# ಗುಣಮಧುರ

(ಡಾ॥ ದೇವರಕೊಂಡಾರೆಡ್ಡಿ ಅಭಿನಂದನ ಗ್ರಂಥ)

ಪ್ರಧಾನ ಸಂಪಾದಕರು

ಡಾ॥ ಕೆ.ಆರ್. ಗಣೇಶ್

ಸಂಪಾದಕರು

ಡಾ॥ ಪಿ.ವಿ. ಕೃಷ್ಣಮೂರ್ತಿ

ಡಿ. ಸ್ಮಿತಾರೆಡ್ಡಿ

ಡಾ॥ ತಮಿಳ್ ಸೆಲ್ವಿ


ಡಾ॥ ದೇವರಕೊಂಡಾರೆಡ್ಡಿ ಅಭಿನಂದನ ಸಮಿತಿ

ನಂ. ೭೦೨, ಬಿ-೨, ಕೃಷ್ಣಾ ಬ್ಲಾಕ್, ರಾಷ್ಟ್ರೀಯ ಕ್ರೀಡಾ ಗ್ರಾಮ ವಸತಿ ಸಂಕೀರ್ಣ, ಬೆಂಗಳೂರು - ೫೬೦೦೪೭.

೨೦೧೦

# GUNA MADHURA

A Felicitation Volume in honour of **Dr. Devarakonda Reddy**, Former Professor and Head, Department of Epigraphy, Kannada University, Hampi.


Editors : **Dr. P.V. Krishnamurthy**
**D. Smitha Reddy**
**Dr. Tamil Selvi**

Publishers : **Dr. Devarakonda Reddy Felicitation Committee,**
No.702, B-2, Krishna Block,
National Games Village Housing Complex,
Koramangala, Bangalore - 560 047

Pages : 668+xvi+xx

Price : Rs. 650/-

First Ipression : 2010







Paper used : 70 G.S.M. Maplitho

DTP& Design : Dr. T.D.R. Shilpa Graphics, Chennai
Nirmala Ganesh, Bangalore.
Niranjan B.P., Icon Computers, Vijayanagar, Bangalore-560 040.

Cover Page : Jayasimha, Bangalore.

Printers : Sathyasri Printers Pvt. Ltd., Bangalore-560 026; Ph. 080-26748811

ಸಂಪಾದಕರು : ಡಾ॥ ಪಿ.ವಿ. ಕೃಷ್ಣಮೂರ್ತಿ
ಡಿ. ಸ್ಮಿತಾ ರೆಡ್ಡಿ
ಡಾ॥ ತಮಿಳ್ ಸೆಲ್ವಿ

ಪ್ರಕಾಶಕರು : ಡಾ॥ ದೇವರಕೊಂಡಾರೆಡ್ಡಿ ಅಭಿನಂದನ ಸಮಿತಿ
ನಂ.೭೦೨, ಬಿ-೨, ಕೃಷ್ಣಾ ಬ್ಲಾಕ್, ರಾಷ್ಟ್ರೀಯ ಕ್ರೀಡಾ ಗ್ರಾಮ ವಸತಿ ಸಂಕೀರ್ಣ,
ಕೋರಮಂಗಲ, ಬೆಂಗಳೂರು – ೫೬೦ ೦೪೭.

ಪುಟಗಳು : ೬೬೮+xvi+xx

ಬೆಲೆ : ರೂ.೬೫೦/-

ಪ್ರಥಮ ಮುದ್ರಣ : ೨೦೧೦





ಮುದ್ರಣ ಕಾಗದ : ಮ್ಯಾಪ್‌ಲಿಥೋ ೭೦ ಜಿ.ಎಸ್.ಎಂ.

ಅಕ್ಷರ ಸಂಯೋಜನೆ : ಡಾ॥ ಟಿ.ಡಿ.ಆರ್. ಶಿಲ್ಪ ಗ್ರಾಫಿಕ್ಸ್, ಚೆನ್ನೈ.
ನಿರ್ಮಲಾ ಗಣೇಶ್, ಬೆಂಗಳೂರು.
ಬಿ.ಪಿ. ನಿರಂಜನ್, ಐಕಾನ್ ಕಂಪ್ಯೂಟರ್ಸ್, ವಿಜಯನಗರ, ಬೆಂಗಳೂರು – ೫೬೦ ೦೪೦.

ಮುದ್ರಕರು : ಸತ್ಯಶ್ರೀ ಪ್ರಿಂಟರ್ಸ್ ಪ್ರೈ.ಲಿ., ಬೆಂಗಳೂರು – ೫೬೦ ೦೨೬; ದೂ. : ೦೮೦-೨೬೭೪೮೮೧೧

# ಅಧ್ಯಕ್ಷರ ಮಾತು

ಡಾ॥ ದೇವರಕೊಂಡಾರೆಡ್ಡಿಯವರು ಕರ್ನಾಟಕ ಶಾಸನಾಧ್ಯಯನ ಮತ್ತು ಲಿಪಿಶಾಸ್ತ್ರಕ್ಕೆ ನೀಡಿರುವ ಕಾಣಿಕೆ ಬಹುಮುಖವಾದುದು. ಲಿಪಿಶಾಸ್ತ್ರ, ಶಾಸನಶಾಸ್ತ್ರಗಳನ್ನು ಬೋಧಿಸುವ ಅಧ್ಯಾಪಕರಾಗಿ ಶಾಸನಾಧ್ಯಯಿಗಳ ಒಂದು ಪಡೆಯನ್ನೇ ಅವರು ನಿರ್ಮಿಸಿದ್ದಾರೆ. ಸುಮಾರು ಕಳೆದ ಮೂವತ್ತು ವರ್ಷಗಳ ಅವಧಿಯಲ್ಲಿ ಹಲವಾರು ಶಾಸನಗಳನ್ನು ಕಂಡು ಹಿಡಿದು, ಪ್ರಕಟಿಸಿದ್ದಾರೆ; ಕೆಲವು ಶಾಸನಗಳನ್ನು ಪರಿಷ್ಕರಿಸಿದ್ದಾರೆ. ಹೈದರಾಬಾದ್ ಕರ್ನಾಟಕ, ಬಾಂಬೆ ಕರ್ನಾಟಕ, ಮದರಾಸು ಪ್ರೆಸಿಡೆನ್ಸಿಯಲ್ಲಿ ಚೆಲ್ಲಾಪಿಲ್ಲಿಯಾಗಿದ್ದ ಉತ್ತರ ಕರ್ನಾಟಕದ ಶಾಸನಗಳನ್ನು ವ್ಯವಸ್ಥಿತ ರೀತಿಯಲ್ಲಿ ತಮ್ಮ ಸಹೋದ್ಯೋಗಿಗಳೊಂದಿಗೆ ಹೊರತಂದಿದ್ದಾರೆ. ಈ ಸಂಪುಟಗಳು ಡಾ॥ ದೇವರಕೊಂಡಾರೆಡ್ಡಿಯವರ ಕರ್ತೃತ್ವಶಕ್ತಿಗೆ, ನಾಯಕತ್ವಕ್ಕೆ ನಿದರ್ಶನವಾಗಿವೆ. ಇತಿಹಾಸ ಅಕಾದೆಮಿಯ ಮೂಲಕ ನಾಡಿನ ಹಲವಾರು ಮಂದಿ ಉತ್ಸಾಹಿ ತರುಣರನ್ನು ಶಾಸನ, ಶಿಲ್ಪ, ವಾಸ್ತುಶಿಲ್ಪ, ಕಡತ ಮುಂತಾದ ಮೂಲ ಆಕರಗಳನ್ನು ಹುಡುಕಿ ತೆಗೆಯುವುದರತ್ತ, ವಿಶ್ಲೇಷಿಸುವುದರತ್ತ ಆಕರ್ಷಿಸಿದ್ದಾರೆ; ಅವರನ್ನು ಬೆನ್ನು ತಟ್ಟಿ ಪ್ರೋತ್ಸಾಹಿಸಿದ್ದಾರೆ. ಲಿಪಿಶಾಸ್ತ್ರವನ್ನು ಕುರಿತು ಅವರು ರಚಿಸಿರುವ ಗ್ರಂಥ ಕನ್ನಡ ಸಂಶೋಧನಾ ರಂಗಕ್ಕೆ ಒಂದು ಅಮೂಲ್ಯ ಕೊಡುಗೆ.

ದೇವರಕೊಂಡಾರೆಡ್ಡಿ ಎಂದೂ ಯಾವುದಕ್ಕೂ ಹಂಬಲಿಸಿ ಹಪಹಪಿಸಿದವರಲ್ಲ; ನೈರಾಶ್ಯತೆ ಎಂಬುದು ಆತನ ನಿಘಂಟಿನಲ್ಲಿಯೇ ಇಲ್ಲ. ಇರುವ ಸಮಯ, ದೊರೆತ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳುತ್ತಾ ತನ್ನದೇ ಆದ ಶೈಲಿಯಲ್ಲಿ ಅಧ್ಯಯನ ಮಾಡುತ್ತ ಬೆಳೆಯುತ್ತಿರುವ ನಿರಂತರ ಅಧ್ಯಯನಶಾಲಿ. ತಾನು ಬೆಳೆಯುವುದರೊಂದಿಗೆ ತನ್ನ ಸುತ್ತಲಿನವರನ್ನು ಬೆಳೆಸುವ ಸಹೃದಯಿ. ಕೇವಲ ಶಾಸನಶಾಸ್ತ್ರವಷ್ಟೆ ಅಲ್ಲ, ಲಿಪಿಶಾಸ್ತ್ರ, ಶಿಲ್ಪ, ವಾಸ್ತುಶಿಲ್ಪ, ಗ್ರಂಥ ಸಂಪಾದನೆ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಆಸಕ್ತಿ ಹೊಂದಿರುವ ವಿದ್ಯಾರ್ಥಿಗಳನ್ನು ಬೆಳೆಸುತ್ತಾ ಬಂದಿದ್ದಾರೆ.

ಪ್ರತಿಯೊಂದು ಚಟುವಟಿಕೆಯ ಹಿಂದೆಯೂ ದೇವರಕೊಂಡಾರೆಡ್ಡಿಯವರ ಪ್ರಭಾವ ಮುದ್ರೆ ಇರುತ್ತದೆ. ಅದು ಆತನಿಗೆ ಪ್ರತ್ಯೇಕವಾದುದು. ಅಂಕಿ ಅಂಶಗಳನ್ನು ನೀಡುವಲ್ಲಿ ಖಚಿತತೆ, ನೇರವಾದ, ಖಂಡಾಖಂಡಿತವಾದ ಆದರೂ ಯಾರ ಮನಸ್ಸನ್ನು ನೋಯಿಸದ ಮಾತು; ಮಾತು ಮತ್ತು ನಡುವಳಿಕೆಯ ನಡುವಿನ ಸಾಂಗತ್ಯ. ಪ್ರತಿಯೊಂದನ್ನು ತನ್ನ ಮೂಗಿನ ನೇರಕ್ಕೆ ನೋಡದೆ, ತಾನು ಹಿಡಿದ ಮೊಲಕ್ಕೆ ಮೂರೇಕಾಲು ಎಂದು ಹಠ ಹಿಡಿಯದ ಮುಕ್ತ ಮನಸ್ಸಿನ ಔದಾರ್ಯ. ಗೆಳೆಯರಿಂದ, ಗುರುಗಳಿಂದ, ವಿದ್ಯಾರ್ಥಿಗಳಿಂದ, ಶುದ್ಧ ಸ್ನೇಹ, ವಿದ್ಯೆ ಮತ್ತು ಆತ್ಮೀಯತೆಯನ್ನು ಬಿಟ್ಟರೆ ಬೇರೇನನ್ನು ಬಯಸದ ಯಾರಿಗೂ ತನ್ನ ನೋವನ್ನು ಹೇಳದ, ಯಾರ ಬಗ್ಗೆಯೂ ಪೇಚಾಡದ, ಗೊಣಗದ ನಿರ್ಮಲ ವ್ಯಕ್ತಿತ್ವ, ತಾವು ಬೇರೆಯವರಿಂದ ಏನನ್ನು ಬಯಸುತ್ತಾರೆಯೊ, ಅವುಗಳನ್ನೆಲ್ಲಾ, ಅವರಿಂದ ಪಡೆದುದಕ್ಕಿಂತಲೂ ದುಪ್ಪಟ್ಟು ನೀಡುವ ಧಾರಾಳತನ. ತನ್ನ ಗೆಳೆಯರಿಗೆ, ವಿದ್ಯಾರ್ಥಿಗಳಿಗೆ ಅವರ ಅಗತ್ಯಗಳನ್ನು ತಾನೇ ಅರಿತು ಮುಂದೆ ಬಂದು ಸಹಾಯ ಮಾಡಿ, ಅದು ತೀರಾ ಸಹಜ ಕ್ರಿಯೆಯೆಂಬಂತೆ ಕೈ ಕೊಡವಿಕೊಂಡು ಮುನ್ನಡೆಯುವ ನಿರ್ಲಿಪ್ತ. ಈ ಗುಣಗಳೇ ಅತನ ಸಾನ್ನಿಧ್ಯವನ್ನು ಮಧುರವಾಗಿಸುತ್ತದೆ.

ಇಂಥ ಡಾ॥ ದೇವರಕೊಂಡಾರೆಡ್ಡಿಯವರಿಗೆ ಅರವತ್ತು ವರ್ಷಗಳು ತುಂಬುತ್ತಿರುವ ಸಂದರ್ಭದಲ್ಲಿ ಅವರನ್ನು ಅಭಿನಂದಿಸಬೇಕೆಂದು ಕೆಲವು ಮಂದಿ ಮಿತ್ರರೂ, ವಿದ್ಯಾರ್ಥಿಗಳು, ಅಭಿಮಾನಿಗಳೂ ಉದ್ದೇಶಿಸಿದರು. ಅದರ ಫಲವೇ ಈ 'ಗುಣಮಧುರ'ವಾದ ಅಭಿನಂದನ ಗ್ರಂಥ. ಈ ಗ್ರಂಥ ಒಂದು ವರ್ಷದ ಹಿಂದೆಯೇ ಬಿಡುಗಡೆಯಾಗಬೇಕಿತ್ತು. ನಿವೃತ್ತರಾದ ಮೇಲೆ ರೆಡ್ಡಿಯವರ ಚಟುವಟಿಕೆ ಹೇಗಿರುತ್ತದೆಯೋ ನೋಡೋಣ ಎನ್ನಿಸಿತು. ಡಾ॥ ಜೆ.ಪಿ. ರಾಜರತ್ನಂ ಅವರು ಹೇಳಿದಂತೆ ಅವರು 'ರೀಟೈರ್' ಆಗಿ ತಮ್ಮ ಎಂದಿನ ಶೈಲಿಯಲ್ಲಿಯೇ 'ಖೇಡ, ಖರ್ವಡ, ಮಡಂಬ, ಪಟ್ಟಣ'ಗಳನ್ನು ಸುತ್ತಿ ಅಧ್ಯಯನ ಮುಂದುವರಿಸಿದ್ದಾರೆ. ಅದು ನಮಗೆ ಇನ್ನಷ್ಟು ಹೆಮ್ಮೆ ತಂದಿದೆ.

"ಶಾಸನ ತಜ್ಞರನ್ನು, ಪುರಾತತ್ತ್ವವಿದರನ್ನು ಗುರುತಿಸಿ ಅಭಿನಂದಿಸುವ ಕೆಲಸವನ್ನು ಯಾರೂ ಮಾಡುವುದಿಲ್ಲ" ಎಂಬ ಕೇಂದ್ರ ಪುರಾತತ್ತ್ವ ಇಲಾಖೆಯ ಶ್ರೀ ಸಿ.ಬಿ. ಪಾಟೀಲರ ಮಾತು ಈ ಯೋಜನೆಗೆ ಅಂಕುರವಾಯಿತು.

ಈ ಯೋಜನೆಯನ್ನು ಕಾರ್ಯ ರೂಪಕ್ಕೆ ತರಲೇಬೇಕೆಂದು ಸಂಕಲ್ಪಿಸಿದವರು ಶ್ರೀಮತಿ ಡಿ. ಸ್ಮಿತಾ. ಚಿ॥ಸೌ॥ ಸ್ಮಿತಾ ದೇವರಕೊಂಡಾರೆಡ್ಡಿಯವರ ನಿಜ ವಾರಸುದಾರಳು. ತಂದೆಯಂತೆ ಶಾಸನ ಅಧ್ಯಯನವನ್ನು ತಾನೂ ಮುಂದುವರಿಸುತ್ತಿದ್ದಾಳೆ. ತಂದೆಯವರಿಗೆ ಒಂದು ಅಭಿನಂದನ ಗ್ರಂಥವನ್ನು ಸಮರ್ಪಿಸಿ, ಗೌರವಸೂಚಿಸಬೇಕೆಂದು ತನ್ನ ಗುರುಗಳಾದ ಡಾ॥ ಪಿ.ವಿ. ಕೃಷ್ಣಮೂರ್ತಿಯವರೊಂದಿಗೆ ಸಮಾಲೋಚನೆ ಮಾಡಿದಳು. ಈ ಇಬ್ಬರೂ ದೇವರಕೊಂಡಾರೆಡ್ಡಿಯವರ ಗೆಳೆಯರು ಮತ್ತು ವಿದ್ಯಾರ್ಥಿಗಳನ್ನು ತಮ್ಮೊಂದಿಗೆ ಸೇರಿಸಿಕೊಂಡು ಒಂದು ಅಭಿನಂದನಾ ಸಮಿತಿಯನ್ನು ಏರ್ಪಡಿಸಿಯೇ ಬಿಟ್ಟರು. ನನಗೂ ಮತ್ತು ಮಾನ್ಯ ಶ್ರೀ ದೇವರಕೊಂಡಾರೆಡ್ಡಿಯವರಿಗೂ ಇರುವ ಬಾಂಧವ್ಯದಿಂದಾಗಿ ನನ್ನನ್ನು ಈ ಸಮಿತಿಯ

ಅಧ್ಯಕ್ಷನೆಂದು ಮಾಡಿದರು. "ಕೇವಲ ಉತ್ಸಾಹವೊಂದೇ ಬಂಡವಾಳವಾದರೆ ಸಾಲದು ಇಂಥ ಕೆಲಸಗಳಿಗೆ" ಎಂದು ನಾನು ಹಿತೋಪದೇಶ ಮಾಡಿದಾಗ, ಇವರುಗಳು ಹಾಕಿಕೊಂಡಿದ್ದ ವ್ಯವಸ್ಥಿತವಾದ ಯೋಜನೆಯ ರೂಪು ರೇಷೆಗಳನ್ನು ನನ್ನ ಮುಂದೆ ಹಿಡಿದರು. ಅದನ್ನು ನೋಡಿ ನನ್ನ ಕೆಲಸ ಹಗುರವಾದುದೆಂದು ಅನಿಸಿತು. ಅಂತೆಯೇ ಇವರುಗಳು ಎರಡು ವರ್ಷಗಳಿಂದ ನಿರಂತರವಾಗಿ ದುಡಿದು, ತಮ್ಮ ಮಿತ್ರರ, ಗುರುಗಳ ನೆರವಿನಿಂದ ಈ ಕೆಲಸವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ್ದಾರೆ.

ಈ ಅಭಿನಂದನಾ ಗ್ರಂಥದ ರೂಪು ರೇಷೆಯ ಬಗ್ಗೆ ಆಸ್ಥೆ ವಹಿಸಿದ ಮಿತ್ರರಾದ ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ ಅವರು ಡಾ॥ ರೆಡ್ಡಿಯವರು ಲಿಪಿಶಾಸ್ತ್ರದ ಬಗ್ಗೆ ವಿಶೇಷವಾದ ಕೆಲಸ ಮಾಡಿರುವುದರಿಂದ ಹೆಚ್ಚಿನ ಲೇಖನಗಳು ವಿವಿಧ ಲಿಪಿಗಳ ಬಗ್ಗೆ ಇರುವಂತೆ ಎಚ್ಚರವಹಿಸಬೇಕೆಂದು ಸೂಚಿಸಿದರು. ಅವರ ಸಲಹೆಯನ್ನು ಸವಿನಯವಾಗಿ ಸ್ವೀಕರಿಸಲಾಗಿದೆ.

ಈ ಸಂದರ್ಭದಲ್ಲಿ ಅನೇಕ ರೀತಿಯಲ್ಲಿ ಅಭಿನಂದನಾ ಸಮಿತಿಗೆ ಬೆಂಬಲವಾಗಿ ನಿಂತು ಸಹಕರಿಸಿದ ಶ್ರೀ ಎಸ್. ಕಾರ್ತಿಕ್, ಡಾ॥ ಡಿ.ಟಿ. ರಾಜಣ್ಣ, ಡಾ॥ ಎಂ.ಜಿ. ಮಂಜುನಾಥ, ಐ.ಸಿ.ಎಚ್.ಆರ್.ನ ಉಪ ನಿರ್ದೇಶಕರಾದ ಡಾ॥ ಎಸ್.ಕೆ. ಅರುಣಿ, ಎಸ್. ನಂಜುಂಡಸ್ವಾಮಿ, ಛಾಯಾಗ್ರಾಹಕರಾದ ಶಿವು ಮತ್ತು ರಾಘವೇಂದ್ರ ಮುಂತಾದವರ ನೆರವನ್ನು ಇಲ್ಲಿ ತುಂಬು ಹೃದಯದಿಂದ ಸ್ಮರಿಸುತ್ತೇನೆ. ನಮ್ಮಲ್ಲಿಯೇ ಒಬ್ಬರಾಗಿರುವ ಕೇಂದ್ರ ಪುರಾತತ್ತ್ವ ಇಲಾಖೆಯ ನಿರ್ದೇಶಕರಾದ ಎಸ್.ವಿ. ವೆಂಕಟೇಶಯ್ಯನವರ ಸಲಹೆ ಸಹಕಾರಗಳನ್ನು ನೆನೆಯದೆ ಹೋದರೆ ಲೋಪವಾದೀತು. ಈ ಪುಸ್ತಕದ ಮುದ್ರಣ ಕಾರ್ಯದಲ್ಲಿ ಡಾ॥ ದೇವರಕೊಂಡಾರೆಡ್ಡಿಯವರ ಬಗೆಗಿನ ಅಭಿಮಾನದಿಂದ ತಮ್ಮ ಸ್ನೇಹ ಹಸ್ತ ಚಾಚಿದವರು ಸತ್ಯಶ್ರೀ ಮುದ್ರಣಾಲಯದ ಶ್ರೀ ಲಿಂಗಪ್ಪನವರು. ಅವರಿಗೆ ಕೃತಜ್ಞತೆಗಳನ್ನು ಹೇಳಿ ಕೈತೊಳೆದುಕೊಳ್ಳಲಾರೆವು. ಅವರ ನೆರವಿನ ಹಸ್ತ ನಮ್ಮ ಹೃದಯದಲ್ಲಿ ಸದಾ ಹಸಿರಾಗಿರುತ್ತದೆ. ಹಾಗೆಯೇ ಪುರಾತತ್ತ್ವವಿದರಾದ ಶ್ರೀ ಎಂ.ವಿ. ವಿಶ್ವೇಶ್ವರ ಅವರೂ ಒತ್ತಾಸೆ ನೀಡಿದ್ದಾರೆ.

ಕೆಲಸ ಪ್ರಾರಂಭ ಮಾಡುವುದು ಸುಲಭ; ಅದನ್ನು ನೆರವೇರಿಸುವುದೂ ಸುಲಭ; ಆದರೆ ಅನೇಕ ರೀತಿಯಲ್ಲಿ ಎದುರಾಗುವ ಸಮಸ್ಯೆಗಳು, ಕಷ್ಟಗಳು ತುಂಬಾ ವಿಚಿತ್ರವಾದುವು. ಅಂಥವುಗಳನ್ನು ಅಧಿಗಮಿಸುವುದರಲ್ಲಿ ಅಭಿನಂದನಾ ಸಮಿತಿಯ ಸದಸ್ಯರು, ಸಲಹಾ ಮಂಡಲಿಯವರು ಮತ್ತು ಶಿಷ್ಯರುಗಳು ಯಶಸ್ವಿಯಾಗಿದ್ದಾರೆ. ಅವರೆಲ್ಲರ ಶ್ರಮ, ಆ ಶ್ರಮದ ಹಿಂದಿನ ಶ್ರದ್ಧೆ, ದೇವರಕೊಂಡಾರೆಡ್ಡಿಯವರ ಬಗೆಗಿನ ಅಭಿಮಾನ, ಪ್ರೀತಿ, ಈ ಕೆಲಸವನ್ನು ಆಗುಮಾಡಿಸಿದೆ. ಇಂಥ ಮಿತ್ರರುಗಳನ್ನು, ಶಿಷ್ಯರುಗಳನ್ನು ಪಡೆದ ಡಾ॥ ದೇವರಕೊಂಡಾರೆಡ್ಡಿ ನಿಜಕ್ಕೂ ಧನ್ಯರು. ಈ ಸಂದರ್ಭದಲ್ಲಿ ಆತನನ್ನು ಅಭಿನಂದಿಸುತ್ತೇನೆ.

ಈ ಅಭಿನಂದನಾ ಸಂಪುಟದ ಸಂಪಾದಕತ್ವದ ಹೊಣೆಯನ್ನು ಡಿ. ಸ್ಮಿತಾ, ಪಿ.ವಿ. ಕೃಷ್ಣಮೂರ್ತಿ, ತಮಿಳ್ ಸೆಲ್ವಿ ಅವರುಗಳು ಹೊತ್ತಿದ್ದಾರೆ. ಪಿ.ವಿ. ಕೃಷ್ಣಮೂರ್ತಿಯವರು ಇತರ ಕೆಲಸಗಳ ಒತ್ತಡದಲ್ಲೂ ಬಿಡುವು ಮಾಡಿಕೊಂಡು ಈ ಸಂಪುಟದ ಸಂಪಾದನೆಯಲ್ಲಿ ಹೆಚ್ಚಿನ ಹೊಣೆಯನ್ನು ತಮ್ಮದಾಗಿಸಿಕೊಂಡಿದ್ದಾರೆ. ಇವರಿಗೆ ಸೂಕ್ತ ಮಾರ್ಗದರ್ಶನ ನೀಡಿ ಪ್ರಧಾನ ಸಂಪಾದಕತ್ವದ ಹೊಣೆ ನಿರ್ವಹಿಸಿರುವ ಡಾ॥ ಕೆ.ಆರ್. ಗಣೇಶ್ ಅವರಿಗೂ ನನ್ನ ಅಭಿನಂದನೆಗಳು ಸಲ್ಲುತ್ತವೆ. ಈ ಕಾರ್ಯವು ಸುಗಮವಾಗಿ ಸಾಗಲು ಅನೇಕ ಮಂದಿ ಆರ್ಥಿಕವಾಗಿಯೂ ನೆರವಾಗಿದ್ದಾರೆ. ಶ್ರೀಯುತರಾದ ಡಾ॥ ಸುಧಾ ಮೂರ್ತಿ, ಯಡವನಹಳ್ಳಿಯ ಲಲಿತಮ್ಮ ತಿಮ್ಮಾರೆಡ್ಡಿ ಮುಂತಾದವರು ನೀಡಿರುವ ಸಹಕಾರವನ್ನು ತುಂಬು ಹೃದಯದಿಂದ ನೆನೆಯುತ್ತೇನೆ.

ಡಾ॥ ಪಿ.ವಿ. ಕೃಷ್ಣಮೂರ್ತಿ, ಡಿ. ಸ್ಮಿತಾ, ಡಾ॥ ತಮಿಳ್‌ಸೆಲ್ವಿ ಮತ್ತು ಎಸ್. ಕಾರ್ತಿಕ್ ಮುಂತಾದವರು ತಮ್ಮ ಗುರುಋಣವನ್ನು ಅರ್ಥಪೂರ್ಣವಾಗಿ ತೀರಿಸಿದ್ದಾರೆ. ಅದಕ್ಕಾಗಿ ಅವರನ್ನು ಆರ್ದ್ರ ಹೃದಯದಿಂದ ಬೆನ್ನು ತಟ್ಟಿ ನಾನು ಹರ್ಷಿಸುತ್ತೇನೆ.

ಇಷ್ಟೆಲ್ಲಾ ದೇವರಕೊಂಡಾರೆಡ್ಡಿಯವರು ಸಂಶೋಧನಾ ರಂಗದಲ್ಲಿ ನಿಮಗ್ನರಾಗಬೇಕಾದರೆ ಅವರ ಸಂಸಾರದ ಸಂಪೂರ್ಣ ಜವಾಬ್ದಾರಿಯನ್ನು ಅಕ್ಷರಶಃ ಹೊತ್ತು, ಒಂದು ದಿನವು ಸಿಡುಕದೆ ದೇವರಕೊಂಡಾರೆಡ್ಡಿಯವರನ್ನು ಸಲಹಿದ ಮಾತೃಮೂರ್ತಿ ಧರ್ಮಪತ್ನಿ ಶ್ರೀಮತಿ ರತ್ನಮ್ಮ ಅವರನ್ನು ನಾನು ನೆನೆಯದೆ ಹೋದರೆ ಅದು ತಪ್ಪಾಗುತ್ತದೆ. ಆಕೆಯನ್ನು ಅವರ ಕುಲದೈವ ಎಲ್ಲಮ್ಮ, ಪ್ರಿಯ ದೈವ ಮಂತ್ರಾಲಯದ ಗುರುಸಾರ್ವಭೌಮ ಶ್ರೀ ರಾಘವೇಂದ್ರರು ಸದಾ ಕಾಪಾಡಲಿ.

ಆತ್ಮೀಯ ಮಿತ್ರನ ಅಭಿನಂದನಾ ಸಮಾರಂಭಕ್ಕೆ 'ಮುಂದಾಳು' ಎಂದೆನ್ನಿಸಿಕೊಳ್ಳುವ ಅವಕಾಶ ದೊರೆತದ್ದು ನನ್ನ ಭಾಗ್ಯವಲ್ಲದೆ ಮತ್ತೇನು. ಇಂಥ 'ಅಧ್ಯಕ್ಷ' ಪದವಿಗಳು ಇನ್ನೂ ಸಾವಿರ ಸಿಕ್ಕಿದರೂ ನಾನು ಸೈ.

**ಆರ್. ಶೇಷಶಾಸ್ತ್ರಿ**

## ಸಂಪಾದಕರ ಮಾತು

ಡಾ॥ ದೇವರಕೊಂಡಾರೆಡ್ಡಿಯವರು ಕರ್ನಾಟಕದ ಶಾಸನ ಮತ್ತು ಲಿಪಿತಜ್ಞರಲ್ಲಿ ಪ್ರಮುಖರು. ಇವರ ಅಧ್ಯಯನ ಕ್ಷೇತ್ರಗಳ ಹರವು ಬಹುಮುಖಿಯಾದುದು. ಇಂತಹ ಬಹುಮುಖಿ ಕ್ಷೇತ್ರಗಳ ಪರಿಧಿಯಲ್ಲಿಯೂ ಶಾಸನ ಮತ್ತು ಲಿಪಿಶಾಸ್ತ್ರಕ್ಕೆ ಅವರಿಂದ ಹೆಚ್ಚಿನ ಆದ್ಯತೆ ಮತ್ತು ಕೊಡುಗೆ ಸಂದಿದೆ. ಅವರಿಗೆ ಅರವತ್ತು ವರ್ಷಗಳು ತುಂಬುತ್ತಿರುವ ಸಂದರ್ಭದಲ್ಲಿ ಅವರನ್ನು ಗೌರವಿಸಲು ಮತ್ತು ಸನ್ಮಾನಿಸಲು ನಮ್ಮ ಗುರುಗಳಾದ ಡಾ॥ ಆರ್. ಶೇಷಶಾಸ್ತ್ರಿಯವರ ಅಧ್ಯಕ್ಷತೆಯಲ್ಲಿ ಅಭಿನಂದನಾ ಸಮಿತಿ ರೂಪುಗೊಂಡಿತು. ಅವರಿಗೊಂದು ಅಭಿನಂದನಾ ಗ್ರಂಥವನ್ನು ಸಮರ್ಪಿಸಲು ಅಭಿನಂದನಾ ಸಮಿತಿಯು ತೀರ್ಮಾನಿಸಿ, ಈ ದಿಸೆಯಲ್ಲಿ ಕಾರ್ಯಪ್ರವೃತ್ತವಾಯಿತು. ಇದರ ಸಲಹೆ-ಸಂಪಾದನೆಗಳಲ್ಲಿ ಅನೇಕ ವಿದ್ವಾಂಸರು ಪಾಲ್ಗೊಂಡು ತಮ್ಮ ಅಮೂಲ್ಯ ಸಲಹೆ-ಸಹಕಾರಗಳನ್ನು ನೀಡಿದ್ದಾರೆ. ಈ ಎಲ್ಲ ಸಲಹೆ-ಸೂಚನೆಗಳ ಹಿನ್ನೆಲೆಯಲ್ಲಿ ಪ್ರಕೃತ ಅಭಿನಂದನ ಗ್ರಂಥ ರೂಪುಗೊಂಡಿದೆ.

ಈ ಗ್ರಂಥದ ಹೆಸರು **ಗುಣಮಧುರ**. ಈ ಹೆಸರು ಡಾ॥ ದೇವರಕೊಂಡಾರೆಡ್ಡಿಯವರಿಗೆ ಅವರ ಶಾಸನಾಧ್ಯಯನದ ಹಿನ್ನೆಲೆಯಲ್ಲಿ ಡಾ॥ ಆರ್. ಶೇಷಶಾಸ್ತ್ರಿಯವರಿಂದ ಅನ್ವರ್ಥವಾಗಿ ಸಂದ ಬಿರುದು. ಈ ಸಂಪುಟಕ್ಕೆ ಡಾ॥ ದೇವರಕೊಂಡಾರೆಡ್ಡಿಯವರ ಮಿತ್ರರು, ವಿದ್ಯಾರ್ಥಿಗಳು, ವಿದ್ವಾಂಸರು ಹಾಗೂ ಅನೇಕರು ಲೇಖನಗಳನ್ನು ನೀಡಿದ್ದಾರೆ. ಈ ಸಂಪುಟದಲ್ಲಿ ಅನೇಕ ಉದಯೋನ್ಮುಖ ಶಾಸನಶಾಸ್ತ್ರ ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇಲ್ಲಿನ ಹಲವು ಲೇಖನಗಳು ಆಯಾ ಕ್ಷೇತ್ರಗಳಲ್ಲಿ ಕನ್ನಡ ಭಾಷೆಯಲ್ಲಿಯೇ ಪ್ರಪ್ರಥಮ ಲೇಖನಗಳಾಗಿವೆ. ಇವುಗಳಲ್ಲಿ ಹಲವು ಕುಂದು-ಕೊರತೆಗಳಿರಬಹುದಾದರೂ, ಅವು ಪರಿಗ್ರಾಹ್ಯವೆಂಬುದು ನಮ್ಮ ಭಾವನೆ.

ಈ ಗ್ರಂಥದಲ್ಲಿ ಒಟ್ಟು ಆರು ವಿಭಾಗಗಳಿವೆ. ಮೊದಲನೆಯದು ಡಾ॥ ದೇವರಕೊಂಡಾರೆಡ್ಡಿಯವರ ಆತ್ಮಕಥನ. ಎರಡನೆಯ ಭಾಗ ರೆಡ್ಡಿಯವರನ್ನು ಬಲ್ಲವರ ನುಡಿಗಳು. ಮೂರನೆಯದು ಡಾ॥ ರೆಡ್ಡಿಯವರ ಕೃತಿಗಳನ್ನು ಕುರಿತ ಬರಹಗಳು. ನಾಲ್ಕನೆಯದು ಈ ಗ್ರಂಥದ ಪ್ರಮುಖ ಭಾಗವಾದ ಲಿಪಿಶಾಸ್ತ್ರ. ಐದನೆಯ ಭಾಗ ಶಾಸನ ಅಧ್ಯಯನವಾಗಿದ್ದು ಇಲ್ಲಿನ ಲೇಖನಗಳು ವೈವಿಧ್ಯಮಯವಾಗಿವೆಯಷ್ಟೇ ಅಲ್ಲದೆ, ವಿಭಿನ್ನ ಆಲೋಚನೆಗಳಿಂದ ಕೂಡಿವೆ. ಆರನೆಯ ಭಾಗದಲ್ಲಿ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗೆ ಸಂಬಂಧಿಸಿದ ಬರಹಗಳಿದ್ದು ಮಾಹಿತಿಪೂರ್ಣವಾಗಿವೆ. ಒಟ್ಟು ನೂರ ಎಂಟು ಬರಹಗಳು ಈ ಬೃಹತ್ ಸಂಪುಟದಲ್ಲಿದ್ದು ಕನ್ನಡ ಸಂಶೋಧನ ಕ್ಷೇತ್ರಕ್ಕೆ ಅತ್ಯಮೂಲ್ಯ ಕೊಡುಗೆಗಳಾಗಿವೆ ಎಂಬುದು ನಮ್ಮ ನಂಬಿಕೆ.

ಈ ಸಂಪುಟದೊಳಗಿನ ಬಹುತೇಕ ಲೇಖನಗಳು ೨೦೦೮ರ ಜೂನ್-ಜುಲೈ ಸುಮಾರಿಗೆ ಅಕ್ಷರ ಸಂಯೋಜನೆಗೆಂದು ಮದ್ರಾಸ್‌ಗೆ ತೆರಳಿದವು. ಇದರ ಹೊಣೆಯನ್ನು ಡಾ॥ ತಮಿಳ್ ಸೆಲ್ವಿ ಹೊತ್ತುಕೊಂಡರು. ಕೆಲವು ಲೇಖನಗಳು ಅಕ್ಷರ ಸಂಯೋಜನೆಗೊಂಡು ಸಿದ್ಧವೂ ಆದವು. ಅನೇಕ ಕಾರಣಗಳಿಂದ ಮುಂದೆ ಕೆಲಸ ಸಾಗದೆ ಮತ್ತೆ ಬೆಂಗಳೂರಿನಲ್ಲಿಯೇ ಅಕ್ಷರ ಸಂಯೋಜನಾ ಕಾರ್ಯ ನಿ ಧಾ ನ ವಾ ಗಿ ಮುಂದುವರೆಯಿತು. ಬೆಂಗಳೂರಿನಲ್ಲಿ ಅಕ್ಷರ ಸಂಯೋಜನೆಗೊಂಡ ಲೇಖನಗಳು ಮತ್ತು ಮದ್ರಾಸ್‌ನಲ್ಲಿ ಸಂಯೋಜನೆಗೊಂಡ ಲೇಖನಗಳು, ಇವುಗಳಲ್ಲಿ ಹಲವು ಲೇಖನಗಳ ಸಂಪಾದನೆ ಮದ್ರಾಸ್‌ನಿಂದ ಬಂದಂತಹ ಕೇವಲ ಅಕ್ಷರ ಸಂಯೋಜಿತ ಪ್ರತಿಗಳನ್ನು ಆಧರಿಸಿವೆ. ಲೇಖಕರದೇ ಆದ ಮೂಲ ಪ್ರತಿಗಳು ಹಾಗೂ ಛಾಯಾಚಿತ್ರಗಳು ಈ ಸಂದರ್ಭದಲ್ಲಿ ಅಲಭ್ಯವಾಗಿವೆ.

ಈ ಎಲ್ಲಾ ಲೇಖನಗಳನ್ನು ಮತ್ತೊಮ್ಮೆ ಆಮೂಲಾಗ್ರವಾಗಿ ಪರಿಶೀಲಿಸಿ, ಭಾಷೆ, ವಿಷಯ ಮುಂತಾದವುಗಳ ದೃಷ್ಟಿಯಿಂದ ಲೇಖಕರ ಆಶಯ-ಅಭಿಪ್ರಾಯಗಳಿಗೆ ಭಂಗಬಾರದಂತೆ ಪರಿಷ್ಕರಿಸಲಾಗಿದೆ. ಅನೇಕ ಲೇಖನಗಳನ್ನು ಸಂಪಾದಕರ ಇತಿಮಿತಿಗಳ ಮತ್ತು ಇತರ ತಾಂತ್ರಿಕ ಕಾರಣಗಳ ಹಿನ್ನೆಲೆಯಲ್ಲಿ ಈ ಸಂಪುಟದೊಳಗೆ ಸೇರಿಸುವುದು ಸಾಧ್ಯವಾಗಲಿಲ್ಲ. ಈ ವಿಚಾರದಲ್ಲಿ ಲೇಖಕರ ಕ್ಷಮೆಯನ್ನು ಕೋರುತ್ತೇವೆ.

ನಮ್ಮ ಈ ಕಾರ್ಯದಲ್ಲಿ ಅನೇಕ ಕುಂದು ಕೊರತೆಗಳಿರಲು ಸಾಧ್ಯ. ನಮ್ಮ ಇತಿಮಿತಿಗಳ ಹಿನ್ನೆಲೆಯಲ್ಲಿ ಈ ಸಂಪುಟ ಸಾಧ್ಯವಿರುವಷ್ಟೂ ಉತ್ತಮವಾಗಿಯೇ ರೂಪುಗೊಂಡಿದೆ ಎಂಬ ವಿಶ್ವಾಸ ನಮ್ಮದಾಗಿದೆ. ಈ ವಿಚಾರದಲ್ಲಿ ವಿದ್ವಾಂಸರು ಮತ್ತು ವಾಚಕರ ಸಹಾನುಭೂತಿಯನ್ನು ನಿರೀಕ್ಷಿಸುತ್ತೇವೆ.

ಈ ಬೃಹತ್ ಸಂಪುಟದ ಕಾರ್ಯದಲ್ಲಿ ಹಲವರು ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಅಹರ್ನಿಶಿ ದುಡಿದಿದ್ದಾರೆ. ಇವರಲ್ಲಿ ಸಂಪಾದನಾ ಕಾರ್ಯದಲ್ಲೂ ಕೈಜೋಡಿಸಿ ಎಲ್ಲ ರೀತಿಯಲ್ಲೂ ಹಗಲಿರುಳೆನ್ನದೆ ಸಹಕಾರ ನೀಡಿದ ಎಸ್. ಕಾರ್ತಿಕ್ ಅವರಿಗೂ, ಸಾಂದರ್ಭಿಕವಾಗಿ ನೆರವಿಗೆ ಬಂದ ವಿದ್ಯಾರ್ಥಿಮಿತ್ರರಾದ ಎನ್.ಆರ್. ಲಲಿತಾಂಬ, ಹರಿಹರ ಶ್ರೀನಿವಾಸರಾವ್, ಎಸ್. ನಂಜುಂಡಸ್ವಾಮಿ, ಕೋ.ವೆಂ. ರಾಮಕೃಷ್ಣೇಗೌಡ, ಗಂಗರಾಜು, ಜಿ.ಕೆ. ದೇವರಾಜ ಸ್ವಾಮಿ, ಕೆಂಗೇರಿ ಚಕ್ರಪಾಣಿ. ಅಭಿನಂದನಾ ಸಮಾರಂಭದ ಆಹ್ವಾನ ಪತ್ರಿಕೆಯ ಉಸ್ತುವಾರಿ ಮುಂತಾದ ಕಾರ್ಯಗಳನ್ನು ತಮ್ಮದೇ ಎಂಬಂತೆ ನಿರ್ವಹಿಸಿರುವ ಎಸ್. ಕಾರ್ತಿಕ್ ಅವರ ಸ್ನೇಹಿತರಾದ ಕೆ.ಆರ್. ಗೋಪಿ, ಎಸ್. ಗಣೇಶ್ ರಾಜ್, ಟಿ. ವಿನೋದ್, ಡಿ. ರಾಕೇಶ್, ಆರ್. ಶಾಂತರಾಜು, ಬಿ. ಮಲ್ಲಿಕಾರ್ಜುನಗೌಡ, ಸಿ.ಎನ್. ವಿಜಯಕುಮಾರ್, ಜಿ.ಪಿ. ಪರಮೇಶ್, ಎಸ್.ಸಿ. ನರೇಂದ್ರಕುಮಾರ್ ಮುಂತಾದವರಿಗೂ, ಅಭಿನಂದನಾ ಕಾರ್ಯಕ್ರಮಕ್ಕೆ ಪ್ರಾಯೋಜಕತ್ವ ವಹಿಸಿರುವ ಡಾ॥ ದೇವರಕೊಂಡಾರೆಡ್ಡಿಯವರ ಪುತ್ರ ಸನತ್‌ಕುಮಾರ್ ಮತ್ತು ಸೊಸೆ ಯಶ್ವತಿ, ರೆಡ್ಡಿಯವರ ಪುತ್ರಿಯರಾದ ಸ್ಮಿತಾ, ರೂಪವತಿ ಹಾಗೂ ಅಳಿಯಂದಿರಾದ ಎನ್.ಸಿ. ಬಾಬುರೆಡ್ಡಿ, ರಮೇಶರೆಡ್ಡಿಯವರಿಗೂ, ವಿಶೇಷವಾಗಿ ಈ ಸಂಪುಟದ ಅಕ್ಷರ ಸಂಯೋಜನಾ ಕಾರ್ಯವನ್ನು ಆರಂಭದಲ್ಲಿ ನಿರ್ವಹಿಸಿದ ಟಿ.ಡಿ. ರಾಜಣ್ಣ ಅವರಿಗೂ, ಆಂಶಿಕವಾಗಿ ಅಕ್ಷರ ಸಂಯೋಜನೆ ಮಾಡಿಕೊಟ್ಟ ನಿರ್ಮಲಾ ಗಣೇಶ್ ಅವರಿಗೂ ಮತ್ತು ಈ ಸಂಪುಟ ಈಗಿರುವ ರೂಪ ತಾಳಲು ಸತತವಾಗಿ ಅಕ್ಷರ ಸಂಯೋಜನೆ ಹಾಗೂ ವಿನ್ಯಾಸವನ್ನು ಮಾಡಿರುವ ಬಿ.ಪಿ. ನಿರಂಜನ್, ಐಕಾನ್ ಕಂಪ್ಯೂಟರ್ಸ್, ವಿಜಯನಗರ, ಇವರುಗಳಿಗೆ ಎಷ್ಟು ಕೃತಜ್ಞತೆಗಳನ್ನು ಹೇಳಿದರೂ ಅದು ಕಡಿಮೆಯಾಗಿಯೇ ತೋರುತ್ತದೆ.

ಈ ರೀತಿಯಾಗಿ ನೆರವು ನೀಡಿರುವ ಮೇಲ್ಕಂಡ ಎಲ್ಲ ವ್ಯಕ್ತಿಗಳಿಗೂ ಮತ್ತು ಈ ಕಾರ್ಯಕ್ಕೆ ಬೆನ್ನೆಲುಬಾಗಿ ನಿಂತು ಸತತವಾಗಿ ವಿಚಾರಣೆಯ ಮೂಲಕ ಉತ್ಸಾಹ ತುಂಬಿ ಈ ಕೆಲಸವನ್ನು ಆಗು ಮಾಡಿಸಿದ ನಮ್ಮ ಗುರುಗಳಾದ ಡಾ॥ ಆರ್. ಶೇಷಶಾಸ್ತ್ರಿಯವರಿಗೂ ಹಾಗೂ ಶ್ರೀ ರೆಡ್ಡಿಯವರ ವಿದ್ಯಾರ್ಥಿಗಳಾದ ವಸಂತಲಕ್ಷ್ಮಿ ಮತ್ತು ಅಪರ್ಣರವರಿಗೂ, ಮುದ್ರಣದ ಬಗೆಗಿನ ವಿವರಗಳನ್ನು ಗಮನಿಸಿ ಸಲಹೆ ಸೂಚನೆಗಳನ್ನು ನೀಡಿ ಪ್ರೋತ್ಸಾಹಿಸಿದ ಡಾ॥ ಅ.ಲ. ನರಸಿಂಹನ್ ಅವರಿಗೂ, ಪ್ರಧಾನ ಸಂಪಾದಕತ್ವದ ಹೊಣೆ ಹೊತ್ತು ಸಮುಚಿತ ಮಾರ್ಗದರ್ಶನ ನೀಡಿರುವ ಡಾ॥ ಕೆ.ಆರ್. ಗಣೇಶ್ ಅವರಿಗೂ, ಸಮಾರಂಭದ ಆಹ್ವಾನ ಪತ್ರಿಕೆ ಮತ್ತು ರಕ್ಷಾಪುಟವನ್ನು ಸಿದ್ಧಪಡಿಸುವಲ್ಲಿ ನೆರವಾದ ಮಿಥಿಕ್ ಸೊಸೈಟಿಯ ಶ್ರೀ ಜಯಸಿಂಹ ರವರಿಗೂ, ಈ ಗ್ರಂಥದ ಮುದ್ರಣವನ್ನು ಯಾವುದೇ ಅಡೆತಡೆಗಳು ಬಂದರೂ ನಿವಾರಿಸಿ ಲಾಭಾಪೇಕ್ಷೆಯಿಲ್ಲದೆ ಮಾಡಿಕೊಟ್ಟವರು ಡಾ॥ ದೇವರಕೊಂಡಾರೆಡ್ಡಿಯವರ ಹಿತೈಷಿ ಸನ್ಮಿತ್ರರಾದ ಸತ್ಯಶ್ರೀ ಮುದ್ರಣಾಲಯದ ಮಾಲೀಕರಾದ ಶ್ರೀ ಎಲ್. ಲಿಂಗಪ್ಪನವರು ಮತ್ತು ಅವರ ಸಿಬ್ಬಂದಿವರ್ಗದವರು. ಈ ಎಲ್ಲರಿಗೂ ನಾವು ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಸಂಪಾದಕರ ಪರವಾಗಿ

**ಪಿ.ವಿ. ಕೃಷ್ಣಮೂರ್ತಿ**

# ಪರಿವಿಡಿ

## ಗ್ರಂಥಾವಲೋಕನ



## ಲಿಪಿ ಲೋಕ



## ಶಾಸನ ಅಧ್ಯಯನ ಮತ್ತು ಇತರ ಲೇಖನಗಳು

## ವಾಸ್ತು ಮತ್ತು ಶಿಲ್ಪಕಲೆ





# ಡಾ॥ ದೇವರಕೊಂಡಾರೆಡ್ಡಿ ಅವರ ಸ್ವವಿವರ

ಹೆಸರು: **ದೇವರಕೊಂಡಾರೆಡ್ಡಿ**

ವಿಳಾಸ (ಅ): ನಿವೃತ್ತ ಪ್ರಾಧ್ಯಾಪಕರು
ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ, ಹೊಸಪೇಟೆ ತಾಲ್ಲೂಕು,
ಬಳ್ಳಾರಿ ಜಿಲ್ಲೆ – ೫೮೩ ೨೭೬.

(ಆ) ಮನೆ ನಂ. ೩೫/೧, ೨೦ನೆಯ 'ಎ' ಮುಖ್ಯರಸ್ತೆ,
೧೨ನೆಯ ಅಡ್ಡರಸ್ತೆ, ವೆಂಕಟೇಶ್ವರ ಲೇಔಟ್, ಮಾರುತಿ ನಗರ (ಕೆ.ಇ.ಬಿ. ಬಳಿ),
ಬೆಂಗಳೂರು ೫೬೦ ೦೬೮. ದೂರವಾಣಿ: ೯೪೪೯೫೨೨೪೬೨
E-mail: devarakondareddy@rediffmail.com

ಜನ್ಮ ದಿನಾಂಕ: ೧೦-೫-೧೯೪೮

---

### ಶೈಕ್ಷಣಿಕ ಹಿನ್ನೆಲೆ

ಎಂ.ಎ. ಕನ್ನಡ (ಐಚ್ಛಿಕ ವಿಷಯ: ಕನ್ನಡ ಶಾಸನಗಳು)
ಬೆಂಗಳೂರು ವಿಶ್ವವಿದ್ಯಾಲಯ, ೧೯೭೧

**ಪಿಎಚ್.ಡಿ.**, ಬೆಂಗಳೂರು ವಿಶ್ವವಿದ್ಯಾಲಯ, ೧೯೯೩
ವಿಷಯ: **ತಲಕಾಡಿನ ಗಂಗರ ದೇವಾಲಯಗಳು – ಒಂದು ಅಧ್ಯಯನ**

### ಕಾರ್ಯಾನುಭವ

**ಸಂದರ್ಶಕ ಪ್ರಾಧ್ಯಾಪಕ**, ಶಾಸನ ಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭–೨೦೦೯

**ಡೀನ್**, ಸಮಾಜ ವಿಜ್ಞಾನಗಳ ನಿಕಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪ ರಿಂದ ೨೦೦೭

**ಪ್ರಾಧ್ಯಾಪಕ**, ಶಾಸನ ಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪–೨೦೦೮

**ಪ್ರವಾಚಕ**, ಶಾಸನ ಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬–೨೦೦೪

**ಉಪನ್ಯಾಸಕ**, ಶಾಸನ ಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫–೧೯೯೬

**ಬೋಧಕರು**, ಶಾಸನ ಶಾಸ್ತ್ರ ಪ್ರೌಢ ಮತ್ತು ಪ್ರವೇಶ ತರಗತಿಗಳು, ಶಾಸನ ಶಾಸ್ತ್ರ ವಿಭಾಗ, ಕನ್ನಡ ಸಾಹಿತ್ಯ ಪರಿಷತ್ತು, ೧೯೭೬–೧೯೯೪

**ಅನ್ವೇಷಕರು**, ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು, ೧೯೮೩–೧೯೯೫
(ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ, ಶಾಸನ ಮತ್ತು ದೇವಾಲಯಗಳ ಬಗ್ಗೆ ಮಾಹಿತಿ ಸಂಗ್ರಹ ಹಾಗೂ ಅಧ್ಯಯನ)

**ಮುಖ್ಯಸ್ಥರು**, ಸಂಶೋಧನಾ ವಿಭಾಗ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೬–೧೯೮೨

**ಉಪನ್ಯಾಸಕ**, ಸರ್ಕಾರಿ ಕಿರಿಯ ಕಾಲೇಜು, ಗುಂಡ್ಲುಪೇಟೆ, ೧೯೭೨–೧೯೭೪

### ವಿಶೇಷ ಅನುಭವ (ಬೋಧನೆ, ಕ್ಷೇತ್ರಕಾರ್ಯ, ಬರವಣಿಗೆ)

ಶಾಸನಗಳು ಮತ್ತು ಸ್ಮಾರಕಗಳ ಅನ್ವೇಷಣೆ ಮತ್ತು ಸಂಶೋಧನೆ ಹಾಗೂ ಸಂಶೋಧನಾ ಲೇಖನಗಳ ಪ್ರಕಟಣೆ. ಶಾಸನಗಳು ಹಾಗೂ ಸ್ಮಾರಕಗಳ ಅನ್ವೇಷಣೆ ಮತ್ತು ಸಂಶೋಧನೆಯಲ್ಲಿ ಕಿರಿಯ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ. ಶಾಸನ ಸಾಹಿತ್ಯ, ಇತಿಹಾಸ ಹಾಗೂ ವಾಸ್ತುಶಿಲ್ಪಗಳ ವಿಶೇಷ ಅಧ್ಯಯನ, ೪೦ ಕ್ಕೂ ಹೆಚ್ಚು ಲೇಖನಗಳ ಪ್ರಕಟಣೆ. ಕ್ರಿ.ಪೂ. ೩ನೆಯ ಶತಮಾನದಿಂದ ಕ್ರಿ.ಶ. ೧೯ನೆಯ ಶತಮಾನದವರೆಗಿನ ಕನ್ನಡ ಶಾಸನ ಲಿಪಿಗಳನ್ನು ಓದುವುದರಲ್ಲಿ ಪರಿಣತಿ, ಲಿಪಿಶಾಸ್ತ್ರದ ಬಗ್ಗೆ ವಿದ್ಯಾರ್ಥಿಗಳಿಗೆ ಬೋಧನೆ, ತರಬೇತಿ ಹಾಗೂ ಲೇಖನಗಳ ಪ್ರಕಟಣೆ. ದಕ್ಷಿಣ ಭಾರತದ ವಾಸ್ತು ಮತ್ತು ಶಿಲ್ಪಕಲೆಯ ಅಭ್ಯಾಸದಲ್ಲಿ ಪರಿಣತಿ, ವಿದ್ಯಾರ್ಥಿಗಳಿಗೆ ಬೋಧನೆ, ತರಬೇತಿ ಹಾಗೂ ಲೇಖನಗಳ ಪ್ರಕಟಣೆ. "ಇತಿಹಾಸ ದರ್ಶನ"– ಇತಿಹಾಸ ಅಕಾದೆಮಿಯ ವಾರ್ಷಿಕ ಸಂಚಿಕೆಗಳ ಸಂಪಾದಕನಾಗಿ ಐದು ವರ್ಷಗಳ ಅನುಭವ. ವಿಶ್ವವಿದ್ಯಾನಿಲಯಗಳು,

ಅಕಾಡೆಮಿಗಳು, ಇತಿಹಾಸ ಅಧ್ಯಯನ ಸಂಸ್ಥೆಗಳು, ಮಠಮಾನ್ಯಗಳು ನಡೆಸುವ ಅನೇಕ ರಾಜ್ಯ ಹಾಗೂ ರಾಷ್ಟ್ರಮಟ್ಟದ ವಿಚಾರ ಸಂಕಿರಣಗಳಲ್ಲಿ ಭಾಗವಹಿಸುವಿಕೆ ಹಾಗೂ ಪ್ರಬಂಧ ಮಂಡನೆ.

**ಸದಸ್ಯತ್ವ (ಪ್ರಾತಿನಿಧಿಕ ಸಂಸ್ಥೆಗಳು)**

೧) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨) ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂಗಳೂರು ೩) ಮಿಥಿಕ್ ಸೊಸೈಟಿ, ಬೆಂಗಳೂರು,
೪) ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು ೫) ಎಪಿಗ್ರಫಿಕಲ್ ಸೊಸೈಟಿ ಆಫ್ ಇಂಡಿಯಾ, ಮೈಸೂರು.

**ಪ್ರಶಸ್ತಿಗಳು-ಬಹುಮಾನಗಳು**

ಕರ್ನಾಟಕ ಇತಿಹಾಸ ಅಕಾದೆಮಿಯ **ಬಾ.ರಾ. ಗೋಪಾಲ್ ಪ್ರಶಸ್ತಿ**, ರೂ.೧೦,೦೦೦ ನಗದು ಹಾಗೂ ಪ್ರಶಸ್ತಿ ಪತ್ರ
(ಕರ್ನಾಟಕ ಇತಿಹಾಸ ಅಕಾದೆಮಿಯ ೧೮ನೆಯ ವಾರ್ಷಿಕ ಸಮ್ಮೇಳದಲ್ಲಿ ಪ್ರದಾನ ಮಾಡಲಾಯಿತು).
ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ** ಕೃತಿಗೆ, ೨೦೦೨.
ಸರ್ವಾಧ್ಯಕ್ಷ, ಹಂಪಿ ಉತ್ಸವ, ೨೦೦೮.

**ಪ್ರಕಟಿತ ಕೃತಿಗಳು**

**ಕರ್ನಾಟಕದ ಶಾಸನಗಳು** (ಕಿರಿಯರಿಗಾಗಿ), ಪ್ರಕಾಶ್ ಸಾಹಿತ್ಯ, ಬೆಂಗಳೂರು, ೧೯೮೯.
**ಕರ್ನಾಟಕದ ಚರಿತ್ರೆ** (ನವಸಾಕ್ಷರ ಪುಸ್ತಕ ಮಾಲೆ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.
**ಗಂಗರ ಶಿಲ್ಪಕಲೆ**, ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೧೯೯೩.
**ಶ್ರವಣಬೆಳಗೊಳದ ಬಸದಿಗಳ ವಾಸ್ತುಶಿಲ್ಪ**, ಚಂದ್ರಗುಪ್ತ ಪ್ರಕಾಶನ, ಶ್ರವಣಬೆಳಗೊಳ, ೧೯೯೩.
**ತಲಕಾಡಿನ ಗಂಗರ ದೇವಾಲಯಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೪
**ಲಿಪಿಯ ಹುಟ್ಟು ಮತ್ತು ಬೆಳವಣಿಗೆ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಮೊದಲ ಮುದ್ರಣ, ೨೦೦೨. ದ್ವಿಮು., ೨೦೦೯.
**ಕೃಷ್ಣಾಮೇಲ್ದಂಡೆ ಯೋಜನೆಯಲ್ಲಿನ ಮುಳುಗಡೆಯಾದ ಗ್ರಾಮಗಳ ಶಾಸನಗಳ ಶಾಸನಗಳ ಅಧ್ಯಯನ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.
**ಕರ್ನಾಟಕ ಶಾಸನಗಳಲ್ಲಿ ಶಾಪಾಶಯ**, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳ, ಧಾರವಾಡ, ೨೦೦೮
**ಗಂಗರ ಶಿಲ್ಪಕಲೆ**, ಕರ್ನಾಟಕ ಲಲಿತಕಲಾ ಅಕಾಡೆಮಿ, ೧೯೯೩; ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ೨೦೦೮ (ಪರಿಷ್ಕೃತ ದ್ವಿ. ಮು.).
**ಭಾರತೀಯ ವಾಸ್ತುವಿದ್ಯೆ**, ತೆಲುಗು ಮೂಲ – ಗಡಿಯಾರಂ ರಾಮಕೃಷ್ಣ ಶರ್ಮ, ರೆಡ್ಡಿ ಪ್ರಕಾಶನ, ಬೆಂಗಳೂರು, ೧೯೯೪

**ಸಂಪಾದಿತ ಕೃತಿಗಳು**

**ಬೆಂಗಳೂರು ಕೆಂಪೇಗೌಡರ ವಂಶಸ್ಥರು** (ಸಹ ಸಂಪಾದಕರು: ಪ್ರೊ॥ ಎಂ.ಎಚ್. ಕೃಷ್ಣಯ್ಯ), ಜನತಾ ಶಿಕ್ಷಣ ಸಂಸ್ಥೆ, ವಿವೇಕಾನಂದ ಕಾಲೇಜು, ರಾಜಾಜಿನಗರ, ಬೆಂಗಳೂರು, ೧೯೯೬.
**ಶ್ರೀ ಭೈರವಕ್ಷೇತ್ರದ ಸೀತಿಬೆಟ್ಟ**, (ಸಹ ಸಂಪಾದಕರು: ಡಾ॥ ಸೂರ್ಯನಾಥ ಕಾಮತ್, ಪಿ.ವಿ. ಕೃಷ್ಣಮೂರ್ತಿ) ಶ್ರೀ ಬೈರವೇಶ್ವರ ಮತ್ತು ಶ್ರೀಪತೇಶ್ವರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ, ಸೀತಿ ಗ್ರಾಮ, ೧೯೯೬.
**ಕೆಳದಿ ಬಸವರಾಜೇಂದ್ರ ವಿರಚಿತ ಕಾಳಿ ಮತ್ತು ಶಿವಸ್ತೋತ್ರ**, ಸ್ನೇಹ ಪ್ರಕಾಶನ, ಹೊಸಪೇಟೆ, ೨೦೦೧.
**ತುಳುನಾಡಿನ ಜೈನ ಶಾಸನಗಳು**, (ಸಹ ಸಂಪಾದಕರು: ಜಯಪ್ರಕಾಶ ಮಾವಿನಕುಳಿ), ಹಂಪಿ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.
**ಹಂಪಿ – ಕಲೆ, ಕ್ರೀಡೆ, ಕೌಶಲ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.
**ಶಾಸನ ಅಧ್ಯಯನ**, ಅರ್ಧವಾರ್ಷಿಕ, ಸಂಪುಟ ೧ ಮತ್ತು ೨, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩–೦೪.
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೧, ಬಳ್ಳಾರಿ ಜಿಲ್ಲೆ, ೧೯೯೮.
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೨, ಕೊಪ್ಪಳ ಜಿಲ್ಲೆ, ೧೯೯೯.
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೩, ಹಂಪಿ, ೨೦೦೦.
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೬, ಮಹಾರಾಷ್ಟ್ರ ಕನ್ನಡ ಶಾಸನಗಳು, ೨೦೦೧ (ಸಹಸಂಪಾದಕರು– ಜಿ.ಎನ್. ಉಪಾಧ್ಯ).
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೭, ರಾಯಚೂರು ಜಿಲ್ಲೆ, ೨೦೦೩.
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೮, ಬೀದರ್ ಜಿಲ್ಲೆ, ೨೦೦೬ (ಪ್ರಸಂ. ದೇವರಕೊಂಡಾರೆಡ್ಡಿ).

**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೯, ಬಾಗಲಕೋಟೆ ಜಿಲ್ಲೆ, ೨೦೦೬.
(ಅಚ್ಚಿಗೆ ಸಿದ್ಧಪಡಿಸಿರುವುದು)
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೧೦, ಬಿಜಾಪುರ ಜಿಲ್ಲೆ.
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ಹಾವೇರಿ ಜಿಲ್ಲೆ.
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ಗುಲ್ಬರ್ಗಾಜಿಲ್ಲೆ.
**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ಯಾದಗಿರಿ ಜಿಲ್ಲೆ.

**ಶಾಸನ, ಸಾಹಿತ್ಯ, ಇತಿಹಾಸ ಮತ್ತು ವಾಸ್ತುಶಿಲ್ಪ ಕುರಿತಂತೆ ಬರೆದಿರುವ ಸಂಶೋಧನ ಲೇಖನಗಳು**

ಸತ್ಯವಾಕ್ಯನ ಹಿರೇಕಾಟಿ ಶಾಸನ, **ಇತಿಹಾಸ ದರ್ಶನ**, ಸಂಪುಟ–೧, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ೧೯೮೮.
ದೊಡ್ಡಬೇಗೂರಿನ ನಾಗತ್ತರನ ಶಾಸನ, **ಇತಿಹಾಸ ದರ್ಶನ**, ಸಂಪುಟ–೩, ೧೯೮೯.
ಸೋಸಲೆಯ ನಿಶಿಧಿಶಾಸನ, **ಇತಿಹಾಸ ದರ್ಶನ**, ಸಂಪುಟ–೪, ೧೯೯೦.
ಗುಮ್ಮಳಾಪುರದ ಗೌರಮ್ಮನ ಗುಡಿಯ ಶಿಲಾಶಾಸನ, **ಇತಿಹಾಸ ದರ್ಶನ**, ಸಂಪುಟ–೫, ೧೯೯೦.
ಬೇಲೂರು ದೇವಾಲಯ ಭಿತ್ತಿಶಿಲ್ಪಗಳ ಮೇಲೆ ಜೈನಯಕ್ಷ ಯಕ್ಷಿಯರ ಪ್ರಭಾವ, **ಇತಿಹಾಸ ದರ್ಶನ**, ಸಂಪುಟ–೬, ೧೯೯೨.
ಶಿವಪುರ ಶಾಸನ, **ಇತಿಹಾಸ ದರ್ಶನ**, ಸಂಪುಟ–೭, ೧೯೯೩.
ಬನ್ನೇರುಘಟ್ಟ ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ, **ಇತಿಹಾಸ ದರ್ಶನ**, ಸಂಪುಟ–೮, ೧೯೯೪.
ಎರಿಗಲ್ವಾಡಿ ಚೋಳರ ಕೂರಾಕಲಪಲ್ಲಿ ತಾಮ್ರಶಾಸನ, **ಇತಿಹಾಸ ದರ್ಶನ**, ಸಂಪುಟ–೯, ೧೯೯೫.
ಆನೇಕಲ್ ಪಾಳೆಯಗಾರರ ಕೈಫಿಯತ್ತು, **ಇತಿಹಾಸ ದರ್ಶನ**, ಸಂಪುಟ–೧೦, ೧೯೯೫.
ಶಿವಮಾಂಧಾತೃವರ್ಮನ ಮುತ್ತೂರು ತಾಮ್ರಶಾಸನ, **ಇತಿಹಾಸ ದರ್ಶನ**, ಸಂಪುಟ–೧೧, ೧೯೯೬.
ತುಂಗಭದ್ರಾ ಪ್ರದೇಶದ ವಿರೂಪಾಕ್ಷ ದೇವಾಲಯಗಳು, **ಇತಿಹಾಸ ದರ್ಶನ**, ಸಂಪುಟ–೧೩, ೧೯೯೮.
ದಿದ್ದಿಗಿಯ ಕಾಮಕೋಟಿ ಭಳಾರಿಯ ಶಾಸನ, **ಇತಿಹಾಸ ದರ್ಶನ**, ಸಂಪುಟ–೧೪, ೨೦೦೧.
ಶ್ರವಣಬೆಳಗೊಳದ ಶಾಸನದ ಹಿನ್ನೆಲೆಯಲ್ಲಿ ಕುಲಸಂಬಂಧೀ ಕಟ್ಟಳೆಗಳು, ಕಲಹಗಳು, **ಇತಿಹಾಸ ದರ್ಶನ**, ಸಂಪುಟ–೧೫, ೨೦೦೩.
ಉತ್ತರ ಕರ್ನಾಟಕ ಶಾಸನ ಸಂಪಾದನೆ (ಬಾ.ರಾ. ಗೋಪಾಲ್ ದತ್ತಿ ಪ್ರಶಸ್ತಿ ವಿಜೇತರ ಭಾಷಣ). **ಇತಿಹಾಸ ದರ್ಶನ**, ಸಂಪುಟ – ೧೬, ೨೦೦೪.
ಸೂಳೆ ಎಂಬ ಪದದಿಂದ ಆರಂಭವಾಗುವ ಸ್ಥಳಗಳ ವಿಶ್ಲೇಷಣೆ, **ಇತಿಹಾಸ ದರ್ಶನ**, ಸಂಪುಟ–೨೦, ೨೦೦೫.
ಕರ್ನಾಟಕದ ಹತ್ತನೆಯ ಶತಮಾನದ ಕೆಲವು ಸ್ಥಳನಾಮಗಳು, **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, ೬೩–೧, ಜೂನ್ ೧೯೭೮.
ದೊಡ್ಡಹುಲ್ಲೂರಿನ ಕಲಿನೊಳಂಬನ ಶಾಸನ, **ಕನ್ನಡ ನುಡಿ**, ೪೧–೬, ಜನವರಿ, ಕನ್ನಡ ಸಾಹಿತ್ಯ ಪರಿಷತ್ತು, ೧೯೭೮.
ಬೂದಿಹಾಳಿನ ನಾಯಿಂದರ ಶಾಸನ, **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, ೬೫–೧, ೨, ಜೂನ್–ಡಿಸೆಂಬರ್ ೧೯೮೦.
ಕುತ್ತೂರು ಸಿಂಹವರ್ಮನ ತಾಮ್ರಶಾಸನ, **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, ೬೬–೨ ಮತ್ತು ೬೭–೧, ೧೯೮೪.
ಕದಂಬ ಇಮ್ಮಡಿ ಕೃಷ್ಣವರ್ಮನ ಶಿವಳ್ಳಿಯ ತಾಮ್ರಶಾಸನಗಳು, **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, ೬೯–೧, ಜೂನ್, ೧೯೮೪.
ಬೂದಿಹಾಳಿನ ಲಕ್ಷ್ಮೀಕಾಂತದೇವಾಲಯದ ಶಾಸನ, **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, ೭೦–೧, ಜೂನ್, ೧೯೮೫.
ಕಾಳೀಕಾಂಡದ ಪ್ರಾರ್ಥನಾ ಪದ್ಯಗಳು, **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, ೧೯೮೬.
ಬಳ್ಳಿಗಾವೆಯ ಕೋಡಿ ಮಠ, **ಸಾಧನೆ** ೨–೨, ಬೆಂಗಳೂರು ವಿಶ್ವವಿದ್ಯಾಲಯ, ೧೯೭೨.
ಬೇಗೂರು ಶಾಸನ ಒಂದು ವಿವೇಚನೆ, **ಸಾಧನೆ** ೩–೨, ೧೯೭೩.
ಕರ್ನಾಟಕದಲ್ಲಿ ಮಾಸ್ತಿ, **ಸಾಧನೆ** ೪–೨, ೧೯೭೫.
ತಮಟಕಲ್ಲಿನ ಗುಣಮಧುರನ ಶಾಸನಗಳು ಪುನರ್ ಪರಿಶೀಲನೆ (ಸಹಲೇಖಕರು – ರಾ. ಶೇಷಶಾಸ್ತ್ರಿ) **ಸಾಧನೆ** ೧೦–೩, ೧೯೮೨.
ಹಾಗಲ್ವಾಡಿ ಪಾಳೆಯಗಾರರ ವಾಸ್ತುರಚನೆ, ವಿಚಾರಗೋಷ್ಠಿ, ತುಮಕೂರು, ೧೯೯೧ (?).
ಹಂಪೆಯಲ್ಲಿ ಬಾದಾಮಿ ಚಾಲುಕ್ಯರ ದೇವಾಲಯ, ವಿಜಯನಗರ ಅಧ್ಯಯನ, ಹಂಪಿ ಉತ್ಸವ ಸಂಚಿಕೆ, ೧೯೯೫.
ವಾಸ್ತು ಮತ್ತು ಮೂರ್ತಿಶಿಲ್ಪ, **ಬೆಂಗಳೂರು ಕೆಂಪೇಗೌಡರ ವಂಶಸ್ಥರು** (ಸಹ ಸಂಪಾದಕರು: ಪ್ರೊ॥ ಎಂ.ಎಚ್. ಕೃಷ್ಣಯ್ಯ), ಜನತಾ ಶಿಕ್ಷಣ ಸಂಸ್ಥೆ, ವಿವೇಕಾನಂದ ಕಾಲೇಜು, ರಾಜಾಜಿನಗರ, ಬೆಂಗಳೂರು, ೧೯೯೬.
ಶಾಸನಗಳ ಮೊರಸುನಾಡು, **ಮಾನವಿಕ ಕರ್ನಾಟಕ**, ೪–೨, ೧೯೭೪, ಮೈಸೂರು ವಿಶ್ವವಿದ್ಯಾನಿಲಯ, ೧೯೭೫; ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು (ಭಾಗ–೧), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.
ಹಲ್ಮಿಡಿ ಶಾಸನ ಪುನರಧ್ಯಯನ, **ಆಸ್ವಾದ** (ಎಂ.ವಿ.ಸೀ. ಅಭಿನಂದನಾ ಗ್ರಂಥ,) ಉದಯಭಾನು ಕಲಾಸಂಘ, ಬೆಂಗಳೂರು, ೧೯೯೬.
ಸಪ್ತಮಾತೃಕಾ ಸಂಪ್ರದಾಯ, **ಹರತಿಸಿರಿ**, ಹರತಿ ವೀರನಾಯಕ ನೆನಪಿನ ಸಂಪುಟ, ಹರತಿ.

ಗದಾಯುದ್ಧ- ಸಾಂಸ್ಕೃತಿಕ ಅಧ್ಯಯನ, ರನ್ನ - **ಕವಿ ಕಾವ್ಯ ವಿಮರ್ಶೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಜಗನ್ನಾಥವಿಜಯ ಸಾಂಸ್ಕೃತಿಕ ಅಧ್ಯಯನ, **ರುದ್ರಭಟ್ಟ ವಿಚಾರಣಾ ಸಂಕಿರಣ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕೋಲಾರ ಜಿಲ್ಲೆಯ ಶಾಸನ ಶಿಲ್ಪಿಗಳು, **ನಾಗಾಭಿನಂದನ** (ಎಂ.ಜಿ. ನಾಗರಾಜ್ ಅಭಿನಂದನಾ ಗ್ರಂಥ) ಬೆಂಗಳೂರು, ೧೯೯೪.

ಜಿಜ್ಞಾವರದ ಪಾಳೆಯಗಾರರು, ನೊಳಂಬ ಸಮ್ಮೇಳನದ ಸಂಚಿಕೆ, ಅರಸೀಕೆರೆ, ೨೦೦೦.

ಸುಗಟೂರು ಪಾಳೆಯಗಾರರು, ನೊಳಂಬ ಸಮ್ಮೇಳನದ ಸ್ಮರಣ ಸಂಚಿಕೆ, ಅರಸೀಕೆರೆ, ೨೦೦೦.

ಸೀತಿಬೆಟ್ಟದ ಶಾಸನಗಳು, **ಶ್ರೀ ಭೈರವಕ್ಷೇತ್ರದ ಸೀತಿಬೆಟ್ಟ**, ೧೯೯೬.

ಹಂಪಿಯಲ್ಲಿ ಇನ್ನೊಂದು ಮಾಲ್ಯವಂತ, ವಿಜಯನಗರ ಅಧ್ಯಯನ, **ಹಂಪಿ ಉತ್ಸವದ ಸ್ಮರಣ ಸಂಚಿಕೆ**, ೧೯೯೬.

ಪಂಪಾತೀರ್ಥ, ಪಂಪಾಕ್ಷೇತ್ರ, ಪಂಪಾಸರೋವರ, ವಿಜಯನಗರ ಅಧ್ಯಯನ, **ಹಂಪಿ ಉತ್ಸವದ ಸ್ಮರಣ ಸಂಚಿಕೆ**, ೧೯೯೭.

ಶಿವತತ್ತ್ವ ಚಿಂತಾಮಣಿ ಮತ್ತು ಹಂಪಿ, ವಿಜಯನಗರ ಅಧ್ಯಯನ, **ಹಂಪಿ ಉತ್ಸವದ ಸ್ಮರಣಸಂಚಿಕೆ**, ೧೯೯೯.

ವಿದ್ಯಾರಣ್ಯ, ಕ್ರಿಯಾಶಕ್ತಿ ಮತ್ತು ವಿಜಯನಗರ ಸ್ಥಾಪನೆ, ವಿಜಯನಗರ ಅಧ್ಯಯನ, **ಹಂಪಿ ಉತ್ಸವದ ಸ್ಮರಣ ಸಂಚಿಕೆ**, ೨೦೦೦.

ಲಿಪಿ ಮತ್ತು ಬರವಣಿಗೆಯ ಉಗಮ, **ಭಾಷಾ ವಿಶ್ವಕೋಶ**, ಹಂಪಿ, ೨೦೦೦.

ಬರವಣಿಗೆ ಮತ್ತು ಬರೆಯುವುದು, **ಭಾಷಾ ವಿಶ್ವಕೋಶ**, ಕನ್ನಡ ವಿವಿ. ಹಂಪಿ, ೨೦೦೦.

*ಗೆಜೆಟಿಯರ್ ಮತ್ತು ಕ್ಷೇತ್ರಕಾರ್ಯ*, **ಸೂರ್ಯಕೀರ್ತಿ** {ಸೂರ್ಯನಾಥ ಕಾಮತ್ ಅವರ ಅಭಿನಂದನಾ ಗ್ರಂಥ (ಸಂ) ಪಿ.ವಿ. ಕೃಷ್ಣಮೂರ್ತಿ, ಕೆ. ವಸಂತಲಕ್ಷ್ಮೀ}, ಬೆಂಗಳೂರು, ೨೦೦೦.

ಆನೆಕಲ್ಲು ಪಾಳೆಗಾರರು, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಕನ್ನಡ ವಿವಿ, ಹಂಪಿ, ೨೦೦೧.

ಕಾಳಿಕಾಂಡದಲ್ಲಿ ಐತಿಹಾಸಿಕ ಅಂಶಗಳು.

ವಾಣಿಜ್ಯ, ಕೈಗಾರಿಕೆ ಮತ್ತು ತೆರಿಗೆಗಳನ್ನೊಳಗೊಂಡಂತೆ ಪ್ರಾಚೀನ ಕಾಲದ ಅಧ್ಯಯನ, **ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**-(ಸಂ) ಆರ್. ಗೋಪಾಲ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ- ೨೦೦೪.

ಚಿತ್ರದುರ್ಗ ಜಿಲ್ಲೆಯ ವಾಣಿಜ್ಯ, ವ್ಯಾಪಾರ ಮತ್ತು ಗಣಿಗಾರಿಕೆ, **ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**-(ಸಂ) ಆರ್.ಗೋಪಾಲ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಹೊಸಪೇಟೆ - ೨೦೦೫.

ಗದಗ ಜಿಲ್ಲೆಯ ತೆರಿಗೆ, ವ್ಯಾಪಾರ, ವಾಣಿಜ್ಯ ಮತ್ತು ಕೈಗಾರಿಕೆಗಳು, **ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**-(ಸಂ) ಆರ್. ಗೋಪಾಲ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು-೨೦೦೬.

ಶಾಸನ ಸಾಹಿತ್ಯ, **ಮಂಜುನಾಥೇಶ್ವರ ಕಾಲೇಜು ಸ್ಮರಣ ಸಂಚಿಕೆ**, ಧರ್ಮಸ್ಥಳ, ೨೦೦೬.

ಹಂಪಿಯ ಶಾಸನಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬?

ಗಂಗರ ಕಲೆ, **ಕನ್ನಡ ವಿಶ್ವಕೋಶ**, ಮೈಸೂರು ವಿ.ವಿ., ೨೦೦೮.

ಗಂಗರ ಇತಿಹಾಸ, **ಸುವರ್ಣ ಕರ್ನಾಟಕ ಸಂಪುಟ**, ಕನ್ನಡ ವಿವಿ., ೨೦೦೮.

ಮಂಡ್ಯ ಜಿಲ್ಲೆಯ ವ್ಯಾಪಾರ, ವಾಣಿಜ್ಯ ಮತ್ತು ಕೈಗಾರಿಕೆ, **ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**-(ಸಂ) ಆರ್. ಗೋಪಾಲ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು - ೨೦೦೮.

ಯೋಗವಾಹ, 'ಜ', 'ಜಳ' ಮತ್ತು 'ಳ' ಲಿಪಿಗಳ ಉಗಮ, ಮೊದಲ ಸಹಸ್ರಮಾನದ ಕನ್ನಡ ಶಾಸನಗಳು (ಅಪ್ರಕಟಿತ).

ಕನ್ನಡ ಸಂಶೋಧನೆಗೆ ಗೋವಿಂದ ಪೈಗಳ ಕೊಡುಗೆ, **ಗೋವಿಂದ ಪೈ ಸಂಸ್ಕೃತಿ ಲೋಕ**, ಸುರಾನಾ ಕಾಲೇಜು, ಬೆಂಗಳೂರು, ೨೦೦೬.

ಗೋಸಾಸ ಕಲ್ಲುಗಳು, ಉದ್ದೇಶ ಮತ್ತು ಅರ್ಥ, ಸ್ಮರಣ ಸಂಚಿಕೆ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ, ೨೦೦೮?

ಆರಂಭಕಾಲದ ಲಿಪಿ ಬೆಳವಣಿಗೆ ಮತ್ತು ಸಮಕಾಲೀನ ಲಿಪಿ ಸಂಬಂಧಗಳು, ೨೦೦೮.

**ಪುಸ್ತಕ ವಿಮರ್ಶೆ**

*ಧಾರವಾಡ ತಾಲೂಕಿನ ಶಾಸನಗಳು*, (ಸಂ-ಎಂ.ಎಂ.ಕಲಬುರ್ಗಿ) **ಕನ್ನಡ ನುಡಿ** ೪೧-೫, ಮಾರ್ಚ್, ಕನ್ನಡ ಸಾಹಿತ್ಯ ಪರಿಷತ್ತು, ೧೯೭೮.

*ಶಾಸನ ಮತ್ತು ಸಾಹಿತ್ಯ ಕ್ಷೇತ್ರಗಳು*, **ಸಂಶೋಧನ** {ಎಂ. ಚಿದಾನಂದಮೂರ್ತಿ ಗೌರವ ಸಂಪುಟ - (ಸಂ) ಲಕ್ಷ್ಮಣ್ ತೆಲಗಾವಿ} ಬೆಂಗಳೂರು, ೧೯೯೧.

*Pratima Kosa*, Vol.I, An Encyclopedia of Indian Iconograhy, by S.K. Ramachandra Rao, **ಕರ್ನಾಟಕ ಲೋಚನ**, ಸಂ.೨-೧, ಜೂನ್ ೧೯೮೯, ಪು.೪೬.

## ಅಭಿನಂದನ ಸಮಿತಿ

ಅಧ್ಯಕ್ಷರು : ಡಾ॥ ಆರ್. ಶೇಷಶಾಸ್ತ್ರಿ

ಉಪಾಧ್ಯಕ್ಷರು : ಡಾ॥ ಪಿ.ವಿ. ಕೃಷ್ಣಮೂರ್ತಿ

### ಕಾರ್ಯದರ್ಶಿಗಳು

ಡಾ॥ ತಮಿಳ್ ಸೆಲ್ವಿ
ಶ್ರೀ ಹೊ.ನ. ನೀಲಕಂಠೇಗೌಡ
ಶ್ರೀಮತಿ ಡಿ. ಸ್ಮಿತಾರೆಡ್ಡಿ
ಡಾ॥ ಬಿ.ಆರ್. ಸತ್ಯನಾರಾಯಣ

### ಸಲಹೆ-ಸಮಾಲೋಚನೆ

ಡಾ॥ ಸೂರ್ಯನಾಥ ಯು. ಕಾಮತ್
ಡಾ॥ ಕೆ.ಆರ್. ಗಣೇಶ್
ಡಾ॥ ಅ.ಲ. ನರಸಿಂಹನ್
ಡಾ॥ ಎಚ್.ಎಸ್. ಗೋಪಾಲರಾವ್
ಡಾ॥ ಎಂ.ಜಿ. ನಾಗರಾಜ್
ಡಾ॥ ಎಂ.ಬಿ. ಪಾಟೀಲ್
ಡಾ॥ ಎಸ್.ವಿ. ವೆಂಕಟೇಶಯ್ಯ

### ಸದಸ್ಯರು

ಡಾ॥ ಬೆಂ.ಶಾ. ಶ್ಯಾಮಲಾ ರತ್ನಕುಮಾರಿ
ಡಾ॥ ಕೂ.ಸ. ಅಪರ್ಣ
ಶ್ರೀ ಕೋ.ವೆಂ.ರಾಮಕೃಷ್ಣೇಗೌಡ
ಡಾ॥ ಹರಿಹರ ಶ್ರೀನಿವಾಸ ರಾವ್
ಡಾ॥ ಜಯಮ್ಮ ಕರಿಯಣ್ಣ
ಶ್ರೀ ಜಿ.ಕೆ. ದೇವರಾಜಸ್ವಾಮಿ
ಡಾ॥ ಎನ್.ಆರ್. ಲಲಿತಾಂಬ
ಶ್ರೀ ವೇಮಗಲ್ ಸೋಮಶೇಖರ್
ಶ್ರೀ ಕೆಂಗೇರಿ ಚಕ್ರಪಾಣಿ
ಶ್ರೀ ಲಿಂಗಪ್ಪ ಎಲ್.
ಡಾ॥ ಕೆ. ವಸಂತಲಕ್ಷ್ಮಿ
ಡಾ॥ ಟಿ.ವಿ. ನಾಗರಾಜ್
ಶ್ರೀ ಸುಂಕಂ ಗೋವರ್ಧನ
ಡಾ॥ ಬಿ.ಆರ್. ಭಾರತೀ
ಶ್ರೀ ಎಸ್. ನಂಜುಂಡಸ್ವಾಮಿ
ಶ್ರೀ ಎಸ್. ಕಾರ್ತೀಕ್
ಶ್ರೀ ಎಂ.ಎನ್. ಪ್ರಭಾಕರ್
ಶ್ರೀ ಬೆಂ.ಪು. ನಿರಂಜನ



ತಾತ – ತಿಮ್ಮರಾಯರೆಡ್ಡಿ



ಅಜ್ಜಿ – ಚೆನ್ನಮ್ಮ



ತಂದೆ – ಮುನಿಸ್ವಾಮಿರೆಡ್ಡಿ



ತಾಯಿ – ತಿಮ್ಮಕ್ಕ



ಮನೆ ದೇವರ ಪಲ್ಲಕ್ಕಿ



ಊರಿನ ಪಲ್ಲಕ್ಕಿಗಳು



ಊರಿನ ಗೆಳೆಯರು : ದೇವರಕೊಂಡಾರೆಡ್ಡಿ,
ರಾಮಸ್ವಾಮಿರೆಡ್ಡಿ, ನಾರಾಯಣರೆಡ್ಡಿ, ಚೆನ್ನಕೇಶವರೆಡ್ಡಿ





ಮದುವೆಯ ಸಂದರ್ಭದ ಚಿತ್ರಗಳು ೧೯೭೩



ಅಣ್ಣ – ಮುನಿಸ್ವಾಮಿರೆಡ್ಡಿ



ಕನ್ನಡ ಅಂತಿಮ ಎಂ.ಎ. ಪ್ರವಾಸ, ಚಿದಾನಂದಮೂರ್ತಿಯವರೊಂದಿಗೆ
ಬ್ರಹ್ಮಗಿರಿ ಶಾಸನದ ಬಳಿ



ಕನ್ನಡ ಅಂತಿಮ ಎಂ.ಎ. ಪ್ರವಾಸ, ಬಾದಾಮಿಯ ಮಂಗಳೇಶನ ಶಾಸನದ ಬಳಿ



ಸ್ನಾತಕೋತ್ತರ ಸಹಪಿದ್ಯಾರ್ಥಿಗಳೊಂದಿಗೆ ಶೈಕ್ಷಣಿಕ ಪ್ರವಾಸ



ಕನ್ನಡ ಅಂತಿಮ ಎಂ.ಎ. ಪ್ರವಾಸ, ಹಂಪಿ ವಿರೂಪಾಕ್ಷನ ಗುಡಿ ಮುಂದೆ, ೧೯೭೦



ಕನ್ನಡ ಅಂತಿಮ ಎಂ.ಎ. ವಿದ್ಯಾರ್ಥಿಗಳೊಂದಿಗೆ ಪ್ರವಾಸ, ಪಟ್ಟದಕಲ್ಲು



ಸಂಸ್ಕೃತ ಕಾಲೇಜು ಆವರಣದಲ್ಲಿ : (ಪ್ರಸನ್ನಕುಮಾರ, ಜ್ವಾಲಾಕುಮಾರ,
ಡಿ.ವಿ. ಕೃಷ್ಣಮೂರ್ತಿ, ಶಿವಣ್ಣ ಎಸ್, ಶ್ಯಾಮಸಂದರ್ ಡಿ.ಕೆ.)



ಗುಂಡ್ಲುಪೇಟೆ ಗೆಳೆಯರು, ೧೯೭೪



ಹಸ್ತಪ್ರತಿ ಸಮ್ಮೇಳನ – ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಭಾಗವಹಿಸಿದ್ದ ಅತಿಥಿಗಳೊಂದಿಗೆ



ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ೬೬೦ನೆಯ ವರ್ಷದ
ಸ್ಮರಣೋತ್ಸವದ ಸಂಚಾಲಕನಾಗಿ



ತುಳುನಾಡಿನ ಜೈನಶಾಸನಗಳು ವಿಚಾರಸಂಕಿರಣ ೨೦೦೩.
ಶ್ರೀಮತಿ ರತ್ನಮ್ಮಹೆಗ್ಗಡೆ, ಮಾವಿನಕುಳಿ ಮುಂತಾದವರೊಂದಿಗೆ




ಪುಸ್ತಕ ಬಿಡುಗಡೆ ೨೦೦೨, ಎಸ್.ವಿ. ವೆಂಕಟೇಶಯ್ಯ, ಎಚ್.ಆರ್. ರಘುನಾಥಭಟ್,
ಎಂ.ಎಂ. ಕಲಬುರ್ಗಿ, ಮಲ್ಲೇಪುರಂ ಜಿ. ವೆಂಕಟೇಶ ಮುಂತಾದವರೊಂದಿಗೆ




ಶಾಸನ ಕಾರ್ಯಾಗಾರ ೨೦೦೪, ಕೆ.ವಿ. ನಾರಾಯಣ, ಎಚ್. ಲಕ್ಕಪ್ಪಗೌಡ



ನ್ಯಾಕ್ ಕಮಿಟಿ ಶಾಸನ ವಿಭಾಗಕ್ಕೆ ಬಂದಾಗ, ವಿಭಾಗದ ಸಹೋದ್ಯೋಗಿಗಳೊಂದಿಗೆ



ಹಂಪಿ ವಸ್ತುಸಂಗ್ರಹಾಲಯದಲ್ಲಿಯ ಕೊಪ್ಪಳದ ಶಾಸನಗಳ ಬಳಿ
ಕೆ.ಜಿ. ಭಟ್‌ಸೂರಿ, ಡಿ.ವಿ. ಪರಮಶಿವಮೂರ್ತಿಯವರೊಂದಿಗೆ



ಮಾನ್ಯ ರಾಜ್ಯಪಾಲರಾದ ಚತುರ್ವೇದಿಯವರು ಶಾಸನ ಸಂಪುಟವನ್ನು ಪರಿಶೀಲಿಸುತ್ತಿರುವುದು



ಇತಿಹಾಸ ಅಧ್ಯಯನ ಕಟ್ಟಡದ ಉದ್ಘಾಟನಾ ಸಮಯದಲ್ಲಿ ರವೀಂದ್ರ, ಕೆ.ಎಂ. ಸುರೇಶ್,
ಲಕ್ಷ್ಮಣ್ ತೆಲಗಾವಿ, ಎಂ.ಪಿ. ಪ್ರಕಾಶ್, ಟಿ.ಪಿ. ವಿಜಯ್ ಅವರುಗಳೊಂದಿಗೆ



ಗಿಡ ನೆಡುತ್ತಿರುವುದು ಅರಣ್ಯ ಇಲಾಖೆ ಕಮಿಷನರ್ ರೈ, ಪ್ರಭಾರಿ ಕುಲಪತಿ ಕೆ.ವಿ. ನಾರಾಯಣ ಅವರೊಂದಿಗೆ



ನುಡಿ ಹಬ್ಬ ೧೩ರಲ್ಲಿ ಸಮಾಜ ವಿಜ್ಞಾನ ನಿಕಾಯವನ್ನು ಪ್ರತಿನಿಧಿಸುವ ಡೀನ್ ಆಗಿ




ನುಡಿ ಹಬ್ಬ ೧೩ರ ಸಮಾಜ ವಿಜ್ಞಾನ ನಿಕಾಯದ ಡೀನ್ ಆಗಿ



ನುಡಿ ಹಬ್ಬ ೧೩ರ ಮೆರವಣಿಗೆಯಲ್ಲಿ ಕಾರ್ಯಕಾರಿ ಸಮಿತಿ ಸದಸ್ಯರೊಂದಿಗೆ



ಬಾದಾಮಿಯಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ
ವಾರ್ಷಿಕ ಸಮ್ಮೇಳನದಲ್ಲಿ (೨೦೦೩) ಬಾ.ರಾ. ಗೋಪಾಲ್ ಪ್ರಶಸ್ತಿ ಸ್ವೀಕರಣೆ



ಕರ್ನಾಟಕ ಸಾಹಿತ್ಯ ಅಕಾಡೆಮಿಯ ೨೦೦೨ರ ಪುಸ್ತಕ ಬಹುಮಾನ ವಿತರಣೆ, ಮಂಡ್ಯದಲ್ಲಿ,
ದೇ. ಜವರೇಗೌಡ, ಕಮಲಾ ಹಂಪನಾ, ಮುಂತಾದವರು



ಕನ್ನಡ ವಿಶ್ವವಿದ್ಯಾಲಯದಿಂದ ಸನ್ಮಾನಿತ, ೨೦೦೮



ನಿವೃತ್ತರಾದಾಗ ಬೀಳ್ಕೊಡಿಗೆ, ೨೦೦೮
ಎ. ವೆಂಕಟೇಶ್, ಮಲ್ಲೇಪುರಂ ಜಿ. ವೆಂಕಟೇಶ, ಬೊರಲಿಂಗಯ್ಯ, ಡಿ.ವಿ. ಪರಮಶಿವಮೂರ್ತಿ



ಚಿತ್ರ ಕೃಪೆ : ಡಾ॥ ಹೆಚ್. ಚಂದ್ರಶೇಖರ್
೨೦೦೮ರ ಹಂಪಿ ಉತ್ಸವದ ಸರ್ವಾಧ್ಯಕ್ಷರಾಗಿ
ಸಚಿವ ಶ್ರೀ ಜನಾರ್ಧನರೆಡ್ಡಿಯವರಿಂದ ಸನ್ಮಾನ, ಶ್ರೀರಾಮುಲು ಉಪಸ್ಥಿತಿ



ಅಕ್ಕಾದೇವಿ ಕಟ್ಟಿಸಿದ ಗ್ರಾಮದ ಅನ್ವೇಷಣ ಸಂದರ್ಭದಲ್ಲಿ
ದಿ॥ ವರಪ್ರಸಾದರಾವ್, ಜೋಯಸ್, ಶ್ರೀಮತಿ ವರಪ್ರಸಾದರಾವ್, ಎಸ್.ವಿ. ವೆಂಕಟೇಶಯ್ಯ



ಶಾಸನಶಾಸ್ತ್ರ ತರಗತಿ ವಿಶೇಷ ಉಪನ್ಯಾಸ
ಎಂ.ವಿ. ಸೀತಾರಾಮಯ್ಯ, ಕೆ. ಗೋಕುಲನಾಥ್ ರನ್ನು ಸ್ವಾಗತಿಸುತ್ತಿರುವುದು



ಗ್ಯಾಜೆಟಿಯರ್ ಸಹೋದ್ಯೋಗಿ ಆರ್. ಶೇಷಶಾಸ್ತ್ರಿ



ಗಬ್ಬೂರಿನ ಶಾಸನ ಪ್ರತಿ ತೆಗೆಯುತ್ತಿರುವಲ್ಲಿ ನಿರ್ದೇಶನ
ಬಿರಾದಾರ್, ಕಲವೀರ ಮನ್ವಾಚಾರ್



ಶಾಸನಶಾಸ್ತ್ರ ಪ್ರವೇಶ ತರಗತಿ, ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾಗಿದ್ದ ಜಿ. ನಾರಾಯಣ,
ಸೂರ್ಯನಾಥ ಯು. ಕಾಮತ್ ಮುಂತಾದವರೊಂದಿಗೆ ೧೯೭೬-೭೭



ಶಾಸನಶಾಸ್ತ್ರ ಪ್ರೌಢ ತರಗತಿ. ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಹಂಪನಾ.
ಅಶ್ವತ್ಥನಾರಾಯಣ, ಡಿ. ಲಿಂಗಯ್ಯ ಅವರೊಂದಿಗೆ ೧೯೭೭-೭೮



ಕನ್ನಡ ಸಾಹಿತ್ಯ ಪರಿಷತ್ತಿನ ಶಾಸನಶಾಸ್ತ್ರ ತರಗತಿ ವಿದ್ಯಾರ್ಥಿಗಳೊಂದಿಗೆ ಪ್ರವಾಸ



ಬಿಜಾಪುರದ ಫ.ಗು. ಹಳಕಟ್ಟಿ ಸಂಶೋಧನಾಲಯದ
ಮಾನ್ಯ ಕಮಿಟಿ ಸದಸ್ಯರಾದ ತೇಜಸ್ವಿ ಕಟ್ಟೀಮನಿ, ವಿ.ಜಿ. ಕೆರಿಮನಿ, ಶಿವಯೋಗಿ ತಂಬಾಕೆ.



ಆವರಣದಲ್ಲಿ ಬೆಳೆಸಿದ ಗಿಡ-ಮರಗಳ ಹಿನ್ನಲೆಯಲ್ಲಿ



ಕರ್ನಾಟಕ ಇತಿಹಾಸ ಅಕಾದೆಮಿಯ ಕಾರ್ಯಕಾರ್ತನಾಗಿ
ಕೆ.ಆರ್. ಗಣೇಶ್, ಎಚ್.ಎಸ್. ಗೋಪಾಲರಾವ್‌ರೊಂದಿಗೆ



ನ್ಯಾಕ್ ಸಮಿತಿಯವರು ಶಾಸನಶಾಸ್ತ್ರ ತರಗತಿಗೆ ಬಂದಿದ್ದಾಗ



ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಿರುವುದು



ರಾಮರೆಡ್ಡಿ, ನಾರಾಯಣರೆಡ್ಡಿ, ತಿಮ್ಮಕ್ಕ, ದೇವರಕೊಂಡಾರೆಡ್ಡಿ, ಕೃಷ್ಣಾರೆಡ್ಡಿ



ಡಾ॥ ದೇವರಕೊಂಡಾರೆಡ್ಡಿಯವರ ಸಂಪೂರ್ಣ ಕುಟುಂಬ



ಮಗನ ಮದುವೆಯ ಸಂದರ್ಭದಲ್ಲಿ



ಕರ್ನಾಟಕ ಇತಿಹಾಸ ಅಕಾದೆಮಿಯ ಪ್ರವಾಸ – ವಸಂತಲಕ್ಷ್ಮಿ, ಅಪರ್ಣ,
ಪಿ.ವಿ. ಕೃಷ್ಣಮೂರ್ತಿ, ಅ.ಲ. ನರಸಿಂಹನ್, ಬಿ.ಆರ್. ತುಬಾಕಿ, ಎಸ್.ವಿ. ವೆಂಕಟೇಶಯ್ಯ



ಕನ್ನಡ ಸಾಹಿತ್ಯ ಪರಿಷತ್ತಿನ ಶಾಸನಶಾಸ್ತ್ರ ತರಗತಿ ವಿದ್ಯಾರ್ಥಿಗಳು, ಉಪನ್ಯಾಸಕರೊಂದಿಗೆ
ಪಿ.ವಿ. ಕೃಷ್ಣಮೂರ್ತಿ, ಲಕ್ಷ್ಮಣ್ ತೆಲಗಾವಿ, ಕೆ.ಆರ್. ಗಣೇಶ್, ಶ್ರೀಮತಿ ಗಣೇಶ್,
ನಂಜುಂಡಸ್ವಾಮಿ, ಆಚಾರ್ .... ನೀರಲಗಿ ಶಿವಪ್ಪ



ಶಾಸನಶಾಸ್ತ್ರ ತರಗತಿ ವಿದ್ಯಾರ್ಥಿಗಳೊಂದಿಗೆ ಬ್ರಹ್ಮಗಿರಿ ಬಳಿ



ಶಾಸನಶಾಸ್ತ್ರ ತರಗತಿ – ೧೯೯೦




ಜೈನ ಸಮುದಾಯವೊಂದರ ವಿಚಾರ ಸಂಕಿರಣದಲ್ಲಿ ಪೂಜ್ಯ ಆಸೂರೀ ಸ್ವಾಮಿಗಳೊಂದಿಗೆ




ವಿಚಾರ ಸಂಕಿರಣ, ಹಂಪಿ




ತಾಲ್ಲೂಕು ಇತಿಹಾಸ ಸಮ್ಮೇಳನ, ಸಾಗರ



ಸಾಂಚಿ ಸ್ತೂಪದ ಬಳಿ ಎಂ.ಎಂ. ಕಲಬುರ್ಗಿ ದಂಪತಿಗಳು
ಮತ್ತು ಎಸ್.ವಿ. ವೆಂಕಟೇಶಯ್ಯ ಅವರೊಂದಿಗೆ

# ಸಾಧನೆಯ ಹಾದಿಯಲ್ಲಿ . . . .

– ಡಾ॥ ದೇವರಕೊಂಡಾರೆಡ್ಡಿ

**ವ**ಣಕನಹಳ್ಳಿಯು ತಾಲೂಕು ಕೇಂದ್ರವಾದ ಆನೇಕಲ್‌ನಿಂದ ದಕ್ಷಿಣಕ್ಕೆ ಇರುವ ಸುಮಾರು ದೊಡ್ಡದಾದ ಊರು. ಪಂಚಾಯತಿ ಕೇಂದ್ರವೂ ಆಗಿದೆ. ಊರಿನ ಪಶ್ಚಿಮಕ್ಕೆ ಆನೇಕಲ್–ಗುಮ್ಮಳಾಪುರ ರಸ್ತೆಯಿದ್ದು, ಈ ರಸ್ತೆಯೇ ದಕ್ಷಿಣ ಪಿನಾಕಿನಿ ಹಾಗೂ ಕಾವೇರಿ ಜಲಾನಯನ ಪ್ರದೇಶದ ವಿಂಗಡಣೆಯ ಗೆರೆಯಂತಿದೆ. ರಸ್ತೆಯ ಪಶ್ಚಿಮಕ್ಕೆ ಬೀಳುವ ಮಳೆನೀರು ಮುತ್ಯಾಲಮಡು ಸೇರಿ ಮುಂದೆ ಅರ್ಕಾವತಿಗೆ ಕೂಡಿದರೆ ಪೂರ್ವದಲ್ಲಿ ಬೀಳುವ ಮಳೆನೀರು ಸಿಂಗಸಂದ್ರದ ಕೆರೆಗೆ ಹರಿದು ಅಲ್ಲಿಂದ ರಾಜಾನುಕೆರೆ. ಅಲ್ಲಿಂದ ದೊಡ್ಡ ಕೆರೆ ಹೀಗೆ ಸಾಗಿ ಮುಂದೆ ದಕ್ಷಿಣ ಪಿನಾಕಿನಿಗೆ ಸೇರುತ್ತದೆ. ಇಂತಹ ರಸ್ತೆಯ ಪೂರ್ವಕ್ಕೆ ಸುಮಾರು ಒಂದು ಕಿ.ಮೀ. ದೂರದಲ್ಲಿ ನಮ್ಮ ಊರಿದೆ. ರಸ್ತೆಯಿಂದ ಬಸ್ ಇಳಿದು ಬಂದರೆ ಮೊದಲು ಸಿಗುವುದು ಒಂದು ದೊಡ್ಡ ಮಾವಿನಮರ. ಅದರ ಸಮೀಪ ಕುಂಟೆಗೆರೆ ಎಂದು ಕರೆಯುವ ಕುಂಟೆ. ಅಲ್ಲಿಂದ ಮುಂದೆ ಬಂದರೆ ಪಳ್ಳಗಳು; ಹಳ್ಳಗಳನ್ನು ದಾಟಿ ಬಂದರೆ ಮಾದಿಗರಕೇರಿ. ಅಲ್ಲಿಂದ ದಕ್ಷಿಣಕ್ಕೆ ತಿರುಗಿದರೆ ಶಾಲೆ. ಶಾಲೆಯನ್ನು ಸುತ್ತುವರಿದು ಪಶ್ಚಿಮಕ್ಕೆ ತಿರುಗಿ ಒಂದೆರಡು ಮನೆ ದಾಟಿದರೆ ನಮ್ಮ ಮನೆ ಸಿಗುತ್ತದೆ. ಊರು ಎರಡು ಭಾಗವಾಗಿದ್ದು ಒಂದು ಹಳೆಯ ಊರು ಇನ್ನೊಂದು ಹೊಸವೂರು ಎಂದಿದ್ದವು. ನಮ್ಮದು ಹಳೆಯ ಊರಿನ ಊರು ಬಾಗಿಲಲ್ಲಿ ಮನೆ. ಕಂದಕವನ್ನು ಮುಚ್ಚಿ ಮನೆ ನಿರ್ಮಿಸಿದ್ದರಂತೆ. ನನಗೆ ನೆನಪಿದ್ದಂತೆ ಯಾವುದೇ ಕೋಟೆಯು ಊರಲ್ಲಿ ಅಥವಾ ಊರ ಸುತ್ತ ಇರಲಿಲ್ಲ. ಆದರೆ ಕಂದಕವಿತ್ತು. ಈ ಕಂದಕ ನಮ್ಮ ಮನೆಯ ಹಿಂಬದಿಯಿಂದ ಗಾಣಿಗರ ಮನೆವರೆಗೆ ಇದ್ದದ್ದು ನನ್ನ ನೆನಪು. ಅದು ಹಾಗೆಯೇ ಮುಂದುವರಿದಿದ್ದಿರಬಹುದು. ನಮ್ಮ ಮನೆಯ ಮುಂದೆ ಮುತ್ತರಾಯಪ್ಪನವರ ಪಳ್ಳ ಒಂದಿತ್ತು. ಈ ಕಂದಕ ಅಲ್ಲಿಂದ ಸಂಜೀವಪ್ಪನವರ ಮನೆಯವರೆಗೆ ಇತ್ತು. ಸಂಜೀವಪ್ಪನವರ ಮನೆ ದಿಣ್ಣೆಯಲ್ಲಿದ್ದು ಅವರ ಮನೆಯಲ್ಲಿ ಸೇದುವ ಬಾವಿಯೂ ಇತ್ತು. ಈ ಎತ್ತರದಲ್ಲಿ ಬಾವಿ ತೋಡಿಸಿ ನೀರು ಪಡೆದವರ ಸಾಹಸ ಮೆಚ್ಚಬೇಕು. ಹಳೆಯ ಊರಿನಲ್ಲಿ ತೆಲುಗು ಮೊರಸು ಒಕ್ಕಲಿಗರು, ರೆಡ್ಡಿಗರು. ಅಗಸರು, ಆಚಾರಿಗಳು, ಲಿಂಗಾಯಿತರು, ಬ್ರಾಹ್ಮಣರು, ಗಾಣಿಗರು, ನಗರ್ತರು, ಮೇದರು, ವಡ್ಡರಿದ್ದರು. ನಮ್ಮ ಮನೆಯ ಹಿಂಬದಿಯಲ್ಲಿ ಆದಿಕರ್ನಾಟಕರ ಕೇರಿ ಇತ್ತು. ಈ ಆದಿ ಕರ್ನಾಟಕರ ಕೇರಿಯಲ್ಲಿ ಮಗ್ಗದ ಹೊಲೆಯರು, ತಿಗುಳ ಹೊಲೆಯರು ಮತ್ತು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದ್ದ ತಿಗುಳ ಹೊಲೆಯರ ಕುಟುಂಬಗಳಿದ್ದವು. ಊರಿನಲ್ಲಿ ನಡುಬೀದಿ ಇದ್ದು ಎಲ್ಲ ಜಾತಿಯವರನ್ನು ಕೂಡಿಸುವ ಸ್ಥಳವಾಗಿತ್ತು. ಈ ನಡುಬೀದಿಯಲ್ಲಿ ಎರಡು ಗೊಡ್ಡು ಕಲ್ಲುಗಳಿದ್ದು ಒಂದಕ್ಕೆ ಯಾವ ಆಕಾರವೂ ಇರಲಿಲ್ಲ. ಮೇಲ್ಭಾಗವನ್ನು ಮಚ್ಚು, ಕುಡಗೋಲು ಇತ್ಯಾದಿಗಳನ್ನು ಉಜ್ಜಿ ಉಜ್ಜಿ ನುಣ್ಣಗೆ ಮಾಡಿದ್ದರು. ಇದು ದಕ್ಷಿಣಕ್ಕೆ ಬಾಗಿತ್ತು. ಇನ್ನೊಂದು ಸೀಳಿದ ಬಂಡೆಯನ್ನು ತಂದುಹೂತಿದ್ದಾರೆ. ಈ ಕಲ್ಲಿನ ದಕ್ಷಿಣಕ್ಕೆ ಕರಗದ ಗುಡಿ ಇದ್ದು ಇದು ಹೆಂಚಿನದಾಗಿತ್ತು. ಈ ಕರಗ ಹೊರುವರು ಒಂಟಿತ್ತು ಗಾಣಿಗರು. ಈ ಕರಗದ ಗುಡಿ ಎದುರಿಗೆ ಬಸವೇಶ್ವರ ದೇವರ ಗುಡಿ ಇದ್ದು, ಇದು ಕರಿಹೆಂಚಿನ ದೇವಾಲಯ ಈ ಬಸವೇಶ್ವರ ದೇವರ ವೈಶಿಷ್ಟ್ಯವೆಂದರೆ ಇಲ್ಲಿ ಎರಡು ನಂದಿಗಳಿದ್ದು ಒಂದರ ಮೂತಿ ಒಡೆದು ಹೋಗಿದೆ. ಈ ಬಗ್ಗೆ ಹಿಂದೆ ಊರಿಗೆ ದಾಳಿಬಂದಾಗ ಈ ಬಸವ ಹೂಂಕರಿಸಿ ಹಿಮ್ಮೆಟ್ಟಿಸಿನೆಂದೂ, ಆಗ ಫಿರಂಗಿ ಗುಂಡು ತಾಗಿ ಇದರ ಮೂತಿ ಒಡೆದು ಹೋಯಿತೆಂದೂ ಜನರು ಕಥೆ ಹೇಳುತ್ತಾರೆ.

ಈ ಬಸವ ಮೂರ್ತಿಗಳು ನೆಲದ ಮೇಲೆ ನಿಲ್ಲಿಸಿರುವ ಕಂಬದ ಮೇಲಿನ ಅಗಲವಾದ ಪೀಠದ ಮೇಲೆ ಇವೆ. ಇತಂಹ ಕಂಬಗಳ ಮೇಲಿನ ನಂದಿವಿಗ್ರಹಗಳು ಮೈಸೂರು ಜಿಲ್ಲೆ ಮುಂತಾದ ಕಡೆ ಕಾಣಸಿಗುತ್ತವೆ. ಕಾರ್ತಿಕ ಮಾಸದಲ್ಲಿ ಇಲ್ಲಿ ನಿತ್ಯ ಪೂಜೆ. ಪ್ರತಿಮನೆಯವರೂ ಒಂದೊಂದು ದಿನ ಪೂಜೆ ನೀಡುವುದು ಪದ್ಧತಿ. ಕಾರ್ತಿಕದ ಕಡೇ ಸೋಮವಾರ ವಿಶೇಷ ಅಲಂಕಾರ ಮತ್ತು ಪೂಜೆ. ಇಲ್ಲಿ ಅರ್ಚಕರಾಗಿದ್ದವರು ಪುಟ್ಟಪ್ಪನವರು; ಬಳೆಬಣಜಿಗರು. ಕಾರ್ತಿಕಮಾಸದ ಕಡೇ ಸೋಮವಾರ ಬಾಳೆದಿಂಡುತಂದು ಸೀಳಿ ಅದನ್ನು ವಿವಿಧ ಆಕಾರಗಳಲ್ಲಿ ಕತ್ತರಿಸಿ ಜೋಡಿಸಿ ಅಲಂಕರಿಸುತ್ತಿದ್ದರು. ನಮಗೆ ಇದನ್ನು ನೋಡುವುದೇ ಒಂದು ಖುಷಿ. ಪೂಜೆಯ ಕೊನೆಯಲ್ಲಿ ಚರುಪು ನೀಡುತ್ತಿದ್ದರು. ದೊಡ್ಡ ಪೂಜೆಯಾದ ಮೇಲೆ ಏಳುಕೋಟಿ ಮುಂತಾದವರಿಗೆ ಉಘೇ ಎಂದು ಏನನ್ನೋ ಹೇಳಿದರೆ ಪೂಜೆ ಮುಗಿಯಿತೆಂದು ಅರ್ಥ. ಆದರೆ ಚರುಪು ತೆಗೆದುಕೊಂಡವರೆಲ್ಲ ಕೊನೆಗೆ ಪೂಜಾರಿ ಪುಟ್ಟಪ್ಪನವರ ಹೆಸರು ಹೇಳಿ ಉಘೇ ಎಂದಾಗ ಪೂಜಾರಿ ಕೋಪದಿಂದ

ನಮ್ಮನ್ನು ಅಟ್ಟಿಸಿಕೊಂಡು ಬರುತ್ತಿದ್ದರು. ಕಾರ್ತಿಕಮಾಸದಲ್ಲಿ ಈ ದೇವಾಲಯದ ಮುಂದೆ ಒಂದು ಎತ್ತರವಾದ ಮರವನ್ನು ಹೂತು ಅದರ ಮೇಲ್ಭಾಗಕ್ಕೆ ಪ್ರತಿದಿನವೂ ಒಂದು ದೀಪವನ್ನು ಕಟ್ಟುತ್ತಿದ್ದರು. ವಿದ್ಯುತ್ತಿಲ್ಲದ ಹಿಂದಿನ ಕಾಲದಲ್ಲಿ ಈ ದೀಪ ದೂರದವರೆಗೆ ಕಾಣುತ್ತಿತ್ತು. ಈ ಬಸವೇಶ್ವರ ದೇವಾಲಯದ ಬಳಿಯಲ್ಲಿ ಸ್ವಲ್ಪ ಕೆಳಗೆ ಮಾರಮ್ಮನ ಗುಡಿ ಇತ್ತು. ಸಾಮಾನ್ಯವಾಗಿ ಊರಿನಲ್ಲಿ ಅಮ್ಮ ಮುಂತಾದ ಖಾಯಿಲೆಗಳು ಬಂದಾಗ ಈ ಮಾರಮ್ಮನ ಗುಡಿಗೆ ಪೂಜೆ.

ಹಳೆಯವೂರಿನಲ್ಲಿ ಕಬ್ಬಿಣದ ಕೆಲಸದ ಕೊಲುಮಿ ಬಸಪ್ಪ ಎಂಬುವರು ಬ್ರಾಹ್ಮಣರ ಮನೆಗಳ ಆಚೆಗೆ ಇದ್ದವರು. ಕಟ್ಟಾ ಶಿವಭಕ್ತ. ಜಟೆಗಳಿಂದ ಕೂಡಿದ ತಲೆ ತೀಕ್ಷ್ಣವಾದ ಕಣ್ಣುಗಳು, ಕಾವಿಬಟ್ಟೆ, ಎತ್ತರವಲ್ಲದ ಶರೀರ. ಮಕ್ಕಳಿಗೆ ಶಿವಪರವಾದ ಹೆಸರನ್ನೇ ಇಟ್ಟಿದ್ದರು. ತಮ್ಮ ಮನೆಯ ಸಮೀಪದಲ್ಲೇ ಕಾಶಿವಿಶ್ವನಾಥನ ದೇವಾಲಯ ಕಟ್ಟಿಸಿದ್ದರು. ಇವರಿಗೆ ಐದು ಗಂಡು ಒಂದು ಹೆಣ್ಣು ಮಗು. ಶುಕ್ರವಾರ ಆನೇಕಲ್ ಸಂತೆಗೆ ಇವರು ತಪ್ಪದೆ ವ್ಯವಸಾಯ ಪರಿಕರಗಳಾದ ಮಚ್ಚು, ಕೊಡಲಿ, ಕುಡುಗೋಲು ಮುಂತಾದವನ್ನು ಮಾರಲು ಹೋಗುತ್ತಿದ್ದರು. ಇವರ ಮನೆಯ ಬಳಿ ಬೆಳಸಿದ್ದ ದಾಸವಾಳ ಗಿಡಗಳು ಸಣ್ಣ ಪೊದೆಗಳಂತಿದ್ದು ಅವುಗಳನ್ನು ಹತ್ತಿ ಹೂಗಳನ್ನು ಕೀಳುತ್ತಿದ್ದೆವು. ಈ ಬಸವಾಚಾರಿ ಅಥವಾ ಕೊಲಮಿ ಬಸಪ್ಪನವರ ಸಂಸಾರ ನಮ್ಮ ಊರಿನಲ್ಲಿ ಅನೇಕ ಹೊಸ ಪ್ರಯೋಗಗಳನ್ನು ನಡೆಸಿದ ಕುಟುಂಬ; ಇವರ ಎಡನೆಯ ಮಗ ಬಸವಾಚಾರಿ ರೇಡಿಯೋದ ಬಿಡಿಭಾಗಗಳನ್ನು ತಂದು ಜೋಡಿಸಿ ಅನೇಕ ಮನೆಗಳಲ್ಲಿ ರೇಡಿಯೋ ಸಂಪರ್ಕ ಕಲ್ಪಿಸಿದ್ದರು. ಇದರೊಂದಿಗೆ ರಾಟೆ ಯಂತ್ರಗಳನ್ನು ಅಂದರೆ ಬಾವಿಯಿಂದ ನೀರೆತ್ತುವ ಡಬ್ಬಗಳ ಮಶಿನ್ ಯಂತ್ರವನ್ನು, ಇವರೇ ಜೋಡಿಸಿ ಬೇಕಾದವರಿಗೆ ಮಾರುತ್ತಿದ್ದರು. ಇವರ ಕುಲುಮೆಗೆ ನಾವು ಹೋಗುತ್ತಿದ್ದಕ್ಕೆ ಕಾರಣಗಳು ಇವೆ. ಇವರ ಕೊನೆಯ ಇಬ್ಬರು ಮಕ್ಕಳು ರುದ್ರಮುನಿ ಮತ್ತು ನಾಗರಾಜ ನನ್ನ ಸರಿಸುಮಾರು ವಯಸ್ಸಿನವರು ಹೀಗಾಗಿ ಅವರ ಕುಲುಮೆಯಲ್ಲಿ ಕುಳಿತುಕೊಂಡು ಅವರು ಕಬ್ಬಿಣ ಕಾಯಿಸುವದನ್ನು ಚಮುಟಗೆಯಿಂದ ಬಡಿಯುವುದನ್ನು, ಹದ ಕೊಡುತ್ತಿದ್ದುದನ್ನು ನೋಡುತ್ತಿದ್ದೆ. ಕೆಲವೊಮ್ಮೆ ತಿದಿ ಒತ್ತುವ ಕೆಲಸ ನನ್ನದಾಗಿರುತ್ತಿತ್ತು. ಕೆಲವರು ಇದ್ದಿಲು ತರದೆ ಬರೀ ಯಾನಗಳನ್ನು ಮಾತ್ರ ತರುತ್ತಿದ್ದರು. ಬೇರೆಯವರು ತಂದ ಇದ್ದಿಲಿನಲ್ಲೇ ಇವರೂ ಕಾವು ಕೊಡಿಸುತ್ತಿದ್ದರು. ಆಗ ಮಾತಿನ ಜಟಾಪಟಿ ಕೇಳಲು, ನೋಡಲು ಒಂದು ರೀತಿಯ ತಮಾಷೆ. ಇನ್ನೊಂದು ಆಚಾರರ ಮನೆ ಚಿಕ್ಕಣ್ಣನದು. ಇದು ವಡ್ಡರ ಮನೆಗಳ ಬಳಿ ಇತ್ತು ಯಾರನ್ನೂ ಈತ ಗಟ್ಟಿಯಾಗಿ ಬೈದ ನೆನಪು ನನಗಿಲ್ಲ. ಎಲ್ಲರನ್ನು ಅಣ್ಣಯ್ಯ ಎಂದೇ ಸಂಬೋಧಿಸುತ್ತಿದ್ದರು. ಇವರು ನಮ್ಮ ಮನೆಗೆ ಬೇಕಾದವರಾಗಿದ್ದುದು ಮಾತ್ರವಲ್ಲ; ನಮ್ಮ ತಾತನವರೊಂದಿಗೆ ಬಡ್ಡಿವ್ಯವಹಾರವನ್ನು ಇಟ್ಟುಕೊಂಡಿದ್ದರು. ನಮ್ಮ ತಾತನನ್ನು ಮುಂದಿಟ್ಟುಕೊಂಡು ಬೇರೆಯವರಿಗೆ ಬಡ್ಡಿಗೆ ಹಣ ನೀಡುತ್ತಿದ್ದರು. ಸ್ವಲ್ಪ ಜಮೀನೂ ಇತ್ತು. ಇವರ ಕುಲುಮೆಯಲ್ಲಿ ನನಗೆ ಅಷ್ಟು ಹೆಚ್ಚಿನ ಒಡಂಬಡಿಕೆಯಿರಲಿಲ್ಲ. ಆದರೂ ಆ ಅಡಿಗಟ್ಟು, ತಿದಿ, ಚಮ್ಮಟಗೆ, ನೀರುಹಾಕಿದ್ದ ಕಲ್ಲುಕುಳಿ, ಬೂದಿ, ಕಿಡಿ, ಕಿಟ್ಟ, ಇವುಗಳ ಜೊತೆಗೆ ಇವರ ಕುಲುಮೆಗೆ ಬಂದು ರೇಗಿಸಿಮಾತನಾಡುತ್ತಿದ್ದವರಿಗೆ ಚಮ್ಮಟಗೆ ನೀಡಿ ಕಾದಕಬ್ಬಿಣ ಹೊಡೆಯುವಂತೆ ಹೇಳಿ ಸುಸ್ತಾಗುವವರೆಗೆ ಒಡೆಸುತ್ತಿದ್ದದು ನೆನಪಿದೆ. ನಮ್ಮೂರಿನ ಗೌಡಲಿಂಗಾಯ್ತರು ಮೊದಲಿಗೆ ಈಗ ಹಾಳೂರಾಗಿರುವ ನಮ್ಮೂರ ಬಳಿಯ ಕಾಳನಾಯಕನಹಳ್ಳಿಯಲ್ಲಿದ್ದವರು. ಇವರ ವ್ಯವಸಾಯ ಭೂಮಿಯೆಲ್ಲಾ ಇಂದಿಗೂ ಈ ಹಾಳೂರಿನ ಸುತ್ತಮುತ್ತಲೇ ಇದೆ. ಇವರ ದೇವರಾದ ಜಡೆಲಿಂಗೇಶ್ವರದೇವರೂ ಅಲ್ಲಿಯೇ ಇದೆ. ಊರು ಹಾಳಾದಾಗ ಇವರು ನಮ್ಮ ಊರಿಗೆ ಬಂದು ನೆಲಸಿದರಂತೆ,

ಊರಿನಲ್ಲಿ ನಮ್ಮ ಜನರ ಮನೆಗಳು ಒಂದೆಡೆ ಇರಲಿಲ್ಲ ಚದುರಿದಂತೆ ಅಲ್ಲಲ್ಲಿ ಇದ್ದವು. ಗೌಡಲಿಂಗಾಯ್ತರು, ಬಳೆಬಣಜಿಗರು, ವಡ್ಡರು, ಶಿವಾಚಾರದವರು, ನಗರ್ತರು ಜೋಡೆತ್ತು ಗಾಣಿಗರು, ಚಿನ್ನದ ಕೆಲಸದ ಆಚಾರಿಗಳ ಮನೆಗಳಿದ್ದವು. ಇವುಗಳಲ್ಲಿ ಜೋಡೆತ್ತು ಗಾಣಿಗರ ಹಾಗೂ ನಗರ್ತರ ಮನೆಗಳು ಒಂದೇ ಕಡೆ ಇದ್ದವು. ಹಾಗೆಯೇ ಅಗಸರ ಮನೆಗಳು ನಡುಬೀದಿಯಲ್ಲಿದ್ದವು. ಇವರಲ್ಲಿ ದೊಣ್ಣೆ ಚಿಕ್ಕಣ ಎಂಬುವವರನ್ನು ನೆನೆಸಿಕೊಳ್ಳಬೇಕು ನನಗೆ ಬುದ್ಧಿ ಬರುವ ಹೊತ್ತಿಗೆ ಇವರಿಗೆ ವಯಸ್ಸಾಗಿತ್ತು. ಅಲ್ಪಸ್ವಲ್ಪ ನಾಟಿವೈದ್ಯವನ್ನೂ ಮಾಡುತ್ತಿದ್ದರು. ನಾನು ಚಿಕ್ಕ ಹುಡುಗನಿದ್ದಾಗ ಕಾಲಬೆರಳುಗಳ ಬಳಿ ಊತ ಕಾಣಿಸಿಕೊಂಡಿತು. ಅದು ದಿನೇ ದಿನೇ ಹೆಚ್ಚುತ್ತಾ ನೋವು ವಿಪರೀತವಾಯಿತು. ನಡೆಯಲು ಸಾಧ್ಯವಾಗದೆ ಕಾಲು ಚಾಚಿಕೊಂಡು ನಡೆಯುವಂತಾಯಿತು. ಆಗ ನಮ್ಮ ಮನೆಯವರಿಗೆ ದೊಣ್ಣೆ ಚಿಕ್ಕಣ್ಣನ ನೆನಪಾಯಿತು. ಆತ ಬಂದು ನನ್ನ ಊತವನ್ನು ನೋಡಿದ. ಕಾಲಿನ ಕೆಳಗೆ ಹಾಗೂ ಕಾಲ ಬೆರಳುಗಳ ಬಳಿ ದೊಡ್ಡ ಬೊಬ್ಬೆಬಂದಿತ್ತು. ಮಧ್ಯಾಹ್ನ ಬರುವುದಾಗಿ ಹೇಳಿ ಹೊರಟುಹೋದ. ಮಧ್ಯಾಹ್ನ ಬಂದು ಬೆಂಕಿಹಾಕಿಸಿದ ಆ ಬೆಂಕಿಯಲ್ಲಿ ಮೂಟೆಗಳನ್ನು ಹೊಲೆಯುವ ದಬ್ಬಳವನ್ನು ಕಾಯಿಸತೊಡಗಿದ. ನನಗೋ ಮೊದಲೇ ನೋವು ಕಾಯುತ್ತಿದ್ದ ದಬ್ಬಳವನ್ನು ನೋಡುತ್ತಿದ್ದಂತೆ ನೋವು ಇನ್ನು ಜಾಸ್ತಿಯಾಯಿತು. ಕಿರಿಚಾಡತೊಡಗಿದೆ. ದಬ್ಬಳ'ಕಾದ ಮೇಲೆ ನನ್ನ ಕಾಲನ್ನು ಚಾಚಿ ನನ್ನನ್ನು ಗಟ್ಟಿಯಾಗಿ ಹಿಡಿದುಕೊಂಡರು. ದೊಣ್ಣೆ ಚಿಕ್ಕಣ್ಣ ಕಾದ ದಬ್ಬಳವನ್ನು ಅಂಗಾಲಿನಲ್ಲಿ ಊದಿ ಕೀವು ಕಟ್ಟಿದ್ದ ಜಾಗದಲ್ಲಿಟ್ಟ ಕಾಲಿನಲ್ಲಿ ಕಟ್ಟಿದ್ದ ಕೀವು ಚಲ್ಲನೆ ಹೊರಗೆ ಬಂತು.

ನೋವಾಗಬಹುದೆಂದಿದ್ದ ನನಗೆ ನೋವಾಗಲೇ ಇಲ್ಲ. ಕೊನೆಗೆ ಏನೋ ಸೊಪ್ಪನ್ನು ಕೊಟ್ಟು ಅದನ್ನು ಜಜ್ಜಿ ಸುಟ್ಟ ಜಾಗದಲ್ಲಿ ಕಟ್ಟಲು ಹೇಳಿಹೋದ. ಆಶ್ಚರ್ಯವೆಂಬಂತೆ ದಿನದಿನವೂ ಉಳಿದಿದ್ದ ಅಲ್ಪ ಸ್ವಲ್ಪ ಕೀವು ಹೊರಗೆ ಬರತೊಡಗಿತ್ತು. ನನ್ನ ಚರ್ಮ ಒಣಗಿ ಮೇಲೆ ಪೊರೆಪೊರೆಯಾಗಿ ಬರುತ್ತಿತ್ತು. ನೋಡಲು ಒರಟನಂತೆ ಕಾಣುತ್ತಿದ್ದ ಈ ದೊಣ್ಣೆ ಚಿಕ್ಕಣ್ಣ.

ಇದೇ ರೀತಿಯ ನಾಟಿವೈದ್ಯ ಮಾಡುತ್ತಿದ್ದ ವ್ಯಕ್ತಿಗಳಲ್ಲಿ ನಮ್ಮ ಹೊಸೂರಿನಲ್ಲಿದ್ದ ಕುವ್ವಣ್ಣನವರ ಗುಳ್ಳಾರೆಡ್ಡಿ ಒಬ್ಬರು. ಹೆಂಗಸರಿಗೆ ಬರುತ್ತಿದ್ದ ಮೊಲೆಬಾವುಗೆ ಇವರು ಹಸುವಿನ ಬೆಣ್ಣೆಯನ್ನು ಮಂತ್ರಿಸಿಕೊಡುತ್ತಿದ್ದರು. ಮಂತ್ರದ ಪ್ರಭಾವವೋ, ಬೆಣ್ಣೆಯ ಪ್ರಭಾವವೋ ಈ ಬಾವು ಎರಡು ಮೂರು ದಿನಗಳಲ್ಲಿ ಇಳಿದು ಹೋಗುತ್ತಿತ್ತು. ಪ್ರಾಣಿಗಳ ಅನೇಕ ಕಾಯಿಲೆಗಳಿಗೆ ಗಿಡಮೂಲಿಕೆಗಳ ಔಷಧಿಯನ್ನು ನೀಡುತ್ತಿದ್ದರು. ಸಾಮಾನ್ಯವಾಗಿ ಹಸುಗಳಿಗೆ ಹುಳು (ಹಾವು) ಮುಟ್ಟಿದರೆ ಅದಕ್ಕೆ ಔಷಧಿ, ಹಸುಗಳ ಮೊಲೆ ಬಾತು ಹಾಲು ಕೊಡದಿದ್ದರೆ ಯಾವುದೋ ಮೂಲಿಕೆಯಿಂದ ಹೊಗೆ ಹಾಕುವುದು ಮುಂತಾದ ಔಷಧಿ ಮಾಡುತ್ತಿದ್ದರು. ನನಗೆ ಇವರಿಂದ ಈ ವಿದ್ಯೆ ಕಲಿಯಬೇಕೆಂಬ ಆಸೆಯಿತ್ತು. ಕಲಿಸುವುದಾಗಿ ಹೇಳಿದ್ದರು. ಒಮ್ಮೆ ಉಳುಕು ಮಂತ್ರ ಹೇಳಿಕೊಟ್ಟಿದ್ದರು. ಅದನ್ನು ಸರಿಯಾಗಿ ನೆನಪಿಟ್ಟುಕೊಳ್ಳದೆ ಮರೆತೆ.

ಆದಿಕರ್ನಾಟಕರ ಕೇರಿಯಲ್ಲಿ ಶಂಬಪ್ಪನ ದೇವಾಲಯವಿತ್ತು. ಒಳಗೆ ಉತ್ಸವ ವಿಗ್ರಹ. ಅದರ ಪಕ್ಕದಲ್ಲಿಯೇ ಸಿಡೀರಣ್ಣನ ವಿಗ್ರಹ. ಶಂಬಪ್ಪದೇವರ ಮುಂದೆ ಈ ಸಿಡೀರಣ್ಣನ ವಿಗ್ರಹ ಮೆರೆಯಲೇಬೇಕು. ಅಂದರೆ ಅದನ್ನು ಹೆಗಲ ಮೇಲಿರಿಸಿಕೊಂಡು ಕುಣಿಯಲೇಬೇಕು. ಬಹುತೇಕವಾಗಿ ಆಗ ಇದನ್ನು ಬಗ್ಗಲಿಗ ಎಂಬ ವ್ಯಕ್ತಿ ಹೊತ್ತು ಲಯಬದ್ಧವಾಗಿ ಕುಣಿಯುತ್ತಿದ್ದ; ಕಾಲಲ್ಲಿ ಗೆಜ್ಜೆ, ಕೈಯಲ್ಲಿ ಟವಲ್ ಹಿಡಿದು ಕಣವನ ಹಳ್ಳಿಯಿಂದ ತರಿಸಿದ ಮೇಳದ ತಾಳಕ್ಕೆ ತಕ್ಕಂತೆ ಸೀಡಿರಣ್ಣನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಕುಣಿಯುತ್ತಿದ್ದ.

ಶಂಬಪ್ಪನ ಪಲ್ಲಕ್ಕಿಯನ್ನು ಆದಿಕರ್ನಾಟಕರೆಲ್ಲಾ ಸೇರಿ ಮಾಡಿಸುತ್ತಿದ್ದರು. ಈ ಸಿಡೀರಣ್ಣನೇ ಅಲ್ಲದೆ, ಕೀಲು ಕುದುರೆ ಕುಣಿತವೂ ಇರುತ್ತಿತ್ತು. ಇದರಲ್ಲಿ ದೇವರ ಬೆಟ್ಟಪ್ಪ ರಾಜನ ಪಾತ್ರಧಾರಿಯಾದರೆ, ತೋಟಗರ ಮುನಿಯಪ್ಪ ಸ್ತ್ರೀ ಪಾತ್ರಧಾರಿ. ಇಬ್ಬರೂ ಮರಗಾಲು ಕಟ್ಟಿಕೊಂಡು ಕುಣಿಯುತ್ತಿದ್ದರು. ಸುಮಾರು ೨ ಅಡಿ ಎತ್ತರದ ಮರಗಾಲು ಇವರಿಗೆ ಮೇಳ ಮೊದಲೇ ಹೇಳಿದಂತೆ ಕಣವನಹಳ್ಳಿಯ ಸ್ಥಳೀಯ ಮೇಳ. ಉಳಿದ ಪಲ್ಲಕ್ಕಿಗಳ ಮುಂದೆ ಘಟ್ಟಮೇಳ (ಡೋಲು, ಓಲಗ, ತಾಳ). ಶಂಬಪ್ಪನ ಪಲ್ಲಕ್ಕಿಯ ಮುಂದೆ ಈ ಕೀಲು ಕುದುರೆ ಜೊತೆಗೆ ತಮಿಳುನಾಡಿನಿಂದ ಕರೆಸುತ್ತಿದ್ದ ನಯ್ಯಂಡಿ ಕುಣಿತದ ಮೇಳವೂ ಜನರು ಗುಂಪುಗೂಡಲು ಕಾರಣವಾಗಿತ್ತು. ಸಾಮಾನ್ಯವಾಗಿ ಈ ದೇವರಿಗೆ ಹಲಗೆ ಹೊಡೆಯುವವರನ್ನು ಬೇರೆಲ್ಲಿಂದಲೋ ತರಬೇಕಿರಲಿಲ್ಲ. ಕೀಲು ಕುದುರೆ ಮುನಿಯಪ್ಪನ ತಮ್ಮ ಬಸಪ್ಪನೇ ಉತ್ತಮ ಹಲಗೆಕಾರನಾಗಿದ್ದ. ಕರಗವೂ ಸಹ ರಾತ್ರಿ ೧೦ ಗಂಟೆಗೆ ದೇವಾಲಯದಿಂದ ಹೊರಹೊರಟು ಈ ಮೇಳಗಳನ್ನು ಸೇರಿಕೊಳ್ಳುತ್ತಿತ್ತು. ಆದರೆ ಈ ಕರಗ ಮನೆ ಮನೆ ಬಳಿ ಪೂಜೆ ತೆಗೆದುಕೊಳ್ಳುತ್ತಿದ್ದುದರಿಂದ ಈ ಗುಂಪಿನಿಂದ ದೂರವಿರುತ್ತಿತ್ತು. ಕರಗವನ್ನು ನಮ್ಮೂರಿನ ಒಂಟೆತ್ತು ಗಾಣಿಗರ ಮೋಟಪ್ಪ ಎಂಬುವವರೇ ವಂಶಪಾರಂಪರ್ಯವಾಗಿ ಹೊರುತ್ತಿದ್ದುದು. ಈ ಜಾತ್ರೆಯ ದಿನ ಥಿಕಾಂಬರಿ ಇರುತ್ತಿತ್ತು. ಈ ಥಿಕಾಂಬರಿಗೂ ಕಣವನಹಳ್ಳಿಯ ಸ್ಥಳೀಯ ಮೇಳದವರೇ ಮೇಳನುಡಿಸಬೇಕಿತ್ತು. ಕಾಲಿಗೆ ದಪ್ಪದಾದ ಕಬ್ಬಿಣ ಗುಂಡನ್ನು ಸರಪಳಿಸಹಿತ ಕಟ್ಟಿಕೊಂಡು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ತಲೆಯ ಮೇಲೆ ವಿಚಿತ್ರ ಕಿರೀಟವಿಟ್ಟುಕೊಂಡು, ಎಡಗೈಲಿ ಜಿಲ್ಲನ್ನು ಹಿಡಿದು ಮೇಳದ ತಾಳಕ್ಕೆ ತಕ್ಕಂತೆ ಕುಣಿಯಬೇಕಿತ್ತು. ನಮ್ಮೂರಿನ ಬಸಪ್ಪನವರ ಮಗ ಬಸವಾಚಾರಿ, ಆತನ ತಮ್ಮ ಗಜಾನನಪ್ಪ, ಕೆಲವೊಮ್ಮೆ ಮುನಿವೆಂಕಟರೆಡ್ಡಿ ಈ ವೇಷ ಹಾಕುತ್ತಿದ್ದರು. ಕಣವನಹಳ್ಳಿಯ ಮೇಳದವರು ಕೆಲವೊಮ್ಮೆ ಬೇಕಂತಲೇ ಕುಣಿಯುವವರು ಸುಸ್ತಾಗುವಂತೆ ಮೇಳವನ್ನು ನಿಲ್ಲಿಸದೆ ಬಜಾಯಿಸುತ್ತಿದ್ದರು. ಆಗ ಕುಣಿಯುತ್ತಿದ್ದ ವ್ಯಕ್ತಿ ಸುಸ್ತಾಗುತ್ತಿದ್ದ. ಆಗ ಮೇಳದವರನ್ನು ಸರಿಯಾಗಿ ಬಾರಿಸುವಂತೆ ಕೋಪದಿಂದ ಹೇಳುತ್ತಿದ್ದ ಪ್ರಸಂಗಗಳೂ ನಡೆಯುತ್ತಿದ್ದವು. ಈ ಥಿಕಾಂಬರಿ ಜೊತೆಯಲ್ಲಿ ರಾಕ್ಷಸನ ವೇಷವೂ ಇರುತ್ತಿತ್ತು. ಈ ರಾಕ್ಷಸನ ವೇಶಕ್ಕೆ ಕರಿಕಂಬಳಿ ಸುತ್ತಿ, ಅದಕ್ಕೆ ನಮ್ಮೂರಿನ ದೊಡ್ಡಬಾವಿಯಲ್ಲಿ ಬೆಳೆದ ನಿರಂಜಿ ಮರದ ಬೇರುಗಳನ್ನು ತಂದು ಸುತ್ತುತ್ತಿದ್ದರು. ಬೇರುಗಳು ಕೂದಲಿನಂತೆ ಉದ್ದವಾಗಿದ್ದು ಮೈಯೆಲ್ಲಾ ಕೂದಲಿರುವಂತೆ ಭಾಸವಾಗುತ್ತಿತ್ತು. ಈ ವೇಷದವನ ಎರಡೂ ರೆಟ್ಟೆಗೆ-ಹಗ್ಗಗಳನ್ನು ಕಟ್ಟಿರುತ್ತಿದ್ದರು. ಬಲಗೈ ಮಚ್ಚು ಹಿಡಿದು ಹೂಂಕರಿಸಿ ಜನಗಳ ಕಡೆಗೆ ನುಗ್ಗುತ್ತಿದ್ದ ಇದನ್ನು ಹಗ್ಗ ಹಿಡಿದವರು ನುಗ್ಗದಂತೆ ಜಗ್ಗುತ್ತಿದ್ದರು. ಇವೆಲ್ಲಾ ಊರು ಒಗ್ಗಟ್ಟಿದ್ದ ಕಾಲದಲ್ಲಿ ನಡೆಯುತ್ತಿದ್ದ ವೇಷಗಳು.

ಊರ ಶಾಲೆ ಬಳಿ ಹೊಸವೂರಿಗೆ ಸೇರಿದಂತೆ ರಾಮರದೇವಾಲಯವಿತ್ತು. ಅಲ್ಲಿಯೇ ಒಂದು ಅಶ್ವತ್ಥಕಟ್ಟೆ, ಬೃಹದಾಕಾರದ ಮರಗಳು. ಇನ್ನೊಂದು ಅಶ್ವತ್ಥಕಟ್ಟೆ ಶಾಲೆಯ ಹಿಂಬದಿಯಲ್ಲಿತ್ತು. ಶಾಲೆ ಮೇಲೆ ಮರ ಬೀಳಬಹುದೆಂದು ಈ ಮರಗಳನ್ನು ಕಡಿದರು. ಇವುಗಳಲ್ಲಿ ರಾಮರ ದೇವಾಲಯದ ಬಳಿಯ ಕಟ್ಟೆಯೇ ಹೆಚ್ಚಿಗೆ ಉಪಯೋಗವಾಗುತ್ತಿದ್ದುದು. ಶಾಲೆಹಿಂಬದಿ

ಇದ್ದ ನಾಗರಕಲ್ಲುಗಳು ದೊಡ್ಡವು. ರಾಮರ ದೇವಾಲಯದ ಹಿಂಬದಿಯಲ್ಲಿ ಕೊಲ್ಲಾಪುರದಮ್ಮ ಹಾಗೂ ಸಲ್ಲಾಪುರದಮ್ಮನ ದೇವಾಲಯಗಳು ಇದ್ದು ಇವು ಚಪ್ಪಡಿ ಕಲ್ಲುಗಳಿಂದ ನಿರ್ಮಿತವಾದ ಮಂಟಪಗಳು. ಸಲ್ಲಾಪುರದಮ್ಮನ ದೇವಾಲಯದ ಉಸ್ತುವಾರಿ ನಮ್ಮ ಕುಲದ ಗುಂಪಿನ ಮನೆಗಳಿಗೆ ಸೇರಿದ್ದು, ಇವರ ಪೂಜಾರಿ ಒಂಟೆತ್ತು ಗಾಣಿಗರ ಮೋಟಪ್ಪ ಎಂಬುವವರಾಗಿದ್ದರು. ಇವರ ಉತ್ಸವ ವಿಗ್ರಹ ಮಾಮೂಲಿ ಪೂರ್ಣವಿಗ್ರಹವಲ್ಲ. ಎರಕ ಹೊಯ್ದ ಉಬ್ಬುಶಿಲ್ಪವಾಗಿತ್ತು.

ಈ ಭಾಗದಿಂದ ಮೇಲೆ ಬರುವ ಪ್ರದೇಶವನ್ನು ಹೊಸವೂರು ಎಂದೇ ಕರೆಯುವುದು. ಇಲ್ಲಿ ಆರಂಭದಲ್ಲಿ ಬಣಜಿಗರ ಮನೆಗಳು ಮುಖ್ಯವಾಗಿ ಹೂ ಬಣಜಿಗರು, ಇನ್ನೂ ಮೇಲೆ ಬಳೆಬಣಜಿಗರು, ಮಧ್ಯೆ ಅಗಸರು, ರೆಡ್ಡಿಗರು ಒಂದೊಂದು ಮನೆ, ನಂತರ ಒಂಟೆತ್ತು ಗಾಣಿಗರ ಮನೆಗಳು, ರೆಡ್ಡಿಗರ ಮನೆಗಳು, ಕುಂಬಾರರ ಬೀದಿ, ವಡ್ಡರ ಬೀದಿ, ಒಂದೆರಡು ಬಾಯರ (ಬೇಡರ) ಮನೆಗಳು ಇದ್ದುವು. ಹಳೆಯ ಊರಿನ ಒಕ್ಕಲುಗಳಿಗಿಂತ ಹೊಸವೂರಿನ ಒಕ್ಕಲುಗಳು ಸ್ವಲ್ಪ ಜೋರಾಗಿದ್ದರು. ಇವರಲ್ಲಿ ಅಗಸರು, ಬಾಯರು (ಬೇಡರು) ಹಿಂದೆ ಇದ್ದು, ಈಗ ಹಾಳಾಗಿರುವ ಕಾಳನಾಯಕನ ಹಳ್ಳಿಯಿಂದ ಬಂದವರು. ಆ ಕಾಳನಾಯಕನ ಹಳ್ಳಿಗೆ ಕಾಟೇರಿ (ಒಂದು ಬಗೆಯ ದೆವ್ವ) ನುಗ್ಗಿದಾಗ ಊರು ನಾಶ ಆಯಿತಂತೆ. ನನಗೆ ನೆನಪಿದ್ದಂತೆ ಆ ಊರಿನ ಮೋಟು ಗೋಡೆಗಳು ಮೊನ್ನೆವರೆಗೂ ಉಳಿದಿದ್ದುವು. ಹೊಸವೂರಿನಲ್ಲಿ ಒಂದು ನಡು ಬೀದಿ ಇದ್ದು, ಇಲ್ಲಿಯೂ ಒಂದು ಮಾರಮ್ಮನ ದೇವಾಲಯವಿದೆ. ಕುಂಬಾರರ ಪೈಕಿ ಸಂಜೀವಪ್ಪ ಎಂಬ ವ್ಯಕ್ತಿಯನ್ನು ನೆನಪಿಸಿಕೊಳ್ಳಬೇಕು. ಬಹು ಗೆಳೆತನದ ವ್ಯಕ್ತಿತ್ವ. ಯಾರಲ್ಲಿಯೂ ಯಾವ ತಾರತಮ್ಯವೂ ತೋರಿಸುತ್ತಿರಲಿಲ್ಲ. ನಮ್ಮ ಊರಿನಲ್ಲಿ ಮುಸಲ್ಮಾನರಿಲ್ಲ. ಹೀಗಾಗಿ ಆನೇಕಲ್‌ನಿಂದ ಮೊಹರಂ ಕುಣಿತಗಾರರು ಬರುತ್ತಿದ್ದರು. ಇವರ ಜೊತೆ ಸೇರಿದನೆಂದರೆ ನಗೆಯೋ ನಗೆ. ಸಂಜೀವಪ್ಪ ಕುಂಬಾರಿಕೆಯ ಕೆಲವು ವಸ್ತುಗಳನ್ನು ಮಾಡುತ್ತಿದ್ದ. ಹೆಂಚಿನ ಮನೆಗಳ ಮೇಲೆ ಮೂರು ಮೂಲೆ ಸೇರುವ ಜಾಗವೊಂದಿರುತ್ತದೆ. ಎತ್ತರದ ಕಡೆ ವಿಶಿಷ್ಟವಾದ ಮೂರು ಮೂಲೆಗೂ ಹೊಂದಿಕೆಯಾಗುವ ಹೆಂಚನ್ನು ಮಾಡುತ್ತಿದ್ದರು. ಅವುಗಳಲ್ಲಿ ಮೇಲೆ ಅಲಂಕಾರಕ್ಕೆ ಕಲಶವನ್ನು ರಚಿಸುತ್ತಿದ್ದರು. ಒಂದೆರಡು ಕಡೆ ಈತ ಇಂತಹ ಹೆಂಚಿಗೆ ಕೋತಿಯೊಂದು ಕುಳಿತಿರುವಂತೆ ಮಾಡಿ ಒಂದು ಮನೆ ಮೇಲೆ ಇರಿಸಿದ್ದ. ನೋಡುಗರಿಗೆ ನಿಜವಾದ ಕೋತಿಯೇನೋ ಎಂಬಂತಿತ್ತು. ಈತನಿಗೆ ಮೂವರು ಮಕ್ಕಳು. ಮುತ್ತುರಾಯಪ್ಪ, ಹನುಮಂತಪ್ಪ ಮತ್ತು ಅಂಜಿನಪ್ಪ ಇವರು ಮುಂದೆ ಸೀಮೆ ಹೆಂಚಿನ ಕಾರ್ಖಾನೆಯನ್ನು ಇಟ್ಟಿದ್ದರು. ಸಿಮೆಂಟು ಶೀಟುಗಳು ಹೆಚ್ಚಿಗೆ ಬಳಕೆಗೆ ಬಂದ ಮೇಲೆ ಇವರು ಈ ಕಾರ್ಖಾನೆಯನ್ನು ಮುಚ್ಚಿದರು.

ನಮ್ಮೂರಿನಲ್ಲಿ ಕೆರೆಯ ಕೆಳಗೆ ಕಲ್ಲುಕಟ್ಟಿದ್ದ ಆಯತಾಕಾರದ ನಾಲ್ಕು ಬಾವಿಗಳಿದ್ದುವು. ಅವುಗಳು ಖಾನೆಯ ಸಾಲಿನಲ್ಲಿಯೇ ಇದ್ದುದರಿಂದ ಮಳೆಗಾಲದಲ್ಲಿ ತುಂಬಿಹರಿದರೆ ಬೇಸಿಗೆಯಲ್ಲಿ ಸ್ವಲ್ಪ ನೀರನ್ನು ಹೊಂದಿರುತ್ತಿದ್ದುವು. ಕೆರೆಯ ಕೆಳಗೆ ಇದ್ದದ್ದೇ ಚಿಕ್ಕಬಾವಿ ಅಥವಾ ಕರಗದ ಬಾವಿ. ಊರಿನ ಜಾತ್ರೆಯ ಸಮಯದಲ್ಲಿ ಕರಗದ ಕೊಡವನ್ನು ಶುಚಿಗೊಳಿಸಿ ಗಂಗೆಯನ್ನು ತರುತ್ತಿದ್ದುದು ಈ ಬಾವಿಯಿಂದಲೇ. ಈ ಬಾವಿಯ ಸುತ್ತ ಕರಗವನ್ನು ಹೊರುವ ಮನೆತನದವರ ಗದ್ದೆಗಳಿದ್ದುವು. ಈ ಬಾವಿ ಆಯತಾಕಾರವಾಗಿದ್ದು ಇದಕ್ಕೆ ಇಳಿಯಲು ಸ್ಥಳವಿದ್ದುದರಿಂದ ನಮ್ಮೂರಿನ ಬಹುತೇಕ ಹುಡುಗರು ನಾನೂ ಸೇರಿದಂತೆ ಈಜು ಕಲಿತದ್ದು ಈ ಬಾವಿಯಲ್ಲಿಯೇ. ಇದು ಕರಗದ ಬಾವಿಯಾದ್ದರಿಂದ ಇಲ್ಲಿ ಹೆಂಗಸರ ಸೀರೆಗಳನ್ನು ಒಗೆಸುತ್ತಿರಲಿಲ್ಲ. ಇದಕ್ಕಿಂತ ಸ್ವಲ್ಪ ಕೆಳಗೆ ಮಣಸಿಗನಹಳ್ಳಿ ಮತ್ತು ಹುಚ್ಚನಹಳ್ಳಿ ಮತ್ತು ಸ್ಮಶಾನದ ದಾರಿಗಳು ಸೇರುವ ಕಡೆ ದೊಡ್ಡ ನಂಜಪ್ಪನ ಬಾವಿ ಇತ್ತು. ಇಲ್ಲಿ ಒಂದು ಮಂಟಪವೂ ಇತ್ತು. ಈ ಬಾವಿಗೆ ಸ್ವಲ್ಪ ದೂರದಲ್ಲಿ ಸ್ಮಶಾನವಿದ್ದುದರಿಂದ ಹೆಣ ಹೂತು ಬಂದವರು ಇಲ್ಲಿ ಕೈಕಾಲು ತೊಳೆದುಕೊಂಡು ಸಕ್ಕರೆ ತಿಂದು, ಅಡಕೆ ಎಲೆ ಹಾಕಿಕೊಂಡು ಸ್ವಲ್ಪ ಹೊತ್ತು ಕುಳಿತು, ನಂತರ ಊರ ಕಡೆಗೆ ಹೋಗುತ್ತಿದ್ದುದು ಪದ್ಧತಿ. ಇದರ ಸಮೀಪದ ನಗರ್ತರ ಪುಟ್ಟತಾಯಪ್ಪನ ತೋಟವಿತ್ತು. ಇಲ್ಲಿ ಒಂದು ದೊಡ್ಡ ಆಲದ ಮರವಿತ್ತು. ಈ ಆಲದ ಮರವನ್ನು ನಾನೂ ಆಗಾಗ ಸ್ಮರಿಸಿಕೊಳ್ಳುತ್ತೇನೆ. ಅದಕ್ಕೆ ಕಾರಣ ವಡ್ಡಾರಾಧನೆಯಲ್ಲಿ ಬರುವ ಜರ್ದಿ ಈ ಮರದಲ್ಲಿಯೇ ಇದ್ದಳೆಂಬುದು ನನ್ನ ಮನೋಕಲ್ಪನೆ. ಇದೇ ಖಾನೆಸಾಲಿನಲ್ಲಿ ದೊಮ್ಮಸಂದ್ರದ ದಾರಿ ಬಳಿ ದೊಡ್ಡಬಾವಿ ಇತ್ತು. ಇದು ಆಕಾರದಲ್ಲಿ ದೊಡ್ಡಬಾವಿಯೇ ಬೇಸಿಗೆಯಲ್ಲಿ ಸ್ವಲ್ಪ ನೀರನ್ನು ಇವು ಪಡೆದಿದ್ದು ದನಗಳು ತಮ್ಮ ದಣಿವಾರಿಸಿಕೊಳ್ಳಲು ಇಲ್ಲಿಗೆ ಬರುತ್ತಿದ್ದುವು. ಇದಕ್ಕೆ ಹೊಂದಿಕೊಂಡಂತೆ ಒಂದು ಏತದ ಬಾವಿಯೂ ಇದ್ದು, ಇದನ್ನು ತೋಟ ಮಾಡಲು ಉಪಯೋಗಿಸುತ್ತಿದ್ದರು. ಇದರಲ್ಲಿ ಏತವನ್ನು ಹೂಡಲು ನಿರಂಜಿಮರದ ಕೊಂಬೆಗಳನ್ನು ಬೆಳಸಿದ್ದರು. ಅವು ನೀರಿನಲ್ಲಿಯೇ ಚಿಗುರಿ ದೊಡ್ಡ ಮರಗಳಾಗಿ ಬೆಳೆದಿದ್ದುವು. ಇವುಗಳ ಬೇರು ಒತ್ತಾಗಿ ಭೂಮಿಯ ಮೇಲೆಯೇ ಇರುತ್ತಿತ್ತು. ನಮ್ಮ ಊರು ಜಾತ್ರೆಯಲ್ಲಿ ಪಾಳೆಯಗಾರನ ವೇಷ ಹಾಕುವವನ ಮೈಗೆ ಈ ಬೇರಿನ ಗುಚ್ಛಗಳನ್ನು ತಂದು ಸುತ್ತುತ್ತಿದ್ದರು. ಕಂಬಳಿ ಹೊದ್ದಂತೆ ಇರುತ್ತಿತ್ತು. ಇಲ್ಲಿಯೇ ಒಂದು ದೊಡ್ಡ ಮಾವಿನ ಮರವಿತ್ತು. ೧೫ ವರ್ಷಗಳ ಹಿಂದೆ ಇತ್ತು; ಈಗ ಇಲ್ಲ. ನಾನು ಇದುವರೆವಿಗೆ ಇಷ್ಟು ಗಾತ್ರದ ಮಾವಿನ ಮರವನ್ನು ಎಲ್ಲಿಯೂ ನೋಡಿಲ್ಲ.

೨೫ ಅಡಿ ಉದ್ದದ ಹಗ್ಗ ಈ ಮರದ ಬೊಡ್ಡೆಗೆ ಒಂದು ಸುತ್ತು ಬರುತ್ತಿರಲಿಲ್ಲ. ಮರದಲ್ಲಿ ದೊಡ್ಡ ರೆಂಬೆಗಳಿದ್ದು ಬಹಳಷ್ಟು ಕಡೆಯಲ್ಲಿ ಟೊಳ್ಳುಗಳಿಂದ ಕೂಡಿತ್ತು. ಹೀಗಾಗಿ ಗಿಳಿಗಳು, ಗೊರವಂಕಗಳು ಇಲ್ಲಿ ಆರಾಮವಾಗಿ ಗೂಡುಕಟ್ಟಿಕೊಂಡು ವಾಸಿಸುತ್ತಿದ್ದವು. ಇದು ವಯಸ್ಸಾದ ಮರವಾಗಿದ್ದರೂ ಇನ್ನೂ ಹಣ್ಣನ್ನು ಬಿಡುತ್ತಿತ್ತು. ಹಿಂದೆ ಟಿವಿಯಲ್ಲಿ ಸುರಭಿ ಕಾರ್ಯಕ್ರಮ ಬಂದಾಗ ಈ ಮರದ ಬಗ್ಗೆ ವಿವರಗಳನ್ನು ಬರೆದು ಕಳುಹಿಸಬೇಕೆಂದು ಯೋಚಿಸುತ್ತಿದ್ದಾಗಲೇ ಒಂದು ದಿನ ಇಡೀ ಮರವೇ ಪೂರ್ಣವಾಗಿ ಬಿದ್ದುಹೋಗಬೇಕೇ! ಬಿದ್ದದ್ದು ಕೂಡ ಒಂದು ರೆಂಬೆ ಮೊದಲು ಬಿತ್ತು. ನಂತರ ಉಳಿದ ರೆಂಬೆಗಳೂ ಪಟಪಟನೆ ಬಿದ್ದವು. ಇದರ ಬುಡ ಮಾತ್ರ ಉಳಿದಿತ್ತು. ಈ ಮರ ಈ ಗಾತ್ರದಲ್ಲಿದ್ದ ಕಾರಣಕ್ಕೋ ಏನೋ ಈ ಮರದ ಕೆಳಗೆ ಮುನೀಶ್ವರನನ್ನು ಸ್ಥಾಪಿಸಿದ್ದರು. ಈ ದೇವರುಗಳ ವಿಗ್ರಹಗಳು ನವಶಿಲಾಯುಗದ ಆಯುಧಗಳಂತೆ ತ್ರಿಕೋಣಾಕಾರದಲ್ಲಿದ್ದವು. ಈ ಬಗ್ಗೆ ಸ್ವಲ್ಪ ತಿಳುವಳಿಕೆ ಬಂದ ಮೇಲೆ ಈ ದೇವತಾ ಮೂರ್ತಿಗಳನ್ನು ಮತ್ತೊಮ್ಮೆ ಪರೀಕ್ಷಿಸಿದೆ. ಇವುಗಳಲ್ಲಿ ಕೆಲವು ಕಲ್ಲುಗಳು ಅರ್ಧ ಅಡಿಗೂ ಹೆಚ್ಚು ಅಗಲವಾಗಿದ್ದವು. ಯಾವುದೇ ಕಲ್ಲು ನವಶಿಲಾಯುಗದ ಆಯುಧವಾಗಿರಲಿಲ್ಲ. ಈ ದೇವಾಲಯದಲ್ಲಿ ಒಂದು ಗರ್ಭಗೃಹ ಇದ್ದು, ಇಬ್ಬರು ಮೂವರು ದೇವರ ಮುಂದೆ ಕುಳಿತುಕೊಳ್ಳಬಹುದಾದಷ್ಟು ಸ್ಥಳವನ್ನು ಹೊಂದಿತ್ತು. ಇದರ ಮುಂದೆ ತೆರೆದ ಮೂರು ಅಂಕಣದ ಕಲ್ಲಿನ ವಪ್ಪಾರ. ಇಲ್ಲಿ ಜನರು ಕುಳಿತುಕೊಳ್ಳಲು ಸ್ಥಳವಿತ್ತು. ಇಲ್ಲಿ ಗುರುವಾರ ವಿಶೇಷ ಪೂಜೆ ನಡೆಯುತ್ತಿತ್ತು. ಈ ವಿಶೇಷತೆ ಏನೆಂದರೆ ದೆವ್ವಗಳನ್ನು ಬಿಡಿಸುವುದು. ನಮ್ಮೂರು ಅಗಸರ ಚಿಕ್ಕಣ್ಣ ಎಂಬುವವರು ಸುಮಾರು ೧೨ ಗಂಟೆಗೆ ಬಂದು ಕಲ್ಲುಗಳಿಗೆ ಬಿಳಿವಿಭೂತಿ ಮತ್ತು ಕುಂಕುಮವನ್ನು ನಾಮದಂತೆ ಎಳೆದು ಹೂವಿಟ್ಟು ಸಿಂಗರಿಸುತ್ತಿದ್ದರು. ಈ ಸಿಂಗಾರವಾದ ಮೇಲೆ ಮಂಗಳಾರತಿ. ಇದಾದ ಮೇಲೆ ದೆವ್ವ ಹಿಡಿದ ಮಹಿಳೆಯರನ್ನು ಕರೆತರುತ್ತಿದ್ದರು. ಈ ದೆವ್ವಗಳು ಸ್ತ್ರೀಯರ ಮೇಲೆ ಬಂದಾಗ ದೆವ್ವ ಹಿಡಿದ ಹೆಂಗಸು ಬಹು ರಭಸವಾಗಿ ಹೂಂಕರಿಸಿ ತಲೆಕೂದಲನ್ನು ಬಿಚ್ಚಿ ತಲೆ ತಿರುಗಿಸುತ್ತಿದ್ದಳು. ಪೂಜಾರಿ ಚಿಕ್ಕಣ್ಣ ಹಾಡಿನಂತೆ ರಾಗವಾಗಿ ಮಾತುಗಳನ್ನು ಹೇಳುತ್ತಾ ಆ ದೆವ್ವ ಯಾರೆಂದೂ ಈ ಸ್ತ್ರೀ ಮೈಮೇಲೆ ಏಕೆ ಬಂದಿದೆ ಎಂಬುದನ್ನು ವಿಚಾರಿಸುತ್ತಿದ್ದ. ಬಾಯಿ ಬಿಡದ ದೆವ್ವಗಳನ್ನು ಮೂಕದೆವ್ವಗಳೆಂಬ ವಿಗಂಡಣೆಯೂ ಮಾಡುತ್ತಿದ್ದರು. ಈ ಮೂಕ ದೆವ್ವಗಳು ಬಾಯಿ ಬಿಡದಿದ್ದಾಗ ಬೆತ್ತದ ಏಟು ಬೀಳುತ್ತಿದ್ದವು. ಆಗ ದೆವ್ವವು ತನ್ನ ವಿವರಗಳನ್ನು ಹೇಳುತ್ತಿತ್ತು. ಎಲ್ಲ ದೆವ್ವಗಳ ಮಾತೂ ಸರಿ ಸುಮಾರು ಒಂದೇ ಆಗಿತ್ತು. ಅದೆಂದರೆ ತಾನೂ ಇಂತಹ ಸಮಯದಲ್ಲಿ ಈಕೆಗೆ ಹಿಡಿದಿರುವುದಾಗಿಯೂ ಈಕೆಯನ್ನು ತೆಗೆದುಕೊಂಡು ಹೋಗಲು (ಸಾಯಿಸಲು) ಬಂದಿರುವುದಾಗಿಯೂ ಹೇಳುತ್ತಿದ್ದವು. ಹೀಗಾಗಿ ಒಂದು ವಾರದಲ್ಲಿ ಇವು ಹೋಗುತ್ತಿರಲಿಲ್ಲ. ಅನೇಕ ಗುರುವಾರಗಳು ಈ ದೆವ್ವ ಹಿಡಿದ ಮಹಿಳೆ ಈ ದೆವ್ವದ ಗುಡಿಗೆ ಬಂದು ತಲೆ ಆಡಿಸಲೇಬೇಕಿತ್ತು. ಕೆಲವು ದೆವ್ವಗಳು ತಮಗೆ ಬೇಕಾದ ಭಕ್ಷ್ಯ ಭೋಜ್ಯಗಳನ್ನು ಮಾಡಿಡಬೇಕೆಂದೂ ಅವನ್ನು ತಿಂದು ತಾನು ತೃಪ್ತಿಯಿಂದ ಈಕೆಯನ್ನು ಬಿಟ್ಟು ಹೋಗುವುದಾಗಿ ಹೇಳುತ್ತಿದ್ದವು. ಹೋಗುವ ಕುರುಹಾಗಿ ಇವು ತಮ್ಮ ತಲೆಯ ಸುಳಿಯ ಬಳಿ ಸ್ವಲ್ಪ ಕೂದಲನ್ನು ಎತ್ತಿಕೊಡುತ್ತಿದ್ದವು. ಈ ಕೂದಲನ್ನು ಪೂಜಾರಿ ಮೊಳೆಗೆ ಕಟ್ಟಿ ಅದನ್ನು ನೆಲಕ್ಕೆ ಬಡಿಯುತ್ತಿದ್ದ. ದೆವ್ವ ಹಿಡಿದ ಹೆಂಗಸು ಹೂಂಕರಿಸಿ ತಲೆ ಎತ್ತಿದಾಗ ಮೊಳೆಗೆ ಕಟ್ಟಿದ್ದ ಕೂದಲು ಅಲ್ಲಿ ಉಳಿಯುತ್ತಿತ್ತು. ಇದು ದೆವ್ವ ಹೊರಟು ಹೋದದ್ದರ ಸೂಚನೆ. ನಮಗೆ ಇವೆಲ್ಲಾ ವಿಚಿತ್ರವೆನಿಸಿ ಅಲ್ಲೇ ಸ್ವಲ್ಪ ಹೊತ್ತು ಕುಳಿತು ನೋಡುತ್ತಿದ್ದವು. ಪೂಜಾರಿ ಚಿಕ್ಕಣ್ಣನ ಮೈಮೇಲೆ ದೆವ್ವಗಳನ್ನು ಬಿಡಿಸಲು ಬರುತ್ತಿದ್ದ ದೇವತಾಪುರುಷರಲ್ಲಿ ರಾಮಕ್ಕ, ನಂಜಪ್ಪ ಮುಂತಾದವರಿದ್ದರು. ಇವರು ಪುಣ್ಯ ಪುರುಷರಾಗಿದ್ದು ಸತ್ತು ಹೀಗೆ ಮೈ ಮೇಲೆ ಬಂದು ದೆವ್ವಗಳನ್ನು ಬಿಡಿಸುವ ಕಾರ್ಯ ಮಾಡುತ್ತಿದ್ದಾರೆಂದು ಹೇಳಿಕೆ. ಈ ದೇವತೆಗಳು ಒಬ್ಬೊಬ್ಬರಾಗಿ ಬರುವಾಗ ಪೂಜಾರಿಯ ಬಿಕ್ಕಳಿಕೆ ಮತ್ತು ಮಾತಿನ ದಾಟಿ ಬೇರೆ ಬೇರೆ ರೀತಿಯಲ್ಲಿರುತ್ತಿತ್ತು. ನಂಜಪ್ಪ ಪೂರ್ಣ ಪ್ರಮಾಣದಲ್ಲಿ ಬಂದಾಗ ಪೂಜಾರಿ ಚಿಕ್ಕಣ್ಣ ತನ್ನ ಕೈಯಲ್ಲಿ ಮೂರು ನಾಲ್ಕು ಸಿಗರೇಟನ್ನು ಒಮ್ಮೆಗೇ ಹಚ್ಚಿ ಧಂ ಬಿಡುತ್ತಿದ್ದ ದೃಶ್ಯವನ್ನು ನೋಡುವ ಸನ್ನಿವೇಶಕ್ಕಾಗಿ ಕಾಯುತ್ತಿದ್ದೆವು. ಇದಕ್ಕಾಗಿ ಕೆಲವರು ಸಿಗರೇಟನ್ನು ತಂದಿರುತ್ತಿದ್ದರು. ದೆವ್ವಹಿಡಿದವರಲ್ಲಿ ಬ್ರಾಹ್ಮಣರನ್ನು ಬಿಟ್ಟು ಎಲ್ಲಾ ಜಾತಿಯವರೂ ಇರುತ್ತಿದ್ದರು. ಪಕ್ಕದ ಗುಮ್ಮಳಾಪುರದಿಂದ ಮುಸ್ಲಿಂ ದಂಪತಿಗಳೂ ಬರುತ್ತಿದ್ದುದು ಜ್ಞಾಪಕ. ಈ ಚಿಕ್ಕಣ್ಣನ ಕುಟುಂಬ ನಮ್ಮ ಹಳ್ಳಿಯ ಪಕ್ಕದಲ್ಲಿದ್ದು, ಹಾಳಾಗಿರುವ ಕಾಳನಾಯಕನ ಹಳ್ಳಿಗೆ ಮೂಲತಃ ಸೇರಿದ್ದು, ಇವರ ಹೊಲಗಳಲ್ಲಿ ಪ್ರಾಗೈತಿಹಾಸ ಕಾಲದ ಅನೇಕ ಗೋರಿಗಳಿದ್ದವು. ಗೋರಿಯೊಂದರ ಮಣ್ಣನ್ನು ಅಗೆಯುವಾಗ ಸಿಕ್ಕಿದ ಕಬ್ಬಿಣದ ಕೊಡಲಿಯನ್ನು ನನ್ನ ಮಗಳು ಸಂಗ್ರಹಿಸಿದ್ದಳು. ಈ ದೇವಾಲಯದಿಂದ ಮುಂದೆ ಕಣವನಹಳ್ಳಿಗೆ ಹೋಗುವ ದಾರಿಯಲ್ಲಿ ಇನ್ನೊಂದು ಬಾವಿ ಇದೆ. ಇದು ಸಾರಕಳ್ಳಿ ನಂಜಪ್ಪನ ಬಾವಿ. ನಮ್ಮೂರ ಬಾನೆಯ ತುತ್ತತುದಿ ಹಾಗೂ ದೊಮ್ಮಸಂದ್ರದ ಕೆರೆಯ ಆರಂಭದಲ್ಲಿದ್ದುದರಿಂದ ಬೇಸಿಗೆಯಲ್ಲಿ ಇದರಲ್ಲಿ ನೀರಿರುತ್ತಿತ್ತು. ಸಾರಕಳ್ಳಿ ನಂಜಪ್ಪನ ಬಾವಿಯನ್ನು ಬಿಟ್ಟರೆ ಉಳಿದ ಮೂರು ಬಾವಿಗಳನ್ನು ದೊಡ್ಡ ದೊಡ್ಡ ಕಲ್ಲುಗುಂಡುಗಳನ್ನು ತಳಗಡೆ ಹಾಕಿ ಕಟ್ಟಿರುವಂತಹವು ದೊಡ್ಡ ಬಾವಿ ಮುಚ್ಚಿ ಹೋಗಿದ್ದರೂ ಅಲ್ಲಲ್ಲಿ ದೊಡ್ಡಗುಂಡುಗಳು ಇಂದಿಗೂ ಕಾಣಿಸುತ್ತಿವೆ. ಇನ್ನೊಂದು ಬಾವಿ ಆನೇಕಲ್‌ಗೆ ಹೋಗುವ ದಾರಿಯ ಸಮೀಪ ನೆಸೆಯ ಅಗ್ಗಿನಲ್ಲಿತ್ತು. ನೆಸೆಯಗ್ಗು ಎಂದರೆ ಜೌಗಿನಲ್ಲಿ

ಬೆಳೆಯುತ್ತಿದ್ದ ಒಂದು ಬಗೆಯ ಹುಲ್ಲು ಇರುವ ಸ್ಥಳ. ಸಾಮಾನ್ಯವಾಗಿ ನೀರಿನ ಪಸೆ ಇರುವ ಸ್ಥಳ. ನಮ್ಮೂರು ಜಾತ್ರೆಯ ದೇವರಾದ ದಬ್ಬಗೂಳಿ ಬಸವೇಶ್ವರನನ್ನು ಹೊಲ ಮುಟ್ಟಿಸುವ ಸ್ಥಳ ಇದಾಗಿತ್ತು. ಈ ನೀರಿನಲ್ಲಿ ದೇವರನ್ನು ತೊಳೆದನಂತರ ಇಲ್ಲಿಂದ ಪೂಜಾರಿಗೆ ದೇವರ ಆವೇಶ ಬರುತ್ತಿತ್ತು. ಆವೇಶದಲ್ಲಿ ಊರಿಗೆ ವಾದ್ಯ ಸಮೇತ ಬಂದು ಮನೆ ಮನೆ ಬಳಿ ಪೂಜೆ ತೆಗೆದುಕೊಳ್ಳುತ್ತಿದ್ದರು. ಪ್ರತಿ ಮನೆಯವರೂ ತೆಂಗಿನಕಾಯಿಯ ಈಡುಗಾಯಿ ಹಾಕಬೇಕಿತ್ತು. ರಾತ್ರಿ ಇದೇ ದೇವರನ್ನು ಮುತ್ತಿನ ಪಲ್ಲಕ್ಕಿಯಲ್ಲಿ ಮೆರೆಸುತ್ತಿದ್ದರು. ಮಾರನೆಯ ದಿನ ಈ ದೇವರನ್ನು ತಮ್ಮನಾಯಕನ ಹಳ್ಳಿಗೆ ತೆಗೆದುಕೊಂಡು ಹೋಗಿ ಬಿಟ್ಟುಬರಬೇಕಿತ್ತು. ಈ ದೇವಾಲಯಕ್ಕೆ ನಾನೂ ಒಮ್ಮೆ ಹೋಗಿದ್ದೆ. ಇದು ತಮ್ಮ ನಾಯಕನ ಹಳ್ಳಿಯ ಹೊರವಲಯದಲ್ಲಿದ್ದ ಸಾಧಾರಣ ಗುಡಿ. ಊರಿನ ದನಗಳಿಗೆ ರೋಗ ರುಜಿನ ಬಾರದಿರಲೆಂದು ಈ ದಬ್ಬಗುಳಿ ಬಸವೇಶ್ವರ ದೇವರನ್ನು ತಂದು ಊರಿನಲ್ಲಿ ಮೆರೆಸುತ್ತಿದ್ದರು. ಈ ಮೂಲ ದಬ್ಬಗುಳಿ ಮಾಗಡಿ ತಾಲೂಕಿನಲ್ಲಿದೆ. ಊರ ಪಶ್ಚಿಮಕ್ಕೆ ಇರುವ ಕಂಜಿಕೆರೆಯಲ್ಲಿ ಮೇ ತಿಂಗಳಲ್ಲೂ ನೀರಿರುತ್ತಿತ್ತು. ಕಾಡಿಗೆ ಹೋಗುವ ದನಗಳಿಗೆ ನೀರಿನ ಆಸರೆಯಾಗಿತ್ತು. ಇದರ ಹೂಳಿನಲ್ಲಿ ಒಂದು ಶಾಸನವಿದೆ. ನೀರು ಕಡಿಮೆಯಾದಾಗ ಅದು ಕಾಣುತ್ತದೆ. ಮುತ್ಯಾಲಮಡುವಿನ ನೀರಿನ ಆರಂಭದ ಸ್ಥಳವೇ ಈ ಕೆರೆ. ಇನ್ನೊಂದು ಕೊಳ ನಮ್ಮೂರ ಕೆರೆಯ ಹಾಗೂ ಸೋಲೂರು ಖಾನಿಯ ಅಂತ್ಯದಲ್ಲಿದ್ದು, ಇದನ್ನು ಕೆಂಪಣ್ಣ ಬಾವಿ ಎಂದೇ ಕರೆಯುತ್ತಿದ್ದೆವು. ಈ ಬಾವಿಯ ಒಡನಾಟ ನಮ್ಮೂರಿನವರಿಗೆ ಕಡಿಮೆ. ಇನ್ನೊಂದು ವಿಶಾಲವಾದ ಕುಂಟೆಯು ಈಶ್ವರ ದೇವಾಲಯದ ಬಳಿ ಇದ್ದು ಇದನ್ನು ಲಿಂಗನಗುಡಿಕುಂಟೆ ಎಂದೇ ಕರೆಯುತ್ತಿದ್ದುದು. ಕೆಂಪುಮಣ್ಣಿನ ಹೊಲಗಳಿಂದ ನೀರು ಹರಿದು ಬರುತ್ತಿದ್ದುದರಿಂದ ಇದರ ನೀರು ಎಂದೂ ಕೆಂಪಗಿರುತ್ತಿತ್ತು. ಸ್ವಲ್ಪ ಆಳವೂ ಇದ್ದದ್ದರಿಂದ ಬೇಸಿಗೆಯಲ್ಲಿ ದನ-ಕುರಿಗಳಿಗೆ ನೀರಿನ ಆಸರೆಯ ಸ್ಥಾನವಾಗಿತ್ತು (ಇತ್ತೀಚೆಗೆ ಇದನ್ನು ಮುಚ್ಚಲಾಗಿದೆ). ಅನೇಕ ನೆಸೆಗಳ ಸಮೀಪ ಬೇಸಿಗೆಯಲ್ಲಿಯೂ ಚಿಕ್ಕದಾಗಿ ನೀರು ಜಿನಗಿ ಮುಂದೆ ಹರಿಯುತ್ತಿದ್ದುದನ್ನು ನಾನು ನೋಡಿದ್ದೇನೆ. ಇಂತಹ ನೀರಿಗೆ ಅಡ್ಡ ಕಟ್ಟಿ ನೀರು ತುಂಬಿದ ನಂತರ ಅಡ್ಡ ಕಟ್ಟೆಯನ್ನು ಕಿತ್ತು ಅದು ಜೋರಾಗಿ ಹರಿಯುವುದನ್ನು ನೋಡುವುದು ಖುಷಿಯ ಕೆಲಸವಾಗಿತ್ತು. ನಮ್ಮೂರನ್ನು ಕೇಂದ್ರವಾಗಿಟ್ಟುಕೊಂಡಲ್ಲಿ ಪೂರ್ವಕ್ಕೆ ದೊಮ್ಮಸಂದ್ರ ಮತ್ತು ಕಣವನಹಳ್ಳಿಗಳೂ, ಪಶ್ಚಿಮಕ್ಕೆ ವಡ್ಡನ ಕುಂಟೆ ಮತ್ತು ಮುತ್ಯಾಲಮಡುವು; ದಕ್ಷಿಣಕ್ಕೆ ಹುಚ್ಚನಹಳ್ಳಿ, ಆಗ್ನೇಯಕ್ಕೆ ಮೇಣಸಿಗನಹಳ್ಳಿ, ನೈರುತ್ಯಕ್ಕೆ ಸೋಲೂರು, ಉತ್ತರಕ್ಕೆ ಸಿಂಗಸಂದ್ರ ಗ್ರಾಮಗಳಿದ್ದವು. ಈ ಎಲ್ಲಾ ಊರುಗಳನ್ನು ಕೂಡಿಸಲು ಕಾಲುದಾರಿ, ಬಂಡಿದಾರಿಗಳಿದ್ದವು. ಈ ಊರುಗಳ ಸಂಪರ್ಕ ನಮ್ಮೂರಿಗೆ ನಿಕಟವಾಗಿತ್ತು.

ವಣಕನಹಳ್ಳಿ ಗ್ರಾಮದಲ್ಲಿ ನಮ್ಮ ಮನೆ ಇದ್ದದ್ದು ಹಳೆಯವೂರಿನ ಊರಬಾಗಿಲಲ್ಲಿ. ಈ ಕಾರಣದಿಂದ ನಮ್ಮ ಮನೆಗೆ ಊರು ಬಾಗಿಲನವರ ಮನೆ ಎಂದೂ ಗುರುತ್ತಿತ್ತು. ನನಗೆ ಬುದ್ಧಿ ಬರುವ ವೇಳೆಗಾಗಲೇ ಈಗಿರುವ ಮನೆ ಕಟ್ಟಿದ್ದರು. ಇದಕ್ಕೆ ಹೊಂದಿಕೊಂಡಂತೆ ಇರುವ ಹಿಂದಿನ ಮನೆಯನ್ನು ಕಟ್ಟಿದ್ದು ನನಗೆ ನೆನಪಿದೆ. ಮನೆಯಲ್ಲಿ ನಮ್ಮ ತಾತ, ಅಜ್ಜಿ, ನಮ್ಮ ತಾಯಿ, ತಂದೆ ಹಾಗೂ ನಾವು ಮಕ್ಕಳು ಇದ್ದೆವು. ನಾಡ ಹೆಂಚಿನ ಮನೆಯಲ್ಲಿ ವಾಸ. ಪಕ್ಕದ ಮನೆ ದನಗಳಿಗಾಗಿಯೇ ಮೀಸಲಿತ್ತು. ಅದು ತೊಟ್ಟಿ ಮನೆಯಂತೆ ಇತ್ತು. ಪೂರ್ವದ ಗೋಡೆಗೆ ತಾಕಿದಂತೆ ದನಗಳಿಗೆ ಹುಲ್ಲು ಹಾಕಲು ಗಾಡಿ ಇತ್ತು. ಬಾಗಿಲಬಳಿ ಎತ್ತುಗಳು, ಅವುಗಳ ಪಕ್ಕದಲ್ಲಿ ಹಸುಗಳು, ಅವುಗಳ ಪಕ್ಕದಲ್ಲಿ ಕುರಿ ಹಾಗೂ ಕರುಗಳನ್ನು ಕಟ್ಟಿ ಹಾಕುತ್ತಿದ್ದರು. ಹಸುಗಳ ಹಿಂಬದಿಯಲ್ಲಿ ಮೋಟುಗೋಡೆಯೊಂದನ್ನು ಹಾಕಿ ಅಲ್ಲಿ ಹುಲ್ಲನ್ನು ಶೇಖರಿಸಿರುತ್ತಿದ್ದರು. ಹಳೆಯ ಮನೆಯಲ್ಲಿಯೇ ಅಡುಗೆ ಮನೆ, ನಡುಮನೆ ಮತ್ತು ಪಡಸಾಲೆ ಹಾಗೂ ಚಿಕ್ಕ ಎರಡು ಕೋಣೆಗಳಿದ್ದವು ಈ ಚಿಕ್ಕ ಕೋಣೆಗಳಲ್ಲಿ ಸುಟ್ಟ ಮಣ್ಣಿನ ಹಾಗೂ ಹಸಿ ಮಣ್ಣಿನ ವಾಡೆಗಳಿದ್ದವು. ಈ ವಾಡೆಗಳಲ್ಲಿಯೇ ವರ್ಷಕ್ಕೆ ಬೇಕಾದ ದವಸ ಧಾನ್ಯಗಳನ್ನು ಇಡುತ್ತಿದ್ದರು. ಸುಟ್ಟ ಮಣ್ಣಿನ ವಾಡೆಗಳನ್ನು ಕುಂಬಾರರು ಮಾಡಿದರೆ, ಹಸಿ ಮಣ್ಣಿನ ವಾಡೆಗಳನ್ನು ಮಣ್ಣು ವಡ್ಡರು ಮಾಡುತ್ತಿದ್ದರು. ಸಾಮೆಹುಲ್ಲನ್ನು ತಂದು ತುಂಡು ತುಂಡಾಗಿ ಕತ್ತರಿಸಿ ಮಣ್ಣನ್ನು ತಂದು ಅದನ್ನು ನೀರಿನಲ್ಲಿ ಕಲಸಿ ಸಾಮೆಹುಲ್ಲನ್ನು ಮಿಶ್ರಮಾಡಿ ಚೆನ್ನಾಗಿ ತುಳಿದು ನೆಲದ ಮೇಲೆ ವಾಡೆಯನ್ನು ಭಾಗ ಭಾಗವಾಗಿ ಮಾಡಿ ಒಣಗಿದ ಮೇಲೆ ಇದನ್ನು ಮನೆಯಲ್ಲಿ ಸೂಕ್ತ ಸ್ಥಳದಲ್ಲಿಟ್ಟು ಜೋಡಿಸುತ್ತಿದ್ದರು.

ನಮ್ಮ ತಾತನ ಕಾಲಕ್ಕಾಗಲೇ ಅವರ ಪೂರ್ವಿಕರು ಈ ಊರಿಗೆ ಈಗಿನ ಯಲಹಂಕದ ಬಳಿಯ ಅಲ್ಲಾಳ ಸಂದ್ರದ ಕಡೆಯಿಂದ ಬಂದವರಂತೆ. ಇವರು ನಮ್ಮ ಊರಿನ ಬಳಿ ಪಾಳ್ಯ ಎಂಬ ಜಾಗದಲ್ಲಿ ಮೊದಲು ನೆಲೆಯೂರಿ ಅನಂತರ ಈಗಿನ ವಣಕನಹಳ್ಳಿಗೆ ಬಂದರಂತೆ. ನಮ್ಮ ತಾತನ ಅಣ್ಣತಮ್ಮಂದಿರು ೬ ಜನ. ಇವರಲ್ಲಿ ನಮ್ಮ ತಾತ ಕೊನೆಯವರು. ನಮ್ಮ ತಾತನಾದ ತಿಮ್ಮರಾಯರೆಡ್ಡಿಯವರ ತಾತ ಮುನಿರೆಡ್ಡಿಯವರಿಗೆ ಇಬ್ಬರು ಮಕ್ಕಳು. ಮೊದಲನೆಯವರು ಮುನಿರೆಡ್ಡಿ, ಎರಡನೆಯವರು ತಿಮ್ಮಾರೆಡ್ಡಿ. ಮುನಿರೆಡ್ಡಿಗೆ ಇಬ್ಬರು ಮಕ್ಕಳು ಮೊದಲನೆಯವರು ನಾಗರೆಡ್ಡಿ, ಎರಡನೆಯವರು ರಾಮರೆಡ್ಡಿ,

ನಾಗರೆಡ್ಡಿಯವರು ಹೊಸವೂರಿನಲ್ಲಿ ನೆಲೆ ನಿಂತರು. ಇವರ ಮಗ ಚಿನ್ನಾಸ್ವಾಮಿರೆಡ್ಡಿ. ಇವರಿಗೆ ನಮ್ಮೂರಿನ ಗೌಡರ ಸಿದ್ಧಾರೆಡ್ಡಿಯವರ ಮನೆಯಿಂದ ಹೆಣ್ಣು ತಂದರು. ರಾಮರೆಡ್ಡಿ ಹಳೆಯ ಊರಿನಲ್ಲಿಯೇ ನಿಂತರು. ನಮ್ಮ ತಾತನ ತಂದೆ ತಿಮ್ಮಾರೆಡ್ಡಿಗೆ ಆರು ಜನ ಮಕ್ಕಳು ಮುನಿರೆಡ್ಡಿ, ನಾಗರೆಡ್ಡಿ, ಪಾಪರೆಡ್ಡಿ, ನಂಜಾರೆಡ್ಡಿ, ಕೊಂಡಾರೆಡ್ಡಿ, ತಿಮ್ಮರಾಯರೆಡ್ಡಿ ಇವರಲ್ಲಿ ಒಂದಿಬ್ಬರು ಹೊಸೂರಿನಲ್ಲಿ ನೆಲೆ ನಿಂತರೆ ನಮ್ಮ ತಾತ ಮತ್ತು ಅವರ ಅಣ್ಣ ನಂಜಾರೆಡ್ಡಿ ಹಳೆಯವೂರಿನಲ್ಲಿ ನೆಲೆ ನಿಂತರು. ನನಗೆ ತಿಳುವಳಿಕೆ ಬರುವ ವೇಳೆಗೆ ನಮ್ಮ ತಾತನ ಅಣ್ಣ ಕೊಂಡಾರೆಡ್ಡಿಯವರು ಮಾತ್ರ ಉಳಿದಿದ್ದರು. ಉಳಿದವರು ಸತ್ತುಹೋಗಿದ್ದರು. ಈ ಕೊಂಡಾರೆಡ್ಡಿಯವರೂ ನಮ್ಮ ಊರಿನ ಇನ್ನೊಂದು ಭಾಗವಾದ ಹೊಸವೂರಿನಲ್ಲಿ ನೆಲೆನಿಂತರು. ನಮ್ಮ ಪಕ್ಕದ ಮನೆಯ ನಂಜಾರೆಡ್ಡಿಗೆ ಒಬ್ಬನೇ ಮಗ ಗುಳ್ಳಾರೆಡ್ಡಿ ಅಥವಾ ಮುನಿಸ್ವಾಮಿ ರೆಡ್ಡಿ. ಇವರ ಹೆಂಡತಿ ಚಿಕ್ಕಮುನಿಯಮ್ಮ ಬೆಂಗಳೂರು ದಕ್ಷಿಣ ತಾಲೂಕಿನ ಸೂಲಕುಂಟೆಯವರು. ಇವರಿಗೆ ಹತ್ತು ಮಕ್ಕಳು. ಪಕ್ಕದ ಮನೆಯೇ ಅಲ್ಲದೆ ನಮ್ಮ ಹೊಲಗಳ ಪಕ್ಕದಲ್ಲಿಯೇ ಇವರ ಹೊಲಗಳೂ ಇದ್ದದ್ದರಿಂದ ಇವರ ಒಡನಾಟ ನಮಗೆ ಜಾಸ್ತಿ. ಇವರ ಗಂಡು ಮಕ್ಕಳು ದೊಡ್ಡವರಾದ ಮೇಲೆ ಊರಿನ ಆಸ್ತಿಯನ್ನು ಮಾರಿ ಮುಂದೆ ಗುಮ್ಮಳಾಪುರದ ತಮಾಪುರದಲ್ಲಿ ಜಮೀನು ಸಂಪಾದಿಸಿ ಅಲ್ಲಿಯೇ ಇದ್ದಾರೆ. ಹೀಗಾಗಿ ತಮಾಪುರದ ಸುತ್ತಮುತ್ತಲ ಪರಿಚಯ ನನಗೆ ಇವರಿಂದಾಯಿತು. ನಮ್ಮ ತಾತನವರ ಇನ್ನೊಬ್ಬ ಅಣ್ಣ ಬೆಂಗಳೂರು ದಕ್ಷಿಣ ತಾಲೂಕಿನ ನೆರಿಗಾ ಗ್ರಾಮದಲ್ಲಿ ನೆಲೆಸಿದರು. ನಮ್ಮ ತಾತ ವಣಕನಹಳ್ಳಿಯಲ್ಲಿಯೆ ಮದುವೆಯಾದರು. ಈಗಿರುವ ಮನೆಯನ್ನು ನಮ್ಮ ತಾತನವರೇ ಕಟ್ಟಿಸಿದರಂತೆ. ವ್ಯವಸಾಯಗಾರರಾಗಿದ್ದ ಇವರಿಗೆ ಸ್ವಲ್ಪ ಭೂಮಿ ಮಾತ್ರ ಇತ್ತು. ಮುಂದೆ ಗಿಡಗಳನ್ನು ಕಿತ್ತು ಅದರಲ್ಲಿ ಉತ್ತಿ ಬಿತ್ತಿ ಹೊಲಗಳನ್ನಾಗಿ ಪರಿವರ್ತಿಸಿದರು. ಗದ್ದೆ ಭೂಮಿ, ನೀರಾವರಿ ಭೂಮಿ ಇರಲಿಲ್ಲ. ಹೀಗಾಗಿ ವ್ಯವಸಾಯದಲ್ಲಿ ರಾಗಿ ಪ್ರಮುಖ ಬೆಳೆಯಾಗಿತ್ತು. ಭತ್ತ ಬೆಳೆಯುವ ಭೂಮಿಯಿರಲಿಲ್ಲವಾದ್ದರಿಂದ ಸಾವೆಯನ್ನು ಬೆಳೆದು ಅದನ್ನು ಅಕ್ಕಿಯನ್ನಾಗಿ ಪಿಂಗಡಿಸಿ ಅದನ್ನು ಅನ್ನವಾಗಿ ಉಣ ಬಡಿಸುತ್ತಿದ್ದರು. ಈ ಕಸಬಿನೊಂದಿಗೆ ನಮ್ಮ ತಾತನವರು ರಾಗಿ ತೆಗೆಯುವುದು, ನಂತರ ಮಾರಾಟ ಮಾಡುವುದು; ಅದರಲ್ಲಿ ಬರುವ ಅಲ್ಪಸ್ವಲ್ಪ ಲಾಭವನ್ನು ಮನೆಯ ವೆಚ್ಚಕ್ಕೆ ಬಳಸಿಕೊಳ್ಳುವುದು, ಇದರೊಂದಿಗೆ ಸರ್ವೆ ಮರಗಳ ತೋಪುಗಳನ್ನು ತೆಗೆಯುವುದು. ಅದನ್ನು ಕೊಯ್ದು ಕತ್ತರಿಸಿ ಬೆಂಗಳೂರಿನ ಸೌದೆಮಂಡಿಗಳಿಗೆ ಹಾಕುವ ವ್ಯವಹಾರವನ್ನೂ ಮಾಡುತ್ತಿದ್ದರಂತೆ. ಆನೇಕಲ್‌ನಲ್ಲಿ ಮೂಕಿ ಸಿನಿಮಾಗಳ ಪ್ರದರ್ಶನ ಕಾಲದಲ್ಲಿ ಅಲ್ಲಿನ ಥಿಯೇಟರನಲ್ಲಿ ಇವರೂ ಸಣ್ಣ ಪಾಲುದಾರರಾಗಿದ್ದರೆಂದು ಹೇಳುತ್ತಾರೆ.

ಚಿಕ್ಕವಯಸ್ಸಿನಲ್ಲಿ ನಾವು ಅನ್ನವನ್ನು ಹೆಚ್ಚಿಗೆ ತಿನ್ನಬೇಕೆಂದು ಅಪೇಕ್ಷಿಸಿದರೆ ನಮ್ಮ ತಾತ 'ಹೊಟ್ಟೆ ತುಂಬ ಹಿಟ್ಟು ಬಾಯಿತುಂಬ ಅನ್ನ ತಿನ್ನಿ' ಎಂದು ಹೇಳುತ್ತಿದ್ದರು. ಮುಂದೆ ಹಾಲಿನಿಂದ, ರಾಗಿಯ ಮಾರಾಟದಿಂದ ಬಂದ ಸ್ವಲ್ಪ ಹಣದಲ್ಲಿ ಗದ್ದೆಯನ್ನು ತೆಗೆದುಕೊಂಡರು.

ಮೊದಮೊದಲು ಚಿಕ್ಕದಾಗಿದ್ದ ಕುಟುಂಬ ನಾವೆಲ್ಲಾ ಹುಟ್ಟಿದ ಮೇಲೆ ದೊಡ್ಡದಾಗುತ್ತಾ ಬಂತು. ನಮ್ಮ ತಾಯಿಗೆ ಗಂಡು ಮಕ್ಕಳೇ ಆದಾಗ ಪ್ರತಿ ಹೆರಿಗೆಯ ಸಮಯದಲ್ಲಿ ನಮ್ಮ ತಾಯಿಯನ್ನು ಅಜ್ಜಿ ಚೆನ್ನಮ್ಮ ಹೀಯಾಳಿಸಿ ಹೆಣ್ಣುಮಗುವಾಗಲಿಲ್ಲವೆಂದು ಜರೆಯುತ್ತಿದ್ದರು. ನಮ್ಮ ತಾತನವರು ಕುಂಪಣಿ ಸೀಮೆಯ ಕೆಲವು ಗ್ರಾಮಗಳಲ್ಲಿ ಅಲ್ಪಸ್ವಲ್ಪ ಲೇವಾದೇವಿ ಇಟ್ಟುಕೊಂಡಿದ್ದರು. ಹೀಗಾಗಿ ಅನೇಕರು ಅಲ್ಲಿಂದ ನಮ್ಮ ಮನೆಗೆ ಬಂದು ಹೋಗುತ್ತಿದ್ದರು. ನೇರಿಲಹಟ್ಟಿಯ ಮೊರಸು ಒಕ್ಕಲಿಗರ ಮಾರಪ್ಪ ಮತ್ತು ಮಾರಮ್ಮ ದಂಪತಿಗಳು ಇವರಲ್ಲಿ ಪ್ರಮುಖರು. ಇವರ ಊರಿಗೆ ಹೋಗಬೇಕಾದರೆ ದಾರಿಯಲ್ಲಿ ದಾಲಂದ್ರ ಎಂಬ ಊರು ಹಾಗೂ ಹೊನ್ನಮ್ಮನ ಕೆರೆಯನ್ನು ದಾಟಕೊಂಡು ಹೋಗಬೇಕಿತ್ತು. ಒಮ್ಮೆ ನಾನು ಹೋದಾಗ ದಾಲಂದ್ರದಲ್ಲಿ ಎತ್ತರವಾದ ಕಲ್ಲಿನ ಉಯ್ಯಾಲೆ ಕಂಬ, ಕೋಟೆ, ಶಾಸನಗಳನ್ನು ನೋಡಿದ್ದ ನೆನಪು. ಈ ಹೊನ್ನಮ್ಮನ ಕೆರೆ ಜನಪದ ಸಾಹಿತ್ಯದಲ್ಲಿ ಬರುವ ಹೊನ್ನಮ್ಮನ ಕೆರೆಯೆಂದೇ ನನ್ನ ಭಾವನೆ. ಏಕೆಂದರೆ ಹೊನ್ನಮ್ಮನ ಕೆರೆ ಈ ಪ್ರದೇಶದಲ್ಲಿ ದೊಡ್ಡದು ಒಮ್ಮೆ ತುಂಬಿದರೆ ಎರಡು ಬೆಳೆ ತೆಗೆಯುವಷ್ಟು ನೀರು ನಿಲ್ಲುತ್ತಿತ್ತು. ನಮ್ಮ ತಾತ ವ್ಯವಸಾಯದ ಜೊತೆಗೆ ಮರ–ಮಟ್ಟಿನ ವ್ಯವಹಾರ ಮಾಡುತ್ತಿದ್ದಾಗ ಮರಳಿನ ಮೇಲೆ ಅಕ್ಷರಗಳನ್ನು ತಿದ್ದಿ ಕಲಿತರಂತೆ. ಸಾಯುವವರೆವಿಗೂ ಈ ಅಕ್ಷರದ ಜ್ಞಾನ ಅವರಿಗಿತ್ತು. ಅಕ್ಷರಗಳನ್ನು ಒಂದೊಂದಾಗಿ ಓದುತ್ತಾ ನಂತರ ಒಟ್ಟಿಗೆ ಕೂಡಿಸಿಕೊಂಡು ಓದುತ್ತಿದ್ದರು. ಮಹಾಭಾರತದ ಕಥೆಯನ್ನು ಓದುತ್ತಿದ್ದರು. ನಮ್ಮ ಮನೆಯಲ್ಲಿ ಮನೆಯ ಸಂಸಾರ ನಡೆಯಲು ವ್ಯವಸಾಯದ ಉಪಕಸುಬಾದ ಹೈನುಗಾರಿಕೆಯಿತ್ತು. ಸುಮಾರು ೬ ರಿಂದ ೭ ಎಮ್ಮೆಗಳು ಇದ್ದು ಇವುಗಳಲ್ಲಿ ಮೂರು ಅಥವಾ ನಾಲ್ಕು ಹಾಲು ಕರೆಯುವವಾಗಿದ್ದವು. ನಮ್ಮ ಅಜ್ಜಿ ಇದರ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ಬೆಳಗ್ಗೆ ಮತ್ತು ಸಂಜೆ ಹಾಲು ಕರೆಯುವುದು

ಹಾಗೂ ಅದನ್ನು ಆನೇಕಲ್‌ಗೆ ತೆಗೆದುಕೊಂಡು ಹೋಗಿ ವರ್ತನೆ ಮನೆಗಳಿಗೆ ಕೊಟ್ಟು ಬರುವುದು ನಮ್ಮ ಅಜ್ಜಿಯ ಜವಾಬ್ದಾರಿಯಾಗಿತ್ತು. ಕಾಲಿಗೆ ಚಪ್ಪಲಿಯಿರಲಿಲ್ಲ. ಕಾಲಿನಲ್ಲಿ ಆಣೆಗಳಿದ್ದವು. ಅವುಗಳಿಂದ ರಕ್ಷಿಸಿಕೊಳ್ಳಲು ಕಾಲಿಗೆ ಬಟ್ಟೆಗಳನ್ನು ಸುತ್ತಿಕೊಂಡು ನಡೆಯುತ್ತಿದ್ದರು. ಬೆಳಗ್ಗೆ ನಸುಕಿಗೆ ಹೋದರೆ ೧೦ ಗಂಟೆಗೆಲ್ಲಾ ವಾಪಸ್ಸಾಗುತ್ತಿದ್ದರು. ನನಗೆ ನೆನಪು ಬಂದಂದಿನಿಂದ ಈ ಕಾರ್ಯವನ್ನು ನಮ್ಮ ಅಜ್ಜಿ ಮಾಡುತ್ತಿದ್ದರು. ನಮ್ಮ ಮನೆ ಸ್ವಲ್ಪ ಉತ್ತಮ ಸ್ಥಿತಿಗೆ ಬರಲು ನಮ್ಮ ಅಜ್ಜಿ ಚೆನ್ನಮ್ಮನ ಅವಿಶ್ರಾಂತ ದುಡಿಮೆಯೂ ಕಾರಣ.

ನಮ್ಮ ಅಜ್ಜಿಗೆ ತೀವ್ರವಾದ ಅಸ್ತಮಾ ಖಾಯಿಲೆ. ಅವರು ಕೆಲವೊಮ್ಮೆ ಕೆಮ್ಮಲು ಶುರುಮಾಡಿದರೆ ನಿಲ್ಲಿಸಲು ೩೦ ನಿಮಿಷವಾದರೂ ಬೇಕಿತ್ತು. ಕೆಲವೊಮ್ಮೆ ಉಸಿರು ನಿಂತು ಹೋಯಿತೇನೋ ಎಂಬಂತಹ ಕೆಮ್ಮು. ಆ ಕಾಲಕ್ಕೆ ಇದ್ದಿರಬಹುದಾದ ಎಲ್ಲಾ ಬಗೆಯ ಔಷಧಿಗಳನ್ನು ಅವರು ಪ್ರಯೋಗಿಸಿದ್ದರು. ಒಮ್ಮೆ ಯಾರೋ ಒಬ್ಬರು ಕೆಲವು ವನಸ್ಪತಿಗಳನ್ನು ಸೇರಿಸಿ ಅದರ ಹೊಗೆ ಸೇದಿದರೆ ಕಫ ಹೊರಗೆ ಬಂದು ಸರಾಗವಾಗುತ್ತದೆಂಬ ಸಲಹೆ ನೀಡಿದರು. ಸರಿ ಈಗ ನಮ್ಮ ಸರದಿ. ಕೆಲವು ವನಸ್ಪತಿಗಳನ್ನು ಹುಡುಕುವುದು, ಅವುಗಳ ಸಂಗ್ರಹ, ಬೀಡಿ ಎಲೆ ಸಂಗ್ರಹ ಮುಂತಾಗಿ ಕಾರ್ಯಗಳು ನಮ್ಮದಾಗಿತ್ತು. ಆಗಲೇ ನನಗೆ ಭೀಮನ ಚೆಂಡು ಎಂಬ ಗಿಡ, ಕರಿ ಉಮ್ಮತ್ತಿ ಗಿಡದ ಪರಿಚಯವಾಗಿದ್ದು. ಇವುಗಳಲ್ಲಿ ಭೀಮನ ಚೆಂಡು ಸಂಗ್ರಹಿಸುವುದು ಬಹುಕಷ್ಟದ ಕೆಲಸವಾಗಿತ್ತು ಅದೊಂದು ಮುಳ್ಳಿನ ಚೆಂಡು. ಒಂದು ಅಂಗುಲದ ಮುಳ್ಳುಗಳು ನಿಮಿರಿನಿಂತ ಚೆಂಡಿನಂತಿದ್ದವು. ಅವನ್ನು ಕಿತ್ತು ಅಥವಾ ಕುಡುಗೋಲಿನಲ್ಲಿ ಕೊಯ್ದು ಬುಟ್ಟಿಯಲ್ಲಿ ಹಾಕಿಕೊಳ್ಳುತ್ತಿದ್ದೆವು. ಉಮ್ಮತ್ತಿಗಿಡಗಳಲ್ಲಿ ಕರಿ ಉಮ್ಮತ್ತಿ ಗಿಡವು ಬಿಳಿ ಉಮ್ಮತ್ತಿ ಗಿಡಕ್ಕಿಂತ ಸ್ವಲ್ಪ ಭಿನ್ನ. ಆದರೆ ಕಾಯಿ ಒಂದೇ ತರ ಇತ್ತು. ಇದರೊಂದಿಗೆ ಇನ್ನೂ ಕೆಲವು ವಸ್ತುಗಳನ್ನು ಹಾಕಿ ಕುಟ್ಟಿ ಪುಡಿಮಾಡಿ ಬೀಡಿ ಎಲೆಯಲ್ಲಿ ಸುತ್ತಿ ಇಡುತ್ತಿದ್ದೆವು. ನಮ್ಮ ಅಜ್ಜಿ ಬೀಡಿಯನ್ನು ಹಚ್ಚಿ ಸೇದುತ್ತಿದ್ದುದನ್ನು ನೋಡಲು ನಾವೆಲ್ಲಾ ಸೇರುತ್ತಿದ್ದುದೆ ಅಲ್ಲದೆ ಬೆಂಕಿ ಇತ್ಯಾದಿಗಳನ್ನು ಹಾಸಿಗೆ ಬಳಿಗೆ ತಂದು ಕೊಡುತ್ತಿದ್ದೆವು. ಈ ಬೀಡಿ ಸೇದಿದ ಮೇಲಿನ ಪರಿಣಾಮ ಮತ್ತೆ ಕೆಮ್ಮು, ಕಫ ಹೀಗೆ ಸಾಗುತ್ತಿತ್ತು. ಭೀಮನ ಚೆಂಡು, ಕರಿಉಮ್ಮತ್ತಿ ಗಿಡಗಳ ಪರಿಚಯ ನನಗಾಗಿದ್ದು ಆಗಲೇ. ಇದುವರೆವಿಗೆ ಬಿಳಿ ಉಮ್ಮತ್ತಿ ಗಿಡದ ಎಲೆಗಳನ್ನು ತಂದು ಇದ್ದಲಿನೊಂದಿಗೆ ಜಜ್ಜಿ ಅರೆದು ರಸವನ್ನು ಬಣ್ಣ ಕಳೆದುಕೊಂಡಿದ್ದ ಶಾಲೆಯ ಕಪ್ಪು ಹಲಗೆಗೆ ಬಳಿಯುತ್ತಿದ್ದೆವು. ಈ ಮೂಲಕ ಬಿಳಿ ಉಮ್ಮತ್ತಿ ಗಿಡ ಪರಿಚಯವಾಗಿತ್ತು.

ರೆಡ್ಡಿಗರಲ್ಲಿ ನಮ್ಮದು ನೆರಾಟರೆಡ್ಡಿಗರ ಗುಂಪು. ನಮ್ಮ ಗುಂಪಿಗೆ ಸೇರಿದ ರೆಡ್ಡಿಗರು ಆನೇಕಲ್ ತಾಲೂಕಿನ ಪೂರ್ವಭಾಗ, ಬೆಂಗಳೂರು ಪೂರ್ವ ತಾಲೂಕು ಹಾಗೂ ಯಲಹಂಕ, ಹೊಸಕೋಟೆ ತಾಲೂಕು, ಮಾಲೂರು ತಾಲೂಕು, ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರು ತಾಲೂಕು ಮತ್ತು ಡೆಂಕಣಿ ಕೋಟೆ ತಾಲೂಕಿನ ಕೆಲವು ಗ್ರಾಮಗಳಲ್ಲಿ ನೆಲೆಸಿದ್ದಾರೆ. ಇತ್ತೀಚೆಗೆ ಬೆಂಗಳೂರಿಗೆ ಬಹಳ ಜನ ವಲಸೆಹೋಗಿದ್ದಾರೆ. ನಮ್ಮ ಕುಟುಂಬದ ಮನೆ ದೇವರು ಯಲ್ಲಮ್ಮ. ನಮ್ಮ ಕುಟುಂಬವೇ ಅಲ್ಲದೆ ನಮ್ಮ ಗುಂಪಿನ ಅನೇಕ ಕುಟುಂಬಗಳಿಗೆ ಯಲ್ಲಮ್ಮನೇ ಮನೆದೇವರು. ಈ ಕಾರಣದಿಂದ ನಮ್ಮ ಗುಂಪಿನ ಜನ ನೆಲೆಸಿರುವ ಅನೇಕ ಗ್ರಾಮಗಳಲ್ಲಿ ಯಲ್ಲಮ್ಮನ ದೇವಾಲಯಗಳಿವೆ. ಈ ಯಲ್ಲಮ್ಮ ಎಲ್ಲಿನ ಯಲ್ಲಮ್ಮ ಎಂಬ ಬಗ್ಗೆ ಯಾರಿಗೂ ತಿಳಿದಿಲ್ಲ. ಇತ್ತೀಚೆಗೆ ಸವದತ್ತಿ ಎಲ್ಲಮ್ಮ ಎಂದು ಕೆಲವರು ಹೇಳಿದರೆ. ಕೆಲವರು ಆಂಧ್ರಪ್ರದೇಶದ ಕಡಪಾ ಜಿಲ್ಲೆಯ ಗಂಡಿಕೋಟೆಯ ಯಲ್ಲಮ್ಮ ಎಂದು ಹೇಳತೊಡಗಿದ್ದಾರೆ. ನಮ್ಮ ನೆರಾಟರೆಡ್ಡಿಗರಲ್ಲಿ ಕೆಲವರ ಮನೆದೈವ ತಿಮ್ಮರಾಯಸ್ವಾಮಿ, ಕೆಲವರದ್ದು ಮಲ್ಲೇಶ್ವರ ದೇವರೂ ಆಗಿದ್ದರೆ. ಕೆಲವರದು ಚಿಕ್ಕತಿರುಪತಿಯ ವೆಂಕಟೇಶ್ವರಸ್ವಾಮಿ, ಕೆಲವರಿಗೆ ಮುಗಳೂರಿನ ವೀರಭದ್ರಸ್ವಾಮಿ. ಹೀಗೆ ಬೇರೆ ಬೇರೆ ಗುಂಪುಗಳು ಬೇರೆ ಬೇರೆ ಮನೆದೇವರನ್ನು ಹೊಂದಿವೆ. ಮನೆದೇವರು ಯಾವುದಾದರೂ ಎಲ್ಲಾ ಗುಂಪುಗಳಲ್ಲಿ ಕೊಡು-ಕೊಳುಗಳಿವೆ. ಜೊತೆಗೆ ಸ್ಥಳೀಯ ದೇವರುಗಳನ್ನೂ ತಮ್ಮ ಇಷ್ಟದೈವಗಳಾಗಿ ತೆಗೆದುಕೊಂಡಿದ್ದಾರೆ. ನಮ್ಮೂರಿನಲ್ಲಿ ನಮ್ಮ ಗುಂಪಿಗೆ ಸೇರಿದ ಮನೆಗಳಲ್ಲದೆ ಪೆನುಗೊಂಡೆ ಕಡೆಯಿಂದ ಬಂದಿರುವ ಪೆನಗೊಂಡೆ ರೆಡ್ಡಿಗರ (ಹೊಸರೆಡ್ಡಿಗರು) ಮನೆಗಳೂ ಒಂದೆರಡು ಇವೆ. ಈಶ್ವರ ದೇವಾಲಯದ ಉಸ್ತುವಾರಿ ಇದೇ ಪೆನಗೊಂಡೆರೆಡ್ಡಿಗರ ಮನೆತನದ ದೊಡ್ಡ ನಂಜಾರೆಡ್ಡಿಯವರ ಸುಪರ್ದಿನಲ್ಲಿತ್ತು. ಈ ದೇವಾಲಯವೇ ನಮ್ಮೂರಿನ ಪ್ರಾಚೀನ ದೇವಾಲಯ ಇದನ್ನು ಸೋಮೇಶ್ವರ ದೇವಾಲಯವೆಂದೂ ಕರೆಯುತ್ತಾರೆ. ನಾಲ್ಕೂವರೆ ಅಡಿ ಎತ್ತರದ ಶಿಲಾ ಅಧಿಷ್ಠಾನವನ್ನು ಹೊಂದಿದ್ದು ಗರ್ಭಗೃಹ ಮತ್ತು ಅಂತರಾಳ ಮಂಟಪವನ್ನು ಮಾತ್ರ ಹೊಂದಿದೆ. ಇದರ ಮೇಲ್ಭಾಗ ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಿದ ರಚನೆ. ಈ ದೇವಾಲಯದ ಎಲ್ಲಾ ಭಾಗಗಳೂ ಕ್ರಿ.ಶ. ಸು. ೧೩ನೇ ಶತಮಾನದಲ್ಲಿಯೇ ರಚಿತಗೊಂಡದ್ದಾಗಿದೆ. ಬಹು ಪ್ರಮುಖ ದೇವಾಲಯವನ್ನು ಶಿಲೆಯಲ್ಲಿ ನಿರ್ಮಿಸಲು ಹೋಗಿ ಯಾವುದೋ ಕಾರಣದಿಂದ ಈ ಕಲ್ಲು ಮತ್ತು ಇಟ್ಟಿಗೆಯ ಮಿಶ್ರರಚನೆಯಾಗಿರಬೇಕು. ಈ ಈಶ್ವರ ದೇವಾಲಯವಲ್ಲದೆ ಸೋಲೂರಿನ ಬಳಿ ಒಂದು ಶಿಥಿಲ ಈಶ್ವರ ದೇವಾಲಯವಿದ್ದು ಸಕಾಲದಲ್ಲಿ ಮಳೆ ಬರದಿದ್ದರೆ ಈ ದೇವಾಲಯಕ್ಕೆ ಕುಂಭಾಭಿಷೇಕವನ್ನು ಮಾಡಿದರೆ

ಮಳೆ ಬರುತ್ತದೆಂದು ನಂಬಿಕೆ. ಅನೇಕ ಸಾರಿ ಕುಂಭಾಭಿಷೇಕವನ್ನು ಈ ದೇವಾಲಯದ ಲಿಂಗಕ್ಕೆ ಮಾಡಿದ್ದಾರೆ. ಈ ದೇವಾಲಯ ಅವಶೇಷಗಳನ್ನು ನೋಡಿದಾಗ ಇದು ನಮ್ಮೂರ ಈಶ್ವರ ದೇವಾಲಯಕ್ಕಿಂತ ಹಳೆಯದೆಂಬಂತೆ ತಿಳಿಯುತ್ತದೆ.

ನಮ್ಮ ತಾತನಿಗೆ ಮೂವರು ಮಕ್ಕಳು. ಇವರಲ್ಲಿ ನಮ್ಮ ತಂದೆ ಮುನಿಸ್ವಾಮಿ ರೆಡ್ಡಿ ದೊಡ್ಡವರು. ಎರಡನೆಯವರು ಕೊಂಡಮ್ಮ. ಮೂರನೆಯವರು ಸುಂಕಮ್ಮ. ನಮ್ಮ ತಂದೆಗೆ ಎರಡು ಮದುವೆ. ಮೊದಲ ಹೆಂಡತಿ ಚಿಕ್ಕಕ್ಕಯ್ಯ ಇವರಿಗೆ ಒಂದು ಹೆಣ್ಣು, ಒಂದು ಗಂಡು ಮಗುವಾದ ಮೇಲೆ ತೀರಿಕೊಂಡರು. ನಂತರ ಆವಡದೇನ ಹಳ್ಳಿಯ ನಂಜುಂಡರೆಡ್ಡಿಯವರ ಎರಡನೆಯ ಮಗಳು ತಿಮ್ಮಕ್ಕನನ್ನು ಮದುವೆಯಾದರು. ಇವರಿಗೆ ನಾನೇ ಮೊದಲ ಮಗುವಾಗಿ ಜನಿಸಿದೆ. ನನ್ನ ನಂತರ ಮುನಿರೆಡ್ಡಿ, ನಾರಾಯಣರೆಡ್ಡಿ, ಕೃಷ್ಣಾರೆಡ್ಡಿ, ಚೆನ್ನಾರೆಡ್ಡಿ, ರಾಮರೆಡ್ಡಿ ಎಂಬುವವರು ಮಕ್ಕಳಾದರು. ಮೊದಲ ಹೆಂಡತಿ ಮಗಳು ಮುನಿತಾಯಮ್ಮ, ಮಗ ಮುನಿಸ್ವಾಮಿ ರೆಡ್ಡಿ. ತಂದೆಯ ಹೆಸರನ್ನು ಮಗನಿಗೆ ಇಟ್ಟಿದ್ದುದರಿಂದ ಮುನಿಸ್ವಾಮಿರೆಡ್ಡಿ ಎಂದು ಕರೆಯಲಾರದೆ ಪಾಪಣ್ಣ ಎಂದು ಕರೆಯುತ್ತಿದ್ದರು. ನಮ್ಮ ತಂದೆಯವರು ನಮ್ಮೂರಿನ ಶಾಲೆಯಲ್ಲಿ ೪ನೆಯ ತರಗತಿಯವರೆಗೆ ಕಲಿತಿದ್ದರು. ಹೀಗಾಗಿ ಲೆಕ್ಕಗಳ ಬರಹ, ಹುಟ್ಟಿದ, ಸತ್ತ, ಎತ್ತುಗಳನ್ನು ಕೊಂಡುತಂದ, ಮಾರಿದ ವಿವರಗಳನ್ನು ಬರೆದಿಡುತ್ತಿದ್ದರು. ನಮ್ಮ ಅಕ್ಕ ಶಾಲೆ ಓದಿರಲಿಲ್ಲ. ನಮ್ಮ ಅಣ್ಣ ನಮ್ಮೂರಿನ ಮಿಡ್ಲ್‌ಸ್ಕೂಲ್ ಪಾಸುಮಾಡಿ ನಂತರ ಓದದೆ ವ್ಯವಸಾಯಕ್ಕೆ ಇಳಿದಿದ್ದರು. ನಮ್ಮ ತಾಯಿ ಎರಡನೆಯ ಪತ್ನಿಯಾಗಿ ಬಂದಾಗ ಆಕೆಯ ಜವಾಬ್ದಾರಿ ನಮ್ಮ ತಂದೆಯ ಮೊದಲ ಹೆಂಡತಿಯ ಇಬ್ಬರು ಮಕ್ಕಳನ್ನು ನೋಡಿಕೊಳ್ಳುವುದೂ ಆಗಿತ್ತು. ಆದರೂ ನಮ್ಮ ತಾತ ಮತ್ತು ಅಜ್ಜಿ ತಾಯಿಯಿಲ್ಲದ ಮಕ್ಕಳೆಂದು ಅವರನ್ನು ಸ್ವಲ್ಪ ಮುದ್ದಾಗಿಯೇ ನೋಡಿಕೊಳುತ್ತಿದ್ದರು. ತನ್ನ ತವರು ಊರು ಆವಡದೇನಹಳ್ಳಿಗೆ ಬಹಳ ಸಾರಿ ನನ್ನ ತಾಯಿ ಹೋಗಲೇ ಇಲ್ಲ. ನನಗೆ ನೆನಪು ಬಂದ ಮೇಲೆ ನಮ್ಮ ಚಿಕ್ಕಮ್ಮ ಗೌರಮ್ಮನ ಸೋಬಣಕ್ಕೆ ಒಮ್ಮೆ, ನಮ್ಮ ತಾಯಿಯ ತಾತ ಬಹು ಖಾಯಿಲೆ ಬಿದ್ದಾಗ ನೋಡಿಕೊಂಡು ಬರಲು ಒಮ್ಮೆ, ಇನ್ನೊಮ್ಮೆ ಬಹುಶಃ ಅವರು ಸತ್ತಾಗ ಅಥವಾ ಇನ್ನೊಂದು ಎರಡು ಬಾರಿ ಹೋಗಿರಬೇಕು. ನಮ್ಮೂರಿಂದ ಅವರೂರಿಗೆ ಹೋಗಬೇಕಾದರೆ ಆ ಕಾಲಕ್ಕೆ ನಡದೇ ಹೋಗುವುದು ರೂಢಿ. ಬಸ್ ಇದ್ದರೂ ಅಪರೂಪಕ್ಕೆ. ಹೀಗಾಗಿ ಆರು ಮೈಲಿ ನಡೆದೇ ಹೋಗಬೇಕಿತ್ತು. ತೊಟ್ಟಿಲ ಮಕ್ಕಳು ಜೇರೆ. ಅದೇ ದಿನ ವಾಪಾಸ್ಸಾಗಬೇಕಿತ್ತು. ಹೀಗಾಗಿ ಹೋಗುವುದನ್ನೇ ಕಡಿಮೆ ಮಾಡಿದ್ದರು.

ಒಮ್ಮೆ ಕಬ್ಬಿಣದ ಸರಪಳಿ ಹಾಕಿ ದೊಡ್ಡ ತೊಟ್ಟಿಲು ಕಟ್ಟಿದ್ದರು. ನಾನು ಇನ್ನು ಚಿಕ್ಕವನು ಬಹುಶಃ ೪-೫ ವರ್ಷದವನಿರಬಹುದು ನನ್ನ ತಮ್ಮನನ್ನು ತೊಟ್ಟಿಲಲ್ಲಿ ಹಾಕಿ ತೂಗುವಾಗ ನನ್ನನ್ನು ಕುಳ್ಳಿರಿಸಿರೆಂದು ರಚ್ಚೆ ಗಿಟ್ಟಿದ ಜ್ಞಾಪಕ. ತೊಟ್ಟಿಲಲ್ಲಿದ್ದ ನನ್ನನ್ನು ತೊಟ್ಟಿಲಿಗೆ ಹತ್ತಬಾರದೆಂದು ನನ್ನ ತಮ್ಮನ ಹಠ. ನಾನು ಹತ್ತಲು ಹೋಗುವುದು ಅವನು ಕಿರುಚುವುದು. ಇಬ್ಬರೂ ಕಿರುಚುವುದು ಹೀಗೆ ಸಾಗಿತ್ತು... ನಾವೆಲ್ಲರೂ ಶಾಲೆಗೆ ಹೋಗುತ್ತಿದ್ದುರಿಂದ ನಮ್ಮ ತಾಯಿಗೆ ಮನೆಯಲ್ಲಿ ಕೆಲಸದ ಭಾರ ಹೆಚ್ಚಾದಂತೆ ಮನೆಯಲ್ಲಿ ಕೆಲಸ ಮಾಡುವವರ ಕೊರತೆ ಕಾಣತೊಡಗಿತು. ನಮ್ಮ ತಾಯಿ ಬೆಳಗ್ಗೆ ಎದ್ದು ರಾಗಿ ಜೀಸುವುದು, ನೀರು ಸೇದುವುದು, ಅಡುಗೆ ಮಾಡುವುದು, ಆಳು-ಕಾಳುಗಳಿಗೆ ಅದನ್ನು ಹೊಲಕ್ಕೆ ಎತ್ತಿಕೊಂಡು ಹೋಗಿ ಬಡಿಸಿಬರುವುದು. ಮತ್ತೆ ಮಧ್ಯಾಹ್ನ ಮೂರು ಗಂಟೆಗೆ ತಂಗಳು ಊಟ. ಸಂಜೆ ಎತ್ತುಗಳಿಗೆ ಹುರಳಿ ರುಬ್ಬುವುದು, ರಾತ್ರಿ ಮತ್ತೆ ಅಡುಗೆ ಕೆಲಸ, ಈ ಮಧ್ಯೆ ಬಟ್ಟೆ ಒಗೆಯುವುದು, ಹಬ್ಬ ಹರಿದಿನಗಳಲ್ಲಿ ಮನೆ ತೊಳೆಯುವುದು ಮುಂತಾದ ಕೆಲಸವನ್ನು ಮಾಡಬೇಕಿತ್ತು. ನಮ್ಮ ಅಕ್ಕ ಮದುವೆಯಾಗಿ ಗಂಡನ ಮನೆಗೆ ಹೋಗಿದ್ದಳು. ನಮ್ಮ ಸೋದರತ್ತೆ ಮಗಳು ಪುಟ್ಟಮ್ಮನ ಮದುವೆಯೂ ಆಗಿತ್ತು. ಹೀಗಾಗಿ ಮನೆಯಲ್ಲಿ ಕೆಲಸದ ಒತ್ತಡ ಹೆಚ್ಚಿದಾಗ ನಮ್ಮ ಅಣ್ಣ ಮುನಿಸ್ವಾಮಿರೆಡ್ಡಿಗೆ ಮದುವೆ ಮಾಡಲು ಹೆಣ್ಣನ್ನು ಹುಡುಕಲಾರಂಭಿಸಿದರು. ಆಗ ಜೂಜವಾಡಿಯಿಂದ ಮುನಿಯಮ್ಮ ಎಂಬ ಕನ್ನೆಯನ್ನು ತಂದು ಮನೆಯಲ್ಲಿಯೇ ಇರಿಸಿಕೊಂಡರು. ನಮ್ಮ ಅತ್ತಿಗೆ ನಮ್ಮ ಮನೆಗೆ ಬಂದಾಗ ಸುಮಾರು ೧೦ ವರ್ಷ ವಯಸ್ಸು. ಮನೆಯ ಅನೇಕ ಕೆಲಸಗಳನ್ನು ಇವರೇ ಮಾಡಬೇಕಿತ್ತು. ಶಾಲೆಯ ಬಿಡುವಿದ್ದಾಗ ನಾನು, ನನ್ನ ತಮ್ಮ ಇವರಿಗೆ ಸಹಕರಿಸುತ್ತಿದ್ದೆವು. ನಂತರ ಕೆಲವು ವರ್ಷಗಳ ತರುವಾಯ ಇವರಿಬ್ಬರ ಮದುವೆಯಾಯಿತು. ಈ ಹಂತದಲ್ಲಿ ನಾನು ಊರಿನಲ್ಲಿ ಓದುತ್ತಿದ್ದುದರಿಂದ ನೀರು ತರಲು, ಹುರಳಿ ರುಬ್ಬಲು ಸಹಾಯ ಮಾಡುತ್ತಿದ್ದೆ. ಮುಂದೆ ಹೈಸ್ಕೂಲಿಗೆ ಸೇರಿದ ಮೇಲೆ ಈ ಕೆಲಸಗಳು ಬಂದಾದವು.

ನಮ್ಮ ತಂದೆಯ ದೊಡ್ಡ ತಂಗಿ ಕೊಂಡಮ್ಮನನ್ನು ನಮ್ಮ ಊರಿನಲ್ಲಿಯೇ ನಮ್ಮ ಅಜ್ಜಿ ಚೆನ್ನಮ್ಮನ ಅಣ್ಣನ ಹಿರಿಯ ಮಗ ಮುನಿನಂಜಾರೆಡ್ಡಿಗೆ ಕೊಟ್ಟು ಮದುವೆ ಮಾಡಿದ್ದರು. ಇವರಿಗೆ ಬಜ್ಜಾರೆಡ್ಡಿ ಎಂಬ ಗಂಡುಮಗು, ಪುಟ್ಟಮ್ಮ ಎಂಬ ಹೆಣ್ಣು ಮಗುವಾದ ಮೇಲೆ ಕೊಂಡಮ್ಮ ತೀರಿಕೊಂಡರು. ಮುಂದೆ ಚಿಕ್ಕ ಮಗು ಪುಟ್ಟಮ್ಮನ ಜವಾಬ್ದಾರಿ ನಮ್ಮ ಮನೆಯೇ ಆಯಿತು. ಈಕೆಯನ್ನು ನಮ್ಮೂರಿನ ದೊಡ್ಡ ನಂಜಾರೆಡ್ಡಿಯ ದೊಡ್ಡಮಗ ಪಿಲ್ಲಾರೆಡ್ಡಿಗೆ ಕೊಟ್ಟು ಮದುವೆ ಮಾಡಲಾಯಿತು. ಪುಟ್ಟಮ್ಮನ ಮದುವೆ ಯಾರು ಮಾಡಬೇಕೆಂಬ ಬಗ್ಗೆ ವಾದ-ವಿವಾದವುಂಟಾಯಿತು. ನಮ್ಮ ತಾತ ಆಕೆಯನ್ನು ಜಿನ್ನಮಂಗಲಕ್ಕೆ

ಕೊಡುವ ಬಗ್ಗೆ ಯೋಚಿಸಿದ್ದರು. ಇದರ ವಿರುದ್ಧ ಪುಟ್ಟಮ್ಮನ ತಂದೆ ಮತ್ತು ಚಿಕ್ಕಪ್ಪಂದಿರು, ಊರಿನ ದೊಡ್ಡನಂಜಾರೆಡ್ಡಿಯವರ ಮನೆಗೆ ಕೊಡಬೇಕೆಂದು ತೀರ್ಮಾನಿಸಿದರು. ಈ ಬಗ್ಗೆ ವಾದವಿವಾದಗಳು ನಡೆದು ಪಂಚಾಯತಿ ಏರ್ಪಡಿಸಿದ್ದರು. ನಾನು ಈ ಬಗ್ಗೆ ಆಸಕ್ತಿ ವಹಿಸದಿದ್ದರೂ ಕುತೂಹಲದಿಂದ ಗಮನಿಸುತ್ತಿದ್ದೆ. ಒಂದು ದಿನ ಕುಲಸ್ಥರೆಲ್ಲಾ ಪಂಚಾಯತಿ ಸೇರಿ ನಮ್ಮ ತಾತನ ಮಾತನ್ನು ತೆಗೆದುಹಾಕಿ ಹೆಣ್ಣು ಮಗು ತಂದೆಯ ಮನೆಗೆ ಸೇರಿದ್ದೆಂದು ಹೇಳಿ ವಣಕನಹಳ್ಳಿಯ ನಂಜಾರೆಡ್ಡಿ ಮಗ ಪಿಲ್ಲಾರೆಡ್ಡಿಗೆ ಮದುವೆ ಮಾಡಿದರು. ಈ ಮದುವೆಗೆ ನಮ್ಮ ಮನೆಯ ಕಡೆಯಿಂದ ಯಾರೂ ಹೋಗಿರಲಿಲ್ಲ. ಮದುವೆ ದಿನ ಬೆಳಗ್ಗೆ ಬಸವೇಶ್ವರ ದೇವಾಲಯದಲ್ಲಿ ದಿಬ್ಬಣವಿರಿಸಿದ್ದಾಗ ನಾನೊಬ್ಬನೇ ಅಲ್ಲಿಗೆ ಹೋಗಿದ್ದೆ. ಮನೆಗೆ ಬಂದ ಮೇಲೆ ಬೈಗಳನ್ನು ತಿಂದೆ. ಆಗ ಏಕೆ ಇವರು ಹೀಗೆ ವರ್ತಿಸುತ್ತಿದ್ದಾರೆ? ಮದುವೆಗೆ ಏಕೆ ಹೋಗಲಿಲ್ಲ ಎಂಬ ಬಗ್ಗೆ ಯೋಚಿಸಿದ್ದೆ. ಆದರೆ ಉತ್ತರ ಸಿಕ್ಕಿರಲಿಲ್ಲ.

ನಮ್ಮ ತಂದೆಯ ಎರಡನೆಯ ತಂಗಿ ಸುಂಕಮ್ಮನನ್ನು ಡೆಂಕಣಿಕೋಟೆ ತಾಲೂಕು ಥಳಿ ಬಳಿಯ ದೇವಗಾನಹಳ್ಳಿಯ ಮುನಿರೆಡ್ಡಿ ಅಥವಾ ದೊಡ್ಡ ಅಬ್ಬಯ್ಯ ಎಂಬುವವರಿಗೆ ಕೊಟ್ಟು ವಿವಾಹ ಮಾಡಲಾಗಿತ್ತು. ನಮ್ಮೂರಿಗೂ ಇವರ ಊರಿಗೂ ೫ ಮೈಲಿ ಅಂತರ. ಇವರ ಊರಿಗೆ ಹೋಗಬೇಕಾಗದರೆ ಹುಚ್ಚನಹಳ್ಳಿ, ಅಡಿಸೋಂಪುರ, ಸಾತನೂರು, ನಂತರ ದೇವಗಾನಹಳ್ಳಿ ಸಿಗುತ್ತಿತ್ತು. ಸಾಮಾನ್ಯವಾಗಿ ನಡೆದೇ ಹೋಗುತ್ತಿದ್ದು ರೂಢಿ. ಕೆಲವೊಮ್ಮೆ ಜಿನ್ನಮಂಗಲದ ಮೇಲೆ ಈ ಊರಿಗೆ ಹೋಗುತ್ತಿದ್ದೆವು. ಸಾಮಾನ್ಯವಾಗಿ ಹುಚ್ಚನಹಳ್ಳಿ ಮೇಲಿನ ದಾರಿಯನ್ನೇ ಆಯ್ದು ಕೊಳ್ಳುತ್ತಿದ್ದೆವು. ಕಾರಣ ಜನ ಸಂಚಾರವಿದ್ದ ದಾರಿ ಅದು. ಈಕೆಗೆ ರಾಮಕ್ಕ, ರತ್ನಮ್ಮ ಎಂಬ ಇಬ್ಬರು ಹೆಣ್ಣು ಮಕ್ಕಳು, ಗುರುನಾಥರೆಡ್ಡಿ ಎಂಬ ಗಂಡು ಮಗು. ರಾಮಕ್ಕನನ್ನು ಜಿನ್ನಮಂಗಲದ ಮಾದರೆಡ್ಡಿಯ ಹಿರಿಯ ಮಗ ವೀರಾರೆಡ್ಡಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಈ ಮಾದರೆಡ್ಡಿಯವರ ಕುಟುಂಬ ಎತ್ತುಗಳ ವ್ಯಾಪಾರದಲ್ಲಿ ಇಂದಿಗೂ ಎತ್ತಿದಕೈ. ಎರಡನೆಯ ಮಗಳು ರತ್ನಮ್ಮ ಈಕೆ ನನ್ನನ್ನು ಮದುವೆಯಾದಳು. ನಮ್ಮ ಅತ್ತೆ ಸುಂಕಮ್ಮನ ಬಗ್ಗೆ ಬರೆಯದಿದ್ದಲ್ಲಿ ಈ ಆತ್ಮಕಥನ ಪೂರ್ಣವಾಗಲಾರದು. ಈಕೆಗೆ ಓದು ಬರಹ ಬರುತ್ತಿರಲಿಲ್ಲ. ಆದರೆ ಸಾಕಷ್ಟು ವ್ಯವಹಾರಿಕ ಜ್ಞಾನವಿತ್ತು. ನಮ್ಮ ಮಾವನಿಗೆ ತೀವ್ರವಾದ ಅಸ್ತಮಾ ಖಾಯಿಲೆ. ಹೀಗಾಗಿ ವ್ಯವಸಾಯದ ಕೆಲಸಗಳು, ಹೊಲಗಳ ಬಳಿ ಓಡಾಡುವುದು ನಮ್ಮ ಅತ್ತೆಯದೇ ಕೆಲಸವಾಗಿತ್ತು. ಇಷ್ಟಿದ್ದರೂ ಸ್ವಲ್ಪ ಮೊಂಡು ಹಠ. ಗಂಡನೊಡನೆ ಜಗಳವಾಡಿಕೊಂಡು ಕೆಲವೊಮ್ಮೆ ವಾರಗಟ್ಟಲೆ ನಮ್ಮೂರಿನಲ್ಲಿರುತ್ತಿದ್ದಳು. ಬೆಳಗ್ಗೆ ಕೋಳಿ ಕೂಗುವ ವೇಳೆಗೆ ದೇವಗಾನಹಳ್ಳಿ ಬಿಟ್ಟು ಬೆಳಗ್ಗೆ ೭ ಗಂಟೆಗೆಲ್ಲಾ ನಮ್ಮೂರಿನಲ್ಲಿರುತ್ತಿದ್ದಳು. ನಂತರ ನಮ್ಮ ತಾತನ ಬಳಿ ಏನೋ ಹೇಳಿ ಇದ್ದದ್ದನ್ನು ತಿಂದು ನಮ್ಮೂರು ಬಿಟ್ಟರೆ ಬೆಳಗ್ಗೆ ೧೦ ಗಂಟೆಗೆ ಅವರೂರಿನಲ್ಲಿರುತ್ತಿದ್ದಳು. ಈ ಬಗೆಯ ನಡಿಗೆ ಅವರಲ್ಲಿತ್ತು. ವ್ಯವಸಾಯದ ಉಪ ಅಂಗವಾದ ಹೈನುಗಾರಿಕೆಗೆ ಈಕೆ ಹೆಚ್ಚಿನ ಒತ್ತುಕೊಟ್ಟಿದ್ದಳು. ನಾನೆಂದರೆ ಆಕೆಗೆ ತುಂಬು ಅಭಿಮಾನ. ನನ್ನ ಹೆಚ್ಚಿನ ಓದಿಗೂ ಸಹ ಹಣಕಾಸಿನ ನೆರವು ನೀಡಿದ್ದರು. ತನ್ನ ಎರಡನೆಯ ಮಗಳನ್ನು ನನಗೇ ಕೊಡಬೇಕೆಂದೂ ಈ ಬಗ್ಗೆ ಒಪ್ಪಿಕೊಳ್ಳಬೇಕೆಂದೂ ನಮ್ಮ ತಾತನನ್ನು ಒತ್ತಾಯಿಸುತ್ತಿದ್ದಳು. ಯುಗಾದಿಯ ಜಾತ್ರೆ ಬಂದರೆ ನಾನು ಇವರ ಊರಿಗೆ ಹೋಗಿ ಇವರ ಮಗಳು ರತ್ನಮ್ಮಳನ್ನು ನಮ್ಮೂರಿಗೆ ಕರೆದುಕೊಂಡು ಬರಬೇಕಿತ್ತು. ಹಾಗೆಯೇ ಜಾತ್ರೆ ಮುಗಿದ ಮೇಲೆ ಕರೆದುಕೊಂಡು ಹೋಗಿ ಅವರೂರಿಗೆ ಬಿಡಬೇಕಿತ್ತು. ಹೀಗಾಗಿ ನಾನು ಇವರ ಊರಿಗೆ ಆಗಾಗ ಹೋಗುತ್ತಿದ್ದೆ. ಅನೇಕ ವೇಳೆ ಯಾರಾದರೂ ನನ್ನ ವಯಸ್ಸಿನ ಸ್ನೇಹಿತರನ್ನು ಕರೆದುಕೊಂಡು ಹೋಗಿ ಅದೇ ದಿನ ಸಂಜೆ ಒಳಗೆ ವಾಪಸ್ಸಾಗುತ್ತಿದ್ದೆ. ಊರಿನಲ್ಲಿ ಓದು ಮುಗಿದ ನಂತರ ಹೈಸ್ಕೂಲಿಗೆ ಆನೇಕಲ್ಲಿಗೆ ಹೋಗಬೇಕಾಗಿತ್ತು. ಹೈಸ್ಕೂಲಿನಲ್ಲಿ ನಾನು ಓದುವಾಗ ಬುದ್ಧಿವಂತನೂ ಅಲ್ಲ, ದಡ್ಡನೂ ಅಲ್ಲದ ಮಧ್ಯಮ ಜ್ಞಾನ ಹುಡುಗನಾಗಿದ್ದೆ ಬೆಳಗ್ಗೆ ಮೂರುವರೆ ಮೈಲಿ ಸಂಜೆ ಮೂರುವರೆ ಮೈಲಿ ನಡೆದು ಸುಸ್ತಾಗುತ್ತಿದ್ದೆ. ನಮಗೆ ಓದಲು ಕುಳಿತರೆ ಸ್ವಲ್ಪ ಹೊತ್ತು ಮಾತ್ರ ಸಾಧ್ಯವಾಗುತ್ತಿತ್ತು. ನಂತರ ನಿದ್ದೆ ಬರುತ್ತಿತ್ತು. ಇದರ ಜೊತೆಗೆ ಎಣ್ಣೆದೀಪದ ಬೆಳಕಿನಲ್ಲಿ ಓದಬೇಕಿತ್ತು. ಸುಮಾರು ಒಂದು ಅಡಿ ಎತ್ತರದ ಮರದ ಕಂಬವೊಂದರ ಮೇಲಿನ ಮಣ್ಣಿನ ಹಣತೆಯ ದೀಪದ ಬೆಳಕಿನಲ್ಲಿ ಅದರ ಸುತ್ತಲೂ ಕುಳಿತು ನಾನು ನನ್ನೊಂದಿಗೆ ನನ್ನ ತಮ್ಮಂದಿರು ಓದಬೇಕಿತ್ತು. ಹೊಂಗೆಮರಗಳು ನಮ್ಮ ಹೊಲದಲ್ಲಿ ಇದ್ದದ್ದರಿಂದ ಅವುಗಳ ಬೀಜದಿಂದ ತೆಗೆದ ಎಣ್ಣೆಯನ್ನೇ ದೀಪ ಉರಿಸಲು ಬಳಸುತ್ತಿದ್ದುದು. ಮುಂದೆ ಸೀಮೆ ಎಣ್ಣೆಯ ಬಳಕೆ ಹೆಚ್ಚಾದ ಮೇಲೆ ಅದರ ಬುಡ್ಡಿಗಳನ್ನು ಬಳಸುತ್ತಿದ್ದೆವು. ಇದೂ ಅಷ್ಟೇ ಬೆಳಕು. ಹೆಚ್ಚಿನ ಬೆಳಕಿರಲಿಲ್ಲ. ಆದರೆ ಅದಕ್ಕಿಂತಲೂ ಹೆಚ್ಚಿನ ಮಸಿಯನ್ನು ಇದು ಕಾರುತ್ತಿತ್ತು. ಈ ಕಾರಣಗಳಿಂದ ಕಣ್ಣಿಗೆ ಆಯಾಸವಾಗಿ ಬೇಗ ನಿದ್ದೆಬರುತ್ತಿತ್ತು.

ನಾನು ಚಿಕ್ಕವನಿದ್ದಾಗ ನಮ್ಮ ಮನೆಯಲ್ಲಿ ವ್ಯವಸಾಯದ ಕೆಲಸಗಳು ಮುಗಿದ ಮೇಲೆ, ನಮ್ಮ ತಂದೆಯವರು ತಾವು ತಂದಿದ್ದ ಎತ್ತುಗಳನ್ನು ಮಾರುತ್ತಿದ್ದರು. ನಂತರ ಸಮೀಪದ ಜಾತ್ರೆಗೆ ಹೋಗಿ ಎತ್ತುಗಳನ್ನು ತರುವುದು. ಜನವರಿಯಿಂದ ಮೇ ಅಂತ್ಯದೊಳಗೆ ಎರಡು ಮೂರು ಜೊತೆಗಳನ್ನು ಬದಲಿಸುತ್ತಿದ್ದರು. ನಮ್ಮ ತಂದೆ ಮಾತ್ರವಲ್ಲ ಊರಿನಲ್ಲಿ ಅನೇಕರು

ಈ ಕೆಲಸ ಮಾಡುತ್ತಿದ್ದರು. ಒಂದು ಹೊಸ ಜೊತೆ ಎತ್ತುಗಳು ಮನೆಯ ಮುಂದೆ ಇದ್ದರೆ ಅನೇಕರು ಬಂದು ನೋಡಿ ಅದರ ಸುಳಿ, ಬಣ್ಣ, ಕಾಲುಗಳು ಮುಂತಾದವನ್ನು ನೋಡಿ ಹೀಗೆ ಹೀಗೆ ಎಂದು ಹೇಳುತ್ತಿದ್ದರು. ೧೯೬೧-೬೨ ಸುಮಾರಿನಲ್ಲಿ ಒಮ್ಮೆ ಎತ್ತುಗಳನ್ನು ತಂದು ಅವುಗಳ ಜೊತೆಗೆ ಬೇರೆಯವರ ಎತ್ತುಗಳನ್ನು ಸೇರಿಸಿ ಒಂದು ಲಾರಿಯಲ್ಲಿ ಹಾಕಿಕೊಂಡು ಹಾವೇರಿ ಕಡೆಗೆ ಹೋದವರು ಒಂದು ತಿಂಗಳು, ಒಂದೂವರೆ ತಿಂಗಳಾದರೂ ಬರಲಿಲ್ಲ. ನಮ್ಮ ಮನೆಯಲ್ಲಿ ಒಂದು ಬಗೆಯ ದುಗುಡ ವಾತಾವರಣ. ಎಲ್ಲಿದ್ದಾರೆಂದೂ ತಿಳಿದಿಲ್ಲ. ಈಗಿನಂತೆ ಅಂದು ದೂರವಾಣಿ ಸಂಪರ್ಕವೂ ಇರಲಿಲ್ಲ. ಹಿಂದೆಲ್ಲಾ ಹೋಗಿದ್ದಾಗ ೧೫ ದಿನಕ್ಕೆಲ್ಲಾ ವಾಪಾಸ್ಸಾಗಿದ್ದರು. ಸ್ಥಳದ ಪರಿಚಯವಿರುವವರನ್ನು ಆ ಕಡೆಯಿಂದ ಎತ್ತು ಮಾರಿಬಂದವರನ್ನು ಎಲ್ಲರನ್ನೂ ವಿಚಾರಿಸಿದ್ದಾಯಿತು. ಯಾರಿಂದಲೂ ವಿಷಯ ತಿಳಿಯಲಿಲ್ಲ. ಕೊನೆಗೆ ಹಿಂದೆ ನಮ್ಮ ತಂದೆ ಜೊತೆಯಲ್ಲಿ ಹೋಗಿದ್ದ ನಮ್ಮ ಸೋದರತ್ತೆ ಮಗ ಬಜ್ಜಾರೆಡ್ಡಿ ಎಂಬುವವರನ್ನು ಹಾವೇರಿ ಕಡೆಗೆ ನಮ್ಮ ತಾತ ಕಳುಹಿಸಿದರು. ಆತ ೮-೧೦ ದಿನಗಳ ಮೇಲೆ ತಂದ ವಾರ್ತೆಯೆಂದರೆ ನಮ್ಮ ತಂದೆಯವರು ಕರ್ಜಗಿ ಸಮೀಪವಿರುವದಾಗಿಯೂ ಇನ್ನೂ ಒಂದೆರಡು ಜೊತೆ ಎತ್ತುಗಳನ್ನು ಮಾರಿಲ್ಲವೆಂದೂ, ಮಾರಿದ ಮೇಲೆ ಬರುತ್ತಾರೆಂದೂ ತಿಳಿಸಿದ. ಅದಾದ ೧೦ ದಿನದಲ್ಲಿ ನಮ್ಮ ತಂದೆಯವರು ಬಂದರು. ಅದೇ ವರ್ಷ ಅಷ್ಟಗ್ರಹಕೂಟ. ನಮ್ಮ ತಾಯಿಗೆ ಕೆಲವರು ಈ ಕೂಟದಿಂದ ಕಷ್ಟವಿರುವುದಾಗಿಯೂ ನವಗ್ರಹ ಪೂಜೆಮಾಡಬೇಕೆಂದು ಹೇಳಿದರು. ಅದರಂತೆ ನಮ್ಮ ತಾಯಿ ಕಪ್ಪುಬಟ್ಟೆಯಲ್ಲಿ ಎಳ್ಳು ಮುಂತಾದವನ್ನು ಹಾಕಿ ಸಣ್ಣ ಸಣ್ಣ ಗಂಟುಕಟ್ಟಿ ಸಂಜೆ ದೇವಾಲಯಕ್ಕೆ ಹೋಗಿ ಉರಿಸಿ ಬರುತ್ತಿದ್ದರು. ಅದೇ ವರ್ಷ ಅಂದರೆ ೧೯೬೨ರಲ್ಲಿ ನಮ್ಮ ತಂದೆ ಕಾಲವಾದರು. ನಾನು ಆಗ ಹೈಸ್ಕೂಲ್ ಎಂಟನೆಯ ತರಗತಿ ಸೇರಿದ್ದೆ. ನನ್ನ ಕೊನೆಯ ತಮ್ಮ ರಾಮರೆಡ್ಡಿ ಆಗ ಒಂದು-ಒಂದುವರೆ ವರ್ಷದ ಮಗು. ನಮ್ಮ ಅಣ್ಣ ನನಗಿಂತ ಸುಮಾರು ೫ ವರ್ಷ ದೊಡ್ಡವರು.

ನಮ್ಮ ತಂದೆಗೆ ಒಟ್ಟು ೭ ಗಂಡು ಮಕ್ಕಳು ಒಬ್ಬಳೇ ಹೆಣ್ಣುಮಗಳು. ನಾನು ಚಿಕ್ಕವನಿದ್ದಾಗಲೇ ನಮ್ಮ ಅಕ್ಕನಿಗೆ ಮದುವೆಯಾಗಿತ್ತು. ನಮ್ಮ ಊರಿನಲ್ಲೇ ಇದ್ದ ಅಜ್ಜಿಯ ತವರು ಮನೆಗೆ ಆಕೆಯನ್ನು ಕೊಡಲಾಗಿತ್ತು. ನಮ್ಮ ಅಣ್ಣ ಆಕೆಗಿಂತ ಎರಡು ವರ್ಷ ಚಿಕ್ಕವನು. ನನ್ನ ನಂತರ ಕ್ರಮವಾಗಿ ಮುನಿರೆಡ್ಡಿ ನಾರಾಯಣರೆಡ್ಡಿ, ಕೃಷ್ಣಾರೆಡ್ಡಿ, ಚೆನ್ನಾರೆಡ್ಡಿ, ರಾಮರೆಡ್ಡಿ ಎಂಬುವವರು ಮಕ್ಕಳಾದರು. ಇವರಲ್ಲಿ ಚೆನ್ನಾರೆಡ್ಡಿ ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡ. ಮುನಿರೆಡ್ಡಿ ನಮ್ಮ ತಂದೆ ತೀರಿದ ಒಂದೆರಡು ವರ್ಷಗಳಲ್ಲಿ ತೀರಿಕೊಂಡ. ಈತ ಮರಗಳ ಬಳಿ ಬಿದ್ದಿದ್ದ ತರಗನ್ನು ಬಳಿಯುವಾಗ ಹುಳ ಕಚ್ಚಿತೆಂದೂ ಅದು ನಿಧಾನವಾಗಿ ವಿಷವೇರಿ ಸತ್ತನೆಂದು ಮಾತನಾಡಿಕೊಳ್ಳುತ್ತಿದ್ದರು. ಸ್ವತಃ ಆತನಿಗೂ ಏನಾಗಿತ್ತೆಂದು ತಿಳಿದಿರಲಿಲ್ಲ. ಬೆಳಗ್ಗೆ ಜ್ವರವೆಂದು ಮಲಗಿದವನು ಸಂಜೆ ಹೆಣವಾಗಿದ್ದ. ಈ ಸನ್ನಿವೇಶದಲ್ಲಿ ನಡೆದ ಘಟನೆಯೊಂದು ನನ್ನ ಅನುಭವದಲ್ಲಿದೆ. ಸಪ್ತಮಾತೃಕೆಯರ ಲೇಖನ ಬರೆಯಲು ಇದು, ಹಾಗೂ ಬೇರೆ ಬೇರೆ ಕಡೆಯ ಕ್ಷೇತ್ರಕಾರ್ಯಗಳಲ್ಲಿ ಇಂತಹದನ್ನು ಗುರುತಿಸಲು ನನಗೆ ಸಹಕಾರಿಯಾಯಿತು. ನನ್ನ ತಮ್ಮ ಪ್ರಜ್ಞೆ ಕಳೆದುಕೊಂಡ ಮೇಲೆ ಇದಕ್ಕೆ ಪರಿಹಾರವಾಗಿ ತಕ್ಷಣ ಕನ್ನಿಕೆಯರ ಪೂಜೆ ಮಾಡಬೇಕೆಂದು ಹೇಳಿದರು. ಆಗ ಸುಮಾರು ಸಂಜೆ ೫.೩೦ರ ಸಮಯ ಊರಿನ ಹೊರಗೆ ಇದ್ದ ಚಿಕ್ಕ ಬಾವಿಗೆ ಹೋಗಿ ನೀನು ಪೂಜೆ ಮಾಡಿಕೊಂಡು ಬಾ ಎಂದು ನನಗೆ ಹೇಳಿದರು. ಆ ದಿನ ಮೋಡ ಬೇರೆ ಕವಿದು ಕತ್ತಲಾದಂತೆ ತಿಳಿಯುತ್ತಿತ್ತು. ನಮ್ಮ ಮನೆ ಬಳಿಯ ಓಬಳರೆಡ್ಡಿ ಮಗ ಶ್ರೀನಿವಾಸ ರೆಡ್ಡಿಯನ್ನು ಕರೆದುಕೊಂಡು ಚಿಕ್ಕ ಬಾವಿ ಬಳಿ ಹೋದೆ. ಭಯ, ಹತ್ತಿರದಲ್ಲಿಯೇ ಸ್ಮಶಾನ. ಭಯದಲ್ಲಿ ಮೊಣಕಾಲು ಮಟ್ಟದ ನೀರಿನಲ್ಲಿ ಇಳಿದು ಕೈ ಕಾಲು ತೊಳೆದುಕೊಂಡು ೭ ಕಲ್ಲುಗಳನ್ನು ತಂದು ತೊಳೆದು ಉದ್ದಕ್ಕೆ ವೇದಿಕೆ ನಿರ್ಮಿಸಿ ಕಲ್ಲುಗಳನ್ನಿಟ್ಟು ಲಕ್ಕಲಿ ಸೊಪ್ಪನ್ನು ಸಿಕ್ಕಿಸಿ ಪೂಜೆ ಮಾಡಿ ಭಯದಲ್ಲಿಯೇ ಮೇಲೆ ಬಂದೆ. ನಂತರ ಮನೆಗೆ ಕಡೆಗೆ ಬಂದೆ. ದೂರದಲ್ಲಿಯೆ ಮನೆಯವರು ರೋಧಿಸುತ್ತಿರುವುದು ನನಗೆ ಏನಾಗಿದೆ ಎಂಬುದನ್ನು ಹೇಳುತ್ತಿತ್ತು. ವರ್ಷಗಳು ಕಳೆದರೂ ಈ ಕನ್ನಿಕೆಯರು ಯಾರೆಂದು ಯೋಚಿಸುತ್ತಲೇ ಇದ್ದೆ. ಸಪ್ತಮಾತೃಕೆಯರ ಬಗ್ಗೆ ವಿಷಯ ಸಂಗ್ರಹಣೆ ಮಾಡುತ್ತಿದ್ದಾಗ ಇದರ ಸುಳಿವು ದೊರೆಯಿತು. ಸಾಮಾನ್ಯವಾಗಿ ಈ ಕನ್ನಿಕೆಯರನ್ನು ನೀರಿನ ಬಳಿ ಪೂಜಿಸುವುದು ವಾಡಿಕೆ. ಪೂಜೆಗೆ ಹೋಗುವಾಗ ಪೂಜೆ ಮಾಡುವ ವ್ಯಕ್ತಿ ಮೌನವಾಗಿರಬೇಕು ಮತ್ತು ಪೂಜೆ ಮುಗಿಯುವವರೆಗೂ ಯಾರೊಂದಿಗೂ ಮಾತನಾಡಬಾರದಿತ್ತು. ಮಾತನಾಡಿದರೆ ವ್ರತಭಂಗವಾಗುತ್ತದೆಂದು ನಂಬಿಕೆ.

ನಮ್ಮೂರ ಶಾಲೆಗೆ ನಾನು ಸೇರುವ ವೇಳೆಗೆ ಸುಮಾರಾಗಿ ಬುದ್ಧಿಬಂದಿತ್ತು. ನಮ್ಮ ಅಣ್ಣನ ಜೊತೆಯಲ್ಲಿ ಹೋಗಿ ಶಾಲೆಗೆ ಸೇರಿಕೊಂಡೆ. ವಯಸ್ಸು ನೋಡಲು ಕೈಯನ್ನು ತಲೆಯ ಹಿಂಭಾಗಕ್ಕೆ ತಂದು ಕಿವಿ ಹಿಡಿಸುವುದು, ನಿಲ್ಲಿಸಿ ಎತ್ತರ ನೋಡುವುದು ಹೀಗೆ ನಾನಾತರದಲ್ಲಿ ವಯಸ್ಸನ್ನು ಉಪಾಧ್ಯಾಯರು ನಿಷ್ಕರ್ಷಿಸುತ್ತಿದ್ದರು. ಶಾಲೆಗೆ ಸೇರಿಸುವಾಗ ನಮ್ಮಣ್ಣ ನನ್ನ ಹೆಸರನ್ನು ದೇವರಕೊಂಡಾರೆಡ್ಡಿ ಎಂದು ಹೇಳಿದಾಗ ನಮ್ಮಣ್ಣ ಯಾರ ಹೆಸರನ್ನೋ ಹೇಳುತ್ತಿದ್ದಾನೆ ಎಂದುಕೊಂಡಿದ್ದೆ. ಏಕೆಂದರೆ ನನಗೆ ಈ ಹೆಸರೇ ಗೊತ್ತಿರಲಿಲ್ಲ. ಅಪ್ಪಾಜಿ ಎಂಬ ಬಳಕೆ ಹೆಸರೇ ರೂಢಿಯಲ್ಲಿತ್ತು. ಮುಂದೆ ಹಲಗೆ ಬಳಪ.

ಇದರಲ್ಲಿಯೇ ಅಭ್ಯಾಸ. ನಾಲ್ಕನೆಯ ತರಗತಿ ಮುಗಿಸಿ ೫ನೆಯ ತರಗತಿಗೆ ಬರುವವರೆಗೆ ಅಂತಹ ಹೇಳಕೊಳ್ಳುವಂತಹ ನೆನಪುಗಳೇನೂ ಇಲ್ಲ. ಐದನೆಯ ತರಗತಿಯು ವಿದ್ಯಾಭ್ಯಾಸದಲ್ಲಿ ಒಂದು ಹಂತ. ಈ ಹಂತಕ್ಕೆ ಅನೇಕರು ಶಾಲೆ ಬಿಡುತ್ತಿದ್ದರು. ಬೇರೆ ಊರುಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳು ಐದನೆಯ ತರಗತಿಗಾಗಿ ಸೇರಲು ಮುಖ್ಯವಾಗಿ ಮಣಸಿಗನಹಳ್ಳಿ, ಹುಚ್ಚನಹಳ್ಳಿ, ಸೋಲೂರು, ಗುಮ್ಮಳಾಪುರ ಕೆಲವೊಮ್ಮೆ ಮುತ್ತೂರು, ಕಣವನಹಳ್ಳಿಗಳಿಂದ ನಾಲ್ಕನೆಯ ತರಗತಿ ಮುಗಿಸಿದ ವಿದ್ಯಾರ್ಥಿಗಳು ನಮ್ಮ ಊರಿನ ಶಾಲೆಗೆ ಐದನೆಯ ತರಗತಿಗೆ ಸೇರಲು ಬರುತ್ತಿದ್ದರು. ಗುಮ್ಮಳಾಪುರ, ಕಣವನಹಳ್ಳಿ ಮತ್ತು ಹುಚ್ಚನಹಳ್ಳಿಗಳು ಆಗಿನ ಮದರಾಸು ಪ್ರಾಂತ್ಯ (ಈಗಿನ ತಮಿಳುನಾಡು) ದಲ್ಲಿದ್ದರೂ ಅಲ್ಲಿ ಕನ್ನಡ ಪ್ರೈಮರಿ ಶಾಲೆಗಳಿದ್ದವು. ಹೀಗಾಗಿ ಮುಂದಿನ ವಿದ್ಯಾಭ್ಯಾಸಕ್ಕಾಗಿ ಅವರು ನಮ್ಮೂರಿಗೆ ಬರುತ್ತಿದ್ದರು.

ನಮ್ಮೂರಿನಲ್ಲಿ ಈ ಕಾಲಕ್ಕೆ ಸೀತಾರಾಮಯ್ಯನವರು ಹೆಡ್‌ಮಾಸ್ಟರ್. ಇವರ ಪೂರ್ಣ ಹೆಸರು ಸೀತಾರಾಮಯ್ಯಂಗಾರ್ ಇವರಿಗಿಂತ ಮೊದಲು ರಾಮಯ್ಯ ಎಂಬುವವರಿದ್ದರು. ಸೀತಾರಾಮಯ್ಯನವರು ಆನೇಕಲ್‌ನಲ್ಲಿ ನೆಲೆಸಿದ್ದರೂ ಇವರ ಜಮೀನು ನಮ್ಮೂರ ಬಳಿಯ ತೆಲಗರಹಳ್ಳಿಯ ಬಳಿಯ ಗೊಲ್ಲಹಳ್ಳಿಯಲ್ಲಿತ್ತು. ಹೀಗಾಗಿ ನಮ್ಮ ಊರಿನ ಅನೇಕ ಹಿರಿಯ ತಲೆಮಾರುಗಳಿಗೆ ಇವರ ಪರಿಚಯವಿತ್ತು. ಬಹುಶಃ ಆ ಗ್ರಾಮದ ಶಾನುಭೋಗರು ಇವರ ತಂದೆಯವರೇ ಆಗಿದ್ದರು. ಹೀಗಾಗಿ ನಮ್ಮೂರ ಒಕ್ಕಲುತನದವರೆಲ್ಲಾ ಇವರಿಗೆ ಪರಿಚಿತರೇ ಆಗಿದ್ದರು. ಕಚ್ಚೆ ಪಂಚೆ, ಷರ್ಟು, ಅದರ ಮೇಲೆ ಕೋಟು, ಕನ್ನಡಕ, ಹಣೆಯ ಮೇಲೆ ಮೂರು ನಾಮ, ಕಾಲಲ್ಲಿ ಚಪ್ಪಲಿ ಇವರ ವೇಷ. ಸಮಯಕ್ಕೆ ಸರಿಯಾಗಿ ಶಾಲೆಯಲ್ಲಿದ್ದು, ಸಮಯ ಮುಗಿದ ಮೇಲೆ ಹೋಗುತ್ತಿದ್ದರು. ಬೆಳಗ್ಗೆ ಪ್ರಾರ್ಥನೆಯಲ್ಲಿ ನಿಂತು 'ವನಸುಮದೊಳೆನ್ನ ಜೀವನವು ವಿಕಸಿಸುವಂತೆ' ಹಾಡಿಸುತ್ತಿದ್ದರು. ಅದಾದ ನಂತರ 'ಸ್ವಾಮಿ ದೇವನೆ ಲೋಕಪಾಲನೆ' ನಂತರ ಜನಗಣಮನ. ವಿದ್ಯಾರ್ಥಿಗಳು ಪ್ರಾರ್ಥನೆಗೆ ಬಂದಾಗ ಅವರು ನಿಂತಿರುವ ಸಾಲಿಗೆ ಬಂದು ಬಟ್ಟೆ ಒಗೆದಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸುತ್ತಿದ್ದರು. ವಿದ್ಯಾರ್ಥಿಗಳ ಮನೆಮಾತಿನಲ್ಲಿ ಅಂದರೆ ತೆಲುಗು, ಕನ್ನಡ ಭಾಷೆಗಳಲ್ಲಿ ಬುದ್ಧಿ ಹೇಳಿ ಮುಂದೆ ಹೋಗುತ್ತಿದ್ದರು. ನಮ್ಮ ಅಣ್ಣನಿಗೆ ಇವರೇ ಮೇಷ್ಟ್ರು, ನನಗೂ ಇವರೇ ಮೇಸ್ಟ್ರಾಗಿದ್ದರು. ಸಂಗೀತದ ಮೇಷ್ಟ್ರು ಗುಜ್ಜಯ್ಯಂಗಾರರು ಗುಮ್ಮಳಾಪುರದಿಂದ ಬಂದು ಸಂಜೆ ಹಾಡುಗಳನ್ನು ಹೇಳಿಕೊಡುತ್ತಿದ್ದರು. ಇವರ ವಯಸ್ಸು ಗೊತ್ತಿರಲಿಲ್ಲ. ನಮ್ಮ ಅಣ್ಣನಿಗೆ, ನನಗೆ, ನನ್ನ ತಮ್ಮಂದಿರಿಗೆ, ನನ್ನ ಮಗಳಿಗೂ ಇವರು ಸಂಗೀತದ ಮೇಷ್ಟ್ರು ಆಗಿದ್ದರು. ನಮ್ಮ ಶಾಲೆಯಲ್ಲಿಯೇ ಸೇರಿ ನಮ್ಮ ಶಾಲೆಯಲ್ಲಿಯೇ ರಿಟೈರ್ಡ್ ಆದವರು. ಗುಮ್ಮಳಾಪುರದ ನರಸಿಂಹದೇವಾಲಯದ ಅರ್ಚಕರೂ ಇವರೇ ಆಗಿದ್ದರು. ಇವರ ತಮ್ಮ ರಾಜಯ್ಯಂಗಾರ್ ನಮ್ಮ ಸಹ ಪಾಟಿ. ಸಾಮಾನ್ಯವಾಗಿ ಸಾಯಂಕಾಲ ಕೊನೆಯ ಪಿರಿಯಡ್ಡು ಇವರದಿರುತ್ತಿತ್ತು. 'ಗಿರಿಧರ ಗೋಪಾಲ ಬಾಲ', 'ರಘುಪತಿರಾಘವ ರಾಜಾರಾಂ' ಮುಂತಾದ ಹಾಡುಗಳನ್ನು ಇವರು ರಾಗವಾಗಿ, ಸಾಮೂಹಿಕವಾಗಿ ಹಾಡಿಸುತ್ತಿದ್ದರು.

ಸೀತಾರಾಮಯ್ಯನವರಲ್ಲದೆ ನಮ್ಮೂರಿಗೆ ವರ್ಗವಾಗಿ ಬಂದ ಮೇಷ್ಟ್ರುಗಳಲ್ಲಿ ನಮ್ಮೂರ ನಗರ್ತರ ಕುಟುಂಬಕ್ಕೆ ಸೇರಿದ ಸಾಹುಕಾರ್ ಮುನಿಸ್ವಾಮಪ್ಪನವರ ತಮ್ಮ ವೀರಭದ್ರಪ್ಪ ಮೇಷ್ಟ್ರು ಮುಖ್ಯರಾದವರು. ಹುಸ್ಕೂರಿನಿಂದ ವರ್ಗವಾಗಿ ನಮ್ಮೂರಿಗೆ ಬಂದಾಗ ಇವರಿಗೆ ಇನ್ನೂ ಚಿಕ್ಕವಯಸ್ಸು. ಇವರು ಹೊಡೆತಗಳಿಗೆ ಪ್ರಸಿದ್ಧಿ. ನಮ್ಮೂರಿನ ಕೆಲವು ಹಿರಿಯರೂ ಇವರಿಗೆ ಅವರ ಮನೆಯ ಮಕ್ಕಳನ್ನು ಹೊಡೆದು ದಾರಿಗೆ ತರುವಂತೆ ಹೇಳುತ್ತಿದ್ದರು. ಇವರು ಹೇಳಿದ ವಿಷಯವನ್ನು ಒಪ್ಪಿಸದಿದ್ದರೆ ಅಂದು ಅವರಿಗೆ ಹೊಡೆತ ಗ್ಯಾರಂಟಿ. ಇವರಿಂದ ಬಹುವಾಗಿ ಹೊಡೆತ ತಿಂದವರಲ್ಲಿ ಲಿಂಗಾರೆಡ್ಡಿಗರ ಕೃಷ್ಣಾರೆಡ್ಡಿ ಮತ್ತು ಬೋಡಪ್ಪ ಮುಖ್ಯರಾದವರು. ಇವರ ತರಗತಿಯು ಹಿಂದೆ ಇದ್ದ ಪಂಚಾಯತಿ ಹಾಲ್‌ನ ವರಾಂಡದಲ್ಲಿ ನಡೆಯುತ್ತಿತ್ತು. ದಾರಿಯಲ್ಲಿ ಹೋಗುವವರೆಲ್ಲಾ ನಮಗೆ ಪಾಠ ಮಾಡುತ್ತಿದ್ದುದನ್ನು ನೋಡಬಹುದಿತ್ತು. ಒಮ್ಮೆ ನಮ್ಮ ತಾಯಿ ಕೆರೆಗೆ ಹೋಗಿ ಬಟ್ಟೆಗಳನ್ನು ಹಿಂಡಿಕೊಂಡು ಬರುತ್ತಿದ್ದಾಗ ವೀರಭದ್ರಪ್ಪ ಮೇಷ್ಟ್ರು ಬೋಡರೆಡ್ಡಿಗೆ ಹೊಡೆಯುತ್ತಿದ್ದರು. ಇದನ್ನು ನೋಡಿದ ನಮ್ಮ ತಾಯಿ ಯಾಕೆ ಸ್ವಾಮಿ ತಾಯಿಯಿಲ್ಲದ ಮಕ್ಕಳನ್ನು ಹಾಗೆ ಹೊಡೆಯುತ್ತೀರಿ ನಿಮಗೆ ಕರುಣೆಯಿಲ್ಲವೆ ಎಂದು ಜೋರಾಗಿ ಕೇಳಿದಾಗ ವೀರಭದ್ರಪ್ಪ ಮೇಷ್ಟ್ರಿಗೆ ಷಾಕ್. ಈ ಮಾತುಕತೆಗಳನ್ನು ಕೇಳಿದ ಹೆಡ್‌ಮಾಸ್ಟರ್ ಸೀತಾರಾಮಯ್ಯನವರು ಬಂದು ವೀರಭದ್ರಪ್ಪ ಮೇಷ್ಟ್ರನ್ನು ಆ ಹೆಂಗಸು ಯಾರೆಂದು ಕೇಳಿದಾಗ ನನ್ನ ಕಡೆ ತೋರಿಸುತ್ತಾ ಈ ದ್ಯಾವರಕೊಂಡನ ತಾಯಿಯೆಂದರು. ಹೆಡ್‌ಮಾಸ್ಟರು ಹೆಚ್ಚಿಗೆ ಮಾತನಾಡದೆ ಹಾಗೆಲ್ಲಾ ಸಿಕ್ಕಾಪಟ್ಟೆ ಹೊಡೀಬೇಡ ವೀರಭದ್ರಪ್ಪ ಎಂದು ಹೇಳಿದ್ದು ಜ್ಞಾಪಕ. ಶಾಲೆಯಲ್ಲಿ ಚರಿತೆ ಮತ್ತು ಭೂಗೋಳವನ್ನು ಇವರು ಮಾಡುತ್ತಿದ್ದರು. ಶಾಲೆಯಲ್ಲಿ ಯಾವುದೇ ಕಾರ್ಯವಾಗಲಿ ಇವರು ಮುಂದಾಗಿ ನಿಲ್ಲುತ್ತಿದ್ದರು.

ಇನ್ನು ಉಳಿದ ಉಪಾಧ್ಯಾಯರಲ್ಲಿ ನಾರಾಯಣ ಮೂರ್ತಿ ಮತ್ತು ನರಸಿಂಹಮೂರ್ತಿ ಮೇಷ್ಟ್ರು ಮುಖ್ಯರಾದವರು. ಸೀತಾರಾಮಯ್ಯಂಗಾರ್, ನರಸಿಂಹಮೂರ್ತಿ ಮತ್ತು ನಾರಾಯಣಮೂರ್ತಿ ಮೇಷ್ಟ್ರುಗಳನ್ನು ನಾವು ತ್ರಿಮೂರ್ತಿಗಳೆಂದೇ ಭಾವಿಸಿದ್ದೆವು. ತರಗತಿಯಲ್ಲಿ ಪಾಠ ಮಾಡುವುದು, ಶಿಸ್ತು, ಜೊತೆಗೆ ನೀತಿಬೋಧನೆ ಎಲ್ಲದರಲ್ಲೂ ಇವರು ಒಬ್ಬರೊಬ್ಬರನ್ನು

ಎಂದೂ ಬಿಟ್ಟುಕೊಟ್ಟಿರಲಿಲ್ಲ. ಒಂದೇ ಮಾತಿನಲ್ಲಿದ್ದವರು. ಒಬ್ಬರು ಇನ್ನೊಬ್ಬರಿಗೆ ಸಹಾಯಕರಾಗಿ ಶಾಲೆಯ ಬೆಳವಣಿಗೆಯಲ್ಲಿ ತೊಡಗಿಸಿಕೊಂಡವರು. ನಾರಾಯಣಮೂರ್ತಿಯವರು ಕನ್ನಡ ಪಾಠವನ್ನು ಬಹು ಮನಮುಟ್ಟುವಂತೆ ಬೋಧಿಸುತ್ತಿದ್ದರು. ಎ.ಆರ್. ಕೃಷ್ಣಶಾಸ್ತ್ರಿಯವರ ವಚನ ಭಾರತದ ಪಾಠವನ್ನು ಇವರೇ ಮಾಡುತ್ತಿದ್ದುದು. ಎಂದೂ ಗಟ್ಟಿಯಾಗಿ ಯಾರನ್ನು ಗದರಿಸುತ್ತಿರಲಿಲ್ಲ. ಹೇ ಕತ್ತೆ ಎಂಬ ಬೈಗುಳ ಬಿಟ್ಟರೆ ಬೇರೆ ಬರುತ್ತಿರಲಿಲ್ಲ. ಇನ್ನು ಹೆಚ್ಚೆಂದರೆ ಸಣ್ಣ ಸ್ಕೇಲಿನಲ್ಲಿ ಒಂದೇಟು. ಇದು ಪರಮೋಚ್ಚ ಶಿಕ್ಷೆ. ನಾವು ಯಾರೂ ಈ ಶಿಕ್ಷೆ ಪಡೆಯುವಷ್ಟು ಗಲಾಟೆ ಮಾಡುತ್ತಿರಲಿಲ್ಲ. ಒಮ್ಮೆ ನಳಚರಿತೆ ಪದ್ಯವನ್ನು ಪಾಠಮಾಡುತ್ತಿದ್ದಾಗ ಅಲ್ಲಿ ಬರುವ 'ಭಯಗೊಂಡು ಓಡಿದರಲ್ಲಿ ಬಣಜಿಗರು' ಎಂಬ ಪಾಠ ಮಾಡುವಾಗಿನ ಪ್ರಸಂಗ ಈಗಲೂ ನನಗೆ ನೆನಪಿದೆ. ನಾರಾಯಣಮೂರ್ತಿ ಮೇಷ್ಟ್ರು ಪಾಠ ಓದಿದ ಮೇಲೆ ಪ್ರತಿ ಹುಡುಗನೂ ಪದ್ಯಗಳನ್ನು ನಿಂತು ಓದಬೇಕಿತ್ತು. ಮೊರಸು ಒಕ್ಕಲಿಗ, ರೆಡ್ಡಿ ಇತರೆ ಜಾತಿಯ ವಿದ್ಯಾರ್ಥಿಗಳಲ್ಲದೆ ಬಣಜಿಗ ಹುಡುಗರೂ ತರಗತಿಯಲ್ಲಿ ಇರುತ್ತಿದ್ದರು. ಮೇಲೆ ಹೇಳಿದ ಪದ್ಯವನ್ನು ಓದುವ ಸಂದರ್ಭ ನಮ್ಮಲ್ಲಿ (ಬಣಜಿಗ ಹುಡುಗರನ್ನು ಬಿಟ್ಟು) ಯಾರಿಗೆ ಬಂದರೂ 'ಭಯಗೊಂಡು ಓಡಿದರಲ್ಲಿ' ಎಂಬ ಭಾಗವನ್ನು ಸಹಜವಾಗಿ ಓದಿ 'ಬಣಜಿಗರೂ' ಎಂಬ ಪದವನ್ನು ಗಟ್ಟಿಯಾಗಿ ಹೇಳುತ್ತಾ ಆ ಹುಡುಗರ ಕಡೆ ನೋಡುತ್ತಿದ್ದೆವು. ಮೇಷ್ಟ್ರಿಗೂ ನಮ್ಮ ತುಂಟಾಟ ಗೊತ್ತು. ಬಣಜಿಗ ಹುಡುಗರು ಮೇಷ್ಟ್ರಿಗೆ ದೂರು ನೀಡಿದಾಗ ನಾರಾಯಣಮೂರ್ತಿ ಮೇಷ್ಟ್ರು ಲೇ ಕತ್ತೆ ಬಾರೋ ಇಲ್ಲಿ, ಹಂಗೆಲ್ಲಾ ಓದಬಾರದು ಎಂದು ಹೇಳುತ್ತಾ ಕೈಯಲ್ಲಿದ್ದ ಚಿಕ್ಕ ಕಡ್ಡಿಯಿಂದ ಒಂದು ಬಾರಿಸುತ್ತಿದ್ದರು. ನಳಚರಿತ್ರೆಯನ್ನು ಈ ಕಾಲಕ್ಕೇ ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೆ. ನಾರಾಯಣಮೂರ್ತಿ ಮೇಷ್ಟ್ರು ಎಷ್ಟು ಜನಾನುರಾಗಿಗಳೆಂದರೆ ಅವರು ಸಾಕಿದ್ದ ಹಸುವಿಗೆ ಹುಲ್ಲು ಬೇಕೆಂದು ಕೇಳಿದರೆ ಸಾಕು ಕೂಡಿಹಾಕಿದ ಹುಲ್ಲೇ ಒಂದು ಬಂಡಿಯಾಗುತ್ತಿತ್ತು. ಇದು ಊರವರಿಗೆ ಇವರ ಮೇಲಿದ್ದ ಸದ್ಭಾವನೆಗೆ ಸಾಕ್ಷಿ.

ನರಸಿಂಹಮೂರ್ತಿಗಳು ಮಡಿವಂತ ಸ್ಮಾರ್ತ ಬ್ರಾಹ್ಮಣರು. ಕಚ್ಚೆಪಂಚೆ ಜುಬ್ಬ. ಕೆಲವೊಮ್ಮೆ ಜುಬ್ಬದ ಮೇಲೆ ಕ್ಲೋಸ್ ಕಾಲರ್ ಕೋಟು. ಆಯುರ್ವೇದ ಔಷಧಿಗಳ ಜ್ಞಾನ ತಕ್ಕಷ್ಟು ಮಟ್ಟಿಗೆ ಇವರಿಗೆ ಇತ್ತು. ಶಾಲೆಯಲ್ಲಿ ಒಂದು ಕೊಠಡಿಯ ಮೂಲೆಯಲ್ಲಿ ಬೆಂಚೊಂದರ ಮೇಲೆ ಇವರು ವಿದ್ಯಾರ್ಥಿಗಳ ನೆರವಿನೊಂದಿಗೆ ಸಿದ್ಧಪಡಿಸಿದ್ದ ಪುಡಿ ಔಷಧಿಗಳನ್ನು ಬಾಟಲುಗಳಲ್ಲಿ ಜೋಡಿಸಿ ಇಟ್ಟಿದ್ದರು. ಬಿದ್ದು ರಕ್ತ ಬರುವ ಗಾಯವಾದರೆ ಅದಕ್ಕೆ ಔಷಧಿ, ಹಲ್ಲು ಉಜ್ಜುವ ಪುಡಿ, ಹಳೆಯ ಗಾಯಗಳಿಗೆ ಔಷಧಿ ಹೀಗೆ ಇತ್ತು ಔಷಧಿಗಳ ಸಾಲು. ಬಾಟಲಿಗಳ ಮೇಲೆ ಅದರ ಉಪಯೋಗದ ಬಗ್ಗೆ ಬರೆದು ಅಂಟಿಸಿದ್ದರು. ಒಂದೆರಡು ಬಾರಿ ಇವರು ನಮ್ಮನ್ನು ಊರಸುತ್ತಲೂ ಇರುವ ಔಷಧಿ ಸಸ್ಯಗಳನ್ನು ಸಂಗ್ರಹಿಸಲು ಜೊತೆಯಲ್ಲಿ ಕರೆದುಕೊಂಡು ಹೋಗಿದ್ದರು. ನನಗೆ ಎಕ್ಕದ ಗಿಡದ ಹೆಚ್ಚಿನ ಪರಿಚಯವಾಗಿದ್ದು ಅಂದೇ. ಒಂದೆಲಗ ಅಥವಾ ಬ್ರಾಹ್ಮಿ ಗಿಡವನ್ನು ದಿನವೂ ನೋಡುತ್ತಿದ್ದೆನಾದರೂ ಇದೇ ಬ್ರಾಹ್ಮಿಗಿಡ ಅಥವಾ ಒಂದೆಲಗ ಎಂದು ತೋರಿಸಿಕೊಟ್ಟವರು ಇವರೇ. ಎಳ್ಳೆಣ್ಣೆ, ಬೆಳ್ಳುಳ್ಳಿ, ಒಂದೆಲಗವನ್ನು ಸೇರಿಸಿ ಅರೆದು ಹಳೆಯ ಗಾಯಗಳಿಗೆ ಹಚ್ಚಿದರೆ ವಾಸಿಯಾಗುತ್ತದೆ ಎಂಬುದನ್ನು ತೋರಿಸಿದವರು. ಒಮ್ಮೆ ಹಲ್ಲುಪುಡಿ ತಯಾರಿಕೆಯ ಬಗ್ಗೆ ಹೇಳುತ್ತಾ ಬಿಲ್ವಪತ್ರೆಕಾಯನ್ನು ಎರಡು ಹೋಳಾಗಿ ಒಡೆದು ಒಂದು ಕಡೆ ತಿರುಳು ತೆಗೆದು ಉಪ್ಪು ತುಂಬಿ ಮತ್ತೆ ಜೋಡಿಸಿ ಬೆಂಕಿಯಲ್ಲಿ ಸುಟ್ಟು ಇದ್ದಲಿನಂತಾದ ಮೇಲೆ ತೆಗೆದು ಪುಡಿ ಮಾಡಿ ಅದರಿಂದ ದಿನವೂ ಹಲ್ಲು ಉಜ್ಜಿದಲ್ಲಿ ಹಲ್ಲುಗಳು ಗಟ್ಟಿಯಾಗುತ್ತವೆ ಎಂದು ಹೇಳಿದ್ದರು. ಅದನ್ನು ಪ್ರಯೋಗಿಸಬೇಕೆಂಬ ಕುತೂಹಲ. ಊರ ಈಶ್ವರನ ಗುಡಿಯ ಬಳಿಯ ಬಿಲ್ವಪತ್ರೆ ಕಾಯಿಗಳನ್ನು ಸಂಗ್ರಹಿಸಿದ್ದಾಯಿತು. ಅವನ್ನು ಗುರುಗಳು ಹೇಳಿದಂತೆ ಒಡೆದು ಉಪ್ಪು ತುಂಬಿ ಒಲಗೆ ಹಾಕಿದೆ. ಸ್ವಲ್ಪ ಹೊತ್ತು ಏನು ಆಗಲಿಲ್ಲ. ಸೌದೆ ಇಡುವಾಗ ಒಲೆಯಲ್ಲಿದ್ದ ಕಾಯಿಯೊಂದು ಕದಲಿ ಹೋಳುಗಳು ಬೇರೆ ಬೇರೆಯಾದವು ಒಳಗಿದ್ದ ಉಪ್ಪಿನ ಹರಳು ಒಲೆಯಲ್ಲಿ ಚಿಟಪಟಗುಟ್ಟತೊಡಗಿತ್ತು. ಕೊನೆಗೆ ನಮ್ಮ ತಾಯಿಯ ಬೈಗಳಲ್ಲಿ ಈ ಕಾರ್ಯ ಅಂದು ಮುಗಿಯಿತು. ಮಾರನೇ ದಿನ ನನ್ನ ಪ್ರಯೋಗ ನೀರ ಒಲೆಯಲ್ಲಿ. ಅಂತೂ ಇಂತು ಒಂದು ಕಾಯನ್ನು ಸುಡುವುದರಲ್ಲಿ ಯಶಸ್ವಿಯಾದೆ. ಅದನ್ನು ಪುಡಿ ಮಾಡಿಟ್ಟುಕೊಂಡು ಉಪಯೋಗಿಸಲಾರಂಭಿಸಿದೆ. ಒಣಗಿದ ಮಾವಿನ ಎಲೆಗಳನ್ನು ಸುಟ್ಟು ಅದರ ಭಸ್ಮವನ್ನು ಹೊಸ ಗಾಯಗಳಿಗೆ ಹಚ್ಚಿದರೆ ಗಾಯ ಬೇಗನೆ ವಾಸಿಯಾಗುತ್ತದೆಂದು ತಿಳಿಸಿದ್ದರು. ಅದನ್ನು ಮಾಡಬೇಕಾದಲ್ಲ!ಯುಗಾದಿ ದಿನ ತಂದು ಮಿಕ್ಕಿದ ಮಾವಿನ ಎಲೆಗಳನ್ನು ಜೋಪಾನವಾಗಿ ಒಣಗಿಸಿ ಮುಂದೊಂದು ದಿನ ಅದನ್ನು ಸುಟ್ಟು ಇಂಕ್ ಬಾಟಲಿಯಲ್ಲಿ ಇಟ್ಟುಕೊಂಡಿದ್ದೆ. ಯಾರಿಗಾದರೂ ಗಾಯವಾದರೆ ಸಾಕು ಈ ಔಷಧಿ ಹಚ್ಚಲು ಕಾತುರನಾಗಿದ್ದೆ. ಔಷಧಿ ಇದ್ದದ್ದಕ್ಕೇನೋ ಯಾರಿಗೂ ನನ್ನ ಎದುರಿನಲ್ಲಿ ಗಾಯಗಳಾಗಲಿಲ್ಲ. ಈ ಮಾವಿನೆಲೆಯ ಉಪಯೋಗ ಇಂದಿಗೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿತ್ತು. ಕನ್ನಡ ವಿಶ್ವವಿದ್ಯಾಲಯದಲ್ಲಿ ದಿನಮಾತಿನಲ್ಲಿ ಒಮ್ಮೆ ಪುರುಷೋತ್ತಮ ಬಿಳಿಮಲೆಯವರು ಕಳಸ ಮತ್ತು ಅದಕ್ಕೆ ಬಳಸುವ ಮಾವಿನಸೊಪ್ಪಿನ ಬಗ್ಗೆ ವಿವರಣೆ ನೀಡಲು ಸಾಧ್ಯವಾಗದಿದ್ದಾಗ ನನಗೆ ಮೇಲಿನ ಔಷಧಿ ಉಪಯೋಗದ ನೆನಪಾಗಿ

ಮಾವಿನಸೊಪ್ಪು ಮತ್ತು ಹಸುವಿನ ಗಂಜಳಗಳು ಸೇರಿ ಶುದ್ಧೀಕರಣದ ಅಂಶವಾಗಿ ಬಳಕೆಯಾಗುತ್ತವೆಯೆಂಬ ಬಗ್ಗೆ ನಾನು ಪ್ರತಿಕ್ರಿಯಿಸಿದೆ. ಎಂದೋ ಕೇಳಿದ್ದ ಸಾಮಾನ್ಯ ವಿಷಯ ಹೇಗೆ ಸಂಶೋಧನೆಯಲ್ಲಿ ಬೆಳಕಿನ ಕಿಂಡಿಯಾಗಿ ಸಹಾಯಕ್ಕೆ ಬರುತ್ತದೆಂಬುದನ್ನು ತಿಳಿದೆ. ಈ ನರಸಿಂಹಮೂರ್ತಿ ಮೇಷ್ಟ್ರು ಇಷ್ಟಕ್ಕೇ ಸೀಮಿತವಾಗಿರಲಿಲ್ಲ. ಜಪಾನಿನ ಯಾವುದೋ ಶಾಲೆಯೊಂದಿಗೆ ಸಂಪರ್ಕವಿರಿಸಿ ಕನ್ನಡ ಲಿಪಿಯ ಚಾರ್ಟನ್ನು ಅಲ್ಲಿಗೆ ಕಳುಹಿಸಿ, ಅಲ್ಲಿಂದ ಜಪಾನಿ ಲಿಪಿಯ ಚಾರ್ಟನ್ನು ತರಿಸಿ ನಮಗೆಲ್ಲಾ ಅದನ್ನು ತೋರಿಸಿದ್ದರು. ತರಗತಿಗಳಲ್ಲಿ ಶಾಲೆಯ ಪಠ್ಯವಲ್ಲದೆ ಭಗವದ್ಗೀತೆಯ ಬಗ್ಗೆ, ಅದರ ಹೆಚ್ಚುಗಾರಿಕೆ ಬಗ್ಗೆ ಹೇಳಿದ್ದರು. ಕೆಲವು ಆಸಕ್ತರಿಗೆ ಪಾಕೆಟ್ ಮಾದರಿಯ ಭಗವದ್ಗೀತೆ ಪುಸ್ತಕಗಳನ್ನು ತರಿಸಿಕೊಟ್ಟಿದ್ದರು. ಗುಮ್ಮಳಾಪುರದ ಮುನಿಯಪ್ಪ ಎಂಬುವವನು ಇದಕ್ಕೆ ಕಾಕಿ ಬಟ್ಟೆಯಲ್ಲಿ ಬಗಲು ಚೀಲ ಹೊಲಿಸಿ ಅದರಲ್ಲಿ ಭಗವದ್ಗೀತೆಯನ್ನು ಇಟ್ಟುಕೊಂಡು ಓಡಾಡುತ್ತಿದ್ದ. ಇದು ಇವರ ಪ್ರಭಾವ. ಸೀತಾರಾಮಯ್ಯಂಗಾರ್, ನಾರಾಯಣಮೂರ್ತಿ, ನರಸಿಂಹಮೂರ್ತಿ ಹಾಗೂ ವೀರಭದ್ರಪ್ಪ ಮೇಷ್ಟ್ರು ನಮ್ಮ ಶಾಲೆಯಲ್ಲಿರುವವರೆಗೆ ನಮ್ಮ ಶಾಲೆಯ ಕೀರ್ತಿ ಇಡೀ ಜಿಲ್ಲೆಯ ಗಮನ ಸೆಳೆದಿತ್ತು. ಇವರ ಬಗ್ಗೆ ಊರಿನವರಿಗೆ ಭಕ್ತಿ ಮತ್ತು ಗೌರವಾದರಗಳಿದ್ದವು. ಇಂಥ ಮೇಷ್ಟ್ರ ಸಂತತಿ ಸಾವಿರವಾಗಲಿ.

ಆನೇಕಲ್‌ನ ಹೈಸ್ಕೂಲಿಗೆ ಬಂದಾಗ ಶರಭಣ್ಣನವರ ಕುದುರೆ ಲಾಯಗಳೆಂದು ಕರೆಯುತ್ತಿದ್ದ ವಪ್ಪಾರದಲ್ಲಿ ಎಂಟನೆಯ ತರಗತಿಗಳು ನಡೆಯುತ್ತಿದ್ದವು. ಎ.ಬಿ.ಸಿ. ವರ್ಗಗಳಿದ್ದವು. ಈ ವರ್ಗಗಳಲ್ಲಿ ಎ ವರ್ಗವು ಇಂಗ್ಲೀಷ್ ಮೀಡಿಯಂ ಆಗಿದ್ದುದರಿಂದ ಬೇರೆ ಕಟ್ಟಡದಲ್ಲಿ ನಡೆಯುತ್ತಿತ್ತು. ಕನ್ನಡ ಮೀಡಿಯಂ ಬಿ ಮತ್ತು ಸಿ ವರ್ಗಗಳು ಲಾಯದಂತಹ ಕಟ್ಟಡದಲ್ಲಿ ನಡೆಯುತ್ತಿದ್ದವು. ಈ ಓಂದೆ ಬೇರೆ ಊರಿನವರು ನಮ್ಮೂರಿಗೆ ಕಲಿಯಲು ಬರುತ್ತಿದ್ದರು ಈಗ ನಾವೇ ಬೇರೆ ಊರಿಗೆ ಕಲಿಯಲು ಬಂದದ್ದಾಗಿದೆ. ಬಹಳಷ್ಟು ಮುಖಗಳು ಹೊಸವು. ನಮ್ಮೂರಿನಲ್ಲಿಯೇ ನಮ್ಮೊಂದಿಗೆ ಓದುತ್ತಿದ್ದವರು ಅನೇಕರು ಶಾಲೆ ಬಿಟ್ಟಿದ್ದರು. ಈಗ ನಮ್ಮೂರಲ್ಲದೆ ಆನೇಕಲ್‌ನಲ್ಲಿಯ ಹಳೆಯ ಹಿರಿಯ ಪ್ರೈಮರಿ ಶಾಲೆ, ಹೊಸ ಹಿರಿಯ ಪ್ರೈಮರಿ ಶಾಲೆ, ಮೊರಸೂರು, ಕರ್ಪೂರು, ಸಮಂದೂರು, ಸಿಡಿ ಹೊಸಕೋಟೆ. ಇಂಡ್ಲವಾಡಿ, ಚಂದಾಪುರ, ಜಿಗಣಿ ಮುಂತಾದ ಕಡೆಗಳಿಂದ ವಿದ್ಯಾರ್ಥಿಗಳು ಸೇರಿದ್ದರು. ಇಲ್ಲಿ ನನ್ನ ನೋಟದ ಪ್ರಪಂಚ ಇನ್ನು ವಿಸ್ತಾರವಾಗತೊಡಗಿತ್ತು. ಬೇರೆ ಬೇರೆ ಜಾತಿ, ಬೇರೆ ಬೇರೆ ಕಸುಬಿನವರು, ಬಡವರ ಮಕ್ಕಳು, ಸಾಹುಕಾರರ ಮಕ್ಕಳು. ಅಧಿಕಾರಿಗಳ ಮಕ್ಕಳು; ಹೀಗೆ ಬೇರೆ ಬೇರೆ ವರ್ಗದ ವಿದ್ಯಾರ್ಥಿಗಳು ಇಲ್ಲಿ ಸಹಪಾಠಿಗಳಾದರು. ನನಗಿಂತ ಮೊದಲು ಸೇರಿದ್ದ ರಾಮಸ್ವಾಮಿರೆಡ್ಡಿ ಮೊದಲಾದವರು ಅಲ್ಲಿನ ಉಪಾಧ್ಯಾಯರ ಬಗ್ಗೆ ಹೇಳುತ್ತಿದ್ದ ರಂಗು ರಂಗು ವರ್ಣನೆಗಳು ನನ್ನನ್ನು ಬಾಯಿಬಿಟ್ಟು ಕೇಳುವಂತೆ ಮಾಡುತ್ತಿದ್ದವು. ಹೈಸ್ಕೂಲಿನಲ್ಲಿ ಎಂಟನೆಯ ತರಗತಿಗೆ ನಾನು ಸೇರಿದೆನಾದರೂ ಈಗಾಗಲೇ ಊರಿನಲ್ಲಿ ಎಂಟನೆಯ ತರಗತಿಯಲ್ಲಿ ಓದಿದ್ದೆ. ಹೊಸ ಸಿಲಬಸ್ ಅಂತೆ. ಹೀಗಾಗಿ ಆನೇಕಲ್‌ನಲ್ಲಿ ಪ್ರೌಢಶಾಲೆಗೆ ಸೇರಿದಾಗ ಮತ್ತೆ ಎಂಟನೆಯ ತರಗತಿಗೇ ಸೇರಿದೆ. ಹೀಗಾಗಿ ಒಂದು ವರ್ಷ ಮತ್ತೆ ಅದೇ ತರಗತಿ ಸೇರುವಂತಾಯಿತು. ಆನೇಕಲ್ ತಾಲೂಕಿನಲ್ಲಿ ಆಗ್ಗೆ ಹೈಸ್ಕೂಲುಗಳಿದ್ದದ್ದು ಆನೇಕಲ್‌ನಲ್ಲಿ ಮಾತ್ರ; ಸರ್ಜಾಪುರದಲ್ಲಿ ನಂತರ ಆಯಿತು. ಮುಂದೆ ಅತ್ತಿಬೆಲೆ, ಚಂದಾಪುರಗಳಲ್ಲಿ ತೆರೆಯಲಾಯಿತು. ತರಗತಿ ಆರಂಭವಾದಾಗ ಮೊದಲು ನಮ್ಮ ತರಗತಿಗೆ ಬಂದ ಉಪಾಧ್ಯಾಯರೆಂದರೆ ನೂರುಲ್ಲಾಖಾನ್. ಇವರು ಆನೇಕಲ್‌ನವರೇ. ಬಿ.ಎಡ್. ಡಿಗ್ರಿ ಮುಗಿದ ಕೂಡಲೇ ತಮ್ಮ ಊರಿನ ಮುನಿಸಿಪಲ್ ಹೈಸ್ಕೂಲಿಗೆ ಕೆಲಸಕ್ಕೆ ಬಂದರು. ನಮ್ಮ ಶಾಲೆಯಲ್ಲಿ ಅನೇಕ ವಿಷಯಗಳಿಗೆ ಮೇಷ್ಟ್ರುಗಳಿರಲಿಲ್ಲ. ಹೀಗಾಗಿ ಇಂಗ್ಲೀಷಿಗೆ ಮೇಷ್ಟ್ರಿಲ್ಲದಿದ್ದುದರಿಂದ ಸಮಾಜಶಾಸ್ತ್ರಕ್ಕೆ ನೇಮಕವಾಗಿದ್ದ ನೂರುಲ್ಲಾಖಾನ್ ಅವರೇ ಇಂಗ್ಲೀಷ್ ಪಾಠ ಮಾಡುತ್ತಿದ್ದರು. ಮುಂದೆ ಇವರು ಗಜೆಟಿಯರ್ ಇಲಾಖೆಯಲ್ಲಿದ್ದಾಗ ನಾನು ಅವರ ಸಹೋದ್ಯೋಗಿಯಾಗಿ ಸೇರಿಕೊಂಡೆ. ಇನ್ನೊಬ್ಬರು ಮಸ್ತಾನ್ ಸಾಹೇಬರು. ಇವರೂ ಆನೇಕಲ್‌ನವರಂತೆ. ನಮ್ಮ ಊರಿಗೆಲ್ಲಾ ರಾಗಿ ಅಳೆಯಲು, ವ್ಯಾಪಾರ ಮಾಡಲು ಬರುತ್ತಿದ್ದರಂತೆ. ಹೀಗಾಗಿ ನಮ್ಮ ಊರಿನ ಅನೇಕರು ಇವರಿಗೆ ಪರಿಚಿತರಿದ್ದರಂತೆ. ಇವರು ಭೂಗೋಳವನ್ನು ಬೋಧಿಸುತ್ತಿದ್ದರು. ತಪ್ಪು ಮಾಡಿದರೆ ಹೇ ಕತ್ತೆ ಎಂದು ಬಯ್ಯುತ್ತಾ ತುಂಡು ಕೋಲಲ್ಲಿ ಒಂದೇಟು ಹಾಕುತ್ತಿದ್ದರು. ಪೈಜಾಮ. ಷರ್ಟು, ತಲೆಗೆ ಟೋಪಿ, ಕಾಲಲ್ಲಿ ಚಪ್ಪಲಿ, ಇವರ ವೇಷ. ಇವರ ಭಾಷೆ ಸ್ವಲ್ಪ ಮುಸ್ಲಿಂ ಕನ್ನಡಕ್ಕೆ ಹತ್ತಿರವಾಗಿತ್ತು. ಇನ್ನು ಉಳಿದಂತೆ ದೊರೆಸ್ವಾಮಿ ಮೊದಲಾದ ಮೇಷ್ಟ್ರು ಪಾಠಗಳನ್ನು ಮಾಡಿದ್ದರೂ ಆ ಕಾಲಕ್ಕೆ ಇವರು ಸರ್ಟಿಫಿಕೇಟೆಡ್ ಮೇಷ್ಟ್ರಾದ್ದರಿಂದ ನಮ್ಮಂತಹ ಹಳ್ಳಿ ಹುಡುಗರು ಅವರ ಹತ್ತಿರ ಹೋಗುತ್ತಿರಲಿಲ್ಲ. ಹೆಚ್ಚಿಗೆ ಸಂಪರ್ಕವಿರಲಿಲ್ಲ. ಇನ್ನೊಬ್ಬರು ಆನೇಕಲ್ ಸಮೀಪದ ಬಿದುರುಗೆರೆಯವರಾದ ನಾಗರಾಜ್ ಅವರು. ಇವರದ್ದೂ ಒಂದು ರೀತಿಯ ಸ್ಥಳೀಯ ಛಾಪು. ನಾಟಕ ಮುಂತಾದ ಚಟುವಟಿಕೆಗಳಲ್ಲಿ ಇವರು ತೊಡಗಿಸಿಕೊಂಡಿದ್ದರು. ಹೈಸ್ಕೂಲ್‌ನಲ್ಲಿ ಸೈನ್ಸ್ ಮೇಷ್ಟ್ರಾದ್ದರಿಂದ ಇವರ ಸಂಪರ್ಕ ನನಗೆ ಕಡಿಮೆ.

ತರಗತಿಯಲ್ಲಿ ನನ್ನ ಸಹಪಾಠಿಗಳಾಗಿದ್ದ ಬಹಳಷ್ಟು ಜನ ಎಸ್.ಎಸ್.ಎಲ್.ಸಿ. ಪರೀಕ್ಷೆ ಮುಗಿದ ಕೂಡಲೇ ಶಾಲೆ ಬಿಟ್ಟರು, ಕೆಲವರು ಅಲ್ಲಲ್ಲಿ ಕೆಲಸಕ್ಕೆ ಸೇರಿದರು. ಮತ್ತೆ ಕೆಲವರ ಸಂಪರ್ಕ ಆಗಲೇ ಇಲ್ಲ. ಹೀಗಾಗಿ ಹೈಸ್ಕೂಲಿನಲ್ಲಿ ಒಟ್ಟಿಗೆ

ಓದಿದ ಅನೇಕರನ್ನು ಇಂದಿಗೂ ಭೇಟಿಯಾಗಿಲ್ಲ. ಕೆಲವರಲ್ಲಿ ಸುಬ್ಬಯ್ಯ, ಪಿಳ್ಳಪ್ಪ, ಜಯಣ್ಣ ಮುಂತಾದ ಕೆಲವು ಮುಖಗಳು ಮಾತ್ರ ಪರಿಚಿತವಿದೆ. ಅನೇಕ ವಿದ್ಯಾರ್ಥಿಗಳು ತುಂಟರೂ ಇದ್ದರು. ಒಮ್ಮೆ ಪ್ರಾಕ್ಟಿಕಲ್ ಕ್ಲಾಸ್‌ನಲ್ಲಿ ಮುನಿಸ್ವಾಮಿ ಎಂಬ ತುಂಟಹುಡುಗ ತರಗತಿ ಮುಗಿಯುವ ವೇಳೆಯಲ್ಲಿ ಬಿಳಿರಂಜಕವನ್ನು ಜ್ಯಾಮೆಟ್ರಿ ಬಾಕ್ಸ್‌ನಲ್ಲಿ ಹಾಕಿಕೊಂಡು ಪ್ಯಾಂಟು ಜೇಬಿನಲ್ಲಿಟ್ಟುಕೊಂಡು ಮನೆಗೆ ಹೋಗುವಾಗ ಸುಮಾರು ೨೦೦ ಅಡಿ ದೂರ ಸಾಗಿರಬಹುದು. ಜ್ಯಾಮೆಟ್ರಿ ಬಾಕ್ಸ್‌ನಲ್ಲಿದ್ದ ರಂಜಕ ಒಮ್ಮೆಗೇ ಉರಿಯಲಾರಂಭಿಸಿತು. ತಕ್ಷಣ ಜ್ಯಾಮೆಟ್ರಿಬಾಕ್ಸ್ ಹೊರಗೆ ಬಿಸಾಕಿದನಾದರೂ ತೊಡೆ ಬಳಿ ರಂಜಕದ ತೀವ್ರ ಸುಟ್ಟಗಾಯವಾಗಿತ್ತು. ತಕ್ಷಣವೇ ಅವನನ್ನು ಎತ್ತಿಕೊಂಡು ಸಮೀಪ ನಿರ್ಮಾಣವಾಗುತ್ತಿದ್ದ ಕಟ್ಟಡವೊಂದರಲ್ಲಿದ್ದ ತೊಟ್ಟಿಯಲ್ಲಿ ಮುಳುಗಿಸಿದರು. ಈ ಸುಟ್ಟಗಾಯದಿಂದ ಚೇತರಿಸಿಕೊಳ್ಳಲು ೨-೩ ತಿಂಗಳೇ ಬೇಕಾಯಿತು. ಇನ್ನೊಂದು ಅಶಿಸ್ತಿನ ಪ್ರಸಂಗವೊಂದು ನಡೆಯಿತು. ನಾನು ಎಸ್.ಎಸ್.ಎಲ್.ಸಿ.ಯಲ್ಲಿದ್ದಾಗ ಮೊದಲೇ ಹೇಳಿದಂತೆ ಬೇರೇ ಬೇರೆ ಕಡೆಯ ಹುಡುಗರು ತರಗತಿಗೆ ಸೇರಿದರು. ಅವರಲ್ಲಿ ಕೆಲವರು ಪೋಲೀಸರ ಮಕ್ಕಳು, ಕೆಲವರು ಕರೆಂಟು ಆಫೀಸಿನವರ ಮಕ್ಕಳೂ ಇದ್ದರು. ನಮ್ಮ ಹೈಸ್ಕೂಲಿಗೆ ಎಲ್ಲರೂ ಬಿಳಿಯ ಗಾಂಧಿ ಟೋಪಿ ಹಾಕಿಕೊಂಡು ಬರಬೇಕಿತ್ತು. ಇದು ಬಹಳ ವರ್ಷಗಳಿಂದ ರೂಢಿಯಲ್ಲಿತ್ತು. ನಾನು ಎಸ್.ಎಸ್.ಎಲ್.ಸಿ.ಗೆ ಬರುವ ವೇಳೆಗೆ ಮೇಲೆ ಹೇಳಿದ ನೌಕರರ ಕೆಲವು ಮಕ್ಕಳು ಗಲಾಟೆ ಮಾಡುವಷ್ಟು ಚಿಗುರೊಡೆದಿದ್ದರು. ಸರಿ ಒಂದು ದಿನ ಇವರೆಲ್ಲಾ ಸೇರಿ ಟೋಪಿಯನ್ನು ಹಾಕಬಾರದೆಂದು ತೀರ್ಮಾನಿಸಿ ಎಲ್ಲರಿಗೂ ತಿಳಿಸಿ ಎಲ್ಲರನ್ನೂ ಒಗ್ಗೂಡಿಸಿದರು. ಹೆಡ್‌ಮಾಸ್ಟರ್ ಕೃಷ್ಣಮೂರ್ತಿಯವರು ಇದಕ್ಕೆ ಒಪ್ಪಲಿಲ್ಲ. ನಾಯಕತ್ವ ವಹಿಸಿದ್ದ ವಿದ್ಯಾರ್ಥಿಗಳ ಮಾತಿನ ಭಯ ಹಾಗೂ ಹೊಡೆಯುತ್ತಾರೆಂಬ ಭಯ ಎರಡೂ ಸೇರಿ ಎಲ್ಲರೂ ಟೋಪಿ ಬಿಟ್ಟು ಪ್ರತಿಭಟಿಸಿದೆವು. ಅಂದಿನಿಂದ ಟೋಪಿ ಯಾರೂ ಹಾಕಲಿಲ್ಲ. ಹೈಸ್ಕೂಲು ಸೇರಿದಾಗ ಪರಿಚಿತವಾದ ಇನ್ನೊಬ್ಬ ಗೆಳೆಯನೆಂದರೆ ರಾಘವೇಂದ್ರ. ಈತ ನಮ್ಮ ಮಿಡ್ಲ್‌ಸ್ಕೂಲ್ ಮೇಷ್ಟ್ರು ನರಸಿಂಹಮೂರ್ತಿಗಳ ಮಗ. ಈ ಕಾರಣಕ್ಕಾಗಿ ನಮ್ಮಿಬ್ಬರಲ್ಲಿ ಸ್ವಲ್ಪ ಹೆಚ್ಚಿನ ಸಲುಗೆಯೂ ಬೆಳೆಯಿತು. ಈತ ಮುಂದೆ ದೆಹಲಿ ಕನ್ನಡ ಶಾಲೆಯ ಉಪಾಧ್ಯಾಯನಾಗಿ ಕೆಲಸಕ್ಕೆ ಸೇರಿದ.

ನಮ್ಮ ತಾತನವರು ಬಹುಶ್ರಮಜೀವಿ. ಮನೆಯಲ್ಲಿ ಜನಸಂಖ್ಯೆಯೂ ಜಾಸ್ತಿ. ಹೀಗಾಗಿ ದುಡಿಮೆ ಎಷ್ಟು ದುಡಿದರೂ ಸಾಲದು. ಊರಿಗೆ ದೂರದಲ್ಲಿ ಹಳ್ಳಗಳಿದ್ದು ಅಲ್ಲಿಯ ಹೊಲವೊಂದರಲ್ಲಿ ಒಂದು ಕುಂಟೆಯನ್ನು ರಚಿಸಿದ್ದರು. ಈ ಕುಂಟೆಗೆ ಆರಂಭದ ಮಳೆಗಳಾದ ಅಶ್ವಿನಿ. ಭರಣಿ ರೇವತಿಗಳಲ್ಲಿ ಸ್ವಲ್ಪ ನೀರು ಬರುತ್ತಿತ್ತು. ಈ ನೀರಿಗೆ ಭರಣಿ ಮಳೆಯಲ್ಲಿ ೧೦ ಗುಂಟೆ ನೆಲದಲ್ಲಿ ಆಲೂಗಡ್ಡೆ ಹಾಕುತ್ತಿದ್ದರು. ನಮಗೋ ಅಲ್ಲಿ ಹಗಲು ಹೊತ್ತು ಹೋಗಲೂ ಕೂಡ ಹೆದರಿಕೆ. ಇಂತಹ ಕಡೆ ನಮ್ಮ ತಾತ ಮತ್ತು ಒಬ್ಬ ಆಳಿನೊಡನೆ ಹಗಲು ರಾತ್ರಿಯೆನ್ನದೆ ಅಲ್ಲಿಯೇ ಇರುತ್ತಿದ್ದರು. ಅಲೂಗಡ್ಡೆ ಸಾಮಾನ್ಯವಾಗಿ ಮೂರು ತಿಂಗಳ ಬೆಳೆ. ಬೆಳೆ ಕಟಾವಿಗೆ ಬಂದಾಗ ಬೆಲೆಯಿದ್ದರೆ ಅಂದೇ ಮಾರ್ಕೆಟ್ಟಿಗೆ ಒಯ್ಯುತ್ತಿದ್ದರು. ಬೆಲೆಯಿಲ್ಲದಿದ್ದರೆ ಭೂಮಿಯಲ್ಲಿ ಸ್ವಲ್ಪ ಹಳ್ಳ ತೋಡಿ ಆಲೂಗಡ್ಡೆಯನ್ನು ಅದರಲ್ಲಿ ಸುರಿದು ಅದರ ಮೇಲೆ ಆಲೂಗಡ್ಡೆ ಸೊಪ್ಪನ್ನೇ ಮುಚ್ಚುತ್ತಿದ್ದರು. ಎಂತಹ ಮಳೆ ಬಂದರೂ ಇದು ನೆನೆಯುತ್ತಿರಲಿಲ್ಲ. ಒಮ್ಮೆ ಆಲೂಗಡ್ಡೆ ಸಸಿಗೆ ರೋಗಬಂದಾಗ ಯಾವುದೋ ಪುಡಿಯನ್ನು ಎರಚಿದ್ದರು. ಇದು ಎಷ್ಟು ತೀಕ್ಷ್ಣವಾಗಿತ್ತೆಂದರೆ ಈ ಜಮೀನಿನಲ್ಲಿ ಒಂದು ವರ್ಷ ಸೊಪ್ಪು ಬೆಳೆದರೂ ತಿನ್ನಲು ಆಗುತ್ತಿರಲಿಲ್ಲ. ಔಷಧಿ ಅಷ್ಟು ತೀಕ್ಷ್ಣವಾಗಿತ್ತು. ಬೇಸಿಗೆಯಲ್ಲಿ ನೀರಿಲ್ಲದಿದ್ದುದರಿಂದ ಈ ತೋಟವನ್ನು ಮಾಡುತ್ತಿರಲಿಲ್ಲ. ಇಂತಹದೇ ಒಂದು ಸಣ್ಣ ತೋಟವನ್ನು ನಮ್ಮೂರ ಬಳಿಯ ಸಿಂಗಸಂದ್ರದ ಬಳಿ ಮಾಡಿದ್ದರು. ೧೬ ಗುಂಟೆ ಇದ್ದ ಅದರಲ್ಲಿ ಮೊದಲು ಎಲೆ ತೋಟವಿತ್ತು. ನಮ್ಮ ತಾತ ಇಲ್ಲಿ ಒಂದು ಕಲ್ಲುಕಟ್ಟಡದ ಬಾವಿಯನ್ನು ಮಾಡಿಸಿ ಸಣ್ಣ ಮನೆ ಕಟ್ಟಿಕೊಂಡು ಅಲ್ಲಿಯೇ ಇರತೊಡಗಿದರು. ಸಾಮಾನ್ಯವಾಗಿ ಆಲೂಗಡ್ಡೆ ಬೆಳೆ ನಮ್ಮ ತಾತನ ನೆಚ್ಚಿನ ಬೆಳೆ. ಈ ಬೆಳೆ ತೆಗೆದ ಮೇಲೆ ತಿಂಗಳ ಹುರುಳಿ, ಅಥವಾ ಬೇಸಿಗೆ ರಾಗಿ ಹಾಕುತ್ತಿದ್ದರು. ನನಗೆ ಬೆಳಗ್ಗೆ ನಮ್ಮ ತಾತನವರಿಗೆ ಊಟ ಹೊರುವುದೇ ಮುಖ್ಯ ಕೆಲಸ. ಈ ಕೆಲಸ ಮುಗಿಸಿಕೊಂಡು ಶಾಲೆಗೆ ಹೋಗಬೇಕಿತ್ತು. ಊಟ ಒಯ್ಯಲು ಒಂದು ಸಣ್ಣ ಮಕ್ಕರಿ ಇದರಲ್ಲಿ ರಾಗಿಮುದ್ದೆ, ಸಾರು, ಅನ್ನ ಮತ್ತು ಮಜ್ಜಿಗೆ ಇರುತ್ತಿತ್ತು. ಇದನ್ನು ಎತ್ತಿಕೊಂಡು ಅಲುಗಾಡದಂತೆ ಮೂರು ಕಿಲೋಮೀಟರ್ ನಡೆದು ನಮ್ಮ ತಾತನವರಿಗೆ ನೀಡಿ. ನಂತರ ಮನೆಗೆ ಬಂದು ಶಾಲೆಯ ಪುಸ್ತಕಗಳನ್ನು ತೆಗೆದುಕೊಂಡು ಹೋಗಬೇಕಿತ್ತು. ಊಟ ಹೊತ್ತುಕೊಂಡು ಹೋಗುವುದಿಲ್ಲವೆಂದು ಮೊಂಡು ಬಿದ್ದಾಗ ನಮ್ಮ ತಾಯಿಯ ಕೈಲಿ ಹೊಡೆತಗಳೂ ಬೀಳುತ್ತಿದ್ದವು. ಕೆಲವೊಮ್ಮೆ ನಮ್ಮ ತಾತ ಊಟ ಮಾಡಿ ಮುಗಿಸಿದ ಮೇಲೆ ತೋಟದಿಂದ ಹೊರಬರುತ್ತಿದ್ದ ನನಗೆ ಆನೇಕಲ್‌ನಿಂದ ನಮ್ಮ ಶಾಲೆಗೆ ನಡೆದು ಬರುತ್ತಿದ್ದ ಉಪಾಧ್ಯಾಯರು ಜೊತೆ ಸಿಗುತ್ತಿದ್ದರು. ಈ ತೋಟದ ಭಾವಿ ಕಟ್ಟಿದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ. ಮೆಟ್ಟಿಲುಗಳಿಗಾಗಿ ಬಳಸಿದ ತೋಕೆಕಲ್ಲುಗಳು ಹಸಿಕಲ್ಲಿನವು ಮಂದವಾಗಿದ್ದವು. ಈ ಬಾರಿ ಗಾತ್ರದ ಕಲ್ಲುಗಳನ್ನು ಹಗ್ಗಗಳ ಮೂಲಕ ನಿಧಾನವಾಗಿ ಬಾವಿಗೆ ಇಳಿಸುತ್ತಿದ್ದರು. ತಳಗಡೆ ಇದ್ದ ವಡ್ಡರು ಅದನ್ನು ತೆಗೆದುಕೊಂಡು ತಮಗೆ ಬೇಕಾದಂತೆ ಜೋಡಿಸುತ್ತಿದ್ದರು. ನಿರಕ್ಷರಿಗಾದರೂ ವಡ್ಡರು ಕಸುಬುದಾರರಾಗಿದ್ದರು. ಅವರ ಕಟ್ಟಡ ಕಟ್ಟುವಲ್ಲಿನ ಕುಶಲತೆಯನ್ನು ನೋಡಿಯೇ ತಿಳಿಯಬೇಕು.

ನಮ್ಮ ತಂದೆ ತೀರಿಹೋದ ಮೇಲೆ ನಾನು ನನ್ನ ತಮ್ಮಂದಿರು ಓದಲು ಊರು ಬಿಟ್ಟು ಆನೇಕಲ್ ಹಾಗೂ ಬೆಂಗಳೂರು ಸೇರಿದ ಮೇಲೆ ಈ ಸ್ಥಳವನ್ನು ನಮ್ಮ ತಾತ ತನ್ನ ಪರಿಚಿತರೊಬ್ಬರಿಗೆ ಮಾರಿದರು. ಸ್ನೇಹಿತನಿಗೆ ಮಾರುತ್ತಿರುವುದರಿಂದ ಬೆಲೆಯ ಬಗ್ಗೆ ಕೇಳಬಾರದೆಂದೂ, ರಿಜಿಸ್ಟ್ರಾರ್ ಆಫೀಸಿಗೆ ಬಂದು ಸಹಿಹಾಕಬೇಕೆಂದೂ ಹೇಳಿದರು. ಸರಿ ಅವರ ಇಚ್ಛೆಯಂತೆ ಅದನ್ನು ಮಾರಿದ್ದಾಯಿತು.

ನಮ್ಮ ಅತ್ತೆಯ ಬಗ್ಗೆ ಹೇಳಬೇಕೆಂದರೆ ಈಕೆ ನಮ್ಮ ತಂದೆಯ ಕಿರಿಯ ಸಹೋದರಿ. ಈಕೆಯನ್ನು ಈಗಿನ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಡೆಂಕಣಿಕೋಟೆ ತಾಲೂಕಿನ ದೇವಗಾನಹಳ್ಳಿಗೆ ಮದುವೆ ಮಾಡಿ ಕೊಡಲಾಗಿತ್ತು. ನಮ್ಮ ಮಾವ ಮುನಿರೆಡ್ಡಿಯವರಿಗೆ ಸ್ವಲ್ಪ ಅಸ್ತಮಾ ಇತ್ತು. ಆದ್ದರಿಂದ ವ್ಯವಸಾಯದ ಕೆಲಸವನ್ನು ಆಳುಗಳಿಂದ ಮಾಡಿಸುತ್ತಿದ್ದರು. ಇವರೂ ಮತ್ತು ಇವರ ತಮ್ಮ ಚಿಕ್ಕ ಅಬ್ಬಯ್ಯ ಒಳಗೆ ಎರಡು ಬೇರೆ ಮನೆಗಳಲ್ಲಿದ್ದರೂ ಒಂದೇ ಹೊಸ್ತಿಲಲ್ಲಿ ಒಳಕ್ಕೆ ಹೋಗಬೇಕಿತ್ತು. ನಮ್ಮ ಮಾವನಿಗೆ ಮೂವರು ಮಕ್ಕಳು. ಮೊದಲನೆಯವರು ರಾಮಕ್ಕ, ಎರಡನೆಯವರು ರತ್ನಮ್ಮ, ಮೂರನೆಯವನು ಗುರುನಾಥರೆಡ್ಡಿ. ನನಗೆ ಬುದ್ಧಿ ಬರುವ ವೇಳೆಗೆ ಅಥವಾ ನಾನು ದೇವಗಾನಹಳ್ಳಿಗೆ ಹೋಗುವ ವೇಳೆಗಾಗಲೇ ರಾಮಕ್ಕನವರಿಗೆ ಮದುವೆಯಾಗಿತ್ತು. ಪಕ್ಕದ ಊರಾದ ಬಿನ್ನಮಂಗಲದ ಮಾದರೆಡ್ಡಿ ಮಗ ವೀರಾರೆಡ್ಡಿಗೆ ಇವರನ್ನು ಮದುವೆ ಮಾಡಿಕೊಟ್ಟಿದ್ದರು. ಚಿಕ್ಕ ಅಬ್ಬಯ್ಯರೆಡ್ಡಿಯವರ ಹೆಂಡತಿ ಪಾರ್ವತಮ್ಮ. ಇವರು ವೀರಾರೆಡ್ಡಿಯವರ ಅಕ್ಕ. ಪಾರ್ವತಮ್ಮ. ಇವರಿಗೆ ಜಯಮ್ಮ ಮತ್ತು ಶಾಂತಮ್ಮ ಇಬ್ಬರು ಹೆಣ್ಣುಮಕ್ಕಳು. ಇವರನ್ನು ತನ್ನ ತಮ್ಮಂದಿರಾದ, ಭದ್ರಾರೆಡ್ಡಿ ಮತ್ತು ಮಲ್ಲಾರೆಡ್ಡಿಗೆ ಕೊಟ್ಟು ಮದುವೆ ಮಾಡಿದ್ದರು. ಭದ್ರಾರೆಡ್ಡಿ ದೇವಗಾನಹಳ್ಳಿಯ ಮಾವನ ಮನೆಗೇ ಮನೆ ಅಳಿಯನಾಗಿ ಸೇರಿಕೊಂಡರು. ನನಗೆ ಬುದ್ಧಿ ಬರುವ ವೇಳೆಗೆ ನಮ್ಮ ಮಾವ ಮುನಿರೆಡ್ಡಿ ಮತ್ತು ಚಿಕ್ಕ ಅಬ್ಬಯ್ಯ ಬೇರೆ ಬೇರೆಯಾಗಿದ್ದರು. ನಮ್ಮ ಅತ್ತೆ ಇಂತಹ ಮನೆಗೆ ಸೊಸೆಯಾಗಿ ಹೋಗಿದ್ದಳು. ನಮ್ಮ ಅತ್ತೆ ಮತ್ತು ಪಾರ್ವತಮ್ಮನವರ (ನಮ್ಮ ಚಿಕ್ಕ ಅತ್ತೆ) ಮಧ್ಯೆ ಸಣ್ಣ ಸಣ್ಣ ವಿಷಯಕ್ಕೆ ಜಗಳಗಳು ಬರುತ್ತಿದ್ದವು. ನಮ್ಮ ಅತ್ತೆಗೆ ಮಾತು ಜಾಸ್ತಿ.

ನಮ್ಮ ಮಾವನಿಗೆ ಪಾರ್ವತಮ್ಮ ನಾದಿನಿ ಆಗಬೇಕಿತ್ತು. ತನ್ನ ಅಕ್ಕನ ಮಗಳೇ ಆದ್ದರಿಂದ ನಮ್ಮ ಅತ್ತೆ ಮತ್ತು ಚಿಕ್ಕ ಅತ್ತೆ ಮಧ್ಯೆ ಏನೇ ಜಗಳ ಬಂದರೂ ತಲೆಗೆ ಹಚ್ಚಿಕೊಳ್ಳುತ್ತಿರಲಿಲ್ಲ. ನಮ್ಮ ಮಾವನಿಗೆ ಕೊನೆಯ ಮಗುವಾಗಿ ಹುಟ್ಟಿದ ಗುರುನಾಥರೆಡ್ಡಿ ಹುಟ್ಟಿದಂದಿನಿಂದಲೂ ಒಂದಲ್ಲಾ ಒಂದು ಕಾಯಿಲೆಯಿಂದ ನರಳುತ್ತಿದ್ದುದರಿಂದ ಅವನನ್ನು ಆಸ್ಪತ್ರೆಗಳಿಗೆ ಅಡ್ಡಾಡಿಸುವುದೇ ನಮ್ಮ ಅತ್ತೆಯ ಕೆಲಸವಾಯಿತು. ನಮ್ಮ ತಾತ ಆನೇಕಲ್, ಬೆಂಗಳೂರು, ಹೊಸೂರು ಎಂದು ಅಡ್ಡಾಡುತ್ತಿದ್ದುದರಿಂದ ಅವರಿಗೆ ಆಸ್ಪತ್ರೆಗಳ ಪರಿಚಯವೂ ಇತ್ತು. ಆದರೆ ಆಸ್ಪತ್ರೆಗಳಲ್ಲಿ ಗುರುನಾಥರೆಡ್ಡಿ ಖಾಯಿಲೆ ವಾಸಿಯಾಗಲಿಲ್ಲ. ನಮ್ಮ ಊರಿಗೆ ಸಮೀಪದ ಕಣವನಹಳ್ಳಿಗೆ ಹೋಗಿ ಮಣಿ ಹಾಕಿಸಿಕೊಂಡು ಬಂದರೆ ವಾಸಿಯಾಗುತ್ತದೆ ಎಂದಾಗ ನಾನು ಮತ್ತು ನಮ್ಮ ಅತ್ತೆ ಕಣವನಹಳ್ಳಿಗೆ ನಡೆದುಕೊಂಡು ಹೋಗಿ ಬೆಳಗ್ಗೆ ಮಣಿಹಾಕಿಸಿಕೊಂಡು ಬಂದೆವು. ಆದರೆ ಇದರಿಂದಲೂ ಖಾಯಿಲೆ ವಾಸಿಯಾಗಲಿಲ್ಲ. ಆಗ ನಮ್ಮ ಊರಿನ ಬಳಿ ಇರುವ ಸೋಲೂರಿನ ತಿಗಳ ಹೊಲೆಯರ ಮೂಕರಿಗ ಎಂಬುವವನು ಈ ಮಗುವನ್ನು ನೋಡಿ ಹುತ್ತದ ಒಳಗಿನ ಮಣ್ಣನ್ನು ತಂದು ಅರೆದು ಮೈಗೆಲ್ಲಾ ಮೆತ್ತಿ ಬಿಸಿಲಲ್ಲಿ ಆರಲು ಬಿಟ್ಟು ನಂತರ ಸ್ನಾನ ಮಾಡಿಸಿ ಎಂದ. ಈತ ನಮ್ಮ ಸುತ್ತಮುತ್ತ ಊರುಗಳಿಗೆ ನಾಟಿವೈದ್ಯನಾಗಿದ್ದ. ಸರಿ ನಮ್ಮ ಅತ್ತೆ ಅಂದೇ ನಾಟಿವೈದ್ಯ ಶುರುಮಾಡಿದಳು. ನನ್ನನ್ನು ನನ್ನ ತಮ್ಮ ಮುನಿರೆಡ್ಡಿಯನ್ನು ಕರೆದುಕೊಂಡು ಗುದ್ದಲಿ ಮತ್ತು ಚಿಕ್ಕ ಮಕ್ಕರಿ ಸಮೇತ ಊರು ಹೊರಗೆ ಹೊರಟೆವು. ನಮ್ಮ ಅತ್ತೆ ಹುತ್ತ ತೋರಿಸಿ ಅಗೆಯಿರಿ ಎಂದಾಗ ನಮಗೆ ಹಾವಿನ ಭಯ. ಕೊನೆಗೆ ನಮ್ಮ ಅತ್ತೆಯೇ ಇದು ಮೂಕಹುತ್ತ ಇದರಲ್ಲಿ ಹಾವಿರುವುದಿಲ್ಲವೆಂದಾಗ ಅಗೆದೆವು. ನಮ್ಮ ಅತ್ತೆ ಅದರ ಒಳಗೆ ಕೈಹಾಕಿ ಒಳಗಿನ ಮೃದುವಾದ ಗೆದ್ದಲು ಗೂಡನ್ನು ತೆಗೆದು ಮಂಕರಿಗೆ ಹಾಕಿಕೊಳ್ಳುತ್ತಿದ್ದಳು. ಸಾಕಷ್ಟಾದ ನಂತರ ಮನೆಗೆ ವಾಪಸ್. ನಂತರ ಅದನ್ನು ಅರೆದು ಲೇಪಿಸುವುದು. ಬಿಸಿಲಿನಲ್ಲಿ ಕುಳ್ಳಿರಿಸಿ ನಂತರ ಸ್ನಾನ ಮಾಡಿಸುತ್ತಿದ್ದರು. ಇದೆಲ್ಲಾ ನಮಗೆ ಕುತೂಹಲದ ವಿಷಯವಾಗಿತ್ತು. ಈ ಪದ್ಧತಿ ಇಂದು ಅನೇಕ ಆಯುರ್ವೇದಿಕ್ ಕೇಂದ್ರಗಳಲ್ಲಿ ಇಂದು ಚಾಲ್ತಿಯಲ್ಲಿರುವುದಾದರೂ ಬಹು ಹಿಂದಿನಿಂದಲೂ ಇದು ಚಾಲ್ತಿಯಲ್ಲಿತ್ತು. ಇದು ಸುಮಾರು ಒಂದು ತಿಂಗಳು ಕಾಲ ನಡೆಯಿತು. ಮುಂದಿನ ದಿನಗಳಲ್ಲಿ ನಮ್ಮ ಅತ್ತೆ ನಮ್ಮ ಊರಿಗೆ ನಮ್ಮ ತಾತನ ಬಳಿ ಏನಾದರೂ ಕೆಲಸವಿದ್ದರೆ ಬೆಳ್ಳಂಬೆಳಗ್ಗೆಯೇ ಬಂದು, ಬೆಳಿಗ್ಗೆ ೮ ಗಂಟೆಯ ವೇಳೆಗೆ ಊಟಮಾಡಿಕೊಂಡು ಹಾಗೆಯೇ ವಾಪಸ್ಸಾಗುತ್ತಿದ್ದರು. ವ್ಯವಸಾಯದ ಕಾರ್ಯದಲ್ಲಿ ಎಂದೂ ಹಿಂದೆ ಬಿದ್ದವರಲ್ಲ. ಗಿಡಗಳ ಕೆಳಗಿನ ತರಗು, ಮಣ್ಣು ತರುವುದು. ತಿಪ್ಪೆ ತುಂಬಿಸುವುದು; ಇವರ ಜೊತೆಗೆ ನನ್ನ ಹೆಂಡತಿಯಾಗಿರುವ ರತ್ನಳೂ ಈ ಕೆಲಸಕ್ಕೆ ಹೋಗಬೇಕಿತ್ತು. ಮದುವೆಗೆ ಮೊದಲು ಒಮ್ಮೆ ರತ್ನಳಿಗೆ ಪಾರ್ಶ್ವವಾಯು ಬಡಿಯಿತು. ಮೂರು ದಿನ ಆಸ್ಪತ್ರೆಯಲ್ಲಿದ್ದರೂ ವಾಸಿಯಾಗುವ ಲಕ್ಷಣಗಳು ಕಾಣಲಿಲ್ಲ. ಆಗ ಯಾರೋ ಬಂದು

ಸರ್ಜಾಪುರದ ಬಳಿಯ ಮುಗಳೂರಿಗೆ ಕರೆದುಕೊಂಡು ಹೋಗಲು ಹೇಳಿದರಂತೆ. ಅಲ್ಲಿಗೆ ಕರೆದುಕೊಂಡು ಹೋದಾಗ ಪಾದದ ಬಳಿ ಎರಡು ಸ್ಥಳಗಳಲ್ಲಿ ತೊಡೆಯಲ್ಲಿ ಒಂದು ಸ್ಥಳದಲ್ಲಿ ಸುಟ್ಟು ಹಸಿರು ಔಷಧಿ ಹಚ್ಚಿ ಕಳುಹಿಸಿದರಂತೆ ೩–೪ ದಿನದಲ್ಲಿ ಕಾಯಿಲೆ ವಾಸಿಯಾಯಿತಂತೆ. ಬಾಳೆ ಎಲೆ ಮೇಲೆ ಊಟ ಮಾಡಬಾರದು, ಬಾಳೆಹಣ್ಣು ತಿನ್ನಬಾರದೆಂಬ ಪಥ್ಯ. ಇಂದಿಗೂ ಇದು ಅಪಥ್ಯವಾದಾಗ ಸುಟ್ಟಗಾಯದ ಜಾಗದಲ್ಲಿ ಕೀವು ಕಾಣಿಸಿಕೊಳ್ಳುತ್ತದೆ.

ನಮ್ಮ ಅತ್ತೆ ದುಡಿಮೆಯಲ್ಲಿಯೇ ಸ್ವರ್ಗ ಕಂಡವಳು. ನನಗೇ ತನ್ನ ಮಗಳನ್ನು ಕೊಡಬೇಕೆಂದು ಹಟ ಹಿಡಿದು ಅದಕ್ಕೆ ತಕ್ಕ ಷಢ್ಯಂತ್ರಗಳನ್ನು ನಮ್ಮ ತಾತನ ಜೊತೆ ಸೇರಿ ರೂಪಿಸಿದವರು. ಇವರೆಲ್ಲರ ದುಡಿಮೆ ಮತ್ತು ಸಹಾಯ, ಸಹಕಾರ ನನ್ನ ಸಂಶೋಧನೆಯ ಹಿಂದಿದೆ. ಕಡಿಮೆ ಸಂಬಳ ಬರುತ್ತಿದ್ದಾಗ ಊರಿನಿಂದ ಸ್ವಲ್ಪ ದವಸ ಧಾನ್ಯಗಳನ್ನು ನೀಡಿದ್ದಾರೆ. ಅಕ್ಕರೆಯಿಂದ ನನ್ನ ಮಕ್ಕಳ ಪಾಲನೆ ಪೋಷಣೆ ಮಾಡಿದ್ದಾರೆ. ಇವರ ಸಾವೂ ಸಹ ಅಷ್ಟೆ. ನರಳಲು ಸಮಯ ಕೊಡಲೇ ಇಲ್ಲ. ಏನೆನೋವೆಂದು ಹೇಳಿದವರು ಮುಂದೆ ಸ್ವಲ್ಪ ಸಮಯದಲ್ಲಿಯೇ ಸಾವನ್ನಪ್ಪಿದರು.

ನನ್ನ ಸಂಶೋಧನೆಯ ಬೆನ್ನೆಲುಬು ನನ್ನ ಹೆಂಡತಿ ಎಂದು ಹೇಳದಿದ್ದರೆ ಅದು ಬಹು ದೊಡ್ಡ ಲೋಪವಾಗುತ್ತದೆ. ನನ್ನ ಸೋದರತ್ತೆಯ ಮಗಳಾದ ಈಕೆ ನನಗೆ ಚಿಕ್ಕಂದಿನಿಂದಲೂ ತಿಳಿದವಳೇ ಆಗಿದ್ದಳು. ಮುಂದೆ ನನ್ನನ್ನು ಮದುವೆಯಾಗಿ ನಮ್ಮ ಮನೆಗೆ ಬರುವ ವೇಳೆಗೆ ನಾನು ಗುಂಡ್ಲುಪೇಟೆ ಜೂನಿಯರ್ ಕಾಲೇಜಿನ ಲೋಕಲ್ ಉಪನ್ಯಾಸಕನಾಗಿದ್ದೆ. ೧೯೭೪ರಲ್ಲಿ ಆ ಕೆಲಸ ಹೋದ ಮೇಲೆ ಒಂದುವರೆ ವರುಷ ನಿರುದ್ಯೋಗಿಯಾಗಿದ್ದಾಗಲೂ ಯಾವುದೇ ಸೊಲ್ಲೆತ್ತಲಿಲ್ಲ. ನನ್ನ ಮಗಳು ಸ್ಮಿತಾ ೧೯೭೪ರಲ್ಲಿ ಹುಟ್ಟಿದ್ದಳು. ೧೯೭೬ರ ಸುಮಾರಿಗೆ ನಮ್ಮ ತಾತನವರು ತೀರಿಹೋದರು. ಇವರು ತೀರಿಹೋದಾಗ ಇವರ ವಯಸ್ಸು ೯೫ ಆಗಿತ್ತು. ಯಾರಿಗೂ ಭಾರವಾಗಿರಲಿಲ್ಲ ಈ ಜೀವ. ಮುಪ್ಪಿನ ವಯಸ್ಸಿನಲ್ಲಿಯೂ ಅಷ್ಟೋ ಇಷ್ಟೋ ಕೆಲಸ ಮಾಡುತ್ತಾ ಇದ್ದರು. ಊರಿನಲ್ಲಿ ಊಟಕ್ಕೆ ತೊಂದರೆಯಿಲ್ಲ. ಆದರೆ ಖರ್ಚಿಗೆ ಕಾಸಿರಲಿಲ್ಲ. ನನ್ನ ಮಗಳು ರೂಪ ಇದೇ ಸಮಯದಲ್ಲಿ ಹುಟ್ಟಿದ್ದು. ಯಾವುದಾದರೂ ಕೆಲಸ ಹುಡುಕೋಣವೆಂದು ಅಲೆಯುವುದರಲ್ಲಿಯೇ ಕಾಲ ಕಳೆದೆ. ಕೆಲಸ ಎಲ್ಲಿಯೂ ಸಿಕ್ಕಲಿಲ್ಲ. ಈ ಮಧ್ಯೆ ಹಂದಿಗಳನ್ನು ಸಾಕುವ ಯೋಚನೆ ಬಂತು. ನನಗೆ ಇದು ಕೀಳೆಂದೇನೂ ಅನಿಸಲಿಲ್ಲ. ನನ್ನ ಹೆಂಡತಿ ಬಳಿ ಈ ವಿಷಯ ಹೇಳಿದೆ. ಹೌಹಾರಿದಳು. ಆಕೆಗೆ ನಾನು ಹಂದಿಸಾಕುವುದಕ್ಕಿಂತಲೂ ಅವರ ಊರಿನವರು ಏನಾದರೂ ಅಂದುಕೊಳ್ಳುತ್ತಾರೆ. ಅದರಿಂದ ತನಗೆ ಅವಮಾನವಾಗುತ್ತದೆ. ಖಂಡಿತಾ ಹಂದಿ ಸಾಕುವುದು ಬೇಡವೆಂದಳು. ಸರಿ ನಾನು ಸುಮ್ಮನಾದೆ. ನನ್ನ ಸರಿಸಮಾನರೆಲ್ಲಾ ಕೆಲಸದಲ್ಲಿದ್ದುದರಿಂದ ಯಾವುದಾದರೂ ಸರಿ ಬೆಂಗಳೂರಿನಲ್ಲಿ ಸಣ್ಣ ಕೆಲಸವನ್ನು ಹಿಡಿದುಕೊಳ್ಳಿರಿ ಎಂದಳು. ಸರಿ ಕೆಲಸ ಹುಡುಕಲು ಓಡಾಡುತ್ತಿದ್ದೆ. ಕೆಲವೇ ಜನ ಸ್ನೇಹಿತರು ಈಗ ಉಳಿದದ್ದು. ಬೆಂಗಳೂರಿಗೆ ಬಂದಾಗ ನನ್ನ ಬಾಲ್ಯಮಿತ್ರರಾದ ರಾಮಸ್ವಾಮಿರೆಡ್ಡಿಯ ಮನೆಯಲ್ಲಿಯೋ ರಾಮಚಂದ್ರನ ಮನೆಯಲ್ಲಿಯೋ ಉಳಿದುಕೊಳ್ಳುತ್ತಿದ್ದೆ. ಡಿ.ಕೆ. ಶ್ಯಾಮಸುಂದರ್‌ರಾವ್ ಅವರ ಚಾಮರಾಜಪೇಟೆ ರೂಂನಲ್ಲಿ ಕೆಲವೊಮ್ಮೆ ಉಳಿದುಕೊಳ್ಳುತ್ತಿದ್ದೆ. ಹೀಗೆಯೇ ಕೆಲಸದ ಭೇಟಿಯಲ್ಲಿದ್ದಾಗ ಶೇಷಶಾಸ್ತ್ರಿ ಸಿಕ್ಕಿ ಒಂದು ವಿಷಯ ಹೇಳಿದ. ಪರಿಷತ್ತಿನ ಸಂಶೋಧನಾ ವಿಭಾಗದಲ್ಲಿ ಅಣ್ಣಿಗೇರಿಯವರು ಈಗ ಇಲ್ಲ. ಸಂಶೋಧನಾ ವಿಭಾಗಕ್ಕೆ ಬರಲು ನೀನು ಪ್ರಯತ್ನಿಸು ಎಂದ. ಅದರಂತೆ ನಾನು ಪ್ರಯತ್ನಿಸಿ ಆ ಹುದ್ದೆ ಪಡೆಯುವಲ್ಲಿ ಯಶಸ್ವಿಯಾದೆ. ಈ ಕೆಲಸ ದೊರೆತ ಮೇಲೆ ಮತ್ತೆ ಸ್ವಲ್ಪ ಉತ್ಸಾಹ ಮೂಡಿತು. ಇಲ್ಲಿ ೩೦೦ ರೂ.ಗಳನ್ನು ತಿಂಗಳಿಗೆ ಸಂಬಳವಾಗಿ ಕೊಡುತ್ತಿದ್ದರು. ಮುಂದೆ ಇದನ್ನು ೩೭೦ಕ್ಕೆ ಏರಿಸಿದರು. ಊರಿನಲ್ಲಿ ನಮ್ಮ ಕುಟುಂಬ ಬೆಳೆಯುತ್ತಿತ್ತು ನಮ್ಮ ಅಣ್ಣನಿಗೆ ೫ ಜನ ಮಕ್ಕಳು. ನನ್ನ ಮಕ್ಕಳು ಎರಡು. ನಮ್ಮ ತಾಯಿ, ನಮ್ಮ ಅಣ್ಣ ಮತ್ತು ಅತ್ತಿಗೆ ನನ್ನ ಮೂವರು ತಮ್ಮಂದಿರು ಒಟ್ಟು ೧೪ ಜನ. ಊರಿನಲ್ಲಿ ಮೊದಲಿನಂತೆ ಉತ್ಪತ್ತಿ ಇರಲಿಲ್ಲ. ಯಾರಿಗಾಗಿ ಯಾರು ದುಡಿಯಬೇಕೆಂಬ ಮನಸ್ಸುಗಳು. ಒಳಗೊಳಗೇ ಬೇಗುದಿ. ಇಂತಹ ಸಮಯದಲ್ಲಿ ನಮ್ಮ ತಾಯಿ ನಿನ್ನ ಹೆಂಡತಿಯನ್ನು ಬೆಂಗಳೂರಿಗೆ ಕರೆದುಕೊಂಡು ಹೋಗೆಂದು ತಾಕೀತು ಮಾಡತೊಡಗಿದರು. ನನ್ನ ಹೆಂಡತಿಯೂ ಕಷ್ಟವೋ ಸುಖವೋ ಒಂದು ಸಣ್ಣ ಮನೆ ಮಾಡಿ ಎಂದಳು. ಅದುವರೆಗೂ ಈ ಬಗ್ಗೆ ನಾನು ಸೀರಿಯಸ್ಸಾಗಿ ಯೋಚನೆ ಮಾಡಿರಲಿಲ್ಲ. ನನ್ನ ಹೆಂಡತಿಯ ಅಕ್ಕ ರಾಮಕ್ಕ ಸಹ ಬೆಂಗಳೂರಿನಲ್ಲಿ ಮನೆ ಮಾಡಿದಲ್ಲಿ ಅಲ್ಪ ಸ್ವಲ್ಪ ಸಹಾಯ ಮಾಡುವುದಾಗಿ ಹೇಳಿದರು. ಇದುವರೆವಿಗೆ ಅಲ್ಲಿ ಇಲ್ಲಿ ವಾಸವಿದ್ದ ನಾನು ಈಗ ಸಣ್ಣ ಮನೆ ಹುಡುಕತೊಡಗಿದೆ. ಇಲ್ಲಿಯವರೆಗೆ ಚಾಮರಾಜಪೇಟೆಯಲ್ಲಿ ಸಣ್ಣ ಕೊಠಡಿಯೊಂದನ್ನು ಮಾಡಿಕೊಂಡು ನಾನು, ಹನುಮಂತರಾಯಪ್ಪ ಅವರ ಅಳಿಯ ಜಿ.ಆರ್. ತಿಪ್ಪೇಸ್ವಾಮಿ ಇದ್ದೆವು. ಮನೆ ಹುಡುಕಿ ಲಕ್ಕಸಂದ್ರದಲ್ಲಿ ಒಂದು ಸಣ್ಣ ಮನೆ ಮಾಡಿದೆ. ತಿಂಗಳಿಗೆ ಬಾಡಿಗೆ ೧೨೦ ರೂಪಾಯಿ. ಅಂತೂ ಬೆಂಗಳೂರಿನಲ್ಲಿ ನಾನು ೧೯೭೭–೭೮ರಲ್ಲಿ ನೆಲೆಯೂರಿದೆ. ನನ್ನ ಹೆಂಡತಿ, ಚಿಕ್ಕ ಮಗು ರೂಪ ಇದ್ದೆವು. ದೊಡ್ಡಮಗಳು ಸ್ಮಿತಾ ಊರಿನಲ್ಲಿ ನಮ್ಮ ತಾಯಿಯ ಬಳಿಯೇ ಉಳಿದಳು. ೧೯೭೯ರಲ್ಲಿ ಮಾರ್ಚಿ

ತಿಂಗಳಲ್ಲಿ ಮಗ ಸನತ್‌ಕುಮಾರ್ ಹುಟ್ಟಿದ. ೧೯೭೯ರ ಮಾರ್ಚ್ ತಿಂಗಳಲ್ಲಿ ನನ್ನ ಹೆಂಡತಿಯನ್ನು ಹೆರಿಗೆಗಾಗಿ ವಾಣೀವಿಲಾಸ ಆಸ್ಪತ್ರೆಗೆ ಸೇರಿಸಿದೆ. ಮೂರು ದಿನಗಳ ಬಳಿಕ ಧರ್ಮಸ್ಥಳದಲ್ಲಿ ಸಾಹಿತ್ಯ ಸಮ್ಮೇಳನವಿತ್ತು. ಅಲ್ಲಿಗೆ ಹೋದೆ. ೧೧-೩-೧೯೭೯ಕ್ಕೆ ಸಮ್ಮೇಳನ ಮುಕ್ತಾಯವಾಯಿತು. ಅಲ್ಲಿಂದ ಬೆಂಗಳೂರಿಗೆ ಬಂದು ಆಸ್ಪತ್ರೆಗೆ ಹೋದೆ. ಮುಂದೆ ಎರಡು ದಿನಗಳ ನಂತರ ಹೆರಿಗೆಯಾಯಿತು. ಶೇಷಶಾಸ್ತ್ರಿ ಆಸ್ಪತ್ರೆಗೆ ಹೆಂಡತಿಯನ್ನು ಸೇರಿಸಿ ಸಮ್ಮೇಳನಕ್ಕೆ ಹೋಗಿದ್ದಕ್ಕೆ ಬೈದ. ಇದೇ ವರ್ಷ ನಮ್ಮ ಅಣ್ಣ ಮುನಿಸ್ವಾಮಿರೆಡ್ಡಿ ಮತ್ತು ನಾವು ಬೇರೆ ಬೇರೆಯಾದೆವು. ಊರಿನಲ್ಲಿ ವಾಸವಿದ್ದ ಮನೆ ನಮ್ಮ ಅಣ್ಣನಿಗೆ ಹೋದದ್ದರಿಂದ ದನದ ಕೊಟ್ಟಿಗೆ ನಮಗೆ ಬಂದಿತ್ತು. ನಾವು ಅದನ್ನು ಚೊಕ್ಕಟ ಮಾಡಿಕೊಂಡು ವಾಸವಿದ್ದೆವು. ಮನೆಯ ರಿಪೇರಿಗೆ ನನ್ನ ಹೆಂಡತಿಯ ಜಡೆಬಿಲ್ಲೆಯನ್ನು ಬ್ಯಾಂಕಿನಲ್ಲಿ ಒತ್ತೆ ಇಟ್ಟು ೩೦೦ ರೂಪಾಯಿ ಪಡೆದೆ. ನನ್ನ ಹೆಂಡತಿ ತಪ್ಪಿದರೆ ನಾನು ವಾರಕ್ಕೆ ಅಥವಾ ಹದಿನೈದು ದಿನಕ್ಕೊಮ್ಮೆ ಊರಿಗೆ ಬಂದುಹೋಗುತ್ತಿದ್ದೆವು. ನನ್ನ ಮಗಳು ಸ್ಮಿತಾ ನನ್ನ ತಾಯಿಯ ಬಳಿಯೇ ಇದ್ದು, ನಮ್ಮೂರ ಸರ್ಕಾರಿ ಶಾಲೆಯಲ್ಲಿಯೇ ವಿದ್ಯಾಭ್ಯಾಸ ಮುಂದುವರಿಸಿದಳು. ಹೀಗಾಗಿ ಬರುತ್ತಿದ್ದ ಸಂಬಳದಲ್ಲಿ ಮನೆ ವೆಚ್ಚವನ್ನು ತೂಗಿಕೊಂಡು ಹೋಗಬೇಕಿತ್ತು. ಈ ಅವಧಿಯಲ್ಲಿಯೇ ನನ್ನ ತಮ್ಮ ಕೃಷ್ಣಾರೆಡ್ಡಿ ಬೆಂಗಳೂರಿನ ಸರ್ಕಾರಿ ವಿಜ್ಞಾನ ಕಾಲೇಜಿಗೆ ಸೇರಿದ್ದುದರಿಂದ ನಮ್ಮ ಬಳಿಯೇ ಉಳಿದ. ಊರಿನಲ್ಲಿ ನನ್ನ ತಮ್ಮಂದಿರು ನಾರಾಯಣರೆಡ್ಡಿ ಮತ್ತು ರಾಮರೆಡ್ಡಿ ಮಾತ್ರ ಉಳಿದರು. ಊರಿನಿಂದ ಬರುತ್ತಿದ್ದ ರಾಗಿ, ಅಕ್ಕಿ, ಬೇಳೆ ಮುಂತಾದವುಗಳನ್ನು ಬಳಸಿ ಬರುತ್ತಿದ್ದ ಕಡಿಮೆ ಸಂಬಳದಲ್ಲಿಯೇ ಸ್ವಲ್ಪ ಮಟ್ಟಿಗಿನ ಸಂತೃಪ್ತ ಜೀವನವನ್ನು ನಡೆಸುತ್ತಿದ್ದೆ.

ಮತ್ತೆ ನನ್ನ ನೆನಪು ಹಿಂದಕ್ಕೆ ಹೋಗುತ್ತಿದೆ. ನಮ್ಮೂರಿನ ವೀರಭದ್ರಪ್ಪ ಮೇಷ್ಟ್ರು ಕುಲದಲ್ಲಿ ನಗರ್ತರು. ಇವರ ಕುಲಸ್ಥರು ಮತ್ತು ಸಂಬಂಧಿಕರು ನಮ್ಮೂರು, ಆನೇಕಲ್, ವಿಜಯಪುರ, ಬೂದಿಗೆರೆ, ದೇವನಹಳ್ಳಿ, ಬೆಂಗಳೂರು, ತಮಿಳುನಾಡಿನ ಕೆಲಮಂಗಲ, ರಾಯಕೋಟೆ, ಮುಂತಾದ ಗ್ರಾಮಗಳಲ್ಲಿ ವಾಸವಾಗಿದ್ದಾರೆ. ಈಗ ಇವರ ಒಂದು ಗುಂಪು ವೀರಶೈವರೊಡನೆ ಗುರುತಿಸಿಕೊಂಡರೂ ಮೂಲತಃ ಇವರು ಅವರಿಗಿಂತ ಭಿನ್ನ. ಇವರ ಆಚಾರ ವಿಚಾರಗಳಲ್ಲಿ ಜಂಗಮರು ಮತ್ತು ಬ್ರಾಹ್ಮಣರಿಬ್ಬರೂ ಪಾಲ್ಗೊಳ್ಳುತ್ತಾರೆ. ನಮ್ಮೂರಿನಲ್ಲಿ ಇವರು, ಕಬ್ಬಿಣದ ಕೆಲಸ ಮಾಡುವ ಆಚಾರಿಗಳು, ಗಾಣಿಗರು, ಮಾದಿಗರು, ಒಂಬತ್ತು ಪಣದವರೆಂತಲೂ ಉಳಿದವರು ೧೮ ಪಣದವರೆಂತಲೂ ಭಾವನೆ. ಹೀಗಾಗಿ ಈ ಒಂಬತ್ತು ಪಣಕಟ್ಟಿನವರ ಮದುವೆ ಮೆರವಣಿಗೆ ಒಂದು ಸೀಮಿತ ವಲಯದಲ್ಲಿ ಆಚರಿಸಲಾಗುತ್ತಿತ್ತು. ಈ ಪಣಕಟ್ಟುಗಳ ವ್ಯವಸ್ಥೆ ಎಷ್ಟು ವಿಚಿತ್ರವಾಗಿ, ಬಿಗಿಯಾಗಿ ಇತ್ತೆಂದರೆ ಈಗ ಊಹಿಸಲೂ ಸಾಧ್ಯವಿಲ್ಲದಷ್ಟಿತ್ತು. ಬೆಂಗಳೂರಿನಂತಹ ನಗರದಲ್ಲಿಯೂ ಈ ಪಣಕಟ್ಟು ವ್ಯವಸ್ಥೆ ೧೯೭೧ರ ವರೆಗೂ ಬದುಕಿತ್ತೆಂದರೆ ಹಳ್ಳಿಗಾಡಿನಲ್ಲಿ ಊಹಿಸಿಕೊಳ್ಳಿ. ವೀರಭದ್ರಪ್ಪ ಮೇಷ್ಟ್ರ ಅಣ್ಣ ಮುನಿಸ್ವಾಮಪ್ಪ ನಮ್ಮೂರಿಗೇ ಸಾಲ ಕೊಡುವ ಸಾಹುಕಾರರು. ಇವರ ಮುಖ್ಯ ಕಸುಬು ರಾಗಿ ವ್ಯಾಪಾರ. ಸುತ್ತಮುತ್ತಲ ಊರುಗಳಲ್ಲಿ ಕೊಂಡ ರಾಗಿಯನ್ನು ಲಾರಿಗಳಲ್ಲಿ ಬೆಂಗಳೂರಿಗೆ ಸಾಗಿಸಿ ಮಾರಾಟ ಮಾಡುತ್ತಿದ್ದರು. ಇಂತಹ ಸಾಹುಕಾರ ಮುನಿಸ್ವಾಮಪ್ಪನವರಿಗೆ ವೀರಭದ್ರಪ್ಪನವರಲ್ಲದೆ, ಚಿಕ್ಕಣ್ಣ, ಶಂಕರಪ್ಪ ಮತ್ತು ಮುನಿರುದ್ರಪ್ಪ ಎಂಬ ತಮ್ಮಂದಿರೂ ಇದ್ದರು. ವೀರಭದ್ರಪ್ಪ ಮೇಷ್ಟ್ರಿಗೆ ಮದುವೆಯಾದಾಗ ಮದುಮಗನನ್ನು ಹೊರಲು ಪಲ್ಲಕ್ಕಿ ತರಿಸಿದ್ದರು. ಮಬ್ಬುಗತ್ತಲಲ್ಲಿ ಮೆರವಣಿಗೆ ಮಾಡುವಾಗ ಅವರ ಬೀದಿಗಳಲ್ಲಿ ಮೆರವಣಿಗೆ ಮಾಡಿ ಊರು ಮುಂದಿನ ಹನುಮಂತನಗುಡಿಗೆ ಹೊರಡಲು ಊರು ಸುತ್ತಿ ಓಣಿಯಲ್ಲಿ ಬಂದರು. ಮತ್ತೆ ಅದೇ ದಾರಿಯಲ್ಲಿ ಅವರ ಮನೆಗಳ ಕಡೆಗೆ ವಾಪಸ್ಸು ಹೋದರು ಇದು ಗಾಣಿಗರು, ಆಚಾರರು, ಮಾದಿಗರಿಗೂ ಅನ್ವಯಿಸುತ್ತಿತ್ತು. ನಡು ಬೀದಿಯಿಂದ ಬರುವ ಮುಖ್ಯ ಬೀದಿಯಲ್ಲಿ ಇವರ ಮೆರವಣಿಗೆಗೆ ಇತರೆ ಪಣಕಟ್ಟು ಜನಗಳಾದ ಅಗಸರು, ಬಣಜಿಗರು, ಹೊಲೆಯರು ತಡೆ ಹಾಕುತ್ತಿದ್ದರು. ಬೀದಿಯಲ್ಲಿ ಬೇರೆ ಸಮಯಗಳಲ್ಲಿ ಹಾಗೂ ಸಾಮಾನ್ಯವಾಗಿ ನಡೆದುಕೊಂಡು ಹೋಗುವುದಕ್ಕೆ ತಡೆ ಇರಲಿಲ್ಲ. ದೇವರ ಮೆರವಣಿಗೆ ತೆಗೆದುಕೊಂಡು ಹೋಗಲು ಯಾವುದೇ ತಡೆ ಇರಲಿಲ್ಲ. ಆದರೆ ಮದುವೆ ಮೆರವಣಿಗೆ ತೆಗೆದುಕೊಂಡು ಹೋಗಲು ಮಾತ್ರ ತಡೆ ಇತ್ತು. ನನಗೆ ಇದು ಬಹುದಿನಗಳ ಕಾಲ ಏಕೆ ಎಂದು ಹೊಳೆದಿರಲಿಲ್ಲ. ಬುಕ್ಕರಾಯನ ಶಾಸನದ ಗಲಭೆ ಬಗ್ಗೆ ಯೋಚಿಸುತ್ತಿದ್ದಾಗ ನಮ್ಮ ಊರಿನ ಪಣಕಟ್ಟಿನ ವಿವರ ತಟ್ಟನೆ ಹೊಳೆದು ಕೆಲವು ಶಾಸನಗಳ ವಿಷಯದ ಆಧಾರದ ಮೇಲೆ 'ಶ್ರವಣಬೆಳಗೊಳದ ಶಾಸನದ ಹಿನ್ನೆಲೆಯಲ್ಲಿ ಕುಲಸಂಬಂಧೀ ಕಟ್ಟಳೆಗಳು ಮತ್ತು ಕಲಹಗಳು' ಎಂಬ ಲೇಖನ ಬರೆದೆ. ಛತ್ರಗಳಲ್ಲಿ ಮದುವೆ ನಡೆಯಲು ಪ್ರಾರಂಭವಾದ ಮೇಲೆ ಮದುವೆಯ ಅನೇಕ ಆಚರಣೆಗಳಲ್ಲಿ ಬದಲಾವಣೆಗಳು ಬಂದಿವೆ. ನಮ್ಮೂರ ಮುನಿಸ್ವಾಮಪ್ಪನವರು ಊರಿಗೇ ಸಾಹುಕಾರರಾಗಿದ್ದರೂ, ಅಗಸರು, ಹೊಲೆಯರು ಇವರ ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಆದರೆ ಬರಗಾಲ ಮುಂತಾದ ಪ್ರಾಕೃತಿಕ ವಿಕೋಪಗಳಿಂದ ಬದಲಾದ ಪರಿಸ್ಥಿತಿಯಲ್ಲಿ ಈಗ ಊಟವನ್ನು ಮಾಡುತ್ತಿದ್ದಾರೆ. ನಮ್ಮೂರಿನ ವೀರಭದ್ರಪ್ಪ ಮೇಷ್ಟ್ರು ಕೊನೆಯ ತಮ್ಮ ಮುನಿರುದ್ರಪ್ಪ. ಇವರ ಅಣ್ಣಂದಿರು ಚಿಕ್ಕಣ್ಣ ಮತ್ತು ಶಂಕರಪ್ಪನವರು

ಪದವೀಧರರಾಗಿದ್ದರು. ಇಂತಹ ಕುಟುಂಬದ ಹಿನ್ನೆಲೆಯುಳ್ಳ ಮುನಿರುದ್ರಪ್ಪನವರು ನಮ್ಮೂರಿನ ಮೊದಲ ಇಂಜಿನಿಯರ್ ಪದವೀಧರ. ಹೀಗಾಗಿ ಇವರು ಎಲ್ಲರಿಗೂ ಒಂದು ರೀತಿಯ ಮಾಡೆಲ್. ನಮಗೂ ಹಾಗೆ ಓದಬೇಕೆಂಬ ಆಸೆ. ಇವರು ರಜೆಯಲ್ಲಿ ಊರಿಗೆ ಬಂದರೆ ಮಾತನಾಡಿಸದೆ ಮುಂದೆ ಹೋಗುತ್ತಿರಲಿಲ್ಲ. ಬೆಂಗಳೂರಿನಲ್ಲಿ ನೆಲೆಸಿದ್ದ ನಮ್ಮಂತಹವರಿಗೆ ಇವರು ಆಗಾಗ ಎಚ್ಚರಿಕೆಯ ಮಾತುಗಳನ್ನು ಹೇಳುವುದರ ಮೂಲಕ ನಮ್ಮ ನಡವಳಿಕೆಯನ್ನು ತಿದ್ದುತ್ತಿದ್ದರು. ಇವರ ಅಣ್ಣ ಮುನಿಸ್ವಾಮಪ್ಪನ ಸಾವು ಇವರ ಇಡೀ ಕುಟುಂಬವನ್ನು ಚದುರುವಂತೆ ಮಾಡಿದ್ದು ಇತಿಹಾಸ.

ನನ್ನ ಮಗನಿಗೆ ಒಂದು ವರ್ಷವಾದಾಗ ಭೇದಿ ಶುರುವಾಯಿತು. ಅನೇಕ ಡಾಕ್ಟರುಗಳ ಕಡೆ ತೋರಿಸಿ ಸೆಂಟ್‌ಜಾನ್ಸ್ ಆಸ್ಪತ್ರೆಗೆ ಒಳರೋಗಿಯಾಗಿ ಸೇರಿಸಿದೆ. ಐದು ದಿನವಾದರೂ ಬೇಧಿ ನಿಲ್ಲಲಿಲ್ಲ. ಅಂತ್ಯದಲ್ಲಿ ಆಸ್ಪತ್ರೆಯಿಂದ ಡಿಸ್ಚಾರ್ಜ್ ಮಾಡಿ ಅವರೂ ಕೈ ಎತ್ತಿದರು. ನನ್ನ ಹೆಂಡತಿ ಮುಂದೇನೂ ದಾರಿಯಿಲ್ಲ ಮಗುವಿನ ಸಾವು ನಿಶ್ಚಿತವೆಂದು ಕೈಚೆಲ್ಲಿ ಕುಳಿತಾಗ, ಮನೆಗೆ ಬಂದ ವಯಸ್ಸಾದ ಹೆಂಗಸೊಬ್ಬರು ತಾನು ಔಷಧಿ ಕೊಡುವುದಾಗಿ ಹೇಳಿ ಗಿಡವೊಂದರ ಚಿಗುರನ್ನು ತಂದು ರಸ ಕುಡಿಸಿದಳು. ಹೇಗಿದ್ದರೂ ಮಗು ಸಾಯುತ್ತೆ, ಹೀಗಾಗಿ ಇದೂ ಒಂದು ವೈದ್ಯ ಆಗಲಿ ಎಂದು ನನ್ನ ಹೆಂಡತಿ ತೀರ್ಮಾನಿಸಿದ್ದಳು. ಆಶ್ಚರ್ಯವೆಂಬಂತೆ ಭೇಧಿ ಕಡಿಮೆಯಾಗಹತ್ತಿತ್ತು. ರಾತ್ರಿ ಇನ್ನೊಮ್ಮೆ ಔಷಧಿ ನೀಡಿದಳು. ಪೂರ್ಣವಾಗಿ ಭೇಧಿ ಕಡಿಮೆಯಾಯಿತು. ಎರಡು ದಿನ ಮಗುವಿಗೆ ಭೇಧಿಯೇ ಆಗಲಿಲ್ಲ. ಆಗ ಮತ್ತೆ ಭೇದಿಯಾಗುವ ಸ್ವಲ್ಪ ಔಷಧಿ ಕುಡಿಸಿದ್ದಾಯಿತು.

ಪರಿಷತ್ತಿನಲ್ಲಿದ್ದಾಗ ಶೇಷಶಾಸ್ತ್ರಿಯ ಪುಸ್ತಕ 'ಕರ್ನಾಟಕದ ವೀರಗಲ್ಲುಗಳು' ಪರಿಷತ್ತಿನಿಂದ ಪ್ರಕಟವಾಯಿತು. ಈ ಸಂದರ್ಭದಲ್ಲಿ ಅವರ ಗುರುಗಳೊಬ್ಬರು ಆ ಪುಸ್ತಕ ಪರಿಷತ್ತಿನಿಂದ ಪ್ರಕಟಿಸಲೇ ಕೂಡದೆಂದು ಹಠ ಹಿಡಿದರು. ಶೇಷಶಾಸ್ತ್ರಿ ಇಬ್ಬಂದಿಯಾದ. ಆಗ ನಾನು ಅದನ್ನು ಪ್ರಕಟಿಸಲೇಬೇಕೆಂದು ಒತ್ತಾಯಿಸಿದೆ. ಜೊತೆಗೆ ಇದೇ ಮಹಾಪ್ರಬಂಧದ ಪ್ರೂಫ್ ತಿದ್ದುವುದು, ಪುಟಗಳ ಜೋಡಣೆ ಮೊದಲಾದ ಕಾರ್ಯಗಳನ್ನು ಮಾಡಿದೆ. ನನ್ನ ನೆರವಿಗೆ ಪಿ.ವಿ. ಕೃಷ್ಣಮೂರ್ತಿಯವರೂ ನಿಂತರು. ಅಂತೂ ಪುಸ್ತಕ ಪ್ರಕಟವಾಯಿತು. ಗುರುಗಳಿಗೆ ಪುಸ್ತಕ ಕೊಡಬೇಕೆಂದು ಶೇಷಶಾಸ್ತ್ರಿ ಹಟ ಹಿಡಿದ. ಕೊಡಲೇ ಕೂಡದೆಂದು ನಮ್ಮ ಒತ್ತಾಯ. ನಮ್ಮ ಮಾತು ಮೀರಿ ಪುಸ್ತಕ ನೀಡಲು ಹೋಗಿ ಗುರುಗಳಿಂದ ಬೈಸಿಕೊಂಡು ಬಂದದ್ದು ಇತಿಹಾಸ. ಇದೆ ಸಂದರ್ಭದಲ್ಲಿ ವಿಭಾಗದಲ್ಲಿದ್ದ ಹಸ್ತಪ್ರತಿಗಳನ್ನು ಶುದ್ಧೀಕರಣಗೊಳಿಸಿ ಕಾಪಾಡಲು ಕೇಂದ್ರಸರ್ಕಾರದಿಂದ ಯೋಜನೆಯೊಂದನ್ನು ತರುವ ಸಲುವಾಗಿ ಅನುದಾನಕ್ಕಾಗಿ ಪರಿಷತ್ತಿನ ಮೂಲಕ ಅರ್ಜಿ ಸಲ್ಲಿಸಿದೆ. ಈ ಅನುದಾನ ನಾನು ಪರಿಷತ್ತನ್ನು ಬಿಟ್ಟ ಮೇಲೆ ಪರಿಷತ್ತಿಗೆ ಮಂಜೂರಾಯಿತು. ಪರಿಷತ್ತಿನಲ್ಲಿನ ದುಡಿಮೆಗೆ ಇಂತಹದೇ ಎಂಬ ಸಮಯವಿರಲಿಲ್ಲ. ಬೆಳಗ್ಗೆ ಒಂಬತ್ತರಿಂದ ಮಧ್ಯಾಹ್ನ ಒಂದು ಮತ್ತು ಸಂಜೆ ನಾಲ್ಕರಿಂದ ರಾತ್ರಿ ಏಳೂವರೆವರೆಗೆ ಇದರ ಕೆಲಸದ ಅವಧಿ. ಮಧ್ಯದ ಅಂದರೆ ಒಂದರಿಂದ ನಾಲ್ಕರವರೆಗಿನ ಮೂರುಗಂಟೆಗಳು ವಿಶ್ರಾಂತಿ ಸಮಯ. ಸಾಮಾನ್ಯವಾಗಿ ಈ ಸಮಯದಲ್ಲಿ ಮನೆ ದೂರವಿದ್ದುದ್ದರಿಂದ ವಿಭಾಗದಲ್ಲಿಯೇ ಇರುತ್ತಿದ್ದೆ. ಈ ವೇಳೆಯಲ್ಲಿ ಅನೇಕ ಮಿತ್ರರು ವಿದ್ವಾಂಸರು ವಿಭಾಗಕ್ಕೆ ಬಂದು ಚರ್ಚೆಯಲ್ಲಿ ತೊಡಗುತ್ತಿದ್ದರು. ಸಂಜೆಯೂ ಸಹ ೭.೩೦ಕ್ಕೆ ಮುಚ್ಚಬೇಕಾದ ವಿಭಾಗ ಚರ್ಚೆಯಲ್ಲಿ ತೊಡಗಿದ್ದಲ್ಲಿ ೮ ಗಂಟೆಯೂ ಆಗುತ್ತಿತ್ತು. ವಿಭಾಗಕ್ಕೆ ಶೇಷಶಾಸ್ತ್ರಿ, ಗಣೇಶ್, ಲಕ್ಷ್ಮಣ್ ತೆಲಗಾವಿ, ಗೋಪಾಲರಾವ್, ಶಾಸನಶಾಸ್ತ್ರ ವಿದ್ಯಾರ್ಥಿಗಳು ಸೇರಿ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದೆವು. ಕೆಲವೊಮ್ಮೆ ಮೇಲೆ ನಾವಿರುವುದನ್ನು ಮರೆತು ಜವಾನ ಕೆಳಗಡೆ ಬಾಗಿಲನ್ನು ಬೀಗ ಹಾಕಿಕೊಂಡು ಹೋಗುತ್ತಿದ್ದ. ಅನೇಕ ಬಾರಿ ಏಣಿ ತರಿಸಿ ಮಹಡಿ ಮೇಲ್ಗಡೆಯಿಂದ ಕೆಳಗೆ ಇಳಿದದ್ದೂ ಉಂಟು. ಅಲ್ಲಿಂದ ನಡೆದುಕೊಂಡು ಲಕ್ಕಸಂದ್ರಕ್ಕೆ ಬರುತ್ತಿದ್ದೆ. ಶೇಷಶಾಸ್ತ್ರಿ ಮಿನರ್ವ ಟಾಕೀಸಿನ ವರೆಗೆ ಜೊತೆಯಲ್ಲಿ ಬರುತ್ತಿದ್ದ.

೧೯೮೨ರ ಆಗಸ್ಟ್‌ನಲ್ಲಿ ನಾನು ಸಾಹಿತ್ಯ ಪರಿಷತ್ ಬಿಟ್ಟು ಗುಂಡ್ಲುಪೇಟೆಗೆ ಹೈಸ್ಕೂಲ್ ಉಪಾಧ್ಯಾಯನಾಗಿ ಹೋದಾಗ ನನ್ನ ಹೆಂಡತಿ ಬಳಿ ಇದ್ದ ಸ್ವಲ್ಪ ಹಣವನ್ನು ವೆಚ್ಚಕ್ಕೆ ತೆಗೆದುಕೊಂಡು ಹೋಗಿದ್ದೆ. ಈ ವೇಳೆಗೆ ಪರಿಷತ್ತಿನಲ್ಲಿ ೬೯೦ ರೂಪಾಯಿ ಸಂಬಳ ಬರುತ್ತಿತ್ತು. ಹೈಸ್ಕೂಲ್ ಉಪಾಧ್ಯಾಯನ ಸಂಬಳ ೬೧೦ ರೂಪಾಯಿಯಿತ್ತು. ಆದರೂ ಸರ್ಕಾರಿ ನೌಕರಿ ಎಂದು ಗುಂಡ್ಲುಪೇಟೆಗೆ ಹೋದಾಗ ಸಂಸಾರ ಬೆಂಗಳೂರಿನಲ್ಲಿಯೇ ಉಳಿಯಿತು. ಇಲ್ಲಿ ನನ್ನ ಹೆಂಡತಿಯು ಮಕ್ಕಳನ್ನು, ತಮ್ಮನನ್ನೂ ಪೋಷಿಸಿಕೊಂಡು ಬೆಂಗಳೂರಿನಲ್ಲಿಯೇ ಉಳಿದಳು. ಮಗಳು ರೂಪಾಳನ್ನು ವಿಲ್ಸನ್ ಗಾರ್ಡನ್‌ನಲ್ಲಿದ್ದ ಶಾಲೆಯೊಂದಕ್ಕೆ ಸೇರಿಸಿದ್ದೆ. ಅವಳನ್ನು ಕರೆತರುವುದು, ಬಿಟ್ಟು ಬರುವುದು ನನ್ನ ಹೆಂಡತಿ ಇಲ್ಲವೇ ನನ್ನ ತಮ್ಮನ ಕೆಲಸವಾಗಿತ್ತು. ನಾನು ಗುಂಡ್ಲುಪೇಟೆಯಲ್ಲಿಯೇ ಇರುತ್ತಿದ್ದೆ. ಗೆಳೆಯ ಶೇಷಶಾಸ್ತ್ರಿ ಆಗಲೂ ಮಾಡಿದ ಸಹಾಯವೆಂದರೆ ನನಗೆ ಶನಿವಾರ ಶಾಸನಶಾಸ್ತ್ರ ತರಗತಿಯೊಂದನ್ನು ನೀಡಿದ್ದು. ಹೀಗಾಗಿ ಗುಂಡ್ಲುಪೇಟೆಯ ಸರ್ಕಾರಿ ಪ್ರೌಢಶಾಲೆಯಲ್ಲಿ ಶನಿವಾರ ಬೆಳಗಿನ ತರಗತಿ ಮುಗಿಸಿಕೊಂಡು ಬೆಳಗ್ಗೆ ೧೧ ಗಂಟೆಗೆ ಗುಂಡ್ಲುಪೇಟೆಯಲ್ಲಿ ಬಸ್ ಹತ್ತಿ ಸಾಯಂಕಾಲ ೫ ಗಂಟೆಗೆ ಪರಿಷತ್ತಿನಲ್ಲಿರುತ್ತಿದ್ದೆ. ಒಂದುವರೆ ಗಂಟೆ ಚರ್ಚೆ, ಹರಟೆ ಮುಗಿದ ಮೇಲೆ ೬.೩೦ ರಿಂದ ೭.೩೦ರವರೆಗೆ ತರಗತಿ.

ಶಾಸನಶಾಸ್ತ್ರ ತರಗತಿಯಲ್ಲಿ ಪಾಠ ಮಾಡಿ ಮನೆಗೆ ಹೋಗುತ್ತಿದ್ದೆ. ಮತ್ತೆ ಸೋಮವಾರ ಬೆಳಗ್ಗೆ ೫ ಗಂಟೆ ಬಸ್ ಹತ್ತಿ ೧೦ ಗಂಟೆಗೆ ಗುಂಡ್ಲುಪೇಟೆಯಲ್ಲಿರುತ್ತಿದ್ದೆ. ಗುಂಡ್ಲುಪೇಟೆಯಲ್ಲಿದ್ದಷ್ಟು ಕಾಲವೂ ಮನೆಯ ಸಂಪೂರ್ಣ ಜವಾಬ್ದಾರಿ ಹೆಂಡತಿಯದಾಗಿತ್ತು. ಇಂದಿಗೂ ಈ ಜವಾಬ್ದಾರಿಯನ್ನು ನಾನು ವಹಿಸಿಕೊಳ್ಳಲೇ ಇಲ್ಲ. ಮನೆಗೆ ಬರುವ ನೆಂಟರನ್ನು ಸುಧಾರಿಸುವುದು, ಮದುವೆಯ ಸೀರೆ ಕೊಂಡುಕೊಳ್ಳಲು ಕರೆದರೆ ಅವರ ಜೊತೆಯಲ್ಲಿ ಹೋಗುವುದು. ಮದುವೆಗೆ ಒಡವೆ ಮಾಡಿಸಲು ಬಂದವರನ್ನು ಪರಿಚಯದ ಚಿನಿವಾರರ ಅಂಗಡಿಗೆ ಕರೆದುಕೊಂಡು ಹೋಗಿ ಒಡವೆ ಹಾಕಿಸುವುದು, ಇದೆಲ್ಲಾ ನನ್ನ ಹೆಂಡತಿಯದೇ ಕೆಲಸವಾಗಿತ್ತು.

೧೯೮೫ರಲ್ಲಿ ಇಂಡಿಯನ್ ಆಯಿಲ್ ಕಾರ್ಪೊರೇಷನ್‌ನವರು ಆನೇಕಲ್ ತಾಲೂಕಿನಲ್ಲಿ ಸೀಮೆಎಣ್ಣೆ ಬಂಕ್ ತೆಗೆಯುವ ಬಗ್ಗೆ ಆಸಕ್ತ ಅಂಗವಿಕಲ ವ್ಯಕ್ತಿಗಳು ಅರ್ಜಿ ಸಲ್ಲಿಸಬಹುದೆಂದು ಪತ್ರಿಕಾ ಪ್ರಕಟಣೆ ನೀಡಿದ್ದರು. ಇದನ್ನು ನೋಡಿ ನನ್ನ ತಮ್ಮ ಕೃಷ್ಣಾರೆಡ್ಡಿಯ ಕೈಯಲ್ಲಿ ಅರ್ಜಿ ಹಾಕಿಸಿದೆ. ಈತ ಬಿಎಸ್‌ಸಿ ಡಿಗ್ರಿಯಾಗಿ ಕೆಲಸ ಹುಡುಕಾಡುತ್ತಿದ್ದ. ಇಂಡಿಯನ್ ಆಯಿಲ್ ಕಾರ್ಪೊರೇಷನ್‌ನಿಂದ ಸಂದರ್ಶನಕ್ಕೆ ಕರೆ ಬಂತು. ಅದೃಷ್ಟವಶಾತ್ ಆಯ್ಕೆಯಾಗಿದ್ದ. ಇದೇ ಸಮಯಕ್ಕೆ ಅವನಿಗೆ ಕೋಲಾರ ಜಡ್ಜ್ ಆಫೀಸಿಗೆ ಎಫ್.ಡಿ.ಸಿ. ಪೋಸ್ಟ್‌ನ ನೇಮಕಾತಿ ಪತ್ರವೂ ಬಂತು. ನನ್ನ ತಮ್ಮ ಕೊನೆಗೆ ಸೀಮೆಎಣ್ಣೆ ವ್ಯವಹಾರ ಮಾಡುವುದಾಗಿ ತೀರ್ಮಾನಿಸಿ ಕೋಲಾರದ ಜಿಲ್ಲಾ ನ್ಯಾಯಾಲಯದ ಪ್ರಥಮ ದರ್ಜೆ ಸಹಾಯಕನ ಹುದ್ದೆಗೆ ಹೋಗಲಿಲ್ಲ. ಈ ಸನ್ನಿವೇಶದಲ್ಲಿ ಹಣದ ಅಗತ್ಯ ಬಂದಾಗ ನನ್ನ ತಮ್ಮ ನಾರಾಯಣರೆಡ್ಡಿ, ಈ ಕಾಲಕ್ಕೆ ಹೊಸೂರಿನ ಅಶೋಕ ಲೇಲ್ಯಾಂಡ್ ಕಂಪನಿಗೆ ಸೇರಿದ್ದು ೧೦ ಸಾವಿರ ರೂಪಾಯಿಗಳ ಸಹಾಯ ನೀಡಿದ. ನಮ್ಮೂರಿನ ಪುಟ್ಟಾರೆಡ್ಡಿಯವರ ತಾಯಿ ತಿಮ್ಮಕ್ಕ ಸ್ವಲ್ಪ ಹಣವನ್ನು ಸಾಲವಾಗಿ ನೀಡಿದ್ದರು. ಡಿ.ಕೆ. ಶ್ಯಾಮಸುಂದರ್‌ರಾವ್ ಹಣವನ್ನು ನೀಡಿದರು. ಉಳಿಕೆ ಹಣವನ್ನು ನನ್ನ ಹೆಂಡತಿಯೇ ಹೊಂದಿಸಿದಳು. ತವರುಮನೆ ಕಡೆಯಿಂದಲೂ ಸ್ವಲ್ಪ ಹಣವನ್ನು ಸಾಲವಾಗಿ ತಂದಳು. ಲಕ್ಕಸಂದ್ರದಲ್ಲಿ ಅನೇಕರು ಈಕೆಗೆ ಪರಿಚಯವಿದ್ದದ್ದರಿಂದ ಸಾಲ ಸಿಗುವುದು ಸುಲಭವಾಯಿತು. ೧೯೮೬ರಲ್ಲಿ ಡಿಸೆಂಬರ್ ತಿಂಗಳಿನಲ್ಲಿ ಸೀಮೆಯೆಣ್ಣೆ ಬಂಕ್ ಆನೇಕಲ್‌ನಲ್ಲಿ ಪ್ರಾರಂಭವಾಯಿತು. ಇದರ ಹಿಂದೆ ನನ್ನ ಹೆಂಡತಿಯ ಶ್ರಮ ಹೆಚ್ಚಿಗಿತ್ತು. ಏಕೆಂದರೆ ನಾನು ಗ್ಯಾಜೆಟಿಯರ್ ಕಚೇರಿಯಲ್ಲಿದ್ದುದರಿಂದ ಪ್ರವಾಸ ಇತ್ಯಾದಿ ಕೆಲಸಗಳ ಮೇಲೆ ಊರಿನಲ್ಲಿರುತ್ತಿದ್ದುದು ಕಡಿಮೆ. ಮುಂದೆ ೧೯೮೭ರಲ್ಲಿ ಸುಮಾರಿಗೆ ನನ್ನ ತಮ್ಮ ಕೃಷ್ಣಾರೆಡ್ಡಿಯ ಮದುವೆಯಾಯಿತು. ಈ ವೇಳೆಗೆ ಮನೆಯನ್ನು ಲಕ್ಕಸಂದ್ರದಲ್ಲಿಯೇ ಬೇರೆ ಮನೆಗೆ ಬದಲಾಯಿಸಿದ್ದೆವು. ಈಗ ನನ್ನ ಹೆಂಡತಿಯ ಕೆಲಸ ಮನೆ ಉಸ್ತುವಾರಿ ನೋಡಿಕೊಳ್ಳುವುದರ ಜೊತೆಗೆ ಸೀಮೆಯೆಣ್ಣೆ ಡಿ.ಡಿ.ಗೆ ಸಾಲದೆ ಬಂದ ಹಣವನ್ನು ಹೊಂದಿಸುವುದು; ಮಾರಾಟ ಮಾಡಿ ಹಣ ಬಂದ ಮೇಲೆ ಆ ಹಣವನ್ನು ವಾಪಸ್ಸು ಮಾಡುವ ಕೆಲಸ ಹೆಚ್ಚುವರಿಯಾಗಿ ಬಿತ್ತು. ಇಷ್ಟು ಹೊತ್ತಿಗೆ ನಮ್ಮ ಮನೆಯ ಆರ್ಥಿಕ ಸ್ಥಿತಿ ಪೂರಾ ಇಲ್ಲದಿದ್ದರೂ ಸ್ವಲ್ಪ ಮಟ್ಟಿಗೆ ಚೇತರಿಕೆ ಕಂಡಿತ್ತು. ಯಾರೂ ಬೇಕಾದರೂ ಸಾಲಕೊಡುವವರಿದ್ದರು.

೧೯೮೭–೮೮ ಸೀಮೆಯೆಣ್ಣೆ ಮುಕ್ತ ಮಾರುಕಟ್ಟೆಗೆ ಬಂದು, ಬೇಕಾದವರು ಲೈಸನ್ಸ್ ಪಡೆಯಬಹುದೆಂದು ಸರ್ಕಾರದವರು ಸೂಚಿಸಿದರು. ನನ್ನ ಹೆಂಡತಿಯು ನನ್ನ ತಮ್ಮನ ಹೆಸರಿನಲ್ಲಿ ಲೈಸನ್ಸ್ ಮಾಡಿಸಿ ತಾನೇ ಮುಕ್ತ ಮಾರುಕಟ್ಟೆ ಸೀಮೆಯೆಣ್ಣೆ ವ್ಯವಹಾರವನ್ನು ನಿರ್ವಹಿಸುತ್ತಿದ್ದಳು. ಇದರಲ್ಲಿ ನನ್ನ ತಮ್ಮ ಕೃಷ್ಣಾರೆಡ್ಡಿ ಪಾತ್ರ ಬಹುಮುಖ್ಯವಾಗಿತ್ತು. ನಿಜದ ಅರ್ಥದಲ್ಲಿ ನಾನು ಈ ಹಣಕಾಸಿನ ವಿಷಯದಲ್ಲಿ ಜಾಣನೂ ಆಗಿರಲಿಲ್ಲ. ನನಗೆ ನನ್ನ ತಮ್ಮ ಮತ್ತು ನನ್ನ ಹೆಂಡತಿ ಎಂದೂ ಹಣಕಾಸಿನ ಬಗ್ಗೆ ತಿಳಿಸುತ್ತಲೂ ಇರಲಿಲ್ಲ. ತಿಂಗಳಿಗೋ ಎರಡು ತಿಂಗಳಿಗೋ ಒಮ್ಮೆ ಏನಾಯಿತೆಂದು ಕೇಳುತ್ತಿದ್ದೆ. ಅವರ ಸಮಜಾಯಿಷಿ ನನಗೆ ಅರ್ಥವಾಗುತ್ತಿರಲಿಲ್ಲ. ಸಾಲಗಾರರು ಮನೆ ಬಳಿ ಬರಬಾರದು ಎಂದು ಹೇಳುತ್ತಿದ್ದೆ. ೧೯೯೦ರ ಸುಮಾರಿಗೆ ಆನೇಕಲ್‌ನಲ್ಲಿರುವ ಜೈಭೀಮ್ ಪೆಟ್ರೋಲ್ ಬಂಕ್ ಅನ್ನು ಗುತ್ತಿಗೆ ಹಿಡಿದೆವು. ಇದರ ದಿನವಹಿ ಆಡಳಿತ, ವಹಿವಾಟನ್ನು ನನ್ನ ಹೆಂಡತಿಯೇ ನೋಡಿಕೊಳ್ಳುತ್ತಿದ್ದಳು. ನನ್ನ ತಮ್ಮ ಕೃಷ್ಣಾರೆಡ್ಡಿ ಹೊರಗಿನ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದ. ಮುಕ್ತ ಸೀಮೆಯೆಣ್ಣೆ ವ್ಯವಹಾರದಲ್ಲಿ ಹಣ ಚೆನ್ನಾಗಿ ಸಂಪಾದನೆಯಾಯಿತು. ಇದ್ದ ಬದ್ದ ಸಾಲಗಳನ್ನು ಮೊದಲು ತೀರಿಸಲಾಯಿತು. ನಂತರ ಮಡಿವಾಳ ಚೆಕ್‌ಪೋಸ್ಟ್ ಬಳಿ ಒಂದು ಖಾಲಿ ನಿವೇಶನವನ್ನು ಕೊಂಡುಕೊಂಡೆವು. ೧೯೯೪ರಲ್ಲಿ ಅದನ್ನು ಕಟ್ಟಲು ಆರಂಭಿಸಿದೆವು. ೧೯೯೫ರ ಜೂನ್‌ಗೆ ಮನೆ ಅಪೂರ್ಣವಾಗಿತ್ತು. ಇಂತಹ ಸಂದರ್ಭದಲ್ಲಿ ನಾನು ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದು ಸೇರಿದ್ದೆ. ಮನೆಯಲ್ಲಿ ನನ್ನ ಮಗಳು ಸ್ಮಿತಾ ಎಂ.ಎ. ತರಗತಿಗೆ ಸೇರಿದ್ದಳು. ನನ್ನ ಇನ್ನೊಬ್ಬ ಮಗಳು ರೂಪ ಮತ್ತು ಮಗ ಸನತ್‌ಕುಮಾರ್ ಬೆಂಗಳೂರಿನಲ್ಲಿ ಪಿಯುಸಿ ಓದುತ್ತಿದ್ದರು. ಇವರ ಆಗು ಹೋಗುಗಳನ್ನು ಮತ್ತು ಓದಿನ ಉಸ್ತುವಾರಿಯನ್ನು ನನ್ನ ಹೆಂಡತಿ ಮತ್ತು ನನ್ನ ತಮ್ಮನೇ ನೋಡಿಕೊಳ್ಳುತ್ತಿದ್ದರು.

೧೯೯೬ ಫೆಬ್ರವರಿ ತಿಂಗಳಲ್ಲಿ ಹೊಸಮನೆಗೆ ಪ್ರವೇಶ ಮಾಡಿದೆವು. ಅದೇ ವರ್ಷ ಹಂಪಿಯಲ್ಲಿ ವಿಜಯನಗರ ಸ್ಥಾಪನೆಯ ೬೬೦ ನೆಯ ವರ್ಷದ ನೆನಪಿನಲ್ಲಿ ವಿಚಾರ ಸಂಕಿರಣವೊಂದನ್ನು ಹೊಸಪೇಟೆ ನಾಗರೀಕರ ಹಾಗೂ ಗಾಯತ್ರಿ

ಪೀಠದ ಆಶ್ರಯದಲ್ಲಿ ಜೈನಮಂದಿರವಿರುವ ಹಂಪೆಯ ರತ್ನಕೂಟದಲ್ಲಿ ಏರ್ಪಡಿಸಲಾಗಿತ್ತು. ಅದು ನಡೆಯುವ ದಿನದಲ್ಲೇ ನಾವು ನಡೆಸುತ್ತಿದ್ದ ಆನೇಕಲ್‌ನಲ್ಲಿನ ಪೆಟ್ರೋಲ್ ಬಂಕ್ ದರೋಡೆಯಾಗಿತ್ತು. ಊರಿನಿಂದ ಬಂದ ಸುದ್ದಿ ಪ್ರಕಾರ ೯೫,೦೦೦ ನಗದು ಲೂಟಿಯಾಗಿತ್ತು. ಜೊತೆಗೆ ಹಣ ಒಯ್ಯುತ್ತಿದ್ದ ರಾಜಣ್ಣ ಎಂಬುವವರಿಗೆ ಮಚ್ಚೇಟಿನಿಂದ ಬೆರಳು ಕತ್ತರಿಸಿತ್ತು. ಈತ ಆಸ್ಪತ್ರೆ ಸೇರಿದ ಮೇಲೆ ಸಾಲ ಹಾಕಿಸಿಕೊಂಡಿದ್ದವರೆಲ್ಲಾ ರಾಜಣ್ಣನಿಗೆ ನೀಡಿದ್ದಾಗಿ ತಿಳಿಸತೊಡಗಿದರು. ಹೀಗಾಗಿ ಸುಮಾರು ೫೦,೦೦೦ ಬಾಕಿ ಬರಲಿಲ್ಲ ರಾಜಣ್ಣನ ಆಸ್ಪತ್ರೆ ವೆಚ್ಚ ಇತ್ಯಾದಿಯಾಗಿ ಸುಮಾರು ಎರಡು ಲಕ್ಷ ಹಣ ನಷ್ಟವಾಗಿತ್ತು. ಮನೆಯಲ್ಲಿ ನಾನು, ನನ್ನ ತಮ್ಮ, ನನ್ನ ಹೆಂಡತಿ ಮೂವರು ಸೇರಿ ಮುಂದೆ ಏನು ಮಾಡಬೇಕೆಂದು ಸಮಾಲೋಚಿಸುತ್ತಿದ್ದಾಗ, ನನ್ನ ತಮ್ಮ, ನೀನು ಬೆಂಗಳೂರಿಗೆ ಬಂದು ಬಂಕ್ ನೋಡಿಕೊಳ್ಳುವುದಾದರೆ ನೋಡಿಕೋ ಇಲ್ಲದಿದ್ದರೆ ಬಿಟ್ಟು ಬಿಡೋಣವೆಂದ. ಆಗ ನಾನು ಕನ್ನಡ ವಿಶ್ವವಿದ್ಯಾಲಯದ ಕೆಲಸವನ್ನೇ ಆರಿಸಿಕೊಂಡೆ. ಹೀಗಾಗಿ ಪೆಟ್ರೋಲ್ ಬಂಕನ್ನು ೧೯೯೬ರಲ್ಲಿ ಅದರ ಮಾಲೀಕರಿಗೆ ಬಿಟ್ಟುಕೊಟ್ಟೆವು.

ನಾನು ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರದಲ್ಲಿ ಕೆಲಸ ಮಾಡುತ್ತಾ ಉತ್ತರ ಕರ್ನಾಟಕದ ಜಿಲ್ಲೆಗಳ ಪ್ರವಾಸವನ್ನೂ ಮಾಡಬೇಕಿತ್ತು. ಹೀಗಾಗಿ ಬೆಂಗಳೂರಿಗೆ ಹೋಗುತ್ತಿದ್ದುದು ಕಡಿಮೆ. ಹೋದರೂ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿಯೋ, ಮಿಥಿಕ್ ಸೊಸೈಟಿ ಗ್ರಂಥಾಲಯದಲ್ಲಿಯೋ ಅಥವಾ ಮುದ್ರಣಾಲಯದಲ್ಲಿಯೋ ಕೆಲಸವಿಟ್ಟುಕೊಂಡೇ ಹೋಗುತ್ತಿದ್ದೆ. ಬೆಳಗ್ಗೆ ರೈಲು ಅಥವಾ ಬಸ್ ಇಳಿದು ಮನೆಗೆ ಹೋಗಿ ನಿತ್ಯಕರ್ಮ ಮುಗಿಸಿ ೧೦ ಗಂಟೆಗೆ ಮೇಲೆ ಸೂಚಿಸಿರುವ ಯಾವುದಾದರೂ ಸ್ಥಳಕ್ಕೆ ಹೋಗಲು ಸಿದ್ಧನಾಗುತ್ತಿದ್ದೆ. ನನ್ನ ಹೆಂಡತಿ ಆಕ್ಷೇಪವೆಂದರೆ "ಬೆಂಗಳೂರಿಗೆ ಬಂದೆ, ತಿಂದೆ, ಹೋದೆ ಎಂಬಂತೆ ಯಾರು? ಏನು? ಊರ ಕಡೆಯ ಸಮಾಚಾರವೇನು? ಇತ್ಯಾದಿಯಾಗಿ ಏನಾದರೂ ವಿಚಾರಿಸಿದೆಯಾ? ನೆಂಟರ ತರ ಬಂದು ನೆಂಟರ ತರಹ ಹೋಗ್ತೀರಿ ಜವಾಬ್ದಾರಿ ಏನೂ ಇಲ್ಲವೆ" ಎಂದು ಆಕ್ಷೇಪಿಸುತ್ತಿದ್ದಳು. ಅಂತಹ ಸಂದರ್ಭದಲ್ಲಿ ನಾನು ಹೆಚ್ಚಿಗೆ ಮಾತು ಬೆಳಸದೆ ನೀವೆಲ್ಲಾ ಇರೋವಾಗ ಏನೋ ಆಗಿರುತ್ತೆ ಅಂತ ನಾನ್ಯಾಕೆ ಯೋಚಿಸಲಿ ಎಂದು ನಗುತ್ತಾ ಹೊರಗೆ ಹೋಗುತ್ತಿದ್ದೆ. ಕೆಲವೊಮ್ಮೆ ಮನೆಗೆ ಬರುತ್ತಿದ್ದ ನೆಂಟರು ನಾವು ವಾಸವಿದ್ದ ಮನೆಯ ಹತ್ತಿರವಿರುವ ಆಸ್ಪತ್ರೆಗೆ ರೋಗಿಯನ್ನು ಸೇರಿಸಿ ಬರುತ್ತಿದ್ದರು. ಇವರಿಗೆ ಅಡುಗೆ ಮಾಡುವುದು, ಕೆಲವೊಮ್ಮೆ ರೋಗಿಗೆ ಊಟ ತೆಗೆದುಕೊಂಡು ಹೋಗಿ ಕೊಟ್ಟುಬರುವುದು ನನ್ನ ಹೆಂಡತಿಯ ಕೆಲಸವಾಗುತ್ತಿತ್ತು. ಮುಂದೆ ನನ್ನ ಹೆಂಡತಿಗೆ ಕಾಲುನೋವು ಕಾಣಿಸಿಕೊಂಡಾಗ ಹೀಗೆ ಆಸ್ಪತ್ರೆಗೆ ಸೇರುವ ರೋಗಿಗಳ ಬಂಧುಗಳಿಗೆ ಅಡುಗೆ ಮಾಡುತ್ತೇನೆ. ನೀವೇ ಊಟ ತೆಗೆದುಕೊಂಡು ಹೋಗಬೇಕೆಂಬ ಷರತ್ತು ವಿಧಿಸುವಂತೆ ತಿಳಿಸಿದೆ. ಅದರಂತೆ ಆಕೆ ಅಡುಗೆ ಮಾಡಿಡುತ್ತಿದ್ದಳು; ರೋಗಿಯ ಕಡೆಯವರು ತೆಗೆದುಕೊಂಡು ಹೋಗುತ್ತಿದ್ದರು. ಹೀಗೆ ಮನೆಗೆ ಬಂದ ಅತಿಥಿಗಳನ್ನು ಸುಧಾರಿಸುವಲ್ಲಿ, ವ್ಯವಹಾರಕ್ಕೆ ಬೇಕಾಗುವ ಹಣಕಾಸನ್ನು ಹೊಂದಿಸುವುದರಲ್ಲಿ ನನ್ನ ಹೆಂಡತಿ ನನಗೆಂದೂ ಜವಾಬ್ದಾರಿ ವಹಿಸಲಿಲ್ಲ. ನನ್ನ ಅಧ್ಯಯನ ಯಾವುದೇ ತೊಂದರೆಯಿಲ್ಲದೆ ಮುಂದುವರಿಯಲು ಈಕೆಯ ಶ್ರಮ ಕಾರಣವಾಗಿದೆ. ಈಕೆ ೩ನೆಯ ತರಗತಿಯವರೆಗೆ ಮಾತ್ರ ಓದಿದ್ದರೂ, ಅದು ಅವಳ ವ್ಯವಹಾರಜ್ಞಾನಕ್ಕೆ ಅಡ್ಡಿಯಾಗಲಿಲ್ಲ.

ನನ್ನ ತಮ್ಮಂದಿರ ಪೈಕಿ ಉಳಿದಿರುವವರಲ್ಲಿ ಕೃಷ್ಣಾರೆಡ್ಡಿ ಎರಡನೆಯವನು. ಚಿಕ್ಕವಯಸ್ಸಿನಲ್ಲಿ ಕಣ್ಣುಗಳು ತೊಂದರೆಯಾದಾಗ ಮಿಂಟೋ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು ಮನೆಗೆ ಬಂದ ಕೆಲವು ದಿನಗಳಲ್ಲಿ ಪೋಲಿಯೋ ಸೋಂಕು ತಗುಲಿತು. ನಾವು ಅದನ್ನು ಗಮನಿಸಿರಲಿಲ್ಲ. ಬರುಬರುತ್ತಾ ಒಂದು ಕಾಲು ಸಣ್ಣದಾಗಿ ಇನ್ನೊಂದು ಕಾಲು ಸಹಜವಾಗುತ್ತಾ ಬಂದಾಗಲೇ ನಮಗ ಪೋಲಿಯೋ ಬಗ್ಗ ತಿಳಿದದ್ದು, ಊರಿನಲ್ಲಿಯೇ ಏಳನೆಯ ತರಗತಿ ವರೆಗೆ ಓದಿದ ಈತ ಹೈಸ್ಕೂಲು ಆನೇಕಲ್‌ನಲ್ಲಿ ಮುಗಿಸಿದ. ಹೈಸ್ಕೂಲು ಮುಗಿದಾಗ ನನ್ನದು ಎಂ.ಎ. ತರಗತಿ ಮುಗಿದಿತ್ತು. ಮುಂದಿನ ವಿದ್ಯಾಭ್ಯಾಸಕ್ಕೆ ಸಿದ್ಧಗಂಗಾ ಮಠಕ್ಕೆ ಸೇರಿಸುವ ಇಚ್ಛೆಯಿಂದ ಅಲ್ಲಿಗೆ ಹೋದೆ. ಯಾರೂ ಪರಿಚಯವಿಲ್ಲದ ಆ ಜಾಗದಲ್ಲಿ ಸೂಕ್ತ ಉತ್ತರವೂ ದೊರೆಯಲಿಲ್ಲ. ಇದು ನಮ್ಮ ತಾತನಿಗೆ ಗೊತ್ತಾಯಿತು. ತಕ್ಷಣ ಅವರು ಕೋಪಗೊಂಡು ಅವನು ಓದಿದಷ್ಟು ಓದಲಿ ಕಣ್ಣಮುಂದೆ ಇರಲಿ, ಅನುಕೂಲವಾದ ಕಡೆ ಸೇರಿಸೋಣ ಎಂದು ಬಿಟ್ಟರು. ಮುಂದೆ ಆನೇಕಲ್‌ನಲ್ಲಿಯೇ ಪಿಯುಸಿ ಸೇರಿದ. ಬೆಂಗಳೂರಿನ ಸರ್ಕಾರಿ ವಿಜ್ಞಾನ ಕಾಲೇಜಿನಲ್ಲಿ ಬಿ.ಎಸ್ಸಿಗೆ ಸೇರಿಸಿದೆ, ಡಿಗ್ರಿಯಾಯಿತು. ಈತ ಡಿಗ್ರಿ ಓದುವ ಕಾಲಕ್ಕೆ ನಾನು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಂಶೋಧನಾ ವಿಭಾಗದ ಮುಖ್ಯಸ್ಥನಾಗಿದ್ದೆ. ನನ್ನ ಕ್ಷೇತ್ರದಲ್ಲಿ ನನ್ನನ್ನು ನಾನು ನಿರಾತಂಕವಾಗಿ ತೊಡಗಿಸಿಕೊಳ್ಳಲು ಈತನ ಪಾತ್ರ ತುಂಬಾ ಮಹತ್ತರವಾದುದು.

ಒಮ್ಮೆ ಮಿತ್ರ ಜಿ.ಎಸ್. ವೆಂಕಟರಾಜು ಸಿಕ್ಕಿ ನಿಮ್ಹಾನ್ಸ್ ಡೈರೆಕ್ಟರ್ ನಾರಾಯಣರೆಡ್ಡಿಯವರ ಮಕ್ಕಳಿಗೆ ಕನ್ನಡ ಪಾಠ ಹೇಳಿಕೊಡುವೆಯಾ ಎಂದು ಕೇಳಿದ. ನಾನು ಲಕ್ಕಸಂದ್ರದಲ್ಲಿಯೇ ಇದ್ದುದರಿಂದ ಇವರ ಮನೆ ನನಗೆ ಹತ್ತಿರವಿತ್ತು. ನನಗೆ

ಆಗ ಆರ್ಥಿಕ ಮುಗ್ಗಟ್ಟು ಇದ್ದುದರಿಂದ ಆಗಲಿ ಎಂದು ಒಪ್ಪಿಕೊಂಡೆ. ಬೆಳಗ್ಗೆ ಆರೂವರೆಯಿಂದ ಏಳುವರೆವರೆಗೆ ಪಾಠ ಮಾಡಬೇಕಾಗಿತ್ತು. ಏಕೆಂದರೆ ನಾರಾಯಣರೆಡ್ಡಿಯವರ ಹುಡುಗರೂ ಶಾಲೆಗೆ ಹೋಗಲು ಒಂಬತ್ತಕ್ಕೆ ಸಿದ್ಧವಾಗಬೇಕಿತ್ತು. ಹೀಗಾಗಿ ಬೆಳಗ್ಗೆ ೬ಕ್ಕೆ ಮನೆಬಿಟ್ಟು ೬.೩೦ಕ್ಕೆ ನಾರಾಯಣ ರೆಡ್ಡಿಯವರ ಮನೆಯಲ್ಲಿರುತ್ತಿದ್ದೆ. ದೊಡ್ಡ ಹುಡುಗ ಸತೀಶ ಎಂಟನೆಯ ತರಗತಿಯಲ್ಲಿದ್ದ. ಎರಡನೆಯ ಹುಡುಗ ೬ನೆಯ ತರಗತಿಯಲ್ಲಿದ್ದುದ್ದು ನೆನಪು. ಸುಮಾರು ಮೂರು ವರ್ಷಗಳ ಕಾಲ ಇವರಿಗೆ ನಾನು ಪಾಠ ಮಾಡಿದೆ. ತಿಂಗಳಿಗೆ ರೂ.೧೦೦.೦೦ ಕೊಡುತ್ತಿದ್ದರು. ಈ ನೂರು ರೂಪಾಯಿಗಿಂತ ನಾರಾಯಣರೆಡ್ಡಿಯವರ ಜೀವನ ಶಿಸ್ತು, ಸರಳತೆ ಇವು ನನ್ನನ್ನು ಬಹುವಾಗಿ ಆಕರ್ಷಿಸಿದವು. ಇವರ ಪತ್ನಿ ಚಂದ್ರಮತಿಯವರೂ ನಿಮ್ಹಾನ್ಸ್‌ನಲ್ಲಿಯೇ ಪ್ರೊಫೆಸರ್ ಆಗಿದ್ದರು. ನಾನು ಪಾಠ ಮಾಡಲು ಹೋದ ಕೂಡಲೇ ಬಿಸಿ ಕಾಫಿ ತಂದಿಡುತ್ತಿದ್ದರು. ನಾನು ಪಾಠಕ್ಕೆ ಹೋದ ದಿನದಿಂದ ಬಿಡುವವರೆಗೂ ಇದು ಕ್ರಮ ಲೋಪವಾಗಲಿಲ್ಲ. ಅಂತಹ ಮನಸ್ಸು ಅವರದ್ದು. ಇವರ ಇಬ್ಬರು ಮಕ್ಕಳೂ ಈ ಅಮೇರಿಕಾದಲ್ಲಿ ನೆಲಸಿದ್ದಾರೆಂದು ತಿಳಿಯಿತು. ನಾರಾಯಣರೆಡ್ಡಿಯವರು ಮತ್ತು ಚಂದ್ರಮತಿಯವರು ಬೆಂಗಳೂರಿನಲ್ಲಿಯೇ ನೆಲೆಸಿದ್ದಾರೆ.

ರಾಮಸ್ವಾಮಿರೆಡ್ಡಿ ನಮ್ಮ ಊರಿನ ಇನ್ನೊಂದು ಭಾಗವಾದ ಹೊಸೂರಿನವರು. ನಾವು ಹಳೆಯ ಊರಿನವರು. ಸಾಮಾನ್ಯವಾಗಿ ಹೊಸವೂರಿನ ಹುಡುಗರು ಹಳೆಯ ಊರಿಗೆ ಬರುತ್ತಿರಲಿಲ್ಲ. ಇದಕ್ಕೆ ತಂದೆ ತಾಯಿಗಳ ತಡೆಯೂ ಇತ್ತು. ಹಳೆಯ ಊರಿನ ಹುಡುಗರೆಲ್ಲಾ ಕೆಟ್ಟವರೆಂಬುದು ಇವರ ನಂಬಿಕೆ. ನಮ್ಮ ಜೊತೆ ಸೇರಿದರೆ ಕೆಡುತ್ತಾರೆಂಬ ಹೆದರಿಕೆ ಬೇರೆ. ಹೀಗಾಗಿ ಹೊಸವೂರಿನ ಹುಡುಗರು ನಮ್ಮ ಹಳೆಯ ಊರಿಗೆ ಬರುತ್ತಿದ್ದದ್ದೂ ಕಡಿಮೆ. ಹೀಗಾಗಿ ಮದುವೆ ಅಥವಾ ಯಾವುದಾದರೂ ಕಾರ್ಯಗಳಲ್ಲಿ ಮಾತ್ರ ನಮ್ಮ ಕೇರಿಗೆ ಅವರು, ಅವರ ಕೇರಿಗೆ ನಾವು ಹೋಗುತ್ತಿದ್ದೆವು. ಹೀಗಾಗಿ ಹೊಸೂರಿನ ಹುಡುಗರ ಒಡನಾಟ ಹಳೆಯ ಊರಿನ ಹುಡುಗರಿಗೆ ಶಾಲೆಯಲ್ಲಿ ಬಿಟ್ಟರೆ ಹೊಲಗಳ ಬಳಿ ಮಾತ್ರ ಇತ್ತು. ಅನೇಕ ವೇಳೆ ಇವರು ಕೊಲುಮಿಗೆ ಬಂದರೆ, ಅವರ ಹೊಲಗಳಿಗೆ ಹೋಗಬೇಕಾದಲ್ಲಿ ನಮ್ಮೂರಿನ ಮೂಲಕ ಹಾದುಹೋಗುತ್ತಿದ್ದರು. ಇಂತಹವರಲ್ಲಿ ರಾಮಸ್ವಾಮಿರೆಡ್ಡಿಯೂ ಒಬ್ಬ. ಇವರ ಅಕ್ಕನನ್ನು ಡೆಂಕಣಿಕೋಟೆ ಬಳಿಯ ಪಂಚೇಶ್ವರ ಎಂಬ ಗ್ರಾಮಕ್ಕೆ ನೀಡಿದ್ದರು. ರಾಮಸ್ವಾಮಿ ಒಬ್ಬನೇ ಗಂಡುಮಗು. ಹೀಗಾಗಿ ಸ್ವಲ್ಪ ಮುದ್ದಾಗಿ ಸಾಕಿದ್ದರೆಂದರೂ ಅತಿಶಯೋಕ್ತಿಯಲ್ಲ. ಮುಂದೆ ನಾವು ಹೈಸ್ಕೂಲಿಗೆ ಸೇರಿದಾಗ ದಿನವೂ ಪ್ರಯಾಣಿಸುವಾಗ ದಾರಿಯಲ್ಲಿ ಚನ್ನಕೇಶವರೆಡ್ಡಿ, ರಾಮಸ್ವಾಮಿರೆಡ್ಡಿ ಇಬ್ಬರೂ ಸಿಗುತ್ತಿದ್ದರು. ಮುಂದೆ ಎಸ್.ಎಸ್.ಎಲ್.ಸಿ.ಯಾದ ಮೇಲೆ ಮತ್ತೆ ಬೆಂಗಳೂರಿನಲ್ಲಿ ಭೇಟಿ. ಪಿಯುಸಿ ಓದುತ್ತ ಹಾಗೆಯೇ ಕಾರ್ಪೊರೇಷನ್ ಕಚೇರಿಯಲ್ಲಿ ಕೆಲಸಕ್ಕೆ ಸೇರಿದರು. ನಾವೆಲ್ಲಾ ಓದುತ್ತಿದ್ದುದರಿಂದ ಇವರ ರೂಂ ನಮಗೆ ಒಂದು ರೀತಿಯ ಆಶ್ರಯತಾಣ. ಮುಂದೆ ಈತ ಮದುವೆಯಾಗಿ ಮನೆ ಮಾಡಿದ ಮೇಲೆಯೂ ನಾನು, ಕೆಲವೊಮ್ಮೆ ನನ್ನ ತಮ್ಮ ಇವರ ಮನೆಯಲ್ಲಿಯೇ ಉಳಿದುಕೊಳ್ಳುತ್ತಿದ್ದೆವು. ಪರಿಷತ್ತಿಗೆ ಸೇರಿ ಬೇರೆ ಮನೆ ಮಾಡುವವರೆಗೂ ಇವರ ಮನೆ, ತಪ್ಪಿದರೆ ರಾಮಚಂದ್ರನ ಮನೆ ಇಲ್ಲವೆ, ಶ್ಯಾಮಸುಂದರ್ ರೂಮಿನಲ್ಲಿ ಕಾಲಕಳೆಯುತ್ತಿದ್ದೆ.

ತಂದೆಯಿಲ್ಲ, ಗಟ್ಟಿಯಾಗಿ ದುಡಿಯುತ್ತಿದ್ದ ಮೊದಲನೆಯ ತಮ್ಮ ಮುನಿರೆಡ್ಡಿ ಹಾವು ಕಚ್ಚಿ ಸತ್ತಿದ್ದ. ಹೈಸ್ಕೂಲು ೮ನೆಯ ತರಗತಿ ಪಾಸಾಗಿದ್ದೆ. ಮುಂದೆ ಏನು ಓದಬೇಕು. ಎಂಬುದು ಚರ್ಚೆ. ಆಗ ನಮ್ಮೂರಿನಲ್ಲಿದ್ದ ವಿದ್ಯಾವಂತರು ಬಹಳಷ್ಟು ಜನ ಪ್ರೈಮರಿ ಮೇಷ್ಟ್ರುಗಳಾಗಿದ್ದರು. ಸರಿ ನಮ್ಮ ತಾಯಿ ಎಸ್.ಎಸ್.ಎಲ್.ಸಿ. ಆದ ಮೇಲೆ ಮುಂದೆ ಓದಿಸಲು ಆಗುವುದಿಲ್ಲ. ಟೀಚರ್ ಟ್ರೈನಿಂಗ್ ತೆಗದುಕೊ ಎಂದರು. ನಾನು ಏನು ಹೇಳಲಿಲ್ಲ. ಆಗಲಿ ಎಂದೇ ತೀರ್ಮಾನಿಸಿದೆ. ಅದರಂತೆ ಹೈಸ್ಕೂಲ್ ೯ನೆಯ ತರಗತಿಯಲ್ಲಿಯೇ ಆರ್ಟ್ಸ್ ಆ್ಯಂಡ್ ಸೈನ್ಸ್ ವಿಭಜನೆ ಮಾಡಿಕೊಳ್ಳಬೇಕಿತ್ತು. ಹೀಗಾಗಿ ನಾನು ಚರಿತ್ರೆ, ಭೂಗೋಳ ಮತ್ತು ಹಿಂದಿಯನ್ನು ಐಚ್ಛಿಕ ವಿಷಯವಾಗಿ ಪಡೆದೆ. ಮುಂದಿನ ವಿದ್ಯಾಭ್ಯಾಸದ ಘಟನೆಗಳಿಗೆ ಇಲ್ಲಿಯೇ ಹಣೆಬರೆಹ ಬರೆಯಲಾಯಿತು. ವಿಜ್ಞಾನದ ಓದು ಇಲ್ಲಿಗೆ ಮುಗಿಯಿತು.

ನಮ್ಮೂರಿನಲ್ಲಿ ಹೈಸ್ಕೂಲ್ ಇರಲಿಲ್ಲ. ಸಮೀಪದ ಹೈಸ್ಕೂಲಿದ್ದ ಸ್ಥಳವೆಂದರೆ ಆನೇಕಲ್. ಹೈಸ್ಕೂಲಿದ್ದ ಸ್ಥಳಕ್ಕೂ ನಮ್ಮ ಊರಿಗೂ ೩ ೧/೨ಮೈಲಿ ಅಂದರೆ ಸುಮಾರು ೬ ಕಿ.ಮೀ. ಆಗುತ್ತಿತ್ತು. ಇಷ್ಟೂ ದೂರವನ್ನು ನಾವು ನಡದೇ ಹೋಗಿಬರಬೇಕಿತ್ತು. ಬೆಳಗ್ಗೆ ಒಂಬತ್ತು ಗಂಟೆಗೆ ಮನೆ ಬಿಟ್ಟರೆ ೧೦.೩೦ ಗೆ ಹೈಸ್ಕೂಲಿಗೆ ಹೋಗಿ ಸೇರುತ್ತಿದ್ದೆವು ಅದಷ್ಟು ಸಮೀಪದ ದಾರಿಗಳನ್ನು ಹುಡುಕುತ್ತಿದ್ದೆವು. ರಾಜಣ್ಣನ ಕೆರೆಗೆ ನೀರು ಬಂದಾಗ ದಾರಿ ಸುತ್ತಾಗುತ್ತಿತ್ತು. ಸುತ್ತಿರಲಿ, ಸಮೀಪವಿರಲಿ ನಡೆಯುವುದು ತಪ್ಪುತ್ತಿರಲಿಲ್ಲ. ನಾನು, ಮದ್ದರೆಡ್ಡಿ ಮಗ ರಾಮಚಂದ್ರ ಅವರ ದೊಡ್ಡಪ್ಪನ ಮಗ ಸಂಪಂಗಿರಾಮಯ್ಯ ನಡೆದುಕೊಂಡು ಹೋದಾಗ ಮರೇಕಮ್ಮನಗುಡಿ ಮಾವಿನ ಮರದ ಬಳಿ ರಾಮಸ್ವಾಮಿರೆಡ್ಡಿ, ಚನ್ನಕೇಶವರೆಡ್ಡಿ ಸೇರುತ್ತಿದ್ದರು. ಅಲ್ಲಿಂದ ಮುಂದೆ ದಕ್ಷಿಣಕ್ಕಿದ್ದ ನೆಸತಗ್ಗಿನ ಬಳಿಯ ಅತ್ತಿ ಮರದ ಬಳಿಗೆ ಹೋದಾಗ ಇನ್ನೊಂದು ಕಡೆಯಿಂದ ಪಾಪರೆಡ್ಡಿ, ಅಣ್ಣಯ್ಯರೆಡ್ಡಿ ನಂಜುಂಡಪ್ಪ ಬರುತ್ತಿದ್ದರು. ನನ್ನದು ಬಿ ಸೆಕ್ಷನ್. ಇಂಗ್ಲೀಷ್ ಮೀಡಿಯಂನವರದ್ದು ಎ ಸೆಕ್ಷನ್. ಉಳಿದವರದ್ದು

ಸಿ ಸೆಕ್ಷನ್. ಹೀಗಾಗಿ ತರಗತಿಗಳಲ್ಲಿ ನಾನು ಒಬ್ಬನೇ ಊರವರ ಸಂಪರ್ಕವಿಲ್ಲದೆ ಇರುತ್ತಿದ್ದೆ. ಬೆಳಗ್ಗೆ ತಿಂದು ಹೋದರೆ ಮತ್ತೆ ರಾತ್ರಿಯ ಊಟವೇ ಗಟ್ಟಿ. ಎಲ್ಲಿ ತಿನ್ನಲೂ ಕೈಯಲ್ಲಿ ಕಾಸಿರಲಿಲ್ಲ. ಇಂತಹ ಸಮಯದಲ್ಲಿ ಹೈಸ್ಕೂಲಿನಲ್ಲಿ ಕೆಲವು ಮಾನವೀಯತೆಯುಳ್ಳ ಉಪಾಧ್ಯಾಯರಿದ್ದರು. ಅವರಲ್ಲಿ ಆರ್. ನಾಗರಾಜ್, ಎಸ್. ರಾಮಯ್ಯ, ಸಿ.ಎಸ್.ಆರ್., ಹೆಡ್ಮಾಸ್ಟರ್ ಕೃಷ್ಣಮೂರ್ತಿ ಮೊದಲಾದವರಿದ್ದರು. ಇವರೆಲ್ಲಾ ಸೇರಿ ಮಧ್ಯಾಹ್ನ ನಮ್ಮಂತಹವರಿಗೆ ಲಘು ಉಪಹಾರ ನೀಡುವ ಕಾರ್ಯಕ್ರಮ ಹಾಕಿಕೊಂಡರೆಂದು ತೋರುತ್ತದೆ. ಗ್ರಾಮಾಂತರದಿಂದ ಬಂದ ಬಡಹುಡುಗರಿಗೆ ಈ ಲಘು ಉಪಹಾರ. ಸರಿ ನಾನು ಒಬ್ಬ ಗ್ರಾಮಾಂತರ ವಿದ್ಯಾರ್ಥಿಯಾದೆ. ಮಧ್ಯಾಹ್ನ ಒಂದು ದಿನ ಹೆಸರು ಕಾಳು ಉಸಲಿ, ಒಂದು ದಿನ ಕಡಲೆ ಉಸಲಿ, ಒಂದು ದಿನ ಚಿತ್ರಾನ್ನ ಹೀಗೆ ಶನಿವಾರ, ಭಾನುವಾರ, ಬಿಟ್ಟು ಉಳಿದ ಐದು ದಿನ ಈ ಏರ್ಪಾಟಿತ್ತು. ಈ ಏರ್ಪಾಟಿಗೆ ಹಣ ಎಲ್ಲಿಯದೋ ಇದನ್ನು ಜಾರಿಗೊಳಿಸಬೇಕೆಂದು ಈ ಉಪಾಧ್ಯಾಯರು ಊರಿನಲ್ಲಿ ಯಾರ ಯಾರನ್ನು ನಮಗಾಗಿ ಕಾಡಿಬೇಡಿದರೋ ತಿಳಿದಿಲ್ಲ. ಅಂತೂ ಒಂದು ಟರ್ಮು ಇದು ನಡೆಯಿತು. ಇದರಿಂದ ನಮ್ಮಂತಹ ದೂರದ ಅನೇಕ ಗ್ರಾಮಾಂತರ ವಿದ್ಯಾರ್ಥಿಗಳಿಗೆ ಆದ ಸಂತೋಷ, ಸಮಾಧಾನವನ್ನು ಹೇಗೆ ಹೇಳುವುದು! ಈ ಏರ್ಪಾಟು ಮಾಡಿದ್ದವರ ಹೊಟ್ಟೆ ತಣ್ಣಗಿರಲಿ.

೨ನೆಯ ವರ್ಷ ಹೈಸ್ಕೂಲಿನಲ್ಲಿ ಎ.ಸಿ.ಸಿ. ಶುರುಮಾಡಿದರು. ಇದಕ್ಕೆ ಸೇರಿರೆಂದು ತಾಕೀತು ಮಾಡಿದರು. ನನಗೇನೋ ಸೇರಬೇಕೆಂಬ ಆಸೆ. ಆದರೆ ಇದು ಪ್ರಾರಂಭವಾಗುತ್ತಿದ್ದುದು ಸಂಜೆ ೫ ಗಂಟೆ ಮೇಲೆ ಬಿಡುತ್ತಿದ್ದುದು. ಸಂಜೆ ೬ ಗಂಟೆಗೆ. ಹೀಗಾಗಿ ಮನೆ ತಲುಪುದು ಸಂಜೆ ೭.೩೦ ಆಗುತ್ತಿತ್ತು. ನಮ್ಮ ಊರಿನಲ್ಲಿ ಯಾರೂ ಸೇರಲಿಲ್ಲ. ಕೊನೆಗೆ ಸೋಲೂರಿನ ಒಬ್ಬ ವಿದ್ಯಾರ್ಥಿಯನ್ನು ಪುಸಲಾಯಿಸಿದೆ ಇಬ್ಬರೂ ಸೇರಿದೆವು. ಆತ ಸ್ಕೂಲಿಗೆ ಬಾರದ ದಿನ ನಾನು ಎ.ಸಿ.ಸಿ.ಗೆ ಚಕ್ಕರ್. ಏಕೆಂದರೆ ಆನೇಕಲ್‌ನಿಂದ ನಮ್ಮೂರಿಗೆ ನಡೆದುಕೊಂಡು ಹೋಗುವ ರಸ್ತೆಯಲ್ಲಿ ಕೆಲವು ಅಗಮ್ಯಸ್ಥಳಗಳಿದ್ದವು. ಆ ಜಾಗಕ್ಕೆ ಒಬ್ಬನೇ ಬಂದರೆ ಎಲ್ಲಿಲ್ಲದ ಹೆದರಿಕೆ. ಅಂತಹ ಸ್ಥಳಗಳಲ್ಲಿ ಇಬ್ಬರಿದ್ದರೆ ಜೋರಾಗಿ ಓಡಿ ಆ ಸ್ಥಳವನ್ನು ತಪ್ಪಿಸಿಕೊಳ್ಳುತ್ತಿದ್ದೆವು. ಆದರೂ ಊರು ಸೇರಲೇಬೇಕಿತ್ತು. ಈ ಸೋಲೂರಿನ ಹುಡುಗ ನಮ್ಮ ಊರಿನ ಮೇಲೆ ಹೋಗುವುದರಿಂದ ಇವನನ್ನು ನಾನು ಜೊತೆ ಮಾಡಿಕೊಂಡೆ. ಎರಡು ವರ್ಷಗಳ ಕಾಲ ಎ.ಸಿ.ಸಿ. ಸೇರಿದ್ದೆ.

ಇಂತಹದಲ್ಲಿ ಒಂಬತ್ತನೆಯ ತರಗತಿಯಲ್ಲಿ ಚರಿತೆ, ಭೂಗೋಳ ಮತ್ತು ಹಿಂದಿ ವಿಷಯಗಳನ್ನು ಐಚ್ಛಿಕ ವಿಷಯಗಳಾಗಿ ತೆಗೆದುಕೊಂಡಿದ್ದೆ. ಎಸ್.ಎಸ್.ಎಲ್.ಸಿ. ಯಲ್ಲಿ ಚರಿತೆ, ಭೂಗೋಳ ಓದಬಹುದು. ಹಿಂದಿಯನ್ನು ಓದುವುದು ಕಷ್ಟವಾಗಿತ್ತು. ಹೀಗಾಗಿ ಪರೀಕ್ಷಾ ಸಮಯದಲ್ಲಿ ೧೫ ದಿನಗಳ ಕಾಲ ಹಿಂದಿಯನ್ನು ವಿಶೇಷವಾಗಿ ಹೇಳಿಸಿಕೊಳ್ಳಲು ಆನೇಕಲ್‌ನಲ್ಲಿ ಉಳಿದೆ. ಈ ಸಮಯದಲ್ಲಿ ನಮ್ಮ ತಾತನಿಗೆ ಪರಿಚಿತವಿದ್ದ, ರಾಮಕ್ಕ ಎಂಬುವವರ ಮನೆಯಲ್ಲಿ ಊಟದ ಏರ್ಪಾಟಾಗಿತ್ತು. ಒಂದು ತಿಂಗಳು ಈ ಮನೆಯಲ್ಲಿದ್ದೆ. ಇದು ತೊಗಟರ ಮನೆಯಾದ್ದರಿಂದ ನೇಯ್ಗೆ ಕೆಲಸವೂ ನಡೆಯುತ್ತಿತ್ತು. ಹೀಗಾಗಿ ನೇಯ್ಗೆಗೆ ಸಂಬಂಧಿಸಿದ ಅನೇಕ ಶಬ್ದಗಳನ್ನು ಇಲ್ಲಿ ತಿಳಿದುಕೊಂಡೆ. ಮುಂದೆ ಎಸ್.ಎಸ್.ಎಲ್.ಸಿ. ಪರೀಕ್ಷೆಯೂ ಮುಗಿಯಿತು. ಫಲಿತಾಂಶಕ್ಕಾಗಿ ಕಾಯುತ್ತಿದ್ದಾಗ ಸುದ್ದಿ ಪತ್ರಿಕೆಯಲ್ಲಿ ನನ್ನ ರಿಸಲ್ಟ್ ಬಂತು ನಮ್ಮೂರಿನಲ್ಲಿ ಸರಿಸುಮಾರು ಎಲ್ಲರೂ ಪಾಸಾಗಿದ್ದೆವು. ಎಲ್ಲರಿಗೂ ಖುಷಿಯೋ ಖುಷಿ. ಮುಂದೇನು ಎಂಬುದು ಎಲ್ಲರ ಮುಂದಿನ ಪ್ರಶ್ನೆ. ನಮ್ಮ ಮನೆಯಲ್ಲಿ ಮತ್ತೆ ಸಭೆ. ನಾನು ಓದಬೇಕೆಂದು ಪಟ್ಟುಹಿಡಿದಿದ್ದೆ. ಕೊನೆಗೆ ನಮ್ಮ ತಾತ ನಮ್ಮ ಅಣ್ಣನನ್ನು ಕರೆದು ಈ ಬಗ್ಗೆ ಕೇಳಿದರು. ನಮ್ಮ ಅಣ್ಣ ಓದಲಿ ಎಂದರು. ನನಗೆ ಬೆಂಗಳೂರು ಹೊಸದು. ಎಂದೂ ಓಡಾಡಿದವನಲ್ಲ, ಹಾಗೂ ಪರಿಚಯವಿರಲಿಲ್ಲ. ಕೊನೆಗೆ ಯಡವನಹಳ್ಳಿಯ ನಮ್ಮ ದೊಡ್ಡಪ್ಪ ಸುಂಕಾರೆಡ್ಡಿಯವರನ್ನು ಕಾಣುವಂತೆ ನಮ್ಮ ತಾಯಿ ಹೇಳಿದಳು. ಇವರು ನಮ್ಮ ತಾಯಿಯ ಅಕ್ಕನ ಗಂಡ. ಹೀಗಾಗಿ ನಾನು ಅವರ ಮೂಲಕ ಬೆಂಗಳೂರಿನ ಸೈಂಟ್ ಜೋಸೆಪ್ಸ್ ಕಾಲೇಜನ್ನು ಸೇರಿದೆ. ಕಾರ್ಪೊರೇಷನ್ ಸಮೀಪದ ಸಂಪನ್ನಪ್ಪ ಹಾಸ್ಟೆಲ್‌ನಲ್ಲಿ ಉಚಿತ ವಿದ್ಯಾರ್ಥಿಯಾಗಿ ಹಾಸ್ಟೆಲ್‌ನಲ್ಲಿ ಪ್ರವೇಶ ಪಡೆದೆ. ಸಂಪನ್ನಪ್ಪ ಹಾಸ್ಟೆಲ್‌ಗೆ ಯಾರು ಅಧ್ಯಕ್ಷರು, ಕಾರ್ಯದರ್ಶಿಗಳೆಂಬ ಬಗ್ಗೆ ನನಗೆ ಹಾಸ್ಟೆಲ್‌ನಲ್ಲಿ ಇರುವವರೆಗೆ ತಿಳಿಯಲೇ ಇಲ್ಲ. ಏಕೆಂದರೆ ಅವರು ಯಾರೂ ಅಲ್ಲಿಗೆ ಬರುತ್ತಿರಲಿಲ್ಲ. ಹಾಸ್ಟೆಲ್‌ನ ಆವರಣದಲ್ಲಿದ್ದ ಕಾರಕೂನರೇ ಎಲ್ಲವೂ ಆಗಿದ್ದರು. ಇಂತಹ ವಿದ್ಯಾರ್ಥಿನಿಲಯಗಳು ನಗರ್ತರ ಪೇಟೆಯಲ್ಲಿ ಬೇರೆ ಬೇರೆ ಜಾತಿಯವರವೂ ಇದ್ದವು. ಎತ್ತರವಾದ ಕಟ್ಟಡ, ಒಳಗೆ ವಿಶಾಲವಾದ ಹಾಲು, ಅದರ ಎರಡೂ ಕಡೆ ರೂಮುಗಳು. ಹಿಂಭಾಗದಲ್ಲಿ ಅಡುಗೆ ಮನೆ ಮತ್ತು ಭೋಜನ ಶಾಲೆ. ಅದರ ಹಿಂದೆ ಸ್ನಾನಗೃಹಗಳಿದ್ದವು. ಸಂಪನ್ನಪ್ಪನವರು ನಗರ್ತರು, ತಮಗೆ ಸಂತಾನವಿಲ್ಲದ್ದರಿಂದ ತಮ್ಮ ಆಸ್ತಿ ಮತ್ತು ಕಟ್ಟಡಗಳನ್ನು ಮಕ್ಕಳ ಹಾಸ್ಟೆಲ್‌ಗಾಗಿ ಬಿಟ್ಟರೆಂದು ಹೇಳುತ್ತಿದ್ದರು. ಸುಮಾರು ೪೦ ಮಂದಿ ಈ ಹಾಸ್ಟೆಲ್‌ನಲ್ಲಿದ್ದೆವು. ಕೆಲವರು ಡಿಗ್ರಿ ಓದುವವರೂ ಇದ್ದರು. ನಗರ್ತ ವಿದ್ಯಾರ್ಥಿಗಳೇ ಅಲ್ಲದೆ ನನ್ನಂತಹ ಬೇರೆ ಬೇರೆ ಜಾತಿಯ ವಿದ್ಯಾರ್ಥಿಗಳೂ ಈ ಹಾಸ್ಟೆಲ್‌ನಲ್ಲಿದ್ದೆವು. ದೊಡ್ಡಬಳ್ಳಾಪುರ, ದೇವನಹಳ್ಳಿ ಕಡೆಯ ವಿದ್ಯಾರ್ಥಿಗಳು ಹೆಚ್ಚಿಗಿದ್ದರು. ಹಳೆಯ ವಿದ್ಯಾರ್ಥಿಗಳು

ರೂಮುಗಳಲ್ಲಿದ್ದರೆ ಹೊಸಬರು ಹಾಲಿನಲ್ಲಿದ್ದೆವು. ಎಲ್ಲರ ಬಳಿ ಒಂದು ಟಂಕು, ಹಾಸಿಗೆ, ಊಟದ ತಟ್ಟೆ, ಲೋಟ ಇಷ್ಟೆ. ನಾನೊಬ್ಬನೇ ಸೈಂಟ್ ಜೋಸೆಫ್ಸ್ ಕಾಲೇಜಿಗೆ ಹೋಗುತ್ತಿದ್ದವನು. ಉಳಿದವರು ಸರ್ಕಾರಿ ಕಾಲೇಜು, ವಿ.ವಿ.ಪುರಂ ಕಾಲೇಜಿಗೆ ಹೋಗುತ್ತಿದ್ದವರು.

ನಾನು ಪಿಯುಸಿಯಲ್ಲಿ ಕನ್ನಡ, ಇಂಗ್ಲೀಷ್, ಚರಿತ್ರೆ, ಅರ್ಥಶಾಸ್ತ್ರ ಮತ್ತು ಲಾಜಿಕ್‌ಗಳನ್ನು ತೆಗೆದುಕೊಂಡೆ. ಶಿರಾ ಹಳ್ಳಿಗಾಡಿನಿಂದ ಹೋಗಿದ್ದ ನನಗೆ ಆ ಕಾಲೇಜಿನ ವಾತಾವರಣಕ್ಕೆ ಹೊಂದಿಕೊಳ್ಳಲಾಗಲೇ ಇಲ್ಲ. ಏಕೆಂದರೆ ಬಹುತೇಕ ವಿದ್ಯಾರ್ಥಿಗಳು ಕಾನ್ವೆಂಟ್‌ನಿಂದ ಬಂದಿದ್ದವರು. ಅವರ ಹಿನ್ನೆಲೆ ಸಹ ಶ್ರೀಮಂತರ ಮಕ್ಕಳಾಗಿದ್ದರು. ಸ್ವಲ್ಪ ಮಟ್ಟಿಗೆ ಗಲಭೆಕೋರರೂ ಆಗಿದ್ದರು. ಪ್ರಿನ್ಸಿಪಾಲರು ಡಿಸೌಜ ಎಂಬ ಬಹು ಸೌಮ್ಯ ವ್ಯಕ್ತಿ. ಈ ಕಾಲೇಜಿನಲ್ಲಿ ಭಾಷೆ ಬಹು ತೊಡಕಾಗಿತ್ತು. ಇಂಗ್ಲೀಷ್ ಬಾರದು. ಪ್ರಿನ್ಸಿಪಾಲರ ಬಳಿ ಕನ್ನಡದಲ್ಲಿ ಮಾತನಾಡಲು ಹೋದರೆ ಇಂಗ್ಲೀಷ್‌ನಲ್ಲಿಯೇ ಮಾತನಾಡಿ ಎಂದು ಹೇಳುತ್ತಿದ್ದರು. ಆದರೂ ನಾನು ಕನ್ನಡದಲ್ಲಿಯೇ ಮಾತನಾಡುತ್ತಿದ್ದೆ. ಚರಿತ್ರೆ ಉಪನ್ಯಾಸಕರು ಮಲೆಯಾಳಿಯಾದ್ದರಿಂದ ಮಲೆಯಾಳಿ ಇಂಗ್ಲೀಷ್, ಅರ್ಥಶಾಸ್ತ್ರದ ಉಪನ್ಯಾಸಕರು ತಮಿಳಿನವರಾಗಿದ್ದುದರಿಂದ ತಮಿಳು ಇಂಗ್ಲೀಷ್, ಲಾಜಿಕ್ ಉಪನ್ಯಾಸಕರು ಕರ್ನಾಟಕದವರಾಗಿದ್ದುದರಿಂದ ಕರ್ನಾಟಕ ಇಂಗ್ಲೀಷ್, ಕೊನೆಗೆ ಯಾವುದು ಸರಿಯಾಗಿ ಅರ್ಥವಾಗಿರಲಿಲ್ಲ. ಆ ವರ್ಷ ಪಿಯುಸಿ ಪರೀಕ್ಷೆಯಲ್ಲಿ ನಪಾಸಾದೆ. ಲಾಜಿಕ್, ಕನ್ನಡ, ಚರಿತ್ರೆ ಮೂರರಲ್ಲಿ ಪಾಸಾಗಿದ್ದೆ. ಈ ಅವಧಿಯಲ್ಲಿ ನಡೆದ ಒಂದು ಘಟನೆಯನ್ನು ಇಲ್ಲಿಯೇ ಹೇಳುವುದು ಸೂಕ್ತ. ಸಂಪನ್ನಪ್ಪನವರ ವಿದ್ಯಾರ್ಥಿನಿಲಯ ಕಾರ್ಪೊರೇಷನ್ ಬಳಿಯ ಶಾರದಾ ಟಾಕೀಸ್ ಎದುರಿತ್ತು. ಇಲ್ಲಿ ಎರಡು ಹೊತ್ತು ಊಟ ಹಾಕುತ್ತಿದ್ದರು. ಬೆಳಗ್ಗೆ ೯.೩೦ ಗಂಟೆಗೆ – ರಾತ್ರಿ ೭.೩೦ ರಿಂದ ೮ ಗಂಟೆಯೊಳಗೆ ಊಟ ಹಾಕುತ್ತಿದ್ದರು. ನಾನು ಬೆಳಗ್ಗೆ ರಾಗಿ ಮುದ್ದೆ ಊಟ ಮಾಡಿ ಅನ್ನವನ್ನು ಕಾಲೇಜಿಗೆ ತೆಗೆದುಕೊಂಡು ಹೋಗುತ್ತಿದ್ದೆ. ಕಾಲೇಜಿಗೆ ನಡೆದೇ ಹೋಗುತ್ತಿದ್ದುದರಿಂದ, ಕಾರ್ಪೊರೇಷನ್ ಪಕ್ಕದಲ್ಲಿ ಹಾದು ಸಂಪಂಗಿರಾಮನಗರದ ಮೂಲಕ ವುಡ್‌ಲ್ಯಾಂಡ್ ಹೋಟೆಲ್ ಬಳಿ ಸಾಗಿ, ರಿಚ್‌ಮಂಡ್ ರಸ್ತೆ, ಹಳೇ ರಿಸರ್ವ್ ಬ್ಯಾಂಕ್ ಮುಂದೆ ಕಾಲೇಜಿಗೆ ಹೋಗಬೇಕಿತ್ತು. ಬಸ್ಸಿನ ಒಡನಾಟ ಆಗ ಕಡಿಮೆಯಿತ್ತು. ಹೀಗಾಗಿ ಸಮಯ ಮೀರುತ್ತದೆಂದು ಬೇಗ ಬೇಗ ಹೋಗುತ್ತಿದ್ದೆ. ಕೆಲವೊಮ್ಮೆ ಕಾಲೇಜು ಪ್ರಾರಂಭವಾಗಿರುತ್ತಿತ್ತು. ಬಿಸಿ ಊಟ ಮಾಡಿದ್ದು, ಬೇಗ ಬೇಗ ನಡೆದದ್ದು, ಅರ್ಥವಾಗದ ಇಂಗ್ಲೀಷ್ ಭಾಷೆಯ ಪಾಠಗಳು, ನಿದ್ದೆಗೆ ಹೇಳಿಮಾಡಿಸಿದ ಸಮಯ. ಹೀಗಾಗಿ ಕೆಲವೊಮ್ಮೆ ಡೆಸ್ಕಿನ ಮೇಲೆ ತಲೆಯಿಟ್ಟು ತೂಕಡಿಸುತ್ತಿದ್ದೆ. ನಾನು ಕುಳ್ಳಗಿದ್ದುದರಿಂದ ಮುಂದಿನ ಬೆಂಚಿನಲ್ಲಿ ಕುಳ್ಳಿರಿಸುತ್ತಿದ್ದರು. ಒಮ್ಮೆ ಲಾಜಿಕ್ ಪಾಠವನ್ನು ನಾಗರಾಜರಾವ್ ಎನ್ನುವವರು ಮಾಡುತ್ತಿದ್ದರು. ನಾನು ತೂಕಡಿಸಿದ್ದುದನ್ನು ಅವರು ಗಮನಿಸಿದ್ದರೂ ತಲೆಗೆ ಹಚ್ಚಿಕೊಳ್ಳದೇ ಪಾಠಮಾಡುತ್ತಿದ್ದರೆಂದು ನನ್ನ ಭಾವನೆ. ಪಕ್ಕದಲ್ಲಿದ್ದ ವಿದ್ಯಾರ್ಥಿಯೊಬ್ಬ ನನ್ನನ್ನು ಎಬ್ಬಿಸಿದ. ನನಗೆ ದಿಢೀರನೆ ಎಚ್ಚರವಾಯಿತು. ಇದರಿಂದ ವಿದ್ಯಾರ್ಥಿಗಳು ನಕ್ಕ ಕಾರಣದಿಂದ ತರಗತಿಗೆ ತೊಂದರೆಯಾಯಿತು. ಆಗ ಅಧ್ಯಾಪಕರು ನನ್ನನ್ನೇನೂ ಅನ್ನಲಿಲ್ಲ. ಆದರೆ ನನ್ನನ್ನು ಎಬ್ಬಿಸಿದವನನ್ನು ನಿಂತುಕೊಳ್ಳಲು ಹೇಳಿ ತರಗತಿಯಿಂದ ಆಚೆಗೆ ಹೋಗಲು ಹೇಳಿದರು. ಇದರಿಂದ ಆತ ಕಕ್ಕಾ ಬಿಕ್ಕಿಯಾದ. ತಾನು ತೂಕಡಿಸಲಿಲ್ಲವೆಂದೂ, ಈತ ತೂಕಡಿಸಿದ್ದೆಂದು ನನ್ನ ಕಡೆ ಕೈ ಮಾಡಿ ತೋರಿಸಿದ. ಆಗ ನಾಗರಾಜರಾವ್ ಮೇಷ್ಟ್ರು ಹೇಳಿದ್ದು–ಆತ ನಿದ್ದೆ ಮಾಡಿದ್ದರಿಂದ ನನ್ನ ತರಗತಿಗೆ ಯಾವುದೇ ತೊಂದರೆ ಆಗಲಿಲ್ಲ. ನೀನು ಎಬ್ಬಿಸಿದ್ದುದರಿಂದ ತರಗತಿಯಲ್ಲಿ ಪಾಠಮಾಡಲು ತೊಂದರೆಯಾಯಿತು. ಇನ್ನು ಮುಂದೆ ಹಾಗೆ ಮಾಡಬೇಡವೆಂದು ಹೇಳಿ ಎಚ್ಚರಿಕೆ ಕೊಟ್ಟು ಕುಳ್ಳಿರಿಸಿದರು. ಇಂದಿಗೂ ಶರೀರಕ್ಕೆ, ಮನಸ್ಸಿಗೆ, ಕಣ್ಣಿಗೆ ಆಯಾಸವಾದಾಗ ಕುಳಿತಲ್ಲೆ ಒಂದೈದು ನಿಮಿಷ ನಿದ್ದೆ ಮಾಡುವುದು ರೂಢಿ ಇದ್ದು. ಇದು ಕೆಲವರ ತಪ್ಪು ಅಭಿಪ್ರಾಯಕ್ಕೂ ಕಾರಣವಾಗಿದೆ.

ಪರೀಕ್ಷೆಯಲ್ಲಿ ಫೇಲಾದ್ದರಿಂದ ಹಾಸ್ಟೆಲ್‌ನಲ್ಲಿ ಸ್ಥಳವಿಲ್ಲ. ಹೀಗಾಗಿ ಸಂಪನ್ನಪ್ಪನವರ ಹಾಸ್ಟೆಲ್ ಬಿಟ್ಟ ಮೇಲೆ ಎಲ್ಲಿಯಾದರೂ ರೂಂ ಮಾಡಬೇಕೆಂದು ತೀರ್ಮಾನಿಸಿ ಹುಡುಕಾಟ ನಡೆಸಹತ್ತಿದ್ದೆವು. ಇದೇ ಸಮಯದಲ್ಲಿ ನನಗಿಂತ ಓದಿನಲ್ಲಿ ಒಂದು ವರ್ಷ ಮುಂದೆ ಇದ್ದ ನಮ್ಮೂರ ರಾಮಸ್ವಾಮಿರೆಡ್ಡಿ ಜೊತೆಯಾದ. ಕೊನೆಗೆ ತಿಗಳರಪೇಟೆಯ ಧರ್ಮರಾಯ ಸ್ವಾಮಿ ದೇವಾಲಯದ ಅನ್ನಛತ್ರದ ಕಟ್ಟಡದಲ್ಲಿ ಬಾಡಿಗೆಗೆ ಕೊಡುತ್ತಾರೆಂಬ ಸುದ್ದಿ ತಿಳಿದು ಅಲ್ಲಿ ಸಂಬಂಧಿಸಿದವರನ್ನು ಕಂಡು ಸೀಟು ಪಡೆದೆವು. ದೊಡ್ಡ ವರಾಂಡವನ್ನು ಪರದೆಗಳನ್ನು ಹಾಕಿ ನಾಲ್ಕು ಭಾಗಮಾಡಿದ್ದರು. ಒಂದೊಂದು ಭಾಗದಲ್ಲಿ ನಾಲ್ಕೈದು ಜನವಿರುತ್ತಿದ್ದೆವು. ನಾನು, ರಾಮಸ್ವಾಮಿರೆಡ್ಡಿ, ರಾಮಚಂದ್ರ ಒಂದು ಕಡೆ ಸೇರಿದೆವು. ಪಕ್ಕದ ಭಾಗದಲ್ಲಿ ವೇಮಗಲ್ ಪಾಪಣ್ಣ ಎಂಬುವವರಿದ್ದರು. ಈ ವರ್ಷ ಒಂದೊಂದೇ ವಿಷಯವನ್ನು ಪರೀಕ್ಷೆಗೆ ಕಟ್ಟಿ ಪಾಸು ಮಾಡಿಕೊಂಡೆ. ನಾವು ಮೂವರು ಅಂದು ಒಂದು ಕಡೆ ಸೇರಿ ಒಟ್ಟಿಗೆ ಅಡುಗೆ ಮಾಡಿಕೊಂಡು ಕಾಲ ಕಳೆದ ಒಡನಾಟ ಇಂದಿಗೂ ಹಾಗೆಯೇ ಉಳಿದಿದೆ.

ಇದೇ ವರ್ಷ ಬರಗಾಲ. ನನಗೆ ಬುದ್ಧಿ ಬಂದ ಮೇಲೆ ಕಂಡ ಬರಗಾಲ. ೧೯೬೫ರಲ್ಲಿ ಕಾಲಕ್ಕೆ ಮಳೆ ಸರಿಯಾಗಿ ಬೀಳಲಿಲ್ಲ. ಕೆರೆ ಬಾವಿಗಳಲ್ಲಿ ನೀರು ಕಡಿಮೆಯಾದವು ದನಗಳಿಗೆ ಮೇವಿಲ್ಲ. ಇಲ್ಲಿಯವರೆಗೆ ಗ್ರಾಮದ ವ್ಯವಸ್ಥೆ ಒಂದು ತಹಬದಿಯಲ್ಲಿತ್ತು. ಈಗ ಸ್ವಲ್ಪ ಸ್ವಲ್ಪವೇ ಅಲುಗಾಡತೊಡಗಿತು. ನಮ್ಮ ತಾತ ಇಂತಹ ಬರಗಾಲಗಳನ್ನು ಹಿಂದೆ ಕಂಡಿದ್ದರಂತೆ. ಆದರೆ ನಾನು ಕಂಡಿರಲಿಲ್ಲ. ೧೯೬೪ರಲ್ಲಿ ಬೆಳೆದಿದ್ದ ರಾಗಿ, ಭತ್ತ ಈ ವರ್ಷ ತಿಂದದ್ದಾಯಿತು. ಆದರೆ ೧೯೬೫ರಲ್ಲಿ ಬೆಳೆ ಬರಲಿಲ್ಲ. ೧೯೬೬ರಲ್ಲಿ ಇದರ ಭೀಕರತೆ ಜನರಿಗೆ ಅರಿವಾಗತೊಡಗಿತು. ಮಳೆಯಿಲ್ಲ; ವ್ಯವಸಾಯವಿಲ್ಲ; ಜನರಿಗೆ ಕೂಲಿಯಿಲ್ಲ. ಹೊಟ್ಟೆಗೆ ಕೂಳಿಲ್ಲ. ಮೊದಲು ಇದರ ಪರೋಕ್ಷ ಹೊಡೆತ ಆಯಗಾರರಾದ ಅಗಸ, ಕೆಲಸಿಗ (ಹಜಾಮ), ತೋಟಿಗರ ಮೇಲಾಯಿತು. ಆಯ ಕೊಡುವುದರಲ್ಲಿ ಚೌಕಾಸಿಮಾಡಿದರೆ ಅವರೇನು ಮಾಡಿಯಾರು. ಕೆಲವು ಸಣ್ಣ ಕುಟುಂಬಗಳು ನಮ್ಮ ಬಟ್ಟೆಗಳನ್ನು ನಾವೇ ಒಗೆದುಕೊಳ್ಳುತ್ತೇವೆ ಎಂದು ಆಯಾಗಾರರನ್ನು ಬಿಟ್ಟರು. ಹಜಾಮತಿಗೂ ಹಣ ನೀಡುತ್ತೇವೆ ಎಂದು ಕೆಲವರಂದರು. ಹೀಗಾಗಿ ಊರ ವ್ಯವಸ್ಥೆ ಶಿಥಿಲದ ಕಡೆಗೆ ಸಾಗಹತ್ತಿತ್ತು. ಮನೆಯಲ್ಲಿ ದುಡಿಯುವ ಗಂಡಸು ಮತ್ತು ಆತನ ಹೆಂಡತಿ ಉಳಿದವರನ್ನು ನಮ್ಮ ದುಡಿಮೆಯಿಂದ ಏಕೆ ಸಾಕಬೇಕೆಂದು ಮೆಲ್ಲನೆ ಪಕ್ಕಕ್ಕೆ ಸರಿಯತೊಡಗಿದರು. ಈ ಬರಗಾಲ ಇಲ್ಲಿಂದ ಪದೇ ಪದೇ ಮರುಕಳಿಸಹತ್ತಿತು. ಮನೆಯಲ್ಲಿದ್ದ ಒಂದೊಂದೇ ಜಾನುವಾರುಗಳನ್ನು ಸಂತೆಗೆ ತೆಗೆದುಕೊಂಡು ಹೋಗಿ ಮಾರತೊಡಗಿದರು. ಸಂತೆಗೆ ಎಂದರೆ ಕಸಾಯಿ ಖಾನೆಗೆ ಎಂದೇ ಅರ್ಥ. ಇದು ಸಣ್ಣ ಕುಟುಂಬಗಳಿಗಿಂತ ದೊಡ್ಡ ಕುಟುಂಬಗಳಿಗೆ ಹೆಚ್ಚಿನ ತೊಂದರೆ ನೀಡಿತು. ಸರ್ಕಾರ ಮತ್ತು ಪ್ರಾಥಮಿಕ ಪತ್ತಿನ ಸಹಕಾರ ಬ್ಯಾಂಕ್‌ಗಳಿಂದ ಬಾವಿಗಳನ್ನು ತೋಡಿಸಲು ಸಾಲಕ್ಕೆ ಹಣ ನೀಡುವುದಾಗಿ ಘೋಷಿಸಿತು. ಈ ಸಂದರ್ಭವನ್ನು ಅನೇಕರು ಬಳಸಿಕೊಂಡು ಬಾವಿಗಳನ್ನು ತೋಡಿಸಿದರು. ನಮ್ಮೂರ ಲಿಂಗಾಯ್ತರ ಬಸಪ್ಪ, ಜಡಿಯಪ್ಪ, ಪಟೇಲ್ ಪಾಪರೆಡ್ಡಿ, ಓಬಳರೆಡ್ಡಿ, ಕಾವೇರಪ್ಪ, ಮೊದಲಾದವರು ತಮ್ಮ ತಗ್ಗಿನ ಜಮೀನುಗಳಲ್ಲಿ ಬಾವಿಗಳನ್ನು ತೂಡಿ ಬೆಳೆಗಳನ್ನು ತೆಗೆಯಲು ಪ್ರಾರಂಭಿಸಿದರು. ೧೯೬೫ರಲ್ಲಿ ನಾನು ನಪಾಸಾಗಿ ಊರಿನಲ್ಲಿ ಹೆಚ್ಚುಕಾಲ ಇದ್ದದ್ದರಿಂದ ನಮ್ಮ ಮನೆಯಲ್ಲಿನ ಎಮ್ಮೆಗಳನ್ನು ಮೇಯಿಸಲು ಹೊಸ ಬಾವಿ ತೋಡಿಸುವ ಕಡೆ ಹೋಗುತ್ತಿದ್ದೆ. ಯಾವ ಬಾವಿಯಲ್ಲಿ ಜಲ ಬಂತು ಎಂದು ನೋಡುವ ತವಕ. ಕೆಲವು ಕಡೆ ಪರಂಗಿಗಿಡದ ಎಲೆಯ ಕಾಂಡಗಳನ್ನು ಕೊಳವೆಯಂತೆ ಮಾಡಿ ಜಲಬರುವ ಜಾಗದಲ್ಲಿ ಇಟ್ಟು ಅದರಿಂದ ಬರುತ್ತಿದ್ದ ನೀರನ್ನು ಕುಡಿದು ಸಂತೋಷಿಸುತ್ತಿದ್ದೆವು. ಬಾವಿಗೆ ಕಲ್ಲು ಕಟ್ಟಡ ಕಟ್ಟಲು ತಮಿಳುನಾಡಿನಿಂದ ತೆಲುಗು ಮಾತನಾಡುವ ವಡ್ಡರು ನಮ್ಮ ಸುತ್ತಮುತ್ತಲ ಊರುಗಳಲ್ಲಿ ನಿಂತು ಬಾವಿಗಳನ್ನು ಕಟ್ಟುವ ಕೆಲಸವನ್ನು ಮಾಡುತ್ತಿದ್ದರು. ಇಂತಹದೇ ಒಂದು ಬಾವಿಯನ್ನು ೧೯೬೬ರಲ್ಲಿ ನಮ್ಮ ತಾತ ಕಟ್ಟಿಸಿದರು. ಇಲ್ಲಿಂದ ಸ್ವಲ್ಪ ನಮ್ಮ ಕುಟುಂಬ ಚೇತರಿಸಿಕೊಂಡರೂ ಪದೇ ಪದೇ ಬರುತ್ತಿದ್ದ ಬರಗಾಲದಿಂದ ಮತ್ತೆ ಸಂಕಷ್ಟಕ್ಕೆ ಗುರಿಯಾಗುತ್ತಿತ್ತು. ಎಂಟು ಎಮ್ಮೆಗಳಿದ್ದ ಮನೆಯಲ್ಲಿ ಒಂದೊಂದೇ ಕಡಿಮೆಯಾಗಹತ್ತಿದವು. ಸಾದಾ ಹಸುಗಳಿದ್ದ ಜಾಗದಲ್ಲಿ ಸೀಮೆ ಹಸು (ವಿಲಾಯತಿ ಹಸು) ಜಾಗ ಪಡೆದುಕೊಂಡಿತು. ತೋಟದ ಕಡೆಗೆ ಹೆಚ್ಚು ಗಮನ ಕೊಟ್ಟಿದ್ದರಿಂದ ಒಣ ವ್ಯವಸಾಯದ ಭೂಮಿ ಕಡಿಮೆ ಮಾಡಿಕೊಂಡು ಸರ್ವೆಮರಗಳ ನೆಡುತೋಪು ಬಂತು. ಹೀಗೆ ಈ ಬರಗಾಲಗಳು ತಂದ ಬದಲಾವಣೆಗಳು ಒಂದಲ್ಲಾ ಎರಡಲ್ಲ. ಇದುವರೆವಿಗೆ ಹೆಚ್ಚಿನ ಸಾಲ ಮಾಡಿರಲಿಲ್ಲ ಈಗ ಸಾಲ ಬೇರೆ ಮಾಡಿದ್ದಾಗಿದೆ. ರಾಗಿಯನ್ನು ಬಳಸುತ್ತಿದ್ದ ಅನೇಕ ಮನೆಗಳಲ್ಲಿ ಈಗ ಮೆಕ್ಕೆಜೋಳ ಅಥವಾ ಮುಸುಕಿನ ಜೋಳದ ಮುದ್ದೆ, ರೊಟ್ಟಿ ಬಳಕೆಗೆ ಬಂದವು. ಅನೇಕ ಮನೆಗಳಲ್ಲಿ ಊಟದ ಸ್ಥಳದಲ್ಲಿ ರಾಗಿ ಅಂಬಲಿ ಬಂತು. ಜೋಳೆಯ ನುಚ್ಚನ್ನು ಮೊದಲು ದನಗಳಿಗೆ ಪೌಷ್ಠಿಕವಾಗಿರಲು ನೀಡುತ್ತಿದ್ದೆವು. ಈಗ ಈ ಜೋಳೆನುಚ್ಚು ರೈತರ ಅಡುಗೆಮನೆ ಸೇರಿತು. ವಸ್ತುಗಳ ವಿನಿಮಯದ ಮೂಲಕ ನಡೆಯುತ್ತಿದ್ದ ವ್ಯವಹಾರ, ಈಗ ಸ್ವಲ್ಪ ಸ್ವಲ್ಪವಾಗಿ ಹಣದ ರೂಪಕ್ಕೆ ಬರಲಾರಂಭಿಸಿತು. ಇವೆಲ್ಲಕ್ಕಿಂತ ಮುಖ್ಯವಾಗಿ ಜಾತಿ ಜಾತಿಗಳ ಮಧ್ಯೆ ಬಂದ ಶಿಥಿಲತೆ. ಬಡತನ ಮತ್ತು ಹಸಿವು ಮನುಷ್ಯನನ್ನು ಯಾವ ಮಟ್ಟಕ್ಕಾದರೂ ತರುತ್ತದೆ ಎಂಬುದಕ್ಕೆ ಇದು ಸಾಕ್ಷಿ. ಕೆಲವು ಪಂಗಡಗಳು ಇನ್ನೊಂದು ಪಂಗಡಗಳ ಮಧ್ಯೆ ಊಟದ ನಿಷೇಧವಿತ್ತು. ಆದರೆ ಈ ಬರಗಾಲದಲ್ಲಿ ಮೊದಮೊದಲು ಕಾಣದಂತೆ ತಿಂದು ಬರುತ್ತಿದ್ದವರು ಬರುಬರುತ್ತಾ ಕಾಣುವಂತೆ ತಿನ್ನಲಾರಂಭಿಸಿದರು. ಇಂತಹ ಸನ್ನಿವೇಶದಲ್ಲಿ ಜಾತಿ ಬಹಿಷ್ಕಾರದ ವಿಷಯ ತೆಗೆಯುವ ಎದೆಗಾರಿಕೆ ಯಾರಿಗೂ ಇರಲಿಲ್ಲ. ಆಹಾರ ಧಾನ್ಯಗಳಿಗಾಗಿ ಅಥವಾ ಆ ದಿನದ ಹಸಿವು ನೀಗಿಸಿಕೊಳ್ಳಲು ಮೇಲ್ಜಾತಿ, ಮಧ್ಯಮಜಾತಿ, ಕೆಳಜಾತಿಗಳು ಎಲ್ಲಾ ಜನರು ಪರದಾಡಬೇಕಾದ ಪರಿಸ್ಥಿತಿ ಏರ್ಪಟ್ಟಿತ್ತು. ಇದು ನಮ್ಮ ಕುಟುಂಬದ ಕಥೆ ವ್ಯಥೆಯಲ್ಲ. ಬಹುತೇಕ ಮಧ್ಯಮ ವರ್ಗದ ರೈತಾಪಿ ಕುಟುಂಬ ವರ್ಗಗಳಲ್ಲಿ ಹಾಗೂ ಇವರನ್ನು ಅವಲಂಬಿಸಿದ ಕುಟುಂಬವರ್ಗಗಳಲ್ಲಿ ಕಂಡುಬಂದ ಚಿತ್ರಣ.

೧೯೬೫-೬೬ರಲ್ಲಿ ಬಂದ ಬರಗಾಲಕ್ಕೂ ಹಾಗೂ ನಾನು ಪಿಯುಸಿ ಫೇಲಾದುದಕ್ಕೂ ಸಂಬಂಧವಿಲ್ಲದಿದ್ದರೂ, ಇದು ನನಗೆ ಪರ್ತ್ಯೇತರ ಪಾಠ ಕಲಿಸಿದ ಕಾಲವಾಗಿತ್ತು. ಮೊದಲೇ ಹೇಳಿದಂತೆ ಎಮ್ಮೆ ಕಾಯಲು ನಾನು ಸ್ವಯಿಚ್ಛೆಯಿಂದಲೇ ಹೋಗುತ್ತಿದ್ದೆ. ಆಗ ಮೂರು ಕಡೆ ನೆಸೆಗಳಿದ್ದವು. ಒಂದು ನೆಸೆ ಕಾಳನಾಯ್ಕನಹಳ್ಳಿ ಬಳಿ. ಇನ್ನೊಂದು ತಮಾಪುರದ

ಬಳಿಯ ದೊಡ್ಡನೆಸೆ. ಇನ್ನೊಂದು ವಡ್ಡನಕುಂಟೆ ಎಂದು ಕರೆಯುವ ಊರಿನ ಕೆಳಭಾಗದಲ್ಲಿನ ನೆಸೆ. ಈ ನೆಸೆಗಳ ಸಮಾನ ಲಕ್ಷಣವೆಂದರೆ ಬೇಸಿಗೆಯಲ್ಲೂ ಜಿನುಗು ನೀರಿನಿಂದ, ಕೆಸರಿನಿಂದ ಕೂಡಿದ ಹಾಗೂ ನೆಸೆ ಜಾತಿಯ ಹುಲ್ಲನ್ನು ಹೊಂದಿದ್ದ ಭೂಮಿ. ತಮ್ಮಾಪುರದ ನೆಸೆಗಳಲ್ಲಿನ ಬಾವಿಗಳು ಜಿನುಗುನೀರು ಕೆಸರನ್ನಷ್ಟೇ ಹೊಂದಿರದೆ ದನಗಳು ಒಳಕ್ಕೆ ಇಳಿದರೆ ಮೇಲಕ್ಕೆ ಬರಲಾರದೆ ಕೆಸರಿನಲ್ಲಿ ಸಿಕ್ಕಿಹಾಕಿಕೊಂಡು ಒದ್ದಾಡುತ್ತ ಸ್ವಲ್ಪ ಸ್ವಲ್ಪವೇ ಒಳಕ್ಕೆ ಹೋಗುತ್ತಿದ್ದವು. ಇಂತಹ ಕೆಲವು ನೆಸೆ ಬಾವಿಗಳ ಅಂಚಿನಲ್ಲಿನ ಹುಲ್ಲಿನ ಮೇಲೆ ನಿಂತು ಕುಪ್ಪಳಿಸಿದರೆ ಇಡೀ ಬಾವಿಯ ಮೇಲಿನ ಹುಲ್ಲಿನ ಪದರ ಅಲುಗಾಡುತ್ತಿತ್ತು. ನಮಗೆ ಇದೊಂದು ಮೋಜಾಗಿತ್ತು. ಈ ಬಗ್ಗೆ ಮುಂದೆ ಮಣಿಹದಲ್ಲಿ 'ಕಡಿತ' ಎಂಬ ಲೇಖನ ಬರೆಯುವಾಗ ರುದ್ರಭಟ್ಟನ ಪ್ರಯೋಗ 'ಕಡಿತದಂತಲ್ಲಾಡೆ' ಎಂಬ ಶಬ್ದದ ಪ್ರಾಯೋಗಿಕ ಅರ್ಥವನ್ನು ತಿಳಿದುಕೊಳ್ಳಲು ಸಹಕಾರಿಯಾಯಿತು. ಈ ನೆಸೆಗಳಿಂದ ಜಿನುಗುತ್ತಿದ್ದ ನೀರು ಮುಂದೆ ಸ್ವಲ್ಪ ಸ್ವಲ್ಪವಾಗಿ ಸೇರಿಕೊಂಡು ಹಳ್ಳವಾಗಿ ಹರಿಯುತ್ತಿದ್ದವು. ಮುತ್ತ್ಯಾಲಮಡುವಿನ ಜನನ ಕಾಳಾನಾಯ್ಕನಹಳ್ಳಿಯ ನೆಸೆಯಾಗಿತ್ತು. ಚಿಕ್ಕದಾಗಿ ಹರಿಯುತ್ತಿದ್ದ ನೀರಿಗೆ ಅಡ್ಡಗಟ್ಟಿ ಅಲ್ಲಲ್ಲಿ ತೋಟಗಳನ್ನು ಮಾಡುತ್ತಿದ್ದರು. ಈ ನೆಸೆಗಳ ಮಧ್ಯದ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕಾಲದ ವಿಶಾಲವಾದ ನಿವೇಶನಗಳಿವೆ. ಇದರಲ್ಲಿ ಬೂದಿ ಹೊಲಗಳಲ್ಲದೆ, ಪಾಂಡವರ ಗುಡಿಗಳೆಂದು ಕರೆಯುವ ಪುರಾತನ ವ್ಯಕ್ತಿಗಳ ಸಮಾಧಿಗಳೂ ಇವೆ. ಹೀಗಾಗಿ ಒಂದು ಕಾಲದಲ್ಲಿ ಈ ಪ್ರದೇಶ ಒಂದು ದೊಡ್ಡವಾಸದ ನೆಲೆಯಾಗಿತ್ತು. ಈ ನಿವೇಶನದಲ್ಲಿ ದೊರೆತ ಸುಟ್ಟ ಮಣ್ಣಿನ ಗೊಂಬೆಗಳು ಹಾಗೂ ಹಿಂದಿನ ಮನುಷ್ಯನ ಚಪ್ಪಲಿ ಎಂದು ಭಾವಿಸಿದ್ದ ಕಬ್ಬಿಣದ ಚಪ್ಪಟೆಯ ಕೊಡಲಿ ದೊರೆತಿದ್ದು, ಇದರ ಮೇಲೆ ನನ್ನ ಮಗಳು ಸ್ಮಿತಾ ಒಂದು ಲೇಖನವನ್ನೂ ಬರೆದಿದ್ದಾಳೆ. ಇಡೀ ಪ್ರದೇಶವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದಲ್ಲಿ ಇನ್ನೂ ಹೆಚ್ಚಿನ ಮಾಹಿತಿ ದೊರೆಯುವುದರಲ್ಲಿ ಸಂಶಯವಿಲ್ಲ.

ನಾನು ನಾಲ್ಕನೆಯ ತರಗತಿಯಿಂದ ಐದನೆಯ ತರಗತಿಗೆ ಬಂದ ಮೇಲೆ ಸ್ವಾತಂತ್ರ್ಯ ದಿನಾಚರಣೆಯನ್ನು ವಿಜೃಂಭಣೆಯಿಂದ ಆಚರಿಸುತ್ತಿದ್ದುದು ನೆನಪಿದೆ. ಇದು ೧೯೪೭ ರಿಂದಲೂ ಆಚರಿಸುತ್ತಿದ್ದರೂ, ನನಗೆ ನೆನಪಿರುವುದು ಐದನೆಯ ತರಗತಿಗೆ ಬಂದ ಮೇಲೆ. ಇಡೀ ಉತ್ಸವ ಶಾಲೆಯಲ್ಲಿ ನಡೆದರೂ, ಇದರ ಹಿಂದಿದ್ದ ಶಕ್ತಿ ಬಳೆ ಬಣಜಿಗರ ಚಿಕ್ಕಣ್ಣ ಎಂಬುವವರು. ಖಾದಿಪಂಚೆ, ಖಾದಿ ಶರ್ಟು, ಅದರ ಮೇಲೆ ಖಾದಿ ವೇಸ್‌ಕೋಟು, ಖಾದಿ ಟೋಪಿ. ಇವು ಇವರ ಡ್ರೆಸ್. ಇವರದ್ದು ಆಕಾರದಲ್ಲಿ ಅಷ್ಟು ಎತ್ತರವಲ್ಲದ ಎಣ್ಣೆಗೆಂಪಿನ ದೇಹ. ಕೃಶಕಾಯ. ಸ್ವಾತಂತ್ರ್ಯದಿನ ಹಾಗೂ ಜನವರಿ ೨೬ರ ದಿನ ಬಂತೆಂದರೆ ಮೈ ಕೊಡವಿ ಪುಟಪುಟನೆ ಓಡಾಡುತ್ತಾ ಶಾಲೆಯ ಹಳೆಯ ವಿದ್ಯಾರ್ಥಿಗಳನ್ನು ಒಂದೆಡೆ ಸೇರಿಸಿ ಮೂರುನಾಲ್ಕು ದಿನಗಳ ಪೂರ್ವತಯಾರಿ ನಡೆಸುತ್ತಿದ್ದರು. ನಾವೆಲ್ಲಾ ಸಣ್ಣ ಹುಡುಗರು ತೋರಣಗಳನ್ನು ಮಾಡುವಾಗ ಅಂಟುಹಾಕುತ್ತಿದ್ದ ಬಣ್ಣದ ಕಾಗದಗಳನ್ನು ದಾರಕ್ಕೆ ಅಂಟಿಸುವವರಿಗೆ ನೀಡುವುದು ನಮ್ಮ ಕೆಲಸವಾಗಿತ್ತು. ಮುಂದೆ ನಾವೂ ಹಳೆಯ ವಿದ್ಯಾರ್ಥಿಗಳಾದಾಗ ನಮಗೆ ಬಡ್ತಿ ಏನೆಂದರೆ ಬಣ್ಣದ ಕಾಗದಗಳನ್ನು ಕತ್ತರಿಸುವುದು. ಚಪ್ಪರಗಳಿಗೆ ಸೊಪ್ಪು ತರುವುದು; ಚಪ್ಪರ ಸಿದ್ಧವಾದ ಮೇಲೆ ಅದಕ್ಕೆ ಅಲಂಕರಿಸುವುದು. ಇದಕ್ಕಿಂತ ಮುಖ್ಯವಾದ ಕಸುಬೆಂದರೆ ಚಿಕ್ಕಣ್ಣನ ಮನೆಯಲ್ಲಿದ್ದ ಗಾಂಧಿವಿಗ್ರಹ (ಇದು ಸುಮಾರು ೪ ೧/೨ ಎತ್ತರವಿತ್ತು) ವನ್ನು ತಂದು ಅದರ ಸುತ್ತಲೂ ತಳಿದು ತೋರಣಗಳಿಂದ ಅಲಂಕರಿಸುವುದು. ನಾಳಿನ ಭಾಷಣಕ್ಕೆ ವೇದಿಕೆ ಸಿದ್ಧಪಡಿಸುವುದಾಗಿತ್ತು. ಚಿಕ್ಕಣ್ಣ ಈ ಸಂದರ್ಭದಲ್ಲೆಲ್ಲಾ ಶಾಲೆಯಲ್ಲಿಯೇ ಇರುತ್ತಿದ್ದರು. ರಾತ್ರಿ ಶಾಲೆಯಲ್ಲಿಯೇ ಇದ್ದು ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ಬೀದಿಗಳಲ್ಲಿ ಸ್ವಾತಂತ್ರ್ಯೋತ್ಸವದ ಮೆರವಣಿಗೆ ಹೋಗುವಾಗ ಇವರದ್ದೇ ಜೈ ಕಾರ. ಇವರನ್ನು ನೋಡಿದ ಉಳಿದವರದ್ದೂ ಜೋರು ಧ್ವನಿಯಲ್ಲಿ ಜೈಕಾರ. ಮಧ್ಯಾಹ್ನ ವೇಳೆಗೆ ಜೈಕಾರ ಹಾಕಿ ಹಾಕಿ ಕೆಲವರಿಗೆ ಗಂಟಲು ಕಟ್ಟಿಕೊಳ್ಳುತ್ತಿತ್ತು. ಈ ಗುಂಪಿನಲ್ಲಿ ಪಟೇಲ್ ಮುತ್ತರಾಯಪ್ಪನವರ ಮಗ ಕೃಷ್ಣಪ್ಪ ಪ್ರಮುಖ ಪಾತ್ರಧಾರಿ. ಈತನೊಂದಿಗೆ ಹನುಮಂತರೆಡ್ಡಿ, ಸುಂಕಾರೆಡ್ಡಿ ಮುಂತಾದ ಮೇಷ್ಟ್ರುಗಳು ಸೇರಿದ್ದರು. ಚಿಕ್ಕಣ್ಣನವರದ್ದು ವೀರಶೈವ ಬಳೆ ಬಣಜಿಗರ ಮನೆತನ. ಇವರ ಮನೆಗಳು ಕೆಲವು ಮಾತ್ರ. ಉಳಿದವು ವೀರಶೈವ ಗೌಡಾಳ್ವಿಕೆಯವರವು. ಈ ಚಿಕ್ಕಣ್ಣನ ಅಣ್ಣ ರೇವಣ್ಣ ಬಟ್ಟೆ ಹೊಲಿದು ಹೊಟ್ಟೆಪಾಡು ನೀಗಿಸಿಕೊಳ್ಳುತ್ತಿದ್ದರು. ಚಿಕ್ಕಣ್ಣನವರು ಕುಲಕಸುಬಾಗಿ ಬಳೆವ್ಯಾಪಾರವನ್ನು ಇಟ್ಟುಕೊಂಡಿದ್ದರು. ಅಲ್ಪ ಸ್ವಲ್ಪ ಸಂಪಾದನೆ. ಅದರಲ್ಲಿಯೇ ಜೀವನ ಸಾಗಿಸುತ್ತಿದ್ದರು. ಇವರ ಅಕ್ಕನ ಮಗಳನ್ನೇ ಇವರು ಮದುವೆಯಾಗಿದ್ದರು. ಕಡಿಮೆ ಜಮೀನಿದ್ದು ಅದನ್ನು ಬೇರೆಯವರಿಂದ ಮಾಡಿಸುತ್ತಿದ್ದರು. ಇಂತಹ ಬಡತನದಲ್ಲಿಯೂ ಇವರ ಸ್ವಾತಂತ್ರ್ಯೋತ್ಸವದ, ಗಣರಾಜ್ಯೋತ್ಸವದ ಉತ್ಸಾಹ ಕುಗ್ಗಿರಲಿಲ್ಲ. ಅನೇಕ ವರ್ಷಗಳ ಬಳಿಕ ಇಂದಿರಾ ಗಾಂಧಿಯವರು ಸೋತಾಗ ನಾವೆಲ್ಲಾ ಇವರನ್ನು ಛೇಡಿಸಿದರೂ ಕಾಂಗ್ರೆಸ್ಸನ್ನು ಸಮರ್ಥಿಸಿಕೊಂಡ ನಿಷ್ಠಾವಂತ ದೇಶ ಸೇವಕ. ಮುಂದೆ ಬರಗಾಲ ಬಂದಾಗಲೂ ಗಾಂಧಿತತ್ವಗಳನ್ನು ಬಿಡದ ಛಲಗಾರ. ಎಂದೂ ಪಕ್ಷಾಂತರ ಮಾಡದ ಇವರ ಬಗ್ಗೆ ನಮಗೆ ಗೌರವವೂ ಇತ್ತು. ಆದರೂ ಕಾಲನ ಕೈಗೆ ಸಿಕ್ಕಿದ, ಬಡತನದ ಬೇಗೆಯಲ್ಲಿ ನೊಂದ ಇವರು ಆಕಸ್ಮಿಕ ಸಾವನ್ನು ಅಪ್ಪಿದ್ದು, ನಿಷ್ಠಾವಂತರಿಗೆ ದಕ್ಕಿದ ಕೊಡುಗೆ ಎಂದರೆ ಅತಿಶಯೋಕ್ತಿಯಲ್ಲ.

ಇವರ ಬಗ್ಗೆ ಇನ್ನೊಂದು ವಿಷಯವನ್ನು ಬರೆಯುವುದು ಸೂಕ್ತ. ಅದೇನೆಂದರೆ ಗಾಂಧಿಪಲ್ಲಕ್ಕಿ. ನಮ್ಮ ಊರಿನಲ್ಲಿ ಯುಗಾದಿ ಕಳೆದ ಎರಡೆಯ ದಿನ ದಬ್ಬಗೂಳಿ ಬಸವೇಶ್ವರನ ಜಾತ್ರೆ. ದೂರದ ತಮ್ಮನಾಯಕನಹಳ್ಳಿಯಲ್ಲಿ ನೆಲೆಸಿರುವ ದಬ್ಬಗೂಳಿ ಬಸವೇಶ್ವರನನ್ನು ಅಲ್ಲಿನ ಪೂಜಾರಿಗಳ ಸಮೇತ ಬರಮಾಡಿಕೊಂಡು ಊರ ಹೊರಗಿನ ಕೊಳವೊಂದರಲ್ಲಿ ದಬ್ಬಗುಳಿ ಲಿಂಗಕ್ಕೆ ಸ್ನಾನ ಮಾಡಿಸಿ ಊರಿಗೆ ತಂದು ಊರಿನಲ್ಲಿ ಪ್ರತಿ ಮನೆಯ ಬಳಿ ಹೋಗಿ ಪೂಜೆ ಸ್ವೀಕರಿಸಿ ಈಡುಗಾಯಿ ಹೊಡೆಸುತ್ತಿದ್ದರು. ಊರಿನ ಋಷೇಶ್ವರ ದೇವಾಲಯದ ಮುಂದೆ ಸಿದ್ದಪಡಿಸಿದ್ದ ಬೆಂಕಿಯ ಕೊಂಡದಲ್ಲಿ ಕೊಂಡ ಹಾಯಿಸುತ್ತಿದ್ದರು. ರಾತ್ರಿ ಈ ದೇವರ ಪಲ್ಲಕ್ಕಿ ಸೇವೆ. ಒಟ್ಟು ೧೦-೧೨ ಪಲ್ಲಕ್ಕಿಗಳು ನಡೆಯುತ್ತಿದ್ದವು. ನಮ್ಮ ಊರಿನ ದೇವರುಗಳಲ್ಲದೆ ಪಕ್ಕದ ಸೋಲೂರಿನ ಮಾರೆಮ್ಮ ದೇವರದ್ದೂ ಸೇರಿಕೊಳ್ಳುತ್ತಿತ್ತು. ದಬ್ಬಗುಳಿ ಮುನೇಶ್ವರ, ಸೋಮೇಶ್ವರ, ಶ್ರೀರಾಮ, ಸಲಾಪುರದಮ್ಮ, ಬಸವೇಶ್ವರ, ಕಾಶೀ ಈಶ್ವರ, ಸೊಂಬಪ್ಪ, ಋಷೇಶ್ವರ ಮುಂತಾದ ಪಲ್ಲಕ್ಕಿಗಳ ಜೊತೆಗೆ ಮುತ್ತಿನ ಪಲ್ಲಕ್ಕಿಯಲ್ಲಿ ಗಾಂಧಿಯವರದ್ದೂ ಒಂದು. ಬಹುಶಃ ನನಗೆ ಬುದ್ಧಿ ಬಂದಾಗಿನಿಂದ ಈ ಪಲ್ಲಕ್ಕಿ ನಡೆಯುತ್ತಿದೆ. ನನಗೆ ತಿಳಿದ ಮಟ್ಟಿಗೆ ಬೇರೆ ಎಲ್ಲಿಯೂ ಗಾಂಧಿಗಾಗಿ ಪಲ್ಲಕ್ಕಿ ಇರಲಿಲ್ಲ. ಎಲ್ಲ ದೇವರುಗಳಂತೆ ಗಾಂಧಿವಿಗ್ರಹಕ್ಕೆ ಹಣ್ಣು ಕಾಯಿ ಕೊಡಬೇಕಿತ್ತು. ಇದು ಈ ನಮ್ಮ ಚಿಕ್ಕಣ್ಣನವರ ಕೊಡುಗೆ. ಅವರೇ ಈ ಪಲ್ಲಕ್ಕಿಯ ಸೇವಾಕರ್ತರು. ಪೂಜೆಮುಗಿದ ಮೇಲೆ ಗಾಂಧಿವಿಗ್ರಹ ಮತ್ತೆ ಇವರ ಮನೆ ಸೇರುತ್ತಿತ್ತು. ಹೀಗಾಗಿ ನಮ್ಮೂರು ಗಾಂಧಿವಿಗ್ರಹ ಹಾಗೂ ಗಾಂಧಿಪಲ್ಲಕ್ಕಿ ಬಹಳ ಜನರಿಗೆ ಚಿರಪರಿಚಿತವಾಗಿತ್ತು. ಗಾಂಧಿ ತತ್ತ್ವಗಳು ತಿಳಿಯದಿದ್ದರೂ ಗಾಂಧಿಯ ರೂಪದ ಬಗ್ಗೆ ಈ ಮೂಲಕ ಜನರು ತಿಳಿದುಕೊಂಡಿದ್ದರು. ಈಗಲೂ ಸಹ ಜಾತ್ರೆಯಲ್ಲಿ ಗಾಂಧಿ ಪಲ್ಲಕ್ಕಿ ಇರುತ್ತದೆ.

ನಮ್ಮ ಮನೆಯ ಪಕ್ಕದ ಮನೆ ಪಟೇಲ್ ಮುತ್ತರಾಯಪ್ಪನವರದ್ದು. ಇವರು ಜುಟ್ಟು ಕೊಡುವ ಒಕ್ಕಲಿಗರು. ಆದಿ ಭೈರವನ ಒಕ್ಕಲು, ನಮ್ಮಂತೆ ತೆಲುಗು ಮನೆಮಾತುಳ್ಳವರು. ನನಗೆ ಬುದ್ಧಿ ಬರುವ ಕಾಲಕ್ಕೇ ಇವರು ಪಟೇಲರಾಗಿದ್ದರು. ದಪ್ಪಶರೀರ, ಸ್ವಲ್ಪ ಎತ್ತರ ದೇಹ. ಹಣೆಯಲ್ಲಿ ಕೆಂಪುನಾಮ, ಪಂಚೆ, ಜುಬ್ಬದಂತಹ ಬಟ್ಟೆ, ಇವರು ಬೀದಿಯಲ್ಲಿ ಬರುತ್ತಿದ್ದರೆ, ಹೊರಗೆ ಕುಂತಿದ್ದ ಹೆಂಗಸರು ಒಳಕ್ಕೆ ಹೋಗುತ್ತಿದ್ದರು. ಕಂದಾಯ ವಸೂಲಿಯ ದಿನ ಶಾನುಭೋಗರಿಗೆ ಸಹಕರಿಸುತ್ತಿದ್ದರು. ಊರಿನ ನ್ಯಾಯಪಂಚಾಯತಿಗಳಲ್ಲಿ ಇವರ ಪಾತ್ರವಿರಲೇಬೇಕಿತ್ತು. ನಮ್ಮ ಊರಿನಲ್ಲಿದ್ದದ್ದು ಎರಡೇ ಮಹಡಿ ಮನೆಗಳು. ಒಂದು ಪಟೇಲ್ ಮುತ್ತರಾಯಪ್ಪನವರದ್ದು, ಇನ್ನೊಂದು ಹಿಂದಿನ ಪಟೇಲ್ ಪಾಪರೆಡ್ಡಿಯವರದ್ದು. ಪಟೇಲ್ ಪಾಪರೆಡ್ಡಿಯವರು ಮಹಡಿ ಮನೆ ಕಟ್ಟಿದ್ದು ನನಗೆ ಸುಮಾರು ನೆನಪಿದೆ. ಆದರೆ ಮುತ್ತರಾಯಪ್ಪನವರ ಮನೆ ನನಗೆ ಬುದ್ಧಿ ಬರುವ ವೇಳೆಗೇ ಇತ್ತು. ಈ ಪಟೇಲ್ ಮುತ್ತರಾಯಪ್ಪನವರು ಬೆಳಗ್ಗೆ ಸುಮಾರು ೭.೩೦ ರಿಂದ ೮ ಗಂಟೆಯೊಳಗೆ ಮಹಡಿ ಮೇಲೆ ಸೂರ್ಯ ನಮಸ್ಕಾರ ಮಾಡುತ್ತಿದ್ದರು. ಇವರು ಕೈಗಳನ್ನು ಹಿಂದೆ ಮುಂದೆ ಮಾಡುತ್ತಿದ್ದಾಗ ನಮಗೆ ಏನೊಂದು ಅರ್ಥವಾಗುತ್ತಿರಲಿಲ್ಲ. ಹೀಗಾಗಿ ಚಿಕ್ಕಹುಡುಗರಾದ ನಾವು ಇವರನ್ನು ಅನುಕರಿಸಿ ಆಟವಾಡುತ್ತಿದ್ದೆವು. ನಮ್ಮ ತಾತ ಇವರನ್ನು ಏಕವಚನದಲ್ಲಿ ಮುತ್ತರಾಯ ಎಂದೇ ಸಂಬೋಧಿಸುತ್ತಿದ್ದರು. ನಾವೆಲ್ಲಾ ಇವರನ್ನು ತಾತ ಎಂತಲೇ ಕರೆಯುತ್ತಿದ್ದೆವು. ನಾನು ಎಂ.ಎ ಓದುವಾಗ ಓದಲು ಯಾವುದಾದರೂ ಒಂದು ಪುಸ್ತಕಕೊಡು ಎಂದರು. ನನಗೆ ಆಗ ಎಲ್ಲಿಲ್ಲದ ಹುಮ್ಮಸ್ಸು ವಡ್ಡಾರಾಧನೆಯ ಗದ್ಯಾನುವಾದವನ್ನು ಅವರಿಗೆ ನೀಡಿದ. ಒಂದು ಗಂಟೆಯೊಳಗೇ ಅದು ನನಗೆ ವಾಪಸ್ಸು ಬಂತು. ಕಾರಣ ಕೇಳಿದಾಗ ಇಂತಹ ಕಥೆಗಳನ್ನು ಏಕೆ ಓದುವೆ ಚೆನ್ನಾಗಿರುವುದನ್ನು ಓದು ಎಂದು ಹೇಳಿದರು. ಆದದ್ದು ಇಷ್ಟೆ. ವಡ್ಡಾರಾಧನೆ ಕಥೆಗಳಲ್ಲಿ ಸನತ್ಕುಮಾರಸ್ವಾಮಿ ಕಥೆ ಓದಿ ಇವರಿಗೆ ಮುಜುಗರವಾಗಿದೆ. ಅದನ್ನು ಹೇಳಲಾರದೆ ಚೆನ್ನಾಗಿರುವುದನ್ನು ಓದೆಂದು ಹೇಳಿದ್ದು. ಇಲ್ಲಿ ನನ್ನ ಉತ್ಸಾಹದ ಭರದಲ್ಲಿ ಯಾರಿಗೆ ಯಾವ ಪುಸ್ತಕ ನೀಡಬೇಕು ಎಂಬುದನ್ನು ಮರೆತಿದ್ದು, ಇದು ಕೊರತೆಯಾಗಿತ್ತು.

ಇವರ ಮನೆಯಲ್ಲಿ ಎರಡು ಜೊತೆ ಎತ್ತುಗಳು, ಒಂದೆರಡು ಎಮ್ಮೆಗಳು ಇದ್ದವು. ಎತ್ತುಗಳಲ್ಲಿ ಒಂದು ಜೊತೆ ನನಗೆ ಬುದ್ಧಿ ಬಂದಾಗಿನಿಂದ ಇದ್ದವು. ಇವು ಎಷ್ಟು ಪಳಗಿದ್ದವೆಂದರೆ ಹೊಲದಲ್ಲಿ ಇವುಗಳ ಕೊಂಬುಗಳಿಗೆ ಹಗ್ಗ ಸುತ್ತಿಬಿಟ್ಟರೆ ಇವು ನೇರವಾಗಿ ಮನೆಗೆ ಬರುತ್ತಿದ್ದವು. ಯಾರನ್ನು ಹಾಯುತ್ತಿರಲಿಲ್ಲ. ಬಹು ಸಾಧು ಎಂದು ಪ್ರಸಿದ್ಧಿಯಾಗಿದ್ದವು. ಕೆಲವರ ಪ್ರಕಾರ ಸುಮಾರು ೨೫ ವರ್ಷಗಳು ಇವು ಇದ್ದವಂತೆ. ೧೯೭೦ರಲ್ಲಿ ಬರಗಾಲ ಬಂದ ಮೇಲೆ ತೊಂದರೆಗಳೆಂಬುದು ಪಟೇಲ್ ಮುತ್ತರಾಯಪ್ಪನವರನ್ನು ಬಿಡಲಿಲ್ಲ. ಕೆಲವೇ ವರ್ಷಗಳಲ್ಲಿ ಈ ಎತ್ತುಗಳನ್ನು ಕಟುಕರಿಗೆ ಮಾರಿದರು. ಜನರ ಮಾತಿನಲ್ಲಿ ಹೇಳುವುದಾದರೆ ಈ ಎತ್ತುಗಳನ್ನು ಕಟುಕರಿಗೆ ಮಾರಿದ್ದೆ ಇವರ ಕುಟುಂಬದ ಕಷ್ಟ ಕೋಟಲೆಗಳಿಗೆ ಕಾರಣವಾಯಿತಂತೆ. ಕರ್ಮ ಸಿದ್ಧಾಂತದಲ್ಲಿ ನಂಬಿಕೆಯಿರುವ ನನಗೂ ಘಟನೆಗಳನ್ನೆಲ್ಲಾ ಗಮನಿಸಿದಾಗ ಜನರು ಆಡಿಕೊಳ್ಳುವುದು ಹೌದೇನೋ ಎಂಬ ಸಂಶಯ ಬರುತ್ತೆ. ಊರಿನ ಅನೇಕ ಕ್ಲಿಷ್ಟಕರ ಸನ್ನಿವೇಶಗಳಲ್ಲಿ ಮುತ್ತರಾಯಪ್ಪನವರು ವಹಿಸಿದ ಪಾತ್ರವೂ ಸಣ್ಣದಲ್ಲ.

ಶನಿವಾರ ಬಂತೆಂದರೆ ಎಲ್ಲಾದರೂ ಸರಿ. ಸಂಜೀವಪ್ಪನ ಮಗ ನಾರಾಯಣಪ್ಪನವರಿಂದ ಯಕ್ಷಗಾನ ಪುಸ್ತಕದ ಪಠಣವಾಗಬೇಕು. ಯಕ್ಷಗಾನ ಕಥೆಯಲ್ಲಿ ಬರುವ ಹಾಡಿನ ಮಟ್ಟುಗಳನ್ನು ಭಾವಪೂರ್ಣವಾಗಿ ಹಾಡುತ್ತಿದ್ದರು. ಇಂದಿಗೂ ಆ ಬಗೆಯಲ್ಲಿ ಭಾವಪೂರ್ಣವಾಗಿ ಯಕ್ಷಗಾನದ ಅದರಲ್ಲೂ ಯಾಲಪದ, ಧ್ರುವಪದ, ತ್ರಿಪುಡೆಗಳನ್ನು ಹಾಡುವುದನ್ನು ನಾನು ಕೇಳಿಲ್ಲ. ಇವರು ಭಾವಪೂರ್ಣವಾಗಿ ಆವೇಶ ಭರಿತವಾಗಿ ಹಾಡುತ್ತಿದ್ದರೆ ಅನೇಕ ಶ್ರೋತ್ರುಗಳು ಕಣ್ಣೀರು ಹಾಕುತ್ತಿದ್ದರು. ಶನಿಮಹಾತ್ಮೆ ಕಥೆಯಲ್ಲಿ ವಿಕ್ರಮನ ಕೈಕಾಲುಗಳನ್ನು ಕತ್ತರಿಸಿದಾಗ ಆತ ಪಡುವ ನೋವನ್ನು ನೋಡುವವರ ಕಣ್ಣಿಗೆ ಕಟ್ಟುವಂತೆ ರಾಗ ಪೂರ್ಣವಾಗಿ ಹಾಡುತ್ತಿದ್ದರು. ಸ್ಪಷ್ಟವಾದ ಉಚ್ಚಾರಣೆ. ಇವರ ಜೊತೆಗೆ ಕೆಲವು ಜಂಗಾಲಿಗ ಏಕತಾರೀ ಗಾಯಕರೂ ಸೇರುತ್ತಿದ್ದರು. ಬಾಲವ್ವ, ಬಾಲಪ್ಪ ಎಂಬ ಗಾಯಕರು ನಮ್ಮ ಮನೆಯ ಮುಂದೆಯೇ ಇದ್ದ ದೊಡ್ಡಕ್ಕಯ್ಯನ ಮನೆಯ ಜಗಲಿಯಲ್ಲಿದ್ದರು. ಬಾಲಪ್ಪ ಬಹು ಸುಶ್ರಾವ್ಯವಾಗಿ ಕೈವಾರದ ನಾರಣಪ್ಪನವರ ತತ್ತ್ವಪದಗಳನ್ನು ಹಾಡುತ್ತಿದ್ದ. ರಾತ್ರಿ ೮ ಗಂಟೆಗೆ ತಂಬೂರಿ ತೆಗೆದುಕೊಂಡು ರಾತ್ರಿ ೯ರವರೆಗೆ ಭಾವಪೂರ್ಣವಾಗಿ ಹಾಡುತ್ತಿದ್ದ. ಇವರು ಊರು ಬಿಟ್ಟರೂ ಈತನ ಏಕತಾರಿ ಹಾಡುಗಾರಿಕೆ ಹಾಗೂ ನಗುತ್ತ ಮಾತಾನಾಡಿಸುತ್ತಿದ್ದ ರೀತಿ ಕಣ್ಣಿಗೆ ಕಟ್ಟಿದಂತಿದೆ.

ಊರಿನಲ್ಲಿ ಎರಡು ಭಜನಾ ತಂಡಗಳು. ಒಂದು ಕುಟುಂಬದವರೇ ಸೇರಿ ನಡೆಸುತ್ತಿದ್ದ ತಂಡ. ಇನ್ನೊಂದು ಕೆಲವು ಆಸಕ್ತರು ಸೇರಿ ನಡೆಸುತ್ತಿದ್ದ ಭಜನಾತಂಡ. ಎರಡು ತಂಡಗಳೂ ನಿರ್ದಿಷ್ಟ ಕಾಲದಲ್ಲಿ ಮಾತ್ರ ಕಾರ್ಯ ಪ್ರವೃತ್ತವಾಗಿರುತ್ತಿದ್ದವು. ಕುಟುಂಬದವರು ನಡೆಸುತ್ತಿದ್ದ ತಂಡದಲ್ಲಿ ನಗರ್ತರ ಪುಟ್ಟತಾಯಪ್ಪ ಮತ್ತು ಅವರ ಮಕ್ಕಳದ್ದು ಒಂದು. ಈ ತಂಡ ಧನುರ್ಮಾಸದಲ್ಲಿ ಬೆಳಗಿನಜಾವ ಹೊತ್ತು ಹುಟ್ಟುವುದಕ್ಕಿಂತ ಮುಂಚೆ ಗರುಡಗಂಬದ ಸಮೇತ ಊರ ಹೊರಗಿನ ಈಶ್ವರ ದೇವಾಲಯಕ್ಕೆ ಹೋಗಿ ಪೂಜೆಸಲ್ಲಿಸಿ ಮತ್ತೆ ಊರ ಒಳಗಿನ ಬಸವೇಶ್ವರ ದೇವಾಲಯಕ್ಕೆ ಬಂದು ಪೂಜೆ ಸಲ್ಲಿಸಿ ಭಜನೆ ನಿಲ್ಲಿಸುತ್ತಿದ್ದರು. ಇದು ಒಂದು ತಿಂಗಳ ಕಾಲ ನಡೆಯುತ್ತಿತ್ತು. ಕೊನೆಯದಿನ ಅಂದರೆ ಸಂಕ್ರಾಂತಿ ದಿನ ಊರಿನಲ್ಲೆಲ್ಲಾ ಭಜನೆ ಮಾಡುತ್ತಿದ್ದರು. ಇವರ ಮಕ್ಕಳಾದ ನಂಜುಂಡಪ್ಪ, ಶಂಕ್ರಪ್ಪ, ಚೂಡಪ್ಪ, ಶಾಂತಪ್ಪ ಇವರು ಮೃದಂಗ. ಹಾರ್ಮೋನಿಯಂ, ಕಂಜಿರ ಮುಂತಾದ ಪರಿಕರಗಳನ್ನು ಬಾಜಿಸುತ್ತಿದ್ದರು. ಕೆಲವೊಮ್ಮೆ ನಾನು ಈ ಭಜನೆಗೆ ಹೋದರೆ ಗರುಡಗಂಬ ಹೊರುವುದು ನನ್ನ ಕೆಲಸವಾಗುತ್ತಿತ್ತು. ಇವರಲ್ಲಿ ಚೂಡಪ್ಪ ಎಂಬುವವರು ಒಮ್ಮೆ ಚಕಮುಕಿ ಕಲ್ಲಿನಿಂದ ಹತ್ತಿಗೆ ಬೆಂಕಿ ಹತ್ತಿಸಿ ಬೀಡಿ ಹಚ್ಚುತ್ತಿದ್ದರು. ಇದನ್ನು ನೋಡುವುದಕ್ಕಾಗಿ ಅವರಿಗೆ ಪದೇ ಪದೇ ಬೀಡಿ ಸೇದಿಸುತ್ತಿದ್ದೆವು. ಇನ್ನೊಂದು ಭಜನಾ ತಂಡ ಬಣಜಿಗರ ಸೀನಪ್ಪನದು. ಇದು ರಾಮನವಮಿಯ ಒಂಭತ್ತು ದಿನಗಳು ಕಾರ್ಯಪ್ರವೃತ್ತವಾಗಿರುತ್ತಿತ್ತು. ಈ ತಂಡದಲ್ಲಿ ರಾಮದೇವರ ಒಕ್ಕಲು ಮನೆಗಳಾದ ಬಳೆ ಬಣಜಿಗರ ಕೆಲವು ಜನರಲ್ಲದೆ, ವಡ್ಡರ ರಾಮಯ್ಯ ಮೊದಲಾದವರಿದ್ದರು. ಇಲ್ಲಿ ರಾಮದೇವರ ದೇವಾಲಯದಲ್ಲಿ ಆಂಜನೇಯಸ್ವಾಮಿ ವಿಗ್ರಹದ ಎದುರು ಗರುಡಗಂಬವಿಟ್ಟು ಅದರ ಸುತ್ತಲೂ ಹಾಡುಗಳನ್ನು ಹಾಡುತ್ತಾ ಸುತ್ತಬೇಕಿತ್ತು. ಯಾರಾದರೂ ಸರಿಯಾಗಿ ಹಾಡದಿದ್ದರೆ. ಭಜನೆಗೆ ಸರಿಯಾಗಿ ಬರದಿದ್ದರೆ. ಸೀನಪ್ಪನ ಮಾತುಗಳ ಏಟನ್ನು ಕೇಳಬೇಕಿತ್ತು. ಈ ಭಜನೆ ಸಂಜೆ ನಡೆಯುತ್ತಿದ್ದುದರಿಂದ, ಪರೀಕ್ಷೆಗಳು ಮುಗಿದ ಕಾಲವಾದ್ದರಿಂದ ಸ್ವಲ್ಪ ಹೊತ್ತು ಹೋಗಿ ಬರುತ್ತಿದ್ದೆ. ಈಗ ಪುಟ್ಟತಾತಪ್ಪನವರೂ ಇಲ್ಲ, ಸೀನಪ್ಪನೂ ಇಲ್ಲ, ಅವರ ಪರಿವಾರವೂ ಇಲ್ಲ. ಈ ಎರಡೂ ತಂಡಗಳು ಕನ್ನಡ, ತೆಲುಗು ಭಾಷೆಯ ಭಜನೆ ಹಾಡುಗಳನ್ನು ಹಾಡುತ್ತಿದ್ದರು.

ನಮ್ಮೂರಿನಲ್ಲಿ ಮೊದಲು ಹಜಾಮರಿದ್ದರೋ ಇಲ್ಲವೋ ತಿಳಿಯದು. ನನಗೆ ಬುದ್ಧಿ ಬರುವ ವೇಳೆಗೆ ಯಲ್ಲಪ್ಪ ಎಂಬು ವ್ಯಕ್ತಿ. ನಮ್ಮ ಊರಿನಲ್ಲಿದ್ದ. ಈತನಿಗೆ ನಮ್ಮೂರ ಪಾಪರೆಡ್ಡಿಯವರು ಮನೆಗೆ ಜಾಗ ಕೊಟ್ಟಿದ್ದಂತೆ ತಿಳಿಯುತ್ತದೆ. ಈತ ನಾಗಸ್ವರವನ್ನು ಬಹುಚೆನ್ನಾಗಿ ಬಾರಿಸುತ್ತಿದ್ದ. ಇದಕ್ಕಿಂತ ಮುಖ್ಯವಾಗಿ ಊರಿನಲ್ಲಿ ಯಾರಾದರೂ ಸತ್ತಾಗ ಈತನನ್ನು ಓಲಗ ಬಾರಿಸಲು ಕರೆದರೆ, ಈತ ಬಾರಿಸುವ ರಾಗವೇ ವ್ಯತ್ಯಾಸವಾಗುತ್ತಿತ್ತು. ಸಾಮಾನ್ಯವಾಗಿ ಯಕ್ಷಗಾನದಲ್ಲಿ ಬರುವ ಯಾಲಪದವನ್ನು ಈತ ಬಾರಿಸುತ್ತಿದ್ದ. ಮುಂದೆ ನಾನು ಓದುವಾಗ ಅರ್ಜುನನ ಜೋಗಿ ಹಾಡನ್ನು ಉದಾಹರಣೆಯಾಗಿ ನೀಡಿದ್ದರಾದರೂ ಛಂದಸ್ಸಿನ ಪಾಠ ಮಾಡಿದ ಯಾವ ಮೇಷ್ಟ್ರೂ ಇದರ ರಾಗವನ್ನು ತಿಳಿಸಿರಲಿಲ್ಲ. ಆಗ ಈ ಯಲ್ಲಪ್ಪನ ಭಜನೆಯನ್ನು ನೆನಪಿಸಿಕೊಂಡಾಗ ಯಾಲಪದದ ರಾಗ ಹಾಗೂ ಅದರ ಪ್ರಭಾವ ತಿಳಿಯುತ್ತಿತ್ತು. ಈತ ಈ ರಾಗವನ್ನು ಯಾವುದಾದರೂ ಊರಲ್ಲಿ ಬಾಜಿಸಿದನೆಂದರೆ ಯಾರದೋ ಹೆಣ ಮಣ್ಣಾಗಲು ಹೋಗುತ್ತಿದೆ ಎಂದೇ ತಿಳಿಯಬೇಕಿತ್ತು. ಈ ರಾಗ ಅಷ್ಟು ಪ್ರಭಾವ ಶಾಲಿಯಾಗಿತ್ತು. ಈ ರಾಗವನ್ನು ಶುಭಕಾರ್ಯಗಳಲ್ಲಿ ಬಾಜಿಸುತ್ತಿರಲಿಲ್ಲ. ಹಿಂದೆ ಊರಿನಲ್ಲಿ ಆಸ್ಪತ್ರೆ ಇರಲಿಲ್ಲ. ನಮ್ಮೂರಿನ ಸೂಲಗಿತ್ತಿ ಬುರ್ರಕ್ಕ ಎಂಬುವವರು ಈ ಕೆಲಸ ಮಾಡುತ್ತಿದ್ದರು. ಇವರು ಅಗಸರ ಮುನಿವೆಂಟಪ್ಪನ ಪತ್ನಿ. ಇವರಿಗೆ ನಾಲ್ಕು ಗಂಡು. ಒಂದು ಹೆಣ್ಣು. ಈ ಬುರ್ರಕ್ಕ ಯಾರದೇ ಮನೆಯಲ್ಲಿ ಹೆರಿಗೆಯಾಗಲಿ ಹೇಳಿ ಕಳುಹಿಸಿದರೆ ಅಲ್ಲಿ ಹಾಜರ್. ಹೆರಿಗೆಯಾದ ಮೇಲೆ ಮಗುವಿಗೆ ನೀರು ಹಾಕುವವರೆವಿಗೂ ಈಕೆಯದೇ ಆರೈಕೆ. ಹೆರಿಗೆಯಾದ ಮೇಲೆ ಇಷ್ಟು ಹಣ ಎಂದು ಯಾರನ್ನೂ ಪೀಡಿಸಿದ್ದಿಲ್ಲ. ಕೊಟ್ಟರೂ ಕೊಡದಿದ್ದರೂ ಅದೇ ನಗೆಯೊಂದಿಗೆ ಎಲ್ಲರೊಡನೆ ಮಾತನಾಡುತ್ತಾ ಓಡಾಡುತ್ತಿದ್ದಳು.

ನಮ್ಮೂರಿನಲ್ಲಿ ಬ್ರಾಹ್ಮಣರ ಬೀದಿ ಇದೆ. ಈ ಬೀದಿಯಲ್ಲಿ ನಾಲ್ಕು ಮನೆಗಳು ಇವೆ. ಇವುಗಳಲ್ಲಿ ಎರಡು ಮನೆಗಳು ಕರ್ಮಠ ಬ್ರಾಹ್ಮಣರದ್ದಾಗಿದ್ದರೆ, ಎರಡು ಮನೆಗಳು ವ್ಯವಹಾರಸ್ಥರ ಮನೆಗಳಾಗಿದ್ದವು. ಸುಬ್ಬರಾಮಪ್ಪನ ಮನೆ, ವೆಂಕಟೇಶ ಭಟ್ಟರ ಮನೆಗಳು ಪೌರೋಹಿತ್ಯದ ಮನೆಗಳು. ವೆಂಕಟಸುಬ್ಬಯ್ಯ ಮತ್ತು ರಾಮಸುಬ್ಬಪ್ಪನವರ ಮನೆಗಳಲ್ಲಿ ರಾಮಸುಬ್ಬಪ್ಪನ ಮನೆ ಶಾನುಭೋಗರ ಮನೆಯಾಗಿತ್ತು. ವೆಂಕಟಸುಬ್ಬಯ್ಯನವರ ರಾಮಸುಬ್ಬಯ್ಯನವರ ದಾಯಾದಿಯಾಗಿದ್ದು ಹೊಲಿಗೆಯಂತ್ರವನ್ನಿಟ್ಟುಕೊಂಡಿದ್ದರು. ಈ ನಾಲ್ಕು ಮನೆಗಳಿಗೆ ಅಲ್ಪ ಸ್ವಲ್ಪ ಜಮೀನೂ ಇತ್ತು. ರಾಮಸುಬ್ಬಪ್ಪನವರ ಮಗ ರಾಮಯ್ಯನವರು ನಮ್ಮ ಗ್ರಾಮದ ಸುತ್ತಮುತ್ತಲ ಗ್ರಾಮಗಳ ಶ್ಯಾನುಭೋಗರಾಗಿದ್ದರು. ಕಂದಾಯಕ್ಕೆ ಸಂಬಂಧಿಸಿದ ಹಾಗೂ ಸರ್ಕಾರದ ಸರ್ಟಿಫಿಕೇಟಿಗಾಗಿ ಸಂಬಂಧಿಸಿದ ಅನೇಕ ವಿಷಯಗಳಿಗಾಗಿ ಇವರ ಬಳಿ ಹೋಗಬೇಕಾಗಿತ್ತು. ಇಂಥ ಸಮಯಕ್ಕೆ ಬನ್ನಿ ಎಂದು ಹೇಳುತ್ತಿದ್ದರು. ಆ ಸಮಯಕ್ಕೆ ಹೋದಾಗ ನಮಗೆ ಬೇಕಾದ ಪತ್ರಗಳನ್ನು ನೀಡಿ ಕಳುಹಿಸುತ್ತಿದ್ದರು. ಊರಿನ ವ್ಯವಹಾರಿಕ ಪತ್ರಗಳನ್ನು ಬರೆಯುವುದು ರಿಜಿಸ್ಟ್ರೇಷನ್ ಪತ್ರಗಳನ್ನು ಬರೆಯುವುದು ಊರಿನವರಿಗೆ ಬೇಕಾದ ಸಲಹೆಗಳನ್ನು ಇವರು ಯಾವುದೇ ಪ್ರತಿಫಲವಿಲ್ಲದೆ ನೀಡುತ್ತಿದ್ದರು.

ವೆಂಕಟೇಶಭಟ್ಟರದ್ದು ಏಳು ಊರಿನ ಪೌರೋಹಿತ್ಯ. ಏಳು ಊರುಗಳ ಸಮಸ್ತ ಜನರಿಗೆ ಪಂಚಾಗ ಹೇಳಿ ಮದುವೆ ಮುಹೂರ್ತ ಹೇಳುವುದು. ಮದುವೆ ಮಾಡಿಸುವುದು, ಯುಗಾದಿಯಂದು ಮನೆಮನೆಗೆ ಬಂದು ಪಂಚಾಂಗ ಶ್ರವಣ ಮಾಡಿ ಮನೆಗಳವರು ನೀಡಿದ ದವಸ-ಧಾನ್ಯಗಳನ್ನು ಸಂಗ್ರಹಿಸುತ್ತಿದ್ದರು. ದೀಪಾವಳಿ ದಿನ ಗೌರಿಯನ್ನು ಇವರ ಮನೆಯಲ್ಲಿಯೇ ಇಡುತ್ತಿದ್ದರು. ಆದಿಕರ್ನಾಟಕ, ಆದಿದ್ರಾವಿಡ, ಒಕ್ಕಲುತನ ಮಾಡುತ್ತಿದ್ದವರು. ಎಲ್ಲರೂ ಇವರ ದೇವರಿಗೆ ನೈವೇದ್ಯ ಅರ್ಪಿಸಿ ಮನೆಗೆ ಮರಳುತ್ತಿದ್ದರು. ಬಹು ಸಾತ್ವಿಕ ವ್ಯಕ್ತಿತ್ವ. ಯಾರನ್ನೂ ಎಂತಹ ಸಂದರ್ಭದಲ್ಲಿಯೂ ಜೋರಾಗಿ ಮಾತನಾಡಿಸಿದವರಲ್ಲ. ಬೆಳಗ್ಗೆ ಸಂಧ್ಯಾವಂದನೆಯನ್ನು ಮುಗಿಸಿ ಬ್ಯಾಗನ್ನು ಹೆಗಲಿಗೆ ಹಾಕಿಕೊಂಡು ಪಕ್ಕದ ಗ್ರಾಮಗಳಿಗೋ ಆನೇಕಲ್ಲಿಗೋ ಹೋಗುತ್ತಿದ್ದರು. ೧೯೬೪ರ ನಂತರ ಬಂದ ಬರಗಾಲ ಇವರನ್ನೂ ಮಾತನಾಡಿಸಿತು. ಆಗ ಅರೆಕಾಲಿಕ ಪೋಸ್ಟ್‌ಮ್ಯಾನ್ ಹುದ್ದೆಯನ್ನು ಪಡೆದರು. ಬಹು ನಿಗರ್ವಿ. ತಮ್ಮ ಕೆಲಸಗಳ ಮಧ್ಯೆ ಪೋಸ್ಟ್ ಕೆಲಸವನ್ನು ಮಾಡಿ, ಆನೇಕಲ್‌ಗೆ ಹೋಗಿ ಪೋಸ್ಟ್‌ಬ್ಯಾಗ್ ಕೊಟ್ಟು ಅಲ್ಲಿಂದ ಪತ್ರಗಳನ್ನು ತಂದು ವಿತರಿಸುತ್ತಿದ್ದರು. ಕಾಯಕ ಜೀವಿ. ಇಂದಿಗೂ ಇವರ ಮನೆಯಲ್ಲಿ ಇಡುತ್ತಿದ್ದ ದೀಪಾವಳಿ ಗೌರಿಗೂ, ಇತಿಹಾಸ ಕಾಲದ ಲಜ್ಜಾಗೌರಿಗೂ ಸಂಬಂಧ ಕಲ್ಪಿಸಲು ಯೋಚಿಸುತ್ತಲೇ ಇದ್ದೇನೆ.

ಸುಬ್ಬರಾಮಪ್ಪನವರಿಗೂ ವೆಂಕಟೇಶಭಟ್ಟರಿಗೂ ಇದ್ದ ಪೌರೋಹಿತ್ಯದ ಬಗ್ಗೆ ನನಗೆ ಪ್ರಾರಂಭದಲ್ಲಿ ವ್ಯತ್ಯಾಸಗಳು ಗೊತ್ತಿರಲಿಲ್ಲ. ಗುಮ್ಮಳಾಪುರದ ಅರುಣಾಚಲಪ್ಪನವರ ಮನೆಯಲ್ಲಿ ಶ್ರಾದ್ಧಕಾರ್ಯ ಮಾಡಿಸಿದ ಇವರಿಗೆ ಸ್ವಲ್ಪ ಗದ್ದೆಯನ್ನು ಭೂದಾನ ಮಾಡಿದ ಸಂಗತಿ ಅಂದು ದೊಡ್ಡಸುದ್ದಿಯಾಗಿತ್ತು. ಇವರನ್ನು ಮದುವೆಗಳಿಗೆ ಪೌರೋಹಿತ್ಯಕ್ಕೆ ಕರೆಯುವುದಿಲ್ಲವೆಂಬ ಸಂಗತಿ ಆಗಲೇ ನನಗೆ ಗೊತ್ತಾಗಿದ್ದು. ಅಂದು ಅದು ಊರಿನಲ್ಲಿ ಚರ್ಚೆಯ ವಿಷಯವೂ ಆಗಿತ್ತು. ಬಹುದೂರದ ಊರುಗಳಿಂದ ಇವರಿಗೆ ಈ ಬಗ್ಗೆ ಕರೆಯಿತ್ತು. ಹೋಗಿಬರುತ್ತಿದ್ದರು. ಈ ನಾಲ್ಕು ಮನೆಗಳಲ್ಲದೆ ಇನ್ನೊಂದು ಬ್ರಾಹ್ಮಣರ ಮನೆ ನಮ್ಮೂರ ಶ್ರೀರಾಮದೇವಾಲಯದ ಆವರಣದಲ್ಲಿತ್ತು. ಇವರು ಶ್ರೀರಾಮ ದೇವಾಲಯದ ಅರ್ಚಕರಾದ ಶಿವರಾಮಯ್ಯನವರು. ಇವರಿಗೆ ದೇವಾಲಯದ ಧರ್ಮದರ್ಶಿಗಳೇ ಅಲ್ಪ ಸ್ವಲ್ಪ ಭತ್ಯೆ ನೀಡುತ್ತಿದ್ದರು. ಇವರು ಅಷ್ಟರಲ್ಲೇ ತೃಪ್ತಿಪಡುತ್ತಿದ್ದರು. ಆದರೆ ಇವರದು ಕುಟುಂಬ ದೊಡ್ಡದು. ಓದುವ ಮಕ್ಕಳು. ಹೀಗಾಗಿ ವೆಚ್ಚ ಜಾಸ್ತಿ. ಹೀಗಾಗಿ ಕಣಗಳ ಸಮಯದಲ್ಲಿ, ಬೇರೆ ಬೇರೆ ಸಮಯದಲ್ಲಿ ದವಸ ಧಾನ್ಯಗಳನ್ನು ನೀಡುವಂತೆ ಊರವರಲ್ಲಿ ಮನವಿ ಮಾಡಿಕೊಳ್ಳುತ್ತಿದ್ದರು. ಮುಂದೆ ೧೯೬೪ರ ನಂತರ ಬರಗಾಲ ಮತ್ತೆ ಇವರನ್ನು ವಿಷಮ ಪರೀಕ್ಷೆಗೆ ಒಡ್ಡಿತು. ಧರ್ಮದರ್ಶಿಗಳು ಬರಗಾಲವಾದ್ದರಿಂದ ಸ್ವಲ್ಪ ದವಸ ಧಾನ್ಯಗಳನ್ನು ನೀಡಿದರು. ಹೀಗಾಗಿ ದೊಡ್ಡ ಕುಟುಂಬಕ್ಕೆ ಸಾಕಾಗುತ್ತಿರಲಿಲ್ಲ. ಸ್ವಾಭಿಮಾನ ಬೇರೆ. ಪೂಜೆಗೂ ಕಾಸಿಲ್ಲ. ಪೂಜೆಗೆ ನೀಡುತ್ತಿದ್ದವರ ಸಂಖ್ಯೆಯೂ ಕಡಿಮೆ. ಹೀಗಾಗಿ ಆದಾಯವಿಲ್ಲ. ಎಷ್ಟೋ ದಿನ ನೀರು ಕುಡಿದು ಉಪವಾಸವಿದ್ದರು. ಮುಂದೆಯೂ ಈ ವ್ಯವಸ್ಥೆ ಸರಿಹೋಗಲಿಲ್ಲ. ತಮಗೆ ಶಕ್ತಿ ಇರುವವರಗೆ ದೇವರ ಪೂಜೆ ಕಷ್ಟಪಟ್ಟು ಮಾಡಿದರು. ಮುಂದೆ ತಮ್ಮ ಕೈಲಾಗುವುದಿಲ್ಲವೆಂದು ಹೇಳಿ ಆನೇಕಲ್‌ಗೆ ಮಕ್ಕಳ ಬಳಿಗೆ ಹೊರಟು ಹೋದರು. ಇವರ ಮಗ ಶ್ರೀನಿವಾಸಮೂರ್ತಿ, ಮಗಳು ಶಾರದಮ್ಮ ನಮ್ಮ ಜೊತೆಯಲ್ಲಿ ಓದುತ್ತಿದ್ದರು. ಶ್ರೀನಿವಾಸಮೂರ್ತಿಯವರು ಮುಂದೆ ಜಿಗಣಿ ಹೈಸ್ಕೂಲ್ ಹೆಡ್‌ಮಾಸ್ಟರಾದರು. ನಮ್ಮ ಊರಿನ ಬ್ರಾಹ್ಮಣರ ಎಲ್ಲ ಕುಟುಂಬಗಳೂ ತೆಲುಗು ಮಾತನಾಡುವ ಮುಲಕನಾಡು ಬ್ರಾಹ್ಮಣರ ಪಂಗಡಕ್ಕೆ ಸೇರಿದವರು. ಇವರದ್ದೇ ಆದ ಒಂದು ಬಗೆಯ ತೆಲುಗನ್ನು ಮಾತನಾಡುತ್ತಿದ್ದರು. ನಮಗಿಂತ ಸ್ವಲ್ಪ ಭಿನ್ನವಾದ ಭಾಷೆ. ಈ ಕುಟುಂಬಗಳ ಹುಡುಗರು ಸಿಕ್ಕಿದಾಗ ಅವರ ಭಾಷೆಯನ್ನು ಅವರೆದುರಿಗೆ ಮಾತನಾಡಿ ರೇಗಿಸುತ್ತಿದ್ದೆವು.

ಕ್ರಿ.ಶ. ೧೯೬೪ರ ವರೆಗೆ ಬಹುಶಃ ಅನಾವೃಷ್ಟಿ ಎಂಬುದು ನನಗೆ ತಿಳಿದಿರಲಿಲ್ಲ. ಮುಂಗಾರು ಮಳೆಗಳಿರಲಿ, ಹಿಂಗಾರು ಮಳೆಗಳಿರಲಿ ಯಾವುವೂ ತಪ್ಪಿದ್ದ ನೆನಪಿಲ್ಲ. ಹೀಗಾಗಿ ವ್ಯವಸಾಯದ ಕಾರ್ಯಗಳಲ್ಲಿ ಹಾಗೂ ಬೆಳೆಗಳಲ್ಲಿ ಕಾಲದಿಂದ ಕಾಲಕ್ಕೆ ನಡೆಯುತ್ತಿದ್ದ ಕಾರ್ಯಗಳು, ಇಡುತ್ತಿದ್ದ ಬೆಳೆಗಳಲ್ಲಿ ಬದಲಾವಣೆಯಿರಲಿಲ್ಲ. ಯುಗಾದಿಗೆ ಮೊದಲು ಅಥವಾ ಅನಂತರ ರೇವತಿ ಮಳೆಯಿಂದ ಆರಂಭವಾದ ಮಳೆಗಳು ಮುಂದೆ ಅನೂರಾಧ ಮಳೆಯ ಜಡಿಯೊಂದಿಗೆ ಮುಗಿಯುತ್ತಿದ್ದವು. ಇದು ಬೆಂಗಳೂರು ಜಿಲ್ಲೆಯ ಮಳೆಯ ಕಾಲ. ರೇವತಿ, ಅಶ್ವಿನಿ, ಭರಣಿ ಮಳೆಗಳಲ್ಲಿ ಬಿರುಗಾಳಿ ಜೊತೆಗೆ ಕೆಲವೊಮ್ಮೆ ಆಲಿಕಲ್ಲುಗಳ ಸಮೇತ ಮಳೆ ಬೀಳುತ್ತಿತ್ತು. ಈ ಮಳೆಗಳಲ್ಲಿ ಜನ ಒಂಟಿ ಮರಗಳ ಕೆಲಗೆ ನಿಲ್ಲಲು ಹೆದರುತ್ತಿದ್ದರು. ಕಾರಣ ಸಿಡಿಲು ಬಡಿಯುವುದು ಗ್ಯಾರಂಟಿ ಎಂಬ ಹೆದರಿಕೆ. ಕೆಲವು ಸಲ ಬಿದ್ದದ್ದೂವುಂಟು. ನಾನು ೬ನೆಯ ತರಗತಿಯಲ್ಲಿದ್ದಾಗ ಮಧ್ಯಾಹ್ನ ಸುಮಾರು ೩ ಗಂಟೆಗೆ ಒಬ್ಬರು ಬಂದು ಜಡಪ್ಪನವರ ಹೊಲ ಉಳುತ್ತಿದ್ದಾಗ ಸಿಡಿಲು ಬಡಿದು ಅವರ ಎರಡೂ ಎತ್ತುಗಳು ಸತ್ತವಂತೆ. ಉಳುತ್ತಿದ್ದವನು ಮಳೆ ಬೀಳಲು ಆರಂಭವಾದಾಗ ಮರದ ಬಳಿ ಹೋದನೆಂದೂ ಸ್ವಲ್ಪ ಹೊತ್ತಿನಲ್ಲೇ ಕಣ್ಣುಕೋರೈಸುವ ಬೆಳಕು ಬಡಿಯಿತೆಂದು ಆಗಲೇ ಎತ್ತುಗಳು ಸತ್ತವೆಂದೂ ಮಾತನಾಡಿಕೊಳ್ಳುತ್ತಿದ್ದರು. ಸಿಡಿಲಿನ ಆಘಾತವನ್ನು ಖುದ್ದಾಗಿ ನೋಡಲಾಗದಿದ್ದರೂ ಆಲಿಕಲ್ಲುಗಳ ಹೊಡತಕ್ಕೆ ಒಮ್ಮೆ ನಾನು ಸಿಕ್ಕಿದ್ದುವುಂಟು.

ನಮ್ಮ ಊರಿನಿಂದ ಪಶ್ಚಿಮಕ್ಕೆ ದೊಡ್ಡಿನೆಸೆ ಎಂಬ ಸ್ಥಳವಿದೆ. ಸಾಮಾನ್ಯವಾಗಿ ನೀರಿನ ಪಸೆ ಅಲ್ಲಿದ್ದರಿಂದ ನಮ್ಮ ದನಗಳು ಅಲ್ಲಿಗೆ ಮೇಯಲು ಹೋಗುತ್ತಿದ್ದವು. ಒಮ್ಮೆ ನಾನೂ ಎಮ್ಮೆಗಳನ್ನು ಹೊಡೆದುಕೊಂಡು ಹೋಗಿದ್ದಾಗ ಸಂಜೆ ವಾಪಸ್ಸು ಬರುವಾಗ ಬಯಲಿನಲ್ಲಿ ಇಂತಹ ಮಳೆಗೆ ಸಿಕ್ಕಿಹಾಕಿಕೊಂಡೆ. ದಪ್ಪದಪ್ಪ ಆಲಿಕಲ್ಲುಗಳು! ಎಮ್ಮೆಗಳು ಅವುಗಳ ಹೊಡೆತ ತಾಳಲಾರದೆ ಓಡಲಾರಂಭಿಸಿದವು ನಾನು ಅಂದು ಗೋಣಿಚೀಲ ತೆಗೆದುಕೊಂಡು ಹೋಗಿದ್ದೆ. ತಕ್ಷಣವೇ ಗೊಂಗಡಿ ಮಾಡಿ ತಲೆಯ ಮೇಲೆ ಹಾಕಿಕೊಂಡೆ ಆದರೂ ಆಲಿಕಲ್ಲುಗಳ ಹೊಡೆತ ಸುಮಾರಾಗಿ ಬೀಳುತ್ತಿತ್ತು. ಹೊಲದಕಡೆ ನೋಡಿದರೆ ಇಡೀ ಹೊಲ ಕಲ್ಲುಗಳಿಂದ ತುಂಬಿದಂತೆ ಕಾಣುತ್ತಿತ್ತು ಒಂದೆರಡು ನಿಮಿಷ ಅಷ್ಟೆ. ನಂತರ ಕೆಂಪು ನೀರಾಗಿ ಹರಿಯಲಾರಂಭಿಸಿತು. ಸಮೀಪದಲ್ಲಿಯೇ ಗಾಣಿಗರ ಹೊಲದಲ್ಲಿ ಕೊಂಡಗುಡಿ ಎಂಬ ಕಲ್ಲಿನ ರಚನೆಯಿತ್ತು ಅಲ್ಲಿ ಸೇರಿಕೊಂಡೆ. ಈ ಕೊಂಡಗುಡಿಯ ಹಿಂಭಾಗ ಸಹಜವಾಗಿ ದೊರೆಯುವ ಚಪ್ಪಡಿಕಲ್ಲುಗಳನ್ನು ತಂದು ಜೋಡಿಸಿದಂತಿತ್ತು.

ಇಂತಹ ಮಳೆಗಳು ಬೀಳಲು ಆರಂಭವಾದರೆ, ಭೂಮಿ ಹದವಾಗಿ ನೆನೆದಿದ್ದರೆ ನೇಗಿಲು ಹೂಡುತ್ತಿದ್ದರು. ಇಲ್ಲವಾದಲ್ಲಿ ಹೆಗ್ಗುಂಟೆಯನ್ನು ಕಟ್ಟುತ್ತಿದ್ದರು. ಒಂದು ದಿನ, ಕೆಲವೊಮ್ಮೆ ಅರ್ಧದಿನ ಮಾತ್ರ ಮೊದಲ ಮಳೆಗೆ ಉಳುಮೆಮಾಡಲು ಸಾಧ್ಯವಾಗುತ್ತಿತ್ತು. ಮೊದಲು ಉಳುತ್ತಿದ್ದ ನೆಲಗಳೆಂದರೆ ಎಳ್ಳು ಬಿತ್ತಲು ಆರಿಸಿದ ಭೂಮಿಯನ್ನು. ಏಕೆಂದರೆ ಭರಣಿ ಮಳೆಗೆ ಎಳ್ಳು ಬಿತ್ತಬೇಕಿತ್ತು. ಕೆಲವರು ನೆಲಗಡಲೆಯನ್ನು ಹಾಕುತ್ತಿದ್ದರು. ಕುಂಟೆಗಳಿದ್ದರೆ (ಬೆಂಚಿ) ಅದಕ್ಕೆ ಬಂದ ಅಲ್ಪ ಸ್ವಲ್ಪ ನೀರಿಗೆ ತಿಂಗಳ ಹುರುಳಿ ಇಲ್ಲವೇ ಯಾವುದಾದರೂ ತೋಟದ ಬೆಳೆಗಳನ್ನು ಬೆಳೆಯುತ್ತಿದ್ದರು. ಉಳುಮೆ ಶುರುವಾಯಿತೆಂದರೆ ನಮ್ಮ ಊರಿನ ಮಹಿಳೆಯರು ಬೆಳಗ್ಗೆ ಎಂಟುಗಂಟೆಗೆ ಮುದ್ದೆ ಊಟದ ಸಮೇತ ಹೊಲದಲ್ಲಿರಬೇಕಿತ್ತು. ಹೀಗಾಗದಿದ್ದಲ್ಲಿ ಗಂಡ–ಹೆಂಡತಿಯರ, ಅತ್ತೆ–ಸೊಸೆ ಜಗಳಗಳು ಆರಂಭ. ರೋಹಿಣಿ ಮಳೆಯಲ್ಲಿ ಮೆಣಸಿನಕಾಯಿ ಬೀಜವನ್ನು ಸಸಿ ಮಡಿಗಳಲ್ಲಿ ಹಾಕುತ್ತಿದ್ದರು. ಇಲ್ಲಿಯವರೆಗೆ ಇದ್ದ ವಾತಾವರಣ ಮೃಗಶಿರ ಮಳೆ ಮುಗಿದ ಕೂಡಲೇ ಬದಲಾಗುತ್ತಿತ್ತು. ಪಶ್ಚಿಮದಿಂದ ಗಾಳಿ ಮತ್ತು ತುಂತುರು ಮಳೆ ಬೀಳಲು ಶುರುವಾಗುತ್ತಿತ್ತು. ಹೀಗಾಗಿ ಚಳಿ ಬೇರೆ; ಜುಲೈ, ಆಗಸ್ಟ್ ತಿಂಗಳು ಮಳೆಗಾಲದ ಮಧ್ಯದ ಅವಧಿ. ಕೆಲವೊಮ್ಮೆ ೮ ದಿನಗಳವರೆಗೆ ಒಂದೇ ಸಮ ಮಳೆ ಬೀಳುತ್ತಿದ್ದುದು ನೆನಪು. ಅಂತಹ ಸಮಯದಲ್ಲಿ ದನಗಳದ್ದೇ ಸಮಸ್ಯೆ. ಹೊರಗೆ ಮಳೆ ಬೀಳುವುದರಿಂದ ಮೇವಿಲ್ಲ. ಮನೆಯಲ್ಲೂ ಹುಲ್ಲಿನ ಬಣವೆ ಖಾಲಿಯಾಗಿರುತ್ತಿತ್ತು. ಹಸಿ ಹುಲ್ಲು ತಂದು ಜಗಲಿಗಳ ಮೇಲೆ ಒಣಹಾಕುವುದು, ಜೋಳದ ಕಡ್ಡಿ ತಂದು ತೆಳ್ಳಗೆ ಜಗಲಿಯ ಗೋಡೆಗೆ ಒರಗಿಸಿ ನಿಲ್ಲಿಸುವುದು; ಇದೆಲ್ಲಾ ನೀರು ಬಸಿದು ಹೋಗಲೆಂದು ಮಾಡುತ್ತಿದ್ದುದು. ಏಕೆಂದರೆ ಬಿಸಿಲಿರಲಿಲ್ಲ. ನೀರು ಮೇವು ತಿಂದು ಕೆಲವೊಮ್ಮೆ ಎಮ್ಮೆಗಳು ನೀರುಸಗಣಿ ಹಾಕುತ್ತಿದ್ದವು. ಅದನ್ನು ಮಕ್ಕರಿಗೆ ತುಂಬುವುದು ಮತ್ತು ಸಾಗಿಸುವುದು ಒಂದು ಪ್ರಯಾಸವಾಗುತ್ತಿತ್ತು. ಅಕ್ಟೋಬರ್‌ನಲ್ಲಿ ಬೀಳುತ್ತಿದ್ದ ಮಳೆಗಳು ನಮ್ಮ ಭಾಗದ ರೈತರಿಗೆ ಅಂತಹ ಕಷ್ಟವನ್ನೇನೂ ಕೊಡುತ್ತಿರಲಿಲ್ಲ. ಆದರೆ ಅಕ್ಟೋಬರ್ ನಂತರದ ಮಳೆಗಳು ಅನೇಕ ವೇಳೆ ಅತಿನಷ್ಟವನ್ನೂ ಉಂಟುಮಾಡುತ್ತಿದ್ದ ಸಂದರ್ಭಗಳೂ ಇವೆ. ರಾಗಿಯ ಪೈರು ಸಾಮಾನ್ಯವಾಗಿ ದೀಪಾವಳಿಯ ಮೊದಲ ಅಥವಾ ನಂತರ ಕೊಯ್ಲಾಗುತ್ತಿತ್ತು. ಕೊಯ್ಲಾದ ೩–೪ ದಿನ ಹೊಲದಲ್ಲಿಯೇ ತಾಳು ಒಣಗಲು ಬಿಡುತ್ತಿದ್ದರು ಅಂತಹ ಸಂದರ್ಭದಲ್ಲಿ ಮಳೆ ಬಂತೆಂದರೆ ಪಜೀತಿ ಬೇಡ. ಸಾಮಾನ್ಯವಾಗಿ ಮಳೆ ಬೀಳುತ್ತಿದ್ದುದು ರಾತ್ರಿ ವೇಳೆ; ಹಗಲು ಬಿಸಿಲು. ಕೆಲವೊಮ್ಮೆ ೨–೩ ದಿನ ಮಳೆ ಬಿಸಿಲು ಬಂದರೆ ರಾಗಿ ತೆನೆಗಳು ಅಲ್ಲಿಯೇ ಮೊಳಕೆ ಬರುತ್ತಿದ್ದವು. ಕೈಗೆ ಬಂದದ್ದು ಬಾಯಿಗಿರುತ್ತಿರಲಿಲ್ಲ. ಮುಂದೆ

ಡಿಸೆಂಬರ್–ಜನವರಿ ತಿಂಗಳಲ್ಲಿ ಮಳೆ ಕ್ಲುಪ್ತ ಸಮಯದಲ್ಲಿ ಬೀಳುತ್ತಿತ್ತು. ಈ ಮಳೆಗಳ ಲಕ್ಷಣವೆಂದರೆ ಚಳಿ ಸಮೇತ ಗಾಳಿ ಮಳೆ. ಬಹುತೇಕ ಅವರೆ ಬೆಳೆ ಇದರಿಂದ ನಾಶ. ಚೆನ್ನಾಗಿ ಹೂಕಾಯುತ್ತಿದ್ದ ಅವರೆ ಗಿಡಗಳು ಮಳೆ ನಿಂತ ಮೇಲೆ ಉದುರಿ ಕಡ್ಡಿಗಳಂತಾಗುತ್ತಿದ್ದವು. ಕಾಯಿ ಇದ್ದಲ್ಲಿ ಹುಳುಗಳು ಕಾಯಿ ಕೊರೆದು ಒಳಗೆ ಸೇರುತ್ತಿದ್ದವು. ೧೯೬೪ರ ವರೆಗೂ ಇಂತಹ ಮಳೆಗಾಲವನ್ನು ನಾನು ಕಂಡಿದ್ದೇನೆ. ಮಳೆಗಾಲದಲ್ಲಿ ಓಡಾಡುವಾಗ ಸಾಮಾನ್ಯವಾಗಿ ಬರಿಗಾಲಲ್ಲೇ ಓಡಾಡುತ್ತಿದ್ದೆವು ವಾಸ್ತವವಾಗಿ ಚಪ್ಪಲಿಗಳಿರಲಿಲ್ಲ. ಇಂತಹ ಸಂದರ್ಭಗಳಲ್ಲಿ ಕಾಲಲ್ಲಿ ಕೆಸರುಗುಳ್ಳೆ ಏಳುತ್ತಿದ್ದವು. ಇವು ಕಾಣಿಸಿಕೊಂಡ ಜಾಗದಲ್ಲಿ ವಿಪರೀತ ಕೆರೆತ; ಕುಳಿತರೆ ಕೆರೆಯುತ್ತಾ ಇರಬೇಕು. ಚಿಕ್ಕ ಹುಡುಗರಾಗಿದ್ದಾಗ ಒಲೆಯ ಬಳಿ ಕುಳಿತು ಅಳುತ್ತಿದ್ದೆವು. ಇದಕ್ಕೆ ಔಷಧಿಯಾಗಿ ಹುರಳಿ ಸೊಪ್ಪು ತಂದು ಉಜ್ಜುವುದು, ಹುಣಸೇಕಾಯಿ ತಂದು ದೀಪದ ಬುಡ್ಡಿಯಲ್ಲಿ ಕಾಯಿಸಿ ಬಿಸಿ ಬಿಸಿಯಾಗಿರುವಾಗಲೇ ಆಜಾಗಕ್ಕೆ ಇಡುತ್ತಿದ್ದೆವು. ಪ್ರತಿ ಮಳೆಗಾಲದಲ್ಲಿ ಈ ಕ್ರಿಯೆ ಪುನರಾವರ್ತನೆಯಾಗುತ್ತಿತ್ತು. ಕೆರೆಗಳು ತುಂಬಿ ಕೋಡಿ ಹೋಗುವುದನ್ನೇ ನೋಡಿ ಸಂತೋಷಿಸುತ್ತಿದ್ದೆವು. ಕೆರೆಯ ಕೆಳಗೆ ಹಸುರಿನಿಂದ ಕೂಡಿದ ಗದ್ದೆಗಳು. ಇಂದು ಗದ್ದೆಗಳೆಲ್ಲಾ ನೀಲಗಿರಿ ತೋಪುಗಳಿಂದ ಕೂಡಿವೆ. ಕೆರೆ ಕೋಡಿ ಹೋದದ್ದೂ ಅಪರೂಪ.

ನೆನಪಿನಿಂದ ಮತ್ತೆ ಓದಿನ ಕಡೆಗೆ ಬರುತ್ತಿದ್ದೇನೆ. ಪಿ.ಯು.ಸಿ. ಫೇಲಾದ ಬಗ್ಗೆ ಹಿಂದೆಯೇ ತಿಳಿಸಿದ್ದೇನೆ. ಅದನ್ನು ಮುಂದೆ ಒಂದೊಂದೇ ಪಾರ್ಟನ್ನು ಪರೀಕ್ಷೆಗೆ ಕಟ್ಟಿ ಪಾಸು ಮಾಡಿಕೊಂಡೆ. ಮುಂದೆ ಯಾವ ಕಾಲೇಜನ್ನು ಸೇರಬೇಕೆಂಬ ಯೋಜನೆ. ಕೊನೆಗೆ ಸರ್ಕಾರಿ ಕಲೆ ಮತ್ತು ವಿಜ್ಞಾನ ಕಾಲೇಜಿಗೆ ಅರ್ಜಿ ಹಾಕಿದೆ. ಬೇರೆ ಯಾವ ಕಾಲೇಜಿಗೂ ಹಾಕಿರಲಿಲ್ಲ. ಒಂದು ದಿನ ತರಗತಿಗೆ ಎಂದು ಸೇರಿಸಿಕೊಳ್ಳುತ್ತಾರೆಂದು ತಿಳಿದುಕೊಳ್ಳಲು ಸರ್ಕಾರಿ ಕಾಲೇಜಿಗೆ ಹೋದೆ. ಆಗಾಗಲೇ ಆಯ್ಕೆಯ ಪಟ್ಟಿಯೊಂದನ್ನು ಪ್ರಕಟಿಸಿದ್ದರು. ನನ್ನ ಹೆಸರಿರಲಿಲ್ಲ. ನನಗೋ ಏನೂ ತೋಚದು. ಕೊನೆಗೆ ಅಳುಕುತ್ತಾ ಗುಮಾಸ್ತರೊಬ್ಬರನ್ನು ಕೇಳಿದೆ. ಅವರು ನಿಮ್ಮ ಅರ್ಜಿಗಳು ಅರ್ಥಶಾಸ್ತ್ರ ವಿಭಾಗದಲ್ಲಿರುತ್ತವೆ. ಅಲ್ಲಿ ಹೋಗಿ ವಿಚಾರಿಸಿ ಎಂದರು. ಅಲ್ಲಿ ಸಿದ್ಧಲಿಂಗಸ್ವಾಮಿ ಎಂಬುವವರನ್ನು ಕಂಡೆ. ನನ್ನ ಅರ್ಜಿ ತೆಗೆದು ಪರಿಶೀಲಿಸಿ ಅರ್ಥಶಾಸ್ತ್ರದಲ್ಲಿ ಕಡಿಮೆ ಅಂಕ ಬಂದಿರುವುದನ್ನು ತಿಳಿದು, ಜೊತೆಗೆ ಸೈಂಟ್ ಜೋಸೆಪ್ಸ್ ಕಾಲೇಜಿನ ಹುಡುಗ ಎಂದು ತಿಳಿದು ಸೀಟು ಕೊಡುವುದಿಲ್ಲ ಹೇಳಿದರು. ನಾನು ಬೇರೆ ಕಾಲೇಜಿಗೆ ಅರ್ಜಿ ಹಾಕಿರಲಿಲ್ಲ. ಅಲ್ಲೇ ನಿಂತಿದ್ದೆ. ಕೊನೆಗೆ ಇಲ್ಲಿ ನಿಲ್ಲಬೇಡಿ; ಪ್ರಿನ್ಸಿಪಾಲರನ್ನು ನೋಡಿ ಅವರು ಕೊಟ್ಟರೆ ನನ್ನದೇನು ತಕರಾರಿಲ್ಲ ಎಂದರು. ಅಂದಿದ್ದೆ ತಡ ಪ್ರಿನ್ಸಿಪಾಲರನ್ನು ಭೇಟಿ ಮಾಡಲು ಮಹಡಿ ಹತ್ತಿದೆ. ನನ್ನ ಹಾಗೆ ಇನ್ನೂ ಕೆಲವು ವಿದ್ಯಾರ್ಥಿಗಳು ಕಾಯುತ್ತಿದ್ದರು. ಆಗ ಪ್ರಿನ್ಸಿಪಾಲರಾಗಿದ್ದ ಆರ್.ಆರ್.ಉಮರ್ಜಿಯವರನ್ನು ನಾನು ಭೇಟಿ ಮಾಡಿ ನನ್ನ ಕಷ್ಟವನ್ನು ಹೇಳಿಕೊಂಡು ಇದೊಂದೇ ಕಾಲೇಜಿಗೆ ಅರ್ಜಿ ಸಲ್ಲಿಸಿರುವುದು ದಯವಿಟ್ಟು ಸೀಟು ಕೊಡಬೇಕೆಂದು ಕೇಳಿಕೊಂಡೆ. ಆಗ ಅವರು ನಿನ್ನನ್ನು ನೋಡಿದರೆ ಗಲಾಟೆಯ ಹುಡುಗನಲ್ಲವೆಂದು ತಿಳಿಯುತ್ತೆ. ಸೆಂಟ್ ಜೋಸೆಫ್ಸ್ ವಿದ್ಯಾರ್ಥಿಯೆಂದು ಅವರು ಹಾಗಂದಿರಬಹುದೆಂದು ಹೇಳಿ ಒಂದು ಸ್ಲಿಪ್‌ನಲ್ಲಿ ಇವರನ್ನು ಸೇರಿಸಿಕೊಳ್ಳಿ ಎಂದು ಬರೆದು ಕಳುಹಿಸಿದರು. ಮುಂದೆ ಮೊದಲನೆಯ ಬಿ.ಎ. ತರಗತಿ ವಿದ್ಯಾರ್ಥಿಯಾಗಿ ನಾನು ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜಿನಲ್ಲಿ ಸೇರಿದೆ.

ಒಂದು ದಿನ ಕನ್ನಡ ತರಗತಿ ನಡೆಯುತ್ತಿತ್ತು. ಜಿ. ಬ್ರಹ್ಮಪ್ಪನವರು ತರಗತಿಗೆ ಬಂದರು ಎಂದಿನಂತೆ ತಮ್ಮ ನಗೆ ಚಾಟಿಕೆಯ ಮಾತುಗಳಿಂದ ಗಲಾಟೆ ಮಾಡುತ್ತಿದ್ದ ವಿದ್ಯಾರ್ಥಿಗಳನ್ನು ಹದ್ದುಬಸ್ತಿಗೆ ತರುತ್ತಾ ಒಂದು ವಿಷಯ ತಿಳಿಸಿದರು. ಅದೆಂದರೆ ಯಾರಿಗೆ ಕನ್ನಡ ವಿಷಯವನ್ನು ಐಚ್ಛಿಕವಾಗಿ ಓದಲು ಇಷ್ಟವಿದೆ ಕೈಯೆತ್ತಿ ಎಂದರು. ಒಂದಿಬ್ಬರು ಎತ್ತಿದರು. ನನಗೆ ಅಥವಾ ನನ್ನಂತೆ ಕೆಲವರಿಗೆ ಅರ್ಥವಾಗಲಿಲ್ಲ. ಮತ್ತೆ ಬಿಡಿಸಿ ಬಿಡಿಸಿ ಹೇಳಿ ಕನ್ನಡ ಐಚ್ಛಿಕಕ್ಕೆ ಸೇರುವವರು ಕನ್ನಡ ವಿಭಾಗದಲ್ಲಿ ಎಂ.ವಿ. ಸೀತಾರಾಮಯ್ಯ ಎಂಬುವವರಿದ್ದಾರೆ; ಅವರನ್ನು ಈಗಲೇ ನೋಡಿ ಎಂದರು. ಸರಿ ನಾವು ೬–೭ ಜನ ಹೊರಟೆವು. ಎಂ.ವಿ. ಸೀತಾರಾಮಯ್ಯ ಅವರು ಯಾರೆಂದು ಇನ್ನೂ ನೋಡಿರಲಿಲ್ಲ. ಕೊನೆಗೆ ವಿಚಾರಿಸಿಕೊಂಡು ಕೋಣೆಯೊಂದರಲ್ಲಿದ್ದ ಅವರನ್ನು ನೋಡಲು ಹೋದೆವು. ಬಹು ಆತ್ಮೀಯವಾಗಿ ಅವರು ನಮ್ಮೊಡನೆ ಮಾತನಾಡುತ್ತಾ ನಮ್ಮ ಹೆಸರುಗಳನ್ನು ಪಡೆದು ನಮ್ಮನ್ನು ಕನ್ನಡ ಐಚ್ಛಿಕಕ್ಕೆ ಬದಲಾಯಿಸುವಂತೆ ಪ್ರಿನ್ಸಿಪಾಲರನ್ನು ಕೇಳುವುದಾಗಿ ಹೇಳಿ ನಾಳೆ ಬಂದು ಕಾಣಲು ತಿಳಿಸಿದರು. ನಾಳೆ ಮತ್ತೆ ಇವರನ್ನು ಕಂಡಾಗ ಒಪ್ಪಿಗೆ ದೊರೆತಿತ್ತು. ಕನ್ನಡ ಮತ್ತು ಇತಿಹಾಸವನ್ನು ಮುಖ್ಯ ವಿಷಯಗಳಾಗಿಯೂ ಅರ್ಥಶಾಸ್ತ್ರವನ್ನು ಚಿಕ್ಕ ವಿಷಯವಾಗಿಯೂ ತೆಗೆದುಕೊಂಡು ಓದುವಂತೆ ಅದರಲ್ಲಿ ಸೂಚಿಸಿತ್ತು. ತರಗತಿಗಳು ಪ್ರಾರಂಭವಾಗಿ ಒಂದು ವಾರ ಕಳೆಯಿತು. ಕೆ.ಟಿ. ಪಾಂಡುರಂಗಿ ಎಂಬ ಸಂಸ್ಕೃತ ಪ್ರಾಧ್ಯಾಪಕರು ತರಗತಿಗೆ ಬಂದು ಯಾರಾದರೂ ಸಂಸ್ಕೃತವನ್ನು ಮೈನರ್ ವಿಷಯವಾಗಿ ಓದಲು ಇಷ್ಟವಿದ್ದರೆ ಹೆಸರು ನೀಡಬಹುದೆಂದು ಹೇಳಿದರು. ಒಬ್ಬೊಬ್ಬರನ್ನಾಗಿ ಹೈಸ್ಕೂಲಿನಲ್ಲಿ ಏನೇನು ಓದಿದ್ದಿರೆಂದು ಕೇಳುತ್ತಾ ಬಂದರು. ನನ್ನದು ಹಿಂದಿ ಇದ್ದ ಕಾರಣ ತಕ್ಷಣ ನೀನು ಸೇರಿಕೋ ಎಂದರು. ವಿದ್ಯಾರ್ಥಿಗಳೆಲ್ಲಾ ಸಂಸ್ಕೃತದ ಬಗ್ಗೆ ಅಂಜಿಕೆ ವ್ಯಕ್ತಪಡಿಸಿದಾಗ ಏನೂ ಅಂಜುವ ಅವಶ್ಯಕತೆಯಿಲ್ಲ.

ನಿಮಗೆ ಅರ್ಥವಾಗುವ ಹಾಗೆ ಪಾಠಮಾಡುವ ಜವಾಬ್ದಾರಿ ನಮ್ಮದು ಎಂದು ಹುರಿದುಂಬಿಸಿ ನಮ್ಮ ಪಟ್ಟಿಯನ್ನು ತೆಗೆದುಕೊಂಡು ಪ್ರಿನ್ಸಿಪಾಲರ ಬಳಿಗೆ ಹೋಗಿ ಅನುಮೋದನೆ ಪಡೆದು ಬಂದು ಬಿಟ್ಟರು. ಅರ್ಥಶಾಸ್ತ್ರವನ್ನು ಮೈನರ್ ವಿಷಯವಾಗಿ ಓದುವ ಅವಕಾಶವೂ ಈಗ ಇಲ್ಲ. ಐಚ್ಛಿಕ ವಿಷಯವಾಗಿ ಕನ್ನಡ ತರಗತಿಗೆ ೧೨ ವಿದ್ಯಾರ್ಥಿಗಳು ಸೇರಿದ್ದೆವು. ಟೈಂಟೇಬಲ್ ವಿಷಯವಾಗಿ ಬೇರೆ ಬೇರೆ ವಿಭಾಗಗಳಲ್ಲಿನ ಉಪನ್ಯಾಸಕರಲ್ಲಿ ಗೊಂದಲವುಂಟಾಯಿತು. ಇತಿಹಾಸ ವಿಭಾಗದ ಮುಖ್ಯಸ್ಥರು ರಾಮಸ್ವಾಮಿ ಅಯ್ಯಂಗಾರ್ ಅವರು ಸೀತಾರಾಮಯ್ಯನವರ ಬಳಿ ಬಂದು ಸ್ವಲ್ಪ ಕಾವೇರಿದ ರೀತಿಯಲ್ಲಿ ಮಾತನಾಡಿದರು. ಆಗ ಸೀತಾರಾಮಯ್ಯನವರು ಅಷ್ಟೇ ತಣ್ಣಗೆ ನೀವೇನೂ ಚಿಂತೆ ಮಾಡಬೇಡಿ ನಾವು ಬೇಕಾದರೆ ನಮ್ಮ ಹುಡುಗರಿಗೆ ಬೆಳಗ್ಗೆ ೯ಕ್ಕೆ ಬಂದು ಪಾಠ ಮಾಡುತ್ತೇವೆ. ನೀವು ವೇಳಾಪಟ್ಟಿ ನಿಮಗೆ ಅನುಕೂಲವಾಗುವಂತೆ ವೇಳಾಪಟ್ಟಿ ಮಾಡಿಕೊಳ್ಳಿ ಎಂದರು. ಏನೋ ಕೇಳಿದರೆ ಏನೋ ಹೇಳುತ್ತೀಯ ಅವರು ಎದ್ದುಹೋದ ಮೇಲೆ ಇಂತಹವರಿಂದ ಹೇಗೆ ಕನ್ನಡದ ಉದ್ಧಾರ ಎಂದರು.

ಆರ್.ಆರ್. ಉಮರ್ಜಿಯವರು ಠಾಕುಠೀಕಿನ ವ್ಯಕ್ತಿ. ಸೂಟು, ಬೂಟು, ಟೈ ಇಲ್ಲದೆ ಕಾಲೇಜಿಗೆ ಬರುತ್ತಿರಲಿಲ್ಲ. ತರಗತಿ ಬೆಲ್ ಹೊಡೆದ ಮೇಲೆ ಒಂದು ರೌಂಡ್ ಸುತ್ತುತ್ತಿದ್ದರು ವಿದ್ಯಾರ್ಥಿಗಳು ತರಗತಿ ಹೊರಗೆ ಕಂಡರೆ ವಿಚಾರಿಸಿ ಯಾವ ಮೇಷ್ಟ್ರು ಯಾಕ ತೆಗೆದುಕೊಳ್ಳಲಿಲ್ಲ ಮುಂತಾಗಿ ವಿಚಾರಿಸುತ್ತಿದ್ದರು. ಉಪನ್ಯಾಸಕರೂ ಅವರು ಹೇಳಿಕಳುಹಿಸಿದರೆ ಅಂಜುತ್ತಲೇ ಹೋಗುತ್ತಿದ್ದರು. ಈ ಉಮರ್ಜಿಯವರಿಗೆ ಎಂ.ವಿ. ಸೀತಾರಾಮ್ಯನವರನ್ನು ಕಂಡರೆ ಒಂದು ಬಗೆಯ ಗೌರವ. ಕಚ್ಚೆ ಪಂಚೆ, ಜುಬ್ಬ, ಕೋಟು, ಚಪ್ಪಲಿ, ಉಮರ್ಜಿಗೆ ವಿರುದ್ಧವಾದ ಡ್ರೆಸ್! ಕುಳ್ಳ ಶರೀರ ಮತ್ತು ಸ್ವಲ್ಪ ಸೆಳೆದ ಬೆರಳುಗಳು. ಇವರು ಹಾಜರಾತಿ ಹಾಕಲು ಮಹಡಿ ಮೇಲಿನ ಪ್ರಿನ್ಸಿಪಾಲರ ಛೇಂಬರಿಗೆ ಹೋದರೆ ಅಯ್ಯೋ ನೀವ್ಯಾಕೆ ಬಂದಿರಿ ಇನ್ನು ಮುಂದೆ ಹಾಜರಾತಿ ಹಾಕಲು ಇಲ್ಲಿಗೆ ಬರಬೇಡಿ ಅಲ್ಲಿಗೆ ಹಾಜರಾತಿ ರಿಜಿಸ್ಟರ್ ಬರುತ್ತದೆ ಎಂದು ನಮ್ಮೆದುರಿಗೆ ಹೇಳಿದರು. ಹೀಗಾಗಿ ಎಂ.ವಿ. ಸೀತಾರಾಮಯ್ಯನವರ ಅನೇಕ ಕಾರ್ಯಗಳು ಅವರು ಹೋಗದಿದ್ದರೂ ಹೇಳಿ ಕಳುಹಿಸಿದರೆ ನಡೆಯುತ್ತಿದ್ದವು. ಕನ್ನಡ ವಿಭಾಗದಲ್ಲಿ ಸೀತಾರಾಮಯ್ಯನವರಲ್ಲದೆ ಹಂಪನಾ, ಚ. ಸುಂದರೇಶನ್, ರಾಘವೇಂದ್ರ ಪಟವಾರಿ, ಎಂ.ಎಲ್.ಲಲಿತಮ್ಮ, ಎಂ.ಎಚ್. ಕೃಷ್ಣಯ್ಯನವರಿದ್ದರು. ಒಬ್ಬೊಬ್ಬರೂ ಒಂದೊಂದು ವಿಷಯದಲ್ಲಿ ವಿದ್ವತ್ತನ್ನು ಹೊಂದಿದವರಾಗಿದ್ದರು. ವಾಸ್ತವವಾಗಿ ಇಲ್ಲಿ ಪಡೆದ ಜ್ಞಾನಕ್ಕಿಂತ ಹೆಚ್ಚಿನದನ್ನು ನಾವು ಎಂ.ಎ. ತರಗತಿಯಲ್ಲೂ ಪಡೆಯಲಿಲ್ಲ. ಒಬ್ಬೊಬ್ಬರೂ ಅವರದೇ ಆದ ವಿಧಾನದಿಂದ ಪಾಠ ಮಾಡುತ್ತಿದ್ದರು. ಎಂ.ಎಚ್. ಕೃಷ್ಣಯ್ಯನವರು ಶಬ್ದಮಣಿದರ್ಪಣವನ್ನು ಬಿ.ಎ. ತರಗತಿಯಲ್ಲಿ ಅರೆದು ಕುಡಿಸಿದರೆ, ಎಂ.ಎಲ್. ಲಲಿತಮ್ಮ ನವರು ಕರ್ನಾಟಕ ಕಾದಂಬರಿ ಮತ್ತು ಬಾಣನ ಕಾದಂಬರಿ ಎರಡನ್ನು ತುಲನೆ ಮಾಡಿ ನಾಗವರ್ಮನ ಸ್ವಂತಿಕೆ ಏನು ಬಾಣಭಟ್ಟನ ರೀತಿ ಹೇಗೆ ಎಂದು ವಿವರವಾಗಿ ವಿವರಿಸುತ್ತಿದ್ದರು. ಪಂಪಭಾರತದ ಎರಡು ಆಶ್ವಾಸಗಳನ್ನು ಇವರೇ ಪಾಠ ಮಾಡಿದರು. ಎಂ.ವಿ. ಸೀತಾರಾಮಯ್ಯನವರು ಮೊದಲ ವರ್ಷ ನಂಜಿಯಣ್ಣನ ರಗಳೆಯನ್ನು ಪಾಠಮಾಡಿದರು. ಅವರು ವಿವರಿಸುತ್ತಿದ್ದರೆ ನಂಜಿಯಣ್ಣ, ಪರವೆನಾಚಿ, ಸಂಕಿಲಿನಾಚಿ, ಶಿವಬಾಹ್ಮಣ, ಊರಜನ ಇವರೆಲ್ಲರ ಪಾತ್ರಗಳು ಕಣ್ಣಮುಂದೆ ಬರುತ್ತಿದ್ದವು. ಅಷ್ಟರಮಟ್ಟಿಗೆ ತಾದಾತ್ಮ್ಯ ಹೊಂದುತ್ತಿದ್ದರು. ಮುಂದಿನ ವರ್ಷ ಇವರು ಶಬರಶಂಕರ ವಿಳಾಸ ಪಾಠಮಾಡಲು ತೆಗೆದುಕೊಂಡರು. ಇದು ಸಂಸ್ಕೃತ ಭೂಯಿಷ್ಠ ಕಾವ್ಯ. ಓದಲು ನಾಲಿಗೆ ತಿರುಗುತ್ತಿರಲಿಲ್ಲ. ಅಂತಹ ಕಾವ್ಯವನ್ನು ಅರ್ಥವಾಗುವಂತೆ ಪಾಠ ಮಾಡಿದ ಶ್ರೇಯಸ್ಸು ಇವರದ್ದು. ಇವರ ಪಾಠ ಮಾಡಲು ಆಯ್ಕೆ ಮಾಡಿಕೊಂಡ ಪ್ರಾರಂಭದಲ್ಲಿಯೇ ಪಠ್ಯವನ್ನು ಪೂರ್ಣವಾಗಿ ಪಾಠಮಾಡುವುದಿಲ್ಲವೆಂದೂ ವಿವರವಾಗಿ ೨/೩ ರಷ್ಟನ್ನು ಮಾಡುವುದಾಗಿಯೂ ಉಳಿದದ್ದನ್ನು ನೀವೇ ಓದಿಕೊಳ್ಳಬೇಕೆಂದು ಹೇಳಿ ಆರಂಭಿಸುತ್ತಿದ್ದರು. ಅದರಂತೆ ಪಾಠವನ್ನು ಮಾಡುತ್ತಿದ್ದರು. ತರಗತಿಯಲ್ಲಿ ನಾನು, ಜಿ.ಎಸ್. ವೆಂಕಟರಾಜು, ಹಾ.ಜ. ನಾರಾಯಣ, ಎನ್.ಜಿ. ಚಂದ್ರಮೋಹನ್, ಎಸ್. ಚೆನ್ನಪ್ಪ, ಭಾಸ್ಕರ, ರಾಮಪ್ರಸಾದ, ಬಿ.ಎಸ್. ಕೃಷ್ಣಪ್ಪ, ಸಿದ್ಧಲಿಂಗಯ್ಯ, ನರಸಿಂಹಮೂರ್ತಿ ಮುಂತಾದವರಿದ್ದೆವು. ಎಲ್ಲರೂ ಒಂದೇ ಮಾತಿನಲ್ಲಿದ್ದೆವು. ಇದೇ ತರಗತಿಯಲ್ಲಿ ಓದುತ್ತಿದ್ದಾಗ ಐಚ್ಛಿಕವಾಗಿ ಕನ್ನಡ ಮತ್ತು ಇತಿಹಾಸ ಓದಬೇಕಿತ್ತು. ಇತಿಹಾಸವನ್ನು ರಂಗಸ್ವಾಮಿಯವರಲ್ಲದೆ ಮುಂದಿನ ವರ್ಷ ಅಬ್ದುಲ್ ಹಮೀದ್ ಅವರೂ ಪ್ರಪಂಚದ ನಾಗರಿಕತೆಗಳ ಬಗ್ಗೆ ಬೋಧಿಸುತ್ತಿದ್ದರು. ಇನ್ನೊಬ್ಬರು ದಾಸಪ್ಪನವರು ಯುರೋಪಿನ ಇತಿಹಾಸವನ್ನು ಪಾಠ ಮಾಡುತ್ತಿದ್ದರು. ನಮಗೆ ಇವರ ಬಗ್ಗೆ ಅಚ್ಚರಿಯೆಂದರೆ ಇಸವಿಗಳನ್ನು ಹೇಳುತ್ತಿದ್ದದು; ಹೇಗೆ ಇಸವಿಗಳನ್ನು ನೆನಪಿಟ್ಟುಕೊಳ್ಳುತ್ತಿದ್ದರೆಂಬುದು ನಮ್ಮ ಚರ್ಚೆಯ ವಿಷಯವಾಗಿತ್ತು. ಇನ್ನೊಬ್ಬ ಉಪನ್ಯಾಸಕರು ಸತ್ಯನಾರಾಯಣರಾವ್. ಮೂಲತಃ ಚನ್ನಪಟ್ಟಣದ ಕಡೆಯವರು ನನ್ನ ಊರು ಇತ್ಯಾದಿಗಳನ್ನು ಕೇಳಿ ಆತ್ಮೀಯ ಉಪನ್ಯಾಸಕರಾದರು. ಅದಕ್ಕೆ ಕಾರಣ ಮಿಡ್ಲ್‌ಸ್ಕೂಲಿನಲ್ಲಿ ನನಗೆ ಪಾಠ ಮಾಡಿದ ನಾರಾಯಣಮೂರ್ತಿಯವರಿಗೆ ಇವರ ತಂಗಿಯನ್ನು ನೀಡಿದ್ದರಂತೆ. ಈ ಹಿನ್ನೆಲೆಯಲ್ಲಿ ಇವರು ನನಗೇ ಅಲ್ಲದೆ ನಮ್ಮ ಕನ್ನಡದ ವಿದ್ಯಾರ್ಥಿಗಳಿಗೆ ತೀರಾ ಹತ್ತಿರವಾಗಿದ್ದರು. ಎಲ್ಲರನ್ನು ಏಕವಚನದಲ್ಲಿ

ಕರೆಯುತ್ತಿದ್ದರು. ಒಮ್ಮೆ ಎರಡನೆಯ ವರ್ಷದ ಅಂತಿಮ ಪರೀಕ್ಷೆಯಲ್ಲಿ ಇತಿಹಾಸ ವಿಷಯವನ್ನು ಬರೆದು ೧೦ ನಿಮಿಷ ಮೊದಲು ಕೆಳಗೆ ಬಂದೆ. ಆಗಲೇ ಸತ್ಯನಾರಾಯಣರಾವ್ ಕೆಳಗಡೆ ಸಂಪಿಗೆ ಮರದ ಬಳಿ ನಿಂತಿದ್ದರು. ಬಾರೋ ಇಲ್ಲಿ ಎಂದರು. ವಿನೀತನಾಗಿ ಹೋದೆ. ಪ್ರಶ್ನೆಪತ್ರಿಕೆ ತೆಗೆದುಕೊಂಡು ನೋಡಿ ಚೆನ್ನಾಗಿ ಬರೆದಿದ್ದೀಯಾ? ಎಂದರು ಹೌದು ಸಾರ್ ಎಂದೆ. ನಿನ್ನ ತಲೆ ಸರಿಯಾಗಿ ಬರೆಯುವವನಿಗೆ ಮೂರು ಗಂಟೆ ಸಾಲುವುದಿಲ್ಲ. ನೀನು ಇನ್ನು ಹತ್ತು ನಿಮಿಷ ಮುಂಚಿತವಾಗಿ ಮುಗಿಸಿರುವ ಮಹಾಬುದ್ಧಿವಂತ ಎಂದು ತಲೆಯ ಮೇಲೆ ಒಂದು ಮೊಟಕಿದರು. ವಿದ್ಯಾರ್ಥಿಗಳ ಬಗ್ಗೆ ಇಂತಹ ಆತ್ಮೀಯತೆ ಸತ್ಯನಾರಾಯಣರಾವ್ ಅವರಿಗೆ ಇತ್ತು. ಮೈನರ್ ವಿಷಯವಾಗಿ ಸಂಸ್ಕೃತವಿತ್ತಷ್ಟೇ. ಇದನ್ನು ಪಾಠ ಮಾಡಲು ಕೆ.ಟಿ. ಪಾಂಡುರಂಗಿಯವರೇ ಬರುತ್ತಿದ್ದರು. ರಘುವಂಶ ಕಾವ್ಯವನ್ನು ಮನಮುಟ್ಟುವಂತೆ ಸಂಸ್ಕೃತ ಶ್ಲೋಕ, ವಿಂಗಡಣೆ, ಕನ್ನಡದಲ್ಲಿ ಅರ್ಥ, ಅದರೊಂದಿಗೆ ವ್ಯಾಕರಣ, ನಂತರ ಸಾರಂಶ ಹೀಗೆ ಇವರ ಪಾಠದ ಶೈಲಿ. ಇಲ್ಲಿ ಆರಂಭವಾದ ಇವರ ಪರಿಚಯ ಇಂದಿಗೂ ಅದೇ ರೀತಿಯಲ್ಲಿ ಉಳಿದಿದೆ. ಇವರೂ ಸಹ ಏಕವಚನದಲ್ಲೇ ಆತ್ಮೀಯವಾಗಿ ಮಾತನಾಡಿಸುತ್ತಿದ್ದರು. ನಮಗೆ ಮೊದಲ ಬಾರಿಗೆ ಹಂಪೆಯನ್ನು ಅದಕ್ಕಿಂತ ಮುಖ್ಯವಾಗಿ ತುಂಗಭದ್ರೆ ಮಧ್ಯೆ ಇರುವ ನವವೃಂದಾವನವನ್ನು ತೋರಿಸಿದವರು (೧೯೬೭ ರಲ್ಲಿ) ಇವರೇ. ಇಷ್ಟೆಲ್ಲಾ ಓದುವಾಗ ನನಗೆ ಇರಲು ಸ್ಥಳವೊಂದು ಬೇಕಿತ್ತಲ್ಲ. ನಾನು, ನಮ್ಮೂರು ರಾಮಸ್ವಾಮಿರೆಡ್ಡಿ, ರಾಮಚಂದ್ರ ಮೊದಲಾದವರು ಸೇರಿ ನಗರ್ತರಪೇಟೆಯಲ್ಲಿನ ಧರ್ಮರಾಯಸ್ವಾಮಿ ದೇವಾಲಯದ ಬಳಿ ಒಂದು ರೂಂ ಮಾಡಿಕೊಂಡೆವು. ಈ ಹೊತ್ತಿಗೆ ರಾಮಸ್ವಾಮಿರೆಡ್ಡಿ ಕಾರ್ಪೊರೇಷನ್ ಕಚೇರಿಯಲ್ಲಿ ಕೆಲಸಕ್ಕೆ ಸೇರಿದ್ದರು.

ನಾನು ಎರಡನೇ ವರ್ಷದ ಬಿ.ಎ. ತರಗತಿಗೆ ಬಂದಾಗ ಎನ್.ಬಿ. ಚಂದ್ರಮೋಹನ್ ಮತ್ತು ರಾಂಪ್ರಸಾದ್ ಅವರು ಅಂತರ ಕಾಲೇಜು ಭಾಷಣ ಸ್ಪರ್ಧೆಗಳಲ್ಲಿ ಭಾಗವಹಿಸಿ ವಾಗ್ಮಿಗಳಾಗಿದ್ದರು. ನನಗೋ ಇವರನ್ನು ನೋಡಿದಾಗ ಒಂದು ಬಗೆಯ ಹಿಂಜರಿಕೆ. ಎಂ.ವಿ.ಸೀ.ಯವರಿಗೆ ರಾಮಪ್ರಸಾದ್ ಅವರನ್ನು ಕಂಡರೆ ಒಂದು ಬಗೆಯ ಮಮಕಾರ. ನಮಗೋ ಹೊಟ್ಟೆಯುರಿ. ಒಮ್ಮೆ ಕರ್ನಾಟಕ ಸಂಘದ ಚುನಾವಣೆ ನಡೆದಾಗ ರಾಮಪ್ರಸಾದ್ ಚುನಾವಣೆಗೆ ನಿಂತಿದ್ದರು. ಎಲ್ಲರೂ ಮಾತನಾಡಿಕೊಂಡು ಅವರನ್ನು ಸೋಲಿಸಿದ್ದು ನೆನಪು. ಇದೇ ವರ್ಷ ಎಂ.ವಿ. ಸೀತಾರಾಮಯ್ಯನವರು ಮತ್ತು ಎಂ.ಎಲ್. ಲಲಿತಮ್ಮನವರು ಸೇರಿ ಕವಿರಾಜಮಾರ್ಗ ಕೃತಿಯ ಸಂಪಾದನಾ ಕಾರ್ಯಕ್ಕೆ ಕೈ ಹಾಕಿದ್ದು. ಇಷ್ಟು ಹೊತ್ತಿಗಾಗಲೇ ಕನ್ನಡ ಸಾಹಿತ್ಯದ ಬಗ್ಗೆ ಅಷ್ಟಿಷ್ಟು ಜ್ಞಾನ ಪಡೆದಿದ್ದ ನಮಗೆ ಅದರ ಸಂಪಾದನೆಯ ಬಗ್ಗೆ ಆಗಾಗ್ಗೆ ಸೀತಾರಾಮಯ್ಯನವರು ಹೇಳುತ್ತಿದ್ದರು. ಇದೇ ಕಾಲಕ್ಕೆ ಜಿ. ಬ್ರಹ್ಮಪ್ಪನವರು ಭರತೇಶ ವೈಭವ ಸಮಗ್ರ ಕೃತಿಯನ್ನು ಅಚ್ಚು ಹಾಕಿಸಿ ಮಾರಾಟಕ್ಕೆ ಬಿಡುಗಡೆ ಮಾಡಿದರು. ಅನೇಕ ವೇಳೆ ಹಣವಂತ ವಿದ್ಯಾರ್ಥಿಗಳನ್ನು ಕರೆದು ಅವರ ವಿವರಗಳನ್ನೆಲ್ಲಾ ಕೇಳಿ ಭರತೇಶ ವೈಭವವನ್ನು ಕೊಂಡುಕೊಳ್ಳಬೇಕೆಂದೂ ಮುಂದೆ ನಿನ್ನ ಕೈ ಹಿಡಿದ ಹೆಂಡತಿಗೆ ಈ ಪುಸ್ತಕವನ್ನು ನಾನು ಓದಿದ್ದೇನೆ ಎಂದು ರೀಲು ಬಿಡಬೇಕೆಂದೂ ಹಾಸ್ಯದ ರೀತಿಯಲ್ಲಿ ಹೇಳುತ್ತಿದ್ದರು. ಕವಿರಾಜಮಾರ್ಗ ಮಾತ್ರ ಸಂಪಾದನೆಯ ನಂತರ ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜಿನ ಕನ್ನಡ ಸಂಘದ ವತಿಯಿಂದ ಪ್ರಕಟವಾಯಿತು. ಇದೇ ಕೃತಿಯಲ್ಲಿಯೇ ಸೀತಾರಾಮಯ್ಯನವರು ಇದನ್ನು ಶ್ರೀವಿಜಯ ಕೃತವೆಂದು ಸಾಧಿಸಿದ್ದು. ಎರಡನೆಯ ವರ್ಷದ ಪರೀಕ್ಷೆಯಲ್ಲಿ ಇಂಗ್ಲೀಷ್, ಕನ್ನಡ, ಕಿರಿಯ ಐಚ್ಛಿಕ ವಿಷಯವಾದ ಸಂಸ್ಕೃತ ಮತ್ತು ಸಾಮಾನ್ಯ ವಿಜ್ಞಾನ, ಐಚ್ಛಿಕಗಳಾದ ಇತಿಹಾಸ ಮತ್ತು ಕನ್ನಡ ವಿಷಯಗಳ ಪರೀಕ್ಷೆಗಳಿದ್ದವು. ಇಂಗ್ಲೀಷ್, ಕನ್ನಡ ಮತ್ತು ಕಿರಿಯ ಐಚ್ಛಿಕ ಸಂಸ್ಕೃತವನ್ನು ಈ ವರ್ಷ ಪಾಸು ಮಾಡಿದಲ್ಲಿ ಇವು ಮುಂದಿನ ವರ್ಷವಿರುತ್ತಿರಲಿಲ್ಲ. ಈ ಸರ್ಕಾರಿ ಕಾಲೇಜಿನಲ್ಲಿಯೂ ನನಗೆ ತೊಡಕಾಗಿದ್ದು ಮತ್ತೆ ಇಂಗ್ಲೀಷ್ ಭಾಷೆಯೇ. ಸರ್ಕಾರಿ ಕಾಲೇಜು ಇದಾದ್ದರಿಂದ ಕೆಲವು ಉಪನ್ಯಾಸಕರು ನಮಗೆ ಅರ್ಥವಾಗಲೀ ಆಗದಿರಲಿ ತಮ್ಮ ಕರ್ತವ್ಯವನ್ನು ಮುಗಿಸುತ್ತಿದ್ದರು. ಹೀಗಾಗಿ ನನಗೂ ಅಷ್ಟು ಚೆನ್ನಾಗಿ ಅರ್ಥವಾಗಿರಲಿಲ್ಲ. ಆದರೂ ಪಾಸಾಗಲೇಬೇಕೆಂಬ ಒತ್ತಡದ ಭಯಕ್ಕೆ ಓದಿ, ಉರು ಹಚ್ಚಿ ಪರೀಕ್ಷೆ ಬರೆದೆ ಈ ವರ್ಷ ಎಲ್ಲಾ ವಿಷಯಗಳೂ ಪಾಸಾಗಿದ್ದವು. ಆದರೆ ಸಾಮಾನ್ಯ ವಿಜ್ಞಾನ ಫೇಲಾಗಿತ್ತು. ಬಿ.ಎ. ಓದುವಾಗ ನಮಗೆ ಜನರಲ್ ಸೈನ್ಸ್ ವಿಷಯವಿತ್ತೆಂದು ಹಿಂದೆಯೇ ಹೇಳಿದ್ದೇನೆ. ಈ ವಿಷಯದಲ್ಲಿ ಪಾಠ ಮಾಡಲು ಮುಖ್ಯವಾಗಿ ಇಬ್ಬರು ಉಪನ್ಯಾಸಕರು ಬರುತ್ತಿದ್ದರು. ಒಬ್ಬರು ಜಿ.ಟಿ. ನಾರಾಯಣರಾವ್ ಇನ್ನೊಬ್ಬರು ನಿಸಾರ್ ಅಹಮದ್. ಜಿ.ಟಿ. ನಾರಾಯಣರಾಯರು ವಿಜ್ಞಾನದ ಉಪನ್ಯಾಸಕರೇ ಅಲ್ಲದೆ ಎನ್.ಸಿ.ಸಿ.ಯ ಮುಖ್ಯಸ್ಥರೂ ಆಗಿದ್ದರು. ಮಾಟವಾದ ದೇಹ, ತೀಕ್ಷ್ಣಕಣ್ಣುಗಳು, ಮಂಗಳೂರು ಕನ್ನಡ–ಇದು ಇವರ ಹೊರನೋಟ. ಇವರಿಂದ ನಾನು ಕಲಿತದ್ದು ಮುಖ್ಯವಾಗಿ ಅಂತರಿಕ್ಷಜ್ಞಾನ. ಇವರು ಅಸ್ಟ್ರಾನಮಿಯಲ್ಲಿ ಪಾರಂಗತರು. ಎನ್.ಸಿ.ಸಿ. ಕ್ಯಾಂಪಿನಲ್ಲಿ ರಾತ್ರಿ ವೇಳೆ ನಮಗೆ ನಕ್ಷತ್ರ ರಾಶಿ, ಗ್ರಹಗಳು ಮುಂತಾದವುಗಳ ಪರಿಚಯ ಮಾಡಿಸುತ್ತಿದ್ದರು. ಜೇಷ್ಠಾ ನಕ್ಷತ್ರ ಮತ್ತು ವೃಶ್ಚಿಕ ರಾಶಿಯನ್ನು ಇವರ ತೋರಿಸಿದ್ದುದು ಇಂದಿಗೂ ನನಗೆ ನೆನಪಿದೆ. ಶುಭ್ರ ಆಕಾಶವಿದ್ದಾಗ ಈ ನಕ್ಷತ್ರವನ್ನು ಇಂದಿಗೂ ನೆನಪಿನಲ್ಲಿಟ್ಟುಕೊಂಡು ನೋಡುತ್ತೇನೆ. ಬಹು

ಸ್ನೇಹಜೀವಿಗಳು. ನಿಖರವಾದ ಮಾತು. ನಿಸಾರ್ ಅಹಮದರದು ಭೂಗರ್ಭಶಾಸ್ತ್ರ ಹೀಗಾಗಿ ಭೂಮಿಯ ಹುಟ್ಟು ಮುಂತಾದ ವಿವರಗಳ ಬಗ್ಗೆ ಇವರು ಪಾಠಮಾಡುತ್ತಿದ್ದರು.

ಮುಂದಿನ ವರ್ಷ ಕೇವಲ ಎರಡು ಮೇಜರ್ ವಿಷಯಗಳು ಮತ್ತು ಸಾಮಾನ್ಯ ವಿಜ್ಞಾನ ಮಾತ್ರ ಉಳಿದುಕೊಂಡವು. ಚರಿತ್ರೆ ಮತ್ತು ಕನ್ನಡ ವಿಷಯಗಳಾದ್ದರಿಂದ ನನಗೆ ಅಂತಹ ತೊಡಕೇನೂ ಆಗಿರಲಿಲ್ಲ. ಇತಿಹಾಸಕ್ಕೆ ಸಂಬಂಧಿಸಿದಂತೆ ಸತ್ಯನಾರಾಯಣರಾವ್ ಅವರು ಹೆಚ್ಚಿನ ಗಮನ ಕೊಟ್ಟಿದ್ದರು. ಆದರೆ ಪರೀಕ್ಷೆಯನ್ನು ಇಂಗ್ಲೀಷಿನಲ್ಲಿ ಬರೆಯಬೇಕಿತ್ತು. ಇದು ನಮಗೆ ಮುಖ್ಯವಾದ ತೊಡಕಾಗಿತ್ತು. ಇದೇ ವರ್ಷ ಯಾವುದೋ ಸೆಮಿನಾರಿಗೆ ಸಂಬಂಧಿಸಿದಂತೆ ಚಂದ್ರಮೋಹನ ಜೊತೆಯಲ್ಲಿ ಸೆಂಟ್ರಲ್ ಕಾಲೇಜಿಗೆ ಹೋಗಿದ್ದೆ. ಆಗ ಅಲ್ಲಿ ಹಾಸ್ಯಭರಿತ ಮಾತುಗಳನ್ನಾಡಿ ನಗೆ ಚಿಮ್ಮಿಸುತ್ತಿದ್ದ, ರೇಗಿಸುತ್ತಿದ್ದ ವ್ಯಕ್ತಿಯೊಬ್ಬರ ಪರಿಚಯವಾಯಿತು. ಅವರೇ ಆರ್. ಶೇಷಶಾಸ್ತ್ರಿ. ಇವರ ತಂದೆ ಚಂದ್ರಮೋಹನನ ಕುಟುಂಬಕ್ಕೆ ಪುರೋಹಿತರೂ ಆಗಿದ್ದುದರಿಂದ ಸ್ವಲ್ಪ ಮಟ್ಟಿನ ಪರಿಚಯ ಆ ದಿನವೇ ಆಯಿತು. ಆಗ ಈ ಶೇಷಶಾಸ್ತ್ರಿ ಬಿ.ಎ. ಆನರ್ಸ್ ಕೋರ್ಸನ್ನು ಸೆಂಟ್ರಲ್ ಕಾಲೇಜಿನಲ್ಲಿ ಮಾಡುತ್ತಿದ್ದರು. ಒಂದೇ ವಿಷಯವಾದ್ದರಿಂದ ವಿಷಯಗಳ, ಪಾಠ ಮಾಡುವ ಬಗ್ಗೆ ವಿಚಾರ ವಿನಿಮಯವೂ ಆಯಿತು. ಅಂದು ಆದ ಪರಿಚಯ ಮುಂದೆ ಗೆಳೆತನಕ್ಕೆ ತಿರುಗಿತು.

ಇತಿಹಾಸ ವಿಷಯವನ್ನು ಇಂಗ್ಲೀಷಿನಲ್ಲಿ ಬರೆಯಬೇಕೆಂಬ ಭಯದಲ್ಲಿ, ಕನ್ನಡ ವಿಷಯಕ್ಕಿಂತ ಇತಿಹಾಸ ವಿಷಯದ ಕಡೆಗೇ ಗಮನ ಕೊಡುತ್ತಿದ್ದೆ. ಸತ್ಯನಾರಾಯಣರಾವ್ ಅವರೂ ಇದಕ್ಕೆ ಒತ್ತಾಸೆ ನೀಡುತ್ತಿದ್ದರು. ಡಾ.ವಿ.ಕೃ ಗೋಕಾಕರು ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿ ಆ ವರ್ಷ ಅಧಿಕಾರಕ್ಕೆ ಬಂದರು. ಆಗ ಮಾರ್ಚಿ ತಿಂಗಳಲ್ಲಿ ಪರೀಕ್ಷೆಗಳು ನಡೆಯಬೇಕು. ಒಂದು ದಿನ ಸತ್ಯನಾರಾಯಣರಾವ್ ಅವರು ಇತಿಹಾಸ ಮತ್ತು ಕನ್ನಡ ಮೇಜರ್ ಪಡೆದಿದ್ದ ವಿದ್ಯಾರ್ಥಿಗಳನ್ನು ಕರೆದು ವಿ.ಕೃ. ಗೋಕಾಕರು ಈಗ ವಿಸಿಯಾಗಿದ್ದಾರೆ. ನೀವೆಲ್ಲಾ ಒಂದು ಬಾರಿ ಅವರನ್ನು ನೋಡಿ ಇತಿಹಾಸವನ್ನು ಕನ್ನಡದಲ್ಲಿ ಬರೆಯಲು ಕೇಳಿ. ಕಳೆದ ಸಾರಿ ಕೇಳಿದಾಗ ಈ ಸಾರಿ ಆಗುವುದಿಲ್ಲವೆಂದಿದ್ದರು. ಬಹುಶಃ ಸ್ವಲ್ಪ ಪಟ್ಟು ಹಿಡಿಯಿರಿ ಕೆಲಸ ಆಗಬಹುದು ಎಂದಿದ್ದರು. ಗೋಕಾಕರನ್ನು ಭೇಟಿ ಮಾಡುವುದರ ಬಗ್ಗೆ ವಿವರಗಳನ್ನು ತಿಳಿಸಿದ್ದರು. ವಿ.ಕೃ. ಗೋಕಾಕರನ್ನು ಭೇಟಿಮಾಡಿ ಮನವಿ ಸಲ್ಲಿಸಿದೆವು. ಮೊದಲು ಅವರು ಒಪ್ಪಲಿಲ್ಲ. ಕಳೆದ ಬಾರಿ ನೀಡಿದ್ದ ಪತ್ರವನ್ನು ಪ್ರಸ್ತಾಪಿಸಿ ಈ ವರ್ಷ ಇತಿಹಾಸ ವಿಷಯವನ್ನು ಕನ್ನಡದಲ್ಲಿ ಬರೆಯಲು ಅನುಮತಿ ನೀಡಬೇಕೆಂದು ಪಟ್ಟು ಹಿಡಿದೆವು. ಕನ್ನಡದಲ್ಲಿ ನೋಟ್ಸ್ ಇಲ್ಲ ಕಷ್ಟವಾಗುತ್ತೆ ಎಂದಾಗ ಯಾರೋ ಒಬ್ಬ ವಿದ್ಯಾರ್ಥಿ ಸಾರ್ ಜಟಕಾ ಚಾರ್ಜುಕೊಡಿ ಬೇಕಾದಷ್ಟು ಹಾಕಿಕೊಂಡು ಬರುತ್ತೇನೆ ಎಂದ. ಕೊನೆಗೆ ನಮ್ಮ ಪರವಾಗಿ ವಾದಿಸಲು ಬಂದಿದ್ದವರು ನೀವು ಕನ್ನಡ ಪರವಾಗಿ ಮಾತನಾಡುತ್ತೀರಿ ಕನ್ನಡದಲ್ಲಿ ಉತ್ತರ ಬರೆಯುತ್ತೇವೆಯೆಂದರೆ ಅನುಮತಿ ನೀಡುತ್ತಿಲ್ಲ. ನಾವು ಈ ವರ್ಷ ಕನ್ನಡದಲ್ಲಿ ಇತಿಹಾಸ ವಿಷಯವನ್ನು ಬರೆಯುತ್ತೇವೆ. ಮುಂದೆ ನಿಮ್ಮ ಇಷ್ಟ ಎಂದು ಹೇಳಿ ಬಂದೆವು. ಇದಾದ ೧೦ ದಿನಗಳ ಬಳಿಕ ನಮ್ಮ ಕಾಲೇಜಿಗೆ ನಾವು ಈ ವರ್ಷ ಇತಿಹಾಸ ವಿಷಯವನ್ನು ಕನ್ನಡದಲ್ಲಿ ಬರೆಯಬಹುದೆಂದು ಸುತ್ತೋಲೆ ಬಂತು. ಈ ಬಗ್ಗೆ ಸತ್ಯನಾರಾಯಣರಾವ್ ಅವರಿಗೆ ತಿಳಿಸಿದೆವು. ಅವರು ಹೌದು ನೋಟ್ಸಿಲ್ಲ ಹೇಗೆ ಬರೆಯುತ್ತೀರಿ ಎಂದು ಹೇಳಿ ತಮ್ಮ ಬಳಿ ಇದ್ದ ಇಂಗ್ಲೀಷ್ ನೋಟ್ಸನ್ನು ನಮಗೆ ನೀಡಿ ಒಬ್ಬರು ಇಂಗ್ಲೀಷಿನಲ್ಲಿ ಓದುವುದು ಎಂದೂ ಭಾಷೆ ತಿಳಿದಿದ್ದ ಒಬ್ಬರು ಅದನ್ನು ಕನ್ನಡದಲ್ಲಿ ಹೇಳುವುದು. ಉಳಿದವರು ಅದನ್ನು ಬರೆದುಕೊಳ್ಳುವುದು ಎಂಬ ವ್ಯವಸ್ಥೆಯನ್ನು ಅವರೇ ಮಾಡಿದರು. ಅದರಂತೆ ಸುಮಾರು ೨೫ ದಿನಗಳಲ್ಲಿ ಈ ಕಾರ್ಯವನ್ನು ಪೂರೈಸಿದೆವು. ಹುಮ್ಮಸ್ಸಿನಿಂದ ಪರೀಕ್ಷೆಯನ್ನು ಬರೆದೆವು.

ಮುಂದೆ ಜೂನ್ ತಿಂಗಳಲ್ಲಿ ಫಲಿತಾಂಶ ಬಂದಾಗ ಎರಡನೆಯ ದರ್ಜೆಯಲ್ಲಿ ಪಾಸಾಗಿದ್ದೆ. ಬಹುತೇಕ ನಮ್ಮ ಬ್ಯಾಚಿನಲ್ಲಿದ್ದವರೆಲ್ಲಾ ಪಾಸಾಗಿದ್ದರು.

ಈಗ ಮತ್ತೆ ಮನೆಯಲ್ಲಿ ಚರ್ಚೆ ಪ್ರಾರಂಭ. ಓದು ಮುಂದುವರಿಸುವುದೋ ಬೇಡವೋ ಎಂದು. ಓದು ಮುಂದುವರಿಸುವುದರ ಬಗ್ಗೆ ತೀರ್ಮಾನಿಸಿದ್ದೆ. ನಮ್ಮ ಅಣ್ಣನವರಿಗೆ ಮದುವೆಯಾಗಿ ಎರಡು ಮಕ್ಕಳಾಗಿದ್ದವು. ಪದೇ ಪದೇ ಮರುಕಳಿಸುತ್ತಿದ್ದ ಬರಗಾಲ ಬೇರೆ. ಹೀಗಾಗಿ ನಮ್ಮ ಅಣ್ಣನವರು ಓದಿಸಲು ಕಷ್ಟವೆಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಸರಿ ನಮ್ಮ ತಾತನವರು ನಮ್ಮ ಸೋದರತ್ತೆಯ ಮಗಳನ್ನು ಮದುವೆಯಾಗುವುದಾದರೆ ಅವರಲ್ಲಿ ನಾನು ಕೇಳುತ್ತೇನೆ ಎಂದರು. ಅಂತಿಮವಾಗಿ ಆಗಲಿ ಎಂದು ಒಪ್ಪಿಗೆ ಸೂಚಿಸಿದೆ. ಅದರಂತೆ ನಮ್ಮ ತಾತನವರು ನಮ್ಮ ಮಾವ ಮತ್ತು ಅತ್ತೆಯವರನ್ನು ಭೇಟಿಯಾಗಿ ನನ್ನ ಇಷ್ಟ ತಿಳಿಸಿದಾಗ ಅವರು ಎಂ.ಎ. ಓದಿಸಲು ಒಪ್ಪಿಗೆ ನೀಡಿದರು. ಸರಿ ಊರಿನಿಂದ ಬಂದವನು ಸೆಂಟ್ರಲ್ ಕಾಲೇಜಿಗೆ ಹೋಗಿ ಎಂ.ಎ. ತರಗತಿ ಸೇರಲು ಅರ್ಜಿ ಹಾಕಿದೆ. ಈ ಕಾಲಕ್ಕೆ ಬಿ.ಎ.ಯಲ್ಲಿ ಜೊತೆಯಲ್ಲಿ ಓದುತ್ತಿದ್ದ ಚನ್ನಪ್ಪ, ನರಸಿಂಹ, ಸಿದ್ದಲಿಂಗಯ್ಯ, ಭಾಸ್ಕರ ಇವರೆಲ್ಲಾ ಓದಲು ಸಾಧ್ಯವಿಲ್ಲವೆಂದು ಕಾಲೇಜು

ಅಧ್ಯಯನ ಮುಗಿಸಿ ಕೆಲಸದ ಹುಡುಕಾಟದಲ್ಲಿದ್ದರು. ನಾನು ಜಿ.ಎಸ್. ವೆಂಕಟರಾಜು, ರಾಮಪ್ರಸಾದ್, ಬಿ.ಎಸ್. ಚಂದ್ರಮೋಹನ ಇವರು ಎಂ.ಎ. ತರಗತಿಗೆ ಸೇರಿದೆವು. ಭಾಸ್ಕರನನ್ನು ನಾನೇ ಜಿಗಣಿ ಹೈಸ್ಕೂಲಿನಲ್ಲಿ ಕನ್ನಡ ಉಪಾಧ್ಯಾಯ ವೃತ್ತಿಗೆ ಸೇರಿಸಿದೆ. ಉಳಿದವರು ಅಕ್ಕಿಹೆಬ್ಬಾಳ, ತುರುವೇಕೆರೆ ಮುಂತಾದ ಕಡೆಯ ಹೈಸ್ಕೂಲುಗಳಲ್ಲಿ ಕನ್ನಡ ಉಪಾಧ್ಯಾಯರಾಗಿ ಸೇರಿದರು. ಚನ್ನಪ್ಪನವರು ವಯಸ್ಸಿನಲ್ಲಿ ನಮ್ಮೆಲ್ಲರಿಗಿಂತ ಒಂದೆರಡು ವರ್ಷ ಹಿರಿಯರಾಗಿದ್ದರು. ದೇವನಹಳ್ಳಿ ತಾಲೂಕಿನ ಆವುತಿ ಇವರ ಗ್ರಾಮ. ವಿದ್ಯಾಭ್ಯಾಸ ಮುಗಿದ ಮೇಲೆ ಇವರು ಮೈಸೂರು ವಿಶ್ವವಿದ್ಯಾನಿಲಯವು ಹೊರತರುತ್ತಿದ್ದ ವಿಶ್ವಕೋಶದ ಕೆಲಸದಲ್ಲಿ ಸೇರಿಕೊಂಡರು. ನಾನು ಮೈಸೂರಿಗೆ ಹೋದಾಗಲೆಲ್ಲಾ ಇವರ ಮನೆಯಲ್ಲಿಯೇ ಉಳಿದುಕೊಳ್ಳುತ್ತಿದ್ದೆ. ಚೆನ್ನಪ್ಪ ತನ್ನ ನಿತ್ಯದ ಕೆಲಸದ ಜೊತೆಗೆ ಮಕ್ಕಳಿಗೆ ಸಂಬಂಧಿಸಿದ ಪುಸ್ತಕಗಳನ್ನು 'ಅರ್ಕಾವತಿ ಪ್ರಕಾಶ'ದ ಹೆಸರಿನಲ್ಲಿ ಪ್ರಕಟಿಸುತ್ತಿದ್ದರು. ಕೆಲವು ಪುಸ್ತಕಗಳಿಗೆ ನಮ್ಮ ಮನೆಯೇ ವಿಳಾಸದ ಸ್ಥಳವಾಗಿತ್ತು. ಒಂದೆರಡು ವರ್ಷ ಇದು ನಡೆಯಿತು. ಮುಂದೆ ನನ್ನ ಪ್ರವಾಸಗಳ ಕಾರಣದಿಂದ ವ್ಯವಹಾರ ನಡೆಸುವುದು ಕಷ್ಟವಾಗಿ ಮತ್ತೆ ಮೈಸೂರಿನ ವಿಳಾಸವನ್ನೇ ಮುಂದುವರಿಸಿದರು. ಇದರಿಂದ ನನಗಾದ ಲಾಭವೆಂದರೆ, ನಾನು ಗಡಿಯಾರಂ ರಾಮಕೃಷ್ಣಶರ್ಮರ 'ಭಾರತೀಯ ವಾಸ್ತು ವಿದ್ಯೆ' ಎಂಬ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದಾಗ ಪ್ರಕಾಶಕರು ದೊರಕದಿದ್ದಾಗ ನಾನು 'ರೆಡ್ಡಿ ಪ್ರಕಾಶನ' ಎಂಬ ಹೆಸರಿನಲ್ಲಿ ಪುಸ್ತಕ ಪ್ರಕಟಿಸಿದೆ. ಇದಕ್ಕೆ ಚನ್ನಪ್ಪನೇ ಹೀಗೆ ಮಾಡು, ಹೀಗೆ ಮಾಡು ಎಂದು ಉತ್ತೇಜನ ನೀಡಿದ್ದು.

ಎಂ.ಎ. ತರಗತಿ ಸೇರಿದ ಮೇಲೆ ವಸತಿ ಮತ್ತು ಊಟದ ವ್ಯವಸ್ಥೆಗಾಗಿ ಬೆಂಗಳೂರಿನ ಭಾರತ್ ಟಾಕೀಸು ಬಳಿಯ ರೆಡ್ಡಿಜನ ಸಂಘ ಹಾಸ್ಟೆಲ್‌ಗೆ ಸೇರಿದೆ. ಈ ಕಟ್ಟಡ ಈ ವರ್ಷ ನಿರ್ಮಾಣವಾಗಿತ್ತು. ಈ ಹಾಸ್ಟೆಲ್‌ನಲ್ಲಿ ಬೆಂಗಳೂರು ಕಡೆಯ ವಿದ್ಯಾರ್ಥಿಗಳಿಗಿಂತ ಆಂಧ್ರದ ಕಡೆಯ ವಿದ್ಯಾರ್ಥಿಗಳೇ ಹೆಚ್ಚಿಗಿದ್ದರು. ಊಟ ಸಮಯದಲ್ಲಿ ಮಾತ್ರ ಒಟ್ಟಿಗೆ ಸೇರುತ್ತಿದ್ದೆವು. ಉಳಿದಂತೆ ನಾವಾಯಿತು, ನಮ್ಮ ರೂಂ ಆಯಿತು. ರೆಡ್ಡಿಗರ ಹುಡುಗರಲ್ಲದೆ ಬೇರೆ ಬೇರೆ ಕುಲದ ವಿದ್ಯಾರ್ಥಿಗಳು ವಿದ್ಯಾರ್ಥಿ ನಿಲಯದಲ್ಲಿದ್ದರು. ನನ್ನ ಜೊತೆಯಲ್ಲಿ ಕೃಷ್ಣಗಿರಿ ಕಡೆಯ ಶೆಟ್ಟರ ಹುಡುಗ, ಕೂನೂರಿನ ಬಡಗರ ಹುಡುಗ ಮೇಳಗನ್ ಎಂಬುವವರಿದ್ದರು. ಬಡಗ ವಿದ್ಯಾರ್ಥಿ ಮೇಳಗನ್‌ನಿಂದ ಅವರ ಭಾಷೆಯ ಬಗ್ಗೆ, ಜನಗಳ ಬದುಕಿನ ಬಗ್ಗೆ ಕೇಳಿ ತಿಳಿದುಕೊಳ್ಳುತ್ತಿದ್ದೆ. ಇದೇ ವರ್ಷ ಕೇಂದ್ರ ಸರ್ಕಾರದ ಲೋನ್ ಸ್ಕಾಲರ್‌ಶಿಪ್ ನನಗೆ ಬಂತು. ಮೊದಲ ವರ್ಷ ಒಂಬೈನೂರು ರೂಪಾಯಿ ಎಂದು ನಿಗದಿತವಾಗಿತ್ತು. ಹೀಗಾಗಿ ನಮ್ಮ ಮಾವ ಕಳುಹಿಸುತ್ತಿದ್ದ ಹಣದ ಜೊತೆಗೆ ಈ ಹಣವೂ ಸೇರಿ ನನ್ನ ವೆಚ್ಚವನ್ನು ಸರಿದೂಗಿಸುತ್ತಿದೆ. ನಮ್ಮ ಮಾವ ಒಂದು ಮಿತಿಯಲ್ಲಿ ಹಣ ನೀಡುತ್ತಿದ್ದರು. ಹೆಚ್ಚಿಗೆ ಕೇಳುವಂತಿರಲಿಲ್ಲ. ಎಂ.ಎ. ತರಗತಿಗೆ ಬರುವ ವೇಳೆಗೆ ಸರ್ಕಾರಿ ಕಲಾ ಕಾಲೇಜಿನಲ್ಲಿ ರಿಟೈರಾಗಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯನವರು, ಹಂ.ಪ. ನಾಗರಾಜಯ್ಯನವರು ಸೆಂಟ್ರಲ್ ಕಾಲೇಜಿನ ಎಂ.ಎ. ತರಗತಿಗೆ ಉಪನ್ಯಾಸಕರಾಗಿ ಬಂದಿದ್ದರು.

ಈ ತರಗತಿ ಆರಂಭವಾದಾಗ ಈ ಬಾರಿ ಕನ್ನಡ ಆನರ್ಸ್ ವಿದ್ಯಾರ್ಥಿಗಳು, ಕನ್ನಡ ಮೇಜರ್ ವಿದ್ಯಾರ್ಥಿಗಳ ಜೊತೆಗೆ ಬಿ.ಎ. ಅಥವಾ ಬಿ.ಎಸ್ಸಿ. ಡಿಗ್ರಿಯಲ್ಲಿ ಕನ್ನಡದಲ್ಲಿ ಹೆಚ್ಚಿನ ಅಂಕ ಪಡೆದವರೂ ತರಗತಿಗೆ ಸೇರಿದ್ದರು. ಈ ಕಾರಣದಿಂದಲೋ ಅಥವಾ ಪಾಠ ಮಾಡುವ ಮೇಷ್ಟ್ರುಗಳ ಕೊರತೆಯೋ ಶಬ್ದಮಣಿದರ್ಪಣವಾಗಲೀ, ಕಾವ್ಯಮೀಮಾಂಸೆಯಾಗಲೀ ಪಠ್ಯವಾಗಿ ಇರಲಿಲ್ಲ. ಸಂಸ್ಕೃತದ ಪತ್ರಿಕೆಗಳನ್ನೂ ತೆಗೆದು ಹಾಕಿದ್ದರು. ಬರೀ ಕಾವ್ಯಗಳನ್ನೇ ಓದಬೇಕಿತ್ತು. ಇದರ ಜೊತೆಗೆ ಪಾಶ್ಚಾತ್ಯ ಕಾವ್ಯಮೀಮಾಂಸೆಯನ್ನು ಮುಗಳಿಯವರು ತೆಗೆದುಕೊಳ್ಳುತ್ತಿದ್ದರು. ಭಾರತೀಯ ಕಾವ್ಯಮೀಮಾಂಸೆಗಿಂತ ಶಿವರುದ್ರಪ್ಪನವರ ಸೌಂದರ್ಯ ಸಮೀಕ್ಷೆಯೇ ಪಾಠವಾಯಿತು. ಶೇಕಡ ೭೫ ಭಾಗ ಹೊಸ ಮುಖಗಳಿಂದ ಕೂಡಿದ್ದ ತರಗತಿಯಲ್ಲಿ ಹಳಬರ ಜೊತೆಗೆ ಮೊದಲು ಪರಿಚಯವಾಗಿದ್ದು ಎಂ.ಪಿ. ಪ್ರಸನ್ನಕುಮಾರ್, ಡಿ.ವಿ. ಕೃಷ್ಣಮೂರ್ತಿ, ಡಿ.ಕೆ. ಶ್ಯಾಮಸುಂದರರಾವ್ ಇವರುಗಳು. ಇವರೂ ಗ್ರಾಮಾಂತರ ಪ್ರದೇಶದಿಂದ ಬಂದಿದ್ದರಿಂದ ಬಹುಶಃ ಬೇಗ ಪರಿಚಯವಾಗಲು ಕಾರಣವಾಯಿತು. ಈ ಪರಿಚಯ ಸ್ನೇಹ ಇಂದಿಗೂ ಹಾಗೆಯೇ ಉಳಿದು ಬಂದಿದೆ. ಮಧ್ಯಾಹ್ನದ ವೇಳೆಯಲ್ಲಿ ವಿಭಾಗದ ಸಮೀಪದ ಆಲದಮರದ ಕೆಳಗೆ ಹಳೆಯ ಮಿತ್ರರಲ್ಲದೇ, ಹೊಸದಾಗಿ ಸೇರಿದ್ದ ಕೆ.ವಿ. ನಾರಾಯಣ, ಶ್ರೀಮತಿ ಮೊದಲಾದವರು ಕುಳಿತು ಕೆಲವು ಪಾಠಸಂಬಂಧೀ ವಿಷಯಗಳನ್ನು ಚರ್ಚಿಸುತ್ತಿದ್ದೆವು. ಕೆಲವೊಮ್ಮೆ ಅಧ್ಯಾಪಕರ ಪಾಠವನ್ನು ಅನುಕರಣೆ ಮಾಡುತ್ತಿದ್ದೆವು.

ಇದೇ ಅವಧಿಯಲ್ಲಿ ನಮಗಿಂತ ಹಿರಿಯ ವಿದ್ಯಾರ್ಥಿಗಳಾದ (ಅಂತಿಮ ಎಂ.ಎ.ಯಲ್ಲಿದ್ದ) ರಾಘವೇಂದ್ರರಾವ್ ಎಚ್.ಎಸ್., ಬರಗೂರು ರಾಮಚಂದ್ರಪ್ಪ, ಕೆ.ಆರ್. ಗಣೇಶ್, ಅವರಿಗಿಂತ ಹಿರಿಯರಾದ ಟಿ.ಶ್ರೀನಿವಾಸರಾಜು ಅವರು ಜೊತೆ ಸೇರುತ್ತಿದ್ದೆವು. ಶ್ರೀನಿವಾಸರಾಜು ಅವರು ರಾಜರತ್ನಂ ಅವರ ಅಭಿಮಾನಿ ಹಾಗೂ ವಿದ್ಯಾರ್ಥಿ. ಇವರು ನಮ್ಮ ತರಗತಿ ಮುಗಿದ ಕೂಡಲೇ ನಮ್ಮೊಂದಿಗೆ ಆತ್ಮೀಯತೆಯಿಂದ ಸೇರುತ್ತಿದ್ದರು. ಶ್ರೀನಿವಾಸರಾಜು ಅವರಂತೂ ಅತಿ ನಿಕಟರಾಗಿದ್ದರು.

ಕೆ.ಆರ್. ಗಣೇಶ್ ಯಥಾಪ್ರಕಾರ ನಮ್ಮವರೇ ಆಗಿಬಿಟ್ಟರು. ಶೇಷಶಾಸ್ತ್ರಿಯವರ ತರಗತಿ ಬೇರೆಡೆ ನಡೆಯುತ್ತಿದ್ದುದರಿಂದ ಬಿಡುವಿನ ವೇಳೆ ಅಲ್ಲಿಗೆ ಬರುತ್ತಿದ್ದರು. ಒಟ್ಟಿನಲ್ಲಿ ಹೊಸ ಪರಿಚಯದ ಹೊಸ ಚರ್ಚೆಯ ವರ್ಷ ಆದಾಗಿತ್ತು. ಅಂತೂ ಆ ವರ್ಷ ಮುಗಿಯಿತು. ಜೂನಿಯರ್ ಎಂ.ಎ. ತರಗತಿ ಪಾಸಾಗಿದ್ದೆ.

ದ್ವಿತೀಯ ಎಂ.ಎ.ಗೆ ಬರುವ ವೇಳೆಗೆ ನಾನು ಅನೇಕ ವಿಷಯಗಳಲ್ಲಿ ಮುಖ್ಯವಾಗಿ ಶಾಸನಗಳ ಅಭ್ಯಾಸದ ಬಗ್ಗೆ ಒಲವುಗಳಿಸಿಕೊಂಡಿದ್ದೆ. ಬೇರೆಯವರು ಭಾಷಾವಿಜ್ಞಾನ ವಿಷಯ ಆರಿಸಿಕೊಂಡಾಗ ನಾವು ಅಂದರೆ ಪ್ರಸನ್ನ, ಕೃಷ್ಣಮೂರ್ತಿ, ಶ್ಯಾಂಸುಂದರ್ ಮೊದಲಾದ ಗೆಳೆಯರು ಶಾಸನ ವಿಷಯವನ್ನು ಐಚ್ಛಿಕವಾಗಿ ತೆಗೆದುಕೊಂಡೆವು. ಎಂ. ಚಿದಾನಂದಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ನಮಗೆಲ್ಲಾ ಆದರ್ಶ ಕೃತಿ. ಚಿದಾನಂದಮೂರ್ತಿಗಳು ಕರ್ನಾಟಕ ಸಾಂಸ್ಕೃತಿಕ ಇತಿಹಾಸವನ್ನು ಬೋಧಿಸುತ್ತಿದ್ದರು. ಜಯದೇವ್ ಅವರು ಶಾಸನ ಪಠ್ಯಗಳನ್ನು ಪಾಠಮಾಡುತ್ತಿದ್ದರು. ಉಳಿದ ವಿಷಯಗಳಿಗಿಂತ ಈ ವಿಷಯಗಳ ಬಗ್ಗೆ ನನಗೆ ಹೆಚ್ಚಿನ ಆಸಕ್ತಿ ಇತ್ತು. ಈ ವಿಷಯದಲ್ಲಿ ನನಗೂ ಮತ್ತು ತಾಳ್ತಜೆ ವಸಂತಕುಮಾರ್‌ಗೆ ಒಂದು ಬಗೆಯ ಸ್ಪರ್ಧೆ. ಈ ಸ್ಪರ್ಧೆಯಲ್ಲಿ ವಸಂತಕುಮಾರ್‌ಗಿಂತ ನಾನು ಚೆನ್ನಾಗಿ ಬರೆಯಬೇಕು ರಾಜಕುಮಾರ್ ಗೋಲ್ಡ್‌ಮೆಡಲ್ ಪಡೆಯಬೇಕು ಎಂದು. ಎಂ.ಎ. ತರಗತಿಗಳಲ್ಲಿ ವಾರಕ್ಕೊಮ್ಮೆ ಸಾಮಾನ್ಯವಾಗಿ ಶನಿವಾರದಂದು ವಿದ್ಯಾರ್ಥಿಗಳಿಗಾಗಿ ಒಂದು ಸೆಮಿನಾರು ಇರುತ್ತಿತ್ತು. ಅವರಿಗೆ ಇಷ್ಟವಾದ ವಿಷಯದ ಮೇಲೆ ವಿಷಯ ಮಂಡನೆ ಮಾಡಬಹುದಿತ್ತು. ನಾನು ಬಳ್ಳಿಗಾವೆಯ ಕೋಡಿಮಠ ಎಂಬ ವಿಷಯದ ಮೇಲೆ ಲೇಖನ ಮಂಡಿಸಿದ ನೆನಪು. ಮುಂದೆ ಇದೇ ಸುಧಾರಿತ ಲೇಖನವಾಗಿ ಬೆಂಗಳೂರು ವಿಶ್ವವಿದ್ಯಾಲಯದ ನಿಯತಕಾಲಿಕೆಯಾದ ಸಾಧನೆಯಲ್ಲಿ ಪ್ರಕಟವಾಯಿತು. ಹೀಗೆ ಶಾಸನದ ಕಡೆಗೆ ಸ್ವಲ್ಪ ಸ್ವಲ್ಪವೇ ಪರಿಶ್ರಮದ ಒಲವು ಹೆಚ್ಚಾಗುತ್ತಾ ಬಂತು. ಮುಂದೆ ಕರ್ನಾಟಕದಲ್ಲಿ ಮಾಸ್ತಿ ಎಂಬ ಲೇಖನ ಬರೆದೆ. ಬೇಗೂರಿನ ಶಾಸನ ಪಾಠಕೇಳುವಾಗ ವೀರಮಹೇಂದ್ರನ ಬಗ್ಗೆ ಬರೆಯಬೇಕೆಂದು ತೀರ್ಮಾನಿಸಿ, 'ಬೇಗೂರು ಶಾಸನ ಒಂದು ವಿವೇಚನೆ' ಎಂಬ ಲೇಖನ ಬರೆದೆ. ಇದನ್ನೂ ಮುಂದೆ ಸಾಧನೆಯಲ್ಲಿ ಪ್ರಕಟಿಸಲಾಯಿತು. ಎರಡನೆಯ ವರ್ಷದ ಎಂ.ಎ. ತರಗತಿಗೆ ಬರುವ ವೇಳೆಗೆ ಮೊದಲ ಎಂ.ಎ. ತರಗತಿಗೆ ಶೇಷಶಾಸ್ತ್ರಿ ಮತ್ತು ಕಂಪನಿ ಬಂದಿತ್ತು. ನಮ್ಮ ಸಂಖ್ಯೆಗಿಂತಲೂ ಈ ಬಾರಿಯ ಸಂಖ್ಯೆ ಇನ್ನೂ ಹೆಚ್ಚಾಗಿತ್ತು. ಸಿಂಗು.ಸಿದ್ಧರಾಮಯ್ಯ, ದೊಡ್ಡರಂಗೇಗೌಡ ಇನ್ನು ಅನೇಕರು ಈ ಬ್ಯಾಚಿನಲ್ಲಿದ್ದರು. ದೊಡ್ಡರಂಗೇಗೌಡರು ಅಂಚೆ ಇಲಾಖೆಯಲ್ಲಿದ್ದು ರಾತ್ರಿ ಅಂಚೆ ಬ್ಯಾಗುಗಳನ್ನು ರೈಲಿನಲ್ಲಿ ಸಾಗಿಸಿ, ಅದೇ ರೈಲಿನಲ್ಲಿ ಬೇರೆ ಬ್ಯಾಗುಗಳನ್ನು ತೆಗೆದುಕೊಂಡು ಬಂದು ರೈಲ್ವೆ ನಿಲ್ದಾಣದಲ್ಲಿಳಿಸಿ ಮತ್ತೆ ಯಥಾ ಪ್ರಕಾರ ಕಾಲೇಜಿಗೆ ಬರುತ್ತಿದ್ದರು. ಈ ವಿಷಯ ಕೇಳಿಯೇ ನನಗೆ ಆಶ್ಚರ್ಯ. ಈ ಎಲ್ಲರೂ ಹೆಚ್ಚಿಗೆ ಕಾಲ ಕಳೆಯುತ್ತಿದ್ದ ಸ್ಥಳ ವಿಭಾಗದ ಪಕ್ಕದಲ್ಲಿದ್ದ ಆಲದ ಮರದ ನೆರಳಿನಲ್ಲಿ. ಇದು ತಪ್ಪಿದರೆ ಚಿದಾನಂದಮೂರ್ತಿಗಳು ಲೈಬ್ರರಿಯಲ್ಲಿ ಹೆಚ್ಚಿಗೆ ಕಾಲ ಕಳೆಯುತ್ತಿದ್ದರು. ಉಳಿದಂತೆ ಯಾರೂ ಹೆಚ್ಚಿಗೆ ಬರುತ್ತಿರಲಿಲ್ಲ. ಗ್ರಂಥಾಲಯದಲ್ಲಿದ್ದ ವೆಂಕಟರಮಣಯ್ಯ ಮತ್ತು ರಾಮಮೂರ್ತಿಯವರು ನಮಗೆ ಬೇಕಾದ ಪುಸ್ತಕಗಳನ್ನು ಒದಗಿಸುತ್ತಿದ್ದರು. ಹೀಗಾಗಿ ನಾನಂತೂ ಹೆಚ್ಚಿನ ಕಾಲವನ್ನು ಗ್ರಂಥಾಲಯದಲ್ಲಿಯೇ ಕಳೆಯುತ್ತಿದ್ದೆ. ಹೀಗಾಗಿ ಓದುವ ಹವ್ಯಾಸ ಅಂದೇ ಅಂಟಿಕೊಂಡಿತ್ತು. ಸೀನಿಯರ್ ಎಂ.ಎ. ತರಗತಿ ಮುಗಿಯುವ ವೇಳೆಗೆ ಅನೇಕ ಕಾಲೇಜು ಅಧ್ಯಾಪಕ ಬಂಡವಾಳ ಬಯಲಾಗಿತ್ತು. ಕೆಲವರು ಪಾಠಗಳನ್ನು ಉಡಾಫೆಯಿಂದ ಮಾಡುತ್ತಿದ್ದರು. ಕೆಲವರು ತರಗತಿಗಳನ್ನು ತೆಗೆದುಕೊಳ್ಳುತ್ತಲೇ ಇರಲಿಲ್ಲ. ಇಂದು ಇವರು ಇವರಲ್ಲಿ ಕೆಲವರು ಮಹಾ ಉಪದೇಶಕರಾಗಿ ಪೋಸು ಕೊಡುತ್ತಿರುವುದನ್ನು ಕಂಡಾಗ ನಗೆಯು ಬರುತಿದೆ ಎನಗೆ ನಗೆಯು ಬರುತಿದೆ. ಬಹುತೇಕ ಸಾಹಿತ್ಯ ಚರ್ಚೆಗಳು ಸಾಹಿತ್ಯದಲ್ಲಿ ಬರುವ ಕಾಮದ ವಿವರಗಳಿಗೇ ಮೀಸಲಾಗಿರುತ್ತಿತ್ತು. ಜನ್ನನ ಯಶೋಧರ ಚರಿತ್ರೆ, ಕೆಲವು ಸಾಹಿತಿಗಳ ಕಾದಂಬರಿಗಳ ಈ ಬಗೆಯ ಪಾತ್ರಗಳಿಗೆ ಹಾಗೂ ಕಾಮು, ಕಾಫ್ಕ ಮುಂತಾದ ಒಣ ಚರ್ಚೆಯಲ್ಲಿ ಯಾವ ಫಲಿತವೂ ಇಲ್ಲದೆ ಮುಕ್ತಾಯವಾಗುತ್ತಿತ್ತು.

ಮುಂದೆ ಪರೀಕ್ಷೆಗಳು ಮುಗಿದವು. ಪರೀಕ್ಷೆ ಮುಗಿದ ಮೇಲೆ ನಡೆದ ಒಂದು ಘಟನೆಯನ್ನು ಇಲ್ಲಿ ಹೇಳಲೇಬೇಕಾಗಿದೆ. ಎಂ.ಎ. ಎರಡನೆಯ ವರ್ಷಕ್ಕೆ ಬರುವ ಕಾಲಕ್ಕೆ ಮುಗಳಿಯವರು ನಿವೃತ್ತರಾದರು. ಅವರ ಸ್ಥಾನಕ್ಕೆ ಜಿ.ಎಸ್. ಶಿವರುದ್ರಪ್ಪನವರು ಬಂದರು. ಪರೀಕ್ಷೆ ಮುಗಿದ ಮೇಲೆ ಊರುಗಳಿಗೆ ಹೋದೆವು. ಒಂದು ಬಾರಿ ಬೆಂಗಳೂರಿಗೆ ಬಂದಿದ್ದಾಗ ಜಿ. ಶ್ರೀನಿವಾಸರಾಜು ಅವರು ಸಿಕ್ಕಿದ್ದರು. ಮುಂದೆ ಎಂ.ಎ. ಪಾಸಾಗಿ ಉಪನ್ಯಾಸಕರಾಗುವವರಿಗೆ ಹಳಗನ್ನಡ ಹೇಗೆ ಪಾಠಮಾಡಬೇಕೆಂಬ ಬಗ್ಗೆ ೧೦ ದಿನಗಳ ಕಾಲ ಉಪನ್ಯಾಸವಿರಿಸಿಕೊಂಡಿರುವುದಾಗಿಯೂ ಮಧ್ಯಾಹ್ನ ಊಟದ ವ್ಯವಸ್ಥೆಯನ್ನು ಏರ್ಪಾಟು ಮಾಡಿರುವುದಾಗಿಯೂ ತಿಳಿಸಿ, ನಮ್ಮ ಬ್ಯಾಚಿನ ವಿದ್ಯಾರ್ಥಿಗಳನ್ನು ಆ ಕಾರ್ಯಕ್ರಮದಲ್ಲಿ ಭಾಗವಹಿಸಲು ಕರೆದರು. ನಾವೂ ಒಪ್ಪಿ ಹೋದೆವು. ಮೊದಲದಿನ ಜಿ.ಪಿ. ರಾಜರತ್ನಂ ಅವರು ಹಳಗನ್ನಡ ಪದ್ಯವನ್ನು ಹೇಗೆ ಬೋಧಿಸಬೇಕೆಂಬುದನ್ನು ೨ ಗಂಟೆಗಳ ಅವಧಿಯಲ್ಲಿ ಒಂದೆರಡು ಪದ್ಯ ತೆಗೆದುಕೊಂಡು ಓದು, ಪದವಿಂಗಡಣೆ, ಅನ್ವಯಾರ್ಥ, ಸಾರಾಂಶ ಇವನ್ನೆಲ್ಲಾ ವಿವರವಾಗಿ ಬೋಧಿಸಿದರು. ಎರಡನೆಯ ದಿನ ರೊಹಡೇಕರ್ ಅವರು ಉಪನ್ಯಾಸ ನೀಡಿದರು. ಈ ಕಾರ್ಯಕ್ರಮ ನಡೆಯುತ್ತಿದ್ದ ಸ್ಥಳ

ನ್ಯಾಷನಲ್ ಕಾಲೇಜು. ಮಾರನೆಯ ದಿನ ಸೆಂಟ್ರಲ್ ಕಾಲೇಜು ಕನ್ನಡ ವಿಭಾಗದ ಮುಖ್ಯಸ್ಥರಿಂದ ನಮಗೆಲ್ಲಾ ಬುಲಾವ್ ಬಂತು. ಸರಿ ಹೋದೆವು. ಮುಖ್ಯಸ್ಥರ ಮೊದಲ ಪ್ರಶ್ನೆ ನೀವೆಲ್ಲಾ ಎಂ.ಎ. ಪಾಸಾಗಿ ಬಿಟ್ರಾ ಎಂದರು. ನಾವು ಇಲ್ಲಾ ಸಾರ್ ಎಂದೆವು. ಮತ್ತೆ ಅದೇನೋ ಮೇಷ್ಟ್ರಿಗೆ ನೀಡುವ ಟ್ರೈನಿಂಗ್‌ನಲ್ಲಿ ನೀವೆಲ್ಲಾ ಸೇರಿದ್ದೀರಂತೆ ಎಂದರು. ಏನೋ ಕಲಿಯೋಣವೆಂದು ಹೋಗಿದ್ದೀವಿ ಸಾರ್. ಏಕೆ ಇಲ್ಲಿ ಕಲಿಸಲಿಲ್ವಾ, ನಾಳೆ ನೀವ್ಯಾರೂ ಅಲ್ಲಿಗೆ ಹೋಗಕೂಡ್ದು ಎಂದರು. ನಾವು ಹೋಗೊಲ್ಲ ಸಾರ್ ಎಂದು ಬಂದು ಜಿ. ಶ್ರೀನಿವಾಸರಾಜುಗೆ ಈ ವಿಷಯ ತಿಳಿಸಿದೆವು. ಶ್ರೀನಿವಾಸರಾಜು ನಿಮ್ಮ ಭವಿಷ್ಯ ಮುಖ್ಯ ಆಯ್ತು ಇಲ್ಲಿಗೆ ನಿಲ್ಲಿಸ್ತೀವಿ ಎಂದು ಆ ಟ್ರೈನಿಂಗ್ ಅನ್ನು ಎರಡು ದಿನಕ್ಕೇ ನಿಲ್ಲಿಸಿದರು. ಮುಂದೆ ಎಂ.ಎ. ರಿಸಲ್ಟು ೧೯೭೧ರ ಜೂನ್‌ಗೆ ಬಂತು. ಎರಡನೆಯ ದರ್ಜೆಯಲ್ಲಿ ಪಾಸಾಗಿದ್ದೆ. ೫೬% ಬಂದಿತ್ತು. ಸಾಂಸ್ಕೃತಿಕ ಚರಿತ್ರೆಯ ವಿಷಯದಲ್ಲಿ ತಾಳ್ತಜೆ ವಸಂತಕುಮಾರ ನನಗಿಂತಲೂ ಮುಂದೆ ಇದ್ದ. ಆತನಿಗೆ ನಾಲ್ಕನೆಯ ರ್‍ಯಾಂಕೂ ಬಂದಿತ್ತು. ನಾರಾಯಣ ಮೊದಲ ಸ್ಥಾನದಲ್ಲಿ ಉತ್ತೀರ್ಣನಾಗಿದ್ದ. ಕೆ.ಪಿ. ಭಟ್ ಮೂರನೆಯ ಸ್ಥಾನ ಪಡೆದಿದ್ದರು. ರಾಜಕುಮಾರ್ ಗೋಲ್ಡ್‌ಮೆಡಲ್ ನನಗೆ ಬರಲಿಲ್ಲ. ನನ್ನ ಮಗಳು ಎಂ.ಎ.ನಲ್ಲಿ ಅದನ್ನು ಪಡೆದುಕೊಂಡಿದ್ದಾಳೆ.

ಎಂ.ಎ. ಪಾಸಾದ ಮೇಲೆ ಕೆಲಸದ ಬೇಟೆ ಆರಂಭ. ಅಲ್ಲಿಯವರೆಗೆ ಓದಿನ ನೆಪದಲ್ಲಿ ದಿನದೂಡುತ್ತಿದ್ದ ನಮಗೆ ಈಗ ಕೆಲಸಕ್ಕಾಗಿ ಅಲೆದಾಟ, ಅರ್ಜಿ ಹಾಕುವುದು, ಇತ್ಯಾದಿ ಕೆಲಸಕ್ಕೆ ಶುರುಹಚ್ಚಿಕೊಂಡೆವು. ಅನೇಕ ಸ್ನೇಹಿತರು ವಿವಿಧ ಶಿಫಾರ್ಸುಗಳೊಂದಿಗೆ ಅಲ್ಲಲ್ಲಿ ಕೆಲಸಕ್ಕೆ ಸೇರಿಕೊಳ್ಳಹತ್ತಿದರು. ಪ್ರಸನ್ನಕುಮಾರ ತುಮಕೂರಿನ ಸಿದ್ಧಗಂಗಾ ಕಾಲೇಜು, ವೆಂಕಟರಾಜು ಶೇಷಾದ್ರಿಪುರಂ ಕಾಲೇಜು ಹೀಗೆ ಒಬ್ಬೊಬ್ಬರೇ ನಿರುದ್ಯೋಗದಿಂದ ಕಳಚಿಕೊಳ್ಳಹತ್ತಿದರು. ನಾನೂ ಬಹಳ ಕಡೆ ಪ್ರಯತ್ನಿಸಿದೆ. ಎಲ್ಲಿಯೂ ಸೇರಿಕೊಳ್ಳಲಾಗಲಿಲ್ಲ. ಇದೇ ಕಾಲಕ್ಕೆ ವಿಧಾನಸಭೆಗೆ ಸಾರ್ವತ್ರಿಕ ಚುನಾವಣೆ ನಡೆಯ ಹತ್ತಿದವು. ಕನ್ನಡ ಮೇಷ್ಟ್ರಾಗಿ ಮಾಗಡಿ ರಸ್ತೆಯ ಕಾರ್ಪೊರೇಷನ್ ಹೈಸ್ಕೂಲ್‌ನಲ್ಲಿ ಕೆಲಸ ಮಾಡುತ್ತಿದ್ದ ಕೋಣಂದೂರು ಲಿಂಗಪ್ಪನವರು ಚುನಾವಣೆಯಲ್ಲಿ ಸ್ಪರ್ಧಿಸಲು ಕೆಲಸಕ್ಕೆ ರಾಜೀನಾಮೆ ನೀಡಿದ್ದರು. ಈ ಸಂದರ್ಭದಲ್ಲಿ ನಮ್ಮ ಸ್ನೇಹಿತ ರಾಮಸ್ವಾಮಿರೆಡ್ಡಿ ಮೂಲಕ ಕಾರ್ಪೊರೇಷನ್ ಎಜುಕೇಶನ್ ಆಫೀಸರ್ ಆಗಿದ್ದ ಪದ್ಮಾವತಿ ವಿಠಲರಾವ್ ಅವರನ್ನು ಭೇಟಿಯಾಗಿ ಐದು ತಿಂಗಳ ಕೆಲಸ ಗಿಟ್ಟಿಸಿಕೊಂಡೆ. ಅಕ್ಟೋಬರ್ ೧೯೭೧ರಲ್ಲಿ ಕೆಲಸಕ್ಕೆ ಸೇರಿ ಏಪ್ರಿಲ್ ೧೯೭೨ರ ವರೆಗೆ ಅಲ್ಲಿ ಕೆಲಸ ಮಾಡಿದೆ. ಏಪ್ರಿಲ್‌ನಿಂದ ನವೆಂಬರ್‌ವರೆಗೆ ಮತ್ತೆ ನಿರುದ್ಯೋಗ. ೧೯೭೨ರ ಏಪ್ರಿಲ್ ತಿಂಗಳ ಮಧ್ಯಭಾಗದಲ್ಲಿ ಟೈಫಾಯಿಡ್ ಜ್ವರ ಬಂತು. ಸುಮಾರು ಒಂದು ತಿಂಗಳ ಕಾಲ ಇದು ನನ್ನನ್ನು ಸತಾಯಿಸಿತು. ಬಹು ನಿಶ್ಶಕ್ತನನ್ನಾಗಿ ಮಾಡಿತು. ಖಾಯಿಲೆ ವಾಸಿಯಾದ ಮೇಲೆ ಮತ್ತೆ ಕೆಲಸದ ಬೇಟೆ ಪ್ರಾರಂಭ. ಗ್ರಾಮಾಂತರ ಪ್ರದೇಶದಿಂದ ಬಂದಿದ್ದ ನನಗೆ ಶಿಫಾರಸ್ಸು ಮಾಡುವವರು ಇರಲಿಲ್ಲ. ಅನೇಕ ಕಡೆ ಪ್ರಯತ್ನಿಸಿ ಕೊನೆಗೆ ಸರ್ಜಾಪುರಕ್ಕೆ ಹೋದೆ. ಸರ್ಜಾಪುರದಲ್ಲಿ ಸರ್ದಾರ್ ವಲ್ಲಭಭಾಯ್ ಪಟೇಲ್ ಜೂನಿಯರ್ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರ ಹುದ್ದೆ ಖಾಲಿ ಇತ್ತು. ಆಗತಾನೆ ಕಾಲೇಜು ಶುರುವಾಗಿತ್ತು ಅಲ್ಲಿನ ಪ್ರಿನ್ಸಿಪಾಲ್ ರಾಮಸ್ವಾಮಿರೆಡ್ಡಿಯವರನ್ನು ಕಂಡು ನಂತರ ಛೇರ್‌ಮನ್ ಮುನಿಸ್ವಾಮಿರೆಡ್ಡಿಯವರನ್ನು ಕಂಡೆ. ಅಲ್ಲಿ ಉಪನ್ಯಾಸಕ ಹುದ್ದೆಗೆ ಸೇರಿದೆ. ಈ ಕಾಲೇಜಿನಲ್ಲಿ ನಾನು ಕೆಲಸ ಮಾಡಿದ್ದು ೧೭-೭-೧೯೭೨ರಿಂದ ೨೩-೯-೧೯೭೨ರ ವರೆಗೆ. ಅಧ್ಯಕ್ಷರಾಗಿದ್ದ ಮುನಿಸ್ವಾಮಿರೆಡ್ಡಿಯವರು ನಾನು ಕೆಲಸ ಬಿಡುತ್ತಿರುವುದರ ಬಗ್ಗೆ ಸ್ವಲ್ಪ ಬೇಸರದ ಮಾತುಗಳನ್ನಾಡಿದರು. ಈ ಅವಧಿಯಲ್ಲಿಯೂ ನಾನು ಸರ್ಜಾಪುರ ಸೇರಿದಂತೆ ಸುತ್ತಮುತ್ತಲ ಊರುಗಳಲ್ಲಿ ಹಂದೇನಹಳ್ಳಿಯ ಮೇಷ್ಟ್ರು ಕೃಷ್ಣಾರೆಡ್ಡಿ ಜೊತೆ ಓಡಾಡುತ್ತಿದ್ದೆ. ಈ ಅವಧಿಯೇ ಅಲ್ಲದೆ ಮುಂದೆಯೂ ಈ ಕೃಷ್ಣಾರೆಡ್ಡಿ ಆತ್ಮೀಯ ಮಿತ್ರನಾಗಿ ಸಹಕರಿಸಿದ್ದಾರೆ. ಕೆಲವು ತಿಂಗಳು ಕಳೆದ ಮೇಲೆ ಸರ್ಕಾರದಿಂದ ಲೋಕಲ್ ಕ್ಯಾಂಡಿಡೇಟ್ ಆಗಿ ಆಯ್ಕೆಯಾಗಿ ಮೈಸೂರು ಜಿಲ್ಲೆ ಗುಂಡ್ಲುಪೇಟೆಗೆ ಹೋದೆ. ಇಲ್ಲಿ ಅನೇಕರು ನನ್ನಂತೆ ಬಂದಿದ್ದರು. ಸುರೇಶ್, ಕುಲಕರ್ಣಿ, ರಾಮಪ್ಪ ಮುಂತಾದವರು ಇದ್ದರು. ಅದೇ ಹೈಸ್ಕೂಲಿನಲ್ಲಿ ಚಿಕ್ಕತುಪ್ಪೂರಿನ ಆರ್. ಶ್ರೀನಿವಾಸಮೂರ್ತಿಯವರು ಬಹು ಆತ್ಮೀಯರಾಗಿದ್ದರು. ಇದ್ದವರೆಲ್ಲಾ ಅವಿವಾಹಿತರೇ ಒಂದೇ ಮನೆಯಲ್ಲಿ ವಾಸ. ಭಾನುವಾರ ಬಂದರೆ ಗುಂಡ್ಲುಪೇಟೆ ಆಸುಪಾಸಿನಲ್ಲಿ ಸುತ್ತಾಡುವುದು ಅಲ್ಲಿನ ಕೋಳಿಗುಡ್ಡ, ಗುಂಡ್ಲು ನದಿತೀರದ ದೇವಾಲಯ ಸಮೂಹ, ತುಪ್ಪೂರು, ಪಾರ್ವತಿ ಬೆಟ್ಟ, ತ್ರಿಯಂಬಕಪುರ, ತೆರಕಣಾಂಬಿ, ಹುಲಿಗನ ಮೊರಡಿ ವೆಂಕಟರಮಣ ದೇವಾಲಯ, ಬಂಡೀಪುರ, ಗೋಪಾಲಸ್ವಾಮಿ ಬೆಟ್ಟ ಹೀಗೆ ಓಡಾಡುವುದೇ ಆಗಿತ್ತು. ಪ್ರಿನ್ಸಿಪಾಲ್ ಹಾಗೂ ಹೆಡ್‌ಮಾಸ್ಟರ್ ನಂಜುಂಡಯ್ಯನವರು ಬಹುವಾಗಿ ಇದಕ್ಕೆ ಪ್ರೋತ್ಸಾಹ ನೀಡುತ್ತಿದ್ದರು ಬಹು ಆತ್ಮೀಯವಾಗಿ ಮಾತನಾಡಿ ಹುರಿದುಂಬಿಸುತ್ತಿದ್ದರು. ಇವರ ಶ್ರೀಮತಿಯವರೇ ಲೇಖಕಿಯರಾದ ಸಿ.ಎನ್. ಜಯಲಕ್ಷ್ಮಿದೇವಿ. ಈ ನಂಜುಂಡಯ್ಯನವರು ಮೈಸೂರಿನವರು, ಅಲ್ಲದೆ ರೆಗ್ಯುಲರ್ ಎಂ.ಎ. ಪಾಸು ಮಾಡಿದ್ದವರು ಸಾಹಿತ್ಯಾಸಕ್ತರು. ಕಾಲೇಜಿನ ಕಾರ್ಯಕ್ರಮವೊಂದಕ್ಕೆ ಆಗ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ದೇ.ಜವರೇಗೌಡರನ್ನು ಆಹ್ವಾನಿಸಿದ್ದರು. ನಾನೇ ಖುದ್ದಾಗಿ ಹೋಗಿ ಮೈಸೂರಿನಿಂದ ಅವರನ್ನು ಕರೆತಂದಿದ್ದೆ. ಇವರ

ಜೊತೆಯಲ್ಲಿ ಗೋಪಾಲಸ್ವಾಮಿ ಬೆಟ್ಟಕ್ಕೂ ಹೋಗಿದ್ದೆ. ನಂಜುಂಡಯ್ಯನವರು ಎಷ್ಟು ಮೃದುವಾಗಿದ್ದರೆಂದರೆ ಇವರ ಕಣ್ಣೆದುರೇ ಟೇಬಲ್, ಚೇರು, ಡೆಸ್ಕುಗಳನ್ನು ನಮ್ಮಲ್ಲಿನ ಒಂದಿಬ್ಬರು ಉಪಾಧ್ಯಾಯರು ಕದ್ದು ಸಾಗಿಸುತ್ತಿದ್ದರೂ, ಏನೂ ಮಾತನಾಡುತ್ತಿರಲಿಲ್ಲ. ನಿವೃತ್ತರಾದಾಗ ಸಂಬಂಧಿಸಿದ ವಸ್ತುಗಳಿಗೆ ಹಣಕಟ್ಟಿಕೊಟ್ಟು ಬಂದರೆಂದು ನಂತರ ತಿಳಿಯಿತು.

ನಾನು ಹಾಗೂ ನನ್ನಂತೆ ಕೆಲವು ಯುವಕರು ಗುಂಡ್ಲುಪೇಟೆಗೆ ಹೋದಾಗ ಅಲ್ಲಿ ನಮಗಿಂತ ಹಿಂದೆ ಇದ್ದು, ಜೂನಿಯರ್ ಕಾಲೇಜಿನಲ್ಲಿ ಕೆಲಸಮಾಡುತ್ತಿದ್ದ ಸೀನಿಯರ್ ಹೈಸ್ಕೂಲ್ ಉಪನ್ಯಾಸಕರು ತಮಗೆ ಕಾಲೇಜಿನ ಕೆಲಸ ತಪ್ಪಿಹೋಯಿತಲ್ಲಾ ಎಂಬ ಒಳಗುದಿಯಿಂದ ನಮಗೆ ಅಸಹಕಾರವನ್ನೇ ನೀಡಲು ಪ್ರಾರಂಭಿಸಿದರು. ಆಗ ಅವರನ್ನೂ, ನಮ್ಮನ್ನೂ ಬಹು ಸಮಾಧಾನದಿಂದ ನಡೆಸಿಕೊಂಡು ಕಾಲೇಜಿನ ಕೆಲಸಗಳು ಸುಸೂತ್ರವಾಗಿ ನಡೆಯುವಂತೆ ನೋಡಿಕೊಂಡವರು ಪ್ರಿನ್ಸಿಪಾಲರಾಗಿದ್ದ ನಂಜುಂಡಯ್ಯನವರು. ಇವರಿಗೆ ಹೆಗಲಾಗಿ ನಿಂತವರು ಸ್ಥಳೀಯರಾದ ಶಿವಲಿಂಗಯ್ಯನವರು. ಇವರು ವಯಸ್ಸಿನಲ್ಲಿ ನನಗಿಂತ ದೊಡ್ಡವರಾದರೂ ನಮ್ಮೊಂದಿಗೆ ಆತ್ಮೀಯವಾಗಿ ಬೆರೆಯುತ್ತಿದ್ದರು. ಇವರದು ಇದೇ ಊರಾದ್ದರಿಂದ ಇವರ ಮೂಲಕ ಊರಿನ ಅನೇಕ ಹಿರಿಯ ರಾಜಕಾರಣಿಗಳ ಪರಿಚಯವೂ ಆಗಿತ್ತು. ಮುನಿಸಿಪಲ್ ಪ್ರೆಸಿಡೆಂಟ್ ಚಿಕ್ಕಣ್ಣ, ಪುರಿ ಅಂಗಡಿ ಚಿಕ್ಕಣ್ಣ, ಅಬ್ದುಲ್ ನಜೀರ್‌ಸಾಬ್ ಹೀಗೆ ಇವರೆಲ್ಲರ ಪರಿಚಯದಿಂದ ಅನೇಕ ಹೊಸ ಹೊಸ ವಿಷಯಗಳು ಚರ್ಚೆಗೆ ಬರುತ್ತಿದ್ದವು. ಇಲ್ಲಿ ಕೆಲಸ ಮಾಡುತ್ತಿದ್ದಾಗಲೇ ಈ ತಾಲೂಕಿನಲ್ಲಿ ಎಲ್ಲಿ ಯಾವ ಜನ ಇದ್ದಾರೆಂಬ ಬಗ್ಗೆ ವಿವರಗಳನ್ನು ಪಡೆಯುತ್ತಿದ್ದೆ. ಮತ್ತೆ ಕೆಲವು ಪ್ರಮುಖ ಜಾತಿಗಳು ಇಲ್ಲಿ ಇಲ್ಲದಿರುವ ಬಗ್ಗೆ ಯೋಚಿಸುತ್ತಿದ್ದೆ. ಆಗಲೇ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದ ಮೂಗೂರು ಬ್ರಾಹ್ಮಣರ, ಪರಿವಾರ ನಾಯಕರ, ಇತರೆ ಜಾತಿಗಳವರ ಪರಿಚಯವಾಯಿತು. ಒಂದು ರೀತಿಯಲ್ಲಿ ಈ ಊರು ಮತ್ತು ಇಲ್ಲಿ ಕೆಲಸ ಮಾಡಿದ ಅವಧಿ ಅನೇಕ ಮಾಹಿತಿಗಳ ಸಂಗ್ರಹದ ಕಾಲ. ಕೋಳಿಗುಡ್ಡವನ್ನು ಕುರಿತು ಒಂದು ವಿವರವಾದ ವರ್ಣನೆಯನ್ನು ನೆನಪಿನಲ್ಲಿ ಬರೆದಿದ್ದೇನೆ. ಬರಗಿ, ಅಲತ್ತೂರು, ನಾಗಲಿಂಗನ ಬೆಟ್ಟ ಮುಂತಾದ ಊರುಗಳ ಮಾಹಿತಿ ಇಲ್ಲೇ ಆದದ್ದು. ಗಂಗರ ಶಾಸನಗಳಲ್ಲಿ ಬರುವ ದುರ್ವಿನೀತ ಗೆದ್ದ ಊರುಗಳ ಪಟ್ಟಿಯಲ್ಲಿ ಬರುವ ಅಲತ್ತೂರು ಇದೇ ಇರಬೇಕೆಂದು ಇಂದಿಗೂ ನನ್ನ ನಂಬಿಕೆ. ಏಕೆಂದರೆ ಈ ಊರಿನಲ್ಲಿ ಗಂಗಡಿಕಾರ ಒಕ್ಕಲಿಗರು ಹೆಚ್ಚಿಗೆ ಇದ್ದಾರೆ. ಸುತ್ತಮುತ್ತಲ ಯಾವ ಗ್ರಾಮಗಳಲ್ಲಿಯೂ ಇಲ್ಲ. ೧೯೭೨ರ ಸೆಪ್ಟಂಬರ್‌ನಲ್ಲಿ ಕೆಲಸಕ್ಕೆ ಇಲ್ಲಿ ಸ್ಥಳೀಯ ಅಭ್ಯರ್ಥಿಯಾಗಿ ಸೇರಿದೆ. ೧೯೭೩ರಲ್ಲಿ ಮತ್ತೆ ಕೆಲಸ ಮುಂದುವರಿಯಿತಾದರೂ ಅದನ್ನು ಗುತ್ತಿಗೆಯಾಧಾರಿತ ಎಂದು ಪರಿವರ್ತಿಸಿದರು. ೧೯೭೩ರಲ್ಲಿ ಮೇ ತಿಂಗಳಲ್ಲಿ ನನ್ನ ಮದುವೆಯಾಯಿತು. ನನ್ನ ಹೆಂಡತಿಯನ್ನು ಅಲ್ಲಿಗೆ ಕರೆದುಕೊಂಡು ಹೋದೆ. ಆಕೆಗೆ ತೆಲುಗು ಬಿಟ್ಟರೆ ಬೇರೆ ಭಾಷೆ ಬಾರದು. ಅಲ್ಲಿನವರಿಗೆ ಕನ್ನಡ ಬಿಟ್ಟರೆ ಬೇರೆ ಭಾಷೆ ಬಾರದು. ಇಂತಹ ಸಮಯದಲ್ಲಿ ತೆಲುಗು ಬಾರದಿದ್ದರೂ ಅಲ್ಲಿನ ತಾಯಮ್ಮ ಎಂಬ ಕುರುಬರ ಹೆಂಗಸು ಬಹು ಸಹಕಾರ ನೀಡಿದ್ದರು. ಶ್ರೀನಿವಾಸಮೂರ್ತಿ, ರಾಮಪ್ಪ ಇವರೆಲ್ಲಾ ನಮ್ಮ ಮನೆಯವರೇ ಆಗಿದ್ದರು. ಗುಂಡ್ಲುಪೇಟೆ ಜೂನಿಯರ್ ಕಾಲೇಜಿನಲ್ಲಿ ೧೯೭೨ರ ಸೆಪ್ಟಂಬರ್‌ನಿಂದ ೧೯೭೭ ಏಪ್ರಿಲ್ ೧೧ರವರೆಗೆ ಉಪನ್ಯಾಸಕನಾಗಿದ್ದ ಅವಧಿಯಲ್ಲಿ ಅನೇಕ ಗೆಳೆಯರು ನೆನಪಿನಲ್ಲಿ ಬರುತ್ತಾರೆ. ಒಬ್ಬೊಬ್ಬರದು ಒಂದೊಂದು ಗುಣ, ಅವತಾರ, ಏಪ್ರಿಲ್ ೧೯೭೭ರಲ್ಲಿ ಎಲ್ಲರೂ ಚದುರಿದರು. ಕೆಲವರು ಮುಂದಿನ ದಿನಗಳಲ್ಲಿ ನೆನಪಿನಿಂದ ಮಾಸಿಹೋದರು. ಕೆಲವರು ಮಾತ್ರ ನೆನಪಿನಲ್ಲಿ ಅಚ್ಚಳಿಯದೇ ಉಳಿದಿದ್ದಾರೆ. ಮಂಗಳೂರು ಬಳಿಯ ಪುತ್ತೂರಿನ ಸುರೇಶ ಭೌತಶಾಸ್ತ್ರದ ಉಪನ್ಯಾಸಕರಾಗಿದ್ದರು. ಮಲ್ಲಪ್ಪ ಹುಲ್ಲಪ್ಪ ಕಟಗಿ ರಸಾಯನಶಾಸ್ತ್ರದ ಉಪನ್ಯಾಸಕರಾಗಿದ್ದರು. ಕುಲಕರ್ಣಿ ಎಂಬುವವರು ಮಂತ್ರಾಲಯದ ಭಕ್ತರಾಗಿದ್ದು, ಇಂಗ್ಲೀಷ್ ವಿಷಯಕ್ಕೂ, ಜಿ. ರಾಮಪ್ಪ ಎಂಬುವವರು ಅರ್ಥಶಾಸ್ತ್ರದ ಉಪನ್ಯಾಸಕರಾಗಿದ್ದರು. ನಾವೆಲ್ಲಾ ಅಕ್ಕಪಕ್ಕದ ಎರಡು ಮನೆಗಳನ್ನು ಬಾಡಿಗೆಗೆ ತೆಗೆದುಕೊಂಡು ವಾಸಿದ್ದೆವು. ಭಾನುವಾರ ಬಂದರೆ, ಗುಂಡ್ಲುಕೆರೆಗೆ ಹೋಗಿ ಬಟ್ಟೆ ಒಗೆದುಕೊಂಡು ಬರುವುದು. ತಿಳಿಯಾದ ನೀರಿನಲ್ಲಿ ಸ್ನಾನ ಮಾಡುವುದು ಇಂತಹ ಖುಷಿ ಕೆಲಸಗಳಲ್ಲದೆ ಯಾವುದಾದರೂ ಬೆಟ್ಟಕ್ಕೋ, ದೇವಾಲಯಕ್ಕೋ ಹೋಗಿ ಬರುವುದು. ಹೊಸ ಹೊಸ ಸ್ಥಳಗಳಿಗೆ ಹೋಗುವುದು. ಇಂತಹ ಕೆಲಸಗಳಲ್ಲಿ ಮಗ್ನರಾಗಿರುತ್ತಿದ್ದೆವು. ನನ್ನ ಹೆಂಡತಿ ಗುಂಡ್ಲುಪೇಟೆಯಲ್ಲಿರುವಷ್ಟು ಕಾಲವೂ ಈ ಗೆಳೆಯರ ಒಂದಲ್ಲಾ ಒಂದು ಸಮಯದ ಊಟ ನಮ್ಮ ಮನೆಯಲ್ಲೇ ಆಗುತ್ತಿತ್ತು. ಒಂದು ಬಗೆಯ ಅನ್ಯೋನ್ಯ ಭಾವ ನಮ್ಮಲ್ಲಿ ಇತ್ತು. ರಾಮಪ್ಪ ಮಧ್ಯೆ ಕಾಲೇಜು ಬಿಟ್ಟು ಹೋಗಬೇಕಾದ ಸಂದರ್ಭ ಬಂದಾಗ ನನ್ನ ಹೆಂಡತಿ ಬಹುವಾಗಿ ನೊಂದುಕೊಂಡಳು. ಕಾಲೇಜಲ್ಲದೆ ಹೈಸ್ಕೂಲಿನ ಸ್ನೇಹಿತರು ನಮ್ಮಂತೆ ಯುವಕರಿದ್ದವರು ನಮ್ಮ ಜತೆ ಸೇರಿದ್ದರು. ಆರ್. ಶ್ರೀನಿವಾಸಮೂರ್ತಿ ಅವರ ಸ್ಥಳ ಗುಂಡ್ಲುಪೇಟೆ ಸಮೀಪದ ಚಿಕ್ಕತುಪ್ಪೂರು. ಅನೇಕ ಸನ್ನಿವೇಶಗಳಲ್ಲಿ ಕಷ್ಟಕ್ಕೆ ಆದವ್ಯಕ್ತಿ. ನಮ್ಮ ಬಗ್ಗೆ ಅತೀವ ಕಾಳಜಿ ಹೊಂದಿದ್ದರು. ಗುಂಡ್ಲುಪೇಟೆಯ ಅನೇಕ ಸ್ಥಳಗಳಿಗೆ ಹೋಗಿ ಬರಲು ಇವರೇ ಮಾರ್ಗದರ್ಶಿ. ಇವರನ್ನು ಮುಂದಿಟ್ಟುಕೊಂಡು ನಾವು ಹಿಂದೆ ಹೋಗುತ್ತಿದ್ದುದಕ್ಕೆ ಕೆಲವು ಕಾರಣಗಳೂ ಇವೆ. ಇವರು ಸ್ಥಳವಂದಿಗರು. ಜೊತೆಗೆ ಯಾವ ಸ್ಥಳಕ್ಕೆ ಹೋದರೂ ಇವರಿಗೆ ಪರಿಚಿತ ಹಿರಿಯರು.

ಪರಿಚಿತ ವಿದ್ಯಾರ್ಥಿಗಳು ಇರುತ್ತಿದ್ದರು. ಹೀಗಾಗಿ ನಮ್ಮ ಅನೇಕ ಸ್ಥಳೀಯ ಸಮಸ್ಯೆಗಳು ನೀಗಿಹೋಗುತ್ತಿದ್ದವು. ಇವರು ಉತ್ತಮ ಹಾಡುಗಾರರೂ ಆಗಿದ್ದರು. ಇವರ ಅಚ್ಚುಮೆಚ್ಚಿನ ಹಾಡು 'ನನ್ನ ಪ್ರೇಮದ ಹುಡುಗಿ ತಾವರೆಯ ನಸುಗೆಂಪು' ಎಂಬ ಬಿ.ಎಂ.ಶ್ರೀ ಅವರ ಕವನ. ಇದನ್ನು ನಾವು ಹಾಡಿಸಿ ಆನಂದಿಸುತ್ತಿದ್ದೆವು. ಗುಂಡ್ಲುನದಿ ತೀರದ ಪರವಾಸುದೇವರ ದೇವಾಲಯ, ರಾಮೇಶ್ವರ ದೇವಾಲಯ ಮುಂತಾದ ದೇವಾಲಯ ಸಮುಚ್ಚಯಗಳನ್ನು ಇವರ ನೇತೃತ್ವದಲ್ಲಿ ನೋಡಿದೆ. ಗುಂಡ್ಲುಪೇಟೆಯಲ್ಲಿ ಈತ ನಮಗೆ ಬೆಂಬಲವಾಗಿ ನಿಂತಿದ್ದ ವ್ಯಕ್ತಿ. ಇಂದಿಗೂ ಈ ಸಂಬಂಧ ಹಾಗೆಯೇ ಉಳಿದು ಬಂದಿದೆ (ಇತ್ತೀಚೆಗೆ ಇವರು ತೀರಿಹೋದರು.) ತರಗತಿಗಳು ಬೆಳಗ್ಗೆ ೧೦.೩೦ರಿಂದ ೫ರ ವರೆಗೆ ನಡೆದರೂ ನಮ್ಮ ಕ್ವಾಟ್ರರ್ಸ್ ಇದ್ದುದರಿಂದ ಸಂಜೆ ಐದು ಗಂಟೆಗೆ ಎಲ್ಲರೂ ಮನೆಯಲ್ಲಿ ಸೇರುತ್ತಿದ್ದೆವು. ಒಂದು ತರಹದ ಸ್ನೇಹದ ವಾತಾವರಣ ಮನೆ ಮಾಡಿತ್ತು. ಇಷ್ಟಿದ್ದರೂ ನಾನು ನನ್ನ ಶಾಸನ ಲೇಖನಗಳನ್ನು ಬರೆಯುವುದು ನಿಲ್ಲಿಸಿರಲಿಲ್ಲ. ೧೯೭೪ರಲ್ಲಿ 'ಶಾಸನಗಳಲ್ಲಿ ಮೊರಸುನಾಡು' ಎಂಬ ಲೇಖನ ಮೈಸೂರು ವಿಶ್ವವಿದ್ಯಾನಿಲಯದ ಮಾನವಿಕ ಕರ್ನಾಟಕದಲ್ಲಿ ಪ್ರಕಟವಾಯಿತು. 'ಬೇಗೂರು ಶಾಸನ ಒಂದು ವಿವೇಚನೆ' ಸಾಧನೆಯಲ್ಲಿ ಪ್ರಕಟವಾಯಿತು. ಹೀಗೆ ಅಧ್ಯಯನ, ಸ್ನೇಹ, ಪ್ರವಾಸ ನಡೆದೇ ಇತ್ತು. ೧೯೭೪ರಲ್ಲಿ ನನ್ನ ಮಗಳು ಸ್ಮಿತಾ ಹುಟ್ಟಿದಳು. ಈ ಗುಂಡ್ಲುಪೇಟೆಯಲ್ಲಿದ್ದ ಅವಧಿಯಲ್ಲಿ ಬೆಂಗಳೂರಿನ ಸಂಪರ್ಕ ಸ್ವಲ್ಪ ಕಡಿದುಕೊಂಡಂತಾಯಿತು. ಹೀಗಾಗಿ ಎಲ್ಲಿಯಾದರೂ ಬೇರೆ ಕಾಲೇಜುಗಳಲ್ಲಿ ಕೆಲಸಕ್ಕೆ ಪ್ರಯತ್ನಿಸಿರಲಿಲ್ಲ. ೧೯೭೫ರ ವೇಳೆಗೆ ಕನ್ನಡ ಎಂ.ಎ. ತರಗತಿಯ ಅನೇಕ ಬ್ಯಾಚುಗಳು ಪದವೀಧರರಾದ್ದರಿಂದ ಸ್ಪರ್ಧೆಯೂ ಅಧಿಕವಾಯಿತು. ೧೯೭೫ರ ಮಾರ್ಚಿಗೆ ಕಾಂಟ್ರ್ಯಾಕ್ಟ್ ಮೇಲೆ ಕೆಲಸ ಮಾಡುತ್ತಿದ್ದ ಎಲ್ಲ ಅಭ್ಯರ್ಥಿಗಳನ್ನು ಕೆಲಸದಿಂದ ತೆಗೆಯುವರೆಂಬ ಸುದ್ದಿ ಬಂದದ್ದರಿಂದ ಎಲ್ಲರೂ ಸಂಘಟಿತರಾಗಿ ಹೋರಾಡಬೇಕೆಂದು ಪ್ರಯತ್ನಿಸಿ ನಾನೂ ಅನೇಕ ಸ್ಥಳಗಳಿಗೆ ಹೋಗಿ ಸಂಘಟನೆಗೆ ಪ್ರಯತ್ನಿಸಿದೆ. ಆದರೆ ಅದು ಯಶಸ್ವಿಯಾಗಲಿಲ್ಲ. ಕೊನೆಗೆ ಮಾರ್ಚಿ ೧೯೭೫ಕ್ಕೆ ನಮ್ಮನ್ನು ಈ ಕೆಲಸದ ಹುದ್ದೆಯಿಂದ ತೆಗೆಯಲಾಯಿತು. ಕೆ.ಪಿ.ಎಸ್.ಸಿ. ಮೂಲಕ ಕೆಲಸದ ಹುದ್ದೆಗಳಿಗೆ ಕರೆಯಲಾಯಿತು. ಆದರೆ ನಾನು ಆಯ್ಕೆಯಾಗಲಿಲ್ಲ.

ಮುಂದೇನು ಎಂಬುದು ಸಮಸ್ಯೆ, ನಿರುದ್ಯೋಗಿ. ಜೊತೆಗೆ ಒಂದು ಮಗುವಿನ ತಂದೆ. ಯಾರನ್ನು ಸಹಾಯಕ್ಕೆ ಯಾಚಿಸುವಂತಿಲ್ಲ. ಮನೆಯಲ್ಲಿಯೂ ವೆಚ್ಚ ಜಾಸ್ತಿ. ಹೀಗಾಗಿ ಯಾವುದಾದರೂ ಒಂದು ಕೆಲಸ ಹುಡುಕುವ ಅನಿವಾರ್ಯತೆ ನನಗಿತ್ತು. ಉರಿಗಾಂ ಕಾಲೇಜು, ಚಿಕ್ಕಬಳ್ಳಾಪುರದ ಕಾಲೇಜು ಮುಂತಾದ ಕಡೆ ಕೆಲಸಕ್ಕಾಗಿ ಪ್ರಯತ್ನಿಸಿದೆ. ಫಲಿತಾಂಶ ನಿರಾಶೆ ಹೀಗಾಗಿ ಕಾಲೇಜುಗಳಿಗೆ ಅರ್ಜಿ ಹಾಕುವುದು ಕರೆದಾಗ ಸಂದರ್ಶನಕ್ಕೆ ಹೋಗಿಬರುವುದು ಹೀಗೆಯೇ ಸಾಗಿತ್ತು. ಶೇಷಶಾಸ್ತ್ರಿ ಮತ್ತು ಶ್ಯಾಂಸುಂದರ್ ಸಂದರ್ಭಕ್ಕೆ ಬೇಕಾಗುವ ಸಲಹೆಗಳನ್ನು ನೀಡುತ್ತಿದ್ದರು. ಬೆಂಗಳೂರಿಗೆ ಹೋದಾಗ ಡಿ.ಕೆ. ಶ್ಯಾಂಸುಂದರ್ ಚಾಮರಾಜಪೇಟೆಯಲ್ಲಿ ಮಾಡಿದ್ದ ಮನೆಗೆ ಹೋಗುತ್ತಿದ್ದೆ. ಅಲ್ಲಿಯೇ ಊಟ. ಕೆಲವೊಮ್ಮೆ ರಾಮಸ್ವಾಮಿರೆಡ್ಡಿ ಮನೆ ಅಥವಾ ರಾಮಚಂದ್ರನ ಮನೆಯಲ್ಲಿ ಇರುತ್ತಿದ್ದೆ. ಒಮ್ಮೆ ಚಿದಾನಂದಮೂರ್ತಿಯವರು ಸಿಕ್ಕಿದಾಗ ಎರ್ನಾಕುಲಂನಲ್ಲಿ ದ್ರಾವಿಡಿಯನ್ ಲಿಂಗ್ವಿಸ್ಟಿಕ್ ಅಸೋಸಿಯೇಷನ್ ಸಮ್ಮೇಳನ ನಡೆಯುವುದಾಗಿ ತಿಳಿಸಿ ಆಸಕ್ತಿಯಿದ್ದರೆ ಅಲ್ಲಿಗೆ ಬನ್ನಿ ಎಂದರು. ನಾನು ಅಲ್ಲಿ ಕನ್ನಡ ಶಾಸನ ಪದಗಳಲ್ಲಿ ನಡೆದ ಬದಲಾವಣೆಯ ಬಗ್ಗೆ ಪ್ರಬಂಧ ಓದುವುದಾಗಿ ತಿಳಿಸಿದೆ. ಅದರಂತೆ ನಾನು, ಕೆ.ಪಿ. ಭಟ್, ಚಿದಾನಂದಮೂರ್ತಿಯವರು ಅಲ್ಲಿಗೆ ಹೋಗಿದ್ದೆವು. ಅಲ್ಲಿ ಇಂಗ್ಲೀಷಿನಲ್ಲಿ ಪ್ರಬಂಧ ಮಂಡಿಸಿದೆ. ಅದನ್ನೇ ಮುಂದೆ ಕನ್ನಡಲ್ಲಿ ಬರೆದು ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟಿಸಿದೆ. ಆರ್. ಶೇಷಶಾಸ್ತ್ರಿ ಪಿಎಚ್.ಡಿ. ರಿಜಿಸ್ಟ್ರೇಷನ್ ಮಾಡಿಸಿ ಮಾಹಿತಿ ಸಂಗ್ರಹ ಕಾರ್ಯದಲ್ಲಿ ತೊಡಗಿದ್ದ. ನಾನು ಆಗಾಗ್ಗೆ ಪರಿಷತ್ತಿಗೆ ಹೋಗುತ್ತಿದ್ದೆ. ಆತನೂ ಅಲ್ಲಿಗೆ ಬರುತ್ತಿದ್ದ. ಪರಿಷತ್ತಿನ ಶಾಸನಶಾಸ್ತ್ರ ತರಗತಿಗಳು ಆ ವರ್ಷ ತಾನೇ ಆರಂಭವಾಗಿದ್ದವು. ಧಾರವಾಡದ ಎ.ಎಂ. ಅಣ್ಣಿಗೇರಿಯವರು ಅಲ್ಲಿದ್ದುದರಿಂದ ಪರಿಷತ್ತಿನಲ್ಲಿ ಶಾಸನ ಸಂಬಂಧಿತ ಚರ್ಚೆಗಳನ್ನು ನಡೆಸುತ್ತಿದ್ದೆವು. ಅಣ್ಣಿಗೇರಿಯವರಿಗೆ ಒಂದು ಕಣ್ಣು ಆಪರೇಷನ್ ಆಗಿತ್ತು. ಇನ್ನೊಂದು ಕಣ್ಣನ್ನು ಆಪರೇಷನ್ ಮಾಡಿಸಬೇಕೆಂದು ಕಣ್ಣಾಸ್ಪತ್ರೆಯಲ್ಲಿ ಸೇರಿದಾಗ ದುರದೃಷ್ಟವಶಾತ್ ಎರಡೂ ಕಣ್ಣುಗಳು ಮಸುಕಾದವು. ಹೀಗಾಗಿ ಅವರು ಬೆಂಗಳೂರು ಬಿಟ್ಟು ಧಾರವಾಡಕ್ಕೆ ಅನಿವಾರ್ಯವಾಗಿ ಹೋಗಲು ತೀರ್ಮಾನಿಸಿದರು. ಈ ಸಮಯದಲ್ಲಿ ಶೇಷಶಾಸ್ತ್ರಿ ನನಗೆ ಪರಿಷತ್ತಿನ ಅಧ್ಯಕ್ಷರಾದ ಜಿ. ನಾರಾಯಣ ಅವರನ್ನು ಭೇಟಿಯಾಗಲು ತಿಳಿಸಿದ. ಅದರಂತೆ ಇಬ್ಬರು ಅವರನ್ನು ಭೇಟಿಯಾಗಿ ಅಣ್ಣಿಗೇರಿಯವರು ಕೆಲಸ ಮಾಡುತ್ತಿದ್ದ ಕೆಲಸವನ್ನು ನನಗೆ ಕೊಡುವಂತೆ ಕೇಳಿದೆ. ಶೇಷಶಾಸ್ತ್ರಿ ಕೊಡಿರೆಂದು ಹೇಳಿದ. ಆಗ ಜಿ. ನಾರಾಯಣ ಅವರು ಶೇಷಶಾಸ್ತ್ರಿಗೆ ನೀವು ಬ್ರಾಹ್ಮಣರು ಒಬ್ಬ ಒಕ್ಕಲಿಗನ ಪರವಾಗಿ ರೆಕಮೆಂಡ್ ಮಾತಾಡುತ್ತಿದ್ದೀರಿ. ಜನರು ಇದರ ಬಗ್ಗೆ ನಿಮ್ಮನ್ನು ಥೇಷ್ ಎನ್ನಬಹುದು. ಆದರೆ ನಾನು ಒಕ್ಕಲಿಗ. ಇನ್ನೊಬ್ಬ ಒಕ್ಕಲಿಗನಿಗೆ ಕೆಲಸ ನೀಡಿದರೆ ಸ್ವಜಾತಿ ಪ್ರೇಮ ತೋರಿಸಿದ್ದಾರೆ ಎಂದುಕೊಳ್ಳುವುದಿಲ್ಲವೆ ಎಂದರು. ಆದರೂ ಅರ್ಜಿ ಕರೆಯುವುದಾಗಿಯೂ ಸಂದರ್ಶನದಲ್ಲಿ ನೀವು ಆಯ್ಕೆಯಾದರೆ ನೀವಿಲ್ಲಿಗೆ ಬರಬಹುದೆಂದೂ ತಿಳಿಸಿದರು. ಮುಂದೆ ಸಂದರ್ಶನಕ್ಕೆ ಬಂದಾಗ ಸೂರ್ಯನಾಥ ಕಾಮತರು ಕಮಿಟಿಯಲ್ಲಿದ್ದುದರಿಂದ ಅವರನ್ನು ಭೇಟಿಯಾದೆ

ಸಂದರ್ಶನದ ಬಗ್ಗೆ ತಿಳಿಸಿದೆ. ಆಯ್ತು ಬಿಡಿ ನಿಮ್ಮ ಲೇಖನಗಳನ್ನು ನೋಡಿದ್ದೇನೆ ಎಂದರು. ಮುಂದೆ ಸಂದರ್ಶನದಲ್ಲಿ ಕಾಮತರೊಂದಿಗೆ ಶೇಷಶಾಸ್ತ್ರಿ, ಜಿ.ಎಸ್.ಗಾಯಿಯವರಿದ್ದರು. ನಾನು ಆಯ್ಕೆಯಾದೆ. ಮುಂದೆ ಜೆ. ನಾರಾಯಣ ಅವರು ನನ್ನನ್ನು ಸಂಶೋಧನಾ ವಿಭಾಗಕ್ಕೆ ಕರೆದುಕೊಂಡು ಬಂದು ಶಾಸನಗಳಿದ್ದ ಚಾರ್ಟುಗಳನ್ನು ತೋರಿಸಿ ೧೫ ದಿನದೊಳಗೆ ಇವನ್ನೆಲ್ಲಾ ನನಗೆ ಓದಿ ಹೇಳಬೇಕೆಂದೂ ಅನಂತರ ಸಂಬಳ ನೀಡುವುದಾಗಿ ತಿಳಿಸಿದರು. ಆಗಲಿ ಎಂದು ೧೫ ದಿನಗಳಲ್ಲಿ ಅವನ್ನು ಅವರಿಗೆ ಓದಿ ಹೇಳಿದೆ. ಅವರು ಸಂತೃಪ್ತರಾದರು. ಈ ಶಾಸನಗಳ. ಓದುವಿಕೆಯಲ್ಲಿ, ವ್ಯವಹಾರದಲ್ಲಿ ಶೇಷಶಾಸ್ತ್ರಿಯ ಪಾತ್ರ ಹಿರಿದಾಗಿತ್ತು. ೧೯೭೬ರ ಅಕ್ಟೋಬರ್ ತಿಂಗಳಲ್ಲಿ ಪರಿಷತ್ತಿನ ಈ ಕೆಲಸಕ್ಕೆ ಸೇರಿದ ಮೇಲೆ ಒಂದುವರೆ ವರ್ಷದ ವನವಾಸ ಮತ್ತು ಉಪವಾಸ ಮುಗಿಯಿತು. ಅಲ್ಲಿಂದ ನನ್ನ ಅಧ್ಯಯನದ ವಿಧಾನವೇ ಬದಲಾಗತೊಡಗಿತು. ಅಣ್ಣಿಗೇರಿಯವರಿದ್ದಾಗಲೇ ಎಫಿಗ್ರಾಫಿಯಾ ಇಂಡಿಕಾ, ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್, ಎಫಿಗ್ರಾಫಿಯಾ ಕರ್ನಾಟಿಕಾ. ಕರ್ನಾಟಕ್ ಇನ್ಸ್‌ಕ್ರಿಪ್ಷನ್ಸ್ ಮೊದಲಾದ ಸಂಪುಟಗಳಲ್ಲದೆ, ಭಾರತೀಯ ಹಾಗೂ ಕರ್ನಾಟಕ ಸಂಸ್ಕೃತಿಗೆ ಸೇರಿದ ಅನೇಕ ಗ್ರಂಥಗಳನ್ನು ಸಂಶೋಧನಾ ಗ್ರಂಥಾಲಯಕ್ಕೆ ತರಿಸಿದ್ದರು. ಅರ್ಥವಾಗಲಿ ಅಥವಾ ಅರ್ಥವಾಗದಿರಲಿ ಅವುಗಳನ್ನು ಓದುವುದು, ಟಿಪ್ಪಣಿ ಬರೆಯುವುದು, ಶಾಸನಗಳ ಫೋಟೋಗಳನ್ನು ಓದಲು ಪ್ರಯತ್ನಿಸುವುದು, ಸಣ್ಣ ಸಣ್ಣ ವಿಷಯಗಳ ಟಿಪ್ಪಣಿ ಮಾಡುವುದು ನಡದೇ ಇತ್ತು. ಶ್ರವಣಬೆಳಗೊಳ. ತಮಟಕಲ್ಲು ಮೊದಲಾದ ಕಡೆಗೆ ಹೋಗಿ ಅಲ್ಲಿನ ಶಾಸನಗಳ ಕಾಗದ ಪ್ರತಿಗಳನ್ನು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಸಂಗ್ರಹಿಸಿದ್ದರು. ಅವನ್ನು ಒಂದೊಂದಾಗಿ ಓದುತ್ತಿದ್ದಾಗ ತಮಟುಕಲ್ಲಿನ ಶಾಸನದ ಪರಿಷ್ಕೃತ ಪಾಠವನ್ನು ನಾನೂ ಶೇಷಶಾಸ್ತ್ರಿ ಸೇರಿ ಓದಿ ಅದನ್ನು ಸಾಧನೆಯಲ್ಲಿ ಪ್ರಕಟಿಸಿದೆವು. ಅನೇಕ ಸಂಶೋಧಕರ ಮೊದಲ ಪರಿಚಯವಾಗಿದ್ದು ಈ ಸಂಶೋಧನಾ ವಿಭಾಗದಿಂದಲೇ. ಒಮ್ಮೆ ಕೆಲವು ತಾಡವೋಲೆ ಹಸ್ತಪ್ರತಿಗಳು ಪರಿಷತ್ತಿನಲ್ಲಿ ಅಲ್ಲಲ್ಲಿ ಬಿದ್ದಿರುವುದನ್ನು ಗಮನಿಸಿದ ನಾನು ಅವೆಲ್ಲವನ್ನು ಒಂದೆಡೆ ಏಕೆ ಸಂಗ್ರಹಿಸಬಾರದೆಂದು ಯೋಚಿಸಿ ಅಧ್ಯಕ್ಷರಿಗೆ ತಿಳಿಸಿದೆ. ಅಗತ್ಯವಾಗಿ ಆಗಬಹುದು ಎಂದು ಅವರು ತಿಳಿಸಿದರು. ಅದರಂತೆ ಅವೆಲ್ಲವನ್ನು ಒಂದೆಡೆ ಸಂಗ್ರಹಿಸುತ್ತಿದ್ದಾಗ ಅತ್ತಿಬೆಲೆ ಎಸ್. ಶಿವಣ್ಣನವರ ಪರಿಚಯವಾಗಿ ಅವರಿಂದ ಅನೇಕ ಅಮೂಲ್ಯ ಸಲಹೆಗಳನ್ನು ಪಡೆದು ಒಂದು ಕ್ಯಾಟಲಾಗು ಮಾಡಲು ಪ್ರಯತ್ನಿಸಿದೆ. ೧೯೭೯-೮೦ರಲ್ಲಿ ತಾಡಯೋಲೆ ಮತ್ತು ಕಾಗದ ಹಸ್ತಪ್ರತಿಗಳಿಗೆ ಹುಳುಗಳು ಜಾಸ್ತಿಯಿದ್ದರಿಂದ ಒಮ್ಮೆ ಬೀರುವಿನಲ್ಲಿಟ್ಟು ವಿಷದ ಗುಳಿಗೆ ಹಾಕಿ ಸೀಲು ಮಾಡಿಸಿದೆ. ೩೨ ವರ್ಷದ ಪ್ರಾಯದವನಾಗಿದ್ದುದರಿಂದ ಉತ್ಸಾಹದಿಂದ ನಾನೇ ಹಸ್ತಪ್ರತಿಗಳನ್ನು ಶುದ್ಧಿಮಾಡಿ. ಓದಿ, ಕ್ಯಾಟಲಾಗು ಮಾಡುತ್ತಿದ್ದೆ. ಒಮ್ಮೆ ಹೀಗೆ ಶುದ್ಧಿ ಮಾಡುತ್ತಿದ್ದಾಗ ನೆಗಡಿ ಸೂಚಕವಾದ ಒಂದೆರಡು ಸೀನುಗಳು ಬಂದವು. ಮುಂದೆ ದಿನಕ್ಕೆ ಒಂದು ಬಾರಿಬರುತ್ತಿದ್ದ ಸೀನು ದಿನಕ್ಕೆ ಮೂರು ನಾಲ್ಕು ಬಾರಿ ಬರಲು ಆರಂಭಿಸಿತು. ನಂತರ ಕೆಮ್ಮು ಆರಂಭವಾಯಿತು ಕೆಮ್ಮು ನೆಗಡಿಗೆ ಔಷಧಿ ತೆಗೆದುಕೊಳ್ಳುತ್ತಿದ್ದೆನಾದರೂ ಅದು ಹಿಡಿತಕ್ಕೆ ಬಂದಿರಲಿಲ್ಲ. ಒಂದು ದಿನ ಬೆಳಗ್ಗೆ ಕೆಮ್ಮಿದಾಗ ಕಫದೊಡನೆ ರಕ್ತ ಬಂತು ಆಗ ಗಾಬರಿಯಾದೆ. ಈ ಕಾಲಕ್ಕೆ ಬೆಂಗಳೂರಿನ ಲಕ್ಕಸಂದ್ರದಲ್ಲಿ ಮನೆ ಮಾಡಿದ್ದೆ. ಕೊನೆಗೆ ಡಾಕ್ಟರ ಬಳಿ ಮತ್ತೆ ಹೋದಾಗ ಈಸೋಫಿಲಿನ್ ಮಾಡಿಸೆಂದರು ಮಾಡಿಸಿದೆ. ಅಲರ್ಜಿಕ್ ಬ್ರಾಂಕೈಟ್ ಇರುವುದಾಗಿ ತಿಳಿಸಿ, ಔಷಧಿ ತೆಗೆದುಕೊಳ್ಳಲು ಸೂಚಿಸಿದರು. ಅಂದಿನಿಂದ ಇದುವರೆವಿಗೂ ಇದು ನನಗೆ ಅಂಟಿಕೊಂಡೇ ಬಂದಿದೆ.

ಪರಿಷತ್ತಿನಲ್ಲಿ ಬೆಳಗ್ಗೆ ೯ ರಿಂದ ಮಧ್ಯಾಹ್ನ ಒಂದರವರೆಗೆ ನಂತರ ಸಂಜೆ ನಾಲ್ಕರಿಂದ ೭.೩೦ರ ವರೆಗೆ ಕೆಲಸದ ಅವಧಿಯಾಗಿತ್ತು ಚಾಮರಾಜಪೇಟೆ ಸುತ್ತಲಿನವರು ಮನೆಗೆ ಹೋಗಿಬರುತ್ತಿದ್ದರು. ನಾನು ಎಲ್ಲಿಗೂ ಹೋಗುತ್ತಿರಲಿಲ್ಲ. ಪರಿಷತ್ತಿನಲ್ಲಿಯೇ ಇರುತ್ತಿದ್ದೆ. ಬೆಂಗಳೂರಿನಲ್ಲಿ ಇನ್ನೂ ಮನೆ ಮಾಡಿರಲಿಲ್ಲ. ಒಂದೆರಡು ತಿಂಗಳು ಪರಿಷತ್ತಿನ ಸಣ್ಣ ಕೋಣೆಯೊಂದರಲ್ಲಿ ನಾನು ಶಿವರಾಮಯ್ಯ ಇಬ್ಬರೂ ಇದ್ದೆವು. ಇದೇ ಅವಧಿಯಲ್ಲಿ ಪರಿಷತ್ತಿನಲ್ಲಿ ಟೇಪ್‌ರಕಾರ್ಡರ ಸೆಕ್ಷನ್ ಆರಂಭವಾಯಿತು. ಇದನ್ನು ನೋಡಿಕೊಳ್ಳಲು ನಾಗೇಂದ್ರ ಎಂಬುವವರನ್ನು ಕೆಲಸಕ್ಕೆ ತೆಗೆದುಕೊಂಡರು. ಈ ನಾಗೇಂದ್ರ ಮತ್ತು ಇವರ ಜೊತೆಗೆ ಭೀಮಯ್ಯ ಎಂಬುವವರು ಸೇರಿ ವಾರ್ತಾ ಇಲಾಖೆಯಿಂದ ಕೆಲವು ದೇವಾಲಯಗಳ ಫಿಲಂ ರೀಲುಗಳನ್ನು ತಂದು ಅಲ್ಲಲ್ಲಿ ಪ್ರದರ್ಶಿಸುತ್ತಿದ್ದರು. ಇದೇ ಕಾಲಕ್ಕೆ ಗೊ.ರು. ಚನ್ನಬಸಪ್ಪನವರು ಕರ್ನಾಟಕ ಜಾನಪದ ನೃತ್ಯಗಳ ಒಂದು ಫಿಲಂ ತಯಾರಿಸಿ ಪರಿಷತ್ತಿಗೆ ನೀಡಿದ್ದರು. ಚಾಮರಾಜಪೇಟೆಯಲ್ಲಿ ರೂಂ ಮಾಡಿಕೊಂಡಿದ್ದವು. ನಾನು ಜಿ.ಆರ್. ತಿಪ್ಪೇಸ್ವಾಮಿ, ಇವರ ಮಾವ ಹನುಮಂತರಾಯಪ್ಪ ಜೊತೆಯಲ್ಲಿದ್ದೆವು. ಹೀಗಾಗಿ ಹೋಟೆಲ್‌ನಲ್ಲಿ ತಿಂಡಿ ತಿಂದು ಬಂದು ಮಧ್ಯಾಹ್ನ ಮತ್ತೆ ಹೋಟೆಲ್‌ನಲ್ಲಿ ಊಟ. ರಾತ್ರಿ ಮನೆಯಲ್ಲಿ ಎಲ್ಲರೂ ಸೇರಿಕೊಂಡು ಅಡುಗೆ ಮಾಡಿಕೊಳ್ಳುತ್ತಿದ್ದೆವು ಈ ಅವಧಿಯಲ್ಲಿ ಚಾಮರಾಜಪೇಟೆಯಲ್ಲಿ ಅರವಿಂದ ಸಂಗೀತ ವಿದ್ಯಾಲಯ ನಡೆಸುತ್ತಿದ್ದ ಶ್ರೀ ಶೇಷಾದ್ರಿ ಗವಾಯಿಗಳ ಪರಿಚಯವಾಗಿ ಕೆಲವು ದಿನ ಸಿತಾರ್ ಕಲಿಯಲು ಹೋಗುತ್ತಿದ್ದೆ. ಅಲ್ಲಿಯೇ ಕಲಾವಿದ ಕಮಲೇಶ್ ಅವರ ಪರಿಚಯವಾದದ್ದು. ಹೀಗಾಗಿ ಮಧ್ಯಾಹ್ನವೂ ಓದು ಚರ್ಚೆ ನಡೆಯುತ್ತಲೇ ಇತ್ತು. ಈ ಚರ್ಚೆಯಲ್ಲಿ ಶೇಷಶಾಸ್ತ್ರಿ, ಆಳ್ಗ ಚಿರಂಜೀವಿ ಮೊದಲಾದವರು ಭಾಗವಹಿಸುತ್ತಿದ್ದರು. ಶಿವಣ್ಣನವರೂ ೪ ಗಂಟೆಗೆ ಬಂದು ಸೇರಿಕೊಳ್ಳುತ್ತಿದ್ದರು. ಹೀಗಾಗಿ ನಾನಿದ್ದ ಸಂಶೋಧನಾ ವಿಭಾಗ

ಆಸಕ್ತರ ಚರ್ಚಾಕೂಟವಾಗಿ ಬದಲಾಗಿತ್ತು. ೧೯೭೪ರ ಸುಮಾರಿಗೆ ಹಿರಿಯರಾದ ಬಿ.ಜಿ.ಎಲ್. ಸ್ವಾಮಿಯವರೂ ಈ ಚರ್ಚೆಯಲ್ಲಿ ಪಾಲ್ಗೊಳ್ಳತೊಡಗಿದರು. ಅನೇಕ ಶಾಸನಗಳ ಬಗ್ಗೆ ಇತರೆ ವಿಷಯಗಳ ಬಗ್ಗೆ ಈ ಚರ್ಚೆ ನಡೆಯುತ್ತಿತ್ತು. ಮೇಲುಕೋಟೆಯ ಯದುಗಿರಿ ಯತಿರಾಜ ಮಠದ ಈಗಿನ ಸ್ವಾಮಿಗಳಾಗಿರುವ ಯದುಗಿರಿ ಯತಿರಾಜ ರಾಮಾನುಜ ಜೀಯರ್ ಅವರು (ಇವರ ಪೂರ್ವಾಶ್ರಮದ ಹೆಸರು ಆಸೂರಿ ಶ್ರೀನಿವಾಸ ಅಯ್ಯಂಗಾರ್) ಶೇಷಶಾಸ್ತ್ರಿ ಮೂಲಕ ಪರಿಚಯವಾಗಿ ಪೂರ್ವಾಶ್ರಮದಲ್ಲಿ ನಮ್ಮ ವಿಭಾಗಕ್ಕೆ ಬಂದು ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದರು ಆಳ್ವ ಚಿರಂಜೀವಿಯವರಿಗೆ ಅತಿಯಾದ ಅಧ್ಯಯನದ ಹಿನ್ನೆಲೆ ಇದ್ದರೂ ಬರವಣಿಗೆ ಇರಲಿಲ್ಲ. ವೇದಗಳನ್ನು (ಅರಮನೆ ಸಂಪುಗಳನ್ನು) ಚೆನ್ನಾಗಿ ಓದಿಕೊಂಡಿದ್ದರು. ಏನಾದರೂ ವಿಷಯ ಹೇಳಿದರೆ ಸಾಕು ವೇದಗಳಲ್ಲಿ ಹೀಗೆ ಹೇಳಿದೆ ಗಮನಿಸಿ ಎಂದು ಸೂಚನೆ ನೀಡುತ್ತಿದ್ದರು. ನಾನು ಬೆಳಗ್ಗೆ ತಾಳೆಗರಿಗಳ ಓದುವಿಕೆ ಮತ್ತು ದಾಖಲಾತಿ ಮಾಡಿಕೊಳ್ಳುವುದು, ನಂತರ ಮಧ್ಯಾಹ್ನದ ಶಾಸನ ಶಾಸ್ತ್ರ ತರಗತಿಗಳಿಗೆ ತಯಾರಾಗುವುದು, ಇದರೊಂದಿಗೆ ಸ್ಥಿರ ಪುಸ್ತಕ ಪ್ರದರ್ಶನಕ್ಕೆ ಬರುವ ಪುಸ್ತಕಗಳನ್ನು ರಿಜಿಸ್ಟರ್‌ನಲ್ಲಿ ದಾಖಲಿಸುವುದು, ಪುಸ್ತಕಗಳನ್ನು ವಿಷಯವಾರಾಗಿ ಪ್ರದರ್ಶನಕ್ಕೆ ಜೋಡಿಸುವುದು. ಸಂಜೆ ಶಾಸನಶಾಸ್ತ್ರ ತರಗತಿಗೆ ಪಾಠ ಮಾಡಲು ಉಪನ್ಯಾಸಕರು ಯಾರಾದರೂ ತಪ್ಪಿಸಿಕೊಂಡಲ್ಲಿ ಅವರ ಪಾಠವನ್ನು ನಾನೇ ಮಾಡಬೇಕಿತ್ತು. ಹೀಗಾಗಿ ಶಾಸನಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲಿ ನಾನು ಪಾಠ ಮಾಡಲು ಸಿದ್ಧನಾಗಿರಬೇಕಿತ್ತು. ಹೀಗಾಗಿ ಶಾಸನಕ್ಕೆ ಸಂಬಂಧಿಸಿದ ಲಿಪಿ. ವಿವರಣೆ, ಪಠ್ಯವನ್ನು ಬೋಧಿಸುವ ವಿಷಯಗಳಲ್ಲಿ ತಯಾರಾಗಿರುತ್ತಿದ್ದೆ. ಪರಿಷತ್ತಿನಲ್ಲಿ ನನಗೆ ಆಗ ಮಾಸಿಕ ಎಲ್ಲಾ ಸೇರಿ ರೂಪಾಯಿ ೩೭೦ ನೀಡುತ್ತಿದ್ದರು. ನನಗೆ ಮತ್ತು ಗ್ರಂಥಪಾಲಕರಾದ ಚೂಡಾಮಣಿ ರಾಜೇಂದ್ರನ್ ಅವರಿಗೆ ಮಾತ್ರ ಇಷ್ಟು ಹಣ ನೀಡುತ್ತಿದ್ದು ಉಳಿದವರಿಗೆ ಕಡಿಮೆ ಕೊಡುತ್ತಿದ್ದರು. ಜಿ. ನಾರಾಯಣರು ಕುಳಿತಿದ್ದ ಕೊಠಡಿ ಪ್ರತ್ಯೇಕವಾಗಿರಲಿಲ್ಲ. ಯಾರು ಬೇಕಾದರೂ ಯಾರನ್ನೂ ಕೇಳದೆ ಅವರನ್ನು ನೋಡಬಹುದಿತ್ತು. ಮಾತನಾಡಿಸಬಹುದಿತ್ತು. ಬಿ.ಎಂ.ಶ್ರೀ. ಪ್ರೆಸ್ಸಿಗೆ ಹೋಗಬೇಕಾದಲ್ಲಿ ಅವರ ಕೊಠಡಿಯ ಮೂಲಕವೇ ಹಾದುಹೋಗಬೇಕಿತ್ತು. ಸಮ್ಮೇಳನಗಳ ಸಮಯದಲ್ಲಿ ಆಹ್ವಾನ ಪತ್ರಿಕೆ ಕಳುಹಿಸಬೇಕಾದಲ್ಲಿ ನಮ್ಮೆಲ್ಲರ ಜೊತೆಗೆ ಅವರೂ ಸೇರಿ ಹೀಗೆ ಮಡಿಚಬೇಕು. ವಿಳಾಸ ಹೀಗೆ ಬರೆಯಬೇಕು ಎಂದು ನಿರ್ದೇಶಿಸುತ್ತಿದ್ದರು. ನಡೆದುಕೊಂಡೇ ಎಲ್ಲಾ ಚಟುವಟಿಕೆಗಳನ್ನು ನಿಭಾಯಿಸುತ್ತಿದ್ದರು. ಪರಿಷತ್ತಿಗೆ ಯಾರಾದರೂ ಅತಿಥಿಗಳು ಬಂದರೆ ಅವರನ್ನು ಸಂಶೋಧನಾ ವಿಭಾಗಕ್ಕೆ ನೋಡಲು ಕಳುಹಿಸಿ, ನನಗೆ ಫೋನ್ ಮಾಡಿ ಅವರಿಗೆ ಸಂಶೋಧನಾ ವಿಭಾಗದ ಚಟುವಟಿಕೆಗಳ ಬಗ್ಗೆ ತಿಳಿಸಬೇಕೆಂದು ಹೇಳುತ್ತಿದ್ದರು. ಒಮ್ಮೆ ಆಂಧ್ರದ ಬೆಜವಾಡ ಗೋಪಾಲರೆಡ್ಡಿಯವರು ಪರಿಷತ್ತಿಗೆ ಆಕಸ್ಮಿಕವಾಗಿ ಬಂದರು. ತಕ್ಷಣ ಜಿ. ನಾರಾಯಣರು ನನಗೆ ಫೋನ್ ಮಾಡಿ ಗೋಪಾಲರೆಡ್ಡಿಯವರನ್ನು ಸಂಶೋಧನಾ ವಿಭಾಗಕ್ಕೆ ಕರೆತರುವುದಾಗಿಯೂ ಶೋಕೇಸುಗಳು ಶುಚಿಯಾಗಿರಬೇಕೆಂದು ಹೇಳಿದರು. ಮೂರು ದಿನಗಳಿಂದ ಜವಾನ ಬಂದಿರಲಿಲ್ಲ. ಸರಿ ಯಾರಿಗೂ ಕಾಯುವುದು ಬೇಡವೆಂದು ನಾನೇ ಗ್ಲಾಸುಗಳನ್ನು ಒರೆಸಿ ಶುಚಿಮಾಡಿದೆ. ಜಿ. ನಾರಾಯಣರು ಗೋಪಾಲರೆಡ್ಡಿಯವರನ್ನು ವಿಭಾಗಕ್ಕ ಕರೆದುಕೊಂಡು ಬಂದು ಎಲ್ಲವನ್ನು ವಿವರಿಸುವಂತೆ ಹೇಳಿದರು. ನಾನು ಅರೆಬರೆ ಇಂಗ್ಲೀಷು ಕನ್ನಡ ಮತ್ತು ತೆಲುಗಿನಲ್ಲಿ ಅವರಿಗೆ ವಿಭಾಗದ ಮತ್ತು ಗ್ರಂಥಾಲಯದ ಪರಿಚಯ ಮಾಡಿಸಿದೆ. ೧೯೭೪ ಜನವರಿ ತಿಂಗಳಲ್ಲಿ ಬೂದಿಹಾಳಿನಲ್ಲಿ (ಈಗಿನ ಶ್ರೀರಾಮಪುರ) ಒಂದು ಶಾಸನವಿರುವುದಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಿಗೆ ಆವೂರಿನ ವ್ಯಕ್ತಿಯೊಬ್ಬರು ತಿಳಿಸಿದಾಗ ಅಲ್ಲಿಗೆ ಹೋಗಿ ಆ ಗ್ರಾಮದ ಎರಡು ಶಾಸನಗಳ ಪ್ರತಿಯನ್ನು ತಂದೆ. ಸ್ಥಳೀಯ ಮಟ್ಟದಲ್ಲಿದ್ದ ಕನ್ನಡದ ಅಭಿಮಾನಿಗಳ ಪರಿಚಯವೂ ಆಯಿತು. ಈ ಶಾಸನಗಳನ್ನು ಮುಂದೆ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ 'ಬೂದಿಹಾಳಿನ ನಾಯಿಂದ ಶಾಸನ' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದೆ. ಇದೇ ವರ್ಷ ಫೆಬ್ರವರಿಯಲ್ಲಿ ನಡೆದ ಪ್ರಮುಖ ಘಟನೆಯೊಂದನ್ನು ಇಲ್ಲಿ ನೆನೆಯಬೇಕಿದೆ. ಅದೆಂದರೆ ಅಖಿಲ ಭಾರತ ಶಾಸನಶಾಸ್ತ್ರ ಸಮ್ಮೇಳನವು ಬೆಂಗಳೂರಿನಲ್ಲಿ ಮಿಥಿಕ್ ಸೊಸೈಟಿಯಲ್ಲಿ ನಡೆಯಿತು. ಇದರಲ್ಲಿ ಶಾಸನಶಾಸ್ತ್ರ ವಿದ್ಯಾರ್ಥಿಗಳನ್ನು ಭಾಗವಹಿಸಲು ಪ್ರೇರೇಪಿಸಿದೆನಲ್ಲದೆ ಒಂದು ಹೊತ್ತಿನ ಟೀಗಾಗುವ ವೆಚ್ಚವನ್ನು ಭರಿಸುವಂತೆ ತಿಳಿಸಿದ್ದೆ. ಹಳೆಯ ಹಾಗೂ ಹೊಸ ವಿದ್ಯಾರ್ಥಿಗಳಿಬ್ಬರೂ ಸೇರಿ ಈ ವೆಚ್ಚವನ್ನು ಭರಿಸಿದ್ದರು. ಶಾಸನಶಾಸ್ತ್ರ ಸಮ್ಮೇಳನದಲ್ಲಿ ಭಾಗವಹಿಸಿದ್ದ ವಿದ್ವಾಂಸರಿಗೆಲ್ಲಾ ಪರಿಷತ್ತಿನ ಶಾಸನಶಾಸ್ತ್ರ ತರಗತಿ ನಡೆಯುವ ಸ್ಥಳಕ್ಕೆ ಬರಬೇಕೆಂದು ವಿನಂತಿಸಿದ್ದೆ. ೪-೨-೧೯೭೪ರಂದು ಪ್ರತಿನಿಧಿಗಳು ಪರಿಷತ್ತಿನ ಶಾಸನಶಾಸ್ತ್ರ ತರಗತಿಗಳು ನಡೆಯುವ ಸಂಶೋಧನಾ ವಿಭಾಗಕ್ಕೆ ಒಂದು ಭೇಟಿ ನೀಡಿದರು. ಆಗ ಪರಿಷತ್ತಿನಲ್ಲಿ ಸಂಗ್ರಹಿಸಿದ್ದ ಶಾಸನ ಪ್ರತಿಗಳ ಪ್ರದರ್ಶನವನ್ನು ಏರ್ಪಡಿಸಿದ್ದೆವು. ಎಸ್.ಆರ್.ರಾವ್, ಜಡ್.ಎ. ದೇಸಾಯಿ ಮೊದಲಾದ ಹಿರಿಯ ವಿದ್ವಾಂಸರು ಮುಕ್ತಕಂಠದಿಂದ ಪರಿಷತ್ತಿನ ಶಾಸನಶಾಸ್ತ್ರ ತರಗತಿಗಳ ಬಗ್ಗೆ ಪ್ರಶಂಸೆ ಮಾಡಿದ್ದಲ್ಲದೆ ಭಾರತದಲ್ಲಿ ಬೇರೆಲ್ಲಿಯೂ ಈ ಬಗೆಯ ತರಗತಿಗಳು ನಡೆಯುತ್ತಿಲ್ಲವೆಂದೂ, ಇಲಾಖೆಗೆ ಅರ್ಜಿ ಸಲ್ಲಿಸಿದ್ದಲ್ಲಿ ಸಹಾಯಧನ ನೀಡುವ ಬಗ್ಗೆ ಪರಿಶೀಲಿಸಬಹುದೆಂದೂ ಠರಾವನ್ನು ಅಂದಿನ ಸಮ್ಮೇಳನದ ಅಂತ್ಯದಲ್ಲಿ ಸ್ವೀಕರಿಸಿದ್ದರು. ಇಂತಹ ತರಗತಿಗಳನ್ನು ನಡೆಸಲು ಸಹಕರಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಎಲ್ಲರಿಗೂ ಈ ಪ್ರಶಂಸೆ ಸಲ್ಲುತ್ತದೆ.

ಪರಿಷತ್ತಿನಲ್ಲಿ ಕೆಲಸ ಮಾಡುವಾಗ ನನ್ನ ವಾಸ ಚಾಮರಾಜಪೇಟೆಯಲ್ಲಿ. ಇದೇ ಅವಧಿಯಲ್ಲಿ ನನಗೆ ಶ್ರೀ ಶೇಷಾದ್ರಿ ಗವಾಯಿಗಳ ಪರಿಚಯವಾಯಿತು. ಬಹುಶಃ ಈ ಪರಿಚಯ ಕಲಾವಿದರಾದ ಶ್ರೀ ಕಮಲೇಶ್ ಅವರಿಂದ ಆಗಿರಬೇಕು. ಏಕೆಂದರೆ ಅವರ ಶ್ರೀಮತಿಯವರು ಶೇಷಾದ್ರಿ ಗವಾಯಿಗಳ ಬಳಿ ಸಂಗೀತ ಕಲಿಯುತ್ತಿದ್ದರು. ಪರಿಷತ್ತಿನಲ್ಲಿ ನಡೆಯುತ್ತಿದ್ದ ಅನೇಕ ಸಮ್ಮೇಳನಗಳಿಗೆ ವೇದಿಕೆ ಸಜ್ಜುಗೊಳಿಸಿ ಕೊಡುತ್ತಿದ್ದುದು ಶ್ರೀ ಕಮಲೇಶ್ ಅವರೇ. ಗವಾಯಿಗಳ ಜೊತೆಯಲ್ಲಿ ಮಾತನಾಡುತ್ತಾ ಮಾತನಾಡುತ್ತಾ ಒಂದು ಬಗೆಯ ಆತ್ಮೀಯತೆಗೆ ತಿರುಗಿತ್ತು. ಒಮ್ಮೆ ಗವಾಯಿಗಳ ಬಳಿ ನಾನು ಸಂಗೀತ ಕಲಿಯಬಹುದೇ ಎಂದೆ. ಅವರು ಅಗತ್ಯವಾಗಿ ಆದರೆ ಹಾಡುಗಾರಿಕೆ ಬೇಡ. ವಯಸ್ಸಾಗಿದೆ ವಾದ್ಯಗಳಲ್ಲಿ ಸಿತಾರನ್ನು ಕಲಿಯಿರಿ. ಫೀಸಿನ ಬಗ್ಗೆ ಕೇಳಿದೆ. ನಿನಗೆ ಫೀಸು ಅಂತ ಇಲ್ಲ. ಎಷ್ಟು ಕೊಟ್ಟರೆ ಅಷ್ಟೇ ಕೊಡು ಎಂದು ಹೇಳಿದರು. ರಾತ್ರಿ ೮ ಗಂಟೆಗೆ ಅವರ ಮನೆಗೆ ಹೋಗಿ ೮.೩೦ರವರೆಗೆ ಸಿತಾರ್ ನುಡಿಸುವುದನ್ನು ಕಲಿಯಲು ಪ್ರಾರಂಭಿಸಿದೆ. ಮೊದಲು ಗಣಪತಿ ಪ್ರಾರ್ಥನೆಯನ್ನು ಕಲಿಸಿದ್ದರು. ಎರಡನೆಯ ಹಾಡಿಗೆ ನಾಂದಿ ಹಾಕಿದ್ದರು. ನಾನು ೮ ಗಂಟೆಗೆ ಮೊದಲೇ ಹೋಗಿ ಕುಳಿತಿರುತ್ತಿದ್ದೆ. ಹಾಗೆಯೇ ಅವರ ವೈಯುಕ್ತಿಕ ಮಾಹಿತಿ ಕಲೆ ಹಾಕಿದೆ. ಅವರು ನಮ್ಮ ತಾಲೂಕಿನ ಕಿತ್ತಗಾನಹಳ್ಳಿಯ ಮೂಲದವರಂತೆ. ಗುಮ್ಮಳಾಪುರ, ಬಿದರಗೆರೆಯಲ್ಲಿ ಅವರ ನೆಂಟರಿದ್ದಾರೆಂದು ತಿಳಿಯಿತು. ಇವರ ಜೊತೆಗೆ ಶ್ರೀವತ್ಸ ಎಂಬುವವರಿದ್ದು ಅವರೇ ತಬಲಾ ಬಾರಿಸುತ್ತಿದ್ದರು. ಶೇಷಾದ್ರಿ ಗವಾಯಿಗಳು ಒಂದು ಪತ್ರಿಕೆ ತರುತ್ತಿದ್ದರು. ಅದರ ಹೆಸರು ಗಾಯನಗಂಗಾ. ಇದರಲ್ಲಿನ ಅನೇಕ ಲೇಖನಗಳಿಗೆ ಅವರೇ ಲೇಖಕರು. ಶೇಷಶಯನ, ಶೇಷಾದ್ರಿ ಹೀಗೆ ಬೇರೆ ಬೇರೆ ಹೆಸರುಗಳಲ್ಲಿ ಲೇಖನ ಬರೆದು ಮಾಸಿಕವಾಗಿ ಪ್ರಕಟಿಸುತ್ತಿದ್ದರು. ಈ ಪತ್ರಿಕೆ ಇಂತಹ ಧೀಮಂತ ವ್ಯಕ್ತಿಯ ಪ್ರಯತ್ನದಿಂದ ಅನೇಕ ವರ್ಷಗಳ ಕಾಲ ನಡೆಯಿತು. ನೀಳವಾದ ಬಳಿಯ ಗಡ್ಡ, ಜುಬ್ಬಾ, ವೇಸ್‌ಕೋಟ್, ಕಚ್ಚೆ ಪಂಚೆ ಇವರ ವೇಷಭೂಷಣ ಹಾರ್ಮೋನಿಯಂ ವಾದನದಲ್ಲಿ ಇವರು ಹೆಸರುವಾಸಿ. ಮುಂದೆ ಚಾಮರಾಜಪೇಟೆಯಿಂದ ಲಕ್ಕಸಂದ್ರಕ್ಕೆ ಮನೆ ಬದಲಾಯಿಸಿದ ಮೇಲೆ ನನ್ನ ಸಂಗೀತದ ಅಭ್ಯಾಸ ನಿಂತುಹೋಯಿತು. ಇದಕ್ಕಿಂತಲೂ ಮುಖ್ಯವಾಗಿ ಪ್ರತಿದಿನ ಸಂಜೆ ಸಜ್ಜನರೊಬ್ಬರ ಜೊತೆಯ ಸಂವಾದ ತಪ್ಪಿಹೋಯಿತು. ಆದರೂ ಆಗಾಗ್ಗೆ ಅವರನ್ನು ಮಾತನಾಡಿಸಲು ಹೋಗುತ್ತಿದ್ದೆ.

ನಾನು ಪರಿಷತ್ತಿನಲ್ಲಿದ್ದಾಗ ಶಿವಮೊಗ್ಗ ಮತ್ತು ದೆಹಲಿಗಳಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳಾದವು. ಇಲ್ಲೆಲ್ಲಾ ಶಾಸನಗಳ ಮತ್ತು ಕರ್ನಾಟಕ ಸಂಸ್ಕೃತಿಗೆ ಸಂಬಂಧಿಸಿದ ಚಾರ್ಟುಗಳ ಪ್ರದರ್ಶನ ನನ್ನ ಕೆಲಸವಾಗಿತ್ತು. ಅಖಿಲ ಭಾರತ ಕನ್ನಡ ಸಮ್ಮೇಳನವನ್ನು ದೆಹಲಿಯಲ್ಲಿ ಆಯೋಜಿಸಿದಾಗ ಸಿಬ್ಬಂದಿಯನ್ನು ಅಧ್ಯಕ್ಷರಾದ ಜಿ. ನಾರಾಯಣರು ಕರೆದಿದ್ದರು. ನಾನು, ಫಿಲಂ ಮತ್ತು ಟೇಪ್ ರೆಕಾರ್ಡರ್ ಸೆಕ್ಷನ್ ನೋಡಿಕೊಳ್ಳುತ್ತಿದ್ದ ನಾಗೇಂದ್ರ, ಸಿದ್ದಗಂಗಪ್ಪ ಮೊದಲಾದವರು ಪರಿಷತ್ತಿನಿಂದ ಹೋಗಿದ್ದೆವು. ಹೋಗಿದ್ದೇ ಒಂದು ರೋಚಕ. ಕುಳಿತುಕೊಳ್ಳಲು ಸ್ಥಳವಿಲ್ಲ ಇನ್ನು ಮಲಗುವುದೆಲ್ಲಿ? ಅಂತೂ ಇಂತೂ ೩ ದಿನ ಪ್ರಯಾಣಿಸಿದೆವು. ಅಲ್ಲಿಂದಲೇ ಋಷಿಕೇಶ, ಹರಿದ್ವಾರ ಮೊದಲಾದ ಸ್ಥಳಗಳನ್ನು ನೋಡಿದೆ. ನಮ್ಮೊಂದಿಗೆ ಎಚ್.ಜಯಮ್ಮ ಮತ್ತಿತರೂ ಪ್ರವಾಸಕ್ಕೆ ಬಂದಿದ್ದರು. ೧೯೭೮ರ ಏಪ್ರಿಲ್‌ನಲ್ಲಿ ಮತ್ತೊಮ್ಮೆ ದೆಹಲಿಗೆ ಹೋಗಿಬಂದೆ. ಈ ಬಾರಿ ದೆಹಲಿಗೆ ಹೋದದ್ದು ಅಲ್ಲಿನ ವಿಶ್ವವಿದ್ಯಾಲಯದ ಉಪನ್ಯಾಸಕರ ಹುದ್ದೆಗೆ ಸ್ಪರ್ಧಿಯಾಗಿ. ನಮ್ಮ ಜೊತೆಯಲ್ಲಿ ಸತ್ಯನಾಥ್ ಅವರೂ ಸಹ ಪ್ರಯಾಣಿಕರಾಗಿ ಬಂದಿದ್ದರು. ಈತ ತನಗೇ ಈ ಕೆಲಸ ಸಿಗುವುದೆಂದು ಹೇಳುತ್ತಿದ್ದ. ಚಿದಾನಂದಮೂರ್ತಿಯವರು ಈ ಸಂದರ್ಶನದ ಮುಖ್ಯಸ್ಥರಾಗಿ ಬಂದಿದ್ದರು. ಮುಂದೆ ಫಲಿತಾಂಶದಲ್ಲಿ ಸತ್ಯನಾಥನೇ ಆಯ್ಕೆಯಾಗಿದ್ದ. ಇದಾದ ಕೆಲವು ದಿನಗಳಿಗೆ ಪಂಜಾಬ್ ವಿಶ್ವವಿದ್ಯಾಲಯದವರು ಕನ್ನಡ ಉಪನ್ಯಾಸಕ ಹುದ್ದೆಗೆ ಅರ್ಜಿಗಳನ್ನು ಕರೆದಿದ್ದರು. ಅಲ್ಲಿಗೂ ಅರ್ಜಿ ಹಾಕಿದ್ದೆ. ಹೀಗೆ ಎಲ್ಲಿ ಹುದ್ದೆ ಖಾಲಿ ಇದೆ ಎಂದು ಗೊತ್ತಾದರೂ ಅಲ್ಲಿಗೆ ಅರ್ಜಿ ಹಾಕುತ್ತಿದ್ದೆ. ೧೯೭೯ರಲ್ಲಿ ಶೇಷಶಾಸ್ತ್ರಿಯವರಿಗೆ ಪಿಎಚ್.ಡಿ ಪದವಿ ಬಂತು. ಆಗಿನಿಂದ ಆಲ್ಲ ಚಿರಂಜೀವಿಯವರು ನೀವು ಪಿಎಚ್.ಡಿ ಮಾಡಬೇಕೆಂದು ಬೆನ್ನು ಹತ್ತಿದರು. ವಿಷಯವೇನು ಯಾರನ್ನು ಗೈಡಾಗಿ ತೆಗೆದುಕೊಳ್ಳಬೇಕು ಈ ವಿಷಯಗಳ ಬಗ್ಗೆ ಚರ್ಚೆ ನಡೆಯುತ್ತಲೇ ಇತ್ತು. ಚಿರಂಜೀವಿಯವರು ಕೆಲವು ಸ್ಥಳಗಳಿಗೆ ಹೋಗಿ ಬರೋಣವೆಂದು ಉತ್ಸಾಹದಿಂದ ಸೂಚಿಸಿದರಾದರೂ ನೋಡೋಣವೆಂದು ಸುಮ್ಮನೆಯಿದ್ದೆ. ಮುಂದೆ ೧೯೮೨-೮೩ರಲ್ಲಿ ಎಂ.ವಿ.ಸೀತಾರಾಮಯ್ಯನವರ ಮಾರ್ಗದರ್ಶನದಲ್ಲಿ ಪಿಎಚ್.ಡಿ ನೋಂದಣಿಯಾಯಿತು.

ಪರಿಷತ್ತಿನಲ್ಲಿ ಕೆಲಸ ಮಾಡುತ್ತಿದ್ದಾಗ ಅಲ್ಲಿಗೆ ಬರುತ್ತಿದ್ದ ವಯೋವೃದ್ಧರಲ್ಲಿ ಆಸೂರಿ ಶ್ರೀನಿವಾಸ ಅಯ್ಯಂಗಾರ್ ಅವರೂ ಒಬ್ಬರು. ಆಂಧ್ರಪ್ರದೇಶದ ದೇವಾಲಯ ಇಲಾಖೆಯಲ್ಲಿ ಆಗಮಿಕರಾಗಿ ಕಾರ್ಯ ನಿರ್ವಹಿಸಿದ್ದರು. ನನ್ನನ್ನು ಇವರು ಕೊಂಡಪ್ಪ, ಕೊಂಡಯ್ಯ ಎಂದೇ ಸಂಬೋಧಿಸುತ್ತಿದ್ದರು. ಶ್ರೀವೈಷ್ಣವರಾದರೂ 'ಶಿವಲಿಂಗಪ್ರಭೇಧಮುಲು' ಎಂಬ ಶಿವಲಿಂಗದ ಬಗ್ಗೆ ಕೃತಿಯನ್ನು ತೆಲುಗಿನಲ್ಲಿ ರಚಿಸಿದ್ದರು. ಅದರ ಹಸ್ತಪ್ರತಿಯನ್ನು ನಮಗೆ ನೀಡಿದ್ದರು. ಇದಕ್ಕಿಂತ ಮುಖ್ಯವಾಗಿ ವೇದಗಳ ಕಾಲದಲ್ಲಿದ್ದ ದೇವಾಲಯ ಕಲ್ಪನೆಯ ಮಂಡಲಗಳನ್ನು ಬಣ್ಣಬಣ್ಣಗಳಲ್ಲಿ ರಚಿಸಿ ಅವುಗಳ ವಿವರಣೆ ಬರೆದಿದ್ದರು.

ಇವರು ಮುಂದೆ ಮಂಡೆಯಂ ಅಯ್ಯಂಗಾರರ ಮೂಲಮಠವಾದ 'ಯದುಗಿರಿ ಯತಿರಾಜ ಮಠ'ದ ಪೀಠಕ್ಕೆ ಗುರುಗಳೂ ಆದರು. ಇವರು ಪರಿಷತ್ತಿಗೆ ಬಂದರೆ ಶೇಷಶಾಸ್ತ್ರಿ, ನಾನು, ಗಣೇಶ್ ಮತ್ತಿತ್ತರರು ಸೇರಿ ಚರ್ಚೆ ಆರಂಭಿಸುತ್ತಿದ್ದೆವು. ಹಿರಿಯರಾಗಿ ತಮ್ಮ ಅನುಭವವನ್ನು ನಮ್ಮೊಂದಿಗೆ ಹಂಚಿಕೊಳ್ಳುತ್ತಿದ್ದರು. ಪೀಠದ ಗುರುಗಳಾದ ಮೇಲೆ ಅವರು ಮುಕ್ತವಾಗಿ ನಮ್ಮೊಂದಿಗೆ ಬೆರೆಯಲು ಆಗುವುದಿಲ್ಲವೆಂಬುದನ್ನು ತಿಳಿದು ಮಲ್ಲೇಶ್ವರಂನಲ್ಲಿರುವ ಅವರ ಮಠದಲ್ಲಿಯೇ ಶಿವಲಿಂಗದ ಬಗ್ಗೆ ಉಪನ್ಯಾಸ ನೀಡಬೇಕೆಂದು ಕೇಳಿಕೊಂಡವು. ಅವರು ಒಪ್ಪಿ ಉಪನ್ಯಾಸ ನೀಡಿದರು. ಈ ಬಗ್ಗೆ ಅಲ್ಲಿನ ಭಕ್ತರಿಗೆ ಇರುಸು–ಮುರುಸು. ಕಾರಣ ಶ್ರೀವೈಷ್ಣವ ಮಠದ ಗುರುಪರಂಪರೆಯವರಾಗಿ ಶಿವಲಿಂಗದ ಆಧಿಕ್ಯದ ಬಗ್ಗೆ ಮಾತನಾಡಿದ್ದು. ಆದರೆ ಗುರುಗಳಾದ ಯದುಗಿರಿ ಯತಿರಾಜ ರಾಮಾನುಜಜೀಯರಿಗೆ ಅದೇನೂ ಆಗದೇ ಸಂತೋಷದಿಂದ ಉಪನ್ಯಾಸ ನೀಡಿದ್ದರು. ಒಮ್ಮೆ ನಾನು, ಶೇಷಶಾಸ್ತ್ರಿ ಇವರನ್ನು ಮಠದಲ್ಲಿ ಕಂಡಾಗ ತಮ್ಮ ಬಳಿಯಿದ್ದ, ದೇವಾಲಯಗಳಿಗೆ ಸಂಬಂಧಿಸಿದ ಹಸ್ತಪ್ರತಿಗಳನ್ನು ಗಣ್ಯ ವಿದ್ವಾಂಸರೊಬ್ಬರು ತೆಗೆದುಕೊಂಡು ಹೋಗಿ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿರುವುದಾಗಿಯೂ, ಆ ಹಸ್ತಪ್ರತಿಯನ್ನು ವಾಪಸ್ಸು ತರಬೇಕೆಂದು ನಮಗೆ ತಿಳಿಸಿದರು. ಸರಿ ನಾವಿಬ್ಬರು ಜಯನಗರದಲ್ಲಿದ್ದ ವಿದ್ವಾಂಸರ ಮನೆ ಒಂದೆರಡು ದಿನ ಸುತ್ತಿ ಆ ಹಸ್ತಪ್ರತಿಯನ್ನು ವಾಪಾಸ್ಸು ಪಡೆದು ಗುರುಗಳಿಗೆ ಮುಟ್ಟಿಸಿದೆವು. ಅವರಿಗಾದ ಖುಷಿ ಇಷ್ಟೆಂದು ಹೇಳಲು ಸಾಧ್ಯವಿಲ್ಲ. ಇವರು ದೇವಾಲಯಗಳ ಬಗ್ಗೆಯೂ ಒಂದು ಪುಸ್ತಕ ಬರೆದಿದ್ದರು. ಆಸೂರಿ ಶ್ರೀನಿವಾಸ ಅಯ್ಯಂಗಾರರ ಪುಸ್ತಕಗಳಲ್ಲಿ ವಿಷಯವಿತ್ತು. ಆದರೆ ಒಂದು ಕ್ರಮವಿರಲಿಲ್ಲ. ಈ ಬಗ್ಗೆ ಅವರನ್ನು ಕೇಳಿದಾಗ ನನಗೆ ತೋಚಿದ್ದನ್ನು ಬರೆದಿದ್ದೇನೆ. ಬರೆಯುವಾಗ ಹೀಗೆ ಹಾಗೆ ಎಂದು ವಿಂಗಡಿಸುವುದು ನನ್ನಿಂದಾಗದು ಓದುವ ನೀವೇ ಆ ಕೆಲಸ ಮಾಡಿಕೊಳ್ಳಬಹುದಲ್ಲಾ ಎಂದಿದ್ದರು. ಆಸೂರಿಯವರಂಥ ವಿದ್ವಾಂಸರ ಸಹವಾಸ ದೇವಾಲಯಗಳ ಬಗ್ಗೆ ಇನ್ನೂ ಹೆಚ್ಚಿನ ಕುತೂಹಲ ಮೂಡಿಸಿತು.

ನಾನು ಶಾಸನಗಳ ಬಗ್ಗೆ ಪಿಎಚ್.ಡಿ. ಮಾಡಬೇಕೆಂಬ ಆಸಕ್ತಿಯನ್ನು ಆರಂಭದಲ್ಲಿ ಹೊಂದಿದ್ದೆ. ಹೀಗಾಗಿ ಶಾಸನ ಕ್ಷೇತ್ರದಲ್ಲಿ ಹೆಸರಾಗಿದ್ದ ಚಿದಾನಂದಮೂರ್ತಿಯವರ ಮಾರ್ಗದರ್ಶನದಲ್ಲಿ ಮಾಡಬೇಕೆಂಬ ಉತ್ಕಟ ಆಸೆ ಹೊಂದಿದವನಾಗಿದ್ದೆ. ಆದರೆ ಚಿದಾನಂದಮೂರ್ತಿಗಳು ತಮ್ಮ ಬಳಿ ಪಿಎಚ್.ಡಿ ಮಾಡಲು ಸ್ಥಳವಿಲ್ಲವೆಂದು ತಿಳಿಸಿದಾಗ ಕೆಲವು ಕಾಲ ಸುಮ್ಮನಾಗಿದ್ದೆ. ಆದರೆ ಅಳ್ಳ ಚಿರಂಜೀವಿಯವರು ಒತ್ತಾಯ ದಿನೇ ದಿನೇ ಹೆಚ್ಚಾಗುತ್ತಿತ್ತು. ಇದರೊಂದಿಗೆ ಗಂಗರ ಶಾಸನ ಮತ್ತು ವಾಸ್ತುಶಿಲ್ಪದ ಮೇಲೆಯೇ ನಾನು ಪಿಎಚ್.ಡಿ ಮಾಡಬೇಕೆಂಬ ಒತ್ತಾಯ ಅವರದಿತ್ತು. ಅವರೇ ಗಂಗವಾರಕ್ಕೆ ನನ್ನನ್ನು ಒಮ್ಮೆ ಕರೆದುಕೊಂಡು ಹೋಗಿದ್ದರು. ಅನಂತರ ಗಂಗರ ವಾಸ್ತು ಮತ್ತು ಶಿಲ್ಪಕಲೆಯಲ್ಲಿ ಏನೋ ವಿಶೇಷವಿದೆ ಎಂಬುದು ನನಗೆ ಮನವರಿಕೆಯಾಗತೊಡಗಿತು. ಕೊನೆಗೆ ಎಂ.ವಿ. ಸೀತಾರಾಮಯ್ಯನವರನ್ನು ಈ ಬಗ್ಗೆ ನಾನು ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ ಮಾಡಬಯಸುವುದಾಗಿ ತಿಳಿಸಿದೆ. ಆಗಲಿ ವಿಷಯ ಹಾಗೂ ಅದರ ಪರಿವಿಡಿಗಳನ್ನು ರಚಿಸಿಕೊಂಡು ಬಾ ನೋಡೋಣವೆಂದರು. ಸರಿ ನಾನೂ ಶೇಷಶಾಸ್ತ್ರಿ ಈ ಬಗ್ಗೆ ಚರ್ಚಿಸಿ ವಿಷಯ ಮತ್ತು ಪರಿವಿಡಿ ತಯಾರಿಸಿದೆವು. ಅದನ್ನು ಸೀತಾರಾಮಯ್ಯನವರಿಗೆ ತೋರಿಸಿದೆ. ಅವರು ಅದನ್ನು ಪರಿಶೀಲಿಸಿ ಮಾರ್ಗದರ್ಶಕರಾಗಲು ಒಪ್ಪಿದರು. ಅದೃಷ್ಟವಶಾತ್ ಈ ವಿಷಯವನ್ನು ಅಂದಿನ ಮುಖ್ಯಸ್ಥರಾಗಿದ್ದ ಶಿವರುದ್ರಪ್ಪ ತಕರಾರಿಲ್ಲದೆ ಒಪ್ಪಿ ರಿಜಿಸ್ಟ್ರಾರ್‌ಗೆ ಕಳುಹಿಸಿದರು. ಮುಂದೆ 'ತಲಕಾಡಿನ ಗಂಗರ ದೇವಾಲಯಗಳು – ಒಂದು ಅಧ್ಯಯನ.' ಎಂಬ ವಿಷಯದ ಮೇಲೆ ನನಗೆ ಪಿಎಚ್.ಡಿ. ಮಾಡಲು ತಾತ್ಪೂರ್ವಿಕವಾಗಿ ಒಪ್ಪಿಗೆ ಕೊಡಲಾಯಿತು. ಇದು ನಡೆದದ್ದೂ ೧೯೮೨–೮೩ರಲ್ಲಿ ಪಿಎಚ್.ಡಿ ಪ್ರವೇಶ ಪರೀಕ್ಷೆ ನಡೆಸಲಾಯಿತು. ಆ ಪರೀಕ್ಷೆಗೆ ನಾನು, ಎಚ್.ಎಸ್.ರಾಘವೇಂದ್ರರಾವ್, ಅ.ಲ.ನರಸಿಂಹನ್ ಮತ್ತು ಅವರ ಪತ್ನಿ ಮಂಜುಳಾ ಈ ನಾಲ್ವರು ಕುಳಿತಿದ್ದೆವು ಒಮ್ಮೆ ಎಂ.ವಿ. ಸೀತಾರಾಮಯ್ಯನವರಿಗೆ ಒಂದು ಪ್ರಶ್ನೆ ಹಾಕಿದೆ. ಸಾರ್ ನೀವು ಸಾಹಿತ್ಯದಲ್ಲಿ ಉದ್ದಾಮ ಪಂಡಿತರು. ಛಂದಸ್ಸು ಅಲಂಕಾರ ಮುಂತಾದ ವಿಷಯಗಳಲ್ಲಿಯೂ ಹೆಸರಾದವರು. ನಾನು ನಿಮ್ಮ ಬಳಿ ಅಭ್ಯಾಸ ಮಾಡುತ್ತಿರುವುದು ವಾಸ್ತು ಮತ್ತು ಶಿಲ್ಪದ ಮೇಲೆ. ನೀವು ನನ್ನ ಬರವಣಿಗೆಯನ್ನು ಹೇಗೆ ತಿದ್ದುವಿರಿ ಸಾರ್ ಎಂದು ಸಲಿಗೆಯಿಂದ ಅಂದೆ. ತಕ್ಷಣ ಅವರು ದಡ್ಡ! ನೀನು ನನ್ನ ಬಳಿಗೆ ಬರುವುದಕ್ಕೆ ಮೊದಲೇ ಈ ಬಗ್ಗೆ ಯೋಚಿಸಬೇಕಿತ್ತು. ಆದರೂ ನಾನು ಗೈಡ್. ನೀನು ವಿದ್ಯಾರ್ಥಿ ಇಷ್ಟು ತಿಳಿದುಕೊ. ನನಗೆ ಯಾವುದಾದರೂ ದೇವಾಲಯದ ಫೋಟೋ ತೋರಿಸು ಅದರ ಜಾತಕದ ಬಗ್ಗೆ ಹೇಳುತ್ತೇನೆ. ಅನುಮಾನ ಬೇಡ ಬರವಣಿಗೆ ಮಾಡು ಎಂದರು. ಇಂತಹ ಗಟ್ಟಿತನದ ಮಾತನ್ನಾಡಲು ಸೀತಾರಾಮಯ್ಯನವರಿಗಲ್ಲದೆ ಬೇರೆ ಯಾರಿಗೆ ಧೈರ್ಯವಿತ್ತು.

ನನ್ನ ಪಿಎಚ್.ಡಿ. ಪ್ರಬಂಧದ ಬರವಣಿಗೆಯನ್ನು ಓದಿ, ತಿದ್ದಿ ಹೀಗೆ ಬರೆಯಬೇಕು ಎಂದು ತಿಳಿಹೇಳಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯನವರು ಹಠಾತ್ತನೆ ತೀರಿಕೊಂಡರು. ಈ ಸಮಯದಲ್ಲಿ ಗೈಡನ್ನು ಬದಲಿಸಬೇಕಾಗಿ ಬಂದಾಗ ಯಾರನ್ನು ಗೈಡಾಗಿ ಪಡೆಯುವುದು ಎಂಬ ಯೋಚನೆಗಿಟ್ಟುಕೊಂಡಿತು. ಆಗ ನನ್ನ ಸಹಪಾಠಿಯಾಗಿದ್ದ ಡಾ. ಕೆ.ಪಿ. ಭಟ್

ಅವರ ನೆನಪಾಯಿತು. ಅವನ್ನು ಮಾರ್ಗದರ್ಶಕರಾಗಲು ಕೇಳಿದೆ. ಅದಕ್ಕವರು 'ನಾನು ಮಾರ್ಗದರ್ಶನ ಮಾಡುವುದು ಏನಿದೆ ಈಗಾಗಲೇ ಗುರುಗಳು ತಿದ್ದಿದ್ದಾರೆ. ತಾಂತ್ರಿಕವಾಗಿ ನಿನಗೆ ನಾನು ಗೈಡ್ ಆಗುತ್ತೇನೆ, ಟೈಪು ಮಾಡಿಸು' ಎಂದು ಧೈರ್ಯ ನೀಡಿದರು. ಮುಂದೆ ಈ ಮಹಾಪ್ರಬಂಧ ಪುನಃ ತಿದ್ದಿ ನೀಡಬೇಕೆಂದು ವಾಪಸ್ಸು ಬಂದಾಗ ನನ್ನ ವೀರಾವೇಶದ ದುಡುಕಿನ ಮಾತು-ಕೃತಿಗಳಿಗೆ ಇವರೇ ತಣ್ಣೀರೆರಚಿ 'ಸುಮ್ಮನೆ ಸೂಚಿಸಿರುವ ಅಂಶಗಳನ್ನು ತಿದ್ದುಪಡಿ ಮಾಡಿ ಸಲ್ಲಿಸು' ಎಂದು ಹೇಳಿದರು. ಇಷ್ಟೇ ಅಲ್ಲ. ರಿಪೋರ್ಟುಗಳು ಬರುವುದು ತಡವಾದಾಗ ನನ್ನ ಪರವಾಗಿ ರಿಜಿಸ್ಟ್ರಾರ್ ಕಚೇರಿಗೆ ಹೋಗಿ ಅವರಿಂದ ಫೋನು ಮಾಡಿಸುತ್ತಿದ್ದರು. ಇಂತಹ ಮಿತ್ರರ ಸಹಕಾರದಿಂದ ನನಗೆ ಪಿಎಚ್.ಡಿ. ಪಡೆಯಲು ಸಹಾಯವಾಯಿತು. ಮುಂದೆ ನಮ್ಮ ಗುಂಪಿನ ಶ್ರೀಮತಿ ವಸಂತಲಕ್ಷ್ಮಿಯವರಿಗೂ ಗೈಡಾಗಬೇಕೆಂದು ಕೇಳಿದಾಗ ಮೊದಮೊದಲು ಬೇಡ, ಆಗುವುದಿಲ್ಲವೆಂದವರು ನಂತರ ಒಪ್ಪಿಕೊಂಡು ಅವರು ಪಿಎಚ್.ಡಿ. ಪಡೆಯುವಲ್ಲಿಯೂ ನೆರವಾದರು.

ಎಂ.ಎ. ಓದುವಾಗ ೧೯೭೦-೭೧ರ ಶೈಕ್ಷಣಿಕ ವರ್ಷದ ಆರಂಭದಲ್ಲಿ ಎಕ್ಸ್‌ಪೋ ೭೦ ಚಳುವಳಿ ನಡೆಯಿತು. ತಮ್ಮನ್ನು ವಿದೇಶಕ್ಕೆ ಕಳುಹಿಸಲಿಲ್ಲ ಎಂಬ ಸಿಟ್ಟೋ ಏನೋ ಚಳುವಳಿ ಒಂದು ದಿನ ವಿಕೋಪಕ್ಕೆ ತಿರುಗಿ ಸೆಂಟ್ರಲ್ ಕಾಲೇಜು ರಣರಂಗವಾಗಿತ್ತು. ಇದರ ಮುಂದಾಳತ್ವವನ್ನು ವಹಿಸಿಕೊಂಡಿದ್ದವರು ರಘುಪತಿ ಮತ್ತು ಗಂಗರಾಜ್. ಇವರ ನೇತೃತ್ವದಲ್ಲಿ ಸೆಂಟಲ್ ಕಾಲೇಜಿನ ಭೂಗರ್ಭ ಶಾಸ್ತ್ರ ವಿಭಾಗವನ್ನು ಚಳುವಳಿಕಾರರು ಸಂಪೂರ್ಣ ನಾಶಮಾಡಿದರು. ಅಲ್ಲಿ ಬಹು ಹಿಂದಿನಿಂದ ಸಂಗ್ರಹಿಸಿದ್ದ ವಿವಿಧ ರೀತಿಯ ಶಿಲೆಗಳು, ಪೋಲೀಸರ ಕಡೆಗೆ ಎಸೆಯುವ ಕಲ್ಲುಗಳಾದವು. ಜೀರುಗಳು ಬೀದಿಗೆ ಬಿದ್ದವು. ರಸ್ತೆಗೆ ಅನೇಕ ವಸ್ತುಗಳನ್ನು ತಂದು ಬೆಂಕಿ ಹಾಕಿದರು. ನಮ್ಮ ವಿಭಾಗ ಸೆಂಟಲ್ ಕಾಲೇಜು ಹಿಂದುಗಡೆ ಇದ್ದದ್ದರಿಂದ ಇವರ ಗಮನಕ್ಕೆ ಅದು ಬರಲಿಲ್ಲ. ೧೯೭೯ರಲ್ಲಿ ಪಿಎಚ್.ಡಿ ಪದವಿ ಪಡೆದ ಶೇಷಶಾಸ್ತ್ರಿಗೆ ಕೆಲಸ ಸಿಗಲಿಲ್ಲ. ಹೀಗಾಗಿ ಊರಿಗೆ ಹೋಗಿ ರೇಷ್ಮೆ ಕೃಷಿ ಮಾಡತೊಡಗಿದ. ವಾರಕ್ಕೆ ಒಂದು ದಿನ ಶಾಸನಶಾಸ್ತ್ರ ತರಗತಿಗೆ ಬಂದು ಪಾಠವನ್ನು ಮಾಡುತ್ತಿದ್ದ. ಮುಂದೆ ಊರಿನ ರಾಜಕೀಯದಲ್ಲಿ ಸಿಕ್ಕಿ ಹಾಕಿಕೊಂಡು ಊರಿನ ವ್ಯವಸಾಯ ಬಿಟ್ಟು ಬೆಂಗಳೂರಿಗೆ ಕೆಲಸದ ಬೇಟೆಗೆ ಬಂದ. ಈ ಹಂತದಲ್ಲಿ ಬೆಳಗೆರೆ ಕೃಷ್ಣಶಾಸ್ತ್ರಿಗಳು ಬೆಂಗಳೂರಿಗೆ ಬಂದಾಗ ನಮ್ಮ ವಿಭಾಗಕ್ಕೆ ತಪ್ಪದೆ ಬರುತ್ತಿದ್ದರು. ಅಂದಿನಿಂದ ಅವರ ಪರಿಚಯ ನನಗಾಯಿತು. ಶೇಷಶಾಸ್ತ್ರಿ ಈಗ ವಾರಕ್ಕೆ ಎರಡು ಪಿರಿಯಡ್ಡು ತರಗತಿ ತೆಗೆದುಕೊಳ್ಳತೊಡಗಿದ. ಗಣೇಶ್ ಒಂದು ಪಿರಿಯಡ್ಡು ತೆಗೆದುಕೊಳ್ಳುತ್ತಿದ್ದರು. ಗಣೇಶ್ ಅವರಿಗೆ ಸಂಸ್ಕೃತ ಶಾಸನಗಳ ಪತ್ರವನ್ನು ಪಾಠ ಮಾಡಲು ನೀಡಿದ್ದೆವು. ಜಿ.ನಾರಾಯಣರು ಪರಿಷತ್ತಿನ ಅಧ್ಯಕ್ಷರಾಗಿದ್ದ ಅವಧಿಯಲ್ಲಿಯೇ ಶಾಸನಶಾಸ್ತ್ರ ತರಗತಿಗಳಿಗೆ ಒಂದು ಚೌಕಟ್ಟು ಬಂದಿತ್ತು. ಆರ್. ಶೇಷಶಾಸ್ತ್ರಿ, ಕೆ.ಆರ್. ಗಣೇಶ್ ಮತ್ತು ನನ್ನ ಪರಿಶ್ರಮದಿಂದ ಶಾಸನಶಾಸ್ತ್ರ ತರಗತಿ ವಿದ್ಯಾರ್ಥಿಗಳು ತಮ್ಮ ಕ್ಷೇತ್ರದಲ್ಲಿ ಗಟ್ಟಿಯಾಗಿ ಕಾಲೂರಿ ನಿಲ್ಲಲು ಸಾಧ್ಯವಾಯಿತೆಂದು ಹೇಳಿದರೆ ತಪ್ಪಾಗಲಾರದು. ಅನೇಕ ಸಂದರ್ಭಗಳಲ್ಲಿ ಪರಿಷತ್ತಿನ ಪದಾಧಿಕಾರಿಗಳ ಅಸಹಕಾರದಿಂದ ಹಣ ಪಡೆಯದೆ ಪುಕ್ಕಟೆಯಾಗಿ ಫಲಕ್ಕೆ ತರಗತಿ ಮಾಡಿದ್ದಾರೆ.

೧೯೭೮-೭೯ರ ವೇಳೆಗೆ ಪರಿಷತ್ತಿಗೆ ಚುನಾವಣೆಗಳು ನಡೆದು ಹಂಪನಾ ಅವರು ಅದರ ಅಧ್ಯಕ್ಷರಾದರು. ಕೆಲವು ಮಾರ್ಪಾಟುಗಳನ್ನು ಅವರು ಮಾಡಿದರು. ಅದರಲ್ಲಿ ಬಹುವರ್ಷಗಳಿಂದ ಇದ್ದ ರಿಟೈರ್ಡ್ ಆಗಿ ಕೆಲಸ ಮಾಡುತ್ತಿದ್ದ ವ್ಯಕ್ತಿಗಳನ್ನು ತೆಗೆದು ಅವರ ಸ್ಥಾನದಲ್ಲಿ ಕೆಲವು ಹೊಸ ಯುವಕರನ್ನು ನೇಮಿಸಿದರು. ಹೀಗೆ ನೇಮಿಸುವಾಗ ಹಿಂದಿನಿಂದ ಕೆಲಸ ಮಾಡುತ್ತಿದ್ದ ಹುಡುಗರಿಗೆ ಯಾವುದೇ ಪ್ರಮೋಷನ್ ಇತ್ಯಾದಿ ನೀಡದೆ ಹೊಸಬರಿಗೆ ಮುಖ್ಯವಾದ ವ್ಯವಹಾರಗಳನ್ನು, ವ್ಯವಸ್ಥಾಪಕ ಹುದ್ದೆಯನ್ನು ನೀಡಿದರು. ಎಲ್ಲರಿಗೂ ಸಂಬಳವನ್ನು ನಿಗದಿಗೊಳಿಸಿದರು. ಈ ನಿಗದಿಯ ಏರುಪೇರುಗಳಿಂದ ಹೊಸಬರಿಗೂ-ಹಳಬರಿಗೂ ಒಂದು ಬಗೆಯ ವೈಮನಸ್ಸು ಬಂದಿತ್ತು. ಪರಿಷತ್ತು ನಿಯಮಗಳಿಂದ ನಡೆಯುತ್ತಿತ್ತು. ಸ್ವಯಂಪ್ರೇರಿತ ಮನಸ್ಸುಗಳಿಂದ ನಡೆಯುತ್ತಿರಲಿಲ್ಲ. ಹಂ.ಪ.ನಾ. ಅವರು ಅಧ್ಯಕ್ಷರಾಗಿದ್ದಾಗ ಕಾರ್ಯದರ್ಶಿಗಳಲ್ಲಿ ಒಬ್ಬರಾಗಿದ್ದ ಲಕ್ಷ್ಮಣ್ ತೆಲಗಾವಿಯವರು ಯಾವಾಗಲೂ ಆಡಳಿತದ ಕೆಲಸಗಳಿಂದ ದೂರವಿದ್ದು, ಇವರು ವ್ಯಾಸಂಗದತ್ತ ಸಹಜವಾಗಿ ಒಲವಿರಿಸಿಕೊಂಡಿದ್ದರು. ಹೀಗಾಗಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಂಶೋಧನಾ ವಿಭಾಗವನ್ನು ಕಟ್ಟುವ ಕಾರ್ಯದಲ್ಲಿ ನನಗೆ ಆಡಳಿತಾತ್ಮಕವಾಗಿ ಬೆಂಬಲಕ್ಕೆ ನಿಂತರು. ಕೆಲವೊಮ್ಮೆ ದೈಹಿಕವಾಗಿಯೂ ಶ್ರಮಿಸಿದರು. ಮುಖ್ಯವಾಗಿ ಮ್ಯಾನೇಜರ್ ರಾಜಾರಾಯರ ಕಾಲದಲ್ಲಿ ಪರಿಷತ್ತಿಗೆ ಹಿಂದಿನಿಂದ ಬಂದಿದ್ದ ನಿಯತಕಾಲಿಕೆಗಳನ್ನು ಒಂದೆಡೆ ಜೋಡಿಸಿ ಇಡದೆ ಒಂದು ಕಡೆ ರಾಶಿ ಹಾಕಿದ್ದರು. ಅವನ್ನು ತೂಕಕ್ಕೆ ಹಾಕಬೇಕೆಂದು ಮಾತನಾಡುತ್ತಿದ್ದಾಗ ನಾನು ಅವನ್ನೊಮ್ಮೆ ಗಮನಿಸಿದೆ. ಶಿವಾನುಭವ, ಜಯಕರ್ನಾಟಕ, ಮಿಥಿಕ್ ಸೊಸೈಟಿ ಜರ್ನಲ್ ಮುಂತಾದ ಅಮೂಲ್ಯ ಸಂಪುಟಗಳ ಬಿಡಿಪತ್ರಿಕೆಗಳಿದ್ದವು. ನಾನು ತೂಕಕ್ಕೆ ಹಾಕಬೇಡಿರೆಂದು ಮ್ಯಾನೇಜರ್ ರಾಜಾರಾವ್ ಅವರ ಬಳಿ ಹೇಳಿದೆ. ಅದೇನಯ್ಯ ಅದು ಕಸ ಅದನ್ನೆಲ್ಲಿ ಇಡುವುದು ಎಂದು ಬಿಟ್ಟರು. ಕೊನೆಗೆ ಅಧ್ಯಕ್ಷರಾಗಿದ್ದ ಜಿ. ನಾರಾಯಣರ ಬಳಿ ಇವುಗಳ ಪ್ರಾಮುಖ್ಯತೆ ಬಗ್ಗೆ ಹೇಳಿದೆ. ಅವರು

ಮ್ಯಾನೇಜರಿಗೆ ತಕ್ಷಣ ಫೋನ್ ಮಾಡಿ ರೆಡ್ಡಿಯವರು ಆಯ್ಕೆ ಮಾಡಿಕೊಂಡ ಮೇಲೆ ತೂಕಕ್ಕೆ ಹಾಕಿ ಎಂದರು. ಸರಿ ಆಯ್ಕೆ ಮಾಡಿ ಎಲ್ಲವನ್ನು ಸಂಶೋಧನಾ ವಿಭಾಗದಲ್ಲಿ ತಂದಿಟ್ಟೆ. ಆದರೆ ಇಡಲು ಸ್ಥಳವಿಲ್ಲ. ನಾರಾಯಣರ ಕೊನೆಯ ವರ್ಷ ಹೀಗಾಗಿ ನಾನು ಅವನ್ನು ಜೋಪಾನವಾಗಿ ಸಂಪುಟಗಳಾಗಿ ಜೋಡಿಸಿ ದಾರದಲ್ಲಿ ಕಟ್ಟಿ ಒಂದು ಕಡೆ ಇಟ್ಟೆ. ಇದರೊಂದಿಗೆ ಸಂಶೋಧನಾ ವಿಭಾಗದಲ್ಲಿನ ಹಸ್ತಪ್ರತಿಗಳನ್ನು ನಾನು ನೋಡಿಕೊಳ್ಳಬೇಕಿತ್ತು. ಇಂತಹ ಸಮಯದಲ್ಲಿ ತೆಲಗಾವಿಯವರ ಪ್ರವೇಶವಾಗಿತ್ತು. ಅವರು ನಾನು ಸೇರಿ ಕೆಲವು ರ್‍ಯಾಕುಗಳನ್ನು ತರಿಸಿ ಪುಸ್ತಕಗಳನ್ನು ಮತ್ತು ನಿಯತಕಾಲಿಕೆಗಳನ್ನು ಒಂದೆಡೆ ಜೋಡಿಸಿದೆವು. ಬಿಡಿಬಿಡಿಯಾಗಿದ್ದ ನಿಯತಕಾಲಿಕೆಗಳನ್ನು ಸಂಪುಟಗಳಾಗಿ ತೆಲಗಾವಿಯವರು ಬೈಂಡ್ ಮಾಡಿಸಿದರು. ಚದುರಿಹೋಗಿದ್ದ ತೆಲುಗು, ಸಂಸ್ಕೃತ ಭಾಷೆಯ ಗ್ರಂಥಗಳನ್ನು ಒಂದೆಡೆ ಜೋಡಿಸಿದೆವು. ಆಂಧ್ರ ಹಿಸ್ಟಾರಿಕಲ್ ರೀಸರ್ಚ್ ಸೊಸೈಟಿ, ಬಾಂಬೆ ಬ್ರಾಂಚ್ ಆಫ್ ರಾಯಲ್ ಏಷಿಯಟಿಕ್ ಸೊಸೈಟಿ, ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆಯ ಪ್ರಾರಂಭದ ಸಂಪುಟಗಳು, ಡೆಕ್ಕನ್ ಕಾಲೇಜು, ಚಾಮ ಇನ್ಸಿಟಿಟ್ಯೂಟ್, ಆಡ್ಯಾರ್ ಲೈಬ್ರರಿ, ಇನ್ನು ಮುಂತಾದ ಕಡೆಯಿಂದ ಬಂದಿದ್ದ ನಿಯತಕಾಲಿಕೆಗಳನ್ನು ಒಂದೆಡೆ ಜೋಡಿಸಿ ಅವನ್ನು ರಿಜಿಸ್ಟರ್‌ಗ ಸೇರ್ಪಡೆ ಮಾಡಿಕೊಂಡೆವು. ಬಹುಶಃ ಸಂಶೋಧನಾ ವಿಭಾಗದ ಗ್ರಂಥಾಲಯ ಇಂದು ಶ್ರೀಮಂತವಾಗಲು ಅಂದಿನ ನಮ್ಮ ಶ್ರಮವೂ ಕಾರಣ. ತೆಲಗಾವಿಯವರು ಮುಂದೆ ಕಾಂಟ್ರಕ್ಟ್ ಮೇಲೆ ಗ್ಯಾಜೆಟಿಯರ್‌ನ ಸಂಪಾದಕರಾಗಿ ಅಲ್ಲಿಗೆ ಬಂದರು. ೧೯೯೩–೯೪ ರ ವರೆಗೆ ಗ್ಯಾಜೆಟಿಯರ್‌ನಲ್ಲಿ ನಾವಿಬ್ಬರೂ ಒಟ್ಟಿಗೆ ಇದ್ದೆವು. ಮುಂದೆ ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಹೋದಾಗ, ೧೯೯೫ರ ಜೂನ್‌ನಲ್ಲಿ ನಾನು, ಅವರು ಮತ್ತೆ ಕನ್ನಡ ವಿಶ್ವವಿದ್ಯಾಲಯದಲ್ಲಿ ಸಹೋದ್ಯೋಗಿಗಳಾದೆವು.

೧೯೭೯ರಲ್ಲಿ ಧರ್ಮಸ್ಥಳದಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯುವ ಸಂದರ್ಭದಲ್ಲಿ ಮಾರ್ಚಿ ತಿಂಗಳಲ್ಲಿ ನನ್ನ ಮಗ ಹುಟ್ಟಿದ. ೧೯೮೧ರ ಅಂತ್ಯದಲ್ಲಿ ವಿದ್ಯಾಇಲಾಖೆಯ ಪ್ರೌಢಶಿಕ್ಷಣ ವಿಭಾಗದಲ್ಲಿ ಹೈಸ್ಕೂಲಿನಲ್ಲಿ ಖಾಲಿಯಿದ್ದ ಹುದ್ದೆಗಳನ್ನು ಭರ್ತಿ ಮಾಡಲು ಜಾಹೀರಾತು ನೀಡಿದ್ದರು. ಆಗ ನಾನು ಒಬ್ಬ ಅರ್ಜಿದಾರನಾಗಿ ಬೆಂಗಳೂರು ವಿಭಾಗ ಹಾಗೂ ಮೈಸೂರು ವಿಭಾಗಕ್ಕೆ ಭಾಷಾಸಹಾಯಕನಾಗಿ ಅರ್ಜಿ ಹಾಕಿದೆ. ಬೆಂಗಳೂರು ವಿಭಾಗದವರು ಸಂದರ್ಶನಕ್ಕೆ ಅರ್ಹತೆಯುಳ್ಳವರನ್ನೆಲ್ಲಾ ಕರೆದರು. ನನ್ನ ಅರ್ಜಿ ತಿರಸ್ಕೃತಗೊಂಡಿತ್ತು. ಮೈಸೂರು ವಿಭಾಗದವರು ಸಂದರ್ಶನಕ್ಕೆ ಬಹುದಿನಗಳಾದರೂ ಕರೆಯಲಿಲ್ಲ. ನಾನೂ ಇದರ ಬಗ್ಗೆ ಯೋಚನೆಯನ್ನು ಬಿಟ್ಟು ಸುಮ್ಮನಾಗಿದ್ದೆ. ೧೯೮೨ ಜೂನ್ ತಿಂಗಳಲ್ಲಿ ಸಂದರ್ಶನಕ್ಕೆ ಕರೆಬಂತು. ಸಂದರ್ಶನಕ್ಕೆ ಹೋಗಿ ಬಂದೆ. ಮುಂದೆ ಆಗಸ್ಟ್ ತಿಂಗಳ ಮೊದಲವಾರದಲ್ಲಿ ಆಯ್ಕೆಯಾಗಿ ಚಂದೂಪುರ ಸರ್ಕಲ್‌ನಲ್ಲಿರುವ ಹೈಸ್ಕೂಲಿಗೆ ಸೇರಿಕೊಳ್ಳಲು ತಿಳಿಸಿದ್ದರು. ನಾನು ಪರಿಷತ್ತು ಬಿಡುವುದೋ ಬೇಡವೋ ಎಂಬ ತಾಕಲಾಟದಲ್ಲಿದ್ದಾಗ ಶೇಷಶಾಸ್ತ್ರಿ, ಮೊದಲು ಪರಿಷತ್ತು ಬಿಟ್ಟು ಆ ಕೆಲಸಕ್ಕೆ ಹೋಗು ಎಂದ. ಸಂಬಳದಲ್ಲಿ ೮೦ ರೂಪಾಯಿ ಕಡಿಮೆಯಾಗುತ್ತಿತ್ತು. ಆದರೂ ಗಟ್ಟಿ ಧೈರ್ಯ ಮಾಡಿ ಪರಿಷತ್ತಿಗೆ ರಾಜೀನಾಮೆ ನೀಡಿ ಚಂದೂಪುರ ಸರ್ಕಲ್‌ಗೆ ಹೋದೆ. ಪರಿಷತ್ತಿನ ಸಂಶೋಧನಾ ವಿಭಾಗ ಬಿಡುವಾಗ ಅಧ್ಯಕ್ಷರಾಗಿದ್ದ ಹಂ.ಪ.ನಾ. ಅವರಿಗೆ ಆರ್. ಶೇಷಶಾಸ್ತ್ರಿಯವರನ್ನು ಇಲ್ಲಿ ತೆಗೆದುಕೊಳ್ಳಲು ವಿನಂತಿಸಿದ್ದೆ. ಅದರಂತೆ ಶೇಷಶಾಸ್ತ್ರಿಯವರು ಈ ವಿಭಾಗದ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸಲಾರಂಭಿಸಿದರು. ಮದ್ದೂರಿಗೆ ಹೋಗಿ ಚಂದೂಪುರ ಸರ್ಕಲ್ ಎಲ್ಲಿದೆ ಎಂದು ಕೇಳಿದೆ. ಯಾರೂ ಸರಿಯಾಗಿ ಉತ್ತರಿಸಲಿಲ್ಲ. ಕೊನೆಗೆ ಯಾರೋ ಒಬ್ಬರು ಧನಗೂರು ಕಡೆಗೆ ಇದೆ ಹೋಗಿ ಎಂದರು. ಮಾರನೆಯ ದಿನ ಆ ಬಸ್ ಹಿಡಿದು ಅಲ್ಲಿಗೆ ಹೋದೆ. ಹೆಡ್‌ಮಾಸ್ಟರು ರಜೆ ಹಾಕಿರಲಿಲ್ಲ. ಸಮೀಪದ ಊರಿನವರಂತೆ ಗದ್ದೆಯಲ್ಲಿ ಪೈರು ನಡಿಸಲು ಹೋಗಿದ್ದರು. ನಾನು ಬಂದ ಸುದ್ದಿ ಕೇಳಿ ಮಧ್ಯಾಹ್ನ ಸ್ಕೂಲಿಗೆ ಬಂದರು. ಬಂದನಂತರ ಇಲ್ಲಿ ಪೋಸ್ಟ್ ಖಾಲಿ ಇಲ್ಲ. ಮೊನ್ನೆ ಭರ್ತಿ ಮಾಡಿಕೊಂಡಿದ್ದೇವೆ. ನೀವು ಬೇರೆ ಸ್ಥಳಕ್ಕೆ ಹೋಗಿರಿ ಎಂದರು. ನಾನು ಮತ್ತೆ ಮೈಸೂರಿನ ಜೆ.ಡಿ. ಆಫೀಸಿಗೆ ಹೋದೆ ಅಲ್ಲಿ ವಿಷಯ ತಿಳಿಸಿದೆ. ಅವರು ಈ ಬಾರಿ ಕೃಷ್ಣರಾಜಪೇಟೆ ತಾಲೂಕಿನ ಬೂಕನಕೆರೆಗೆ ಹೋಗಿ ಎಂದು ಬರೆದುಕೊಟ್ಟರು. ಬೂಕನಕೆರೆಗೆ ಹೋದರೆ ಅಲ್ಲಿಯೂ ಅದೇ ಉತ್ತರ. ಈಗಾಗಲೆ ಅಲ್ಲಿನ ಹುದ್ದೆಗಳನ್ನು ತುಂಬಿದ್ದರಂತೆ ಹುದ್ದೆ ಖಾಲಿಯಿಲ್ಲ ಎಂಬ ಉತ್ತರ. ಮತ್ತೆ ಮೈಸೂರಿನ ಜಾಯಿಂಟ್ ಡೈರೆಕ್ಟರ್ ಕಛೇರಿಗೆ ಹೋದೆ. ಗುಂಡ್ಲುಪೇಟೆಯಿಂದ ಶಿವಲಿಂಗಯ್ಯನವರು ಬಂದಿದ್ದರು. ಅವರು ಗುಂಡ್ಲುಪೇಟೆಯಲ್ಲಿ ಹುದ್ದೆ ಖಾಲಿ ಇದೆ ಅಲ್ಲಿಗೇ ಬನ್ನಿ ಎಂದರು. ನಾನು ಅಲ್ಲಿಗೆ ಮತ್ತೆ ಬರುವುದು ಬೇಡ ಸಾರ್ ಬೇರೆ ಊರಿಗೆ ಹೋಗುತ್ತೇನೆ ಎಂದೆ. ಸರಿ ನಿಮ್ಮಿಷ್ಟ ಎಂದು ಹೇಳಿ ಕ್ಲರ್ಕ್ ಒಬ್ಬರನ್ನು ಪರಿಚಯಿಸಿದರು. ಈ ಬಾರಿ ಅವರು ಹೆಗ್ಗಡದೇವನಕೋಟೆ ತೋರಿಸಿದರು. ಅಲ್ಲಿ ಖಾಲಿಯಿರುವುದಾಗಿ ತಿಳಿಸಿದರು. ಇದು ಅಲ್ಪ ಸ್ವಲ್ಪ ಪರಿಚಿತ ಸ್ಥಳವಾದ್ದರಿಂದ ಅಲ್ಲಿಗೆ ಹೋದೆ. ಅಲ್ಲಿಯೂ ಅದೇ ಉತ್ತರ. ತೀರ ಬೇಸರವಾಯಿತು. ಏನು ಮಾಡುವುದೆಂದು ತಿಳಿಯಲಿಲ್ಲ. ಆಗ ಶಿವಲಿಂಗಯ್ಯನವರು ಪರಿಚಯಿಸಿದ್ದ ಕ್ಲರ್ಕ್ ಬಳಿ ಹೋದೆ. ಗುಂಡ್ಲುಪೇಟೆಗೆ ನನ್ನನ್ನು ಹಾಕಿ ಅಲ್ಲಿ ಹೇಗಿದ್ದರೂ ಖಾಲಿಯಿದೆ ಎಂದೆ. ಆದರೆ ಕ್ಲರ್ಕ್ ಇಲ್ಲ ಸುಳ್ಯದಲ್ಲಿ ಉಪಾಧ್ಯಾಯರಿಲ್ಲವೆಂದು

ಗಲಾಟೆಯಾಗಿದೆ ಅಲ್ಲಿಗೆ ಹಾಕುತ್ತೇವೆ ನಾಳೆ ಬನ್ನಿ ಎಂದ. ನನಗೆ ಸುಳ್ಯಕ್ಕೆ ಹೋಗಲು ಇಷ್ಟವಿರಲಿಲ್ಲ. ಸರಿ ಎಂದು ಸಂಜೆ ಕ್ಲರ್ಕ್ ಮನೆಗೆ ಹೋದೆ ಕೈ ಬೆಚ್ಚಗೆ ಮಾಡಿದೆ. ಮೂರನೆಯ ದಿನ ಗುಂಡ್ಲುಪೇಟೆ ಸಂಯುಕ್ತ ಪದವಿಪೂರ್ವ ಕಾಲೇಜಿಗೆ ಸೇರಿಕೊಳ್ಳಲು ಆರ್ಡರ್ ನೀಡಿದ. ಆ ದಿನವೇ ಹೋಗಿ ಗುಂಡ್ಲುಪೇಟೆಯ ಜೂನಿಯರ್ ಕಾಲೇಜಿನಲ್ಲಿ ಹೈಸ್ಕೂಲಿನ ಭಾಷಾ ಸಹಾಯಕನಾಗಿ ಕೆಲಸಕ್ಕೆ ಸೇರಿದೆ. ಈ ಓಡಾಟದಲ್ಲಿ ಸುಮಾರು ೨೫ ದಿನಗಳು ಕಳೆದಿದ್ದವು. ಗುಂಡ್ಲುಪೇಟೆ ಹೈಸ್ಕೂಲಿಗೆ ಬಂದಾಗ ಮತ್ತೆ ಕೆಲವು ಹಳೆಯ ಸ್ನೇಹಿತರು, ಹಾಗೂ ನನ್ನಂತೆ ಬಂದ ಹೊಸ ಮುಖಗಳು ಎದುರಾದವು. ಹೈಸ್ಕೂಲ್ ಉಪಾಧ್ಯಾಯರ ಬಗ್ಗೆ ಜೂನಿಯರ್ ಕಾಲೇಜಿನ ಉಪನ್ಯಾಸಕರಲ್ಲಿ ತಾತ್ಸರ ಮನೋಭಾವ ತುಂಬಿತ್ತು. ಪ್ರಿನ್ಸಿಪಾಲರೂ ಸಹ ಹೈಸ್ಕೂಲಿನ ಜವಾಬ್ದಾರಿ ವಹಿಸಿಕೊಂಡಿದ್ದದರಿಂದ ಹೈಸ್ಕೂಲಿನವರ ಮೇಲೆ ಅವರ ಜಬರದಸ್ತು ಜೋರಾಗಿತ್ತು. ಏಕೆಂದರೆ ಜೂನಿಯರ್ ಕಾಲೇಜಿನ ಉಪನ್ಯಾಸಕರು ಪ್ರಿನ್ಸಿಪಾಲರ ಮಾತನ್ನು ಕೇಳುತ್ತಿರಲಿಲ್ಲ. ನನಗೆ ಶ್ರೀನಿವಾಸಮೂರ್ತಿ, ಶಿವಲಿಂಗಯ್ಯನವರ ಶ್ರೀರಕ್ಷೆ ಇದ್ದೇ ಇತ್ತು. ಸಂಜೆಯೋ ಬೆಳಗ್ಗೆಯೋ ಬಿಡುವಾದಾಗ ಅವರ ಮನೆಗೆ ಹೋಗಿ ಬರುತ್ತಿದ್ದೆ. ಆತ್ಮೀಯ ಸಂಬಂಧವೂ ಮುಂದುವರಿದಿತ್ತು. ಶಿವಲಿಂಗಯ್ಯನವರು ನಜೀರ್‌ಸಾಬರೊಂದಿಗೆ ಸೇರಿ ಜವಾಹರ್ ವಿದ್ಯಾಸಂಸ್ಥೆಯನ್ನು ಈ ವೇಳೆಗೆ ಹುಟ್ಟುಹಾಕಿದ್ದರು. ಅದರ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದರು. ಗುಂಡ್ಲುಪೇಟೆಗೆ ಹೋಗಿದ್ದರಿಂದ ಶಾಸನಶಾಸ್ತ್ರ ತರಗತಿಯಲ್ಲಿ ಉಪನ್ಯಾಸ ನೀಡುವುದು ತೊಂದರೆಯಾಯಿತು. ಇದನ್ನು ಮನಗಂಡ ಶೇಷಶಾಸ್ತ್ರಿ 'ಶನಿವಾರ ಸಂಜೆ ಒಂದು ತರಗತಿಯನ್ನು ತೆಗೆದುಕೋ ಹೇಗಿದ್ದರೂ ನೀನು ಶನಿವಾರ ಬೆಂಗಳೂರಿಗೆ ಬರುತ್ತೀಯ' ಎಂದು ಹೇಳಿದ. ನಾನು ಶನಿವಾರ ಬೆಳಗ್ಗೆ ಹೈಸ್ಕೂಲ್ ತರಗತಿಗಳನ್ನು ಮುಗಿಸಿಕೊಂಡು ೧೧ ಗಂಟೆಗೆ ಗುಂಡ್ಲುಪೇಟೆಯಲ್ಲಿ ಬಸ್ ಹತ್ತಿ ೪ ಗಂಟೆಗೆ ಬೆಂಗಳೂರು ತಲುಪುತ್ತಿದ್ದೆ. ಸೀದಾ ಪರಿಷತ್ತಿಗೆ ಬಂದು ಅಲ್ಲಿ ಶೇಷಶಾಸ್ತ್ರಿ, ಗಣೇಶ್, ಕೃಷ್ಣಮೂರ್ತಿ ಹಾಗೂ ಶಾಸನಶಾಸ್ತ್ರದ ಹಳೆಯ, ಹೊಸ ವಿದ್ಯಾರ್ಥಿಗಳ ಜೊತೆಯಲ್ಲಿ ಚರ್ಚೆ, ಹರಟೆ ಮುಂತಾದ ಕ್ರಿಯೆಗಳಲ್ಲಿ ತೊಡಗುತ್ತಿದ್ದೆ ಸಂಜೆ ೬.೩೦ ರಿಂದ ೭.೩೦ರ ವರೆಗೆ ತರಗತಿ ನಡೆಯುತ್ತಿತ್ತು. ಅನಂತರ ಮನೆಗೆ ಹೋಗುತ್ತಿದ್ದೆ. ಶನಿವಾರವಾದ್ದರಿಂದ ಆಲ್ಲ ಚಿರಂಜೀವಿಯವರು ಸಂಜೆ ಪರಿಷತ್ತಿಗೆ ಬರುತ್ತಿದ್ದರು. ಮತ್ತೆ ಸೋಮವಾರ ಬೆಳಗ್ಗೆ ೬ ಗಂಟೆಗೆ ಬೆಂಗಳೂರು ಬಿಟ್ಟು ೧೧ ಗಂಟೆಗೆ ಗುಂಡ್ಲುಪೇಟೆ ಶಾಲೆಯಲ್ಲಿರುತ್ತಿದ್ದೆ.

ಬಿ.ಎ. ಓದುವಾಗ ನಮ್ಮ ಜೊತೆಯಲ್ಲಿದ್ದ ವಿದ್ಯಾರ್ಥಿಗಳಲ್ಲಿ ಎಸ್. ಚನ್ನಪ್ಪನವರು ಒಬ್ಬರು. ಇವರು ವಯಸ್ಸಿನಲ್ಲಿ ನಮ್ಮೆಲ್ಲರಿಗಿಂತ ಒಂದೆರಡು ವರ್ಷ ಹಿರಿಯರಾಗಿದ್ದರು. ದೇವನಹಳ್ಳಿ ತಾಲ್ಲೂಕಿನ ಆವುತಿ ಇವರ ಗ್ರಾಮ. ವಿದ್ಯಾಭ್ಯಾಸ ಮುಗಿದ ಮೇಲೆ ಇವರು ಮೈಸೂರು ವಿಶ್ವವಿದ್ಯಾನಿಲಯವು ಹೊರತರುತ್ತಿದ್ದ ವಿಶ್ವಕೋಶದ ಕೆಲಸದಲ್ಲಿ ಸೇರಿಕೊಂಡರು. ನಾನು ಮೈಸೂರಿಗೆ ಹೋದಾಗಲೆಲ್ಲಾ ಇವರ ಮನೆಯಲ್ಲಿಯೇ ಉಳಿದುಕೊಳ್ಳುತ್ತಿದ್ದೆ. ಚನ್ನಪ್ಪ ತನ್ನ 'ನಿತ್ಯದ ಕೆಲಸದ ಜೊತೆಗೆ ಮಕ್ಕಳಿಗೆ ಸಂಬಂಧಿಸಿದ ಪುಸ್ತಕಗಳನ್ನು 'ಅರ್ಕಾವತಿ ಪ್ರಕಾಶನ'ದ ಹೆಸರಿನಲ್ಲಿ ಪ್ರಕಟಿಸುತ್ತಿದ್ದ. ಕೆಲವು ಪುಸ್ತಕಗಳಿಗೆ ನಮ್ಮ ಮನೆಯೇ ವಿಳಾಸದ ಸ್ಥಳವಾಗಿತ್ತು. ಒಂದೆರಡು ವರ್ಷ ಇದು ನಡೆಯಿತು. ಮುಂದೆ ನನ್ನ ಪ್ರವಾಸಗಳ ಕಾರಣದಿಂದ ವ್ಯವಹಾರ ನಡೆಸುವುದು ಕಷ್ಟವಾಗಿ ಮತ್ತೆ ಮೈಸೂರಿನ ವಿಳಾಸವನ್ನೇ ಮುಂದುವರಿಸಿದ. ಇದರಿಂದ ನನಗಾದ ಲಾಭವೆಂದರೆ. ನಾನು ಗಡಿಯಾರಂ ರಾಮಕೃಷ್ಣಶರ್ಮರ 'ಭಾರತೀಯ ವಾಸ್ತು ವಿದ್ಯೆ' ಎಂಬ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಾಶಕರು ದೊರಕದಿದ್ದಾಗ ನಾನೇ 'ರೆಡ್ಡಿ ಪ್ರಕಾಶನ' ಎಂಬ ಹೆಸರಿನಲ್ಲಿ ಪುಸ್ತಕ ಪ್ರಕಟಿಸಿದೆ. ಇದಕ್ಕೆ ಚನ್ನಪ್ಪನೇ ಹೀಗೆ ಮಾಡು, ಹೀಗೆ ಮಾಡು ಎಂದು ಉತ್ತೇಜನ ನೀಡಿದ್ದು.

ಹೀಗೆ ೧೯೭೫ರ ಅಕ್ಟೋಬರ್ ವರೆಗೆ ಗುಂಡ್ಲುಪೇಟೆಯ ಹೈಸ್ಕೂಲಿನಲ್ಲಿ ಕನ್ನಡ ಭಾಷಾ ಉಪಾಧ್ಯಾಯನಾಗಿ ಕೆಲಸ ಮಾಡಿದೆ ಈ ಅವಧಿಯಲ್ಲಿ ಸಂಸ್ಕೃತ ಉಪಾಧ್ಯಾಯರಾಗಿದ್ದ ಕನಕಶೈಲ, ಹಿಂದಿ ಉಪಾಧ್ಯಾಯರಾಗಿದ್ದ ಶಾಂತ, ಶಾಸನತಜ್ಞ ಪಿ.ಎನ್. ನರಸಿಂಹಮೂರ್ತಿಯವರ ಅಕ್ಕ ಶಾಂತಮ್ಮ ಅವರೊಂದಿಗೆ ಸಂಬಂಧಿಸಿದ ವಿಷಯಗಳ ಚರ್ಚೆಯನ್ನು ಬಿಡುವಿನ ವೇಳೆಯಲ್ಲಿ ಮಾಡುತ್ತಿದ್ದೆ. ಈ ಸಮಯಕ್ಕಾಗಲೇ ನಾನು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ 'ಗಂಗರ ದೇವಾಲಯಗಳು – ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯದ ಮೇಲೆ ಪಿಎಚ್.ಡಿ. ಅಧ್ಯಯನಕ್ಕಾಗಿ ರಿಜಿಸ್ಟರ್ ಮಾಡಿಸಿದ್ದೆ. ಹೀಗಾಗಿ ಅನೇಕ ಗಂಗರ ಸಂಸ್ಕೃತ ಶಾಸನ ಪಾಠಗಳನ್ನು ಸಂಸ್ಕೃತದ ಕನಕಶೈಲ ಅವರೊಂದಿಗೆ ಚರ್ಚಿಸುವ ಸನ್ನಿವೇಶ ತಾನಾಗಿ ಒದಗಿಬಂದಿತ್ತು. ಈ ಅವಧಿಯಲ್ಲಿ ರಜಾದಿನಗಳಂದು ಅಥವಾ ಬಿಡುವು ದೊರಕಿದಾಗ ಹಿರೇಕಾಟ, ಶಿವಪುರ ಮೊದಲಾದ ಗ್ರಾಮಗಳ ಶಾಸನಗಳ ಪ್ರತಿಗಳನ್ನು ಪಡೆದಿದ್ದೆ. ಇವನ್ನು ಮುಂದೆ ಇತಿಹಾಸ ದರ್ಶನ ಸಂಪುಟಗಳಲ್ಲಿ ಪ್ರಕಟಿಸಿದೆ. ಎರಡನೆಯ ಬಾರಿ ಗುಂಡ್ಲುಪೇಟೆಗೆ ಹೋದಾಗ ಅನೇಕ ಹೊಸ ಬೆಳವಣಿಗೆಗಳಾಗಿದ್ದವು. ಹೊಸ ಬಸ್ ನಿಲ್ದಾಣ, ಗುಂಡ್ಲುನದಿಗೆ ಹೊಸ ಕೆರೆಯೊಂದರ ನಿರ್ಮಾಣವಲ್ಲದೆ ಗುಂಡ್ಲುಪೇಟೆ ಸಹ ವಿಸ್ತಾರವಾಗಿ ಹರಡಿತ್ತು.

ಸಾಹಿತ್ಯ ಪರಿಷತ್ತಿನಲ್ಲಿ ನಾನಿದ್ದಾಗ ಶಾಸನಶಾಸ್ತ್ರ ತರಗತಿಯಲ್ಲಿ ಕಲಿತಿದ್ದ ಹಳೆಯ ವಿದ್ಯಾರ್ಥಿಗಳ ಸಂಘವನ್ನು ಕಟ್ಟಿದ್ದೆ. ಇಲ್ಲಿ ತಿಂಗಳಿಗೆ ಒಮ್ಮೆ ಹಳೆಯ ವಿದ್ಯಾರ್ಥಿಗಳೇ ಶಾಸನಕ್ಕೆ ಸಂಬಂಧಿಸಿದ ವಿಷಯದ ಮೇಲೆ ಉಪನ್ಯಾಸ ನೀಡಬೇಕಿತ್ತು. ಇಂತಹ ಅನೇಕ ಉಪನ್ಯಾಸಗಳು ಅಲ್ಲಿ ನಡೆದು ಕೆಲವು ಹೊಸ ಶಾಸನಗಳೂ ಬೆಳಕಿಗೆ ಬಂದವು. ಅಲ್ಲದೆ ಇಂತಹ ವಿಷಯಗಳ ಮೇಲೆ ಹೇಗೆ ಅಧ್ಯಯನ ಮಾಡಬಹುದೆಂಬುದನ್ನು ಶಾಸನಶಾಸ್ತ್ರದ ಅಧ್ಯಾಪಕರಾದ ಶೇಷಶಾಸ್ತ್ರಿ, ನಾನು, ಗಣೇಶ್ ನೀಡುತ್ತಿದ್ದೆವು. ಈ ಉಪನ್ಯಾಸಗಳ ಏರ್ಪಾಡನ್ನು ಶ್ರೀ ವೇಮಗಲ್ ಸೋಮಶೇಖರ್ ನೋಡಿಕೊಳ್ಳುತ್ತಿದ್ದರು. ಶಾಸನಶಾಸ್ತ್ರ ಅಧ್ಯಯನದ ಪ್ರವೇಶ ತರಗತಿಗೆ ಆರಂಭದಲ್ಲಿ ಹೆಚ್ಚಿನ ವಿದ್ಯಾರ್ಥಿಗಳು ಸೇರಿದರೂ ಅಂತ್ಯದಲ್ಲಿ ಅರ್ಧದಷ್ಟು ಜನರು ಬಿಟ್ಟುಹೋಗುತ್ತಿದ್ದರು. ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು ವರ್ಷಕ್ಕೆ ಐದು ರೂಪಾಯಿ ಶುಲ್ಕವನ್ನು ಮಾತ್ರ ತೆಗೆದುಕೊಳ್ಳುತ್ತಿದ್ದರು. ಪ್ರವೇಶ ತರಗತಿಯ ವಿದ್ಯಾರ್ಥಿಯು ಕೋರ್ಸಿನ ಅಂತ್ಯದಲ್ಲಿ ಕಡ್ಡಾಯವಾಗಿ ಪ್ರವಾಸಕ್ಕೆ ಬರಬೇಕಿತ್ತು. ಒಮ್ಮೆ ನಮ್ಮ ಜೊತೆಯಲ್ಲಿ ಪ್ರವಾಸಕ್ಕೆ ಬಂದ ವಿದ್ಯಾರ್ಥಿ ಮುಂದೆ ತರಗತಿಯನ್ನು ಬಿಡುತ್ತಿರಲಿಲ್ಲ. ಗಟ್ಟಿಗೊಳ್ಳುತ್ತಿದ್ದ ಈ ಪ್ರವಾಸಕ್ಕೂ ಪರಿಷತ್ತು ಆ ಕಾಲಕ್ಕೆ ೧೫ ರೂ.ಗಳನ್ನು ಪ್ರವಾಸಕ್ಕೆ ಹೋಗುವ ಪ್ರತಿ ವಿದ್ಯಾರ್ಥಿಗೆ ನೀಡುತ್ತಿತ್ತು. ಈ ೧೫ ರೂಪಾಯಿಗಳು ಅಂದು ಶ್ರವಣಬೆಳಗೊಳ ಮತ್ತು ಬೆಂಗಳೂರಿನ ಒಂದು ಕಡೆಯ ಬಸ್ ಚಾರ್ಜು ಆಗಿತ್ತು.

ಪರಿಷತ್ತಿನಲ್ಲಿದ್ದಾಗ ಸಾಹಿತಿಯಲ್ಲದ, ಆದರೆ ಸಾಹಿತ್ಯ ಪರಿಚಾರಕನಾದ ವ್ಯಕ್ತಿಯೊಬ್ಬರು ಬರುತ್ತಿದ್ದರು. ಅವರ ಹೆಸರು ಸೋಮಶೇಖರ್. ಅವರ ಮನೆಯ ಬಳಿ ಹಳೆಯ ಪೇಪರ್ ಅಂಗಡಿಯೊಂದಿತ್ತು. ಅಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದ ಪುಸ್ತಕಗಳಿದ್ದರೆ ಅವನ್ನು ಆತ ಪೊಟ್ಟಣ ಕಟ್ಟಲು ಬಿಡದೆ ಪರಿಷತ್ತಿಗೆ ತರುತ್ತಿದ್ದರು. ನಾನು, ತೆಲಗಾವಿ, ಶೇಷಶಾಸ್ತ್ರಿ ಅಲ್ಲದೆ ಹಳೆಯ ವಿದ್ಯಾರ್ಥಿಗಳಿಗೆ ಅವನ್ನು ತೋರಿಸಿ ಬೇಕಾದವರಿಗೆ ಬೇಕಾದ ಪುಸ್ತಕಗಳನ್ನು ನೀಡುತ್ತಿದ್ದರು. ಇಷ್ಟು ಹಣ ಎಂದಿಲ್ಲ. ಕೊಟ್ಟಷ್ಟು ತೆಗೆದುಕೊಳ್ಳುತ್ತಿದ್ದರು. ಹಣವಿಲ್ಲದಿದ್ದಲ್ಲಿ ಇನ್ನೊಮ್ಮೆ ಕೊಡಿ ಸಾರ್ ಎಂಬ ಮಾತು ಬೇರೆ. ನಮ್ಮೆಲ್ಲರ ಪುಸ್ತಕ ಭಂಡಾರ ಬೆಳೆಯಲು ಹಾಗೂ ಹಳೆಯ ಪುಸ್ತಕಗಳು ನಮ್ಮ ಸಂಗ್ರಹಕ್ಕೆ ಸೇರಲು ಇವರು ಕಾರಣರಾಗಿದ್ದಾರೆ. ಅನೇಕ ಪುಸ್ತಕಗಳನ್ನು ಪರಿಷತ್ತಿನ ಪುಸ್ತಕ ಭಂಡಾರಕ್ಕೆ ಉಚಿತವಾಗಿ ನೀಡಿದ್ದರು. ಪರಿಷತ್ತಿನಲ್ಲಿ ಜಿ. ನಾರಾಯಣರು ಅಧ್ಯಕ್ಷರಾಗಿದ್ದಷ್ಟು ಕಾಲವೂ ಬೆಳಗ್ಗೆ ೯ರಿಂದ ಮಧ್ಯಾಹ್ನ ಒಂದರ ವರೆಗೆ ಸಂಜೆ ನಾಲ್ಕರಿಂದ ರಾತ್ರಿ ೭.೩೦ರ ವರೆಗೆ ಕೆಲಸದ ವೇಳೆ ಇತ್ತು. ನಾನು ಬೆಳಗ್ಗೆ ೮.೧೫ಕ್ಕೆ ಮನೆ ಬಿಟ್ಟು ಬಂದರೆ ಮತ್ತೆ ಮನೆ ಸೇರುತ್ತಿದ್ದುದು ರಾತ್ರಿ ೮.೩೦ಕ್ಕೆ. ಸಾಮಾನ್ಯವಾಗಿ ಸಾಹಿತ್ಯ ಪರಿಷತ್ತಿನಿಂದ ಲಕ್ಕಿಸಂದ್ರಕ್ಕೆ ನಡೆದೇ ಹೋಗುತ್ತಿದ್ದೆ. ಮಿನರ್ವ ಟಾಕೀಸಿನವರೆಗೆ ಶೇಷಶಾಸ್ತ್ರಿ ಬರುತ್ತಿದ್ದು, ಅಲ್ಲಿಂದ ಒಬ್ಬನೇ ಬೇಗ ಬೇಗ ಹೆಜ್ಜೆ ಹಾಕಿ ಹೋಗುತ್ತಿದ್ದೆ. ದಿನದಲ್ಲಿ ಮಧ್ಯಾಹ್ನ ೧ ರಿಂದ ೪ ರವರೆಗೆ ಅನೇಕ ವೇಳೆ ಪರಿಷತ್ತಿನ ಟೇಪ್‌ರೆಕಾರ್ಡು ರೂಮಿನಲ್ಲಿದ್ದ ನಾಗೇಂದ್ರನೊಂದಿಗೆ ಬೇಂದ್ರೆ, ಮಾಸ್ತಿ, ಕುವೆಂಪು ಮುಂತಾದವರ ಭಾಷಣಗಳನ್ನು ಆಲಿಸುವುದು. ಜಾನಪದ ಹಾಡುಗಾರರ ಹಾಡುಗಳನ್ನು ಕೇಳುವ ಕೆಲಸಮಾಡುತ್ತಿದ್ದೆವು. ಬಾನಂದೂರು ಕೆಂಪಯ್ಯ ಆಗ ಈ ವೇಳೆಗೆ ಪರಿಷತ್ತಿಗೆ ಬರುತ್ತಿದ್ದರು. 'ಎಲ್ಲೊ ಜೋಗಪ್ಪ ನಿನ್ನರಮನೆ' ಎಂಬ ಹಾಡು ಮೊದಲಿಗೆ ಕೇಳಿದ್ದು ಇವರ ಬಾಯಿಯಲ್ಲಿಯೇ. ಬಹು ಇಂಪಾದ ದನಿ ಇವರಿಗಿತ್ತು. ಇದು ಬಿಟ್ಟರೆ ನನ್ನ ವಿಭಾಗದಲ್ಲಿ ಬೇರೆ ಬೇರೆ ವಿಷಯಗಳ ಅಧ್ಯಯನ ಹಾಗೂ ಸಂಜೆಯ ಪಾಠಕ್ಕೆ ತಯಾರಿ ನಡೆಸುತ್ತಿದ್ದೆ. ಅನೇಕ ವೇಳೆ ಪರಿಷತ್ತಿನ ಮೆಟ್ಟಲುಗಳೇ ನಮ್ಮ ಅಧ್ಯಯನದ ಸ್ಥಳವಾಗುತ್ತಿತ್ತು. ಕೆಲವು ವೇಳೆ ರಾತ್ರಿ ೭.೩೦ ಆದ ಮೇಲೆ ಇಲ್ಲಿ ಚರ್ಚೆಗೆ ಸೇರುತ್ತಿದ್ದೆವು. ಗಣೇಶ್, ಶೇಷಶಾಸ್ತ್ರಿ, ಕೃಷ್ಣಮೂರ್ತಿ, ಗೋಪಾಲರಾವ್, ವೆಂಕಟೇಶಯ್ಯ ಮೊದಲಾದವರು ಸೇರಿದರೆ ಶಾಸನ, ಪುರಾತತ್ತ್ವ ವಿಷಯಗಳ ಚರ್ಚೆ ನಡೆಯುತ್ತಿತ್ತು.

ಇದೇ ಸಂದರ್ಭದಲ್ಲಿ ಕರ್ನಾಟಕ ಸಾಹಿತ್ಯ ಅಕಾದೆಮಿಯಿಂದ ಹೊರರಾಜ್ಯಗಳಿಗೆ ಹೋಗಿ ಅಲ್ಲಿನ ಸಾಹಿತಿಗಳೊಂದಿಗೆ ಹಾಗೂ ಸಾಹಿತ್ಯದ ಪ್ರಗತಿ ಬಗ್ಗೆ ತಿಳಿದುಬರಲು ಅರ್ಜಿಗಳನ್ನು ಆಹ್ವಾನಿಸಿದ್ದರು. ನಾನು ತಮಿಳುನಾಡಿಗೆ ಹೋಗುವುದಾಗಿ ಅರ್ಜಿ ಸಲ್ಲಿಸಿದ್ದೆ. ನನ್ನದು ಆಯ್ಕೆಯೂ ಆಯಿತು. ಆದರೆ ಆಗತಾನೆ ಕೆಲಸಕ್ಕೆ ಸೇರಿದ್ದ ನನಗೆ ಪ್ರವಾಸ ಕಳುಹಿಸುವುದಿಲ್ಲವೆಂದು ಹೆಡ್‌ಮಾಸ್ಟರು ಗುಟುರು ಹಾಕಿದರು. ಕೊನೆಗೆ ಮತ್ತೆ ಶಿವಲಿಂಗಯ್ಯನವರ ಮೊರೆ ಹೋದೆ. ಅವರು ಖಾಜಿನ್ಯಾಯ ಮಾಡಿ ಆಗಸ್ಟ್ ತಿಂಗಳಲ್ಲಿ ೨೨ ದಿನಗಳ ಪ್ರವಾಸ ಹೋಗಿ ಬರಲು ಅನುಮತಿ ದೊರಕಿಸಿ ಕೊಟ್ಟರು. ಈ ಇಪ್ಪತ್ತೆರಡು ದಿನಗಳಲ್ಲಿ ವಾಸ್ತವವಾಗಿ ನಾನು ಸಾಹಿತಿಗಳನ್ನು ಭೇಟಿ ಮಾಡುವ ಕಾರ್ಯ ಹೆಚ್ಚಾಗಿ ಮಾಡದೆ ವಾಸ್ತುಶಿಲ್ಪದ ಖ್ಯಾತ ಕೇಂದ್ರಗಳನ್ನು ಸಂದರ್ಶಿಸಲು ಬಳಸಿಕೊಂಡೆ. ಧರ್ಮಪುರಿ, ಸೇಲಂ ಜಿಲ್ಲೆಯ ಅನೇಕ ಸ್ಥಳಗಳು ಮುಖ್ಯವಾಗಿ ಬೇಲೂರು, ಅಯೋಧ್ಯಾಪಟ್ಟಣಂ, ನಾಮಕ್ಕಲ್, ಕೊಯಮುತ್ತೂರಿನ ಪೇರೂರು, ಮತ್ತು ಪಳನಿ, ಐವರ್‌ಮಲೈ, ಮಧುರೆ, ರಾಮನಾಥಪುರ, ಕುಂಭಕೋಣ, ತಂಜಾವೂರು, ಪುದುಕೋಟ್ಟೆ, ಕೋಡಂಬಾಳೂರು, ನಟ್ರಮಲೆ, ಚಿದಂಬರಂ, ಅಣ್ಣಾಮಲೆ ವಿಶ್ವವಿದ್ಯಾಲಯ, ಸೀರ್ಕಾಳಿ,

ಕಡಲೂರು, ಮಹಾಬಲಿಪುರ, ಕಂಚಿ, ಮದರಾಸು ಮೊದಲಾದ ಸ್ಥಳಗಳ ವಾಸ್ತು ಮತ್ತು ಮೂರ್ತಿಶಿಲ್ಪಗಳ ಅಭ್ಯಾಸವನ್ನು ಮಾಡಿದುದಲ್ಲದೆ ಛಾಯಾಚಿತ್ರಗಳನ್ನು ಪಡೆದೆ. ಮದರಾಸು ವಿಶ್ವವಿದ್ಯಾನಿಲಯದಲ್ಲಿ ಆಗ ಪ್ರೊ.ಸಂಜೀವನ್ ತಮಿಳು ಪ್ರಾಧ್ಯಾಪಕರಾಗಿದ್ದರು. ಅವರನ್ನು ಸಂದರ್ಶಿಸಿ ತಮಿಳು ಸಾಹಿತ್ಯದ ಕಾಲಘಟ್ಟಗಳಲ್ಲಿ ಬರುವ ಬ್ಲಾಕ್ ಪೀರಿಯಡ್‌ಗಳ ಬಗೆಗೆ ಪ್ರಶ್ನಿಸಿದೆ. ನಂತರ ಬೆಂಗಳೂರಿಗೆ ಬಂದು ಈ ಪ್ರವಾಸದ ನಂತರ ಒಂದು ವಿಸ್ತೃತ ವರದಿಯನ್ನು ಸಾಹಿತ್ಯ ಅಕಾದೆಮಿಗೆ ಸಲ್ಲಿಸಿದೆ.

ಈ ಅವಧಿಯಲ್ಲಿ ಗುಂಡ್ಲುಪೇಟೆಯಲ್ಲಿದ್ದಾಗ ತಲಕಾಡಿನ ಗಂಗರ ಶಾಸನಗಳು ಎಲ್ಲೆಲ್ಲಿ ದೊರೆಯುತ್ತವೆ, ಆ ಸ್ಥಳಗಳ ಪಟ್ಟಿ ಮಾಡಿಕೊಂಡು ಗುಂಡ್ಲುಪೇಟೆ ತಾಲೂಕಿನಲ್ಲಿ ವಿಸ್ತೃತ ಸರ್ವೆ ಮಾಡತೊಡಗಿದೆ. ಅನೇಕ ಹೊಸ ಹೊಸ ದೇವಾಲಯಗಳು ಇಲ್ಲಿ ಸಿಕ್ಕತೊಡಗಿದವು. ಭಾನುವಾರ ಬೆಳಗ್ಗೆ ಬಸ್ ಹತ್ತಿದರೆ ಸಂಜೆ ಅಥವಾ ರಾತ್ರಿಗೆ ಗುಂಡ್ಲುಪೇಟೆಗೆ ವಾಪಾಸ್ಸಾಗುತ್ತಿದ್ದೆ. ಕೆಲವೊಮ್ಮೆ ಸ್ನೇಹಿತರನ್ನು ಪುಸಲಾಯಿಸಿ ಗಾಡಿ ತೆಗೆದುಕೊಂಡು ಕೆಲವು ಸ್ಥಳಗಳಿಗೆ ಹೋಗಿ ಬರುತ್ತಿದ್ದೆ. ಬಹಳಷ್ಟು ಕಡೆ ನಡೆಯುವುದೇ ಕೆಲಸವಾಗುತ್ತಿತ್ತು. ಈ ಸರ್ವೆಯಲ್ಲಿ ಕೆಲವು ಗಂಗರ ಕಾಲದ ಬೇರೆ ರೀತಿಯ ದೇವಾಲಯಗಳು ಗೋಚರಿಸಿದವು. ಈ ವಿಂಗಡಣೆಯನ್ನು ನನ್ನ 'ತಲಕಾಡಿನ ಗಂಗರ ದೇವಾಲಯಗಳು – ಒಂದು ಅಧ್ಯಯನ' ಎಂಬ ಕೃತಿಯಲ್ಲಿ ಸೂಚಿಸಿದ್ದೇನೆ. ಇಲ್ಲಿಯೂ ಸಹ ಯಾವುದಾದರೂ ಒಂದು ಸ್ಥಳಕ್ಕೆ ಬಸ್ಸಿನಲ್ಲಿ ಹೋಗಿ ಇಳಿದು ಅಲ್ಲಿಂದ ಕ್ಷೇತ್ರಕಾರ್ಯ ಮುಂದುವರಿಸುತ್ತಾ ಇನ್ನಾವುದಾದರೂ ರಸ್ತೆ ಬಳಿಯ ಊರಿಗೆ ಬಂದು ಅಲ್ಲಿ ಬಸ್ ಹತ್ತಿ, ಗುಂಡ್ಲುಪೇಟೆ ತಲುಪುತ್ತಿದ್ದೆ. ಈ ಕಾಲಕ್ಕೆ ಶೇಷಶಾಸ್ತ್ರಿಯ ಕ್ಯಾಮರ ನನ್ನ ಬಳಿಯೇ ಇದ್ದು ಅದನ್ನು ಕ್ಷೇತ್ರಕಾರ್ಯದಲ್ಲಿ ಬಳಸಿಕೊಂಡಿದ್ದೇನೆ. ಗುಂಡ್ಲುಪೇಟೆಯಲ್ಲಿದ್ದಾಗ ಬಂಡೀಪುರದ ಬೆಟ್ಟಕುರುಬರ ಕುಣಿತವನ್ನು ನೋಡಲು ಮತ್ತು ಫೋಟೋ ತೆಗೆಯಲು ಡಾ. ಕೃಷ್ಣಾನಂದ ಕಾಮತರು ಶಿವರಾತ್ರಿಯಂದು ಅಲ್ಲಿಗೆ ಬಂದಿದ್ದರು.

ಇದೇ ಸಮಯದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಗ್ಯಾಜೆಟಿಯರ್‌ಗೆ ಸೂರ್ಯನಾಥ ಯು. ಕಾಮತರು ಮುಖ್ಯಸಂಪಾದಕರಾಗಿ ಬಂದಿದ್ದರು. ಒಮ್ಮೆ ಇವರನ್ನು ಭೇಟಿ ಮಾಡಿದಾಗ ತಮ್ಮ ಗ್ಯಾಜೆಟಿಯರ್ ಇಲಾಖೆಗೆ ಬರುವ ಇಚ್ಛೆ ಇದ್ದಲ್ಲಿ ಒಂದು ಪತ್ರ ಬರೆದು ಕೊಡುವಂತೆ ಹೇಳಿದರು. ಅದರಂತೆ ನಾನು ಒಂದು ಅರ್ಜಿ ಬರೆದುಕೊಟ್ಟೆ. ಅವರು ಅದನ್ನು ತೆಗೆದುಕೊಂಡು ವಿದ್ಯಾ ಇಲಾಖೆಯ ಕಮಿಷನರ್ ಅವರ ಕಡೆಗೆ ಕಳುಹಿಸಿದರು. ಮುಂದೆ ಒಂದು ದಿನ ಗುಂಡ್ಲುಪೇಟೆ ಹೈಸ್ಕೂಲಿನಿಂದ ನನ್ನನ್ನು ಡೆಪ್ಯುಟೇಷನ್ ಮೇಲೆ ಗ್ಯಾಜೆಟಿಯರ್ ಕಛೇರಿಗೆ ಕಳುಹಿಸಿಕೊಡುವಂತೆ ಆದೇಶ ಬಂತು. ಆಗಿನ ಪ್ರಿನ್ಸಿಪಾಲರು ಕಳುಹಿಸಲು ಆಗುವುದಿಲ್ಲವೆಂದು ಹೇಳಿ ಸುಮ್ಮನಾದರು. ಮತ್ತೆ ನಾನು ಸೂರ್ಯನಾಥ ಕಾಮತರನ್ನು ಭೇಟಿಯಾಗಿ ವಿಷಯ ತಿಳಿಸಿದೆ. ಅವರು ಕಮಿಷನರ್‌ಗೆ ಕಾಗದ ಬರೆದು ಮತ್ತೊಂದು ಸುತ್ತೋಲೆಯನ್ನು ಕಳುಹಿಸಿದಾಗ ಪ್ರಿನ್ಸಿಪಾಲರು ನಿರ್ವಾಹವಿಲ್ಲದೆ ನನ್ನನ್ನು ಗುಂಡ್ಲುಪೇಟೆ ಸರ್ಕಾರಿ ಪ್ರೌಢಶಾಲೆಯ ಉಪಾಧ್ಯಾಯ ವೃತ್ತಿಯಿಂದ ಬಿಡುಗಡೆಗೊಳಿಸಿದರು. ೧೯೮೩ರ ಅಕ್ಟೋಬರ್ ತಿಂಗಳಲ್ಲಿ ನಾನು ಗ್ಯಾಜೆಟಿಯರ್ ಇಲಾಖೆಯಲ್ಲಿ ಅನ್ವೇಷಕನಾಗಿ ರಿಪೋರ್ಟು ಮಾಡಿಕೊಂಡೆ.

ಅನ್ವೇಷಕನಾಗಿ ಕೆಲಸಕ್ಕೆ ಸೇರಿದಾಗ ಆಗತಾನೆ ಚಿಕ್ಕಮಗಳೂರು ಜಿಲ್ಲಾ ಸಂಪುಟ ಬಿಡುಗಡೆಯಾಗಿತ್ತು. ಕರ್ನಾಟಕ ಗ್ಯಾಜೆಟಿಯರ್‌ನ ಇಂಗ್ಲಿಷ್ ಭಾಷೆಯ ರಾಜ್ಯ ಸಂಪುಟದ ಕನ್ನಡಾನುವಾದ ನಡೆಯುತ್ತಿತ್ತು.

ನಾನು ಗೆಜೆಟಿಯರ್‌ಗೆ ಸೇರಿದ ಮೇಲೆ ಶೇಷಶಾಸ್ತ್ರಿಯವರ ಮೇಲೆ ಕಾಮತರ ಕಣ್ಣು ಬಿತ್ತು. ಅವರನ್ನು ಕಾಂಟ್ರ್ಯಾಕ್ಟ್ ಮೇಲೆ ತೆಗೆದುಕೊಳ್ಳಲು ನಿರ್ಧರಿಸಿ, ಪತ್ರವ್ಯವಹಾರ ನಡೆಸಿ ಅವರನ್ನು ನೇಮಕ ಮಾಡಿಕೊಳ್ಳುವುದರಲ್ಲಿ ಅವರು ಯಶಸ್ವಿಯಾದರು. ೧೯೮೪-೮೫ರಲ್ಲಿ ಶೇಷಶಾಸ್ತ್ರಿಯವರು ಗ್ಯಾಜೆಟಿಯರ್ ಇಲಾಖೆಗೆ ಸಂಪಾದಕರಾಗಿ ಬಂದರು. ಇಬ್ಬರೂ ಒಂದೇ ಕೊಠಡಿಯಲ್ಲಿ ಕೆಲಸ; ಅಕ್ಕ ಪಕ್ಕ ಟೇಬಲ್‌ಗಳು. ಅವರು ಸಂಪಾದಕರು, ನಾನು ಅನ್ವೇಷಕ ಎಂಬ ಭಾವನೆ ಎಂದೂ ಇಬ್ಬರಿಗೂ ಬರಲಿಲ್ಲ. ಒಂದೇ ಸಮನೆ ಕೆಲಸ ಮಾಡುತ್ತಿದ್ದೆವು. ನಮ್ಮ ಕೊಠಡಿಯಲ್ಲಿ ಅ. ಲಕ್ಷ್ಮೀನರಸಿಂಹನ್ ಇದ್ದ. ಈತ ನಮ್ಮಿಬ್ಬರಿಗೂ ಶಾಸನಶಾಸ್ತ್ರ ತರಗತಿಯಲ್ಲಿ ವಿದ್ಯಾರ್ಥಿ. ಹೀಗಾಗಿ ನಮಗೆ ಈ ಕಚೇರಿಯಲ್ಲಿ ಅಪರಿಚಿತತನ ಕಾಡಲೇ ಇಲ್ಲ. ತಮಾಷೆ ಮಾಡುತ್ತಾ ನಮಗೆ ವಹಿಸಿದ ಕೆಲಸಗಳನ್ನು ಸಕಾಲದಲ್ಲಿ ಮುಗಿಸಿಕೊಡುತ್ತಿದ್ದೆವು. ಕರ್ನಾಟಕ ಗ್ಯಾಜೆಟಿಯರ್‌ಗೆ ಬರುವ

ವೇಳೆಗಾಗಲೇ ಶೇಷಶಾಸ್ತ್ರಿಗೆ ಮದುವೆಯಾಗಿತ್ತು. ಟೆಲಿಫೋನ್ ಡಿಪಾರ್ಟ್‌ಮೆಂಟ್‌ನಲ್ಲಿ ಅವರ ಶ್ರೀಮತಿಯವರ ಕೆಲಸ. ಮುಂದೆ ಕೃಷ್ಣದೇವರಾಯ ವಿಶ್ವವಿದ್ಯಾಲಯವಲ್ಲಿ ಕನ್ನಡ ವಿಷಯದಲ್ಲಿ ಅಧ್ಯಾಪಕರು ಬೇಕೆಂದು ಪತ್ರಿಕಾ ಪ್ರಕಟಣೆ ನೀಡಿದಾಗ ಅರ್ಜಿ ಹಾಕಿದ್ದರು. ಅದೃಷ್ಟ ಬಲದಿಂದ ಶೇಷಶಾಸ್ತ್ರಿ ಅಲ್ಲಿನ ಭಾಷಾ ಭಾರತಿ ವಿಭಾಗದಲ್ಲಿ ಕನ್ನಡ ಉಪನ್ಯಾಸಕನಾಗಿ ಸೇರಿಕೊಂಡರು. ಇವರಿಂದ ತೆರವಾದ ಜಾಗಕ್ಕೆ ಮುಂದೆ ಲಕ್ಷ್ಮಣ್ ತೆಲಗಾವಿಯವರನ್ನು ಸಂಪಾದಕರಾಗಿ ತೆಗೆದುಕೊಂಡರು. ಗ್ಯಾಜೆಟಿಯರ್‌ನಲ್ಲಿ ಲಕ್ಷ್ಮೀನರಸಿಂಹನ್ ಅವರ ಒಡನಾಟದಿಂದ ನಾನು ಚಿತ್ರಕಲೆಯ ಬಗ್ಗೆ ಕೆಲವು ಮೂಲ ಮಾಹಿತಿಗಳನ್ನು ಪಡೆದೆ. ಚಿತ್ರಗಳ ವಿವಿಧ ಮಾಧ್ಯಮಗಳು, ಪ್ರಾಗೈತಿಹಾಸಿಕ ಚಿತ್ರಕಲೆ, ಶಿಲೆಗಳ ಮೇಲೆ ತಿದ್ದಿದ ಚಿತ್ರಗಳು ಇವುಗಳ ಕಾಲದ ಬಗ್ಗೆ ಚರ್ಚೆ ಮಾಡುತ್ತಿದ್ದೆವು. ಈತ ಒಳ್ಳೆಯ ಕ್ಯಾಮರಾಮನ್ ಸಹ. ಹೀಗಾಗಿ ಕ್ಯಾಮರಾ ಬಳಕೆಯ ಬಗ್ಗೆಯೂ ವಿಚಾರ ವಿನಿಮಯ ನಡೆಯುತ್ತಿತ್ತು. ಮುದ್ರಣ ಕಲೆಯಲ್ಲಿ ಪಳಗಿದ್ದ ಈತ, ಮುದ್ರಣದಲ್ಲಿ ಛಾಯಾಚಿತ್ರಗಳನ್ನು ಪುಟಕ್ಕೆ ಹೇಗೆ ಜೋಡಿಸಬೇಕೆಂಬ ಬಗ್ಗೆ ತಿಳಿಸಿದ್ದ. ಗ್ಯಾಜೆಟಿಯರ್ ಸಂಪುಟಗಳ ಚಿತ್ರಗಳ ಜೋಡಣೆಯಲ್ಲಿ ಕೆಲವೊಮ್ಮೆ ಇಬ್ಬರೂ ಸೇರಿ ಕೆಲಸ ನಿರ್ವಹಿಸುತ್ತಿದ್ದೆವು. ಹೀಗೆ ಹಂತ ಹಂತದಲ್ಲೂ ಸ್ನೇಹಿತರ ಸಹವಾಸದಲ್ಲಿ ಅನೇಕ ಬಗೆಯ ಕಲಿಕೆಗಳನ್ನು ಕಲಿಯುತ್ತಾ ಹೋದೆ. ಲಕ್ಷ್ಮಣ್ ತೆಲಗಾವಿಯವರು ಮತ್ತು ನಾನು ಇಬ್ಬರೂ ಅನೇಕ ಬಾರಿ ಒಟ್ಟಿಗೆ ಪ್ರವಾಸ ಹೋಗುತ್ತಿದ್ದೆವು. ಮಾಹಿತಿ ಸಂಗ್ರಹಣೆಯಲ್ಲಿ ತೆಲಗಾವಿಯವರದ್ದು ತಲಸ್ಪರ್ಶಿ ಅಧ್ಯಯನ. ನಾನೋ ಅಗತ್ಯಕ್ಕೆ ಎಷ್ಟು ಬೇಕೋ ಅಷ್ಟು ಸಂಗ್ರಹಿಸುತ್ತಿದ್ದೆ.

ಗ್ಯಾಜೆಟಿಯರ್‌ನಲ್ಲಿ ನಾನು ಸೇರುವ ಹೊತ್ತಿಗೆ ಚಿಕ್ಕಮಗಳೂರು ಜಿಲ್ಲಾ ಗ್ಯಾಜೆಟಿಯರ್‌ನ ಕೆಲಸ ಮುಗಿದಿತ್ತು. ಉತ್ತರ ಕನ್ನಡ ಜಿಲ್ಲೆಯ ಸಂಪುಟದ ಬರವಣಿಗೆ ಆರಂಭವಾಗಿತ್ತು. ಈ ಜಿಲ್ಲೆಯ ಪ್ರವಾಸ ಮಾಡುವಾಗ ಮುಖ್ಯಸಂಪಾದಕರಾದ ಸೂರ್ಯನಾಥ ಕಾಮತರ ಜೊತೆ ಹೋಗುತ್ತಿದ್ದೆ. ನಮ್ಮೊಂದಿಗೆ ಕೆಲವು ಸಾರಿ ಪ್ರಸಿದ್ಧ ಲೇಖಕರಾದ ಕೃಷ್ಣಾನಂದ ಕಾಮತರೂ ತಮ್ಮ ಕ್ಯಾಮರಾದೊಂದಿಗೆ ಬರುತ್ತಿದ್ದರು. ಉತ್ತರ ಕನ್ನಡ ಜಿಲ್ಲೆಯ ಅನೇಕ ಸ್ಥಳಗಳನ್ನು ನೋಡುವ ಅವಕಾಶ ಈ ಸಂದರ್ಭದಲ್ಲಿ ಒದಗಿ ಬಂತು. ಕೆಲವು ಸ್ಥಳಗಳಿಗೆ ನಾನು ಒಬ್ಬನೇ ಹೋಗಿದ್ದೇನೆ. ಇವುಗಳಲ್ಲಿ ಭೋಜರ ರಾಜಧಾನಿ ಶಿವಪುರದ ಹುಡುಕಾಟವೂ ಒಂದು. ಈ ಪ್ರಯಾಣವನ್ನು ಕುರಿತು ಪ್ರತ್ಯೇಕವಾಗಿ ಒಂದು ಪ್ರವಾಸ ಕಥನವನ್ನೇ ಬರೆದಿದ್ದೇನೆ. ಇದೊಂದು ರೋಚಕ ಅನುಭವ. ಕಾಳಿನದಿಯ ಪ್ರಪಾತದಲ್ಲಿನ, ಊರಿಗೆ ಹೋಗಿಬಂದಿದ್ದು. ಸ್ಥಳದ ಪರಿಚಯವಿಲ್ಲದ ಬಯಲು ಸೀಮೆಯ ವ್ಯಕ್ತಿ ಅರಣ್ಯದಿಂದ ಕೂಡಿರುವ ಪ್ರದೇಶದಲ್ಲಿ ಒಂಟಿಯಾಗಿ ಓಡಾಡುವುದು ಎಷ್ಟು ಕಷ್ಟವೆಂಬುದು ತಿಳಿಯಿತು. ಈ ಸಮಯಕ್ಕಾಗಲೇ ಅಲ್ಪಸ್ವಲ್ಪ ಶಾಸನದ ಅಕ್ಷರವನ್ನು ಗುರುತಿಸುವ, ದೇವಾಲಯ ಹಾಗೂ ಮೂರ್ತಿ ಶಿಲ್ಪಗಳ ಅಭ್ಯಾಸ ಮಾಡುವ ಸ್ವಲ್ಪ ಜ್ಞಾನವನ್ನು ನಾನು ಪಡೆದಿದ್ದುದರಿಂದ ಮುಖ್ಯ ಸಂಪಾದಕರು ಸ್ಥಳದ ವಿವರಗಳನ್ನು ಬರೆದುಕೊಳ್ಳಲು ತಮ್ಮೊಡನೆ ನನ್ನನ್ನೂ ಕರೆದೊಯ್ಯುತ್ತಿದ್ದರು. ಕ್ಯಾಮರಾ ಒಂದು ನನ್ನ ಬಳಿ ಇದ್ದದ್ದರಿಂದ ಛಾಯಾಚಿತ್ರಗಳನ್ನು ನಾನು ತೆಗೆಯುತ್ತಿದ್ದೆ. ಮುಖ್ಯಸಂಪಾದಕರಾಗಿದ್ದ ಸೂರ್ಯನಾಥ ಕಾಮತರ ಜೊತೆಯಲ್ಲಿ ಓಡಾಡುವುದೆಂದರೆ ಅದೊಂದು ವಿಶೇಷ ಅನುಭವ. ಅವರು ಯಾವುದೇ ಊರಿಗೆ ಹೋಗಲಿ, ಯಾರಾದರೂ ಒಬ್ಬರು ಅವರ ಪರಿಚಿತರಿರುತ್ತಿದ್ದರು. ಅವರನ್ನು ಕರೆದುಕೊಂಡು ಬೆಳಗ್ಗೆ ಕಾರು ಬಿಟ್ಟರೆ ಮತ್ತೆ ಬರುತ್ತಿದ್ದದ್ದು ರಾತ್ರಿಗೆ. ಹೀಗಾಗಿ ಒಮ್ಮೆ ನಮ್ಮ ಜೊತೆಗೆ ಸ್ಥಳ ತೋರಿಸಲು ಬಂದವರು ಇನ್ನೊಮ್ಮೆ ಬರುತ್ತಿರಲಿಲ್ಲ. ನಮಗೋ ಹೊಸ ಹೊಸ ಸ್ಥಳಗಳನ್ನು ನೋಡಿ ಟಿಪ್ಪಣಿ ಪಡೆದುಕೊಳ್ಳಬೇಕೆಂಬ ಆಸೆ ಹಾಗೂ ಕುತೂಹಲ. ಕ್ಷೇತ್ರಕಾರ್ಯವೇ ಒಂದು ಪ್ರತ್ಯೇಕ ಜೀವನಾನುಭವ. ಕಾರವಾರ ಅಥವಾ ಉತ್ತರ ಕನ್ನಡ ಜಿಲ್ಲೆಯ ಕಾರ್ಯ ಮುಗಿದ ಮೇಲೆ ಬೆಳಗಾವಿ ಜಿಲ್ಲಾ ಗ್ಯಾಜೆಟಿಯರ್‌ನ ಕಾರ್ಯ ಆರಂಭವಾಯಿತು. ಈ ಜಿಲ್ಲೆಯಲ್ಲಿಯೂ ಅನೇಕ ಕಡೆಗೆ ಮುಖ್ಯಸಂಪಾದಕರ ಜೊತೆಗಲ್ಲದೆ, ಲಕ್ಷ್ಮಣ್ ತೆಲಗಾವಿಯವರ ಜೊತೆಗೂ ಹೋಗಿ ಕ್ಷೇತ್ರಕಾರ್ಯ ಮಾಡುತ್ತಿದ್ದೆ.

ಬೆಳಗಾವಿ ಜಿಲ್ಲಾ ಗ್ಯಾಜೆಟಿಯರ್‌ನ ಪ್ರವಾಸದ ಹಾಗೂ ಮಾಹಿತಿ ಸಂಗ್ರಹಣೆಯ ಕೆಲಸ ಮುಗಿದ ಕೂಡಲೇ ಮೈಸೂರು ಜಿಲ್ಲೆಯ ಕಾರ್ಯ ಆರಂಭ. ಮೈಸೂರು ಜಿಲ್ಲೆಯ ಕ್ಷೇತ್ರಕಾರ್ಯ ಮಾಡುವ ಕಾಲದಲ್ಲಿ ಅನೇಕ ಕಡೆಗಳಲ್ಲಿ ನಾನೊಬ್ಬನೇ ಪ್ರವಾಸಕ್ಕೆ ಹೋಗಿದ್ದೇನೆ. ನಾನು ಗುಂಡ್ಲುಪೇಟೆಯಲ್ಲಿ ಹಿಂದೆ ಇದ್ದದ್ದರಿಂದ ಮತ್ತೊಮ್ಮೆ ಈ ಊರುಗಳನ್ನು ನೋಡುವ ಅವಕಾಶ. ಇದಕ್ಕಿಂತ ಮುಖ್ಯವಾಗಿ ನಾನು ಈ ಹೊತ್ತಿಗೆ ತಲಕಾಡಿನ ಗಂಗರ ದೇವಾಲಯಗಳು ಎಂಬ ವಿಷಯದ ಮೇಲೆ ಪಿ.ಎಚ್.ಡಿ ಮಾಡುತ್ತಿದ್ದೆ. ಗಂಗರ ಅನೇಕ ಶಾಸನಗಳು ಇಲ್ಲಿ ದೊರೆತದ್ದರಿಂದ ಇಲ್ಲಿ ಇತರ

ಅವಶೇಷಗಳೊಂದಿಗೆ ಗಂಗರ ದೇವಾಲಯ ಹಾಗೂ ಮೂರ್ತಿಶಿಲ್ಪಗಳನ್ನು ಅಭ್ಯಾಸ ಮಾಡುವ ಅವಕಾಶ ನನಗೆ ಅನಾಯಾಸವಾಗಿ ಒದಗಿ ಬಂದಾಗ ಅದನ್ನು ಬಿಡಬಾರದೆಂದು ಇಡೀ ಜಿಲ್ಲೆಯನ್ನು ಒಂಟಿಯಾಗಿ, ನನ್ನ ಸಹೋದ್ಯೋಗಿಗಳ ಜೊತೆಯಲ್ಲಿ, ಮುಖ್ಯಸಂಪಾದಕರ ಜೊತೆಯಲ್ಲಿ ಓಡಾಡಿ ಮಾಹಿತಿ ಸಂಗ್ರಹಿಸಿದೆ. ಬಹಳಷ್ಟು ಅಮೂಲ್ಯ ವಿವರಗಳು ಈ ಜಿಲ್ಲೆಯಲ್ಲಿ ಲಭ್ಯವಾದವು. ಪಿರಿಯಾಪಟ್ಟಣ ತಾಲೂಕಿನಲ್ಲಿ ಅನೇಕ ಗ್ರಾಮಗಳನ್ನು ನೋಡಿ ಹೊನ್ನೂರನ್ನು ನೋಡಬೇಕೆಂದು ಹೋದೆವು. ಪುರಂದರದಾಸರು ಹೊನ್ನೂರು ಪುರವಾಸ ಎಂದು ಹೇಳಿರುವುದು ಇಲ್ಲಿಯ ದೇವರನ್ನೇ ಎಂಬ ಸ್ಥಳೀಯರ ಮಾಹಿತಿಯನ್ನಾಧರಿಸಿ ಕಾರಿನಲ್ಲಿ ಹೊರಟೆವು. ಒಂದೆರಡು ಕಿಲೋಮೀಟರ್ ಕಾರಿನಲ್ಲಿ ಥೋಗಿ ಮುಂದೆ ದಾರಿ ಸರಿಯಿಲ್ಲದ ಕಾರಣ ಕಾರನ್ನು ನಿಲ್ಲಿಸಿ ನಡೆದೆವು. ಸುಮಾರು ೨.೫೦ ಕಿ.ಮೀ ನಡೆದ ಮೇಲೆ ಒಂದು ಚಿಕ್ಕ ಗುಡ್ಡ, ಅದರಲ್ಲಿ ವಿಷ್ಣು ದೇವಾಲಯವಿತ್ತು. ಅಲ್ಲಿನ ಒಂದು ವಿಗ್ರಹ ವಿಷ್ಣುವು ಕುಳಿತು ತಪಸ್ಸು ಮಾಡುವ ಭಂಗಿಯ ಶಿಲ್ಪವಿತ್ತು. ಇದು ವಿಷ್ಣುದೇವಾಲಯ ಹೌದಾದರೂ, ಪುರಂದರದಾಸರಿಗೂ ಈ ದೇವಾಲಯಕ್ಕೂ ಯಾವುದೇ ಸಂಪರ್ಕ ಕೊಂಡಿ ದೊರೆಯಲಿಲ್ಲ. ಆ ದಿನವೇ ಸಂಜೆ ಬೆಟ್ಟದಪುರಕ್ಕೆ ಬಂದೆವು. ಸಿಡಿಲುಮಲ್ಲಿಕಾರ್ಜುನನ ಬೆಟ್ಟ ಕೋಡುಗಲ್ಲಿನಂತೆ ಎತ್ತರವಾಗಿತ್ತು. ಇದನ್ನು ಗಂಗರ ಶಾಸನಗಳಲ್ಲಿ ಕೂರ್ಗಲ್ಲು ಎಂದು ಕರೆಯಲಾಗಿದೆ. ಇದನ್ನು ಹತ್ತಿಳಿದರೆ ಈ ದಿನದ ಕಾರ್ಯಕ್ರಮ ಮುಗಿದಂತೆ. ಅದನ್ನು ಅಲ್ಲಿನ ಪುರಾತತ್ತ್ವ ಇಲಾಖೆಯ ವ್ಯಕ್ತಿಯ ಮಾರ್ಗದರ್ಶನದಲ್ಲಿ ಬೆಟ್ಟ ಹತ್ತಿದೆವು. ಕತ್ತಲಾಗುವ ಸಮಯ, ಮೋಡ ಮುಚ್ಚಿತ್ತು. ದೇವಾಲಯದಲ್ಲಿ ವಿದ್ಯುತ್ ಇರಲಿಲ್ಲ. ಹೀಗಾಗಿ ಸರಿಯಾಗಿ ಏನನ್ನು ನೋಡಲಾಗಲಿಲ್ಲ. ಕೆಲವು ಛಾಯಾಚಿತ್ರಗಳನ್ನು ಪಡೆದೆ. ಮೈಸೂರು ಜಿಲ್ಲೆಯಾದ ಮೇಲೆ ಕ್ರಮವಾಗಿ ಬೆಂಗಳೂರು ಗ್ರಾಮಾಂತರ ಮತ್ತು ಬೆಂಗಳೂರು ನಗರಜಿಲ್ಲೆಯ ಸಂಪುಟಗಳ ರಚನೆಯಲ್ಲಿ ತೊಡಗಿದೆವು. ನನಗೆ ಈ ಎರಡು ಜಿಲ್ಲೆಗಳ ಓಡಾಟ ನನ್ನ ಥೀಸಿಸ್‌ಗೆ ಬೇಕಾದ ಬಹಳಷ್ಟು ಮಾಹಿತಿಯನ್ನು ಒದಗಿಸಿತ್ತು. ಅಂದು ನೋಡಿದ್ದ ಶಿಲ್ಪಗಳು ಇಂದು ಅನೇಕ ಕಡೆ ಕಾಣುತ್ತಿಲ್ಲ. ನಾಗರಿಕತೆಯ ಹೆಸರಿನಲ್ಲಿ ಹಳೆಯ ಶಿಲಾ ದೇವಾಲಯಗಳನ್ನು ಕೆಡವಿ ಅವುಗಳ ಜಾಗದಲ್ಲಿ ಸಿಮೆಂಟ್ ದೇವಾಲಯಗಳು ತಲೆ ಎತ್ತಿವೆ.

ಈ ಮಧ್ಯೆ ಸಮಾಜ ಕಲ್ಯಾಣ ಇಲಾಖೆಯಿಂದ ನಮ್ಮ ಇಲಾಖೆಗೆ ಬೇಡ ಜಂಗಮ, ಬುಡಗ ಜಂಗಮ ಮತ್ತು ಮೂಲ ಜಂಗಮ ಎಂಬ ಜಾತಿಗಳ ಬಗ್ಗೆ ವಿವರವಾದ ವರದಿ ಬೇಕೆಂದು ಪತ್ರ ಬರೆದಿದ್ದರು. ಮೊದಲ ಪತ್ರ ಬಂದಾಗ ಮುಖ್ಯಸಂಪಾದಕರು ಹೆಚ್ಚಿನ ಆಸಕ್ತಿ ವಹಿಸಲಿಲ್ಲ. ಆದರೆ ಪದೇ ಪದೇ ಪತ್ರಗಳು ಬರತೊಡಗಿದಾಗ ಈ ಬಗ್ಗೆ ಗುಲ್ಬರ್ಗಾ, ರಾಯಚೂರು, ಬೀದರ್ ಜಿಲ್ಲೆಗಳ ಪ್ರವಾಸ ಮಾಡಿ ವರದಿ ತರುವಂತೆ ಸಂಪಾದಕರಾಗಿದ್ದ ಮೈಲಾರಯ್ಯ ಮತ್ತು ನನಗೆ ತಿಳಿಸಿದರು. ನಾವು ಪ್ರವಾಸ ಕೈಗೊಂಡಿದ್ದು ಏಪ್ರಿಲ್ ಮಧ್ಯಭಾಗದ ನಂತರ. ಹೀಗಾಗಿ ಬಿಸಿಲು ವಿಪರೀತವಿತ್ತು. ನಾನು ಎಂದಿನ ಉತ್ಸಾಹದಲ್ಲೇ ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಅನೇಕರನ್ನು ಸಂದರ್ಶಿಸಿ, ಮಾಹಿತಿ ಸಂಗ್ರಹಿಸಿದೆ. ಬೀದರ್‌ನಲ್ಲಿ ಆಗ ಹಿಂದೂ-ಸಿಖ್ ಗಲಭೆಗಳಿದ್ದುದರಿಂದ ಆ ಜಿಲ್ಲೆಗೆ ಹೋಗಲಾಗಲಿಲ್ಲ. ಪ್ರವಾಸದ ನಂತರ ಒಂದು ವಿಸ್ತೃತ ವರದಿಯನ್ನು ಇಲಾಖೆಗೆ ನೀಡಿದೆವು.

ಬೆಂಗಳೂರು ನಗರ ಜಿಲ್ಲೆಯ ಗ್ಯಾಜೆಟಿಯರ್ ಪ್ರಕಟಣೆಯೊಂದಿಗೆ ಕರ್ನಾಟಕ ಗ್ಯಾಜೆಟಿಯರ್‌ನ ಇಂಗ್ಲೀಷ್ ಸೀರೀಸ್ ಮುಗಿದಾಗ ಮುಖ್ಯಸಂಪಾದಕರಾದ ಸೂರ್ಯನಾಥ ಕಾಮತರು ಕನ್ನಡದಲ್ಲಿ ಜಿಲ್ಲೆಗಳ ಪರಿಷ್ಕೃತ ಮುದ್ರಣಗಳನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡರು. ಈ ವೇಳೆಗೆ ಕೆಲವು ಸಹೋದ್ಯೋಗಿಗಳು ನಿವೃತ್ತರಾಗಿದ್ದರು. ಕೆಲವರು ತಮ್ಮ ಮಾತೃ ಇಲಾಖೆಗಳಿಗೆ ವಾಪಸ್ಸು ಹೋಗಿದ್ದರು. ಹೀಗಾಗಿ ಸಿಬ್ಬಂದಿ ಕಡಿಮೆಯಿತ್ತು. ಕೆಲವರು ಎರಡೆರಡು ಅಧ್ಯಾಯಗಳನ್ನು ಬರೆಯಬೇಕಾಗಿ ಬಂತು. ಮೊದಲು ಕೊಡಗು ಜಿಲ್ಲೆಯ ಕನ್ನಡ ಗ್ಯಾಜೆಟಿಯರ್ ತರುವ ಬಗ್ಗೆ ಯೋಜನೆಯನ್ನು ಕೈಗೊಳ್ಳಲಾಯಿತು. ನಾನು ಈ ಸಂಪುಟದಲ್ಲಿ ಸಂಪಾದಕರಾಗಿದ್ದ ರಾಮಚಂದ್ರಯ್ಯನವರೊಂದಿಗೆ ಜನತೆ ಎಂಬ ಅಧ್ಯಾಯ ಬರೆಯಬೇಕಾಗಿ ಬಂತು. ಆಗ ಕೊಡಗು ಜಿಲ್ಲೆಯನ್ನು ವಿಸ್ತೃತವಾಗಿ ಸುತ್ತುವ ಅವಕಾಶ ದೊರೆಯಿತು. ಕೊಡಗು ಬೆಟ್ಟಗುಡ್ಡಗಳಿಂದ ಕೂಡಿರುವುದರಿಂದ ಸಂಪರ್ಕ ಸಾಧನಗಳು ಕಡಿಮೆಯಿದ್ದುದರಿಂದ ಸಹಜವಾಗಿ ಆ ಜನ ಬಯಲು ಸೀಮೆಯ ಜನರಿಗಿಂತ ಅನೇಕ ವಿಭಿನ್ನ ಆಚರಣೆಗಳನ್ನು ಹೊಂದಿರುವುದನ್ನು ನಾವು ಕಾಣಬಹುದು. ಕೆಲವೊಮ್ಮೆ ಕೇರಳ, ದಕ್ಷಿಣ ಕನ್ನಡದ ಅನೇಕ ಆಚರಣೆಗಳಿಂದ ಪ್ರಭಾವಿತವಾದಂತೆ ತಿಳಿಯಿತು. ಇರುವ ಸ್ವಲ್ಪ ಸ್ಥಳದಲ್ಲಿಯೇ ಕೊಡವರು ಅನೇಕ ಗುಂಪುಗಳಾಗಿ ಒಡೆದಿರುವುದು ಈ ಅಧ್ಯಯನದಿಂದ ಸ್ಪಷ್ಟವಾಯಿತು. ಕೆಳವರ್ಗದ ಅನೇಕ ಗುಂಪುಗಳು ಆಚಾರ ವಿಚಾರಗಳಲ್ಲಿ ಮೇಲ್ವರ್ಗದ

ಕೊಡವರನ್ನು ಅನುಸರಿಸುವುದು ತಿಳಿಯಿತು. ಕೊಡಗು ಜಿಲ್ಲೆ ಮುದ್ರಣಕ್ಕೆ ಹೋದ ಕೂಡಲೇ ಧಾರವಾಡ ಜಿಲ್ಲಾ ಗ್ಯಾಜೆಟಿಯರ್ ಮಾಡಲು ಕಾರ್ಯ ಕೈಗೊಳ್ಳಲಾಯಿತು. ಧಾರವಾಡ ಜಿಲ್ಲೆಯ ಪ್ರವಾಸ, ಮಾಹಿತಿ, ಸಂಗ್ರಹದಲ್ಲಿಯೇ ಮುಳುಗಿದ್ದೆ ಈ ಪ್ರವಾಸದಲ್ಲಿ ನಾನೂ ರಾಜೇಂದ್ರಪ್ಪ ಹೋಗುತ್ತಿದ್ದೆವು. ೧೯೯೩ರ ವೇಳೆಗೆ ಬಹಳ ವರ್ಷಗಳಿಂದ ಬರೆಯುತ್ತಿದ್ದ ಪಿ.ಎಚ್.ಡಿ ಬರವಣಿಗೆ ಮುಗಿದು ಡಿಗ್ರಿ ಅವಾರ್ಡ್ ಆಗಿತ್ತು. ಈ ವೇಳೆಗೆ ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆಯಾಗಿತ್ತು. ಸೂರ್ಯನಾಥ ಕಾಮತರ ಹೆಸರೂ ಕುಲಪತಿಯಾಗುವ ಪಟ್ಟಿಯಲ್ಲಿತ್ತು. ಆದರೆ ಕಾಮತರು ಒಪ್ಪಲಿಲ್ಲ. ಎಂ.ಎಚ್. ಕೃಷ್ಣಯ್ಯನವರು ಸಿಂಡಿಕೇಟ್ ಮೆಂಬರ್ ಆಗಿದ್ದರು. ಒಂದೆರಡು ಬಾರಿ ಭೇಟಿಯಾದಾಗ ಕನ್ನಡ ವಿಶ್ವವಿದ್ಯಾಲಯಕ್ಕೆ ಬರುವಂತೆ ನನಗೆ ಹೇಳಿದ್ದರು. ಆದರೆ ನಾನು ಬರುವುದಿಲ್ಲವೆಂದು ಹೇಳಿದ್ದೆ. ೧೯೯೪ರಲ್ಲಿ ಕನ್ನಡ ವಿಶ್ವವಿದ್ಯಾಲಯ ಸಿಬ್ಬಂದಿಯ ನೇಮಕಾತಿಗಾಗಿ ಅರ್ಜಿ ಕರೆದಾಗ ನಾನು ಸ್ನೇಹಿತರ ಬಲವಂತಕ್ಕೆ ಅರ್ಜಿ ಹಾಕಿದೆ. ಮುಂದೆ ಕನ್ನಡ ವಿಶ್ವವಿದ್ಯಾಲಯದಿಂದ ಸಂದರ್ಶನಕ್ಕೆ ಕರೆದು ಅದರಲ್ಲಿ ನಾನು ಆಯ್ಕೆಯಾಗಲಿಲ್ಲವೆಂದು ತಿಳಿಯಿತು. ಹೀಗಾಗಿ ಮತ್ತೆ ಕೆಲಸದಲ್ಲಿ ತೊಡಗಿದೆ. ಬೆಂಗಳೂರಿನಲ್ಲಿ ಮನೆ ಬೇರೆ ಕಟ್ಟಿಸುತ್ತಿದ್ದೆ. ಮಕ್ಕಳು ಬೇರೆ ಬೆಂಗಳೂರಿನಲ್ಲಿ ಓದುತ್ತಿದ್ದರು. ಹೀಗಾಗಿ ಎಲ್ಲಿಯೂ ಹೋಗುವುದು ಬೇಡವೆಂದು ತೀರ್ಮಾನಿಸಿದ್ದೆ. ೧೯೯೫ರ ಏಪ್ರಿಲ್‌ನಲ್ಲಿ ಸೂರ್ಯನಾಥ ಕಾಮತರು ಸೇವೆಯಿಂದ ನಿವೃತ್ತರಾದರು.

ಮನೆ ಕಟ್ಟುತ್ತಿದ್ದ ಕಾರಣ ನಾನು ಒಂದು ತಿಂಗಳು ರಜೆ ಹಾಕಿದ್ದೆ. ಕಾಮತರ ಸ್ಥಾನಕ್ಕೆ ಬಂದ ಪತ್ರಾಗಾರದ ನಿರ್ದೇಶಕರಾಗಿದ್ದ ಮುನಿಸ್ವಾಮಿ ಕಾಮತರ ಕಡುವೈರಿಗಳಲ್ಲಿ ಒಬ್ಬರು. ಸರಿ ನಾವೆಲ್ಲಾ ಕಾಮತರ ಪರವೆಂಬ ಅನುಮಾನ ಅವರಿಗೆ. ಗ್ಯಾಜೆಟಿಯರ್‌ನ ಕೆಲವು ಸಹೋದ್ಯೋಗಿಗಳ ಕುಮ್ಮಕ್ಕೂ ಇದರಲ್ಲಿತ್ತು. ರಜೆ ಮುಗಿದ ಮೇಲೆ ರಜೆ ಮುಂದುವರಿಕೆಗೆ ಅರ್ಜಿ ನೀಡಿದಾಗ ರಜೆ ಮುಂದುವರಿಸಲು ಆಗುವುದಿಲ್ಲವೆಂದು ಹೇಳಿದರು. ಸರಿ ಹಾಗೂ ಹೀಗೂ ಕಚೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಕನ್ನಡ ವಿಶ್ವವಿದ್ಯಾಲಯದಿಂದ ನನ್ನನ್ನು ಶಾಸನಶಾಸ್ತ್ರ ವಿಭಾಗಕ್ಕೆ ಅಧ್ಯಾಪಕನಾಗಿ ನೇಮಕವಾಗಿರುವ ಆದೇಶ ಬಂತು. ಈಗ ವಿಭಾಗ ಬಿಡಲು ಅರೆಮನಸ್ಸು. ಬೆಂಗಳೂರಿನಲ್ಲಿ ನೆಲಗೊಳ್ಳಲು ಎಲ್ಲಾ ಏರ್ಪಾಟುಗಳನ್ನು ಮಾಡಿಕೊಂಡಿದ್ದಾಗಿತ್ತು. ಹೀಗಾಗಿ ಮನಸ್ಸು ಡೋಲಾಯಮಾನದಲ್ಲಿ ಸಿಲುಕಿಕೊಂಡಿತ್ತು. ಆದರೂ ಸ್ನೇಹಿತರ ಒತ್ತಾಯದ ಮೇರೆಗೆ ಕನ್ನಡ ವಿಶ್ವವಿದ್ಯಾಲಯಕ್ಕೆ ಹೋಗುವುದೆಂದು ತೀರ್ಮಾನಿಸಿದೆ. ಮನೆಯಲ್ಲಿ ಹಂಪೆಗೆ ವರ್ಗಾವಣೆಯಾಗಿದೆಯೆಂದು ಸುಳ್ಳು ಹೇಳಿದೆ. ವರ್ಗಾವಣೆ ತಪ್ಪಿಸಿಕೊಳ್ಳಿ ಎಂದರು. ಒಂದೆರಡು ವರ್ಷ ಓಡಾಡಿದರೆ ಆಯಿತಲ್ಲ ಎಂದು ಸಮಾಧಾನ ಮಾಡಿದೆ. ಗ್ಯಾಜೆಟಿಯರ್ ಸೇವೆಯಿಂದ ಬಿಡುಗಡೆ ಮಾಡಲು ಅರ್ಜಿ ನೀಡಿದೆ. ಮುಖ್ಯಸಂಪಾದಕರಾಗಿದ್ದ ಮುನಿಸ್ವಾಮಿಯವರು ಬಿಡುಗಡೆ ಮಾಡಬೇಕಾದರೆ ರಾಜೀನಾಮೆ ನೀಡಬೇಕೆಂದು ಹೇಳಿದರು. ನನಗೂ ಇವರ ಕೈ ಕೆಳಗೆ ಕೆಲಸ ಮಾಡಲು ಬೇಸರವಾಗಿತ್ತು. ಹೀಗಾಗಿ ಕೇಳಿದ ತಕ್ಷಣ ಕಾರಣ ನೀಡಿ ರಾಜೀನಾಮೆ ಸಲ್ಲಿಸಿದೆ. ಅಲ್ಲಿಂದ ಬಿಡುಗಡೆಗೊಂಡು ಜೂನ್ ೨೫, ೧೯೯೫ ರಂದು ಕನ್ನಡ ವಿಶ್ವವಿದ್ಯಾಲಯಕ್ಕೆ ಸೇರಿದೆ. ಈ ಮಧ್ಯೆ ನನ್ನ ಕೆಲಸದ ಆರ್ಡರ್ ಕೆಲವು ತಾಂತ್ರಿಕ ಕಾರಣಗಳಿಂದ ತಾತ್ಕಾಲಿಕವಾಗಿ ಮಾರ್ಪಟ್ಟಿತ್ತು. ಏನೇ ಆದರೂ ಸರಿ ಹಿಂದೆ ಸರಿಯಬಾರದೆಂದು ತಾತ್ಕಾಲಿಕವಾಗಿಯೇ ಸೇರಿದೆ. ಆಗ ರಿಜಿಸ್ಟ್ರಾರ್ ಆಗಿದ್ದ ಗೆಳೆಯ ನಾರಾಯಣ ಮುಂದೆ ಹುದ್ದೆಗಳನ್ನು ಕರೆದಾಗ ಅರ್ಜಿ ಹಾಕಿಕೋ ಯೋಚನೆ ಮಾಡಬೇಡ, ವಿಭಾಗವನ್ನು ಕಟ್ಟು, ಬೇಜಾರು ಮಾಡಿಕೊಳ್ಳಬೇಡ ಎಂದು ಧೈರ್ಯ ತುಂಬಿದ. ಸರಿ. ಕನ್ನಡ ವಿಶ್ವವಿದ್ಯಾಲಯದಲ್ಲಿ ಕೆಲಸಕ್ಕೆ ಸೇರಿದೆ. ಉಪನ್ಯಾಸಕರ ಹುದ್ದೆ ತಾತ್ಕಾಲಿಕವಾಗಿದ್ದುದರಿಂದ ಡಿಸೆಂಬರ್ ತಿಂಗಳಲ್ಲಿ ಮತ್ತೆ ಪುನರ್ನವೀಕರಿಸಲಾಯಿತು. ಈ ಮಧ್ಯೆ ಹಿಂದೆ ಅರ್ಜಿ ಹಾಕಿದ್ದ ರೀಡರ್ ಹುದ್ದೆಗೆ ಸಂದರ್ಶನವಾಗಿ ನಾನು ರೀಡರ್ ಆಗಿ ೧೯೯೬ ಫೆಬ್ರವರಿ ತಿಂಗಳಲ್ಲಿ ಕೆಲಸಕ್ಕೆ ಹಾಜರಾದೆ.

ಧಾರವಾಡ ಜಿಲ್ಲೆ ಗ್ಯಾಜೆಟಿಯರ್ ಮಾರ್ಚಿ ೧೫ ಕ್ಕೆ ೧೯೯೫ಕ್ಕೆ ಬಿಡುಗಡೆಯಾಗಬೇಕಿತ್ತು. ಏಕೆಂದರೆ ಸೂರ್ಯನಾಥ ಕಾಮತರು ಈ ತಿಂಗಳು ನಿವೃತ್ತರಾಗುವವರಿದ್ದರು. ಹೀಗಾಗಿ ನಾನು ಪತ್ರಿಕೋದ್ಯಮದ ಬಗ್ಗೆ ಮಾಹಿತಿ ಸಂಗ್ರಹಿಸಿ ಅಧ್ಯಾಯ ಬರೆಯುತ್ತಿದ್ದೆ. ಸ್ಥಳದ ಪರಿಚಯದ ಬಗ್ಗೆ ಕಾಮತರು ಸಂಗ್ರಹ ಮಾಡುತ್ತಿದ್ದರು. ಕೆಲಸದ ಒತ್ತಡ ಬೆಂಗಳೂರಿನಲ್ಲಿ ಜಾಸ್ತಿಯಾಗಿತ್ತು. ಹೀಗಾಗಿ ನನ್ನನ್ನು ಮತ್ತು ಸಂಪಾದಕರಾಗಿದ್ದ ರಾಜೇಂದ್ರಪ್ಪ ಇಬ್ಬರನ್ನು ಕರೆದು ಧಾರವಾಡ ಜಿಲ್ಲೆಯಲ್ಲಿ ಉಳಿದಿದ್ದ ಸ್ಥಳಗಳ ಬಗ್ಗೆ ಮಾಹಿತಿ ತರುವಂತೆ ಕಾರು ನೀಡಿ ಕಳುಹಿಸಿದರು. ಇದು ನಮ್ಮ ಬಗ್ಗೆ ಕಾಮತರಿಗಿದ್ದ ನಂಬಿಕೆಗೆ ಉದಾಹರಣೆ.

ಗ್ಯಾಜೆಟಿಯರ್‌ನ ಕೆಲಸ ಮಾಡುವಾಗ ಕೆಲಸದ ಜೊತೆಗೆ ನಾನೂ ಬೆಳೆದೆ. ಗ್ಯಾಜೆಟಿಯರ್‌ನ ಕೆಲಸವನ್ನೂ ಶ್ರದ್ಧೆಯಿಂದ ಪ್ರಾಮಾಣಿಕತೆಯಿಂದ ಮಾಡಿದ ಆತ್ಮತೃಪ್ತಿ ನನಗೆ ಇದೆ. ಇದೇ ಸಂದರ್ಭದಲ್ಲಿ ಗ್ಯಾಜೆಟಿಯರ್‌ನಲ್ಲಿಯೇ ಇದ್ದು ಆಸಕ್ತಿಯಿಂದ ಎಲ್ಲರೂ ಸೇರಿ ಮಾಡಿದ ಕೆಲಸದ ಬಗ್ಗೆ ಹೇಳದಿದ್ದರೆ ಅಪೂರ್ಣವಾಗುತ್ತದೆ. ಸು. ೧೯೮೫ರಲ್ಲಿ ಸೂರ್ಯನಾಥ ಕಾಮತರು, ಎಂ.ಜಿ. ನಾಗರಾಜ್, ಲಕ್ಷ್ಮಣ್ ತೆಲಗಾವಿ, ಎಂ.ಬಿ. ಪಾಟೀಲ್, ಲೈಬ್ರರಿ ಪಾಟೀಲ್, ಲಕ್ಷ್ಮಿನರಸಿಂಹನ್, ಜಗನ್ನಾಥ್, ಗೋಪಾಲರಾವ್, ನಾನು ಮುಂತಾದವರು ಸೇರಿ ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದಂತೆ ಒಂದು ಸಂಸ್ಥೆಯೊಂದನ್ನು ಹುಟ್ಟು ಹಾಕಬೇಕೆಂದು ಸಮಾಲೋಚಿಸಿದೆವು. ಅದರ ಫಲವೇ 'ಕರ್ನಾಟಕ ಇತಿಹಾಸ ಅಕಾದೆಮಿ' ಇದು ಸ್ಥಾಪನೆಯಾದ ಆರಂಭದಲ್ಲಿ ಇದರ ಎಲ್ಲಾ ಪತ್ರವ್ಯವಹಾರವನ್ನು ತೆಲಗಾವಿ ಮತ್ತು ನಾನು ಮಾಡುತ್ತಿದ್ದೆವು. ಅಂಚೆ ವ್ಯವಹಾರಕ್ಕಾಗಿ ಲಕ್ಷ್ಮೀನರಸಿಂಹ ಅವರ ಮನೆ ವಿಳಾಸ ನೀಡಿದ್ದೆವು. ಅವರು ದಿನವಹೀ ಪತ್ರಗಳನ್ನು ತಂದು ಕೊಡುತ್ತಿದ್ದರು. ಕಾಮತರು ಸಲಹೆ ಸೂಚನೆಗಳನ್ನು ನೀಡುತ್ತಾ ಸಂಸ್ಥೆಯ ಕಾರ್ಯಕ್ರಮಗಳ ಬಗ್ಗೆ ರೂಪುರೇಷೆಗಳನ್ನು ರೂಪಿಸುತ್ತಿದ್ದರು. ಎಂ.ಬಿ. ಪಾಟೀಲರು ಸಂಸ್ಥೆಯ ಕೋಶಾಧಿಕಾರಿಯಾಗಿದ್ದರು. ಮುಂದೆ ಜಿ.ಎಸ್. ದೀಕ್ಷಿತರು ಇದರ ಅಧ್ಯಕ್ಷರಾದರು. ಅಂದು ಚಿಕ್ಕದಾಗಿ ಆರಂಭವಾದ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಂಚಿಕೆ ಇದು ಪ್ರೌಢವಾಗಿ ಬರುತ್ತಿದೆ. ಆರಂಭದಲ್ಲಿ ನಾವು ನಾವೇ ಹಣ ಹಾಕಿಕೊಂಡು ವ್ಯಯಿಸುತ್ತಿದ್ದೆವು. ಹಣ ಬಂದಾಗ ಸಾಲ ತೀರಿಸುತ್ತಿದ್ದೆವು. ಈ ಕಾರ್ಯ ನಮ್ಮ ಗ್ಯಾಜೆಟಿಯರ್ ಕೆಲಸದ ಜೊತೆಗೆ ನಡೆಯುತ್ತಿತ್ತು. ಹೀಗಾಗಿ ಕೆಲಸದ ಒತ್ತಡ ನಮ್ಮ ಮೇಲೆ ಒಮ್ಮೊಮ್ಮೆ ವಿಪರೀತವಾಗುತ್ತಿತ್ತು. ಆದರೂ ಬೇಸರವಾಗುತ್ತಿರಲಿಲ್ಲ. ಸೂರ್ಯನಾಥ ಕಾಮತ್ ಮತ್ತು ಲಕ್ಷ್ಮಣ್ ತೆಲಗಾವಿಯವರು ಆರಂಭದ ಸಂಚಿಕೆಗಳಿಗೆ ಸಂಪಾದಕರಾಗಿದ್ದರು. ಮುಂದೆ ೧೯೯೪ರ ವರೆಗೆ ಸೂರ್ಯನಾಥ ಕಾಮತ್ ಮತ್ತು ನಾನು ಸಂಪಾದಕರಾಗಿದ್ದೆವು. ನಾನು ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದ ಮೇಲೆ ಕಾಮತರು ಮತ್ತು ಕೃಷ್ಣಮೂರ್ತಿಯವರು ಸಂಪಾದಕರಾದರು. ಇತಿಹಾಸ ಅಕಾದೆಮಿಯಲ್ಲಿ ತೊಡಗಿಸಿಕೊಂಡಿದ್ದರಿಂದ ಕರ್ನಾಟಕದಾದ್ಯಂತ ಅನೇಕ ವಿದ್ವಾಂಸರ, ಇತಿಹಾಸ ಪ್ರಿಯರ ಪರಿಚಯವಾಯಿತು. ವರ್ಷಕ್ಕೊಮ್ಮೆ ನಡೆಯುವ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನದಲ್ಲಿ ಪರಿಚಿತರನ್ನು ಕಾಣುವ ಕಾರಣದಿಂದಲೇ ಅನೇಕರು ಒಂದೆಡೆ ಸೇರುತ್ತಾರೆ. ಎಂಬುದರಲ್ಲಿ ಅತಿಶಯೋಕ್ತಿ ಇಲ್ಲ. ಕರ್ನಾಟಕ ಇತಿಹಾಸವನ್ನು ವಿದ್ಯಾರ್ಥಿಗಳಲ್ಲಿ ಜನಪ್ರಿಯಗೊಳಿಸಲು ದ್ವಿತೀಯ ಪಿಯುಸಿ ವಿದ್ಯಾರ್ಥಿಗಳಿಗಾಗಿ ಇತಿಹಾಸ ಪರೀಕ್ಷೆಗಳನ್ನು ಕೆಲವು ವರ್ಷ ಮಾಡಲಾಯಿತು. ಆಗ ೩೫೦೦ ಸರ್ಟಿಫಿಕೇಟುಗಳನ್ನು ಬರೆದು ಕಾಲೇಜುವಾರಾಗಿ ವಿಂಗಡಿಸಿ ಅಂಚೆಗೆ ಕಳುಹಿಸುವ ಕೆಲಸವನ್ನೂ ನಾವೇ ಮಾಡುತ್ತಿದ್ದೆವು. ಇದರೊಂದಿಗೆ ಗೆಜೆಟಿಯರ್ ಕೆಲಸವನ್ನೂ ನಿಗದಿತ ವೇಳೆಯಲ್ಲಿ ಮಾಡಬೇಕಿತ್ತು. ಇಂದು ಇತಿಹಾಸ ಅಕಾದೆಮಿ ಹೊರತರುತ್ತಿರುವ 'ಇತಿಹಾಸ ದರ್ಶನ'ವು ಅನೇಕ ಯುವಕರಿಗೆ ಪ್ರಬಂಧ ಮಂಡಿಸಲು, ಲೇಖನ ಬರೆಯಲು ಪ್ರಮುಖ ವೇದಿಕೆಯಾಗಿದೆ. ಇದರೊಂದಿಗೆ ನಾನು ಬೆಳೆದೆ.

ಕನ್ನಡ ವಿಶ್ವವಿದ್ಯಾಲಯಕ್ಕೆ ಸೇರಿದ ಮೇಲೆ ಏನಾದರೂ ಒಂದು ಮಹತ್ತರ ಕಾರ್ಯ ಮಾಡಲೇಬೇಕೆಂಬ ಹಂಬಲ ನನ್ನಲ್ಲಿ ಹೆಚ್ಚಾಗಿತ್ತು. ಆರಂಭದಲ್ಲಿ ಏನೇ ಕುಂದು ಕೊರತೆ ಬಂದರೂ ರಿಜಿಸ್ಟ್ರಾರ್ ಕೆ.ವಿ. ನಾರಾಯಣ ಅದನ್ನು ನಿವಾರಿಸುತ್ತಿದ್ದ. ಶಾಸನಶಾಸ್ತ್ರದ ಅಧ್ಯಯನದಲ್ಲಿ ನನಗೆ ದಕ್ಷಿಣ ಕರ್ನಾಟಕಕ್ಕಿಂತ ಉತ್ತರ ಕರ್ನಾಟಕ ಪ್ರದೇಶವು ಸಾಂಸ್ಕೃತಿಕವಾಗಿ ಶ್ರೀಮಂತವಾಗಿದ್ದರೂ ಆ ಪ್ರದೇಶದ ಶಾಸನಗಳು ಜಿಲ್ಲಾವಾರಾಗಿ, ತಾಲೂಕುವಾರಾಗಿ, ಗ್ರಾಮವಾರಾಗಿ ಲಭ್ಯವಿಲ್ಲದ್ದರಿಂದ ಸಾಂಸ್ಕೃತಿಕ ಅಧ್ಯಯನ ನಡೆಸಲು ತೊಡಕಿತ್ತು. ಆ ಪ್ರದೇಶದ ವಿಶ್ವವಿದ್ಯಾಲಯಗಳು ಇದರ ಬಗ್ಗೆ ಏನೂ ಮಾಡಿರಲಿಲ್ಲ. ಕೆಲವೊಂದು ಸಣ್ಣ ಪ್ರಯತ್ನಗಳು ನಡೆದಿದ್ದವಾದರೂ ಅವು ಅತ್ಯಲ್ಪ ಪ್ರಮಾಣದಾಗಿದ್ದವು. ಹೀಗಾಗಿ ಉತ್ತರ ಕರ್ನಾಟಕದ ಜಿಲ್ಲಾವಾರು ಶಾಸನ ಸಂಪುಟಗಳನ್ನು ತರಬೇಕೆಂಬ ಯೋಜನೆ ಇತ್ತು. ವಿಭಾಗದಲ್ಲಿ ಒಬ್ಬನೇ ಇದ್ದದ್ದರಿಂದ ಮುಂದೆ ಕಲವೀರ ಮನ್ವಾಚಾರ್ ಅವರನ್ನು ನನ್ನ ಬಳಿಗೆ ವರ್ಗಾಯಿಸಿಕೊಂಡೆ. ಇಬ್ಬರೂ ಸೇರಿ ಬಳ್ಳಾರಿ ಜಿಲ್ಲಾ ಶಾಸನ ಸೂಚಿಯನ್ನು ತಯಾರಿಸಿದೆವು. ೧೯೯೯ರಲ್ಲಿ ಕಲ್ಬುರ್ಗಿಯವರು ಬರುವ ವೇಳೆಗೆ ವಿಭಾಗಕ್ಕೆ ಪರಮಶಿವಮೂರ್ತಿ ಮತ್ತು ಭಟ್‌ಸೂರಿಯವರು ಬಂದು ಸೇರಿದ್ದರು. ಹೀಗಾಗಿ ನಮ್ಮ ವಿಭಾಗದ ಬಲ ಒಂದರಿಂದ ನಾಲ್ಕಾಗಿತ್ತು.

ಚಂದ್ರಶೇಖರ ಕಂಬಾರರ ಕುಲಪತಿಯ ಎರಡನೆಯ ಅವಧಿಯಲ್ಲಿ ಒಮ್ಮೆ ನಾನು ಅವರನ್ನು ಭೇಟಿಮಾಡಿ ಈ ಯೋಜನೆಯ ಬಗ್ಗೆ ಮಾತನಾಡಿದೆ. ನೋಡೋಣವೆಂದು ಹೇಳಿದವರು. ಮೂರು ನಾಲ್ಕು ದಿನದಲ್ಲಿ ಬರಹೇಳಿದರು. ಅವರ ಬಳಿ ಹೋದಾಗ ಅವರು ನನಗೆ ಇನ್ನು ಎರಡು ವರ್ಷಗಳ ಕಾಲ ಮಾತ್ರ ಕುಲಪತಿ ಅವಧಿ ಇದೆ. ಈ ಎರಡು ವರ್ಷದಲ್ಲಿ ಉತ್ತರ ಕರ್ನಾಟಕದ ಎಲ್ಲಾ ಜಿಲ್ಲೆಗಳ ಶಾಸನ ಸಂಪುಟಗಳನ್ನು ತರಬಲ್ಲೆಯಾ ತಿಳಿಸು ಎಂದಾಗ ತಕ್ಷಣವೇ ಉತ್ತರ ಕೊಡಲಾರದ ನಾನು ಒಂದೆರಡು ದಿನ ಸಮಯ ಕೇಳಿ ನಂತರ ಉತ್ತರಿಸುವುದಾಗಿ ತಿಳಿಸಿ ಹೊರಬಂದೆ. ಆ ದಿನ ರಾತ್ರಿ ರಿಜಿಸ್ಟ್ರಾರ್ ಆಗಿದ್ದ ನಾರಾಯಣನನ್ನು ಭೇಟಿ ಮಾಡಿ ಕುಲಪತಿಗಳ ಮಾತನ್ನು ತಿಳಿಸಿದೆ. ಆತ ತಕ್ಷಣ 'ಮಾಡುತ್ತೇನೆ ಸಾರ್' ಎಂದು ಹೇಳಬೇಕಿತ್ತು. ಮೊದಲು ಪ್ರಾರಂಭವಾದ ಮೇಲೆ ತಾನೇ ನಂತರ ಮುಕ್ತಾಯದ ಮಾತು. ನಾಳೆ ಹೋಗಿ ನಿನಗೆ ಬೇಕಾದ ಸವಲತ್ತುಗಳನ್ನು ಕೊಟ್ಟರೆ ಖಂಡಿತಾ ಮಾಡುವುದಾಗಿ ತಿಳಿಸು ಎಂದ. ಸರಿ ಮಾರನೆಯ ದಿನ ಬೇಕಾದ ಸವಲತ್ತುಗಳು. ಹಣಕಾಸಿನ ಬಜೆಟ್ ಹಾಕಿಕೊಂಡು ಹೋದೆ. ಕಂಬಾರರು ನಾನು ಹೇಳಿದ್ದು ಏನು ಮಾಡಿದೆ ಎಂದರು. ನಾನು ಮಾಡಿಕೊಡುತ್ತೇನೆ ಸಾರ್ ಎಂದು ಸವಲತ್ತುಗಳ ಬಗ್ಗೆ ಹಣಕಾಸಿನ ನೆರವಿನ ಬಗ್ಗೆ ವಿವರ ನೀಡಿದೆ. ಸರಿನೋಡೋಣ ಹೋಗು ಎಂದವರು ಮತ್ತೆ ಆ ವಿಷಯದ ಬಗ್ಗೆ ಚರ್ಚಿಸಲು ಕರೆಯಲೇ ಇಲ್ಲ.

ಉಪನ್ಯಾಸಕನಾಗಿ ಕೆಲಸಕ್ಕೆ ಸೇರಿದಾಗ ನಾನು ಎಲ್ಲಿ ಕುಳಿತುಕೊಳ್ಳಬೇಕು. ಚೇರು, ಟೇಬಲ್ ಯಾವ ವ್ಯವಸ್ಥೆಯೂ ಇರಲಿಲ್ಲ. ನನಗಿಂತ ಮೊದಲಿದ್ದ ಅಧ್ಯಾಪಕರು ಸುಸಜ್ಜಿತ ರೀತಿಯಲ್ಲಿ ತಮ್ಮ ಸ್ಥಳಗಳನ್ನು ಭದ್ರಪಡಿಸಿಕೊಂಡಿದ್ದರು. ಹೊಸ ವಿಶ್ವವಿದ್ಯಾಲಯ ಜೇರೆ. ಸ್ಥಳದ ಅಭಾವವೂ ಇತ್ತು. ಇದರ ಬಗ್ಗೆ ಒಮ್ಮೆ ನಾರಾಯಣನನ್ನು ಕೇಳಿದೆ. ಜಾಗ ಎಲ್ಲಿ ಖಾಲಿ ಇದೆಯೋ ಅಲ್ಲಿ ಕುಳಿತುಕೋ ಯಾವ ಚೇರು, ಟೇಬಲ್ ಖಾಲಿ ಇದೆಯೋ ಅದನ್ನು ಬಳಸಿಕೋ. ಮುಂದೆ ಬೇರೆ ವ್ಯವಸ್ಥೆ ಮಾಡೋಣವೆಂದ. ಆಗ ಈಗನ ತ್ರಿಪದಿ ಕಟ್ಟಡದಲ್ಲಿ ಒಂದು ತೆರೆದ ಹಾಲಿನಲ್ಲಿ ಚೇರೊಂದಿತ್ತು. ಅದನ್ನು ಹಾಕಿಕೊಂಡ ಟೇಬಲ್ ಒಂದಿತ್ತು, ಅದಕ್ಕೆ ಒಂದು ಕಾಲಿರಲಿಲ್ಲ. ಹೊರಗಡೆಯಿಂದ ಸೈಜುಕಲ್ಲುಗಳನ್ನು ತಂದು ಆಧಾರವಾಗಿಟ್ಟುಕೊಂಡು ಆ ಟೇಬಲ್ ಬಳಸಿದೆ. ಸುಮಾರು ಒಂದೂವರೆ ವರ್ಷಗಳ ಕಾಲ ಈ ಟೇಬಲ್ ನನ್ನ ಸರ್ವಸ್ವವಾಗಿತ್ತು. ಇದರಲ್ಲಿಯೇ ಕೆಲಸ ಮಾಡುತ್ತಿದ್ದ. ಚೇರು ಮಾತ್ರ ನಾನು ವಿಶ್ವವಿದ್ಯಾಲಯದಿಂದ ವಿಶ್ರಾಂತನಾಗುವವರೆಗೂ ಅದೇ ಇತ್ತು.

ಇದೇ ಸಮಯದಲ್ಲಿ ದಿನ ಮಾತು ನಡೆಯುತ್ತಿತ್ತು. ಇದು ಬುಡಕಟ್ಟು ವಿಭಾಗದ ಚಾವಡಿಯಲ್ಲಿ ನಡೆಯುತ್ತಿತ್ತು. ಬೆಳಗ್ಗೆ ಮೊದಲ ಅವಧಿಯಲ್ಲಿ ಇದು ಮುಗಿಸಿಕೊಂಡು ನಂತರ ವಿಭಾಗಕ್ಕೆ ಹೋಗುತ್ತಿದ್ದೆವು. ಈ ದಿನ ಮಾತಿನಲ್ಲಿ ಶಾಸನದ ವಿಷಯ ಬಂದರೆ ಮೂಗು ಮುರಿಯುವವರೇ ಹೆಚ್ಚಾಗಿದ್ದರು. ತೆಲಗಾವಿಯವರ ಜೊತೆಗೆ ನಾನು ಸೇರಿಕೊಂಡೆ. ಅಲ್ಲಿ ಅನೇಕ ಐತಿಹಾಸಿಕ ವಿವರಗಳನ್ನೂ ಊಹೆಯ ಆಧಾರದ ಮೇಲೆ ಜನಪದರ ಆಧಾರವನ್ನಿಟ್ಟುಕೊಂಡು ತಮಗೆ ತೋಚಿದಂತೆ ಅರ್ಥೈಸಲು ಪ್ರಯತ್ನಿಸುತ್ತಿದ್ದರು. ಇದಕ್ಕೆ ತೆಲಗಾವಿ ಮತ್ತು ನಾನು ಶಾಸನಾಧಾರಗಳ ಮೂಲಕ ತೀಕ್ಷ್ಣ ಪ್ರತಿಕ್ರಿಯೆ ನೀಡುತ್ತಿದ್ದೆವು. ಆಗಲೂ ಕೂಡ ಶಾಸನ ಅಧ್ಯಯನವೆಂದರೆ ಕನ್ನಡ ವಿಶ್ವವಿದ್ಯಾಲಯದಲ್ಲಿ ಎರಡನೆಯ ದರ್ಜೆಯ ಅಧ್ಯಯನವಾಗಿತ್ತು. ಕನ್ನಡ ವಿಶ್ವವಿದ್ಯಾಲಯದಲ್ಲಿ ನಾನಿದ್ದ ಕಾಲದಲ್ಲಿ ಒಂಬತ್ತು ಶಾಸನ ಸಂಪುಟಗಳು ಬಿಡುಗಡೆಯಾದರೂ ಅವು ಸದ್ದಿಲ್ಲದೆ ಹತ್ತರಲ್ಲಿ ಒಂದರಂತೆ ಬಿಡುಗಡೆಯಾಗಿವೆ. ಕೆಲವು ವಿಭಾಗಗಳಲ್ಲಿ ಬರೆದ ಕೆಲವು ಸಣ್ಣ ಪುಸ್ತಕಗಳೂ ವಿಚಾರ ಸಂಕಿರಣ ಮಾಡಿ ಬಿಡುಗಡೆ ಭಾಗ್ಯ ಪಡೆದಿದ್ದವು.

ನಾನು ವಿಶ್ವವಿದ್ಯಾಲಯಕ್ಕೆ ಸೇರಿದಾಗ ಒಬ್ಬನೇ ಇದ್ದದ್ದರಿಂದ ಸೀದಾ ಲೈಬ್ರರಿಗೆ ಹೋಗಿ ಅಲ್ಲಿದ್ದ ಎಪಿಗ್ರಾಫಿಯಾ ಇಂಡಿಕಾ ಮತ್ತು ಇಂಡಿಯನ್ ಆಂಟಿಕ್ವರಿ ಸಂಪುಟಗಳನ್ನು ಒಂದು ಕಡೆಯಿಂದ ಕುತೂಹಲದಿಂದ ಓದಲು ಪ್ರಯತ್ನಿಸಿದೆ. ಅನೇಕ ವಿವರಗಳು, ಶಾಸನಗಳು, ಅವುಗಳ ಟಿಪ್ಪಣಿಗಳು, ಸ್ಥಳಗಳಿಗೆ ಸಂಬಂಧಿಸಿದ ವಿವರಗಳು ಮೊದಲಾದವನ್ನು ಟಿಪ್ಪಣಿ ಮಾಡಿಕೊಂಡೆ. ನನ್ನ ಜ್ಞಾನದ ಹೆಚ್ಚಳಕ್ಕೆ ಇವುಗಳ ಅಧ್ಯಯನ ಹೆಚ್ಚಿನ ನೆರವು ನೀಡಿದವು.

ಡಾ. ಎಂ.ಎಂ. ಕಲಬುರ್ಗಿಯವರು ವಿಶ್ವವಿದ್ಯಾಲಯಕ್ಕೆ ಬರುವ ವೇಳೆಗಾಗಲೇ ನಮ್ಮ ವಿಭಾಗ ಬೆಳೆದಿತ್ತೆಂಬುದನ್ನು ಹಿಂದೆಯೇ ಹೇಳಿದ್ದೇನಷ್ಟೆ. ಈ ಮೊದಲು ನಾನು ಮತ್ತು ಕಲವೀರ ಮನ್ವಾಚಾರ್ ಬಳ್ಳಾರಿ ಜಿಲ್ಲಾ ಶಾಸನಗಳ ವಿಸ್ತೃತ ಸೂಚಿಯನ್ನು ತಯಾರಿಸಿ ಅದನ್ನು ೧೯೯೮ರಲ್ಲಿ ಕಂಪ್ಯೂಟರ್ ಬೆರಳಚ್ಚು ಮಾಡಿಸಿದ್ದೆವು. ಬಳ್ಳಾರಿ ಜಿಲ್ಲೆಯ ಕೆಲವು

ಸ್ಥಳಗಳ ಶಾಸನಗಳನ್ನು ಸಂಗ್ರಹಿಸಿದ್ದೆವು. ಮುಂದೆ ಬರುವ ಕುಲಪತಿಗಳ ಬಳಿ ಬಳ್ಳಾರಿ ಜಿಲ್ಲಾ ಶಾಸನ ಸಂಪುಟ ರಚಿಸಲು ಒಪ್ಪಿಗೆ ಪಡೆಯಲು ಕಾತುರರಾಗಿದ್ದೆವು. ಇಂತಹ ಸಮಯದಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು ಕುಲಪತಿಗಳಾಗಿ ವಿಶ್ವವಿದ್ಯಾಲಯಕ್ಕೆ ಬಂದಿದ್ದರು. ೧೯೯೮ರಲ್ಲಿ ವಿಭಾಗಕ್ಕೆ ಕಲ್ಬುರ್ಗಿಯವರು ಬಂದಾಗ ಅವರಿಗೆ ಉತ್ತರ ಕರ್ನಾಟಕದ ಜಿಲ್ಲಾವಾರು ಶಾಸನ ಸಂಪುಟಗಳನ್ನು ತರುವ ಯೋಜನೆಯ ಬಗ್ಗೆ ವಿವರಿಸಿದೆ. ತಕ್ಷಣವೇ ಅವರು ಅದಕ್ಕೆ ಒಪ್ಪಿಗೆ ನೀಡಿ ಕೆಲಸದ ಬಗ್ಗೆ ಬೆನ್ನು ಹತ್ತಿದರು. ವೆಚ್ಚಕ್ಕೆ ಯೋಚನೆ ಮಾಡಬೇಡಿ, ಅದು ನನಗೆ ಬಿಡಿ. ನೀವು ಕೆಲಸ ಮಾಡಿ ಎಂದು ವಿಭಾಗದವರಿಗೆಲ್ಲಾ ಹುರಿದುಂಬಿಸಿದರು. ೨೦೦೨ರಲ್ಲಿ ಇವರು ವಿಶ್ವವಿದ್ಯಾಲಯ ಬಿಡುವ ಹೊತ್ತಿಗೆ ಬಳ್ಳಾರಿ, ಕೊಪ್ಪಳ ಜಿಲ್ಲೆ, ಹಂಪೆ ಇವು ವಿಭಾಗದ ಸಹೋದ್ಯೋಗಿಗಳಾಗಿದ್ದ ಕೆ.ಜಿ. ಭಟ್‌ಸೂರಿ, ಕಲವೀರ ಮನ್ವಾಚಾರ್, ಡಿ.ವಿ. ಪರಮಶಿವಮೂರ್ತಿ ಇವರ ಸಹಯೋಗದೊಂದಿಗೆ ಪ್ರಕಟವಾದರೆ, 'ತಮಿಳುನಾಡಿನ ಕನ್ನಡ ಶಾಸನಗಳು' ಎಂಬ ಸಂಪುಟವು ಬಾ.ರಾ. ಗೋಪಾಲ್, ಎಚ್.ಎಸ್. ಗೋಪಾಲರಾವ್ ಮತ್ತು ಪಿ.ವಿ. ಕೃಷ್ಣಮೂರ್ತಿಯವರ ಸಂಪಾದಕತ್ವದಲ್ಲೂ 'ಆಂಧ್ರಪ್ರದೇಶದ ಕನ್ನಡ ಶಾಸನಗಳು' ಸಂಪುಟವು ಆರ್. ಶೇಷಶಾಸ್ತ್ರಿ ಮತ್ತು ಕೆ.ಆರ್. ಗಣೇಶ್ ಅವರಿಂದ ವಿಭಾಗಕ್ಕಾಗಿ ಸಂಪಾದನೆಗೊಂಡು ಪ್ರಕಟಗೊಂಡವು. ಇದರೊಂದಿಗೆ ಎಚ್.ಎಸ್. ರಿತ್ತಿಯವರ 'ಸೊಲ್ಲಾಪುರ ಜಿಲ್ಲೆಯ ಕನ್ನಡ ಶಾಸನಗಳು', ಎಸ್. ಸ್ವಾಮಿನಾಥನ್ ಅವರ 'ರಾಷ್ಟ್ರಕೂಟ ಇನ್ಸ್‌ಕ್ರಿಪ್ಷನ್ಸ್ ಇನ್ ತಮಿಳ್ ಕಂಟ್ರಿ', ಜಡ್.ಎ. ಅನ್ಸಾರಿ, ಸೀತಾರಾಮ ಜಾಗೀರದಾರ್ ಅವರ 'ಕರ್ನಾಟಕದ ಅರಾಬಿಕ್, ಪರ್ಷಿಯನ್ ಮತ್ತು ಉರ್ದು ಶಾಸನಗಳು' ಎಂಬ ಕೃತಿಗಳೂ ಪ್ರಕಟವಾದವು. ವಾಸ್ತವವಾಗಿ ಕನ್ನಡ ವಿಶ್ವವಿದ್ಯಾಲಯದ ಯೋಜನೆಗಳ ಮಹತ್ವ ಈ ಕೃತಿಗಳ ಮೂಲಕ ಹೊರಗಿನ ವಿದ್ವಾಂಸರ ಗಮನಕ್ಕೆ ಬಂತು. ಈ ಕೆಲಸ ನಮ್ಮ ವಿಭಾಗದ ಮೇಲೆ ಕೆಲವರ ಕರುಬುವಿಕೆಗೂ ಕಾರಣವಾಯಿತು. ಈ ಎಲ್ಲಾ ಕೃತಿಗಳ ಪ್ರಕಟಣೆಯ ಹಿಂದೆ ಅಂದಿನ ಸ್ನೇಹಮಯಿ ಕುಲಪತಿಗಳಾಗಿದ್ದ ಎಂ.ಎಂ. ಕಲಬುರ್ಗಿ ಹಾಗೂ ಕುಲಸಚಿವರಾಗಿದ್ದ ಮಿತ್ರ ಮಲ್ಲೇಪುರಂ ಜಿ. ವೆಂಕಟೇಶ ಇವರ ಸಹಕಾರ ಮತ್ತು ನಮ್ಮ ವಿಭಾಗದ ಸಹೋದ್ಯೋಗಿಗಳ ದುಡಿಮೆ ಇತ್ತು. ರಾಯಚೂರು ಸಂಪುಟದ ರಚನೆಯ ಕಾಲದಲ್ಲಿ ಕ್ಷೇತ್ರಕಾರ್ಯ ಮಾಡಬೇಕಾಗಿ ಬಂದಾಗ, ಕೃಷ್ಣಾಮೇಲ್ದಂಡೆ ಯೋಜನೆಯ ಮುಳುಗಡೆ ಗ್ರಾಮಗಳು ಎಂಬ ಯೋಜನೆಯಲ್ಲಿ ಅಲ್ಲಿನ ಶಾಸನಗಳ ಸರ್ವೇಕ್ಷಣೆಯಲ್ಲಿ ನಾನು ಗಳಿಸಿದ್ದ ಹಣದಲ್ಲಿ ಒಂದು ಸಣ್ಣ ಮೊಪೆಡ್ ಗಾಡಿಯನ್ನು ತೆಗೆದುಕೊಂಡಿದ್ದೆ. ಇಡೀ ದೇವದುರ್ಗ ತಾಲೂಕಿನ ಕ್ಷೇತ್ರಕಾರ್ಯವನ್ನು ಈ ಗಾಡಿಯಲ್ಲಿಯೇ ಮಾಡಲಾಯಿತು. ನಾನು ಪರಮಶಿವಮೂರ್ತಿ ಸೇರಿ ದೇವದುರ್ಗ ತಾಲೂಕಿನ ಸುಮಾರು ೧೭೦ಕ್ಕಿಂತ ಹೆಚ್ಚಿನ ಹಳ್ಳಿಗಳನ್ನು ಈ ಗಾಡಿಯಲ್ಲಿ ಸುತ್ತಿದ್ದೇವೆ. ಮುಂದೆ ಮಹಾರಾಷ್ಟ್ರದ ಕನ್ನಡ ಶಾಸನಗಳು ಎಂಬ ಸಂಪುಟವನ್ನು ನಾನು ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಜಿ.ಎನ್. ಉಪಾಧ್ಯ ಇವರೊಂದಿಗೆ ಸೇರಿ ಸಂಪಾದಿಸಿದೆ. ಇದೇ ಕಾಲದಲ್ಲಿ ರಾಯಚೂರು ಜಿಲ್ಲೆಯ ಶಾಸನಗಳ ಸಂಪಾದನಾ ಕಾರ್ಯವೂ ಪ್ರಾರಂಭವಾಗಿತ್ತು. ಕಲ್ಬುರ್ಗಿಯವರು ಕುಲಪತಿ ಸ್ಥಾನದಿಂದ ನಿವೃತ್ತರಾಗುವ ಸಮಯದಲ್ಲಿ ನನ್ನನ್ನು ಕರೆದು ಶಾಸನ ಸಂಪುಟಗಳನ್ನು ವಿಭಾಗದವರೇ ಮಾಡಲು ಕೈಗೆತ್ತಿಕೊಂಡರೆ ಸಂಪುಟಗಳನ್ನು ಬೇಗ ಹೊರಗೆ ತರುವುದು ಸಾಧ್ಯವಾಗುವುದಿಲ್ಲ. ಆದ್ದರಿಂದ ಹೊರಗಿನವರೊಂದಿಗೆ ಸೇರಿ ಅಥವಾ ಸ್ಥಳೀಯವಾಗಿ ಕೆಲಸ ಮಾಡುತ್ತಿರುವವರಿಗೆ ಇದನ್ನು ವಹಿಸೋಣವೆಂದು ತೀರ್ಮಾನಿಸಿ ಗುಲ್ಬರ್ಗ ಮತ್ತು ಬೀದರ್ ಜಿಲ್ಲಾ ಶಾಸನ ಸಂಪುಟಗಳನ್ನು ಈಗಾಗಲೇ ಆ ಜಿಲ್ಲಾ ಶಾಸನಗಳ ಬಗ್ಗೆ ಕೆಲಸ ಮಾಡಿದ್ದ ಶ್ರೀಮತಿ ಹನುಮಾಕ್ಷಿ ಗೋಗಿಯವರು ಮತ್ತು ನನಗೂ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಶಾಸನ ಸಂಪುಟಗಳನ್ನು ರಚಿಸಿ ಕೊಡಲು ಡಾ. ಕೆ.ವಿ. ರಮೇಶ್, ಡಾ. ಪಿ.ಎನ್. ನರಸಿಂಹಮೂರ್ತಿಯವರಿಗೂ ವಹಿಸಿದ್ದರು. ಇನ್ನೊಂದು ಅವಧಿಗೆ ಕಲ್ಬುರ್ಗಿಯವರು ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಮುಂದುವರಿದಿದ್ದರೆ ಬಹುಶಃ ಉತ್ತರ ಕರ್ನಾಟಕದ ಬಹುತೇಕ ಶಾಸನ ಸಂಪುಟಗಳು ಹೊರ ಬರುತ್ತಿದ್ದವು. ಕಲಬುರ್ಗಿಯವರು ತೆರೆದ ಮನಸ್ಸಿನವರು ಹಾಗೂ ತಮಗೆ ಅನ್ನಿಸಿದ್ದನ್ನು ಹಾಗೆಯೇ ಹೇಳುತ್ತಿದ್ದರು. ಕನ್ನಡ ಸಾಹಿತ್ಯ, ಶಾಸನ, ಜನಪದ ವಿಷಯ, ಇತಿಹಾಸ ಮುಂತಾದ ವಿಷಯಗಳಲ್ಲಿ ಪರಿಣತರಾದ್ದರಿಂದ ಯಾವ ವಿದ್ವಾಂಸರ ಉಡಾಫೆಯ ಮಾತೂ ಇವರಲ್ಲಿ ನಡೆಯುತ್ತಿರಲಿಲ್ಲ. ವಿಶ್ವವಿದ್ಯಾಲಯದ ಅನೇಕರು ಪುಸ್ತಕಗಳನ್ನು ರಚಿಸಿದ್ದು ಇವರ ಕಾಲದಲ್ಲಿಯೇ. ನಿಗದಿತ ಅವಧಿಯಲ್ಲಿ ಕಾರ್ಯ ನಡೆಯಬೇಕಿತ್ತು. ಇಲ್ಲದಿದ್ದಲ್ಲಿ ನಿರ್ದಾಕ್ಷಿಣ್ಯದ ಮಾತುಗಳನ್ನು ಕೇಳಬೇಕಿತ್ತು. ಈ ಕಾರಣದಿಂದ ಮುಂದಿನ ಅವಧಿಗೆ ಇವರು ಕುಲಪತಿಗಳಾಗದಂತೆ ತಡೆಯುವಲ್ಲಿ ನಮ್ಮ ವಿಶ್ವವಿದ್ಯಾಲಯದ ಕೆಲವು ಆಸಕ್ತ ವಿದ್ವಾಂಸರ ಪಾತ್ರವೂ ಇತ್ತು. ಇದೇ ಅವಧಿಯಲ್ಲಿ ಒಂದು ಬಾರಿ ಎಸ್.ಎಂ. ಜಾಮದಾರರು ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದು ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಮುಳುಗಡೆಯಾಗುವ

ಗ್ರಾಮಗಳಲ್ಲಿನ ಶಾಸನ, ಶಿಲ್ಪ ಮತ್ತು ದೇವಾಲಯಗಳ ಸಮೀಕ್ಷೆ ಮಾಡಿ ವರದಿ ನೀಡಬೇಕೆಂದೂ ಇದಕ್ಕಾಗಿ ಐದು ಲಕ್ಷ ರೂಪಾಯಿಗಳ ಅನುದಾನ ನೀಡುವುದಾಗಿ ತಿಳಿಸಿದರು. ಕುಲಪತಿಗಳಾಗಿದ್ದ ಕಲ್ಬುರ್ಗಿಯವರು ನನ್ನನ್ನು, ಡಾ. ಕೆ.ಎಂ. ಸುರೇಶ್ ಅವರನ್ನು ಕರೆದು ಈ ಬಗ್ಗೆ ಚರ್ಚಿಸಿದಾಗ ನಾವು ಈ ಯೋಜನೆಯನ್ನು ಮಾಡಿಕೊಡಲು ಒಪ್ಪಿಕೊಂಡೆವು. ನಾನು ಮತ್ತು ಡಾ. ಡಿ.ವಿ. ಪರಮಶಿವಮೂರ್ತಿ ಶಾಸನಗಳ ಸಮೀಕ್ಷೆ ಮಾಡುವುದಾಗಿ ಸುರೇಶ್, ಡಾ. ವಾಸಪ್ಪ ಬಡಿಗೇರ, ಸೋಮಶೇಖರ್ ಮತ್ತು ಕೊಟ್ರೇಶ್ ಅವರು ದೇವಾಲಯ, ಶಿಲ್ಪಗಳ ಸಮೀಕ್ಷೆ ನಡೆಸುವುದಾಗಿ ಹೇಳಿ ಕೆಲಸ ಆರಂಭಿಸಿಯೇ ಬಿಟ್ಟೆವು. ಆರಂಭದಲ್ಲಿ ತೊಂದರೆಯಾಗಲಿಲ್ಲ. ಸ್ವಲ್ಪ ಹಣ ಅಡ್ವಾನ್ಸ್ ತೆಗೆದುಕೊಂಡಿದ್ದೆವು. ಮುಂದಿನ ಅಡ್ವಾನ್ಸ್ ತೆಗೆದುಕೊಳ್ಳಬೇಕಾದ ಸಂದರ್ಭದಲ್ಲಿ ಕಚೇರಿಯಲ್ಲಿದ್ದವರ ಕಿರಿ ಕಿರಿ ಆರಂಭವಾಯಿತು. ಅತ್ತ ಜಾಮದಾರರು ಆಲಮಟ್ಟಿ ಅಣೆಕಟ್ಟಿನ ಗೇಟುಗಳನ್ನು ಹಾಕುವುದಾಗಿಯೂ ಅಷ್ಟರೊಳಗೆ ಕ್ಷೇತ್ರಕಾರ್ಯ ಮಾಡಿ ವರದಿ ನೀಡಬೇಕೆಂಬ ಒತ್ತಾಯ ಹಾಕುತ್ತಿದ್ದರೆ, ಕಚೇರಿಯಲ್ಲಿದ್ದವರಿಗೆ ಇದರ ಪರಿವೆಯೇ ಇರಲಿಲ್ಲ. ನಂತರ ಸ್ವಲ್ಪ ಹಣ ಬಿಡುಗಡೆ ಮಾಡಿದರಾದರೂ ಆ ವೇಳೆಗೆ ನೀರು ನಿಲ್ಲಲು ಆರಂಭವಾಗಿತ್ತು. ಆದರೂ ಕುಂದದ ಉತ್ಸಾಹದೊಡನೆ ಎರಡು ಗುಂಪುಗಳಾಗಿ ನಿಗದಿತ ವೇಳೆಯೊಳಗೆ ಅಂದರೆ ನೀರು ನಿಲ್ಲುವ ವೇಳೆಗೆ ಕ್ಷೇತ್ರಕಾರ್ಯವನ್ನು ಮುಗಿಸಿದ್ದೆವು. ಈ ಲೆಕ್ಕಪತ್ರಗಳು ಕೊನೆಗೂ ಕಲ್ಬುರ್ಗಿಯವರ ಮತ್ತು ಅವರ ಆಡಳಿತದಲ್ಲಿ ಆಡಳಿತಾಂಗದಲ್ಲಿದ್ದವರ ಕಾಲದಲ್ಲಿ ತೀರ್ಮಾನವಾಗಲೇ ಇಲ್ಲ. ಲಕ್ಕಪ್ಪಗೌಡರು ಬಂದಾಗ ಕೆ.ವಿ. ನಾರಾಯಣ ರಿಜಿಸ್ಟ್ರಾರ್ ಆದಾಗ ಸುಲಭದಲ್ಲಿ ೫–೬ ದಿನದಲ್ಲಿ ತೀರ್ಮಾನವಾಯಿತು. ಇದು ಆಡಳಿತದಲ್ಲಿ ಕಗ್ಗಂಟುಗಳನ್ನು ಸುಲಭವಾಗಿ ಬಿಡಿಸುವ ನಾರಾಯಣನ ಜೀನಿಯಸ್. ಈ ಸರ್ವೇಕ್ಷಣೆಯಲ್ಲಿ ಸಿಕ್ಕಿದ ಮತ್ತು ಈಗಾಗಲೇ ಪ್ರಕಟಗೊಂಡಿದ್ದ ಶಾಸನಗಳನ್ನು ಸೇರಿಸಿ ಜಾಮದಾರ ಅವರಿಗೆ ವರದಿ ನೀಡಿದೆವು. ಇದೇ ಮುಂದೆ 'ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಮುಳುಗಡೆಯಾದ ಗ್ರಾಮಗಳ ಶಾಸನಗಳ ಅಧ್ಯಯನ' ಎಂಬ ಹೆಸರಿನಲ್ಲಿ ವಿಶ್ವವಿದ್ಯಾಲಯದಿಂದ ಪ್ರಕಟವಾಯಿತು. ಲಕ್ಕಪ್ಪಗೌಡರ ಕಾಲದಲ್ಲಿ ಆರ್ಥಿಕ ಕಾರಣಗಳಿಂದ ಶಾಸನ ಸಂಪುಟಗಳ ಸಂಪಾದನಾ ಕಾರ್ಯ ಹಿಂದೆ ಬಿತ್ತು. ಒಮ್ಮೆ ಒತ್ತಾಯದಿಂದ ಕ್ಷೇತ್ರಕಾರ್ಯಕ್ಕೆ ಹಣ ಕೇಳಲು ಹೋದಾಗ ಬಿಲ್ಡಿಂಗ್‌ಗಳನ್ನು ಕಟ್ಟಿಸುತ್ತಿರುವುದಾಗಿಯೂ, ಆದಕ್ಕೇ ಹಣ ಸಾಲುತ್ತಿಲ್ಲ ಮುಂದೆ ಯಾವುದಾದರೂ ಹಣ ಬಂದರೆ ನೋಡೋಣವೆಂದು ಹೇಳಿದರು. ಕೊನೆಗೆ ಐ.ಸಿ.ಎಚ್.ಆರ್.ಗೆ ಕಾಗದ ಬರೆದು ಅವರಿಂದ ಬಾಗಲಕೋಟೆ ಜಿಲ್ಲಾ ಸಂಪುಟದ ರಚನೆಯ ಕ್ಷೇತ್ರಕಾರ್ಯಕ್ಕೆ ರೂ.೩೦,೦೦೦/– ಹಣ ಪಡೆಯಲಾಯಿತು. ರಾಯಚೂರು ಜಿಲ್ಲಾ ಶಾಸನ ಸಂಪುಟ ಮುದ್ರಣವಾದ ಮೇಲೆ ಅದನ್ನು ಜಿಲ್ಲಾ ಕೇಂದ್ರ ರಾಯಚೂರಿನಲ್ಲಿಯೇ ಪ್ರಕಟಿಸಬೇಕೆಂದು ನನ್ನ ನಿಲುವಾಗಿತ್ತು. ಅದಕ್ಕಾಗಿ ಅಲ್ಲಿನ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್‌ನ ಅಧ್ಯಕ್ಷರು, ಹಿಂದೆ ಇದ್ದ ಅಧ್ಯಕ್ಷರು ಇವರಿಗೆಲ್ಲಾ ದೂರವಾಣಿ ಮೂಲಕ ಪತ್ರಗಳ ಮೂಲಕ ವಿನಂತಿಸಲಾಗಿತ್ತು. ಅದರ ಆಹ್ವಾನ ಪತ್ರಿಕೆ ಮತ್ತು ಪ್ರಯಾಣ ವೆಚ್ಚಗಳನ್ನು ನಾವು ಭರಿಸುವುದಾಗಿಯೂ, ಅಲ್ಲಿ ಸಭೆ ನಡೆಸುವ ಸಭಾಂಗಣ ಮತ್ತು ಗಣ್ಯರ ಆಹ್ವಾನದ ತೀರ್ಮಾನವನ್ನು ಅವರಿಗೇ ಬಿಡಲಾಗಿತ್ತು. ಈ ದಿನ, ನಾಳೆ, ನಾಳಿದ್ದು ಎಂದು ಕಾಲ ಕಳೆದರೇ ವಿನಹ ಇಂತಹ ಕೃತಿಯೊಂದನ್ನು ಬಿಡುಗಡೆ ಮಾಡುವ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳಲಿಲ್ಲ. ಕುಲಪತಿಗಳಾಗಿದ್ದ ಲಕ್ಕಪ್ಪಗೌಡರೂ ಈ ಬಗ್ಗೆ ಅನೇಕರಿಗೆ ದೂರವಾಣಿ ಮೂಲಕ ವಿನಂತಿಸಿದ್ದರೂ, ಯಾರಿಗೆ ಹೇಳಿದರೂ. ಸಾಹಿತ್ಯದ ಗಂಧವಿಲ್ಲದ ಜಿಲ್ಲಾ ಸಾಹಿತ್ಯ ಪರಿಷತ್ತಿನ ರಾಜಕೀಯ ಸಾಹಿತಿಗಳಿಗೆ ತಾಕಲಿಲ್ಲ. ಕೊನೆಗೆ ಲಕ್ಕಪ್ಪಗೌಡರು ಬೇಸರಿಸಿ ವಿಶ್ವವಿದ್ಯಾಲಯದಲ್ಲಿಯೇ ಬಿಡುಗಡೆ ಮಾಡೋಣವೆಂದು ತೀರ್ಮಾನಿಸಿ ಮುಂದೆ ಅನೇಕ ಪುಸ್ತಕಗಳ ಬಿಡುಗಡೆ ಸಂದರ್ಭದಲ್ಲಿ ಇದನ್ನು ಬಿಡುಗಡೆ ಮಾಡಿದರು.

ಲಕ್ಕಪ್ಪಗೌಡರು ಕುಲಪತಿಗಳಾಗಿದ್ದಾಗ ನಾರಾಯಣ ರಿಜಿಸ್ಟ್ರಾರ್ ಆಗಿದ್ದ. ನನ್ನನ್ನು ಕರೆದು ಶಾಸನಶಾಸ್ತ್ರ ವಿಭಾಗದಲ್ಲಿ ಕೆಲಸ ಮಾಡುವುದರ ಜೊತೆಗೆ ವಿಶ್ವವಿದ್ಯಾಲಯದಲ್ಲಿನ ಮರ–ಗಿಡಗಳ ಯೋಗಕ್ಷೇಮ ನೋಡಿಕೋ ಎಂದು ಹೇಳಿದ. ನಾನು ಸಂತೋಷದಿಂದಲೇ ಈ ಕಾರ್ಯವನ್ನು ಒಪ್ಪಿಕೊಂಡೆ. ನಾಲ್ಕು ವರ್ಷಗಳ ಕಾಲ ಈ ಹುದ್ದೆಯಲ್ಲಿದ್ದೆ. ಅನೇಕ ಹೊಸ ಗಿಡಗಳನ್ನು ನೆಡಿಸಿ ಅವು ಬೆಳೆಯುವಂತೆ ಪಾಲನೆ ಪೋಷಣೆ ಮಾಡಿಸಿದೆ. ಈ ಕಾರ್ಯದಲ್ಲಿ ವಿಶ್ವವಿದ್ಯಾಲಯದ ನೌಕರರಾದ ಜಯದೇವಪ್ಪ ಮತ್ತು ರಾಮಸ್ವಾಮಿ ಸಹಕರಿಸಿದರು. ವಿಶ್ವವಿದ್ಯಾಲಯದ 'ಕೆಲವು' ಪ್ರಗತಿಪರರೆಂದು ಹೇಳಿಕೊಳ್ಳುವವರು ನನ್ನನ್ನು ದನ ಕಾಯುವವನೆಂದು ಪರೋಕ್ಷವಾಗಿ ಕರೆಯುತ್ತಿದ್ದರು. ಇದರಿಂದ ನನಗೇನೂ ಬೇಸರವಿಲ್ಲ. ದೊರೆತ ಅಲ್ಪ ಸಮಯದಲ್ಲಿ ಪ್ರಕೃತಿಮಾತೆಗೆ ಕಿಂಚಿತ್ ಸೇವೆ ಸಲ್ಲಿಸಿದ್ದೇನೆಂಬ ಭಾವನೆ ನನಗಿದೆ.

ನಮ್ಮ ವಿಭಾಗದ ಯಾವ ಶಾಸನ ಸಂಪುಟವೂ ಆಯಾ ಜಿಲ್ಲಾ ಕೇಂದ್ರದಲ್ಲಿ ಬಿಡುಗಡೆಯಾಗಲಿಲ್ಲ. ಹಿಂದೆ ಕೊಪ್ಪಳ ಜಿಲ್ಲಾ ಶಾಸನ ಸಂಪುಟವನ್ನು ಬಿಡುಗಡೆ ಮಾಡಲು ಕೊಪ್ಪಳದಲ್ಲಿ ಜಿಲ್ಲಾಧಿಕಾರಿಯಾಗಿದ್ದ ಡಾ. ಅಶ್ವತ್ಥ್ ಅವರು ಸಿದ್ಧತೆಗಳನ್ನು ಮಾಡಿದ್ದರು. ಆಮಂತ್ರಣ ಪತ್ರಿಕೆ ಮುದ್ರಣವಾಗಿ ಹಂಚಿಯಾಗಿತ್ತು. ಬಿಡುಗಡೆಗೆ ಎರಡು ದಿನ ಬಾಕಿಯಿತ್ತು. ಅದೇ ಕಾಲಕ್ಕೆ ಮುಖ್ಯಮಂತ್ರಿಗಳು ತಮ್ಮ ಪ್ರವಾಸ ಕಾರ್ಯವನ್ನು ಕೊಪ್ಪಳ ಜಿಲ್ಲೆಯಲ್ಲಿರಿಸಿಕೊಂಡರು. ಹೀಗಾಗಿ ಜಿಲ್ಲಾಧಿಕಾರಿಗಳು ಮುಖ್ಯಮಂತ್ರಿಗಳು ಬರುವುದರಿಂದ ಅಲ್ಲಿ ಅವರ ಹಾಜರಿ ಕಡ್ಡಾಯವಾಗಿತ್ತು. ಹೀಗಾಗಿ ಪುಸ್ತಕ ಬಿಡುಗಡೆ ಕಾರ್ಯಕ್ರಮ ರದ್ದುಪಡಿಸಿ, ಮುಖ್ಯಮಂತ್ರಿಗಳ ಓಡಾಟದಲ್ಲಿ ಜಿಲ್ಲಾಧಿಕಾರಿಗಳು ಪಾಲ್ಗೊಂಡರು. ಮುಂದೆ ಈ ಪುಸ್ತಕದ ಬಿಡುಗಡೆಯನ್ನು ನಮ್ಮ ವಿಶ್ವವಿದ್ಯಾಲಯದಲ್ಲಿಯೇ ಮಾಡಲಾಯಿತು.

ಕನ್ನಡ ವಿಶ್ವವಿದ್ಯಾಲಯಕ್ಕೆ ಸೇರಿಕೊಂಡ ಮೇಲೆ ಒಮ್ಮೆ ರಾಜಾಜಿನಗರದ ವಿವೇಕಾನಂದ ಕಾಲೇಜಿನ ಪ್ರಾಂಶುಪಾಲರು, ಸದಸ್ಯರಾದ ಅಪ್ಪಾರೆಡ್ಡಿ, ಅಧ್ಯಕ್ಷರಾದ ನಾರಾಯಣರೆಡ್ಡಿಯವರನ್ನು ಭೇಟಿಯಾಗಿ ಕೆಂಪೇಗೌಡರ ಬಗ್ಗೆ ಒಂದು ಸೆಮಿನಾರ್ ಮಾಡಬೇಕೆಂದೂ, ಆ ಸೆಮಿನಾರಿನ ಪ್ರಬಂಧಗಳನ್ನು ಸೇರಿಸಿ ಪುಸ್ತಕವೊಂದನ್ನು ಹೊರತರುವ ಬಗ್ಗೆ ಚರ್ಚಿಸಲಾಯಿತು. ಅದರಂತೆ 'ಬೆಂಗಳೂರು ಕೆಂಪೇಗೌಡನ ವಂಶಸ್ಥರು' ಎಂಬ ವಿಷಯವನ್ನಿಟ್ಟುಕೊಂಡು ವಿಚಾರ ಸಂಕಿರಣವನ್ನು ನಡೆಸಲಾಯಿತು. ಅನೇಕ ಹಿರಿಯ ವಿದ್ವಾಂಸರ ಜೊತೆಗೆ ಕಿರಿಯ ಸಂಶೋಧಕರನ್ನು ಸೇರಿಸಿಕೊಂಡು ನಾನಾ ವಿಷಯ ಸಂಗ್ರಹಣೆ ಮಾಡಿ ನಂತರ ಅದನ್ನು ಪ್ರೊ. ಎಂ.ಎಚ್. ಕೃಷ್ಣಯ್ಯ ಮತ್ತು ನಾನು ಸೇರಿ ಸಂಪಾದಿಸಿದೆವು. ಇದರಲ್ಲಿ ಕೆಂಪೇಗೌಡರ ವಾಸ್ತು ಮತ್ತು ಮೂರ್ತಿ ಶಿಲ್ಪ ಎಂಬುದು ನನ್ನ ವಿಷಯವಾಗಿತ್ತು.

ಇವರ ನಂತರ ಬಂದ ವಿವೇಕ ರೈಗಳ ಕಾಲದಲ್ಲೂ ಆರಂಭದ ಒಂಬತ್ತು ತಿಂಗಳು ಯಾವುದೇ ಆರ್ಥಿಕ ಸಹಾಯ ದೊರೆಯಲಿಲ್ಲ. ಮುಂದೆ ದೊರೆತಾಗ ನಾನು ಮತ್ತು ಹನುಮಾಕ್ಷಿ ಗೋಗಿಯವರು ಸಂಪಾದಿಸಿದ್ದ 'ಬೀದರ್ ಜಿಲ್ಲೆಯ ಶಾಸನಗಳು' ಬಿಡುಗಡೆಯಾಯಿತು. ಬೀದರ್ ಸಮ್ಮೇಳನದಲ್ಲಿ ಬೀದರ್‌ನ ಸಾಹಿತಿ ಸಂಶೋಧಕರು ತೊಡಗಿದ್ದುದರಿಂದ ಇದನ್ನು ಗುಲ್ಬರ್ಗಾದಲ್ಲಿ ಬಿಡುಗಡೆ ಮಾಡಲಾಯಿತು. ಈ ಪುಸ್ತಕ ಬಿಡುಗಡೆಯ ಸಮಯದಲ್ಲಿ ಮೂಡ್ನಾಕೋಡು ಚಿನ್ನಸ್ವಾಮಿ ಮತ್ತು ಗುಲ್ಬರ್ಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರು ಬಹುವಾಗಿ ಶ್ರಮಿಸಿದರು. ಕಲ್ಬುರ್ಗಿಯವರು ಬಿಡುಗಡೆ ಮಾಡಿದರು. ಮುಂದೆ ವಿಭಾಗದವರ ಸಹಯೋಗದಲ್ಲಿ ಸಂಪಾದಿಸಿದ ಬಾಗಲಕೋಟೆ ಜಿಲ್ಲಾ ಶಾಸನ ಸಂಪುಟವು ವಿವೇಕ ರೈಗಳ ಕಾಲದಲ್ಲಿ ಬಿಡುಗಡೆಯಾಯಿತು. ಇದೂ ಸಹ ಬಾಗಲಕೋಟೆಯಲ್ಲಿ ಬಿಡುಗಡೆ ಮಾಡಬೇಕೆಂದಿದ್ದ ಆಸೆ ಕೈಗೂಡದೆ ವಿಶ್ವವಿದ್ಯಾಲಯದ ಘಟಿಕೋತ್ಸವ ಸಮಯದಲ್ಲಿ ಬಿಡುಗಡೆಯಾಯಿತು. ಇದಕ್ಕೆ ಒಂದು ಲಕ್ಷ ರೂಪಾಯಿಗಳ ಸಹಾಯ ಧನವನ್ನು ನೀಡುವುದಾಗಿ ಬಾಗಲಕೋಟೆ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಪ್ರಭಾಕರ ಅವರು ವಾಗ್ದಾನ ನೀಡಿದ್ದರು. ಅದರಂತೆ ಅವರನ್ನು ಒಂದೆರಡು ಬಾರಿ ನಮ್ಮ ಕುಲಪತಿಗಳ ಪರವಾಗಿ ಭೇಟಿಯಾಗಿದ್ದೆ. ಪುಸ್ತಕದಲ್ಲಿ ಅವರ ಹೆಸರನ್ನು ನಮೂದಿಸಲಾಯಿತು. ಆದರೆ ಪುಸ್ತಕ ಮುದ್ರಣವಾಗಿ ಬಿಡುಗಡೆಯಾಗುವ ಸಮಯದಲ್ಲಿ ಅವರು ಬೆಂಗಳೂರಿಗೆ ವರ್ಗವಾಗಿ ಹೋದರು. ಹಣ ಕ್ರೋಢೀಕರಿಸಲು ತಮ್ಮ ಕೈಕೆಳಗಿನ ಅಧಿಕಾರಿಗಳಿಗೆ ನಮ್ಮ ಎದುರೇ ಹೇಳಿದ್ದರು. ಆದರೆ ಅವರು ವರ್ಗವಾಗಿದ್ದೇ ತಡ ಇಡೀ ಬಾಗಲಕೋಟೆ ಆಡಳಿತ ಇದರ ಬಗ್ಗೆ ತಮಗೇನೂ ಗೊತ್ತಿಲ್ಲವೆಂಬಂತೆ ವರ್ತಿಸಿತು. ಬೇಸತ್ತ ನಮ್ಮ ವಿಭಾಗದವರು ಮತ್ತು ಕುಲಪತಿಗಳಾಗಿದ್ದ ಡಾ. ವಿವೇಕ ರೈ ಅವರು ಈ ಸಂಪುಟವನ್ನು ವಿಶ್ವವಿದ್ಯಾಲಯದಲ್ಲಿಯೇ ಬಿಡುಗಡೆ ಮಾಡಲು ತೀರ್ಮಾನಿಸಿದೆವು. ಇದು ಸರ್ಕಾರದ ಆಡಳಿತದಲ್ಲಿದ್ದವರ ಕಾರ್ಯವೈಖರಿ. ಅವರಿಗೆ ಇದರಿಂದ ಏನೂ ಲಾಭವಿಲ್ಲವೆಂದರೆ ಇಂತಹ ವಿಷಯಗಳ ಬಗ್ಗೆ ತಾತ್ಸಾರ ಅಷ್ಟೇ ಅಲ್ಲ, ತಲೆಕೆಡಿಸಿಕೊಳ್ಳುವುದಿಲ್ಲ.

ಈ ಮಧ್ಯೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸೇರಿದ ಒಂದೆರಡು ವರ್ಷಗಳ ನಂತರ ಯು.ಜಿ.ಸಿ.ಗೆ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಮಟ್ಟಕ್ಕೆ ಪಠ್ಯವನ್ನು ರಚಿಸುವ ಯೋಜನೆಗಳಿಗೆ ಧನಸಹಾಯ ನೀಡುವ ಪ್ರಕಟಣೆ ನೋಡಿ ಅದಕ್ಕಾಗಿ ಅರ್ಜಿ ಹಾಕಿದೆ. ಧನಸಹಾಯ ಸಿಕ್ಕಲಿಲ್ಲ. ಆದರೂ ಲಿಪಿಯ ಬಗ್ಗೆ ಪುಸ್ತಕ ಬರೆಯಬೇಕೆಂಬ ಹಂಬಲ ಕಾಡುತ್ತಿತ್ತು. ಅಂದಿನಿಂದ ನನ್ನಲ್ಲಿ ಸಂಗ್ರಹವಿದ್ದ ಶಾಸನಗಳಿಗೆ ಸಂಬಂಧಿಸಿದ ಚಿತ್ರಗಳು ವಿವರಗಳು ಇವನ್ನೆಲ್ಲಾ ಸೇರಿಸಿ ಏಕೆ ಪುಸ್ತಕವೊಂದನ್ನು ರಚಿಸಬಾರದೆಂಬ ಯೋಚನೆ ಬಂತು. ಅಂದಿನಿಂದ ಲಿಪಿಯನ್ನು ಕುರಿತ ಪುಸ್ತಕವೊಂದನ್ನು ರಚಿಸಲು ತೊಡಗಿದೆ. ನನ್ನ ಕೆಲಸಗಳ ಮಧ್ಯೆ ವಿವರಗಳನ್ನು ಸಂಗ್ರಹಿಸುತ್ತಾ ಹೋದೆ. ೨೦೦೧ನೆಯ ಇಸವಿ ಹೊತ್ತಿಗೆ ಈ ಪುಸ್ತಕ ಒಂದು ಹಂತಕ್ಕೆ

ಬಂತು. ಮಿತ್ರ ಮಲ್ಲೇಪುರಂ ಜಿ. ವೆಂಕಟೇಶ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದಾಗ 'ಆಕರ ಗ್ರಂಥಮಾಲೆ' ಎಂಬ ಮಾಲೆಯನ್ನು ಆರಂಭಿಸಿದಾಗ ನನ್ನ ಕೃತಿಯನ್ನು ಪ್ರಕಟಿಸುವುದಾಗಿ ತಿಳಿಸಿದರು. ಅದರಂತೆ, ಈ ನನ್ನ 'ಲಿಪಿಯ ಹುಟ್ಟು ಮತ್ತು ಬೆಳವಣಿಗೆ' ಕೃತಿಯು ೨೦೦೨ ಏಪ್ರಿಲ್ ತಿಂಗಳಲ್ಲಿ ಪ್ರಕಟವಾಯಿತು. ಈ ಪುಸ್ತಕ ರಚನೆಯಲ್ಲಿ ಅನೇಕ ಪುಸ್ತಕಗಳನ್ನು ಬಳಸಿಕೊಂಡರೂ ಕೆಲವು ಅಧ್ಯಾಯಗಳನ್ನು ಬರೆಯಲು ಡೇವಿಡ್ ಡಿರಿಂಜರ್ ಅವರ 'ದಿ ಆಲ್ಫಬೆಟ್' ಎಂಬ ಕೃತಿಯನ್ನು ಪ್ರಮುಖವಾಗಿ ಬಳಸಿಕೊಂಡಿದ್ದೇನೆ. ಇದಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ಸಹ ಲಭಿಸಿದೆ. ನನ್ನ ಕೃತಿ ಪ್ರಕಟಗೊಂಡ ಮೇಲೆ ಲಿಪಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಒಂದೆರಡು ಕೃತಿಗಳು ಪ್ರಕಟವಾದವು. ೧೯೯೩ರಲ್ಲಿ ಪಿಎಚ್.ಡಿ. ಪದವಿ ಬರುವ ಕಾಲಕ್ಕೆ ಒಂದೆರಡು ಕೃತಿಗಳನ್ನು ನಾನು ಬರೆದಿದ್ದೆ. ೧೯೯೩-೯೪ರಲ್ಲಿ ನಡೆದ ಮಹಾಮಸ್ತಕಾಭಿಷೇಕದ ನೆನಪಲ್ಲಿ ಶ್ರವಣಬೆಳಗೊಳದ ಜೈನ ಮಠದವರು ಕೆಲವು ಕೃತಿಗಳನ್ನು ಪ್ರಕಟಿಸುವುದಾಗಿ ತಿಳಿದುಬಂತು. ನಾನು ಶ್ರವಣಬೆಳಗೊಳದ ಬಸದಿಗಳ ವಾಸ್ತುಶಿಲ್ಪದ ಬಗ್ಗೆ ಅಧ್ಯಯನ ನಡೆಸಿ, ಟಿಪ್ಪಣಿಗಳನ್ನು ಹಾಕಿ ಇಟ್ಟುಕೊಂಡಿದ್ದೆ. ಈ ಬಗ್ಗೆ ಆಗ ಟೌನ್ ಪ್ಲಾನಿಂಗ್ ಡೈರೆಕ್ಟರ್ ಆಗಿದ್ದ ಶ್ರೀ ಅ.ನಾ. ಚಂದ್ರಕೀರ್ತಿಯವರನ್ನು ಭೇಟಿಯಾಗುವಂತೆ ಶ್ರವಣಬೆಳಗೊಳದ ಎಸ್.ಎನ್. ಅಶೋಕ್‌ಕುಮಾರ್ ಅವರು ತಿಳಿಸಿದರು. ನಾನು ಅ.ನಾ. ಚಂದ್ರಕೀರ್ತಿಯವರನ್ನು ಭೇಟಿ ಮಾಡಿದಾಗ, ಅವರು ಸಿದ್ಧಪಡಿಸಿದ ಹಸ್ತಪ್ರತಿಯನ್ನು ನೀಡುವಂತೆ ಹೇಳಿದರು. ಅದನ್ನು ನೋಡಿ ಅವರ ಕೀರ್ತಿ ಪ್ರಿಂಟರ್ಸ್‌ನಲ್ಲಿ ಪುಸ್ತಕವನ್ನು ಅಚ್ಚಿಗೆ ಕೊಡುವಂತೆ ಹೇಳಿದರು. ೧೯೯೩ರಲ್ಲಿ 'ಶ್ರವಣಬೆಳಗೊಳದ ಬಸದಿಗಳ ವಾಸ್ತುಶಿಲ್ಪ' ಈ ಪುಸ್ತಕ ಮುದ್ರಣವಾಗಿ ಹೊರಬಂತು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅಧ್ಯಕ್ಷರಾಗಿ ಗೊ.ರು. ಚನ್ನಬಸಪ್ಪನವರು ಮತ್ತು ಕಾರ್ಯದರ್ಶಿಗಳಾಗಿ ಎಂ.ಜಿ. ನಾಗರಾಜ್ ಅವರಿದ್ದಾಗ ಸಂಶೋಧನಾ ಗ್ರಂಥಗಳನ್ನು ಪ್ರಕಟಿಸುವ ಯೋಜನೆಯೊಂದನ್ನು ಹಾಕಿಕೊಂಡರು. ಅದರಂತೆ ನಾನು ನನ್ನ ಪಿಎಚ್.ಡಿ ನಿಬಂಧ 'ತಲಕಾಡಿನ ಗಂಗರ ದೇವಾಲಯಗಳು–ಒಂದು ಅಧ್ಯಯನ' ಪ್ರಕಟಿಸಲು ಅರ್ಜಿ ಸಲ್ಲಿಸಿದೆ. ಅದನ್ನು ಪರಿಶೀಲಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ನನ್ನ ನಿಬಂಧವನ್ನು ಪ್ರಕಟಿಸಲು ಒಪ್ಪಿಕೊಂಡು. ೨೫೦ ಪುಟಕ್ಕೆ ಸೀಮಿತಗೊಳಿಸುವಂತೆ ತಿಳಿಸಿದರು. ಆಗ ನಿಬಂಧದಲ್ಲಿದ್ದ ರಾಜಕೀಯ ಇತಿಹಾಸ, ಸಾಹಿತ್ಯ ಅಧ್ಯಾಯಗಳನ್ನು ತೆಗೆದು ಪ್ರಕಟಣೆಗೆ ನೀಡಿದೆ. ನವೆಂಬರ್ ೧೯೯೪ರಲ್ಲಿ ಇದು ಪರಿಷತ್ತಿನಿಂದ ಪ್ರಕಟಣೆಗೊಂಡಿತು. ಈ ಪುಸ್ತಕದಲ್ಲಿ ಮೊದಲ ಬಾರಿಗೆ ಗಂಗರ ದೇವಾಲಯಗಳ ಬಗ್ಗೆ ವಿಮರ್ಶಾತ್ಮಕವಾದ, ವಿವರಣಾತ್ಮಕವಾದ. ಗಂಗರ ದೇವಾಲಯಗಳನ್ನು ಗುರುತಿಸಬಹುದಾದ ವಿವರಗಳನ್ನು ವಿವರಿಸಲಾಗಿತ್ತು. ಇದಕ್ಕಿಂತ ಮೊದಲೇ ನನ್ನ ಸಹೋದ್ಯೋಗಿಯಾಗಿದ್ದ ಲಕ್ಷ್ಮೀನರಸಿಂಹನ್ ಕರ್ನಾಟಕ ಲಲಿತಕಲಾ ಅಕಾದೆಮಿಯ ಪ್ರಕಟಣಾ ವಿಭಾಗದ ಸಂಪಾದಕನಾಗಿ ನನ್ನಿಂದ ಗಂಗರ ಶಿಲ್ಪಕಲೆಯ ಬಗ್ಗೆ ಪುಸ್ತಕ ಬರೆಸಿದ್ದ, ೪೦ ಪುಟಗಳ ಈ ಪುಸ್ತಿಕೆಯಲ್ಲಿ ಸಂಕ್ಷಿಪ್ತವಾಗಿ ಗಂಗರ ಶಿಲ್ಪಗಳನ್ನು ಗುರುತಿಸುವ ಬಗೆ, ಅವುಗಳ ವೈಶಿಷ್ಟ್ಯತೆ ಬಗ್ಗೆ ಒತ್ತಿ ಹೇಳಿದ್ದೇನೆ. ಇದೂ ೧೯೯೩ರಲ್ಲಿಯೇ ಪ್ರಕಟವಾಯಿತು. ಈ ಎರಡೂ ಪುಸ್ತಕಗಳು ಗಂಗರ ದೇವಾಲಯ ಮತ್ತು ಶಿಲ್ಪಗಳ ಬಗ್ಗೆ ವ್ಯಾಸಂಗ ಮಾಡುವವರಿಗೆ ದಾರಿದೀಪವಾದವು. ಇತ್ತೀಚೆಗೆ ಗಂಗ ಶಿಲ್ಪಕಲೆ ಪುಸ್ತಕವನ್ನು ತಿದ್ದಿ ಹೆಚ್ಚಿನ ವಿಷಯ ಹಾಗೂ ಛಾಯಾಚಿತ್ರಗಳನ್ನು ಸೇರಿಸಿ ವಿಸ್ತೃತವಾಗಿ ಬರೆದು ಶಿಲ್ಪಕಲಾ ಅಕಾದೆಮಿಯಿಂದ ಪುನರ್ಮುದ್ರಿಸಲಾಗಿದೆ. ಇವೆಲ್ಲಾ ಪ್ರಕಟಣೆಗಳು ಕರ್ನಾಟಕ ಗ್ಯಾಜೆಟಿಯರ್‌ನಲ್ಲಿದ್ದಾಗ ಪ್ರಕಟಗೊಂಡಂತಹವು. ಇವುಗಳ ಪ್ರಕಟಣೆಯ ಹಿಂದೆ ಗ್ಯಾಜೆಟಿಯರ್‌ನ ಮುಖ್ಯಸಂಪಾದಕರಾಗಿದ್ದ ಸೂರ್ಯನಾಥ ಕಾಮತರ ಪ್ರೋತ್ಸಾಹವಿತ್ತು. ೧೯೯೪ರಲ್ಲಿಯೇ ಮೆಹಬೂಬ್‌ನಗರ ಜಿಲ್ಲೆಯ ಆಲಂಪುರದ ಗಡಿಯಾರಂ ರಾಮಕೃಷ್ಣಶರ್ಮ ಅವರ 'ಭಾರತೀಯ ವಾಸ್ತು ವಿದ್ಯೆ' ಎಂಬ ತೆಲುಗು ಕೃತಿಯನ್ನು ಕನ್ನಡಕ್ಕೆ ಅನುವಾದಿಸಿ, ತಿರುಮಲ ತಿರುಪತಿ ದೇವಾಲಯದ ಆರ್ಥಿಕ ನೆರವಿನಿಂದ ನಾನೇ ಸ್ವಂತ ಪ್ರಕಟಿಸಿದೆ. ೧೯೯೩ ಮತ್ತು ೧೯೯೪ನೆಯ ಇಸವಿಗಳಲ್ಲಿ ನನ್ನ ನಾಲ್ಕು ಪುಸ್ತಕಗಳು ಹೊರಬಂದು ಪ್ರಕಟಗೊಂಡವು.

ನನ್ನ ಶಾಸನ ಸಂಪುಟಗಳ ಪ್ರಕಟಣೆಯಲ್ಲಿ ಸಹಕರಿಸಿರುವ ಡಾ. ಕೆ.ಆರ್. ಗಣೇಶ್ ಅವರ ಸಹಕಾರವನ್ನು ನೆನೆಯುವುದು ನನ್ನ ಕರ್ತವ್ಯ. ಬಳ್ಳಾರಿ ಜಿಲ್ಲೆ ಪ್ರಕಟವಾದ ಮೇಲೆ ಈ ಬಗ್ಗೆ ಮಿಶ್ರ ಪ್ರತಿಕ್ರಿಯೆ ಬಂತು. ಇದು ಮೊದಲ ಸಂಪುಟವಾದ್ದರಿಂದ ಕಲಬುರ್ಗಿಯವರ ಪ್ರೋತ್ಸಾಹದ ಜೊತೆಗೆ, ನಮ್ಮ ಭಂಡ ಧೈರ್ಯವೂ ಸೇರಿತ್ತು. ಸಂಪುಟವನ್ನು ಹೇಗಾದರೂ ಸರಿ ಹೊರತರಬೇಕೆಂಬ ಆತುರದಲ್ಲಿ ಇಂಗ್ಲೀಷ್ ಪಾಠದ ಕಡೆಗೆ ಹೆಚ್ಚು ಗಮನ ಹರಿಸಲಿಲ್ಲ. ಹೀಗಾಗಿ

ಇಂಗ್ಲಿಷ್ ಪಾಠದಲ್ಲಿ ವ್ಯಾಕರಣದೋಷಗಳು ಬಹಳಷ್ಟು ನುಗ್ಗಿದ್ದವು. ಇದು ಪ್ರಕಟವಾದ ಮೇಲೆ ನಮ್ಮ ಗಮನಕ್ಕೂ ಬಂತು. ಅಷ್ಟು ಹೊತ್ತಿಗಾಗಲೇ ಕೊಪ್ಪಳ ಜಿಲ್ಲಾ ಶಾಸನ ಸಂಪುಟದ ಸಂಪಾದನಾಕಾರ್ಯ ಆರಂಭವಾಗಿತ್ತು. ಈಗ ಈ ಇಂಗ್ಲೀಷ್ ಅನುವಾದವನ್ನು ಬರೆದು ತಿದ್ದುವ ಕೆಲಸವನ್ನು ಗಣೇಶ್‌ಗೆ ಒಪ್ಪಿಸಿದೆವು. ಅಂದಿನಿಂದ ಇಂದಿನವರೆಗೆ ಇವರು ಈ ಕೆಲಸವನ್ನು ಮಾಡುತ್ತಲೇ ಬಂದಿದ್ದಾರೆ. ಒಂದೆರಡು ಸಂಪುಟಗಳಿಗೆ ಹಣವನ್ನೇ ನೀಡಲಿಲ್ಲ. ಆದರೂ ನಮ್ಮ ಸ್ನೇಹಕ್ಕೆ ಕಟ್ಟುಬಿಟ್ಟು ಇಂದಿಗೂ ನಮ್ಮ ಸಂಪುಟಗಳ ಕಾರ್ಯದಲ್ಲಿ ಸಹಕರಿಸುತ್ತಿದ್ದಾರೆ. ಸಂಪುಟಗಳನ್ನು ಎಲ್ಲಿ ಡಿ.ಟಿ.ಪಿ. ಮಾಡಿಸಬೇಕೆಂದು ಯೋಚಿಸುತ್ತಿದ್ದಾಗ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶಾಸನಶಾಸ್ತ್ರ ತರಗತಿಗಳಲ್ಲಿ ನನ್ನ ವಿದ್ಯಾರ್ಥಿನಿಯಾಗಿದ್ದ ಎಸ್.ವೈ. ನಿರ್ಮಲಾ ಗಣೇಶ್ ಅವರು ಈ ಕಾರ್ಯವನ್ನು ಮಾಡುತ್ತಾ ಇದ್ದಾರೆ. ಕೆಲವು ಸಂಪುಟಗಳು ಡಿ.ಟಿ.ಪಿ.ಗೆ ನೀಡಿ ಒಂದೆರಡು ವರ್ಷಗಳಾದರೂ, ಆ ದತ್ತಾಂಶವನ್ನು ಜೋಪಾನ ಮಾಡಿ ತೋರಿಸಿದ ದೋಷಗಳನ್ನು ತಿದ್ದಿ ಸಂಪುಟಗಳನ್ನು ಅಚ್ಚುಕಟ್ಟಾಗಿ ಬರಲು ಸಹಕರಿಸಿದ್ದಾರೆ. ಸತ್ಯಶ್ರೀ ಮುದ್ರಣಾಲಯದ ಲಿಂಗಪ್ಪನವರ ಸಹಕಾರವೂ ಇದರಲ್ಲಿ ಇದೆ ಎಂಬುದು ಅತಿಶಯೋಕ್ತಿಯಲ್ಲ.

ನನ್ನ ಯಾವುದೇ ಪುಸ್ತಕ ಅಥವಾ ಲೇಖನಗಳನ್ನು ನಾನು ಎಂದೂ ಗುಟ್ಟಾಗಿ ಬರೆಯಲಿಲ್ಲ. ನಾನು ಬರೆದದ್ದನ್ನು ನನ್ನ ಸ್ನೇಹಿತರಿಗೆ ತೋರಿಸುತ್ತಿದ್ದೆ. ಆ ವಿಷಯ ಕುರಿತಂತೆ ಅನೇಕರ ಬಳಿ ಚರ್ಚಿಸುತ್ತಿದ್ದೆ. ಈ ಚರ್ಚೆಯಲ್ಲಿ ಅನೇಕ ಹೊಸ ವಿಷಯಗಳು ಹೊಳೆಯುತ್ತಿದ್ದವು. ಹೀಗಾಗಿ ನನ್ನ ಲೇಖನ, ಪುಸ್ತಕ ಇವುಗಳ ರಚನೆಯ ಹಿಂದೆ ನನ್ನ ಸ್ನೇಹಿತರಾದ ಗಣೇಶ್, ಶೇಷಶಾಸ್ತ್ರಿ, ಕೃಷ್ಣಮೂರ್ತಿ, ವಸಂತಲಕ್ಷ್ಮಿ, ಅಪರ್ಣ ಮುಂತಾದವರ ಪಾಲಿದೆ ಎಂಬುದನ್ನು ವಿನಮ್ರನಾಗಿ ಒಪ್ಪಿಕೊಳ್ಳುತ್ತೇನೆ. ನನ್ನ ಈ ಸಂಕ್ಷಿಪ್ತ ಆತ್ಮಕಥನದಲ್ಲಿ ನನ್ನ ಸಂಶೋಧನೆಗೆ ಹಾಗೂ ವಿಶಾಲ ಪ್ರಪಂಚದ ಜ್ಞಾನಕ್ಕೆ ಪೂರಕವಾದ ಪ್ರವಾಸದ ಬಗ್ಗೆ ನಾನು ಬರೆದಿಲ್ಲ. ಈ ಪ್ರವಾಸ ನನ್ನ ಸ್ವಂತಕ್ಕೆ ಮಾಡಿರುವುದಿರಬಹುದು, ಸರ್ಕಾರದ ಕಾರ್ಯ ನಿಮಿತ್ತ ಮಾಡಿರಬಹುದು, ಶಾಸನ ಸಂಪುಟಗಳ ರಚನೆಗಾಗಿ ಮಾಡಿರುವುದಿರಬಹುದು, ಪಿಎಚ್.ಡಿ. ವಿದ್ಯಾರ್ಥಿಗಳೊಂದಿಗೆ ಮಾಡಿರುವುದಿರಬಹುದು. ಈ ಪ್ರವಾಸಗಳು ಯಾವುದೇ ಉದ್ದೇಶವಿಟ್ಟು ಮಾಡಿದ್ದರೂ ಇದನ್ನು ನನ್ನ ಸ್ವಂತಕ್ಕೂ ಬಳಸಿಕೊಂಡಿದ್ದೇನೆ. ಬಹುಶಃ ನನ್ನ ಜ್ಞಾನದ ಹರವಿಗೆ ಈ ಪ್ರವಾಸಗಳಲ್ಲಿ ಕಂಡ ದೇವಾಲಯ, ಮೂರ್ತಿಶಿಲ್ಪ, ಶಾಸನ, ಶಾಸನದ ವೈವಿಧ್ಯಗಳು ಇಂದಿಗೂ ನನಗೆ ದಾರಿದೀಪವಾಗಿದೆ.

ಇಷ್ಟೆಲ್ಲಾ ಕಾರ್ಯಗಳನ್ನು ಮಾಡಲು ಸಹಕರಿಸಿದ್ದ ಮಿತ್ರರಿಗೆ, ಹಿತೈಷಿಗಳಿಗೆ ಹಾಗೂ ಆಯುರಾರೋಗ್ಯವನ್ನು ದಯಪಾಲಿಸಿದ ಅವ್ಯಕ್ತ ದೇವರಿಗೆ ಕೈ ಮುಗಿಯುತ್ತೇನೆ.



# ರೆಡ್ಡಿ ಪ್ರಶಸ್ತಿ

– ಡಾ॥ ಜೋಸ್ಯುಲ ಸದಾನಂದಶಾಸ್ತ್ರಿ*

ಓಂ

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥

ಶ್ರೀಮದ್ ಬ್ರಹ್ಮಾಂಡರಾಶ್ಯದ್ಭುತನುತ ಸೃಜನಾರಂಭ ಕೇಳೀ ವಿಲಾಸ
ಸ್ತೋಮಂ ಸ್ಥಿತ್ಯಾಖ್ಯ ರಕ್ಷಾತ್ಮಕ ಕೃತಿರಚನಾನಂದ ಸಂದೋಹ ಭಾಸಂ
ಭೀಮೋತ್ಸೃಷ್ಟಿ ಪ್ರಣಾಶ ಪ್ರಳಯಿತ ಜಗದುದ್ಯೋತ ನಿರ್ಭೀಕನಾಟ್ಯಾ
ತ್ತೋಮಾರ್ಧಾಂಗಂ ಪರೇಶಂ ರಚಿಸಲಿ ಶುಭಮಂ ರೆಡ್ಡಿವರ್ಯಂಗೆ ನಿತ್ಯಂ

ಶ್ರೀ ಲಕ್ಷ್ಮೀಶಂ, ಪರೇಶಂ, ಸಕಲ ವಿಭವದಂ ಸರ್ವ ಭಕ್ತಾವನಾಢ್ಯಂ
ಲೀಲಾಲೋಲಂ ಲಲಾಮಂ ಸುಲಲಿತ ಹೃದಯಂ ಲಾಲಿತಾನಂತ ಲೋಕಂ
ವೇಲಾಶೂನ್ಯಂ ವಿಶೀರ್ಣಂ ವಿದಿತ ಸುಸದನಂ ವಿಶ್ವಸಂರಕ್ಷ ದಕ್ಷಂ
ಫಾಲಾಕ್ಷಾಪ್ತಂ ರಮೇಶಂ ಪೊರೆಯಲಿ ನಿರತಂ ರೆಡ್ಡಿಯಂ ಪ್ರೀತಿಯಿಂದಂ

ಶ್ರೀ ಸರ್ವಧಾರಿ ವತ್ಸರ
ದಾ ಸುಪಥ ಶಿರಾಖ್ಯಮಾಸದಾ ಪೂರ್ಣಿಮೆಯೊಳ್
ಭಾಸುರಮಾದೀ ಪ್ರಶಸ್ತಿ
ಶಾಸನ ನಿರ್ಮಾಣಮಾಯ್ತು ಶರ್ವನ ಕೃಪೆಯಿಂ

ಅದೆಂತೆನೆ,

ಬೊಮ್ಮನಾಶು ಸೃಷ್ಟಿಯಲ್ಲಿ ಜಂಬುವೆನುವ ದ್ವೀಪದೊಳ್
ನಮ್ಮ ಕನ್ನಡಾಂಬೆ ಶೋಭೆಯಿಂದಲೆಸೆವ ದೇಶದೊಳ್
ತಮ್ಮ, ಆನೆಕಲ್ಲು ಶೋಭೆಗೈವ ಮೊರಸ ನಾಡಿನೊಳ್
ಹೆಮ್ಮೆಯಿಂದ ನಿಲ್ಲುತೊಪ್ಪುವಂಥ ವಣಕನಳ್ಳಿಯೊಳ್
ತಿಮ್ಮರಾಯನೆನ್ನುವಂಥ ಧೀರನೆಸೆಯುತಿರ್ದ, ಚೆ
ನ್ನಮ್ಮ ಧರ್ಮ ಪತ್ನಿಯಾಗೆ ಲೋಕ ಮೊರೆದು ಮೆಚ್ಚಲುಂ
ಕಡುಮೇಲೆತ್ತಿದ ಕೀರ್ತಿಯ
ಕೊಡೆ, ಕುರುಮಂಡಲ ಸುಗೋತ್ರ ಸುಸ್ಥಿತಿಯಾಮು

* ತೆಲುಗು ಅಧ್ಯಾಪಕರು, ಎಸ್.ಎಸ್.ಬಿ.ಎನ್ ಜೂನಿಯರ್ ಕಾಲೇಜು, ಅನಂತಪುರಂ, ಆಂಧ್ರಪ್ರದೇಶ.

ನ್ನಡೆ, ತಿಮ್ಮರಾಯ ರೆಡ್ಡಿಯ
ಮಡದಿ ಮುನಿಸ್ವಾಮಿಯೆಂಬ ಮಗನಂ ಪಡೆದಳ್

ಆತಂ ಸುಧರ್ಮ ವರ್ತನ
ನೀತಂ ಸತ್ಪುಣ್ಯಕರ್ಮಪೂತಂ ಬೆಳೆದಂ
ತಾತಂಗೊಪ್ಪುವನೈ ಮಗ
ನೀತನೆನುತ್ತೆಲ್ಲ ಜನರು ನಿತ್ಯಂ ಪೊಗಳಲ್

ತಿಮ್ಮಕ್ಕಾಂಬಾ ಸತೀತಸ್ಯ ಪತಿಮಾನಸಗಾಮಿನೀ ।
ವಂಶಯೋರುಭಯೋಃ ಕೀರ್ತೇಃ ಪತಾಕೇವ ಸಮುದ್ಯತಾ ॥

ಸುರುಚಿರ ಸದ್ಗುಣ ಸಂಪ
ದ್ವಿರಚಿತ ದಿಗ್ವ್ಯಾಪ್ತ ದಿವ್ಯ ಕೀರ್ತೇಃ ಶ್ರೀ ದೇ
ವರಕೊಂಡಾರೆಡ್ಡಿವರ
ಸ್ಯ ರಮದ್ರಮಣೀಮಣೀತು ರತ್ನಮ್ಮಾಖ್ಯಾ

ಭಾವದೊಳು ಶುದ್ಧ ವರ್ತನೆ
ಯಾವಾಗಳ್ ಮೆರೆಯೆ ಭರ್ತೃ ಸೇವೆ ಎಸಗುತಂ
ದೇವರಕೊಂಡಾರೆಡ್ಡಿಯ
ಕೋವಿದನಂ ತನಯನಾಗಿ ಸುದತಿಯು ಪಡೆದಳ್

ಸುಂಕಮ್ಮಾ ಮುನಿರೆಡ್ಡಿ ದಂಪತಿಗೆ ಬಲ್ ಸೌಭಾಗ್ಯದಾ ರತ್ನಮೇ
ಯಿಂತು ಪ್ರಾಪ್ತಿಸಿತೆಂಬ ರೀತಿ ಸುದತೀರತ್ನಾಢ್ಯ ರತ್ನಾಂಬೆಯಂ
ಕೊಂಕೆಂದಿಲ್ಲದ ಪ್ರೀತಿಯಿಂದ ಮನದೋಳಿಟ್ಟಂತ ಯೀ ರೆಡ್ಡಿವ
ರ್ಯಂ ಕೊಂಡಂ ಗಡ ಮಕ್ಕಳಂ ಮಿಗೆ ಸ್ಮಿತಾ, ರೂಪಾ, ಸನತ್ ನಾಮರಂ

ಸ್ಮಿತವೇ ಸ್ಮಿತಯೆನೆ ರತಿ ಸಂ
ತತ ರೂಪಮೆ ರೂಪಯೆನಲು ಪಡೆದರ್ ಬಲು ಸ
ನ್ನುತ ದಾಂಪತ್ಯದ ಫನ ಸ
ಮ್ಮತನಂ ಸುತನಂ ಸನತ್‌ಕುಮಾರನನೊಪ್ಪಲ್

ಶಾಸನ ಸಾಹಿತ್ಯ ವಾಸ್ತುಶಿಲ್ಪೇತಿಹಾ
ಸಂಗಳ ಕುರಿತ ಪ್ರಬಂಧ ರಚನೆ
ಬ್ರಹ್ಮನ ಲಿಪಿಯುಮನೋದಲ್ಕೆ ಬಲ್ಲಂಥ

ಲಿಪಿಶಾಸ್ತ್ರ ನಿರ್ಮಾಣ ನಿಪುಣತಾಪ್ತಿ
ಸಂಶೋಧನಾಸಕ್ತ ವಿದ್ಯಾರ್ಥಿಲೋಕಕ್ಕೆ
ಮಾರ್ಗದರ್ಶನ ಮಾಳ್ಪ ಮಾನ್ಯತಾಪ್ತಿ
ಶಾಸನಗಳು, ಲಿಪಿ, ವಾಸ್ತುಶಿಲ್ಪಂಗಳ
ಕುರಿತಂತೆ ಬಹುಮೂಲ್ಯ ಕೃತಿರಚನೆಯು
ಶಿಷ್ಯವಾತ್ಸಲ್ಯ, ವಿಧ್ಯುಕ್ತ ಧರ್ಮನಿರತಿ
ಮಿತ್ರ ಸಂಪ್ರೀತಿ, ಸತ್ಕೀರ್ತಿಯೊಪ್ಪುತಿರ್ಪ
ದೇವರಾದಿಕೊಂಡಾರೆಡ್ಡಿ ದಿವ್ಯ ಚರಿತೆ
ಶಿಷ್ಟಜನ ಸಮ್ಮತಂ ನಿತ್ಯಮಿಂತು ಜಗದಿ

ದೇವರ ಕೊಂಡಾರೆಡ್ಡಿಗೆ
ದೇವರ ಕೃಪೆ ನಿತ್ಯವಿರಲಿ ದೀವಿಸಲೆಂದುಂ
ಪಾವನ ಜೀವನ ಭಾವನ
ದೀ ವನನಿಧಿ ವಲಿತ ಧರಣಿಯೊಳ್ ಸುಖಿಸುತಿರಲ್

ಕೊಂಡಾರೆಡ್ಡೇರ್ದೇವರಾದೇಃ
ಕೃತಂ ಪ್ರಶಸ್ತಿ ಶಾಸನಂ
ತನ್ಮಿತ್ರೇಣ ಮುದಾಪ್ರೀತ್ಯಾ
ಸದಾನಂದೇಣ ಶಾಸ್ತ್ರೀಣಾ
ಇತಿ ಮಂಗಳಂ ಮಹಾ ಶ್ರೀ ಶ್ರೀ ಶ್ರೀ ಃ



# ನನ್ನ ಮಗ... ಆಲದ ಮರ

– ತಿಮ್ಮಕ್ಕ ಮುನಿಶಾಮಿರೆಡ್ಡಿ*

ನನ್ನ ಹುಟ್ಟೂರು ಆನೇಕಲ್ ತಾಲ್ಲೂಕಿನ ಆವಡದೇನಹಳ್ಳಿ. ಚಿಕ್ಕವಯಸ್ಸಿನಲ್ಲೇ ತಾಯಿ ತೀರಿಕೊಂಡರು. ನಾವು ಎಂಟು ಮಂದಿ ಮಕ್ಕಳು. ತಾಯಿಯಿಲ್ಲದ ಈ ಮಕ್ಕಳನ್ನು ಹೇಗೆ ಸಾಕುವುದೆಂಬ ಕೊರಗಿನಲ್ಲಿ ಅಪ್ಪ ಮೂಲೆ ಹಿಡಿದರು. ನಾನು ಮತ್ತು ನನ್ನ ಅಕ್ಕನೇ ಇಡೀ ಮನೆಯ ಜವಾಬ್ದಾರಿ ಹೊತ್ತುಕೊಂಡು ಮನೆಯನ್ನು ನಿಭಾಯಿಸುತ್ತಿದ್ದೆವು. ನನ್ನ ಇಪ್ಪತ್ತನೆಯ ವಯಸ್ಸಿನಲ್ಲಿ ವಣಕನಹಳ್ಳಿಯ ಊರ ಬಾಗಿಲು ತಿಮ್ಮರಾಯರೆಡ್ಡಿ ಮತ್ತು ಚನ್ನಮ್ಮನವರ ಮಗ ಮುನಿಸ್ವಾಮಿರೆಡ್ಡಿಯವರ ಎರಡನೇ ಹೆಂಡತಿಯಾಗಿ ವಣಕನಹಳ್ಳಿಗೆ ಬಂದೆ. ನನ್ನ ಮಾವ ನನಗೆ ಸಾಕಷ್ಟು ಚಿನ್ನವನ್ನು ಕೊಟ್ಟು ತನ್ನ ಮಗನಿಗೆ ತಂದುಕೊಂಡಿದ್ದರು. ಆ ವೇಳೆಗೆ ಹಿರಿಯ ಹೆಂಡತಿಗೆ ಮುನಿಸ್ವಾಮಿರೆಡ್ಡಿ ಎಂಬ ಒಬ್ಬ ಮಗ ಮತ್ತು ಮುನಿತಾಯಿ ಎಂಬ ಹೆಣ್ಣು ಮಗಳಿದ್ದಳು. ನಾನು ಬಂದಾಗ ಮನೆಯಲ್ಲಿ ಜನ ಕಡಿಮೆ. ಆಳು–ಕಾಳು, ಹಾಲು, ಎಣ್ಣೆ–ಬೆಣ್ಣೆ ತುಪ್ಪಗಳಿಗೆ ಕೊರತೆಯಿರಲಿಲ್ಲ. ಹಣದ ವ್ಯವಹಾರವನ್ನೆಲ್ಲ ಮಾವನವರೇ ನೋಡಿಕೊಳ್ಳುತ್ತಿದ್ದರು. ನನ್ನ ಪತಿ ಮುನಿಸ್ವಾಮಿರೆಡ್ಡಿ ತುಂಬಾ ಸಾಧು ಸ್ವಭಾವದ ಮನುಷ್ಯ. ಎಂದೂ ಯಾರಿಗೂ ಕೆಟ್ಟದ್ದನ್ನು ಬಯಸಿದವರಲ್ಲ. ನನಗೆ ದೇವರಕೊಂಡಾರೆಡ್ಡಿ, ಮುನಿರೆಡ್ಡಿ, ನಾರಾಯಣರೆಡ್ಡಿ, ಚನ್ನಾರೆಡ್ಡಿ, ಕೃಷ್ಣಾರೆಡ್ಡಿ, ರಾಮರೆಡ್ಡಿ – ಒಟ್ಟು ಆರು ಜನ ಗಂಡುಮಕ್ಕಳು. ಅವರಲ್ಲಿ ಮುನಿರೆಡ್ಡಿ ಹಾವು ಕಡಿದು ತನ್ನ ೧೩ನೆಯ ವಯಸ್ಸಿನಲ್ಲಿ ತೀರಿಹೋದ. ಚನ್ನಪ್ಪ ೨ ವರ್ಷದ ಮಗುವಿದ್ದಾಗಲೇ ಕಣ್ಮುಚ್ಚಿಕೊಂಡ. ಕೊನೆಗೆ ೪ ಗಂಡುಮಕ್ಕಳು ಉಳಿದುಕೊಂಡರು. ನಮ್ಮ ಮನೆದೇವರು ಯಲ್ಲಮ್ಮ. ಆದರೆ ನಮ್ಮ ಪೂರ್ವಿಕರ ಕಾಲದಿಂದಲೂ ನಮ್ಮ ಕುಟುಂಬದಲ್ಲಿ ಮಕ್ಕಳಿಗೆ ದೇವರಬೆಟ್ಟದಲ್ಲಿ (ದೇವರಕೊಂಡ) ಮುಡಿ ಕೊಡುತ್ತೇವೆ. ಹಾಗಾಗಿ ನನ್ನ ಹಿರಿಮಗನಿಗೆ ಅದೇ ಹೆಸರನ್ನೇ ಇಟ್ಟೆವು. ಇಸ್ಕೂಲಿನ ದಾಖಲಾತಿಯಲ್ಲಿ ಮಾತ್ರ ಆ ಹೆಸರಿದೆ. ಉಳಿದಂತೆ ನಮ್ಮ ಮನೆಗೆ, ಊರಿಗೆ, ಬಂಧು–ಬಳಗಕ್ಕೆ ಅವನು 'ಅಪ್ಪೋಜಿ, ಅಪ್ಪೋಜಣ್ಣ, ಅಪ್ಪೋಜಪ್ಪ'ನೆಂದೇ ಪರಿಚಿತನಾಗಿದ್ದಾನೆ.

ಅಪ್ಪೋಜಿ ಶನಿವಾರ ೧೨ ಗಂಟೆಗೆ ಹುಟ್ಟಿದ. ನನಗೆ ಡೇಟು ಪಾಟು ಗೊತ್ತಾಗೋದಿಲ್ಲ. ಸ್ವಲ್ಪ ದಿನ ತುಂಬಾ ಕೂರೇಸಿ (ರೋಗದ ಮೂಳೆಯಾದ) ಬಿದ್ದ. ಆಗ ಹತ್ತಿರದಲ್ಲಿ ಡಾಕ್ಟ್ರು ಇರಲಿಲ್ಲ. ನಾಟಿ ವೈದ್ಯ ಮಾಡಿಸಿ ಮಣಿ ಮುಂತಾದುವುಗಳನ್ನು ಹಾಕಿಸಿದ ಮೇಲೆ ಸ್ವಲ್ಪ ವಾಸಿಯಾಯ್ತು. ಆನಂತರ ಐದು ವರ್ಷದ ಮಗುವಾಗಿದ್ದಾಗ ಇಸ್ಕೂಲಿಗೆ ಹಾಕಿದೆ. ಇಸ್ಕೂಲಿಗೆ ಹಾಕಿದ ಮೇಲೂ ಕೂರೇಸಿಯಾಗಿದ್ದುಕೊಂಡೇ ದೊಡ್ಡವನಾದ. ನಮ್ಮ ಊರಿನಲ್ಲಿ ೮ನೆಯ ಕ್ಲಾಸಿನವರೆಗೆ ಮಾತ್ರ ಇತ್ತು. ಅವನು ಎಂಟನೇ ಕ್ಲಾಸಿನಲ್ಲಿದ್ದಾಗ ಅವರಪ್ಪ ತೀರಿಹೋದ. ವಣಕನಹಳ್ಳಿಯಲ್ಲಿ ಓದು ಮುಗಿದ ಮೇಲೆ ಹೈಸ್ಕೂಲಿಗೆ ಆನೇಕಲ್‌ಗೆ ಹಾಕಿದ್ವಿ. ಆನೇಕಲ್ ಮೂರುವರೆ ಮೈಲಿ ದೂರದಲ್ಲಿದೆ. ಆಗ ಬಸ್ಸು–ಗಿಸ್ಸು ಏನೂ ಇರ್ಲಿಲ್ಲ. ಅವನು ದಿನಾಲು ನಡೆದುಕೊಂಡು ಹೋಗಿ ಬರ್ತಿದ್ದ. ಒಂದು ದಿನ ಇಸ್ಕೂಲಿನಿಂದ ಬರುವಾಗ ಏನಾಯಿತೋ ಏನೋ ನನಗದೆಲ್ಲ ಏನೂ ಗೊತ್ತಿಲ್ಲ. ಎಲ್ಲ ಮಕ್ಕಳು ಮನೆಗೆ ವಾಪಸ್ಸು ಬಂದರೂ ಇವನು ಬಂದಿಲ್ಲ. ನಾವು ಆನೇಕಲ್‌ನಿಂದ ಊರಿಗೆ ಬರುವ ಕಾಲುದಾರಿಯಲ್ಲಿ ಜಮೀನು ತಗೊಂಡು ಚಕ್ರಬಾವಿ ಕಟ್ಟಿಸಿದ್ದೀವಿ. ಇವನು ಹೋಗಿ ಅಲ್ಲಿ ಬಾವಿಗಡ್ಡೆಯ ಬಳಿ ಕುಳಿತುಕೊಂಡು ಬಿಟ್ಟಿದ್ದಾನೆ. ರಾತ್ರಿ ಏಳೂವರೆಯಾದರೂ ಬಾರದಿದ್ದಾಗ ನಾನು ಅತ್ತುಕೊಂಡು ಅವನ ಸ್ನೇಹಿತರ ಮನೆಗೆ ಹೋಗಿ 'ಎಲ್ಲಪ್ಪ ನನ್ನ ಮಗ' ಎಂದು ಕೇಳಿದ. ಅವರು 'ಅವನು ತೋಟದ ಕಡೆಗೆ ಹೋದ' ಎಂದರು. ನನಗೆ ಆತಂಕವುಂಟಾಯಿತು. ನನ್ನ ಮಾವ, ಆಳುಗಳೆಲ್ಲ ಅವನನ್ನು ಹುಡುಕಿಕೊಂಡು ಜಮೀನಿನ ಕಡೆ ಹೋದರು. ಹೋಗುವಷ್ಟೊತ್ತಿಗೆ ಬಾವಿಗಡ್ಡೆಯ ಮೇಲೆ ಪುಸ್ತಕಗಳನ್ನಿಟ್ಟುಕೊಂಡು ಕಾಲನ್ನು ಬಾವಿಗೆ ಇಳಿಬಿಟ್ಟು ಕುಳಿತಿದ್ದನಂತೆ. ಅವನನ್ನು ಕರೆತಂದು ನನ್ನ ಮುಂದೆ ನಿಲ್ಲಿಸಿದರು. 'ಏನಪ್ಪಾ ಇಂಥ ಕೆಲ್ಸ ಮಾಡಿದ್ದೀಯ ಸರಿಯಾ ? ಎಂದೆ. ಅವನು 'ಇಲ್ಲಮ್ಮಾ ಇನ್ನು ಮೇಲೆ ಅಂಥ ಕೆಲಸ ಮಾಡೊಲ್ಲ' ಎಂದು ಒಪ್ಪಿಕೊಂಡ. ಬಹುಶಃ ಸತ್ತ ಅವರಪ್ಪನೇನಾದ್ರೂ ಮನಸ್ಸಿಗೆ ಬಂದಿದ್ದನೇನೋ ಗೊತ್ತಿಲ್ಲ. ಅದೇ ಕೊನೆ. ಮತ್ತೆಂದೂ ಅಂಥ ಕೆಲಸ ಮಾಡ್ಲಿಲ್ಲ. ನಾನೂ ಕಷ್ಟಪಟ್ಟು ಓದಿಸ್ದೆ. ಬೆಳಿಗ್ಗೆ ನಸುಕಿನಲ್ಲಿ ಎದ್ದು ನಡೆದುಕೊಂಡು ಹೋಗೋಣು. ಗೊಜ್ಜು ಅನ್ನ ಏನೋ ಒಂದು ಮಾಡಿ ಹಾಕಿ ಮಕ್ಕಳನ್ನು ಇಸ್ಕೂಲಿಗೆ ಕಳಿಸ್ತಿದ್ದೆ.

---

* ವಣಕನ ಹಳ್ಳಿ ಅಂಚೆ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ.

ಅಪ್ಪೋಜಿ ಚಿಕ್ಕವನಿದ್ದಾಗಿನಿಂದಲೂ ತುಂಬಾ ಸಾಧು. ಧರ್ಮರಾಯನ ಸ್ವಭಾವ. ಹಠಮಾಡಿ ಗಿಟ್ಟಿಸಿಕೊಳ್ಳುವ ಬುದ್ಧಿಯೇ ಅವನಿಗಿಲ್ಲ. ಅವನಿಗೇನಾದರೂ ಬೇಕಾದರೂ ಕೇಳದೆ ಹಾಗೇ ಮೌನವಾಗಿಬಿಡುತ್ತಿದ್ದ. ಒಂದು ದಿನ ಊರಲ್ಲಿ ಸ್ವಾತಂತ್ರ್ಯ ದಿನಾಚರಣೆ ಇತ್ತು. ಆಗೆಲ್ಲ ನೀಲಿಫಾರಂ (ಯೂನಿಫಾರಂ) ಇರಲಿಲ್ಲ. ಇವನಿಗೆ ಹಾಕಿಕೊಳ್ಳುವುದಕ್ಕೆ ಸರಿಯಾದ ಬಟ್ಟೆ ಬರೆಗಳಿರಲಿಲ್ಲ. ಹಾಗಾಗಿ ಇಸ್ಕೂಲಿಗೆ ಹೋಗಲಿಲ್ಲ. ಸ್ವಾತಂತ್ರ್ಯ ದಿನಾಚರಣೆಯ ಮೆರವಣಿಗೆ ಮನೆ ಹತ್ತಿರ ಬಂದಾಗ ಅಪ್ಪೋಜಿ ಬಾಗಿಲ ಹಿಂದೆ ನಿಂತುಕೊಂಡು ಬಗ್ಗಿ ಬಗ್ಗಿ ನೋಡುತ್ತಿದ್ದ. ನಾನು 'ಯಾಕಪ್ಪಾ ನೀನು ಹೋಗ್ಲಿಲ್ಲ' ಎಂದೆ. ಅಪ್ಪೋಜಿ 'ಯಾಕೂ ಇಲ್ಲಮ್ಮಾ' ಎಂದ. ಬಲವಂತ ಮಾಡಿದಾಗ 'ಎಲ್ಲರೂ ಚೆನ್ನಾಗಿರೋ ಬಟ್ಟೆ ಹಾಕ್ಕೊಂಡು ಹೋಗ್ತಾರೆ. ನನ್ನ ಬಟ್ಟೆಯೆಲ್ಲ ಹರಿದುಹೋಗಿದೆ' ಎಂದ. ಆ ವೇಳೆಗೆ ಅವನ ತಾತನೂ ಬಂದ. ನೋಡಪ್ಪಾ ಅಳ್ತಿದ್ದಾನೆ ಎಂದೆ. ಅವರ ತಾತ 'ಅಯ್ಯೋ ಮಗನೇ ಮೊದಲೇ ಹೇಳಬಾರದಿತ್ತಾ ?' ಎಂದು ಹೇಳಿ ಆ ದಿನವೇ ಆನೇಕಲ್ಲಿಗೆ ಹೋಗಿ ಬಟ್ಟೆ ತಂದು ಹೊಲಿಸಿಕೊಟ್ಟರು.

ಆನೇಕಲ್ ಹೈಸ್ಕೂಲಿಗೆ ವಣಕನಹಳ್ಳಿಯಿಂದ ಮಾತ್ರವಲ್ಲದೆ ಮೇಣಸಿನಹಳ್ಳಿ, ಹುಚ್ಚನಹಳ್ಳಿ, ಸಿಂಗಸಂದ್ರ, ತಮ್ಮಾಪುರ, ಮುತ್ತೂರು ಮುಂತಾದ ಊರುಗಳಿಂದಲೂ ಹುಡುಗರು ನಡೆದುಕೊಂಡು ಶಾಲೆಗೆ ಹೋಗುತ್ತಿದ್ದರು. ಒಂದು ಸಾರಿ ಮೇಣಸಿನಹಳ್ಳಿಯ ಒಬ್ಬ ಹುಡುಗ ಅಪ್ಪೋಜಿಯನ್ನು ಹೊಡೆದಿದ್ದಾನೆ. ಅಪ್ಪೋಜಿ ಹೆದರಿಕೊಂಡು 'ನಾನು ಇಸ್ಕೂಲಿಗೆ ಹೋಗೊಲ್ಲ, ನನ್ನನ್ನು ಎಲ್ಲರೂ ಹೊಡೆಯುತ್ತಾರೆಂದು' ಹಠ ಹಿಡಿದ. ಎಷ್ಟೇ ಧೈರ್ಯ ಹೇಳಿದರೂ ಸ್ಕೂಲಿಗೆ ಹೋಗಲಿಲ್ಲ. ಬೆಳಿಗ್ಗೆ ನಾನು ಮೇಣಸಿನಹಳ್ಳಿಯ ದಾರಿಯಲ್ಲಿ ಕಾದುಕುಳಿತೆ. ನಾನು ಅಲ್ಲಿರುವ ಸುಳಿವು ಹೇಗೆ ಗೊತ್ತಾಯ್ತೋ ಏನೋ ಆ ಹುಡುಗರು ಆ ದಾರಿಬಿಟ್ಟು ಬೇರೆ ದಾರಿಯಲ್ಲಿ ಹೊರಟು ಹೋಗಿದ್ದರು. ಆಗ ಅಪ್ಪೋಜಿಗೆ ಸ್ವಲ್ಪ ಧೈರ್ಯ ಬಂದಿತ್ತು. 'ಇವತ್ತೇನಾದ್ರೂ ನಿನ್ನನ್ನು ಹೊಡೆದ್ರೆ ನಾಳೆ ನಾನು ಮೇಣಸಿನಹಳ್ಳಿಗೆ ಹೋಗಿ ಅವರ ಗ್ರಹಚಾರ ಬಿಡಿಸ್ತೀನಿ. ನೀನು ಧೈರ್ಯವಾಗಿ ಹೋಗು' ಎಂದು ಹೇಳಿ ಕಳಿಸಿದೆ. ಆಮೇಲೆ ಹುಡುಗರಾರೂ ಅವನ ತಂಟೆಗೆ ಬರಲಿಲ್ಲವಂತೆ.

ಆನೇಕಲ್‌ನಲ್ಲಿ ಆಗ ಎಸ್.ಎಸ್.ಎಲ್.ಸಿ.ವರೆಗೆ ಮಾತ್ರ ಇತ್ತು. ನಂತರ ಬೆಂಗಳೂರಿಗೆ ಹೋಗಬೇಕು. ಏನೇನೋ ಅವಸ್ಥೆ ಪಟ್ಟು ಬೆಂಗಳೂರಿನಲ್ಲಿ ಕಾಲೇಜಿಗೆ ಸೇರಿಸಿದೆ. ಕಾಲೇಜು ಓದುವಾಗ ಹಾಸ್ಟೆಲ್ ಸೇರಿಕೊಂಡ. ಯಾವಾಗ್ಲಾದ್ರೂ ತಿಂಗಳಿಗೊಂದು ಸಾರಿ ಊರಿಗೆ ಬಂದ್ರೆ 'ಅಮ್ಮಾ ನನಗೆಲ್ಲಾದ್ರೂ ಐದು ರೂಪಾಯಿ ತಂದುಕೊಡು' ಎಂದು ಕೇಳುತ್ತಿದ್ದ. ಆಗ ನನ್ನಲ್ಲಿ ಐದು ರೂಪಾಯಿಗೂ ಯತ್ನವಿರಲಿಲ್ಲ. ಯಾರತ್ರನಾದ್ರೂ ಕೇಳಿ ೫ ರೂಪಾಯಿ ತಂದುಕೊಟ್ರೆ ಕಣ್ಣಿಗೊತ್ತಿಕೊಂಡು ಜೇಬಿಗಿಟ್ಟುಕೊಳ್ತಿದ್ದ. ಹೀಗೆ ಕಷ್ಟಪಟ್ಟು ಓದಿಕೊಂಡು ತಮ್ಮಂದಿರಾದ ನಾರಾಯಣರೆಡ್ಡಿ, ಕೃಷ್ಣಾರೆಡ್ಡಿಯನ್ನೂ ಬೆಂಗಳೂರಿಗೆ ಕರೆದುಕೊಂಡು ಬಂದು ತನ್ನ ಜೊತೆ ಇಟ್ಟುಕೊಂಡ. ನಾರಾಯಣ ರೆಡ್ಡಿ ಓದಲಿಲ್ಲ. ವಾಪಸ್ಸು ಬಂದುಬಿಟ್ಟ. ಕೃಷ್ಣಾರೆಡ್ಡಿಯನ್ನು ಹಾಸ್ಟೆಲ್‌ನಲ್ಲಿಟ್ಟು ಓದಿಸಿದ. ನನಗೆ ಎಲ್ಲಾ ಗಂಡುಮಕ್ಕಳೇ ಹುಟ್ಟಿದ್ದರಿಂದ ನಮ್ಮ ಮಾವ ಮನೆಯಲ್ಲಿದ್ದ ಚಿನ್ನವನ್ನೆಲ್ಲ ಮಾರಿ ಜಮೀನು ಖರೀದಿಸಿದರು. ಹಾಗಾಗಿ ಮನೆಯಲ್ಲಿ ಅನ್ನ ಬಟ್ಟೆಗೆ ಕೊರತೆಯಿರಲಿಲ್ಲ. ಆದರೆ ಇದ್ದ ಬದ್ದ ಹಣವನ್ನೆಲ್ಲಾ ಜಮೀನಿನ ಮೇಲೆ ಹಾಕಿದ್ದರಿಂದ ಸ್ವಲ್ಪ ಹಣಕಾಸಿನ ಮುಗ್ಗಟ್ಟು ಉಂಟಾಯಿತು. ಡಿಗ್ರಿ ಮುಗಿದ ಮೇಲೆ ಎಂ.ಎ. ಮಾಡಬೇಕೆಂದು ಹೇಳಿದ. ಮನೆಯ ಕಡೆಯಿಂದ ಅಪ್ಪೋಜಿಗೆ ನಯಾಪೈಸೆಯಷ್ಟು ಸಹಾಯ ಮಾಡಲು ಸಾಧ್ಯವಿರಲಿಲ್ಲ. ಮನೆ ವ್ಯವಹಾರವೆಲ್ಲ ಹಿರಿಮಗನ ಕೈಯಲ್ಲಿತ್ತು. ಆಗ ಅವನ ಸೋದರತ್ತೆ (ನನ್ನ ಪತಿಯ ತಂಗಿ) ಸುಂಕಮ್ಮ ಅವನಿಗೆ ಹಣ ನೀಡಿ ಅವನು ಓದು ಮುಂದುವರೆಸಲು ನೆರವಾದಳು. ಓದು ಮುಗಿದ ಮೇಲೆ ಅವನ ಸೋದರತ್ತೆಯ ಮಗಳು ನಾಗರತ್ನಳೊಡನೆಯೇ ಅವನ ಲಗ್ನ ಮಾಡಿಸಿದೆವು. ಬೆಂಗಳೂರಿನಲ್ಲಿ ಮನೆ ಮಾಡಿ ಹೆಂಡತಿಯನ್ನು ಕರೆದುಕೊಂಡು ಹೋಗಲು ಯತ್ನವಿರಲಿಲ್ಲ. ಹೆಂಡತಿಯನ್ನು ಊರಲ್ಲಿ ಬಿಟ್ಟ. ಊರಲ್ಲಿ ಅಣ್ಣನ ಹೆಂಡತಿಗೂ, ಇವನ ಹೆಂಡತಿಗೂ ಸರಿಹೋಗಲಿಲ್ಲ. ನಾನು 'ನಿನ್ನ ಹೆಂಡತಿಯನ್ನು ಸ್ವಲ್ಪ ದಿನ ತವರು ಮನೆಯಲ್ಲಿ ಬಿಟ್ಟುಬಿಡು' ಎಂದೆ. ಅವನು ತವರು ಮನೆಯಲ್ಲಿ ಬಿಡಲು ಒಪ್ಪಲಿಲ್ಲ. ಬೆಂಗಳೂರಿಗೆ ಕರೆದುಕೊಂಡು ಹೋಗಿ ಒಬ್ಬರ ಮನೆಯಲ್ಲಿ ಪಾತ್ರೆ ತೊಳೆಯೋದಕ್ಕೆ ಕಳಿಸುತ್ತೇನೆಯೇ ಹೊರತು ತವರುಮನೆಗೆ ಕಳಿಸೊಲ್ಲ' ಎಂದುಬಿಟ್ಟ. ನಾನು ನಿನ್ನಿಷ್ಟ ಎಂದು ಸುಮ್ಮನಾದೆ. ಲಕ್ಕಸಂದ್ರದಲ್ಲಿ ಮನೆ ಮಾಡಿದ ಹೊಸದರಲ್ಲಿ ಒಮ್ಮೆ ಬೆಂಗಳೂರಿಗೆ ಭೇಟಿ ನೀಡಿದ್ದೆ. ಮಹಡಿ ಮೇಲೆ ಒಂದೇ ಒಂದು ಹಾಲು ಮತ್ತು ಅಡಿಗೆ ಮನೆಯಿದ್ದ ಮನೆ. ಎರಡು ಪ್ಲಾಸ್ಟಿಕ್ ಬಕೆಟ್‌ಗಳು, ೫–೬ ಪಾತ್ರೆಗಳು ನಾಲ್ಕು ತಟ್ಟೆಗಳು ಒಂದು ಚಾಪೆ ಮತ್ತು ಬೆಡ್‌ಷೀಟ್ – ಒಟ್ಟಾರೆ ಇಡೀ ಮನೆಯೇ ಅವನು ಅನುಭವಿಸುತ್ತಿದ್ದ ಬಡತನದ ಕತೆಯನ್ನು ಸಾರಿ ಸಾರಿ ಹೇಳುತ್ತಿತ್ತು. ನಂತರ ಅವನ ಸೋದರತ್ತೆ ಸುಂಕಮ್ಮ, ಅವನ ಹೆಂಡತಿ ನಾಗರತ್ನಳ ಅಕ್ಕ ರಾಮಕ್ಕ ಮುಂತಾದವರ ಬೆಂಬಲದೊಂದಿಗೆ ಅವನು ಒಂದು ಹಂತಕ್ಕೆ ಬಂದು ನಿಂತ.

ಹಾಸ್ಟೆಲ್‌ನಲ್ಲಿದ್ದ ತಮ್ಮ ಕೃಷ್ಣಾರೆಡ್ಡಿಯನ್ನು ತನ್ನ ಜೊತೆಯಲ್ಲಿ ಹಾಕಿಕೊಂಡ. ತಮ್ಮನ ಓದು ಮುಗಿದರೂ ಅವನಿಗೊಂದು ಕೆಲಸ ಸಿಕ್ಕಿರಲಿಲ್ಲ. ಅವನು ಅಲ್ಲಿ ಇಲ್ಲಿ ಅಲೆದುಕೊಂಡಿರುತ್ತಿದ್ದ. ಚಿಕ್ಕಂದಿನಲ್ಲಿ ಪೋಲಿಯೋದಿಂದಾದ ಸ್ವಲ್ಪ ಮಟ್ಟಿನ ಊನದಿಂದಾಗಿ ಊರಿಗೆ ಬಂದು ವ್ಯವಸಾಯ ಮಾಡುವುದಕ್ಕೂ ಆಗ್ತಿರಲಿಲ್ಲ. ಕೆಲವು ವರ್ಷಗಳ ನಂತರ ಕೃಷ್ಣನಿಗೆ ಸೀಮೆಎಣ್ಣೆಯ ಡೀಲರ್‌ಶಿಪ್ ಸಿಕ್ತು. ಆದರೆ ಇದಕ್ಕೆ ಆಗ (೧೯೮೨) ಕನಿಷ್ಠ ಒಂದು ಲಕ್ಷ ರೂ.ಗಳ ಬಂಡವಾಳ ಬೇಕಿತ್ತು. ಆಗ ಅಪ್ಪೋಜಿಯ ಸಂಬಳವೇ ಸಾವಿರ ರೂಪಾಯಿಗಳು. ಅವನಿಗೆ ಸಾಲದ ಲೆಕ್ಕ ಬಿಟ್ಟು ಬಂಡವಾಳದ ಲೆಕ್ಕ ಗೊತ್ತಿರಲಿಲ್ಲ. ಅವನಿಗೆ ಏನು ಮಾಡಬೇಕೆಂಬುದೇ ತೋಚಲಿಲ್ಲ. ಊರಿಂದ ನಯಾಪೈಸೆಯನ್ನೂ ನಿರೀಕ್ಷಿಸೋ ಹಾಗಿರಲಿಲ್ಲ. ನನ್ನನ್ನು 'ಏನಮ್ಮಾ ಮಾಡೋದು' ಎಂದು ಕೇಳಿದ. ನಾನು 'ಹೋಗ್ಲಿ ಇದನ್ನು ಕೈಬಿಟ್ಟಿಡಪ್ಪ, ಬೇರೆ ಕೆಲಸ ಸಿಗಬಹುದು' ಎಂದೆ. ಇಂಥ ಅವಕಾಶ ಮತ್ತೆ ಸಿಗುವುದಿಲ್ಲವೆಂದು ಹೇಳಿ ಪ್ರಯತ್ನಪಡುವುದಾಗಿ ಹೇಳಿ ಹೊರಟ. ಬ್ಯಾಂಕ್‌ಗಳಲ್ಲಿ ೭೦ ಸಾವಿರದಷ್ಟು ಸಾಲ-ಸೋಲ ಮಾಡಿದ. ಹೆಂಡತಿಯ ಒಡವೆಯನ್ನೆಲ್ಲಾ ಅಡವಿಟ್ಟ. ಅತ್ತೆಯ ಮನೆಯಿಂದಲೂ ಸ್ವಲ್ಪ ಹಣವನ್ನು ಸಾಲ ತಂದಾಯಿತು. ಊರಲ್ಲಿ ಎತ್ತಿನಗಾಡಿ, ಎತ್ತುಗಳನ್ನು ಮಾರಿ ಹೇಗೋ ಕಷ್ಟಪಟ್ಟು ಹಣವನ್ನು ಸಂಗ್ರಹಿಸಿ ಆನೇಕಲ್ ತಾಲ್ಲೂಕಿನ ಸೀಮೆಎಣ್ಣೆಯ ಡೀಲರ್‌ಶಿಪ್ ಮಾಡಿಕೊಟ್ಟು ಅವನನ್ನು ಒಂದು ತಾಪಿನಲ್ಲಿ ಕೂರಿಸಿದ.

ಸೊಸೆ ರತ್ನಮ್ಮ ಇನ್ನೇ ಮಗುವಿನ ತುಂಬುಗರ್ಭಿಣಿಯಾಗಿದ್ದಾಗ ಊರಲ್ಲಿ ಹಿರಿಯ ಮುನಿಸ್ವಾಮಿರೆಡ್ಡಿ ಆಸ್ತಿ ಪಾಲುಮಾಡಿಕೊಳ್ಳಬೇಕೆಂದು ಹಠ ತೊಟ್ಟ. ಆಗಿನ್ನೂ ಅಪ್ಪೋಜಿಯೊಬ್ಬನದು ಮಾತ್ರ ಮದುವೆಯಾಗಿತ್ತು. ಉಳಿದ ಮೂವರು ಗಂಡುಮಕ್ಕಳು ಮದುವೆಯ ವಯಸ್ಸಿಗೆ ಬಂದಿದ್ದು ಅವರಿಗೆ ಮದುವೆ ಮಾಡಬೇಕಾಗಿತ್ತು. ನಾನು 'ನನ್ನ ಉಳಿದ ಮಕ್ಕಳ ಮೇಲೆ ನಾಲ್ಕು ಅಕ್ಕಿಕಾಳು ಬಿದ್ದ ನಂತರ ಬೇರೆ ಹೋಗು' ಎಂದೆ. ಅವನು ಒಪ್ಪಲಿಲ್ಲ. ಅಪ್ಪೋಜಿ ಊರಿಗೆ ಬಂದಾಗ ಅವನಿಗೆ ಹೇಳಿದೆ. ಅವನು ಪಾಲು ಮಾಡಿಕೊಳ್ಳುವ ಯೋಚನೆಯಿಂದ ಹಿಂದೆ ಸರಿಯುವಂತೆ ತನ್ನ ಅಣ್ಣನಿಗೆ ಹೇಳಿದ. ಅಣ್ಣ ಖಡಾಖಂಡಿತವಾಗಿ ನಿರಾಕರಿಸಿದ. ಆಗ ಅಪ್ಪೋಜಿ ನನ್ನ ಹತ್ತಿರ ಬಂದು 'ಅಣ್ಣ ಏನು ಹೇಳಿದರೂ ಎದುರಾಡಬೇಡ. ಅವನಿಗೋ ಐದು ಜನ ಮಕ್ಕಳಿದ್ದಾರೆ. ಎಲ್ಲದಕ್ಕೂ ಒಪ್ಕಿಕೋ' ಎಂದು ತಾಕೀತು ಮಾಡಿದ. ನ್ಯಾಯಸ್ಥರ ಸಮ್ಮುಖದಲ್ಲಿ ಮೂರನೇ ಒಂದು ದೊಡ್ಡ ಮಗನಿಗೆ ಉಳಿದ ಎರಡು ಭಾಗ ನನ್ನ ನಾಲ್ಕು ಮಕ್ಕಳಿಗೆ ಪಾಲಾಯಿತು. ಯಾವ ಆಸ್ತಿ ಯಾರಿಗೆ ಎಂಬ ವಿಚಾರ ಬಂದಾಗ ಅಪ್ಪೋಜಿ 'ಅಣ್ಣ ನೀನು ಬಿಟ್ಟಿದ್ದ ನಾನು ತಗೋಳ್ತೀನಿ' ಎಂದು ಒಂದೇ ಮಾತಿನಲ್ಲಿ ಹೇಳಿಬಿಟ್ಟ. ಹಾಗೆಯೇ ವಾಸವಿದ್ದ ಮನೆಯನ್ನು ಅಣ್ಣನಿಗೇ ಬಿಟ್ಟುಕೊಟ್ಟು ಹಸುಗಳ ಮನೆಯನ್ನು ತನ್ನ ತಮ್ಮಂದಿರಿಗೆ ಉಳಿಸಿಕೊಂಡ ನಾನು ಅತ್ತುಕೊಂಡೆ. ಆಗ ನನ್ನ ಮಗ ಧರ್ಮರಾಯ. ಅಣ್ಣನಿಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಅವರಿಗೆ ಇರೋ ಮನೇನೇ ಬಿಟ್ಟುಕೊಡೋಣ. ನಾನಿದ್ದೀನಿ ಧೈರ್ಯವಾಗಿರು ಎಂದು ಸಂತೈಸಿದ. ಕೊನೆಗೆ ಸಾಮಾನು, ಸರಂಜಾಮು, ಮೊರ-ಮಟ್ಟಿಯಿಂದ ಆಸ್ತಿ-ಪಾಸ್ತಿಯವರೆಗೆ ಯಾವುದಕ್ಕೂ ಜಗಳವಾಡದೆ ಹಿರಿಯಣ್ಣ ಬಿಟ್ಟುದನ್ನೇ ಇಟ್ಟುಕೊಂಡ. ಹಸುಗಳ ಕೊಠಡಿಯನ್ನು ರಿಪೇರಿ ಮಾಡಿಸಿದ. ಮನೆಯಲ್ಲಿ ಅಡಿಗೆ ಮಾಡುವುದಕ್ಕೆ ಸರಿಯಾದ ಪಾತ್ರೆಗಳಿರಲಿಲ್ಲ. ಹೆಂಡತಿಯ ಜಡೆಬಿಲ್ಲೆ ಅಡವಿಟ್ಟು ಸಿಲ್ವರ್ (ಅಲ್ಯೂಮಿನಿಯಂ) ಪಾತ್ರೆಗಳನ್ನು ತಂದುಕೊಟ್ಟು ೨೯ ವರ್ಷಗಳಾಗಿವೆ. ಈಗಲೂ ಕೆಲವು ಪಾತ್ರೆಗಳನ್ನು ಜೋಪಾನವಾಗಿರಿಸಿಕೊಂಡಿದ್ದೇನೆ. ಮನೆ ಪಾಲಾದ ನಂತರ ಹಿರಿಮಗ ಮುನಿಸ್ವಾಮಿರೆಡ್ಡಿಯ ಮಕ್ಕಳು ಮನೆಗೆ ಬರುವುದು ನಿಂತುಹೋಯಿತು. ನನ್ನ ಗಂಡುಮಕ್ಕಳೆಲ್ಲಾ ದೊಡ್ಡವರಾಗಿದ್ದರು. ಮಕ್ಕಳಿಲ್ಲದ ಮನೆಯಲ್ಲಿ ಬದುಕುವುದು ದುಸ್ತರವೆನಿಸಿತು. ಒಬ್ಬಂಟಿಯಂತಾಗಿದೆ. ಅಪ್ಪೋಜಿ ಊರಿಗೆ ಬಂದಾಗ ಹೇಳಿಕೊಂಡು ಅತ್ತುಕೊಂಡೆ. ಅಷ್ಟೇ ! ಮಾರನೇ ದಿನ ಅವನ ದೊಡ್ಡ ಮಗಳು ಸ್ಮಿತಾಳನ್ನು ತಮ್ಮ ಕೃಷ್ಣನೊಂದಿಗೆ ಊರಿಗೆ ಕಳಿಸಿ 'ಜೊತೆಯಲ್ಲಿಟ್ಟುಕೊಂಡು ಊರಿನಲ್ಲೇ ಓದಬೇಕೆಂದು ಅಮ್ಮನಿಗೆ ಹೇಳು' ಎಂದು ಕಳಿಸಿದ್ದ. ತನ್ನ ಮಗಳನ್ನು ನನಗೆ ಅಕ್ಷರಶಃ 'ದತ್ತು' ನೀಡಿ ನನ್ನ ಅನಾಥ ಭಾವವನ್ನು ನೀಗಿಸಿದ ಪುಣ್ಯಾತ್ಮ ನನ್ನ ಮಗ.

ಮನೆ ಪಾಲಾದ ಹದಿನೈದು ಇಪ್ಪತ್ತು ದಿನಕ್ಕೆ ಯುಗಾದಿ ಬಂತು. ಅಪ್ಪೋಜಿ ಹಬ್ಬದ ದಿನ ಬಂದ. ಏನು ಮಾಡಿದ್ದೀಯಮ್ಮ ಎಂದು ಕೇಳಿದ. ನಾನು ಬೇಜಾರಿಗೆ ಏನು ಮಾಡಿರಲಿಲ್ಲ. ನಾನು 'ಏನೂ ಮಾಡ್ಲಿಲ್ಲಪ್ಪ' ಎಂದಾಗ ಒಬ್ಬಟ್ಟು ಮಾಡು ತಿನ್ನಬೇಕು ಎಂದು ಹೇಳಿ ಒಬ್ಬಟ್ಟು ಮಾಡಿಸಿದ. ಎಲ್ಲರಿಗೂ ಬಡಿಸು ಎಂದು ಹೇಳಿ ಹೋದ.

ನನ್ನ ಮಗ ನಿಜವಾಗಿಯೂ ಧರ್ಮರಾಯನೇ. ಅವನ ಒಳ್ಳೆಯತನವೇ ಅವನಿಗೆ ಶ್ರೀರಕ್ಷೆಯಾಗಿದೆ. ಅವನ ಒಳ್ಳೆಯತನಕ್ಕೆ ದೇವರೂ ಸಹ ತಕ್ಕ ಪ್ರತಿಫಲ ನೀಡಿದ್ದಾನೆ. ತಮ್ಮಂದಿರೆಂದರೆ ಅವನಿಗೆ ಪ್ರಾಣ. ಅವರನ್ನು ಜೊತೆಯಲ್ಲಿ ಹಾಕಿಕೊಂಡೇ ಸಾಕಿ ಬೆಳೆಸಿದ. ಒಂದೇ ಮಾತಿನಲ್ಲಿ ಹೇಳುವುದಾದರೆ ಅವನಿಲ್ಲದೆ ನಾವು ಈ ಸ್ಥಿತಿಯಲ್ಲಿರುತ್ತಿರಲಿಲ್ಲ. ನನ್ನ

ಪತಿಗಿಂತ ಮೊದಲೇ ನನ್ನ ಅತ್ತೆ ಸತ್ತು ಹೋಗಿದ್ದರು. ನನ್ನ ಕೊನೆ ಮಗ ರಾಮರೆಡ್ಡಿ ಒಂದೂವರೆ ವರ್ಷದವನಾಗಿದ್ದಾಗ ಎಂದರೆ ೪೫ ವರ್ಷಗಳ ಹಿಂದೆ ನನ್ನ ಪತಿಯೂ ತೀರಿಹೋದರು. ಅಪ್ಪೋಜಿ ಮದುವೆಯಾದ ಎರಡು ವರ್ಷಗಳಲ್ಲಿ ನನ್ನ ಮಾವನವರೂ ಗತಿಸಿದರು. ಹಿರಿಯ ಮಗ ಬೇರೆಯಾಗಿಬಿಟ್ಟ. ಇಡೀ ಮನೆಯ ಸಂಪೂರ್ಣ ಜವಾಬ್ದಾರಿ ಅಪ್ಪೋಜಿಯ ಮೇಲೆ ಬಿತ್ತು. ಹೇಗೆ ನಿಭಾಯಿಸಿದನೋ ದೇವರೇ ಬಲ್ಲ. ಅಪ್ಪನ ಸ್ಥಾನದಲ್ಲಿ ನಿಂತು ತಮ್ಮಂದಿರನ್ನು ನೋಡಿಕೊಂಡಿದ್ದಾನೆ. ಅವರಪ್ಪ ಸತ್ತ ನಂತರ ನಾನಾ ಬಾಧೆ, ಅವಸ್ಥೆ ಪಟ್ಟು ಓದಿ ಊರಿಗೆ ಮಾದರಿಯೆನಿಸಿಕೊಂಡ. ಮನೆಗೂ ಊರುಗೋಲಾದ. ಈಗಲೂ ಊರಿಗೆ ಬಂದರೆ ಜನ ಅವನನ್ನು ಇರುವೆ ಮುತ್ತುವಂತೆ ಮುತ್ತುತ್ತಾರೆ. ತುಂಬು ಗೌರವದಿಂದ ಕಾಣುತ್ತಾರೆ. ಊರವರ ಕಷ್ಟಗಳಲ್ಲೂ ಸಹ ಗಂಡ–ಹೆಂಡತಿ ಸಮಭಾಗಿಯಾಗಿದ್ದಾರೆ. ಅವನು ಸಾಮಾನ್ಯವಾಗಿ ಭಾನುವಾರ ಊರಿಗೆ ಬರುತ್ತಿದ್ದ. ನಾನು ಮಾಡಿದ್ದ ಅಡಿಗೆಯನ್ನು ಉಣ್ಣದೆ ಹೋಗುತ್ತಿರಲಿಲ್ಲ. ನಂತರ ತೋಟ–ಹೊಲದ ಕಡೆ ಹೋಗುತ್ತಿದ್ದ. ಜಮೀನಿನಲ್ಲಿ ಗಿಡಗಳನ್ನು ಬೆಳೆಸಿದ. ಅವನು ಹಾಕಿದ ಗಿಡಗಳೆಲ್ಲಾ ಈಗ ಮರಗಳಾಗಿ ಹಣ್ಣು ಬಿಡುತ್ತವೆ. ಅವನ್ನೆಲ್ಲಾ ಕೊನೆ ತಮ್ಮ ರಾಮರೆಡ್ಡಿಯ ಪಾಲಿಗೆ ಬಿಟ್ಟುಬಿಟ್ಟ.

ಎಲ್ಲ ತಮ್ಮಂದಿರಿಗೂ ಮುಂದೆ ನಿಂತು ಮದುವೆ ಮಾಡಿದ. ತನ್ನಲ್ಲಿ ಬಡತನ ತುಂಬಿಕೊಂಡಿದ್ದರೂ, ಯಾರಲ್ಲೂ ನಯಾಪೈಸೆ ವರದಕ್ಷಿಣೆ ತಗೊಳ್ಳಲಿಲ್ಲ. ನಾನು 'ಎಷ್ಟು ಅಂತ ಸಾಲ–ಸೋಲ ಮಾಡ್ತೀಯ. ಖರ್ಚಿಗಾದ್ರೂ ಸ್ವಲ್ಪ ದುಡ್ಡು ತಗೊಳ್ಳೋಣ' ಎಂದಿದ್ದಕ್ಕೆ ನನ್ನನ್ನು ಬೈದುಬಿಟ್ಟ. ಒಬ್ಬ ತಮ್ಮ ಮದುವೆ ದಿನ ನಿಶ್ಚಯವಾದ ಮೇಲೆ ನನಗೆ ೫ ಸಾವಿರ ವರದಕ್ಷಿಣೆ ಬೇಕೇ ಬೇಕು ಎಂದು ಹಠ ಹಿಡಿದು ಕೂತ. ಆಗ ಅಪ್ಪೋಜಿ ಐದು ಸಾವಿರ ಸಾಲ ಮಾಡಿ ತಂದುಕೊಟ್ಟನೇ ವಿನಾ ಹೆಣ್ಣಿನ ಕಡೆಯವರನ್ನು ಕೇಳಲಿಲ್ಲ. ಹಾಗೇ ತನ್ನ ಹೆಣ್ಣುಮಕ್ಕಳಿಗೂ ವರದಕ್ಷಿಣೆ ಕೊಡದೆ ಮದುವೆ ಮಾಡಿದ. ಒಳ್ಳೆಯತನಕ್ಕೆ ಮಾತ್ರ ಅವನು ಬೆಲೆ ಕೊಡ್ತಾನೆ. ಇಲ್ಲದಿದ್ದರೆ ತುಂಬಾ ಕಟು, ಕಡ್ಡಿ ಎರಡು ತುಂಡು ಮಾಡಿದಂತೆ ಅವನ ಮಾತು. ನನ್ನನ್ನು ಪ್ರೀತಿಯಿಂದ ನೋಡಿಕೊಳ್ಳುವ ಅವನು, ನಾನೇನಾದರೂ ಇತರ ಮಕ್ಕಳ ವಿರುದ್ಧವಾಗಿ ಏನನ್ನಾದರೂ ಹೇಳಿದರೆ, ನನ್ನನ್ನೇ ಬೈಯುತ್ತಾನೆ. ಅಷ್ಟು ಮಮಕಾರ ತಮ್ಮಂದಿರೆಂದರೆ! ಅವನು ಕರುಣಾಮಯಿ. ನನ್ನ ಮಟ್ಟಿಗಂತೂ ಅಪ್ಪೋಜಿ ಆಲದ ಮರ. ತನ್ನ ನೆರಳಿಗೆ ಬಂದವರಿಗೆಲ್ಲಾ ಆಶ್ರಯ ನೀಡುತ್ತಾ ಹತ್ತಾರು ಜನರ ಬದುಕಿಗೆ ಮಾರ್ಗದರ್ಶಿಯಾಗಿದ್ದಾರೆ. ಅವನಿಗೆ ಆಯಸ್ಸು, ಆರೋಗ್ಯ, ಐಶ್ವರ್ಯಗಳನ್ನು ನೀಡಿ ಕಾಪಾಡಲು ಎಂದು ಆ ಈಶ್ವರನಲ್ಲಿ ಬೇಡಿಕೊಳ್ಳುತ್ತೇನೆ.



# ಡಾ॥ ದೇವರಕೊಂಡಾರೆಡ್ಡಿ

– ಶ್ರೀಮತಿ ಎಂ. ರತ್ನ ದೇವರಕೊಂಡಾರೆಡ್ಡಿ*

"ಏ ಬಿಡ್ಡ ನುವ್ವು ನನ್ನು ಪೆಳ್ಳೈತಾವಾ?" (ಹೇ ಹುಡುಗಿ ನೀನು ನನ್ನನ್ನು ಮದುವೆಯಾಗ್ತೀಯಾ?) ಎಂಬ ಮಾತು ಕೇಳಿ ಅಡಿಗೆಮನೆಯಲ್ಲಿ ಜೆಲ್ಲ ಕದಿಯುತ್ತಿದ್ದ ನಾನು ಗಾಬರಿಯಿಂದ ಗಕ್ಕನೆ ಹಿಂತಿರುಗಿದೆ. ನೋಡಿದೆ "ಇವರು!!". ಅಡಿಗೆ ಮನೆಯ ಮೋಟುಗೋಡೆಗೆ ಒಂದು ಕೈ ಹಾಗೂ ಗೋಡೆಗೆ ಇನ್ನೊಂದು ಕೈ ಆನಿಸಿಕೊಂಡು ಅಡಿಗೆ ಮನೆಯ ಕಡೆ ಮುಖ ಮಾಡಿ ಅಡ್ಡವಾಗಿ ನಿಂತಿದ್ದರು. ನನಗೋ ಭಯ, ಗಾಬರಿ! ಅವರು ಏನು ಕೇಳಿದ್ದರೆಂಬುದೇ ಗೊತ್ತಾಗಲಿಲ್ಲ. ಧ್ವನಿ ಮಾತ್ರ ಕೇಳಿಸಿತ್ತು. ಆ ಮೇಲೆ ಸಾವರಿಸಿಕೊಂಡು ಅವರು ಕೇಳಿದ್ದೇನು? ಎಂದು ಯೋಚಿಸಿದೆ. ಅದು ನಾನು ಕೊಡಬೇಕಾದ ಉತ್ತರವಲ್ಲ ಎನಿಸಿತು. ಗಾಬರಿಯಿಂದಲೇ "ನಮ್ಮ ಅಮ್ಮ ಹಾಲು ಕರೆಯುತ್ತಿದ್ದಾಳೆ ಅವಳನ್ನೆ ಕೇಳು" ಎಂದು ಹೇಳಿ ಹೊರಗಡೆ ಓಡಿ ಬಂದಿದ್ದೆ. ನನಗಾಗ ೧೧ರ ಹರೆಯ.

ಹಾಗೆ ಕೇಳಿದ "ಇವರು" ನನ್ನ ಸೋದರಮಾವನ ಮಗ ಎಂದರೆ ಅಮ್ಮನ ಅಣ್ಣನ ಮಗ. ನಮ್ಮ ಊರು ದೇವಗಾನಹಳ್ಳಿ. ಕರ್ನಾಟಕಕ್ಕೆ ಹೊಂದಿಕೊಂಡ ತಮಿಳುನಾಡಿನ ಗಡಿಭಾಗದ ಗ್ರಾಮ. ಆದರೆ, ವೈಚಿತ್ರ್ಯವೆಂದರೆ, ಇಲ್ಲಿ ಕನ್ನಡ, ತಮಿಳು ಭಾಷೆಗಿಂತ ಹೆಚ್ಚಾಗಿ ತೆಲುಗು ಭಾಷೆಯ ಬಳಕೆ ಹೆಚ್ಚು. ಅಲ್ಲಿ ಶಾಲೆಗಳೂ ಸಹ ತೆಲುಗು ಮಾಧ್ಯಮದಲ್ಲೇ ಇವೆ. ಹಾಗಾಗಿ ನನಗೆ ತೆಲುಗು ಭಾಷೆಯ ಹೊರತು ಬೇರಾವ ಭಾಷೆಯೂ ಗೊತ್ತಿರಲಿಲ್ಲ. ನಮ್ಮ ಊರಿನಿಂದ ನಮ್ಮ ಸೋದರಮಾವ ಮುನಿಶ್ವಾಮಿರೆಡ್ಡಿಯ ಊರು ವಣಕನಹಳ್ಳಿ, ಸುಮಾರು ಐದು ಮೈಲಿಗಳಷ್ಟು ದೂರವಿದೆ. ಆಗ ವಾಹನ ಸೌಕರ್ಯ ಕಡಿಮೆಯೇ. ಹಾಗಾಗಿ ಅಮ್ಮ ಹೋಗಬೇಕೆನಿಸಿದಾಗ ನಮ್ಮ ಅಕ್ಕ ರಾಮಕ್ಕನ ಊರಾದ ಜಿನ್ನಮಂಗಲದ ಮೂಲಕ ವಣಕನಹಳ್ಳಿಗೆ ಹೋಗಿ ಸಾಯಂಕಾಲದಷ್ಟರಲ್ಲಿ ವಾಪಸ್ಸಾಗುತ್ತಿದ್ದಳು. ಆಕೆ ಅಲ್ಲಿ ತಂಗುತ್ತಿದ್ದುದು ಕಡಿಮೆ. ನನ್ನನ್ನು ವಣಕನಹಳ್ಳಿಗೆ ವರ್ಷಕ್ಕೊಮ್ಮೆ ನಡೆಯುವ ಜಾತ್ರೆಗೆ ಕರೆದುಕೊಂಡು ಹೋಗುತ್ತಿದ್ದರು. ಅದರ ಮಧ್ಯೆ ಯಾವಾಗಲಾದರೂ ಹಠ ಮಾಡಿದರೆ ಒಂದೊಂದು ಸಾರಿ ಕರೆದುಕೊಂಡು ಹೋಗುತ್ತಿದ್ದರು. ಆಗ 'ಇವರು' ಇವರ ತಮ್ಮಂದಿರೆಲ್ಲರೂ ಶಾಲೆಗೆ ಹೋಗಿರುತ್ತಿದ್ದರು. ಅವರೆಲ್ಲರೂ ಶಾಲೆಯಿಂದ ಬರುವ ವೇಳೆಗೆ ನಾವು ಊರಿಗೆ ವಾಪಸ್ಸಾಗುತ್ತಿದ್ದೆವು. ಹೀಗಾಗಿ 'ಇವರ' ಪರಿಚಯವೇ ಒಂದು ರೀತಿಯಲ್ಲಿ ಮಸುಕು-ಮಸುಕಾಗಿತ್ತು. ಇವರು, ಬಿ.ಎ. ಮುಗಿದ ನಂತರ ಆಗಾಗ ನಮ್ಮ ಮನೆಗೆ ಬರುತ್ತಿದ್ದರು. ಅಮ್ಮನಿಂದ ನನಗೆ ತಿಳಿದು ಬಂದ ವಿಷಯವೆಂದರೆ, ಇವರಿಗೆ ಮುಂದೆ ಎಂ.ಎ. ಮಾಡಲು ಹಣಕಾಸಿನ ಅನುಕೂಲವಿಲ್ಲದ್ದರಿಂದ ಸಹಾಯ ಕೋರಿ ಅಮ್ಮನ ಬಳಿಗೆ ಬಂದಿದ್ದರೆಂಬುದು. ನನ್ನ ಅಪ್ಪ ಮುನಿರೆಡ್ಡಿಯವರದು ಲೇವಾದೇವಿ ವ್ಯವಹಾರ. ನಮ್ಮ ಅಮ್ಮ ಸುಂಕಮ್ಮ ದಯಾಳು. ಅಲ್ಲದೆ ಆಕೆಗೆ ತನ್ನ ಅಣ್ಣನ ಮಗನಾದ 'ಇವರ' ಬಗ್ಗೆ ಇನ್ನಿಲ್ಲದ ಮಮಕಾರ, ಅಭಿಮಾನ, ಅಕ್ಕರೆ, ಅವರ ಮುಂದಿನ ಓದಿಗೆ ಅಪ್ಪ-ಅಮ್ಮ ಧನ ಸಹಾಯ ಮಾಡಿದ್ದರು. ಆ ಒಂದು ಕೃತಜ್ಞತೆಯ ಮೇಲೆ ಇವರು ಆಗಾಗ ಮನೆಗೆ ಬರುತ್ತಿದ್ದರು. ಆಗ ಅಮ್ಮ ನನ್ನನ್ನು ಮನೆಯಲ್ಲಿರುವಂತೆ ಒತ್ತಾಯಿಸುತ್ತಿದ್ದಳು. ಮೂರನೇ ತರಗತಿಯವರೆಗೆ ಓದಿ ಶಾಲೆ ಬಿಟ್ಟಿದ್ದ ನಾನು ಸದಾ ಹೊಲ, ಗದ್ದೆ, ಸ್ನೇಹಿತರು, ಕಡಲೆಕಾಯಿ, ಆಲೆಮನೆ ಎಂದುಕೊಂಡು ಹೊರಗಡೆಯೇ ಇರುತ್ತಿದ್ದೆ. ಮನೆಯಲ್ಲಿರುವುದೆಂದರೆ ನನಗೆ ತಲೆನೋವು. ಅದಕ್ಕೆ "ಈಯಪ್ಪ ಒಬ್ರು ಬಂದ್ಬುಡ್ತಾರೆ, ಮಾಡೋದಕ್ಕೇನೂ ಕೆಲ್ಸ ಇಲ್ಲ" ಎಂದು ಬೈದುಕೊಳ್ತಿದ್ದೆ. ಆದ್ರೆ ಅವರು ಬಂದರೆ ಸಂತೋಷವೂ ಆಗ್ತಿತ್ತು. ಕಾರಣ, 'ಇವರು' ಬಂದಾಗ ಅಮ್ಮ ರಾತ್ರೋರಾತ್ರಿ ತರಹೇವಾರಿ ಅಡಿಗೆ/ತಿಂಡಿಗಳನ್ನು ಮಾಡಿ ಹಾಕುತ್ತಿದ್ದಳು. ಹಾಗಾಗಿ ಬಾಯಿಚಪಲವಾದಾಗಲೆಲ್ಲಾ 'ಇವರಾದರೂ ಬರಬಾರದೇ' ಎಂದು ಹಾರೈಸಿಕೊಳ್ಳುತ್ತಿದ್ದೆ. ಅದರ ವಿನಾ ಅವರ ಬಗ್ಗೆ ಬೇರೆ ಯಾವುದೇ ರೀತಿಯ ಭಾವನೆಗಳು ಇರಲಿಲ್ಲ. ಬದಲಾಗಿ ಗಾಬರಿಯಾಗುತ್ತಿತ್ತು. ಇವರು ಬಂದರೆ ನಾನು ಗಾಬರಿ-ಗಡಿಬಿಡಿಯಿಂದ ಏನೇ ಕೆಲಸ ಮಾಡಿದರೂ ಏನಾದರೊಂದು ಎಡವಟ್ಟು ಮಾಡಿರುತ್ತಿದ್ದೆ. ಆಗ ಅಮ್ಮ 'ಇವರ' ಎದುರಿನಲ್ಲೇ ಬೈಯ್ಯುತ್ತಿದ್ದಳು. ನನಗೆ ತುಂಬಾ ಅವಮಾನವೆನಿಸುತ್ತಿತ್ತು. ಆಗ 'ಇವರು ಯಾಕಾದ್ರೂ ಬಂದು ನನ್ನನ್ನು ಬಯ್ಯಿಸುತ್ತಾರೋ

---

* ವಣಕನ ಹಳ್ಳಿ ಅಂಚೆ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ.

ಎಂದು ಬೈದುಕೊಳ್ಳುತ್ತಿದ್ದೆ'. ಆಗೆಲ್ಲ ಇವರು "ಬಿಡು ಸುಂಕಮ್ಮಾ (ಇವರು ನಮ್ಮ ಅಮ್ಮನನ್ನು ಹೆಸರ್ಹಿಡಿದೇ ಕರೆಯುತ್ತಿದ್ದರು) ಸುಮ್ಮನೆ ಯಾಕೆ ಯಾವಾಗ್ಲೂ ಬೈಯ್ತಾ ಇರ್ತೀಯಾ" ಎಂದು ನಮ್ಮ ಅಮ್ಮನನ್ನು ಸುಮ್ಮನಿರಿಸುತ್ತಿದ್ದರು.

ಎಂ.ಎ. ಮುಗಿದ ನಂತರ ಅವರಿಗೆ ಮನೆಯಲ್ಲಿ ಮದುವೆ ಪ್ರಸ್ತಾವಗಳು ಬರಲಾರಂಭಿಸಿದವು. ಎಂ.ಎ. ಓದಿದ ಹುಡುಗ, ಸದ್ಗುಣಿ, ಲಕ್ಷಣವಂತ, ಇನ್ನೇನು ಬೇಕು?! ಹಲವಾರು "ಒಳ್ಳೆಯ ಸ್ಥಿತಿವಂತ" ಸಂಬಂಧಗಳು ಹುಡುಕಿಕೊಂಡು ಬರಲಾರಂಭಿಸಿದವು. ಇವರ ಅಮ್ಮ-ಅಣ್ಣಂದಿರೂ ಆ ಕಡೆ ಒಲವು ತೋರುತ್ತಿದ್ದರು. ಇಲ್ಲಿ ನಮ್ಮ ಅಮ್ಮನ ತಳಮಳ ಹೇಳತೀರದು. ನನಗೂ ಹಲವಾರು ಮದುವೆ ಪ್ರಸ್ತಾವಗಳು ಬರತೊಡಗಿದವು. ಅಪ್ಪ ಸ್ವಲ್ಪ ಉತ್ಸುಕರಾಗೇನೋ ಇದ್ದರು. ಆದರೆ ಅಮ್ಮನಿಗೆ ನನ್ನನ್ನು ತನ್ನ ಅಣ್ಣನ ಮಗನಿಗೇ ಕೊಡಬೇಕೆಂಬ ಇಚ್ಛೆ ತೀವ್ರವಾಗಿತ್ತು. ಆಕೆ ಹುಣಸೆಹಣ್ಣೋ, ಬೇಳೆಯೋ, ರಾಗಿಯೋ, ಮತ್ತೊಂದೋ ಒಟ್ಟಾರೆ ಏನೋ ಒಂದು ವಸ್ತುವನ್ನು ತೆಗೆದುಕೊಂಡು ಅಪ್ಪನಿಗೆ ಆನೇಕಲ್ ಸಂತೆಗೆ ಹೋಗಿ ಬರುವುದಾಗಿ ಹೇಳಿ ವಣಕನಹಳ್ಳಿಗೆ ಬರುತ್ತಿದ್ದಳು (ದೇವಗಾನಹಳ್ಳಿಯಿಂದ ಆನೇಕಲ್‌ಗೆ ಕಾಲ್ನಡಿಗೆಯಲ್ಲಿ ವಣಕನಹಳ್ಳಿ ಮೂಲಕವೇ ಹೋಗಬೇಕು). ಕೆಲವೊಮ್ಮೆ ಅಪ್ಪನಿಗೂ ತಿಳಿಸದೆ ಹಸುಗಳನ್ನು ಮೇಯಿಸುವಂತೆ ಬಂದು ಅವುಗಳನ್ನು ಹೊಲದಲ್ಲೋ, ಗದ್ದೆಯಲ್ಲೋ ಕಟ್ಟಿಹಾಕಿ ವಣಕನಹಳ್ಳಿಗೆ ಹೋಗಿ ಸಾಯಂಕಾಲವಾಗುವಷ್ಟರಲ್ಲಿ ಬಂದುಬಿಡುತ್ತಿದ್ದಳು. ಹೀಗೆ ವಾರದಲ್ಲಿ ಮೂರು-ನಾಲ್ಕು ದಿನ ತನ್ನ ಹುಟ್ಟಿದೂರಿಗೆ ಹೋಗಿ ತನ್ನ ತಂದೆ ತಿಮ್ಮರಾಯರೆಡ್ಡಿಯವರ ಬಳಿ ನನ್ನ ಮಗಳನ್ನು ನಿನ್ನ ಮೊಮ್ಮಗನಿಗೆ ತಂದುಕೋ ಎಂದು ಕಾಡಿ ಅವರಿಂದ ಭರವಸೆ ಪಡೆದು ಬರುತ್ತಿದ್ದಳು. ಇವರು ಆಗಾಗ ಪತ್ರ ಬರೆದು "ನೀವೇನೂ ಯೋಚನೆ ಮಾಡಬೇಡಿ, ರತ್ನಳನ್ನು ನಾನೇ ಮದುವೆಯಾಗುತ್ತೇನೆ. ಆಕೆಗೆ ಎಲ್ಲೂ ಸಂಬಂಧ ನೋಡಬೇಡಿ"ರೆಂದು ಹೇಳುತ್ತಿದ್ದರು. ಆದರೂ 'ಇವರ' ಮನೆಯಲ್ಲಿ ನನ್ನನ್ನು ಸೊಸೆಯನ್ನಾಗಿ ಮಾಡಿಕೊಳ್ಳುವುದು ಇಷ್ಟವಿರಲಿಲ್ಲವಾದ್ದರಿಂದ ಅಮ್ಮನಿಗೆ ತಳಮಳ. ಏನೂ ಓದದ ತನ್ನ ಮಗಳನ್ನು ಎಲ್ಲಿ ಮದುವೆಯಾಗುವುದಿಲ್ಲವೋ ಎಂಬ ಭಯ. ಅಂತಿಮವಾಗಿ ಇವರು ತಮ್ಮ ಮನೆಯವರ ವಿರೋಧದ ನಡುವೆಯೇ ಅವರನ್ನೆಲ್ಲ ಒಪ್ಪಿಸಿ ಮದುವೆ ನಿಶ್ಚಯಿಸಿದರು. ಮದುವೆಗೆ ಸಿದ್ಧತೆಗಳು ಭರದಿಂದ ಸಾಗುತ್ತಿದ್ದವು. ಏತನ್ಮಧ್ಯೆ ನನ್ನ ಆರೋಗ್ಯ ಸ್ಥಿತಿ ತೀವ್ರವಾಗಿ ಹದಗೆಟ್ಟಿತು. ನನಗೆ ಪಾರ್ಶ್ವವಾಯು ಬಡಿಯಿತು. ಸ್ವಲ್ಪ ದಿನ ನಾನು ಪ್ರಜ್ಞೆಯನ್ನೂ ಸಹ ಕಳೆದುಕೊಂಡು ಜೀವಂತ ಕಳೇಬರದಂತೆ ಇದ್ದೆನಂತೆ. ಎಲ್ಲೆಲ್ಲಿ ತೋರಿಸಿದರೂ ಪ್ರಯೋಜನವಾಗಿರಲಿಲ್ಲ. ಇದರಿಂದ ನಾನು ಬದುಕುವುದೇ ದುಸ್ತರ ಎನ್ನುವಂಥ ವಾತಾವರಣ ಸೃಷ್ಟಿಯಾಗಿತ್ತು. ಆಗ ಇವರ ಮನೆಯವರೆಲ್ಲ ನನ್ನನ್ನು ಮದುವೆಯಾಗದಿರುವಂತೆ ಅವರನ್ನು ತುಂಬಾ ಒತ್ತಾಯಿಸಿದರು. ಆ ರೋಗಿಷ್ಠೆಯನ್ನು ಮದುವೆಯಾಗುವುದು ಬೇಡ. ಬೇರೆ ಕಡೆ ಒಳ್ಳೆ ಸಂಬಂಧ ನೋಡೋಣವೆಂದು ಪುಸಲಾಯಿಸಿದರು. ಇವರು ಜಗ್ಗಲಿಲ್ಲ. ಕೊನೆಗೆ ನನ್ನ ಕಾಯಿಲೆ ಸ್ವಲ್ಪ ತಹಬದಿಗೆ ಬಂದ ನಂತರ ನಮ್ಮ ಮದುವೆಯಾಯಿತು. ಅಡಿಗೆಮನೆಯ ಗಂಧ-ಗಾಳಿಯೇ ಗೊತ್ತಿರದಿದ್ದ ನಾನು ತಾತ, ಅತ್ತೆ, ಅಕ್ಕ-ಭಾವ, ಮೂವರು ಮೈದುನಂದಿರು, ಆಳುಕಾಳುಗಳಿದ್ದ ಆ ತುಂಬು ಕುಟುಂಬಕ್ಕೆ ಇವರ ಹೆಂಡತಿಯಾಗಿ ಅಳುಕಿನಿಂದಲೇ ಕಾಲಿರಿಸಿದ್ದೆ. ಮದುವೆಯಾದಂದಿನಿಂದ ಇವರನ್ನು "ಮಾಮ" ಎಂದು ಕರೆಯುವಂತೆ ಎಲ್ಲರೂ ಸೂಚಿಸಿದ್ದರಿಂದ ಅಂದಿನಿಂದ "ಮಾವ" ಎಂದೇ ಕರೆಯುತ್ತಿದ್ದೇನೆ.

ಮದುವೆಯಾದಾಗ ಇವರು ಸರ್ಜಾಪುರದಲ್ಲಿದ್ದರು. ಒಂದೆರಡು ತಿಂಗಳ ನಂತರ ಗುಂಡ್ಲುಪೇಟೆಗೆ ವರ್ಗಾವಣೆಯಾಯಿತು. ನನ್ನನ್ನೂ ಗುಂಡ್ಲುಪೇಟೆಗೆ ಕರೆದುಕೊಂಡು ಹೋದರು. ದೇವಗಾನಹಳ್ಳಿಯಂಥ ಗ್ರಾಮವೇ ಪ್ರಪಂಚವೆಂದು ನಂಬಿ, ನಮ್ಮ ಊರ ಹೊಲ, ಗದ್ದೆ, ಆಲೆಮನೆಗಳನ್ನೇ ನನ್ನ ಕಾರ್ಯಕ್ಷೇತ್ರಗಳನ್ನಾಗಿ ಮಾಡಿಕೊಂಡು ಬೆಳೆದಿದ್ದ ನನಗೆ ಗುಂಡ್ಲುಪೇಟೆ ಯಾವುದೋ ಒಂದು ಪರದೇಶವಾಗಿ ಭಾಸವಾಯಿತು. ತೆಲುಗು ಭಾಷೆಯ ಹೊರತು ಅನ್ಯಭಾಷೆಯ ಒಂದಕ್ಷರವೂ ನನಗೆ ಗೊತ್ತಿರಲಿಲ್ಲ. ಅಂಥ ಹೊರ ಪ್ರಪಂಚದಲ್ಲಿ ಹೇಗಪ್ಪಾ ಜೀವನ ನಡೆಸುವುದು ಎಂಬ ಭಯ ಪ್ರಾರಂಭವಾಯಿತು. ಅಲ್ಲಿಂದ ಯಾರಿಗೂ ಹೇಳದೆ-ಕೇಳದೆ ನಮ್ಮ ಊರಿಗೆ ಓಡಿಹೋಗೋಣವೆನಿಸಿತು. ಅಲ್ಲಿ ಕೆಲವು ತಿಂಗಳು ನಾನು ಮೂಕಿಯಾಗಿದ್ದೆನೆಂದರೆ ಸುಳ್ಳಲ್ಲ!

ಈರುಳ್ಳಿ ಬೇಕಾದಾಗ ನಾನು ಈರುಳ್ಳಿ ಸಿಪ್ಪೆ ತೋರಿಸಿ ಗಾಡಿಯವನ ಬಳಿ ವ್ಯಾಪಾರ ಮಾಡುತ್ತಿದ್ದೆ. ಕೈಯಲ್ಲಿ ಸಂಜ್ಞೆ ಮಾಡಿ ಅವನ ಬಳಿ ವ್ಯವಹಾರ ಮಾಡುತ್ತಿದ್ದೆ. ಇಂಥ ನನ್ನನ್ನು ಅವರು ತಿದ್ದಿ, ತೀಡಿ ಈ ಮಟ್ಟಿಗೆ ರೂಪುಗೊಳಿಸಿದ್ದಾರೆ. ನನ್ನಲ್ಲಿದ್ದ ಕೀಳರಿಮೆ, ಭಯ, ಆತಂಕಗಳನ್ನು ನಿವಾರಿಸಿ, ನನ್ನಲ್ಲಿ ಧೈರ್ಯ ತುಂಬಿದ್ದಾರೆ. ನಾನು ವ್ಯಕ್ತಿಗತವಾಗಿ ಯೋಚಿಸುವಂತೆ ಮಾಡಿ, ನನ್ನಲ್ಲಿ ವ್ಯಾವಹಾರಿಕ ಜ್ಞಾನ ಬೆಳೆಸಿದ್ದಾರೆ.

ನನಗೆ ಅಡಿಗೆ ಮಾಡಲು ಬರುತ್ತಿರಲಿಲ್ಲವೆಂದು ಮೊದಲೇ ಹೇಳಿದೆ. ಒಮ್ಮೆ 'ಇವರು' ಗುಂಡ್ಲುಪೇಟೆಯಲ್ಲಿ ಉಪ್ಪಿಟ್ಟು ಮಾಡುವಂತೆ ಹೇಳಿದರು. ನನಗೋ ತಿಂದಿರುವುದು ಬಿಟ್ಟರೆ ಉಪ್ಪಿಟ್ಟಿಗೆ ರವೆ ಅನ್ನುವ ಒಂದು ಪದಾರ್ಥವನ್ನು ಹಾಕುತ್ತಾರೆ ಎನ್ನುವುದೂ ಗೊತ್ತಿಲ್ಲ. ಬರುವುದಿಲ್ಲವೆಂದು ಹೇಳಲು ನಾಚಿಕೆ, ಮುಜುಗರ, ಕೊನೆಗೆ ಹೊಟ್ಟೆನೋವೆಂದು ನಾಟಕವಾಡಿದೆ.

ಆಗ ಅವರೇ ಉಪ್ಪಿಟ್ಟು ಮಾಡಲು ಅಣಿಯಾದರು. ನಾನು ಕಲಿತುಕೊಳ್ಳಬೇಕಲ್ಲ! ಹೊಟ್ಟೆ ಹಿಡಿದುಕೊಂಡೇ ಅವರ ಬಳಿ ಹೋಗಿ ಅವರು ಮಾಡುವುದನ್ನೆಲ್ಲ ನೋಡಿಕೊಂಡೆ. ಆಗ ಇಷ್ಟೇನಾ ಎನ್ನಿಸಿತು. ಮತ್ತೊಮ್ಮೆ ಹುಣಸೆಹಣ್ಣಿನ ಚಿತ್ರಾನ್ನ ಮಾಡಲು ಹೇಳಿದರು. ನಾನು ಅದಕ್ಕೆ ತುಂಬಾ ನೀರು ಹಾಕಿ ರಸದಂತೆ ಮಾಡಿಬಿಟ್ಟಿದ್ದೆ. ಇಂಥ ಹಲವಾರು ಪ್ರಸಂಗಗಳ ನಂತರ ನನಗೆ ಅಡಿಗೆ ಬರುವುದಿಲ್ಲವೆಂಬ ನಿಜಸ್ಥಿತಿಯನ್ನು ಅವರಿಗೆ ಅರುಹಿದೆ. ನಂತರ ತಾವೇ ಮುಂದೆ ನಿಂತು ಅಡಿಗೆ ಮಾಡುವುದನ್ನು ಹೇಳಿಕೊಟ್ಟರು. ಈಗ ಎಲ್ಲರೂ ನನ್ನ ಅಡಿಗೆಯನ್ನು ಹೊಗಳುತ್ತಾರೆ. ಅದೆಲ್ಲಾ 'ಇವರಿಗೇ' ಮೀಸಲು.

ಅವರು ನನ್ನನ್ನು ಕೇವಲ ಅಡಿಗೆ ಮನೆಗೆ ಅಂಕಿತಗೊಳಿಸಲಿಲ್ಲ. ನನಗೆ ಅಕ್ಷರಾಭ್ಯಾಸ ಮಾಡಿಸಲು ತುಂಬ ಪ್ರಯತ್ನಪಟ್ಟರು. ಆದರೆ ನಾನು ಆಸಕ್ತಿ ತೋರಿಸಲಿಲ್ಲ. ಅವರು ಸಾಕಷ್ಟು ಪ್ರಯತ್ನಪಟ್ಟ ನಂತರ ಸುಮ್ಮನಾದರು. ಎಷ್ಟು ಹೆಣ್ಣುಮಕ್ಕಳಿಗೆ ಇಂಥ ಅವಕಾಶ ಸಿಗುತ್ತಿತ್ತು? ನನಗೆ ಅಂಥ ಸುವರ್ಣಾವಕಾಶ ಸಿಕ್ಕಿದ್ದರೂ ನಾನು ಅದನ್ನು ಕಳೆದುಕೊಂಡೆ, ಆ ಬಗ್ಗೆ ಈಗ ನನಗೆ ತುಂಬ ಖೇದವಾಗುತ್ತದೆ.

ಗುಂಡ್ಲುಪೇಟೆಯಿಂದ ಚೊಚ್ಚಲ ಹೆರಿಗೆಗೆಂದು ಮತ್ತೆ ನಮ್ಮ ಊರಿಗೆ ಬಂದೆ. ಮೊದಲ ಮಗು ಸ್ಮಿತಾ ಹುಟ್ಟಿದಳು. ಅಲ್ಲಿ ಇವರ ಕೆಲಸವೂ ಹೊರಟು ಹೋಯಿತು. ಮಗಳಿಗೆ ಒಂದು ವರ್ಷವಾದಾಗ ನಾನು ವಣಕನಹಳ್ಳಿಗೆ ಬಂದೆ. ಇವರು ಬೆಂಗಳೂರಿನಲ್ಲಿ ಸಣ್ಣಪುಟ್ಟ ಕೆಲಸ ಮಾಡಿಕೊಂಡಿದ್ದರು. ವಣಕನಹಳ್ಳಿಯಲ್ಲಿ ನನಗೆ ಸರಿಬೀಳಲಿಲ್ಲ. ಇವರು ಆಗಾಗ ಬಂದು ಧೈರ್ಯ ಹೇಳಿ ಧೈರ್ಯಗುಂದಬಾರದೆಂದು ತಿಳಿ ಹೇಳುತ್ತಿದ್ದರು. ಅವರ ಧೈರ್ಯದ ಮಾತುಗಳು ನನ್ನಲ್ಲಿ ಜೀವನೋತ್ಸಾಹ ತುಂಬುತ್ತಿದ್ದವು.

ಎರಡನೇ ಮಗಳು ರೂಪ ಹುಟ್ಟಿದ ನಂತರ ಮತ್ತೆ ಹೆಣ್ಣುಮಗುವನ್ನು ಹಡೆದಿದ್ದಾಳೆಂಬ ಅಪನಿಂದೆ ಹೆಚ್ಚಾಯಿತು. ಈ ಮಧ್ಯೆ ಕೌಟುಂಬಿಕ ಕಲಹಗಳ ಹಿನ್ನೆಲೆಯಲ್ಲಿ ನನಗೆ ಅಲ್ಲಿರುವುದು ಅಸಾಧ್ಯವಾಯಿತು. ನಮ್ಮ ಅತ್ತೆಯವರು ನನ್ನ ಸ್ಥಿತಿಯನ್ನು ನೋಡಲಾರದೆ ಸ್ವಲ್ಪ ದಿನದ ಮಟ್ಟಿಗೆ ತವರಿನಲ್ಲಾದರೂ ಬಿಟ್ಟುಬರುವಂತೆ ಇವರಿಗೆ ಸಲಹೆ ನೀಡಿದರು. ಇವರು ಒಪ್ಪಲಿಲ್ಲ. ಅವರಿಗೆ ಆ ಸಂದರ್ಭದಲ್ಲಿದ್ದಂತಹ ಕಷ್ಟಗಳಲ್ಲೂ ಬೆಂಗಳೂರಿನಲ್ಲಿ ಒಂದು ಚಿಕ್ಕ ಮನೆ ಮಾಡಿ, ನನ್ನನ್ನು ಕರೆದುಕೊಂಡು ಹೋದರು. ಕಷ್ಟದ ನಡುವೆಯೇ ಹೇಗೋ ಜೀವನ ಸಾಗುತ್ತಿತ್ತು. ಮಗ ಸನತ್ ಹುಟ್ಟಿದ ನಂತರ ಎರಡನೇ ತಮ್ಮ ಕೃಷ್ಣಾರೆಡ್ಡಿಯನ್ನು ಓದಿಸುವ ಸಲುವಾಗಿ ಬೆಂಗಳೂರಿಗೆ ಕರೆದುಕೊಂಡು ಬಂದರು. ಆಗಷ್ಟೆ ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕೆಲಸ ಸಿಕ್ಕಿತ್ತು. ಇದರ ಜೊತೆಗೆ ಬೆಳಗ್ಗೆ ಎದ್ದು ನಿಮ್ಹಾನ್ಸ್‌ನಲ್ಲಿ ವೈದ್ಯರಾಗಿದ್ದ ನಾರಾಯಣರೆಡ್ಡಿಯವರ ಮನೆಗೆ ಟ್ಯೂಷನ್ ಹೇಳಿಕೊಡಲು ಹೋಗುತ್ತಿದ್ದರು. ಪ್ರತಿದಿನ ಲಕ್ಕಸಂದ್ರದಿಂದ ಚಾಮರಾಜಪೇಟೆಗೆ ನಡೆದುಕೊಂಡೇ ಹೋಗಿ ನಡೆದುಕೊಂಡು ಬರುತ್ತಿದ್ದರು. ಇವೆಲ್ಲದರ ಜೊತೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶಾಸನಶಾಸ್ತ್ರ ತರಗತಿಗಳನ್ನು ತೆಗೆದುಕೊಳ್ಳಲಾರಂಭಿಸಿದರು. ಇಷ್ಟೆಲ್ಲ ಶ್ರಮಪಟ್ಟರೂ 'ಇವರ' ಸಂಪಾದನೆ ಆನೆ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯಾಗಿತ್ತು. ಆಗ ನಮ್ಮ ಪಾಲಿನದು ಕಷ್ಟದ ದಿನಗಳು. ಊರಿನಲ್ಲೂ ಆಸ್ತಿ ಪಾಲಾಗಿ ಊರಿನ ಮನೆಯ ನಿರ್ವಹಣೆಯೂ ಇವರ ಮೇಲೆ ಬಿತ್ತು. ತಮ್ಮಂದಿರ ಓದು, ಮೂವರು ಮಕ್ಕಳ ಪಾಲನೆ – ಜೀವನ ನಿರ್ವಹಣೆ ತುಂಬಾ ಕಷ್ಟವಾಗಿತ್ತು. ತಮ್ಮ ಆರೋಗ್ಯದ ಕಡೆ ಕಾಳಜಿ ನೀಡದೆ ಹಗಲು-ರಾತ್ರಿಯೆನ್ನದೆ ದುಡಿಯುತ್ತಿದ್ದರು. ನಮ್ಮ ತಾಯಿ ಹಣಕಾಸಿನ ಸಹಾಯ ಮಾಡಲು ಮುಂದಾದರೂ ಇವರು ನಿರಾಕರಿಸಿದರು. ಆದರೂ ನಮ್ಮ ಅಮ್ಮ, ಚಿಕ್ಕಮ್ಮ ಪಾರ್ವತಮ್ಮ, ನಮ್ಮ ಅಕ್ಕ ರಾಮಕ್ಕ ಮತ್ತು ಭಾವ ವೀರಾರೆಡ್ಡಿ, ಮತ್ತೊಬ್ಬ ಭಾವ ಭದ್ರಾರೆಡ್ಡಿ ಇನ್ನೂ ಮುಂತಾದವರು ತಾವು ಬೆಳೆಯುತ್ತಿದ್ದುದೆಲ್ಲವನ್ನೂ ನನಗೆ ಕೊರತೆಯಾಗದಂತೆ ತಂದು ಹಾಕುತ್ತಿದ್ದರು. ಕಷ್ಟಕಾಲದಲ್ಲಾದ ಇವರನ್ನು ಬಹುಶಃ ನಾನಾದರೂ ಮರೆಯುತ್ತೇನೇನೋ?! ಆ ಎಲ್ಲ ಆಪದ್ಬಾಂಧವರ ಬಗ್ಗೆ ಇವರಿಗೆ ಇನ್ನಿಲ್ಲದ ಅಭಿಮಾನ. ಇದಕ್ಕ ಅಳತೆಗೋಲಿಲ್ಲ!

ಕಾಲಾನಂತರ ಇವರಿಗೆ ಕರ್ನಾಟಕ ರಾಜ್ಯ ಗೆಜೆಟಿಯರ್‌ನಲ್ಲಿ ಕೆಲಸ ಸಿಕ್ಕಿತು. ಇದರೊಂದಿಗೆ ನನಗೆ ನಮ್ಮ ತಂದೆಯಿಂದ ಬಳುವಳಿಯಾಗಿ ಬಂದಿದ್ದ ಲೇವಾದೇವಿ ವ್ಯವಹಾರವನ್ನು ನಾನೂ ಸಣ್ಣ ಪ್ರಮಾಣದಲ್ಲಿ ಪ್ರಾರಂಭಿಸಿದೆ. ಇದು ಅವರಿಗೆ ಇಷ್ಟವಿರಲಿಲ್ಲ; ರಕ್ತಗತವಾಗಿ ಬಂದಿದ್ದ ಈ ವ್ಯವಹಾರವನ್ನು ನಾನೂ ಬಿಡಲಿಲ್ಲ. ದೇವರು ದಯಾಮಯ. ಇವರ ಗುಣಧರ್ಮಕ್ಕೆ ಆತನೂ ಸೋತನೆಂದು ಕಾಣುತ್ತದೆ. ಕಣ್ತೆರೆದು ನೋಡಲಾರಂಭಿಸಿದ.

ಗೆಜೆಟಿಯರ್ ಇಲಾಖೆಯಲ್ಲಿದ್ದಾಗ ಇವರಿಗೆ ಆಗಾಗ ಪ್ರವಾಸಗಳಿರುತ್ತಿದ್ದವು. ಕೆಲವೊಮ್ಮೆ ವಾರಗಟ್ಟಲೆ ಪ್ರವಾಸದಲ್ಲೇ ಕಾಲ ಕಳೆಯುತ್ತಿದ್ದರು. ಪ್ರಾರಂಭದಲ್ಲಿ ಒಬ್ಬಳೇ ಇದ್ದು ಮನೆ ನಿರ್ವಹಣೆ ಮಾಡುವುದು ಕಷ್ಟವಾಗುತ್ತಿತ್ತು. ಆದರೆ ಇವರು ಯಾವಾಗಲೂ ಧೈರ್ಯ ತುಂಬುತ್ತಿದ್ದುದರಿಂದ ನಾನು ಮನೋಸ್ಥೈರ್ಯವನ್ನು ಬೆಳೆಸಿಕೊಂಡೆ. ಎಲ್ಲ ಸಮಸ್ಯೆ-ಸವಾಲು-ಜವಾಬ್ದಾರಿಗಳನ್ನು ಒಬ್ಬಳೇ ನಿಭಾಯಿಸುವುದು ಕಲಿತುಕೊಂಡೆ. ಈ ಮನೋಭೂಮಿಕೆ ಮುಂದೆ ಅವರು ಹಂಪಿಗೆ

ಉಪನ್ಯಾಸಕರಾಗಿ ಹೋದಾಗ ನನಗೆ ನೆರವಾಯಿತು. ಆಗ ಮಕ್ಕಳೆಲ್ಲಾ ಇನ್ನೂ ಓದುತ್ತಿದ್ದುದರಿಂದ ಇಡೀ ಕುಟುಂಬ ಅವರ ಹಿಂದೆ ಹಂಪಿಗೆ ಹೋಗುವುದು ಸಾಧ್ಯವಿರಲಿಲ್ಲ. ಇವರು ನನ್ನನ್ನೇ ಸಲಹೆ ಕೇಳಿದರು. ನನಗೆ ಏನೊಂದೂ ಉತ್ತರಿಸಲಾಗಲಿಲ್ಲ. ಬೇಡವೆಂದರೆ ಅವರಿಗೆ ದೊರೆತ ಒಂದು ಒಳ್ಳೆಯ ಅವಕಾಶದಿಂದ ಅವರನ್ನು ವಂಚಿಸಿದಂತೆ, ಒಪ್ಪಿದರೆ, ಇಡೀ ಜವಾಬ್ದಾರಿ ನನ್ನ ನೊಗದ ಮೇಲೆ. ಆದರೂ ಅವರ ಮೇಲೆ ನನಗೆ ಅಚಲವಾದ ನಂಬಿಕೆಯಿತ್ತು, ದೃಢವಿಶ್ವಾಸವಿತ್ತು. ಬೆಂಗಳೂರಿನಲ್ಲಿದ್ದುಕೊಂಡೆ ಕರ್ನಾಟಕದ ಯಾವುದೋ ಒಂದು ಮೂಲೆಯಲ್ಲಿರುವವರಿಗೆಲ್ಲಾ ಇವರು ಸಹಾಯ ಮಾಡುತ್ತಾರಾದರೆ, ನಮ್ಮ ಜವಾಬ್ದಾರಿಯನ್ನು ಅವರು ಅಲ್ಲಿಂದಲೇ ಸಮರ್ಪಕವಾಗಿ ನಿರ್ವಹಿಸಲು ಕಷ್ಟವೇ? ನನ್ನವರ ಮೇಲೆ ನಾನಿಟ್ಟ ನಂಬಿಕೆ ಹುಸಿಯಾಗಲಿಲ್ಲ. ಈಗ್ಗೆ ಅವರು ಹಂಪಿಗೆ ಹೋಗಿ ಹದಿನಾಲ್ಕು ವರ್ಷಗಳು ಸಂದಿದ್ದರೂ, ಈ ಅವಧಿಯಲ್ಲಿ ಅವರು ತಮ್ಮ ದಣಿವರಿಯದ ಅಧ್ಯಯನಶೀಲತೆಯಲ್ಲಿ ಕುಟುಂಬದ ಜವಾಬ್ದಾರಿಯನ್ನು ಮರೆಯಲಿಲ್ಲ. ಮೂವರು ಮಕ್ಕಳಿಗೂ ಮದುವೆ ಮಾಡಿ ಮುಗಿಸಿದ್ದರಲ್ಲದೆ, ಬೆಂಗಳೂರಿನಲ್ಲೊಂದು ಸೂರು ಕಟ್ಟಿಕೊಂಡರು.

ನಮ್ಮಿಬ್ಬರದೂ ೩೭ ವರ್ಷಗಳ ಅರ್ಥಪೂರ್ಣ ಸಾರ್ಥಕ ಜೀವನ. ಅವರು ಬಹುತೇಕ ಪ್ರವಾಸವೆಂದು ಮತ್ತು ಹಂಪಿಯಲ್ಲಿ ಉಪನ್ಯಾಸಕರಾದ ನಂತರ ಮನೆಯಿಂದ ಹೊರಗಡೆ ಇದ್ದರೇ ವಿನಾ ನನ್ನ ಮನಸ್ಸಿನಿಂದಲ್ಲ. ಈಗಲೂ ಅವರು ಹಂಪಿಯಿಂದ ಬೆಂಗಳೂರಿಗೆ ಬಂದರೆ ಮನೆಯಲ್ಲಿರುವುದು ರಾತ್ರಿ ಸಮಯ ಮಾತ್ರ. ಏಕೆಂದರೆ ಅವರು ಬೆಳಗ್ಗೆ ಎದ್ದು ಸ್ನಾನ ಮಾಡಿ ತಿಂಡಿ ತಿಂದು ಒಂದು ಬ್ಯಾಗ್ ನೇತು ಹಾಕಿಕೊಂಡು ಹೊರಟರೆಂದರೆ ಮನೆಗೆ ಬರುವುದು ರಾತ್ರಿ ಊಟದ ಸಮಯಕ್ಕೇ. ಅದಕ್ಕೇ ನಾನು, "ನೀವು ಬಂದಿರುವುದು ಮನೆಗಲ್ಲ; ಲಾಡ್ಜ್‌ಗೆ" ಎಂದು ಯಾವಾಗಲೂ ರೇಗಿಸುತ್ತೇನೆ.

ಜೀವನವೆಂದರೇನೆಂಬ ಬಗ್ಗೆ ಅರಿವಿರದಿದ್ದ ನನ್ನನ್ನು ಪ್ರಾರಂಭದಲ್ಲಿ ಬಡತನ ಸ್ವಲ್ಪ ಮಟ್ಟಿಗೆ ಘಾಸಿಗೊಳಿಸಿತ್ತಾದರೂ, ಇವರ ಸಂಯಮಚಿತ್ತತೆ, ಸ್ಥಿತಪ್ರಜ್ಞತೆಗಳನ್ನು ನೋಡುತ್ತಾ ಬಡತನದ ವಾಸ್ತವವನ್ನು ಸಹಜವಾಗೇ ಸ್ವೀಕರಿಸಲು ಕಲಿತೆ. ತೆಲುಗು ಭಾಷೆಯ ಹೊರತು ಯಾವುದೇ ಭಾಷೆಯ ಗಂಧಗಾಳಿಯಿಲ್ಲದೆ, ಕೂಪಮಂಡೂಕವಾಗಿ ಬೆಳೆದಿದ್ದ ನನಗೆ ನನ್ನ ಅಂತರಂಗದ ಬಾಗಿಲಿನ ಮೂಲಕ ಬಾಹ್ಯ ಪ್ರಪಂಚವನ್ನು ದರ್ಶಿಸಲು ಮಾರ್ಗದರ್ಶನ ನೀಡಿದ್ದಾರೆ. ಪ್ರಪಂಚವೆಂದರೇನೆಂದು ತೋರಿಸಿಕೊಟ್ಟಿದ್ದಾರೆ. ಇವೆಲ್ಲಕ್ಕೂ ಮಿಗಿಲಾಗಿ ಕಷ್ಟಜೀವಿಗಳ ಆರ್ತದನಿಗಳಿಗೆ ಸ್ಪಂದಿಸಿ ದನಿಗೂಡಿಸಬೇಕಾದ ರೀತಿಯನ್ನು ಕಲಿಸಿಕೊಟ್ಟಿದ್ದಾರೆ. ಮುಖ್ಯವಾಗಿ ಎಂಥ ಪರಿಸ್ಥಿತಿಯಲ್ಲೂ ಸ್ಥಿತಪ್ರಜ್ಞತೆಯಿಂದ, ಸಮಚಿತ್ತತೆಯಿಂದ ಪರಿಸ್ಥಿತಿಯನ್ನು ಹೇಗೆ ನಿಭಾಯಿಸಬೇಕೆಂಬುದನ್ನು ತಮ್ಮದೇ ದೃಷ್ಟಾಂತಗಳ ಮೂಲಕ ಕಲಿಸಿ ತೋರಿಸಿಕೊಟ್ಟಿದ್ದಾರೆ. ಈಗ ಯಾರಾದರೂ ನನ್ನನ್ನು ಕಿಂಡಲ್ ಮಾಡಲೋ ಅಥವಾ ಹೆಮ್ಮೆಯಿಂದಲೋ "ಏನೂ ಓದದೇ ಇಷ್ಟು ಸಮರ್ಥವಾಗಿ ವ್ಯವಹರಿಸುತ್ತೀಯ. ಓದಿದ್ದರೆ ಭಾರತವನ್ನೇ ಆಳುತ್ತಿದ್ದೇಯೇನೋ" ಎಂದು ರೇಗಿಸುತ್ತಾರೆ. ಇಂಥ ಸಾಮರ್ಥ್ಯ ನನ್ನಲ್ಲಿದೆಯೆಂದು ಜನ ಗುರುತಿಸುತ್ತಾರಾದರೆ, ಅದರ ರೂವಾರಿ "ಇವರೇ". ಹಳ್ಳಿಗಾಡಿನ ಒಂದು ಮೊದ್ದನ್ನು ಅವರು ಈ ರೀತಿ ಕಂಡರಿಸಿ ರೂಪಿಸಿದ್ದಾರೆ. ಒಬ್ಬ ಮನುಷ್ಯನಿಗೆ ಏಳೇಳು ಜನ್ಮಗಳಿವೆ ಎಂಬ ನಂಬಿಕೆ ನಿಜವಾಗಿದ್ದಲ್ಲಿ ನನಗೆ ಇದೇ ಮೊದಲ ಜನ್ಮವಾಗಿ, ಉಳಿದ ಜನ್ಮಗಳಲ್ಲಿಯೂ ಇವರೇ ನನ್ನ ಪತಿಯಾಗಬೇಕೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.



# ಅಣ್ಣ – ನಾನು ಕಂಡಂತೆ

– ಸ್ಮಿತಾರೆಡ್ಡಿ*

ಅಣ್ಣನ ಬಗ್ಗೆ ಬರೆಯಬೇಕೆಂದುಕೊಂಡಾಗ ಕೂಡಲೇ ಬಾಲ್ಯದಿಂದ ಇಂದಿನವರೆಗೆ ನನ್ನಣ್ಣನ ಹಲವಾರು ಚದುರಿದ ಚಿತ್ರಗಳು ಅಸ್ಪಷ್ಟವಾಗಿ ನನ್ನ ಮನೋಪಟಲದಲ್ಲಿ ಹಾದು ಹೋಗುತ್ತವೆ. ಅವನ್ನು ಅಕ್ಷರ ರೂಪಕ್ಕೆ ತರುವುದು ಕಷ್ಟವೆನಿಸುತ್ತದೆ. ಆ ಚದುರಿರುವ ಚಿತ್ರಗಳಿಗೆ ಒಂದು ಚೌಕಟ್ಟನ್ನು ಹಾಕಿ ಅವರ ಇಡಿಯಾದ ವ್ಯಕ್ತಿತ್ವವನ್ನು ಬಿಡಿಬಿಡಿಯಾಗಿ ಕಟ್ಟಿಕೊಡುವ ಸಣ್ಣ ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ.

ನಮ್ಮ ಊರು ವಣಕನಹಳ್ಳಿ. ಇದು ಬೆಂಗಳೂರು ಜಿಲ್ಲೆಯ ಆನೇಕಲ್ ತಾಲ್ಲೂಕಿನಲ್ಲಿದೆ. ಸುಮಾರು ೨೦೦ರಷ್ಟು ಕುಟುಂಬಗಳಿರುವ ದೊಡ್ಡ ಊರು. ಇಲ್ಲಿಯೇ ಅಣ್ಣ ಮತ್ತು ನಾನು ಹುಟ್ಟಿ, ಬೆಳೆದು, ಓದಿದ್ದು. ನಂತರ ಅಣ್ಣ ನೌಕರಿ ನಿಮಿತ್ತ ಬೆಂಗಳೂರಿನಲ್ಲಿ ನೆಲೆ ನಿಂತರು. ಊರ ಹಿರಿಯರ ಪಾಲಿಗೆ ಅಣ್ಣ 'ಅಪ್ಪೋಜಿ'ಯಾದರೆ ಕಿರಿಯರೆಲ್ಲರಿಗೂ ಪ್ರೀತಿಯ 'ಅಪ್ಪೋಜಣ್ಣಯ್ಯ', 'ಅಣ್ಣಯ್ಯ'. ಹಾಗಾಗಿ ನಾವೂ ಸಹ ಅಣ್ಣನನ್ನು ಎಲ್ಲರಂತೆ ಅಪ್ಪೋಜಣ್ಣಯ್ಯ, ಅಣ್ಣಯ್ಯ ಎಂದು ಕರೆಯಲಾರಂಭಿಸಿದೆವು. ಅಣ್ಣನಿಗೆ ನಾವು ಮೂವರು ಮಕ್ಕಳು. ನಾನು ದೊಡ್ಡವಳು, ತಂಗಿ ರೂಪವತಿ ಹಾಗೂ ತಮ್ಮ ಸನತ್‌ಕುಮಾರ.

ಅಣ್ಣನೊಂದಿಗಿನ ನನ್ನ ಸಹಯೋಗ ಕೇವಲ ಆರು ವರ್ಷಗಳಷ್ಟೇ! ನಾನು ನಾಲ್ಕು ವರ್ಷದ ಮಗುವಿದ್ದಾಗಲೇ ನನ್ನನ್ನು ಅಜ್ಜಿಯ ಜೊತೆಯಿರಲು ಊರಿನಲ್ಲಿ ಬಿಟ್ಟರು. ಹಾಗಾಗಿ ನಾನು ಆಡಿ ಓದಿ ನನ್ನ ಬಾಲ್ಯ ಕಳೆದದ್ದು ಅಜ್ಜಿಯ ಮನೆಯಲ್ಲೇ. ಎಸ್.ಎಸ್.ಎಲ್.ಸಿ. ನಂತರ ಬೆಂಗಳೂರಿಗೆ ಬಂದೆ. ನಂತರ ನಾನು ಪ್ರಥಮ ಎಂ.ಎ.ಯಲ್ಲಿದ್ದಾಗ ಅಣ್ಣ ಉದ್ಯೋಗ ನಿಮಿತ್ತ ಹಂಪಿಗೆ ಹೋದರು. ಅವರು ನಿವೃತ್ತಿಯಾಗುವ ವೇಳೆಗೆ ನನಗೆ ಮದುವೆಯಾಗಿತ್ತು. ಇದೆಲ್ಲದರ ನಡುವೆ ನಾನು ಅವರೊಂದಿಗಿದ್ದ ಸುಸಮಯ ಬೆರಳೆಣಿಕೆಯಷ್ಟು ವರ್ಷಗಳು! (ಈ ಮಧ್ಯೆ ಶಾಲಾ ರಜ ದಿನಗಳಲ್ಲಿ ಬೆಂಗಳೂರಿಗೆ ಬಂದು ಹೋಗುತ್ತಿದ್ದೆ). ಹೀಗಾಗಿ ಅವರ ಜೀವನದ ಸಮಗ್ರ ಚಿತ್ರಣ ನನಗೆ ಕಾಣಸಿಗುತ್ತಿಲ್ಲವಾದರೂ ನನ್ನ ಜೀವನದ ಎಲ್ಲ ಸಂದರ್ಭಗಳಲ್ಲೂ ಅಣ್ಣನ ವ್ಯಕ್ತಿತ್ವ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ನನ್ನನ್ನು ಪ್ರಭಾವಿಸಿದೆ; ಪ್ರೇರಣಾತ್ಮಕವಾಗಿದೆ.

ನಾನು ಕಂಡ ಅಣ್ಣ ಸ್ನೇಹಜೀವಿ, ವಾತ್ಸಲ್ಯಮಯಿ, ಕಷ್ಟಜೀವಿ. ಲಿಂಗತಾರತಮ್ಯವಿಲ್ಲದೆ ಎಲ್ಲರನ್ನೂ ಸಮಾನವಾಗಿ ಕಾಣುವ ಸಮತಾವಾದಿ. ಅವೆಲ್ಲಕ್ಕಿಂತ ಮಿಗಿಲಾಗಿ ಮಾನವತಾವಾದಿ. ಮನುಷ್ಯತ್ವವನ್ನು ಮೀರಿ ಅವರೆಂದೂ ವರ್ತಿಸಿದವರಲ್ಲ. ಮನಸ್ಸಿನಲ್ಲಿ ಅಣ್ಣನ ಚಿತ್ರವನ್ನು ಕಲ್ಪಿಸಿಕೊಂಡರೆ ಅಲ್ಲಿ ಬಿಳಿ ಪಂಚೆ ಉಟ್ಟು, ಅದೇ ಬಣ್ಣದ ಬನಿಯನ್ ಹಾಕಿಕೊಂಡು ಚೇರ್ ಮೇಲೆ ಚಕ್ಕಳಮಕ್ಕಳ ಹಾಕಿಕೊಂಡು ಕುಳಿತು ಟೇಬಲ್ ಮೇಲೆ ಹಾಳೆ/ಪುಸ್ತಕ ಇಟ್ಟುಕೊಂಡಿರುವ ವ್ಯಕ್ತಿಯ ಚಿತ್ರ ಮೂಡುತ್ತದೆ. ಇದು ಈಗ ಸಾಮಾನ್ಯವಾಗಿ ಕಂಡುಬರುವ ರೂಪ. ಆದರೆ ನನಗೆ ಬಾಲ್ಯದಲ್ಲಿ ಕಂಡ ನನ್ನಣ್ಣನ ಚಿತ್ರ ನನಗೆ ತುಂಬ ಇಷ್ಟ. ಊರಲ್ಲಿ ನಮ್ಮ ಮನೆ ಪಾಲಾದ ನಂತರ ಅಜ್ಜಿಯ ಜೊತೆಗಿರಲು ನನ್ನನ್ನು ಬಿಟ್ಟರು. ಅವರು ಸಾಮಾನ್ಯವಾಗಿ ವಾರಕ್ಕೊಮ್ಮೆ ಊರಿಗೆ ಬರುತ್ತಿದ್ದರು. ಅವರು ಬರಿಗೈಲಿ ಎಂದೂ ಬರುತ್ತಿರಲಿಲ್ಲ. ಬಿಸ್ಕತ್ ಮತ್ತು ಮಿಕ್ಚರ್ ಅವರು ತರುತ್ತಿದ್ದ ಖಾಯಂ ತಿಂಡಿಗಳು. ಅವರು ಬರುವ ಸಮಯಕ್ಕೆ ಸರಿಯಾಗಿ ನಮ್ಮ ಬೀದಿಯ ಹತ್ತಾರು ಮಕ್ಕಳು ನಮ್ಮ ಮನೆಯ ಜಗುಲಿಯನ್ನೇರುತ್ತಿದ್ದರು. ಅಣ್ಣ ತಾನು ತಂದ ತಿಂಡಿಯನ್ನು ಭೇದ ಭಾವವೆಣಿಸದೆ ನನ್ನನ್ನೂ ಒಳಗೊಂಡಂತೆ ಎಲ್ಲರಿಗೂ ಸಮನಾಗಿ ಹಂಚುತ್ತಿದ್ದರು. ಎಲ್ಲರನ್ನೂ ಸಮಾನವಾಗಿ ಆದರಿಸಿ ಪ್ರೀತಿಸುವ ಗುಣ ಅವರಲ್ಲಿತ್ತು. ಅಣ್ಣ ತಂದ ತಿಂಡಿ ಪೊಟ್ಟಣಗಳು ಖಾಲಿಯಾಗುವವರೆಗೂ ಮಕ್ಕಳು ಅಲ್ಲಿಂದ ಕದಲುತ್ತಿರಲಿಲ್ಲ. ಅಜ್ಜಿ ಬಡಿಸಿದ ಊಟವನ್ನು ಸಂತೃಪ್ತಿಯಿಂದ ಮುಗಿಸಿ ಮಂಚದ ಮೇಲೆ ಕುಳಿತುಕೊಂಡು ಅವರ ಕಾಲಿನಷ್ಟಿದ್ದ ನನ್ನನ್ನು ನಿಲ್ಲಿಸಿಕೊಂಡೇ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ಹೇನು ಕುಕ್ಕುತ್ತಿದ್ದ ದೃಶ್ಯ... ಮರೆಯಲು ಸಾಧ್ಯವೇ? ಅವರ ತೊಡೆಯ ಮೇಲೆ ತಲೆಯಿರಿಸಿಕೊಂಡಿರುತ್ತಿದ್ದ ನನಗೋ ಅವರ ಸಾನ್ನಿಧ್ಯದಿಂದ ಏನೋ ಒಂದು ರೀತಿಯ ಸಂತೋಷ. ಅವರ್ಣನೀಯ ಆಪ್ಯಾಯಮಾನತೆ. ಹಲವೊಮ್ಮೆ ಎಷ್ಟು ಸಾರಿ ಹಾಗೇ ನಿದ್ರೆಗೆ ಜಾರುತ್ತಿದ್ದುದೂ

---

* ಭಾಷಾಂತರಕಾರರು, ಕರ್ನಾಟಕ ವಿಧಾನ ಪರಿಷತ್ತು ಸಚಿವಾಲಯ, ನಂ.೨೧೬ಬಿ, ವಿಧಾನಸೌಧ, ಬೆಂಗಳೂರು-೫೬೦೦೦೧.

ಉಂಟು. ಕೆಲವೊಮ್ಮೆ ನಿದ್ದೆಯಿಂದ ಎಚ್ಚರವಾಗುವ ವೇಳೆಗೆ ಅಪ್ಪ ಬೆಂಗಳೂರು ಸೇರಿರುತ್ತಿದ್ದರು... ನನ್ನ ಮಟ್ಟಿಗಂತೂ ಅದೊಂದು ಅನಿರ್ವಚನೀಯ ಸ್ಮೃತಿ. ಅದನ್ನು ವಿವರಿಸಲು ನನ್ನಲ್ಲಿ ಶಬ್ದಗಳಿಲ್ಲ. ಅಣ್ಣನ ತೊಡೆಯ ಮೇಲೆ ತಲೆಯಿಟ್ಟು ಹೇನು ಕುಕ್ಕಿಸಿಕೊಳ್ಳಲು ನನಗೆ ಇನ್ನೊಮ್ಮೆ ಬಾಲ್ಯ ಮರಳಿ ಬರಬಾರದೆ ಎಂದು ಹಪಹಪಿಸುವಂತಾಗುತ್ತದೆ. ಕಣ್ಣಂಚು ತೇವವಾಗಿ ಗಂಟಲು ಬಿಗಿಯುತ್ತದೆ.

ಅಣ್ಣ ನಮ್ಮ ಶಿಕ್ಷಣದ ಬಗ್ಗೆ ಎಂದೂ ತಲೆಕೆಡಿಸಿಕೊಂಡವರಲ್ಲ. ಅಂಕಾಧಾರಿತ ವಿದ್ಯಾಭ್ಯಾಸಕ್ಕಿಂತ ಸರ್ವಾಂಗೀಣ ಬೌದ್ಧಿಕ ವಿಕಾಸಕ್ಕೆ ಒತ್ತು ನೀಡುತ್ತಿದ್ದರು. ನಾನು ಊರಿನಲ್ಲಿದ್ದುದರಿಂದ ನನ್ನ ಮೇಲೆ ತಂಗಿ ತಮ್ಮನಿಗಿಂತ ತುಸು ಅಕ್ಕರೆ ಹೆಚ್ಚು. ನನಗಾಗಿ ಆಗಾಗ ಕತೆ ಪುಸ್ತಕಗಳನ್ನು ತಂದು ಕೊಡುತ್ತಿದ್ದರು. ಆದರೆ ಚಿಕ್ಕಪ್ಪನ ಹೆದರಿಕೆಯಿಂದ ನಾನು ಕತೆ ಪುಸ್ತಕಗಳನ್ನು ಓದುತ್ತಿರಲಿಲ್ಲ. ಆದರೆ ಅಣ್ಣ ಒಮ್ಮೆಯೂ ಓದುವಂತೆ ಒತ್ತಾಯಿಸಿದವರಲ್ಲ. ಬೆಂಗಳೂರಿನಲ್ಲಿ ತನ್ನ ನೆರೆಹೊರೆಯವರು ಸ್ನೇಹಿತರೆಲ್ಲ ತಮ್ಮ ಮಕ್ಕಳನ್ನು ಕಾನ್ವೆಂಟಿಗೆ ಸೇರಿಸಿದರೂ, ಅಣ್ಣ ನನ್ನನ್ನು ನಮ್ಮ ಊರಿನ ಸರ್ಕಾರಿ ಶಾಲೆಗೆ ಹಾಗೂ ರೂಪ–ಸನತ್‌ನನ್ನು ಕನ್ನಡ ಮಾಧ್ಯಮದ ಸಾಮಾನ್ಯ ಶಾಲೆಗೆ ಸೇರಿಸಿದರು. ಸಮಾಜದ ಕಟ್ಟಕಡೆಯ ವ್ಯಕ್ತಿಗೆ ಸಿಗಬಹುದಾದ ಸಾಮಾನ್ಯ ಶಿಕ್ಷಣವೇ ತನ್ನ ಮಕ್ಕಳು ಪಡೆದು ಬೆಳೆಯಲೆಂಬುದು ಅವರ ಅಭೀಪ್ಸೆ. ಏಕೈಕ ಮಗ ಸನತ್‌ನನ್ನಾದರೂ ಕಾನ್ವೆಂಟಿಗೆ ಸೇರಿಸುವಂತೆ ಬಂಧುಗಳು ಸಲಹೆ ನೀಡಿದರೂ, ತನ್ನ ಹೆಣ್ಣುಮಕ್ಕಳಿಗೊಂದು ರೀತಿಯ ವಿದ್ಯಾಭ್ಯಾಸ ಅವನಿಗೊಂದು ರೀತಿಯ ಶಿಕ್ಷಣ ಕೊಡಿಸಲಾರೆನೆಂದು ಹೇಳಿ ಅವನನ್ನೂ ಕನ್ನಡ ಮಾಧ್ಯಮ ಶಾಲೆಗೆ ಸೇರಿಸಿದರು. ಅವರೆಂದೂ ಲಿಂಗತಾರತಮ್ಯವನ್ನು ತೋರಲಿಲ್ಲ. ಮೂವರು ಮಕ್ಕಳನ್ನೂ ಸಮಾನವಾಗಿಯೇ ಕಂಡವರು. ಅವರು ಬಲವಂತವಾಗಿ ಯಾರ ಮೇಲೂ ತಮ್ಮ ಅಭಿಪ್ರಾಯವನ್ನು ಹೇರುತ್ತಿರಲಿಲ್ಲ. ಹಾಗೆಯೇ ನಮ್ಮ ಓದಿನ ಬಗ್ಗೆಯೂ ವಿಚಾರಿಸಿಕೊಂಡವರಲ್ಲ. ಯಾರಾದರೂ 'ನಿಮ್ಮ ಮಕ್ಕಳು ಏನು ಓದುತ್ತಿದ್ದಾರೆ' ಎಂದರೆ, ಅವರು ಕೆಲವೊಮ್ಮೆ ತಡವರಿಸುತ್ತಿದ್ದೂ ಉಂಟು. ನಮಗೂ ಇಂಥದ್ದೇ ಓದಬೇಕೆಂದು ತಾಕೀತು ಮಾಡಲಿಲ್ಲ.

ಎಸ್.ಎಸ್.ಎಲ್.ಸಿ. ಮುಗಿದ ನಂತರ ಪಿ.ಯು.ಸಿ. ಪದವಿಯನ್ನು ನಾನು ಕನ್ನಡ ಮಾಧ್ಯಮದಲ್ಲೇ ಓದುತ್ತೇನೆಂದು ಹೇಳಿದಾಗ ಸಂತೋಷವಾಗಿಯೇ ಸಮ್ಮತಿಸಿದ್ದರು. ಪದವಿಯ ನಂತರ ಎಂ.ಎ. ಮಾಡಬೇಕೆಂದು ನಾನು ಕೇಳಿದಾಗ ಅವರು ಅರ್ಥಶಾಸ್ತ್ರ ತೆಗೆದುಕೊಳ್ಳುವಂತೆ ಸೂಚಿಸಿದರು. ನಾನು ಕನ್ನಡ ಎಂ.ಎ. ಬಗ್ಗೆ ಒಲವು ತೋರಿಸಿದಾಗ ಅದನ್ನು ನಿರಾಕರಿಸಲಿಲ್ಲ. ರೂಪ–ಸನತ್‌ರ ವಿಚಾರದಲ್ಲೂ ಅವರವರ ಇಷ್ಟಕ್ಕೇ ಬಿಟ್ಟುಬಿಟ್ಟರು. ಒಮ್ಮೊಮ್ಮೆ ಅನಿಸುತ್ತದೆ, ನಮ್ಮ ಓದಿನ ಬಗ್ಗೆ ಅಣ್ಣ ನಿರ್ಲಿಪ್ತ ಭಾವ ತೋರದೇ ಇದ್ದಿದ್ದರೆ ನಾವು ಇಂಗ್ಲಿಷ್ ಭಾಷೆಯಲ್ಲಿ ಸಂವಹನ ಮಾಡುವ ಸಂದರ್ಭ ಬಂದಾಗ ಕೀಳರಿಮೆಯಿಂದ ಬಳಲುತ್ತಿರಲಿಲ್ಲವೆಂದು. ನಮ್ಮಣ್ಣ ನಮಗೆ ಪ್ರತಿಷ್ಠಿತ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸವನ್ನು ಕೊಡಿಸಿದ್ದಿದ್ದರೆ, ಬಹುಶಃ ನಾವು ಕಾರ್ಪೋರೇಟ್ ಸಂಸ್ಥೆಗಳಲ್ಲಿ ಕಳೆದು ಹೋಗುತ್ತಿದ್ದೆವೋ ಏನೋ ! ಆದರೆ ಅಣ್ಣ ನಮ್ಮನ್ನು Individual ಆಗಿ ಬೆಳೆಸಿ ಆ ಮೂಲಕ ನಮ್ಮಲ್ಲಿ ಸ್ವತಂತ್ರ ವ್ಯಕ್ತಿತ್ವ ರೂಪುಗೊಳ್ಳಲು ಕಾರಣರಾಗಿದ್ದಾರೆ. ನಮ್ಮಲ್ಲಿ ಉತ್ತಮ ಸಂಸ್ಕಾರ ನೆಲೆಗೊಳ್ಳಲು ಮಾನವೀಯತಾ ಮನೋಭಾವವನ್ನು ಬೆಳೆಸಿಕೊಳ್ಳಲು ಅವಕಾಶ ಕಲ್ಪಿಸಿದ್ದಾರೆ.

ನನ್ನ ಮಟ್ಟಿಗಂತೂ ನನ್ನಣ್ಣನೇ ನನ್ನ ಶಿಲ್ಪಿ. ಬಾಲ್ಯದಿಂದಲೇ ಅಣ್ಣನ ಪ್ರತ್ಯಕ್ಷ ಹಾಗೂ ಪರೋಕ್ಷ ವ್ಯಕ್ತಿತ್ವಕ್ಕೆ ಮಾರುಹೋದವಳು ನಾನು. ಊರಿನ ಯಾರೇ ಆಗಲೀ ಅಣ್ಣನ ಬಗ್ಗೆ ಕೆಟ್ಟದಾಗಿ ಹೇಳಿದ್ದನ್ನು ನಾನು ಕೇಳಲೇ‌ಇಲ್ಲ... ಇಲ್ಲ. ನಮ್ಮ ಊರಿನ ಎಷ್ಟೋ ಜನರು ನ್ಯಾಯ ಪಂಚಾಯ್ತಿಗಾಗಿ ಅಣ್ಣನನ್ನು ಕರೆಸುತ್ತಿದ್ದುದುಂಟು. ಅಜ್ಜಿಯ ಬಳಿ ಬರುತ್ತಿದ್ದವರೆಲ್ಲ 'ದೇವರಂಥ ಮಗ ನಿನಗಿದ್ದಾನೆ ಜಿಡಮ್ಮ, ನಿನಗೆ ಯೋಚನೆಯೇ ಇಲ್ಲ' ಎಂದು ಹೇಳುವಾಗ ಅಜ್ಜಿಯ ಮುಖ ನೋಡಬೇಕು! ಆಕೆಯ ಮುಖದಲ್ಲಿ ಅದೆಂಥ ಸಂತೃಪ್ತಿ–ಸಾರ್ಥಕತೆಯ ಭಾವ ಮಿಂಚುತ್ತಿತ್ತು!? ಆಗೆಲ್ಲಾ ನಾನೂ ನಮ್ಮಣ್ಣನಂತಾಗಬೇಕೆಂದು ಬಯಸುತ್ತಿದ್ದೆ. ನಾನು ಶಾಲೆಯಲ್ಲಿ ಓದುವಾಗ ನಮ್ಮ ಹೆಡ್ ಮಾಸ್ತರರಾದ ವೀರಭದ್ರಪ್ಪನವರು ನನ್ನನ್ನು ಬೈಯುವಾಗ 'ಏ ಕೊಂಡ, (ಬಹುತೇಕ ನನ್ನ ಸಹಪಾಠಿಗಳಿಗೂ, ಅವರ ಅಪ್ಪಂದಿರಿಗೂ ಅವರೇ ಗುರುಗಳಾಗಿದ್ದಿದ್ದರಿಂದ ಮಕ್ಕಳನ್ನು ಅವರ ಅಪ್ಪಂದಿರ ಹೆಸರಿನಲ್ಲಿ ಗುರುತಿಸುತ್ತಿದ್ದರು.) ಅಂಥ ಅಪ್ಪನ ಹೊಟ್ಟೆಯಲ್ಲಿ ಹುಟ್ಟಿದ್ದೀಯ. ನೀನೂ ನಿನ್ನಪ್ಪನಂತಾಗಬೇಕೆ'ಂದು ಹೇಳುತ್ತಿದ್ದರು. ಹೀಗಾಗಿ ಅಣ್ಣನ ವ್ಯಕ್ತಿತ್ವ ಬೇರೆ ಬೇರೆಯವರ ಪ್ರಶಸ್ತಿ/ಪ್ರಶಂಸೆಗಳ ಮೂಲಕ ನನಗರಿವಿಲ್ಲದೆಯೇ ನನ್ನಲ್ಲಿ ಅಂತರ್ಗತವಾಗಿ 'ನಾನೂ ನನ್ನಪ್ಪನಂತಾಗಬೇಕು' ಎಂಬ ಕನವರಿಕೆ ಪ್ರಾರಂಭವಾಯಿತು. ಯಾರಾದರೂ 'ದೊಡ್ಡವಳಾಗಿ ಏನ್ಮಾಡ್ತೀಯ' ಎಂದರೆ 'ನನ್ನಣ್ಣನಂತೆ ಎಂ.ಎ. ಮಾಡಿ ಲೆಕ್ಚರರ್ ಆಗ್ತೀನಿ' ಎಂದು ತಕ್ಷಣ ಉತ್ತರಿಸುತ್ತಿದ್ದೆ. ಹೀಗೆ ಅಣ್ಣನ ಮೂಲಕ ನನಗೊಂದು ಗುರಿ ಸಿಕ್ಕಿತು. ಆ ಗುರಿಗೊಂದು ಖಚಿತ ಆಕಾರವಿರಲಿಲ್ಲ. ಏಕೆಂದರೆ ಎಂಥ ಎಂ.ಎ. ಮಾಡಬೇಕೆಂದು ಯೋಚಿಸಿರಲಿಲ್ಲ. ಕೊನೆಗೆ ಶಾಸನಶಾಸ್ತ್ರ ಆಯ್ಕೆ ಮಾಡಿಕೊಂಡೆ. ಇದಕ್ಕೂ ಅಣ್ಣನೇ ಸ್ಫೂರ್ತಿ. ನಾನು ಎಸ್.ಎಸ್.ಎಲ್.ಸಿ. ನಂತರ ಬೆಂಗಳೂರಿಗೆ ಬಂದೆ. ಅಣ್ಣ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶಾಸನ ಶಾಸ್ತ್ರ ತರಗತಿ ತೆಗೆದುಕೊಳ್ಳುತ್ತಿದ್ದರು. ಉತ್ತರ

ಪತ್ರಿಕೆಗಳನ್ನು ಮೌಲ್ಯಮಾಪನಕ್ಕೆಂದು ಮನೆಗೆ ತರುತ್ತಿದ್ದರು. ಉತ್ತರ ಪತ್ರಿಕೆಗಳಲ್ಲಿದ್ದ ವಿಚಿತ್ರವಾದ ಅಕ್ಷರಗಳು ನನ್ನನ್ನು ಆಕರ್ಷಿಸಿದವು. ಅಣ್ಣನಿಗೆ ಏನೆಂದು ಕೇಳಿದಾಗ ಅವರು ನಮ್ಮ ಕನ್ನಡ ಅಕ್ಷರಗಳು ಈಗಿನ ರೂಪ ಪಡೆಯುವುದಕ್ಕೆ ಮುನ್ನ ಈ ಅವಸ್ಥಾಂತರಗಳನ್ನೆಲ್ಲ ದಾಟಿ ಬಂದಿದೆಯೆಂದು ವಿವರಿಸಿದ್ದರು. ಈಗ ಗುರಿಯೂ ನಿಶ್ಚಿತವಾಗಿತ್ತು. ಎಂ.ಎ. ಕನ್ನಡ ಅದರಲ್ಲೂ ಶಾಸನಶಾಸ್ತ್ರ ತೆಗೆದುಕೊಳ್ಳಬೇಕೆಂದು ನಿರ್ಧರಿಸಿದೆ. ನಂತರ ನಾನೂ ಶಾಸನಶಾಸ್ತ್ರ ತರಗತಿಗಳಿಗೆ ಸೇರಬೇಕೆಂದು ಹಠ ಹಿಡಿದೆ. ಅಣ್ಣ ಪಿ.ಯು.ಸಿ. ಮುಗಿಯಲಿ ನಂತರ ನೋಡೋಣವೆಂದರು. ಪ್ರಥಮ ಬಿ.ಎ. ನಲ್ಲಿರುವಾಗ ನನ್ನ ಒತ್ತಾಯಕ್ಕೆ ಮಣಿದು ಸೇರಿಸಿದರು. ನಾನು ಶಾಸನಶಾಸ್ತ್ರ ತರಗತಿಗಳಿಗೆ ಆದ್ಯತೆ ನೀಡಿ ನನ್ನ ಬಿ.ಎ. ಪದವಿಯ ಪ್ರಥಮ ವರ್ಷದಲ್ಲೇ ಇಂಗ್ಲಿಷ್‌ನಲ್ಲಿ ಅನುತ್ತೀರ್ಣಳಾದೆ. ಅಣ್ಣ ಬೈಯಲಿಲ್ಲ. ಯಾಕೆ ಹೀಗಾಯ್ತು ಎನ್ನಲಿಲ್ಲ. ಬದಲಾಗಿ, 'ಹೇಗೋ ವ್ಯವಸ್ಥೆಯಿದೆ. ಅಕ್ಟೋಬರ್‌ನಲ್ಲಿ ಕಟ್ಟು, ಪಾಸು ಮಾಡಿಕೋ' ಎಂದು ಹೇಳಿ ಸುಮ್ಮನಾದರು. ದ್ವಿತೀಯ ಬಿ.ಎ.ನಲ್ಲಿ ಎರಡನೇ ವರ್ಷದ ಶಾಸನಶಾಸ್ತ್ರ ತರಗತಿಗೆ ಸೇರಿದೆ. ಆ ವರ್ಷ ಶಾಸನಶಾಸ್ತ್ರ ತರಗತಿಗಳಿಗೆ ಕಡಿಮೆ ಗಮನ ನೀಡಿ ಪದವಿ ಕಡೆ ಗಮನ ಹರಿಸುವಂತೆ ಸಲಹೆ ನೀಡಿದರು. ಅವರ ಸಲಹೆಯಂತೆ ವಿದ್ಯಾಭ್ಯಾಸದ ಕಡೆಗೆ ಹೆಚ್ಚಿನ ಗಮನ ನೀಡಿದೆ. ಆಗ ಶಾಸನಶಾಸ್ತ್ರ ತರಗತಿಯ ಗೆಳೆಯರಾದ ಎಂ.ಜಿ. ಮಂಜುನಾಥ, ಹೊ.ನ.ನೀಲಕಂಠೇಗೌಡ, ತಮಿಳ್‌ಸೆಲ್ವಿ, ಸಾಸಲು ವಿಶ್ವನಾಥ, ಚಕ್ರಪಾಣಿ ಮುಂತಾದವರ ಒಡನಾಟದಿಂದ ಶಾಸನ ಕ್ಷೇತ್ರದ ಬಗೆಗಿನ ಆಸಕ್ತಿಯ ಜೊತೆಗೆ ಪುರಾತತ್ತ್ವ ಕ್ಷೇತ್ರದೆಡೆಗೂ ಆಕರ್ಷಿತಳಾದೆ. ನಮ್ಮ ಊರು ವಣಕನಹಳ್ಳಿಯ ಬಳಿ ಒಂದು ಪ್ರಾಗೈತಿಹಾಸಿಕ ನೆಲೆಯಿದೆ ಎಂಬುದನ್ನು ಗೆಜೆಟಿಯರ್‌ನಲ್ಲಿ ಓದಿ ಕ್ಷೇತ್ರಕಾರ್ಯ ಕೈಗೊಂಡೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನಗೆ ಇತಿಹಾಸ ಪೂರ್ವ ಕಾಲದ ಎರಡು ಟೆರಕೋಟಾ ಶಿಲ್ಪಗಳು (ಜೇಡಿಮಣ್ಣಿನ ಗೊಂಬೆಗಳು), ಒಂದು ಮೃತ್ಪಾತ್ರೆ ಹಾಗೂ ಕಬ್ಬಿಣದ ಕೈಗೊಡಲಿ ದೊರೆತವು. ಅವುಗಳನ್ನು ತಂದು ಅಣ್ಣನಿಗೆ ತೋರಿಸಿದಾಗ ಅಣ್ಣ 'ನನಗಿಂತ ನೀನೇ ವಾಸಿ' ಎಂದರಷ್ಟೆ. ನನಗೆ ಸ್ವರ್ಗಕ್ಕೆ ಮೂರೇ ಗೇಣು!!! ಏಕೆಂದರೆ ಅಣ್ಣ ನಾವು ಮಕ್ಕಳು ಏನೇ ಮಾಡಿದರೂ ಅದು ಕೆಟ್ಟದಿರಲಿ ಅಥವಾ ಯಾವುದೇ ಸಾಧನೆಯಿರಲಿ ಮುಖತಃ ಬೈದದ್ದು ಇಲ್ಲ. ಹೊಡೆದದ್ದೂ ಇಲ್ಲ, ಹೊಗಳಿದ್ದೂ ಇಲ್ಲ. ಅವರದು ಯಾವಾಗಲೂ ನಿರ್ಲಿಪ್ತಭಾವ. ಹಾಗಾಗಿ ಅಣ್ಣನ ಮಾತೇ ನನಗೆ ದೊಡ್ಡ ಪ್ರಶಸ್ತಿ. ನಾನು ಏನನ್ನಾದರೂ ಸಾಧಿಸಬೇಕು ಎಂಬುದಕ್ಕೆ ಅವರ ಮಾತುಗಳು ಸ್ಫೂರ್ತಿಯಾದವು. ಆದರೂ ಒಮ್ಮೊಮ್ಮೆ ಅನ್ನಿಸುತ್ತದೆ. ಅಣ್ಣನ ಹಿರಿಮೆ, ತಜ್ಞತೆ, ಸಾಧನೆಗಳೇ ಅವರ ಮತ್ತು ನಮ್ಮಗಳ (ಮಕ್ಕಳ) ಸುಲಭ ಸಂವಹನಕ್ಕೆ ತೊಡರಾಯಿತೇನೋ ಎಂದು. ಏಕೆಂದರೆ ಎಲ್ಲರೂ ನಮ್ಮನ್ನು ನಿಮ್ಮಪ್ಪನಂತಾಗಿ, ನಿಮ್ಮಪ್ಪನಂತಾಗಿ ಎಂದು ಹೇಳುವ ಮೂಲಕ ಅವರೊಬ್ಬ ಸಾಧಕ ಪುರುಷ, ದೊಡ್ಡ ವಿದ್ವಾಂಸ, ಅಸಾಧಾರಣ ವ್ಯಕ್ತಿ ಎಂಬ ಭಾವ ನಮ್ಮಲ್ಲಿ ಒಡ ಮೂಡಲಾರಂಭಿಸಿತು. ಅಲ್ಲದೆ ನಾವು ನಮ್ಮಣ್ಣನಂತಾಗಲು ಸಾಧ್ಯವಾಗಲಿಲ್ಲವಲ್ಲಾ ಎಂಬ ಅಳುಕು ಕಾಡಲಾರಂಭಿಸಿತು. ಹಾಗಾಗಿ ಅಣ್ಣನೊಂದಿಗಿನ ಸಂವಹನದಲ್ಲಿ ಒಂದು ನಿರ್ದಿಷ್ಟ ಅಂತರ ಕಾಯ್ದುಕೊಂಡು ಬಂದೆವೇನೋ ಎಂದೆನ್ನಿಸುತ್ತದೆ.

ಅಣ್ಣ ಸದಾ ಕ್ರಿಯಾಶೀಲ... ಏನಾದರೊಂದು ಚಟುವಟಿಕೆಯಲ್ಲಿ ನಿರತರಾಗಿರುತ್ತಾರೆ. ಅವರು ಮನೆಯಲ್ಲಿದ್ದರೂ ಸುಮ್ಮನೆ ಕುಳಿತು ಕಾಲಹರಣ ಮಾಡುವುದಕ್ಕೆ ನಮಗೆ ಅಳುಕಾಗುತ್ತದೆ. ಎಲ್ಲ ಕೆಲಸಗಳಲ್ಲೂ ಅವರದು ಬತ್ತದ ಉತ್ಸಾಹ. ಓದುವುದೋ, ಬರೆಯುವುದೋ ಗಿಡಗಳ ಪಾಲನೆಯಲ್ಲಿ ತೊಡಗುವುದೋ... ಏನಾದರೊಂದು ಕೆಲಸ ಇದ್ದೇ ಇರುತ್ತದೆ. ಅವರ ಶಾಸನ-ವಾಸ್ತುಶಿಲ್ಪ ಕ್ಷೇತ್ರದ ನಂತರ ಹೆಚ್ಚು ಇಷ್ಟ ಪಡುವ ಮತ್ತೊಂದು ಕ್ಷೇತ್ರ ಕೃಷಿ ಮತ್ತು ಪಶುಪಾಲನೆ. ಬಹುಶಃ ಅವರು ಎಂ.ಎ. ಮಾಡದಿದ್ದರೆ ಅತ್ಯುತ್ತಮ ಮಣ್ಣಿನ ಮಗನಾಗಿ ರೂಪುಗೊಳ್ಳುತ್ತಿದ್ದರೇನೋ. ಅವರು ಊರಿಗೆ ಬಂದರೆ ಹೊಲಗದ್ದೆಗಳಿಗೆ ಭೇಟಿ ಕೊಡದೆ ಹಿಂತಿರುಗುತ್ತಿರಲಿಲ್ಲ. ತಾವು ನೆಟ್ಟು ಬೆಳೆಸಿದ ಗಿಡಗಳ ಬಳಿ ಹೋಗಿ ಅವುಗಳನ್ನು ಮುಟ್ಟಿ, ಅವುಗಳೊಂದಿಗೆ ಸಂವಾದ ನಡೆಸಿ ಹಿಂತಿರುಗುತ್ತಿದ್ದರು. ತೋಟದಲ್ಲಿ ಏಲಕ್ಕಿ-ಕಾಫಿ ಗಿಡಗಳನ್ನು ನೆಟ್ಟಿದ್ದರು. ಪ್ರತಿ ಭಾನುವಾರವೂ ಅವುಗಳಿಗೆ ನೀರುಣಿಸದೆ ಬೆಂಗಳೂರಿಗೆ ಮರಳುತ್ತಿರಲಿಲ್ಲ. ಕಾಫಿ ಏಲಕ್ಕಿಯಂಥ ಮಲೆನಾಡಿನ ಗಿಡಗಳಿಗೆ ವಾರಕ್ಕೊಮ್ಮೆ ನೀರುಣಿಸಿದರೆ ಸಾಕಾದೀತೇ? ಕೆಲವೇ ವರ್ಷಗಳಲ್ಲಿ ಅವು ಒಣಗಿ ಹೋದವು. ಇನ್ನೊಂದು ಕಲ್ಲುಗುಡ್ಡದ ಹೊಲದಲ್ಲಿ ಗೋಡಂಬಿ, ಹುಣಸೆ, ಬೇವು, ಎಲಚಿ ಮರಗಳನ್ನು ನೆಟ್ಟಿದ್ದರು. ಅವು ಬೇರುಬಿಟ್ಟು ಬೆಳೆಯುವವರೆಗೆ ಪಕ್ಕದಲ್ಲಿದ್ದ ಕಂಜಿಕೆರೆಯಿಂದ ನೀರು ತಂದು ಹಾಕುತ್ತಿದ್ದರು. ಆದರೂ ಸರಿಯಾದ ಆರೈಕೆಯಿಲ್ಲದೆ ಕೆಲವು ಮರಗಳು ಒಣಗಿ ಹೋದವು. ಶಾಲೆಗೆ ಹೋಗುವ ಮುನ್ನ ಪ್ರತಿದಿನ ಅವುಗಳಿಗೆ ನೀರು ಹಾಕಬೇಕೆಂದು ಅಣ್ಣ ನನಗೆ ತಾಕೀತು ಮಾಡಿದ್ದರೂ ನಾನದನ್ನು ಪಾಲಿಸುತ್ತಿರಲಿಲ್ಲ. ಆಗ ಅಣ್ಣ ಬೈದಿದ್ದರು. ಸ್ವಂತ ಊರಿನಲ್ಲಿ ಮಾತ್ರವಲ್ಲ ಯಾರೇ ನೆಂಟರಿಷ್ಟರ ಮನೆಗೆ ಹೋದರೂ, ಅವರ ಹೊಲ ತೋಟಗಳಿಗೆ ಭೇಟಿ ನೀಡದೆ ಬರುತ್ತಿರಲಿಲ್ಲ. ಈಗಲೂ ಊರಿನ ತೋಟದಲ್ಲಿನ ಎಲಚಿ ಹಣ್ಣು, ಕಲ್ಲುಗುಡ್ಡ ಹೊಲದ ಹುಣಸೇ ಹಣ್ಣು ಬಳಸುವಾಗಲೆಲ್ಲಾ ನನ್ನಣ್ಣನ ಪರಿಶ್ರಮ ನೆನಪಾಗಿ ಸಾರಿನ ಸ್ವಾದ ಮತ್ತಷ್ಟು ಹೆಚ್ಚಾಗಿ ಇನ್ನೆರಡು ತುತ್ತು ಹೆಚ್ಚಾಗಿ ಹೊಟ್ಟೆ ಸೇರುತ್ತಿತ್ತು.

• ಅವರು ಹಂಪಿಗೆ ಹೋದ ನಂತರ ಅವರಿಗೆ ವಸತಿಗೃಹ ಮಂಜೂರಾಯಿತು. 'ಕಾಡಿನ' ಮನೆಯಾದ್ದರಿಂದ ಮನೆಯ ಹಿಂದೆ ಸಾಕಷ್ಟು ಜಾಗವಿತ್ತು. ಅಲ್ಲೂ ಸಹ ನಾನಾ ನಮೂನೆಯ ತರಕಾರಿ ಗಿಡಗಳನ್ನು, ಹಣ್ಣು, ಹಂಪಲುಗಳನ್ನು ಬೆಳೆಸಿದರು. ನಿವೃತ್ತಿಯ ದಿನಗಳು ಸಮೀಪಿಸಿದಂತೆ ಹಂಪಿಯಲ್ಲೇ ಸ್ವಲ್ಪ ಬಯಲು ಖರೀದಿಸಿ ಇರುವ ಅಲ್ಪ ಜಾಗದಲ್ಲಿ ನಾನಾ ರೀತಿಯ ಅಂದರೆ, ಸಿಲ್ವರ್, ತೇಗ, ಬೇವು, ಹುಣಸೆ. ಮಾವು. ಸೀಬೆ, ದಾಳಿಂಬೆ, ಬಾಳೆ. ಸಪೋಟ... ಹೀಗೆ ಸಾಕಷ್ಟು ಮರಗಿಡಗಳನ್ನು ಬೆಳೆಸಿದ್ದಾರೆ. ಬೆಂಗಳೂರಿಗೆ ಬರುವಾಗ ತಾವು ಬೆಳೆದ ಹೂ-ಹಣ್ಣು-ತರಕಾರಿಗಳನ್ನು ತಂದರೆ ಅಮ್ಮ ಅಣ್ಣ ಬೆಳೆದದ್ದೆಂದು ಹೇಳಿ ಬೇರೆಯವರಿಗೆ ಹಂಚಿ ತಿನ್ನುವ ಸಂಭ್ರಮ ನೋಡಬೇಕು. ಅಣ್ಣ ಬೆಂಗಳೂರಿಗೆ ಬಂದರೂ ಸಹ ಇಲ್ಲೂ ಅದೇ ಕೆಲಸವೇ. ತನ್ನ ಬಿಡುವಿನ ಸಮಯದಲ್ಲಿ ಮನೆಯ ಪಕ್ಕದ ಜಾಗದಲ್ಲಿ ಗಿಡ ನೆಡುವುದು, ಬೆಳೆದ ಹೂ-ಗಿಡಗಳ ರೆಂಬೆ ಕತ್ತರಿಸುವುದು, ಕಳೆ ಕೀಳುವುದು, ಬಾಳೆಗಿಡದ ನಿರರ್ಥಕ ಎಲೆ ಕಂದುಗಳನ್ನು ಕಿತ್ತು ಹಾಕುವುದು, ಒಟ್ಟಾರೆ ಏನಾದರೊಂದನ್ನು ಮಾಡುತ್ತಿರಬೇಕಷ್ಟೆ.

ಅಣ್ಣ ಪ್ರಾಣಿಪ್ರಿಯ. ಅವರಿಗೆ ಪ್ರಾಣಿಗಳೆಂದರೆ ತುಂಬ ಇಷ್ಟ. ಅಣ್ಣನಿರುವ ಕಡೆ ಯಾವುದಾದರೊಂದು ನಾಯಿಯೋ, ಬೆಕ್ಕೋ ಇರಬೇಕಿತ್ತು. ಊರಿನಲ್ಲಿ ಮೊಲಗಳನ್ನು ಸಾಕಲು ತಂದುಬಿಟ್ಟಿದ್ದರು. ಬೆಕ್ಕುಗಳ ಕಾಟದಿಂದ ಮೊಲಗಳಿಗೆ ಉಳಿಗಾಲವಿಲ್ಲದ್ದರಿಂದ ಹಲವಾರು ಪ್ರಯತ್ನಗಳ ನಂತರ ಆ ಸಾಹಸವನ್ನು ಕೈಬಿಟ್ಟರು. ಬೆಂಗಳೂರಿನ ನಮ್ಮ ಬಾಡಿಗೆ ಮನೆ ಇಕ್ಕಟ್ಟಾಗಿದ್ದರೂ ಅಲ್ಲಿ ನಾಯಿ-ಬೆಕ್ಕುಗಳನ್ನು ಒಟ್ಟಿಗೆ ಒಂದೆರಡು ವರ್ಷ ಸಾಕಿದ್ದರು. ಆದರೆ ಬೆಂಗಳೂರಿನಂಥ ನಗರದಲ್ಲಿ ಬೆಕ್ಕುಗಳನ್ನು ಸಾಕುವುದು ಕಷ್ಟವೆಂದು ಅರಿವಾದ ನಂತರ ನಾಯಿಗಳನ್ನಷ್ಟೇ ಸಾಕಲಾರಂಭಿಸಿದರು. ನನಗೆ ತಿಳುವಳಿಕೆ ಬಂದಾಗಿನಿಂದಲೂ ನಮ್ಮ ಮನೆಯಲ್ಲಿ ಯಾವುದಾದರೂ ನಾಯಿ ಇದ್ದೇ ಇದೆ. ಈಗಲೂ ಅಷ್ಟೆ ಅವರು ಬಿಡುವಿದ್ದಾಗ ನಾಯಿಗೆ ತಲೆ/ಮೈ ಬಾಚುವುದು, ಸ್ನಾನ ಮಾಡಿಸುವುದು, ನಾಯಿಯ ಕೂದಲು ಕತ್ತರಿಸುವುದು ಮುಂತಾದ ಕೆಲಸಗಳು ಇದ್ದೇ ಇರುತ್ತವೆ. ಅವರ ಕೈಯಲ್ಲಿ ಕತ್ತರಿಗೊಳಗಾದ ನಾಯಿ ಒಮ್ಮೊಮ್ಮೆ ನಮಗೇ ಗುರುತು ಸಿಗುವುದಿಲ್ಲ. ಕುರುಬರು ಕುರಿಗಳ ತುಪ್ಪಳ ಕತ್ತರಿಸಿ ನುಣ್ಣನೆ ಬೋಳಿಸುವಂತೆ ಅಣ್ಣ ನಾಯಿಯ ಕೂದಲು ಕತ್ತರಿಸುತ್ತಾರೆ. ನಾಯಿಯೂ ಅಷ್ಟೆ. ನಾವೆಷ್ಟೇ ಹೇಳಿದರೂ ಮೊಂಡಾಟವಾಡುವ ಅಥವಾ ಬಲವಂತ ಮಾಡಿದರೆ ನಮ್ಮೆಡೆಗೆ ಗುರುಗುಡುವ ಅದು ಅಣ್ಣನ ಪ್ರೀತಿಯ ಏಟಿಗೆ, ಮುದ್ದಾಟಕ್ಕೆ ಕುಂಯ್‌ಗುಡುತ್ತಾ ಮಾಂತ್ರಿಕ ಸ್ಪರ್ಶಕ್ಕೊಳಗಾದಂತೆ ಅವರು ಹೇಳಿದಂತೆ ಕೇಳುತ್ತದೆ.

ಅಣ್ಣನ ಕ್ಷಮಾಶೀಲತೆ, ಸಹನೆ, ಸ್ಥಿತಪ್ರಜ್ಞತೆ ನಮಗ್ಯಾರಿಗೂ ಬರಲೇ ಇಲ್ಲ. ಯಾರು ಏನೇ ಅಂದರೂ ಅದಕ್ಕೆ ಪ್ರತಿಕ್ರಿಯಿಸುವುದಿಲ್ಲ. ಆದರೆ ಅದಕ್ಕೊಂದು ಗರಿಷ್ಠ ಮಿತಿಯಿರುತ್ತದೆ. ಸಾಧ್ಯವಾದಷ್ಟೂ ಕ್ಷಮಿಸಿಬಿಡುತ್ತಿದ್ದ ಅವರ ಸಹನಶೀಲತೆಯನ್ನು 'ಹೇಡಿತನ'ವೆಂದು ತಿಳಿದುಕೊಂಡು ಮುಂದುವರಿದವರ ಪಾಲಿಗೆ ಅವರು 'ಉಗ್ರನರಸಿಂಹ'ರೇ ಸರಿ! ಅವರ ಮೃದು ಮಾತುಗಳನ್ನೇ ಕೇಳಿದ್ದ ನಾನು ಅಂಥ ಸಂದರ್ಭದಲ್ಲಿ ಅವರು ಬಳಸಿದ 'ಸಂಸ್ಕೃತ ಪದಗಳನ್ನು' ಕೇಳಿ ಇವರು ನನ್ನಣ್ಣನಾ? ಎಂದು ಅವಾಕ್ಕಾಗಿದ್ದೆ. ಅಂಥ ಕೆಲವು ಸಂದರ್ಭಗಳ ಹೊರತು ಅಣ್ಣ ತುಂಬಾ ಮಿತಭಾಷಿ. ಅಷ್ಟೇ ಅಲ್ಲ ಮೃದು ಭಾಷಿ. ಅನವಶ್ಯಕವಾಗಿ ಬೇರೆಯವರ ಬಗ್ಗೆ ಮಾತನಾಡುವುದಿಲ್ಲ. ಬೇರೆಯವರಿಗೂ ಅವಕಾಶ ಕಲ್ಪಿಸುವುದಿಲ್ಲ. ನಾವು ಮಕ್ಕಳು ಏನೇ ತಪ್ಪು ಮಾಡಿದರೂ ನಮ್ಮ ಮೂವರಿಗೂ ನೆನಪಿರುವ ಮಟ್ಟಿಗೆ ಒಮ್ಮೆಯೂ ಹೊಡೆದಿಲ್ಲ. ಗದರಿಸಿದ್ದಿಲ್ಲ. ನನಗಂತೂ ನಾನೇನು ತಪ್ಪು ಮಾಡಿದರೂ ಕ್ಷಮಾರ್ಹಳೇ. ಅಂಥ ಸಂದರ್ಭವೇನಾದರೂ ಬಂದರೆ ಮಾರ್ಮಿಕವಾಗಿ ಸೂಚ್ಯವಾಗಿ ತಿಳಿಸುತ್ತಿದ್ದರು.

ಅಂಥ ಒಂದು ಸಂದರ್ಭವನ್ನು ನಾನು ಇಲ್ಲಿ ದಾಖಲಿಸದಿದ್ದರೆ ಲೇಖನ ಅಪೂರ್ಣವಾಗುತ್ತದೆ. ೧೭ ವರ್ಷಗಳ ಹಿಂದೆ ಮನೆಗೆ ಹೊಸದಾಗಿ ಫೋನ್ ಬಂದಿತ್ತು. ಪತ್ರಿಕೆಯೊಂದರಲ್ಲಿ ನಮ್ಮ ಭವಿಷ್ಯವನ್ನು ಉಚಿತವಾಗಿ ತಿಳಿಯಲು ಒಂದು ಸಂಖ್ಯೆಗೆ ಕರೆ ಮಾಡಿ ಸಂಪರ್ಕಿಸುವಂತೆ ಹಾಗೂ ನಮ್ಮ ಜನ್ಮರಾಶಿ ಬಂದಾಗ 'ಉಂ' ಅನ್ನುವಂತೆ ಸೂಚಿಸಿ ಜಾಹಿರಾತು ನೀಡಲಾಗಿತ್ತು. ಅದೊಂದು ಅಂತರರಾಷ್ಟ್ರೀಯ (ISD) ಕರೆಯ ಸಂಖ್ಯೆಯಾಗಿತ್ತು. ನಾನು ಉಚಿತ ಸಂಖ್ಯೆಯೆಂದು ತಿಳಿದು ಸಾಕಷ್ಟು ಸಾರಿ ಪ್ರಯತ್ನಿಸಿದ್ದೆ. ಭವಿಷ್ಯ ಮಾತ್ರ ಬರುತ್ತಿರಲಿಲ್ಲ. ನನ್ನ ಮುಂದಾಳತ್ವದಲ್ಲಿ ತಂಗಿ-ತಮ್ಮನೂ ಪಟ್ಟುಬಿಡದೆ ಪ್ರಯತ್ನಿಸುತ್ತಲೇ ಇದ್ದೆವು. ಕೊನೆಗೊಂದು ದಿನ ಬಿಲ್ ಬಂತು. ನೋಡಿದರೆ ಸುಮಾರು ೭೦೦೦ ರೂ.ಗಳಷ್ಟಾಗಿತ್ತು. ನಾವು ಅಣ್ಣ ಏನೆನ್ನುತ್ತಾರೋ ಎಂದು ತುಂಬಾ ಭಯಪಟ್ಟಿದ್ದೆವು. ಏಕೆಂದರೆ ಆಗಿನ ಸಂದರ್ಭಕ್ಕೆ ೭೦೦೦ ರೂ.ಗಳಿಗೆ ಒಂದು ಸೈಟ್ ತಗೋಬೋದಿತ್ತು. ಆ ಹಣಕ್ಕೆ ಅಷ್ಟು ಮೌಲ್ಯವಿತ್ತು. ಅಲ್ಲದೆ ಆಗ ನಮ್ಮ ಆರ್ಥಿಕ ಸ್ಥಿತಿಯೂ ಅಷ್ಟಕ್ಕಷ್ಟೇ ಇತ್ತು. ಆದರೆ ನಾವು ಭಯಪಟ್ಟಂತೆ ಅಣ್ಣ ಏನನ್ನೂ ಅನ್ನಲಿಲ್ಲ. ಪ್ರತಿಯಾಗಿ ಅಂಥ ಸಂಖ್ಯೆಗಳಿಗೆ ಕರೆ ಮಾಡಬಾರದೆಂದು ಸಲಹೆ ನೀಡಿದ್ದರು. ಇದೊಂದು ಉದಾಹರಣೆಯಷ್ಟೇ. ಇಂಥ ಎಷ್ಟೋ ಪ್ರಸಂಗಗಳಲ್ಲಿ ಅವರು ನಮ್ಮನ್ನು ಕ್ಷಮಿಸಿ ಬುದ್ಧಿವಾದ ಹೇಳುತ್ತಿದ್ದರು.

ಜೀವನದಲ್ಲಿ ನಡೆ ನುಡಿಗಳೆರಡರಲ್ಲೂ ಸರಳತೆಯನ್ನು ಪಾಲಿಸಬೇಕೆಂಬುದು ಅವರಿಚ್ಛೆ. ಹಾಕಿಕೊಳ್ಳುವ ಬಟ್ಟೆ ಬರೆಗಳ ಬಗ್ಗೆ ಅಣ್ಣ ತುಂಬಾ ನಿರ್ದಿಷ್ಟ. ಎಲ್ಲರೂ ಸಾಮಾನ್ಯವಾಗಿ ಧರಿಸುವ ಬಟ್ಟೆಗಳನ್ನೇ ನಾವೂ ಹಾಕಿಕೊಳ್ಳಬೇಕೆಂಬುದು ಅವರ ಅಭಿಪ್ರಾಯ. ನಾವು ಚಿಕ್ಕವರಿದ್ದಾಗ ಚೂಡಿದಾರ, ಮ್ಯಾಕ್ಸಿಗಳಂತಹ ಉಡುಪನ್ನು ಧರಿಸುವುದು ನಗರ ಜೀವನದ ಫ್ಯಾಷನ್ ಆಗಿತ್ತು. ಅಂಥ ಬಟ್ಟೆಗಳನ್ನು ನಾವು ನಗರದಲ್ಲಿ ಮಾತ್ರ ಹಾಕಿಕೊಳ್ಳಬೇಕಾಗಿತ್ತು. ನಮಗೋ ಊರುಗಳಿಗೆ ಹೋದಾಗ ಹಾಕಿಕೊಂಡು ಹೋಗಿ ನಮ್ಮ ಓರಗೆಯವರ ಮುಂದೆ ಮೆರೆಯುತ್ತಾ ಅವರಿಗಿಂತ ಭಿನ್ನವಾಗಿ ಕಾಣಿಸಿಕೊಳ್ಳಬೇಕೆಂಬ ಆಸೆ. ಆದರೆ ಅಣ್ಣ ಅದಕ್ಕೆ ಆಸ್ಪದ ಕೊಡುತ್ತಲೇ ಇರಲಿಲ್ಲ. ಅದಕ್ಕೆ ಅವರು ನೀಡುತ್ತಿದ್ದ ಕಾರಣ ನಾವು ಹೊಸ ಹೊಸ ನಮೂನೆಯ ಬಟ್ಟೆಗಳನ್ನು ಧರಿಸಿ ಊರಿಗೆ ಹೋದರೆ. ಅಲ್ಲಿನ ಮಕ್ಕಳು ಅಂಥ ಬಟ್ಟೆಗಳು ತಮ್ಮಲ್ಲಿಲ್ಲದ ಅಸಹಾಯಕತೆಯಿಂದ ಬೇಸರಪಟ್ಟುಕೊಳ್ಳಬಾರದೆಂಬುದು. ಈಗ ನನ್ನ ಮಗಳನ್ನು ಊರುಗಳಿಗೆ ಕರೆದುಕೊಂಡು ಹೋಗುವಾಗ ಅಣ್ಣನ ಮಾತುಗಳು ನನ್ನ ಕಿವಿಯಲ್ಲಿ ಎಚ್ಚರಿಕೆಯ ಗಂಟೆಯಾಗಿ ಮೊರೆಯುತ್ತವೆ.

ನನ್ನ ಮದುವೆಯ ಸಂದರ್ಭದಲ್ಲಿ ಅಣ್ಣ ನನಗೆ ನೀಡಿದ ಮಾನಸಿಕ ಸ್ಥೈರ್ಯ ತುಂಬ ಮುಖ್ಯ. ನನ್ನ ಸ್ನಾತಕೋತ್ತರ ಪದವಿ ಮುಗಿದ ಕೂಡಲೇ ಮನೆಯಲ್ಲಿ ಮದುವೆ ಪ್ರಸ್ತಾಪ ಬಂತು. ನನಗೆ ಎರಡು ಕಾರಣಗಳಿಂದ ತಕ್ಷಣಕ್ಕೆ ಮದುವೆ ಇಷ್ಟವಿರಲಿಲ್ಲ. ಒಂದು ನಾನು ಪಿಎಚ್.ಡಿ. ಮಾಡಿದ ನಂತರ ಮದುವೆ ಆಗಬೇಕೆಂಬುದು. ಎರಡು ಮದುವೆಯ ಬಗ್ಗೆ ನನಗಿದ್ದ ಪೂರ್ವಾಗ್ರಹ. ನಾನು ಸ್ತ್ರೀವಾದಿ ಚಿಂತನೆಯನ್ನು ತಪ್ಪಾಗಿ ಅರ್ಥೈಸಿಕೊಂಡಿದ್ದೆ. ಮದುವೆಯಾದರೆ ನಾನು ನನ್ನ ವ್ಯಕ್ತಿತ್ವವನ್ನು, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಳೆದುಕೊಂಡು ಗಂಡನ ಅಡಿಯಾಳಾಗಿ ಅವನ ಮನೆಯವರು ಹೇಳಿದ ಹಾಗೆ ಕೇಳಿಕೊಂಡು ಗುಲಾಮಳಾಗಿ ಬದುಕಬೇಕಾಗಬಹುದು. ನನ್ನ ಸ್ನೇಹಿತರನ್ನೆಲ್ಲ ದೂರೀಕರಿಸಬೇಕಾಗಬಹುದು ಎಂದು ಭ್ರಮಿಸಿದ್ದೆ. ಭ್ರಮೆಯ ಭಯದಿಂದ ನಾನು ಮದುವೆ ಬೇಡವೆಂದು ಹಠ ಹಿಡಿದ ಆತಂಕದಿಂದ ಖಿನ್ನತೆಗೊಳಗಾಗಿದ್ದೆ. ಅಣ್ಣ ಬಳಿಗೆ ಕರೆಸಿ, ಕೂರಿಸಿಕೊಂಡು ಅದೆಲ್ಲ ನನ್ನ ಭ್ರಮೆಯೆಂದೂ, ವಾಸ್ತವವಾಗಿ ಹಾಗೇನೂ ಆಗುವುದಿಲ್ಲವೆಂದು ಸಾಂತ್ವನ ಹೇಳಿ ಸಮಾಧಾನ ಪಡಿಸಿದರು. ಅಲ್ಲದೆ ನನ್ನ ಮನೋಭಾವಕ್ಕೆ ಹೊಂದಿಕೆಯಾಗುವಂಥ ವ್ಯಕ್ತಿಯನ್ನೇ ನನ್ನ ಬಾಳ ಸಂಗಾತಿಯನ್ನಾಗಿ ಆಯ್ಕೆ ಮಾಡಿಕೊಟ್ಟರು. ನನ್ನ ತಂಗಿ ರೂಪಳಿಗೂ ಅಷ್ಟೆ. ಈ ವಿಷಯದಲ್ಲಿ ನಾವು ಹೆಣ್ಣುಮಕ್ಕಳು ಅಣ್ಣನಿಗೆ ಕೃತಜ್ಞರಾಗಿದ್ದೇವೆ.

ಅಣ್ಣನ ಮತ್ತೊಂದು ಇಷ್ಟವಾಗುವ ಗುಣ ಅವರು ಸಂತೃಪ್ತಿಯಿಂದ ಓರಣವಾಗಿ ಊಟ ಮಾಡುವ ರೀತಿ. ಊಟಕ್ಕೆ ಕುಳಿತರೆಂದರೆ ಉದರದೇವನ ಓಲೈಕೆಗಾಗಿ ತಪಸ್ಸಿಗೆ ಕುಳಿತ ಯೋಗಿಯಂತೆ. ಅವರಿಗೆ ಊಟದ ಬಗ್ಗೆ ಅಪರಿಮಿತ ಗೌರವ. ಪ್ರತಿಯೊಂದು ಅಗುಳು/ತುತ್ತನ್ನೂ ಸಂತೋಷದಿಂದ ಅನುಭವಿಸಿಕೊಂಡು ಆಸ್ವಾದಿಸಿಕೊಂಡು ಒಪ್ಪವಾಗಿ ಊಟ ಮಾಡುತ್ತಾರೆ. ತಟ್ಟೆಯ ಪಕ್ಕದಲ್ಲಿ ಒಂದು ಅಗುಳು ಚೆಲ್ಲಲೂ ಬಿಡುವುದಿಲ್ಲ. ನನ್ನ ಅಜ್ಜಿ ತನ್ನ ಮರಿಮೊಮ್ಮಕ್ಕಳಿಗೆ ಊಟ ಮಾಡಿಸುವಾಗ ಹೇಗೆ ಊಟ ಮಾಡಬೇಕೆಂಬುದನ್ನು ಹೇಳಲು 'ನಿಮ್ಮ ತಾತನನ್ನು ನೋಡಿ ತಿನ್ನೋದು ಹೇಗೆ ಅಂತ ಕಲಿತುಕೊಳ್ಳಿ' ಎಂದು ಬೈಯುತ್ತಾರೆ. ಅಷ್ಟು ನಾಜೂಕು. ನಾನು ಚಿಕ್ಕವಳಿದ್ದಾಗ ಒಮ್ಮೆ ಬಸವಣ್ಣನ ಕುರಿತ ಚಲನಚಿತ್ರವೊಂದನ್ನು ವೀಕ್ಷಿಸುತ್ತಿದ್ದಾಗ, ಬಸವಣ್ಣ ಊಟದ ಕೊನೆಯಲ್ಲಿ ತಟ್ಟೆಗೆ ನೀರು ಹಾಕಿಕೊಂಡು ತಟ್ಟೆ ತೊಳೆದು ಅದನ್ನೂ ಆಪೋಶನ ಮಾಡುತ್ತಿದ್ದರು. ಆಗ ನನ್ನ ದೊಡ್ಡಪ್ಪನ ಮಗ ಲೋಕೇಶ, 'ನೋಡು ಬಸವಣ್ಣ ನಿಮ್ಮಪ್ಪನ ಬಳಿಯೇ ಊಟ ಹೇಗೆ ಮಾಡಬೇಕೆಂಬುದನ್ನು ಕಾಪಿ ಮಾಡಿದ್ದು' ಎಂದು ಹೇಳಿದ್ದಾಗ ಹಲವಾರು ವರ್ಷಗಳ ಕಾಲ ನಾನದನ್ನು ನಂಬಿದ್ದೆ.

ಒಟ್ಟಾರೆಯಾಗಿ ಅಣ್ಣನ ಬಗ್ಗೆ ಬರೆಯುತ್ತಾ ಹೋದರೆ ಎಷ್ಟು ಪುಟಗಳಾದರೂ ಸಾಲದು. ಈ ಲೇಖನದ ಪುಟಗಳ ಪರಿಮಿತಿಯನ್ನು ಗಮನದಲ್ಲಿಟ್ಟುಕೊಂಡು ಅಣ್ಣನನ್ನು ನಾನು ಕಂಡ ರೀತಿಯಲ್ಲಿ ಕಾಣಿಸುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ.



# ಶ್ರೀ ದೇವರಕೊಂಡಾರೆಡ್ಡಿಯವರ ಬಾಲ್ಯ – ನಾ ಕಂಡಂತೆ

– ಎಂ. ರಾಮಚಂದ್ರ*

ಶ್ರೀ ದೇವರ ಕೊಂಡಾರೆಡ್ಡಿಯವರು, ಅಂದಿನ ಬೆಂಗಳೂರು ಜಿಲ್ಲೆಯ ಆನೇಕಲ್ ತಾಲ್ಲೂಕಿನ ಸುಮಾರು ೩೦೦ ಮನೆಗಳುಳ್ಳ ವಣಕನಹಳ್ಳಿ ಎಂಬ ಹಳ್ಳಿಯಲ್ಲಿ ೧೯೪೮ನೆಯ ಇಸವಿಯಲ್ಲಿ ಜನಿಸಿದವರು.

ವಣಕನಹಳ್ಳಿ ಗ್ರಾಮವು ಪಂಚಾಯ್ತಿ ಕೇಂದ್ರವಾಗಿದ್ದು ಅಂದಿಗೆ ಮಾಧ್ಯಮಿಕ ಪಾಠಶಲೆಯನ್ನು ಹೊಂದಿದ್ದ ಗ್ರಾಮ (೧ ರಿಂದ ೮ನೆಯ ತರಗತಿಯವರೆಗೆ) ಅಂದಿನ ಕಾಲಕ್ಕೆ ಸುಸಜ್ಜಿತವಾದ ಆರ್.ಸಿ.ಸಿ ಕಟ್ಟಡವನ್ನು ಹೊಂದಿದ್ದ ಪಾಠಶಾಲೆಯೆಂದೇ ಹೇಳಬಹುದಾಗಿತ್ತು. ಈ ಶಾಲೆಯಲ್ಲಿ ಬಹಳ ಶ್ರದ್ಧೆಯಿಂದ ಪಾಠ ಪ್ರವಚನಗಳನ್ನು ಕಲಿಸಿಕೊಡುತ್ತಿದ್ದ ಉತ್ಸಾಹಿ ಉಪಾಧ್ಯಾಯರುಗಳು ಕಾರ್ಯ ನಿರ್ವಹಿಸುತ್ತಿದ್ದರು. ಈ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಸೀತಾರಾಮಯ್ಯಂಗಾರ್, ಮತ್ತು ಹಿರಿಯ ಉಪಾಧ್ಯಾಯರುಗಳಾಗಿದ್ದ ಶ್ರೀ ನಾರಾಯಣಮೂರ್ತಿ, ನರಸಿಂಹಮೂರ್ತಿ ಮತ್ತು ನಮ್ಮ ಗ್ರಾಮಸ್ಥರೇ ಆದ ಶ್ರೀ ವೀರಭದ್ರಪ್ಪ ಮೇಷ್ಟ್ರುಗಳ ಹೆಸರುಗಳನ್ನು ಸ್ಮರಿಸದೆ ಇದ್ದಲ್ಲಿ ನಾನು ನನ್ನ ಕರ್ತವ್ಯದಲ್ಲಿ ಲೋಪವೆಸಗಿದಂತೆ ಆಗುತ್ತದೆ.

ನನ್ನ ಹೆಸರು ಎಂ. ರಾಮಚಂದ್ರ, ನಾನು ಮತ್ತು ದೇವರಕೊಂಡಾರೆಡ್ಡಿಯವರು ಬಹಳ ಹತ್ತಿರದಲ್ಲಿ ವಾಸ ಮಾಡುತ್ತಿದ್ದವರಾಗಿದ್ದು, ದಿನಂಪ್ರತಿ ಒಡನಾಡಿಗಳಾಗಿದ್ದವರು ಮತ್ತು ಒಂದೇ ಶಾಲೆಯಲ್ಲಿ ತ್ಯಾಗಬುದ್ಧಿಯುಳ್ಳ ನುರಿತ ಉಪಾಧ್ಯಾಯರುಗಳಿಂದ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಮಾಡಿದಂಥವರು.

ದೇವರಕೊಂಡಾರೆಡ್ಡಿಯವರನ್ನು ಬಾಲ್ಯದಲ್ಲಿ ಅವರ ಮನೆಯಲ್ಲಿ "ಅಪ್ಪೋಡ" ಎಂಬ ಅಡ್ಡ ಹೆಸರಿನಿಂದಲೇ ಕರೆಯುತ್ತಿದ್ದರು ಮತ್ತು ಅವರ ಸ್ನೇಹಿತರು, ಒಡನಾಡಿಗಳು ಅವರನ್ನು 'ಅಪ್ಪಾಜಿ' ಎಂಬ ನಾಮಧೇಯದಿಂದ ಕರೆಯುತ್ತಿದ್ದು ಊರಿನ ಜನರಿಗಾಗಲೀ ಜೊತೆಯಲ್ಲಿದ್ದ ಒಡನಾಡಿಗಳಿಗಾಗಲೀ ಇವರ ನಾಮಧೇಯ 'ದೇವರಕೊಂಡಾರೆಡ್ಡಿ' ಎಂಬುದು ತಿಳಿದಿರಲೇ ಇಲ್ಲ.

ಇವರು, ಈಗಿನಂಥ ಬಾಲ್ಯದಿಂದಲೂ ಪುಟ್ಟ (ಚಿಕ್ಕ) ಆಕಾರದವರಾಗಿದ್ದು ಎಲ್ಲಾ ಜೊತೆಗಾರರಿಗಿಂತ ಪುಟ್ಟ ಆಕೃತಿಯನ್ನು ಹೊಂದಿದವರಾಗಿದ್ದರು. ಆದ್ದರಿಂದ ಇವರನ್ನು ನಮ್ಮ ಗುಂಪಿನಲ್ಲಿ 'ಸೊಳ್ಳೆ' ಎಂದು ನಾಮಕರಣ ಮಾಡಿಕೊಂಡಿದ್ದು, ಅವರು ಇಲ್ಲದಾಗ ಅವರ ಬಗ್ಗೆ ಮಾತನಾಡುವಾಗ 'ಸೊಳ್ಳೆ' ಎಂದೇ ಹೇಳುತ್ತಿದ್ದರೂ. ಯಾರಿಗೂ ಎದುರಿನಲ್ಲಿ ಸೊಳ್ಳೆ ಎಂದು ಕೂಗುವ ಧೈರ್ಯವಿರಲಿಲ್ಲ. ಏಕೆಂದರೆ ಇವರು ಗಾತ್ರದಲ್ಲಿ ಪುಟ್ಟದಾಗಿದ್ದರೂ ಇವರಷ್ಟು ಕೋಪಿಷ್ಠರು ನಮ್ಮ ಗುಂಪಿನಲ್ಲಿ ಯಾರು ಇರಲಿಲ್ಲ ಎಂದು ಹೇಳಬಹುದು. ಯಾರಾದರೂ ಅಡ್ಡ ಹೆಸರಿನಲ್ಲಿ ಕರೆದರೆಂದರೆ ಅವರ ಮೇಲೆ ರೇಗಾಡಿ ಮುಂದೆ ೩-೪ ದಿನಗಳು ಮಾತು ಬಿಟ್ಟು ಯಾವ ಆಟಗಳಲ್ಲಿ ಪಾಲ್ಗೊಳ್ಳದೆ ಒಂಟಿಯಾಗಿಯೇ ಇದ್ದು ಬಿಡುತ್ತಿದ್ದರು. ಆದರೆ ಈ ಸಿಟ್ಟು ಒಂದೇ ದಿನ. ನಂತರ ಮಾಮೂಲಿನಂತೆ ಎಲ್ಲರೊಡನೆ ಮಿಲನವಾಗಿ ಆಟವಾಡುತ್ತಿದ್ದರು.

ಇವರು, ಹೇಳಬೇಕೆಂದರೆ ಬಾಲ್ಯದಿಂದಲೂ ಕುಡುಮಿ. ಇತರೆ ಸ್ನೇಹಿತರು ಇವರಷ್ಟು ಕುಡುಮಿಗಳಾಗಿರಲಿಲ್ಲ. ಇವರು ಓದುವ ಸಮಯದಲ್ಲಿ ಯಾರು ಇವರನ್ನು ಮಾತನಾಡಿಸುವಂತಿಲ್ಲ, ಮೊದಲಿನಿಂದಲೂ ಇವರು ನಿಷ್ಠುರವಾದಿಯಾಗಿದ್ದು ಇವರನ್ನು ಓದುವ ಸಮಯದಲ್ಲಿ ಅಥವಾ ಇನ್ನಾವುದೇ ಕೆಲಸದಲ್ಲಿ ನಿರತರಾಗಿದ್ದಾಗ ಮಾತನಾಡಿದಲ್ಲಿ, ನೇರ ಮಾತುಗಳಿಂದ ಬೈದು ಬಿಡುತ್ತಿದ್ದರು. ಆದರೆ ನಾನು ಈಗಾಗಲೇ ಹೇಳಿದಂತೆ, ನಂತರ ಸ್ನೇಹಿತರೊಡನೆ ಬೆರೆತು, "ನಾನು ಹೇಳುವುದಿಲ್ಲವೆ ಓದುವಾಗ ನನ್ನನ್ನು ಯಾರು ಮಾತನಾಡಿಸಬಾರದೆಂದು" ಎಂದು ಸಮಾಧಾನ ಮಾಡುತ್ತಿದ್ದರು. ಇವರ ಆಕೃತಿಯಲ್ಲಿ ಪುಟ್ಟದಾಗಿದ್ದುದರಿಂದಲೋ ಏನೋ, ಇತರ ಸ್ನೇಹಿತರು ಇವರನ್ನು ಇವರ ಇಷ್ಟಕ್ಕೆ ವಿರುದ್ಧವಾಗಿ ಕೆಲವು ಆಟಗಳಿಗೆ ಅಂದರೆ ಕಬ್ಬಡಿ, ಚಿಣ್ಣಿದಾಂಡು, ವಾಲಿಬಾಲ್, ಬುಗುರಿ ಆಟ ಇತ್ಯಾದಿಗಳಿಗೆ ಸೇರಿಸಿಕೊಳ್ಳುತ್ತಿರಲಿಲ್ಲ. ಆದರೆ ಇವರು ತಕ್ಷಣಕ್ಕೆ ಸಿಟ್ಟು ಮಾಡಿಕೊಂಡರೂ ನಂತರ ಸರಿಯಾಗಿ ಬಿಡುತ್ತಿದ್ದರು.

ಇವರು, ದೊಡ್ಡ ಸಂಸಾರದಲ್ಲಿ ಹುಟ್ಟಿದ್ದು ಇವರ ಮನೆಯಲ್ಲಿ ಅಜ್ಜಿ-ತಾತ, ತಂದೆ-ತಾಯಿ, ಅಣ್ಣ-ತಮ್ಮಂದಿರೆಲ್ಲರು ಇದ್ದರು. ಇವರೊಂದಿಗೆ ಹುಟ್ಟಿದ ಹೆಣ್ಣುಮಕ್ಕಳಿರಲಿಲ್ಲ. ಮತ್ತು ಈ ಹಳ್ಳಿಯಲ್ಲಿ ಇವರದು ಉತ್ತಮ ಸ್ಥಿತಿಯಲ್ಲಿದ್ದ ಒಂದು ಸಂಸಾರ. ಹೀಗಾಗಿ ಇವರಿಗೆ ತಮ್ಮ ಬಾಲ್ಯದಿಂದಲೂ ಯಾವ ತರಹದ ಕೊರತೆಯಾಗಲೀ ಹೆಚ್ಚಿನ ಕಷ್ಟ ಕಾರ್ಪಣ್ಯಗಳಾಗಲೀ ಇರಲಿಲ್ಲವೆಂದೇ ಹೇಳಬಹುದು. ಆದರೆ ಇಂತಹ ಸ್ಥಿತಿಯಲ್ಲಿ ಇದ್ದರೂ ಎಂದೂ ಇವರು ಇವರ ಜಂಭದ ಜೀವನ

---

* ನಂ.೧೦೪೯, ೮ನೆಯ ಮುಖ್ಯರಸ್ತೆ, ೨೦ನೆಯ ಕ್ರಾಸ್, ೭ನೆಯ ವಿಭಾಗ ಹೆಚ್.ಎಸ್.ಆರ್. ಬಡಾವಣೆ, ಬೆಂಗಳೂರು-೫೬೦೧೦೨.

ನಡೆಸಿದವರಾಗಲಿಲ್ಲ. ಜೊತೆಗಾರರೊಡನೆ ಉಳ್ಳವರಂತೆ ವರ್ತಿಸಿದಂತಹ ಪ್ರಸಂಗಗಳು ಇಲ್ಲವೇ ಇಲ್ಲವೆಂದು ಹೇಳಬಹುದು. ಒಡನಾಡಿಗಳೊಂದಿಗೆ ಭೇದಭಾವವಿಲ್ಲದೆ ಸೌಜನ್ಯದಿಂದ ಮತ್ತು ಸ್ನೇಹಭಾವದಿಂದ ನಡೆದುಕೊಳ್ಳುತ್ತಿದ್ದರು.

ವಣಕನಹಳ್ಳಿ, ಗ್ರಾಮದಲ್ಲಿ ಪ್ರಮುಖ ಜನಾಂಗ ರೆಡ್ಡಿ ಜನಾಂಗ, ಇವರ ಆಡುಭಾಷೆ 'ತೆಲುಗು'. ಕಲಿಕೆಯ ಭಾಷೆ 'ಕನ್ನಡ' ಅಂದರೆ ನಮ್ಮ ಒಡನಾಡಿಗಳೆಲ್ಲ ತೆಲುಗು ಭಾಷೆಯಲ್ಲಿ ಮಾತನಾಡುವವರೇ (ತೆಲುಗು ಭಾಷೆಯೂ ಕನ್ನಡ ಮಿಶ್ರಿತವಾಗಿತ್ತು). ನಾವು ಬಾಲ್ಯದಿಂದಲೂ ಈ ಪುಣ್ಯಾತ್ಮ ದೇವರಕೊಂಡಾರೆಡ್ಡಿ "ಲು" "ಅಪ್ಪಾಜಿ "ಲು" 'ಸೊಳ್ಳೆ'ಯವರಲ್ಲಿ ಕಂಡ ವಿಶಿಷ್ಟ ಗುಣವೆಂದರೆ ಇವರು ಮನೆಯ ಹಿರಿಯರು ಅಂದರೆ ತಾತ, ಅಜ್ಜಿ, ತಂದೆ, ತಾಯಿ, ಈ ನಾಲ್ಕು ವ್ಯಕ್ತಿಗಳೊಂದಿಗೆ ಬಿಟ್ಟು ಬೇರೆ ಅಣ್ಣ, ತಮ್ಮಂದಿರೊಳಗೊಂಡು ಎಲ್ಲರೊಂದಿಗೂ 'ಕನ್ನಡ' ಭಾಷೆಯಲ್ಲಿಯೇ ಮಾತನಾಡುತ್ತಿದ್ದುದು. ಊರಿನವರು ತೆಲುಗಿನಲ್ಲಿ ಮಾತನಾಡಿಸಿದರೂ ಕನ್ನಡದಲ್ಲೇ ಉತ್ತರಿಸುತ್ತಿದ್ದರು. ಅಷ್ಟು ಅಭಿಮಾನ ಇವರಿಗೆ ಕನ್ನಡ ಭಾಷೆ ಎಂದರೇ.

ನಮ್ಮ ಗ್ರಾಮದಲ್ಲಿ ಮಾಧ್ಯಮಿಕ ಶಾಲೆ ವಿದ್ಯಾಭ್ಯಾಸ ಮುಗಿಸಿ ಆನೇಕಲ್ ಟೌನ್‌ನಲ್ಲಿ ಹೈಸ್ಕೂಲು ವಿದ್ಯಾಭ್ಯಾಸಕ್ಕೆ ಸೇರಿದಾಗ ನಾನು ಆಂಗ್ಲ ಮಾಧ್ಯಮವನ್ನರಿಸಿಕೊಂಡರೆ, ಇವರು ಕನ್ನಡ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದರು. ಇವರು ಯಾವಾಗಲೂ ಆಂಗ್ಲಭಾಷೆಯಲ್ಲಿ ವ್ಯಾಸಂಗ ಮಾಡುವ ಬಗ್ಗೆ ಕನಸಿನಲ್ಲಿಯೂ ನೆನಸಿಕೊಂಡವರಲ್ಲ. ಹಾಗೆಯೇ ಬೆಂಗಳೂರಿನಲ್ಲಿ ಕಾಲೇಜು ವಿದ್ಯಾಭ್ಯಾಸವನ್ನು ಸಹ ಇವರು ಕನ್ನಡ ಭಾಷೆಯನ್ನು ಐಚ್ಛಿಕವಾಗಿ ಪಡೆದು ಅದೇ ಭಾಷೆಯಲ್ಲಿ ಉನ್ನತ ವ್ಯಾಸಂಗವನ್ನು) ಮಾಡಿ ಪದವಿಯನ್ನು ಪಡೆದವರು. ಸಾಮಾನ್ಯವಾಗಿ, ವಿದ್ಯಾರ್ಥಿಗಳು ಮುಂದಿನ ಭವಿಷ್ಯವನ್ನು ಮನದಲ್ಲಿಟ್ಟುಕೊಂಡು ಅದಕ್ಕೆ ತಕ್ಕಂತೆ ಐಚ್ಛಿಕಗಳನ್ನು ಆರಿಸಿಕೊಂಡು, ಅದರಂತೆ ವಿದ್ಯಾಭ್ಯಾಸ ಮಾಡಿ ನೌಕರಿಗಳನ್ನು ಪಡೆಯಲು ಪದವಿಗಳನ್ನು ಪಡೆದು, ಮುಂದಿನ ಜೀವನ ಸುಖಮಯವಾಗಿಸಿಕೊಳ್ಳಲು ಪ್ರಯತ್ನಿಸುವುದು ವಾಡಿಕೆ. ಆದರೆ ಈ ಮನುಷ್ಯ (ದೇವರಕೊಂಡಾರೆಡ್ಡಿ) ಮಾತ್ರ, ಲೌಕಿಕ ಜ್ಞಾನ ಪೂರ್ಣವಿಲ್ಲದಿರುವ ವಯಸ್ಸಿನಿಂದಲೇ ಇವರ ಅಂತರಾತ್ಮ ಕನ್ನಡ ಭಾಷೆಯ ಬಗ್ಗೆ ಒಲವು, ಅಭಿಮಾನ ಮತ್ತು ಗೌರವವನ್ನು ಬೆಳೆಸಿಕೊಂಡವರೇ ವಿನಃ ಬೇರೆಯವರಂತೆ ಜೀವನೋಪಾಯಕ್ಕಾಗಿ ವಿದ್ಯಾಭ್ಯಾಸವನ್ನು ಆರಿಸಿಕೊಂಡವರಲ್ಲ. ಅದರಲ್ಲೇ ಅಭಿವೃದ್ಧಿಯನ್ನು ಕಾಣಲು ಪ್ರಯತ್ನಿಸಿ, ಸಫಲತೆಯನ್ನು ಪಡೆದವರು. ಇಂತಹ ಸ್ವಭಾವದವರು ವಿರಳವೆಂದೇ ಹೇಳಬಹುದು. ಇನ್ನೊಂದು ವಿಶೇಷವೆಂದರೆ, ಕನ್ನಡ ಭಾಷೆಯಲ್ಲಿ ಉನ್ನತ ವ್ಯಾಸಂಗ ಮಾಡಿದ್ದರೂ ಆ ಕಾಲದಲ್ಲಿ ಬೇರೆ ಪದವೀಧರರಂತೆ ತಕ್ಷಣ ಸರ್ಕಾರಿ ಉದ್ಯೋಗ ದೊರೆಯದೆ ೨-೩ ವರ್ಷಗಳ ಕಾಲ ನಿರುದ್ಯೋಗಿ ಇವರು. ಇವರು ಧೈರ್ಯಗೆಟ್ಟವರಲ್ಲ ಅಥವಾ ತಾನು ಈ ಭಾಷೆಯಲ್ಲಿ ವ್ಯಾಸಂಗ ಮಾಡಬಾರದಾಗಿತ್ತೆಂದು ಭಾವಿಸಿದವರಲ್ಲ. ತನ್ನ ವ್ಯಾಸಂಗದ ಬಗ್ಗೆ ಅಭಿಮಾನ ಮತ್ತು ಗೌರವವನ್ನು ಹೊಂದಿದ್ದಂಥವರು.

ಈಗಾಗಲೇ, ತಿಳಿಸಿದಂತೆ, ಇವರೊಡನೆ ಹುಟ್ಟಿದ ಹೆಣ್ಣುಮಕ್ಕಳು ಇಲ್ಲದಿದ್ದರು, ಇವರ ಚಿಕ್ಕಮ್ಮನ ಮಗಳೊಬ್ಬರು ಹೆಸರು ಶ್ರೀಮತಿ ಲಲಿತಮ್ಮ ಪಕ್ಕದೂರಿನವರು, ಓದುತ್ತಿದ್ದು ರಜೆಗಳಲ್ಲಿ ಇವರ ಮನೆಗೆ ಬರುತ್ತಿದ್ದರು. ಅವರೂ ಸಹ, ದೇವರಕೊಂಡರೆಡ್ಡಿಯಿಂದ ಭಾಷಾಭಿಮಾನದ ಬಗ್ಗೆ ಒಲವು ಹೊಂದಿ, ಕಡೆಗೆ ಇವರು ಕನ್ನಡ ಭಾಷೆಯಲ್ಲಿಯೇ ಉನ್ನತ ಶಿಕ್ಷಣ ಪಡೆದು, ಆನೇಕಲ್ ತಾಲ್ಲೂಕಿನ ಕಾಲೇಜೊಂದರಲ್ಲಿ ಕನ್ನಡ ಭಾಷೆಯ ಉಪನ್ಯಾಸಕರಾಗಿದ್ದಾರೆ.

ಇವರಿಗೆ ಒದಗಿದ ಸಂಕಷ್ಟವೆಂದರೆ ಚಿಕ್ಕವಯಸ್ಸಿನಲ್ಲಿಯೇ ಇವರು ತಂದೆಯನ್ನು ಕಳೆದುಕೊಂಡದ್ದು ಮತ್ತು ತದನಂತರ ತಾತ ಅಜ್ಜಿಯನ್ನು ಕಳೆದುಕೊಂಡಿದ್ದು. ಇವರ ಬಗ್ಗೆ ಇಷ್ಟೊಂದು ಹೇಳಿದರು ಇವರ ಅರ್ಧಾಂಗಿಯವರ ಬಗ್ಗೆ ಸ್ವಲ್ಪವಾದರು ಹೇಳದಿದ್ದರೆ ನನ್ನ ಕರ್ತವ್ಯದಲ್ಲಿ ಲೋಪವೆಸಗಿದಂತಾಗುತ್ತದೆ. ಇವರ ಅರ್ಧಾಂಗಿ ಶ್ರೀಮತಿ ರತ್ನಮ್ಮನವರು, ಇವರ ತಂದೆಯವರ ಸ್ವಂತ ತಂಗಿ ಮಗಳು ಅಂದರೆ ಸೋದರತ್ತೆ ಮಗಳು. ತಮಿಳುನಾಡಿನ ಡಂಕಣಿಕೋಟೆ ತಾಲ್ಲೂಕಿನ ಒಂದು ಪುಟ್ಟ ಗ್ರಾಮದಲ್ಲಿ ಜನಿಸಿದವರು. ಇವರು ದೇವರಕೊಂಡಾರೆಡ್ಡಿಯವರಿಗಾಗಿಯೇ ಜನಿಸಿದವರು ಎಂದು ಹೇಳಬಹುದು. ಅವರ ಗ್ರಾಮದಲ್ಲಿ ಕನ್ನಡ ಮಾಧ್ಯಮ ಶಾಲೆ ಇಲ್ಲದೆ ಇದ್ದುದರಿಂದ ಇವರ ಪ್ರಾಥಮಿಕ ಶಾಲೆಯನ್ನು ತೆಲುಗಿನಲ್ಲಿ ಓದಿ ಅಷ್ಟರಲ್ಲೇ ಮುಗಿಸಿದ್ದವರು. ಇವರಿಗೆ ಆಡುಭಾಷೆ ಕಲಿತ ಭಾಷೆ ಎರಡೂ ತೆಲುಗು ಆಗಿದ್ದರಿಂದ ಇವರಿಗೆ ತೆಲುಗು ಭಾಷೆ ಬಿಟ್ಟು ಕನ್ನಡ ಭಾಷೆಯ ಗಂಧವೇ ಇರಲಿಲ್ಲ. ಈಕೆ ನಮ್ಮ ಊರಿಗೆ ಅರ್ಥಾತ್ ದೇವರಕೊಂಡಾರಡ್ಡಿಯವರ ಮನೆಗೆ ಬಂದಾಗ ನಾನು ಕನ್ನಡ ಮಾವನ ಜೊತೆಗೆ ಹೇಗೆ ಸಂಸಾರ ಮಾಡುವೆ ಎಂದು ಭೀಡಿಸುತ್ತಿದ್ದುದುಂಟು. ಅಂತೂ ಇಂತೂ ಈ ಮುಗ್ಧೆ ಅಪ್ಪಾಜಿಯವರಿಗೆ ಅರ್ಧಾಂಗಿಯಾದವರು. ಅಪ್ಪಾಜಿಯವರು ಮೊದಲಿನಿಂದ ಅರ್ಧಾಂಗಿಯೊಂದಿಗೆ ಕನ್ನಡದಲ್ಲಿ ಮಾತನಾಡುವುದು, ಪತ್ನಿ ಅರ್ಥವಾದುದಕ್ಕೆ ತೆಲುಗಿನಲ್ಲಿ ಉತ್ತರಿಸುವುದು.

ಸುಮಾರು ೩೫ ವರ್ಷದ ದಾಂಪತ್ಯ ಜೀವನ ಸುಗಮವಾಗಿ ನಡೆಸಿ ೩ ಮಕ್ಕಳಾಗಿ ಮೊಮ್ಮಕ್ಕಳಾಗಿ ಸುಖವಾಗಿ ನೆಮ್ಮದಿಯಾಗಿ ಬಾಳ್ವೆ ನಡೆಸುತ್ತಿದ್ದಾರೆ.

# ಶುಭ ಹಾರೈಕೆ

– ಡಾ॥ ಸೂರ್ಯನಾಥ ಯು. ಕಾಮತ್*

**ಡಾ॥** ದೇವರಕೊಂಡಾರೆಡ್ಡಿಯವರು ಗ್ರಾಮೀಣ ಪರಿಸರದಿಂದ ಬಂದವರು. ಕೃಷಿವಂತ ರೈತಕುಟುಂಬದಿಂದ ಬಂದಿದ್ದರೂ ವಿದ್ಯೆಯ ಕಡೆ ಎಳೆತ ನೀಡುವ ವಾತಾವರಣ ಅವರ ಮನೆತನದಲ್ಲಿ ಇದ್ದಂತೆ ನಾ ಕಾಣೆ. ಆದರೆ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಇಲಾಖೆಯಲ್ಲಿ ಇದ್ದ ಜಾಗೃತ ಶೈಕ್ಷಣಿಕ ವಾತಾವರಣ ಅವರನ್ನು ಸಂಶೋಧನೆ, ಜ್ಞಾನವರ್ಧನೆಗಳ ಕಡೆ ಎಳೆದಂತ ಅಚ್ಚರಿಯಲ್ಲಿ. ಆದರೆ ಗ್ರಾಮೀಣ ಹಿನ್ನೆಲೆಯಿಂದ ಬಂದ ಅನೇಕ ಕನ್ನಡ ವಿದ್ಯಾರ್ಥಿಗಳು ಜಾನಪದ ಸಂಶೋಧನೆಗಳ ಕಡೆ ಸೆಳೆಯಲ್ಪಡುತ್ತಾರೆ. ಆದರೆ ರೆಡ್ಡಿ ಸಂಶೋಧನೆಗಳ ಕಡೆ ಸೆಳೆಯಲ್ಪಡುತ್ತಾರೆ. ಆದರೆ ರೆಡ್ಡಿಯವರನ್ನು ಸೆಳೆದುದು ಕಠಿಣವಾದ ಲಿಪಿಗಳ, ಶಾಸನಗಳ, ವಾಸ್ತುಶಿಲ್ಪದ ಅಧ್ಯಯನ.

ಅವರು ಎಂ.ಎ. ಮಾಡಿದ ಮೇಲೆ ಕೆಲಕಾಲ ಒಂದು ಖಾಸಗಿ ಕಾಲೇಜಿನಲ್ಲಿ ನೌಕರಿ ಮಾಡಿದರು. ಅದು ನೆಪ ಮಾತ್ರ ಸಂಬಳಕ್ಕೆ. ಮುಂದೆ ಆ ನೌಕರಿ ಕಳೆದುಕೊಂಡು ಪಾಡುಪಟ್ಟದು. ಕೆಲಕಾಲ ನಿರುದ್ಯೋಗಿ. ಮುಂದೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ "ಕ್ಯುರೇಟರ್' ಆದರು. ಅಲ್ಲಿ ಕನ್ನಡ ಸಂಶೋಧನೆಗಾಗಿ ಒಂದು ಕೇಂದ್ರವನ್ನು ತೆರೆಯಲಾಗಿತ್ತು. ದಿ॥ ತಿ.ತಾ.ಶರ್ಮ, ನಾನು, ಡಾ॥ ಚಿದಾನಂದಮೂರ್ತಿ, ಡಾ॥ ಗಾಯಿ ಮುಂತಾದವರಿದ್ದ ಒಂದು ಸಮಿತಿ. ಈ ವಿಚಾರ ಶಿಫಾರಸು ಮಾಡಲು ನಾಡೋಜ ಶ್ರೀ ನಾರಾಯಣ ಇದಕ್ಕೆ ಒಪ್ಪಿದ್ದರು. ಅಲ್ಲಿ ಮುಖ್ಯವಾಗಿ ಶಾಸನಗಳ ಅಧ್ಯಯನಕ್ಕೆ ಒಂದು ಕೇಂದ್ರವೂ ಇತ್ತು. ಆರ್.ಎಸ್. ಪಂಚಮುಖಿಯವರ ಕೈಕೆಳಗೆ ಪಳಗಿದವರಾದ ಶ್ರೀ ಎ.ಎಂ. ಅಣ್ಣಿಗೇರಿ ಅಲ್ಲಿ ಶಿಕ್ಷಕರಾಗಿ ಬಂದರು. ಆ ವರ್ಷ ನೆನಪಿಲ್ಲ. ಆಗ ಅವರು ಆರಂಭಿಸಿದ ತರಗತಿಯಲ್ಲಿ ಶ್ರೀ ರೆಡ್ಡಿ ಒಬ್ಬ. ಮೊದಲ ತಂಡದ ವಿದ್ಯಾರ್ಥಿಯೆಂದು ನನಗೆ ನೆನಪು ಆಗಲೇ ಶಾಸನಗಳ ಅಧ್ಯಯನದಲ್ಲಿ ಶ್ರೀ ರೆಡ್ಡಿ ಪಳಗಿದ್ದರು. ಶ್ರೀ ಅಣ್ಣಿಗೇರಿಯವರು ಧಾರವಾಡಕ್ಕೆ ಮರಳಿದ ಮೇಲೆ, ಶ್ರೀ ರೆಡ್ಡಿಯವರು ಅದರ ಮುಖ್ಯಸ್ಥರಾದರು. ಹಲವು ವರ್ಷ ಅಲ್ಲಿ ದುಡಿದರು. ವಿದ್ಯಾರ್ಥಿಗಳ ಪ್ರವಾಸ ಏರ್ಪಡಿಸಿ, ಅವರಲ್ಲಿ ಉತ್ಸಾಹ, ಕುತೂಹಲ ತುಂಬಿದರು. ಮುಂದೆ ಅವರಿಗೆ ಸರಕಾರೀ ನೌಕರಿಯು ಗ್ರಾಮೀಣ ಪ್ರೌಢಶಾಲೆಯಲ್ಲಿ ದೊರೆಯಿತು. ಅಲ್ಲಿ ಅವರ ಶಾಸನಗಳ ಅಧ್ಯಯನ, ದೇವಾಲಯದ ಅಧ್ಯಯನದಂಥ ವಿಚಾರಗಳನ್ನು ಮೆಚ್ಚುವ ವಾತಾವರಣ ಇರಲಿಲ್ಲ. ಯಾವುದೇ ವಿಚಾರ ಸಂಕಿರಣ ಅಥವಾ ಅಧ್ಯಯನ ಕಾರ್ಯಾಗಾರಕ್ಕೆ ಇವರು ಹೋಗಬೇಕೆಂದಾಗ ಅವರಿಗೆ ಡೆಪ್ಯುಟೇಶನ್ ನೀಡಲು ಮೀನಮೇಷ!

ಇದೇ ಕಾಲಕ್ಕೆ ನಮ್ಮ ಗ್ಯಾಸೆಟಿಯರ್ ಇಲಾಖೆಗೆ ಅವರನ್ನು ಎರವಲು ಸೇವೆ ಮೇಲೆ ಪಡೆದೆವು. ಆಗ ಗ್ಯಾಸೆಟಿಯರ್‌ನ ಕನ್ನಡ ಆವೃತ್ತಿ ತರಬೇಕೆಂದು ಅವರನ್ನು ಕರೆಯುವುದು ಸಾಧ್ಯವಿತ್ತು. ಕಚೇರಿಯ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿದರೆ, ಅವರ ಇತರ ಶೈಕ್ಷಣಿಕ ಚಟುವಟಿಕೆಗೆ ನಮ್ಮ ಅಡ್ಡಿ ಇರಲಿಲ್ಲ. ವಾಸ್ತವಾಗಿ ಅದೆಲ್ಲ ನಮ್ಮ ಇಲಾಖೆಗೆ ಬೇಕಿತ್ತು. ಇಲಾಖೆಯಲ್ಲಿ ಯಾವುದೇ ವಿಷಯ – ಕೃಷಿ, ಪಶುಸಂಗೋಪನೆ, ಜಾತಿ–ನೀತಿ, ಹಬ್ಬ ಹರಿದಿನ ಮುಂತಾದ ಗ್ರಾಮೀಣ ಚಟುವಟಿಕೆಗಳ ಬಗ್ಗೆ ಯಾವಾಗಲೂ ಮುದ್ರಿತ ಇಲ್ಲವೆ ಲಿಖಿತ ವಿವರ ಸಿಗುತ್ತಿರಲಿಲ್ಲ. ಗ್ರಾಮೀಣ ಜೀವನ ಬಲ್ಲವರು ಬೇಕಾಗಿತ್ತು. ಅಲ್ಲದೆ ಶ್ರೀ ರೆಡ್ಡಿಯವರಿಗೆ ಕನ್ನಡ, ತೆಲುಗು, ತಮಿಳು ಭಾಷೆ ಬರುತ್ತಿರುವುದು ಒಂದು ವಿಶೇಷಾನುಕೂಲವಾಗಿತ್ತು. ಗ್ಯಾಸೆಟಿಯರ್‌ನಲ್ಲಿ ಪುಸ್ತಕದ ಬದನೆಕಾಯಿಯಿಂದ ಮಾತ್ರ ಅಡುಗೆ ಆಗುತ್ತಿರಲಿಲ್ಲ. ಕ್ಷೇತ್ರಕಾರ್ಯ ಕೂಡ ಮಾಡಬೇಕಿತ್ತು. ಗ್ರಾಮೀಣ ಜೀವನದ ಅನುಭವವೂ ಬೇಕಿತ್ತು. ಶ್ರೀ ರೆಡ್ಡಿ ನಮ್ಮ ಇಲಾಖೆಗೆ ಹೇಳಿ ಮಾಡಿಸಿದವರಂತೆ ಇದ್ದರು. ಆದರೆ ಸರಕಾರದ ನಿಯಮಗಳಂತೆ ಅವರನ್ನು ರಿಸರ್ಚ್ ಅಸಿಸ್ಟೆಂಟ್‌ಗಿಂತ ಹೆಚ್ಚಿನ ಹುದ್ದೆಗೆ ನಾನು ನೇಮಿಸುವಂತಿರಲಿಲ್ಲ. ಆದರೆ ಅವರು ಸಂಪಾದಕರಾಗಿ ಒಂದೆರಡು ಅಧ್ಯಾಯಗಳ ಕೆಲಸ ಮಾಡಬೇಕಿತ್ತು. ಅದನ್ನು ಶ್ರೀ ರೆಡ್ಡಿ ಸಂತೋಷದಿಂದ ಮಾಡಿದರು (ಪ್ರತಿ ಅಧ್ಯಾಯದ ಕೆಲಸ ಮಾಡಿದವರ ಹೆಸರು ಮುದ್ರಿಸುವ ಪರಿಪಾಠ ನಾನು ಆರಂಭಿಸಿದ್ದೆ), ಹೇಳಿದ ಕಾಲಮಿತಿಯಲ್ಲಿ ಅವರು ಕೆಲಸ ಮಾಡುತ್ತಿದ್ದರು. ಏಕೆಂದರೆ ಅವರಿಗೆ ಶೈಕ್ಷಣಿಕ ಜ್ಞಾನದ ಬಲವಾದ ಹಸಿವಿತ್ತು. ಇದೇ ಕಾಲಕ್ಕೆ ಅವರಿಗೆ ಡಾಕ್ಟರೇಟ್ ಪದವಿ

---

* 'ಕೀರ್ತಿ', ೭೯೮, ೧೧ನೆಯ ಮುಖ್ಯರಸ್ತೆ, ೬ನೆಯ ಅಡ್ಡರಸ್ತೆ, ಹನುಮಂತನಗರ, ಬೆಂಗಳೂರು-೫೬೦೦೧೯.

ಕೂಡ ಬಂತು. ನಾವೆಲ್ಲ ಸಂತೋಷಪಟ್ಟೆವು. ಆದರೆ ಹುದ್ದೆಯಲ್ಲಿ ಅವರಿಗೆ ಬಡ್ತಿ ನೀಡಲು ನಿಯಮಗಳಂತೆ ನನಗೆ ಸಾಧ್ಯ ಇರಲಿಲ್ಲ.

ಸಂಶೋಧನೆಯ ನೆಪದಲ್ಲಿ ಭಾರತೀಯ ಸಂಸ್ಕೃತಿಯ ಪ್ರತಿಯೊಂದು ಸಂಗತಿಯನ್ನು ಬಹಳ ಸಲ ಕಾರಣವಿಲ್ಲದೇ ತೆಗಳುವವರ ಬಗ್ಗೆ ಶ್ರೀ ರೆಡ್ಡಿ ನನಗಿಂತ ಬಲುವಾಗಿ ಖಂಡನೆ ಮಾಡುತ್ತಿದ್ದರು ಮತ್ತು ನಾವು ಬರೆಯುವುದು ಸರಕಾರದ ಪರವಾಗಿ. ಇಚ್ಛೆ ಬಂದಂತೆ ಬರೆಯುವಂತಿಲ್ಲ. ಬರಹ ಸಕಾರಣವಾಗಿರಬೇಕು ಎಂದು ಹೇಳಿದರೂ ಹೀಗೆ ಬರೆಯಬೇಕೆಂದು ಕ್ಷೇತ್ರಕಾರ್ಯದ ಕಾಲಕ್ಕೆ ನಮ್ಮ ಮೇಲೆ ಒತ್ತಾಯ ತರುವವರಿದ್ದರು. ಜಾತಿಗಳ ಬಗ್ಗೆ ಏನೇನನ್ನೋ ಹೇಳಿ ದಾರಿ ತಪ್ಪಿಸುವವರಿದ್ದರು. ಒಮ್ಮೆ ಇಂಥ 'ತಜ್ಞರು' ಈ ವಿಷಯ ತಾವು ಹೇಳಿದಂತೆ ಬರೆಯಬೇಕೆಂದು ಹೇಳಿ ಈ ಬಗ್ಗೆ ಮುಖ್ಯ ಕಾರ್ಯದರ್ಶಿಗಳಿಗೆ ಪತ್ರ ಕೂಡ ಬರೆದಿದ್ದರು. ಅವರ ಬಾಯಿ ಮುಚ್ಚಿಸಿದುದು ಶ್ರೀ ರೆಡ್ಡಿಯ ಜಾಣ್ಮೆ ಹಾಗೂ ಅವಶ್ಯವಿದ್ದಾಗ ಕಾಣಿಸುವ ನಿಷ್ಠುರ ಸ್ವಭಾವ. ಇಂಥ ಕೆಲ ಘಟನೆಗಳನ್ನು ನೆನೆದಾಗಲೆಲ್ಲ ಈಗಲೂ ನನಗೆ ಶಿಳಿನಗೆ ಬರುತ್ತದೆ.

ಇದೇ ಕಾಲದಲ್ಲಿ ನಾನು ಮಿಥಿಕ್ ಸೊಸೈಟಿಯಲ್ಲೂ ಕಾರ್ಯಶೀಲನಾಗಿದ್ದೆ. ನಮ್ಮ ಇಲಾಖೆಯ ಅನೇಕ ಸಹೋದ್ಯೋಗಿಗಳು ಅಲ್ಲಿನ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದರು. ಇದರಲ್ಲಿ ಶ್ರೀ ರೆಡ್ಡಿ ಒಬ್ಬರು. ಅಲ್ಲಿ ಅಮೂಲ್ಯ ಗ್ರಂಥಾಲಯವೂ ಇದೆ. ಕರ್ನಾಟಕ ಇತಿಹಾಸದ ಬಗ್ಗೆ ಹೊಸ ವಿಷಯ ಬೆಳಕಿಗೆ ಬಂದಾಗ (ಶಾಸನ, ಪ್ರಾಗಿತಿಹಾಸ ಅಥವಾ ಇತರ ಸಂಗತಿಗಳು) ಇದಕ್ಕೆ ಕಾರಣರಾದ ವ್ಯಕ್ತಿಯನ್ನು ಕರೆದು ಸೊಸೈಟಿಯಲ್ಲಿ ಭಾಷಣ ಏರ್ಪಡಿಸುತ್ತಿದ್ದೆವು. ಅಂಥವರಿಂದ ಸೊಸೈಟಿಯ ನಿಯತಕಾಲಿಕಕ್ಕೆ ಲೇಖನ ತರಿಸುತ್ತಿದ್ದೆವು. ಇದರಿಂದ ಗ್ಯಾಸೆಟಿಯರ್‌ಗೆ ಬೇಕಾದ ಹೊಸ ಮಾಹಿತಿ ಒದಗುತ್ತಿತ್ತು. ಹಳೆಯ ಕತೆಗಳನ್ನೇ ಮತ್ತೆ (ಅವುಗಳು ನಿಜವಲ್ಲವಾದರೂ) ಪುನರಾವರ್ತನೆ ಮಾಡಬಾರದು. ಹೊಸ ವಿಷಯ ಬೆಳಕಿಗೆ ಬಂದಾಗ ಅದನ್ನು ಗ್ಯಾಸೆಟಿಯರ್ ದಾಖಲೆ ಮಾಡಬೇಕು ಎಂಬುದು ನಮ್ಮ ಇರಾದೆ. ಐತಿಹ್ಯ, ಪುರಾಣಗಳ ಬಗ್ಗೆ ಇರುವ ಪರಂಪರೆಯನ್ನು ಕೂಡ ಉಲ್ಲೇಖಿಸುತ್ತಿದ್ದೆವು. ಇದಕ್ಕೂ ವ್ಯಾಪಕವಾದ ಕೆಲಸವಾಗಬೇಕೆಂದು ನಾಡಿನ ಮೂಲೆ ಮೂಲೆಯಿಂದ ವಿಷಯ ಸಂಗ್ರಹಿಸಲು ಕರ್ನಾಟಕ ಇತಿಹಾಸ ಅಕಾದೆಮಿ ಆರಂಭಿಸಿದೆವು. ಶ್ರೀ ರೆಡ್ಡಿ ಅದರಲ್ಲೂ ಕಾರ್ಯಶೀಲರಾದರು. ಇಲಾಖೆಗೆ ಮಾಹಿತಿ ನೀಡುವವರ ದೊಡ್ಡ ತಂಡ ಅದರಿಂದ ವ್ಯಾಪಕವಾಗಿದೆ.

'ಗ್ಯಾಸೆಟಿಯರ್' ಇಲಾಖೆಯಲ್ಲಿ ಕೆಲಸ ಮಾಡಿದ್ದರಿಂದ ತಮ್ಮ ಜ್ಞಾನದಿಗಂತ ವಿಸ್ತರಿಸಿದೆ. ಅದರಿಂದ ತನಗೆ ಶೈಕ್ಷಣಿಕವಾಗಿ ಮಾತ್ರವಲ್ಲ ವ್ಯಕ್ತಿತ್ವವಿಕಾಸಕ್ಕೂ ಅನುಕೂಲವಾಗಿದೆ ಎಂದು ಶ್ರೀ ರೆಡ್ಡಿ ಹೇಳಿದ್ದಾರೆ. ಅದಕ್ಕೆ ನಾನು ಕಾರಣನಲ್ಲ. ಇಲಾಖೆಯಲ್ಲಿ ಒಳ್ಳೆಯ ಉತ್ಸಾಹಿಗಳ ಗುಂಪು ಇತ್ತು. ಗ್ಯಾಸೆಟಿಯರ್‌ನ ಉದ್ದೇಶ ಮನಗಂಡು ಅವರೆಲ್ಲ ದುಡಿಯುವ ವಾತಾವರಣ ಅಲ್ಲಿ ಸೃಷ್ಟಿಯಾಗಿತ್ತು. ಅವರಿಗೆಲ್ಲ ಪೂರ್ಣ ಸ್ವಾತಂತ್ರ್ಯವಿತ್ತು. ಸಕಾಲಕ್ಕೆ ಅವರಿಗೆ ಒಪ್ಪಿಸಿದ ಕಾರ್ಯ ಮಾಡುವ ಒತ್ತಾಯ ಇತ್ತು. ಇದರಿಂದ ವರ್ಷಕ್ಕೊಂದು ಸಂಪುಟ ಹೊರತಂದೆವು. ಇಷ್ಟು ವೇಗದಿಂದ, ಇಷ್ಟು ವ್ಯಾಪಕವಾಗಿ ಬೇರೆ ರಾಜ್ಯಗಳಲ್ಲಿ ಕೆಲಸ ಆಗಿಲ್ಲ. ಇದಕ್ಕೆ ಶ್ರೀ ರೆಡ್ಡಿಯಂಥ ಉತ್ಸಾಹಿಗಳು ಕಾರಣ.

ವಾಸ್ತುಶಿಲ್ಪ, ಶಾಸನ ಹಾಗೂ ಇತರ ಸಾಂಸ್ಕೃತಿಕ ವಿಚಾರಗಳ ಬಗ್ಗೆ ಅನೇಕ ಲೇಖನ, ಪುಸ್ತಕ ಶ್ರೀ ರೆಡ್ಡಿ ಬರೆದಿದ್ದಾರೆ. ಲಿಪಿಶಾಸ್ತ್ರದ ಬಗ್ಗೆ ತಲಸ್ಪರ್ಶಿ ಪುಸ್ತಕ ರಚಿಸಿದ್ದಾರೆ. ಅವರ ಮಗಳೊಬ್ಬಳು ಶಾಸನಶಾಸ್ತ್ರದಲ್ಲಿ ಪರಿಣತಿ ಪಡೆದಿದ್ದಾರೆ. ಇದೆಲ್ಲ ನನಗೆ ಹೆಮ್ಮೆಯ ಸಂಗತಿ. ಹಂಪಿ ವಿಶ್ವವಿದ್ಯಾಲಯದಿಂದ ಜಿಲ್ಲಾವಾರು ಶಾಸನಗಳ ಸಂಪುಟ ಹೊರತಂದದ್ದು ಅಭಿನಂದನೀಯ ಕೆಲಸ. ಅದರಲ್ಲೂ ಹಂಪೆಯ ಶಾಸನಗಳ ಸಂಪುಟ ನೆನೆಯಬೇಕಾದದ್ದು. ಅರವತ್ತು ದಾಟಿ ಉದ್ಯೋಗದಲ್ಲಿ ನಿವೃತ್ತರಾಗಿದ್ದರೂ ಅವರ ದೇಹಸ್ಥಿತಿ ಚೆನ್ನಾಗಿರದಿದ್ದರೂ ಅವರು ವಿದ್ವತ್‌ಪಥ ಸಂಚಲನ ಕೈ ಬಿಟ್ಟಿಲ್ಲ. ಅವರಿಂದ ಇನ್ನಷ್ಟು ಒಳ್ಳೆಯ ಪ್ರಕಟಣೆಗಳು ಬರಲೆಂದು ಹಾರೈಸುತ್ತೇನೆ. ಅವರಿಗೆ ಸದಾ ಶುಭ ಕೋರುತ್ತೇನೆ.



# ಡಾ॥ ದೇವರಕೊಂಡಾರೆಡ್ಡಿಯವರು

– ಜಿ. ಬ್ರಹ್ಮಪ್ಪ*

ಬೆಂಗಳೂರಿನ ಗವರ್ನಮೆಂಟ್ ಕಾಲೇಜಿನಲ್ಲಿ ಶ್ರೀ ದೇವರಕೊಂಡಾರೆಡ್ಡಿಯವರು ನನ್ನ ನೆಚ್ಚಿನ ವಿದ್ಯಾರ್ಥಿಯಾಗಿದ್ದವರು. ಇವರು ಮಿತಭಾಷಿಯಾಗಿ ಮೈಯೆಲ್ಲ ಮನಸ್ಸಾಗಿ ಪಾಠಪ್ರವಚನವನ್ನು ರಕ್ತಗತ ಮಾಡಿಕೊಳ್ಳುತ್ತಿದ್ದರು.

ಭಾರತೀಯರು ಇತಿಹಾಸವನ್ನು ಮರೆತು, ಎಲ್ಲವನ್ನೂ ಪುರಾಣ ಮಾಡಿ ಮೈ ಮರೆತಾಗ ಪರಕೀಯರು ದಾಳಿ ಮಾಡಿ ಭಾರತವನ್ನು ಆಳಿದರು. ಮುಸಲ್ಮಾನರು ಗುಡಿಗೋಪುರಗಳನ್ನು ಹಾಳುಗೆಡವಿದರು. ಆದರೆ ಬ್ರಿಟಿಷರು ಬಂದ ಮೇಲೆ ಅಳಿದುಳಿದ ಭಾರತದ ದೇಗುಲಗಳನ್ನು ಶಿಲಾಶಾಸನಗಳನ್ನು ರಕ್ಷಿಸಿದರು. ರೈಸ್ ಮಹಾಶಯರೂ, ಶ್ರೀ ಆರ್. ನರಸಿಂಹಾಚಾರ್ಯರೂ, ಶ್ರೀ ಎಂ.ಎಚ್. ಕೃಷ್ಣರವರೂ ಶಾಸನಗಳ ವಿವರಗಳನ್ನು ಪ್ರಕಟಿಸಿ ಇತಿಹಾಸಕ್ಕೆ ಭದ್ರ ಬುನಾದಿ ಹಾಕಿದರು. ಶಾಸನದ ಅಕ್ಷರಗಳೂ ವಾಕ್ಯಗಳೂ ಹಿಂದಿನ ಪರಂಪರೆಯವಾಗಿದ್ದು ಸಾಮಾನ್ಯರಿಗೆ ಅರ್ಥವಾಗುವುದಿಲ್ಲ.

ಇತ್ತೀಚೆಗೆ ಶ್ರೀ ಸೀತಾರಾಮ ಜಾಗೀರದಾರರೂ, ಡಾ॥ ಬಾ.ರಾ. ಗೋಪಾಲ ಅವರೂ ಶಾಸನ ಸಂಪತ್ತನ್ನು ರಕ್ಷಿಸಲು ಹೆಣಗಾಡಿದರು. ಗೋಜಲು ಗೋಜಲಾದ ಈ ಕಾರ್ಯಕ್ಕೆ ತೊಡಗುವವರ ಸಂಖ್ಯೆ ತೀರ ವಿರಳ. ನಾಡಿನ ಸುದೈವವೋ ಏನೋ ಡಾ. ದೇವರಕೊಂಡಾರೆಡ್ಡಿಯವರು ಪುರಾತನ ಸಂಪದವನ್ನು ಉಳಿಸಲು ಪಣ ತೊಟ್ಟು ತ್ರಿಕರಣ ಪೂರ್ವಕವಾಗಿ ಯತ್ನಿಸಿ ಸಫಲತೆ ಪಡೆದಿರುವರು. ಹತ್ತರಲ್ಲಿ ಒಬ್ಬರಾಗಿರದೆ ಪುರಾತನ ಸಂಪತ್ತನ್ನು ಬೆಳಕಿಗೆ ತರಲು ಅಹರ್ನಿಶಿ ಶ್ರಮಿಸಿ ಸಾರ್ಥಕತೆ ಪಡೆದಿರುವರು. ಇವರ ಬರವಣಿಗೆಯನ್ನೆಲ್ಲ ಒಂದು ಸಂಪುಟವಾಗಿ ತಂದರೆ ಅದು ನಿಜವಾದ ಅಭಿನಂದನೆಯಾಗುವುದು. ಸಮಿತಿಯು ಈ ಕಾರ್ಯ ಮಾಡಿ ಕರ್ನಾಟಕಕ್ಕೆ ಕೊಡುಗೆಯಾಗಿ ಕೊಡಬೇಕು.

ಇತಿಹಾಸವನ್ನು ದಾಖಲಿಸುವ ಹಾದಿ ಅಂಕುಡೊಂಕಾಗಿ ಸಂಶೋಧಕರನ್ನು ಕಾಡುವುದು. ಡಾ॥ ದೇವರಕೊಂಡಾರೆಡ್ಡಿಯವರು ಧೈರ್ಯವಾಗಿ ಈ ಅಂಕುಡೊಂಕು ಹಾದಿಯಲ್ಲಿ ಸಾಗಿ ಅಪೂರ್ವವಾದ ಐತಿಹಾಸಿಕ ಸಂಪದವನ್ನು ನಮಗೆ ನೀಡಿ ಕೃತಾರ್ಥರಾಗಿರುವರು. ಇವರು ನೂರ್ಕಾಲ ಬಾಳಲಿ. ಇಂಥವರಿಂದಲೇ ನಮ್ಮ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಸಂಪತ್ತು ರಕ್ಷಣೆಯಾಗಬೇಕಾಗಿದೆ.



* ನಂ. ೩೧೦, ಆಲನಹಳ್ಳಿ ಬಡಾವಣೆ, ಮೈಸೂರು-೫೭೦೦೧೧.

# ಇತಿಹಾಸಕ್ಕೆ ಮತಾಂತರ ಹೊಂದಿದ ಕನ್ನಡ ವಿದ್ಯಾರ್ಥಿ

– ಡಾ॥ ಎಂ.ಎಂ. ಕಲಬುರ್ಗಿ*

'ಕಾರ್ಯವನ್ನು ಯೋಜಿಸು, ಯೋಜನೆಯನ್ನು ಕಾರ್ಯಗತಗೊಳಿಸು' ಈ ನಿಲುವು ನನಗೆ ತುಂಬ ಪ್ರಿಯವಾದುದು. ಈ ದಾರಿಯಲ್ಲಿ ದುಡಿಯುವ ನಾನು ಹೀಗೆ ದುಡಿಯುವವರನ್ನು ತುಂಬ ಪ್ರೀತಿಸುತ್ತೇನೆ. ಇಂಥ ನನ್ನ ಪ್ರೀತಿಗೆ ಪಾತ್ರರಾದ ಕೆಲವೇ ಜನರಲ್ಲಿ ಡಾ॥ ದೇವರ ಕೊಂಡಾರೆಡ್ಡಿಯವರೂ ಒಬ್ಬರು.

ಡಾ॥ ದೇವರಕೊಂಡಾರೆಡ್ಡಿಯವರು ನನಗೆ ಮೂರು ದಶಕಗಳಿಂದ ಪರಿಚಿತರು. ಸಾಹಿತ್ಯ ಪರಿಷತ್ತಿನಲ್ಲಿ, ಗೆಜೆಟಿಯರ್ ಕಾರ್ಯಾಲಯದಲ್ಲಿ ಸೇವೆ ಸಲ್ಲಿಸುತ್ತಾ ಇತಿಹಾಸ ಅಕಾದೆಮಿಯಲ್ಲಿ ಅವರು ತೊಡಗಿಕೊಂಡಿದ್ದ ದಿನಗಳವು. ಈ ಎಲ್ಲ ನೆಲೆಗಳಲ್ಲಿ ಅವರು ದುಡಿಯುತ್ತಿದ್ದುದನ್ನು, ಆಗಾಗ ಲೇಖನ ಪ್ರಕಟಿಸುತ್ತಿದ್ದುದನ್ನು ಗಮನಿಸುತ್ತಲಿದ್ದೆ. ಹೀಗೆ ಅವರು ನನ್ನ ಕಣ್ಣ ಮುಂದೆಯೇ ಇತಿಹಾಸ ಕ್ಷೇತ್ರದಲ್ಲಿ ವಿದ್ವಾಂಸರಾಗಿ ಬೆಳೆಯುತ್ತಾ ಬಂದರು. ಹೀಗಿದ್ದೂ ಈ ಘಟ್ಟದಲ್ಲಿ ಅವರ ನನ್ನ ಸಂಬಂಧ ಅಷ್ಟಕಷ್ಟೇ. ಇದಕ್ಕೆ ಕಾರಣ, ಧಾರವಾಡ ಬೆಂಗಳೂರುಗಳ ಭೌಗೋಳಿಕ ಅಂತರ ಮತ್ತು ನಾವು ಕೆಲಸ ಮಾಡುತ್ತಲಿದ್ದ ಭಿನ್ನ ಸ್ವರೂಪದ ಸಂಸ್ಥೆಗಳು.

೧೯೯೮, ನಾನು ಕನ್ನಡ ವಿಶ್ವವಿದ್ಯಾಲಯದ ಕುಲಪತಿಯಾದ ಸಂದರ್ಭ. ಸಂಶೋಧನೆ–ಶಾಸನ ಸಂಶೋಧನೆ ನನ್ನ ಪ್ರೀತಿಯ ವಿಷಯವಾದ್ದರಿಂದ ಅಲ್ಲಿಯ ಶಾಸನ ವಿಭಾಗದ ಬಗ್ಗೆ ನಾನು ವಿಶೇಷ ಗಮನ ನೀಡಿದೆ. ಆಗ ಈ ವಿಭಾಗದ ಮುಖ್ಯಸ್ಥರು ಡಾ॥ ದೇವರಕೊಂಡಾರೆಡ್ಡಿ. ಮುಖ್ಯಸ್ಥರೂ ಸೇರಿ ಅಲ್ಲಿ ಅಧ್ಯಾಪಕರು ನಾಲ್ಕು ಜನ ಮಾತ್ರ. ಮೇಲಾಗಿ ಯುವಕರು. ಇನ್ನೂ ವಿಶೇಷವೆಂದರೆ ದೇವರಕೊಂಡಾರೆಡ್ಡಿಯವರ ಸಹಿತ ಮೂರು ಜನರೂ ಕನ್ನಡ ಎಂ.ಎ. ಓದಿದವರು. ಒಬ್ಬರು ಮಾತ್ರ ಇತಿಹಾಸ ಓದಿದವರು. ಇಂಥ ಕನ್ನಡ ಸಿಬ್ಬಂದಿ ಇಟ್ಟುಕೊಂಡು ಇತಿಹಾಸ ಕ್ಷೇತ್ರದ ಶಾಸನ ಸಂಪುಟಗಳನ್ನು ಪ್ರಕಟಿಸುವುದು ಹೇಗೆ? ಎಂಬ ಪ್ರಶ್ನೆ ನನಗೆ ಎದುರಾಯಿತು.

ಒಂದು ದಿನ ಮುಖ್ಯಸ್ಥರನ್ನು ಕರೆಸಿ, 'ಧಾರವಾಡ, ಗುಲ್ಬರ್ಗಾ ವಿಶ್ವದ್ಯಾಲಯಗಳು ಅಸ್ತಿತ್ವಕ್ಕೆ ಬಂದು ಹಲವು ದಶಕಗಳು ಸಂದಿವೆ. ಗುಲ್ಬರ್ಗಾದಲ್ಲಿ ಒಂದು ಇತಿಹಾಸ ವಿಭಾಗವಿದೆ. ಧಾರವಾಡದಲ್ಲಿ ಎರಡು ಇತಿಹಾಸ ವಿಭಾಗ, ಒಂದು ಕನ್ನಡ ಸಂಶೋಧನಾ ಸಂಸ್ಥೆಗಳಿವೆ. ಹೀಗಿದ್ದೂ ಉತ್ತರ ಕರ್ನಾಟಕದ ಶಾಸನಗಳು ವ್ಯವಸ್ಥಿತವಾಗಿ ಅಂದರೆ ಜಿಲ್ಲಾವಾರು ಸಂಪುಟಗಳಾಗಿ ಹೊರಬರಲಿಲ್ಲ. ಈ ಕೊರತೆಯನ್ನು ಹಂಪಿ ವಿಶ್ವವಿದ್ಯಾಲಯ ತುಂಬಿಕೊಡುವುದು ಅವಶ್ಯವಿದೆ' ಎನ್ನುತ್ತಲೇ, 'ಕುಲಪತಿಗಳ ಪ್ರೋತ್ಸಾಹವಿದ್ದರೆ ಈ ಸಿಬ್ಬಂದಿ ಕಟ್ಟಿಕೊಂಡು ನಾನು ನಿಮ್ಮ ಇಚ್ಛೆಯನ್ನು ಪೂರೈಸುತ್ತೇನೆ' ಎಂದು ದಿಟ್ಟ ಉತ್ತರ ನೀಡಿದರು. ನಾನು ಭರವಸೆ ನೀಡುತ್ತಲೇ ಇನ್ನೂ ದಿಟ್ಟವಾಗಿ ಕ್ಷೇತ್ರಕಾರ್ಯ, ಶಾಸನ ವಾಚನ, ಪರಿಷ್ಕರಣ, ಮುದ್ರಣಕಾರ್ಯಗಳನ್ನು ಜೊತೆ ಜೊತೆಯಾಗಿ ಆರಂಭಿಸಿಯೇಬಿಟ್ಟರು. ಪ್ರತಿ ಮೂರು ತಿಂಗಳಿನ ಸಂದರ್ಶನದಲ್ಲಿ ಈ ವಿಭಾಗ ಬೆಟ್ಟದಷ್ಟು ಕಾರ್ಯ ಮಾಡುತ್ತಲಿರುವುದನ್ನು ಗಮನಿಸಿದೆ. 'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ' ಎನ್ನುವ ಹೆಸರಿನಲ್ಲಿ ಒಂದರ ಮೇಲೆ ಒಂದರಂತೆ ಸಂಪುಟಗಳು, ಅದೂ ಗಜಗಾತ್ರದ ಸಂಪುಟಗಳು ಪ್ರಕಟವಾಗತೊಡಗಿದವು.

ಈವರೆಗೆ ೧. ಬಳ್ಳಾರಿ ಜಿಲ್ಲೆ, ೨. ಕೊಪ್ಪಳ ಜಿಲ್ಲೆ ೩. ಹಂಪಿ, ೪. ತಮಿಳುನಾಡಿನ ಕನ್ನಡ ಶಾಸನಗಳು, ೫. ಆಂಧ್ರಪ್ರದೇಶದ ಕನ್ನಡ ಶಾಸನಗಳು ಭಾಗ ೧ ಮತ್ತು ೨, ೬. ಮಹಾರಾಷ್ಟ್ರದ ಕನ್ನಡ ಶಾಸನಗಳು, ೭. ರಾಯಚೂರು ಜಿಲ್ಲೆ, ೮. ಬೀದರ್ ಜಿಲ್ಲೆ, ೯. ಬಾಗಲಕೋಟ ಜಿಲ್ಲೆ – ಹೀಗೆ ಶಾಸನ ಸಂಪುಟಗಳು ಪ್ರಕಟವಾಗಿದ್ದು, ಇವುಗಳಲ್ಲಿ ೪, ೫ನೆಯ ಸಂಪುಟಗಳನ್ನು ಬಿಟ್ಟರೆ ಮಿಕ್ಕ ಸಂಪುಟಗಳೆಲ್ಲ ದೇವರಕೊಂಡಾರೆಡ್ಡಿಯವರ ನೇರ ನೇತೃತ್ವ, ಶ್ರಮ–ಶ್ರದ್ಧೆಯ ಫಲವೆಂದೇ ಹೇಳಬೇಕು. ಇವರಿಗೆ ಕೆಲಸ ಮಾಡುವ, ಕೆಲಸ ಮಾಡಿಸುವ ಕಲೆ ಗೊತ್ತಿದೆ. ಇಂದಿನ ವಿಭಕ್ತ ಮನಸ್ಸಿನ ಸಹೋದ್ಯೋಗಿಗಳಿಂದ ಅವಿಭಕ್ತ ಕಾರ್ಯ ಮಾಡಿಸುವುದು ತುಂಬಾ ಕಠಿಣ. ಅದರಲ್ಲಿಯೂ ಒಬ್ಬೊಬ್ಬರಿಂದ ಒಂದೊಂದು ಕೃತಿ ರಚನೆ ಮಾಡಿಸುವುದಲ್ಲ.

---

* ಸೌಜನ್ಯ, ಕಲ್ಯಾಣನಗರ, ೯ನೆಯ ಅಡ್ಡರಸ್ತೆ, ಧಾರವಾಡ–೫೮೦೦೦೭.

ಎಲ್ಲರೂ ಸೇರಿ ಒಂದೇ ಕೃತಿ ರಚನೆ ಮಾಡುವುದು ಇನ್ನೂ ಕಠಿಣ. ಇಲ್ಲಿ ಕೆಲಸದ ತಾರತಮ್ಯ, ಪ್ರಸಿದ್ಧಿಯ ತಾರತಮ್ಯ ಪ್ರಶ್ನೆಗಳು ಎದುರಾಗುತ್ತವೆ. ಅವು ಎದುರಾಗದಂತೆ ನೋಡಿಕೊಳ್ಳುವ, ಎದುರಾದರೂ ನಿವಾರಿಸಿ ಸಂಪುಟವನ್ನು ಸಾಕಾರಗೊಳಿಸುವ ಯೋಜಕತ್ವ ಅವಶ್ಯ. ಹೆಚ್ಚಿನದಾಗಿ ಸಂಸ್ಕೃತ ಶಾಸನಗಳ ವಾಚನ, ಇಂಗ್ಲಿಷ್ ಟಿಪ್ಪಣಿ ಬರವಣಿಗೆಗಳಿಗೆ ಅನ್ಯ ವಿದ್ವಾಂಸರ ನೆರವು ಪಡೆಯುವುದು... ಇವೆಲ್ಲ ಸುಲಭವಲ್ಲ. ಹೀಗಿದ್ದೂ ರೆಡ್ಡಿಯವರು ಈ ಎಲ್ಲ ಅಗ್ನಿದಿವ್ಯಗಳನ್ನು ಸುಲಭವಾಗಿ ಗೆದೆಯುತ್ತಲಿದ್ದ ರೀತಿ ನನಗೆ ಸೋಜಿಗ, ಸಂತೋಷಗಳನ್ನುಂಟು ಮಾಡುತ್ತಲಿದ್ದಿತು.

ಅದೇನೇ ಇರಲಿ, ನಮ್ಮ ನಾಡಿನ ಶಾಸನ ಸಾಹಿತ್ಯದ ಪ್ರಕಟಣೆಯ ಇತಿಹಾಸದಲ್ಲಿ ದಕ್ಷಿಣ ಕರ್ನಾಟಕದ ಶಾಸನಗಳನ್ನು ಹೊರತಂದ ಬಿ.ಎಲ್. ರೈಸ್ ಅವರಂತೆ, ಉತ್ತರ ಕರ್ನಾಟಕದ ಶಾಸನಗಳನ್ನು ಹೊರತಂದ ಕೀರ್ತಿ ಡಾ॥ ದೇವರಕೊಂಡಾರೆಡ್ಡಿ ಅವರಿಗೆ ಸಲ್ಲುತ್ತದೆ. ರೈಸ್ ಅವರ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳಂತೆ ಇವರ ಕನ್ನಡ ಯೂನಿವರ್ಸಿಟಿ ಎಪಿಗ್ರಾಫಿಕಲ್ ಸೀರಿಸ್ ಮೈಲಿಗಲ್ಲು ಎನಿಸಿದೆ. ರೆಡ್ಡಿಯವರು ಮುಖ್ಯಸ್ಥ ಹುದ್ದೆಯಿಂದ ನಿರ್ಗಮಿಸುತ್ತಲೇ ಈ ಕೆಲಸ ನಿಧಾನವಾಗುತ್ತಲಿರುವುದನ್ನು ನೋಡಿದರೆ ಈ ಯೋಜನೆಗೆ ಅವರೇ ಕೇಂದ್ರಶಕ್ತಿಯಾಗಿದ್ದರೆಂದು ಸ್ಪಷ್ಟವಾಗುತ್ತದೆ. ಇವೆಲ್ಲವನ್ನೂ ಗಮನಿಸಿದರೆ, ಶಾಸನ ಪ್ರಕಟಣೆಗೆ ಸಂಬಂಧಿಸಿದಂತೆ ಇವರದು ಬಿ.ಎಲ್.ರೈಸ್ ಮಾದರಿಯ ಕೆಲಸವೆಂದು ಮನವರಿಕೆಯಾಗುತ್ತದೆ.

ಈ ಯೋಜನೆಗೆ ಮೊದಲು ಪ್ರಕಟಿಸಿದ 'ತಲಕಾಡಿನ ಗಂಗರ ದೇವಾಲಯಗಳು – ಒಂದು ಅಧ್ಯಯನ', ತರುವಾಯ ಪ್ರಕಟಿಸಿದ 'ಲಿಪಿಯ ಹುಟ್ಟು ಮತ್ತು ಬೆಳವಣಿಗೆ' ಇವರ ಇನ್ನೆರಡು ಮೌಲಿಕ ಕೃತಿಗಳಾಗಿವೆ. ವ್ಯಾಪಕ ಕ್ಷೇತ್ರಕಾರ್ಯ, ವಿಪುಲ ಮಾಹಿತಿ ಸಂಗ್ರಹ, ಗಂಗರ ದೇವಾಲಯಗಳ ವೈಶಿಷ್ಟ್ಯ ಗುರುತಿಸುವಿಕೆ – ಇವು ಗಂಗರ ದೇವಾಲಯ ಕೃತಿಯ ಸಾಧನೆಗಳೆನಿಸಿವೆ. ಈ ಮೊದಲು ಲಿಪಿಶಾಸ್ತ್ರವನ್ನು ಕುರಿತು ಕನ್ನಡದಲ್ಲಿ ಒಂದೆರಡು ಗ್ರಂಥಗಳು ಬಂದಿದ್ದರೂ ಡಾ. ರೆಡ್ಡಿಯವರ ಲಿಪಿಯ ಹುಟ್ಟು ಮತ್ತು ಬೆಳವಣಿಗೆ ಕೃತಿ ಹೆಚ್ಚು ಸಮಗ್ರ ಹಾಗೂ ಹೆಚ್ಚು ಒಳನೋಟಗಳನ್ನು ಹೊಂದಿದೆ.

ಹೀಗೆ ಇತಿಹಾಸಕ್ಕೆ ಸಂಬಂಧಿಸಿದಂತೆ ಸ್ವತಂತ್ರ ಬರವಣಿಗೆ, ಶಾಸನ ಸಂಪಾದನೆಗಳಿಗೆ ಗಮನಾರ್ಹ ಕೊಡುಗೆ ನೀಡಿದ ಇವರ ವೈಶಿಷ್ಟ್ಯವನ್ನು ಇನ್ನೊಂದು ದೃಷ್ಟಿಯಿಂದ ಗುರುತಿಸಬಹುದು. ಅದು ಮೂಲತಃ ಕನ್ನಡ ಎಂ.ಎ. ಓದಿದ್ದರೂ ಇವರು ಇತಿಹಾಸ ಕ್ಷೇತ್ರದಲ್ಲಿಯೇ ವಿಶೇಷ ಕೆಲಸ ಮಾಡಿದರು. ಹಾಗೆ ನೋಡಿದರೆ ಇತಿಹಾಸ ಮತ್ತು ಸಾಹಿತ್ಯ ಪರಸ್ಪರ ಪೂರಕ ವಿಷಯಗಳು. ಸಾಹಿತ್ಯದ ವಿದ್ಯಾರ್ಥಿಗೆ ಇತಿಹಾಸದ ಅಧ್ಯಯನವು ಸಾಹಿತ್ಯವನ್ನು ಚಾರಿತ್ರಿಕ ಸಂದರ್ಭದಲ್ಲಿಟ್ಟು ನೋಡುವುದನ್ನು, ಜೊತೆಗೆ ಇತಿಹಾಸ ವಿದ್ಯಾರ್ಥಿಗಿಂತ ಭಿನ್ನ ದೃಷ್ಟಿಯಿಂದ ಚರಿತ್ರೆ ನೋಡುವುದನ್ನು ಕಲಿಸುತ್ತದೆ. ಈ ಕಾರಣದಿಂದಾಗಿ ಇತ್ತೀಚಿನ ದಿನಗಳಲ್ಲಿ ಕನ್ನಡ ಪ್ರಾಧ್ಯಾಪಕರು ಶಾಸನ–ಇತಿಹಾಸ–ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ವಿಪುಲ ಕಾರ್ಯ ಮಾಡಿದ್ದಾರೆ. ಇಂಥವರನ್ನು ಇತಿಹಾಸಕ್ಕೆ ವಲಸೆ ಹೋದ ಕನ್ನಡ ಪ್ರಾಧ್ಯಾಪಕರೆಂದು ಗುರುತಿಸಬಹುದು. ಇವರಿಗಿಂತ ಭಿನ್ನವೆಂಬಂತೆ ಕನ್ನಡ ಮೂಲದ ಡಾ. ರೆಡ್ಡಿಯವರು ಇಡಿಯಾಗಿ ಇತಿಹಾಸಕ್ಕೆ ಹೊರಳಿದ್ದಾರೆ. ಹೀಗಾಗಿ ಇವರನ್ನು ಇತಿಹಾಸಕ್ಕೆ ವಲಸೆ ಹೋದ ಕನ್ನಡ ವಿದ್ಯಾರ್ಥಿಯೆನ್ನುವುದಕ್ಕಿಂತ ಇತಿಹಾಸಕ್ಕೆ ಮತಾಂತರ ಹೊಂದಿದ ಕನ್ನಡ ವಿದ್ಯಾರ್ಥಿಯೆಂದು ಕರೆಯಬಹುದಾಗಿದೆ.



# ದೇವರಕೊಂಡಂ

– ಕೆ.ಎಸ್. ಮಧುಸೂಧನ*

ಇತ್ತೀಚೆಗೊಂದು ದಿನಂ ಸೆಜ್ಜೆವನೆಯೊಳಗೆ ಪಟ್ಟಿರ್ದೆನಾಗಳ್ ಸೆಜ್ಜೆಯ ಮೇಲ್ ಬಿದ್ದಿರ್ದ ಕರ್ಣ ಪಿಶಾಚಂ (Mobilinge ಈ ಪೆಸರಂ ಇತ್ತವರ್ ಎನಗುಂ ಮೇಣ್ ದೇವರಕೊಂಡಾರೆಡ್ಡಿಗುಂ ಓಜರಾಗಿರ್ದ ಶ್ರೀ ಜಿ.ಎಸ್. ಶಿವರುದ್ರಪ್ಪ ನಾಮಾಖ್ಯರ್) ಒರ್ಮೆಗೇ ಟ್ರಿಣ್ ಟ್ರಿಣ್ ನಾದಂಗೆಯ್ಯುದಂ ಕೇಳ್ದು, ಕರದೊಳ್ ಪಿಡಿದು ಕರ್ಣದ ಸನಿಹಕ್ಕೆ ಕೊಂಡೊಯ್ಯಲ್ ಅತ್ತಣಿಂದಂ ಒರ್ ಕರ್ಕಶ ಇಂಚರಂ ಪೊರಪೊಣ್ಮಿದುದು, ಅಕಟಕಟಾ! ಇದಾರ ದನಿಯೆಂದು ಅಚ್ಚರಿಗೊಳುತಿರಲ್ ನಾನ್ ಶಶಿಗೆ ಅಭಿರಾಮನ್, ಎನ್.ಬಿ. ಚಂದ್ರಮೋಹನನ್ನೈ – ಎಂದು ಇಂತೆಂದು ಪೇಳಲ್ ತೊಡಂಗಿದನ್. 'ಎಲೈ ಗುಮ್ಮಳಾಪುರದ ಏರಿಗೆರೆಯ ಸೇನಬೋವ, ವರಬೃಹಚ್ಚರಣಾಲಂಕರಣ ಕೆ.ಎಸ್. ಮಧುಸೂದನಾ, ಕೇಳ್ ವಣಕನಹಳ್ಳಿ ಎಂಬ ಗ್ರಾಮದ ಪುತ್ರಂ ಶ್ರೀಮಾನ್ ದೇವರಕೊಂಡಾರೆಡ್ಡಿಗೆ ಷಷ್ಟ್ಯಬ್ದಿ ಸಂವತ್ಸರಂ ನೆರೆಗುಂ. ಒರ್ ಲೇಖನಮನ್ ಕತಿಪಯ ದಿನಂಗಳೊಳ್ ದಯೆಯಿಂ ಕಳಿಪು' ಎನೆ ಆನುಂ ಲೇಖನಮುಂ ರಚಿಸಿತೊಡಗಿದೆನಂತೆನೆ,

ಈ ದೇವರಕೊಂಡಂ ವಣಕನಹಳ್ಳಿ ಗ್ರಾಮಕೆ ಸೇರ್ದವಂ ಆಂ ಗುಮ್ಮಳಾಪುರಿಗಂ ಅವಂ ಪಳ್ಳಿಗೆ ಸೇರ್ದವಂ, ಆಂ ಪುರಾಧಿಪಂ. ಪುರಕಂ ಪಳ್ಳಿಗಂ ಅಂತರಂ ಅರೆ ಯೋಜನಮಂತೆ. ಎನಗೆ, ಎನ್ನ ಸೋದರರ್ಗೆ, ದಾಯಾದ್ಯರ್ಗೆ ಎಮ್ಮಜ್ಜಂ ಆಚಮನಾಚರಣೆಯೊಳ್ ಬರ್ಪ ಕೇಶವ ನಾಮಾವಳಿಯ ಪೆಸರ್ಗಳಿಂದಂ ಮಧುಸೂಧನ, ಅಚ್ಯುತ, ನಾರಾಯಣ ವೆಸರ್ಗಳನಿರಿಸಿರ್ಪರ್, ಕರ್ಮಠ ಬ್ರಾಹ್ಮಣರಲ್ತೆ. ಅವಂಗೆ ಅವನ ತಾಯ್ತಂದೆವಿರ್ ಪುರಕೆರಡು ಗಾವುದಮಿರ್ಪ ದೇವರ ಬೆಟ್ಟ ಗ್ರಾಮದ ಪೆಸರನಿರಿಸಿರ್ಪರ್. ಎನಿತು ಇನಿದಲ್ತೆ ದೇವರಬೆಟ್ಟಮೆಂಬ ಕನ್ನಡವಾತಿನ ತೆಲುಂಗು ಭಾಷಾ ರೂಪಂ, ದೇವರಕೊಂಡಂ. ಅವನೋ ತನ್ನ ತನೂಭವಂಗೆ ದೇವರಕೊಂಡದ ದೈವಮಾದ ಸನತ್ಕುಮಾರವೆಸರನಿರಿಸಿರ್ಪಂ. ಎನಿತಾದೊಡಂ ಮಾರ್ಗಕಿಂ ದೇಸಿಯ ಸೊಗಡು ಇನಿದಲ್ತೆ.

ಈ ಸಮಯದೊಳ್ ಪೇಳಬೇಕಿರ್ಪ ಮಾತೊಂದಿರ್ಪುದು. ಈ ಪಾಮರ ಮಾರ್ಗಕಾರನ ಮನೆವಾತು ತಮಿಳ್ ಸೊಲ್, ಆ ದೇಸಿಗನ ಮನೆವಾತೊ ತೆಲುಗು ಮಾಟ. ಎಮ್ಮಿರ್ವರ್ಗಂ ಪ್ರಾಯದಂತರಂ ಎರಳ್ವರುಷಂ. ಅಂತೆಯೆ ಎಮ್ಮಿರ್ವರ್ಗಂ ಸಮಾನಂ ಕನ್ನಡ ಭಾಷಾ ಪ್ರೇಮಂ. ಇವಂ ಪಾಷಾಣ ಹೃದಯಿ. ಪಾಷಾಣಮೆನೆ ಶಿಲೆ. ಇವನ ಹೃದಯ ಕಮಲದೊಳ್ ಶಿಲೆ ಇರ್ಕುಂ, ಶಿಲಾಶಾಸನಮಿರ್ಕುಂ, ಅನಿತು ಶಾಸನ ಪ್ರಿಯನವಂ. ಇತಿಹಾಸ ದರ್ಶನ ಸಂಪುಟಮೈದರೊಳ್ ದೇವರಕೊಂಡಂ 'ಗುಮ್ಮಳಾಪುರದ ಗೌರಮ್ಮನ ಗುಡಿಯ ಶಿಲಾಶಾಸನ' ಮೆಂಬ ಲೇಖನಮಂ ಪ್ರಕಟಿಸಿರ್ಪಂ, ಅದು ಬಲು ಲೇಸು, ಬಲು ಲೇಸು. ತರಗತಿಯೊಳಿವಂ ಎನಗಿಂ ಒಂದು ಬರಿಸಂ ಮುಂದಪ್ಪುದರಿಂ ಅಂತು ಎನ್ನಕ್ಕ ಉಮಾ ಮಹೇಶ್ವರಿಯ ಸಹಪಾಠಿ. ಕಾಲೇಜಿನೊಳಂ, ವಿಶ್ವವಿದ್ಯಾಲಯದೊಳಂ ಇವಂ ಕರ್ತವ್ಯಮಂ ನಿರ್ವಹಿಸಿ ನಿವೃತ್ತನಾಗಿರ್ಪಂ.

ಚಿಕ್ಕಂದಿನೊಳ್ ಶಾಲೆಯೊಳ್ ಆಡುವಂದು ಇವಂ ಎನ್ನೊಡನೆ ಕಲಹಂ ತೆಗೆವಂ ಪೊಡೆಯುವನ್ ಗಿಲ್ಲುವನ್ ಗಹಗಹಿಸಿ ನಗುವನ್ ಆದೊಡದು ಕೆಳೆಯ ಕಲಹಮನಿತೆ, ಇನ್ನೇನಲ್ಲಂ. ಇವಂ ನೇರ ನುಡಿಗಾರಂ, ಮತ್ತೋರ್ವ ಗುರುವರ್ಯ ರಾಜರತ್ನಂ ಪೇಳ್ವಂತೆ 'ಯೋಳಾದೇನ್ರ ಯೋಳಾದಿದ್ರ ಜಟ್ಟಿಟ್ನೇಳ್ಮುಗಿಸು' ಎಂಬ ನುಡಿಯೊಳ್ ಇವಂಗೆ ನಂಬುಗೆ. ಪುರಕಂ ಪಳ್ಳಿಗಂ ಒರ್ಮೆ ಕಾರಣಾಂತರದಿಂ ಕಲಹಮುಂಟಾಗಲ್ ಎನಗಂ ಇವಂಗಂ ಇರಿಸುಮುರಿಸು. ಒರ್ಮೆ ಇವಂ ಗುಮ್ಮಳಾಪುರದ ಪಿರಿಯ ಮಠದೊಳ್ ಶೂನ್ಯ ಸಂಪಾದನೆಯಂ ಕುರಿತು ಗೋಷ್ಟಿಯೊಂದನೇರ್ಪಡಿಸಿರ್ದಂ ಪಿರಿಯರಿರ್ವರ್ ವಿದ್ವಾಂಸರ್ ಕಲಬುರ್ಗಿ ಎಂ.ಎಂ. ಮೇಣ್ ಮಾನ್ಯ ಕಿ.ರಂ. ನಾಗರಾಜ್ ಆ ಗೋಷ್ಟಿಯೊಳ್ ಶೂನ್ಯ ಸಂಪಾದನೆಯಂ ಕುರಿತು ಉಪನ್ಯಾಸಂಗಳಂ ಬಿತ್ತರಿಸಿದರ್. ಆ ಗೋಷ್ಟಿ ಬಲು ಸೊಬಗುವಡೆದಿರ್ದುದೆಂದು ನಂತರಂ ಎನಗೆ ಕೆಳೆಯರ್ ಪೇಳ್ದರ್.

ಅಂತಿಮಮಾಗಿ, ಆಂ ಅವನಂ ಕಿರಿಯನಪ್ಪುದರಿಂ ಆಶೀರ್ವಾದಂ ಮಾಳ್ಪಂತಿಲ್ಲಂ. ಅಪ್ಪನ್ನೆಗಂ ಒರ್ಕಂದ ಪದ್ಯದಿಂ ಈ ಲೇಖ್ಯಮಂ ಮುಗಿಪೆಂ.

ದೇವರಕೊಂಡಾರೆಡ್ಡಿಗೆ ದೇವಶಿವಂ ನೀಡುತಿರಲಿ ಕ್ಷೇಮಾಯುಷ್ಯಂ ।
ಆವಾಗಳ್ ಸಂಪದಮಂ ಭಾವಿತ ಸರ್ವಾರ್ಥ ಸಿದ್ಧಿಯಂ ದಯೆಯಿಂದಂ ।



* ೧೫೫೫ ವೈ. ೩ನೆಯ ಮೈನ್. ೭ನೆಯ ಬ್ಲಾಕ್, ೪ನೆಯ ಫೇಸ್, ಬನಶಂಕರಿ ೩ನೆಯ ಹಂತ, ಬೆಂಗಳೂರು–೫೬೦೦೮೫.

# ನೆಲದಲ್ಲಿ ಬೇರುಗಳಿರುವ ವಿದ್ವಾಂಸ : ದೇಕೊಂರೆ

– ಡಾ॥ ಕೆ.ವಿ. ನಾರಾಯಣ*

ದೇವರಕೊಂಡಾರೆಡ್ಡಿ ಜೊತೆಗೆ ನಾನು ಎಂ.ಎ. ಓದಿದೆ. ಆ ಓದಿನ ದಿನಗಳಲ್ಲಿ (೧೯೬೯–೭೧) ಬೆಂಗಳೂರಿನ ಸರ್ಕಾರಿ ಕಾಲೇಜಿನಿಂದ ಕನ್ನಡವನ್ನು ಪದವಿ ತರಗತಿಯಲ್ಲಿ ಐಚ್ಛಿಕ ವಿಷಯವನ್ನಾಗಿ ಓದಿದವರ ಗುಂಪೊಂದಿತ್ತು. ರೆಡ್ಡಿ ಆ ಗುಂಪಿಗೆ ಸೇರಿದವನು. ಹಾಗೆ ಆ ಗುಂಪಿನಲ್ಲಿ ಇದ್ದವರೆಂದರೆ ಎನ್.ಬಿ. ಚಂದ್ರಮೋಹನ್, ಜಿ.ಎಸ್.ವೆಂಕಟರಾಜು, ಬಿ.ಎಸ್. ರಾಮಪ್ರಸಾದ್, ಜ್ವಾಲಾಕುಮಾರ್, ನರಸಿಂಹನ್. ಇವರಲ್ಲದೆ ಸರ್ಕಾರಿ ಕಾಲೇಜಿನಿಂದ ಬಂದ, ಆದರೆ ಇವರ ಒಡನಾಡಿಗಳಲ್ಲದ ಇನ್ನೂ ಕೆಲವರು ಇದ್ದರು. ಆ ಹೊತ್ತಿಗೆ ಸೆಂಟ್ರಲ್ ಕಾಲೇಜಿನ ಕನ್ನಡ ವಿಭಾಗಕ್ಕೂ ಸರ್ಕಾರಿ ಕಾಲೇಜಿನ ಕನ್ನಡ ವಿಭಾಗಕ್ಕೂ ಏನೋ ಮುನಿಸು ಇರುವುದು ಹೊಸಬರಾದ ನಮಗೇ ತಿಳಿಯುತ್ತಿತ್ತು. ಹಾಗಾಗಿ ಈ ಪಟಾಲಂನ ಹುಡುಗರು ಸೆಂಟ್ರಲ್ ಕಾಲೇಜ್ ಪಾಂಡಿತ್ಯಕ್ಕೆ ತಾವು ಸೊಪ್ಪು ಹಾಕುವವರಲ್ಲ ಎಂಬಂತೆ ನಡೆದುಕೊಳ್ಳುತ್ತಿದ್ದರು. ನಮ್ಮ ದೇಕೊಂರೆ (ಎಲ್ಲರ ಹೆಸರನ್ನೂ ಚುಟುಕುಗೊಳಿಸುವುದರಲ್ಲಿ ನಿಸ್ಸೀಮನಾದ ನಮ್ಮ ಸೀನಿಯರ್ ಎಚ್.ಎಸ್. ರಾಘವೇಂದ್ರ ರಾವ್ ನೀಡಿದ ಹೆಸರು) ಸಿಡಿಯುವ ಪಟಾಕಿಯಂತಿದ್ದ. ಶಾಸ್ತ್ರ ವಿಷಯಗಳಲ್ಲಿ ಅವನ ತಿಳುವಳಿಕೆ ಆ ಹೊತ್ತಿಗೆ ನಮ್ಮೆಲ್ಲರ ತಿಳಿವಿಗಿಂತ ಹೆಚ್ಚಾಗಿದ್ದುದು ಗೊತ್ತಾಗುವಂತಿತ್ತು. ದರ್ಪಣವಿರಲಿ, ಛಂದಸ್ಸಿರಲಿ, ಸಾಹಿತ್ಯ ಚರಿತ್ರೆಯಿರಲಿ ಇವೆಲ್ಲ ಅವನಿಗೆ ಆಗಲೇ ಅಂಗೈ ಮೇಲಿನ ನೆಲ್ಲಿಕಾಯಿಯಂತಿದ್ದವು. ಆ ನೆಲ್ಲಿಕಾಯನ್ನು ನಮಗೂ ಆಗಾಗ ಅವನು ತೋರಿಸುತ್ತಿದ್ದ. ಹೀಗಿದ್ದರೂ ವಿಮರ್ಶೆ, ಮೀಮಾಂಸೆಗಳು ಹೊತ್ತು ಕಳೆಯುವವರ ಕೈ ಕೆಲಸವೆಂದೇ ಅವನು ತಿಳಿದಿದ್ದ.

ಮೊದಲ ವರ್ಷ ಗ್ರಂಥ ಸಂಪಾದನೆಯ ತರಗತಿಗಳನ್ನು ನಡೆಸಿ ಕೊಡುತ್ತಿದ್ದವರು ಆಗ ತಾನೇ ವೃತ್ತಿಯಿಂದ ವಿಶ್ರಾಂತರಾಗಿದ್ದ ಸರ್ಕಾರಿ ಕಾಲೇಜಿನ ಪ್ರೊಫೆಸರ್ ಎಂ.ವಿ. ಸೀತಾರಾಮಯ್ಯನವರು. ಇವರು ಆಗಲೇ ದೇಕೊಂರೆ ಗುಂಪಿಗೆ ಪಾಠ ಹೇಳಿದ್ದವರು. ಹಾಗಾಗಿ ಅವರಿಗೆಲ್ಲ ತಮ್ಮ ಗುರುಗಳ ಮೇಲೆ ಎಣೆಯಿಲ್ಲದ ಭಕುತಿ. ಆಸ್ತಮಾದಿಂದ ತೊಂದರೆ ಪಡುತ್ತಿದ್ದ ಪ್ರೊ.ಎಂವಿಸೀ ಅವರು ತರಗತಿಗಳಿಗೆ ಬರುವಾಗ ಕಾಫಿ, ಬಿಸಿನೀರು ಎರಡೂ ಇರುತ್ತಿದ್ದ ಫ್ಲಾಸ್ಕನ್ನು ತರುತ್ತಿದ್ದರು. ಅದನ್ನು ದೇಕೊಂರೆ ಬಿಡದೆ ತಾನೇ ತಂದೊಯ್ಯುವ ಕೆಲಸ ಮಾಡುತ್ತಿದ್ದ; ಆಗಾಗ ನಮ್ಮಿಂದ ಗೇಲಿಗೂ ಒಳಗಾಗುತ್ತಿದ್ದ. ಆದರೆ ಅವೆಲ್ಲ ಅವನಲ್ಲಿ ಹಿಂಜರಿಕೆ ತರಲಿಲ್ಲ. ತನ್ನ ಕಾಯಕವನ್ನು ಬಿಡದೆ ಮುಂದುವರೆಸಿದ.

ಆ ಹೊತ್ತು ಹಳ್ಳಿಯಿಂದ ಬೆಂಗಳೂರಿಗೆ ಬಂದು ಓದುತ್ತಿದ್ದ ಎಲ್ಲರಂತೆ ರೆಡ್ಡಿ ಕೂಡ ಎಲ್ಲೆಲ್ಲೋ ಇದ್ದುಕೊಂಡು, ಎಲ್ಲೆಲ್ಲೋ ಊಟ ಮಾಡಿಕೊಂಡು ಓದಿದವನು. ಪದವಿಯೋದಿನಲ್ಲಿ ಅವನಿದ್ದ ಹಾಸ್ಟೆಲ್ ಈಗ ನಗರ್ತ ಪೇಟೆಯಲ್ಲಿ ಇದ್ದಂತಿಲ್ಲ. ಈ ಪಡಿಪಾಟಲುಗಳು ಅವನ ಓದಿನ ಮೇಲೆ ಯಾವ ಅಡ್ಡ ಪರಿಣಾಮಗಳನ್ನೂ ಮಾಡಲಿಲ್ಲ. ನಮ್ಮ ವಿಭಾಗ ಆಗ ತೆರೆದುಕೊಳ್ಳುತ್ತಿದ್ದ ಹೊಸ ಬಗೆಯ ಚಿಂತನಾ ಕ್ರಮಗಳಿಗೆ ತನ್ನನ್ನು ಒಗ್ಗಿಸಿಕೊಳ್ಳದೆ ತನಗೆ ಸರಿಯೆನಿಸಿದ ಹಾದಿಯಲ್ಲೇ ಓದನ್ನು ಮುಂದುವರೆಸುತ್ತ ನಡೆದದ್ದನ್ನು ನಾನು ಕಂಡೆ. ಹೊಸ ಚಿಂತನೆ ಎಂದರೆ ಕೊಂಚ ದೂರವೇ ಉಳಿಯುತ್ತಿದ್ದ ರೆಡ್ಡಿ ನಮ್ಮೆಲ್ಲರನ್ನೂ ಗೇಲಿ ಮಾಡುತ್ತಲೇ ನಮ್ಮಿಂದಲೂ ಗೇಲಿಗೆ ಒಳಗಾಗುತ್ತಿದ್ದ. ಎರಡನೆಯ ವರುಷದಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಮೈದಳೆದ ಪಿಪಿ ಬಳಗದಲ್ಲಿ ಸೇರಿ ಹೋದ. ಆ ವರುಷ ನಾವು ಕೆಲವರು ಓದಿಗೆ ನೆರವಾಗುವಂತೆ ಟಿಪ್ಪಣಿಗಳನ್ನು ಮಾಡಿಕೊಂಡು ಕುಳಿತು ಗುಂಪಿನಲ್ಲಿ ಚರ್ಚಿಸುತ್ತಿದ್ದೆವು. ಆಗ ರೆಡ್ಡಿ ಬರೆಯುತ್ತಿದ್ದ ಟಿಪ್ಪಣಿಗಳ ಹಿಂದಿನ ಓದು ಮತ್ತು ಅವನ ತಿಳುವಳಿಕೆಗಳು ನಮಗೆಲ್ಲ ಅಚ್ಚರಿ ತರುತ್ತಿದ್ದವು.

---

* ೩೨೯, ಗೌರಿ, ಡಿಯೋಮಾರ್ವೆಲ್ ಕಾಲೋನಿ, ಅನಂತಪುರ ರಸ್ತೆ, ಯಲಹಂಕ, ಬೆಂಗಳೂರು.

ಹೀಗಿದ್ದ ದೇಕೊಂರೆ ಎಂ.ಎ. ಮುಗಿಸಿದ ಮೇಲೆ ತಕ್ಕ ಕೆಲಸ ಸಿಗದೆ ಗುಂಡ್ಲುಪೇಟೆ ಕಡೆ ಶಾಲೆಯ ಅಧ್ಯಾಪಕನಾಗಿ ಸೇರಿಕೊಂಡ. ಆಗಲೇ ಪಿಎಚ್.ಡಿ. ಅಧ್ಯಯನಕ್ಕೂ ತೊಡಗಿಸಿಕೊಂಡದ್ದನ್ನು ತಿಳಿದೆ. ಗಂಗರ ದೇವಸ್ಥಾನಗಳಿದ್ದ ಊರುಗಳಿಗೆ ಹೋಗಿ ಅಲ್ಲಿ ಮಾಹಿತಿಯನ್ನು ಕೂಡಿಹಾಕತೊಡಗಿದ್ದು, ಆ ಹೊತ್ತಿನಲ್ಲೇ ನಮ್ಮೂರಿಗೆ ಹೋಗಿ ಅಲ್ಲಿದ್ದ ಶಿವಾಲಯವೊಂದರಲ್ಲಿ ಇರಿಸಿದ್ದ ಗಂಗರ ಕಾಲದ ವಿಗ್ರಹಗಳ ಬಗೆಗೆ ನನಗೆ ಗೊತ್ತಿಲ್ಲದಿದ್ದ ಹಲವು ಸಂಗತಿಗಳನ್ನು ನನಗೆ ತಿಳಿಸಿದ್ದು... ಇವೆಲ್ಲ ಈಗ ಕತೆ. ಬಳಿಕ ಕನ್ನಡ ಸಾಹಿತ್ಯ ಪರಿಷತ್ತಿನ ಸಂಗ್ರಹಾಲಯ ಬೆಳಸಲು ಬಂದು ಎಲ್ಲಿಂದೆಲ್ಲಿಂದಲೋ ಹಸ್ತಪ್ರತಿಗಳನ್ನು ಕಲೆಹಾಕಿದ. ಈವರೆಗೆ ನಮಗೆ ದೊರಕಿರುವ ಆದಿಪುರಾಣದ ಹಸ್ತಪ್ರತಿಗಳಲ್ಲೇ ಅತಿ ಹಿಂದಿನ ಹಸ್ತಪ್ರತಿಯೊಂದನ್ನು ಪತ್ತೆ ಮಾಡಿದ. ಅಲ್ಲಿ ಹೋದಾಗ ಕಾಳಿಕಾ ಪುರಾಣವೆಂಬ ಕೃತಿಯೊಂದನ್ನು ನನಗೆ ತೋರಿಸಿ ಗಾಬರಿ ಹುಟ್ಟಿಸಿದ. ಅದರಲ್ಲಿ ಎಷ್ಟೋ ಸಾವಿರ ಷಟ್ಪದಿಗಳಿವೆ. ಆ ಕೃತಿಯನ್ನು ತಾನು ಸಂಪಾದಿಸುತ್ತಿರುವುದಾಗಿ ಹೇಳಿದ (ಆ ಕೆಲಸ ಮುಗಿದಿರಬೇಕು). ಅಲ್ಲಿ ಆಡಳಿತ ನಡೆಸುತ್ತಿದ್ದವರನ್ನು ಎದುರು ಹಾಕಿಕೊಂಡು ಧರಣಿ ಕೂತು ಮೇಲಿನವರ ಅವಕೃಪೆಗೆ ಒಳಗಾದ. ಆ ಬಳಿಕ ಕರ್ನಾಟಕ ಗಜೆಟಿಯರ್ ಇಲಾಖೆಗೆ ಸೇರಿದ. ಈ ನಡುವೆ ಅವನ ಪಿಎಚ್.ಡಿ. ಅಧ್ಯಯನ ಮುಗಿದಿತ್ತು. ಅವನ ನಿಬಂಧದಲ್ಲಿನ ಸಂಗತಿಗಳ ಬಗೆಗೆ ತಕರಾರು ತೆಗೆದ ರೆಫರಿಯೊಬ್ಬರ ವರದಿಗೆ ಪ್ರತಿಯಾಗಿ ಅದಕ್ಕಿಂತಲೂ ದೊಡ್ಡ ಎದುರುತ್ತರವನ್ನು ಸಿದ್ಧಪಡಿಸಿದ್ದನ್ನು ನಾನು ಕಂಡೆ. ಅದಿರಲಿ, ಗಜೆಟಿಯರ್ ಇಲಾಖೆಯಲ್ಲಿ ಅಗಾಧ ಪ್ರಮಾಣದ ಮಾಹಿತಿ ಸಂಗ್ರಹ ಮತ್ತು ಬರವಣಿಗೆಯನ್ನು ಮಾಡಿದ್ದಾನೆ. ಇದೆಲ್ಲ ಕತೆ ಏಕೆ ಹೇಳಿದೆ? ನನಗೆ ಈಗಲೂ ಅನ್ನಿಸುವುದಿಷ್ಟೆ. ರೆಡ್ಡಿಗೆ ಎದುರಾದ ಅಡ್ಡಿ ಆತಂಕಗಳನ್ನು ಗಮನಿಸಿದರೆ ಬೇರೆಯವರಾಗಿದ್ದಲ್ಲಿ ಓದುಬರಹಗಳನ್ನು ತೊರೆದುಬಿಡುತ್ತಿದ್ದರು. ಇಲ್ಲವೇ ಮನಸ್ಸು ಕಹಿ ಮಾಡಿಕೊಳ್ಳುತ್ತಿದ್ದರು. ಆದರೆ ಈ ನನ್ನ ಮಿತ್ರ ಹಾಗಾಗಲಿಲ್ಲ. ಎಡೆಬಿಡದೆ ಅಧ್ಯಯನದ ಬೆನ್ನು ಹತ್ತಿದ. ಛಲವನ್ನು ಬಿಡಲಿಲ್ಲ.

ಸಾಹಿತ್ಯ ಪರಿಷತ್ತಿನಲ್ಲಿದ್ದಾಗ ಅವನಿಗೆ ಶಾಸನ ಶಾಸ್ತ್ರದ ತರಗತಿಗಳನ್ನು ನಡೆಸುವ ಅವಕಾಶ ದೊರೆತಿತ್ತು. ಇದರಿಂದ ರೆಡ್ಡಿಗೆ ಎರಡು ಪ್ರಯೋಜನಗಳಾದಂತೆ ತೋರುತ್ತದೆ. ಒಂದು: ತನ್ನ ಅಧ್ಯಯನಕ್ಕೆ ಒಂದು ಹೊಸ ಗುರಿ ಸಿಕ್ಕಿದ್ದು. ಎರಡು: ಆ ಕ್ಷೇತ್ರದಲ್ಲಿ ಹೊಸಬರನ್ನು ತರಬೇತಿಗೊಳಿಸುತ್ತಲೇ ಪಳಗಿದ ವಿದ್ವಾಂಸರೊಡನೆ ಮುಖಾಮುಖಿಯಾಗುವುದು. ಇವೆರಡೂ ರೆಡ್ಡಿಯ ಕಳೆದ ಎರಡು ದಶಕಗಳ ಓದುಬರಹವನ್ನು ಪೋಷಿಸಿವೆ. ತಜ್ಞತೆಯನ್ನು ಪಡೆದುಕೊಳ್ಳುವುದು ಒಂದು ನೆಲೆಯಾದರೆ, ಹಾಗೆ ಪಡೆದ ತಜ್ಞತೆಯನ್ನು ಜ್ಞಾನಶಾಖೆಯ ವಿಸ್ತರಣೆಗೆ ಬಳಸುವುದು ಇನ್ನೊಂದು ನೆಲೆ. ರೆಡ್ಡಿ ತನ್ನ ತಜ್ಞತೆಯನ್ನು ಬಳಸಿಕೊಂಡ ಬಗೆಗೆ ನಾನು ಹೊಸ ಸಾಕ್ಷಿಗಳನ್ನು ಈಗ ಮುಂದಿಡಬೇಕಿಲ್ಲ.

ಕನ್ನಡ ವಿಶ್ವವಿದ್ಯಾಲಯಕ್ಕೆ ದೇಕೊಂರೆ ಬಂದದ್ದು ಒಂದು ಕತೆ. ಅದನ್ನೀಗ ಹೇಳುವುದಿಲ್ಲ. ಬಂದ ಮೇಲೆ ಆವರೆಗೆ ಕನ್ನಡ ನಾಡಿನ ಯಾವ ವಿಶ್ವವಿದ್ಯಾಲಯವೂ ಮಾಡದಿದ್ದಷ್ಟು ಪ್ರಮಾಣದಲ್ಲಿ ಶಾಸನ ಅಧ್ಯಯನ ಕ್ಷೇತ್ರದ ಕೆಲಸಗಳನ್ನು ರೆಡ್ಡಿ ಮಾಡಿ ಮುಗಿಸಿರುವುದನ್ನು ಹತ್ತಿರದಿಂದ ನಾನು ನೋಡಿ ಬಲ್ಲೆ. ಕರ್ನಾಟಕದ ಹೊಸ ಜಿಲ್ಲೆಗಳ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸುವುದು ಸಾಮಾನ್ಯ ಕೆಲಸವಲ್ಲ. ಕನ್ನಡ ವಿಶ್ವವಿದ್ಯಾಲಯ ಹಲವು ವಿದ್ವಾಂಸರ ನೆರವಿನಿಂದ ರೆಡ್ಡಿಯ ಕಣ್ಗಾಪಿನಲ್ಲಿ ಹೊರತಂದಿರುವ ಶಾಸನ ಸಂಪುಟಗಳ ಮಹತ್ವವನ್ನು ಹೇಳಲಾಗುವುದಿಲ್ಲ.

ನಾನು ಬರೆದ ಒಂದಕ್ಷರವನ್ನೂ ರೆಡ್ಡಿ ಓದಿಲ್ಲವೆಂದು ನಾನು ಬಲ್ಲೆ. ನನ್ನ ಆಸಕ್ತಿಗಳ ಬಗೆಗೆ ಅವನಿಗೆ ಯಾವ ಕುತೂಹಲವೂ ಇಲ್ಲ. ಆದರೆ ಅವನು ಬರೆದದ್ದನ್ನೆಲ್ಲ ಅಲ್ಲದಿದ್ದರೂ ಅದರಲ್ಲಿ ಬಹುಪಾಲನ್ನು ನಾನು ಓದಿದ್ದೇನೆ. ಅದಕ್ಕೆ ಆ ಬರಹಗಳು ನನಗೆ ತೆರೆದು ತೋರಿಸುವ ಕರ್ನಾಟಕದ ಚರಿತ್ರೆಯ ವಿವರಗಳ ಬಾಹುಳ್ಯವೇ ಕಾರಣ. ರೆಡ್ಡಿ ತನ್ನ ಬರಹಗಳಲ್ಲಿ ಮುಂದಿಡುವ ಎಷ್ಟೋ ಒಳನೋಟಗಳು ವಿದ್ವಾಂಸರ ಗಮನವನ್ನು ಸಾಕಷ್ಟು ಪ್ರಮಾಣದಲ್ಲಿ ಸೆಳೆದಿಲ್ಲವೆಂದೇ ನಾನು ತಿಳಿದಿದ್ದೇನೆ. ಮಧ್ಯಕಾಲದ ಕರ್ನಾಟಕದ ರಾಜಕೀಯ ಆಡಳಿತ ವ್ಯವಸ್ಥೆಯಲ್ಲಿ ಕಾಶ್ಮೀರದಿಂದ ಬಂದವರು ವಹಿಸಿದ ಪಾತ್ರ ಮತ್ತು ಅದರಿಂದ ಉಂಟಾದ ಪರಿಣಾಮಗಳ ಬಗೆಗೆ ರೆಡ್ಡಿ ಮಂಡಿಸುವ ವಿಚಾರವನ್ನೇ ನೋಡಿ; ಅದಿನ್ನೂ ವಿವರವಾಗಿ ಚರ್ಚೆಯಾಗಬೇಕಿತ್ತು ಎಂದು ನನ್ನ ತಿಳುವಳಿಕೆ. ಇಂತಹ ಹಲವು ಸಂಗತಿಗಳನ್ನು ಪಟ್ಟಿ ಮಾಡಬಹುದು. ಶಾಸನಗಳ

ಸಂಗ್ರಹ, ಸಂಪಾದನೆಗಳ ಜೊತೆಗೆ ಅವುಗಳ ಮೂಲಕ ರೆಡ್ಡಿ ಗ್ರಹಿಸಿ ಮುಂದಿಡುವ ಅಪೂರ್ವ ಒಳನೋಟಗಳನ್ನು ಆತನ ಬರಹಗಳಲ್ಲಿ ನಾನು ಕಂಡಿದ್ದೇನೆ. ತನ್ನ ನಿಲುವನ್ನು ಕಟ್ಟಿ ಮುರಿದಂತೆ ಹೇಳುವುದು ಅವನ ಸ್ವಭಾವ. ಇದರಿಂದ ಆತ ಕಳೆದುಕೊಂಡಿರುವುದೇ ಹೆಚ್ಚು. ಹಾಗೆಂದು ತನ್ನ ವಿಚಾರಗಳನ್ನು ಬದಲಿಸಿಕೊಳ್ಳಬೇಕಿತ್ತೆಂದು ನಾನು ಹೇಳುತ್ತಿಲ್ಲ. ಚರ್ಚೆಗೆ ಎಳೆಯಲು ಹೊಸ ತಂತ್ರಗಳನ್ನು ಬಳಸುವ ಅವಕಾಶಗಳಿಗೆ ತನ್ನ ನಿಷ್ಠುರ ನಿಲುವಿನಿಂದಾಗಿ ರೆಡ್ಡಿ ಎರವಾಗಿರುವಂತೆ ನನಗೆ ತೋರುತ್ತದೆ. ಇದು ಸುಳ್ಳಾದರೆ ಅದರಿಂದ ನನಗೆ ಸಂತಸವೇ ಸರಿ.

ಈ ನಡುವೆ ಆತ ಕನ್ನಡ ವಿಶ್ವವಿದ್ಯಾಲಯದಲ್ಲಿ ಮಾಡಿದ ಇನ್ನೊಂದು ಸಾಹಸವನ್ನು ಇಲ್ಲಿ ಹೇಳಲೇ ಬೇಕಿದೆ. ಕನ್ನಡ ವಿಶ್ವವಿದ್ಯಾಲಯದ ಆವರಣ 'ವಿದ್ಯಾರಣ್ಯ' ಒಂದು ಕುರುಚಲು ಕಾಡಿದ್ದ ಜಾಗ. ರೆಡ್ಡಿಗೆ ಅದನ್ನು ಹಸುರುಗೊಳಿಸುವ ಹೊಣೆಯನ್ನು ಹೊರಿಸಲಾಯಿತು. ತಾನು ಎಂದೋ ಕೈಬಿಟ್ಟಿದ್ದ ರೈತಾಪಿ ತಿಳಿವನ್ನು ಬಳಸಿ ಅಲ್ಲಿ ಆತ ತಂದ ಬದಲಾವಣೆಯನ್ನು ನೋಡಿದರೆ ಅಚ್ಚರಿಯಾಗುತ್ತದೆ. ಹತ್ತು ವರ್ಷಗಳ ಹಿಂದೆ ವಿದ್ಯಾರಣ್ಯಕ್ಕೆ ಹೋದವರು ಈಗ ಹೋಗಿ ನೋಡಿದರೆ ಅಲ್ಲಿನ ಹಸುರನ್ನು ಕಂಡು ಬೆರಗಾಗುತ್ತಾರೆ. ಹಗಲಿರುಳೂ ಆ ಆವರಣದಲ್ಲಿ ಸುತ್ತಾಡುತ್ತ, ಕೊಂಚ ಯಾಮಾರಿದರೂ ಮೈಗಳ್ಳರಾಗುವ ಕೆಲಸದವರೊಡನೆ ಏಗುತ್ತ, ಮರಗಿಡಗಳನ್ನು ನೆಡಿಸಿ ಬೆಳಸಿದ ಅವನ ಸಾಹಸವನ್ನು ನೋಡಿ ಮೆಚ್ಚುವ ಅವಕಾಶ ನನಗೆ ದೊರಕಿತ್ತು. ಮುಂದೊಂದು ದಿನ ವಿದ್ಯಾರಣ್ಯದ ಒಂದು ಭಾಗಕ್ಕೆ ರೆಡ್ಡಿಯ ಹೆಸರನ್ನು ಇರಿಸಿ ಅವನ ಕಾಯಕವನ್ನು ಗೌರವಿಸಬೇಕಾಗಿದೆ. ಸುತ್ತಮುತ್ತಲ ಊರಿನ ರೈತರೊಡನೆ ಒತ್ತುವರಿ ಪ್ರಕರಣಗಳಲ್ಲಿ ಜಗಳವಾಡುತ್ತ ವಿಶ್ವವಿದ್ಯಾಲಯದ ಹಿತ ಕಾಯ್ದ ಈ ವಿದ್ವಾಂಸನ ಜೀವನದ ಬೇರುಗಳು ನೆಲದೊಡನೆ ಹೆಣೆದುಕೊಂಡಿರುವುದನ್ನು ಕಂಡು ಬೆರಗಾಗಿದ್ದೇನೆ. ಇಂತವರು ಎಷ್ಟು ಜನ ನಮ್ಮ ಸುತ್ತಮುತ್ತ ದೊರಕಿಯಾರು.

ಹೆಚ್ಚು ಹೊಗಳಿದೆನೆ? ಇಲ್ಲ. ನನ್ನ ನೆನಪುಗಳ ಉಗ್ರಾಣದಲ್ಲಿ ಇನ್ನೂ ಹೇಳಬೇಕಾದ್ದು ಬಹಳಷ್ಟಿದೆ. ಈಗ ಸಾಕು. ಈ ನನ್ನ ಗೆಳೆಯ ಈಗ ವೃತ್ತಿಯಿಂದ ವಿಶ್ರಾಂತ. ಆದರೆ ಅವನ ವಿದ್ವತ್ ಸಾಹಸಗಳಿಗೆ ಕೊನೆ ಎಂಬುದಿಲ್ಲ. ಅದು ಎಡೆಬಿಡದೆ ಮುಂದುವರೆಯುತ್ತದೆ ಎಂಬ ಗಟ್ಟಿ ನಂಬಿಕೆ ನನಗಿದೆ. ನಮ್ಮ ನಾಡು ಈತನ ಅಧ್ಯಯನದ ಫಲಿತಗಳಿಂದ ಸಮೃದ್ಧವಾಗಲಿ ಎನ್ನುವುದೇ ನನ್ನ ಹಾರೈಕೆ (ಈ ಬರಹದಲ್ಲಿ ರೆಡ್ಡಿಯನ್ನು ಏಕವಚನದಲ್ಲಿ ಸಂಬೋಧಿಸಿ ಬರೆದದ್ದಕ್ಕೆ ನನಗೆ ಮುಜುಗರವಿಲ್ಲ. ಓದುಗರಿಗೆ ಹಾಗಾಗಿದ್ದರೆ ಮನ್ನಿಸಿ. ಗೆಳೆಯ ರೆಡ್ಡಿಯನ್ನು ನಾನು ನಿದ್ದೆಯಲ್ಲೂ ಬಹುವಚನದಲ್ಲಿ ಕರೆಯಲಾರೆ).



# ಸಜ್ಜನಿಕೆಯ ಸೋಗಿಲ್ಲದ ಸ್ನೇಹಿತ ದೇ.ಕೊಂ.ರೆ.

– ಪ್ರೊ॥ ಎನ್.ಬಿ. ಚಂದ್ರಮೋಹನ್*

ಅಕಾಡೆಮಿಕ್ ವಲಯದಲ್ಲಿ ಡಾ॥ ದೇವರಕೊಂಡಾರೆಡ್ಡಿ ಸಂಶೋಧಕನಾಗಿ, ಶಾಸನ ತಜ್ಞನಾಗಿ, ಲಿಪಿಶಾಸ್ತ್ರದ ವಿದ್ವಾಂಸನಾಗಿ ಸುಪರಿಚಿತ ವ್ಯಕ್ತಿ. ಸುಮಾರು ನಲವತ್ತೈದು ವರ್ಷಕ್ಕಿಂತ ಹೆಚ್ಚು ಕಾಲ ಸಹಪಾಠಿಗಳಾಗಿ, ಸ್ನೇಹಿತರಾಗಿ ಇರುವ ನಮ್ಮಂಥ ಕೆಲವರಿಗೆ ಮಾತ್ರ ಅವನು ಕೇವಲ ಆತ್ಮೀಯ ಗೆಳೆಯ. ವಿದ್ವತ್ ಪ್ರಪಂಚದಲ್ಲಿ ಅವನ ಸಾಧನೆಯ ಬಗ್ಗೆ ನಮಗೆಲ್ಲಾ ಹೆಮ್ಮೆ, ಮೆಚ್ಚುಗೆ ಮತ್ತು ಗೌರವ ಇದೆ. ಅದೇನೇ ಇದ್ದರೂ ಅವನ ಜತೆಗಿನ ಸಲುಗೆಯ ಸ್ನೇಹ ಮಾತ್ರ ಅದೇ ರೀತಿ ಉಳಿದು ಬಂದಿದೆ. ನಾಲ್ಕೂವರೆ ದಶಕಗಳ ನಮ್ಮ ಒಡನಾಟದಲ್ಲಿ ಪರಸ್ಪರ ಗೌರವ ಸೂಚಕ ಬಹುವಚನದ ಸಂಬೋಧನೆಯಾಗಲೀ, ಸಜ್ಜನಿಕೆಯ ಸಂಭಾಷಣೆಯ ವೈಖರಿಯಾಗಲೀ ಒಮ್ಮೆಯಾದರೂ ಸುಳಿದದ್ದಿಲ್ಲ. ಮರೆತಾದರೂ ಪರಸ್ಪರ ಗೌರವ ಪೂರ್ವಕವಾಗಿ ಮಾತಾಡಿದ್ದಿಲ್ಲ. ಅದಕ್ಕೆ ಕಾರಣವಾಗಿರುವುದು ಖಂಡಿತವಾಗಿಯೂ ಪರಸ್ಪರ ನಮ್ಮಲ್ಲಿರುವ ಪ್ರೀತಿಯೇ ಹೊರತು ಅಗೌರವವಲ್ಲ.

ಅರವತ್ತೈದರ ದಶಕದಲ್ಲಿ ಪಿ.ಯು.ಸಿ. ತರಗತಿಗಳಲ್ಲೇ ಪರಸ್ಪರ ಭೇಟಿಯಾಗಿದ್ದರೂ ಅದು ತೀರ ಸಲುಗೆಯ ಸ್ನೇಹಕ್ಕೆ ತಿರುಗಿದ್ದು ಅರವತ್ತಾರರ ನಂತರದ ಬಿ.ಎ. ಮತ್ತು ಎಂ.ಎ. ತರಗತಿಗಳ ವ್ಯಾಸಂಗದ ಅವಧಿಯಲ್ಲಿ. ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜುಗಳು ಅವಿಭಜಿತವಾಗಿದ್ದ ಕಾಲ ಅದು. ಕನ್ನಡ ಮೇಜರ್ ವಿದ್ಯಾರ್ಥಿಗಳಾದ ನಮಗೆ ಮೇಷ್ಟ್ರು ಜಿ.ಬ್ರಹ್ಮಪ್ಪನವರು 'ಭರತೇಶ ವೈಭವ' ದಂತಹ ಬೇರೆ ಬೇರೆ ಗ್ರಂಥಗಳನ್ನು ಕೊಡುತ್ತಿದ್ದರು. ಪುಸ್ತಕಗಳ ವಾಸ್ತವ ಬೆಲೆಗಿಂತ ಅರ್ಧದಷ್ಟು ಕಡಿಮೆ ದರದಲ್ಲಿ ನಾವದನ್ನು ಕೊಳ್ಳುತ್ತಿದ್ದೆವು. ಅದರ ದುಡ್ಡನ್ನೂ ಒಟ್ಟಿಗೇ ಏನೂ ಕೊಡಬೇಕಾದ್ದಿರಲಿಲ್ಲ. ಆಗಾಗ ಸಾಧ್ಯವಾದಷ್ಟನ್ನು ಕೊಡಬಹುದಿತ್ತು. ಮೇಷ್ಟ್ರ ಜೊತೆಗಿದ್ದ ನಮ್ಮ ಸಲಿಗೆಯಿಂದಾಗಿ ಅದಕ್ಕೂ ನಾವು ಬಹಳಷ್ಟು ಚೌಕಾಸಿ ಮಾಡುತ್ತಿದ್ದೆವು. ಅಂಥ ಸಮಯದಲ್ಲಿ ಬ್ರಹ್ಮಪ್ಪನವರು ನಮ್ಮ ಜೇಬುಗಳನ್ನು ಜಪ್ತಿ ಮಾಡಿಸಿ ಹಣ ವಸೂಲಿ ಮಾಡುತ್ತಿದ್ದರು. ಅಂಥ ಸಂದರ್ಭಗಳಲ್ಲಿ ನಮ್ಮ ಕೈ ಕಾಲುಗಳನ್ನು ಆಡಿಸಿದಂತೆ ಗಟ್ಟಿಯಾಗಿ ಹಿಡಿದಿಡಲು ಧಡಿಯರಾದ ದೈತ್ಯ ವೆಂಕಟರಾಜು ಮತ್ತು ಲಂಬು ತುಂಡು ಬೀಡಿ ನಾರಾಯಣನಿಗೆ ಅನುಮತಿ ಮತ್ತು ಆದೇಶ ನೀಡಲಾಗುತ್ತಿತ್ತು. ಹಾಗೆಯೇ ಎಲ್ಲರ ಜೇಬುಗಳನ್ನು ಮೇಲೆ ಕೆಳಗೆ ನುಗ್ಗಿ ಜಪ್ತಿ ಮಾಡುವ ಕೆಲಸ ನಮ್ಮ ನರಪೇತಲ ದೇಕೊಂರೆ ಗೆ ವಹಿಸಲಾಗುತ್ತಿತ್ತು. ದೇಕೊಂರೆ. ಈ ಕೆಲಸವನ್ನು ತನ್ನ ಮಹಾಭಾಗ್ಯವೆಂಬಂತೆ ನಿರ್ವಹಿಸುತ್ತಿದ್ದ. ಆಮೇಲೆ ನಮ್ಮಿಂದ ಗೂಸಾ ತಿನ್ನುತ್ತಿದ್ದ. ನಾವು ಅವನ ಮೇಲೆ ಮೇಷ್ಟ್ರಿಗೆ ಅನುಮಾನ ಬರುವಂತೆ ಚಾಡಿ ಹೇಳಲು ಪ್ರಯತ್ನಿಸುತ್ತಿದ್ದೆವು. ಆದರೆ ಇವೆಲ್ಲವನ್ನೂ ಯಾರೂ ಗಂಭೀರವಾಗಿ ಪರಿಗಣಿಸುತ್ತಿರಲಿಲ್ಲ. ಎಲ್ಲವೂ ದಿನ ನಿತ್ಯದ ಆಟಗಳಾಗಿಯೇ ಇರುತ್ತಿದ್ದವು. ನಮ್ಮ ಮೇಷ್ಟ್ರು ಪ್ರೊ॥ ಜಿ. ಬ್ರಹ್ಮಪ್ಪನವರ ಮಾತಿನಲ್ಲಿ ಹೇಳಬೇಕೆಂದರೆ ನಾವು ಪಕ್ಕ ಎಂ.ಹೆಚ್.ಗಳು. ಅದರ ವಿಸ್ತೃತ ರೂಪ 'ಮನೆಹಾಳ್ ಮಕ್ಕಳು' ನಮ್ಮಲ್ಲಿ ಬಹಳಷ್ಟು ಜನರಿಗೆ ವ್ಯಕ್ತಿಗತವಾದ ಅಡ್ಡ ಹೆಸರುಗಳು ಇದ್ದವು. ಈ ಅಡ್ಡ ಹೆಸರುಗಳಿಗೆ ಮಹತ್ತರವಾದ ತಾರ್ಕಿಕ ಕಾರಣಗಳೇನು ನಮಗೆ ಬೇಕಿರಲಿಲ್ಲ. ತತ್‌ಕ್ಷಣದ ಪ್ರಕರಣವೊಂದರ ಪ್ರೇರಣೆ ಸ್ಫೂರ್ತಿಗಳಷ್ಟೇ ಸಾಕಾಗಿತ್ತು. ದಿವಂಗತ ವೆಂಕಟರಾಜು 'ದೈತ್ಯ' ಆಗಿದ್ದ. ದೇ.ಕೊಂ.ರೆ. ಅವನ ಮೂಲದಿಂದಲೇ 'ಕಳ್ಳಭಟ್ಟಿ' ಅಂತ ಕರೆಯಲ್ಪಟ್ಟಿದ್ದ. ಪ್ರಾಯಶಃ ಇದಕ್ಕೆ ಕಾರಣ ಆ ಸಮಯದಲ್ಲಿ ಆನೇಕಲ್ ಪ್ರದೇಶದ ಯಾವುದೋ ಮೂಲೆಯಲ್ಲಿ ನಡೆದು ಸುದ್ದಿಯಾಗಿದ್ದ ಕಳ್ಳಭಟ್ಟಿ ಪ್ರಕರಣವೊಂದರ ಸ್ಫೂರ್ತಿಯೆಂದು ನೆನಪು. ನಮ್ಮ ಜತೆಗೆ ಇದ್ದ ನಾರಾಯಣ ನಮ್ಮ ಅನೇಕ ದುಸ್ಸಾಹಸಿಗಳಿಗೆ ಮುಂದಾಳಾಗಿರುತ್ತಿದ್ದ. ಅವನನ್ನು ತುಂಡು ಬೀಡಿ' ಅಂತ ಕರೆಯುತ್ತಿದ್ದೆವು. ನನ್ನನ್ನು ಇವರೆಲ್ಲ ಸಾಹಿತಿ ಅಂತ ಕರೆಯುತ್ತಿದ್ದುದು ರೂಢಿ. ಆದರೆ, ಆ ಶಬ್ದಕ್ಕೆ ಯಾವುದೇ ವಿಶೇಷ ಮರ್ಯಾದೆಯೇನು ಇರುತ್ತಿರಲಿಲ್ಲ. 'ಕಳ್ಳಭಟ್ಟಿ' 'ತುಂಡುಬೀಡಿ' ಗಳಿಗಿದ್ದಷ್ಟೇ

---

* ೨೧೫, ಎ-೪, ಘಟಪ್ರಭ, ರಾಷ್ಟ್ರೀಯ ಕ್ರೀಡಾಗ್ರಾಮ, ಕೋರಮಂಗಲ, ಬೆಂಗಳೂರು-೫೬೦೦೪೭.

ಘನತೆ ಅದಕ್ಕೂ ದಕ್ಕಿತ್ತು. ಸ್ವಲ್ಪಮಟ್ಟಿಗೆ ತುಸು ಬೈಗುಳವಾಗಿಯೇ ನನ್ನ ಮೇಲೆ ಪ್ರಯೋಗವಾಗುತ್ತಿತ್ತು. ನಮ್ಮೊಂದಿಗೆ ಇನ್ನೂ ಕೆಲವರು ನಾಮಕರಣಗೊಳ್ಳದ ಆದರೆ ಅವರ ಹೆಸರುಗಳನ್ನೇ ತಿರುಚಿ ತಾತ್ಕಾಲಿಕ ಅಡ್ಡ ಹೆಸರುಗಳಾಗಿ ಮಾರ್ಪಡಿಸಿಕೊಳ್ಳುತ್ತಿದ್ದುದೂ ಉಂಟು. ಅವರಲ್ಲಿ 'ಪ್ರಸಾದ' ಆಗಿದ್ದ ಬಿ.ಎಸ್.ರಾಮ್‌ಪ್ರಸಾದ್ ಮತ್ತು ಏಸಾಮಿ ಆಗಿದ್ದ ನರಸಿಂಹಸ್ವಾಮಿ ಇನ್ನೂ ಮುಂತಾದವರಿದ್ದು. ನಮ್ಮ ಗುಂಪಿನ ಯಾವುದೇ ದುಸ್ಸಾಹಸಗಳ ಹಿಂದೆ ಮಾರ್ಗದರ್ಶಕನಾಗಿ ಮುಗುಮ್ಮಾಗಿ ವೆಂಕಟರಾಜು ಇರುತ್ತಿದ್ದ. ಮಹಾ ಕುಂಭನಾಗಿದ್ದ ತುಂಡು ಬೀಡಿ ನಾರಾಯಣ ಮುಂದಾಳಾಗಿರುತ್ತಿದ್ದ. ಅನಿವಾರ್ಯವಾಗಿ ಅವನಿಗೆ ದೇ.ಕೊಂ.ರೆ. ಕಳ್ಳಭಟ್ಟಿ ಸಾಥ್ ಕೊಡಲೇಬೇಕಾಗುತ್ತಿತ್ತು. ಎತ್ತರದ ಆಳಾಗಿದ್ದ ತುಂಡು ಬೀಡಿ ನಾರಾಯಣನ ಜೊತೆಗೆ ನಮ್ಮ ಸಣಕಲು ಕಳ್ಳಭಟ್ಟಿ ಸಾರಾಯಿ ದೇಕೊಂರೆ ತಾನಾಗಿ ಹೋಗದೇ ಹೋದರೆ ಅವನ ಬಲ ಪ್ರಯೋಗಕ್ಕೂ ಪಕ್ಕಾಗಬೇಕಾಗಿತ್ತು. ಎತ್ತರದ ಮೈಕಟ್ಟಿನ ತುಂಡು ಬೀಡಿ ಸಣಕಲು ಕುಳ್ಳ ಕಳ್ಳಭಟ್ಟಿಯನ್ನು ಕಂಕುಳಲ್ಲಿ ಇರುಕಿಸಿಕೊಂಡು ಎಳದೊಯ್ಯುತ್ತಿದ್ದ. ನಾವೆಲ್ಲ ಇವರ ಸಂಗೀತಗೋಷ್ಠಿಗೆ ಪಕ್ಕವಾದ್ಯಗಳಾಗಿ, ಇವರ ಯಕ್ಷಗಾನ, ಬಯಲಾಟಗಳಿಗೆ ತಾಳ ಮದ್ದಲೆಗಳಾಗಿ, ಮೇಳಗಳಾಗಿ, ಚಪ್ಪಾಳೆ ತಟ್ಟುವ ಪೋಷಕ ರಸಿಕ ವೃಂದವಾಗಿ ಬಳಕೆಯಾಗುತ್ತಿದ್ದೆವು.

ತುಂಡು ಬೀಡಿ ನಾರಾಯಣ ಮತ್ತು ನಾವೆಲ್ಲ ಕಾಫಿ, ತಿಂಡಿಗೇಂತ ಕ್ಯಾಂಟೀನ್‌ಗೆ ಹೋದಾಗ ರೆಡ್ಡಿಯನ್ನ ಹಿಡಿದು ಬಗಲಲ್ಲೆ ಕೂರಿಸಿಕೊಳ್ಳುತ್ತಿದ್ದ. ಅದಕ್ಕೆ ಕಾರಣ ಪ್ರೀತಿಯಲ್ಲ ಅವನದೇ ಆದ ಸಕಾರಣವಾದ ತರ್ಕ. ಅದೇನೆಂದರೆ ಚೋಟುದ್ದ ಇರುವ ರೆಡ್ಡಿಗೆ ಫುಲ್ ಪ್ಲೇಟ್ ತಿಂಡಿಯಾಗಲೀ, ಪೂರ್ತಿ ಲೋಟ ಕಾಫಿಯಾಗಲೀ ತಿನ್ನುವ ಅಥವಾ ಕುಡಿಯುವ ಅರ್ಹತೆಯಿಲ್ಲ. ಅದೇನಿದ್ದರೂ ಮಾರುದ್ದ ಇರುವ ತನ್ನ ಹಕ್ಕು ಎಂದು ತನ್ನ ಹಕ್ಕನ್ನು ಚಲಾಯಿಸಿ ರೆಡ್ಡಿ ಪಾಲಿನ ಅರ್ಧ ಪ್ಲೇಟ್ ತಿಂಡಿಯನ್ನು ಗಬಕಾಯಿಸಿಬಿಡುತ್ತಿದ್ದ. ಇದನ್ನು ಪರಿಹರಿಸಲಿಕ್ಕೆ ರೆಡ್ಡಿಗೆ ಹೊಳೆದ ಉಪಾಯವೆಂದರೆ ಇಡೀ ಪ್ಲೇಟನ್ನು ಎಂಜಲು ಮಾಡಿ ಇಡುವುದು. ಇದರಿಂದ ತುಂಡು ಬೀಡಿಯ ಕೋಪ ನೆತ್ತಿಗೇರಿತು. ಇವನ ತಲೆಯನ್ನು ಇಡೀ ತಿಂಡಿ ಪ್ಲೇಟಿಗೆ ಅಮುಕಿ ಹಿಡಿದು 'ತಿನ್ನು ತಿನ್ನು' ಅಂತ ನಾಲ್ಕು ಗುದ್ದುತ್ತಿದ್ದ. ಇಂತಹ ಅನೇಕ ಪ್ರಸಂಗಗಳು ನೆನಪಾಗುತ್ತದೆ.

ಒಮ್ಮೆ ಯಾವುದೋ ಕಾರಣಕ್ಕೆ ವಿದ್ಯಾರ್ಥಿಗಳ ಮುಷ್ಕರ ನಡೆಯುತ್ತಿತ್ತು. ಸಾಮಾನ್ಯವಾಗಿ ಮುಷ್ಕರಗಳಿಗೆಲ್ಲ ಸರ್ಕಾರಿ ಕಾಲೇಜು ತೌರು ಮನೆಯೇ ಆಗುತ್ತಿತ್ತು. ಅಂದೂ ಕೂಡ ಅಂಥದೇ ಪ್ರಸಂಗ. ಆದರೆ ವಿಶೇಷವೆಂದರೆ ಅವತ್ತಿನ ದಿನ ಹೊರಗಿನ ಕಾಲೇಜಿನ ವಿದ್ಯಾರ್ಥಿಗಳ ಸಂಖ್ಯೆಯೇ ಅತಿಯಾಗಿತ್ತು. ಕಾಲೇಜಿನ ಒಳ ಆವರಣದಲ್ಲಿ ವಿದ್ಯಾರ್ಥಿಗಳ ದಾಂಧಲೆ ಜೋರಾಗುತ್ತಿದ್ದಂತೆ ಮಹಡಿಯಲ್ಲಿ ನಿಂತು ನೋಡುತ್ತಿದ್ದ ನಮ್ಮ ಬಳಗದಲ್ಲಿದ್ದ ತುಂಡು ಬೀಡಿಗೆ ಉತ್ಸಾಹ ಉಕ್ಕೇರಿತು. ನಮ್ಮನ್ನೆಲ್ಲಾ ಅಲ್ಲೇ ನಿಂತು ಮುಂದೆ ನಡೆಯುವುದನ್ನು ನೋಡುವಂತೆ ತಾಕೀತು ಮಾಡಿ ದೇಕೊಂರೆ ಯನ್ನು ಕಂಕುಳಲ್ಲಿ ಇರುಕಿಸಿಕೊಂಡು ಕೆಳಗೆ ಎಳೆದುಕೊಂಡು ಹೋದ. ಗಲಾಟೆ ನಡೆಯುತ್ತಿದ್ದ ಗುಂಪಿನ ನಡುವೆ ರೆಡ್ಡಿಯ ಭುಜದ ಮೇಲೆ ಕೈ ಹಾಕಿಕೊಂಡು ಸೀಟಿ ಹೊಡೆಯುತ್ತ ಕುಣಿದಾಡಹತ್ತಿದನು. ಅದೇ ಸಮಯಕ್ಕೆ ನಮ್ಮ ಪ್ರಿನ್ಸಿಪಾಲರಾದ ಮುನಿಗವಿಯಪ್ಪನವರು ವಿದ್ಯಾರ್ಥಿಗಳನ್ನು ಹತೋಟಿಗೆ ತರುವ ಉದ್ದೇಶದಿಂದ ಅಲ್ಲಿಗೇ ಬರುತ್ತಿದ್ದರು. ಪ್ರೊ॥ ಮುನಿಗವಿಯಪ್ಪನವರು ಆಕೃತಿಯಲ್ಲಿ ಸ್ವಲ್ಪ ಕುಳ್ಳಾಗಿದ್ದವರು. ಆದರೆ ಶಿಸ್ತು ಜಬರದಸ್ತಿನಲ್ಲಿ ಸಾಕಷ್ಟು ಜೋರಾಗಿದ್ದವರೂ ಕೂಡಾ. ಅವರು ಅತ್ತಕಡೆ ಸುಳಿಯುತ್ತಿದ್ದಂತೆ ರೆಡ್ಡಿ ತನ್ನ ಭುಜದ ಮೇಲಿದ್ದ ನಾರಾಯಣನ ಕೈಯನ್ನು ಮೆತ್ತಗೆ ಜಾರಿಸಿಬಿಟ್ಟು ಅಲ್ಲಿಂದ ಪರಾರಿಯಾಗಿಬಿಟ್ಟ, ಎತ್ತರದ ನಾರಾಯಣ ಮೇಲಿದ್ದ ನಮ್ಮನ್ನು ನೋಡುತ್ತಾ ಸೀಟಿ ಊದುತ್ತಾ ಕೈಚಾಚಿದಾಗ ಸಿಕ್ಕಿದ್ದು ಪ್ರಿನ್ಸಿಪಾಲರ ಭುಜ. ಇದ್ಯಾವುದರ ಪರಿವೆ ಇಲ್ಲದೆ ನಾರಾಯಣ ಅವರನ್ನೇ ರೆಡ್ಡಿಯೆಂದು ತಿಳಿದು ಕಂಕುಳಲ್ಲಿ ಇರಿಕಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದ. ಇದನ್ನೆಲ್ಲಾ ಮೇಲಿಂದ ನೋಡುತ್ತಿದ್ ನಮಗೆ ಗಾಬರಿ. ಸಾಧ್ಯವಿದ್ದ ಎಲ್ಲ ಆಂಗಿಕ ಸನ್ನೆಗಳನ್ನು ಮಾಡುತ್ತಾ ಬೇರೆ ಬೇರೆ ಭಾವ ಭಂಗಿಗಳಲ್ಲಿ ತುಂಡು ಬೀಡಿಯನ್ನು ಎಚ್ಚರಿಸಲು ಪ್ರಯತ್ನ ಪಟ್ಟೆವಾದರೂ ತೀವ್ರವಾದ ಉತ್ಸಾಹದಲ್ಲಿದ್ದ ತುಂಡು ಬೀಡಿಗೆ ಇದ್ಯಾವುದರ ಪರಿವೆಯೂ ಇರಲಿಲ್ಲ. ಪ್ರಿನ್ಸಿಪಾಲರು ಪ್ರಾಯಶಃ ತೀವ್ರ ಗೊಂದಲಕ್ಕೆ ಒಳಗಾದರೆಂದು ಅನ್ನಿಸುತ್ತದೆ. ಅವರು ಕೊಸರಾಡುತ್ತಿದ್ದಷ್ಟೂ ಇವನು ಮೇಲೆ ನೋಡುತ್ತಲೇ ಅವರನ್ನು ಎಳೆದಾಡುತ್ತಿದ್ದ, ನಾವು ಮತ್ತಷ್ಟು ಗಾಬರಿಯಿಂದ ನಮ್ಮ ಆಂಗಿಕ ಸೂಚನೆಗಳನ್ನು ರವಾನಿಸುತ್ತಿದ್ದೆವು. ನಮ್ಮಲ್ಲಿ ಯಾರೋ ಜೋರಾಗಿ ಕೂಗಿ ಹೇಳಿದಾಗ, ಅವನಿಗೆ ಕಿಂಚಿತ್ ಜ್ಞಾನೋದಯವಾದಂತೆ ಕಂಡು ಬಂದಿತು. ಕಕ್ಕಾಬಿಕ್ಕಿಯಾಗಿ ಅಲ್ಲಿಂದ ಓಡಿಬಿಟ್ಟ. ಪ್ರಿನ್ಸಿಪಾಲರೂ ಅಷ್ಟರಲ್ಲಿ ತಲೆಯೆತ್ತಿ ಮೇಲೆ ನೋಡಿ ನಮ್ಮ ಪಟಾಲಮ್ಮನ್ನು ಗಮನಿಸಿಬಿಟ್ಟರು. ಇದೆಲ್ಲಾ ಕೆಲವೇ ಕ್ಷಣಗಳಲ್ಲಿ ನಡೆದುಹೋಗಿತ್ತು. ನಂತರ ಈ ಪ್ರಸಂಗಕ್ಕಾಗಿ ನಾರಾಯಣ ರೆಡ್ಡಿಗೆ ಧರ್ಮದೇಟು ಕೊಟ್ಟಿದ್ದ. ರೆಡ್ಡಿ ಏಟು

ತಿಂದರೂ ತುಂಡು ಬೀಡಿಗೆ ತಕ್ಕ ಶಾಸ್ತಿ ಮಾಡಿದ್ದಕ್ಕೆ ಸಂತೋಷಪಟ್ಟಿದ್ದ. ನಮಗೆಲ್ಲರಿಗೂ ಒಂದೇ ಆತಂಕ, ಮುಂದೆ ಪ್ರಿನ್ಸಿಪಾಲರನ್ನು ಎದುರಿಸುವುದು ಹೇಗೆ ಎಂಬುದು. ನಾರಾಯಣನಂತೂ ಸುಮಾರು ದಿನಗಳ ಕಾಲ ತಲೆತಪ್ಪಿಸಿಕೊಂಡು ತಿರುಗಾಡುತ್ತಿದ್ದ. ಪ್ರಿನ್ಸಿಪಾಲ್ ಮುನಿಗವಿಯಪ್ಪನವರಿಗೆ ಕಾಲೇಜಿನ ಚರ್ಚಾಪಟುಗಳಾದ ನಾನು ಮತ್ತು ರಾಮಪ್ರಸಾದ್ ಚೆನ್ನಾಗಿ ಗೊತ್ತಿತ್ತು. ಅದರಿಂದಾಗಿ ದಫೇದಾರ್ ರಂಗಪ್ಪನಿಗೆ ಹೇಳಿ ಕರೆಸಿಕೊಂಡು ಆ ಬಗ್ಗೆ ನನ್ನನ್ನು ವಿಚಾರಿಸಿದರು. ಮೊದಲೇ ಈ ಪರಿಸ್ಥಿತಿಗೆ ಮಾನಸಿಕವಾಗಿ ಸಿದ್ಧವಾಗಿದ್ದ ನಾನು ಧಾರಾಳವಾಗಿ ಈಗಾಗಲೇ ತಯಾರಿಸಿಟ್ಟುಕೊಂಡಿದ್ದ ಸುಳ್ಳನ್ನು ಹೇಳಿದ್ದೆ. "ಅವನ್ಯಾರೋ ಗೊತ್ತಿಲ್ಲ ಸಾರ್, ಬಹುಶಃ ಬೇರೆ ಕಾಲೇಜಿನವನಿರಬೇಕು" ಅಂತ ಹೇಳಿದೆ. ಆದರೆ ಅವರು ಅಷ್ಟಕ್ಕೇ ಬಿಡದೆ ಕೆಲವು ವಿವರಗಳನ್ನು ಕೆದಕುತ್ತಾ ಹೋದರು. ನಾನು ಅದಕ್ಕೂ ಏನೇನೋ ಹೇಳುತ್ತಾ ಇದ್ದೆ. ಆದರೆ ನನಗೀಗಲೂ ಅನಿಸುತ್ತದೆ. ಸತ್ಯ ಅವರಿಗೆ ಪ್ರಾಯಶಃ ಗೊತ್ತಿತ್ತು. ನಮ್ಮ ಬಗೆಗೂ ಸಾಕಷ್ಟು ತಿಳುವಳಿಕೆ ಇತ್ತು. ಆದ್ದರಿಂದಲೇ ಆ ಮೇಲೆ ಅದರ ಬಗ್ಗೆ ಯಾವುದೇ ರೀತಿಯ ಕಠಿಣ ಕ್ರಮ ತೆಗೆದುಕೊಳ್ಳದೆ ಕೇವಲ ಎಚ್ಚರಿಸಿದಂತೆ ಕಾಣುತ್ತದೆ. ಪ್ರಿನ್ಸಿಪಾಲ್ ಮುನಿಗವಿಯಪ್ಪನವರ ಸ್ವಭಾವವೇ ಹಾಗಿತ್ತು. ಮೇಲುನೋಟಕ್ಕೆ ಅತ್ಯಂತ ಕಟುವಾಗಿ ಕಂಡು ಬರುತ್ತಿದ್ದರಾದರೂ ಆಂತರ್ಯದಲ್ಲಿ ಯಾವುದೇ ಕಾಠಿಣ್ಯಕ್ಕೆ ಎಡೆಯಿದ್ದಂತಿರಲಿಲ್ಲ. ಮೊದಮೊದಲು ನಮಗೆ ಅತ್ಯಂತ ಸಲುಗೆ ಪ್ರೀತಿ ತೋರುತ್ತಿದ್ದ ಹಿಂದಲ ಪ್ರಿನ್ಸಿಪಾಲ್ ಉಮರ್ಜಿಯವರಿಗೆ ಹೋಲಿಸಿ ಇವರಿಗೆ ಹಿಟ್ಲರ್ ಎಂದು ನಾಮಕರಣ ಮಾಡಿದ್ದರೂ, ನಂತರದ ಅನುಭವಗಳು ನಮಗೆ ಹಾಗನಿಸುತ್ತಿರಲಿಲ್ಲ. ವೈಯಕ್ತಿಕವಾಗಿ ಕನ್ನಡ ಸಂಘದ ಕಾರ್ಯದರ್ಶಿಯಾಗಿ ಕವಿರಾಜಮಾರ್ಗ ಕೃತಿಯ ಬಿಡುಗಡೆ ಸಂದರ್ಭದಲ್ಲಿ ನನಗೆ ಅದು ಮತ್ತಷ್ಟು ಸ್ಪಷ್ಟವಾಗುಂತಾಗಿತ್ತು.

ಎಂ.ಎ. ಪದವಿಗೆ ಸೇರಿದ ಮೇಲೂ ಕೂಡಾ ತುಂಡುಬೀಡಿ ಸಾಮಿಯನ್ನು ಬಿಟ್ಟರೆ, ದೈತ್ಯ, ನಾನು ಪ್ರಸಾದ್ ಮತ್ತು ರೆಡ್ಡಿ ಒಟ್ಟಿಗೆ ವ್ಯಾಸಂಗ ಮಾಡುತ್ತಿದ್ದೆವು. ನಮ್ಮ ಪಟಾಲಮ್‌ಗೆ ಇಬ್ಬರು ಮೂವರ ಕೊರತೆ ಇದ್ದರೂ ಕೂಡಾ ಇನ್ನೂ ಹಲವಾರು ಸಮಾನಮನಸ್ಕ ಹೊಸ ಮಿತ್ರರು ನಮಗೆ ಸಿಕ್ಕಿದ್ದರಿಂದ ನಮ್ಮ ಮಂಗಾಟಗಳ ಸ್ವರೂಪವೊಂದಿಷ್ಟು ಬದಲಾಗಿದ್ದು ಬಿಟ್ಟರೆ, ಬೇರೆ ಏನೂ ಬದಲಾವಣೆ ಕಾಣಲಿಲ್ಲ. ಇಲ್ಲಿ ಸಿಕ್ಕಿದ ನಾರಾಯಣ ತುಂಡುಬೀಡಿ ತರಹದವನಲ್ಲವಾದರೂ, ಚೇಷ್ಟೆಗಳಿಗೆ ವಿಮುಖನಾಗೇನೂ ಇರುತ್ತಿರಲಿಲ್ಲ. ಇನ್ನು ಸತ್ಯನಾರಾಯಣ, ಶ್ಯಾಮಸುಂದರ, ಪ್ರಸನ್ನ, ಕೃಷ್ಣಮೂರ್ತಿ, ಕ.ನಂ. ಮುಂತಾದವ ಶ್ರೇಷ್ಠ ಮಿತ್ರರ ಪಡೆಯೇ ಒಟ್ಟಿಗಿತ್ತು.

ಎಂ.ಎ. ತರಗತಿಗಳಲ್ಲಿ ಒಳಗೆ ಮತ್ತು ಹೊರಗೆ ನಮ್ಮ ಚಟುವಟಿಕೆಗಳು ಸದಾ ಜೀವಂತವಾಗಿರುತ್ತಿದ್ದವು. ಒಮ್ಮೆ ಕನ್ನಡ ಅಧ್ಯಯನ ಕೇಂದ್ರದ ಕಂಪೌಂಡ್ ಒಳಗೆ ಇದ್ದ ಮರವೊಂದಕ್ಕೆ ರೆಡ್ಡಿಯನ್ನು ಪುಸಲಾಯಿಸಿ ಹತ್ತಿಸಿಬಿಟ್ಟೆವು. ಆಮೇಲೆ ಅವನನ್ನು ಇಳಿಯದಂತೆ ಕಲ್ಲುಹೊಡೆದು ಕಾಡುತ್ತಾ ಕಿರಿಚಾಡುತ್ತಿದ್ದೆವು. ಮೇಷ್ಟ್ರು ಜಿ.ಎಸ್.ಎಸ್. ಏನೋ ಗಲಾಟೆ ಆಗ್ತಾ ಇದೆ ಎಂದು ಕೊಠಡಿಯಿಂದ ಹೊರಗೆ ಬಂದು ನೋಡುವಷ್ಟರಲ್ಲಿ ನಾವೆಲ್ಲಾ ಮರ್ಯಾದಸ್ಥರಂತೆ ಹುಲ್ಲಿನ ಮೇಲೆ ಕುಳಿತು ಬಿಟ್ಟೆವು. ರೆಡ್ಡಿ ಮಾತ್ರ ಅವನದೇ ಭಾಷೆಯಲ್ಲಿ ನಮ್ಮನ್ನು ಬಯ್ಯುತ್ತಾ ಮರದಿಂದ ಕೆಳಗಿಳಿಯುತ್ತಿದ್ದ. ಇದನ್ನೆಲ್ಲಾ ಗಮನಿಸಿದ ಜಿ.ಎಸ್.ಎಸ್. ಅವರಿಗೆ ಬಹುಶಃ ಎಲ್ಲವೂ ಅರ್ಥವಾಗಿರಬೇಕು. ಅವರು ಸುಮ್ಮನೆ ಕೊಠಡಿಯೊಳಕ್ಕೆ ಹೊರಟುಬಿಟ್ಟರು. ಅಲ್ಲಿಂದಾಚೆಗೆ ನಮ್ಮ ಗಲಾಟೆಯೇನಾದರೂ ಕೇಳಿಸಿದರೆ ಕಿಟಕಿಯಿಂದಷ್ಟೇ ಗಮನಿಸುತ್ತಿದ್ದರೇ ಹೊರತು, ಹೊರಗೆ ಬರುವ ಶ್ರಮ ತೆಗೆದುಕೊಳ್ಳುತ್ತಿರಲಿಲ್ಲ.

ಗೆಳೆಯ ದೇಕೊಂರೆ ನಮ್ಮ ಎಲ್ಲ ಸಹಪಾಠಿಗಳಿಗೂ ಪ್ರಿಯನಾಗಿದ್ದ ಗೆಳೆಯ. ಅವನ ಮಾತು ಯಾವುದೇ ಸಜ್ಜನಿಕೆ, ಸದ್ಗಾಂಭೀರ್ಯಗಳ ಸೋಂಕಿಲ್ಲದೆ ಸೊಗಡಿನ ಮಾತಾಗಿರುತ್ತಿತ್ತು. ವಿಶೇಷವೆಂದರೆ ಅರವತ್ತರ ರೆಡ್ಡಿ ಕೂಡಾ ಅವತ್ತಿನ ರೆಡ್ಡಿಯ ತರಹವೇ ಮಾತಾಡುತ್ತಾನೆ. ಅವನು ಬೌದ್ಧಿಕವಾಗಿ ಬೆಳೆದಿದ್ದಾನೆ. ತುಂಬಾ ಗಂಭೀರವಾದ ಶಾಸ್ತ್ರ ವಿಷಯದಲ್ಲಿ ಪರಿಣಿತನಾಗಿದ್ದಾನೆ. ಆದರೆ ಮನಸ್ಸು ಮತ್ತು ಮಾತಿನ ಧಾಟಿಯನ್ನು ಮಾತ್ರ ಹಾಗೆಯೇ ಉಳಿಸಿಕೊಂಡಿದ್ದಾನೆ. ಅದರಿಂದಲೇ ನಮಗೆ ಇಂದಿಗೂ ಆತ್ಮೀಯನಾಗಿದ್ದಾನೆ. ಇತ್ತೀಚೆಗೆ ನಾನು ನಿವೃತ್ತನಾದಮೇಲೆ ನನ್ನ ಮಕ್ಕಳೊಂದಿಗೆ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಹೋಗಿದ್ದಾಗ ಕ್ಯಾಂಪಸ್‌ನಲ್ಲೇ ಒಂದೆರಡು ದಿನ ಉಳಿದುಕೊಂಡಿದ್ದೆ. ಆಗಿನ್ನೂ ರೆಡ್ಡಿ ಮತ್ತು ಕೆ.ವಿ.ಎನ್.ನಿವೃತ್ತರಾಗಿರಲಿಲ್ಲ. ಹಾಗಾಗಿ ಇವರೆಲ್ಲರ ಆತಿಥ್ಯವನ್ನು ಅನುಭವಿಸುವ ಅವಕಾಶ ನಮಗೆ ಸಿಕ್ಕಿತ್ತು. ನನ್ನನ್ನು ಪುಳಿಚಾರು ಅಂತ ಹಂಗಿಸುತ್ತಿದ್ದ ರೆಡ್ಡಿಗೆ ನನ್ನ ಮಕ್ಕಳು ಬಾಡು ತಿನ್ನುವುದರಲ್ಲಿ ಅವನಿಗೆ ಸಾಥ್ ನೀಡುತ್ತಾರೆ ಎಂದು

ಗೊತ್ತಾದ ತಕ್ಷಣ, ಪುಳಿಚಾರು, ಪಾಯಸವನ್ನು ನಮ್ಮ ಕಡೆಗೆ ತಳ್ಳಿ, ಸೊಗಸಾದ ಬಾಡೂಟವನ್ನು ತಯಾರು ಮಾಡಿ ಮಕ್ಕಳೊಂದಿಗೆ ಹರಟುತ್ತಾ ಊಟ ಮಾಡಿದ. ಅವನ ನಿರಾಳವಾದ ನಿರ್ಭಿಡೆಯ ಮಾತುಗಳು ನನಗೆ ಮೊದಲಿನಿಂದಲೂ ಗೊತ್ತಿದ್ದವಾದರೂ ನನ್ನ ಮಕ್ಕಳಿಗೆ ಅದು ಮೊದಮೊದಲು ಬಹಳ ಆಶ್ಚರ್ಯವೆಂಬಂತೆ ತೋರುತ್ತಿತ್ತು. ಸಾಮಾನ್ಯವಾಗಿ ನಮ್ಮ ಗೆಳೆಯರ ಬಳದಲ್ಲಿ ಲಂಗೂಲಗಾಮಿಲ್ಲದೆ ಸಭ್ಯತೆಯೂ ಇಲ್ಲದೆ ಮಾತಾಡುವನೆಂದು ನಾನು ಕುಪ್ರಸಿದ್ಧ. ಇಷ್ಟು ವಯಸ್ಸಾದ ಮೇಲೂ ನಾನು ಹಾಗೆಯೇ ಮಾತನಾಡುತ್ತೇನೆಂದು ಗೆಳೆಯ ಸತ್ಯನಾರಾಯಣ ನನ್ನನ್ನು ಆರೋಪಿಸುತ್ತಿದ್ದ. ಆದರೆ ನಾನು ಇತ್ತೀಚೆಗೆ ಸುಮಾರು ಮೂವತ್ತೈದು ವರ್ಷಗಳ ನಂತರ ಅವನು ರೆಡ್ಡಿಯೊಂದಿಗೆ ಮಾತನಾಡುವ ಸುಯೋಗವನ್ನು ದೂರವಾಣಿ ಮುಖಾಂತರ ನಾನೇ ಕಲ್ಪಿಸಿಕೊಟ್ಟೆ. ಅವನ ಮಾತನ್ನು ಕೇಳಿದ ನಂತರ ಸತ್ಯನಾರಾಯಣ ನನ್ನ ಮೇಲಿನ ಆರೋಪವನ್ನು ಸಾಕಷ್ಟು ಸಡಿಲಿಸಿಬಿಟ್ಟ. ರೆಡ್ಡಿಯ ಮಾತಿನ ವೈಖರಿ ಕೇಳಿದಮೇಲೆ ಅವನಿಗೆ ನಾನೂ ಕೂಡಾ ಸಭ್ಯ ಅಂತ ಅನ್ನಿಸಿಬಿಟ್ಟಿದೆಯಂತೆ. ಅಂಥದೊಂದು ಸರ್ಟಿಫಿಕೇಟನ್ನು ಕೊಡಿಸಿದ್ದಕ್ಕಾಗಿ ದೇಕೊಂರೆಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈಗಲೂ ನಾವೆಲ್ಲ ಒಟ್ಟಿಗೆ ಸೇರಿದರೆ ಒಮ್ಮೆಗೆ ನಲವತ್ತು ವರ್ಷಕ್ಕಿಂತಲೂ ಹಿಂದಲ ಹುಡುಗರಾಗಿಬಿಡುತ್ತೇವೆ. ಅದರಲ್ಲೂ ರೆಡ್ಡಿ ಇದ್ದರಂತೂ ಕೇಳಬೇಕಾದ್ದೇ ಇಲ್ಲ ಎಂಬಂತೆ ಆಗಿಬಿಡುತ್ತದೆ.

ನಾವೆಲ್ಲ ಒಂದಲ್ಲ ಒಂದು ರೀತಿಯ ಬದುಕಿನ ಏರಿಳಿತಗಳನ್ನು ಅನುಭವಿಸಿದ್ದೇವೆ. ರೆಡ್ಡಿಗೂ ಅಂತಹ ಏರಿಳಿತಗಳ ಅನುಭವ ಸಾಕಷ್ಟಿದೆ. ನಮ್ಮ ನಮ್ಮ ನಡುವೆಯೂ ಸಾಕಷ್ಟು ಸಿಹಿ ಕಹಿ ನೆನಪುಗಳು ಹಾದುಹೋಗಿವೆ. ಹುಡುಗಾಟದ ದಿನಗಳೆಲ್ಲಾ ಮರೆಯಾಗಿ ಹಲವಾರು ಹಳೆಯಪಳೆಯ ಮುಖಗಳೂ ಕೂಡಾ ಕಾಣೆಯಾಗಿ, ಮುಪ್ಪಿನ ಜತೆಗೆ ಮುಕ್ತಾಯದ ಭಾವವನ್ನೂ ಬದುಕಿನಲ್ಲಿ ನಾವು ಮೂಡಿಸಿಕೊಳ್ಳುತ್ತಿರುವ ಈ ಸಮಯದಲ್ಲಿ ಆ ಎಲ್ಲ ಹಳೆಯ ನೆನಪುಗಳು ನಮಗೆ ಚೇತೋಹಾರಿಯಾಗಿ ಕಾಣುತ್ತವೆ. ನಮ್ಮ ದೇಹಗಳಿಗೆ ಮುಪ್ಪು ಬರುತ್ತಿದ್ದರೂ, ನಮ್ಮ ಸ್ನೇಹಕ್ಕೆ ಮುಪ್ಪಿಲ್ಲವೆಂಬುದೇ ನಮಗೆ ಸಮಾಧಾನದ ಸಂಗತಿ. ನಾವು ನಾವು ಇರುವಷ್ಟು ದಿನ ಈ ಸಂತಸವನ್ನು ಉಳಿಸಿಕೊಳ್ಳಬೇಕೆಂಬುದೇ ನಮ್ಮ ಆಸೆ. ಅರವತ್ತರ ಸಂಭ್ರಮದಲ್ಲಿರುವ ರೆಡ್ಡಿಯ ಸಜ್ಜನಿಕೆಯ ಸೋಂಕಿಲ್ಲದ, ಸೊಗಡಿನ ಸ್ನೇಹಕ್ಕೆ ಅಭಿನಂದಿಸುವ ಈ ನೆಪದಲ್ಲಿ ಹಳೆಯದೊಂದಿಷ್ಟನ್ನು ನೆನಪಿಸಿಕೊಂಡು ಖುಷಿ ಪಡುವಂತಾಗುತ್ತದೆ. ಅದಕ್ಕಾಗಿ ಗೆಳೆಯ ದೇಕೊಂರೆ ಯನ್ನು ಮತ್ತು ಇದಕ್ಕೆ ಕಾರಣಕರ್ತರಾದ ಎಲ್ಲರನ್ನ ಅಭಿನಂದಿಸಬೇಕೆನಿಸುತ್ತದೆ. ನಮ್ಮ ಪ್ರೀತಿಯ 'ಬೈಗುಳದ ಸಿದ್ಧಪ್ಪನ' ಅಪರಾವತಾರದಂತಿರುವ ದೇಕೊಂರೆ ಇನ್ನೂ ನೂರು ಕಾಲ ಬಾಳಲಿ .ಅವನ ಜತೆಗೆ ನಾವೂ ಒಂದಷ್ಟುಕಾಲ ಇರಲಿ ಅಂತ ಹಾರೈಸುತ್ತೇನೆ.



# ಸಹಪಾಠಿ ಮಿತ್ರ ಡಾ॥ ದೇವರಕೊಂಡಾರೆಡ್ಡಿ

– ಡಿ.ವಿ. ಕೃಷ್ಣಮೂರ್ತಿ*

**ಸು**ಮಾರು ೪೦ ವರುಷಗಳ ಹಿಂದಿನ ಮಾತು. ತಿಪಟೂರಿನ ಕಲ್ಪತರು ಕಾಲೇಜಿನಲ್ಲಿ ವ್ಯಾಸಂಗ ಮಾಡಿ, ವಿಜ್ಞಾನ-ಗಣಿತಶಾಸ್ತ್ರದಲ್ಲಿ ಪದವಿ ಪಡೆದು. ಮುಂದಿನ ವಿದ್ಯಾಭ್ಯಾಸದ ಕಡೆಗೆ ಗಮನ ಹರಿಸದೆ, ನಮ್ಮ ಕುಲ ಕಸುಬಾದ ವ್ಯಾಪಾರ ವ್ಯವಹಾರಗಳಲ್ಲಿ ನನ್ನ ಮನಸ್ಸನ್ನು ಕೇಂದ್ರೀಕರಿದ್ದೆ. ಅನಿರೀಕ್ಷಿತವಾಗಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಎಂ.ಎ., ತರಗತಿಯಲ್ಲಿ ವ್ಯಾಸಂಗ ಮಾಡಲು ಅವಕಾಶ ದೊರೆತು ಬೆಂಗಳೂರಿಗೆ ಧಾವಿಸಿ ಬಂದು ಕಾಲೇಜಿಗೆ ಸೇರಿದೆ.

ಆ ದಿನಗಳಲ್ಲಿ ಸ್ನಾತಕೋತ್ತರ ತರಗತಿಗಳು ಸೆಂಟ್ರಲ್ ಕಾಲೇಜಿನಲ್ಲಿ ನಡೆಯುತ್ತಿದ್ದು (ಇಂದಿನ ಜ್ಞಾನಭಾರತಿ ಕ್ಯಾಂಪಸ್ ಆಗಿನ್ನೂ ಅಸ್ತಿತ್ವದಲ್ಲಿರಲಿಲ್ಲ). ಕನ್ನಡ ವಿಭಾಗದ ತರಗತಿಗಳು ಪ್ರಸನ್ನಕುಮಾರ್ ಬ್ಲಾಕ್‌ನಲ್ಲಿನ ಕಟ್ಟಡದಲ್ಲಿ ನಡೆಯುತ್ತಿದ್ದವು. ಆ ದಿನಗಳಲ್ಲಿ ಕನ್ನಡ ಸಾಹಿತ್ಯದ ದಿಗ್ಗಜರಾದ ಡಾ॥ ರಂ.ಶ್ರೀ.ಮುಗಳಿ, ಪ್ರೊ॥ ಎಂ.ವಿ. ಸೀತಾರಾಮಯ್ಯ, ಡಾ॥ ಜಿ.ಎಸ್.ಶಿವರುದ್ರಪ್ಪ, ಡಾ॥ ಎಂ.ಚಿದಾನಂದಮೂರ್ತಿ. ಡಾ॥ ಹಂ.ಪ. ನಾಗರಾಜಯ್ಯ, ಡಾ॥ ಕೆ.ಎಂ. ಕೃಷ್ಣರಾವ್, ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಡಾ॥ ತಂಗಿರಾಲ ಸುಬ್ಬರಾವ್ ಮುಂತಾದವರು ನಮ್ಮ ಅಧ್ಯಾಪಕರಾಗಿದ್ದರು. ಮೊದಲಿನಿಂದಲೂ ಕನ್ನಡದ ಬಗೆಗೆ ಅಭಿಮಾನವಿದ್ದ ನನಗೆ ಇವರುಗಳಿಂದ ಕನ್ನಡ ಸಾಹಿತ್ಯವನ್ನು ಅಭ್ಯಸಿಸುವ ಅವಕಾಶ ದೊರೆತಾಗ ಸಂತೋಷವಾಗಿತ್ತು. ಆದರೂ ವಿಜ್ಞಾನದ ವಿದ್ಯಾರ್ಥಿಯಾಗಿದ್ದ ನನ್ನನ್ನು ಅದ್ಯಾವುದೋ ಭಯ, ಆತಂಕ ಆವರಿಸಿತ್ತು. ಕಾರಣ ಸಾಹಿತ್ಯದ ಪ್ರಾಥಮಿಕ ವಿಷಯಗಳನ್ನೇ ಸರಿಯಾಗಿ ಅಭ್ಯಾಸ ಮಾಡಿದ ನಾನು ಎಷ್ಟರಮಟ್ಟಿಗೆ ಸ್ನಾತಕೋತ್ತರ ಅಧ್ಯಯನವನ್ನು ನಿಭಾಯಿಸಬಲ್ಲೆ ಎಂಬ ಅನುಮಾನದಲ್ಲೇ ಕಾಲೇಜಿಗೆ ಕಾಲಿಟ್ಟದ್ದೆ. ಅಲ್ಲಿ ನನಗೆ ಮೊತ್ತ ಮೊದಲು ಪರಿಚಯವಾದದ್ದೇ ದೇವರಕೊಂಡಾರೆಡ್ಡಿ.

ರೆಡ್ಡಿಯವರ ಜೊತೆ ಕನ್ನಡ ಆನರ್ಸ್ ಮುಗಿಸಿ ನಂತರ ಎಂ.ಎ. ಓದಲು ಬಂದ ಅವರದೇ ಆದ ಒಂದು ಗುಂಪಿತ್ತು (ಶ್ರೀಯುತ ಚಂದ್ರಮೋಹನ್, ರಾಮಪ್ರಸಾದ್, ಜ್ವಾಲಾಕುಮಾರ್, ವೆಂಕಟರಾಜು, ಕ.ನಂ. ನಾಗರಾಜು ಮುಂತಾದವರು). ಅವರೆಲ್ಲರೂ ನನ್ನ ಗೆಳೆಯರಾದರು. ಅವರ ಜೊತೆ ಸೇರಿ ನಾನೂ ಕ್ರಮೇಣ ಧೈರ್ಯ ತಂದುಕೊಂಡೆ. ಮೊದಮೊದಲು ಸಾಹಿತ್ಯಕ ವಿಷಯಗಳನ್ನು ಅವರು ಚರ್ಚಿಸುತ್ತಿದ್ದಾಗ, ಆರಂಭದಿಂದಲೂ ಅವನ್ನು ಅಭ್ಯಾಸ ಮಾಡದಿದ್ದ ನನಗೆ, ಆ ಚರ್ಚೆಯಲ್ಲಿ ಭಾಗವಹಿಸಲು ಒಂದು ತರಹ ಮುಜುಗರ ಉಂಟಾಗುತ್ತಿತ್ತು. ಅದನ್ನು ಗಮನಿಸಿದ ದೇವರಕೊಂಡಾರೆಡ್ಡಿಯವರು ನನ್ನಲ್ಲಿ ಧೈರ್ಯ ತುಂಬಿ ಅವರ ಚರ್ಚೆಯಲ್ಲಿ ಭಾಗವಹಿಸಲು ಅವಕಾಶ ಮಾಡಿಕೊಡುತ್ತಿದ್ದರು.

ಕಾಲ ಕಳೆದಂತೆ ಎಂ. ಪ್ರಸನ್ನ ಕುಮಾರ್, ಡಿ.ಕೆ. ಶಾಮಸುಂದರರಾವ್, ತಾಳ್ತಜೆ ವಸಂತಕುಮಾರ್, ಎಚ್. ಸತ್ಯನಾರಾಯಣ, ಕೆ.ವಿ. ನಾರಾಯಣ್, ಸಂಪತ್‌ಕುಮಾರ್ ಮುಂತಾದವರುಗಳಿಂದ ಕೂಡಿದ ಒಂದು ದಂಡೇ ನಮ್ಮದಾಯಿತು. ಹಿರಿಯ ವಿದ್ಯಾರ್ಥಿಗಳಾದ ಟಿ. ಶ್ರೀನಿವಾಸರಾಜು, ಎಚ್.ಎಸ್. ರಾಘವೇಂದ್ರರಾವ್, ಕೆ.ಆರ್. ಗಣೇಶ್ ಮುಂತಾದವರೂ ನಮ್ಮ ಗುಂಪಿನಲ್ಲಿ ಸೇರಿ, ನಮ್ಮದೇ ಆದ ಒಂದು 'ಪಿ.ಪಿ. ಗ್ರೂಪ್' ನಿರ್ಮಾಣವಾಗಿ ಸಾಹಿತ್ಯಕ ವಿಷಯಗಳನ್ನು ಬಿಡುವಿನ ವೇಳೆ ಚರ್ಚಿಸುತ್ತಿದ್ದೆವು. ಕನ್ನಡ ವಿಭಾಗದ 'ಹಸಿರು ಹುಲ್ಲು ಹಾಸು' ಹಾಗೂ ಸೆಂಟ್ರಲ್ ಕಾಲೇಜಿನ ಲೈಬ್ರರಿಯ ಮುಂಭಾಗದ 'ಕಲ್ಲು ಬೆಂಚು' ಇವು ನಮ್ಮ ಸಾಹಿತ್ಯಕ ಹಾಗೂ ಪಠ್ಯೇತರ ಚಟುವಟಿಕೆಗಳ ಕಾರ್ಯಾಗಾರವಾಗಿತ್ತು. ಇದು ಮತ್ತೂ ಹಲವಾರು ವರ್ಷಗಳು ಸಕ್ರಿಯವಾಗಿ ಮುಂದುವರೆದುದು ನನಗೆ ಇನ್ನೂ ನೆನಪಿದೆ.

ದೇವರಕೊಂಡಾರೆಡ್ಡಿಯವರ ವ್ಯಕ್ತಿತ್ವ ವಿಶಿಷ್ಟವಾಗಿದ್ದು, ಅದು ನಮ್ಮ ಗುಂಪಿನಲ್ಲಿ ಎದ್ದು ಕಾಣುತ್ತಿತ್ತು. ಅವರು ಎಷ್ಟೋ ಸಜ್ಜನಿಕೆಯ ಸರಳ ವ್ಯಕ್ತಿಯಾಗಿದ್ದರೂ ಅವರ ನಿಷ್ಠುರ ಸತ್ಯ, ಕಟುವಾದ ಟೀಕೆ ನಮ್ಮೆಲ್ಲರ ಗಮನವನ್ನು ಸೆಳೆಯುತ್ತಿತ್ತು. ಅವರ ಆಡು ಮಾತಿನ ರೀತಿ. ದೇಶೀಯ ಬೈಗುಳ ಮಾತ್ರ ನಮಗೆ ಒಮ್ಮೊಮ್ಮೆ ಭಯ ಉಂಟುಮಾಡುತ್ತಿತ್ತು. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎನ್ನುವಂತೆ ನಮ್ಮ ಗುಂಪಿನಲ್ಲಿ ಅವರದೇ ಆದ ಒಂದು ಛಾಪನ್ನು ಮೂಡಿಸಿದ್ದರು.

---

* ವ್ಯಾಪಾರಿಗಳು, ದಂಡಂ ವೆಂಕಟರಮಣಯ್ಯ ಅಂಡ್ ಸನ್ಸ್, ತಿಪಟೂರು, ತುಮಕೂರು ಜಿಲ್ಲೆ.

ಸಾಹಿತ್ಯಕ ವಿಷಯಗಳಲ್ಲದೆ ಪಠ್ಯೇತರ ಚಟುವಟಿಕೆಗಳಲ್ಲೂ ಅವರು ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅವರಲ್ಲಿ ಎಂದೂ ಸೇಡಿನ, ದ್ವೇಷದ ಮನೋಭಾವ ಇರುತ್ತಿರಲಿಲ್ಲ. ಉತ್ಸಾಹದ ಗಣಿಯಾಗಿದ್ದು 'ಎಲ್ಲರೊಳಗೊಂದಾಗುವ' ಗುಣ ಅವರದಾಗಿತ್ತು. ಎಲ್ಲರೊಂದಿಗೂ ಆತ್ಮೀಯವಾಗಿ ಹೊಂದಿಕೊಂಡು ಹೋಗುವ ಗುಣ ನಿಜವಾಗಿಯೂ ನಮಗೆ ಮಾದರಿಯಾಗಿತ್ತು. ನಮ್ಮ ಯಾವುದೇ ಅನುಮಾನಗಳಿಗೆ ಅವರಿಂದ ಸೂಕ್ತ ಸಮಾಧಾನ ಉತ್ತರಗಳು ದೊರಕುತ್ತಿದ್ದವು.

ಕೊನೆಯ ವರ್ಷದ ಬೀಳ್ಕೊಡುಗೆ ಸಮಾರಂಭದ ಪ್ರಯುಕ್ತ ನಮ್ಮ ತರಗತಿಯ ಪಠ್ಯೇತರ ಚಟುವಟಿಕೆಗಳ ಸ್ಪರ್ಧೆಯಲ್ಲಿ ನಾನು ತರಗತಿಯ 'ಛಾಂಪಿಯನ್' ಆಗಿ ಹೊರಹೊಮ್ಮಿದಾಗ ನನ್ನ ಬೆನ್ನು ತಟ್ಟಿ, ಕೆಂಪೇಗೌಡ ರಸ್ತೆಯ 'ವಿಷ್ಣುಭವನ್'ನಲ್ಲಿ ನನಗೆ ಪ್ರತ್ಯೇಕವಾಗಿ ಎಸ್.ಕೆ.ಸಿ. (ಸ್ವೀಟು–ಕಾರ–ಕಾಫಿ) ಕೊಡಿಸಿದ್ದು ಇಂದೂ ನನ್ನ ನೆನಪಿನಂಗಳದಲ್ಲಿ ಸಿಹಿ–ಸಿಹಿಯಾಗೇ ಉಳಿದಿದೆ.

ಕಾಲೇಜಿನ ಶೈಕ್ಷಣಿಕ ಪ್ರವಾಸದಲ್ಲಿ ನಾವುಗಳು ಹಂಪೆ, ಹರಿಹರ, ಬಾದಾಮಿ, ಐಹೊಳೆ, ಪಟ್ಟದಕಲ್ಲು ಮುಂತಾದ ಕಡೆಗೆ ಭೇಟಿ ಇತ್ತಾಗ ನಮ್ಮ ಗಮನವೆಲ್ಲಾ ಪ್ರವಾಸದ ಸವಿಯನ್ನು ಸವಿಯುವುದರಲ್ಲಿದ್ದಾಗ, ಅವರ ಗಮನ ಮಾತ್ರ ಅಲ್ಲಿನ ಶಾಸನಗಳಲ್ಲೇ ಕೇಂದ್ರೀಕರಿಸಿತ್ತು. ಅವರ ಆ ಆಸಕ್ತಿ ಕಂಡು ನಮಗೆ ನಿಜವಾಗಿಯೂ ಅಭಿಮಾನ ಮೂಡುತ್ತಿತ್ತು. ಬಹುಶಃ ಅಂತಹವರಿಂದಲೇ ನಿಜವಾದ ಅರ್ಥದಲ್ಲಿ ಶೈಕ್ಷಣಿಕ ಪ್ರವಾಸ ಅರ್ಥಪೂರ್ಣವಾಗುವುದು.

ಇದಷ್ಟೇ ಅಲ್ಲದೆ ಇತರ ಕಾರ್ಯಕ್ಷೇತ್ರಗಳಲ್ಲೂ ಅವರು ಸಕ್ರಿಯವಾಗಿದ್ದರು. ಸ್ನಾತಕೋತ್ತರ ಪದವೀಧರರಾಗಿ ಸರ್ಜಾಪುರದ ಸರ್ಕಾರಿ ಜೂನಿಯರ್ ಕಾಲೇಜಿನಲ್ಲಿ ತಾತ್ಕಾಲಿಕ ಕನ್ನಡ ಉಪನ್ಯಾಸಕರಾಗಿ ನೇಮಕವಾಗಿದ್ದಾಗ ಅವರು ಒಂದು ಸಂಘವನ್ನು ಸ್ಥಾಪಿಸಿಕೊಂಡು ಖಾಯಂ ಕೆಲಸ ಪಡೆಯಲು ನಿರಂತರ ಹೋರಾಟ ನಡೆಸಿದ್ದು ನನಗೆ ಇನ್ನೂ ನೆನಪಿದೆ. ಆಗ ನಾನೂ ಸಹ ದೊಡ್ಡಬಳ್ಳಾಪುರದ ಸರ್ಕಾರಿ ಜೂನಿಯರ್ ಕಾಲೇಜಿನಲ್ಲಿ ಅವರಂತೆಯೇ ತಾತ್ಕಾಲಿಕ ಉಪನ್ಯಾಸಕನಾಗಿದ್ದು, ನನ್ನೊಂದಿಗೆ ಆ ಸಂಬಂಧವಾಗಿ ನಿರಂತರ ಸಂಪರ್ಕ ಇಟ್ಟುಕೊಂಡಿದ್ದರು.

ಮುಂದಿನ ದಿನಗಳ ನಮ್ಮ ಸಂಬಂಧ ಹೇಳುವುದಾದರೆ, ತಿಪಟೂರಿನ ಸನಿಹದಲ್ಲಿರುವ ಕೆರೆಗೋಡಿ ಶಂಕರೇಶ್ವರ ದೇವಾಲಯದ ಆವರಣದಲ್ಲಿರುವ ಪುರಾತನ ಚಿತ್ರಕಲೆಯ ಅಧ್ಯಯನಕ್ಕಾಗಿ ಅವರ ಮಿತ್ರರೊಂದಿಗೆ ನಮ್ಮೂರಿಗೆ ಬಂದಿದ್ದು. ಒಂದೆರಡು ದಿನ ನನ್ನ, ನಮ್ಮ ಮನೆಯವರ ಆತಿಥ್ಯ ಸ್ವೀಕರಿಸಿದ ನೆನಪು ನನಗೆ ಇನ್ನೂ ಮಾಸಿಲ್ಲ. ಶಾಸನಗಳ ಅಧ್ಯಯನಕ್ಕಾಗಿ ಕಾಡುಮೇಡುಗಳನ್ನು ಸುತ್ತುತ್ತಾ, ಅನೇಕ ಸಂದರ್ಭಗಳಲ್ಲಿ ಸಾಕಷ್ಟು ಅಡಚಣೆಗಳನ್ನು ಅನುಭವಿಸಿದರೂ, ಅವರು ಛಲದಿಂದ ತಮ್ಮ ನಿರೀಕ್ಷಿತ ಗುರಿಯನ್ನು ಮುಟ್ಟುತ್ತಿದ್ದರು. ಒಮ್ಮೆ 'ಜಿಗಣೆ'ಗಳಿಂದ ಸಾಕಷ್ಟು ಕಚ್ಚಿಸಿಕೊಂಡೂ ತಮ್ಮ ಗುರಿಯನ್ನು ಮುಟ್ಟಿದ ಪ್ರಸಂಗವನ್ನು ಅವರು ನನಗೆ ಹೇಳಿದ್ದರು. ವೇಳೆಗೆ ಸರಿಯಾಗಿ ನಿದ್ರೆ, ಆಹಾರಗಳು ಇಲ್ಲದ ಅದೆಷ್ಟೋ ದಿನ ರಾತ್ರಿಗಳು ಅವರ ಶಾಸನಗಳ ಅಧ್ಯಯನದಲ್ಲಿ ಸಾಮಾನ್ಯವಾಗಿದ್ದವು. ಅವರ ಈ ಛಲ, ಪ್ರಯತ್ನಗಳೇ ಶಾಸನ ಲೋಕದಲ್ಲಿ ಇಷ್ಟು ಎತ್ತರಕ್ಕೆ ಏರಿ, ಇಷ್ಟರಮಟ್ಟಿಗೆ ಸಾಧನೆ ಮಾಡಲು ಕಾರಣವಾದದ್ದು. ಅದರ ಫಲವೇ ಅವರಿಗೆ ಸಂದ 'ಡಾಕ್ಟರೇಟ್ ಪದವಿ'.

ಇನ್ನು ಅವರ ವೈಯಕ್ತಿಕ ವಿಷಯ ಹೇಳುವುದಾದರೆ ಅವರೊಬ್ಬ ಸ್ನೇಹ ಜೀವಿ. ಒಮ್ಮೆ ಪರಿಚಯವಾದರೆ ಸಾಕು, ಎಂದಿಗೂ ಮರೆಯುತ್ತಿರಲಿಲ್ಲ. ನನ್ನ ವಿಷಯವನ್ನೇ ತೆಗೆದುಕೊಳ್ಳಿ. ಅನಿವಾರ್ಯ ಕಾರಣಗಳಿಂದಾಗಿ ನಮ್ಮಿಬ್ಬರ ಕಾರ್ಯಕ್ಷೇತ್ರಗಳು ಬೇರೆ–ಬೇರೆಯಾಗಿ ನಾನು ನನ್ನ ವ್ಯಾಪಾರ ವ್ಯವಹಾರಗಳಲ್ಲಿ ತಲ್ಲೀನನಾದಾಗ, ಸಹಜವಾಗಿ ಅವರನ್ನು ಕ್ರಮೇಣ ನಿಧಾನವಾಗಿ ಮರೆಯುತ್ತಾ ಬರುತ್ತಿದ್ದರೂ ಆಗಿಂದಾಗ್ಗೆ ನೆನಪಿಸಿ ನಮ್ಮಿಬ್ಬರ ಗೆಳೆತನಕ್ಕೆ ಮರುಜೀವ ಕೊಡುತ್ತಿದ್ದರು. ಅವರ ಕಾರ್ಯಕ್ಷೇತ್ರದಲ್ಲಿ ಸಾಕಷ್ಟು ಸಾಧನೆ ಮಾಡಿ, ಪ್ರಸಿದ್ಧಿ ಪಡೆಯುತ್ತಿದ್ದರೂ ನಮ್ಮ ಗೆಳೆತನವನ್ನು ಮಾತ್ರ ಮರೆಯುತ್ತಿರಲಿಲ್ಲ. ಅವರ ಈ ದೊಡ್ಡ ಗುಣದ ಮುಂದೆ ನಾನು ನಿಜವಾಗಿಯೂ ಸಣ್ಣವನಾಗುತ್ತಿದ್ದೆ. ಇಂತಹ ವ್ಯಕ್ತಿತ್ವದ ದೇವರಕೊಂಡಾರೆಡ್ಡಿಯವರು ಅರುವತ್ತು ವಸಂತಗಳನ್ನು ಪೂರೈಸಿ ಅಭಿಮಾನಿ ಮಿತ್ರರ, ಹಿತೈಷಿಗಳ, ವಿದ್ಯಾರ್ಥಿಗಳ ಒಂದು ಗುಂಪನ್ನೇ ತಮ್ಮದಾಗಿಸಿಕೊಂಡಿದ್ದು, ಅವರೆಲ್ಲರ ಅಭಿಮಾನಪೂರ್ವಕವಾದ 'ಅಭಿನಂದನಾ ಗ್ರಂಥ'ವೊಂದು ಇದೀಗ ಪ್ರಕಟವಾಗುತ್ತಿರುವುದು ನನಗೆ ನಿಜವಾಗಿಯೂ ಸಂತಸ ತಂದಿದೆ. ಈ ಸುಸಂದರ್ಭದಲ್ಲಿ ನನ್ನ ಸಹಪಾಠಿಯೂ ಆತ್ಮೀಯರೂ ಹಿತೈಷಿಗಳೂ ಆದ ದೇವರಕೊಂಡಾರೆಡ್ಡಿಯವರ ಬಗೆಗೆ ನನ್ನ ನೆನಪಿನಾಳದ ಕೆಲವು ಸಂಗತಿಗಳನ್ನು ಮೆಲುಕು ಹಾಕಲು ಅವಕಾಶ ದೊರೆತದ್ದಕ್ಕಾಗಿ ನನಗೆ ನಿಜವಾಗಿಯೂ ಅತೀವ ಸಂತಸವಾಗಿದೆ. ಪರಮಾತ್ಮನು ಅವರಿಗೆ ಎಲ್ಲ ರೀತಿಯ ಆಯುರಾರೋಗ್ಯ, ಸಂಪತ್ತು, ಕೀರ್ತಿ ಕರುಣಿಸಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

# ಶಿಲಾಶಾಸನದ ತಪಸ್ವಿ ಗೆಳೆಯ : ದೇವರಕೊಂಡಾರೆಡ್ಡಿ

– ಡಾ॥ ಜ್ಯೋತಿ ಶಶಿಕುಮಾರ್*

**೧೯೬೯ನೆಯ** ಇಸವಿ. ನಾನು ಇತಿಹಾಸ ಎಂ.ಎ. ಪದವಿಗೆ ಅರ್ಜಿ ಸಲಿಸಿದ್ದೆ. ನನ್ನ ಪೂಜ್ಯ ದೊಡ್ಡಪ್ಪನವರಾದ ದಿವಂಗತ ಪ್ರೊ.ಡಿ.ಕೆ.ಭೀಮಸೇನರಾವ್ ಅವರಿಗೆ ನಾನು ಕನ್ನಡ ಬಿಟ್ಟು ಇತಿಹಾಸಕ್ಕೆ ಹೆಜ್ಜೆ ಹಾಕಿದ್ದು ತಿಳಿದು ತುಂಬಾ ಬೇಸರವಾಯಿತು. ಮತ್ತೆ ನನ್ನನ್ನು ಕನ್ನಡ ವಿಭಾಗಕ್ಕೆ ಕಾಲಿಡುವಂತೆ ಮನವೊಲಿಸಿದವರು. ಅಂತೂ ಕನ್ನಡ ವಿಭಾಗದ ತಂಪು ವಾತಾವರಣಕ್ಕೆ ಅಡಿಯಿಟ್ಟದ್ದೆ. ಆಗ ಸರ್ಕಾರಿ ಕಲೆ ಮತ್ತು ವಿಜ್ಞಾನ ಕಾಲೇಜು ಗ್ಯಾಸ್ ಕಾಲೇಜೆಂದೇ ಪ್ರ(ಕು)ಖ್ಯಾತವಾಗಿತ್ತು. ಅಷ್ಟೇ ಅಲ್ಲ ಅಲ್ಲಿನ ಹುಡುಗರು 'ಮಹಾತರಲೆ'ಗಳೆಂದೂ ಕೂಡಾ ಬಿರುದಾಂಕಿತರಾಗಿದ್ದರು.

ಅಲ್ಲಿ ಪರಿಚಯವಾದವರೇ ನನ್ನ ಪ್ರಿಯಮಿತ್ರರಲ್ಲೊಬ್ಬರಾದ ಡಾ. ದೇವರಕೊಂಡಾರೆಡ್ಡಿಯವರು. ಇವರೊಂದಿಗೆ ಪ್ರಸನ್ನ, ಜ್ವಾಲಕುಮಾರ್, ಶ್ಯಾಮಸುಂದರ್, ವೆಂಕಟರಾಜು, ಕೆ.ವಿ. ನಾರಾಯಣ್, ಸಂಪತ್, ಕೃಷ್ಣಮೂರ್ತಿ. ರಾಮಪ್ರಸಾದ್, ಚಂದ್ರಮೋಹನ್ ಮುಂತಾದವರೆಲ್ಲ ಸೇರಿ ದೊಡ್ಡ 'ಗ್ಯಾಂಗ್' ಆಗಿದ್ದರು. ಹಿರಿ ಸೋದರರಂತಿದ್ದ ಪರ್ವತಯ್ಯ, ನಂಜುಂಡಯ್ಯ ಇವೆಲ್ಲರ ಒಡನಾಟದ ಆ ದಿನಗಳು ಎಂದಿಗೂ 'ನೆನಪು ಹಸಿರಾಗಿರುವ' ಆತ್ಮೀಯ ಭಾವವನ್ನುಂಟು ಮಾಡಿತ್ತು.

ತರಗತಿಯಲ್ಲಿದ್ದ ೩೨ ಜನರ ಸಂಖ್ಯೆಯಲ್ಲಿ ಒಂಬತ್ತು ಜನ ಹುಡುಗಿಯರಿದ್ದೆವು. ಬಹಳ ದಿನ ನಾನು ಯಾವ ಹುಡುಗರ ಜೊತೆ ಮಾತಿರಲಿ, ತಲೆಯೆತ್ತಿ ನೋಡಲು ಕೂಡ ಹೆದರುತ್ತಿದ್ದೆ. ಅವರ ಹೆಸರುಗಳೂ ತಿಳಿದಿರಲಿಲ್ಲ. ಅವರಲ್ಲಿ ಶ್ರೀ ದೇವರಕೊಂಡಾರೆಡ್ಡಿ ಹಾಗೂ ಪ್ರಸನ್ನ ಮೊದಲು ಪರಿಚಿತರಾದರು. ಕ್ರಮೇಣ ಸಂಕೋಚ ಹರಿದು ನಾವೆಲ್ಲ ಸಲೀಸಾಗಿ ಮಾತನಾಡುವಷ್ಟು ನಮ್ಮಲ್ಲಿ ಸ್ನೇಹ ಬೆಳೆಯಿತು. ರೆಡ್ಡಿಯವರನ್ನು 'ವ್ಯಾಕರಣ ಪಂಡಿತ', 'ಕೇಶಿರಾಜನ ತುಂಡು' ಎಂದು ನಾವು ಕೀಟಲೆ ಮಾಡುತ್ತಿದ್ದೆವು. ಅವರು ಶಾಸನಗಳ ಅಧ್ಯಯನವನ್ನು ವಿಶೇಷವಾಗಿ ಆಯ್ಕೆ ಮಾಡಿಕೊಂಡಿದ್ದರು. ಕನ್ನಡ ಎಂ.ಎ. ಪದವಿಯ ಆ ಎರಡು ವರ್ಷ ಉರುಳಿದ್ದು ತಿಳಿಯದೇ ಹೋಗುವ ಮಟ್ಟಿಗೆ ನನ್ನ ತರಗತಿಯ ಎಲ್ಲ ಸಹಪಾಠಿಗಳೂ ಆತ್ಮೀಯರಾಗಿದ್ದರು. ಮುಂದೆ ಎಲ್ಲರೂ ತಂತಮ್ಮ ದಾರಿಗಳನ್ನರಸಿ ದೂರಸರಿದಿದ್ದೆವು.

ನಡುವೆ ಒಂದೆರಡು ಬಾರಿ ಶ್ರೀ ರೆಡ್ಡಿಯವರ ಬಗ್ಗೆ ವಿಚಾರಿಸಿದಾಗ ಅವರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕೆಲಸ ಮಾಡುತ್ತಿದ್ದುದು ತಿಳಿದಿತ್ತು. ಮುಂದೆ ಗೆಜೆಟಿಯರ್ ಕಚೇರಿಗೆ ಅವರು ಬಂದ ಮೇಲೆ ಆಗಿಂದಾಗ ಭೇಟಿ ಮಾಡುತ್ತಿದ್ದೆವು. ಅವರ ಭಾಷಾ ಪ್ರೌಢಿಮೆ, ಆಳವಾದ ಅಧ್ಯಯನ, ಅತ್ಯಂತ ಶ್ರಮಪಟ್ಟು ಶಾಸನಗಳನ್ನು ಗುರುತಿಸುವ, ಪಾಠಗಳನ್ನು ಸಿದ್ಧಪಡಿಸುವ ಪ್ರಕ್ರಿಯೆ ಇವೆಲ್ಲವೂ ನನಗೆ ಅಚ್ಚರಿ, ದಿಗ್ಭ್ರಮೆಯನ್ನುಂಟು ಮಾಡಿದ್ದು ಅವರು ಹಂಪಿ ವಿಶ್ವವಿದ್ಯಾಲಯಕ್ಕೆ ಸೇರಿದ ಮೇಲೆ. ಇದೆಂಥ ದೈತ್ಯ ದುಡಿತ, ಅಪ್ರತಿಮ ಸಾಹಸ ಎಂದು ನಾನು ನನ್ನ ಗೆಳತಿಯರು ಅನೇಕ ಬಾರಿ ಸೋಜಿಗ ಪಟ್ಟಿದ್ದೇವೆ. ಹೊಸಪೇಟೆಯ ಉರಿಬಿಸಿಲಲ್ಲಿ ಹಂಪಿಯ ಕಪ್ಪು ಕಲ್ಲು ಬಂಡೆಗಳ ನಡುವೆ ಶಿಲಾಶಾಸನ ಋಷಿಯಂತೆ ಆಹಾರ, ನಿದ್ರೆ, ಆಯಾಸ, ಸಂಸಾರದ ಚಿಂತೆ ಬಿಟ್ಟು ಅಹೋರಾತ್ರಿ ಕನ್ನಡ ಶಾಸನಗಳ ಅಧ್ಯಯನ ನಡೆಸುತ್ತಿದ್ದ ಇವರ ನಿಷ್ಠೆ ಅನನ್ಯವಾದುದು. ತಮ್ಮ ಕಾರ್ಯಕ್ಷೇತ್ರದಲ್ಲಿ ಅವಿರತವಾಗಿ ನಿಷ್ಠೆಯಿಂದ ಕೆಲಸ ಮಾಡುತ್ತಿರುವ ಶ್ರೀ ರೆಡ್ಡಿಯವರಂಥ ವ್ಯಕ್ತಿಗಳು ಅತಿ ವಿರಳವೆನ್ನಬಹುದು.

ಸುಖೀಕುಟುಂಬದ ರೆಡ್ಡಿಯವರ ಪತ್ನಿ ನಿಜಕ್ಕೂ 'ಕ್ಷಮಯಾ ಧರಿತ್ರೀ'. ಕುಟುಂಬದ ಸೌಖ್ಯ, ಸಮಸ್ಯೆ, ಮಕ್ಕಳ ಪಾಲನೆ, ಭವಿಷ್ಯ ಎಲ್ಲವನ್ನೂ ಸುಸೂತ್ರವಾಗಿ ಕುಂದು ಬಾರದಂತೆ ನಿರ್ವಹಿಸುತ್ತಿರುವ ಶ್ರೀಮತಿ ರತ್ನಮ್ಮನವರು ರೆಡ್ಡಿಯವರಿಗೆ 'ತಮ್ಮದೇ ಕಾಯಕ ಲೋಕ'ದಲ್ಲಿ ತನ್ಮಯರಾಗಲು ಸಂಪೂರ್ಣ ನೆರವು ನೀಡಿದ್ದಾರೆ.

ಆತ್ಮೀಯ ಗೆಳೆಯ ವೃಂದದಲ್ಲಿ ಪ್ರೀತಿಯಿಂದ 'ಮಗು' ಎಂದು ಕರೆಸಿಕೊಂಡಿದ್ದ ಈ ಶಾಸನತಜ್ಞರಿಗೆ ಅರವತ್ತು ಸಂದಿತು ಎಂದರೆ 'ಹೌದೇ' ಎನ್ನುವಂತಾಗಿದೆ. ಹಾಗಿದೆ ಅವರ ನಿರ್ಮಲ ಮನಸ್ಸು, ನಡೆನುಡಿ ಹಾಗೂ ಉತ್ಸಾಹ!

ಈ ಗೆಳೆಯನಿಗೆ ತನ್ನ ಕಾರ್ಯದಿಂದ ಸಂತೃಪ್ತಿ ಹಾಗೂ ಜೀವನದಲ್ಲಿ ನೆಮ್ಮದಿಯಿದೆ. ಇದು ಹೀಗೆಯೇ ಮುಂದುವರಿದು ನೂರ್ಕಾಲ ಸಂತಸ, ಆರೋಗ್ಯ ಹಾಗೂ ಚಟುವಟಿಕೆಯಿಂದ ಕೂಡಿರಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.



* ಉಪ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ೭ನೆಯ ಮಹಡಿ, ಬಹುಮಹಡಿ ಕಟ್ಟಡ, ಅಂಬೇಡ್ಕರ್ ಬೀದಿ, ಬೆಂಗಳೂರು-೦೧.

# ಸರಳ ಸಜ್ಜನಿಕೆಯ ಆತ್ಮೀಯ ಸ್ನೇಹಿತ

– ಎಂ.ಬಿ. ಪಾಟೀಲ*

**ಡಾ॥** ದೇವರಕೊಂಡಾರೆಡ್ಡಿ ಮತ್ತು ನನ್ನ ಸ್ನೇಹ ಸುಮಾರು ಕಾಲು ಶತಮಾನದಷ್ಟು ಹಳೆಯದು. ಕಳೆದ ಸುಮಾರು ೨೫ ವರ್ಷಗಳಲ್ಲಿ ಅವರು ವೃತ್ತಿಯಲ್ಲಿ, ಶಾಲಾ ಮಾಸ್ತರಿಕೆಯಿಂದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನ ಶಾಸ್ತ್ರ ವಿಭಾಗದ ಮುಖ್ಯಸ್ಥರಾಗುವವರೆಗೂ ಪದೋನ್ನತಿ ಪಡೆದಿದ್ದರೂ ನಮ್ಮ ಸ್ನೇಹ ಎಂದಿನಂತೆ ಪರಸ್ಪರ ಪ್ರೀತಿ, ವಿಶ್ವಾಸದಿಂದ ಕೂಡಿದ್ದು ಯಾವುದೇ ಅಂತಸ್ತುಗಳ ಏರಿಳಿತ ಇಲ್ಲದೆ ಮುಂದುವರೆದಿದೆ.

೧೯೮೪ರಿಂದ ೧೯೯೫ರವರೆಗೆ ಅಂದರೆ ಪ್ರಾರಂಭದ ಸುಮಾರು ೧೨ ವರ್ಷ, ಗೆಜೆಟಿಯರ್ ಇಲಾಖೆಯಿಂದ ವರ್ಗವಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅಧ್ಯಾಪಕರಾಗಿ ಹೋಗುವವರೆಗೆ ರೆಡ್ಡಿಯವರು ನನ್ನ ಸಹೋದ್ಯೋಗಿಯಾಗಿದ್ದರು. ಸುಮಾರು ೨೬ ವರ್ಷಗಳ (೧೯೭೨–೧೯೯೮) ಸುದೀರ್ಘವಾದ ನನ್ನ ಗೆಜೆಟಿಯರ್ ಇಲಾಖೆಯ ಸೇವೆಯಲ್ಲಿ ಅನೇಕ ಜನ ಸಹೋದ್ಯೋಗಿಗಳು ರೈಲು ಪ್ರಯಾಣಿಕರಂತೆ ಬಂದು ಹೋಗಿದ್ದಾರೆ. ಕೂಡಿ ಕೆಲಸ ಮಾಡಿದವರೆಲ್ಲರೂ ಸ್ನೇಹಿತರಾಗುವುದಿಲ್ಲ. ಅದರಲ್ಲೂ ನನ್ನ ನೆನಪಿನ ಆಳದಲ್ಲಿ ಬೇರೂರಿರುವವರು ಕೆಲವೇ ಕೆಲವರು. ಆ ಪೈಕಿ ರೆಡ್ಡಿಯವರೂ ಒಬ್ಬರು. ನಾನು ಇಲಾಖೆಯ ಸಂಪಾದಕನಾಗಿ ಕಾರ್ಯಭಾರವನ್ನು ವಹಿಸಿಕೊಂಡ ಅವಧಿಯಲ್ಲಿ ಅವರ ಉಪಯುಕ್ತ ಸೇವೆಯು ನನಗೆ ಲಭ್ಯವಾಗಲಿಲ್ಲ. ರೆಡ್ಡಿಯವರು ಮತ್ತು ನನ್ನ ನಡುವೆ ಕೇವಲ ಸಹೋದ್ಯೋಗಿ ಸಂಬಂಧ ಮಾತ್ರ ಇರದೇ ನಾವು ಆತ್ಮೀಯ ಸ್ನೇಹಿತರೂ ಪರಸ್ಪರ ಹಿತೈಷಿಗಳೂ ಆಗಿದ್ದೇವೆ. ಡಾ. ಸೂರ್ಯನಾಥ ಕಾಮತ್ ಅವರ ಕಾಲದಲ್ಲಿ ಡಾ. ರೆಡ್ಡಿ ಅವರು ಗೆಜೆಟಿಯರ್ ಇಲಾಖೆಯ ಅನ್ವೇಷಕರ ಹುದ್ದೆಗೆ, ನಿಯೋಜನೆಯ ಮೇರೆಗೆ ಸರ್ಕಾರಿ ಪದವಿ ಪೂರ್ವ ಕಾಲೇಜು, ಗುಂಡ್ಲುಪೇಟೆಯಿಂದ ಬಂದು ಸೇರಿಕೊಂಡರು.

ಆ ಕಾಲೇಜಿನಲ್ಲಿ ಅವರು ಕನ್ನಡ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಇದಕ್ಕೂ ಪೂರ್ವದಲ್ಲಿ ಸುಮಾರು ೭ ವರ್ಷ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಬಹು ಉಪಯೋಗಿ ಸೇವೆಯನ್ನು ಸಲ್ಲಿಸಿದ್ದರು.

ಇದೇ ಸಮಯದಲ್ಲಿ ಗೆಜೆಟಿಯರ್ ಇಲಾಖೆಗೆ ಡಾ॥ ಲಕ್ಷ್ಮಣ ತೆಲಗಾವಿ ಮತ್ತು ಡಾ॥ ಶೇಷಶಾಸ್ತ್ರಿಯವರು ಬೇರೆ ಬೇರೆ ಹುದ್ದೆಗಳಿಗೆ ಹಂಗಾಮಿಯಾಗಿ ನೇಮಕಗೊಂಡರು. ನಂತರದ ವರ್ಷಗಳಲ್ಲಿ ಈ ಮೂವರು ವಿದ್ವಾಂಸರೂ ವಿಶ್ವವಿದ್ಯಾಲಯಗಳ ಅಧ್ಯಾಪಕರಾಗಿ ನೇಮಕಗೊಂಡರು. ರೆಡ್ಡಿ ಮತ್ತು ತೆಲಗಾವಿಯವರು ಕನ್ನಡ ವಿಶ್ವವಿದ್ಯಾಲಯಕ್ಕೆ ನೇಮಕಗೊಂಡರೆ, ಡಾ. ಶೇಷಶಾಸ್ತ್ರಿಯವರು ಅನಂತಪುರದ ಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ಸೇರಿಕೊಂಡರು.

ಉನ್ನತ ಹುದ್ದೆಯನ್ನು ಅಲಂಕರಿಸಿದರೂ ಗೆಜೆಟಿಯರ್ ಇಲಾಖೆಯ ಸಂಪರ್ಕವನ್ನು ಈ ಮೂವರೂ ಒಂದಲ್ಲಾ ಒಂದು ರೀತಿಯಲ್ಲಿ ಮುಂದುವರೆಸಿಕೊಂಡು ಬಂದರು. ಗೆಜೆಟಿಯರ್ ಇಲಾಖೆಯಲ್ಲಿ ರೆಡ್ಡಿ ಅವರು ಅನ್ವೇಷಕ (ಇನ್ವೆಸ್ಟಿಗೇಟರ್)ರಾಗಿ ಸೇರಿ, ಸೇವೆಯ ಕೊನೆಯವರೆಗೂ (೧೨ ವರ್ಷಗಳು) ಅನ್ವೇಷಕರಾಗಿಯೇ ಮುಂದುವರೆಯಬೇಕಾಯಿತು. ಕಾರಣ ಇಲಾಖೆಯ ನೇಮಕಾತಿ ನಿಯಮಗಳ ಪ್ರಕಾರ ಅಲ್ಲಿ ವಿವಿಧ ಇಲಾಖೆಗಳಿಂದ ನಿಯೋಜನೆಯ ಮೇಲೆ ಬಂದವರಿಗೆ ಯಾವುದೇ ಮುಂಬಡ್ತಿಗೆ ಅವಕಾಶ ಇರಲಿಲ್ಲ. ಒಂದು ಅರ್ಥದಲ್ಲಿ ಹೇಳುವುದಾದರೆ ಕತ್ತೆ ಮತ್ತು ಕುದುರೆ ಎರಡನ್ನೂ ಒಂದೇ ಲಾಯದಲ್ಲಿ ಕಟ್ಟಿದಂತೆ. ಅಲ್ಲಿ ಸೇವಾ ಜ್ಯೇಷ್ಠತೆಯೇ ಇತರೇ ವಿಷಯಗಳಿಗಿಂತ ಬಡ್ತಿಗೆ ಮೂಲ ಆಧಾರವಾಗುತ್ತದೆ. ಮೇಲಾಗಿ ಈ ಇಲಾಖೆಗೆ ೧೯೯೫ ರವರೆಗೆ ಸ್ವತಂತ್ರವಾದ ಅಸ್ತಿತ್ವವೇ ಇರಲಿಲ್ಲ. ಅವರಿಗೆ ಸಂಪಾದಕರಾಗುವ ಎಲ್ಲ ಅರ್ಹತೆ ಇದ್ದರೂ ಕೇವಲ ಅನ್ವೇಷಕರಾಗಿ ಮುಂದುವರೆಯಬೇಕಾಯಿತು. ಆದರೆ ಅವರ ಅನುಭವ, ಆಸಕ್ತಿ, ಕಾರ್ಯವಿಧಾನ, ಕ್ಷೇತ್ರಕಾರ್ಯ ಮುಂತಾದುವನ್ನು ಗಮನಿಸಿ ಕೆಲವು ಅಧ್ಯಾಯಗಳನ್ನು ಸ್ವತಂತ್ರವಾಗಿ ನಿರ್ವಹಿಸುವ ಸಂಪಾದಕರ ಕಾರ್ಯವನ್ನು ಅವರಿಗೆ ಒಪ್ಪಿಸಲಾಯಿತು. ಇದು ಒಂದು ರೀತಿಯಲ್ಲಿ ಅವರ ಸಾಮರ್ಥ್ಯಕ್ಕೆ ಸವಾಲಿನಂತಿತ್ತು. ಅವರು ಅದನ್ನು ಸಮರ್ಥವಾಗಿ ನಿಭಾಯಿಸಿದರು. ಇದರಿಂದ ಅನ್ವೇಷಕ ಹುದ್ದೆಯ ಹಲವರಿಗೆ ಅಸಮಾಧಾನ ಆದದ್ದೂ ಉಂಟು. ಅನ್ವೇಷಕರಾಗಿ ಮುಖ್ಯ ಸಂಪಾದಕರೊಂದಿಗೆ ಮತ್ತು ತಾವೇ ಸ್ವತಃ ಕ್ಷೇತ್ರಕಾರ್ಯವನ್ನು ಸಮರ್ಪಕವಾಗಿ ಮಾಡಿಕೊಂಡು, ಸಲಹಾ ಸಮಿತಿಯ ಸಭೆಯಲ್ಲಿ ವಿಚಾರಗಳನ್ನು ಸಮರ್ಪಕವಾಗಿ ಮಂಡಿಸುತ್ತಿದ್ದುದರಿಂದ ಹಲವು ಸಂದರ್ಭಗಳಲ್ಲಿ ಹಲವಾರು ವಿಷಯಕ್ಕೆ ಸಂಬಂಧಪಟ್ಟಂತೆ, ಸಂಪೂರ್ಣ ಮಾಹಿತಿ ಇಲ್ಲದ ಕೆಲವು ಸಲಹಾ ಸಮಿತಿಯ

* ನಂ.೩೫೬, ಶ್ರೀರೇಣುಕಾ, ಚನ್ನಮ್ಮನಕೆರೆ ಅಚ್ಚುಕಟ್ಟು, ೬ನೆಯ ಕ್ರಾಸ್, ಬನಶಂಕರಿ ೨ನೆಯ ಹಂತ, ಬೆಂಗಳೂರು-೫೬೦೦೭೦.

ಸದಸ್ಯರಿಗೆ ಇರಿಸು ಮುರಿಸಾಗುತ್ತಿತ್ತು. ಆದರೆ ವಿಷಯದ ನೈಜತೆಯ ದೃಷ್ಟಿಯಿಂದ ಅದು ಅನಿವಾರ್ಯವಾಗುತ್ತಿತ್ತು. ಇದು ರೆಡ್ಡಿಯವರ ಕಾರ್ಯ ವೈಖರಿಗೆ ಒಂದು ನಿದರ್ಶನವಾಗಿತ್ತು. ಪ್ರತಿಯೊಂದು ಜಿಲ್ಲಾ ಗೆಜೆಟಿಯರ್ ತಯಾರಿಕೆಯಲ್ಲೂ ಸುಮಾರು ೩-೪ ತಿಂಗಳ ಕ್ಷೇತ್ರಕಾರ್ಯ ಮಾಡುತ್ತಿದ್ದರು.

ಈ ಕುರಿತಂತೆ ಒಂದು ಘಟನೆಯನ್ನು ದಾಖಲಿಸಬೇಕು. ಒಮ್ಮೆ ರಾಜ್ಯಸರ್ಕಾರದ ಸಮಾಜ ಕಲ್ಯಾಣ ಇಲಾಖೆಯು ಗೆಜೆಟಿಯರ್ ಇಲಾಖೆಗೆ ಬೇಡ ಜಂಗಮ, ಬುಡುಗ ಜಂಗಮ ಮುಂತಾದ ಬುಡಕಟ್ಟು ಸಮುದಾಯದವರ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಸಂಪ್ರದಾಯ-ಆಚರಣೆ ಮುಂತಾದುವುಗಳ ಒಂದು ಸಮೀಕ್ಷೆ ನಡೆಸಿ ವಿವರವಾದ ನಿಖರವಾದ, ವರದಿಯನ್ನು ನೀಡುವಂತೆ ತಿಳಿಸಿತು. ಆ ಸಮಯದಲ್ಲಿ ಈ ವಿಷಯ ಮೀಸಲಾತಿಯನ್ನು ಕುರಿತಂತೆ ತುಂಬಾ ಮಹತ್ವದ್ದಾಗಿತ್ತು. ಕಾರಣ ಅನೇಕ ವೀರಶೈವ/ಲಿಂಗಾಯತ ಜಂಗಮರು ತಾವೂ 'ಬೇಡುವ ಜಂಗಮರು' ಎಂದು ವಾದಿಸುತ್ತಾ ಆಂಧ್ರ, ಮಹಾರಾಷ್ಟ್ರಗಳಲ್ಲಿನ ಬೇಡ, ಬುಡುಗ ಎಂಬ ಜಂಗಮರಿಗೆ ನೀಡಿರುವ ಪ.ಜಾ/ಪ.ಪಂಗಳ ಮೀಸಲಾತಿ ಸೌಲಭ್ಯ ಪಡೆಯಲು ಜಾತಿ ಪ್ರಮಾಣ ಪತ್ರ ನೀಡಬೇಕೆಂದು ಆದೇಶಿಸುವಂತೆ ಉಚ್ಚ ನ್ಯಾಯಾಲಯದ ಮೊರೆ ಹೋಗಿದ್ದರು. ಹಿಂದುಳಿದ ವರ್ಗಗಳ ಜನಪ್ರಿಯ ನಾಯಕರೆಂದೇ ಪರಿಗಣಿಸಲಾದ ಡಿ. ದೇವರಾಜ ಅರಸು ಅವರು ಆಗ ರಾಜ್ಯದ ಮುಖ್ಯಮಂತ್ರಿಯಾಗಿದ್ದರು. ಇಂತಹ ಸಂದರ್ಭದಲ್ಲಿ ಕರ್ನಾಟಕದ ಗಡಿಭಾಗದ ಜಿಲ್ಲೆ (ಆಂಧ್ರ ಮಹಾರಾಷ್ಟ್ರ)ಗಳೂ ಸೇರಿದಂತೆ ಅಲ್ಲಿ ಇರುವ ವೀರಶೈವ ಮೂಲದ ಲಿಂಗಾಯತ ಜಂಗಮರು, ಬೇಡ ಮತ್ತು ಬುಡುಗ ಜಂಗಮರ ಆಚಾರ ವಿಚಾರ, ಪರಂಪರೆಗಳನ್ನು ಪಾಲಿಸುವರೇ ? ಮುಂತಾದುವುಗಳನ್ನು ವಿವರವಾಗಿ ಅಭ್ಯಾಸ ಮಾಡಿ ಉತ್ತಮವಾದ ವರದಿಯನ್ನು ಸಲ್ಲಿಸಲು ರೆಡ್ಡಿಯವರನ್ನು ಇಲಾಖೆಯ ವತಿಯಿಂದ ನಿಯೋಜಿಸಲಾಯಿತು. ಈ ಬಗ್ಗೆ ರೆಡ್ಡಿಯವರು ಸಂಬಂಧಪಟ್ಟ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ವಿವರವಾದ ಸಮೀಕ್ಷೆಯಿಂದ, ನಿಖರವಾದ ಅಧಿಕೃತವಾದ ಮಾಹಿತಿಯನ್ನು ಸಂಗ್ರಹಿಸಿ ವೀರಶೈವ ಜಂಗಮರು ಬೇರೆ ಬುಡುಗ-ಬೇಡ ಜಂಗಮರು ಬೇರೆ ಎಂದು ವರದಿ ಮಾಡಿದರು. ಈ ವಿಷಯವಾಗಿ ರೆಡ್ಡಿಯವರನ್ನು ತಮಾಷೆಗೆ 'ಬೇಡ-ಜಂಗಮ ರೆಡ್ಡಿ', 'ಬೇಡರನ್ನು ಕೊಂದ ರೆಡ್ಡಿ' ಎಂದು ಕರೆಯುತ್ತಿದ್ದೆವು. ಈ ವಿಷಯವಾಗಿ ಅವರೊಂದಿಗೆ ಚರ್ಚಿಸಲು ಆಸಕ್ತರು ಕಛೇರಿಗೆ ಬರುತ್ತಿದ್ದರು. ಈ ಘಟನೆಗೆ ಮೂಲಕಾರಣ ಗುಲಬರ್ಗದ ಒಬ್ಬರು ಹುಟ್ಟಿನಿಂದ ವೀರಶೈವ ಜಂಗಮರು ತಾವು ಪರಿಶಿಷ್ಟ ಪಂಗಡಕ್ಕೆ ಸೇರಿದವರು (ಬೇಡ ಜಂಗಮ) ಎಂದು ಲೋಕಸಭೆಗೆ ಸ್ಪರ್ಧಿಸಿದ್ದರು.

ಶಾಸನ, ಇತಿಹಾಸಗಳ ಬಗೆಗೆ ರೆಡ್ಡಿಯವರಿಗೆ, ಆರಂಭದಿಂದಲೂ ಆಸಕ್ತಿ. ಕರ್ನಾಟಕ ಇತಿಹಾಸ ಅಕಾಡೆಮಿಯೊಂದಿಗೆ ಬಿಡಿಸಲಾರದ ನಂಟು, ಭಾವನಾತ್ಮಕ ಸಂಬಂಧ. ಕಳೆದ ೨೨ ವರ್ಷಗಳಲ್ಲಿ ಅಕಾಡೆಮಿಯ ಪದಾಧಿಕಾರಿಗಳಾಗಿ, ಆಡಳಿತ ಮಂಡಳಿಯ ಸದಸ್ಯರಾಗಿ, ಇತಿಹಾಸ ದರ್ಶನ ಸಂಚಿಕೆಯ ಸಂಪಾದಕರಾಗಿ ಅಕಾಡೆಮಿಯನ್ನು ಕಟ್ಟಿ ಬೆಳೆಸುವಲ್ಲಿ ಸಕ್ರಿಯರಾಗಿ ಕಾರ್ಯ ನಿರ್ವಹಿಸಿದ್ದಾರೆ. ಅಕಾಡೆಮಿಯ ಮುದುವಟ್ಟಿನಿಂದ ನೀಡಲಿರುವ ಪ್ರಶಸ್ತಿಗೆ ವಿದ್ವಾಂಸರ ಆಯ್ಕೆಯಲ್ಲೂ ರೆಡ್ಡಿಯವರ ಸಲಹೆ ಸೂಚನೆಗೆ ತನ್ನದೇ ಆದ ತೂಕ ಉಂಟು. ಆದರೆ ಅದನ್ನು ಎಂದೂ ಅವರು ಅತಿಕ್ರಮಿಸಿದವರಲ್ಲ. ಸಮಂಜಸವಾಗಿ ಮೌಲಿಕವಾಗಿ ಉಪಯೋಗಿಸಿದವರು.

ಅಕಾಡೆಮಿಯ ವತಿಯಿಂದ ಪ್ರತಿವರ್ಷ ಖ್ಯಾತ ಇತಿಹಾಸಕಾರ, ಶಾಸನತಜ್ಞ ಡಿ॥ ಜಾ.ರಾ. ಗೋಪಾಲ ಅವರ ಹೆಸರಿನಲ್ಲಿ ರೂ. ೧೦ ಸಾವಿರ ನಗದು ಪ್ರಶಸ್ತಿಯನ್ನು ಖ್ಯಾತ ಶಾಸನತಜ್ಞರಿಗೆ ನೀಡಲಾಗುವುದು. ಈ ಮಾಲಿಕೆಯಲ್ಲಿ ರೆಡ್ಡಿಯವರನ್ನು ಮೂರನೇ ವರ್ಷ ಪ್ರಶಸ್ತಿಗೆ ಆಯ್ಕೆ ಮಾಡಲಾಯಿತು. ರೆಡ್ಡಿಯವರು ತಮಗೆ ನೀಡಿದ ಪ್ರಶಸ್ತಿಯ ರೂ. ೧೦,೦೦೦ ಗೌರವ ಧನವನ್ನು ಅತ್ಯಂತ ವಿನಮ್ರತಾ ಭಾವನೆಯಿಂದ, ಮುದುವಟ್ಟನ್ನು ಇನ್ನೂ ಎತ್ತರಕ್ಕೆ ಬೆಳೆಸುವ ಉದ್ದೇಶದಿಂದ ಅದರೊಂದಿಗೆ ತಮ್ಮ ಹಣವನ್ನೂ ಸೇರಿಸಿ ಅಕಾಡೆಮಿಗೆ ಕೊಡುಗೆ (Donation) ರೂಪದಲ್ಲಿ ಹಿಂದಕ್ಕೆ ನೀಡಿದರು. ಇದು ಅವರ ಮನೋ ವೈಶಾಲ್ಯತೆ, ದೊಡ್ಡತನವನ್ನು ತೋರಿಸುವುದು. ಈ ಸತ್‌ಸಂಪ್ರದಾಯವನ್ನು ನಂತರದ ವರ್ಷಗಳಲ್ಲಿ ಪುರಸ್ಕೃತರಾದ ಶ್ರೀಯುತ ಡಾ. ಕೆ.ಆರ್. ಗಣೇಶ, ಡಾ. ಎಂ.ಜಿ. ನಾಗರಾಜ ಅವರೂ ಅನುಸರಿಸುವ ಮೂಲಕ ಸತ್‌ಸಂಪ್ರದಾಯವನ್ನು ಮುಂದುವರೆಸಿದರು. ಇದು ಅಕಾಡೆಮಿಗೆ ಆರ್ಥಿಕ ಚೇತನ ನೀಡುವಲ್ಲಿ ಸಹಾಯವಾಯಿತು. ಅಕಾಡೆಮಿಯ ಗೌರವ ಕೋಶಾಧಿಕಾರಿಯಾಗಿ ನಾನು ಈ ವಿಷಯವನ್ನು ಅತ್ಯಂತ ಹೆಮ್ಮೆಯಿಂದ ಸ್ಮರಿಸುವೆನು. ಅಲ್ಲದೆ ಈ ಹಿಂದೆ ಅವಶ್ಯ ಇದ್ದಾಗಲೆಲ್ಲ ವಿಶೇಷ ಉಪನ್ಯಾಸ ಸಮಾರಂಭ ಏರ್ಪಡಿಸಲು ತಮ್ಮ ವಂತಿಗೆಯನ್ನು ಸಹ ನೀಡಿರುವರು.

ರೆಡ್ಡಿಯವರದು ಆರಂಭದಿಂದಲೂ ಸರಳ ಜೀವನ. ಬೆಂಗಳೂರಿನಲ್ಲಿ ಕಾಲೇಜು ಅಭ್ಯಾಸ ಪೂರೈಸಿ, ಬಹುಕಾಲದಿಂದ ಇಲ್ಲೇ ನೆಲೆಸಿದ್ದರೂ, ಮೂಲತಃ ಅವರು ಗ್ರಾಮೀಣ ಪರಿಸರದ, ಅವಿಭಕ್ತ, ವ್ಯವಸಾಯ ಪ್ರಧಾನ, ಸಂಪ್ರದಾಯಬದ್ಧ ಕುಟುಂಬದ ಹಿನ್ನೆಲೆಯಲ್ಲಿ ಬೆಳೆದು ಬಂದವರು. ಕುಟುಂಬ ಪ್ರೇಮಿ ರೆಡ್ಡಿ, ಅವಿಭಕ್ತ ಕುಟುಂಬದಲ್ಲಿ ವಯಸ್ಸಿನಿಂದ ಕಿರಿಯರಾಗಿದ್ದರೂ ಕುಟುಂಬದ ಏಳಿಗೆಗೆ ನಿರ್ವಹಿಸಿದ ಜವಾಬ್ದಾರಿ ದೊಡ್ಡದು. ಅವರ ಮಾತಿನಲ್ಲಿ ಕೋಲಾರ ಜಿಲ್ಲೆಯ ಗ್ರಾಮೀಣ ಶೈಲಿಯ ಸೊಗಡನ್ನು, ಹಲವು ಅನಿವಾರ್ಯ ಸಂದರ್ಭಗಳಲ್ಲಿ ಒರಟು ಸ್ವಭಾವವನ್ನೂ ಅವರ ನಿಕಟವರ್ತಿಗಳು ಗಮನಿಸಿರಬಹುದು. ಅವರನ್ನು ಅವರ ಆತ್ಮೀಯ ಬ್ರಾಹ್ಮಣ ವಿದ್ವಾಂಸ ಮಿತ್ರರು, ಒರಟ/ವಡ್ಡ ರೆಡ್ಡಿ ಎಂತಲೂ ಪ್ರೀತಿಯಿಂದ ಕರೆಯುವುದು ಉಂಟು.

ಸಾಮಾನ್ಯವಾಗಿ ದಕ್ಷಿಣ ಕರ್ನಾಟಕದ ರೆಡ್ಡಿ ಸಮುದಾಯದಲ್ಲಿ ವ್ಯವಸಾಯಗಾರರು, ಜಮೀನುದಾರರು, ಉದ್ಯಮದಾರರು, ಸಾರ್ವಜನಿಕ ಕಾಮಗಾರಿಗಳ ಗುತ್ತಿಗೆದಾರರು, ವೃತ್ತಿ ನಿರತರು ಹೆಚ್ಚಾಗಿ ಕಂಡುಬರುವರು. ಆದರೆ ನಮ್ಮ ರೆಡ್ಡಿಯವರು  ದೇಶದ ಗುಡಿ ಗುಂಡಾರಗಳನ್ನು ಸುತ್ತುತ್ತಾ ಅಲ್ಲಿರುವ ಶಾಸನ ಕಲ್ಲುಗಳನ್ನು ಹುಡುಕುತ್ತಾ ವಿದ್ಯಾರ್ಥಿ ಸಮೂಹದೊಂದಿಗೆ ಊರೂರು ಸುತ್ತುವ ಪ್ರವೃತ್ತಿಯನ್ನು ಬೆಳೆಸಿಕೊಂಡವರು. ಆ ಪ್ರವೃತ್ತಿಗೆ, ಸಂಶೋಧನಾ ಕಾರ್ಯಕ್ಕೆ ತಮ್ಮನ್ನು ಆಳವಾಗಿ ತೊಡಗಿಸಿಕೊಳ್ಳಲು ಅವರ ಕುಟುಂಬದ ಪರಿಸ್ಥಿತಿಯೂ ಅನುಕೂಲಕರವಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಮನೋ ಪ್ರವೃತ್ತಿ ಅತೀ ಮುಖ್ಯವಾದದ್ದು. ಸಾಹಿತ್ಯ ಪರಿಷತ್ತಿನಲ್ಲಿ ಸುಮಾರು ೭ ವರ್ಷ ಹಸ್ತಪ್ರತಿ ವಿಭಾಗದಲ್ಲಿ ಕಾರ್ಯ ನಿರ್ವಹಿಸುವ ಸಂದರ್ಭದಲ್ಲಿ ಅಲ್ಲಿನ ತುಂಬ ಹಳೆಯ ಹಸ್ತಪ್ರತಿ, ಇತರೆ ಪುಸ್ತಕಗಳ ಧೂಳು ತುಂಬಿದ ವಾತಾವರಣದಲ್ಲಿ ಕೆಲಸ ಮಾಡಿದ್ದರಿಂದ 'ಡಸ್ಟ್ ಅಲರ್ಜಿ' ಅವರ ಆರೋಗ್ಯದ ಮೇಲೆ ಪರಿಣಾಮ ಬೀರಿ ಈಗಲೂ ಅವರು ಮಳೆಗಾಲ, ಚಳಿಗಾಲದಲ್ಲಿ ಅಸ್ತಮಾದಿಂದ ಬಳಲುವಂತೆ ಮಾಡಿದೆ. ಈ ದೃಷ್ಟಿಯಿಂದ ಬಳ್ಳಾರಿ ಸೀಮೆಯ ಹವಾಗುಣ ಅವರ ಆರೋಗ್ಯಕ್ಕೆ ಹಿತಕರವಾಗಿದೆ.

ರೆಡ್ಡಿಯವರ ಶಿಷ್ಯಬಳಗ ಅಪಾರ. ಅವರು ಶಿಷ್ಯರಿಗೆ ಪ್ರೀತಿಯ ರೆಡ್ಡಿ ಮೇಷ್ಟ್ರು. ತಮ್ಮ ಶಿಷ್ಯರನ್ನೂ ಸಹೋದ್ಯೋಗಿಗಳನ್ನೂ ಕರ್ನಾಟಕ ಇತಿಹಾಸ ಅಕಾಡೆಮಿಯ ಆಜೀವ ಸದಸ್ಯರನ್ನಾಗಿ ಮಾಡಿ ಅವರಿಂದ ಇತಿಹಾಸ ಸಂಶೋಧನಾ ಕಾರ್ಯ ಮುಂದುವರೆಯುವಂತೆ ಮಾರ್ಗದರ್ಶನ ಮಾಡುತ್ತಿದ್ದಾರೆ. ಇದುವರೆಗೆ ನನಗೆ ತಿಳಿದುಬಂದಂತೆ ಐದು ಜನ ಇವರ ಮಾರ್ಗದರ್ಶನದಲ್ಲಿ ಡಾಕ್ಟರೇಟ್ ಪದವಿ ಪಡೆದಿರುವರು. ಇನ್ನೂ ಅನೇಕರು ಇವರ ಮಾರ್ಗದರ್ಶನದಲ್ಲಿ ಕಾರ್ಯ ನಿರ್ವಹಿಸುತ್ತಿರುವರು. ಅವರ ಹಿರಿಯ ಮಗಳು ಶ್ರೀಮತಿ ಸ್ಮಿತಾ ಸಹಾ ಪ್ರವೃತ್ತಿಯಿಂದ ಒಬ್ಬ ತರುಣ ಸಂಶೋಧಕಿಯಾಗಿ ಮುಂದುವರಿಯುತ್ತಿರುವರು.

ಇವರು ಹಂಪಿ ವಿಶ್ವವಿದ್ಯಾಲಯದ ವತಿಯಿಂದ ಮುಂಬಯಿ ಮತ್ತು ಹೈದರಾಬಾದ್ ಕರ್ನಾಟಕದ ಹಲವು ಜಿಲ್ಲೆಗಳ ಶಾಸನ ಸಂಪುಟಗಳನ್ನು ಸಂಪಾದಿಸಿರುವರು. ಇವರು ಸಿದ್ಧಪಡಿಸಿದ ಶಾಸನ ಸಂಪುಟಗಳ ಮುದ್ರಣಕ್ಕೆ ವಿಶ್ವವಿದ್ಯಾಲಯದಲ್ಲಿ ಹಣದ ಕೊರತೆ ಕಂಡುಬಂದಾಗ ಆ ಕುರಿತಂತೆ ಆ ಭಾಗದ ಲೋಕಸಭಾ ಸದಸ್ಯರನ್ನು ಸಂಪರ್ಕಿಸಿ ಅವರ ಫಂಡಿನಿಂದ (ಎಂ.ಪಿ. ಫಂಡ್) ಮುದ್ರಣಕ್ಕೆ ಪ್ರಯತ್ನಿಸಿದರು ಎಂಬುದನ್ನು ನಾನು ಕೇಳಿ ತಿಳಿದಿದ್ದೇನೆ. ವಿಶ್ವವಿದ್ಯಾಲಯಗಳಲ್ಲಿ ಎಷ್ಟು ಜನ ವಿದ್ವಾಂಸರಿಗೆ ಈ ಬಗೆಯ ಆಸಕ್ತಿ ಉಂಟು?

ರೆಡ್ಡಿಯವರ ಕೆಲಸ ಕಾರ್ಯಗಳನ್ನು, ಬದ್ಧತೆಯನ್ನು, ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಸ್ನೇಹಿತರಾದ ಡಾ. ಎಂ.ಎಂ. ಕಲಬುರ್ಗಿಯವರು ಅನೇಕ ಸಂದರ್ಭದಲ್ಲಿ ನನ್ನೊಂದಿಗೆ ಪ್ರಸ್ತಾಪಿಸಿರುವರು.

ರೆಡ್ಡಿಯವರು ಆರಂಭದಿಂದಲೂ ಉತ್ತಮ ಸಂಘಟನಾ ಶಕ್ತಿಯನ್ನು ಬೆಳೆಸಿಕೊಂಡು ಬಂದವರು. ಕರ್ನಾಟಕ ಇತಿಹಾಸ ಅಕಾಡೆಮಿಯ ಹಲವಾರು ಅಧ್ಯಯನ ಶಿಬಿರಗಳು, ವಿಚಾರಗೋಷ್ಠಿ, ವಿಚಾರ ಸಂಕಿರಣಗಳನ್ನು ಸಂಘಟಿಸಿರುವರು. ಕರ್ನಾಟಕ ಇತಿಹಾಸ ಅಕಾದೆಮಿಯ ೧೬ನೆಯ ವಾರ್ಷಿಕ ಸಮ್ಮೇಳನವನ್ನು ಹಂಪಿ, ಕನ್ನಡ ವಿಶ್ವವಿದ್ಯಾಲಯದಲ್ಲಿ ೨೦೦೦ನೆಯ ವರ್ಷದಲ್ಲಿ ಡಾ॥ ಕಲಬುರ್ಗಿಯವರು ಉಪಕುಲಪತಿಗಳಾಗಿದ್ದಾಗ ಪ್ರಾಯೋಜಿಸಲಾಗಿತ್ತು. ಆ ಸಂದರ್ಭದಲ್ಲಿ ಇಂದಿನಂತೆ ವಿಶ್ವವಿದ್ಯಾಲಯದಲ್ಲಿ ಮೂಲಭೂತ ಸೌಕರ್ಯಗಳು ಇನ್ನೂ ಸಮರ್ಪಕವಾಗಿ ಅಭಿವೃದ್ಧಿಗೊಂಡಿರಲಿಲ್ಲ. ಒಂದು ಇದ್ದರೆ ಇನ್ನೊಂದು ಇರಲಿಲ್ಲ. ಆ ಸಂದರ್ಭದಲ್ಲಿ ಡಾ॥ ರೆಡ್ಡಿ ಮತ್ತು ಡಾ॥ ಲಕ್ಷ್ಮಣ್ ತೆಲಗಾವಿ ತುಂಬ ಶ್ರಮವಹಿಸಿ ಸಮ್ಮೇಳನದ ಯಶಸ್ವಿಗೆ ಕಾರಣರಾದರು.

ರೆಡ್ಡಿಯವರು ಶೋಷಣೆಯನ್ನೂ, ಅನ್ಯಾಯವನ್ನೂ ಎಂದೂ ಸಹಿಸುವವರಲ್ಲ. ಶೋಷಿತರ ಪರವಾಗಿ, ಅನ್ಯಾಯದ ವಿರುದ್ಧ, ದೌರ್ಜನ್ಯದ ವಿರುದ್ಧ ತಮ್ಮ ಧ್ವನಿಯನ್ನು, ಪ್ರತಿಭಟನೆಯ ಮೂಲಕ, ವಿವಿಧ ಮಾಧ್ಯಮಗಳ ಮೂಲಕ ಎತ್ತುತ್ತಲೇ ಇರುವರು. ನಿವೃತ್ತಿಯ ನಂತರ ಅವರ ಈ ಧ್ವನಿ ಇನ್ನಷ್ಟು ವ್ಯಾಪಕ, ದೃಢತೆ ಗಟ್ಟಿಯಾಗುವ ಸಾಧ್ಯತೆ ಉಂಟು.

ಡಾ॥ ರೆಡ್ಡಿಯವರು ೨೦೦೮ ಮೇ ಕೊನೆಯಲ್ಲಿ ವಿಶ್ವವಿದ್ಯಾಲಯದ ಸೇವೆಯಿಂದ ನಿವೃತ್ತರಾದರೂ ಪ್ರವೃತ್ತಿಯಿಂದ ಸಕ್ರಿಯರಾಗಿರುವರು. ವಿಶ್ವವಿದ್ಯಾಲಯದ ಅನೇಕ ಸಂಶೋಧನಾ ಯೋಜನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವರು. ತಮ್ಮ ಪ್ರೀತಿಯ ಸಂಸ್ಥೆಗಳಾದ ಕರ್ನಾಟಕ ಇತಿಹಾಸ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತಿನ, ಶಾಸನ ತರಗತಿಗಳು, ಮಿಥಿಕ್ ಸೊಸೈಟಿ ಇನ್ನೂ ಹಲವಾರು ಸಂಸ್ಥೆಗಳೊಂದಿಗೆ ಅವರು ನಿಕಟ ಸಂಪರ್ಕ ಹೊಂದಿರುವರು. ರೆಡ್ಡಿಯವರು ಮುಂಬರುವ ದಿನಗಳಲ್ಲಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಈ ಎಲ್ಲಾ ಸಂಸ್ಥೆಗಳೊಂದಿಗೆ ತಮ್ಮನ್ನು ತೊಡಗಿಸಿಕೊಂಡು ನಿವೃತ್ತ ಜೀವನವನ್ನು ಉತ್ತಮ ಆರೋಗ್ಯ, ಮಾನಸಿಕ ನೆಮ್ಮದಿ, ಸಂತೃಪ್ತತೆಯಿಂದ ಕಳೆಯಲು 'ಸಪ್ತ ಮಾತೃಕೆಯರು' ಅವರನ್ನು ಸದಾ ಹರಸಲಿ ಎಂದು ಶುಭ ಹಾರೈಸುವೆನು.

# ನಂಬಿದ ಮೌಲ್ಯಗಳಿಗೆ ಬದ್ಧರಾದವರು

– ಡಾ॥ ಜಿ.ಆರ್. ತಿಪ್ಪೇಸ್ವಾಮಿ*

ನಾನು ಎಂ.ಎ., ಓದುತ್ತಿದ್ದ ದಿನಗಳಲ್ಲಿ (೧೯೭೫–೭೭) ಕನ್ನಡ ಸಾಹಿತ್ಯ ಪರಿಷತ್ತಿನ ಬಗ್ಗೆ ಮೊದಲು ಕೇಳಿದ್ದು ನನ್ನ ಮಾವನವರಾದ ಸಿ.ಹನುಮಂತರಾಯಪ್ಪನವರಿಂದ. ದೇಶಹಳ್ಳಿ ಜಿ. ನಾರಾಯಣ ಅವರು ಪರಿಷತ್ತಿನ ಅಧ್ಯಕ್ಷರಾಗಿದ್ದ ಸಂದರ್ಭ ಅದು. ಎಚ್.ಎಲ್. ನಾಗೇಗೌಡ, ಗೊ.ರು. ಚನ್ನಬಸಪ್ಪ ಮುಂತಾದವರ ಸಲಹೆ ಸೂಚನೆಗಳಂತೆ ಕರ್ನಾಟಕ ಜನಪದ ಕಲೆಗಳ ಸಮಗ್ರ ಸಂಗ್ರಹ ಕಾರ್ಯ ಯೋಜನೆಯನ್ನು ಆಗ ಪರಿಷತ್ತಿನಿಂದ ಹಮ್ಮಿಕೊಳ್ಳಲಾಗಿತ್ತು. ಈ ಯೋಜನೆಯ ಪ್ರಕಾರ ಕೋಲಾರ ಜಿಲ್ಲೆಯ ಜನಪದ ಕಲೆಗಳನ್ನು ಸಂಗ್ರಹಿಸಿ ವಿಶ್ಲೇಷಿಸುವ ಜವಾಬ್ದಾರಿಯನ್ನು ಹನುಮಂತರಾಯಪ್ಪನವರು ಹೊತ್ತಿದ್ದರು. ಕ್ಷೇತ್ರಕಾರ್ಯ ಮುಗಿದು ಸದರೀ ಯೋಜನೆಯ ಕೆಲಸವೂ ಮುಗಿದಾದ ಮೇಲೆ ಪರಿಷತ್ತಿನ ಕಛೇರಿಯಲ್ಲಿ ನೌಕರಿ ಮಾಡುತ್ತಿದ್ದರು.

ಎಂ.ಎ., ಶಿಕ್ಷಣವನ್ನು ಮುಗಿಸಿದ ನಂತರ ಉದ್ಯೋಗಾನ್ವೇಷಣೆಗಾಗಿ ಆಗಾಗ್ಗೆ ಬೆಂಗಳೂರಿಗೆ ಹೋಗಿ ಬರುವುದು ನನಗೆ ರೂಢಿಯಾಯಿತು. ಎಲ್ಲಿಗಾದರೂ ಸಂದರ್ಶನಕ್ಕೆ ಹೋಗಬೇಕಾದರೆ, ಉದ್ಯೋಗ ಮಾಹಿತಿ ತಿಳಿಯಬೇಕಾದರೆ ನನಗೆ ಆಗ ಹನುಮಂತರಾಯಪ್ಪನವರೇ ದಿಕ್ಕುದೆಸೆಯಾಗಿದ್ದರು. ಅದೃಷ್ಟವಶಾತ್ ಅದೇ ಸಮಯಕ್ಕೆ ಸರಿಯಾಗಿ ಹನುಮಂತರಾಯಪ್ಪನವರಿಗೆ ಕರ್ನಾಟಕ ಲೋಕಾ ಸೇವಾ ಆಯೋಗದಿಂದ ಸರ್ಕಾರಿ ನೌಕರಿ ಲಭ್ಯವಾದ ಪ್ರಯುಕ್ತ ಪರಿಷತ್ತಿನ ಜಾಗವನ್ನು ತೆರವು ಮಾಡಬೇಕಾಯಿತು. ಸಂಸ್ಥೆಯನ್ನು ಬಿಡುವ ಮುನ್ನ ಹನುಮಂತರಾಯಪ್ಪ ಮತ್ತು ದೇವರಕೊಂಡಾರೆಡ್ಡಿಯವರು ಬೆಂಗಳೂರಿನ ಚಾಮರಾಜಪೇಟೆಯಲ್ಲಿ ವಿ. ಸೀತಾರಾಮಯ್ಯ ಅವರ ಕಾಂಪೌಂಡಿನಲ್ಲಿ ಒಂದು ಕೊಠಡಿಯಲ್ಲಿ ವಾಸವಾಗಿದ್ದರು. ನನಗೆ ರೆಡ್ಡಿಯವರ ಪರಿಚಯವಾದದ್ದು ಹನುಮಂತರಾಯಪ್ಪನವರಿಂದ ಎಂಬುದಕ್ಕೆ ಇಷ್ಟೆಲ್ಲ ಹೇಳಬೇಕಾಯಿತು.

ಹನುಮಂತರಾಯಪ್ಪ ಬೆಂಗಳೂರನ್ನು ಬಿಟ್ಟ ನಂತರ ನನಗೆ ಚಿಂತೆ ಶುರುವಾಯಿತು. ಒಂದು ನಮೂನೆ ಅನಾಥಪ್ರಜ್ಞೆ ಕಾಡತೊಡಗಿತು. 'ಮುಂದೆ ಬೆಂಗಳೂರಿಗೆ ಬಂದಾಗ ನಾನು ಎಲ್ಲಿ ಉಳಿದುಕೊಳ್ಳುವುದು, ಯಾರ ಮಾರ್ಗದರ್ಶನ ಪಡೆಯುವುದು' ಎಂಬ ಚಿಂತೆ ನನ್ನನ್ನು ಭಯಂಕರವಾಗಿ ಕಾಡತೊಡಗಿತು. ಅಂಥ ಸಂದರ್ಭದಲ್ಲಿ ನನಗೆ ತುಂಬ ಧೈರ್ಯ ನೀಡಿ, ಅವರ ಕೊಠಡಿಯಲ್ಲಿಯೇ ಉಳಿಸಿಕೊಂಡು ಬದುಕಿನ ಮಾರ್ಗದರ್ಶಕರಾಗಿದ್ದವರೆಂದರೆ ಶ್ರೀ ದೇವರಕೊಂಡಾರೆಡ್ಡಿಯವರು. ಅವರ ಮಾನವೀಯ ಅಂತಃಕರಣದ ಬಗೆಗೆ ನನಗೀಗಲೂ ಅತ್ಯಂತ ಗೌರವ. ಯಾಕೆಂದರೆ ಮಾನವೀಯತೆ, ಜನಪರ ಕಾಳಜಿಯ ಬಗೆಗೆ ಆಕರ್ಷಕವಾಗಿ ಮಾತನಾಡುತ್ತಿದ್ದವರ ಜೊತೆಯಲ್ಲಿಯೇ ನಾನು ಅನಿವಾರ್ಯವಾಗಿ ಓಡಾಡಬೇಕಿತ್ತಾದರೂ ಅಂಥವರಿಂದ ನನಗೆ ಆ ಕಷ್ಟ ಕಾಲದಲ್ಲಿ ಯಾವುದೇ ರೀತಿಯ ಸಹಾಯವಾಗಲಿಲ್ಲ. ಆದರೆ ಅಪಾರ ವಿದ್ವತ್ತನ್ನು ಗಳಿಸಿ, ಸರಳ ಸಜ್ಜನಿಕೆಗೆ ಹೆಸರಾಗಿದ್ದ ಡಾ॥ ಆರ್ ಶೇಷಶಾಸ್ತ್ರಿ, ಡಾ॥ ದೇವರಕೊಂಡಾರೆಡ್ಡಿಯಂಥವರು ಮಾತ್ರ ನನ್ನ ನೆರವಿಗೆ ಬಂದರು. ಆ ದಿನಗಳನ್ನು ಮತ್ತು ಅಂಥ ಸಂದರ್ಭಗಳಲ್ಲಿ ನೆರವಾದವರನ್ನು ಮರೆಯಲಿಕ್ಕಾಗುವುದೇ ಇಲ್ಲ.

ಪರಿಷತ್ತಿನಲ್ಲಿ ಕೆಲಸ ಸಿಕ್ಕುವ ಭರವಸೆ ಮೂಡಿತ್ತಾದರೂ ನೇಮಕಾತಿ ಪತ್ರ ಕೈಗೆ ಬಂದಿರಲಿಲ್ಲ. ಅಲ್ಲಿಯ ತನಕ ಕಾಯಬೇಕಿತ್ತು. ನೆಲೆಯೂರಲು ರೆಡ್ಡಿಯವರ ಕೊಠಡಿಯೇನೋ ಇತ್ತು. ಕೆಲ ದಿನಗಳ ನಂತರ ರೆಡ್ಡಿಯವರು ತಮ್ಮ ಕುಟುಂಬದವರನ್ನು ಊರಿನಿಂದ ಬರಮಾಡಿಕೊಳ್ಳುವ ಕಾರಣದಿಂದ ಇದನ್ನು ಬಿಟ್ಟು ಲಕ್ಕಸಂದ್ರದಲ್ಲಿ (ಬೆಂಗಳೂರು) ಮನೆ ಮಾಡಿದರು. ಪ್ರತ್ಯೇಕವಾಗಿ ಅವರು ಮನೆಯನ್ನು ಮಾಡುತ್ತಾರೆಂದ ಮೇಲೆ ಚಾಮರಾಜಪೇಟೆಯಲ್ಲಿನ ಕೊಠಡಿಯನ್ನು ನಾನು ತೆರವು ಮಾಡಲೇಬೇಕಿತ್ತು. ಯಾಕೆಂದರೆ ನಾನು ನಿರುದ್ಯೋಗಿ. ಬಾಡಿಗೆಯನ್ನು ಕೊಟ್ಟು ಅದರಲ್ಲಿ ವಾಸಿಸುವ ಶಕ್ತಿ ನನಗಿರಲಿಲ್ಲ. ಮುಂದೆ ನನ್ನ ನೆಲೆ ಯಾವುದು ಎಂಬ ಯೋಚನೆಯಲ್ಲಿರಬೇಕಾದರೆ ರೆಡ್ಡಿಯವರು, 'ನೀನೂ ಅಲ್ಲಿಯೇ ನಮ್ಮ ಜೊತೆಯಲ್ಲಿಯೇ ಇರುವಿಯಂತೆ ಬಾ' ಅಂದರು, ಕರೆದುಕೊಂಡೇ ಹೋದರು. ಪರಿಷತ್ತಿನಲ್ಲಿ ಕೆಲಸ ಸಿಕ್ಕಿ ಟ್ಯಾಂಕ್‌ಬಂಡ್ ರಸ್ತೆಯ ಬಳಿಯಿದ್ದ ಡಾ॥ ಆರ್. ಶೇಷಶಾಸ್ತ್ರಿಯವರ ಮನೆಗೆ ವಾಸ ಮಾಡಲು ಬರುವವರೆಗೆ ಎಷ್ಟೋ ದಿನಗಳು

---

* ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ. ಮೈಸೂರು–೫೭೦೦೦೬

ರೆಡ್ಡಿಯವರೇ ಆಶ್ರಯದಾತರು. ಆದ್ದರಿಂದ ಅವರನ್ನು, ಅವರ ಕುಟುಂಬವರ್ಗದವರನ್ನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುವುದು ನನ್ನ ಕರ್ತವ್ಯ. ನನ್ನ ಬದುಕಿನಲ್ಲಿ ರೆಡ್ಡಿ ಮತ್ತು ಶಾಸ್ತ್ರಿ ಇವರುಗಳು ಮರೆಯಲಾರದ – ಮರೆಯಬಾರದ ವ್ಯಕ್ತಿಗಳಾಗಿದ್ದಾರೆ.

ಪರಿಷತ್ತಿನಲ್ಲಿ ಸಂಶೋಧನಾ ವಿಭಾಗದ ಪಕ್ಕದಲ್ಲಿಯೇ ಜಾನಪದ ವಿಭಾಗವೂ ಇತ್ತು. ಅದರ ಜವಾಬ್ದಾರಿಯನ್ನು ಆಗಿನ ಪರಿಷದಧ್ಯಕ್ಷರಾಗಿದ್ದ ಹಂ.ಪ.ನಾ. ಅವರು ನನಗೆ ವಹಿಸಿದ್ದರು. ಆಗ ರೆಡ್ಡಿಯವರ ಕಾರ್ಯ ವೈಖರಿಯನ್ನು ಸಮೀಪದಿಂದ ಗಮನಿಸುತ್ತಿದ್ದೆ. ಡಾ॥ ಆರ್. ಶೇಷಶಾಸ್ತ್ರಿ, ಡಾ॥ ಎಚ್.ಎಸ್. ಗೋಪಾಲ್‌ರಾವ್, ಬಿ.ಜಿ.ಎಲ್. ಸ್ವಾಮಿ, ಡಾ॥ ಕೆ.ಆರ್. ಗಣೇಶ್, ಡಾ॥ ಪಿ.ವಿ. ಕೃಷ್ಣಮೂರ್ತಿ, ಪ್ರೊ॥ ಶಾಮಸುಂದರ್, ಡಾ॥ ಎಂ.ಜಿ. ನಾಗರಾಜ್, ಡಾ॥ ಅ.ಲ. ನರಸಿಂಹನ್ ಮುಂತಾದ ಗಣ್ಯರು–ಶಾಸನತಜ್ಞರು ಅವರ ಬಳಿಗೆ ಬರುತ್ತಿದ್ದರು. ಚರ್ಚೆಯಲ್ಲಿ ತೊಡಗುತ್ತಿದ್ದರು. ಸಂಶೋಧನಾ ಸಂಗತಿಗಳತ್ತ ಬೆಳಕು ಚೆಲ್ಲುತ್ತಿದ್ದರು. ಶಾಸನ ತರಗತಿಗಳನ್ನು ನಡೆಸುವುದು, ಅದಕ್ಕೆ ಬೇಕಾದ ಪಠ್ಯವನ್ನು ಸಿದ್ಧಗೊಳಿಸುವುದು, ಶಾಸನಗಳ ಎಸ್ಟಾಂಪೇಜ್ ತೆಗೆದುಕೊಂಡು ಬಂದು ವಿಶೇಷ ಅಧ್ಯಯನಕ್ಕೆ ಗುರಿಪಡಿಸುವುದು – ಈ ಎಲ್ಲಾ ಚಟುವಟಿಕೆಗಳಲ್ಲಿ ರೆಡ್ಡಿಯವರು ನಾಡಿನ ಸಂಶೋಧಕರ, ಇತಿಹಾಸ ತಜ್ಞರ ಗಮನ ಸೆಳೆದಿದ್ದರು.

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಶಾಸನ ವಿದ್ಯಾರ್ಥಿಗಳೂ ಪರಿಷತ್ತಿನ ಶಾಸನ ತರಗತಿಗಳಲ್ಲಿ ಪ್ರವೇಶ ಪಡೆಯುತ್ತಿದ್ದರೆಂಬುದನ್ನು ಗಮನಿಸಿದರೇನೇ ಇಲ್ಲಿ ಶೈಕ್ಷಣಿಕ ವಾತಾವರಣವನ್ನು ರೆಡ್ಡಿಯವರು ಎಷ್ಟರಮಟ್ಟಿಗೆ ರೂಪಿಸಿದ್ದರೆಂಬುದನ್ನು ಅರ್ಥಮಾಡಿಕೊಳ್ಳಬಹುದು. ಕಾಲಕ್ರಮದಲ್ಲಿ ಸಂಶೋಧನಾ ಕ್ಷೇತ್ರದಲ್ಲಿ ರೆಡ್ಡಿಯವರ ಸಾಧನೆಯನ್ನು ಗಮನಿಸಿ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಇವರನ್ನು ಪ್ರಾಧ್ಯಾಪಕರನ್ನಾಗಿ ಬರಮಾಡಿಕೊಂಡಿತು. ಅವರ ಅಧ್ಯಯನ ಕ್ಷೇತ್ರ ಮತ್ತಷ್ಟು ವಿಸ್ತಾರವಾಗಲು ಇದು ಕಾರಣವಾಯಿತು. ಅಲ್ಲದೆ ಆ ವಿಭಾಗ ಬೆಳೆಯಲೂ ಅವರು ಕಾರಣರಾದರು.

ಜಾಗತೀಕರಣದ ದಿನಗಳಲ್ಲಿ ಹಸ್ತಪ್ರತಿ, ಶಾಸನ, ಗ್ರಂಥಸಂಪಾದನೆ, ವ್ಯಾಕರಣ – ಇಂಥ ಅಧ್ಯಯನ ಕ್ಷೇತ್ರಗಳೇ ಕಣ್ಮರೆಯಾಗುತ್ತಿರುವಾಗ ನಮ್ಮ ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ಅವುಗಳ ಪ್ರಾಮುಖ್ಯತೆ ಜಾಸ್ತಿ ಇದೆ ಎಂಬುದನ್ನು ರೆಡ್ಡಿಯವರು ಸಾಬೀತು ಪಡಿಸಿದ್ದಾರೆ. ಯಾವುದೇ ಮುಲಾಜಿಗೆ ಒಳಗಾಗದ ನೇರ ನಡೆನುಡಿಯ ವ್ಯಕ್ತಿತ್ವ ರೆಡ್ಡಿಯವರದು. ಬರೆದರೆ ಸರಳವಾಗಿ, ಖಚಿತವಾಗಿ ಸ್ಪಷ್ಟವಾಗಿರುವಂತೆ ಬರೆಯಬೇಕು. ಏನಾದರೂ ಹೊಸದನ್ನು ಹೇಳುವ ಹಾಗಿದ್ದರೆ ಬರೆಯಬೇಕು. ಇಲ್ಲದಿದ್ದರೆ ಸುಮ್ಮನಿರಬೇಕು ಎಂಬ ನಿಲುವು ಅವರದು. ನಮ್ಮ ಸಾಹಿತ್ಯ ವಲಯದ 'ಗೊಂದಲದ ಮಹಾಶಯರ' ಬರವಣಿಗೆಯನ್ನು, ನಡವಳಿಕೆಯನ್ನು ಕುರಿತು ಮಾತನಾಡುವಾಗೆಲ್ಲ ರೆಡ್ಡಿಯವರ ಈ ನಿಲುವನ್ನು ನಾನು ನೆನಪಿಸಿಕೊಂಡಿದ್ದೇನೆ. ಅವರು ತಾವು ನಂಬಿದ ಮೌಲ್ಯಗಳಿಗೆ ತಕ್ಕಂತೆ ನಡೆದುಕೊಂಡಿದ್ದಾರೆ, ಬರೆದಿದ್ದಾರೆ. ಲಿಪಿಯ ಉಗಮ ವಿಕಾಸ, ಗಂಗರ ವಾಸ್ತು–ಶಿಲ್ಪಕಲೆ, ಶ್ರವಣಬೆಳಗೊಳದ ವಾಸ್ತುಶಿಲ್ಪ, ಗಂಗರ ದೇವಾಲಯಗಳು–ಶಾಸನಗಳು, ಸಪ್ತಮಾತೃಕೆಯರ ಸಂಗತಿ – ಮುಂತಾದುವನ್ನು ಕುರಿತಂತೆ ಅವರು ನೋಡುವ ದೃಷ್ಟಿ ಹೊಸದಾಗಿರುತ್ತದೆ. ಬರೆಯುವ ಶೈಲಿ ಮಾತ್ರ ಅತ್ಯಂತ ಸರಳವಾಗಿರುತ್ತದೆ. ವಿಶ್ವವಿದ್ಯಾಲಯದ ಉನ್ನತ ಹುದ್ದೆಯಲ್ಲಿದ್ದರೂ ರೆಡ್ಡಿಯವರ ನಡತೆ ಅತ್ಯಂತ ಸರಳವಾದುದು, ಪರಿಶುದ್ಧವಾದುದು. ಅವರ ಬರವಣಿಗೆಯೂ ಸಹ.



# ಅಭಿನವ ಬಿ.ಎಲ್. ರೈಸ್

– ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ*

೧

**ಡಾ॥** ದೇವರಕೊಂಡಾರೆಡ್ಡಿ ನೆನೆಸಿಕೊಂಡಾಗಲೆಲ್ಲ ಹತ್ತಾರು ಚಿತ್ರಗಳು ಮನಸ್ಸಿನ ತುಂಬಾ ನೆಲೆ ನಿಲ್ಲುತ್ತವೆ. ನನಗೆ ಡಾ. ರೆಡ್ಡಿಯ ಪರಿಚಯವಾದದ್ದು ಎಲ್ಲಿ ಎಂದು ನೆನಪಿಲ್ಲ. ಆದರೆ, 'ಕನ್ನಡ ಸಾಹಿತ್ಯ ಪರಿಷತ್ತು' ಜಿ. ನಾರಾಯಣರ ಅಧ್ಯಕ್ಷತೆಯಲ್ಲಿ ನಡೆಯುತ್ತಿದ್ದಾಗ ಮೊದಲು ಕಂಡ ಅಸ್ಪಷ್ಟ ನೆನಪು. ಅದಾದ ಮೇಲೆ ಹಿರಿಯ ಮಿತ್ರರಾದ ಡಾ. ಎಚ್.ಎಸ್. ಗೋಪಾಲರಾಯರ ಜತೆ ಅನೇಕ ಬಾರಿ ಭೇಟಿಯಾಗುವ ಅವಕಾಶ ೧೯೮೭ರ ಸರಿಸುಮಾರಿಗೆ ಬಂದಿತ್ತು. ಆಗಲೇ ರೆಡ್ಡಿಯನ್ನು ನೋಡಿದ್ದು, ಆತನ ಉತ್ಸುಕತೆಯನ್ನು ಕಂಡದ್ದು ಆಳವಾಗಿ ನನ್ನ ಮನಸ್ಸಿನಲ್ಲಿ ನೆಲೆನಿಂತಿದೆ. ಅಂತಹ ಮೂರ್ನಾಲ್ಕು ಸಂದರ್ಭ ಚಿತ್ರಗಳನ್ನು ನೀಡಬಹುದೆನಿಸುತ್ತದೆ.

ನಮ್ಮ ನಾಡಿನ ಅಪೂರ್ವ ಕಲಾವಿದರಲ್ಲಿ ಡಾ॥ ಅ.ಲ. ನರಸಿಂಹನ್ ಒಬ್ಬರು. ಅವರು ಕಲಾವಿದರು ಮಾತ್ರವಲ್ಲ; ಒಳ್ಳೆಯ ಬರಹಗಾರರು. ಅವರು ರೆಡ್ಡಿಯ ಆಪ್ತಮಿತ್ರರು. ಡಾ॥ ರೆಡ್ಡಿ ಪಿಎಚ್.ಡಿ ಮಾಡುತ್ತಿರುವಾಗ ಅ.ಲ.ನ. ಸಂಪರ್ಕ ತುಂಬಾ ಇತ್ತು. ಪ್ರೊ॥ ಕ.ವೆಂ. ರಾಜಗೋಪಾಲ್ ರೆಡ್ಡಿ ಅ.ಲ.ನ ಅವರಿಗೆ ಮಾಗದರ್ಶಕರು. ಅವರು ಬಹು ಕಷ್ಟಪಟ್ಟು ತಮ್ಮ ಆಸಕ್ತಿ ವಿಷಯವನ್ನು ಅನೇಕರಲ್ಲಿ ಚರ್ಚಿಸುತ್ತಿದ್ದರು. ಹೀಗಾಗಿ, ಅ.ಲ.ನ. ಸಂಪರ್ಕದಲ್ಲಿ ನಾನು ಬಹುತರವಾಗಿ ಇದ್ದುದರಿಂದ, ರೆಡ್ಡಿ ಪದೇಪದೇ ನನಗೆ ಸಿಗುತ್ತಿದ್ದರು. ರೆಡ್ಡಿ ಬಹುಸರಸಿ ಕೂಡಾ. ಅವರು ಒಂದು ಹೈಸ್ಕೂಲಿನಲ್ಲಿ ಶಿಕ್ಷಕರಾಗಿದ್ದು, ಡಾ॥ ಸೂರ್ಯನಾಥ ಕಾಮತ್ ಅವರ ಆಸಕ್ತಿಯಿಂದ 'ಕರ್ನಾಟಕ ಗೆಝೆಟಿಯರ್'ಗೆ ಬಂದು ಕೆಲಸ ಮಾಡುತ್ತಿದ್ದರು. ಇತ್ತ ಪ್ರವಾಸ ಅತ್ತ ಬರಹ. ರೆಡ್ಡಿ ಸದಾ ಕುತೂಹಲಿ. ಹತ್ತಾರು ವಿಷಯಗಳನ್ನು ತಿಳಿಯುವುದರಲ್ಲಿ, ಪರಿಶೀಲಿಸುವುದರಲ್ಲಿ ಆತನಿಗೆ ಅಪರಿಮಿತ ಆಸಕ್ತಿ. ಅ.ಲ.ನ. ಬಳಿ ಹೋದಾಗಲೆಲ್ಲಾ ರೆಡ್ಡಿ ಸಿಗುತ್ತಿದ್ದರು. ಗಝೆಟಿಯರ್ ಕಛೇರಿ ಇವರೆಲ್ಲರ ಕಾರ್ಯಕ್ಷೇತ್ರ, ಮಧ್ಯಾಹ್ನದ ವೇಳೆಯಲ್ಲಿ ಕಾಫಿ–ವಡೆ ಸಮಾರಾಧನೆ ಇದ್ದೇ ಇರುತ್ತಿತ್ತು.

ಡಾ॥ ರೆಡ್ಡಿ, ಡಾ. ಎಚ್.ಎಸ್. ಗೋಪಾಲರಾಯ, ಅ.ಲ. ನರಸಿಂಹನ್, ಜತೆಗೆ ದಾರಿಯಲ್ಲಿಯೇ ಸಿಕ್ಕ ಸ್ನೇಹಿತರನ್ನು ಕರೆದುಕೊಂಡು ಹೋಗಿ ಬಹಳ ಖುಷಿಯಿಂದ ತಿಂಡಿ ಕೊಡಿಸಿ ನೋಡಿಕೊಳ್ಳುತ್ತಿದ್ದರು. ಗೆಳೆಯರನ್ನು ಉಪಚರಿಸುವುದರಲ್ಲಿ ರೆಡ್ಡಿಗೆ ಅಪರಿಮಿತ ಆಸಕ್ತಿ. ಡಾ. ಅ.ಲ. ನರಸಿಂಹನ್ ಮೃದುಸ್ವಭಾವದ ಮುಗ್ಧ ವ್ಯಕ್ತಿ. ಅವರಿಗೆ ಕೀಟಲೆ ಗೊತ್ತಿರಲಿಲ್ಲ. ಆದರೆ, ಅವರ ಕೆಲವು ಮಿತ್ರರು ಅ.ಲ.ನನನ್ನು ಗೋಳುಹೊಯ್ದುಕೊಂಡರೆ ಅದನ್ನು ತಪ್ಪಿಸುತ್ತಿದ್ದದ್ದು ರೆಡ್ಡಿಯೇ. ವಿಷಯವನ್ನು ತಿಳಿಯುವಲ್ಲಿ, ತಿಳಿಸುವಲ್ಲಿ ರೆಡ್ಡಿ ತುಂಬಾ ಮುತುವರ್ಜಿ ವಹಿಸುತ್ತಿದ್ದರು. ಅ.ಲ.ನ. ಬರಹಕ್ಕೆ ರೆಡ್ಡಿ ಉಪಜೀವ್ಯವಾದರೆ; ರೆಡ್ಡಿಯ ಬರೆಹಕ್ಕೆ ಅ.ಲ.ನರಸಿಂಹನ್ ಉಪಜೀವ. ಇದೊಂದು ಬಗೆಯಲ್ಲಿ 'ಜೀವ–ಜೀವ್ಯ'ದ ಸಖ್ಯಯೋಗ. ರೆಡ್ಡಿಯ ಬರಹಕ್ಕೆ ಅ.ಲ.ನ. ತುಂಬಾ ಒತ್ತಾಸೆ ಕೊಡುತ್ತಿದ್ದರು. ಬಾಯಲ್ಲಿ ಉಡಾಫೆಯ ಮಾತುಗಳಿದ್ದರೂ ಹೃದಯ ಮಾತ್ರ ಅಪ್ಪಟ ಬಂಗಾರ!

೨

ನನಗೆ ರೆಡ್ಡಿಯನ್ನು ನೆನೆಸಿಕೊಂಡಾಗಲೆ ಕೇಂದ್ರ ಪುರಾತತ್ತ್ವ ಇಲಾಖೆಯಲ್ಲಿ ದಕ್ಷ ಅಧೀಕ್ಷಕರಾಗಿದ್ದ ಡಾ॥ ಎಸ್.ವಿ. ವೆಂಕಟೇಶಯ್ಯ ಅವರ ನೆನಪಾಗುತ್ತದೆ. ರೆಡ್ಡಿ ಮತ್ತು ವೆಂಕಟೇಶಯ್ಯ ಇವರಿಬ್ಬರ ಸಂಬಂಧ ಅಪೂರ್ವದ್ದು. ಅದು ಹಲವೊಮ್ಮೆ ಗುರು–ಶಿಷ್ಯರ ಮುಖವನ್ನು ಹೋಲುತ್ತಿತ್ತು. ಮತ್ತೊಮ್ಮೆ ಅಣ್ಣ–ತಮ್ಮಂದಿರ ಭಾವಸಂಕಲ್ಪವನ್ನು ಇಟ್ಟುಕೊಳ್ಳುತ್ತಿತ್ತು.

---

* "ಪೂರ್ಣಪ್ರೀತಿ", ನಂ. ೨೯೬, ೧೦ನೆಯ ಮುಖ್ಯರಸ್ತೆ, ಎಂ.ಇ.ಐ. ಬಡಾವಣೆ, ಬಾಗಲಗುಂಟೆ, ಬೆಂಗಳೂರು–೫೬೦೦೭೩.

ಡಾ॥ ಎಸ್.ವಿ. ವೆಂಕಟೇಶಯ್ಯ ಅವರಿಗೆ ತಕ್ಕ ಮಾರ್ಗದರ್ಶನ ಮಾಡಿದ್ದನ್ನು ನಾನು ಅನೇಕ ಬಾರಿ ಕಂಡಿದ್ದೇನೆ. ಪ್ರೀತಿಯ, ಸ್ನೇಹದ ಅನೇಕ ಭಾವಗಳು ನನಗೆ ಅರ್ಥವಾದದ್ದು ಡಾ॥ ಎಸ್.ವಿ. ವೆಂಕಟೇಶಯ್ಯ ಅವರ ಜತೆಯಲ್ಲಿದ್ದಾಗ. ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿಗೆ ವಿಷಯಕೊಟ್ಟು, ಮಾರ್ಗದರ್ಶನ ಮಾಡಿ ಆನಂತರ ಬೆನ್ನುಬಿಡದೆ ಬರೆಸುತ್ತ ಉತ್ತಮ ನಿಬಂಧಕ್ಕೆ ರೆಡ್ಡಿ ಕಾರಣರಾದರು. ತಾವೊಬ್ಬರು ಬೆಳೆಯದೆ; ಹಲವರನ್ನು ಬೆಳೆಸುತ್ತ–ಬರೆಯುತ್ತ ಬದುಕಿದ್ದು ರೆಡ್ಡಿಯ ಸಾಧನೆ. ಡಾ॥ ಎಸ್.ವಿ. ವೆಂಕಟೇಶಯ್ಯ ಪಿಎಚ್.ಡಿ. ಪಡೆದಾಗ ರೆಡ್ಡಿ ತಾನೇ ಮತ್ತೊಮ್ಮೆ ಪಡೆದರೇನೊ ಎಂಬಂತಹ ಉತ್ಸುಕತೆ, ಭಾವುಕತೆ, ಅವರ ಮನಸ್ಸಿನ ತುಂಬಾ ಆವರಿಸಿದ್ದನ್ನು ಕಂಡಿದ್ದೇನೆ. ಡಾ॥ ಎಸ್.ವಿ. ವೆಂಕಟೇಶಯ್ಯ ಅವರ ತಿಳಿವಳಿಕೆ, ವಿಶ್ಲೇಷಣ ಸಾಮರ್ಥ್ಯ ಬಲು ದೊಡ್ಡದು. ಅದಕ್ಕೆ ಕಾರಣ ರೆಡ್ಡಿ ಎಂದರೆ ಏನೇನೂ ಆಶ್ಚರ್ಯವಿಲ್ಲ. ಊಟ, ಮಾತುಕತೆ ತುಸು ಸೋಮಪಾನ ತೆಗೆದುಕೊಳ್ಳುವುದರಲ್ಲಿ ರೆಡ್ಡಿಯದು ಬಹುಜಾಣ್ಮೆಯ ಪ್ರಸಂಗ! ಹಂಪಿಯಲ್ಲಿ ಪಿಎಚ್.ಡಿ. ಪದವಿ ಪಡೆದಾಗ ಮೇಲೆ ನಡೆಸಿದ ಮೇಜುವಾನಿ ನಿತ್ಯಸ್ಮರಣೀಯವಾಗಿ ನನ್ನ ಮನಸ್ಸಿನಲ್ಲಿ ಉಳಿದಿದೆ.

೩

ನಾನು ವಿಶ್ವವಿದ್ಯಾಲಯಕ್ಕೆ ಸೇರಿದ್ದು ೧೯೭೨ರಲ್ಲಿ. ಡಾ॥ ರೆಡ್ಡಿ ವಿಶ್ವವಿದ್ಯಾಲಯಕ್ಕೆ ಪ್ರವೇಶ ಪಡೆದದ್ದು ೧೯೭೫ರಲ್ಲಿ. ಆಗ ನಾನು ಅಧ್ಯಯನಾಂಗದ ನಿರ್ದೇಶಕನಾಗಿ ಕಾರ್ಯನಿರ್ವಹಿಸುತ್ತಿದ್ದೆ. ಆಗ ನಡೆದ ಒಂದು ಪ್ರಸಂಗ ನನ್ನನ್ನೂ ರೆಡ್ಡಿಯನ್ನೂ ಅತ್ಯಂತ ಆತ್ಮೀಯವಾಗಿಸಿತು. ರೆಡ್ಡಿ ಒಂದು ಮುಖ್ಯ ಯೋಜನೆಯನ್ನು ಅಧ್ಯಯನಾಂಗಕ್ಕೆ ಸಲ್ಲಿಸಿದ್ದರು. ಯಾರೋ ಹೇಳಿದ ಮಾತಿನಿಂದ ನನ್ನ ಬಗೆಗೆ ಸಂಶಯ ತಾಳಿದ್ದರು. ನಾನು ಯೋಜನೆ ಪ್ರಕಟವಾಗಲು ತೊಡಕಾಗಿದ್ದೇನೆಂದು ಯಾರೋ ಸಮೀಪದವರು ರೆಡ್ಡಿಯ ಕಿವಿ ಚುಚ್ಚಿದ್ದರು. ನನ್ನ ಬಳಿ ಈ ಬಗೆಗೆ ಸಂಶಯವನ್ನು ವ್ಯಕ್ತಪಡಿಸಿದ್ದರು. ನಾನು ಸಾಮಾನ್ಯ ರೀತಿಯಲ್ಲಿ ಅವರಿಗೆ ಹೇಳಿದೆ. ಆದರೆ, ಈ ಪ್ರಸಂಗ ತೀವ್ರತರ ಸ್ಥಿತಿ ಪಡೆಯಿತು. ಅಷ್ಟರಲ್ಲಿ ನಾನು ಪರಿಶೀಲನೆ ಮಾಡಿಸಿ ಖುದ್ದು ನಾನೇ ಆಸಕ್ತಿ ವಹಿಸಿಕೊಂಡು ವರದಿಯನ್ನು ತರಿಸಿಕೊಂಡೆ. ಡಾ॥ ರೆಡ್ಡಿಯನ್ನು ಕರೆಸಿ ಪ್ರತಿಯೊಂದು ವಿವರಗಳನ್ನು ಪ್ರತ್ಯಕ್ಷ ತಿಳಿಹೇಳಿ ವರದಿಯ ಪ್ರತಿಯನ್ನು ಅವರ ಮುಂದೆ ಇಟ್ಟೆ. ನನ್ನ ಬಗೆಗೆ ಇತರರು ಹೇಳಿದ ಎಲ್ಲ ಅಭಿಪ್ರಾಯಗಳೂ ತಲೆಕೆಳಗಾಗಿದ್ದುವು. ಆಗ ರೆಡ್ಡಿ ಕೈಹಿಡಿದು ನನ್ನನ್ನು ಕ್ಷಮೆ ಕೇಳಿದ ಸಂದರ್ಭವನ್ನು ಈಗ ನೆನೆಸಿಕೊಂಡರೆ ಕಣ್ಣು ತೇವವಾಗುತ್ತದೆ. ನನ್ನ ಮತ್ತು ರೆಡ್ಡಿಯ ಬಾಂಧವ್ಯ 'ಏಕವಚನ'ಕ್ಕೆ ತಿರುಗಲು ಇದು ಪರ್ಯಾಯವಾಗಿ ಕಾರಣವಾಯಿತು. ಈ ಪ್ರಸಂಗದ ಮೂಲಕ ನಾನೂ ರೆಡ್ಡಿಯ ಅಂತರಂಗ ಪ್ರಪಂಚಕ್ಕೆ ಸೇರಿಕೊಂಡೆವು. ಅಲ್ಲಿಂದ ನನ್ನ ಆತನ ಬಾಂಧವ್ಯ ಸ್ನೇಹಪೂರ್ವಕವಾಗಿಯೂ ಆತ್ಮೀಯವಾಗಿಯೂ ಪರಿಣಮಿಸಿತು.

೪

ನನ್ನ ಬದುಕಿನ ಕಡುಕಷ್ಟಗಳ ಕಾಲದಲ್ಲಿ ರೆಡ್ಡಿಯ ಸ್ನೇಹ–ಭರವಸೆ–ಸಾಂತ್ವನ–ಹಿತೋಕ್ತಿಗಳು ನನ್ನನ್ನು ಬದುಕಿಸಿವೆ. ನಾನು ಪುಸ್ತಕ ಪ್ರಾಧಿಕಾರದ ಅಧ್ಯಕ್ಷನಾಗಿ ಕಾರ್ಯನಿರ್ವಹಿಸುವ ವೇಳೆಯಲ್ಲಿ ಅನೇಕ ತೊಡಕುಗಳು ಬಂದುವು. ನನ್ನ ಪ್ರಾಧಿಕಾರದ ಸದಸ್ಯರು ತುಂಬಾ ನೆರವಾದರು. ಪ್ರೊ॥ ಸಿದ್ದಣ್ಣ ಉತ್ನಾಳ್ ಮತ್ತು ಟಿ.ಎಸ್. ಛಾಯಾಪತಿ ಇವರನ್ನು ನಾನು ಸದಾ ನೆನೆಯಬೇಕು. ವಚನ ಸಂಪುಟಗಳ ಮರುಮುದ್ರಣವನ್ನು ಪ್ರಾಧಿಕಾರ ಪ್ರಕಟಿಸಿತಷ್ಟೆ? ಅದಕ್ಕೆ ಬೆಂಬಲವಾಗಿ ನಿಂತವರು ಡಾ॥ ಎಂ. ಎಂ. ಕಲಬುರ್ಗಿ. ಇದು ಪ್ರಕಾಶಗೊಂಡು ಉತ್ತಮ ಪ್ರತಿಕ್ರಿಯೆ ಬಂದಾಗ ಕೆಲವು ಕುಹಕಿಗಳು ನನ್ನ ಮೇಲ ತಳತಂತ್ರ ಹೂಡಲು ಪ್ರಾರಂಭಿಸಿದರು. ಮುದ್ರಣಕ್ಕೆ ಸಂಬಂಧಿಸಿದಂತೆ ಮೂಗರ್ಜಿಗಳನ್ನು ಸರ್ಕಾರಕ್ಕೆ ಬರೆದರು. ಕೆಲವು ಪತ್ರಿಕೆಗಳಲ್ಲಿ ವರದಿಗಳೂ ಬಂದುವು. ಅವುಗಳಿಗೆ ನಾನು ತಕ್ಕ ಸಮಜಾಯಿಷಿ ಮತ್ತು ವಿವರವಾದ ಉತ್ತರಗಳನ್ನು ಕೊಟ್ಟದ್ದು ಆಯಿತು. ಆಗ ನಾನು ವಿದ್ಯಾರಣ್ಯ ಆವರಣದಲ್ಲಿದ್ದೆ. ಆಗ ರೆಡ್ಡಿಯ ಮನೆಯಲ್ಲಿ ಆತನ ಜತೆಗೆ ಇದ್ದೆ. ಇಂಥ ಸಂದರ್ಭದಲ್ಲಿ ಆತ ತೋರಿಸಿದ ಧೈರ್ಯ ಮತ್ತು ಸಾಂತ್ವನ ನನ್ನ ನೆನಪಿನಲ್ಲಿ ಉಳಿದಿವೆ. ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಸ್ಥಾನಕ್ಕೆ ನಾನು ಆಕಾಂಕ್ಷಿಯಾಗಿದ್ದಾಗ ನನ್ನನ್ನು ಬೆಂಬಲಿಸಿ ಸ್ಫೂರ್ತಿ ನೀಡಿದ್ದು ರೆಡ್ಡಿಯ ದೊಡ್ಡಗುಣ! ಆತನ ಜತೆ ಇದ್ದು ಬದುಕಿದ, ಬದುಕುತ್ತಿರುವ ಕಳೆದ ಒಂದು ದಶಕ, ನನ್ನ ಜೀವಮಾನದಲ್ಲೆ ನೆನಪಿನಲ್ಲಿ ಸದಾ ಇಟ್ಟುಕೊಳ್ಳಬೇಕಾದ ಸಂವತ್ಸರಗಳೇ ಆಗಿವೆ.

೫

ಡಾ॥ ದೇವರಕೊಂಡಾರೆಡ್ಡಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸೇರಿ ತೆಗೆದುಕೊಂಡ ಹಾಗೂ ರೂಪಿಸಿದ ಯೋಜನೆಗಳು ಹಲವು. ಅವುಗಳಲ್ಲಿ ಸಂಪೂರ್ಣ ಉತ್ತರ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿಯೂ ಪ್ರಕಟಗೊಂಡ ಹಾಗೂ ಅಪ್ರಕಟಗೊಂಡ ಶಾಸನಗಳನ್ನು ಸಂಗ್ರಹಿಸಿ, ಸಂಪಾದಿಸಿ, ಅನುವಾದಿಸಿ, ಬೃಹತ್ ಸಂಪುಟಗಳಾಗಿ ಹೊರತಂದದ್ದು, ಒಂದು ಅಸಾಮಾನ್ಯ ಸಾಧನೆಯೇ ಸರಿ. ಕಳೆದ ಶತಮಾನದ ಆರಂಭದ ದಶಕದಲ್ಲಿ ರೈಸ್ ಸಾಹೇಬರು ದಕ್ಷಿಣ ಕರ್ನಾಟಕದ ಎಲ್ಲ ಜಿಲ್ಲೆಗಳ ಶಾಸನಗಳನ್ನು ಸಂಗ್ರಹಿಸಿ, ಸಂಪಾದಿಸಿ, ಇಂಗ್ಲಿಷ್ ಸಾರಾಂಶದೊಂದಿಗೆ ಪ್ರಕಟಿಸಿದ್ದು ಚಾರಿತ್ರಿಕ ಸಂಗತಿ. ಇದು ಎಲ್ಲರಿಗೂ ತಿಳಿದ ಸಂಗತಿ. ಆದರೆ, ರೈಸ್ ಸಾಹೇಬರಿಂದ ಬಿಟ್ಟುಹೋಗಿದ್ದ ಬಳ್ಳಾರಿ, ಬಿಜಾಪುರ, ಬಾಗಲಕೋಟೆ, ರಾಯಚೂರು, ಕೊಪ್ಪಳ ಮುಂತಾದ ಉತ್ತರ ಕರ್ನಾಟಕದ ಜಿಲ್ಲೆಗಳ ಸರ್ವೇಕ್ಷಣ ಕಾರ್ಯ ಮಾಡಿ ಹೊಸದಾಗಿ ನೂರಾರು ಶಾಸನಗಳನ್ನು ಸಂಗ್ರಹಿಸಿದ್ದು ಮಾತ್ರವಲ್ಲದೆ; ಬಹುಶಾಸ್ತ್ರೀಯವಾಗಿ ಸಂಪಾದಿಸಿದ್ದು ಡಾ॥ ರೆಡ್ಡಿಯ ವಿದ್ವತ್‌ಪ್ರತಿಭೆಯ ದ್ಯೋತಕವೆಂದೇ ನಾನು ತಿಳಿಯುತ್ತೇನೆ. ಕನ್ನಡ ವಿಶ್ವವಿದ್ಯಾಲಯದ ಶಾಸನ ವಿಭಾಗವು ಹಮ್ಮಿಕೊಂಡ ಈ ಕೆಲಸದ ಕರ್ಣಧಾರತ್ವ ವಹಿಸಿಕೊಂಡು, ತನ್ನ ಸಹೋದ್ಯೋಗಿಗಳಲ್ಲಿ ಹೊಸಹುರುಪನ್ನು ತುಂಬಿದ್ದು ಈಗಲೂ ನನಗೆ ರೋಮಾಂಚನವನ್ನು ಉಂಟುಮಾಡುತ್ತದೆ. ಶಾಸನಗಳ ಪಡಿಯಚ್ಚು ತೆಗೆಯುವಲ್ಲಿ, ತೆಗೆದ ಶಾಸನಗಳನ್ನು ಓದುವಲ್ಲಿ, ಪ್ರಕಟಿತ ಶಾಸನಗಳನ್ನು ಮರು ಓದುವಿಕೆಯಲ್ಲಿ ರೆಡ್ಡಿಯ ಸೂಕ್ಷ್ಮಗ್ರಹಣ ಎಣೆಯಿಲ್ಲದ್ದು. ನನ್ನ ಮಟ್ಟಿಗೆ ರೆಡ್ಡಿಯ ಈ ದೈತ್ಯಸಾಹಸ ನೆನೆದಾಗ ಈತ ಅಭಿನವ ಬಿ.ಎಲ್. ರೈಸ್ ಎಂದೇ ನನಗೆ ಭಾಸವಾಗುತ್ತದೆ.

ಈತನ ವಿದ್ವತ್ತು, ಈತನ ಮಾನವೀಯತೆ, ಈತನ ಪ್ರೀತಿ–ಮಮತೆ ಮತ್ತು ಅನೇಕ ಸದ್ಗುಣಗಳು ಒಂದಕ್ಕೊಂದು ಮಿಲಿತಗೊಂಡಿವೆ. ಅವು ಅಪೂರ್ವವಾಗಿ ಸಹ ಮೈತ್ರಿಯಿಂದ ಬೆಳೆದಿವೆ. ರೆಡ್ಡಿಯ ಉದಾರತೆಗೆ ಕಡಮೆಯಿಲ್ಲ. ವಿಶ್ವವಿದ್ಯಾಲಯದ ಎಲ್ಲ ವರ್ಗದವರಿಗೂ ರೆಡ್ಡಿ ಆಪ್ತ. ಆತನಿಂದ ಹಣಕಾಸು ನೆರವು ಪಡೆದವರೆಷ್ಟೋ ಮಂದಿ! ಆತ ಎಷ್ಟೋ ಜನರ ಕಷ್ಟಸುಖಗಳಲ್ಲಿ ಪಾಲುದಾರನಾಗಿದ್ದು ಮಾನವೀಯ ಮೌಲ್ಯಕ್ಕೆ ಸಂದ ಭಾಗ್ಯವೆಂದೇ ನಾನು ತಿಳಿದಿದ್ದೇನೆ.



# ಸಾಧುಗೆ ಸಾಧು ಗುಣಮಧುರನ್ ಈತನ್ ಪೆರನಲ್ಲಂ

– ಡಾ॥ ಎಸ್.ವಿ. ವೆಂಕಟೇಶಯ್ಯ*

**ಮೇ**ಷ್ಟ್ರು ದೇವರಕೊಂಡಾರೆಡ್ಡಿಯವರು ಹಾಗೂ ನನ್ನ ಪರಿಚಯ ಮೂರು ದಶಕಗಳಿಗಿಂತಲೂ ಹಳೆಯದು. ನಾನು ೧೯೭೭ರಲ್ಲಿ ಕೆಲವು ಸರ್ಕಾರೀ ಆಫೀಸರ್ ಹುದ್ದೆಗೆ ಸಲ್ಲಿಸುವ ಅರ್ಜಿಯನ್ನು ತರಲು ಕೆ.ಪಿ.ಎಸ್.ಸಿ. ಕಾರ್ಯಾಲಯಕ್ಕೆ ಹೋಗಿದ್ದೆ, ಈ ರೆಡ್ಡಿ ಎಂಬ ವಾಮನಮೂರ್ತಿಯೂ ಅಲ್ಲಿಗೆ ಬಂದಿದ್ದರು. ಯಾರನ್ನು ಏನು ಹೇಗೆ ಕೇಳಬೇಕೆಂದು ನಾನು ಒದ್ದಾಡುತ್ತಿದ್ದೆ. ರೆಡ್ಡಿಯವರೂ ಏನೋ ಕೇಳಿದರು. ಅದಕ್ಕೆ ಕಛೇರಿಯ ಕಡೆಯಿಂದ ಸರಿಯಾದ ಪ್ರತಿಕ್ರಿಯೆ ಬರಲಿಲ್ಲ. ಆಗ ರೆಡ್ಡಿ ಅವರನ್ನು ದಬಾಯಿಸಿದ ರೀತಿಯಿಂದ ಒಂದಾಕ್ಷಣ ನನಗೆ ಕಕ್ಕಾಬಿಕ್ಕಿಯಾಯಿತು. ಸಣಕಲು ದೇಹದ ಸುಮಾರು ಐದು ಅಡಿ ಎತ್ತರದ ಈ ವ್ಯಕ್ತಿಯ ಆತ್ಮವಿಶ್ವಾಸ ನನ್ನನ್ನು ಆಶ್ಚರ್ಯಪಡಿಸಿತ್ತು.

ಮತ್ತೆ ಅವರನ್ನು ನೋಡಿದ್ದು ೧೯೭೭ರ ನಂತರವೇ. ಈ ವೇಳೆಗೆ ನಾನು 'ಪಿ.ಜಿ.ಡಿಪ್ಲೋಮಾ ಇನ್ ಎಪಿಗ್ರಫಿ'ಯನ್ನು ಮುಗಿಸಿದ್ದೆ. ಅದು ಒಂದು ಪದವಿಯಾಗಿ ನನಗೆ ಬಂದಿತ್ತೇ ಹೊರತು ಆಳವಾದ ಅಧ್ಯಯನ ಆಗಿರಲಿಲ್ಲ. ಹೆಚ್ಚು ತಿಳಿದುಕೊಳ್ಳುವ ಆಸೆಯಿದ್ದರೂ, ಹೇಳಿಕೊಡುವ ಹತ್ತಿರದವರು ಯಾರೂ ಇರಲಿಲ್ಲ. ೧೯೮೦ರ ಹೊತ್ತಿಗೆ, ನನಗೆ ಬಸವಕಲ್ಯಾಣದಿಂದ ಬೆಂಗಳೂರಿಗೆ ಮ್ಯೂಸಿಯಂನ ಸಹಾಯಕ ಕ್ಯುರೇಟರ್ ಆಗಿ ವರ್ಗಾವಣೆಯಾಯಿತು. ನನ್ನ ಇಂಗ್ಲಿಷ್ ಅಷ್ಟು ಸಮರ್ಥವಾಗಿರಲಿಲ್ಲ. ಇಂಗ್ಲಿಷ್ ಕೃತಿಗಳನ್ನು ಓದಬೇಕೆಂಬ ಆಸೆಯೇನೋ ಬಲವಾಗಿತ್ತು. ಬಿಡುವಿನ ಸಮಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗ್ರಂಥಭಂಡಾರದಲ್ಲಿರುವ ಷೇಕ್ಸ್‌ಪಿಯರ್ ಮಹಾಕವಿಯ ನಾಟಕಗಳ ಕನ್ನಡ ಅನುವಾದಗಳನ್ನು ಓದಿ, ಆನಂತರ ಇಂಗ್ಲಿಷ್ ಮೂಲವನ್ನು ಓದಿ, ಕೃತಿಗಳ ಭಾವ ಗ್ರಹಿಸುವ ಪ್ರಯತ್ನ ಮಾಡುತ್ತಿದ್ದೆ. ಸಾಹಿತ್ಯ ಪರಿಷತ್ತಿನಲ್ಲಿ ಶಾಸನ ತರಗತಿಗಳು ನಡೆಯುತ್ತಿದ್ದುದು ತಿಳಿದು ಅದಕ್ಕೆ ಸೇರಿಕೊಂಡೆ. ಆಗಲೇ ನನಗೆ ಮೇಷ್ಟ್ರ ಸಂಪರ್ಕ ಹೆಚ್ಚಾದದ್ದು. ಇವರ ಮೂಲಕ ಡಾ॥ ಆರ್. ಶೇಷಶಾಸ್ತ್ರಿ, ಡಾ॥ ಕೆ.ಆರ್. ಗಣೇಶ್ ಹಾಗೂ ಡಾ॥ ಪಿ.ವಿ. ಕೃಷ್ಣಮೂರ್ತಿಗಳ ಪರಿಚಯವೂ ಆಯಿತು. ಇವರೆಲ್ಲಾ ಸಾಯಂಕಾಲ ತರಗತಿಯ ನಂತರ ಸೇರುತ್ತಿದ್ದರು. ಈ 'ಸಾಯಂಕಾಲದ ಸರ್ಕಸ್'ನಲ್ಲಿ ನಾನೂ ಭಾಗವಹಿಸುತ್ತಿದ್ದೆ. ನನ್ನ ಅನುಮಾನಗಳನ್ನು ಇವರು ಬಗೆಹರಿಸುತ್ತಿದ್ದರು. ರೆಡ್ಡಿಯವರು ಶಾಸನಶಾಸ್ತ್ರ ತರಗತಿಯಲ್ಲಿ ಲಿಪಿಯನ್ನು ಹೇಳಿಕೊಡುತ್ತಿದ್ದರು. ಲಿಪಿವಿಕಾಸದ ಬಗ್ಗೆ ಅವರು ನೀಡುತ್ತಿದ್ದ ವ್ಯಾಖ್ಯಾನ, ತಿಳಿವಳಿಕೆಗಳು, ಅವರೊಬ್ಬ ಪ್ರಾಮಾಣಿಕ ವಿದ್ವಾಂಸರೆಂಬುದನ್ನು ಶ್ರುತಪಡಿಸುತ್ತಿತ್ತು.

ನನಗೆ ಬೆಂಗಳೂರಿನಿಂದ ರಾಯಚೂರಿಗೆ ವರ್ಗವಾಯಿತು. ಡಾ. ಶೇಷಶಾಸ್ತ್ರಿಗಳು ವೀರಗಲ್ಲುಗಳ ಅಧ್ಯಯನಕ್ಕಾಗಿ ರಾಯಚೂರಿಗೆ ಬಂದಾಗ, ಅವರಿಗೆ ಸಹಾಯ ಮಾಡುವಂತೆ ತಿಳಿಸಿದವರು ರೆಡ್ಡಿ ಮೇಷ್ಟ್ರು. ನಾನು ೧೯೮೩ರಲ್ಲಿ ಗೌರಿಬಿದನೂರಿನಲ್ಲಿ ಉಪನ್ಯಾಸಕನಾದ ಸಮಯದಲ್ಲಿ ರೆಡ್ಡಿ, ಕರ್ನಾಟಕ ಗೆಜೆಟಿಯರ್ ಇಲಾಖೆಯಲ್ಲಿ, ಅನ್ವೇಷಕರಾಗಿ ಕೆಲಸ ಮಾಡುತ್ತಿದ್ದರು. ಮೂಲತಃ ಸಾಹಿತ್ಯದ ವಿದ್ಯಾರ್ಥಿಯಾದ ರೆಡ್ಡಿ ಅವರಿಗೆ ಶಾಸನ ಹಾಗೂ ಇತಿಹಾಸದಲ್ಲಿ ಅಧ್ಯಯನಾಸಕ್ತಿ, ನಾನು ವಾಸ್ತುಶಿಲ್ಪ ಹಾಗೂ ಪುರಾತತ್ತ್ವ ಶಾಸ್ತ್ರದ ವಿದ್ಯಾರ್ಥಿ. ಇಬ್ಬರಿಗೂ ವಿಷಯ ವಿನಿಮಯ ಮಾಡಿಕೊಳ್ಳುವ ಆಸಕ್ತಿ ಬೆಳೆಯಿತು. ನನ್ನಿಂದ ಅವರು ಏನು ಕಲಿತರೋ ನನಗೆ ತಿಳಿಯದು. ನನಗೆ ಮಾತ್ರ ಅವರ ನಿಕಟ ಪರಿಚಯದಿಂದ ಶಾಸನಶಾಸ್ತ್ರದ ಬಗೆಗೆ ಜ್ಞಾನ–ಗೌರವ ಆದರಗಳು ಹೆಚ್ಚಾದವು.

೧೯೮೫ರಲ್ಲಿ ನನಗೆ ಕೇಂದ್ರಸರ್ಕಾರದ ಪುರಾತತ್ತ್ವ ಇಲಾಖೆಯಲ್ಲಿ ಕೆಲಸವಾಯಿತು. ಅಂದಿನಿಂದ ಎಲ್ಲಿದ್ದರೂ ಅವರ ಸಂಪರ್ಕವನ್ನು ಕಳೆದುಕೊಳ್ಳಲಿಲ್ಲ. ನಮ್ಮ ವಿಭಾಗದ ಗ್ರಂಥಭಂಡಾರದಲ್ಲಿ, ಗೆಜೆಟಿಯರ್ ಕಛೇರಿಯಲ್ಲಿ, ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ, ಎಲ್ಲಾದರೂ ಅವರ ಭೇಟಿ ಆಗುತ್ತಲೇ ಇತ್ತು. ನಾನು ಅಧ್ಯಯನ ನಡೆಸುತ್ತಿಲ್ಲ ಎಂದು ಗೌರವದಿಂದಲೇ

---

* ಪ್ರಾದೇಶಿಕ ನಿರ್ದೇಶಕರು (ದಕ್ಷಿಣ ಭಾರತ), ನಂ.೫೨೧, ೫ನೆಯ ಮಹಡಿ, ಬಿ–೪ ವಿಂಗ್, ಯಮುನಾ ಬ್ಲಾಕ್, ನ್ಯಾಷನಲ್ ಗೇಮ್ಸ್ ವಿಲೇಜ್, ಕೋರಮಂಗಲ, ಬೆಂಗಳೂರು–೫೬೦೦೪೭.

ಆಕ್ಷೇಪಿಸುತ್ತಿದ್ದರು. ಕಛೇರಿಯ ಆಡಳಿತಾತ್ಮಕ ಕೆಲಸಗಳ ಮಧ್ಯೆ ಅಧ್ಯಯನ ನಡೆಸಲು ಸಾಧ್ಯವಾಗದ ನಾನು ಜಾರಿಕೊಳ್ಳುತ್ತಿದ್ದೆ. ಆದರೆ ಅವರು ಬಿಡದೆ ಗ್ರಂಥಗಳನ್ನು ಓದಲು ಪ್ರೇರೇಪಿಸುತ್ತಿದ್ದರು. ಬಲವಂತವಾಗಿ ಓದಿಸುತ್ತಿದ್ದರು.

೨೦೦೧ರಲ್ಲಿ ನನಗೆ ಮಹಾರಾಷ್ಟ್ರದ ಔರಂಗಾಬಾದ್‌ಗೆ ವರ್ಗವಾಯಿತು. ಅಲ್ಲಿಗೆ ಮೇಷ್ಟ್ರು ಬಂದಿದ್ದಾಗ ಅಜಂತಾ ಎಲ್ಲೋರಾಗಳಿಗೆ ಭೇಟಿ ನೀಡಿದರು. ನಾನು ಅವರೊಂದಿಗೆ ಅಜಂತಾದ ವರ್ಣಚಿತ್ರಗಳ ಶಿಲ್ಪಗಳ ಬಗೆಗೆ ಚರ್ಚಿಸಿದೆ. ನನ್ನ ಆಸಕ್ತಿಯನ್ನು ಗಮನಿಸಿದ ಅವರು ಈ ವಿಷಯವನ್ನು ಕುರಿತು ನೀವೇಕೆ ಪಿಎಚ್.ಡಿ ಅಧ್ಯಯನ ಮಾಡಬಾರದು ಎಂದು ಸೂಚಿಸಿದರು. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ನಾನು ಪಿಎಚ್.ಡಿಗೆ ನೋಂದಣಿ ಮಾಡಿಸಿದಾಗ, ಅವರೇ ನನ್ನ ಮಾರ್ಗದರ್ಶಕರಾಗಲು ಮುಂದೆ ಬಂದರು. ನನಗೆ ಮತ್ತೆ ಇನ್ನೊಂದು ವರ್ಗಾವಣೆಯಾಗಿ ಧಾರವಾಡಕ್ಕೆ ಬಂದು, ಆಡಳಿತದಲ್ಲಿ ಮುಳುಗಿ, ಅಧ್ಯಯನದ ಕಡೆಗೆ ಗಮನ ಕೊಡದೆ ಸೋಮಾರಿಯಾದಾಗ, ಅಲಕ್ಷ್ಯ ತೋರಿಸಿದಾಗ ಆಕ್ಷೇಪಿಸುತ್ತಿದ್ದರು. ನಾನು 'ಆರ್ಕಿಯಾಲಜಿ ಸೂಪರಿಂಟೆಂಡೆಂಟ್' ಎಂದು ನನ್ನ ಕೆಲಸದ ಬಗೆಗೆ ಹುಸಿಗಂಭೀರವಾಗಿ ಹೇಳಿದರೆ, 'ಆ ಹುದ್ದೆಯನ್ನು ನಿಮ್ಮ ಕಛೇರಿಯಲ್ಲಿ ಕಟ್ಟಿಟ್ಟು ಬನ್ನಿ, ಇಲ್ಲಿ ನೀವು ವಿದ್ಯಾರ್ಥಿ' ಎಂದು ನಗುತ್ತಲೇ ದಬಾಯಿಸುತ್ತಿದ್ದರು.

ಅವರ ಒತ್ತಾಸೆ-ಒತ್ತಾಯಗಳು ಇಲ್ಲದಿದ್ದರೆ, ನಾನು ಅಧ್ಯಯನವನ್ನು ಕೊನೆಗಾಣಿಸುತ್ತಿದ್ದೆನೆಂದು ತೋರುತ್ತದೆ. ಅವರು ನನ್ನ ಬರವಣಿಗೆಯನ್ನು ಪರಿಶೀಲಿಸಿ ಕೊಡುತ್ತಿದ್ದ ಸೂಚನೆಗಳು ಅಮೂಲ್ಯವಾಗಿರುತ್ತಿದ್ದವು. ೨೦೦೫ರಲ್ಲಿ ನನಗ ಪಿಎಚ್.ಡಿ. ಪದವಿಯೂ ದೊರೆಯಿತು.

ನಾನು ಧಾರವಾಡದಲ್ಲಿದ್ದಾಗ, 'ಲಿಪಿ ಜಾಗೃತಿ ಕಾರ್ಯಕ್ರಮ'ವೊಂದನ್ನು ರೂಪಿಸಿ. ಅಲ್ಲಿ ರೆಡ್ಡಿಯವರ 'ಲಿಪಿಯ ಹುಟ್ಟು ಮತ್ತು ಬೆಳವಣಿಗೆ' ಗ್ರಂಥವನ್ನು ಬಿಡುಗಡೆ ಮಾಡಿಸಬೇಕೆಂದು ಯೋಚಿಸಿದೆ. ಕೆಲವು ವಿದ್ವಾಂಸರು, ಜನ ಬರದ ಕಾರ್ಯಕ್ರಮವಾಗುತ್ತದೆ ಎಂದಿದ್ದರೂ. ವಿದ್ಯಾವರ್ಧಕ ಸಂಘದ ಸಭಾಂಗಣದಲ್ಲಿ ತುಂಬಿದ ಸಭೆಯಲ್ಲಿ ರೆಡ್ಡಿಯವರಿಗೆ ಗೌರವ ಸಮರ್ಪಣೆಯಾಯಿತು.

ಕ್ಷೇತ್ರಕಾರ್ಯಗಳಿಗೆ ಮೇಷ್ಟ್ರ ಜೊತೆಗೆ ನಾನೂ ಅನೇಕ ಬಾರಿ ಹೋಗಿದ್ದೇನೆ. ಶಾಸನ/ಸ್ಮಾರಕ/ದೇವಾಲಯ/ ಶಿಲ್ಪಗಳನ್ನು ಯಾವ ಯಾವ ದೃಷ್ಟಿಕೋನಗಳಿಂದ ಅವಲೋಕಿಸಬೇಕೆಂದು, ಅವರಿಂದ ಸ್ವಲ್ಪ ಮಟ್ಟಿಗೆ ಕಲಿತಿದ್ದೇನೆ. ನನ್ನಂತಹ ಒರಟುಗಲ್ಲಿಗೆ ಒಂದು ಶಿಲ್ಪದ ಸ್ವರೂಪವನ್ನು ನೀಡಿದವರು ಅವರು ಎಂದರೆ ತಪ್ಪಿಲ್ಲ. ಗುರುತಿನ ಚೀಟಿಗಳಿಲ್ಲದೆ ನಾವು ಗುಮ್ಮರೆಡ್ಡಿಪುರಕ್ಕೆ ಕ್ಷೇತ್ರಕಾರ್ಯಕ್ಕೆ ಹೋಗಿದ್ದಾಗ, ನಮ್ಮನ್ನು ವಿಗ್ರಹಚೋರರೆಂದು ತಿಳಿದು ಜನ ಹಲ್ಲೆ ಮಾಡಲು ಬಂದಿದ್ದರು. ಚಾಕಚಕ್ಯತೆಯಿಂದ ರೆಡ್ಡಿ ಅದನ್ನು ತಪ್ಪಿಸಿದರು.

ನಾನು ಬರೆದಿದ್ದ ಲೇಖನವೊಂದನ್ನು ಒಬ್ಬ ವಿದ್ವಾಂಸರು ಪ್ರಶ್ನಿಸಿ, ಅದರಲ್ಲಿರುವ ತಪ್ಪನ್ನು ತೋರಿಸಿದಾಗ, ನಾನು ಅದನ್ನು ಪ್ರತಿಷ್ಠೆಯ ಪ್ರಶ್ನೆಯನ್ನಾಗಿ ಮಾಡಿಕೊಂಡಿದ್ದೆ. ಮೇಷ್ಟ್ರ ಸಹವಾಸ ನನ್ನ ಅಂತಹ ಪ್ರತಿಷ್ಠೆಗಳನ್ನು ಬಿಡುವಂತೆ ಮಾಡಿತು. ಅವರು ನಾನು ಅಧ್ಯಯನವನ್ನು ಗಂಭೀರವಾಗಿ ಸ್ವೀಕರಿಸುವಂತೆ ಮಾಡಿದರು. ಅವರ ಒತ್ತಾಯವಿಲ್ಲದಿದ್ದರೆ, ನಾನು ಹಿರೇಬೆಣಕಲ್‌ನ ಅರ್ಲಿಯಸ್ಟ್ ಟ್ರಪೆಟ್. ಪಟ್ಟದಕಲ್ಲಿನ ಕಲ್ಲುಗಣಿಗಳು, ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳ ಮೇಲೆ ತಾಳಿಕೋಟೆಯುದ್ಧದ ಪ್ರಭಾವ ಮೊದಲಾದ ವಿದ್ವಾಂಸರ ಮೆಚ್ಚುಗೆ ಪಡೆದ ಸಂಶೋಧನಾ ಲೇಖನಗಳನ್ನು ರಚಿಸುತ್ತಿದ್ದೆನೋ ಇಲ್ಲವೋ, ಪುರಾತತ್ತ್ವ ವಿಭಾಗದ ಮೇಲ್ವಿಚಾರಕನಾಗಿ ಬಾದಾಮಿ. ಐಹೊಳೆ, ಪಟ್ಟದಕಲ್ಲು, ಅಜಂತಾ-ಎಲ್ಲೋರಾಗಳಲ್ಲಿ ನಾನು ಕೈಗೊಂಡ ಪುನರ್‌ನಿರ್ಮಾಣ ಕಾರ್ಯಗಳನ್ನು, ನಡೆಸಿದ ಶೋಧನೆಗಳು ಮಹಾಸಾಧನೆಯೆಂದು ಜನ ಮೆಚ್ಚಿದ್ದಾರೆ. ಈ ಸಾಧನೆಯ ಹಿನ್ನೆಲೆಯಲ್ಲಿ ಮೇಷ್ಟ್ರ ಉತ್ತೇಜನ ಸಹಕಾರಗಳೂ ಇವೆ. ನಾನು ಬಾದಾಮಿಯಲ್ಲಿ ಅಧಿಕಾರದಲ್ಲಿದ್ದಾಗ, ಅಲ್ಲಿ ಮಾಹಿತಿ ಫಲಕಗಳಾಗಲಿ, ಮಾರ್ಗದರ್ಶನ ಪಟ್ಟಿಕೆಗಳಾಗಲಿ ಇಲ್ಲದೇ ಪ್ರವಾಸಿಗರಿಗೆ ಪರದಾಟವಾಗುತ್ತಿತ್ತು. ರೆಡ್ಡಿಯವರು 'ಸರ್ಕಾರ ಏನೆಲ್ಲ ವೆಚ್ಚ ಮಾಡುತ್ತಿದೆ. ಪ್ರವಾಸಿಗರಿಗೆ ನೀನು ಏನು ಮಾಹಿತಿ ಕೊಡುತ್ತಿಲ್ಲ. ಮಾಹಿತಿಯನ್ನು ಒದಗಿಸದಿದ್ದರೆ

ಸ್ಥಳದ ಬಗ್ಗೆ ಅವರು ಏನು ತಿಳಿಯುತ್ತಾರೆ' ಎಂದು ಸಲಹೆ ನೀಡಿದರು. ಅದಕ್ಕೆ ತಕ್ಕಂತೆ ೧೨ ಮಾಡ್ಯುಲ್‌ಗಳಲ್ಲಿ ಚಿತ್ರೀಕರಣ ಮಾಡಿಸಿ, Touch screen Information Kioskಗಳನ್ನು ನಾನು ಆಯಾ ಸ್ಥಳದ ವಸ್ತುಸಂಗ್ರಹಾಲಯಗಳಲ್ಲಿ ಸ್ಥಾಪಿಸಿದೆ.

ಮೈಸೂರಿನ ಶಾಸನಶಾಸ್ತ್ರ ಇಲಾಖೆಯಲ್ಲಿದ್ದಾಗ, ರೆಡ್ಡಿ ಹಾಗೂ ಡಾ. ಎಂ.ಎಂ. ಕಲಬುರ್ಗಿ ಅವರ ಒತ್ತಾಯದಿಂದ, ಹತ್ತೇ ತಿಂಗಳಲ್ಲಿ ಇಲಾಖೆಯಲ್ಲಿ, ಹಲವಾರು ಉತ್ತಮ ಬದಲಾವಣೆಗಳನ್ನು ತರಲಾಯಿತು. Dynastic List of South Indian Copper Plates ಎಂಬ ಗ್ರಂಥವನ್ನು ಪ್ರಕಟಿಸಲಾಯಿತು. ನನ್ನ ಅನೇಕ ಚಿಂತನೆಗಳಿಗೆ ಮೂರ್ತ ರೂಪ ನೀಡಿದವರು ಈ ರೆಡ್ಡಿ ಮೇಷ್ಟ್ರು.

ರೆಡ್ಡಿಯವರು ಶಿಷ್ಯರಿಗೆ ಮಾರ್ಗದರ್ಶನ ಮಾಡುವ ರೀತಿಯೇ ಆತ್ಮೀಯವಾದುದು. ಒಮ್ಮೆ ಗಂಗವಾರಕ್ಕೆ ಕ್ಷೇತ್ರಕಾರ್ಯಕ್ಕೆ ಹೋಗಿದ್ದಾಗ 'ಶಿಲ್ಪಗಳು ಒಂದೇ ರೀತಿ ಇರುತ್ತದಲ್ಲವಾ, ಇವುಗಳ ನಡುವೆ ವ್ಯತ್ಯಾಸಗಳನ್ನು ಕಂಡುಹಿಡಿಯುವುದು ಹೇಗೆ' ಎಂದು ಅವರನ್ನು ಪ್ರಶ್ನಿಸಿದೆ. ಅವರು ಏನೋ ಉತ್ತರ ನೀಡಿದಾಗ, ನಾನು ಸುಮ್ಮನಿರದೆ 'ನಿಮಗೂ ಏನೂ ಗೊತ್ತಿಲ್ಲ, ಸುಮ್ಮನೆ ಏನೋ ಹೇಳ್ತಿದೀರಿ ಬಿಡಿ' ಎಂದು ಜೋರಾಗಿ ಹೇಳಿಬಿಟ್ಟೆ. ಹಾಗೆ ನಾನು ಹೇಳಿದ್ದು ತಪ್ಪು ಎಂದು ಈಗಲೂ ನನಗೆ ಅರಿವಿದೆ. ಶ್ರೀಮತಿ ಅಪರ್ಣ, ಶ್ರೀಮತಿ ವಸಂತಲಕ್ಷ್ಮಿ ಮೊದಲಾದವರು ಶಿಲ್ಪಗಳ ಬಗೆಗೆ ಅಧ್ಯಯನ ನಡೆಸುತ್ತಿದ್ದವರ ಎದುರಿಗೆ ಈ ನನ್ನ ಧಾಷ್ಟ್ಯ ವರ್ತನೆಗೆ ರೆಡ್ಡಿ ತಣ್ಣಗೆ ಪ್ರತಿಕ್ರಿಯೆ ನೀಡಿದರು. ಇನ್ನೊಬ್ಬರ ವಿದ್ವತ್ತಿನ ಬಗ್ಗೆ ಮಾತನಾಡುವಾಗ ಎಚ್ಚರ ಇರಬೇಕು. ನಮ್ಮ ಮಿತಿ ಗೊತ್ತಿರಬೇಕು ಎಂಬುದು ನನಗೆ ಅಂದು ರೆಡ್ಡಿ ಅವರ ವರ್ತನೆಯಿಂದ ಅರಿವಾಯಿತು.

ಯಾರಿಗೂ ಹೆದರದೆ, ನೇರ ನಡೆ ನುಡಿಯ, ಮಾಡಿದ ಉಪಕಾರಗಳಿಗೆ ಪ್ರತಿಫಲವನ್ನು ಅಪೇಕ್ಷಿಸದ ರೆಡ್ಡಿಯವರು ಕೃತಕವಾಗಿ ನಡೆದದ್ದೇ ಇಲ್ಲ. ಹೆಚ್ಚು ಕಡಿಮೆ ಒಂದೇ ವಯಸ್ಸಿನವರಾದ ನಾವು ಸ್ನೇಹಿತರಂತೆ ನಡೆದುಕೊಳ್ಳಬೇಕು ಎಂಬುದು ರಡ್ಡಿಯವರ ಮನಸ್ಸಾದರೆ, ನನಗೆ ಅವರು ಎಂದಿಗೂ ಮೇಷ್ಟ್ರಾಗೇ ಉಳಿದುಕೊಂಡಿದ್ದಾರೆ.



# ರೆಡ್ಡಿ ಮಾಸ್ಟರು ನಾ ಕಂಡಂತೆ

– ವೇಮಗಲ್ ಸೋಮಶೇಖರ್*

**ದೇ**ವರಕೊಂಡಾರೆಡ್ಡಿ ನನಗೆ ಪರಿಚಯ ಆದದ್ದು ೧೯೬೫-೬೬ರಲ್ಲಿ. ಆಗ ಕಬ್ಬನ್‌ಪೇಟೆಯ ಸಾದರ ಪತ್ರಪ್ಪ ರಸ್ತೆಯಲ್ಲಿದ್ದ ಧರ್ಮರಾಯಸ್ವಾಮಿ ದೇವಾಲಯದ ಧರ್ಮಛತ್ರದಲ್ಲಿದ್ದ ವೇಮಗಲ್ ಪಾಪಣ್ಣನನ್ನು ಕಾಣಲು ಆಗಾಗ್ಗೆ ನಾನು ಅಲ್ಲಿಗೆ ಹೋಗುತ್ತಿದ್ದೆ. ಅದೇ ಛತ್ರದಲ್ಲಿದ್ದ ರೆಡ್ಡಿಯವರೂ ಸಹ ವಿದ್ಯಾರ್ಜನೆ ನಡೆಸುತ್ತಿದ್ದರು. ಆ ಛತ್ರದ ಅಂಗಳವನ್ನು ನೀಲಿ ಬಣ್ಣದ ಅಡ್ಡ ಪರದೆಗಳನ್ನೆಳೆದು ಸಣ್ಣ ಸಣ್ಣ ಕೊಠಡಿಗಳಾಗಿ ವಿಂಗಡಿಸಿ ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯವನ್ನು ಒದಗಿಸಿದ್ದರು. ಆಗಾಗಲೇ ನಾನು ಭಾರತೀಯ ದೂರವಾಣಿ ಕಾರ್ಖಾನೆಯಲ್ಲಿ ಉದ್ಯೋಗದಲ್ಲಿದ್ದೆ. ರೆಡ್ಡಿಯವರು ನನಗಿಂತ ವಯಸ್ಸಿನಲ್ಲಿ ನಾಲ್ಕು ವರ್ಷ ಕಿರಿಯರು.

ಧರ್ಮರಾಯಸ್ವಾಮಿ ದೇವಾಲಯದ ಸುತ್ತಮುತ್ತ ಅನೇಕ ದೇವಾಲಯಗಳಿದ್ದು ದೇವಾಲಯಗಳ ಸಂಕೀರ್ಣವೆಂದೇ ಪ್ರಸಿದ್ಧವಾಗಿತ್ತು. ನಗರದ ಹೃದಯಭಾಗದಲ್ಲಿನ ಇಂತಹ ಪರಿಸರದಲ್ಲಿ ವಿದ್ಯಾರ್ಥಿ ಜೀವನವನ್ನು ಪ್ರಾರಂಭಿಸಿದ ದೇವರಕೊಂಡಾರೆಡ್ಡಿಯವರಿಗೆ ದೇವರು ಹಾಗೂ ದೇವಾಲಯಗಳ ಬಗ್ಗೆ ಅಧ್ಯಯನ ಮಾಡಲು ಸ್ಫೂರ್ತಿ ದೊರಕಿರಬಹುದು.

೧೯೭೨-೭೩ರಲ್ಲಿ ಪ್ರಸಿದ್ಧ ಶಾಸನ ತಜ್ಞರು, ಪತ್ರಿಕೋದ್ಯಮಿಗಳೂ ಆಗಿದ್ದ ತಿರುಮಲೆ ತಾತಾಚಾರ್ಯ ಶರ್ಮರು ಆಗ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಜಿ. ನಾರಾಯಣರಿಗೆ "ನಮ್ಮ ನಾಡಿನಲ್ಲಿ ಕನ್ನಡ ಶಾಸನಗಳನ್ನು ಅಭ್ಯಾಸ ಮಾಡಿದವರೂ, ಮೂಲ ಶಾಸನಗಳನ್ನು ಓದಬಲ್ಲವರೂ ಅತಿ ವಿರಳ. ಆದ್ದರಿಂದ ಪರಿಷತ್ತಿನಲ್ಲಿ ಶಾಸನ ತರಗತಿಗಳನ್ನು ನಡೆಸಬೇಕು" ಎಂದು ಸಲಹೆ ನೀಡಿದ್ದರು. ತಿ.ತಾ. ಶರ್ಮರು ನೀಡಿದ್ದ ಸೂಚನೆ ಬಹು ಸೂಕ್ತ ಎಂದು ತಿಳಿದ ಜಿ. ನಾರಾಯಣರು ಕಾಲೇಜಿನ ಮೆಟ್ಟಲು ಹತ್ತದವರೂ ಸಹ ಶಾಸನಗಳ ಬಗ್ಗೆ ಅಧ್ಯಯನ ಮಾಡಬೇಕೆಂಬ ಉದ್ದೇಶದಿಂದ ಪರಿಷತ್ತಿನಲ್ಲಿ ಶಾಸನಶಾಸ್ತ್ರ ತರಗತಿಯನ್ನು ೧೯೭೬ರಲ್ಲಿ ಪ್ರಾರಂಭಿಸಿದರು. ವಿದ್ಯಾರ್ಥಿಗಳಿಗೆ ವಯಸ್ಸಿನ ಮಿತಿ ಇರಲಿಲ್ಲ. ಅದಾಗಲೇ ಪರಿಷತ್ತಿನಲ್ಲಿ ಪ್ರಾರಂಭವಾಗಿದ್ದ ಸಂಶೋಧನಾ ವಿಭಾಗಕ್ಕೆ ಎ.ಎಂ. ಅಣ್ಣಿಗೇರಿಯವರು ಮುಖ್ಯಸ್ಥರಾಗಿ ನೇಮಕಗೊಂಡರು. ಕನ್ನಡ ಶಾಸನಗಳನ್ನು ಓದುವುದರಲ್ಲಿ ಸಾಕಷ್ಟು ಅನುಭವವಿದ್ದ ಅಣ್ಣಿಗೇರಿಯವರ ಸಹಕಾರದಿಂದ ಸಂಶೋಧನಾ ವಿಭಾಗದಲ್ಲಿ ಶಾಸನಶಾಸ್ತ್ರ ತರಗತಿಯ ಉದ್ಘಾಟನೆಯನ್ನು ೧೯೭೬ ಏಪ್ರಿಲ್ ೩ರಂದು ಭಾರತ ಸರಕಾರದ ಪ್ರಾಚ್ಯವಸ್ತು ಸರ್ವೇಕ್ಷಣಾ ಇಲಾಖೆಯ ದಕ್ಷಿಣ ಮಧ್ಯವಲಯದ ಮುಖ್ಯಸ್ಥರಾದ ಎಸ್.ಆರ್. ರಾವ್ ಅವರು ಮಾಡಿದರು. ಕರ್ನಾಟಕ ರಾಜ್ಯದ ಪ್ರಾಕ್ತನ ಶಾಸ್ತ್ರ ಮತ್ತು ವಸ್ತುಸಂಗ್ರಹಾಲಯ ಇಲಾಖೆಯ ನಿರ್ದೇಶಕರಾಗಿದ್ದ ಡಾ॥ ಎಂ.ಎಸ್. ನಾಗರಾಜರಾವ್ ಅವರು ಎ.ಎಂ. ಅಣ್ಣಿಗೇರಿ ಮತ್ತು ಆರ್. ಶೇಷಶಾಸ್ತ್ರಿ ಅವರು ಸಂಪಾದಿಸಿದ "ಶಾಸನ ಸಂಗ್ರಹ" ಪುಸ್ತಕವನ್ನು ಅಂದು ಬಿಡುಗಡೆ ಮಾಡಿದರು. ಭಾರತ ಸರ್ಕಾರದ ಶಾಸನ ಇಲಾಖೆಯ ಪ್ರಮುಖ ಅಧಿಕಾರಿಗಳಾಗಿ ನಿವೃತ್ತರಾಗಿದ್ದ ಡಾ॥ ಜಿ.ಎಸ್. ಗಾಯಿ ಅವರು ಅಂದಿನ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಆ ವರ್ಷದಲ್ಲಿ ಡಾ॥ ಚಿದಾನಂದಮೂರ್ತಿ, ಎ.ಎಂ. ಅಣ್ಣಿಗೇರಿ ಮತ್ತು ಆರ್. ಶೇಷಶಾಸ್ತ್ರಿಗಳು ಬೋಧಕರಾಗಿದ್ದರು. ಎಚ್.ಎಸ್. ಗೋಪಾಲರಾವ್, ಕೆ.ಆರ್. ಗಣೇಶ್, ಸಿ.ಯು. ಮಂಜುನಾಥ್, ಎಂ.ಕೆ. ನಾಗಲಕ್ಷ್ಮಿ ಸೇರಿದಂತೆ ಒಟ್ಟು ೨೨ ಜನ ವಿದ್ಯಾರ್ಥಿಗಳು ಅಧ್ಯಯನ ನಡೆಸಿದರು. ಆನಂತರ ಅಣ್ಣಿಗೇರಿಯವರು ಅನಿವಾರ್ಯವಾಗಿ ಧಾರವಾಡಕ್ಕೆ ಹಿಂತಿರುಗಿದಾಗ ೧೯೭೭ರಲ್ಲಿ ರೆಡ್ಡಿಯವರು ಸಂಶೋಧನಾ ವಿಭಾಗದ ಮುಖ್ಯಸ್ಥರಾಗಿ ನೇಮಕಗೊಂಡರು. ಎರಡನೇ ಸಾಲಿನ ಶಾಸನಶಾಸ್ತ್ರ ಪ್ರವೇಶ ತರಗತಿಗಳು ೧೯೭೭ರಲ್ಲಿ ಪ್ರಾರಂಭವಾದಾಗ ನಾನು ವಿದ್ಯಾರ್ಥಿಯಾಗಿ ಸೇರಿದೆ. ಈ ತರಗತಿಗೆ ದೇವರ ಕೊಂಡಾರೆಡ್ಡಿ, ಆರ್. ಶೇಷಶಾಸ್ತ್ರಿ ಮತ್ತು ಕೆ.ಆರ್. ಗಣೇಶ್ ಬೋಧಕರಾಗಿದ್ದರು. ಚಿಂತಾಮಣಿ ಬಳಿಯ ಸಂತೆಕಲ್ಲಹಳ್ಳಿಯವರಾದ ಶೇಷಶಾಸ್ತ್ರಿಗಳು ಆಗ ಪಿಎಚ್.ಡಿ ಪದವಿಗಾಗಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ 'ಕರ್ನಾಟಕದ ವೀರಗಲ್ಲುಗಳು' ಎಂಬ ವಿಷಯದ ಬಗ್ಗೆ ಮಹಾ

* ೧೬೦(೩೭೦), 'ದೀಪ', ೪ನೆಯ ಅಡ್ಡರಸ್ತೆ, ಮದಕರಿನಾಯಕ ರಸ್ತೆ, ಲಕ್ಷ್ಮೀಪುರ, ಕೆಂಪೇಗೌಡನಗರ, ಬೆಂಗಳೂರು-೫೬೦೦೧೯.

ಪ್ರಬಂಧವನ್ನು ರಚಿಸಿ ನೀಡಿದ್ದರು. ಈ ಎರಡನೇ ಸಾಲಿನ ತರಗತಿಯಲ್ಲಿ ತೇರ್ಗಡೆಯಾದವರ ೨೧ ಜನರಲ್ಲಿ ನಾನೂ ಸೇರಿದಂತೆ ಎಂ.ಜಿ. ನಾಗರಾಜ್, ಅ.ಲ. ನರಸಿಂಹನ್, ಎಂ. ಮಂಜುಳ, ಪಿ.ವಿ. ಕೃಷ್ಣಮೂರ್ತಿ, ನಾ. ಗೀತಾಚಾರ್ಯ ಮುಂತಾದವರಿದ್ದರು.

೧೯೭೭ರಲ್ಲಿ ಪರಿಷತ್ತಿನ ಸಂಶೋಧನಾ ಸಲಹಾ ಸಮಿತಿಯಲ್ಲಿದ್ದ ಡಾ॥ ಸೂರ್ಯನಾಥ ಕಾಮತ್, ದೇವರಕೊಂಡಾರೆಡ್ಡಿ, ಶೇಷಶಾಸ್ತ್ರಿ, ಕೆ.ಆರ್. ಗಣೇಶ್ ಮತ್ತು ಪ್ರವೇಶ ತರಗತಿಗಳಲ್ಲಿ ತೇರ್ಗಡೆಯಾಗಿದ್ದ ವಿದ್ಯಾರ್ಥಿಗಳ ಪ್ರಯತ್ನದಿಂದ ಪ್ರಾರಂಭಗೊಂಡ ಶಾಸನಶಾಸ್ತ್ರ ಪ್ರೌಢ ತರಗತಿಯನ್ನು ೧೯೭೭ರ ಜೂನ್ ೧ ರಂದು ಡಾ॥ ಕೆ.ವಿ.ರಮೇಶ್ ಅವರು ಉದ್ಘಾಟಿಸಿದರು. ಈ ತರಗತಿಯ ಅಂಗವಾಗಿ ಪ್ರಸಿದ್ಧ ಶಾಸನ ತಜ್ಞರಿಂದ ವಿಶೇಷ ಉಪನ್ಯಾಸಗಳು ನಡೆಯುತ್ತಿತ್ತು. ಪರೀಕ್ಷೆಯ ಸಂಬಂಧವಾಗಿ ಶೇಷಶಾಸ್ತ್ರಿಗಳು ವಿದ್ಯಾರ್ಥಿಗಳಿಗೆ ಕಿರು ಪ್ರಬಂಧ ಬರೆಯಲು ಒಬ್ಬೊಬ್ಬರಿಗೊಂದೊಂದು ವಿಷಯವನ್ನು ನೀಡಿದರು. ನನಗೆ 'ಪರಿಷತ್ತಿನ ಶಾಸನ ತರಗತಿಗಳು" ಎಂಬುದನ್ನು ಕೊಟ್ಟರು. ಬರವಣಿಗೆಯ ಗಂಧವೇ ಇಲ್ಲದ ನನಗೆ ಏನು ಬರೆಯಬೇಕೆಂಬುದೇ ತೋಚದಂತಾಯಿತು. ಸರಿ ಹಾಗೋ ಹೀಗೋ ಪ್ರಬಂಧವನ್ನು ಬರೆದುಕೊಟ್ಟೆ. ಪ್ರೌಢ ತರಗತಿಯಲ್ಲಿ ತೇರ್ಗಡೆಯೂ ಆದೆ. ಆ ಲೇಖನ ೧೯೭೮ರ ಕನ್ನಡ ನುಡಿ ಸಂಚಿಕೆಯಲ್ಲಿ ಪ್ರಕಟವೂ ಆಯಿತು. ನನ್ನ ಸಂತೋಷಕ್ಕೆ ಮಿತಿಯೇ ಇಲ್ಲದಾಯಿತು. ಇದೇ ನನ್ನ ಚೊಚ್ಚಲ ಲೇಖನ. ಅಂದಿನಿಂದ ನನಗೆ ಬರವಣಿಗೆಯಲ್ಲಿ ಆಸಕ್ತಿಯುಂಟಾಯಿತು. ಕ್ರಮೇಣ ರೆಡ್ಡಿಯವರ ಮಾರ್ಗದರ್ಶನದಲ್ಲಿ ಅಪರೂಪಕ್ಕೆ ಒಂದೊಂದು ಸಂಶೋಧನಾತ್ಮಕ ಲೇಖನವನ್ನು ಬರೆಯಲು ಪ್ರಾರಂಭಿಸಿದೆ. ಸಂಶೋಧನಾ ವಿಭಾಗದಲ್ಲಿದ್ದ ಮೌಲಿಕವೂ ಬಹು ಉಪಯುಕ್ತವೂ ಆದ ಇತಿಹಾಸ ಗ್ರಂಥಗಳ ಸಹಾಯದಿಂದ ನಾನು ಸಂಶೋಧನಾ ಕ್ಷೇತ್ರ ಪ್ರವೇಶಿಸಲು ಸ್ಫೂರ್ತಿ ದೊರೆತು, ಮುನ್ನಡೆಯಲು ಸಾಧ್ಯವಾಯಿತು.

ಈ ತರಗತಿಗಳಿಗೆ ವೈದ್ಯರು, ವಕೀಲರು, ಸಾಹಿತಿಗಳು ಸೇರಿದಂತೆ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಆಸಕ್ತರು ಸೇರುತ್ತಿದ್ದರು. ತರಗತಿಗಳು ಪ್ರಾರಂಭವಾಗುವಾಗ ೪೦ಕ್ಕೂ ಹೆಚ್ಚು ಜನ ಬರಲು ಪ್ರಾರಂಭಿಸಿ ಪರೀಕ್ಷೆಯ ಸಮಯಕ್ಕೆ ಸುಮಾರು ೩೦ ಜನರಾದರೂ ಇದ್ದು ಕೊನೆಗೆ ೨೦ ಜನರಾದರೂ ತೇರ್ಗಡೆಯಾಗುತ್ತಿದ್ದರು. ತರಗತಿಗಳ ಉದ್ಘಾಟನೆ ಮತ್ತು ಅರ್ಹತಾ ಪತ್ರಗಳನ್ನು ವಿತರಿಸುವ ಸಮಾರೋಪ ಸಮಾರಂಭದ ಕಾರ್ಯಕ್ರಮಗಳು ಬಹು ಪ್ರಧಾನವಾಗಿ ನಡೆಯುತ್ತಿತ್ತು. ಬ್ರಾಹ್ಮಿ ಶಾಸನಗಳಿಂದ ಹಿಡಿದು ಮೈಸೂರು ಅರಸರ ಶಾಸನಗಳಲ್ಲಿನ ರಾಜಕೀಯ, ಧಾರ್ಮಿಕ, ಸಾಮಾಜಿಕ ಜೀವನ, ಸಾಹಿತ್ಯ, ಭಾಷೆ, ಲಿಪಿಗಳ ಅಧ್ಯಯನ ಹಾಗೂ ಶಾಸನಗಳನ್ನು ಪ್ರತಿ ಮಾಡುವ ವಿಧಾನ ಇತ್ಯಾದಿಗಳ ಪರಿಚಯ ಮಾಡಿಕೊಡಲಾಗುತ್ತಿತ್ತು. ಜಿ. ನಾರಾಯಣರ ನಂತರ ಅಧ್ಯಕ್ಷರಾಗಿದ್ದ ಹಂಪ ನಾಗರಾಜಯ್ಯನವರು ಈ ತರಗತಿಗಳ ಬಗ್ಗೆ ವಿಶೇಷ ಆಸಕ್ತಿ ತೋರಿಸುತ್ತಿದ್ದರು.

ನಂತರದಲ್ಲಿ ಹಿಂದಿನ ವಿದ್ಯಾರ್ಥಿಗಳಲ್ಲಿ ಅಡಗಿದ್ದ ಪ್ರತಿಭೆಯನ್ನು ರೆಡ್ಡಿಯವರು ಗುರುತಿಸಿ ಅಂತಹವರ ಪ್ರತಿಭೆಯನ್ನು ಪ್ರದರ್ಶಿಸಲು ಅವಕಾಶ ನೀಡುತ್ತಿದ್ದರು. ವಿವಿಧ ರೀತಿಯಲ್ಲಿ (ಅಸಹ್ಯವಾಗಿಯೂ) ಜನರು ಊಟ ಮಾಡುವ ರೀತಿಯನ್ನು ನಾನು ಅನುಕರಿಸುತ್ತಿದ್ದುದನ್ನು ಹೇಗೋ ತಿಳಿದುಕೊಂಡು ರೆಡ್ಡಿಯವರು ಆ ಪ್ರದರ್ಶನಕ್ಕೆ ಒಂದು ಅವಕಾಶವನ್ನು ನೀಡಿದರು. ಆ ಕಾರ್ಯಕ್ರಮ ಎಲ್ಲರಿಂದ ಮೆಚ್ಚುಗೆಯನ್ನು ಪಡೆಯಿತು. ಇನ್ನೊಂದು ಸಲ 'ಕೋಲಾರ ಜಿಲ್ಲೆಯ ಸ್ಥಳನಾಮಗಳು' ಎಂಬ ಉಪನ್ಯಾಸವನ್ನು ನೀಡಿದೆ. ಅದೇ ರೀತಿ ಆಗಾಗ್ಗೆ ರೆಡ್ಡಿಯವರು ಸಂಶೋಧನಾ ವಿಭಾಗದಲ್ಲಿ ಹಿಂದಿನ ವಿದ್ಯಾರ್ಥಿಗಳನ್ನು ಕಲೆ ಹಾಕಿ ಅವರುಗಳಿಂದಲೇ ಸಣ್ಣ ಪ್ರಮಾಣದಲ್ಲಿ ವಿಚಾರ ಸಂಕಿರಣ ಹಾಗೂ ಉಪನ್ಯಾಸಗಳನ್ನು ನಡೆಸಿ ಉತ್ತೇಜನ ನೀಡುತ್ತಿದ್ದರು.

ಶಾಸನಶಾಸ್ತ್ರ ತರಗತಿ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರವಾಸವನ್ನು ಹಮ್ಮಿಕೊಂಡು ಶ್ರವಣಬೆಳಗೊಳ ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿನ ಬನವಾಸಿ, ಉಡುತಡಿ, ಬಳ್ಳಿಗಾವಿ ಮುಂತಾದ ಸ್ಥಳಗಳಿಗೆ ರೆಡ್ಡಿಯವರು ಮತ್ತು ಶಾಸ್ತ್ರಿಗಳು ನಮ್ಮನ್ನು ಕರೆದುಕೊಂಡು ಹೋಗಿದ್ದರು. ಶಿವಮೊಗ್ಗ ಜಿಲ್ಲೆಯ ಪ್ರವಾಸದ ಸಮಯದಲ್ಲಿ ನಾನು ತಲೆಯನ್ನು ಪೂರ್ತಿ ಬೋಳಿಸಿಕೊಂಡಿದ್ದೆ, ಅಗ ಕೋಡಿಮಠಕ್ಕೆ ಹೋಗಿದ್ದಾಗ ನಾನು ಪಂಚೆಯನ್ನುಟ್ಟು ಕೆಂಪು ಬಣ್ಣದ ವಸ್ತ್ರದ ಮೇಲು ಹೊದಿಕೆಯೊಂದಿಗೆ ಹಣೆ ಹಾಗೂ ಇತರೆ ಕಡೆ ವಿಭೂತಿ ಧರಿಸಿ ಬಹು ಶುಭ್ರವಾಗಿ ಹೋಗುತ್ತಿದ್ದರೆ ಅಲ್ಲಿನ ಬಾಲಕರು 'ಯಾರೋ ಸ್ವಾಮಿಗಳು ನಮ್ಮ ಮಠಕ್ಕೆ ಬಂದಿದ್ದಾರೆ' ಎಂದು ತಿಳಿದು ನನ್ನ ಕಾಲಿಗೆ ನಮಸ್ಕಾರ ಹಾಕಲು ಪ್ರಾರಂಭಿಸಿದರು. ನನಗೆ ಆಶ್ಚರ್ಯವಾಯಿತು. ಈ ದೃಶ್ಯವನ್ನು ವೀಕ್ಷಿಸಿದ ರೆಡ್ಡಿ ಮತ್ತು ಶಾಸ್ತ್ರಿಯವರು ಅಂದಿನಿಂದ ಇಂದಿನವರೆಗೂ ನನ್ನನ್ನು ಕಂಡು ತಕ್ಷಣ ಗೌರವದಿಂದ 'ಏನು ಸ್ವಾಮಿಗಳೇ' ಎಂದು ಸಂಬೋಧಿಸುತ್ತಾರೆ. ಒಂದು ದಿವಸ ನಮ್ಮನ್ನು ರೆಡ್ಡಿಯವರು ಕ್ಷೇತ್ರಕಾರ್ಯಕ್ಕೆಂದು ಆನೇಕಲ್ ಹತ್ತಿರವಿರುವ ಗುಮ್ಮಳಾಪುರಕ್ಕೆ ಕರೆದುಕೊಂಡು ಹೋಗಿದ್ದರು.

ಹಿಂದಿನ ತರಗತಿಯ ವಿದ್ಯಾರ್ಥಿಗಳೆಲ್ಲಾ ಆಗಾಗ್ಗೆ ಪರಿಷತ್ತಿನ ಸಂಶೋಧನಾ ವಿಭಾಗದಲ್ಲಿ ಸೇರಬೇಕೆಂದು ೧೯೭೮ರಲ್ಲಿ ಯೋಚಿಸಿದ ರೆಡ್ಡಿಯವರು ಪರಿಷತ್ತಿನ ನೆರವಿನೊಂದಿಗೆ ಪ್ರತಿ ತಿಂಗಳು ಇತಿಹಾಸ ತಜ್ಞರೊಬ್ಬರಿಂದ ಉಪನ್ಯಾಸ ಕಾರ್ಯಕ್ರಮವನ್ನು ಸುಮಾರು ಎರಡು ವರ್ಷ ನಡೆಸಿದರು. ಈ ಕಾರ್ಯಕ್ರಮದಿಂದ ಅನೇಕ ವಿದ್ವಾಂಸರ ಪರಿಚಯ ನನಗಾಯಿತು. ಆಗಾಗ್ಗೆ ಶೇಷಶಾಸ್ತ್ರಿಗಳು ರಜಾ ಇದ್ದ ದಿವಸ 'ಎಲ್ಲಿಯಾದರೂ ಪ್ರವಾಸ ಹೋಗೋಣ' ಎಂದು ನನ್ನನ್ನು ಹಾಗೂ ಇತರರನ್ನು ಕರೆದುಕೊಂಡು ಹೋಗುತ್ತಿದ್ದರು. ಅದೇ ರೀತಿ ನಗರದಲ್ಲಿನ ಇತಿಹಾಸ ತಜ್ಞರ ಮನೆಗಳಿಗೂ ಕರೆದುಕೊಂಡು ಹೋಗಿ ಅವರ ಪರಿಚಯವನ್ನು ಮಾಡಿಸುತ್ತಿದ್ದರು. ಪರಿಷತ್ತಿನಲ್ಲಿ ಶಾಸನಶಾಸ್ತ್ರ ತರಗತಿಗಳು ನಡೆಯಲು ಭದ್ರ ಬುನಾದಿಯನ್ನು ರೆಡ್ಡಿಯವರು ಹಾಕಿದರೆ ಅದಕ್ಕೆ ಕೈ ಜೋಡಿಸಿದವರು ಶೇಷಶಾಸ್ತ್ರಿಗಳು.

ಪುನಃ ೧೯೮೨ರಲ್ಲಿ ಗುಂಡ್ಲುಪೇಟೆಗೆ ಪ್ರೌಢಶಾಲಾ ಶಿಕ್ಷಕರಾಗಿ ನೇಮಕಗೊಂಡ ರೆಡ್ಡಿಯವರನ್ನೂ ೧೯೮೩ರಲ್ಲಿ ಕರ್ನಾಟಕ ಗೆಜಿಟಿಯರ್ ಇಲಾಖೆಗೆ ನಿಯೋಜನೆಯ ಮೇಲೆ ಕರೆ ತಂದ ಡಾ॥ ಕಾಮತರು, ಅವರಿಗೆ ಅನ್ವೇಷಕ ಹುದ್ದೆ ನೀಡಿದರು. ಮುಂದೆ ಕೆಲವು ದಿವಸಗಳ ನಂತರ ಗೆಳೆಯ ಶಾಸ್ತ್ರಿಯನ್ನು ರೆಡ್ಡಿ ಗೆಜೆಟಿಯರ್‌ಗೆ ಕರೆತಂದರು. ಇಲಾಖಾ ಕಾರ್ಯದಲ್ಲಿ ಪಾಲ್ಗೊಂಡು, ಜಿಲ್ಲಾ ಗ್ಯಾಸೆಟಿಯರುಗಳಿಗಾಗಿ, ವಿವಿಧ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ ಕೈಗೊಳ್ಳಲು ರೆಡ್ಡಿಯವರಿಗೆ ಅವಕಾಶ ಲಭಿಸಿತು. ಏತನ್ಮಧ್ಯೆ ಪ್ರೊ॥ ಎಂ.ವಿ. ಸೀತಾರಾಮಯ್ಯ ಹಾಗೂ ಡಾ॥ ಕೆ.ಪಿ. ಭಟ್ ಅವರ ಮಾರ್ಗದರ್ಶನದಲ್ಲಿ 'ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ' ಎಂಬ ಮಹಾ ಪ್ರಬಂಧವನ್ನು ಸಿದ್ಧಪಡಿಸಿ ಬೆಂಗಳೂರು ವಿಶ್ವವಿದ್ಯಾಲಯದಿಂದ ೧೯೯೩ರಲ್ಲಿ ಡಾಕ್ಟರೇಟ್ ಪದವಿ ಪಡೆದರು.

ಮುಂದೆ ೧೯೯೫ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯವು ಶಾಸನಶಾಸ್ತ್ರ ವಿಭಾಗವನ್ನು ಆರಂಭಿಸಿದಾಗ ಉಪನ್ಯಾಸಕರಾಗಿ ಆಯ್ಕೆಗೊಂಡು ೧೯೯೭ರಲ್ಲಿ ಪ್ರವಾಚಕರಾಗಿ ಬಡ್ತಿ ಹೊಂದಿದರು. ಅನಂತರ ಅಂದರೆ ೨೦೦೪ರಿಂದ ಪ್ರಾಧ್ಯಾಪಕರಾಗಿ ಹಾಗೂ ಸಮಾಜ ವಿಜ್ಞಾನ ನಿಕಾಯದ ಡೀನ್ ಆಗಿ ಸೇವೆ ಸಲ್ಲಿಸಿ ಜೊತೆಗೆ ಶಾಸನ, ಸಾಹಿತ್ಯ, ಇತಿಹಾಸ ಹಾಗೂ ದಕ್ಷಿಣ ಭಾರತದ ವಾಸ್ತುಶಿಲ್ಪ ಅಭ್ಯಾಸದಲ್ಲಿ ಪರಿಣಿತಿ ಹೊಂದಿ, ಶಾಸನ ಸಂಪುಟಗಳನ್ನು ಸಂಪಾದಿಸಿ, ಸ್ವಂತ ಕೃತಿಗಳನ್ನು ರಚಿಸಿ ಹಾಗೂ ಅನುವಾದಿಸಿ ಸುಮಾರು ೫೦ಕ್ಕೂ ಹೆಚ್ಚು ಐತಿಹಾಸಿಕ ಲೇಖನಗಳನ್ನು ಬರೆದು ಅನೇಕ ಪ್ರಶಸ್ತಿ ಹಾಗೂ ಬಹುಮಾನಗಳನ್ನು ಪಡೆದಿದ್ದಾರೆ. ಇವರ ಮಾರ್ಗದರ್ಶನದಲ್ಲಿ ನಾಲ್ಕಾರು ವಿದ್ಯಾರ್ಥಿಗಳು ಪಿಹೆಚ್.ಡಿ. ಪದವಿಗಳಿಸಿದ್ದಾರೆ.

ಕರ್ನಾಟಕದಲ್ಲಿ ಎಲ್ಲಾ ಕಾಲದ ಶಾಸನ ಲಿಪಿಗಳನ್ನು ಓದುವುದರಲ್ಲಿ ಪರಿಣಿತಿ ಹೊಂದಿರುವ ಕೆಲವೇ ವಿದ್ವಾಂಸರಲ್ಲಿ ವಣಕನಹಳ್ಳಿಯ ದೇವರಕೊಂಡಾರೆಡ್ಡಿಯವರು ಒಬ್ಬರು. ಇವರು ಎಲ್ಲಿಯೇ ಹೋದರು ಬಳಿಸಾರಿ ಬರುವ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವ ದೃಶ್ಯ ಸಾಮಾನ್ಯವಾಗಿ ಕಾಣಸಿಗುತ್ತಿದೆ. ತಮ್ಮ ಸರಳತೆ, ಹುಡುಗಾಟಿಕೆಗಳಿಂದಾಗಿ, ಸ್ವಲ್ಪಮಟ್ಟಿಗೆ ಓದಿದ ಸಾಮಾನ್ಯ ಹಳ್ಳಿಯ ರೈತನಂತೆ ಕಾಣುವ ಇವರು ಸ್ನೇಹಶೀಲರು. ವೃತ್ತಿ ಜೀವನದಲ್ಲಿ ಯಶಸ್ಸನ್ನು, ಕೌಟುಂಬಿಕ ಬದುಕಿನಲ್ಲಿ ಸಂತೃಪ್ತತೆಯನ್ನು ಕಂಡಿರುವ ಡಾ॥ ದೇವರ ಕೊಂಡಾರೆಡ್ಡಿಯವರಿಗೆ ಈ ಶುಭ ಸಂದರ್ಭದಲ್ಲಿ ಹೃತ್ಪೂರ್ವಕವಾದ ಅಭಿನಂದನೆಯನ್ನು ಸಲ್ಲಿಸುತ್ತೇನೆ.



# ಗುರುಸ್ಮರಣೆ

– ಡಾ॥ ಬಿ.ಆರ್. ಭಾರತಿ*

ಕನ್ನಡ ಸಾಹಿತ್ಯ ಪರಿಷತ್ತಿನ 'ಶಾಸನಶಾಸ್ತ್ರ' ತರಗತಿಯ 'ಪ್ರೌಢ'ದಲ್ಲಿದ್ದೆ. ಕೆಲವು ತಿಂಗಳುಗಳ ಹಿಂದಷ್ಟೆ ಅಲ್ಲಿನ ಶಿಕ್ಷಕರುಗಳಾಗಿದ್ದ ಡಾ॥ ಎಂ.ಜಿ. ನಾಗರಾಜ್, ಡಾ॥ ಎಚ್.ಎಸ್. ಗೋಪಾಲರಾವ್, ಡಾ॥ ಕೆ.ಆರ್. ಗಣೇಶ್, ಡಾ॥ ಪಿ.ವಿ. ಕೃಷ್ಣಮೂರ್ತಿ ಮುಂತಾದವರ ಪರಿಚಯವಾಗಿತ್ತು. ಮುಂದೆ ಅವರುಗಳ ಸಲಹೆಯಂತೆ ಕರ್ನಾಟಕ ಇತಿಹಾಸ ಅಕಾಡೆಮಿಯ ಸದಸ್ಯಳೂ ಆಗಿದ್ದೆ. ಇದೇ ಸಂದರ್ಭದಲ್ಲಿ ಪಿಎಚ್.ಡಿ. ಮಾಡಲು ನಿರ್ಧರಿಸಿದ್ದೆ. ಹಿಂದೆಯೇ ಮೂಡಿದ ಪ್ರಶ್ನೆ ಯಾರ ಮಾರ್ಗದರ್ಶನದಲ್ಲಿ? ಎಂಬುದಾಗಿತ್ತು. ಮತ್ತೆ ಗುರುವರ್ಗದವರ ಮೊರೆ ಹೊಕ್ಕೆ.

ಅವರು ಮಾರ್ಗದರ್ಶಕರಾಗಿ ಸೂಚಿಸಿದ ವ್ಯಕ್ತಿಯೇ ಡಾ॥ ದೇವರಕೊಂಡಾರೆಡ್ಡಿಯವರು. ಸೋಮವಾರದಂದು ಇತಿಹಾಸ ಅಕಾಡೆಮಿಯ ಪದಾಧಿಕಾರಿಗಳೆಲ್ಲ ಸೇರುವ ದಿನ. ದೇವರಕೊಂಡಾರೆಡ್ಡಿಯವರು ಅಂದು ಅಕಾಡೆಮಿಗೆ ಬರುತ್ತಾರೆ. ನಿಮಗೆ ಪರಿಚಯ ಮಾಡಿಕೊಡುತ್ತೇವೆ ಎಂದರು.

ಸೋಮವಾರ ಇತಿಹಾಸ ಅಕಾಡೆಮಿಯಲ್ಲಿ ಅವರ ಪರಿಚಯವಾಯಿತು. ಪರಿಚಯದ ನಂತರ ನಾಲ್ಕಾರು ಸಾಮಾನ್ಯ ಪ್ರಶ್ನೆಗಳಾಯಿತು. ಸ್ವಲ್ಪ ಧೈರ್ಯ ಬಂದಂತಾಯಿತು.

ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಿಷಯಗಳ ಬಗ್ಗೆ ಕೇಳಿದರು. ಎರಡೂ ವಿಷಯಗಳ ಬಗ್ಗೆ ತಿಳಿಸಿ, ಹೆಚ್ಚಿನ ಒಲವು ರಾಷ್ಟ್ರಕೂಟರ ಕಡೆಗಿದೆ ಎಂದು ಹೇಳಿ ಸಮಗ್ರ ಅಧ್ಯಯನದ ಆಶಯವನ್ನು ವ್ಯಕ್ತಪಡಿಸಿದೆ. ಮಾಡಬಹುದು, ಆದರೆ ವ್ಯಾಪ್ತಿ ಬಹಳ ದೊಡ್ಡದಾಗುತ್ತದೆ. ಶಾಸನಗಳಿಗೆ ಸೀಮಿತಗೊಳಿಸಿಕೊಳ್ಳಿ, ಮುಂದೆ ಅದರ ಬಗ್ಗೆ ನೋಡೋಣ ಎಂದು ಹೇಳಿದರು. ಕೊನೆಯಲ್ಲಿ ನನಗೆ ಕೇಳುವ ಮನಸ್ಸಿಲ್ಲದಿದ್ದರೂ ಅನಿವಾರ್ಯವೋ ಎಂಬಂತೆ ನೀವು ಯಾವುದಾದರೂ ವಿಷಯ ಸೂಚಿಸಿದರೆ ಅದನ್ನೇ ಮಾಡುತ್ತೇನೆ. ಆದರೆ ೧೦–೧೧ನೆಯ ಶತಮಾನದ ಒಳಗಿನದಾಗಿರಬೇಕು ಎಂದುಬಿಟ್ಟೆ. ಒಳಗಿನ ಆತಂಕ, ಭಯ ಹೆಚ್ಚಾಯಿತು. ಕಾರಣ ವಿಷಯ ಸೂಚಿಸಿ ಎಂದು ಹೇಳಿ ಕಾಲದ ಮಿತಿಯನ್ನು ನಾನೇ ಹೇಳಿಬಿಟ್ಟಿದ್ದೆ. ಅವರು ನೀಡಿದ ಉತ್ತರ ಈಗ ತಾನೇ ಕೇಳಿದೆನೋ ಎಂಬಂತೆ ಸದಾ ಅನುರಣಿತವಾಗುತ್ತಿದೆ. 'ಇಲ್ಲಮ್ಮ ವಿಷಯ ನೀನೇ ಆಯ್ಕೆ ಮಾಡಿಕೊಳ್ಳಬೇಕು. ಏಕೆಂದರೆ ಸಂಶೋಧನೆ ಮಾಡುವಾಗ ಅನೇಕ ತೊಡಕುಗಳು ಬರುವ ಸಾಧ್ಯತೆಗಳಿರುತ್ತವೆ. ಅರ್ಥವಾಗದೆ ಏನು ಮಾಡಲೂ ತೋರದೆ, ಅಧ್ಯಯನ ಮುಂದೆ ಸಾಗದೆ, ನಿಧಾನವಾದಾಗಲೂ ನಿಮಗೆ ಉತ್ಸಾಹ ಬತ್ತುವುದಿಲ್ಲ. ಆದರೆ ನಿಮಗಿಷ್ಟವಿಲ್ಲದ ವಿಷಯವನ್ನು ಆಯ್ಕೆ ಮಾಡಿಕೊಂಡಾಗ ಅಂತಹ ಸಂದರ್ಭಗಳಲ್ಲಿ ಆಸಕ್ತಿ ಕಳೆದುಕೊಂಡು ಬಿಡ್ತೀರಿ. ಆಗ ಕೆಲಸ ಅರ್ಧಕ್ಕೆ ನಿಂತು ಹೋಗುತ್ತೆ. ಆದ್ದರಿಂದ ಅಧ್ಯಯನ ಮಾಡಿ ಸಂಶೋಧನೆ ಮಾಡುವವರು ನೀವು. ನನ್ನದೇನಿದ್ದರೂ ಮಾರ್ಗದರ್ಶನ ಮಾಡುವುದಷ್ಟೇ. ವಿಷಯಾಂತರವಾದರೆ ಅಥವಾ ಅನವಶ್ಯಕ ವಿಷಯ ಸಂಗ್ರಹ ಆದಾಗ ಮಾತ್ರ ಚರ್ಚಿಸಿ ಮುಂದುವರಿಸುವುದು. ಆಯ್ತೇನಮ್ಮ, ಉಳಿದಂತೆ ನೀವು ಸ್ವತಂತ್ರರು' ಎಂದು ಹೇಳಿದರು. ಇಷ್ಟೇ ನಮ್ಮ ಸಂಶೋಧನಾ ಪೂರ್ವದ ಚರ್ಚೆ.

ಇಂದಿಗೂ ಅವರದು ಇದೇ ನಿಲುವು. ಅಂದು ಅವರು ಹೇಳಿದ ಮಾತುಗಳು ಸಂಶೋಧನೆಗೆ ಮಾತ್ರವಲ್ಲ ಉಳಿದೆಲ್ಲ ಚಟುವಟಿಕೆಗಳಲ್ಲೂ ಮುಂದೆ ಸಾಗಲು ದಾರಿದೀಪವಾದಂತಾಯಿತು. ಎಷ್ಟೋ ಸಂದರ್ಭಗಳಲ್ಲಿ ಅಗತ್ಯವೆನಿಸಿದಾಗ ಬೇರೆಯವರಿಗೂ ಈ ಮಾತುಗಳನ್ನು ಹೇಳುತ್ತೇನೆ. ನನಗಿಂತ ಒಂದು ವರ್ಷ ಮೊದಲು ನೋಂದಾಯಿಸಿದ್ದ ಜಯಮ್ಮನವರಿಗೆ ಏನೇನೋ ಹೇಳುತ್ತಾರೆ. ನನಗೇನೂ ಹೇಳುವುದಿಲ್ಲವಲ್ಲ ಎಂದು ಅನೇಕ ಬಾರಿ ಯೋಚಿಸಿದ್ದೇನೆ. ಒಮ್ಮೆ ಧೈರ್ಯ ಮಾಡಿ ಕೇಳಿಯೇ ಬಿಟ್ಟೆ, 'ಸರ್, ನೀವು ನನಗೇನೂ ಹೇಳುವುದೇ ಇಲ್ಲವಲ್ಲ. ಏಕೆ?' ಎಂದು. 'ನಾನು ನಿಂಗೆ ಮೊದಲೇ ಹೇಳಿದ್ನಲ್ಲಮ್ಮ... ನಿಮ್ಮ ಕೆಲಸ ನೀವು ಮಾಡಬೇಕು. ಅಗತ್ಯಬಿದ್ದಾಗ ವಿಷಯಾಂತರವಾದಾಗಷ್ಟೇ ತಿದ್ದುವುದು ಮಾರ್ಗದರ್ಶಕರ

* ಸಂಶೋಧಕರು, ಸಮಾಜವಿಜ್ಞಾನ ಸಂಶೋಧನ ಕೇಂದ್ರ, ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿ ಕಾಲೇಜು, ೧೮ನೆಯ ಕ್ರಾಸ್, ಮಲ್ಲೇಶ್ವರ, ಬೆಂ.–೧೨.

ಕೆಲಸ ಅಂತ. ನಿನ್ನ ಪಾಡಿಗೆ ನೀನು ಕೆಲಸ ಮಾಡಿಕೊಂಡು ಬಾಮ್ಮ ಬೇರೆ ಏನೂ ಯೋಚನೆ ಮಾಡಬೇಡ' ಎಂದುಬಿಟ್ಟರು. ಅದೇ ಕೊನೆ ಮತ್ತೆಂದೂ ಆ ರೀತಿ ಯೋಚಿಸಲಿಲ್ಲ.

ನಿಗರ್ವಿಯಾಗಿರುವ ಅವರು ಸರಳವಾಗಿ ಎಲ್ಲರೊಂದಿಗೆ ಸಹಜವಾಗಿರುತ್ತಾರೆ. ವಿಚಾರಗಳ ಸಂಗ್ರಹವೇ ತುಂಬಿದ್ದರೂ, ಕೇಳದಿದ್ದರೆ ಏನೂ ತಿಳಿಯದವರಂತೆ ಸುಮ್ಮನಿದ್ದು ಬಿಡುವುದನ್ನು ಕಂಡಿದ್ದೇನೆ. ಆದರೆ ಸಂದರ್ಭ ಬಂದಾಗ ತಮ್ಮ ನೆನಪಿನ ಭಂಡಾರದಿಂದ ತೆಗೆಯುವ ವಿಷಯಗಳು ಅನೇಕ.

ಸಂಶೋಧನೆಗೆ ನೋಂದಾಯಿಸಿದ ನಂತರ ಒಮ್ಮೆ ಮೂರು ದಿವಸಗಳ ಕಮ್ಮಟಕ್ಕಾಗಿ ವಿಶ್ವವಿದ್ಯಾಲಯಕ್ಕೆ ಹೋಗಬೇಕಾಯಿತು. ಅನಾರೋಗ್ಯವಿದ್ದರೂ ಹಾಜರಾತಿ ಕಡ್ಡಾಯವಾದ್ದರಿಂದ ಹೊರಟೆ. ಹೊಸಪೇಟೆ ತಲುಪಿದಾಗಲೇ ಸಾಕಷ್ಟು ನಿತ್ರಾಣಗೊಂಡಿದ್ದೆ. ನನ್ನ ಸ್ಥಿತಿಯನ್ನು ನೋಡಿದ ಸರ್. 'ಏಕಮ್ಮ ಬರೋದಿಕ್ ಹೋದೆ?' ಎಂದವರು ಮುಂದೆ ಮಾತನಾಡಲೇ ಇಲ್ಲ. ಮೊದಲೆರಡು ದಿನ ಹಾಗೂ ಹೀಗೂ ಕಳೆಯಿತು. ಮೂರನೆಯ ದಿನಕ್ಕೆ ಬಹುಶಃ ಅವರ ತಾಳ್ಮೆ ಮೀರಿರಬಹುದು. 'ಇವತ್ತು ನೀನು ಬರಬೇಡಮ್ಮ' ಎಂದರು. ನಾನು 'ಬೇಡ ಸರ್' ನೀವು ವಿಭಾಗದ ಮುಖ್ಯಸ್ಥರಾಗಿದ್ದೀರಿ. ಈಗ ಬರದಿದ್ದರೆ ಮುಂದೆ ಬೇರೆ ಸಂದರ್ಭದಲ್ಲಿ ನಿಮಗೆ ತೊಂದರೆಯಾದರೆ' ಎಂದೆ. 'ಏನಾಗೋದಿಲ್ಲ. ಹಾಗಾದಾಗ ನೋಡಿಕೊಳ್ಳೋಣ' ಎಂದರು. ಡಾಕ್ಟರ್ ಹತ್ತಿರ ಹೋಗಿ ಬರುವಂತೆ ಹೇಳಿದರು. ಬೆಳಿಗ್ಗೆ ಯಾವ ವೈದ್ಯರೂ ಸಿಗದಿದ್ದರಿಂದ ಹಾಗೆಯೇ ಹೋದೆ. ನಿಲ್ಲಲು, ನಡೆಯಲು, ಮಾತನಾಡಲು ತೊಂದರೆಯಿದ್ದರೂ ಉತ್ಸಾಹ, ಆತ್ಮವಿಶ್ವಾಸವೇನೂ ಕುಗ್ಗಿರಲಿಲ್ಲ. ಮಾಸ್ತರರಿಗೆ ನನ್ನ ಕಷ್ಟ ಅರ್ಥವಾಗಿತ್ತು. ಆದರೆ ವಿಭಾಗದ ಉಳಿದ ಪ್ರಾಧ್ಯಾಪಕರು ಸಹ ನನ್ನ ಸ್ಥಿತಿ ನೋಡಿ ಪ್ರತಿಕ್ರಿಯಿಸಿದ ರೀತಿಯನ್ನು ಮರೆಯುವಂತಿಲ್ಲ.

ಬೆಂಗಳೂರಿಗೆ ಹಿಂದಿರುಗಿದ ಮೇಲೆ ಸೋಮವಾರ ಇತಿಹಾಸ ಅಕಾಡೆಮಿ ಕಾರ್ಯಾಲಯಕ್ಕೆ ಹೋದಾಗ ಡಾ.ಎಚ್.ಎಸ್.ಗೋಪಾಲರಾಯರು, 'ಭಾರತೀ, ರೆಡ್ಡಿ ನಿಮ್ಮನ್ನು ನೋಡಿ ಹೆದರಿಬಿಟ್ಟಿದ್ದಾನೆ' ಎಂದರು. ಕಾರಣ ಕೇಳಿದೆ: ನಾವು ಮೊದಲೇ ರೇಗಿಸುತ್ತಿದ್ದೆವು. "ಎಂ.ವಿ.ಸೀ.ಯವರ ಶಿಷ್ಯನಾದ ನೀನೂ ಅಸ್ತಮಾ ರೋಗಿ, ನಿನ್ನ ಶಿಷ್ಯೆಯೂ ಅಸ್ತಮಾ ರೋಗಿ. ಒಟ್ಟು ಮೂರು ಜನರಾದಿರಿ. ಅದೇ ಪರಂಪರೆ ಮುಂದುವರೆಸುತ್ತಿದ್ದೀಯಾ" ಎಂದು. ಈಗಿನ ನಿಮ್ಮ ಸ್ಥಿತಿಯನ್ನು ನೋಡಂತೂ ಅವನು ಸುಸ್ತಾಗಿಬಿಟ್ಟಿದ್ದಾನೆ' ಎಂದರು. ಇನ್ನೊಬ್ಬರ ನೋವಿಗೆ ಸ್ಪಂದಿಸುವ ಗುಣವನ್ನು ಅವರಲ್ಲಿ ಕಂಡಿದ್ದೇನೆ. ಮೆಟ್ಟಲು ಹತ್ತಬೇಕಾದ ಸಂದರ್ಭವಿದ್ದರೆ, 'ನಾನೇ ಬರ್ತೀನಿ, ನೀನು ಅಲ್ಲೇ ಇರು' ಎಂದು ಕೆಳಗಿಳಿದು ಬಂದು ಮಾತನಾಡಿಕೊಂಡು ಹೋಗುತ್ತಿದ್ದರು. ಶಿಷ್ಯಳಿಗಿಂತ ಹೆಚ್ಚಾಗಿ ನನ್ನನ್ನು ಮಗಳಂತೆ ನೋಡಿ ಕೊಂಡಿದ್ದಾರೆ ಎನ್ನುವುದೇ ಸೂಕ್ತ. ಇಂದಿಗೂ ಅದೇ ಕಾಳಜಿ, ವಾತ್ಸಲ್ಯ. ನಾನಾಗಿ ಫೋನ್ ಮಾಡಿ ಅವರನ್ನು ಮಾತನಾಡಿಸಿದ್ದು ಬೆರಳೆಣಿಕೆಯಷ್ಟು ಬಾರಿ. ಪ್ರತಿಸಲವೂ ಅವರೇ ಫೋನ್ ಮಾಡಿ ತಾವು ಬರುವ, ಬಂದಿರುವ ವಿಷಯವನ್ನು ತಿಳಿಸುತ್ತಿದ್ದರು. ಅಧ್ಯಯನದ ಬಗ್ಗೆ ಕೇಳುತ್ತಿದ್ದರು. ಒಮ್ಮೊಮ್ಮೆ ಮಾತ್ರ 'ಏನಮ್ಮಾ ನಮ್ಮನ್ನೆಲ್ಲ ಮರೆತೇ ಬಿಟ್ಟಿದ್ದೀಯಾ. ಒಂದ್ ಫೋನ್ ಮಾಡೋಕೆ ಆಗೊಲ್ವೇನಮ್ಮಾ?' ಎಂದಷ್ಟೇ ಹೇಳಿದ್ದಾರೆ.

ಇನ್ನು ಸಂಶೋಧನೆಯ ವಿಷಯಕ್ಕೆ ಬಂದಾಗ ಸಂಪೂರ್ಣ ಸ್ವಾತಂತ್ರ್ಯ ನೀಡಿ ವಿಷಯ ಸಂಗ್ರಹ ಮಾಡಲು ಅವಕಾಶ ಮಾಡಿಕೊಟ್ಟಿದ್ದಾರೆ. ಇನ್ನು ಚರ್ಚೆ ಮಾಡುವ ಸಂದರ್ಭಗಳಲ್ಲಿ ಅವರು ಹೇಳುತ್ತಿದ್ದ ಬಹಳಷ್ಟು ವಿಷಯಗಳು ನನಗೆ ತಿಳಿದೇ ಇರುತ್ತಿರಲಿಲ್ಲ. ಆಗ ವಿಧೇಯ ವಿದ್ಯಾರ್ಥಿಯಾಗಿ ಗಂಭೀರವಾಗಿ ಅವರು ಹೇಳುವುದನ್ನು ಆಲಿಸಿದ್ದೇನೆ. ಟಿಪ್ಪಣಿ ಮಾಡಿಕೊಂಡಿದ್ದೇನೆ.

ಈ ಹಿಂದೆ ಶಾಸನಶಾಸ್ತ್ರ 'ಪ್ರವೇಶ' ತರಗತಿಯಲ್ಲಿದ್ದಾಗ ಕ್ಷೇತ್ರಕಾರ್ಯಕ್ಕೆ ಶ್ರವಣಬೆಳಗೊಳಕ್ಕೆ ಹೋಗಿದ್ದೆವು. ಅಲ್ಲಿನ ದೇವಾಲಯವೊಂದರಲ್ಲಿ ಶಾಸನವನ್ನು ಪಡಿಯಚ್ಚು ತೆಗೆಯುವುದು ಹೇಗೆಂದು ಹೇಳಿಕೊಡುತ್ತಿದ್ದರು. ಆಗ ಅನಿರೀಕ್ಷಿತವಾಗಿ ದೇವರಕೊಂಡಾರೆಡ್ಡಿಯವರು ಬಂದರು ಎಂದು ಹೇಳಿದ ಪಿ.ವಿ.ಕೃಷ್ಣಮೂರ್ತಿಯವರು ಎಲ್ಲರಿಗೂ ಪರಿಚಯ ಮಾಡಿಕೊಟ್ಟರು. ಒಂದು ಶಾಸನದ ಪಡಿಯಚ್ಚು ತೆಗೆಯಲು ಅನುಸರಿಸಬೇಕಾದ ವಿಧಾನವನ್ನು ಆಗ ಅವರು ಪೂರ್ಣವಾಗಿ ತೋರಿಸಿಕೊಟ್ಟರು. ಮುಂದೆ ಅವರೇ ನನ್ನ ಗುರುಗಳಾಗಿ ಬರುತ್ತಾರೆ ಎಂದೇನೂ ನಿರೀಕ್ಷಿಸಿರಲಿಲ್ಲ.

ಅವರ ಕೆಲವೊಂದು ಗುಣ ಸ್ವಭಾವಗಳನ್ನು ನಾನು ಗಮನಿಸಿದ್ದೇನೆ. ಏಕಾಗ್ರಚಿತ್ತದಿಂದ ಗ್ರಂಥಾಲಯದಲ್ಲಿ ಕುಳಿತು ಮೌನವಾಗಿ ಅಧ್ಯಯನದಲ್ಲಿ ತೊಡಗಿರುವ ಅವರನ್ನು ಕಂಡಿದ್ದೇನೆ. ಅವರನ್ನು ಕಾಣಲು ಬರುವ ಅನೇಕ ಸಂಶೋಧಕರೊಂದಿಗೆ ನಡೆಸುವ ಚರ್ಚೆಗಳನ್ನು ಕೇಳಿದ್ದೇನೆ. ಅವರ ಬಗ್ಗೆ ಹೇಳಲೇಬೇಕಾದ ಇನ್ನೊಂದು ಅಂಶವೆಂದರೆ ಸರಳ ಮತ್ತು ನೇರ ಸ್ವಭಾವ. ಅದು ನನಗೆ ಬೆರಗು ಹುಟ್ಟಿಸುತ್ತದೆ. ತಮಗೆ ತಿಳಿಯದ ವಿಷಯ ಯಾರಾದರೂ ಹೇಳಿದರೆ ಗಂಭೀರವಾಗಿ ಆಲಿಸುತ್ತಾರೆ, ಚರ್ಚಿಸುತ್ತಾರೆ, ಸಂಶಯ ಪರಿಹಾರ ಮಾಡಿಕೊಳ್ಳುತ್ತಾರೆ. ದೊಡ್ಡವರಿರಲಿ, ಚಿಕ್ಕವರಿರಲಿ ಹಿಂಜರಿಯುವುದಿಲ್ಲ. ಸ್ನೇಹಿತರೊಂದಿಗೆ ಸೇರಿದಾಗಲಂತೂ ಯುವಕರಂತೆ ಎಲ್ಲರೂ ಪರಸ್ಪರ ರೇಗಿಸಿಕೊಳ್ಳುವುದನ್ನು ಕಂಡು ಖುಷಿಪಟ್ಟಿದ್ದೇನೆ.

ಡಾ॥ ದೇವರಕೊಂಡಾರೆಡ್ಡಿಯವರ ಸಂಶೋಧನಾ ವಿದ್ಯಾರ್ಥಿ ಡಾ.ಜಯಮ್ಮ ಕರಿಯಣ್ಣನವರು ನೊಳಂಬರ ಬಗ್ಗೆ ಅಧ್ಯಯನ ಮಾಡುತ್ತಿದ್ದರು. ಅವರೊಂದಿಗೆ ಚರ್ಚೆ ಮಾಡುವಾಗಲೆಲ್ಲ ನನ್ನನ್ನೂ ಜೊತೆಯಲ್ಲೇ ಕೂಡಿಸಿಕೊಳ್ಳುತ್ತಿದ್ದರು. ಇದರಿಂದ ನನಗೆ ಎರಡು ರೀತಿಯ ಪ್ರಯೋಜನವಾಗುತ್ತಿತ್ತು. ನೊಳಂಬರ ಬಗೆಗಿನ ಮಾಹಿತಿ ಒಂದೆಡೆಯಾದರೆ; ಅಧ್ಯಯನದ ರೀತಿ, ವಿಷಯ ಸಂಗ್ರಹಣೆ, ಬರವಣಿಗೆ, ವಿಶ್ಲೇಷಿಸಬೇಕಾದ ರೀತಿಗಳ ಬಗ್ಗೆ ತಿಳಿಯುತ್ತಿತ್ತು. ಜಯಮ್ಮನವರಂತೆ ನನಗೆಂದೂ ಪ್ರಶ್ನಿಸುವ ಧೈರ್ಯವಾಗುತ್ತಿರಲಿಲ್ಲ. ಕೇಳಬೇಕಾದ ಪ್ರಶ್ನೆಗಳು, ಪುಸ್ತಕಗಳ ಪಟ್ಟಿ ಇತ್ಯಾದಿಗಳನ್ನು ಅವರ ಮುಂದಿಟ್ಟು ಒಮ್ಮೆ ಕೇಳಿದೆನೆಂದರೆ ಮತ್ತೆ ಮೌನವಾಗಿದ್ದುಬಿಡುತ್ತಿದ್ದೆ. ಈಗಲೂ ಅವರ ಮುಂದೆ ಹೆಚ್ಚು ಮಾತನಾಡುವುದೇ ಇಲ್ಲ.

ಇದುವರೆಗೆ ನನ್ನ ಜೀವನದಲ್ಲಿ ದೊರಕಿರುವ 'ಗುರು'ಗಳೆಲ್ಲ ನನ್ನನ್ನು ಒಂದಲ್ಲ ಒಂದು ರೀತಿ ತಿದ್ದಿ ತೀಡಿ ಬೆಳೆಸಿದ್ದಾರೆ. ಒಂದು ರೂಪು ಕೊಟ್ಟಿದ್ದಾರೆ. ಅದರಲ್ಲೂ 'ಶಾಸನಶಾಸ್ತ್ರ' ತರಗತಿಗಳಲ್ಲಿ ದೊರಕಿದ ಗುರುಗಳ ಪಾತ್ರವನ್ನಂತೂ ಮರೆಯುವಂತೆಯೇ ಇಲ್ಲ. ಅವರುಗಳ ಬಗ್ಗೆ ನನ್ನ ನೆನಪಿನ ಭಂಡಾರದಲ್ಲಿ ಹಲವಾರು ಮರೆಯಲಾಗದ ಘಟನೆಗಳಿವೆ. ಸಿಹಿ–ಕಹಿ ಎನ್ನುವ ಜೋಡಿಪದ ಜ್ಞಳಕೆಯ ಅಗತ್ಯ ಇಲ್ಲಿಲ್ಲ. ಕಾರಣ ಕಹಿ ನೆನಪುಗಳೇ ಇಲ್ಲ. ಅವರಿಂದ ಹರಿದ ಜ್ಞಾನಧಾರೆ ನಿರಂತರ ನನ್ನೊಳಗೆ ಪ್ರವಹಿಸುತ್ತಿದೆ. ಲೇಖನಿಯ ಮಿತಿಗೆ ಮೀರಿದ ನನ್ನ ಭಾವನೆಗಳ ಮುಂದೆ ಮಾತು ಕೂಡ ಆಡಂಬರವೆನಿಸುತ್ತದೆ. ಡಾ॥ ದೇವರಕೊಂಡಾರೆಡ್ಡಿಯವರಂತಹ ಸದ್ಗುರುವಿನ ಬಳಿ ಶಿಷ್ಯತ್ವ ಪಡೆಯುವುದೂ ಒಂದು ವಿಶಿಷ್ಟ ಅನುಭವವೇ.



# ರೆಡ್ಡಿ ಮೇಷ್ಟ್ರು ಮತ್ತು ನಾನು

– ಡಾ|| ಬಿ.ಆರ್. ಸತ್ಯನಾರಾಯಣ*

ಕ್ರಿ.ಶ. ೧೯೯೮ರಲ್ಲಿ ನಾನು ಉದ್ಯೋಗಾರ್ಥಿಯಾಗಿ ಬೆಂಗಳೂರಿಗೆ ಬಂದೆ. ಬೆಳಿಗ್ಗೆ ೯ ಗಂಟೆಯಿಂದ ಸಂಜೆ ೪ ಗಂಟೆಯವರೆಗೆ ಮಾತ್ರ ಉದ್ಯೋಗ. ಆಗೊಂದು ದಿನ ದಿನಪತ್ರಿಕೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ 'ಶಾಸನಶಾಸ್ತ್ರ' ತರಗತಿಗಳ ಪ್ರವೇಶಕ್ಕೆ ಅರ್ಜಿ ಆಹ್ವಾನಿಸಿದ್ದು ಕಣ್ಣಿಗೆ ಬಿತ್ತು. ಮುಕ್ತ ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ತರಗತಿಗೆ ದಾಖಲಾಗಿದ್ದ ನನಗೆ, ಅಲ್ಲಿ 'ಶಾಸನಶಾಸ್ತ್ರ' ಎಂಬ ಒಂದು ಪತ್ರಿಕೆಯೇ ಇತ್ತು. ಸಂಜೆಯ ವೇಳೆ ತರಗತಿಗಳು ನಡೆಯುತ್ತಿದ್ದುದರಿಂದ, ಯಾವುದೇ ಯೋಚನೆ ಮಾಡದೆ ನಾನು ಶಾಸನಶಾಸ್ತ್ರ ತರಗತಿಗೆ ಸೇರಿಕೊಂಡುಬಿಟ್ಟೆ. ಅಲ್ಲಿಂದ ಮುಂದೆ ನನ್ನ ಅಧ್ಯಯನ, ಆಸಕ್ತಿ ಮೊದಲಾದವುಗಳು ಬದಲಾಗಿಬಿಟ್ಟವು. ಬಹುಶಃ ನಾನು ಈ ತರಗತಿಗಳಿಗೆ ಹೋಗಿರದಿದ್ದರೆ, ನಾನೊಬ್ಬ ಕೇವಲ ಸಂಬಳದ ಉದ್ಯೋಗಿಯಾಗಿ ಬೆಲ್ಲು-ಜಿಲ್ಲು ನೋಡಿಕೊಂಡು, ಹತ್ತರಲ್ಲಿ ಹನ್ನೊಂದನೆಯವನಾಗಿ ಬಿಡುತ್ತಿದ್ದೆ, ಅಷ್ಟೆ!

ಆ ತರಗತಿಗಳಲ್ಲಿ ಡಾ|| ಕೆ.ಆರ್. ಗಣೇಶ, ಡಾ|| ಪಿ.ವಿ. ಕೃಷ್ಣಮೂರ್ತಿ ಮೊದಲಾದವರು ಮಾಡುತ್ತಿದ್ದ ಪಾಠಗಳಿಂದಾಗಿ ಶಾಸನಕ್ಷೇತ್ರದಲ್ಲಿ ನನ್ನ ಆಸಕ್ತಿ ಹೆಚ್ಚಾಗತೊಡಗಿತು. ಈ ಶಾಸನಗಳ ಅಧ್ಯಯನ ಬಹುಮುಖಿಯಾದದ್ದು. ಅದಕ್ಕೆ ಪೂರಕವಾಗಿ ಇತಿಹಾಸ, ಸಾಹಿತ್ಯ, ದೇವಾಲಯ, ವಾಸ್ತುಶಿಲ್ಪ, ಮೂರ್ತಿಶಿಲ್ಪ ಮೊದಲಾದವುಗಳ ತಿಳುವಳಿಕೆ ಅಗತ್ಯ ಬೇಕಾಗಿರುತ್ತದೆ. ಎರಡು ವರ್ಷಗಳ ಪ್ರವೇಶ ಮತ್ತು ಪ್ರೌಢ ಶಾಸನಶಾಸ್ತ್ರ ತರಗತಿಗಳು ಮುಗಿಯುವಷ್ಟರಲ್ಲಿ ನನ್ನ ಕನ್ನಡ ಎಂ.ಎ. ಕೂಡಾ ಮುಗಿದಿತ್ತು. ಇನ್ನು ಪಿಹೆಚ್.ಡಿ. ಮಾಡುವುದಾದರೆ ಇದೇ ಕ್ಷೇತ್ರದಲ್ಲಿ ಮಾಡಬೇಕು ಎಂಬ ಆಲೋಚನೆಯೂ ಬಂತು. ವಿಷಯಕ್ಕೆ ಹುಡುಕಾಟ ನಡೆಸಿದಾಗ ನನ್ನ ತಲೆಗೆ ಹೊಳೆದಿದ್ದು 'ಸರಸ್ವತಿ'.

ಈ ವಿಷಯವನ್ನು ನನ್ನ ಗೆಳೆಯರು, ಗುರುಗಳು ಎಲ್ಲರೂ ಅನುಮೋದಿಸಿದರು. ಈ ನಡುವೆ ಪ್ರಾಚೀನ ದೇವಾಲಯಗಳಿಗೆ ಭೇಟಿ ನೀಡುವುದು, ಅವುಗಳ ಅಧ್ಯಯನ ನಡೆಸುವುದು, ಪತ್ರಿಕೆಗಳಿಗೆ ಅವುಗಳ ಬಗ್ಗೆ ಲೇಖನ ಬರೆಯುವುದು ಮಾಡುತ್ತಿದ್ದೆ. ಈ ಸಂದರ್ಭದಲ್ಲಿ, ಶಾಸನ ತರಗತಿಯ ಹಿರಿಯ ವಿದ್ಯಾರ್ಥಿಯಾಗಿದ್ದ ಬಿ.ಆರ್. ಭಾರತಿಯವರ ಪರಿಚಯವಾಯಿತು. ಅವರು ಡಾ|| ದೇವರಕೊಂಡಾರೆಡ್ಡಿ ಅವರ ಮಾರ್ಗದರ್ಶನದಲ್ಲಿ ಪಿಹೆಚ್.ಡಿ. ಅಧ್ಯಯನ ಕೈಗೊಂಡಿದ್ದರು. ಅವರ ಮುಖಾಂತರವಾಗಿಯೇ ನನಗೆ 'ನನ್ನ ಮೇಷ್ಟ್ರು' ದೇವರಕೊಂಡಾರೆಡ್ಡಿಯವರ ಪರಿಚಯವಾಗಿದ್ದು. ಭಾರತಿಯವರ ಮಹಾಪ್ರಬಂಧ ಸಲ್ಲಿಕೆಯಾದ ಮೇಲೆ ಮೇಷ್ಟ್ರು ನನಗೆ ಒಂದು ಜವಾಬ್ದಾರಿಯನ್ನು ವಹಿಸುವುದಾಗಿ ಹೇಳಿದರು. ಅದರಂತೆ ಹಂಪಿ ವಿಶ್ವವಿದ್ಯಾಲಯದ ಡಾ.ಬಾಲಸುಬ್ರಹ್ಮಣ್ಯ ಅವರು ದೆಹಲಿ ಐ.ಜಿ.ಎನ್.ಸಿ.ಎ.ಗಾಗಿ ಸಿದ್ಧಪಡಿಸುತ್ತಿದ್ದ ಹಂಪಿ ಶಾಸನಗಳ ಸೂಚಿ ಕೆಲಸದಲ್ಲಿ ಭಾಗವಹಿಸುವಂತೆ ನನಗೆ ತಿಳಿಸಿದರು. ನಾನು ಆ ಕೆಲಸದಲ್ಲಿ ಸಂತೋಷವಾಗಿ ಭಾಗವಹಿಸಿದೆ. ಆ ಸಂದರ್ಭದಲ್ಲಿ ಭಾರತಿಯವರು, 'ಮೇಷ್ಟ್ರನ್ನೇ ಏಕೆ ನೀವು ಗೈಡ್ ಆಗಲು ಕೇಳಬಾರದು' ಎಂಬ ಸಲಹೆಯನ್ನು ಕೊಟ್ಟರು. ಜೊತೆಗೆ, 'ನಾನು ಜನರಲ್ ಕೋಟಾದ ಅಭ್ಯರ್ಥಿ. ನನ್ನ ಮಹಾಪ್ರಬಂಧ ಸಲ್ಲಿಕೆಯಾಗಿರುವುದರಿಂದ ನಿಮ್ಮನ್ನು ಅವರು ಆಯ್ಕೆ ಮಾಡಿಕೊಳ್ಳಬಹುದು ಕೇಳಿ ನೋಡಿ' ಎಂಬ ಸಲಹೆಯನ್ನೂ ಕೊಟ್ಟರು.

ಬೆಂಗಳೂರಿನ ಬಿ.ಎಂ.ಶ್ರೀ. ಪ್ರತಿಷ್ಠಾನದ ಯಾವುದೋ ಸಮಾರಂಭಕ್ಕೆ ಬಂದಿದ್ದ ಮೇಷ್ಟ್ರಿಗೆ ವಿಷಯ ತಿಳಿಸಿದೆ. ಅವರು ಎಲ್ಲವನ್ನೂ ನಿಧಾನವಾಗಿ ಕೇಳಿಸಿಕೊಂಡು, 'ನನ್ನದು ಶಾಸನಶಾಸ್ತ್ರ ವಿಭಾಗವಾಗಿರುವುದರಿಂದ, ನಿಮ್ಮ ಅಧ್ಯಯನ ಆಂಶಿಕವಾಗಿಯಾದರೂ ಶಾಸನಕ್ಷೇತ್ರಕ್ಕೆ ಸಂಬಂಧಿಸಿದ್ದಾಗಿರಬೇಕಾಗುತ್ತದೆ. ಆದ್ದರಿಂದ ಶಾಸನಗಳಲ್ಲಿ ಸರಸ್ವತಿಯ ವಿಷಯ ಬಂದಿದೆಯೇ? ಅದು ಒಂದು ಅಧ್ಯಾಯವಾಗುವಷ್ಟು ಇದೆಯೇ? ಎಂಬುದನ್ನು ಪರಿಶೀಲಿಸಿ ತಿಳಿಸಿ. ನೋಡೋಣ' ಎಂದು ಹೇಳಿದರು. ನಾನು ಅಲ್ಲಿಂದ ಮೂರ್ನಾಲ್ಕು ತಿಂಗಳು ಕೆಲಸ ಮಾಡಿ ಶಾಸನಗಳಲ್ಲಿ ವ್ಯಕ್ತವಾಗಿದ್ದ ಸರಸ್ವತಿಗೆ ಸಂಬಂಧಿಸಿದ ವಿಷಯಗಳನ್ನು ಸಂಗ್ರಹಿಸಿ ಮೇಷ್ಟ್ರ ಗಮನಕ್ಕೆ ತಂದೆ. ಆಗ ಅವರು ಮಾರ್ಗದರ್ಶಕರಾಗಲು ತಮ್ಮ ಒಪ್ಪಿಗೆ ಸೂಚಿಸಿ, ವಿಶ್ವವಿದ್ಯಾಲಯಕ್ಕೆ ಅರ್ಜಿ ಸಲ್ಲಿಸಲು ಹೇಳಿದರು.

---

* ಗ್ರಂಥಪಾಲಕರು, ಸುರಾನಾ ಪದವಿ ಕಾಲೇಜು, ಜಯನಗರ ಬೆಂಗಳೂರು.

ಎಲ್ಲ ಮಾರ್ಗದರ್ಶಕರಂತೆ ಅವರೂ ನನಗೆ ಮಾರ್ಗದರ್ಶನ ಮಾಡಿದರು ಎಂದರೆ ಅವರ ವ್ಯಕ್ತಿತ್ವಕ್ಕೆ ನಾನು ಅಪಚಾರವೆಸಗಿದಂತೆ. ಮಾರ್ಗದರ್ಶಕರಾಗಿದ್ದಂತೆ ಒಬ್ಬ ವ್ಯಕ್ತಿಯಾಗಿಯೂ ಅವರು ನನಗೆ ಮುಖ್ಯರು. ಅವರು ನನಗೆ ಮೊದಲು ನೀಡಿದ ಸಲಹೆಯೇ, 'ಉತ್ಸಾಹದಲ್ಲಿ ಸಿಕ್ಕಾಪಟ್ಟೆ ದುಡ್ಡು ಖರ್ಚು ಮಾಡಲು ಹೋಗಬೇಡಿ' ಎಂಬುದಾಗಿತ್ತು. ಸ್ವತಃ ಅವರೇ ಹಂಪಿಯಿಂದ ಅರ್ಜಿಯನ್ನು ಕೊರಿಯರ್ ಮೂಲಕ ಕಳುಹಿಸಿಕೊಟ್ಟಿದ್ದರು. ಸಣ್ಣ ವಿಚಾರಗಳಿಗೂ ಅವರು ಮಹತ್ವ ಕೊಡುತ್ತಿದ್ದರು. ಮೊದಲ ಬಾರಿ ನಾನು ಪ್ರವೇಶ ಮತ್ತು ಮೌಖಿಕ ಪರೀಕ್ಷೆಗಾಗಿ ಹಂಪಿಗೆ ಹೊರಟು ನಿಂತಾಗ ಹೇಗೆ ಬರಬೇಕೆಂದು ಎಲ್ಲವನ್ನೂ ಫೋನಿನಲ್ಲಿಯೇ ತಿಳಿಸಿದ್ದರು. 'ರೈಲಿನಲ್ಲಿ ಬರುವುದಾದರೆ, ಒಂದು ವಾರ ಮುಂಚಿತವಾಗಿಯೇ ರಿಸರ್ವೇಷನ್ ಮಾಡಿಸಿಕೊಳ್ಳಿ. ಹೊಸಪೇಟೆ ರೈಲ್ವೆ ನಿಲ್ದಾಣದಲ್ಲಿ ಇಳಿದು, ಒಂದು ಆಟೋ ಹಿಡಿದು ಬಸ್ ಸ್ಟ್ಯಾಂಡಿಗೆ ಬನ್ನಿ. ಹತ್ತು ರೂಪಾಯಿ ಆಟೋಗೆ ತೆಗೆದುಕೊಳ್ಳುತ್ತಾರೆ. ಬೆಳಿಗ್ಗೆ ಏಳೂವರೆ ಮತ್ತು ಒಂಬತ್ತಕ್ಕೆ ವಿದ್ಯಾರಣ್ಯಕ್ಕೆ ಬಸ್‌ಗಳು ಹೊರಡುತ್ತವೆ. ಬಸ್ ತಪ್ಪಿ ಹೋದರೆ, ಕಮಲಾಪುರಕ್ಕೆ ಬೇರೆ ಯಾವುದಾದರೂ ಬಸ್ ಹಿಡಿದು ಬಂದು, ಅಲ್ಲಿಂದ ಆಟೋದಲ್ಲಿ ಬಂದುಬಿಡಿ. ಆಟೋದವರು ಕೇಳುವಾಗ ಹೆಚ್ಚಿಗೆ ಕೇಳುತ್ತಾರೆ ಮೂವತ್ತು ರೂಪಾಯಿಗೆ ಒಪ್ಪಿಕೊಳ್ಳುತ್ತಾರೆ. ನೇರವಾಗಿ ನನ್ನ ಕ್ವಾರ್ಟ್ರಸಿಗೆ ಬನ್ನಿ. ಆಟೋದವರಿಗೆ ನನ್ನ ಹೆಸರು ಹೇಳಿದರೆ ಅವರೇ ನನ್ನ ಮನೆಯವರೆಗೆ ಕರೆದುಕೊಂಡು ಬರುತ್ತಾರೆ' – ಹೀಗೆ ಸಣ್ಣ ಸಣ್ಣ ವಿಷಯವನ್ನೂ ತಿಳಿಸಿ ನನಗೆ ಒಂದು ಸಣ್ಣ ತೊಂದರೆಯೂ ಆಗದಂತೆ ನೋಡಿಕೊಂಡರು. 'ಈ ಪ್ರವೇಶ ಪರೀಕ್ಷೆ, ಮೌಖಿಕ ಪರೀಕ್ಷೆ ಎಲ್ಲದರ ಬಗ್ಗೆ ಅಷ್ಟೊಂದು ತಲೆ ಕೆಡಿಸಿಕೊಳ್ಳಬೇಡಿ. ನಿಮಗೆ ಈಗಾಗಲೇ ಶಾಸನಶಾಸ್ತ್ರದಲ್ಲಿ ಸಾಕಷ್ಟು ಪರಿಶ್ರಮವಿರುವುದರಿಂದ ಇದು ಕಷ್ಟವಾಗುವುದಿಲ್ಲ' ಎಂದು ಹೇಳಿದರು.

ಎಲ್ಲವನ್ನು ಮುಗಿಸಿ ಸಂಜೆಯ ವೇಳೆಗೆ ತಾತ್ಕಾಲಿಕ ಪ್ರವೇಶಧನವನ್ನು ಕಟ್ಟಿ ನಾನು ಊರಿಗೆ ಬಂದು ಬಿಟ್ಟೆ. ನಂತರ ಕೆಲ ತಿಂಗಳುಗಳಲ್ಲಿ ನನ್ನ ಪ್ರವೇಶ ಅಧಿಕೃತವಾಗಿ ಘೋಷಿಸಲ್ಪಟ್ಟಿತ್ತು. ಆಗ ನಾನು ಮತ್ತೆ ಹಂಪೆಗೆ ಹೋಗಿ ಪ್ರವೇಶ ಶುಲ್ಕವನ್ನು ಕಟ್ಟಬೇಕಾಗಿತ್ತು. ಆದರೆ ಮೇಷ್ಟ್ರು, 'ಅದಕ್ಕಾಗಿ ನೀವು ಇಲ್ಲಿಯವರೆಗೆ ಬರಬೇಕಾಗಿಲ್ಲ. ಡಿ.ಡಿ. ತೆಗೆದು ನನ್ನ ವಿಳಾಸಕ್ಕೆ ಕಳುಹಿಸಿ. ನಾನೇ ಅದನ್ನು ಅಧ್ಯಯನಾಂಗಕ್ಕೆ ತಲುಪಿಸಿ, ಅದರ ರಸೀತಿಯನ್ನು ನಿಮಗೆ ತಲುಪಿಸುತ್ತೇನೆ' ಎಂದು ನನಗೆ ಆಗಬಹುದಾಗಿದ್ದ ಆರ್ಥಿಕ ಹೊರೆಯನ್ನು ತಪ್ಪಿಸಿಬಿಟ್ಟರು. ಮುಂದೆಯೂ ಅಷ್ಟೆ, ಅರ್ಧವಾರ್ಷಿಕ ವರದಿಗಳನ್ನು ಅಂಚೆ ಮುಖಾಂತರ ತರಿಸಿಕೊಂಡು ಅಥವಾ ಅವರು ಬೆಂಗಳೂರಿಗೆ ಬಂದಾಗ ಸ್ವತಃ ತಾವೇ ತೆಗೆದುಕೊಂಡು ಅದನ್ನು ಅಧ್ಯಯನಾಂಗಕ್ಕೆ ಸಲ್ಲಿಸಿಬಿಡುತ್ತಿದ್ದರು. ಇದರಿಂದಾಗಿ ಆಗ 'ತೀರಾ ಕಡಿಮೆ' ಸಂಬಳದವನಾಗಿದ್ದ ನನಗೆ ಆರ್ಥಿಕವಾಗಿ ಹೊಡೆತ ಬೀಳುವುದನ್ನು ತಪ್ಪಿಸುತ್ತಿದ್ದರು. ಮಧ್ಯೆ ಒಂದು ಬಾರಿ ನಾನು ಹಂಪೆಗೆ ಹೋಗಿದ್ದೆ. ಅದೂ ನನ್ನ ಪರಿವಾರದ ಸಮೇತ. ಜೊತೆಗೆ ನಾಲ್ಕೈದು ಊರುಗಳಲ್ಲಿ ಕ್ಷೇತ್ರಕಾರ್ಯದ ಯೋಜನೆ ಬೇರೆ. ಅವರು ದೆಹಲಿಗೋ ಅಥವಾ ಬೇರೆಲ್ಲಿಗೋ ಹೊರಟಿದ್ದರು. ಆದರೆ ತಮ್ಮ ಮನೆಯನ್ನೇ ಪೂರ್ತಿ ನಮಗೆ ಬಿಟ್ಟು ಕೊಟ್ಟು ನಾವು ಅಲ್ಲಿರುವವರೆಗೆ ಅಲ್ಲಿಯೇ ಉಳಿಯುವಂತೆ ತಿಳಿಸಿ ಹೋಗಿದ್ದರು. ಅವರ ಮನೆಯ ಹಿಂದೆ ಅವರೇ ಸ್ವತಃ ಕೈಯಾರೆ ಬೆಳೆಸಿದ್ದ ಹಲವಾರು ತರಕಾರಿಗಳನ್ನು ಬಳಸಿಕೊಳ್ಳುವಂತೆ ಹೇಳಿ ಹೋಗಿದ್ದರು!

ಮೇಷ್ಟ್ರು ತುಂಬಾ ಸರಳ ಜೀವಿ. ಅದು ಅವರ ಜೀವನ ವಿಧಾನದಲ್ಲೂ ಅಡಕವಾಗಿತ್ತು. ಅವರು ಬೆಂಗಳೂರಿಗೆ ಬಂದಾಗ ಮಾತ್ರ ನನ್ನ ಅವರ ಭೇಟಿ. ಮಿಥಿಕ್ ಸೊಸೈಟಿ, ಬಿಎಂಶ್ರೀ ಪ್ರತಿಷ್ಠಾನ ಅಥವಾ ಸಾಹಿತ್ಯ ಪರಿಷತ್ ಗ್ರಂಥಾಲಯದಲ್ಲಿ ಕುಳಿತು ಚರ್ಚೆ ಮಾಡುತ್ತಿದ್ದವು. ಕೆಲವೊಮ್ಮೆ ಅವರ ಮನೆಗೆ ನನ್ನನ್ನು ಆಹ್ವಾನಿಸಿ, ಊಟ ತಿಂಡಿ ಎಲ್ಲವನ್ನೂ ಅವರೇ ಕೊಟ್ಟಿದ್ದಾರೆ. ಒಂದೆರಡು ಬಾರಿ ನಮ್ಮ ಮನೆಗೇ ಬಂದು, ಗಂಟೆಗಟ್ಟಲೆ ಇದ್ದು, ಅಧ್ಯಯನದ ಪ್ರಗತಿಯನ್ನು ಪರಿಶೀಲಿಸಿ, ಚರ್ಚಿಸಿ, ಸಲಹೆಗಳನ್ನು ಕೊಟ್ಟು ಹೊರಡುತ್ತಿದ್ದರು. ಅವರಿಗೆ 'ಕಾಂಗ್ರೆಸ್ ಕಡ್ಲೆಬೀಜ' ಎಂದರೆ ಇಷ್ಟ. ಜೊತೆಗೆ ಕಾಫಿ. ಇವೆರಡನ್ನೂ ಸಂತೋಷವಾಗಿ ಸ್ವೀಕರಿಸುತ್ತಿದ್ದರು. ಹೊರಡುವಾಗ ನಾನು 'ಸಾರ್, ನಾನು ಬೈಕಿನಲ್ಲಿ ಬಿಡುತ್ತೇನೆ' ಎಂದರೆ, 'ಅಯ್ಯೋ ಈ ಟ್ರಾಫಿಕ್ಕಿನಲ್ಲಿ ಸುಮ್ನೆ ಏಕೆ ತೊಂದರೆ ತಗೋತೀರಿ. ಹತ್ರದ ಬಸ್‌ಸ್ಟ್ಯಾಂಡಿಗೆ ಬಿಡಿ ಸಾಕು' ಎನ್ನುತ್ತಿದ್ದರು.

ನನ್ನ ಪ್ರವೇಶ ಅಧಿಕೃತವಾಗಿ ಘೋಷಣೆಯಾದ ಮೇಲೆ, ಒಂದು ವಾರದ ಕಾಲ ವಿಶ್ವವಿದ್ಯಾಲಯದಲ್ಲಿ ಅಧ್ಯಯನಾಂಗದವರು ನಡೆಸುವ ಕಾರ್ಯಾಗಾರದಲ್ಲಿ ಭಾಗವಹಿಸಬೇಕಾಗಿತ್ತು. ಆಗ ಪೂರ್ತಿ ನನ್ನನ್ನು ಅವರ ಮನೆಯಲ್ಲಿಯೇ ಇರಿಸಿಕೊಂಡಿದ್ದರು.

ನನ್ನ ಮಹಾಪ್ರಬಂಧ ಸಿದ್ಧವಾಗಿ ಅದನ್ನು ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಹೋಗಬೇಕಾಗಿತ್ತು. ಆಗ ನನ್ನ ಮನೆ ನಿರ್ಮಾಣವೂ ನಡೆಯುತ್ತಿತ್ತು. ಆಗಲೂ ಅವರು 'ಅಲ್ಲಿ ನಿಮಗೆ ಕೆಲಸವಿದ್ದರೆ, ಕೊರಿಯರ್‌ನಲ್ಲಿ ಕಳುಹಿಸಿ ಬಿಡಿ. ಸುಮ್ಮನೆ

ನೀವೇಕೆ ಹೊತ್ತುಕೊಂಡು ಬರುತ್ತೀರಿ' ಎಂದಿದ್ದರು. ಆದರೂ ನಾನು ಸ್ವತಃ ಮಹಾಪ್ರಬಂಧದ ಸಂಪುಟಗಳನ್ನು ತೆಗೆದುಕೊಂಡು ಹೋಗಿದ್ದೆ. ರೈಲ್ವೆ ರಿಸರ್ವೇಷನ್ ಸಿಗದೆ ಬಸ್ಸಿನಲ್ಲಿ ಹೋಗಿದ್ದೆ. ನಾನು ಹೋಗುವಷ್ಟರಲ್ಲಿ ಸೀಗಡಿ ಸಾರು ಮಾಡಿ, ಕಾಯುತ್ತಾ ಕುಳಿತಿದ್ದರು.

ಕೇವಲ ಪಿಹೆಚ್.ಡಿ. ಅಧ್ಯಯನಕ್ಕೆ ಮಾತ್ರ ಅವರು ನನ್ನ ಮಾರ್ಗದರ್ಶಕರಾಗಿರಲಿಲ್ಲ. ನಾನು ಮನೆ ಕಟ್ಟಿಸುವ ವಿಚಾರ ತಿಳಿಸಿದಾಗಲೂ ಹಲವಾರು ಸಲಹೆ ಸೂಚನೆಗಳನ್ನು ಕೊಟ್ಟರು. 'ಲಕ್ಸುರಿ, ಸ್ಟ್ಯಾಂಡರ್ಡ್ ಎಂದು ಅನಾವಶ್ಯಕವಾಗಿ ದುಡ್ಡು ಸುರಿಯಬೇಡಿ. ನಾವು ಕಟ್ಟುವ ಮನೆ ನಮ್ಮ ತಲೆಮಾರಿಗಷ್ಟೆ, ಮುಂದಿನ ತಲೆಮಾರಿನವರಿಗೆ ಅದು ಹಳೆಯದಾಗುತ್ತದೆ' ಎಂದು ಹೇಳಿ ಬೆಂಗಳೂರಿನಲ್ಲಿ ಕೆಡವುತ್ತಿರುವ ಒಳ್ಳೊಳ್ಳೆಯ ಬಂಗಲೆಗಳ ಉದಾಹರಣೆಗಳನ್ನು ಕೊಟ್ಟಿದ್ದರು.

ನನ್ನ ಮೌಖಿಕ ಪರೀಕ್ಷೆ ನಡೆಯುವಷ್ಟರಲ್ಲಿ ಅವರು ನಿವೃತ್ತರಾಗಿದ್ದರು. ಗಿಡಗಳನ್ನು ಬೆಳೆಸುವುದರಲ್ಲಿ ಅವರಿಗೆ ವಿಶೇಷ ಪ್ರೀತಿ. ವಿಶ್ವವಿದ್ಯಾಲಯದ ಆವರಣದಲ್ಲಿನ ತೋಟಗಾರಿಕೆಯ ಉಸ್ತುವಾರಿಯನ್ನೂ ಕೆಲವು ವರ್ಷಗಳ ಕಾಲ ಅವರು ನಿರ್ವಹಿಸಿದ್ದುಂಟು. ದಾರಿಯಲ್ಲಿ ನಡೆದುಕೊಂಡು ಹೋಗುವಾಗ ಯಾವುದಾದರೂ ಗಿಡದ ಮುಂದೆ ನಿಂತುಕೊಂಡು, ಅದನ್ನು ಎಲ್ಲಿಂದ ತರಿಸಿದೆ, ಅದರ ವಿಶೇಷವೇನು ಮೊದಲಾದವುಗಳನ್ನು ನನಗೆ ಹೇಳುತ್ತಿದ್ದರು. ಇಂದು ಹಂಪಿ ವಿಶ್ವವಿದ್ಯಾಲಯದ ಆವರಣದಲ್ಲಿ ಹಸುರು ಕಾಣುತ್ತಿರುವುದಕ್ಕೆ ಅತಿಮುಖ್ಯ ಕಾರಣಕರ್ತರು ನಮ್ಮ ಮೇಷ್ಟ್ರು. ಅಲ್ಲಿನ ಕೆಲಸಗಾರರೊಂದಿಗೆ ಸ್ನೇಹದಿಂದ ವರ್ತಿಸುತ್ತಾ, ಕೆಲಸ ಮಾಡಿಸುತ್ತಿದ್ದುದನ್ನು ನಾನು ಹಲವಾರು ಬಾರಿ ಕಣ್ಣಾರೆ ಕಂಡಿದ್ದೇನೆ.

ನನ್ನ ಮೌಖಿಕ ಪರೀಕ್ಷೆಯಲ್ಲಿ ಒಬ್ಬ ಪ್ರಾಧ್ಯಾಪಕರು ಧರ್ಮಸಂಬಂಧವಾದ ಪ್ರಶ್ನೆಯನ್ನು ಎತ್ತಿದ್ದರಿಂದ, ಸ್ವತಃ ಮಾನ್ಯ ಕುಲಪತಿಯವರೇ ಆ ಪ್ರಶ್ನೆಯನ್ನು ನಿರಾಕರಿಸಿ ಮುಂದೆ ಬೇರೆ ಪ್ರಶ್ನೆಗೆ ಉತ್ತರಿಸುವಂತೆ ಹೇಳಿಬಿಟ್ಟರು! ಎಲ್ಲಾ ಮುಗಿದ ಮೇಲೆ, ಮೇಷ್ಟ್ರಿಗೆ ತುಂಬಾ ಬೇಸರವಾಗಿತ್ತು. 'ನಿಮಗೆ ಗೊತ್ತಿರುವ, ಬರೆದಿರುವ ವಿಷಯವನ್ನು ಹೇಳುವ ಅವಕಾಶ ಇಲ್ಲವಾಯಿತು' ಎಂದು ಬೇಸರಪಟ್ಟುಕೊಂಡರು.

ಘಟಿಕೋತ್ಸವದ ದಿನ ಅವರು ಊರಿನಲ್ಲಿ ಇರಲಿಲ್ಲ. ಆದರೂ ಅವರೇ ಫೋನ್ ಮಾಡಿ, ಅಲ್ಲಿ ಕೀ ಕೊಟ್ಟು ಬಂದಿರುವ, ಅಲ್ಲಿರುವ ವ್ಯಕ್ತಿಗೆ ನೀರು ತುಂಬಿಸಿಡಲು ಹೇಳಿ ಬಂದಿರುವ ವಿಚಾರವನ್ನು ತಿಳಿಸಿದ್ದರು. ಅಂದು ಅವರು ಅಲ್ಲಿಲ್ಲದಿದ್ದರೂ ನಾನು ಹೋಗಿ, ಆರಾಮವಾಗಿ ಘಟಿಕೋತ್ಸವದಲ್ಲಿ ಭಾಗವಹಿಸಿ ಬಂದಿದ್ದೆ. ಹಂಪೆಯಲ್ಲಿದ್ದ ದಿನಗಳಲ್ಲಿ ನನ್ನ ಮನೆಯಿಂದ ಹೊರಗೆ ಇದ್ದೇನೆ ಎಂಬ ಭಾವನೆ ನನಗೆಂದೂ ಬರಲೇ ಇಲ್ಲ.

ಗುರು–ಶಿಷ್ಯ ಸಂಬಂಧದ ನಡುವೆ ಒಂದು ಆರೋಗ್ಯಕರ ಅಂತರವನ್ನು ಕಾಪಾಡಿಕೊಂಡೇ, ನನಗೆ ಅತ್ಯಂತ ಪ್ರೀತಿಯನ್ನು, ವಾತ್ಸಲ್ಯವನ್ನು ತೋರಿದ ನನ್ನ ಮೇಷ್ಟ್ರು ಒಬ್ಬ ವ್ಯಕ್ತಿಯಾಗಿ ನೂರಾರು ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿದ್ದವರು. ಕಮಲಾಪುರದ ಆಟೋ ಹುಡುಗರಿಗೆ, 'ರೆಡ್ಡಿ ಮೇಷ್ಟ್ರ ಮನೆಗೆ' ಅಂದರೆ ಸಾಕು, 'ಓ ಅವ್ರಾ! ಗೊತ್ತು ಬನ್ರಿ ಸರ್' ಎಂದು ಯಾವ ಸಬೂಬು ಹೇಳದೆ, ಚೌಕಾಸಿ ಮಾಡದೆ ಕರೆದುಕೊಂಡು ಹೋಗುತ್ತಿದ್ದರು. ಒಬ್ಬ ಮೇಷ್ಟ್ರು, ವಿಶ್ವವಿದ್ಯಾಲಯದ ಹೊರಗೂ ತನ್ನ ಪ್ರಭಾವವನ್ನು ಬೀರಬಲ್ಲ ಎಂಬುದಕ್ಕೆ ಅತ್ಯಂತ ಉತ್ತಮ ಉದಾಹರಣೆ ನಮ್ಮ 'ರೆಡ್ಡಿ ಮೇಷ್ಟ್ರು'!



# ಸರಳ ನಿಗರ್ವಿ ಗುರು

– ಡಾ॥ ಎಚ್. ಜಯಮ್ಮ ಕರಿಯಣ್ಣ*

೧೯೭೮ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ನಾಡೋಜ ಶ್ರೀ ಜಿ.ನಾರಾಯಣ ಅವರು, ಅನೇಕ ಕನ್ನಡದ ಕಾರ್ಯಗಳನ್ನು ಹಮ್ಮಿಕೊಂಡು ಕೆಲಸ ಮಾಡುತ್ತಿದ್ದರು. ಕನ್ನಡ ಸಾಹಿತ್ಯ ಸಮ್ಮೇಳನವನ್ನು ಹೊರನಾಡಿನವರಿಗೂ ಪರಿಚಯಿಸಬೇಕೆಂಬ ಉದ್ದೇಶದಿಂದ ದೇಶದ ರಾಜಧಾನಿ ದೆಹಲಿಯಲ್ಲಿ ಡಾ॥ ಜಿ.ಪಿ.ರಾಜರತ್ನಂ ಅವರ ಅಧ್ಯಕ್ಷತೆಯಲ್ಲಿ ಆಯೋಜಿಸಿದ್ದರು. ದೂರದ ದೆಹಲಿಯಲ್ಲಿ ಕನ್ನಡದ ಕಹಳೆ ಮೊಳಗುವುದನ್ನು ಕೇಳಲು, ನೋಡಲು ಆಹ್ವಾನಿತ ಸಾಹಿತಿಗಳು, ಕನ್ನಡ ಅಭಿಮಾನಿಗಳಾದ ನನ್ನಂತಹ ಜನಸಾಮಾನ್ಯರು ದೆಹಲಿಗೆ ಹೊರಟೆವು. ಆಗ ಟ್ರೈನಿನಲ್ಲಿ ಪ್ರಯಾಣಿಸುತ್ತಿದ್ದ ಗೆಳೆಯರ ಗುಂಪಿನಲ್ಲಿ ಪರಿಚಯವಾದವರು ದೇವರಕೊಂಡಾರೆಡ್ಡಿಯವರು.

ಅಂದು ನೋಡಿದ ದೇವರಕೊಂಡಾರೆಡ್ಡಿಯವರು ಮತ್ತೊಮ್ಮೆ, ಮಡಿಕೇರಿ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಲು ರಾತ್ರಿ ಮಡಿಕೇರಿ ಬಸ್ ಹತ್ತಿದಾಗ ಅವರ ಗೆಳೆಯರ ಜೊತೆ ಬಂದಿದ್ದರು. ನಾವೆಲ್ಲಾ ಸೇರಿ ಒಟ್ಟಿಗೆ ಪ್ರಯಾಣ ಮಾಡಿದೆವು. ಮಡಿಕೇರಿಯ ಮೂರು ದಿನಗಳ ಸಮ್ಮೇಳನದಲ್ಲಿ ಒಂದು ದಿವಸ ಮಾತ್ರ ಅವರನ್ನು ನೋಡಿದ್ದೆ.

ಇದಾದ ಕೆಲವು ವರ್ಷಗಳ ನಂತರ ಒಂದು ದಿನ ಪ್ರಜಾವಾಣಿ ಪೇಪರ್‌ನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಜಾಹಿರಾತೊಂದು ಕಣ್ಣಿಗೆ ಬಿತ್ತು. ಕುತೂಹಲದಿಂದ ಕಣ್ಣಾಡಿಸಿದೆ. ಶಾಸನ ತರಗತಿ ಪ್ರಾರಂಭವಾಗುವ ವಿಷಯ ಪ್ರಕಟವಾಗಿತ್ತು.

ಮರುದಿನ ಮಧ್ಯಾಹ್ನ ಕಛೇರಿಯ ಊಟದ ಬಿಡುವಿನ ವೇಳೆಯನ್ನು ಬಳಸಿಕೊಂಡು ಪರಿಷತ್ತಿಗೆ ಬಂದು ಅರ್ಜಿ ಭರ್ತಿ ಮಾಡಿ ನಿಗದಿತ ಶುಲ್ಕ ತುಂಬಿ ಶಾಸನ ತರಗತಿಗೆ ಹೆಸರು ನೋಂದಾಯಿಸಿದೆ. ತರಗತಿ ವಾರದಲ್ಲಿ ಮೂರು ದಿನ, ಅದೂ ದಿನ ಬಿಟ್ಟು ದಿನ. ಸಂಜೆ ೬.೩೦ ರಿಂದ ೭.೩೦ರವರೆಗೆ. ಇದರಿಂದ ಕಛೇರಿ ಕೆಲಸಕ್ಕೆ ಯಾವ ಅಡಚಣೆಯೂ ಇರಲಿಲ್ಲ. ನಾನು ತರಗತಿಗೆ ಹೋದ ಮೊದಲ ದಿವಸ ಪ್ರೊ. ಲಕ್ಷ್ಮಣ ತೆಲಗಾವಿಯವರು 'ಚರಿತ್ರ ಶಾಸ್ತ್ರ'ಕ್ಕೆ ಸಂಬಂಧಿಸಿದ ಪಾಠ ಮಾಡಿದರು. 'ಲಿಪಿಶಾಸ್ತ್ರ' ಹೇಳಿಕೊಡಲು ಬಂದವರು ಡಾ॥ ದೇವರಕೊಂಡಾರೆಡ್ಡಿ ಅವರು. 'ಶಾಸನ ಸಾಹಿತ್ಯ'ಕ್ಕೆ ಬಂದವರು ಡಾ॥ ಕೆ.ಆರ್. ಗಣೇಶ್. ದೇವರಕೊಂಡಾರೆಡ್ಡಿಯವರನ್ನು ದೆಹಲಿ ಮತ್ತು ಮಡಿಕೇರಿ ಸಾಹಿತ್ಯ ಸಮ್ಮೇಳನದಲ್ಲಿ ನೋಡಿ ಪರಿಚಯ ಮಾಡಿಕೊಂಡಿದ್ದರೂ ಶಾಸನ ತರಗತಿಯಲ್ಲಿ ಲಿಪಿಶಾಸ್ತ್ರ ಹೇಳಿಕೊಡುವ ಗುರುಗಳೆಂದು ತಿಳಿದಿರಲಿಲ್ಲ. ಪರಿಷತ್ತಿನ ಸಿಬ್ಬಂದಿ ಎಂಬ ಸೂಚನೆ ಮಾತ್ರ ಸಿಕ್ಕಿತ್ತು. ಅಲ್ಲದೆ ಡಾ॥ ಚಿದಾನಂದಮೂರ್ತಿ ಅವರ ಸನ್ಮಾನ ಸಮಾರಂಭ ಹಾಗೂ ಸಂಭಾವನಾ ಗ್ರಂಥ ಸಮಿತಿಯಲ್ಲಿ ನಾನು ಅವರ ಜೊತೆಯಲ್ಲಿ ಕೆಲಸ ಮಾಡಿದ್ದೆ. ರೆಡ್ಡಿ ಸರ್ ಮತ್ತು ತೆಲಗಾವಿ ಸರ್ ಅವರನ್ನು ೧೯೮೮-೮೯ರಿಂದ ನೋಡಿದ್ದೆ. ಆದರೆ ಹೆಚ್ಚಿನ ಪರಿಚಯವಿರಲಿಲ್ಲ. ಅವರು ಪರಿಷತ್ತಿನ ಹಾಗೂ ಇತರೆ ಉಪನ್ಯಾಸ ಕಾರ್ಯಕ್ರಮಗಳಿಗೆ ಬರುವಂತೆ ತಮ್ಮ ಎಲ್ಲಾ ಶಿಷ್ಯರಿಗೂ ಪ್ರೋತ್ಸಾಹ ನೀಡುತ್ತಿದ್ದರು. ಅಂತಹ ಕೆಲವು ಉಪನ್ಯಾಸ ಕಾರ್ಯಕ್ರಮಗಳಲ್ಲಿ ಉಪನ್ಯಾಸಕರಾಗಿ ಬರುತ್ತಿದ್ದ ಈ ಇಬ್ಬರು ಗುರುಗಳನ್ನು ನೋಡುತ್ತಿದ್ದೆ.

ಶಾಸನ ತರಗತಿಗೆ ಸೇರಿದ ಮೇಲೆ ಡಾ॥ ದೇವರಕೊಂಡಾರೆಡ್ಡಿ ಅವರ ವಿದ್ವತ್ತಿನ ಪರಿಚಯವಾಗುತ್ತಾ ಬಂತು. ಅವರು ತರಗತಿಯಲ್ಲಿ ಅಶೋಕನ ಕಾಲದ ಲಿಪಿಯ ಉಗಮದಿಂದ ಆರಂಭಿಸಿ ಅದರ ಹುಟ್ಟು ಮತ್ತು ಬೆಳವಣಿಗೆಯನ್ನು ಬೋರ್ಡ್ ಮೇಲೆ ಬರೆದು ತೋರಿಸುತ್ತಿದ್ದರು. ಅವರ ಕಲಿಸುವ ಉತ್ಸಾಹ, ಆಸಕ್ತಿ ಗಮನಾರ್ಹವಾಗಿದ್ದು ಅವರ ಬಗ್ಗೆ ಅಭಿಮಾನ ಬೆಳೆಯುತ್ತಾ ಹೋಯಿತು. ತರಗತಿಯಲ್ಲಿ ಪಾಠಕ್ಕೆ ಸಂಬಂಧಿಸಿದ ವಿಷಯ ಬಿಟ್ಟು ಬೇರೆ ಯಾವ ವಿಷಯ ಮಾತನಾಡಿದ್ದನ್ನೂ ನಾವು ನೋಡಿಲ್ಲ. ಕೇಳಿದ್ದಕ್ಕೆ ಮಾತ್ರ ಉತ್ತರ ಕೊಟ್ಟು, ತರಗತಿ ಮುಗಿದ ತಕ್ಷಣ ಬೋರ್ಡ್ ಮೇಲೆ ಬರೆದಿರುವುದನ್ನು ಬಟ್ಟೆಯಲ್ಲಿ ಅಳಿಸಿ ತಮ್ಮ ಫೈಲನ್ನು ಹಿಡಿದು ಅಲ್ಲಿಗೆ ಬಂದಿದ್ದ ಅವರ ಸ್ನೇಹಿತರೊಡನೆ ಮಾತನಾಡುತ್ತಾ ಹೋಗುತ್ತಿದ್ದರು.

---

* 'ಆಶೀರ್ವಾದ', ೨೯೩೩, ೧೩ನೆಯ ಮುಖ್ಯರಸ್ತೆ, ವಿಜಯನಗರ ೨ನೆಯ ಹಂತ, ಬೆಂಗಳೂರು-೫೬೦೦೪೦.

'ಶಾಸನ ಪ್ರವೇಶ' ತರಗತಿಯಲ್ಲಿ ಕಲಿಯಬೇಕಾಗಿದ್ದ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರವಾಸ ಕಡ್ಡಾಯವಾಗಿತ್ತು. ಎರಡು ದಿನಗಳ ಶ್ರವಣಬೆಳಗೊಳದ ಪ್ರವಾಸಕ್ಕೆ ನಾವೆಲ್ಲಾ ವಿದ್ಯಾರ್ಥಿಗಳು ಸಡಗರದಿಂದ ಹೊರಟೆವು. ರೆಡ್ಡಿ ಸರ್ ಮತ್ತು ಪಿ.ವಿ.ಕೃಷ್ಣಮೂರ್ತಿ ಸರ್ ನಮ್ಮನ್ನು ಕರೆದುಕೊಂಡು ಹೊರಟರು. ಬೆಟ್ಟ ಹತ್ತಿ ಗೊಮ್ಮಟನ ದರ್ಶನ ಮಾಡಿದ ಮೇಲೆ ಇತರ ಶಿಲ್ಪಗಳ ಮತ್ತು ಅವುಗಳ ಚರಿತ್ರೆಯ ಬಗ್ಗೆ ವೀಕ್ಷಕ ವಿವರಣೆ ಕೊಡುತ್ತಾ ಹೋದರು. ಮರುದಿನ ಚಿಕ್ಕ ಬೆಟ್ಟ ಹತ್ತಲು ಆರಂಭಿಸಿದೆವು. ಬೆಟ್ಟದ ಮೇಲಿನ ಬಂಡೆಯ ಮೇಲೆಲ್ಲಾ ಕೆತ್ತಿರುವ ಶಾಸನಗಳು ಹೆಜ್ಜೆಗೊಂದರಂತೆ ಕಾಣಸಿಕ್ಕಿದವು. ಅಷ್ಟರಲ್ಲಿ ಸುಮಾರಾಗಿ ಲಿಪಿಗಳನ್ನು ಗುರುತಿಸಿ ಓದುವುದನ್ನು ಕಲಿತಿದ್ದ ನಾವು ಒಬ್ಬೊಬ್ಬರು ಒಂದೊಂದು ಕಡೆ ನಿಂತು ಓದುವುದಕ್ಕೆ ಶುರು ಮಾಡಿದೆವು. ಆದರೆ ರೆಡ್ಡಿ ಮೇಷ್ಟ್ರು, 'ನಿಧಾನವಾಗಿ ಓದುವಿರಂತೆ, ನೋಡುವುದು ಬಹಳವಿದೆ ಬನ್ನಿ' ಎಂದು ನಮ್ಮ ಗುಂಪನ್ನು ಕಟ್ಟಿಕೊಂಡು ಬೆಟ್ಟದ ಮೇಲಿನ ಬಸದಿಗಳ ವಿವರಗಳನ್ನು ನೀಡುತ್ತಾ ಹೋದರು. ಎಲ್ಲಾ ಬಸದಿಗಳ ವಿವರಣೆ, ವಿಷಯದ ಮಾಹಿತಿ ಕೊಟ್ಟ ನಂತರ ಶಾಸನದ ಪ್ರತಿ ತೆಗೆಯುವ ವಿಧಾನವನ್ನು ತೋರಿಸಿ, ನೀವು ಈಗ ಪ್ರತಿ ತೆಗೆಯಿರಿ ಎಂದು ೪-೫ ಜನರ ಒಂದೊಂದು ಗುಂಪು ಮಾಡಿಬಿಟ್ಟರು. ಕಾಲಿಟ್ಟ ಕಡೆ ಶಾಸನಗಳನ್ನು ನೋಡಿದ ನನಗೆ ಇದು ಬರೀ ಬೆಟ್ಟವಲ್ಲ ಶಾಸನಗಳ ತೋಟವೆನ್ನಿಸಿತು. ರೆಡ್ಡಿ ಸರ್ ಅವರು ಸಹನೆಯಿಂದ ನೀಡುತ್ತಿದ್ದ ವಿಶ್ಲೇಷಣೆ, ವಿವರಣೆಗೆ ವಿದ್ಯಾರ್ಥಿಗಳ ಕುತೂಹಲ ಕೆರಳುತ್ತಿತ್ತು. ನಾವು ಕೇಳಿದ ಪ್ರಶ್ನೆಗಳಿಗೆ ಸಮಂಜಸ ಉತ್ತರ ಕೊಟ್ಟು ನಮ್ಮನ್ನು ತಣಿಸುತ್ತಿದ್ದರು.

ನಾನು ಇತಿಹಾಸ ಅಕಾಡೆಮಿಯ ಸದಸ್ಯಳಾದ ಮೇಲೆ, ಅವರೊಡನೆ ಅಕಾಡೆಮಿ ಏರ್ಪಡಿಸಿದ ಸಮ್ಮೇಳನಗಳಲ್ಲಿ ಭಾಗವಹಿಸಿ, ಅನೇಕ ಸ್ಥಳಗಳಿಗೆ ಭೇಟಿಕೊಟ್ಟಿದ್ದೇನೆ. ಹಾಗೆಯೇ ಬೆಳಗಾವಿಯ ಅಕಾಡೆಮಿ ಸೆಮಿನಾರ್ ಮುಗಿಸಿ ಹಿಡಕಲ್ ಡ್ಯಾಂನಲ್ಲಿ ಕೆಲಸ ಮಾಡುತ್ತಿದ್ದ, ನನಗೆ ಪರಿಚಯವಿದ್ದ ಕುಟುಂಬದ ಭೇಟಿಗೆಂದು ಹೋದೆ. ಅವರೊಡನೆ ಅಲ್ಲಿ ಮುಳುಗಡೆಯಾಗಿರುವ ದೇವಸ್ಥಾನಗಳ ಬಗ್ಗೆ ಮಾತನಾಡುವಾಗ ಅವರು, 'ಈಗ ಬಹುತೇಕ ಹಳೆಯ ಹಳ್ಳಿಗಳೆಲ್ಲಾ ಮುಳುಗಿ ಹೋಗಿವೆ. ಆದರೆ ಹತ್ತಿರದಲ್ಲಿ ಒಂದು ಹಳೆಯ ಶಿಲ್ಪವಿದೆ ನೋಡಿ ಬನ್ನಿ' ಎಂದು ಕರೆದೊಯ್ದರು. ನೋಡಿದ ಮೇಲೆ ಒಂದು ಸಣ್ಣ ಲೇಖನ ಮಾಡಬಹುದೆಂದು ಅನ್ನಿಸಿ ಆ ಶಿಲ್ಪದ ಫೋಟೋ ತೆಗೆದುಕೊಂಡು ಬಂದೆ. ಆಗ ಆ ಶಿಲ್ಪದ ಬಗ್ಗೆ ಲೇಖನ ಮಾಡುವ ರೀತಿ ತಿಳಿಯದೆ ಯಾರನ್ನು ಕೇಳುವುದು ಎಂದು ಗೊಂದಲದಲ್ಲಿ ಬಿದ್ದೆ. ಇವುಗಳನ್ನು ತೋರಿಸಿ ರೆಡ್ಡಿಯವರ ಸಲಹೆ ಸೂಚನೆ ಪಡೆಯಬಹುದೆಂಬ ಆಶಾಕಿರಣವನ್ನಿಟ್ಟುಕೊಂಡು ಅವರಿಗೆ ಫೋಟೋ ತೋರಿಸಿ ಲೇಖನ ಮಾಡುವ ಬಗ್ಗೆ ಕೇಳಿದೆ. ಅಂದು ಅವರು ಧೈರ್ಯ ತುಂಬಿ ಲೇಖನ ಮಾಡುವ ಬಗ್ಗೆ ಸಂಪೂರ್ಣ ವಿವರಣೆ ನೀಡಿದರು. ಅವರ ಮಾರ್ಗದರ್ಶನದಂತೆ ಲೇಖನ ಬರೆದು ತೋರಿಸಿದೆ. ಲೇಖನವನ್ನು ತಿದ್ದಿ ಸರಿ ಮಾಡಿ ಪ್ರಬಂಧವನ್ನು ಮಂಡಿಸಲು ಸಹಾಯ ಮಾಡಿದರು. ಇದು ನನಗೆ ರೆಡ್ಡಿ ಸರ್ ಮಾಡಿದ ಮೊಟ್ಟ ಮೊದಲ ಸಹಾಯ. ಅಂದಿನಿಂದ ಇಂದಿನವರೆಗೂ ಹಲವಾರು ಲೇಖನ ಅಥವಾ ಪ್ರಬಂಧಗಳನ್ನು ಬರೆಯಲು ಅವರು ಸಹಾಯ ಮಾಡಿದ್ದಾರೆ.

೧೯೯೬-೯೭ರಲ್ಲಿ ಪುನಃ ಮೈಸೂರು ವಿಶ್ವವಿದ್ಯಾಲಯ ಅಂಚೆತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಇತಿಹಾಸ ಎಂ.ಎ. ಪದವಿ ಪಡೆದೆ. ಇದೇ ಅವಧಿಯಲ್ಲಿ ಕಛೇರಿಯಿಂದ ನಿವೃತ್ತಿಯನ್ನು ಪಡೆದೆ. ಏನು ಮಾಡಬಹುದು, ಸುಮ್ಮನೆ ಕಾಲ ಕಳೆಯುವ ಮನಸಿರಲಿಲ್ಲ. ಪಿಎಚ್.ಡಿ. ಯಾಕೆ ಮಾಡಬಾರದು ಎಂಬ ಆಲೋಚನೆ ಬಂದರೂ ಸಂಕೋಚದಿಂದ ಯಾರನ್ನೂ ಕೇಳಲಾಗದೆ ಒಂದು ವರ್ಷ ಹಾಗೇ ಕಳೆದುಬಿಟ್ಟೆ. ನಂತರ 'ರೆಡ್ಡಿ ಸರ್'. ಅವರಿಗೆ ಫೋನ್ ಮಾಡಿ ವಿಚಾರಿಸಿದಾಗ, 'ನಿಮಗೆ ಡಾಕ್ಟರೇಟ್‌ಗಾಗಿ ಪದವಿ ಬೇಕೆ ಅಥವಾ ಆಸಕ್ತಿಯಿಂದ ಜ್ಞಾನಾರ್ಜನೆಗಾಗಿ ಮಾಡುವಿರಾ? ನಿಮ್ಮ ಸ್ಪಷ್ಟ ಅಭಿಪ್ರಾಯವನ್ನು ತಿಳಿಸಿ' ಎಂದರು. "ಕನ್ನಡ ಎಂ.ಎ. ಮಾಡುವಾಗಲೂ ನನ್ನ ಮೇಲಧಿಕಾರಿಗಳು 'ಪ್ರಮೋಷನ್‌ಗಾಗಿ ಮಾಡುವಿರಾ?' ಎಂದು ಕೇಳಿದ್ದರು. ಅವರಿಗೆ ಅಂದು 'ಬಡ್ತಿಗಿಂತ ಜ್ಞಾನಾರ್ಜನೆಗಾಗಿ ಕಲಿಯುತ್ತೇನೆ' ಎಂದು ಹೇಳಿದ್ದೆ. ನಿಮಗೂ ಅದೇ ಉತ್ತರ. ನಾನು ಕಲಿಯಬೇಕು ಎಂಬ ಆಸಕ್ತಿಯ ವಿನಾ ಮತ್ತೇನಿಲ್ಲ" ಎಂದಾಗ ಸಮಾಧಾನದಿಂದ ೨-೩ ವಿಷಯಗಳ ಬಗ್ಗೆ ಚರ್ಚಿಸಿದರು. ಅವರು ಕೊಟ್ಟ ವಿಷಯಗಳಲ್ಲಿ 'ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡೆ.

ವಿಶ್ವವಿದ್ಯಾಲಯಕ್ಕೆ ಶುಲ್ಕ ಕಟ್ಟುವುದರಿಂದ ಹಿಡಿದು ಸಂಶೋಧನೆಗೆ ಸಂಬಂಧಿಸಿದಂತೆ ವರದಿ ಸಲ್ಲಿಸುವ ಬಗ್ಗೆ, ನಿಗದಿತ ಅವಧಿಯಲ್ಲಿ ಕಳಿಸುವಂತೆ, ಮುಂಗಡವಾಗಿ ಸೂಚನೆ, ಎಚ್ಚರಿಕೆ ಮತ್ತು ತಿಳುವಳಿಕೆಯನ್ನು ನೀಡುತ್ತಿದ್ದರು. ಕ್ಷೇತ್ರಕಾರ್ಯಕ್ಕೆ ತೊಡಗುವುದಕ್ಕೆ ಮೊದಲು ಅಲ್ಲಿ ನೋಡಿ ಸಂಗ್ರಹಿಸಬೇಕಾದ ಮಾಹಿತಿಗಳ ವಿವರಗಳನ್ನು ನೀಡಿ, ತಮ್ಮ ಮತ್ತೊಬ್ಬ ಶಿಷ್ಯನ ಜೊತೆ ಮಾಡಿ ಕಳಿಸುವವರೆಗೆ ಶ್ರಮ ವಹಿಸಿದ್ದಾರೆ. ಸಂಶೋಧನೆಯ ಅಧ್ಯಾಯಗಳನ್ನು ಬರೆದು

ಕಳಿಸಿದಾಗ ತಪ್ಪುಗಳನ್ನು ತಿದ್ದಿದ್ದಾರೆ ಮತ್ತು ಸೂಕ್ತ ಮಾರ್ಗದರ್ಶನ ನೀಡಿದ್ದಾರೆ. ಅಧ್ಯಾಯಗಳನ್ನು ವಿಂಗಡಿಸಿ ಕಾಲಾನುಕ್ರಮದಲ್ಲಿ ವಿಷಯಗಳನ್ನು ಬರೆಯುವಂತೆ ಸೂಚನೆ ನೀಡಿದ್ದಾರೆ. ಮೂರು ವರ್ಷಗಳಲ್ಲಿ ಮುಗಿಸಲೇಬೇಕೆಂಬ ಷರತ್ತಿನೊಡನೆ ಬರೆಯಲು ಕುಳಿತಾಗ ದಾರಿ ತಪ್ಪುತ್ತಿರುವ ಭಯ ಆವರಿಸಿತು. ಅಂಜಬೇಡಿರೆಂದು ಧೈರ್ಯ ಹೇಳಿ ಆರು ತಿಂಗಳ ಹೆಚ್ಚಿನ ಅವಧಿ ಪಡೆದುಕೊಳ್ಳಲು ತಿಳಿಸಿದರು.

ಇಷ್ಟೆಲ್ಲಾ ಶ್ರಮ ವಹಿಸುತ್ತಿದ್ದುದು ನನಗೊಬ್ಬಳಿಗೇ ಅಲ್ಲ. ನಾನು ಕಂಡಂತೆ ಅವರ ಮನೆಗೆ ಅನೇಕರು ಬಂದು ಅವರ ಆತಿಥ್ಯ ಪಡೆದು ತಮ್ಮ ಸಮಸ್ಯೆಗಳಿಗೆ ಪರಿಹಾರ ಪಡೆದು ಹೋಗುತ್ತಿದ್ದರು. ಇವರಲ್ಲದೆ ಅವರ ಅನೇಕ ಶಿಷ್ಯರು ಅವರ ಮಾರ್ಗದರ್ಶನದಲ್ಲಿ ಅವರ ನೇತೃತ್ವದಲ್ಲಿ ಪಿಎಚ್.ಡಿ. ಪದವಿ ಪಡೆದಿದ್ದಾರೆ. ನನಗೆ ಗೊತ್ತಿರುವಂತೆ ನನ್ನ ಜೊತೆಯಲ್ಲಿದ್ದ ಶ್ರೀಮತಿ ಭಾರತಿಯವರೂ ಅವರಲ್ಲೊಬ್ಬರು. ರೆಡ್ಡಿ ಸರ್ ಮನೆಗೆ ಬಾರದ ಸ್ನೇಹಿತರು, ಶಿಷ್ಯರು ಇಲ್ಲವೆಂದೇ ಕಾಣಿಸುತ್ತದೆ. ಕಾರಣ ಅವರ ಸರಳ ಜೀವನ ಶೈಲಿ, ಆತ್ಮವಿಶ್ವಾಸದ ಮಾತುಗಳು, ಪ್ರೋತ್ಸಾಹ ಪೂರ್ವಕವಾದ ನಡೆ–ನುಡಿಗಳಿಂದ ಎಲ್ಲರ ಮನ ಗೆಲ್ಲುತ್ತಿದ್ದರು. ಒಮ್ಮೆ ಇಂಡಾಲಜಿ ವಿದ್ಯಾರ್ಥಿಗಳಾದ ನಾವು ೮–೧೦ ಜನರು, ಮುಖ್ಯಸ್ಥರಾದ ಡಾ॥ ಎಸ್. ನಾಗರಾಜು ಅವರೊಡನೆ ಕ್ಷೇತ್ರಕಾರ್ಯಕ್ಕೆಂದು ಎರಡು ದಿನ ಮೊದಲು ಹೊರಟು ಸುತ್ತಾಡಿಕೊಂಡು ಕಡೆಗೆ ಹಂಪಿ ಕ್ಷೇತ್ರಕ್ಕೆ ಬಂದೆವು. ಅಲ್ಲಿ ನಾವು ಉಳಿಯಲು ವ್ಯವಸ್ಥೆಯಾಗಿರಲಿಲ್ಲ. ಆಗ ಸುಮಾರು ರಾತ್ರಿ ೧೨ ಗಂಟೆ. ನಾನು ದೂರವಾಣಿ ಮುಖಾಂತರ ರೆಡ್ಡಿ ಸರ್ ಅವರನ್ನು ಸಂಪರ್ಕಿಸಿದಾಗ ದಯವಿಟ್ಟು ಬನ್ನಿ ಎಂದರು. ಸುಮಾರು ಹನ್ನೆರಡೂವರೆ ಅಥವಾ ಒಂದು ಗಂಟೆಯ ಹೊತ್ತಿಗೆ ಅವರ ಮನೆ ತಲುಪಿದೆವು. ಎಲ್ಲರನ್ನೂ ಸ್ವಾಗತಿಸಿ, 'ಊಟ ಆಗಿಲ್ಲದಿದ್ದರೆ ಅಡುಗೆ ಮನೆಯಲ್ಲಿ ಎಲ್ಲಾ ಸಾಮಾನು ಇದೆ. ಬೇಡವಾದರೆ ಹಾಲು ಇದೆ. ಕಾಫಿ/ಟೀ ಬೇಕಾದರೂ ಮಾಡಿಕೊಳ್ಳಬಹುದೆ'ಂದು ಅಡುಗೆ ಮನೆ ತೋರಿಸಿದರು. ಇದು ಅವರ ಆದರ–ಆತಿಥ್ಯದ ಸಣ್ಣ ಉದಾಹರಣೆ. ನಾವು ೪ ಜನ ಹೆಣ್ಣು ಮಕ್ಕಳು, ಉಳಿದವರೆಲ್ಲಾ ಗಂಡಸರು. ನಮ್ಮದೇ ರಾಜ್ಯ. ಎಲ್ಲರೂ ಸೇರಿ ಗದ್ದಲ, ಗಲಾಟೆ, ಮಾತು, ಹರಟೆ ಮೊದಲಾದ ತೊಂದರೆ ಕೊಟ್ಟಾಗಲೂ ಒಂದು ಮಾತನ್ನೂ ಹೇಳದೆ ಮಲಗಿದರು.

ಈ ಎಲ್ಲದರ ನಡುವೆ 'ಸರ್'ಗೆ ಸಿಟ್ಟೇ ಬರುವುದಿಲ್ಲವೆಂದುಕೊಂಡಿದ್ದೆ. ನಿಗದಿತ ಅವಧಿಯಲ್ಲಿ 'ಥೀಸಿಸ್' ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿಲ್ಲವೆಂಬ ಕಾರಣಕ್ಕೆ ತಮ್ಮ ಸಿಟ್ಟನ್ನು ಹೊರನೋಟಕ್ಕೆ ವ್ಯಕ್ತಪಡಿಸದೆ ಹೇಳಿದಾಗ ಅವರ ಆದೇಶದಂತೆ ತೆಗೆದುಕೊಂಡ ೬ ತಿಂಗಳ ಅವಧಿಯಲ್ಲಿ ಪ್ರಬಂಧ ಮಂಡಿಸಿದೆ. ಆಗ ತಿಳಿಯಿತು, ಅವರು ಕಾಲಕ್ಕೆ ಎಷ್ಟು ಮಹತ್ವ ಕೊಡುವವರೆಂದು. ಅಂತೂ ದಾರಿಕಾಣದೆ ಕಾಡಿನಲ್ಲಿ ಅಲೆಯುತ್ತಿದ್ದ ವ್ಯಕ್ತಿಗೆ ಸೂಕ್ತ ಮಾರ್ಗದರ್ಶನ, ಸಲಹೆಗಳನ್ನು ಕೊಟ್ಟು ನಾನು ನಿಬಂಧ ಮಂಡಿಸಿ ಪದವಿ ಪಡೆಯಲು ಮಾರ್ಗದರ್ಶಕರಾದರು. ಡಾ॥ ದೇವರಕೊಂಡಾರೆಡ್ಡಿಯವರ ಸರಳತೆ, ಸೌಜನ್ಯ, ಸೌಹಾರ್ದತೆ, ವಿದ್ವತ್ತಿನ ಬಗ್ಗೆ ಹೇಳುತ್ತಾ ಹೋದರೆ ಮುಗಿಯುವುದೇ ಇಲ್ಲ.



# ರೆಡ್ಡಿ ಮೇಷ್ಟ್ರ !

– ಡಾ॥ ತಮಿಳ್ ಸೆಲ್ವಿ*

ಕನ್ನಡ ಸಾಹಿತ್ಯದಲ್ಲಿ ಅತೀವ ಆಸಕ್ತಿಯನ್ನು ಹೊಂದಿದ್ದ ನಾನು ಪದವಿ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗಿನಿಂದಲೂ ಕನ್ನಡ ಸಾಹಿತ್ಯ ಪರಿಷತ್ತಿನ ಸರಸ್ವತಿ ಗ್ರಂಥ ಭಂಡಾರಕ್ಕೆ ಆಗಾಗ ಹೋಗಿ ಬರುತ್ತಿದ್ದೆ. ಹಳಗನ್ನಡ ಸಾಹಿತ್ಯದಲ್ಲಿ ಅತೀವ ಆಸಕ್ತಿಯನ್ನು ಹೊಂದಿದ್ದ ನಾನು ಬಹುಪಾಲು ಕನ್ನಡ ಕವಿಗಳ ಕಾವ್ಯಗಳನ್ನು ಓದಿದ್ದು ಇಲ್ಲಿನ ಗ್ರಂಥಾಲಯದಲ್ಲೇ. ಗೆಳತಿ ಸ್ಮಿತಾ ಪರಿಚಯವಾದದ್ದು ಆಗಲೇ. ನಾವಿಬ್ಬರೂ ಒಂದೇ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದುದೇ ನಮ್ಮ ಪರಿಚಯಕ್ಕೆ ಕಾರಣ. ಆ ದಿನಗಳಲ್ಲೇ ನನಗೆ ಅಲ್ಲಿ 'ಶಾಸನಶಾಸ್ತ್ರ' ತರಗತಿಗಳು ನಡೆಯುತ್ತಿವೆ ಎಂದು ಗೊತ್ತಾದದ್ದು. ಅದಕ್ಕಿಂತ ಮುನ್ನ ನನಗೆ 'ಶಾಸನ' ಎಂಬ ಪದ ಇತಿಹಾಸದ ಪಠ್ಯಗಳಲ್ಲಿ ಓದಿ ಪರಿಚಯವಾಗಿತ್ತೇ ಹೊರತು ಅದರ ಬಗ್ಗೆ ಬೇರೇನೂ ಗೊತ್ತಿರಲಿಲ್ಲ. ಸ್ಮಿತಾ ಆ ತರಗತಿಗಳಿಗೆ ಹಾಜರಾಗುತ್ತಿದ್ದಳು. ಆಕೆ ಪದವಿ ತರಗತಿಯಲ್ಲಿ ನನಗಿಂತ ಒಂದು ವರ್ಷ ಕಿರಿಯಳು. ಅವಳ ತಂದೆಯವರಾದ ಡಾ. ದೇವರಕೊಂಡಾರೆಡ್ಡಿಯವರಯ ಶಾಸನಶಾಸ್ತ್ರ ತರಗತಿಯಲ್ಲಿ ಒಬ್ಬ ಅಧ್ಯಾಪಕರಾಗಿದ್ದುದರಿಂದ ಅವಳಿಗೆ ಸಹಜವಾಗಿಯೇ ಈ ವಿಷಯದಲ್ಲಿ ಆಸಕ್ತಿಯಿತ್ತು. ಹಾಗಾಗಿ ಅವಳು ಕಾಲೇಜಿಗೆ ಸೇರಿದ ಮೇಲೆ ಪರಿಷತ್ತಿನಲ್ಲೂ ಶಾಸನಶಾಸ್ತ್ರ ತರಗತಿಗೆ ಸೇರಿಕೊಂಡಿದ್ದಳು. ಸ್ಮಿತಾ ಮತ್ತು ಅವಳ ಸಹಪಾಠಿಗಳು ಪರಿಷತ್ತಿನ ಗ್ರಂಥಾಲಯದಲ್ಲಿ ಕುಳಿತು, ತರಗತಿಗಳಲ್ಲಿ ಅವರು ಕೇಳಿ–ಓದಿ ತಿಳಿದ ವಿಷಯಗಳನ್ನು ನನಗೆ ವಿವರಿಸುತ್ತಿದ್ದರು. ಮುಂದಿನ ವರ್ಷ ನನ್ನನ್ನೂ ಶಾಸನ ತರಗತಿಗೆ ಸೇರುವಂತೆ ಹುರಿದುಂಬಿಸಿದರು. ಆದರೆ ನನಗೋ ಆ ವಿಷಯವೇ ಹೊಸದು. ಏನೇನೂ ಗೊತ್ತಿಲ್ಲ. ಅಂತಹುದೊಂದು ವಿಷಯವನ್ನು ಆಯ್ಕೆ ಮಾಡಿಕೊಂಡು ತರಗತಿಗೆ ಹಾಜರಾದರೂ ನನಗೇನೂ ಅರ್ಥವಾಗದಿದ್ದರೆ ಎಂಬ ಸಂದೇಹ ನನ್ನದು. ಆದರೂ ಅವರು ಬಿಡುವಂತಿರಲಿಲ್ಲ. ಈ ನಡುವೆ ವಿಲ್ಸನ್ ಗಾರ್ಡನ್‌ನಲ್ಲಿದ್ದ ಸ್ಮಿತಾಳ ಮನೆಗೆ ಒಮ್ಮೆ ಹೋಗಿದ್ದೆ. ಆದರೆ ಅಂದು ಅವಳ ತಂದೆ ಮನೆಯಲ್ಲಿರಲಿಲ್ಲ. ಮುಂದೊಂದು ದಿನ ಪರಿಷತ್ತಿನ ಗ್ರಂಥಾಲಯದಲ್ಲೇ ಅವರ ಭೇಟಿಯಾಯಿತು. ಅವರೂ ಕೂಡ ಮುಂದಿನ ವರ್ಷ ಶಾಸನ ತರಗತಿಗಳಿಗೆ ಹಾಜರಾಗುವಂತೆ ನನ್ನನ್ನು ಹುರಿದಂಬಿಸಿದರು. ಸರಳ ಸ್ವಭಾವದ ಅವರ ಮಾತುಗಳು ನನ್ನಲ್ಲಿ ಸ್ಫೂರ್ತಿಯನ್ನು ತುಂಬಿದವು. ಅಂತೂ ಇವರೆಲ್ಲರ ಒತ್ತಾಯದ ಮೇರೆಗೆ ಪರಿಷತ್ತಿನ ಶಾಸನಶಾಸ್ತ್ರ ತರಗತಿಗೆ ಸೇರಿದ್ದಾಯಿತು.

ಅಷ್ಟು ಹೊತ್ತಿಗಾಗಲೇ ಸ್ಮಿತಾಳ ಮನೆಗೆ ಹಲವಾರು ಸಲ ಹೋಗಿ ಬಂದು ಅವರ ಪರಿಚಯ ಆಪ್ತವಾಗಿತ್ತು. ನಾನು ಮೊದಲು ಅವರನ್ನು ಭೇಟಿಯಾಗಿದ್ದು ೧೯೮೩ರಲ್ಲಿ. ಅಂದಿನಿಂದ ಇಂದಿನವರೆಗೂ ನನ್ನ ಹಾಗೂ ಅವರ ಕುಟುಂಬದ ಸಂಬಂಧ ಗಾಢವಾಗಿ, ಅವ್ಯಾಹತವಾಗಿ ಮುಂದುವರೆದಿದೆ. ಈ ಅವಧಿಯಲ್ಲಿ ಅವರನ್ನು ನಾನು ಹತ್ತಿರದಿಂದ ಕಂಡಿದ್ದೇನೆ. ಅವರಿಂದ ನಾನು ಕಲಿತಿರುವುದು ಅಪಾರ. ನನ್ನನ್ನು ಒಬ್ಬ ವಿದ್ಯಾರ್ಥಿನಿ ಎಂಬುದಕ್ಕಿಂತಲೂ ಹೆಚ್ಚಾಗಿ ತಮ್ಮ ಮಗಳಂತೆ ನೋಡಿಕೊಂಡಿದ್ದಾರೆ. ಹಲವು ವಿಷಯಗಳಲ್ಲಿ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ನನ್ನನ್ನು ತುಂಬ ವಿಶ್ವಾಸದಿಂದ ನಡೆಸಿಕೊಂಡಿದ್ದಾರೆ. ಅದರಿಂದ ವೈಯಕ್ತಿಕವಾಗಿ ನಾನು ತುಂಬ ಫಲ ಗಳಿಸಿದ್ದೇನೆ. ಹಳಗನ್ನಡದಲ್ಲಿ ನನಗೆ ಆಸಕ್ತಿಯಿರುವುದನ್ನು ಕಂಡು ಅವರು ತುಂಬ ಪ್ರೋತ್ಸಾಹಿಸಿದ್ದಾರೆ. ಬೆಂಗಳೂರಿನ ಆಕಾಶವಾಣಿ ಕೇಂದ್ರದಿಂದ ಪ್ರಸಾರವಾಗುತ್ತಿದ್ದ ನನ್ನ ಹಲವಾರು ಕಾರ್ಯಕ್ರಮಗಳನ್ನು ಕೇಳಿ ಮೆಚ್ಚುಗೆಯ ಮಾತುಗಳನ್ನಾಡಿದ್ದನ್ನು ನಾನಿಂದಿಗೂ ಮರೆತಿಲ್ಲ.

ಡಾ॥ ದೇವರಕೊಂಡಾರೆಡ್ಡಿಯವರು ನಮ್ಮ ನಡುವಿರುವ ಅಪರೂಪದ ವ್ಯಕ್ತಿಗಳಲ್ಲೊಬ್ಬರು. ಶಾಸನಶಾಸ್ತ್ರದಲ್ಲಿ ಅಪಾರ ವಿದ್ವತ್ತನ್ನು ಗಳಿಸಿರುವ ವ್ಯಕ್ತಿ. ಲಿಪಿ ಶಾಸ್ತ್ರದಲ್ಲೂ ಅವರಿಗಿರುವ ಜ್ಞಾನ ಅಪಾರವಾದುದು. ಮೂರ್ತಿ ಚಿಕ್ಕದಾದರೂ ಅವರ ಕೀರ್ತಿ ಹಿರಿದು. ನಾನು ಪರಿಷತ್ತಿನಲ್ಲಿ ಶಾಸನ ತರಗತಿಗಳಿಗೆ ಹಾಜರಾಗುವ ವೇಳೆಗಾಗಲೇ ಪರಿಷತ್ತಿನಲ್ಲೂ, ಗೆಜೆಟಿಯರ್ ವಿಭಾಗದಲ್ಲೂ ಹಲವಾರು ಕಾರ್ಯಗಳನ್ನು ನಿರ್ವಹಿಸಿ ತುಂಬ ಹೆಸರು ಗಳಿಸಿದ್ದರು. ಸದಾ ಉತ್ಸಾಹದಿಂದ ಕೂಡಿದ

---

* ಹಿರಿಯ ಶ್ರೇಣಿ ಅಧ್ಯಾಪಕಿ, ಕನ್ನಡ ವಿಭಾಗ, ಮರೀನಾ ಕ್ಯಾಂಪಸ್, ಮದರಾಸು ವಿಶ್ವವಿದ್ಯಾನಿಲಯ, ಚೆನ್ನೈ–೬೦೦೦೦೫.

ಚಟುವಟಿಕೆಯ ವ್ಯಕ್ತಿ. ಮಾತು ಮಧುರ. ಲವಲವಿಕೆಯೇ ಮೂರ್ತೀಭವಿಸಿದ ವ್ಯಕ್ತಿತ್ವ. ಒಬ್ಬ ಸದಭಿರುಚಿಯ ವ್ಯಕ್ತಿಯ ಚಿಂತನೆಯನ್ನು ಅವರಲ್ಲಿ ಕಾಣಬಹುದು.

ಹಿರಿಯ ವಿದ್ವಾಂಸರಾದರೂ ಯಾರೊಂದಿಗೂ ಬಿಗುಮಾನವಿಲ್ಲದೆ ವ್ಯವಹರಿಸುವ ಸ್ವಭಾವವೇ ಅವರನ್ನು ಎಲ್ಲರಿಗೂ ಆತ್ಮೀಯರನ್ನಾಗಿಸುತ್ತಿತ್ತು. 'ಹಳ್ಳಿಯ ರೈತನೇ ಆಗಲಿ, ದಿಲ್ಲಿಯ ಸಾಹೇಬನೇ ಆಗಲಿ' ತಾರತಮ್ಯವಿಲ್ಲದೆ ಎಲ್ಲರನ್ನೂ ಒಂದೇ ರೀತಿ ನಡೆಸಿಕೊಳ್ಳುತ್ತಿದ್ದರು. ಮೊದಲ ಭೇಟಿಯಲ್ಲೇ ಯಾರಿಗೇ ಆಗಲಿ ಆತ್ಮೀಯರೆನಿಸಿಸುವ ವ್ಯಕ್ತಿತ್ವ. ಮೇಲ್ನೋಟಕ್ಕೆ ಗಂಭೀರ ಎನ್ನಿಸಿದರೂ ವಾಸ್ತವವಾಗಿ ಅವರು ತುಂಬ ಮೃದು ಹೃದಯಿಗಳು. ಸರಳ, ಮಾನವೀಯ ಅನುಕಂಪವಿರುವ ವ್ಯಕ್ತಿ. ಸ್ನೇಹಶೀಲ ವ್ಯಕ್ತಿತ್ವ. ಸದಾ ಎಲ್ಲರಿಗೂ ಹಿತವನ್ನೇ ಕೋರುವ ನಿಷ್ಕಲ್ಮಷ ಅಂತರಂಗ ಅವರದು. ನಿಷ್ಕಪಟ ಮಾತು. ಅವರ ನಿರ್ವ್ಯಾಜ ಪ್ರೀತಿ ಎಲ್ಲರಿಗೂ ಒಂದೇ ರೀತಿ. ಅವರ ಪರಿಚಯದೊಳಗೆ ಬಂದವರೆಲ್ಲರನ್ನೂ ಆಪ್ತಬಂಧುವಿನಂತೆ ನೋಡಿಕೊಳ್ಳುವ ಹಿರಿಯಗುಣ ಅವರದು. ವಿದ್ಯಾರ್ಥಿಗಳೇ ಆಗಲೀ, ತಮಗಿಂತ ಕಿರಿಯರಾಗಲೀ, ಗೆಳೆಯರಾಗಲೀ, ಯಾರೇ ಆಗಿರಲಿ ಅವರಿಗೆ ಉಪಯುಕ್ತವಾದ ಸಲಹೆ ಸೂಚನೆಗಳನ್ನು ನೀಡಿ ಅವರ ಯಶಸ್ಸನ್ನು ಹಾರೈಸುತ್ತಿದ್ದರು. ಚಿಕ್ಕವರು ದೊಡ್ಡವರೆನ್ನದೆ ಎಲ್ಲರೊಂದಿಗೂ ಸಮಾನವಾಗಿ ಬೆರೆಯುವ ಗುಣ ಅವರದು. ಸಾಮಾನ್ಯವಾಗಿ ಅವರು ವಿದ್ಯಾರ್ಥಿಗಳ ಜೊತೆ ಬೇಸರದಿಂದ ಮಾತನಾಡುವುದಾಗಲೀ, ಆಕ್ಷೇಪಿಸುವುದಾಗಲೀ ಇಲ್ಲ. ತಪ್ಪು ಮಾಡಿದರೆ, ನಿಧಾನವಾಗಿ ಸಾವಕಾಶವಾಗಿ ವಿವರಿಸುತ್ತಿದ್ದರು. ನಾನು ನನ್ನ ಜೀವನದಲ್ಲಿ ಆದರ್ಶಪುರುಷರೆಂದು ಪರಿಗಣಿಸುವ ಕೆಲವೇ ವ್ಯಕ್ತಿಗಳಲ್ಲಿ ಡಾ.ದೇವರಕೊಂಡಾರೆಡ್ಡಿಯವರೂ ಒಬ್ಬರು.

ಅವರ ತರಗತಿಗಳು ಕುತೂಹಲ ಹುಟ್ಟಿಸುವಂತಿದ್ದವು. ಲಿಪಿಗಳು ಬೆಳೆದು ಬಂದ ಕ್ರಮವನ್ನು ಅವರು ಸೋದಾಹರಣವಾಗಿ ವಿವರಿಸುತ್ತಿದ್ದರೆ ರೋಮಾಂಚನವಾಗುತ್ತಿತ್ತು. ಇಂದು ನಾವು ಭಾರತದಲ್ಲಿ ಹಲವು ಬಗೆಯ ಲಿಪಿಗಳನ್ನು ಬಳಸುತ್ತಿದ್ದರೂ ಅವೆಲ್ಲವೂ ಒಂದೇ ಮೂಲದಿಂದ ಬಂದವು ಎಂಬ ಸಂಗತಿಯೇ ನಮಗೆ ಹೊಸದಾಗಿತ್ತು. ಲಿಪಿಗಳು ಕಾಲದಿಂದ ಕಾಲಕ್ಕೆ ಹೇಗೆಲ್ಲಾ ಮಾರ್ಪಾಟು ಹೊಂದಿದವು ಎಂಬುದನ್ನು ನಿರರ್ಗಳವಾಗಿ ವಿವರಿಸುತ್ತಿದ್ದರು.

ಶಾಸ್ತ್ರಗ್ರಂಥಗಳು ಎಂದರೇನೇ ಅದು ನೀರಸವಾದ ವಿಷಯ ಎಂಬ ಅಭಿಪ್ರಾಯ ಇಂದು ಎಲ್ಲೆಡೆಯೂ ಸಾಮಾನ್ಯವಾಗಿದೆ. ಆದರೆ ಸೊಗಸಾದ, ಪಾಂಡಿತ್ಯಪೂರ್ಣವಾದ ಹಾಗೂ ಅಷ್ಟೇ ಸರಳವಾದ ಶೈಲಿಯಲ್ಲಿ ಶಾಸನ-ಲಿಪಿಗಳ ಬಗ್ಗೆ ಇವರು ನೀಡುವ ಉಪನ್ಯಾಸ ಕೇಳಿದ ಯಾವ ವಿದ್ಯಾರ್ಥಿಯೂ ಆ ವಿಷಯಗಳು ನೀರಸ ಎಂದು ಹೇಳಲು ಸಾಧ್ಯವೇ ಇಲ್ಲ ಎನ್ನುವ ಮಟ್ಟಿಗೆ ವಿವರಿಸುತ್ತಿದ್ದರು.

ವಿದ್ಯಾರ್ಥಿಗಳ ಬಗ್ಗೆ ಅವರಿಗೆ ವಿಶೇಷ ಕಾಳಜಿ. ತಮ್ಮ ಮನೆಯ ಮಕ್ಕಳಂತೆ ಅವರನ್ನು ದಂಡಿಸಿ ತಿದ್ದಿ, ಬದುಕಿನಲ್ಲಿ ಮುಂದೆ ಬರಲು ಮಾರ್ಗದರ್ಶನ ಮಾಡುತ್ತಿದ್ದರು. ಅವರ ಬಗ್ಗೆ ಅವರ ಎಲ್ಲ ವಿದ್ಯಾರ್ಥಿಗಳೂ ತುಂಬ ವಿಶ್ವಾಸದಿಂದ ಮಾತನಾಡುವುದನ್ನು ನಾನು ಕೇಳಿದ್ದೇನೆ. ಇವರ ಮಾತು ಬಂದಾಗ ಉತ್ಸಾಹದಿಂದ, ಹೆಮ್ಮೆಯಿಂದ, ಬಹಳ ಗೌರವದಿಂದ ಅವರು ಮಾತನಾಡುತ್ತಾರೆ. ಕಾರಣ, ಅವರ ಗುಣ-ನಡತೆಗಳು, ಪರೋಪಕಾರ ಪ್ರವೃತ್ತಿ, ಸಾಧನೆ. ದೂರದೃಷ್ಟಿ, ಸಮಯಪ್ರಜ್ಞೆ, ಅಧ್ಯಾಪನ ಎಲ್ಲವೂ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತವೆ. ತಮ್ಮ ಉನ್ನತ ವ್ಯಕ್ತಿತ್ವದಿಂದಲೇ ಎಲ್ಲರ ಗಮನ ಸೆಳೆಯುವುದರಿಂದ ಅವರು ಅನುಕರಣೀಯರೂ ಆಗಿದ್ದಾರೆ. ಅಧ್ಯಯನ-ಅಧ್ಯಾಪನ, ಮಾರ್ಗದರ್ಶನ. ಸಹಭಾಗಿತ್ವ ಇವು ಇವರ ವ್ಯಕ್ತಿತ್ವದ ಹಲವು ಮುಖಗಳು.

ಇವರ ಇನ್ನೊಂದು ಗುಣ ವಿದ್ಯಾರ್ಥಿಗಳಲ್ಲಿರುವ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸುವುದು. ನಾವು ವಿದ್ಯಾರ್ಥಿಗಳು ಯಾರೇ ಆಗಲಿ ಎಲ್ಲಿಗಾದರೂ ಕ್ಷೇತ್ರಕಾರ್ಯಕ್ಕೆ ಹೋಗುತ್ತೇವೆಂದು ತಿಳಿಸಿದರೆ ಸಾಕು, ನಾವು ಹೋಗಲಿರುವ ಸ್ಥಳದಲ್ಲಿ ಏನೇನಿದೆ? ಯಾವ ಯಾವ ಸ್ಥಳಕ್ಕೆ ಭೇಟಿ ನೀಡಬೇಕು? ಅಲ್ಲಿ ಹೋಗಿ ಏನೇನು ಮಾಡಬೇಕು ಎಂಬುದನ್ನೆಲ್ಲ ವಿವರವಾಗಿ ತಿಳಿಸುತ್ತಿದ್ದರು. ಕರ್ನಾಟಕದ ಪ್ರತಿಯೊಂದು ಐತಿಹಾಸಿಕ ಸ್ಥಳಗಳ ಬಗೆಗಿನ ಮಾಹಿತಿಯೂ ಅವರಲ್ಲಿತ್ತು. ಅವರ ನೆನಪಿನ ಶಕ್ತಿಯನ್ನು ಕಂಡು ನಾವು ಬೆರಗಾಗುತ್ತಿದ್ದೆವು.

ಡಾ॥ ರೆಡ್ಡಿ ಸರ್ ಅವರ ಇನ್ನೊಂದು ಗುಣ ವಿದ್ಯಾರ್ಥಿಗಳ ಪ್ರತಿಭೆಯನ್ನು ಗುರುತಿಸಿ ಅದಕ್ಕೆ ಪ್ರೋತ್ಸಾಹ ನೀಡುತ್ತಿದ್ದುದು. ವಿದ್ಯಾರ್ಥಿಗಳು ಈ ದಿಸೆಯಲ್ಲಿ ಏನೇ ಕೆಲಸ ಮಾಡಲಿ, ಅದರ ಬಗೆಗೆ ಮೊದಲು ಮೆಚ್ಚುಗೆಯ

ಮಾತನಾಡುತ್ತಿದ್ದರು. ಕಡೆಯಲ್ಲಿ ಅವರಿಗೆ ನೋವಾಗದ ಹಾಗೆ ಅವರಲ್ಲಿರುವ ಲೋಪ-ದೋಷಗಳನ್ನು ತಿಳಿಸಿ, ಪ್ರಿಯವಾಗಿ ತಿದ್ದುವ ಸಂಯಮ ಪ್ರದರ್ಶಿಸುತ್ತಿದ್ದರು. ಇದರಿಂದ ವಿದ್ಯಾರ್ಥಿಗಳಿಗೆ ತಾವು ಬರೆದ ಲೇಖನಗಳನ್ನು ತೆಗೆದುಕೊಂಡು ಹೋಗಿ ಅವರಿಗೆ ತೋರಿಸುವುದೆಂದರೆ ತೀವ್ರ ಆಸಕ್ತಿ. ತಾವು ಏನನ್ನೇ ಬರೆಯಲಿ ಅದನ್ನು ತೆಗೆದುಕೊಂಡು ಹೋಗಿ ತೋರಿಸುತ್ತಿದ್ದರು. ಕೆಲವರು ಅವರು ಹೇಳುವ ಮೆಚ್ಚುಗೆಯ ಮಾತುಗಳನ್ನು ಮಾತ್ರ ಸ್ವೀಕರಿಸಿ, ಮುಂದೆ ಹೇಳುವ ಸಲಹೆಗಳನ್ನು ಮರೆತೇ ಬಿಡುತ್ತಿದ್ದರು. ವಿದ್ಯಾರ್ಥಿಯ ಸಾಧನೆ ಎಷ್ಟೇ ಚಿಕ್ಕದಿರಲಿ ಅದನ್ನು ತಕ್ಷಣ ಗುರುತಿಸಿ ಅವರಲ್ಲಿ ಆತ್ಮವಿಶ್ವಾಸವನ್ನು ತುಂಬುತ್ತಿದ್ದರು. ಇಂದು ನಾವು ಯಾರನ್ನು ಉದಯೋನ್ಮುಖ ಸಂಶೋಧಕರೆಂದು ಗುರುತಿಸುತ್ತೇವೆಯೋ ಅವರು ಮುಂದೆ ಭವಿಷ್ಯದಲ್ಲಿ ಒಳ್ಳೆಯ ಲೇಖಕರಾಗಿಯೂ ಬರಬಹುದು ಎಂಬ ದೂರದೃಷ್ಟಿಯಿಂದ ಅವರ ಲೇಖನಗಳನ್ನು ತಿದ್ದಿ ಸರಿಪಡಿಸುವತ್ತ ಗಮನ ಹರಿಸುತ್ತಿದ್ದರು.

ಅವರೇನೂ ಕಥೆ-ಕಾದಂಬರಿಗಳನ್ನು ಬರೆದು ಪ್ರಸಿದ್ಧರಾದ ಸಾಹಿತಿಗಳಲ್ಲ. ಆಳವಾದ ಅಧ್ಯಯನ ಹಾಗೂ ಸಂಶೋಧನೆಗಳನ್ನು ಮಾಡಿ ಅಪಾರ ವಿದ್ವತ್ತನ್ನು ಗಳಿಸಿಕೊಂಡಿದ್ದರು. ಅವರನ್ನು ಪ್ರತಿಭೆ-ಪಾಂಡಿತ್ಯ-ವಿದ್ವತ್ತುಗಳ ಆಗರವೆಂದೇ ಹೇಳಬಹುದು. ಅವರ ಬರವಣಿಗೆಗಳೆಲ್ಲವೂ ಸಾಮಾನ್ಯವಾಗಿ ಶಾಸನ, ಲಿಪಿ, ಮೂರ್ತಿ-ಶಿಲ್ಪಕಲೆ, ಪುರಾತತ್ವ ಸಂಶೋಧನೆ, ಐತಿಹಾಸಿಕ ಘಟನೆಗಳ ಸುತ್ತಲೇ ಇರುತ್ತಿದ್ದವು. ಈ ಕ್ಷೇತ್ರದಲ್ಲಿ ಆಸಕ್ತಿಯನ್ನು ಹೊಂದಿರುವ ವಿದ್ವಾಂಸರ ಸಂಖ್ಯೆ ಕಡಿಮೆ ಎಂದೇ ಹೇಳಬೇಕು. ಕನ್ನಡ ಶಾಸನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇವರದು ಚಿರಪರಿಚಿತ ಹೆಸರು. ಲಿಪಿಶಾಸ್ತ್ರದಲ್ಲಂತೂ ಅವರಿಗಿರುವ ಪರಿಣತಿ ಅದ್ವಿತೀಯವಾದುದು. ತಾವು ಕಲಿತುದೆಲ್ಲವನ್ನೂ ವಿದ್ಯಾರ್ಥಿಗಳಿಗೆ ಧಾರೆಯೆರೆಯುತ್ತಿದ್ದರು. ಲೇಖನಗಳನ್ನು ಬರೆಯುವಂತೆ ಪ್ರೋತ್ಸಾಹಿಸುತ್ತಿದ್ದರು. ಹೀಗಾಗಿಯೇ ಅವರ ವಿದ್ಯಾರ್ಥಿಗಳೆಲ್ಲರೂ ಸಾಮಾನ್ಯವಾಗಿ ಬರಹವನ್ನು ರೂಢಿಸಿಕೊಂಡಿದ್ದಾರೆ. ನಾನೂ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅವರ ವಿದ್ಯಾರ್ಥಿನಿಯಾಗಿ, ಅವರಿಂದ ಬಹಳಷ್ಟು ವಿಷಯಗಳನ್ನು ಕಲಿತಿದ್ದೇನೆ. ಸಾಮಾನ್ಯವಾಗಿ ಅವರಿಗೆ ವಿದ್ಯಾರ್ಥಿಗಳ ಮೇಲೆ ಅತೀವ ಕಾಳಜಿ. ವಿದ್ಯಾರ್ಥಿಗಳನ್ನು ಉತ್ತೇಜಿಸಿ ಅವರನ್ನು ಹುರಿದುಂಬಿಸಿ ಕಾರ್ಯಪ್ರವೃತ್ತರನ್ನಾಗಿಸುತ್ತಾರೆ. ಒಟ್ಟಿನಲ್ಲಿ ಅವರ ವ್ಯಕ್ತಿತ್ವವೇ ವಿದ್ಯಾರ್ಥಿಗಳನ್ನು ಸೆಳೆಯುತ್ತಿತ್ತು.

ವಿದ್ಯಾರ್ಥಿಗಳನ್ನು ಕಿರಿಯ ಗೆಳೆಯರಂತೆ, ಅದರಲ್ಲೂ ಹೆಣ್ಣುಮಕ್ಕಳನ್ನು ತಮ್ಮ ಮಗಳಂತೆ ನೋಡಿಕೊಳ್ಳುತ್ತಿದ್ದರು. ಯಾರಾದರೂ ಕಷ್ಟದಲ್ಲಿದ್ದಾರೆಂದು ತಿಳಿದರೆ ಅವರ ಜೊತೆ ಮಾತನಾಡಿ ಬೇಕಾದ ಅಗತ್ಯ ನೆರವು ನೀಡುತ್ತಿದ್ದರು. ಕೆಲವೊಮ್ಮೆ ಆರ್ಥಿಕ ಸಹಾಯ ಮಾಡಿರುವುದೂ ಉಂಟು. ಅವರ ಪರೋಪಕಾರ ಹಾಗೂ ಸ್ನೇಹಮಯ ವ್ಯಕ್ತಿತ್ವವನ್ನು ಅವರ ವಲಯದೊಳಗೆ ಬಂದ ಪ್ರತಿಯೊಬ್ಬರೂ ಬಲ್ಲರು. ಅವರ ಸ್ನೇಹ-ಸಹಾಯಗಳನ್ನು ಯಾರೂ ಮರೆಯಲಾರರು ಎಂಬುದು ನನ್ನ ಅನಿಸಿಕೆ.

ಅವರ ವ್ಯಕ್ತಿತ್ವ 'ಹಿತ ಮಿತ ಮೃದುವಚನ'ದ ವ್ಯಾಖ್ಯೆಗೆ ಸರಿಯಾಗಿ ಒಗ್ಗುವಂತಹುದು. ಅದು ಕೇವಲ ಮಿತ್ರರೊಂದಿಗಿನ ಸಂಭಾಷಣೆಯಾಗಿರಲಿ, ತರಗತಿಯಲ್ಲಿ ನಡೆಯುವ ಪಾಠ ಪ್ರವಚನವಿರಲಿ. ವೇದಿಕೆಯ ಮೇಲಿನ ಭಾಷಣವಾಗಿರಲಿ, ಹಿತವಾಗಿಯೂ. ಮೃದುವಾಗಿಯೂ ಹೊಮ್ಮುತ್ತ ಕೇಳುಗರನ್ನು ಕುತೂಹಲದ ಕಡಲಿನಲ್ಲಿ ಮುಳುಗಿಸುತ್ತದೆ. ಎಂದೂ ಅವರು ತರಗತಿಗಳಲ್ಲಿ ತಾಳ್ಮೆ-ಸಂಯಮ ಕಳೆದುಕೊಂಡವರಲ್ಲ. ಅವರ ಪಾಠ ಕೇಳುವುದೆಂದರೆ ಪುಸ್ತಕಗಳನ್ನು ತೆರೆದು ಓದಿದಷ್ಟು ಸ್ಪಷ್ಟ. ತರಗತಿಯಲ್ಲಿ ಎಂದೂ ಅನವಶ್ಯಕ ಸಂಗತಿಗಳನ್ನೋ, ವೈಯಕ್ತಿಕ ವಿಷಯಗಳನ್ನೋ ಹೇಳಿ ವ್ಯರ್ಥವಾಗಿ ಸಮಯ ಕಳೆದದ್ದೇ ಇಲ್ಲ. ಸ್ವಪ್ರಶಂಸೆ-ಆತ್ಮರತಿಯ ಮಾತುಗಳನ್ನು ಎಂದೂ ಆಡಿದ್ದಿಲ್ಲ. 'ವಿಷಯಾಂತರ' ಎಂಬುದು ಅವರಿಗೆ ಗೊತ್ತೇ ಇರಲಿಲ್ಲ. ಹೇಳಬೇಕಾದ್ದನ್ನು ಕರಾರುವಾಕ್ಕಾಗಿ, ನಿರ್ದಿಷ್ಟವಾಗಿ, ಚೆನ್ನಾಗಿ ಅರ್ಥವಾಗುವಂತೆ ಹೇಳುತ್ತಿದ್ದರು. ಅವರ ಬೋಧನೆ ದಡ್ಡ ವಿದ್ಯಾರ್ಥಿಗಳಿಗೂ ಸರಳವಾಗಿ ಅರ್ಥವಾಗುವಂತಿತ್ತು. ಶಾಸನಗಳ ಪಠ್ಯವನ್ನು ಬೇಗ ಅರ್ಥ ಮಾಡಿಕೊಳ್ಳಲಾರದಂತಹ ವಿದ್ಯಾರ್ಥಿಗಳ ತಲೆಯೊಳಗೆ ವೃಥಾ ವಿಷಯಗಳನ್ನು ತುಂಬುತ್ತಿರಲಿಲ್ಲ. ಅವರಿಗೆ ಎಷ್ಟು ಬೇಕೋ ಅಷ್ಟು, ಹೇಗೆ ಬೇಕೋ ಹಾಗೆ, ಅಷ್ಟೆ. ಎಂಥ ಮಂದಬುದ್ಧಿಯ ವಿದ್ಯಾರ್ಥಿಗೂ ವಿಷಯದ ಸ್ಪಷ್ಟವಾಗಿ ಅರ್ಥವಾಗುವಂತೆ ಬೋಧಿಸುತ್ತಿದ್ದರು. ಸರಳ ಭಾಷೆಯಲ್ಲಿ ಅಪಾರ ಮಾಹಿತಿ ನೀಡುತ್ತಿದ್ದರು. ಶಾಸನಶಾಸ್ತ್ರದ ಗಂಧ ಗಾಳಿಯೂ ಇಲ್ಲದ ವಿದ್ಯಾರ್ಥಿಯೂ ಕೂಡ ಒಂದು ವರ್ಷ ಮುಗಿಯುವುದರೊಳಗೆ ಆ ವಿಷಯದ ಬಗ್ಗೆ ವಿಶೇಷವಾದ ಆಸಕ್ತಿಯನ್ನು ಮೂಡಿಸಿಕೊಳ್ಳುವಂತೆ ಅವರ ಬೋಧನೆ ಇರುತ್ತಿತ್ತು. ಯಾವ ವಿದ್ಯಾರ್ಥಿ ಯಾವ ಸಂದೇಹವನ್ನು ಕೇಳಿದರೂ ಕರಾರುವಾಕ್ಕಾಗಿ ಉತ್ತರಿಸುತ್ತಿದ್ದರು. ಎಲ್ಲ ವಿಷಯಗಳೂ, ಘಟನೆಗಳೂ ಅವರಿಗೆ ಕರತಲಾಮಲಕ. ಹಳಗನ್ನಡ ಕಾವ್ಯದಲ್ಲೂ ಅವರಿಗೆ

ಅತೀವ ಆಸಕ್ತಿ.ಪಾಠದ ಜೊತೆಗೆ ಸ್ವಾನುಭವದ ಸಾರವನ್ನೆರೆದು ಬೋಧನೆಯನ್ನು ಸ್ವಾರಸ್ಯಕರವನ್ನಾಗಿಸುತ್ತಿದ್ದರು. ಎರಡು ವರ್ಷಗಳಲ್ಲಿ ನಾನು ಅವರ ಒಂದೇ ಒಂದು ಕ್ಲಾಸನ್ನೂ ತಪ್ಪಿಸಿಕೊಂಡಿದ್ದಿಲ್ಲ.

ಶಾಸನ ತರಗತಿಗಳ ಪಠ್ಯಗಳೆಲ್ಲ ಮುಗಿದ ಮೇಲೆ ಕಡೆಯಲ್ಲಿ ಕ್ಷೇತ್ರಕಾರ್ಯಕ್ಕಾಗಿ ಕರ್ನಾಟಕದ ಯಾವುದಾದರೂ ಒಂದು ಐತಿಹಾಸಿಕ ಸ್ಥಳಕ್ಕೆ ಎಲ್ಲ ವಿದ್ಯಾರ್ಥಿಗಳನ್ನೂ ಕರೆದೊಯ್ಯುತ್ತಿದ್ದರು. ಇದರಿಂದ ವಿದ್ಯಾರ್ಥಿಗಳ ಜೊತೆ ಒಳ್ಳೆಯ ಬಾಂಧವ್ಯ ಏರ್ಪಡುತ್ತಿತ್ತು. ಕೆಲವೊಮ್ಮೆ ಪಠ್ಯದೊಂದಿಗೆ ಬದುಕಿನ ಪಾಠವನ್ನೂ ಹೇಳಿಕೊಡುತ್ತಿದ್ದರು. ಸರಸ ಹಾಸ್ಯಗಳಿಗೂ ಕೊರತೆಯಿರಲಿಲ್ಲ. ತಮ್ಮದೇ ಶೈಲಿಯ ವಿಶಿಷ್ಟ ಹಾಸ್ಯ ಚಟಾಕಿಗಳನ್ನು ಹಾರಿಸುತ್ತಿದ್ದುದೂ ಉಂಟು.

ಗ್ಯಾಜೆಟಿಯರನ ಕೆಲಸ ಬಿಟ್ಟು ಹಂಪಿ ವಿಶ್ವವಿದ್ಯಾನಿಲಯಕ್ಕೆ ಪ್ರಾಧ್ಯಾಪಕರಾಗಿ ಹೋದ ನಂತರವೂ ಅವರ ನನ್ನ ಬಾಂಧವ್ಯಕ್ಕೇನೂ ತಡೆಯಾಗಲಿಲ್ಲ. ಅವರು ಬೆಂಗಳೂರಿಗೆ ಬಂದಾಗ, ಗೆಳತಿ ಸ್ಮಿತಾಳನ್ನು ನೋಡುವ ನೆವದಿಂದ ನಾನು ಆಗಾಗಿ ಹೋಗಿ ಅವರನ್ನು ಮನೆಯಲ್ಲಿ ಭೇಟಿಯಾಗುತ್ತಿದ್ದೆ. ಹಂಪಿ ವಿವಿಯ ತಮ್ಮ ವಿಭಾಗದ ಬಗ್ಗೆ ತುಂಬಾ ವಿಶ್ವಾಸ ಅವರಿಗೆ. ತಮ್ಮ ಸಹೋದ್ಯೋಗಿಗಳ ಬಗೆಗೆ ಸದಾ ಹೆಮ್ಮೆಯಿಂದ ಮಾತನಾಡುತ್ತಿದ್ದರು. ಇವರು ಅಲ್ಲಿನ ಶಾಸನ ಶಾಸ್ತ್ರ ವಿಭಾಗಕ್ಕೆ ಮುಖ್ಯಸ್ಥರಾದ ಮೇಲೂ ತಮ್ಮ ಉಳಿದ ಸಹೋದ್ಯೋಗಿಗಳ ಜೊತೆ ವಿಶ್ವಾಸದಿಂದ ನಡೆದುಕೊಳ್ಳುತ್ತಿದ್ದುದನ್ನು ನಾನು ಪ್ರತ್ಯಕ್ಷ ಕಂಡಿದ್ದೇನೆ. ಎಲ್ಲೇ ಆಗಲಿ, ಮಾತಿನ ನಡುವೆ ವಿಭಾಗದ ವಿಷಯ ಬಂದಾಗ ತಮ್ಮ ಜೊತೆ ಕೆಲಸ ಮಾಡುತ್ತಿದ್ದವರ ಗುಣಗಳನ್ನೋ, ವಿದ್ಯಾಪ್ರೌಢಿಮೆಯನ್ನೋ, ಕಾರ್ಯದಕ್ಷತೆಯನ್ನೋ–ವಯಸ್ಸಿನ ತಾರತಮ್ಯವಿಲ್ಲದೆ ಮೆಚ್ಚಿ ಪ್ರಶಂಸಿಸುತ್ತಿದ್ದರು.

ಸಮಯಪ್ರಜ್ಞೆ ಅವರಲ್ಲಿ ನನಗೆ ಕಂಡು ಬಂದ ಇನ್ನೊಂದು ಪ್ರಮುಖ ಗುಣ. ಸದಾ ಒಂದಲ್ಲಾ ಒಂದು ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೂ, ಎಲ್ಲ ಕೆಲಸಗಳನ್ನೂ ಸರಿಯಾದ ಸಮಯದಲ್ಲಿ ಮಾಡಿ ಮುಗಿಸುತ್ತಿದ್ದರು. ದಿನದ ಒಂದಿಷ್ಟು ವೇಳೆಯನ್ನು ಕೂಡ ಅವರು ಹಾಳು ಮಾಡಿದ್ದನ್ನು ನಾನು ಕಂಡದ್ದಿಲ್ಲ. ಕೆಲಸ ಕಾರ್ಯಗಳು ಹೆಚ್ಚಾದರೂ ವಿಚಲಿತಗೊಳ್ಳದ ವ್ಯಕ್ತಿತ್ವ. ಒಪ್ಪಿಕೊಂಡ ಎಲ್ಲಾ ಕೆಲಸಗಳನ್ನೂ ಕ್ಲುಪ್ತ ಸಮಯದೊಳಗೇ ಮುಗಿಸುತ್ತಿದ್ದರು. ಯಾವ ಕೆಲಸವೇ ಆಗಲಿ ಕೊಟ್ಟ ಅವಧಿಯನ್ನು ಎಂದೂ ಮೀರದೆ ಸಾಕಷ್ಟು ಮುಂಚಿತವಾಗಿಯೇ ಕೆಲಸ ಮುಗಿಸಿ ಬಿಡುವ ದಕ್ಷತೆ ಅವರದು. ಉದಾಹರಣೆಗೆ ಪಿಎಚ್.ಡಿ., ಪ್ರಬಂಧಗಳ ಮೌಲ್ಯಮಾಪನ ವಿಷಯವನ್ನೇ ನೋಡಬಹುದು. ಯಾವುದೇ ವಿಶ್ವವಿದ್ಯಾಲಯವಾದರೂ ಬೇರೊಂದು ವಿಶ್ವವಿದ್ಯಾಲಯದ ಪ್ರಾಧ್ಯಾಪಕರನ್ನು ಪಿಎಚ್.ಡಿ ನಿಬಂಧಗಳ ಪರೀಕ್ಷಕರಾಗಿ ನೇಮಿಸುತ್ತದೆ. ಹೀಗೆ ಇವರೂ ಹಲವು ವಿ.ವಿ.ಗಳಿಂದ ಪಿಎಚ್.ಡಿ.,ಪ್ರಬಂಧಗಳ ಮೌಲ್ಯಮಾಪಕರಾಗಿ ನೇಮಕಗೊಂಡಿದ್ದುಂಟು. ಈ ಮೌಲ್ಯಮಾಪನ ಕಾರ್ಯಕ್ಕಾಗಿ ಸುಮಾರು ಎರಡು–ಮೂರು ತಿಂಗಳ ಕಾಲಾವಧಿಯನ್ನು ನೀಡಲಾಗಿರುತ್ತದೆ. ಆದರೆ ಡಾ.ದೇವರಕೊಂಡಾರೆಡ್ಡಿಯವರಾದರೋ ಎಂದೂ ಕೊಟ್ಟ ಅವಧಿಯನ್ನು ಮೀರಿದವರಲ್ಲ. ಕೊಟ್ಟ ಸಮಯ ಮಿತಿ ಮುಗಿಯುವ ಮುನ್ನವೇ ವಿವರವಾದ ವರದಿಯನ್ನು ಕಳುಹಿಸುತ್ತಿದ್ದರು. ಅವರ ಅಭಿಪ್ರಾಯಗಳೂ ನಿಖರವಾಗಿರುತ್ತಿದ್ದವು, ಸಾಧಾರವಾಗಿರುತ್ತಿದ್ದವು. ಪ್ರಬಂಧವನ್ನು ಸಂಪೂರ್ಣವಾಗಿ ಓದಿ ಗುಣದೋಷಗಳನ್ನು ಪಟ್ಟಿ ಮಾಡಿ ಬರೆದು ಕಳಿಸುತ್ತಿದ್ದರು. ಇದರಿಂದ ವಿದ್ಯಾರ್ಥಿಗೆ ತಡವಿಲ್ಲದೆ ಫಲಿತಾಂಶ ಬರಲು ಕಾರಣವಾಗುತ್ತಿದ್ದರು ಹಾಗೂ ಆ ವಿದ್ಯಾರ್ಥಿ ತನ್ನ ಪ್ರಬಂಧವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಮುನ್ನ ತಪ್ಪುಗಳನ್ನೆಲ್ಲ ತಿದ್ದಿಕೊಳ್ಳಲು ಈ ವರದಿ ತುಂಬ ಉಪಯುಕ್ತವಾಗಿರುತ್ತಿತ್ತು.

ಸಮಯಪ್ರಜ್ಞೆಯೊಂದಿಗೆ ಅಚ್ಚುಕಟ್ಟುತನ, ಕ್ರಮಬದ್ಧತೆ, ಪ್ರಾಮಾಣಿಕತೆಗಳಿಗೆ ಪ್ರಾಧಾನ್ಯ ಕೊಟ್ಟವರು ಅವರು. ಆಲಸ್ಯವೆಂಬುದೇ ಅವರಲ್ಲಿಲ್ಲ. ಸದಾ ಯಾವುದಾದರೊಂದು ಕಾರ್ಯದಲ್ಲಿ ನಿರತರಾಗಿರುತ್ತಿದ್ದರು. ತಾವು ವಹಿಸಿಕೊಂಡ ಕೆಲಸವನ್ನು ಆರೋಗ್ಯವನ್ನೂ ಲೆಕ್ಕಿಸದೆ ಪೂರ್ಣಗೊಳಿಸುವ ಛಲವಾದಿ ಅವರು. ಫಲಾಪೇಕ್ಷೆ ಇಲ್ಲದ ಪ್ರಾಮಾಣಿಕ ದುಡಿಮೆ ಅವರದು. ಅವರು ನಿಷ್ಕಪಟತೆ, ನೈತಿಕತೆ, ಶಿಸ್ತು, ಅಚ್ಚುಕಟ್ಟು, ಪ್ರಾಮಾಣಿಕ ನಡತೆಗಳಿಗೆ ಅವರು ಹೆಸರಾಗಿದ್ದರು.

ಆದರೆ ಸಭೆ–ಸಮಾರಂಭ, ಚರ್ಚೆಗಳಲ್ಲಿ ತಮಗನ್ನಿಸಿದ್ದನ್ನು ನಿರ್ಭಿಡೆಯಿಂದ ಹೇಳುವುದು ಅವರ ಸಹಜ ಗುಣ. ಜೊತೆಗೆ ಯಾವುದಾದರೂ ಒಂದು ವಿಷಯವನ್ನು ಚರ್ಚೆಗೆ ತೆಗೆದುಕೊಂಡರೆ ಅದರ ಮೂಲಚೂಲಗಳನ್ನೆಲ್ಲ ಶೋಧಿಸುತ್ತಿದ್ದರು. ಯಾವುದಾದರೂ ಒಂದು ವಿಷಯದಲ್ಲಿ ಚರ್ಚೆಗೆ ತೊಡಗಿದರೆ ಗಂಟೆಗಟ್ಟಲೆ ನಿರರ್ಗಳವಾಗಿ ಮಾತನಾಡುತ್ತಾರೆ. ಆದರೆ ಸಾಮಾನ್ಯವಾಗಿ ಅವರು ಹೆಚ್ಚು ಮಾತಾಡುತ್ತಿರಲಿಲ್ಲ. ಸದಾ ಯಾವುದಾದರೂ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಿದ್ದರು.

ಸುಮ್ಮನೆ ಕುಳಿತುಕೊಂಡು ಸಮಯ ಕಳೆದದ್ದಾಗಲೀ, ಬಿಡುವಾಗಿ ಕುಳಿತು ಹರಟೆ ಹೊಡೆದದ್ದಾಗಲೀ ನಾನು ಕಂಡದ್ದೇ ಇಲ್ಲ. ಎಲ್ಲ ಕೆಲಸಗಳನ್ನೂ ತಾವೇ ನಿರ್ವಹಿಸುತ್ತಿದ್ದರು. ಇನ್ನೊಬ್ಬರ ಮೇಲೆ ತಮ್ಮ ಜವಾಬ್ದಾರಿಯನ್ನು ಹೇರುವವರಲ್ಲಿಲ್ಲ. ಅವರು ಯಾವುದೇ ಕೆಲಸ ಮಾಡಲಿ ಶ್ರದ್ಧೆಯಿಂದ, ಅಚ್ಚುಕಟ್ಟಾಗಿ ಮಾಡುತ್ತಿದ್ದರು.

ಒಟ್ಟಿನಲ್ಲಿ ಅವರೊಬ್ಬ ಅತ್ಯುತ್ತಮ ಪ್ರಾಧ್ಯಾಪಕರು, ಆಳವಾದ ಅಧ್ಯಯನ ಶೀಲರು, ಉತ್ತಮ ಸಂಶೋಧಕರು. ಆದರೆ ತಮ್ಮ ಸಾಧನೆಗಳ ಬಗ್ಗೆ ಎಂದೂ ಹೆಮ್ಮೆಯಿಂದ ಹೇಳಿಕೊಂಡವರಲ್ಲ. ಅವರ ಜೀವನದ ಆದರ್ಶ ಇತರರಿಗೆ ಮಾರ್ಗದರ್ಶಕವಾದದ್ದು, ಸ್ಫೂರ್ತಿದಾಯಕವಾದದ್ದು. ಅವರದು ಹೋರಾಟದ ಬದುಕು. ತಮ್ಮ ಸ್ವಂತ ಪರಿಶ್ರಮದಿಂದಲೇ ಹಂತಹಂತವಾಗಿ ಉನ್ನತಿಯನ್ನು ಪಡೆದ ಅವರ ಶಕ್ತಿಯನ್ನು ಎಲ್ಲರೂ ಅನುಸರಿಸಬೇಕು.

ತುಂಬ ಸ್ನೇಹಮಯಿಗಳಾದ ರೆಡ್ಡಿ ಸರ್ ಅವರ ಸರಳತೆ, ಸಜ್ಜನಿಕೆ, ಔದಾರ್ಯ, ಉದಾತ್ತ ಮನೋಭಾವ, ಸಹಾಯ ಮಾಡುವ ಗುಣಗಳೇ ವಿದ್ಯಾರ್ಥಿಗಳ ಮೆಚ್ಚುಗೆಗೆ ಕಾರಣವಾಗಿವೆ.

ತೀಕ್ಷ್ಣ ಬುದ್ಧಿ, ಆಳವಾದ ಚಿಂತನೆ, ಮಾನವೀಯ ದೃಷ್ಟಿಯಿಂದ, ಮಿಡಿಯುವ ಹೃದಯದಿಂದ, ಮಮತೆಯ ನೋಟದಿಂದ. ಶಾಂತ ಮನಸ್ಸಿನಿಂದ ಸಮಚಿತ್ತ ಭಾವದಿಂದ ಎಲ್ಲಕ್ಕೂ ಮಿಗಿಲಾಗಿ ತಮ್ಮ ಒಳ್ಳೆಯತನದಿಂದ ನನ್ನಂತಹ ಹಲವರ ವ್ಯಕ್ತಿತ್ವವನ್ನು ರೂಪಿಸಿದವರು ಡಾ. ದೇವರಕೊಂಡಾರೆಡ್ಡಿಯವರು.

ಯಾವುದೇ ವ್ಯಕ್ತಿಯ ಶಿಸ್ತು, ಸಮಯಪ್ರಜ್ಞೆ, ದೃಢ ಸಂಕಲ್ಪಗಳು ಅವರನ್ನು ಸಾಧನೆಯ ಉತ್ತುಂಗ ಶಿಖರಕ್ಕೆ ತಲುಪಿಸುತ್ತವೆ ಎಂಬುದಕ್ಕೆ ಡಾ॥ ದೇವರಕೊಂಡಾರೆಡ್ಡಿಯವರೇ ಸಾಕ್ಷಿ. ಅವರ ಜನಪ್ರಿಯತೆಗೆ ಅವರ ಕರ್ತವ್ಯನಿಷ್ಠೆ, ಸತ್ಯಸಂಧತೆ, ಪ್ರಾಮಾಣಿಕತೆ, ಸ್ನೇಹಪರತೆ, ಅವಿಶ್ರಾಂತ ದುಡಿಮೆ, ವಿನಯ, ಸೌಜನ್ಯ ಹಾಗೂ ಸರಳ ಸಜ್ಜನಿಕೆಗಳೇ ಕಾರಣಗಳಾಗಿವೆ.

ಡಾ॥ ದೇವರಕೊಂಡಾರೆಡ್ಡಿಯವರದು ಅಚ್ಚುಕಟ್ಟಾದ ಸಂಸಾರ. ಒಬ್ಬ ಒಳ್ಳೆಯ ಗಂಡನಾಗಿ, ಒಳ್ಳೆಯ ತಂದೆಯಾಗಿ, ಒಳ್ಳೆಯ ಮಿತ್ರನಾಗಿ, ಒಳ್ಳೆಯ ಪ್ರಾಧ್ಯಾಪಕನಾಗಿ, ಮಾರ್ಗದರ್ಶಕನಾಗಿ ತಮ್ಮ ಬದುಕನ್ನು ನಿರ್ವಹಿಸಿದ್ದಾರೆ. ಅವರ ಶ್ರೀಮತಿಯವರ ಬಗ್ಗೆ ಹೇಳದಿದ್ದರೆ ಈ ಲೇಖನ ಅಪೂರ್ಣವೇ ಸರಿ. ನನ್ನನ್ನೂ ಒಳಗೊಂಡಂತೆ ಸ್ಮಿತಾಳ ಎಲ್ಲ ಗೆಳತಿಯರಿಗೂ ಅವರು ನಿಜವಾದ 'ಅಮ್ಮ'ನೇ ಆಗಿದ್ದರು. ನಿಜವಾಗಿಯೂ ಆಕೆ ಅನ್ನಪೂರ್ಣೆ. ಮನೆಗೆ ಬಂದ ಯಾರಿಗೇ ಆಗಲಿ ಹೃದಯತುಂಬಿ ಆತಿಥ್ಯ ನೀಡುತ್ತಿದ್ದರು. ಪ್ರೀತಿಯಿಂದ ಮಾತನಾಡುತ್ತಿದ್ದರು. ವಾತ್ಸಲ್ಯಮಯ ವ್ಯಕ್ತಿತ್ವ ಅವರದು. ರೆಡ್ಡಿ ಸರ್ ಅವರು ಏನನ್ನಾದರೂ ಸಾಧಿಸಿದ್ದಾರೆಂದರೆ ಅದಕ್ಕೆ ಇವರ ಧೈರ್ಯ–ಸ್ಥೈರ್ಯಗಳೂ, ಮುಂದಾಲೋಚನೆಯೂ, ದಿಟ್ಟ ಹೆಜ್ಜೆಯೂ ಕೂಡ ಕಾರಣ ಎಂಬುದನ್ನು ಅವರನ್ನು ಬಲ್ಲವರೆಲ್ಲರೂ ಬಲ್ಲರು.

ಯಾವ ವ್ಯಕ್ತಿಯು ನ್ಯಾಯಮಾರ್ಗದಲ್ಲಿ ನಡೆದು ಇತರರಿಗೆ ತೊಂದರೆಯಾಗದಂತೆ, ವಿಶೇಷವಾಗಿ ಪರರಿಗೆ ಹಿತವಾಗುವಂತೆ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಾನೋ ಅವನು ಸಮಾಜದಲ್ಲಿ ದೇಶದ ಮಾನ್ಯತೆಗೆ ಪಾತ್ರನಾಗುತ್ತಾನೋ ಅಂತಹವರನ್ನು ಜನರು ಮರೆಯುವುದಿಲ್ಲ. ಇದೇ ಉಚ್ಚ ಧ್ಯೇಯದಿಂದ ಡಾ.ದೇವರಕೊಂಡಾರೆಡ್ಡಿಯವರನ್ನೂ ಅವರ ಶಿಷ್ಯರೂ, ಅಭಿಮಾನಿಗಳೂ ಸೇರಿ ಅಭಿನಂದಿಸಲು ತೀರ್ಮಾನಿಸಲಾಗಿದೆ. ಅವರ ಸಂಶೋಧನೆ, ವಿದ್ವತ್ ಕಾರ್ಯ, ವಾಙ್ಮಯ ತಪಸ್ಸು ಮೊದಲಾದವು ಇನ್ನೂ ದೀರ್ಘಕಾಲ ಮುಂದುವರೆಯುವಂತಾಗಲಿ.



# ಸ್ನೇಹಜೀವಿ : ಡಾ॥ ದೇವರಕೊಂಡಾರೆಡ್ಡಿ

– ಡಾ॥ ಬಿ. ನಂಜುಂಡಸ್ವಾಮಿ*

ಬೆಂಗಳೂರು ನಗರದಲ್ಲಿ ೧೯೮೦ರ ನಂತರ ಇತಿಹಾಸ, ಸಾಹಿತ್ಯ, ಹಸ್ತಪ್ರತಿ, ಶಾಸನ, ದೇವಸ್ಥಾನದ ವಾಸ್ತು ಮುಂತಾದ ವಿಷಯಗಳ ಬಗ್ಗೆ ಸಂಶೋಧನಾತ್ಮಕ ಲೇಖನಗಳನ್ನು ಬರೆದ ವಿದ್ಯಾರ್ಥಿ ವಿದ್ಯಾರ್ಥಿನಿಯರ ಅಧ್ಯಯನ ಕೇಂದ್ರ ಯಾವುದು ಎಂದು ಹುಡುಕಿದಾಗ 'ಕನ್ನಡ ಸಾಹಿತ್ಯ ಪರಿಷತ್ತಿನ – ಶಾಸನ ತರಗತಿ' ಎಂದರೆ ಬಹಳ ಜನಕ್ಕೆ ಆಶ್ಚರ್ಯವಾಗಬಹುದು. ಬೆಂಗಳೂರು ಪರಿಸರದಲ್ಲಿ ಇರುವ ಶಾಸನತಜ್ಞರು, ಇತಿಹಾಸಜ್ಞರು ತರಬೇತಿ ಪಡೆದು ತಯಾರಾದದ್ದು ಇಲ್ಲೇ. ಕನ್ನಡ ಸಾಹಿತ್ಯ ಪರಿಷತ್ತಿನ ಶಾಸನ ತರಗತಿಯ ಅಧ್ಯಾಪಕರಾಗಿ ಡಾ॥ ದೇವರಕೊಂಡಾರೆಡ್ಡಿಯವರ ಸಾಧನೆ ಬಹಳ ದೊಡ್ಡದು.

ಕನ್ನಡ ಸಾಹಿತ್ಯ, ಸಂಸ್ಕೃತಿ ಬಗ್ಗೆ ಸಾಕಷ್ಟು ಆಸಕ್ತಿಯಿಂದ ಅಧ್ಯಯನ ಮಾಡುತ್ತಾ ಇದ್ದ ನನಗೆ ಡಾ॥ ದೇವರಕೊಂಡಾರೆಡ್ಡಿಯವರ ಪರಿಚಯವಾದದ್ದು ೧೯೯೦ರಲ್ಲಿ. ತುಮಕೂರಿನಿಂದ ಬೆಂಗಳೂರಿಗೆ ಪ್ರತಿನಿತ್ಯ ಓಡಾಡುತ್ತಾ ಇದ್ದ ನನ್ನ ಚಿಕ್ಕಪ್ಪನಂತೆ ಇದ್ದ ಶ್ರೀ ಕರುಣಾಕರರವರು ಗೆಜೆಟಿಯರ್ ಪಕ್ಕದ ಕಟ್ಟಡದಲ್ಲಿ ಕೆಲಸ ಮಾಡುತ್ತಾ ಇದ್ದರು. ಪ್ರಕಟಣಾ ಪೂರ್ವಬೆಲೆಯಲ್ಲಿ ಡಾ.ಎಂ. ಚಿದಾನಂದಮೂರ್ತಿಯವರ ಸಂಭಾವನ ಗ್ರಂಥ ಕೊಳ್ಳಲು ಅವರ ಹತ್ತಿರ ಹಣ ಕೊಟ್ಟಿದ್ದೆ. ಪ್ರಕಟಣಾಪೂರ್ವ ರಸೀದಿಯನ್ನು ಅವರು, ದೇವರಕೊಂಡಾರೆಡ್ಡಿಯವರು ಹತ್ತಿರ ಕೊಟ್ಟಿದ್ದರು. ಹೀಗೆ ನಮ್ಮ ಸ್ನೇಹ ಪ್ರಾರಂಭವಾಯಿತು. ಅವರ ಮೂಲಕ ಕರ್ನಾಟಕ ಇತಿಹಾಸ ಅಕಾಡೆಮಿಯ ಪರಿಚಯವಾಯಿತು.

ಕರ್ನಾಟಕ ಇತಿಹಾಸ ಅಕಾಡೆಮಿ ಪ್ರಾರಂಭವಾದದ್ದು ೧೯೮೬ರಲ್ಲಿ. ನಾನು ಇತಿಹಾಸ ಅಕಾಡೆಮಿ ಸದಸ್ಯನಾಗಿ ಸಮ್ಮೇಳನದಲ್ಲಿ ಮೊದಲು ಭಾಗವಹಿಸಿದ್ದು ೨೦, ೨೧, ೨೨ ಜುಲೈ, ೧೯೯೦. ಹೊಸದಾಗಿ ಸದಸ್ಯನಾದ ನನಗೆ ಸಮ್ಮೇಳನಕ್ಕೆ ಬರುವಂತೆ ದೇವರಕೊಂಡಾ ರೆಡ್ಡಿಯವರು ಒಂದು ಪತ್ರವನ್ನು ಬರೆದಿದ್ದರು. ದಾವಣಗೆರೆಯಲ್ಲಿ ಸಮ್ಮೇಳನ. ಬೆಂಗಳೂರಿಗೆ ಪ್ರತಿತಿಂಗಳೂ ಔಷಧಿ ಕೊಂಡುಕೊಂಡು ಬರಲು ಹೋದಾಗ ಸಮಯ ಮಾಡಿಕೊಂಡು ಗೆಜೆಟಿಯರ್ ಕಛೇರಿಗೆ ಹೋಗಿ ಡಾ॥ ಅ.ಲ. ನರಸಿಂಹನ್. ಪ್ರೊ॥ ಲಕ್ಷ್ಮಣ್ ತೆಲಗಾವಿ, ಡಾ॥ ದೇವರಕೊಂಡಾರೆಡ್ಡಿ, ಶ್ರೀ ಎಂ.ಬಿ. ಪಾಟೀಲ, ಡಾ॥ ಸೂರ್ಯನಾಥ ಕಾಮತ್ ಮುಂತಾದವರನ್ನು ಮಾತಾಡಿಸಿಕೊಂಡು ಬರುತ್ತಿದ್ದೆ. ಗೆಜೆಟಿಯರ್ ಆಫೀಸಿನಲ್ಲಿ ಒಂದೊಂದು ಸಾರಿ ಶ್ರೀ ಎಸ್. ಶಿವಣ್ಣನವರು ಸಹ ಸಿಕ್ಕುತ್ತಿದ್ದರು. ದೇವರಕೊಂಡಾರೆಡ್ಡಿಯವರು ಕುಳಿತುಕೊಳ್ಳುವ ಟೇಬಲ್‌ನ ಹತ್ತಿರ ನೂರಾರು ಹಳೆಯ ಅಪರೂಪದ ಪುಸ್ತಕಗಳನ್ನು ಇಟ್ಟುಕೊಂಡಿರುತ್ತಿದ್ದರು. ನಾವು ಏನನ್ನೇ ಕೇಳಲಿ ಎಲ್ಲದಕ್ಕೂ ರೆಡ್ಡಿಯವರು ಸಮಾಧಾನದಿಂದ ಉತ್ತರ ಹೇಳಿ ಹತ್ತಿರದ ಅವೆನ್ಯೂ ರಸ್ತೆಯಲ್ಲಿ ತಿಂಡಿ ತಿನ್ನಿಸಿ, ಕಾಫಿ ಕುಡಿಸಿ, ಆತಿಥ್ಯವನ್ನು ಮಾಡಿಯೇ ಕಳುಹಿಸುತ್ತಿದ್ದದ್ದು, ರೆಡ್ಡಿಯವರಿಗೆ ಬಸವಣ್ಣನ ದಾಸೋಹಭಾವ ರಕ್ತಗತವಾಗಿ ಬಂದದ್ದು.

ಒಮ್ಮೆ ಗುಬ್ಬಿ ಹೊಸಹಳ್ಳಿ ದಾಖಲೆಗಳನ್ನು ಪರಿಶೀಲಿಸಲು ನಾನು, ತುಮಕೂರಿನ ಪ್ರೊ. ರೇವಣ್ಣ ಸಿದ್ದಪ್ಪನವರು, ಡಾ. ದೇವರಕೊಂಡಾರೆಡ್ಡಿಯವರು ಹೊರಟೆವು. ಗುಬ್ಬಿಯ ನಮ್ಮ ಮನೆಗೆ ಮೊದಲು ಹೋಗಿ ನಂತರ ಗುಬ್ಬಿ ಹೊಸಹಳ್ಳಿಗೆ ಹೋಗುವುದೆಂದು ನಿರ್ಧರಿಸಿದ್ದೆವು. ನಮ್ಮ ಮನೆ ಹಿಂದೆ ಮೂರು ಅಡಿ ಉದ್ದದ ಒಂದೂವರೆ ಅಡಿ ಅಗಲದ ವೀರಗಲ್ಲು ಇತ್ತು. ವೀರನ ಪಕ್ಕ ನಾಗನ ಕೆತ್ತನೆ ಇತ್ತು. ಅದು ಬಹಳ ಅಪರೂಪದ ಗಂಗರ ಕಾಲದ ವೀರಗಲ್ಲು ಎಂದು ರೆಡ್ಡಿಯವರು ಗುರುತಿಸಿದರು. ಇಂದು ಆ ವೀರಗಲ್ಲು ಅಲ್ಲಿ ಇಲ್ಲ. ನನ್ನ ಮನೆಯಲ್ಲಿ ನಮ್ಮ ಅಜ್ಜಿ ಮತ್ತು ನನ್ನ ತಂದೆಯವರು ರೆಡ್ಡಿಯವರನ್ನು ಮತ್ತು ರೇವಣ್ಣ ಸಿದ್ದಪ್ಪನವರನ್ನು ನೋಡಿ ಬಹಳ ಸಂತೋಷಪಟ್ಟರು. ನಂತರ ಮೂವರೂ ಗುಬ್ಬಿ ಹೊಸಹಳ್ಳಿಗೆ ಹೋಗಿ ನೂರಾರು ದಾಖಲೆಗಳನ್ನು ಜೋಪಾನ ಮಾಡಿ ಬಂದೆವು. ೧೯೯೨ರಲ್ಲಿ ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಗೂಳೂರು ಮೂಲದ 'ಲೋಕಸೇವಾ ನಿರತ ಜಿ.ಎಂ. ಸಿದ್ಧರಾಮಣ್ಣನವರ ಧರ್ಮದತ್ತಿ

---

* ಪಂಡಿತ ತಾರಾನಾಥ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಶಾಪಿಂಗ್ ಕಾಂಪ್ಲೆಕ್ಸ್, ಬಿ.ಎಚ್.ರಸ್ತೆ, ತುಮಕೂರು–೫೭೨೧೦೨.

ಸಂಸ್ಥೆಯ ಸಹಕಾರದಿಂದ ಗೂಳೂರು ಸಿದ್ಧವೀರಣ್ಣೊಡೆಯನ ಶೂನ್ಯ ಸಂಪಾದನೆ ಬಗ್ಗೆ ವಿಚಾರ ಸಂಕಿರಣವನ್ನು ಏರ್ಪಡಿಸಲಾಗಿತ್ತು. ಈ ಸಮ್ಮೇಳನಕ್ಕೆ ಹಿರಿಯ ವಿದ್ವಾಂಸರಾದ ಡಾ. ಎಲ್.ಬಸವರಾಜು, ಡಾ. ಎಂ. ಚಿದಾನಂದ ಮೂರ್ತಿ, ಪ್ರೊ. ಕ.ವೆಂ. ರಾಜಗೋಪಾಲ್, ಶ್ರೀ ಷಣ್ಮುಖಯ್ಯ ಅಕ್ಕೂರಮಠ, ಶ್ರೀ ಎಸ್. ಶಿವಣ್ಣನವರು, ಅಂದಿನ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು ಹೀಗೆ ವಿದ್ವತ್ತಿನ ದಂಡೇ ಗೂಳೂರಿಗೆ ಬಂದಿತ್ತು. ಇದೇ ತರಹದ ಒಂದು ವಿಚಾರ ಸಂಕಿರಣವನ್ನು ಗುಮ್ಮಳಾಪುರದಲ್ಲಿ ಮಾಡಲು ದೇವರಕೊಂಡಾರೆಡ್ಡಿಯವರ ಸಹಕಾರ ಕೇಳಿದೆ. ಸಂತೋಷದಿಂದ ಒಪ್ಪಿಕೊಂಡರು. ಬೆಂಗಳೂರು ಬಸವ ಸಮಿತಿ ಆಶ್ರಯದಲ್ಲಿ ವಿಚಾರಸಂಕಿರಣ ನಡೆಸಲು ನಿರ್ಧರಿಸಿದೆವು. ಇಬ್ಬರೂ ಗುಮ್ಮಳಾಪುರಕ್ಕೆ ಹೋಗಿ ಗುಮ್ಮಳಾಪುರದ ಮಠದ ಸ್ವಾಮಿಗಳನ್ನೂ, ಊರಿನ ಯಜಮಾನರನ್ನೂ ಕಂಡು ಎಲ್ಲಾ ವ್ಯವಸ್ಥೆ ಮಾಡಿದೆವು.

'ಗುಮ್ಮಳಾಪುರದ ಸಿದ್ಧಲಿಂಗಯತಿಗಳ ಶೂನ್ಯ ಸಂಪಾದನೆ' ಎಂಬ ವಿಷಯದಲ್ಲಿ ನಡೆದ ಭವ್ಯವಾದ ಈ ಕಾರ್ಯಕ್ರಮದಲ್ಲಿ ರಾಜಾಪುರದ ಶ್ರೀಗಳೂ ಭಾಗವಹಿಸಿದ್ದರು. ಆ ದಿನ ಗುಮ್ಮಳಾಪುರದ ಐತಿಹಾಸಿಕ ಸಂಪತ್ತು ಮತ್ತು ಶಾಸನವನ್ನು ಕುರಿತು ಡಾ. ದೇವರಕೊಂಡಾರೆಡ್ಡಿಯವರು ಉಪನ್ಯಾಸ ಮಾಡಿದರು. ಬಸವ ಸಮಿತಿ ಕಡೆಯಿಂದ ಜಮಖಂಡಿಮಠರು ಸಮಾರೋಪ ಸಮಾರಂಭವನ್ನು ನೆರವೇರಿಸಿಕೊಟ್ಟರು.

ಬೆಂಗಳೂರು ರಾಜಾಜಿನಗರದ ವಿವೇಕಾನಂದ ಕಾಲೇಜಿನವರು 'ಗೌಡ ದೊರೆಗಳ' ಕುರಿತು ಒಂದು ವಿಚಾರ ಸಂಕಿರಣವನ್ನು ಮಾಡಿದರು. ಅದು ಪುಸ್ತಕ ರೂಪದಲ್ಲಿಯೂ ಹೊರಬಂದಿದೆ. ವಿವೇಕಾನಂದ ಕಾಲೇಜಿನ ದಿ. ಜಯರಾಮಯ್ಯನವರು ಈ ವಿಚಾರ ಸಂಕಿರಣಕ್ಕೆ ವಿಶೇಷವಾಗಿ ದುಡಿದವರು. ಈ ವಿಚಾರ ಸಂಕಿರಣ ಯಶಸ್ವಿಯಾಗಲು, ಅದು ಪುಸ್ತಕ ರೂಪದಲ್ಲಿ ಪ್ರಕಟವಾಗಲು ದೇವರಕೊಂಡಾರೆಡ್ಡಿಯವರ ಶ್ರಮ ಸಾಕಷ್ಟು ಇದೆ. ಹೀಗೆ ಬೆಂಗಳೂರಿನ ಸಾಂಸ್ಕೃತಿಕ ಬದುಕಿನಲ್ಲಿ ತಮ್ಮದೇ ಆದ ಛಾಪು ಮೂಡಿಸಿದ ಇವರು ನಂತರ ಹಂಪಿ ವಿಶ್ವವಿದ್ಯಾಲಯದ ಶಾಸನ ವಿಭಾಗದ ಮುಖ್ಯಸ್ಥರಾಗಿ ತಮ್ಮ ಸೇವೆ ಪ್ರಾರಂಭಿಸಿದರು.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನ ವಿಭಾಗದಿಂದ ಹಲವಾರು ಶಾಸನ ಸಂಪುಟಗಳನ್ನು ಇವರು ಪ್ರಕಟಿಸಿದ್ದಾರೆ. ರೆಡ್ಡಿಯವರ ಮಹಾಪ್ರಬಂಧ ಗಂಗರಸರ ವಾಸ್ತುಶಿಲ್ಪ ಕುರಿತದ್ದು. ಅದು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿದೆ. ಕೆಳದಿ ಅರಸರ ಕಾಲದ ಕೆಳದಿ ಬಸವರಾಜ ಭೂಪಾಲನ 'ಕಾಳಿಕಾಕಾಂಡ'ದ ಬಗ್ಗೆ ಸಂಶೋಧನೆ ಮಾಡಿದ್ದಾರೆ.

ಡಾ. ದೇವರಕೊಂಡಾರೆಡ್ಡಿಯವರ ಇನ್ನೊಂದು ದೊಡ್ಡ ಗುಣವೆಂದರೆ ಕಷ್ಟದಲ್ಲಿ ಇರುವವರಿಗೆ ತಮ್ಮ ಸಹಾಯ ಹಸ್ತವನ್ನು ನೀಡುವಂತಹುದು. ಕೌಟುಂಬಿಕ ಸಮಸ್ಯೆ ಇರಲಿ, ಆರ್ಥಿಕ ಸಮಸ್ಯೆ ಇರಲಿ ನೊಂದು ಬೆಂದವರ ಬಗ್ಗೆ ಸಾಕಷ್ಟು ಅನುಕಂಪ. ಬೆಂಗಳೂರಿನಂತಹ ಮಹಾನಗರದಲ್ಲಿ ಇಂತಹವರೂ ಇದ್ದಾರೆಯೇ ಎಂದು ಬೆರಗಾಗುವಷ್ಟು ದೊಡ್ಡಗುಣ ರೆಡ್ಡಿಯವರದು. ಸಾಮಾನ್ಯ ಶಿಷ್ಯನನ್ನೂ ಕೂಡ ಅಸಾಮಾನ್ಯ ಶಿಷ್ಯನನ್ನಾಗಿ ಮಾಡಲು ಪ್ರಯತ್ನ ಪಟ್ಟದ್ದನ್ನು ನಾನು ನೋಡಿದ್ದೇನೆ. ಸೆಪ್ಟಂಬರ್ ೨೦೦೩ರಲ್ಲಿ ಬಾದಾಮಿಯಲ್ಲಿ ನಡೆದ ಇತಿಹಾಸ ಅಕಾಡೆಮಿಯ ಸಮ್ಮೇಳನದಲ್ಲಿ ಡಾ॥ ಬಾ.ರಾ. ಗೋಪಾಲ್ ಪ್ರಶಸ್ತಿ ಪಡೆದ ತಕ್ಷಣ, ತಾವು ಪಡೆದ ಹಣವನ್ನು ಆ ಕ್ಷಣದಲ್ಲೇ ಕರ್ನಾಟಕ ಇತಿಹಾಸ ಅಕಾಡೆಮಿಗೆ ನೀಡಿದರು. ತ್ಯಾಗ ಎನ್ನುವುದು ರೆಡ್ಡಿಯವರಿಗೆ ರಕ್ತಗತವಾಗಿ ಬಂದದ್ದು.

ಡಾ॥ ದೇವರಕೊಂಡಾರೆಡ್ಡಿಯವರದು ಸುಖೀ ಕುಟುಂಬ. ಇದೇ ರೀತಿ ನೂರ್ಕಾಲ ಬಾಳಲಿ.



# ನಾ ಕಂಡ ರೆಡ್ಡಿ ಮೇಷ್ಟ್ರು

– ಡಾ॥ ಎಂ. ಕೊಟ್ರೇಶ್*

**ಆ** ದಿನ ನನ್ನ ಜೀವಮಾನದಲ್ಲಿಯೇ ಮರೆಯಲಾರದ್ದು, ಕನ್ನಡಿಗರು ಹೆಮ್ಮೆ ಪಡುವ ವಿಶ್ವವಿದ್ಯಾಲಯ ನನ್ನ ಜಿಲ್ಲೆಯಲ್ಲಿದೆ. ಆಗ ಕನ್ನಡದ ರಾಯಭಾರಿಗಳಂತೆ ಸಾರಥ್ಯ ವಹಿಸಿಕೊಂಡಿದ್ದವರು ಖ್ಯಾತ ಸಾಹಿತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರು. ಅವರಿಗೆ ಜೊತೆಯಾದವರು ಶ್ರೇಷ್ಠ ವಿಮರ್ಶಕ ಡಾ॥ ಕೆ.ವಿ.ಎನ್. ಈ ಹುರಿಯಾಳುಗಳ ನೇತೃತ್ವದಲ್ಲಿ ಕನ್ನಡದ ಬಂಡಿ ಪ್ರಯಾಣ ಬೆಳೆಸಿತ್ತು. ಆ ಬಂಡಿಯ ಒಂದು ಅಂಕಣ ಶಾಸನಶಾಸ್ತ್ರ ವಿಭಾಗ. ಆಗ ಇದರ ನಾಯಕರು ರೆಡ್ಡಿಮೇಷ್ಟ್ರು. ಕ್ರಿ.ಶ. ೧೯೯೫ರ ಸೆಪ್ಟಂಬರ್ ತಿಂಗಳಿನಲ್ಲಿ ನಾನು ಎಂ.ಫಿಲ್., ಪ್ರವೇಶ ಪರೀಕ್ಷೆ ಮುಗಿಸಿ ಮೌಖಿಕ ಪರೀಕ್ಷೆಗಾಗಿ ಕೂಡಲಸಂಗಮದ ಕಲ್ಲುಕಟ್ಟಡದ ಒಳ ಪ್ರವೇಶಿಸಿದಾಗ, ಸಂದರ್ಶನ ತೆಗೆದುಕೊಳ್ಳಲು ಕುಳಿತ ಮೂವರಲ್ಲಿ ಇವರು ಒಬ್ಬರು. ಆಗ ಮೊದಲ ಬಾರಿ ರೆಡ್ಡಿ ಮೇಷ್ಟ್ರು ಅವರ ಪರಿಚಯವಾಯಿತು. ಸಂದರ್ಶನ ಪತ್ರದಲ್ಲಿಯ ನನ್ನ ಹೆಸರನ್ನು ನೋಡಿಯೇ ಏನೋ, ಬಹಳ ದಿನಗಳಿಂದ ನಾನು ಅವರಿಗೆ ಪರಿಚಿತನೇನೋ ಎನ್ನುವಂತೆ, 'ಏನಪ್ಪ ಕೊಟ್ರೇಶ್ ಯಾವ ವಿಶ್ವವಿದ್ಯಾಲಯದಲ್ಲಿ ಎಂ.ಎ. ಮಾಡಿದೆ' ಎಂದರು. ನನ್ನವರು ಎನ್ನುವವರು ಯಾರು ಇಲ್ಲದ ಆ ಸ್ಥಳದಲ್ಲಿ, ನನ್ನ ಹೆಸರನ್ನು ಸಂಬೋಧಿಸಿದ್ದು, ಬಡತನದ ಬೇಗೆಯಲ್ಲಿ ಬೆಂದು ಬಸವಳಿದು ಸರ್ಟಿಫಿಕೇಟುಗಳನ್ನು ಹೊತ್ತು ಇಲ್ಲಿಗೆ ಬಂದದ್ದು ಸಾರ್ಥಕವೆನಿಸಿತು. ಎಷ್ಟೋ ಬಹಳ ದಿನಗಳಿಂದ ಇವರು ನನ್ನ ಪರಿಚಯದವರು ಎನಿಸಿತು. ಹಾಗಾಗಿ ಆ ದಿನ ನನ್ನ ಜೀವಮಾನದಲ್ಲಿಯೇ ಮರೆಯಲಾರದ್ದು.

ಬ್ರಹ್ಮ–ವಿಷ್ಣು–ಮಹೇಶ್ವರರಂತೆ ಇದ್ದ ಪ್ರೊ. ಲಕ್ಷ್ಮಣ ತೆಲಗಾವಿ, ಡಾ॥ ಕೆ.ಎಂ. ಸುರೇಶ ಮತ್ತು ರೆಡ್ಡಿ ಮೇಷ್ಟ್ರು ಒಬ್ಬೊಬ್ಬ ವಿದ್ಯಾರ್ಥಿಯನ್ನು ಆಯ್ಕೆ ಮಾಡಿಕೊಂಡಿದ್ದರು. ಅವರಲ್ಲಿ ನಾನು ಒಬ್ಬನಾಗಿದ್ದೆ. ನನ್ನ ಎಂ.ಫಿಲ್., ಮಾರ್ಗದರ್ಶಕರಾಗಿ ರೆಡ್ಡಿ ಮೇಷ್ಟ್ರು ಸಿಗುತ್ತಾರೆ ಅಂತ ಎಣಿಸಿರಲಿಲ್ಲ. ಈ ಎಂ.ಫಿಲ್. ನನ್ನ ಭವಿಷ್ಯವನ್ನೇ ಬದಲಾಯಿಸಿತು.

ಒಂದು ದಿನ ಸಂಜೆ ೭ರ ಹೊತ್ತಿಗೆ ರೆಡ್ಡಿ ಮೇಷ್ಟ್ರ ಕೊಠಡಿಗೆ ಹೋಗಿದ್ದೆ. ಪಟ್ಟೆ ಪಟ್ಟೆ ನಿಕ್ಕರ್, ಅದರ ಮೇಲೆ ಪಂಚೆ, ಬಿಳಿ ಬನಿಯನ್ ತೊಟ್ಟ ಮುಟ್ಟ ಶರೀರ. ಪುಸ್ತಕಗಳ ರಾಶಿಯ ಮಧ್ಯದ ನೈಲಾನ್ ಕುರ್ಚಿಯ ಮೇಲೆ ಇದ್ದದ್ದು ಯಾರು ಅಂತ ಇಣುಕಿದೆ. ಅವರೇ ರೆಡ್ಡಿ ಮೇಷ್ಟ್ರು. 'ಸಾರ್' ಅಂದೆ, ಪಾಪ ದಣಿದ ಶರೀರಕ್ಕೆ ವಿಶ್ರಾಂತಿ ಬೇಕಿತ್ತೇನೋ? ಎಂದು ನಾನು ಒಳಗೊಳಗೆ ಅಂದುಕೊಂಡೆ. ಅವರು 'ಬಾಪ್ಪ ಕೊಟ್ರೇಶಿ, ಕಾಫಿ ಕುಡಿತಿಯೇನು? ಕುಳಿತುಕೋ' ಎಂದರು. 'ಪರವಾಗಿಲ್ಲ ಸಾರ್' ಎಂದು ಹಾಗೆ ಗೋಡೆಗೆ ಬೆನ್ನು ಒರಗಿಸಿ ಕೆಳಗೆ ಕುಳಿತುಕೊಂಡೆ, 'ಅಯ್ಯೋ ನಿನ್ನ, ಛೇರ್ ಮೇಲೆ ಕುಳಿತುಕೋ, ಛೇರ್ ಇರೋದು ಏತಕ್ಕೆ' ಎಂದರು.

ಅಂದು ನನ್ನ ಗಜ ಗಾತ್ರದ ಕುಟುಂಬದ ವಿವರವನ್ನು ಪಾಠದ ರೀತಿಯಲ್ಲಿ ಅವರಿಗೆ ಒಪ್ಪಿಸಿದೆ. ಅಲ್ಲಿಂದ ನಿತ್ಯ ಒಂದಿಲ್ಲೊಂದು ಸಂದರ್ಭದಲ್ಲಿ ಅವರ ಜತೆ ಮಾತನಾಡುವ ಅವಕಾಶಗಳು ದೊರೆತವು. ಬಳ್ಳಾರಿ, ಕೊಪ್ಪಳ ಜಿಲ್ಲೆಯ ಶಾಸನ ಸಂಪುಟದ ತಯಾರಿಯಲ್ಲಿ ನನ್ನನ್ನು ತೊಡಗಿಸಿಕೊಂಡರು. ಇದರಿಂದಾಗಿ ಡಾ॥ ಹಂ.ಪ.ನಾ. ಅವರನ್ನು ಸೇರಿಸಿಕೊಂಡಂತೆ ದೊಡ್ಡವರ ಪರಿಚಯ ಹಾಗೂ ಅವರ ಜತೆ ಒಡನಾಟ ಬೆಳೆಯಿತು. ಇದರಿಂದಾಗಿ ನನ್ನ ವ್ಯಕ್ತಿತ್ವ ರೂಪಿಸಿಕೊಂಡೆ.

ಆರ್ಥಿಕ ಸಂಕಷ್ಟದಲ್ಲಿದ್ದ ನನಗೆ ಸಕಾಲದಲ್ಲಿ ಸಹಾಯ ಮಾಡಿ ಆಸರೆಯಾದರು. ಎಷ್ಟು ಸಲುಗೆ ಬೆಳೆಯಿತು ಅಂದರೆ, ಪ್ರಾಯಶಃ ಅವರು, ಗಂಡಸರು–ಹೆಂಗಸರು ಎಲ್ಲರ ಜತೆಗೆ ಬಹಳ ಪ್ರೀತಿಯಿಂದ ಆತ್ಮೀಯತೆಯಿಂದ ನಡೆದುಕೊಳ್ಳುತ್ತಿದ್ದರು. ಅವರ ಆತ್ಮೀಯರಲ್ಲಿ ನಾನು ಒಬ್ಬನಾದೆ.

ಆ ಕ್ಷಣ ಮರೆಯುವ ಹಾಗಿಲ್ಲ, ಅಂದು ವಿಶ್ವವಿದ್ಯಾಲಯಕ್ಕೆ ನಾನು ಹೋಗಿರಲಿಲ್ಲ. ಸಂಜೆ ೬.೩೦ಕ್ಕೆ ನಾನು

---

* ಮುಖ್ಯಸ್ಥರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನರಳುತ್ತಾ ರೂಂನಲ್ಲಿ ಹರಕಲು ಬೆಡ್‌ಶೀಟನ್ನು ಹೊದ್ದು ಮಲಗಿದ್ದೆ, ಯಾರೋ ಕೂಗಿದ ಹಾಗೆ ಭಾಸವಾಯಿತು. ಹತ್ತಿರ ಬಂದು ನನ್ನ ತಲೆಯನ್ನು ಸವರುತ್ತಾ ಬ್ರೆಡ್, ಗುಳಿಗೆ ಮುಂದಿಟ್ಟು ಮಾತನಾಡಿಸಿದಾಗಲೇ ತಿಳಿದಿದ್ದು, ಅವರು ರೆಡ್ಡಿ ಮೇಷ್ಟ್ರು ಅಂತ. ಗಾಬರಿಯಿಂದ ಮೇಲೆದ್ದು, 'ಸಾರ್ ಸಾರ್' ಅಂದೆ, 'ಮಲಗಿಕೋ, ಹುಷಾರಿಲ್ಲಂತ ಯಾರೋ ಹೇಳಿದರು, ಅದಕ್ಕೆ ಬಂದೆ, ವಿಶ್ರಾಂತಿ ತಗೋ. ಏನಾದ್ರೂ ಬೇಕಾದ್ರೆ ಕೇಳು' ಅಂದ್ರು, ಇಂಥಾ ದೊಡ್ಡ ಹೃದಯವಂತರು ಈ ರೆಡ್ಡಿ ಮೇಷ್ಟ್ರು.

ಶೈಕ್ಷಣಿಕ ವಿಚಾರ ಬಂದಾಗ ಅಷ್ಟೆ ಗಟ್ಟಿ, ಸ್ವಲ್ಪ ಚೆನ್ನಾಗಿ ತಿರುಗಾಡು ಅನುಭವ ಬರುತ್ತೆ ಎಂದು ಹೇಳುತ್ತಿದ್ದರು. 'ವಿಷಯ ಸಂಗ್ರಹ ಮಾಡಿ ತೆಗೆದುಕೊಂಡು ಬಾ. ಬರೆಯುವುದು ಹೇಗೆ ಅಂತಾ ಹೇಳಿ ಕೊಡ್ತೀನಿ' ಅಂತಾ ಹೇಳುವ ಸರಳ ಸಜ್ಜನಿಕೆ ಅವರದು.

ವಿಭಾಗ, ವಿಶ್ವವಿದ್ಯಾಲಯದ ಬಗ್ಗೆ ಅಪಾರ ಪ್ರೀತಿ-ಕಾಳಜಿ, ಕಳಕಳಿ ಅವರಿಗೆ ಇತ್ತು. ವಿಶ್ವವಿದ್ಯಾಲಯದಲ್ಲಿರುವ ಬಹಳಷ್ಟು ಗಿಡ-ಮರಗಳು ಅವರ ಹೆಸರನ್ನು ಹೇಳುತ್ತವೆ ಅಂದರೆ ಅವುಗಳಿಗೆ ಬಾಯಿ ಇದೆ ಎಂದಲ್ಲ. ಅವರ ಆರೈಕೆ ಹಾಗೂ ಕಳಕಳಿ ಹಾಗಿತ್ತು. ಅವರು ನೇರ-ನಿಷ್ಠುರ, ನುಡಿಗಳಿಂದ ಅನೇಕ ಆಡಳಿತಾತ್ಮಕ ಹುದ್ದೆಗಳಿಗೆ ಏರಲೇ ಇಲ್ಲ. ಮುಖಾಮುಖಿ ನೇರ ಮತ್ತು ದಿಟ್ಟವಾಗಿ ಅವರು ಮಾತನಾಡುವ ಸ್ವಭಾವ ಕೆಲವರಿಗೆ ಬೇಸರ ತರಿಸಿದ್ದು ಇರಬಹುದು. ಆದರೆ ಹೃದಯದಲ್ಲಿ ಕಲ್ಮಶ ಇಲ್ಲದವರು. ನಿರಂತರವಾಗಿ ಶ್ರಮಿಸುವ ನನ್ನಂತಹ ಅದೆಷ್ಟೋ ಮಂದಿಗೆ ಆಸರೆಯಾಗಿ, ಸರಳ ಸಜ್ಜನಿಕೆಯ ಪ್ರತಿರೂಪ ಈ ರೆಡ್ಡಿ ಮೇಷ್ಟ್ರು ಆಗಿದ್ದರು.

ಕ್ರಿ.ಶ.೧೯೯೫ರಿಂದ ಇಂದಿನವರೆಗೆ ಅವರ ಒಡನಾಟದಲ್ಲಿರುವುದರಿಂದ, ಅವರ ವ್ಯಕ್ತಿತ್ವದ ಬಹುಮುಖಿ ಪರಿಚಯ ನನಗಾಗಿದೆ. ವಿಭಾಗದ ಬಗ್ಗೆ ಸದಾ ಕಾಳಜಿ ಅವರಲ್ಲಿತ್ತು. ಅವರ ಜೊತೆ ಇರುವಾಗ ಪರಸ್ಪರ ಕುಶಲೋಪರಿಗಳಿಗಿಂತ ಶೈಕ್ಷಣಿಕ ವಿಷಯಗಳನ್ನು ಚರ್ಚೆ ಮಾಡಿದ್ದೇ ಹೆಚ್ಚು. ಅವರು ಯಾವುದೇ ವಿಷಯವನ್ನು ತೆಗೆದುಕೊಂಡರೂ, ಗಂಭೀರವಾಗಿ ಪರಿಗಣಿಸಿ, ಅದರ ಬಗೆಗೆ ಪರಾಮರ್ಶೆ ಮಾಡುತ್ತಿದ್ದರು. ವಿಭಾಗದ ಸದಸ್ಯರನ್ನು ಸೇರಿಸಿಕೊಂಡು, ಉತ್ತರ ಕರ್ನಾಟಕದ ಹಲವು ಶಾಸನ ಸಂಪುಟಗಳನ್ನು ರಚಿಸಿ ಕನ್ನಡ ನಾಡಿಗೆ ನೀಡಿದ ಕೀರ್ತಿ ಅವರದು.

ಕ್ಷೇತ್ರಕಾರ್ಯ ಆಧಾರಿತ ಅವರ ಕೆಲಸದಲ್ಲಿ ನಾನು ಅವರ ಜೊತೆಯಲ್ಲಿ ಹೋದಾಗ ಪ್ರತಿಸಾರಿಯು ಹೊಸ ಹೊಸ ಅನುಭವವನ್ನು ಗಳಿಸಿಕೊಂಡೆ. ವೃತ್ತಿಯಿಂದ ನಿವೃತ್ತರಾದರೂ ಪ್ರಸ್ತುತ ಅವರು ನಿವೃತ್ತಿಯಾಗಿಲ್ಲ. ಸದಾ ಕ್ರಿಯಾಶೀಲ ವ್ಯಕ್ತಿತ್ವವನ್ನುಳ್ಳ ರೆಡ್ಡಿ ಮೇಷ್ಟ್ರು ಅನೇಕರಿಗೆ ಆದರ್ಶರಾಗಿದ್ದಾರೆ.



# ‘ಲಿಪಿಯ ಹುಟ್ಟು ಮತ್ತು ಬೆಳವಣಿಗೆ’ – ಒಂದು ಅವಲೋಕನ

– ಡಾ॥ ಎಂ.ವಿ. ಶ್ರೀನಿವಾಸ*

ಬರವಣಿಗೆ ಮಾನವ ಇತಿಹಾಸದ ಒಂದು ಅತ್ಯಂತ ಮಹತ್ವದ ಬೆಳವಣಿಗೆ. ಎಲ್ಲ ನಾಗರಿಕತೆಗಳ ಬೆಳವಣಿಗೆಗೆ ಲಿಪಿಯೇ ಪ್ರಮುಖ ಆಧಾರ. ಸಾಂಪ್ರದಾಯಿಕವಾಗಿ ಬಳಕೆಯಲ್ಲಿರುವ ಗುರುತು, ಗೆರೆಗಳ ಮೂಲಕ ಮಾನವ ಮಾಡುವ ಸಂವಹನವನ್ನು ಬರವಣಿಗೆಯೆಂದು ಕರೆಯಲಾಗಿದೆ. ಈ ಲಿಪಿಯ ಉಗಮ ಮತ್ತು ಬೆಳವಣಿಗೆಯನ್ನು ಕುರಿತ ಡಾ॥ ದೇವರಕೊಂಡಾರೆಡ್ಡಿಯವರ ಗ್ರಂಥ ‘ಲಿಪಿಯ ಹುಟ್ಟು ಮತ್ತು ಬೆಳವಣಿಗೆ’ ಮಹತ್ವದ ಕೃತಿಯಾಗಿದೆ.

ಇಂದಿನ ಬರವಣಿಗೆ ೫೦೦೦ ವರ್ಷಗಳಿಗಿಂತಲೂ ಹಳೆಯದು. ಆದರೆ ಅದಕ್ಕೂ ಮುನ್ನ ಪ್ರಾಚೀನ ಮಾನವ ಕಲ್ಲಿನ ಮೇಲಿನ ಚಿತ್ರಗಳ ಮೂಲಕ ತನ್ನ ಭಾವನೆಯನ್ನು ವ್ಯಕ್ತಪಡಿಸುತ್ತಿದ್ದ. ಯಾವುದೋ ಅಸ್ಪಷ್ಟ ಚಿಹ್ನೆ, ಗೀರು ಹೇಗೆ ಅಕ್ಷರವಾಯಿತು; ಪುಟ್ಟಪುಟ್ಟ ಸೊಟ್ಟ ಸೊಟ್ಟ, ನೆಟ್ಟಗಿನ ಗೀರುಗಳು ಹೇಗೆ ಸುಂದರವಾದ ಅಕ್ಷರಗಳಾಗಿ ಮಾರ್ಪಾಡಾಗಿ ಅರ್ಥ ನೀಡಲಾರಂಭಿಸಿದವು ಎನ್ನುವುದನ್ನು ಹಿಂಬಾಲಿಸುತ್ತಾ ಹೋಗುವುದು ಒಂದು ರೋಚಕ ಅನುಭವ. ಇದನ್ನು ಪತ್ತೇದಾರಿಯಂತೆ ದೇವರಕೊಂಡಾರೆಡ್ಡಿಯವರು ಹಿಂಬಾಲಿಸುತ್ತ ಹೋಗಿ ಅವುಗಳ ವಿಕಾಸವನ್ನು ನಮ್ಮ ಮುಂದೆ ಚಿತ್ರಿಸಿದಾಗ ಒಂದು ಪ್ರಜ್ಞಾಪೂರ್ಣವಾದ ಕೃತಿಯನ್ನು ಓದಿದ ಅನುಭವವಾಗುತ್ತದೆ.

‘ಲಿಪಿಯ ಹುಟ್ಟು ಮತ್ತು ಬೆಳವಣಿಗೆ’ ಬಹುಗಂಭೀರವೂ ಶಾಸ್ತ್ರೀಯವೂ ಆದ ವಿಷಯ. ವಿವಿಧ ವಿಷಯ, ವಿವಿಧ ವಿಜ್ಞಾನಗಳ ಹಾಗೂ ಶಾಸ್ತ್ರಗಳ ನೆರವಿನಿಂದ ಬರವಣಿಗೆಯ ಹುಟ್ಟು ಮತ್ತು ಬೆಳವಣಿಗೆಯನ್ನು ಈ ಕೃತಿಯಲ್ಲಿ ಅಧ್ಯಯನ ಮಾಡಲಾಗಿದೆ.

ಜಗತ್ತಿನಾದ್ಯಂತ ಇಂದು ಬಳಕೆಯಲ್ಲಿರುವುದು ವರ್ಣ(Alphabetical) ಲಿಪಿಯಾಗಿದ್ದರೂ ಅದು ಬಳಕೆಗೆ ಬರುವುದಕ್ಕೆ ಮೊದಲು ಅನೇಕ ಪ್ರಯೋಗಗಳಾಗಿರುವುದನ್ನು ರೆಡ್ಡಿಯವರು ಮನಗಾಣಿಸುತ್ತಾರೆ. ಅತ್ಯಂತ ಪ್ರಾಚೀನ ರೂಪವಾದ ಚಿತ್ರಲಿಪಿ, ಅನಂತರದ ಭಾವಲಿಪಿ, ಮಧ್ಯಮ ಲಿಪಿ, ಧ್ವನಿರೂಪಕ ಲಿಪಿ, ಅರೆವರ್ಣಲಿಪಿ ಕಡೆಯದಾಗಿ ಇಂದಿನ ವರ್ಣಲಿಪಿಯವರೆಗೆ ಈ ಗ್ರಂಥದಲ್ಲಿ ದೇವರಕೊಂಡಾರೆಡ್ಡಿಯವರು ಕ್ರಮಬದ್ಧವಾಗಿ ನಿರೂಪಿಸಿದ್ದಾರೆ. ಸು.ಕ್ರಿ.ಪೂ.ದಲ್ಲಿ ಸುಮೇರಿಯನ್ನರು ಬಳಸುತ್ತಿದ್ದ ಸುಮೇರಿಯನ್ನರ ಲಿಪಿ ಪ್ರಾರಂಭದಲ್ಲಿ ಮೊಳೆಯಾಕಾರದಲ್ಲಿದ್ದು ಅನಂತರ ಚಿತ್ರಗಳು ಭಾವ ಮತ್ತು ಧ್ವನಿರೂಪಗಳಾಗಿ ಬದಲಾದವು. ಇದೇ ಕಾಲಕ್ಕೆ ಈಜಿಪ್ಟ್‌ನಲ್ಲಿ ಚಿತ್ರಲಿಪಿ ಬಳಕೆಯಲ್ಲಿತ್ತು. ಅನಂತರ ಸಿಂಧೂ, ಚೀನಾ ಮೊದಲಾದ ದೇಶಗಳಲ್ಲಿ ಭಾವಲಿಪಿಗಳು ಕಾಣಿಸಿಕೊಂಡವು. ಸಿರಿಯಾದಲ್ಲಿ ಬಳಕೆಯಲ್ಲಿದ್ದ ಧ್ವನಿ ನಿರೂಪಕ ಲಿಪಿಗಳೂ, ಇಥಿಯೋಪಿಯಾದ ಮೊಳೆಯಾಕಾರದ ಅರೆವರ್ಣಲಿಪಿಗಳೂ ಲಿಪಿಯ ಬೆಳವಣಿಗೆಯಲ್ಲಿ ಪ್ರಮುಖ ಹಂತಗಳೆಂದು ತಿಳಿಸುತ್ತಾರೆ.

ಚಿತ್ರಲಿಪಿಯೇ ಮಾನವ ಬಳಸಿದ ಪ್ರಥಮ ಲಿಪಿ. ಜಗತ್ತಿನ ಅತ್ಯಂತ ಪ್ರಾಚೀನ ನಾಗರಿಕತೆಗಳಲ್ಲಿ ಮೊದಲು ಚಿತ್ರಲಿಪಿ ಪ್ರಾರಂಭವಾದ ಬಗೆಯನ್ನು ಲೇಖಕರು ಇಲ್ಲಿ ನಿರೂಪಿಸಿದ್ದಾರೆ. ಅವುಗಳಲ್ಲಿ ಈಜಿಪ್ಟ್‌ನ ಹಿರೋಗ್ಲಿಫಿಕ್ ಲಿಪಿ, ಜಗತ್ತಿನಲ್ಲೇ ಅತ್ಯಂತ ಮಹತ್ವಪೂರ್ಣವಾದ ಶೋಧನೆ. ಈಜಿಪ್ಟ್‌ನಲ್ಲಿ ದೊರೆತ ರೊಸೆಟ್ಟಾ ಶಾಸನ ಮೂರು ಲಿಪಿಗಳನ್ನು ಒಳಗೊಂಡಿದ್ದಿತು. ಇದನ್ನು ಓದಿದಾಗ ಈಜಿಪ್ಟ್‌ನ ಪ್ರಾಚೀನ ಇತಿಹಾಸ ಹಾಗೂ ನಾಗರಿಕತೆಯ ಬಾಗಿಲು ತೆರೆದಂತಾಯಿತು. ಈಜಿಪ್ಟ್‌ನಲ್ಲಿ ಚಿತ್ರಲಿಪಿ (ಹಿರೋಗ್ಲಿಫಿಕ್), ಧಾರ್ಮಿಕ ಲಿಪಿ ಮತ್ತು ಸಾಮಾನ್ಯ ಲಿಪಿ ಎಂಬ ಮೂರು ಹಂತಗಳಲ್ಲಿ ಲಿಪಿಯು ಬೆಳೆದಿರುವುದನ್ನು ಇಲ್ಲಿ ಗುರುತಿಸಿದ್ದಾರೆ. ಪ್ರಾಚೀನ ಕಾಲದ ಚಿತ್ರಗಳು ಬೆಳೆದು ಅವುಗಳ ಚಿತ್ರದ ಮೂಲ ರೂಪವನ್ನು ಅಷ್ಟಿಷ್ಟು ಕಳೆದುಕೊಂಡು ಸಂಕೇತಗಳಾದ ಬಗೆಯನ್ನೂ ಇಲ್ಲಿ ವಿವರಿಸಲಾಗಿದೆ. ಅನಂತರ ಧರ್ಮಗ್ರಂಥಗಳಿಗೆ ಸೀಮಿತವಾದ ಧರ್ಮಲಿಪಿ, ಕಡೆಗೆ ಖಾಸಗಿ ಹಾಗೂ ವ್ಯಾಪಾರದಲ್ಲಿ ಬಳಕೆಯಾದ ಡೊಮಾಟಿಕ್ (ಸಾಮಾನ್ಯ ಲಿಪಿ) ಬಳಕೆಗೆ ಬಂದಿತು. ಇದು ಕ್ರಿ.ಶ. ೫ನೆಯ ಶತಮಾನದವರೆಗೂ ಬಳಕೆಯಲ್ಲಿತ್ತು ಎನ್ನುತ್ತಾರೆ.

---

* ನಂ.೪೩೦, ಎಚ್. ರಸ್ತೆ, ಐಡಿಯಲ್ ಟೌನ್‌ಷಿಪ್, ರಾಜರಾಜೇಶ್ವರಿನಗರ, ಬೆಂಗಳೂರು-೫೬೦೦೯೮.

ಮೆಸಪೊಟೋಮಿಯಾದಲ್ಲಿ ಕ್ರಿ.ಪೂ. ೪೦೦೦ ವರ್ಷಗಳಿಂದಲೇ ಬಳಕೆಯಲ್ಲಿದ್ದ ಕ್ಯೂನಿಫಾರಂ ಅಥವಾ ಮೊನಚು ಲಿಪಿ ಸುಮೇರಿಯನ್ನರ ಶೋಧ. ಅದು ಸಾಕಷ್ಟು ಮಾರ್ಪಾಡಾಗಿ ಉಚ್ಚಾರಾಂಶ ಚಿತ್ರಲಿಪಿಯಾಗಿ ಮಾರ್ಪಟ್ಟಿತು. ಇವುಗಳನ್ನು ಚಿತ್ರಗಳ ಮೂಲಕ ವಿವರಿಸಿದ ನಂತರ ದೇವರಕೊಂಡಾರೆಡ್ಡಿಯವರು ಕ್ರಿ.ಪೂ. ೩೦೦೦ದಲ್ಲಿದ್ದ ಕ್ರೀಟ್ ಲಿಪಿಯ ಬಗ್ಗೆ, ಕ್ರಿ.ಪೂ. ೧೫೦೦ರ ಸಮಯದಲ್ಲಿದ್ದ ಹಿಟ್ಟೈಟರ ಲಿಪಿಯ ಬಗ್ಗೆ ಕ್ರಿ.ಪೂ. ೩೦೦೦ದ ಮೊದಲೇ ಆರಂಭವಾಗಿದ್ದ ಚೀನಾದ ಲಿಪಿಯ ಬಗ್ಗೆ ವಿವರಿಸಿದ್ದಾರೆ. ಬಹುಸಂಕೀರ್ಣವಾಗಿದ್ದ ಚೀನಾ ಲಿಪಿಯನ್ನು ಜಪಾನ್, ಕೊರಿಯಾ, ಮಂಗೋಲಿಯ ಇನ್ನೂ ಕೆಲವು ಪೂರ್ವ ಏಷ್ಯಾದ ದೇಶಗಳು ಅಳವಡಿಸಿಕೊಂಡಿವೆ ಎಂದು ತಿಳಿಸುತ್ತಾರೆ.

ಸಿಂಧೂಲಿಪಿಯ, ಲಕ್ಷಣ, ಅವುಗಳ ಕಾಲ ಮತ್ತು ವಿದ್ವಾಂಸರ ಅಭಿಪ್ರಾಯಗಳನ್ನು ದೇವರಕೊಂಡಾರೆಡ್ಡಿಯವರು ಇಲ್ಲಿ ವಿವರವಾಗಿ ಚರ್ಚಿಸಿದ್ದಾರೆ. ಕ್ರಿ.ಪೂ. ೩೦೦೦ದ ಹೊತ್ತಿಗೆ ಮುಂದುವರೆದಿದ್ದ ಈ ಸಂಸ್ಕೃತಿ ಮೆಸಪೊಟೋಮಿಯಾದೊಂದಿಗೆ ಸಂಪರ್ಕವನ್ನು ಹೊಂದಿದ್ದಿತು. ಡಿರಿಂಜರ್ ಅವರು ಹೇಳುವಂತೆ ಇವು ಭಾವಸೂಚಕ ಶಬ್ದಗಳೆಂದೂ, ಭಾಗಶಃ ಭಾಷಾಧ್ವನಿ ಸೂಚಕವೆಂದೂ ದೇವರಕೊಂಡಾರೆಡ್ಡಿ ಅಭಿಪ್ರಾಯ ಪಡುತ್ತಾರೆ. ಈ ಲಿಪಿಯ ಬಗ್ಗೆ ಫಾದರ್ ಹೆರಾಸ್, ಮಾರ್ಷಲ್, ಎಲಿಸಬೆತ್, ಪ್ರಾಣ್‌ನಾಥ್, ಬಿ.ವಿ. ಸುಬ್ಬರಾಯಪ್ಪ, ಎನ್. ಝಾ, ಎನ್.ಎಸ್. ರಾಜಾರಾಂ, ಐರಾವತಮ್ ಮಹದೇವನ್ ಹಾಗೂ ರಷ್ಯನ್ ವಿದ್ವಾಂಸರ ಪ್ರಯತ್ನಗಳನ್ನೂ ಇಲ್ಲಿ ಪರಿಶೀಲಿಸಿದ್ದಾರೆ.

ಡಾ. ಎಸ್.ಆರ್. ರಾವ್ ಇದು ಮೂಲ ಸಂಸ್ಕೃತ ಭಾಷೆ ಎಂದಿರುವುದನ್ನೂ ಕೆ.ವಿ.ರಮೇಶ್ ಅವರು ಸಿಂಧೂ ಮುದ್ರಿಕೆಗಳಲ್ಲಿರುವುದು ಅಕ್ಷರಗಳಲ್ಲ, ವೇದದ ಉಚ್ಚಾರದ ಸಂಕೇತವೆಂದು ಹೇಳಿರುವುದನ್ನೂ ಪ್ರಸ್ತಾಪಿಸುತ್ತಾರೆ. ಇಷ್ಟಾದರೂ ಈ ಲಿಪಿಯ ಬಗ್ಗೆ ಸರ್ವ ವಿದ್ವಾಂಸರ ಸರ್ವಸಮ್ಮತ ಫಲಿತಾಂಶ ದೊರೆತಿಲ್ಲವೆಂದು ಲೇಖಕರು ತಿಳಿಸುತ್ತಾರೆ. ಜಗತ್ತಿನ ಅತಿ ಪುರಾತನ ಲಿಪಿಗಳಲ್ಲಿ ಮಾಯಾ, ಈಸ್ಟರ್, ಜಪಾನಿನ ಲಿಪಿಗಳು ಸೇರಿರುವುದನ್ನು ಈ ಗ್ರಂಥದಲ್ಲಿ ಪ್ರಸ್ತಾಪಿಸಲಾಗಿದೆ.

ಹೀಗೆ ಜಗತ್ತಿನ ಪ್ರಾಚೀನ ಲಿಪಿಗಳ ಹುಟ್ಟು ಮತ್ತು ಬೆಳವಣಿಗೆಯನ್ನು ನಿರೂಪಿಸಿದ ನಂತರ ದೇವರಕೊಂಡಾರೆಡ್ಡಿಯವರು ಭಾರತದಲ್ಲಿ ಲಿಪಿಯ ಉಗಮವನ್ನು ಚರ್ಚಿಸಿದ್ದಾರೆ. ಭಾರತದಲ್ಲಿ ಬಹುಪ್ರಾಚೀನ ಕಾಲದಿಂದ ಬರವಣಿಗೆ ಉಪಯೋಗದಲ್ಲಿತ್ತು ಎಂಬುದಕ್ಕೆ ಹಲವಾರು ಆಧಾರಗಳನ್ನು ನೀಡುತ್ತಾರೆ. ಜೈನ, ಬೌದ್ಧ ಹಾಗೂ ವೈದಿಕ ಗ್ರಂಥಗಳಲ್ಲಿ ಬರವಣಿಗೆಯ ಪ್ರಸ್ತಾಪವನ್ನು ಎತ್ತಿ ತೋರಿಸುತ್ತಾರೆ. ವೇದಗಳ ಕಾಲದಲ್ಲೇ ಅಕ್ಷರ ಜ್ಞಾನವಿತ್ತು ಎಂಬುದನ್ನು ಕೆಲವು ಮಂತ್ರಗಳಿಂದ ತಿಳಿಯಬಹುದು. ತೈತ್ತಿರೀಯ ಉಪನಿಷತ್ತಿನಲ್ಲಿ ಇಂದ್ರನು ಭಾಷೆಗೆ ವ್ಯಾಕರಣವನ್ನು ಬರೆದನೆಂದು ಹೇಳಲಾಗಿದೆ. ಗೋಪಥ ಬ್ರಾಹ್ಮಣದಲ್ಲಿ ನಡೆದಿರುವ ಚರ್ಚೆಯಿಂದ ಅಕ್ಷರ, ಪದ, ಛಂದಸ್ಸು ಮುಂತಾದುವು ಬಳಕೆಯಲ್ಲಿದ್ದುದು ಕಂಡುಬರುತ್ತದೆ. ಹಾಗೆಯೇ ಕ್ರಿ.ಪೂ. ೮ನೆಯ ಶತಮಾನದ ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಅಕ್ಷರ, ವರ್ಣ, ಲಿಪಿ, ಲಿಪಿಕರ ಮೊದಲಾದ ಪದಗಳು ಉಲ್ಲೇಖವಾಗಿರುವುದನ್ನು ತಿಳಿಸುತ್ತಾರೆ.

ಭಾರತದ ಅತ್ಯಂತ ಪ್ರಾಚೀನ ಲಿಪಿಯಾದ ಬ್ರಾಹ್ಮಿಯ ಬಗ್ಗೆ ಬರೆಯುತ್ತ ಅದರ ಬಗ್ಗೆ ಇದುವರೆಗೂ ನಡೆದಿರುವ ಚರ್ಚೆಯ ಸಾರಾಂಶವನ್ನು ನೀಡಿದ್ದಾರೆ. ಬ್ರಾಹ್ಮಿಯ ಮೂಲದ ಬಗ್ಗೆ ಪ್ರಸ್ತುತವಿರುವ ಎಲ್ಲಾ ವಾದಗಳನ್ನೂ ಅಂಕಿ ಅಂಶಗಳನ್ನೂ ಇಲ್ಲಿ ಸಂಗ್ರಹವಾಗಿ ನೀಡಿದ್ದಾರೆ. ಕಡೆಗೆ ಬ್ರಾಹ್ಮಿಲಿಪಿಗೆ ಬೇರೆ ಮೂಲವೊಂದಿದ್ದಿರಬೇಕು. ಆ ಮೂಲವು ಸ್ಥಳೀಯ ಸೃಷ್ಟಿಯಾಗಿದ್ದಿರಬೇಕು ಎಂಬ ತೀರ್ಮಾನಕ್ಕೆ ಬರುತ್ತಾರೆ.

ಅಶೋಕನ ಕಾಲದ ಬ್ರಾಹ್ಮಿ ಲಿಪಿ ಬೆಳೆಯುತ್ತಾ, ಶಾತವಾಹನರ ಕಾಲದಲ್ಲೂ ಮುಂದುವರೆಯಿತು. ಇದನ್ನು ದಾಕ್ಷಿಣಾತ್ಯ ಬ್ರಾಹ್ಮಿಲಿಪಿ ಎಂದು ಕರೆಯಲಾಗಿದೆ. ಬರವಣಿಗೆಯ ಮಾಧ್ಯಮ ಉತ್ತರ ಮತ್ತು ದಕ್ಷಿಣದಲ್ಲಿ ಬೇರೆ ಬೇರೆಯಾಗಿದ್ದುದರಿಂದ ಲಿಪಿಯಲ್ಲೂ ಭಿನ್ನತೆ ಕಂಡುಬರುತ್ತದೆ.

ನಾಲ್ಕನೆಯ ಶತಮಾನದಲ್ಲಿ ಆಳಿದ ಕದಂಬರು ಮೊದಲ ಕನ್ನಡ ಅರಸರು. ಇವರ ಕಾಲದಲ್ಲಿ ಕನ್ನಡ ಲಿಪಿ ವಿಕಾಸ ಹೊಂದಿದೆ. ಇದನ್ನು ಕನ್ನಡ ಬ್ರಾಹ್ಮಿ ಎಂದು ಕರೆದಿರುವುದರಿಂದ ಅದು ಕನ್ನಡಕ್ಕೆ ಅಷ್ಟು ಸಮೀಪವೆಂದು ಗೊತ್ತಾಗುತ್ತದೆ.

ಅಶೋಕನ ನಂತರದ ಲಿಪಿಗಳನ್ನು ಪರಿಶೀಲಿಸುತ್ತಾ ನಾಗರಿ ಲಿಪಿಯ ಉಗಮ ಮತ್ತು ವಿಕಾಸವನ್ನು ವಿವರಿಸುತ್ತಾರೆ. ಬಂಗಾಳಿ ಲಿಪಿ, ಶಂಕು ಲಿಪಿಯನ್ನು ಚರ್ಚಿಸಿದ ನಂತರ ದಕ್ಷಿಣ ಭಾರತವನ್ನು ಪ್ರವೇಶಿಸುತ್ತಾರೆ. ಶಾತವಾಹನರ ಕಾಲದಲ್ಲಿ ವರ್ಣಮಾಲೆ ಬೆಳೆದ ಬಗೆಯನ್ನು ಚರ್ಚಿಸಿ, ಕದಂಬರ ಕಾಲವನ್ನು ಪ್ರವೇಶಿಸುತ್ತಾರೆ. ಈ ಸಂತತಿಯ ಅನೇಕ ಶಾಸನಗಳ (ಹಲ್ಮಿಡಿ ಶಾಸನವನ್ನೊಳಗೊಂಡಂತೆ) ಮಹತ್ವವನ್ನು ವಿವರಿಸಿ, ಕದಂಬರ ಕಾಲ ಕನ್ನಡ ಲಿಪಿಯ ಬೆಳವಣಿಗೆಯಲ್ಲಿ

ಮಹತ್ವದ್ದು ಎಂಬ ವಾದವನ್ನು ಅಲ್ಲಗಳೆದು ಕನ್ನಡ ಲಿಪಿಯ ಬೆಳವಣಿಗೆಯಲ್ಲಿ ಗಂಗರ ಪಾತ್ರ ಬಹಳ ಮುಖ್ಯವಾದದ್ದು ಎಂಬ ಅಂಶವನ್ನು ಎತ್ತಿ ಹಿಡಿಯುತ್ತಾರೆ. ಸುಮಾರು ಏಳುನೂರು ವರ್ಷ ಕಾಲ ಆಳಿದ ಗಂಗರ ಕಾಲದಲ್ಲಿ ಕನ್ನಡ ಲಿಪಿಯಲ್ಲಿ ಸಾಕಷ್ಟು ಬದಲಾವಣೆಗಳಾದವು. ಬಾದಾಮಿ ಚಲುಕ್ಯರ ಕಾಲದಲ್ಲಿ ಕನ್ನಡ ಲಿಪಿ ಸ್ಪಷ್ಟ ರೂಪವನ್ನು ಪಡೆದುಕೊಂಡಿತು. ರಾಷ್ಟ್ರಕೂಟರ ಕಾಲದಲ್ಲಿ ದುಂಡಾಕಾರವನ್ನು ಪಡೆದುಕೊಂಡ ಕನ್ನಡ ಲಿಪಿ ಕಲ್ಯಾಣದ ಚಾಲುಕ್ಯರ ಆಳ್ವಿಕೆಯಲ್ಲಿ ಮೃದು ಮಾಧ್ಯಮದ ಮೂಲಕ ಮತ್ತಷ್ಟು ಸುಂದರ ರೂಪವನ್ನು ಪಡೆದಿದ್ದನ್ನು ಶಾಸನಗಳಿಂದ ಚಿತ್ರಿಸಿದ್ದಾರೆ. ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ಅವರ ಶಾಸನಗಳ ಬರವಣಿಗೆಯೂ ಅಂದವಾಗಿದ್ದಿತು. ಆದರೆ ವಿಜಯನಗರದ ಕಾಲದಲ್ಲಿ ಅವರು ಒರಟು ಕಲ್ಲನ್ನು ಬಳಸಿದ್ದರಿಂದ ಹೊಯ್ಸಳರ ಕಾಲದ ಸೌಂದರ್ಯ ಮರೆಯಾಗಿ ಸರಳ ಗೀರುಗಳು ಕಾಣಿಸಿಕೊಂಡವು. ಮೈಸೂರು ಒಡೆಯರ ಕಾಲದಲ್ಲಿ ಕನ್ನಡ ಮತ್ತೆ ತನ್ನ ಗುಂಡು ರೂಪ ಪಡೆಯಿತು.

ಹೀಗೆ ಕನ್ನಡ ನಾಡಿನ ವಿವಿಧ ರಾಜವಂಶಗಳ ಆಳ್ವಿಕೆಯಲ್ಲಿ ಲಿಪಿ ಹೇಗೆ ವಿಕಾಸಗೊಂಡಿತೆಂಬುದನ್ನು ಲೇಖಕರು ಸೋದಾಹರಣವಾಗಿ ಚಿತ್ರಿಸಿದ್ದಾರೆ. ಇದಲ್ಲದೆ ಚಿತ್ರದುರ್ಗ, ಮಡಿಕೇರಿ ಮೊದಲಾದ ಪ್ರಾದೇಶಿಕ ವೈವಿಧ್ಯಗಳನ್ನೂ ವಿವರಿಸಿದ್ದಾರೆ. ಹಾಗೆಯೇ 'ಅಮರ ಕನ್ನಡ' ಎಂಬ ಸ್ವಾರಸ್ಯಕರವಾದ ಲಿಪಿಯನ್ನು ಕುರಿತು ಬರೆಯುತ್ತಾರೆ. ಧಾರ್ಮಿಕ ಗ್ರಂಥಗಳನ್ನು ಉಳಿಸಿಕೊಳ್ಳಲು ಕೊಡೇಕಲ್ ಬಸವಣ್ಣ ಸೃಷ್ಟಿಸಿದ ಹೊಸರೀತಿಯ ಅಕ್ಷರಗಳ ಚಿತ್ರವನ್ನೂ ಕೊಟ್ಟಿದ್ದಾರೆ.

ಇದಕ್ಕೂ ಮುಂಚೆ ತಮಿಳುನಾಡಿನ ಲಿಪಿಗಳನ್ನು ಪರಿಶೀಲಿಸಿ, ವಟ್ಟೆಟುತ್ತು ಮತ್ತು ಗ್ರಂಥಲಿಪಿಗಳನ್ನು ಚರ್ಚಿಸುತ್ತಾರೆ. ಕನ್ನಡಕ್ಕೆ ಸಮೀಪವಾಗಿರುವ ತೆಲುಗು ಲಿಪಿಯ ವಿಕಾಸವನ್ನು ಪರಿಶೀಲಿಸುತ್ತಾರೆ. ಭಾರತದಲ್ಲಿ ಪರ್ಶಿಯನ್, ಅರೇಬಿಕ್ ಮತ್ತು ಉರ್ದು ಲಿಪಿಗಳನ್ನು ವಿವರಿಸುತ್ತಾ ಕಲಾತ್ಮಕ ಅಥವಾ ಅಲಂಕಾರಿಕ ಬರವಣಿಗೆಗಳ ಚಿತ್ರಗಳನ್ನು ನೀಡಿದ್ದಾರೆ. ದಕ್ಷಿಣದಲ್ಲಿ ಹೆಚ್ಚು ಬಳಕೆಯಲ್ಲಿದ್ದ ಮೋಡಿ ಲಿಪಿಯ ಬಳಕೆ ಹಾಗೂ ಅದರ ಅವಸಾನವನ್ನೂ ವಿವರಿಸಲಾಗಿದೆ.

ಲಿಪಿಯಂತೆ ಅಂಕೆಗಳ ಹುಟ್ಟು ಮತ್ತು ವಿಕಾಸವೂ ಬಹು ಸ್ವಾರಸ್ಯಕರವಾದುದು. ಶಿಲಾಯುಗದಿಂದ ಅಂಕೆಗಳು ಹೇಗೆ ವಿಕಾಸಗೊಂಡವು, ಬ್ರಾಹ್ಮಿ ಮತ್ತು ಖರೋಷ್ಠಿ ಲಿಪಿಗಳಲ್ಲಿ ಅಂಕಗಳು ಹೇಗೆ ಕಾಣಿಸಿಕೊಂಡವು ಎನ್ನುವುದು ಸ್ವಾರಸ್ಯಕರವಾದುದು. ಚೀನಾ, ಮಾಯಾ ನಾಗರಿಕತೆಯಲ್ಲಿ, ಅನಂತರ ಭಾರತದಲ್ಲಿ ಬಳಕೆಯಲ್ಲಿದ್ದ ಅಂಕೆಗಳು, ದಶಾಂಶ ಪದ್ಧತಿ, ಕಟಪಯಾದಿಗಳು ಕನ್ನಡ, ತಮಿಳು ಭಾಷೆಗಳಲ್ಲಿ ವಿಕಾಸವಾದುದನ್ನು ಇಲ್ಲಿ ವಿವರಿಸಲಾಗಿದೆ. ಇದರಲ್ಲಿ ಸ್ವಾರಸ್ಯಕರವಾದ ಭೂತ ಸಂಖ್ಯೆಗಳನ್ನು ತಿಳಿಸಿ ಹಣದ ಲೆಕ್ಕಾಚಾರದಲ್ಲಿ ಬಳಸಲಾಗುತ್ತಿದ್ದ ಹಲ್ ಗುರುತುಗಳನ್ನು ಪ್ರಸ್ತಾಪಿಸಿದ್ದಾರೆ.

ಭಾರತೀಯ ಲಿಪಿಗಳು ಸುತ್ತಲಿನ ದೇಶಗಳಿಗೆ ಹರಡಿದ ಕತೆಯನ್ನೂ, ಈ ಲಿಪಿಗಳ ವಿವಿಧ ಪ್ರಭೇದಗಳನ್ನೂ ಈ ಸಂದರ್ಭದಲ್ಲಿ ನಿರೂಪಿಸಿದ್ದಾರೆ. ಮಧ್ಯ ಏಷ್ಯಾ, ದಕ್ಷಿಣ ಏಷ್ಯಾದ ಲಿಪಿಗಳ ಪರಿಚಯ ಬಹು ಸುಂದರವಾಗಿ ಮೂಡಿಬಂದಿದೆ. ಸಿಂಹಳ, ಮಾಲ್ಡೀವ್, ಚಾಮ್, ಬರ್ಮಾ, ಖ್ಮೇರ್, ಸಯಾಮಿ, ಇಂಡೋನೇಷ್ಯಾ ಎಷ್ಟು ದೇಶಗಳು ಎಷ್ಟು ಬರವಣಿಗೆಯ ಪ್ರಭೇದಗಳು!! ಭಾರತದ ಲಿಪಿ ಎಷ್ಟು ಲಿಪಿಗಳ ಮೇಲೆ ಪ್ರಭಾವ ಬೀರಿದೆ ಎನ್ನುವುದು ನಿಜಕ್ಕೂ ಕುತೂಹಲಕಾರಿ ಸಂಗತಿ.

ಇಷ್ಟೊಂದು ಸುಧಾರಣೆಗಳಾಗಿದ್ದರೂ ನಮ್ಮ ಲಿಪಿ ಪರಿಪೂರ್ಣವಲ್ಲ. ಅದು ಇನ್ನೂ ಪರಿಷ್ಕಾರವಾಗಬೇಕೆಂಬ ಮಾತು ಆಗಾಗ ಕೇಳಿಬರುತ್ತಿದೆ. ಕನ್ನಡದಲ್ಲಿ ವ್ಯವಹರಿಸಲು ೩೨ ಅಕ್ಷರಗಳು ಸಾಕೆಂದು ಹೇಳುತ್ತಾ ವಿದ್ಯೆಯ ಕಲಿಕೆಗೆ ಲಿಪಿ ಪೂರಕವಾಗಬೇಕೇ ಹೊರತು ಲಿಪಿಗೆ ವಿದ್ಯೆ ಪೂರಕವಾಗಬಾರದು ಎಂಬ ನಿರ್ಧಾರವನ್ನು ತಿಳಿಸುತ್ತಾರೆ. ಲಿಪಿಯೊಂದಿಗೆ ಧರ್ಮವೂ ಕೊಂಡಿ ಹಾಕಿಕೊಂಡಿವೆ ಎಂಬ ಅಂಶವನ್ನು ಸಂಸ್ಕೃತ, ಅರೇಬಿಕ್ ಮೊದಲಾದ ಲಿಪಿಗಳ ಉದಾಹರಣೆಗಳಿಂದ ವಿಶದಪಡಿಸುತ್ತಾರೆ. ಹಾಗೆಯೇ ರಾಜಾಶ್ರಯದ ಪ್ರಭಾವ ಲಿಪಿಯ ಮೇಲೆ ಹೇಗೆ, ಎಲ್ಲಿ ಆಯಿತೆಂಬುದನ್ನೂ ಸೂಚಿಸುತ್ತಾರೆ.

ಮುದ್ರಣದ ಆಗಮನದಿಂದ ಆದ ಆವಿಷ್ಕಾರಗಳನ್ನು ವಿವರಿಸುತ್ತಾ ತೆಲುಗು ಮತ್ತು ಕನ್ನಡಕ್ಕೆ ಏಕಲಿಪಿ ಸೂತ್ರ ಜಾರಿಗೆ ತಂದಿದ್ದರೆ ಜನರು ಒಪ್ಪಿಕೊಳ್ಳುತ್ತಿದ್ದರು ಎಂದು ಅಭಿಪ್ರಾಯಿಸುತ್ತಾರೆ. ಏಕಲಿಪಿಯ ಬಗ್ಗೆ ಸಾಕಷ್ಟು ಪೂರ್ವಾಪರ, ಸಾಧಕ ಬಾಧಕಗಳ ಚರ್ಚೆಯಾಗಿದ್ದರೂ ದೇವರಕೊಂಡಾರೆಡ್ಡಿಯವರು ಆ ಬಗ್ಗೆ ಏನನ್ನೂ ಹೇಳುವುದಿಲ್ಲ. ಈ ಗ್ರಂಥದಲ್ಲಿ ಆ ಬಗ್ಗೆ ಇನ್ನಷ್ಟು ಚರ್ಚೆ ನಡೆದಿದ್ದರೆ ಚೆನ್ನಾಗಿರುತ್ತಿತ್ತು. ಇನ್ನು ಆಧುನಿಕ ಆವಿಷ್ಕಾರಗಳಾದ ಕಾಗದದ ಬರವಣಿಗೆ, ಟೈಪ್‌ರೈಟರ್ ಬೆರಳಚ್ಚು, ಕಡೆಯದಾಗಿ ಕಂಪ್ಯೂಟರ್ ಆಗಮನದವರೆಗಿನ ಬದಲಾವಣೆಗಳನ್ನು ಸಂಕ್ಷೇಪವಾಗಿ ಸೂಕ್ತವಾಗಿ ನಿರೂಪಿಸಿದ್ದಾರೆ.

ಕನ್ನಡ ಲಿಪಿಯ ಪ್ರಾರಂಭ ಮತ್ತು ಬೆಳವಣಿಗೆಯನ್ನು ಅರಿತುಕೊಳ್ಳಲು ದೇವರಕೊಂಡಾ ರೆಡ್ಡಿಯವರ ಪುಸ್ತಕ ಒಂದು ಅಧಿಕೃತ ಗ್ರಂಥವೆಂಬುದರಲ್ಲಿ ಸಂದೇಹವಿಲ್ಲ. ಕನ್ನಡ ವರ್ಣಮಾಲೆ ಹೇಗೆ ರೂಪುಗೊಂಡಿತೆಂಬುದನ್ನು ಲೇಖಕರು

ಬಹು ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ. ಇವೆಲ್ಲವುಗಳೊಂದಿಗೆ ಕರ್ನಾಟಕದ ಇತಿಹಾಸವನ್ನು ಬಹು ಜಾಣ್ಮೆಯಿಂದ ನೆಯ್ದಿದ್ದಾರೆ. ಲೇಖಕರ ಶೈಕ್ಷಣಿಕ ಹಿನ್ನೆಲೆ ಈ ನಿಟ್ಟಿನಲ್ಲಿ ಬಹಳ ಉಪಯುಕ್ತವಾದ ಅಂಶವಾಗಿರುವುದು ಗಮನಾರ್ಹವಾದುದು. ಎಲ್ಲಕ್ಕೂ ಮಿಗಿಲಾಗಿ ದೇವರಕೊಂಡಾರೆಡ್ಡಿಯವರಿಗೆ ಶಾಸನಗಳ ಬಗ್ಗೆಯಿರುವ ಅಪಾರ ಜ್ಞಾನ ಮತ್ತು ಅನುಭವ ಲಿಪಿಗಳ ಬೆಳವಣಿಗೆಯನ್ನು ವಿಶ್ಲೇಷಿಸಲು ಸಾಧ್ಯವಾಗಿದೆ.

ಲಿಪಿಯ ಪ್ರಭೇಧಗಳು ಅಪಾರವಾಗಿದ್ದಂತೆ ಅದರ ಉಪಯೋಗಗಳೂ ಹಲವಾರು. ತಮ್ಮ ಪುಸ್ತಕದ ಕಡೆಯ ಭಾಗದಲ್ಲಿ ಸಂಜ್ಞಾ ಲಿಪಿ, ಬ್ರೈಲ್ ಲಿಪಿ, ಮಾರ್ಸ್ ಕೋಡ್ ಧಾರ್ಮಿಕ ಚಿಹ್ನೆ ಹಾಗೂ ಶೀಘ್ರ ಲಿಪಿಗಳ ಪ್ರಸ್ತಾಪವೂ ಬಂದಿದೆ.

ಲಿಪಿ ವಿವಿಧ ಸಂಕೇತಗಳಲ್ಲಿ ಬಳಕೆಯಾಗಿರುವುದು, ನಾಟ್ಯ ಮುದ್ರೆ ಹೇಗೆ ಭಾವಾಭಿವ್ಯಕ್ತಿಗೆ ಸಹಾಯಕವಾಗಿದೆ. ಹಾಗೆಯೇ ಸಹಿ ಮಾಡುವ ವಿಧಾನ ಶಾಸನಗಳ ಕಾಲದಿಂದ ಈಗಿನ ಕಾಲದವರೆಗೆ ಹೇಗೆ ಬದಲಾಗುತ್ತ ಬಂದಿದೆ ಎಂಬ ಅಂಶದಿಂದ ಅವರ ಗ್ರಂಥ ಮುಕ್ತಾಯಗೊಳ್ಳುತ್ತದೆ. ಕೆಲವು ಮಹತ್ವದ ಶಾಸನಗಳ ಪಾಠವನ್ನು ಕೊನೆಯ ಭಾಗದಲ್ಲಿ ಕೊಟ್ಟಿದೆ.

ಲಿಪಿಯನ್ನು ಕುರಿತು ಬರೆದಿರುವ ಈ ಗ್ರಂಥ ಬರವಣಿಗೆಯ ಸಮಗ್ರ ಮಾಹಿತಿಯನ್ನು ನೀಡುತ್ತದೆ. ದೇವರಕೊಂಡಾರೆಡ್ಡಿಯವರು ಲಿಪಿಯ ಬೆಳವಣಿಗೆಯನ್ನು ಹೇಳುವಾಗ ರಾಜಕೀಯ ಹಿನ್ನೆಲೆಯನ್ನೂ ನೀಡಿದ್ದಾರೆ. ಕರ್ನಾಟಕ ಇತಿಹಾಸದ ರಾಜಕೀಯ ಹಾಗೂ ಸಾಂಸ್ಕೃತಿಕ ಚಿತ್ರದ ನಿರೂಪಣೆಯೂ ಸೇರಿಕೊಂಡಿದೆ. ಲಿಪಿಯ ಹುಟ್ಟು ಮತ್ತು ವಿಕಾಸ ನಮ್ಮ ನಾಗರಿಕತೆಯ ಒಂದು ಅವಿಭಾಜ್ಯ ಭಾಗ. ಆದುದರಿಂದ ವಿವಿಧ ಶಾಸ್ತ್ರಗಳು, ಅದರ ಅಧ್ಯಯನಕ್ಕೆ ಅಗತ್ಯವಾದ ಅಂಶಗಳು, ಮಾನವಶಾಸ್ತ್ರ, ಸಮಾಜಶಾಸ್ತ್ರ, ಭಾಷಾಶಾಸ್ತ್ರಗಳ ಅಧ್ಯಯನಕ್ಕೆ ಲಿಪಿಯನ್ನು ಕುರಿತ ಅಧ್ಯಯನ ಅತ್ಯುಪಯುಕ್ತವಾದುದು. ವಿವಿಧ ವಿಜ್ಞಾನಗಳೂ ಸಹ ಲಿಪಿಯನ್ನು ಕುರಿತ ಅಧ್ಯಯನದಲ್ಲಿ ಸೇರಿಕೊಂಡಿವೆ. ಪುಸ್ತಕದಲ್ಲಿ ಸಾಕಷ್ಟು ಚಿತ್ರಗಳಿದ್ದು ಲಿಪಿಯ ಹುಟ್ಟು ಬೆಳವಣಿಗೆಯನ್ನು ತಿಳಿಯಲು ಸಹಾಯಕವಾಗಿವೆ. ದೇವರಕೊಂಡಾರೆಡ್ಡಿಯವರೇ ಹಿಡಿಸಿರುವ ಶಾಸನ ಮತ್ತು ಲಿಪಿ ಚಿತ್ರಗಳು ಬರವಣಿಗೆ ಹಾಗೂ ಶಾಸನ ಪಾಠವನ್ನು ಸುಲಭವಾಗಿ ಪರಿಚಯ ಮಾಡಿಕೊಡುತ್ತವೆ.

ಬರವಣಿಗೆಯು ಹಂತ ಹಂತವಾಗಿ ವಿವಿಧ ಕಾಲ ದೇಶಗಳಲ್ಲಿ ಬೆಳವಣಿಗೆಯಾದ ಬಗೆಯನ್ನು ವಿವರಿಸುವ ಈ 'ಲಿಪಿ ಪುಸ್ತಕ' ಶಾಸ್ತ್ರೀಯವಾದ ಗ್ರಂಥವಾಗಿದ್ದರೂ ಅದು ಎಲ್ಲೂ ಕ್ಲಿಷ್ಟವಾಗಿದೆಯೆನಿಸುವುದಿಲ್ಲ. ಅಕ್ಷರಗಳು ವಿವಿಧ ಕಾಲ ಘಟ್ಟಗಳಲ್ಲಿ ವಿವಿಧ ಸಂದರ್ಭಗಳಲ್ಲಿ ತಮ್ಮ ಸ್ವರೂಪವನ್ನು ಬದಲಾಯಿಸುತ್ತಾ ಹೋದುದು ಕುತೂಹಲಕಾರಿಯಾಗಿ ಸಾಗುತ್ತದೆ. ಈ 'ಲಿಪಿ' ಗ್ರಂಥವು ವೈಜ್ಞಾನಿಕವಾಗಿದ್ದಂತೆ ಕಲಾತ್ಮಕವಾಗಿಯೂ ಇದೆ.

ಲಿಪಿಗಳು, ಅವುಗಳ ಸಾಂಸ್ಕೃತಿಕ ರಾಜಕೀಯ ಹಿನ್ನೆಲೆಯನ್ನು ತಿಳಿಸಿಕೊಡುವ ಈ ಕೃತಿ ಒಂದು ವಿಶ್ವಕೋಶವೇ ಆಗಿದೆ. ಇಷ್ಟೊಂದು ಮಾಹಿತಿ ನೀಡುವ ಗ್ರಂಥ ಇದುವರೆಗೂ ಬಂದಿಲ್ಲ. ಶಾಸನಶಾಸ್ತ್ರ, ಭಾಷಾಶಾಸ್ತ್ರ, ಪ್ರಾಕ್ತನಶಾಸ್ತ್ರಗಳನ್ನು ಅಭ್ಯಾಸ ಮಾಡುವವರಿಗೆ ಈ ಕೃತಿಯು ಒಳ್ಳೆಯ ದಿಕ್ಸೂಚಿಯಾಗುವ ಅರ್ಹತೆ ಹೊಂದಿದೆ. ಪ್ರಾಚೀನ ಲಿಪಿಗಳನ್ನೂ ವಿವಿಧ ಕಾಲದಲ್ಲಿ ಅವು ಬದಲಾವಣೆ ಹೊಂದುತ್ತಾ ಹೋಗುವುದನ್ನೂ ತಿಳಿದುಕೊಂಡಲ್ಲಿ ಶಾಸನಗಳನ್ನು ಓದಿ ಅರ್ಥೈಸುವುದು ಸುಲಭವಾಗುತ್ತದೆ. ಹಾಗೆ ಮಾಡುವುದರಿಂದ ನಮ್ಮ ಇತಿಹಾಸದ ಸಮಗ್ರ ಚಿತ್ರ ಲಭಿಸುವುದು ಸಾಧ್ಯವಾಗುತ್ತದೆ.

ಒಟ್ಟಿನಲ್ಲಿ ಲಿಪಿಯ ಅದ್ಭುತ ಪ್ರಪಂಚವನ್ನು ಈ ಪುಟ್ಟ ಪುಸ್ತಕ ಮಾಡಿಕೊಡುತ್ತದೆ. ಯಾವುದೋ ಬೆಟ್ಟ, ಕಾಡು, ಮಲೆಗಳಲ್ಲಿ, ಕಲ್ಲುಬಂಡೆಗಳ ಮೇಲೆ ಪುಟ್ಟ ಪುಟ್ಟ ಸೊಟ್ಟ ಸೊಟ್ಟ ನೆಟ್ಟ ಗೀರುಗಳು ಬೆಳೆದು ಗುಂಡಾಗಿ, ಗುಂಪಾಗಿ ಹೊಸ ಅರ್ಥವನ್ನು ನೀಡಿ, ಯಾವುದೋ ಲೋಕದ ಕಾಲದ ಕತೆಯನ್ನು ಹೇಳುವ ರೋಚಕ ಅನುಭವ ಈ ಗ್ರಂಥದಿಂದ ಲಭಿಸುತ್ತದೆ.

# ತಲಕಾಡಿನ ಗಂಗರ ದೇವಾಲಯಗಳು – ಒಂದು ಸಮೀಕ್ಷೆ

– ಡಾ॥ ಶೋಭ ಮಹೇಶ್*

## ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ

ಡಾ॥ ದೇವರಕೊಂಡಾರೆಡ್ಡಿಯವರು ಮೊದಲಿನಿಂದಲೂ ಶಿಲ್ಪ ಮತ್ತು ವಾಸ್ತುಶಿಲ್ಪಗಳ ಬಗ್ಗೆ ಅಧ್ಯಯನ ನಡೆಸಿದ್ದು, ಅದಕ್ಕಾಗಿ ಸಾಕಷ್ಟು ಕಡೆಗಳಲ್ಲಿ ಅಧ್ಯಯನ ಪ್ರವಾಸವನ್ನು ಕೈಗೊಂಡಿದ್ದಾರೆ. ಗಂಗರ ಶಿಲ್ಪಕಲೆಯ ಬಗ್ಗೆ ಹೆಚ್ಚಿನ ಅಧ್ಯಯನ ನಡೆಯದೇ ಇರುವುದರಿಂದ ಆ ದಿಸೆಯಲ್ಲಿ ತಮ್ಮ ಗಮನವನ್ನು ಹರಿಸಿದರು. "ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಂಶೋಧನ ವಿಭಾಗದ ಮುಖ್ಯಸ್ಥರಾಗಿ ೧೯೭೬ರಲ್ಲಿ ಕೆಲಸಕ್ಕೆ ಸೇರಿದ ಮೇಲೆ ಅಲ್ಲಲ್ಲಿ ಪ್ರವಾಸ ಹೋಗುವ ಅವಕಾಶ ಒದಗಿತು. ಇಂತಹ ಪ್ರವಾಸದಲ್ಲಿ ಗಂಗವಾರ, ಶ್ರವಣಬೆಳಗೊಳ ಮುಂತಾದ ಸ್ಥಳಗಳನ್ನು ಸಂದರ್ಶಿಸಿದಾಗ ಅಲ್ಲಿನ ದೇವಾಲಯ ಹಾಗೂ ಬಸದಿಗಳು ನನ್ನ ಗಮನ ಸೆಳೆದವು. ಅವು ಉಳಿದ ದೇವಾಲಯಗಳಿಗಿಂತ ಭಿನ್ನವಾಗಿದ್ದು, ಇವುಗಳ ಬಗ್ಗೆ ಅಭ್ಯಾಸ ಮಾಡಬೇಕೆಂಬ ಕುತೂಹಲದಿಂದ ೧೯೮೦ರಿಂದೀಚೆಗೆ ಇದೇ ವಿಷಯದ ಮೇಲೆ ಮಾಹಿತಿ ಸಂಗ್ರಹಿಸಿ, ಕ್ಷೇತ್ರಕಾರ್ಯ ಮಾಡಲು ಆರಂಭಿಸಿದೆ" ಎಂದು ಅವರೇ ಹೇಳಿದ್ದಾರೆ. ಪ್ರಕಟಿತ ಪುಸ್ತಕಗಳು, ಲೇಖನಗಳ ಜೊತೆಗೆ ಗಂಗರ ಲಭ್ಯ ಶಾಸನಗಳನ್ನೆಲ್ಲ ವಿವರವಾಗಿ ಪರಿಶೀಲಿಸಿದ್ದಾರೆ. ಶಾಸನಗಳಲ್ಲಿ ಉಲ್ಲೇಖಿತವಾಗಿರುವ, ಗಂಗರ ವಾಸ್ತುಶಿಲ್ಪ ಇರುವ ಪ್ರದೇಶಗಳಷ್ಟೇ ಅಲ್ಲದೆ ಕರ್ನಾಟಕದಲ್ಲಿ ಗಂಗರ ಆಡಳಿತ ಪ್ರದೇಶಗಳಲ್ಲೆಲ್ಲ ಸಂಚರಿಸಿ ಶಾಸನೋಕ್ತವಲ್ಲದ ದೇವಾಲಯಗಳ ವಾಸ್ತು ಹಾಗೂ ಶಿಲ್ಪಗಳನ್ನೂ ಸಹ ಗುರುತಿಸಿದ್ದಾರೆ.

"ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ" ಗ್ರಂಥದಲ್ಲಿ ೭ ಅಧ್ಯಾಯಗಳಿವೆ. ಗಂಗರ ಕಾಲದಲ್ಲಿ ದೇವಾಲಯ ರಚನೆಯ ಉಲ್ಲೇಖಗಳು, ಶಿಲ್ಪಶೈಲಿ ಮತ್ತು ಲಕ್ಷಣಗಳು, ಗಂಗರ ಮೂರ್ತಿಶಿಲ್ಪ, ಗಂಗರ ಕೊಡು-ಕೊಳುಗೆಗಳು, ಗಂಗರ ದೇವಾಲಯಗಳಿದ್ದ, ಇರುವ ಸ್ಥಳಗಳ ಸಮೀಕ್ಷೆ, ಇವು ಮುಖ್ಯ ಅಧ್ಯಾಯಗಳು.

ಮೊದಲನೇ ಅಧ್ಯಾಯವು ಅಧ್ಯಯನದ ವಿಷಯ ಮತ್ತು ವ್ಯಾಪ್ತಿ ಕುರಿತದ್ದಾಗಿದ್ದು, ಈ ಹಿಂದೆ ಗಂಗರ ಇತಿಹಾಸ ಮತ್ತು ವಾಸ್ತುಶಿಲ್ಪಗಳನ್ನು ಕುರಿತು ಬಂದಿರುವ ಗ್ರಂಥಗಳು ಪುಸ್ತಕಗಳು ಹಾಗೂ ಲೇಖನಗಳನ್ನು ಪರಿಶೀಲಿಸಿರುವ ಪಟ್ಟಿಯನ್ನು ನೀಡಿರುತ್ತಾರೆ ಹಾಗೂ ಒಟ್ಟು ಗಂಗರ ಆಡಳಿತಾವಧಿಯಲ್ಲಿ ಕಂಡುಬರುವ ಶಿಲ್ಪಗಳ ಏಳುಬೀಳುಗಳನ್ನು ನೋಡಿದ್ದಾರೆ. "ಒಂದು ರಾಜ್ಯದ ನಿರ್ದಿಷ್ಟ ಕಾಲದ ಸಮೃದ್ಧಿ, ಸ್ಥಿರತೆ, ಅರಸನಾದವನ ಕಲಾಭಿರುಚಿ, ಧರ್ಮವೃದ್ಧಿ ಇತ್ಯಾದಿ ಇವುಗಳು ಆ ಕಾಲದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೆಚ್ಚಿಸುತ್ತವೆ" ಎಂದು ಅಭಿಪ್ರಾಯಪಡುತ್ತಾರೆ.

"ಗಂಗರ ಕಾಲದ ದೇವಾಲಯದ ರಚನೆಯ ಉಲ್ಲೇಖಗಳು" ಎಂಬ ಎರಡನೆ ಅಧ್ಯಾಯದಲ್ಲಿ ಗಂಗರ ಹಾಗೂ ಅವರ ಮಾಂಡಲಿಕರ ಸುಮಾರು ೩೫೦ ಶಾಸನಗಳ ಬಗೆಗೆ (೧) ನೇರವಾಗಿ ದೇವಾಲಯಗಳನ್ನು ಉಲ್ಲೇಖಿಸುವ ಶಾಸನಗಳು. (೨) ದೇವಾಲಯಗಳ ರಚನೆಯ ಬಗ್ಗೆ ಪ್ರಸ್ತಾಪಿಸದ, ಆದರೆ ದೇವಾಲಯದ ಬಳಿ ದೊರೆಯುವ ಶಾಸನಗಳು (೩) ಯಾವುದೇ ವಾಸ್ತುವಿನ ರಚನೆಯಿಲ್ಲ ಬಿಡಿಯಾಗಿ ದೊರೆಯುವ ಶಾಸನಗಳು ಎಂದು ವಿಭಾಗಿಸಿಕೊಂಡಿದ್ದಾರೆ. ಗಂಗರ ಒಟ್ಟು ದೊರೆಯುವ ಶಾಸನಗಳಲ್ಲಿ ೫೦ ಭಾಗ ದಾನಶಾಸನಗಳು, ೩೫ ಭಾಗ ವೀರಗಲ್ಲುಗಳು. ೧೦ ಭಾಗ ಶಿಥಿಲಶಾಸನಗಳ ಹಾಗೂ ಐದು ಭಾಗ ಆಡಳಿತಾತ್ಮಕ ಶಾಸನಗಳು ಎಂದು ವಿಶ್ಲೇಷಿಸಿದ್ದಾರೆ.

ಗಂಗರ ಆಡಳಿತ ಪ್ರದೇಶದ ವ್ಯಾಪ್ತಿ 'ಹಳೆಯ ಮೈಸೂರು ಪ್ರದೇಶ ಹಾಗೂ ಅದಕ್ಕೆ ಹೊಂದಿಕೊಂಡಂತಿರುವ ತಮಿಳುನಾಡಿನ ಪ್ರದೇಶಗಳು'. ಗಂಗರ ಆಡಳಿತ ಕೇಂದ್ರವು ಮಣ್ಣೆ, ಕೋಳಾಲ, ತಲಕಾಡು, ಇತ್ಯಾದಿ ವಿವಿಧ ಸ್ಥಳಗಳಾಗಿದ್ದು, ಇಂದಿನ ಚಾಮರಾಜನಗರ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗಂಗರ ವಾಸ್ತು ಹಾಗೂ ಶಿಲ್ಪಗಳು ದೊರೆಯುತ್ತವೆ.

---

* ನಂ.೧೫೪, ೧೬ನೆಯ ಮುಖ್ಯರಸ್ತೆ, ಸತ್ಯನಾರಾಯಣ ಬಡಾವಣೆ, ಬಸವೇಶ್ವರನಗರ, ಬೆಂಗಳೂರು-೫೬೦೦೭೯.

ಅಪರೂಪವಾಗಿ ಧಾರವಾಡ, ಗುಲ್ಬರ್ಗ, ರಾಯಚೂರುಗಳಲ್ಲಿಯೂ ಗಂಗರ ಉಲ್ಲೇಖಗಳು ದೊರೆಯುತ್ತವೆ. ಅಲ್ಲದೆ ತಮಿಳುನಾಡಿನ ಧರ್ಮಪುರಿ, ಸೇಲಂಗಳಲ್ಲಿ, ಆಂಧ್ರದ ಅನಂತಪುರ, ಚಿತ್ತೂರುಗಳಲ್ಲಿಯೂ, ಗಂಗರ ಶಾಸನ, ಶಿಲ್ಪ, ವಾಸ್ತುಶಿಲ್ಪಗಳು ದೊರೆಯುತ್ತವೆ. ಮುಂದೆ ಗಂಗರ ಆರಂಭದ ಕಾಲದ ದೇವಾಲಯಗಳಿಂದ ಹಿಡಿದು ಕಾಲಕಾಲಕ್ಕೆ ಆಯಾ ರಾಜರು ನಿರ್ಮಿಸಿದ ದೇವಾಲಯಗಳ ಪಟ್ಟಿಯನ್ನು ನೀಡಿದ್ದಾರೆ.

ಎರಡನೆಯ ವಿಭಾಗವಾದ ದೇವಾಲಯಗಳ ಬಳಿ ದೊರೆಯುವ ಗಂಗರ ಶಾಸನಗಳನ್ನು ಗಮನಿಸಿ ಅಲ್ಲಿಯ ದೇವಾಲಯಗಳು ಮೂಲತಃ ಗಂಗರ ರಚನೆಯಾಗಿರಬಹುದೆಂದು ಕೆಲವು ಅದೇ ಸ್ಥಿತಿಯಲ್ಲಿ ಉಳಿದಿದೆಯೆಂದೂ, ಆದರೆ ಬಹಳಷ್ಟು ದೇವಾಲಯಗಳು ಮುಂದಿನ ಕಾಲದಲ್ಲಿ ನವೀಕರಣಗೊಂಡಿದ್ದರೂ ಕೆಲವಾದರೂ ಗಂಗರ ಕುರುಹುಗಳು ದೊರೆಯುತ್ತವೆಂದು ಹೇಳುತ್ತಾರೆ. ಉದಾಹರಣೆಗೆ ಕಂಬಗಳು, ಬಾಗಿಲುವಾಡ ಇಲ್ಲವೇ ಬಿಡಿಶಿಲ್ಪಗಳು ಇದ್ದು, ಅವು ಗಂಗರ ಕಾಲದ ಶೈಲಿಯನ್ನು ಅಭಿವ್ಯಕ್ತಿಸುತ್ತವೆ. ಆದರೆ ಈ ಮಾತಿಗೆ ದೇವಾಲಯದ ಬಳಿ ಇರುವ ಶಾಸನಗಳು ಯಾವುದೇ ಪುರಾವೆಯನ್ನು ನೀಡುವುದಿಲ್ಲ. ಆದರೆ ಶಿಲ್ಪ ಲಕ್ಷಣದಿಂದಾಗಿ ಗಂಗರದೆಂದು ಹೇಳಬಹುದು. ಇಲ್ಲಿಯೂ ಒಂದನೆ ಶಿವಮಾರನ ಕ್ರಿ.ಶ.೭೦೦ರ ನೆಕ್ಕುಂದಿಯ ನಾಗನಾಥ ದೇವಾಲಯವೇ ಪ್ರಥಮ ಉಲ್ಲೇಖವಾಗಿದ್ದು, ೧೦೭೯ರ ಕಿತ್ತೂರಿನ ರಾಮೇಶ್ವರ ದೇವಾಲಯ ಅಂತಿಮ ದೇವಾಲಯವಾಗಿರುವುದನ್ನು ಗಮನಿಸಿದ್ದಾರೆ.

ಮೂರನೆಯ ವಿಭಾಗವಾದ ಗಂಗರ ಶಾಸನಗಳು ದೊರೆಯುವ ದೊಡ್ಡಪಟ್ಟಿಯೊಂದನ್ನು ರೆಡ್ಡಿಯವರು ನೀಡುತ್ತಾರೆ. ಇದರಲ್ಲಿ ಮೇಲಿನ ಎರಡೂ ವಿಭಾಗಗಳಲಿಲ್ಲದ ಸ್ಥಳಗಳು ಉಲ್ಲೇಖಿತವಾಗಿವೆ. ಈ ಸ್ಥಳಗಳಲ್ಲಿ ಗಂಗರ ಬಿಡಿಶಿಲ್ಪಗಳು ದೊರೆಯುವ ಸಾಧ್ಯತೆಯಿದೆ. ಉದಾಹರಣೆಗೆ ಚಾಮರಾಜನಗರದ ಜಿಲ್ಲೆಯಲ್ಲಿ ಅನೇಕ ಸ್ಥಳಗಳಲ್ಲಿ ಬಿಡಿಯಾದ ಜೈನ ವಿಗ್ರಹಗಳು ಇದ್ದು ಇವೆಲ್ಲವೂ ಗಂಗರ ಕಾಲದ ಜೈನ ದೇವಾಲಯಗಳಾಗಿರುವ ಸಾಧ್ಯತೆ ಇದೆ.

ಮೂರನೆಯ ಅಧ್ಯಾಯವಾದ "ಶಿಲ್ಪ ಶೈಲಿ ಮತ್ತು ಲಕ್ಷಣಗಳು". ಇದರಲ್ಲಿ ಆರಂಭದಲ್ಲಿ ದೇವಾಲಯಗಳ ರಚನೆ, ಉದ್ದೇಶ, ಶೈಲಿ, ವಿಭಾಗ, ಆಗಮೋಕ್ತ, ಶಿಲ್ಪಿಗಳು ಇವೇ ಮುಂತಾದ ವಿಷಯಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಿ ಗಂಗರ ವಾಸ್ತುಶಿಲ್ಪಗಳ ಬಗ್ಗೆ ವಿವರಿಸುತ್ತಾರೆ. ಹಿಂದಿನ ವಿದ್ವಾಂಸರು ಗಂಗರದೇ ಪ್ರತ್ಯೇಕವಾದ ಶೈಲಿಯಾಗಲೀ ರಚನೆಯಾಗಲೀ ಕಂಡುಬರುವುದಿಲ್ಲವೆಂದು ದ್ರಾವಿಡ ಶೈಲಿಯ ಮುಂದುವರಿದ ರೂಪವೆಂದು ಅಭಿಪ್ರಾಯಪಟ್ಟಿರುವುದನ್ನು ರೆಡ್ಡಿಯವರು ನಿರಾಕರಿಸುತ್ತಾರೆ.

ಡಾ. ರೆಡ್ಡಿಯವರು ಗಂಗರ ದೇವಾಲಯಗಳನ್ನು ಗುರುತಿಸಲು ಪ್ರಮುಖ ಲಕ್ಷಣಗಳನ್ನು ನೀಡುತ್ತಾರೆ. ಅವುಗಳೆಂದರೆ: (೧) ಎಲ್ಲಾ ತರಹದ ದೇವಾಲಯಗಳೂ ಉದ್ದ ಅಗಲಗಳು ಚಿಕ್ಕದಾಗಿರುತ್ತವೆ. (೨) ಸಣ್ಣ ಗರ್ಭಗೃಹ (೩) ತೆರೆದ ಅಂತರಾಳ (೪) ಕಡಿಮೆ ಎತ್ತರ (೫) ಬಾಗಿಲ ಎತ್ತರವೂ ಕಡಿಮೆ (೬) ಚೋಳ ಪ್ರತಿಷ್ಠೆ (೭) ಕಡಿಮೆ ಅಲಂಕಾರವಿರುವುದು, ಬಹುತೇಕ ಎಲ್ಲ ದೇವಾಲಯಗಳು ಊರ ಹೊರಗಿರುವುದು (೮) ದೇವಾಲಯಗಳ ಬಳಿ ಗಂಗರ ಶಾಸನಗಳು ಅಥವಾ ವೀರಗಲ್ಲುಗಳು ಸಿಗುವುದು, (೯) ಶೈವ ದೇವಾಲಯಗಳಾದಲ್ಲಿ ಸೋಮೇಶ್ವರ, ಅರ್ಕೇಶ್ವರ, ರಾಮೇಶ್ವರ ಎಂಬ ಹೆಸರುಗಳಿರುವುದು.

ಮುಂದೆ ಅಧಿಷ್ಠಾನರಹಿತ ಹಾಗೂ ಅಧಿಷ್ಠಾನಸಹಿತ ಇರುವ ದೇವಾಲಯಗಳ ಬಗ್ಗೆ ವಿವರಿಸುತ್ತಾರೆ. ಅಧಿಷ್ಠಾನ, ಭಿತ್ತಿ, ದೇವಕೋಷ್ಠ, ಕಪೋತ ಹಾಗೂ ಇನ್ನಿತರ ಭಾಗಗಳನ್ನು, ಅವುಗಳನ್ನು ಗುಣ ವಿಶೇಷಗಳನ್ನು ತಿಳಿಸುತ್ತಾರೆ. ಕೆಲವೇ ದೇವಾಲಯಗಳಲ್ಲಿ ಗೋಪುರ (ಕಲಶ) ಉಳಿದು ಬಂದಿರುವುದನ್ನು ಗಮನಿಸಿದ್ದಾರೆ. ದೇವಾಲಯದ ಒಳಭಾಗಗಳಲ್ಲಿ ಗರ್ಭಗೃಹ, ನವರಂಗ, ಕಂಬಗಳು ಇದ್ದು ಸುಂದರವಾಗಿದೆ. ಕೆಲವೊಮ್ಮೆ ಬೋದಿಗೆ, ಬಾಗಿಲುವಾಡಗಳಲ್ಲಿ ಶಿಲ್ಪಗಳಿರುವುದುಂಟು. ಗಂಗರ ಜೈನ, ವೈಷ್ಣವ, ಶೈವ ದೇವಾಲಯಗಳ ವಾಸ್ತುಶಿಲ್ಪಗಳಲ್ಲಿ ಹೆಚ್ಚಿನ ಬದಲಾವಣೆ ಕಂಡುಬರುವುದಿಲ್ಲ. ಕೆಲವೊಂದು ಗುಹಾಲಯಗಳಿದ್ದು ಅವುಗಳನ್ನೂ ಗಂಗರ ರಚನೆ ಎನ್ನಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಗಂಗರ ಮೂರ್ತಿಶಿಲ್ಪಗಳ ಬಗ್ಗೆ ಚರ್ಚಿಸಿದ್ದಾರೆ. ಗಂಗರ ಶಿಲ್ಪಗಳನ್ನು ಗುರುತಿಸುವುದಕ್ಕೆ ಕೆಲವು ಸುಳಿವುಗಳನ್ನು ರೆಡ್ಡಿಯವರು ನೀಡುತ್ತಾರೆ. ಅವುಗಳು (೧) ಶಿಲ್ಪಗಳು ಸಾಮಾನ್ಯವಾಗಿ ಗಟ್ಟಿಕಲ್ಲಿನಿಂದಾಗಿರುತ್ತದೆ. (೨) ಕಲ್ಲಿನ ಅಳತೆಗೆ ತಕ್ಕಂತಹ ರಚನೆ (೩) ಉಬ್ಬುಕೆತ್ತನೆಯೇ ಪ್ರಧಾನವಾಗಿದ್ದು, ಶಿಲ್ಪದ ಮುಂಭಾಗ ವಿವರವಾಗಿದ್ದು, ಹಿಂಬದಿಯಲ್ಲಿ ಶಿಲ್ಪದ ಕೆತ್ತನೆಯಿರುವುದಿಲ್ಲ. (೪) ಶಿಲ್ಪದ ಕಾರ್ಯಕ್ಕೆ ತಕ್ಕ ಮುಖಭಾವ ಮೂಡಿಸಿರುವುದು (೫) ಒಂದೇ ಚೌಕಟ್ಟಿನಲ್ಲಿ ಹಲವಾರು ಸನ್ನಿವೇಶಗಳನ್ನು ಬಿಡಿಸಿರುವುದು ಇತ್ಯಾದಿ.

ಈ ಮೇಲೆ ಹೇಳಿದ ಶಿಲ್ಪಗಳಿಗೆ ಅನುಸಾರವಾಗಿ ಹಲವಾರು ದೇವತಾ ವಿಗ್ರಹಗಳ ವಿವರಣೆ ನೀಡುತ್ತಾರೆ. ಜೈನಶಿಲ್ಪದಲ್ಲಿ ಕೆಲವು ವಿಶೇಷ ಅಂಶಗಳನ್ನು ಗುರುತಿಸಿದ್ದಾರೆ.

ಐದನೆಯ ಅಧ್ಯಾಯ ಗಂಗರ ಸಮಕಾಲೀನರಾದ ಚಲುಕ್ಯ ರಾಷ್ಟ್ರಕೂಟರಲ್ಲದೆ ಪಲ್ಲವರ ಮೂರ್ತಿಶಿಲ್ಪಗಳ ಕೊಡು-ಕೊಳುಗೆಗಳನ್ನು ಗಮನಿಸಿದ್ದು ರೆಡ್ಡಿಯವರ ಸೂಕ್ಷ್ಮದೃಷ್ಟಿಗೆ ಉತ್ತಮ ದ್ಯೋತಕವಾಗಿದೆ.

ಆರನೆಯ ಅಧ್ಯಾಯದಲ್ಲಿ ಗಂಗರ ವಾಸ್ತುಶಿಲ್ಪಗಳುಳ್ಳ ಸುಮಾರು ನೂರೈವತ್ತು ದೇವಾಲಯಗಳ ಸಮೀಕ್ಷೆ ಮಾಡಿದ್ದಾರೆ. ಅದಲ್ಲದೆ ಅಲ್ಲಲ್ಲಿ ಚದುರಿಹೋಗಿರುವ ಬಿಡಿ ಶಿಲ್ಪಗಳುಳ್ಳ ಸ್ಥಳಗಳನ್ನು ವ್ಯಾಪಕವಾದ ಕ್ಷೇತ್ರಕಾರ್ಯದ ಮೂಲಕ ಪಟ್ಟಿ ಮಾಡಿದ್ದಾರೆ.

ಗಂಗರ ವಾಸ್ತು-ಮೂರ್ತಿಶಿಲ್ಪಗಳ ಮುಖ್ಯ ಲಕ್ಷಣಗಳನ್ನು ಗುರುತಿಸುವಲ್ಲಿ ಪ್ರಸ್ತುತ ಅಧ್ಯಯನ ಯಶಸ್ವಿಯಾಗಿದೆ. ಮತ್ತೊಂದು ಪ್ರಮುಖ ವಿಷಯವಾದ ಚೋಳ ಪ್ರತಿಷ್ಠೆಯ ಬಗ್ಗೆ ಉಲ್ಲೇಖವಿದ್ದ ಗಂಗರ (ಶೈವ) ದೇವಾಲಯಗಳನ್ನು ನಂತರ ಚೋಳರು ಕಾಪಾಡಿರುವುದರ ಬಗ್ಗೆ ವಿವರಣೆ ಇದೆ. ಈ ಹಿಂದೆಯೇ ಗಂಗರ ವಾಸ್ತು ಮತ್ತು ಮೂರ್ತಿಶಿಲ್ಪಗಳ ಬಗ್ಗೆ ನಡೆದಿರುವ ಅಧ್ಯಯನಗಳು ಚದುರಿದಂತಿದ್ದು, ಅವೆಲ್ಲವನ್ನು ಒಂದೆಡೆ ಸೇರಿಸುವ ಈ ಪ್ರಯತ್ನ ಶ್ಲಾಘನೀಯ ಮತ್ತು ಇತಿಹಾಸ ಪ್ರೇಮಿಗಳಿಗೆ ಸ್ವಾಗತಾರ್ಹವಾದುದಾಗಿದೆ.



# ದೇವರ ಕೊಂಡಾರೆಡ್ಡಿಯವರ ಕೆಲವು ಕೃತಿಗಳು – ಒಂದು ಪರಿಚಯ

– ಎಸ್. ನಂಜುಂಡಸ್ವಾಮಿ*

## ಶ್ರವಣಬೆಳಗೊಳದ ಬಸದಿಗಳ ವಾಸ್ತುಶಿಲ್ಪ

ಡಾ॥ ದೇವರಕೊಂಡಾರೆಡ್ಡಿಯವರು ಕರ್ನಾಟಕದ ವಾಸ್ತುಶಿಲ್ಪ ವಿಷಯದಲ್ಲಿ ಪರಿಗಣಿಸಲ್ಪಡಲೇಬೇಕಾದ ವಿದ್ವಾಂಸರಲ್ಲಿ ಒಬ್ಬರು. ಇದಕ್ಕೆ ಕಾರಣ ಈ ವಿಷಯದಲ್ಲಿ ಅವರು ನಡೆಸಿರುವ ವ್ಯಾಪಕ ಕ್ಷೇತ್ರಕಾರ್ಯ ಮತ್ತು ಆಳವಾದ ಅಧ್ಯಯನ. ಶ್ರವಣಬೆಳಗೊಳದ ಚಂದ್ರಗುಪ್ತ ಗ್ರಂಥಮಾಲೆಯಿಂದ ಪ್ರಕಟವಾಗಿರುವ ಅವರ "ಶ್ರವಣಬೆಳಗೊಳದ ಬಸದಿಗಳ ವಾಸ್ತುಶಿಲ್ಪ" ಕೃತಿಯು ಅಲ್ಲಿನ ಬಸದಿಗಳ ವಾಸ್ತುಶಿಲ್ಪವನ್ನೇ ಪ್ರಧಾನ ವಿಷಯವನ್ನಾಗಿ ಹೊಂದಿದ್ದರೂ, ಆ ಬಸದಿಗಳ ನಿರ್ಮಾಣ, ಅಲ್ಲಿರುವ ಶಾಸನಗಳು, ಅವುಗಳ ಹಿಂದಿರುವ ಇತಿಹಾಸ, ಹಾಗೂ ಇತರ ಪ್ರಮುಖ ಅಂಶಗಳ ಬಗೆಗೂ ಉಲ್ಲೇಖಿಸಿರುವ ಅತ್ಯಂತ ಗಮನಾರ್ಹವಾದ, ಮಹತ್ವದ ಕೃತಿಯಾಗಿದೆ. ಇದರಿಂದ ಕೇವಲ ವಾಸ್ತು ಎಂಬ ಪಾರಿಭಾಷಿಕಗಳ ಶಾಸ್ತ್ರೀಯ ವಿವರಣೆ, ಜೀವಂತ ಸಾಂಸ್ಕೃತಿ ಹಾಗೂ ಐತಿಹಾಸಿಕ ಸಂಗತಿಗಳ ನಡುವೆ ಕಾಣಿಸಿಕೊಳ್ಳುತ್ತಾ ಓದುಗನಿಗೆ ಬೇಸರವಾಗದಂತೆ ಅವನ ಗಮನ ಸೆಳೆಯುತ್ತದೆ.

ಶ್ರವಣಬೆಳಗೊಳದಲ್ಲಿರುವ ಬಸದಿಗಳನ್ನು ಪರಿಚಯಿಸುವ ಮೊದಲ ಕೃತಿಯೆಂದರೆ ಬಹುಶಃ ಅಂದಿನ ಮೈಸೂರು ಸರ್ಕಾರದ ಪ್ರಾಚ್ಯವಸ್ತು ಇಲಾಖೆಯಿಂದ ಮೊದಲಬಾರಿಗೆ ೧೯೪೦ ರಲ್ಲಿ ಪ್ರಕಟವಾಗಿರುವ ಡಾ.ಎಂ.ಎಚ್. ಕೃಷ್ಣರವರು ರಚಿಸಿರುವ "ಶ್ರವಣಬೆಳಗೊಳ' ಕೃತಿ ಅಥವಾ ಪ್ರವಾಸಿ ಕೈಪಿಡಿ. ಅದರಲ್ಲಿ ಶ್ರವಣಬೆಳಗೊಳದ ದೊಡ್ಡಬೆಟ್ಟದ ಮೇಲಿರುವ ೪ ಚಿಕ್ಕಬೆಟ್ಟದ ಮೇಲಿರುವ ೧೩, ಮತ್ತು ಊರಿನೊಳಗಿರುವ ೪ ಬಸದಿಗಳನ್ನು ಸುತ್ತಮುತ್ತಲ ಗ್ರಾಮಗಳಲ್ಲಿರುವ ೩ ಬಸದಿಗಳನ್ನು ಪರಿಚಯಿಸಲಾಗಿದೆ. ಆ ಬಸದಿಗಳ ನಿರ್ಮಾಣ ಕಾಲ, ಅದರ ವಾಸ್ತು ವಿಶೇಷಗಳ ಬಗ್ಗೆ ಕೆಲವು ಅಂಶಗಳನ್ನು, ಆ ಕಾಲದಲ್ಲಿ ತೆಗೆದಿದ್ದ ಉತ್ತಮ ಛಾಯಾಚಿತ್ರಗಳನ್ನು ನೀಡಲಾಗಿದೆ. ಮುಂದೆ ಡಾ॥ ಅ. ಸುಂದರ, ಡಾ॥ ಷ. ಶೆಟ್ಟರ್, ಇವರು ಶ್ರವಣಬೆಳಗೊಳದ ಬಸದಿಗಳ ಬಗ್ಗೆ ಕೃತಿರಚನೆ ಮಾಡಿದ್ದಾರೆ. ದೇವರಕೊಂಡಾರೆಡ್ಡಿಯವರೇ ತಮ್ಮ ಕೃತಿಯ ಮುನ್ನುಡಿಯಲ್ಲಿ ಹೇಳಿರುವಂತೆ ಷ. ಶೆಟ್ಟರ್ ಅವರ ಕೃತಿ ೧೯೮೧ರ ಮಹಾ ಮಸ್ತಕಾಭಿಷೇಕದ ಕಾಲದಲ್ಲಿ ರಚಿತವಾದ ಸಾಮಾನ್ಯ ಪ್ರವಾಸಿಗರ ಕೈಪಿಡಿಯಾಗಿದೆ.

"ಶ್ರವಣಬೆಳಗೊಳದಲ್ಲಿ ಜೈನಬಸದಿಗಳು– ಒಂದು ಸಮೀಕ್ಷೆ" ಯಲ್ಲಿ, ಅ. ಸುಂದರ ಅವರು ಶ್ರವಣಬೆಳಗೊಳ ಹಾಗೂ ಸಮೀಪದ ಗ್ರಾಮಗಳಲ್ಲಿರುವ ಬಸದಿಗಳನ್ನು ಅವುಗಳ ವಾಸ್ತುವಿನ್ಯಾಸದ ಆಧಾರದ ಮೇಲೆ, ಏಳು ಹಂತಗಳಲ್ಲಿ ವಿಂಗಡಿಸಿಕೊಂಡು ಚರ್ಚಿಸಿದ್ದಾರೆ. ಮೊದಲನೆಯ ಹಂತದಲ್ಲಿ ಕಂಬದಹಳ್ಳಿಯ ಪಂಚಕೂಟ ಬಸದಿ ಮತ್ತು ಚಂದ್ರಗುಪ್ತ ಬಸದಿ, ಎರಡನೇ ಹಂತದಲ್ಲಿ ಕತ್ತಲೆ ಬಸದಿ, ಸುಪಾರ್ಶ್ವನಾಥ ಬಸದಿ, ಶಾಸನ ಬಸದಿಗಳ ವಾಸ್ತು ವಿವರಗಳಿವೆ. ಮೂರನೆಯ ಹಂತದಲ್ಲಿ, ಚಾಮುಂಡರಾಯ ಬಸದಿಯ ವಾಸ್ತು ವೈಶಿಷ್ಟ್ಯವನ್ನು ಅತ್ಯಂತ ಸೂಕ್ಷ್ಮವಾಗಿ ವಿವರಿಸಿದ್ದಾರೆ. ವಾಸ್ತುಶಿಲ್ಪ ಲಕ್ಷಣಗಳ ಆಧಾರದ ಮೇಲೆ ಈ ಬಸದಿಯನ್ನು ಚಾಮುಂಡರಾಯನೇ ಪೂರ್ಣಗೊಳಿಸಿದ್ದಾನೆಂದು ಹೇಳಿದ್ದಾರೆ. ನಾಲ್ಕನೆಯ ಹಂತದಲ್ಲಿ ಶಾಸನ ಬಸದಿ, ಎರಡುಕಟ್ಟೆ ಬಸದಿ, ಸವತಿ ಗಂಧವಾರಣ ಬಸದಿ, ಶಾಂತೀಶ್ವರನಾಥ ಬಸದಿ, ತೇರಿನ ಬಸದಿ ಇವುಗಳ ವಾಸ್ತು ಲಕ್ಷಣಗಳನ್ನು ನೀಡಿ ಈ ಬಸದಿಗಳು ಒಂದೇ ಕಾಲದ್ದೆಂದು ಹೇಳುವುದು ಸಾಧ್ಯವಿಲ್ಲ, ಕಾಲಕಾಲಕ್ಕೆ ವಿಸ್ತರಣೆ ಜೀರ್ಣೋದ್ಧಾರಗೊಂಡಿವೆಯೆಂದು ಹೇಳಿದ್ದಾರೆ. ಐದನೆಯ ಹಂತದಲ್ಲಿ ಪಾರ್ಶ್ವನಾಥ ಬಸದಿ,

---

* ಸಹಾಯಕ ಚರ್ಚಾ ಸಂಪಾದಕ, ಕರ್ನಾಟಕ ವಿಧಾನ ಪರಿಷತ್ತು, ಮೊದಲನೇ ಮಹಡಿ, ವಿಧಾನಸೌಧ, ಬೆಂಗಳೂರು–೫೬೦೦೦೧.

ಆರನೆಯ ಹಂತದಲ್ಲಿ ಊರೊಳಗಿನ ಅಕ್ಕನ ಬಸದಿ, ಜಿನನಾಥಪುರದ ಶಾಂತೀಶ್ವರ ಬಸದಿ, ಮಜ್ಜಿಗಣ್ಣನ ಬಸದಿ, ಭಂಡಾರ ಬಸದಿ, ನಗರ ಜಿನಾಲಯಗಳು ಸೇರುತ್ತವೆಯೆಂದು ಹೇಳಿದ್ದಾರೆ. ಏಳನೆಯ ಹಂತದಲ್ಲಿ ಇಂದ್ರಗಿರಿಯಲ್ಲಿರುವ ಒದೆಗಲ್ ಬಸದಿ, ಮಂಗಾಯಿ ಚೆನ್ನಣ್ಣ ಬಸದಿ, ಸಿದ್ಧರ ಬಸದಿ, ಚೌವೀಸ ತೀರ್ಥಂಕರರ ಬಸದಿ ಇವುಗಳು ಬರುತ್ತವೆಂದು ಹೇಳಿದ್ದಾರೆ.

ಹಂ.ಪ. ನಾಗರಾಜಯ್ಯನವರ "ಶಾಸನಗಳಲ್ಲಿ ಜೈನತೀರ್ಥಗಳು" ಮತ್ತು "ಶಾಸನಗಳಲ್ಲಿ ಬಸದಿಗಳು" ಕೃತಿಗಳು ಶಾಸನಗಳ ಹಿನ್ನೆಲೆಯಲ್ಲಿ ಬಸದಿಗಳ ಪರಿಚಯ ಮಾಡಿಕೊಡುವ ಕೃತಿಗಳಾಗಿವೆ. ಶಾಸನಗಳಲ್ಲಿ ಜೈನತೀರ್ಥಗಳು ಕೃತಿಯಲ್ಲಿ, ಕಳ್ವಪ್ಪು ತೀರ್ಥ, ಕಂಬದಹಳ್ಳಿ ತೀರ್ಥ, ಬೆಳ್ಗೊಳತೀರ್ಥ, ಬಿಂಡಿಗನವಿಲೆಯ ತೀರ್ಥ, ಇಲ್ಲಿರುವ ಶಾಸನೋಕ್ತ ಬಸದಿಗಳ ಪರಿಚಯ ಮಾಡಿಕೊಡಲಾಗಿದೆ. ಶಾಸನಗಳಲ್ಲಿ ಬಸದಿಗಳು ಕೃತಿಯಲ್ಲಿ, ಶ್ರವಣಬೆಳಗೊಳ ಹಾಗೂ ಸುತ್ತಮುತ್ತಲ ಗ್ರಾಮಗಳಲ್ಲಿರುವ ಹಾಗೂ ಇದ್ದ ಶಾಸನೋಕ್ತ ಬಸದಿಗಳನ್ನು ಉಲ್ಲೇಖಿಸಲಾಗಿದೆ. ವಾಸ್ತುವಿನ ವಿಚಾರವಾಗಲಿ ಬೇರೆ ಹೆಚ್ಚಿನ ವಿವರಗಳಾಗಲೀ ಇರುವುದಿಲ್ಲ.

ಡಾ॥ ಎಸ್.ಡಿ. ಶೆಟ್ಟಿಯವರ "ಜೈನಬಸದಿಗಳು" ಕೃತಿಯಲ್ಲಿ ಗಂಗರ ಕಾಲದ ಬಸದಿಗಳು, ಕಲ್ಯಾಣದ ಚಾಲುಕ್ಯರ ಕಾಲದ ಬಸದಿಗಳು, ಹೊಯ್ಸಳರ ಕಾಲದ ಬಸದಿಗಳು ಮತ್ತು ವಿಜಯನಗರ ಕಾಲದ ಬಸದಿಗಳು ಅಧ್ಯಾಯಗಳಲ್ಲಿ, ಶ್ರವಣಬೆಳಗೊಳದ ಬಸದಿಗಳನ್ನು ಉಲ್ಲೇಖಿಸಿದ್ದು, ಅವುಗಳ ನಿರ್ಮಾಣ ಕಾಲ ಮತ್ತು ವಾಸ್ತುಶೈಲಿಯನ್ನು ಬಹಳ ಸ್ಥೂಲವಾಗಿ ವಿವರಿಸಲಾಗಿದೆ. ಜಿ. ಬ್ರಹ್ಮಪ್ಪನವರ "ಶ್ರವಣಬೆಳಗೊಳ" ಕೃತಿಯಲ್ಲಿ ಶ್ರವಣಬೆಳಗೊಳ ಹಾಗೂ ಜಿನನಾಥಪುರದ ಬಸದಿಗಳನ್ನು ವರ್ಣನಾತ್ಮಕವಾಗಿ ಪ್ರವಾಸಿಗರಿಗೆ ಪರಿಚಯಿಸಲಾಗಿದೆ.

ಮೇಲ್ಕಂಡ ಕೃತಿಗಳ ಪರಿಚಯವನ್ನು ನೋಡಿದಾಗ, ಡಾ॥ ದೇವರಕೊಂಡಾರೆಡ್ಡಿಯವರ "ಶ್ರವಣಬೆಳಗೊಳದ ಬಸದಿಗಳ ವಾಸ್ತುಶಿಲ್ಪ" ಕೃತಿಯ (೧೯೯೩) ಮಹತ್ವ ನಮಗೆ ಅರಿವಾಗುತ್ತದೆ. ಶ್ರವಣಬೆಳಗೊಳದ ಬಸದಿಗಳ ವಾಸ್ತುಶೈಲಿಯ ಚಿತ್ರಣ ನೀಡುವ ಮೊದಲು, ಕ್ಷೇತ್ರ ಪರಿಚಯ, ಇತಿಹಾಸಪೂರ್ವ ಕಾಲದಲ್ಲಿ ಶ್ರವಣಬೆಳಗೊಳ, ಶ್ರವಣಬೆಳಗೊಳದ ಪ್ರಾಚೀನತೆ, ಬೆಳ್ಗೊಳ ಮತ್ತು ಕಳ್ವಪ್ಪು ಪದದ ಅರ್ಥನಿಷ್ಪತ್ತಿ, ಮತ್ತು ಶ್ರವಣಬೆಳಗೊಳದ ಬೆಳವಣಿಗೆಗೆ ಕಾರಣರಾದವರು ಎಂಬ ಬಗ್ಗೆ ಪ್ರತ್ಯೇಕ ಚಿಕ್ಕ ಅಧ್ಯಾಯಗಳಲ್ಲಿ, ಆ ಕ್ಷೇತ್ರದ ಪ್ರಾಚೀನತೆ, ಪಾವಿತ್ರ್ಯತೆ ಹಾಗೂ ಅಲ್ಲಿರುವ ಬಸದಿಗಳು, ಅವುಗಳ ನಿರ್ಮಾಣ ಹಾಗೂ ವಾಸ್ತುಶಿಲ್ಪವನ್ನು ಅರಿಯುವ ಕುತೂಹಲವನ್ನು ಮೂಡಿಸುತ್ತಾರೆ.

ಮೊದಲ ಅಧ್ಯಾಯದಲ್ಲಿ ಶ್ರವಣಬೆಳಗೊಳದ ಹೆಸರು ಮತ್ತು ಪ್ರಾಚೀನತೆಯನ್ನು ಚರ್ಚಿಸುತ್ತಾ, ಇದು ಬಹಳ ಹಿಂದಿನಿಂದಲೂ ಮೋಕ್ಷ ಭೂಮಿಯಾಗಿತ್ತು, ಇಲ್ಲಿ ದೊರಕಿರುವ ಸುಮಾರು ೫೨೫ ಶಾಸನಗಳು, ಕನ್ನಡ ಲಿಪಿಯ ಉಗಮ ಮತ್ತು ವಿಕಾಸವನ್ನು ಅರಿಯಲು, ಕನ್ನಡದ ಕಾವ್ಯ ಪ್ರಕಾರಗಳನ್ನು ತಿಳಿಯಲು, ಅನೇಕ ಐತಿಹಾಸಿಕ ಘಟನೆಗಳನ್ನು ತಿಳಿಯಲು ಪ್ರಯೋಜನಕಾರಿಯಾಗಿವೆ ಎಂಬ ಅಂಶವನ್ನು ಹೇಳಿದ್ದಾರೆ. ಇತಿಹಾಸಪೂರ್ವ ಕಾಲದಲ್ಲಿ ಕೋಡುಗಲ್ಲುಗಳಿಂದ, ಮೊರಡಿಗಳಿಂದ, ನೀರಿನ ಡೋಣೆಗಳಿಂದ, ನೀರಿನ ಒರತೆ ಮತ್ತು ಆಸರೆಯಿಂದ ಕೂಡಿದ್ದ ಜನವಸತಿಗೆ ಅನುಕೂಲವಾಗಿದ್ದ ಹಾಗೂ ವಿರಳವಾಗಿ ಜನರು ವಾಸಿಸುತ್ತಿದ್ದ ಜಾಗ ಎಂಬುದನ್ನು ಹೇಳಿ, ಹಳೆಯಬೆಳ್ಗೊಳವೇ, ಶ್ರವಣಬೆಳಗೊಳಕ್ಕಿಂತ ಪ್ರಾಚೀನವಾದುದು ಎಂಬ ವಿದ್ವಾಂಸರ ಅಭಿಪ್ರಾಯವನ್ನು ಸಾಧಾರವಾಗಿ ನಿರಾಕರಿಸಿದ್ದಾರೆ. ಇಂದಿನ ಶ್ರವಣಬೆಳಗೊಳ ಪ್ರದೇಶದಲ್ಲಿ ಕ್ರಿಸ್ತಪೂರ್ವದ ಶಿಲಾಯುಗದ ಅವಶೇಷಗಳು ಕಂಡುಬರುತ್ತವೆ, ಹಳೆಯ ಬೆಳ್ಗೊಳಕ್ಕಿಂತ ನೀರಿನ ಆಸರೆ ಇಲ್ಲಿಯೇ ಹೆಚ್ಚಾಗಿರುವುದನ್ನು ಹೇಳಿದ್ದಾರೆ. ಕ್ರಿ.ಶ. ೭೮೦ರಲ್ಲಿ ಕಂಬಯ್ಯನು ಬೆಳ್ಗೊಳಕ್ಕೆ ಸೇರಿದ ಗೋವಿಂದವಾಡಿ ಗ್ರಾಮವನ್ನು ದತ್ತಿ ನೀಡಿದ್ದನು, ಹತ್ತನೆಯ ಶತಮಾನದ ಶಾಸನದ ಪ್ರಕಾರ ಅಂದಮಾರಯ್ಯನು ಅಗ್ಗಳದೇವನನ್ನು ಕಾಣಲು ಬೆಳ್ಗೊಳದಲ್ಲಿ ನಿಂತಿದ್ದನು. ಕ್ರಿ.ಶ. ೧೯೮೪ರ ಶಾಸನದಲ್ಲಿಯೇ ಎರೆಗಂಗನು ಬೆಳ್ಗೊಳದ ಕಳ್ಬಪ್ಪು ತೀರ್ಥದ ಬಸದಿಗಳ ಜೀರ್ಣೋದ್ಧಾರಕ್ಕೆ ರಾಚೇನಹಳ್ಳಿ ಮತ್ತು ಬೆಳ್ಗೊಳ-೧೨ನ್ನು ದತ್ತಿ ಬಿಟ್ಟಿದ್ದನು, ಈ ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಬೆಳ್ಗೊಳವು ಇಂದಿನ ಶ್ರವಣಬೆಳಗೊಳವೇ ಆಗಿದೆ, ಹಳೆಯ ಬೆಳಗೊಳದಲ್ಲಿ ಸಿಕ್ಕಿರುವ ಕ್ರಿ.ಶ. ೧೧೭೦ ಶಾಸನದಲ್ಲಿ ಬೆಳಗೊಳದ ಉಲ್ಲೇಖವಿಲ್ಲ, ಜರಗನಹಳ್ಳಿಯ ಉಲ್ಲೇಖವಿದೆ, ಆದುರಿಂದ ಹಳೆಯ ಬೆಳಗೊಳ ಎಂಬ ಹೆಸರು ಕ್ರಿ.ಶ. ೧೨-೧೩ನೆಯ ಶತಮಾನದ ನಂತರವೇ ಬಂದಿರಬಹುದೆಂದು ಸಾಧಾರವಾಗಿ ಊಹಿಸಿದ್ದಾರೆ. ಬೆಳ್ಗೊಳ ಮತ್ತು ಕಳ್ವಪ್ಪುವಿನ ಅರ್ಥನಿಷ್ಪತ್ತಿಯನ್ನು ಅದುವರೆಗಿನ ವಿದ್ವಾಂಸರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಚರ್ಚಿಸಿ, ಕ್ರಿ.ಶ. ೬೫೦ ರಲ್ಲಿಯೇ ಶಾಸನದಲ್ಲಿ ವೆಳ್ಗೊಳದ ಉಲ್ಲೇಖಗಳಿವೆ, ಆರನೆಯ ಶತಮಾನದ ಶಾಸನದಲ್ಲಿಯೇ ಕಟವಪ್ರದ ಉಲ್ಲೇಖವಿದ್ದು, ಕಡ, ಕಡವು ಎಂದರೆ ದೋಣಿಯಾಕಾರದ (ದೊಣೆ), ಅಪ್ಪು ಎಂದರೆ ನೀರಿರುವ ಸ್ಥಳ, ಚಂದ್ರಗಿರಿಯ ಮೇಲೆ ನೀರುತುಂಬಿರುವ ಇಂತಹ ಕಡವು ಅಥವಾ ದೊಣೆಗಳಿವೆಯೆಂದು, ಹೇಳಿ ಈ ಪ್ರದೇಶವೇ ಕಡವಪ್ಪು>ಕಳ್ವಪ್ಪು>ಕಳ್ಬಪ್ಪು ಆಗಿದೆ ಎಂಬುದನ್ನು ಹೇಳಿದ್ದಾರೆ.

ಶ್ರವಣಬೆಳಗೊಳದ ಬೆಳವಣಿಗೆಗೆ ಕಾರಣರಾದವರು ಅಧ್ಯಾಯದಲ್ಲಿ ಇಲ್ಲಿ ದೇಹತ್ಯಾಗ ಮಾಡಿದ ಭದ್ರಬಾಹು ಮತ್ತು ಚಂದ್ರಗುಪ್ತ ಮುನಿಗಳು ಕ್ರಿಪೂ. ಮೂರನೆಯ ಶತಮಾನದಲ್ಲಿದ್ದ ಶ್ರುತಕೇವಲಿ ಭದ್ರಬಾಹು ಮತ್ತು ರಾಜ ಚಂದ್ರಗುಪ್ತನೇ ಆಗಿದ್ದಾರೆಂಬ ಬಹುಜನ ಸಮ್ಮತವಾದ ಅಭಿಪ್ರಾಯವನ್ನು ಸ್ವೀಕರಿಸಿದ್ದಾರೆ. ಭದ್ರಬಾಹುಗಳು ಈ ಬೆಟ್ಟದ ಮೇಲೆ ನೆಲೆನಿಂತಾಗ ಈ ಬೆಟ್ಟದ ಸುತ್ತಮುತ್ತ "ನೂರಾರು ಹಳ್ಳಿಗಳುಳ್ಳ ಪ್ರದೇಶದಲ್ಲಿದ್ದ ಜನರು ಧನ ಧಾನ್ಯವುಳ್ಳವರು, ಹಸು-ಎಮ್ಮೆ ಆಡು-ಕುರಿಗಳನ್ನು ಸಾಕಿಕೊಂಡು ಸ್ಥಿತಿವಂತರಾಗಿದ್ದರು ಎಂಬ ಶಾಸನದ ಸಾಲುಗಳನ್ನು ಉದ್ಧರಿಸಿದ್ದಾರೆ. ಇದು ಒಂದು ನದಿಕೊಳ್ಳದ ಪ್ರದೇಶವಾಗಿದ್ದು, ಪ್ರಾಚೀನ ಕಾಲದಿಂದ ಇಂದಿನವರೆಗೂ ಸಮೃದ್ಧಿಯಾಗಿಯೇ ಇರುವುದನ್ನು ಗಮನಿಸಬಹುದು ಎಂಬುದು ಈ ಪ್ರದೇಶದಲ್ಲಿ ಸುತ್ತಾಡಿದವರಿಗೆ ಕಂಡುಬರುತ್ತದೆ. ಆ ನಂತರ ಇದರ ಅಭಿವೃದ್ಧಿಗೆ ಗಂಗ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಮತ್ತು ಮೈಸೂರು ಅರಸರ ಕೊಡುಗೆ ಏನು ಎಂಬುದನ್ನು ವಿಸ್ತಾರವಾಗಿಯೇ ನೀಡಿದ್ದಾರೆ. ಇದರಿಂದ ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರೆಗಿನ ಈ ಊರಿನ ಇತಿಹಾಸವು ಖಚಿತವಾಗಿ ತಿಳಿದುಬರುತ್ತದೆ.

ವಾಸ್ತುಶಿಲ್ಪ ವಿಭಾಗದಲ್ಲಿ, ಬಸದಿ, ಸ್ತಂಭ, ಕೊಳ ಮುಂತಾದ ರಚನೆಗಳನ್ನೂ ಸೇರಿಸಿ ವಿಶ್ಲೇಷಿಸಿದ್ದಾರೆ. ಕ್ರಿ.ಶ. ಆರನೆಯ ಶತಮಾನದಿಂದ ಇಂದಿನವರೆಗೆ ರಚನೆಗಳು, ಜೀರ್ಣೋದ್ಧಾರಗಳು ನಡೆಯುತ್ತಲೇ ಬಂದಿವೆ, ಇಲ್ಲಿನ ಬಸದಿಗಳ ಹಾಗೂ ವಾಸ್ತುರಚನೆಗಳಲ್ಲಿ ಕೆಲವಕ್ಕೆ ಮಾತ್ರ ಕಟ್ಟಿದುದರ ಉಲ್ಲೇಖವಿದೆ, ಕೆಲವೊಮ್ಮೆ ಜೀರ್ಣೋದ್ಧಾರ ಮಾಡಿಸಿದಾಗ ಬಸದಿಯನ್ನು ಹೊಸದಾಗಿ ನಿರ್ಮಿಸಿದಂತೆ ಹೇಳಿಕೊಂಡಿರುವುದರಿಂದ ಇಂತಹ ಶಾಸನಗಳಿರುವ ಬಸದಿಗಳ ನಿರ್ಮಿತಿಯ ಕಾಲವನ್ನು ನಿರ್ಧರಿಸುವುದು ಕಷ್ಟವಾಗುತ್ತದೆ, ಉಳಿದಿರುವ ಹಳೆಯ ವಾಸ್ತು ಅವಶೇಷಗಳನ್ನು ಗಮನಿಸಿ ಅದರ ರಚನಾ ಕಾಲವನ್ನು ನಿರ್ಧರಿಸಬೇಕಾಗುತ್ತದೆಂದು ಸರಿಯಾಗಿಯೇ ಗುರುತಿಸಿದ್ದಾರೆ. ಮೊಟ್ಟಮೊದಲ ಬಾರಿಗೆ ಶ್ರವಣಬೆಳಗೊಳದಲ್ಲಿರುವ ವಾಸ್ತು ರಚನೆಗಳ ಕಾಲಾನುಕ್ರಮ ಪಟ್ಟಿಯನ್ನು, ವಾಸ್ತುವಿನ (ಬಸದಿಯ) ಹೆಸರು, ಇರುವ ಸ್ಥಳ, ರಚನಾ ಕಾಲ, ಕಟ್ಟಿಸಿದವರು, ಜೀರ್ಣೋದ್ಧಾರ ಹಾಗೂ ಇತರೆ ವಿಷಯಗಳನ್ನು ಒಳಗೊಂಡಂತೆ ನೀಡಿದ್ದಾರೆ. ಇದು ಪ್ರವಾಸಿಗರಿಗೆ, ಸಂಶೋಧಕರಿಗೆ, ಇತಿಹಾಸ ರಚನಾಕಾರರಿಗೆ ಅತ್ಯಂತ ಉಪಯುಕ್ತವಾದ, ಸಮಗ್ರವಾದ ಹಾಗೂ ಖಚಿತವಾದ ಪಟ್ಟಿಯಾಗಿದೆ ಎಂದು ಹೇಳಬಹುದು.

ಮೊದಲಿಗೆ ಅಡಿಪಾಯದಿಂದ ಶಿಖರದವರೆಗಿನ ಬಸದಿಯ ಅಂಗಗಳ ಹೆಸರುಗಳನ್ನು ವಾಸ್ತುಶಾಸ್ತ್ರದ ಪರಿಭಾಷೆಗೆ ಅನುಗುಣವಾಗಿ ರೇಖಾಚಿತ್ರದ ಸಮೇತ ನೀಡಿ, ಸಾಮಾನ್ಯ ಓದುಗನಿಗೆ, ಕುತೂಹಲಿಗಳಿಗೆ, ಸಂಶೋಧಕರಿಗೆ, ಪರಿಭಾಷೆಯ ಬಗೆಗೆ ಗೊಂದಲ ಏರ್ಪಡದಂತೆ ಮಾಡಿದ್ದಾರೆ. ಚಿಕ್ಕಬೆಟ್ಟ ಅಥವಾ ಚಂದ್ರಗಿರಿಯ ಮೇಲಿರುವ ಬಸದಿಗಳು ಹಾಗೂ ವಾಸ್ತುರಚನೆಗಳ ವಿವರಗಳನ್ನು ಚಿಕ್ಕಬೆಟ್ಟದ ನಕ್ಷೆ, ಆಯಾ ಬಸದಿಯ ಅಧಿಷ್ಠಾನದ ನಕ್ಷೆಗಳು, ಬಸದಿಯ ರೇಖಾಚಿತ್ರಗಳ ಸಮೇತ ಒಂದೊಂದಾಗಿ ವಿವರಿಸುತ್ತಾ ಹೋಗುತ್ತಾರೆ. ಬಸದಿಯ ನಿರ್ಮಾಣದ ಕಾಲ, ಅದರ ರೂವಾರಿ, ಅದರಲ್ಲಿರುವ ಮೂರ್ತಿಗಳ ಹಾಗೂ ಶಾಸನಗಳ ರಚಕ ಇವರ ಹೆಸರುಗಳನ್ನೂ ನೀಡುತ್ತಾರೆ. ಆ ಬಸದಿಯ ವಿವಿಧ ಭಾಗಗಳು, ಅದರಲ್ಲಿರುವ ಕಂಬಗಳ ಸಂಖ್ಯೆಗಳನ್ನೂ ನೀಡುತ್ತಾರೆ. ಚಂದ್ರಗುಪ್ತ ಮುನಿಯು ಸಲ್ಲೇಖನ ವ್ರತವನ್ನು ಸ್ವೀಕರಿಸಿ ದೇಹತ್ಯಾಗ ಮಾಡಿದ ಜಾಗವನ್ನು, ಜನ ತಲೆಮಾರುಗಳಿಂದಲೂ ಗುರುತಿಸುತ್ತಾ ಬಂದಿದ್ದು, ಕ್ರಿ.ಶ.೭ನೆಯ ಶತಮಾನದ ಹೊತ್ತಿಗೆ ಇಲ್ಲಿ ಚಿಕ್ಕದಾದ, ಆಯತಾಕಾರದ ಒಂದು ರಚನೆ ನಿರ್ಮಾಣವಾಯಿತೆಂದು ಹೇಳುತ್ತಾ ಈ ಬಸದಿಯಲ್ಲಿರುವ ಜೈನಕಥೆಯನ್ನು ಹೇಳುವ ಜಾಲಂಧ್ರವು ಶಿಲ್ಪಲಕ್ಷಣಗಳ ದೃಷ್ಟಿಯಿಂದ ನಿಸ್ಸಂಶಯವಾಗಿ ಗಂಗರ ಕಾಲಕ್ಕೆ ಅಂದರೆ ಕ್ರಿ.ಶ. ೮೫೦-೯೦೦ ಕ್ಕೆ ಸೇರಿದುದು ಎಂಬ ಮಹತ್ವವಾದ ಖಚಿತವಾದ ಅಭಿಪ್ರಾಯವನ್ನು ನೀಡಿದ್ದಾರೆ. ಚಂದ್ರಪ್ರಭ ಬಸದಿಯ ಹಿಂಭಾಗಕ್ಕೆ "ಶಿವಮಾರನ ಬಸದಿ" ಎಂಬುದಿದ್ದು, ಇಲ್ಲಿ ಚಿಕ್ಕದೊಂದು ಶಾಸನವಿದ್ದು, ಈ ಶಾಸನಕ್ಕೂ ಬಸದಿಗೂ ಸಂಬಂಧ ಇಲ್ಲವೆ ಇಲ್ಲ ಎಂದು ಇದು ೯, ೧೦ ಅಥವಾ ೧೧ನೆಯ ಶತಮಾನದ ರಚನೆ ಎಂದು ವಿದ್ವಾಂಸರು ಹೇಳಿರುವುದನ್ನು ಸಾಧಾರವಾಗಿ ನಿರಾಕರಿಸಿ ಇದು ನಿಸ್ಸಂಶಯವಾಗಿ ಗಂಗರ ಕಾಲದ ಬಸದಿಗಳಲ್ಲಿ ಒಂದೆಂಬುದಾಗಿ ಗುರುತಿಸಿದ್ದಾರೆ. ಸುಪಾರ್ಶ್ವನಾಥ ಬಸದಿ ೧೦ನೆಯ ಶತಮಾನದ ಗಂಗರ ಕಾಲದ ರಚನೆ ಆದರೆ ಇದರ ಬಾಗಿಲುವಾಡವು ಹೊಯ್ಸಳರ ಕಾಲದ್ದೆಂದು ಗುರುತಿಸಿದ್ದಾರೆ. ಶಾಂತಿನಾಥ ಬಸದಿ ಪೂರ್ಣವಾಗಿ ಮೈಸೂರು ಅರಸರ ಕಾಲದಲ್ಲಿ ಜೀರ್ಣೋದ್ಧಾರವಾಗಿದ್ದು ಇದರ ಕಾಲವನ್ನು ಗುರುತಿಸಲು ಸಾಧ್ಯವಿಲ್ಲವೆಂದು ಹೇಳಿದ್ದಾರೆ. ಚಾಮುಂಡರಾಯ ಬಸದಿಯ ವಾಸ್ತು ವಿಶೇಷಗಳನ್ನು ವಿವರವಾಗಿ ನೀಡಿ, ತಳಪಾಯದ ಇಕ್ಕೆಲಗಳಲ್ಲಿ "ಚಾಮುಂಡರಾಯಂ ಮಾಡಿಸಿದಂ" ಎಂಬ ಬರಹ ಇರುವುದನ್ನು ಗುರುತಿಸಿ, ಇದನ್ನು ಚಾಮುಂಡರಾಯ ತನ್ನ ಕಾಲದಲ್ಲಿ ಕಟ್ಟಲು ಪ್ರಾರಂಭಿಸಿ, ಅದು ಪೂರ್ಣವಾಗುವುದರಲ್ಲಿ ಗತಪ್ರಾಣನಾದನು. ನಂತರ ಅವನ ಮಗ ಜಿನದೇವಣ್ಣ ಇದನ್ನು ಪೂರ್ಣಗೊಳಿಸಿದ. ಹೊಯ್ಸಳ ಸೇನಾನಿ ಗಂಗರಾಜನ ಮಗ ಏಚಣ್ಣ ಜೀರ್ಣೋದ್ಧಾರ ಮಾಡಿಸಿ ಇದಕ್ಕೆ ತ್ರೈಲೋಕ್ಯರಂಜನ ಚೈತ್ಯಾಲಯವೆಂದು ಹೆಸರಿಟ್ಟ ವಿಚಾರವನ್ನು ಹೇಳಿದ್ದಾರೆ. ಚಾಮುಂಡರಾಯ

ಬಸದಿಯು ದಕ್ಷಿಣ ಭಾರತದಲ್ಲಿ ಒಂದು ಸುಂದರವಾದ ದ್ರಾವಿಡ ಶೈಲಿಯ ಪ್ರಮುಖ ಬಸದಿಗಳಲ್ಲಿ ಒಂದು ಎಂಬ ಅಭಿಪ್ರಾಯ ಒಪ್ಪತಕ್ಕದ್ದಾಗಿದೆ. ಎರಡುಕಟ್ಟೆ ಬಸದಿಯ ಕಂಬದಲ್ಲಿರುವ ಅಪ್ರಕಟಿತ "ದುಗ್ಗಮಾರೋವಜ ಮಾಡಿದೋನ್" ಎಂಬ ಬರಹ ಹಾಗೂ ಅದರ ವಾಸ್ತುಶೈಲಿಯನ್ನು ಅನುಲಕ್ಷಿಸಿ ಇದನ್ನು ಶ್ರೀಪುರುಷನ ಮಗನಾದ ದುಗ್ಗಮಾರನು ಕಟ್ಟಿಸಿರಬಹುದೆಂದು ಹೇಳಿದ್ದಾರೆ. ದುಗ್ಗಮಾರೋವಜನು ದುಗ್ಗಮಾರನ ಬಳಿ ಶಿಲ್ಪಿಯಾಗಿದ್ದನೆಂಬ ಇವರ ಊಹೆ ಸರಿಯಾಗಿದೆ. ಸವತಿ ಗಂಧವಾರಣ ಬಸದಿ, ತೇರಿನ ಬಸದಿ, ಶಾಂತೀಶ್ವರ ಬಸದಿ, ಮಜ್ಜಿಗಣ್ಣ ಬಸದಿಗಳ ವಾಸ್ತು ಹಾಗೂ ಕಾಲದ ಬಗ್ಗೆ ವಿವರಿಸಿದ್ದಾರೆ. ಭದ್ರಬಾಹು ಗುಹೆ ಸಹಜ ಗುಹೆಯಾಗಿದ್ದು, ಮುಂದೆ ಇಂದಿನ ರೂಪ ಪಡೆದುದನ್ನು ವಿವರಿಸಿದ್ದಾರೆ. ಅಷ್ಟು ಪರಿಚಿತವಲ್ಲದ ಇರುವೆ ಬ್ರಹ್ಮದೇವರ ಗುಡಿಯ ಬಗ್ಗೆ ವಿವರಣೆ ನೀಡಿದ್ದಾರೆ.

ದೊಡ್ಡಬೆಟ್ಟದ ನಕ್ಷೆಯನ್ನು ನೀಡಿ, ಅಲ್ಲಿರುವ ಬ್ರಹ್ಮದೇವರ ದೇವಾಲಯ, ಚೌವೀಸ ತೀರ್ಥಂಕರ ಬಸದಿ, ಒದೆಗಲ್ ಬಸದಿ, ಚನ್ನಣ್ಣನ ಬಸದಿ, ಅಖಂಡಬಾಗಿಲು, ಭರತ–ಬಾಹುಬಲಿ ಬಸದಿ, ಸಿದ್ಧರ ಬಸದಿ, ಸುತ್ತಾಲಯಗಳ ವಾಸ್ತು ವೈವಿಧ್ಯಗಳು, ಅವುಗಳ ನಿರ್ಮಾಣ ಕಾಲ ಇತ್ಯಾದಿ ವಿವರಗಳನ್ನು ನೀಡಿದ್ದಾರೆ. ಬ್ರಹ್ಮ ದೇವರ ದೇವಾಲಯವನ್ನು ಕ್ರಿ.ಶ. ೧೬೭೮ ರಲ್ಲಿ ಹಿರಿಸಾವೆಯ ಗಿರಿಗೌಡನ ತಮ್ಮ ರಂಗಯ್ಯ ಕಟ್ಟಿಸಿದ ಅಂಶವನ್ನು ಹೇಳಿದ್ದು, ಇದು ಈ ಭಾಗದ ಅನ್ಯಧರ್ಮದ ಜನರು ಜೈನಧರ್ಮದ ಮೇಲೂ ಯಾವರೀತಿ ಭಕ್ತಿಯನ್ನು ಇಟ್ಟಿದ್ದರು ಎಂಬುದನ್ನು ಇದು ತೋರಿಸುತ್ತದೆ. ಮೂಲತಃ ಇದು ಆದಿನಾಥ ಬಸದಿಯಾಗಿದ್ದು, ಮುಂದೆ ಯಾವರೀತಿ ಚಂದ್ರನಾಥ ಬಸದಿಯಾಯಿತು ಎಂಬ ಅಂಶವನ್ನು ಹೇಳಿದ್ದಾರೆ. ಅಖಂಡ ಬಾಗಿಲು ಬಿಡಿರಚನೆ ಎಂಬ ಡಾ. ಶೆಟ್ಟರ್ ಅವರ ಅಭಿಪ್ರಾಯವನ್ನು ನಿರಾಕರಿಸಿ, ಇದು ಹುಟ್ಟುಬಂಡೆಯಲ್ಲಿ ಕೊರೆದಿರುವ ಅಖಂಡಬಾಗಿಲಾಗಿದ್ದು, ಅದರ ವಾಸ್ತು ಲಕ್ಷಣಗಳ ಆಧಾರದ ಮೇಲೆ ಇದೂ ಚಾಮುಂಡರಾಯನ ಕಾಲದಲ್ಲೇ ನಿರ್ಮಿತವಾಯಿತೆಂಬ ತೀರ್ಮಾನಕ್ಕೆ ಬಂದಿದ್ದಾರೆ. ಈ ಅಖಂಡ ಬಾಗಿಲಿನ ಅಲಂಕಾರಕ್ಕೆ ಹೊಂದಿಕೊಳ್ಳುವಂತೆ ಅದರ ಇಕ್ಕೆಲಗಳಲ್ಲಿರುವ ಭರತ ಬಾಹುಬಲಿ ಬಸದಿಗಳು ವಿಷ್ಣುವರ್ಧನನ ದಂಡನಾಯಕ ಭರತಮಯ್ಯನ ನಿರ್ಮಾಣವೆಂಬುದನ್ನು ಹೇಳಿದ್ದಾರೆ. ಸಿದ್ಧರ ಬಸದಿಯೂ ಹೊಯ್ಸಳರ ಕಾಲದ ರಚನೆಯಾಗಿದ್ದು, ಇಲ್ಲಿರುವ ಕ್ರಿ.ಶ. ೧೩೯೮ರ ಶ್ರುತಮುನಿಯ ಶಾಸನವು ಕವಿ ಮಂಗರಾಜನ (ಈ ಮಂಗರಾಜನೂ, ಮಂಗರಾಜ ನಿಘಂಟಿನ ಕರ್ತೃವೂ ಭಿನ್ನರು) ರಚನೆ ಎಂಬ ಕುತೂಹಲಕರ ಅಂಶವನ್ನು ತಿಳಿಸುತ್ತಾರೆ. ಗೊಮ್ಮಟನ ಹಿಂಬದಿಯಲ್ಲಿ ಚಾಮುಂಡರಾಯನು ನಿರ್ಮಿಸಿದ್ದ ಮಂಟಪವನ್ನು ಸೇರಿಸಿಕೊಂಡು ಹೊಯ್ಸಳ ಸೇನಾನಿ ಗಂಗರಾಜನು ಸುತ್ತಾಲಯವನ್ನು ನಿರ್ಮಿಸಿದ ವಿಚಾರ ಇದೆ. ಪೂರ್ಣ ಸುತ್ತಾಲಯವೇ ಗಂಗರಾಜನ ರಚನೆ ಎಂದು ಎಲ್ಲರೂ ಹೇಳುತ್ತಿದ್ದು, ಇದರಲ್ಲಿ ಚಾಮುಂಡರಾಯನ ಕಾಲದ ರಚನೆಯೂ ಸೇರಿರುವ ಅಂಶವನ್ನು ತೋರಿಸಿದ್ದಾರೆ. ಗೊಮ್ಮಟನ ಮುಂಬದಿಯ ಮಂಟಪದಲ್ಲಿ ಅಷ್ಟದಿಕ್ಪಾಲಕರು, ವಾದ್ಯಗಾರರು, ನರ್ತಕರು, ಕೈಯಲ್ಲಿ ಕಳಶ ಹಿಡಿದ ಇಂದ್ರ ಇವುಗಳು ಹೊಯ್ಸಳ ಶಿಲ್ಪಿಗಳ ಕೈಚಳಕವಾಗಿದ್ದು, ಚಪ್ಪಡಿಗಲ್ಲಿನಲ್ಲಿ ಇದನ್ನು ಬಿಡಿಸಿರುವುದು ಒಂದು ಅದ್ಭುತವೆಂದೇ ಹೇಳಿದ್ದಾರೆ. ಸುತ್ತಾಲಯದ ಪ್ರವೇಶದ್ವಾರದ ಒಂದೂ ಕಡೆ ಬೊಪ್ಪಣ ಪಂಡಿತನ ಗೊಮ್ಮಟ ಜಿನಸ್ತುತಿಯ ಶಾಸನ ಕಾವ್ಯ ಇರುವ ವಿಚಾರ ಹೇಳಿದ್ದಾರೆ.

ಶ್ರವಣಬೆಳಗೊಳ ಊರೊಳಗಿರುವ ಇಮ್ಮಡಿ ಬಲ್ಲಾಳನ ಮಂತ್ರಿ ಚಂದ್ರಮೌಳಿಯ ಹೆಂಡತಿ ಆಚಿಯಕ್ಕನು ಕಟ್ಟಿಸಿದ ಅಕ್ಕನ ಬಸದಿಯು ಹೊಯ್ಸಳರ ಕಾಲದ ಲಕ್ಷಣಗಳುಳ್ಳ ಅಧಿಕೃತವಾದ ಕಟ್ಟಡ, ಶ್ರವಣಬೆಳಗೊಳದಲ್ಲಿ ಅನೇಕ ಹೊಯ್ಸಳರ ಕಾಲದ ರಚನೆಗಳಿದ್ದರೂ, ನಕ್ಷತ್ರಾಕಾರದ ಕಟ್ಟಡ ಇದೊಂದೇ ಆಗಿದೆ ಎಂದು, ಅದರ ವಾಸ್ತು ಶೈಲಿಯನ್ನು, ಬಸದಿಯ ಮುಂಬದಿಯಲ್ಲಿರುವ ಶಾಸನ ಶಿಲ್ಪವನ್ನು, ಅದರ ಅಲಂಕಾರಿಕ ಲಿಪಿಗಳ ವಿಚಾರವನ್ನು ಪೂರ್ಣವಾಗಿ ವಿವರಿಸಿದ್ದಾರೆ. ಬಸದಿಯ ಗೋಡೆಯ ಮೇಲೆ ಕ್ರಿ.ಶ. ೧೪೦೪ ಮತ್ತು ೧೪೪೬ರ ಶಾಸನಗಳಿದ್ದು, ಅವು ವಿಜಯನಗರದ ಅರಸರಾದ ಇಮ್ಮಡಿ ಹರಿಹರರಾಯ ಮತ್ತು ಇಮ್ಮಡಿ ದೇವರಾಯರ ಮರಣದ ವಿಚಾರವನ್ನು ಹೇಳುವ ಕುತೂಹಲದ ಅಂಶವನ್ನು ಉಲ್ಲೇಖಿಸಿದ್ದಾರೆ. ಸಿದ್ಧರ ಬಸದಿಯು ಜೈನ ಗ್ರಂಥಭಂಡಾರವಾಗಿದ್ದಿರಬಹುದು. ದಾನಶಾಲಾ ಬಸದಿಯು ಹಳೆಯ ಊರಿನ ಪ್ರದೇಶದಲ್ಲಿದ್ದು, ಇಲ್ಲಿ ಜೈನಮಠ ಇದ್ದಿರಬಹುದೆಂಬ ಊಹೆ ಮಾಡಿದ್ದಾರೆ. ನಗರ ಜಿನಾಲಯ ಅಥವಾ ಆದಿನಾಥ ಬಸದಿಯು ನಖರಗಳ ಆಡಳಿತದಲ್ಲಿದ್ದ ಬಸದಿಯಾಗಿದ್ದು, ವಿವಿಧ ಕಾಲಗಳಲ್ಲಿ ಇದು ಜೀರ್ಣೋದ್ಧಾರಗೊಂಡಿರುವ ಅಂಶವನ್ನು, ಇಲ್ಲಿ ಆದಿನಾಥನಿಗೆ ಬದಲು ಸುಮತಿನಾಥನಿರುವುದನ್ನೂ ಗುರುತಿಸಿದ್ದಾರೆ. ಶ್ರವಣಬೆಳಗೊಳದ ಬಸದಿಗಳಲ್ಲೆಲ್ಲಾ ಬಹುದೊಡ್ಡ ಬಸದಿಯಾದ ಹೊಯ್ಸಳ ಒಂದನೆಯ ನರಸಿಂಹನ ಭಂಡಾರಿಯಾಗಿದ್ದ ಹುಳ್ಳನು ಕಟ್ಟಿಸಿದ ಭಂಡಾರಬಸದಿ ಅಥವಾ ಚೌವೀಸ ತೀರ್ಥಂಕರರ ಬಸದಿಯ ವಾಸ್ತು ವಿಶೇಷಗಳನ್ನು, ಅಲ್ಲಿರುವ ನವರಂಗದ ಬಾಗಿಲ ಕಲಾತ್ಮಕತೆಯನ್ನೂ ವಿವರಿಸಿದ್ದಾರೆ. ಇತ್ತೀಚೆಗೆ ಬೆಳಕಿಗೆ ಬಂದ ಶಾಸನದ ಪ್ರಕಾರ, ಬಸದಿಯ ಮುಂದಿನ ತೆರೆದ ವಿಶಾಲ ಮಂಟಪವು ವಿಜಯನಗರ ಕಾಲದ ರಚನೆಯಾಗಿದ್ದು, ಸರಸ್ವತಿ ಮಂಟಪವೆಂದು ಹೆಸರಾಗಿದ್ದ ಇದನ್ನು ಜೈನಕವಿ ದೇವಪ್ಪನು ಜೀರ್ಣೋದ್ಧಾರ

ಮಾಡಿಸಿದ ಮಾಹಿತಿಯನ್ನು ಉಲ್ಲೇಖಿಸಿದ್ದಾರೆ. ಭಂಡಾರ ಬಸದಿಯ ಬಲದಲ್ಲಿರುವ ಜೈನಮಠದಲ್ಲಿರುವ ಸ್ಥಳದ ಯಕ್ಷಿ ಅಂಬಿಕಾಯಕ್ಷಿಯ ಹಾಗೂ ಅಲ್ಲಿನ ಕೊಠಡಿಗಳಲ್ಲಿರುವ ಅನೇಕ ಯಕ್ಷ ಯಕ್ಷಿಯರ ಬಿಂಬಗಳನ್ನು, ತೀರ್ಥಂಕರರ ಬಿಂಬಗಳ ವಿವರಣೆಯನ್ನೂ ನೀಡಿದ್ದಾರೆ. ಗಂಗರ ಮಾರಸಿಂಹನ ಅಕ್ಕ ಕುಂದಣಸೋಮಿಯು ಮಾಡಿಸಿದ ಎರಡು ಅಡಿ ಎತ್ತರದ ಜಿನಪ್ರತಿಮೆ ಇಲ್ಲಿರುವುದನ್ನು ಉಲ್ಲೇಖಿಸಿದ್ದಾರೆ. ಮಠದ ಗೋಡೆಗಳ ಮೇಲಿನ ವರ್ಣಚಿತ್ರಗಳ ವಿವರಣೆ ನೀಡಿದ್ದಾರೆ. ಈ ಮಠವು ಮೈಸೂರು ಅರಸರ ಕಾಲದ ರಚನೆಯಾಗಿದ್ದು, ಇಲ್ಲಿದ್ದ ಹಳೆಯ ಮಠದ ಕಟ್ಟಡವನ್ನು ಕಿತ್ತುಹಾಕಿ ಹೊಸ ಕಟ್ಟಡವನ್ನು ನಿರ್ಮಿಸಿರಬಹುದೆಂಬ ಇವರ ಊಹೆ ಸರಿಯಾಗಿದೆ. ಇತರ ವಾಸ್ತು ರಚನೆಗಳಲ್ಲಿ ಒದೆಗಲ್ ಬಸದಿಯ ಹತ್ತಿರ ಇಳಿಜಾರಿನಲ್ಲಿರುವ ೧೧ ಅಡಿ ಎತ್ತರದ ತ್ಯಾಗದ ಬ್ರಹ್ಮದೇವರ ಸ್ಥಂಬ, ಗೊಮ್ಮಟ ಮೂರ್ತಿಯ ಎದುರಿಗಿನ ಮಂಟಪದಲ್ಲಿ ಗುಳ್ಳಕಾಯಜ್ಜಿಯ ಹಿಂದಿರುವ ೨೨ ಅಡಿ ಎತ್ತರದ ಬ್ರಹ್ಮಸ್ಥಂಭ, ಮಾರಸಿಂಹನ ಕೂಗೆ ಬ್ರಹ್ಮದೇವರ ಸ್ಥಂಭ ಅಥವಾ ಮಾನಸ್ಥಂಭ, ಕಮಠ ಪಾರ್ಶ್ವನಾಥ ಬಸದಿಯ ಮುಂದೆ ಇರುವ ೮೦ ಅಡಿ ಎತ್ತರದ ಚಿಕ್ಕದೇವರಾಜ ಒಡೆಯರ ಕಾಲದ ಮಾನಸ್ತಂಭ, ಚೆನ್ನಣ್ಣನ ಬಸದಿಯ ಮುಂದೆ ಇರುವ ೩೦ ಅಡಿ ಎತ್ತರದ ಮಾನಸ್ಥಂಭ ಇವುಗಳ ವಿಶೇಷಗಳನ್ನು ವರ್ಣಿಸಿದ್ದಾರ. ಮಾರಸಿಂಹನ ಕೂಗೆ ಬ್ರಹ್ಮದೇವರ ಸ್ಥಂಭದ ಬಳಿ ಅದರ ನಕ್ಷೆ ಇರುವ ವಿಶೇಷ ವಿಚಾರವನ್ನು ಉಲ್ಲೇಖಿಸಿದ್ದಾರೆ. ಎರಡು ಬೆಟ್ಟಗಳ ಮಧ್ಯೆ ಇರುವ ಇಂದಿನ ಕಲ್ಯಾಣಿ ಅಥವಾ ಧವಳ ಸರೋವರ ಯಾವರೀತಿ ಒಂದು ಕುಂಟೆಯಿಂದ, ಕೆರೆಯಾಗಿ, ಇಂದಿನ ಕಲ್ಯಾಣಿಯಾಗಿದೆ ಎಂಬುದನ್ನು ಸಾಧಾರವಾಗಿ ಊಹಿಸಿದ್ದಾರೆ. ಇನ್ನೂ ಬೆಟ್ಟದಮೇಲೆ ಇರುವ ದೊಣೆಗಳ ವಿವರಣೆ ನೀಡಿದ್ದಾರೆ.

ಪ್ರತಿಯೊಂದು ಬಸದಿಯ ಅಧಿಷ್ಠಾನದ ನಕ್ಷೆ, ರೇಖಾಚಿತ್ರಗಳನ್ನು ನೀಡಿರುವುದು ಈ ಕೃತಿಯ ವಿಶೇಷ ಹಾಗೂ ಕೆಲವು ಅಪರೂಪದ ಛಾಯಾಚಿತ್ರಗಳನ್ನು ಸಹ ಕೃತಿ ಒಳಗೊಂಡಿದೆ. ಒಟ್ಟಿನಲ್ಲಿ ಈ ಕೃತಿಯು ಪಂಡಿತರಿಂದ ಹಿಡಿದು ಪಾಮರರವರೆಗೆ ಎಲ್ಲರಿಗೂ ಅವರವರ ಆಸಕ್ತಿಗೆ ತಕ್ಕಂತೆ ಶ್ರವಣಬೆಳಗೊಳದ ಪ್ರಾಚೀನತೆ, ಭವ್ಯತೆ ಹಾಗೂ ವಿಶೇಷತೆಗಳನ್ನು ಅತ್ಯಂತ ಸಹಜವಾಗಿ, ಸರಳವಾಗಿ ವರ್ಣಿಸುವ ಆದ್ಯಕೃತಿಯಾಗಿದೆ ಎಂದು ಹೇಳಬಹುದು.

### ಗಂಗ ಶಿಲ್ಪಕಲೆ

ಸುವರ್ಣ ಕರ್ನಾಟಕ ಶಿಲ್ಪಕಲಾ ಮಾಲೆಯ ಅಡಿಯಲ್ಲಿ ಪ್ರಕಟವಾಗಿರುವ "ಗಂಗ ಶಿಲ್ಪಕಲೆ" ಡಾ॥ ದೇವರಕೊಂಡಾರೆಡ್ಡಿಯವರ ಮತ್ತೊಂದು ಪ್ರಮುಖ ಗಮನಸೆಳೆಯುವ ಕೃತಿಯಾಗಿದೆ. ತಲಕಾಡಿನ ಗಂಗರ ದೇವಾಲಯಗಳು – ಒಂದು ಅಧ್ಯಯನ ಇವರ ಪಿಎಚ್.ಡಿ ಪ್ರಬಂಧವಾಗಿದ್ದು, ಮಿತಿಯ ದೃಷ್ಟಿಯಿಂದ ಪ್ರಬಂಧದ ವ್ಯಾಪ್ತಿಯಲ್ಲಿ ತರಲಾಗದಿದ್ದ ಕೆಲವು ಹೊಸ ವಿಷಯಗಳನ್ನು ಈ ಕೃತಿಯಲ್ಲಿ ಹೇಳಿದ್ದಾರೆ. ಬಹುಶಃ ಈ ಕೃತಿ ಒಂದು ರೀತಿಯಲ್ಲಿ ಇವರ ಪಿಎಚ್.ಡಿ ಪ್ರಬಂಧದ ಮುಂದುವರಿದ ಭಾಗವೇ ಆಗಿದೆ ಎಂದು ಹೇಳಬಹುದು.

ಪ್ರಬಂಧದ ಪರಿಮಿತಿಯಿಂದ ಹೊರಗಿಟ್ಟಿದ್ದ ಗಂಗರ ರಾಜಕೀಯ ಇತಿಹಾಸ ಈ ಕೃತಿಯಲ್ಲಿದೆ. ಒರಿಸ್ಸಾದ ಗಂಗರು ತಮ್ಮನ್ನು ಗಂಗವಾಡಿವಿಷಯದ ಕೊಲಾಹಲಪುರದಿಂದ ಬಂದವರೆಂದು ಹೇಳಿಕೊಂಡಿರುವುದರಿಂದ ಕಳಿಂಗದ ಗಂಗರ ಮೂಲವೂ ಕರ್ನಾಟಕವೇ ಆಗಿರಬಹುದಾದರೂ ಕರ್ನಾಟಕದ ಗಂಗರಿಗೂ, ಕಳಿಂಗದ ಗಂಗರಿಗೂ ಕೆಲವು ವ್ಯತ್ಯಾಸಗಳನ್ನು ಉಲ್ಲೇಖಿಸಿದ್ದಾರೆ. ಇಮ್ಮಡಿ ಶಿವಮಾರನ ಮಗ ಪೃಥ್ವಿಪತಿಯು ತಮಿಳುನಾಡಿನ ಗಂಗರ ಶಾಖೆಯನ್ನು ಆರಂಭಿಸಿದ ವಿಚಾರವನ್ನು ಹೇಳಿದ್ದಾರೆ. ಗಂಗರು ಮೊದಲಿಗೆ ಕೋಲಾರ, ಬೆಂಗಳೂರು ಮತ್ತು ತುಮಕೂರು ಮತ್ತು ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಕೆಲವು ಭಾಗಗಳನ್ನು ಒಳಗೊಂಡ ಗಂಗ–೬೦೦೦ ಪ್ರಾಂತದ ಅಧಿಪತಿಗಳಾಗಿದ್ದು, ಮೊದಲಿಗೆ ಇವರ ರಾಜಧಾನಿ ಕುವಳಾಲಪುರವಾಗಿದ್ದು, ಶ್ರೀಪುರುಷನ ಕಾಲದಲ್ಲಿ ಮಣ್ಣೆ ಇವರ ರಾಜಧಾನಿಯಾಗಿತ್ತೆಂದು, ಇವು ತಾತ್ಕಾಲಿಕ ರಾಜಧಾನಿಗಳಾಗಿದ್ದು, ಮುಂದೆ ಗಂಗರ ಅಂತ್ಯದವರೆಗೆ ತಲಕಾಡೇ ಇವರ ರಾಜಧಾನಿ ಆಯಿತೆಂದು ಹೇಳಿರುವುದು ಗಮನಾರ್ಹವಾಗಿದೆ. ಗಂಗರಸರ ಇತಿಹಾಸವನ್ನು ಹಳೆಯ ಹಾಗೂ ಇತ್ತೀಚೆಗೆ ದೊರೆತ ಎಲ್ಲ ಶಾಸನಗಳ ಹಿನ್ನೆಲೆಯಲ್ಲಿ ಅಧಿಕೃತವಾಗಿ ಹೊಸದಾಗಿಯೇ ರಚಿಸಿದ್ದಾರೆ ಎಂದು ಹೇಳಬಹುದು. ಶ್ರೀವೈಷ್ಣವ ಧರ್ಮದ ಆಗಮನ, ಜೈನಧರ್ಮಕ್ಕೆ ಆದ ಆಘಾತ, ತಮಿಳು ಶೈವಭಕ್ತರ ಪ್ರಭಾವ, ಉತ್ತರದ ಚಾಳುಕ್ಯ ರಾಜ್ಯದ ಮೇಲೆ ಆದ ಶೈವರ ಪ್ರಭಾವದಿಂದ ವೀರಶೈವಧರ್ಮದ ಉದಯ, ಹೊಯ್ಸಳ ಸಾಮ್ರಾಜ್ಯದ ಉದಯ ಹಾಗೂ ಕರ್ನಾಟಕದಿಂದ ಚೋಳರ ನಿರ್ಗಮನ ಇವೇ ಗಂಗರ ಸೋಲಿನಿಂದ ಹಾಗೂ ಚೋಳರ ಆಗಮನದಿಂದ ಕರ್ನಾಟಕದ ಮೇಲೆ ಆದ ಪ್ರಭಾವಗಳೆಂದು ಬಹಳ ಸಮರ್ಪಕವಾಗಿ ಗುರುತಿಸಿದ್ದಾರೆ.

*ಗಂಗರ ದೇವಾಲಯಗಳು ಮತ್ತು ಶಿಲ್ಪಗಳು* ಅಧ್ಯಾಯದಲ್ಲಿ, ಭಾರತದಲ್ಲಿ ಮೂರ್ತಿಶಿಲ್ಪ ಹಾಗೂ ಮೂರ್ತಿಪೂಜೆಯ ಪ್ರಾರಂಭದ ಹಿನ್ನೆಲೆಯನ್ನು ಗುರುತಿಸಿ, ಗಂಗರು, ಸಮಕಾಲೀನ ಚಲುಕ್ಯ, ಪಲ್ಲವ, ರಾಷ್ಟ್ರಕೂಟರ ಶಿಲ್ಪಗಳಿಂದ ಪ್ರಭಾವಿತರಾಗಿದ್ದ ಅಂಶವನ್ನು ಗುರುತಿಸಿದ್ದಾರೆ. ಬಾದಾಮಿ ಚಲುಕ್ಯರು ರಾಜ್ಯವಾಳುತ್ತಿದ್ದ ಕಾಲದಲ್ಲಿ ಗಂಗರ ಶಿಲ್ಪಗಳು ದೊರೆಯದಿರಲು ಕಾರಣ ಬಹುಶಃ ಇಟ್ಟಿಗೆಯ ವ್ಯಾಪಕ ಬಳಕೆ ಮತ್ತು ವಿಗ್ರಹಗಳೂ ಮಣ್ಣಿನದೇ ಆಗಿದ್ದುದೆಂದು ಊಹಿಸಿದ್ದಾರೆ. ಕೋಲಾರದ ಸಪ್ತಮಾತೃಕೆಯರ ವಿಗ್ರಹಗಳು ಮಣ್ಣಿನವು ಎಂಬುದನ್ನು ಉದಾಹರಿಸುತ್ತಾರೆ. ಚಲುಕ್ಯರು ಮತ್ತು ರಾಷ್ಟ್ರಕೂಟರ ಪ್ರಭಾವದಿಂದ ಗಂಗರು ತಮ್ಮದೇ ಆದ ಶೈಲಿಯೊಂದನ್ನು ರೂಪಿಸಿಕೊಂಡರೆಂದು, ಇವರ ಕಾಲದ ದೇವಾಲಯಗಳು ಕುಳ್ಳಾಗಿದ್ದುದರಿಂದ, ಮೂರ್ತಿಗಳೂ ಚಿಕ್ಕದಾಗಿ ದೇವಾಲಯದ ನವರಂಗದಲ್ಲಿಯೇ ಪ್ರತಿಷ್ಠೆಯಾಗಿರುವುದನ್ನು ಗಮನಿಸಿದ್ದಾರೆ. ಇವರ ಶಿಲ್ಪಗಳಲ್ಲಿ ವಿಷ್ಣು, ಸೂರ್ಯ, ಸಪ್ತಮಾತೃಕೆ, ಗಣಪತಿ, ಬಸವ, ದುರ್ಗಾ ಮತ್ತು ಮಹಿಷಮರ್ದಿನಿ ಶಿಲ್ಪಗಳು ಹೆಚ್ಚಾಗಿರುವುದನ್ನು ವಿಚಾರವನ್ನು ಗಮನಿಸಿದ್ದಾರೆ.

*ಶಿಲೆಯ ಸ್ವರೂಪ* ಅಧ್ಯಾಯದಲ್ಲಿ ಗಂಗರ ಶಿಲ್ಪಗಳು ಗಟ್ಟಿಯಾದ ಕಪ್ಪುಕಲ್ಲಿನಿಂದ ಮಾಡಲ್ಪಟ್ಟಿವೆ. ಈ ಕಲ್ಲು ಯಾವ ಅಳತೆಯಲ್ಲಿ ಸಿಗುತ್ತಿತ್ತೋ ಅಷ್ಟಕ್ಕೇ ಮೂರ್ತಿ ಶಿಲ್ಪವನ್ನು ಮೊಟಕಾಗಿಸುತ್ತಿದ್ದ ವಿಶೇಷ ಅಂಶವನ್ನು ಹೇಳಿದ್ದಾರೆ. ವೀರಗಲ್ಲುಗಳು ಸಾಮಾನ್ಯವಾಗಿ ಒಂದೇ ಹಂತದಲ್ಲಿ ಉಬ್ಬುಶಿಲ್ಪಕ್ಕೇ ಹೆಚ್ಚಿನ ಮಾನ್ಯತೆ ನೀಡಿರುವುದನ್ನು, ಶಿವನನ್ನು ಅಮೂರ್ತವಾದ ಲಿಂಗರೂಪದಲ್ಲಿಯೇ ಕಡೆದು ಪೂಜಿಸುತ್ತಿದ್ದ ವಿಚಾರವನ್ನು ಹೇಳಿದ್ದಾರೆ.

*ಶಿಲ್ಪಗಳು ಧಾರ್ಮಿಕ ಮತ್ತು ಲೌಕಿಕ* ಅಧ್ಯಾಯದಲ್ಲಿ ಅತ್ಯಂತ ಪ್ರಾಚೀನ ಶಿಲ್ಪವಾದ ಲಿಂಗದ (ಶಿವಲಿಂಗ) ಉಗಮ ವಿಚಾರವನ್ನು ಚರ್ಚಿಸಿ, ಗಂಗರ ಕಾಲದ ದೇವಾಲಯಗಳ ಶಿವಲಿಂಗಗಳು ಬಹುತೇಕ ಚಳುಕ್ಯರಲ್ಲಿರುವಂತೆ ಕಂಡುಬರುತ್ತದೆಂದೂ, ಪಲ್ಲವರು ಗಂಗರಾಜ್ಯಕ್ಕೆ ಸಮೀಪದಲ್ಲಿದ್ದರೂ ಅವರ ಪ್ರಭಾವ ಗಂಗರ ಮೇಲೆ ಕಂಡುಬರುವುದಿಲ್ಲವೆಂಬ ಅಂಶವನ್ನು ಗುರುತಿಸಿದ್ದಾರೆ. ಐಗಂಡಪುರ, ಚನ್ನಪಟ್ಟಣ, ಚಿಕ್ಕನಹಳ್ಳಿಗಳಲ್ಲಿ ಬಾಣದಾಕಾರದ ಮಧ್ಯನಾಡಿ ಹೊಂದಿರುವ ಲಿಂಗಗಳು ಅತ್ಯಂತ ಪ್ರಾಚೀನವೆಂದು ಹೇಳಿದ್ದಾರೆ. ಗಂಗರ ಕಾಲದಲ್ಲಿ ಹೆಚ್ಚಾಗಿ ಪ್ರಮಾಣಬದ್ಧ ಶಿವಲಿಂಗಗಳ ರಚನೆ ಕಂಡುಬಂದರೂ, ತಲಕಾಡಿನ ಮರಳೇಶ್ವರ, ನರಸಮಂಗಲದ ರಾಮೇಶ್ವರ, ಅರಳಗುಪ್ಪೆಯ ಕಲ್ಲೇಶ್ವರ ಲಿಂಗಗಳು ಭಾರೀ ಗಾತ್ರದ್ದಾಗಿರುವುದನ್ನು ಗುರುತಿಸಿದ್ದಾರೆ. (ನರಸಮಂಗಲದಲ್ಲಿ ಭಾರೀ ಗಾತ್ರದ ಐದು ಲಿಂಗಗಳಿದ್ದು, ಅವುಗಳ ದೇವಾಲಯಗಳು ಬಿದ್ದುಹೋಗಿವೆ) ಗಂಗರ ಕಾಲದ ಶಿಲ್ಪಗಳಲ್ಲಿ ಶಿವನ ಸಾಕಾರ ರೂಪಗಳು ಕಡಿಮೆ ಇದ್ದು, ಕಂದಗಾಲ, ಅರಳಗುಪ್ಪೆ, ವರುಣದ ಉಮಾಮಹೇಶ್ವರ ಶಿಲ್ಪಗಳು ಗಂಗರ ಪ್ರಾಚೀನ, ಮಧ್ಯಕಾಲೀನ ಹಾಗೂ ನಂತರದ ಕಾಲಕ್ಕೆ ಸೇರಿರುವುದನ್ನು ಗುರುತಿಸಿ ಅವುಗಳ ವಿಶೇಷಗಳನ್ನು ವರ್ಣಿಸಿದ್ದಾರೆ.

ಗಂಗರ ಕಾಲದ ಮತ್ತೊಂದು ಪ್ರಮುಖ ಮೂರ್ತಿಶಿಲ್ಪವಾದ ನಟರಾಜನ ಶಿಲ್ಪವು ಅವರ ಕಾಲದ ದೇವಾಲಯಗಳ ನವರಂಗದ ಮಚ್ಚಿಗೆಯಲ್ಲಿ ಅಷ್ಟದಿಕ್ಪಾಲಕರ ಮಧ್ಯೆ ನಾಟ್ಯಭಂಗಿಯಲ್ಲಿ ಕಂಡುಬರುತ್ತವೆ. ಇಂತಹ ಶಿಲ್ಪಗಳು ಆಲೂರು, ಹೊಂಗನೂರು, ಅರಳಗುಪ್ಪೆ ದೇವಾಲಯಗಳಲ್ಲಿ ಪ್ರಧಾನವಾಗಿ ಕಂಡುಬರುತ್ತವೆಂದು ಹೇಳಿ ಈ ಮೂರ್ತಿಶಿಲ್ಪಗಳ ವಿಶೇಷತೆಗಳನ್ನು ವರ್ಣಿಸಿದ್ದಾರೆ. ಚಲುಕ್ಯರು ಮತ್ತು ರಾಷ್ಟ್ರಕೂಟರ ಶಿಲ್ಪಗಳ ಪ್ರಭಾವ ಇವುಗಳ ಮೇಲಿರುವುದನ್ನು ಗುರುತಿಸಿದ್ದಾರೆ. ಗಂಗರ ಕಾಲದಲ್ಲಿಯೇ ನಂದಿಮಂಟಪಗಳನ್ನು ನಿರ್ಮಿಸುವ ಸಂಪ್ರದಾಯ ಆರಂಭವಾಗಿದೆ ಎಂದೂ, ಇಲ್ಲಿರುವ ನಂದಿಗಳು ಒರಟುಕಲ್ಲಿನ, ಮಿತಿಯಾದ ಅಲಂಕಾರಗಳಿಂದ ಕೂಡಿದ್ದು, ತಲೆಯನ್ನು ತಗ್ಗಿಸಿ, ಬಲಗಾಲನ್ನು ಮುಂದಕ್ಕೆ ಚಾಚಿ ಸಹಜವಾಗಿ ಮಲಗಿರುವ ಭಂಗಿಯಲ್ಲಿರುತ್ತವೆಯಂದೂ, ಮುಂದೆ ಈ ನಂದಿಗಳನ್ನು ಬದಲಾಯಿಸಿ ಅಲಂಕಾರಭರಿತವಾದ ನಂದಿಯ ವಿಗ್ರಹಗಳನ್ನು ಪ್ರತಿಷ್ಠಾಪಿಸುವ ಕೆಲಸ ಆರಂಭವಾಯಿತೆಂಬ ಅಂಶವನ್ನು ಉದಾಹರಣೆಗಳ ಸಮೇತ ವಿವರಿಸಿದ್ದಾರೆ.

ಶಿವನ ಉಗ್ರರೂಪದ ಪ್ರಭೇದವಾದ ಭೈರವ ಶಿಲ್ಪದ ಪ್ರಾಚೀನತೆ, ಅದರ ಲಕ್ಷಣಗಳು, ವೈವಿಧ್ಯಗಳು, ಭೈರವನ ಪೂಜೆ, ಪಂಥ ಇವುಗಳ ವಿವರಗಳನ್ನು ನೀಡಿ ಹುನ್ಕುಂದ, ಕೆಲಸೂರು, ಪಡಗೂರು, ಕೋಲಾರ, ಐಗಂಡಪುರ, ಮಣ್ಣೆ, ಇಲ್ಲಿರುವ ಗಂಗರ ಕಾಲದ ಭೈರವನ ಪ್ರತಿಮಾ ವಿಶೇಷಗಳನ್ನು ವರ್ಣಿಸಿದ್ದಾರೆ. ಶಿವನ ಪರಿವಾರದ ಮತ್ತೊಂದು ದೇವರಾದ ಸ್ಕಂದನ ಅಥವಾ ಕುಮಾರನ ಪೂಜೆಯು ಗಂಗವಾಡಿ ಪ್ರಾಂತ್ಯದಲ್ಲಿ ಹೆಚ್ಚು ಜನಪ್ರಿಯವಾಗಿರಲಿಲ್ಲವೆಂಬ ವಿಚಾರವನ್ನು ತಿಳಿಸಿ, ಕಂಪಲಾಪುರ, ತಲಕಾಡು, ಕಮ್ಮಸಂದ್ರ, ಮದಗೊಂಡನಹಳ್ಳಿ ಮುಂತಾದ ಕಡೆ ಪರಿವಾರ ದೇವತೆಗಳ ಸಾಲಿನಲ್ಲಿ ಕಂಡುಬರುವ ಸ್ಕಂದನ ವಿಗ್ರಹದ ವಿಶೇಷಗಳನ್ನು ವಿವರಿಸಿದ್ದಾರೆ. ಅದೇ ರೀತಿ ಅತ್ಯಂತ ಜನಪ್ರಿಯ ಶಿವನ ಪರಿವಾರ ದೇವತೆಯಾದ ವಿನಾಯಕನ ಪ್ರಾಚೀನ ಮೂರ್ತಿಶಿಲ್ಪ ಕರ್ನಾಟಕದಲ್ಲಿ ಎಲ್ಲೆಲ್ಲಿ ದೊರೆಯುತ್ತದೆ ಎಂಬ ವಿವರಗಳನ್ನೆಲ್ಲಾ ನೀಡಿ, ಗಂಗರ ಕಾಲದ ದೇವಾಲಯಗಳಲ್ಲಿ ಎರಡು ಕೈ ಮತ್ತು ನಾಲ್ಕು ಕೈಗಳ ವಿನಾಯಕ ಶಿಲ್ಪಗಳಿದ್ದರೂ ಅವುಗಳ

ಪ್ರಾಚೀನತೆಯನ್ನು ಕಂಡುಹಿಡಿಯುವುದು ಕಷ್ಟವೆಂದು ಹೇಳಿದ್ದಾರೆ. ತಲಕಾಡು, ಬೇಗೂರು, ಮಣ್ಣೆ, ನಂದಿ, ಹುಸ್ಕುಂದ ಮುಂತಾದ ಕಡೆಗಳಲ್ಲಿರುವ ಗಂಗರ ಕಾಲದ ವಿನಾಯಕ ಶಿಲ್ಪದ ವಿಶೇಷತೆಗಳನ್ನು ನೀಡಿದ್ದಾರೆ. ವಿಷ್ಣುವಿನ ಮೂರ್ತಿಶಿಲ್ಪದ ಬಗ್ಗೆ ವಿವರಣೆ ನೀಡುತ್ತಾ, ಪ್ರಾರಂಭದಲ್ಲಿ ವಿಷ್ಣುವಿನ ಅವತಾರ ಮೂರ್ತಿಗಳಾದ ನಾರಸಿಂಹ ಮತ್ತು ವರಾಹ ರೂಪಗಳಿಗೆ ಹೆಚ್ಚಿನ ಒತ್ತು ದೊರಕಿತು, ಗಂಗವಾಡಿ, ಕಂಪಲಾಪುರ, ಹಿರೇಮಗಳೂರು ಮತ್ತು ತಲಕಾಡಿನಲ್ಲಿ ದೊರಕಿರುವ ವಿಷ್ಣು ಶಿಲ್ಪಗಳು ಪ್ರಾಚೀನವೆಂದು ಹೇಳಿ ವಿಷ್ಣುಪ್ರತಿಮಾ ಲಕ್ಷಣಗಳನ್ನು ವಿವರಿಸಿದ್ದಾರೆ. ಸುತ್ತೂರಿನ ವರದರಾಜಸ್ವಾಮಿ, ಗಂಗವಾರದ ವಿಷ್ಣುಶಿಲ್ಪಗಳ ವಿವರಣೆ ನೀಡಿ, ಚಿಕ್ಕನಹಳ್ಳಿಯ ವಿಷ್ಣುಶಿಲ್ಪ ಶ್ರೀಪುರುಷನ ಕಾಲಕ್ಕಿಂತ ಹಿಂದಿನದಾಗಿದ್ದು ವಿಶಿಷ್ಟವಾಗಿದೆ ಎಂಬ ಅಭಿಪ್ರಾಯ ನೀಡಿದ್ದಾರೆ. ಕೂಡಲೂರು, ತೊಂಡವಾಡಿಯ ವಿಷ್ಣು ವಿಗ್ರಹಗಳ ಲಕ್ಷಣಗಳನ್ನು ವಿವರಿಸಿ, ಗಂಗವಾಡಿಯ ವಿಷ್ಣುವಿಗ್ರಹಗಳು ಪ್ರಸನ್ನ ಮುಖಭಾವದಿಂದ ಕೂಡಿದ್ದು, ಪ್ರಯೋಗಚಕ್ರ ಮತ್ತು ಕಟಿಹಸ್ತವನ್ನು ಹೊಂದಿರುವುದು ಸಮಾನ ಅಂಶವಾಗಿದೆ ಎಂದು ಹೇಳಿದ್ದಾರೆ.

ಸೂರ್ಯನ ಆರಾಧನೆ ಸೌರಾಷ್ಟ್ರದಿಂದ ಚಲುಕ್ಯರ ಮೂಲಕ ಕರ್ನಾಟಕಕ್ಕೆ ಬಂದರೂ, ಸೌರಮತದವರು ಇಲ್ಲಿ ಹೆಚ್ಚಾಗಿರಲಿಲ್ಲವಾದರೂ ಸೂರ್ಯನ ಆರಾಧನೆ ವ್ಯಾಪಕವಾಗಿತ್ತೆಂಬ ಎಂಬ ವಿಶೇಷ ಅಂಶವನ್ನು ವಿವರವಾಗಿ ಪ್ರಸ್ತಾಪಿಸಿದ್ದಾರೆ. ಗಂಗವಾಡಿಯ ಬಹುತೇಕ ಶಿವಾಲಯಗಳಲ್ಲಿ ಸೂರ್ಯನ ಶಿಲ್ಪ ಕಾಣುವುದಾದರೂ ಅವೆಲ್ಲಾ ಒಂದೇ ರೀತಿಯಲ್ಲಿವೆ ಎಂದು ಹೇಳಿ, ಕಂಪಲಾಪುರ, ಕೆಲಸೂರು, ತಲಕಾಡು, ವಿಜಯಪುರ, ಬಾಗಳಿ ಇವುಗಳಲ್ಲಿರುವ ಸೂರ್ಯ ಶಿಲ್ಪಗಳ ವಿವರಣೆ ನೀಡಿದ್ದಾರೆ.

ಪೂರ್ವತೀರದ ವಿಷ್ಣುಕುಂಡಿಗಳ ಕಾಲದಲ್ಲಿ ಜನಪ್ರಿಯಗೊಂಡ ದುರ್ಗಾರಾಧನೆ ಮಹಾಬಲಿಪುರಂನಲ್ಲಿ ಮುಂದುವರಿದು ಗಂಗರ ಕಾಲದಲ್ಲಿ ಶಕ್ತಿದೇವತೆಯ ಆರಾಧನೆ ವಿಶೇಷವಾಗಿ ಬೆಳೆಯಿತು. ಗಂಗವಾರದ ಕೆರೆಕಟ್ಟೆಯ ಮೇಲಣ ದುರ್ಗಾಶಿಲ್ಪದ ವಿವರಗಳನ್ನು ನೀಡಿದ್ದಾರೆ. ದುರ್ಗೆಯ ಶಿಲ್ಪವು ಗಂಗವಾಡಿಯ ಗಂಗರ ದೇವಾಲಯಗಳಲ್ಲಿ ಶಿವಪಂಚಾಯತನದ ಭಾಗವಾಗಿ ಬಂದಿದ್ದು, ಕೋಣನ ತಲೆಯಮೇಲೆ ಸ್ಥಾನಕ ಭಂಗಿಯಲ್ಲಿ ನಿಂತು ಅಭಯಚಕ್ರ, ಶಂಖ ಮತ್ತು ಕಟೀಹಸ್ತವನ್ನುಳ್ಳ ವಿಗ್ರಹಗಳೇ ಹೆಚ್ಚಾಗಿರುವುದನ್ನು ಉಲ್ಲೇಖಿಸಿದ್ದಾರೆ. ಕೂಡಲೂರು ಮುಂತಾದ ಕಡೆ ಎಂಟು ಕೈಗಳ ವಿಗ್ರಹಗಳು ಕಂಡುಬರುತ್ತವೆಂದು ಹೇಳಿದ್ದಾರೆ. ದುರ್ಗಾಶಿಲ್ಪವು ಸೌಮ್ಯಮುಖಭಾವ ಹೊಂದಿದ್ದು, ಕೆಲವೆಡೆ ಇದಕ್ಕೆ ಬದಲಾಗಿ ಮಹಿಷಮರ್ದಿನಿ ವಿಗ್ರಹಗಳಿವೆ ಎಂಬ ಅಂಶವನ್ನು ಗಮನಿಸಿದ್ದಾರೆ. ಹೆಬ್ಬಾಳ, ಕುಣಿಗಲ್, ಮಾಯಸಂದ್ರ (ಆನೇಕಲ್ ತಾಲ್ಲೂಕು), ತಲಕಾಡು, ಕೂಡಲೂರು, ಬೇಗೂರು, ಕೊಂಡ್ರಹಳ್ಳಿ, ಪಡಗೂರು, ಹುನಗುಂದ, ಹಳೇಆಲೂರು, ಮುಂತಾದ ಕಡೆಗಳಲ್ಲಿರುವ ಗಂಗರಕಾಲದ ದುರ್ಗಾ ಪ್ರತಿಮೆಗಳ ವಿಶೇಷಗಳನ್ನು ನೀಡಿದ್ದಾರೆ. ದೇವನಹಳ್ಳಿ ತಾಲ್ಲೂಕು ಬೂದಿಗೆರೆಯ ದುರ್ಗಾಶಿಲ್ಪವು ವಿಶೇಷವಾಗಿದ್ದು ಈ ಪ್ರತಿಮಾಶಿಲ್ಪದ ಮೇಲೆ ಪಲ್ಲವರ ಛಾಯೆ ಇದೆ ಎಂದು ಹೇಳಿದ್ದಾರೆ. ಹೆಚ್ಚಿನ ದುರ್ಗಾ ಶಿಲ್ಪಗಳು ಕಲ್ಲಿನ ಆಕಾರಕ್ಕೆ ತಕ್ಕಂತೆ ಕೆತ್ತಿದ ಉಬ್ಬು ಶಿಲ್ಪಗಳಾಗಿವೆ ಎಂಬ ಗಮನಾರ್ಹ ಅಂಶವನ್ನು ಹೇಳಿದ್ದಾರೆ.

ಮಹಿಷಮರ್ದಿನಿಯ ಮೂರ್ತಿಯ ಪ್ರಾಚೀನತೆಯನ್ನು ವಿವರಿಸಿ, ಗಂಗರ ಕಾಲದ ಮಹಿಷಮರ್ದಿನಿ ವಿಗ್ರಹಗಳ ವಿಶೇಷತೆಯನ್ನು ವಿವರಿಸಿದ್ದಾರೆ. ವರುಣದ ಮಹಿಷಮರ್ದಿನಿ ಶಿಲ್ಪ ವಿಶೇಷವಾಗಿದ್ದು, ಕುಕ್ಕರಹಳ್ಳಿ, ಬೆಳಗೆರೆ, ಸಂತೇಕಲ್ಲಹಳ್ಳಿ, ನರಸಮಂಗಲ ಮುಂತಾದ ಕಡೆಗಳಲ್ಲಿ ದೊರಕಿರುವ ಮಹಿಷಮರ್ದಿನಿ ಬಿಂಬಗಳ ಭಿನ್ನತೆಯನ್ನು ವಿವರಿಸಿ, ಬಹುತೇಕ ಮಹಿಷಮರ್ದಿನಿ ವಿಗ್ರಹಗಳು ಆಲೀಢಭಂಗಿಯಲ್ಲಿದ್ದು ಮಹಿಷನನ್ನು ಲೀಲಾಜಾಲವಾಗಿ ಕೊಲ್ಲಲು ಹೋಗುತ್ತಿರುವ ಮುಖಭಾವವನ್ನು ಹೊಂದಿವೆ ಎಂದು ಹೇಳಿದ್ದಾರೆ. ಸಿಂಹವಾಹನ ಹಾಗೂ ಮಹಿಷನ ವಿಗ್ರಹದ ವಿಶೇಷತೆಗಳನ್ನು ವರ್ಣಿಸಿ, ನರಸಮಂಗಲದಲ್ಲಿ ಕತ್ತರಿಸಿದ ಕೋಣನ ತಲೆಯಿಂದ ಹೊರಬಂದಿರುವ ಮಹಿಷನನ್ನು ಹಿಡಿಸಿರುವ ವಿಶೇಷವನ್ನು ಗಮನಿಸಿದ್ದಾರೆ. ಶಿಲ್ಪ ಸೌಂದರ್ಯದ ದೃಷ್ಟಿಯಿಂದಲೂ ಪ್ರಾಚೀನತೆಯ ದೃಷ್ಟಿಯಿಂದಲೂ ತಲಕಾಡು, ದೊಡ್ಡಬೇಗೂರು, ದೇವರಹಳ್ಳಿ, ಕೂಡಲೂರಿನ ಮಹಿಷಮರ್ದಿನಿ ವಿಗ್ರಹಗಳನ್ನು ಪ್ರಮುಖವಾದವೆಂದು ಗುರುತಿಸಿ, ಅವುಗಳ ಪ್ರತಿಮಾಲಕ್ಷಣಗಳನ್ನು ವಿವರವಾಗಿ ನೀಡಿದ್ದಾರೆ.

ಸಪ್ತಮಾತೃಕೆಯರ ಆರಾಧನೆ ವಿಕಾಸಗೊಂಡ ಬಗೆಯನ್ನು ವಿವರಿಸಿ, ಗಂಗರ ಕಾಲದ ಶಿವಾಲಯಗಳಲ್ಲಿ ಈ ಮಾತೃಕೆಯರು ಪರಿವಾರ ದೇವತೆಗಳಾಗಿ ಕಾಣಿಸಿಕೊಂಡಿದ್ದರೂ, ಕೆಲವೊಮ್ಮೆ ಈ ಮೂರ್ತಿಗಳಿಗೂ ಪ್ರತ್ಯೇಕವಾದ ಮಂಟಪಗಳು, ದೇವಾಲಯಗಳು ನಿರ್ಮಾಣವಾಗಿವೆ. ಈ ಮೂರ್ತಿಯನ್ನು ಬಿಡಿಯಾಗಿ ಒರಟು ಕಲ್ಲಿನ ಮೇಲೆ ಕೆತ್ತಿರುವುದು ಕಂಡು ಬರುತ್ತದೆ. ಹುನಗುಂದ, ಸೋಸಲೆ, ಬಲ್ಲ, ಸಂತೇಕಲ್ಲಹಳ್ಳಿ, ಸುತ್ತೂರು, ಕೋಲಾರ, ಬೆಂಗಳೂರು, ಮಡಿವಾಳ, ನರಸಮಂಗಲ,

ಶಶಕಪುರ, ದೊಡ್ಡಬೇಗೂರು, ಐಗಂಡಪುರ ಮುಂತಾದ ಊರುಗಳಲ್ಲಿ ಇವುಗಳನ್ನು ಕಾಣಬಹುದೆಂದು ಹೇಳಿದ್ದಾರೆ. ಕೆಲವೊಂದು ಕಡೆ ಮೂರ್ತಿಗಳು ಕಳುವಾಗಿ ಒಂದೋ ಎರಡೋ ವಿಗ್ರಹಗಳು ಉಳಿದು ಬಂದಿರುವುದನ್ನು ಗಮನಿಸಿದ್ದಾರೆ. ನರಸಮಂಗಲದಲ್ಲಿರುವ ಸಪ್ತಮಾತೃಕೆಯರ ಸಮೂಹ ಬಿಂಬಗಳು ಇಡೀ ದಕ್ಷಿಣಭಾರತದಲ್ಲಿಯೇ ಸುಂದರವಾಗಿದ್ದು ಇಲ್ಲಿ ಒಟ್ಟು ಹತ್ತು ವಿಗ್ರಹಗಳಿದ್ದು, ವೀಣಾಧರ ಶಿವನಿಂದ ಆರಂಭವಾಗಿ, ಬ್ರಾಹ್ಮೀ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾ, ಅಲ್ಲದೆ ಗಣಪತಿ ಮತ್ತು ದಕ್ಷನ ವಿಗ್ರಹಗಳು ಇಲ್ಲಿರುವುದು ವಿಶೇಷವಾಗಿದೆ ಎಂಬುದನ್ನು ಹೇಳಿದ್ದಾರೆ. ಎಲ್ಲ ವಿಗ್ರಹಗಳು ನಾಲ್ಕು ಅಡಿ ಎತ್ತರವಾಗಿದ್ದು, ಪದ್ಮಾಸನದಲ್ಲಿ ಕುಳಿತಿದ್ದು, ಈ ವಿಗ್ರಹಗಳ ಎಲ್ಲ ಲಕ್ಷಣಗಳನ್ನೂ ಇಲ್ಲಿ ಕಾಣಬಹುದೆಂದು, ಹೊಂಗನೂರಿನ ಮಾಹೇಶ್ವರಿ ಶಿಲ್ಪ ಗಮನಸೆಳೆಯುವಂತಿದೆ ಎಂದು ಹೇಳಿದ್ದಾರೆ. ಪ್ರತ್ಯೇಕ ಸಪ್ತಮಾತೃಕಾ ದೇವಾಲಯಗಳಿದ್ದ ಕಡೆ ಅವುಗಳಿಗೆ ಸ್ಥಳೀಯ ಗ್ರಾಮದೇವತೆಗಳ ಹೆಸರುಗಳನ್ನು ನೀಡಿರುವುದನ್ನು ಗಮನಿಸಿದ್ದಾರೆ. ಯೋಗಿನಿ ಅಥವಾ ಯೋಗೀಶ್ವರಿಯ ಶಿಲ್ಪವು ಸಪ್ತಮಾತೃಕೆಯರ ಶಿಲ್ಪದ ಸಾಲಿನಲ್ಲಿ ಬರುವ ಬಿಂಬವಾಗಿದ್ದು, ಅದರ ವಿಶೇಷತೆಗಳನ್ನು ವಿವರಿಸಿದ್ದಾರೆ.

ಗಂಗರ ಕಾಲದಲ್ಲಿ ನಿರ್ಮಾಣವಾದ ಜೈನರ ಮೂರ್ತಿಶಿಲ್ಪದ ಲಕ್ಷಣಗಳನ್ನು ವರ್ಣಿಸಿದ್ದು, ಶ್ರವಣಬೆಳಗೊಳದ ಸುಪ್ರಸಿದ್ಧ ಗೊಮ್ಮಟನ ಶಿಲ್ಪವನ್ನು ವರ್ಣಿಸುತ್ತಾ ಅದರ ಪ್ರಶಾಂತಭಾವಕ್ಕೆ ಆ ಮೂರ್ತಿಯ ಮುಖದ ಯಾವಯಾವ ಭಾಗಗಳು ಕಾರಣವೆಂದು ಹೇಳಿರುವುದು ಮುಖ್ಯ. ಇದರ ಎತ್ತರ ೫೮ ಅಡಿ ಎಂದು ಹೇಳಿದ್ದಾರೆ (ಈ ಮೂರ್ತಿಯ ಎತ್ತರದ ಬಗ್ಗೆ ಕುತೂಹಲಕಾರಿ ವಿಷಯಗಳನ್ನು ಪ್ರೊ॥ ಎಸ್.ಕೆ. ರಾಮಚಂದ್ರರಾವ್ ಅವರು ತಮ್ಮ ಗೊಮ್ಮಟೇಶ್ವರ ಕೃತಿಯಲ್ಲಿ ನೀಡಿದ್ದಾರೆ). ಗಂಗರ ಕಾಲದ ಬಸದಿಗಳಲ್ಲಿರುವ ಯಕ್ಷ ಯಕ್ಷಿಯರ, ಚಕ್ರೇಶ್ವರಿಯ, ಜ್ವಾಲಾಮಾಲಿನಿ, ಅಂಬಿಕಾಯಕ್ಷಿ, ಪದ್ಮಾವತಿ ಮೂರ್ತಿಗಳ ವಿವರಗಳನ್ನು ಅವು ಎಲ್ಲೆಲ್ಲಿರುತ್ತವೆ ಎಂಬವುದನ್ನೂ ವಿವರವಾಗಿ ನೀಡಿದ್ದಾರೆ. ಜ್ವಾಲಾಮಾಲಿನಿ ಶಿಲ್ಪಗಳು ಕಡಿಮೆ ಇದ್ದು, ಮಲೆಯೂರಿನಲ್ಲಿರುವ ನಾಲ್ಕು ಅಡಿ ಎತ್ತರದ ಜ್ವಾಲಾಮಾಲಿನಿಯೇ ಗಂಗರ ಕಾಲದ ಪ್ರಾಚೀನ ಶಿಲ್ಪವಾಗಿದ್ದು, ಉಳಿದುದೆಲ್ಲಾ ಹನ್ನೊಂದನೆಯ ಶತಮಾನದ ನಂತರದವು ಎಂಬ ಅಂಶವನ್ನು ಹೇಳಿದ್ದಾರೆ. ಅಂಬಿಕಾ ಯಕ್ಷಿಯೇ ಕೂಷ್ಮಾಂಡಿನಿ ದೇವಿಯಾಗಿದ್ದು, ಈ ಬಿಂಬದ ಲಕ್ಷಣಗಳನ್ನು ವಿವರಿಸಿ, ಶ್ರವಣಬೆಳಗೊಳಕ್ಕೆ ಸಮೀಪದ ಹೊಸಹಳ್ಳಿ ಗ್ರಾಮದ ಕೆರೆ ಕೋಡಿಯಲ್ಲಿ ಶ್ರವಣಬೆಳಗೊಳದ ಮೂಲದೇವತೆಯಾದ ಕೂಷ್ಮಾಂಡಿನಿಯ ವಿಗ್ರಹ ಇರುವುದನ್ನು ಗುರುತಿಸಿದ್ದಾರೆ.

ಗಂಗರ ಕಾಲದ ವೀರಗಲ್ಲು, ಮಾಸ್ತಿಕಲ್ಲು ಮತ್ತು ಶಾಸನ ಶಿಲ್ಪಗಳ ಬಗ್ಗೆ ಪ್ರತ್ಯೇಕವಾಗಿ ವಿವೇಚಿಸಿದ್ದಾರೆ. ಗಂಗರ ಕಾಲದಲ್ಲಿ ಹಿರೇಗುಂಡಗಲ್, ಶ್ರವಣಗುಡಿ, ನಗರಗೆರೆ, ಹುನ್ಕುಂದ ಮುಂತಾದ ಕಡೆ ಗುಂಪುಗುಂಪಾಗಿ ಗಂಗರ ಕಾಲದ ವೀರಗಲ್ಲುಗಳು ದೊರೆಯುತ್ತಿದ್ದು, ಇದು ಗಂಗರ ಕಾಲದ ವಿಶೇಷ ಎಂಬುದನ್ನು ಗುರುತಿಸಿದ್ದಾರೆ. ಎತ್ತರವಾದ ಅಗಲವಾದ ಚಪ್ಪಡಿಗಳ ಮೇಲೆ, ವೀರನ ಉಬ್ಬುಶಿಲ್ಪವನ್ನು ಮಾತ್ರ ಬಿಡಿಸುತ್ತಿದ್ದು ನಂತರ ಎರಡು ಹಾಗೂ ಮೂರು ಹಂತದ ವೀರಗಲ್ಲುಗಳು ಕಾಣಿಸಿಕೊಂಡ ಬಗೆಯನ್ನು, ಬೇಗೂರು, ಕೋಲಾರದ ವೀರಗಲ್ಲಿನ ವಿಶೇಷತೆಗಳನ್ನು ವಿವರಿಸಿದ್ದಾರೆ. ಮಾಸ್ತಿಕಲ್ಲುಗಳ ಶಿಲ್ಪಗಳನ್ನು ಬಿಡಿಸುವಾಗ ಶಿಲ್ಪಿ ಸಮಕಾಲೀನ ಸಮಾಜದ ನಿಯಮಗಳಿಗೆ ಬೆಲೆ ನೀಡಿದ್ದಾನೆ, ಸಾವಿಯಬ್ಬೆ ಮತ್ತು ಸಾವಿನಿರ್ಮಡಿಯರ ಸ್ಮಾರಕಶಿಲೆಗಳಲ್ಲಿ ಇದನ್ನು ಗಮನಿಸಬಹುದೆಂದು ವಿವರಿಸಿದ್ದಾರೆ.

ಗಂಗರ ಶಾಸನ ಶಿಲ್ಪದ ಬಗ್ಗೆ ವಿವರಿಸುತ್ತಾ, ಶಾಸನದ ಮೇಲೆ ಗಂಗರ ಧರ್ಮಕ್ಕೆ ಸಂಬಂಧಿಸಿದ ದೈವದ ಶಿಲ್ಪವಿರುವುದಿಲ್ಲ, ಕರುವಿನ ಸಮೇತನ ಗೋವಿನ ಚಿತ್ರವಿದೆ, ನಾಗಮಂಗಲ ಮತ್ತು ಮಂಡ್ಯ ತಾಲ್ಲೂಕಿನ ಗಂಗರ ಶಿಲಾ ಶಾಸನಗಳಲ್ಲಿ ಗಂಗರ ಲಾಂಛನವಾದ ಆನೆಯ ಗುರುತಿದೆ. ಕೊಡಗಿನ ಪೆಗ್ಗೂರು ಮತ್ತು ಕೋಟೂರಿನ ದಾನ ಶಾಸನಗಳ ಮೇಲಿನ ಶಂಖ, ಚಕ್ರ, ಮುಕ್ಕೊಡೆ, ದೀಪಸ್ತಂಭಗಳ ಮಧ್ಯೆ ಇರುವ ಆನೆಯ ಶಿಲ್ಪ ಬಹಳ ಸುಂದರವಾಗಿದೆ ಎಂದು ವಿವರಿಸಿದ್ದಾರೆ. ಗಂಗರ ಕಾಲದ ಇತರ ಶಿಲ್ಪಗಳ ಅಡಿಯಲ್ಲಿ, ಗಂಗವಾಡಿ ಪ್ರದೇಶದಲ್ಲಿ ವಿಪುಲವಾಗಿ ಕಂಡುಬರುವ ನಾಗಶಿಲ್ಪಗಳ ಬಗ್ಗೆ ವಿವರಣೆ ನೀಡಿದ್ದಾರೆ. ಕಂಪಲಾಪುರದಲ್ಲಿರುವ ಪರಶುಶಿವನ ಪ್ರತಿಮೆಯನ್ನು ವಿವರಿಸಿದ್ದಾರೆ. ಕಂದಾಗಾಲದ ಪಾರ್ವತಿಬೆಟ್ಟ, ಕಲಸೂರು, ನರಸಮಂಗಲದಲ್ಲಿರುವ ದಕ್ಷನ ಶಿಲ್ಪದ ವಿವರಣೆ ನೀಡಿದ್ದಾರೆ. ಅಷ್ಟದಿಕ್ಪಾಲಕರ ಶಿಲ್ಪಗಳು, ತೀರ್ಥಂಕರನ ಪಕ್ಕದಲ್ಲಿರುವ ಚಾಮರಧಾರಿಗಳು, ದೇವಾಲಯದ ಗೋಪುರಗಳ ಮೇಲಿನ ಗಾರೆ ಶಿಲ್ಪಗಳ ವಿಶೇಷ, ಜಾಲಂಧ್ರಗಳು ಇವೆಲ್ಲವುಗಳನ್ನೂ ಗಮನಿಸಿ ಪ್ರತ್ಯೇಕ ಪ್ರತ್ಯೇಕವಾಗಿ ವಿವರಿಸಿರುವುದು ಈ ಕೃತಿಯ ವಿಶೇಷ. ವಿವಿಧ ಬಿಂಬಗಳ ಉತ್ತಮವಾದ ರೇಖಾಚಿತ್ರಗಳು, ಕಪ್ಪು ಬಿಳುಪು ಚಿತ್ರಗಳು, ತಪ್ಪಿಲ್ಲದ ಅಂದವಾದ ಮುದ್ರಣ, ಆಕರ್ಷಕ ರಕ್ಷಾಪುಟ, ಸುಲಭ ಬೆಲೆ, ಗಂಗ ಶಿಲ್ಪಕಲೆ ಪುಸ್ತಕಕ್ಕೆ ವಿಶೇಷ ಮೆರಗು ನೀಡಿವೆ. ಗಂಗರ ಶಿಲ್ಪಕಲೆಯ ಬಗ್ಗೆ ಇದೊಂದು ವಿಶೇಷವಾದ ಕೃತಿ ಎಂದು ನಿಸ್ಸಂಶಯವಾಗಿ ಹೇಳಬಹುದು.

**ಕೆಳದಿ ಬಸವರಾಜ ವಿರಚಿತ ಕಾಳಿಕಾ ಕಾಂಡದ ಪ್ರಾರ್ಥನಾ ಪದ್ಯಗಳು**

ದೇವರಕೊಂಡಾರೆಡ್ಡಿಯವರು ಲಿಪಿ ಶಾಸ್ತ್ರದಲ್ಲಿ ಪರಿಣತರಾಗಿರುವುದರಿಂದ ಹಸ್ತಪ್ರತಿಗಳನ್ನೂ ಅಧ್ಯಯನ ಮಾಡಿದ್ದಾರೆ. ಜೊತೆಗೆ ಕನ್ನಡ ಭಾಷೆ, ಸಾಹಿತ್ಯ ಮತ್ತು ಛಂದಸ್ಸಿನ ವಿಚಾರಗಳಲ್ಲಿ ವಿದ್ವಾಂಸರೂ ಆಗಿದ್ದಾರೆ. ಹಸ್ತಪ್ರತಿಗಳನ್ನು ಅಧ್ಯಯನ ಮಾಡುತ್ತಿದ್ದಾಗ ಅವರ ಕಣ್ಣಿಗೆ ಬಿದ್ದದ್ದು, ಕೆಳದಿ ಬಸವರಾಜ ವಿರಚಿತ ಕಾಳಿಕಾಂಡದ ಹಸ್ತಪ್ರತಿ. ಈ ಕೃತಿಯು ಸುಮಾರು ೧೭೩ ಅಧ್ಯಾಯಗಳನ್ನು, ೭೧೫೦ ವಾರ್ಧಕ ಷಟ್ಪದಿಗಳನ್ನೂ ಹೊಂದಿದೆ. ಸ್ಕಾಂದಪುರಾಣದ, ಸನತ್ಕುಮಾರ ಸಂಹಿತೆಯಲ್ಲಿ ಬರುವ ಕಾಳಿಕಾಕಾಂಡವನ್ನು ಭಕ್ತ ಜನ ಹಿತಕ್ಕೋಸ್ಕರ ಅನುವಾದ ಮಾಡಿರುವುದಾಗಿ ಕವಿಯು ಹೇಳಿದ್ದಾನೆ.

ಕೆಳದಿ ಅರಸರದಲ್ಲಿ ಬಹಳ ಪ್ರಮುಖನಾದ ಕೆಳದಿಯ ಶ್ರೀ ಬಸವರಾಜ ಅಥವಾ ಬಸವರಾಜೇಂದ್ರನು ಕೆಳದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೧೬೯೮ ರಿಂದ ೧೭೭೧೫ರವರಗೆ ರಾಜ್ಯವಾಳಿದನು. ಈತನು ವೀರನೂ, ಚತುರ ರಾಜಕಾರಣಿಯೂ ಆಗಿದ್ದುದರ ಜೊತೆಗೆ, ಜ್ಞಾನಿಯೂ, ವಿದ್ವಾಂಸನೂ, ಕವಿಯೂ ಆಗಿದ್ದನು. ಇವನು ಶಿವತತ್ತ್ವ ರತ್ನಾಕರ, ಸುಭಾಷಿತ ಸುರದ್ರುಮ ಎಂಬ ಇನ್ನೆರಡು ಕೃತಿಗಳನ್ನು ರಚಿಸಿದ್ದಾನೆ. ಇವನನ್ನು ಹಿರಿಯ ಬಸಪ್ಪ ನಾಯಕ ಎಂದೂ ಇತಿಹಾಸದಲ್ಲಿ ಗುರುತಿಸಲಾಗಿದೆ.

ಮೊದಲಬಾರಿಗೆ ಕವಿಚರಿತೆಕಾರರು ಇವನ ವಿಷಯವನ್ನು ಪ್ರಸ್ತಾಪಿಸುತ್ತಾ, ಬಸವಪ್ಪನಾಯಕನು ಕ್ರಿ.ಶ.೧೬೯೭ ರಿಂದ ೧೭೭೧೪ರವರೆಗೆ ಆಳಿದ ಇಕ್ಕೇರಿಯ ಅರಸರಲ್ಲಿ ಒಬ್ಬನು. ಇವನು ಸೂಕ್ತಿಸುಧಾಕರವೆಂಬ ವಸ್ತುಕ ಕಾವ್ಯವನ್ನು ಕರ್ಣಾಟಕ ಭಾಷೆಯಲ್ಲಿ ರಚಿಸಿದಂತೆ ಕೆಳದಿ ನೃಪವಿಜಯದಲ್ಲಿ ಹೇಳಿದೆ. ಈ ಗ್ರಂಥವು ನಮಗೆ ದೊರಕಿಲ್ಲ ಎಂದಷ್ಟೇ ಹೇಳಿದ್ದಾರೆ. ಮುಂದೆ ಈ ಕವಿಯ ಬಗ್ಗೆ ಒಂದು ರೀತಿಯ ಉಪೇಕ್ಷೆಯೇ ಮುಂದುವರಿದಿದೆ. ಬೆಂಗಳೂರು ವಿಶ್ವವಿದ್ಯಾಲಯವು ೧೯೮೨ ರಲ್ಲಿ ಪ್ರಕಟಿಸಿದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ (ಕ್ರಿ.ಶ. ೧೬೦೦-೧೮೫೦) ಇವನ ಹೆಸರು, ಕೃತಿಗಳು ಬಿಟ್ಟುಹೋಗಿವೆ. ಎಸ್.ಶಿವಣ್ಣನವರು ನೀಡಿರುವ ಅನುಬಂಧದಲ್ಲೂ ಇವನ ಹೆಸರು ಕೃತಿಗಳು ಕಂಡುಬರುವುದಿಲ್ಲ.

೧೯೮೪ರಲ್ಲಿ ದೇವರಕೊಂಡಾರೆಡ್ಡಿಯವರು ಈ **ಕಾಳಿಕಾ ಕಾಂಡದ** ಹಸ್ತಪ್ರತಿಯನ್ನು ಓದಿ, ಮೊದಲ ೧೨೫ ಸಂಧಿಗಳಲ್ಲಿ (೧೭-೧೮ನೆಯ ಸಂಧಿಯನ್ನು ಬಿಟ್ಟು) ಪ್ರತಿಸಂಧಿಯ ಸೂಚನಾ ಪದ್ಯವಾದ ಮೇಲೆ ಬರುವ ಕಾಳಿಕಾ ದೇವಿಯ ೧೨೫ ಪ್ರಾರ್ಥನಾ ಪದ್ಯಗಳನ್ನು ಸಂಗ್ರಹಿಸಿ ಡಿಸೆಂಬರ್ ೧೯೮೫ರ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ (ಸಂಪುಟ ೬೯, ಸಂಚಿಕೆ ೨) ಪ್ರಕಟಿಸಿದರು ನಂತರ ಪುಸ್ತಕದ ರೂಪದಲ್ಲಿ ಪ್ರಕಟವಾಯಿತು. ಹಸ್ತಪ್ರತಿಯಲ್ಲಿ ಕೆಲವು ಪದ್ಯಗಳ ಸಾಲುಗಳು ತ್ರುಟಿತವಾಗಿದ್ದು, ಅವುಗಳನ್ನು ತುಂಬದೆ ಹಾಗೇ ಬಿಟ್ಟಿದ್ದಾರೆ. ಈ ಪ್ರಾರ್ಥನಾ ಪದ್ಯಗಳು ಲಕ್ಷಣಯುಕ್ತವಾಗಿವೆ. ಭಾಷೆ ಬಹಳ ಸರಳವಾಗಿ ನಡುಗನ್ನಡ ಮತ್ತು ಹೊಸಗನ್ನಡ ಸಂಧಿಕಾಲದ ಭಾಷೆಯಿದೆ. ಪದ್ಯಗಳಲ್ಲಿ ಭಕ್ತಿರಸ ಓತಪ್ರೋತವಾಗಿ ಹರಿದಿದೆ ಹಾಗೂ ಭಕ್ತನಾದವನ ಆರ್ತತೆ ಕಂಡುಬರುತ್ತದೆ. ಪ್ರತಿ ಪದ್ಯದ ಅಂತ್ಯದಲ್ಲೂ "ಕಿಳದೀಶೆ ಕಾಳಿ ಶರಣೂ", "ಕಿಳದೀ ನಗರವಾಸಿನಿ ಭದ್ರಕಾಳೀಶ್ವರಿ ಜಯಾ" ಎಂದೂ ಇದೆ. ಇದು ಕೆಳದೀಶೆ ಎಂಬುದರ ರೂಪವಿರಬಹುದು. ೨೧ನೆಯ ಪದ್ಯದಲ್ಲಿ "ರಾಮವಾಂ ರಾವಾಣಿ" ಎಂದಿದೆ. ಇದಕ್ಕೆ ಸಂಪಾದಕರು ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಿದ್ದಾರೆ. ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕಿನಲ್ಲಿ ರಾವಣಿ (ರಾವಾಣಿ) ಎಂಬ ಊರಿದೆ. ಇಲ್ಲಿ ರಾವಣೇಶ್ವರ (ರಾವಾಣೀಶ್ವರ)ಗುಡಿ ಎಂಬ ಈಶ್ವರನ ಗುಡಿ ಇದೆ. ರಾವಾಣಿ ಎಂಬುದು ಕಾಳಿಯ ನಾಮವಿರಬಹುದು. ಈ ಕಾವ್ಯವನ್ನು ಪೂರ್ಣವಾಗಿ ಸಂಪಾದಿಸಿ ಅಚ್ಚು ಹಾಕಿಸಿದರೆ ಅದು ಕನ್ನಡದ ಶಕ್ತಿಸಾಹಿತ್ಯದ ಒಂದು ದಾಖಲೆಯಾಗುತ್ತದೆ. ಪ್ರಾರ್ಥನಾ ಪದ್ಯಗಳು ದೇವೀ ಪೂಜೆಯ ಸಮಯದಲ್ಲಿ ಹೇಳಿಕೊಳ್ಳಬಹುದಾದಷ್ಟು ಮಧುರವಾಗಿವೆ. ಬಸಪ್ಪನಾಯಕನು ತನ್ನ ತಾಯಿ ಚೆನ್ನಮ್ಮಾಜಿಯನ್ನು ನೆನೆಯುತ್ತಾ "ಕಿಳದೀಪುರನಿಕಾಯೆ ಚನ್ನಮ್ಮಾಜಿ ತಾಯಿ ಜಯಭದ್ರಕಾಳೀ" ಎಂದೂ ಹೇಳಿದ್ದಾನೆ. ದೇವರಕೊಂಡಾರೆಡ್ಡಿಯವರು ಈ ಪ್ರಾರ್ಥನಾ ಪದ್ಯಗಳನ್ನು ಬಹಳ ಅಚ್ಚುಕಟ್ಟಾಗಿ ಸಂಪಾದಿಸಿ ಕೊಟ್ಟಿದ್ದಾರೆ.

೧೯೯೬ ರಲ್ಲಿ ಪ್ರಕಟವಾಗಿರುವ ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಗ್ರಂಥದ ಪರಿಶಿಷ್ಟದಲ್ಲಿ ನೀಡಿರುವ ಪಟ್ಟಿಯಲ್ಲೂ ಕೆಳದಿ ಬಸಪ್ಪನಾಯಕನು ಬರೆದಿರುವ ಕೃತಿಗಳಲ್ಲಿ ಕಾಳಿಕಾ ಕಾಂಡದ ಹೆಸರಿಲ್ಲ. ೧೯೯೯ ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿದ ಕೆಳದಿ ಬಸವರಾಜ ಭೂಪಾಲನು ಸಂಕಲಿಸಿದ ಶಿವತತ್ತ್ವ ರತ್ನಾಕರದ ಕನ್ನಡ ಅನುವಾದದ ಬೃಹತ್ ಗ್ರಂಥದ ಮುನ್ನುಡಿಯಲ್ಲಿ, ಕೆಳದಿ ಬಸಪ್ಪ ನಾಯಕನ ರಾಜಕೀಯ ಚರಿತ್ರೆಯನ್ನು ನೀಡಲಾಗಿದೆ. ಇವನ ಸಾಹಿತ್ಯ ಸೇವೆಯ ವಿಚಾರ, ಕಾಳಿಕಾ ಕಾಂಡವೂ ಸೇರಿದಂತೆ ಇವನು ರಚಿಸಿದ ಕೃತಿಗಳ ವಿಚಾರ ಇರುವುದಿಲ್ಲ.

## ಶಾಸನ ಅಧ್ಯಯನ

ಶಾಸನ ಅಧ್ಯಯನ ಪತ್ರಿಕೆಯು ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಆರಂಭವಾದ ಶಾಸನ ಅಧ್ಯಯನಕ್ಕೆ ಮೀಸಲಾದ ಒಂದು ಜರ್ನಲ್ ಆಗಿದೆ. ಇತ್ತೀಚೆಗೆ ಇದನ್ನು ಪುಸ್ತಕ ಎಂದು ಹೇಳಿದ್ದಾರೆ. ಈ ಜರ್ನಲ್‌ನ್ನು ಶಾಸನ ಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿದ್ದ ಡಾ. ದೇವರಕೊಂಡಾರೆಡ್ಡಿಯವರು, ೨೦೦೩ ಸೆಪ್ಟೆಂಬರ್ ತಿಂಗಳಲ್ಲಿ ಆರಂಭಿಸಿದರು. ಪ್ರತಿ ವರ್ಷದ ಸೆಪ್ಟೆಂಬರ್ ತಿಂಗಳಲ್ಲಿ ಪ್ರಕಟವಾಗುವ ಸಂಚಿಕೆಗೆ ಗೌರಿ ಸಂಚಿಕೆ ಎಂದು, ಮಾರ್ಚ್ ತಿಂಗಳಲ್ಲಿ ಪ್ರಕಟವಾಗುವ ಸಂಚಿಕೆಗೆ ಯುಗಾದಿ ಸಂಚಿಕೆ ಎಂದು, ಬಹುತೇಕ ಈ ತಿಂಗಳುಗಳಲ್ಲಿ ಬರುವ ನಮ್ಮ ಕರ್ನಾಟಕದ ಸರ್ವಜನತೆಗೆ ಪ್ರಮುಖವಾದ ಎರಡು ಹಬ್ಬಗಳ ಹೆಸರುಗಳನ್ನು ಇಟ್ಟಿದ್ದು ಬಹಳ ಸೂಕ್ತವಾಗಿದೆ. ಈ ಜರ್ನಲ್‌ನ ಲೇಖನಗಳನ್ನು, ಹೊಸಶೋಧ, ಶಾಸನಶೋಧನೆ, ಶಾಸನಾಧ್ಯಯನ, ವಿಶೇಷ ಶಾಸನ ಪರಿಚಯ, ಶಾಸನ ಪ್ರಾಜ್ಞರು, ಶಾಸನ ನಿಬಂಧಗಳು, ಶಾಸನ ಕೃತಿನೋಟ, ಶಾಸನದ ಸುತ್ತಮುತ್ತ ಎಂಬ ಶೀರ್ಷಿಕೆಗಳಲ್ಲಿ ವಿಂಗಡಿಸಲಾಗಿದೆ. ಶಾಸನಗಳ ಅಧ್ಯಯನ ಕ್ಷೇತ್ರದಲ್ಲಿ ಯಾವಯಾವ ಚಟುವಟಿಕೆಗಳು ನಡೆಯುತ್ತವೋ ಅವೆಲ್ಲವನ್ನೂ ಒಳಗೊಳ್ಳುವಂತೆ ಶೀರ್ಷಿಕೆಗಳನ್ನು ಗೊತ್ತುಪಡಿಸಿರುವುದು ಸೂಕ್ತವಾಗಿದೆ. ಈಗ ಈ ಸಂಚಿಕೆಗಳನ್ನು ಪುಸ್ತಕಗಳೆಂದು ಪರಿಗಣಿಸಿ ಸಂಪುಟ ಸಂಖ್ಯೆಯನ್ನು ಮಾತ್ರ ಕೊಡಲಾಗುತ್ತಿದೆ.

ಇದುವರೆಗೆ ಕರ್ನಾಟಕದಲ್ಲಿ ಕೇವಲ ಶಾಸನ ಅಧ್ಯಯನಕ್ಕೆ ಮೀಸಲಾದ ಜರ್ನಲ್ ಅಥವಾ ಪತ್ರಿಕೆ ಇರಲಿಲ್ಲ. ಸಾಹಿತ್ಯ ಪರಿಷತ್ ಪತ್ರಿಕೆ, ಮಿಥಿಕ್ ಸೊಸೈಟಿ ಜರ್ನಲ್, ಕರ್ನಾಟಕ ಲೋಚನ, ಸಾಧನೆ, ಮುಂತಾದ ನಿಯತಕಾಲಿಕಗಳಲ್ಲಿ ಆಗಾಗ ಹೊಸ ಶಾಸನಗಳು, ಶಾಸನ ಅಧ್ಯಯನಕ್ಕೆ ಸಂಬಂಧಿಸಿದ ಲೇಖನಗಳು ಪ್ರಕಟವಾಗುತ್ತಿದ್ದವು. ಕರ್ನಾಟಕ ಇತಿಹಾಸ ಅಕಾಡೆಮಿಯು ಹೊರತರುತ್ತಿರುವ ಇತಿಹಾಸದರ್ಶನ ವಾರ್ಷಿಕ ಸಂಚಿಕೆಗಳಲ್ಲಿ ಹೊಸ ಶಾಸನಗಳು ಹಾಗೂ ಶಾಸನಕ್ಕೆ ಸಂಬಂಧಿಸಿದ ಲೇಖನಗಳು ವಿಶೇಷವಾಗಿ ಪ್ರಕಟಗೊಳ್ಳುತ್ತಿದ್ದರೂ, ಇತಿಹಾಸ ಮತ್ತು ಸಂಸ್ಕೃತಿಯ ವಿವಿಧ ಮುಖಗಳಿಗೆ ಸಂಬಂಧಿಸಿದ ಲೇಖನಗಳೂ ಅಲ್ಲಿ ಪ್ರಕಟವಾಗುತ್ತಿವೆ. ಹೀಗಾಗಿ ಶಾಸನ ಅಧ್ಯಯನಕ್ಕೇ ಮೀಸಲಾದ ವಿಶೇಷ ಪತ್ರಿಕೆ/ಜರ್ನಲ್ ಇರಲಿಲ್ಲ ಎಂಬುದು ಕೊರತೆಯ ವಿಷಯವಾಗಿತ್ತು. ಅದನ್ನು ಗಮನಿಸಿದ ಹಂಪಿ ವಿಶ್ವವಿದ್ಯಾಲಯ ಹಾಗೂ ಶಾಸನ ವಿಭಾಗದ ಮುಖ್ಯಸ್ಥರಾಗಿದ್ದ ಡಾ. ದೇವರಕೊಂಡಾರೆಡ್ಡಿಯವರು ಈ ಶಾಸನ ಅಧ್ಯಯನ ಎಂಬ ಅರ್ಧವಾರ್ಷಿಕ ಜರ್ನಲ್ ಅನ್ನು ಪ್ರಾರಂಭಿಸಿದ್ದು ಸಕಾಲಿಕವಾಗಿದೆ. ಇದುವರೆಗೆ ಪ್ರಕಟವಾಗಿರುವ ಕೆಲವು ಸಂಚಿಕೆಗಳಲ್ಲೇ ಶಾಸನ ಕ್ಷೇತ್ರಕ್ಕೆ ಸಂಬಂಧಿಸಿ ಉತ್ತಮ ಲೇಖನಗಳು, ಅತ್ಯಂತ ಪ್ರಮುಖವೆನಿಸುವ ಹೊಸ ಶಾಸನಗಳು, ಶಾಸನ ತಜ್ಞರ ಸಂದರ್ಶನಗಳೂ ಪ್ರಕಟವಾಗಿರುವುದನ್ನು ನೋಡಿದರೆ ಇದರ ಉಪಯುಕ್ತತೆಯ ಅರಿವಾಗುತ್ತದೆ.

ಹಾಗೆ ನೋಡಿದರೆ ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಶಾಸನ ಅಧ್ಯಯನ ಆರಂಭವಾಗಿದ್ದೇ ಇಂತಹ ಜರ್ನಲ್‌ಗಳ ಮೂಲಕ. ಆಮೇಲೆ ಅವು ಕೃತಿ ರೂಪದಲ್ಲಿ ಪ್ರಕಟವಾಗತೊಡಗಿದವು. ೧೭೮೧ರ ಏಷಿಯಾಟಿಕ್ ರೀಸರ್ಚಸ್ ಇಂಗ್ಲಿಷ್ ಪತ್ರಿಕೆಯಲ್ಲಿ ಪ್ರಕಟವಾದ ಲೇಖನವೇ ಭಾರತೀಯ ಶಾಸನ ಅಧ್ಯಯನದ ಇತಿಹಾಸದಲ್ಲಿ ಪ್ರಕಟವಾದ ಮೊದಲ ಲೇಖನ. ಈ ಜರ್ನಲ್‌ನಲ್ಲಿ ಕನ್ನಡ ನಾಡಿನ ಅನೇಕ ಶಾಸನಗಳು ಪ್ರಕಟವಾಗಿವೆ. ಜರ್ನಲ್ ಅಫ್ ಏಷಿಯಾಟಿಕ್ ಸೊಸೈಟಿ, ಜರ್ನಲ್ ಅಫ್ ಓರಿಯಂಟಲ್ ರೀಸರ್ಚ್, ಇಂಡಿಯನ್ ಆಂಟಿಕ್ವರಿ ಈ ರೀತಿಯ ಅನೇಕ ಮಹತ್ವದ ಜರ್ನಲ್‌ಗಳಲ್ಲಿ ಸಹಸ್ರಾರು ಶಾಸನಗಳು ಪ್ರಕಟವಾದವು. ಈ ಜರ್ನಲ್‌ಗಳ ಮಟ್ಟಕ್ಕೆ ಶಾಸನ ಅಧ್ಯಯನ ಜರ್ನಲ್ ಅನ್ನೂ ತರಬಹುದು. ಕಾರಣ ಅಷ್ಟೊಂದು ಶಾಸನ ತಜ್ಞರು, ಶಾಸನ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರು, ಸಂಶೋಧಕರು ಕರ್ನಾಟಕದಲ್ಲಿದ್ದಾರೆ. ಪ್ರತಿ ವರ್ಷವೂ ಹೊಸ ಹೊಸ ಶಾಸನಗಳೂ ಕರ್ನಾಟಕದಲ್ಲಿ ಸಿಗುತ್ತಿವೆ. ಆದುದರಿಂದ ಡಾ. ದೇವರಕೊಂಡಾರೆಡ್ಡಿಯವರ ಸಂಪಾದಕತ್ವದಲ್ಲಿ ಮಹತ್ವಾಕಾಂಕ್ಷೆಯಿಂದ ಪ್ರಾರಂಭವಾದ ಈ ಜರ್ನಲ್ ತಪ್ಪದೆ ನಿಯಮಿತವಾಗಿ ಪ್ರಕಟವಾಗಿ ಆ ಮಟ್ಟಕ್ಕೆ ಬೆಳೆದು ನಿಂತರೆ ಅದು ಕನ್ನಡನಾಡಿನ, ಭಾರತದ ವಿದ್ವತ್ ಕ್ಷೇತ್ರಕ್ಕೆ, ಶಾಸನ ಕ್ಷೇತ್ರಕ್ಕೆ ದೊಡ್ಡಕೊಡುಗೆ ಆಗುವುದರಲ್ಲಿ ಸಂದೇಹವಿಲ್ಲ.

ಇತಿಹಾಸ *ದರ್ಶನ*ದ ೫ ರಿಂದ ೮ ಸಂಪುಟಗಳನ್ನು ಡಾ. ದೇವರಕೊಂಡಾರೆಡ್ಡಿಯವರು ಡಾ. ಸೂರ್ಯನಾಥ ಕಾಮತ್ ಅವರ ಸಹಸಂಪಾದಕತ್ವದಲ್ಲಿ ಹೊರ ತಂದಿದ್ದಾರೆ. ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಂಪುಟಗಳಾದ ಇವು, ಕರ್ನಾಟಕದ ಇತಿಹಾಸ ಸಂಸ್ಕೃತಿಗಳಿಗೆ ಮೌಲಿಕವಾದ ಕೊಡುಗೆಗಳನ್ನು ನೀಡುತ್ತಿವೆ. ಕರ್ನಾಟಕ ಇತಿಹಾಸ ಅಕಾದೆಮಿಯ ಕಾರ್ಯಕಾರಿ ಸಮಿತಿಯಲ್ಲಿ ಮೊದಲಿನಿಂದಲು ಕಾರ್ಯನಿರ್ವಹಿಸುತ್ತಿರುವ ಇವರು ಕರ್ನಾಟಕದ ಇತಿಹಾಸಕ್ಕೆ ಮಹತ್ವದ ಕೊಡುಗೆಗಳನ್ನು ನೀಡುತ್ತಿದ್ದಾರೆ.

# ದೇವರಕೊಂಡಂಗಳ ತ್ರೈಗ್ರಂಥಂಗಳಾವಲೋಕನಂ

– ಎಸ್. ಕಾರ್ತೀಕ್*

**ಕರ್ನಾಟಕದ ಶಾಸನಗಳು**

*ಕರ್ನಾಟಕದ ಶಾಸನಗಳು* ಎಂಬ ಕಿರುಕೃತಿಯು ಕಿರಿಯರು ಮತ್ತು ಸಾಮಾನ್ಯ ಓದುಗರಿಗಾಗಿ ಬರೆದ ಕೃತಿಯಾದರೂ ವಿಷಯ ಮತ್ತು ನಿರೂಪಣೆಯ ದೃಷ್ಟಿಯಿಂದ ತುಂಬಾ ಮಹತ್ತ್ವದ್ದಾಗಿದೆ. ಈ ಕೃತಿಯಲ್ಲಿ ಇರುವ ವಿಭಾಗಗಳನ್ನು ಈ ಕೆಳಗಿನಂತೆ ನಿರೂಪಿಸಬಹುದಾಗಿದೆ:

*ಶಾಸನಗಳೆಂದರೆ ಏನು?, ಶಾಸನಗಳನ್ನು ಹಾಕಿಸುತ್ತಿದ್ದುದರ ಉದ್ದೇಶ, ಶಾಸನಗಳಲ್ಲಿ ಬಳಸಿದ ಭಾಷೆ, ವಸ್ತು, ಕಾಲ ಮತ್ತು ಶಾಸನೋಕ್ತ ವಿಷಯ, ಪ್ರಾಚೀನ ಭಾರತದಲ್ಲಿ ಬರವಣಿಗೆಗೆ ಬಳಸುತ್ತಿದ್ದ ಸಾಧನಗಳು (ತಾಳೆಗರಿ, ತಾಮ್ರ, ಭೂರ್ಜಪತ್ರ, ಮುಂತಾದವು), ತಾಮ್ರಪಟಗಳನ್ನು ಕಾಪಾಡುತ್ತಿದ್ದ ರೀತಿ, ಶಿಲಾಶಾಸನಗಳನ್ನು ಸಿದ್ಧಪಡಿಸುತ್ತಿದ್ದ ಕ್ರಮ, ಶಾಸನಗಳ ವಿಂಗಡನೆ (ಇದರಲ್ಲಿ ವೀರಗಲ್ಲು, ಮಾಸ್ತಿಕಲ್ಲು, ಇತ್ಯಾದಿ), ಕನ್ನಡ ಲಿಪಿಯ ಬೆಳವಣಿಗೆ, ಶಾಸನಗಳು ದೊರೆಯುವ ಸ್ಥಳ, ಕಾಲ (ಶಾಸನಗಳಲ್ಲಿ ಬಳಸಲಾಗಿರುವ ಕಾಲಗಣನೆ) ಮತ್ತು ವೈವಿಧ್ಯ, ಶಾಸನಗಳಿಂದಾಗುವ ಪ್ರಯೋಜನಗಳು ಮತ್ತು ಮಹತ್ವ, ಶಾಸನ ಶಿಲ್ಪ, ಶಾಸನಗಳ ಅಧ್ಯಯನ, ಶಾಸನಗಳು ಪ್ರಮುಖವಾಗಿ ಪ್ರಕಟವಾಗಿರುವ ಕೃತಿಗಳು, ಶಾಸನಗಳನ್ನು ಪ್ರತಿ ತೆಗೆಯುವ ವಿಧಾನ, ಇತ್ಯಾದಿಗಳು.*

ಈ ಮೇಲ್ಕಂಡ ಉಪಶೀರ್ಷಿಕೆಗಳು ನಿಜಕ್ಕೂ ಆಸಕ್ತಿಕರವಾಗಿದ್ದು ಅದಕ್ಕೆ ತಕ್ಕಂತೆ ವಿಷಯಗಳನ್ನು ಉಚಿತವರಿತು ಸರಳವಾಗಿ ನೀಡಲಾಗಿದೆ. ಆದರೆ ಯಾವುದೇ ವಿಷಯವೂ ಬಿಟ್ಟು ಹೋಗದಂತೆ ಜಾಗ್ರತೆ ವಹಿಸಲಾಗಿದೆ. ಕನ್ನಡ ಶಾಸನ ಕ್ಷೇತ್ರದಲ್ಲಿ ಈ ಮಾದರಿಯ ಅನೇಕ ಗ್ರಂಥಗಳು ಪ್ರಕಟವಾಗಿವೆ. ಉದಾ: ಬಾ.ರಾ. ಗೋಪಾಲ ಅವರ 'ಕನ್ನಡ ಶಾಸನಗಳು', ರಾ. ಶೇಷಶಾಸ್ತ್ರಿಯವರ 'ಶಾಸನ ಪರಿಚಯ', ಮುಂತಾದವು ಪ್ರಮುಖವಾಗಿವೆ. ಬಾ.ರಾ. ಗೋಪಾಲರ 'ಕನ್ನಡ ಶಾಸನಗಳು' ಕೃತಿಯು ಸ್ವಲ್ಪಮಟ್ಟಿಗೆ ಬೇರೆ ಮಾಹಿತಿಯನ್ನೂ, ಶಾಸನಾಧ್ಯಯನದ ಇತಿಹಾಸವನ್ನೂ ನಿರೂಪಿಸುತ್ತದೆಯಾದರೂ ಸ್ವಲ್ಪಮಟ್ಟಿಗೆ ಮಾಹಿತಿ ದೋಷಗಳೂ ಕಂಡುಬರುತ್ತಿರುವುದು ವಿಷಾದಕರ. ಇನ್ನು ಕಿರಿಯರಿಗಾಗಿ ಬರೆದ ಪುಸ್ತಕಗಳೆಂದು ಬಂದಿರುವುಗಳಲ್ಲಿ ಅತಿವ್ಯಾಪ್ತಿ ಮತ್ತು ಅವ್ಯಾಪ್ತಿ ದೋಷಗಳು ಕಂಡುಬರುತ್ತಿವೆ. ಇಂತಹ ಹಲವು ಕೃತಿಗಳ ನಡುವೆ ಪ್ರಕಟವಾಗಿರುವ ದೇವರಕೊಂಡಾರೆಡ್ಡಿಯವರ 'ಕರ್ನಾಟಕದ ಶಾಸನಗಳು' ಕೃತಿಯು ಒಂದು ಸರಳವಾದ ಆದರೆ ವಿಷಯಭರಿತವಾದ ಅತ್ಯುತ್ತಮ ಕೃತಿಯಾಗಿದೆ. ಭಾಷೆ ಅತ್ಯಂತ ಸರಳವಾಗಿದೆ. ಇಲ್ಲಿ ನೀಡಿರುವ ಶಾಸನೋಕ್ತ ಪದ್ಯಗಳು ಕಾವ್ಯಗುಣದಿಂದ ಕೂಡಿದವಾಗಿದ್ದು ಈ ಪದ್ಯಗಳನ್ನು ಶುದ್ಧ ಪಾಠದಲ್ಲಿ ನೀಡಿರುವುದು ನಿಜಕ್ಕೂ ಶ್ಲಾಘನೀಯ. ಉದಾ: ಆತಕೂರಿನ ಶಾಸನದಲ್ಲಿ ಬರುವ ಉರದಿದಿರಾಂತ ಪದ್ಯವನ್ನು ರೆಡ್ಡಿಯವರು ಶುದ್ಧವಾಗಿ ನೀಡಿದ್ದಾರೆ. ಈ ಪದ್ಯದ ತೃತೀಯ ಪಾದದಲ್ಲಿ ಶಾಸನದಲ್ಲಿ ಪೊಟ್ಟಳಿಸುವ ಎಂದಿದೆ. ಇಲ್ಲಿ 'ಜ'ಕಾರ ಪ್ರಾಸಾಕ್ಷರವಾಗಿರುವುದರಿಂದ ಈ ಪದದ ಸಾಧುತ್ವ ಪ್ರಶ್ನಾರ್ಹ ಆರ್. ನರಸಿಂಹಾಚಾರ್ಯರು ಇದನ್ನು ಗಮನಿಸಿ ಶಾಸನ ಪದ್ಯಮಂಜರಿಯಲ್ಲಿ ಪೊಜ್ಜಜೆಸುವ ಎಂದು ತಿದ್ದಿದ್ದಾರೆ. ರೆಡ್ಡಿಯವರು ಇದೇ ಪಾಠವನ್ನು ಅಂಗೀಕರಿಸಿರುವುದು ಸಮರ್ಥನೀಯ. ಈ ಪದ್ಯಗಳಲ್ಲಿ ಸಾಮಾನ್ಯ ಓದುಗರ ದೃಷ್ಟಿಯಿಂದ 'ಱ' ಮತ್ತು 'ೞ'ಗಳನ್ನು ಬಳಸದಿರುವುದು ಉತ್ತಮವಾಗಿದೆ. ಕಾಲಗಣನೆ, ಶಾಸನಗಳ ವಿಧಗಳು ಮುಂತಾದ ಅನೇಕ ವಿಷಯಗಳನ್ನು ಉಚಿತವಾಗಿ ನೀಡಲಾದ ಇಂತಹ ಕೃತಿಗಳ ಅಗತ್ಯ ಇಂದು ಹೆಚ್ಚಾಗಿದೆ. ಈ ಕೃತಿ ಅಗತ್ಯವಾಗಿ ಮರುಮುದ್ರಣವನ್ನು ಕಾಣಬೇಕಾಗಿದೆ.

---

* ನಂ.೬೫ (೧ ಮಹಡಿ), ೩ನೆಯ ಅಡ್ಡರಸ್ತೆ, ಶಿಕ್ಷಕರ ಬಡಾವಣೆ, ೧ನೆಯ ಹಂತ, ಜೆ.ಪಿ.ನಗರ ಅಂಚೆ, ಬೆಙ್ಗಳೂರು-೫೬೦೦೭೮.

## ಭಾರತೀಯ ವಾಸ್ತು ವಿದ್ಯೆ

ಭಾರತೀಯ ವಾಸ್ತುವಿದ್ಯೆ ಎನ್ನುವುದು ಆಂಧ್ರಪ್ರದೇಶದ ಹಿರಿಯ ವಿದ್ವಾಂಸರಾದ ಗಡಿಯಾರಂ ರಾಮಕೃಷ್ಣಶರ್ಮರ ತೆಲುಗು ಕೃತಿಯ ಕನ್ನಡಾನುವಾದವಾಗಿದೆ. ದೇವರಕೊಂಡಾರೆಡ್ಡಿಯವರು ಕನ್ನಡನಾಡಿನ ಯುವ ಪೀಳಿಗೆಯವರಿಗೆ ವಾಸ್ತು ವಿದ್ಯೆಯ ಅರಿವು ಮೂಡಬೇಕೆಂಬ ಸದುದ್ದೇಶದಿಂದ ಇದನ್ನು ಅನುವಾದಿಸಿದ್ದಾರೆ. ಕನ್ನಡ ಭಾಷೆಯಲ್ಲಿ ವಾಸ್ತುವಿನ ಬಗೆಗೆ ಇರುವ ಬರವಣಿಗೆಗಳೇ ಕಡಿಮೆ. ಈಚೆಗೆ ಕೆಲವು ಲೇಖನಗಳು ಮತ್ತು ಪುಸ್ತಕಗಳು ಕನ್ನಡದಲ್ಲಿಯೇ ಪ್ರಕಟವಾಗುತ್ತಿರುವುದು ತುಂಬಾ ಶ್ಲಾಘನೀಯವಾದ ವಿಚಾರ. ಆದರೆ ಈ ಬರಹಗಳು ವಿಪರೀತ ಪಾರಿಭಾಷಿಕ ಶಬ್ದಗಳಿಂದ ಕೂಡಿದ್ದು ವಾಚನೀಯತೆಯನ್ನು ಕಠಿಣಗೊಳಿಸಿವೆ. ಸಾಮಾನ್ಯರಿಗೆ ಇವು ಕಬ್ಬಿಣದ ಕಡಲೆ ಎನಿಸಿದರೆ ಆಶ್ಚರ್ಯವೇನಿಲ್ಲ. ಇಂತಹ ಸಮಯದಲ್ಲಿ ಗಡಿಯಾರಂ ರಾಮಕೃಷ್ಣಶರ್ಮರ ಕೃತಿಯ ಅನುವಾದವು ಇತರ ಕೃತಿಗಳಿಗೆ ಮಾದರಿಯೆನಿಕೊಂಡಿದೆ. ವಾಸ್ತುವಿನ ವಿವರವನ್ನು ಇಷ್ಟು ಸರಳವಾಗಿ ಮನಮುಟ್ಟುವಂತೆ ಹೇಳುವ ಕೃತಿ ಇದರ ಹೊರತು ಮತ್ತೊಂದಿರಲಾರದು. ಪಾರಿಭಾಷಿಕ ಶಬ್ದಗಳನ್ನು ಸರಳವಾಗಿ ಹದವರಿತು ಬಳಸಲಾಗಿರುವ ಈ ಕೃತಿಯಲ್ಲಿ ಒಟ್ಟು ೧೩ ಅಧ್ಯಾಯಗಳು ಚಿತ್ರಗಳೂ ಸೇರಿವೆ. ಈ ಚಿತ್ರಗಳು ಮೂಲ ಕೃತಿಯಲ್ಲಿ ಇಲ್ಲದೆ ಸುಲಭವಾಗಿ ಅರ್ಥವಾಗಬೇಕೆಂದು ಅನುವಾದಕರೇ ನೀಡಿದುದಾಗಿದೆ. ಆರಂಭದ ಅಧ್ಯಾಯದಲ್ಲಿ ವಾಸ್ತುವನ್ನು ಕುರಿತು ರಚಿತವಾಗಿರುವ ಕೆಲವು ಗ್ರಂಥಗಳನ್ನು ಸೂಕ್ತವಾದ ವಿಮರ್ಶೆಯೊಂದಿಗೆ ಪರಿಚಯಿಸಿದೆ. ನಂತರ ಮಾನಸಾರದಲ್ಲಿನ ವಿಷಯಗಳನ್ನು ವಿಮರ್ಶೆಯೊಂದಿಗೆ ಸರಳವಾಗಿ ಪರಿಚಯಿಸಲಾಗಿದೆ. ಉಪಪೀಠ, ಅಧಿಷ್ಠಾನ, ಸ್ತಂಭಗಳು, ಬೋದಿಗೆ, ಗ್ರಾಮ ನಗರ ವಿನ್ಯಾಸ, ದೇವಾಲಯಗಳ ನಿರ್ಮಾಣ, ಈ ರೀತಿಯಾಗಿ ಇರುವ ಅಧ್ಯಾಯಗಳಲ್ಲಿ ವಿಮರ್ಶಾತ್ಮಕವಾಗಿ ಪ್ರತಿಯೊಂದು ವಿವರಗಳನ್ನೂ ಜಿಡದಂತೆ ಪರಿಚಯವನ್ನು ಮಾಡಲಾಗಿದೆ. ವಾಸ್ತುವಿನಲ್ಲಿ ಕಂಡುಬರುವ ಅಳತೆಗಳನ್ನು ಪರಿಚಯಿಸಿರುವುದು ಅತ್ಯಂತ ಸೊಗಸಾಗಿದೆ. ಒಟ್ಟಿನಲ್ಲಿ ಇಡೀ ಕೃತಿಯು ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ. ಇನ್ನು ಈ ಕೃತಿಯನ್ನು ಅನುವಾದಿಸಿರುವ ದೇವರಕೊಂಡಾರೆಡ್ಡಿಯವರು ಈ ಕ್ಷೇತ್ರದಲ್ಲಿ ಕೆಲಸ ನಿರ್ವಹಿಸುತ್ತಿರುವವರೇ ಆಗಿರುತ್ತಾರೆ. ಈ ಕೃತಿಯ ಅನುವಾದದ ಮುಖ್ಯ ಲಕ್ಷಣವೇನೆಂದರೆ ಎಲ್ಲಿಯೂ ಕೃತಕತೆ ತಲೆದೋರದಿರುವುದು. ಅನುವಾದವೆಂದು ಅನ್ನಿಸದಿರುವಷ್ಟು ಸ್ವತಂತ್ರವಾಗಿದೆ. ಇಂತಹ ಕೃತಿಯ ಮರುಮುದ್ರಣ ಇಂದು ಅತ್ಯಗತ್ಯವಾಗಿದೆ.

## ಕೃಷ್ಣಾ ಮೇಲ್ದಂಡ ಯೋಜನೆ ಮುಳುಗಡೆ ಗ್ರಾಮಗಳಲ್ಲಿನ ಶಾಸನಗಳ ಅಧ್ಯಯನ

*ಕೃಷ್ಣಾ ಮೇಲ್ದಂಡ ಯೋಜನೆ ಮುಳುಗಡೆ ಗ್ರಾಮಗಳಲ್ಲಿನ ಶಾಸನಗಳ ಅಧ್ಯಯನ* ಕೃತಿಯು ಹೆಸರೇ ಸೂಚಿಸುವಂತೆ ಕೃಷ್ಣಾನದಿ ಹಿನ್ನೀರಿನಲ್ಲಿ ಮುಳುಗಡೆಯಾದ ಗ್ರಾಮಗಳಲ್ಲಿನ ಶಾಸನಗಳನ್ನು ಕುರಿತ ವರದಿ ಅಥವಾ ಅಧ್ಯಯನ ಎರಡೂ ಆಗಿದೆ. ಶಾಸನ ಪಾಠಗಳನ್ನು ನೀಡಿರುವುದರಿಂದ ಇದು ಶಾಸನ ಸಂಪುಟವೂ ಆಗಿದೆ. ಈ ಕೃತಿ ಹೊರಬರಲು ಕಾರಣವಾದ ಅಂಶಗಳನ್ನು ಸಂಪಾದಕರಾದ ದೇವರಕೊಂಡಾರೆಡ್ಡಿಯವರು ಹೇಳಿದ್ದಾರೆ. ಈ ಕಾರ್ಯದಲ್ಲಿ ಎದುರಾದ ತೊಡಕುಗಳನ್ನು ಸಹ ಹೇಳಿದ್ದಾರೆ. ಈ ಕೃತಿಯಲ್ಲಿ ಮುಳುಗಡೆಯಾಗಿರುವ ಗ್ರಾಮಗಳ ವಿವರಗಳನ್ನು ನಕ್ಷೆಯ ಮೂಲಕ ಅಚ್ಚುಕಟ್ಟಾಗಿ ನೀಡಿದ್ದಾರೆ. ಈ ಮುಳುಗಡೆಯಾದ ಗ್ರಾಮಗಳಲ್ಲಿ ಅನೇಕ ಶಾಸನಗಳು ನಾಶವಾಗಿರುವ ಅಂಶವನ್ನು ತಿಳಿಸಿ ಪರಿವೀಕ್ಷಣೆಯ ಸಂದರ್ಭದಲ್ಲಿ ದೊರೆತ ಕೆಲವು ಅಪ್ರಕಟಿತ ಹೊಸ ಶಾಸನಗಳನ್ನು ಈ ಕೃತಿಯಲ್ಲಿ ನೀಡಿದ್ದಾರೆ.

ಈ ಕೃತಿಯಲ್ಲಿ ಒಟ್ಟು ೩೪ ಶಾಸನಗಳೂ ಪದಸೂಚಿಯೂ ಮತ್ತು ಚಿತ್ರಗಳೂ ಇವೆ. ೧೨, ೨೨, ೨೮, ೨೯, ೩೦, ೩೧, ೩೨, ೩೩, ೩೪ನೆಯ ಸಂಖ್ಯೆಯ ಶಾಸನಗಳು ಮೊದಲ ಬಾರಿಗೆ ಈ ಕೃತಿಯಲ್ಲಿ ಬೆಳಕು ಕಂಡಿವೆ. ಉಳಿದ ಶಾಸನಗಳು South Indian Inscriptions ಸಂಪುಟಗಳಲ್ಲಿ ಬೆಳಕು ಕಂಡಿವೆ. ಈ ಕೃತಿಯ ಪ್ರಸ್ತಾವನೆಯಲ್ಲಿ ರಾಜಕೀಯ, ಧಾರ್ಮಿಕ, ಸಾಮಾಜಿಕ ಅಂಶಗಳನ್ನು ಕುರಿತು ವಿಸ್ತಾರವಾಗಿ ಚರ್ಚಿಸಿದ್ದಾರೆ ಮತ್ತು ಈ ಶಾಸನಗಳಲ್ಲಿ ಕಂಡುಬರುವ ನಾಡುಗಳನ್ನು ಕುರಿತು ವಿವೇಚಿಸಿದ್ದಾರೆ. ಈ ಕೃತಿಯಲ್ಲಿನ ಬಹುತೇಕ ಶಾಸನಗಳು ಹೆಚ್ಚು ಹಾಳಾಗಿವೆ. ಇದರಿಂದ ಅನೇಕ ವಿಷಯಗಳನ್ನು ತಿಳಿಯುವುದೇ ಕಷ್ಟ. ಈ ಕೃತಿ ಹೊರಬರುವ ಸಮಯಕ್ಕೆ, ಪರಿವೀಕ್ಷಣೆಯ ಸಂದರ್ಭದಲ್ಲಿ ಕಂಡುಬರದ South Indian Inscriptions ನಲ್ಲಿ ಪ್ರಕಟಕೊಂಡಿರುವ ಶಾಸನಗಳ ಪಾಠವನ್ನು South Indian Inscriptions ನಿಂದಲೇ ನೇರವಾಗಿ ತೆಗೆದುಕೊಳ್ಳಲಾಗಿದೆ. ಒಟ್ಟಿನಲ್ಲಿ ಕೃತಿ ಉತ್ತಮಿಕೆಯಿಂದ ಕೂಡಿದ್ದು ಅಭ್ಯಾಸಿಗಳಿಗೆ ಅನಿವಾರ್ಯ ಆಕರ ಗ್ರಂಥವಾಗಿದೆ.

# ಕರ್ನಾಟಕ ಶಾಸನಗಳಲ್ಲಿ ಶಾಪಾಶಯ

– ಡಾ. ಶಾಂತಿನಾಥ ದಿಬ್ಬದ*

'ಕರ್ನಾಟಕ ಶಾಸನಗಳಲ್ಲಿ ಶಾಪಾಶಯ' ಎಂಬುದು ಡಾ॥ ದೇವರಕೊಂಡಾರೆಡ್ಡಿ ಅವರ ಇತ್ತೀಚಿನ ಕೃತಿಯಾಗಿದೆ. ದೇವರಕೊಂಡಾರೆಡ್ಡಿ ಅವರು ನನ್ನ ಹಿರಿಯ ಸ್ನೇಹಿತರು. ತಾಳ್ಮೆ ಮತ್ತು ಹೋರಾಟದ ಮೂಲಕ ಬದುಕನ್ನು ರೂಪಿಸಿಕೊಂಡಿರುವ ಅವರ ಬಗ್ಗೆ ನನಗೆ ವಿಶೇಷ ಪ್ರೀತಿ. ಕರ್ನಾಟಕದ ಬೆರಳೆಣಿಕೆಯ ಶಾಸನತಜ್ಞರಲ್ಲಿ ಅವರು ಒಬ್ಬರು. ಅವರು ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ, ಡೀನ್ ಆಗಿ ಮಾಡಿರುವ ಕಾರ್ಯ ಸ್ಮರಣೀಯವಾಗಿದೆ. ಸ್ವತಃ ಶಾಸನತಜ್ಞರಾಗಿ ಬೆಳೆಯುವುದರ ಜೊತೆಗೆ ಆ ಕ್ಷೇತ್ರದಲ್ಲಿ ಅಧ್ಯಯನ ಮಾಡಬಯಸುವವರಿಗೆ ಉಪಯುಕ್ತ ಆಕರಗಳನ್ನು ನೀಡಿದ್ದಾರೆ. ಇವರ 'ಕರ್ನಾಟಕ ಶಾಸನಗಳಲ್ಲಿ ಶಾಪಾಶಯ' ಎಂಬ ಕೃತಿಯನ್ನು ಧಾರವಾಡದ ಕರ್ನಾಟಕ ಇತಿಹಾಸ ಸಂಶೋಧನ ಮಂಡಲದವರು ೨೦೦೮ರಲ್ಲಿ ಪ್ರಕಟಿಸಿದ್ದಾರೆ.

ನಮ್ಮ ಹಿಂದಿನ ತಲೆಮಾರಿನ ವಿದ್ವಾಂಸರು ಶಾಸನಗಳ ಮುಖ್ಯ ಪಾಠಕ್ಕೆ ಮಾತ್ರ ಹೆಚ್ಚಿನ ಮಹತ್ವವನ್ನು ಕೊಡುತ್ತ ಬಂದಿದ್ದಾರೆ. ಶಾಸನಗಳ ಕೊನೆಯ ಭಾಗದಲ್ಲಿ ಬಂದಿರುವ ಶಾಪಾಶಯ ಪಾಠಗಳು ಅಲಕ್ಷ್ಯಕ್ಕೊಳಗಾಗಿವೆ. ತಮ್ಮ ಈ ಕೃತಿಯ ಮೂಲಕ ದೇವರಕೊಂಡಾರೆಡ್ಡಿ ಅವರು ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ನಿರ್ಮಿಸುವಲ್ಲಿ ಶಾಪಾಶಯ ಭಾಗಗಳು ಪೂರಕ ಆಕರಗಳಾಗಿ ನಿಲ್ಲುತ್ತವೆಯೆಂಬುದನ್ನು ಉದಾಹರಣೆಗಳ ಮೂಲಕ ಸಾಬೀತುಪಡಿಸಿದ್ದಾರೆ. ಶಾಪಾಶಯ ಭಾಗಕ್ಕೆ ಸಂಬಂಧಿಸಿದ ಮೊದಲನೆಯ ಪ್ರತ್ಯೇಕ ಕೃತಿ ಇದಾಗಿದೆಯೆಂಬುದು ನನ್ನ ತಿಳುವಳಿಕೆ. ಶಾಪಾಶಯ ಪಾಠಗಳ ಬಗ್ಗೆ ತಿಳಿಸುತ್ತ ಅವರು ಹೀಗೆ ಹೇಳಿದ್ದಾರೆ. "ಬಹುತೇಕ ಮೂಲಶಾಸನಗಳನ್ನು ಓದಲಾರದ ಕೆಲವು ಎಡಪಂಥೀಯ ಇತಿಹಾಸಕಾರರು ಶಾಸನಗಳ ಕೆಲವು ಭಾಗಗಳನ್ನು ಮಾತ್ರ ಗಮನಿಸಿ, ಇವು ಜನಸಾಮಾನ್ಯರ ಕನ್ನಡಿಯಲ್ಲ' ಎಂದು ವಾದಿಸುವವರಿಗೆ ಶಾಸನಗಳ ಶಾಪಾಶಯ ಭಾಗಗಳು ಸ್ವತಃ ಉತ್ತರವನ್ನು ನೀಡುವಂತಹವಾಗಿವೆ. ಆಡುನುಡಿ ಮತ್ತು ನುಡಿಕಟ್ಟುಗಳು, ಜನಸಾಮಾನ್ಯರ ನಂಬಿಕೆಗಳು, ಸಾಮಾಜಿಕ ಸ್ಥಿತಿಗಳ ಬಗ್ಗೆ ಇವು ಬೆಳಕು ಚೆಲ್ಲುತ್ತವೆ. ಸಾಹಿತ್ಯಕೃತಿಗಳಲ್ಲಿ ಕಾಣದ ಸ್ವಾತಂತ್ರ್ಯವನ್ನು ಶಾಸನಗಳ ಈ ಭಾಗದಲ್ಲಿ ಶಾಸನಕವಿಗಳು ಪಡೆದಿದ್ದಾರೆ". ಇಲ್ಲಿಯ ಕೊನೆಯ ಮಾತು ಮಹತ್ವದ್ದಾಗಿದೆ. ಮುಂದುವರೆದು ಅವರು ಹೀಗೆ ಹೇಳಿದ್ದಾರೆ. "ಕನ್ನಡ ಭಾಷಾ ಶಾಪಾಶಯಗಳು ಕಾಲದಿಂದ ಕಾಲಕ್ಕೆ ಆಳುತ್ತಿದ್ದ ಅರಸರು, ಆಡಳಿತ ಬದಲಾವಣೆಗೆ ತಕ್ಕಂತೆ ಬದಲಾಗಿ ಕೆಲವೊಮ್ಮೆ ತೀಕ್ಷ್ಣವಾಗಿ ಹೊಸ ಹೊಸ ಅಂಶಗಳನ್ನು ಸೇರಿಸಿಕೊಳ್ಳುತ್ತ ಹೋಗಿವೆ. ಆದರೆ ಇಂತಹ ಬೆಳವಣಿಗೆ ಸಂಸ್ಕೃತ ಶಾಪಾಶಯಗಳಲ್ಲಿ ಇಲ್ಲ.

'ಪ್ರವೇಶ' ಎಂಬ ಭಾಗದೊಂದಿಗೆ ಲೇಖಕರು ವಿಷಯಪ್ರವೇಶ ಮಾಡಿದ್ದಾರೆ. ಇಲ್ಲಿ ಮನುಷ್ಯ ಸಂಸ್ಕೃತಿಯಲ್ಲಿ 'ಬರಹ' ಪ್ರಕ್ರಿಯೆಯು ಆರಂಭವಾದ ಬಗೆಯ ಕುರಿತು ಚರ್ಚೆ ಮಾಡಿದ್ದಾರೆ. ತಾನು ಮಾಡಿದ ಕಾರ್ಯಗಳು ಮುಂದಿನ ತಲೆಮಾರಿನವರಿಗೂ ತಿಳಿಯಲಿ ಎಂಬ ಕಾರಣದಿಂದ ನಮ್ಮ ಪೂರ್ವಜರು ಬರಹ ಕಲೆಯನ್ನು ಜಾರಿಗೆ ತಂದಿರುವರೆಂದು ಲೇಖಕರು ತಿಳಿಸಿದ್ದಾರೆ. ಗುಹೆಯ ಗೋಡೆಗಳ ಮೇಲೆ, ಶಿಲಾಫಲಕಗಳ ಮೇಲೆ ಇಂಥ ಬರವಣಿಗೆಗಳು ಬೆಳೆಯುತ್ತ ಬಂದವು. ತರುವಾಯ ಮನುಷ್ಯನು ನಾಗರೀಕನಾದಂತೆ, ರಾಜತ್ವ ಬೆಳೆದಂತೆ ಅಗತ್ಯವಿರುವವರಿಗೆ ವ್ಯವಸಾಯ ಭೂಮಿಯನ್ನು ಹಂಚತೊಡಗಿದ. ಕೆಲವೊಮ್ಮೆ ತಾನು ನಿರ್ಮಿಸಿದ ದೇವಾಲಯಗಳ ದೈನಂದಿನ ಕಾರ್ಯಗಳಿಗಾಗಿ ದಾನ ನೀಡಿದ. ಹೀಗೆ ದಾನ ನೀಡಿದ ನಂತರ ಯಾರೂ ಅಪಹರಿಸಬಾರದೆಂಬ ಉದ್ದೇಶದಿಂದ ಕೊಟ್ಟ ದಾನವನ್ನು ಕಾಪಾಡುವವನಿಗೆ ಬರುವ ಪುಣ್ಯ, ಹಾಳು ಮಾಡಿದರೆ ಬರುವ ಕೆಟ್ಟ ಫಲದ ಬಗ್ಗೆ ಹೆದರಿಸಲು ಯತ್ನಿಸಿದ ಎಂಬ ಲೇಖಕರ ವಿವರಣೆ ಸಮರ್ಪಕವಾಗಿದೆ.

ಶಾಪಾಶಯಗಳಲ್ಲಿ ಬಂದಿರುವ ಪುಣ್ಯ–ಪಾಪ ಎಂಬ ಪದಗಳನ್ನಿಟ್ಟುಕೊಂಡು, ಮನುಷ್ಯನ ಚಿಂತನಕ್ರಮದಲ್ಲಿ ಇವು ಯಾವಾಗ ಹುಟ್ಟಿದವು? ಏಕೆ ಹುಟ್ಟಿದವು? ಯಾವ ಅರ್ಥ ಪಡೆದುಕೊಂಡವು? ಎಂಬ ಪ್ರಶ್ನೆಗಳಿಗೆ ಉತ್ತರ

* 'ಅರುಣೋದಯ', ಪ್ಲಾಟ್ ಸಂಖ್ಯೆ ೧೮ 'ಸಿ', ಶಾಂತಿನಿಕೇತನನಗರ, ಕೆಲಗೇರಿ ರಸ್ತೆ, ಧಾರವಾಡ–೫೮೦೦೦೮.

ಹುಡುಕುವ ಪ್ರಯತ್ನವನ್ನೂ, ಲೇಖಕರು ಮಾಡಿದ್ದಾರೆ. ಧರ್ಮಸಂಗ್ರಹ ಪ್ರವೃತ್ತಿಗೆ ಹೆಚ್ಚಿನ ಒತ್ತು ಕೊಡುವ ಪರಿಪಾಠ ಹಿಂದಿನ ಕಾಲದಲ್ಲಿದ್ದಿತು. ಕೆರೆ–ಬಾವಿಗಳ ನಿರ್ಮಾಣ, ದೇವಾಲಯಗಳ ನಿರ್ಮಾಣ, ಅನ್ನಛತ್ರ, ಅರವಟ್ಟಿಗೆ, ಗುರುಕುಲ, ಅಗ್ರಹಾರ ಇವುಗಳ ಸ್ಥಾಪನೆ ಈ ಮುಂತಾದ ಕ್ರಿಯೆಗಳಲ್ಲಿ ಪುಣ್ಯಪ್ರಾಪ್ತಿಯೋಗ್ಯವಾದ ಧರ್ಮಸಂಗ್ರಹಕಾರ್ಯಗಳೆಂಬ ನಂಬಿಕೆ ಅಂದು ಬಲವಾಗಿ ಇದ್ದೀತು. ಜೊತೆಗೆ ತಾನು ಮಾಡಿದ ಇಂಥ ಜನಪರ ಕಾರ್ಯಗಳ ನೆನಪು ಮುಂದೆಯೂ ಉಳಿಯಲಿ ಎಂಬ ಲೌಕಿಕ ಉದ್ದೇಶದಿಂದ ಆ ಕುರಿತು ಶಾಸನಗಳನ್ನು ಕೆತ್ತಿಸುವ ಪರಿಪಾಠವೂ ಈ ಕಾರ್ಯಗಳ ಒಂದು ಭಾಗವೇ ಎಂಬಂತೆ ಮುಂದುವರೆದುಕೊಂಡು ಬಂದಿತು. ಬರುಬರುತ್ತ ಇಂಥಹ ದಾನದತ್ತಿಗಳ, ಸ್ಮಾರಕಗಳ ರಕ್ಷಣೆಯೂ ಪುಣ್ಯದ ಕಾರ್ಯವೇ ಎಂಬ ತಿಳಿವನ್ನು ಜನತೆಯಲ್ಲಿ ಮೂಡಿಸುವ ಅನಿವಾರ್ಯತೆಯು ಎದುರಾಗುತ್ತ ಬಂದಿತು. ಆ ಹಂತದಲ್ಲಿ ಇಂಥ ಸ್ಮಾರಕಗಳ ರಕ್ಷಣೆಗೆ ಜನರನ್ನು ಪ್ರೇರೇಪಿಸುವ ಮತ್ತು ಸ್ಮಾರಕದ ನಾಶಕ್ಕೆ ಮುಂದಾಗುವ ಜನರನ್ನು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಹೆದರಿಸುವ ಶಾಪಾಶಯದ ಭಾಗಗಳು ಶಾಸನಪಾಠಗಳ ಅನಿವಾರ್ಯ ಘಟಕಗಳಾಗಿ ಸೇರಿಕೊಂಡವು. ಲೇಖಕರು ನೀಡಿರುವ ಈ ವಿವರ ಸಮರ್ಪಕವಾಗಿದೆ. ಶಾಪ, ಆಣೆ, ಪ್ರಮಾಣ ಮುಂತಾದವು ವ್ಯಕ್ತಿಯ ಮನಸ್ಸಾಕ್ಷಿಗೆ ಸಂಬಂಧಪಡುವ ಸಂಗತಿಗಳಾಗಿದ್ದು ಪುರಾಣಗಳಿಂದ ತಾವು ಕೇಳಿ ತಿಳಿದ ಶಾಪ ಪ್ರಸಂಗಗಳು ಮತ್ತು ಅವುಗಳ ಭೀಕರ ಪರಿಣಾಮಗಳಿಗೆ ಸಂಬಂಧಿಸಿದ ಪೂರ್ವಸಂಚಿತ ತಿಳುವಳಿಕೆ ಮತ್ತು ನಂಬಿಕೆಗಳಿಂದಾಗಿ ಮಧ್ಯಕಾಲೀನ ಮತ್ತು ಆಧುನಿಕ ಕಾಲದ ಮಾನವ ಶಾಪ, ಆಣೆ, ಪ್ರಮಾಣಗಳಿಗೆ ಹೆದರುತ್ತ ಬಂದಿದ್ದಾನೆ. ಇದು ಮನೋವಿಜ್ಞಾನಕ್ಕೆ ಸಂಬಂಧಿಸಿರುವ ವಿಚಿತ್ರ ವಿಷಯ. ತಪ್ಪಿತಸ್ಥರನ್ನು ಎಲ್ಲಿ ನೇರವಾಗಿ ಶಿಕ್ಷೆಗೆ ಗುರಿಪಡಿಸಲು ಸಾಧ್ಯವಾಗುವುದಿಲ್ಲವೋ ಅಲ್ಲಿ ತನ್ನ ತಪ್ಪಿನ ಅರಿವನ್ನು ತಾನೇ ಮೂಡಿಸಿಕೊಳ್ಳಲು ಮತ್ತು ಆ ಕಾರಣವಾಗಿ ಒದಗುವ ಶಿಕ್ಷೆಗೆ (ದೈವೀಶಿಕ್ಷೆ?) ಹೆದರುವ ಸಂದರ್ಭವನ್ನು ಸೃಷ್ಟಿಸುವುದು ಅನಿವಾರ್ಯವಾಗುತ್ತದೆ. ಇದು ತಪ್ಪಿತಸ್ಥನ ಸ್ವಯಂ ಆತ್ಮವಿಮರ್ಶೆಗೆ ಮತ್ತು ವಿವೇಚನೆಗೆ ಬಿಟ್ಟಿರುವ ವಿಚಾರ. ಯಾವುದೋ ಕಾಲದಲ್ಲಿ ಯಾವನೋ ರಾಜನು ಯಾರಿಗೋ ಬಿಟ್ಟು ಕೊಟ್ಟ ದಾನದತ್ತಿಗಳನ್ನು ತರುವಾಯದ ಕಾಲಘಟ್ಟಗಳಲ್ಲಿ ರಕ್ಷಿಸುವುದು ಅಥವಾ ಕಾವಲುಗಾರರನ್ನು ನೇಮಿಸುವುದು ಅಸಾಧ್ಯದ ಕೆಲಸ. ಬಹುಶಃ ಇದನ್ನು ತಿಳಿದುಕೊಂಡೇ ಹಿಂದಿನ ಶಾಸನಗಳನ್ನು ಹಾಕಿಸಿದವರು ಶಾಪಾಶಯದ ಮೂಲಕ ಅಪಹರಣಕಾರರಲ್ಲಿ ಭಯವನ್ನು ಹುಟ್ಟಿಸುವ ಕೆಲಸವನ್ನು, ಒಂದು ಮನೋವೈಜ್ಞಾನಿಕ ತಂತ್ರದ ರೂಪದಲ್ಲಿ ಮಾಡಲಾರಂಭಿಸಿರಬೇಕು.

ಶಾಪಾಶಯದ ಪ್ರಾಚೀನತೆಯನ್ನು ಗುರುತಿಸುತ್ತ ದೇವರಕೊಂಡಾರೆಡ್ಡಿ ಅವರು ಕ್ರಿಸ್ತಪೂರ್ವದಲ್ಲಿ ರಚನೆಯಾದ ಶಾಸನಗಳ ಅಂತ್ಯದಲ್ಲಿ ಶಾಪಾಶಯ ಶ್ಲೋಕಗಳು ಇಲ್ಲದಿರುವುದನ್ನು ಗುರುತಿಸಿದ್ದಾರೆ. ಅಶೋಕನ ಶಾಸನಗಳಲ್ಲೂ ಶಾಪಾಶಯಗಳಿಲ್ಲದಿರುವುದನ್ನು ಗುರುತಿಸಿದ್ದಾರೆ. ಅದಕ್ಕೆ ಸಮಂಜಸವಾದ ಕಾರಣವನ್ನೂ ಕಂಡುಕೊಂಡಿದ್ದಾರೆ (ಅಶೋಕ ಶಾಸನಗಳು ದಾನಶಾಸನಗಳಾಗಿರಲಿಲ್ಲವಾದ ಕಾರಣ ಅವುಗಳಿಗೆ ಶಾಪಾಶಯಗಳಿರಲಿಲ್ಲ ಎಂಬುದು ಅವರ ವಾದ). ಕ್ರಿ.ಶ. ಎರಡನೆಯ ಶತಮಾನದ ಸಂಸ್ಕೃತ ಮತ್ತು ಪ್ರಾಕೃತ ಶಾಸನಗಳಲ್ಲಿ ಈ ಶಾಪಾಶಯ ಪದ್ಧತಿ ಆರಂಭವಾಗಿದೆಯೆಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಅದರಲ್ಲೂ ತಾಮ್ರಶಾಸನಗಳಲ್ಲಿ ಇದು ಅಧಿಕವೆಂದೂ ತಿಳಿಸಿದ್ದಾರೆ. "ಇದಕ್ಕೆ ಕಾರಣ ತಾಮ್ರಶಾಸನಗಳು ಕಲಿತ ಬ್ರಾಹ್ಮಣರ ವೈಯಕ್ತಿಕ ದಾಖಲೆಗಳಾಗಿದ್ದು ಹಾಗೂ ರಾಜಕೀಯ ಅಸ್ಥಿರತೆಯಿಂದ ದಾನಗಳು ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತಿದ್ದುದು. ಇಂಥ ಬಲಾತ್ಕಾರ ಬದಲಾವಣೆಯನ್ನು ಸ್ವಲ್ಪವಾದರೂ ತಡೆಯಲು ಶಾಪಾಶಯಗಳನ್ನು ಬಳಸಿದರು". ಇದು ಲೇಖಕರ ಅಭಿಪ್ರಾಯ.

ಈ ಶಾಪಾಶಯ ಮಾತುಗಳು ತಾವು ಹೇಳಿದವಲ್ಲ, ಅವು ಮನುವಿನಿಂದ ಹಾಗೂ ವೇದವ್ಯಾಸನಿಂದ ಹೇಳಲ್ಪಟ್ಟವು ಎಂದು ಶಾಸನಕರ್ತೃಗಳು ಹೇಳಿರುವುದರ ಬಗ್ಗೆ ಚರ್ಚಿಸುತ್ತ ಲೇಖಕರು ವ್ಯಾಸರಲ್ಲಿ ಅಂಥ ಯಾವ ಸುಳಿಹುಗಳೂ ಇಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಕೆಲವು ಪುರಾಣಗಳಲ್ಲಿ ಬಂದಿದ್ದ ಶಾಪಾಶಯದ ಶ್ಲೋಕಗಳನ್ನೇ ತರುವಾದ ಶಾಸನಕಾರರು ಬಳಸುತ್ತ ಬಂದಿರಬಹುದು ಎಂಬು ಅಭಿಪ್ರಾಯಪಟ್ಟಿದ್ದಾರೆ. ಮಾದರಿಗಾಗಿ ಅಂಥ ಕೆಲವು ಶ್ಲೋಕಗಳನ್ನು ಕೊಟ್ಟಿದ್ದಾರೆ. ಇವು ಪದ್ಮಪುರಾಣ, ವಿಷ್ಣುಧರ್ಮೋತ್ತರ ಪುರಾಣ, ವಶಿಷ್ಠಸ್ಮೃತಿ, ಬೃಹಸ್ಪತಿಸ್ಮೃತಿ, ಭವಿಷ್ಯಪುರಾಣ ಮುಂತಾದ ಸಂಸ್ಕೃತ ಕೃತಿಗಳಿಂದ ಆಯ್ದುಕೊಂಡ ಶ್ಲೋಕಗಳಾಗಿವೆ.

ಸಂಸ್ಕೃತ ಶಾಸನಗಳ ಪ್ರಭಾವದಿಂದಲೇ ಕನ್ನಡ ಶಾಸನಗಳ ಶಾಪಾಶಯ ಭಾಗಗಳು ಹುಟ್ಟಿಕೊಂಡಿರುವುದನ್ನು ಲೇಖಕರು ಆಧಾರಸಹಿತವಾಗಿ ತೋರಿಸಿಕೊಟ್ಟಿದ್ದಾರೆ. ಕನ್ನಡದ ಬಹುತೇಕ ಶಾಸನಗಳಲ್ಲಿ ಬಂದಿರುವ 'ಸ್ವದತ್ತಾಂ, ಪರದತ್ತಾಂ' ಎಂಬ ಶಬ್ದಗಳ ಅರ್ಥದ ಬಗ್ಗೆ ಮಾಡಿರುವ ಚರ್ಚೆ ಉತ್ತಮವಾಗಿದೆ. ಶಾಸನ ನಾಶ, ದತ್ತಿ ಅಪಹರಣ ಮುಂತಾದವು

ದೊಡ್ಡ ಪಾಪಕಾರ್ಯಗಳು. ಅವು ವಾರಣಾಸೀ ತೀರದ ಬ್ರಾಹ್ಮಣರನ್ನು ಪವಿತ್ರವಾದ ಗೋವುಗಳನ್ನು ಹತ್ಯೆಗೈದುದಕ್ಕೆ ಸಮಾನವಾದ ಪಾಪಕೃತ್ಯಗಳು ಎಂಬ ಮಾತುಗಳು ಶಾಸನಗಳಲ್ಲಿ ಪುನರುಕ್ತವಾಗಿರುವುದು ಅಂದಿನ ಸಮಾಜದಲ್ಲಿದ್ದ ಬ್ರಾಹ್ಮಣ ಪ್ರಾಧಾನ್ಯತೆಯನ್ನೂ, ಗೋವಿನ ಪವಿತ್ರ ಸ್ಥಾನಮಾನವನ್ನು ಎತ್ತಿ ತೋರಿಸುತ್ತದೆ. ಜೊತೆಗೆ ಶಾಪಾಶಯಗಳ, ದಾನ-ಧರ್ಮ-ತ್ಯಾಗ ಮುಂತಾದ ಮೌಲ್ಯಗಳನ್ನು ಎತ್ತಿ ಹಿಡಿದಿರುವುದು ಕಂಡುಬರುತ್ತದೆ.

ದೇವರಕೊಂಡಾರೆಡ್ಡಿ ಅವರ ಪ್ರಕಾರ ಹಲ್ಮಿಡಿ ಶಾಸನದಲ್ಲಿರುವ "ಕಳ್ದೋನ್ ಮಹಾಪಾತಕನ್" ಎಂಬುದು ಶಾಪಾಶಯದ ಮೊದಲ ಮಾದರಿಯಾಗಿದೆ. ಬಾದಾಮಿಯ ಮಂಗಲೇಶನ ಶಾಸನದಲ್ಲಿ 'ಅಟಿವೋನ್ ಪಂಚಮಹಾಪಾತಕನಕ್ಕುಂ, ಏಳನೆಯ ನರಕದಾ ಪುೞು ಅಕುಂ' ಎನ್ನಲಾಗಿದೆ. ಇಂಥ ಇನ್ನು ಕೆಲವು ಮಾದರಿಗಳನ್ನು ಲೇಖಕರು ಸಂಗ್ರಹಿಸಿಕೊಟ್ಟಿದ್ದಾರೆ.

ಶಾಪಾಶಯ ಪಾಠಗಳ ಆಧಾರದಿಂದ ಹಿಂದಿನ ದಿನಗಳಲ್ಲಿ ಯಾವ ಯಾವ ಕುಕೃತ್ಯಗಳು ಪಾಪಕಾರ್ಯಗಳೆನ್ನಿಸಿಕೊಂಡಿದ್ದವೆಂಬುದನ್ನು ಈ ರೀತಿ ತಿಳಿಸಲಾಗಿದೆ.

೧. ಬ್ರಾಹ್ಮಣರಿಗೆ ನೀಡಲಾದ ದಾನವನ್ನು ಅಪಹರಿಸುವುದು (ಬ್ರಹ್ಮಸ್ವ)

೨. ದೇವರ ಸ್ವತ್ತನ್ನು ಅಪಹರಿಸುವುದು (ದೇವಸ್ವ)

೩. ದೇವರ ಒಡವೆಯನ್ನು ಒತ್ತೆ ಇಡುವುದು.

೪. ಕೆರೆ-ಕೋಡಿಗಳನ್ನು ಕೆಡಿಸುವುದು.

೫. ದೇವಾಲಯಗಳನ್ನು ಮಲಿನಗೊಳಿಸುವುದು, ನಾಶಗೊಳಿಸುವುದು.

'ಶಾಪಾಶಯಗಳಲ್ಲಿ ಮತಧರ್ಮಗಳು' ಎಂಬುದು ಈ ಕೃತಿಯ ಎರಡನೆಯ ಭಾಗವಾಗಿದೆ. ಶಾಪಾಶಯ ಪಾಠಗಳಲ್ಲಿ ದೊರೆಯುವ ವೈದಿಕ, ಜೈನ, ಶೈವ ಸಂಬಂಧಿ ಸಂಗತಿಗಳನ್ನು ಈ ಭಾಗದಲ್ಲಿ ಸಂಗ್ರಹಿಸಿ ಚರ್ಚಿಸಲಾಗಿದೆ. ಈ ಭಾಗದ ಮುಖ್ಯಾಂಶಗಳು ಹೀಗಿವೆ: (೧) ಕರ್ನಾಟಕದಲ್ಲಿ ದೊರೆಯುವ ಶಾಸನಗಳಲ್ಲಿ ವೈದಿಕಮತದ ಶಾಸನಗಳದು ಸಿಂಹಪಾಲು. ಅದರಲ್ಲಿ ಶೈವ, ವೈಷ್ಣವ ಶಾಸನಗಳು ಅಧಿಕ (೨) ನಂತರದ ಸ್ಥಾನ ಜೈನ ಶಾಸನಗಳದು. (೩) ೧೫ನೆಯ ಶತಮಾನ, ೧೬-೧೭ನೆಯ ಶತಮಾನಗಳಲ್ಲಿ ಕೆಲವು ಮುಸಲ್ಮಾನ ಶಾಸನಗಳು ದೊರೆಯುತ್ತವೆ. (೪) ವೈಷ್ಣವ ಶಾಸನಗಳ ಶಾಪಾಶಯಗಳಲ್ಲಿ ವಿಷ್ಣು, ವಿಷ್ಣು ಸಂಬಂಧಿಪದಗಳು, ಗೋಬ್ರಾಹ್ಮಣ ಕೊಂದ ಪಾಪಕೆ ಹೋಹರು, ಶ್ರೀರಾಮನಾಮಕ್ಕೆ ತಪ್ಪಿದ ಪಾಪಕೆ ಹೋಹರು' ಎಂಬ ರೂಪಗಳು ಬಂದಿವೆ. ಮತ್ತೆ ಕೆಲವೆಡೆ 'ಇ ಧರ್ಮವಂ ಶ್ರೀರಂಗದೇವರ ಶ್ರೀವೈಷ್ಣವರ ರಕ್ಷೆ' ಎಂದೂ, 'ಕೊಟ್ಟ ದಾನದ ಮರ್ಯಾದೆ ಮೀರಿದರೆ ಇತರೆ ಆಣೆಗಳ ಜೊತೆಗೆ ಹದಿನೆಂಟು ನಾಡ ಶ್ರೀವೈಷ್ಣವರಾಣೆ' ಎಂದು ಬಂದಿದೆ. ಮತ್ತೊಂದೆಡೆ 'ಯೀ ಧರ್ಮಕೆ ಆರು ತಪಿದರೂ ಶ್ರೀ ರಾಮಾನುಜಾಚಾರ್ಯರ ಶ್ರೀಪಾದಕೆ ತಪಿದವರು' ಎಂಬ ಮಾತಿದೆ.

ಜೈನ ಶಾಸನಗಳಲ್ಲಿ ಶಾಪಾಶಯಗಳ ಬಗ್ಗೆ ಮಾತನಾಡುತ್ತ ಅವು ಬಹುಮಟ್ಟಿಗೆ ವೈದಿಕ ಶಾಪಾಶಯಗಳಂತೆಯೇ ಇವೆಯೆಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ "ಇವರು (ಜೈನರು) ಅಲ್ಪಸಂಖ್ಯಾತರಾಗಿದ್ದು, ಬಹುಸಂಖ್ಯಾತರನ್ನು ಅವಲಂಬಿಸಿರಬೇಕಾಗಿದ್ದುದು ಒಂದು ಕಾರಣವಾದರೆ, ಇನ್ನೊಂದು ಕಾರಣ ಅನೇಕ ಜೈನ ಬಸದಿಗಳು ಶೈವರಿಂದ ನಿರ್ಮಿತವಾಗಿರುವುದು" ಎಂದು ಕಾರಣಗಳನ್ನು ಗುರುತಿಸಿದ್ದಾರೆ. ಆದರೆ ವೀರಶೈವರ ಮತ್ತು ರಾಮಾನುಜರ ಪೂರ್ವಕಾಲದಲ್ಲಿ ಜೈನರು ಅಲ್ಪಸಂಖ್ಯಾತರಾಗಿದ್ದರೇ? ಎಂಬ ಪ್ರಶ್ನೆ ಇಲ್ಲಿ ಎದುರಾಗುತ್ತದೆ. ಹಾಗೆಯೇ ಶೈವರಿಂದ ನಿರ್ಮಿತವಾದ ಜೈನಬಸದಿಗಳ ಸಂಖ್ಯೆಯಾದರೂ ಎಷ್ಟು ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ. ಏನಿದ್ದರೂ ಜೈನಶಾಪಾಶಯಗಳು ವೈದಿಕ ಶಾಪಾಶಯದ ಮಾದರಿಗಳನ್ನು ಹೋಲುತ್ತವೆ ಎಂಬ ಮಾತು ನಿಜ. ಆದರೆ ಅದಕ್ಕೆ ಲೇಖಕರು ಕೊಟ್ಟಿರುವ ಕಾರಣಗಳು ಅಷ್ಟು ಸಮಂಜನವೆನ್ನಿಸುವುದಿಲ್ಲ. ಜೈನ ಶಾಪಾಶಯಗಳು ಹೀಗಿರುತ್ತವೆ: 'ಶಾಸನ ಮರ್ಯಾದೆಯನ್ನು ಮೀರಿದವರು', 'ಸಮಯದ್ರೋಹಿಗಳು', 'ಸಂಘಸಮುದಾಯಕ್ಕೆ ದ್ರೋಹಿಗಳು' ಇತ್ಯಾದಿ. ಇತರ ಮತಗಳ ಶಾಪಾಶಯಗಳಿಗಿಂತ ಇವು ತುಂಬ ಸೌಮ್ಯ ಎಂಬ ಲೇಖಕರ ಅಭಿಪ್ರಾಯ ಸರಿಯಾದುದಾಗಿದೆ. ಅದಕ್ಕೆ ಜೈನ ಸಿದ್ಧಾಂತದ ಹಿನ್ನೆಲೆಯೇ ಕಾರಣವೆಂಬುದನ್ನು ನಾವು ಗುರುತಿಸಬಹುದು.

ಮುಸಲ್ಮಾನರು ತಮ್ಮ ಶಾಸನ ಮತ್ತು ಸ್ಮಾರಕಗಳ ಮೇಲೆ ದಾಳಿ ಮಾಡದಿರಲಿ ಎಂಬ ಕಾರಣಕ್ಕಾಗಿ ವೈದಿಕರು ಶಾಪಾಶಯ ಭಾಗಗಳಲ್ಲಿ ಇಸ್ಲಾಂ ಪವಿತ್ರ ತಾಣವಾದ 'ಮೆಕ್ಕಾ'ದ ಹೆಸರನ್ನು ಬಳಸತೊಡಗಿದರು. ಅಲ್ಲದೆ ಮುಸಲ್ಮಾನರಿಗೆ ಅಭೋಜ್ಯವಾದ ಹಂದಿಯ ಪ್ರಸ್ತಾಪವನ್ನು ತರಲಾರಂಭಿಸಿದರು. ಒಂದು ಶಾಸನದಲ್ಲಿ 'ನಡೆಸದೇ ತಪ್ಪಿದರೆ ತೂರಕರಾದರೆ ಮುಸಾಫರ ಆಣೆ' ಎನ್ನಲಾಗಿದೆ. ಇನ್ನೊಂದೆಡೆ 'ಮುಸಲ್ಲಮಾನರು ತಪ್ಪಿದರೆ ಮಖೆದ ಒಳಗೆ ಹಂದಿಗೆಯಿದ ಪಾತಕ' ಎನ್ನಲಾಗಿದೆ. ಮತ್ತೊಂದೆಡೆ 'ಮುಸಲಮಾನರು ಮಡಿದರೆ ಕುರನಕ್ಕೆ ತಪ್ಪಿದವರು' ಎನ್ನಲಾಗಿದೆ. ಮುಸಲ್ಮಾನ ಉಲ್ಲೇಖಗಳು ಬಂದಿರುವ ಇಂಥ ಶಾಸನಗಳ ಆಧಾರದಿಂದ ಆ ದಿನಗಳಲ್ಲಿ ವೈದಿಕರಿಗೆ–ಜೈನರಿಗೆ ಮುಸಲ್ಮಾನರಿಗೆ ಆಕ್ರಮಣದ ಭಯ ಎಷ್ಟಿತ್ತೆಂಬುದು ತಿಳಿದುಬರುತ್ತದೆ.

ಮೂರನೆಯ ಭಾಗವು 'ಶಾಪಾಶಯ ಬೆಳವಣಿಗೆ' ಎಂಬುದಾಗಿದ್ದು ಶಾಪಾಶಯಗಳಲ್ಲಿನ ಸಂಬಂಧಸೂಚಕ ವಿವರಗಳನ್ನು ನಾಲ್ಕನೆಯ ಭಾಗದಲ್ಲಿ ಗುರುತಿಸಲಾಗಿದೆ. ಉದಾಹರಣೆಗೆ ದಾನವನ್ನು ಅಪರಿಸಿದವನು ತನ್ನ ತಾಯಿಯನ್ನು ಮತ್ತು ತಂಗಿಯನ್ನು ಕೆಡಿಸಿದ ಹಾಗೆ... ಇತ್ಯಾದಿ. ಈ ಭಾಗದಲ್ಲಿ ಶಾಪಾಶಯಗಳಲ್ಲಿ ಕಂಡುಬರುವ ಸ್ಥಳ, ಪ್ರಾಣಿ, ದೈವಗಳನ್ನು ಗುರುತಿಸಲಾಗಿದೆ. ಐದನೆಯ ಭಾಗವು ಶಾಪಾಶಯ ಸಾಹಿತ್ಯ ಎಂಬುದಾಗಿದ್ದು ಶಾಪಾಶಯದ ಕೆಲವು ಮಾದರಿಗಳನ್ನು ಇಲ್ಲಿ ಕೊಡಲಾಗಿದೆ. ಆರನೆಯ ಭಾಗದಲ್ಲಿ ಶಾಪಾಶಯಗಳಲ್ಲಿ ಉಲ್ಲೇಖಿತರಾದ ಅರಸರ ವಿವರಗಳನ್ನು ಒದಗಿಸಿ, ಏಳನೆಯ ಭಾಗದಲ್ಲಿ ಇತರ ವಿವರಗಳನ್ನು ಒದಗಿಸಲಾಗಿದೆ.

ಅನುಬಂಧದಲ್ಲಿ ಸಂಸ್ಕೃತ ಶಾಪಾಶಯಗಳು ಎಂಬ ಭಾಗವನ್ನು ಜೋಡಿಸಿರುವುದು ಉಪಯುಕ್ತವಾದುದಾಗಿದೆ. ಸಂಸ್ಕೃತ ಶಾಪಾಶಯಗಳು, ಕನ್ನಡ ಶಾಪಾಶಯಗಳನ್ನು ಹೇಗೆ ರೂಪಿಸಿವೆ ಎಂಬುದು ಇಲ್ಲಿ ತಿಳಿದುಬರುತ್ತದೆ.

ಒಟ್ಟಾರೆ, ಅಲಕ್ಷಿತವಾಗಿ ಉಳಿದಿದ್ದ ಶಾಪಾಶಯಗಳ ಕುರಿತಾಗಿ ನಡೆದಿರುವ ಪ್ರತ್ಯೇಕ ಅಧ್ಯಯನ ಇದಾಗಿದೆ. ಶಾಸನಭ್ಯಾಸಿಗಳಿಗೆ ಇದು ಉತ್ತಮ ಆಕರವಾಗಬಲ್ಲುದಾಗಿದೆ.



# ಡಾ. ದೇವರಕೊಂಡಾರೆಡ್ಡಿ ಅವರ ಸಂಪಾದಿತ ಕೃತಿಗಳು
## – ಹಂಪಿ ಸಂಪುಟ ಮತ್ತು ತುಳುನಾಡಿನ ಶಾಸನಗಳು

– ಕೋ.ವೆಂ. ರಾಮಕೃಷ್ಣೇಗೌಡ*

**ಕನ್ನಡ** ಸಾಂಸ್ಕೃತಿಕ ಶ್ರೇಷ್ಠತೆಗೆ ಕಳಶಪಿಟ್ಟವರಲ್ಲಿ ಖ್ಯಾತ ಸಂಶೋಧಕರಾದ ಡಾ. ದೇವರಕೊಂಡಾರೆಡ್ಡಿ ಅವರು ಪ್ರಮುಖರಾಗುತ್ತಾರೆ. ಕನ್ನಡಿಗರ ಸಾರ್ವಭೌಮ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತು, ಶಿಕ್ಷಣ ಇಲಾಖೆ. ಕರ್ನಾಟಕದ ಗೆಜೆಟಿಯರ್ ಇಲಾಖೆ, ಹಂಪಿ ಕನ್ನಡ ವಿಶ್ವವಿದ್ಯಾಲಯಗಳಲ್ಲಿ ಸೇವೆಗೈದು ನಿವೃತ್ತರಾಗಿರುವ ಡಾ. ದೇಕೊಂರೆ, ಅವರದು ಬತ್ತದ ಕ್ರಿಯಾಶೀಲತೆ. 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎಂಬ ಗಾದೆಮಾತಿಗೆ ಅನ್ವರ್ಥವಾಗಿ ಕೀರ್ತಿ ಶಿಖರಕ್ಕೇರಿ ಇವರು ವಿರಾಜಮಾನರಾಗಿದ್ದಾರೆ. ತಮ್ಮ ಸಂಶೋಧನೆಯ ಫಲಿತವಾಗಿ ಮೂಡಿದ ಮೌಲಿಕ ಕೃತಿ ಸಂಪತ್ತನ್ನು ಕನ್ನಡ ಸಾಹಿತ್ಯ ಸಾಗರಕ್ಕೆ ಸೇರಿಸಿರುವ ಇವರು ಎಂದೂ ಪ್ರಚಾರಕ್ಕೆ ಗಂಟುಬಿದ್ದವರಲ್ಲ. ಶಾಸನ, ಸಂಶೋಧನೆ, ಸಂಸ್ಕೃತಿ ಚಿಂತನೆಯಲ್ಲಿ ಅದ್ವಿತೀಯ ಕೊಡುಗೆಯ ಮೂಲಕ ವಿಶಿಷ್ಟ ಹೆಸರುಗಳಿಸಿರುವ ಡಾ. ರೆಡ್ಡಿ ಅವರು ಹತ್ತಾರು ಉಪಯುಕ್ತ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಸಂಶೋಧನೆಗೆ ಒತ್ತು ನೀಡಿರುವ **ಹಂಪಿ ಸಂಪುಟ** ಹಾಗೂ **ತುಳುನಾಡಿನ ಜೈನ ಶಾಸನಗಳು** ಕೃತಿಗಳು ಅವುಗಳಲ್ಲಿ ಮುಖ್ಯವಾಗಿವೆ.

**ಹಂಪಿ ಸಂಪುಟವನ್ನು** ೨೦೦೬ರ ಹಂಪಿ ಉತ್ಸವದ ನೆನಪಿನಲ್ಲಿ ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿದ್ದು ೫೩೦ ಪುಟಗಳ ಬೃಹತ್ ಗ್ರಂಥವಾಗಿದೆ. ವಿಜಯನಗರ ಅರಸರ ಆಡಳಿತ ಅವಧಿಯ ಕಲೆ, ಕ್ರೀಡೆ ಮತ್ತು ಕೌಶಲವನ್ನು ಕೇಂದ್ರವಾಗುಳ್ಳ ನಲವತ್ತೈದು ಮೌಲಿಕ ಹಾಗೂ ವಿದ್ವತ್ಪೂರ್ಣ ಲೇಖನಗಳನ್ನು ಮೂರು ಭಾಗಗಳಲ್ಲಿ ಸಂಗ್ರಹಿಸಿ ಕೊಡಲಾಗಿದೆ. ವಿಜಯನಗರ ಅರಸರ ರಾಜಧಾನಿಯಾಗಿ ಮೆರೆದ ಹಂಪೆಯ ಪರಿಸರದ ಕಲೆಯನ್ನು ಕಟ್ಟಿಕೊಡುವಾಗ ಪ್ರಾಗಿತಿಹಾಸ ಕಾಲದ ಕಲೆ, ಬಿಳಿಯ ಜೇಡಿಮಣ್ಣಿನ ಗೊಂಬೆಗಳು, ಉತ್ಖನನದ ಸಂದರ್ಭದಲ್ಲಿ ದೊರೆತ ಮುದ್ರೆಗಳು, ವಿರೂಪಾಕ್ಷ ದೇವಾಲಯದಲ್ಲಿ ಕಂಡು ಬಂದಿರುವ ವರ್ಣಚಿತ್ರ ಹಾಗೂ ಭಿತ್ತಿಚಿತ್ರಗಳು, ರೇಖಾ ಹಾಗೂ ವರ್ಣಚಿತ್ರ ಕಲೆಯ ವಿಶೇಷತೆ, ಗಾರೆಶಿಲ್ಪಕಲೆ, ಶಾಸನೋಕ್ತ ಸಂಗೀತ, ನೃತ್ಯ, ಆಯುಧ ಕಲೆಗಳಿಗೆ ಪ್ರಾಧಾನ್ಯತೆ ನೀಡಿರುವ ಲೇಖನಗಳಿಗೆ ಒತ್ತು ನೀಡಲಾಗಿದೆ. ಎರಡನೆಯ ಭಾಗವಾದ 'ಕ್ರೀಡೆ'ಯಲ್ಲಿ ಕುಸ್ತಿ, ಗರಡಿ, ಬೇಟೆಹಬ್ಬ, ಬಡಿಗೆಹಬ್ಬ, ಜನಪದ ಆಟಗಳು ಸ್ಥಾನ ಪಡೆದಿವೆ. ಕಲೆಗಳು ಮತ್ತು ಜನಪದ ಪ್ರದರ್ಶನ ಕಲೆಗಳು ಲೇಖನಗಳನ್ನು 'ಕಲೆ' ಭಾಗದಲ್ಲಿ ಅಡಕಗೊಳಿಸಬಹುದಿತ್ತು. 'ಕೌಶಲ' ತಲೆ ಬರಹದ ಮೂರನೆಯ ಭಾಗದಲ್ಲಿ ವಿಜಯನಗರ ಅರಸರ ಕಾಲದ ಕೋಟೆಗಳ ರಚನೆ, ಅವುಗಳ ನಿರ್ಮಾಣಕ್ಕೆ ಆಯ್ಕೆ ಮಾಡಿಕೊಂಡ ಸ್ಥಳ, ವಿನ್ಯಾಸ, ವಿಜಯನಗರ ಪಟ್ಟಣ ಮತ್ತು ಉಪನಗರಗಳ ನಿರ್ಮಾಣ, ಆನೆಯ ಸಾಲೆ, ಪ್ರಮುಖರ ಮನೆಗಳು, ಬಜಾರುಗಳ ರಚನೆ, ದಾರಿಗಳ ನಿರ್ಮಾಣ, ಜಲಸಾರಿಗೆ ವ್ಯವಸ್ಥೆ, ನೀರಿನ ವ್ಯವಸ್ಥೆ, ಪುಷ್ಕರಣಿ ನಿರ್ಮಾಣದಲ್ಲಿ ಬಳಸಿರುವ ತಾಂತ್ರಿಕತೆ, ಜಲಕ್ರೀಡಾ ಸೌಧಗಳು, ತುಂಗಭದ್ರಾ ನದಿಗೆ ಕಟ್ಟಿದ ಅಣೆಕಟ್ಟುಗಳ ತಾಂತ್ರಿಕ ವಿವರ, ಬಾವಿ, ಕೆರೆಗಳ ನಿರ್ಮಿತಿ, ಸ್ಮಾರಕ ಶಿಲೆ ಮತ್ತು ಸಂರಕ್ಷಣೆಗೆ ಸಂಬಂಧಿಸಿದ ಪ್ರಬಂಧಗಳನ್ನು ಅಡಕಗೊಳಿಸಲಾಗಿದೆ. 'ಕೌಶಲ' ಎನ್ನುವ ಬದಲು, 'ಸಂಕೀರ್ಣ' ಎಂಬ ಹೆಸರನ್ನು ಈ ಭಾಗಕ್ಕೆ ನೀಡಿದ್ದರೆ ಹೆಚ್ಚು ಸೂಕ್ತವಾಗಿರುತ್ತಿತ್ತು. ಕೃತಿಯು ವಸ್ತು ವೈವಿಧ್ಯದಿಂದ ಕೂಡಿ ಅತ್ಯಮೂಲ್ಯ ವಿಷಯ ಸಂಗ್ರಹಗೊಂಡಿದ್ದು ಶ್ರೇಷ್ಠ ಆಕರಗ್ರಂಥವಾಗಿದೆ. ವಿಜಯನಗರ ಅರಸರು ಕೇವಲ ಆಡಳಿತಕ್ಕೆ ಒತ್ತು ನೀಡಿದವರಲ್ಲ. ಬದುಕಿನ ಸಮಗ್ರತೆಗೆ ಮಹತ್ವಕೊಟ್ಟಿದ್ದರು ಎಂಬ ಸಂಗತಿಯನ್ನು ಪ್ರತಿಪಾದಿಸುವಲ್ಲಿ ಪ್ರಸ್ತುತ ಗ್ರಂಥವು ಯಶ ಕಂಡಿದೆ. ಕನ್ನಡ ಸಂಸ್ಕೃತಿಯ ವಿವಿಧ ಮಜಲುಗಳು ಪುಟ ಪುಟಗಳಲ್ಲೂ ತೆರೆದುಕೊಳ್ಳುವುದರಿಂದ ವರ್ತಮಾನದಲ್ಲಿರುವ ನಮಗೆ ನಮ್ಮ ಪೂರ್ವಿಕರು ನಡೆಸಿದ ಜೀವನಸಾಧನೆಯ ಹೆಜ್ಜೆಗುರುತುಗಳನ್ನು ಅರಿಯುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಇಂಥ ಕಾರ್ಯವನ್ನು ಮಾಡುವಲ್ಲಿ ಸಂಶೋಧಕರು ವಹಿಸಿರುವ ಮುತುವರ್ಜಿಯು ಮೆಚ್ಚುವಂಥಾದ್ದು.

---

* ಸಂಪಾದಕರು, ಕನ್ನಡ ನುಡಿ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–೫೬೦೦೧೮.

ಡಾ॥ ದೇವರಕೊಂಡಾರೆಡ್ಡಿ ಅವರ ಸಂಪಾದಕರ ಮಾತು ವಿದ್ವತ್ಪೂರ್ಣ ಸಂಶೋಧನಾ ಲೇಖನವಾಗಿದೆ. ವಿಜಯನಗರ ಪತನಾನಂತರ ವಿರೂಪಾಕ್ಷ ದೇವಾಲಯದಲ್ಲಿ ಪೂಜಾಕಾರ್ಯ ನಿರಂತರವಾಗಿ ನಡೆಯದಿರುವುದನ್ನು ಗಮನಿಸಿದ ಛತ್ರಪತಿ ಶಿವಾಜಿಯು ಆನೆಗೊಂದಿ ಅರಸರಿಗೆ ಕೆಲವು ಮಾಗಣೆಗಳನ್ನು ಬಿಟ್ಟನೆಂದು ಡಾ. ರೆಡ್ಡಿ ಅವರು ದಾಖಲಿಸಿದ್ದಾರೆ. ಶಾಸನಗಳಲ್ಲಿ ಪಂಪಾಕ್ಷೇತ್ರ, ಪಾಪಾತೀರ್ಥ, ಪಂಪಾತಟ, ಭಾಸ್ಕರಕ್ಷೇತ್ರ, ಹಂಪೆ ಎಂಬ ಹೆಸರುಗಳು ಉಕ್ತವಾಗಿರುವುದನ್ನು ಉಲ್ಲೇಖಿಸುತ್ತ ಶತಮಾನಗಳಿಂದಲೂ ಹಂಪೆಯೊಡನೆ ಸಾಮಾನ್ಯ ಜನ ಹೊಂದಿರುವ ಭಾವನಾತ್ಮಕ ಸಂಬಂಧವನ್ನು ಗುರುತಿಸಿದ್ದಾರೆ. ಪುರಾಣ ಕಾಲದಲ್ಲಿ 'ಕಿಷ್ಕಿಂಧೆ' ಹೆಸರನ್ನು ಪಡೆದು ಮೂವತ್ತ ಮೂರು ದೇವತೆಗಳ ಸ್ಥಾನವಾಗಿದ್ದ ಶಾಸನ ಉಲ್ಲೇಖವನ್ನು ನೀಡಿರುವುದಲ್ಲದೆ ಹಂಪೆಯು ಪ್ರಾಗೈತಿಹಾಸಿಕ ಮಾನವನ ನೆಲೆಯಾಗಿದ್ದ ಅಂಶಕ್ಕೆ ಪುರಾವೆಗಳನ್ನು ನೀಡಿದ್ದಾರೆ. ಹಂಪೆಯು ಧಾರ್ಮಿಕ, ಸಾಹಿತ್ಯಿಕ, ರಾಜಕೀಯ ಕಾರಣಗಳಿಂದ ಹೇಗೆ ತನ್ನ ಮಹತ್ವವನ್ನು ಹೆಚ್ಚುಮಾಡಿಕೊಂಡಿತು ಎಂಬುದನ್ನು ಸ್ಥೂಲವಾಗಿ ಕೊಟ್ಟಿರುವ ಸಂಪಾದಕರು 'ಪಂಪಾ' ಎಂಬ ಪದವು ದ್ರಾವಿಡ ಭಾಷಾ ಮೂಲದ್ದೆಂದು ಗುರುತಿಸಿದ್ದಾರೆ. ಜಾನಪದೀಯ ನಂಬಿಕೆಗಳು ಈ ಪರಿಸರದಲ್ಲಿ ಹೇಗೆ ಮಹತ್ವವನ್ನು ಪಡೆದು, ಈಗಲೂ ಮುಂದುವರಿದುಕೊಂಡು ಬರುತ್ತಿವೆ, ಪೌರಾಣಿಕ ಸಂಗತಿಗಳೊಡನೆ ಇಲ್ಲದ ಜನ ಹೇಗೆ ಭಾವನಾತ್ಮಕ ಸಂಬಂಧವನ್ನು ಪ್ರಾಚೀನಕಾಲದಲ್ಲಿ ಹೊಂದಿದ್ದರು ಎಂಬುದಕ್ಕೆ ಕುರುಹುಗಳನ್ನು ನೀಡಿರುವುದು, ಮಧ್ಯಕಾಲೀನ ಸಂದರ್ಭದ ಹೆಸರಾಂತ ಸಾಹಿತಿಗಳು ತಮ್ಮ ಸಾಹಿತ್ಯದ ಮೂಲಕ ಹಂಪೆಯ ಹೆಸರನ್ನು ಹೇಗೆ ಚಿರಸ್ಥಾಯಿಗೊಳಿಸಿದರು ಎಂಬುದನ್ನು ಸಮರ್ಥವಾಗಿ ನಿರೂಪಿಸಿದ್ದಾರೆ. ಗ್ರಂಥದ ಕೊನೆಯಲ್ಲಿ ನೀಡಿರುವ ಛಾಯಾಚಿತ್ರಗಳು ಕೃತಿಯ ಮಹತ್ವವನ್ನು ಇಮ್ಮಡಿಗೊಳಿಸಿದೆ.

ಡಾ. ಜಯಪ್ರಕಾಶ ಮಾವಿನಕುಳಿ ಅವರೊಡನೆ ಸೇರಿ ಸಂಪಾದಿಸಿರುವ **'ತುಳುನಾಡಿನ ಜೈನ ಶಾಸನಗಳು'** ಕೃತಿಯನ್ನೂ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ. ನೂರೈವತ್ತು ಪುಟಗಳ ಈ ಕೃತಿಯಲ್ಲಿ ವಿವಿಧ ಲೇಖಕರ ಹದಿಮೂರು ಸಂಶೋಧನ ಬರಹಗಳು ಸೇರಿವೆ. ವಾಸ್ತವದಲ್ಲಿ ಈ ಕೃತಿಯಲ್ಲಿರುವ ಲೇಖನಗಳು ವಿಚಾರ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳಾಗಿವೆ. ಇವೆಲ್ಲವೂ ಶಾಸನಗಳನ್ನು ಆಧರಿಸಿ ಸಿದ್ಧಪಡಿಸಿದವಾಗಿವೆ. ತುಳುನಾಡಿನ ಜೈನ ಶಾಸನದ ಆಕರಗಳ ಅಧ್ಯಯನ, ಶಾಸನಗಳ ಅಧ್ಯಯನದ ಇತಿಹಾಸ, ಜೈನ ಶಾಸನಗಳ ವೈವಿಧ್ಯತೆ, ದಾನ ಶಾಸನಗಳ ಮಹತ್ವ, ನಿಸಿಧಿ ಶಾಸನಗಳ ಪ್ರಾಮುಖ್ಯತೆ, ಜೈನ ಬಸದಿಗಳ ರಚನೆ, ವಾಸ್ತುಶಿಲ್ಪ, ಮೂರ್ತಿಶಿಲ್ಪ, ಜೈನ ಶಾಸನಗಳ ಸಾಹಿತ್ಯ, ಜೈನ ಮಠಗಳು ಮೊದಲಾದ ವಸ್ತುಗಳನ್ನು ಒಳಗೊಂಡಿವೆ. ವಿದೇಶ ಹಾಗೂ ದೇಶೀಯ ಸಂಶೋಧಕರು ತುಳುನಾಡಿನ ಸಂಸ್ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸಿರುವ ಕ್ರಮವನ್ನು ಕೃತಿಯು ಪರಿಚಯ ಮಾಡಿಕೊಡುತ್ತದೆ. ತುಳುನಾಡನ್ನು ಕೇಂದ್ರವಾಗಿಸಿಕೊಂಡು ನಡೆದಿರುವ ಈ ಅಧ್ಯಯನದ ಫಲಶ್ರುತಿಯು ಪರೋಕ್ಷವಾಗಿ ಕನ್ನಡನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಪುನರ್ ರಚಿಸುವಲ್ಲಿ ಸಹಕಾರಿಯಾಗಲಿದೆ ಎಂದು ಹೇಳಬಹುದು. ಆದರೆ ಕೃತಿಯ ಹೆಸರಿಗೂ ಒಳಗಿನ ಹೂರಣಕ್ಕೂ ತಾಳೆಯಾಗದಿರುವದನ್ನು ಕಾಣಬಹುದು. ಕೃತಿಯ ಹೆಸರು 'ತುಳುನಾಡಿನ ಜೈನ ಶಾಸನಗಳ ಅಧ್ಯಯನ' ಎಂದಿದ್ದರೆ ಸೂಕ್ತವಾಗಿರುತ್ತಿತ್ತು. ಹಾಗೆಯೇ 'ಶಾಸನಗಳು' ತಲೆಬರಹ ಹೊತ್ತ ಪುಸ್ತಕದಲ್ಲಿ ಹಸ್ತಪ್ರತಿ ಭಂಡಾರ, ಸಾಹಿತ್ಯ, ಮಠಗಳನ್ನು ಕುರಿತ ಪ್ರಬಂಧಗಳಿರುವುದರಿಂದ ಭಿನ್ನ ವಿಷಯಗಳ ಸೇರ್ಪಡೆಯಾಗಿರುವುದನ್ನು ಗುರುತಿಸಬಹುದಾಗಿದೆ. ಇದು ಕೃತಿಯ ದೊಡ್ಡ ದೋಷವಲ್ಲವಾದರೂ ಇಂಥ ಸೂಕ್ಷ್ಮಸಂಗತಿಗಳು ಅಧ್ಯಯನದ ಶಿಸ್ತಿಗೆ ಒಳಪಡುತ್ತವೆ. ಸಂಪಾದಕರು ತಮ್ಮ ಕಾರ್ಯವನ್ನು ಶ್ರದ್ಧೆಯಿಂದ ನಿರ್ವಹಿಸಿರುವುದು ಶ್ಲಾಘನೀಯ. ಕೃತಿಯಲ್ಲಿರುವ ಪ್ರತಿ ಪ್ರಬಂಧವೂ ತಲಸ್ಪರ್ಶಿ ಅಧ್ಯಯನಕ್ಕೆ ಒಳಪಟ್ಟಿರುವುದರಿಂದ ಮುಂದೆ ಈ ಬಗ್ಗೆ ಅಧ್ಯಯನ ಕೈಗೊಳ್ಳುವವರಿಗೆ ಆಕರ ಸಾಮಗ್ರಿಯನ್ನು ಒದಗಿಸುತ್ತವೆ. ಕನ್ನಡ ವಿಶ್ವವಿದ್ಯಾಲಯ ಹಾಗೂ ಮೂಡಬಿದಿರೆಯ ಮಹಾವೀರ ಜೈನ ಕಾಲೇಜಿನ ಜೈನ ಅಧ್ಯಯನ ಕೇಂದ್ರ ಸಂಯುಕ್ತವಾಗಿ ಈ ಮಹತ್ವದ ಕಾರ್ಯವನ್ನು ಮಾಡಿರುವುದು ಇತರರಿಗೆ ಮಾದರಿಯಾಗಿದೆ. ಹಿತಮಿತ ಮೃದು ವಚನಕ್ಕೆ ಹೆಸರಾದ ಡಾ॥ ದೇವರಕೊಂಡಾರೆಡ್ಡಿ ಅವರ ಮುಂದಾಳುತನದಲ್ಲಿ ಬಂದಿರುವ ಮೇಲಿನ ಎರಡೂ ಗ್ರಂಥಗಳು ನಾಡಿನ ಸಂಸ್ಕೃತಿಯನ್ನು ಕಟ್ಟಿಕೊಡುವ ಪ್ರಯತ್ನದಲ್ಲಿ ಯಶಸ್ವಿಯಾಗಿವೆ. ಯಾವ ಪಂಥವನ್ನೂ ಕಟ್ಟಿಕೊಳ್ಳದೆ ತಮ್ಮದೇ ಆದ ವ್ಯಕ್ತಿತ್ವವನ್ನು ಕಾಯಕದ ಮೂಲಕ ಛಾಪಿಸುತ್ತಿರುವ ಡಾ॥ ದೇ.ಕೊಂ.ರೆಡ್ಡಿ ಅವರ ವಿದ್ವತ್ತು ಹಲವು ಬಗೆಯಲ್ಲಿ ಕನ್ನಡ ನಾಡಿಗೆ ಪರಿಚಿತವಾಗಿದೆ. ಸಂಪಾದಿತ ಕೃತಿಗಳಲ್ಲೂ ಅದು ಪ್ರಕಟಗೊಂಡಿದೆ ಎಂದು ಹೇಳಬಹುದು.

# ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು

– ಡಾ॥ ಕೆ.ಆರ್. ಗಣೇಶ*

ಬಿ.ಎಲ್. ರೈಸ್, ಆರ್. ನರಸಿಂಹಾಚಾರ್ಯ, ಎಂ.ಎಚ್. ಕೃಷ್ಣ, ಪಿ.ಬಿ. ದೇಸಾಯಿ, ಬಾ.ರಾ. ಗೋಪಾಲ್, ಕೆ.ವಿ. ರಮೇಶ್ ಮೊದಲಾದ ಮಹನೀಯರು ಶಾಸನಗಳನ್ನು ಸಂಪಾದಿಸಿ ಪ್ರಕಟಿಸುತ್ತಾ ಬಂದದ್ದರಿಂದ ಪ್ರಾಚೀನ ಕರ್ನಾಟಕದ ಶಾಸನಗಳು ವಿವಿಧ ಸಂಪುಟಗಳಲ್ಲಿ ಬೆಳಕು ಕಾಣುವಂತಾಯಿತು. ಹಳೆಯ ಮೈಸೂರು ಪ್ರಾಂತ್ಯದ ಶಾಸನಗಳು ಎಪಿಗ್ರಾಫಿಯಾ ಕರ್ನಾಟಿಕ ಮಾಲಿಕೆಯಲ್ಲಿ ಪ್ರಕಟವಾದ ಮೇಲೆ ಅವುಗಳ ಪರಿಷ್ಕೃತ ಮುದ್ರಣಗಳೂ ಹೊರಬರುತ್ತಿವೆ. ಆದರೆ ಮುಂಬೈ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ್ದ ಕರ್ನಾಟಕದ ಶಾಸನಗಳು ಒಂದು ಕಡೆ ಸಿಗದಂತಾಗಿದ್ದವು. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳಲ್ಲಿ ಪ್ರಕಟವಾಗಿದ್ದವು ಹಾಗೂ ಹೈದರಾಬಾದ್ ಆರ್ಕಿಯಲಾಜಿಕಲ್ ಸೀರೀಸ್ ಮಾಲಿಕೆಯಲ್ಲಿ ಪ್ರಕಟವಾದವುಗಳನ್ನು ಹೊರತು ಪಡಿಸಿ ಶಾಸನ ಸಂಪುಟಗಳು ಪ್ರಕಟವಾಗಲೇ ಇಲ್ಲ. ಕರ್ನಾಟಕ ಪ್ರಾಚ್ಯವಸ್ತು ಇಲಾಖೆಯಿಂದ ಬಳ್ಳಾರಿ ಜಿಲ್ಲೆಯ ಶಾಸನಗಳ ಸಾರಾಂಶವನ್ನು ಮಾತ್ರ ಒಳಗೊಂಡಿರುವ ಸಂಪುಟ ಪ್ರಕಟವಾಗಿದ್ದು ಈ ದಿಸೆಯಲ್ಲಿ ನಡೆದ ಮೊದಲ ಪ್ರಯತ್ನ ಎನ್ನಬಹುದು. ಗಂಗ ಮನೆತನದ ಶಾಸನಗಳ ಸಂಪುಟ, ಕದಂಬರ ಶಾಸನಗಳ ಸಂಪುಟಗಳು ವಿದ್ವಾಂಸರ ಸಾಹಸದಿಂದ ಹೊರಬಂದವು.

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದವರು, ಶಾಸನ ಸಂಪುಟ ಮಾಲೆಯಲ್ಲಿ ವಿವಿಧ ವಿದ್ವಾಂಸರ ಸಹಾಯದಿಂದ, ಎಪಿಗ್ರಾಫಿಯಾ ಕರ್ನಾಟಿಕ ಮಾಲೆಯಲ್ಲಿ ಹೊರಬರದಿರುವ ಕರ್ನಾಟಕದ ಜಿಲ್ಲೆಗಳ ಶಾಸನಗಳ ಸಂಪುಟಗಳ ಮಾದರಿಯಲ್ಲಿ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳನ್ನು ಪ್ರಕಟಿಸುವ ಕಾರ್ಯವನ್ನು ಕೈಗೊಂಡಿರು. ಕ್ಷೇತ್ರಕಾರ್ಯಗಳನ್ನು ಕೈಗೊಂಡು, ಆಮೂಲಾಗ್ರವಾಗಿ ಪ್ರದೇಶಗಳನ್ನು ಪರಿಶೀಲಿಸಿ, ಶಾಸನಗಳ ಪಡಿಯಚ್ಚುಗಳನ್ನು ತೆಗೆದುಕೊಂಡು ಬಂದು, ಈಗಾಗಲೇ ಪ್ರಕಟವಾಗಿರುವುದರಲ್ಲಿ ಕಂಡುಬರುವ ಅಪಪಾಠಗಳನ್ನು ಸರಿಪಡಿಸಿ ಮುದ್ರಿಸುವ ಕೆಲಸವನ್ನು ಕೈಗೊಳ್ಳಲಾಯಿತು. ಆ ಕಾರ್ಯದ ನೇತಾರರಾಗಿ ಸಂಪುಟಗಳನ್ನು ಪ್ರಕಟಿಸುವ ಕೆಲಸವನ್ನು ಮಾಡಿದವರು ಡಾ॥ ದೇವರಕೊಂಡಾರೆಡ್ಡಿ. ಶಾಸನದ ವಿಭಾಗದ ಮುಖ್ಯಸ್ಥರಾಗಿದ್ದ ಇವರು ಒಟ್ಟು ಒಂಬತ್ತು ಸಂಪುಟಗಳನ್ನು ಹೊರತಂದಿದ್ದಾರೆ. ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ – ಎಂದರೆ ಕರ್ನಾಟಕದ ಹೊರಗಡೆಯಿರುವ ಕನ್ನಡ ಶಾಸನಗಳನ್ನು, ಕನ್ನಡ ವಿಶ್ವವಿದ್ಯಾಲಯದ ಹೊರಗಿನ ವಿದ್ವಾಂಸರು ಸಂಪಾದಿಸಿದ್ದಾರೆ.

ದೇವರಕೊಂಡಾರೆಡ್ಡಿಯವರು ಸಂಪಾದಿಸಿರುವ ಶಾಸನ ಸಂಪುಟಗಳು ಹೀಗಿವೆ :

| | | | |
|---|---|---|---|
| ಸಂಪುಟ ೧ | ಬಳ್ಳಾರಿ ಜಿಲ್ಲೆ | ೬೩೫ | ಶಾಸನಗಳು |
| ಸಂಪುಟ ೨ | ಕೊಪ್ಪಳ ಜಿಲ್ಲೆ | ೩೭೮ | ಶಾಸನಗಳು |
| ಸಂಪುಟ ೩ | ಹಂಪಿಯ ಶಾಸನಗಳು | ೩೯೯ | ಶಾಸನಗಳು |
| ಸಂಪುಟ ೪ | ತಮಿಳುನಾಡಿನ ಕನ್ನಡ ಶಾಸನಗಳು | (ಸಂ) | ಡಾ. ಬಾ.ರಾ. ಗೋಪಾಲ್ |
| | | | ಡಾ. ಎಚ್.ಎಸ್. ಗೋಪಾಲರಾಯ |
| | | | ಡಾ. ಪಿ.ವಿ. ಕೃಷ್ಣಮೂರ್ತಿ |
| ಸಂಪುಟ ೫ | ಆಂಧ್ರಪ್ರದೇಶದ ಕನ್ನಡ ಶಾಸನಗಳು | (ಸಂ) | ಡಾ. ಕೆ.ಆರ್. ಗಣೇಶ್ |
| | | | ಡಾ. ಆರ್. ಶೇಷಶಾಸ್ತ್ರಿ |
| ಸಂಪುಟ ೬ | ಮಹಾರಾಷ್ಟ್ರದ ಕನ್ನಡ ಶಾಸನಗಳು | (ಸಂ) | ಡಾ. ದೇವರಕೊಂಡಾರೆಡ್ಡಿ |
| | | | ಡಾ. ಜಿ.ಎನ್. ಉಪಾಧ್ಯ |
| ಸಂಪುಟ ೭ | ರಾಯಚೂರು ಜಿಲ್ಲೆ | ೪೧೮ | ಶಾಸನಗಳು |

* ನಂ.೨೦/೧, ೪ನೆಯ ಅಡ್ಡರಸ್ತೆ, ಮಾಗಡಿ ರಸ್ತೆ, ಬೆಂಗಳೂರು-೫೬೦೦೨೩.

| | | | |
|---|---|---|---|
| ಸಂಪುಟ ೮ | ಬೀದರ್ ಜಿಲ್ಲೆ | ಸಂ. | ಡಾ. ಹನುಮಾಕ್ಷಿ ಗೋಗಿ |
| ಸಂಪುಟ ೯ | ಬಾಗಲಕೋಟೆ ಜಿಲ್ಲೆ | ಸಂ. | ಡಾ. ಕೆ.ಜಿ. ಭಟ್‌ಸೂರಿ |
| | | | ಡಾ. ಕಲವೀರ ಮನ್ವಾಚಾರ್ |
| | | | ಡಾ. ಡಿ.ವಿ. ಪರಮಶಿವಮೂರ್ತಿ |

ದೇವರಕೊಂಡಾರೆಡ್ಡಿಯವರು ೧, ೨, ೩, ೭ ಸಂಪುಟಗಳನ್ನು ವಿಭಾಗದ ಸಹ ಸಂಪಾದಕರೊಂದಿಗೆ ಸಂಪಾದಿಸಿದ್ದಾರೆ. ಈ ಎಲ್ಲ ಸಂಪುಟಗಳಲ್ಲಿ ರೆಡ್ಡಿಯವರು ಶಾಸನಗಳನ್ನು ಮುದ್ರಿಸುವ ಕ್ರಮ ಎಪಿಗ್ರಾಫಿಯಾ ಕರ್ನಾಟಿಕದ ಮಾದರಿಯದು. ಒಂದು ಸಾವಿರ ಸಂಖ್ಯೆಗಿಂತ ಹೆಚ್ಚು ಹೊಸ ಶಾಸನಗಳನ್ನು ಬೆಳಕಿಗೆ ತಂದಿರುವ ರೆಡ್ಡಿಯವರು, ಪ್ರತಿಯೊಂದು ಶಾಸನಕ್ಕೂ ಕನ್ನಡ ಮತ್ತು ಇಂಗ್ಲಿಷ್ ಎರಡರಲ್ಲೂ ಟಿಪ್ಪಣಿಗಳನ್ನು ನೀಡಿದ್ದಾರೆ. ಪ್ರತಿಯೊಂದು ಸಂಪುಟದಲ್ಲೂ ವಿಸ್ತಾರವಾದ ಪ್ರಸ್ತಾವನೆಗಳು ಎರಡೂ ಭಾಷೆಗಳಲ್ಲಿವೆ. ಸಂಕೇತ ಸೂಚಿ, ಗ್ರಾಮ ಮತ್ತು ಶಾಸನ ಸಂಖ್ಯಾಸೂಚಿ, ರಾಜವಂಶೀಯ ಪಟ್ಟಿಗಳನ್ನು ಅಚ್ಚುಕಟ್ಟಾಗಿ ನೀಡಲಾಗಿದೆ.

ರೆಡ್ಡಿಯವರು ಮಾಡಿದ ಒಂದು ದೊಡ್ಡ ಮಹತ್ವದ ಕೆಲಸ ಎಂದರೆ ಪ್ರಸ್ತಾವನೆಗಳಲ್ಲಿ ಅವರು ನಿರೂಪಿಸಿರುವ ಸಣ್ಣಮಟ್ಟ ರಾಜಮನೆತನಗಳ ಇತಿಹಾಸ, ಮಹಾಬಲಿ ವಂಶೀಯರು, ಗುತ್ತಿ ವಂಶೀಯರು, ಕೊಟ್ಟೂರಿನ ಕದಂಬರು, ಪಾಳೆಯಗಾರರು, ಕರಡಿಕಲ್ಲಿನ ಕದಂಬರು, ಅಹಿಹಯರು (ಹೈಹಯರು), ಬಾಗಡಗೆಯ ಸಿಂಧರು – ಮೊದಲಾದ ಕಿರಿಯ ರಾಜವಂಶಗಳ ಇತಿಹಾಸ ರಚನೆಗೆ ರೆಡ್ಡಿಯವರು ನೀಡಿರುವ ವಿವರಣೆಗಳು ಅಪೂರ್ವ ದಾಖಲೆಗಳಾಗಿವೆ.

ಪ್ರಸ್ತಾವನೆಗಳಲ್ಲಿ ಬಂದಿರುವ ಬಾಗಲಕೋಟೆಯ 'ಭಾವನ ಗಂಧವಾರಣ'ನ ಕೆಲಸಗಳು, ಬೀದರ್ ಜಿಲ್ಲೆಯ ಕಲ್ಯಾಣದ ಗೋಷ್ಠಿ, ರಾಯಚೂರು ಜಿಲ್ಲೆಯ ಸಕಳೇಶ್ವರ ಮಾದರಸ, ಬಳ್ಳಾರಿ ಜಿಲ್ಲೆಯ ಕವಿ ಹರಿಹರನ ವಿಚಾರ – ರೆಡ್ಡಿ ಶಾಸನಗಳನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸುತ್ತಾರೆ ಎಂಬುದಕ್ಕೆ ಸಾಕ್ಷಿಗಳಾಗಿವೆ.

ಪ್ರಸ್ತಾವನೆಯ ಇಂಗ್ಲಿಷ್ ಭಾಗದಲ್ಲಿ Diacritic Mark ಗಳನ್ನು ಬಳಸದೇ ಇರುವುದೇ ಒಂದು ದೊಡ್ಡ ಕೊರತೆ ಎನಿಸುತ್ತದೆ. ಆಯಾ ಸಂಪುಟಗಳ ಕೊನೆಯಲ್ಲಿ ಕೊಟ್ಟಿರುವ ಶಾಸನಗಳ ಪಡಿಯಚ್ಚುಗಳು, ಛಾಯಾಚಿತ್ರಗಳು ರೆಡ್ಡಿಯವರ ಶಾಸನ ಅಧ್ಯಯನಕ್ಕೆ ಅಧಿಕೃತ ಮುದ್ರೆಯನ್ನು ಒತ್ತುತ್ತವೆ.

ಶಾಸನಗಳಲ್ಲಿ ಉಕ್ತವಾಗಿರುವ ಕಾಲಗಳ ಬಗ್ಗೆ ರೆಡ್ಡಿಯವರು ಏಕೋ ಹೆಚ್ಚಾಗಿ ಬರೆದಿಲ್ಲ. ಶಾಸನ ಪಾಠಗಳನ್ನು ಕೊಡುವಾಗ ಎಪಿಗ್ರಾಫಿಯಾ ಇಂಡಿಕಾ ಅಥವಾ ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂಪುಟಗಳಲ್ಲಿ ಒಂದು ಕ್ರಮವನ್ನು ಅನುಸರಿಸುತ್ತಿದ್ದರು. ಶಾಸನ ಪಾಠದಲ್ಲಿ ಅಕ್ಷರ ದೋಷವಿದ್ದರೆ, ದೋಷಪೂರಿತ ಅಕ್ಷರವನ್ನು ಕೊಟ್ಟು ಪಕ್ಕದಲ್ಲಿ ಸಣ್ಣಕಂಸಗಳಲ್ಲಿ ಶುದ್ಧ ಅಕ್ಷರವನ್ನು ನೀಡುತ್ತಿದ್ದರು. ಉದಾಹರಣೆಗೆ **ಸ(ಶ)ಕ ನ್ರಿ(ನೃ)ಪ ಕಾಲಾತೀತ ಸಂವಛ(ತ್ಸ)ರ** – ರೆಡ್ಡಿಯವರು ಶಾಸನದಲ್ಲಿರುವ ಪಾಠವನ್ನು ಮಾತ್ರ ನೀಡಿ, ಅದರ ದೇಸೀ ಗುಣವನ್ನು ಹಾಗೆ ಉಳಿಸುತ್ತಾರೆ. ಪಾಠಗಳನ್ನು ಊಹಿಸುವಾಗ ದೊಡ್ಡ ಕಂಸಗಳ ನಡುವೆ ತೋರಿಸುತ್ತಾರೆ. ಗ್ರಂಥ ಸಂಪಾದನೆಯ ತತ್ವವನ್ನು ಆದಷ್ಟೂ ಅನುಸರಿಸಿದ್ದಾರೆ.

ಬಳ್ಳಾರಿ ಜಿಲ್ಲೆಯ ಸಂಪುಟದಲ್ಲಿ ಮಾತ್ರ ಶಾಸನ ಸಿಕ್ಕಿರುವ ಸ್ಥಳದ ವಿವರಗಳನ್ನು ಇಂಗ್ಲಿಷ್‌ನಲ್ಲಿ ಕೊಟ್ಟಿಲ್ಲ. ಉಳಿದ ಸಂಪುಟಗಳಲ್ಲಿ ಆ ಕೊರತೆಯನ್ನು ನೀಗಿಸಿ ಇಂಗ್ಲಿಷ್ ಕನ್ನಡಗಳೆರಡರಲ್ಲೂ ಸ್ಥಳ ಸೂಚನೆಗಳನ್ನು ನೀಡಲಾಗಿದೆ. ನೂರಾರು ಶಾಸನಗಳ ಪಾಠವನ್ನು ಪರಿಶೀಲಿಸಿ, ಅವುಗಳ ಪರಿಷ್ಕೃತ ಪಾಠಗಳನ್ನು ರೆಡ್ಡಿ ನೀಡಿದ್ದಾರೆ. ಅವುಗಳಲ್ಲಿ ಅತ್ಯಂತ ಮಹತ್ವದ್ದು ಮಹಾಕೂಟದ ವಿನಾಪೊಡಿಯ ಶಾಸನ. ಕೊಪ್ಪಳ ಜಿಲ್ಲೆಯ ಶಾಸನ ಸಂಪುಟದಲ್ಲಿ ಕೊಪ್ಪಳ ಜಿಲ್ಲೆಯ ಜೈನ ಧರ್ಮದ ಬಗ್ಗೆ ರೆಡ್ಡಿಯವರು ನೀಡಿರುವ ವಿಸ್ತಾರವಾದ ವಿವರಣೆಯಂತೂ ಸೊಗಸಾಗಿದೆ. ಅಧ್ಯಯನ ಮಾಡುವವರಿಗೆ ಅದು ಮೂಲ ಆಕರವಾಗುತ್ತದೆ.

ಸಹ ಸಂಪಾದಕರೊಂದಿಗೆ ರೆಡ್ಡಿಯವರು ಸೇರಿ ಮಾಡಿರುವ ಈ ಶಾಸನ ಸಂಪುಟಗಳ ಸಂಪಾದನೆ, ಪ್ರತಿಷ್ಠಿತ ಉಳಿದ ವಿಶ್ವವಿದ್ಯಾಲಯಗಳ ಕೈಯಲ್ಲಿ ಮಾಡಲು ಸಾಧ್ಯವಾಗಿರಲಿಲ್ಲ ಅಥವಾ ಮಾಡಿದರೂ ಅರ್ಧ ಶತಮಾನ ಕಳೆದರೂ ಮುಗಿಯದ ಕಥೆಯಾಗುತ್ತಿದೆ. ಹೀಗಿರುವಾಗ ರೆಡ್ಡಿ ಹಾಕಿಕೊಟ್ಟ ಈ ದಾರಿಯಲ್ಲಿ ಹಂಪಿಯ ವಿಶ್ವವಿದ್ಯಾಲಯ ಮಾತ್ರವಲ್ಲ ಉಳಿದ ಎಲ್ಲ ವಿಶ್ವವಿದ್ಯಾಲಯಗಳು ನಡೆದು, ನಾಡಿನ ಸಾಂಸ್ಕೃತಿಕ ಮುಖವೊಂದರ ಬೆಳಕಿಗೆ ಕಾರಣವಾಗಬೇಕಾಗಿದೆ.

卐卐卐

# ಡಾ॥ ದೇವರಕೊಂಡಾರೆಡ್ಡಿಯವರ ಬಿಡಿಲೇಖನಗಳು – ವೈವಿಧ್ಯ–ವೈದುಷ್ಯ

– ಡಾ॥ ಬೆಂ.ಶಾ. ಶ್ಯಾಮಲಾ ರತ್ನಕುಮಾರಿ*

**ಡಾ॥** ದೇವರಕೊಂಡಾರೆಡ್ಡಿಯವರು ಕರ್ನಾಟಕದ ಖ್ಯಾತ ಶಾಸನತಜ್ಞರು, ನಿಷ್ಠ ಸಂಶೋಧಕರು, ಭಾಷೆ–ಲಿಪಿಗಳಲ್ಲಿ ಪರಿಣತರು ಹಾಗೂ ಪ್ರತಿಭಾಸಂಪನ್ನರು. ಇವರು ಬರೆದ ನೂರಾರು ವಿದ್ವತ್ಪೂರ್ಣ ಲೇಖನಗಳು ಹಲವಾರು ಸಂಶೋಧನ ಪತ್ರಿಕೆಗಳಲ್ಲಿ, ಅಭಿನಂದನ, ಸಂಸ್ಮರಣ, ಸಂಭಾವನಾ ಗ್ರಂಥಗಳಲ್ಲಿ ಪ್ರಕಟವಾಗಿವೆ. ವಿದ್ವಾಂಸರ ಮತ್ತು ಓದುಗರ ಮೆಚ್ಚುಗೆಗೆ ಪಾತ್ರವಾಗಿವೆ. ಅವುಗಳು 'ಇತಿಹಾಸ ದರ್ಶನ', 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಾಧನೆ, ಮಾನವಿಕ ಕರ್ನಾಟಕ, ಆಸ್ವಾದ, ಸಂಶೋಧನ, ಹರತಿಸಿರಿ, ಸೂರ್ಯಕೀರ್ತಿ, ನಾಗಾಭಿನಂದನ ಮುಂತಾದ ಸಂಸ್ಮರಣ ಗ್ರಂಥಗಳಲ್ಲಿ, ಕರ್ನಾಟಕ ಜಿಲ್ಲಾ ಪುರಾತತ್ತ್ವ ಮತ್ತು ಇತಿಹಾಸ ಸಂಪುಟಗಳಲ್ಲಿ ಪ್ರಕಟವಾಗಿರುವ ಅವರ ಬಿಡಿ ಲೇಖನಗಳಲ್ಲಿ ಬಿಂಬಿತವಾಗಿರುವ ವೈವಿಧ್ಯ ಮತ್ತು ವೈದುಷ್ಯಗಳನ್ನು ಕುರಿತಂತೆ ಇಲ್ಲಿ ವಿವೇಚಿಸಲಾಗಿದೆ.

ಸತ್ಯವಾಕ್ಯನ ಹಿರೇಕಾಟಿ ಶಾಸನದ ಕಾಲವನ್ನು ಲಿಪಿಯ ಆಧಾರದ ಮೇಲೆ ಕ್ರಿ.ಶ. ೯೬೫ ಎಂದೂ ಶಾಸನೋಕ್ತ ಬೆಟ್ಟಮಹಾದೇವರು ಈಗಿನ ಚಂದ್ರಶೇಖರ ದೇವಾಲಯ ಎಂದೂ, 'ನರಗ ಮತ್ತು ಕಾರೇನಾಡು ಎಪ್ಪತ್ತು ನಾಚಿಗ್ಗಾಮುಂಡ ಸಾಕ್ಷಿ' ಎಂದು ಶಾಸನದಲ್ಲಿ ಉಲ್ಲೇಖವಿರುವುದರಿಂದ 'ನರಗ' ಎಂಬುದು ಪುರುಷವಾಚಿ, ರಾಜ ಎಂಬ ಅರ್ಥಕೊಡುವ ಶಬ್ದ ಆದುದರಿಂದ ನರಗ ಎಂದರೆ ಗಂಗ ಸತ್ಯವಾಕ್ಯ ಪೆರ್ಮಾನಡಿ ಎಂದು ಲೇಖಕರು ಶಾಸನದ ಕಾಲವನ್ನು 'ನರಗ' ಶಬ್ದದ ಗಂಗರಾಜಾನ್ವಯವನ್ನು ನಿರ್ಧರಿಸಿಕೊಟ್ಟಿದ್ದಾರೆ.

ದೊಡ್ಡ ಬೇಗೂರಿನ ನಾಗತ್ತರನ ಶಾಸನದ ಕಾಲವನ್ನು ಕ್ರಿ.ಶ. ೮೯೦ ಎಂದು ನಿರ್ಧರಿಸಿದ್ದಾರೆ. ಈ ಕಾಲ ನಿರ್ದೇಶನಕ್ಕೆ ಆಧಾರವಾಗಿ ಬೆಂಗಳೂರು ಪುರಾತತ್ತ್ವ ವಸ್ತುಸಂಗ್ರಹಾಲಯದಲ್ಲಿರುವ ಬೇಗೂರು ಶಾಸನದಲ್ಲಿ ನಾಗತ್ತರನು ಸತ್ತ ಉಲ್ಲೇಖವಿರುವುದರಿಂದ ಇದು ಅವನ ಕೊನೆಯ ಶಾಸನವೆಂದು ಪರಿಗಣಿಸಿ ಶಾಸನದ ಕಾಲವನ್ನು ಕ್ರಿ.ಶ. ೯೦೦ ಎಂದು ನಿರ್ಧರಿಸಿದರೆ ಲೇಖನದಲ್ಲಿ ಪ್ರಸ್ತಾಪಿಸಿರುವ ಶಾಸನದಲ್ಲಿ ನಾಗತ್ತರನು ಬೀರವರ್ಮನನ್ನು ಸೋಲಿಸಿದ ನಂತರ ದೇವಾಲಯವನ್ನು ಕಟ್ಟಿಸಿದ ಉಲ್ಲೇಖವಿರುವುದರಿಂದ ಎಂದು ಸಮರ್ಥನೆ ನೀಡಿದ್ದಾರೆ ಹಾಗೂ ಶಾಸನದಲ್ಲಿ ನಾಗತ್ತರನನ್ನು ನನ್ನಿಪೆರ್ಬಾಣ ಎಂದು ಕರೆದಿರುವುದರಿಂದ ಬಹುಶಃ ನಾಗತ್ತರನು ಬಾಣ ವಂಶದವನಾಗಿದ್ದು ಅಲ್ಲಲ್ಲಿ ಗಂಗರ ಅಧಿಕಾರಿಗಳಾಗಿದ್ದ ಇತರ ಬಾಣ ವಂಶಸ್ಥರಂತೆ ಗಂಗರ ಆಳ್ವಿಕೆಯಲ್ಲಿ (ಸತ್ಯವಾಕ್ಯ ಪೆರ್ಮಾನಡಿ, ಎರೆಯಪ್ಪ) ಬೆಂಪೂರು ನಾಡಿನ ಅಧಿಕಾರಿಯಾಗಿದ್ದನು ಎಂದೂ ಶಾಸನೋಕ್ತ ಬೀರವರ್ಮನು ನೊಳಂಬವಂಶದ ವೀರ ಮಹೇಂದ್ರ ಎಂದು ಭಾವಿಸಬಹುದೆಂಬ ಗಮನಾರ್ಹ ವಿಚಾರವನ್ನು ನಮ್ಮ ಮುಂದಿಟ್ಟಿದ್ದಾರೆ.

ಸೋಸಲೆಯ ನಿಷಿಧಿ ಶಾಸನದಲ್ಲಿನ ಅಕ್ಷರಗಳು ಶ್ರವಣಬೆಳಗೊಳದ ಭದ್ರಬಾಹು ಮುನಿಯ ಶಾಸನದ ಅಕ್ಷರಗಳಿಗಿಂತ ಹಿಂದಿನ ಕಾಲದ ಅಕ್ಷರಗಳ ಲಕ್ಷಣಗಳನ್ನು ಹೊಂದಿದೆ, ತಲಕಾಡು ಗಂಗರ ಪೆನುಗೊಂಡೆ ಶಾಸನದ ಲಿಪಿಗೆ ಹೋಲಿಕೆಯಿರುವುದರಿಂದ ಲಿಪಿಯಾಧಾರದ ಮೇಲೆ ಶಾಸನದ ಕಾಲವನ್ನು ಕ್ರಿ.ಶ. ಐದನೆಯ ಶತಮಾನವೆಂದು ಹೇಳಬಹುದಾಗಿದೆ ಎಂದಿದ್ದಾರೆ. ಶಾಸನದಲ್ಲಿ ಉಕ್ತವಾಗಿರುವ 'ಪಳಿದಂಗ' ಎಂಬುದು ತಪಸ್ಸಿನ ಒಂದು ಆಸನವಾದ ಪರ್ಯಂಕ ಇರಬಹುದೆಂದೂ ಹಾಗೂ ಶಾಸನೋಕ್ತ ಚಾತುರ್ವರ್ಣ ಎಂದರೆ ವೈದಿಕಧರ್ಮದ ಚಾತುರ್ವರ್ಣಗಳೇ ಎಂದೂ ಜೈನಧರ್ಮವು ವರ್ಣಧರ್ಮಪದ್ಧತಿಗೆ ವಿರೋಧಿಯೆನಿಸಿದ್ದರೂ ಕ್ರಿ.ಶ. ಐದನೆಯ ಶತಮಾನದ ವೇಳೆಗೆ ವೈದಿಕಧರ್ಮದ ಪ್ರಭಾವಕ್ಕೊಳಗಾಗಿ ಚಾತುರ್ವರ್ಣವನ್ನು ಒಪ್ಪಿಕೊಂಡಿತ್ತು ಎಂದು ಹೇಳಬಹುದಾಗಿದೆ ಎಂಬ ಅಭಿಪ್ರಾಯವನ್ನು ಪ್ರಬಂಧಕಾರರು ವ್ಯಕ್ತಪಡಿಸಿದ್ದಾರೆ.

---

* ನಂ.೨೯, 'ವಿಶಾಲಾಕ್ಷಿ ಕೃಪ', ಪರಮಹಂಸ ರಸ್ತೆ, ೨ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು–೫೬೦೦೨೮.

ಗುಮ್ಮಳಾಪುರದ ಗೌರಮ್ಮನ ಗುಡಿಯ ಶಿಲಾಶಾಸನವು ವಿಜಯನಗರದರಸ ವೆಂಕಟಪತಿ ರಾಯನು ಪೆನುಗೊಂಡೆಯಿಂದ ರಾಜ್ಯವಾಳುತ್ತಿರಲು ಯಲಹಂಕದ ನಾಡಪ್ರಭು ಇಮ್ಮಡಿ ಕೆಂಪೇಗೌಡನು ಮೇಲೂರಿಗೆ ಸೇರಿದ್ದ ಗುಮ್ಮಳಾಪುರವನ್ನು ಗುಮ್ಮಳಾಪುರದ ಸಿಂಹಾಸನದ ಕರ್ತೃ ನಂಜೇದೇವರು ಅಯ್ಯನವರಿಗೆ ದಾನ ನೀಡಿದುದನ್ನು ದಾಖಲಿಸುತ್ತದೆ. ಇಲ್ಲಿ ಯಲಹಂಕ ನಾಡಪ್ರಭು ಇಮ್ಮಡಿ ಕೆಂಪೇಗೌಡನ ರಾಜ್ಯವು ಗುಮ್ಮಳಾಪುರದವರೆಗೆ ವಿಸ್ತರಿಸಿದ್ದಿತೇ? ಎಂಬ ಪ್ರಶ್ನೆಯನ್ನೆತ್ತಿದ್ದಾರೆ ಲೇಖಕರು ಹಾಗೂ ವೀರಶೈವ ಮನೆತನಗಳಾಗಿದ್ದ ಸುಗಟೂರು ನಾಡಪ್ರಭುಗಳಿಗೂ ಮತ್ತು ಯಲಹಂಕದ ನಾಡಪ್ರಭುಗಳಿಗೂ ಸಮಾನವಾಗಿ ವೀರಶೈವ ಕೇಂದ್ರವಾಗಿದ್ದ ಗುಮ್ಮಳಾಪುರದ ಪೀಠದೊಂದಿಗೆ ನಿಕಟಸಂಬಂಧವಿದ್ದು ಪೀಠದ ಗುರುಗಳಾಗಿದ್ದ ನಂಜೇಶ್ವರರನ್ನು ತಮ್ಮ ರಾಜಗುರುಗಳಾಗಿ ಸ್ವೀಕರಿಸಿ ಅವರಿಗೆ ಗ್ರಾಮದಾನವನ್ನು ನೀಡಿದರೆಂಬ ಅಂಶವನ್ನು ಔಚಿತ್ಯಪೂರ್ಣವಾಗಿ ಪ್ರಬಂಧಕಾರರು ನಿರೂಪಿಸಿದ್ದಾರೆ.

ಬೇಲೂರು ಚೆನ್ನಕೇಶವ ದೇವಾಲಯದ ಭಿತ್ತಿಶಿಲ್ಪಗಳನ್ನು ಗಮನಿಸಿದಾಗ ದೇವದೇವಿಯರ ಶಿಲ್ಪಗಳ ಮಧ್ಯೆ ಕೆಲವು ಜೈನ ಯಕ್ಷ ಯಕ್ಷಿ ಶಿಲ್ಪಗಳನ್ನು ಹೋಲುವ ಭಿತ್ತಿಶಿಲ್ಪಗಳು ಕಾಣಬರುತ್ತವೆ. ಈ ದೇವಾಲಯದ ಯಕ್ಷ ಯಕ್ಷಿ ಶಿಲ್ಪಗಳು ದೇವಾಲಯದ ಮುಂಭಾಗದ ಭಿತ್ತಿಯಲ್ಲಿದ್ದು ನಿಂತ ನಿಲುವಿನಲ್ಲಿವೆ. ಆದರೆ ಸಾಮಾನ್ಯವಾಗಿ ಯಕ್ಷಿ ಶಿಲ್ಪಗಳು ಬಸದಿಗಳಲ್ಲಿ ಕುಳಿತ ಭಂಗಿಯಲ್ಲಿರುತ್ತವೆ ಎಂಬ ವ್ಯತ್ಯಾಸವನ್ನು ತೋರಿಸುತ್ತಾ ಆದರೂ ಬೇಲೂರು ದೇವಾಲಯದ ಶಿಲ್ಪಗಳ ಮೇಲೆ ಜೈನ ಯಕ್ಷ ಯಕ್ಷಿಯರ ಪ್ರಭಾವ ಇದೆಯೆಂದು ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ. ಅಲ್ಲದೆ, ಈ ಲೇಖನದ ಮೂಲಕ ಬೇಲೂರು ದೇವಾಲಯವನ್ನು ಜೈನ ಬಸದಿಯಾಗಿ ಕಟ್ಟಲು ಆರಂಭಿಸಿ ಅನಂತರ ಅದನ್ನು ವಿಷ್ಣುದೇವಾಲಯವಾಗಿ ಪರಿವರ್ತಿಸಿದರು ಎಂದು ಶ್ರೀ ರಾಮಾನುಜ ಸಂಪತ್ಕುಮಾರ ಜೀಯರು ಹೇಳಿದ ಮಾತನ್ನು ಸಮರ್ಥಿಸಿದ್ದಾರೆ.

ಶಿವಪುರದ ಶಾಸನದ ಕಾಲವನ್ನು ಪ, ಮ, ಅಕ್ಷರಗಳ ಸ್ವರೂಪ ರ, ಳ ದ ಪ್ರಯೋಗ ಹಾಗೂ ಅನುಸ್ವಾರದ ಬದಲು ಅನುನಾಸಿಕದ ಬಳಕೆ ಇವುಗಳ ಆಧಾರದಿಂದಲೂ, ಶಾಸನದಲ್ಲಿ ಅಯ್ಯಾವೊಳೆ ಐನೂರ್ವರ್ ಎಟ್ಟಿತ್ತರ ಉಲ್ಲೇಖವಿರುವುದರಿಂದಲೂ ಕ್ರಿ.ಶ. ೧೦೭೦ ಎಂದು ಲೇಖಕರು ಖಚಿತವಾಗಿ ನಿರ್ಧರಿಸಿದ್ದಾರೆ. ಈ ಶಾಸನವಿರುವ ಸ್ಥಳವೇ ಕುಪ್ಪದ ಬಯಲೆಂದೂ ದಾನ ಪಡೆದ ಕುಪ್ಪದ ಭಗವತಿ ದೇವಾಲಯವು ಕಲ್ಲು ಕಟ್ಟೆ ಅಣೆಕಟ್ಟೆಯಲ್ಲಿ ಮುಳುಗಡೆಯಾಗಿರಬೇಕೆಂದೂ ಲೇಖಕರು ಊಹಿಸಿದ್ದಾರೆ. ಈ ಊಹೆಯು ನಿಜವಾಗಿರಲೂ ಸಾಧ್ಯವಿದೆ.

ಬನ್ನೇರುಘಟ್ಟ–ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ ಎಂಬ ಲೇಖನದಲ್ಲಿ ಬನ್ನೇರುಘಟ್ಟದ ನಾಮನಿಷ್ಪತ್ತಿಯನ್ನು ಈ ರೀತಿಯಾಗಿ ನೀಡಿದ್ದಾರೆ. ಬನ್ನೇರು–ಬನ್ನೂರು–ಪೊನ್ನೂರು, ಸುವರ್ಣಾವತಿ ಎಂದಾಗಿರಬೇಕು. ಪೊನ್ನೂರು ಎಂಬುದು ಚಿನ್ನವನ್ನು ನಿರ್ದೇಶಿಸುತ್ತದೆ. ಈ ಪೊನ್ನೂರಿನ ಕೊಳವೇ ಪೊನ್ನೂರುಘಟ್ಟವಾಗಿದ್ದು ಮುಂದೆ ಬನ್ನೇರುಘಟ್ಟವಾಗಿದೆ. ಇದು ಚಿನ್ನದ ಅದಿರು ಅಥವಾ ಚಿನ್ನದ ಕೆಲಸ ಮಾಡುತ್ತಿದ್ದ ಸ್ಥಳವೆಂಬುದು ಸ್ಪಷ್ಟ ಎಂದಿದ್ದಾರೆ. ಚಂಪಕಧಾಮಸ್ವಾಮಿ ದೇವಾಲಯದಿಂದ ಸುವರ್ಣಮುಖಿತೀರ್ಥಕ್ಕೆ ಹೋಗುವ ದಾರಿಯಲ್ಲಿ ಬೆಟ್ಟದ ಮೇಲೆ ಶಿಲಾಮಂಟಪಗಳ ರಚನೆಗಳಿದ್ದು, ಅವುಗಳ ಮಧ್ಯೆ ಏಳುಸುತ್ತಿನ ಕೋಟೆಯ ರಚನೆ ಇದೆ. ಏಳು ಸುತ್ತಿನ ಕೋಟೆ ಎಂಬುದು ಸಣ್ಣಕಲ್ಲುಗಳನ್ನು ಸಾಲಾಗಿ ಜೋಡಿಸಿ ಏಳು ಸುತ್ತುಗಳನ್ನು ರಚಿಸಿರುವುದು. ಈ ಏಳುಸುತ್ತಿನ ಕೋಟೆಯನ್ನು ಕೋಟೆ ಎಂದು ಅರ್ಥ ಮಾಡುವ ಬದಲು ಇದನ್ನು ಇಷ್ಟಾರ್ಥಸಿದ್ಧಿ ಅಥವಾ ಕಷ್ಟಪರಿಹಾರದ ಯಂತ್ರವೆಂದು ಭಾವಿಸಬಹುದೆಂದೂ ಇಂತಹ ರಚನೆಗಳನ್ನು ಬೆಟ್ಟದ ಇಳಿಜಾರು, ದೇವಾಲಯ ಹಾಗೂ ಕೊಳದ ಬಳಿಯಲ್ಲಿ ಶಿಲಾಯುಗದ ಜನರು ರಚಿಸುತ್ತಿದ್ದರು ಎಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ.

ಡಾ॥ ಆರ್. ಶೇಷಶಾಸ್ತ್ರಿಗಳು ಸಿದ್ಧಪಡಿಸಿದ್ದ ತಾಮ್ರಪಟದ ಪೆನ್ಸಿಲ್ ಪ್ರತಿಯನ್ನಾಧರಿಸಿ ಅತ್ಯಂತ ವಿರಳವಾಗಿ ಕನ್ನಡ ಭಾಷೆ ಲಿಪಿಗಳಲ್ಲಿರುವ ಹತ್ತನೆಯ ಶತಮಾನಕ್ಕೆ ಸೇರುವ ಉರ್ಯೆಯೂರು ಚೋಳವಂಶೀಯರಾದ 'ಎರಿಗಲ್ವಾಡಿ ಚೋಳರ ಕೊರಾಕಲಪಲ್ಲಿ ತಾಮ್ರಶಾಸನ' ಎಂಬ ಶೀರ್ಷಿಕೆಯಡಿ ಮೂಲ ಪಾಠದೊಂದಿಗೆ ಈ ಲೇಖನದ ಮೂಲಕ ಪ್ರಚುರಪಡಿಸಿದ್ದಾರೆ.

ಆನೇಕಲ್ ಪಾಳೆಯಗಾರರ ಕೈಫಿಯತ್ತು ಎಂಬ ಲೇಖನದಲ್ಲಿ ಆನೇಕಲ್ ಪಾಳೆಯಗಾರ ವಂಶೀಯರಾದ ಶ್ರೀ ಪಿ.ಎಸ್. ಶಿವಕುಮಾರ ಅವರ ಬಳಿಯಲ್ಲಿದ್ದ ಕೈಫಿಯತ್ತಿನ ಪ್ರತಿಯಲ್ಲಿ ಉಕ್ತವಾದ ಘಟನಾವಳಿಗಳನ್ನು ನಿಖರವಾಗಿ ಕಾಲಾನುಕ್ರಮದಲ್ಲಿ ಲೇಖಕರು ನೀಡಿದ್ದಾರೆ.

ಬ್ಯಾಡಗಿ ತಾಲ್ಲೂಕಿನ ಮುತ್ತೂರಿನ ಶಿವಪ್ಪ ಬಸಪ್ಪ ಅಂಗಡಿಯವರ ಬಳಿಯಿದ್ದ ತಾಮ್ರಶಾಸನ (೨ ಹಲಗೆಗಳಿವೆ)ವನ್ನು ಪತ್ತೆಹಚ್ಚಿ ಶಾಸನದ ಎರಡು ತಾಮ್ರಫಲಕಗಳ ಚಿತ್ರಗಳನ್ನೂ ಲೇಖನದೊಂದಿಗೆ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ

ಪ್ರಕಟಿಸಿದರು. ಅದೇ ತಾಮ್ರಶಾಸನವನ್ನು ಕುರಿತಂತೆ ವಿವರಪೂರ್ಣವಾಗಿ ಶಿವಮಾಂಧಾತೃವರ್ಮನ ಮುತ್ತೂರು ಶಾಸನ ಎಂಬ ಶೀರ್ಷಿಕೆಯಡಿ ಲೇಖನವನ್ನು ಇತಿಹಾಸ ದರ್ಶನ ಸಂಪುಟದಲ್ಲಿ ಬರೆದಿದ್ದಾರೆ. ಈ ಶಿವಮಾಂಧಾತೃವರ್ಮನು ಕದಂಬ ವಂಶಕ್ಕೆ ಸೇರಿದವನೆಂದು ಹೇಳಬಹುದಾಗಿದೆ. ಶಾಸನದಲ್ಲಿ ಆಳ್ವಿಕೆಯ ಹದಿಮೂರನೆಯ ವರ್ಷದ ಉಲ್ಲೇಖವಿರುವುದರಿಂದ ಈತನು ಹದಿನೈದು ವರ್ಷಗಳ ಕಾಲ ರಾಜ್ಯಭಾರ ನಡೆಸಿರಬೇಕು. ಕಾಕುಸ್ಥವರ್ಮನ ಶಾಸನದ ಲಿಪಿಗಿಂತ ಸ್ವಲ್ಪ ಮುಂದುವರೆದ ಹಂತವನ್ನು ಸೂಚಿಸುವುದರಿಂದ ಈ ಶಾಸನದ ಕಾಲವನ್ನು ಕ್ರಿ.ಶ. ೪೫೦ರಿಂದ ೫೦೦ಕ್ಕೆ ನಿಗದಿಪಡಿಸಬಹುದಾಗಿದೆ. ಶಾಸನೋಕ್ತ ಮೂಕುನ್ನಹಾರವನ್ನು ಈಗಿನ ಚಿನ್ನಮುಳುಗುಂದ ಹಾಗೂ ವಲಶೆಟ್ಟಿಗ್ರಾಮವು ಶಾಸನವು ದೊರೆತ ಪಾಳುಗ್ರಾಮವಾಗಿರಬಹುದು. ಲಿಪಿ ಹಾಗೂ ವಿಷಯದ ದೃಷ್ಟಿಯಿಂದ ಈ ಶಾಸನ ನೈಜಶಾಸನವಾಗಿದೆ. ಈವರೆಗೆ ದೊರೆತಿರುವ ಇವನ ಎರಡನೆಯ ಶಾಸನವಾಗಿದೆ. ಕದಂಬರ ಇತಿಹಾಸದ ಮೇಲೆ ಹೆಚ್ಚಿನ ಬೆಳಕನ್ನು ಬೀರಬಹುದಾದ ಶಾಸನ ಇದಾಗಿದೆ. ಈ ಮುಂತಾದ ವಿಚಾರಗಳನ್ನು ಲೇಖಕರು ನಮ್ಮ ಗಮನಕ್ಕೆ ತಂದಿದ್ದಾರೆ.

ತುಂಗಭದ್ರಾ ಪ್ರದೇಶದ ವಿರೂಪಾಕ್ಷ ದೇವಾಲಯಗಳು ಎಂಬ ಲೇಖನದಲ್ಲಿ ಲೇಖಕರು ರಾಣೆಬೆನ್ನೂರು ತಾಲ್ಲೂಕಿನ ಇಟಗಿ, ಹರಪನಹಳ್ಳಿ ತಾಲ್ಲೂಕಿನ ಬೆಣ್ಣೆಹಳ್ಳ, ಬಳ್ಳಾರಿ ತಾಲ್ಲೂಕಿನ ಬರುವಾಯಿ, ಹೊಸಪೇಟೆ ತಾಲ್ಲೂಕಿನ ಹಂಪೆ, ಕಂಪಿಲಿ, ಸೊಂಡೂರು ತಾಲ್ಲೂಕಿನ ಕುರಿಕುಪ್ಪೆಗಳಲ್ಲಿ ವಿರೂಪಾಕ್ಷ ದೇವಾಲಯಗಳಿರುವುದನ್ನು ಗುರುತಿಸಿದ್ದಾರೆ. ಇವುಗಳಲ್ಲಿ ಅತ್ಯಂತ ಪ್ರಾಚೀನ ವಿರೂಪಾಕ್ಷ ದೇವಾಲಯ ಕ್ರಿ.ಶ. ೧೧೯೯ರ ಇಟಗಿಯ ವಿರೂಪಾಕ್ಷ ದೇವಾಲಯ. ಹಂಪೆಯು ಪ್ರಾಚೀನ ಕಾಲದಲ್ಲಿ ಶಕ್ತಿಕೇಂದ್ರ ಆಗಿದ್ದಿತು. ಕ್ರಿ.ಶ. ೧೦೦೦ದ ನೊಳಂಬ ಉದಯಾದಿತ್ಯನ ಕಾಲಕ್ಕೆ ಹಂಪೆಯಲ್ಲಿದ್ದ ಶಿವ ದೇವಾಲಯ ಮಹಾಬಲ ದೇವರದ್ದು. ಪ್ರಥಮ ಬಾರಿಗೆ ವಿರೂಪಾಕ್ಷನ ಉಲ್ಲೇಖವು ಕ್ರಿ.ಶ. ೧೧೯೯ರ ದುರ್ಗಾ ದೇವಾಲಯದ ಶಾಸನದಲ್ಲಿ ದೊರಕುತ್ತದೆ ಎಂದು ಗುರುತಿಸಿದ್ದಾರೆ.

ದಿದ್ದಿಗಿಯ ಕಾಮಕೋಟಿ ಭಟಾರಿ ಶಾಸನದಲ್ಲಿ ಉಕ್ತವಾದ ಕಾಮಕೋಟಿ ಭಟಾರಿ ಕಂಚಿಯ ಕಾಮಕೋಟಿ ಪೀಠದ ಕಾಮಾಕ್ಷಿಯ ಇನ್ನೊಂದು ಹೆಸರಾಗಿರಬೇಕೆಂದೂ, ಕಾಮಕೋಟಿಯು ಹಿಂದೆ ಕಂಚಿಯ ಭಾಗವೇ ಆಗಿದ್ದಿತು. ದಿದ್ದಿಗೆಯ ೧೦೮ ಮಹಾಜನರು ದಿದ್ದಿಗೆ ಅಗ್ರಹಾರ (ಸಿಂಧನೂರ ತಾಲ್ಲೂಕು ಮಸ್ಕಿಹಾಳದ ದಂಡೆ ಮೇಲಿದೆ)ವನ್ನು ಕಾಮಕೋಟಿ ವಿಷ್ಣುದೇವರಿಗೆ, ಸುಬ್ರಹ್ಮಣ್ಯದೇವರಿಗೆ, ರಾಮೇಶ್ವರದೇವರಿಗೆ, ಸೋಮೇಶ್ವರ ಮತ್ತು ಚಿಕ್ಕೇಸ್ವರದೇವರಿಗೆ ಬಳರಿ ಮಾರಕಟ್ಟಿಗೆ ಪಿರಿಯಕಟ್ಟಗೆ ಹಂಚಿ ಕೊಡುತ್ತಾರೆ. ದಿದ್ದಿಗೆಯಲ್ಲಿ ಈಗ ಉಳಿದಿರುವ ಅವಶೇಷಗಳಲ್ಲಿ ಈ ಬಗೆಯ ದೇವಾಲಯಗಳು ಎಲ್ಲೂ ಕಂಡುಬಂದಿಲ್ಲ. ಆದರೆ ಆದಿತ್ಯ ಚೋಳ ಮತ್ತು ಅವನ ಮಕ್ಕಳು ಕಂಚಿಯಲ್ಲಿ ಚಂಡೇಶ್ವರ, ಚಂದ್ರಸೂರ್ಯ, ಗಣಪತಿ, ಸುಬ್ರಹ್ಮಣ್ಯ, ಸಪ್ತಮಾತೃಕೆ, ಜ್ಯೇಷ್ಠಾದೇವಿ ಮೊದಲಾದ ಪರಿವಾರ ದೇವಾಲಯಗಳನ್ನು ಕಟ್ಟಿಸಿದಂತೆ ತಿಳಿದುಬರುತ್ತದೆ. ಆದುದರಿಂದ ದಿದ್ದಿಗೆ ಶಾಸನೋಕ್ತ ದೇವಾಲಯಗಳು ಕಂಚಿಯಲ್ಲಿಯೇ ಇದ್ದಿರಬೇಕು, ಕಂಚಿಯು ಶೈವ ಬ್ರಾಹ್ಮಣರ ಕೇಂದ್ರವಾಗಿದ್ದಿರಬೇಕು ಎಂದಿದ್ದಾರೆ ಲೇಖಕರು. ಶಾಸನದ ಆರಂಭದಲ್ಲಿ ಕೊಡಲಾಗಿರುವ ರಟ್ಟರಮೇರು, ಮದಗಜಮಲ್ಲ, ಎಲ್ಲರಮರುಳ, ಪರಾಂಗನಾಪುತ್ರಕ – ಈ ಮುಂತಾದ ಬಿರುದುಗಳು ರಾಷ್ಟ್ರಕೂಟ ದೊರೆ ಮುಮ್ಮಡಿ ಕೃಷ್ಣನಿಗಿದ್ದುವು. ಕೃಷ್ಣನು ದಕ್ಷಿಣದ ದಿಗ್ವಿಜಯದ ನಂತರ ಮೇಲ್ಪಾಡಿ ನೆಲೆವೀಡಿನಲ್ಲಿದ್ದಾಗ ಸಂಕ್ರಾಂತಿಯಂದು ನೀಡಿದ ದೇವದೇಯ ಶಾಸನ ಇದಾಗಿದ್ದು ಕ್ರಿ.ಶ. ೯೬೦ಕ್ಕೆ ಸೇರಬಹುದೆಂದು ಹೇಳಲಾಗಿದೆ.

ಶ್ರವಣಬೆಳಗೊಳದ ಶಾಸನದ ಹಿನ್ನೆಲೆಯಲ್ಲಿ ಮತೀಯ ಗಲಭೆಗಳನ್ನು ಧಾರ್ಮಿಕ ಘರ್ಷಣೆ ಎನ್ನುವುದಕ್ಕಿಂತ ಕುಲಾಚಾರದ ಕಟ್ಟಳೆಯ ಜಗಳ ಎನ್ನುವುದು ಸೂಕ್ತವೆಂದಿದ್ದಾರೆ ಲೇಖಕರು. ೧ ನೆಯ ಬುಕ್ಕರಾಯನ ಕಾಲದಲ್ಲಿ ನಡೆದ ಜಗಳವು ಮಾಗಡಿ ಸಮೀಪದ ಕಲ್ಲೆಹ (ಕಲ್ಯ) ಪಟ್ಟಣದಲ್ಲಿ ನಡೆದಿರಬೇಕು. ಸಾಮಾನ್ಯವಾಗಿ ಊರಿನಲ್ಲಿನ ಅರ್ಧದಷ್ಟು ಜನರು ಮತಾಂತರಗೊಂಡಾಗ ಯಾರೂ ಊರು ತೊರೆಯುವುದಿಲ್ಲ. ಇಂತಹ ಸಂದರ್ಭದಲ್ಲಿ ಕಟ್ಟಳೆಗಳನ್ನು ಮುರಿಯಲು, ಮೇಲುಗೈ ಸಾಧಿಸಲು ಪ್ರಯತ್ನಗಳು ನಡೆಯುತ್ತಿದ್ದವು, ಗಲಭೆಗಳು ಉಂಟಾಗುತ್ತಿದ್ದವು. ಇಂತಹ ಪ್ರಕ್ರಿಯೆ ಕಲ್ಯದಲ್ಲಿ ನಡೆದಿರಬೇಕು. ಶ್ರವಣಬೆಳಗೊಳದ ಶಾಸನದ ಪ್ರಕಾರ ಬುಕ್ಕರಾಯನು ಜೈನ ಶ್ರೀವೈಷ್ಣವ ಮತಗಳ ನಡುವೆ ಭೇದವಿಲ್ಲ, ಜೈನಬಸದಿಗಳಿಗೆ ಪಂಚಮಹಾವಾದ್ಯ ಮತ್ತು ಕಲಶಮರ್ಯಾದೆ ಸಲ್ಲುತ್ತದೆ ಎಂಬ ತೀರ್ಪು ನೀಡಿದನು. ಆದರೆ ಜೈನರು ಈ ಕಟ್ಟಳೆಗಳನ್ನು ತಮ್ಮದಾಗಿಸಿಕೊಳ್ಳಲು ತಮ್ಮ ಸ್ವಂತಿಕೆಗಳನ್ನು ಬಿಟ್ಟುಕೊಡಬೇಕಾಯಿತು. ಕಟ್ಟಳೆಯಂತೆ ಬೇರೆಯವರಿಗೆ ಹಣ ನೀಡಿ ಬಸದಿಗಳನ್ನು ಮತ್ತು ತಮ್ಮ ಜೀವಗಳನ್ನು ಬೇರೆಯವರ ಕೈಯಲ್ಲಿಟ್ಟು ರಕ್ಷಣೆ ಪಡೆಯುವಂತಾಯಿತು ಎಂಬ ವಾಸ್ತವಿಕ ಸತ್ಯದ ಕಡೆಗೆ ಲೇಖಕರು ನಮ್ಮ ಗಮನವನ್ನು ಸೆಳೆದಿದ್ದಾರೆ.

ಸೂಳೆ ಎಂಬ ಶಬ್ದ ದಕ್ಷಿಣ ದ್ರಾವಿಡ ಪದವಾದ 'ಚೂಳೈ' ಎಂಬ ಪದಮೂಲದಿಂದ ಬಂದಿದೆ ಎಂದು ನಿಷ್ಪತ್ತಿಯನ್ನು ಸೂಚಿಸಿದ್ದಾರೆ. ವೇಶ್ಯಾ ಸಂಘದಲ್ಲಿದ್ದ ಜೈನ ವ್ಯಾಪಾರಿಗಳು ಕಟ್ಟಿಸಿದ ಹಾಗೂ ದಾನ ನೀಡಿದುದರಿಂದ ಸೂಳೆಕೆರೆ, ಸೂಳೆಕೇರಿ, ಸೂಲಿಬೆಲೆ ಮುಂತಾದ ಹೆಸರುಗಳು ಬಂದಿವೆ ಎಂದು ನಿಷ್ಕರ್ಷೆಮಾಡಿದ್ದಾರೆ ಲೇಖಕರು.

ಕೋಲಾರ ತಾಲೂಕಿನ ಅರಾಜಿಕೊತ್ತನೂರಿನ ಸಮೀಪದಲ್ಲಿರುವ ಚೆಲುವನಹಳ್ಳಿ ಶಾನಭೋಗರ ಬಳಿ ದೊರೆತ ತಾಮ್ರಶಾಸನದ ವಿಶ್ಲೇಷಣೆಯನ್ನು ಒಂದು ಲೇಖನದಲ್ಲಿ ಮಾಡಲಾಗಿದೆ. ಈ ಶಾಸನವು ಲಿಪಿಯಾಧಾರದ ದೃಷ್ಟಿಯಿಂದ ಐದನೆಯ ಶತಮಾನದ ಮಧ್ಯಭಾಗಕ್ಕೆ ಸೇರುತ್ತದೆ. ಶಾಸನದ ಭಾಷೆ ಸಂಸ್ಕೃತ, ಲಿಪಿ ದಕ್ಷಿಣ ಬ್ರಾಹ್ಮಿಯಿಂದ ನಿಷ್ಪನ್ನವಾದ ಕನ್ನಡ, ಗದ್ಯದಿಂದ ಕೂಡಿದೆ. ಕದಂಬ ಕಾಕುಸ್ಥವರ್ಮನ ಮರಣದ ನಂತರ ಅವನ ಇಬ್ಬರು ಮಕ್ಕಳಿಂದ ಶಾಂತಿವರ್ಮ, ಕೃಷ್ಣವರ್ಮರ ನಡುವೆ ಸಿಂಹಾಸನಾಧಿಕಾರಕ್ಕಾಗಿ ಹೋರಾಟವೇರ್ಪಡುತ್ತದೆ. ಹಿರಿಯನಾದ ಶಾಂತಿವರ್ಮನನ್ನು ಉತ್ತರಾಧಿಕಾರಿಯನ್ನಾಗಿ ನೇಮಿಸಿದ್ದನು. ಆದ್ದರಿಂದ ಕೃಷ್ಣವರ್ಮನು ಕಾಕುಸ್ಥವರ್ಮನ ವೈರಿಗಳಾಗಿದ್ದ ಗಂಗರೊಡನೆ ಸ್ನೇಹ ಬೆಳೆಸಿ ತನ್ನ ತಂಗಿಯನ್ನು ಗಂಗ ಇಮ್ಮಡಿ ಮಾಧವನಿಗೆ ವಿವಾಹ ಮಾಡಿಕೊಟ್ಟು ಅಣ್ಣನ ವಿರುದ್ಧದ ಹೋರಾಟದಲ್ಲಿ ಗಂಗರ ನೆರವನ್ನು ಪಡೆದನು. ಪಲ್ಲವರು ಗಂಗರ ಸ್ನೇಹಿತರಾಗಿದ್ದುದರಿಂದ ಕದಂಬ ಕೃಷ್ಣವರ್ಮನ ಮಗ ವಿಷ್ಣುಶರ್ಮನನ್ನು ಸಿಂಹಾಸನದಲ್ಲಿ ಕೂರಿಸಿದನು. ಗಂಗ ಇಮ್ಮಡಿ ಮಾಧವನಿಗೆ ಸಿಂಹವರ್ಮನೆಂಬ ಮತ್ತೊಂದು ಹೆಸರು ಇದ್ದಿತು. ಈ ಹೆಸರನ್ನು ತನ್ನನ್ನು ಅಧಿಕಾರಕ್ಕೆ ತಂದ ಪಲ್ಲವ ದೊರೆ ಸಿಂಹವರ್ಮನ ಮಗ ಸ್ಕಂಧವರ್ಮನ ಗೌರವಸೂಚಕವಾಗಿ ಮಾಧವನು ಧರಿಸುತ್ತಾನೆ. ಹೀಗಾಗಿ ಕದಂಬರ, ಪಲ್ಲವರ ಬೆಂಬಲದಿಂದ ಗಂಗರು ಈ ಅವಧಿಯಲ್ಲಿ ಸ್ಥಿರವಾದ ನೆಲೆ ಪಡೆಯುತ್ತಾರೆ, ಎರಡು ಗಂಗ ಶಾಖೆಗಳನ್ನು ಈ ಅವಧಿಯಲ್ಲಿ ಗುರುತಿಸಬಹುದೆಂದು ಲೇಖಕರು ದೃಢವಾದ ನಿಲುವನ್ನು ತಳೆದಿದ್ದಾರೆ.

ಶಿವಮೊಗ್ಗ ಜಿಲ್ಲೆಯ ಶಿವಳ್ಳಿ ಗ್ರಾಮದ ಸಮೀಪದ ಪ್ರಭುದೇವರ ಗದ್ದುಗೆ ಪ್ರದೇಶದಲ್ಲಿ ದೊರೆತ ಎರಡು ಸಂಸ್ಕೃತ ತಾಮ್ರಪಟ ಶಾಸನಗಳ ಕನ್ನಡಾನುವಾದವನ್ನೂ ಶಾಸನಗಳ ಪಾಠವನ್ನು ಛಾಯಾಚಿತ್ರಗಳೊಂದಿಗೆ ಈ ಲೇಖನದಲ್ಲಿ ನೀಡಿದ್ದಾರೆ. ಈ ಎರಡೂ ತಾಮ್ರಶಾಸನಗಳು ಕದಂಬ ಕೃಷ್ಣವರ್ಮನ ಆಳ್ವಿಕೆಯಲ್ಲಿ ನೀಡಿದ ಭೂದಾನವನ್ನು ಉಲ್ಲೇಖಿಸುತ್ತವೆ. ಕೃಷ್ಣವರ್ಮನ ಕಾಲವನ್ನು ಕ್ರಿ.ಶ. ೫೧೬-೫೪೦ ಎಂದು ಆರ್.ಎಸ್. ಪಂಚಮುಖಿಯವರು ನಿರ್ಧರಿಸಿರುವುದನ್ನು ಲೇಖಕರು ಒಪ್ಪಿದ್ದಾರೆ. ಪಲ್ಲವರ ನೆರವಿನಿಂದ ಕೃಷ್ಣವರ್ಮನು ವೈಜಯಂತಿಯಲ್ಲಿ ಸಿಂಹಾಸನಾಧಿಕಾರವನ್ನು ಪಡೆದುದರ ಬಗ್ಗೆ ಈ ಲೇಖನದಲ್ಲಿ ದೃಢ ಸಮರ್ಥನೆ ನೀಡಿದ್ದಾರೆ. ಪ್ರಸ್ತುತ ಶಾಸನಗಳೆರಡರಲ್ಲೂ ಬಂದಳಿಕೆ ಉಲ್ಲೇಖವಿದೆ. ಇದು ಬಂದಳಿಕೆಯ ಪ್ರಾಚೀನ ಉಲ್ಲೇಖವೂ ಹೌದು. 'ಬನ್ದನಿಕೇ ಗ್ರಾಮೇ ಪೂರ್ವ ದಿಗ್ಭಾಗೇ ಮಾಹೇಶ್ವರೀ ಕ್ಷೇತ್ರೇ' ಎಂಬ ಉಲ್ಲೇಖದಲ್ಲಿನ ಮಾಹೇಶ್ವರಿ ಕ್ಷೇತ್ರವು ಈಗಿನ ಬಂದಳಿಕೆ ಎಂದು ಗುರುತಿಸಲ್ಪಡುವ ಬನದಮ್ಮನ ದೇವಾಲಯವೇ ಇರಬೇಕು. ಈ ಮಾಹೇಶ್ವರಿ ಕ್ಷೇತ್ರದ ದಕ್ಷಿಣ ದಿಕ್ಕಿಗೆ 'ಸಾನ್ತ ತಟಾಕದ' ಉಲ್ಲೇಕ ಶಾಸನದಲ್ಲಿದೆ. ಈ ಸಾನ್ತತಟಾಕವು ನರಸಾಪುರದಿಂದ ಬಂದಳಿಕೆಗೆ ಹೋಗುವ ದಾರಿಯಲ್ಲಿಯೇ ಇರುವ ಕೆರೆಯೇ ಇರಬಹುದು ಎಂದು ಲೇಖಕರು ಬಂದಳಿಕೆ, ಮಾಹೇಶ್ವರೀ ಕ್ಷೇತ್ರ ಮತ್ತು ಸಾನ್ತತಟಾಕಗಳನ್ನು ಗುರುತಿಸಿದ್ದಾರೆ.

'ಬಳ್ಳಿಗಾವೆಯ ಕೋಡಿಮಠ' ಲೇಖನದಲ್ಲಿ ಶಾಸನಗಳ ಹಿನ್ನೆಲೆಯಲ್ಲಿ ಕೋಡಿಮಠದ ಮಹತ್ವವನ್ನು ವಿವರಿಸಲಾಗಿದೆ. ಶೈವಧರ್ಮದ ಒಂದು ಪ್ರಭೇದವಾದ ಪಾಶುಪತವನ್ನು ಶಾಸನಗಳಲ್ಲಿ ಕಾಳಾಮುಖ, ಲಾಕುಳಶೈವ, ಎಕ್ಕೋಟಿಸಮಯ ಎಂದು ಕರೆಯಲಾಗಿದೆ. ಕಾಳಾಮುಖ ಪಂಥವು ಕರ್ನಾಟಕಕ್ಕೆ ಸೌರಾಷ್ಟ್ರದಿಂದ ಬಹುಶಃ ೫ನೆಯ ಶತಮಾನದ ಉತ್ತರಾರ್ಧದಲ್ಲಿ ಬಂದಿರಬಹುದೆಂದು ಊಹಿಸಲಾಗಿದೆ. ಕಾಳಾಮುಖ ಗುರುಗಳು ಸಾತ್ವಿಕರೂ ವಿದ್ವಾಂಸರೂ, ರಾಜಗುರುಗಳೂ, ಸಮಾಜದಲ್ಲಿ ಗಣ್ಯವ್ಯಕ್ತಿಗಳೂ ಆಗಿದ್ದು ತಮ್ಮ ವಾಸಸ್ಥಾನಕ್ಕಾಗಿ ದೇವಾಲಯಗಳನ್ನಾಶ್ರಯಿಸಿ ಅಲ್ಲಿಯೇ ಒಂದು ಮಠವನ್ನು ಕಟ್ಟಿಕೊಂಡು ಧರ್ಮಪ್ರಚಾರ ಮಾಡುತ್ತಾ ಅಲ್ಲಿನ ಸ್ಥಾನಿಕ (ಸ್ಥಾನಪತಿ)ರಾಗಿರುತ್ತಿದ್ದರು. ಇವರ ಪ್ರಭಾವದಿಂದ ದೇವಾಳಯಗಳು ಊರಿನ ಕೇಂದ್ರಸ್ಥಾನವಾಗಿ ಎಲ್ಲ ಚಟುವಟಿಕೆಗಳ ತಾಣವಾಗಿ ಪ್ರಾಮುಖ್ಯತೆ ಪಡೆದವು. ಕೆಲವು ಕಾಳಾಮುಖ ಮಠಗಳು ನೈಷ್ಠಿಕ ಬ್ರಹ್ಮಚಾರಿ ಸ್ಥಾನಿಕರನ್ನು ಹೊಂದಿದ್ದವು. ಅಂತಹ ನೈಷ್ಠಿಕ ಕಾಳಾಮುಖ ಮಠಗಳಲ್ಲಿ ಒಂದಾಗಿದ್ದಿತು ಬಳ್ಳಿಗಾವೆಯ ಕೋಡಿಮಠ. ಕೆರೆಯ ಕೋಡಿಯಲ್ಲಿ ಈ ಮಠವಿದ್ದುದರಿಂದ ಇದಕ್ಕೆ ಕೋಡಿಮಠ ಎಂದು ಹೆಸರಾಯಿತು. ಬಳ್ಳಿಗಾವೆಯ ಈ ಕೋಡಿಮಠವು ಶ್ರೀಶೈಲದಿಂದ ಬಳ್ಳಿಗಾವೆಗೆ ಬಂದ ಕಾಳಾಮುಖ ಗುರು ಕೇದಾರಶಕ್ತಿಯಿಂದ ಸ್ಥಾಪನೆಗೊಂಡು ಕ್ರಿ.ಶ. ೧೦೬೦ರಲ್ಲಿ ಎಂದು ಡಾ॥ ಎಂ. ಚಿದಾನಂದ ಮೂರ್ತಿಗಳು ಹೇಳಿರುವುದನ್ನು ಪ್ರಬಂಧಕಾರರು ಒಪ್ಪಿದ್ದಾರೆ. ಗುರು

೨ನೆಯ ವಾಮಶಕ್ತಿಯು ಮಠದ ಸ್ಥಾನಿಕನಾಗಿದ್ದಾಗ ಮಠವು ಉಚ್ಛ್ರಾಯಸ್ಥಿತಿಗೇರಿ ನೈಷ್ಠಿಕ ಸ್ಥಾನ, ವಿದ್ಯಾಸ್ಥಾನ, ನಾನಾದೇಶಭಿಕ್ಷುಕದಾನಸ್ಥಾನ, ರೋಗಿಜನ ಬೈಷಜ್ಯಸ್ಥಾನ. ಸಕಲ ಭೂತಾಭಯ ಪ್ರಧಾನ ಸ್ಥಾನವಾಗಿ ಖ್ಯಾತಿ ಪಡೆಯಿತು. ಕ್ರಿ.ಶ. ೧೦೬೦ರಿಂದ ೧೨೧೫ರ ವರೆಗೆ ೧೫೦ ವರ್ಷಗಳ ಕಾಲ ಕೀರ್ತಿಶಾಲಿಯಾಗಿ ಮೆರೆದು ವೀರಶೈವಮತದ ಪ್ರಭಾವ ಪ್ರಸಾರ ಹೆಚ್ಚಿದಂತೆ ತನ್ನ ಪ್ರಭಾವವನ್ನು ಕಳೆದುಕೊಂಡು ಕಣ್ಮರೆಯಾಯಿತು ಕೋಡಿಮಠ.

ಬೇಗೂರು ಶಾಸನ ಯುದ್ಧರಂಗದ ವಾಸ್ತವಿಕ ಚಿತ್ರದಿಂದ ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡಿದೆ. ಎರಡು ಹಂತಗಳಲ್ಲಿ ಚಿತ್ರಣವಿದೆ. ಮೇಲಿನ ಹಂತದಲ್ಲಿ ಗಂಗರಸರ ಎರೆಯಪ್ಪನಿಂದ ಅವನ ಸೇನಾನಿ ನಾಗತ್ತರ ಖಡ್ಗವನ್ನು ಸ್ವೀಕರಿಸುತ್ತಿರುವಂತಿದೆ. ಕೆಳಗಿನ ಹಂತದಲ್ಲಿ ಸವಿವರವಾದ ಯುದ್ಧ ಚಿತ್ರಣವಿದೆ. ಯುದ್ಧದ ವಾಸ್ತವ ಚಿತ್ರಣವನ್ನು ನೀಡುವ ಇಂತಹ ಅಪರೂಪದ ಶಾಸನ ಬೇರೊಂದಿಲ್ಲವೆನ್ನಬಹುದು. ಈ ಶಾಸನೋಕ್ತ ಪೂವಿನ ಪುಲ್ಲಿಮಙ್ಗಲವನ್ನು ಮಾಲೂರು ತಾಲೂಕಿನ ಉಲಿಮಂಗಲ ಹಾಗೂ ಕಲ್ನಾಡು ಎಂದರೆ ಪ್ರದೇಶವೆಂದು ಅರ್ಥೈಸಿದ ಫ್ಲೀಟರ ಅಭಿಪ್ರಾಯವನ್ನು ಲೇಖಕರು ಒಪ್ಪದೆ ಹುಲಿಮಂಗಲ (ಜಿಗಣಿ ಹೋಬಳಿ)ವೇ ಪೂವಿನಪುಲ್ಲಿಮಂಗಲ ಮತ್ತು ಕಲ್ನಾಡು ಎಂದರೆ ಕಲ್ಲನ್ನು ನಾಟು ಅಥವಾ ನೆಡು ಎಂದಾಗುತ್ತದೆ ತಮಿಳುನಾಡಿನಲ್ಲಿ ಇವನ್ನು ನಾಟ್ಟುಕಲ್ ಎಂದೇ ಕರೆಯುತ್ತಾರೆ. ಆದುದರಿಂದ ಕಲ್ನಾಡು ಎಂಬುದು ವೀರರಿಗೆ ಸಂಬಂಧಿಸಿದಂತೆ ಉಕ್ತವಾಗಿರುವ ದಾನಕ್ಕೆ ಅನ್ವಯಿಸುತ್ತದೆ ಎಂದು ಅರ್ಥೈಸಿದ್ದಾರೆ.

'ಮಾಸ್ತಿ' ಎಂಬ ಲೇಖನದಲ್ಲಿ ವೀರಗಲ್ಲು, ಬರವಣಿಗೆ ಇಲ್ಲದ ವೀರಗಲ್ಲುಗಳು, ಮಾಸ್ತಿಗಲ್ಲುಗಳು, ವೀರಮಾಸ್ತಿಕಲ್ಲುಗಳು ಎಂದು ವಿಂಗಡಿಸಿ ಇವುಗಳ ಸ್ವರೂಪವನ್ನು ವಿವರಿಸಿದ್ದಾರೆ. ಮಾಸ್ತಿ ಅಥವಾ ಮಹಾಸತಿ ಪದ್ಧತಿಗೆ ತನ್ನ ಪತಿಯ ನಿಂದೆಯನ್ನು ಕೇಳಲಾಗದೆ ಯಜ್ಞಕುಂಡದಲ್ಲಿ ಬಿದ್ದು ಆತ್ಮಾಹುತಿಯಾಗುವ ದಾಕ್ಷಾಯಿಣಿಯೇ ಮೂಲ ಪ್ರೇರಣೆ ಎನ್ನಲಾಗಿದೆ. ಸಾಮಾನ್ಯವಾಗಿ ಮಾಸ್ತಿಗಲ್ಲಿನಲ್ಲಿ ಸ್ತ್ರೀಯ ಬಲಗೈಯನ್ನು ಮಾತ್ರ ಕೆತ್ತಿರುತ್ತಾರೆ. ಇದನ್ನು ಶಾಸನಗಳಲ್ಲಿ 'ತೋಳುಕಯಿಗೊಟ್ಟಳು' ಎಂದು ಕರೆದಿದ್ದಾರೆ. ಮಹಾ ಸತಿಯನ್ನು 'ಸಂಗತಿ', 'ಮದವಳಿಗೆಕಲ್', 'ಸಹಾನುಭೂತಿ' ಎಂಬ ಪದಗಳಿಂದಲೂ ಶಾಸನಗಳಲ್ಲಿ ನಿರ್ದೇಶಿಸಲಾಗಿದೆ. ಎಂದರೆ ಮಹಾಸತಿಯಾದವರ ಜ್ಞಾಪಕಾರ್ಥವಾಗಿ ನಿಲ್ಲಿಸಿದ ಕಲ್ಲು ಮಾಸ್ತಿಗಲ್ಲು ಎಂದು ಅರ್ಥೈಸಲಾಗಿದೆ. ತನ್ನ ಪತಿ ಸತ್ತು ಸ್ವರ್ಗ ಸೇರಿದಾಗ ಆತನನ್ನು ಒಬ್ಬಂಟಿಗನಾಗಿರಲು ಬಿಡದೆ ತಾನೂ ಸತ್ತು ಅವನೊಡನೆ ಸ್ವರ್ಗದಲ್ಲೂ ಕೂಡಿ ಇರಬೇಕೆಂಬ ಬಯಕೆಯಿಂದ, ನಿತ್ಯವಿಧಿಯಂತೆ ಸ್ವಸಂತೋಷದಿಂದ ಸತಿಯಾಗುತ್ತಿದ್ದಳು. ಕರ್ನಾಟಕದಲ್ಲಿ ಮಹಾಸತಿಪದ್ಧತಿ ಸಾರ್ವತ್ರಿಕವಾಗಿರಲಿಲ್ಲ, ಬಲಾತ್ಕಾರದಿಂದ ಕೂಡಿರಲಿಲ್ಲ ಎನ್ನುತ್ತಾರೆ ಲೇಖಕರು.

ಮಹಾಸತಿಯ ಉಲ್ಲೇಖವಿರುವ ಮೊದಲ ಶಾಸನ ಕ್ರಿ.ಶ. ೪೦೦ರ ಕದಂಬ ರವಿವರ್ಮನ ಸಂಗಡ ಅವನ ರಾಣಿ ಮುಕ್ತಿ ಪಡೆದಳು ಎಂದು ತಿಳಿಸುವ ಸೊರಬದ ಸಂಸ್ಕೃತ ಶಾಸನ. ಅನಂತರ ಕ್ರಿ.ಶ. ೯೦೮–೯೦೯ರ ಬೇಗೂರು ಶಾಸನದಲ್ಲಿ ನಾಗತ್ತರನ ಮಗಳು 'ಕೊಣ್ಡಬ್ಬೆ ಕತ್ತವ್ವ ವೆಳೆಗೊಣ್ಡುಸತ್ತಂ' ಎಂದಿದೆ. ನಾಗತ್ತರನು ಸತ್ತನಂತರ ಅವನ ಮಗಳು ಕೊಣ್ಡಬ್ಬೆ ಜೈನದೀಕ್ಷೆಯನ್ನು ತೆಗೆದುಕೊಂಡು ಸತ್ತಂತೆ ಊಹಿಸಬಹುದು. ಆದುದರಿಂದ ಈ ಶಾಸನವನ್ನು ವೇಳೆವಾಳಿ ಶಾಸನ ಎನ್ನುವುದಕ್ಕಿಂತ ಮಾಸ್ತಿಕಲ್ಲು ಎನ್ನುವುದೇ ಸೂಕ್ತವೆಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಈವರೆಗೆ ಸಿಕ್ಕಿರುವ ಮಾಸ್ತಿಕಲ್ಲುಗಳಲ್ಲೆಲ್ಲ ದೀರ್ಘವಾದುದು ಕಾವ್ಯಮಯವಾಗಿರುವುದು ರವಿಗನ ಕುಲದೀಪಕಿ ಎನಿಸಿದ ದೇಕಬ್ಬೆ ತನ್ನ ಪತಿ ನವಿಲೆನಾಡಧಿಪತಿ ಏಚ ಕೊಲ್ಲಲ್ಪಟ್ಟನೆಂಬ ಸುದ್ದಿ ತಿಳಿದು ಸಾಯಲೆದ್ದು ಕೊಣ್ಡಕೆ ನಡೆದಳ್ ಎಂದು ತಿಳಿಸುವ ದೇಕಬ್ಬೆಯ ಶಾಸನವು ಮಾಸ್ತಿಯ ಕೊನೆಯ ಉಲ್ಲೇಖವಿರುವ ಉಪಲಬ್ಧ ಶಾಸನ. ಕ್ರಿ.ಶ. ೧೬೯೯ಕ್ಕೆ ಸೇರಿದ ಕೆಳದಿಯ ಕರಿತಿಮ್ಮೇಗೌಡ ಸ್ವರ್ಗಸ್ಥನಾದಲ್ಲಿ ಆತನ 'ಮದುವಳಿಗೆ ರಾಮಕ್ಕನು ಮಹಾಸತಿಯಾದಳು' ಎಂದು ತಿಳಿಸುವ ಶಾಸನ. ಶಾಸನಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಮಹಾಸತಿ ಪದ್ಧತಿ ಬಹು ಪ್ರಚಾರದಲ್ಲಿದ್ದಂತೆ ಕಂಡುಬರುತ್ತದೆ. ಮಹಾಸತಿ ಪದ್ಧತಿಯು ೧೯ನೆಯ ಶತಮಾನದ ಕೊನೆಯವರೆಗೂ ಅಸ್ತಿತ್ವದಲ್ಲಿತ್ತೆಂದು ಹೇಳಬಹುದಾಗಿದೆ.

'ಮೊರಸುನಾಡು' ಲೇಖಕರ ಅಭಿಪ್ರಾಯದಲ್ಲಿ ಹಳೇಹಳ್ಳಿ ಶಾಸನದ ಪ್ರಕಾರ ಇದು ಮುಡಿಗೊಂಡ ಚೋಳಮಂಡಲಕ್ಕೆ ಸೇರಿದ್ದ ರಾಜೇಂದ್ರ ಚೋಳನ ವಳನಾಡಿಗೆ ಸೇರಿತ್ತು, ಡಾ॥ ಎಂ.ವಿ. ಕೃಷ್ಣರಾಯರು ಕಂಚಿಯ ಸಮೀಪದ ಯಣಮಂಜಿಯೇ ಮೊರಸುನಾಡೆಂದು ಹೇಳಿದ್ದನ್ನು ಲೇಖಕರು ನಿರಾಕರಿಸುತ್ತಾ ಯಣಮಂಜಿ ಎಂಬುದು ಇಳವಂಜಿ ಎಂಬ ಹೆಸರಿನ ರೂಪ, ಇಂದಿನ ಮುಳಬಾಗಿಲು, ಬೌರಿಂಗ್‌ಪೇಟೆ, ಚಿತ್ತೂರು ಜಿಲ್ಲೆಯ ಕೆಲಭಾಗಗಳು ಸೇರಿದ್ದ ಪ್ರದೇಶ, ಯಣಮಂಜಿಯನ್ನು ಮೊರಸುನಾಡೆಂದು ಕರೆದಿರುವ ಉಲ್ಲೇಖಗಳು ಇಲ್ಲ. ಮೊರಸುನಾಡೆಂಬುದು ಸಾರ್ವತ್ರಿಕ ಹೆಸರಲ್ಲ. ಗಂಗ ೬೦೦೦ ಪ್ರದೇಶಕ್ಕೆ ಮೊರಸುನಾಡೆಂಬ ಹೆಸರಿದ್ದು ಮೊರಸು ಒಕ್ಕಲಿಗರಿದ್ದ ಪ್ರದೇಶ ಎಂಬರ್ಥದಲ್ಲಿ ಶಾಸನಗಳಲ್ಲಿ ಪ್ರಯೋಗವಾಗಿದೆ.

ತಮಿಳು ಶಾಸನಗಳ ಕಾಲಕ್ಕೆ ಈ ನಾಡು ಬೆಂಗಳೂರಿನ ದಕ್ಷಿಣಭಾಗಕ್ಕೆ ಮಾತ್ರ ಸೀಮಿತವಾಗಿದ್ದಂತೆ ಕಂಡುಬರುತ್ತದೆ ಎಂಬ ಖಚಿತ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ.

'ದೊಡ್ಡಹುಲ್ಲೂರಿನ ಕಲಿನೊಳಂಬನ ಶಾಸನ'ವನ್ನು ದೇವರಕೊಂಡಾರೆಡ್ಡಿಯವರೇ ಪತ್ತೆಮಾಡಿ ಪ್ರಕಟಿಸಿದ್ದಾರೆ. ದೊಡ್ಡಹುಲ್ಲೂರು ಹೊಸಕೋಟೆಗೆ ಸುಮಾರು ಮೂರು ಮೈಲಿ ದೂರದಲ್ಲಿದೆ. ಇದೊಂದು ವೀರಗಲ್ಲು ಶಾಸನ. ಶಾಸನೋಕ್ತ ದೊರೆ ನೊಳಂಬ ವಂಶದ ಕಲಿನೊಳಂಬ. ನೊಳಂಬರಾಜರಲ್ಲಿ ಈ ಬಿರುದನ್ನು ಪಡೆದಿದ್ದವನು ಸಿಂಹಪೋತ. ಲಿಪಿಯಾಧಾರದ ಮೇಲೆ ಕ್ರಿ.ಶ. ೮೯೫ಕ್ಕೆ ಸೇರಬಹುದಾದ ಈ ಶಾಸನದ ಕಾಲಕ್ಕೆ ರಾಜನಾಗಿದ್ದವನು ವೀರಮಹೇಂದ್ರ. ವೀರ ಪದಕ್ಕೆ ಶೂರ, ಕಲಿ ಎಂಬ ಅರ್ಥಗಳೂ ಇರುವುದರಿಂದ ವೀರಮಹೇಂದ್ರನನ್ನೇ ಕಲಿನೊಳಂಬನೆಂದು ಹೆಸರಿಸಲಾಗಿದೆ. ಶಾಸನದಲ್ಲಿ ದಾನ ಪಡೆದವನ ಹೆಸರಿನ ಉಲ್ಲೇಖವಿಲ್ಲ. ಸದ್ಯಕ್ಕೆ ಶಾಸನೋಕ್ತನಾದ ಪಡಿಯರ (ಸೇವಕ) ಕೊತ್ತಣ್ಣನನ್ನೇ ಶಾಸನದ ವೀರನೆನ್ನಬಹುದು. ವೀರನು ಸತ್ತಿಲ್ಲ, ಬದುಕಿ ದಾನವನ್ನು ಸ್ವೀಕರಿಸಿದ್ದಾನೆ. ಶಾಸನದ ಕಿಷ್ಣ ಎಂಬ ಕೊನೆಯ ಮೂರು ಅಕ್ಷರಗಳು ಶಾಸನ ಕೆತ್ತಿದ ಶಿಲ್ಪಿಯ ಸಂಕುಚಿತ ರೂಪವೆನ್ನಬಹುದು ಎಂದಿದ್ದಾರೆ ಲೇಖಕರು.

'ಹಲ್ಮಿಡಿ ಶಾಸನ – ಒಂದು ಅಧ್ಯಯನ' ಎಂಬ ಲೇಖನದಲ್ಲಿ ಹಲ್ಮಿಡಿ ಶಾಸನವು ಕನ್ನಡ ಶಾಸನವೆಂದು ಹೇಳಲ್ಪಟ್ಟಿದ್ದರೂ ಕನ್ನಡದ ಸೊಗಸಿಗಿಂತ ಸಂಸ್ಕೃತದ ಸೊಗಡಿನ ವಾಸನೆ ಹೆಚ್ಚಿಗೆ ಬೀರುತ್ತದೆ. ಸಂಸ್ಕೃತದ ಪದಪುಂಜಗಳನ್ನು ಕೆಲವೊಮ್ಮೆ ಕನ್ನಡೀಕರಿಸಿ, ಕೆಲವೊಮ್ಮೆ ಸಮಾನಾರ್ಥ ಪದಗಳನ್ನು ಬಳಸಿ, ಸಮಾನಪದ ದೊರೆಯದಿದ್ದಾಗ ಹೇಗೋ ಒಂದು ಸಮಾಸಪದ ಮಾಡಿ ಬಳಸಿರುವುದು ಕಾಣಸಿಗುತ್ತದೆ. ಉದಾಹರಣೆಗೆ 'ಪತ್ತೊನ್ದಿ' ಎಂಬ ಪದ. ಸಂಸ್ಕೃತದಲ್ಲಿ ಯೋಚಿಸಿ ಕನ್ನಡದಲ್ಲಿ ಬರೆದಂತಿದೆ. ಹಿಂದಿನ ಕಾಲದ ಶಾನುಭೋಗರ ಭಾಷೆ ಎನ್ನದೆ ವಿಧಿಯಿಲ್ಲ. ಬೇರಾವ ಶಾಸನದಲ್ಲೂ ಇಲ್ಲಿ ಕಾಣುವಷ್ಟು ಭಾಷಾ ಕೃತಕತೆ ಕಂಡುಬರುವುದಿಲ್ಲ ಎಂಬ ಕಟುಸತ್ಯವನ್ನು ಲೇಖಕರು ಎತ್ತಿ ನುಡಿದಿದ್ದಾರೆ. ಹಲ್ಮಿಡಿ ಶಾಸನವು ತಾಳಗುಂದ, ಗುಡ್ನಾಪುರ ಶಾಸನಗಳಂತೆ ಉತ್ತರ ಭಾರತದಿಂದ ಬಂದ ಸಂಸ್ಕೃತ ವಿದ್ವಾಂಸರಿಂದ ರಚಿತಗೊಂಡಿದೆಯಾದ ಕಾರಣ ಸಂಸ್ಕೃತ ಭೂಯಿಷ್ಠವಾಗಿ ಅನ್ವಯಾರ್ಥ ಬಿಡಿಸುವುದರಲ್ಲಿ ತೊಡಕುಂಟಾಗಿ ಶಾಸನದ ಪಾಠ ಕಠಿಣವೆನಿಸಿತ್ತು. ಆದರೆ ವಾಸ್ತವದಲ್ಲಿ ಹಲ್ಮಿಡಿ ಶಾಸನದ ಪಾಠ ಕಠಿಣವೇನಲ್ಲ ಎಂದು ಹೇಳಿದ ಶಾಸನದ ಅನೇಕ ಪದಗಳನ್ನು ಕುರಿತು ಸಮರ್ಥವಾಗಿ ವಿವೇಚಿಸಿದ್ದಾರೆ. ಈ ಶಾಸನದಲ್ಲಿ ಭಟೋರ, ಭಟರಿ, ಭಟ, ಬಟಾರಿ, ಬಟರಿ ಎಂಬ ಪದಪ್ರಯೋಗಗಳಿದ್ದು 'ಭಟರಿ' 'ಬಟರಿ' ಎಂಬ ಪದಗಳು ವಂಶ ಕುಲ, ವಂಶದವನು ಎಂಬರ್ಥದಲ್ಲಿಯೂ, 'ಭಟ' ಎಂಬ ಪದವು ವೀರ ಎಂಬರ್ಥದಲ್ಲಿಯೂ, ಭಟ್ಟ ಎಂಬುದು ಸ್ಥಾನಿಕ ವೇದಪಾರಂಗತ ಬ್ರಾಹ್ಮಣ ಎಂಬರ್ಥದಲ್ಲಿಯೂ 'ಭಟ್ಟೋರ' ಎಂಬುದು ಭಟ್ಟಾರಕ (ರಾಜ) ಎಂಬರ್ಥದಲ್ಲಿಯೂ ಪ್ರಯೋಗಗೊಂಡಿವೆ. 'ಭಟಾರಿ' ಕುಲ ಎಂಬುದು ಆಳುಪ ವಂಶಕ್ಕಿದ್ದ ಇನ್ನೊಂದು ಹೆಸರಿರಬೇಕು. ಪಶುಪತಿಯು ತನ್ನನ್ನು ಆಳುಪಗಣದ ಒಡೆಯನೆಂದೂ, ಅಳಕದಂಬನೆಂದೂ ಹೇಳಿಕೊಂಡಿದ್ದಾನೆ. ಕಾಕುಸ್ಥವರ್ಮನ ಆಳ್ವಿಕೆಯಲ್ಲಿ ನರಿದಾವಿಳೆ ನಾಡಿನಲ್ಲಿ ಮೃಗೇಶ ಮತ್ತು ನಾಗೇಂದ್ರರೆಂಬ ಸಿಂಹದಂತೆ, ಆನೆಯಂತೆ, ಪರಾಕ್ರಮಶಾಲಿಗಳಾದ, ಬಲಶಾಲಿಗಳಾದ ಶೂರರಿದ್ದರು ಎಂದು ಅರ್ಥೈಸಬೇಕು. ಪಶುಪತಿ ಎಂಬ ಪದವನ್ನು ನಾನಾ ಅರ್ಥ ಬರುವಂತೆ ಬಳಸಿರುವುದೊಂದು ವಿಶೇಷ. ಪಶುಪತಿಯ ಉಲ್ಲೇಖವಿರುವ ಶಾಸನವೊಂದು ತಾಳಗುಂದದ ಪ್ರಣವೇಶ್ವರ ದೇವಾಲಯದ ಬಾಗಿಲಲ್ಲಿ ಕಂಡುಬರುತ್ತದೆ. ಹಲ್ಮಿಡಿ ಶಾಸನೋಕ್ತ ಪಶುಪತಿ ಕೇಕಯ ಪಲ್ಲವರನ್ನು ಗೆದ್ದ ವಿಜ ಅರಸನ ಪರಾಕ್ರಮಕ್ಕೆ ಮೆಚ್ಚಿ ಪಲ್ಮಡಿಯನ್ನೂ ಮೂಳೆವಳ್ಳಿಯನ್ನೂ ದಾನವಾಗಿ ನೀಡಿದನು. ಪೂರ್ವೋಕ್ತ ತಾಳಗುಂದ ಶಾಸನದಲ್ಲಿ ಉಕ್ತನಾದ ಪಶುಪತಿಯು ಯುದ್ಧಗಳಲ್ಲಿ ಭಾಗವಹಿಸದೆ ಯಜ್ಞಗಳೆಂಬ ಯುದ್ಧಗಳನ್ನು ಮಾಡಿಸುತ್ತಾ ಪಶುವೇ ಮುಖ್ಯವಾದ ದಾನಗಳನ್ನು ಮಾಡುತ್ತಾ 'ದಾನಪಶುಪತಿ' ಎಂಬ ಪ್ರಖ್ಯಾತಿಯನ್ನು ಪಡೆದು ಬ್ರಾಹ್ಮಣರಿಂದ ಆಶೀರ್ವಾದದ ಅಕ್ಷತೆಯನ್ನು ಹಾಕಿಸಿಕೊಳ್ಳುತ್ತಿದ್ದನು ಈ ಪಶುಪತಿಯು ಕಾಕುಸ್ಥ ಭಟರಿ ಮತ್ತು ಕದಂಬ ವಂಶದ ಲಕ್ಷ್ಮೀಯ ಮಗ ಮತ್ತು ಕದಂಬ ದೊರೆ ಕಾಕುಸ್ಥವರ್ಮನ ಮೊಮ್ಮಗ ಎಂದು ಲೇಖಕರು ತಿಳಿಸುತ್ತಾರೆ. ಪ್ರೇಮಾಲಯ ಸುತ ಎಂದರೆ ಮನೆಮಗ. ಬಾಳ್ಗಟ್ಟು ಎಂಬ ಪದಕ್ಕೆ ಕತ್ತಿ ತೊಳೆದ ಮರ್ಯಾದೆ ಎಂಬ ಅರ್ಥವೇ ಸರಿ, ಸಂಸ್ಕೃತದ 'ಖಡ್ಗಧಾರಾಂಬಸಿ' ಎಂಬ ಪದಕ್ಕೆ ಸಮಾಸಪದ ಅರ್ಥಪೂರ್ಣವೂ ಆಗಿದೆ 'ಪತ್ತೊಂದಿ' ಎಂಬುದಕ್ಕೆ ದಸವಂದ ಅಥವಾ ೧/೧೧ನೆಯ ಭಾಗದ ತೆರಿಗೆ ಎಂದೊಪ್ಪದೆ ತೆಲುಗು ಶಾಸನಗಳಲ್ಲಿನ ಪದಪ್ರಯೋಗವನ್ನಾಧರಿಸಿ ಇದನ್ನು 'ನೀರಾವರಿ ತೆರಿಗೆ' ಎಂದು ಅರ್ಥೈಸಿರುವರು.

ಡಾ॥ ಚಿದಾನಂದಮೂರ್ತಿಯವರು ಸಾಹಿತ್ಯದ ಕೃತಿಗಳನ್ನು, ವಚನಗಳನ್ನು ಅಭ್ಯಸಿಸುವಾಗ ಅವುಗಳೆಲ್ಲದಗಿರುವ ಚಾರಿತ್ರಕ ಮತ್ತು ಸಾಂಸ್ಕೃತಿಕ ಅಂಶಗಳ ಕಡೆಗೆ ಗಮನ ಹರಿಸುವುದು ಅವರ ವಿಶೇಷವೆಂದು ಗುರುತಿಸಿದ್ದಾರೆ. ಉಗಾಭೋಗ

ಸುಳಾದಿಗಳ ಮೇಲೆ ವಚನ ಸಾಹಿತ್ಯದ ಪ್ರಭಾವವಿದ್ದು ಉತ್ತಮ ಸಾಹಿತ್ಯಕ್ಕೆ ಯಾವುದೇ ಜಾತಿ ಇತ್ಯಾದಿಗಳ ಸೋಂಕು ಇಲ್ಲವೆಂಬುದನ್ನು ಆಚಾರ್ಯ ಪರಂಪರೆ ವ್ಯಕ್ತಪಡಿಸಿದೆ ಎಂದಿದ್ದಾರೆ. ವಿಜಯನಗರ ಕಾಲದಲ್ಲಿ ವೈದಿಕ ಗ್ರಂಥಗಳ ಸಂಕಲನ ಭಾಷ್ಯ ಮುಂತಾದ ಕಾರ್ಯಗಳು ನಡೆದಿದ್ದು ಅದನ್ನೇ ಅನುಸರಿಸಿದರು ವೀರಶೈವರು. ತೋಂಟದ ಸಿದ್ಧಲಿಂಗ ಯತಿಗಳ ಸಮಾಜೋ-ಧಾರ್ಮಿಕ ಹಿನ್ನೆಲೆಯು ವಾಸ್ತವವಾಗಿ ವಿಜಯನಗರ ಕಾಲದ ವೀರಶೈವ ಧರ್ಮದ ಬೆಳವಣಿಗೆಯನ್ನು ಕುರಿತದ್ದೇ ಆಗಿದೆ. ಶುದ್ಧಶೈವ ತಮಿಳುನಾಡಿನಲ್ಲಿ ಪ್ರಚಲಿತವಿದ್ದ ಶೈವ ಶಾಖೆ ಎಂದುನ್ನೊಪ್ಪದೆ ಕರ್ನಾಟಕದ ಶಿವಧ್ವಜರು, ಗೊರವರು ಶುದ್ಧಶೈವರಾಗಿದ್ದು ಶಿವದೇವಾಲಯಗಳಲ್ಲಿ ಇಂದಿಗೂ ಅರ್ಚಕರಾಗಿದ್ದಾರೆ ಎಂಬುದನ್ನೂ ಇವರ ಮನೆವಂತು ಕನ್ನಡವೆಂದೂ ಸ್ಪಷ್ಟವಾಗಿ ಹೇಳಿದ್ದಾರೆ ಲೇಖನಕಾರರು. ಅಂತೆಯೇ ೧೨ನೆಯ ಶತಮಾನದಲ್ಲಿ ಜೈನಧರ್ಮದ ಪ್ರಾಬಲ್ಯ ಎದ್ದು ಕಾಣುತ್ತಿತ್ತೆಂಬ ಹೇಳಿಕೆಯನ್ನೂ ನಿರಾಕರಿಸಿ ಕಾಳಾಮುಖ ಶೈವಧರ್ಮವೇ ಆ ಕಾಲದಲ್ಲಿ ಪ್ರಬಲವಾಗಿತ್ತು ಎನ್ನುತ್ತಾರೆ.

'ಪೂರ್ಣಸೂರ್ಯಗ್ರಹಣ' ಕೃತಿಯಲ್ಲಿ ಕರ್ನಾಟಕದ ಸೂರ್ಯದೇವಾಲಯಗಳ ಬಗ್ಗೆ ನೀಡಿರುವ ಶಾಸನ ವಿವರಗಳು ಶಿವಪಂಚಾಯತನದ ಸೂರ್ಯ ದೇವಾಲಯಗಳಿಗೆ ಅನ್ವಯವಾಗುತ್ತವೆ, ಸ್ವತಂತ್ರ ಸೂರ್ಯದೇವಾಲಯಗಳಿಗಲ್ಲ ಎಂದಿದ್ದಾರೆ. 'ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಸಂಗೀತದ ವಿಚಾರ' ಎಂಬುದು ಪ್ರಚಾರೋಪನ್ಯಾಮಾಲೆಯ ಕೃತಿಯಾದರೂ ಸಾಹಿತ್ಯ ಶಾನಗಳನ್ನಾಧರಿಸಿ ರಚನೆಗೊಂಡ ಮಹತ್ವದಕೃತಿ. ಈ ಕೃತಿಯನ್ನು ಎಷ್ಟು ಎಚ್ಚರದಿಂದ ಬರೆದಿದ್ದಾರೆಂಬುದಕ್ಕೆ ನಾಟ್ಯದ ಪ್ರಕಾರವಾಗಿ ಪರಿಗಣಿಸಲ್ಪಟ್ಟ 'ಕೇಳಿಕೆ'ಯ ಬಗ್ಗೆ ನೀಡಿರುವ ವಿವರಗಳೇ ಸಾಕ್ಷಿಯಾಗಿವೆ ಎಂದು ಮೆಚ್ಚುಗೆ ಸೂಚಿಸಿದ್ದಾರೆ.

'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಕ್ರಿ.ಶ. ೪೫೦-೧೧೫೦ರ ಕಾಲಾವಧಿಯ ಕನ್ನಡ, ಸಂಸ್ಕೃತ ಶಾಸನ ಹಾಗೂ ಸಾಹಿತ್ಯವನ್ನೂ ಬಳಸಿಕೊಂಡು ಅನೇಕ ಸಂಶೋಧನಾ ಗ್ರಂಥಗಳಿಗೆ ಇದು ಮೂಲ ಆಕರದಂತಿದೆ ಎಂದರೆ ಅತಿಶಯೋಕ್ತಿಯಲ್ಲ ಎಂದಿದ್ದರೂ ತಮಿಳು ಶಾಸನಗಳು ವಿಪುಲವಾಗಿವೆ. ಕನ್ನಡದಲ್ಲಿ ಪ್ರಶಸ್ತಿ ಶಾಸನಗಳು ವಿರಳ ಎಂಬ ವಿಚಾರಗಳನ್ನು ಒಪ್ಪದೆ ಕನ್ನಡ ಶಾಸನಗಳಲ್ಲಿರುವಂಥ ವೈವಿಧ್ಯತೆ ಸುಂದರತೆ ಬೇರೆಡೆ ದೊರಕಿಲ್ಲ. ಕನ್ನಡದ ತಮಟುಕಲ್ಲಿನ ಗುಣಮಧುರನ ಶಾಸನ, ಕಪ್ಪೆ ಅರಭಟ್ಟ, ಜೂರ, ತಡಮೇಲಂಗಿಯ ಅಪ್ರಮೇಯನ ಶಾಸನಗಳು ಪ್ರಶಸ್ತಿಶಾಸನಗಳೆ ಎಂದಿದ್ದಾರೆ.

ದೀಪಿಕಾ ಎಂಬ ದ್ವೀಪಾವನ ಗೋವಾಬಳಿಯ ದೀವರ್ ಅಥವಾ ಕಾರವಾರದ ಬಳಿಯ ಅಂಜುದೀವ್ ದ್ವೀಪವಲ್ಲ, ಶರಾವತಿ ನದಿ ಮಧ್ಯೆ ಇರುವ ಹೈಗುಂದ ಎಂದೂ, ತ್ರಿಮೂರ್ತಿಗಳಲ್ಲಿ ಬ್ರಹ್ಮನನ್ನು ಅಸಂಭವ ಎಂದು ಚಿದಾನಂದಮೂರ್ತಿಯವರು ಕರೆದಿದ್ದರೆ, ಕರ್ನಾಟಕದಲ್ಲಿ ಬ್ರಹ್ಮನನ್ನೂ ಲಿಂಗರೂಪದಲ್ಲಿ ಪೂಜಿಸುವ ಬಗ್ಗೆ ಹೇಳಿ ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದ ಉದಾಹರಣೆ ನೀಡಿದ್ದಾರೆ ರೆಡ್ಡಿಯವರು.

ವೀರಗಲ್ಲುಗಳ ಬಗ್ಗೆ 'ಕಡಿತಲೆ' ಎಂಬುದು ಖಡ್ಗದ ಒಂದು ಪ್ರಭೇದ ಅಲ್ಲ 'ಗುರಾಣಿ' ಎಂದು ಪದದ ಅರ್ಥವನ್ನು ತಿಳಿಸುತ್ತಾರೆ. ಹಾಗೆಯೇ ಶಾಸನದಲ್ಲಿ ಧ್ವಜದ ಕೆಳಗೆ ನಿಂತಿರುವ ಸ್ತ್ರೀ ರಾಜಲಕ್ಷ್ಮಿಯ ಸಂಕೇತ ಎಂದಿದ್ದನ್ನು ಅಲ್ಲವೆಂದೂ ಆಕೆ ಕಪಾಲಭೈರವಿ ಎಂದೂ, ಹಿರೇಗುಂಡಕಲ್ಲು, ಶ್ರವಣಗುಡಿಗಳು ಯುದ್ಧ ನಡೆದ ಸ್ಥಳಗಳಲ್ಲವೆಂದೂ ಬೇರೆ ಬೇರೆ ಕಡೆ ಸತ್ತ ವೀರರ ಸ್ಮಾರಕ ಶಿಲೆಗಳನ್ನು ಇಲ್ಲಿ ನೆಡಲಾಯಿತೆಂದು ರೆಡ್ಡಿಯವರು ತಿದ್ದುಪಡಿ ಮಾಡಿದ್ದಾರೆ ತಮ್ಮದೇ ಆದ ಸಮರ್ಥ ರೀತಿಯಲ್ಲಿ ಅರ್ಥೈಸಿದ್ದಾರೆ.

'ಸಪ್ತಮಾತೃಕೆಯರು' ಎಂಬ ಲೇಖನದಲ್ಲಿ ಏಳರಾಟ ಎಂತಹುದು ಅದರ ನಿವಾರಣೆ ಹೇಗೆ, ಏಳರಾಟವನ್ನು ಏಳು ಸ್ತ್ರೀದೇವತೆ ಅಥವಾ ಸಪ್ತಮಾತೃಕೆಯರೊಡನೆ ಸಮೀಕರಿಸಿದ್ದಾರೆ. ಗ್ರಾಮದ ಅಧಿದೇವತೆಗಳು ಸ್ತ್ರೀಯರೇ, ಉಗ್ರದೇವತೆಗಳು ಹಾಗೂ ಈ ದೇವಿಯರು ಬಹುಮಟ್ಟಿಗೆ ಶಿವನಿಗೆ ಸಂಬಂಧವುಳ್ಳವರು. ಪುರುಷ ದೇವತೆಗಳಿಂದ ಕೊಲ್ಲಲಾಗದ ಕ್ರೂರ ರಾಕ್ಷಸರನ್ನು ಈ ದೇವಿಯರು ಕೊಂದು ಸಾಮಾನ್ಯ ಜನರಿಗೆ ಅಭಯ ಪ್ರದಾನ ಮಾಡಿ ಕಷ್ಟನಿವಾರಣೆ ಮಾಡುವುದು ಇವರ ವಿಶೇಷ. ಮುಂಡಕೋಪನಿಷತ್ತಿನಲ್ಲಿ ಕಾಳೀ, ಕರಾಳೀ, ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ ಸುಪುಲ್ಲಿಂಗಿನೀ, ವಿಶ್ವರುಚೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬ ಸಪ್ತಮಾತೃಕೆಯರನ್ನು ಹೆಸರಿಸಲಾಗಿದೆ. ಕಾಳಿಕಾಪುರಾಣದ ಪ್ರಕಾರ ಶುಂಭ ನಿಶುಂಭರನ್ನು ಕೊಲ್ಲಲು ತನ್ನ ರೋಮಗಳಿಂದ ಸಹಾಯಕ್ಕಾಗಿ ಸೃಷ್ಟಿಸಿದ ದೇವಿಯರಿಗೆ ರಾಕ್ಷಸ ಸಂಹಾರದ ನಂತರ ದೇವಿಯು ಪ್ರಪಂಚದಲ್ಲಿರುವ ಮರಗಿಡಸೊಪ್ಪುಹೂಗಳಲ್ಲಿ ನೀವು ನೆಲೆಸಿ ಪುಣ್ಯಾತ್ಮ ಪಾಪಾತ್ಮ ಜನರನ್ನು ನೋಡುತ್ತಿರಬೇಕು, ಪಾತಕಿಗಳನ್ನು ಕಾಡಬೇಕು, ಎಲ್ಲ ಲೋಕದವರಿಂದ ಪೂಜೆ ಪಡೆಯಿರಿ, ಮಕ್ಕಳ ಮೇಲೆ ಕೃಪೆ

ಇಡಿರಿ ಎಂದು ಕಾರ್ಯಭಾರವನ್ನು ವಹಿಸಿಕೊಟ್ಟಳು. ಅದರಂತೆ ಸಪ್ತಮಾತೃಕೆಯರು ಜನರಿಗೆ ಕೊಡುವ ಕಷ್ಟ, ಕೋಟಲೆ, ರೋಗ ರುಜಿನವನ್ನು ಏಳರಾಟವೆಂದು ಕರೆಯಲಾಗುತ್ತದೆ ಎಂದು ಬಸವರಾಜನ ಕಾಳಿಕಾ ಪುರಾಣದಲ್ಲಿ ಹೇಳಿದೆ. ಕರ್ನಾಟಕದಲ್ಲಿ ಗಂಗರ ಕಾಲದ ಶಿವದೇವಾಲಯಗಳಲ್ಲಿ ಮಾತೃಕೆಯರು ಪರಿವಾರ ದೇವತೆಗಳಾಗಿದ್ದಾರೆ. ಚೋಳರು ಗಂಗವಾಡಿಯನ್ನಾಕ್ರಮಿಸಿದ ನಂತರ ಒಂದೇ ಕಲ್ಲಿನಲ್ಲಿ ಏಳು ದೇವಿಯರನ್ನೂ ಇಕ್ಕೆಲಗಳಲ್ಲಿ ವಿನಾಯಕ, ಕುಮಾರಸ್ವಾಮಿಯನ್ನು ಶಿಲ್ಪದಲ್ಲಿ ಬಿಡಿಸುವುದು ಆರಂಭವಾಯಿತು. ಕೋಲಾರ, ಕೆಲಸೂರು ನರಸಮಂಗಲ ಮುಂತಾದೆಡೆಗಳಲ್ಲಿ ಸಪ್ತಮಾತೃಕೆಯರಿಗೆ ಪ್ರತ್ಯೇಕ ದೇವಾಲಯಗಳಿವೆ. ಸಪ್ತಮಾತೃಕೆಯರ ಜೊತೆಯಲ್ಲಿ ಯೋಗೀಶ್ವರಿ-ಕೊಂತ್ಯಮ್ಮ, ಭೈರವ ಅಥವಾ ಪೋತರಾಜ ಹಾಗೂ ಕ್ಷೇತ್ರಪಾಲ ಇರುತ್ತಾರೆ. ಈ ಸಪ್ತಮಾತೃಕಾ ಪೂಜೆ, ವಿಧಿ ಆಚರಣೆಗಳ ಬಗ್ಗೆಯು ವಿವರಗಳನ್ನು ಲೇಖಕರು ನೀಡಿ ಏಳರಾಟವೆಂದರೆ ಸಪ್ತಮಾತೃಕಾ ಪ್ರಕೋಪದಿಂದುಂಟಾಗುವ ಜನರ ಕಷ್ಟ ಕೋಟಲೆ ಎಂಬ ನಿರ್ಧಾರಕ್ಕೆ ಬಂದು ಸಾಮಾನ್ಯ ನಂಬಿಕೆಯಾದ ಏಳರಾಟ ಶನಿ ಅಥವಾ ಶನಿಕಾಟದಿಂದ ಭಿನ್ನವಾದ ರೀತಿಯಲ್ಲಿ ಏಳರಾಟವನ್ನು ಅರ್ಥೈಸಿದ್ದಾರೆ.

ಡಾ॥ ಸೂರ್ಯನಾಥ ಕಾಮತರೊಂದಿಗೆ ಗೆಝೆಟಿಯರ್ ಇಲಾಖೆಯಲ್ಲಿ ಕಾರ್ಯ ನಿರತರಾದಾಗ ತಮ್ಮ ಅನುಭವಗಳನ್ನು ಗೆಝೆಟಿಯರ್‌ಗಳು ಕಾಮತರ ಸಂಪಾದಕತ್ವದಲ್ಲಿ ಪಡೆದುಕೊಂಡ ಹೊಸ ಸ್ವರೂಪ, ಅದರ ಮಹತ್ವದಲ್ಲಿ ಉಂಟಾದ ಹೆಚ್ಚಳ ಇವುಗಳ ಬಗ್ಗೆ ತಿಳಿಸಿದ್ದಾರೆ ರೆಡ್ಡಿಯವರು.

ಹೆಗ್ಗಡದೇವನಕೋಟೆ, ನಿಜಗಲ್, ಶಿವಗಂಗೆ, ಮಹಿಮಾರಂಗಪುರದ ಬೆಟ್ಟ, ಹೆಗ್ಗುಂದದ ಬೆಟ್ಟಗಳನ್ನು ಒಂದೇ ದಿನದಲ್ಲಿ ಹತ್ತಿಳಿದು ಮಣ್ಣೆಯಲ್ಲಿ ಕ್ಷೇತ್ರಕಾರ್ಯ ನಡೆಸುವಾಗ ಪಿರಿಯಾಪಟ್ಟಣ, ಕೊಳ್ಳೆಗಾಲ ಪ್ರವಾಸಗಳಲ್ಲಿ ಕಾಮತರ ಜೊತೆಗಿದ್ದು ಅವರ ಕಾರ್ಯೋತ್ಸಾಹ, ಕಾರ್ಯದಕ್ಷತೆ, ಕಷ್ಟಸಹಿಷ್ಣುತೆ, ಸರಳ ನಡೆ-ನುಡಿ, ಆಹಾರ ಸೇವನೆ, ಮಾಹಿತಿ ಸಂಗ್ರಹದ ರೀತಿ, ವ್ಯಕ್ತಿಗಳನ್ನು ಸಂಪರ್ಕಿಸಿ ಸ್ನೇಹ ಬೆಳೆಸುವ ವೈಖರಿ ಇವುಗಳಿಂದ ಪ್ರಭಾವಿತರಾಗಿದ್ದಾರೆ. ಹಾಗೆಯೇ ಕಾಮತರ ಸಂಪಾದಕತ್ವದಲ್ಲಿ ಗೆಝೆಟಿಯರ್‌ಗಳು ಕಂಡು ಕ್ರಾಂತಿಕಾರಿಗೆ ಬದಲಾವಣೆಗಳಿಂದ ಪಡೆದ ಕಾಯಕಲ್ಪಗಳನ್ನು ವಿವರಿಸುತ್ತಾರೆ. ಗೆಝೆಟಿಯರು ಹಿಂದಿನಂತೆ ಕೇವಲ ಅಂಕಿ-ಅಂಶಗಳ ದಾಖಲಾತಿ ಪುಸ್ತಕವಾಗಿರದೆ ಆಯಾಯಾ ಜಿಲ್ಲೆಗಳಲ್ಲಿ ನಡೆದ ಕಾಲಕಾಲದ ಘಟನೆಗಳ ಚಾರಿತ್ರಕ ಹಿನ್ನೆಲೆಯನ್ನು ಆಧಾರಗಳ ಸಮೇತ, ಸಮಗ್ರ ಸಮರ್ಪಕ ಮಾಹಿತಿಯೊಡನೆ, ಛಾಯಾಚಿತ್ರಗಳೊಂದಿಗೆ, ಐತಿಹಾಸಿಕ ಪ್ರಾಮುಖ್ಯತೆಯುಳ್ಳ ಸ್ಥಳಗಳ ವಿವರಗಳೊಂದಿಗೆ ದೃಢವಾದ ಖಚಿತ ಹಾಗೂ ಸ್ಪಷ್ಟರೂಪದಲ್ಲಿ ನಿರೂಪಿಸಲ್ಪಟ್ಟು ಮಹತ್ವವನ್ನು ಹೆಚ್ಚಿಸಿಕೊಂಡದ್ದನ್ನು ಮೆಚ್ಚಿದ್ದಾರೆ.

'ಕೋಲಾರ ಜಿಲ್ಲೆಯ ಶಾಸನೋಕ್ತ ಶಿಲ್ಪಿಗಳು' ಎಂಬ ಲೇಖನದಲ್ಲಿ ಲೇಖಕರು ಶಿಲ್ಪಿಯ ಹೆಸರು ಶೇಕಡ ೯೦ರಷ್ಟು ಶಾಸನಗಳಲ್ಲಿ ಕಾಣಬರುವುದಿಲ್ಲ. ಕಾರಣ ಶಿಲ್ಪಿಯು ತನ್ನ ಹೆಸರನ್ನು ಹೇಳಬಾರದೆಂಬ ನಿಯಮವನ್ನು ಪಾಲಿಸಿಕೊಂಡು ಬಂದಿರುವುದು. ತಾಮ್ರಶಾಸನಗಳಲ್ಲಿ ತಮ್ಮ ಹೆಸರನ್ನು ಆಶ್ರಯದಾತನ ವಂಶದ ಹೆಸರಿನಲ್ಲಿ ಗುರುತಿಸಿಕೊಂಡಿರುತ್ತಾರೆ. ಶಿಲ್ಪಿಗಳನ್ನು ಶಾಸನಗಳಲ್ಲಿ ತ್ವಷ್ಟಕಾರ, ತಟ್ಟೆಕಾರ, ಶಿಲ್ಪಿ, ಕಮ್ಮಟ, ಕರ್ಮಾರ, ಪಂಚಿಲ, ವಿಶ್ವಕರ್ಮಣ, ಕಲ್ಲುಕುಟಿಗ ಮುಂತಾದ ಹೆಸರುಗಳಿಂದ ಉಲ್ಲೇಖಿಸಿದೆ. ಇವರ ಹೆಸರುಗಳ ಅಂತ್ಯದಲ್ಲಿ ಆಚಾರ್ಯ, ಆಚಾರಿ, ಓಜ ಎಂದಿರುತ್ತದೆ. ಹೀಗಾಗಿ ಇವರನ್ನು ಇಂದಿನ ವಿಶ್ವಕರ್ಮ ಜನಾಂಗದವರೊಡನೆ ಗುರುತಿಸಬಹುದಾಗಿದೆ. ವೀರಗಲ್ಲುಗಳನ್ನು ಮಾಡಿದ ಶಿಲ್ಪಿಗಳು ಸ್ವಲ್ಪ ಮಟ್ಟಿಗೆ ಅಕ್ಷರಸ್ಥರಾಗಿರುತ್ತಿದ್ದು ಶಾಸನ ಪಾಠವನ್ನು ಬರೆದವರೂ, ಕೆತ್ತಿದವರೂ ಅವರೇ ಆಗಿರುತ್ತಿದ್ದರು. ಕೆಲವು ಕೆರೆತೂಬು, ದೇವಾಲಯಗಳ ಶಾಸನಗಳಲ್ಲೂ ಶಿಲ್ಪಿಗಳ ಹೆಸರು ಕಂಡುಬಂದಿವೆ. ಕೊಯತೂರು ಕಾಸಿಗ ಆಯ್ಯುಮ್ಮಾಚಾರಿ, ನೊಳಂಬಾಚಾರಿ, ಚೆಣೋಜ, ಮುಂತಾದ ಶಿಲ್ಪಿಗಳ ಹಾಗೂ ಅವರು ಕೆತ್ತಿದ ಶಾಸನಗಳ ಪಟ್ಟಿಯನ್ನೂ ಲೇಖಕರು ನೀಡಿ ಅಲಕ್ಷಿತರಾದ ಶಿಲ್ಪಿಗಳ ಪ್ರತಿಭೆಯನ್ನು ಬೆಳಕಿಗೆ ತರುವ ಸಫಲ ಪ್ರಯತ್ನ ಮಾಡಿದ್ದಾರೆ.

ರಾಜ್ಯ ಪುರಾತತ್ತ್ವ ಇಲಾಖೆಯ ಕೋಲಾರ ಜಿಲ್ಲಾ ಸಂಪುಟದ ಲೇಖನದಲ್ಲಿ ಅರ್ಥವ್ಯವಸ್ಥೆಯ ಬಗ್ಗೆ ಪ್ರಸ್ತಾಪಿಸುತ್ತ ೧೧ನೆಯ ಶತಮಾನದಲ್ಲಿ ಐನೂರ್ವರು ವ್ಯಾಪಾರಿಗಳು, ಮಹೇಂದ್ರ ಚತುರ್ವೇದಿಮಂಗಲವನ್ನು ನಿರ್ಮಿಸಿ ಅದನ್ನು ಅಯ್ಯಾವೊಳೆಯನ್ನಾಗಿ ಪರಿವರ್ತಿಸಿದ್ದನ್ನು, ವಿಜಯನಗರ ಕಾಲದಲ್ಲಿದ್ದ 'ಸಾಲು ಮೂಲೆಯ ಸಮಸ್ತ ಹಲರು' ಅಥವಾ ಐವತ್ತಾರು ದೇಶದವರ ಉಲ್ಲೇಖವನ್ನು, ಕೋಮಟ (ಶೆಟ್ಟಿ)ಗರು ವ್ಯಾಪಾರ ಮಾಡುತ್ತಿದ್ದ ಸ್ಥಳಗಳನ್ನು, ವೀರಶೈವ ವ್ಯಾಪಾರಿಗಳನ್ನು, ಬ್ರಿಟಿಷರ ಕಾಲದಲ್ಲಿ ವ್ಯಾಪಾರಕ್ಕಾಗಿ ಏರ್ಪಡಿಸಿದ ಸಂತೆಗಳನ್ನು, ಮಾರಾಟದ ವಸ್ತುಗಳನ್ನು, ಕಾಡಾರಂಭ, ನೀರಾರಂಭ, ಕುದುರೆಸುಂಕ, ತುರುಕಾಣಿಕೆ, ಬೀಜವರಿ, ಮಗ್ಗದೆರೆ ಮುಂತಾದ ತೆರಿಗೆ ಮತ್ತು ಸುಂಕಗಳನ್ನು, 'ದಸವಂದ' ಎಂಬ ನೀರಾವರಿ ತೆರಿಗೆಯನ್ನು ಧಾನ್ಯದ ರೂಪದಲ್ಲಿ ವಸೂಲಿ ಮಾಡುತ್ತಿದ್ದುದನ್ನು, ಹುನಗುಂದದಲ್ಲಿ ಚಿನ್ನದ ಗಣಿ, ಚಪ್ಪಡಿ ಕಲ್ಲು ಸಾಗಣೆ, ನೇಯ್ಗೆ, ಬಳೆ ತಯಾರಿಕೆ ಮುಂತಾದ ಕೈಗಾರಿಕೆಗಳನ್ನು ಕುರಿತು ತಿಳಿಸಿದ್ದಾರೆ.

ಚಿತ್ರದುರ್ಗ ಜಿಲ್ಲೆಯ ವ್ಯಾಪಾರ, ಗಣಿಗಾರಿಕೆ ಬಗ್ಗೆ ತಿಳಿಸುವ ಮುಖ್ಯ ಅಂಶಗಳೆಂದರೆ ಹೊಳಲ್ಕೆರೆಯಲ್ಲಿ ಸಿಡಿಲೇಶ್ವರ ದೇವಾಲಯಕ್ಕೆ ೧೦೦೦೦ ಬಳ್ಳಿ (ವೀಳೆಯದೆಲೆಬಳ್ಳಿ) ದಾನ ಶಾಸನೋಕ್ತವಾಗಿರುವುದರಿಂದ ವೀಳೆಯದೆಲೆ ಬೆಳೆ, ಬಳಕೆ, ವ್ಯಾಪಾರ ವ್ಯಾಪಕವಾಗಿದ್ದಿತು. ಕುರಿದೆರೆಗೆ, ವಡ್ಡರಾವುಳ ಪೆರ್ಜುಂಕ, ವೃತ್ತಿ ತೆರಿಗೆಗಳೂ, ತಪ್ಪು–ತವುಡಿ, ದಂಡ ಕಿರುಕುಳ, ಮದುವೆ, ನಾಮಕರಣ ಸುಂಕ ಶಾಸನೋಕ್ತವಾಗಿವೆ. ಉಪ್ಪಿನ ಮೋಳೆ, ನಾಣ್ಯ ಅಚ್ಚು ಹಾಕುವ ಕಂಮಟ ಕೋಗುಂಡಿಯನ್ನು ಉಲ್ಲೇಖಿಸಲಾಗಿದೆ. ಗಂಗನ ಗಳೆ ಧರಣ, ಕೊಳಗ, ಅಡ್ಡ ಬಳ್ಳ ಮುಂತಾದ ಅಳತೆ ತೂಕಗಳೂ ಪ್ರಸ್ತಾಪಗೊಂಡಿವೆ. 'ಪಿಂಜಾರ' ಎಂದರೆ ಹತ್ತಿ ಹಿಂಜುವವರ ಉಲ್ಲೇಖ ಗಮನಾರ್ಹ. ಎಂಟು ಪಿಟ್ಟುಗಳು, ಹನ್ನೆರಡು ಪಿಟ್ಟುಗಳು ಮುಂದಿನ ಕಾಲದ ಹನ್ನೆರಡು ಆಯಗಾರ ಅಥವಾ ಬಾರಾಬಲೂತಿಯಾಗಿದ್ದಿತು. ಇವರನ್ನೇ ೧೮ ಸಮಯ, ೧೮ ಕೈಯ ಎಂದೂ ಕರೆಯಲಾಗಿದೆ ಎಂದಿದ್ದಾರೆ. ಪಟ್ಟಣಸ್ವಾಮಿ ಸಮಸ್ತ ನಖರ ಮುಂಮುರಿದಂಡಗಳು, ಶೆಟ್ಟರ ಒಳಪಂಗಡವಾದ ಸ್ಥಳ, ಪರಸ್ಥಳದ ಸೆಟ್ಟಿ, ಸವುದ್ರಿ ಕೋಮಟಿರನ್ನು ಶಾಸನ ಹೆಸರಿಸಿರುವುದನ್ನೂ ಗಮನಿಸಿ ತಿಳಿಸಿದ್ದಾರೆ.

ಗದಗ ಜಿಲ್ಲೆಯಲ್ಲಿ ಸಾಮಾನ್ಯವಾಗಿ ಕಾಣಬರುವ ಅಯ್ಯಾವೊಳೆ ಐನೂರ್ವರ ಒಳಗುಂಪುಗಳಾದ ಗಾಣಿಗರು, ತಂಬುಲಿಗರು 'ಉಗುರು' ಅಂಬಿಗರು ಇವರಲ್ಲದೆ, ಸೆಟ್ಟಿಗುತ್ತ ಗವರೆ, ಸಾಲಿಗರು ಪ್ರಸ್ತಾಪಗೊಂಡಿದ್ದಾರೆ. ಕುರ್ತಕೋಟಿ ಶಾಸನದಲ್ಲಿನ ದೋಣಿಸಾಸಿರ್ವರ ಉಲ್ಲೇಖವನ್ನು ದೋಣಿಗಳು ನೀರಲ್ಲಿ ಮುಳುಗಿದರೆ ನೀಡುತ್ತಿದ್ದ ಪರಿಹಾರಕ್ಕೆ ಸಂಬಂಧಿಸಿದ್ದಿರಬೇಕು ಎಂದು ಲೇಖಕರು ಊಹಿಸಿದ್ದಾರೆ. ಕಿರುದೆರೆಯಲ್ಲಿ ಮನೆವಣ, ಪಿರಿಯರವಣ, ಧನಬಳಂ, ಮಂಟಿಗಣ್ಣುಗ ಮತ್ತು ಅಂಗಡಿಯ ತಿಂಗಳ, ಕಾಳಗೊಲ್ಲು ಸೇರಿದೆ ಎಂದಿದ್ದಾರೆ. ಭೂಮಾಪನಕ್ಕಾಗಿ ಮತ್ತರು, ಕಮ್ಮ, ಮನೆನಿವೇಶನಕ್ಕಾಗಿ ಹಸ್ತ ನೂರುಗಡಿಂಬದ ಕೋಲು, ಲಕ್ಷ್ಮೇಶ್ವರ ಗಳೆ, ಮಲೆಪರಮಾರಿಯಕೋಲು, ಮಲ್ಲಹರಮಾರ ಕೋಲುಗಳು, ಅವುಗಳ ಅಳತೆಗೇಣುಗಳು, ಪ್ರಚಲಿತವಿದ್ದ ನಾಣ್ಯಗಳು, ಬಡ್ಡಿವ್ಯವಹಾರ, 'ಕಿಸುಗುಂದಿ' ಎಂದರೆ ತಾಮ್ರಗಣಿ, ಈ ಮುಂತಾದ ವಿವರಗಳನ್ನು ಸಾಧಾರವಾಗಿ ನೀಡಿದ್ದಾರೆ.

ಮಂಡ್ಯ ಜಿಲ್ಲೆಯ ವ್ಯಾಪಾರ ವಾಣಿಜ್ಯ ಕೈಗಾರಿಕೆ ಬಗ್ಗೆ ಬರೆಯುತ್ತಾ ಅಗ್ರಹಾರಗಳು ಹೆಚ್ಚಾಗಿದ್ದರೆ ವ್ಯಾಪಾರಕೇಂದ್ರಗಳ ಸಂಖ್ಯೆಯೂ ಹೆಚ್ಚಿ ವಾಣಿಜ್ಯ ಬೆಳೆಯುತ್ತದೆ. ಮಂಡ್ಯ ಜಿಲ್ಲೆಯಲ್ಲಿ ಅಗ್ರಹಾರಗಳ ಸಂಖ್ಯೆ ಕೇವಲ ೨೫ ಮಾತ್ರ ಎಂದಿದ್ದಾರೆ. ದವಸ ಧಾನ್ಯ ಎಲೆ ಅಡಿಕೆ ತೆಂಗು ಮತ್ತು ವ್ಯವಸಾಯೋತ್ಪನ್ನಗಳ ಮಾರಾಟ ಸ್ಥಳೀಯರ ಕೈಯಲ್ಲಿದ್ದಿತು ದೇವಾಲಯಗಳೇ ವ್ಯಾಪಾರಿಗಳ ಸರಕಿಗೆ ದೊಡ್ಡ ಗಿರಾಕಿಗಳಾಗಿದ್ದವು ಎಂದಿದ್ದಾರೆ. ಹರತಿ ರಾಯಪ್ಪರಾಜನು ಕೃಷಿ ಭೂಮಿಯನ್ನು ೧೨ ರೀತಿಯಲ್ಲಿ ವಿಂಗಡಿಸಿ ಬೇರೆ ಬೇರೆ ರೀತಿ ತೆರಿಗೆ ವಿಧಿಸಿದ್ದನ್ನು ತಿಳಿಸುತ್ತಾರೆ. ಅಲ್ಲದೆ ಶಾಸನೋಕ್ತ ೬೮ ತೆರಿಗೆ, ಸುಂಕಗಳ ದೀರ್ಘ ಪಟ್ಟಿಯನ್ನೇ ಲೇಖಕರು ಓದುಗರ ಮುಂದಿಟ್ಟಿದ್ದಾರೆ.

ಮೇಲೆ ವಿವರಿಸಲ್ಪಟ್ಟ ಲೇಖನಗಳು ಡಾ॥ ದೇವರಕೊಂಡಾರೆಡ್ಡಿಯವರ ವೈದುಷ್ಯ ಅಥವಾ ವಿದ್ವತ್ತಿಗೆ ಹಾಗೂ ವೈವಿಧ್ಯಕ್ಕೆ ಹಿಡಿದ ಕೈಗನ್ನಡಿಗಳೆಂದು ಹೇಳಬಹುದಾಗಿದೆ. ಕರ್ನಾಟಕದ ಒಬ್ಬ ಶಾಸನತಜ್ಞರಾಗಿ ಶಾಸನಗಳನ್ನು ಪತ್ತೆಹಚ್ಚಿ, ಪಡಿಯಚ್ಚು ತೆಗೆದು, ಶಾಸನಪಾಠವನ್ನು ನಿಷ್ಕರ್ಷಿಸಿ ಶಾಸನದ ಲಿಪಿ, ಭಾಷೆ, ಸಂಸ್ಕೃತ, ಕನ್ನಡ, ತೆಲುಗು, ತಮಿಳು ಯಾವುದೇ ಇರಲಿ ನೀಡುತ್ತಾರೆ. ಶಾಸನಗಳನ್ನು ತಲಸ್ಪರ್ಶಿ ಅಧ್ಯಯನ ಮಾಡಿ ಕಾಲನಿರ್ಧಾರ, ರಾಜಮನೆತನಗಳ ಇತಿಹಾಸದಲ್ಲಿನ ಘಟನಾವಳಿಗಳು, ರಾಜರ ಸಾಧನೆಗಳು, ಬಿರುದುಗಳು, ವಿಭಿನ್ನ ರಾಜವಂಶೀಯರ ನಡುವಣ ಸಂಬಂಧಗಳು, ಸ್ಥಿತ್ಯಂತರಗಳು ಮುಂತಾದ ಸಮಸ್ಯೆಗಳಿಗೆ ಸಾಧಾರವಾಗಿ, ತರ್ಕಬದ್ಧವಾಗಿ, ತುಲನಾತ್ಮಕವಾಗಿ ವಿವೇಚಿಸುವುದರ ಮೂಲಕ ಸ್ಪಷ್ಟ ನಿರ್ದಿಷ್ಟ, ಸಂದರ್ಭೋಚಿತ ವಿಚಾರಪೂರ್ಣವಾದ ಸಾಭಿಪ್ರಾಯಪೂರ್ವಕ ಉತ್ತರಗಳನ್ನು ಓದುಗರ ಮುಂದಿಡುವ ರೆಡ್ಡಿಯವರ ಪಾಂಡಿತ್ಯ ಪ್ರತಿಭೆಗಳು ಸಂಶೋಧಕರಿಗೆ ದಾರಿದೀಪವಾಗಿವೆ. ಶಾಸನಗಳೇ ಅಲ್ಲದೆ ಶಿಲ್ಪ, ಜಾನಪದ, ಕಲೆ, ಜೈನಧರ್ಮ, ಧಾರ್ಮಿಕ ನಂಬಿಕೆಗಳು, ಸಂಪ್ರದಾಯಗಳು, ಆಚರಣೆಗಳ ಮಹತ್ವ, ದುಷ್ಪ್ರಭಾವ ಇವುಗಳ ಬಗ್ಗೆಯೂ ಆಸಕ್ತಿ ತಳೆದು ಅಧ್ಯಯನ ನಡೆಸಿ ತಮ್ಮ ಮೌಲಿಕ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಸಾಹಿತ್ಯ ಗ್ರಂಥಾಧ್ಯಯನ, ವಿಮರ್ಶೆ, ಸಂಶೋಧನಾ ಪ್ರವಾಸ, ಕ್ಷೇತ್ರಕಾರ್ಯಗಳಲ್ಲೂ ಇವರು ಸಿದ್ಧಹಸ್ತರಾಗಿದ್ದಾರೆ. ಕಾರ್ಯದಕ್ಷತೆ, ನಿಷ್ಠೆ, ನೈಪುಣ್ಯಗಳು ಇವರ ಬಿಡಿ ಲೇಖನಗಳಲ್ಲಿ ಎದ್ದುಕಾಣುತ್ತವೆ. ಇಂತಹ ಬಹುಮುಖೀ ಪ್ರತಿಭೆಯ ದ್ಯೋತಕಗಳಾಗಿರುವ ಅವರ ಬಿಡಿ ಲೇಖನಗಳನ್ನು ಅಧ್ಯಯನ ಮಾಡಲು ಪ್ರೇರೇಪಿಸಿ ಈ ಲೇಖನವನ್ನು ಬರೆಯಲು ಅವಕಾಶ ಒದಗಿಸಿ ಕೊಟ್ಟ ಡಾ॥ ದೇವರಕೊಂಡಾರೆಡ್ಡಿ ಅಭಿನಂದನ ಸಮಿತಿಯವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

# ಚಿತ್ರ ಲಿಪಿ

– ಡಾ॥ ಅ.ಲ. ನರಸಿಂಹನ್*

**ಚಿತ್ರ**ಲಿಪಿ ಕ್ರಿಪೂ. ೬೦೦೦ ದ ವೇಳೆಯಲ್ಲಿ ಪ್ರಪಂಚದ ವಿವಿಧ ಭಾಗಗಳಲ್ಲಿ ವಿವಿಧ ರೂಪಗಳಲ್ಲಿ ಕಾಣಿಸಿಕೊಂಡಿತು. ಇತಿಹಾಸ ಪೂರ್ವದ ಗುಹೆ ಅಥವಾ ಬಯಲು ಬಂಡೆ ಚಿತ್ರಗಳು ಮೂವತ್ತೈದು ಸಾವಿರ ವರ್ಷಗಳ ಹಿಂದೆಯೇ ರಚಿತವಾಯಿತಾದರೂ ಅದು 'ಲಿಪಿ'ಯ ಸ್ವರೂಪ ತಾಳಲು ಸುಮಾರು ಮೂವ್ವತ್ತು ಸಹಸ್ರಮಾನಗಳೇ ಬೇಕಾಯಿತು. 'ಲಿಪಿ'ಯ ಮುಖ್ಯ ಲಕ್ಷಣವೆಂದರೆ ಒಂದು ಲಿಪಿಗೆ ಸ್ವರ, ವ್ಯಂಜನಗಳು ಸೇರ್ಪಡೆಯಾಗಿ ಇನ್ನೊಂದೇ ಧ್ವನಿ ಜನಿಸುವುದು ಹಾಗೂ ಪ್ರಾದೇಶಿಕ ಭಾಷೆಯೊಂದು ರೂಪುಗೊಳ್ಳುವುದು. ಇದರೊಂದಿಗೆ ಕನಿಷ್ಠ ಪ್ರಾದೇಶಿಕ ಜನರಾದರೂ ಅದನ್ನು ಓದಿ ಅರ್ಥೈಸಿಕೊಳ್ಳುವ, ಸಂವಹನ ಮಾಧ್ಯಮವಾಗುವ ಆವಶ್ಯಕತೆಯಿದೆ. ನಾಗರಿಕತೆಯ ಹುಟ್ಟಿನ ಹಲವಾರು ಅಂಶಗಳಲ್ಲಿ ಈ ಬಗೆಯ 'ವಿದ್ಯಾಭ್ಯಾಸ' ಸಹ ಒಂದು ಪ್ರಮುಖ ಅಂಶವಾಗುತ್ತದೆ. ಆದರೆ ಭಾಷೆಗೆ ಲಿಪಿ ಇರಲೇಬೇಕೆಂದಿಲ್ಲ. ಇಂದಿಗೂ ಪ್ರಪಂಚದ ಭಾಷೆಗಳಲ್ಲಿ ಸುಮಾರು ಮೂರನೇ ಒಂದು ಭಾಗದಷ್ಟು ಭಾಷೆಗಳಿಗೆ ಲಿಪಿಯೇ ಇಲ್ಲ. ಅಂತಹ ಸಂದರ್ಭದಲ್ಲಿ ಅವು ಹತ್ತಿರದ ಯಜಮಾನ ಭಾಷೆಯ ಲಿಪಿಯನ್ನೇ ಆಶ್ರಯಿಸುತ್ತವೆ. ಕರ್ನಾಟಕದ್ದೇ ಆದ ತುಳು ಭಾಷೆಗೆ ವಟ್ಟೆಳುತ್ತನ್ನು ಹೋಲುವ ಲಿಪಿಯೊಂದಿದ್ದು, ಕೆಲ ಶತಮಾನಗಳ ಕಾಲ ಮರೆಯಾಗಿದ್ದು ಮತ್ತೆ ಇಂದು ಚಾಲನೆ ದೊರೆಯುತ್ತಿದೆ. ಚಿತ್ರ ಚಾಕ್ಷುಷವಾದರೆ, ಭಾಷೆ ಶಾಬ್ದಿಕ. ಆದರೆ ಒಂದು ಅರ್ಥದಲ್ಲಿ 'ಚಿತ್ರ' ಎಂಬುದು ವಿಶ್ವಭಾಷೆ. ಪ್ರಕೃತಿ, ದೈನಂದಿನ ಉಪಕರಣಗಳು, ಪಶು–ಪಕ್ಷಿಗಳು, ಮಾನವನ ಅಂಗಾಂಗಗಳ ಚಲನವಲನ, ಬಣ್ಣಗಳು ಇತ್ಯಾದಿಗಳು ಪ್ರಪಂಚದಾದ್ಯಂತ – ಕೆಲವು ಅಪವಾದಗಳ ವಿನಾ – ಒಂದೇ ಬಗೆಯ ಅರ್ಥ ನೀಡುವಂತಹುವು.

ಚಿತ್ರ ರಚನೆ ಆದಿಮ ಕಾಲದಿಂದಲೇ ಕಂಡುಬರುತ್ತದೆ. ವಿಶ್ವದಾದ್ಯಂತ ಜನ ಜೀವನ ಕಾಣಿಸಿಕೊಂಡಿರುವ ಪ್ರದೇಶಗಳಲ್ಲೆಲ್ಲಾ ಗುಹೆ, ಬಯಲು, ಬಂಡೆ, ಶಿಲಾಶ್ರಯಗಳಲ್ಲಿ ಒಂದಲ್ಲ ಒಂದು ಬಗೆಯ ಚಿತ್ರ, ಚಿಹ್ನೆ, ಜ್ಯಾಮಿತಿಯ ಆಕಾರಗಳು ಒಂದು ಅಥವಾ ಹಲವು ಬಣ್ಣಗಳಲ್ಲಿ ರಚಿತವಾಗಿವೆ. ಅಲ್ಲದೆ ಗೆರೆಯಂತೆ ಕೊರೆದು ಇಲ್ಲವೇ ಬಂಡೆಯ ಮೇಲೆ ಗೀರಿ ಗಾಯ ಮಾಡಿದಂತೆಯೂ ಆಕೃತಿಗಳ ರಚನೆಗಳಾಗಿವೆ. ಇವುಗಳ ಆರಂಭದ ಕಾಲ ಕ್ರಿಪೂ. ಮೂವತ್ತೈದು ಸಾವಿರ ವರ್ಷಗಳೆಂದು ಅಂದಾಜಿಸಲಾಗಿದೆ. ಈ ಬಗೆಯ ಚಿತ್ರಗಳು ಆದಿಮ, ಅನಾಗರಿಕ, ಇತಿಹಾಸ ಪೂರ್ವ ಕಾಲದ್ದೆಂದೂ, ಆತನು ನಾಗರಿಕನಾಗುತ್ತಿದ್ದಂತೆ ಇಂತಹ ಮುಗ್ಧ ಚಿತ್ರರಚನೆ ಅಂತ್ಯ ಕಂಡಿತೆಂದೂ ಭಾವಿಸಲಾಗಿದೆ. ಆದರೆ ಈ ಚಿತ್ರಗಳದ್ದೇ ಒಂದು ಶೈಲಿ ಎಂದು ಭಾವಿಸಿದಲ್ಲಿ ಮುಂದೆ ಇತಿಹಾಸದಲ್ಲೂ, ನಾಗರಿಕತೆ ಪ್ರವೇಶವಾದ ಮೇಲೂ ಇಂದಿಗೂ ಶಿಲೆಯ ಮೇಲೆ ಚಿತ್ರ ರಚನೆಯಾಗುತ್ತಿರುವುದಕ್ಕೆ ಸಕಾರಣವಾಗಿ ಉತ್ತರಿಸಬಹುದಾಗಿದೆ ಹಾಗೂ ಒಟ್ಟಾರೆಯಾಗಿ ಕಂಡುಬರುವ ಈ ಚಿತ್ರಗಳಲ್ಲಿ ಅನೇಕ ಆಕಾರಗಳು, ಸಂಕೇತಗಳು ಜನಪದ ಚಿತ್ರಕಲೆಯಲ್ಲಿ ಸಮಾವೇಶಗೊಂಡು ಅವೇ ಒಂದು ಪ್ರತ್ಯೇಕ ಅಧ್ಯಯನಕ್ಕೆ ವಸ್ತುವಾಗಿವೆ.

ಚಿತ್ರಲಿಪಿಯ ಉಗಮದ ಬಗ್ಗೆ ನೋಡುತ್ತಿರುವ ಈ ಸಂದರ್ಭದಲ್ಲಿ ಆದಿಮ ಚಿತ್ರಗಳಲ್ಲಿ ಕಂಡುಬರುವ ಲಿಪಿಸೂಚಕ ಆಕಾರಗಳ ಬಗ್ಗೆ ಗಮನ ಹರಿಸಬಹುದಾಗಿದೆ. ಎತ್ತು, ಹಸು ಹಾಗೂ ಕುದುರೆಯ ಆಕಾರಗಳು ಆ ಪ್ರದೇಶದಲ್ಲಿ ಜನವಸತಿ ನೆಲೆ ನಿಂತಿರುವ ಹಾಗೂ ಈ ಪ್ರಾಣಿಗಳನ್ನು ಸಾಕಿ ದಷ್ಟಪುಷ್ಟವಾಗಿ ಬೆಳೆಸಿ ತನ್ನ ದೈನಂದಿನ ಕಾರ್ಯಗಳಿಗೆ ಬಳಸಿಕೊಳ್ಳುತ್ತಿದ್ದುದನ್ನು ಇವು ಸೂಚಿಸುತ್ತವೆಯಾದರೂ ಬೇಟೆಯೇ ಆತನ ಮುಖ್ಯ ಕಸುಬಾಗಿತ್ತು. ಇದರೊಂದಿಗೆ ದುಷ್ಟ ಮೃಗಗಳು ದುಷ್ಟ ಶಕ್ತಿಯಾಗಿ ಕಾಡುತ್ತಿದ್ದು ಅವುಗಳ ನಿವಾರಣೆಗೆ ಮಾಂತ್ರಿಕ ಆಚರಣೆಯನ್ನು ಕೈಗೊಳ್ಳುತ್ತಿದ್ದ. ಸಂತೃಪ್ತನಾದಾಗ ಹಾಡಿ ಕುಣಿದು ನಲಿಯುತ್ತಿದ್ದ. ಬದುಕಿನ ಅವಿಭಾಜ್ಯ ಅಂಗವಾದ ಲೈಂಗಿಕ ಕ್ರಿಯೆಯಲ್ಲಿ ತೊಡಗುತ್ತಿದ್ದ. ಹುಟ್ಟು ಸಾವುಗಳಿಗೆ ಬೆರಗಾಗಿ ಶರಣಾಗಿದ್ದ. 'ಚಿತ್ರ' ವೆಂದರೆ ಕಣ್ಣಿನಿಂದ ನೋಡಿ ಗ್ರಹಿಸುವಿಕೆಯೆಂದು ಭಾವಿಸಿದಂತೆ ಈ ಎಲ್ಲ ಆಕಾರಗಳನ್ನು ಒಟ್ಟಿಗೆ ಇರಿಸಿ

---

* ೧೩, ೧ನೆಯ ದೇವಾಲಯದ ರಸ್ತೆ, ೧೫ನೆಯ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-೫೬೦೦೦೩.

ನೋಡುತ್ತಾ ಹೋಗುವುದರಿಂದ ಸರಳವಾಗಿ ಅರ್ಥೈಸುತ್ತಾ ಹೋಗಬಹುದು. ಆದರೆ ಕೆಲವಾದರೂ ಚಿತ್ರಗಳು 'ಧ್ವನಿ'ಯಂತೆ ಅರ್ಥ ಹೊರಡಿಸುತ್ತವೆ. ಆ ಕುರಿತು ಒಂದೆರಡು ಉದಾಹರಣೆ ನೀಡಬಹುದು. ಮಧ್ಯಪ್ರದೇಶದ ಲಖಾಜೋರ್‌ನ ಮೆಸೊಲಿಥಿಕ್ ಕಾಲದ ಚಿತ್ರವೊಂದರಲ್ಲಿ ಎದುರು ಬದುರು ಕುಳಿತ ದಂಪತಿಗಳು ಮಣೆಯಂತಹ ಸಾಧನದ ಮೇಲೆ ಮೀನು ಇತ್ಯಾದಿ ಆಹಾರ ಇರಿಸಿ ಭೋಜನ ಮಾಡುತ್ತಿದ್ದಾರೆ. ಹಿಂದೆ ದೂರದಲ್ಲಿ ಇವರಿಗಿಂತ ಕಿರಿಯ ಆಕಾರದಲ್ಲಿ ಇನ್ನೊಬ್ಬ ವ್ಯಕ್ತಿಯಿದ್ದು ಆತನೂ ಆಹಾರ ಸೇವನೆ ಮಾಡುತ್ತಿದ್ದಾನೆ. ದಂಪತಿಗಳ ಮುಂದೆ ದಾರದಿಂದ ಬಂಧಿಸಿದ ಎರಡು ಮಡಕೆಗಳಿದ್ದು ಮೇಲೆ ಉರಿಯಲ್ಲಿ ಒಂದು ಮಡಕೆಯಿದೆ. ಕೆಳಗಿನ ಮಡಕೆಯಲ್ಲಿ ನೀರು ಅಥವಾ ಮರದಿಂದ ಇಳಿಸಿದ ಕಳ್ಳು ಇರಬಹುದು. ಊಟ ಮಾಡುತ್ತಿರುವ ಮೂವರಲ್ಲಿ ಒಬ್ಬಾತ ಪ್ರತ್ಯೇಕವಾಗಿದ್ದಾನೆ ಎಂಬುದರಿಂದ ಆತ ಸಹಭೋಜನದಿಂದ ಹೊರಗಿದ್ದಾನೆ ಎಂಬುದಾಗಿ ಅರ್ಥೈಸಬಹುದಾಗಿದ್ದು, 'ಅಸ್ಪೃಶ್ಯತೆ'ಯ ಕಲ್ಪನೆ ಬರುವಂತಾಗುತ್ತದೆ.



(ಚಿತ್ರ –೧)



(ಚಿತ್ರ –೨)

ಮತ್ತೊಂದು ಚಿತ್ರ ಆನೆಗೊಂದಿಯ ಬಳಿಯ ರಾಮಪುರ ಶಿಲಾಶ್ರಯದಲ್ಲಿದ್ದು ವ್ಯಕ್ತಿಯೊಬ್ಬ ಮಲಗಿದ್ದು ಆತನ ಸುತ್ತ ಬಂಡೆಗಳು, ಬೆಟ್ಟಗಳು, ನದಿ ಇತ್ಯಾದಿ ಸುತ್ತುವರಿದಿದೆ. ಇದು ವ್ಯಕ್ತಿಯೊಬ್ಬನ ಸಮಾಧಿಯ ಸ್ಥಿತಿ ಎಂದು ತಿಳಿಯಲಾಗಿದೆ. ನದಿ ಹಾಗೂ ಬೆಟ್ಟಗಳು ಇಂದಿನ ತುಂಗಭದ್ರ ಹಾಗೂ ಕಿಷ್ಕಿಂಧೆಯ ಬೆಟ್ಟಗಳ ಸಾಲು ಆಗಿರುವ ಸಂಭವವಿದೆ.

ಈ ಬಗೆಯ ಹಲವಾರು ಚಿತ್ರಗಳು ದೊರೆಯುವಂತಿದ್ದು ಯಾವುದೋ ಕಾಲದಲ್ಲಿ ಒಬ್ಬಾತ ನೀಡಿದ ಸಂದೇಶವನ್ನು ಲಿಪಿ ಅಥವಾ ಭಾಷೆಗಳಿಂದ ಹೊರತಾಗಿ ಅರ್ಥೈಸಬಹುದು. ಆದಿಮ ಚಿತ್ರಗಳ ಉದ್ದೇಶವೂ ಅದೇ ಆಗಿದೆ. ಅವುಗಳಲ್ಲಿ ಕಲಾತ್ಮಕತೆಗಿಂತ ತನ್ನ ಅನ್ನಿಸುವಿಕೆಯನ್ನು ವ್ಯಕ್ತಪಡಿಸುವುದೇ ಮುಖ್ಯವಾಗುತ್ತದೆ.[೧]

ಆದಿಮ ಚಿತ್ರಗಳ ಅವಧಿಯಲ್ಲಿಯೇ ಮೂಳೆ, ಕಲ್ಲು ಹಾಗೂ ಮಡಕೆಯ ಮೇಲೆಯೂ ಹಲವಾರು ಚಿತ್ರಿತ ಆಕಾರಗಳು ಉತ್ಖನನದಲ್ಲಿ ದೊರೆತಿವೆ. ಸೂರ್ಯ, ಚಂದ್ರ, ಕೈ, ಕಾಲು, ಹಕ್ಕಿ, ಆಯುಧ, ಏಣಿ, ಗಿಡ, ಮೀನು ಇತ್ಯಾದಿ ಆಕಾರಗಳಿದ್ದು ಅವು ಆಯಾ ವಸ್ತುವಿನ ರೂಪಕ್ಕಿಂತ ಹೆಚ್ಚಿನದೇನನ್ನೂ ಹೇಳುವುದಿಲ್ಲ. ಕೆಲವೊಮ್ಮೆ ಅಕ್ಕ ಪಕ್ಕಗಳಲ್ಲಿಯೇ ಹಲವಾರು ಚಿತ್ರಗಳನ್ನು ರಚಿಸಿದ್ದರೂ ಅವು ಪರಸ್ಪರ ಪೂರಕವಾಗದೇ ಪ್ರತ್ಯೇಕವಾಗಿ ನಿಲ್ಲುವಂತಿವೆ. ಇಂದಿಗೂ ಈ ಬಗೆಯ ಬಿಡಿ ಚಿತ್ರಗಳನ್ನು ರಚಿಸಿ ಸಂದೇಶ ನೀಡುವ ಆದಿವಾಸಿ ಜನಾಂಗಗಳಿದ್ದು ಚಿತ್ರಗಳೊಂದಿಗೆ ಶಬ್ದಗಳೂ ಬಳಕೆಯಲ್ಲಿವೆ. ಉದಾಹರಣೆಗೆ ಉದ್ದನೆಯಗರೆ ದೇಹಭಾಗವಾಗಿದ್ದು ಎರಡು ಕಾಲು, ದುಂಡನೆಯ ತಲೆ, ಚಾಚಿದ ಎರಡು ಕೈಗಳ ಮೇಲೆ ಅಡ್ಡಗೆರೆ ಇರುವ ಆಕಾರ ಹಕ್ಕಿಯನ್ನು ಹೋಲುವಂತಿದ್ದು ಇದನ್ನು ಆ ಪ್ರದೇಶದ (ಬಾಮುನ್) ಜನರು 'Si' ಎಂಬ ಉಚ್ಚಾರಣೆಯಿಂದ ಗುರುತಿಸುತ್ತಾರೆ (ಚಿತ್ರ ೩ಎ, ಬಿ, ಸಿ, ಡಿ).

ಇದೇ ಪ್ರದೇಶದಲ್ಲಿದ್ದಿರಬಹುದಾದ ಆದಿಮಾನವ ಇದೇ ಬಗೆಯ ಚಿತ್ರ ರಚಿಸಿ, ಇದೇ ಬಗೆಯ 'ಧ್ವನಿ'ಯಿಂದ ಗುರುತಿಸಿದ್ದೇ ಆಗಿದ್ದರೆ ಕೇವಲ ಭಾವನಾತ್ಮಕವಾಗಿದ್ದ 'ಚಿತ್ರ'ಕ್ಕೆ 'ಲಿಪಿ'ಯೊಂದು ಸೇರ್ಪಡೆಯಾಗಿದೆಯೆಂದು ಹೇಳಬಹುದು[೨]. (ಚಿತ್ರಗಳು) ಇದರೊಂದಿಗೆ ಹೇಳಬಹುದಾದುದೆಂದರೆ ನಕ್ಸಿ (Naxi) ಜನಾಂಗದವರ ದೊಂಗ್ಬ (Dongba) ಲಿಪಿ. ಇದನ್ನು ಭಾವನಾತ್ಮಕ ಚಿತ್ರಲಿಪಿ ಎಂದು ಕರೆದಿದ್ದು ಕೈಕಾಗದದ ಹಾಳೆಯ ಮೇಲೆ ವಿವಿಧ ವರ್ಣದಲ್ಲಿ ಬರೆದಿರುವ ಗುರುತಿಸಬಹುದಾದ ಹಾಗೂ ಗುರುತಿಸಲಾಗದ ಆಕಾರಗಳು, ಒಟ್ಟಾರೆಯಾಗಿ ಎರಡು ಸಾವಿರ ಸಂಕೇತಗಳಿಂದ ಕೂಡಿದ

ಇಪ್ಪತ್ತು ಸಾವಿರ ಧಾರ್ಮಿಕ ಅಕ್ಷರಗಳಿಂದ ಸಂಯೋಜಿತಗೊಂಡಿವೆ. ಇವು ದೈನಂದಿನ ಬಳಕೆಯ ಲಿಪಿ/ಚಿತ್ರ ಆಗಿರಲಾರದೆಂದೂ ಧಾರ್ಮಿಕ ಆಚರಣೆಯ ವೇಳೆಯಲ್ಲಿ ಬಳಸುತ್ತಿದ್ದ ಆಕಾರಗಳೆಂದೂ ತಿಳಿಯಲಾಗಿದೆ. ಇಂದಿಗೂ ಇರುವ ದೊಂಗ್ಬ ಜನರು ಈ ಚಿತ್ರಗಳನ್ನು ಧ್ವನಿ ಸಹಿತ 'ಓದ' ಬಲ್ಲವರಾಗಿದ್ದು ಬಳಕೆಯಲ್ಲಿಯೂ ಇದೆ. ಎರಡು ಕಣ್ಣುಗಳ ಚಿತ್ರ, 'ವಿಧಿ' (Myd) ಎಂಬುದಾಗಿಯೂ, ಅನ್ನದ ಬಟ್ಟಲು 'ಆಹಾರ' ಹಾಗೂ ನಿದ್ದೆ' (xa) ಎಂದೂ ಸೂಚಿಸುತ್ತವೆ.[೩] (ಚಿತ್ರ ೪)




(ಚಿತ್ರ – ೫)

ಆದಿಮ ಚಿತ್ರಲಿಪಿ ಎಂದು ಸಾಮಾನ್ಯವಾಗಿ ಗುರುತಿಸುವುದು ಕ್ರಿ.ಪೂ. ೩೦ ಸಹಸ್ರಮಾನಗಳ ಹಿಂದೆ ಆಫ್ರಿಕಾ, ಆಸ್ಟ್ರೇಲಿಯಾ, ಯೂರೋಪ್, ಉತ್ತರ ಅಮೆರಿಕಾಗಳಲ್ಲಿ ಕಂಡುಬರುವ ಚಿತ್ರಿತ ಆಕಾರಗಳನ್ನು. ಇವುಗಳಲ್ಲಿ ಪ್ರಾಣಿ ಪಕ್ಷಿಗಳಲ್ಲದೆ ಬೇಟೆ, ನೌಕಾಯುದ್ಧ ಇತ್ಯಾದಿಗಳೂ ಇದ್ದು ಭಾವನಾತ್ಮಕತೆಯೂ ಕಂಡುಬರುತ್ತದೆ. ಮನುಷ್ಯ ಸ್ತಬ್ಧನಾಗಿ ನಿಂತಿರುವುದಲ್ಲದೆ, ನಡೆಯುತ್ತಿರುವ, ಓಡುತ್ತಿರುವ, ನೆಗೆಯುತ್ತಿರುವ, ಬಿಲ್ಲಿನಿಂದ ಬಣ್ಣ ಬಿಡುತ್ತಿರುವ 'ಕ್ರಿಯೆ'ಯೂ ಸೇರ್ಪಡೆಯಾಗಿವೆ.[೪] (ಚಿತ್ರ ೫)

ವಿದ್ವಾಂಸರುಗಳು 'ಪದಗಳಿಲ್ಲದೆ ಕಥೆ ಹೇಳುವಿಕೆ' (Stories without words) ಯು ಚಿತ್ರಲಿಪಿಯ ಮೊದಲ ಹಂತ ಎಂದು ಪ್ರತಿಪಾದಿಸಿದ್ದಾರೆ. ಇವು ಕ್ರಿ.ಪೂ. ಆರರಿಂದ ನಾಲ್ಕು ಸಾವಿರ ವರ್ಷಗಳಲ್ಲಿ ಕಂಡುಬರುತ್ತವೆ. ಉತ್ತರ ಅಮೇರಿಕಾದ ಚಿತ್ರಿತ ಹಾಳೆಯಲ್ಲಿ ಮನುಷ್ಯರ ಹಲವಾರು ಕ್ರಿಯೆಗಳಿದ್ದು ನಡುವೆ ಗಿಡಮರ ಇತ್ಯಾದಿಗಳೂ ಇವೆ. ಈ ಲಿಪಿ (ಚಿತ್ರ) ಎಡದಿಂದ ಆರಂಭವಾಗಿ ಬಲಕ್ಕೆ ಸಾಗಿ ಸಾಲಿನ ಅಂತ್ಯದಲ್ಲಿ ಕೆಳಮುಖನಾಗಿ ಬಂದು (ಬಲಬದಿಯಿಂದ) ಅಲ್ಲಿಂದ ಎಡಬದಿಗೆ ಹೋಗುತ್ತದೆ. ಇದೇ ರೀತಿ ಎಲ್ಲ ಸಾಲುಗಳೂ ಸೇರಿ ಉದ್ದನೆಯ ಪಟ್ಟಿಯಂತಾಗುತ್ತದೆ.

ಚಿತ್ರ ಲಿಪಿ (Pictography) ಎಂಬುದು ಗ್ರೀಕ್ ಮೂಲದ ಚಿತ್ರ ರಚಿಸು (to Paint) ಹಾಗೂ ಗುರುತಿಸು/ಬರಿ (to trace or write) ಎಂಬುದರಿಂದ ಬಂದಿದ್ದು ಚಿತ್ರ ನೋಡಿದ ಮಾತ್ರದಿಂದಲೇ ಚಿತ್ರದ ಉದ್ದೇಶ ತಿಳಿದು ಬರುವಂತಿರಬೇಕು. ಅಖಂಡವಾಗಿರಬೇಕಲ್ಲದೆ ಪದಗಳಂತೆ ಬಿಡಿಬಿಡಿಯಾಗಿರಬಾರದು. ಯಾವುದೇ ಭಾಷೆಗೂ ಮೂಲವಾಗಿರಬಾರದೆಂದು ಹೇಳುವ ಮಾರ್ಷಲ್ ಕೊಹಿನ್‌ರವರು ಮುಂದಿನ ಹಂತದ ಬೆಳವಣಿಗೆಯ ಬಗ್ಗೆ ಚಿತ್ರ ಸಹಿತ ವಿವರಿಸುತ್ತಾರೆ.[೫]

ಚಿತ್ರಲಿಪಿಯ ಹಂತದಲ್ಲಿ ಅದೇ ಕಾಲದಲ್ಲಾಗಲೀ ಅಥವಾ ಮುಂದಿನ ಕಾಲದಲ್ಲಾಗಲೀ ಚಿತ್ರಿಸಿದ ಎಲ್ಲವೂ ಎಲ್ಲರ ಗ್ರಹಿಕೆಗೂ ಬಂದಂತಿಲ್ಲ. ಗುರುತಿಸಬಹುದಾದ ಆಧಾರಗಳು ಗಮನಕ್ಕೆ ಬಂದಿರಬಹುದು. ಹಾಗೆ ಗುರುತಿಸಬಹುದಾದ ಆಕಾರಗಳೂ ತಮ್ಮ 'ಮಾತ'ನ್ನು ಅಷ್ಟಕ್ಕೇ ನಿಲ್ಲಿಸುವುದಿಲ್ಲ. ಸೂರ್ಯ, ಮನೆ, ದೋಣಿ ಇತ್ಯಾದಿಗಳು ತಾನು ಹೇಳುವುದಕ್ಕಿಂತ ಹೆಚ್ಚಿನದನ್ನು ಹೇಳುತ್ತದೆ. ಎಂದರೆ ಚಿತ್ರಗಳಿಗೆ ಭಾವನೆಗಳು ಸೇರ್ಪಡೆಯಾಗುತ್ತವೆ. ಈ ಹಂತವೂ ಕ್ರಿ.ಪೂ. ನಾಲ್ಕು ಸಹಸ್ರಮಾನ ಕಾಲದ ಹಿಂದಿನದೆಂದು ವಿದ್ವಾಂಸರ ಮತ. ಸೂರ್ಯ ಶಾಖ, ಬಿಸಿಲು, ಹಗಲುಗಳನ್ನೂ; ಮನೆ ಆಶ್ರಯ, ಆವರಣಗಳನ್ನೂ; ದೋಣಿ ಚಲನಶೀಲತೆಯನ್ನೂ, ಭೂಮಿ-ನೀರುಗಳ ಸಂಪರ್ಕವನ್ನೂ ಹೇಳುತ್ತವೆ. ಆಧುನಿಕ ಮನಃಶಾಸ್ತ್ರ, ಸಮಾಜಶಾಸ್ತ್ರದ ರೀತ್ಯಾ ಒಂದು ವಸ್ತುವಿಗೆ ಹತ್ತಾರು ಅರ್ಥಗಳನ್ನು ಹೇಳಬಹುದಾದರೂ ಆದಿಮ ಜನಾಂಗ ಅದನ್ನು ಬರೆದ ಕಾಲಕ್ಕೆ ಯಾವ ನಿಶ್ಚಿತ ಅರ್ಥ ಬಳಸಿತ್ತು ಎಂಬುದು ಇಂದಿಗೂ ತೊಡಕಾಗಿರುವ ವಿಷಯ. ಕೈಗಳ ವಿನ್ಯಾಸದಿಂದ ಬಾ, ಹೋಗು, ನಿಲ್ಲು, ಬೇಡ ಇತ್ಯಾದಿಗಳನ್ನು ಸೂಚಿಸಬಹುದಾದರೂ ಬೆರಳುಗಳ ವಿನ್ಯಾಸ ಬರೆದಾಗ ಅದರ ಪರಿಚಯವಿರುವವರಿಗೆ ವಿಶೇಷವಾಗಿ ನೃತ್ಯಗಾರರಿಗೆ ಅರ್ಥವಾಗಬಹುದಾದರೂ ಇತರರಿಗೆ ಕಷ್ಟಸಾಧ್ಯ.[೬]

ಚಿತ್ರ ಒಂದು ಲಿಪಿಯಾಗುವ ಹಂತದಲ್ಲಿ ಕೆಲವು ತೊಡರುಗಳಾಗಿರಬಹುದು. ಒಂದು 'ಚಿತ್ರ' ಒಂದು 'ಪದ' ಎಂತಾಗಬೇಕಾಯಿತು ಎಂದರೆ ಏಕಾಕ್ಷರ ಪದ ಎಂದು ಭಾವಿಸಬೇಕಿತ್ತು ಮತ್ತು ಈ 'ಪದ' ಎಲ್ಲೆಲ್ಲಿ ಪುನರಾವರ್ತನೆಯಾಗುತ್ತದೋ ಅಲ್ಲೆಲ್ಲಾ ಅದೇ ಬಗೆಯ 'ಆಕೃತಿ' ರಚಿಸಬೇಕಿತ್ತು. ಉದಾಹರಣೆಗೆ r' i ಎಂದರೆ ಬಾಯಿ, nu ಎಂದರೆ ಎಂದರೆ ನೀರು ಇತ್ಯಾದಿ.[೭] (ಚಿತ್ರ – ೬)

 

(ಚಿತ್ರ – ೬)

ಮುಂದಿನ ಹಂತ ವೆಂದರೆ ಚಿತ್ರಕ್ಕೆ ಇನ್ನೊಂದು ಚಿತ್ರದ ಆಕಾರವನ್ನೇ ಹೊಂದಿಸುವಿಕೆ. ಇದಕ್ಕೆ ಸಂಯುಕ್ತ ಏಕಾಕ್ಷರ ಎಂದು ಕರೆಯಬಹುದು. ಇದನ್ನು ಭಾವ ಲಿಪಿಯ ಮುಂದಿನ ಹಂತವೆಂದೂ ಭಾವಿಸ ಬಹುದು. ಹೀಗೆ ಪ್ರತ್ಯಯ ಸೇರ್ಪಡೆಯಾದಾಗಲೂ ಅದರ ಸ್ಥಾನ ಮುಖ್ಯವಾದುದು. ಮನುಷ್ಯನೊಬ್ಬನ ತಲೆಯ ಮೇಲೆ ಸಿಂಹದ ಚಿತ್ರ ಬರೆದರೆ ಆತನ ಹೆಸರು ಸಿಂಹ ಸಂಬಂಧಿಯಾದುದೆಂದೂ ಮುಂದೆ ಬರೆದರೆ ಸಿಂಹದೊಂದಿಗೆ ಕಾದಾಡುತ್ತಿರುವನೆಂದೂ, ಹಿಂದೆ ಬರೆದರೆ ಸಿಂಹ ಆತನಿಗೆ ಹೆದರಿ ಓಡಿ ಹೋಯಿತೆಂದೂ ಅರ್ಥೈಸಲಾಗಿದೆ. ಅಮೆರಿಕನ್ ಇಂಡಿಯನ್ ಬರವಣಿಗೆಯಲ್ಲಿ

ಸಂದೇಶದ ಕೊನೆಯಲ್ಲಿ ಚಿರತೆಯ ಚಿತ್ರ ಬರೆದರೆ ಶಕ್ತಿ ದೇವತೆಯನ್ನು ಸ್ತುತಿಸಿದ ಎಂದೂ ತಲೆಯ ಮೇಲೆ ಬರೆದರೆ ಆತನ ಹೆಸರೆಂದೂ ತಿಳಿಯಲಾಗಿದೆ.[೮]

ಇತಿಹಾಸ ಪೂರ್ವದ ಚಿತ್ರಗಳಲ್ಲಿಯೇ ಚುಕ್ಕೆ, ವೃತ್ತ, ಅಂಡಾಕಾರ, ಗೆರೆ, ಜ್ಯಾಮಿತಿಯ ಆಕಾರ ಇತ್ಯಾದಿ ಚಿಹ್ನೆಗಳು ದೊರೆಯುತ್ತವೆ. ಇವು ಪ್ರದೇಶದಿಂದ ಪ್ರದೇಶಗಳಿಗೆ ಭಿನ್ನವಾಗಿ ಅರ್ಥವಾಗುವಂತಿದ್ದು, ಪೂರ್ಣವಾಗಿ ವ್ಯಾಖ್ಯಾನಿಸಲು ಸಾಧ್ಯವಾಗುವುದಿಲ್ಲ. ಅಗಲ ತೀರ ಕಡಿಮೆಯಿದ್ದು ಉದ್ದ ಹೆಚ್ಚಾಗಿರುವ ಪಟ್ಟಿಕೆಯನ್ನು ಆಕಾಶ ಎಂದೂ, ಅದರ ಕೆಳಗೆ ನಕ್ಷತ್ರ ರಚಿಸಿದರೆ ಕತ್ತಲಲ್ಲಿ ದೀಪ ಹಚ್ಚಿದೆಯೆಂದೂ, ಕೆಳಭಾಗದಲ್ಲಿ ಅಲಅಲೆಯಾದ ರಚನೆಯಿದ್ದಲ್ಲಿ ಮಳೆ ಬರುವಿಕೆ ಎಂಬಿತ್ಯಾದಿಯಾಗಿ ಅರ್ಥೈಸಲಾಗಿದೆ. (ಚಿತ್ರ –೭)




(ಚಿತ್ರ – ೭)

ಅಂತೆಯೇ ಒಂದಕ್ಕಿಂತ ಹೆಚ್ಚಿನ ಸಂಜ್ಞೆ ಅಥವಾ ಚಿತ್ರ ರಚಿಸಿ ಒಂದು ಘಟಕವಾಗಿಸಿ ಪದ ಅಥವಾ ವಾಕ್ಯ ರಚನೆ ಕಾಣಬಹುದು. ಇದಕ್ಕೆ 'ಪದ ಸೂಚಕ ಲಿಪಿ' ಎಂದು ಕರೆಯಲಾಗಿದೆ. ೧. ಕಿರೀಟಧಾರಿಯಾದ ವ್ಯಕ್ತಿ (ರಾಜ) ೨. ಆನೆಯೊಂದಿಗೆ ಹೋರಾಡುತ್ತಿರುವುದು. ಹಾಗೂ ೩. ಆನೆ ಸತ್ತು ಬಿದ್ದಿರುವುದು – ಇವು ಮೂರು ಚಿತ್ರಗಳು ಒಂದು ಘಟಕದಂತಿದ್ದು – ರಾಜನೊಬ್ಬ ಆನೆಯೊಂದಿಗೆ ಹೋರಾಡಿ ಅದನ್ನು ಸಾಯಿಸಿದ ಎಂಬ ರೂಪಕವನ್ನು ನೀಡುತ್ತವೆ. ಮಾತನಾಡುವ ರೀತಿಯಲ್ಲಿಯೇ ಈ ಮೂರೂ ಚಿತ್ರಗಳು ಬರಬೇಕು. ಕ್ರಮ ತಪ್ಪಿದಲ್ಲಿ ಬೇರೆಯದೇ ಅರ್ಥ ನೀಡಬಹುದು.[೯]

ಈಜಿಪ್ಟ್‌ನ ಚಿತ್ರ ಲಿಪಿಯಲ್ಲಿ ಏಳೆಂಟು ಆಕಾರಗಳು ಸೇರಿ ಒಂದು ನಾಮ ಪದವಾಗುವುದನ್ನು ಗುರುತಿಸಲಾಗಿದೆ. ಚಿತ್ರಗಳಿಗೆ ಇಂದಿನ ಇಂಗ್ಲಿಷ್ ಕಾಗುಣಿತವನ್ನು ಹೊಂದಿಸಿದೆ. ಉದಾ : 'ಟಾಲೆಮಿ'ಗೆ

(p ಮತ್ತು s ಗಳು ಉಚ್ಚಾರಣಾ ರಹಿತವಾದುದು – ಸೈಲೆಂಟ್)

ಈ ಚಿತ್ರಿತ ಘಟಕಗಳಲ್ಲಿ ಚಿತ್ರ (ಲಿಪಿ)ಗಳು ಮೇಲಿನಿಂದ ಕೆಳಗೆ ಬರುವಂತೆ ರಚಿಸಿರುವುದೇ ಅಧಿಕ.

ಆಫ್ರಿಕಾದ ನೈಲ್ ನದಿಯ ದಡದಲ್ಲಿದ್ದ ಒಂದೇ ಶಿಲಾ ಫಲಕದಲ್ಲಿದ್ದ ಮೂರು ವಿಭಿನ್ನ ಚಿತ್ರ ಲಿಪಿಯ ನೆರವಿನಿಂದ ಆಫ್ರಿಕಾದ ಚಿತ್ರ ಲಿಪಿಯನ್ನು (hieroglyphs) ಓದಲು ಸಾಧ್ಯವಾಯಿತು. ಕ್ರಿ.ಪೂ. ೧೯೬ ರಲ್ಲಿ ರಚಿಸಿದ ಈ ಶಿಲಾಫಲಕ ರೊಸೆಟ್ಟಾ ಫಲಕ (Rosetta stone) ಎಂದೇ ಪ್ರಸಿದ್ಧವಾಗಿದೆ.

ಮೊದಮೊದಲು ಆದಿಮ ಚಿತ್ರಗಳಲ್ಲಿ ಇರುವುದು ಕೆಲವೇ ಬಣ್ಣಗಳು. ಚರ್ಮ ಅಥವಾ ಪ್ಯಾಪಿರಸ್ ಹಾಳೆ ಇಲ್ಲವೆ ಮಾನವ ನಿರ್ಮಿತ ಕಟ್ಟಡಗಳ ಒಳಗೆ ಹಲವು ಬಣ್ಣಗಳಿಂದ ಬರೆದ ಚಿತ್ರಗಳು ದೊರೆಯುತ್ತವೆ. ಇವೂ ಸಹ ಭಾವನಾತ್ಮಕ

ಲಿಪಿಗಳೇ ಆಗಿವೆ. ಬಣ್ಣಗಳಿಗೆ ಇರುವ ಸಾಂಕೇತಿಕ ಅರ್ಥ ವಿಶ್ವವ್ಯಾಪಿಯಾದುದು ಹಾಗೂ ಪ್ರಾಚೀನವಾದುದು. ಅಮೆರಿಕದ ಆದಿವಾಸಿಗಳಲ್ಲಿ ಇಬ್ಬರು ರಾಜರು ಹೋರಾಡುತ್ತಿರುವ ಚಿತ್ರವಿದ್ದು ಒಬ್ಬಾತನಿಗೆ ಕೆಂಪು ಇನ್ನೊಬ್ಬಾತನಿಗೆ ನೀಲಿ ವರ್ಣವಿದ್ದಲ್ಲಿ ಕೆಂಪು ಬಣ್ಣದ ರಾಜ ಗೆದ್ದನೆಂದೂ ನೀಲಿ ಬಣ್ಣದವ ಸೋತನೆಂದೂ ಅರ್ಥೈಸಲಾಗಿದೆ.[೧೦]

ಚಿತ್ರಿತ ಆಕಾರಗಳ ಸಮೂಹಗಳನ್ನೇ ರಚಿಸಿ ಸಂದೇಶ ನೀಡಿರುವುದೂ ಉಂಟು. ಈಜಿಪ್ಟ್‌ನ ನಾರ್ಮರ್‌ಪಾಲೆಟ್ ಎಂದು ಕರೆಯುವ ಫಲಕದ ಮೇಲೆ ಈಜಿಪ್ಟ್‌ನ ಸೈನ್ಯವೊಂದು ಶತ್ರು ಪಾಳೆಯದತ್ತ ಹೋಗುತ್ತಿರುವುದು, ಅವರನ್ನು ಸೋಲಿಸುತ್ತಿರುವುದು ರಾಜನೊಬ್ಬ ಶತ್ರು ರಾಜನನ್ನು ಹೊಡೆಯುತ್ತಿರುವುದನ್ನು ಚಿತ್ರಿಸಲಾಗಿದೆ.[೧೧]

ಚೀನಾ ಹಾಗೂ ಭಾರತದ ಸಿಂಧೂ ಕಣಿವೆಯ ಲಿಪಿಗಳೂ ಚಿತ್ರ ಲಿಪಿಯಿಂದ ಆವಿಷ್ಕಾರಗೊಂಡವೆಂದು ವಿದ್ವಾಂಸರ ಅಭಿಪ್ರಾಯ. ಚೀನಾದ ಲಿಪಿಗಳು ಸಾಂಕೇತಿಕ ರೂಪದಲ್ಲಿದ್ದು ಇಂದಿಗೂ ಬಳಕೆಯಲ್ಲಿರುವ ಲಿಪಿ ಹಾಗೂ ಅರ್ಥಗಳನ್ನು ಪ್ರಾಚೀನ ಲಿಪಿಗೂ ಅನ್ವಯಿಸಿದೆ.

ಚೀನಾದ ಲಿಪಿಗಳಲ್ಲಿ 'ಕುದುರೆ' ಎಂದು ಹೇಳಲು ಒಂಬತ್ತು ಚಿಹ್ನೆಗಳಿವೆ. ಅವು ಚಿತ್ರ ಲಿಪಿಯಿಂದ ಮುಂದುವರೆದಿವೆ. ಉದಾ :

= (ಚಿತ್ರಲಿಪಿ), = ನಂತರದ ಬೆಳವಣಿಗೆ, = ಇಂದಿನ ಲಿಪಿ

ಬೆಟ್ಟವನ್ನು ಸೂಚಿಸುವ ಲಿಪಿ ಇಂದು ಎಂಬಂತೆ ರೂಪುಗೊಂಡಿದೆ.[೧೨]

ಭಾರತಕ್ಕೆ ಸಂಬಂಧಿಸಿದಂತೆ ಸಿಂಧೂ ಲಿಪಿಯಲ್ಲಿಯೂ ಈ ಬಗೆಯ ಸಂಕೇತಗಳನ್ನು ಗುರುತಿಸಲಾಗಿದೆ. ಈವರೆಗೆ ಸುಮಾರು ೩೦೦೦ ಮುದ್ರೆಗಳು (ಸೀಲ್) ದೊರೆತಿದ್ದು ಅವುಗಳಲ್ಲಿ ಕನಿಷ್ಠ ೩೦೦ ಚಿಹ್ನೆಗಳನ್ನು ಪಟ್ಟಿಮಾಡಲಾಗಿದೆ. ಇವುಗಳು ಚಿತ್ರಲಿಪಿ, ಭಾವನಾತ್ಮಕಲಿಪಿ, ಇವು ಲಿಪಿಯೇ ಅಲ್ಲ ಸಂಕೇತಗಳು, ಗಣಿತಕ್ಕೆ ಸಂಬಂಧಿಸಿದ ಅಂಕಗಳು ಎಂದೆಲ್ಲಾ ವಾದಗಳಿವೆ. ನಮ್ಮವರೇ ಆದ ಎಸ್.ಆರ್.ರಾವ್ ಅವರ ಪ್ರಕಾರ ಸಿಂಧೂ ಲಿಪಿಯಲ್ಲಿ ೫೨ ಸಂಕೇತಗಳಿದ್ದು ಅವುಗಳಲ್ಲಿ ೧೨ ಮಾತ್ರ ಕೀಟ, ಪಕ್ಷಿ, ಚೇಳು, ನಾಯಿ, ಮರ, ಮೀನು, ಮನುಷ್ಯ ಇತ್ಯಾದಿ ಚಿತ್ರಗಳು. ಉಳಿದವು ಧ್ವನ್ಯಾತ್ಮಕ ಚಿಹ್ನೆಗಳು ಎಂದು ತೀರ್ಮಾನಿಸಿದ್ದಾರೆ.[೧೩]

ಸಿಂಧೂ ಕಣಿವೆಯ ಮುದ್ರೆಗಳಲ್ಲಿ ಈ ಬಗೆಯ ಒಂದಕ್ಕಿಂತ ಹೆಚ್ಚು ಆಕೃತಿಗಳನ್ನು ಸಾಲಾಗಿ ರಚಿಸಿ ಪದಗಳಂತೆ ರೂಪಿಸಿದೆ. ಅವುಗಳಲ್ಲಿ ಋಗ್ವೇದದ ಅರ್ಥವನ್ನು ಆಯೋಜಿಸಿರುವುದುಂಟು. ಇಲ್ಲಿ ಚಿತ್ರ ಲಿಪಿಗೆ ಪ್ರತ್ಯಯಗಳೂ ಹತ್ತಿ ಬೇರೆಯದೇ ಲಿಪಿಯಾಗುತ್ತದೆ. ಉದಾ :

= ಮೀನು, = ಪ್ರಜ್ವಲಿಸು, = ನಕ್ಷತ್ರ/ನಾಮಪದ/ ರಾಜನೊಬ್ಬನ ಬಿರುದು ಎಂದಾಗುತ್ತದೆ.[೧೪]

ಎಗ್ಬರ್ಟ್ ರಿಕ್ಟರ್ ಅವರ ಪ್ರಕಾರ ಬಿಲ್ಲು ಬಾಣ ಹಿಡಿದ ಮನುಷ್ಯ = ಗರ್ಭ ಮಗುವಿಗೆ ಜನ್ಮ ನೀಡಿದಾತ; ಅರಳಿ ಎಲೆ, ಮೃಡ, ಮುಖ್ಯಸ್ಥ, ಊರ್ಧ್ವವಾಗಿ ಬೆಳೆಯುವಿಕೆ; ಬಟ್ಟಲಿನ ಮೇಲೆ ಗೆರೆ = ಯೋನಿ, ನನ್ನ ಯೋನಿ; ಚೌಕದ ಒಳಗೆ ಅಲೆ = ವಜ್ರಾಕೃತಿ (rhombμ) ಅಪಸ್ = ನೀರು; ಅಪೂರ್ಣ ಚೌಕದ ಮೇಲೆ ವೃತ್ತ (   ) = ಅಂತರ್‌ಗತ (within); ಸರ್ಪ = ಭುವನ ಅನಂತ; ಬಟ್ಟಲ ಒಳಗೆ ಹಾಗೂ ಹೊರಗೆ ಗೆರೆಗಳು = ನೌಕೆ, ನಾವೆ; ವೃತ್ತದ ಒಳಗೊಂದು ಗೆರೆ = ಈ ಪ್ರಪಂಚ; ಅಪೂರ್ಣ ತ್ರಿಕೋಣ (   ) ಉಪಸ್ಪರ್ಷ; ಬಟ್ಟಲ ಆಚೀಚೆಯ ಗೆರೆಗಳು = ಉಪಸ್ಥ, ಪುರುಷ ಲಿಂಗ ಇದನ್ನು ಋಗ್‌ವೇದದ x.೧೨೫.೭ ರ ಶ್ಲೋಕವಾದ

**ಅಹಂ ಸುದೆ ಪಿತರಂ ಅಸ್ಯ ಮೃಡಾನ್**
**ಮಮ ಯೋನಿ ರಪ್ಸ್ವಂತಸ್ಸಮುದ್ರೇ**
**ತತೋ ವಿತಿಷ್ಟೆ ಭುವನ ಅನು ವಿಶ್ವೋ**
**ತ ಆಮುಮ್ ಧ್ಯಾಮ್ ವರ್ಷ್‌ಮಣ ಉಡ ಸ್ಪೃಡಾಮಿ**






ಚಿತ್ರ ೧೦

*I gave birth to the father in his head*

*my womb is in the waters within the ocean;*

*from there I permeate all the words*

*and touch the sky with the top of my head* ಎಂದು ಅರ್ಥೈಸಿದೆ. ಇಲ್ಲಿ ಚಿತ್ರಿತವಾಕ್ಯ ಬಲಬದಿಯಿಂದ ಎಡಬದಿಗೆ ಬರೆದಂತೆ ಭಾವಿಸಿದೆ.[೧೫]

ಇಷ್ಟಾದರೂ 'ಚಿತ್ರ'ವನ್ನು 'ಲಿಪಿ' ಎಂದು ಪೂರ್ಣಪ್ರಮಾಣದಲ್ಲಿ ಕರೆಯಲು ಸಾಧ್ಯವಿಲ್ಲ. ಲಿಪಿ–ಅಕ್ಷರಗಳ ನಿಯಮಿತ ಸಂಖ್ಯೆ, ಅಕ್ಷರಗಳಲ್ಲಿ ಏಕಸ್ವರೂಪತೆ, ಅಕ್ಷರಗಳನ್ನು ಕಲಿಯುವ ಜ್ಞಾನ, ಅಕ್ಷರಸ್ಥ ಹಾಗೂ ವಿದ್ಯಾವಂತರಲ್ಲಿರುವ ವ್ಯತ್ಯಾಸ, ವಿದ್ಯಾಭ್ಯಾಸ ಮತ್ತು ಗೋಪ್ಯತೆ, ಅಕ್ಷರಗಳು ಕೈ ಬರಹವಾದುದರಿಂದ ಕಾಲಕಾಲಕ್ಕೆ ಸ್ವರೂಪದಲ್ಲಿ ಬದಲಾವಣೆ, ಬರೆಯುವಿಕೆಗೆ ಬರೆಯುವ ಸಾಧನಗಳೂ ಕಾರಣವಾಗುವಿಕೆ – ಹೀಗೆ ಹತ್ತಾರು ದೃಷ್ಟಿಗಳಿಂದ ನೋಡಬಹುದಾದ ಸಾಧ್ಯತೆಯಿದೆ. ಪ್ರಸ್ತುತ ಲೇಖನದಲ್ಲಿ ಚಿತ್ರ ಲಿಪಿಯಾಗಿ ಬದಲಾದ ಬಗ್ಗೆ ಮಾತ್ರ ನೋಡಲಾಗಿದೆ.

ಸುಮೇರಿಯದಲ್ಲಿಯ ಚಿತ್ರಗಳು ಲಿಪಿ ಆದ ಬಗೆಗೆ ಉದಾಹರಿಸಿವೆ. ಹಕ್ಕಿಯೊಂದರ ಚಿತ್ರ ಎರಡನೇ ಹಂತದಲ್ಲಿ ಮೇಲ್ಮುಖವಾಗಿಯೂ ಮುಂದಿನ ಹಂತಗಳಲ್ಲಿ ಅದರ ಹೊರರೇಖೆಗಳು ಹಲವಾರು ಮೊಳೆಗಳ ರೂಪದಲ್ಲಿ ಬದಲಾಗಿ ಅಂತಿಮವಾಗಿ ಲಿಪಿಯ ರೂಪ ತಳೆದಿದೆ. (ಚಿತ್ರ ೫ನ್ನು ನೋಡಿ)

ಈ ಬಗೆಯ ಲಿಪಿಗಳಿಗೆ Cuneiform ಎಂದೇ ಹೆಸರಿದೆ. ಹಸಿಯಾದ ಆವೆ ಮಣ್ಣಿನ ಮೇಲೆ ಕೊರೆದು ನಂತರ ಸುಟ್ಟ ಶಾಸನಗಳೋಪಾದಿಯಲ್ಲಿರುವ ಫಲಕಗಳು ಮೆಸಪೊಟೋಮಿಯಾದ ಪ್ರದೇಶದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದೊರಕಿವೆ. ಅರಸ ಹಮ್ಮುರಬಿ (ಕ್ರಿ.ಪೂ. ೧೭೯೨ – ೧೭೫೦) ಯ ಪ್ರಖ್ಯಾತ ರಾಜನೀತಿ ಸಂಹಿತೆಯು ಈ ಬಗೆಯ ಫಲಕಗಳಲ್ಲಿ ರಚಿತವಾದವು. ಫಿಲಡೆಲ್ಫಿಯಾದಲ್ಲಿ ಇದರ ಮುಂದುವರಿದ ರೂಪದ ಚಿಕ್ಕ ಆಕಾರದ ಬಿಲ್ಲೆಗಳು ದೊರೆತಿದ್ದು ಚಿತ್ರದೊಂದಿಗೆ ಕ್ಯೂನಿಫಾರಂ ಲಿಪಿಯೂ ಇದ್ದು ವಾಣಿಜ್ಯ ಉದ್ದೇಶ ಅವುಗಳಲ್ಲಿ ಇರುವುದನ್ನು ಗುರುತಿಸಲಾಗಿದೆ. ಕುರಿ, ಮದ್ಯ (ದ್ರಾಕ್ಷಾರಸ), ದಿನದ ಕಾರ್ಯಗಳು ಇತ್ಯಾದಿಗಳಿಗೆ ಪ್ರತ್ಯೇಕವಾದ ಬಿಲ್ಲೆಗಳಿದ್ದು ಮೂರು ಕುರಿಗಳಿಗೆ ಮೂರು ಬಿಲ್ಲೆ, ಎರಡು ಹೂಜಿ ದ್ರಾಕ್ಷಾರಸಕ್ಕೆ ಎರಡು ಬಿಲ್ಲೆ ಎಂಬಂತೆ (Token) ನೀಡುತ್ತಿದ್ದಿರಬಹುದು. ಕ್ರಿ.ಪೂ. ೩೦೦೦ದ ವೇಳೆಗೆ ಈ ಸಂಕೇತ ಇನ್ನಷ್ಟು ಸುಧಾರಿಸಿತು. ಮೂರು ಕುರಿಗಳಿಗೆ ಮೂರು ಪ್ರತ್ಯೇಕ ಬಿಲ್ಲೆ ನೀಡುವ ಬದಲು ಕುರಿಯ ಚಿತ್ರದೊಂದಿಗೆ ಸಂಖ್ಯೆಯನ್ನು ಬರೆಯುವಂತಾಯಿತು. ಚಿತ್ರದೊಂದಿಗೆ ಅಂಕಿಗಳ 'ಓದು'ವಿಕೆಯೂ ಬಳಕೆಗೆ ಬಂತು. ಇದರಿಂದಾಗಿ ಪ್ರಪಂಚದ ಮೊದಲ ನಾಗರಿಕತೆ ಎಂದು ಸುಮೇರಿಯಾ ಪ್ರದೇಶ ಗುರುತಿಸಿಕೊಂಡಿತು.[೧೬]

ಕ್ಯೂನಿಫಾರಂ ಲಿಪಿಯ ಓದುವಿಕೆಯ ಇತಿಹಾಸವೂ ದೀರ್ಘವಾಗಿದ್ದು ಉಜಠಡಿಠಜ ಂಚಿಡಿಠಿಟ ಃಚಿಡಿಣಣಠಣಟ ರವರು ಸುಮಾರು ಮುನ್ನೂರು ಬಿಲ್ಲೆಗಳನ್ನು ಇರಿಸಿ ಚಿತ್ರಿತ ಚಿಹ್ನೆಯನ್ನು ವಿಂಗಡಿಸಿದ್ದಾರೆ. ಅದರಂತೆ ಮನುಷ್ಯರ ಅವಯವಗಳು, ಸಸ್ತನಿ ಪ್ರಾಣಿಗಳು, ಹಕ್ಕಿಗಳು, ಕೀಟಗಳು, ಮೀನುಗಳು, ಮರಗಳು, ನಕ್ಷತ್ರ ಹಾಗೂ ಮೋಡಗಳು, ಭೂಮಿ ಮತ್ತು ನೀರು, ಮನೆಗಳು, ದೋಣಿಗಳು, ಗೃಹೋಪಕರಣಗಳು, ಬೆಂಕಿ, ಶಸ್ತ್ರಾಸ್ತ್ರಗಳು, ಬಟ್ಟೆ, ಪೂಜಾ ಉಪಕರಣಗಳು, ಬಲೆಗಳು, ಸಂಗೀತವಾದ್ಯಗಳನ್ನು ಗುರುತಿಸಿದ್ದಾರೆ.[೧೭] ಗೆರೆಗಳ ರೂಪದಲ್ಲಿದ್ದು, ತ್ರಿಕೋಣಾಕಾರವಾದ ತಲೆಕಟ್ಟಿನಿಂದ ಕೂಡಿದ ಕ್ಯೂನಿಫಾರಂ ಕ್ರಿ.ಪೂ. ೨೫೦೦ರ ವೇಳೆಗೆ ಪರ್ಷಿಯನ್ ಸೇರಿದಂತೆ ಹಲವಾರು ಭಾಷೆಗಳಿಗೆ ಇದು ಮೂಲ ಲಿಪಿಯಾಯಿತು.[೧೮]

ಪ್ರಸ್ತುತ ಅಭಿನಂದನಾ ಗ್ರಂಥದಲ್ಲಿ ಪರ್ಷಿಯನ್, ಉರ್ದು ಇತ್ಯಾದಿ ಲಿಪಿಗಳ ಬಗೆಗೆ ಪ್ರತ್ಯೇಕ ಲೇಖನಗಳಿರುವುದರಿಂದ ಆ ಬಗ್ಗೆ ಇಲ್ಲಿ ಚರ್ಚಿಸಿಲ್ಲ. ಅದರಲ್ಲಿಯ ಒಂದು ಅಂಶವಾದ ಕ್ಯಾಲಿಗ್ರಫಿ (ಅಕ್ಷರ-ಬರಹ)ಗಳನ್ನು ಬಳಸಿ ವಿವಿಧ ಪ್ರಾಣಿಗಳ ಆಕಾರಗಳನ್ನು ರಚಿಸುವುದು ಅಂದಿನಿಂದ ಇಂದಿಗೂ ಉಳಿದುಬಂದಿರುವ ಕಲೆಯ ಪ್ರಕಾರವಾಗಿದೆ. ಮೊದಲಿಗೆ ಚೀನಾದಲ್ಲಿ ಕ್ಯಾಲಿಗ್ರಫಿ ಕಾಣಿಸಿಕೊಂಡಿತೆಂದು ಹೇಳಿದೆಯಾದರೂ ಪರ್ಷಿಯಾ ಹಾಗೂ ಅದರ ಸೋದರ ಲಿಪಿಗಳಲ್ಲಿ ಉಳಿದು ಬಂದಿದೆ.

ಭಾರತದಲ್ಲಿ ಸಿಂಧೂ ಕಣಿವೆಯ ಜಿಲ್ಲೆಗಳಲ್ಲಿ ಚಿತ್ರ ಹಾಗೂ ಲಿಪಿಗಳು ಇವೆಯಾದರೂ, ಕ್ರಿ.ಪೂ. ೫೦೦-೩೫೦ರ ವೇಳೆಯಲ್ಲಿ ಕಾಣಿಸಿಕೊಂಡ ಖರೋಷ್ಠಿ ಹಾಗೂ ಬ್ರಾಹ್ಮಿಲಿಪಿಗಳಲ್ಲಿ ಅವುಗಳ (ಸಿಂಧೂ ಲಿಪಿಯ) ಪ್ರಭಾವ ಕಂಡುಬರುವುದಿಲ್ಲ. ಕ್ರಿ.ಶ.ದ ಆರಂಭದಲ್ಲಿ ಕ್ಯೂನಿಫಾರಂ ಲಿಪಿಯಂತೆ ದೀರ್ಘವಾದ ಗೆರೆಗಳ ತಲೆಯ ಮೇಲೆ ಚೌಕಾಕಾರದ (ಪೇಟಿಕಾ ಶಿರ) ರಚನೆಯಿದ್ದು ಕಾಲಕ್ರಮದಲ್ಲಿ ಸ್ಥಳೀಯ ಭಾಷೆಗಳಿಗೆ ಅನುಗುಣವಾಗಿ ಲಿಪಿ ಬೆಳೆದು ಬಂದಿದೆ.

ಒಟ್ಟಾರೆಯಾಗಿ ಚಿತ್ರ - ಲಿಪಿ ಆಗುವ ಹಂತವನ್ನು ಹೀಗೆ ವಿಭಾಗಿಸಬಹುದಾಗಿದೆ.

೧. ಆದಿಮ ಚಿತ್ರಗಳು

೨. ಕೇವಲ ಒಂದೇ ಚಿತ್ರದಲ್ಲಿ ಸಂದೇಶ ನೀಡುವಿಕೆ

೩. ಒಂದಕ್ಕಿಂತ ಹೆಚ್ಚಿನ ಚಿತ್ರ ಬಳಸಿ ಸಂವಹನಗೊಳಿಸುವಿಕೆ

೪. ಚಿತ್ರಕ್ಕೆ ಭಾವನಾತ್ಮಕ ಅಂಶ ಸೇರ್ಪಡಿಸುವಿಕೆ

೫. ಬಣ್ಣಗಳನ್ನು ಬಳಸಿ ಇನ್ನಷ್ಟು ಅಭಿವ್ಯಕ್ತಿಗೊಳಿಸುವಿಕೆ

೬. ಚಿತ್ರಗಳನ್ನೇ ಸರಳೀಕರಿಸಿ ಅಕ್ಷರಗಳಾಗಿ (ಲಿಪಿಗಳಾಗಿ) ಬದಲಿಸುವಿಕೆ

ಪರ್ಷಿಯನ್ ಲಿಪಿ ಬೆಳೆದು ಬಂದ ಮೇಲೆ ಲಿಪಿಯು ಚಿತ್ರದ ಒಂದು ಭಾಗವಾಗುವಂತೆ ಪುನರ್ ರೂಪಿಸಿದೆ. ಎಂದರೆ ಪ್ರಾಣಿ ಪಕ್ಷಿ ಅಥವಾ ವಸ್ತುವಿನ ಆಕಾರದಲ್ಲಿಯೇ ಲಿಪಿಯನ್ನು ಸೃಜಿಸಿದಂತೆ ಕಂಡುಬರುತ್ತದೆ.




(ಚಿತ್ರ - ೧೨)

ಪ್ರಪಂಚದ ಮೊದ ಮೊದಲ ಲಿಪಿಗಳಿಗೆ ಚಿತ್ರಗಳೇ ಆಧಾರವಾಗಿದ್ದು ಚಿತ್ರಕಲೆಯ ಮಾಂತ್ರಿಕತೆ ಅಥವಾ ಪೂಜನೀಯ ಭಾವನೆ ಲಿಪಿಗಳಿಗೂ ಅನ್ವಯವಾಯಿತು. ನಾಗರಿಕತೆಯಲ್ಲಿ ಆದ ಮಹತ್ತರ ಬದಲಾವಣೆ ಈ ಹಂತದ್ದು. ಲಿಪಿ 'ಬರೆಯುವ'; ಅದನ್ನು ಓದಲು 'ಕಲಿಸುವ' ಒಂದು ವರ್ಗ ಹುಟ್ಟಿಕೊಂಡಿತು. ಇದು ಸಮುದಾಯದಲ್ಲಿಯೇ ವರ್ಗೀಕರಣಕ್ಕೆ ದಾರಿ ಮಾಡಿತು. ಬರೆಯುವ - ಓದುವ ವರ್ಗವನ್ನು 'ಅಕ್ಷರಸ್ಥ, 'ವಿದ್ಯಾವಂತ' ಎಂದು ಉನ್ನತೀಕರಿಸಲಾಯಿತು. ಹಾಗೆ 'ಓದಲು' 'ಬರೆಯಲು' ಬಾರದ ವರ್ಗದವರು ಅರಿವಿಲ್ಲದೆಯೇ ಶೋಷಿತ ವರ್ಗದವರಾದರು.

**ಅನುಬಂಧ**

ಉತ್ತರ ಭಾರತದ ಕೆಲವೆಡೆ ಹಾಗೂ ನಮ್ಮದೇ ರಾಯಚೂರಿನ ಪರಿಸರದ ಆದಿಮ ಚಿತ್ರಗಳಲ್ಲಿ ಮಾಂತ್ರಿಕರ, ನೃತ್ಯಗಾರರ ಲೈಂಗಿಕ ಕ್ರಿಯೆಯ ಚಿತ್ರಗಳೂ, ಪ್ರಾಣಿಗಳ ನೆರಳು ಚಿತ್ರದಲ್ಲಿ ಅವುಗಳ ಉದರ ಪ್ರದೇಶದಲ್ಲಿ ಬೇರೆ ಪ್ರಾಣಿಗಳ ಚಿತ್ರಗಳೂ ಕಂಡುಬರುತ್ತವೆ. ಅಲ್ಲದೆ ಸಾಕಷ್ಟು ಸಂಖ್ಯೆಯಲ್ಲಿ ಚುಕ್ಕಿ, ಗೆರೆ, ಅನಿಶ್ಚಿತ ಆಕಾರಗಳೂ ಚಿತ್ರಿತವಾಗಿದ್ದು ಇಲ್ಲಿ ಚಿತ್ರಕಲೆಗಿಂತ ಹೆಚ್ಚಿನದನ್ನು ಹೇಳಲು ಪ್ರಯತ್ನಿಸಿದೆ. (ಚಿತ್ರ – ೧೩)



(ಚಿತ್ರ – ೧೩)

ಇವುಗಳಲ್ಲಿ ಸರಳೀಕರಿಸಿದ ಎತ್ತು, ಕುದುರೆಗಳ ಚಿತ್ರ ಮುಂದಣ ಇತಿಹಾಸ ಕಾಲದಲ್ಲಿ ಮಾತ್ರವಲ್ಲದೆ ಇಂದಿಗೂ ದನಗಾಹಿಗಳಿಂದ ಹಾಗೂ ವ್ರತಾಚರಣೆಯ ವೇಳೆಯಲ್ಲಿ ರಚಿತವಾಗುತ್ತಿವೆ. ಆದಿಮ ಚಿತ್ರಗಳಲ್ಲಿ ಕೆಳಮುಖವಾದ ತ್ರಿಕೋಣ, ಯೋನಿ ಅಥವಾ ಸ್ತ್ರೀ ಶಕ್ತಿಯನ್ನೂ, ಊರ್ಧ್ವ ಮುಖ ತ್ರಿಕೋಣ–ಪುರುಷ ಶಕ್ತಿಯನ್ನೂ ಸಂಕೇತಿಸುತ್ತಿದ್ದು ಎರಡೂ ಕೂಡಿದಂತೆ ಇರುವ ಆಕಾರಗಳು ಸ್ತ್ರೀಪುರುಷರ ಮಿಲನ ಸೂಚಿಸುತ್ತವೆ. ತ್ರಿಕೋಣಗಳ ಅಂಚು ಮಾತ್ರ ಸೇರಿದ ಆಕಾರ ಸಹ ಆದಿಮ ಕಾಲದಿಂದಲೇ ಕಂಡುಬರುತ್ತಿದ್ದು, ಇಂದಿಗೂ ಉಳಿದು ಬಂದಿದೆ. ಕೆಳಮುಖವಾದ ತ್ರಿಕೋಣ ಇಂದಿನ ಕುಟುಂಬ ಯೋಜನೆಯ ಸಂಕೇತವೂ ಆಗಿದೆ. ಎಂದರೆ ಚಿತ್ರವನ್ನು ಓದುವ 'ಧ್ವನಿ' ಸಂಕೇತವೂ ಇಲ್ಲಿ ಕಂಡುಬರುತ್ತವೆ. ಮಾನವ ಅವಯವಗಳೂ ಸಂಕೇತವನ್ನು ಸೂಚಿಸುತ್ತವೆ. ರಸ್ತೆಯ ಸಿಗ್ನಲ್‌ಗಳಲ್ಲಿರುವ ಮಾನವ ಚಿತ್ರಗಳ ಕಾಲುಗಳು ಸ್ಥಿರವಾಗಿದ್ದರೆ 'ನಿಲ್ಲು' ಎಂದೂ, ಚಲನೆಯಲ್ಲಿದ್ದರೆ 'ಹೋಗು' ಎಂದು ತಿಳಿಸುತ್ತವೆ. ಅಂತೆಯೇ ಸಿಗರೇಟಿನ ಮೇಲೆ ಕಾಟು ಹೊಡೆದ ಚಿತ್ರ ಧೂಮಪಾನ ನಿಷೇಧಿಸಿದೆ ಎಂದೂ, ತಲೆ ಬುರುಡೆಯ ಕೆಳಗೆ ಮೂಳೆಗಳ ಕಾಟು ಹಾಕಿದ ಚಿತ್ರ ವಿದ್ಯುತ್ ಅಪಾಯವೆಂದೂ ಸಂಕೇತಿಸುತ್ತವೆ.

'ಪದಗಳಿಲ್ಲದೆ ಕಥೆ ಹೇಳುವಿಕೆ' ಭಾರತದ ಯಾವತ್ತೂ ಚಿತ್ರ ಶಿಲ್ಪಗಳಿಗೇ ಅನ್ವಯಿಸುವಂತಿದೆ. ಚಿತ್ರಶಿಲ್ಪಗಳ ಓದುವಿಕೆ ಇಂದಿಗೂ ಮುಂದುವರಿದಿದೆ. 'ಆಲೇಖ್ಯ' ಎಂಬ ಪದ ಚಿತ್ರ ರಚನೆ ಹಾಗೂ ಲಿಪಿಯ ಬರವಣಿಗೆ ಎರಡಕ್ಕೂ ಅನ್ವಯಿಸುತ್ತದೆ. ಶಾಸ್ತ್ರಗ್ರಂಥಗಳಲ್ಲಿ, ಕಾವ್ಯ ನಾಟಕಗಳಲ್ಲಿ ಚಿತ್ರ ರಚಿಸುವಿಕೆಗೆ 'ಆಲೇಖ್ಯ' ಎಂದೇ ಬಳಸಲಾಗಿದೆ. ದೇವಾನುದೇವತೆಗಳ ಶಿಲ್ಪಗಳ ಗುರುತಿಸುವಿಕೆ, ಅವುಗಳೊಂದಿಗೆ ಇರುವ ಉಪಕರಣಗಳು ಜೊತೆಗೆ ಹಸ್ತ ಪಾದಗಳ ವಿನ್ಯಾಸ, ಉಡುಗೆ ತೊಡುಗೆಗಳೂ ಸೇರ್ಪಡೆಯಾಗುತ್ತದೆ. ಶಂಖ, ಚಕ್ರ, ಗದಾ, ಪದ್ಮವಾಗಲೀ, ತ್ರಿಶೂಲ, ಪಾನಪಾತ್ರೆ, ವೀಣೆ, ಕೊಳಲು ಇತ್ಯಾದಿಗಳೆಲ್ಲಾ ಅವುಗಳನ್ನು ಹೊಂದಿರುವ ದೇವ–ದೇವಿಯರ ಸಮಗ್ರ ಗುಣ ವಿಶೇಷಗಳಾಗಿರುತ್ತವೆ. ಅವುಗಳ ಸ್ಥಾನ ಬದಲಾವಣೆ, ಆಕಾರದ ಬದಲಾವಣೆಗಳೂ ಲಿಪಿಯಂತೆ ಅರ್ಥ ವ್ಯತ್ಯಾಸಗಳನ್ನು ನೀಡುತ್ತವೆ. ಈ ಚಿತ್ರಗಳು ಭಾವನಾತ್ಮಕವೂ ಆಗುತ್ತವೆ. ಬೌದ್ಧರ ಹೀನಾಯಾನದಲ್ಲಿ ಬುದ್ಧನ ಪಾದ, ಚಕ್ರ, ವಿಹಾರಗಳ ಚಿತ್ರ ಬುದ್ಧನನ್ನು ಸಂಕೇತಿಸಿದರೆ; ಮಹಾಯಾನದಲ್ಲಿ ಬುದ್ಧನ ಮೂರ್ತಿಯೂ, ಮುಂದೆ ವಜ್ರಾಯಾನದಲ್ಲಿ ತಾರಾಭಗವತಿ ಇತ್ಯಾದಿಗಳೂ ಖಚಿತವಾಗಿ ಪ್ರತಿಯೊಂದೂ ಬುದ್ಧ ತತ್ವಗಳನ್ನು ವಿವರಿಸುತ್ತವೆ.

ಒಂದೇ ಚಿತ್ರ ಹಲವಾರು ಅರ್ಥ ನೀಡುವಂತೆ ಒಂದೇ ಅಕ್ಷರ ಹಲವಾರು ಅರ್ಥ ನೀಡುತ್ತದೆ. ಇವುಗಳನ್ನು 'ಏಕಾಕ್ಷರ' ಪದಗಳೆಂದು ಹೇಳಬಹುದು. 'ಅ' ಕಾರ ವಿಷ್ಣು, ವಾಸುದೇವ ಇತ್ಯಾದಿ ೩೧ ಅರ್ಥಗಳನ್ನು ನೀಡುತ್ತದೆ ಎಂದು ತಿಳಿಸುವ ನಿಘಂಟಿನಲ್ಲಿ, ಅವುಗಳಲ್ಲಿ ಆರು ವಿಧದ ಅರ್ಥಗಳನ್ನು ೧. ಸಾದೃಶ್ಯ, ೨. ಅಭಾವ, ೩. ಅನ್ಯತ್ವ, ಭೇದ, ೪. ಅಲ್ಪತ್ವ, ೫. ಅಪ್ರಾಶಸ್ತ್ಯ, ೬. ವಿರೋಧ ಎಂದು ಉದಾಹರಣೆಗಳಿಂದ ವ್ಯಾಖ್ಯಾನಿಸಲಾಗಿದೆ.[೧೯] ಇದೇ ರೀತಿ ಒಂದಕ್ಕಿಂತ ಹೆಚ್ಚು

ಅಕ್ಷರಗಳ ಪದವಲ್ಲಿ ಪ್ರತಿ ಅಕ್ಷರಕ್ಕೂ ಅರ್ಥ ವಿಶೇಷಣವನ್ನು ಹಚ್ಚಲಾಗಿದೆ. ಎಂದರೆ ಒಂದು ಶಿಲ್ಪದ ಮುಂದೆ ನಿಂತರೆ ಅದರಲ್ಲಿಯ ಸಂಕೇತಗಳು ಹಾಗೂ ಏಕಾಕ್ಷರದಿಂದ ಬಹು ಅಕ್ಷರಗಳವರೆಗಿನ ವ್ಯಾಖ್ಯಾನಗಳು ಆ ಶಿಲ್ಪದ ನೈಜ, ಭಾವನಾತ್ಮಕ ಹಾಗೂ ತತ್ವ ಸಿದ್ಧಾಂತ ಮತ್ತು ಶಿಲ್ಪದ ಹಿನ್ನೆಲೆಯ ಕಥೆಗಳನ್ನು ಮನಃಪಟಲದ ಮೇಲೆ ಮೂಡಿಸಿ 'ಪದಗಳಿಲ್ಲದ ಕಥೆ' ಯಾಗುತ್ತವೆ. ಉದಾ : ನಟರಾಜನ ಶಿಲ್ಪ ಇರಿಸಿ ಸತ್, ಚಿತ್, ಆನಂದ ಕುರಿತು ಆನಂದ ಕುಮಾರ ಸ್ವಾಮಿಯವರು ಬೃಹತ್ ಗ್ರಂಥವನ್ನೇ ರಚಿಸಿದ್ದಾರೆ.

ಮೊಸಳೆಯ ಮೇಲೆ ಕುಳಿತ ಕೋತಿಯ ಚಿತ್ರವೊಂದು ಪಂಚತಂತ್ರದ ಕೋತಿಯ ಹೃದಯ ಬಯಸಿದ ಮೊಸಳೆಯ ಇಡೀ ಕಥೆಯನ್ನು ನೆನಪಿಸುತ್ತದೆ. ಇಡೀ ರಾಮಾಯಣ, ಭಾರತಾದಿಗಳನ್ನು ತಲಾ ಹತ್ತು ಚಿತ್ರಗಳಲ್ಲಿ ವಿವರಿಸಿದ್ದು ಕಥೆ ಹೇಳುವಾತ ಈ ಹತ್ತೇ ಚಿತ್ರವಿರಿಸಿ ಇಡೀ ಮೂಲಕತೆಯನ್ನು – ಉಪಕಥೆಗಳೂ ಸೇರಿಸಿ ನಾಲ್ಕಾರು ಗಂಟೆಗಳ ಕಾಲ ವಿವರಿಸಬಹುದು. ಈ ಬಗೆಯಲ್ಲಿ ಕಥೆ ಹೇಳುವುದನ್ನು ಚಿತ್ರ ಕಥೆಗಳೆಂದು ಕರೆಯುತ್ತಾರೆ. ಈ ರೀತಿ ರಾಮಾಯಣ, ಭಾರತಗಳಲ್ಲದೆ ಜೈನ ಹಾಗೂ ಶೈವ ಪುರಾಣಗಳ ಹತ್ತಾರು ಸಂಯೋಜನಾ ಶಿಲ್ಪಗಳನ್ನು ಇರಿಸಿ ಕಥೆ ಹೇಳಿರುವುದನ್ನು ದೇವಾಲಯಗಳ ಪಟ್ಟಿಕೆಗಳಲ್ಲಿ ಕಾಣಬಹುದು. ಆದರೆ ಜಾತಕ ಕಥೆಗಳಲ್ಲಿ ಒಂದೇ ಕಥೆಯ ನಾಲ್ಕಾರು ಘಟನೆಗಳನ್ನು ಒಂದೇ ಸಂಯೋಜನೆಯಲ್ಲಿ ತಂದಿರುವುದು ಭಾರತೀಯ ಶಿಲ್ಪಕಲೆಯ ಸಂಯೋಜನೆಯಲ್ಲಿ ಪ್ರಮುಖ ಅಂಶ. ಇಂತಹ ಸಂದರ್ಭಗಳಲ್ಲಿ ಕಥೆಯ ಪೂರ್ವ ಪರಿಚಯವಿದ್ದಲ್ಲಿ ಹೆಚ್ಚು ಗ್ರಾಹ್ಯವಾಗಬಹುದಾದರೂ ಕಥಾ ಪ್ರಸಂಗ ತಿಳಿಯದಿದ್ದರೂ ಚಿತ್ರಗಳನ್ನು 'ಓದಲು' ಅಡ್ಡಿಯಿಲ್ಲ. ಶಿವರಾಮ ಕಾರಂತರು ತಮ್ಮ ಭಿತ್ತಿಚಿತ್ರ ಕುರಿತ ಪುಸ್ತಕದಲ್ಲಿ ಆಕಾರಗಳ ಉಡುಗೆ-ತೊಡುಗೆ ಅವುಗಳ ಸ್ಥಾನ, ಇತ್ಯಾದಿಗಳಿಂದ ಆಕಾರಗಳನ್ನು ಗುರುತಿಸಿದ್ದಾರೇ ವಿನಾ ಕಥೆಯ ಗೋಜಿಗೆ ಹೋಗುವುದಿಲ್ಲ. ಈ ರೀತಿ ಚಿತ್ರ ಶಿಲ್ಪಗಳು 'ಓದು'ವಂತಿದ್ದು ಯಾವುದೇ 'ಭಾಷೆ'ಯ 'ಲಿಪಿ'ಯ ತೊಡಕುಗಳನ್ನು ನಿವಾರಿಸಿಕೊಂಡಿವೆ.

ಕೊನೆಯದಾಗಿ ಪರ್ಶಿಯನ್ ಲಿಪಿಗಳನ್ನೇ ಬಳಸಿ ಚಿತ್ರ ರಚಿಸುವ ಕ್ಯಾಲಿಗ್ರಫಿ ರೀತಿಯ ಚಿತ್ರಗಳು ಭಾರತದ ಭಾಷೆಗಳಲ್ಲಿ ಕಂಡುಬರುವುದಿಲ್ಲ. ಮಹಾಕಾಳನೆಂಬ ಚಿತ್ರದುರ್ಗ ಪ್ರದೇಶದ ೧೧ನೇ ಶತಮಾನದ ಶಿಲ್ಪಿ ತಾನು ಲಿಪಿಯ ಆಕಾರವನ್ನು ಅನುಸರಿಸಿ ಆನೆ, ಸಿಂಹ, ಗಿಳಿ ಇತ್ಯಾದಿ ಚಿತ್ರ ರಚಿಸಬಲ್ಲೆನೆಂದು ಹೇಳಿಕೊಂಡಿದ್ದಾನೆ.[೨೦] ಇಂದಿನ ಕಲಾವಿದ ಬಿ.ಕೆ.ಎಸ್. ವರ್ಮ ತಮ್ಮ ಸಹಿಯನ್ನು ಕಲಾಕೃತಿಯೊಂದರಂತೆ ರಚಿಸುತ್ತಾರೆ. ಜನಪದದ ಅನೇಕ ಆಚರಣೆಗಳಲ್ಲಿ ಚಿತ್ರ, ಶಿಲ್ಪಗಳನ್ನು ರಚಿಸುತ್ತಿದ್ದು ಅವೂ ಸಹ ಚಿತ್ರಲಿಪಿಯನ್ನು ಹೋಲುತ್ತವೆ. ಶಿವ-ಪಾರ್ವತಿ, ವಿಷ್ಣುಪಾದ ಇತ್ಯಾದಿ ೧೫ ಸಂಕೇತಗಳನ್ನು ತುಳಸಿಕಟ್ಟೆಯ ಮುಂದೆ ರಚಿಸುವುದುಂಟು (ಚಿತ್ರ ೧೪). ೧೯೭೨ ರಲ್ಲಿ ಸೌರವ್ಯೂಹದಾಚೆಗೆ ಉಡಾಯಿಸಿದ ಗಗನ ನೌಕೆಯಲ್ಲಿ ಸ್ತ್ರೀ-ಪುರುಷರೊಂದಿಗೆ ಇತರ ಸಂಕೇತಗಳನ್ನು ಇರಿಸಿ ಅನ್ಯಲೋಕದಲ್ಲಿ ಇರಬಹುದಾದ ಜೀವಿಗಳಿಗೆ ಚಿತ್ರ ಭಾಷೆಯಲ್ಲಿ ಸಂವಹನಗೊಳಿಸಲಾಗಿದೆ.



(ಚಿತ್ರ – ೧೪)

ಒಂದು ಅರ್ಥದಲ್ಲಿ ಚಿತ್ರದಿಂದ ಲಿಪಿ ಹುಟ್ಟಿ, ಅಕ್ಷರಗಳಾಗಿ, ಪದ, ವಾಕ್ಯಗಳಾಗಿ ಮುಂದುವರೆಯಿತು. ಇನ್ನೊಂದು ಅರ್ಥದಲ್ಲಿ ಚಿತ್ರ ಹಾಗೆಯೇ ಸಂವಹನ ಮಾಧ್ಯಮವಾಗಿ ವಿಶ್ವದಾದ್ಯಂತ ಏಕ ಭಾಷೆಯಾಗಿ ಉಳಿದುಕೊಂಡು ಬಂದಿತು ಎನ್ನಬಹುದು. ಆದರೆ ಎರಡಕ್ಕೂ ಅದರದೇ ಆದ ಮಿತಿಯಿದೆ, ಗೌಪ್ಯತೆಯಿದೆ ಎಂದೂ ಹೇಳಬಹುದು.

ಗೌಪ್ಯತೆಯನ್ನು ಅರಿಯುವುದೇ (ಡಿ.ಕೋಡಿಂಗ್) ಒಂದು ಸಂಶೋಧನಾ ವಸ್ತುವೂ ಆಗಿದೆ.



(ಚಿತ್ರ – ೧೫)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. Michel Lorblanchet, Ed : *Rock Art in the old World,* IGNC for Arts, New Delhi, 1992.

೨. David Diringer, *The Alphabet*, London 1968.

೩. Wikipedia / Dongba

೪. http://www.crystalinks.com/petroglyphs

೫. Marcel cohen, *The art of writing*, courier magazine, March 1964, unesco.

೬ **ಕನ್ನಡ ವಿಶ್ವಕೋಶ**, ಮೈಸೂರು ವಿ.ವಿ. ಅಡಕ ಮುದ್ರೆ, ಸಿಡಿ.

೭. http://www.historian.net/hxwrite.htm

೮. **ಕನ್ನಡ ವಿಶ್ವಕೋಶ**, ಮೈ.ವಿ.ವಿ. ಅಡಕ ಮುದ್ರೆ.

೯. ಅದೇ.

೧೦. ಅದೇ,

೧೧. ಅದೇ,

೧೨. ಚಿತ್ರ/ವಿವರ http://www.chinesefortunecalendar.com) (http://www.rohan.sdsu.edu/dept/chinese/aspect/pictographic.htm

೧೩. **ಕನ್ನಡ ವಿಶ್ವಕೋಶ** – ಅಡಕಮುದ್ರೆ.

೧೪. David Diringer, *The Alphabet.*

೧೫. Egbert Richter, *The Indus Script and Reg veda*, p.79-80.

೧೬. Omnglot – ಅಂತರ್‌ಜಾಲ ತಾಣ) ಹಾಗೂ ಡಿರಿಂಜರ್ – ದ **ಆಲ್ಫಬೆಟ್**

೧೭. http://encarta.msn.com/text/cuneform

೧೮. http://newworldencyclopedia)

೧೯. ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ, **ಸಂಸ್ಕೃತ–ಕನ್ನಡ ಶಬ್ದಕೋಶ**, ಪ್ರಥಮ ಭಾಗ, ಬೆಂಗಳೂರು, ೧೯೮೮. ಪು.೧.

೨೦. ಎಪಿಗ್ರಾಫಿಯಾ **ಕರ್ನಾಟಿಕಾ** ಸಂ.೧೧. (ಸಂ) ಬಿ.ಎಲ್.ರೈಸ್. ೧೯೦೩, ಚಿತ್ರದುರ್ಗ ಶಾಸನ ಸಂ. ೪೭, ಕ್ರಿ.ಶ. ೧೦೬೭.


❋❋❋

# ಲಿಪಿಯ ಉಗಮ ಮತ್ತು ವಿಕಾಸದ ಬಗೆಗಿನ ಸಿದ್ಧಾಂತಗಳು

– ಜಿ.ಕೆ. ದೇವರಾಜಸ್ವಾಮಿ*

**ಭಾಷೆಯು** ಪ್ರಪಂಚದ ಎಲ್ಲಾ ಜನಾಂಗಗಳಲ್ಲಿಯೂ ಇದೆ. ಹಾಗೆಯೇ ಬೇರೆ ಬೇರೆ ಪ್ರಕಾರಗಳನ್ನು ಹೊಂದಿದೆ. 'ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಯಾದೃಚ್ಛಿಕ ಧ್ವನಿ ಸಂಕೇತಗಳ ವ್ಯವಸ್ಥೆಯೇ ಭಾಷೆ' ಎಂದು ಸ್ಟೂರಟ್‌ವೆಂಟ್ ಎಂಬ ವಿದ್ವಾಂಸನು ಹೇಳುತ್ತಾನೆ. ಬರವಣಿಗೆಯು 'ಸರಿಯಾದ ರೀತಿಯಲ್ಲಿ ಭಾಷೆಯನ್ನು ಮೂರ್ತ ರೂಪದಲ್ಲಿ ಹಿಡಿದಿಡುವ ಸಂಯೋಜಿತ ಸಂಜ್ಞೆ ಅಥವಾ ಕಣ್ಣಿಗೆ ಕಾಣಿಸುವ ಸುವ್ಯವಸ್ಥಿತ ಗುಂಪಾಗಿದೆ' ಎಂದು ಬ್ಲಾಕ್‌ವೆಲ್ ವಿಶ್ವಕೋಶವು ತಿಳಿಸುತ್ತದೆ. 'ಭಾಷೆಯು ನಾವು ಆಡುವ ಮಾತಾದರೆ, ಅದನ್ನು ಹಿಡಿದಿಡುವ ಸಾಧನವೇ ಲಿಪಿ' ಎಂದು ಚಿದಾನಂದ ಮೂರ್ತಿಯವರು ಅಭಿಪ್ರಾಯಪಡುತ್ತಾರೆ.

ಪ್ರಾಚೀನ ಮಾನವನು ತಾನು ನೆಲೆಸಿದ್ದಂತಹ ಕಲ್ಲಾಸರೆಗಳಲ್ಲಿ, ಬಣ್ಣದಲ್ಲಿ ಬರೆದಂತಹ, ಕೊರೆದಂತಹ ಚಿತ್ರಗಳು ಪಳೆಯುಳಿಕೆಗಳಾಗಿ ಇಂದಿಗೂ ಇವೆ. ಇವುಗಳಲ್ಲಿ ಪ್ರಾಣಿ ಚಿತ್ರ, ಬೇಟೆ ಚಿತ್ರ, ಘಟಿಸಿದ ಸನ್ನಿವೇಶ ಅಥವಾ ಭಾವನಾತ್ಮಕ ಚಿತ್ರಗಳೂ ಇವೆ. ಇವು ಪ್ರಾಚೀನ ಮಾನವ ಅವನ ಭಾವನೆಗಳನ್ನು ಹಿಡಿದಿಟ್ಟ ದಾಖಲೆಗಳಾಗಿವೆ. ಇವು ಹತ್ತಾರು ಸಾವಿರ ವರ್ಷಗಳಿಂದ ಇಂದಿಗೂ ಪ್ರಪಂಚದಾದ್ಯಂತ ದೊರೆತಿವೆ. ಕರ್ನಾಟಕದಲ್ಲಿಯೂ ಹಲವಾರು ಕಡೆ ಇಂತಹ ಪ್ರಾಗೈತಿಹಾಸಿಕ ಚಿತ್ರಗಳು ದೊರೆತಿವೆ. ಹೀಗೆ ಸಂಕೇತ, ಸಂಜ್ಞೆಗಳ ರೂಪದಲ್ಲಿರುವ ಚಿತ್ರಗಳು, ಗೆರೆಗಳು ಮುಂತಾದವು ಭಾಷೆಯನ್ನು ಹಿಡಿದಿಡುವ ಒಂದು ಪ್ರಯತ್ನಗಳಾಗಿವೆ. ಇದು ಕಾಲಾಂತರದಲ್ಲಿ ಹೆಚ್ಚಿನ ವಿವರಗಳೊಂದಿಗೆ ವಿಸ್ತರಿಸಿಕೊಂಡಿತು. ಇತರರಿಗೆ ಹಾಗೂ ಮುಂದಿನವರಿಗೆ ತಿಳಿಸುವ ಮಾಧ್ಯಮವೂ ಆಯಿತೆನ್ನಬಹುದು. ಆನಂತರದಲ್ಲಿ ಒಂದೆಡೆ ನೆಲೆ ನಿಲ್ಲಲಾರಂಭಿಸಿದ ಮಾನವನು ಚಿತ್ರ ಸಂಜ್ಞೆಗಳ ಮುಖಾಂತರ ಬದಲಾವಣೆಯೊಂದಿಗೆ ಬರವಣಿಗೆಯನ್ನು ತನ್ನ ನಾಗರಿಕತೆಯಲ್ಲಿ ಬೆಳೆಸಿಕೊಳ್ಳಲಾರಂಭಿಸಿದ. ಆದಿಮಾನವನು ತನ್ನ ಜಮೀನಿನ ಲೆಕ್ಕ, ಜಾನುವಾರುಗಳ ಲೆಕ್ಕ, ದವಸ ಧಾನ್ಯಗಳ ಪ್ರಮಾಣ ಅಥವಾ ಆಸ್ತಿಯ ಹಸ್ತಾಂತರ ಮುಂತಾದ ಸಂದರ್ಭಗಳಲ್ಲಿಯೂ ಬರವಣಿಗೆಗೆ ತನ್ನನ್ನು ತೊಡಗಿಸಿಕೊಂಡಿರಬೇಕು. ನಮಗೆ ೯೦೦೦ ವರ್ಷಗಳ ಹಿಂದಿನ ನವಶಿಲಾಯುಗದ ಕಾಲದ ಎಣಿಕೆಯ (ಟೋಕನ್ಸ್) ಬಿಲ್ಲೆಗಳು ಮೆಸಪಟೋಮಿಯಾದಲ್ಲಿ ದೊರೆತಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

ಮಾನವನ ನಾಗರಿಕತೆಯಲ್ಲಿ ಲಿಪಿ ಉಗಮಿಸಿ ಅದು ವಹಿಸಿದ ಪಾತ್ರ ಬಹಳ ಮುಖ್ಯವಾದುದು. ಲಿಪಿಯು ಮನುಷ್ಯನ ನಾಗರಿಕತೆಯ ಮಾನದಂಡ ಎಂಬ ವಿದ್ವಾಂಸರ ಹೇಳಿಕೆಯು ಬಹಳ ಚರ್ಚೆಗೆ ಒಳಗಾಗಿದೆ. ಲಿಪಿಯ ಉಗಮದ ಹಾದಿಯನ್ನು ಗುರುತಿಸುವಲ್ಲಿ ವಿದ್ವಾಂಸರ ಶ್ರಮ ಮೆಚ್ಚುವಂತದ್ದಾಗಿದೆ. ವರ್ಣಮಾಲೆ ಉಗಮವಾಗಿ ಸಾವಿರಾರು ವರ್ಷಗಳೇ ಆಗಿವೆ. ಆದರೂ ವಿದ್ವಾಂಸ ಡೇವಿಡ್ ಡಿರಿಂಜರ್ ಹೀಗೆ ಹೇಳುತ್ತಾರೆ. 'ವರ್ಣಮಾಲೆಯ ಮತ್ತು ಕೆಲವು ವಿಶಿಷ್ಟ ವರ್ಣಮಾಲೆಗಳ ಉಗಮ ಇನ್ನೂ ಅಸ್ಪಷ್ಟವಾಗಿಯೇ ಇದೆ.' ಇದು ನಾವು ಒಪ್ಪಬೇಕಾದುದೇ ಆಗಿದೆ. ಬರವಣಿಗೆಯು ಮನುಷ್ಯನ ಬುದ್ಧಿಶಕ್ತಿಯನ್ನು ಕುಗ್ಗಿಸುತ್ತದೆ ಎಂಬುದು ಪ್ರಾಚೀನ ಹೇಳಿಕೆ ಹಾಗೂ ಟೀಕೆಯೂ ಕೂಡ. 'ನಿಗದಿತ ರೂಪ ಬರವಣಿಗೆಯು ಮನುಷ್ಯನ ಮೆದುಳಿನ ಬುದ್ಧಿಮತ್ತೆಯನ್ನು ಕುಗ್ಗಿಸುತ್ತದೆ ಹಾಗೂ ಮೆದುಳಿನ ಕೆಲಸ ಸಮರ್ಥವಾಗದೆ, ನೆನಪಿನ ಶಕ್ತಿಯನ್ನು ಕಡಿಮೆಗೊಳಿಸುತ್ತದೆ' ಎಂಬುದಾಗಿ ತತ್ತ್ವಶಾಸ್ತ್ರಜ್ಞ ಪ್ಲೇಟೋನ ವಾದ. ಇದಕ್ಕೆ ಉದಾಹರಣೆಯಾಗಿ ಸಾವಿರಾರು ವರ್ಷಗಳು ವೇದಗಳು ಬಾಯಿಂದ ಬಾಯಿಗೆ ಬಂದಿರುವುದು. ಹಾಗೆಯೇ ಜನಪದ ಹಾಡು ಹಸೆಗಳು ಒಬ್ಬರಿಂದೊಬ್ಬರಿಗೆ, ಮೂಲದಲ್ಲಿ ವ್ಯತ್ಯಾಸವಿಲ್ಲದಂತೆ ಹರಿದು ಬಂದಿರುವುದು. ಆದರೆ ಬರವಣಿಗೆಯಲ್ಲಿ ಇದು ಅಸಾಧ್ಯವೆನ್ನುವ ಅಂಶಗಳಾಗಿವೆ.

---

* 'ತ್ರಯೀ' ೫೬, ಮೈಸೂರುಲ್ಯಾಂಪ್ ಲೇಔಟ್, ೨ನೆಯ ಹಂತ. ನಾಗಸಂದ್ರ ಅಂಚೆ, ಬೆಂಗಳೂರು–೫೬೦೦೭೩.

**ಲಿಪಿ ಉಗಮದ ಬಗೆಗಿನ ಪೌರಾಣಿಕ ಹೇಳಿಕೆಗಳು**

ಪ್ರಾಚೀನ ಈಜಿಪ್ಷಿಯನ್ನರು ತಮ್ಮ ಲಿಪಿಯು ದೇವರಿಂದ ಉಗಮವಾಗಿದೆ ಎಂದು ನಂಬಿದವರು. 'ಥೋತ್'(*Thoth*) ಎಂಬ ದೇವತೆಯು ಬರವಣಿಗೆಯನ್ನಲ್ಲದೆ, ದಿನ, ಲೆಕ್ಕಾಚಾರ, ಪಂಚಾಂಗಗಳನ್ನು, ಹಾಗೆಯೇ ಕಲೆ, ವಿಜ್ಞಾನವನ್ನು ಕರುಣಿಸಿದನೆಂದು ಅವರಲ್ಲಿ ನಂಬಿಕೆ ಇದೆ. ಥೋತ್ ದೇವತೆಯೇ ಮಾತನ್ನು ಬರವಣಿಗೆಯನ್ನಾಗಿಸುವುದು. ತಮ್ಮ ಸಾಧನಾ ಪಥವೆಲ್ಲಾ ಅವನಿಂದಲೇ ಎಂದು ಅವರು ತಿಳಿದಿದ್ದರು. ಈ ನಂಬಿಕೆಯ ಹಿನ್ನೆಲೆಯಲ್ಲಿ ತಮ್ಮ ಹೆಸರನ್ನು ಎಲ್ಲಾದರೂ ಕೆತ್ತಿಸಿ ಶಾಶ್ವತವಾಗಿರಿಸುತ್ತಿದ್ದರು.

ಈಜಿಪ್ಟ್‌ನಲ್ಲಿ ಕ್ರಿ.ಶ. ೧೭೯೯ರಲ್ಲಿ ಫ್ರೆಂಚ್ ಸೈನಿಕರಿಂದ ದಾಳಿಗೊಳಗಾದ ಸೈನಿಕರು 'ರಷಿದ್'(ರೊಸೆಟ್ಟು) ಎಂಬಲ್ಲಿ ಕೋಟೆ ಅಗೆಯುವಾಗ ಚಿತ್ರದಿಂದ ಕೂಡಿದ ಒಂದು ಕಲ್ಲು ಚಪ್ಪಡಿ ಪತ್ತೆಯಾಯಿತು. ಇದನ್ನು ರೊಸೆಟ್ಟಾ ಶಿಲಾಶಾಸನವೆಂದು ಕರೆಯುತ್ತಾರೆ. ಕ್ರಿ.ಶ. ೧೮೧೩ರಲ್ಲಿ ಸರ್ ಥಾಮಸ್ ಯಂಗ್ ಎಂಬ ವಿದ್ವಾಂಸನು ಇದನ್ನು ಪರಿಶೀಲಿಸಿದ. ಇದರಲ್ಲಿ ಚಿತ್ರರೂಪ ಲಿಪಿ, ಸಾಮಾನ್ಯವಾದ ಲಿಪಿ ಹಾಗೂ ಗ್ರೀಕ್ ಲಿಪಿಗಳಿಂದ ಕೂಡಿದ ಲಿಪಿ ಹೀಗೆ ಮೂರು ವಿಧದ ಲಿಪಿ ಇದೆ ಎಂಬುದನ್ನು ಗಮನಿಸಿದ. ಹಾಗೆಯೇ ಒಂದೇ ಭಾಷೆಗೆ ಬೇರೆ ಬೇರೆ ಲಿಪಿಗಳಿರುವುದನ್ನೂ ಗಮನಿಸಿದ. ಕ್ರಿ.ಶ. ೧೮೨೨ರಲ್ಲಿ ಜೆ.ಎಫ್. ಚಾಂಪೋಲಿಯನ್ ಎಂಬುವರು ಹಲವಾರು ವರ್ಷಗಳ ಶ್ರಮದಿಂದ ಇದರ ಒಗಟನ್ನು ಬಿಡಿಸಿದರು. ಈ ಓದಿನಿಂದ ಈಜಿಪ್ಟ್‌ನ ಪ್ರಾಚೀನ ಇತಿಹಾಸ ಮತ್ತು ನಾಗರಿಕತೆ, ಸಂಸ್ಕೃತಿಯ ಮೇಲೆ ಹೊಸ ಬೆಳಕು ಮೂಡಿತು.

೧೮೭೪ರಲ್ಲಿ ಡೇರೋಗ್ ಎಂಬ ವಿದ್ವಾಂಸನು ಈಜಿಪ್ಟ್ ದೇಶದಲ್ಲಿಯೇ ಮೊದಲಿಗೆ ವರ್ಣಮಾಲೆಯ ಉಗಮವಾಯಿತೆಂದು ತಿಳಿಸುತ್ತಾನೆ.

ಈಜಿಪ್ಟ್‌ನ ಪ್ರಾಚೀನ ಲಿಪಿಯನ್ನು ಮೂರು ವಿಭಾಗಗಳಾಗಿ ವಿದ್ವಾಂಸರು ವಿಂಗಡಿಸಿದ್ದಾರೆ.

೧. ಹೇರೋಗ್ಲೆಫಿಕ್ ವಿಭಾಗದಿಂದ ವರ್ಣಮಾಲೆ ಉಗಮಕ್ಕೆ ಕಾರಣವಾಯಿತೆಂದು ವಿದ್ವಾಂಸರಾದ ಚಾಂಪೋಲಿಯನ್, ಲೇನಾರ್‌ಮಂಟ್, ಹಾಲ್ವೆಯವರ ವಾದವಾಗಿದೆ.

೨. ಹೈರಾಟಿಕ್ ವಿಭಾಗದಿಂದ ವರ್ಣಮಾಲೆ ಉಗಮವಾಯಿತೆಂದು ಲುಜ್ಜಟ್ಟೋ, ಡೇರೋಗ್, ಟೈಲರ್, ಕೈಲೇ ಮತ್ತು ಇತ್ತೀಚಿನವರಾದ ಮಾಂಟೆಟ್, ಮಾಲ್ಲನ್, ಉಲ್‌ಮ್ಯಾನ್ ಮತ್ತು ರಾಂಜೆ ವಾಲ್ಲೆಯವರು ತಮ್ಮ ವಾದವನ್ನು ಮಂಡಿಸುತ್ತಾರೆ.

೩. ಡೆಮೋಟಿಕ್ ವಿಭಾಗದ ಬಗ್ಗೆ ಚಾರ್ ಎಂಬ ವಿದ್ವಾಂಸ ವಾದ ಮಂಡಿಸಿದರೂ, ಇದು ವರ್ಣಮಾಲೆಯೊಂದಿಗೆ ಉದಯಿಸಿದ ಮಾದರಿ ಎಂಬುದು ಇತರ ವಿದ್ವಾಂಸರ ವಾದ.

ಒಟ್ಟಾರೆ ಈಜಿಪ್ಟ್‌ನ ಲಿಪಿಯಲ್ಲಿ ೬೦೦ಕ್ಕೂ ಹೆಚ್ಚಿನ ಚಿಹ್ನೆಯನ್ನು ಗುರುತಿಸಲಾಗಿದೆ. ಹಾಗೆ ಕೆಲವು ಒಂದಕ್ಕೊಂದು ಹೋಲಿಕೆಗಳಿದ್ದರೆ ಇನ್ನು ಕೆಲವು ಭಿನ್ನವಾಗಿವೆ. ಮೊದಲಿನಿಂದಲೂ ಸಂಜ್ಞೆಗಳಲ್ಲಿ ಮೂಲ ಸ್ವರಗಳು ಕಂಡು ಬರುವುದಿಲ್ಲ. ಪ್ರತ್ಯೇಕವಾದ ಹಾಗೂ ಸೇರಿಕೊಂಡಂತಹ ವ್ಯಂಜನಗಳೂ, ಪದಗಳೂ ಕಂಡುಬರುತ್ತವೆ. ಹಾಗೆಯೇ ಒಂದೇ ಶಬ್ದಕ್ಕೆ ಬೇರೆ ಬೇರೆ ಸಂಜ್ಞೆ/ಚಿಹ್ನೆಗಳೂ ಕಂಡು ಬರುತ್ತವೆ.

ಒಂದೇ ಶಬ್ದವನ್ನು ವಿವಿಧ ರೀತಿಯಲ್ಲಿಯೂ ಬರೆಯಲಾಗುತ್ತದೆ. ಹೀಗಿರುವುದರಿಂದ ವರ್ಣಮಾಲೆಯ ಉಗಮ ಈಜಿಪ್ಟ್‌ನಲ್ಲಿ ಆಯಿತು ಎಂಬುದನ್ನು ಡೇವಿಡ್ ಡಿರಿಂಜರ್ ಒಪ್ಪುವುದಿಲ್ಲ. ಒಂದೊಮ್ಮೆ ವರ್ಣಮಾಲೆ ಇದ್ದಿದ್ದರೆ, ಅವರು ಹಲವಾರು ವರುಷ ಇಂತಹ ಕ್ಲಿಷ್ಟವಾದ ಸಂಕೀರ್ಣ ಬರವಣಿಗೆಯನ್ನು ಮುಂದುವರಿಸುತ್ತಿರಲಿಲ್ಲವೆನ್ನಬಹುದು. ಹಿಂದಿನ ಕಷ್ಟಕರವಾದ ಬರವಣಿಗೆಯನ್ನೇ ಈಗಲೂ ಮುಂದುವರಿಸುತ್ತಿದ್ದಾರೆ. ಅಂದರೆ ವರ್ಣಮಾಲೆ ಬಂದ ನಂತರ ನೂರಾರು ವರ್ಷಗಳಾದರೂ ಹಿರೋಗ್ಲಿಫಿಕ್ ಮತ್ತು ಹೆರಾಟಿಕ್ ಲಿಪಿಗಳಲ್ಲಿ ಸ್ವಲ್ಪ ಬದಲಾವಣೆ ಮಾತ್ರ ಕಂಡುಬರುತ್ತದೆ. ಹೀಗಿದ್ದಾಗ್ಯೂ ಇತ್ತೀಚಿನ ವಿದ್ವಾಂಸರಾದ ರಾನ್ ಜೆವಾಲ್ಲೆ, ಡುನಾಡ್ ಮುಂತಾದವರು ಈಜಿಪ್ಟ್ ಲಿಪಿಯಿಂದ ನೇರವಾಗಿ ವರ್ಣಮಾಲೆ ಉಗಮವಾಯಿತೆಂದೇ ವಾದಿಸುತ್ತಾರೆ. ಕ್ರೈಸ್ತ ಧರ್ಮವು ಈಜಿಪ್ಟನ್ನು ಪ್ರವೇಶಿಸಿದ ನಂತರ ಇವರು ಗ್ರೀಕ್‌ಲಿಪಿಯನ್ನು ಬಳಸಲಾರಂಭಿಸಿದರು. ಇತ್ತೀಚೆಗೆ ಪ್ರಾಚೀನ ಚಿತ್ರಲಿಪಿ ಕಣ್ಮರೆಯಾಗುತ್ತಿದೆ.

**ಮೆಸಪಟೋಮಿಯಾ (ಕ್ಯೂನಿಫಾರಂ ಸಿದ್ಧಾಂತ)**

ಪ್ರಾಚೀನ ಮೆಸಪಟೋಮಿಯಾದವರೂ ಈಜಿಪ್ಟ್‌ನವರಂತೆಯೇ ತಮ್ಮ ದೇವತೆಯೇ ಬರವಣಿಗೆಗೆ ಕಾರಣನೆಂದು ನಂಬಿದವರು. ಸುಮೇರಿಯನ್ನರು ಎನ್ಲಿಲ್ (Enlil) ಎಂಬ ದೇವತೆ ಬರವಣಿಗೆಗೆ ಕಾರಣ ಎಂದು ತಿಳಿದಿದ್ದರು. ಅಸ್ಸೀರಿಯನ್

ಮತ್ತು ಬ್ಯಾಬಿಲೋನಿಯನ್ ಕಾಲಗಳಲ್ಲಿ 'ನಬು' (Nabu) ಎಂಬ ದೇವತೆ ಬರವಣಿಗೆಯಲ್ಲದೆ ಇತರ ದೇವತೆಗಳ ಸೃಷ್ಟಿಕರ್ತನೆಂದೂ ತಿಳಿದಿದ್ದರು. ಹಾಗೆಯೇ ಲಿಪಿಕಾರ ದೇವತೆಗಳು ದೇವವಾಕ್ಯಗಳಿಂದ ಸೃಷ್ಟಿ, ಶಕ್ತಿ ಪ್ರದರ್ಶಿಸುತ್ತಾರೆ ಎಂಬ ನಂಬಿಕೆಯೂ ಇತ್ತು. ಬರವಣಿಗೆಯು ಸುಮೇರಿಯನ್ನರಲ್ಲಿ ಸು. ೫೦೦೦ ವರ್ಷಗಳಿಂದಲೇ ಇದೆ ಎಂಬುದಕ್ಕೆ ಒಂದು ಪೌರಾಣಿಕ ಕಥೆ ಇದೆ. ನೂರಾರು ಮೈಲಿಗಳಿಂದ ಒಬ್ಬ ಸೇವಕನು ಉರುಕ್ (Uruk) ರಾಜನಲ್ಲಿಗೆ ಬಂದ. ಅವನಿಗೆ ನಡೆದ ಆಯಾಸದಿಂದ ಮಾತೇ ಹೊರಡದಾಯಿತು. ಅವನು ಬೇರೆ ರಾಜನ ಸೇವಕನಾಗಿದ್ದನು. ಆಗ ರಾಜನು ಒಂದು ಉಪಾಯ ಕಂಡುಹಿಡಿದನು. ಒಂದು ಮಣ್ಣಿನ ಫಲಕವನ್ನು ಇಟ್ಟು ಅದರ ಮೇಲೆ ಸಂದೇಶ ಬರೆಯಲು ತಿಳಿಸಿದನು. ಮೊದಲು ಮಣ್ಣಿನ ಮೇಲೆ ಬರವಣಿಗೆ ಇರಲಿಲ್ಲವೆಂದೂ, ರಾಜನಾದ ಕುಲ್ಲಬ (Kullaba)ನು ಫಲಕದ ಮೇಲೆ ವಾಕ್ಯ ರಚಿಸಲಿಕ್ಕೆ ಕಾರಣನೆಂದೂ ಕಥೆ ಇದೆ. ಈ ರೀತಿ ಲಿಪಿ ಬಗ್ಗೆ ಇರುವ ಸುಮೇರಿಯನ್ನರ ಕಥೆಯನ್ನು ಹಲವಾರು ವಿದ್ವಾಂಸರು ಅಲ್ಲಗಳೆದಿದ್ದಾರೆ.

ಆದರೂ ಸುಮೇರಿಯನ್ನರು ಮೊದಲು ಲಿಪಿ/ಬರವಣಿಗೆಯನ್ನು ಪ್ರಾರಂಭಿಸಿದರೆಂದು ಆಧಾರಗಳಿಂದ ಸಾಬೀತಾಗಿದೆ. ಏಕೆ ಮತ್ತು ಹೇಗೆ ಶೋಧವಾಯಿತೆಂಬುದು ದೊಡ್ಡ ವಿಚಾರ. ಮೆಸಪಟೋಮಿಯಾದ ರೂಕ್ ಅಥವಾ ವರ್ಕ (Ruk or Warka) ಎಂಬಲ್ಲಿ ಮೊನಚಾದ ಲಿಪಿಯನ್ನು ಕಂಡುಹಿಡಿಯಲಾಯಿತು. ಇಲ್ಲಿನ ಮುದ್ರೆಗಳು ರೇಖೆಗಳನ್ನು ಹೊಂದಿವೆ. ಹಾಗೇ ಜೀವ ಮತ್ತು ಜಡವಸ್ತುಗಳ ಸಂಜ್ಞೆಯು ಚಿತ್ರರೂಪವನ್ನು ಹೊಂದಿವೆ. ಕಾಲಾಂತರದಲ್ಲಿ ಇದು ಮಾರ್ಪಾಟು ಹೊಂದಿರುವುದನ್ನು ಗುರುತಿಸಲಾಗಿದೆ. ಇದು ವರ್ಣಮಾಲೆಯನ್ನು ಹೊಂದಿಲ್ಲದಿದ್ದರೂ, ಭಾವನೆಗಳನ್ನು ವ್ಯಕ್ತಪಡಿಸುವ ಸಂಜ್ಞೆಗಳಾಗಿ ಭಾವಲಿಪಿಯಾಗಿದೆ ಎನ್ನಬಹುದು. ಗುಂಡು ಸೂಜಿಯಾಕಾರದಲ್ಲಿನ ಈ ಲಿಪಿಯನ್ನು ಸುಮೇರಿಯನ್ನರು ಮಣ್ಣಿನ ಫಲಕಗಳಲ್ಲಿ ಬರೆದು ಸುಟ್ಟಿರುತ್ತಾರೆ. ಮೊನಚು ಲಿಪಿ ಅಥವಾ ಕ್ಯೂನಿಫಾರಂ ಎಂದು ಇದನ್ನು ಕರೆಯುತ್ತಾರೆ. ಹಾಗಾಗಿ ಇಂದಿಗೂ ಹಾಗೆಯೇ ಉಳಿದು ಬಂದಿವೆ. ಅಸ್ಸೀರಿಯನ್ನರೂ ಇದರ ರೂಪಾತ್ಮಕದೊಂದಿಗೆ ಬರವಣಿಗೆಯನ್ನು ಕಂಡುಕೊಂಡಿದ್ದಾರೆ. ಇವುಗಳಲ್ಲಿ ೩೦೦೦ಕ್ಕೂ ಹೆಚ್ಚು ಫಲಕಗಳು ಕ್ರಿ.ಪೂ. ಸು. ೨೦೦ಕ್ಕೆ ಸೇರಿದವುಗಳಾಗಿವೆ. ಇವುಗಳೆಲ್ಲವೂ ಲೆಕ್ಕಾಚಾರ, ವ್ಯವಹಾರ, ಧಾರ್ಮಿಕ, ನ್ಯಾಯವಿಚಾರಗಳಿಗೆ ಸಂಬಂಧಿಸಿದ್ದೆಂದು ವಿದ್ವಾಂಸರು ಗುರುತಿಸಿದ್ದಾರೆ.

ಡಾ. ಗುಂಟರ್ ಡ್ರೇಯರ್ (Dr. Gunter Dreyer) ಈಜಿಪ್ಟ್‌ನಲ್ಲಿ ಜರ್ಮನ್ ಪುರಾತತ್ತ್ವ ಸಂಸ್ಥೆಯ ನಿರ್ದೇಶಕರು. ಇವರು, ಅಬೇಡೋಸ್ ಮಾ ಎಂಬ ಪ್ರದೇಶವಲ್ಲಿ ನೈಲ್ ನದಿಯಿಂದ ಸುಮಾರು ೨೫೦ ಕಿ.ಮೀ ದೂರದಲ್ಲಿ (ಕೈರೋದಿಂದ ದಕ್ಷಿಣಕ್ಕೆ) ದೊರೆತ ಕುಂಭ, ಎಲುಬು, ದಂತ ಇವುಗಳ ಮೇಲಿರುವ ಬರವಣಿಗೆಯನ್ನು ಪತ್ತೆ ಹಚ್ಚಿದ್ದಾರೆ. ಇದರ ಕಾಲ ರೇಡಿಯೋ ಕಾರ್ಬನ್‌ದಿಂದ ಕ್ರಿ.ಪೂ.ಸು. ೩೨೦೦ ಎಂದು ಅಂದಾಜಿಸಿದ್ದಾರೆ. ಸುಮಾರು ೩೪೦೦ ವರ್ಷಗಳಾಗಿರಬೇಕು ಎಂಬುದು ಅವರ ವಾದ. ಹಾಗೆ ಈಜಿಪ್ಟ್ ಮತ್ತು ಮೆಸಪಟೋಮಿಯಾ ವಾದಗಳಲ್ಲಿ ಯಾವುದರಲ್ಲಿ ಮೊದಲು ಬರವಣಿಗೆ ಕಾಣಿಸಿಕೊಂಡಿದೆ ಎಂಬುದು ನಿಗೂಢವಾಗಿಯೇ ಇದೆ ಎನ್ನುತ್ತಾರೆ. ಇದಕ್ಕಿಂತ ಪೂರ್ವದ ಅವಶೇಷಗಳು ಇನ್ನೂ ಬರವಣಿಗೆಯ ಬಗ್ಗೆ ದೊರೆತಿಲ್ಲವೆನ್ನಬಹುದು.

ವಿದ್ವಾಂಸರಾದ ಡಿಲಿಟಜ್ಜ್ ವರ್ಣಮಾಲೆ/ಬರವಣಿಗೆಗೆ ಮೂಲ ಕ್ಯೂನಿಫಾರಂ ಎಂಬ ವಾದ ಮಂಡಿಸುತ್ತಾರೆ. ಹೊಮ್ಮೆಲ್ (೧೯೦೪), ಮತ್ತು ವಾಡೆಲ್ (೧೯೨೭) ಇವರು ಸುಮೇರಿಯನ್ ಲಿಪಿಯು ಬರವಣಿಗೆಗೆ ಮೂಲವೆಂದೂ; ಫೀಟರ್ಸ್ ಹೊಮೆಲ್, ಬಾಲ್, ಪೆಸರ್ ಲಿಜ್ಜ್ ಬಾರ್ಕಕ್ಷಿ ಇಬೆಲಿಂಗ್ (೧೯೩೪) ಇವರು ಬ್ಯಾಬಿಲೋನಿಯನ್ ಲಿಪಿಯೇ ಬರವಣಿಗೆಯ ಮೂಲವೆಂದೂ ತಿಳಿಸುತ್ತಾರೆ. ಡೀಕೆ ಎಂಬಾತ ಅಸ್ಸೀರಿಯನ್ ಲಿಪಿಯು ಬರವಣಿಗೆಗೆ ಮೂಲವೆಂದೂ, ವಿದ್ವಾಂಸರಾದ ಪ್ರೆಟೋರಿಯಸ್, ಕೋಯಿಂಗ್‌ರವರು ಸೈಪ್ರೆಸ್ ಲಿಪಿಯು ಬರವಣಿಗೆ ಮೂಲ ಎಂದು ಹೇಳುತ್ತಾರೆ. ಸೇಸಿ ಎಂಬುವನು ಹಿಟ್ಟೈಟ್, ಹಿರೋಗ್ಲಫಿಕ್ ವರ್ಣಮಾಲೆಗೆ ಮೂಲವೆಂದು ತಿಳಿಸುತ್ತಾನೆ. ಜರ್ಮನಿಯವರಾದ ವಾರ್ಟೆನ್‌ಬರ್ಗ್, ಗ್ಯಾಂತರ್ ನಾ ಫೀಸ್ ಮುಂತಾದವರು ಆರ್ಯನ್ ಮೂಲದಿಂದ ವರ್ಣಮಾಲೆ ಬಂದಿದೆ ಎಂದು ತೋರಿಸುವ ಪ್ರಯತ್ನ ಮಾಡಿದ್ದಾರೆ.

## ಕ್ರೀಟನ್ ಲಿಪಿ ಸಿದ್ಧಾಂತ

ಯೂರೋಪ್ ಖಂಡದ ಕ್ರೀಟ್ ದೇಶವು ಈಜಿಪ್ಟ್ ಮತ್ತು ಮೆಸಪಟೋಮಿಯಾ ನಾಗರಿಕತೆಗಳಿಗೆ ಸಮಾಂತರವಾಗಿ ಬೆಳೆದ ನಾಗರಿಕತೆಯಾಗಿದೆ. ಈ ನಾಗರಿಕತೆಯ ಉತ್ಖನನದಲ್ಲಿ ದೊರೆತ ಮುದ್ರೆಗಳು, ದಂತದ ಮೇಲಿನ ಬರಹಗಳು ಓದಲು ತೊಡಕಾಗಿಯೇ ಇವೆ. ಇವುಗಳ ಮೇಲೆ ಪ್ರಾಣಿ, ಧಾನ್ಯ, ಮಾನವನ ಅಂಗಾಂಗ ಮುಂತಾದ ಚಿತ್ರಗಳಿವೆ. ಇವುಗಳ ಕಾಲ ಕ್ರಿ.ಪೂ.ಸು. ೩೦೦೦ ಎಂಬುದು ವಿದ್ವಾಂಸರ ಮತ.

ಫಿಲಿಪೈನ್ಸ್‌ನವರು ಕ್ರೀಟ್‌ನಿಂದ ಪ್ಯಾಲೆಸ್ತೀನ್ ವರ್ಣಮಾಲೆಯನ್ನು ಪಡೆದರು ಹಾಗೂ ಇವರಿಂದ ಫಿನಿಷಿಯನ್‌ರು ಎರವಲು ಪಡೆದರು ಎಂಬುದು ಸರ್ ಅರ್ಥರ್ ಇವಾನ್ಸ್, ರೇನಾಟ್, ಡುಸೂಡ್ ಮುಂತಾದ ವಿದ್ವಾಂಸರ ವಾದ. ಆದರೆ ಫಿಲಿಪೈನ್ಸ್, ಪ್ಯಾಲೇಸ್ಟನ್‌ನನ್ನು ಕ್ರಿ.ಪೂ. ೧೨೦೦ರಲ್ಲಿ ವಶಪಡಿಸಿಕೊಳ್ಳುವುದಕ್ಕೂ ಮೊದಲೇ ವರ್ಣಮಾಲೆ ಉಗಮವಾಗಿ ಅಸ್ತಿತ್ವದಲ್ಲಿತ್ತು ಎಂಬುದನ್ನು ಬೆಂಬಲಿಸುವ ವಿದ್ವಾಂಸರಿದ್ದಾರೆ. ಇದನ್ನು ಈಜಿಪ್ಷಿಯನ್, ಕ್ರಿಟಾನ್, ನಾರ್ಥ್ ಸೆಮಿಟಿರಿ ಲಿಪಿ ಎಂಬುದಾಗಿಯೂ ಕರೆಯುತ್ತಾರೆ.

ಫಿಲಿಫೈನ್ಸ್ ಲಿಪಿಗೆ ಕ್ರೀಟಾನ್ ಸಂಜ್ಞೆಯೊಂದಿಗೆ ಹಲವಾರು ಹೋಲಿಕೆಗಳಿದ್ದರೂ ಅದು ಬಾಹ್ಯ ರೂಪದ್ದಾಗಿದೆ ಎನ್ನಬಹುದು. ಏಕೆಂದರೆ ಈ ಕ್ರೀಟಾನ್ ಸಂಜ್ಞೆಯನ್ನು ಸರಿಯಾಗಿ ಇನ್ನೂ ಅರ್ಥೈಸಲಾಗಿಲ್ಲ. ವರ್ಣಮಾಲೆ ಮತ್ತು ಸಂಜ್ಞೆಗಳ ನಡುವೆ ಹೋಲಿಕೆ ಆಕಸ್ಮಿಕವಾಗಿರಬಹುದು.

ಈ ಸಂಜ್ಞೆಗಳನ್ನು ಉಚ್ಚಾರಕ್ಕೆ ಗಮನ ಕೊಡದೆ ಬಳಸಿಕೊಂಡಿರಲೂಬಹುದು. ಕ್ರೀಟ್ ಲಿಪಿಯು ಇನ್ನೂ ಒಗಟಾಗಿಯೇ ಇದೆ. ಕ್ರಿ.ಪೂ.ಸು. ೧೭೦೦ರಲ್ಲಿ ಚಿತ್ರಲಿಪಿ, ರೇಖಾಲಿಪಿಯಾಗಿ ಮಾರ್ಪಾಟಾಗಿದೆ. ಇಲ್ಲಿ ದೊರೆತ ಶಾಸನಗಳು ಶಿಲೆ, ಲೋಹ, ಮಣ್ಣಿನ ಫಲಕ ಮುಂತಾದವುಗಳ ಮೇಲೆ ಬರೆದವುಗಳಾಗಿವೆ. ಇವು ಈ ದೇಶದ ಹೊರಗೂ ದೊರೆತಿವೆ. ಎಡದಿಂದ ಬಲಕ್ಕೆ ಬರೆಯುವ ಈ ಬರವಣಿಗೆಯು ಇಂದಿಗೂ ಬದಲಾಗಿಲ್ಲ. ಬಹುಶಃ ಇದು ಭಾವಲಿಪಿಯಾಗಿರಬೇಕೆಂದು ವಿದ್ವಾಂಸರ ಅಭಿಪ್ರಾಯ.

ಮಾಯಾ ಜನಾಂಗದಲ್ಲಿ ಬರಹವನ್ನು ಸೃಷ್ಟಿಸಿದವನು ಇಝುಮ್ನಾ ಎನ್ನುವ ಮಾಂತ್ರಿಕ. ಅವನೇ ಪ್ರಪಂಚವನ್ನು ಸೃಷ್ಟಿಸಿದ ಎಂಬ ಪ್ರತೀತಿಯೂ ಅವರಲ್ಲಿದೆ. ಬರಹದ ಸೃಷ್ಟಿಗೆ ಇಝುಮ್ನಾ ಕಾರಣನಾಗಿದ್ದಾನೆ. ಆನಂತರ ಬರವಣಿಗೆ ಕೆಲಸವು ವಾನರ ದೇವತೆಗಳ ಪಾಲಿಗೆ ಬೀಳುತ್ತದೆ. ವಾನರ ದೇವತೆಗಳಿಂದ ಚಕ್ರ, ಮಡಕೆಗಳಲ್ಲಿ ಬರಹಗಳನ್ನು ಕೆತ್ತಲಾಗಿದೆ, ಅವರ ಮಹಾಕಾವ್ಯಗಳಲ್ಲಿಯೂ ವಾನರ ದೇವತೆಗಳ ಪ್ರಸ್ತಾಪವಿದೆ.

ಹೀಗೆ ಪುರಾತನ ಕಾಲದಲ್ಲಿ ಬರಹವು ಮಾಂತ್ರಿಕ ಅಥವಾ ದೈವಿಕವೆಂದು ಪರಿಗಣಿಸಲ್ಪಟ್ಟಿದೆ. ಪ್ರಭಾವಿ ಜನರು ಇತರರ ಮೇಲೆ ಪ್ರಭುತ್ವ ಸಾಧಿಸಲು ಇದು ಒಂದು ಸಾಧನವೂ ಆಗಿತ್ತು ಎನ್ನಬಹುದು. ೧೯ನೇ ಶತಮಾನಕ್ಕೆ ಬಂದಾಗ ಕೆಲವು ಐರೋಪ್ಯ ವಿದ್ವಾಂಸರು ಬರಹದ ಮೂಲವನ್ನು ಮೆಸಪಟೋಮಿಯಾ ನಾಗರಿಕತೆಯಲ್ಲಿ ಗುರುತಿಸಿ, ತದನಂತರ ಇದು ಇನ್ನಿತರ ಪ್ರದೇಶಗಳಿಗೆ ಹರಡಿತು ಎಂದು ವಾದಿಸುತ್ತಾರೆ. ಇವರು ಮಾಯಾ ಜನಾಂಗದ ಲಿಪಿಯನ್ನು ಬರವಣಿಗೆ ಎಂದೇ ಪರಿಗಣಿಸದೆ ಅದನ್ನು ಕ್ಯಾಲೆಂಡರ್ ಅಥವಾ ಸಂಖ್ಯಾ ಶಾಸ್ತ್ರವೆಂದೇ ಪರಿಗಣಿಸುತ್ತಾರೆ. ಚೀನಾ ಸಿಂಧೂ ಬರವಣಿಗೆಗಳೂ ಮಧ್ಯಪೂರ್ವದ ಭಾಗಗಳ ಲಿಪಿಯಿಂದ ವಿಕಾಸ ಹೊಂದಿದವು ಎನ್ನುತ್ತಾದರೂ, ಇವರ ವಾದಗಳು ಸಮಂಜಸವಲ್ಲವೇಂದೇ ಹೇಳಬೇಕು. ಐರೋಪ್ಯ ವಿದ್ವಾಂಸರು ಚೀನಾದ ಚಿತ್ರಲಿಪಿಯನ್ನು ಅತ್ಯಂತ ಕೆಳಮಟ್ಟದ ಆರಂಭಿಕ ಹಂತದ್ದೆಂದು ಭಾವಿಸುತ್ತಾರೆ. ಅವರ ಪ್ರಕಾರ ವರ್ಣಮಾಲೆಯು ಅತ್ಯಂತ ಕಡಿಮೆ ಸಂಕೇತಗಳನ್ನು ಒಳಗೊಂಡ ನಿರ್ದಿಷ್ಟ ಉಚ್ಚಾರದ ಸಾಧ್ಯತೆ ಉಳ್ಳ ಬರಹ ಪ್ರಕಾರವಾಗಿದೆ. ಆದರೆ ಈ ಐರೋಪ್ಯ ಕೇಂದ್ರಿತ ವಾದವನ್ನು ಒಪ್ಪಿಕೊಳ್ಳಲಾಗುವುದಿಲ್ಲ. ಚೀನಾ ಮತ್ತು ಮಾಯಾ ಲಿಪಿಗಳನ್ನು ಓದಲು ಸಾಧ್ಯವಾದ ಮೇಲೆ ಐರೋಪ್ಯ ವಿದ್ವಾಂಸರ ವಾದ ಹುರುಳಿಲ್ಲದ್ದು ಎಂಬುದು ಸ್ಪಷ್ಟವಾಗಿದೆ.

ಬರಹದ ಮೂಲದ ಬಗ್ಗೆ ಇಂದಿಗೂ ಏಕಾಭಿಪ್ರಾಯವಿಲ್ಲ, ಮೆಸಪಟೋಮಿಯಾ ಚೀನಾ ಹಾಗೂ ಮೆಸೋ ಅಮೇರಿಕಾ ಭಾಗದಲ್ಲಿ ಬರಹ ಸ್ವತಂತ್ರವಾಗಿ ವಿಕಾಸ ಹೊಂದಿತು ಎನ್ನುವ ವಾದವಿದೆ. ತದನಂತರದ ಸಂಶೋಧನೆಗಳು ಈಜಿಪ್ಟ್ ಹಾಗೂ ಸಿಂಧೂ ನಾಗರಿಕತೆಗಳ ಬರಹ ಸ್ವತಂತ್ರವಾಗಿ ಬೆಳವಣಿಗೆಯಾಗಿದೆ ಎನ್ನುವ ವಾದ ಮುಂದಿಡುತ್ತವೆ. ಬರವಣಿಗೆಯ ಇತಿಹಾಸದಲ್ಲಿ ವಿಕಾಸವಾದವನ್ನು ಯಾರೂ ಇಂದು ಒಪ್ಪಲು ತಯಾರಿಲ್ಲ ಹಾಗೂ ಯಾವ ಬರವಣಿಗೆಯ ರೂಪವೂ ಮೇಲಲ್ಲ ಮತ್ತು ಕೀಳಲ್ಲ. ಪ್ರತಿ ಬರವಣಿಗೆಯೂ ಆಯಾ ಭಾಷೆಯ ಪ್ರಾತಿನಿಧಿಕ ರೂಪವಾಗಿದೆ.

ಕನ್ನಡ ಲಿಪಿಯು ಕನ್ನಡ ಭಾಷೆಯ ಎಲ್ಲಾ ಅಂಶಗಳನ್ನು ಪ್ರತಿನಿಧಿಸುವಂತೆ ಇಂಗ್ಲಿಷ್ ಭಾಷೆಯನ್ನು ಪ್ರತಿನಿಧಿಸಲು ಸಾಧ್ಯವಿಲ್ಲ. ಇಂಗ್ಲಿಷ್ ಭಾಷೆಯನ್ನು ಆಂಗ್ಲ ಲಿಪಿಯೇ ಸಮರ್ಥವಾಗಿ ಪ್ರತಿನಿಧಿಸುತ್ತದೆ. ಬರವಣಿಗೆಯ ವಿಕಾಸವು ನಾಗರಿಕತೆ ಸಂಸ್ಕೃತಿಗಳ ಕುರುಹು ಎನ್ನುವ ವಾದವನ್ನು ಒಪ್ಪಲು ಸಾಧ್ಯವಿಲ್ಲ. ಲಿಪಿಯನ್ನು ಹೊಂದದೇ ಇರುವ, ಭಾಷೆಯೊಂದೇ ಇರುವ ನಾಗರಿಕತೆ/ಸಂಸ್ಕೃತಿಗಳು ಇಂದಿಗೂ ಪ್ರಪಂಚದಲ್ಲಿವೆ ಎಂದು ಸ್ಪಷ್ಟಪಡಿಸಬಹುದು.

### ಭಾರತದಲ್ಲಿ ಬರವಣಿಗೆ ಬಗೆಗಿನ ಸಿದ್ಧಾಂತಗಳು

ಭಾರತದ ಪ್ರಾಚೀನ ನಾಗರಿಕತೆಯಾದ ಸಿಂಧೂ ಬಯಲಿನ ನಾಗರಿಕತೆಯಲ್ಲಿನ ಪ್ರಾಚ್ಯಾವಶೇಷಗಳಲ್ಲಿ ಹಲವಾರು ಫಲಕಗಳು ದೊರೆತಿವೆ. ಆ ಫಲಕಗಳ ಮೇಲಿನ ಲಿಪಿ ಅಥವಾ ಚಿತ್ರಗಳನ್ನು ಹೀಗೆಯೇ ಎಂದು ನಿರ್ಧರಿಸಲಾಗಿಲ್ಲ.

ಸಿಂಧೂ ನಾಗರಿಕತೆಗಿಂತಲೂ ಪ್ರಾಚೀನವಾದ ಹಾಗೂ ಭಾರತದ ಸಂಸ್ಕೃತಿ ಪ್ರತೀಕವಾದ ವೇದಗಳಲ್ಲಿ ಲಿಪಿ ಶಬ್ದದ ಬಗ್ಗೆ ಉಲ್ಲೇಖ ದೊರೆಯುತ್ತದೆ. ವೇದಗಳು ಬಾಯಿಂದ ಬಾಯಿಗೆ ಅಂದರೆ ಮೌಖಿಕ ಸಾಹಿತ್ಯವಾಗಿಯೇ ಇತ್ತೀಚಿನವರೆಗೂ ಬಂದಿದೆ. ಸರಸ್ವತಿಯನ್ನು ವಾಕ್ ಹಾಗೂ ಬುದ್ಧಿ ದೇವತೆಯನ್ನಾಗಿಯೂ ಕಾಣಲಾಗಿದೆ. ವೇದ ಮಂತ್ರಗಳಲ್ಲಿ ಪಾದ, ಛಂದಸ್ಸು ಮುಖ್ಯವಾದುದಾಗಿದೆ. ಉದಾಹರಣೆಗೆ ಗಾಯತ್ರಿ ಮಂತ್ರದಲ್ಲಿ ಎಂಟು ಅಕ್ಷರಗಳ ಮೂರು ಪಾದವಿದೆ. ಹಾಗಾಗಿ ಅಕ್ಷರ(ಲಿಪಿ)ಗಳ ಸ್ಪಷ್ಟ ಜ್ಞಾನವಿತ್ತೆಂಬುದು ಸ್ಪಷ್ಟವಾಗುತ್ತದೆ. ವ್ಯಾಕರಣ ಪೂರ್ವವಿಚಾರದಲ್ಲಿ ಇಂದ್ರನನ್ನು ನೆನೆಯುವುದು ಸಾಮಾನ್ಯ. ತೈತ್ತಿರೀಯ ಸಂಹಿತೆಯ ಪ್ರಕಾರ ದೇವರ ಪ್ರಾರ್ಥನೆಯಂತೆ ಇಂದ್ರನು ವರ್ಣ, ಪ್ರಕೃತಿ, ಪ್ರತ್ಯಯ, ವಾಕ್ಯ ಎಂಬ ವರ್ಗೀಕರಣವನ್ನು ತಿಳಿಸಿದನೆಂದು ಪ್ರತೀತಿ ಇದೆ.

ಗೋಪಥ ಬ್ರಾಹ್ಮಣದಲ್ಲಿ ಬರುವ ಓಂಕಾರ ವಿಚಾರ ಪ್ರಶ್ನಾವಳಿಯಲ್ಲಿ ಪದ, ಅಕ್ಷರ, ವರ್ಣಗಳ ವಿಚಾರವು ಬಂದಿದೆ. ಶುಕ್ಲ ಯಜುರ್ವೇದದ ವಾಜಸನೇಯ ಸಂಹಿತೆಯಲ್ಲಿ ಲೇಖನ ಸಾಮಗ್ರಿಗಳ ಉಲ್ಲೇಖವಿದೆ. ಹೀಗೆ ಪ್ರಾಚೀನ ವೇದಗಳಲ್ಲಿ 'ಅಕ್ಷರ' ಎಂಬ ಉಲ್ಲೇಖವಿದ್ದರೂ ಅದು 'ಲಿಪಿ' ಅಲ್ಲ ಎಂಬ ವಾದವೂ ಇದೆ. ಅಕ್ಷರ ಎಂದರೆ ನಾಶವಿಲ್ಲದ್ದು (ನ ಕ್ಷರತೀತಿ ಇತಿ ಅಕ್ಷರ). ಇದು ಕೇವಲ ಪರಮಾತ್ಮನನ್ನು ಮಾತ್ರ ಸಂಕೇತಿಸುತ್ತದೆ. ವಾಸ್ತವವಾಗಿ ಮೌಖಿಕಕ್ಕೆ ಹೆಚ್ಚಿನ ಪ್ರಾಶಸ್ತ್ಯವಂತೂ ಖಂಡಿತ. ಅಕ್ಷರಗಳ ಉಲ್ಲೇಖದಿಂದ ವೇದ ಮತ್ತು ವೇದೋತ್ತರ ಕಾಲದಲ್ಲಿ ಲಿಪಿಯು ಇದ್ದರೂ, ವೇದ ಮಂತ್ರಗಳನ್ನು ಬರೆಯುವ ಹಾಗಿರಲಿಲ್ಲ ಎಂಬುದು ಗೊತ್ತಿರುವ ವಿಚಾರವೇ.

ಪುರಾಣಗಳಲ್ಲಿ ಜಗತ್ತಿನ ಸೃಷ್ಟಿಕರ್ತ ಬ್ರಹ್ಮನಾಗಿದ್ದಾನೆ. ಹಾಗೆಯೇ ಅವನು ಬರವಣಿಗೆಯ ಸೃಷ್ಟಿಕರ್ತನೂ ಆಗಿದ್ದಾನೆ ಎಂಬ ನಂಬಿಕೆ ಇದೆ. ನಾರದ ಸ್ಮೃತಿ, ಬೃಹಸ್ಪತಿ ವಾರ್ತಿಕ ಕೃತಿಗಳು ಇದನ್ನು ಸ್ಪಷ್ಟಪಡಿಸುತ್ತವೆ. ಭಾರತೀಯ ಸಂಸ್ಕೃತಿಯ ವೇದ ಪುರಾಣಗಳಂತೆ, ಜೈನ ಧರ್ಮದಲ್ಲಿಯೂ ಲಿಪಿ/ಬರವಣಿಗೆಯ ಕರ್ತೃ ಬ್ರಹ್ಮನೆಂದೇ ಪ್ರತಿಪಾದಿಸಲಾಗಿದೆ. ಬ್ರಹ್ಮನು ತನ್ನ ಮಕ್ಕಳಾದ ಬ್ರಾಹ್ಮೀ ಮತ್ತು ಸುಂದರಿಯರಿಗೆ ಲಿಪಿ ಕಲಿಸಿದನೆಂದು ಪ್ರತೀತಿ. ಬ್ರಾಹ್ಮಿಯೇ ಬ್ರಾಹ್ಮೀಲಿಪಿಗೆ ಕಾರಣವೆಂಬ ಹೇಳಿಕೆ ಇದೆ. ಬೌದ್ಧಧರ್ಮ ಸಾಹಿತ್ಯದಲ್ಲಿ ಬರವಣಿಗೆ ಹಾಗೂ ಲಿಪಿಯ ಬಗ್ಗೆ ಸಾಕಷ್ಟು ವಿವರವಾದ ಮಾಹಿತಿ ದೊರೆಯುತ್ತದೆ. ಬೌದ್ಧತತ್ವ ಗ್ರಂಥಗಳಲ್ಲಿ ಹಸ್ತಪ್ರತಿ, ರಾಜಾಜ್ಞೆಗಳ ಬಗ್ಗೆ ಉಲ್ಲೇಖಗಳಿವೆ. ಮಹಾವಗ್ಗ ಜಾತಕದಲ್ಲಿ ಶಾಲೆ ಮತ್ತು ಬರವಣಿಗೆಯ ಬಗ್ಗೆ ಉಲ್ಲೇಖವಿದೆ.

ಧರ್ಮಗ್ರಂಥವಾದ ಲಲಿತ ವಿಸ್ತರದಲ್ಲಿ ಲೇಖನಿ, ಹಲಗೆ ಮೇಲಿನ ಬರವಣಿಗೆಯ ಬಗ್ಗೆ ಉಲ್ಲೇಖವಿದೆ. ಅದಲ್ಲದೆ ಅದರಲ್ಲಿ ೬೪ ಲಿಪಿಗಳ ಬಗ್ಗೆ ತಿಳಿಸಿದೆ. ಇದನ್ನು ಕುರಿತು ಆರ್.ಬಿ.ಪಾಂಡೆಯವರು ತಮ್ಮ ಗ್ರಂಥದಲ್ಲಿ (ಇಂಡಿಯನ್ ಪೇಲಿಯೋಗ್ರಫಿ) ಪಟ್ಟಿಯನ್ನೇ ನೀಡಿದ್ದಾರೆ. ಬೌದ್ಧ ಸಾಹಿತ್ಯಗಳು ಚಿಂದತಿ, ಲೇಖ, ಲೇಖಕ, ಅಖ್ಖರ ಮುಂತಾದ ಶಬ್ದಗಳು ಇರುವುದಲ್ಲದೆ, ಮರ, ಬಂಗಾರದ ತಗಡು ಮುಂತಾದವುಗಳ ಮೇಲೆ ಬರೆಯುವುದನ್ನು ತಿಳಿಸುತ್ತವೆ.

ಮಹಾಭಾರತ ಕಥೆಯನ್ನು, ವ್ಯಾಸ ಮಹರ್ಷಿಗಳು ಹೇಳಿದ್ದನ್ನು ಗಣಪತಿ ಬರೆದನು ಎಂಬ ಪೌರಾಣಿಕ ಕತೆ ಜನಜನಿತ. ಅಂತೂ ಆ ಕಾಲಕ್ಕೆ ಬರವಣಿಗೆ/ಲಿಪಿ ಇತ್ತು ಎಂದು ತಿಳಿಯಬಹುದಾಗಿದೆ. ಮಹಾಭಾರತದಲ್ಲಿ ಲೇಖ, ಲೇಖನ, ಲಿಖ್ ಪದಗಳ ಬಳಕೆಯೂ ಇದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಶಾಸನದ ಬರವಣಿಗೆ ಬಗ್ಗೆ ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಲಿಪಿ, ಲಿಖಿ, ಲಿಪಿಕಾರರ ಉಲ್ಲೇಖಗಳಿದ್ದು ಇವು ಪ್ರಾಚೀನ ಬರವಣಿಗೆಯನ್ನು ಸಾರಿ ಹೇಳುತ್ತವೆ. ಒಟ್ಟಾರೆಯಾಗಿ ಭಾರತದಲ್ಲಿ ವೇದ ಕಾಲದಿಂದಲೂ ಲಿಪಿ ಹಾಗೂ ಬರವಣಿಗೆ ಇದ್ದರೂ ಎಲ್ಲಾ ಅಂಶಗಳನ್ನು ಬರೆಯಲಾಗುತ್ತಿತ್ತು ಎಂಬುದನ್ನು ಹೇಳುವುದು ಕಷ್ಟ ಸಾಧ್ಯ.

## ಸಿಂಧೂ ಲಿಪಿ

ಭಾರತದ ಅತ್ಯಂತ ಪ್ರಾಚೀನ ನಾಗರಿಕತೆಯಾದ ಸಿಂಧೂ ಬಯಲಿನ ನಾಗರಿಕತೆಯ ಕುರುಹುಗಳು ಹರಪ್ಪ, ಮೊಹೆಂಜೋದಾರೋ, ಲೋಥಾಲ್, ಕಾಲಿಬಂಗನ್ ಮುಂತಾದ ಹಲವಾರು ಕಡೆಗಳಲ್ಲಿ ದೊರೆತಿವೆ. ಒಟ್ಟು ಅವಶೇಷಗಳಲ್ಲಿ ಚಿತ್ರ/ಬರವಣಿಗೆಯು ಮಣ್ಣಿನ ಫಲಕಗಳು ಹಾಗೂ ಬಳಪದ ಕಲ್ಲಿನ ಮೇಲೆ ದೊರೆತಿವೆ. ಇವುಗಳು ಇಂದಿಗೆ ಸುಮಾರು ೫೦೦೦ ವರ್ಷಗಳಷ್ಟು ಪ್ರಾಚೀನವಾದವು ಎಂದು ವಿದ್ವಾಂಸರು ಈಗಾಗಲೇ ನಿರ್ಧರಿಸಿದ್ದಾರೆ.

ಕ್ರಿ.ಶ. ೧೮೨೦ರ ಸುಮಾರಿನಲ್ಲಿ ಹರಪ್ಪಾ ನಿವೇಶನವು ಒಬ್ಬ ಮೇಸ್ತ್ರಿಯ ಗಮನಕ್ಕೆ ಬಂದು, ಆನಂತರ ಈ ವಿಷಯವನ್ನು ಕನ್ನಿಂಗ್ ಹ್ಯಾಂರವರ ಗಮನಕ್ಕೆ ತರಲಾಯಿತು. ಅವರು ೧೮೫೩ರಲ್ಲಿ ಅಧ್ಯಯನ ಕೈಗೊಂಡು, ಆನಂತರದಲ್ಲಿ ೧೮೭೫ರಲ್ಲಿ ಕೆಲವು ಫಲಕಗಳನ್ನು ಬೆಳಕಿಗೆ ತಂದರು. ಕ್ರಿ.ಶ. ೧೯೨೧ರಲ್ಲಿ ರಾವ್ ಬಹದ್ದೂರ್ ದಯಾರಾಮ್ ಸಾನಿ ಎಂಬುವರು ಉತ್ಖನನವನ್ನು ಪ್ರಾರಂಭಿಸಿದರು. ಕ್ರಿ.ಶ. ೧೯೨೬ರಿಂದ ೧೯೩೪ರವರೆಗೆ ಮಧು ಸ್ವರೂಪ್ ವಾಟ್ ಅವರು

ಉತ್ಖನನ ಮಾಡಿದ್ದಲ್ಲದೆ ಅದರ ವರದಿಯನ್ನು ತಯಾರಿಸಿ ಪ್ರಕಟಿಸಿದರು. ಸರ್ ಜಾನ್ ಮಾರ್ಷಲ್‌ರವರು ಕ್ರಿ.ಶ. ೧೯೨೨ರಿಂದ ೧೯೨೭ರವರೆಗೆ ಹರಪ್ಪದಲ್ಲಿ ಉತ್ಖನನ ಮುಂದುವರೆಸಿದರು ಮತ್ತು ೧೯೩೧ರಲ್ಲಿ ಎಸ್ ಲಾಂಗ್‌ಟನ್, ಎಸ್ ಸ್ಮಿತ್ ಮತ್ತು ಸಿ.ಜೆ. ಗ್ಯಾಡ್‌ರೊಂದಿಗೆ ಸೇರಿ ಮೆಹೆಂಜೋದಾರೋ ಬಗ್ಗೆ ಉತ್ತಮ ಕಾರ್ಯ ನಿರ್ವಹಿಸಿ ಸಿಂಧೂ ನಾಗರಿಕತೆಯ ಬಗ್ಗೆ ಮಹತ್ವವಾದ ಅಂಶಗಳನ್ನು ಪ್ರಕಟಿಸಿದರು.

ಜೆ.ಎಸ್. ಮ್ಯಾಕೆ ಎಂಬ ವಿದ್ವಾಂಸರು ಕ್ರಿ.ಶ. ೧೯೨೭ ಮತ್ತು ೧೯೩೧ರಲ್ಲಿ ಕೈಗೊಂಡ ಉತ್ಖನನದ ಸಾರಾಂಶವನ್ನು ಕ್ರಿ.ಶ. ೧೯೩೭ ಮತ್ತು ೧೯೩೮ರಲ್ಲಿ ಪ್ರಕಟಪಡಿಸಿದರು. ಪ್ರೊ. ಜಿ.ಆರ್ ಹಂಟರ್‌ರವರನ್ನು ವಿಶೇಷವಾಗಿ ಲಿಪಿ/ಚಿತ್ರಗಳನ್ನು ಅಧ್ಯಯನ ಮಾಡುವ ಸಲುವಾಗಿಯೇ ನೇಮಿಸಲಾಗಿತ್ತು.

ಉತ್ಖನನದಲ್ಲಿ ದೊರೆತ ಫಲಕಗಳ ಒಟ್ಟು ಸಂಖ್ಯೆಯ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಇದರಲ್ಲಿ ೩೯೬ ಚಿಹ್ನೆಗಳಿವೆಯೆಂದು ಗ್ಯಾಡ್ ಮತ್ತು ಸಿಡ್ನಿ ಸ್ಮಿತ್‌ರವರ ಅಭಿಪ್ರಾಯ. ಲ್ಯಾಂಗ್ಡನ್ ಅವರು ೨೮೮ ಚಿಹ್ನೆ ಎಂದೂ, ಹಂಟರ್ ೨೫೩ ಚಿಹ್ನೆ ಎಂದೂ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಈ ಫಲಕಗಳಲ್ಲಿ ಪಕ್ಷಿ, ಚಿತ್ರ, ಚೇಳು, ಸರೀಸೃಪ, ಅರಳಿ ಎಲೆ, ಮರ, ಮುಂತಾದವೂ; ರೇಖಾ ರೂಪ ಚಿಹ್ನೆ, ಮೀನಿನಾಕಾರ ಇತ್ಯಾದಿಗಳೂ ಕಂಡುಬರುತ್ತವೆ. ಹಾಗೆಯೇ ವಿವಿಧ ಸ್ಥಳಗಳಲ್ಲಿನ ಚಿಹ್ನೆಗಳಲ್ಲಿ ಬದಲಾವಣೆಯೂ ಕಂಡುಬರುತ್ತದೆ.

ಈ ಫಲಕಗಳಲ್ಲಿ ಸುಮಾರು ೪೦೦ರಷ್ಟು ಚಿಹ್ನೆಗಳಿರುವುದರಿಂದ ವರ್ಣಾತ್ಮಕ (Alphabetia) ಎಂದು ಗುರ್ತಿಸಲು ಸಾಧ್ಯವಿಲ್ಲ. ಭಾವಲಿಪಿ (Ideographic Script) ಎಂದೂ ತಿಳಿಯಲಾಗುವುದಿಲ್ಲ. ಬಹುಶಃ ಇವುಗಳು ಭಾವಲಿಪಿ ಮತ್ತು ಧ್ವನಿ ಅಥವಾ ಶಬ್ದಾತ್ಮಕ ಎರಡೂ ಆಗಿರಬಹುದೆಂದು ಭಾವಿಸಬಹುದೇನೋ? ಇವು ಒಂದೇ ರೀತಿಯ ರೇಖಾತ್ಮಕ ರೂಪಗಳಾಗಿದ್ದು, ಚಿತ್ರಲಿಪಿಯ ಮೂಲದ ಕೊಂಡಿ ಯಾವಾಗಲೋ ಕಳಚಿಕೊಂಡಿರಬಹುದು.

ಸದ್ಯದ ಸ್ಥಿತಿಯಲ್ಲಿ ನಿಜವಾಗಿಯೂ ಪಿಕ್ಟೋಗ್ರಾಫ್ (Pictograph) ಅಥವಾ ಐಡಿಯೋಗ್ರಾಫ್ (Ideograph) ಅಲ್ಲವೆನ್ನಬಹುದು. ಈ ಚಿಹ್ನೆ/ಲಿಪಿಗಳನ್ನು ಈಜಿಪ್ಷಿಯನ್, ಸುಮೇರಿಯನ್, ಕ್ರೇಟನ್ ಲಿಪಿಗಳಿಗೆ ಹೋಲಿಸಲು ವಿದ್ವಾಂಸರಾದ ವ್ಯಾಡಲ್, ಪ್ರಾಣನಾಥ್ ಮುಂತಾದವರ ಯತ್ನಿಸಿದ್ದಾರೆ. ಹೀಗಿದ್ದರೂ ಮೆಸಪಟೋಮಿಯಾದಲ್ಲಿ ದೊರೆತ ಮುದ್ರಿಕೆಗಳಲ್ಲಿ ಸಿಂಧೂ ಲಿಪಿ/ಚಿಹ್ನೆ ಕಂಡು ಬರುವುದಿಲ್ಲ.

ಹ್ರಾಸ್ನಿಯವರು ಹಿಟ್ಟೈಟ್ ಚಿತ್ರ ಲಿಪಿಗೂ ಸಿಂಧೂ ಲಿಪಿ/ಚಿಹ್ನೆಗೂ ಸಂಬಂಧ ಕಲ್ಪಿಸುತ್ತಾರೆ. ಹೀರೋಗ್ಲಿಫಿಕ್, ಹಿಟ್ಟೈಟ್ ಶಾಖೆಯ ಆರ್ಯರು, ಸಿರಿಯಾ, ಮೆಸಪಟೋಮಿಯಾ, ಇರಾನ್ ಮೂಲಕ ಕ್ರಿ.ಪೂ. ೩ನೇ ಸಹಸ್ರಾಬ್ದಿಯಲ್ಲಿ ಸಿಂಧೂ ಕಣಿವೆಗೆ ಬರವಣಿಗೆ ತಂದರು ಎಂದು ಅಭಿಪ್ರಾಯ ಪಡುತ್ತಾರೆ. ಫಾದರ್ ಹೆರಾಸ್‌ರವರು ಸಿಂಧೂ ಮುದ್ರಿಕೆಗಳ ಮೇಲಿನ ಭಾಷೆ ದ್ರಾವಿಡವೆಂದೂ, ಅವುಗಳನ್ನು ಆ ಜನಾಂಗಗಳ ದೇವತೆಗಳ ಸ್ಮಾರಕವಾಗಿ ಹಾಕಿಸಿರಬೇಕೆಂದು ಅಭಿಪ್ರಾಯಪಡುತ್ತಾರೆ. ಆದರೆ ಆ ಕಾಲದ ತಮಿಳು ಭಾಷೆ ಹೇಗಿತ್ತೆಂದು ಇವರು ವಿವರಿಸುವುದಿಲ್ಲ.

ಲ್ಯಾಂಗ್ಡನ್, ಹಂಟರ್ ಮುಂತಾದವರು ಬ್ರಾಹ್ಮಿ ಲಿಪಿಗೆ ಸಿಂಧೂ ಲಿಪಿಯೇ ಮೂಲವೆಂದು ಹೇಳಿದ್ದಾರೆ. ಆದರೆ ಆ ಬದಲಾವಣೆಯ ಹಂತದ ಬಗ್ಗೆ ವಿವರಣೆ ನೀಡುವುದಿಲ್ಲ. ಇನ್ನೂ ಮುಂದುವರೆದು ಹಂಟರ್‌ರವರು, ಸಿಂಧೂ ಲಿಪಿಯು ಫಿನೀಷಿಯನ್, ಸರ್ಬಿಯನ್ ಸಿಪ್ರಿಯೋಟ್ ಮುಂತಾದ ಲಿಪಿಗಳ ಮೇಲೆ ಪ್ರಭಾವ ಬೀರಿತು ಎನ್ನುತ್ತಾರೆ.

ಎರಡು ಸಾವಿರದ ಐನೂರರಷ್ಟು ಮುದ್ರೆಗಳು ಹಾಗೂ ಫಲಕಗಳು ಮತ್ತು ಮಡಕೆಗಳ ಮೇಲೆ ಸಿಗುವ ಸಿಂಧೂಲಿಪಿ ಸುಮಾರು ಒಂದುನೂರ ಐವತ್ತು ಚಿಹ್ನೆಗಳನ್ನು ಒಳಗೊಂಡಿದೆ ಎನ್ನಲಾಗಿದೆ. ಇದನ್ನು ಓದಲು ಪ್ರಯತ್ನಿಸಿದ ವಿದ್ವಾಂಸರು ಪ್ರತಿ ಚಿಹ್ನೆಯೂ ಒಂದು ಪದ ಅಥವಾ ಭಾವವನ್ನು ಪ್ರತಿನಿಧಿಸುತ್ತದೆ ಎಂದು ಅಭಿಪ್ರಾಯಪಡುತ್ತಾರೆ (ಉದಾ : ಕೋಲನ್ನು ಹಿಡಿದಿರುವ ಮನುಷ್ಯ ರೂಪ ಚಿತ್ರವನ್ನು 'ದಂಡಧರ' ಎಂದು ಗುರುತಿಸುವುದು). ಈ ಸಂಸ್ಕೃತಿಯ ಕೊನೆಯ ಹಂತದಲ್ಲಿ ದೊರೆತ ಮೂಲ ಚಿಹ್ನೆಗಳ ಸಂಖ್ಯೆಗಳು ಕಡಿಮೆಯಾಗುತ್ತಾ ಹೋಗುತ್ತವೆ. ಹರಪ್ಪಾದಲ್ಲಿ ದೊರೆತ ಫಲಕಗಳಲ್ಲಿ ಒಟ್ಟು ೫೨ ಚಿತ್ರ ಸಂಕೇತಗಳಿವೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ವಿಶಿಷ್ಟ ಅಂಶವೆಂದರೆ ಮೂಲ ಚಿಹ್ನೆಗೆ ಗೆರೆ ಸೇರಿಸಿರುವುದು. ಸಿಂಧೂ ಹಾಗೂ ಸೆಮಿಟಿಕ್ ಲಿಪಿ / ಚಿಹ್ನೆಗಳಲ್ಲಿ ಸಮಾನಾಂಶವಿದ್ದರೂ, ಸಿಂಧೂಲಿಪಿಯಲ್ಲಿ ಗೆರೆಗಳಿರುವುದು ಸೆಮಿಟಿಕ್‌ನಿಂದ ಭಿನ್ನವಾಗಿಸಿದೆ.

ಲಾಲ್‌ರವರು ಸಿಂಧೂಲಿಪಿ ಬರವಣಿಗೆ ದಿಕ್ಕನ್ನು ಕುರಿತು ತಿಳಿಸುತ್ತಾ ಬರಹವು ಎಡದಿಂದ ಬಲಕ್ಕೆ ಹೋಗುತ್ತದೆ ಎನ್ನುತ್ತಾರೆ. ಇದನ್ನು ಮುಂದುವರಿಸುತ್ತಾ ಡಾ. ಎಸ್.ಆರ್. ರಾವ್‌ರವರು ಬರಹವು ಬಲದಿಂದ ಎಡಕ್ಕೆ ಹಾಗೂ ಎಡದಿಂದ

ಬಲಕ್ಕೆ (Boustre Phedon) ಬರೆಯಲಾಗಿದೆ ಎನ್ನುತ್ತಾರೆ. ಇತ್ತೀಚಿನ ಸಂಶೋಧಕರಾದ ನಟವರ್ ಝಾ ಮತ್ತು ಎನ್.ಎಸ್. ರಾಜಾರಾಂರವರು, ಸಿಂಧೂ ಮುದ್ರಿಕೆಗಳ ಭಾಷೆಯು ವೇದಗಳ ಕಾಲದ ಸಂಸ್ಕೃತವೆಂತಲೂ, ಹಾಗೂ ೫೨ ವರ್ಣಾಕ್ಷರ ಹೊಂದಿದೆ ಎಂದು ಅಭಿಪ್ರಾಯಪಡುತ್ತಾರೆ.

ಅಕ್ಷರಗಳು ಅಂಕೆಗಳಿಂದ ಉಗಮವಾಗಿವೆ ಎಂದೂ ಮತ್ತು ಬರವಣಿಗೆಯೂ, ಬರೆಯುವ ರೀತಿಯೂ ಹಲಾಯುಧ ಪದ್ಧತಿ ಎಂದೂ ಅಭಿಪ್ರಾಯಪಟ್ಟಿದ್ದಾರೆ. ಡಾ॥ ಕೆ.ವಿ. ರಮೇಶ್‌ರವರು ಅಕ್ಷರಗಳಲ್ಲಿ ವೇದ ಉಚ್ಚಾರದ ಸಂಕೇತಗಳು ಇವೆ ಎನ್ನುತ್ತಾರೆ (ಉದಾ: ದಂಡ, ಕಪಾಲ, ಏಕಪಾ). ಸುಬ್ಬರಾಯಪ್ಪನವರು ಸಿಂಧೂಲಿಪಿ/ಚಿಹ್ನೆಗಳನ್ನು ಸಂಖ್ಯೆಗಳೆಂದು ಅಭಿಪ್ರಾಯಪಟ್ಟಿದ್ದಾರೆ.

## ಬ್ರಾಹ್ಮೀ ಲಿಪಿ

ಲಿಪಿಯನ್ನು ಹೊಂದಿರುವ ಎಲ್ಲಾ ಭಾರತೀಯ ಭಾಷೆಗಳ ಈಗಿರುವ ಲಿಪಿಗಳಿಗೆ ಮೂಲ ಕಾರಣ ಬ್ರಾಹ್ಮೀ ಲಿಪಿ. ಇದು ಎಲ್ಲಾ ವಿದ್ವಾಂಸರ ಅಭಿಪ್ರಾಯವಾಗಿದೆ. ಸಿಂಧೂ ಲಿಪಿಯ ಬಗ್ಗೆ ಮಾತ್ರ ಖಚಿತ ನಿರ್ಧಾರವಿಲ್ಲದೆ ಇನ್ನೂ ಒಗಟಾಗಿಯೇ ಉಳಿದಿದೆ. ಪೌರಾಣಿಕ ಹೇಳಿಕೆಯನ್ನು ಈಗಾಗಲೇ ಗಮನಿಸಿದೆ. ಬ್ರಾಹ್ಮೀಲಿಪಿಯ ಹುಟ್ಟಿನ ಬಗ್ಗೆ ಎರಡು ವಾದಗಳಿವೆ. ೧. ಇದು ಇಲ್ಲಿಯೇ ಹುಟ್ಟಿ ಬೆಳೆದಿರುವುದು ೨. ಬೇರೆ ಲಿಪಿ ಮೂಲದಿಂದ ಬಂದು ಬೆಳವಣಿಗೆ ಕಂಡಿರುವುದು.

ಬ್ರಾಹ್ಮೀ ಲಿಪಿಯು ದ್ರಾವಿಡರ ಶೋಧವೆಂದು ಖ್ಯಾತ ವಿದ್ವಾಂಸ ಎಡ್ವರ್ಡ್ ಥಾಮಸ್ ಅಭಿಪ್ರಾಯಪಡುತ್ತಾರೆ. ವಿದ್ವಾಂಸರಾದ ಕನ್ನಿಂಗ್ ಹ್ಯಾಂ, ಡಾರ್ಸನ್ ಮುಂತಾದವರು ಬ್ರಾಹ್ಮಿಲಿಪಿಗೆ ಕಾರಣ ಭಾರತದ ಪುರೋಹಿತ ವರ್ಗ ಎನ್ನುತ್ತಾರೆ. ಕಾರಣ ಅವರು ರಚಿಸುವ ಮಂಡಲ ಚಿತ್ರ ಇತ್ಯಾದಿಗಳು ಬ್ರಾಹ್ಮಿಲಿಪಿಯ ಸೃಷ್ಟಿಗೆ ಅವಕಾಶವಾಯಿತು ಎನ್ನುತ್ತಾ, ಸಿಂಧೂ ಲಿಪಿಗೂ ಸಾದೃಶ್ಯವನ್ನು ಕಲ್ಪಿಸುತ್ತಾರೆ. ಇದನ್ನು ಹಲವಾರು ಭಾರತೀಯ ವಿದ್ವಾಂಸರೂ ಒಪ್ಪುತ್ತಾರೆ. ಆದರೆ ಸಾಕಷ್ಟು ಪುರಾವೆಗಳಿಲ್ಲ.

ಬ್ರಾಹ್ಮಿಲಿಪಿಯು ಗ್ರೀಕ್ ಮೂಲದ ವರ್ಣಮಾಲೆಯಿಂದ ಬಂದಿದೆ ಎಂಬುದು ಜೇಮ್ಸ್‌ಪ್ರಿನ್ಸೆಪ್. ಕೌಬಲ್-ಡೇ-ರೋಳೆಟ್, ಬಟ್‌ಫ್ರೈಡ್, ಮ್ಯೂಲರ್, ಎಮಿಲೆಸೆನರ್ಟ್, ಗೊಬ್ಲೆಟ್ ದಿ ಆಲ್‌ವೆಲ್ಲ ಮುಂತಾದವರ ವಾದ. ಹಾಗೆಯೇ ಗ್ರೀಕ್‌ಲಿಪಿ ಬ್ರಾಹ್ಮೀಲಿಪಿಯನ್ನು ರೂಪಿಸುವಲ್ಲಿ ಸ್ವಲ್ಪ ಪಾತ್ರವಹಿಸಿದೆ ಎಂಬುದು ಜೋಸೆಫ್ ಹವೇಲಿ, ವಿಲ್‌ಸನ್ ಮುಂತಾದ ವಿದ್ವಾಂಸರ ಅಭಿಪ್ರಾಯ. ಆದರೆ ಖ್ಯಾತ ಲಿಪಿಶಾಸ್ತ್ರಜ್ಞರಾದ ಡೇವಿಡ್ ಡಿರಿಂಜರ್ ಇದನ್ನು ನಿರಾಕರಿಸುತ್ತಾರೆ. ಅವರು ಕೊಡುವ ಕಾರಣ ಇಂಡೋಗ್ರೀಕ್ ಸಾಂಸ್ಕೃತಿಕ ಸಂಪರ್ಕಕ್ಕಿಂತ ಒಂದೆರಡು ಶತಮಾನಗಳ ಮುಂಚೆಯೇ ಬ್ರಾಹ್ಮೀಲಿಪಿ ಬಳಕೆಯಲ್ಲಿದೆ ಎನ್ನುತ್ತಾರೆ. ಸೆಮಿಟಿಕ್ ಮೂಲದಿಂದ ಬ್ರಾಹ್ಮೀ ವರ್ಣಮಾಲೆ ಬಂದಿದೆ ಎಂಬುದು ಹಲವು ವಿದ್ವಾಂಸರ ವಾದ. ಮೊದಲು ಕ್ರಿ.ಶ. ೧೮೦೬ರಲ್ಲಿ ಜೋನ್ಸ್ ಈ ವಾದ ಮಂಡಿಸಿದರು. ೧೮೧೧ರಲ್ಲಿ ವಾನ್‌ಸಿಟ್ಟನ್, ಕ್ರಿ.ಶ. ೧೮೨೧ರಲ್ಲಿ ಕೋಪ್, ಕ್ರಿ.ಶ. ೧೮೩೪ರಲ್ಲಿ ಲೆಪ್ಸಿಯಸ್, ಹಾಗೆಯೇ ಕ್ರಿ.ಶ. ೧೮೫೬ರಲ್ಲಿ ವೆಬರ್ ಮತ್ತು ಹತ್ತೊಂಬತ್ತರ ಶತಕದ ಕೊನೆಯಲ್ಲಿ ವಿದ್ವಾಂಸ ಬ್ಯೂಲರ್‌ರವರು ಸೆಮಿಟಿಕ್ ಮೂಲವನ್ನು ಎತ್ತಿ ಹಿಡಿದಿದ್ದಾರೆ.

ಬ್ರಾಹ್ಮೀಲಿಪಿಯು ಫೊನೀಷಿಯನ್ ವರ್ಣಮಾಲಾ ಮೂಲದಿಂದ ಬಂದಿದೆ ಎಂಬುದು ಇನ್ನೂ ಕೆಲವು ವಿದ್ವಾಂಸರ ವಾದ. ಪೂರ್ವ ಬ್ರಾಹ್ಮೀಲಿಪಿಯ ಮೂರನೇ ಒಂದು ಭಾಗದಷ್ಟು ಲಿಪಿಗಳು ಫೊನೀಷಿಯನ್ ಲಿಪಿಗೆ ಹೋಲಿಕೆಯಾಗುವುದು ಇದಕ್ಕೆ ಕಾರಣವಾಗಿದೆ. ಇದನ್ನು ಮುಖ್ಯವಾಗಿ ಚೆನ್ ಫೈ, ವೆಬರ್, ಬ್ಯೂಲರ್, ಜೆನ್‌ಸೆನ್‌ರವರು ಮಂಡಿಸುತ್ತಾರೆ. ಅದಲ್ಲದೆ ಉಳಿದ ಭಾಗದ ಲಿಪಿ ಸ್ವರೂಪವೂ ಫೊನೀಷಿಯನ್ ಲಿಪಿ ಸಾಮ್ಯತೆಯನ್ನು ಹೊಂದಿದೆ ಎಂಬ ಅಭಿಪ್ರಾಯಕ್ಕೆ ಬರುತ್ತಾರೆ. ಆದರೆ ಆ ಸಂದರ್ಭ ಕಾಲಘಟ್ಟದಲ್ಲಿ ನೇರವಾದ ಸಂಪರ್ಕವು ಈ ದೇಶದೊಂದಿಗೆ ಆಗಿರಲೇ ಇಲ್ಲ. ಆದ ಕಾರಣ ಈ ವಾದವು ಸರಿಯಲ್ಲವೆಂಬುದು ಡೇವಿಡ್ ಡಿರಿಂಜರ್ ಅವರ ಪ್ರತಿಪಾದನೆಯಾಗಿದೆ.

ಬ್ರಾಹ್ಮೀ ವರ್ಣಮಾಲೆಯು ದಕ್ಷಿಣ ಸೆಮಿಟಿಕ್ ಮೂಲದಿಂದ ಬಂದಿದೆ ಎಂಬುದು ಕ್ಯಾನನ್ ಟೈಲರ್, ಹಾಗೂ ದಿವಂಗತ ಸೇಥೇರವರ ವಾದ. ಆದರೆ ಇದು ಸ್ವೀಕಾರಾರ್ಹವಲ್ಲ. ಕಾರಣ ನಂತರದ ಕಾಲಘಟ್ಟದಲ್ಲಿ ಭಾರತಕ್ಕೆ ದಕ್ಷಿಣ ಅರೇಬಿಯಾದ ಸಂಪರ್ಕ ವೇರ್ಪಟ್ಟಿರುವುದು. ಸ್ವಲ್ಪ ಲಿಪಿ ಸಾಮ್ಯ ಕಾಣುವ ಮಾತ್ರದಿಂದಲೇ ಈ ನಿರ್ಧಾರವು ಕಷ್ಟವೇ ಆಗಿದೆ. ಪ್ರೊ. ರೈಸ್ ಡೇವಿಡ್ಸ್‌ರವರು ಬ್ರಾಹ್ಮೀಲಿಪಿಯು ಕ್ಯೂನಿಫಾರಂ(*Cuniform*) ಮೊಳೆಯಾಕಾರದ ಲಿಪಿ ಮೂಲದಿಂದ ಬಂದಿದೆ ಎನ್ನುತ್ತಾರೆ. ಈ ಲಿಪಿ ಸ್ವರೂಪವು ಉತ್ತರ-ದಕ್ಷಿಣ ಸೆಮಿಟಿಕ್ ಮೂಲದಿಂದ ಬಂದಿಲ್ಲವೆಂದು ತಿಳಿಸುತ್ತಾರೆ. ಈ ಬರವಣಿಗೆಯು ಯುಪ್ರೆಟಿಸ್ ಕಣಿವೆ ಮುಖಾಂತರ ಬಂದಿರಬೇಕು ಎಂಬ ವಾದ ಮುಂದಿಡುತ್ತಾರೆ.

ಇದಕ್ಕೆ ಸರಿಯಾದ ಪುರಾವೆಗಳಿಲ್ಲದಿರುವುದರಿಂದ ಇದು ಅನುಮಾನಾಸ್ಪದವೇ ಆಗಿದೆ. ಈ ಮೇಲಿನ ಹಾಗೂ ಇನ್ನೂ ಕೆಲವು ಸಿದ್ಧಾಂತಗಳು ಅರೆಮಿಕ್‌ನ ಪ್ರೋಟೋಟೈಪ್ (*Prototype*) ಬ್ರಾಹ್ಮಿಯೇ ಆಗಿದೆ ಎನ್ನುತ್ತೇವೆ. ಬ್ರಾಹ್ಮೀಲಿಪಿ ಹಾಗೂ ಫೊನೀಷಿಯನ್ ಲಿಪಿ ಸಾಮ್ಯವೂ ಕೂಡ ಅರೆಮಿಕ್ ಲಿಪಿಗೆ ಸಾಮೀಪ್ಯವಾದದ್ದಾಗಿದೆ. ಇಂಡೋಆರ್ಯನ್ ವ್ಯಾಪಾರಸ್ಥರ ಸಂಬಂಧವನ್ನು ಅರೆಮಿಕ್ ಜನರು ಹೊಂದಿರುವುದರಿಂದ, ಅವರಿಂದಲೇ (ಬ್ರಾಹ್ಮೀ) ವರ್ಣಮಾಲಾ ಲಿಪಿಗಳೂ ಬಂದಿವೆ ಎಂಬುದು ಡೇವಿಡ್ ಡಿರಿಂಜರ್ ಅವರ ಅಭಿಪ್ರಾಯ. ಅರೆಮಿಕ್‌ನವರು ವರ್ಣಮಾಲೆಯನ್ನು ಕಲಿಸಿರಬೇಕು ಅಥವಾ ಬ್ಯಾಬಿಲೋನಿಯನ್ ಅಥವಾ ಇತರ ಕಡೆಯಿಂದ ಭಾರತದ ವ್ಯಾಪಾರಿಗಳು ಕಲಿತು ತಂದಿರಲೂಬಹುದು ಎಂದು ತಿಳಿಸುತ್ತಾರೆ.

ಭಾರತದ ಬ್ರಾಹ್ಮೀ ಲಿಪಿಯು ಕ್ರಿ.ಪೂ. ೭–೮ನೇ ಶತಕದಲ್ಲಿ ಉದಯಿಸಿರ ಬಹುದೆಂಬುದು ಆರ್.ಎನ್. ಕಸ್ಟ್ ಎಂಬುವರ ವಾದ. ಹಾಗೆಯೇ ಇದು ಭಾರತೀಯರ ಅನ್ವೇಷಣೆ ಅಲ್ಲ. ಸ್ವರ ವ್ಯಂಜನಗಳನ್ನು ಪ್ರತಿನಿಧಿಸುವ ಕ್ರಿಯೆಯೂ ಪಶ್ಚಿಮ ಏಷ್ಯಾದಿಂದ ಬಂದಿರಬೇಕು. ಈ ಅಂಶಗಳನ್ನು ಬಳಸಿಕೊಂಡು ತಮಗೆ ಬೇಕಾದಂತೆ ಲಿಪಿಯನ್ನು ರಚಿಸಿಕೊಂಡಿರಬೇಕೆಂಬುದಾಗಿ ಹೇಳುತ್ತಾರೆ.

ಪಾಣಿನಿಯ ವ್ಯಾಕರಣದಲ್ಲಿ ಬರವಣಿಗೆ ಬಗ್ಗೆ ಉಲ್ಲೇಖವಿರುವುದರಿಂದ ಬಹುಶಃ ಕ್ರಿ.ಪೂ. ನಾಲ್ಕನೇ ಶತಕದ ಬಳಿಕ ಬರವಣಿಗೆ ಬಂದಿರಬೇಕೆಂಬುದು ಮ್ಯಾಕ್ಸ್‌ಮುಲ್ಲರ್‌ರವರ ವಾದ. ವಿದ್ವಾಂಸ ಬರ್ನೆಲ್‌ರವರು ಫೊನೀಷಿಯಾದಿಂದ ಕ್ರಿ.ಪೂ. ೫ರಲ್ಲಿಯೂ, ಬೂಹ್ಲರ್‌ರವರು ಸೆಮಿಟಿಕ್ ಮೂಲದಿಂದ ಕ್ರಿ.ಪೂ. ೮ರಲ್ಲಿ ಬಂದು, ಕಾಲಾಂತರದಲ್ಲಿ ಬೆಳೆಯಿತು ಎಂದೂ ತಿಳಿಸುತ್ತಾರೆ. ಪ್ರಪಂಚದಲ್ಲಿ ಒಟ್ಟಾರೆ ಲಿಪಿ ಸೃಷ್ಟಿಯಾದ ಕಾಲದಲ್ಲಿ ಬೇರೆ ಬೇರೆ ಭಾಗದ ಜನರು ಲಿಪಿಗಳನ್ನು ತಾವೇ ಸೃಷ್ಟಿಸಿಕೊಂಡಿರಲೂಬಹುದು ಹಾಗೂ ಕೆಲವು ಸಂಪರ್ಕದಿಂದ ಉಂಟಾಗಿರಬಹುದು.

ಭಾರತದಲ್ಲಿ ಮೊದಲು ಬ್ರಾಹ್ಮೀ ಲಿಪಿಯನ್ನು ಬಳಸಿದವನು ಅಶೋಕ ಚಕ್ರವರ್ತಿ. ಅವನಿಗಿಂತಲೂ ಹಿಂದೆ ಈ ಲಿಪಿ ಇರುವ ಉಲ್ಲೇಖದ ಬಗ್ಗೆ ಊಹಾಪೋಹಗಳಿವೆ. ಅಶೋಕನ ಕಾಲದ ಶಾಸನಗಳಲ್ಲಿ ಬರವಣಿಗೆಯನ್ನು ಎಡದಿಂದ ಬಲಕ್ಕೆ ಬರೆಯಲಾಗಿದೆ. ಒಂದು ನಾಣ್ಯದಲ್ಲಿ ಮಾತ್ರ ಬಲದಿಂದ ಎಡಕ್ಕೆ ಬರವಣಿಗ ಇದೆ. ಬಟ್ಟಿಪ್ರೋಲು ಶಾಸನದಲ್ಲಿ ಬರವಣಿಗೆ ಅಂಕುಡೊಂಕಾಗಿದೆ. ಬ್ರಾಹ್ಮೀಲಿಪಿಯು ತಾಂತ್ರಿಕ ಬೀಜಾಕ್ಷರಗಳಿಂದ ಇಲ್ಲೇ ಉಂಟಾಯಿತೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಭಾರತದಲ್ಲಿ ಬ್ರಾಹ್ಮೀಲಿಪಿಯ ೮ ಪ್ರಭೇದಗಳನ್ನು ವಿದ್ವಾಂಸರು ಗುರುತಿಸಿರುವುದಲ್ಲದೆ, ಇದು ಕ್ರಿ.ಪೂ. ೬ನೇ ಶತಕದಿಂದ ಕ್ರಿ.ಶ. ೪ನೇ ಶತಕದವರೆಗೆ ಬಳಕೆಯಲ್ಲಿತ್ತೆಂದು ಊಹಿಸಲಾಗಿದೆ. ಉತ್ತರ ಭಾರತದ ಒಂದು ಶಾಖೆಯು ಗುಪ್ತ, ಸಿದ್ಧ ಮಾತೃಕಾ ಮತ್ತು ಶಾರದಾ ಲಿಪಿಗಳಾಗಿ ರೂಪಾಂತರವಾಯಿತು. ಸಿದ್ಧಮಾತೃಕಾದಿಂದ ಸಂಸ್ಕೃತ ಭಾಷೆಗೆ ಉಪಯೋಗವಾಗಿ ಮುಂದೆ 'ನಾಗರಿ'ಲಿಪಿ ಜನ್ಮವಾಯಿತು. ಇನ್ನೊಂದು ಶಾಖೆಯಿಂದ ಬಂಗಾಳಿ, ಒರಿಯಾ, ಅಸ್ಸಾಮಿ, ಮೈಥಿಲೀ, ಗುಜರಾತಿ, ಬಿಹಾರಿ ಭಾಷೆಗಳಲ್ಲಿ ಉಪಯೋಗಿಸುವ ಲಿಪಿ ರೂಪಾಂತರಗೊಂಡಿದೆ. ಮತ್ತೊಂದು ಶಾಖೆಯಿಂದ ದಕ್ಷಿಣದ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಲಿಪಿ ರೂಪ ತಾಳಿದವು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. **ಕನ್ನಡ ಲಿಪಿ ವಿಕಾಸ,** ಡಾ॥ ಎಂ.ಜಿ. ಮಂಜುನಾಥ್, ಜಿ.ಕೆ. ದೇವರಾಜಸ್ವಾಮಿ, ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ, ಮಂತ್ರಾಲಯ–೨೦೦೪.

೨. **ಲಿಪಿಯ ಹುಟ್ಟು ಬೆಳವಣಿಗೆ,** ಡಾ॥ ದೇವರಕೊಂಡಾರೆಡ್ಡಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨.

೩. **ತೌಲನಿಕ ಸಾಹಿತ್ಯ ಮತ್ತು ಇತರ ಲೇಖನಗಳು,** ಡಾ॥ ಸಿ.ಎನ್. ರಾಮಚಂದ್ರನ್, ಪ್ರಸಾರಾಂಗ, ಮೈ.ವಿ.ವಿ., ಮೈಸೂರು, ೧೯೯೮.

೪. *The Alphabet*, Devid Diringer, Munshiram Manoharlal Publishers Pvt. Ltd., New Delhi, 2005.

೫. Web : ancient script.com & others.




# ವಿಶ್ವಲಿಪಿಗಳ ಮಹಾ ತಾಯಿ – ಸೆಮೆಟಿಕ್ ಲಿಪಿ

**– ಡಿ. ಸೀತಾರೆಡ್ಡಿ***

**ಮ**ನುಕುಲದ ಪ್ರಗತಿಯ ಇತಿಹಾಸದಲ್ಲಿ ಬರವಣಿಗೆಯ ಪಾತ್ರ ಮಹತ್ವದ್ದು, ಪ್ರಪಂಚದಲ್ಲಿ ಬರವಣಿಗೆ ಎಂದು, ಎಲ್ಲಿ ಮತ್ತು ಹೇಗೆ ಪ್ರಾರಂಭವಾಯಿತೆಂಬುದಕ್ಕೆ ಉತ್ತರ ನೀಡುವುದು ಕಷ್ಟ. ಬರವಣಿಗೆಯ ಇತಿಹಾಸದ ಜಾಡನ್ನು ಹಿಡಿದು ಹೊರಟಾಗ ಅದು ಒಂದೊಂದು ಪ್ರದೇಶದಲ್ಲಿ ಒಂದೊಂದು ಕಾಲಘಟ್ಟದಲ್ಲಿ ಹುಟ್ಟಿ ವಿಕಾಸಗೊಂಡಿರುವುದು ಕಂಡುಬರುತ್ತದೆ. ಬರವಣಿಗೆಯ ವ್ಯವಸ್ಥೆಯು ಲಿಪಿ ಶೋಧನೆಗೂ ಹಿಂದಿನ ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿದೆ. ಲಿಪಿಯ ಶೋಧ ಮಾನವನ ಬೌದ್ಧಿಕತೆಯ ಮೊದಲ ಮೆಟ್ಟಿಲು. ಬರವಣಿಗೆಯ ಗೈರುಹಾಜರಿಯಲ್ಲಿ ಮಾನವನ ಬೌದ್ಧಿಕ ವಿಕಾಸ ಅಸಾಧ್ಯ. ಇಂದು ನಾವು ವಿಶ್ವದಾದ್ಯಂತ ಬಳಸುತ್ತಿರುವ ಲಿಪಿವ್ಯವಸ್ಥೆ ತುಂಬಾ ಸರಳ ಮತ್ತು ಸುಲಭವೆನಿಸಬಹುದು. ಆದರೆ ಲಿಪಿ ತನ್ನ ಇಂದಿನ ಅವಸ್ಥೆ ತಲುಪಲು ಸಾವಿರಾರು ವರ್ಷಗಳನ್ನು ಕ್ರಮಿಸಿದೆ. ನಾಗರಿಕತೆಯ ಬೆಳವಣಿಗೆಯಲ್ಲಿ ಬರವಣಿಗೆಯ ಆರಂಭ ಒಂದು ಸ್ಥಿರ ಹಂತವಾಗಿದೆ. ಸುಮೇರಿಯನ್, ಈಜಿಪ್ಟ್, ಚೀನಾ, ಸಿಂಧೂ ನಾಗರಿಕತೆಗಳಲ್ಲಿ ಲಿಪಿ ವ್ಯವಸ್ಥೆಯ ಶೋಧನೆಗೂ ಮೊದಲೇ ಬರವಣಿಗೆ ಪ್ರಚಲಿತದಲ್ಲಿತ್ತು. ವಿಶ್ವದ ಎಲ್ಲ ಬೇರೆ ಬೇರೆ ಕಾಲಘಟ್ಟಗಳಲ್ಲಿ ಬೇರೆ ಬೇರೆ ಜನಾಂಗಗಳ ಜನರು ಪ್ರಾತಿನಿಧಿಕವಾಗಿ ಬರವಣಿಗೆ ವಿಧಾನದ ಶೋಧದಲ್ಲಿ ತೊಡಗಿದ್ದರು. ಆದರೆ ಈ ಬರವಣಿಗೆಗಳ ಅಭಿವ್ಯಕ್ತಿ ಸೀಮಿತ ಅರ್ಥಮೌಲ್ಯವನ್ನು ಹೊಂದಿತ್ತು. ಏಕೆಂದರೆ ಈ ಎಲ್ಲ ನಾಗರೀಕತೆಗಳ ಸಂದರ್ಭದಲ್ಲೂ ಬರವಣಿಗೆ ಒಂದು ಸಾಮಾನ್ಯವಾದ (Rude) ಚಿತ್ರಲಿಪಿಯಿಂದಲೇ ಆರಂಭವಾಗಿದೆ. ಇಲ್ಲಿ ಉಚ್ಚಾರಣಾ ಧ್ವನಿಗಳ ಬದಲಾಗಿ ಕೇವಲ ಚಿತ್ರಗಳ ಮೂಲಕ ಅರ್ಥ ಅಭಿವ್ಯಕ್ತವಾಗುತ್ತದೆ. ಈಜಿಪ್ಟ್, ಚೀನಾ, ಸುಮೇರಿಯನ್ ಮತ್ತು ಸಿಂಧೂ ನಾಗರೀಕತೆಗಳ ಆರಂಭಿಕ ಬರವಣಿಗೆ ವ್ಯವಸ್ಥೆ ಕಂಡುಬರುವುದೇ ಚಿತ್ರಲಿಪಿಯಲ್ಲಿ. ಇಲ್ಲಿ ನಾಲಿಗೆ ಚಿತ್ರ 'ಮಾತನ್ನು', ಕಣ್ಣಿನ ಚಿತ್ರ ನೋಡುವುದನ್ನು ಹಾಗೂ ಸೂರ್ಯನ ಚಿತ್ರ ಹಗಲನ್ನು ಸೂಚಿಸುತ್ತದೆ.

ಚಿತ್ರಲಿಪಿಯ ನಂತರದ ಹಂತ ಭಾವಲಿಪಿ (Ideogram) ವಸ್ತು ಅಥವಾ ಭಾವನೆ/ಚಿಂತನೆಗಳನ್ನು ವ್ಯಕ್ತಪಡಿಸಲು ಬರೆದ/ರೇಖಿಸಿದ ಚಿತ್ರಗಳು ವಸ್ತುಗಳನ್ನು ಸೂಚಿಸದೆ ಅವುಗಳ ಹಿಂದಿರುವ ಭಾವವನ್ನು ಧ್ವನಿಸುತ್ತವೆ. ಪ್ರತಿಯೊಂದು ಚಿತ್ರಕ್ಕೂ ಒಂದು ನಿರ್ದಿಷ್ಟ ಮತ್ತು ಶಬ್ದಾತ್ಮಕ ಮೌಲ್ಯವನ್ನು ಹೊಂದಿರುವ ಹಾಗೂ ಒಂದೇ ರೀತಿಯಲ್ಲಿ ಬಳಸಲಾಗುವ ಮೌಲ್ಯವಿರುತ್ತಿತ್ತು. ಭಾವಲಿಪಿಗಳು ಎರಡು ರೀತಿಯಲ್ಲಿದ್ದವು. ಅವುಗಳೆಂದರೆ ವಸ್ತುಗಳ ವಾಸ್ತವಿಕ ಉಚ್ಚಾರಣೆಯನ್ನು ಧ್ವನಿಸುವ ಚಿತ್ರಗಳು ಮತ್ತು ಮೂರ್ತ/ಅಮೂರ್ತ ಭಾವನೆಗಳನ್ನು ಸೂಚಿಸಲು ಬಳಸಲಾಗುತ್ತಿದ್ದ ಚಿತ್ರ ಸಂಕೇತಗಳು. ಉದಾ: ಕಣ್ಣು+ಕಣ್ಣೀರು ದುಃಖವನ್ನು ಚಂದ್ರ ಮತ್ತು ನಕ್ಷತ್ರಗಳ ಚಿತ್ರ ರಾತ್ರಿಯನ್ನು, ಮಾನವಾಕೃತಿ ಮತ್ತು ಕಾಡುಪ್ರಾಣಿಗಳ ಚಿತ್ರ ಬೇಟೆಯ ಅರ್ಥವನ್ನು ಧ್ವನಿಸುತ್ತದೆ.

ಧ್ವನಿಸಂಕೇತಗಳು (Phonogram) ಬರವಣಿಗೆಯ ಮೂರನೇ ಹಂತದಲ್ಲಿ ನಿರ್ದಿಷ್ಟ ಸಂಕೇತವು ಎಲ್ಲ ಸಂದರ್ಭಗಳಲ್ಲಿ ಒಂದೇ ಅರ್ಥವನ್ನು ಮತ್ತು ಅದೇ ಶಬ್ದಾತ್ಮಕ ಮೌಲ್ಯವನ್ನು ಸೂಚಿಸುತ್ತದೆ. ಇವು ಶಬ್ದಗಳ ಲಿಖಿತ ಸಂಕೇತಗಳಾಗಿದ್ದು, ಸಾಮಾನ್ಯವಾಗಿ ಸಾಂಪ್ರದಾಯಿಕ ಭಾವಲಿಪಿಯಿಂದ ಉದ್ಭವಿಸಿದೆ. ಇವುಗಳನ್ನು ವಸ್ತುಗಳಿಗೆ ಬದಲಾಗಿ ಶಬ್ದಗಳನ್ನು ಪ್ರತಿನಿಧಿಸಲು ತೆಗೆದುಕೊಳ್ಳಲಾಗಿದೆ. ಇಲ್ಲಿ ಚಿಹ್ನೆಗಳು ಮಾತನಾಡುವ ಭಾಷೆಯ ಧ್ವನಿಗಳನ್ನು ಸೂಚಿಸುತ್ತವೆ. ಇವು ಕ್ರಮೇಣ ಮೂರು ಹಂತಗಳಲ್ಲಿ ಮುಂದುವರೆಯುತ್ತವೆ. ಅವುಗಳೆಂದರೆ, (i) ಇಡೀ ಶಬ್ದಕ್ಕೆ ಅನ್ವಯವಾಗುವ ಶಾಬ್ದಿಕ ಸಂಕೇತಗಳು, (ii) ಜೋಡಿಸಲಾದ ಪದಗಳ ಸ್ಪಷ್ಟ ಉಚ್ಚಾರಣೆಯನ್ನು ಸಂಕೇತಿಸುವ ಉಚ್ಚಾರಾಂಶ ಚಿಹ್ನೆಗಳು ಹಾಗೂ (iii) ಮೂಲ ಶಬ್ದವನ್ನು ಸಂಕೇತಿಸುವ ಲಿಪಿ ಸಂಕೇತಗಳು ಅಥವಾ ವರ್ಣಮಾಲೆ.

---

* ಭಾಷಾಂತರಕಾರರು, ಕರ್ನಾಟಕ ವಿಧಾನ ಪರಿಷತ್ತು ಸಚಿವಾಲಯ, ನಂ ೨೧೬ಬಿ, ವಿಧಾನಸೌಧ, ಬೆಂಗಳೂರು-೫೬೦೦೦೧.

ಬರವಣಿಗೆಯ ಇತಿಹಾಸದಲ್ಲಿ ಕೊನೆಯ ಮತ್ತು ಅತ್ಯಂತ ಮಹತ್ವದ ಘಟ್ಟ ಶಬ್ದಾತ್ಮಕ ಚಿಹ್ನೆಗಳನ್ನು ಘಟಕಗಳಾಗಿ ಅಥವಾ ಅಕ್ಷರಗಳಾಗಿ ವಿಭಜಿಸಿ ಅವುಗಳನ್ನು ಒಂದು ನಿರ್ದಿಷ್ಟ ಚಿತ್ರದ ಮೂಲಕ ಸೂಚಿಸಿದುದು. ಈ ಹಂತದಲ್ಲಿ ಪ್ರತಿಯೊಂದು ಅಕ್ಷರವನ್ನು ಒಂದು ಚಿತ್ರದ ಮೂಲಕ ಸೂಚಿಸಲಾಗುತ್ತಿತ್ತು. ಲಿಪಿಯ ಇತಿಹಾಸದಲ್ಲಿ ಪ್ರತಿಯೊಂದು ಅಕ್ಷರವೂ ಕೆಲವು ವಸ್ತುಗಳ ಸಾಂಪ್ರದಾಯಿಕ ಚಿತ್ರಗಳಿಂದ ಉಗಮವಾಗಿರುವುದು ಕಂಡುಬರುತ್ತದೆ. ಪ್ರಾಚೀನ ಈಜಿಪ್ಟ್ ಭಾಷೆಯಲ್ಲಿ ಗೂಬೆಯ ಹೆಸರು 'ಮುಲಕ್' (Mulak), ಗೂಬೆಯನ್ನು ಸೂಚಿಸಲು ಗೂಬೆಯ ಚಿತ್ರವನ್ನು ಭಾವಲಿಪಿಯಂತೆ ಬಳಸಿಕೊಂಡಿರಬಹುದು. ಅದು ಉಚ್ಚಾರವನ್ನು ಸಂಕೇತಿಸುವಾಗ 'mu' ಶಬ್ದವನ್ನು ವ್ಯಕ್ತಪಡಿಸಲು ಬಳಸಲಾಯಿತು. ನಂತರ ಹೆಸರಿನ ಮೊದಲ ಉಚ್ಚಾರಾಂಶ 'm'ನ್ನು ಸುಲಭವಾಗಿ ಸೂಚಿಸಲು ಬಳಸಲಾಯಿತು. ಇವುಗಳನ್ನು ಸಾಂಪ್ರದಾಯಿಕ ಸ್ಮಾರಕಗಳ ಮೇಲೆ ಬರೆದಾಗ ಹಾಗೆಯೇ ಉಳಿದವು. ಆದರೆ ಹಿರಾಗ್ಲಿಫಿಕ್‌ನ್ನು ಪಾಪಿರಸ್ ಎಲೆಗಳ ಮೇಲೆ ಬರೆದಾಗ (ಕಲ್ಲಿಗೆ ಬದಲಾಗಿ) ಹಿರಾಗ್ಲಿಫಿಕ್ ಲಿಪಿಯು ಸುರುಳಿಯಾಕಾರದ ಅಥವಾ ಗುಂಡಾದ (cursive) ರೂಪವನ್ನು ಪಡೆದುಕೊಂಡವು. ಹೈರಾಟಿಕ್ ಲಿಪಿಯಲ್ಲಿ ಮೂಲಚಿತ್ರದ ರೂಪ ಉಳಿಯದಂತೆ ಬದಲಾಯಿತು. ಚಿತ್ರದ ಹಿಂಭಾಗ ಮತ್ತು ಕಾಲುಗಳನ್ನು ಬಿಟ್ಟುಬಿಡಲಾಯಿತು. ಹೀಗೆ ಚಿತ್ರಗಳು ಕಾಲಕ್ರಮೇಣ ಮಸುಕಾದಂತೆ ಚಿತ್ರದ ವಿವರಗಳನ್ನು ಕೈಬಿಟ್ಟು ಕೆಲವೇ ದೊಡ್ಡ ರೇಖೆಗಳನ್ನು ಬಳಕೆಗೆ ಇಟ್ಟುಕೊಂಡು ಉಳಿದ ಸಣ್ಣಪುಟ್ಟ ರೇಖೆಗಳನ್ನು ಕೈಬಿಡಲಾಯಿತು. ಅಂತಿಮವಾಗಿ ಯಾವ ವಸ್ತುವಿನಿಂದ ಆ ಒಂದು ಅಕ್ಷರ ಜನ್ಯವಾಯಿತೋ ಆ ಚಿತ್ರಕ್ಕೆ ಸಾಮ್ಯತೆ ಇಲ್ಲದಂತಾಗಿದೆ (ಚಿತ್ರಗಳ ಪಟ್ಟಿ).



Wadi_el-Hol_inscriptions_drawing

Z Zayin Weapon | W Waw Hook | H He Window | D Daleth Door | G Gimel Camel | B Beth House | ' Aleph Ox

N Nun Fish | M Mem Water | L Lamedh Ox-Goad | K Kaph Palm of Hand | Y Yodh Hand | T Teth Unknown | H Heth Fence

T Taw Mark | SH Shin Tooth | R Resh Head | Q Qoph Monkey | S Sadhe Fishhook | P Pe Mouth | ' Ayin Eye | S Samekh Support

The Phoenician Alphabet ~ 1400 BC

Egyptian 3000 B.C. | Sinai 1850 B.C. | Phoenician aleph 1200 B.C. | Greek alpha 600 B.C. | Roman 114 A.D.

aleph


Afro-Asiatic
Semitic
East
Akkadian
Assyrian
Old
Middle
New
Babylonian
Old
Middle
New
"North Peripheral"
Cuneiform
West
Central
Aramaic
"North Central"
Imperial/Biblical Aramaic
East (Syriac)
Babylonian Talmudic
Classical Syriac
Mandaic
Modern
Ṭûrôyo
Mlahsô
Northeastern
Christian dialects
Jewish dialects
West (Syriac)
Galilean
Palestinian
Samaritan
Palmyrene
Nabataean
Modern
Ma'lûla
Bakh'a
Jubb 'Adîn
South
Canaanite
Ugaritic
Amorite
Ebla
Phoenician
Hebrew
Modern
Moabite
Alphabet
"South Central"
Arabic
Qur'ânic
Maltese
Literary
Egyptian
Sudanese
Maghribi
Levantine
Iraqi
Peninsular
Gulf
South
"South Peripheral"
Epigraphic South Arabian
Sabaean
Minean
Awsani
Qatabani
Hadramauti
Modern South Arabian
Shahri
Mahri
Harsusi
Soqotri
Ethiopian
North
Ge'ez/Ethiopic
Tigrinya
South
Transversal
Amharic
Argobba
Harari
East Gurage
Within Outer
Gafat
Soddo
Goggot
Muher
Western Gurage
Hieroglyphics
"Hamitic"
Egyptian
Old
Middle
Late
Demotic
Coptic
Akhmîmic
Ṣa'Îdic
Boḥairic
Cushitic
North Cushitic
Beja
Central Cushitic/Agaw
Rift Valley (Highland East) Cushitic
Sidamo
Lowland (East) Cushitic
Afar-Saho/Dankali
Oromo/Galla
Somali
Dullay
South Cushitic
?
Omotic
Berber
Tuareg
Tamazighi
Tshalhit
Tirifie
Kabyle
Chawiya
Zengaga
Chadic
West
Hausa
Bole
Angas
Ron
Bade
Warji
Zaar
Biu-Mandara
Tera
Bura
Higi
Mandara
Matakam
Sukur
Daba
Bata
Kotoko
Musugu
Gidar
East
Somrai
Nancere
Kera
Dangla
Kokulu
Sokoro
Masa

Semitic

| | Proto-Canaanite | Early Phoenician | Greek | | Proto-Canaanite | Early Phoenician | Greek |
|---|---|---|---|---|---|---|---|
| ' | | | Α | l | | | Λ |
| b | | | Β | m | | | Μ |
| g | | | Γ | n | | | Ν |
| d | | | Δ | s | | | Ξ |
| h | | | Ε | ' | | | Ο |
| w | | | Υ | p | | | Π |
| z | | | Ζ | ṣ | | | Μ |
| ḥ | | | Η | q | | | Ϙ |
| ṭ | | | Θ | r | | | Ρ |
| y | | | Ι | š | | | Σ |
| k | | | Κ | t | | | Τ |

canaanitealph

| Egyptian | Protosinaitic | Phoenician | Early Greek | Greek | Latin |
|---|---|---|---|---|---|
| | | | | | A |
| | | | | | B |
| | | | | | G |
| | | | | | E |
| | | | | | K |
| | | | | | M |
| | | | | | N |
| | | | | | O |
| | | | | | R |
| | | | | | T |
| | | | | | S |

letters small

ಆರಂಭಿಕ ಲಿಪಿ ವ್ಯವಸ್ಥೆ ಅಥವಾ ವರ್ಣಮಾಲೆ ಹೇಗೆ ಉಗಮವಾಯಿತು? ಎಲ್ಲಿ ಮೊದಲು ಕಂಡುಬಂದಿತು? ಯಾರು ಶೋಧಿಸಿದರು? ಪ್ರೇರಕರಾರು? ಹೇಗೆ ವಿಕಾಸ ಹೊಂದಿತು ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಾದರೆ ನಾವು ಉತ್ತರ ಸೆಮೆಟಿಕ್ ಲಿಪಿಯನ್ನು ಅಭ್ಯಸಿಸಬೇಕಾಗುತ್ತದೆ. ವಿದ್ವಾಂಸರು ಸೆಮೆಟಿಕ್ ಭಾಷಾಶಾಸನಗಳಲ್ಲಿ ಲಿಪಿಯ ಆರಂಭಿಕ ವ್ಯವಸ್ಥೆಯನ್ನು ಗುರುತಿಸಿದ್ದಾರೆ. ಹಾಗಾಗಿ ಸೆಮೆಟಿಕ್ ಲಿಪಿಯ ಬಗ್ಗೆ ಅರಿವಿಲ್ಲದೆ ಲಿಪಿ ವ್ಯವಸ್ಥೆಯನ್ನು ಅಭ್ಯಸಿಸುವುದಸಾಧ್ಯ!

'ಸೆಮ್ಮೆಟ್' ಪದವನ್ನು ಎ ಲುಡ್‌ವಿಗ್ ಸ್ಕ್ಲೋಯೇಜರ್ (A.L. Schloczer) ಹಿಬ್ರೂಗೆ ಸಂಬಂಧಿಸಿದ ಭಾಷೆಗಳ ಬಗ್ಗೆ ಹೇಳುವಾಗ ಮೊಟ್ಟಮೊದಲಿಗೆ ೧೭೮೧ರಲ್ಲಿ ಬಳಸಿದರು. ಜೊತೆಗೆ ಸೆಮೆಟಿಕ್ ಭಾಷೆಗಳನ್ನೂ ಸಹ ಮೊದಲ ಬಾರಿಗೆ ಗುರುತಿಸಿದರು. ಈಬ್ ಕುರೇಕ್ಷರವರು (Ibn Quraysh) ಅರಾಬಿಕ್, ಹಿಬ್ರೂ ಮತ್ತು ಅರಮೆಯಿಕ್ ಭಾಷೆಗಳನ್ನಾಧರಿಸಿ ಮೊದಲಬಾರಿ ಸೆಮೆಟಿಕ್ ಭಾಷೆಗಳ ತೌಲನಿಕ ಅಧ್ಯಯನ ನಡೆಸಿದರು. ಆದರೆ ಈ ಸೆಮೆಟಿಕ್ ಗುಂಪಿನ ಭಾಷೆಗಳನ್ನು ಆಫ್ರೋ-ಏಷಿಯಾಟಿಕ್‌ನ ಮತ್ತೊಂದು ಶಾಖೆಗೆ ಸಂಬಂಧ ಕಲ್ಪಿಸುವ ಅವರ ಉದ್ದೇಶ ೧೯ನೇ ಶತಮಾನಕ್ಕೆ ಮೊದಲು ಸಾಧ್ಯವಾಗಲಿಲ್ಲ. ಥಾಮಸ್, ಬೆನ್‌ಫೇ (Th. Benfey) ಎಂಬುವವರು ತಮ್ಮ ಕೃತಿ 'ಸೆಮೆಟಿಕ್ ಲಿಂಗ್ವಿಸ್ಟಿಕ್ಸ್'ನಲ್ಲಿ ಸೆಮೆಟಿಕ್ ಭಾಷೆಗಳ ನಡುವಿನ ಆಂತರಿಕ ಸಂಬಂಧವನ್ನು ಗುರುತಿಸಿದರು. ಫಾದರ್ ಮುಲ್ಲರ್ (Fr. Mullar) ಕ್ರಿ.ಶ. ೧೮೭೬ರಲ್ಲಿ ಇಡೀ ಭಾಷಾ ಕುಟುಂಬವನ್ನು "ಹಮ್ಮೈಟೋ ಸೆಮೆಟಿಕ್" ಎಂದು ಗುರುತಿಸಿದರು.

'ಸೆಮಿಟಿಕ್' ಎಂದರೇನು? ಎಂಬುದನ್ನು ಬೇರೆ ಬೇರೆ ನಿಘಂಟುಗಳು ಏಕರೀತಿಯ ಪರಿಭಾಷೆಯನ್ನೇ ನೀಡುತ್ತವೆ. ಈ ಎಲ್ಲ ನಿಘಂಟುಗಳು ಉಲ್ಲೇಖಿಸಿರುವಂತೆ,

(i) ಸೆಮೆಟಿಕ್ ಎಂಬುದು, ಆಫ್ರೋ ಏಷಿಯಾಟಿಕ್ ಭಾಷಾ ಕುಟುಂಬದ ಪ್ರಧಾನ ಶಾಖೆ;

(ii) ಸೆಮೈಟರು, ಸೆಮೈಟ್ ಜನರ ಲಿಪಿಗೆ ಸಂಬಂಧಿಸಿದ ಪದ;

(iii) ಸೆಮೆಟಿಕ್ ಭಾಷೆಯ ಅಥವಾ ಸೆಮಟಿಕ್ ಭಾಷೆಗೆ ಸಂಬಂಧಿಸಿದ ಪದ (Wordent Dictionary);

(iv) ಅರಬ್ಬರು, ಜ್ಯೂಗಳು ಮತ್ತು ಸಂಬಂಧಪಟ್ಟ ಸಂತತಿಯೂ ಸೇರಿದಂತೆ ಕಕೇಷಿಯನ್ ಬುಡಕಟ್ಟಿಗೆ ಸೇರಿಗೆ ಷೆಮ್ ಅಥವಾ ಆತನ ಸಂತತಿಯವರ/ಅವರಿಗೆ ಸಂಬಂಧಿಸಿದ ಪದ (Webster Dictionary);

(v) ಏಷಿಯಾ ಮತ್ತು ಆಫ್ರಿಕಾ ಭಾಷೆಗಳ ಮೃತ ಮತ್ತು ಪ್ರಚಲಿತ ಭಾಷಾ ಸಮೂಹವನ್ನು ಸೂಚಿಸುವ ಪದ (Encyclopedia Britanica);

(vi) ಸೆಮೈಟರ/ಅವರಿಗೆ ಸಂಬಂಧಿಸಿದ ಪದ ಮತ್ತು ಹೀಬ್ರೂ, ಅರಾಬಿಕ್ ಒಳಗೊಂಡ ಭಾಷಾ ಕುಟುಂಬದ ಮತ್ತು ಅದಕ್ಕೆ ಸಂಬಂಧಿಸಿದ ಪದ.

ಈ ಎಲ್ಲ ನಿಘಂಟುಗಳೂ, 'ಸೆಮೆಟಿಕ್' ಪದವನ್ನು ಸೆಮೆಟಿಕ್ ಜನರೊಂದಿಗೆ ಸಂಪರ್ಕ ಕಲ್ಪಿಸಿ, ಅದು ಆ ಜನಾಂಗದ ಭಾಷೆ ಮತ್ತು ಲಿಪಿಯನ್ನು ಸೂಚಿಸುವ ಪದವೆಂಬುದಾಗಿ ಅರ್ಥೈಸಿವೆ. ಈ ಎಲ್ಲ ನಿಘಂಟುಗಳು ಸೂಚಿಸುವ ಅರ್ಥವ್ಯಾಪ್ತಿಯ ಹಿನ್ನೆಲೆಯಲಿ ಸೆಮೆಟಿಕ್ ಎಂಬುದು ಏಕೈಕ ಲಿಪಿಯಾಗಿರದೆ, ನೂರಕ್ಕೂ ಹೆಚ್ಚಿನ ಲಿಪಿಗಳ ಸಮೂಹವೆಂಬುದು ಗ್ರಾಹ್ಯವಾಗುತ್ತದೆ. ಆದ್ದರಿಂದ ಈ ಲೇಖನದ ಪರಿಮಿತಿಯಲ್ಲಿ ಕೇವಲ ಸೆಮೆಟಿಕ್ ಲಿಪಿಗಳ ಮೂಲ, ಉಗಮ ಮತ್ತು ವಿಸ್ತರಣೆ (ವಿಕಾಸದ) ಬಗ್ಗೆ ಮಾತ್ರ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಹಿಂದೆ ಹೇಳಲಾದಂತೆ 'ಸೆಮೆಟಿಕ್ ಲಿಪಿ' ಎಂಬುದು ಏಕೈಕ ಭಾಷೆಗೆ ಸಂಬಂಧಿಸಿದ ಲಿಪಿಯಲ್ಲ. ಬದಲಾಗಿ ಇದು ೧೦೦ಕ್ಕೂ ಅಧಿಕ ಭಾಷೆಗಳನ್ನೊಳಗೊಂಡ ಹಾಗೂ ೪೫೦೦ ವರ್ಷಗಳ ಇತಿಹಾಸವನ್ನು ಹೊಂದಿರುವ ಭಾಷಾ ಸಮೂಹದ ಲಿಪಿವ್ಯವಸ್ಥೆ. ಆದ್ದರಿಂದ ಇಲ್ಲಿ 'ಸೆಮೆಟಿಕ್ ಲಿಪಿ' ಎಂಬುದನ್ನು 'ಸೆಮೆಟಿಕ್ ಭಾಷೆಗಳ ಲಿಪಿ' ಎಂದು ಪರಿಭಾವಿಸಬೇಕಾಗಿದೆ. ಡಾ. ಇಸಾಕ್ ಟೈಲರ್‌ರವರು ಉತ್ತರ ಸೆಮೆಟಿಕ್, ದಕ್ಷಿಣ ಸೆಮೆಟಿಕ್ ಭಾಷಾ ವರ್ಗಕ್ಕೆ ಸೇರಿದ ಕನಾನೈಡ, ಪೊನೆಷಿಯನ್, ಗ್ರೀಕ್, ಎಟ್ರುಸ್ಕಾನ್, ಲ್ಯಾಟಿನ್, ಇಥಿಯೋಪಿಯಾ, ಅರೇಬಿಯಾ, ಅರಮೆಯಿಕ್ ಒಳಗೊಂಡಂತೆ, ೯೯ ಸೆಮೆಟಿಕ್ ಭಾಷೆಗಳನ್ನು ಗುರುತಿಸಿದ್ದಾರೆ[೧]. ವಿದ್ವಾಂಸರು ಸೆಮೆಟಿಕ್ ಲಿಪಿಯ ಭೌಗೋಳಿಕ ವಿಸ್ತರಣೆ, ಸಾಂಸ್ಕೃತಿಕ ಮತ್ತು ರಾಜನಿಕ ವರ್ಗೀಕರಣದ ಆಧಾರದ ಮೇಲೆ, (i) ಆಫ್ರೋ–ಏಷಿಯಾಟಿಕ್ ಸೆಮೆಟಿಕ್ (ii), ಪಶ್ಚಿಮ ಸೆಮೆಟಿಕ್ (iii) ದಕ್ಷಿಣ ಸೆಮೆಟಿಕ್ (iv) ಮಧ್ಯ ಸೆಮೆಟಿಕ್ (v) ಪೂರ್ವ ಸೆಮೆಟಿಕ್ (vi) ವಾಯವ್ಯ ಸೆಮೆಟಿಕ್ (vii) ಆಗ್ನೇಯ ಸೆಮೆಟಿಕ್ ಎಂಬಿತ್ಯಾದಿಯಾಗಿ ಹಲವಾರು ಉಪಗುಂಪುಗಳನ್ನಾಗಿ ವಿಭಜಿಸಿದ್ದಾರೆ. ಆದರೆ ಸೆಮೆಟಿಕ್ ಲಿಪಿಯನ್ನು ಆಯಾ ಉಪಗುಂಪುಗಳಲ್ಲಿ ಸೇರಿಸುವ ವಿಚಾರದಲ್ಲಿ ಇದಮಿತ್ಥಂ ಎಂದು ಹೇಳಬಹುದಾದಂಥ ನಿರ್ಣಯಕ್ಕೆ ಯಾವ ವಿದ್ವಾಂಸರೂ ಬಂದಿಲ್ಲ. ಹಾಗಾಗಿ ಬಹುತೇಕ ಲಿಪಿತಜ್ಞರು ಸೆಮೆಟಿಕ್ ಲಿಪಿಯನ್ನು ಸ್ಥೂಲವಾಗಿ ಉತ್ತರ ಸೆಮೆಟಿಕ್ ಮತ್ತು ದಕ್ಷಿಣ ಸೆಮೆಟಿಕ್ ಎಂದು ವರ್ಗೀಕರಿಸಿದ್ದಾರೆ. ಆದಿ ಸೆಮೆಟಿಕ್ ಲಿಪಿ ಮತ್ತು ಅದರಿಂದ ಟಿಸಿಲೊಡೆದ ಕನಾನೈಟ್, ಪೊನೆಷಿಯನ್, ಗ್ರೀಕ್, ರೋಮನ್, ಅರಮೆಯಿಕ್ ಮುಂತಾದ ಲಿಪಿಗಳು ಉತ್ತರ ಸೆಮೆಟಿಕ್ ವರ್ಗಕ್ಕೆ ಸೇರುತ್ತವೆ. ಇಥಿಯೋಪಿಯಾ ಮತ್ತು ದಕ್ಷಿಣ ಅರೇಬಿಯಾ ದಕ್ಷಿಣ ಸೆಮೆಟಿಕ್ ವರ್ಗಕ್ಕೆ ಸೇರುತ್ತವೆ.

ಇಂದು ಸೆಮೆಟಿಕ್ ಜನರು ವಿಶ್ವದಾದ್ಯಂತ ಚದುರಿರುವಂತೆಯೇ ಸೆಮೆಟಿಕ್ ಲಿಪಿಯೂ ಸಹ ಪ್ರಪಂಚದ ಬಹುತೇಕ ಲಿಪಿಗಳಿಗೆ ಒಂದಿಲ್ಲೊಂದು ರೀತಿಯಲ್ಲಿ ಮಾತೃಲಿಪಿಯಾಗಿದೆ. ಆದರೆ, ಸೆಮೆಟಿಕ್ ಲಿಪಿಗಳಿಗೆ ಮಾತೃಲಿಪಿ ಯಾವುದು? ಅದು ಎಲ್ಲಿ ಉಗಮವಾಯಿತು? ಎಲ್ಲಿಂದ ಪ್ರೇರಣೆ ಪಡೆದಿದೆ? ಯಾವ ಲಿಪಿಯನ್ನು ಆದಿಸೆಮೆಟಿಕ್ ಲಿಪಿಯೆಂದು ಗುರುತಿಸಬೇಕೆಂಬುದು ಹೆಚ್ಚು ಸಂದಿಗ್ಧಕರ ವಿಷಯ. ಜನಾಂಗಿಕ, ಸಾಂಸ್ಕೃತಿಕ, ಭೌಗೋಳಿಕ ಸಂಪರ್ಕಗಳಿಗಿಂತ ಭಿನ್ನವಾಗಿ ಪ್ರತಿಯೊಂದು ಲಿಪಿಯ ಬೇರುಗಳನ್ನು ಅನ್ವೇಷಿಸುತ್ತಾ ಸಾಗಿದರೆ ಅದರ ಟಿಸಿಲು ಯಾವ ಲಿಪಿ ವೃಕ್ಷದ ಕಾಂಡಕ್ಕೆ ಸಂಪರ್ಕ ಕಲ್ಪಿಸುತ್ತದೆ ಎಂಬುದನ್ನು ಪರಿಶೀಲಿಸಿ ಆ ಲಿಪಿಯನ್ನೂ ಅದೇ ಹಿನ್ನೆಲೆಯಲ್ಲಿ ಹುಡುಕಬೇಕಾಗುತ್ತದೆ. ಉದಾಹರಿಸಿ ಹೇಳುವುದಾದರೆ, ಇಂಗ್ಲಿಷ್ ಲಿಪಿಗೆ ರೋಮನ್ ಲಿಪಿ, ಅದಕ್ಕೆ ಗ್ರೀಕ್ ಲಿಪಿ, ಗ್ರೀಕ್ ಲಿಪಿಗೆ ಪೊನೆಷಿಯನ್ ಲಿಪಿ, ಅದಕ್ಕೆ

ಕನಾನೈಟ್ ಅಥವಾ ಉತ್ತರ (ಆದಿ) ಸೆಮೆಟಿಕ್ ಲಿಪಿ ಮೂಲವಾಗಿದೆ. ಹಾಗಾಗಿ ಇಂಗ್ಲಿಷ್ ಲಿಪಿಯ ಬೇರೆಗಳನ್ನು ನಾವು ಉತ್ತರ ಸೆಮೆಟಿಕ್ ಲಿಪಿಯಲ್ಲಿ ಕಾಣಬಹುದು. ಎಂದರೆ ಸಂಬಂಧಪಟ್ಟ ಲಿಪಿಗಳ ಉಗಮ ಮತ್ತು ರಾಜನಿಕ ವ್ಯವಸ್ಥೆ, ಭಾಷಾ ವೈಶಿಷ್ಟ್ಯಗಳ ಅಧ್ಯಯನದ ಮೂಲಕ ಸೆಮೆಟಿಕ್ ಲಿಪಿಗಳ ಸಮೂಹವನ್ನು ಗುರುತಿಸಬೇಕಾಗಿದೆ. ಹಲವಾರು ಲಿಪಿತಜ್ಞರು ಸೆಮೆಟಿಕ್ ಲಿಪಿಯ ಮೂಲವನ್ನು ಬೇರೆ ಬೇರೆ ಮೂಲಗಳಿಂದ ಗುರುತಿಸುವ ಪ್ರಯತ್ನ ಮಾಡಿದ್ದಾರೆ/ಮಾಡುತ್ತಿದ್ದಾರೆ.

ಲಿಪಿಗಳ ಉಗಮಕ್ಕೆ ಸಂಬಂಧಿಸಿದಂತೆ ಇರುವ ಸಾಂಪ್ರದಾಯಿಕವಾದ ಒಂದು ವಾದವೆಂದರೆ, 'ಶಬ್ದಾತ್ಮಕ ಸಂಕೇತಗಳನ್ನು (syllabary) ವಿಶ್ವದ ವಿವಿಧ ಭಾಗಗಳಲ್ಲಿ ಪ್ರತ್ಯೇಕವಾಗಿ ಅಭಿವೃದ್ಧಿಪಡಿಸಲಾಗಿದ್ದರೆ, ವರ್ಣಮಾಲೆಯನ್ನು ಮಾತ್ರ ಒಬ್ಬ ವ್ಯಕ್ತಿ ಪ್ರಜ್ಞಾಪೂರ್ವಕವಾಗಿ ಮತ್ತು ಮುಕ್ತವಾಗಿ ಒಮ್ಮೆ ಮಾತ್ರ ಪರಿಶೋಧಿಸಿದ' ಡಿರಿಂಜರ್‌ರವರು ಸಹ ವರ್ಣಮಾಲೆಯನ್ನು ಒಮ್ಮೆ ಮಾತ್ರ ಪರಿಶೋಧಿಸಲಾಗಿದೆಯೆಂದು ಅಭಿಪ್ರಾಯಪಡುತ್ತಾರೆ.

ಸೆಮೆಟಿಕ್ ಲಿಪಿಯ ಉಗಮದ ಬಗೆಗಿನ ಐತಿಹ್ಯವೊಂದು ಹೀಗಿದೆ: ಹಳೆ ಒಡಂಬಡಿಕೆಯ ಪ್ರಕಾರ 'ಸೆಮೆಟಿಕ್' ಪದವು 'ನೋಹ್' ಎಂಬುವವನ ಮಕ್ಕಳಲ್ಲೊಬ್ಬರಾದ ಷೆಮ್ ಎಂಬುವನಿಂದ ವ್ಯುತ್ಪತ್ತಿಯಾಗಿದೆ. ಒಮ್ಮೆ ಭೀಕರ ಪ್ರವಾಹ ಬಂದಾಗ ನೋಹ್ ಮತ್ತವನ ಕುಟುಂಬ ವಲಸೆ ಹೋಗಿ ಪ್ರಪಂಚದ ಬೇರೆ ಬೇರೆ ಕಡೆ ನೆಲೆಸುತ್ತಾನೆ. ಆತನ ಮಗ ಷೆಮ್ ಈಜಿಪ್ಟ್‌ನ ಕಡೆ ಬಂದು ನೆಲೆಸುತ್ತಾರೆ. ಅವನ ಸಂತತಿಯವರನ್ನು ಷೆಮೈಟರು ಅಥವಾ ಸೆಮೈಟರೆಂದು ಕರೆಯುತ್ತಾರೆ. ಅವರು ಶೋಧಿಸಿದ ಲಿಪಿಗೆ ಸೆಮೆಟಿಕ್ ಲಿಪಿ ಎಂದು ಹೆಸರಾಯಿತು.

ಈ ಐತಿಹ್ಯಗಳನ್ನು ಕೆಲವು ವಿದ್ವಾಂಸರು ಅಲ್ಲಗಳೆದು ಲೆವೆಂಟ್‌ನಲ್ಲಿದ್ದ ಮತ್ತು ಒಂದೇ ಭಾಷೆಯನ್ನಾಡುತ್ತಿದ್ದ ಜನರನ್ನು ಸೆಮೈಟರೆನ್ನುತ್ತಾರೆಂದು ಅಭಿಪ್ರಾಯಪಡುತ್ತಾರೆ. ಗ್ರೀಕ್ ಮತ್ತು ರೋಮನ್ನರ ಪ್ರಕಾರ ಐದು ಬೇರೆ ಬೇರೆ ಪಂಗಡಗಳು ಎಂದರೆ ಫೊನೇಷಿಯನ್ನರು, ಈಜಿಪ್ಟರು, ಅಸ್ಸೀರಿಯನ್ನರು, ಕ್ರೀಟರು ಮತ್ತು ಹಿಬ್ರೂ ಜನಾಂಗದವರು ಲಿಪಿಯನ್ನು ಶೋಧಿಸಿದರು. ಪ್ರಾಚೀನ ಲಿಪಿ ಪರಂಪರೆಯ ಪ್ರಕಾರ, ಸಮುದ್ರ ವ್ಯಾಪಾರಿಗಳಾಗಿದ್ದ ಫೊನೇಷಿಯನ್ನರು ಮೂಲತಃ ಬರವಣಿಗೆಯ ಜ್ಞಾನವನ್ನು ಹೊಂದಿದ್ದರು. ಸಮುದ್ರ ಮಾರ್ಗದ ಮೂಲಕ ಸೆಮೆಟಿಕ್ ಲಿಪಿಯನ್ನು ಗ್ರೀಕ್‌ಗೆ ಒಯ್ಯುತ್ತಾರೆ. ಆದರೆ ಟೈರಿಯನ್ ಇತಿಹಾಸಕಾರರಾದ ಸ್ಯಾಂಚುನಿಯಥಾನ್ (Sanchuniathon) ಪ್ರಕಾರ ಫೊನೇಷಿಯನ್ನರು ತಾವು ಲಿಪಿ ಶೋಧಕರೆಂದು ಎಲ್ಲೂ ಹೇಳಿಕೊಂಡಿಲ್ಲ. ಬದಲಾಗಿ ತಾವು ಈಜಿಪ್ಟ್‌ನಿಂದ ಕ್ಯಾಡ್ಮಿಯನ್ ಎಂಬ ವ್ಯಕ್ತಿಯಿಂದ ಲಿಪಿಯನ್ನು ಪಡೆದುಕೊಂಡುದಾಗಿ ಹೇಳಿಕೊಂಡಿದ್ದಾರೆ. ಪ್ಲೇಟೋ, ಡಿಯೋಡರಸ್, ಸಿಬುಲ್‌ಪ್ಲುಟಾರ್ಚ್, ಅಲುಸ್‌ಜೀಲಿಯಸ್ ಮತ್ತು ಟೆಸಿಟಸ್ ಮುಂತಾದ ವಿದ್ವಾಂಸರು ಸಹ ಇದೇ ಹೇಳಿಕೆಯನ್ನು ಎಂದರೆ ಲಿಪಿಯ ಈಜಿಪ್ಟ್ ಮೂಲವನ್ನು ಪುನರುಚ್ಚರಿಸಿದ್ದಾರೆ. ಈಜಿಪ್ಟ್‌ನ ಹಿರಾಗ್ಲಿಫಿಕ್ ಮತ್ತು ಸೆಮೆಟಿಕ್‌ಗಳಿಗೆ ಮಧ್ಯದಲ್ಲಿದ್ದ ಸೆಮೆಟಿಕ್ ಚಿಹ್ನೆಗಳಿಂದ ಅಕ್ಷರಮಾಲೆ ಉಗಮವಾಯಿತೆಂಬುದು ಗಾರ್ಡಿನರ್ ಸೇಥೆಯವರ ಅಭಿಪ್ರಾಯ. ಬೈಬ್ಲಾಸ್ ಎಂದ ಪದದಿಂದ ಬೈಬಲ್ (ಪುಸ್ತಕ) ಎಂಬ ಹೆಸರು ಬಂದಿರುವುದರಿಂದ ಸೆಮೆಟಿಕ್ ಲಿಪಿ ಸಿರಿಯಾದ ಬೈಬ್ಲಾಸ್ ನಗರದಲ್ಲಿ ಹುಟ್ಟಿರಬಹುದೆಂದು ದೋರ್ಮೆ ಅಭಿಪ್ರಾಯಪಡುತ್ತಾರೆ.

ಫ್ರೆಂಚ್ ಈಜಿಪ್ಟಾಲಜಿಸ್ಟರಾದ ಇಮ್ಯಾನ್ಯುಯಲ್ ಡಿ. ರೋಗ್ (Emmanual De Rouge)ರವರು ಈಜಿಪ್ಟ್ ಲಿಪಿಯ ಮೂಲ ನೆಲೆಯೆಂದು ಕ್ರಿ.ಶ. ೧೮೫೯ರಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದರು. ಇದು ಸಾಂಪ್ರದಾಯಿಕ ನಂಬಿಕೆಗೆ ವಿರುದ್ಧವಾದ ನಂಬಿಕೆಯಾಗಿತ್ತು. ನಂಬಿಕೆಯ ಪ್ರಕಾರ ಸು. ಕ್ರಿ.ಪೂ. ೧೭೦೦ರಲ್ಲಿ ಸಿನಾಯ್‌ನ್ ಪಶ್ಚಿಮ ಸೆಮೆಟಿಕ್ ಮಾತನಾಡುವ ಜನರು ಈ ಆಡಳಿತದ ಅವಧಿಯಲ್ಲಿ ಗುಲಾಮರಾಗಿದ್ದರು. ಅವರು ಈಜಿಪ್ಟ್‌ನ ಹಿರಾಗ್ಲಿಫ್ ಸಂಕೇತವನ್ನು ನೋಡಿ ಪ್ರಭಾವಿತರಾಗಿ ಸೀಮಿತ ಸಂಖ್ಯೆಯ ಹಿರಾಗ್ಲಿಫ್ ಸಂಕೇತಗಳನ್ನು ಸ್ವೀಕರಿಸಿ ತಮ್ಮ ಭಾಷಾ ಶಬ್ದಗಳಿಗೆ ಸಮಂಜಸವಾಗುವಂತೆ ಅಳವಡಿಸಿಕೊಂಡರೆಂಬುದು ಈವರೆಗಿನ ವಾದವಾಗಿತ್ತು. ಕ್ರಿ.ಶ. ೧೯೦೫ರಲ್ಲಿ ಸಿನಾಯ್‌ನಲ್ಲಿ ಹಾಗೂ ೧೯೨೯ರಲ್ಲಿ ಸಿರಿಯಾದ ಉಗ್ರೈಟ್‌ನಲ್ಲಿ ದೊರೆತ ಪ್ರಾಚೀನ ಶಾಸನಗಳ ಆಧಾರದ ಮೇಲೆ ಮೊಟ್ಟಮೊದಲ ಲಿಪಿ ಕ್ರಿ.ಪೂ. ೧೭೦೦-೧೫೦೦ರ ನಡುವೆ ಪ್ಯಾಲಸ್ತೈನ್ ಮತ್ತು ಸಿರಿಯಾದಲ್ಲಿ ಅಭಿವೃದ್ಧಿಪಡಿಸಲಾಗಿದೆಯೆಂದು ನಂಬಲಾಗಿತ್ತು. ಗೋರ್ಡಾನ್ ಜೆ. ಹ್ಯಾಮಿಲ್ಟನ್‌ರವರು ಮಧ್ಯೆ ಈಜಿಪ್ಟ್‌ನ ಗೋಡೆ ಬರಹಗಳಲ್ಲಿನ ಸೆಮೆಟಿಕ್ ಭಾಷೆಯ ಅತ್ಯಂತ ಪ್ರಾಚೀನ ಶಾಸನಗಳನ್ನಾಧರಿಸಿ ಲಿಪಿಯನ್ನು ಬಹುಶಃ ಕ್ರಿ.ಪೂ. ೧೮೦೦ರಲ್ಲಿ ಈಜಿಪ್ಟ್‌ನಲ್ಲಿ ಶೋಧಿಸಿರುವ ಸಂಭವವಿದೆಯೆಂದು ಅಭಿಪ್ರಾಯಪಡುತ್ತಾರೆ[೨].

ಆದರೆ ಪರಿಪೂರ್ಣ ಸೆಮೆಟಿಕ್ ಲಿಪಿಯೆಂದು ಕರೆಯಲ್ಪಡುವ ಲಿಪಿ ಕ್ರಿ.ಪೂ.ಸು.೨೦೦೦ರಲ್ಲಿ ಈಜಿಪ್ಟ್‌ನಲ್ಲಿದ್ದ ಸೆಮೆಟಿಕ್ ಜನರ ಭಾಷೆಯನ್ನು ಅಭಿವ್ಯಕ್ತಪಡಿಸಲು ಬಳಸಲಾಗಿತ್ತು. ಯಾಲೆ ವಿಶ್ವವಿದ್ಯಾಲಯದ ಡಾ. ಜಾನ್ ಕೋಲ್‌ಮನ್ ಡರ್ನೆಲ್‌ರವರು (Dr. Jhon Colemen Dernell) ಕ್ರಿ.ಶ.೧೯೯೩ರಲ್ಲಿ ದಕ್ಷಿಣ ಈಜಿಪ್ಟ್‌ನ ನೈಲ್ ನದಿ ಕಣಿವೆಯಲ್ಲಿ ಪ್ರಾಚೀನ ಪ್ರವಾಸಿ ಮಾರ್ಗಗಳ ಸಮೀಕ್ಷೆಯಲ್ಲಿ ತೊಡಗಿದ್ದಾಗ ವಾಡಿ-ಎಲ್-ಹೋಲ್ (Wadi-el-holi) ಎಂಬ ಸ್ಥಳದಲ್ಲಿ ಬಂಡೆಶಾಸನವನ್ನು ಪತ್ತೆ ಹಚ್ಚಿದರು. ಇವರ ಈ ಶೋಧನೆ ನಾಗರಿಕತೆಯ ಅತಿಮುಖ್ಯ ಸಂಶೋಧನೆಯಾದ ಲಿಪಿಯ ಮೂಲನೆಲೆ ಮತ್ತು ಕಾಲವನ್ನು ನಿಗದಿಪಡಿಸುವಲ್ಲಿ ಹೆಚ್ಚು ಸಹಾಯಕವಾಗಿತ್ತು. ಲಿಪಿಯ ಉಗಮದ ಕಾಲ/ನೆಲೆಯ ಬಗ್ಗೆ ಈವರೆಗಿದ್ದ ಎಲ್ಲ ಪ್ರಶ್ನೆ/ವಾದಗಳಿಗೆಲ್ಲಾ ಡರ್ನಲ್‌ರವರು ಈ ಶೋಧನೆಯ ಮೂಲಕ ಉತ್ತರಿಸಿದರು. ಅವರು, ಈ ಶಾಸನದ ಲಿಪಿಗಳು ಈಜಿಪ್ಟ್ ಪ್ರಭಾವವನ್ನು ಹೊಂದಿರುವ ಸೆಮೆಟಿಕ್ ಲಿಪಿಯಾಗಿದ್ದು ಕ್ರಿ.ಪೂ. ೧೯೦೦ರಿಂದ ೧೮೦೦ರ ಅವಧಿಯಲ್ಲಿ ಸೆಮೆಟಿಕ್ ಜನು ಅವರ ಪ್ರಕಾರ ಈಜಿಪ್ಟ್ ಲಿಪಿಕಾರರು ಮತ್ತು ಆ ಸಮಯದಲ್ಲಿ ಈಜಿಪ್ಟ್‌ನಲ್ಲಿದ್ದ ಸೆಮೆಟಿಕ್ ವ್ಯಾಪಾರಿಗಳ ನಡುವಿನ ಸಂಯುಕ್ತ ಪ್ರಯತ್ನದ ಫಲವಾಗಿ ಈಜಿಪ್ಟ್‌ನ ಪ್ರಭಾವ ಹೊಂದಿರುವ ಸೆಮೆಟಿಕ್ ಲಿಪಿ ಕ್ರಿ.ಪೂ. ೧೯೦೦-೧೮೦೦ರಲ್ಲಿ ಶೋಧವಾಗಿರುವ ಸಾಧ್ಯತೆಯಿದೆ. ಈಜಿಪ್ಟ್‌ನ ಹಿರಾಗ್ಲಿಫ್ ಚಿತ್ರಲಿಪಿಯನ್ನು ವರ್ಣಮಾಲೆಗೆ ಸರಿಹೊಂದುವಂತೆ ಸರಳೀಕರಿಸುವ ಸಲುವಾಗಿ ಸೆಮೆಟಿಕ್ ಭಾಷೆಯ ವ್ಯಂಜನ ಶಬ್ದಗಳನ್ನು ಸೂಚಿಸುವ ೨೨ ಬೇರೆ ಬೇರೆ ಸಂಕೇತಗಳನ್ನು ಸೃಷ್ಟಿಸಿದರು. ಇವು ಅತ್ಯಂತ ಹಳೆಯ ವರ್ಣಮಾಲೆಯಾಗಿದ್ದು ಈವರೆಗೆ ಭಾವಿಸಿದ್ದಕ್ಕಿಂತ ತುಂಬಾ ಹಳೆಯದಾಗಿವೆ ಎಂದು ಅಭಿಪ್ರಾಯಪಡುತ್ತಾರೆ.

ಸೆಮೆಟಿಕ್ ಲಿಪಿಯ ಪ್ರಾರಂಭಿಕ ಲಕ್ಷಣಗಳನ್ನು ನಾವು ಉತ್ತರ ಸೆಮೆಟಿಕ್ ಲಿಪಿಯಲ್ಲಿ ಕಾಣಬಹುದು. ಉತ್ತರ ಸೆಮೆಟಿಕ್ ಲಿಪಿಯೇ ಲಿಪಿಯ, ಅಂತೆಯೇ ಸೆಮೆಟಿಕ್ ಲಿಪಿಯ ಅತ್ಯಂತ ಪ್ರಾಚೀನ ರೂಪವಾಗಿದೆ. ವಿದ್ವಾಂಸರು ಉತ್ತರ ಸೆಮೆಟಿಕ್‌ಗೆ ಈಜಿಪ್ಟ್‌ನ ಹಿರಾಗ್ಲಿಫ್ಸ್ ಮೂಲವೆಂದು ಹೇಳಿ ಈಜಿಪ್ಟ್‌ನ ಹೈಗ್ಲಿಫ್ಸ್ ಮತ್ತು ಆದಿ ಸೆಮಟಿಕ್ ರಚನೆಗಳ ನಡುವೆ ಸಂಬಂಧ ಕಲ್ಪಿಸುವ ಪ್ರಯತ್ನ ಮಾಡಿದ್ದಾರೆ/ಮಾಡುತ್ತಿದ್ದಾರೆ. ಜಿಯೋಫ್ರೆ ಡ್ರೈವರ್‌ರವರು (Geoffery Driver) ಉತ್ತರ ಸೆಮೆಟಿಕ್ ಲಿಪಿಗೆ ಈಜಿಪ್ಟ್ ಲಿಪಿಯೇ ಮೂಲವೆಂದು ಅಭಿಪ್ರಾಯಪಡುತ್ತಾರೆ[೬]. ಅವರ ಪ್ರಕಾರ "ಈ ಪ್ರಕ್ರಿಯೆಯನ್ನು ಮೊದಲು ಯಾರು ಕೈಗೆತ್ತಿಕೊಂಡರೆಂಬ ವಿಷಯ ಅಜ್ಞಾತವಾಗಿ ಉಳಿದಿದೆ ಮತ್ತು ಹಾಗೆಯೇ ಉಳಿಯಲೂಬಹುದು; ಸು.ಕ್ರಿ.ಪೂ.೨೫೦೦-೧೫೦೦ರ ಅವಧಿಯಲ್ಲಿ ಈಜಿಪ್ಟರ ಸಂಪರ್ಕಕ್ಕೆ ಬಂದ ಸೆಮೆಟಿಕ್ ಜನರ ಪೈಕಿ ಒಬ್ಬ ಅಥವಾ ಇತರ ವ್ಯಕ್ತಿಗಳ ಪೈಕಿಯಿಂದ ಲಿಪಿಶೋಧಕ ಅಥವಾ ಲಿಪಿಶೋಧಕರು ಉದ್ಭವಿಸಿದ್ದಾರೆ/ಬಂದಿದ್ದಾರೆ ಎಂಬುದು ಸರ್ವವಿದಿತ ಮಾತಾಗಿದೆ".

ರಾಚನಿಕವಾಗಿ ಸೆಮೆಟಿಕ್ ಲಿಪಿಗೂ ಈಜಿಪ್ಟ್ ಹಿರಾಗ್ಲಿಫ್ ಚಿಹ್ನೆಗಳಿಗೂ ಹೆಚ್ಚು ಸಾಮ್ಯತೆಯಿದೆ. ಹಿರಾಗ್ಲಿಫ್‌ನಿಂದ ಸ್ವೀಕರಿಸಿದ ಮೀನಿನ ಚಿಹ್ನೆ ಬಾಗಿಲಿನ (door) ಸಂಕೇತವಾಗಿದೆ. ಕಾಲಾನಂತರ ಮೀನಿನ ಬಾಲದ ಭಾಗ ಮಾತ್ರ ಉಳಿದುಕೊಂಡು ಬಂದು ಸೆಮೆಟಿಕ್ ಭಾಷೆಯಲ್ಲಿ deleth ಆಗಿ ೪ನೇ ಅಕ್ಷರವಾಯಿತು. ಡೇವಿಡ್ ಡಿರಿಂಜರ್‌ರವರು ಸಹ ವಾಯುವ್ಯ ಭಾಗದಲ್ಲಿದ್ದ ಸೆಮೆಟಿಕ ಲಿಪಿಯ ಶೋಧಕರಾದ ಕನಾನೈಟ್, ಹೀಬ್ರೂ, ಪೊನೆಷಿಯನ್ನರು ಈಜಿಪ್ಟ್ ಲಿಪಿಯಿಂದ ಪ್ರಭಾವಿತರಾಗಿದ್ದರೆಂದು ಅಭಿಪ್ರಾಯಪಡುತ್ತಾರೆ. ಅಲ್ಲದೆ, ಅವರಿಗೆ (ಲಿಪಿ ಶೋಧಕರಿಗೆ) ಪೂರ್ವ ಮೆಡಿಟರೇನಿಯನ್‌ನಲ್ಲಿದ್ದ ಹಲವಾರು ಲಿಪಿಗಳು (ವರ್ಣಮಾಲೆ) ಗೊತ್ತಿದ್ದವೆಂದು ಅಭಿಪ್ರಾಯಪಡುತ್ತಾರೆ. ಮುಂದುವರೆಸುತ್ತಾ ಮೂಲ ಅಕ್ಷರಗಳು ಸಾಂಪ್ರದಾಯಿಕ ಸಂಕೇತಗಳಾಗಿವೆಯೇ ವಿನಾಃ ಭಾವಲಿಪಿಯಂತೆ ಬಳಸಲಾದ ಚಿತ್ರಗಳಲ್ಲವೆಂದು ಹೇಳುತ್ತಾರೆ[೭].

ಒಟ್ಟಾರೆಯಾಗಿ ಬಹುತೇಕ ವಿದ್ವಾಂಸರು ಸೆಮೆಟಿಕ್ ಲಿಪಿಯ ಮೂಲನೆಲೆ ಈಜಿಪ್ಟ್ ಎಂದೂ, ಅದು ಈಜಿಪ್ಟ್‌ನ ಹಿರಾಗ್ಲಿಫ್ ಲಿಪಿಯಿಂದ ಪ್ರೇರಿತವಾಗಿ ಕ್ರಿ.ಪೂ.೨೫೦೦ರಿಂದ ೨೦೦೦ದ ಅವಧಿಯಲ್ಲಿ ಉದಯಿಸಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಡಿ.ರೋಗ್ (De Rouge) ಪ್ರಕಾರ ೨೨ ಸೆಮೆಟಿಕ್ ಅಕ್ಷರಗಳಲ್ಲಿ ೧೫ ಅಕ್ಷರಗಳು ನಿಸ್ಸಂಶಯವಾಗಿ ಈಜಿಪ್ಟ್ ಮಾದರಿಗಳಿಂದ ನೇರವಾಗಿ ರೂಪುಗೊಂಡಿವೆ[೮].

ಸೆಮೆಟಿಕ್ ಲಿಪಿಯ ಅನ್ವೇಷಕರು ತಮ್ಮ ಲಿಪಿಯ ಶೇ.೯೦ರಷ್ಟು ಶಬ್ದಗಳನ್ನು ಹಾಗು ೯೦ ರಷ್ಟು ಆಕೃತಿಗಳನ್ನು ಈಜಿಪ್ಟ್‌ನಿಂದ ಎರವಲು ಪಡೆದಿದ್ದಾರೆ. ಈಜಿಪ್ಟ್ ಲಿಪಿ ಮತ್ತು ಸೆಮೆಟಿಕ್ ಲಿಪಿಗಳ ಆಕೃತಿ ಮತ್ತು ಶಬ್ದ ಸಂಯೋಜನೆ ಏಕಪ್ರಕಾರವಾಗಿದೆ. ಅವರು ತಮ್ಮ ಭಾಷೆಗಾಗಿ ೨೨ ಹಿರಾಗ್ಲಿಫ್ ಚಿಹ್ನೆಗಳನ್ನು ಲಿಪಿಯಾಗಿ ಅಳವಡಿಸಿಕೊಂಡರು. ಈ ವೇಳೆಗಾಗಲೇ ಹಿರಾಗ್ಲಿಫ್ ಲಿಪಿ ಪದ ಚಿಹ್ನೆಗೆ ಪ್ರತಿಯಾಗಿ ಧ್ವನ್ಯಾತ್ಮಕ ಸಂಕೇತಗಳನ್ನು ಅಳವಡಿಸಿಕೊಂಡಿತ್ತು. ಆದರೆ ಸೆಮೆಟಿಯನ್ನರು ಧ್ವನ್ಯಾತ್ಮಕ ಸಂಕೇತಗಳನ್ನು ಆಯ್ಕೆ ಮಾಡಿಕೊಳ್ಳದೆ ಚಿತ್ರ ಲಿಪಿಯನ್ನೇ ಆಯ್ಕೆ ಮಾಡಿಕೊಂಡರು ಎಂದರೆ, ಸೆಮೆಟಿಯನ್ನರು ಅಕ್ಷರಗಳ ಆಕೃತಿಯ ಜೊತೆಗೆ ಈಜಿಪ್ಟ್ ಲಿಪಿಯಿಂದ 'ಶಬ್ದಪ್ರಥಮಾ'ಕ್ಷರ, ಸ್ವೀಕಾರ (acrophonic principle) ತತ್ತ್ವವನ್ನು ಅಳವಡಿಸಿಕೊಂಡರು. ಈ ಪ್ರಕ್ರಿಯೆಯಲ್ಲಿ ಅಕ್ಷರದ ಶಬ್ದವು ಮೂಲ ಚಿತ್ರಲಿಪಿಯ ಮೂಲಕ ಸೂಚಿತವಾದ ಉಚ್ಚಾರಿತ ಪದದ ಮೊದಲ ಶಬ್ದವಾಗಿದೆ. ಎಂದರೆ ಆ ವಸ್ತುವಿನ ಉಚ್ಚಾರಣೆಯ ಶಬ್ದದ ಮೊದಲ ವ್ಯಂಜನ ಆ ಸಂಕೇತವು ಪ್ರತಿನಿಧಿಸುವ ಶಬ್ದವಾಗುತ್ತದೆ. ಹೀಗಾಗಿ ಸಿಂಹವನ್ನು ಸೂಚಿಸುವ ಚಿತ್ರಕ್ಕೆ ಉಚ್ಚಾರಿತ ಪದ ಲಾಬೋ (Lobo). ಕಾಲಕ್ರಮೇಣ ಆ ಪದದ ಮೊದಲ ಶಬ್ದ 'l' ಬಳಸಲಾರಂಭಿಸಿದರು. ಹಾಗೆಯೇ ಗೂಬೆಗೆ 'mulag' ಪದವಿರುವುದರಿಂದ ಆ ಚಿತ್ರದ ಪ್ರಾರಂಭದ 'm' ಅಕ್ಷರ ಧ್ವನಿತವಾಗುತ್ತದೆ. ಬಾಯಿಯ ಚಿತ್ರಕ್ಕೆ 'ro' ಪದವಿದ್ದು, ಅದು 'r' ಅಕ್ಷರದಿಂದ ಪ್ರಾರಂಭವಾಗುತ್ತದೆ. ಎಲ್ಲ ಅಕ್ಷರಗಳಿಗೂ ಇದೇ ನಿಯಮ ಅನ್ವಯವಾಗುತ್ತದೆ. ಡಾ. ಡೇವಿಡ್ ಡಿರೆಂಜರ್‌ರವರು ಹೇಳುವಂತೆ "ವರ್ಣಮಾಲೆ ಸೃಜನೆಯಲ್ಲಿನ ಅತಿ ಮುಖ್ಯ ಸಾಧನೆಯೆಂದರೆ ಸಂಕೇತಗಳ ಶೋಧನೆಯಾಗಿರದೆ ಅವುಗಳಲ್ಲಿ ಅಂತರ್ಗತವಾಗಿರುವ ತತ್ತ್ವ. ಎಂದರೆ ಪ್ರತಿಯೊಂದು ಶಬ್ದವನ್ನೂ ಒಂದು ಸಂಕೇತದ ಮೂಲಕ ಸೂಚಿಸಲಾಗುತ್ತದೆ. ಹಾಗೆಯೇ ಪ್ರತಿಯೊಂದು ಸಂಕೇತವೂ ಸಾಮಾನ್ಯವಾಗಿ ಒಂದು ಶಬ್ದವನ್ನು ಧ್ವನಿಸುತ್ತದೆ"[೬].

ಅಕ್ಷರಗಳ ರಾಚನಿಕ ಸ್ವರೂಪದ ಆಯ್ಕೆ ಮತ್ತು ಆ ಅಕ್ಷರಗಳನ್ನು ಪ್ರತಿನಿಧಿಸುವ ವಿಶಿಷ್ಟ ಶಬ್ದಗಳ ಸೀಮಿತ ಸಂಖ್ಯೆ ಸೆಮೆಟಿಕ್ ಲಿಪಿ ವಿಶ್ವವ್ಯಾಪಿಯಾಗಿ ಹರಡಲು ಕಾರಣವಾಯಿತು. ಅಕ್ಷರಗಳ ಹೆಸರು, ಆ ಅಕ್ಷರಗಳ ಸ್ವರೂಪ ಮತ್ತು ಹೆಸರುಗಳ ನಡುವಿನ ಸಂಬಂಧ, ಅವುಗಳ ಅನುಕ್ರಮಣಿಕೆ, ಬೇರೆ ಬೇರೆ ಸ್ಥಳ_ಸಂಸ್ಕೃತಿಗಳಲ್ಲಿ ಅಕ್ಷರಗಳ ಸ್ವರೂಪದಲ್ಲಾದ ವಿಭಿನ್ನತೆಯ ಬಗೆಗೂ ಸಹ ವಿದ್ವಾಂಸರು ಚರ್ಚಿಸಿದ್ದಾರೆ. ಡ್ರೈವರ್‌ರವರು ಹೆಸರುಗಳು ಮೊದಲು ಬಂದಿರಬಹುದೆಂದು ಅಭಿಪ್ರಾಯಪಡುತ್ತಾರೆ. ಅವರ ಪ್ರಕಾರ ಸಂಕೇತಗಳು ಹೆಸರುಗಳಿಗಿಂತ ಮೊದಲು ಬಂದ್ದಿದ್ದರೆ, ಅಕ್ಷರಗಳು ಯಾವುದೇ ನಿರ್ದಿಷ್ಟ ನಮೂನೆಯಲ್ಲೇ ಏಕಿರಬೇಕು ಎಂಬುದಕ್ಕೆ ಯಾವುದೇ ಆಧಾರಗಳಿಲ್ಲ. ಹಾಗಾಗಿ ಅವುಗಳ ರಚನೆ ಅಥವಾ ಸ್ವರೂಪ ಅವುಗಳ ಹೆಸರುಗಳನ್ನಾಧರಿಸಿವೆ. ಅಕ್ಷರಗಳಿಗೆ ಅವುಗಳ ಹೆಸರು ಲಿಪಿ ವ್ಯವಸ್ಥೆಯ ಶೈಶಾವಸ್ಥೆಯಲ್ಲೇ ಬಂದಿರಬಹುದೆಂದು ಪರಿಗಣಿಸಬೇಕು. ಅಕ್ಷರಗಳ ಅನುಕ್ರಮಣಿಕೆಯನ್ನು ನಿರ್ಧರಿಸುವ ಸಂಗತಿಗಳ ಬಗ್ಗೆ ಡ್ರೈವರ್‌ರವರು ಸೆಮೆಟಿಕ್ ಅಕ್ಷರಗಳು ಸುಮೇರಿಯಾದ ಸಂಗೀತ ಸ್ವರಶ್ರೇಣಿಯ ಸಂಕೇತಗಳನ್ನಾಧರಿಸಿವೆಯೆಂದು ಹೇಳುತ್ತಾರೆ[೭]. ಆದರೆ ಡಾ. ಡೇವಿಡ್ ಡಿರೆಂಜರ್‌ರವರು ಅಕ್ಷರಗಳ ಅನುಕ್ರಮಣಿಕೆ ಮತ್ತು ಹೆಸರುಗಳು ಆಕಸ್ಮಿಕವಾಗಿ ಬಂದಿರಬಹುದು. ಆದ್ದರಿಂದ ಈ ವಿಷಯಕ್ಕೆ ಮಹತ್ವ ನೀಡಬೇಕಾಗಿಲ್ಲವೆಂದು ಅಭಿಪ್ರಾಯಪಡುತ್ತಾರೆ[೮].

ಸೆಮೆಟಿಕ್ ಲಿಪಿ ಈಜಿಪ್ಟ್‌ನಲ್ಲಿ ಪ್ರಚಲಿತದಲ್ಲಿದ್ದ ವ್ಯಂಜನ ಚಿಹ್ನೆಗಳಿಗೆ ಕಟ್ಟುಬೀಳದೆ ಸುಮಾರು ೨೨ರಷ್ಟು ಇತರ ಈಜಿಪ್ಟ್ ಚಿತ್ರಲಿಪಿಗಳನ್ನು ತಮ್ಮ ಲಿಪಿಗೆ ಅಳವಡಿಸಿಕೊಂಡರು. ಅವುಗಳಿಗಿದ್ದ ಈಜಿಪ್ಟ್ ಹೆಸರುಗಳನ್ನು ಕೈಬಿಟ್ಟು ತಮ್ಮ ಭಾಷೆಯ ಹೆಸರುಗಳನ್ನು ಇಟ್ಟುಕೊಂಡರು. ಹಿರಾಗ್ಲಿಫ್‌ನ 'per'ಗೆ ಈಜಿಪ್ಟ್ ಭಾಷೆಯಲ್ಲಿ 'ಮನೆ' ಎಂದು ಅರ್ಥವಿತ್ತು. ಸೆಮೆಟಿಯನ್ನರಿಗೆ ಆ ಪದ ಅಪರಿಚಿತವಾದುದರಿಂದ 'per' ಸಂಕೇತವನ್ನು ಮಾತ್ರ ಸ್ವೀಕರಿಸಿ ಅದಕ್ಕೆ ತಮ್ಮ ಭಾಷೆಯ bayt ಎಂಬ ಹೆಸರನ್ನು ಇಟ್ಟರು. ಸೆಮೆಟಿಕ್ ಭಾಷೆಯಲ್ಲಿ 'bayt' ಎಂದರೆ ಮನೆ ಎಂದರ್ಥ.

ಉತ್ತರ ಸೆಮೆಟಿಕ್‌ನಲ್ಲಿ ಮೂಲತಃ ಸ್ವರಗಳಿಲ್ಲ ಅಲ್ಲಿರುವ ೩೩ ಅಕ್ಷರಗಳೂ ವ್ಯಂಜನಾಕ್ಷರಗಳೇ ಆಗಿವೆ. ಈ ಹಿರಾಗ್ಲಿಫ್‌ಗಳು ವ್ಯಂಜನಗಳನ್ನು ಮಾತ್ರ ಸೂಚಿಸುತ್ತಿದ್ದುದರಿಂದ ಸೆಮೆಟಿಯನ್ನರು ಸಹ ಅದೇ ಪ್ರಕಾರವನ್ನೇ ಅಳವಡಿಸಿಕೊಂಡರು. ಹೀಗಾಗಿ ಸೆಮೆಟಿಕ್ ಲಿಪಿ ಸರಳೀಕೃತ ಶಬ್ದಾತ್ಮಕ ಸಂಕೇತಗಳನ್ನು ಹೊಂದಿದ್ದು, ಪ್ರತಿಯೊಂದು ಸಂಕೇತವೂ ವ್ಯಂಜನ ಮತ್ತು ಸ್ವರಗಳನ್ನು ಧ್ವನಿಸುತ್ತದೆ. ಗ್ರೀಕರು ಪ್ರತ್ಯೇಕ ಸ್ವರಚಿಹ್ನೆಗಳನ್ನು ಅಭಿವೃದ್ಧಿಪಡಿಸಿ ಬಳಸುವವರೆಗೂ ಇದೇ ಮಾದರಿ ಮುಂದುವರೆಯುತ್ತದೆ.

ಪ್ರಾರಂಭದಲ್ಲಿ ಸೆಮೆಟಿಕ್ ಭಾಷೆಯನ್ನು ಬಲಭಾಗದಿಂದ ಎಡಭಾಗಕ್ಕೆ ಬರೆಯಲಾಗುತ್ತಿತ್ತು. ಈ ಕ್ರಮ ಅದರಿಂದ ಅಭಿವೃದ್ಧಿ ಹೊಂದಿ ಪೊನೆಷಿಯಾ, ಅರಮೆಯಿಕ್, ಹೀಬ್ರೂ, ಇಥಿಯೋಪಿಯಾ, ಅರೇಬಿಯಾ ಸೇರಿದಂತೆ ಅದರಿಂದ ಟಿಸಿಲೊಡೆದ ಎಲ್ಲ ಲಿಪಿಗಳಲ್ಲೂ ಸಹ ಮುಂದುವರೆಯಿತು. ಕ್ರಿಪೂ. ೭೦೦ರ ವೇಳೆಗೆ ಈ ಪ್ರಕ್ರಿಯೆ ಬದಲಾವಣೆ ಹೊಂದಿ ಎಡದಿಂದ ಬಲಕ್ಕೆ ಬರೆಯುವ ಪದ್ಧತಿ ಪ್ರಾರಂಭವಾಯಿತು. ಆದರೆ ದಕ್ಷಿಣ ಸೆಮೆಟಿಕ್ ಲಿಪಿಯಿಂದ ಅಭಿವೃದ್ಧಿ ಹೊಂದಿದ ಅರಾಬಿಕ್, ಇಥಿಯೋಪಿಯಾ ಭಾಷೆಯಲ್ಲಿ ಈ ರೀತಿಯ ಬರವಣಿಗೆಯ ಪಿಧಾನ ಹಾಗೆಯೇ ಮುಂದುವರೆದುಕೊಂಡು ಬಂದಿದೆ.

ಹೀಗೆ ಈಜಿಪ್ಟ್‌ನಲ್ಲಿದ್ದ ನೂರಾರು ಹಿರಾಗ್ಲಿಫ್‌ಗಳಲ್ಲಿ ಸೆಮೆಟಿಯನ್ನರು ತಮ್ಮ ಭಾಷೆಯಲ್ಲಿರುವ ಧ್ವನಿಗೆ ಅನುರೂಪವಾಗುವಂಥ ೨೨ ಹಿರಾಗ್ಲಿಫ್‌ಗಳನ್ನು ಮಾತ್ರ ಸ್ವೀಕರಿಸಿ ಒಂದು ವ್ಯವಸ್ಥಿತ ವರ್ಣಮಾಲೆಗೆ ನಾಂದಿ ಹಾಡಿದರು. ಅದು ಉತ್ತರ ಸೆಮೆಟಿಕ್ ಲಿಪಿಯೆನಿಸಿಕೊಂಡಿತು. ಸೆಮೆಟಿಕ್ ಲಿಪಿಯಿಂದ ಕನಾನ್ಯೆಟ್, ಪೊನೆಷಿಯಾ. ಹಿಬ್ರೂ, ಅರೇಮಿಯಾ ಮತ್ತು ದಕ್ಷಿಣ ಸೆಮೆಟಿಕ್ ಲಿಪಿಗಳಾದ ದಕ್ಷಿಣ ಅರೇಬಿಯ ಮತ್ತು ಇಥಿಯೋಪಿಯ ಲಿಪಿಗಳು ಜನ್ಮತಾಳಿದವು. ದಕ್ಷಿಣ ಸೆಮೆಟಿಕ್ ಲಿಪಿಯ ಉಗಮದ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಗ್ರಿಮ್ಮ್, ಮೂರೈಸ್ ದುಸಂದ್, ಸೇಥೆ, ಆಲ್‌ಬ್ರೈಟ್ ಮುಂತಾದವರು ಬೇರೆ ಬೇರೆ ಮೂಲಗಳ ಬಗ್ಗೆ ವಾದಗಳನ್ನು ಮಂಡಿಸಿದ್ದಾರೆ. ಡೇವಿಡ್ ಡಿರೆಂಜರ್‌ರವರು ದಕ್ಷಿಣ ಸೆಮೆಟಿಕ್ ಲಿಪಿಗಳು ಪ್ರಾಚೀನ ಸೈನಾಟಕ್ ಲಿಪಿಯಿಂದ ನೇರವಾಗಿ ಉದಿಸಿದವುಗಳಾಗಿದೆ ಮತ್ತು ಉತ್ತರ ಸೆಮೆಟಿಕ್ ಲಿಪಿ ಉಗಮವಾದ ಹಲವಾರು ಶತಮಾನಗಳ ತರುವಾಯ ದಕ್ಷಿಣದ ಈ ಲಿಪಿಗಳು ಉಗಮಗೊಂಡಿವೆ. ದಕ್ಷಿಣದ ಬುದ್ಧಿವಂತ ಯಾತ್ರಿಕರು ಲಿಪಿಯ ಬಗ್ಗೆ ಒಂದು ಅಭಿಪ್ರಾಯವುಳ್ಳವರಾಗಿದ್ದರು. ತಮಗೆ ಬೇಕಾದ ಒಂದು ಲಿಪಿಯನ್ನು ರೂಢಿಸಿಕೊಳ್ಳುವಾಗ ಉತ್ತರ ಸೆಮೆಟಿಕ್ ಲಿಪಿಯನ್ನು ಆಧಾರವಾಗಿಟ್ಟುಕೊಂಡಿದ್ದರೆಂದು ಅಭಿಪ್ರಾಯಪಡುತ್ತಾರೆ.

ದಕ್ಷಿಣ ಸೆಮೆಟಿಕ್ ಲಿಪಿಯು ಪ್ರಧಾನವಾಗಿ ದಕ್ಷಿಣ ಅರೇಬಿಯಾ ಮತ್ತು ಇಥಿಯೋಪಿಯಾದಲ್ಲಿ ಕಂಡುಬರುತ್ತದೆ. ನಂತರ ದಕ್ಷಿಣ ಅರೇಬಿಯಾವು ಮೀನಿಯನ್ (Minaean), ಹಿಮ್ಯರಿಟಿಕ್ (Himyaritic), ಸಬಿಯೆನ್ (Sabiean), ಥಮುಡೇನ್ (Thamudene), ಡೆಡಾನೈಟ್ (Dedanite), ಮತ್ತು ಸೆಫೈಟಿಕ್ (Safaitic) ಶಾಖೆಗಳಾಗಿ ವಿಭಜನೆ ಹೊಂದಿತು. ಅವುಗಳಲ್ಲಿ ಅರೇಬಿಯಾ ಲಿಪಿಯು ಇಸ್ಲಾಂ ಧರ್ಮದ ಪ್ರಸರಣದೊಂದಿಗೆ ಅದೂ ವಿಶ್ವಾದ್ಯಂತ ಪ್ರಸಾರಗೊಂಡು ಸಾಲ್ವಾನಿಕ್, ಸ್ಪೆಯಿನ್, ಆಫ್ರಿಕಾ, ಪರ್ಷಿಯಾ, ಟರ್ಕಿ, ಆಫ್ಘನಿಸ್ತಾನ ಹಾಗೂ ಭಾರತದ ಉರ್ದು ಲಿಪಿಗಳಿಗೆ ಜನ್ಮ ನೀಡಿದರೆ, ಇಥಿಯೋಪಿಯಾ ಲಿಪಿಯಿಂದ ಅಮ್‌ಹಾರಿಕೆ, ಟೈಗ್ರೆ, ಟೈಗ್ರಿಯಾನ್ ಮತ್ತು ಆಧುನಿಕ ಇಥಿಯೋಪಿಯಾದ ಇತರ ಲಿಪಿಗಳ ಅಭಿವೃದ್ಧಿ ಹೊಂದಿದವು.

ಉತ್ತರ ಸೆಮೆಟಿಕ್‌ನಿಂದ ಲಿಪಿಯನ್ನು ಅಳವಡಿಸಿಕೊಂಡ ಸಮುದ್ರ ವ್ಯಾಪಾರಿಗಳಾದ ಪೊನೆಷಿಯನ್ನರು ಅದನ್ನು ಪ್ರಪಂಚದ ಹಲವಾರು ಕಡೆಗಳಿಗೆ ಒಯ್ದರು. ಕ್ರಿಪೂ. ೧೦೦೦ದ ವೇಳೆಗೆ ಗ್ರೀಕರು ಪೊನೆಷಿಯನ್ ವ್ಯಾಪಾರಿಗಳ ಸಂಪರ್ಕದಿಂದ ಪೊನೆಷಿಯ ಲಿಪಿ ಕಲಿತರು. ಗ್ರೀಕರು ಹಲವಾರು ಸಂಕೇತಾಕ್ಷರಗಳನ್ನು ಸ್ವೀಕರಿಸಿದರೂ, ಮೂಲ ವ್ಯಂಜನಗಳನ್ನು ಪ್ರತ್ಯೇಕವಾಗಿ ಸ್ವರಗಳಾಗಿ ಬಳಸಿಕೊಳ್ಳುವ ಮೂಲಕ ಪರಿಪೂರ್ಣವಾದ ಲಿಪಿಯನ್ನು ಅಭಿವೃದ್ಧಿಪಡಿಸಿದರು. ಗ್ರೀಕ್ ಶಬ್ದಗಳಿಗೆ ಹೊಸ ಸಂಕೇತಗಳನ್ನು ಸೇರಿಸಿ, ಪೊನೇಷಿಯಾ ಭಾಷೆಯಲ್ಲಿದ್ದ ಶಬ್ದಗಳನ್ನು ಕೈಬಿಟ್ಟರಲ್ಲದೆ, ತಾವು ಬಳಸದ ಶಬ್ದಗಳಿಗೆ ಸಂಕೇತಗಳನ್ನು ಸಹ ಕೈಬಿಟ್ಟರು. ಅಲ್ಲದೆ ಮೊದಲು ಚಿತ್ರಲಿಪಿಯ ಮಾದರಿಯಲ್ಲಿದ್ದ ಅಕ್ಷರಗಳನ್ನು ಸಂಪೂರ್ಣವಾಗಿ ಭಾವರೂಪಿಯಾಗಿ ರೂಪಿಸಿದರು. ೨೨ರಷ್ಟಿದ್ದ ಅಕ್ಷರಗಳನ್ನು ಇವರು ೨೪ ಮಾಡಿದರು. ಅಲೇಫ್, ಬೇತ್ ಮುಂತಾದ ಸೆಮೆಟಿಕ್ ಹೆಸರುಗಳಿಂದ ಕರೆಸಿಕೊಳ್ಳುತ್ತಿದ್ದ ಲಿಪಿಸೂಚಕ ಅಕ್ಷರಗಳನ್ನು ತಮ್ಮ ಭಾಷೆಗೆ ಸರಿಹೊಂದುವಂತೆ ಆಲ್ಫಾ, ಬೀಟಾ, ಗಾಮ ಇತ್ಯಾದಿ ಹೆಸರಿನಲ್ಲಿ ಕರೆದರು. ಈ ಎಲ್ಲ ಬದಲಾವಣೆಗಳು ಗ್ರೀಕ್ ಲಿಪಿ ಹೆಚ್ಚು ಪರಿಪೂರ್ಣ ಮತ್ತು ಕರಾರುವಕ್ಕಾಗಿ ರೂಪುಗೊಳ್ಳಲು ಕಾರಣವಾಯಿತಲ್ಲದೆ, ಬಳಸಲು ಸುಲಭವಾಯಿತು. ಎಟ್ರುಸ್ಕ್ಯಾನ್, ಓಸ್ಕಾನ್, ಸಿರಿಲಿಕ್, ಅಂಬ್ರೈಯನ್ ಮತ್ತು ಲ್ಯಾಟಿನ್ ಲಿಪಿಗಳೆಲ್ಲವೂ ಗ್ರೀಕ್ ಲಿಪಿಯ ಮಾರ್ಪಟುಗೊಂಡ ರೂಪ. ರೋಮನ್ ಎಟ್ರುಸ್ಕ್ಯಾನ್ ಲಿಪಿಯಿಂದ ಅಭಿವೃದ್ಧಿ ಹೊಂದಿತು. ನಂತರ ಇದು ಎಲ್ಲ ಯುರೋಪಿಯನ್ ಲಿಪಿಗಳಿಗೆ ಮೂಲವಾಯಿತು. ಹೀಗೆ ಸೆಮೆಟಿಕ್ ವಿಶ್ವದ ಬಹುತೇಕ ಲಿಪಿಗಳಿಗೆ ಎಂದರೆ, ಪೊನೆಷಿಯಾ, ಅರಮೇಯಿರ್, ಹೀಬ್ರೂ, ಕಾಪ್ಟಿಕ್, ರಷಿಯಾ, ಲ್ಯಾಟಿನ್, ರೋನ್ಸ್, ಗೋಥಿಕ್, ಇಂಗ್ಲಿಷ್, ಮಂಗೋಲ್, ಟಿಬೆಟಿಯನ್, ಕೊರಿಯನ್‌ಗಳಿಗೆ ಮೂಲವಾಗಿದ್ದು **ವಿಶ್ವ ಲಿಪಿಗಳ ಮಹಾತಾಯಿಯಾಗಿದೆ.**



Semitic Gods

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

1. Isaac Taylor: *The Alphabet* (Vol. I, *Semitic Alphabets*), London, 1883.
2. Gordan G Hamilton & W.F. Albright: *Early Alphabetic Writing, Eastern Archealogy 65*, No.1, 2002, p.35.
3. Driver. G.R; *Semitic Writing: From Pictograph to Alphabet*, OUP, London, 1054, p.196.
4. Diringer, D; *The Alphabets: A Key to the History of Mankind*, London, 1976, p.618.
5. William write & William Robertson Smith: *Lectures on the Comparative Grammer of the Semitic Languages*, CUP, 1890, p.37.
6. Diringer, D; *The Alphabets: A Key to the History of Mankind*, London, 1976, page 619.
7. Driver, G.R; *Semitic Writing: From Pictograph to Alphabet*, OUP, London, 1054, p.160.
8. Diringer, D.; *The Alphabets: A Key to the History of Mankind*, London, 1976, p.170.

# ರೊಸೆಟ್ಟಾ ಶಿಲೆ ತೆರೆದ ರಹಸ್ಯ : ಮರೆವಿಗೆ ಸಂದ ಭಾಷೆಯೊಂದು ಬೆಳಕು ಕಂಡ ಕಥೆ

– ಡಾ॥ ಎನ್.ಆರ್. ಲಲಿತಾಂಬ*

ಜಗತ್ತಿನ ನಾಗರಿಕತೆಯ ತೊಟ್ಟಿಲುಗಳಲ್ಲಿ ನೈಲ್ ನದೀ ತೀರವೂ ಒಂದು. ಇಲ್ಲಿನ ಈಜಿಪ್ಟಿಯನ್ನರ ಸಂಸ್ಕೃತಿ, ಚರಿತ್ರೆ ಪ್ರಾಚೀನವಾದದ್ದು. ಅಲ್ಲಿನ ಕಲೆ, ವಾಸ್ತು ಹಾಗೂ ಶಾಸನಗಳಲ್ಲಿ ಆ ಜನರ ಸಾಂಸ್ಕೃತಿಕ ಚರಿತ್ರೆ ನಿಗೂಢವಾಗಿ ಅಡಗಿದೆ. ಅವರ ವಿಶಿಷ್ಟ ಕೊಡುಗೆಗಳಲ್ಲಿ ಲಿಪಿಯೂ ಒಂದು. ತಮ್ಮ ಲಿಪಿಯನ್ನು ಪ್ರಾಚೀನ ಈಜಿಪ್ಟಿಯನ್ನರು ದೇವರ ನುಡಿ (*mdjuetjer*) ಎಂದು ಕರೆಯುತ್ತಿದ್ದರು. ಅಲ್ಲಿನ ಜನಪದದ ಪ್ರಕಾರ ಹೈರೋಗ್ಲೈಫ್‌ಗಳನ್ನು ಅವರಿಗೆ 'ಕರೇಟು'ವೆಂಬ ಪಕ್ಷಿಯ ತಲೆಯುಳ್ಳ ಚಂದ್ರದೇವತೆ ಸೇಥ್ ಅಥವಾ ಥೋಥ್ ದೇವತೆ ನೀಡಿದನು. ಇವನು ಬರಹ ಮತ್ತು ಲಿಪಿಕಾರರ ಅಧಿದೇವತೆ ಎಂಬ ನಂಬಿಕೆಯಿದೆ. ಇವುಗಳನ್ನು ಹೈರೋಗ್ಲೈಫ್ (ಪವಿತ್ರಬರಹ) ಗಳೆಂದು ಗ್ರೀಕರು ಕರೆದರು. ಕ್ರಿ.ಪೂ. ೩೪೦೦ ವರ್ಷಗಳಷ್ಟು ಹಿಂದಿನ ಹೈರೋಗ್ಲೈಫ್‌ಗಳು ದೊರಕಿವೆ. ಕ್ರಿ.ಶ. ೩೯೪ರ ಫಿನಾಲೆಯ ದೇವಾಲಯದ ಹೆಬ್ಬಾಗಿಲಿನ ಶಾಸನ (*the graffito of esmet akhom*) ಅತ್ಯಂತ ಅರ್ವಾಚೀನ ಹೈರೋಗ್ಲೈಫ್ ಬರಹವಾಗಿದೆ.[೧] ಹೈರೋಗ್ಲೈಫ್ ಚಿತ್ರ ಸಂಜ್ಞೆಗಳು ಕೇವಲ ಭಾಷಾಲಿಪಿಗಳಾಗದೆ, ಅವುಗಳ ಸತ್ವವೇ ಆಗಿರುತ್ತದೆಂದು ಅವರು ನಂಬಿದ್ದರು. ಎಲ್ಲಿಯವರೆಗೆ ಅವುಗಳನ್ನು ಓದಲಾಗುತ್ತದೋ ಅಲ್ಲಿಯವರೆಗೆ ಆ ಚಿತ್ರದ ವ್ಯಕ್ತಿ, ಪ್ರಾಣಿ ಅಥವಾ ವಸ್ತುಗಳು ಉಳಿಯುತ್ತವೆ ಎಂದು ಅಲ್ಲಿನ ಜನಪದರು ಭಾವಿಸಿದ್ದರು. ಯಾವುದೇ ವ್ಯಕ್ತಿಯ ಹೈರೋಗ್ಲೈಫ್‌ಗಳನ್ನು ಅಳಿಸಿಹಾಕುವ ಪದ್ಧತಿಯು ಶಾಶ್ವತವಾಗಿ ಆ ವ್ಯಕ್ತಿಯ ಅಸ್ತಿತ್ವವನ್ನು, ಇರುವಿಕೆಯನ್ನು ನಾಶಮಾಡುವ ಸಲುವಾಗಿಯೇ ನಡೆಯುತ್ತಿತ್ತು.

ಇವು ಮುಖ್ಯವಾಗಿ ಸಾಂಪ್ರದಾಯಿಕ ದೇವಾಲಯ ಮತ್ತು ಸ್ಮಾರಕಗಳಲ್ಲಿ ಬಳಕೆಯಾಗಿವೆ. ಕೆಲವು ಶಾಸನಗಳಲ್ಲಿ ಹೇರೋಗ್ಲೈಫಿಕ್ ಲಿಪಿಗಳು ವಿವರವಾಗಿವೆ ಹಾಗೂ ಬಣ್ಣದಿಂದ ಕೂಡಿವೆ. ಮತ್ತೆ ಕೆಲವು ಶಾಸನಗಳಲ್ಲಿ ಅವು ಕೇವಲ ಸರಳವಾದ ಗೀಟುಗಳಾಗಿವೆ (*simple out lines*). ಯಾವುದೇ ಸಂಸ್ಕೃತಿಯಲ್ಲಿ ಬರವಣಿಗೆಯ ಭಾಷೆ ಬದಲಾವಣೆ ಹೊಂದುವ ಸಾಧ್ಯತೆಗಳು ಹೆಚ್ಚಾಗಿದ್ದರೂ ಈ ಹೈರೋಗ್ಲೈಫ್‌ಗಳು ಸ್ಥಿರವಾಗಿದ್ದು, ಅಸಾಧಾರಣವಾದ ಗಟ್ಟಿತನವನ್ನು ತೋರಿವೆ ಎಂದೇ ಹೇಳಬೇಕಾಗುತ್ತದೆ. ಬಹು ಮುಖ್ಯವಾಗಿ ಅದು ದೇವ ಭಾಷೆ, ದೈವೀನುಡಿ ಎಂಬ ಭಾವನೆ ಇದ್ದದ್ದು ಮತ್ತು ಅನ್ಯ ಸಂಸ್ಕೃತಿಯ ಜನರು ಇವುಗಳನ್ನು ನಿಗೂಢವಾದ, ಪವಿತ್ರವಾದ, ಮಾಂತ್ರಿಕವಾದ ಬರಹಗಳೆಂದು ಭಾವಿಸಿ ಅವುಗಳನ್ನು ದಿನನಿತ್ಯದ ಬಳಕೆಯಿಂದ ದೂರವಿಟ್ಟದ್ದೇ ಅವು ಬದಲಾಗದೇ ಇರಲು ಕಾರಣ. ಆದರೆ ಇಂತಹ ಸುಂದರವಾದ ವಿಶಿಷ್ಟವಾದ ಭಾಷಾಲಿಪಿಯು ಮರೆವಿಗೆ ಸಂದುಹೋಯಿತೆಂಬುದು ಸತ್ಯ. ಯಾವುದೇ ಸಂಸ್ಕೃತಿಯಲ್ಲುಂಟಾಗುವ ಏರುಪೇರುಗಳಿಗೆ ಅಲ್ಲಿನ ರಾಜಕೀಯ ಚುಕ್ಕಾಣಿ ಹಿಡಿದ ಪ್ರಭುತ್ವ ಬಹಳ ಮುಖ್ಯ. ಹಾಗಾಗಿ ಈಜಿಪ್ಟಿನ ಆಡಳಿತ ವ್ಯವಸ್ಥೆಯಲ್ಲಾದ ಬದಲಾವಣೆಯನ್ನು ಅರಿಯುವುದು ಮುಖ್ಯ.

ಈಜಿಪ್ಟ್‌ನಲ್ಲಿ ಕ್ರಿ.ಪೂ. ೩೧೧೦ ಕ್ಕಿಂತ ಮೊದಲಿನ ಕಾಲ ರಾಜವಂಶಾವಳಿಗೆ ಪೂರ್ವಕಾಲ. ಕ್ರಿ.ಪೂ. ೩೧೧೦ ರಿಂದ ಕ್ರಿ.ಪೂ. ೩೩೨ರ ವರೆಗೆ ಈಜಿಪ್ಟಿನಲ್ಲಿ ೩೦ ಸ್ಥಳಿಯ ವಂಶಗಳು ಆಳ್ವಿಕೆ ನಡೆಸಿವೆ. ಹೈರೋಗ್ಲೈಫ್‌ಗಳ ಪ್ರಾಚೀನ ಉಲ್ಲೇಖ ಪ್ರಸಿದ್ಧವಾದ ನಾರ್‌ಮೆರ್ ಪಲೆಟ್ಟೆಯ ಮೇಲೆ ಕಂಡುಬಂದಿದೆ. ನಾರ್‌ಮೆರ್ ರಾಜನ ಹೆಸರು ಈಜಿಪ್ಟಿನ ವಂಶಾವಳಿ ಪಟ್ಟಿಯಲ್ಲಿ ಇಲ್ಲವಾದರೂ ಇವನು ಅತ್ಯಂತ ಪ್ರಾಚೀನ ರಾಜನೆಂಬುದು ತಿಳಿದು ಬಂದಿದೆ. ಪಾಲೆಟ್ಟೆಯ ಮೇಲಿನ ಶಿಲಾಮೂರ್ತಿಯನ್ನಾಧರಿಸಿ ಈತ ಏಕೀಕೃತ ಈಜಿಪ್ಟನ್ನು ಸುಮಾರು ಕ್ರಿ.ಪೂ. ೩೦೦೦ದಲ್ಲಿ ಆಳುತ್ತಿದ್ದನೆಂದೂ, ಈತ ಉತ್ತರ ಮತ್ತು ದಕ್ಷಿಣ ಈಜಿಪ್ಟಿನ ಎರಡೂ ಪ್ರಾಂತ್ಯಗಳ ಕಿರೀಟವನ್ನು ಧರಿಸುತ್ತಿದ್ದನೆಂದೂ ತಿಳಿದುಬಂದಿದೆ. ಈತನನ್ನು

---

* ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮದರ್ಜೆ ಕಾಲೇಜು, ವಿಜಯನಗರ, ಬೆಂಗಳೂರು–೫೬೦೦೪೦.

ಅನೇಕ ಸಂಶೋಧಕರು ಮೊದಲ ವಂಶದ ಮೊದಲ ದೊರೆ ಮೆನೆಸ್‌ನೊಂದಿಗೆ ಸಮೀಕರಿಸುತ್ತಾರೆ. ಮತ್ತೆ ಕೆಲವರು ಈತನನ್ನು ಪ್ರಾಚೀನ ಜೀರೊ ವಂಶದ ಸ್ಕಾರ್ಪಿಯನ್ ದೊರೆ ಮಕುಖಾ(ಝುಖೆನ್)ನೊಂದಿಗೆ ಸಮೀಕರಿಸುತ್ತಾರೆ. ಈ ಮೂವತ್ತು ವಂಶದ ದೊರೆಗಳ ಆಳ್ವಿಕೆಯ ಕಾಲದಲ್ಲಿ ಅಲ್ಲಿನ ಸಾಂಸ್ಕೃತಿಕ ಪರಂಪರೆ ವಿಶಿಷ್ಟವಾಗಿ ಬೆಳೆಯಿತು.

ಈಜಿಪ್ಟಿನ ಸಾಂಸ್ಕೃತಿಕ ಇತಿಹಾಸದಲ್ಲಿ ಪರ್ಷಿಯನ್ನರ ಆಳ್ವಿಕೆಯ ಕ್ರಿ.ಪೂ. ೬ ಮತ್ತು ೫ನೆಯ ಶತಮಾನಗಳು ಗ್ರಹಣ ಕಾಲ. ಅಧೀನಕ್ಕೆ ಒಳಗಾದ ಸ್ಥಳೀಯ ಸಂಸ್ಕೃತಿ ಹಾಗೂ ಪರಕೀಯ ಸಂಸ್ಕೃತಿಗಳ ಮುಖಾಮುಖಿ ಈಜಿಪ್ಟಿಯನ್ನರ ಬದುಕಿನಲ್ಲಿ ಸಂಚಲನಕ್ಕೆ ಅವಕಾಶ ಮಾಡಿಕೊಟ್ಟಿತು. ಈಜಿಪ್ಟಿನ ಸಹಜ ಸಾಂಸ್ಕೃತಿಕ ನೆಲೆಯಲ್ಲಿ ಬದಲಾವಣೆಯನ್ನು ತಂದದ್ದು ನೇರವಾಗಿ ಪರ್ಷಿಯನ್ನರ ಆಕ್ರಮಣವಲ್ಲ, ಬದಲಿಗೆ ಈಜಿಪ್ಟನ್ನು ಆಳಲು ತೊಡಗಿದ ಪರ್ಷಿಯನ್ನರ ಮತ್ತು ಗ್ರೀಕರ ಯುದ್ಧಗಳು. ಪರ್ಷಿಯನ್ನರಿಂದ ಬಿಡುಗಡೆಯನ್ನು ಬಯಸುತ್ತಿದ್ದ ಈಜಿಪ್ಟಿಯನ್ನರಿಗೆ ಅಲೆಗ್ಸಾಂಡರನ ದಂಡಯಾತ್ರೆ ವರವಾಗಿತ್ತು. ಪರ್ಷಿಯನ್ನರಿಂದ ಬಿಡುಗಡೆಗೊಳಿಸಿದ್ದಕ್ಕಾಗಿ ಅಲೆಗ್ಸಾಂಡರನನ್ನು ಅಲ್ಲಿನ ಪ್ರಜೆಗಳು ಮತ್ತು ಫರೋಗಳು ರಕ್ಷಕದೇವತೆಯೆಂದು ಗೌರವಿಸಿದರು. ಅಲೆಗ್ಸಾಂಡರ್ ತನ್ನ ಮುಂದಿನ ದಂಡಯಾತ್ರೆಗೆ ಹೊರಟಾಗ ಈಜಿಪ್ಟಿನಲ್ಲಿ ತನ್ನ ಸೈನ್ಯದ ತುಕಡಿಯೊಂದನ್ನು ಉಳಿಸಿದನು. ಅಲೆಗ್ಸಾಂಡರನ ನಂತರ ಅವನ ಶ್ರೇಷ್ಠ ದಂಡನಾಯಕರಲ್ಲೊಬ್ಬನಾದ ಟಾಲೆಮಿಯ (*Ptolemy*) ಆಡಳಿತಕ್ಕೆ ಈಜಿಪ್ಟ್ ಒಳಗಾಯಿತು. ಈತ ಅಲ್ಲಿ ೩೨ನೇ ಫರೋ(ರಾಜ)ಆಗಿ ಹೊಸ ವಂಶದ ಉದಯಕ್ಕೆ ಕಾರಣನಾದನು. ಅಲ್ಲಿಗೆ ಈಜಿಪ್ಟಿನ ಸ್ಥಳೀಯ ದೊರೆಗಳ ಆಳ್ವಿಕೆ ಕೊನೆಗೊಂಡಂತಾಯಿತು. ಇವನ ವಂಶದ ಉತ್ತರಾಧಿಕಾರಿಗಳೆಲ್ಲರನ್ನೂ ಟಾಲೆಮಿಗಳೆಂದೂ ಉತ್ತರಾಧಿಕಾರಿಣಿ ಯರೆಲ್ಲರನ್ನೂ ಕ್ಲಿಯೋಪಾತ್ರ ಎಂದೂ ಕರೆಯುವ ವಾಡಿಕೆ ಬಂದಿತು. ಟಾಲೆಮಿಯ ವಂಶದ ಆಳ್ವಿಕೆಯ ಕಾಲದಲ್ಲಿ ಈಜಿಪ್ಟ್ ಮತ್ತು ಗ್ರೀಕ್ ಭಾಷೆಗಳೆರಡೂ ಜೊತೆಜೊತೆಯಾಗಿ ಬಳಕೆಯಾಗುತ್ತಿದ್ದವು. ಗ್ರೀಕ್ ವಂಶವು ಕೊನೆಯ ಕಾಲದಲ್ಲಿ ರೋಮ್ ನಗರದೊಂದಿಗಿನ ರಾಜಕೀಯದಲ್ಲಿ ವಿಶೇಷವಾಗಿ ತೊಡಗಿಕೊಂಡಿತು. ರೋಮ್ ನಗರದ ಸೀಸರ್ ಮತ್ತು ಪಾಂಪೆ ನಡುವಣ ಆಂತರಿಕ ಯುದ್ಧವು ಪರೋಕ್ಷವಾಗಿ ಈಜಿಪ್ಟನ್ನು ಒಳಗೊಂಡಿತು. ಸೀಸರನ ಗೆಲುವಿನ ನಂತರ ಈಜಿಪ್ಟ್ ಮಾರ್ಕ್‌ಆಂಟೋನಿಯ ಆಡಳಿತಕ್ಕೆ ಒಳಗಾಯಿತು. ಟಾಲೆಮಿ ವಂಶದ ಚಿಕ್ಕ ಟಾಲೆಮಿ ಮತ್ತು ಅವನ ಸೋದರಿ ಕ್ಲಿಯೋಪಾತ್ರಳ ಸಾವಿನ ನಂತರ ಈಜಿಪ್ಟಿನ ವಂಶವಾಹಿನಿ ಪದ್ಧತಿ ಮುಕ್ತಾಯ ಕಂಡಿತು. ರೋಮ್ ಆಳ್ವಿಕೆ ಪ್ರಾರಂಭವಾಯಿತು. ಪರ್ಷಿಯನ್ ಆಳ್ವಿಕೆ, ಅಲೆಗ್ಸಾಂಡರನ ಕಾಲ, ತರುವಾಯದ ಮಾಸಿಡೋನಿಯ ಮತ್ತು ರೋಮನ್ ಕಾಲದಲ್ಲಿ ಕೂಡ ಹೈರೋಗ್ಲೈಫ್‌ಗಳ ಬಳಕೆ ಮುಂದುವರೆಯಿತು. ಆದರೆ ರೋಮಿನ ಆಡಳಿತದಲ್ಲಿ ಪ್ರಧಾನವಾಗಿ ಲ್ಯಾಟಿನ್ ಬಳಸಲಾಗುತ್ತಿದ್ದು, ಸಾಂದರ್ಭಿಕವಾಗಿ ಗ್ರೀಕ್ ಬಳಕೆ ಇರುತ್ತಿತ್ತು.

**(ಗ್ರೀಕೋ ರೋಮನ್ ಕಾಲದ ಹೈರೋಗ್ಲೈಫ್‌ಗಳು)**

ಈ ರೀತಿಯ ನೂರು ವರ್ಷಗಳ ಕಾಲಾವಧಿಯಲ್ಲಿ ಹೈರೋಗ್ಲೈಫ್‌ಗಳ ಬಳಕೆ ನಿಂತು ಹೋಯಿತು. ಅದನ್ನು ಅರ್ಥ ಮಾಡಿಕೊಳ್ಳುವವರೂ ಇಲ್ಲವಾದರು. ಗ್ರೀಕ್ ಮತ್ತು ರೋಮನ್ ಬರಹಗಾರರು ಹೈರೋಗ್ಲೈಫ್‌ಗಳ ಬಗೆಗೆ ಅನೇಕ ರೀತಿಯ ತಪ್ಪು ಅಭಿಪ್ರಾಯಗಳನ್ನು ನೀಡತೊಡಗಿದರು. ಹೈರೋಗ್ಲೈಫ್‌ಗಳು ಭಾಷೆಯೇ ಅಲ್ಲವೆಂದು ಸಲಹೆ ಮಾಡಿದ್ದರು. ಅವುಗಳಿಗೆ ಇಲ್ಲಸಲ್ಲದ ನಿಗೂಢತೆಯನ್ನೂ, ಮಾಂತ್ರಿಕತೆಯನ್ನೂ ಹೇರಿದರು. ಹೈರೋಗ್ಲೈಫ್ ಲಿಪಿಗಳು ಮೂಲ ಈಜಿಪ್ಟಿಯನ್ನರನ್ನು ಪರಕೀಯರಿಂದ ಪ್ರತ್ಯೇಕಿಸುವ ಒಂದು ಮಾರ್ಗವಾಗಿತ್ತೆಂದು ಕೆಲವು ವಿದ್ವಾಂಸರು ಭಾವಿಸುತ್ತಾರೆ. ಬದಲಾದ ರಾಜಕೀಯ ವಿದ್ಯಮಾನಗಳಿಗೆ ಅವರು ತೋರಿಸಿರಬಹುದಾದ ಪ್ರತಿಕ್ರಿಯೆ, ಪರಕೀಯ ಸಂಸ್ಕೃತಿಯನ್ನು ಏಕಾಏಕಿ ಒಪ್ಪಿಕೊಳ್ಳಲಾಗದ ಸ್ಥಳೀಯರ ವಿರೋಧ ಮತ್ತು ಅನ್ಯ ಸಂಸ್ಕೃತಿಯೊಂದನ್ನು ಅರ್ಥಮಾಡಿಕೊಳ್ಳುವಲ್ಲಿ ಭಿನ್ನದೃಷ್ಟಿಕೋನದಿಂದಾಗಿ ಉಂಟಾಗಿರುವ ಅಪಾರ್ಥಗಳು ಹಾಗೂ ಕ್ರಿ.ಶ.೪ನೇ ಶತಮಾನದ ಕಾಲಕ್ಕಾಗಲೇ ಕೆಲವೇ ಈಜಿಪ್ಟರು ಅವುಗಳನ್ನು ಓದಲು ಬಲ್ಲವರಾಗಿದ್ದುದು ಇವೆಲ್ಲವೂ ಹೈರೋಗ್ಲೈಫಿಕ್ ಲಿಪಿಗಳನ್ನು ರಹಸ್ಯ ಜ್ಞಾನ ಉಳ್ಳ ಮಾಂತ್ರಿಕ ಲಿಪಿಗಳೆಂದು ಭಾವಿಸಿ ಅವುಗಳಿಗೆ ಅನೇಕ ಮಿಥ್‌ಗಳನ್ನು ಕೂಡಿಸಲು ಕಾರಣವಾಯಿತು. ರೋಮನ್ ಚಕ್ರವರ್ತಿ ೧ನೇ ಥಿಯೋಡೊಸ್ಯೋಸ್‌ನು ಕ್ರಿ.ಶ. ೩೯೧ರಲ್ಲಿ ರೋಮ್ ಸಾಮ್ರಾಜ್ಯದಲ್ಲಿನ ಎಲ್ಲಾ ವಿಗ್ರಹಾರಾಧನೆಯುಳ್ಳ ಕ್ರಿಶ್ಚಿಯನೇತರ ದೇವಾಲಯಗಳನ್ನು ಮುಚ್ಚಿಸಿದ ಕಾರಣ ಸ್ಮಾರಕಗಳಲ್ಲಿ ಹೈರೋಗ್ಲೈಫ್‌ಗಳ ಬರವಣಿಗೆ ನಿಂತುಹೋಯಿತು. ಅವುಗಳ ಬಗೆಗಿನ ಅರಿವು, ಪರಿಚಯ ಮಾಸುತ್ತಾ ಬಂದಿತು.

ಕೊನೆಗೆ ರೋಮ್ ರಾಜ್ಯ ಉರುಳಿ ಈಜಿಪ್ಟಿನ ಮಧ್ಯಕಾಲೀನ ಯುಗ ಪ್ರಾರಂಭವಾಯಿತು. ಇಷ್ಟಾದರೂ ಈಜಿಪ್ಟ್ ಮತ್ತು ಯೂರೋಪಿನ ಸತತ ಸಂಬಂಧದಿಂದಾಗಿ ಯೂರೋಪಿನ ಬುದ್ಧಿಜೀವಿಗಳನೇಕರಿಗೆ ಹೈರೋಗ್ಲೈಫ್‌ಗಳು ತಿಳಿದಿದ್ದವು.

ಇದಕ್ಕೆ ಕಾರಣ ಮಧ್ಯಯುಗೀನ ವೈದ್ಯಕೀಯ ಪದ್ಧತಿಯಲ್ಲಿ ಮಣ್ಣು ತೈಲ ಅಥವಾ ಶಿಲಾಜಿತು ಹಾಗೂ ಮಮ್ಮಿಗಳನ್ನು ಚಿಕಿತ್ಸೆಗೆ ಬಳಸಲಾಗುತಿದ್ದುದು. ಆ ಸಂಬಂಧದಲ್ಲಿನ ವಿವರಗಳುಳ್ಳ ಹೈರೋಗ್ಲೈಫ್ ಬರಹಗಳು ಯೂರೋಪಿಗೆ ಬಂದವು. ಈ ಕಾರಣದಿಂದಾಗಿ ೧೬೩೩ರಿಂದಲೇ ಹೈರೋಗ್ಲೈಫ್‌ಗಳ ಅನುವಾದಕ್ಕೆ ಪ್ರಯತ್ನಗಳು ಆರಂಭವಾಗಿದ್ದವು.

ಕ್ರಿ.ಶ.೫ನೇ ಶತಮಾನದಲ್ಲಿ **ಹೊರಪೋಲೊ** ಎಂಬುವವನ, ೨೦೦ ಹೈರೋಗ್ಲೈಫ್ ಚಿಹ್ನೆಗಳ ವಿವರಗಳನ್ನೊಳಗೊಂಡ **'ಹೈರೊಗ್ಲೈಫಿಕಾ'** ಹೊರಬಂದಿತು. ಇದು ಅಧಿಕಾರಯುತವಾದ ಬರವಣಿಗೆಯಾಗಿದ್ದರೂ ಹೆಚ್ಚಾಗಿ ತಪ್ಪಾದ ಓದುವಿಕೆಯಾಗಿತ್ತು. ಈ ತಪ್ಪಾದ ವಿಶ್ಲೇಷಣೆ ಹೈರೋಗ್ಲೈಫ್‌ಗಳ ಅರ್ಥಗಳನ್ನು ಭೇದಿಸುವ ನಿಟ್ಟಿನಲ್ಲಿ ಅಡ್ಡಿಯುಂಟುಮಾಡಿತು.

ಮೊದಲ ವಿದ್ವಾಂಸರು ಹೈರೋಗ್ಲೈಫ್‌ಗಳಿಗೆ ಗ್ರೀಕ್ ಮೂಲದ ಕಡೆಗೆ ಹೆಚ್ಚು ಒತ್ತು ಕೊಟ್ಟರೆ, ಇತ್ತೀಚಿನ ಸಂಶೋಧನೆಗಳು ಅವುಗಳನ್ನು ಈಜಿಪ್ಟಿನ ಬುದ್ಧಿಜೀವಿಗಳು ತಮ್ಮ ಹಿಂದಣ ಬದುಕಿನ ವಿವರಗಳನ್ನು ಹಿಡಿದಿಟ್ಟಿರುವ ಚೊಕ್ಕ ಜ್ಞಾನದ ತುಣುಕುಗಳೆಂಬುದನ್ನು ಗುರುತಿಸುವಲ್ಲಿ ಸಫಲರಾಗಿದ್ದಾರೆ. ಅನೇಕ ಆಧುನಿಕ ವಿದ್ವಾಂಸರು ಇವುಗಳನ್ನು ಓದಲು, ಅರ್ಥೈಸಲು ಶತಮಾನಗಳಿಂದಲೂ ಪ್ರಯತ್ನಿಸುತ್ತಲೇ ಬಂದಿದ್ದಾರೆ. ಮುಖ್ಯವಾಗಿ ಜೋಹನ್ಸ್ ಗೊರೋಪಿಯನ್ ಬಿಕಾನಸ್ (*Johanes Goropius Becanus*) ಎಂಬ ವಿದ್ವಾಂಸ, ೧೬ನೇ ಶತಮಾನದಲ್ಲಿ ಮತ್ತು ಅತನೇಸಿಯಸ್ ಕಿರ್ಚರ್ (*Athanasius Kircher*) ಎಂಬಾತ ೧೭ನೇ ಶತಮಾನದಲ್ಲಿ ಓದಲು ಪ್ರಯತ್ನಿಸಿದರು. ಹೈರೋಗ್ಲೈಫ್‌ಗಳ ಬಗೆಗೆ ಹುಟ್ಟಿಕೊಂಡಿದ್ದ ಎಲ್ಲ ಊಹಾಪೋಹ, ಅಭಿಪ್ರಾಯಗಳು ಒಂದು ರಾಜಕೀಯ ಘಟನೆ ನಡೆಯದಿದ್ದರೆ ಮುಂದುವರಿಯುತ್ತಿತ್ತೆಂದು ತೋರುತ್ತದೆ. ಹೈರೋಗ್ಲೈಫ್‌ಗಳನ್ನು ಅರ್ಥೈಸುವಲ್ಲಿ ಫ್ರಾನ್ಸ್ ಮತ್ತು ಬ್ರಿಟನ್ನಿನ ನಡುವಿನ ಸತತ ಸಮರ ಮಹತ್ತರವಾದ ಬದಲಾವಣೆಯೊಂದನ್ನು ತಂದಿತು. ನೈಲ್ ನದೀ ತೀರದ ಫಲವತ್ತಾದ ಭೂಮಿ ಆಹಾರದ ಖಜಾನೆಯಂತಿದ್ದು ಅದನ್ನು ವಶಪಡಿಸಿಕೊಳ್ಳುವ ಮೂಲಕ ಬ್ರಿಟೀಷರನ್ನು ಸೋಲಿಸಬಹುದೆಂದು ಭಾವಿಸಿದ ನೆಪೋಲಿಯನ್ ಬೋನಪಾರ್ಟೆ ಈಜಿಪ್ಟಿಗೆ ಮುತ್ತಿಗೆ ಹಾಕಿದ.

ಕ್ರಿ.ಶ. ೧೭೯೮ರ ಆಗಸ್ಟಿನಲ್ಲಿ ೧೩ ಫ್ರೆಂಚ್ ಹಡಗುಗಳು ಈಜಿಪ್ಟಿನ ಅಬೌರಿಕ್ ಬೇಯ ಅಲೆಗ್ಸಾಂಡ್ರಿಯಕ್ಕೆ ಸೇರಿದ ಕೈರೋ ಹತ್ತಿರ ಬ್ರಿಟೀಷರನ್ನೆದುರಿಸಲು ಸೈನ್ಯದೊಂದಿಗೆ ಮುಂದುವರಿಯಿತು ನೆಪೋಲಿಯನ್ನನ ಧೀರಸೈನಿಕರು ಭೂ ಯುದ್ಧದಲ್ಲಿ ಗೆಲುವನ್ನು ಸಾಧಿಸಿದರಾದರೂ ಬ್ರಿಟೀಷರು ಜಲಯುದ್ಧದಲ್ಲಿ ಗೆಲುವು ಸಾಧಿಸಿದರು. ಹೀಗಾಗಿ ಕೆಲವೇ ತಿಂಗಳು ಈಜಿಪ್ಟಿನಲ್ಲಿ ತಂಗಲು ಬಯಸಿದ್ದ ನೆಪೋಲಿಯನ್ ಹಿಂದಿರುಗಲು ದಾರಿಯಿಲ್ಲದೆ ತನ್ನ ಜನರೊಂದಿಗೆ ಮೂರು ವರ್ಷಗಳ ಕಾಲ ಅಲ್ಲೇ ನಿಲ್ಲಬೇಕಾಯಿತು. ಈಜಿಪ್ಟಿನ ದೃಷ್ಟಿಯಿಂದ ಈ ಅವಧಿ ಬಹಳ ಮುಖ್ಯವಾದುದಾಯಿತು. ನೆಪೋಲಿಯನ್ ತನ್ನೊಂದಿಗೆ ಕರೆತಂದಿದ್ದ ಒಂದು ಸಾವಿರ ಪ್ರಜೆಗಳಲ್ಲಿ ೧೬೭ ಮಂದಿ ವಿಜ್ಞಾನಿಗಳೂ ತಂತ್ರಜ್ಞರೂ ಗಣಿತಜ್ಞರೂ ಕಲಾವಿದರೂ ಆಗಿದ್ದರು. ಒತ್ತಾಯ ಪೂರ್ವಕವಾದ ಈ ಮೂರು ವರ್ಷಗಳ ಬಿಡುವಿನ ದಿನಗಳಲ್ಲಿ ಅವರು ಈಜಿಪ್ಟಿನ ಕಲೆ, ವಾಸ್ತುಶಿಲ್ಪ, ಸಂಸ್ಕೃತಿಗಳನ್ನು ಅಧ್ಯಯನ ಮಾಡಿದರು. ಕ್ರಿ.ಶ.೧೮೦೯-೧೮೨೮ರ ಅವಧಿಯಲ್ಲಿ ಅವರು ೧೯ ಸಂಪುಟಗಳಲ್ಲಿ 'ಈಜಿಪ್ಟಿನ ವರ್ಣನೆ' ಎಂಬ ಕೃತಿಯನ್ನು ಪ್ರಕಟಿಸಿದರು. ಯೂರೋಪಿನಾದ್ಯಂತ ದೊರಕಿದ ಈಜಿಪ್ಟಿನ ಚಿತ್ರಗಳು, ವಿಶ್ಲೇಷಣೆಗಳು, ವರ್ಣನೆಗಳು ಈಜಿಪ್ಟಿನ ಬಗೆಗೆ ಹೊಸ ಕಣ್ಣನ್ನು ತೆರೆಸಿದವು ಹಾಗೂ ಅಲ್ಲಿನ ಪ್ರಾಚೀನ ಸಂಸ್ಕೃತಿಯ ಪಳೆಯುಳಿಕೆಗಳ ಬಗೆಗೆ ತೀವ್ರ ಕುತೂಹಲವನ್ನು ಕೆರಳಿಸಿದವು.

ಈಜಿಪ್ಟಿನಲ್ಲಿ ತಳ ಊರಿದ ನೆಪೋಲಿಯನ್ನನ ಸೈನಿಕರು ಪುನರ್ನಿರ್ಮಾಣ ಕಾರ್ಯದಲ್ಲಿ ತೊಡಗಿಕೊಂಡು ಹಾಳಾದ ಕಟ್ಟಡದ ಗೋಡೆಗಳ ಕಲ್ಲುಗಳನ್ನು ಬಳಸಿಕೊಂಡು ಕೋಟೆಗಳನ್ನು ಭದ್ರಪಡಿಸತೊಡಗಿದರು. ಕ್ರಿ.ಶ. ೧೭೯೯ರಲ್ಲಿ ಅಲೆಗ್ಸಾಂಡ್ರಿಯಾ ಹತ್ತಿರದ ಸಣ್ಣ ಪಟ್ಟಣ **ರೊಸೆಟ್ಟಾ** ಎಂಬಲ್ಲಿ ಹೀಗೆ ಕೋಟೆಯೊಂದರ ವಿಸ್ತರಣಾ ಕಾರ್ಯದಲ್ಲಿ ತೊಡಗಿದ್ದಾಗ, ಪೈರೀಫ್ರಾಂಕಾಯ್ಸ್ ಬುಚರ್ಡ್ (*Pierre-Francois Bouchard*) ಎಂಬ ಯುವ ಫ್ರೆಂಚ್ ಅಧಿಕಾರಿಗೆ ಒಂದು ಕಪ್ಪು ಶಿಲಾ ತುಂಡು ದೊರಕಿತು. ೩ ಅಡಿ ೯ ಅಂಗುಲ ಉದ್ದ, ೨ ಅಡಿ ೪.೫ ಅಂಗುಲ ಅಗಲ, ೧೧ ಅಂಗುಲ ದಪ್ಪವಿದ್ದ ಈ ಶಿಲೆಯ ಮೇಲೆ ಮೂರು ಭಿನ್ನ ರೀತಿಯ ಬರವಣಿಗೆಗಳು ಇರುವುದು ಗಮನಕ್ಕೆ

ಬಂತು. ಅಪೂರ್ಣವಾಗಿದ್ದ ಬರಹವು ಹೈರೋಗ್ಲೈಫ್‌ಗಳಾಗಿದ್ದು, ಮಧ್ಯದಲ್ಲಿನ ಬರಹ ಈಜಿಪ್ಟಿನ ಡೆಮೋಟಿಕ್ ಲಿಪಿಯಾಗಿತ್ತು (ಅದು ಆತನಿಗೆ ತಿಳಿದಿರಲಿಲ್ಲ). ಕೆಳ ಭಾಗದಲ್ಲಿದ್ದ ಬರಹ ಹಳೆಯ ಗ್ರೀಕ್ ಲಿಪಿಯಾಗಿತ್ತು. ಆ ಕೆಳಗಿನ ಬರಹ ಪಟ್ಟಿಯನ್ನು ಗ್ರೀಕ್ ಎಂದು ಗುರುತಿಸಿದ ಆತ ಶಿಲೆಯನ್ನು ವಿದ್ವಾಂಸರಲ್ಲಿಗೆ ಒಯ್ದು ತೋರಿಸಿದನು. ಅದೊಂದು ರಾಜಾಜ್ಞೆ (*Royal*

*Decree*)ಯಾಗಿದ್ದು ಅದನ್ನು ಈಜಿಪ್ಟಿನಲ್ಲಿ ಬಳಸಲ್ಪಡುತ್ತಿರುವ ಭಾಷೆಯಲ್ಲಿ ಬರೆಯಬೇಕೆಂದು ಹೇಳಲಾಗಿತ್ತು. ಆ ಕಾರಣದಿಂದ ಆ ಶಿಲಾಲಿಪಿ ಆಗ ಈಜಿಪ್ಟಿನಲ್ಲಿ ಬಳಕೆಗೊಳ್ಳುತ್ತಿದ್ದ ಮೂರು ಭಾಷೆಯಲ್ಲಿ ಬರೆಯಲ್ಪಟ್ಟಿತ್ತು. ವಿದ್ವಾಂಸರು ಮಧ್ಯದ ಡೆಮೋಟಿಕ್ ಬರಹದ ಮೇಲೆ ಹೆಚ್ಚಿನ ಗಮನ ಹರಿಸಿದರು. ಅದು ಪೂರ್ಣವಾಗಿದ್ದುದಲ್ಲದೆ ಮೇಲಿನ ಹೈರೋಗ್ಲೈಫ್ ಚಿತ್ರಗಳಂತಲ್ಲದೆ ಅಕ್ಷರಗಳಂತೆ ಗೋಚರಿಸುತ್ತಿದ್ದವು. ಈ ಡೆಮೋಟಿಕ್ ಲಿಪಿ ಹೈರೋಗ್ಲೈಫ್‌ಗಳಿಂದ ಜನಿಸಿದ ಹೈರಾಟಿಕ್ ಲಿಪಿಯಿಂದ ಮೂಡಿದ ಶೀಘ್ರ ಲಿಪಿಯಾಗಿತ್ತು (ಈ ಲಿಪಿ ಬದಲಾವಣೆಗೆ ಶೀಘ್ರ ಬರಹವೇ ಕಾರಣ). ಕುಶಲಿಯಾದ, ಶ್ರೇಷ್ಠ ಭಾಷಾಶಾಸ್ತ್ರಜ್ಞನಾದ 'ಸಿಲ್‌ವೆಸ್ತ್ರೆ ಡಿಸಾಕಿ' ಎಂಬ ಫ್ರೆಂಚ್ ವಿದ್ವಾಂಸ ರೊಸೆಟ್ಟಾ ಶಿಲೆಯ ಮೇಲಿನ ಡೆಮೋಟಿಕ್ ಲಿಪಿಯನ್ನು ಅರ್ಥೈಸುವಲ್ಲಿ ಸಫಲನಾದನು. ಈತ ಟಾಲೆಮಿ ಮತ್ತು ಅಲೆಗ್ಸಾಂಡರನ ಹೆಸರಿದ್ದ ಲಿಪಿ ಚಿಹ್ನೆಗಳನ್ನು ಗುರುತಿಸಿ, ಚಿಹ್ನೆಗಳಿಗೂ ಧ್ವನಿಗಳಿಗೂ ಸಂಬಂಧವನ್ನು ಸ್ಥಾಪಿಸಿದನು.

ಸ್ವೀಡಿಶ್ ಮುತ್ಸದ್ದಿ ಎಂದು ಚರಿತ್ರೆಯು ಗುರುತಿಸುವ 'ಜೊಹಾನ್ ಅಕೆರ್ ಬ್ಲಾಡ್' ಎಂಬ ತಜ್ಞ ತನಗಿದ್ದ ಕಾಪ್ಟಿಕ್ ಭಾಷೆಯ ತಿಳುವಳಿಕೆಯ ಸಹಾಯದಿಂದ ರೊಸೆಟ್ಟಾ ಶಿಲಾಲಿಪಿಯನ್ನು ಅರಿಯಲು ಪ್ರಯತ್ನಿಸಿದನು. ಈ ಕಾಪ್ಟಿಕ್ ಭಾಷೆಯನ್ನು ಪ್ರಾಚೀನ ಕ್ರಿಶ್ಚಿಯನ್ ಗುಂಪು ಈಜಿಪ್ಟಿನ ಕಾಪ್ಟಿಕ್ ಚರ್ಚ್‌ಗಳಲ್ಲಿ ಬಳಸುವುದರ ಮೂಲಕ ಕ್ರಿಶ ೪ನೇ ಶತಮಾನದಷ್ಟು ಪ್ರಾಚೀನವಾದ ಈ ಭಾಷೆಯನ್ನು ಕಾಪಾಡಿಕೊಂಡಿದ್ದರು. ಈ ಕಾಪ್ಟಿಕ್ ಭಾಷೆಯು ಗ್ರೀಕ್ ಅಕ್ಷರ ಮಾಲೆಯಿಂದ ಬರೆಯಲ್ಪಡುತ್ತಿದ್ದು, ಜೊತೆಗೆ ಹೆಚ್ಚುವರಿಯಾಗಿ ಏಳು ಡೆಮೋಟಿಕ್ ಲಿಪಿ ಚಿಹ್ನೆಗಳನ್ನು ಬಳಸಿಕೊಂಡಿದೆ. ಈ ಭಾಷೆಯ ಅರಿವಿದ್ದ ಅಕೆರ್ ಬ್ಲಾಡ್ 'ಲವ್' 'ಟೆಂಪಲ್' 'ಗ್ರೀಕ್' ಎಂಬ ಪದಗಳನ್ನು ರೊಸೆಟ್ಟಾ ಶಿಲಾಲಿಪಿಯಲ್ಲಿ ಗುರುತಿಸಿದನು. ಆ ಮೂಲಕ ಡೆಮೋಟಿಕ್ ಲಿಪಿಗಳು ಕೇವಲ ಧ್ವನಿ ನಿರೂಪಕಗಳಷ್ಟೇ ಅಲ್ಲ, ಅವುಗಳನ್ನು ಅನುವಾದಿಸಬಹುದೆಂಬುದನ್ನು ತೋರಿಸಿಕೊಟ್ಟನು.

ಕ್ರಿ.ಶ. ೧೮೦೩ರ ಏಪ್ರಿಲ್‌ನಲ್ಲಿ 'ರೆವರೆಂಡ್ ಸ್ಟೀಫನ್ ವೆಸ್ಟನ್', ಲಂಡನ್ನಿನ ಆಂಟಿಕ್ವೈರಿ ಸೊಸೈಟಿಯ ಮುಂದೆ ರೊಸೆಟ್ಟಾ ಶಿಲಾ ಲಿಪಿಯ ಗ್ರೀಕ್ ಪಠ್ಯದ ಮೊದಲ ಇಂಗ್ಲಿಷ್ ಅನುವಾದವನ್ನು ಮಾಡಿದನು. ಈ ಕಾಲಕ್ಕೆ ರೊಸೆಟ್ಟಾ ಶಿಲೆಯ ಹೈರೋಗ್ಲೈಫ್ ಲಿಪಿಗಳನ್ನು 'ಸ್ಯಾಕಿ' ಮತ್ತು 'ಥಾಮಸ್ ಯೂಂಗ್' ಓದಲು ಪ್ರಯತ್ನಿಸಿದ್ದರು. ಯಾವುದೇ ಭಾಷೆಯಲ್ಲಿನ ಲಿಖಿತ ಲಿಪಿಗಳು ಕೇವಲ ಆ ಭಾಷೆಯಲ್ಲಿನ ಪದಗಳನ್ನು ಆಧರಿಸಿರುತ್ತವಾದ್ದರಿಂದ ಅವುಗಳಿಂದ ಅನ್ಯ ಭಾಷೆಯ ಹೆಸರುಗಳನ್ನು ಬರೆಯಲು ಸಾಧ್ಯವಾಗುವುದಿಲ್ಲ. ಪರಭಾಷಾ ಹೆಸರುಗಳನ್ನು ಬರೆಯಲು ಲಿಪಿಯು ಧ್ವನಿ ನಿರೂಪಕವಾಗಿದ್ದರೆ ಮಾತ್ರ ಸಾಧ್ಯವೆಂಬುದನ್ನು ಸಾಬೀತುಪಡಿಸುವಲ್ಲಿ ಸ್ಟೀಫನ್ ಸಫಲನಾದನು.

ಕ್ಲಿಯೋಪಾತ್ರಳ ಹೈರೋಗ್ಲೈಫ್

ಹೈರೋಗ್ಲೈಫ್‌ಗಳಲ್ಲಿ ಕೆಲವು ಚಿಹ್ನೆಗಳ ಗುಂಪು ಇತರ ಚಿಹ್ನೆಗಳಿಂತ ಭಿನ್ನವಾಗಿದ್ದವು. ಆಯತಾಕಾರದ ಪಟ್ಟಿಕೆಯಿಂದ ಆವರಿಸಲ್ಪಟ್ಟ ಈ ಬರಹಗಳನ್ನು 'ಕಾರ್ಟಚ್ಚಸ್' (*cartouches*) ಎಂದು ಕರೆಯಲಾಗುತ್ತದೆ. ಇವು ಒಂದು ರೀತಿಯ ನಿಗೂಢ ದಾರದ ಚೌಕಟ್ಟಿನಿಂದ ಬಂಧಿತವಾದಂತೆ ಕಾಣಿಸುತ್ತವೆ. ಫ್ರೆಂಚ್ ಸೈನಿಕರು ಇವು ಬುಲೆಟ್ಟುಗಳನ್ನು ಹೋಲುವುದೆಂಬ ಕಾರಣಕ್ಕೆ ಅವುಗಳನ್ನು **ಕಾರ್ಟಚ್** ಎಂದು ಕರೆದರು.

ಟಾಲೆಮಿಯ ಹೈರೋಗ್ಲೈಫ್

'ಥಾಮಸ್ ಯೂಂಗನು' ಇವು ಈಜಿಪ್ಟಿನ ಜನರ ಹೆಸರಾಗದೆ ಅವು ಗ್ರೀಕರ ಟೋಲೆಮೆಯಸ್ (ಟಾಲೆಮಿ, *Ptolemy*) ಹಾಗೂ ಅಲೆಗ್ಸಾಂಡರ್ (*Alexander or Aexandrus*) ನಂತಹ ಅನ್ಯ ಭಾಷಿಕರ ಹೆಸರೆಂದು ಗುರುತಿಸಿದನು. ಇಂತಹ ಐದು ಕಾರ್ಟಚ್‌ಗಳನ್ನು ಆತ ಓದುವುದರಲ್ಲಿ ಯಶಸ್ವಿಯಾದನು ಮತ್ತು ಅದನ್ನು ಪ್ರಕಟಿಸಿದನು.

೧೯ನೇ ಶತಮಾನದ ಆದಿಭಾಗದಲ್ಲಿ ಮತ್ತೊಬ್ಬ ಯುವ ಫ್ರೆಂಚ್ ಇತಿಹಾಸಕಾರ ಮತ್ತು ಬಹು ಭಾಷಾತಜ್ಞ ಜೀನ್ ಫ್ರಾಕಾಯಿಸ್ ಛಾಂಪೊಲ್ಲಿಯನ್ (*Jean-Fracois Champollion* ೧೭೯೦-೧೮೩೨) ಎಂಬಾತ ರೊಸೆಟ್ಟಾ ಶಿಲಾಲಿಪಿಗಳ ಬಗೆಗೆ ಆಸಕ್ತನಾದನು. ಈತನು ಅನೇಕ ಪೌರಾತ್ಯ ಭಾಷೆಗಳನ್ನು ಬಲ್ಲವನಾಗಿದ್ದನು. ೧೮೦೭ರಲ್ಲಿ ಈತ ಫ್ರೆಂಚ್ ಭಾಷಾ ತಜ್ಞ 'ಫ್ರಾಂಕಾಯಿಸ್ ಆಂಟೋನಿ ಇಸ್ಯಾಕ್ ಸಿಲ್ವೆಸೆ ಡಿ ಸಾಕಿ'ಯ ಹತ್ತಿರ ಎರಡು ವರ್ಷಗಳ ಕಾಲ ಅಧ್ಯಯನಕ್ಕೆ ತೊಡಗಿದನು. ಮುಂದೆ ಈತ ಕಾಪ್ಟಿಕ್ ಭಾಷಾ ನಿಘಂಟೊಂದನ್ನು ಸಂಗ್ರಹಿಸಿದನು. ೧೮೧೯ರಲ್ಲಿ ಇವನು ಥಾಮಸ್ ಯೂಂಗ್‌ನ ಹೈರೋ ಗ್ಲೈಫ್‌ಗಳನ್ನು ಕುರಿತ ಬರಹ ಗಳನ್ನು ಓದಿ, ಹೈರೋಗ್ಲೈಫ್ ಕಾರ್ಟುಚ್‌ಗಳು ಧ್ವನಿ ನಿರೂಪಗಳೆಂದು ಯೂಂಗ್ ನಿರೂಪಿಸಿದ್ದ ಅಂಶವು ಸತ್ಯವೆಂಬುದನ್ನು, ಕೇವಲ ಕಾರ್ಟುಚ್‌ಗಳಲ್ಲಿ ಬರೆದ ಚಿಹ್ನೆಗಳಷ್ಟೇ ಧ್ವನಿ ನಿರೂಪಗಳಲ್ಲ, ಉಳಿದ ಹೈರೋಗ್ಲೈಫ್‌ಗಳೂ ಕೂಡ ಧ್ವನಿ ನಿರೂಪಕಗಳೆಂಬುದನ್ನು ಕಂಡುಕೊಂಡನು.

ಈತ ಸುಮಾರು ೩೦ ಧ್ವನಿ ನಿರೂಪಕ ಚಿಹ್ನೆಗಳನ್ನು ಗುರುತಿಸಿದ್ದಾನೆ. ಬ್ರಿಟನ್ನಿನ ಕಿಂಗ್‌ಸ್ಟನ್ ಎಸ್ಟೇಟಿನಲ್ಲಿದ್ದ ಹೈರೋಗ್ಲೈಫ್‌ಗಳನ್ನು ಬಳಸಿಕೊಂಡು ಛಾಂಪೋಲಿಯನ್ ಕ್ಲಿಯೋಪಾತ್ರಾ ಮತ್ತು ಅಲೆಗ್ಸಾಂಡ್ರಸ್ ಹೆಸರುಗಳನ್ನು ಈತ ಸರಿಯಾಗಿ ಗುರುತಿಸಿದನು. ಯೂಂಗನು ಆ ಮುಂಚೆ ಗುರುತಿಸಿದ್ದ ಟೋಲೆಮಸ್(ಟಾಲೆಮಿ) ಹೆಸರನ್ನು ಪರಿಶೀಲಿಸಿದನು. ಆಸಕ್ತಿಯಿಂದ ತನ್ನ ಸಂಶೋಧನೆಯನ್ನು ಮುಂದುವರಿಸಿದನು. ಕ್ರಿ.ಶ. ೧೮೨೨ರಲ್ಲಿ ನೈಲ್ ನದಿ ತೀರದ ಅಬು ಸಿಂಬಬೇಲ್‌ನ ದೇವಾಲಯದಲ್ಲಿನ ಶಾಸನಗಳು ಬೆಳಕಿಗೆ ಬಂದು ಯೂರೋಪಿನಲ್ಲಿ ಪರಿಚಯಿಸಲ್ಪಟ್ಟವು. ಈ ಶಾಸನದಿಂದ ಛಾಂಪೊಲಿಯನ್ ಆ ದೇವಾಲಯವನ್ನು ನಿರ್ಮಿಸಿದ ಫರೋ(ದೊರೆ)ನ ಹೆಸರು 'ರಾಮ್‌ಸೆಸ್' ಎಂದು ಗುರುತಿಸಿದನು. ಇವನು ರೊಸೆಟ್ಟಾ ಶಿಲಾಲಿಪಿ ಕುರಿತು *précis du systems hieroglyphique* ಎಂಬ ಲೇಖನ ಪ್ರಕಟಿಸಿದ ನಂತರ ಅಲ್ಲಿಯವರೆಗೆ ಹೈರೋಗ್ಲೈಫ್‌ಗಳ ಬಗೆಗೆ ಹರಡಿಕೊಂಡಿದ್ದ ನಿಗೂಢ ಮಾಂತ್ರಿಕತೆ ಕಡಿಮೆಯಾಗಿ ಹೈರೋಗ್ಲೈಫ್‌ಗಳು ಅರ್ಥವಾಗತೊಡಗಿದವು. ಈತ ತನಗಿದ್ದ ಕಾಪ್ಟಿಕ್ ಭಾಷಾ ಜ್ಞಾನದಿಂದಾಗಿ ಹೈರೋಗ್ಲೈಫ್‌ಗಳನ್ನು ಅತ್ಯಂತ ಯಶಸ್ವಿಯಾಗಿ ಅನುವಾದಿಸಲು ತೊಡಗಿದನು. ಆ ಮೂಲಕ ಪ್ರಾಚೀನ ಈಜಿಪ್ಟಿನ ಸಂಸ್ಕೃತಿಯನ್ನು ಬೆಳಕಿಗೆ ತರುವಲ್ಲಿ ಯಶಸ್ವಿಯಾದನು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. *The latest presently known heroglypic inscription* : birthday of Osiris, year110 (of Dioclelian) dated to August 24-396.A.D.

*. *Ancient peoples*; A Hypertext View, drafte by Richard A. Strachan and Kathleen A. Roetzel(1997).

*. http//www.mnsu.edu/emuseum/prehistory/Egypt/hieroglyphics.



# ಅರಾಬಿಕ್, ಪರ್ಷಿಯನ್ ಹಾಗೂ ಉರ್ದು ಲಿಪಿಗಳ ಇತಿಹಾಸ

– ಸುಂಕಂ ಗೋವರ್ಧನ*

**ಪ್ರಾ**ಚೀನ ಪ್ರಪಂಚದ ಈಜಿಪ್ಟ್, ಮೆಸಪಟೋಮಿಯ ಪ್ರದೇಶಗಳಲ್ಲಿ ಕೇವಲ ಚಿತ್ರಲಿಪಿಯಾಗಿ ಕಾಣಿಸಿಕೊಂಡ ಲಿಪಿಯು ಕಾಲಕ್ರಮೇಣ ಮಾನವನ ಬೌದ್ಧಿಕ ಉನ್ನತಿಯನ್ನು ಅನುಸರಿಸಿ 'ಭಾವಲಿಪಿ'ಯಾಗಿ, ನಂತರ 'ಪದಸೂಚಕ ಲಿಪಿ'ಯಾಗಿ, ನಂತರ 'ಏಕಶಬ್ದಾತ್ಮಕ ಲಿಪಿ'ಯಾಗಿ ಪ್ರಪಂಚದ ಹಲವಾರು ಭಾಗಗಳಲ್ಲಿ ಹರಡಿ ಬೇರೆ ಬೇರೆಯ ಮೂಲಗಳಿಂದ ಬೆಳೆದ ಪರಿಪೂರ್ಣ 'ವರ್ಣಲಿಪಿ' ಯಾಗಿ ರೂಪುಗೊಂಡಿತು.

ಸಿಮಿಟಿಕ್ ಪಂಥಕ್ಕೆ ಸೇರಿದ ಪ್ರಧಾನ ಲಿಪಿಯು ಎರಡು ಕವಲುಗಳಾಗಿ ಉತ್ತರ ಸಿಮಿಟಿಕ್ ಮತ್ತು ದಕ್ಷಿಣ ಸಿಮಿಟಿಕ್ ಲಿಪಿಗಳಾಗಿ ಭಾಗವಾಯಿತು. ದಕ್ಷಿಣ ಸಿಮಿಟಿಕ್ ಲಿಪಿಯ ಒಂದು ಪ್ರಕಾರವು ಇಥಿಯೋಪಿಯಾಕ್ಕೆ ಹೋಯಿತು. ಅದರ ಇನ್ನೊಂದು ಪ್ರಕಾರವು ಅರೇಬಿಯಾ, ಸಿನಾಯ್ ಮತ್ತು ಸಿರಿಯಾ ದೇಶಗಳ ಲಿಪಿಗಳಾಗಿ ರೂಪುಗೊಂಡಿತು. ಉತ್ತರ ಸಿಮಿಟಿಕ್ ಪಂಥಕ್ಕೆ ಸೇರಿದ ಒಂದು ಭಾಗ ಕ್ಯಾನನೈಟ್ ಲಿಪಿಯಾಗಿ ರೂಪಾಂತರವಾಯಿತು. ಈ ಕ್ಯಾನನೈಟ್ ಲಿಪಿಯ ಪ್ರಭೇದಗಳು ಮೋಟೈಟ್, ಎಡೋಮೈಟ್, ಆಮೋನೈಟ್ ಮತ್ತು ಫ಼ಿನೀಷಿಯನ್ ಲಿಪಿಗಳಾಗಿ ಜನಪ್ರಿಯವಾಯಿತು.

ಫ಼ಿನೀಷಿಯನ್ ಲಿಪಿಯು ಉತ್ತರ ಸಿಮಿಟಿಕ್ ಪಂಥಕ್ಕೆ ಸೇರಿದ ಲಿಪಿಯಾಗಿದ್ದು ಪ್ರಾಚೀನ ಫ಼ಿನೀಷಿಯನ್ ಅಲಿಬತ್ *(Alibata)* ಎಂದು ಕರೆಯುತ್ತಿದ್ದರು. ಈ ಅಲಿಬತ್ ಲಿಪಿಯು ಕ್ರಿ.ಪೂ. ೮ನೆಯ ಶತಮಾನದಲ್ಲಿ ದಕ್ಷಿಣ ಅರೇಬಿಯಾದಲ್ಲಿ ಪ್ರಚಲಿತವಾಗಿತ್ತು. ಈ ಲಿಪಿಯಲ್ಲಿ ೨೯ ಧ್ವನಿಗಳಿದ್ದವು. ಈ ಭಾಷೆಯು ಕ್ರಮೇಣ ಕ್ರಿ.ಶ. ೫ನೆಯ ಶತಮಾನದ ಹೊತ್ತಿಗೆ ಜನರಿಂದ ದೂರ ಸರಿದು ಅನುಪಯುಕ್ತವಾಯಿತು.

ಈ ಅಲಿಬತ್ ಲಿಪಿಯನ್ನು 'ಅಲಿಬತ್ ಅರಾಮೆಯಿಕ್' ಎಂದು ಕೆಲವು ಶತಮಾನಗಳ ಕಾಲ ಉಪಯೋಗಿಸಿದ ನಂತರ ಈ ಪ್ರಭೇದದಿಂದ ಕೆಲವು ಧ್ವನಿಗಳನ್ನು ಪಡೆದು ಸಿರಿಯಾಕ್ ಲಿಪಿ, ಪಾಲ್ಮಿರೀನ್ ಲಿಪಿ ಹಾಗೂ ನಬಾಟಿಯನ್ ಲಿಪಿಗಳು ಈ ಭಾಷೆಗಳನ್ನಾಡುವ ಜನರಿಂದ ರೂಪುಗೊಂಡಿತು.

ಫ಼ಿನೀಷಿಯನ್ ಲಿಪಿಯ ಸಂಬಂಧಿಯಾದ ಅರಾಮೆಯಿಕ್ ಲಿಪಿಯನ್ನು ನಬಾಟಿಯನ್ ಪಂಗಡದ ಜನರು ತಮ್ಮ ನಬಾಟಿಯನ್ ಭಾಷೆಯನ್ನು ಬರೆಯಲು ಉಪಯೋಗಿಸಿಕೊಂಡರು. ಈ ನಬಾಟಿಯನ್ ಜನರು ಕ್ರಿ.ಪೂ. ೬–೫ ನೆಯ ಶತಮಾನದಲ್ಲಿ ಪೆಟ್ರಾದ ಸುತ್ತಮುತ್ತಲ ಭಾಗಕ್ಕೆ ವಲಸೆ ಬಂದು ಇವತ್ತಿನ ಜೋರ್ಡನ್‌ನಲ್ಲಿ ನೆಲೆ ನಿಂತರು. ಈ ಜನರ ಮೂಲ ಭಾಷೆಯೇ ನಬಾಟಿಯನ್. ಈ ಜನ ಕ್ರಮೇಣ ಕ್ರಿ.ಶ. ೭ನೆಯ ಶತಮಾನದ ಹೊತ್ತಿಗೆ ತಮ್ಮ ಭಾಷೆಯನ್ನು ಬಿಟ್ಟು ಅವತ್ತಿನ ಜೋರ್ಡನ್‌ನ ಸಂವಹನ ಮತ್ತು ವ್ಯಾಪಾರದ ಭಾಷೆಯಾಗಿದ್ದ ಅರಾಮೆಯಿಕ್ ಭಾಷೆಯನ್ನು ತಮ್ಮ ದೈನಂದಿನ ಉಪಯೋಗಕ್ಕೆ ಬಳಸಿಕೊಂಡರು. ಅವರು ಬರವಣಿಗೆಯ ಸಂದರ್ಭದಲ್ಲಿ ಅರಾಮೆಯಿಕ್ ಭಾಷೆಯನ್ನು ಸಹ ತಮ್ಮ ನಬಾಟಿಯನ್ ಲಿಪಿಯಲ್ಲಿಯೇ ಬರೆಯುತ್ತಿದ್ದರು.

ನಂತರ ಈ ನಬಾಟಿಯನ್ ಬರವಣಿಗೆಯು ಎರಡು ರೀತಿಯಲ್ಲಿ ಬೆಳೆದು ಬಂದಿತು. ಮೊದಲನೆಯದು ಕೇವಲ ಶಾಸನಗಳನ್ನು ಬರೆಯಲು ಉಪಯೋಗಿಸುತ್ತಿದ್ದ ಲಿಪಿ. ಇದನ್ನು ಸ್ಮಾರಕ ಲಿಪಿ (Monumetal Nabatean) ಎಂದು ಕರೆದರು. ಎರಡನೆಯದು ಅಕ್ಷರಗಳನ್ನು ಕೂಡಿಸಿಕೊಂಡು ಬರೆಯುವ ಕೂಡು ಅಕ್ಷರ ಕ್ರಮ ಅಥವಾ ಕೂಡು ಲಿಪಿ (Cureive). ಅವರು ಇದನ್ನು ಪ್ಯಾಪಿರಸ್‌ನ ಮೇಲೆ ಬರೆಯುತ್ತಿದ್ದುದರಿಂದ ಹೀಗೆ ಕೂಡು ಅಕ್ಷರಗಳಾಗಿ ಬರೆಯುತ್ತಿದ್ದುದು ಅನಿವಾರ್ಯವಾಗಿತ್ತು. ನಂತರ ಇದೇ ಮಾದರಿ ಜನಪ್ರಿಯವಾಗಿ ಸ್ಮಾರಕ ಲಿಪಿಯ ಮೇಲೂ ಪ್ರಭಾವ ಬೀರಿ ಕ್ರಮೇಣ ಅರಾಬಿಕ್ ಲಿಪಿಯ ಉಗಮವಾಯಿತು.

---

* ನಂ.೬೭, ೧ನೆಯ ಅಂತಸ್ತು, ಕೋದಂಡರಾಮಪುರ, ೫ನೆಯ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು–೫೬೦೦೦೩.

## ಅರಾಬಿಕ್ ಲಿಪಿ

ಅರಾಬಿಕ್ ಲಿಪಿಯು ನಬಾಟಿಯನ್ ಲಿಪಿಯ ಒಂದು ಪ್ರಭೇದವಾಗಿದೆ. ನಬಾಟಿಯನ್ ಲಿಪಿಯ ಮೂಲಕ ಅರಾಬಿಕ್ ಲಿಪಿಯು ಬಳಕೆಗೆ ಬಂದಿತು. ಅರಾಬಿಕ್ ಭಾಷೆಯು ಮೂಲತಃ ಸೆಮಿಟಿಕ್ ಭಾಷಾ ವರ್ಗಕ್ಕೆ ಸೇರಿದ ಭಾಷೆಯಾಗಿದೆ. ಆದರೂ ಈ ಲಿಪಿಯ ಬಳಕೆ ಇಂದಿಗೆ ಎಷ್ಟಿದೆ ಎಂದರೆ ಸೆಮಿಟಿಕ್ ಭಾಷಾ ವರ್ಗಕ್ಕೆ ಸೇರದ ಇಂಡೋ – ಯುರೋಪಿಯನ್ ವರ್ಗಕ್ಕೆ ಸೇರಿದ ಸ್ಲೇವಿಕ್ (ಜೋಸ್ನಿಯಾ), ಸ್ಪಾನಿಷ್ (ಸ್ಪೇನ್) (ಸ್ಪೇನ್‌ನಲ್ಲಿ ಉಪಯೋಗಿಸುವ ಅರಾಬಿಕ್ ಲಿಪಿಯನ್ನು 'ಅಲ್ಜಾಮಿಯಾ' ಎನ್ನುತ್ತಾರೆ). ಪರ್ಷಿಯನ್, ಹಿಂದೂಸ್ತಾನಿ, ಟರ್ಕಿಷ್, ಹಿಬ್ರೂ ಭಾಷೆಗಳಿಗೆ ಹಾಗೂ ಆಫ್ರಿಕಾದ ಭಾಷೆಗಳಾದ ಬರ್ಬರ್, ಸ್ವಾಹಿಲಿ, ಸೂಡನೇಸ್ ಮುಂತಾದ ಭಾಷೆಗಳಿಗೆ, ಉರ್ದು, ಪಂಜಾಬಿ (ಪಾಕಿಸ್ತಾನ), ಕಾಶ್ಮೀರಿ, ಸಿಂಧಿ ಮುಂತಾದ ಭಾರತೀಯ ಭಾಷೆಗಳಿಗೆ ಲಿಪಿಯಾಗಿ ಇಂದು ಜಗತ್ತಿನಾದ್ಯಂತ ಬಳಕೆಯಲ್ಲಿದೆ. ಲ್ಯಾಟಿನ್ ಲಿಪಿಯನ್ನು ಬಿಟ್ಟರೆ ಜಗತ್ತಿನಾದ್ಯಂತ ಇಂದು ವ್ಯಾಪಕವಾಗಿ ಉಪಯೋಗಿಸುತ್ತಿರುವ ಲಿಪಿಯಾಗಿ ಅರಾಬಿಕ್ ಲಿಪಿಯು ಎರಡನೆಯ ಸ್ಥಾನದಲ್ಲಿದೆ.

ಶಾಸ್ತ್ರೀಯ ಪೂರ್ವ ಅರಾಬಿಕ್ (Pre-Classical Arab) ಶಾಸನಗಳು ಹಾಗೂ ಶಾಸ್ತ್ರೀಯ ಅರಾಬಿಕ್ (Cultural Arab) ಶಾಸನಗಳು ನಮಗೆ ಸಿಕ್ಕಿರುವುದು ಅತ್ಯಲ್ಪ ಪ್ರಮಾಣದಲ್ಲಿ. ಈ ಶಾಸ್ತ್ರೀಯ ಪೂರ್ವ ಅರಾಬಿಕ್ ಶಾಸನಗಳು ನಮಗೆ ಖುರ್‌ಯತ್ ಅಲ್ಫಾ ಕಾಲದಿಂದ (ಕ್ರಿ.ಪೂ. ೧ನೆಯ ಶತಮಾನ) ಕ್ರಿ.ಶ. ೧ನೆಯ ಶತಮಾನದವರೆಗಿನ ಅವಧಿಯಲ್ಲಿ ದೊರೆಯುತ್ತದೆ.

ಡಮಾಸ್ಕಸ್‌ನ ಆಗ್ನೇಯಕ್ಕಿರುವ ಎನ್–ನೆಮರಾಹ್‌ನಲ್ಲಿ ದೊರಕಿದ ಕ್ರಿ.ಶ. ೩೨೮ ರ ನಬಾಟಿಯನ್ ಶಾಸನದಲ್ಲಿಯೇ ಅರಾಬಿಕ್ ಭಾಷೆ ಹಾಗೂ ಲಿಪಿಯ ಕೆಲವು ಲಕ್ಷಣಗಳು ಕಂಡುಬರುವುದಾದರೂ ಅರಾಬಿಕ್ ಭಾಷೆ ಹಾಗೂ ಲಿಪಿಯ ಅಧಿಕೃತ ಶಾಸನ ೧೮೭೯ ರಲ್ಲಿ ಸಿರಿಯಾದ ಅಲಿಪ್ಪೆಯ ಸಮೀಪದ ಜ಼ಬದ್‌ನಲ್ಲಿ ಪತ್ತೆಯಾದ ಕ್ರಿ.ಶ. ೫೧೨ ರ ಗ್ರೀಕ್, ಸಿರಿಯಾಕ್ ಹಾಗೂ ಅರಾಬಿಕ್ ಭಾಷೆಗಳ ತ್ರಿಭಾಷಾ ಶಾಸನವಾಗಿದೆ.

ಕ್ರಿ.ಶ. ೧೦ನೆಯ ಶತಮಾನದ ಉತ್ತರಾರ್ಧದಲ್ಲಿ ಬದುಕಿದ್ದ ಪ್ರಖ್ಯಾತ ಅರಾಬಿಕ್ ಬರಹಗಾರನಾದ ನದೀಮ್‌ನ ಪ್ರಕಾರ ಅರಾಬಿಕ್ ಲಿಪಿಯು ನಾಲ್ಕು ಮುಖ್ಯ ನಗರಗಳಲ್ಲಿ ಬೆಳೆದು ಬಂದಿತು. ೧. ಮೆಕ್ಕಾ, ೨. ಮದೀನ, ೩. ಬಸ್ರಾ, ೪. ಕೂಫ಼. ಈ ನಗರಗಳಲ್ಲಿದ್ದ ವಿದ್ಯಾಲಯಗಳು ಈ ಸ್ಥಳೀಯ ಲಿಪಿಯ ವಿಕಾಸಕ್ಕಾಗಿ ಹೆಚ್ಚಿನ ಪ್ರೋತ್ಸಾಹ ನೀಡಿದವು. ಮಹಮ್ಮದ್ ಪೂರ್ವಯುಗದಲ್ಲಿ ಬಳಕೆಯಲ್ಲಿದ್ದ ಎರಡು ರೀತಿಯ ಬರವಣಿಗೆಯ ಪ್ರಭೇದಗಳನ್ನು ನದೀಮ್ ದಾಖಲಿಸಿದ್ದಾನೆ. ಇವುಗಳೆಂದರೆ ಒಂದು ಕುಫ್ಲಿಕ್, ಇನ್ನೊಂದು ನಕ್ಷ್. ಕುಫ್ಲಿಕ್ ಬರಹವು ೭ ನೆಯ ಶತಮಾನದ ಕಡೆಯ ಹೊತ್ತಿಗೆ ಕೂಫ಼ ಮತ್ತು ಬಸ್ರಾ ಪ್ರದೇಶಗಳಲ್ಲಿ ಬೆಳೆದು ಸುಂದರವಾದ ಸ್ಮಾರಕ ಬರಹ ಆಯಿತು. ಕಲ್ಲು, ಲೋಹಗಳ ಮೇಲೆ, ಮಸೀದಿಯ ಗೋಡೆಗಳ ಮೇಲೆ ಬರೆಯಲು ವಿಶೇಷವಾಗಿ ಇದನ್ನು ಉಪಯೋಗಿಸಲಾಗುತ್ತಿತ್ತು. ನಕ್ಷ್ ಬರಹವು ಮೆಕ್ಕಾ, ಮದೀನ ಭಾಗಗಳಲ್ಲಿ ಪ್ರಚಾರಕ್ಕೆ ಬಂದು ಈ ರೀತಿಯ ಬರವಣಿಗೆಯು ಪ್ಯಾಪರಸ್‌ನ ಮೇಲೆ ಬರೆಯಲು ಬಳಸುತ್ತಿದ್ದುದರಿಂದ ಹೆಚ್ಚು ದುಂಡಗೂ ಹಾಗೂ ಕೂಡು ಅಕ್ಷರಗಳ (Cureive) ಪಂಥಕ್ಕೆ ಸೇರಿಹೋಯಿತು.

ಸುಮಾರು ೪೦,೦೦೦ ಕ್ಕೂ ಹೆಚ್ಚಿನ ಇಸ್ಲಾಂ ಪೂರ್ವ ಕಾಲದ ಶಾಸನಗಳಲ್ಲಿ ಬಹುತೇಕ ಪ್ರಾಚೀನ ಉತ್ತರ ಅರಾಬಿಯನ್ ಭಾಷೆಗಳಿದ್ದು, ಇವುಗಳಲ್ಲಿ ತುಮುಡಿಕ್, ಲಿಹ್ಯಾನಿಕ್, ತೈಮೊನಿಟಿಕ್, ಡುಮಾಯ್‌ಟಿಕ್ ಭಾಷೆಯ ಶಾಸನಗಳು ಉತ್ತರದಲ್ಲಿಯೂ, ಹಾಸಿಯಾಟಿಕ್ ಭಾಷೆಯ ಶಾಸನಗಳು ಪೂರ್ವದಲ್ಲಿಯೂ, ಹಿಸ್‌ಮಾಯ್ಕ್ ಭಾಷೆಯ ಶಾಸನಗಳು ಮಧ್ಯ ಅರೇಬಿಯಾದಲ್ಲಿಯೂ ಲಭ್ಯವಿದ್ದರೂ ಅರಾಬಿಕ್ ಶಾಸನಗಳು ಸಿಕ್ಕಿರುವುದು ಕೇವಲ ೫ ಮಾತ್ರ.

ಅರಾಬಿಕ್ ಲಿಪಿಯು ಪ್ರಧಾನವಾಗಿ ಅರಾಬಿಕ್ ಭಾಷೆಯನ್ನು ಬರೆಯಲು ಬಳಸುವ ಭಾಷೆಯಾದರೂ ಅನೇಕ ಭಾಷೆಗಳ ಮಾತೃ ಲಿಪಿ ಆಗಿ ಇದು ಜನಪ್ರಿಯವಾಗಿದೆ. ಅರಾಬಿಕ್ ವರ್ಣಮಾಲೆಯಲ್ಲಿ ೨೮ ಅಕ್ಷರಗಳಿದ್ದು, ಈ ಲಿಪಿಯನ್ನು ಬಲಗಡೆಯಿಂದ ಎಡಗಡೆಗೆ ಬರೆಯುವ ಪದ್ಧತಿ ರೂಢಿಯಲ್ಲಿದೆ ಹಾಗೂ ಪ್ರತಿಯೊಂದು ಅಕ್ಷರಗಳನ್ನೂ ತನ್ನ ಮುಂದಿನ ಅಕ್ಷರದೊಂದಿಗೆ ಸೇರಿಸಿ ಬರೆಯುವ ರೂಢಿ ಇದ್ದು ಇದೂ ಕೂಡು ಅಕ್ಷರ ಶೈಲಿ (Cureive writing) ಎಂದು ಜನಪ್ರಿಯವಾಗಿದೆ. ಈ ಲಿಪಿಯು ಕೂಡು ಅಕ್ಷರ ಶೈಲಿಯಲ್ಲಿ ಇರುವುದರಿಂದ ಪ್ರತಿಯೊಂದು ಅಕ್ಷರವೂ ಪದಾದಿಯಲ್ಲಿ, ಪದಮಧ್ಯದಲ್ಲಿ ಹಾಗೂ ಪದಾಂತ್ಯದಲ್ಲಿ ಬರುವಾಗ ಅದರ ರೂಪವು ಬದಲಾಗುತ್ತದೆ. ಕೆಲವೊಂದು ಅಕ್ಷರಗಳು ಮುಂದಿನ

ಅಕ್ಷರಗಳೊಂದಿಗೆ ಸೇರುತ್ತವೆ. ಕೆಲವು ಸೇರುವುದಿಲ್ಲ. ಇದನ್ನು Connectors ಮತ್ತು Non-connectors ಎಂದು ಗುರುತಿಸುತ್ತಾರೆ. ಪದಾಂತ್ಯದ ಅಕ್ಷರಗಳು ಮಾತ್ರ ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಳ್ಳುತ್ತವೆ.

ನಾವು ಇಂದು ಉಪಯೋಗಿಸುತ್ತಿರುವ ಸ್ವರ ಸಂಜ್ಞೆಗಳು ಪ್ರಾಚೀನ ಅರಾಬಿಕ್‌ನಲ್ಲಿ ಇರಲಿಲ್ಲ. ಮೊದಲು ಅರಾಮೆಯಿಕ್ ಲಿಪಿಯಲ್ಲಿ ಕೇವಲ ೧೫ ಧ್ವನಿಗಳು ಮಾತ್ರ ಇದ್ದವು. ನಬಾಟಿಯನ್ ಲಿಪಿಯಲ್ಲಿ ೨೨ ಧ್ವನಿಗಳು ಪ್ರಯೋಗದಲ್ಲಿದ್ದವು. ಆದರೆ ಅರಾಬಿಕ್ ಭಾಷೆಯನ್ನು ಬರೆಯಲು ೨೮ ಧ್ವನಿಗಳ ಅವಶ್ಯಕತೆ ಇತ್ತು. ಆಗ ಅರಾಬಿಕ್ ಭಾಷೆಯನ್ನು ನಬಾಟಿಯನ್ ಲಿಪಿಯಲ್ಲಿ ಬರೆಯುವಾಗ ಆರು ಅಕ್ಷರಗಳಿಗೆ ಎರಡೆರಡು ಧ್ವನಿಗಳನ್ನು ಉಪಯೋಗಿಸಬೇಕಾಗಿತ್ತು. ಇದು ಹಲವಾರು ಸಲ ಗೊಂದಲಕ್ಕೆ ಎಡೆ ಮಾಡಿಕೊಡುತ್ತಿತ್ತು. ಅರಾಬಿಕ್ ಭಾಷೆಗೆ ಪೂರ್ವದ ಯಾವ ಭಾಷೆಯ ಲಿಪಿಯಲ್ಲಿಯೂ ಸ್ವರಗಳ ಬಳಕೆ ಇರಲಿಲ್ಲ. ಎಲ್ಲಾ ಸಂಪೂರ್ಣ ವ್ಯಂಜನಗಳನ್ನು ಮಾತ್ರ ಬಳಸಿ ಬರೆಯಲಾಗುತ್ತಿತ್ತು. ಅವತ್ತಿನ ಲಿಪಿಯಲ್ಲಿ ೧೭ ರೀತಿಯ ಅಕ್ಷರ ರೂಪಗಳು ಮಾತ್ರ ಪ್ರಚಲಿತವಾಗಿತ್ತು. ಈ ಅಕ್ಷರಗಳ ರೂಪ ಸಾಮ್ಯತೆ ಬಹಳ ಇತ್ತು. ಉದಾಹರಣೆಗೆ ಬೆ, ತೆ, ಟೆ, ನ, ಯ ಗಳು ಒಂದೇ ರೂಪ ಸಾಮ್ಯತೆಯನ್ನು ಹೊಂದಿದ್ದವು. ಹಾಗೂ ಜ, ಹ, ಖ ಗಳು ಒಂದೇ ರೀತಿ ಇದ್ದವು. ನಾಲ್ಕು ಅಕ್ಷರ ರೂಪುಗಳು ಎರಡೆರಡು ಧ್ವನಿಯನ್ನು ಪ್ರತಿನಿಧಿಸುತ್ತಿದ್ದವು.

ಆರನೆಯ ಶತಮಾನದ ಉತ್ತರಾರ್ಧದಲ್ಲಿ ಉಮಾಯದ್‌ನ ರಾಜ್ಯಪಾಲನಾಗಿದ್ದ ಹಜ್ಜಾಜ್-ಇಬ್ನೆ-ಯೂಸೂಫ್ ಈ ಲಿಪಿಯ ಬಗೆಗೆ ಇರುವ ಗೊಂದಲಗಳನ್ನು ಬಗೆ ಹರಿಸಲು ಲಿಪಿಗೆ ಸ್ವರ ಸಂಜ್ಞೆಗಳನ್ನು, ಉದಾಹರಣೆಗೆ ಅ ಅಕ್ಷರಕ್ಕೆ ತಲೆಯ ಮೇಲೊಂದು ಚುಕ್ಕೆ (ಉದಾ i ), ಇ ಅಕ್ಷರಕ್ಕೆ 'ಅ' ಅಕ್ಷರದ ಕೆಳಗೆ ಚುಕ್ಕೆ (ಉದಾ ←) ಮುಂತಾದ ಆವಿಷ್ಕಾರವನ್ನು ಮಾಡಿದನು. ಇದು ಕೆಲವೊಂದು ಅಕ್ಷರಗಳನ್ನು ಸ್ಫುಟವಾಗಿ ಗುರುತಿಸಲು ಸಹಾಯ ಮಾಡಿತು. ೭ನೆಯ ಶತಮಾನದಲ್ಲಿ ಪವಿತ್ರ ಖುರಾನ್‌ನನ್ನು ಬರೆಯಲು ಆರಂಭಿಸಿದಾಗ ಮೇಲಿನ ಗೊಂದಲಗಳನ್ನು ಅರಿತಿದ್ದವರು ಪೂರ್ಣ ಪ್ರಮಾಣದ ಅರಾಬಿಕ್ ಲಿಪಿಯ ಹುಟ್ಟಿಗೆ ಕಾರಣರಾದರು. ಸ್ವಲ್ಪ ಮಟ್ಟಿನ ಸಂಜ್ಞೆಗಳನ್ನು (Qiaritical marks) ಲಿಪಿಗೆ ಸೇರಿಸುವುದರ ಮೂಲಕ ಅಕ್ಷರಗಳು ಪೂರ್ಣವಾಗಿ ಸ್ಫುಟವಾಯಿತು. ೭ನೆಯ ಶತಮಾನಕ್ಕೆ ಹಿಂದಿನ ಲಿಪಿಯಲ್ಲಿ ಈ ಬಗೆ ಇರಲಿಲ್ಲ. ಹೀಗೆ ಸಂಜ್ಞೆಗಳೊಂದಿಗೆ ಪರಿಪೂರ್ಣವಾಗಿ ಬರೆದ ಪ್ರಾಚೀನ ಶಾಸನ ನಮಗೆ ದೊರೆತಿರುವುದು ಕ್ರಿ.ಶ. ೬೪೩ ರ ಮೇಲಿನ ಪ್ಯಾಪರೆಸ್ ಶಾಸನ. ಈ ಬಗೆಯ ಲಿಪಿವಿನ್ಯಾಸವನ್ನು ಕ್ರಿ.ಶ. ೭೮೬ ರಲ್ಲಿ ಅಲ್-ಫ಼ರಾಹಿದಿಯು ಅತ್ಯಂತ ವ್ಯವಸ್ಥಿತಗೊಳಿಸಿದನು.

ಅರಾಬಿಕ್ ಲಿಪಿಯ ಸಂಪೂರ್ಣ ಆವಿಷ್ಕಾರದೊಂದಿಗೆ ಉಚ್ಚಾರಣೆಯಲ್ಲಿ ಇದ್ದ ದೊಡ್ಡ ಗೊಂದಲವು ಪರಿಹಾರವಾಯಿತು. ಉದಾಹರಣೆಗೆ ಪ್ರಾಚೀನ ಅರಬರು 'ಕತಬ' ಎಂದು ಬರೆದು ಅದನ್ನು ಕತಬ್ (ಅವನು ಬರೆದನು), ಕುತಿಬ (ನಾನು ಬರೆದೆನು), ಕುತುಬ್ (ಪುಸ್ತಕಗಳು) ಎಂದೆಲ್ಲಾ ಓದಬಹುದಿತ್ತು. 'ಮಲಕ್' ಎಂದು ಬರೆದರೆ ಮಲಿಕ್, ಮುಲಕ್, ಮುಲ್ಕ್, ಮಲುಕು ಮುಂತಾಗಿ ನಾನಾ ರೀತಿಯಲ್ಲಿ ಓದಬಹುದಿತ್ತು. ಅಕ್ಷರಗಳಿಗೆ ಸರಿಯಾದ ಸ್ವರ ಸಂಜ್ಞೆಗಳು ಬಂದು ಸಮಸ್ಯೆಯು ಪರಿಹಾರವಾಯಿತು. ಎರಡೆರಡು ಧ್ವನಿಗಳಿದ್ದ ಅಕ್ಷರಗಳ(ಉದಾ : ತ ಎಂದು ಬರೆದರೆ ತ ಹಾಗೂ ಹ ಆಗುತ್ತಿತ್ತು) ಸಮಸ್ಯೆಯೂ ಪರಿಹಾರವಾಯಿತು.

ಅರಾಬಿಕ್ ಲಿಪಿಯನ್ನು 'ಅಬ್‌ಜದ್' ಎಂದು ಕರೆಯುತ್ತಾರೆ. ಅರಾಬಿಕ್‌ನಲ್ಲಿ ದೀರ್ಘ ಸ್ವರಗಳನ್ನು ಬರೆಯಲಾಗುತ್ತದೆ. ಆದರೆ ಹ್ರಸ್ವ ಸ್ವರಗಳನ್ನು ಬರವಣಿಗೆಯಲ್ಲಿ ತೋರಿಸಲಾಗುವುದಿಲ್ಲ. ಈ ಭಾಷೆಯ ಬಗೆಗಿನ ಸ್ಪಷ್ಟವಾದ ಜ್ಞಾನ ಇರುವವರು ಮಾತ್ರ ಇದನ್ನು ಸರಿಯಾಗಿ ಉಚ್ಚರಿಸಬಲ್ಲರು.

ಇಂದು ಅರಾಬಿಕ್ ಲಿಪಿಯನ್ನು ಹಲವಾರು ಶತಮಾನಗಳಿಂದ ಹೇಗೆ ಬರೆಯುತ್ತಾ ಬಂದಿರುವರೋ ಹಾಗೇ ಬರೆಯುತ್ತಿದ್ದಾರೆ. ಭಾರತೀಯ ಲಿಪಿಗಳು ಕಾಲ ಕಾಲಕ್ಕೆ ಬದಲಾದಂತೆ ಇದು ಬದಲಾಗಿಲ್ಲ. ಆದರೆ ಅರಾಬಿಕ್ ಕ್ಯಾಲಿಗ್ರಫ಼ಿಯಲ್ಲಿ ಮಾತ್ರ ಹಲವಾರು ರೀತಿಯ ಬರವಣಿಗೆಯ ಕ್ರಮಗಳಿವೆ.

**ಪರ್ಷಿಯನ್ ಲಿಪಿ**

ಕ್ರಿ.ಶ. ೧೯೩೫ ರವರೆಗೆ ಇಂದಿನ ಇರಾನ್ ದೇಶಕ್ಕಿದ್ದ ಅಧಿಕೃತ ಹೆಸರೆಂದರೆ 'ಪರ್ಷಿಯಾ'. ಪ್ರಪಂಚದ ಅತ್ಯಂತ ಶ್ರೀಮಂತ ಪರಂಪರೆಯನ್ನು ಹೊಂದಿರುವ ದೇಶಗಳಲ್ಲಿ ಪರ್ಷಿಯಾಕ್ಕೆ ವಿಶೇಷ ಸ್ಥಾನವಿದೆ. ಈ ಪರ್ಷಿಯನ್ ಭಾಷೆಯು ಇಂಡೋ-ಯೂರೋಪಿಯನ್ ಭಾಷಾ ವರ್ಗಕ್ಕೆ ಸೇರಿದ ಭಾಷೆಯಾಗಿದೆ. ಸುಮಾರು ೪೦ ಮಿಲಿಯನ್ ಜನರು ಆಡುವ

ಈ ಭಾಷೆ ಮಧ್ಯ ಇರಾನ್ ಮತ್ತು ದಕ್ಷಿಣ ಮಧ್ಯ ಇರಾನಿನ ಭಾಷೆಯಾಗಿದೆ. ಈ ಭಾಷೆಗೆ ತೀರ ಹತ್ತಿರವಾದ 'ದರಿ' ಭಾಷೆಯನ್ನು ಆಫ್ಘಾನಿಸ್ತಾನ್ ಹಾಗೂ ಪಾಕಿಸ್ತಾನ್ ಮುಂತಾದ ಭಾಗಗಳಲ್ಲಿ ಸುಮಾರು ೭ ಮಿಲಿಯನ್ ಜನರು ಮಾತನಾಡುತ್ತಾರೆ. ಪರ್ಷಿಯಾದ ಇನ್ನೊಂದು ಉಪಭಾಷೆಯಾದ 'ತಾಜಿಕಿ'ಯನ್ನು ಉಜ್ಬೆಕಿಸ್ತಾನ, ತಜಕಿಸ್ತಾನ, ಕಜಕಿಸ್ತಾನ, ಕಿರ್ಗಿಸ್ತಾನ, ರಷ್ಯಾ, ಟರ್ಕಿಮಿನಿಸ್ತಾನ ಮತ್ತು ಉಕ್ರೇನಿನ ಸುತ್ತಮುತ್ತ ೪.೪ ಮಿಲಿಯನ್ ಜನರಾಡುತ್ತಾರೆ.

ಪರ್ಷಿಯನ್ ಭಾಷೆಯನ್ನು ವಿವಿಧ ಕಾಲಘಟ್ಟಗಳಲ್ಲಿ ವಿವಿಧ ಲಿಪಿಗಳಲ್ಲಿ ಬರೆದಿರುವುದು ನಮಗೆ ಕಂಡುಬರುತ್ತದೆ. ಪರ್ಷಿಯಾದ ಅತ್ಯಂತ ಪ್ರಾಚೀನ ಬರಹವೆಂದರೆ ಕ್ರಿ.ಪೂ. ೬೦೦-೫೦೦ ರಲ್ಲಿ ಬಳಕೆಯಲ್ಲಿದ್ದ ಕ್ಯೂನಿಫಾರಂ ಲಿಪಿಯೇ ಆಗಿದೆ. ಈ ಲಿಪಿಯನ್ನು ವಿದ್ವಾಂಸರು 'ಖಟ್-ಎ-ಮಿಖಿ' ಎಂದರೆ 'ಉಗುರುಗಳ ಬರಹ' ಎಂದು ಕರೆದಿರುತ್ತಾರೆ.

ಶತಮಾನಗಳ ನಂತರ ಈ ಭಾಗದಲ್ಲಿ ಅವೇಸ್ಥ ಲಿಪಿಯನ್ನು ಬರೆಯಲು ಆರಂಭಿಸಿದರು. ಕ್ರಿ.ಪೂ. ಮೂರನೆಯ ಶತಮಾನದ ಹೊತ್ತಿಗೆ ಪರ್ಷಿಯನ್ನರು ತಮ್ಮದೇ ಆದ ಪೂರ್ಣಪ್ರಮಾಣದ ಪರ್ಷಿಯನ್ ಭಾಷೆಯನ್ನೂ ಹಾಗೂ ಪಹ್ಲವಿ ಎಂಬ ಲಿಪಿಯನ್ನು ಕಂಡುಕೊಂಡರು.

ಪಹ್ಲವಿ ಲಿಪಿಯು ಸ್ಥಳೀಯ ಅರಾಮೆಯಿಕ್ ಲಿಪಿಯಿಂದ ಸ್ವಾಭಾವಿಕವಾಗಿ ಬೆಳೆದು ಬಂದ ಲಿಪಿಯೇ ಆಗಿದೆ. ಆ ಕಾಲದಲ್ಲಿ ಈ ಪಹ್ಲವಿ, ಬರವಣಿಗೆಯಲ್ಲಿ ಮೂರು ಪ್ರಭೇದಗಳು ಕಾಣಿಸುತ್ತಿತ್ತು. (೧) ವಾಯುವ್ಯ ಪಹ್ಲವಿಯನ್ನು ಪಾರ್ಥಿಯನ್ನರ ಲಿಪಿಯೆಂದೇ ಕರೆಯುತ್ತಿದ್ದರು. ಈ ಲಿಪಿಯನ್ನು ಅರ್ಸಾಸಿಡ್ (Arsasid) ಲಿಪಿ ಎಂದು ಕರೆಯುತ್ತಿದ್ದರು. ಈ ಲಿಪಿಯನ್ನು ಮುಖ್ಯವಾಗಿ ನಾಣ್ಯಗಳ ಮೇಲೆ ಉಪಯೋಗಿಸುತ್ತಿದ್ದರು. (೨) ನೈರುತ್ಯ ಭಾಗದಲ್ಲಿ ಬಳಕೆಯಲ್ಲಿದ್ದ ಪಹ್ಲವಿಯನ್ನು ಮುಖ್ಯವಾಗಿ ಸ್ಮಾರಕ ಲಿಪಿಯಾಗಿ ಕಲ್ಲಿನ ಮೇಲೆ ಬರೆಯಲು ಬರೆಯುವ ಸಲುವಾಗಿ ಉಪಯೋಗಿಸುತ್ತಿದ್ದರು. (೩) ಪೂರ್ವ ಭಾಗದಲ್ಲಿ ಉಪಯೋಗದಲ್ಲಿದ್ದ ಪ್ಯಾಪಿರಸ್‌ನ ಮೇಲೆ ಬರೆಯುತ್ತಿದ್ದ ಕ್ರಮದ ಪಹ್ಲವಿ.

ಪರ್ಷಿಯನ್ ಭಾಷೆಯನ್ನು ಹಲವಾರು ಲಿಪಿಗಳಲ್ಲಿ ಬರೆಯುತ್ತಿದ್ದರು. ಕ್ರಿ.ಶ. ೬೪೨ ರಲ್ಲಿ ಪರ್ಷಿಯನ್ ಸಸಾನಿಯನ್ನರ ಮೇಲೆ ಇಸ್ಲಾಂನ ವಿಜಯ ಆಗಿ ಇಸ್ಲಾಂ ಸಂಸ್ಕೃತಿಯು ಪರ್ಷಿಯಾದಲ್ಲಿ ಹರಡಲು ಆರಂಭವಾಯಿತು. ಕ್ರಮೇಣ ಪರ್ಷಿಯನ್ನರ ಧರ್ಮ ಹಾಗೂ ಸಂಸ್ಕೃತಿಯ ಮೇಲೆ ಅರಾಬಿಕ್ ಭಾಷೆ ಹಾಗೂ ಲಿಪಿಯ ಪ್ರಭಾವ ಹೆಚ್ಚಾಗಿ ಅರಾಬಿಕ್ ರಾಜಭಾಷೆಯಾಗಿ ಮೆರೆಯಿತು. ಕ್ರಿ.ಶ. ೭ನೆಯ ಶತಮಾನದಿಂದ ಪರ್ಷಿಯನ್ನರು ಅರಾಬಿಕ್ ಲಿಪಿಯನ್ನು ಬಳಸಲು ಆರಂಭಿಸಿದರು.

ಈಗಾಗಲೇ ಅರಾಬಿಕ್‌ನಲ್ಲಿದ್ದ ೨೮ ವರ್ಣಗಳಿಗೆ ಪರ್ಷಿಯನ್ನರು ೪ ವರ್ಣಗಳನ್ನು ಸೇರಿಸಿ ಒಟ್ಟು ೩೨ ವರ್ಣಗಳನ್ನಾಗಿ ಮಾಡಿದರು. ಪರ್ಷಿಯಾಕ್ಕೆ ಬರುವುದರಲ್ಲಿ ಅರಾಬಿಕ್ ಲಿಪಿಯಲ್ಲಿ ಸ್ವಲ್ಪ ಮಟ್ಟಿಗಿನ ಸ್ವರ ಸಂಜ್ಞೆಗಳ ಬಳಕೆ ಆರಂಭವಾಗಿತ್ತು. ಪರ್ಷಿಯನ್ನರು ಈ ವಿಷಯದಲ್ಲಿ ಹೆಚ್ಚಿನ ಕಷ್ಟ ಅನುಭವಿಸಬೇಕಾಗಲಿಲ್ಲ.

ಪೆ, ಚೆ, ಷೆ, ಗಾಫ್ (ಗ) ಎಂಬ ನಾಲ್ಕು ಅಕ್ಷರಗಳ ಪ್ರಯೋಗ ಪರ್ಷಿಯನ್ ಭಾಷೆಯಲ್ಲಿ ಹೆಚ್ಚು. ಅರಾಬಿಕ್ ವರ್ಣಮಾಲೆಯಲ್ಲಿ ಈ ಅಕ್ಷರಗಳು ಇರಲಿಲ್ಲ. ಆದುದರಿಂದ ಈ ನಾಲ್ಕು ಅಕ್ಷರಗಳನ್ನು ಸೇರಿಸಿ ೩೨ ಅಕ್ಷರಗಳನ್ನು ಪರ್ಷಿಯಾದ ವರ್ಣಮಾಲೆಯಲ್ಲಿ ಸೇರಿಸಲಾಯಿತು.

**ಉರ್ದು ಲಿಪಿ**

ಇಂಡೋ-ಯೂರೋಪಿಯನ್ ಭಾಷಾ ಪ್ರಭೇದದಲ್ಲಿ ಇಂಡೋ-ಇರಾನಿಯನ್ ಪಂಗಡಕ್ಕೆ ಸೇರಿದ ಇಂಡೋ-ಆರ್ಯನ್ ಭಾಷೆಯಾದ ಉರ್ದುವು ಜನ್ಮ ತಾಳಿದ್ದು ಭಾರತ ದೇಶದಲ್ಲಿ. ಪ್ರಪಂಚದ ಅತ್ಯಂತ ತರುಣ ಭಾಷೆಯಾದ ಉರ್ದುವು ಸ್ವತಂತ್ರ ಪೂರ್ವ ಭಾರತದ ಅತಿ ಮುಖ್ಯ ಭಾಷೆಗಳಲ್ಲಿ ಮೂರನೆಯ ಸ್ಥಾನದಲ್ಲಿತ್ತು. ಇಂದು ಪ್ರಪಂಚದ ಜನರಾಡುವ ಭಾಷೆಗಳಲ್ಲಿ ೨೦ನೆಯ ಸ್ಥಾನವನ್ನು ಪಡೆದುಕೊಂಡಿದೆ.

ಅರಾಬಿಕ್, ಪರ್ಷಿಯಾ ಹಾಗೂ ಟರ್ಕಿಷ್ ಭಾಷೆಗಳ ಪ್ರಭಾವದಿಂದ ಭಾರತದಲ್ಲಿ ಮೊಘಲ್ ದೊರೆಗಳ ಕಾಲದಲ್ಲಿ ರೂಪುಗೊಂಡ ಭಾಷೆಯೇ ಉರ್ದು. ದೆಹಲಿ ಸುಲ್ತಾನರ ಆಡಳಿತದಲ್ಲಿ (೧೫೨೬-೧೮೫೮) ಪರ್ಷಿಯಾ ಭಾಷೆಯ ನೇರ ಪ್ರಭಾವದಿಂದ ಉರ್ದು ಭಾಷೆಯ ಉಗಮವಾಯಿತು ಎಂಬ ಪ್ರಮುಖ ವಾದವೂ ಇದೆ.

ಷಹಜಹಾನ್ ದೆಹಲಿಯಲ್ಲಿ ಕೆಂಪುಕೋಟೆಯನ್ನು ಕಟ್ಟಿದ ನಂತರವೇ 'ಉರ್ದು' ಪದದ ಬಳಕೆ ಆರಂಭವಾಯಿತು.

ಇದು ಮೂಲತಃ ಟರ್ಕಿ ಭಾಷೆಯಿಂದ ಎರವಲು ಪಡೆದುಕೊಂಡ ಪದ. ಇದರ ಅರ್ಥ ಸೇನಾಪಾಳೆಯ ಅಥವಾ ಸೇನಾಶಿಬಿರ. ಸೈನ್ಯದಲ್ಲಿದ್ದ ಸೈನಿಕರು ಬೇರೆ ಬೇರೆ ಭಾಗಗಳಿಂದ ಬಂದವರಾಗಿರುತ್ತಿದ್ದರು. ಅವರೆಲ್ಲ ಸೇರಿ ಒಂದು ಸಾಮಾನ್ಯವಾದ ಭಾಷೆಯನ್ನು ಕಂಡುಕೊಂಡರು.

ಪಾಕಿಸ್ತಾನದ ರಾಷ್ಟ್ರೀಯ ಭಾಷೆಯಾದ ಉರ್ದು ಭಾಷೆಯು ಭಾರತದ ೨೩ ಮುಖ್ಯ ಅಧಿಕೃತ ಭಾಷೆಗಳಲ್ಲೂ ಸ್ಥಾನ ಪಡೆದುಕೊಂಡಿದೆ. ಉರ್ದುವಿನಲ್ಲಿ ದಖಿನಿ, ಪಿಂಜರಿ, ರೇಖ್ತಾ, ಖರೀಜೋಲಿ ಎಂಬ ನಾಲ್ಕು ಮುಖ್ಯವಾದ ಉಪಭಾಷಾ ಪ್ರಭೇದಗಳಿವೆ. ಇದರೊಂದಿಗೆ ಪ್ರಾದೇಶಿಕ ವ್ಯತ್ಯಾಸಗಳೂ ಸಹ ಈ ಭಾಷೆಯಲ್ಲಿ ಪ್ರಚಲಿತದಲ್ಲಿವೆ.

ಉರ್ದು ಲಿಪಿಯು ಪರ್ಷಿಯಾ ಲಿಪಿಯಿಂದ ಎರವಲು ಪಡೆದುಕೊಂಡ ಲಿಪಿ. ನೇರವಾಗಿ ಪರ್ಷಿಯಾದಲ್ಲಿ ಉಪಯೋಗಿಸುತ್ತಿದ್ದ ಪೂರ್ಣ ವರ್ಣಮಾಲೆಯನ್ನು ಹಾಗೆಯೇ ತೆಗೆದುಕೊಳ್ಳಲಾಗಿದೆ. ಭಾರತದಲ್ಲಿ ಇದರ ಸೋದರ ಭಾಷೆಗಳಾದ ಹಿಂದಿ, ಸಂಸ್ಕೃತಗಳ ಪ್ರಭಾವ, ದಕ್ಷಿಣ ಭಾರತೀಯ ಭಾಷೆಗಳ ಪ್ರಭಾವ, ಪರ್ಷಿಯಾ, ಅರಾಬಿಕ್, ಟರ್ಕಿಷ್ ಭಾಷೆಗಳ ಪ್ರಭಾವ ಇರುವುದರಿಂದ ಆಯಾ ಭಾಷೆಯ ಅನೇಕಾನೇಕ ಪದಗಳು ಉರ್ದುವಿನಲ್ಲಿ ಬಳಕೆಯಲ್ಲಿರುವುದರಿಂದ ಪರ್ಷಿಯಾದ ವರ್ಣಮಾಲೆಯಲ್ಲಿದ್ದ ೩೨ ವರ್ಣಗಳಿಗೆ ೬ ವರ್ಣಗಳನ್ನು ಸೇರಿಸಿ ಒಟ್ಟು ೩೮ ವರ್ಣಗಳನ್ನು ಈಗ ಉರ್ದು ವರ್ಣಮಾಲೆಯಲ್ಲಿ ಬಳಸಲಾಗುತ್ತಿದೆ.

ಟೆ. ಡಾಲ್(ಡ), ಡೇ(ಚ್), ಚೋಟಿಯೆ, ಬಡಿಯೆ ಹಾಗೂ ಮಹಾಪ್ರಾಣ ಗಳಿಗಾಗಿಯೇ ಉಪಯೋಗಿಸುವ ದೋ ಚಶ್ಮೆ ಯೆ ಈ ಆರು ಅಕ್ಷರಗಳನ್ನು ಉರ್ದುವಿನಲ್ಲಿ ಸೇರಿಸಲಾಯಿತು. ಉರ್ದು ಲಿಪಿಯಲ್ಲಿ ಝುಬರ್(ಅ ಎಂದು ಪ್ರಸ್ವವಾಗುವ ಅಕ್ಷರ), ಝೇರ್(ಇ ಕಾರ), ಪೇಷ್(ಉ ಕಾರ), ತಶ್‌ದೇದ್(ಒತ್ತಕ್ಷರ), ಜಜ್ಮ್(ಅರ್ಧಕ್ಷರ), ಹಮ್‌ಜಾ(ಪ್ರಸ್ವಕ್ಷರ) **ಮುಂ**ತಾದ ವ್ಯಾಕರಣ ವಿಶೇಷಗಳಿಂದ ಉರ್ದು ಲಿಪಿಯಲ್ಲಿ ಗರಿಷ್ಠ ಮಟ್ಟದ ಸುಧಾರಣೆಗಳನ್ನು ಮಾಡಲಾಗಿದೆ. ಇದೂ ಸಹ ಅರಾಬಿಕ್. ಪರ್ಷಿಯಾ ಲಿಪಿಗಳಂತೆಯೇ ಬಲಗಡೆಯಿಂದ ಎಡಗಡೆಗೆ ಬರೆಯುವ ಕೂಡು ಅಕ್ಷರಗಳ ಲಿಪಿಯಾಗಿದೆ.

**ಕ್ಯಾಲಿಗ್ರಫಿ (ಕಿತಾಬತ್)**

ಅರಾಬಿಕ್, ಪರ್ಷಿಯನ್ ಹಾಗೂ ಉರ್ದು ಲಿಪಿಗಳು ವಿಶ್ವದಾದ್ಯಂತ ಜನಪ್ರಿಯವಾಗಿದ್ದು, ಈ ಲಿಪಿಗಳಲ್ಲಿ ಮೊದಲು ಪ್ರಾಯೋಗಿಕವಾಗಿ ಆರಂಭಗೊಂಡು ಅತ್ಯಂತ ವ್ಯವಸ್ಥಿತವಾಗಿ ವಿಕಾಸಗೊಂಡ ಅತೀ ಸುಂದರವಾದ ಕಲಾತ್ಮಕ ಕೈ ಬರಹದ ಮೂಲಕ. ಇದನ್ನು ಸುಂದರ ಲಿಪಿ, ಕಲಾತ್ಮಕ ಲಿಪಿ, ಕ್ಯಾಲಿಗ್ರಫಿ ಎನ್ನುತ್ತಾರೆ. ಇದನ್ನು ಉರ್ದುವಿನಲ್ಲಿ ಕಿತಾಬತ್ ಎಂದು ಕರೆಯುತ್ತಾರೆ.

**ಪ್ರಾಚೀನ ಅರಾಬಿಕ್ ಕ್ಯಾಲಿಗ್ರಫಿ**




೯ನೆಯ ಶತಮಾನ

೯ನೆಯ ಶತಮಾನ

೧೦ನೆಯ ಶತಮಾನ

೧೧ನೆಯ ಶತಮಾನ



ಅರಾಬಿಕ್ ಕ್ಯಾಲಿಗ್ರಫ್ಷಿಯನ್ನು ಇಸ್ಲಾಮಿಕ್ ಕ್ಯಾಲಿಗ್ರಫ್ಷಿ ಎನ್ನುವಷ್ಟು ಅದು ಧಾರ್ಮಿಕವಾಗಿ ತಳುಕು ಹಾಕಿಕೊಂಡಿದೆ. ಇಸ್ಲಾಮಿಕ್ ಕಲೆಯ ಪರಮೋಚ್ಚ ವಿಧಾನವಾಗಿ ಪವಿತ್ರ ಖುರ್‌ಆನ್‌ನನ್ನು ಬರೆಯುವುದರ ಮೂಲಕ ಈ ಸುಂದರ ಲಿಪಿಯು ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಪೂರ್ಣ ಪ್ರಮಾಣದ ಅರಾಬಿಕ್ ಲಿಪಿಯ ಹುಟ್ಟಿಗೆ ಖುರ್-ಆನ್ ಹೇಗೆ ಕಾರಣವಾಯಿತೋ ಹಾಗೆಯೇ ಕ್ಯಾಲಿಗ್ರಫ್ಷಿಯ ಹುಟ್ಟಿಗೂ ಕಾರಣವಾಗಿದೆ. ಇಸ್ಲಾಂ ಸಂಸ್ಕೃತಿಯನ್ನು ಕಾಲಕಾಲಕ್ಕೆ ಜೀವಂತವಾಗಿ ಇಟ್ಟಿರುವುದೇ ಈ ಸುಂದರ ಬರಹ.



### ಅರಾಬಿಕ್ ವರ್ಣಮಾಲೆ

ا ب ت ث ج ح خ د ذ ر ز

س ش ص ض ط ظ ع غ ف ق

ك ل م ن ه و ي

### ಪರ್ಷಿಯನ್ ವರ್ಣಮಾಲೆ

ا ب پ ت ث ج چ ح خ د ذ ر

ز ژ س ش ص ض ط ظ ع غ

ف ق ک گ ل م ن و ه ی

### ಉರ್ದು ವರ್ಣಮಾಲೆ

ا ب پ ت ٹ ث ج چ ح خ د ڈ ذ

ر ڑ ز ژ س ش ص ض ط ظ

ع غ ف ق ک گ ل م ن

و ہ ھ ی ے

ಅಂಕಿಗಳು

| | | | | | | | | | | |
|---|---|---|---|---|---|---|---|---|---|---|
| ٠ | ١ | ٢ | ٣ | ۴ | ۵ | ۶ | ٧ | ٨ | ٩ | ١٠ |
| صفر | يك | دو | سه | چهار | پنج | شش | هفت | هشت | نه | ده |
| sefr | yek | do | se | chahār | panj | shesh | haft | hasht | noh | dah |
| 0 | 1 | 2 | 3 | 4 | 5 | 6 | 7 | 8 | 9 | 10 |



The earliest extant Arabic inscription.
Greek-Syriac-Arabic trilingual belonging to A.D. 512



ಪತೇಘುರ್ ಸಿಕ್ರಿ ಶಾಸನ



ಔರಂಗಜೇಬನ ಕತ್ತಿಯ ಮೇಲಿನ ಬರಹ (ಕ್ರಿ.ಶ. ೧೭೦೦)



ನಾಸಿರ ಷಾ ಖಿಲ್ಜಿಯ ಶಾಸನ

ಅರಾಬಿಕ್, ಪರ್ಷಿಯನ್, ಓಟೋಮನ್, ಟರ್ಕಿಷ್ ಕ್ಯಾಲಿಗ್ರಫ್ಟಿಯು ಮೊದಲಿಗೆ ರೇಖಾತ್ಮಕ ಮಾದರಿಯಲ್ಲಿ ಇಸ್ಲಾಮಿಕ್ ಕಲೆಯಾಗಿ ಮಸೀದಿಗಳ ಗೋಡೆಗಳ ಮೇಲೆ ಕಾಣಿಸಿಕೊಂಡಿತು. ಮೊದಲು ಅರಾಬಿಕ್ ಕ್ಯಾಲಿಗ್ರಫ್ಟಿಯು ಜನಪ್ರಿಯ ಗೊಂಡದ್ದು 'ಕೂಫಿಕ್' ಬರಹದಿಂದ. ಈ ಕೂಫಿಕ್ ಬರಹವು ಕೋನಾತ್ಮಕವಾಗಿದ್ದು ಚೌಕಗಳು, ವೃತ್ತಗಳು ಮುಂತಾದ ರೇಖಾಗಣಿತಾತ್ಮಕ ಬರಹವಾಗಿತ್ತು. ಇದನ್ನು ಸ್ಮಾರಕ ಲಿಪಿಯಾಗಿ ಮಾತ್ರ ಬರೆಯಲು ಸಾಧ್ಯವಿತ್ತು. ಆದರೆ ಜನರು ಬರೆಯಲು ಸ್ವಾಭಾವಿಕವಾಗಿ ಬಳಸುತ್ತಿದ್ದ ಲಿಪಿಯೆಂದರೆ 'ನಕ್ಷ್' ಆಗಿತ್ತು. ನಕ್ಷ್ ಬರಹವು ಬರವಣಿಗೆಯಲ್ಲಿಯೇ ಹೆಚ್ಚು ಸುಂದರವಾಗಿ ಕಾಣುತ್ತಿತ್ತು. ಕಾರಣ ಇದರಲ್ಲಿ ಅಕ್ಷರಗಳು ಹೆಚ್ಚು ದುಂಡಗಿರುತ್ತಿದ್ದವು. ಬರವಣಿಗೆಯಲ್ಲಿ ಅತಿ ನೈಪುಣ್ಯತೆಯಿಂದ ಕೂಡಿದ ಲಿಪಿಯೆಂದರೆ ಈ ನಕ್ಷ್ ಬರಹವೇ ಎಂದು ವಿಶ್ವವೇ ಕೊಂಡಾಡಿದೆ.

ಪರ್ಷಿಯನ್ನರು ಈ ಕ್ಯಾಲಿಗ್ರಫಿಗೆ ಹೆಚ್ಚಿನ ಕಾಣಿಕೆ ನೀಡಿದ್ದಾರೆ. 'ತಲೀಖ್' ಮತ್ತು 'ನಸ್ತಾಲಿಕ್' ಶೈಲಿಯ ಬರಹಗಳನ್ನು ಪರ್ಷಿಯನ್ನರು ಪರಿಚಯಿಸಿದರು.

೧೩ನೆಯ ಶತಮಾನದಲ್ಲಿ ಕುಫ್ಟಿಕ್ ಬರಹಕ್ಕೆ ಸಂಬಂಧಿಯಾದ 'ತುಲುತ್' ಬರಹವು ರೂಪುಗೊಂಡಿತು. ತುಲುತ್ ಎಂದರೆ ಮೂರನೇ ಒಂದು ಭಾಗ. ಈ ಲಿಪಿಯ ಮೂರನೆಯ ಒಂದು ಭಾಗದಷ್ಟು ಲಿಪಿಯು ಧಾರಾಳವಾಗಿ ಕೆಳಗೆ ಬಾಗಿರುತ್ತದೆ. ಈ ರೀತಿಯ ಬಾಗುವಿಕೆ ಅಕ್ಷರಗಳ ಸೊಗಸನ್ನು ಹೆಚ್ಚಿಸುತ್ತದೆ.

ಆಟೋಮನ್ ಟರ್ಕರು ೧೬ ಹಾಗೂ ೧೭ನೆಯ ಶತಮಾನದಲ್ಲಿ 'ದಿವಾನಿ' ಬರಹವನ್ನು ಪರಿಚಯಿಸಿದರು. ಈ ರೀತಿಯ ಬರವಣಿಗೆಯನ್ನು ಹೌಸುಮ್ ರೂಮಿಯು ಆರಂಭಿಸಿದನಾದರೂ ದಿವಾನಿ ಲಿಪಿಯು ಪರಾಕಾಷ್ಠೆಯನ್ನು ಪಡೆದದ್ದು ಮಾತ್ರ ಸುಲೇಮಾನ್‌ನ ಅವಧಿಯಲ್ಲಿ (೧೫೨೦-೬೬). ಇದರ ಇನ್ನೊಂದು ಕವಲಾದ 'ದಿವಾನೆ ಅಲ್‌ಜಲಿ' ಒಂದು ರೀತಿಯಲ್ಲಿ ಸಾಲು ಅಕ್ಷರಗಳಿಂದ ತುಂಬಿಕೊಂಡಿರುತ್ತದೆ.

ಈ ರೀತಿ ಹಲವಾರು ಶೈಲಿಯ ಬರಹಗಳು ಈ ಲಿಪಿಯಲ್ಲಿ ಕಾಣಿಸಿಕೊಂಡು ಈ ಬರಹವನ್ನು ಶ್ರೀಮಂತಗೊಳಿಸಿತು. ಕೆಲವರಂತೂ ಪ್ರಾಣಿ, ಪಕ್ಷಿ, ಗಿಡ, ಮರಗಳ ಆಕಾರಗಳಂತೆ ಲಿಪಿಯನ್ನು ಬರೆದು ಅದರ ಅಂದವನ್ನು ಹೆಚ್ಚಿಸಿದ್ದಾರೆ.**

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. David Divinger, *The Alphabet*, New yark, 1949.

೨. Ishwarachandra Rahi, *World Alphabet*, Allahabad, 1977.

೩. ದೇವರಕೊಂಡಾರೆಡ್ಡಿ, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ**, ಬೆಂಗಳೂರು, ೨೦೦೨.

೪. ಎ.ವಿ. ನರಸಿಂಹಮೂರ್ತಿ, **ಕನ್ನಡ ಲಿಪಿಯ ಉಗಮ ಮತ್ತು ವಿಕಾಸ**, ೧೯೬೮.

೫. Basil Gray, Persian painting, 1961.

೬. (ಸಂ) ಸೀತಾರಾಮ ಜಾಗೀರದಾರ್, ಯಾಸಿನ್ ಖಿದ್ವಾಯಿ, **ಕರ್ನಾಟಕದ ಪರ್ಷಿಯನ್, ಅರಾಬಿಕ್ ಮತ್ತು ಉರ್ದು ಶಾಸನಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಇಂಟರ್‌ನೆಟ್ ಆವೃತ್ತಿಗಳು.

** (ಈ ವಿಷಯವನ್ನು ಸೂಚಿಸಿದ ಡಾ॥ ಹಿ.ವಿ. ಕೃಷ್ಣಮೂರ್ತಿಯವರಿಗೂ, ಕೆಲವು ಸಲಹೆಗಳನ್ನು ನೀಡಿದ ಡಾ॥ ಅ.ಲ. ನರಸಿಂಹನ್‌ರವರಿಗೂ, ನನ್ನ ಉರ್ದು ಜ್ಞಾನಕ್ಕೆ ಓಂಕಾರ ಹಾಕಿದ ಡಾ॥ ರಹಮತ್ ಉಲ್ ಹಕ್‌ರಿಗೂ, ನಾಡಿನ ಪ್ರಖ್ಯಾತ ಕವಿಗಳೂ ಅನುವಾದಕರೂ ಪ್ರೀತಿಯ ಗುರುಗಳೂ ಆದ ಡಾ॥ ಮಾಹೀರ್ ಮನ್ಸೂರ್‌ರವರಿಗೂ ವಿಶೇಷ ಕೃತಜ್ಞತೆಗಳು)

# ಶಂಖ ಲಿಪಿ ಶಾಸನಗಳ ಅವಲೋಕನ

– ಡಾ॥ ಶ್ರೀನಿವಾಸ �. ಪಾಡಿಗಾರ*

**ಭಾ**ರತದ ಪ್ರಾಚೀನ ಶಾಸನಗಳಲ್ಲಿ ಬಳಕೆಯಾಗಿರುವ ಲಿಪಿಗಳಲ್ಲಿ ಹೆಚ್ಚೂ ಕಡಿಮೆ ಇನ್ನೂ ತನ್ನ ಗೌಪ್ಯವನ್ನು ಉಳಿಸಿಕೊಂಡು ಬಂದಿರುವ ಲಿಪಿ ಶಂಖ ಲಿಪಿ. ಶಂಖ ಲಿಪಿಯ ಶಾಸನಗಳನ್ನು ಓದುವ ದಿಶೆಯಲ್ಲಿ ಸಾಕಷ್ಟು ಪ್ರಯತ್ನಗಳಾಗಿವೆ. ಆದರೆ ಓದಲು ಪ್ರಯತ್ನಿಸಿರುವ ಎಲ್ಲ ವಿದ್ವಾಂಸರುಗಳಿಗೂ, ಅವರಿಗೆ ಸಮಾಧಾನವೆನಿಸುವಂತೆ ಓದುವುದು ಇನ್ನೂ ಸಾಧ್ಯವಾಗಿಲ್ಲವೆಂದೇ ಹೇಳಬೇಕು. ನೋಡಲು ಈ ಲಿಪಿಯು ಆಲಂಕಾರಿಕ ಲಿಪಿಯಂತೆ ಕಾಣುತ್ತದೆ. ಆದರೆ ಅದರ ಅಕ್ಷರಗಳನ್ನು ಗುರುತಿಸುವ ಪ್ರಯತ್ನ ಇನ್ನೂ ಅಸಮಾಧಾನಕರವಾಗಿರುವುದರಿಂದ ಇದನ್ನು ಗೌಪ್ಯ ಲಿಪಿ ಎಂದು ಕರೆಯುವುದು ಲೇಸು.

ಶಂಖ ಲಿಪಿಯ ಇರವಿನ ಮೊದಲ ಉದಾಹರಣೆಯನ್ನು ಗುರುತಿಸಿದವನು ಜೇಮ್ಸ್ ಪ್ರಿನ್ಸೆಪ್. ಉತ್ತರ ಪ್ರದೇಶದ ಬಾರಾಹತ್ ಎಂಬಲ್ಲಿ ದೊರೆತ ಹಿತ್ತಾಳೆಯ ತ್ರಿಶೂಲದ ಮೇಲೆ ಬರೆದ ಅಕ್ಷರಗಳನ್ನು ಬಣ್ಣಿಸಲು ಪ್ರಿನ್ಸೆಪ್ 'ಶೆಲ್ ಕ್ಯಾರೆಕ್ಟರ್ಸ್' (ಶಂಖ ಲಿಪಿ) ಎಂಬ ಅಭಿದಾನ ನೀಡಿದನು. ಅಂದಿನಿಂದ ಆ ಹೆಸರು ಅನೂಚಾನವಾಗಿ ಇಂಥ ಅಕ್ಷರಗಳಿರುವ ಶಾಸನಗಳ ವರ್ಣನೆಗೆ ಬಳಕೆಯಾಗುತ್ತಲಿದೆ.

ಈ ಲಿಪಿಯನ್ನು ಅಂದಿನಿಂದಲೂ ಓದುವ ಪ್ರಯತ್ನಗಳು ನಡೆದಿವೆ. ಎ. ಕನಿಂಗ್ಹ್ಯಾಮ್, ಜೆ.ಡಿ. ಬೆಗ್ಲರ್, ವೊಗೆಲ್, ಕೆ.ಪಿ. ಜಯಸ್ವಾಲ್, ಬಿ.ಸಿ.ಎಚ್. ಛಾಬ್ರ, ಡಿ.ಸಿ. ಸರ್ಕಾರ್ ಮುಂತಾದ ಹಲವರು ಶಂಖ ಲಿಪಿಯ ಸಂಕೇತಗಳನ್ನು ಅರ್ಥೈಸುವ ದಿಶೆಯಲ್ಲಿ ಕೆಲಸ ಮಾಡಿದ್ದಾರೆ. ಇವುಗಳ ದಾಖಲೀಕರಣ, ವಿಶ್ಲೇಷಣೆ, ಓದುಗಳ ವ್ಯವಸ್ಥಿತ ಪ್ರಯತ್ನ ಮಾಡಿದವರಲ್ಲಿ ಬಿ. ಎನ್. ಮುಖರ್ಜಿ ಮತ್ತು ರಿಚಾರ್ಡ್ ಸಾಲೊಮನ್ ಉಲ್ಲೇಖನೀಯ ರಾಗಿದ್ದಾರೆ.

ಶಂಖ ಲಿಪಿ ಶಾಸನಗಳು ದೊರೆತಿರುವ ಪ್ರದೇಶದ ಭೌಗೋಳಿಕ ಮೇರೆ ಬಹು ವಿಸ್ತಾರವಾಗಿದೆ. ಪ್ರಾಯಶಃ ತಮಿಳುನಾಡು ಮತ್ತು ಕೇರಳ ರಾಜ್ಯಗಳನ್ನು ಹೊರತು ಪಡಿಸಿ ಭಾರತದ ಉಳಿದೆಲ್ಲ ಪ್ರದೇಶದಲ್ಲಿ ಶಂಖ ಲಿಪಿಯ ಶಾಸನಗಳು ಕಂಡುಬಂದಿವೆ. ಕಾಶ್ಮೀರದ ಅಖ್ನೂರ ಎಂಬಲ್ಲಿ ದೊರೆತ ಶಾಸನ ಇವುಗಳ ತೀರ ಉತ್ತರದ ಮೇರೆಯನ್ನು ಪ್ರತಿನಿಧಿಸುತ್ತದೆ. ಪಶ್ಚಿಮ ಬಂಗಾಳದ ಸುಸುನಿಯಾ ಬೆಟ್ಟದಲ್ಲಿ ದೊರೆತಿರುವ ಶಾಸನ ಪೂರ್ವದ ಮೇರೆಯಾಗಿದೆ. ಪಶ್ಚಿಮದಲ್ಲಿ ಗುಜರಾತಿನಲ್ಲಿರುವ ಜುನಾಗಡ ಹಾಗೂ ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿರುವ ಸಂಡೂರು ದಕ್ಷಿಣದ ಮೇರೆಗಳಾಗಿವೆ. ಈಚೆಗೆ ತಮಿಳುನಾಡಿನ ಮಹಾಬಲಿಪುರದಲ್ಲಿಯೂ ಶಂಖ ಲಿಪಿ ಶಾಸನಗಳು ಶೋಧವಾಗಿವೆಯೆಂದು ಹೇಳಲಾಗಿದೆ. ಭಾರತದ ಹೊರಗಡೆಯೂ ಶಂಖ ಲಿಪಿ ಶಾಸನಗಳು ದೊರೆತಿವೆ. ಇಂಡೋನೇಶಿಯಾದ ಜಾವಾ ಮತ್ತು ಬೋರ್ನಿಯೋ ನಡುಗಡ್ಡೆಗಳಲ್ಲಿ ಅವು ದೊರೆತಿವೆ.

ಈ ಲಿಪಿಯನ್ನು 'ಶಂಖ ಲಿಪಿ' ಎಂದು ಕರೆದಿದ್ದರೂ, ಎಲ್ಲ ಬರವಣಿಗೆಗಳಲ್ಲಿ ಎಲ್ಲ ಶಾಸನಗಳ ಸಂಕೇತಗಳೂ ಶಂಖವನ್ನು ಹೋಲುತ್ತವೆಂದಲ್ಲ. ಸಂಕೇತಗಳ ಆಕಾರದಲ್ಲಿ ಬಹಳಷ್ಟು ವೈವಿಧ್ಯವಿದೆ. ಇವು ಲಾವಣ್ಯಮಯ ರೇಖೆಗಳು, ವಿಚಿತ್ರ ರೂಪಗಳು, ಸಾಲು ಹಕ್ಕಿಗಳು, ಸಾಲು ಮೀನುಗಳು, ಎಲೆ-ಬಳ್ಳಿ, ಶಂಖಗಳು ಮುಂತಾದವುಗಳಿಂದ ಕೂಡಿವೆ. ಅಕ್ಷರ ಸಂಕೇತಗಳು ಕೆಲವು ಸಲ ಸ್ವತಂತ್ರವಾಗಿದ್ದರೆ, ಇನ್ನು ಕೆಲವು ಸಲ 'ರನಿಂಗ್ ಹ್ಯಾಂಡ್' ಬರವಣಿಗೆಯಂತೆ ಒಂದಕ್ಕೊಂದು ಜೋಡಿಸಲ್ಪಟ್ಟಿವೆ. ಸಾಮಾನ್ಯವಾಗಿ ಸಂಕೇತಗಳು ತಮ್ಮ ಬಲಕ್ಕೆ, ಅಂದರೆ ನೋಡುಗರ ಎಡಕ್ಕೆ, ಸುಮಾರು ೬೦ ರಿಂದ ೯೦ ಡಿಗ್ರಿ ವಾಲಿರುತ್ತವೆ. ಶಂಖ ಲಿಪಿಯು ಅಕ್ಷರ ಸಂಕೇತಗಳನ್ನು ಬ್ರಾಹ್ಮೀಲಿಪಿಯಿಂದಲೇ ಆಯ್ದುಕೊಂಡಿದೆ ಎಂಬುದು ಸ್ಪಷ್ಟವಿದೆ. ಇದು ನೋಡಲು ಆಲಂಕಾರಿಕ ಲಿಪಿಯಂತೆ ಕಂಡರೂ ಇದನ್ನು ಗೌಪ್ಯ ಲಿಪಿ ಎಂದು ವರ್ಣಿಸುವದು

---

* ಪ್ರಾಧ್ಯಾಪಕರು, ಇತಿಹಾಸ ಮತ್ತು ಶಾಸನಶಾಸ್ತ್ರ ವಿಭಾಗ, ಕರ್ನಾಟಕ ವಿ.ವಿ., ಧಾರವಾಡ-೫೮೦೦೦೩.

ಉಚಿತ. ಶಂಖ ಲಿಪಿಯ ಎಲ್ಲ ಶಾಸನಗಳೂ ಚಿಕ್ಕ ಶಾಸನಗಳೇ. ಒಂದು ಶಾಸನದಲ್ಲಿ ಹೆಚ್ಚೆಂದರೆ ೧೯ ಅಕ್ಷರ ಸಂಕೇತಗಳು ಕಾಣುತ್ತವೆ.

ಶಂಖ ಲಿಪಿ ಶಾಸನಗಳ ಭಾಷೆಯ ಬಗ್ಗೆಯೂ ಜಿಜ್ಞಾಸೆಯಿದೆ. ಭಾರ್ಹುತ (ಮಧ್ಯ ಪ್ರದೇಶ) ಹಾಗೂ ಮಥುರಾ (ಉತ್ತರ ಪ್ರದೇಶ) ಪ್ರಾಚೀನ ಶಾಸನಗಳು ಪ್ರಾಕೃತ ಭಾಷೆಯಲ್ಲಿವೆ. ಗುಪ್ತರ ಕಾಲದಿಂದ ಸಂಸ್ಕೃತದ ಬಳಕೆ ಸಾಮಾನ್ಯವಾಗಿದೆ. ಉತ್ತರ ಪ್ರದೇಶ, ಬಿಹಾರ, ಮಧ್ಯಪ್ರದೇಶ ಇತ್ಯಾದಿ ರಾಜ್ಯಗಳಲ್ಲಿರುವ ಶಾಸನಗಳು ಸಂಸ್ಕೃತದಲ್ಲಿವೆಯೆಂಬುದು ವಿದ್ವಾಂಸರ ಅಭಿಪ್ರಾಯ. ಕರ್ನಾಟಕದ ಬಾದಾಮಿ ಹಾಗೂ ಸಂಡೂರಿನಲ್ಲಿರುವ ಶಂಖ ಲಿಪಿ ಶಾಸನಗಳು ಕನ್ನಡದಲ್ಲಿದ್ದರೂ ಇರಬಹುದು.

ಇನ್ನು ಕಾಲಮಾನದ ದೃಷ್ಟಿಯಿಂದ ಶಂಖ ಲಿಪಿ ಶಾಸನಗಳ ಆರಂಭವನ್ನು ಸು. ಕ್ರಿ.ಪೂ. ೧ನೆಯ ಶತಮಾನಕ್ಕೆ ಅನ್ವಯಿಸಬಹುದು. ಅಲ್ಲಿಂದ ಸುಮಾರು ಕ್ರಿ.ಶ. ೪ನೆಯ ಶತಮಾನದವರೆಗಿನ ಶಾಸನಗಳ ಸಂಖ್ಯೆ ಕಡಿಮೆಯೇ. ಆದರೆ ಸು. ಕ್ರಿ.ಶ. ೩೫೦ – ೬೦೦ ರ ಅವಧಿಯ ಅತಿ ಹೆಚ್ಚು ಉದಾಹರಣೆಗಳು ದೊರೆತಿವೆ. ಆದುದರಿಂದ ಈ ಕಾಲಘಟ್ಟವನ್ನು ಶಂಖ ಲಿಪಿಯ ಪ್ರವರ್ಧಮಾನ ಹಂತವೆಂದು ವರ್ಣಿಸಬಹುದು. ಇಲ್ಲಿಂದ ಮುಂದೆ ಸು. ಕ್ರಿ.ಶ. ೯ನೆಯ ಶತಮಾನದವರೆಗೆ ಅಲ್ಲಲ್ಲಿ ಶಂಖ ಲಿಪಿ ಶಾಸನಗಳು ದೊರೆತಿವೆಯಾದರೂ ಸಂಖ್ಯೆಯಲ್ಲಿ ಅವು ವಿರಳವಾಗಿವೆ. ತದನಂತರ ಈ ಲಿಪಿಯ ಬಳಕೆ ಬಿಟ್ಟುಹೋದಂತಿದೆ. ಕರ್ನಾಟಕದಲ್ಲಿ ಬಾದಾಮಿಯ ಶಂಖ ಲಿಪಿ ಶಾಸನಗಳನ್ನು ಸು. ೬ನೆಯ ಶತಮಾನದ ಕೊನೆಯ ಪಾದಕ್ಕೆ ಅನ್ವಯಿಸಬಹುದು. ಸಂಡೂರಿನ ಶಾಸನ ಸಾಂದರ್ಭಿಕವಾಗಿ ೭ನೆಯ ಶತಮಾನದ್ದು.

ಶಂಖ ಲಿಪಿ ಶಾಸನಗಳು ಬರೆಯಲ್ಪಟ್ಟಿರುವ ಮಾಧ್ಯಮಗಳೂ ವಿಭಿನ್ನವಾಗಿವೆ. ಕಲ್ಲು ಬಂಡೆಗಳ ಮೇಲೆ, ಗುಹಾಲಯಗಳ ಕಂಬದ ಮೇಲೆ, ಅಶೋಕನ ಮತ್ತು ಗುಪ್ತರ ಕಾಲದ ಸ್ವತಂತ್ರ ಕಂಬಗಳ ಮೇಲೆ, ವಿಗ್ರಹಗಳ ಪಾದಪೀಠದ ಮೇಲೆ, ಸೋಪಾನಗಳ ಮೇಲೆ, ಮುದ್ರೆಗಳ ಮೇಲೆ, ಹಿತ್ತಾಳೆಯ ತ್ರಿಶೂಲದ ಮೇಲೆ ಅವು ಕಂಡುಬಂದಿವೆ.

ಈವರೆಗೆ ಶಂಖ ಲಿಪಿಯ ೬೪೦ ಶಾಸನಗಳು ಒಟ್ಟು ೬೭ ನೆಲೆಗಳಲ್ಲಿ ಗುರುತಿಸಲ್ಪಟ್ಟಿವೆ. ಇವುಗಳಲ್ಲಿ ಮಧ್ಯ ಭಾರತದಲ್ಲಿ ದೊರೆತ ಶಾಸನಗಳ ಸಂಖ್ಯೆಯೇ ಹೆಚ್ಚು. ಆದರೂ ಕೆಲವೆಡೆ ಇವು ಹೆಚ್ಚು ಕೇಂದ್ರೀಕೃತವಾಗಿರುವುದು ಗಮನಕ್ಕೆ ಬಂದಿದೆ. ಗುಜರಾತಿನ ಜುನಾಗಡದಲ್ಲಿ ೮೦, ಬಿಹಾರದ ಮುಂಡೇಶ್ವರಿಯಲ್ಲಿ ೧೨೫ ಹಾಗೂ ಅದೇ ರಾಜ್ಯದ ರಾಜಗೀರದಲ್ಲಿ ೪೦ ಶಂಖ ಲಿಪಿ ಶಾಸನಗಳು ಗಮನಿತವಾಗಿವೆ.

ಈ ವಿಶಿಷ್ಟ ಲಿಪಿ, ಸಾಹಿತ್ಯದಲ್ಲಿ ಉಲ್ಲೇಖವಾಗಿಲ್ಲವೇ? ಈ ಪ್ರಶ್ನೆಗೂ ಉತ್ತರ ಹುಡುಕುವ ಪ್ರಯತ್ನವಾಗಿದೆ. ಕ್ರಿ.ಶ. ೨ನೆಯ ಶತಮಾನದ್ದೆಂದು ಹೇಳಲಾಗುವ 'ಲಲಿತವಿಸ್ತರ' ಎಂಬ ಬೌದ್ಧಗ್ರಂಥದಲ್ಲಿ 'ಅವಮೂರ್ಧ ಲಿಪಿ'ಯ ಉಲ್ಲೇಖವಿದೆ. 'ತಲೆಕೆಳಗಾಗಿ ಜೋತು ಬಿದ್ದಿರುವ' ಲಿಪಿ ಎಂಬುದು ಇದರ ಅರ್ಥ. ಕ್ರಿ.ಪೂ. ೨ನೆಯ ಶತಮಾನದ ಮತ್ತು ಕ್ರಿ.ಶ. ೩ನೆಯ ಶತಮಾನದ ಮಧ್ಯಾವಧಿಯಲ್ಲಿ ರಚಿತವಾಗಿರುವ ಇನ್ನೊಂದು ಬೌದ್ಧ ಗ್ರಂಥ 'ಮಹಾವಸ್ತು ಅವದಾನ'ದಲ್ಲಿ 'ವ್ಯತ್ಯಸ್ತಾ ಲಿಪಿ', ಅಂದರೆ 'ತಲೆಕೆಳಗಾಗಿರುವ ಲಿಪಿ'ಯ ಉಲ್ಲೇಖವಿದೆ. ಬಿ.ಎನ್. ಮುಖರ್ಜಿಯವರು ಇವು ಶಂಖ ಲಿಪಿಯ ನಿಜವಾದ ಹೆಸರುಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಅವರ ಪ್ರಕಾರ ಅಂತಿಮ ನಿರ್ಣಯವಾಗುವವರೆಗೆ 'ಶಂಖ ಲಿಪಿ' ಎಂಬ ಹೆಸರಿನ ಬಳಕೆ ಮುಂದುವರಿಸಬಹುದು.

ಕೆಲವೇ ಕೆಲವು ದ್ವಿಲಿಪಿ ಶಾಸನಗಳ ಉದಾಹರಣೆಗಳೂ ಇವೆ. ಮಧ್ಯಪ್ರದೇಶದ ದೇವಗಡದಲ್ಲಿ ಒಂದು ಕಂಬದ ಮೇಲಿನ ಶಾಸನದಲ್ಲಿ ಶಂಖ ಲಿಪಿ ಶಾಸನದ ಕೆಳಗೆ ಗುಪ್ತರ ಕಾಲದ ಬ್ರಾಹ್ಮೀ ಲಿಪಿಯಲ್ಲಿ ಈ ಕೆಳಗಿನಂತೆ ಸಂಸ್ಕೃತ ಶಾಸನವಿದೆ:

೧. [ಶ್ರೀಮತಃ ಕೇ]ಶ[ರ]ಪುರಸ್ವಾಮಿಪಾದೀಯಭಾಗವತ

೨. ಗೋವಿನ್ದಸ್ಯೇದಂ ನಾಮ

ಇದರ ಅರ್ಥ : 'ಇದು ಶ್ರೀ ಕೇಶರಪುರದ ದೇವರ ಪೂಜಕನಾದ ಭಾಗವತ ಗೋವಿನ್ದನ ಹೆಸರು.' ಈ ಆಧಾರದ ಮೇಲೆ ಈ ಶಂಖ ಲಿಪಿಯ ಶಾಸನದ ಓದು 'ಶ್ರೀ ಗೋವಿನ್ದ' ಇರಬೇಕೆಂದು ತರ್ಕಿಸಲಾಗಿದೆ.

ಎರಡನೆಯ ಉದಾಹರಣೆ ಉತ್ತರ ಪ್ರದೇಶದಲ್ಲಿರುವ ವಾರಣಾಸಿಯ ರಾಜಘಾಟ್‌ನಲ್ಲಿ ದೊರೆತ ದ್ವಿಮುಖಿ ಮುದ್ರೆಯಲ್ಲಿ ಕಾಣುತ್ತದೆ. ಇದರ ಒಂದು ಮುಖದಲ್ಲಿ ಗುಪ್ತರ ಕಾಲದ ಬ್ರಾಹ್ಮೀ ಲಿಪಿಯಲ್ಲಿ ಎರಡು ಸಾಲುಗಳಲ್ಲಿ ಈ ಕೆಳಗಿನ ಬರವಣಿಗೆ ಇದೆ:

೧. ಅವಿಮುಕ್ತೇಶ್ವರ ಭ
೨. ಟ್ಟಾರಕಃ

ಮುದ್ರೆಯ ಮುಖ ವೃತ್ತಾಕಾರವಿದ್ದು, ಮಧ್ಯದಲ್ಲಿ ಎರಡು ಅಡ್ಡ ಗೆರೆಗಳಿವೆ. ಈ ಗೆರೆಗಳ ಮೇಲ್ಭಾಗದಲ್ಲಿ ಶಿವಲಿಂಗದ ಮೇಲೆ ಬರೆಯುವಂತೆ ತ್ರಿಪುಂಡ್ರವಿದ್ದು, ಅದರ ಮಧ್ಯದಲ್ಲಿ ಒಂದು ಲಂಬ ಗೆರೆ ಇದೆ. ತುಸು ಮೇಲ್ಗಡೆ ಬಾಲಚಂದ್ರನ ಸಂಕೇತವಿದೆ. ಗೆರೆಗಳ ಮೇಲಿನ ಮುದ್ರೆಯ ಮುಖದ ಅರ್ಧ ಭಾಗವನ್ನು ಶಿವಲಿಂಗದಂತೆ ಕಲ್ಪಿಸಲಾಗಿದೆ ಎಂಬುದು ಇದರಿಂದ ಸ್ಪಷ್ಟವಾಗಿ ಸೂಚಿತವಾಗುತ್ತದೆ.

ಈ ಮುದ್ರೆಯ ಹಿಮ್ಮುಖದಲ್ಲಿ ಶಂಖ ಲಿಪಿ ಬರಹವಿದೆ. ಇದಕ್ಕೆ 'ಅವಿಮುಕ್ತೇಶ್ವರ ಭಟ್ಟಾರಕಃ' ಎಂಬ ಓದನ್ನು ಅನ್ವಯಿಸಬಹುದೋ ಎಂಬುದು ಸಂದೇಹಾಸ್ಪದ. ಸಂಕೇತಗಳ ಸಂಖ್ಯೆ ಸರಿಹೊಂದುವಂತೆ ಕಾಣುತ್ತಿಲ್ಲ. ರಿಚಾರ್ಡ್ ಸಾಲೊಮನ್ ಅವರು ಇದನ್ನು ಈ ಕೆಳಗಿನಂತೆ ಓದುತ್ತಾರೆ: 'ಸುಚಿತ್ರರಸಭಾಜೀ'. ಈ ಓದಿನ ಬಗ್ಗೆ ಅವರಿಗೂ ಪೂರ್ತಿ ಸಮಾಧಾನವಿಲ್ಲ. ನನಗೆ ಇದರ ಸರಿಯಾದ ಓದು 'ಅವಿಮುಕ್ತೇಶ್ವರಃ' ಇರಬೇಕೆಂದು ಅನಿಸುತ್ತದೆ.

ಇನ್ನು ಮೂರನೆಯ ಉದಾಹರಣೆ ಜಾವಾ ನಡುಗಡ್ಡೆಯ ಚಿ ಅರುತನ್ ಬಂಡೆಶಾಸನದಲ್ಲಿದೆ. ಇದು ಪೂರ್ಣವರ್ಮನ ಶಾಸನದ ಪಕ್ಕದಲ್ಲಿದೆ. ಮೂಲ ಶಾಸನ ಸುಮಾರು ೪-೫ನೆಯ ಶತಮಾನದ ಚೌಕತಲೆಯ (ಪೇಟಿಕಾ ಶಿರ) ಕರ್ನಾಟಕ ಬ್ರಾಹ್ಮೀ (ಕದಂಬರ ಕಾಲದ) ಅಕ್ಷರಗಳಲ್ಲಿದೆ. ಭಾಷೆ ಸಂಸ್ಕೃತ. ಅದರ ಓದು ಈ ಕೆಳಗಿನಂತಿದೆ:

೧. ವಿಕ್ರಾನ್ತಸ್ಯಾವನಿಪತೇಃ
೨. ಶ್ರೀಮತಃ ಪೂರ್ಣ್ಣವರ್ಮಣಃ
೩. ತಾರುಮಾ ನಗರೇನ್ದ್ರಸ್ಯ
೪. ವಿಷ್ಣೋರಿವ ಪದದ್ವಯಮ್ ॥

ಇದು ಪಕ್ಕದಲ್ಲಿರುವ ಎರಡು ಪಾದಗಳ ಚಿತ್ರಕ್ಕೆ ಸಂಬಂಧಿಸಿದ ಶಾಸನ. 'ತಾರುಮಾ ನಗರದ ಅಧಿಪತಿಯಾದ ಜಯಶಾಲೀ ಅರಸ ಶ್ರೀಪೂರ್ಣವರ್ಮನ ವಿಷ್ಣುವಿನ (ಪಾದಗಳ) ಹಾಗಿರುವ ಎರಡು ಪಾದಗಳು ಇವು' ಎಂಬುದು ತಾತ್ಪರ್ಯ. ಪಾದಗಳ ಮೇಲ್ಗಡೆ ಸುಮಾರು ಎಂಟು ಶಂಖ ಲಿಪಿ ಸಂಕೇತಗಳಿವೆ. ಇದರ ಓದು 'ಶ್ರೀ ಪೂರ್ಣ್ಣವರ್ಮಣಃ' ಎಂದು ಕೆ.ಪಿ. ಜಯಸ್ವಾಲ ತೋರಿಸಲು ಯತ್ನಿಸಿದ್ದಾರೆ. ಈ ಬಗ್ಗೆ ಪೂರ್ತಿ ಸಮಾಧಾನವಿಲ್ಲ.

ಉತ್ತರ ಪ್ರದೇಶದ ಲಖ್ನೌ ವಸ್ತುಸಂಗ್ರಹಾಲಯದಲ್ಲಿ 'ಸಮುದ್ರಗುಪ್ತನ ಕುದುರೆ' ಎಂದು ಕರೆಯಲಾಗುವ ಕುದುರೆಯ ದುಂಡುಶಿಲ್ಪವಿದೆ. ಇದರ ಮೇಲೆ ಎರಡು ಶಂಖ ಲಿಪಿ ಶಾಸನಗಳಿವೆ. ಬಿ.ಎನ್. ಮುಖರ್ಜಿಯವರು ಈ ಎರಡು ಶಾಸನಗಳನ್ನು ಓದುವುದರಲ್ಲಿ ಯಶಸ್ವಿಯಾದಂತೆ ತೋರುತ್ತದೆ. ಅವರ ಪ್ರಕಾರ ಕತ್ತಿನ ಭಾಗದಲ್ಲಿ ಬರೆದಿರುವ ಶಾಸನದ ಓದು "ಶ್ರೀ ಮಹೇನ್ದ್ರಾದಿತ್ಯ". ಇದು ಮೊದಲನೆಯ ಕುಮಾರಗುಪ್ತನ ಬಿರುದು. ಇವನು ಅಶ್ವಮೇಧಯಾಗ ಮಾಡಿದ್ದನೆಂಬ ಸಂಗತಿ ತಿಳಿದಿದೆ. ಆದುದರಿಂದ ಈ ಶಾಸನವಿರುವ ಕುದುರೆ ಕುಮಾರಗುಪ್ತನದೇ ಹೊರತು ಸಮುದ್ರಗುಪ್ತನದಲ್ಲ ಎಂಬುದಾಗಿ ಮುಖರ್ಜಿಯವರು ವಾದಿಸುತ್ತಾರೆ. ಇದೇ ಕುದುರೆಯ ಮೇಲೆ ಇನ್ನೊಂದು ಶಂಖ ಲಿಪಿ ಶಾಸನವಿದೆ. ಅದರ ಓದು "ವಿಚೂರ್ಣಿತ ಶ್ರೀಪುತ್ರ". ಇದರ ಸಮೀಪ ಆಡಿನ ಮುಖದಂತೆ ಕಾಣುವ ಚಿತ್ರವಿದ್ದು ಇದು ಅಶ್ವಮೇಧಯಾಗ ಮಾಡುವಾಗ ಬಲಿ ಕೊಡಲಾಗಿದ್ದ ಆಡಿನ ಸಾಂಕೇತಿಕ ಹೆಸರು ಎಂಬುದಾಗಿ ಮುಖರ್ಜಿ ಅರ್ಥೈಸುತ್ತಾರೆ. ಅನೇಕರು ಈ ಓದುಗಳನ್ನು ಒಪ್ಪಿದ್ದರೂ ಸಾಲೋಮನ್ ಮುಂತಾದವರಿಗೆ ತೃಪ್ತಿಯಾಗಿಲ್ಲ.

ಬಿ.ಎನ್. ಮುಖರ್ಜಿಯವರು ಇನ್ನೂ ಕೆಲವು ಶಂಖ ಲಿಪಿ ಬರಹಗಳನ್ನು ಓದಿದ್ದಾರೆ. ಅವರ ವಿಶ್ಲೇಷಣೆಯ ಪ್ರಕಾರ ಓದಲಾದ ಕೆಲವು ಶಂಖ ಲಿಪಿ ಬರಹಗಳು ಇಂತಿವೆ:

| | |
|---|---|
| ಬಾರ್ಹುತ್ ಸ್ತಂಭಶಾಸನ | : 'ಸವಛರೆ ೯೦ ಪುವಪುಛವೊ' (ಸಂವತ್ಸರೇ ೯೦ ಪೂರ್ವ ಉತ್ಸವಃ) |
| ಮಥುರಾ ಕಂಕಾಲೀಟೀಲ ಶಾಸನ | : ರಿಧಿ ವುಲುವಸ |
| ದೇವಗಡದ ಸ್ತಂಭಶಾಸನ | : 'ಶ್ರೀಗೋವಿನ್ದ' |
| ಲಾಲಾಭಗತ್ ಸ್ತಂಭಶಾಸನ | : 'ಬಾಲಪ್ಯಾದಿತ್ಯ' |
| ರಜೌನಾ ಅಥವಾ ಚಂಡಿಮೌ ಕಂಬ, ಬಿಹಾರ (ಇಂಡಿಯನ್ ಮ್ಯುಸಿಯಂ, ಕೋಲ್ಕತಾ) | : 'ತಲಿಣ್ಣಸ್ಯ' |

ಪಶ್ಚಿಮ ಬಂಗಾಲದ ಸುಸನಿಯ ಬೆಟ್ಟದ ಗುಹೆಯ ಶಾಸನ : 'ಜಯನ್ತವೃತ್ತಂ ಸವರಗೃಹಯಾವತ್' (ಜಯಶಾಲೀ ಚಕ್ರವು ಶವರನ ಆಲಯಕ್ಕೆ ಒಯ್ಯುತ್ತದೆ).

ಹೊರದೇಶಗಳಲ್ಲಿರುವ ಶಾಸನಗಳಲ್ಲಿ ಹೆಚ್ಚಿನವು ಇಂಡೋನೇಶಿಯಾದಲ್ಲಿ ದೊರೆತಿವೆ. ಜಾವಾದ ಚಿ ಅರುತನ್ ಶಾಸನವನ್ನು ಆಗಲೇ ಹೆಸರಿಸಲಾಯಿತು. ಇನ್ನಿತರ ಉಲ್ಲೇಖನೀಯ ಶಾಸನಗಳೆಂದರೆ, ಜಾವಾದ ಪಾಸಿರ್ ಅವಿ ಶಾಸನ ಮು ಅರ ಚಿ ಅನ್ತೆನ್ ಶಾಸನ ಹಾಗೂ ಬೋರ್ನಿಯೋದ ಸಂಗ್ಗೌ ಶಾಸನ.

ಕರ್ನಾಟಕದ ಬಾದಾಮಿ (ಬಾಗಲಕೋಟೆ ಜಿಲ್ಲೆ) ಹಾಗೂ ಸಂಡೂರು (ಬಳ್ಳಾರಿ ಜಿಲ್ಲೆ) ಶಂಖ ಲಿಪಿ ಶಾಸನಗಳ ಉದಾಹರಣೆ ಒದಗಿಸಿವೆ. ಬಾದಾಮಿಯ ಮೂರನೆಯ ವೈಷ್ಣವ ಗುಹೆಯ ಮುಖದ ಬಲಪಕ್ಕದಲ್ಲಿ ಎರಡು ಶಂಖ ಲಿಪಿ ಶಾಸನಗಳಿವೆ. ಅಲ್ಲಿಯ ವರ್ಣಚಿತ್ರಗಳಲ್ಲಿಯೂ ಶಂಖ ಲಿಪಿ ಬರಹಗಳಿವೆ. ಸಂಡೂರಿನಲ್ಲಿಯೂ ಒಂದು ಉದಾಹರಣೆಯಿದೆ. ಬಾದಾಮಿಯ ಪ್ರಸಿದ್ಧ ಮೂರನೆಯ ಗುಹೆಯ ಮುಖದ ಬಲಪಕ್ಕದಲ್ಲಿ (ನೋಡುಗನ ಎಡಕ್ಕೆ) ಎರಡು ಶಂಖ ಲಿಪಿ ಶಾಸನಗಳು ದೊರೆತಿವೆ. ಇವು ಒಂದೇ ಕಾಲದ್ದಾದರೂ ಎರಡೂ ಶಾಸನಗಳ ಅಕ್ಷರಗಳ ರೂಪದಲ್ಲಿ ಲಿಪಿ ಸಾಮ್ಯವಿಲ್ಲ. ಈವರೆಗೆ ಇವನ್ನು ಓದಲಾಗಿಲ್ಲ. ಸಾಂದರ್ಭಿಕ ಪುರಾವೆಯನ್ನಾಧರಿಸಿ ಇವುಗಳನ್ನು ಕ್ರಿ.ಶ.ಸು. ೫೭೮ಕ್ಕೆ ಅನ್ವಯಿಸಬಹುದು.

ಇವುಗಳಲ್ಲಿರಬಹುದಾದ ವಿಷಯಗಳ ಸಾಧ್ಯತೆಗಳನ್ನು ಊಹಿಸಬಹುದು. ಬಾದಾಮಿಯ ಈ ಗುಹಾಲಯದ ಪರಿಸರದಲ್ಲಿ ಅನೇಕ ಶಿಲ್ಪಿಗಳ ಹೆಸರು/ಬಿರುದುಗಳಿವೆ. ಆದ್ದರಿಂದ ಒಂದು ಸಾಧ್ಯತೆಯೆಂದರೆ ಈ ಶಂಖ ಲಿಪಿಗಳಲ್ಲಿ ಶಿಲ್ಪಿಗಳ ಹೆಸರು/ಬಿರುದು ಇರಬಹುದು. ಮೂರನೆಯ ಗುಹೆಯ ಶಾಸನದಲ್ಲಿ ಮಂಗಲೀಶ ಈ ಗುಹೆಯ ನಿರ್ಮಾಣದ ಪುಣ್ಯ ತನ್ನ ಅಣ್ಣ ಕೀರ್ತಿವರ್ಮನಿಗೆ ಹೋಗಲಿ ಎಂಬುದಾಗಿ ಆಶಿಸಿದ್ದಾನೆ. ಕೀರ್ತಿವರ್ಮನಿಗೆ ಆಗ ಮಕ್ಕಳಿರಲಿಲ್ಲವಾದ್ದರಿಂದ ಈ ರೀತಿ ಆಶಿಸಿರಬಹುದು. ಆ ನೆಪದಲ್ಲಿ ಬರೆದ ಗೌಪ್ಯ ಮಂತ್ರ/ಅರಸನ ಹೆಸರು/ಬಿರುದು ಇರಬಹುದು. ಶಿಲ್ಪಿಗಳ ಹೆಸರು/ಬಿರುದು ಆಗಿರುವ ಸಾಧ್ಯತೆಯೇ ಹೆಚ್ಚು.

ಶಂಖ ಲಿಪಿ ಶಾಸನಗಳ ಓದಿನಲ್ಲಿ ಅಡಗಿರುವ ತೊಡಕುಗಳನ್ನು ಇಲ್ಲಿ ಪಟ್ಟಿ ಮಾಡಬಹುದು. ೧. ಸಮಕಾಲೀನ ಸಾಮಾನ್ಯ ಲಿಪಿಯ ಸಂಕೇತಗಳೇ ಆಗಿದ್ದರೂ ನಿಗೂಢತೆಯನ್ನು ಬೇಕೆಂತಲೇ ಕಲ್ಪಿಸಿರುವುದು. ೨. ಲಿಪಿಕಾರನ ವೈಯಕ್ತಿಕ ಕೈಚಳಕದಿಂದಾಗಿ ಒಂದೇ ಕಾಲದ ಒಂದೇ ಸ್ಥಳದಲ್ಲಿರುವ ಶಂಖ ಲಿಪಿ ಶಾಸನಗಳು ವಿಭಿನ್ನವಾಗಿ ಗೋಚರಿಸುತ್ತವೆ. ೩. ಒಂದೇ ಕಾಲದಲ್ಲಿ ಹೊರಟಿರಬಹುದಾದ ಶಾಸನಗಳು ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ರೂಪ ಪಡೆದಿವೆ. ೪. ದ್ವಿಲಿಪಿಶಾಸನಗಳಲ್ಲಿ ಓದಿನ ಐಕ್ಯತೆಯ ಬಗ್ಗೆ ಸಂದೇಹವಿರುವದು.

ಅಂತೂ ದ್ವಿಲಿಪಿ ಶಾಸನಗಳಿದ್ದಾಗ್ಯೂ ಶಂಖ ಲಿಪಿ ಶಾಸನಗಳ ಓದು ಸಮಾಧಾನಕರವಾಗಿಲ್ಲವೆಂಬುದನ್ನು ಗಮನಿಸಬೇಕು. ಆದರೆ ಈ ಜಾಡನ್ನು ಸುಲಭವಾಗಿ ಬಿಡುವಂತಿಲ್ಲ. ಅಂತಿಮವಾಗಿ ಇವೇ ನಮಗೆ ದೀಪವಾಗಬಲ್ಲ ಶಾಸನಗಳು.

## ಶಂಖ ಲಿಪಿ ಕುರಿತಾದ ಮುಖ್ಯ ಆಕರ ಸಾಹಿತ್ಯ


1. Mukherjee B.N., 1981, *The So-called Shell Script – A Note on its Decipherment*. Indian Museum Bulletin Vol. XVI, pp 128-137, Calcutta.
2. Mukherjee B.N., 1990, *The So-called Shell Script, in Studies in the Shell Script*, ed. by Sharma R.K., pp 21-44, Agam Kala Prakashan, Delhi.
3. Mukherjee B.N., 1990, *The Decipherment of the Shell Script, in Studies in the Shell Script*, ed. by Sharma R.K., pp 45-72, Agam Kala Prakashan, Delhi.
4. Prinsep J., 1836, *Fascimilies of Various Ancient Inscriptions*, Journal of Royal Asiatic Society of Bengal Vol. V, pp 340-349.
5. Prinsep J., 1837, *Fascimiles of Ancient Inscriptions, Lithographed* by J. Prinsep, Journal of Royal Asiatic Society of Bengal Vol. VI, pt II, pp 662-682, Calcutta.
6. Salomon R., 1980, *Shell Inscriptions*, Calcutta, Also in Journal of Ancient Indian History Vols. X (1977-78)and XI (1978-79), Calcutta.
7. Salomon R., 1982, *Progress Toward Decipherment of the Shell Inscriptions*, Brahmavidya, The Adyar Library Bulletin, Vol. XLVI, pp 93-172. Madras.
8. Sharma R.K. (Ed.), 1990, *Studies in the Shell Script*. Agam Kala Prakashan, Delhi.


## ಚಿತ್ರಗಳು





# ತಮಿಳುಬ್ರಾಹ್ಮೀ, ಗ್ರಂಥ ಹಾಗೂ ವಟ್ಟೆಳುತ್ತು ಲಿಪಿಗಳು

– ಡಾ॥ ತಮಿಳ್ ಸೆಲ್ವಿ*

ಲಿಪಿಗಳ ಉಗಮಕ್ಕಿಂತ ಸಾವಿರಾರು ವರ್ಷಗಳ ಹಿಂದೆಯೇ ಜಗತ್ತಿನಲ್ಲಿ ಹಲವಾರು ಭಾಷೆಗಳು ಅಸ್ತಿತ್ವದಲ್ಲಿದ್ದವು. ಅದು ಲಿಪಿ ರಹಿತವಾದ ಮೌಖಿಕ ಯುಗ. ಅನೇಕ ಲಿಪಿ ರಹಿತ ಭಾಷೆಗಳು ಅಪಾರ ಪುರಾತನವಾದವು. ಲಿಪಿಯ ಸಹಾಯವಿಲ್ಲದೆಯೇ ತುಂಬ ಎತ್ತರಕ್ಕೇರಿದ ಭಾಷೆಗಳೂ ಹಲವಾರಿವೆ. ಅವುಗಳಿಗೆ ಭಾರತದಲ್ಲಿ ಉತ್ತಮ ನಿದರ್ಶನಗಳೆಂದರೆ ವೈದಿಕ ಸಾಹಿತ್ಯವನ್ನೊಳಗೊಂಡ ಸಂಸ್ಕೃತ ಮತ್ತು ಸಂಗಂ ಕಾಲದ ತಮಿಳು ಭಾಷೆಗಳು. ಆದರೆ ಇವೆರಡೂ ಭಾಷೆಗಳೂ ಲಿಪಿಯನ್ನು ರೂಢಿಸಿಕೊಳ್ಳುವ ಮುನ್ನವೇ ಪ್ರಾಕೃತ ಭಾಷೆಯು ಬ್ರಾಹ್ಮೀ ಲಿಪಿಯನ್ನು ರೂಢಿಸಿಕೊಂಡಿತ್ತು. ಬ್ರಾಹ್ಮೀ ಲಿಪಿ ಹುಟ್ಟಿದ್ದೇ ಪ್ರಾಕೃತ ಭಾಷೆಯ ಮಾಧ್ಯಮವಾಗಿ. ಗೌತಮಬುದ್ಧ, ಮಹಾವೀರರಂತಹ ಅದ್ಭುತ ಚಿಂತಕರ ವಾಣಿಯನ್ನು ಹರಡುವ ಲೇಖನ ಮಾಧ್ಯಮವಾಗಿತ್ತು ಇದು. ಉತ್ತರದಿಂದ ಚಲಿಸುತ್ತಾ ಬಂದು ಭಾರತದಾದ್ಯಂತ ಹರಡಿಕೊಂಡ ಈ ಲಿಪಿಯನ್ನು ಹಲವು ಭಾಷೆಗಳು ಒಪ್ಪಿಕೊಂಡು, ಅದರ ಆಧಾರದಿಂದ ತಮ್ಮದೇ ಆದ ಲಿಪಿಯನ್ನು ರೂಢಿಸಿಕೊಂಡವು.

ಭಾರತದಲ್ಲಿ ಕಂಡು ಬರುವ ಪ್ರಾಚೀನ ಲಿಪಿ ಸಿಂಧೂ ಲಿಪಿಯೇ ಆಗಿದೆ. ಆದರೆ ಅದು ಭಾವಸೂಚಕ ಲಿಪಿ ಎಂದು ಅಭಿಪ್ರಾಯವಿದ್ದು, ಸಿಂಧೂ ಕಣಿವೆಯ ಮುದ್ರಿಕೆಗಳಲ್ಲಿ ಮಾತ್ರ ಕಂಡು ಬರುತ್ತದೆಯೇ ಹೊರತು ಶಾಸನಗಳಲ್ಲಿ ಅಲ್ಲ. ಸಿಂಧೂ ನಾಗರಿಕತೆಯ ತರುವಾಯ ಕ್ರಿ.ಪೂ. ಮೂರನೇ ಶತಮಾನದವರೆಗೆ ಭಾರತದಲ್ಲಿ ಬಳಕೆಯಲ್ಲಿದ್ದ ಲಿಪಿ ಯಾವುದೆಂಬುದು ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಆದರೆ ಪ್ರಾಚೀನ ಜೈನ, ಬೌದ್ಧ ಸಾಹಿತ್ಯಗಳೂ ಸಂಸ್ಕೃತದ ಪಾಣಿನಿಯ ಅಷ್ಟಾಧ್ಯಾಯಿಯೂ ಕ್ರಿ.ಪೂ. ಮೂರನೇ ಶತಮಾನಕ್ಕಿಂತ ಮುನ್ನವೇ ಭಾರತದಲ್ಲಿ ಲಿಪಿಯೊಂದು ಬಳಕೆಯಲ್ಲಿತ್ತೆಂಬ ಮಾಹಿತಿಯನ್ನು ನೀಡುತ್ತವೆ. ಆದರೆ ಇದನ್ನು ಖಚಿತಪಡಿಸುವ ಆಧಾರಗಳು ಮಾತ್ರ ದೊರಕಿಲ್ಲ. ಭಾರತದಲ್ಲಿ ಇದುವರೆಗೆ ದೊರಕಿರುವ ಓದಲು ಸಾಧ್ಯವಾಗಿರುವ ಪ್ರಾಚೀನ ಲಿಪಿ ಬ್ರಾಹ್ಮಿ ಲಿಪಿಯೇ ಆಗಿದೆ.

ನಾವೀಗ ಬ್ರಾಹ್ಮಿ ಎಂದು ಕರೆಯುವ ಅಶೋಕನ ಕಾಲದ ಶಾಸನಗಳಲ್ಲಿ ಬಳಕೆಯಾಗಿರುವ ಲಿಪಿಗೆ ಆ ಹೆಸರಿತ್ತು ಎಂಬುದಕ್ಕೆ ಪ್ರಾಚೀನ ಬೌದ್ಧ-ಜೈನ ಸಾಹಿತ್ಯಗಳಲ್ಲಾಗಲೀ, ಸಂಸ್ಕೃತದ ವೈದಿಕ ಸಾಹಿತ್ಯದಲ್ಲಾಗಲೀ ಯಾವ ಆಧಾರಗಳೂ ಇಲ್ಲ. ಬಹುದಿನಗಳ ಕಾಲ ಓದಲು ಸಾಧ್ಯವಿಲ್ಲದೆ ಕಬ್ಬಿಣದ ಕಡಲೆ ಎನಿಸಿದ್ದ ಅಶೋಕನ ಶಾಸನಗಳನ್ನು ಮೊದಲ ಬಾರಿಗೆ ೧೮೩೭ರಲ್ಲಿ, ಓದುವುದರಲ್ಲಿ ಯಶಸ್ವಿಯಾದ ಕಲ್ಕತ್ತೆಯ ಟಂಕಸಾಲೆಯ ಅಧಿಕಾರಿಯಾಗಿದ್ದ ಜೇಮ್ಸ್ ಪ್ರಿನ್ಸೆಪ್ – ಜೈನ ಕೃತಿಗಳಲ್ಲಿ ಉಲ್ಲೇಖವಾಗಿರುವ ಬ್ರಾಹ್ಮೀ ಲಿಪಿಯೂ, ಗೌತಮ ಬುದ್ಧನು ಕಲಿತಿದ್ದನೆನ್ನಲಾಗುವ ಬ್ರಾಹ್ಮೀ ಲಿಪಿಯೂ ಇದೇ ಆಗಿರಬಹುದೆಂದು ಊಹಿಸಿ – ಅದನ್ನು 'ಬ್ರಾಹ್ಮೀ ಲಿಪಿ' ಎಂದು ಕರೆದನು. ಅಂದಿನಿಂದ ಅಶೋಕನ ಕಾಲದಲ್ಲಿ ದೊರೆತಿರುವ ಲಿಪಿಗಳಿಗೆ ಬ್ರಾಹ್ಮಿಯೆಂದೇ ಹೆಸರಾಗಿದೆ.

ಅಶೋಕನ ಕಾಲಕ್ಕಾಗಲೇ ಬ್ರಾಹ್ಮೀ ಲಿಪಿಯು ಚೆನ್ನಾಗಿ ಬೆಳೆದಿತ್ತು. ಆ ಕಾಲಕ್ಕಾಗಲೇ ಬ್ರಾಹ್ಮಿಯು ಉತ್ತರ ಮತ್ತು ದಕ್ಷಿಣ ಎಂಬ ಎರಡು ಭಿನ್ನ ರೂಪಗಳಲ್ಲಿ ಬಳಕೆಯಾಗುತ್ತಿತ್ತು. ಅಲ್ಲದೆ, ಕ್ರಿ.ಪೂ. ನಾಲ್ಕು-ಐದನೆಯ ಶತಮಾನಗಳಿಗೆ ಸೇರಿದ ಕೆಲವು ಗಮನಾರ್ಹ ನಾಣ್ಯಗಳೂ ಉತ್ತರದಲ್ಲಿ ದೊರಕಿವೆ. ಅವುಗಳಲ್ಲಿ ಕಂಡು ಬರುವ ಬರಹವೂ ಬ್ರಾಹ್ಮೀ ಲಿಪಿಯೊಂದಿಗೆ ಹೋಲಿಕೆಯಾಗುತ್ತದೆ. ಆದುದರಿಂದ ಅಶೋಕನ ಕಾಲಕ್ಕಿಂತಲೂ ಹಿಂದೆಯೇ ಬ್ರಾಹ್ಮಿ ಲಿಪಿ ಭಾರತದಲ್ಲಿದ್ದುದು ತಿಳಿಯುತ್ತದೆ. ಕ್ರಿ.ಪೂ. ೩-೨ನೆಯ ಶತಮಾನಗಳ ಅವಧಿಯಲ್ಲಿ ಬೌದ್ಧರೂ, ಜೈನರೂ ಉತ್ತರದಿಂದ ದಕ್ಷಿಣಕ್ಕೆ ಬಂದಾಗ ಬ್ರಾಹ್ಮಿ ಲಿಪಿಯನ್ನು ಇಲ್ಲಿಗೆ ಪರಿಚಯಿಸಿರಬೇಕು.

---

* ಹಿರಿಯ ಶ್ರೇಣಿ ಅಧ್ಯಾಪಕಿ, ಕನ್ನಡ ವಿಭಾಗ, ಮರೀನಾ ಕ್ಯಾಂಪಸ್, ಮದ್ರಾಸು ವಿಶ್ವವಿದ್ಯಾನಿಲಯ, ಚೆನ್ನೈ-೫.

ತಮಿಳುನಾಡಿನಲ್ಲಿ ದೊರಕುವ ಪ್ರಾಚೀನ ಬರವಣಿಗೆಗಳು ಜೈನರು ವಾಸಿಸುತ್ತಿದ್ದ ಗುಹೆಗಳಲ್ಲೋ, ಕಲ್ಲುಹಾಸಿಗೆಗಳ ಬಳಿಯೋ ದೊರಕಿವೆ. ಇವು ಅವರು ತಾವು ವಾಸಿಸುತ್ತಿದ್ದ ಸ್ಥಳಗಳಲ್ಲಿ ಅಥವಾ ಜೈನ ಮುನಿಗಳು ಮುಡಿಪಿದ ಸ್ಥಳಗಳಲ್ಲಿ ಕಂಡು ಬರುವ ಒಂದೆರಡು ಸಾಲಿನ ಪುಟ್ಟಪುಟ್ಟ ಬರಹಗಳಾಗಿವೆ. ಇದೇ ಮಾದರಿಯ ಗುಹೆಗಳೂ, ಬರಹಗಳೂ, ಸಿಂಹಳ ದ್ವೀಪದಲ್ಲೂ ದೊರಕಿವೆ. ಈ ಶಾಸನಗಳು ಕ್ರಿ.ಪೂ. ಮೂರನೆಯ ಶತಮಾನದಿಂದ ಕ್ರಿ.ಶ. ೫ನೆಯ ಶತಮಾನದವರೆಗಿನ ಕಾಲಾವಧಿಯೊಳಗೆ ಹರಡಿಕೊಂಡಿವೆ. ಈ ಕಾಲದಲ್ಲಿ ದೊರೆತಿರುವ ಎಲ್ಲ ಶಾಸನಗಳನ್ನೂ ಸಂಪೂರ್ಣವಾಗಿ ಹಾಗೂ ತೃಪ್ತಿಕರವಾಗಿ ಇನ್ನೂ ಓದಲಾಗಿಲ್ಲ.

ತಮಿಳುನಾಡಿನಲ್ಲಿ ದೊರಕಿರುವ ಪ್ರಾಚೀನ ಶಾಸನಗಳಲ್ಲಿ ಮೂರು ಬಗೆಯ ಲಿಪಿಗಳು ಕಂಡು ಬರುತ್ತವೆ. ಅವುಗಳೆಂದರೆ, ೧) ತಮಿಳು ಬ್ರಾಹ್ಮಿ ೨) ಗ್ರಂಥ ಲಿಪಿ ಮತ್ತು ೩) ವಟ್ಟೆಳುತ್ತು ಲಿಪಿಗಳು. ಇವುಗಳೆಲ್ಲಕ್ಕೂ ಮೂಲ ಅಶೋಕನ ಕಾಲದಲ್ಲಿ ಬಳಕೆಯಲ್ಲಿದ್ದ ಬ್ರಾಹ್ಮಿ ಲಿಪಿಯೇ ಆಗಿದೆ.

### ೧. ತಮಿಳು ಬ್ರಾಹ್ಮಿ ಲಿಪಿ

ಭಾರತದ ಇತರ ಎಲ್ಲ ಲಿಪಿಗಳಂತೆ ಇದೂ ಕೂಡ ಬ್ರಾಹ್ಮಿಯಿಂದ ಬಂದದ್ದೇ ಆಗಿದೆ. ಇದು ಬ್ರಾಹ್ಮಿ ಮೂಲದಿಂದ ಬಂದದ್ದಾದರೂ ತನ್ನದೇ ಆದ ಕೆಲವು ಮಾರ್ಪಾಡುಗಳನ್ನೂ ಒಳಗೊಂಡಿದ್ದು ಪ್ರತ್ಯೇಕ ಲಿಪಿಯಂತೆ ಕಂಡು ಬರುತ್ತದೆ. ಭಾರತದಾದ್ಯಂತ ಬ್ರಾಹ್ಮಿಲಿಪಿಯು ಉಪಯೋಗದಲ್ಲಿದ್ದು, ಅದು ಉಚ್ಚಾರಣೆಗೆ ತಕ್ಕಂತೆ ಸ್ಥಳೀಯವಾಗಿ ಬದಲಾವಣೆಗೆ ಒಳಪಟ್ಟು ರೂಪ ಬದಲಾವಣೆಗೊಂಡು ಬಳಕೆಯಾಗಿದೆ. ಆದ್ದರಿಂದಲೇ ಇದನ್ನು ಉತ್ತರ ಬ್ರಾಹ್ಮಿ, ದಕ್ಷಿಣ ಬ್ರಾಹ್ಮಿ, ಭಟ್ಟಿಪ್ರೋಲು ಬ್ರಾಹ್ಮಿ, ಸಿಂಹಳ ಬ್ರಾಹ್ಮಿ, ತಮಿಳು ಬ್ರಾಹ್ಮಿ ಎಂದು ಬೇರೆಬೇರೆಯಾಗಿ ಗುರುತಿಸಲಾಗುವುದು. ಆದರೆ ಕೆಲವು ವಿದ್ವಾಂಸರು ತಮಿಳು ಬ್ರಾಹ್ಮಿಯು ಸಿಂಧೂ ಲಿಪಿಯಿಂದ ಉಗಮವಾಗಿರಬಹುದೆಂದು ಊಹಿಸುತ್ತಾರೆ. ಈ ಅಭಿಪ್ರಾಯವನ್ನು ವ್ಯಕ್ತಪಡಿಸುವವರಲ್ಲಿ ಆರ್. ನಾಗಾಸ್ವಾಮಿಯವರು ಮುಖ್ಯರು. ಇವರು ತಮಿಳುನಾಡಿನ ಗುಹೆಗಳಲ್ಲಿ ಕಂಡು ಬರುವ ಲಿಪಿಯು ಸಿಂಧೂ ಲಿಪಿಯಿಂದ ಬಂದದ್ದು ಎನ್ನುತ್ತಾರೆ. ಕೆಲವು ವಿದ್ವಾಂಸರು ತಮಿಳು ಬ್ರಾಹ್ಮಿಯು ಅಶೋಕನ ಬ್ರಾಹ್ಮಿಗಿಂತಲೂ ಪ್ರಾಚೀನವಾದುದು ಎಂದರೆ, ಇನ್ನು ಕೆಲವರು ತಮಿಳು ಬ್ರಾಹ್ಮಿಯೇ ಅಶೋಕನ ಲಿಪಿಗೆ ಮೂಲವೆಂದು ಹೇಳುವುದೂ ಉಂಟು. ಆದರೆ ಇವು ಆಧಾರ ರಹಿತವಾದ ಹೇಳಿಕೆಗಳು. ಕ್ರಿ.ಪೂ. ೩-೨ನೆಯ ಶತಮಾನಗಳಲ್ಲಿ ಉತ್ತರದಿಂದ ಬಂದ ಜೈನ ವಿದ್ವಾಂಸರೇ ದಕ್ಷಿಣಕ್ಕೆ ಈ ಬ್ರಾಹ್ಮಿಯನ್ನು ಪರಿಚಯಿಸಿರಬಹುದೆಂದು ಬಹುಪಾಲು ವಿದ್ವಾಂಸರು ಒಪ್ಪುತ್ತಾರೆ. ಬಿ.ಆರ್. ಗೋಯೆಲ್ ಅವರು ಜೈನ ಮುನಿಗಳು ಮತ್ತು ವ್ಯಾಪಾರಿಗಳು ಈ ಲಿಪಿಯನ್ನು ದಕ್ಷಿಣಕ್ಕೆ ತಂದರು ಎನ್ನುತ್ತಾರೆ. ಡಾ. ಕೆ.ವಿ.ರಮೇಶ್ ಅವರ ಪ್ರಕಾರ ಜೈನ ಸನ್ಯಾಸಿಗಳು ತಮಿಳುನಾಡಿಗೆ ಬಂದಾಗ ಆ ವೇಳೆಗಾಗಲೇ ಇಲ್ಲಿ ರೇಖೆಯಾಕಾರದ ಯಾವುದೋ ಒಂದು ಲಿಪಿ ಬಳಕೆಯಲ್ಲಿತ್ತು. ಅದನ್ನೇ ಅವರು ತಮಗೆ ಬೇಕಾದಂತೆ ಮಾರ್ಪಡಿಸಿಕೊಂಡರು. ಇದೇ ದಮಿಳಿ ಅಥವಾ ಪೊಲಿಂದಿ ಎಂದು ಹೆಸರು ಗಳಿಸಿತು. ಸಿಂಹಳ ದ್ವೀಪದ ಕೆಲವೆಡೆಗಳಲ್ಲೂ ಈ ಲಿಪಿಗಳು ದೊರಕಿವೆ. ಈ ಲಿಪಿಗಳು ಅಶೋಕನಿಗಿಂತ ಹಿಂದಿನವೆಂದೂ, ಮುಂದೆ ಅದೇ ಲಿಪಿಯೇ ಭಟ್ಟಿಪ್ರೋಲು ಶಾಸನದ ಲಿಪಿಗೆ ಮೂಲವಾಯಿತೆಂದೂ ಅವರು ಹೇಳುತ್ತಾರೆ. ಕಣ್ಣಯ್ಯನ್ ಎನ್ನುವವರು ಭಾರತದಲ್ಲಿ ದೊರೆತಿರುವ ಲಿಪಿಗಳಲ್ಲೆಲ್ಲಾ ತಮಿಳು ನಾಡಿನ ಗುಹೆಗಳಲ್ಲಿ ಕಂಡು ಬರುವ ಲಿಪಿಗಳೇ ಪ್ರಾಚೀನವಾದುದೆಂದೂ, ಅಶೋಕನ ಲಿಪಿಗಳಿಗೆ ಇವೇ ಮೂಲವೆಂದೂ ಹೇಳುತ್ತಾರೆ. ಕೆ.ವಿ. ಸುಬ್ರಹ್ಮಣ್ಯ ಅಯ್ಯರ್ ಅವರೂ ಕೂಡ ಇವು ಆಶೋಕನಿಗಿಂತ ಹಿಂದಿನವು ಎನ್ನುತ್ತಾರೆ. ಸಿ. ಶಿವರಾಮ ಮೂರ್ತಿ ಎನ್ನುವವರು ಭಟ್ಟಿಪ್ರೋಲು ಶಾಸನದ ಲಿಪಿಗಳೇ ತಮಿಳುನಾಡಿನ ಲಿಪಿಗೆ ಮೂಲವೆನ್ನುತ್ತಾರೆ.

'ಅರಿಕಮೇಡು' ಎಂಬಲ್ಲಿ ನಡೆದ ಉತ್ಖನನದಲ್ಲಿ ದೊರೆತ ಶಾಸನ ಬರಹಗಳೇ ತುಂಬ ಪ್ರಾಚೀನವಾದುದೆಂದು ಭಾವಿಸಿ ತಮಿಳುಬ್ರಾಹ್ಮಿ ಲಿಪಿಯನ್ನು ಅರಿಕಮೇಡುವಿನ ಕಾಲ, ಅರಿಕಮೇಡುವಿನ ನಂತರದ ಕಾಲ ಎಂದು ಎರಡು ರೀತಿಯಲ್ಲಿ ನೋಡುವ ಪರಿಪಾಠವೂ ಉಂಟು. ಟಿ.ವಿ. ಮಹಾಲಿಂಗಂ ಎನ್ನುವವರು ಇವುಗಳ ಕಾಲ ಕ್ರಿ.ಪೂ. ಮೂರನೆಯ ಶತಮಾನದಿಂದ ಕ್ರಿ.ಶ. ಮೂರು-ನಾಲ್ಕನೆಯ ಶತಮಾನ ಎಂದರೆ; ಐರಾವತಂ ಮಹಾದೇವನ್ ಅವರು ಕ್ರಿ.ಪೂ. ಮೂರರಿಂದ ಕ್ರಿ.ಶ. ಆರನೆಯ ಶತಮಾನ ಎನ್ನುತ್ತಾರೆ. ಇವೇ ಭಾರತದ ಪ್ರಾಚೀನ ಬರಹಗಳು ಎಂಬುದು ಇವರ ಅಭಿಪ್ರಾಯ. ಕೆ. ಷಣ್ಮುಗಂ ಅವರು ತಂಜಾವೂರಿನ ಬಳಿ ಇರುವ ಕೊರ್ಕೈ(ಕೊರ್ಕೆಲ್) ಎಂಬಲ್ಲಿ ನಡೆದ ಉತ್ಖನನದ ಸಂದರ್ಭದಲ್ಲಿ ದೊರೆತ ಮಡಕೆಯ ಮೇಲಿನ ಬರಹಗಳನ್ನು ಪರಿಶೀಲಿಸಿ ಅವು ಕ್ರಿ.ಪೂ. ೮ನೆಯ ಶತಮಾನಕ್ಕೆ ಸೇರಿದ್ದೆಂಬ ಅಭಿಮಾನಪೂರಿತ ಮಾತುಗಳನ್ನು ಹೇಳಿರುವದೂ ಉಂಟು!

ಲಭ್ಯ ಆಧಾರಗಳನ್ನು ಪರಿಶೀಲಿಸಿದ ಮೇರೆಗೆ, ಕ್ರಿಪೂ. ಮೂರರಿಂದ ಕ್ರಿಶ. ನಾಲ್ಕನೆಯ ಶತಮಾನದವರೆಗೆ ದೊರಕಿರುವ ಶಾಸನ ಬರಹಗಳೇ ತಮಿಳುನಾಡಿನ ಪ್ರಾಚೀನ ಲಿಪಿಗಳು ಎಂಬ ಅಭಿಪ್ರಾಯ ಬಹುಪಾಲು ವಿದ್ವಾಂಸರಿಂದ ಒಪ್ಪಿತವಾಗಿದೆ.

ತಮಿಳು ಬ್ರಾಹ್ಮಿಯ ಕೆಲವು ಪ್ರಮುಖ ಅಂಶಗಳನ್ನು ಹೀಗೆ ಗುರುತಿಸಬಹುದು:

೧. ಸ್ವರಗಳಲ್ಲಿ ಋ, ಐ, ಔ–ಗಳು ಕಂಡು ಬರುವುದಿಲ್ಲ.

೨. ಅನುಸ್ವಾರ(ಂ) ವಿಸರ್ಗ(ಃ)ಗಳು ಬಳಕೆಯಾಗಿಲ್ಲ.

೩. ವರ್ಗದ ಪ್ರಥಮಾಕ್ಷರಗಳಾದ ಕ, ಚ, ಟ, ತ, ಪ–ಗಳು ಮತ್ತು ಕಡೆಯ ಅನುನಾಸಿಕಗಳಾದ ಙ, ಞ, ಣ, ನ, ಮ–ಗಳು ಮಾತ್ರವೇ ಈ ಲಿಪಿಯಲ್ಲಿ ಇವೆ. ಉಳಿದ ವರ್ಗಾಕ್ಷರಗಳಾಗಲೀ, ಮಹಾಪ್ರಾಣಗಳಾಗಲೀ ಬಳಕೆಯಾಗಿಲ್ಲ. ಅಪರೂಪಕ್ಕೆ ಕೆಲವೆಡೆಗಳಲ್ಲಿ ಥ(ಂ) ಅಕ್ಷರವೂ, ಒಂದೇ ಒಂದು ಕಡೆ ಧ ಅಕ್ಷರವೂ ಕಂಡು ಬಂದಿದೆ (ಇಂದಿಗೂ ತಮಿಳಿನಲ್ಲಿ ಮಹಾಪ್ರಾಣಗಳಾಗಲೀ, ಉಳಿದ ವರ್ಗಾಕ್ಷರಗಳಾಗಲೀ ಇಲ್ಲ).

೪. ಶ, ಷ–ಗಳು ಬಳಕೆಯಾಗಿಲ್ಲ. 'ಸ'ಕಾರ ಮಾತ್ರ ಕೆಲವೆಡೆಗಳಲ್ಲಿ ಪ್ರಯೋಗಗೊಂಡಿದೆ.

೫. ಗುಣಿತಾಕ್ಷರಗಳಲ್ಲಿ 'ಎ'ಕಾರ, 'ಒ'ಕಾರಗಳ ಹ್ರಸ್ವ ರೂಪಗಳೇ ಹೆಚ್ಚು ಬಳಕೆಯಾಗಿವೆ. ದೀರ್ಘ ರೂಪವು ಕ್ವಚಿತ್ತಾಗಿ ಮಾತ್ರ ಪ್ರಯೋಗವಾಗಿದೆ.

೬. ಸಂಸ್ಕೃತ ವರ್ಣಮಾಲೆಯಲ್ಲಿಲ್ಲದ ಕೆಲವು ಹೊಸ ಅಕ್ಷರಗಳೂ ಇವುಗಳಲ್ಲಿ ಕಂಡುಬರುತ್ತವೆ. ಅಶೋಕನ ಶಾಸನಗಳಲ್ಲಿ ಈ ಅಕ್ಷರಗಳು ಪ್ರಯೋಗವಾಗಿಲ್ಲ. ಈ ಕಾರಣದಿಂದಲೇ ಅಶೋಕನ ಶಾಸನಗಳಿಗಿಂತ ಇವು ಭಿನ್ನ ಎಂಬ ಅಭಿಪ್ರಾಯ ವ್ಯಕ್ತವಾಗಿರುವುದು.

೭. ಈ ಲಿಪಿಯಲ್ಲಿ ಬರೆದಿರುವ ಭಾಷೆಯು ಅಶೋಕನ ಶಾಸನಗಳಿಗಿಂತ ಭಿನ್ನವಾದ ಭಾಷೆ. ಇದು ಪಾಲಿಯಂತಿದ್ದ ಬೇರಾವುದೋ ಒಂದು ಪ್ರಾಕೃತ ಭಾಷೆಯ ಪದಗಳು ಬೆರೆತಿರುವ ತಮಿಳು ಭಾಷೆ ಎಂದು ಹೇಳಲಾಗುತ್ತದೆ.

೮. 'ತೊಲ್ಕಾಪ್ಪಿಯಂ' ಕೃತಿಯು ತಮಿಳಿನಲ್ಲಿ ೧೨ ಸ್ವರಗಳೂ, ೧೮ ವ್ಯಂಜನಗಳು ಇವೆ ಎಂದು ಹೇಳುತ್ತದೆ. ತಮಿಳು ಬ್ರಾಹ್ಮಿಯಲ್ಲಿ ಅ, ಆ, ಇ, ಈ, ಉ, ಊ, ಎ, ಒ–ಈ ಎಂಡು ಸ್ವರಗಳು ಮಾತ್ರ ದೊರಕಿವೆ. ಆದರೆ ವ್ಯಂಜನಗಳು ಹದಿನೆಂಟೂ ದೊರಕಿವೆ.

೯. ಐ, ಔಕಾರಗಳು ದೊರೆತಿಲ್ಲ. ಆದರೆ ಇವುಗಳಿಂದ ಕೂಡಿದ ವ್ಯಂಜನಾಕ್ಷರಗಳು ದೊರೆತಿವೆ. ಒ, ಓ–ಗಳೆರಡಕ್ಕೂ ಒಂದೇ ಬಗೆಯ ಗುಣಿತಾಕ್ಷರ ಚಿಹ್ನೆಯು ಕಂಡು ಬರುತ್ತದೆ.

ಬ್ರಾಹ್ಮಿ ಲಿಪಿಯಲ್ಲಿರುವ ಶಾಸನಗಳ ಬರಹವು ಕೃಷ್ಣಾ ಜಿಲ್ಲೆಯ ಭಟ್ಟಿಪ್ರೋಲು ಎಂಬಲ್ಲಿ ಒಂದು ಕರಂಡಕದ ಮೇಲೆ ದೊರೆತಿರುವ ಶಾಸನ ಲಿಪಿಯನ್ನು ಹೋಲುತ್ತದೆ. ಭಟ್ಟಿಪ್ರೋಲು ಶಾಸನ ಲಿಪಿಯು ಅಶೋಕನ ಶಾಸನ ಲಿಪಿಗಳನ್ನು ಸ್ವಲ್ಪ ಮಟ್ಟಿಗೆ ಅನುಸರಿಸಿರುವುದು ಕಂಡು ಬರುತ್ತದೆಯಾದರೂ, ಅದಕ್ಕಿಂತ ಭಿನ್ನವಾದ ದಕ್ಷಿಣದ ರೂಪವನ್ನೂ ಹೊಂದಿದೆ. ಉತ್ತರದಲ್ಲಿ ದೊರಕಿರುವ ಅಶೋಕನ ಕಾಲದ ಲಿಪಿಗಳಿಗೂ, ಭಟ್ಟಿಪ್ರೋಲು ಶಾಸನ ಲಿಪಿಗೂ ಕೆಲವು ವ್ಯತ್ಯಾಸಗಳಿವೆ. ಬ್ರಾಹ್ಮಿಯಲ್ಲಿ 'ಕ'(ಚಿತ್ರ–೧)ಕಾರವನ್ನು ಸೂಚಿಸಲು ಶಿಲುಬೆಯಾಕಾರದ ಗೆರೆಗಳನ್ನು ಉಪಯೋಗಿಸಲಾಗಿದೆ. ಅದಕ್ಕೆ ದೀರ್ಘ ರೂಪವನ್ನು ಸೂಚಿಸಲು ಕಕಾರದ ಬಲಬದಿಯಲ್ಲಿ ಒಂದು ನೇರಗೆರೆಯನ್ನು ಎಳೆಯಲಾಗಿದೆ (ಚಿತ್ರ–೨). ಆದರೆ ಭಟ್ಟಿಪ್ರೋಲು ಶಾಸನದಲ್ಲಿ 'ಕ'ಕಾರವನ್ನು ಸೂಚಿಸುವುದಕ್ಕೇ (ಚಿತ್ರ–೨) ಈ ಚಿಹ್ನೆಯನ್ನು ಬಳಸಿ, ಅದರ ದೀರ್ಘ ಚಿಹ್ನೆಯನ್ನು ತೋರಿಸಲು ಕಕಾರದ ತಲೆಕಟ್ಟಿನ ಬಲಬದಿಯಲ್ಲಿ ಮತ್ತೊಂದು ನೀಳಗೆರೆ ಕೆಳಗೆ ತೂಗುವಂತೆ ಬರೆಯಲಾಗಿದೆ (ಚಿತ್ರ ೩). ಭಟ್ಟಿಪ್ರೋಲು ಶಾಸನವು ದ್ರಾವಿಡ ಸಂಪ್ರದಾಯವುಳ್ಳ ಪ್ರದೇಶದಲ್ಲಿ ಸಂಸ್ಕೃತದಲ್ಲಿ ರಚನೆಯಾಗಿದೆ. ಆದುದರಿಂದ ಈ ಎರಡೂ ಕ್ರಮಗಳನ್ನೂ ಪಾಲಿಸುವುದಕ್ಕಾಗಿ, ವ್ಯಂಜನಾಕ್ಷರದ ಹ್ರಸ್ವ–ದೀರ್ಘರೂಪಗಳೆರಡನ್ನೂ ತೋರಿಸಲು ಬೇರೆ ಬೇರೆ ಚಿಹ್ನೆಗಳನ್ನು ರೂಢಿಸಿಕೊಂಡಿರಬೇಕು. 'ಆ'ಕಾರ ಚಿಹ್ನೆಯನ್ನು ತೋರಿಸಲು ಬಳಸಿರುವ ಈ ರೂಪ ಬೇರ್‍ಯಾವ ಶಾಸನಗಳಲ್ಲೂ ಕಂಡು ಬರುವುದಿಲ್ಲ.

'ವ್ಯಂಜನಾಕ್ಷರಗಳು ಚುಕ್ಕೆಯನ್ನೊಳಗೊಂಡಿರಬೇಕು' ಎಂದು ತಮಿಳಿನ ಪ್ರಾಚೀನ ವ್ಯಾಕರಣ ಕೃತಿಯಾದ 'ತೊಲ್ಕಾಪ್ಪಿಯಂ' ತಿಳಿಸುತ್ತದೆ. ಎಂದರೆ ವ್ಯಂಜನಾಕ್ಷರಗಳು ಪದದ ನಡುವೆಯಾಗಲೀ, ಕಡೆಯಲ್ಲಾಲೀ ಬಂದರೆ ಅದನ್ನು ಚುಕ್ಕೆಯಿಂದ ಸೂಚಿಸಬೇಕು. ಅಕ್ಷರದ ಮೇಲೆ ಒಂದು ಚುಕ್ಕೆಯನ್ನು ಇಟ್ಟಾಗ ತಮಿಳಿನಲ್ಲಿ ಅದು ವ್ಯಂಜನವಾಗುತ್ತದೆ. ಹೀಗೆ ಬರೆಯುವ ವ್ಯಂಜನಾಕ್ಷರಗಳು ತಮಿಳಿನಲ್ಲಿ ಒಂದು ಪ್ರತ್ಯೇಕ ಅಕ್ಷರಗಳೇ ಆಗಿವೆ. ಸಂಸ್ಕೃತದಲ್ಲಿ ವ್ಯಂಜನಾಕ್ಷರದ ಮೇಲೆ ಚುಕ್ಕೆಯನ್ನಿಟ್ಟರೆ ಅದು 'ಮ್' ಎಂದು ಉಚ್ಚಾರವಾಗುತ್ತದೆ. ಉದಾಹರಣೆಗೆ, ಕ ಎಂಬ ಅಕ್ಷರದ ಮೇಲೆ ಚುಕ್ಕೆಯನ್ನಿಟ್ಟರೆ ಅದು ತಮಿಳಿನಲ್ಲಿ ಕ್ ಎಂದು ಉಚ್ಚಾರವಾದರೆ; ಸಂಸ್ಕೃತದಲ್ಲಿ ಕಮ್ ಎಂದು ಉಚ್ಚಾರಗೊಳ್ಳುತ್ತದೆ. ಆದರೆ ತಮಿಳುಬ್ರಾಹ್ಮಿ ಶಾಸನಗಳಲ್ಲಿ ಚುಕ್ಕೆಯಿಲ್ಲದೆಯೇ ವ್ಯಂಜನಗಳು ಬಳಕೆಯಾಗಿರುವುದು ಕಂಡು ಬರುತ್ತವೆ.

'ಇ'ಕಾರವನ್ನು ಸೂಚಿಸಲು ಪ್ರಾಚೀನ ತಮಿಳು ಶಾಸನಗಳಲ್ಲಿ ಒಂದು ನೇರೆ ಗೆರೆ ಎಳೆದು ಅದರ ಅತ್ತಿತ್ತ ಎರಡು ಚುಕ್ಕೆಗಳನ್ನು ಇಡಲಾಗಿದೆ. ಇದು ಗುಪ್ತರ ಕಾಲದ ಶಾಸನಗಳಲ್ಲೂ ಕಂಡುಬರುತ್ತದೆ. ಆದರೆ ಅಲ್ಲಿ ಈ ರೂಪವು 'ಈ'ಕಾರವಾಗಿ ಬಳಕೆಯಾಗಿದೆ. ಕ್ರಿ.ಶ. ೮ನೆಯ ಶತಮಾನದ ನಂತರ ತಮಿಳಿನಲ್ಲಿ ಕಂಡು ಬರುವ ಶಾಸನಗಳಲ್ಲಿ ಕೂಡ ಇದು 'ಈ'ಕಾರವಾಗಿಯೇ ಪ್ರಯೋಗವಾಗಿದೆ. ಆದರೆ ತಮಿಳುಬ್ರಾಹ್ಮಿ ಶಾಸನಗಳಲ್ಲಿ ಇದೇ ಚಿಹ್ನೆಯು ಇಕಾರವಾಗಿ ಬಳಕೆಯಾಗಿದೆ. ಇದೇ ಕಾಲಕ್ಕೆ ಸೇರಿದ ಸಿಂಹಳದ ತಮಿಳು ಶಾಸನಗಳಲ್ಲೂ ಇದು ಇಕಾರವಾಗಿಯೇ ಪ್ರಯೋಗವಾಗಿದೆ. ಅಶೋಕನ ಶಾಸನಗಳಲ್ಲಿ 'ಇ'ಕಾರವನ್ನು ತ್ರಿಕೋನಾಕಾರದ ಮೂರು ಚುಕ್ಕೆಗಳಿಂದ ಗುರುತಿಸಲಾಗಿದೆ (ಚಿತ್ರ–೪) ಬ್ರಾಹ್ಮಿಲಿಪಿಯ ರೂಪಗಳೇ ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ತಮಿಳುಬ್ರಾಹ್ಮಿಯಲ್ಲಿ ಕಂಡು ಬರುವುದರಿಂದ ಕ್ರಿ.ಶ. ೩೫೦ಕ್ಕಿಂತ ಹಿಂದಿನ ಈ ಲಿಪಿಯನ್ನು ತಮಿಳು ಬ್ರಾಹ್ಮಿ ಎಂದು ಕರೆಯಲಾಗಿದೆ. ಈ ಲಿಪಿಯಲ್ಲಿ ಕೆತ್ತಲಾಗಿರುವ ಶಾಸನಗಳು ಆಂಧ್ರಪ್ರದೇಶದ ವೆಂಗಿನಾಡಿನ ಭಾಗಗಳಲ್ಲೂ ಕಂಡು ಬರುತ್ತವೆ.

ಇದುವರೆಗೂ ತಮಿಳು ಬ್ರಾಹ್ಮಿ ಲಿಪಿಯಲ್ಲಿರುವ ಸುಮಾರು ತೊಂಬತ್ತು ಶಾಸನಗಳು ತಮಿಳುನಾಡಿನ ದಕ್ಷಿಣ ಭಾಗದ ಪ್ರಾಂತ್ಯಗಳಾದ ಮಧುರೆ, ತಂಜಾವೂರು, ಈರೋಡು, ಪುದುಕೋಟ್ಟೈ, ವಿರುದುನಗರ್, ತೂತ್ತುಕುಡಿ, ಶಿವಗಂಗೆ, ತಿರುನಲ್ವೇಲಿ, ರಾಮನಾಥಪುರ, ಉರ್ರೈಯೂರು, ತಿರುಚಿರಾಪಳ್ಳಿ ಹಾಗೂ ಕೇರಳ ಪ್ರಾಂತ್ಯಗಳಲ್ಲಿ ದೊರಕಿವೆ. ಈಜಿಪ್ಟ್, ಥಾಯ್‌ಲ್ಯಾಂಡ್, ಸಿಂಹಳ ಪ್ರಾಂತ್ಯಗಳಲ್ಲೂ ಈ ಲಿಪಿಯ ಶಾಸನಗಳು ಕಂಡು ಬರುತ್ತವೆ. ಸಾಮಾನ್ಯವಾಗಿ ಈ ಶಾಸನಗಳೆಲ್ಲವೂ ಒಂದೆರಡು ಸಾಲಿನ ಪುಟ್ಟ ಬರಹಗಳು. ಇವುಗಳ ಬರವಣಿಗೆಯಲ್ಲಿ ಅನನುಭವ ಎದ್ದು ಕಾಣುತ್ತದೆ. ತಮಿಳುನಾಡಿನ ಉತ್ತರಭಾಗ (ತೊಂಡೈಮಂಡಲಪ್ರಾಂತ್ಯ)ದ ನಾಲ್ಕು ಸ್ಥಳಗಳಲ್ಲಿ ಬ್ರಾಹ್ಮಿಲಿಪಿಯ ೪ ಶಾಸನಗಳು ದೊರಕಿವೆ. ಇದು ಪಲ್ಲವರ ಆಡಳಿತಕ್ಕೆ ಸೇರಿದ ಪ್ರಾಂತ್ಯ. ದಕ್ಷಿಣ ಭಾಗ (ಪಾಂಡ್ಯನಾಡು)ದ ಇಪ್ಪತ್ತು ಸ್ಥಳಗಳಲ್ಲಿ ೬೪ ಶಾಸನಗಳೂ, ಪೂರ್ವಭಾಗ (ಚೇರನಾಡು, ಕೊಂಗುನಾಡು)ದ ಐದು ಸ್ಥಳಗಳಲ್ಲಿ ೨೧ ಶಾಸನಗಳೂ; ಪಶ್ಚಿಮ (ಚೋಳನಾಡು) ಭಾಗಕ್ಕೆ ಸೇರಿದ ಒಂದು ಸ್ಥಳದಲ್ಲಿ ಒಂದು ಶಾಸನವೂ ದೊರೆತಿವೆ ಎಂದು ಐರಾವತಂ ಮಹಾದೇವನ್ ಅವರು ಹೇಳುತ್ತಾರೆ.

ಭಾರತದ ಉಳಿದೆಡೆಗಳಲ್ಲಿ ದೊರಕಿರುವ ಬ್ರಾಹ್ಮಿಲಿಪಿಯ ಶಾಸನಗಳು ಪ್ರಾಕೃತದಲ್ಲಿದ್ದರೆ, ತಮಿಳುನಾಡಿನಲ್ಲಿ ದೊರೆತಿರುವ ಈ ಬ್ರಾಹ್ಮಿಲಿಪಿಯ ಶಾಸನಗಳು ತಮಿಳು ಭಾಷೆಯಲ್ಲಿರುವುದು ಇವುಗಳ ವೈಶಿಷ್ಟ್ಯವಾಗಿದೆ. ಸ್ಥಳೀಯ ಭಾಷೆಯನ್ನು ಬರೆಯಲು ಆ ಲಿಪಿಯನ್ನು ಬಳಸಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದು.

ಈ ಶಾಸನಗಳ ತರುವಾಯ ಬ್ರಾಹ್ಮಿಯಿಂದ ಸಂಪೂರ್ಣ ಭಿನ್ನ ರೂಪವನ್ನು ಪಡೆದುಕೊಂಡಿರುವ ತಮಿಳುಲಿಪಿಯ ಶಾಸನಗಳು ಕಂಡು ಬರುವುದು ಕ್ರಿ.ಶ. ಏಳನೆಯ ಶತಮಾನದಲ್ಲಿ. ಜಿಂಜಿ ತಾಲೂಕಿನ ತಿರುನಾಥರ್‌ಕುನ್ರು ಎಂಬಲ್ಲಿ ದೊರೆತಿರುವ ಈ ಜೈನ ಶಾಸನವು ನಾಲ್ಕು ಸಾಲುಗಳನ್ನು ಒಳಗೊಂಡಿದ್ದು, ಇದರಲ್ಲಿ ಒಟ್ಟು ೨೯ ಅಕ್ಷರಗಳಿವೆ. ಇದರಲ್ಲಿ ಐಕಾರ ಮೊದಲ ಬಾರಿಗೆ ಪ್ರಯೋಗವಾಗಿದೆ. ಇದು ಚಂದ್ರನಂದಿ ಆಚಾರ್ಯನ ನಿಸಿಧಿ (ಎಸ್.ಐ.ಐ., ನಂ. ೨೬೨). ಮಹಾಲಿಂಗಂ ಅವರು ಇದರ ಕಾಲ ಕ್ರಿ.ಶ. ೪ನೆಯ ಶತಮಾನ ಎಂದು ಹೇಳುತ್ತಾರೆ. ತಿರುಚಿನಾಪಳ್ಳಿಯ ಕೆಲವೆಡೆಗಳಲ್ಲಿ ದೊರೆತಿರುವ ಲಿಪಿಗಳನ್ನು ಕ್ರಿ.ಶ. ೬ನೆಯ ಶತಮಾನದ್ದೆಂದು ಹೇಳಲಾಗುತ್ತದೆ. ಇತ್ತೀಚೆಗೆ ಪೆರಿಯಾನ್ ಪಟ್ಟಿಯಲ್ಲಿ ದೊರೆತಿರುವ ಶಾಸನವೂ ಜಿಂಜಿ ಶಾಸನದ ಕಾಲಕ್ಕಿಂತ ಪ್ರಾಚೀನವಾದುದೆಂದು ಕೆಲವರು ಹೇಳುತ್ತಾರೆ. ತಿರುನಾಥರ್‌ಕುನ್ರು ಶಾಸನದ 'ಪ'ಕಾರವು ಆಯತಾಕಾರಕ್ಕೆ ತಿರುಗಿದೆ (ಲಿಪಿಯ ಹುಟ್ಟು ಬೆ., ೨೦೧ ನೋಡಿ).

ತಮಿಳು ಬ್ರಾಹ್ಮಿಯಲ್ಲಿ ಬರೆಯಲಾಗಿರುವ ಬಹುಪಾಲು ಶಾಸನಗಳು ಜೈನಸಂಬಂಧಿಯಾದುವು. ಇವು ಜೈನ

ಮುನಿಗಳ ನಿಸಿಧಿಗೆಗಳು. ದೊಡ್ಡ ದೊಡ್ಡ ಬೆಟ್ಟಗಳು ಅಥವಾ ಗುಡ್ಡಗಳಲ್ಲಿ ಪ್ರಾಕೃತಿಕವಾಗಿ ರೂಪುಗೊಂಡಿರುವ ಗುಹೆಗಳ ಬಳಿಯೋ, ಕಲ್ಲು ಹಾಸಿಗೆಗಳ ಮೇಲೋ ಇವು ಕಂಡು ಬರುತ್ತವೆ. ಈ ಸ್ಥಳಗಳು ನದಿ, ಏರಿ ಅಥವಾ ನೀರಿನ ಹರಿವು ಇರುವ ಸ್ಥಳಗಳಿಗೆ ಸಮೀಪವಾಗಿವೆ ಮತ್ತು ನಗರಗಳಿಗೆ ಹಾದು ಹೋಗುವ ಹೆದ್ದಾರಿಗಳ ಬಳಿಯೋ, ಫಲವತ್ತಾದ ಬೆಳೆ ಬೆಳೆಯುವ ಪ್ರದೇಶಗಳ ಸುತ್ತಲೋ ಇವು ಕಂಡು ಬರುತ್ತವೆ. ಕೆಲವೆಡೆ ಉತ್ಖನನದ ಸಂದರ್ಭದಲ್ಲಿ ಮಡಕೆಯ ಚೂರಿನ ಮೇಲೂ, ಉಂಗುರ, ಮುದ್ರಿಕೆಗಳ ಮೇಲೂ ಈ ಬರಹಗಳು ಕಂಡು ಬಂದಿವೆ. ಈ ಬರಹಗಳಲ್ಲಿ ನಿಸಿಧಿಗಳನ್ನು ಪಾಳಿ, ಪಾಳಿಯ್, ಪಾಳಿಇಯ್, ಪಳ್ಳಿ, ಅಧಿಟ್ಟಾನಮ್, ಕರಂಡೈ, ಮುಟಿಸಾಗೈ, ಮುಳುಉಗೈ, ಕಲ್‌ಕಾಂಚನಂ ಮೊದಲಾದ ಹೆಸರುಗಳಿಂದ ಕರೆಯಲಾಗಿದೆ.

ಈ ಶಾಸನಗಳಲ್ಲಿ ವೆಳ್‌ಅರೈ, ನೆಲ್‌ವೆಳಿಇಯ್, ಇಲಂಜೀಯ್, ಪಾಂಗಾಡು, ಪೇದಲೈ, ಮದಿರೈ, ಮದಿರ, ಮದಿರೆಯ್ (ಇಂದಿನ ಮದುರೆ), ಪದಿನ್‌ಊರ್, ವೆಣ್‌ಪಳ್ಳಿ, ಪನ್ನೈತುರೈ, ಮುಸಿರಿ, ಇವಕುನ್‌ಜಿಮ್, ತೇನೂರ್, ಕರುಊರ್, ಎಯಿಲ್ ಮೊದಲಾದ ಸ್ಥಳನಾಮಗಳು ಕಂಡು ಬರುತ್ತವೆ.

ವ್ಯಕ್ತಿನಾಮಗಳಲ್ಲಿ ಹಲವು ವಿಶೇಷಣಗಳೂ ಸೇರಿ ಪ್ರಯೋಗಗೊಂಡಿರುವುದು ಕಂಡು ಬರುತ್ತದೆ. ಅವುಗಳಲ್ಲಿ ಕೆಲವು ಉದಾಹರಣೆಗಳು :

'ಇಳ' ಎಂಬ ವಿಶೇಷಣದೊಂದಿಗೆ ಹಲವು ಹೆಸರುಗಳು ಗೋಚರಿಸುತ್ತವೆ. ಪುಗಳೂರು ಶಾಸನದ 'ಇಳಂಕಡುಂಗೋ', ತೊಂಡೂರು ಶಾಸನದ 'ಇಳಂಗಾಯಿಬನ್', ಮನ್ನಾರ್‌ಕೋಯಿಲ್ ಶಾಸನದ 'ಇಳಂಗೋ', ಮಾಂಗುಳಂ ಶಾಸನದ 'ಇಳಂಜಡಿಗನ್', ವರಿಚ್ಚಿಯೂರ್ ಶಾಸನದ 'ಇಳನದನ್', ಅಳಗರ್‌ಮಲೈ ಶಾಸನದ ಎಳಚ್ಚಂದನ್ ಮೊದಲಾದವು.

'ಪೆರು' ಎಂಬ ಪದವು ಹಿರಿಯ, ಹೆಮ್ಮೆಯ, ಶ್ರೇಷ್ಠ ಎಂಬ ಅರ್ಥಗಳನ್ನು ಒಳಗೊಂಡಿದ್ದು, ಈ ವಿಶೇಷಣದೊಂದಿಗೂ ಹಲವು ಹೆಸರುಗಳು ಪ್ರಯೋಗಗೊಂಡಿರುವುದು ಕಂಡು ಬರುತ್ತದೆ. ಉದಾ: ಪುಗಳೂರು ಶಾಸನದ 'ಪೆರುಂಗಡುಗೋನ್, ಪೆರುಂಗೀರನ್', ಮನ್ನಾರ್‌ಕೋಯಿಲ್ ಶಾಸನದ ಪೆರುಂಗೊಟ್ರನ್ 'ಮೊದಲಾದವು.

'ನೆಡು' ಎಂಬ ವಿಶೇಷಣವೂ ಪೆರು ಎಂಬ ಅರ್ಥವನ್ನೇ ಒಳಗೊಂಡಿದೆ. ನೆಡುಂಜೆಳಿಯನ್, ನೆಡಿಂಜೆಟಿಯನ್, ನೆಡುಮಲ್ಲನ್, ನೆಡುಮಾ ಮೊದಲಾದವು ಇದಕ್ಕೆ ಉದಾಹರಣೆಗಳು.

'ಅಂದೈ' ಎಂದರೆ ಹಿರಿ, ಮುಖಂಡ ಎಂದು ಅರ್ಥ. ಅಂದೈ ಅಸುತನ್, ಅಂದೈ ಇರಾವತನ್, ಅಂದೈ, ಅಂದೈ ವಿಸೂವನ್, ಅಂದೈ ಸೇಂದ ಆದನ್, ಅಂದುವನ್, ಇತ್ಯಾದಿಗಳು

ಇವುಗಳಷ್ಟೇ ಅಲ್ಲದೆ, ಚಂದರಿತನ್(ಚಂದನ್+ಅರಿತನ್/ಆರೀತನ್), ಸತಿಯಪುತೋ ಅದಿಯನ್ ನೆಡುಮಾನ್ ಅಂಜಿ, ನಂದಿಯ್, ವೆಣ್‌ಕಾಸಿಬನ್, ಇಳಂಜೀಯ ಎಳಮ್ ಪೇರಾದನ್ ಮಗನ್ ಎಮಯವನ್, ಕಡಿಗೈ ಕೋವಿನ್ ಮಗನ್ ಪೆರುಂಗೂಟ್ರನ್, ಇಳಂಗಡುಂಗೋ ಮೊದಲಾದ ಹೆಸರುಗಳನ್ನೂ ಈ ಶಾಸನಗಳಲ್ಲಿ ಕಾಣಬಹುದು. ಕೆಲವು ವ್ಯಾಪಾರಿಗಳ ಹೆಸರುಗಳೂ ಇವುಗಳಲ್ಲಿ ಕಂಡು ಬರುತ್ತವೆ. ಅಳಗರ್ ಮಲೈ ಶಾಸನದಲ್ಲಿ ಬರುವ 'ವಣಿಗನ್ ಎಳಚಂದನ್', 'ವಣಿಗ ವಿಯಗನ್', ಕರುಊರ್ ಶಾಸನದಲ್ಲಿ ಬರುವ 'ಪೊನ್ ವಣಿಗನ್', 'ಎಣ್ಣೆ ವಣಿಗನ್ ವೆನಾದನ್' ಮೊದಲಾದವು ವ್ಯಾಪಾರಿಗಳನ್ನು ಉಲ್ಲೇಖಿಸುವ ಪದಗಳಾಗಿವೆ.

ಪುಗಳೂರು ಶಾಸನದಲ್ಲಿ 'ಪಿಟ್ಟನ್ ಕುರುಮ್ ಮಗಳ್ ಕೀರನ್ ಕೊಟ್ರಿ, (ಪಿಟ್ಟನ್ ಎನ್ನುವವನ ಕಿರಿಯ ಮಗಳು ಕೀರನ್‌ಕೊಟ್ರಿ) ಎಂಬ ಹೆಸರೂ; ನೇಗನೂರು ಪಟ್ಟಿಯಲ್ಲಿ ದೊರೆತಿರುವ ಶಾಸನದಲ್ಲಿ ಬರುವ 'ಸೇಕ್ಕಂತಿ ತಾಯಿಯರು ಸೇಕ್ಕಂದಣ್ಣಿ' (ಸೇ+ಕಂತಿ; ತಾಯಿ+ಅರ್=ತಾಯಿಯರು. ಈ ಪದದಲ್ಲಿರುವ ಅರ್ ಪ್ರತ್ಯಯವು ಕನ್ನಡದ ಪ್ರಭಾವದಿಂದ ಬಂದುದೆಂದು ಐರಾವತಂ ಮಹಾದೇವನ್ ಅವರು ಹೇಳುತ್ತಾರೆ) ಮೊದಲಾದ ಸ್ತ್ರೀನಾಮಗಳು ಕಂಡು ಬರುತ್ತವೆ. ಇಕಾರಾಂತ್ಯದಿಂದ ಅಂತ್ಯಗೊಳ್ಳುವುದು ಇವುಗಳ ವೈಶಿಷ್ಟ್ಯವಾಗಿದೆ. ಸೇಕ್ಕಂದಣ್ಣಿ ಎಂಬಾಕೆಯು ಒಂದು ಜೈನಗುಹೆಯನ್ನು ನಿರ್ಮಿಸಿ ಕೊಟ್ಟುದುದಾಗಿ ಇದು ತಿಳಿಸುತ್ತದೆ. ಸೇಕ್ಕಂದಿ ಎನ್ನುವ ಜೈನಶ್ರಾವಕಿಯ ತಾಯಿಯ ಹೆಸರು ಸೇಕ್ಕಂದಣ್ಣಿ. ಪಮಿತಿ ಸಪಮಿತಾ(ಸರ್ಪಮಿತ್ರಾ) ಎಂಬ ಇನ್ನೊಂದು ಹೆಸರೂ ಒಂದೆಡೆ ಕಂಡು ಬರುತ್ತದೆ.

ಸಿತ್ತನವಾಸಲ್ ಶಾಸನವು ತುಂಬ ಪ್ರಮುಖವಾದ ಒಂದು ತಮಿಳುಬ್ರಾಹ್ಮಿ ಬರಹದ ಶಾಸನವಾಗಿದ್ದು, ಇದರಲ್ಲಿ ಎರುಮಿನಾಡಿನ

ಉಲ್ಲೇಖವಿದೆ. ಇದು ಮಹಿಷಮಂಡಲ (ಇಂದಿನ ಮೈಸೂರು ಪ್ರಾಂತ್ಯ)ದ ಹಳೆಯ ಹೆಸರು ಎಂದು ಐರಾವತಂ ಮಹಾದೇವನ್ ಅವರು ಹೇಳುತ್ತಾರೆ. ಇದು ಎರಡು ಸಾಲುಗಳ ಶಾಸನ. ಅದರ ಪಾಠ ಹೀಗಿದೆ :

*ಎರುಮಿನಾಡು ಕುಮುಟ್‌ಊರ್ ಪಿಜನ್‌ದ ಗಾವುಡಿಈ*

*ತೆಂಕುಸಿಜುಮೋಸಿಲ್ ಇಳಯರ್ ಸೆಯ್‌ದ ಅದಿಟ್‌ಆನಮ್*

'ಎರುಮಿನಾಡಿನ ಕುಮಿಳೂರಿನಲ್ಲಿ ಹುಟ್ಟಿದ ಗಾವುಡಿಗೆ ತೆಂಕಣ ದಿಕ್ಕಿನಲ್ಲಿ ಸಿಜುಪೋಸಿಲ್ಯೆಗೆ ಸೇರಿದ ಎಳಯರ್ ಎಂಬುವವನು ಮಾಡಿಕೊಟ್ಟ ಅಧಿಷ್ಠಾನ' ಎಂಬುದು ಇದರ ಅರ್ಥ. ಇದರಲ್ಲಿ ಬರುವ ಎರುಮಿನಾಡು ಸಂಗಂ ಸಾಹಿತ್ಯದಲ್ಲಿ ಬರುವ ಎರುಮೈ ನಾಡು ಎಂಬುದನ್ನೇ ಸೂಚಿಸುತ್ತದೆ. ಇದು ಮಹಿಷಮಂಡಲ ಎಂಬ ಸಂಸ್ಕೃತ ಹೆಸರಿನ ದ್ರಾವಿಡ ರೂಪವಾಗಿದೆ. ಈ ಪ್ರಾಂತ್ಯಕ್ಕೆ ಸೇರಿದ ಒಂದು ಊರು ಕುಮಿಟೂರು. ಗಾವುಡಿಈ ಎಂಬುದು ಗೌಡ ಎಂಬ ಪದದ ಸ್ತ್ರೀರೂಪವಾಗಿದ್ದು, ಈಕೆ ಒಬ್ಬ ಜೈನ ಸನ್ಯಾಸಿಯಾಗಿದ್ದಳು ಎಂಬುದನ್ನು ಈ ಶಾಸನ ತಿಳಿಸುತ್ತದೆ. ಗಾವುಡಿ ಪದದ ಜೊತೆ ಕಡೆಯಲ್ಲಿ ಸೇರಿರುವ ಈ ಸ್ವರವು ಸ್ತ್ರೀವಾಚಿಪದವನ್ನು ಸೂಚಿಸುವ ಈಕಾರವಾಗಿ ಬಂದಿದೆ. ಈಕೆಗೆ ಒಂದುಅಧಿಷ್ಠಾನವನ್ನು ನಿರ್ಮಿಸಿಕೊಟ್ಟ ಸಂಗತಿಯನ್ನು ಈ ಶಾಸನವು ತಿಳಿಸುತ್ತದೆ.

ತಮಿಳು ಬ್ರಾಹ್ಮಿಲಿಪಿಯನ್ನು ಬರಹ ರೂಪವನ್ನಾಧರಿಸಿ ಪ್ರಾಚೀನ ಕಾಲ (ಕ್ರಿ.ಪೂ. ೩ನೆಯ ಶತಮಾನದಿಂದ ಕ್ರಿ.ಶ. ೧ನೆಯ ಶತಮಾನದವರೆಗೆ); ನಂತರದ ಕಾಲ (ಕ್ರಿ.ಶ. ೨ನೆಯ ಶತಮಾನದಿಂದ ೪ನೆಯ ಶತಮಾನದವರೆಗೆ) ಎಂದು ಎರಡು ರೀತಿಯಲ್ಲಿ ಗುರುತಿಸಲಾಗುವುದು. ಇದನ್ನು 'ತಮಿಳಿ' ಎಂಬ ಹೆಸರಿನಿಂದಲೂ ಕರೆಯುವುದುಂಟು.

## ತಮಿಳು ಲಿಪಿ

ತಮಿಳು ಅಕ್ಷರಗಳು ತಮಿಳುಬ್ರಾಹ್ಮಿ ಅಥವಾ ಗ್ರಂಥಾಕ್ಷರಗಳಿಗಿಂತ ಸ್ವಲ್ಪ ಭಿನ್ನವಾಗಿವೆ. ತಮಿಳು ಅಕ್ಷರಗಳಲ್ಲಿ ಕೆತ್ತಿರುವ ಶಾಸನಗಳು ಏಳನೇ ಶತಮಾನದಲ್ಲೇ ಮೊದಲು ಕಂಡು ಬರುವುದು. ಕ್ರಿ.ಶ. ಹತ್ತನೆಯ ಶತಮಾನದವರೆಗೂ ಇವು ತೊಂಡೈನಾಡಿನಲ್ಲೂ, ಚೋಳಮಂಡಲದಲ್ಲೂ, ಕೊಂಗುನಾಡಿನಲ್ಲೂ ಕಂಡು ಬರುತ್ತವೆ. ಹತ್ತನೇ ಶತಮಾನದ ಉತ್ತರಾರ್ಧದಲ್ಲಿ ಚೋಳ ಸಾಮ್ರಾಜ್ಯವು ಅಧಿಕಾರಕ್ಕೆ ಬಂದು, ಪಾಂಡ್ಯನಾಡನ್ನು ವಶಪಡಿಸಿಕೊಂಡ ನಂತರ ಪಾಂಡ್ಯ ಮಂಡಲದಲ್ಲಿ ಬಳಕೆಯಲ್ಲಿದ್ದ ವಟ್ಟೆಳುತ್ತು ಬರಹವೂ ಕ್ರಮೇಣ ಮರೆಯಾಯಿತು. ನಂತರ ತಮಿಳು ಲಿಪಿ ರೂಢಿಗೆ ಬಂತು. ಹನ್ನೊಂದನೇ ಶತಮಾನದ ನಂತರ ತಮಿಳುನಾಡಿನಾದ್ಯಂತ ರಚನೆಯಾಗಿರುವ ಬಹುತೇಕ ಶಾಸನಗಳು ಇದೇ ಲಿಪಿಯಲ್ಲಿ ರಚನೆಗೊಂಡಿವೆ.

ಚೋಳರಸರು ವೈಭವದ ತುತ್ತತುದಿಯಲ್ಲಿದ್ದ ಕಾಲದಲ್ಲಿ ಮೈಸೂರು ಪ್ರಾಂತ್ಯಕ್ಕೆ ಸೇರಿದ ಚೋಳರ ಅಧೀನ ಪ್ರದೇಶಗಳಲ್ಲೂ, ಆಂಧ್ರದ ನೆಲ್ಲೂರು ಪ್ರಾಂತ್ಯದಲ್ಲೂ, ಸಿಂಹಳದ ತಮಿಳು ಶಾಸನಗಳಲ್ಲೂ ಈ ಲಿಪಿಯೇ ಕಂಡು ಬರುತ್ತದೆ. ಇದನ್ನು ಗ್ರಂಥ ತಮಿಳು ಎಂದೂ ಕರೆಯುವುದುಂಟು.

ಅ, ಆ-ಗಳ ನೇರಗೆರೆಗಳು ಒಂಟಿಯಾಗಿಯೇ ಇವೆ. ಅವುಗಳ ಎಡಭಾಗವು ಗ್ರಂಥಾಕ್ಷರಗಳಲ್ಲಿರುವಂತೆ ತುಂಬಾ ಬಾಗಿಲ್ಲದಿರುವುದು ಗಮನಾರ್ಹ.

ಇಕಾರವು ಬ್ರಾಹ್ಮೀ ಲಿಪಿಯಲ್ಲಿರುವ ತ್ರಿಕೋನಾಕಾರದ ಮೂರು ಚುಕ್ಕೆಗಳನ್ನೂ ಬಲದಿಂದ ಎಡಕ್ಕೆ ಒಂದು ಸೇರಿಸಿ, ಮೇಲಿನಿಂದ ಕೆಳಕ್ಕೆ ಪ್ರದಕ್ಷಿಣಾಕಾರದಲ್ಲಿ ಸುತ್ತಲಾಗಿದೆ.

ತಮಿಳಿನ ಪ್ರಾಚೀನ ಶಾಸನಗಳ ಬರಹಗಳನ್ನು ನೋಡಿದಾಗ ಅವು ಗ್ರಂಥಾಕ್ಷರಗಳನ್ನು ಅನುಸರಿಸಿಯೇ ಬೆಳೆದಿವೆಯೆಂಬುದು ಕಂಡು ಬರುತ್ತವೆ.

ಇದುವರೆಗೂ ದೊರೆತಿರುವ ತಮಿಳು ಅಕ್ಷರಗಳನ್ನು ಅವುಗಳ ಬೆಳವಣಿಗೆಯ ಮೇರೆಗೆ ಪ್ರಾಚೀನ ಕಾಲ, ಮಧ್ಯಕಾಲ, ನಂತರದ ಕಾಲ ಎಂದು ಮೂರು ಭಾಗಗಳಾಗಿ ಗುರುತಿಸಲಾಗುವುದು.

**ಅ. ಪ್ರಾಚೀನ ತಮಿಳು ಲಿಪಿ** : ಪಲ್ಲವ ಅರಸರೂ, ಅವರ ಸಾಮಂತರೂ, ಚೋಳ ವಂಶದ ಮೊದಲ ಅರಸರ ಕಾಲಕ್ಕೆ ಸೇರಿದ ಸುಮಾರು ಕ್ರಿ.ಶ. ೯೦೦ಕ್ಕಿಂತ ಹಿಂದಿನ ಕಾಲದ ಶಾಸನ ಈ ಗುಂಪಿಗೆ ಸೇರಿಸಲಾಗಿದೆ.

ಪಲ್ಲವರ ಮಹೇಂದ್ರವರ್ಮನ ವಲ್ಲಂ ಶಾಸನವು, ಕ್ರಿ.ಶ. ಏಳನೆಯ ಶತಮಾನದ ಮೊದಲ ಭಾಗಕ್ಕೆ ಸೇರಿದ್ದು (ಎಸ್.ಐ.ಐ.-೨) ಪಲ್ಲವರ ಮೊದಲನೇ ಪರಮೇಶ್ವರ ವರ್ಮನ ಕೂರಂ ತಮಿಳು ಶಾಸನವು, ಕ್ರಿ.ಶ. ೬೮೦ಕ್ಕೆ ಸೇರಿದ್ದಾಗಿದೆ. ಎರಡನೇ ಪರಮೇಶ್ವರವರ್ಮನ ತಿರುವದಿಗೈ ಶಾಸನವು ಸುಮಾರು ಕಿ.ಶ. ೭೧೦ಕ್ಕೆ ಸೇರಿದ್ದು.

ಈ ಕಾಲದ ಶಾಸನ ಲಿಪಿಯ ಮುಖ್ಯಾಂಶಗಳು :

೧. ವ್ಯಂಜನಗಳಿಗೆ ಚುಕ್ಕೆಯಿಡುವ ಪದ್ಧತಿ ವ್ಯಾಪಕವಾಯಿತು.

೨. ವ್ಯಂಜನಾಕ್ಷರಗಳಲ್ಲಿ ಆ, ಇ, ಈ, ಎ, ಐ, ಒ– ಇವುಗಳ ಚಿಹ್ನೆಗಳನ್ನು ಮೂಲಾಕ್ಷರದಿಂದ ಪ್ರತ್ಯೇಕವಾಗಿಯೇ ಬರೆಯುವುದು ರೂಢಿಗೆ ಬಂತು.

೩. ಅಕ್ಷರಗಳ ಆರಂಭದಲ್ಲಿ ಮೇಲಿನಿಂದ ಕೆಳಗೆ ಬರುವ ನೇರ ಗೆರೆಗಳ ತಲೆಯಲ್ಲಿ ಕಾಣಿಸುವ ದಪ್ಪಗೆರೆಯು ಎಡಬದಿಯಲ್ಲಿ ತಿರುಗುವ ಒಂದು ಚಿಕ್ಕಗೆರೆಯಾಗಿ ಬದಲಾಯಿತು.

**ಆ. ಮಧ್ಯಕಾಲೀನ ಅಕ್ಷರಗಳು** : ಸುಮಾರು ಕ್ರಿ.ಶ ೯೦೦ರಿಂದ ೧೨೫೦ರವರೆಗಿನ ಕಾಲದ ಶಾಸನಗಳಲ್ಲಿರುವ ಬರಹಗಳನ್ನು ಈ ಗುಂಪಿಗೆ ಸೇರಿಸಲಾಗುವುದು. ತಂಜಾವೂರಿನ ಚೋಳರೂ, ಅವರ ಸಾಮಂತರೂ ಹಾಕಿಸಿರುವ ಶಾಸನಗಳು ಇದರಲ್ಲಿ ಸೇರುತ್ತವೆ.

ಒಂದನೆಯ ರಾಜರಾಜ ಚೋಳನ ತಂಜಾವೂರು ದೇವಾಲಯದಲ್ಲಿರುವ ಕ್ರಿ.ಶ. ೧೦೧೧ನೆಯ ವರ್ಷದ ಎರಡು ಶಾಸನಗಳು (ಎಸ್.ಐ.ಐ-೨), ಮೇಲ್ಪಾಡಿಯ ಚೋಳೇಶ್ವರಾಲಯದ ಇದೇ ಅರಸನ ಶಾಸನ ಬರಹವೂ (೧೦೧೪) ಈ ಬಗೆಯದೇ ಆಗಿದೆ. ಮೊದಲನೇ ರಾಜೇಂದ್ರ ಚೋಳನ ತಿರುವಲಂಗಾಡು ತಮಿಳು ಶಾಸನದ ಬರಹ (೧೦೨೫), ಮೊದಲನೇ ಕುಲೋತ್ತುಂಗ ಚೋಳನ ತಿರುಕ್ಕಳುಗುನ್ರಂ ಶಾಸನ (೧೧೧೨) ಬರಹಗಳು ಈ ಬಗೆಯವು. ಮ, ಸ–ಗಳ ಬಾಗು ಗೆರೆಗಳ ಸುಳಿಗಳು ಕೆಳಗಿಳಿದು ಒಂದು ಸೇರಿವೆ.

**ಇ. ನಂತರದ ಕಾಲದ ಲಿಪಿಗಳು** : ಸುಮಾರು ಕ್ರಿ.ಶ. ೧೨೫೦ರ ನಂತರದ ಶಾಸನಗಳಲ್ಲಿರುವ ಲಿಪಿಯನ್ನು ಈ ವಿಭಾಗದಲ್ಲಿ ಗುರುತಿಸಲಾಗುವುದು. ಎರಡನೇ ಕಾಲಘಟ್ಟದ ಪಾಂಡ್ಯರಾಜರೂ, ವಿಜಯನಗರ ಅರಸರೂ ಅವರ ಸಾಮಂತರೂ ಹಾಕಿಸಿದ ಶಾಸನಗಳಲ್ಲಿ ಕಾಣಬರುವ ಅಕ್ಷರಗಳು ಇಂದು ರೂಢಿಯಲ್ಲಿರುವ ಅಕ್ಷರಗಳನ್ನು ಹೋಲುತ್ತವೆ.

ರಾಜನಾರಾಯಣ ಶಂಭುವರಾಯನ ಕುನ್ರದುರ್ಗದ ಶಾಸನ (ಕ್ರಿ.ಶ. ೧೩೪೩), ವಿಜಯನಗರದ ಅಚ್ಯುತರಾಯನ ಶ್ರೀರಂಗಂ ಶಾಸನ (೧೫೩೪)ಗಳ ಲಿಪಿಗಳನ್ನು ಇದಕ್ಕೆ ಉದಾಹರಿಸಬಹುದು.

**ಗ್ರಂಥ ತಮಿಳು** : ಪಾಂಡ್ಯ ಮಂಡಲದಲ್ಲೂ, ಕೇರಳದ ಪ್ರಾಂತ್ಯಗಳಲ್ಲೂ ಸಂಸ್ಕೃತ ಭಾಗವು ಗ್ರಂಥಾಕ್ಷರದಲ್ಲೂ, ತಮಿಳು ಭಾಗವು ವಟ್ಟೆಳುತ್ತು ಲಿಪಿಯಲ್ಲೂ ಇರುವ ಶಾಸನಗಳಲ್ಲಿ ಸಂಸ್ಕೃತ ಭಾಷೆಯ ನಡುವೆ ಬರುವ ತಮಿಳು ಪದಗಳು ವಟ್ಟೆಳುತ್ತುವಿನಲ್ಲಿರದೆ ತಮಿಳು ಲಿಪಿಯಲ್ಲೇ ಬರೆಯಲ್ಪಟ್ಟಿವೆ. ಉದಾಹರಣೆಗೆ ಪಾಂಡ್ಯ ಅರಸ ರಾಜಸಿಂಹನ ಪೆರಿಯಚಿನ್ನಮನೂರು ತಮಿಳು ಶಾಸನವನ್ನು ನೋಡಬಹುದು. (ಎಸ್.ಐ.ಐ., ೩, ಭಾಗ ೪). ಇದರಿಂದ ಪ್ರಾಚೀನ ತಮಿಳರು ತಮಿಳು ಲಿಪಿಯನ್ನು ಗ್ರಂಥಾಕ್ಷರದ ಒಂದು ವಿಧವೆಂದೇ ಪರಿಗಣಿಸಿ ಬಳಸುತ್ತಿದ್ದಿರಬಹುದು ಎಂದು ಊಹಿಸಬಹುದು.

ಕೂರಂ ತಮಿಳು ಶಾಸನದ ಲಿಪಿಗಳನ್ನು ಅದೇ ಶಾಸನದಲ್ಲಿರುವ ಗ್ರಂಥಾಕ್ಷರಗಳೊಂದಿಗೆ ಹೋಲಿಸಿ ನೋಡಿದರ ಎರಡೂ ರೀತಿಗಳಲ್ಲೂ, ಉ, ಡ, ಣ, ತ, ನ, ಯ, ವ ಮೊದಲಾದ ಅಕ್ಷರಗಳಲ್ಲಿ ಆ, ಇ, ಈ, ಎ, ಒ–ಈ ಗುಣಿತಾಕ್ಷರ ಚಿಹ್ನೆಗಳು ಒಂದೇ ರೀತಿಯಲ್ಲಿರುವುದನ್ನು ಕಾಣಬಹುದು. ಕ, ನಗಳ ಉಕಾರದ ಚಿಹ್ನೆಯ ನೇರಗೆರೆಗಳು ಎರಡು ಭಾಗವಾಗದೆ, ಒಂದೇ ಗೆರೆಯಾಗಿರುವುದನ್ನು ಬಿಟ್ಟರೆ ಇವುಗಳಲ್ಲಿ ಬೇರ್‍ಯಾವ ವ್ಯತ್ಯಾಸವೂ ಇಲ್ಲ. ಇ ಅಕ್ಷರವೂ, ಓಕಾರವೂ ಎರಡೂ ವಿಧಗಳಲ್ಲೂ ಏಕರೂಪವನ್ನು ಹೊಂದಿವೆ.

ವ್ಯಂಜನಗಳಲ್ಲಿ ಎಕಾರ, ಒಕಾರಗಳ ಚಿಹ್ನೆಗಳನ್ನೊಳಗೊಂಡ ಎರಡು ಸುಳಿಗಳಿರುವ ಕೊಂಬು (ಚಿತ್ರ-೫) ೧೮ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ವೀರ ಮಾಮುನಿವರರ್ (ಪಾದರ್ ರೆವರೆಂಡ್ ಬೆಸ್ಕಿ) ಅವರಿಂದ ರೂಢಿಗೆ ಬಂತೆಂದು ಹೇಳಲಾಗುತ್ತದೆ.

## ೩. ಗ್ರಂಥ ಲಿಪಿ

ಮೇಲ್ನೋಟಕ್ಕೆ ತಮಿಳು ಅಕ್ಷರಗಳೂ, ಗ್ರಂಥಾಕ್ಷರಗಳೂ ಒಂದೇ ಎಂಬಂತೆ ಕಂಡು ಬರುತ್ತವೆ. ಇವೆರಡೂ ಲಿಪಿಗಳೂ ಬೆಳೆದು ಬಂದದ್ದು ಒಂದೇ ರೀತಿ ಹಾಗೂ ಒಂದೇ ಮೂಲದಿಂದ.ಮತಮಿಳು ಅಕ್ಷರಗಳಲ್ಲಿ ವರ್ಗದ ಪ್ರಥಮ ಮತ್ತು ಅನುನಾಸಿಕಾಕ್ಷರಗಳು ಮಾತ್ರ ಇದ್ದು, ಉಳಿದವು ಇಲ್ಲ. ಸಂಸ್ಕೃತದ ಪದಗಳನ್ನು ಬರೆಯಲು ಆ ಲಿಪಿ ಅನುಕೂಲವಾಗಿಲ್ಲದ ಕಾರಣದಿಂದ ಗ್ರಂಥಲಿಪಿ ಹೆಚ್ಚು ಪ್ರಚಾರಕ್ಕೆ ಬಂತು. ಎಲ್ಲಿ ಸಂಸ್ಕೃತ ಭಾಷೆಯ ಪ್ರಭಾವ ಇರಲಿಲ್ಲವೋ ಆ ಪ್ರದೇಶಗಳಲ್ಲಿ ಗ್ರಂಥ ಲಿಪಿ ಹೆಚ್ಚು ಪ್ರಚಾರಗೊಳ್ಳಲಿಲ್ಲ.

ಸಂಸ್ಕೃತ ಪದಗಳನ್ನು ಬರೆಯುವ ಸಂದರ್ಭದಲ್ಲಿ ಗ್ರಂಥ ಲಿಪಿಯನ್ನು ಬಳಸಿದ್ದಾರೆ. ಸಂಸ್ಕೃತದಲ್ಲಿ ಗ್ರಂಥ ಎಂದರೆ ಪುಸ್ತಕ ಎಂಬರ್ಥವಿರುವುದರಿಂದ ಸಂಸ್ಕೃತ ಭಾಷೆಯನ್ನು ಬರೆಯಲು ಬಳಸಿದ ಈ ಲಿಪಿಯನ್ನೂ ಗ್ರಂಥ ಎಂದೇ ಕರೆಯಲಾಗಿದೆ. ಕ್ರಿ.ಶ. ಏಳನೇ ಶತಮಾನದಿಂದ ಸಂಸ್ಕೃತ ಶಾಸನಗಳನ್ನೂ, ತಮಿಳು ಶಾಸನಗಳಲ್ಲಿ ಬರುವ ಸಂಸ್ಕೃತ ಪದಗಳನ್ನೂ ಬರೆಯುವುದಕ್ಕೆ ಈ ಲಿಪಿಯನ್ನು ಉಪಯೋಗಿಸಲಾಗಿದೆ. ಇದೂ ಕೂಡ ಬ್ರಾಹ್ಮಿಯಿಂದಲೇ ಬೆಳವಣಿಗೆ ಹೊಂದಿರುವ ಲಿಪಿಯಾಗಿದೆ. ಪಲ್ಲವರ ಆರಂಭ ಕಾಲದ ಶಾಸನಗಳು ಸಂಸ್ಕೃತದಲ್ಲಿದ್ದು ಮುಂದೆ ಅದೇ ಅವರ ಲಿಪಿಯಾಯಿತು. ಇಂದಿನ ಮಲೆಯಾಳಂ ಲಿಪಿಯು ಗ್ರಂಥಲಿಪಿಯಿಂದಲೇ ಉಗಮವಾಗಿದೆ. ಮಲೆಯಾಳಂ ಭಾಷೆಯಲ್ಲಿ ಸಂಸ್ಕೃತ ಪದಗಳನ್ನು ಹೆಚ್ಚಾಗಿ ಸೇರಿಸಿಕೊಂಡು ಅವರು 'ಮಣಿಪ್ರವಾಳ'ವೆಂಬ ಶೈಲಿಯನ್ನು ರೂಢಿಸಿಕೊಂಡ ನಂತರ ಈ ಲಿಪಿಯನ್ನು ಸ್ವಲ್ಪ ಬದಲಾಯಿಸಿ 'ಆರ್ಯ ಎಚುತ್ತು' (ಆರ್ಯ ಲಿಪಿ) ಎಂದು ಹೆಸರಿಟ್ಟುಕೊಂಡು ತಮ್ಮ ಭಾಷೆಗೆ ತಕ್ಕಂತೆ ಬಳಸಿಕೊಂಡರು. ಆರಂಭ ಕಾಲದಲ್ಲಿ ಮಲಯಾಳಂನಲ್ಲಿ ಗ್ರಂಥ ಲಿಪಿ ಹೆಚ್ಚು ಉಪಯೋಗದಲ್ಲಿರಲಿಲ್ಲ. ಯಾವಾಗ ಸಂಸ್ಕೃತದಿಂದ ಬಹಳಷ್ಟು ಪದಗಳನ್ನು ಎರವಲು ಪಡೆದುಕೊಂಡರೋ ಆಗಿನಿಂದ ಅಲ್ಲಿ 'ಆರ್ಯ ಲಿಪಿ' ಎಂಬ ಹೆಸರಿನಲ್ಲಿ ಗ್ರಂಥವು, ಸ್ವಲ್ಪಮಟ್ಟಿನ ಬದಲಾವಣೆಗಳೊಂದಿಗೆ ಬಳಕೆಗೆ ಬಂತು. ಇಂದಿಗೂ ಗ್ರಂಥ ಮತ್ತು ಮಲಯಾಳಂ ಲಿಪಿಗಳಿಗೆ ಹೆಚ್ಚಿನ ವ್ಯತ್ಯಾಸಗಳೇನೂ ಇಲ್ಲ.

ಹೀಗೆ ಮಲೆಯಾಳಂನಲ್ಲಿ ಆರ್ಯಲಿಪಿಯೆಂದು ಗ್ರಂಥವು ಪ್ರತ್ಯೇಕಗೊಂಡ ನಂತರ ಗ್ರಂಥಲಿಪಿಯು ತಮಿಳಿನಲ್ಲಿ ಮಾತ್ರವೇ ಬಳಕೆಯಲ್ಲಿತ್ತು. ತಮಿಳಿನಲ್ಲಿ ಸಂಸ್ಕೃತ ಪದಗಳನ್ನು ಬರೆಯಲು ನಾಗರೀ ಲಿಪಿಯನ್ನು ಬಳಸುವ ಪದ್ಧತಿ ವಿಜಯನಗರ ಅರಸರ ಕಾಲದಿಂದೀಚೆಗೆ ಆರಂಭವಾಯಿತು. ಆ ಕಾಲದಲ್ಲಿ ಗ್ರಂಥವು ದಕ್ಷಿಣದ ಭಾಗದಲ್ಲಿ ಬಳಕೆಯಲ್ಲಿತ್ತು. ವಿಜಯನಗರದ ಅರಸರ ಜೊತೆ ಹೆಚ್ಚು ಸಂಬಂಧ ಹೊಂದಿದ್ದ ಉತ್ತರ ಭಾರತದಲ್ಲಷ್ಟೇ ನಾಗರಿ ಲಿಪಿ ಬಳಕೆಗೆ ಬಂತು. ಮಹಾರಾಷ್ಟ್ರದವರು ತಮಿಳುನಾಡಿನ ಜೊತೆ ಸಂಪರ್ಕ ಹೊಂದಿದ ನಂತರ ನಾಗರಿ ಲಿಪಿಯನ್ನೇ ಹೆಚ್ಚಾಗಿ ಬಳಸತೊಡಗಿದರು. ಪ್ರಸ್ತುತ ಗ್ರಂಥಲಿಪಿಯು ಬಳಕೆಯಲ್ಲಿಲ್ಲ.

ಆರಂಭ ಕಾಲದಲ್ಲಿ (ಕ್ರಿ.ಶ. ಒಂದನೆಯ ಶತಮಾನ) ಗ್ರಂಥಲಿಪಿಯು ಸಮಕಾಲೀನ ಕನ್ನಡ–ತೆಲುಗು ಲಿಪಿಗಳೊಂದಿಗೆ ಬಹುಮಟ್ಟಿಗೆ ಹೋಲುತ್ತಿತ್ತು. ಕಾಂಚೀಪುರದ ಕೈಲಾಸನಾಥ ದೇವಾಲಯದ ಪ್ರಾಕಾರದ ಮೇಲಿನ ಶಾಸನ, ಮಹಾಬಲಿಪುರದ ಪಂಚರಥಗಳ ಮೇಲಿನ ಪಲ್ಲವರ ಶಾಸನಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಪಲ್ಲವರ ನಂತರದ ಕಾಲದಲ್ಲಿ ಗ್ರಂಥಲಿಪಿ ಸ್ವಲ್ಪ ಗುಂಡಾಗಿ ಪರಿವರ್ತನೆಯಾದುದರಿಂದ ನೇರಗೆರೆಗಳೂ ಅಡ್ಡಗೆರೆಗಳೂ ಇಲ್ಲವಾಗಿ ಸುರುಳಿ ಸುತ್ತಿಕೊಂಡು ವೃತ್ತಾಕಾರವಾದವು. ಹೀಗಾಗಿ ಗ್ರಂಥಲಿಪಿಗೂ ಕನ್ನಡ–ತೆಲುಗು ಲಿಪಿಗಳಿಗೂ ಹೋಲಿಕೆಯಿಲ್ಲದಷ್ಟು ವ್ಯತ್ಯಾಸಗಳು ಏರ್ಪಟ್ಟವು. ಕ್ರಿ.ಶ.ಏಳನೇ ಶತಮಾನದಿಂದ ಹದಿನೈದನೇ ಶತಮಾನದವರೆಗೆ ಈ ಲಿಪಿ ಹಲವು ರೂಪಾಂತರಗಳನ್ನು ಪಡೆಯುತ್ತಾ ಬೆಳೆದು ಬಂದಿದೆ. ಗ್ರಂಥಾಕ್ಷರಗಳನ್ನು ಆರಂಭದಲ್ಲಿ ಪಲ್ಲವರು ಅನಂತರ ಚೋಳರು, ಪಾಂಡ್ಯರು, ಚೇರರು, ವೆಂಗಿಯ ಚಾಳುಕ್ಯರು; ನಂತರ ಚೋಳರ ಜೊತೆಗಿನ ರಾಜಕೀಯ–ವೈವಾಹಿಕ ಸಂಬಂಧಗಳ ಪರಿಣಾಮವಾಗಿ ಗಂಗರೂ, ಬಾಣರೂ, ನಂತರ ವಿಜಯನಗರದ ಅರಸರೂ ತಮ್ಮ ಶಾಸನಗಳಲ್ಲಿ ಬಳಸಿದ್ದಾರೆ.

ಗ್ರಂಥಾಕ್ಷರಗಳನ್ನು ಅವುಗಳ ಬೆಳವಣಿಗೆಯ ಆಧಾರದ ಮೇಲೆ ಪ್ರಾಚೀನ ಕಾಲ, ಲಿಪಿ ಬದಲಾವಣೆಗೊಳ್ಳುವ ಸಂಕ್ರಮಣ ಕಾಲ, ಮಧ್ಯಕಾಲ ಹಾಗೂ ನಂತರದ ಕಾಲವೆಂದು ನಾಲ್ಕು ಹಂತಗಳಲ್ಲಿ ಗುರುತಿಸಲಾಗುವುದು.

**ಅ. ಪ್ರಾಚೀನ ಕಾಲ :** ಸುಮಾರು ಕ್ರಿ.ಶ. ೭೦೦ಕ್ಕಿಂತ ಹಿಂದಿನ ಶಾಸನಗಳಲ್ಲಿನ ಲಿಪಿಯನ್ನು ಪ್ರಾಚೀನವೆಂದು ಗುರುತಿಸಲಾಗುತ್ತದೆ. ಈ ಬಗೆಯ ಲಿಪಿಗಳು ವೆಂಗಿನಾಡಿಗೆ ಸೇರಿದ ಪ್ರದೇಶಗಳಲ್ಲಿ ದೊರಕಿವೆ. ಪಲ್ಲವ ಅರಸರಲ್ಲಿ

ಮಹೇಂದ್ರವರ್ಮನ ಕಾಲ (ಕ್ರಿ.ಶ. ಏಳನೆಯ ಶತಮಾನ)ಕ್ಕಿಂತ ಹಿಂದಿನ ಕಾಲದಲ್ಲಿ ಎರಡು ಬಗೆಯ ಲಿಪಿಗಳು ಬಳಕೆಯಲ್ಲಿದ್ದವು. ಒಂದು: ಸಾಮಾನ್ಯ ಲಿಪಿ; ಎರಡು: ಅಲಂಕೃತ ಲಿಪಿ ಅಥವಾ ಚಿತ್ರತ ಲಿಪಿ. ಈ ಲಿಪಿಯು ತುಂಬಾ ಅಲಂಕೃತವಾಗಿ ಕಾಣಿಸುತ್ತದೆ. ಚಿತ್ರ ಬರೆದಂತೆ ಕಾಣುವುದರಿಂದ ಅಲಂಕೃತ ಲಿಪಿಯೆಂದೂ, ಚಿತ್ರ ಲಿಪಿಯೆಂದೂ ಕರೆಯಲಾಗುವುದು. ಚಿತ್ರಗಳಂತೆ ಕಾಣಿಸುವ ಈ ಲಿಪಿ ಬಹುಶಃ ದೈನಂದಿನ ಬಳಕೆಯಲ್ಲಿ ಇಲ್ಲದಿದ್ದಿರಬಹುದು ಎನ್ನಿಸುತ್ತದೆ. ಶಾಸನಗಳ ರಚನೆಯ ಸಂದರ್ಭದಲ್ಲಷ್ಟೇ ಇವನ್ನು ಬಳಸುತ್ತಿದ್ದಿರಬೇಕು. ಮಂಡಗಪಟ್ಟು, ಮಹೇಂದ್ರವಾಡಿ, ಸೀಯಮಂಗಲಂ, ದಳವಾನೂರು ಮೊದಲಾದೆಡೆಗಳಲ್ಲಿ ದೊರಕುವ ಶಾಸನಗಳು ಸಾಮಾನ್ಯ ಲಿಪಿಯವು. ತಿರುಚಿರಾಪಳ್ಳಿಯ ಬೆಟ್ಟದ ಮೇಲಿರುವ ದೇವಾಲಯದಲ್ಲಿರುವ ಶಾಸನ ಲಿಪಿಗಳು, ಮಹಾಬಲಿಪುರಂನ ಧರ್ಮರಾಜ ರಥದಲ್ಲಿರುವ ಲಿಪಿಗಳು ಅಲಂಕಾರಿಕ ಲಿಪಿಗಳಿಗೆ ಪ್ರಮುಖ ಉದಾಹರಣೆಗಳು. ಇವು ವೃತ್ತಾಕಾರದಲ್ಲಿ ಬಾಗಿರುವ ಸುಳಿಗಳನ್ನು ಒಳಗೊಂಡು ಸುಂದರವಾಗಿವೆ. ಮಹಾಬಲಿಪುರದ ಧರ್ಮರಾಜರಥದಲ್ಲಿ ಕಂಡು ಬರುವ ಶಾಸನ ಲಿಪಿಯು ಕ್ರಿ.ಶ. ಏಳನೇ ಶತಮಾನದ ಎರಡು-ಮೂರನೇ ದಶಕಗಳಿಗೆ ಸೇರಿದ್ದು. ಆ ಕಾಲದಲ್ಲಿ ಆಳುತ್ತಿದ್ದ ವಾತಾಪಿಗೊಂಡ ಪಲ್ಲವ ನರಸಿಂಹವರ್ಮ, ಅವನ ಮಗ ಪರಮೇಶ್ವರ ವರ್ಮನ ಕಾಲಕ್ಕೆ ಸೇರಿದವು. ಇವುಗಳಲ್ಲಿ ಬಾಗು-ಬಳುಕು ಗೆರೆಗಳನ್ನು ಕಾಣಬಹುದು. ಇವುಗಳಲ್ಲಿರುವ ಕೆಲವು ಅಕ್ಷರಗಳು ನೇರಗೆರೆಗಳಲ್ಲಿವೆ. ಸುಂದರವಾದ ಬರಹ.

ಪಲ್ಲವರ ಅರಸರ ರಾಜಸಿಂಹನ ಕಾಲದಲ್ಲಿ ನಿರ್ಮಾಣವಾಗಿರುವ ಕಾಂಚೀಪುರದ ಕೈಲಾಸನಾಥ ದೇವಾಲಯದಲ್ಲಿರುವ ಶಾಸನವು ಸಾಮಾನ್ಯಶೈಲಿಯ ಬರಹವನ್ನು ಒಳಗೊಂಡಿದೆ. ಅ, ಆ, ಉ, ಮ, ಕ, ರ-ಇತ್ಯಾದಿ ಅಕ್ಷರಗಳ ನೇರಗೆರೆಗಳು ಇನ್ನೂ ಕೆಳಕ್ಕಿಳಿದು ಉದ್ದವಾಗಿವೆ. ಕೆಳಗಿನ ಸುಳಿಯು ಎಡಕ್ಕೆ ತಿರುಗಿ ಮೇಲ್ಮುಖವಾಗಿ ಬಾಗಿದೆ. ಆ, ಐ, ಎ, ಒ, ಔ-ಗಳ ಗುಣಿತಾಕ್ಷರ ಚಿಹ್ನೆಗಳು ಮೂಲಾಕ್ಷರದಿಂದ ಪ್ರತ್ಯೇಕಗೊಂಡಿವೆ. ಹೀಗೆ ಹತ್ತನೇ ಶತಮಾನದ ವೇಳೆಗೆ ಈ ಲಿಪಿ ಒಂದು ಖಚಿತ ರೂಪವನ್ನು ಪಡೆದುಕೊಂಡಿದ್ದುದು ಕಾಣುತ್ತದೆ.

ಕಾಲಾನುಕ್ರಮಣಿಕೆಯ ದೃಷ್ಟಿಯಿಂದ ಈ ಲಿಪಿಗಳು ಕೂರಂನ ತಮಿಳು ಶಾಸನಗಳ ಬರಹಕ್ಕಿಂತ ಇತ್ತೀಚಿನವಾದರೂ ಇವುಗಳಲ್ಲಿ ಹಳೆಯ ಬರಹದ ರೂಪಗಳೇ ಇವೆ. ರಾಜಸಿಂಹನ ಕಾಲದಲ್ಲಿ ನಾಲ್ಕು ಬಗೆಯ ಲಿಪಿ ಪ್ರಭೇದಗಳು ರೂಢಿಯಲ್ಲಿದ್ದಂತೆ ಕಂಡು ಬರುತ್ತದೆ. ಕಾರಣ, ಕಾಂಚೀಪುರದ ಕೈಲಾಸನಾಥ ದೇವಾಲಯದ ಪ್ರಾಕಾರದ ಸುತ್ತಲೂ ಒಂದೇ ಶಾಸನವನ್ನು ನಾಲ್ಕು ಸಲ ನಾಲ್ಕು ಲಿಪಿಗಳಲ್ಲಿ ಕೆತ್ತಲಾಗಿದೆ. ಅವುಗಳಲ್ಲಿ ಒಂದು ನಾಗರೀ ಲಿಪಿಗೆ ಸೇರಿದ್ದು, ಇನ್ನೆರಡು ಗ್ರಂಥ ಲಿಪಿಯ ಸಾಮಾನ್ಯ ರೂಪ ಮತ್ತು ಅಲಂಕಾರಿಕ ರೂಪಗಳೆಂಬ ಎರಡು ಪ್ರಭೇದಗಳಿಗೆ ಸೇರಿವೆ. ಇನ್ನೊಂದು ತಮಿಳು ಲಿಪಿಯ ಶಾಸನವಾಗಿದೆ. ರಾಜಸಿಂಹನ ನಂತರ ಈ ಬರಹಗಳು ಕಂಡು ಬಂದಿಲ್ಲ.

ಪಲ್ಲವರು ಆರಂಭದಲ್ಲಿ ಆಂಧ್ರ ಮತ್ತು ಕರ್ನಾಟಕದ ಕೆಲವು ಪ್ರಾಂತ್ಯಗಳನ್ನು ಆಳುತ್ತಿದ್ದು, ಈ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದ ಲಿಪಿಯನ್ನೇ ತಮಿಳು ಶಾಸನಗಳಲ್ಲಿ ಅನುಸರಿಸಿದ್ದಾರೆ. ಕ್ರಿ.ಶ. ಏಳನೇ ಶತಮಾನಕ್ಕೆ ಸೇರಿದ ಗ್ರಂಥ ಲಿಪಿಯಲ್ಲಿರುವ ಪಲ್ಲವರ ಸಂಸ್ಕೃತ ಶಾಸನಗಳ ಲಿಪಿಯೂ ಕನ್ನಡ-ತೆಲುಗು ಲಿಪಿ ಲಕ್ಷಣಗಳನ್ನೇ ಹೋಲುತ್ತದೆ. ನಂತರ ಪಲ್ಲವರ ಲಿಪಿಯು ಉತ್ತರದವರ ಸಂಪರ್ಕವನ್ನು ಹೊಂದಿ ಅಲಂಕಾರಿಕ ಲಿಪಿಯಾಗಿ ರೂಪಗೊಂಡಿದೆ.

ಅಲ್ಲದೆ, ಪಲ್ಲವರ ಆರಂಭದ ಅರಸರಲ್ಲಿ ಒಬ್ಬನಾದ ಸಿಂಹವಿಷ್ಣುವಿನ ತಾಯಿ ಗಂಗ ಅವಿನೀತನ ಸಹೋದರಿ. ಹೀಗಾಗಿ ಗಂಗ-ಪಲ್ಲವ ಮನೆತನಗಳ ನಡುವೆ ರಾಜಕೀಯ, ಸಾಂಸ್ಕೃತಿಕ ಕೊಡುಕೊಳ್ಳುಗೆಗಳು ನಡೆದಿವೆ. ಈ ಸಂದರ್ಭದಲ್ಲಿ ಕನ್ನಡದಲ್ಲಿ ಬಳಕೆಯಲ್ಲಿದ್ದ ಲಿಪಿಯನ್ನು ಇವರು ಅನುಸರಿಸಿರಬೇಕು.

ಈ ಲಿಪಿಯು ಮರೆಯಾಗಲು ಕಾರಣ, ಒಂದೇ ಪ್ರದೇಶದ ಜನರು ಹಲವು ಲಿಪಿಗಳನ್ನು ಬಳಸುತ್ತಿದ್ದು, ಕ್ರಮೇಣ ಅವುಗಳಲ್ಲಿ ಕೆಲವನ್ನು ಕೈಬಿಟ್ಟಿರುವುದೇ ಆಗಿದೆ.

**ಆ. ಲಿಪಿ ರೂಪ ಬದಲಾವಣೆಗೊಂಡ ಸಂಕ್ರಮಣ ಕಾಲ** : ಕ್ರಿ.ಶ. ಸುಮಾರು ೬೫೦ರಿಂದ ೯೫೦ರವರೆಗಿನ ಶಾಸನಗಳು ಈ ಸಾಲಿನೊಳಗೆ ಬರುತ್ತವೆ. ಸಾಮಾನ್ಯವಾಗಿ ಪಲ್ಲವ ಅರಸರಲ್ಲಿ ನಂದಿವರ್ಮನ ವಂಶಕ್ಕೆ ಸೇರಿದ ಅರಸರು, ಪಾಂಡ್ಯರಲ್ಲಿ ಮೊದಲ ಸಾಮ್ರಾಜ್ಯಕ್ಕೆ ಸೇರಿದ ಅರಸರು, ಚೋಳರಲ್ಲಿ ಪಾಂಡ್ಯರನ್ನು ಗೆದ್ದ ಸುಂದರ ಚೋಳನ ಕಾಲ (ಕ್ರಿ.ಶ. ೬೮೦)ಕ್ಕಿಂತ ಮೊದಲು ಆಳಿದ ಅರಸರ ಶಾಸನಗಳಲ್ಲಿ ಕಂಡು ಬರುವ ಲಿಪಿಗಳನ್ನು ಈ ಗುಂಪಿಗೆ ಸೇರಿಸಬಹುದು. ಈ ಅಕ್ಷರಗಳನ್ನು ತಾಳೆಗರಿಗಳಲ್ಲಿ ಕಂಠದ ಮೂಲಕ ಬರೆಯಲು ಉಪಯೋಗಿಸಿದ್ದಾರೆ.

ಪಲ್ಲವರ ಪರಮೇಶ್ವರವರ್ಮನ ಕೂರಂ ತಮಿಳು ಶಾಸನ (ಎಸ್ಐಐ–೧ ಮತ್ತು ಎ.ಇಂ., ೧೭)ದಲ್ಲಿ ಕೆಲವು ಅಕ್ಷರಗಳು ತುಂಬಾ ಬೆಳೆದಿರುವುದು ಕಾಣುತ್ತದೆ. ಮಹೇಂದ್ರವರ್ಮನ ಕಾಲಕ್ಕೂ, ಪರಮೇಶ್ವರವರ್ಮನ ಕಾಲಕ್ಕೂ ನಡುವಿನ ಸುಮಾರು ಐವತ್ತು ವರ್ಷಗಳೊಳಗೆ ಈ ಬದಲಾವಣೆ ಬಂದಿರಲು ಸಾಧ್ಯವಿಲ್ಲ. ಈ ಅಕ್ಷರಗಳ ಬೆಳವಣಿಗೆಯ ಹಂತವನ್ನು ಸೂಕ್ಷ್ಮವಾಗಿ ಗಮನಿಸಿದರೆ, ಮಹೇಂದ್ರವರ್ಮನ ಕಾಲದ ಬರಹಗಳು ವ್ಯತ್ಯಾಸಗೊಂಡು ಈ ರೂಪಗಳನ್ನು ತಾಳಲು ಸುಮಾರು ನೂರು ವರ್ಷಗಳಾದರೂ ಆಗಿರಬೇಕು ಅಲ್ಲದೆ. ಇವು ವೆಂಗಿನಾಡಿನಲ್ಲಿ ದೊರೆತ ಬರಹಗಳಂತಿಲ್ಲದೆ ತಮಿಳು ಅಕ್ಷರಗಳ ಕ್ರಮವನ್ನು ಅನುಸರಿಸಿವೆ. ಮುಖ್ಯವಾಗಿ ಉ,ನ,ಯ–ಮೊದಲಾದ ಅಕ್ಷರಗಳನ್ನು ಉದಾಹರಿಸಬಹುದು. ಆದುದರಿಂದ ಇಂತಹ ಅಕ್ಷರಗಳನ್ನು ತಮಿಳುನಾಡಿನಲ್ಲೇ ಪ್ರಾಚೀನ ಕಾಲದಿಂದ ಬೆಳದು ಬಂದ ಒಂದು ಬಗೆ ಎಂದು ಹೇಳಲಾಗುತ್ತದೆ. ಆದರೂ ಈಗಿರುವ ಆಧಾರಗಳಿಂದ ಈ ಬಗೆಯು ಬ್ರಾಹ್ಮಿಯಿಂದಲೋ, ಹಳೆಯ ಗ್ರಂಥಾಕ್ಷರಗಳಿಂದಲೋ ಯಾವಾಗ ಪ್ರತ್ಯೇಕವಾಯಿತೆಂದು ನಿರ್ದಿಷ್ಟವಾಗಿ ಹೇಳಲಾಗದು.

ಈ ವಿಧದ ಅಕ್ಷರಗಳ ಮುಖ್ಯಾಂಶಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಅಕ್ಷರಗಳು ತಮ್ಮ ಎಡಬದಿಯಿಂದ ಬಲಕ್ಕೆ ತಿರುಗುವ ಒಂದೇ ನೇರಗೆರೆಯಿಂದ ರೂಪುಗೊಂಡಿವೆ.

೨. ವಾಕ್ಯಗಳ ಕೊನೆಯಲ್ಲಿ ಬರುವ ಪ್ರತ್ಯೇಕ ವ್ಯಂಜನಾಕ್ಷರಗಳನ್ನು ಗುರುತಿಸಲು ಆ ಅಕ್ಷರದ ತಲೆಯ ಮೇಲೆ ಅಥವಾ ಬಲಬದಿಯಲ್ಲಿ ಒಂದು ಚುಕ್ಕೆಯನ್ನಿಡುವ ಪರಿಪಾಠ ಈ ಕಾಲದಲ್ಲೇ ಆರಂಭವಾದದ್ದು.

೩. ಅಕ್ಷರಗಳ ಆರಂಭದಲ್ಲಿ ಮೇಲಿನಿಂದ ಕೆಳಮುಖವಾಗಿ ಬರುವ ಗೆರೆಗಳ ತಲೆಭಾಗದಲ್ಲಿ ಕಾಣುವ ದಪ್ಪಗೆರೆ ಎಡಭಾಗಕ್ಕೆ ತಿರುಗುವ ಸಣ್ಣಗೆರೆಯಾಗಿಯೋ, ಕೊಕ್ಕೆಯಂತೆಯೋ ಬದಲಾಗಿದೆ.

೪. ಗುಣಿತಾಕ್ಷರಗಳಲ್ಲಿ ಆ,ಎ,ಐ,ಒ,ಔ–ಕಾರಗಳ ಚಿಹ್ನೆಗಳು ಮೂಲಾಕ್ಷರದಿಂದ ಪ್ರತ್ಯೇಕಗೊಂಡವು.

**ಇ. ಮಧ್ಯಕಾಲೀನ ಲಿಪಿಗಳು** : ಇವು ಸುಮಾರು ಕ್ರಿ.ಶ.೯೫೦ರಿಂದ ಸುಮಾರು ೧೨೫೦ರವರೆಗಿನ ಕಾಲದವು. ತಂಜಾವೂರಿನಿಂದ ವೈಭವದಿಂದ ಆಳಿದ ಚೋಳರ ಕಾಲದ ಶಾಸನಗಳು ಈ ಸಾಲಿಗೆ ಸೇರುತ್ತವೆ.

ಸುಂದರ ಚೋಳನ ಅನ್ಬಿಲ್ ತಮಿಳು ಶಾಸನದ ಕಾಲ ಕ್ರಿ.ಶ. ೯೬೦ (ಎ,ಇಂ.–೧೫). ಪಾಂಡ್ಯ ರಾಜಸಿಂಹನ ಪೆರಿಯಚಿನ್ನಮನೂರು ತಮಿಳು ಶಾಸನ, ರಾಜರಾಜನ ಕಾಂಚೀಪುರದ ಶಿಲಾಶಾಸನಗಳು (ಕ್ರಿ.ಶ. ೧೦೦೧–೦೨), ರಾಜೇಂದ್ರ ಚೋಳನ ತಿರುವಲಂಗಾಡು ತಮಿಳು ಶಾಸನ (೧೦೨೫) ಮೊದಲಾದವುಗಳಲ್ಲಿ ಗುಣಿತಾಕ್ಷರಗಳಾದ ಈಕಾರ ಚಿಹ್ನೆಯು ಎಡಬದಿಯಿಂದ ಬಲಬದಿಗೆ ಪರಿವರ್ತನೆಯಾಗಿರುವುದು ಕಂಡು ಬರುತ್ತದೆ.

**ಈ. ನಂತರದ ಕಾಲದ ಲಿಪಿಗಳು** : ಸುಮಾರು ಕ್ರಿ.ಶ. ೧೨೫೦ರ ನಂತರದ ಕಾಲದ ಶಾಸನ ಲಿಪಿಗಳು ಈ ವಿಭಾಗದೊಳಗೆ ಬರುತ್ತವೆ. ಚೋಳರ ಸಾಮ್ರಾಜ್ಯವನ್ನು ಉರುಳಿಸಿ, ಮತ್ತೆ ಅಧಿಕಾರಕ್ಕೆ ಬಂದ ಎರಡನೇ ಕಾಲಘಟ್ಟದ ಪಾಂಡ್ಯರೂ, ನಂತರ ತಮಿಳುನಾಡನ್ನು ಆಳಿದ ವಿಜಯನಗರದ ಅರಸರು ಮೊದಲಾದವರ ಶಾಸನಗಳಲ್ಲಿ ಕಂಡು ಬರುವ ಈ ಲಿಪಿಗಳು ಈಗ ಬಳಕೆಯಲ್ಲಿರುವ ಲಿಪಿಗಳನ್ನೇ ಬಹುಪಾಲು ಹೋಲುತ್ತವೆ.

ಗ್ರಂಥಾಕ್ಷರಗಳ ಬೆಳವಣಿಗೆಯ ಹಂತದಲ್ಲಿ ಬ್ರಾಹ್ಮಿಯನ್ನೇ ಉಪಯೋಗಿಸಿದ್ದರೂ, ಒಂದೆರಡು ಕಡೆಗಳಲ್ಲಿ ದಾಕ್ಷಿಣಾತ್ಯ ಬ್ರಾಹ್ಮಿಲಿಪಿಯನ್ನೂ ಬಳಸಿಕೊಳ್ಳಲಾಗಿದೆ.

ಮದುರೈ, ತಂಜಾವೂರು, ತಿರುನಲ್ವೇಲಿ, ತಿರುಚಿನಾಪಳ್ಳಿ, ಉತ್ತರ ಆರ್ಕಾಟ್, ದಕಿಣ ಆರ್ಕಾಟ್, ಸೇಲಂ ಜಿಲ್ಲೆಗಳಲ್ಲಿ ಈ ಲಿಪಿ ಬಳಕೆಯಲ್ಲಿದ್ದುದು ಕಂಡು ಬರುತ್ತದೆ.

### ೪. ವಟ್ಟೆಳುತ್ತು

ತಮಿಳುನಾಡಿನ ಪ್ರಾಚೀನ ಲಿಪಿಗಳಲ್ಲಿ ವಟ್ಟೆಳುತ್ತು ತುಂಬ ಪ್ರಮುಖವಾದುದು. ವಟ್ಟೆಳುತ್ತಿಗೆ ದಕ್ಷಿಣ ಮಲೆಯಾಳಂ, ನಾನಾಮೋನಂ ಎಂಬ ಹೆಸರುಗಳೂ ಇದ್ದವು. ಈ ಲಿಪಿಯಲ್ಲಿ ಬರೆಯಲಾಗಿರುವ ಶಾಸನಗಳು ಪಾಂಡ್ಯನಾಡಿನಲ್ಲೂ, ಕೇರಳದಲ್ಲೂ ಕಂಡು ಬರುತ್ತವೆ. ತಮಿಳುನಾಡಿನ ಉಳಿದೆಡೆಗಳಲ್ಲಿ ಕ್ವಚಿತ್ತಾಗಿ ಮಾತ್ರ ಈ ಲಿಪಿ ಕಂಡು ಬರುತ್ತದೆ. ಆ ಪ್ರದೇಶಗಳಲ್ಲಿ ಈ ಲಿಪಿ ರೂಢಿಯಲ್ಲಿದ್ದಂತಿಲ್ಲ. ವಟ್ಟೆಳುತ್ತುವಿನಲ್ಲಿರುವ ಬಹುಪಾಲು ಶಾಸನಗಳು ವೀರಗಲ್ಲುಗಳೇ ಆಗಿವೆ.

ಇವು ಕ್ರಿ.ಶ. ಆರನೇ ಶತಮಾನದಿಂದ ಒಂಭತ್ತನೇ ಶತಮಾನದವರೆಗೂ ದೊರಕುತ್ತವೆ. ಧರ್ಮಪುರಿ ಜಿಲ್ಲೆಯ ಇರುಳಾಪಟ್ಟಿಯಲ್ಲಿ ದೊರೆತಿರುವ ಎರಡು ವೀರಗಲ್ಲುಗಳ ಕಾಲ ಕ್ರಿ.ಶ.೫ನೇ ಶತಮಾನವಾಗಿರಬಹುದೆಂದು ಆರ್.ನಾಗಾಸ್ವಾಮಿಯವರು ಹೇಳುತ್ತಾರೆ. ದುಂಡು ರೇಖೆಗಳ ಗೆರೆಗಳನ್ನು ಹೆಚ್ಚು ಹೊಂದಿದ್ದುದರಿಂದ ಇದನ್ನ ವಟ್ಟೆಳುತ್ತು, ವಟ್ಟಂ (ವಟ್ಟಂ=ವೃತ್ತ; ಎಜುತ್ತು=ಅಕ್ಷರ) ಎಂಬ ಹೆಸರುಗಳಿಂದ ಕರೆಯಲಾಗಿದೆ. ಶಾಸನಗಳಲ್ಲೂ ಈ ಲಿಪಿಯ ಹೆಸರನ್ನು ಇದೇ ರೀತಿ ಕರೆಯಲಾಗಿದೆ. ಸುಮಾರು ಕ್ರಿ.ಶ. ೧೩೮೭ರಲ್ಲಿ ಪರಾಕ್ರಮಪಾಂಡ್ಯದೇವನು ಕುಟ್ರಾಲಂನಲ್ಲಿ ಕುಟ್ರಾಲನಾಥಸ್ವಾಮಿ ದೇವಾಲಯದ ಗರ್ಭಗೃಹವನ್ನು ನವೀಕರಿಸಿದಾಗ ಆ ದೇವಾಲಯದ ಗೋಡೆಗಳ ಮೇಲಿದ್ದ ಶಾಸನಗಳನ್ನು ಪ್ರತ್ಯೇಕವಾಗಿ ಬರೆದಿಟ್ಟುಕೊಂಡು ಕಟ್ಟಡ ಕಟ್ಟಿ ಮುಗಿದ ಮೇಲೆ ಮತ್ತೆ ಅದೇ ಶಾಸನವನ್ನು ಮತ್ತೊಮ್ಮೆ ಕೆತ್ತಿದ್ದನ್ನು ಆ ದೇವಾಲಯದಲ್ಲಿನ ಒಂದು ಶಾಸನ ತಿಳಿಸುತ್ತದೆ. ಈ ಸ್ಥಳದಲ್ಲಿರುವ ಇದೇ ಕಾಲದ ಮತ್ತೊಂದು ಶಾಸನವು, ಆ ಕಾಲದಲ್ಲಿ ವಟ್ಟೆಳುತ್ತು ಅಕ್ಷರಗಳನ್ನು ಓದಲಾಗದುದರಿಂದ ಆ ಲಿಪಿಯಲ್ಲಿದ್ದ ಶಾಸನಗಳನ್ನು ಕೈಬಿಟ್ಟು ಉಳಿದವುಗಳನ್ನು ಮಾತ್ರ ಮತ್ತೆ ಕೆತ್ತಿದುದಾಗಿ ಹೇಳುತ್ತದೆ (ಟಿ.ಎ. ಗೋಪಿನಾಥ ರಾವ್, ತಿರುವಾಂಕೂರು ಆರ್ಕಿಯಾಲಜಿಕಲ್ ಸೀರೀಸ್, ಸಂ.೧, ಪು.೨೮೩). ಇದನ್ನು ಗಮನಿಸಿದರೆ ಪಾಂಡ್ಯ ನಾಡಿನಲ್ಲಿ ಈ ಕಾಲಕ್ಕಿಂತ ಮೊದಲೇ ಈ ಅಕ್ಷರವು ಮರೆಯಾಗಿದ್ದುದರೊಂದಿಗೆ ಇದನ್ನು ಓದುವವರು ಇಲ್ಲವಾಗಿದ್ದರು ಎಂಬುದು ತಿಳಿಯುತ್ತದೆ.

'ನಾವು ಸಾಮಾನ್ಯವಾಗಿ ಅಕ್ಷರಗಳನ್ನು ಎಡದಿಂದ ಬಲಕ್ಕೆ ಬರೆಯುತ್ತೇವೆ. ಹಾಗೆ ಬರೆಯುವಾಗ ಕೆಲವು ಅಕ್ಷರಗಳನ್ನು ಪ್ರದಕ್ಷಿಣ ದಿಕ್ಕಿನಲ್ಲೂ, ಮತ್ತೆ ಕೆಲವನ್ನು ಅಪ್ರದಕ್ಷಿಣ ದಿಕ್ಕಿನಲ್ಲೂ ಬರೆಯುವುದು ಸರಿಯಷ್ಟೇ. ಆದರೆ ಅರವ (ತಮಿಳು) ಮತ್ತು ಗ್ರಂಥಗಳ ಬಹುಪಾಲು ಅಕ್ಷರಗಳನ್ನು ಪ್ರದಕ್ಷಿಣ ರೀತಿಯಲ್ಲೇ ಬರೆಯುತ್ತಾರೆ. ಕನ್ನಡ–ತೆಲುಗು ಮತ್ತು ವಟ್ಟೆಳುತ್ತು ಲಿಪಿಗಳನ್ನು ಅಪ್ರದಕ್ಷಿಣ ದಿಕ್ಕಿನಲ್ಲಿ ಬರೆಯಲಾಗುತ್ತದೆ. ಈ ರೀತಿ ಅಪ್ರದಕ್ಷಿಣ ರೀತಿಯಲ್ಲಿ ಬರೆಯಲಾಗುವ ಲಿಪಿಗಳಲ್ಲಿ ನೇರವಾದ ಅಂದರೆ ಸರಳ ರೇಖೆಯ ತೆರನಾದ ಗೆರೆಗಳನ್ನು ಬರೆಯಲಾಗುವುದಿಲ್ಲ. ಅದರಿಂದಾಗಿಯೇ ಕನ್ನಡ–ತೆಲುಗು, ವಟ್ಟೆಳುತ್ತು ಲಿಪಿಗಳು ದುಂಡನೆಯ ಆಕಾರವನ್ನು ಪಡೆದಿರುವುದು. ಸಾಮಾನ್ಯವಾಗಿ ಪ್ರದಕ್ಷಿಣ ದಿಕ್ಕಿನಲ್ಲಿ ಬರೆಯುವ ಅರವ ಮತ್ತು ಗ್ರಂಥ ಲಿಪಿಗಳಲ್ಲಿ ಅನೇಕ ಲಂಬರೇಖೆಗಳಿರುವುದನ್ನು ಕಾಣಬಹುದು' ('ಗ್ರಂಥ–ಅರವ ಲಿಪಿಗಳು', ಡಾ॥ ಪಿ.ವಿ.ಕೃಷ್ಣಮೂರ್ತಿ, ಮಣಿಹ, ಪು.೩೯೫). ಬ್ರಾಹ್ಮಿಯಿಂದ ಬಂದ ಅಕ್ಷರಗಳನ್ನು ಎಡದಿಂದ ಬಲಕ್ಕೂ, ಖರೋಷ್ಠಿಯಿಂದ ಬಂದ ಅರಬ್, ಪರ್ಶಿಯನ್ ಮೊದಲಾದ ಲಿಪಿಗಳನ್ನು ಬಲದಿಂದ ಎಡಕ್ಕೂ ಬರೆಯಲಾಗುವುದು.

ನಮಗೆ ದೊರಕುವ ವಟ್ಟೆಳುತ್ತು ಶಾಸನಗಳಲ್ಲಿ ತುಂಬ ಪ್ರಾಚೀನವಾದುದು ಕ್ರಿ.ಶ. ಆರನೆಯ ಶತಮಾನಕ್ಕೆ ಸೇರಿದ್ದು. ಆ ಕಾಲಕ್ಕಾಗಲೇ ಈ ಲಿಪಿ ಚೆನ್ನಾಗಿ ಬೆಳವಣಿಗೆ ಹೊಂದಿ ಪ್ರತ್ಯೇಕ ಸ್ವರೂಪವನ್ನು ಪಡೆದುಕೊಂಡಿತ್ತು. ಅನಂತರದ ಶಾಸನಗಳಲ್ಲಿ ಐ, ಲು, ದು, ಜು – ಮೊದಲಾದ ಅಕ್ಷರಗಳು ಒಂದೇ ರೀತಿಯ ರೂಪಗಳನ್ನು ಹೊಂದಿದ್ದರೂ, ಹಳೆಯ ಶಾಸನಗಳಲ್ಲಿ ಇವುಗಳೊಳಗೆ ವ್ಯತ್ಯಾಸಗಳಿದ್ದುದು ಕಂಡು ಬರುತ್ತದೆ. ಕ್ರಿ.ಶ. ೧೫–೧೬ನೆಯ ಶತಮಾನದ ಶಾಸನಗಳಲ್ಲಿನ ನ, ಪ, ಮ, ಯ, ಲ, ವ ಮೊದಲಾದ ಅಕ್ಷರಗಳು ಒಂದೇ ರೀತಿಯ ರೂಪವನ್ನು ಹೊಂದಿರುವುದರಿಂದ ಈ ಶಾಸನಗಳನ್ನು ಸಂದರ್ಭಾನುಸಾರ ಓದಿ ಅರ್ಥ ಮಾಡಿಕೊಳ್ಳಬೇಕೇ ಹೊರತು ಇದೇ ಎಂದು ನಿಖರವಾಗಿ, ಸುಲಭವಾಗಿ ಗುರುತಿಸಲಾಗುವುದಿಲ್ಲ. ಈ ಲಿಪಿಯು ರೂಢಿಯಿಂದ ಮಾಯವಾದುದರಲ್ಲಿ ಇದೂ ಒಂದು ಕಾರಣವಾಗಿರಬೇಕು.

ಕ್ರಿ.ಶ. ಎಂಟನೆಯ ಶತಮಾನದಲ್ಲಿ ಬಳಕೆಯಲ್ಲಿದ್ದ ತಮಿಳು ಮತ್ತು ವಟ್ಟಂ ಈ ಎರಡೂ ಬಗೆಯ ಲಿಪಿಗಳನ್ನು ಹೋಲಿಸಿ ನೋಡಿದರೆ ಈ, ಕ, ಐ, ಞ, ರ, ಲವ, ವ ಟಿ, ಳ – ಮೊದಲಾದವು ಒಂದೇ ರೀತಿಯಲ್ಲಿರುವುದು ಕಂಡು ಬರುತ್ತದೆ. ಅ, ಉ, ಒ, ಚ, ಡ, ಯ–ಗಳು ಸ್ವಲ್ಪ ಮಟ್ಟಿನ ವ್ಯತ್ಯಾಸಗಳನ್ನು ಒಳಗೊಂಡಿವೆ.

ಇದುವರೆಗೂ ತಿಳಿಸಿದ ಗ್ರಂಥ, ತಮಿಳು ಮೊದಲಾದ ಲಿಪಿಗಳು ಬ್ರಾಹ್ಮಿಯಿಂದಲೇ ಬೆಳೆದು ಬಂದ ಹಾಗೆಯೇ, ವಟ್ಟೆಳುತ್ತು ಕೂಡ ಬ್ರಾಹ್ಮಿಯಿಂದಲೇ ಬೆಳೆದು ಬಂದಿದೆ. ಆದರೂ ವಟ್ಟೆಳುತ್ತಿನ ಉಗಮದ ಬಗ್ಗೆ ಬಹುವಿಧವಾದ ಅಭಿಪ್ರಾಯಗಳಿವೆ. ವಟ್ಟೆಳುತ್ತು ತಮಿಳುಬ್ರಾಹ್ಮಿಯಿಂದ ಯಾವಾಗ ಪ್ರತ್ಯೇಕವಾಯಿತು ಎಂದು ಹೇಳಲು ಸಾಧ್ಯವಿಲ್ಲ. 'ತಮಿಳಿ' ಅಕ್ಷರಗಳು ವಟ್ಟೆಳುತ್ತಾಗಿ ಪರಿವರ್ತನೆ ಹೊಂದಿರುವುದನ್ನು ಪ್ರತಿಯೊಂದು ಅಕ್ಷರಗಳ ಬೆಳವಣಿಗೆಯ ಹಂತದಲ್ಲೂ ಗುರುತಿಸಬಹುದು. ಸೆಂಜಿ ಸಮೀಪದ ತಿರುನಾಥರ್‌ಕುನ್ರು ಎಂಬಲ್ಲಿ ದೊರೆತ ಶಾಸನ ಬರಹವು ಇದನ್ನು ಇನ್ನೂ ಸ್ಪಷ್ಟಪಡಿಸುತ್ತದೆ. ಉತ್ತರ ಆರ್ಕಾಟ್‌ನಲ್ಲಿ ದೊರೆತಿರುವ ಶಾಸನಗಳು ತಮಿಳಿ ಮತ್ತು ವಟ್ಟೆಳುತ್ತು ಎರಡೂ ಸೇರಿ ಬರೆದಿರುವಂತೆ ಗೋಚರಿಸುತ್ತವೆ.

ಖರೋಷ್ಠಿಯಿಂದ ಬೆಳೆದು ಬಂದ ಯಾವುದೋ ಒಂದು ಲಿಪಿಯ ಮೂಲಕ ಈ ವಟ್ಟೆಳುತ್ತು ಉಗಮಗೊಂಡಿರಬಹುದೆಂಬ ಅಭಿಪ್ರಾಯವನ್ನು ಮಹಾಮಹೋಪಾಧ್ಯಾಯ ಡಾ. ಹರಿಪ್ರಸಾದ್ ಶಾಸ್ತ್ರಿಗಳು ತಿಳಿಸುತ್ತಾರೆ (ಬಿಹಾರ್-ಒರಿಸ್ಸಾ ರಿಸರ್ಚ್ ಸೊಸೈಟಿ ಜರ್ನಲ್, ಸಂ-೧, ಪು.೫೪). ಅವರು ಹೀಗೆ ಊಹಿಸಲು ಕಾರಣವೇನೆಂದು ಹೇಳಿಲ್ಲ. ಆದರೆ ಇದು ಹಾಗಿರಲು ಸಾಧ್ಯವಿಲ್ಲ.

ಇದನ್ನು ಪ್ರಾಚೀನ, ಮಧ್ಯಕಾಲೀನ ಹಾಗೂ ನಂತರದ ಕಾಲವೆಂದು ಗುರುತಿಸಲಾಗುವುದು.

**೧. ಪ್ರಾಚೀನ ಕಾಲ** : ಸುಮಾರು ಕ್ರಿ.ಶ. ೯೫೦ಕ್ಕಿಂತ ಹಿಂದಿನ ಕಾಲದ ಪಾಂಡ್ಯರ ಮೊದಲ ಸಾಮ್ರಾಜ್ಯದ ಅರಸರ ಶಾಸನಗಳು ಈ ಲಿಪಿಯಲ್ಲಿವೆ. ತಿರುನಾಥರ್‌ಕುನ್ರ ಶಾಸನವು ಇದಕ್ಕೆ ಉದಾಹರಣೆಯಾಗಿದೆ. ತಮಿಳುನಾಡಿನಲ್ಲಿ ದೊರಕುವ ವಟ್ಟೆಳುತ್ತು ಶಾಸನಗಳಲ್ಲಿ ಇದೇ ಪ್ರಾಚೀನವಾದುದು. ಇದರ ಕಾಲವನ್ನು ನಿಖರವಾಗಿ ಗುರುತಿಸಲು ತಕ್ಕ ಆಧಾರಗಳಿಲ್ಲ. ಲಿಪಿ ಸ್ವರೂಪದ ಆಧಾರದಿಂದ ಕ್ರಿ.ಶ. ೩೦೦ ಇರಬಹುದೆಂದು ಎಂದು ಲಿಪಿತಜ್ಞರು ಹೇಳುತ್ತಾರೆ. ಇದರ ನಂತರ ಕ್ರಿ.ಶ. ೭ನೆಯ ಶತಮಾನದವರೆಗೆ ತಮಿಳಿನಲ್ಲಿ ಶಾಸನಗಳು ಕಂಡು ಬರುವುದಿಲ್ಲ. ಆದ್ದರಿಂದ ಇದು ತಮಿಳೋ, ವಟ್ಟೆಳುತ್ತೋ ಎಂದು ನಿಖರವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದರೂ ಇದರಲ್ಲಿರುವ ಐ, ಮ, ನ, ನ ಅಕ್ಷರಗಳ ಸ್ವರೂಪವನ್ನು ಆಧರಿಸಿ ಇದು ವಟ್ಟೆಳುತ್ತು ಆಗಿರಬಹುದೆಂದು ಹೇಳಲಾಗುತ್ತಿದೆ.

ಕ್ರಿ.ಶ. ೭೬೦ರಲ್ಲಿ ಪಾಂಡ್ಯ ಸಿಂಹಾಸನವನ್ನೇರಿದ ನೆಡುಂಜೆಳಿಯನ್ ಎಂಬ ಜಟಾವರ್ಮ ಪರಾಂತಕನ ಕಾಲದ ವೇಲಾನ್‌ಕುಡಿಯ ಮೂರು ಶಾಸನಗಳು ಬೇರೆ ಬೇರೆ ಬರಹವನ್ನು ಒಳಗೊಂಡಿವೆ. ವಟ್ಟೆಳುತ್ತುಗಳು ಸಾಮಾನ್ಯವಾಗಿ ಎಡಬದಿಗೇ ಬಾಗಿರುತ್ತವೆ. ಆದರೆ ಈ ಶಾಸನಗಳ ಅಕ್ಷರಗಳು ನಿಮಿರಿ ನಿಂತಿವೆ. ಇಂತಹ ಇನ್ನೂ ಕೆಲವು ಶಾಸನಗಳೂ ದೊರೆತಿವೆ.

**೨. ಮಧ್ಯಕಾಲ** : ಕ್ರಿ.ಶ. ಸುಮಾರು ೯೫೦ರಿಂದ ೧೩೫೦ರವರೆಗಿನ ಕಾಲಾವಧಿಯಲ್ಲಿ ದೊರಕುವ ಬರಹಗಳನ್ನು ಈ ಕಾಲಕ್ಕೆ ಸೇರಿಸಲಾಗಿದೆ. ಪಾಂಡ್ಯ ಮಂಡಲದಲ್ಲಿ ದೊರೆತ ಒಂದನೇ ರಾಜರಾಜಚೋಳನಿಗಿಂತ ಹಿಂದಿನ ಚೋಳರ ಶಾಸನಗಳು ಈ ಲಿಪಿಯಲ್ಲಿವೆ. ರಾಜರಾಜನ ಚೋಳನ ಆಳ್ವಿಕೆಯ ಆರಂಭದ ಕೆಲವು ವರ್ಷಗಳವರೆಗಿನ ಶಾಸನಗಳು ಈ ಲಿಪಿಯಲ್ಲೇ ರಚನೆಯಾಗಿವೆ. ನಂತರ ತಮಿಳಿನಲ್ಲಿ ಬರೆಯುವುದು ಹೆಚ್ಚು ವ್ಯಾಪಕಗೊಂಡಿರಬೇಕು. ಕೇರಳದಲ್ಲಿ 'ಆರ್ಯ ಎಬುತ್ತು' ರೂಢಿಗೆ ಬರುವ ಮುನ್ನ ಉಪಯೋಗದಲ್ಲಿದ್ದುದು ವಟ್ಟೆಳುತ್ತಿನ ಈ ಬಗೆಯ ಲಿಪಿಗಳೇ ಆಗಿವೆ. ಚೋಳರ ಸಂಬಂಧದಿಂದಾಗಿ ಈ ಬಗೆಯ ಗುಣಿತಾಕ್ಷರಗಳ ಬರಹ ಕ್ರಮದಲ್ಲಿ ತಮಿಳು ಅಕ್ಷರಗಳ ಬರಹ ಕ್ರಮದ ಕೆಲವು ಅಭ್ಯಾಸಗಳು ಈ ಭಾಗದಲ್ಲೂ ರೂಢಿಗೆ ಬಂದವು.

ಮೊದಲ ಪರಾಂತಕ ಚೋಳನ ಆನೆಮಲೈ ಶಾಸನ (ಕ್ರಿ.ಶ. ೯೩೯), ಕ್ರಿ.ಶ. ೧೧ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ವೇನಾಡು ಅರಸ ಭಾಸ್ಕರ ರವಿವರ್ಮನ ಕೊಲ್ಲೂರು ಮಠದ ತಾಮ್ರಶಾಸನಗಳು (ಕ್ರಿ.ಶ. ೧೧೮೮) ಈ ಲಿಪಿಯಲ್ಲಿವೆ. (ಈ ಶಾಸನದ ಮೊದಲ ಭಾಗ ಒಬ್ಬ ಲಿಪಿಕಾರನಿಂದಲೂ, ಉಳಿದರ್ಧ ಭಾಗ ಮತ್ತೊಬ್ಬನಿಂದಲೂ ಬರೆಯಲ್ಪಟ್ಟಿರುವುದು ಬರವಣಿಗೆಯ ಶೈಲಿ ಮತ್ತು ಲಿಪಿ ಸ್ವರೂಪಗಳ ವ್ಯತ್ಯಾಸಗಳಿಂದ ಸ್ಪಷ್ಟವಾಗಿ ಕಂಡು ಬರುತ್ತದೆ.

**೩. ನಂತರದ ಕಾಲದ ಲಿಪಿಗಳು** : ಸುಮಾರು ಕ್ರಿ.ಶ ೧೩೫೦ರ ನಂತರದ ವಟ್ಟೆಳುತ್ತು ಬರಹಗಳು ಈ ಸಾಲಿಗೆ ಸೇರಿದವು. ಕಾಲಕ್ರಮೇಣ ಇವು ಮಲಯಾಳ ಅಕ್ಷರಗಳ ಸಹಜ ಲಕ್ಷಣಗಳನ್ನೇ ಪಡೆದುಕೊಂಡು ಬಿಟ್ಟವು. ಈ ಕಾಲದ ಲಿಪಿಗಳಲ್ಲಿ ಪ, ಯ, ವ- ಈ ಅಕ್ಷರಗಳೂ, ಅವುಗಳ ಗುಣಿತಾಕ್ಷರ ಚಿಹ್ನೆಗಳೂ ಯಾವ ವ್ಯತ್ಯಾಸವೂ ಇಲ್ಲದೆ ಒಂದೇ ರೀತಿ ಬಳಕೆಯಾಗಿವೆ. ಐ,ಲೈ – ಇವೆರಡೂ ಅಕ್ಷರಗಳಿಗೂ ಯಾವ ವ್ಯತ್ಯಾಸವೂ ಇರಲಿಲ್ಲ. ಕ,ಚಗಳೆರಡರಲ್ಲೂ ಕೂಡ ಯಾವ ಭಿನ್ನತೆಯೂ ಇಲ್ಲದೆ ಒಂದೇ ರೀತಿ ಕಂಡು ಬರುತ್ತವೆ.

ವಟ್ಟೆಳುತ್ತು ಶಾಸನಗಳನ್ನು ಕಂಡು ಹಿಡಿದು ಓದುವುದರಲ್ಲಿ ಕೆಲವು ಸಮಸ್ಯೆಗಳಿವೆ. ಕಾಲವನ್ನು ನಿಖರವಾಗಿ ಗುರುತಿಸಬಹುದಾದ ವಟ್ಟೆಳುತ್ತು ಶಾಸನಗಳು ಹೆಚ್ಚು ದೊರಕಿಲ್ಲ. ಇತರ ಲಿಪಿಗಳಂತೆ ಏಕರೂಪದಲ್ಲಿಲ್ಲದೆ ಗುಣಿತಾಕ್ಷರಗಳ ಚಿಹ್ನೆಗಳನ್ನು ಬರೆಯುವುದರಲ್ಲೂ ನಾನಾ ರೂಪಗಳು ಕಂಡು ಬರುತ್ತವೆ. ಕೆಲವು ವ್ಯಂಜನಾಕ್ಷರಗಳೂ ಬೇರೆಬೇರೆ ರೀತಿಯಲ್ಲಿ ಬರೆಯಲ್ಪಟ್ಟಿವೆ.

ಕನ್ಯಾಕುಮಾರಿ, ತಿರುನಲ್ವೇಲಿ, ರಾಮನಾಥಪುರಂ, ಮದುರೈ, ಕೊಯಂಬತ್ತೂರು, ಸೇಲಂ, ಧರ್ಮಪುರಿ, ಉತ್ತರ ಆರ್ಕಾಟ್, ದಕ್ಷಿಣ ಆರ್ಕಾಟ್ ಮುಂತಾದೆಡೆಗಳಲ್ಲಿ ವಟ್ಟೆಳುತ್ತು ಶಾಸನಗಳು ಕಂಡು ಬಂದಿವೆ. ತಾಳೆಗರಿ ಗ್ರಂಥಗಳಲ್ಲೂ ಇದನ್ನು ಬಳಸಲಾಗಿದೆ. ಕೊಚ್ಚಿನ್‌ನ ಅರಸರು ತಮ್ಮ ಆಡಳಿತದ ದಾಖಲೆಗಳನ್ನು ಬರೆದಿಡಲು ಈ ಲಿಪಿಯನ್ನು ಬಳಸುತ್ತಿದ್ದರು.

ಗ್ರಂಥಾಕ್ಷರಗಳ ಬಳಕೆ ಹೆಚ್ಚಾದ ಮೇಲೆ ವಟ್ಟೆಳುತ್ತು ಬಳಕೆ ಆ ಪ್ರಾಂತ್ಯಗಳಲ್ಲಿ ಮಾಯವಾಯಿತು. ಪಲ್ಲವರ ಪ್ರಾಬಲ್ಯ ಹೆಚ್ಚಾಗಿರದಿದ್ದ ಪ್ರದೇಶಗಳಾದ ವಾಣಗಪಟ್ಟಿ, ಗಂಗವಾಡಿ, ಉತ್ತರ ಕೊಂಗುನಾಡಿನ ಪ್ರದೇಶ ಮೊದಲಾದೆಡೆಗಳಲ್ಲಿ ಈ ಎರಡೂ ರೂಪಗಳೂ ಬೆರೆತು ಬಳಕೆಗೆ ಬಂದಿರುವುದನ್ನು ಕಾಣಬಹುದು.

ಚೋಳರು ಅಧಿಕಾರಕ್ಕೆ ಬಂದು ಪಾಂಡ್ಯನಾಡನ್ನು ತಮ್ಮ ವಶಕ್ಕೆ ತೆಗೆದುಕೊಂಡ ನಂತರ ಇದರ ಬಳಕೆ ಕಡಿಮೆಯಾಗುತ್ತಾ ಬಂತು. ಚೋಳರ ಅಧಿಪತ್ಯವಿರದ ಕೇರಳ ಪ್ರಾಂತ್ಯಗಳಲ್ಲಿ ಹೆಚ್ಚು ರೂಢಿಯಲ್ಲಿತ್ತು. ಮಲೆಯಾಳಂನ 'ಮಣಿಪ್ರವಾಳ'ವೆನ್ನುವ ತಮ್ಮ ಭಾಷೆಯಲ್ಲಿ ಅವರು ಸಂಸ್ಕೃತ ಪದಗಳನ್ನು ಹೆಚ್ಚು ಬೆರೆಸಿಕೊಂಡಿದ್ದರಿಂದ ಆರ್ಯ ಲಿಪಿ ಎಂದು ಅವರು ಕರೆಯುತ್ತಿದ್ದ ಗ್ರಂಥ ಲಿಪಿಯನ್ನು ರೂಢಿಗೆ ತಂದರು. ಆದರೆ ಆರ್ಯನ್ ಅಕ್ಷರಗಳಾದ ಕ, ಚ, ಟ, ತ, ಪ–ಮೊದಲಾದ ವ್ಯಂಜನಗಳಲ್ಲಿ ಪ್ರತಿಯೊಂದಕ್ಕೂ ಧ್ವನಿಯ ಆಧಾರದ ಮೇಲೆ ನಾಲ್ಕು ನಾಲ್ಕು ಅಕ್ಷರಗಳಿರುವುದರಿಂದ ಸಂಸ್ಕೃತ ಶಬ್ದಗಳು ಹೆಚ್ಚಾಗಿ ಸೇರಿರುವ ಭಾಷೆಯ ಪದಗಳನ್ನು ಹೆಚ್ಚು ಬಳಸದ ಪ್ರದೇಶದ ಜನರು ಆರ್ಯ ಶಬ್ದಗಳನ್ನು ಬಳಸಲಿಲ್ಲ. ವಟ್ಟೆಳುತ್ತಿನ ಒಂದು ವಿಧವಾದ 'ಕೋಲಕ್ಷರ' (ಕೋಲೆಳುತ್ತು) ಎಂಬುದನ್ನು ಬಳಸಿದರು.

**ಕೋಲೆಳುತ್ತು (ಕೋಲಕ್ಷರ)** : ನಂತರದ ಕಾಲದಲ್ಲಿ ವಟ್ಟೆಳುತ್ತುವಿನಲ್ಲಿ ಕಂಡ ಬಂದ ಇನ್ನೊಂದು ಬಗೆಯ ಲಿಪಿಯನ್ನು ಕೋಲಕ್ಷರ ಎನ್ನಲಾಗುವುದು. ಅದನ್ನು ಹತ್ತೊಂಬತ್ತನೇ ಶತಮಾನದವರೆಗೂ ಬಳಕೆಯಲ್ಲಿತ್ತು. ಆ ಕೋಲಕ್ಷರ ಇತ್ತೀಚಿನವರೆಗೂ ಮಾಪ್ಪಿಳ್ಳೈಗಳು ಎಂದು ಕರೆಯಲಾಗುವ ಮಲೆಯಾಳ ನಾಡಿನ ಮಹಮ್ಮದೀಯರು ಇದನ್ನು ಬಳಸುತ್ತಿದ್ದರು. ಈಗ ಈ ಬರಹವನ್ನು ಬರೆಯುವುದು ಸಂಪೂರ್ಣ ನಿಂತು ಹೋಗಿದೆ.

ಬ್ರಾಹ್ಮಿ ಲಿಪಿಯು ಕ್ರಿ.ಪೂ. ಮೂರನೆಯ ಶತಮಾನದಲ್ಲಿ ತಮಿಳನಾಡನ್ನು ಪ್ರವೇಶಿಸಿತೆಂದು ಹೇಳಲಾಗುತ್ತಿದೆ. ಅದಕ್ಕೂ ಮುನ್ನವೇ ಇಲ್ಲಿ ಬಳಕೆಯಲ್ಲಿದ್ದ ಬೇರಾವುದೋ ಒಂದು ಲಿಪಿಯನ್ನು ಇದು ಪಕ್ಕ ತಳ್ಳಿ ಆ ಸ್ಥಳವನ್ನು ತಾನು ಆಕ್ರಮಿಸಿಕೊಂಡಿತು. ಕ್ರಮೇಣ ಇದು ತಮಿಳಿನಲ್ಲಿ ಸ್ವಲ್ಪಸ್ವಲ್ಪವೇ ಬೆಳೆದು ಪರಿವರ್ತಿತವಾಗಿ ಹರಡತೊಡಗಿತು. ಅದೇ ವಟ್ಟೆಳುತ್ತು. ಒಂದು ಕಾಲದಲ್ಲಿ ಇದು ತಮಿಳುನಾಡಿನಾದ್ಯಂತವೂ ಬಳಕೆಯಲ್ಲಿದ್ದಿರಬೇಕು. ಆದರೂ ಶಾತವಾಹನರೊಂದಿಗೆ ರಾಜಕೀಯ ಸಂಬಂಧ ಹೊಂದಿದ್ದ ಪಲ್ಲವರು ತಮಿಳುನಾಡನ್ನು ತಮ್ಮ ವಶಕ್ಕೆ ತೆಗೆದುಕೊಂಡು ಆಳತೊಡಗಿದುದರಿಂದ ತಮಿಳುನಾಡಿನ ಉತ್ತರ ಭಾಗದಲ್ಲಿ ಹೊಸ ಲಿಪಿ ರೂಪಗಳು ಬಳಕೆಗೆ ಬಂದವು. ಇವರು ಆರಂಭದಲ್ಲಿ ಪ್ರಾಕೃತ ಭಾಷೆಯನ್ನು ಬಳಸುತ್ತಿದ್ದುದರಿಂದ ಅದನ್ನು ಬರೆಯಲು ಬ್ರಾಹ್ಮಿ ಲಿಪಿಯ ಮೂಲಕ ಬಂದ ಗ್ರಂಥವೂ, ಅದರಿಂದ ಬೆಳೆದು ಬಂದ ಗ್ರಂಥತಮಿಳೂ ರೂಢಿಗೆ ಬಂದವು. ಪಲ್ಲವರ ಕೊಡುಗೆಯಾದ ಅಲಂಕಾರಿಕ ಚಿತ್ರ ಗ್ರಂಥಾಕ್ಷರಗಳೂ, ನಾಗರ ಲಿಪಿಗಳೂ ತುಂಬ ದಿನ ಉಪಯೋಗದಲ್ಲಿರಲಿಲ್ಲ. ಪಲ್ಲವರು ವೈಭವದಿಂದ ಆಳುತ್ತಿದ್ದ ದಿನಗಳಲ್ಲಿ ಅವರು ತೊಂಡೈಮಂಡಲವನ್ನೂ, ಚೋಳನಾಡನ್ನೂ ಕೊಂಗು ಪ್ರದೇಶದ ಒಂದು ಭಾಗವನ್ನೂ ಆಳುತ್ತಿದ್ದರು. ಆದ್ದರಿಂದ ಗ್ರಂಥ ತಮಿಳು ಆ ಭಾಗಗಳಲ್ಲಿ ಪ್ರಚಾರಕ್ಕೆ ಬಂತು. ಪಾಂಡ್ಯ ಮಂಡಲ, ಕೇರಳ, ಕೊಂಗುನಾಡಿನ ಒಂದು ಭಾಗದಲ್ಲೂ ವಟ್ಟೆಳುತ್ತು ಪ್ರಚಾರಕ್ಕೆ ಬಂತು. ಇವೆರಡೂ ವಿಭಾಗಗಳಿಗೂ ಅಂಟಿಕೊಂಡಂತಿದ್ದ ಗಡಿಭಾಗಗಳಲ್ಲಿ ಗ್ರಂಥ ತಮಿಳೂ, ವಟ್ಟೆಳುತ್ತೂ ಒಟ್ಟಿಗೆ ಬೆರೆತು ವ್ಯವಹರಿಸತೊಡಗಿದವು.

ಪಲ್ಲವರ ಪ್ರಾಬಲ್ಯ ಕಡಿಮೆಯಾದ ಮೇಲೆ, ಚೋಳರು ಅಧಿಕಾರಕ್ಕೆ ಬಂದು ತಮಿಳುನಾಡಿನ ಸಾಮ್ರಾಟರಾದ ನಂತರ ಅವರು ತಮ್ಮ ಆಳ್ವಿಕೆಯ ಪ್ರಾಂತ್ಯದ ಎಲ್ಲೆಡೆಗಳಲ್ಲೂ ತಮಿಳು ಅಕ್ಷರಗಳನ್ನೇ ಹರಡಿದರು. ಅಂದಿನಿಂದ ಇಂದಿನವರೆಗೂ ತಮಿಳಿನಲ್ಲಿ ಈ ಲಿಪಿಯೇ ಬಳಕೆಯಲ್ಲಿದೆ.

ಚೋಳರ ನೇರ ಆಳ್ವಿಕೆಗೆ ಒಳಪಡದ ಮಲೆನಾಡು ಕೇರಳದಲ್ಲಿ ವಟ್ಟೆಳುತ್ತೇ ಮುಂದುವರೆಯಿತು. ಕೇರಳದವರು ಮಣಿಪ್ರವಾಳವೆಂಬ ತಮ್ಮ ಸಂಸ್ಕೃತ ಮಿಶ್ರಿತ ಭಾಷೆಯನ್ನು ಬರೆಯಲು ಗ್ರಂಥವನ್ನೂ, ಆರ್ಯಎಟುತ್ತು ಎಂದು ಹೆಸರು ಬದಲಿಸಿ ರೂಢಿಸಿಕೊಂಡ ನಂತರ ವಟ್ಟೆಳುತ್ತು ಆ ನಾಡಿನ ಕೆಲವೆಡೆಗಳಲ್ಲಷ್ಟೇ ಬಳಕೆಯಾಯಿತು. ಆ ಲಿಪಿಯೇ ಕಾಲಾ ನಂತರ ಕೋಲೆಳುತ್ತು ಎಂಬ ಪ್ರಭೇದವನ್ನು ಪಡೆದುಕೊಂಡಿತು. ಸ್ವಲ್ಪ ದಿನಗಳ ನಂತರ ಇದೂ ಮಾಯವಾಯಿತು.

ವಿಜಯನಗರ ಸಾಮ್ರಾಜ್ಯ ತಮಿಳುನಾಡನ್ನು ವಶಪಡಿಸಿಕೊಂಡ ನಂತರ ಅವರು ತಮಿಳುನಾಡಿನಲ್ಲಿ ಪುನಃ ನಾಗರ ಲಿಪಿಯನ್ನು ರೂಢಿಗೆ ತಂದರು. ಆರಂಭದಲ್ಲಿ ಅದು ತಮಿಳುನಾಡಿನ ಉತ್ತರ ಪ್ರಾಂತ್ಯಗಳಲ್ಲಷ್ಟೇ ಕಂಡು ಬಂದರೂ, ಮಹಾರಾಷ್ಟ್ರೀಯರು ತಮಿಳುನಾಡಿನೊಳಗೆ ಪ್ರವೇಶಿಸಿ, ಕೆಲವು ಪ್ರಾಂತ್ಯಗಳನ್ನು ತಮ್ಮ ವಶ ಪಡಿಸಿಕೊಂಡು ಆಳತೊಡಗಿದ ನಂತರ ಈ ಲಿಪಿಯು ಪುನರ್ ಚೈತನ್ಯ ಪಡೆದು ವ್ಯಾಪಕವಾಗಿ ಹರಡಿತು.

ಹೀಗೆ ತಮಿಳುನಾಡಿಲ್ಲಿ ಹಲವು ಬಗೆಯ ಲಿಪಿಗಳು ರೂಢಿಯಲ್ಲಿದ್ದುದನ್ನು ಕಾಣಬಹುದು.

## ಆಧಾರ ಸೂಚಿ


೧. ಡಾ॥ ದೇವರಕೊಂಡಾರೆಡ್ಡಿ, **ಕನ್ನಡ ಲಿಪಿಯ ಹುಟ್ಟು ಮತ್ತು ಬೆಳವಣಿಗೆ**, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೨, ಬೆಂಗಳೂರು.

೨. ಡಾ॥ ಪಿ.ವಿ. ಕೃಷ್ಣಮೂರ್ತಿ, 'ಗ್ರಂಥ ಅರವ ಲಿಪಿಗಳು', **ಮಣಿಹ**, ಬಿ.ಎಂ.ಶ್ರೀ. ಪ್ರತಿಷ್ಠಾನ, ೧೯೮೨, ಬೆಂಗಳೂರು.

೩. ಟಿ.ಎಸ್. ಶ್ರೀಧರ, **ತಮಿಳ್ ಬ್ರಾಹ್ಮಿ ಕಲ್‌ವೆಟ್ಟುಗಳ್**, ತಮಿಳುನಾಡು ಪುರಾತತ್ತ್ವ ಇಲಾಖೆ, ಚೆನ್ನೈ, ೨೦೦೮.

೪. ಟಿ.ಎಸ್. ಸುಬ್ರಮಣಿಯನ್, **ಪಂಡೈ ತಮಿಳ್ ಎಳುತ್ತುಗಳ್**, ಇಂಟರ್‌ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ತಮಿಳ್ ಸ್ಟಡೀಸ್, ೨೦೦೪.




# ವಿಜಯನಗರ ಕಾಲದ ಕನ್ನಡ ಲಿಪಿ ಸ್ವರೂಪ

– ಕಾರ್ತಿಕೇಯ*

ಕ್ರಿ.ಶ. ೧೪ನೆಯ ಶತಮಾನದಿಂದ ೧೬ನೆಯ ಶತಮಾನದವರೆಗಿನ ಲಿಪಿಯನ್ನು ವಿಜಯನಗರ ಅರಸರ ಕಾಲದ ಲಿಪಿ ಎಂದು ಗುರುತಿಸಲಾಗುತ್ತದೆ. ಹೊಯ್ಸಳರ ಲಿಪಿಗೆ ಹೋಲಿಸಿದಾಗ ವಿಜಯನಗರ ಅರಸರ ಲಿಪಿ ತೀರಾ ಬದಲಾಗಿದೆ. ಲಿಪಿ ಸೌಂದರ್ಯದ ಪ್ರಶ್ನೆ ಎದುರಾದಾಗ ಈ ಕಾಲವನ್ನು ಕನ್ನಡ ಲಿಪಿಯ ಅವನತಿಯ ಕಾಲ ಎಂದೇ ಹೇಳಬಹುದು. ಇದಕ್ಕೆ ಮುಖ್ಯ ಕಾರಣವೆಂದರೆ ಶಾಸನ ಬರೆಯಲು ಅವರು ಆಯ್ಕೆ ಮಾಡಿಕೊಳ್ಳುತ್ತಿದ್ದ ಒರಟು ಕಣ ಶಿಲೆಗಳು. ಕಠಿಣವಾದ ಕಣ ಶಿಲೆಯ ಮೇಲೆ ಗುಂಡಾಗಿ ಅಕ್ಷರಗಳನ್ನು ಬರೆಯುವುದು ತೀರ ಕಷ್ಟ. ಇದರ ಜೊತೆಗೆ ಈ ಕಾಲಘಟ್ಟದಲ್ಲಿ ಶಾಸನಗಳನ್ನು ಬರವಣಿಗೆಯ ತಿಳುವಳಿಕೆಯಿಲ್ಲದ ಸಾಧಾರಣ ರೂವಾರಿಗಳಿಂದ ತೀರಾ ನಿರ್ಲಕ್ಷ್ಯದಿಂದ ಕೊರೆಸುತ್ತಿದ್ದರು. ಆದ್ದರಿಂದಲೇ ವಿಜಯನಗರ ಅರಸರ ಲಿಪಿಯು ಒಂದೊಂದು ಪ್ರಾಂತ್ಯದಲ್ಲಿ ಒಂದೊಂದು ರೀತಿ ಪ್ರಾದೇಶಿಕ ವೈವಿಧ್ಯದೊಂದಿಗೆ ರೂಪುಗೊಂಡಿದೆ.

ಕದಂಬ, ಬಾದಾಮಿ ಚಲುಕ್ಯ, ರಾಷ್ಟ್ರಕೂಟರ ಕಾಲದ ಲಿಪಿಗಳು ಚೌಕಾಕಾರವಾಗಿ ಇದ್ದವು. ಅವರ ನಂತರ ಆಳಿದ ಕಲ್ಯಾಣದ ಚಾಲುಕ್ಯ, ಹೊಯ್ಸಳ ಮತ್ತು ಯಾದವರ ಕಾಲದ ಕನ್ನಡ ಅಕ್ಷರಗಳು ದುಂಡಾಗಿ, ಸುಂದರವಾಗಿ ಕಾಣುತ್ತವೆ. ಆದರೆ ವಿಜಯನಗರ ಕಾಲದ ಕನ್ನಡ ಅಕ್ಷರಗಳಲ್ಲಿ ಒಂದು ರೀತಿಯ ಅವನತಿ ಕಾಣುತ್ತದೆ. ಆ ಕಾಲದ ಜನರು ಅಕ್ಷರಗಳನ್ನು ಸುಂದರವಾಗಿ ಬರೆಯಲು ಶ್ರಮಿಸುತ್ತಿರಲಿಲ್ಲ ಮತ್ತು ಶಾಸನಗಳನ್ನು ಬರೆಯಲು ಹೊಯ್ಸಳರ ಕಾಲದಲ್ಲಿ ಬಳಸುತ್ತಿದ್ದ ಉತ್ತಮ ಕಲ್ಲನ್ನು ಉಪಯೋಗಿಸುತ್ತಿರಲಿಲ್ಲ. ಬಿರುಸುಕಲ್ಲೇ ಅವರಿಗೆ ಸಾಕಾಯಿತು.

ಈ ಕಾಲದ ಲಿಪಿಯಲ್ಲಿ ನಮ್ಮ ಇಂದಿನ ಲಿಪಿಯ ಬಹುತೇಕ ಲಕ್ಷಣಗಳನ್ನು ಕಾಣಬಹುದು. ಈ ಕಾಲದ ಲಿಪಿಯ ಪ್ರಮುಖ ಬೆಳವಣಿಗೆ ಎಂದರೆ ಛ, ಢ, ಥ, ಧ, ಫ, ಭ ಮುಂತಾದ ಮಹಾಪ್ರಾಣಗಳಿಗೆ ಕೆಳಭಾಗದಲ್ಲಿ ಒಂದು ಸಣ್ಣ ಗೆರೆಯನ್ನು ಬರೆಯುವ ಮೂಲಕ ಹೊಕ್ಕುಳು ಸೀಳುವ ಪ್ರಕ್ರಿಯೆ ಆರಂಭವಾದದ್ದು. ಧ, ಣ, ಷ ಈ ಮೂರು ಅಕ್ಷರಗಳು ಈಗಿನ ಲಿಪಿಗೆ ಹತ್ತಿರವಾದ ತಮ್ಮ ಸ್ಥಿರವಾದ ರೂಪವನ್ನು ಪಡೆದುಕೊಂಡವು.

ಈ ಕೆಳಗಿನ ಪಟ್ಟಿಯು (ಚಿತ್ರ ೧) ವಿಜಯನಗರ ಕಾಲದ ಕನ್ನಡ ಲಿಪಿಯ ಪ್ರಾದೇಶಿಕ ವೈವಿಧ್ಯವನ್ನು ಸೂಚಿಸುತ್ತದೆ.

**೩ನೆಯ ವೀರಬಲ್ಲಾಳನ ಶಾಸನ, ದೊಡ್ಡೇರಿ ಕಾಲ : ಕ್ರಿ.ಶ. ೧೩೨೮**

ಈ ಶಾಸನವು ಒಟ್ಟು ೨೧ ಸಾಲುಗಳನ್ನೊಳಗೊಂಡಿದ್ದು, ಹೊಯ್ಸಳ ದೊರೆ ೩ನೆಯ ವೀರ ಬಲ್ಲಾಳನ ಆಳ್ವಿಕೆಯ ಕಾಲದ್ದಾಗಿದೆ. ಈ ಶಾಸನದ ಕಾಲಕ್ಕಾಗಲೇ ಕೆಲವು ಅಕ್ಷರಗಳು ಬದಲಾವಣೆ ಹೊಂದಿರುವುದು ಕಂಡುಬರುತ್ತದೆ.

ಉದಾಹರಣೆಗೆ, ಈ ಶಾಸನ ದಲ್ಲಿ ಬಂದಿರುವ 'ಕ' ಅಕ್ಷರವನ್ನು ಗಮನಿಸಿದಾಗ ಶಾಸನದ ಪ್ರಾರಂಭ ದಲ್ಲಿ ನಾವು ಕಾಣುವ ಅಕ್ಷರಕ್ಕೂ ಶಾಸನ ಮುಂದುವರಿದಂತೆ ಕಾಣುವ ಅಕ್ಷರಕ್ಕೂ ವ್ಯತ್ಯಾಸ ಕಾಣುತ್ತದೆ. ಶಾಸನದ ಮೊದಲಿನ 'ಕ' ಅಕ್ಷರವು ಹೊಯ್ಸಳರ ಕಾಲದ್ದಾಗಿದ್ದು, ಅಕ್ಷರದ ತಲೆಕಟ್ಟು ಬೇರೆಯಿರುತ್ತದೆ. ಆದರೆ, ನಂತರ ಕಾಣುವ 'ಕ' ಅಕ್ಷರದಲ್ಲಿ ತಲಕಟ್ಟಿನ ಕೆಳಗೆ ಒಂದು ಚಿಕ್ಕ ಗೆರೆಯನ್ನು ಬರೆದು ಅಕ್ಷರವು ಕೂಡಿಕೊಂಡು ನಮ್ಮ ಈಗಿನ ಲಿಪಿಗೆ ಹೋಲುತ್ತದೆ ಎಂದು ಹೇಳಬಹುದು.

ಮೊದಲು ಹೀಗಿದ್ದ ಸ್ವರೂಪ ನಂತರ ಈ ಸ್ವರೂಪ ವಾಗಿರುತ್ತದೆ.

---

* ಸ್ವಸ್ತಿಶ್ರೀ ಸ್ಕಂದ. ಅರಿಶಿನ ಕುಂಟೆ. ನೆಲಮಂಗಲ ತಾಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ–೫೬೨೧೨೩.

(ಚಿತ್ರ ೨)

(ಚಿತ್ರ ೨)

ಈ ಶಾಸನದ 'ಪ' ಅಕ್ಷರದಲ್ಲೂ ಕೂಡ ನಾವು ಬದಲಾವಣೆಯನ್ನು ಕಾಣಬಹುದು. ಶಾಸನದಲ್ಲಿ ಕಾಣುವ ಮೊದಲ 'ಪ' ಅಕ್ಷರವು ಅದರ ತಲಕಟ್ಟಿಗೆ ಕೂಡಿಕೊಂಡಿದ್ದು ಹೊಯ್ಸಳರ ಕಾಲದ್ದಾಗಿದೆ. ಆದರೆ, ಶಾಸನದ ಕೊನೆಯ 'ಪ' ಗಮನಿಸಿದಾಗ ಅಕ್ಷರವು ತಲೆಕಟ್ಟಿನೊಂದಿಗೆ ಬೇರ್ಪಟ್ಟಿರುತ್ತದೆ. ಇದನ್ನು ನಾವು ವಿಜಯನಗರ ಕಾಲದ 'ಪ' ಎಂದು ಹೇಳಬಹುದು. ಹೀಗಿದ್ದ ಬ ಸ್ವರೂಪ ಪ ಸ್ವರೂಪವಾಗಿದೆ.

ಮತ್ತೊಂದು ವಿಶೇಷತೆ ಎಂದರೆ, ಈ ಶಾಸನದಲ್ಲಾಗಲೇ ಹ ಅಕ್ಷರಕ್ಕೆ ಕೆಳಗೆ ಒಂದು ಗೆರೆಯನ್ನು ಎಳೆದು ಹೊಕ್ಕುಳನ್ನು ಸೀಳುವ ಪ್ರಯತ್ನ ನಡೆದಿದೆ.

**ಬುಕ್ಕರಾಯನ ಶಾಸನ, ಶ್ರವಣಬೆಳಗೊಳ, ಕಾಲ : ಕ್ರಿಶ. ೧೩೬೮**

ತೀರಾ ಅಪರೂಪಕ್ಕೆ ವಿಜಯನಗರ ಅರಸರ ಕಾಲದಲ್ಲಿಯೂ ಬಳಪದ ಕಲ್ಲಿನ ಫಲಕದ ಮೇಲೆ ಶಾಸನ ಬರೆದಾಗ ಅಕ್ಷರಗಳು ತಕ್ಕಮಟ್ಟಿಗೆ ಗುಂಡಾಗಿದ್ದು ಹೊಯ್ಸಳರ ಲಿಪಿಯನ್ನು ಹೋಲುವಂತಿರುವುದನ್ನು ಗಮನಿಸಬಹುದು. ಇದಕ್ಕೆ ಉದಾಹರಣೆಯಾಗಿ ಬುಕ್ಕರಾಯನ ಶಾಸನ ಇದೆ. ಈ ಶಾಸನವನ್ನು ಬಳಪದ ಕಲ್ಲಿನ ಮೇಲೆ ಕೊರೆದಿರುವುದರಿಂದ ಅಕ್ಷರಗಳು ಗುಂಡಾಗಿವೆ.

ಈ ಶಾಸನದಲ್ಲಿ ೧೧ ಸಾಲು ಗಳಿದ್ದು ೧ನೆಯ ಬುಕ್ಕರಾಯನ ಆಳ್ವಿಕೆಯ ಕಾಲದ್ದಾಗಿರುತ್ತದೆ. ಈ ಶಾಸನದ ಲಿಪಿಯು ಪೂರ್ತಿ ಯಾಗಿ ವಿಜಯನಗರ ಕಾಲದ ಲಿಪಿಯಾಗಿ ಬದಲಾಗಿಲ್ಲ ಮತ್ತು ಪೂರ್ತಿಯಾಗಿ ಹೊಯ್ಸಳರ ಲಿಪಿಯಲ್ಲೂ ಇಲ್ಲ. ಅಂದರೆ, ಈ ಶಾಸನದ ಕಾಲಕ್ಕೆ ಲಿಪಿಯು ಬೆಳವಣಿಗೆ ಹೊಂದುತ್ತಿತ್ತು ಎಂಬುದು ತಿಳಿಯುತ್ತದೆ.

ಉದಾಹರಣೆಗೆ ಈ ಶಾಸನದಲ್ಲಿ ಕಂಡುಬರುವ 'ಐ'ತ್ವ ಮತ್ತು 'ಇ'ತ್ವವನ್ನು ಹೊಯ್ಸಳರ ಕಾಲ ಮತ್ತು ವಿಜಯನಗರ ಕಾಲಗಳೆರಡರಲ್ಲೂ ಕಾಣಬಹುದು. ಇದು 'ಇ'ತ್ವ ವಾದರೆ, ಇದು 'ಐ'ತ್ವ. ಇಲ್ಲಿ ನಾವು ಗಮನಿಸಬೇಕಾದ ಅಂಶವೆಂದರೆ, ಇಲ್ಲಿ ನಾವು ಮೊದಲು ಕಾಣುವ ಗೆ ಅಕ್ಷರವು ವಿಜಯನಗರ ಕಾಲದ್ದಾಗಿದೆ. ಆದರೆ, ನಂತರ ಕಾಣುವ ಗೆ ಅಕ್ಷರವು ಹೊಯ್ಸಳರ ಕಾಲದ್ದಾಗಿರುತ್ತದೆ. ಇದರಿಂದ ನಮಗೆ ತಿಳಿಯುವುದು ಏನೆಂದರೆ, ಈ ಶಾಸನದ ಕಾಲಕ್ಕೆ ಲಿಪಿಯು ಪೂರ್ತಿಯಾಗಿ ಬದಲಾವಣೆಯನ್ನು ಹೊಂದಿರಲಿಲ್ಲ ಎಂದು.

ಕೇವಲ **ಗ** ಮಾತ್ರವಲ್ಲದೆ **ದ, ಪ** ಅಕ್ಷರಗಳು ಕೂಡ ಎರಡು ಸ್ವರೂಪದಲ್ಲಿವೆ. ಈ ಶಾಸನದಲ್ಲಿ ನಾವು ಕಾಣುವ ಮತ್ತೊಂದು ವಿಶೇಷವೆಂದರೆ **ಶ** ಅಕ್ಷರ. ಇಲ್ಲಿ ನಾವು ಮೂರು ರೀತಿಯ **ಶ** ಕಾಣಬಹುದು. ಈ ಶಾಸನದಲ್ಲಿ **ಡ** ಅಕ್ಷರವು ಬದಲಾಗಿದ್ದು ಈಗಿನ ಸ್ವರೂಪವನ್ನು ಪಡೆದುಕೊಂಡಿದೆ.

**ಕಟ್ಟಿಗೆ ಅಹಮದಖಾನನ ಶಾಸನ, ಹಂಪೆ, ಕಾಲ : ಕ್ರಿ.ಶ. ೧೪೩೦**

**(ಚಿತ್ರ ೪ : ಅಹಮದಖಾನನ ಶಾಸನ)**

ಈ ಶಾಸನವು ೫ ಸಾಲಿನದಾಗಿದ್ದು, ಪ್ರೌಢದೇವರಾಯನ ಆಡಳಿತ ಕಾಲದ್ದಾಗಿದೆ.

ಈ ಶಾಸನದಲ್ಲಿ ಲಿಪಿಯು ಪೂರ್ತಿಯಾಗಿ ವಿಜಯನಗರ ಕಾಲದ ಲಿಪಿಯಾಗಿ ಬದಲಾಗಿಲ್ಲ. ಈ ಶಾಸನದಲ್ಲಿ ನಾವು ಕಾಣುವ **ಪ** ಅಕ್ಷರವು ಹೊಯ್ಸಳರ ಕಾಲದ್ದೇ ಆಗಿರುತ್ತದೆ. ನಾವು ೩ನೇ ವೀರಬಲ್ಲಾಳನ ಶಾಸನವನ್ನು ಗಮನಿಸಿದಾಗ ಅಲ್ಲಿ ನಾವು ಎರಡು ಕಾಲದ **ಪ** ಅಕ್ಷರಗಳನ್ನೂ ಕಂಡಿದ್ದೆವು. ಆದರೆ, ಇಲ್ಲಿ ನಾವು ಕೇವಲ ಈ ರೀತಿಯ ಅಕ್ಷರವನ್ನು ಗಮನಿಸಬಹುದು.

ಆದರೆ, ಈ ಶಾಸನದಲ್ಲಿ ನಾವು ಗಮನಿಸುವ ಮತ್ತೊಂದು ವಿಶೇಷವೆಂದರೆ, **ಕ** ಅಕ್ಷರವು ಮತ್ತಷ್ಟು ಬೆಳೆದಿದ್ದು ತಲೆಕಟ್ಟಿನ ಕೆಳಗೆ ಇದ್ದ ಲಂಬ ರೇಖೆಯು ಡೊಂಕಾಗಿರುತ್ತದೆ. ಇದು ಪೂರ್ತಿಯಾಗಿ ವಿಜಯನಗರ ಕಾಲದ ಅಕ್ಷರ.

**ಹರದನಹಳ್ಳಿ ಶಾಸನ, ಕಾಲ : ಕ್ರಿ.ಶ. ೧೪೮೪**

ಈ ಶಾಸನವು ೧೫ ಸಾಲಿನದಾಗಿದ್ದು, ೩ನೆಯ ವಿರೂಪಾಕ್ಷನ ಆಳ್ವಿಕೆಯ ಕಾಲದ್ದಾಗಿರುತ್ತದೆ.

ಈ ಶಾಸನದ ಲಿಪಿಯು ಈಗಿನ ಲಿಪಿಗೆ ಹೆಚ್ಚು ಹೋಲುತ್ತದೆ. ಶಾಸನದ ಎಲ್ಲಾ ಅಕ್ಷರಗಳೂ ಬೆಳೆದಿವೆ. ಈ ಶಾಸನದಲ್ಲಿ ಅಕ್ಷರಗಳ ತಲೆಕಟ್ಟಿನ ಕೆಳಗೆ ಒಂದು ಚಿಕ್ಕ ಗೆರೆಯನ್ನು ಎಳೆಯುವ ಪ್ರಯತ್ನ ನಡೆದಿದೆ. ಇದು ನಮ್ಮ ಈಗಿನ ಲಿಪಿಯಂತೆಯೇ ಕಾಣುತ್ತದೆ.

ಉದಾಹರಣೆಗೆ **ಪ** ಅಕ್ಷರವು ಈ ರೀತಿಯಾಗಿ, ಇದೇ ರೀತಿ **ಸ, ಹ** ಅಕ್ಷರಗಳಲ್ಲೂ ಕೂಡ ಈ ರೀತಿಯ ಗೆರೆಯನ್ನು ನಾವು ಕಾಣಬಹುದು.



(ಚಿತ್ರ ೫)

ಕೇವಲ ಲಿಪಿ ಬದಲಾವಣೆಯನ್ನು ಮಾತ್ರವಲ್ಲದೆ ಈ ಶಾಸನದಲ್ಲಿ ನಾವು ಅನೇಕ ವಿಶೇಷತೆಗಳನ್ನು ಗಮನಿಸಬಹುದು. ಅಂದರೆ, ಒಂದೇ ಅಕ್ಷರವು ಎರಡು ರೀತಿ ಇರುವುದು ಮತ್ತು ಈ ಕಾಲದ ಆರಂಭದಲ್ಲಿದ್ದ ಲಿಪಿ ಮತ್ತು ನಂತರ ಬೆಳೆದ ಲಿಪಿ ಸ್ವರೂಪವನ್ನೂ ಕಾಣಬಹುದು. ಉದಾಹರಣೆಗೆ ಪಾ ಅಕ್ಷರವು ಈ ಶಾಸನದಲ್ಲಿ ಎರಡು ರೀತಿ ಯಲ್ಲಿದೆ. ಮತ್ತು ಭ ಅಕ್ಷರವೂ ಮತ್ತು ಈ ರೀತಿಯಾಗಿದೆ.

ಈ ಶಾಸನದಲ್ಲಿ ಕಾಣುವ ಮತ್ತೊಂದು ಬೆಳವಣಿಗೆ ಎಂದರೆ, ಶ ಮತ್ತು ಳ ಅಕ್ಷರಗಳು ಪ್ರಾರಂಭದಲ್ಲಿ ವಿಜಯನಗರದ ಆರಂಭ ಕಾಲದ ಲಿಪಿಯಾಗಿದ್ದು, ನಂತರ ಈ ಕಾಲದ ಕೊನೆಯ ಕಾಲದ ಲಿಪಿಯಾಗಿ ಬೆಳೆದಿರುತ್ತದೆ.

ಈ ಶಾಸನದಲ್ಲಿ ನಾವು ಹೊಯ್ಸಳರ ಲಿಪಿ ಸ್ವರೂಪವನ್ನು ಎಲ್ಲೂ ಕಾಣುವುದಿಲ್ಲ. ಈ ಕಾಲಕ್ಕೆ ವಿಜಯನಗರ ಲಿಪಿಯು ಪೂರ್ತಿಯಾಗಿ ಬದಲಾಗಿದೆ.

**ಮೂಡಬಿದರೆಯ ತಾಮ್ರಶಾಸನ**

**ಕಾಲ : ಕ್ರಿಶ. ೧೫೧೧**

ಈ ತಾಮ್ರಶಾಸನವು ೧೧ ಸಾಲುಗಳನ್ನೊಳಗೊಂಡಿದ್ದು ಕೃಷ್ಣದೇವ ರಾಯನ ಆಳ್ವಿಕೆಯ ಕಾಲದ್ದಾಗಿದೆ. ಇದು ತಾಮ್ರ ಶಾಸನವಾಗಿರುವುದರಿಂದ ಇದರ ಲಿಪಿ ಗುಂಡಗಿದೆ. ಈ ಶಾಸನದ ಎಲ್ಲಾ ಅಕ್ಷರಗಳೂ ವಿಜಯನಗರ ಕಾಲದ್ದೇ ಆಗಿರುತ್ತವೆ. ಆದರೆ ಪ ಮತ್ತು ಳ ಅಕ್ಷರಗಳು ಮಾತ್ರ ಹೊಯ್ಸಳರ ಲಿಪಿಯಂತೆ ಕಾಣುತ್ತವೆ.

ಈ ಶಾಸನದಲ್ಲಿ ಕಂಡುಬರುವ ಮತ್ತೊಂದು ಮುಖ್ಯ ಅಂಶವೆಂದರೆ, 'ಏ'ತ್ವ, ಈ ಶಾಸನದಲ್ಲಿ ಏತ್ವವು ಹೆಚ್ಚು ಬಾಗಿಕೊಂಡಿರುತ್ತದೆ. ಇದಕ್ಕೆ ಉದಾಹರಣೆಯೆಂದರೆ

**ಬಯಕಾರ ರಾಮಪ್ಪನ ಶಾಸನ, ಕಾಲ : ಕ್ರಿ.ಶ. ೧೫೫೪**



**(ಚಿತ್ರ ೬ : ಬಯಕಾರ ರಾಮಪ್ಪನ ಶಾಸನ)**

ಈ ಶಾಸನದಲ್ಲಿ ೭ ಸಾಲುಗಳಿವೆ. ಈ ಶಾಸನದ ಕಾಲದಲ್ಲಿ ಅಳಿಯ ರಾಮರಾಯನು ಆಳುತ್ತಿದ್ದನು.

ಈ ಶಾಸನದ ಅಕ್ಷರಗಳು ತುಂಬ ಒರಟಾಗಿದ್ದು ಇದರ ಲಿಪಿ ತೀರ ಕೆಟ್ಟದಾಗಿ ಕಾಣುತ್ತದೆ. ಆದರೆ, ಲಿಪಿಯ ದೃಷ್ಟಿಯಿಂದ ನೋಡಿದಾಗ ಈ ಶಾಸನದಲ್ಲಿ ನಾವು ಅನೇಕ ಬೆಳವಣಿಗೆಗಳನ್ನು ಕಾಣಬಹುದು. ಅಕ್ಷರಗಳ ಗಾತ್ರ ಹಿಂದಿನ ಶಾಸನಗಳಿಗಿಂತ ದೊಡ್ಡದಾಗಿದೆ. ಅಲ್ಲದೆ ಅವು ಗುಂಡಾಗಿರುವುದಕ್ಕಿಂತ ಕೋಲಾಕಾರದಲ್ಲಿವೆ.

ಈ ಶಾಸನದಲ್ಲಿ **ಕ, ಪ, ಸ, ಹ** ಅಕ್ಷರಗಳಲ್ಲಿ ತಲಕಟ್ಟಿನ ಕೆಳಗೆ ಗೆರೆಯ ಬದಲಿಗೆ ಒಂದು ಚಿಕ್ಕ ವೃತ್ತವು ಬಂದಿದೆ. ಉದಾಹರಣೆಗೆ : ಇದು ನಮ್ಮ ಈಗಿನ ಲಿಪಿಗೆ ಹೆಚ್ಚು ಹೋಲಿಕೆಯಾಗುವುದು. **ಭ** ಕಾರದ ರೂಪವು ಈ ಹಂತದಲ್ಲಿ **ಚ** ಕಾರದಂತೆ ಬೆಳೆದು ಅದರ ಕೆಳಗೆ ಹೊಕ್ಕುಳು ಸೀಳಿದೆ. **ಶ** ಕಾರವು ಈಗಿನ ರೂಪಕ್ಕೆ ಹತ್ತಿರವಾಗಿದೆ. **ಱ** ಕಾರವು ಈ ಕಾಲಕ್ಕೆ ರ ಸ್ವರೂಪವನ್ನು ಪಡೆದಿದೆ.

ಈ ಶಾಸನದ ಲಿಪಿಯು ಹೆಚ್ಚು ಕಡಿಮೆ ಈಗಿನ ಲಿಪಿಯನ್ನೇ ಹೋಲುತ್ತದೆ.

# ಆದಿಲ್‌ಶಾಹಿ ಕಾಲದ ಆಲಂಕಾರಿಕ ಲಿಪಿಶೈಲಿಗಳು

– ಎಂ.ವಿ. ವಿಶ್ವೇಶ್ವರ*

ಮುಸ್ಲಿಂ ಸಂಸ್ಕೃತಿ ಹಾಗೂ ಜನಾಂಗವು ಜಗತ್ತಿಗೆ ನೀಡಿದ ಅಮೂಲ್ಯ ಕಾಣಿಕೆ– ಪರಿಷ್ಕೃತ ಅಲಂಕರಣ ಲಿಪಿ. ಈ ಕಲೆಯನ್ನು ಅರಬ್ಬರು ರೂಢಿಸಿಕೊಂಡು ರೂಪಿಸಿದಂತೆ ಇನ್ನಾವ ಜನಾಂಗವೂ ಮಾಡಲಿಲ್ಲ. ಪ್ರಪಂಚದ ಯಾವುದೇ ಪ್ರದೇಶ, ಬರವಣಿಗೆಯ ಶೈಲಿಯನ್ನು ತನ್ನ ಸಂಸ್ಕೃತಿಯ ಒಂದು ಲಕ್ಷಣವಾಗಿಸಿಕೊಂಡು ಈ ಪರಿ ವೈವಿಧ್ಯಮಯವಾಗಿ ಅರಳಿಸಲಿಲ್ಲ. ಶ್ರದ್ಧಾಭಕ್ತಿಯಿಂದ ಗೌರವಿಸಿ ಆದರಿಸಲಿಲ್ಲ. ಅಂದದ ಬರವಣಿಗೆಯ ವ್ಯಾಮೋಹ ಅರಬರನ್ನು ಒಂದು ಗೀಳಾಗಿ, ವ್ಯಸನವಾಗಿ ದೊರೆಯಿಂದ ಫಕೀರ, ಕಡುಬಡವನವರೆಗೆ ಏಕ ಪ್ರಕಾರವಾಗಿ ಕಾಡಿತ್ತು. ವಿವಿಧ ಶೈಲಿಗಳಲ್ಲಿ ಪರಿಣತನಾದ ಕಲಾವಿದ ಯಾವುದೇ ರಾಜಾಸ್ಥಾನಕ್ಕೆ ಭೂಷಣ ಪ್ರಾಯನಾಗಿದ್ದ. ಇದನ್ನು ಎಲ್ಲ ಕಲೆಗಳ ಸಾರಸರ್ವಸ್ವವೆಂದು ಆ ಜನ ಭಾವಿಸಿದ್ದರು. 'ಅಂದದ ಬರವಣಿಗೆ ಸತ್ಯವನ್ನು ಶಾಶ್ವತವಾಗಿಸುತ್ತದೆ' ಮತ್ತು 'ಸುಂದರವಾದ ಲಿಪಿಯ ಸೂಕ್ತಿ ಬಡವರಿಗೆ ಜೀವನೋಪಾಯ, ಧನವಂತರು ಆಸೆಪಟ್ಟು, ಕೊಂಡು ಹೆಮ್ಮೆ ಪಡಬಹುದಾದ ಆಭರಣ ಹಾಗೂ ಅಭಿಜಾತ ಕಲಾವಿದರಿಗೆ ಪರಮಪದ ಸೋಪಾನ' ಎಂಬರ್ಥದ ನಾಣ್ಣುಡಿಗಳು ಪ್ರಚಲಿತವಿದ್ದವು.

ಇಸ್ಲಾಂ ಪೂರ್ವಕಾಲದ ಅರಬ್ ದೇಶದಲ್ಲಿ ಎರಡು ರೀತಿಯ ಬರವಣಿಗೆ ಬಳಕೆಯಲ್ಲಿದ್ದವು. ಮೊದಲನೆಯದು ಮೆದುವಾದ ಹದಮಾಡಿದ ಕುರಿಮರಿಯ ಚರ್ಮ, ಪಪ್ಪೈರಸ್, ತಾಳೆಗರಿ ಮುಂತಾದವುಗಳ ಮೇಲೆ ಬರೆಯಲಾಗುತ್ತಿದ್ದ ಉರುಟುರುಟಾದ ಲಿಪಿ. ಎರಡನೆಯದು ಒರಟು ಅಥವಾ ಮೃದು ಸಾಂದ್ರಕಣಗಳ ಕಲ್ಲಿನ ಫಲಕ, ಒಂಟೆಯ ಪಕ್ಕೆಲುಬು, ಬೆನ್ನು ಮೂಳೆಗಳಂತಹ ಗಟ್ಟಿ ಪದಾರ್ಥಗಳ ಮೇಲೆ ನೀಟಾದ ಲಂಬ, ಅಡ್ಡ ಹಾಗೂ ಕೋನದ ಗೀಟು, ಗೆರೆಗಳಾಗಿ ಬರೆಯಬಹುದಾಗಿದ್ದ ಲಿಪಿ. ಮೊದಲನೆಯದು ವೃತ್ತ ಹಾಗೂ ವೃತ್ತಭಾಗಗಳನ್ನು ಹೊಂದಿದ್ದು ಅಷ್ಟೇನೂ ಆಕರ್ಷಕವಾಗಿರಲಿಲ್ಲ. ಅದರೆ ಎರಡನೆಯ ಬರವಣಿಗೆ ವಿವಿಧ ಜ್ಯಾಮಿತೀಯ ಆಕಾರಗಳಲ್ಲಿದ್ದು ಲಯಬದ್ಧ ರೇಖೆಗಳ ವಿನ್ಯಾಸವಾಗಿ ನಯನಾನಂದಕರವಾಗಿತ್ತು. ಮೊದಲಿನಿಂದಲೂ ಗಣಿತ ಹಾಗೂ ಜ್ಯಾಮಿತಿಯ ಬಗೆಗೆ ಒಲವು ತೋರಿದ್ದ ಅರಬರು ಈ ಎರಡು ಲಿಪಿಗಳನ್ನು ವಿವಿಧ ಆಕರ್ಷಕ ಪ್ರಮಾಣದಲ್ಲಿ ಸಂಯೋಜಿಸಿ ತಮ್ಮ ಲಿಪಿಯನ್ನು ರೂಪಿಸಿದರು. ಯೆಮನ್‌ನಲ್ಲಿ ದೊರೆತಿರುವ ಅತಿಪ್ರಾಚೀನ ಶಾಸನವೊಂದರಲ್ಲಿರುವ ಇಂತಹ ಲಿಪಿ ತತ್ಸಮಕಾಲೀನ ಲಿಪಿಗಳಲ್ಲೆಲ್ಲ ಅತ್ಯಂತ ಸುಂದರವಾದುದೆಂಬ ಹೆಗ್ಗಳಿಕೆ ಹೊಂದಿದೆ.

ಒಂದು ರೀತಿಯಲ್ಲಿ ಆಲಂಕಾರಿಕ ಲಿಪಿಗಳ ಇತಿಹಾಸ ಇಸ್ಲಾಂ ಧರ್ಮದ ಉಗಮ, ಬೆಳವಣಿಗೆ ಹಾಗೂ ಪ್ರಸರಣದೊಂದಿಗೆ ಹಾಸುಹೊಕ್ಕಾಗಿದೆ. ಭಾರತವೂ ಸೇರಿದಂತೆ ಪಶ್ಚಿಮ ಹಾಗೂ ಮಧ್ಯ ಏಷಿಯಾ ರಾಷ್ಟ್ರಗಳಲ್ಲಿ ಈ ಧರ್ಮದ ನಿಷ್ಠಾವಂತ ಅನುಯಾಯಿಗಳಿರುವ ಎಲ್ಲೆಡೆ ಇಸ್ಲಾಂನ ಜೊತೆಜೊತೆಗೆ ವೈವಿಧ್ಯಮಯ ಲಿಪಿಶೈಲಿಗಳೂ ಅರಳಿ ಗೌರವದ ಸ್ಥಾನ ಪಡೆದಿವೆ. ಇಂತಹ ಬರಹದ ಉಲ್ಲೇಖ ವಿವರಗಳಿಲ್ಲದೆ ಈ ಪ್ರದೇಶಗಳ ಇತಿಹಾಸ, ಕಲೆ, ಸಂಸ್ಕೃತಿಗಳ ಚಿತ್ರಣ ಪೂರ್ಣವಾಗುವುದಿಲ್ಲ. ಪ್ರವಾದಿ ಮುಹಮ್ಮದರ ಕಾಣ್ಕೆಗೆ ಒದಗಿದ ಸ್ವತಃ ಅಲ್ಲಾನ ಹೇಳಿಕೆ, ಆದೇಶಗಳನ್ನು ನಿಖರವಾಗಿ, ನಿರ್ದುಷ್ಟವಾಗಿ ದಾಖಲಿಸಬೇಕಾದ ಅವಶ್ಯಕತೆಯಿಂದಾಗಿಯೇ ಇಸ್ಲಾಂ ಧರ್ಮದಲ್ಲಿ ಬರವಣಿಗೆಗೆ ಇನ್ನಿಲ್ಲದ ಪ್ರಾಮುಖ್ಯ, ಮನ್ನಣೆ ದೊರೆತವು. ಖುರಾನಿನ ಸೂಕ್ತಿಗಳನ್ನು ಅಂದದ ಬರವಣಿಗೆಯ ಮೂಲಕ ಅಮರವಾಗಿಸಲು ಆ ಧರ್ಮದ ಅನುಯಾಯಿಗಳು ಅತ್ಯಂತ ಶ್ರಮವಹಿಸಿದರು. ಪ್ರತಿ ಅಕ್ಷರ ರೇಖೆಯ ಉದ್ದ, ಅಗಲ, ತುದಿ ಬಾಗುವ ದಿಕ್ಕು, ಬಾಗು, ಬಳಕು, ತಿರುವು, ಸರಳ ರೇಖೆಗಳು ಉಂಟು ಮಾಡುವ ಕೋನ, ಅಕ್ಷರ, ಪದಗಳ ನಡುವಿನ ಅಂತರ ಇವೆಲ್ಲ ಒಟ್ಟಾಗಿ ಒಂದು ಲಿಪಿ ಶೈಲಿಯನ್ನು ರೂಪಿಸುತ್ತವೆ. ಬಗೆಬಗೆಯ ಜ್ಯಾಮಿತೀಯ ಆಕೃತಿಗಳು ನಾನಾ ರೀತಿಯಲ್ಲಿ ಕಲಾತ್ಮಕವಾಗಿ ಕಲೆತಾಗ ಉಂಟುಮಾಡುವ ಪರಿಣಾಮ ಮುದನೀಡುವಂತಹುದು.

---

* ಉಪ ಅಧೀಕ್ಷಕ ಪುರಾತತ್ತ್ವವಿದ, ಭಾರತೀಯ ಪುರಾತತ್ತ್ವ ಸರ್ವೇಕ್ಷಣೆ, ಹಂಪಿ ವಿಶ್ವಪರಂಪರಾ ತಾಣಗಳ ಮೇಲ್ವಿಚಾರಕರು, ಕಾಮಲಾಪುರ, ಹೊಸಪೇಟೆ.

ಈ ಎಲ್ಲ ಅಂಶಗಳ ಬಗೆಗೆ ಸಾಕಷ್ಟು ಪ್ರಯೋಗ ಮಾಡಿ, ಉದ್ದೇಶಿತ ಸಂದೇಶದ ಸಂವಹನ ಸಮರ್ಥವಾಗಿ, ಪರಿಣಾಮಕಾರಿಯಾಗಿ, ಅಷ್ಟೇ ಕಲಾತ್ಮಕವಾಗಿ ಆಗುವಂತೆ ಅನೇಕ ಲಿಪಿತಜ್ಞರು ಅನವರತ ದುಡಿದು ನಿರ್ದಿಷ್ಟ ನಿಯಮಗಳನ್ನು ರೂಪಿಸಿದ್ದಾರೆ. ಅರಬ್ಬಿ ಲಿಪಿಯ ಅಕ್ಷರಗಳ ಗಾತ್ರ, ಪ್ರಮಾಣ, ರೀತಿಗಳನ್ನು ವಿಧವಿಧವಾಗಿ ಸಂಯೋಜಿಸಿ ಅರಬ್ಬರು, ಪರ್ಷಿಯನ್‌ರು ಹಾಗೂ ಒಟ್ಟೊಮನ್ ತುರ್ಕರು ಹದಿನೆಂಟು ಮುಖ್ಯ ಶೈಲಿ ಮತ್ತು ಕೆಲವು ಉಪಶೈಲಿಗಳನ್ನು ಸೃಜಿಸಿ ಬಳಕೆಗೆ ತಂದಿದ್ದಾರೆ. ಆ ಜನರ ಅಂತರಂಗದಲ್ಲಿ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದ ಶ್ರದ್ಧಾವಂತ ಧಾರ್ಮಿಕ ಪ್ರಜ್ಞೆ, ಸೌಂದರ್ಯೋಪಾಸನಾ ಪ್ರವೃತ್ತಿ ಹಾಗೂ ಪರಿಪೂರ್ಣತಾವಾದಿ ಸ್ವಭಾವ ಇವು ಉದ್ದೀಪಕವಾಗಿ ಅಭಿವ್ಯಕ್ತಿಗೊಂಡು ಈ ಶೈಲಿಗಳನ್ನು ರೂಪಿಸಿವೆ. ಈ ಕಾರಣಗಳಿಂದಾಗಿಯೇ ಇಡೀ ಇಸ್ಲಾಂ ಜಗತ್ತಿನಲ್ಲಿ, ಖುರಾನಿನ ಪಾಠದಂತೆಯೇ ಪ್ರತಿ ಲಿಪಿಶೈಲಿಯೂ ಅತ್ಯಲ್ಪ ಬದಲಾವಣೆಯೂ ಇಲ್ಲದೆ ಏಕಪ್ರಕಾರವಾಗಿ ಬಳಕೆಯಾಗುತ್ತಿದೆ.

ಶಾಸ್ತ್ರೀಯವಾಗಿ ಲಿಪಿ ಶೈಲಿಯ ಅಧ್ಯಯನವಿಲ್ಲದೆ, ಸಾಕಷ್ಟು ಉದಾಹರಣೆ, ಮಾದರಿಗಳ ತುಲನಾತ್ಮಕ ಪರಿಶೀಲನೆ ಮಾಡದೇ ಈ ಕಲೆಯನ್ನು ಅರಿಯುವುದು, ಒಲಿಸಿಕೊಳ್ಳುವುದು ತೀರಕಷ್ಟ.

**ಆಲಂಕಾರಿಕ ಲಿಪಿಶೈಲಿಗಳು**

**೧. ಕೂಫೀ (ಕೂಫೀಕ್):** ಲಂಬ ಹಾಗೂ ಇತರ ಕೋನಗಳು ಪ್ರಧಾನವಾಗಿರುವ ದಪ್ಪಗೆರೆಯ ಅಕ್ಷರವುಳ್ಳ ಲಿಪಿ. ಪ್ರಾಚೀನ ಮೆಸೊಪೋಟೇಮಿಯಾದ ಕೂಫಿಯಾ ಪ್ರಾಂತದಲ್ಲಿ ಉಗಮಿಸಿದುದರಿಂದ ಈ ಹೆಸರು ಬಂದಿದೆ. ತ್ರಿಭುಜ, ಆಯತ, ಚೌಕಾಕಾರದ ಸಂಕೀರ್ಣ ಜಟಿಲ ಜ್ಯಾಮಿತೀಯ ಬಂಧಗಳಿಂದ ಕೂಡಿದ, ಕಸೂತಿಯನ್ನು ಹೋಲುವ ಬರವಣಿಗೆ ಪ್ರಾರಂಭ ಕಾಲದ ಈ ಶೈಲಿಯಲ್ಲಿ ಎದ್ದು ಕಾಣುವ ಲಕ್ಷಣ. ಮೊದ ಮೊದಲು ಬರೆದ ಖುರಾನಿನ ಪ್ರತಿಗಳಲ್ಲಿ ಇದನ್ನು ಹೆಚ್ಚಾಗಿ ಉಪಯೋಗಿಸಿದೆ. ಭಾರತದಲ್ಲಿ ದೆಹಲಿಯ ಕುತುಬ್ ಮೀನಾರ್, ಖುವ್ವತುಲ್ ಇಸ್ಲಾಂ ಮಸೀದಿ ಹಾಗೂ ಅಜ್ಮೀರದ ಅಢಾಯೀ–ದಿನ್–ಕಾ ಝೋಂಪ್ಡಾದ ಬರಹಗಳಲ್ಲಿ ಈ ಲಿಪಿ ಮೊದಲಬಾರಿಗೆ ಹೆಚ್ಚಾಗಿ ಕಂಡು ಬರುತ್ತದೆ. ಬಹಮನಿ ಕಾಲದಲ್ಲಿ ಕರ್ನಾಟಕಕ್ಕೆ ಪರಿಚಿತವಾದರೂ ಇದರ ಉದಾಹರಣೆಗಳು ಕಡಿಮೆಯೇ. ಬಿಜಾಪುರದ ನಾಭಿಪ್ರದೇಶವಾದ ಅರಸ್ ಮಹಲಿನ ಭಾಗವಾಗಿದ್ದ ಪಾನಿ ಮಹಲ್‌ನಲ್ಲಿ ಈ ಶೈಲಿಯ ಒಂದು ವೃತ್ತ ಫಲಕ ಶಾಸನವಿದೆ. ೧೪ನೆಯ ಶತಮಾನದ ಅನಂತರ ಈ ಲಿಪಿಯ ಪ್ರಭಾವ ಕ್ರಮೇಣ ಕಡಿಮೆಯಾಯಿತು.

**೨. ಮುಹಕ್ಕಕ್:** ಬಲಿಷ್ಠ ರೇಖೆಗಳ ಸಂಯೋಜನೆಯಿರುವ ಹೆಣೆದ ಅಕ್ಷರಗಳಿರುವ ಶೈಲಿ. ಅಕ್ಷರಗಳು ಎಡತುದಿಯಲ್ಲಿ ಒಂದಕ್ಕೊಂದು ಕೂಡಿರುತ್ತವೆ. ಉದ್ದನೆಯ ಹಾಳೆಯಲ್ಲಿ ತಯಾರಿಸಿದ ಖುರಾನ್ ಹಸ್ತಪ್ರತಿಗಳಲ್ಲಿ ಇದರ ಬಳಕೆಯಾಗಿದೆ.

**೩. ರಿಹಾನ್ (ರಿಹಾನಿ/ರಹಾನಿ/ರಿಹ್ಯಾನಿ):** ಮಲ್ಲಿಗೆಯಂತೆ ಸುವಾಸನೆ ಬೀರುವ ಲತೆ, ಹೂ ಬಳ್ಳಿಗಳಂತೆ ಬಾಗು ಬಳುಕುಗಳಿರುವ ಶೈಲಿ. ವಕ್ರರೇಖಾ ಪ್ರಧಾನವಾದ ಮುಹಕ್ಕಕ್ ಶೈಲಿಯ ಅಕ್ಷರಗಳನ್ನು ನಸ್ಖ್‌ನ ಗಾತ್ರದಲ್ಲಿ ಬರೆದಾಗ ಈ ಶೈಲಿಯಾಗುತ್ತದೆ.

**೪. ಥುಲ್ಥ್ (ಸುಲುಸ್):** ತ್ರಯಾಂಶ, ನೇರಗೀಟಿನ ಮುಖ್ಯ ಅಕ್ಷರಗಳ ಒಟ್ಟು ಎತ್ತರದ ಮೂರನೆಯ ಒಂದು ಭಾಗಕ್ಕೆ ಉಳಿದೆಲ್ಲ ಅಕ್ಷರಗಳನ್ನು ಸಂಯೋಜಿಸಿದ ಶೈಲಿ. ಇಸ್ಲಾಂ ಪ್ರಪಂಚದಾದ್ಯಂತ ಸಾರ್ವಕಾಲಿಕ ಮನ್ನಣೆಗಳಿಸಿದ ಅಪೂರ್ವ ಶೈಲಿ.

**೫. ನಸ್ಖ್:** ಸ್ಥಳಸಂಕೋಚನ, ಪೋಣಿಸುವಿಕೆ, ಅಕ್ಷರದ ತುದಿಗಳನ್ನು ಒಂದಕ್ಕೊಂದು ಜೋಡಿಸಿ ಬರೆಯುವ ಶೈಲಿ. ವಕ್ರರೇಖಾಪ್ರಧಾನವಾದ ದುಂಡಾದ ಅಕ್ಷರಗಳಿಂದ ಕೂಡಿರುವುದು. ಶಿಲಾಶಾಸನಗಳಲ್ಲಿ ಕೂಫಿಯ ಜೊತೆಜೊತೆಗೆ ಬಳಕೆಯಾಗುತ್ತಿದ್ದ ಲಿಪಿ. ಕುತುಬ್ ಮೀನಾರ್‌ನ ಅಲಂಕರಣದಲ್ಲಿ ದಪ್ಪ ಅಕ್ಷರದ ನಸ್ಖ್ ಬಳಸಿದೆ. ಸುಲಭ ಬರವಣಿಗೆಯಿಂದಾಗಿ ನಾಣ್ಯ, ಮುದ್ರೆ, ಅಧಿಕಾರವಲಯದ ಕಾರ್ಯಾಲಯ, ಆಡಳಿತದಾಖಲೆ ಮುಂತಾದ ಧಾರ್ಮಿಕೇತರ ಬರಹಗಳಿಗೆ ಹೆಚ್ಚು ಉಪಯೋಗವಾಗುತ್ತಿತ್ತು.

**೬. ತಾವಕೀ:** ಒತ್ತಿ ದುಂಡಾಗಿಸಿದ ಅಕ್ಷರಗಳಿರುವ ಶೈಲಿ. ಕೂಫೀಶೈಲಿಯಲ್ಲಿನ ಒಂದು ಉಪಭೇದವಾಗಿಯೂ, ಸುಲುಸ್‌ನಂತೆ ತ್ರಯಾಂಶದಲ್ಲಿಯೂ ಸಂಯೋಜಿಸಿ ಬರೆದುದು.

೭. ರಿಖಾ: ಸುಲುಸ್ ಹಾಗೂ ತಾವಕೀ ಶೈಲಿಗಳನ್ನು ಸಂಕ್ಷಿಪ್ತಗೊಳಿಸಿದ ಅವತರಣಿಕೆ. ಹಸ್ತಪ್ರತಿಗಳ ಪರಿಧಿಯಲ್ಲಿನ ಚೌಕಟ್ಟಿನ ಅಲಂಕರಣದಲ್ಲಿ ಹೆಚ್ಚಾಗಿ ಬಳಕೆಯಾಗುತ್ತದೆ. ಎದ್ದು ಕಾಣುವ ಉದ್ದ ಹಾಗೂ ಅಡ್ಡಗೀಟು ಪ್ರಧಾನವಾಗಿರುತ್ತವೆ.

೮. ದ್ಜಾಲೀ: ಯಾವುದೇ ಶೈಲಿಯ ಅತಿದೊಡ್ಡ ಗಾತ್ರದ ಅಕ್ಷರಗಳಿರುವ ಉಪಶೈಲಿ. ಸುಲುಸ್ ಶೈಲಿಯಲ್ಲಿ ಹೆಚ್ಚು ಬಳಸಲಾಗುತ್ತದೆ.

೯. **ಘುಬಾರಿ:** ಬರಿಗಣ್ಣಿಗೆ ಓದಲು ಕಷ್ಟವಾಗುವ, ಧೂಳಿನ ಕಣದಂತಹ ಅತಿ ಸಣ್ಣ ಅಕ್ಷರಗಳ ಶೈಲಿ. ಇಸ್ಲಾಂ ಧರ್ಮಾವಲಂಬಿ ಸೈನಿಕರು ಜೆಹಾದ್‌ಗೆ (ಧರ್ಮಯದ್ಧಕ್ಕೆ) ಹೊರಡುವಾಗ ತಮ್ಮ ಧ್ವಜದ ಅಂಚಿಗೆ ಕಟ್ಟುವುದಕ್ಕಾಗಿ ಅತಿ ಸಣ್ಣಗಾತ್ರದ ಖುರಾನಿನ ಪ್ರತಿ ತಯಾರಿಸುತ್ತಿದ್ದರು. ಅಂತಹ ಖುರಾನಿನಲ್ಲಿ ಈ ಶೈಲಿಯ ಉದಾಹರಣೆಗಳಿವೆ. ರಹಸ್ಯ ಸಂದೇಶಗಳ ಸಂವಹನೆಗೂ ಇದು ಉಪಯುಕ್ತವಾದ್ದು.

೧೦. **ಮುಸಲ್ ಸಾಲ್:** ಪೋಣಿಸಿದ ಹೂಮಾಲೆಯಂತಹ ಶೈಲಿ. ಸುಲುಸ್ ಶೈಲಿಯ ಅಕ್ಷರಗಳ ತುದಿಯಲ್ಲಿ ಒಂದಕ್ಕೊಂದು ಜೋಡಿಸಿ ಕಲ್ಪಿಸಿದ ಸಂಯುಕ್ತಾಕ್ಷರ ಶೈಲಿ. ಕಲಾವಿದರ ಕುಶಲತೆಗೆ ಸವಾಲೆಸೆಯುವಂತಹುದು. ಶ್ರೇಷ್ಠ ಕಲಾವಿದರು ಮಾತ್ರವೆ ಒಲಿಸಿಕೊಳ್ಳಬಹುದಾದ್ದು.

೧೧. **ಸಿಯಾಕತ್ (ಸಿಯಾಕ):** ಯಾವುದೇ ಶೈಲಿಯ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸದೆ ಬೇಗ ಬೇಗ ಬರೆದಾಗ ರೂಪುಗೊಳ್ಳುವ ಅಲಂಕಾರರಹಿತ ಶೈಲಿ. ಆಡಳಿತ ವ್ಯವಹಾರದ ದಾಖಲೆ, ಕಡತ, ಫರ್ಮಾನ್, ಸನದುಗಳಲ್ಲಿ ಬಳಸಲಾಗುವುದು.

೧೨. **ತಾಲೀಖ್ (ಇಳಿಬಿಡು, ಜೋತುಬೀಳು, ಜೊತೆಜೊತೆಯಾಗಿ ಇಳಿಬಿಟ್ಟಿದ್ದು):** ಅಕ್ಷರಗಳನ್ನು ಪರಸ್ಪರ ತುದಿಗಳಲ್ಲಿ ಸೇರಿಸಿರುವ ಸಂಯೋಜಿತಾಕ್ಷರ ಶೈಲಿ. ತಾವಕೀ, ರಿಖಾ, ನಸ್ಖ್ ಶೈಲಿಗಳ ಹದವರಿತ ಮಿಶ್ರಣ. ಶಿಕಸ್ತಾಲೀಖಿಕ್ಕಿಂತ ಸುಲಭವಾಗಿ ಬರೆಯಬಹುದಾದ್ದು.

೧೩. **ಶಿಕಸ್ತಾಲೀಖ್ (ಶಿಕಸ್ತಾ):** ತುಂಡು ತುಂಡಾದ ತಾಲೀಖ್ ಶೈಲಿಯನ್ನು ಶೀಘ್ರವಾಗಿ ಬರೆದಾಗ ಈ ಶೈಲಿ ರೂಪುಗೊಳ್ಳುತ್ತದೆ. ಸಾಕಷ್ಟು ಅಭ್ಯಾಸ, ಪರಿಣತಿ ಇಲ್ಲದೆ ಇದನ್ನು ಓದಲಾಗದು. ಸಾಹಿತ್ಯ ಕೃತಿ, ಆಡಳಿತದ ವ್ಯವಹಾರಗಳಲ್ಲಿ ಇದರ ಬಳಕೆ ಹೆಚ್ಚು. ಕ್ರಮೇಣ ನಸ್ತಾಲೀಖ್ ಈ ಶೈಲಿಯ ಸ್ಥಾನವನ್ನು ಆಕ್ರಮಿಸಿತು.

೧೪. **ತರಸ್ಸುಲ್ (ವ್ಯಾವಹಾರಿಕ):** ದೀವಾನ್–ಇ–ಆಮ್ ಹಾಗೂ ದೀವಾನ್–ಇ–ಖಾಸ್‌ಗಳಲ್ಲಿ ನಡೆಯುವ ದೈನಂದಿನ ಕಲಾಪಗಳನ್ನು ದಾಖಲಿಸುವ ಹಾಗೂ ಉಕ್ತಲೇಖನಕ್ಕಾಗಿ ಅಲ್ಲಿನ ಅಧಿಕಾರಿಗಳು ಶಿಕಸ್ತಾ ಹಾಗೂ ತಾಲೀಖ್ ಶೈಲಿಯ ಲಿಪಿಯನ್ನು ಇನ್ನಷ್ಟು ಪರಿಷ್ಕರಿಸಿ, ಸಂಕ್ಷೇಪಿಸಿ ರೂಪಿಸಿದ ಶೈಲಿ. ಒಂದು ರೀತಿಯ ಶೀಘ್ರಲಿಪಿ.

೧೫. **ನಸ್ಖ್–ಇ–ತಾಲೀಖ್ (ನಸ್ತಾಲೀಖ್):** ನಸ್ಖ್ ಹಾಗೂ ತಾಲೀಖ್ ಎರಡರ ಸಂಯೋಜನೆಯಿಂದ ಕಲ್ಪಿಸಿದ ಹೊಸ ಶೈಲಿ. ಇದರಲ್ಲಿ ಎರಡು ಮುಖ್ಯ ಉಪಶೈಲಿಗಳಿವೆ. ಮಿರ್ಜಾ ಜಾಫರ್ ತಾಬ್ರಿಜೀ ಹಾಗೂ ಅಝುರ್ ತಾಬ್ರಿಜೀ ಎಂಬ ಲಿಪಿತಜ್ಞರು ೧೫ನೆಯ ಶತಮಾನದಲ್ಲಿ ಖುರಾಸಾನ್ ಪ್ರದೇಶದಲ್ಲಿ ರೂಪಿಸಿ ರೂಢಿಗೆ ತಂದದ್ದು ಹಾಗೂ ಅಬ್ದುಲ್ ರಹಮಾನ್ ಬರ್ಜಾಮೀ ಸುಮಾರು ಅದೇ ಕಾಲದಲ್ಲಿ ಪಶ್ಚಿಮ ಪರ್ಷಿಯಾ ಪ್ರದೇಶದಲ್ಲಿ ರೂಪಿಸಿದ್ದು. ಮೊದಲನೆಯದು ಪರ್ಷಿಯನ್ನರ ಮನ್ನಣೆಗೆ ಪಾತ್ರವಾಗಿ ಖುರಾಸಾನೀ ಶೈಲಿಯೆಂದೇ ಪ್ರಸಿದ್ಧವಾಗಿ ಎಲ್ಲೆಡೆ ಹರಡಿತು. ಭಾರತದಲ್ಲೂ ಬಹುಪ್ರಚಲಿತ ಶೈಲಿ.

೧೬. **ಶಿಕಸ್ತಾ–ನಸ್ತಾಲೀಖ್ (ಖತ್–ಇ–ಶಿಕಸ್ತಾ):** ೧೭ನೆಯ ಶತಮಾನದಲ್ಲಿ ಸಫಾವಿದರ ಆಳುವಿಕೆಯಲ್ಲಿ ನಸ್ತಾಲೀಖ ಅನ್ನು ಶೀಘ್ರವಾಗಿ ಬರೆಯಲು ರೂಪುಗೊಂಡ ಶೈಲಿ. ಕವಿತೆ, ಸಾಹಿತ್ಯ, ಕೃತಿ, ಖುರಾನ್ ಮುಂತಾದ ಹಸ್ತಪ್ರತಿಗಳಲ್ಲಿ ಹಾಗೂ ಮುಖ್ಯ ಪತ್ರವ್ಯವಹಾರಿಕ ದಾಖಲೆಗಳ ರಚನೆಯಲ್ಲಿ ಹೆಚ್ಚು ಬಳಕೆಗೊಂಡಿದೆ. ಆದಿಲ್ ಶಾಹಿ ಕಾಲದಲ್ಲಿಯೂ ಹಸ್ತಪ್ರತಿ, ಶಾಸನಗಳ ರಚನೆಯಲ್ಲಿ ನಸ್ತಾಲೀಖ್, ಆಡಳಿತ ದಾಖಲೆ, ಪತ್ರಲೇಖನ, ಫರ್ಮಾನ್, ಸನ್ನದ್‌ಗಳ ರಚನೆಯಲ್ಲಿ ಶಿಕಸ್ತಾ ನಸ್ತಾಲೀಖ್ ಬಳಕೆಯಾಗಿದೆ.

**೧೭. ತಾಹ್ರೀರೀ (ಪತ್ರಲೇಖನ ಲಿಪಿ):** ಶಿಕಸ್ತಾ-ನಸ್ತಾಲೀಖ್‌ನ ಇನ್ನಷ್ಟು ಸರಳ ಅವತರಣಿಕೆ. ಪತ್ರ ವ್ಯವಹಾರ, ದಾಖಲೆಗಳಲ್ಲಿ ಹೆಚ್ಚು ಬಳಕೆ. ಓದಲು ಸಾಕಷ್ಟು ಪರಿಣತಿಯ ಅವಶ್ಯಕತೆಯಿದ್ದುದರಿಂದ ರಹಸ್ಯ ಸಂದೇಶಗಳ ರವಾನೆಗೆ ಸೂಕ್ತವಾದ್ದು.

**೧೮. ಮುಥನ್ನಾ (ಖತ್-ಇ-ಮುಥನ್ನಾ) (ಪರಸ್ಪರ ಎದುರಾಗಿರುವ):** ಯಾವುದೇ ಶೈಲಿಯ ಅಕ್ಷರ, ಪದಪುಂಜಗಳನ್ನು ವಿವಿಧ ಅಕ್ಷಗಳಲ್ಲಿ ಪರಸ್ಪರ ಬಿಂಬ ಪ್ರತಿಬಿಂಬದಂತೆ ಸಂಯೋಜಿಸಿ ಆಕರ್ಷಕ ಚಿತ್ರಗಳನ್ನು ರೂಪಿಸುವುದು. ವಿಶೇಷವಾಗಿ ಸುಲುಸ್ ಹಾಗೂ ಕೂಫೀ ಶೈಲಿಯನ್ನು ಈ ಪ್ರಕಾರದಲ್ಲಿ ಬರೆಯಲಾಗುತ್ತದೆ. ನಸ್ತಾಲೀಖ್‌ನಲ್ಲಿಯೂ ಕೆಲವು ಉದಾಹರಣೆಗಳಿವೆ.

ಈ ಮೇಲೆ ಹೇಳಿರುವ ಶೈಲಿಗಳಲ್ಲದೆ, ಇವೇ ಲಿಪಿಗಳನ್ನು ಚಿತ್ರ ವಿಚಿತ್ರವಾಗಿ ರೂಪಾಂತರಿಸಿ ಕಲ್ಪಿಸಿದ ಕೆಲವು ಉಪಶೈಲಿಗಳಿವೆ.

**೧. ತುಘ್ರಾ:** ನಸ್ಖ್ ಅಥವಾ ಸುಲುಸ್ ಲಿಪಿಯ ಅಕ್ಷರಗಳನ್ನು ಹತ್ತಿರ ಹತ್ತಿರವಾಗಿ, ಕೆಲವೊಮ್ಮೆ ಒಂದರ ಮೇಲೊಂದು ಮೂಡಿಸಿ ಅಥವಾ ಒಂದಕ್ಕೊಂದು ಪೋಣಿಸಿ ವಿಶೇಷ ವಿನ್ಯಾಸದಲ್ಲಿ ಬರೆದ ಶೈಲಿ. ಮುಘಲರಗಿಂತ ಮೊದಲು ಬಂಗಾಳದಲ್ಲಿ ಹೆಚ್ಚಾಗಿ ಪ್ರಚಲಿತವಾಗಿತ್ತು. ಮೇಲ್ತುದಿಯನ್ನು ಬಾಣದಂತೆ ರೂಪಿಸಿದ ನೇರಗೀಟು, ಬಿಲ್ಲಿನಾಕಾರದ ಅಡ್ಡಗೀಟುಗಳಿರುವ ಬಿಲ್ಲು-ಬಾಣ, ಧ್ವಜ ಹಿಡಿದು ಮೆರವಣಿಗೆ ಹೊರಟ ಸೇನಾದಳದಂತೆ ವಿನ್ಯಾಸ ಮಾಡಿರುವ ಅಕ್ಷರಗಳಿರುತ್ತವೆ. ಕೆಲವೊಮ್ಮೆ ಸಿಂಹ, ಗಿಳಿ, ಮನುಷ್ಯ ಮುಂತಾದ ರೂಪಗಳಲ್ಲಿಯೂ, ಆಕರ್ಷಕ ಜ್ಯಾಮಿತೀಯ ವಿನ್ಯಾಸದ ಬಂಧಗಳಲ್ಲಿಯೂ ಸಂಯೋಜನೆಯಿರುತ್ತದೆ. ಈ ಶೈಲಿಯ ಆಕರ್ಷಣೆ ಹಾಗೂ ಗಾಂಭೀರ್ಯಗಳಿಂದಾಗಿ ಸಾಮ್ರಾಟರ ಹೆಸರಿನ ರಾಜಮುದ್ರೆಗಳಲ್ಲಿ, ಆಭರಣ, ಚಿನ್ನದ ನಾಣ್ಯ, ಹಡಗು, ಫಿರಂಗಿಗಳ ಮೇಲೆ ಸಾರ್ವಭೌಮತ್ವದ ಅಧಿಕೃತತೆಯನ್ನು ಸಾರುವ ಚಿಹ್ನೆಗಳಾಗಿ ಬಳಸಲಾಗುತ್ತಿತ್ತು.

**೨. ರೇಸಿಂ ಯಾಜೀ:** ಅಕ್ಷರಗಳ ವಿಶೇಷ ಸಂಯೋಜನೆಯಿಂದ ಮನುಷ್ಯ, ಪಶು, ಪಕ್ಷಿ, ಜ್ಯಾಮಿತೀಯ ಬಂಧ. ಹೂವು ಮುಂತಾದ ಆಕೃತಿಗಳನ್ನು ರೂಪಿಸುವ ಶೈಲಿ.

**೩. ಖತ್-ಇ-ಮುಅಮ್ಮಾಇ:** ಯಾವುದೇ ಆಲಂಕಾರಿಕ ಲಿಪಿ ಶೈಲಿಯಲ್ಲಿ ಬರೆದ ಪದಪುಂಜಗಳನ್ನು- ವಿಶೇಷವಾಗಿ ಹಡಿತ್, ಖುರಾನಿನ ಸೂಕ್ತಿ, ಕಾವ್ಯಮಯವಾದ ದ್ವಿಪದಿಗಳನ್ನು ಚಿತ್ರ ವಿಚಿತ್ರವಾದ ಬಂಧಗಳಲ್ಲಿ ಸಂಯೋಜಿಸಿ ಬರೆದುದು.

**೪. ಖತ್-ಇ-ಪದ್ಜಾರೀ (ವೃಕ್ಷರೂಪಲೇಖ):** ಸಂಯೋಜಿತಾಕ್ಷರಗಳನ್ನು ಮರದ ಕಾಂಡ, ಕೊಂಬೆ, ಎಲೆ, ಹೂ ಹಣ್ಣುಗಳಾಗಿ ಮಾರ್ಪಡಿಸಿ ಹೆಣೆದಿರುವ ಶೈಲಿ. ಸುಲುಸ್ ಲಿಪಿ ಈ ಶೈಲಿಗೆ ಸೂಕ್ತವಾದ್ದು. ಹಸ್ತಪ್ರತಿಗಳ ಮುಖ ಪುಟ (ಉನ್ವಾನ್)ವನ್ನು ಸಿಂಗರಿಸಲು ಈ ಶೈಲಿಯನ್ನು ಬಳಸಲಾಗುತ್ತದೆ.

**೫. ಖತ್-ಇ-ಸುನ್‌ಬುಲೀ:** ತುರ್ಕಿಸ್ಥಾನದ ಸುಪ್ರಸಿದ್ಧ ಆಲಂಕಾರಿಕ ಲಿಪಿತಜ್ಞ ಆರಿಫ್ ಹಿಕ್ಮೆತ್ ತೀರ ಇತ್ತೀಚೆಗೆ (೧೯೧೮) ರೂಪಿಸಿದ ಈ ಶೈಲಿಯಲ್ಲಿ ಸಂಯೋಜಿತಾಕ್ಷರಗಳು ಬಣ್ಣ ಬಣ್ಣದ ಗಂಟೆಯಾಕಾರದ ಹೂಬಿಡುವ (ಹಯಾಸಿಂಥ್) ಸಸ್ಯದಂತೆ ರೂಪಿತವಾಗಿರುತ್ತವೆ. ದಿವಾನೀ ಶೈಲಿಯ ಅಕ್ಷರಗಳನ್ನು ಮಾರ್ಪಡಿಸಿ ಈ ಶೈಲಿಯಲ್ಲಿ ಬಳಸಲಾಗುತ್ತದೆ.

**೬. ಆಲೆವ್-ಯಾಜೀಸೀ (ಅಗ್ನಿಜ್ವಾಲಾಲೇಖ):** ಇನ್ನೂ ಈಚಿನ ದಶಕಗಳಲ್ಲಿ ತುರ್ಕಿಸ್ಥಾನದ ಇನ್ನೊಬ್ಬ ಖ್ಯಾತ ಲಿಪಿತಜ್ಞ ಇಸ್ಮಾಯಿಲ್ ಹಕ್ಕೀ ಬಲ್ತಡಿಯೋಘ್ಲು ರೂಪಿಸಿದ ಈ ಶೈಲಿಯಲ್ಲಿ ಅಕ್ಷರ ಹಾಗೂ ಅದರ ಭಾಗಗಳು ಮೇಲ್ಮುಖವಾದ ಬೆಂಕಿಯ ಕೆನ್ನಾಲಗೆಗಳಂತೆ ಕಾಣುತ್ತವೆ.

ಅತ್ಯಂತ ಜನಪ್ರಿಯವಾದ ಕೂಫಿ, ನಸ್ಖ್, ಸುಲುಸ್, ತುಘ್ರಾ, ನಸ್ತಾಲೀಖ್, ರಿಖಾ(ಕೆಲವರ ಪ್ರಕಾರ ಖತ್-ಇ-ಘುಬಾರ್ ಅಥವಾ ಘುಬಾರಿ) ಮತ್ತು ಶಿಕಸ್ತಾಲೀಖ್(ಶಿಕಸ್ತಾ) ಈ ಏಳು ಸಪ್ತಲೇಖ ಅಥವಾ ಸಪ್ತಲಿಪಿಶೈಲಿ( ಹಫ್ತ್ ಕಲಮ್)ಗಳೆಂದೇ ಪ್ರಸಿದ್ಧವಾಗಿವೆ. ಮೇಲೆ ಹೇಳಿದ ಶೈಲಿ ಉಪಶೈಲಿಗಳಲ್ಲಿ ಎದ್ದುಕಾಣುವ ಮುಖ್ಯ ಲಕ್ಷಣಗಳನ್ನು ಆಧರಿಸಿ ಮೇಲೆ ಹೇಳಿರುವ ಶೈಲಿ, ಉಪಶೈಲಿಗಳನ್ನು ಕೆಳಕಾಣಿಸಿದಂತೆ ಆರು ಗುಂಪುಗಳಾಗಿ ವಿಂಗಡಿಸಬಹುದು.

೧. ದಪ್ಪಗೆರೆಯ ಜ್ಯಾಮಿತೀಯ ಬಂಧವೇ ಪ್ರಧಾನವಾಗಿರುವ-ಕೂಫೀಕ್ ಇತ್ಯಾದಿ

೨. ಲಂಬ ಹಾಗೂ ಅಡ್ಡ ಗೆರೆಗಳು ಪ್ರಧಾನವಾಗಿರುವ-ರಿಖಾ ಇತ್ಯಾದಿ

೩. ಕೋಮಲ ಬಾಗುಬಳುಕುಗಳಿರುವ ವೃತ್ತ ಭಾಗಗಳು ಪ್ರಧಾನವಾಗಿರುವ-ನಸ್ಖ್, ಶಿಕಸ್ತಾ, ಇತ್ಯಾದಿ

೪. ೧, ೨ ಹಾಗೂ ೩ರ ಲಕ್ಷಣಗಳನ್ನು ವಿವಿಧ ಪ್ರಮಾಣದಲ್ಲಿ ಸಂಯೋಜಿಸಿ ರೂಪಿಸಿದ ಸಂಯುಕ್ತ ಶೈಲಿಯ-ನಸ್ತಾಲೀಖ್, ತಾಲೀಖ್ ಇತ್ಯಾದಿ

೫. ಶೈಲೀಯ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸದೆ ವೇಗವಾಗಿ ಬರೆಯಲು ಅನುವಾಗುವಂತೆ ಅಕ್ಷರಗಳನ್ನು ರೂಪಾಂತರಿಸಿ ಕಲ್ಪಿಸಿದ ಶೀಘ್ರ ಲಿಪಿಗಳು-ಘುಬಾರ್, ತರಸ್ಸುಲ್, ಶಿಕಸ್ತಾ ಇತ್ಯಾದಿ

೬ ಚಿತ್ರಲಿಪಿ ಪ್ರಕಾರಗಳು-ತುಘ್ರಾ, ಖತ್-ಇ-ಮುಥನ್ನಾ ಇತ್ಯಾದಿ.

**ಆದಿಲ್‌ಶಾಹಿ ಕಾಲದಲ್ಲಿ ಆಲಂಕಾರಿಕ ಲಿಪಿಶೈಲಿಗಳ ಉಗಮ ಹಾಗೂ ಪ್ರಸರಣ**

ಇಸ್ಲಾಂ ಧರ್ಮ ಹಾಗೂ ಆಡಳಿತ ಭಾರತಕ್ಕೆ ಬಂದು ವಿವಿಧ ಪ್ರಾಂತ್ಯಗಳಲ್ಲಿ ನೆಲೆಗೊಂಡುದುದರ ಜೊತೆ ಜೊತೆಗೆ ಈ ಶೈಲಿಗಳಲ್ಲಿ ಮುಖ್ಯವಾದವು ಇಲ್ಲಿಯೂ ಹರಡಿದವು. ಬಿಜಾಪುರದ ಆದಿಲ್‌ಶಾಹಿಗಳು ಒಟ್ಟೋಮನ್ ತುರ್ಕರ ಸಂತತಿಯವರಾದುದರಿಂದ ಅಲ್ಲಿ ಪ್ರಚಲಿತವಿದ್ದ ಕೆಲವು ಶೈಲಿಗಳು ನೇರವಾಗಿ ಬಿಜಾಪುರವನ್ನು ತಲುಪಿದವು.

ಭಾರತದ ಮೊಟ್ಟಮೊದಲ ಅರಾಬಿಕ್ ಶಾಸನ ಕೇರಳದ ತಿರುವನಂತಪುರದ ಬಳಿಯಿರುವ ಕೋಯಲಮ್ ಗ್ರಾಮದಲ್ಲಿರುವ ಹಳೆಯ ಮಸೀದಿಯಲ್ಲಿದೆ. ಮೂರು ಸಾಲಿನ ಪ್ರಾಚೀನ ಒರಟು ರೀತಿಯ ನಸ್ಖ್ ಶೈಲಿಯಲ್ಲಿ ಬರೆದಿರುವ ಈ ಬರಹ ಹಿಶ ೧೬೯ (ಕ್ರಿ.ಶ. ೭೮೬)ರದ್ದು. ಬರೆದಾತ ಮಲಿಕ್ ದೀನಾರನ ಮಗ ಇಸ್ಮಾಯಿಲ್. ಅಂದಿನಿಂದ ಇಂದಿನವರೆಗೆ ಹೊಸ ಹೊಸ ಶಾಸನಗಳ ಶೋಧ, ಅನುಶೀಲನೆ, ಪುನಃ ಪರಿಶೀಲನೆ ಮುಂತಾದ ಸಂಶೋಧನಾಕಾರ್ಯ ಅವಿರತವಾಗಿ ನಡೆಯುತ್ತಲಿದೆ. ಆದರೆ ಶಾಸನಗಳ ಶೈಲೀಯ ಅಧ್ಯಯನ, ಆಲಂಕಾರಿಕ ಲಿಪಿಗಳ ವಿಶೇಷ ಅಧ್ಯಯನ ಇನ್ನೂ ಹೆಚ್ಚಾಗಿ ನಡೆದಿಲ್ಲ.

ಆಲಂಕಾರಿಕ ಲಿಪಿಶೈಲಿಗಳು ಪ್ರಾರಂಭದಲ್ಲಿ ತುರ್ತು ಧಾರ್ಮಿಕ ಅವಶ್ಯಕತೆಯಾಗಿ ರೂಪುಗೊಂಡರೂ, ಕ್ರಮೇಣ ಎಲ್ಲ ದೈನಂದಿನ ರಂಗಗಳನ್ನೂ ವ್ಯಾಪಿಸಿದವು. ವಾಸ್ತು- ವಿಶೇಷವಾಗಿ ಧಾರ್ಮಿಕ ವಾಸ್ತು-ಭಾಗಗಳು, ರಾಜ ಅಧಿಕಾರಗಳ ಮುದ್ರೆ, ಮರ, ಕಲ್ಲು, ಲೋಹ, ಬಟ್ಟೆ, ಕಾಗದಗಳಿಂದ ತಯಾರಾದ ನಿತ್ಯ ಬಳಕೆಯ ವಸ್ತು ಇವೆಲ್ಲದರ ಮೇಲೆ ನಾನಾ ಶೈಲಿಗಳಲ್ಲಿ ಬರೆದ ಉದಾಹರಣೆ ದೊರೆಯುತ್ತವೆ. ನಸ್ಖ್, ನಸ್ತಾಲೀಖ್, ರಿಖಾ, ಸುಲುಸ್ (ಥುಲ್ಥ್) ಹಾಗೂ ತುಘ್ರಾ ಶೈಲಿಗಳು ಆದಿಲ್‌ಶಾಹಿ ಕಾಲದಲ್ಲಿ ಬಳಕೆಯಲ್ಲಿದ್ದರೂ, ನಸ್ತಾಲೀಖ್ ಹಾಗೂ ಶಿಕಸ್ತಾ ಅಂದಿನ ಪ್ರಧಾನ ಶೈಲಿಗಳು.

ಭಾರತದಲ್ಲಿ ೧೨ನೆಯ ಶತಮಾನದ ಅನಂತರ ಇಸ್ಲಾಂ ಆಡಳಿತ, ಧರ್ಮ ಬಲಗೊಂಡವು. ಕ್ರಮೇಣ ಭವ್ಯ ಕಟ್ಟಡಗಳ ನಿರ್ಮಾಣ ಆರಂಭವಾಯಿತು. ಕಲ್ಲು, ಮರ, ಕೊರೆದ ಗಾರೆ, ಬಣ್ಣದ ಹೆಂಚು, ನಾನಾ ರೀತಿಯ ಅರೆಪ್ರಶಸ್ತಶಿಲೆ, ಕಪ್ಪೆ ಚಿಪ್ಪುಗಳಿಂದ ಮಾಡಿದ ಕುಶಲಕುಂದಣಕಲೆ ಮುಂತಾದ ವಿವಿಧ ಸಾಮಗ್ರಿಗಳನ್ನು ಬಳಸಿ ಖುರಾನಿನ ಪ್ರಸಿದ್ಧ ಸೂಕ್ತಿ, ಕಾಲಲೇಖಗಳನ್ನು ಒಳಗೊಂಡ ದಪ್ಪ ಆಲಂಕಾರಿಕ ಲಿಪಿಯ ಮೂಲಕ ಕಟ್ಟಡಗಳ ಸೌಂದರ್ಯ, ಭವ್ಯತೆಯನ್ನು ಹೆಚ್ಚಿಸುವ ಕಾರ್ಯ ಮೊದಲಾಯಿತು. ಇಸ್ಲಾಂ ಪ್ರಪಂಚದಲ್ಲಿ ಪ್ರಸಿದ್ಧವೂ, ಜನಪ್ರಿಯವೂ ಆದ, ವಿವಿಧ ಲಿಪಿಗಳಲ್ಲಿ ಬರೆದ ಇಂತಹ ಸಾವಿರಾರು ಶಾಸನಗಳು ಭಾರತದ ಹಲವು ಪ್ರದೇಶ, ಕಾಲಗಳ ಧಾರ್ಮಿಕ, ಸಾಮಾಜಿಕ ಹಾಗೂ ರಕ್ಷಣಾ ವ್ಯವಸ್ಥೆಯ ಕಟ್ಟಡಭಾಗಗಳು ಮತ್ತಿತರ ಅನೇಕ ವೈವಿಧ್ಯಮಯ ಸ್ಥಳಗಳಲ್ಲಿ ದೊರೆಯುತ್ತವೆ.

ಬಹಮನಿ ಸುಲ್ತಾನರ ಪ್ರಾಂತ್ಯಾಧಿಕಾರಿಯಾಗಿದ್ದು, ಅನಂತರ ಸ್ವತಂತ್ರನಾದ ಯೂಸುಫ್ ಆದಿಲಖಾನ್ (ಕ್ರಿ.ಶ. ೧೪೮೯) ಆದಿಲ್‌ಶಾಹಿ ರಾಜವಂಶವನ್ನು ಸ್ಥಾಪಿಸಿ, ಬಿಜಾಪುರವನ್ನು ತನ್ನ ರಾಜಧಾನಿಯಾಗಿಸಿಕೊಂಡ. ಈ ಪ್ರಾಂತೀಯ ರಾಜಮನೆತನದ ಅರಸರು ದಖ್ಖನ್ನಿನ ಬಹುಭಾಗವನ್ನು ಎರಡು ಶತಮಾನಗಳ ಕಾಲ (ಕ್ರಿ.ಶ. ೧೪೮೯-೧೬೮೬) ಸಾಕಷ್ಟು ವೈಭವದಿಂದ ಆಳಿದರು. ಅಪ್ರತಿಮ ಯೋಧರೂ, ಸಮರ್ಥ ಆಡಳಿತಗಾರರೂ ಆದ ಆದಿಲ್‌ಶಾಹಿ ಅರಸರು ಎಲ್ಲ ರೀತಿಯ ಕಲಾಪ್ರಕಾರಗಳನ್ನು ಆಸಕ್ತಿವಹಿಸಿ ಪೋಷಿಸಿದರು. ಇವರ ಆಡಳಿತದಲ್ಲಿ ವಿಶಿಷ್ಟ ವಿನ್ಯಾಸದ ವಾಸ್ತು, ದಖ್ಖನ್ನಿನ

ಪ್ರಸಿದ್ಧ ಚಿಕಣಿಚಿತ್ರಕಲೆ, ಸಂಗೀತ, ದಖನಿ ಉರ್ದು ಹಾಗೂ ಸೂಫಿಪಂಥದ ಅನುಭಾವ ಸಾಹಿತ್ಯ ಮತ್ತು ವಿವಿಧ ಆಲಂಕಾರಿಕ ಲಿಪಿಶೈಲಿಗಳು ಸಮೃದ್ಧವಾಗಿ ಬೆಳೆದವು. ಹಿಂದು-ಇಸ್ಲಾಂ ಸಂಸ್ಕೃತಿ ಹಾಗೂ ಕಲೆ ಕರ್ನಾಟಕದಲ್ಲಿ ಬಹುಮಟ್ಟಿಗೆ ಶ್ರೀಮಂತವಾದವು. ಇವರ ಕಾಲದಲ್ಲಿ ನಿರ್ಮಿತವಾದ ಕೆಲವು ವಾಸ್ತುಶಿಲ್ಪಗಳು ಇಸ್ಲಾಂ ಪ್ರಪಂಚದಲ್ಲಿಯೇ ಅನುಪಮವೆನಿಸಿವೆ. ಇವುಗಳಲ್ಲಿ ರಕ್ಷಣಾವಾಸ್ತುವಿನ ಅಂಗವಾದ ಸುಭದ್ರಕೋಟೆ, ಪ್ರವೇಶದ್ವಾರ, ಬುರುಜು, ಅರಮನೆ, ವಿಹಾರತಾಣ, ಆಡಳಿತ ಕಛೇರಿ ಮುಂತಾದ ಪೌರವಸ್ತು, ವಿವಿಧ ವಿನ್ಯಾಸ ಅಲಂಕರಣದ ಮಸೀದಿ, ಈದ್ಗಾ, ದರ್ಗಾ, ಸಮಾಧಿ ಸಮುಚ್ಚಯ ಮುಂತಾದ ಧಾರ್ಮಿಕ ಕಟ್ಟಡಗಳು ಬಿಜಾಪುರ ಹಾಗೂ ಅದರ ಪರಿಸರದಲ್ಲಿ ಬಹು ಸಂಖ್ಯೆಯಲ್ಲಿವೆ. ವಿಶೇಷವಾಗಿ ಹೆಸರಿಸಬಹುದಾದವು-ಜಾಮೀ ಮಸೀದಿ, ಅಸರ್ ಮಹಲ್, ಮೆಹ್ತರ್ ಮಹಲ್, ಇಬ್ರಾಹೀಮ್ ರೋಜಾ, ಅಮೀನುದ್ದಿನ್ ಆಲಾ ಬಿಜಾಪುರಿಯ ದರ್ಗಾ, ಗೋಳಗುಮ್ಮಟ ಸಮುಚ್ಚಯ ಇತ್ಯಾದಿ.

ಆಲಂಕಾರಿಕ ಲಿಪಿಶೈಲಿಯ ಶ್ರೀಮಂತ ಪರಂಪರೆಯನ್ನು ಆದಿಲ್‌ಶಾಹಿ ಅರಸರು ತಮ್ಮ ಆಳರಸರಾಗಿದ್ದ ಬಹಮನಿಯರಿಂದಲೇ ಪಡೆದುಕೊಂಡರು. ಮೊದಮೊದಲಿಗೆ ಆದಿಲ್‌ಶಾಹಿ ಲಿಪಿ ಬಹಮನಿ ಶೈಲಿಯ ಗಾಢಪ್ರಭಾವಕ್ಕೊಳಗಾಗಿತ್ತು. ಕ್ರಮೇಣ ಉಳಿದ ಕಲಾಪ್ರಕಾರಗಳಲ್ಲಿ ಹೇಗೊ ಹಾಗೆಯೇ ಲಿಪಿಶೈಲಿಗಳಿಗೂ ತಮ್ಮದೇ ಆದ ವಿಶಿಷ್ಟ ಅಂದಗಾರಿಕೆಯನ್ನು ಅಳವಡಿಸಿ ಇನ್ನಷ್ಟು ಕಲಾತ್ಮಕವಾಗಿಸಿದರು. ಆ ವೇಳೆಗೆ ಮುಘಲ್ ಸಾಮ್ರಾಟ ಅಕ್ಬರ್ ತನ್ನ ಆಸ್ಥಾನದಲ್ಲಿ ಬಳಸಿ ಜನಪ್ರಿಯವಾಗಿಸುತ್ತಿದ್ದ ನಸ್ತಾಲೀಖ್ ಲಿಪಿಯನ್ನು ಇಲ್ಲಿಯೂ ವಿನೂತನ ರೀತಿಯಲ್ಲಿ ಉಪಯೋಗಿಸಿದರು. ಆ ಕಾಲದ ಪರಿಣತ ಕಲಾವಿದರು ನೇರ, ಅಡ್ಡಗೀಟುಗಳ ಗಾಂಭೀರ್ಯ, ವಕ್ರರೇಖೆಗಳ ಲಾವಣ್ಯದ ಹದವಾದ ಸಂಯೋಜನೆಯಿರುವ ಈ ಲಿಪಿಯ ಅನಂತ ಸಾಧ್ಯತೆಗಳನ್ನು ಅರ್ಥಪೂರ್ಣವಾಗಿ ಬಳಸಿ, ವಾಸ್ತು ಹಾಗೂ ಇತರ ಮಾಧ್ಯಮಗಳಲ್ಲಿ ಅಪೂರ್ವ ಕಲಾವಂತಿಕೆಯ ಕೃತಿಗಳನ್ನು ಸೃಜಿಸಿದರು. ಇದರಿಂದ ವಿವಿಧ ರೀತಿಯ ಕಾಲ, ಪ್ರಾಂತಗಳಲ್ಲಿ ರಚಿತವಾದ ನಾನಾ ಬರಹಗಳ ನಡುವೆಯೂ ಪರಿಣತರ ಕಣ್ಣುಗಳು ಥಟ್ಟನೆ ಸ್ಪಷ್ಟವಾಗಿ ಗುರುತಿಸಬಹುದಾದ ಸ್ವಂತಿಕೆಯ ಸೊಬಗು ಮೆರೆಯುವ ನಸ್ತಾಲೀಖ್ ಮಾದರಿಯನ್ನು ಸಿದ್ಧಪಡಿಸಿ ಬಳಸಿದರು.

ಆದಿಲ್‌ಶಾಹಿ ರಾಜಮನೆತನದ ಸದಸ್ಯರು ಸ್ವತಃ ತಾವೇ ಅಲಂಕರಣ ಲಿಪಿಶೈಲಿಯಲ್ಲಿ ಪರಿಣತರಾಗಿದ್ದರು. ಉದಾಹರಣೆಗೆ ಯೂಸುಫ್ ಆದಿಲ್‌ಖಾನ್ ನಸ್ತಾಲೀಖ್‌ನಲ್ಲಿ ಸಾಕಷ್ಟು ನೈಪುಣ್ಯ ಪಡೆದಿದ್ದ. ಮೊದಲನೆಯ ಅಲಿ ಹಾಗೂ ಇಮ್ಮಡಿ ಇಬ್ರಾಹೀಮರು ಥುಲ್ಥ್, ನಸ್ಖ್, ನಸ್ತಾಲೀಖ್, ಶಿಕಸ್ತಾ ಮತ್ತು ರಿಖಾ ಬರವಣಿಗೆಯ ಶೈಲಿಗಳಲ್ಲಿ ಅಸದೃಶ ಪ್ರಾವೀಣ್ಯಗಳಿಸಿದ್ದರು. ತಮ್ಮ ಆಸ್ಥಾನದ ಪರಿಣತ ಲಿಪಿಕಾರರು ಹಾಗೂ ಪ್ರತಿಕಾರರ ಸೂಕ್ಷ್ಮ ಬರವಣಿಗೆಗಳಲ್ಲಿಯೂ ತಪ್ಪು ಕಂಡುಹಿಡಿಯುವಷ್ಟು ಅವರು ಪಾಂಡಿತ್ಯಗಳಿಸಿದ್ದರು. ಇಮ್ಮಡಿ ಇಬ್ರಾಹೀಮನ ಕಾಲದಲ್ಲಿ ಅವನ ಆಶ್ರಯ ಬಯಸಿ ಇರಾನ್ ಮುಂತಾದ ದೂರ ದೇಶಗಳಿಂದ ಅನೇಕ ಅಲಂಕರಣ ಲಿಪಿಕಾರರು ಬಿಜಾಪುರಕ್ಕೆ ಬಂದಿದ್ದರು. ಅವನ ಆಸ್ಥಾನದಲ್ಲಿದ್ದ ಸಿದ್ಧಹಸ್ತರಲ್ಲಿ ಶಾಹ್ ಖಲೀಲುಲ್ಲಾಹ್, ಇಸ್ಮತುಲ್ಲಾಹ್, ಮುಸ್ತಾಫಾ ಅಬ್ದುಲ್ ಲತೀಫ್, ಮುಲ್ಲಾನ್ ಜುಹುರಿ ಮತ್ತು ಬಖೀರ ಖಿರ್ದ ಕಾಶೀ ಪ್ರಮುಖರು. ಇವರಲ್ಲಿ ಷಾಹ್ ಖಲೀಲುಲ್ಲಾಹ್ ಹಾಗೂ ಇಸ್ಮತುಲ್ಲಾಹ್ ಇಬ್ಬರೂ ಇಮ್ಮಡಿ ಇಬ್ರಾಹೀಮನ ಸುಪ್ರಸಿದ್ಧ **ಕಿತಾಬ್-ಇ-ನೌರಸ್** ಕೃತಿಯ ಪ್ರತಿಗಳನ್ನು ಬರೆದರು. ಅನೇಕ ಕಲಾವಿದರು ಬರೆದ ಈ ಕಾಲದ ಹಸ್ತಪ್ರತಿಗಳು ಇರಾನ್, ಇಂಗ್ಲೆಂಡ್ ಹಾಗೂ ಭಾರತದ ವಿವಿಧ ವಸ್ತುಸಂಗ್ರಹಾಲಯಗಳಲ್ಲಿವೆ. ಷಾಹ್ ಖಲೀಲುಲ್ಲಾಹ್ ನಸ್ತಾಲೀಖ್ ಶೈಲಿಯ ಬರವಣಿಗೆಯಲ್ಲಿ ಸಾಧಿಸಿದ್ದ ಮಹತ್ಪರಿಣತಿಯನ್ನು ಅವನ ಸಮಕಾಲೀನ ಕವಿ ಮುಲ್ಲಾನ್ ಜುಹುರಿ ತನ್ನ **ಸೆಹ್ರ್ ನಸ್ರ್** ಕೃತಿಯಲ್ಲಿ ಪ್ರಶಂಸಿಸಿದ್ದಾನೆ. ಸುಲ್ತಾನ ಮುಹಮ್ಮದ್ ಆದಿಲ್‌ಶಾಹನ ಆಸ್ಥಾನದಲ್ಲಿದ್ದ ಪ್ರಸಿದ್ಧ ಅಲಂಕರಣ ಲಿಪಿಕಾರರಲ್ಲಿ ಮಿರ್ಜಾ ಮುಹಮ್ಮದ್ ಮುಖಿಂ ಮತ್ತು ಕಮಾಲ್ ಖಾನ್ ರುಸ್ತುಮಿ ಪ್ರಸಿದ್ಧರು. ದೊರೆ ಮುಹಮ್ಮದನು ಕಮಾಲ್ ಖಾನ್ ರುಸ್ತುಮಿಗೆ **ಖುತುತ್ ಖಾನ್** (ಅಲಂಕರಣ ಲಿಪಿಕಲಾಸಾಗರ) ಎಂಬ ಬಿರುದು ನೀಡಿ ಗೌರವಿಸಿದ್ದ. ಇಮ್ಮಡಿ ಅಲಿ ಉತ್ತಮ ಅಲಂಕರಣಲಿಪಿ ಕಲಾಭಿಜ್ಞನೂ ಉಚ್ಚಮಟ್ಟದ ಕಲಾವಿದನೂ ಆಗಿದ್ದ. ಶಾಹ್‌ದವಾಲ್ ಮತ್ತು ಅವನ ಮಗ ಫತೇ ಮುಹಮ್ಮದ್ ಅಲಿಯ ಆಸ್ಥಾನ ಕಲಾವಿದರಾಗಿದ್ದರು. ಅದಿಲ್‌ಶಾಹಿ ವಾಸ್ತುಶೈಲಿಯನ್ನು ಉತ್ತುಂಗಕ್ಕೇರಿಸಿದ ಇಮ್ಮಡಿ ಇಬ್ರಾಹೀಮನ ಕಾಲದ ವಾಸ್ತುತಜ್ಞ ಮಲ್ಲಿಕ್‌ಸಂದಲ್‌ನೂ ಶ್ರೇಷ್ಠ ಅಲಂಕರಣ ಲಿಪಿಕಲಾವಿದನೇ. ಆದಿಲ್‌ಶಾಹಿ ಕಾಲದ ವಾಸ್ತು, ಸಂಗೀತ, ಸಾಹಿತ್ಯ, ಚಿತ್ರಕಲೆಗಳಂತೆಯೇ ಅಲಂಕರಣ ಲಿಪಿ ಕಲೆಯೂ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯನ್ನು ಶ್ರೀಮಂತಗೊಳಿಸಿದೆ.

ಇಂತಹ ಶಾಸನಗಳಲ್ಲಿ ದಕ್ಷಿಣಕ್ಕಿರುವ ಬಾಗಿಲಿನ ಮೇಲಿನ ತೆಳು ಉಬ್ಬು ಬರಹ, ತಾಜ್‌ಸುಲ್ತಾನಾ ತನ್ನ ಪತಿ ಇಬ್ರಾಹೀಮ್ ಗತಿಸಿದ ಎಂಟು ವರ್ಷಗಳ ನಂತರ ಕ್ರಿಶ ೧೬೩೪ರಲ್ಲಿ ಮೃತಳಾದಂತೆ ದಾಖಲಿಸಿದೆ (ಚಿತ್ರ ೩). ಅಲ್ಲದೆ ಇದರ ವಾಸ್ತು ಶಿಲ್ಪಿ ಮಲಿಕ್ ಸಂದಲ್ ಹಾಗೂ ಈ ಕಟ್ಟಡದ ನಿರ್ಮಾಣಕ್ಕೆ ಆದ ವೆಚ್ಚ ಆಕಾಶದಷ್ಟೆತ್ತರ, ಅಗಣಿತವೆಂದು ತಿಳಿಸುತ್ತದೆ. ಇಲ್ಲಿಯ ತೋಟದ ಸೊಬಗು ಸ್ವರ್ಗದ ನಂದನವನಕ್ಕೆ ಸ್ಫೂರ್ತಿಯಾಯಿತೆಂದೂ, ಭೂಮಿಗೆ ಭೂಷಣಪ್ರಾಯವಾಗಿತ್ತೆಂದೂ ಬರೆದಿದೆ. ಇದರ ನಿರ್ಮಾಣ ಕಾಲದ ಬಗೆಗೆ 'ಸ್ವರ್ಗದಿಂದಿಳಿದ ದೇವದೂತನೊಬ್ಬ ಉಸುರಿದಂತೆ ಈ ಮನೋಲ್ಲಾಸಕರವಾದ ಭವನವು ತಾಜ್‌ಸುಲ್ತಾನಳ ಸ್ಮಾರಕ'. ಈ ಕಾಲಲೇಖ ವಾಕ್ಯದ ಅಕ್ಷರಗಳನ್ನು ಸಂಖ್ಯೆಗೆ ಪರಿವರ್ತಿಸಿದಾಗ ಬರುವ ಕಾಲ ಹಿಶ ೧೦೩೬ (ಕ್ರಿ.ಶ. ೧೬೨೬).

ಇಸ್ಲಾಂ ಸಂಸ್ಕೃತಿಯಲ್ಲಿ ಅಲಂಕೃತ ಶೈಲಿಯ ಬರಹವನ್ನು ಎರಡು ಮುಖ್ಯ ಉದ್ದೇಶದಿಂದ ಬಳಸಿರುವುದು ಕಂಡುಬರುತ್ತದೆ. ದೈವಿಕ ಅನುಭೂತಿಯ ಸಂದೇಶಗಳ ಪ್ರಸರಣ ಹಾಗೂ ಸಂವಹನ ಮತ್ತು ವಾಸ್ತುವಿನ ಅಲಂಕರಣ. ಬಿಜಾಪುರದ ಉಳಿದೆಲ್ಲ ಕಟ್ಟಡಗಳಿಗಿಂತ ಇಬ್ರಾಹೀಮ್ ರೋಜಾದಲ್ಲಿ ಈ ಎರಡು ತತ್ವ, ಉದ್ದೇಶಗಳನ್ನು ಅತ್ಯುತ್ತಮವಾಗಿ ಸಾಧಿಸಲಾಗಿದೆ. ಈ ಬರಹಗಳು ಕಟ್ಟಡದ ನಿರ್ಮಾಣ, ಸಮಾಧಿಯಾಗಿರುವ ವ್ಯಕ್ತಿ ಮುಂತಾದ ವಿವರ ನೀಡುವುದರ ಜೊತೆಗೆ ನಿಷ್ಠಾವಂತರಿಗೆ ಕಾದಿರುವ ಸ್ವರ್ಗದ ಸುಖಸಾಂತ್ವನದ ಬಗೆಗೂ ಆಶ್ವಾಸನೆ ನೀಡುತ್ತವೆ. ಬರಹಗಳು ಕಟ್ಟಡದ ಪ್ರತಿ ಅಂಗುಲವನ್ನು ಆವರಿಸಿರುವುದರಿಂದ, ಇಡೀ ಕಟ್ಟಡದ ಒಟ್ಟಾರೆ ಸೌಂದರ್ಯ ಇಮ್ಮಡಿಗೊಂಡಿದೆ. ಅಲ್ಲದೆ ವಾಸ್ತು ಅಲಂಕರಣವಿನ್ಯಾಸ, ಸಂದೇಶ ಸಂವಹನ ಕ್ರಿಯೆಗಳೆಲ್ಲ ಒಂದಕ್ಕೊಂದು ಪೂರಕವಾಗಿದ್ದು ಉದ್ದೇಶ ಸಾಧನೆಗೆ ಸಹಾಯಕವಾಗಿವೆ. ಇದಕ್ಕಾಗಿ ನಸ್ಖ್–ನಸ್ತಾಲೀಖ್ ಹಾಗೂ ರಿಖಾ ಶೈಲಿಯ ಲಿಪಿಗಳಲ್ಲಿ ತೆಳು ಉಬ್ಬು, ಪೂರ್ತಿ ದುಂಡಾಗಿ ಕೊರೆಯುವ ವಿಧಾನಗಳನ್ನು ಅವಶ್ಯವಿದ್ದೆಡೆ ಅರ್ಥಪೂರ್ಣವಾಗಿ ಬಳಸಿದೆ. ಜೊತೆಗೆ ಸೂಕ್ತ ವರ್ಣಸಂಯೋಜನೆಯಿಂದ ಎಲ್ಲ ವಿವರಗಳನ್ನು ಎತ್ತಿ ಕಾಣಿಸುವ ಪ್ರಯತ್ನಮಾಡಿದೆ (ಚಿತ್ರ ೪).

**ವರ್ಣಚಿತ್ರಗಳಲ್ಲಿ ಆಲಂಕಾರಿಕ ಲಿಪಿ**

ಬಿಜಾಪುರದ ವರ್ಣಚಿತ್ರಕಲೆಯಲ್ಲಿ ಇದುವರೆಗೆ ಒಟ್ಟು ಆರು ಯೋಗಿನಿಯರ ಚಿತ್ರಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ಲಂಡನ್ನಿನ ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿರುವ, ಕ್ರಿಶ ೧೫೯೦ರ ಕಾಲಮಾನದ ವರ್ಣಚಿತ್ರ ಹಲವು ಕಾರಣಗಳಿಂದಾಗಿ ಬಹು ಪ್ರಸಿದ್ಧವಾದುದು. ಈ ಚಿತ್ರದ ಪರಿಧಿಯಲ್ಲಿನ ಆಯತಾಕಾರದ ಎರಡು ಚೌಕಟ್ಟುಗಳಲ್ಲಿ ಉತ್ತಮ ರೀತಿಯ ನಸ್ತಾಲೀಖ್ ಶೈಲಿಯ ಬರಹಗಳಿವೆ (ಚಿತ್ರ ೫). ಇವು ಸೂಫಿ ಪಂಥದ ದೈವಿಕ ಅನುಭೂತಿಯ ವಿರಹ, ಮಿಲನಗಳನ್ನು ಕುರಿತ ನಿಗೂಢ ಸಂಕೇತಾರ್ಥದ ಪ್ರತೀಕಗಳಿಂದ ತುಂಬಿದ ಕಾವ್ಯಮಯ ದ್ವಿಪದಿ ಸಾಲುಗಳು, ಕ್ಷಣಭಂಗುರತೆಯನ್ನು ಸಂಕೇತಿಸುವ ಮಾಯಾ ಸ್ವರೂಪದ ಮೋಡಗಳಲ್ಲಿ ಈ ಕವಿತೆಗಳನ್ನು ಬರೆಯಲಾಗಿದೆ.

ಇಮ್ಮಡಿ ಇಬ್ರಾಹಿಮ್ ಆದಿಲ್‌ಶಾಹನ ಅನೇಕ ವರ್ಣ ಭಾವಚಿತ್ರಗಳಲ್ಲಿ ಜುಹೂರಿ ರಚಿಸಿದ ಎದೆಮಟ್ಟದ ಭಾವಚಿತ್ರ ಪ್ರಸಿದ್ಧವಾದ್ದು. ಇದರಲ್ಲಿ ಸುಲ್ತಾನನು ಬಿಜಾಪುರ ಶೈಲಿಯ ವಿಶೇಷ ರೀತಿಯ ರುಮಾಲು ಧರಿಸಿದ್ದಾನೆ. ಇದರ ಅಂಚಿನಲ್ಲಿ ಉತ್ತಮ ರೀತಿಯ ನಸ್ತಾಲೀಖ್ ಲಿಪಿಯಲ್ಲಿರುವ ಪರ್ಷಿಯನ್ ಬರಹ ಕವಿತೆಯ ರೂಪದ್ದು (ಚಿತ್ರ ೬). ದೊರೆ ಸಇಬ್ರಾಹೀಮ್‌ನನ್ನು ಖುರಾನಿನಲ್ಲಿ ಹೆಸರಿಸಲಾದ ಸಂತ ಇಬ್ರಾಹೀಮ್‌ನ ಬಿರುದಾದ ಖಲೀಲ್ ಎಂದು ಕರೆದಿದೆ. ಜುಹೂರಿಯೆ ಬರೆದ 'ಸೇಹ್ರ ನಸ್ರ್' ಕೃತಿಯಲ್ಲಿರುವ, ಇಬ್ರಾಹೀಮ್‌ನ ಪ್ರಶಂಸೆಯ ರೂಪದ ಕವಿತೆಯ ಹೆಸರೂ ಖಾನ್–ಇ–ಖಲೀಲ್ (ದೇವಮಿತ್ರನ ಮೇಜಿನ ಮೇಲೆ).

ಸೂಫಿ ಅನುಭೂತಿಯ ಚಿತ್ರಣ–ಮುಹಮ್ಮದ್, ಅಲ್ಲಾ ಹಾಗೂ ಅಲೀ ಎಂಬ ಮೂರು ಹೆಸರುಗಳನ್ನು ಬಿಂಬ, ಪ್ರತಿಬಿಂಬವಾಗುವಂತೆ ಎರಡೆರಡು ಸಲ ಬಳಸಿ ರೂಪಿಸಿದ ಮನುಷ್ಯರೂಪದ ಚಿತ್ರಣ(ಚಿತ್ರ ೭). ನಸ್ತಾಲೀಖ್ ಶೈಲಿಯ ಬರಹ. ಭಯಭೀತಿಗಳನ್ನು ದೂರಮಾಡುವ ಉದ್ದೇಶದಿಂದ ಇಂತಹ ಚಿತ್ರಣವನ್ನು ಸೂಫಿ ಅನುಯಾಯಿಗಳು ತಾಮ್ರದ ತಗಡಿನಲ್ಲಿ ಬರೆಯಿಸಿ ತಾಯತಿಯಂತೆ (ಬಾಲರಕ್ಷಾ) ಉಪಯೋಗಿಸುತ್ತಿದ್ದರು. ಈ ಲಿಪಿ ಶೈಲಿಯನ್ನು 'ಖತ್–ಇ–ಮುಥನ್ನಾ' ಎಂದೂ ಕರೆಯುತ್ತಾರೆ. ಇದರ ಇನ್ನೊಂದು ಹೆಸರು 'ಐನಾಲಿ–ಯಾಜಿ' (ಕನ್ನಡಿ ಹಿಡಿದದ್ದು) ಪ್ರತಿಬಿಂಬಿತ

ಶೈಲಿ. ಈ ಚಿತ್ರಣ ಮನುಷ್ಯ ರೂಪದಲ್ಲಿರುವುದರಿಂದ ಇದು' ರೇಸಿಮ್ ಯಾಜಿ' ಪ್ರಕಾರಕ್ಕೂ ಉದಾಹರಣೆಯಾಗುತ್ತದೆ. ಇದನ್ನು ಶೈಲೀಯವಾಗಿ ಬೇರೆ ಎಂದು ಪರಿಗಣಿಸುವುದಿಲ್ಲ. ಇಂತಹ ಚಿತ್ರಣಗಳಲ್ಲಿ ಯಾವುದೇ ಶೈಲಿಯ ಲಿಪಿಯನ್ನೂ ಹೀಗೆ ಸಂಯೋಜಿಸಬಹುದಾದರೂ ಸಾಮಾನ್ಯವಾಗಿ ಸುಲುಸ್ ಹಾಗೂ ಕೂಫೀ ಶೈಲಿ ಹೆಚ್ಚಾಗಿ ಬಳಿಸಿರುವುದು ಕಂಡುಬರುತ್ತದೆ. ಕೆಲವೊಮ್ಮೆ ಪಶು, ಪಕ್ಷಿ, ಹೂಬಳ್ಳಿ ಮಾನವಾಕೃತಿಗಳೊಗೆ ಮೂಡುವಂತೆ ಅಕ್ಷರಗಳನ್ನು ಸಂಯೋಜಿಸಿರುತ್ತಾರಾದರೂ ಇಂತಹ ಉದಾಹರಣೆ ಕಡಿಮೆಯೇ. ಭಾರತದ ಸಂಸ್ಕೃತ ಸಾಹಿತ್ಯ ಹಾಗೂ ಶಾಸನ ಪ್ರಪಂಚದಲ್ಲಿ ಚಿತ್ರಕಾವ್ಯ/ಚಿತ್ರಶಾಸನ ಪ್ರಕಾರವಿದ್ದಂತೆ ಇದೂ ಅಷ್ಟೇನೂ ಉತ್ತಮ ಮಟ್ಟದ ಕಲೆಯಲ್ಲವೆಂದು ಅವಗಣನೆಗೊಳಗಾಗಿತ್ತು. ಆದರೂ ಅದ್ಭುತ ಸಂಯೋಜನೆಯ ಸಾಕಷ್ಟು ಮಾದರಿಗಳು ದೊರೆಯುತ್ತವೆ.

**ಹಸ್ತಪ್ರತಿಗಳಲ್ಲಿ ಆಲಂಕಾರಿಕ ಲಿಪಿ**

ಆದಿಲ್‌ಶಾಹಿ ಅರಸರು ಸಾಹಿತ್ಯಪ್ರೇಮಿಗಳಾಗಿದ್ದು ಸಾಹಿತ್ಯಕ ಚಟುವಟಿಕೆಗಳನ್ನೂ ಉದಾರವಾಗಿ ಪ್ರೋತ್ಸಾಹಿಸಿದ್ದರು. ಎರಡನೆಯ ಇಬ್ರಾಹೀಮ್, ಮುಹಮ್ಮದ್ ಮುಂತಾದ ರಾಜರು ಸ್ವತಃ ಉತ್ತಮ ವಿದ್ವಾಂಸರೆಂದು ಪ್ರಸಿದ್ಧರಾಗಿದ್ದಾರೆ. ಅವರ ಸಾಹಿತ್ಯಾಸಕ್ತಿಯ ಫಲವಾಗಿ ಆ ಕಾಲದ ಶಾಸ್ತ್ರ ಹಾಗೂ ಸೃಜನಶೀಲ ಸಾಹಿತ್ಯ ಪ್ರಕಾರಗಳಲ್ಲಿ ರಚಿತವಾದ ಅನೇಕ ಕೃತಿಗಳ ಹಸ್ತಪ್ರತಿಗಳು ದೊರೆತಿವೆ. ಇವು ದೊರೆಗಳ ಆಸ್ಥಾನದಲ್ಲಿದ್ದ ಇತಿಹಾಸಕಾರರು, ಶ್ರೇಷ್ಠಕವಿಗಳು, ಸೂಫೀಸಂತರು ಹಾಗೂ ವಿವಿಧ ವಿಷಯಗಳ ವಿದ್ವಾಂಸರು ರಚಿಸಿದ ಕೃತಿಗಳು. ಪರ್ಷಿಯನ್ ಹಾಗೂ ಅರಬ್ಬಿ ಭಾಷೆಗಳಲ್ಲಿರುವ ಇವು ವಿವಿಧ ಸುಂದರ ಲಿಪಿಗಳಲ್ಲಿ ಕಾಗದದ ಮೇಲೆ ಕೈಯಲ್ಲಿ ಬರೆದವು. ವಿಷಯದ ದೃಷ್ಟಿಯಿಂದ ಈ ಹಸ್ತಪ್ರತಿಗಳನ್ನು:

೧. ಪವಿತ್ರ ಖುರಾನ್-ಅದನ್ನು ಕುರಿತ ವ್ಯಾಖ್ಯಾನ, ಟೀಕೆ ಹಾಗೂ ವಿವರಣೆಗಳು

೨. ಇಸ್ಲಾಂ ಧರ್ಮದ ಇತಿಹಾಸ, ಪ್ರವಾದಿ ಮೊಹಮ್ಮದರನ್ನು ಕುರಿತ ಪ್ರಾರ್ಥನೆ ಹಾಗೂ ಅಶೀರ್ವಾದಗಳು

೩. ಮುಸ್ಲಿಂ ಧಾರ್ಮಿಕ ನ್ಯಾಯಸಂಹಿತೆ, ತರ್ಕಶಾಸ್ತ್ರ ಹಾಗೂ ಧರ್ಮ

೪. ಸೂಫೀಸಂತರ ಜೀವನ ಚರಿತ್ರೆ, ಮೌಲ್ಯ, ನೀತಿ, ಹಾಗೂ ಅನುಭಾವದ ರಚನೆಗಳು

೫. ಆದಿಲ್‌ಶಾಹಿ ರಾಜವಂಶದ ಇತಿಹಾಸ

೬ ಪತ್ರಸಾಹಿತ್ಯ(ಶಾಹಜಾನ್ ಹಾಗೂ ಇತರ ರಾಜಪ್ರಮುಖರೊಡನೆ ನಡೆದ ಪತ್ರವ್ಯವಹಾರಗಳ ಸಂಗ್ರಹ

೭ ವೈದ್ಯಕೀಯ, ಪ್ರವಾಸ, ಧನುರ್ವಿದ್ಯೆ ಹಾಗೂ ಕೋಶಗಳು

೮. ರಮ್ಯಕಾವ್ಯ, ಕವನ ಹಾಗೂ ಕಥೆಗಳ ಸಂಗ್ರಹ{(ವಿಕ್ರಮಾದಿತ್ಯ-ಬೇತಾಳ ಕಥೆಗಳ ಪರ್ಷಿಯನ್ ಅನುವಾದ (ಸಿಂಹಾಸನ ಬತ್ತಿಸೀ)}ದ ಪ್ರತಯೂ ಸೇರಿದಂತೆ

೯. ಧಾರ್ಮಿಕ ಕ್ರಿಯೆ ಹಾಗೂ ಶವಸಂಸ್ಕಾರ ಪದ್ಧತಿಯ ತತ್ವ ಮತ್ತು ಆಚರಣೆಗಳಿಗೆ ಸಂಬಂಧಪಟ್ಟವು- ಎಂದು ವರ್ಗೀಕರಿಸಬಹುದು.

ಕ್ರಿಶ ೧೫ರಿಂದ ೧೮ನೆಯ ಶತಮಾನದವರೆಗಿನ ಕಾಲಾವಧಿಯಲ್ಲಿ ಈ ಗ್ರಂಥಗಳನ್ನು ಪ್ರತಿಮಾಡಲಾಯಿತು. ಕೆಲವು ಹಸ್ತ ಪ್ರತಿಗಳಲ್ಲಿ ಸುಂದರ ವರ್ಣಚಿತ್ರಗಳಿದ್ದರೆ, ಇನ್ನು ಕೆಲವದರ ಪುಟಗಳಲ್ಲಿ ಆಕರ್ಷಕ ವಿನ್ಯಾಸದ ಅಂಚುಗಳಿವೆ. ಈ ಹಸ್ತಪ್ರತಿಗಳು ನಾನಾ ಶೈಲಿಯ ಅಲಂಕೃತ ಲಿಪಿಗಳಲ್ಲಿವೆ. ಅತ್ಯಂತ ಅಲಂಕೃತ ಶೈಲಿಯ ನಸ್ತಾಲೀಖ್ ಹಾಗೂ ರಿಖಾ ಶೈಲಿಗಳನ್ನು ಹಸ್ತಪ್ರತಿಗಳಲ್ಲಿ ಹೆಚ್ಚಾಗಿ ಬಳಸಲಾಗಿದೆ. ಕೆಲವು ಶ್ರೇಷ್ಠ ಲಿಪಿಕಾರರು ಹಸ್ತಪ್ರತಿಯ ಒಂದೇ ಪುಟದಲ್ಲಿ ಒಂದಕ್ಕಿಂತ ಹೆಚ್ಚು ಶೈಲಿಗಳನ್ನು ಬಳಸಿ ತಮ್ಮ ಪರಿಣತಿ ಪ್ರದರ್ಶಿಸಿದ್ದಾರೆ. ಮುಖ್ಯ ಕೃತಿಗಳ ಮುಖಪುಟ (ಉನ್ವಾನ್) ಹಾಗೂ ಕೊನೆಯ ಪುಟಗಳಂತೂ ಅತ್ಯಂತ ಕಲಾತ್ಮಕವಾಗಿ ಸಿಂಗರಿಸಲಾದವು.

## ಚಿತ್ರಗಳು

ಚಿತ್ರ ೧: ಇಬ್ರಾಹೀಮ್ ರೋಜಾದಲ್ಲಿರುವ ಮರದ ಬಾಗಿಲಿನ ಮೇಲಿನ ಬರಹ.

ಚಿತ್ರ ೨: ಜಾಮೀ ಮಸೀದಿಯ ಅಲಂಕೃತ ಮಿಹ್ರಾಬ್‌ನಲ್ಲಿ ಸರಪಣಿಯಿಂದ ತೂಗು ಬಿಟ್ಟಿರುವ ಪದಕದಲ್ಲಿರುವ ಕುರಾನಿನ ಕಲೀಮಾ ಹಾಗೂ ಹಿಶ ೧೦೪೫(ಕ್ರಿಶ ೧೬೩೫)ರ ಕಾಲಲೇಖ.

ಚಿತ್ರ ೩: ಹಿಶ ೧೦೩೭(ಕ್ರಿಶ ೧೬೨೬-೨೭)ರಲ್ಲಿ ಇಮ್ಮಡಿ ಇಬ್ರಾಹೀಮ್ ಆದಿಲ್‌ಶಾಹ್ ಮೃತನಾದನೆಂದು ದಾಖಲಿಸಿರುವ ಪರ್ಷಿಯನ್ ಭಾಷೆ, ಸುಲುಸ್ ಲಿಪಿಯ ಶಾಸನ.

ಚಿತ್ರ ೪: ಇಬ್ರಾಹೀಮ್ ರೋಜಾದಲ್ಲಿರುವ ಜ್ಯಾಮಿತೀಯ ಬಂಧಗಳ ಶಾಸನ.

ಚಿತ್ರ ೫: ಯೋಗಿನಿ.

ಚಿತ್ರ ೬: ಇಮ್ಮಡಿ ಇಬ್ರಾಹೀಮ್ ಆದಿಲ್‌ಶಾಹ್‌ನ ವರ್ಣ ಭಾವಚಿತ್ರದ ರುಮಾಲಿನ ಅಂಚಿನಲ್ಲಿರುವ ನಸ್ತಾಲೀಖ್ ಲಿಪಿಯ ಕವಿತೆಯ ಸಾಲುಗಳ ರೂಪದ ಪರ್ಷಿಯನ್ ಬರಹ.

ಚಿತ್ರ ೭: ಮುಹಮ್ಮದ್, ಅಲ್ಲಾ ಹಾಗೂ ಅಲಿ ಹೆಸರುಗಳನ್ನು ನಸ್ತಾಲೀಖ್ ಶೈಲಿಯಲ್ಲಿ ಎರಡೆರಡು ಸಲ ಬಳಸಿ ರೂಪಿಸಿದ ಸೂಫಿ ಅನುಭೂತಿಯ ಮನುಷ್ಯರೂಪದ ಚಿತ್ರಣ.

ಚಿತ್ರ ೮: ಮೊದಲ, ಮಧ್ಯದ ಹಾಗೂ ಕೊನೆಯ ಮುಖ್ಯ ಸಾಲುಗಳನ್ನು ಸುಲುಸ್‌ನಲ್ಲಿ, ಉಳಿದವುಗಳನ್ನು ಕೂಫಿ ಅಂಶ ಹೆಚ್ಚಾಗಿರುವ ನಸ್ಖ್‌ನಲ್ಲಿ ಬರೆದಿರುವ ಅಲಂಕೃತ ಖುರಾನಿನ ಒಂದು ಪುಟ.

ಚಿತ್ರ ೯: ಹೂಬಳ್ಳಿಗಳ ಮೋಹಕ ವಿನ್ಯಾಸದ ಹಿನ್ನೆಲೆಯಲ್ಲಿರುವ ಖಿತ್-ಇ-ಗುಲ್ಜಾರ್ (ಉದ್ಯಾನದಲ್ಲಿ ಕವಿತೆ) ನಸ್ತಾಲೀಖ್ ಲಿಪಿಯ ಶಾಸನ.

ಚಿತ್ರ ೧೦: ಸನ್ನದು ಹಾಗೂ ಫರ್ಮಾನುಗಳಲ್ಲಿರುವ ಮುದ್ರೆಗಳು.

ಚಿತ್ರ ೧೧: ಐನ್-ಉಲ್-ಮುಲ್ಕ್‌ನ ಸಮಾಧಿಸಮುಚ್ಚಯದ ಮಸೀದಿಯಲ್ಲಿರುವ ಕೊರೆದಗಾರೆಯ ಶಾಸನಾಲಂಕರಣ.



ಚಿತ್ರ ೧



ಚಿತ್ರ ೨



ಚಿತ್ರ ೩



ಚಿತ್ರ ೩ಅ

ಕೆಲವು ಖುರಾನಿನ ಮುಖ್ಯ ದ್ವಿಲಿಪಿ ಹಸ್ತಪ್ರತಿಯ ಪ್ರತಿಪುಟದಲ್ಲಿ ಬರಹವಿರುವ ಸ್ಥಳದ ಮೊದಲ, ಕಡೆಯ ಹಾಗೂ ನಟ್ಟನಡುವಣ ಸಾಲನ್ನು ಮಾತ್ರ ಶ್ರೇಷ್ಠ ಮಾದರಿಯ ಮೋಹಕ ನಸ್ತಾಲೀಖ್‌ನಲ್ಲಿ ಹಾಗೂ ನಡುವೆ ಐದೈದು ಸಾಲುಗಳನ್ನು ಶಿಕಸ್ತಾದಲ್ಲಿ ಬರೆದು ಆಕರ್ಷಕವಾಗಿಸಿವೆ (ಚಿತ್ರ ೮).

**ಶಿಲಾಶಾಸನಗಳು**

ಅಸಾರ ಮಹಲ್ ಪರಿಸರದಲ್ಲಿ ದೊರೆತ ಷೆಲ್ಲಿಗಿರಿಶಿಲೆಯ ಅಲಂಕೃತ ಫಲಕದಲ್ಲಿ ಖುರಾನಿನ ಸೂಕ್ತಿಯೊಂದನ್ನು ಕೆತ್ತಲಾಗಿದೆ. ತೆಳು ಉಬ್ಬುಶಿಲ್ಪ ರೂಪದಲ್ಲಿರುವ ಹೂ ಬಳ್ಳಿಗಳ ಮನೋಹರ ಹಿನ್ನೆಲೆಯಲ್ಲಿ ಈ ಸೂಕ್ತಿಯನ್ನು ಅಳವಡಿಸಿದೆ. ಹಿಶ ೯೮೪ (ಕ್ರಿ.ಶ. ೧೬೭೨)ರಲ್ಲಿ ಬರೆಯಲಾದ ಈ ಶಾಸನದ ಸಾರಾಂಶ 'ಮೊದಲ ದಿನದಿಂದಲೂ ಈ ಮಸೀದಿಗೆ ದೈವನಿಷ್ಠೆಯೇ/ಧರ್ಮಶ್ರದ್ಧೆಯೇ ಆಧಾರವಾಗಿದೆ' ಎಂದು. ಈ ಬರಹವು ಅಲಂಕರಣ ಲಿಪಿ ಶೈಲಿಯ ಒಂದು ವಿಶಿಷ್ಟ ಪ್ರಕಾರವಾದ 'ಖತ್-ಇ-ಗುಲ್ಜಾರ್' (ಉದ್ಯಾನಕಾವ್ಯ)ದ ಅತ್ಯುತ್ತಮ ಉದಾಹರಣೆಯಾಗಿದೆ (ಚಿತ್ರ ೯).

**ಆಧಾರ ಸೂಚಿ**


1. Zafar Hasan 1926: *Specimens of Calligraphy in the Delhi Museum of Archaeology*,
2. MASI, No. 29. New Delhi, Archaeological Survey of India.
3. Nazim 1936: *Bijapur Inscriptions*. MASI, No. 49. New Delhi, Archaeological Survey of India.
4. Khwaja, G.S. 2007: *Epigraphical Splendour of Bijapur*. Nagpur, ASI, Epigraphy Branch.
5. Visweswara. M.V. 2008: *Adilshahi Kalad Alankaarik Lipishailiglu*. Bijapur, ASI, Archaeological Museum.



**ಕೃತಜ್ಞತೆಗಳು**

ಈ ಲೇಖನವನ್ನು ರೂಪಿಸುವಲ್ಲಿ ಡಾ. ಎಸ್.ವಿ. ವೆಂಕಟೇಶಯ್ಯ, ಅಧೀಕ್ಷಕ ಪುರಾತತ್ತ್ವವಿದ, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ಧಾರವಾಡ ವಲಯ, ಧಾರವಾಡ ಅವರ ಪ್ರೋತ್ಸಾಹ ಅವಿಸ್ಮರಣೀಯ. ಶ್ರೀ ಜಿ.ಎಸ್. ಖ್ವಾಜಾ, ಸಹಾಯಕ ಅಧೀಕ್ಷಕ ಪುರಾತತ್ತ್ವವಿದ, ಪರ್ಷಿಯನ್ ಹಾಗೂ ಅರಾಬಿಕ್ ಶಾಸನ ವಿಭಾಗ, ನಾಗಪುರ ಈ ಲೇಖನದ ಬಗೆಗೆ ಅತೀವ ಆಸಕ್ತಿ ವಹಿಸಿ ಅನೇಕ ಸಲಹೆಗಳನ್ನು ನೀಡಿದ್ದಾರೆ. ನನ್ನ ವಿದ್ವನ್ಮಿತ್ರರಾದ ಶ್ರೀ ಸಿ.ಬಿ. ಪಾಟೀಲ, ಉಪ ಅಧೀಕ್ಷಕ ಪುರಾತತ್ತ್ವವಿದ ಹಲವು ವಿಧದ ನೆರವು ನೀಡಿದರೆ ಶ್ರೀ ಲಿಂಗರಾಜು ಛಾಯಾಚಿತ್ರಗಳನ್ನು ಒದಗಿಸಿದ್ದಾರೆ. ಅನೇಕ ಸೂಕ್ತ ಸಂದರ್ಭ ಗ್ರಂಥಗಳನ್ನು ಶ್ರೀ ಷೇಕ ಸೈಫುಲ್ಲಾ ಒದಗಿಸಿ ಕೊಟ್ಟಿದ್ದಾರೆ. ಬಿಜಾಪುರದ ಪುರಾತತ್ತ್ವ ವಸ್ತುಸಂಗ್ರಾಹಲಯದ ಸಿಬ್ಬಂದಿ ಮಿತ್ರರು ಅನೇಕ ರೀತಿಯಲ್ಲಿ ನೇರವಾಗಿದ್ದಾರೆ. ಈ ನನ್ನ ಸಹೋದ್ಯೋಗಿ ಮಿತ್ರರಿಗೆ ಅನೇಕ ವಂದನೆಗಳು. ಈ ಲೇಖನದ ಛಾಯಾಚಿತ್ರಗಳು ಭಾರತೀಯ ಪುರಾತತ್ತ್ವ ಸರ್ವೇಕ್ಷಣದ ಸ್ವಾಮ್ಯಕ್ಕೊಳಪಟ್ಟಿವೆ.




# ಮರಾಠಿ ಮೋಡಿ ಲಿಪಿಯ ಸ್ಥೂಲ ಪರಿಚಯ

– ಡಾ॥ ಎಂ.ವೈ. ಸಾವಂತ ಧಾರವಾಡ*

ಮರಾಠಿ ಮೋಡಿ ಲಿಪಿಯು ವಕ್ರವಾದ ನಂದಿ ನಾಗರಿಲಿಪಿ. ಇದನ್ನು ಅರಬೀ ವರ್ಣಮಾಲೆಯಿಂದ ರಚಿಸಲಾಗಿದೆ. ಈ ಲಿಪಿಯನ್ನು ಮೊಟ್ಟ ಮೊದಲು ದೇವಗಿರಿ ಯಾದವರ ದಿವಾನರಾಗಿದ್ದ ಹೇಮಾಡಪಂತರು ಶೋಧಿಸಿದರು ಎಂದು ಪ್ರತೀತಿ (ಕ್ರಿ.ಶ.ಸು. ೧೨೬೦). ಮುಂದೆ ಮರಾಠಾ ದೊರೆ ಛತ್ರಪತಿ ಶಿವಾಜಿಯ ಕಾಲದಲ್ಲಿ ಕಾರಕೂನ ಸೇವೆಯಲ್ಲಿದ್ದ ಚಂದ್ರಸೇನಿಯ ಕಾಯಸ್ಥ ಪ್ರಭುಗಳು ಇದನ್ನು ಬಳಸಲು ಪ್ರಾರಂಭಿಸಿದ್ದರಿಂದ ಈ ಲಿಪಿಗೆ ರಾಷ್ಟ್ರೀಯ ಸ್ವರೂಪ ದೊರೆಯಿತು. ಹೀಗಾಗಿ ಮರಾಠಾ ಪೇಶ್ವೆ ಹಾಗೂ ಆಗಿನ ಕಾಲದ ಇತರ ಸಂಸ್ಥಾನಿಕರ ಸರಕಾರಿ ಕಾಗದ ಪತ್ರಗಳು, ಹಣಕಾಸಿನ ಲೆಕ್ಕಪತ್ರಗಳು ಹಾಗೂ ಇತರ ಪತ್ರವ್ಯವಹಾರಗಳು ಮೋಡಿ ಲಿಪಿಯಲ್ಲೇ ಇವೆ. 'ಮೋಡಿ' ಇದು ಒಂದು ತರಹದ ಬರವಣಿಗೆ, ಅದು ಭಾಷೆ ಅಲ್ಲ. ಹೆಚ್ಚಾಗಿ ಬಳಸಿದ ಭಾಷೆ ಮರಾಠಿ. ಆದರೆ ಅರೇಬಿಕ್ ಪರ್ಶಿಯನ್ ಮಿಶ್ರಿತ. ತಿಂಗಳು, ತಿಥಿ, ವರ್ಷಗಳ ಬಳಕೆ ಮುಸ್ಲಿಂ ಪದ್ಧತಿಯಂತೆ. ಉದಾ: ಅರಬೀ, ಫಸಲಿ ಮತ್ತು ಹಿಜರಿ. ಇದರಲ್ಲಿ ಸ್ವರಗಳು ೧೨, ವ್ಯಂಜನಗಳು ೩೬, ಒತ್ತಕ್ಷರಗಳು ಅಪರೂಪ.

ಮೋಡಿ ಲಿಪಿಯು ದೇವನಾಗರಿ ಲಿಪಿಯಿಂದ ಭಿನ್ನವಾಗಿದ್ದರೂ ಅದರಲ್ಲಿ ಕೆಲವು ದೇವನಾಗರಿ ಅಕ್ಷರಗಳೂ ಬರುತ್ತವೆ. ಮೋಡಿ ಲಿಪಿಯಲ್ಲಿಯ ಕೆಲವು ಅಕ್ಷರಗಳು ಗುಜರಾತಿ ಅಕ್ಷರಗಳನ್ನು ಹೋಲುತ್ತವೆ. ಮೋಡಿ ಲಿಪಿಯನ್ನು ಬರೆಯಲು ಪ್ರಾರಂಭ ಮಾಡುವುದಕ್ಕೆ ಮೊದಲು ಕಾಗದದ ಮೇಲೆ ಒಂದು ಅಡ್ಡಗೆರೆಯನ್ನು ಎಳೆಯಲೇಬೇಕು. ಗೆರೆಯ ಮೇಲೆಯೇ ಮೋಡಿ ಲಿಪಿಯನ್ನು ಬರೆಯುತ್ತಾರೆ. ಮೋಡಿ ಅಕ್ಷರಗಳನ್ನು ಬಹಳ ಜೇಗ ಬೇಗನೇ ಕೈ ಎತ್ತದೇ ಬರೆಯಬೇಕಾದ್ದರಿಂದ ಇದರಲ್ಲಿ ಒತ್ತಕ್ಷರಗಳು ಹೆಚ್ಚು ಇರುವುದಿಲ್ಲ.

ಮೋಡಿ ಮತ್ತು ಕನ್ನಡ ವ್ಯಂಜನಗಳ ಸಂಖ್ಯೆ ಸಮನಾಗಿದೆ. ಕ ದಿಂದ ಹಿಡಿದು ಜ್ಞ ದವರೆಗೆ ಎಲ್ಲ ವ್ಯಂಜನಗಳಿವೆ. ಆದರೆ ಸ್ವರಗಳಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿದೆ. ಮೋಡಿಯಲ್ಲಿ ಇ, ಈ, ಉ, ಊ, ಎ, ಏ ಮತ್ತು ಒ, ಓ–ಈ ಹ್ರಸ್ವ ಮತ್ತು ದೀರ್ಘಸ್ವರಗಳಿಗೆ ಒಂದೊಂದೇ ಅಕ್ಷರಗಳಿವೆ.

ಒಂದೆರಡು ಅಕ್ಷರಗಳಲ್ಲಿ ಈ ಕಾರಾಂತವನ್ನು ಬೇರೆ ರೀತಿಯಿಂದಲೂ ಬರೆಯುತ್ತಾರೆ. ಉದಾಹರಣೆಗೆ 'ಡ' ವನ್ನು ಡಿ/ಡೀ ಯೆಂದು ಬರೆಯಲು ಹಿಂದಿನಿಂದ ಗೆರೆಯನ್ನು ಮೇಲಕ್ಕೆ ತಂದು ಆಮೇಲೆ ಈ ಕಾರಾಂತದ ಚಿಹ್ನೆಯನ್ನು ಕೊಡುತ್ತಾರೆ. ಒಂದೇ ಒಂದು ಅಕ್ಷರವನ್ನು ಮಾತ್ರ ಇವೆಲ್ಲವಕ್ಕಿಂತ ಭಿನ್ನವಾಗಿ ಈ ಕಾರಾಂತದಲ್ಲಿ ಪರಿವರ್ತಿಸುತ್ತಾರೆ.

ಮೋಡಿ 'ಲ' ಅಕ್ಷರವು ಮೇಲಿನ ಎಡಗಡೆಯ ಗಂಟು ಲಿ/ಲೀ ಇಲ್ಲವೆ ೪ ಈ ಸಂಖ್ಯೆಯನ್ನು ಕನ್ನಡದಲ್ಲಿ ಬರೆದಂತಿದೆ. ಮೋಡಿ ಲಿ/ಲೀ ವನ್ನು ಈ ಕಾರಾಂತದ ಚಿಹ್ನೆಯಿಲ್ಲದೆ ಈ ಕಾರಾಂತದಲ್ಲಿ ಬರೆಯುತ್ತಾರೆ.

ಮೋಡಿ ಅಕ್ಷರಗಳನ್ನು ಉ ಕಾರದಲ್ಲಿ ಬರೆಯುವುದಾದರೆ ಚಿಹ್ನೆಯನ್ನು ಉಪಯೋಗಿಸುತ್ತಾರೆ. ಮೇಲೆ ಹೇಳಿದಂತೆ ಈ ಕಾರದ ಚಿಹ್ನೆಯ ಹಿಂದೆ ಇಂಗ್ಲಿಷ್ ೩ ಸಂಖ್ಯೆಯನ್ನು ಜೋಡಿಸಿ ಒಂದು ಸಂಯುಕ್ತ ಚಿಹ್ನೆಯನ್ನು ಮಾಡಿದಂತೆ ಅನಿಸುತ್ತದೆ. ಆದರೆ ನಿಜವಾಗಿಯೂ ಇದೊಂದು ಸ್ವತಂತ್ರ ಚಿಹ್ನೆಯೇ ಆಗಿದೆ. ಈ ಕಾರಕ್ಕಿಂತ ಉ ಕಾರದಲ್ಲಿ ಬಹಳ ವೈವಿಧ್ಯ ಇದೆ. ಕೆಲವು ಅಕ್ಷರಗಳ ಉ ಕಾರವನ್ನು ದೇವನಾಗರೀ/ಬಾಲಬೋಧ ಲಿಪಿಯಲ್ಲಿರುವಂತೆ ಮಾಡುತ್ತಾರೆ.

---

* ಲಕ್ಷ್ಮೀನಗರ, ವಿದ್ಯಾಗಿರಿ, ಧಾರವಾಡ–೪.

मोडी मुळाक्षरें

स्वर

व्यंजनें

क
ख
ग
घ
ङ
च
छ
ज
झ
ञ
ट
ठ
ड
ढ
ण
त
थ
द

ಆದರೆ ಎಷ್ಟೋ ಅಕ್ಷರ ಫ ಫು/ಫೂ, ಡ ಡು/ಡೂ, ಗ ಗು/ಗೂ ಗಳಲ್ಲಿ ಮೇಲೆ ತೋರಿಸಿದ ಉಕಾರ ಚಿಹ್ನೆಯನ್ನೇ ಉಪಯೋಗಿಸುತ್ತಾರೆ. ಈ ಬಗ್ಗೆ ಮುಂದಿನ ಉದಾಹರಣೆಗಳನ್ನು ಕೊಡಬಹುದು. ಧ ಧು/ಧೂ, ಯ ಯು/ಯೂ, ವ ವು/ವೂ, ಲ ಲು/ಲೂ, ಬ ಬು/ಬೂ, ತ, ಹ, ದ, ಖ, ಜ ಮತ್ತು ನ ಇವುಗಳ ಉ ಕಾರಾಂತವು ಬೇರೆ ಬೇರೆ ರೀತಿಯಲ್ಲಿ ಆಗುತ್ತವೆ. ತ ತು/ತೂ, ಹ ಹು/ಹೂ, ದ ದು/ದೂ, ಖ ಖು/ಖೂ, ಜ ಜು/ಜೂ, ನ ನು/ನೂ 'ತು' ಉಕಾರದ ಚಿಹ್ನೆಯಂತೆಯೇ ಕಾಣಿಸುತ್ತದೆ. 'ಹು' ಪ್ರಾರಂಭದಲ್ಲಿ ಎಡಕ್ಕೆ ಬಗ್ಗಿ ಆಮೇಲೆ ಕೆಳಗೆ ಬಂದು ಉಕಾರಕ್ಕೆ ಸೇರಿಕೊಳ್ಳುತ್ತದೆ. 'ದು' 'ತು' ದಂತೆ ಕಂಡರೂ ಸ್ವಲ್ಪ ವ್ಯತ್ಯಾಸವಿದೆ. 'ದು'ದಲ್ಲಿ ಉಕಾರದ ಮೇಲಿನ ಅರ್ಧಭಾಗವು ಇಂಗ್ಲಿಷ್ 'ಖ'ದಂತೆ ತೋರುತ್ತದೆ. 'ಖು' ಕೂಡ 'ತು' ದಂತೆ ಇದ್ದರೂ ಉಕಾರದ ಚಿಹ್ನೆಯ ಮಧ್ಯಭಾಗದಲ್ಲಿ ಮೇಲಿನ ಅಡ್ಡಗೆರೆಗೆ ಸಮಾಂತರವಾಗಿ ಒಂದು ಸಣ್ಣಗೆರೆಯಿದೆ. 'ಜು' ಮತ್ತು 'ನು' ಇವೆಲ್ಲಕ್ಕಿಂತ ಬೇರೆಯಾಗಿದೆ. 'ಜ' ಮತ್ತು 'ನ' ದಲ್ಲಿಯ ವ್ಯತ್ಯಾಸವನ್ನು ಗಮನಿಸಿರಿ. 'ಜ'ದಲ್ಲಿ ಮೇಲಿನ ಎಡಗಡೆಯ ಗಂಟು ಪೊಳ್ಳಾಗಿದೆ. ಆದರೆ 'ನ'ದಲ್ಲಿ ಅದು ತುಂಬಿದೆ. 'ಕು'ದಲ್ಲಿ ಉ ಕಾರವು 'ಕ'ಕ್ಕಿಂತ ಮ ಪ ದಲ್ಲೇ ಬರುತ್ತದೆ. ಮೇಲಿನ ಅಕ್ಷರಗಳಲ್ಲಿಯಂತೆ ಆಮೇಲೆ ಬರುವುದಿಲ್ಲ. ಕೆಲವು ಅಕ್ಷರಗಳ ಉಕಾರವನ್ನು ಕ ಕು/ಕೂ ಎರಡೆರಡು ರೀತಿಯಲ್ಲಿ ಬರೆಯಬಹುದು. (ಗು) ಈ ಅಕ್ಷರವನ್ನು ಈ ತರಹ ಕೂಡ ಬರೆಯುತ್ತಾರೆ. ಈ

ಎರಡನೆಯ ಪ್ರಕಾರದಲ್ಲಿಯ 'ಗು' ಮೋಡಿಯಲ್ಲಿಯ 'ಉ' ದಂತೆ ಇದ್ದು ಎಡಗಡೆಯ ಪೊಳ್ಳು ಗಂಟಿನ ಮೇಲೆ ಒಂದು ಸಣ್ಣಗೆರೆಯಿಂದ ಇದು ಸರಳ ಗೆರೆಯಿರದೆ ಸ್ವಲ್ಪ ಮೇಲೆ ಉಬ್ಬಿದಂತಿದೆ. ಅದರಂತೆಯೇ 'ಯು' ಮತ್ತು 'ಮು'ಗಳನ್ನೂ ಎರಡೆರಡು ತರಹ ಬರೆಯಬಹುದು. ಯ ಯು ಯು, ಮ ಮು ಮು 'ಯ'ದ ಉ ಕಾರವನ್ನು ಈಗಾಗಲೇ ಒಮ್ಮೆ ತೋರಿಸಿದ್ದಾಗಿದೆ. ಎರಡನೆಯ ಪ್ರಕಾರದಲ್ಲಿಯ 'ಯು' ದೇವನಾಗರಿ/ಬಾಲಬೋಧ ಲಿಪಿಯಲ್ಲಿಯ 'ಯು'ದಂತಿದೆ. 'ಮ' ಅಕ್ಷರವು 'ಕ'ದಂತೆ ತೋರಿದರೂ ಸ್ವಲ್ಪ ವ್ಯತ್ಯಾಸವಿದೆ. 'ಕ'ದಲ್ಲಿ ಎಡಗಡೆಯ ಉದ್ದ ಗೆರೆಯ ನಡುವೆ ಡೊಂಕಾಗಿದೆ. 'ಮ'ದಲ್ಲಿ ಅದು ಸರಳವಾಗಿದೆ. 'ಮ'ದಲ್ಲಿ ಒಂದು ಪೂರ್ಣ ಮೋಡಿಯಲ್ಲಿಯ 'ಮು'ದಂತೆ ಕಾಣಿಸುತ್ತದೆ. ಮೋಡಿ ಉಕಾರದ ಚಿಹ್ನೆಯಲ್ಲಿ ಬಲಗಡೆಗೆ ಒಂದೇ ಒಂದು ಡೊಂಕು ಭಾಗವಿದ್ದು ಈ 'ಮು'ದಲ್ಲಿ ಎರಡು ಡೊಂಕು ಭಾಗಗಳಿವೆ. ಆದರೆ ಸ್ವಲ್ಪ ವ್ಯತ್ಯಾಸವಿದೆ. ದೇವನಾಗರಿಯಲ್ಲಿ 'ಮು' ಅಕ್ಷರವನ್ನು ಹೀಗೆ ಬರೆಯುತ್ತಾರೆ. ಮೋಡಿಯಲ್ಲಿಯ ಎರಡನೆಯ ಪ್ರಕಾರದ 'ಮು'ದಲ್ಲಿ ನಡುವಿನ ಗೆರೆಯ ಅಡ್ಡವಿಲ್ಲ. ಅದನ್ನು ಮೇಲಿನ ಗೆರೆಗೆ ಕೂಡಿಸಿದ್ದಾರೆ.

ಈ ಮೊದಲೇ ತೋರಿಸಿದಂತೆ ಮೋಡಿ ಅಕ್ಷರದ ಮೇಲೆ ಈ ಪ್ರಕಾರದ ಗೆರೆಯನ್ನು ಎಳೆದರೆ ಅಕ್ಷರದ ಎಕಾರಾಂತವಾಗುವುದು. ಉದಾ : ಎ/ಏ, ಕೆ/ಕೇ, ಖೆ/ಖೇ, ಬೆ/ಬೇ. ದೇವನಾಗರಿಯಲ್ಲಿ ಐಕಾರಾಂತದ ಚಿಹ್ನೆಯಲ್ಲಿ ಎರಡು ಗೆರೆಗಳಿವೆ. ಆದರೆ ಮೋಡಿಯಲ್ಲಿ ಈ ಪ್ರಕಾರ ಚಿಹ್ನೆಯಿದೆ. ಇದೇ ಪ್ರಕಾರ ಓ ಕಾರಾಂತಕ್ಕೆ ಅಕ್ಷರದ ಆಕಾರಾಂತದ ಮೇಲೆ ಒಂದು ಗೆರೆ ಹಾಗೂ ಔಕಾರಾಂತಕ್ಕೆ ಅಕ್ಷರದ ಆಕಾರಾಂತದ ಮೇಲೆ ಮೋಡಿಯ ಐಕಾರಾಂತದ ಚಿಹ್ನೆಯನ್ನು ಕೊಡಬೇಕು.

ಉತ್ತರ ಕರ್ನಾಟಕದ ಇತಿಹಾಸ ರಕ್ಷಣೆಯ ದಾರಿಯಲ್ಲಿ ಮೋಡಿ ದಾಖಲೆಗಳ ರಕ್ಷಣೆ ಮತ್ತು ಅಭ್ಯಾಸದ ಅವಶ್ಯಕತೆ ಈಗ ಬಹುವಾಗಿದೆ. ಉತ್ತರ ಕರ್ನಾಟಕ ಮತ್ತು ದಕ್ಷಿಣ ಮಹಾರಾಷ್ಟ್ರಗಳ ಮಧ್ಯಯುಗೀನ ಇತಿಹಾಸದಿಂದ ಅರ್ವಾಚೀನ ಇತಿಹಾಸದವರೆಗಿನ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಆಕರಗಳು ಸುದೈವಕ್ಕೆ ನಮಗೆ ಇಂದಿಗೂ ಆಕರಗಳಂತೆ ಉಳಿದುಕೊಂಡಿದ್ದು, ಅವುಗಳ ಸಂಶೋಧನೆ ಆಗಬೇಕಾದ ಅಗತ್ಯವಿದೆ. ಉದಾಹರಣೆಗೆ (ಪುಣೆ, ದಿಲ್ಲಿ, ಮುಂಬೈ, ಕೊಲ್ಲಾಪುರ, ಪತ್ರಾಗಾರಗಳಲ್ಲಿರುವ) ತಾಳೇ ಬಂಧುಗಳು, ಯಾದಿಗಳು, ಸನದು ಪತ್ರಗಳು, ಜಮಾಬಂದಿ ಕಡತಗಳು, ಕೈಫಿಯತ್ತುಗಳು  ಸಂಶೋಧಕರ ಗಮನಕ್ಕೆ ಬರದೆ ಹಾಗೆಯೇ ಉಳಿದುಕೊಂಡಿವೆ. ಅವು ದಖನ್ ಪ್ರದೇಶ ಮತ್ತು ಉತ್ತರ ಕರ್ನಾಟಕದ ಸಮಗ್ರ ಇತಿಹಾಸವನ್ನು ಕೊಡಲು ಶಕ್ತವಾಗಿವೆ.

ನಮ್ಮ ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಮೋಡಿ ಲಿಪಿಗೆ ಸಂಬಂಧಿಸಿದ ಪರಿಣಿತ ಸಂಶೋಧಕರು ವಿರಳವಾಗಿದ್ದು, ಈ ನಿಟ್ಟಿನಲ್ಲಿ ಮೋಡಿ ಲಿಪಿ ಬಲ್ಲ ತಜ್ಞರನ್ನು ಬಹುಬೇಗನೆ ನಿಯುಕ್ತಿಗೊಳಿಸಬೇಕು. ಇದರಿಂದ ನಶಿಸುತ್ತಿರುವ ಮತ್ತು ಅವಜ್ಞೆಗೆ ಗುರಿಯಾದ ಐತಿಹಾಸಿಕ ದಾಖಲೆಗಳನ್ನು ಅಧ್ಯಯನ ಮಾಡಲು ವಿಶೇಷ ಉತ್ತೇಜನ ನೀಡಿದಂತಾಗುತ್ತದೆ. ಮೋಡಿ ಲಿಪಿಯ ಅಧ್ಯಯನದಿಂದ ಮಧ್ಯಕಾಲೀನ ಚಾರಿತ್ರಿಕ ದಾಖಲೆಗಳನ್ನು, ನ್ಯಾಯಾಲಯದ ತೀರ್ಪುಗಳನ್ನು, ಭೂದಾಖಲೆಗಳನ್ನು, ಧಾರ್ಮಿಕ ಸಂಸ್ಥೆಗಳ ಕಡತಗಳನ್ನು ಅವಲೋಕಿಸಿ ಅದರಲ್ಲಿರುವ ಚಾರಿತ್ರಿಕ ಮಹತ್ವದ ಸಂಗತಿಗಳನ್ನು ಶೋಧಿಸಿ, ಪ್ರಚುರ ಪಡಿಸಲು ಸಾಧ್ಯವಾಗುತ್ತದೆ. ಮೋಡಿ ಲಿಪಿ ಬಲ್ಲ ವಿದ್ವಾಂಸರು ಕಡಿಮೆಯಾಗುತ್ತಿದ್ದು, ಚಾರಿತ್ರಿಕ ದಾಖಲೆಗಳನ್ನು ಅವಲೋಕಿಸುವವರು ಇಲ್ಲವಾಗಿದ್ದಾರೆ. ಮೋಡಿ ಲಿಪಿಯ ಅಧ್ಯಯನ ಚರಿತ್ರೆಯ ವಿದ್ಯಾರ್ಥಿಗಳಿಗೆ ಅಧ್ಯಯನದ ಭಾಗವಾಗಿ ಬೋಧನ ವಿಷಯವಾಗಬೇಕು.

卐 卐 卐

# ತಿಗಳಾರಿ ಲಿಪಿ

– ಡಾ॥ ಕೆಳದಿ ವೆಂಕಟೇಶ ಜೋಯಿಸ್*

ತಿಗಳಾರಿ ಲಿಪಿಯು ಬಹು ಹಿಂದಿನಿಂದಲೂ ಕರ್ನಾಟಕದಲ್ಲಿ ಬಳಕೆಯಲ್ಲಿದೆ. ತಡಮಾಲಂಗಿ ಶಾಸನದಲ್ಲಿ ತಿಗುಳಾರ್ಯ ಲಿಪಿಯನ್ನು ಬಾಲಬೋಧನೆಯಲ್ಲಿ ಕಲಿಸುತ್ತಿದ್ದರೆಂಬ ಸಂಗತಿಯಿದೆ. ಬಹುಶಃ ಇದು ಗ್ರಂಥ ಲಿಪಿ ಇರಬಹುದು. ತಿಗುಳ ಎಂದರೆ ತಮಿಳರು ಎಂದರ್ಥ. ತುಳು ಲಿಪಿಗೂ, ತಿಗಳಾರಿ ಲಿಪಿಗೂ ಇರುವ ವ್ಯತ್ಯಾಸ ತೀರಾ ಕಡಿಮೆ. ತಿಗಳಾರಿಯು ತುಳು ಲಿಪಿಗಿಂತ ಸ್ವಲ್ಪ ವೃತ್ತಾಕಾರವಾಗಿದೆ. ತುಳು ಲಿಪಿಯನ್ನು ಬಲ್ಲವನು ತಿಗಳಾರಿಯನ್ನೂ, ತಿಗಳಾರಿಯನ್ನು ಬಲ್ಲವನು ತುಳು ಲಿಪಿಯನ್ನೂ ಸರಾಗವಾಗಿ ಓದಬಲ್ಲ. ತಿಗಳಾರಿ ಲಿಪಿಯಲ್ಲಿ ಬಳಸಿರುವ ಅಂಕೆಗಳು ಕನ್ನಡದಿಂದ ಪಡೆದವಾಗಿವೆ. ಈ ಲಿಪಿಯು ಕನ್ನಡದ ಪ್ರಭಾವಕ್ಕೆ ಸಿಕ್ಕಿ ಅಕ್ಷರಗಳನ್ನು ಗುಂಡಾಗಿಸಿಕೊಂಡಿರಬೇಕು. ಈ ಲಿಪಿಯನ್ನು ಮುಖ್ಯವಾಗಿ ಸಂಸ್ಕೃತ ಗ್ರಂಥಗಳನ್ನು ಬರೆಸಬೇಕೆಂಬ ಉದ್ದೇಶದಿಂದ ಬಳಸಲಾಗಿದೆ. ಹೀಗಾಗಿ ಸಂಸ್ಕೃತ ವರ್ಣಮಾಲೆ ಯಲ್ಲಿರುವ ಅಕ್ಷರಗಳೆಲ್ಲಾ ಇದರಲ್ಲಿವೆ. ಮಲಬಾರಿನಲ್ಲಿ 'ಆರ್ಯ ಎಳುತ್ತು' ಬಳಕೆಯಲ್ಲಿತ್ತು. 'ಆರ್ಯ ಎಳುತ್ತು' ಎಂದರೆ ಸಂಸ್ಕೃತ ಗ್ರಂಥಗಳಿಗೆ ಬಳಸುವ ಗ್ರಂಥ ಲಿಪಿ. ಅರ್ಥಾತ್ ತಮಿಳುನಾಡಿನ ಲಿಪಿ. ಕರ್ನಾಟಕದ ಮಲೆನಾಡಿನ ಪ್ರದೇಶದಲ್ಲಿ ಇದರ ಬಳಕೆ ಹೆಚ್ಚಾಗಿತ್ತು. ಇದೇ ಮುಂದೆ ತಿಗಳಾರಿ, ಮಲೆಯಾಳ ಮತ್ತು ತುಳು ಲಿಪಿಗಳಿಗೆ ಮೂಲವಾಯಿತು. ಇಂದು ಕಾಲ ಕಳೆದಂತೆ ಪ್ರಾಚೀನ ಹಸ್ತಪ್ರತಿಗಳು ಕಣ್ಮರೆಯಾಗುತ್ತಿವೆ. ಇದಕ್ಕೆ ತಿಗಳಾರಿ ಲಿಪಿ ಹಸ್ತಪ್ರತಿಗಳೂ ಹೊರತಾಗಿಲ್ಲ.

ತಿಗಳಾರಿ ಲಿಪಿಯ ಪ್ರಾಚೀನತೆಯನ್ನು ಸಾರುವ ಶಾಸನವೊಂದರಲ್ಲಿ,

'...ಪ್ಪತ್ತರಮನೆ ಎರಡನೂ ಇನ್ನಿರಹಷೇತ್ರಂಗಳ್ನೂ ಆ ಮಾಇಲಿಗೆಯಲು
ರುಗ್ವೇದವನೋದಿಸುವ (ಖ)ಂಡಿಕದ ಉಪಾದ್ಯರ ಜೀವಿತಕ್ಕೆ ವರ್ಷ ೧ಕ್ಕೆ ಗ
ದ್ಯಾಣಂ ಆರು । ನಾಗರ ಕನಡ ತಿಗುಳಾರ್ಯವನೋದಿಸುವ ಬಾಲಶಿಕ್ಷೆ
ಉಪಾದ್ಯರ ಜೀವಿತಕ್ಕೆ ವರ್ಷ ೧ಕ್ಕೆ ಗದ್ಯಾಣಂ ಆರು । ಇನ್ತೀ ಧರ್ಮವಂ
ಪೂರ್ವಕಂ ಮಾಡಿಕೊಟ್ಟರು ಧಾರಾ........' ಎಂದಿದೆ.

(ಎಪಿಗ್ರಾಫಿಯಾ ಕರ್ನಾಟಕ ಸಂ.೩, ತಿ.ನ. ೨೭, ೨೩೮)

ಕಿಟ್ಟಲ್ ನಿಘಂಟಿನಲ್ಲಿ 'ಉಪಾಧ್ಯಾಯ'ರಿಗೆ ಉಪಾಧ್ಯರು, ಪುರೋಹಿತರು ಎಂದು ಅರ್ಥೈಸಲಾಗಿದೆ. ಅದೇ ನಿಘಂಟಿನಲ್ಲಿರುವ 'ತಿಗಳಾರಿ'ಗೆ ತಿಗಳಾಡಿ k.n. the characters is use among Brahmins in Kanara District for the Sanskrit language. The Malayalam characters owe their origin to Tigalari ಎಂಬುದಾಗಿ ಅರ್ಥೈಸಿದೆ. ನಾಗರಿ, ಕನ್ನಡ, ತಮಿಳು ಹಾಗೂ ತಿಗಳಾರಿ ಲಿಪಿಗಳಲ್ಲಿರುವ ಹಸ್ತಪ್ರತಿ ಜ್ಞಾನಭಂಡಾರವನ್ನು ಗುರುಕುಲ ಮಾದರಿಯಲ್ಲಿ ೧೩ನೆಯ ಶತಮಾನದಲ್ಲಿಯೇ ಶಾಸನದಲ್ಲಿ ಉಲ್ಲೇಖಿಸಿರುವುದನ್ನು ಕಾಣಬಹುದು.

ಡಾ.ಎ.ಸಿ.ಬರ್ನಲ್ ಅವರು ಎಲಿಮೆಂಟ್ಸ್ ಆಫ್ ಸೌತ್ ಇಂಡಿಯನ್ ಪ್ಯಾಲೆಯೋಗ್ರಾಫಿ (*Elements of South Indian Paleography*)ಯಲ್ಲಿ ತುಳು, ಮಲೆಯಾಳಂ ಲಿಪಿಗಳನ್ನು ಪ್ರಸ್ತಾಪಿಸಿದ್ದಾರೆ. ಶ್ರೀ ವೆಂಕಟರಾಜ ಪುಣಿಂಚತ್ತಾಯ ಅವರು ತಮ್ಮ 'ತುಳುವಿನಲ್ಲಿ ಗ್ರಂಥ ಸಂಪಾದನೆ' ಲೇಖನದಲ್ಲಿ ತುಳು ಲಿಪಿಗೂ; ತಮಿಳು, ಮಲೆಯಾಳ, ತಿಗಳಾರಿ ಲಿಪಿಗಳಿಗೂ ಹೋಲಿಕೆಗಳಿವೆ ಎಂದಿದ್ದಾರೆ. ಇದು ಕೇರಳದಲ್ಲಿ ಮಲೆಯಾಳವಾಗಿ, ತುಳುನಾಡಿನಲ್ಲಿ ತುಳುವಾಗಿ, ಉತ್ತರ ಕನ್ನಡ ಜಿಲ್ಲೆ ಮುಂತಾದ ಕಡೆಗಳಲ್ಲಿ ತಿಗಳಾರಿಯಾಗಿ ನಾಮಾಂತರ ಹೊಂದಿರುವುದಾಗಿ ತಿಳಿದುಬರುತ್ತದೆ. ಗೋವಿಂದ ಪೈ

* ಕ್ಯೂರೇಟರ್, ಕೆಳದಿ ವಸ್ತುಸಂಗ್ರಹಾಲಯ, ಕುವೆಂಪು ವಿ.ವಿ., ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ

## ಸ್ವರಗಳು

| | | | | | |
|---|---|---|---|---|---|
| a (अ) | ā (आ) | i (इ) | ī (ई) | u (उ) | ū (ऊ) |
| ṛ (ऋ) | ṝ (ॠ) | lṛ (ऌ) | e (ए) | ē (ऐ) | |
| o (ओ) | au (औ) | am (अं) | ah (अः) | | |

## ವ್ಯಂಜನಗಳು

| | | | | | | | |
|---|---|---|---|---|---|---|---|
| ka (क) | kha (ख) | g (ग) | gh (घ) | ṅ (ङ) | | | |
| c (च) | ch (छ) | j (ज) | jh (झ) | ñ (ञ) | | | |
| ṭ (ट) | ṭh (ठ) | ḍ (ड) | ḍh (ढ) | ṇ (ण) | | | |
| t (त) | th (थ) | d (द) | dh (ध) | n (न) | | | |
| p (प) | ph (फ) | b (ब | bh (भ) | m (म) | | | |
| y (य) | r (र) | l (ल) | v (व) | ś (श) | ṣ (ष) | s (स) | h (ह) |
| ḷ (ळ) | kṣ (क्ष) | jñ (ज्ञ) | | | | | |

## ಕಾಗುಣಿತ

| | | | | | |
|---|---|---|---|---|---|
| k (क) | kā (का) | ki (कि) | kī (की) | ku (कु) | kū (कू) |
| ke (के) | kai (कै) | ko (को) | kau (कौ) | kam (कं) | kah (कः) |

ಸಂಶೋಧನ ಕೇಂದ್ರದಿಂದ ಪ್ರಕಟವಾದ ತುಳು ಸರ್ವೇಕ್ಷಣೆಯ 'ಅನುಭವಾಮೃತ'ದಲ್ಲಿ ಲಿಪಿಯಿಲ್ಲದ ತುಳು ನಿಘಂಟಿಗೆ ವಿದ್ವಾಂಸರು ಪ್ರಶ್ನೆಯನ್ನೆತ್ತಿದ್ದಾರೆ. ಈ ಲಿಪಿ ಕೇವಲ ಈ ಜಿಲ್ಲೆಯಲ್ಲಿ ಮಾತ್ರ ಪ್ರಚಲಿತವಾಗಿರದೆ ವೈದಿಕ ಸಾಹಿತ್ಯ ಮತ್ತು ಶಾಸ್ತ್ರ ಸಾಹಿತ್ಯಗಳು ಕಲಿಕೆ ನಡೆಯುವ ಬಹುತೇಕ ಪ್ರಾಂತ್ಯಗಳಲ್ಲಿವೆ. ಪ್ರಾಚೀನ ಗುರುಕುಲ ಪದ್ಧತಿಯಲ್ಲಿಯೂ ಈ ಲಿಪಿ ಜಾರಿಯಲ್ಲಿದ್ದುದು ಕಂಡುಬರುತ್ತದೆ. ಇದರಲ್ಲಿ ವೇದ, ಆಗಮ ಪ್ರಯೋಗಗಳು, ಪುರಾಣಗಳು, ಧರ್ಮಶಾಸ್ತ್ರಗಳು, ತಂತ್ರಶಾಸ್ತ್ರಗಳು, ಆಯುರ್ವೇದ, ಜೋತಿಷ್ಯ, ಇತಿಹಾಸ, ನಿರೂಪ, ಶಾಸನಗಳು ಮೊದಲಾಗಿ ಎಲ್ಲ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಹಸ್ತಪ್ರತಿಗಳು ದೊರೆತಿವೆ. ನವರಾತ್ರಿಯ ಒಂಭತ್ತು ದಿನಗಳು ಅಖಂಡ ಸರಸ್ವತಿ ಪೂಜೆ ನಡೆಸುತ್ತಿದ್ದರು. ವೇದ, ಪುರಾಣ, ಇತಿಹಾಸ, ಕಾವ್ಯ, ರಾಮಾಯಣ, ಭಾರತ, ಜ್ಯೋತಿಷ್ಯ ಇತ್ಯಾದಿ ಜ್ಞಾನ ಸಂಪತ್ತುಗಳನ್ನು ತಿಗಳಾರಿ ಹಸ್ತಪ್ರತಿಗಳಲ್ಲಿ ಕಾಣಬಹುದು. ಇತ್ತೀಚೆಗೆ ಈ ಲಿಪಿಯನ್ನು ಓದುವವರ ಸಂಖ್ಯೆ ಬೆರಳೆಣಿಕೆಯಷ್ಟಾಗಿದೆ.

ನಾಗರಿ ಲಿಪಿ ಜ್ಞಾನವಿಲ್ಲದಿರುವ ಪಂಡಿತರು ಕೇರಳದಲ್ಲಿರುವ ವೇದ, ಆಗಮ, ಜ್ಯೋತಿಷ್ಯ, ಉಪನಿಷತ್ತು, ತಂತ್ರಶಾಸ್ತ್ರ, ಆಯುರ್ವೇದ ಮೊದಲಾದವುಗಳನ್ನು ತಮ್ಮದೇ ಆದ ತಿಗಳಾರಿ ಲಿಪಿಯಲ್ಲಿ ತಾಳೆಯೋಲೆ ಹಸ್ತಪ್ರತಿಗಳಲ್ಲಿ ಸಂಗ್ರಹಿಸಿದರು. ಇಂತಹ ಹಸ್ತಪ್ರತಿಗಳು ಇಂದು ಮಲೆನಾಡು ಪ್ರದೇಶದಲ್ಲಿ ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತಿವೆ. ಅವುಗಳಲ್ಲಿ ಮುಖ್ಯವಾಗಿ ಇತಿಹಾಸ ಕುರಿತಂತೆ 'ಇತಿಹಾಸೋತ್ತಮ', 'ಕಾವೇರಿ ಮಹಾತ್ಮೆ', 'ಕೆಳದಿ ರಾಣಿ ಚೆನ್ನಮ್ಮಾಜಿಯ ನಿರೂಪ', 'ಶಿಲ್ಪಶಾಸ್ತ್ರ', 'ಅಹಿಚ್ಛತ್ರ ಬ್ರಾಹ್ಮಣ', 'ಗಮನ ಕಥಾ' ಮೊದಲಾದವು ಗುರುತಿಸುವಂತಹವು. ವೇದ, ಆಗಮಗಳಲ್ಲಿ, ಆಗಮ ತಂತ್ರ ಪ್ರಯೋಗ (ಪ್ರಾಚೀನ ಕಾಲದ ರಥೋತ್ಸವ ಇತ್ಯಾದಿ) 'ಆಯುರ್ವೇದ', 'ವಿಶ್ವಪತಿ', 'ವೆಂಕಟೇಶೀಯ ಪ್ರಯೋಗ', 'ಶತಶ್ಲೋಕೀ', 'ಸೌಂದರ್ಯ ಲಹರೀ', 'ಸ್ಮೃತ ಚಂದ್ರಿಕಾ', 'ಜ್ಯೋತಿಷ್ಯದ ಗ್ರಹ ಲಾಘವ', 'ಧರ್ಮ ಪ್ರವೃತ್ತಿ' ಮತ್ತು ಜಯದೇವ ಕವಿಯ 'ಗೀತಗೋವಿಂದ' ಹಾಗೂ ಕೆಳದಿ ಕಾಲದ ವೀರಭದ್ರನಾಯಕನ ನಿರೂಪಗಳು ಉಲ್ಲೇಖಿಸುವಂತಹವು. ಕ್ರಿ.ಶ. ೧೮೮೦ರಲ್ಲಿ ಮುಂಬೈಯಲ್ಲಿ ತಿಗಳಾರಿಯಲ್ಲಿ ಪುಸ್ತಕವೊಂದು ಮುದ್ರಿತವಾಗಿದೆ. ಇದು ತಿಗಳಾರಿ ಅಂದು ವ್ಯಾಪಕ ಪ್ರಚಾರದಲ್ಲಿ ಇತ್ತೆಂಬುದಕ್ಕೆ ಸಾಕ್ಷಿಯಾಗಿದೆ.

ತಿಗಳಾರಿ ಲಿಪಿಯ ಹಸ್ತಪ್ರತಿಗಳಲ್ಲಿ ಕೆಲವದರಲ್ಲಿ ವರ್ಣಮಾಲೆಯೂ ದೊರೆತಿದೆ. ಈ ಲಿಪಿ ಸಾಮಾನ್ಯವಾಗಿ ಕರ್ನಾಟಕದ ಕರಾವಳಿ-ಕಾರವಾರದಿಂದ ಕೇರಳದ ಕಾಸರಗೋಡಿನವರೆಗೆ ಬಳಕೆಯಲ್ಲಿತ್ತು. ಇದು ಒಂದು ಮಿಶ್ರ ಲಿಪಿ. ಅನೇಕ ಮಠಗಳಲ್ಲಿ ಖಾಸಗಿಯವರ ಸುಪರ್ದಿಯಲ್ಲಿ ತಿಗಳಾರಿ ಲಿಪಿಯ ಸಾವಿರಾರು ಹಸ್ತಪ್ರತಿಗಳು ದೊರೆಯುತ್ತವೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. **ಲಿಪಿಯ ಹುಟ್ಟು ಮತ್ತು ಬೆಳವಣಿಗೆ,** ಡಾ. ದೇವರಕೊಂಡಾರೆಡ್ಡಿ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೨, ಪುಟ ೨೧೫-೨೧೬.

೨. **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ,** ತಿಗಳಾರಿ ಹಸ್ತಪ್ರತಿಗಳು (ಸಮೀಕ್ಷಾಧ್ಯಯನ), ಕೆಳದಿ ಗುಂಡಾಜೋಯಿಸ್.

೩. **ತಿಗಳಾರಿ ತಾಳೆಯೋಲೆ ಹಸ್ತಪ್ರತಿಗಳ ವಿವರಣಾತ್ಮಕ ಗ್ರಂಥಸೂಚಿ,** ಸಂಪುಟ ೩, ಕೆಳದಿ ವಸ್ತು ಸಂಗ್ರಹಾಲಯ, ಕೆಳದಿ.

೪. **ತುಳು ಸರ್ವೇಕ್ಷಣೀಯ ಅನುಭವಾಮೃತ,** ಡಾ. ಸುಶೀಲಾ ಪಿ. ಉಪಾಧ್ಯಾಯ. ರಾ.ಗೋ.ಪೈ. ಸಂಶೋಧನಾ ಕೇಂದ್ರ

೫. *Tulu Lexicon*, Vol. 2, p. 75.

೬. *Catalogue of Ancient Tigalari Palm leaf Manuscripts in India*, Vol. I, Government of India, by Keladi Gunda Jois.

೭. *Gezetteer of India*, Kerala, Cannanore, p. 184.

೮. *A Grammar of the Tulu language*, by Rev. J. Brigel, 1872.

೯. *Elements of South Indian Paleography*, A.C. Burnell, 1874.

೧೦. *Introduction to Manuscriptology*, Dr. R.S.Shivaganeshamurthy, Sharada Publishing house, New Dehli, 1996.

೧೧. *Ancient Kerala Scripts, Vidya Shastraniunam*, Dr. L.A. Ravi Varma, Malayalam Improvement Committee.

# ಬಿ.ಎಲ್. ರೈಸ್ ಹಾಗೂ ಶಾಸನ ಸಂರಕ್ಷಣೆ

– ಡಾ॥ ಎಸ್.ಎಲ್. ಶ್ರೀನಿವಾಸಮೂರ್ತಿ*

**ಬಿ**.ಎಲ್.ರೈಸರು ಒಬ್ಬ ಶ್ರೇಷ್ಠ ಶಾಸನತಜ್ಞ, 'ಎಪಿಗ್ರಾಫಿಯಾ ಕರ್ನಾಟಿಕಾ' ಸಂಪುಟಗಳ ಮೂಲಕ ಸಾವಿರಾರು ಶಾಸನಗಳನ್ನು ಬೆಳಕಿಗೆ ತಂದವರು ಎಂಬುದು ಪ್ರಸಿದ್ಧವಾದ ಸಂಗತಿ. ಅಷ್ಟೇ ಮಹತ್ವದ ಅಂಶವೆಂದರೆ ಶಾಸನಗಳು ಮತ್ತು ಪ್ರಾಚೀನ ಸ್ಮಾರಕಗಳನ್ನು ಸಂರಕ್ಷಿಸುವ ನಿಟ್ಟಿನಲ್ಲಿ ಅವರು ನಡೆಸಿದ ಪ್ರಾಮಾಣಿಕ ಪ್ರಯತ್ನಗಳು. ಸರ್ಕಾರಿ ದಾಖಲೆಗಳಲ್ಲಿ ಹುದುಗಿರುವ ಶಾಸನ ಸಂರಕ್ಷಣೆಯನ್ನು ಕುರಿತಾದ ಮಾಹಿತಿಯನ್ನಷ್ಟೇ ಕ್ರೋಡೀಕರಿಸುವುದು ಪ್ರಸ್ತುತ ಸಂಪ್ರಬಂಧದ ಉದ್ದೇಶ.

ಶಾಸನಗಳು ಕೇವಲ ಅವು ಒಳಗೊಂಡಿರುವ ಮಾಹಿತಿಯ ಕಾರಣಕ್ಕಾಗಿ ಮಾತ್ರವಲ್ಲದೆ ಶಿಲ್ಪಕಲಾಕೃತಿಯಾಗಿ ಹಾಗೂ ಪ್ರಾಚೀನ ಕಾಲದ ಸ್ಮಾರಕವಾಗಿಯೂ ಅತ್ಯಂತ ಮಹತ್ವದ್ದಾಗಿವೆ. ಆದರೆ ೧೯ನೇ ಶತಮಾನದಲ್ಲಿ ಸರ್ಕಾರಕ್ಕಾಗಲೀ ಅಥವಾ ಸಾರ್ವಜನಿಕರಿಗಾಗಲೀ ಈ ಬಗ್ಗೆ ವಿಶೇಷವಾದ ಕಾಳಜಿ ಇರಲಿಲ್ಲ. ಪ್ರಾಚೀನ ದೇವಾಲಯಗಳ ದುರಸ್ತಿಯ ಸಂದರ್ಭಗಳಲ್ಲಿ ಪುರಾತತ್ತ್ವ ಶಾಸ್ತ್ರಜ್ಞರ ಅಭಿಪ್ರಾಯವನ್ನು ಪಡೆದು ಅಲ್ಲಿಯ ಶಾಸನ–ಶಿಲ್ಪ–ಸ್ಮಾರಕಗಳನ್ನು ಸಂರಕ್ಷಿಸುವ ಪದ್ಧತಿ ಆಗ ಇರಲಿಲ್ಲ. ಕೇವಲ ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳು ತಮಗೆ ಸರಿ ಕಂಡ ರೀತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದರು.

ಇಂತಹ ಸನ್ನಿವೇಶದಲ್ಲಿ ಮೈಸೂರು ಸಂಸ್ಥಾನದಲ್ಲಿ ರೈಸರು ಮೊಟ್ಟಮೊದಲ ಬಾರಿಗೆ ಶಾಸನಗಳ ಸಂರಕ್ಷಣೆಯ ಅಗತ್ಯವನ್ನು ಸರ್ಕಾರಕ್ಕೆ ಮನವರಿಕೆ ಮಾಡಿಕೊಟ್ಟರು. ಅವರ ಪ್ರಕಾರ ಶಾಸನಗಳನ್ನು ಓದಿ ಅವುಗಳ ವಿವರಗಳನ್ನು ಪ್ರಕಟಿಸುವುದು ಎಷ್ಟು ಮುಖ್ಯವೋ ಅವುಗಳನ್ನು ಸಂರಕ್ಷಿಸುವುದೂ ಅಷ್ಟೇ ಮುಖ್ಯವಾಗಿತ್ತು. ಹಾಗಾಗಿಯೇ ಪುರಾತತ್ತ್ವ ಇಲಾಖೆಯು ಆರಂಭವಾಗುವ ಮುನ್ನವೇ ಕನ್ನಡ ನಾಡಿನ ಸಂಸ್ಕೃತಿ, ಭಾಷೆ ಮತ್ತು ಲಿಪಿಯ ವಿಕಾಸವನ್ನು ಪ್ರತಿಬಿಂಬಿಸುವಂತಹ ಪ್ರಾತಿನಿಧಿಕವಾದ ಶಾಸನಗಳ ಸಂಗ್ರಹಾಲಯ ಒಂದನ್ನು ಆರಂಭಿಸಲು ರೈಸರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಮುಂದೆ ೧೮೮೫ರಲ್ಲಿ ಪುರಾತತ್ತ್ವ ಇಲಾಖೆಯು ಆರಂಭವಾದ ಮೇಲೆ ಈ ಪ್ರಸ್ತಾವನೆಗೆ ಹೆಚ್ಚಿನ ಒತ್ತಾಸೆ ದೊರಕಿತು. ಸಂಗ್ರಹಾಲಯದ ಅಗತ್ಯ ಮತ್ತು ಅದರ ಮಹತ್ವವನ್ನು ಕುರಿತು ೧೮೮೭–೮೮ನೆಯ ವರ್ಷದ ಇಲಾಖಾ ವರದಿಯಲ್ಲಿ ಅವರು ಹೀಗೆ ಹೇಳಿದ್ದಾರೆ :

> 'ಪ್ರಸ್ತುತ ನಡೆಸಲಾಗಿರುವ ಶಾಸನ ಸರ್ವೇಕ್ಷಣೆಯ ಫಲಿತಗಳನ್ನು ಮತ್ತಷ್ಟು ಸ್ಪಷ್ಟವಾಗಿ ಪ್ರದರ್ಶಿಸುವ ಸಲುವಾಗಿ ಈಗ ಮೈಸೂರಿನಲ್ಲಿ ನಿರ್ಮಿಸಲಾಗುತ್ತಿರುವ ವಿಕ್ಟೋರಿಯಾ ಜ್ಯೂಬಿಲಿ ಹಾಲ್‌ನ ಒಂದು ಭಾಗವನ್ನು ಶಾಸನಗಳ ಸಂಗ್ರಹಕ್ಕಾಗಿ ಮೀಸಲಾಗಿಡಬೇಕೆಂದು ನಾನು ಸಲಹೆ ನೀಡಿದ್ದೇನೆ. ಇಲ್ಲಿಯ ಗೋಡೆಗಳಲ್ಲಿ ಆಯ್ದ ಶಾಸನಗಳನ್ನು ಕಾಲಾನುಕ್ರಮವಾಗಿ ಜೋಡಿಸಿ ಹುದುಗಿಸಲಾಗುವುದು. ಹಾಗಾಗಿ ಇವು ಇಲ್ಲಿ ಶಾಶ್ವತವಾಗಿ ಸಂರಕ್ಷಿತವಾಗುತ್ತವಲ್ಲದೆ ತತ್ಕಾಲೀನ ಭಾಷೆಯ ಸ್ವರೂಪ ಹಾಗೂ ವಿನ್ಯಾಸದ ಅಧ್ಯಯನಕ್ಕೆ ಮೂಲ ಮತ್ತು ಅಧಿಕೃತ ದಾಖಲೆಗಳಾಗಿ ಒದಗುತ್ತವೆ. ಇದೇ ಕಟ್ಟಡದಲ್ಲಿ ವಿದ್ವಾಂಸರ ಅಧ್ಯಯನಕ್ಕೆ ಲಭ್ಯವಾಗುವಂತಹ ಕನ್ನಡ ಮತ್ತು ಸಂಸ್ಕೃತ ಹಸ್ತಪ್ರತಿಗಳ ಸಂಗ್ರಹ ಒಂದನ್ನೂ ಆರಂಭಿಸುವ ಉದ್ದೇಶವಿದೆ.[೧]

೧೮೮೮ರಲ್ಲಿ ವಿಕ್ಟೋರಿಯಾ ಜ್ಯೂಬಿಲಿಹಾಲ್(ಈಗಿನ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನ ಕಟ್ಟಡ)ನ ನಿರ್ಮಾಣ ಕಾರ್ಯ ಮುಗಿಯುತ್ತಲೇ ಸಂಗ್ರಹಾಲಯವನ್ನು ಆರಂಭಿಸಲು ಮೈಸೂರು ಸರ್ಕಾರದ ಅನುಮೋದನೆ

---

* ಮುಖ್ಯಸ್ಥರು, ಕನ್ನಡ ವಿಭಾಗ, ವಿಜಯ ಕಾಲೇಜು, ಆರ್.ವಿ.ರಸ್ತೆ, ಬಸವನಗುಡಿ, ಬೆಂಗಳೂರು–೫೬೦೦೦೪.

ದೊರೆಯಿತು.[೨] ೧೮೯೦-೯೧ನೆಯ ವರ್ಷದ ವರದಿಗಳಲ್ಲಿ ಈ ಸಂಗ್ರಹಾಲಯಕ್ಕೆ ಬೇಕಾದ ಶಾಸನಗಳನ್ನು ಸಂಗ್ರಹಿಸಲಾಗುತ್ತಿದೆ ಎಂಬ ಮಾಹಿತಿ ಇದೆ.

ಸಂಗ್ರಹಾಲಯಕ್ಕೆ ಶಾಸನಗಳನ್ನು ಸಂಗ್ರಹಿಸುವಾಗ ರೈಸರು ಅತ್ಯಂತ ಹೆಚ್ಚಿನ ಎಚ್ಚರವನ್ನು ವಹಿಸುತ್ತಿದ್ದರು. ಸುಸ್ಥಿತಿಯಲ್ಲಿರುವ ಕಟ್ಟಡಗಳಲ್ಲಿನ ಶಾಸನಗಳನ್ನು ಹೊರತೆಗೆದು ಕಟ್ಟಡದ ಭದ್ರತೆ ಹಾಗೂ ಸೌಂದರ್ಯವನ್ನು ಹಾಳು ಮಾಡುವುದು ಅವರ ಉದ್ದೇಶವಾಗಿರಲಿಲ್ಲ. ಬದಲಿಗೆ ಅನಾಥವಾಗಿ ಬಿದ್ದಿರುವ ಬಿಡಿ ಬಿಡಿಯಾದ ಶಾಸನಗಳನ್ನಷ್ಟೇ ಅವರು ಶೇಖರಿಸುತ್ತಿದ್ದರು ಎಂಬುದು 'Several deserted and detached stones bearing inscriptions were selected'[೩], 'Several cast away inscribed stones of special interest have been selected'[೪] ಮುಂತಾದ ಅವರ ಮಾತುಗಳಿಂದ ಸ್ಪಷ್ಟವಾಗುತ್ತದೆ. ಈ ರೀತಿ ಸಂಗ್ರಹಿತವಾದ ಶಾಸನಗಳೆಂದರೆ ೧. ತಲಕಾಡು ಶಾಸನ (ಕ್ರಿ.ಶ. ೭೨೫), ೨. ಕುರುಬೂರು ಶಾಸನ (ಕ್ರಿ.ಶ. ೯೩೧), ೩. ಪುರಹಳ್ಳಿ ಶಾಸನ (ಕ್ರಿ.ಶ. ೧೦೩೫), ೪. ಬೆಳಗೆರೆ ಶಾಸನ (ಕ್ರಿ.ಶ. ೧೧೦೭), ೫. ಬೆಳಗೆರೆ ಶಾಸನ (ಕ್ರಿ.ಶ. ೧೧೩೦), ೬. ಸಮೇತನಹಳ್ಳಿ ಶಾಸನ (ಕ್ರಿ.ಶ. ೧೪೧೧), ೭. ಸೋಲದೇವನಹಳ್ಳಿ ಶಾಸನ (ಕ್ರಿ.ಶ. ೧೦೨೯), ೮. ಅವರಗೆರೆ ಶಾಸನ (ಕ್ರಿ.ಶ. ೧೦೪೯), ೯. ಕನತಿ(?) ಶಾಸನ (ಕ್ರಿ.ಶ. ೧೦೬೦) ಮತ್ತು ೧೦. ಮಾದಾಪುರ ಶಾಸನ (ಕ್ರಿ.ಶ. ೧೨೧೮). ರೈಸರೇನೋ 'ಈ ಶಾಸನಗಳನ್ನು ಕಟ್ಟಡದ ಒಳಭಾಗದಲ್ಲಿ ಜೋಡಿಸಲಾಗುತ್ತದೆ' ಎಂದಿದ್ದಾರಾದರೂ ಈಗ ಇವು ಕಟ್ಟಡದ ಹೊರಭಾಗದಲ್ಲಿ ಅಲ್ಲಲ್ಲಿ ಸ್ಥಾಪಿತವಾಗಿವೆ. ಈ ವ್ಯವಸ್ಥೆ ಯಾವಾಗ ಮತ್ತು ಏಕೆ ಆಯಿತು ಎಂಬುದರ ವಿವರಗಳು ಲಭ್ಯವಿಲ್ಲ. ಬಹುಶಃ ಹಸ್ತಪ್ರತಿಗಳ ಬಾಹುಳ್ಯದಿಂದಾಗಿ ಶಾಸನಗಳನ್ನು ಹೊರಗೆ ನಿಲ್ಲಿಸಲಾಗಿದೆ ಎಂದು ಊಹಿಸಬಹುದು.

ಒಂದೆಡೆಯಿಂದ ಮತ್ತೊಂದು ಕಡೆಗೆ ಸಾಗಿಸಬಹುದಾದ ಶಾಸನಗಳನ್ನೇನೋ ಕಟ್ಟಡದ ಒಳಗೆ ಸಂಗ್ರಹಿಸುವುದು ಸಾಧ್ಯ. ಆದರೆ ಸ್ವಾಭಾವಿಕವಾದ ಬಂಡೆಗಲ್ಲುಗಳ ಮೇಲಿರುವ ಶಾಸನಗಳ ರಕ್ಷಣೆ ಹೇಗೆ? ಗಾಳಿ-ಮಳೆ ಮುಂತಾದ ಪ್ರಾಕೃತಿಕ ಕಾರಣಗಳಿಗಾಗಿ ಮಾತ್ರವಲ್ಲದೆ ಜನರ ನಿರ್ಲಕ್ಷ್ಯದ ನಡವಳಿಕೆಯಿಂದಲೂ ಇವು ಹಾಳಾಗುತ್ತವೆ. ಕರ್ನಾಟಕದ ಇತಿಹಾಸ ರಚನೆಯಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸಿರುವ ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲಿನ ಭದ್ರಬಾಹುವಿನ ಶಾಸನದ ಸ್ಥಿತಿಯೂ ಇದಕ್ಕಿಂತ ಭಿನ್ನವಾಗೇನೂ ಇರಲಿಲ್ಲ. ೧೮೮೮-೮೯ರಲ್ಲಿ ಈ ಶಾಸನಕ್ಕೆ ಬಂದೊದಗಿದ ದುರ್ಗತಿಯನ್ನು ಕುರಿತು ರೈಸ್ ಹೀಗೆ ವರದಿ ಮಾಡಿದ್ದಾರೆ :

> 'ನಾನು ಕಳೆದ ಬಾರಿ ಶ್ರವಣಬೆಳಗೊಳಕ್ಕೆ ಭೇಟಿ ಕೊಟ್ಟಾಗ ಅಲ್ಲಿಯ ಅತ್ಯಂತ ಪ್ರಾಚೀನವೂ, ಮೈಸೂರಿನ ಶಾಸನಗಳಲ್ಲೆಲ್ಲಾ ಆಸಕ್ತಿಪೂರ್ಣವೂ ಆದ ಶಾಸನಗಳಲ್ಲಿ ಒಂದಾದ ಭದ್ರಬಾಹುವಿನ ಶಾಸನಕ್ಕೆ ಬಂದ ದುರ್ಗತಿಯನ್ನು ಅತ್ಯಂತ ವಿಷಾದದಿಂದ ಗಮನಿಸಿದೆ. ಅನೇಕ ಶತಮಾನಗಳಿಂದ ಭಕ್ತಾದಿಗಳ ಬರಿಗಾಲಿನ ಸಂಪರ್ಕಕ್ಕೆ ಬಂದಿದ್ದರೂ ಇದು ಹೆಚ್ಚು ಹಾಳಾಗಿರಲಿಲ್ಲ. ಆದರೆ ಇತ್ತೀಚೆಗೆ ಗೋಡೆಯೊಂದನ್ನು ದುರಸ್ತಿಗೊಳಿಸುವ ಸಲುವಾಗಿ ಗಾರೆಯನ್ನು ಈ ಶಾಸನದ ಮೇಲೆ ರಾಶಿ ಹಾಕಲಾಗಿತ್ತಲ್ಲದೆ ಬಹುಶಃ ಅದನ್ನು ಅಲ್ಲಿಯೇ ಕುಟ್ಟಲಾಗಿತ್ತು. ಇದರಿಂದಾಗಿ ಶಾಸನದ ಕೆಲವು ಭಾಗಗಳು ಮತ್ತೆ ದುರಸ್ತಿಯಾಗದಷ್ಟು ಹಾಳಾಗಿವೆ. ಈ ವಿಷಯವನ್ನು ನಾನು ಕೂಡಲೇ ಸರ್ಕಾರದ ಗಮನಕ್ಕೆ ತಂದು ಈ ಶಾಸನವೂ ಸೇರಿದಂತೆ ಇಲ್ಲಿಯ ಬಂಡೆಗಲ್ಲುಗಳ ಮೇಲಿರುವ ಶಾಸನಗಳನ್ನು ಯಾರೂ ಹಾಳು ಮಾಡದಂತೆ ತಡೆಯಲು ಕಟಕಟೆಯನ್ನು ನಿರ್ಮಿಸಲು ಆದೇಶ ನೀಡಲು ಕೋರಿದ್ದೆ...'[೫]

ರೈಸರ ಈ ಸೂಚನೆಯನ್ನು ಸರ್ಕಾರ ತೀವ್ರವಾಗಿ ಪರಿಗಣಿಸಿತು. 'ಶ್ರವಣಬೆಳಗೊಳದ ಬೆಟ್ಟದ ಮೇಲಿನ ಶಾಸನಗಳ ರಕ್ಷಣೆಗೆ ಸಂಬಂಧಿಸಿದ ಸೂಕ್ತ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು' ಎಂಬ ನಿರ್ಣಯವನ್ನು ಸರ್ಕಾರದ ಪರವಾಗಿ ಮುಖ್ಯ ಕಾರ್ಯದರ್ಶಿಯವರು ಪ್ರಕಟಿಸಿದರು.[೬] ೧೮೯೦ರ ವೇಳೆಗೆ ಶಾಸನಗಳಿಗೆ ಕಲ್ಲಿನ ಕಟಕಟೆಯನ್ನು ನಿರ್ಮಿಸುವುದರ ಜೊತೆಗೆ ಕತ್ತಲೆ ಬಸ್ತಿಯಲ್ಲಿ ಲೋಹದ ಜಾಲಂಧ್ರವನ್ನು ಜೋಡಿಸುವ ಕೆಲಸವನ್ನೂ ಕೈಗೊಂಡು ಮುಗಿಸಲಾಯಿತು.

ಆದರೆ ಭದ್ರಬಾಹುವಿನ ಶಾಸನವನ್ನು ಉಳಿಸುವ ಭರದಲ್ಲಿ ಪಕ್ಕದಲ್ಲಿದ್ದ ಇತರ ಶಾಸನಗಳಿಗೆ ಧಕ್ಕೆಯಾಗುವಂತಹ ಕೆಲಸವನ್ನು ಲೋಕೋಪಯೋಗಿ ಇಲಾಖೆಯ ಕಂಟ್ರಾಕ್ಟರ್ ಮಾಡಿದ್ದರು! ಅದರ ಬಗ್ಗೆ ರೈಸ್ ಹೀಗೆ ಹೇಳುತ್ತಾರೆ :

'ಭದ್ರಬಾಹುವಿನ ಶಾಸನದ ಸುತ್ತಲೂ ನಿರ್ಮಿಸಲಾಗಿರುವ ಕಲ್ಲಿನ ಕಟಕಟೆಯೇನೋ ಸೂಕ್ತವಾಗಿದೆ. ಆದರೆ ಅದರ ಕಂಬಗಳನ್ನು ಬದಿಯಲ್ಲಿದ್ದ ಶಾಸನದ ಅಕ್ಷರಗಳ ಮೇಲೆಯೇ ಹುದುಗಿಸಲಾಗಿದೆ. ಆ ಜಾಗದಲ್ಲಿದ್ದ ಅಕ್ಷರಗಳ ಪ್ರತಿರೂಪವನ್ನು ಕಂಟ್ರಾಕ್ಟರ್ ಕಂಬದ ಬದಿಯಲ್ಲಿ ಚಿಕ್ಕದಾಗಿ ಕೆತ್ತಿಸಿದ್ದಾರೆ! ಅದಕ್ಕೆ ಬದಲಾಗಿ ಕಂಬದ ಅಡಿಪಾಯವನ್ನು ಸ್ವಲ್ಪ ಬದಿಗೆ ಸರಿಸಿಕೊಂಡಿದ್ದರೆ ಯಾವ ಶಾಸನಕ್ಕೂ ತೊಂದರೆಯಾಗದಂತೆ ಕಟಕಟೆಯನ್ನು ನಿರ್ಮಿಸಬಹುದಿತ್ತು.'[೭]

ಈ ಕಲ್ಲಿನ ಕಟಕಟೆಯನ್ನು ಈಗಲೂ ಶ್ರವಣಬೆಳಗೊಳದಲ್ಲಿ ಕಾಣಬಹುದು.

ಇವೆಲ್ಲವುಗಳಿಗಿಂತ ವಿಶಿಷ್ಟವಾದದ್ದು ಮೊಳಕಾಲ್ಮೂರಿನ ಅಶೋಕನ ಶಾಸನದ ಸಂರಕ್ಷಣೆ. ೧೮೯೨ರಲ್ಲಿ ಬ್ರಹ್ಮಗಿರಿ ಮತ್ತು ಜಟಿಂಗರಾಮೇಶ್ವರಗಳಲ್ಲಿ, ಅಶೋಕನ ಶಾಸನಗಳು ಪತ್ತೆಯಾದ ನಂತರ ಅವುಗಳನ್ನು ಸಂರಕ್ಷಿಸುವಂತೆ ಸರ್ಕಾರವು ಸ್ಥಳೀಯ ಅಧಿಕಾರಿಗಳಿಗೆ ಸೂಚಿಸಿತು. ೧೮೯೨ರ ಡಿಸೆಂಬರ್ ೫ರಂದು ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳು '೮ ರೂ, ೮ ಆಣೆಗಳ ವೆಚ್ಚದಲ್ಲಿ ರಕ್ಷಣಾಗೋಡೆಯನ್ನು ನಿರ್ಮಿಸಿದ್ದೇವೆ' ಎಂಬ ವರದಿಯನ್ನೂ ನೀಡಿದರು.[೮] ಆದರೆ ಈ ಗೋಡೆಯ ನಿರ್ಮಾಣ ಕಾರ್ಯ ಎಷ್ಟು ಅನಾಗರಿಕವೂ, ಅವೈಜ್ಞಾನಿಕವೂ ಆಗಿತ್ತೆಂಬುದನ್ನು ೧೮೯೩ರ ಫೆಬ್ರವರಿ ೧ರಂದು ದಿವಾನರ ಮುಖ್ಯ ಕಾರ್ಯದರ್ಶಿಗೆ ಬರೆದ ಪತ್ರದಲ್ಲಿ ರೈಸ್ ವಿವರಿಸಿದ್ದಾರೆ. ಅದರ ಸಾರಾಂಶ ಹೀಗಿದೆ :

'ಕಳೆದ ವರ್ಷ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ನಾನು ಕಂಡುಹಿಡಿದ ಅಶೋಕನ ಶಾಸನಗಳ ಹೊಸ ಪ್ರತಿಗಳನ್ನು ತೆಗೆಯುವ ಸಲುವಾಗಿ ನಾನು ಇತ್ತೀಚೆಗೆ ಅಲ್ಲಿಗೆ ಭೇಟಿ ಕೊಟ್ಟಾಗಿನ ವಿದ್ಯಮಾನಗಳನ್ನು ಸರ್ಕಾರದ ಗಮನಕ್ಕೆ ತರಲು ಇಚ್ಛಿಸುತ್ತೇನೆ. ಪತ್ತೆಯಾಗಿರುವ ಮೂರು ಶಾಸನಗಳಲ್ಲಿ ಜಟಿಂಗ ರಾಮೇಶ್ವರದ ಬೆಟ್ಟದ ಮೇಲಿರುವ ಒಂದನ್ನು ಮಾತ್ರ ಸಂರಕ್ಷಿಸಲು ಕ್ರಮವನ್ನು ಕೈಗೊಳ್ಳಲಾಗಿದೆ. ಆದರೆ ಅದಕ್ಕಾಗಿ ಅನುಸರಿಸಿರುವ ವಿಧಾನವು ವಿವರಿಸಲಾಗದಷ್ಟು ಅನಾಗರೀಕವಾದದ್ದು ಎಂದು ವಿಷಾದದಿಂದ ಹೇಳಬೇಕಾಗಿದೆ.

ಸುಮಾರು ಆರು ಅಡಿ ಎತ್ತರ ಮತ್ತು ಎರಡು ಅಡಿಗಳ ದಪ್ಪನಾದ ಗೋಡೆಯನ್ನು ಒರಟಾದ ಕಲ್ಲು ಮತ್ತು ಮಣ್ಣಿನಿಂದ ಕಟ್ಟಲಾಗಿದೆ. ಆದರೆ ಈ ಕೆಲಸ ಎಷ್ಟು ಕಳಪೆಯಾಗಿದೆ ಎಂದರೆ ಗೋಡೆಯನ್ನು ಶಾಸನದ ಅಕ್ಷರಗಳ ಮೇಲೆಯೇ ಕಟ್ಟಲಾಗಿದ್ದು ಅವುಗಳ ಪ್ರತಿಯನ್ನು ತೆಗೆದುಕೊಳ್ಳಲು ಗೋಡೆಯ ಒಂದು ಭಾಗವನ್ನು ಕೀಳಲೇಬೇಕಾಯಿತು. ಮಾತ್ರವಲ್ಲದೆ ಆ ವೃತ್ತಾಕಾರದ ಕಟ್ಟಡದೊಳಕ್ಕೆ ಹೋಗಲು ದಾರಿಯನ್ನೇ ಬಿಟ್ಟಿರಲಿಲ್ಲ. ಹಾಗಾಗಿ ಶಾಸನಗಳನ್ನು ಪ್ರತಿ ಮಾಡಿಕೊಳ್ಳಲು ಕಷ್ಟಪಟ್ಟು ಒಂದು ಏಣಿಯನ್ನು ಹೊಂದಿಸಿಕೊಂಡು (ಅಂತಹ ಒಂಟಿ ಬೆಟ್ಟದ ಮೇಲೆ ಏಣಿ ಸದಾ ಸಿದ್ಧವಾಗಿ ಸಿಗುವಂತಹ ವಸ್ತುವಲ್ಲ) ಅದರ ಸಹಾಯದಿಂದ ಗೋಡೆಯ ಹೊರಬದಿಯನ್ನು ಏರಿ ಆಮೇಲೆ ಏಣಿಯನ್ನು ಮೇಲಕ್ಕೆ ಎಳೆದುಕೊಂಡು ಮತ್ತೆ ಒಳಭಾಗಕ್ಕೆ ಅದನ್ನು ಇಳಿಸಿ ಆ ಮೂಲಕ ನಾವು ಕೆಳಗಿಳಿಯಬೇಕಾಯಿತು. ಈ ಕಟ್ಟಡವು ಸರ್ಕಾರಿ ಅಥವಾ ಮುನಿಸಿಪಲ್ ಕಸದ ತೊಟ್ಟಿಯಂತೆ ಕಾಣುವುದರಿಂದ ಬೆಟ್ಟಕ್ಕೆ ಬರುವ ಪ್ರಯಾಣಿಕರು ಎಲ್ಲ ಬಗೆಯ ಕಸಕಡ್ಡಿಗಳನ್ನೂ ಇದರೊಳಕ್ಕೆ ತಂದು ಸುರಿಯುತ್ತಾರೆ. ಹಾಗಾಗಿ ಪರಿಕಲ್ಪನೆ ಮತ್ತು ನಿಯೋಜನೆ ಎರಡರ ದೃಷ್ಟಿಯಿಂದಲೂ ಇದು ಮೈಸೂರು ಸರ್ಕಾರಕ್ಕೆ ಹೆಸರು ತರುವಂತಹ ಸಂಗತಿಯಲ್ಲ ಎಂದು ತಿಳಿಸಲು ನನಗೆ ಯಾವ ಹಿಂಜರಿಕೆಯೂ ಇಲ್ಲ.

ನನ್ನ ಅಭಿಪ್ರಾಯದಲ್ಲಿ ಅಲ್ಲಿ ಕಬ್ಬಿಣದ ಬೋನಿನಂತಹ ಒಂದು ರಚನೆಯನ್ನು ಮಾಡಿಸಿ ಅದರ ಮೇಲ್ಭಾಗವನ್ನು ಸರಿಯಾದ ರೀತಿಯಿಂದ ಮುಚ್ಚಿದರೆ ಶಾಸನವು ಸಂರಕ್ಷಿತವಾಗುತ್ತದೆ. ಇದೇ ರೀತಿಯ ಕಬ್ಬಿಣದ ರಚನೆಯನ್ನು ಶ್ರವಣಬೆಳಗೊಳದಲ್ಲಿ ಭದ್ರಬಾಹುವಿನ ಶಾಸನವನ್ನು ರಕ್ಷಿಸಲು ನಿಲ್ಲಿಸಲಾಗಿದ್ದು ಅದರ ಕಾರ್ಯ ನೀತಿ ಸರಿಯಾಗಿದೆ. ಉಳಿದ ಎರಡು ಶಾಸನಗಳಲ್ಲಿ ಸಿದ್ಧಾಪುರದಲ್ಲಿರುವ ಶಾಸನವನ್ನೂ ಇದೇ ರೀತಿಯಲ್ಲಿ ಸಂರಕ್ಷಿಸಬಹುದು. ಆದರೆ ಬ್ರಹ್ಮಗಿರಿಯ ಶಾಸನವು ದೊಡ್ಡದೊಂದು ಬಂಡೆಯ ಮೇಲಿರುವುದರಿಂದ ಅದರ ಸಂರಕ್ಷಣೆಗೆ ಬೇರೆಯದೇ ವಿಧಾನವನ್ನು ಬಳಸಬೇಕು. ಈ ಬಗ್ಗೆ ಮುಖ್ಯ ಇಂಜಿನಿಯರ್‌ರವರು ಯೋಜನೆಯೊಂದನ್ನು ಸಿದ್ಧಪಡಿಸುತ್ತಿದ್ದಾರೆಂದು ತಿಳಿದು ಬಂದಿದ್ದು ಅದನ್ನು ನನಗೆ ಕಳುಹಿಸಿದರೆ ಅದರ ಸಾಧ್ಯಾಸಾಧ್ಯತೆಗಳನ್ನು ಹೇಳಬಹುದು.

ಈ ಮೂರು ಶಾಸನಗಳು ದಕ್ಷಿಣ ಭಾರತದ ಅತ್ಯಂತ ಅಪೂರ್ವ ಶಾಸನಗಳಾಗಿದ್ದು ಇವುಗಳ ಸೂಕ್ತ ರಕ್ಷಣೆಗೆ ವೆಚ್ಚ ಮಾಡಬೇಕಿರುವ ಹಣಕ್ಕಾಗಿ ಸರ್ಕಾರವು ಗೋಣಗುವುದಿಲ್ಲವೆಂದು ನಾನು ಭಾವಿಸಿದ್ದೇನೆ.'[೯]

ರೈಸರ ಮೊನಚಾದ ಈ ಪತ್ರ ಸರ್ಕಾರದ ಅಧಿಕಾರಿಗಳನ್ನು ಚುಚ್ಚಿ ಎಚ್ಚರಿಸಿತು. ೧೮೯೫ರ ಮಾರ್ಚ್ ೨೨ರಂದು ದಿವಾನರ ಮುಖ್ಯ ಕಾರ್ಯದರ್ಶಿಯಾದ ಟಿ.ಆನಂದರಾಯರು ಸರ್ಕಾರದ ಪರವಾಗಿ ಈ ಬಗ್ಗೆ ಒಂದು 'ಜ್ಞಾಪನಪತ್ರ' (Memorandum) ಹೊರಡಿಸಿದ್ದಾರೆ. ಅದರಲ್ಲಿ ಅವರು ರೈಸರ ಅಭಿಪ್ರಾಯಕ್ಕೆ ಪೂರ್ಣ ಸಹಮತವನ್ನು ಸೂಚಿಸಿ, 'ಶಾಸನಗಳ ಸಂರಕ್ಷಣೆಗೆ ಸಂಬಂಧಿಸಿದಂತೆ ಲೋಕೋಪಯೋಗಿ ಇಲಾಖೆಯ ಮುಖ್ಯ ಇಂಜಿನಿಯರ್‌ರವರು ಯಾವುದೇ ಯೋಜನೆಗಳನ್ನು ಕೈಗೊಳ್ಳುವುದಿದ್ದರೂ ಅದಕ್ಕೆ ಸಂಬಂಧಿಸಿದ ಎಲ್ಲ ದಾಖಲೆಗಳ ಮೇಲೆ ರೈಸರ ರುಜುವನ್ನು ಪಡೆದ ನಂತರವೇ ಕಾರ್ಯವನ್ನು ಆರಂಭಿಸಬೇಕು. ಅಲ್ಲಿಯವರೆಗೆ ಚಿತ್ರದುರ್ಗದ ಜಿಲ್ಲಾಧಿಕಾರಿಯು ೫ ಅಥವಾ ೬ ರೂ.ಗಳ ಸಂಬಳದ ಮೇಲೆ ಒಬ್ಬ ಕಾವಲುಗಾರನನ್ನು ಶಾಸನಗಳ ರಕ್ಷಣೆಗೆ ನೇಮಿಸತಕ್ಕದ್ದು' ಎಂದು ಆದೇಶಿಸಿದ್ದಾರೆ.[೧೦]

ಹೀಗೆ ರೈಸರ ನಿರಂತರ ಪ್ರಯತ್ನದಿಂದಾಗಿ ನಾಡಿನ ಹಲವಾರು ಶಾಸನಗಳು ಸಂರಕ್ಷಿತಗೊಂಡು ಮುಂದಿನ ಪೀಳಿಗೆಯ ವಿದ್ವಾಂಸರ ಅಧ್ಯಯನಕ್ಕೆ ಲಭ್ಯವಾಗಿವೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. **ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿ,** ೧೮೮೦, ಪು.೭ ರಲ್ಲಿಯ ಭಾಗದ ಅನುವಾದ.
೨. ಮುಖ್ಯ ಕಾರ್ಯದರ್ಶಿಯವರ ಪತ್ರ. ನಂ. ೫೨೨೮–೫೦೧, ದಿನಾಂಕ ೭, ನವೆಂಬರ್, ೧೮೮೮.
೩. **ವಾರ್ಷಿಕ ವರದಿ,** ೧೮೮೯–೯೦, ಪು.೧೬.
೪. ಅದೇ, ೧೮೯೦–೯೧, ಪು.೨೩.
೫. ಅದೇ, ೧೮೮೮–೮೯, ಪು.೬ರಲ್ಲಿಯ ಭಾಗದ ಅನುವಾದ.
೬ ಪೂರ್ವೋಕ್ತ ಮುಖ್ಯ ಕಾರ್ಯದರ್ಶಿಯವರ ಪತ್ರ.
೭. **ವಾರ್ಷಿಕ ವರದಿ,** ೧೮೯೬, ಪು.೪೨ರ ಭಾಗದ ಅನುವಾದ.
೮. ಕರ್ನಾಟಕ ರಾಜ್ಯ ಪತ್ರಾಗಾರದಲ್ಲಿರುವ ಜಿ.ಎಂ. ೪೨, ೧೮೯೧, (೧–೧೬) ಎಂಬ ಸಂಕೇತದ ದಾಖಲೆಯಲ್ಲಿ.
೯. ಅದೇ ದಾಖಲೆಯ ೧೧ನೆಯ ಕ್ರಮ ಸಂಖ್ಯೆಯ ಪತ್ರದ ಸಂಕ್ಷಿಪ್ತ ಕನ್ನಡಾನುವಾದ.
೧೦. ಅದೇ ದಾಖಲೆಯಲ್ಲಿ.

# ಶಾಸನ ಕ್ಷೇತ್ರದ ನೆನಪಿನ ಹನಿಗಳು

– ಎಚ್.ಎಂ. ನಾಗರಾಜರಾವ್*

**ಸಾ**ವಿರದ ಒಂಬೈನೂರ ಎಪ್ಪತ್ತರ ದಶಕದಾರಂಭ, ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ನಡೆಯುತ್ತಿದ್ದ ಭಾಷಾಂತರ ಡಿಪ್ಲೊಮಾಕ್ಕೆ ಸೇರಿಕೊಂಡಿದ್ದೆ. ಗುರುಗಳಾದ ಪ್ರೊ॥ ಎ.ವಿ. ನರಸಿಂಹಮೂರ್ತಿ ಅವರಿಗೆ ನನ್ನನ್ನು ಕಂಡರೆ ವಿಶೇಷ ವಾತ್ಸಲ್ಯ; ಕಷ್ಟದ ದಿನಗಳಲ್ಲಿ ನೆರವಿಗೆ ಬಂದಿದ್ದರು. ಅವರ ಪ್ರಯತ್ನದಿಂದಾಗಿ ಸಂಸ್ಥೆಯು ಆರಂಭಿಸಿದ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳ ಪರಿಷ್ಕರಣ ಮತ್ತು ಪುನರ್ಮುದ್ರಣ ಯೋಜನೆಯಲ್ಲಿ ನನಗೆ ಶಾಸನ ಸಹಾಯಕ ಹುದ್ದೆ ಸಿಕ್ಕಿತು. ಬೆಳಗ್ಗೆ ಡಿಪ್ಲೊಮೊ ತರಗತಿಗಳಿಗೆ ಹಾಜರಾಗಿ ಕೆಲಸಕ್ಕೆ ಹೋಗುತ್ತಿದ್ದೆ; ಅದೇ ಕಟ್ಟಡದಲ್ಲಿಯೆ ಹತ್ತುಗಂಟೆಗಳಿಗೂ ಹೆಚ್ಚು ಇರುವಂತಾಗಿತ್ತು.

ಶ್ರೀ ಎಂ. ಹನುಮಂತರಾವ್ ಅವರು ಮೈಸೂರು ರಾಜ್ಯ ಪುರಾತತ್ತ್ವ ಇಲಾಖೆಯಲ್ಲಿ ಉಪನಿರ್ದೇಶಕರಾಗಿ, ನಿವೃತ್ತರಾದ ಮೇಲೆ ಈ ಯೋಜನೆಗೆ ಉಪಶಾಸನತಜ್ಞರಾಗಿ ಸೇರಿದ್ದರು. ಒಂದೆರಡು ತಿಂಗಳಲ್ಲಿ ಹೈದರಾಬಾದಿನಿಂದ ಶ್ರೀ ಸೀತಾರಾಮ ಜಾಗೀರ್‌ದಾರರು ಬಂದು ನಮ್ಮ ಜೊತೆ ಸೇರಿದರು. ಆರೇಳು ತಿಂಗಳ ಅವಧಿಯಲ್ಲಿಯೇ ಮೊದಲ ಸಂಪುಟ ಬಹುಮಟ್ಟಿಗೆ ಸಿದ್ಧವಾಗಿತ್ತು. ಡಾ॥ ಬಾ.ರಾ. ಗೋಪಾಲ ಅವರು ಶಾಸನತಜ್ಞರಾಗಿ ಯೋಜನೆಯನ್ನು ಮುನ್ನಡೆಸಿದರು. ಮುಂದೆ ಶ್ರೀ ಮೊಹಮ್ಮದ್ ಷರೀಫ್, ಶ್ರೀಮತಿ ಕೃಷ್ಣವೇಣಿ ಜೊತೆಗೂಡಿದರು.

ಪಾಠ ಪರಿಷ್ಕರಣೆಗಾಗಿ ಕೆಲವು ಶಾಸನಗಳ ಪಡಿಯಚ್ಚನ್ನು ತರಬೇಕಾಯಿತು. ಪರಿವೀಕ್ಷಣಾ ಪ್ರವಾಸಕ್ಕೆ ಈಗಿರುವಷ್ಟು ಅನುಕೂಲತೆಗಳು ಆಗಿರಲಿಲ್ಲ. ಒಳನಾಡಿನಲ್ಲಿ ನಡೆಯುವುದೇ ಹೆಚ್ಚಾಗಿತ್ತು. ಶಾಸನಶಾಸ್ತ್ರವನ್ನು ಸ್ನಾತಕೋತ್ತರ ಪದವಿಯಲ್ಲಿ ಒಂದು ವಿಷಯವಾಗಿ ಓದಿದ್ದರೂ ಪಡಿಯಚ್ಚುಗಳನ್ನು ತೆಗೆಯುವ, ಓದುವ ಅಭ್ಯಾಸವಿರಲಿಲ್ಲ. ಕ್ಷೇತ್ರಕಾರ್ಯಕ್ಕೆ ನನ್ನನ್ನು ತೊಡಗಿಸಿಕೊಂಡಾಗಲೇ ನಿಜಾನುಭವ ಉಂಟಾದದ್ದು!

೧

ಕೆಲಸಕ್ಕೆ ಸೇರಿಕೊಂಡಾಗ ನನಗೆ ಇಪ್ಪತ್ಮೂರನೆಯ ವರ್ಷ ನಡೆಯುತ್ತಿತ್ತು. ಬಿಳಿಯ ಬಣ್ಣದ ಸಪೂರದೇಹದ ನಾನು ನೋಡಲು ತರುಣನಂತೆ ಕಾಣದೆ ಹುಡುಗನಂತೆ ಕಾಣುತ್ತಿದ್ದೆ. ಕ್ಷೇತ್ರಕಾರ್ಯ ಪ್ರಾರಂಭವಾದ ಮೂರನೆಯ ದಿನದ ಹೊತ್ತಿಗೆ ಬಿಸಿಲಿನಿಂದಾಗಿ ನನ್ನ ಚರ್ಮಕಾಂತಿ ಕುಂದುತ್ತಿತ್ತು. ಈರುಳ್ಳಿಯ ಸಿಪ್ಪೆಯಂತೆ ಒಂದು ಪದರ ಹೊರಬರುತ್ತಿತ್ತು. ಆ ಬಗ್ಗೆ ನಾನು ಯೋಚಿಸುತ್ತಿರಲಿಲ್ಲ. ಒಮ್ಮೆ ಪ್ರಖರ ಬಿಸಿಲಿನಲ್ಲಿ ದೊಡ್ಡವೀರಗಲ್ಲು ಶಾಸನವೊಂದರ ಪಡಿಯಚ್ಚನ್ನು ತೆಗೆದುಕೊಳ್ಳುತ್ತಿದ್ದೆ. ಸೇವಕನಿದ್ದರೂ ಸಾಮಾನ್ಯವಾಗಿ ನಾನೇ ಪಡಿಯಚ್ಚನ್ನು ತೆಗೆಯುತ್ತಿದ್ದೆ; ಆತನ ಸಹಾಯವಿರುತ್ತಿತ್ತು. ಮುಖದಲ್ಲಿ ಬೆವರೊಡೆದಿತ್ತು. ಮುಖ ಕೆಂಪಾಗಿತ್ತು. ಕೆಲಸ ಮುಗಿದ ಮೇಲೆ ಆಯಾಸ ಪರಿಹಾರಕ್ಕಾಗಿ ತುಸು ನಿಂತುಕೊಂಡೆ. ಬೆಳಗಿನಿಂದಲೂ ನಮ್ಮ ಕೆಲಸ ನೋಡುತ್ತಿದ್ದ ಒಬ್ಬ ವೃದ್ಧರು ನಮ್ಮನ್ನು ಅವರ ಮನೆಗೆ ಕರೆದುಕೊಂಡು ಹೋದರು. ಪಾನಕ ಕೊಟ್ಟರು. ಹೊರಡುವಾಗ ಅವರು ಹೇಳಿದ ಮಾತುಗಳು ಈಗಲೂ ಗುಂಯ್‌ಗುಟ್ಟುತ್ತಿವೆ: "ಮಗೂ, ನಿನಗೆ ಹೇಳಿಸಿದ್ದಲ್ಲ ಈ ಕೆಲಸ! ಬೇಗ ಬೇರೆ ಕೆಲಸ ನೋಡಿಕೊಳ್ಳಪ್ಪ!" ಸುಮ್ಮನೆ ನಕ್ಕೆ. ಬೇರೆ ಕೆಲಸ ಸಿಗಲಿಲ್ಲ!

ಅರಕಲಗೂಡು ತಾಲ್ಲೂಕಿನ ಒಂದು ಹಳ್ಳಿ. ಹೊಸ ಶಾಸನಗಳು ಸಿಕ್ಕವು. ಪಡಿಯಚ್ಚು ತೆಗೆದುಕೊಳ್ಳುವ ಹೊತ್ತಿಗೆ ಅಪರಾಹ್ನ ಎರಡು ಗಂಟೆಯಾಗಿತ್ತು. ಇನ್ನೊಂದು ಹಳ್ಳಿಗೆ ಹೋಗಬೇಕಿತ್ತು. ಆದರೆ ಸ್ಥಳೀಯರೊಬ್ಬರು ಒತ್ತಾಯಪೂರ್ವಕವಾಗಿ

* ನಂ.೨೭೮, "ನೆರಳು", ೫ನೆಯ ಮುಖ್ಯರಸ್ತೆ, ೨ನೆಯ ಅಡ್ಡರಸ್ತೆ, ಎಚ್-ಬ್ಲಾಕ್, ರಾಮಕೃಷ್ಣನಗರ, ಮೈಸೂರು-೫೭೦೦೨೨.

ತಮ್ಮ ಮನೆಗೆ ಕರೆದುಕೊಂಡು ಹೋದರು. ಸಾಕಷ್ಟು ಸ್ಥಿತಿವಂತರಿರಬೇಕು. ವಿಶಾಲವಾದ ಹಾಲಿನಲ್ಲಿ ನನಗೆ ಮತ್ತು ಸೇವಕನಿಗೆ ಸ್ವಲ್ಪ ದೂರದಲ್ಲಿ ಬಾಳೆಲೆ ಹಾಕಿಸಿದರು. ಮನೆಯಾಕೆ ಬಡಿಸಿದರು. ಊಟ ರುಚಿಕಟ್ಟಾಗಿತ್ತು. ತುಸು ಜಾಸ್ತಿಯೇ ಆಯಿತು. ಹೊಟ್ಟೆ ಭಾರವಾದ ಮೇಲೆ ಕೆಲಸ ಮಾಡುವುದು ಕಷ್ಟ ಯಜಮಾನರೊಡನೆ ಲೋಕಾಭಿರಾಮವಾಗಿ ಮಾತನಾಡುತ್ತಿದ್ದೆ. ಅವರು ಒಂದು ಫೋಟೋ ತಂದು ಕೈಲಿಟ್ಟರು. ಪದವಿಪತ್ರ ಹಿಡಿದುಕೊಂಡು ನಿಂತ ತರುಣಿ! ಲಕ್ಷಣವಾಗಿದ್ದಾಕೆ. ಯಜಮಾನರು ಹೇಳಿದರು : "ನೋಡಿ ಇವರೆ, ನಾವು ಹೊಯ್ಸಳ ಕರ್ನಾಟಕರು, ಭಾರದ್ವಾಜ ಗೋತ್ರದವರು. ಇವಳು ನನ್ನ ಮಗಳು ಬಿ.ಎಸ್ಸಿ. ಆಗಿದೆ. ಈಗ ಬೆಂಗಳೂರಿಗೆ, ಅಣ್ಣನ ಮನೆಗೆ ಹೋಗಿದ್ದಾಳೆ". ಮಧುರವಾದ ಭಾವನೆಗಳು ನನ್ನೆದೆಯನ್ನು ಹಿತವಾಗಿ ಬಿಸಿ ಮಾಡಿದವು; ಕನಸು ಕಾಣುವ ವಯಸ್ಸು. ಬಲೂನು ದೊಡ್ಡದಾಗುತ್ತಲೇ ಇತ್ತು! ಅಷ್ಟರಲ್ಲಿ ಅವರ ಧ್ವನಿ! "ನೀವು ಊರೂರು ತಿರುಗುತ್ತಿದ್ದೀರಿ! ನನ್ನ ಮಗಳಿಗೆ ಸರಿಯಾದ ವರ ಕಂಡರೆ ಮನಗೊಂದು ಪೋಸ್ಟ್ ಕಾರ್ಡ್ ಹಾಕಿ. ನೋಡಲು ನಿಮ್ಮ ಹಾಗೆ ಇದ್ದರೆ ಸಾಕು!" ಅವರು ನೇರವಾಗಿ ಹೇಳದಿದ್ದರೂ ಇಂಥ ಕೆಲಸದಲ್ಲಿ ಇರುವವರು ಬೇಡವೆಂಬುದನ್ನು ನನ್ನ ಸೂಕ್ಷ್ಮಮನಸ್ಸು ತಿಳಿದುಕೊಂಡಿತು. ಪೆಚ್ಚುನಗೆ ನಕ್ಕು "ಆಗಲಿ" ಎಂದು ಹೇಳಿಹೊರಟೆ.

ಹೊಳೆನರಸೀಪುರ ತಾಲ್ಲೂಕಿನ ಒಂದು ಹಳ್ಳಿ. ನನ್ನಲ್ಲಿದ್ದ ತಾಲ್ಲೂಕು ನಕ್ಷೆಯ ಪ್ರಕಾರ ಸರ್ಕಾರಿ ರಸ್ತೆಯಿಂದ ಸ್ವಲ್ಪ ಒಳಭಾಗದಲ್ಲಿ ಆ ಹಳ್ಳಿ ಇತ್ತು. ಬಸ್ ಹತ್ತಿದರೆ, ಎಲ್ಲಿ ಇಳಿದುಕೊಳ್ಳಬೇಕೆಂದು ತಿಳಿಯಲಿಲ್ಲ. ಬಸ್ ಕಂಡಕ್ಟರ್‌ನನ್ನು ಕೇಳಿದೆ. "ಅದೆಲ್ಲ ಗೊತ್ತಿಲ್ಲ ಸ್ವಾಮಿ. ಈ ಬಸ್ ಹೋಗೋಲ್ಲ, ಇಳಿಯಿರಿ" ಎಂದು ಸಿಡುಕಿದ. ಬಸ್ ಹೊರಡಲು ಇನ್ನೂ ಸಮಯವಿತ್ತು. ಕೆಳಗೆ ಇಳಿದು ವಯಸ್ಸಾದವರನ್ನು ವಿಚಾರಿಸಲು ಹೊರಟೆ. ಹುಡುಗರಿಗಿಂತ ಹಿರಿಯರಿಗೆ ನನ್ನ ಆದ್ಯತೆ. ಯಾಕೆಂದರೆ ಅವರು ಹೆಚ್ಚು ನಮಗೆ ಸ್ಪಂದಿಸುತ್ತಿದ್ದರೆನ್ನುವುದು ನನ್ನ ಅನುಭವ. ಯಾರೋ ಒಬ್ಬರು ಹೇಳಿದರು: "ನೀವು ಹಂಗೆ ಹಳ್ಳಿ ಹೆಸ್ರು ಹೇಳಿದ್ರೆ ಯಾರಿಗೂ ಗೊತ್ತಾಗೋಲ್ಲ. ಪೂರಿಪಲ್ಯದಲ್ಲಿ ಇಳಿದು ಅಲ್ಲಿಂದ ಆ ಹಳ್ಳಿಗೆ ನಡೆದುಕೊಂಡು ಹೋಗ್ಬೇಕು". "ಏನು ಪೂರಿಪಲ್ಯವೇ?!" ನಾನು ಆಶ್ಚರ್ಯದಿಂದ ಕೇಳಿದ್ದಕ್ಕೆ ಅವರು ಹೂಂಗುಟ್ಟಿದ್ದರು. ಬಸ್ ಹತ್ತಿ ಕುಳಿತೆ, ಸೇವಕನ ಜೊತೆ. ಕಂಡಕ್ಟರ್ ಟಿಕೆಟ್ ಕೊಡುತ್ತಿದ್ದ. ಹತ್ತಿರ ಬಂದ, ಕಣ್ಣಿನಲ್ಲೇ ಎಲ್ಲಿಗೆಂಬ ಪ್ರಶ್ನೆ ಇತ್ತು "ಪೂರಿಪಲ್ಯ" ಎಂದು ಹೇಳಿದೆ. "ಎಷ್ಟು"? ಎಂದು ಆತ ಕೇಳಿದಾಗ ಅದೇನು ಗಲಿಬಿಲಿಯಾಯಿತೋ ತಿಳಿಯದು "ಎರಡು ಸೀಟು" ಎಂದು ಹೇಳುವುದಕ್ಕೆ ಬದಲಾಗಿ "ಎರಡು ಪ್ಲೇಟು" ಎಂದುಬಿಟ್ಟೆ! ಜೂನಿಯರ್ ಕಾಲೇಜು-ಹೈಸ್ಕೂಲಿನ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಸುತ್ತಮುತ್ತಲ ಹಳ್ಳಿಗೆ ಹೋಗುವವರು – ಬಸ್ಸಿನಲ್ಲಿದ್ದರು. ನಗೆಯ ಬಾಂಬ್ ಸಿಡಿಯಿತು. ಎಲ್ಲರೂ "ಹೋ ಹೋ" ಎಂದು ಬಸ್ಸಿನ ಛಾವಣಿ ಕಿತ್ತುಹೋಗುವಂತೆ ನಕ್ಕರು. ಕಂಡಕ್ಟರ್ ಕೂಡ ಜೋರಾಗಿ ನಗುತ್ತ ಟಿಕೆಟ್ ಹರಿದುಕೊಟ್ಟ. ನಾಚಿಕೆಯಿಂದಲೋ ಅವಮಾನದಿಂದಲೋ ಮುಖವೆಲ್ಲ ಕೆಂಪಾಗಿ ಬಿಸಿಯಾಗಿತ್ತು. ಇಳಿಯಬೇಕಾದ ಸ್ಥಳ ಬರುವವರೆಗೂ ಪೇಪರ್‌ನಲ್ಲಿ ಮುಖ ಹುದುಗಿಸಿಕೊಂಡು ಕೂತೆ. ಇಳಿದ ಜಾಗದಲ್ಲೊಂದು ಗುಡಿಸಲು; ಪ್ರಾಯಃ ಪೂರಿಪಲ್ಯಕ್ಕೆ ಪ್ರಸಿದ್ಧವಾದ ಹೋಟಲು.

ಗುಂಡ್ಲುಪೇಟೆ ತಾಲ್ಲೂಕಿನ ಆ ಹಳ್ಳಿಗೆ ಇದ್ದುದು ಒಂದೇ ಬಸ್ಸು ಸಂಜೆ ಐದು ಗಂಟೆಗೆ. ತಪ್ಪಿದರೆ ಮಾರನೆಯ ದಿವಸವೇ. ಹೋದ ಮೇಲೆ ಪ್ರಶ್ನೆ ಎದುರಾಯಿತು. ಇರುವುದು ಎಲ್ಲಿ? ಪಶುವೈದ್ಯಶಾಲೆ ತೆರೆದಿತ್ತು. ಡಾಕ್ಟರರನ್ನು ಪರಿಚಯ ಮಾಡಿಕೊಂಡೆವು. ಅಲ್ಲಿ ಉಳಿದುಕೊಳ್ಳಲು ಅನುಮತಿ ಕೊಟ್ಟರು. ಮೂರು-ನಾಲ್ಕು ಮೈಲು ದೂರದ ಕಾಡಿಗೆ ಶಾಸನಕಲ್ಲನ್ನು ನೋಡಲು ಹೊರಟೆವು. ಸೇರುವಷ್ಟರಲ್ಲಿ ಕತ್ತಲೆ ಕವಿಯುತ್ತಿತ್ತು. ಆನೆ ಕಾಟ ಇದೆ ಎಂದು ಹೆದರಿಸಲಾಯಿತು ಕೂಡ. ವಾಪಸು ಬಂದೆವು. ರಾತ್ರಿಗೆ ಕಡಲೆಪುರಿ-ಬಾಳೆಹಣ್ಣಿನ ಊಟ. ಬೆಂಚುಗಳನ್ನು ಸೇರಿಸಿ ರಾತ್ರಿ ಕಳೆದು, ಬೆಳಗ್ಗೆ ಮತ್ತೆ ಕಾಡಿಗೆ ಹೋಗಿ ವೀರಗಲ್ಲು ಶಾಸನಗಳನ್ನು ನಕಲು ಮಾಡಿಕೊಂಡು ಬಂದೆವು. ಹೊಟ್ಟೆಗೆ ಏನು ಇಲ್ಲ. ಹಸಿವಿನ ತೀವ್ರತೆಯ ಅನುಭವ ಅಂದು ನನಗೆ ಆಯಿತು. ಕಡಲೆಪುರಿ ಬಾಳೆಹಣ್ಣು ಸಿಗಲಿಲ್ಲ. ನೀರು ಕುಡಿದು ಬಸ್‌ಗಾಗಿ ಕಾದೆವು. ಬಸ್ ಬಂತು ತಡವಾಗಿ! ಊರು ಸೇರಿದ ಕೂಡಲೆ ಹೋಟಲಿಗೆ ನುಗ್ಗಿದೆವು. ಈ ಅನುಭವ ಮರೆಯಲು ಸಾಧ್ಯವಾಗದ್ದು. ಈಗಲೂ ನಾನು ಹಸಿವಾದ ಕೂಡಲೇ ತಿನ್ನುವುದಿಲ್ಲ. ಕೇಳುತ್ತಿರುವುದು ಉದರವೋ ನಾಲಗೆಯೋ ಎಂದು ನನ್ನನ್ನೇ ಕೇಳಿಕೊಳ್ಳುತ್ತೇನೆ.

ನಾಗಮಂಗಲ ತಾಲ್ಲೂಕಿಗೆ ಇನ್ನೂ ಹೇಮಾವತಿಯ ನೀರಾವರಿ ಸೌಲಭ್ಯ ದೊರೆತಿರಲಿಲ್ಲ. ಮಂಡ್ಯಜಿಲ್ಲೆಯ ಅತ್ಯಂತ ಬಡ ತಾಲ್ಲೂಕು ಅದು. ನೀರಿಗೆ ಬರ. ಬಾಯಿ ಒಣಗಿತ್ತು. ನೀರು ಬೇಕೇ ಬೇಕಿತ್ತು. ಆ ಹಳ್ಳಿಯ ಮನೆಯೊಂದರ ಜಗುಲಿ ಹತ್ತಿ ಕೂಗಿದೆ: "ಅಮ್ಮಾ, ನೀರು ಬೇಕು". ಮನೆಯಾಕೆ ಬಂದು ನನ್ನನ್ನು ನೋಡಿ ಗಾಬರಿಯಾದಂತೆ ಕಂಡರು. "ನೀವು ಬ್ರಾಂಬ್ರಾ". ಆಕೆ ಕೇಳಿದರು. ಹೌದೆಂದೆ. "ನಿಮಗೆ ನಾವು ನೀರು ಕೊಡುವ ಹಾಗಿಲ್ಲ. ಅಯ್ಯೋ, ನೀವು ಇಲ್ಲಿಗೆ

ಬರಲೇ ಬಾರದು!" ಪರವಾಗಿಲ್ಲ ಎಂದರೂ ಕೇಳಲಿಲ್ಲ. ಹೊರಡಲು ಸೂಚಿಸಿದರು. ಹರಿಜನರ ಮನೆಗೆ ಬ್ರಾಹ್ಮಣರು ಬಂದರೆ ಅವರಿಗೆ ಕೇಡು ಸಂಭವಿಸುವುದಂತೆ. ಈ ಘಟನೆಯಾದ ಮೇಲೆ ನಾನು ಕಿತ್ತಳೆ–ಮೋಸಂಬಿಗಳನ್ನು ಚೀಲದಲ್ಲಿ ಇರಿಸಿಕೊಂಡು ಹೊರಡುತ್ತಿದ್ದೆ. ಆದರೆ ನನ್ನನ್ನು ಈಗಲೂ ಕಾಡುತ್ತಿರುವ ಪ್ರಶ್ನೆ ಎಂದರೆ ಯಾರು ಅಸ್ಪೃಶ್ಯರು ಎನ್ನುವುದು!

ಇಂಥ ಹತ್ತು ಹಲವು ನೆನಪುಗಳಿವೆ. ರಾಜಕಾರಣಿಗಳಿಂದಾಗಿ ಪ್ರವಾಸಿ ಬಂಗಲೆಯಿಂದ ನಮ್ಮನ್ನು ಹೊರಹಾಕಿದ್ದು, ಹಳ್ಳಿಯ ರಾಜಕೀಯ ದ್ವೇಷದ ಸಂದರ್ಭಗಳು, ಶಾಸನಗಳ ಸುತ್ತ ಹಬ್ಬಿರುವ ವಿಚಿತ್ರ ನಂಬಿಕೆಗಳು, ಶಾಸನಶಿಲೆಯೇ ಪೂಜೆಯ ದೇವರಾಗಿರುವುದು ಇತ್ಯಾದಿ ಅನುಭವಗಳದು ಬೇರೊಂದು ಕಥೆ. ಹೊಸತೆಂದು ಭಾವಿಸಿದ ಶಾಸನಗಳು ಕೆಲವೊಮ್ಮೆ ಪ್ರಕಟಗೊಂಡವೇ ಆಗಿದ್ದುಂಟು.

೨

ಗಣಿತದಲ್ಲಿ ನಾನೆಂದೂ ಚುರುಕಾಗಿರಲಿಲ್ಲ. ಅದು ಹೇಗೋ ಪಾಸಾಗುವಷ್ಟು ಅಂಕಗಳು ಬರುತ್ತಿದ್ದವು. ಪಿಯುಸಿಯಿಂದ ಪರಿಸ್ಥಿತಿ ಸುಧಾರಿಸಿತು ನಾನು ಆರ್ಟ್ಸ್ ತೆಗೆದುಕೊಂಡದ್ದರಿಂದ! ನನ್ನ ಮಿತ್ರ ಶ್ರೀ ಕೆ.ಜಿ. ಪ್ರಕಾಶ್ ಅವರಿಗೆ ಗಣಿತವೆಂದರೆ ಜೀವ. ಗಣಿತದ ಸಮಸ್ಯೆಗಳಿಗೆ ಉತ್ತರ ಕಂಡುಹಿಡಿಯುವಲ್ಲಿ ಅವರಿಗೆ ಇರುವ ಆಸಕ್ತಿ ನನಗೆ ಬೆರಗಿನ ಅಂಶ! ಶಾಸನದ ಅಕ್ಷರಗಳನ್ನು ಓದಲು ನನಗೆ ಸಾಧ್ಯವಾದ ಕ್ಷಣಗಳಲ್ಲಿ ಅವರ ನೆನಪಾಗುತ್ತದೆ. ಅವರು ಪಡುತ್ತಿದ್ದ ಸಂತೋಷದ ಅರ್ಥ ನನಗಾಗುತ್ತದೆ. ಅಕ್ಷರವನ್ನು ಓದಿದ್ದಕ್ಕೇ ಇಷ್ಟೊಂದು ಸಂತೋಷವಾಗುತ್ತಿದೆಯಲ್ಲ, ಇನ್ನು ನಮ್ಮ ಪ್ರಾಚೀನ ಮುನಿಗಳು ತಪಸ್ಸು ಮಾಡಿ ಅಕ್ಷರನನ್ನು ಸಾಕ್ಷಾತ್ಕರಿಸಿಕೊಂಡಾಗ ಎಷ್ಟು ಆನಂದಪಟ್ಟಿರಬೇಕು?!

ಎಪಿಗ್ರಾಫಿಯ ಕರ್ನಾಟಿಕ ಮಾಲೆಯ ಹಾಸನದ ಅನುಬಂಧ ಸಂಪುಟದ (XV) ಅರಸೀಕೆರೆ – ೨೪೬ನೆಯ ಶಾಸನ ಪಾಠ ಹೀಗಿತ್ತು:

೧ ಶ್ರೀ ಶ್ರೀ ಬಂನಾಕ
೨ ಕದೇವರ ಸಂಕೆಯಹಳಿ ಶ್ರೀ
೩ ನಂದದೀವಿಗೆ ಕಂಬ ದರ್ಮ

ಮೂರು ಸಾಲಿನ ಪುಟ್ಟ ಶಾಸನಪಾಠ ಸಮಾಧಾನ ತರಲಿಲ್ಲ. ಪಡಿಯಚ್ಚನ್ನು ತರಲಾಗಿತ್ತು. ನನ್ನ ಕೈಗೆ ಬಂದ ಪರಿಷ್ಕೃತ ಪಾಠವೂ ಸರಿ ಎನಿಸಲಿಲ್ಲ. ಪಡಿಯಚ್ಚನ್ನೇ ಹುಡುಕಿ ತಂದು ನೋಡಿದೆ. ಆಮೇಲೆ ಸಿದ್ಧವಾದ ಪಾಠ ಎಪಿಗ್ರಾಫಿಯ ಕರ್ನಾಟಿಕ ಪರಿಷ್ಕೃತ ೧೧ನೆಯ ಸಂಪುಟದಲ್ಲಿ ಪ್ರಕಟಗೊಂಡಿತು (ಅರಸೀಕೆರೆ–೨೮೭):

೧ ಬೇಲುರಾ ಶ್ರೀ ಚೆಂನಾಕೇ[ಶ*]
೨ ವದೇವರ ಸಂಕಿಯಹಳಿ ಶ್ರೀ
೩ ನಂದದೀವಿಗೆ ಕಂಬದ ಧರ್ಮ

ಎಪಿಗ್ರಾಫಿಯ ಕರ್ನಾಟಿಕ ಮಾಲೆಯ ಪರಿಷ್ಕೃತ ೯ನೆಯ ಸಂಪುಟದಲ್ಲಿ ಅಗ್ಗಡಲು ಗ್ರಾಮದ ಶಾಸನಗಳಲ್ಲಿ ಒಂದು ಶಾಸನದ (ಬೇಲೂರು–೨೧೨) ಮೂರನೆಯ ಸಾಲಿನಲ್ಲಿ ಒಂದು ಅಕ್ಷರ ಗೊತ್ತಾಗದೆ ಒಂದು ಚುಕ್ಕಿಯನ್ನು ಇಡಲಾಗಿತ್ತು. ಸುಮಾರು ೯–೧೦ನೆಯ ಶತಮಾನದ ಶಾಸನ. ಅಕ್ಷರಗಳು ದೊಡ್ಡದಾಗಿದ್ದವು. ಆದರೆ ಈ ಅಕ್ಷರ ಎಲ್ಲ ಸಾಲುಗಳನ್ನೂ ವ್ಯಾಪಿಸಿದಂತಿತ್ತು. ಕೊನೆಗೆ ಅದು "ಜ್ಜೈ" ಎಂಬುದು ಪತ್ತೆಯಾದಾಗ ಆನಂದಕ್ಕೆ ಪಾರವೇ ಇರಲಿಲ್ಲ. "ಚನ್ದ್ರಚುಜ್ಜೈನುಳ್ಳಿನ' ಎಂಬ ಭಾಗದ ಅರ್ಥ ಸ್ಪಷ್ಟವಾಯಿತು. ಹಾಗೆಯೆ ಎಂಟನೆಯ ಪರಿಷ್ಕೃತ ಸಂಪುಟದ ಮುದ್ರಣ ಕಾರ್ಯ ನಡೆಯುತ್ತಿತ್ತು. ಶಾಸನಪಾಠದ ಪದಸೂಚಿಯನ್ನು ಮಾಡುತ್ತಿದ್ದೆ. ಕೆಲ್ಲವತ್ತಿಯ ಒಂದು ಶಾಸನದ ಕೊನೆಯಲ್ಲಿ (ಹಾಸನ–೭೫). "ಯಿ ದರ್ಮ್ಮಕ್ಕೆ ಮಹಾಜನಂಗಳು ಸೊಡಪ್ಪಂಣಗೆ ವರ್ಷಂಪ್ರತಿನಿಬಂದಿಯಾಗಿ" ಎಂದು ಪಾಠವನ್ನೋದಿ ಸೊಡಪ್ಪಂಣ ಎಂಬುದು ವ್ಯಕ್ತಿಯೊಬ್ಬನ ಹೆಸರೆಂದು ಭಾವಿಸಿ ಸೂಚೀಪತ್ರವನ್ನೂ ಮಾಡಿದೆ. ಅನುಮಾನವಾಯಿತು. ಪಡಿಯಚ್ಚು ಇತ್ತು. ಒಮ್ಮೆ ನೋಡಿಬಿಡೋಣವೆಂದುಕೊಂಡೆ. ಮೊದಲ ಸಲಕ್ಕೆ 'ಸೊಡಪ್ಪಂಣ'ವೆಂದೇ ಕಂಡಿತು. ಮತ್ತೆ ಸೂಕ್ಷ್ಮವಾಗಿ ನೋಡಿದೆ; "ಸೊಡರೆಂಣೆಗೆ" ಎನ್ನುವುದು ಸರಿಯಾದ ಪಾಠವಾಗಿತ್ತು. ಅಕ್ಷರ ದುಂಡಗಿರಲಿಲ್ಲ. 'ಎ'ಕಾರವನ್ನು

ಅಕ್ಷರದ ಕೆಳಗೆ ಎಡಭಾಗದಿಂದ ಕೊಟ್ಟಿದ್ದರು; 'ಪ್ವ' ಎಂದೇ ಕಾಣುವಂತಿತ್ತು. ಈ ಪರಿಷ್ಕರಣ ನನಗೆ ಖುಷಿ-ಸಮಾಧಾನ ನೀಡಿತು. ಇಂಥ ಹತ್ತಾರು ಉದಾಹರಣೆಗಳಿವೆ.

ರೈಸ್ ಸಾಹೇಬರು ಅರಸೀಕೆರೆ ತಾಲ್ಲೂಕಿನ ಹಲಕೂರಿನ ಶಾಸನವೊಂದನ್ನು ಎಪಿಗ್ರಾಫಿಯ ಕರ್ನಾಟಿಕ ೫ನೆಯ ಸಂಪುಟದಲ್ಲಿ ಪ್ರಕಟಿಸಿದ್ದರು (ಅರಸೀಕೆರೆ-೬೨). ಹಲಕೂರಿಗೆ ಉತ್ತರ ಕಲ್ಲೇಶ್ವರ ದೇವಾಲಯದ ಬಳಿ ಇದ್ದ ಶಾಸನ ೬೭ನೆಯ ಸಾಲಿಗೆ ಕೊನೆಗೊಂಡಿದೆ; 'ಬ್ರಾಹ್ಮಣರಿಕೆ ಕೊಟ" ಎಂದು ಮುಕ್ತಾಯಗೊಂಡಿದೆ. ನನಗೆ ಏಕೋ ಆ ಶಾಸನವನ್ನು ನೋಡಬೇಕೆನ್ನಿಸಿತು. "ಮುಂದೆ ಬರವಣಿಗೆ ಇಲ್ಲ" ಎಂದು ರೈಸರು ಸ್ಪಷ್ಟವಾಗಿ ಹೇಳಿದ್ದರೂ, ಪ್ರಾಯಃ "ಭೇದಂ ಮೂರ್ತಿಯೊಳಲ್ಲದೆ" ಎಂಬ ಕಂದಪದ್ಯದ ಸೆಳೆತ ಇರಬೇಕು. ನಾಗಮಂಗಲ ತಾಲ್ಲೂಕಿನ ಲಾಲನಕೆರೆ ಗ್ರಾಮದ ಒಂದು ಶಾಸನದಲ್ಲಿ ಈ ಪದ್ಯ ಉಕ್ತವಾಗಿದೆ. ಅರಸೀಕೆರೆ ಬಸ್‌ಸ್ಟಾಂಡಿನಲ್ಲಿ ಹಲಕೂರಿಗೆ ಹೇಗೆ ಹೋಗಬೇಕೆಂದು ಕೇಳಿವರೆ 'ಗೊತ್ತಿಲ್ಲ' ಎಂಬುದೇ ಉತ್ತರ! ಯಥಾಪ್ರಕಾರ ವೃದ್ಧರನ್ನು ಹುಡುಕತೊಡಗಿದೆ. ಕಡೆಗೆ ಒಬ್ಬಾತ ಹೇಳಿದರು: "ಈಗ ಅದು ಜೆ.ಸಿ.ಪುರ ಆಗಿದೆ" ಜಯಚಾಮರಾಜಪುರ ಯಾನೆ ಜೆ.ಸಿ. ಪುರಕ್ಕೆ ಸಾಕಷ್ಟು ಬಸ್ಸುಗಳಿದ್ದವು. ಆ ಹಳ್ಳಿ ಸೇರಿ. ಪಾಳು ಈಶ್ವರ ದೇವಾಲಯದ ಬಳಿ ಇದ್ದ ಶಾಸನವನ್ನು ನೋಡಿದೆ. ರೈಸ್ ಅವರು ಹೇಳಿದಂತೆ ೬೭ನೆಯ ಸಾಲಿಗೆ ಕೊನೆಗೊಂಡಿರಲಿಲ್ಲ. ಮತ್ತೆ ಆರು ಸಾಲುಗಳಿದ್ದವು. ಮಹತ್ತ್ವದ ವಿಷಯವಿತ್ತು. ಆಯ್ದ ಪಾಠಭಾಗವಿದು (ಸಂಪುಟ ೧೧, ಅರಸೀಕೆರೆ-೯೬)

೬೮ ಕ್ಷಿತಿವಿನುತೆ

೬೯ [ಸರ್ಬ್ಬ]ದೇವನ ಸತಿ ಸಂನುತೆ ಸೋಮಿಯಕನಣುಗಿನ ಪುತ್ತ್ರಂ ಸತುಕವಿ ಶಾಂತಮಹಂತಂ ಸ್ತಿತಿಸಾರಂ ಪೇಳ್ದನರ್ತ್ಥಿಯಿಂ ಶಾಸನಮಂ॥

೭೦ ಬಿರುದಲೇಹಕಾಚಾರ್ಯ್ಯ ಶಾಂನ್ತಿನಾಥ ಪಂಣ್ಡಿತರ ತಂಮಸೂರ್ಯ್ಯಣನ ಬರಹ

ಪ್ರಸ್ತುತ ಶಾಸನ ಕವಿ ಮತ್ತು ಬರಹಗಾರರ ಹೆಸರುಗಳನ್ನು ನಮೂದಿಸುತ್ತದೆ.

ಶಾಸನೋಕ್ತ ಶಬ್ದಗಳಲ್ಲಿ ಕೆಲವು ಮನದಲ್ಲಿ ನಿಂತುಬಿಟ್ಟಿವೆ; ಗುಣಗಳ್ಳ, ಭಯಲೋಭದುರ್ಲಭ. ಸದ್ಧರ್ಮಲೋಭಿ, ಜಂಗಮಸರಸ್ವತಿ, ಕನ್ನಡಮೇರು, ಬಡವರಬೇಲಿ, ಸರಸ್ವತೀಗಣದಾಸಿ ಇತ್ಯಾದಿ. ಸಂತೋಷ ಎಂಬ ಸಾಮಾನ್ಯ ಶಬ್ದಕ್ಕೆ ಬದಲಾಗಿ ಶಾಸನವೊಂದರಲ್ಲಿರುವ 'ಚಿತ್ತೋತ್ಸವ' ಎಂಬ ಶಬ್ದ ರೋಮಾಂಚನವನ್ನುಂಟುಮಾಡಿತು. ಹಾಗೆಯೇ ಜಿನಸಮಯವನದಹನ ದಾವಾನಳ, ಬೌದ್ಧಸಮಯವಿಧ್ವಂಸನಪ್ರವೀಣ, ಬಸದಿಗಳ ಹೊಸೆದು ಮುಕ್ಕೆ ಶಿವಲಿಂಗ ಸಿಂಹಾಸನ ಸ್ಥಾಪಕ ಮುಂತಾದವು ನನಗೆ ಖುಷಿಯನ್ನೇನೂ ನೀಡಲಿಲ್ಲ. ವೀರರ ಸ್ವಾಮಿ ನಿಷ್ಠೆಗೆ ಬೆರಗಾಗಿದ್ದೇನೆ. ಕೆಲವು ಶಾಪವಾಕ್ಯಗಳಿಗೆ ಅಸಹ್ಯಪಟ್ಟುಕೊಂಡಿದ್ದೇನೆ. ದೇವಾಲಯಗಳನ್ನು ಕಟ್ಟಿದ ಶಿಲ್ಪಿ ರೂವಾರಿಗಳು ತಮ್ಮ ಕೂಲಿಯನ್ನೂ ದೇವರ ಸೇವೆಗೆ ಬಿಟ್ಟುಕೊಟ್ಟದ್ದನ್ನು ಗಮನಿಸಿದಾಗ ಅವರ ಧಾರ್ಮಿಕ ಸ್ವಭಾವಕ್ಕೆ ಮಾರುಹೋಗಿದ್ದೇನೆ; ಭಕ್ತಿಯ ಪರಾಕಾಷ್ಠೆಗೆ ತಲೆಬಾಗಿದ್ದೇನೆ; ಮತ್ತು ಮುಗ್ಧ ಪ್ರಾಮಾಣಿಕತೆಯನ್ನು ಮೆಚ್ಚಿದ್ದೇನೆ.

"ಜನದೊಳಗೆ ನಾಲಗುಳ್ಳಾತನೆ ಬಾಳ್ಗು" ಎಂಬ ಶಾಸನವಾಕ್ಯವನ್ನು ಓದಿದಾಗ "ವೇದ ಸುಳ್ಳಾದರೂ ಗಾದೆ ಸುಳ್ಳಾಗದು" ಎಂಬ ಲೋಕಾನುಭವದ ಮಾತು ನೆನಪಾಗುತ್ತದೆ. "ಉರಿಯನುಗುಳ್ವ ಬೇಸಗೆ ... ಶೀತಮಬ್ಬರಿಸಿದಮಾಗಿ", "ಜೀವಂಗಳಿಗೆಲ್ಲ ಉದಕವೆ ಪ್ರಾಣ", "ನೀರೊಳಗಣ ತಾವರೆಯೆಲೆ ನೀರಪೊರದಂತೆ", "ಹಾಲುಂಡ ಮೇಲುಂಬುದೇ", "ಧರ್ಮವೆ ಪರಮಧನಂ", "ಸುಪುತ್ರಃ ಕುಲದೀಪಕಃ", "ನಾಸ್ತಿಸತ್ರಸಮೋಧರ್ಮೋ", "ದುರ್ಬಲಸ್ಯ ಬಲೋ ರಾಜಾ" - ಇಂಥ ನೂರಾರು ಶಾಸನಸಾಲುಗಳು ಮನದಲ್ಲಿ ಮುದ್ರೆಯೊತ್ತಿವೆ.

ಶಾಸನಗಳಲ್ಲಿ ಕಾಣಸಿಗುವ ರಾಜಕೀಯ ಇತಿಹಾಸಾಂಶಗಳಿಗಿಂತ ನನಗೆ ಹೆಚ್ಚು ಪ್ರಿಯವಾಗುವುದು ಸಾಹಿತ್ಯಕ ಮತ್ತು ಸಾಂಸ್ಕೃತಿಕ ಅಂಶಗಳು. ಶಾಸನಗಳು ಕೆರೆ ಕಟ್ಟಿಸುವುದನ್ನು ಪುಣ್ಯಕಾರ್ಯ ಎಂದು ಹೇಳಿದರೆ, ನನಗೆ ಅದು ಧಾರ್ಮಿಕ ವೇಷ ಧರಿಸಿದ ಸಾಮಾಜಿಕ ಕಾರ್ಯವಾಗಿ ಕಾಣುತ್ತದೆ. ಸ್ಥಳನಾಮ ಅಧ್ಯಯನಕ್ಕೂ ಶಾಸನಗಳು ಬಹುಮುಖ್ಯವಾದ ಆಧಾರಗಳಾಗಿವೆ. ಕಳೆದ ಸುಮಾರು ನಾಲ್ಕು ದಶಕಗಳಲ್ಲಿ ಶಾಸನಗಳ ಅಧ್ಯಯನದಿಂದ ಅನೇಕಾನೇಕ ಸಾತ್ತ್ವಿಕ ಆನಂದದ ಕ್ಷಣಗಳನ್ನು ಕಳೆದಿರುವುದಕ್ಕೆ ಬೆಲೆಯನ್ನು ಕಟ್ಟಲು ಸಾಧ್ಯವಿಲ್ಲ.

卐卐卐

# ಕರ್ನಾಟಕದಲ್ಲಿ ಅಶೋಕನ ಶಾಸನಗಳು

– ಶ್ರೀ ಆದಪ್ಪ ಪಾಸೋಡಿ*

**ಕ**ರ್ನಾಟಕವನ್ನು ಆಳಿದ ಮೊದಲ ದೊರೆ ಅಶೋಕ. ಇದಕ್ಕೂ ಮೊದಲು ಇಲ್ಲಿ ನಂದರ ಆಳ್ವಿಕೆ ಇತ್ತೆಂದು ಐತಿಹ್ಯವಿದೆಯಾದರೂ ಆಧಾರಗಳಿಲ್ಲ. ಕರ್ನಾಟಕದ ಬಹುಭಾಗ ಮೌರ್ಯ ಸಾಮ್ರಾಜ್ಯದ ಒಂದು ಭಾಗವಾಗಿತ್ತು ಎಂಬುದಕ್ಕೆ ಅವರ ಆಳ್ವಿಕೆಯ ಕುರುಹುಗಳಾದ ಅಶೋಕನ ಧರ್ಮಶಾಸನಗಳು ಸಾಕ್ಷಿಯಾಗಿವೆ. ಮೌರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದ ಚಂದ್ರಗುಪ್ತ ಮೌರ್ಯನ ಮೊಮ್ಮಗನಾದ ಅಶೋಕ ಚಕ್ರವರ್ತಿಯು ಕ್ರಿ.ಪೂ. ೨೬೧ರಲ್ಲಿ ತನ್ನ ಆಳ್ವಿಕೆಯ ಎಂಟನೆಯ ವರ್ಷದಲ್ಲಿ ಕಳಿಂಗದ ಮೇಲೆ ದಂಡೆತ್ತಿ ಹೋಗಿ ಘೋರ ಕದನ ಮಾಡಿ ಅನೇಕರನ್ನು ಸೆರೆ ಹಿಡಿದು, ಸಾವಿರಾರು ಜನರನ್ನು ಕೊಂದು, ಆ ರಾಜ್ಯದ ಮೇಲೆ ವಿಜಯ ಮೆರೆದನು. ರಾಜ್ಯಲಾಭದಿಂದ ಹರ್ಷದಿಂದಿರುವುದರ ಬದಲು ಪ್ರಾಣಹಾನಿಯಿಂದ ದುಃಖತಪ್ತನಾದನು. ಆಗಲೇ ಅಶೋಕನ ಜೀವನದಲ್ಲಿ ಅಪೂರ್ವ ಅಧ್ಯಾಯ ಪ್ರಾರಂಭವಾದುದು. ಅಂದಿನಿಂದ ಶಸ್ತ್ರಾಸ್ತ್ರಗಳನ್ನು ತ್ಯಜಿಸಿ, ಧರ್ಮಯಾತ್ರೆಯನ್ನು ಕೈಗೊಂಡನು, ಧರ್ಮದ ಸಂದೇಶವನ್ನು ಶಾಸನಗಳ ಮೂಲಕ ಸಾರಿದನು. ತನ್ನ ಧರ್ಮ ಸಂದೇಶದಲ್ಲಿ ಕುಟುಂಬ ಜೀವನ, ತಂದೆ-ತಾಯಿ, ಗುರು-ಹಿರಿಯರಿಗೆ ಗೌರವ, ಬ್ರಾಹ್ಮಣರು-ಶ್ರಮಣರು-ಸೇವಕರೊಂದಿಗೆ ನಡೆದುಕೊಳ್ಳುವ ಬಗೆ, ಅನಾರೋಗ್ಯ ಹಾಗೂ ವೃದ್ಧಾಪ್ಯದಿಂದ ಬಳಲುವವರಿಗೆ ಉಪಚಾರ, ಶೀಲ-ಸತ್ಯ-ಅಭಿಮಾನ ಗುಣಗಳ ಬಗ್ಗೆಯೂ ಉಲ್ಲೇಖಿಸಿದ್ದಾನೆ. ಕ್ಷಮಾಗುಣ, ಆತ್ಮಾವಲೋಕನ, ಭಿನ್ನಮತಕ್ಕೆ, ಗೌರವಾದರ, ಸಹಿಷ್ಣುತೆ, ಸದಾಚಾರ – ಇವೆಲ್ಲವುಗಳು ಅಶೋಕನ ಧರ್ಮಶಾಸನಗಳ ವಿಷಯಗಳಾಗಿವೆ. ತನ್ನ ಸಾಮ್ರಾಜ್ಯದ ಸಂಪನ್ಮೂಲವನ್ನು ಬಳಸಿಕೊಂಡು ದೇಶದ ಜನರಿಗೆಲ್ಲ ಸಂದೇಶ ತಲುಪಲಿ ಎಂದು ಧರ್ಮಶಾಸನಗಳ ಪ್ರತಿಗಳನ್ನು ನಾಡಿನ ಮೂಲೆ-ಮೂಲೆಗಳಲ್ಲಿ ಕಲ್ಲುಬಂಡೆ, ಕಂಬ ಮತ್ತು ಗುಹೆಗಳ ಗೋಡೆಗಳ ಮೇಲೆ ಕೊರೆಸಲು ತನ್ನ ಅಧಿಕಾರಿಗಳಿಗೆ ಆದೇಶಿಸಿದ. ಆದ್ದರಿಂದಲೇ ಅಶೋಕ ಸಾಮ್ರಾಟನ ಧರ್ಮದ ಕುರುಹುಗಳು ಇಂದಿಗೂ ನಮಗೆ ಲಭ್ಯವಿದೆ. ಧರ್ಮ ವಿಜಯವೇ ಮುಖ್ಯವಾದ ವಿಜಯ, ಈ ವಿಜಯದಿಂದ ಎಲ್ಲ ಕಡೆಗಳಲ್ಲೂ ಪ್ರೀತಿ ಲಭಿಸುತ್ತದೆ; ಹಾಗೆ ಲಭಿಸಿದ ಪ್ರೀತಿ ಸ್ವಲ್ಪವಾದರೂ ಕೂಡ ಪರದಲ್ಲಿ ಮಹತ್ವದ ಫಲ ಕೊಡುವುದೆಂದು ತಿಳಿದಿದ್ದನು. ಮುಂದುವರೆದು ತನ್ನ ಪುತ್ರ-ಪ್ರಪೌತ್ರರೂ ಹೊಸ ವಿಜಯವನ್ನು ಗಳಿಸಬೇಕೆಂದು ಯೋಚಿಸದಿರಲಿ. ಒಂದು ವೇಳೆ ಅವರಿಗೆ ಹೊಸ ವಿಜಯ ರುಚಿಕರವಾಗಿ ಕಂಡುಬಂದರೂ ಅವರಿಗೆ ದಂಡನೆ ಮತ್ತು ಕ್ಷಮೆ ಕೊಡುವ ಯೋಚನೆ ರುಚಿಸಲು; ಇಹಲೋಕ-ಪರಲೋಕಕ್ಕೂ ಧರ್ಮವಿಜಯವೇ ತಳಹದಿ ಎಂಬುದನ್ನು ಸ್ಪಷ್ಟಪಡಿಸಿದ್ದಾನೆ.

ಅಶೋಕನ ಶಾಸನಗಳನ್ನು ಸಾಮಾನ್ಯವಾಗಿ ಪ್ರಸ್ತರಲೇಖ, ಸ್ತಂಭಲೇಖ, ಹಾಗೂ ಗುಹಾಲೇಖಗಳೆಂದು ಮೂರು ಪ್ರಕಾರಗಳಾಗಿ ವಿಂಗಡಿಸಬಹುದು. ಪ್ರಸ್ತರ ಲೇಖಗಳನ್ನು ಬೃಹತ್ ಪ್ರಸ್ತರಲೇಖ, ಲಘು ಪ್ರಸ್ತರಲೇಖಗಳೆಂದೂ ವರ್ಗೀಕರಣ ಮಾಡಬೇಕಾಗುತ್ತದೆ. ಸನ್ನತಿ ಶಾಸನವನ್ನು ಹೊರತುಪಡಿಸಿ ಕರ್ನಾಟಕದಲ್ಲಿ ದೊರೆತಿರುವ ಅಶೋಕನ ಎಲ್ಲ ಶಾಸನಗಳೂ ಲಘು ಪ್ರಸ್ತರಲೇಖಗಳಾಗಿವೆ ಅವುಗಳನ್ನು ಜಿಲ್ಲಾವಾರು ಅಕಾರಾದಿಯಾಗಿ ಈ ಕೆಳಗಿನಂತೆ ಪಟ್ಟಿ ಮಾಡಬಹುದಾಗಿದೆ.

**ಸನ್ನತಿ ಶಾಸನ:** ಈ ಶಾಸನವು ೨.೩೩ ಥ ೧.೨೧ ಮೀ. ವಿಸ್ತೀರ್ಣ ಹೊಂದಿದ್ದು, ೩೦ ಸೆಂ.ಮೀ. ದಪ್ಪವಾಗಿರುತ್ತದೆ. ಚಂದ್ರಲಾ ಪರಮೇಶ್ವರಿದೇವಿಯ ವಿಗ್ರಹ ಪ್ರತಿಷ್ಠಾಪಿಸಲು ಅಶೋಕನ ಸಾಮ್ರಾಟನ ಈ ಶಿಲಾಫಲಕವನ್ನು ಬಳಸಿರುವುದು ಬಹುಶಃ ಶಿಲಾಶಾಸನದ ಬಗ್ಗೆ ತಿಳಿವಳಿಕೆ ಇಲ್ಲದಿರುವುದು ಅಥವಾ ಶಾಕ್ತಪಂಥದ ಬೆಳವಣಿಗೆಯ ಹಿನ್ನೆಲೆಯಲ್ಲಿ ಧಾರ್ಮಿಕ ಅಸಹನೆಯ ಒಂದು ಕುರುಹು ಇದಾಗಿರುವ ಸಾಧ್ಯತೆಯಿದೆ. ಫಲಕದ ಮುಂಭಾಗದಲ್ಲಿ ಬರೆಯಲಾಗಿರುವ ಎಂಟು ಸಾಲುಗಳು ಅಶೋಕನ ಹನ್ನೆರಡನೆಯ ಮುಖ್ಯ ಶಿಲಾಶಾಸನದ ಭಾಗಗಳಾಗಿವೆ. ಇದು ಧರ್ಮಸಹಿಷ್ಣುತೆ ಹಾಗೂ ಅನ್ಯಮತದವರ ಅಭಿಪ್ರಾಯ ಗೌರವಿಸುವುದರ ಬಗ್ಗೆ ಹೇಳುತ್ತದೆ – "ದೇವತೆಗಳಿಗೆ ಪ್ರಿಯನಾದ ಪ್ರಿಯದರ್ಶಿ ರಾಜನು

---

* ಶಿಕ್ಷಣ ಸಂಯೋಜಕ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಬೆಂಗಳೂರು ದಕ್ಷಿಣ ವಲಯ-೪, ಕೃಷ್ಣರಾಜಪುರ.

| ಕ್ರಸಂ. | ಬೆಳಕು ಚೆಲ್ಲಿದ ಮಹನೀಯರು/ಸಂಸ್ಥೆ ಮತ್ತು ವರ್ಷ | ಜಿಲ್ಲೆ ಮತ್ತು ತಾಲ್ಲೂಕು | ಶಾಸನ ದೊರೆತ ಸ್ಥಳ | ಶಾಸನ ಪ್ರಕಾರ |
|---|---|---|---|---|
| ೧. | ಭಾರತೀಯ ಪುರಾತತ್ತ್ವ ಸರ್ವೇಕ್ಷಣಾ ಇಲಾಖೆ, ೧೯೮೮-೮೯ | ಕಲಬುರ್ಗಿ, ಚಿತ್ತಾಪುರ | ಸನ್ನತಿ | ಶಿಲಾಫಲಕ |
| ೨. | ನಾರಾಯಣರಾವ್ ಶಾಸ್ತ್ರಿ, ಯಾಝುದಾನಿ, ೧೯೩೧ | ಕೊಪ್ಪಳ, ಕೊಪ್ಪಳ | ಗವಿಮಠ | ಲಘುಪ್ರಸ್ತರಲೇಖ |
| ೩. | ನಾರಾಯಣರಾವ್ ಶಾಸ್ತ್ರಿ, ಯಾಝುದಾನಿ, ೧೯೩೧ | ಕೊಪ್ಪಳ, ಕೊಪ್ಪಳ | ಪಾಲ್ಕಿಗುಂಡು | ಲಘುಪ್ರಸ್ತರಲೇಖ |
| ೪. | ಬಿ.ಎಲ್. ರೈಸ್, ೧೮೯೨ | ಚಿತ್ರದುರ್ಗ, ಮೊಳಕಾಲ್ಮೂರು | ಜಟ್ಟಿಂಗರಾಮೇಶ್ವರ | ಲಘುಪ್ರಸ್ತರಲೇಖ |
| ೫. | ಬಿ.ಎಲ್. ರೈಸ್, ೧೮೯೨ | ಚಿತ್ರದುರ್ಗ, ಮೊಳಕಾಲ್ಮೂರು | ಬ್ರಹ್ಮಗಿರಿ | ಲಘುಪ್ರಸ್ತರಲೇಖ |
| ೬. | ಬಿ.ಎಲ್. ರೈಸ್, ೧೮೯೨ | ಚಿತ್ರದುರ್ಗ, ಮೊಳಕಾಲ್ಮೂರು | ಸಿದ್ಧಾಪುರ | ಲಘುಪ್ರಸ್ತರಲೇಖ |
| ೭. | ಎಸ್. ಶೆಟ್ಟರ್, ಎಸ್. ರಾಜಶೇಖರ್, ೧೯೭೮ | ಬಳ್ಳಾರಿ, ಸಿರುಗುಪ್ಪ | ಉಡೇಗೊಳ | ಲಘುಪ್ರಸ್ತರಲೇಖ |
| ೮. | ಎಸ್. ಶೆಟ್ಟರ್, ಎಸ್. ರಾಜಶೇಖರ್, ೧೯೭೮ | ಬಳ್ಳಾರಿ, ಸಿರುಗುಪ್ಪ | ನಿಟ್ಟೂರು | ಲಘುಪ್ರಸ್ತರಲೇಖ |
| ೯. | ಬೀಡನ್ ಎಂಜಿನಿಯರ್, ೧೯೧೫ | ರಾಯಚೂರು, ಲಿಂಗಸೂಗೂರು | ಮಸ್ಕಿ | ಲಘುಪ್ರಸ್ತರಲೇಖ |

ಎಲ್ಲ ಅನ್ಯಧರ್ಮೀಯರನ್ನು, ಪರಿವ್ರಾಜಕರನ್ನು, ಗೃಹಸ್ಥರನ್ನು, ವಿಧವಿಧವಾದ ದಾನ ಮತ್ತು ಪೂಜೆಗಳಿಂದ ಸಮನಾಗಿ ಗೌರವಿಸುತ್ತಾನೆ. ಆದರೆ ಅದೇ ದಾನ ಮತ್ತು ಪೂಜೆಗಳನ್ನು ದೇವತೆಗಳಿಗೆ ಪ್ರಿಯನಾದವನು ತನಗಾಗಿ ಒಪ್ಪುವುದಿಲ್ಲ ಏಕೆ? ಎಲ್ಲ ಧರ್ಮಾನುಯಾಯಿಗಳಲ್ಲೂ ಅವರವರ ಧರ್ಮದ ಸಾರವರ್ಧನೆಯಾಗಲಿಯೆಂದು. ಈ ಸಾರವರ್ಧನೆಯೆನ್ನುವುದು. ಅನೇಕ ವಿಧಗಳಲ್ಲಿ ಆಗುತ್ತದೆ. ಅದರ ಮೂಲವಿರುವುದು ವಾಕ್‌ಸಂಯಮದಲ್ಲಿ. ಹಾಗೆಂದರೇನು? ತನ್ನ ಧರ್ಮದಲ್ಲಿ ಅತ್ಯಭಿಮಾನವಾಗಲಿ, ಪರಧರ್ಮದಲ್ಲಿ ಅನಾದರವಾಗಲಿ, ಸಂದರ್ಭಕ್ಕೆ ಅನುಚಿತವೆನಿಸುವ ಸಣ್ಣ ಮಾತಾಗಲಿ ಕೂಡದು. ಅಂತಹ ಸಂದರ್ಭಗಳಲ್ಲಿ ಪರಧರ್ಮೀಯರನ್ನು ಅವರವರ ರೀತಿಯಲ್ಲಿಯೇ ಗೌರವಿಸತಕ್ಕದ್ದು. ಹೀಗೆ ಮಾಡುವುದರಿಂದ ಅವನು ತನ್ನ ಧರ್ಮವನ್ನು ಬಲಪಡಿಸುತ್ತಾನೆ. ಪರಧರ್ಮೀಯರಿಗೂ ಉಪಕಾರ ಮಾಡುತ್ತಾನೆ. ಹೀಗೆ ಮಾಡದೆ ಅನ್ಯಥಾ ನಡೆದುಕೊಂಡರೆ ತನ್ನ ಧರ್ಮವನ್ನು ಹಾಳು ಮಾಡುತ್ತಾನೆ. ಪರಧರ್ಮೀಯರಿಗೂ ಅಪಕಾರ ಮಾಡುತ್ತಾನೆ. ಯಾರು ತನ್ನ ಧರ್ಮವನ್ನು ಹೆಚ್ಚಾಗಿ ಆದರಿಸುತ್ತಾನೋ ಅವನು ಹಾಗೆ ಮಾಡುವುದು ಪರಧರ್ಮವನ್ನು ಹಳಿಯುವುದಕ್ಕೋ? ಇಲ್ಲವೆ ತನ್ನ ಧರ್ಮವಲ್ಲಿ ಅತ್ಯಾದರವನ್ನು ತೋರಿಸುವುದಕ್ಕೋ? ಇಲ್ಲವೆ ತನ್ನ ಧರ್ಮವನ್ನು ಬೆಳಗಲೆಂದೋ? ಆದರೆ ಹೀಗೆ ಮಾಡುವುದರಿಂದ ಅಂಥವನು ನಿಜಕ್ಕೂ ತನ್ನ ಧರ್ಮಕ್ಕೆ ವಿಶೇಷ ಹಾನಿ ಉಂಟುಮಾಡುತ್ತಾನೆ. ಅದಕ್ಕಾಗಿ ಸಮನ್ವಯವೇ ಸಾಧುವಾದದ್ದು ಏಕೆ? ಆಗ ಬೇರೆ ಅಭಿಪ್ರಾಯವುಳ್ಳವರೂ ಧರ್ಮೋಪದೇಶವನ್ನು ಕೇಳುವರು. ಗೌರವದಿಂದ ನಡೆದುಕೊಳ್ಳುವರು. ಇದುವೇ ದೇವತೆಗಳಿಗೆ ಪ್ರಿಯನಾದವನ ಇಚ್ಛೆ, ಏಕೆ? ಎಲ್ಲ ಅನ್ಯಧರ್ಮೀಯರೂ, ಬಹುಶ್ರುತರೂ ಎಲ್ಲರ ಕಲ್ಯಾಣವನ್ನು ಬಯಸುವವರೂ ಆಗಲೆಂದು; ಯಾರು ಯಾರು ಯಾವ ಯಾವುದರಿಂದ ಪ್ರಸನ್ನರಾದರೂ ಅವರೆಲ್ಲರೂ ಹೀಗೆ ಹೇಳುವಂತಾಗಬೇಕು – ದೇವತೆಗಳಿಗೆ ಪ್ರಿಯನಾದವನು ತನ್ನ ರೀತಿಯಲ್ಲಿಯೇ ದಾನ-ಪೂಜೆಗಳನ್ನು ಮಾನ್ಯ ಮಾಡುವುದಿಲ್ಲ. ಏಕೆಂದರೆ ಎಲ್ಲ ಅನ್ಯ ಧರ್ಮಾನುಯಾಯಿಗಳನ್ನು ಅವರವರ ಧರ್ಮದ ಸಾರವೃದ್ಧಿ ಆಗಬೇಕೆಂದು.

ಮುಂದುವರೆದ ೯ ರಿಂದ ೧೨ನೆಯ ಸಾಲುಗಳು ಬೃಹತ್ ಪ್ರಸ್ತರಲೇಖದ ಹದಿನಾಲ್ಕನೆಯ ಮುಖ್ಯ ಶಿಲಾಶಾಸನದ ಭಾಗವಾಗಿದ್ದು, "ಇಯಂ ಧಂಮಲಿಪಿ ದೇವಾನಂಪಿಯೆನ' ಎಂದು ಆರಂಭವಾಗುತ್ತದೆ. ಅಂದರೆ ಈ ಧರ್ಮಲಿಪಿಯು ದೇವತೆಗಳಿಗೆ ಪ್ರಿಯನಾದ ಪ್ರಿಯದರ್ಶಿ ರಾಜನಿಂದ ಬರೆಯಿಸಲಾಗಿದೆ ಎಂದರ್ಥ ಕೆಲವೆಡೆಗಳಲ್ಲಿ ಸಂಕ್ಷಿಪ್ತವಾಗಿ, ಕೆಲವೆಡೆ ಮಧ್ಯಮಾಕಾರದಲ್ಲಿ, ಇನ್ನು ಕೆಲವೆಡೆ ವಿಸ್ತಾರವಾಗಿ; ಎಲ್ಲವೂ ಎಲ್ಲ ಸ್ಥಳಗಳಲ್ಲಿಯೂ ಸಮರ್ಪಕವೆನಿಸದು. ವಿಸ್ತಾರವಾದ ರಾಜ್ಯವನ್ನು ಗೆದ್ದದ್ದಾಯಿತು. ಬಹಳಷ್ಟು ಲಿಪಿಗಳನ್ನು ಬರೆಯಿಸಿದ್ದಾಯಿತು. ಹೀಗೆಯೇ ನಿತ್ಯವೂ ಬರೆಯಿಸುತ್ತಲೇ ಇರುವೆನು. ಕೆಲವೆಡೆಗಳಲ್ಲಿ ಮತ್ತೆ ಮತ್ತೆ ಬರೆಯಿಸಿದ್ದನ್ನೇ ಬರೆಯಿಸಿದ್ದೂ ಉಂಟು. ಆ ಬರಹ ಸ್ವಾರಸ್ಯವಾದದ್ದೆಂದು ಕಂಡದ್ದರಿಂದ ಮತ್ತು ಜನರಿಗೂ ಹಾಗೆ ಕಾಣಲಿ ಎಂದು ಕೆಲವೆಡೆಗಳಲ್ಲಿ ಬರಹ ಅಪೂರ್ಣವಾಗಿರಬಹುದು, ಅಸಮರ್ಪಕವಾಗಿರಬಹುದು, ಸಂಶಯಕ್ಕೆ ಎಡೆಯುಳ್ಳದ್ದಾಗಿರಬಹುದು. ಲಿಪಿಕಾರನ ತಪ್ಪಿನಿಂದಲೂ ಅದು ಆಗಿರಬಹುದು ಎಂಬುದನ್ನು ಆಲೋಚಿಸಿರಬಹುದು. ಈ ಶಾಸನವು ಸಮಾರೋಪ ರೂಪದ್ದಾಗಿದೆ. ಇದು ಧರ್ಮಲಿಪಿಗಳಲ್ಲಿ ಲಿಪಿಕಾರನ ಸ್ಥಳೀಯ ಕಾರಣಗಳಿಗಾಗಿ ಉಂಟಾಗಿರಬಹುದಾದ ಅಸಮರ್ಪಕತೆ-ಅಸಮಗ್ರತೆಗಳಿಗಾಗಿ ಕ್ಷಮಾಯಾಚನೆಯರೂಪದಲ್ಲಿದೆ. ಪ್ರಸ್ತುತ ಶಿಲಾಶಾಸನದ ೧೨ ಸಾಲುಗಳು ಗಿರ್ನಾರ್ ಕಲ್ಸಿ ಮತ್ತು ಆಂಧ್ರಪ್ರದೇಶದ ಎರ್ರಗುಡಿಯಲ್ಲಿ ದೊರೆತಿರುವ ಅಶೋಕನ ಹನ್ನೆರಡು ಮತ್ತು ಹದಿನಾಲ್ಕನೆಯ ಮುಖ್ಯ ಶಿಲಾಶಾಸನಗಳೊಂದಿಗೆ ಸಾಮ್ಯತೆ ಹೊಂದಿ.

ಪೀಠದ ಹಿಂಭಾಗದಲ್ಲಿರುವ ೧೫ ಸಾಲುಗಳ ಶಾಸನವು ಮೊದಲನೆಯ ಪ್ರತ್ಯೇಕ ಶಿಲಾಶಾಸನದ ಅಳಿದುಳಿದ ಭಾಗವಾಗಿದ್ದು, ಇದರ ಇತರ ಭಾಗಗಳು ಫಲಕದ ಮೇಲೆ ಮತ್ತು ಎಡಪಾರ್ಶ್ವದಲ್ಲಿದ್ದಿರಬಹುದಾದ ಸಾಧ್ಯತೆ ಇದೆ. ಶಿಲಾಫಲಕವನ್ನು ಪೀಠವನ್ನಾಗಿ ಮಾಡುವಾಗ ಬಹಳ ತ್ರುಟಿತವಾಗಿದೆ. ಕೆಲವು ಅಕ್ಷರಗಳ ಸಹಾಯದಿಂದ ಹೇಳುವುದಾದಲ್ಲಿ ಇದು ಕಳಿಂಗ ಪ್ರದೇಶದ ಜೌಗಾಡದ ಮೊದಲನೆಯ ಪ್ರತ್ಯೇಕ ಶಿಲಾಶಾಸನದ ಸಾರಾಂಶದೊಂದಿಗೆ ಹೋಲಿಕೆಯಾಗುತ್ತದೆ. ಇದರಲ್ಲಿ ಹೀಗೆ ಹೇಳಲಾಗಿದೆ – "ದೇವತೆಗಳಿಗೆ ಪ್ರಿಯನಾದವನ ಆಜ್ಞಾನುಸಾರ ತೊಸಾಲಿಯರಲ್ಲಿರುವ ಮಹಾಮಾತ್ಯರು ಮತ್ತು ನಗರ ವ್ಯವಹಾರಕರಿಗೆ ಹೀಗೆ ತಿಳಿಸಲಾಗಿದೆ: 'ನನಗೆ ಯಾವುದಾದರೂ ಮುಖ್ಯವೆಂದು ತೋರಿದಾಗ ಅದು ಹಾಗೆ ನಡೆಯಬೇಕೆಂದು ಬಯಸುತ್ತೇನೆ. ಅದು ಹೇಗೆ? ಅದನ್ನು ಕೃತಿಯಲ್ಲಿ ಪ್ರತಿಪಾದಿಸಬೇಕೆಂದು ಮತ್ತು ಯುಕ್ತರಾದವರ ದ್ವಾರಾ ಆರಂಭಿಸಬೇಕೆಂದು. ಇದು ನನ್ನ ಮುಖ್ಯವಾದ ಅಭಿಪ್ರಾಯ ಮತ್ತು ನಿಮ್ಮಗಳಿಗೆ ಅದರಂತೆ ತಿಳಿಯಪಡಿಸುವುದೇ ಸರಿಯಾದ ಆರಂಭ. ಸಾವಿರಾರು ಜೀವಿಗಳು ನಿಮ್ಮ ಅಧಿಕಾರಕ್ಕೆ ಒಳಪಟ್ಟಿದ್ದಾರೆ. ನಾವು ಸಜ್ಜನರಿಗೆಲ್ಲ ಪ್ರಿಯರಾಗಬೇಕು. ಎಲ್ಲ ಮಾನವರು ನನ್ನ ಮಕ್ಕಳು. ನನ್ನ ಮಕ್ಕಳಿಗಾಗಿ ನಾನು ಬಯಸುವುದೇನನ್ನು? ಎಲ್ಲರಿಗೂ ಇಹ-ಪರಗಳಲ್ಲಿ ಹಿತ-ಸುಖಗಳು ಲಭ್ಯವಾಗಬೇಕೆಂದು. ನನ್ನ ಮಕ್ಕಳಂತೆಯೇ ಎಲ್ಲ ಮನುಷ್ಯರಿಗೂ ಆಗಲೆಂದೂ ಬಯಸುತ್ತೇನೆ. ಈ ಉದ್ದೇಶ ಎಲ್ಲಿಯವರೆಗೆ ಸಾಧಿತವಾದಿಯೋ ತಿಳಿಯದು. ಇದು ಎಲ್ಲಿಯೋ ಒಬ್ಬನಲ್ಲಿ ಸಫಲವಾಗಬಹುದು. ಆದರೆ ಅವನೊಬ್ಬನೇ ಪರಿಪೂರ್ಣನಲ್ಲ, ಇದನ್ನು ನೀನು ಮನಗಾಣಬೇಕು – ಈ ನೀತಿಯು ಸುವಿಹಿತವಾಗಿದ್ದರೂ ಇದರಿಂದ ಒಬ್ಬನಾದರೂ ಕಷ್ಟ(ಬಂಧನ)ಕ್ಕೆ ಈಡಾಗಬಹುದು. ಒಂದು ವೇಳೆ ಆಕಸ್ಮಿಕವಾಗಿ ಅವನ ಕಷ್ಟ ಕೊನೆಯಾದರೂ ಬೇರೆಯವರು ಹಾಗೆಯೇ ಕಷ್ಟದಲ್ಲಿರಬಹುದು. ಆದುದರಿಂದ ನೀವು ಅನುಸರಿಸಬೇಕಾದ ಮಾರ್ಗ ಯಾವುದು? ಮಧ್ಯಮ ಮಾರ್ಗವೇ ಎಂದು ನಾವು ಪ್ರತಿಪಾದಿಸುತ್ತೇವೆ. ಈರ್ಷ್ಯೆ, ಶ್ರಮಕ್ಕೆ ಹಿಂಜರಿಯುವುದು, ಕಠೋರತೆ, ಆತುರ, ಆಲಸ್ಯ, ಸತತ ಪ್ರಯತ್ನ ಮಾಡದಿರುವುದು, ಅಲ್ಪಶ್ರಮದಿಂದಲೇ ದಣಿಯುವುದು – ಇಂಥ ದೋಷಗಳು ಜನ್ಮತಃ ಸಹಜವಾದವರಿಗೆ ಈ ಮಾರ್ಗ ಹೇಳಿದ್ದಲ್ಲ. ಹಾಗಾದರೆ ಇಷ್ಟವಾದದ್ದೇನು? ಈ ದೋಷಗಳು ನನ್ನಲ್ಲಿ ಹುಟ್ಟಬಾರದು ಎನ್ನುವುದು. ಇದೆಲ್ಲದರ ಮೂಲದಲ್ಲಿರುವುದು, ಶ್ರಮಕ್ಕೆ ಹಿಂಜರಿಯದ ದುಡಿಮೆ ಮತ್ತು ಆತುರ ಪಡದಿರುವುದು. ಸರಿಯಾದ ಮಾರ್ಗದಲ್ಲಿ ನಡೆಯುವುದಕ್ಕೆ ಬೇಸರಪಡುವವರು ಎಂದಿಗೂ ಉನ್ನತಿ ಪಡೆಯಲಾರರು. ಚಟುವಟಿಕೆಯಿಂದಿರುವುದು. ಮುನ್ನೋಡಿ ನಡೆಯುತ್ತಿರುವುದು. ಇದೇ ಸರಿಯಾದ ದಾರಿ. ತಮ್ಮೊಳಗೆ ಇದನ್ನು ಮನಗಾಣಿಸಿಕೊಂಡವರು ಉಳಿದವರಿಗೆ ಹೀಗೆ ಹೇಳಬೇಕು – 'ನಿಮಗೆ ರಾಜಾಜ್ಞೆ ತಿಳಿದಿಲ್ಲವೇ? ದೇವತೆಗಳಿಗೆ ಪ್ರಿಯನಾದವನ ಶಾಸನವಿರುವುದು ಹೀಗೆ ಇದನ್ನು ಅರಿತಿರುವುದು ಮಹಾಫಲವನ್ನು ನೀಡಬಲ್ಲದು, ಅರಿಯದೇ ಇರುವುದು ಮಹಾ ಅಪಾಯಕಾರಿಯಾಗಬಲ್ಲುದು. ವಿಪರೀತವಾಗಿ ತಿಳಿದುಕೊಂಡವರಿಗೆ ಸ್ವರ್ಗ ಸಿದ್ಧಿಸದು, ರಾಜಾನುಗ್ರಹವೂ ಸಿದ್ಧಿಸದು'. ಉತ್ಸಾಹದಿಂದ ಈ ಕಾರ್ಯವನ್ನು ನೆರವೇರಿಸುವವರಿಗೆ ನಾನು ಎರಡು ವಿಧಗಳ ಫಲಗಳನ್ನು ಕಲ್ಪಿಸಿದ್ದೇನೆ. ಇದನ್ನು ಸರಿಯಾಗಿ ಅರಿತು ಆಚರಿಸಿದವರಿಗೆ ಸ್ವರ್ಗವೂ ಲಭಿಸುತ್ತದೆ. ರಾಜನ ಋಣವೂ ಸಂದಾಯವಾಗುತ್ತದೆ. ಈ ಶಾಸನವನ್ನು ತಿಷ್ಯ ನಕ್ಷತ್ರದ ದಿನಗಳಲ್ಲಿ ಎಲ್ಲರೂ ಕೇಳಲೇಬೇಕು. ಬೇರೆ ದಿನಗಳಲ್ಲಿಯೂ ಪ್ರತಿಕ್ಷಣವೂ ಒಬ್ಬರಾದರೂ

ಕೇಳಬೇಕು. ಇದನ್ನು ನಿಮ್ಮ ದಿನಚರಿಯಲ್ಲಿ ಅನುಸರಿಸುತ್ತಲೂ ಪ್ರಕಾಶಪಡಿಸುತ್ತಲೂ ಇರಬೇಕು. ಈ ಲಿಪಿಯನ್ನು ಇಲ್ಲಿ ಬರೆಯಿಸಿರುವುದರ ಉದ್ದೇಶ ಇದು – ಈ ನಗರದ ಆಡಳಿತ ನಡೆಯಿಸುವವರು ಈ ನಿಯಮಗಳನ್ನು ಸದಾಕಾಲವೂ ಪಾಲಿಸುತ್ತಿರಲಿ ಎಂದು ಮತ್ತು ನಗರವಾಸಿಗಳಿಗೆ ಯಾವುದರಿಂದಲೂ ಬಾಧೆಯಾಗಲೀ ಯಾವುದೇ ವಿಧದ ಕ್ಲೇಶವಾಗಲೀ ಆಗದಿರಲಿ ಎಂದು. ಇದೇ ಉದ್ದೇಶದಿಂದಲೇ ಪ್ರತಿ ಐದು ವರ್ಷಗಳಿಗೊಮ್ಮೆ ಯಾರು ಯಾರೂ ಕರ್ಕಶರಲ್ಲವೋ, ಕ್ರೂರರಲ್ಲವೋ, ಕಾರ್ಯಾಚರಣೆಯಲ್ಲಿ ಮಾರ್ದವವುಳ್ಳವರೋ ಅಂತಹ ಅಧಿಕಾರವರ್ಗದವರನ್ನು ಕಳುಹಿಸುತ್ತೇನೆ. ಈ ಉದ್ದೇಶವನ್ನು ಮನಗಂಡವರಾಗಿ ಅವರೂ ನನ್ನ ಅನುಶಾಸನಗಳಂತೆ ನಡೆದುಕೊಳ್ಳುವರು. ಇದೇ ಉದ್ದೇಶ ಸಾಧನೆಗಾಗಿ ನನ್ನ ಕುಮಾರನು ಉಜ್ಜಯಿನಿಯಿಂದ ಪ್ರತಿ ಮೂರು ವರ್ಷಗಳನ್ನು ಮೀರದಂತೆ ತಪ್ಪದೆ ಅಧಿಕಾರ ವರ್ಗವನ್ನು ಕಳುಹಿಸುವನು. ಇದೇ ತೆರನಾಗಿ ತಕ್ಷಶಿಲೆಯಿಂದಲೂ ಪ್ರತಿ ಮೂರು ವರ್ಷಗಳಲ್ಲಿಯೂ ತಪ್ಪದೇ ನಡೆಯುವುದು ಯಾವ ಕಾಲದಲ್ಲಿ ಈ ಮಹಾಮಾತ್ರರು ಸಂಚಾರಾರ್ಥವಾಗಿ ಹೀಗೆ ಹೊರಡುತ್ತಾರೋ ಆ ಸಮಯದಲ್ಲೆಲ್ಲಾ ಅವರು ತಮ್ಮ ಇತರ ಕಾರ್ಯಗಳ ಜೊತೆಗೆ ಇದನ್ನು ತಿಳಿಸುವರು ಮತ್ತು ರಾಜ ಅನುಶಾಸನದಂತೆ ಕಾರ್ಯಚರಣೆ ನಡೆಸುವರು.

ಸನ್ನತಿಯ ಫಲಕದ ಮೇಲಿರುವ ಶಾಸನಗಳಲ್ಲೆಲ್ಲ ಹೆಚ್ಚು ಸುಸ್ಥಿತಿಯಲ್ಲಿರುವುದು ೧೮ ಸಾಲುಗಳ ಎರಡನೆಯ ಪ್ರತ್ಯೇಕ ಶಿಲಾಶಾಸನ. ಮೊದಲಿನ ನಾಲ್ಕು ಸಾಲುಗಳ ಆರಂಭದ ಅಕ್ಷರಗಳು ತ್ರುಟಿತವಾಗಿವೆ. ಈ ಶಾಸನದ ಸಾಲುಗಳು ಒರಿಸ್ಸಾದ ಗಂಜಾಂ ಜಿಲ್ಲೆಯ ಜೌಗಾಡ ಮತ್ತು ಪುರಿ ಜಿಲ್ಲೆಯ ಧೌಲಿ ಶಿಲಾಶಾಸನಗಳ ಸಾರಂಶವನ್ನು ಹೋಲುತ್ತಿದ್ದು, ಹದಿನೈದನೆಯ ಮುಖ್ಯ ಶಿಲಾಶಾಸನವೆಂದು ಕರೆಯಲ್ಪಟ್ಟಿದೆ. ಇದರ ಸಾರ ಇಂತಿದೆ: ದೇವತೆಗಳಿಗೆ ಪ್ರಿಯನಾದವನು ಹೀಗೆ ಹೇಳುತ್ತಾನೆ: ರಾಜನ ಆಜ್ಞಾನುಸಾರವಾಗಿ ಸಮಾಪಾದಲ್ಲಿರುವ ಮಹಾಮಾತ್ರರು ಇದನ್ನು ತಿಳಿದಿರಬೇಕು. ನನಗೆ ಯಾವುದಾದರೂ ಮುಖ್ಯವೆಂದು ತೋರಿದಾಗ ಅದು ಹಾಗೆ ನಡೆಯಬೇಕೆಂದು ಬಯಸುತ್ತೇನೆ. ಅದು ಹೇಗೆ? ಅದನ್ನು ಕೃತಿಯಲ್ಲಿ ಪ್ರತಿಪಾದಿಸಬೇಕೆಂದು ಮತ್ತು ಯುಕ್ತರಾದವರ ದ್ವಾರಾ ಆರಂಭಿಸಬೇಕೆಂದು. ಇದು ನನ್ನ ಮುಖ್ಯವಾದ ಅಭಿಪ್ರಾಯ ಮತ್ತು ನಿಮ್ಮಗಳಿಗೆ ಅದರಂತೆ ತಿಳಿಯಪಡಿಸುವುದೇ ಸರಿಯಾದ ಆರಂಭ. ಎಲ್ಲ ಮಾನವರು ನನ್ನ ಮಕ್ಕಳು. ನನ್ನ ಮಕ್ಕಳಿಗಾಗಿ ನಾನು ಬಯಸುವುದೇನನ್ನು? ಅವರಿಗೆ ಎಲ್ಲ ವಿಧದ ಹಿತಸುಖಗಳೂ ಲಭ್ಯವಾಗಬೇಕೆಂದು. ಇಹದಲ್ಲಿಯೂ ಪರದಲ್ಲಿಯೂ ಎಲ್ಲ ಮನುಷ್ಯರಿಗಾಗಿ ನಾನು ಬಯಸುವುದು ಇದನ್ನೇ. ನಾನು ಗೆಲ್ಲದೇ ಇರುವ ಗಡಿಪ್ರದೇಶಗಳ ಜನರು ತಮ್ಮನ್ನು ಕುರಿತು ಈ ರಾಜನ ಇಚ್ಛೆಯೇನು ಎಂದುಕೊಳ್ಳುತ್ತಿರಬಹುದು. ಗಡಿಯಲ್ಲಿರುವ ಜನಗಳನ್ನು ಕುರಿತು ನನ್ನ ಇಚ್ಛೆ ಇಷ್ಟೇ. ರಾಜನ ಇಚ್ಛೆ ಇಷ್ಟೇ ಎಂಬುದು ಅವರಿಗೆ ತಿಳಿದಿರಲಿ. ಅವರು (ಜನರು) ನನ್ನ ವಿಷಯದಲ್ಲಿ ಭಯಗ್ರಸ್ಥರಾಗಿರುವುದು ಬೇಡ. ನನ್ನಲ್ಲಿ ವಿಶ್ವಾಸವುಳ್ಳವರಾಗಲಿ. ನನ್ನಿಂದ ಅವರಿಗೆ ಸುಖವೆ ಲಭಿಸಬಹುದು. ದುಃಖವೆಂದಿಗೂ ಅಲ್ಲ ಮತ್ತು ಅವರಿಗೆ ತಿಳಿದಿರಲಿ – ಯಾವ ಯಾವ ಸಂದರ್ಭದಲ್ಲಿ ಕ್ಷಮೆಯು ಶಕ್ಯವೋ ಆಗೆಲ್ಲ ರಾಜನು ನಮ್ಮನ್ನು ಕ್ಷಮಿಸುವನೆಂದು ನನ್ನ ನಿಮಿತ್ತವಾಗಿ ಅವರು ಧರ್ಮಮಾರ್ಗದಲ್ಲಿ ನಡೆಯುತ್ತಿರಬೇಕು. ಇಹ–ಪರದಲ್ಲೂ ಸಮೃದ್ಧಿ ಪಡೆಯಲೆಂದು. ಈ ಉದ್ದೇಶಕ್ಕಾಗಿಯೇ ನಿಮಗೆ ನನ್ನ ಅನುಶಾಸನ ಇದು. ಇದರಿಂದ ನನ್ನ ಋಣವೂ ತೀರಲಿ. ನಿಮ್ಮನ್ನು ಅನುಶಾಸಿಸುವುದರಲ್ಲೂ ನಿಮ್ಮ ಇಚ್ಛೆಯನ್ನು ತಿಳಿಯಬೇಕೆಂಬುದರಲ್ಲೂ ನನ್ನ ಸತತ ಪ್ರಯತ್ನ ಹಾಗೂ ಪ್ರತಿಜ್ಞೆ ಅಚಲವಾದುವು. ಯಾವ ಜನರಲ್ಲಿ ಆಶ್ವಾಸನೆ ಉಂಟು ಮಾಡುವುದಿದೆಯೋ ಅವರನ್ನು ಕುರಿತು ಕಾರ್ಯಾಚರಣೆ ಇಂತಿರಬೇಕು ಅದರಿಂದ ಅವರು ಏನೆಂದು ಮನಗಾಣಬೇಕೆಂದರೆ – "ನಮ್ಮ ರಾಜ ನಮಗೆ ತಂದೆಯಂತೆಯೇ, ತನ್ನವರಲ್ಲಿರುವ ಸಹಾನುಭೂತಿಯೇ ಅವನಿಗೆ ನಮ್ಮಲ್ಲಿಯೂ ಇದೆ. ಈ ರಾಜನಿಗೆ ತನ್ನ ಮಕ್ಕಳು ಹೇಗೋ ಹಾಗೆಯೇ ನಾವು' ಎಂದು. ಎಲ್ಲ ದೇಶಾಧಿಕಾರಿಗಳಿಗೂ, ಭರವಸೆ ನೀಡುತ್ತೇನೆ. ಜನಗಳಲ್ಲೆಲ್ಲ ವಿಶ್ವಾಸವನ್ನು, ಅವರ ಹಿತಸುಖಗಳನ್ನೂ ಸಾಧಿಸುವುದಕ್ಕೆ ಸಮರ್ಥರು ಎಂದು. ಹಾಗೆ ಮಾಡುವುದರಿಂದ, ಸ್ವರ್ಗವು ಸಿದ್ಧಿಸುತ್ತದೆ. ನನ್ನ ಋಣದ ತೀರ್ವೆಯೂ ಆಗುತ್ತದೆ. ಈ ಉದ್ದೇಶದಿಂದ ಲಿಪಿಯನ್ನಿಲ್ಲಿ ಬರೆಸಲಾಗಿದೆ. ಗಡಿನಾಡಿನವರಲ್ಲಿ ಭರವಸೆಯನ್ನುಂಟು ಮಾಡಲು ಮತ್ತು ಅವರನ್ನು ಧರ್ಮಮಾರ್ಗದಲ್ಲಿ ನಡೆಯಿಸಲು ಇಲ್ಲಿಯ ಮಹಾಮಾತ್ರರು ಇದನ್ನು ಶಾಶ್ವತವಾದ ನಿಯಮವೆಂದು ತಿಳಿದಿರಲಿ. ಈ ಲಿಪಿಯನ್ನು ಪ್ರತಿ ನಾಲ್ಕು ತಿಂಗಳಲ್ಲೂ ಎಲ್ಲರೂ ಕೇಳಬೇಕು. ಲಕ್ಷ್ಯಗೊಟ್ಟು ಶಾಂತಚಿತ್ತದಿಂದ ಒಬ್ಬನೇ ಆದರೂ ಕೇಳಬೇಕು. ಹೀಗೆ ಮಾಡುತ್ತಿರುವಾಗಲೇ ಅದನ್ನು ಆಚರಣೆಯಲ್ಲಿ ಪ್ರಕಟಿಸಲು ಮನಸಾರೆ ಪ್ರಯತ್ನಿಸಬೇಕು.

ಸನ್ನತಿ ಶಾಸನಗಳಿಂದ ಇಂದಿನ ಕರ್ನಾಟಕ ಪ್ರದೇಶದಲ್ಲಿ ಮೊದಲ ಬಾರಿಗೆ ಅಶೋಕನ ಮುಖ್ಯ ಹಾಗೂ ಪ್ರತ್ಯೇಕ

ಶಿಲಾಶಾಸನಗಳು ಕಂಡುಬಂದಂತಾಗಿದೆ. ಇಲ್ಲಿಯ ೧೨ ಮತ್ತು ೧೪ನೆಯ ಮುಖ್ಯ ಶಾಸನಗಳಲ್ಲಿ 'ರ'ಕಾರದ ಬದಲಿಗೆ 'ಲ'ಕಾರ ಉಪಯೋಗಿಸಲಾಗಿದೆ. ಶಾಸನಗಳು ಬ್ರಾಹ್ಮಿಲಿಪಿಯಲ್ಲಿದ್ದು, ಭಾಷೆ ಮಾತ್ರ ಆರಂಭಿಕ ಕಾಲದ ಪ್ರಾಕೃತವಾಗಿದೆ. ಪ್ರಸ್ತುತ ಸನ್ನತಿ ಶಾಸನಗಳು ಕಲಿಂಗ ಪರಿಸರದ ಶಾಸನಗಳನ್ನು ಹೋಲುವುದರಿಂದ ಅಶೋಕನ ಮಾನಸಿಕ ಪಶ್ಚಾತ್ತಾಪ ಇಲ್ಲೂ ವ್ಯಕ್ತವಾಗಿದೆ. ಅಂದರೆ ಕಲಿಂಗ ಯುದ್ಧದ ಘೋರತೆ ಇಲ್ಲಿಯೂ ಮುಂದುವರೆದಿರುವುದು ಸ್ಪಷ್ಟವಾಗುತ್ತದೆ. ಆದರೆ ಯಾವ ಸ್ಥಳದಲ್ಲಿಯ ಯುದ್ಧ ಮೊದಲಿನದು ಎಂಬುದು ತಿಳಿದುಬರುವುದಿಲ್ಲ. ಸನ್ನತಿಯಿಂದ ಕನಗಾನಹಳ್ಳಿಯವರೆಗಿನ ಪ್ರದೇಶದಲ್ಲಿ ಸಿಕ್ಕಿರುವ ಅವಶೇಷಗಳಲ್ಲಿ ಬುದ್ಧನ ಜಾತಕ ಕಥೆಗಳ ಶಿಲ್ಪ, ಬುದ್ಧನ ಮೂರ್ತಿಶಿಲ್ಪ, ಅಶೋಕ ಮತ್ತು ಅವನ ಪತ್ನಿಯ ಉಬ್ಬುಶಿಲ್ಪ(?), ನಾಗಶಿಲ್ಪ ಹಾಗೂ ಶಾತವಾಹನರ ಕಾಲದ ಲಜ್ಜಾಗೌರಿ ಪ್ರಮುಖವಾಗಿದೆ. ಈ ಎಲ್ಲ ಶಿಲ್ಪಗಳು ಸ್ಥಳೀಯ ಪರಸೀಕಲ್ಲಿನಲ್ಲಿ ಮಾಡಲ್ಪಟ್ಟಿರುತ್ತವೆ.

ಬ್ರಹ್ಮಗಿರಿ, ಶಾಸನದ ಮೊದಲನೆಯ ಸಾಲಿನಲ್ಲಿ ಉಕ್ತವಾಗಿರುವ ಸುವಂಣಗಿರಿ > ಸುವರ್ಣಗಿರಿ > ಸ್ವರ್ಣಗಿರಿ > ಸಣ್ಣದಿ > ಸನ್ನತಿ ಆಗಿರಬಹುದಾದ ಸಾಧ್ಯತೆಯಿದೆ. ಹಾಗಾದರೆ 'ಸುವರ್ಣಗಿರಿ' ಎನ್ನುವ ಸ್ಥಳನಾಮದಿಂದ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟಿಂಗರಾಮೇಶ್ವರ ಹಾಗೂ ಸಿದ್ಧಾಪುರ ಪರಿಸರಗಳನ್ನು ಕರೆಯಲಾಗುತ್ತಿತ್ತು ಎಂಬುದು ಈಗಾಗಲೇ ಸ್ಪಷ್ಟವಾಗಿದೆ. ಈ ಎರಡೂ ಆಕರಗಳನ್ನು ಗಮನಿಸಿದಾಗ ಬಹುಶಃ ಮೊಳಕಾಲ್ಮೂರು ತಾಲ್ಲೂಕಿನ ಸುವರ್ಣಗಿರಿ ಪ್ರದೇಶ, ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಸನ್ನತಿಯನ್ನೂ ಒಳಗೊಂಡಂತೆ, ಕೃಷ್ಣಾನದಿಯ ಉಪನದಿಗಳ ದಡದ ಮೇಲಿರುವ ಎಲ್ಲ ಸ್ಥಳಗಳೂ ಪ್ರಾಗೈತಿಹಾಸಿಕ ಕಾಲದಿಂದ ಅವಿಚ್ಛಿನ್ನ ಜನವಸತಿ ಕೇಂದ್ರಗಳಾಗಿದ್ದು, ಇತಿಹಾಸಪೂರ್ವ ಕಾಲದಲ್ಲೂ ಧಾರ್ಮಿಕ, ವಾಣಿಜ್ಯ ಹಾಗೂ ರಾಜಕೀಯ ಪ್ರಾಮುಖ್ಯತೆಯ ಕೇಂದ್ರಗಳಾಗಿ ಬೆಳೆದಿದ್ದಿರಬೇಕು.

**ಗವಿಮಠ ಶಾಸನ:** ಇದರಲ್ಲಿ ಒಟ್ಟು ಎಂಟು ಸಾಲುಗಳಿದ್ದು, 'ದೇವಾನಂಪಿಯ ಆಹ' ಎಂದು ಆರಂಭವಾಗುತ್ತದೆ. ಪ್ರಥಮ ಪುರುಷ ಏಕವಚನದ ಸರ್ವನಾಮ 'ನಾನು' ಎಂದು ಅಶೋಕನು ಸಂಬೋಧಿಸಿಕೊಂಡಿದ್ದು, ನೇರವಾಗಿ ಸಾಮ್ರಾಟನಿಂದಲೇ ಹೊರಡಿಸಲ್ಪಟ್ಟ ಶಾಸನವಾಗಿದೆ. ಬ್ರಾಹ್ಮಿಲಿಪಿ, ಪ್ರಾಕೃತ ಭಾಷೆಯಲ್ಲಿರುವ ಶಾಸನದ ಅನುವಾದ ಹೀಗಿದೆ: 'ದೇವನಾಂಪ್ರಿಯನು ಹೀಗೆ ಹೇಳುತ್ತಾನೆ – ನಾನು ಎರಡೂವರೆ ವರ್ಷಗಳಿಗಿಂತ ಹೆಚ್ಚು ಕಾಲ ಅಂತರಂಗದಲ್ಲೆ ಶಾಕ್ಯನಾಗಿದ್ದೆ. ಆದರೆ ಅಷ್ಟು ಚೆನ್ನಾಗಿ ಧರ್ಮಕ್ಕಾಗಿ ಮನಸ್ಸಿಟ್ಟು ಪ್ರಯತ್ನಿಸಲಿಲ್ಲ. ಆದರೆ ಈಗ ಒಂದು ಸಂವತ್ಸರಕ್ಕಿಂತ ಹೆಚ್ಚು ಕಾಲ ಸಂಘವನ್ನು ಪ್ರವೇಶಿಸಿ ಚೆನ್ನಾಗಿ ಪ್ರಯತ್ನಿಸಿರುವೆನು. ಈ ಕಾಲದಲ್ಲಿ ಜಂಬೂದ್ವೀಪದ ಜನರು ದೇವರುಗಳೊಂದಿಗೆ ಮಿಶ್ರರಾಗದಿದ್ದವರೆಲ್ಲರೂ ದೇವರುಗಳೊಂದಿಗೆ ಮಿಶ್ರರಾದರು. ಇದು ಪ್ರಯತ್ನದ ಫಲ. ಮಹಾತ್ಮರಿಂದ (ಮಹತೇನ) ಮಾತ್ರ ಇದು ಸಾಧ್ಯವೆಂದು ತಿಳಿಯಬೇಡಿ. ಕ್ಷುದ್ರ ಜನರೂ (ಖುದಕೇನ) ಕೂಡ ತಮ್ಮ ಪ್ರಯತ್ನದಿಂದ ಸ್ವರ್ಗವನ್ನು ಪಡೆಯಬಹುದು. ಇದಕ್ಕಾಗಿಯೇ ಈ ಧರ್ಮಶ್ರವಣವನ್ನು ಮಾಡಿರುವುದು. ಕ್ಷುದ್ರರೂ, ಮಹಾತ್ಮರೂ ಎಲ್ಲರೂ ಪರಿಕ್ರಮಿಸಲಿ ಎಂದು, ನೆರೆಯವರು ಕೂಡ ಇದನ್ನು (ಧರ್ಮಶ್ರದ್ಧೆ) ತಿಳಿಯಲಿ ಎಂದು, ಪರಿಕ್ರಮ ಎಂದರೆ ಇದು ಎಂದು, ಚಿರಸ್ಥಾಯಿಯಾಗಿ ನಿಲ್ಲಲಿ ಎಂದು; ಇದು ವರ್ಧಿಸುತ್ತದೆ, ವಿಪುಲವಾಗಿ ವರ್ಧಿಸುತ್ತದೆ. ಈಗಿನದಕ್ಕಿಂತ ಒಂದೂವರೆಯಷ್ಟು ವರ್ಧಿಸುತ್ತದೆ'.

ಕಲಿಂಗ ಯುದ್ಧದಲ್ಲಿ ವಿಜಯಿಯಾದ ನಂತರ ಅಶೋಕನು ಬೌದ್ಧಧರ್ಮ ಸ್ವೀಕರಿಸಿದ. ಎರಡೂವರೆ ವರ್ಷಗಳವರೆಗೆ ಅವನು ಸಾಮಾನ್ಯ ಉಪಾಸಕನಾಗಿದ್ದು, ನಂತರದ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಯವರೆಗೆ ಬೌದ್ಧ ಧರ್ಮಾಚರಣೆಯಲ್ಲಿ ವಿಶೇಷ ಆಸಕ್ತಿಯುಳ್ಳವನಾಗಿದ್ದನೆಂದು ಗವಿಮಠ ಲಘು ಪ್ರಸ್ತರಲೇಖದಿಂದ ತಿಳಿದುಬರುತ್ತದೆ. ಪ್ರಯತ್ನಪಟ್ಟರೆ ದೇವರುಗಳೊಂದಿಗೆ ಮಿಶ್ರರಾಗದ ಕೆಟ್ಟ ಜನರೂ ಕೂಡ ಮಹಾತ್ಮರಾಗುತ್ತಾರೆ. ಈ ಪರಿವರ್ತನೆಯ ಪ್ರಕ್ರಿಯೆಯೇ ಪರಿಕ್ರಮ ಎಂಬುದಾಗಿ ತಿಳಿಸುತ್ತಾನೆ. ಇಂಥ ಪರಿವರ್ತನೆ ಹೆಚ್ಚಾಗಲಿ ಎಂಬುದು ಅಶೋಕನ ಆಶಯ.

**ಪಾಲ್ಕಿಗುಂಡು ಶಾಸನ:** ಪಾಲ್ಕಿಗುಂಡು ಶಾಸನದಲ್ಲಿ ಎಂಟು ಸಾಲುಗಳಿದ್ದು, ಒಂದು–ಎರಡು ಮತ್ತು ಎಂಟನೆಯ ಸಾಲುಗಳ ಅಕ್ಷರಗಳು ಸಂಪೂರ್ಣ ಸವೆದಿವೆ. ಮೂರರಿಂದ ಏಳನೆಯ ಸಾಲುಗಳನ್ನು ಗಮನಿಸಿದರೆ ಇದು ಯಥಾವತ್ತಾಗಿ ಗವಿಮಠ ಶಾಸನದಂತೆಯೇ ಇರುತ್ತದೆ.

**ಜಟ್ಟಿಂಗ ರಾಮೇಶ್ವರ ಶಾಸನ:** ರಾಮಸಾಗರ ಗ್ರಾಮದ ಹತ್ತಿರವಿರುವ ಜಟ್ಟಿಂಗ ರಾಮೇಶ್ವರ ಬೆಟ್ಟವು ಸಮುದ್ರ ಮಟ್ಟದಿಂದ ೩೪೬೯ ಅಡಿ ಎತ್ತರದಲ್ಲಿದೆ. ಬೆಟ್ಟದ ಮೇಲಿನ ಶಾಸನ ಬಂಡೆಯನ್ನು ಸ್ಥಳೀಯರು 'ಬಳೆಗಾರ ಗುಂಡು'

ಎಂದು ಕರೆಯುತ್ತಾರೆ. ಪ್ರತಿವರ್ಷ ಜಾತ್ರೆಯ ಸಂದರ್ಭದಲ್ಲಿ ಬಳೆಗಾರರು ಬಂಡೆಯ ರಂಧ್ರಗಳ ಮೂಲಕ ದಾರ ಎಳೆದು ಗುಡಾರ ಕಟ್ಟಿ, ಅದರ ಕೆಳಗೆ ವ್ಯಾಪಾರ ಮಾಡುತ್ತಿದ್ದರಂತೆ, ಸ್ಥಳನಾಮದ ಬಗ್ಗೆ ಹೇಳುವುದಾದರೆ ಕ್ರಿ.ಶ.೯೬೨ರ ಶಾಸನವೊಂದು – ರಾವಣ ಸೀತೆಯನ್ನು ಕದ್ದೊಯ್ಯುತ್ತಿದ್ದಾಗ ಜಟಾಯು ಇಲ್ಲಿ ಅವನನ್ನು ತಡೆದು ಹೋರಾಡಿ ಸತ್ತಾಗ, ರಾಮನು ಜಟಾಯುವಿನ ಹೆಸರಿನಲ್ಲಿ ಲಿಂಗ ಪ್ರತಿಷ್ಠೆ ಮಾಡಿಸಿದನೆಂದು ತಿಳಿಸುತ್ತದೆ. ನಂತರ ಇಟ್ಟಿಗೆಯ ಆ ನಿರ್ಮಿತಿಯನ್ನು ಲಿಂಗ ಶಿವಜೀಯನು ಕಿತ್ತು ಹಾಕಿ, ರಾಮೇಶ್ವರನಿಗಾಗಿ ಕಲ್ಲಿನ ದೇವಾಲಯ ಕಟ್ಟಿಸಿದನೆಂದು ತಿಳಿಸುತ್ತದೆ. ಬಹುಶಃ 'ಜಟಾಯು ರಾಮೇಶ್ವರ'ವೇ 'ಜಟಿಂಗ ರಾಮೇಶ್ವರ' ಆಗಿರಬಹುದು. ಇನ್ನೊಂದು ಭೌಗೋಳಿಕ ಆಶ್ಚರ್ಯವೆಂದರೆ ಬೆಟ್ಟದ ದಕ್ಷಿಣಕ್ಕೆ ಸ್ವಲ್ಪ ದೂರದಲ್ಲಿ ನಿಂತು ನೋಡಿದರೆ ಬೆಟ್ಟದ ಮೇಲ್ಭಾಗವು ರೆಕ್ಕೆ ಮುರಿದು ಗಾಯಗೊಂಡು ರಣಹದ್ದಿನಂತೆ ಕಾಣಿಸುತ್ತದೆ. ಇದು ಕೂಡ 'ಜಟಿಂಗ ರಾಮೇಶ್ವರ'ವೆಂಬ ಹೆಸರು ಬರಲು ಕಾರಣವಾಗಿರುವ ಸಾಧ್ಯತೆಯಿದೆ. ನೊಳಂಬರು ಮತ್ತು ಚಾಲುಕ್ಯರ ಕಾಲದಲ್ಲಿ ಈ ಬೆಟ್ಟಕ್ಕೆ 'ಬಲ್ಗೊಡಿತೀರ್ಥ' ಎಂದು ಕರೆಯಲಾಗುತ್ತಿತ್ತು.

ರಾಮೇಶ್ವರ ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಬಂಡೆಯ ಒಂದರಿಂದ ಈ ಶಾಸನವಿದ್ದು, ಇದರ ಪ್ರಮಾಣ ೧೭'೬" x ೬'೬" ಆಗಿರುತ್ತದೆ. ಒಂದರಿಂದ ಆರು ಸಾಲುಗಳು ಸಂಪೂರ್ಣ ಸವೆದು ಹೋಗಿದ್ದು, ಏಳರಿಂದ ಇಪ್ಪತ್ತೇಳು ಸಾಲುಗಳು ಬ್ರಾಹ್ಮಿಲಿಪಿಯಲ್ಲಿಯೂ, ಕೊನೆಯ ಸಾಲು ಖರೋಷ್ಟಿ ಲಿಪಿಯಲ್ಲಿಯೂ ಇರುತ್ತದೆ. ಪ್ರಸ್ತುತ ಜಟ್ಟಿಂಗ ರಾಮೇಶ್ವರ ಶಾಸನವು ಅಶೋಕನ ಒಂದನೇ ಲಘು ಪ್ರಸ್ತರಲೇಖದ ಪ್ರತಿಯಾಗಿರುತ್ತದೆ. ಅದರ ಅನುವಾದ ಇಂತಿದೆ: "ಸುವರ್ಣಗಿರಿಯಿಂದ ಆರ್ಯಪುತ್ರ ಮತ್ತು ಮಹಾಮಾತ್ರರು ಇಸಿಲದಲ್ಲಿರುವ ಮಹಾಮಾತ್ರರ ಕ್ಷೇಮವನ್ನು ವಿಚಾರಿಸಿ ಈ ರೀತಿ ತಿಳಿಸಬೇಕು: ದೇವರಿಗೆ ಪ್ರಿಯನಾದವನು ಈ ರೀತಿ ಆಜ್ಞೆ ಮಾಡುತ್ತಾನೆ. ನಾನು ಉಪಾಸಕನಾಗಿ ಎರಡೂವರೆ ವರ್ಷಗಳಿಗಿಂತ ಹೆಚ್ಚಾಯಿತು. ಆದರೆ ಒಂದು ವರ್ಷದವರೆಗೆ ನಾನು ಹೆಚ್ಚು ಆಸಕ್ತಿಯುಳ್ಳವನಿರಲಿಲ್ಲ. ಸಂಘವನ್ನು ಸೇರಿ, ವಿಶೇಷ ಆಸಕ್ತಿಯುಳ್ಳವನಾಗಿ ಒಂದು ವರ್ಷಕ್ಕಿಂತಲೂ ಹೆಚ್ಚಾಗಿದೆ. ದೇವತೆಗಳೊಡನೆ ಮಿಶ್ರೀಭೂತರಾಗದಿದ್ದಂಥ ಜಂಬೂದ್ವೀಪದ ಜನರು (ನನ್ನ ಪ್ರಜೆಗಳು) ಈಗ ಮಿಶ್ರೀಭೂತರಾಗಿದ್ದಾರೆ. ಇದು ನನ್ನ ಪರಿಶ್ರಮದ ಫಲವು ಈ ಫಲವನ್ನು ಶ್ರೀಮಂತನಾದವನಷ್ಟೇ ಅಲ್ಲದೆ ಬಡವನು ಸಹ ಪರಿಶ್ರಮ ಪಟ್ಟರೆ ಸ್ವರ್ಗವನ್ನು ಪಡೆಯುವನು ಬಡವರಾಗಲೀ ಬಲ್ಲಿದರಾಗಲೀ ಈ ರೀತಿ ಪರಿಶ್ರಮಪಡಬೇಕೆಂದು, ನನ್ನ ರಾಜ್ಯದ ಗಡಿಯಲ್ಲಿದ್ದ ಜನರು ಇದನ್ನು ತಿಳಿಯಬೇಕೆಂದು ಮತ್ತು ಈ ಪರಿಶ್ರಮವು ಬಹುಕಾಲ ನಡೆಯಲೆಂದು ಘೋಷಣೆ ಹೊರಡಿಸಿರುವೆನು. ಇದು ನನ್ನಿಂದ ವೃದ್ಧಿಯಾಗುವುದು. ಒಂದೂವರೆ ಪಟ್ಟಿನಷ್ಟಾದರೂ ವೃದ್ಧಿ ಹೊಂದುವರು. ಈ ಘೋಷಣೆಯನ್ನು ನಾನು ೨೫೬ ರಾತ್ರಿಗಳನ್ನು ಸಂಚಾರದಲ್ಲಿ ಕಳೆದಾಗ ಹೊರಡಿಸಲಾಗಿದೆ. ದೇವಪ್ರಿಯನಾದವನು ಇನ್ನೂ ಈ ರೀತಿ ಹೇಳುತ್ತಾನೆ – ತಾಯಿ ತಂದೆ ಮತ್ತು ಹಿರಿಯರ ಆಜ್ಞೆಯನ್ನು ಪಾಲಿಸಬೇಕು. ಪ್ರಾಣಿಗಳಲ್ಲಿ ದಯೆ ತೋರಿಸಬೇಕು. ಸತ್ಯ ನುಡಿಯಬೇಕು. ಇಂಥ ಧರ್ಮಗುಣಗಳನ್ನು ಆಚರಿಸಬೇಕು. ಅದರಂತೆ ಶಿಷ್ಯನು ಆಚಾರ್ಯರಿಗೆ ಗೌರವವನ್ನು ತೋರಿಸಬೇಕು. ಆಪ್ತೇಷ್ಟರೊಡನೆ ಯೋಗ್ಯ ರೀತಿಯಿಂದ ನಡೆದುಕೊಳ್ಳಬೇಕು. ಇದು ಪುರಾತನವಾದ ನಿಯಮವಿದ್ದು, ದೀರ್ಘಾಯುಷ್ಯ ಪಡೆಯಲಿಕ್ಕೆ ಸಹಕಾರಿಯಾಗಿದೆ. ಈ ರೀತಿ ಪ್ರತಿಯೊಬ್ಬನೂ ನಡೆದುಕೊಳ್ಳಬೇಕು. ಈ ಶಾಸನವು ಲಿಪಿಕಾರ ಚಪಡನಿಂದ ಬರೆಯಲ್ಪಟ್ಟಿದೆ".

ಉಲ್ಲೇಖಿತ ಸುವರ್ಣಗಿರಿಯು ಮೌರ್ಯ ಸಾಮ್ರಾಜ್ಯದ ದಕ್ಷಿಣ ಪ್ರಾಂತದ ರಾಜಧಾನಿಯಾಗಿದ್ದು, ಅರಸು ಮನೆತನದ ಅಧಿಕಾರಿಯಾಗಿದ್ದ ಆರ್ಯಪುತ್ರನ ಕೈಕೆಳಗಿತ್ತೆಂದೂ ತಿಳಿದುಬರುತ್ತದೆ. 'ಇಸಿಲ' ಬಹುಶಃ ಸ್ಥಳೀಯ ವಿಭಾಗಕ್ಕೆ ಮುಖ್ಯ ಪಟ್ಟಣವಾಗಿದ್ದಿರಬೇಕು. ಜಟ್ಟಿಂಗ ರಾಮೇಶ್ವರ, ಬ್ರಹ್ಮಗಿರಿ ಮತ್ತು ಸಿದ್ಧಾಪುರ ಈ ಮೂರು ಸ್ಥಳಗಳು ಮೂರು ಮೈಲುಗಳ ತ್ರಿಕೋನಾಕಾರದ ಫಾಸಲೆಯಲ್ಲಿ ಪ್ರಾಚೀನ 'ಇಸಿಲ' ಇದ್ದಿರಬೇಕು. ಇದೇ ಸ್ಥಳದ ಶಾಸನವೊಂದು (ಕ್ರಿ.ಶ. ೧೧೯೦ರ ಹೊಯ್ಸಳ ದೊರೆ ಎರಡನೆಯ ವೀರಬಲ್ಲಾಳದ ಕಾಲ, 'ಹನೇಯ' ಪಟ್ಟಣದ ಮೇಲಿನ ವಿಜಯ ಮತ್ತು 'ವಿಜಯನಗರಿ'ಯ ಸ್ಥಾಪನೆಯ ಬಗ್ಗೆ ವಿವರಿಸುತ್ತದೆ. ಬಹುಶಃ ಜಟ್ಟಿಂಗ ರಾಮೇಶ್ವರ ಬೆಟ್ಟಪ್ರದೇಶದ ಹುಲಿಕುಂಟೆಕೆರೆ, ಚೌಡೇಶ್ವರಿಕೆರೆ, ಅಕ್ಕತಂಗಿಕೆರೆ ಪ್ರದೇಶಗಳು ಹೊಯ್ಸಳರ 'ಹನೇಯ' ಮತ್ತು ಮೌರ್ಯರ 'ಇಸಿಲ' ಆಗಿರುವ ಸಾಧ್ಯತೆಯಿದೆ. ಸುವರ್ಣಗಿರಿ ಮತ್ತು ಇಸಿಲಗಳಲ್ಲಿ ಮಹಾಮಾತ್ರರೆಂಬ ಉಚ್ಚಮಟ್ಟದ ಅಧಿಕಾರಿಗಳಿದ್ದರೆಂದು ತೋರುತ್ತದೆ. ಕರ್ನಾಟಕದ ಹೊರಗಡೆ ದೊರೆತ ಅಶೋಕನ ಇತರ ಶಾಸನಗಳಲ್ಲಿ ಅಂತಮಹಾಮಾತ್ರ (ಗಡಿಭಾಗದ ಅಧಿಕಾರಿ), ಧರ್ಮ ಮಹಾಮಾತ್ರ, ನಗರ ವ್ಯವಹಾರಕ ಮಹಾಮಾತ್ರ, ರಾಜವಾಚನಿಕ ಮಹಾಮಾತ್ರ (ಅರಸನ ವಿಶೇಷ ರಾಯಭಾರಿ) ಮತ್ತು ಸ್ತ್ರಧ್ಯಕ್ಷ

ಮಹಾಮಾತ್ರ (ಸ್ತ್ರೀಯರಿಗೆ ಸಂಬಂಧಪಟ್ಟ ಅಧಿಕಾರಿ) ಮುಂತಾದವರ ಉಲ್ಲೇಖವಿದೆ. ಇನ್ನು ಲಿಪಿಕಾರನ ಕೆಲಸ ಬಂಡೆಗಲ್ಲಿನ ಮೇಲಾಗಲಿ, ಸ್ತಂಭದ ಮೇಲಾಗಲಿ, ಗುಹೆಗಳಲ್ಲಾಗಲಿ ಶಾಸನ ಬರೆಯುವುದಾಗಿತ್ತು. ಇಂಥ ಅನೇಕ ಲಿಪಿಕಾರರು ಅಶೋಕನ ಸೇವೆಯಲ್ಲಿದ್ದಿರಬೇಕು.

**ಬ್ರಹ್ಮಗಿರಿ ಶಾಸನ:** ಬ್ರಹ್ಮಗಿರಿಯ ಅಶೋಕನ ಶಾಸನ ಚಿತ್ರದುರ್ಗ ಜಿಲ್ಲೆಯಲ್ಲಿನ ಅಶೋಕನ ಶಾಸನಗಳಲ್ಲೆಲ್ಲಾ ಉತ್ತಮ ಸ್ಥಿತಿಯಲ್ಲಿ ಉಳಿದುಕೊಂಡು ಬಂದಿದೆ. ಈ ಬ್ರಹ್ಮಗಿರಿ ಇರುವುದು ಸಿದ್ದಾಪುರದ ಬಳಿಯಲ್ಲಿಯೇ. ಶಾಸನವಿರುವುದು ಗಂಜಿಗುಂಟೆ ಮೂಲೆಯ ವಾಯುವ್ಯ ದಿಕ್ಕಿನ ಬಂಡೆಯ ಮೇಲೆ. ಜನರು ಅದನ್ನು 'ಅಕ್ಷರಗುಂಡು' ಎಂದು ಕರೆದು, ಅದರ ಮೇಲೆ ಸುರಿದ ನೀರನ್ನು ಔಷಧವಾಗಿ ಸೇವಿಸುವುದನ್ನು ರೂಢಿಕೊಂಡಿದ್ದರು. ೧೫'೬" ಥ ೧೧'೬" ವಿಸ್ತೀರ್ಣ ಹೊಂದಿದ ಬಂಡೆಯ ಮೇಲ್ಮೈ ಅಷ್ಟೇನು ನುಣುಪಾಗಿಲ್ಲ. ಸಾಲುಗಳೂ ಕೂಡ ಸ್ವಲ್ಪ ಓರೆಯಾಗಿವೆ. ಆರು ಮತ್ತು ಏಳನೆಯ ಸಾಲುಗಳ ಆರಂಭದಲ್ಲಿ ಅಕ್ಷರಗಳು ಸವೆದಿರುತ್ತವೆ. ಇದಕ್ಕೆ ಕಾರಣ ಬಂಡೆಗಲ್ಲಿನಲ್ಲಿ ಬಿರುಕು ಬಿಟ್ಟು, ಮಳೆನೀರು ಸೋರಿಹೋಗಿದೆ. ಉಳಿದಂತೆ ಶಾಸನಪಾಠವು ಜಟ್ಟಿಂಗ ರಾಮೇಶ್ವರ ಶಾಸನದಂತೆಯೇ ಇರುತ್ತದೆ.

**ಸಿದ್ಧಾಪುರ ಶಾಸನ:** ಸಿದ್ದಾಪುರ ಗ್ರಾಮದ 'ಎಮ್ಮೆ ತಮ್ಮನಗುಂಡು' ಹೆಸರಿನ ಬಂಡೆಯ ಮೇಲೆ ೧೩'೬" ಥ ೮' ಅಳತೆಯ ಜಾಗದಲ್ಲಿ ೨೨ ಸಾಲುಗಳ ಅಶೋಕನ ಶಾಸನವಿದೆ. ಬಂಡೆಯ ಮೇಲ್ಮೈ ಸಮತಟ್ಟಾಗಿಲ್ಲವಾದ್ದರಿಂದ ಸಾಲುಗಳ ಉದ್ದ ಹಿರಿದು-ಕಿರಿದಾಗಿದೆ. ಶಾಸನ ಬಂಡೆಯ ಮೇಲೆ ದನ-ಕುರಿಗಳು ನೆರಳಲ್ಲಿ ನಿಂತುಕೊಳ್ಳುವುದರಿಂದ ಅಕ್ಷರಗಳು ಅಸ್ಪಷ್ಟವಾಗುತ್ತಿವೆ. ೧೩ರಿಂದ ೧೯ನೇ ಸಾಲುಗಳ ಆರಂಭದ ಭಾಗ ಅಳಿಸಿಹೋಗಿದ್ದು, ಸಾರಾಂಶ ಮಾತ್ರ ಜಟ್ಟಿಂಗ ರಾಮೇಶ್ವರ ಶಾಸನದಂತೆಯೇ ಇರುತ್ತದೆ. ಸುವರ್ಣಗಿರಿ ಪ್ರಾಂತಕ್ಕೊಳಪಟ್ಟ ಬ್ರಹ್ಮಗಿರಿ-ಸಿದ್ದಾಪುರ-ಜಟ್ಟಿಂಗ ರಾಮೇಶ್ವರ ಪ್ರದೇಶಗಳು ದಕ್ಷಿಣ ಗಡಿಭಾಗದ ಸ್ಥಳಗಳಾಗಿದ್ದವೆಂದು ಲಘು ಪ್ರಸ್ತರಲೇಖಗಳಿಂದ ತಿಳಿಯುತ್ತದೆ. ಈ ಮೂರೂ ಲಘು ಪ್ರಸ್ತರಲೇಖಗಳಲ್ಲಿ ಲಿಪಿಕಾರನ ಹೆಸರು ಬಲದಿಂದ ಎಡಕ್ಕೆ ಖರೋಷ್ಠಿಯಲ್ಲಿ ಬರೆಯಲ್ಪಟ್ಟಿದ್ದು, ಇಂಥ ಉದಾಹರಣೆಗಳು ವಾಯವ್ಯ ಪಂಜಾಬ್ ಪ್ರದೇಶದಲ್ಲಿ ಮಾತ್ರ ಕಾಣುತ್ತವೆ. ದೇಶದ ಉತ್ತರ ಭಾಗದ ಲಿಪಿಕಾರರು ಶಾಸನ ಕೆತ್ತುವುದಕ್ಕಾಗಿ ದಕ್ಷಿಣಕ್ಕೆ ಬಂದರೋ ಅಥವಾ ದಕ್ಷಿಣದಲ್ಲಿದ್ದವರೇ ತಮ್ಮ ಖರೋಷ್ಠೀ ಭಾಷಾಜ್ಞಾನ ತೋರ್ಪಡಿಸುವುದಕ್ಕಾಗಿ ಬರೆದರೋ ಎನ್ನುವುದು ವಿಮರ್ಶಾರ್ಹವಾಗಿದೆ. ಈ ಮೂರು ಶಾಸನಗಳ ಪಠ್ಯ ಒಂದೇ ಆಗಿದ್ದು, ಪ್ರಮುಖವಲ್ಲದ ಕೆಲವು ಬದಲಾವಣೆಗಳು ಮಾತ್ರ ಇವುಗಳಲ್ಲಿರುತ್ತವೆ.

**ಉಡೆಗೊಳ ಶಾಸನ:** ಕಿರಿದಾದ ಆರು ಸಾಲುಗಳು ಒಂದು ಬಂಡೆಯ ಮೇಲೆ ಹಾಗೂ ಎಂಟರಿಂದ ಹದಿನಾಲ್ಕು ಸಾಲುಗಳು ಇನ್ನೊಂದು ಬಂಡೆಯ ಮೇಲಿದ್ದು, ಈ ಶಾಸನವು ಬಹಳ ತ್ರುಟಿತ ಸ್ಥಿತಿಯಲ್ಲಿದೆ. ಒಂದರಿಂದ ಆರು ಮತ್ತು ಒಂಬತ್ತನೆಯ ಸಾಲುಗಳು ಬ್ರಹ್ಮಗಿರಿ ಶಾಸನದಲ್ಲಿದ್ದಂತೆ ಇರುತ್ತವೆ. ಇದು ನಿಟ್ಟೂರು ಶಾಸನದ ಪ್ರತಿಯೂ ಆಗಿದೆ. ಎಂಟನೆಯ ಸಾಲಿನಲ್ಲಿ 'ರಾಜಾ ಅಸೋಕೋ ದೇವನಂಪಿಯೇ ಹೇವಂ ಆಹ' ಎಂದು ಹೇಳಲಾಗಿದೆ. ಮಾತಾ-ಪಿತರು, ಗುರುಗಳನ್ನು ಗೌರವದಿಂದ ಕಾಣಬೇಕೆಂಬುದು ದೇವಾನಂಪ್ರಿಯನ ವಚನವಾಗಿರುತ್ತದೆ. ಇದು ಧರ್ಮಗುಣವೂ ಆಗಿದೆಯೆಂಬುದು ಶಾಸನದ ಅರ್ಥ.

**ನಿಟ್ಟೂರು ಶಾಸನ:** ತುಂಗಾಭದ್ರಾ ನದಿ ದಂಡೆಯ ಮೇಲಿರುವ ನಿಟ್ಟೂರು ತೆಕ್ಕಲಕೋಟೆಯಿಂದ ವಾಯವ್ಯಕ್ಕೆ ೬ ಕಿ.ಮೀ. ದೂರದಲ್ಲಿದೆ. ನಿಟ್ಟೂರು ಹತ್ತಿರ ಶುಕ್ರದಪ್ಪ (ಚಿಕ್ಕಡ್ಡಪ್ಪ) ಬೆಟ್ಟದ ಪಶ್ಚಿಮದ ಅಂಚಿನಲ್ಲಿ ಪರಸ್ಪರ ೫೦ ಅಡಿ ಅಂತರದಲ್ಲಿರುವ ಎರಡು ಬಂಡೆಗಳ ಮೇಲೆ ಅಶೋಕನ ಶಾಸನವಿದೆ. ಮೊದಲ ಬಂಡೆಯ ಮೇಲೆ ನೆಲಮಟ್ಟದಿಂದ ಒಂದೂ ಕಾಲು ಮೀಟರ್ ಮೇಲೆ ಬರೆಯಲಾಗಿದ್ದು, ಶಾಸನಪಾಠ ಹಾಳಾಗಿರುತ್ತದೆ. ಬಂಡೆಯ ಸುತ್ತಳತೆ ೩೬', ಎತ್ತರ ೧೧ ೧/೪' ಇರುತ್ತದೆ. ಇದರಲ್ಲಿ ರಾಜನ ಹೆಸರನ್ನು ಎರಡು ಬಾರಿ 'ರಾಜಾ ಅಸೋಕೋ' ಎಂದು ಹೇಳಲಾಗಿದೆ. ಸಾಮ್ರಾಟನು ಪ್ರಾಂತದ ದಕ್ಷಿಣ ಭಾಗದಲ್ಲಿ ದೀರ್ಘ ಪ್ರವಾಸದಲ್ಲಿದ್ದಾಗ ತನ್ನ ೨೫೬ನೇ ದಿನದಂದು ಈ ಶಾಸನ ಬರೆಸಿ, ಇದರಲ್ಲಿ ತನ್ನ ದೇಶದ ಮತ್ತು ಗಡಿನಾಡಿನ ಉನ್ನತ ಹಾಗೂ ನಿಮ್ನವರ್ಗದ ಪ್ರಜೆಗಳು ಧರ್ಮಗುಣವನ್ನು ಬೆಳೆಸಿಕೊಳ್ಳಬೇಕೆಂದು ಸಾರಿರುವನು. ಈ ಶಾಸನದ ಆರು ಸಾಲುಗಳು ಗವಿಮಠ ಶಾಸನದ ಪಾಠದಂತೆ ಇರುತ್ತವೆ. ಎರಡನೆಯ ಬಂಡೆಯ ಮೇಲೆ ನೆಲದಿಂದ ಅರ್ಧ ಮೀಟರ್ ಮೇಲೆ ಬರೆಯಲಾಗಿದೆ. ಇಲ್ಲಿ ಎಂಟರಿಂದ ಹನ್ನೆರಡು ಸಾಲುಗಳಿವೆ. ಸುಮಾರು

೧೫' ಎತ್ತರದ ಬಂಡೆಯಿದಾಗಿದೆ. ಶಾಸನ ಸಾಲುಗಳೂ ೨೧' ಉದ್ದ ಆಗಿರುವುದರಿಂದ ನೇರವಾಗಿರುವುದಿಲ್ಲ. ಇಲ್ಲಿಯೂ 'ರಾಜಾ ಅಸೋಕೋ ಹೇವಂ ಆಹಂ' ಎಂದು ಪ್ರಾರಂಭವಾಗುವುದು. ಶಾಸನದ ಉದ್ದೇಶ ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯಗಳನ್ನು ಪ್ರಸಾರ ಮಾಡುವುದಾಗಿದೆ. ತಾಯಿ-ತಂದೆ, ಗುರುಗಳು ಮತ್ತು ಬ್ರಾಹ್ಮಣರ ಶುಶ್ರೂಷೆಯನ್ನು ಒಳಗೊಂಡ 'ಪುರಾಣಪಕಿತಿ'ಯನ್ನು ತಿಳಿಸುತ್ತದೆ. ಶಾಸನವು ಬ್ರಾಹ್ಮಿಲಿಪಿ, ಪ್ರಾಕೃತ ಭಾಷೆಯನ್ನು ಒಳಗೊಂಡಿದೆ.

**ಮಸ್ಕಿ ಶಾಸನ:** ಮಸ್ಕಿ ಗ್ರಾಮದ ಸಮೀಪವಿರುವ ಬೆಟ್ಟದ ನೈರುತ್ಯ ದಿಕ್ಕಿನಲ್ಲಿ ದೊಡ್ಡ ಬಂಡೆಯ ಮೇಲೆ ನಾಲ್ಕು ಸಾಲುಗಳ ಅಶೋಕನ ಶಾಸನವಿದ್ದು ಇದರಲ್ಲಿಯೂ ಕಾಲದ ಉಲ್ಲೇಖವಿರುವುದಿಲ್ಲ. ದೇವಾನಾಂಪ್ರಿಯ ಅಶೋಕನಾದ ನಾನು ಕಳೆದ ಎರಡೂವರೆ ವರ್ಷಗಳಿಂದ ನಮ್ರ ಶಿಷ್ಯನಾದೆ. ಅದಕ್ಕಿಂತಲೂ ಹೆಚ್ಚಾಗಿ ನಾನು ಸಂಘವನ್ನು ಸೇರಿದೆ. ಅದನ್ನು ಉತ್ಸುಕತೆಯಿಂದ ಸೇರಿದೆ. ಮೊದಲು ಕೆಲವೇ ಮಂದಿ ಜಂಬೂದ್ವೀಪದಲ್ಲಿ ದೇವರನ್ನು ಸಮೀಪಿಸಿದ್ದರು. ಧರ್ಮವನ್ನು ಆಚರಿಸುವುದರ ಮೂಲಕ ಸಾಮಾನ್ಯ ಮನುಷ್ಯನೂ ಕೂಡ ಇದನ್ನು ಸುಳ್ಳಾಗಿಸಿದ್ದಾನೆ. ಈಗ ಯಾರೂ ದೇವರನ್ನು ಸಮೀಪಿಸಲು ಯೋಚಿಸಬೇಕಿಲ್ಲ, ಚಿಕ್ಕವರು ಹಾಗೂ ದೊಡ್ಡವರು ಇದನ್ನು ಆಚರಿಸುವುದರ ಮೂಲಕ ಸಾಧನೆ ಮಾಡಬಹುದಾಗಿದೆಯೆಂದು ಹೇಳಲಾಗಿರುವ ಈ ಶಾಸನವು ಹೆಚ್ಚು ಕಡಿಮೆ ಗವಿಮಠ ಶಾಸನವನ್ನು ಹೋಲುತ್ತದೆ.

ಕರ್ನಾಟಕದಲ್ಲಿ ಈಚೆಗೆ ದೊರೆತ ಉಡೆಗೊಳ ಮತ್ತು ನಿಟ್ಟೂರು ಶಾಸನಗಳ ಹೊರತು 'ದೇವಾನಾಂಪಿಯ', 'ಪಿಯದಸಿ' ಎಂಬ ಸಂಬೋಧನೆಗಳಿರುತ್ತವೆ. ಆದರೆ ಮಸ್ಕಿ ಶಾಸನದಲ್ಲಿ 'ದೇವಾನಂಪಿಯ' ಪದದೊಂದಿಗೆ 'ಅಸೋಕಸ' ಎಂಬ ವ್ಯಕ್ತಿಗತ ಹೆಸರೂ ಮೊದಲಿಗೆ ಬೆಳಕಿಗೆ ಬಂದದ್ದರಿಂದ ಇದು ಅತ್ಯಂತ ಪ್ರಮುಖ ಮತ್ತು ಮಹತ್ವದ ಅಂಶವಾಗಿದೆ. ಏಕೆಂದರೆ ದೇವಾನಾಂಪ್ರಿಯನೂ, ಪ್ರಿಯದರ್ಶಿಯ, ಅಶೋಕನೂ ಒಬ್ಬರೇ ಎಂದು ಈ ಶಾಸನವು ದೃಢಪಡಿಸಿತು. ದೀಪವಂಶ-ಮಹಾವಂಶಗಳೆಂಬ ಬೌದ್ಧಧರ್ಮ ಗ್ರಂಥಗಳಲ್ಲಿ ಉಕ್ತವಾಗಿದ್ದ 'ಅಶೋಕ'ನೆಂಬ ಚಕ್ರವರ್ತಿ ಪೌರಾಣಿಕ ವ್ಯಕ್ತಿಯಾಗಿದ್ದ. ಆದರೆ ಐತಿಹಾಸಿಕ ಸತ್ಯವಾದದ್ದು ಮಸ್ಕಿ ಶಾಸನ ದೊರೆತ ತರುವಾಯವೇ. ನಂತರ ಕ್ರಿ.ಶ.೧೯೫೪ರಲ್ಲಿ ಮಧ್ಯಪ್ರದೇಶದ ಗುಜರ್ರಾದಲ್ಲಿ ದೊರೆತ ಶಾಸನದಲ್ಲಿ ಅಶೋಕ ಮಹಾರಾಜನ ಉಲ್ಲೇಖ ಬಂದಿತು. ಮಸ್ಕಿ ಪ್ರಾಗೈತಿಹಾಸಿಕ ನೆಲೆಯೂ ಆಗಿದ್ದು, ಅಂಥ ೧೭ ಸ್ಥಳಗಳನ್ನು ಇಲ್ಲಿ ಗುರುತಿಸಲಾಗಿದೆ. ಚಿನ್ನದ ಗಣಿಗಾರಿಕೆ ಬಹಳ ಹಿಂದಿನಿಂದಲೂ ಇಲ್ಲಿ ನಡೆಯುತ್ತಿದ್ದ ಬಗ್ಗೆ ತಿಳಿದುಬರುತ್ತದೆ. ಶಾಸನವಿರುವ ಬೆಟ್ಟಕ್ಕೆ ಹೊಂದಿಕೊಂಡಂತೆ ಗ್ರಾನೈಟ್ ಶ್ರೇಣಿಯಿದ್ದು, ತುತ್ತ ತುದಿಯಲ್ಲಿ ಸಮತಟ್ಟಾದ ಜಾಗಗಳಿವೆ. ಶಿಲಾಯುಗದ ಮಾನವರು ವಾಸಿಸುತ್ತಿದ್ದ ಗುಹೆಗಳು, ಮಸ್ಕಿ ಹಳ್ಳದ ಇಕ್ಕೆಲಗಳಲ್ಲಿ ಸಿಕ್ಕಿರುವ ಹೊಸ ಶಿಲಾಯುಗದ ಕಲ್ಲು ಕೊಡಲಿ - ಸುತ್ತಿಗೆಗಳು - ಈ ಎಲ್ಲ ಅಂಶಗಳು ಅಶೋಕ ಸಾಮ್ರಾಟನು ತನ್ನ ಶಾಸನ ಬರೆಯಿಸಲು ಆಯ್ದುಕೊಂಡ ಪರಿಸರಕ್ಕೆ ಪೂರಕ ಕಾರಣವಾಗಿದೆಯೆಂದರೆ ತಪ್ಪಾಗದು.

ಭಾರತದಲ್ಲಿ ದೊರೆತ ಅಶೋಕನ ಶಾಸನಗಳು ಬ್ರಾಹ್ಮಿಲಿಪಿಯಲ್ಲಿಯೂ, ಪ್ರಾಕೃತ (ಪಾಳಿ) ಭಾಷೆಯಲ್ಲೂ ಇವೆ. ಅಲ್ಪ ಸ್ವಲ್ಪ ಪ್ರಾದೇಶಿಕ ವ್ಯತ್ಯಾಸಗಳನ್ನು ಬಿಟ್ಟರೆ, ಭಾಷೆ ಎಲ್ಲ ಶಾಸನಗಳಲ್ಲಿಯೂ ಒಂದೇ ಆಗಿದೆಯೆಂದು ಹೇಳಬಹುದು. ಇದರಿಂದಾಗಿ ಪ್ರಾಕೃತ ಭಾಷೆಯು ದೇಶದ ಜನರೆಲ್ಲರಿಗೂ ಅರ್ಥವಾಗುತ್ತಿತ್ತೆಂದು ತಿಳಿದು ಬರುತ್ತದೆ. ಆದರೆ ಭಾರತದ ವಾಯವ್ಯ ಗಡಿಯಲ್ಲಿ ನೆರೆಯ ಪರ್ಷಿಯಾ ಮತ್ತು ಗ್ರೀಸ್ ದೇಶಗಳ ಪ್ರಭಾವ ಹೆಚ್ಚಾಗಿರುವ ಕಡೆಗಳಲ್ಲಿ ಜನರಿಗೆ ತಿಳಿಯಲೆಂಬ ಉದ್ದೇಶದಿಂದ ಅಶೋಕನು ಅರೆಮಿಕ್ ಮತ್ತು ಗ್ರೀಕ್ ಭಾಷೆಗಳನ್ನು ಬಳಸಿದ್ದಾನೆ. ಅಫ್ಘಾನಿಸ್ತಾನದ ಕಂದಹಾರ್ ಶಾಸನ, ತಕ್ಷಶಿಲಾ ಶಾಸನಗಳು ಇಂಥ ದ್ವಿಭಾಷಾ ಶಾಸನಗಳಿಗೆ ಉತ್ತಮ ಉದಾಹರಣೆಗಳಾಗಿವೆ. ಇಂಥ ದ್ವಿಭಾಷಾ ಶಾಸನಗಳಿಗೆ ಕರ್ನಾಟಕದ ಬ್ರಹ್ಮಗಿರಿ ಸಮೂಹದ ಮೂರು ಶಾಸನಗಳನ್ನು ಸೇರಿಸಬಹುದೇನೋ? ಕಾರಣ ಕೊನೆಯ 'ಚಪಡೇನ ಲಿಖಿತೇ ಲಿಪಿಕರೇಣ' ಎನ್ನುವ ವಾಕ್ಯ ಖರೋಷ್ಠಿ ಲಿಪಿಯಲ್ಲಿರುವುದರಿಂದ; ಇನ್ನೂ ಬಿಡಿಸಲಾರದ ಒಗಟಾಗಿರುವ ಸಿಂಧೂ ಲಿಪಿಯನ್ನು ಬಿಟ್ಟರೆ, ಅಶೋಕನ ಧರ್ಮಲಿಪಿಗಳೇ ಭಾರತದ ಪ್ರಾಚೀನ ಬರಹಗಳಾಗಿವೆ. ಅಶೋಕನಿಗೆ ಹಿಂದೆ ಇದ್ದ ದೊರೆಗಳು ಶಿಲೆಯ ಮೇಲೆ ಬರಹಗಳನ್ನು ಕೆತ್ತಿಸುವ ಪದ್ಧತಿಯನ್ನು ಇಟ್ಟುಕೊಂಡಿರಲಿಲ್ಲವೆಂದು ತೋರುತ್ತದೆ. ಈ ರೀತಿ ಶಿಲಾಶಾಸನ ಹಾಕಿಸುವ ಪದ್ಧತಿಯನ್ನು ಅಶೋಕನು ಪರ್ಷಿಯಾ ದೇಶದ ದೊರೆಗಳಿಂದ ಕಲಿತುಕೊಂಡಿರಬೇಕು. ಏಕೆಂದರೆ ಪರ್ಷಿಯಾ ದೊರೆ ಡೇರಿಯಸ್‌ನ ಶಾಸನಗಳು ಆರಂಭವಾಗುವ ರೀತಿಯಲ್ಲಿಯೇ ಅಶೋಕನ ಶಾಸನಗಳೂ ಸಾಗುತ್ತವೆ.

ಉದಾ: 'ಥಾತಿಯ್ ದಾರಯವ್‌ಷ್ ಕ್ಷಯಾಥಿಯಾ' (ಡೇರಿಯಸ್)
(Thus sayeth the king Dariu)
'ದೇವಾನಾಂಪಿಯ ಪಿಯದಸಿ ರಾಜಾ ಏವಂ ಆಹ' (ಅಶೋಕ)
(ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುತ್ತಾನೆ)

ಇದಲ್ಲದೆ ಅಶೋಕನ ಶಾಸನಗಳಲ್ಲಿ 'ದಿಪಿ', 'ನಿಪಿಸ್ತ' ಇತ್ಯಾದಿ ಪರ್ಷಿಯನ್ ಪದಗಳು ಇರುವುದನ್ನು ಗಮನಿಸಿದರೆ, ಅಶೋಕನು ಪರ್ಷಿಯಾ ದೇಶದ ಶಾಸನಗಳನ್ನು ನೋಡಿ, ತಾನು ಅದನ್ನು ಅನುಕರಿಸಿದಂತೆ ಭಾಸವಾಗುತ್ತದೆ. ಆದಾಗ್ಯೂ 'ಇದುವೇ ಸತ್ಯ' ಎಂದು ಹೇಳಲು ಬರುವುದಿಲ್ಲ.

ಮೌರ್ಯ ದೊರೆ ಚಂದ್ರಗುಪ್ತನು ತನ್ನ ಗುರುವಿನೊಡನೆ ಶ್ರವಣಬೆಳಗೊಳಕ್ಕೆ ಬಂದು ಅಲ್ಲಿಯೇ ಕಾಲವಾದನೆಂಬ ಕಥೆಯು ಮಗಧ ಸಾಮ್ರಾಜ್ಯ ಮತ್ತು ಕರ್ನಾಟಕದ ಆಧ್ಯಾತ್ಮಿಕ ನಂಟು ಸೂಚಿಸಿದರೆ, ಕರ್ನಾಟಕದಲ್ಲಿ ದೊರೆತ ಅಶೋಕನ ಶಾಸನಗಳ ಉತ್ತರದಲ್ಲಿ ಅಫ್ಘಾನಿಸ್ತಾನದಿಂದ ಹಿಡಿದು, ದಕ್ಷಿಣದಲ್ಲಿ ನಮ್ಮ ರಾಜ್ಯದ ಬಹುಭಾಗವನ್ನೊಳಗೊಂಡ ಭಾರತ ಭೂಭಾಗದ ಪ್ರದೇಶವು ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತು ಎಂಬ ರಾಜಕೀಯ ಮತ್ತು ಸಾಂಸ್ಕೃತಿಕ ಸಂಬಂಧವನ್ನು ಸೂಚಿಸುತ್ತವೆ.

## ಆಧಾರ ಸೂಚಿ


೧. ಎಂ.ವಿ. ವಿಶ್ವೇಶ್ವರ, *ಸನ್ನತಿಯ ಅಶೋಕನ ಶಿಲಾಶಾಸನಗಳು*, **ಸಂಶೋಧನ** {ಡಾ॥ ಎಂ. ಚಿದಾನಂದಮೂರ್ತಿಯವರ ಗೌರವ ಸಂಪುಟ, (ಸಂ) ಲಕ್ಷ್ಮಣ್ ತೆಲಗಾವಿ}, ೧೯೯೧, ಪು.೭೨೩-೭೪೩.

೨. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨** (ಕವಿಶಾಸಂ), ಕೊಪ್ಪಳ ಜಿಲ್ಲೆ, ೧೯೯೯.

೩. **ಎಪಿಗ್ರಾಫಿಯ ಕರ್ನಾಟಿಕ** ಸಂಪುಟ XI (ಎ.ಕ.), ಚಿತ್ರದುರ್ಗ ಜಿಲ್ಲೆ (ರೈಸ್ ಆವೃತ್ತಿ).

೪. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ**-೧, ಬಳ್ಳಾರಿ ಜಿಲ್ಲೆ, ೧೯೯೬.

೫. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ**-೭, ರಾಯಚೂರು ಜಿಲ್ಲೆ, ೨೦೦೩.

೬ **ಗೆಜೆಟಿಯರ್ ಆಫ್ ಇಂಡಿಯಾ**, ಚಿತ್ರದುರ್ಗ ಜಿಲ್ಲೆ.

೮. **ಗೆಜೆಟಿಯರ್ ಆಫ್ ಇಂಡಿಯಾ**, ರಾಯಚೂರು ಜಿಲ್ಲೆ, ೧೯೭೦.

೯. ಜಿ.ಎಸ್. ಗಾಯಿ, *ಕರ್ನಾಟಕದಲ್ಲಿ ಅಶೋಕನ ಧರ್ಮಲಿಪಿಗಳು*, **ಪ್ರಬುದ್ಧ ಕರ್ಣಾಟಕ**, ೪೯-೧, ೧೯೬೭.


## ಇತರ ಕೆಲವು ಪ್ರಮುಖ ಬರಹಗಳು


೧. **ಅಶೋಕ**, ನಾ. ಕಸ್ತೂರಿ, ಮೈಸೂರು ವಿಶ್ವವಿದ್ಯಾನಿಲಯ, ೧೯೫೨.

೨. **ಅಶೋಕನ ಶಿಲಾ ಶಾಸನಗಳು**, ಕೋ. ಚನ್ನಬಸಪ್ಪ, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು, ೧೯೫೯.

೩. G. Srinivasamurthy and A.N. Krishna Ayyangar, *Edicts of Ashoka*, The Adyar Library, Madras, 1950.

೪. *The Gavimath and Palkigundu Inscriptions of Ashoka*, (Ed) R.L. Turner, H A S - 10, Hyderabad, Reprint by Department of Archaeology, Government of Andhra Pradesh, 1952.

೫. *The New Ashokan Edict of Maski*, (Ed) H. Krishnashastri, H.A.S.-1, Hyderabad, 1915; (Ed) D.C. Sircar, *Inscriptions of Ashoka*, Andhra Pradesh Government, 1958, Revised Edition.

೬ *Edicts of Ashoka in Mysore*, (Ed) B.L. Rice, Mysore Government, 1892.


(ಸಂ)

(ಲೇಖನ ಬರೆಯಲು ಸೂಚಿಸಿ, ಸಲಹೆಗಳನ್ನು ನೀಡಿದ ಪೂಜ್ಯ ಗುರುಗಳಾದ ಡಾ॥ ಪಿ.ವಿ. ಕೃಷ್ಣಮೂರ್ತಿ ಹಾಗೂ ಡಾ॥ ಕೆ.ಆರ್. ಗಣೇಶ್‌ರವರಿಗೆ ವಂದನೆಗಳು.)

**ಅನುಬಂಧ:** ಶಾಸನ ಪಾಠಗಳು

## ಕಲಬುರ್ಗಿ ಜಿಲ್ಲೆ

### ಚಿತ್ತಾಪುರ ತಾಲ್ಲೂಕು, ಸನ್ನತಿ

ಚಂದ್ರಲಾಂಬಾದೇವಿ ಮಂದಿರದಲ್ಲಿದ್ದ ಚಾಮುಂಡಾ ಶಿಲ್ಪದ ಪೀಠದ ಮುಂಭಾಗ

೧

[ಅಶೋಕನ ಹನ್ನೆರಡನೆಯ ಮುಖ್ಯ ಶಿಲಾಶಾಸನದ ಭಾಗ]

೧ . . . ಪಾ . . ಲನ . . .
೨ . . . ಆಕಾಲೇನಾ ಹೆ . . .
೩ . . . ತಂ ಅಂತ ಪಸಾಢಂ ಚ ಥ . . . ಲ . ಪಾಸ . . .
೪ . . . ಶಗಲಹತಿ ಸವೆ ಅತ ಪಸಾಢಂ ಉತಮ . . . ಗ . . .
೫ . . . ತಿ ಅತ ಪಾಸಂಡಂ ನೆ ಸಮವಾಯೆ ಪಸ . . . ಮ . . .
೬ ಸವಪಾಸಂಡಂ ಬಹೂಸುತ ಚ ಕಿಯಾನಾಗಮ . . . ಸುಪ ಗಿನವಟ . . .
೭ ಚ ಸಥ ಅಥ ಕಿತಿ ಸಾಲವ(ಢೀಸ) . . . ಕ . . .
೮ ಮಹಾಪತ ವಚರಾಜಿಮಿಕಾ ಅಂನೆಧಿನಿ . . . .

೨

[ಅಶೋಕನ ಹದಿನಾಲ್ಕನೆಯ ಮುಖ್ಯ ಶಿಲಾಶಾಸನದ ಭಾಗ]

೧ ಇಯಂ ಧಂಮಲಿಪಿ ದೆವಾನಂ ಪಿಯೆನ . . [ಪಿತಾ] . . ವಸ [೦]
೨ ನೊ ಹಿ ಸಮತಿ ಸವ ಘವ(ತೆ) . . . . .
೩ ತಸ ತಸ ಅ[ಥ]ಸ ಮಾಧುಲಿಯಯ . . ಜ್ಞಾ . ತಥ . . .
೪ . . . (ಯಾ) ಕಾಲನಂ ವ ಅಲೋಚಯತು ಲಿಪಿಕರಾಪ . . ಧವತ . . .

೩

[ಅದೇ ಪೀಠದ ಹಿಂಭಾಗ]

೧ . . . ತವಿಯೆ
೨ . . . ಆನಂನೇ
೩ . . . ಥಿ ದೆವಾನಂ
೪ . . . ಕು(ಮ)ಪಿ
೫ . . . . . ಧೀ
೬ . . . . . . ತ

೭ . . . ಚ ಕರಂತಂ
೮ . . . ಅಥಾ . .
೯ . . . ಲೋ . .
೧೦ . . . ರಸ . .
೧೧ . . . ಚ ಗಲ . . .
೧೨ . . . ಖಾಕರಂ . . ಕ . . .
೧೩ . . . ಯೆವ ಅಥಾ . . . ಪವಗನಿ . . ಖಾಮೆ (ಕುಳಿ) ನಿಅತಿ ಕಾಮೆ ಸತಿ
೧೪ . . ಸಪಾನನ . . . ಪಯತು ಅತು ಹಾ (ಕುಳಿ) ನಿಸತಿತಂ ಪಿಹಾವಾಕ
೧೫ . . . ಸ ಥೀತಿ . . . . . .

## ೪

[ಅದೇ ಪೀಠದ ಪ್ರತ್ಯೇಕ ಶಾಸನ, ಎರಡನೆಯ ಪ್ರತ್ಯೇಕ ಶಿಲಾಶಾಸನ]

೧ . . ಅನುವಿಗ್ [ಇ] . . . .
೨ . . . ಸೆವು ಚ ಸುಖಿಮೆವ ಚ ರಭ್[ಎವ್] ಉ . . . .
೩ . . . ಯೆನ ಚ ಹೆವಂ ಪಾಪುನೆವು ರಾಜಾನೆ ಖಿಮ್ . . . . . .
೪ . ಯೆ ಖಿಮಿತವೆ ಮಮಂ ನಿಮಿತಂ (ಚ) ಧಂಮಂ ಚರೆವೂ ಹಿದ (ಲೊಕಂ)
೫ ಚ ಪರಲೊಕಂ ಚ ಆರಾಧಯೆವು [। *] ಎತಾಯ ಚ ಅಥಾಯ ಹಕಂ ತುಫೆ . . .
೬ ಅನುಸಾಸಾಮಿ ಅನನೋ ಹಕಂ ತುಫೆನಿ ಅನುಸಾಸಿತ ಛಂದಂ ಚದಿತು
೭ ಯಾ ಯಿ ಮಮ ಧಿತಿ ಪಟನಾ ಚ ಅಚಲಾ [। *] ಸಾತಿ ಹೆವಂ ಕಟುಕಂಮೆ ಚರಿತವಿಯೆ
೮ ಆಸ್ವಾಸೆತವಿಯಾ ಚ ತೊಯನ ಚತೆ ಹೆವಂ ಪಾಪುನೆವು ಅಥಾಪಿತ ಹೆವಂ
೯ [ನೆ] ರಾಜಾ ಯಥಾಚ ಅತಾನಂ ಅನುಕಂಪತಿ ಹೆವಂ ಅಫನಿಯ[ಂ] [। *]
೧೦ ಚಕಂ ಪಜಾ ಹೆವಂ ಮ[ಯಿ] ಸೆಹಕಂ ತುಫೆನಿ ಅನುಸಾಸಿತು ಛಂದಂ ಚ
೧೧ [ದಿ]ತು ದೇಸಾವುತಿಕೆ ಎತಸಿ ಅಥಸಿ ಹೊಹಾಮಿ [। *] ಅಲಂ ಹಿ ತುಫ್ ಆಸ್ವಾಸನಾಯೆ
೧೨ ಹಿತಸುಖಾಯ ಚ ತೆಸಂ ಹಿದ ಲೊಕಕಂ ಪಾರಲೋಕಿಕಾಯೆ [। *] ಎತಂ ಚ ಹೆವಂ
೧೩ ಕರಂತಂ ಸ್ವಗ[ಂಚ] ಆರೊಥೆಸಾಥ ಮಮ ಚ ಆನನಿಯಂ ಎಹಥ [। *] ಎತಾ
೧೪ . . . . ಯ ಇಯಂ ಲಿಪಿ ಹಿದ ಲಿಖಿತ ಅಥಾ ಮಹಾಮಾತಾ ಸಾಸ್ವತಂ
೧೫ . . . . ಯುಜೆವು ಆಸ್ವಾಸನಾಯ ಧಂಮ ಚರನಾಯ ಚ ಅಂತಾ
೧೬ . . . [। *] . . . ಚ ಲಿಪಿ ಅನೆ ಚಾತುಮಾಮಿ ಸೊತಾ ಯಿ ಸೆಹಿ [। *] ಅನ್ತಲಾಪಿ
೧೭ . . . ಹಿ ಖಿನಸಿ ಸರೆನ [ಕುಳಿ] . . . . ತವಿಯಾ [। *] ಹೆವಂ
೧೮ . . . . ಫತ ಸಂಪಟ [ಕುಳಿ] . . . . . . .

– **ಸನ್ನತಿಯ ಅಶೋಕನ ಶಿಲಾಶಾಸನಗಳು**, ಸಂಶೋಧನ, ಪು.೭೩೦–೭೩೫.

## ಕೊಪ್ಪಳ ಜಿಲ್ಲೆ

ಕೊಪ್ಪಳ ತಾಲ್ಲೂಕು, ಕೊಪ್ಪಳ

೫

ಗವಿಮಠದ ಹಿಂಬದಿಯ ಗುಂಡಿನಲ್ಲಿ

೧ ದೇವಾಣಂಪಿಯೇ ಆಹ ಸಾತಿರೇಕಾಣಿ ಅಢತಿಯಾಣಿ ವಸಾಣಿ ಯಮ್ ಉಪಾ

೨ ಸಕೇ ಣೋ ಚು ಕೋ ಬಾಢಮ್ ಪಕಂತೇ ಸಂವಛರೇ ಸಾತಿರೇಕೇ ಯಮ್ ಮೇ ಸಂಘೇ ಉಪೇತಿ ಬಾಢಂ

೩ ಚ ಮೇ ಪಕಂತೇ ಸೇ ಇಮಾಯಮ್ ವೇಲಾಯಮ್ ಜಂಬುದೀಪಸಿ ಅಮಿಸಾ ದೇವಾ ಸಮಾಣಾ

೪ ಮಾಣುಸೇಹಿ ಸೇ ದಾಣಿ ಮಿಸಾ ಕಟಾ ಪಕಮಸ ಏಸ ಫಾಲೇ ಣೋ ಹಿ ಇಯಮ್ ಮಹತೇಣೇವ ಚ

೫ ಕಿಯೇ ಪಾಪೋಟವೇ ಖುಡಕೇನ ಪಿ ಪರಮಮೀಣೇನ ವಿಪುಲೇ ಪಿ ಚಕಿಯೇ ಸ್ವಗೇ ಆರಾಧ್ಯಯಿತವೇ

೬ ತಾಯ ಚ ಅಥಯ ಇಯಮ್ ಸಾವಣೇ ಖುಡಕಾ ಚ ಉಡಾರಾ ಚ ಪರಮಂತು ತಿ ಅಂತಾ ಪಿ ಚ ಜಾಣಂತು ಚಿರಠಿ

೭ ತಿಕೇ ಚ ಪಕಮೇ ಹೋತು ಇಯಮ್ ಚ ಅಠೇ ವಢಿಸಿತಿ ವಿಪುಲೇ ಚ ವಢಿಸಿತಿ ದಿಯ

೮ ಢಿಯಮ್ ಪಿ ಚ ವಢಿಸಿತೀತಿ

– **ಕವಿಶಾಸಂ–೨, ಕೊಪ್ಪಳ ೨೮, ಪು.೩೭–೩೮.**

ಅದೇ ಜಿಲ್ಲೆ, ಅದೇ ತಾಲ್ಲೂಕು

೬

ಅದೇ ಗ್ರಾಮದ ಸಮೀಪದ ಗುಡ್ಡದಲ್ಲಿನ ಪಾಲ್ಕಿಗುಂಡಿನ ಮೇಲೆ

೧ . . . . . . . . . . . . . . .

೨ . . . . . . . . . . . . . . .

೩ . . . . . . ಮಾಣುಸೇ . . . . . . . .

೪ . . . . ಣೋಹಿ ಇಯಮ್ . . . . ವ . . . . . . . . . .

೫ . . . . . . ಮೀಣೇನ ವಿಪುಲೇ ಪಿ ಚಕಿಯೇ ಸ್ವಗ ಆರ . . . . . .

೬ . . . . . . . ಚ ಪಕಮಂತು ತಿ ಅಂತಾ ಪಿ ಚ ಜಾಣಂತು ಚಿ . . . . . ಕೇ

೭ . . . . . . . . . ಚ ವಢಿಸಿತಿ ದಿಯಢಿಯಮ್ ಪಿ ಚ

೮ . . . . . . . . . . .

– **ಕವಿಶಾಸಂ–೨, ಕೊಪ್ಪಳ ೬೦, ಪು.೫೫.**

## ಚಿತ್ರದುರ್ಗ ಜಿಲ್ಲೆ

ಮೊಳಕಾಲ್ಮೂರು ತಾಲ್ಲೂಕು, ದೇವಸಮುದ್ರ ಹೋಬಳಿ, ರಾಮಸಾಗರ

೭

ಗ್ರಾಮದ ಜಟ್ಟಿಂಗರಾಮೇಶ್ವರ ಬೆಟ್ಟದ ಮೇಲೆ ರಾಮೇಶ್ವರ ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಬಂಡೆ ಮೇಲೆ

(ಮೊದಲಿನ ಆರು ಸಾಲುಗಳು ಸವೆದಿವೆ)

೭ ಇಸಿಲ . . . . . . . . . . . ನ . . . . .
೮ . . . . . . . . . . . ತವಿಯಾದೇವಾಣ . . . .
೯ . . . . . . ಖೋಬಾಥ . . . . . . . . ಯಹಸಂ . . .
೧೦ . . . ಯೇ . . . . . . ತಿ . . . .
೧೧ . . . ಣ . . . . . ನಿ . . . . . . .
೧೨ . . . ಕಂ . . . . . ಛ . . . . .
೧೩ . . . . . . . . . . . .
೧೪ . . . . . . . . . . . .
೧೫ . . . . . . ಚ . . . . .
೧೬ . . . . . . . ಲ . . . . . ಸ . . .
೧೭ . . . . . . . . ಘುಲಂಪಿ . . . . . . ಯಢಿಯಂ . .
೧೮ . . . . . . . . ಥೇನ ೨೫೬ ಹೇಮೇವ . . . . .
೧೯ . . . ತಾಪಿತುನು . . ಸಿತವಿಯ ಹೇಮೇವ . . . . ಆನೇಸು
೨೦ . . . ಹ್ಯಿತವ್ಯಂಸಚಂ ವತವಿಯಂಪಿ . . . . . . . . . .
೨೧ . . . ಹೇವಂ ಪವತಿತವಿಯಾ . . . . ನತೇ . . . ತವ . . . . .
೨೨ . . . ತವಿಯ ಹೇಮೇವ ಆಚರಿಯೇ ಅಂತೇವಾಸಿನಾ . . . . .
೨೩ . . . . . ರಾಣಾಪಕಿ . . . . . . ಸಿತವಿಯ . ವೇ
೨೪ . . ಚರಿಯಂ . . . . ಆಚರಿಯ ಞಾತಿಕಾತೇ . . . ಯ . .
೨೫ . . . ತಿತವಿಯೇ ಏಸಾ . ರಾಪಕಿ ತಿದೀಘಾ . . . ಚಹೇಮೇವಪಿ . . .
೨೬ . . . . . ವತಿ . . . ಯೇ ಹೇವಂಮೇ ದೇವಾಣಂಪಿಯೇ
೨೭ . . . . ಕ ತವಿಯೇ . . ಪಡೇನಲಿ . . . . .
೨೮ . . ಕರೇಣ*

*ಕರೇಣ ಎಂಬುದು ಖರೋಷ್ಠಿಲಿಪಿಯಲ್ಲಿದೆ.

– ಎ.ಕ.–೧೧, ಮೊಳಕಾಲ್ಮೂರು–೩೪, ಪು.೨೬೦

## ಅದೇ ಜಿಲ್ಲೆ, ಅದೇ ತಾಲ್ಲೂಕು

## ೮

## ಗಂಜಿಗುಂಟೆ ಮೂಲೆಯ ಬಳಿಯಿರುವ ಬ್ರಹ್ಮಗಿರಿ ಶಾಸನ

೧ ಸುವಂಣಗಿರೀತೇ ಆಯಪುತಸ ಮಹಾಮಾತಾಣಂ ಚ ವಚನೇನ ಇಸಿಲಸಿ ಮಹಾಮಾತಾ ಆರೋಗಿಯಂ ವತವಿಯಾ ಹೇವಂ ಚ ವತವಿಯಾ ದೇವಾಣಂಪಿಯೆ ಆಣಪಿಯತಿ

೨ ಅಧಿಕಾನಿ ಅಢಾತಿಯಾನಿ ವಸಾನಿ ಯ ಹಕಂ . . . . . . . . ಸಕೇ ನೋ ತು ಖೋ ಬಾಢಂ ಪ್ರಕಂತೇ ಹುಸಂ ಏಕಂ ಸವಛರಂ ಸಾತಿರೇಕೇ ತು ಖೋ ಸಂವಛರೇಂ

೩ ಯಂ ಮಯಾ ಸಂಘೇ ಉಪಯೀತೇ ಬಾಢಂ ಚ ಮೇ ಪಕಂತೇ ಇಮಿನಾ ಚು ಕಾಲೇನ ಅಮಿಸಾ ಸಮಾನಾ ಮುನಿಸಾ ಜಂಬುದೀಪಸಿ

೪ ಮಿಸಾ ದೇವೇಹಿ ಪಕಮಸ ಹಿ ಇಯಂ ಫಲೇ ನೋ ಹೀಯಂ ಸಕ್ಯೇ ಮಹಾತ್ಪೇನೇವ ಪಾಪೋತವೇ ಕಾಮಂ ತು ಖೋ ಖುದಕೇನ ಪಿ

೫ ಪಕಮಿ . . . . ಣೇಣ ವಿಪುಲೇ ಸ್ವಗೇ ಸಕ್ಯೇ ಆರಾಧೇತವೇ ಏತಾಯಠಾಯ ಇಯಂ ಸಾವಣೇ ಸಾವಾಪಿತೇ

೬ . . . . . . . . . . . . . . . . ಮಹಾತ್ಪಾ ಚ ಇಮಂ ಪಕಮೇಯು ತಿ ಅಂತಾ ಚ ಮೈ ಜಾನೇಯು ಚಿರಠಿತೀಕೇ ಚ ಇಯಂ

೭ ಪಕ . . . . . . . . . . . . . . . ಇಯಂ ಚ ಅಠೇ ವಢಿಸಿತಿ ವಿಪುಲಂ ಪಿಚ ವಢಿಸಿತಿ ಅವರಧಿಯಾ ದಿಯಢಿಯಂ

೮ ವಢಿಸಿತಿ ಇಯಂ ಚ ಸಾವಣೇ ಸಾವಾಪಿತೇ ವ್ಯೂಠೇನ ೨೦೦ ೫೦ ೬ ಸೇ ಹೇವಂ ದೇವಾಣಂಪಿಯೇ

೯ ಆಹ ಮಾತಾಪಿತಿಸು ಸುಸೂಸಿತವಿಯೆ ಹೇಮೇವ ಗರುಸು ಪ್ರಾಣೇಸು ದ್ರಹಿತ್ಯವ್ಯಂ ಸಚಂ

೧೦ ವತವಿಯಂ ಸೇ ಇಮೇ ಧಂಮಗುಣಾ ಪವತಿತವಿಯಾ ಹೇಮೇವ ಅಂತೇವಾಸಿನಾ

೧೧ ಆಚರಿಯೇ ಅಪಚಾಯಿತವಿಯೇ ಞಾತಿಕೇಸು ಚ ಕ ಯಂ . . . . . . . . ರಹಂ ಪವತಿತವಿಯೇ

೧೨ ಏಸಾ ಪೋರಾಣಾ ಪಕಿತೀ ದೀಘಾವುಸೇ ಚ ಏಸ ಹೇವಂ ಏಸ ಕಟಪಿಯೇ

೧೩ ಚಪಡೇನ ಲಿಖಿತೇ ಲಿಪಿಕರೇಣ*

*ಲಿಪಿಕರೇಣ ಎಂಬುದನ್ನು ಖರೋಷ್ಠೀ ಲಿಪಿಯಲ್ಲಿ ಬರೆದಿದೆ.

– ಎ.ಕ.–೧೧, ಮೊಳಕಾಲ್ಮೂರು–೨೧, ಪು.೨೫೨

ಅದೇ ಜಿಲ್ಲೆ, ಅದೇ ತಾಲ್ಲೂಕು, ಸಿದ್ಧಾಪುರ

೯

ಗ್ರಾಮದ ಎಮ್ಮೆತಮ್ಮನಗುಂಡ್ಲು ಬಳಿ ಗುಡ್ಡದಲ್ಲಿ ಬಂಡೆಯ ಮೇಲೆ

೧ ಸುವಣಂಗಿರೀತೇ ಅಯಪುತಸ ಮಹಾಮಾತಾ
೨ ಣಂ ಚ ವಚನೇನ ಇಸಿಲಸಿ ಮಹಾಮಾತಾ
೩ ಆರೋಗಿಯಂ ವತವಿಯಾ ದೇವಾನಾಂಪಿಯೇ ಹೇವಂ
೪ ಆಹ ಅಧಿಕಾನಿ ಅ . ತಿ . ಯಾ . ವಸಾನಿ
೫ ಯಹ . ಉಪಾಸಕೆ ನೋತು ಖೋ ಬಾಢ ಪಕಂತೇಹುಸಂ ಏಕಂ ಸಂವ . .
೬ ಸಾ . . ಕೇತು ಖೋ ಸಂವಛರೇಯಂ . . . ಢೇ ಉಪಯೀತೇ ಬಾಢಂ
೭ ಚಮೇ ಪಕಂತೇ ಇಮಿನಾಚ ಕಾಲೇನ . ಮಿಸಾಸಮಾ . ಮು
೮ . . ಜಂಬುದೀ . . ಮಿಸಾದೀವೇಹಿ ಪಕಮಸಹಿ ಇಯಂ ಫಲೇನೋಹಿ
೯ ಯಸಕೇ . . . ನೇವಪಾಪೋ . ವೇಕಾಮಂತು ಖೋಖುದಕೇನ
೧೦ ಪಿಪ . . . . ನವಿ . ಉಲ . ಸ್ವಗೇಸಕೆ ಆರಾಧಿತವೇ
೧೧ ಸೆ . . . ಯಇ . ೦ ಸಾವಣೇ ಸಾವಿತೇಯಥಾಖು
೧೨ ದು . . ಮಹಾಪ್ತುಚ ಇಮಂ ಪಕಮೇಯುತಿ ಅಂತಾಚ
೧೩ . . . . . . ಥಿತೀಕೇಚ ಇಯಂ ಪಕಮೇ ಹೋತು
೧೪ . . . . . ವಢಿಸಿತಿ ವಿಪುಲಂ ಪಿಚ ವಢಿಸಿತಿ ಅ
೧೫ . . . . . . . ಯಂ ವಢಿಸಿತಿ ಇಯಂ ಚ ಸಾವಣೇ
೧೬ . . . . . . . . . . . . . . . . . . . . . . ತವಿಯೇ
೧೭ . . . . . . . . . . . ಹ್ಯಿತ ವ್ಯಂಶಚಂವ . . ಯಂ ಇಮೇಧಂ ಮಗು
೧೮ . . . . . . . ಹ . ಮ . . . . . . . ಆಚರಿಯೇ ಅಪಚಾಯಿತವಿಯೇಸು
೧೯ . . . . . . . . . . . ಸಾಪೊರಾಣ . . ತೀ ದಿಘಾವುಸಿ ಚ ಹೇಮೇವ . ತೇವಾಸಿನೇಚ
೨೦ ಆಚರಿಯೇ . . . . . . . . . . ಥಾರಹಂ ಪವತಿತವಿಯೇ . . . .
೨೧ . . . . . . . . . . . ಏಸತಥಾಕಟವಿಯೇ ಚಪ . . . . .
೨೨ . . . . ಣ*

*ಈ ಅಕ್ಷರ ಖರೋಷ್ಠೀ ಲಿಪಿಯಲ್ಲಿದೆ.

– ಎ.ಕ.–೧೧, ಮೊಳಕಾಲ್ಮೂರು–೧೪, ಪು.೨೪೯

## ಬಳ್ಳಾರಿ ಜಿಲ್ಲೆ

### ಸಿರುಗುಪ್ಪ ತಾಲ್ಲೂಕು, ಉಡೇಗೊಳ

### ೧೦

ಗ್ರಾಮದ ಆಗ್ನೇಯ ದಿಕ್ಕಿನಲ್ಲಿರುವ ಎರಮಟ್ಟಿಗುಡ್ಡದಲ್ಲಿ ಮೊದಲ ಗುಂಡಿನ ಮೇಲೆ

೧ . . . ನ . . . . ಣಂ ಹಕಂ ಉಪಾಸಕೇ ನೋತು ಖೋ ಬಾಢಂ ಪ . . . ಹುಸಂ

೨ . . . . ಚ ಮೇ ಪಕಂತೇ ಇಮಿನಾ ಚು ಕಾಲೇಣ ಅಮಿಸಾ

೩ . . . ಹಿ ಇಯಂ ಮಹಾಪತಣೇವ ಸಕೇ[ಸ] ಧೇತವೇ

೪ . . . ಏತಾಯ [ಇಯಂ] ಅಥಾಯ ಸಾವಣೇ ಸಾವಾಪಿತೇ

೫ . . . . ಥಿಥಿಕೋ ಚ ಇಯಂ ಪಕಮೇ ಹೋತು ಇಯಂ ಚ ಅಥೇ

೬ . . . . ಸಾವಣೆ ಸ [ಸಾ]ವಪಿತೇ ವ್ಯಥೇಣ [೨೦೦] ೫೦ ೬

– **ಕವಿಶಾಸಂ**–೧, ಸಿರುಗುಪ್ಪ ೪೯, ಪು.೧೨೪.

### ೧೧

ಅದೇ ಗ್ರಾಮದ ಅದೇ ಗುಡ್ಡದ ಎರಡನೆಯ ಗುಂಡಿನ ಮೇಲೆ ಮುಂದುವರೆದ ಭಾಗ

೮ ರಾಜಾ ಅಸೋಕೋ ದೇವನಂಪಿಯೇ ಹೇವಂ ಆಹ ತಥ ಆನಾಪಯಾ(ಯಿ)ಥಾ ರಾಜೂಕ ಸೇ ಆನಪಯಿಸಿತಿ ಜಾನಪದಂ ಚ ಜನಂ ರಥಿಕಾನಿ

೯ ಮಾತಾ ಪಿತುಸು [ಸುಸೂ]ಸಿತವಿಯೇ ಹೇವಮೇವ ಗು[ರುಸು]ಪ್ರಾನೇಸು ಚದಯಿತ [ವಿಯೇ] ಇ[ಮೇ] ಧಮ್ಮಗುಣ ಪಾ(ಪ)ವತಿತವಿಯಾ ಹೇ

೧೦ ವ[ಂ] ತುಂಘೇ ರಜೂಕ ಆನಪಯಾಥ . . ನಿ ದೇವಾನಂಪಿಯಸ ವಚನೇನ ಆನಪಯಿತವಿಯ . . ತ ಹ [ಮ]ವ ಆನಪಯಾಥ ಹೇವಂ ಬಾಂಹನಾನಿ [ಚ] ಹ[ಥಿಯಾ] ರೋಹಾ

೧೧ ನಿ ಚ ಕಾರನಕಾನಿ ಚ ಯುಗಾಚ [ರಿಯಾನಿ] ಹೇವಂ ನಿವೇ[ಸ] ಯಾಥ ಅಂತೇವಾ[ಸಿ] ಯಾದಿಸಾ ಪೋರಾನಾ [ಪಕಿತಿ] ತದಿಸಾ . . . . ಸುಸೂಸಿತವಿಯೇ ತಿ ಇಯ[ಂ]

೧೨ ಇಯಂ ಅಪಚಾಯಿತವಿಯೇ ತಿ ಸ ಆಚಾರಿಯಸ ಆಪಾಚಾವವಿಯೇ ಚ ಸುಸೂಸಿತವಿಯಾ [ಯಥಾ ವ] ಆ[ಆ]ಚಾರಿಯತ ನಾತಿ . ತಸುಪಿಯ ಯಥಾಲಹಂ ಪವತಿತವಿಯೇ ತಿ

೧೩ ಹೇಮೇವ ಸ [ಅಂ]ತೇ[ವಾ]ಸಿಸು ಪಿಯಥಾಲಹಂ ಪವತಿತವಿಯೇ ಯಾದಿಸಿ ಪೊರಾ[ನಾ] ಯಥಾಇಯಂ ಸಾತಿರೇಕೇ ಷುವಯ ತತಾ ಪವತಿ ವಾಪಿಯ[ಂ] ಹೇವಂ ತುಂಘೇ ಆನಪಯಾಥಾ[ಥ]

೧೪ ನಿವೇಸಯಾಥ ಚ ಅಂತೇವಾಸಿನಿ ತಿ

– **ಕವಿಶಾಸಂ**–೧, ಸಿರುಗುಪ್ಪ ೫೦, ಪು.೧೨೪–೧೨೫.

## ಅದೇ ಜಿಲ್ಲೆ, ಅದೇ ತಾಲ್ಲೂಕು, ನಿಟ್ಟೂರು

## ೧೨

### ಗ್ರಾಮದ ದಕ್ಷಿಣಕ್ಕೆ ಚಿಕುಡಪ್ಪ ಗುಡ್ಡದಲ್ಲಿ

೧ ದೇವಾ[ನಂ]ಪಿಯೋ ಹೇವ[ಂ] ಆಹ ಅಧಿಕಾನಿ ಅಢಾತಿಯಾನಿ[ವ] ಸಾನಿಯ

೨ ಉಪಾಸಕೇ ನೋ ತು ಖೋ ಬಾಢಂ ಪಕಂತೇ ಹುಸಂ ಏಕಂ ಸಂವಛರಂ ಸಾತಿರೇಕೇ ತು ಖೋ ಸಂವಛರೇ ಯಂ ಮಯಾ ಸಂಘೇ ಉ

೩ ಪಯಿ . . ಚ ಮೇ ಪಕಂತೇ ಇಮಿನಾ ಚು ಕಾಲೇನ ಅಮಿಸ . . . ಕಾ ಮುನಿಸಾ ಜಂಬುದಿಪಸಿ ಮೀಮಿಸಾ [ದೇವಹಿ]

೪ ಪಕಮಸಹಿ ಇ[ಯಂ] ಫಲೇ[ನೋ] ಹಿ ಇಯಂ [ಮಹತ್ವನೇ]ವ ಸಕೇ ಪಾಪೋತವೇ ಕಾಮಂ ಕೇನಾಪಿ ಪಕಮಿನೇನ ವಿ[ಪುಲೇ ಸ್ವ]ಗೇ

೫ [ಸ]ಕೇ ಆರಾ . . ಯಿತವೇತಿ [ಏ]ತಾಯ ಇಯಂ ಅಥಾಯ ಸಾವಣೇ ಸವಾಪಿತೇ ಯಥಾ ಖುದಕಾ ಚ ಮಹಾತ್ವಾ ಚ ಇಮಂ ಪಕಮೇಯ್ಯು(ಯು) ಅಂತಾ ಚ ಮೇ [ಜಾನೇ] ಯುತಿ

೬ ಚಿರಠಿತಿಕೇ [ಚ] ಇಯಂ ಪಕೇ (ಕ)ಮೇ ಹೋತ ಇಯಂ ಅಥೇ ವಢಿ [ಸಿತಿವಿಪುಲಂ] ಪಿಚ ವಢಿಸಿತಿ ಅವರಧಿಯಾ ದಿಯಢಿಯಂ ವ[ಢಿಸಿ]ತಿ ಇಯಂ ಚ ಸಾವಾಪಿತೇ[ಣ]

೭ ಸಾವಾಪಿತೇ ವ್ಯೂಥೇಣ ೨೫೬ . . . ಪಾಠ ವಾಯಂ ಚ ವವಾಜಿತೇ ತಿ ಯಥಾ ರಾಜಾ ಅಸೋಕೋ ಆಹಾ ತಥಾತಿ

– **ಕವಿಶಾಸಂ**–೧, ಸಿರುಗುಪ್ಪ ೫೧, ಪು.೧೨೫–೧೨೬.

## ೧೩

### ಅಲ್ಲಿಯೇ ಸಮೀಪದಲ್ಲಿ ಎರಡನೆಯ ಗುಂಡಿನ ಮೇಲೆ

೮ ರಾಜಾ ಅಸೋಕೋ ಹೇವಂ ಆಹಾ ತಥಾ ಆನಪಯಿ . . ರಾಜು (ಕ) ಆನಪಯಿಸತಿ [ಜಾ]ನಪದಂಚ ಜನಂ ರಠಿಕಾನಿ ಚ ಮಾತಾ ಪಿತೂಸು ಸುಸೂಸಿತವಿಯೇ ತಿ ಹೇವಮೇವ ಗುರೂಸು

೯ ರ್ಪಾ(ಪ್ರಾ)ನೇಸು ದಯಿತವಿಯೇ ತಿ ಇಮೇ ಧಮ್ಮಗುಣೌ ಪವತಿತವಿಯಾ . . . ಫೇ ರಜುಕ ಆನಪಯಾಥ ಸೇ ದಾನ ದೇವಾನಂಪಿಯಸ ವಚನೇನ ಆನಪಯಿಸತಿರ್ತ್ತ ತೇ ಹೇಮೇವ ಆನಪಯಾಥ ಹೇಸ ಹಿ

೧೦ ಬಂಹನಾನಿ ಚ ಹಚ್ಚಾರೋಹಾನಿ ಚ ಕಾರನಕಾನಿ ಚ ಯುಗಾ . . . . . . . . . [ಪೋ]ರಾನಾ ಪಕಿತಿ . . . ಸಯಾ[ತಾ] ಇ [ಯಂ] ಸುಸೂಸಿತವಿಯೇ ತಿ ಇಯಂ ಅಪಚಾಯತಾವಿಯೇ ತಿ ಆಚಾಲಿಯೇ ಅಪಾಚಾಯಿ

೧೧ ತೇತಿ[ವಿ]ಯೇ ಚ ಸುಸೂಸಿತವಿಯೇ ಚ ಯೇಪಿ ಆಚಲಿ . . . . . . ತಿ . . . . . . ಯಥಾವರಹಂ ಪವತಿತವಿಯೇ ತಿ ಯಾದಿಸಿ ಪೋರಾನಾ ಪಕಿತೀ ಯಥಾ ಇಯಂ

೧೨ ಹಿ ಸಾತಿರೇಕೇ ಹುವೇಯಾ ತಥಾ ಪವತಿತವಿಯೇ[ತಿ]

– **ಕವಿಶಾಸಂ**–೧, ಸಿರುಗುಪ್ಪ ೫೨, ಪು.೧೨೬.

## ರಾಯಚೂರು ಜಿಲ್ಲೆ

### ಲಿಂಗಸೂಗೂರು ತಾಲ್ಲೂಕು, ಮಸ್ಕಿ

### ೧೪

ಗ್ರಾಮದ ಸಮೀಪವಿರುವ ಬೆಟ್ಟದ ನೈರುತ್ಯಕ್ಕೆ ದೊಡ್ಡಬಂಡೆಯ ಮೇಲೆ

೧ ದೇವಾನಂಪಿಯಸ ಅಸೋಕಸ . . . . . ದತ . [ನಿ]ವಸಾನಿ[ಯ]ಂ ಅಂಸುಮಿ ಬುಂಪಾಶಕೇ . . . [ತಿ]ರೇಕೇ . ಮಿ [ಸ]ಂಘ [ಂಉಪ]ಗತೇ [ಬಾ] . . . . . ವಿ ಉ[ಪ]ಗತೇ ಪುರೇ ಜಂಬು

೨ . . . [ಸಿ] . . . [ದೇವ ಹುಸು] ತೇ[ದಾ]ನಿ ಮಿಸಿ ಬೂತಾ ಇಯ ಅಠೇಖಿದು

೩ ಕೇನ ಹಿ ಧಮಯ [ತೇನ] ಸಕೇ ಅಧಿಗತವೇ ನ ಹೇವಂ ದಖಿತವಿಯೇ [ಉಡಾ]

೪ ಲ ಕೇ ವ ಇಮ ಅಧಿಗಚ್ಚೇಯತಿ ಖು[ದಕೇ ಚ ಉಡಾ] ಲ ಕೇಚವಾತವಿಯಂ ಹೇವಂ ವೇ[ಕ]ಲಂ ತಂಭದ [ಕೇ ಥಿತಿ] . . . [ತಿಕೇ] ಚ ವಡಿ ಸಿತಿ ಚ ದಿಯಡಿಯ ಹೇಸತಿ

– **ಕವಿಶಾಸಂ–೭**, ಲಿಂಗಸೂಗೂರು ೨೯, ಪು.೧೬೨.

卐卐卐

# ಕರ್ನಾಟಕದ ರಾಜಶಾಸನಗಳು

– ಡಾ॥ ಕೆ. ವಸಂತಲಕ್ಷ್ಮಿ*

**ಶಾ**ಸನಕ್ಷೇತ್ರದಲ್ಲಿ ವಿವಿಧ ಸ್ವರೂಪದ ಶಾಸನಗಳು ಲಭ್ಯವಿದೆಯಾದರೂ ಅವುಗಳಲ್ಲಿ ರಾಜಶಾಸನಗಳು ಸಿಂಹಪಾಲಿನದಾಗಿವೆ. 'ರಾಜಶಾಸನಗಳು' ಎಂಬ ಹೆಸರನ್ನು ವಿಶೇಷವಾಗಿ ದಾನಶಾಸನಗಳಿಗೆ, ತಾಮ್ರ ಪತ್ರಗಳಿಗೆ ಅನ್ವಯಿಸುತ್ತಾರೆ. ರಾಜರ ಜೀವನದ ಮಹತ್ವದ ಘಟನೆಗಳನ್ನು, ರಾಜ್ಯದ ರಾಜಕೀಯ ಸ್ಥಿತ್ಯಂತರಗಳನ್ನು ಸೂಚಿಸುವ ಶಾಸನಗಳು ರಾಜಶಾಸನಗಳೇ ಆಗಿರುತ್ತವೆ. ಮಹಾರಾಜರ ಅಧೀನ ರಾಜರುಗಳು, ಅಧಿಕಾರಿಗಳು ಮತ್ತು ಸಾಮಾನ್ಯ ಜನರು ಶಾಸನಗಳನ್ನು ಹಾಕಿಸುವಲ್ಲಿ, ಮಹಾರಾಜರ ಅನುಮತಿಯನ್ನು ಪಡೆದಿದ್ದು, ಮಹಾರಾಜರ ಆಳ್ವಿಕೆಯನ್ನು ಉಲ್ಲೇಖಿಸಿರುತ್ತಾರೆ. ಇದರಿಂದಾಗಿ ಇಂಥ ಶಾಸನಗಳೂ ಪರೋಕ್ಷವಾಗಿ ರಾಜಶಾಸನಗಳೆಂದೇ ಪರಿಗಣಿತವಾಗುತ್ತವೆ. 'ಶುಕ್ರನೀತಿಸಾರ' ಗ್ರಂಥವು ರಾಜಶಾಸನಗಳ ಮಹತ್ವವನ್ನು ತಿಳಿಸುತ್ತಾ – "ರಾಜ ಮುದ್ರೆಸಹಿತವಾದ ಶಾಸನವೇ ನಿಜವಾದ ರಾಜ; ಬರಿಯ ರಾಜ ರಾಜನೇ ಅಲ್ಲ" ಎಂದಿದೆ. ಮತ್ತೊಂದೆಡೆಯಲ್ಲಿ– "ಲೇಖನವಿಲ್ಲದೆ ಆಜ್ಞೆ ಮಾಡುವ ರಾಜ, ಆಜ್ಞಾಪತ್ರಗಳಿಲ್ಲದೆ ಅಧಿಕಾರವನ್ನು ಪ್ರಯೋಗಿಸುವ ಅಧಿಕಾರಿಗಳು ಇಬ್ಬರೂ ಚೋರರು"– ಎಂದು ಘೋಷಿಸಿದೆ. ಹೀಗೆ ಪ್ರಾಚೀನ ಕಾಲದಲ್ಲಿನ ರಾಜರ ಆಳ್ವಿಕೆಯ ಪಾರದರ್ಶಕತೆಯನ್ನು ಶಾಸನಗಳು ತೆರೆದಿಟ್ಟಿವೆ.

ರಾಜಶಾಸನಗಳನ್ನು ಮೂರು ವಿಧಗಳಾಗಿ ವಿಂಗಡಿಸಬಹುದು. ಅವುಗಳೆಂದರೆ (೧) ದಾನಶಾಸನಗಳು (೨) ಪ್ರಸಾದ ಶಾಸನಗಳು (ರಾಜಮಾನ್ಯಗಳು) ಮತ್ತು (೩) ಪ್ರಶಸ್ತಿ ಶಾಸನಗಳು (ಜಯಪತ್ರಗಳು)

**ದಾನಶಾಸನಗಳು**

ಪ್ರಾಚೀನ ಕರ್ನಾಟಕದಲ್ಲಿ ವಿಶೇಷವಾಗಿ ದೊರೆತಿರುವ ರಾಜಶಾಸನಗಳಲ್ಲಿ ಹೆಚ್ಚಿನ ಸಂಖ್ಯೆಯ ಶಾಸನಗಳು ದಾನಪತ್ರಗಳೇ (ತಾಮ್ರ ಶಾಸನಗಳು) ಆಗಿವೆ. ವಿಷ್ಣು ಪುರಾಣವು– 'ರಾಜನಾದವನು ಬ್ರಾಹ್ಮಣರಿಗೆ ಭೂಮಿದಾನ ನೀಡಬೇಕೆಂದಿದೆ'; ಈ ದಾನದ ವಿಷಯವನ್ನು ತನ್ನ ವಂಶದ ಮುಂದಿನ ರಾಜರಿಗೆ ಖಚಿತವಾಗಿ ತಿಳಿಸಲು, ಭೂಮಿಯನ್ನು ಅಳತೆಮಾಡಿಸಿ, ಸೀಮಾ ವಿವರವನ್ನು ಗುರುತಿಸಿದ ತಾಮ್ರಪಟಗಳನ್ನು ದಾನ ಸ್ವೀಕರಿಸಿದ ಪ್ರತಿಗ್ರಾಹಿಗೆ ನೀಡಬೇಕೆಂದು ವಿಧಿಸಿದೆ. ಈ ವಿಧಿನಿಯಮಗಳನ್ನು ಕಂಡಾಗ ಪ್ರಾಚೀನ ಕಾಲದಿಂದಲೂ 'ದಾನಶಾಸನ'ಗಳ ಪರಂಪರೆಯನ್ನು ಗುರುತಿಸಬಹುದು. ಯಾಜ್ಞವಲ್ಕ್ಯ ಸ್ಮೃತಿಯ ಟೀಕೆಯಾದ ವಿಜ್ಞಾನೇಶ್ವರನ 'ಮಿತಾಕ್ಷರ'ದಲ್ಲಿ, ಶಾಶ್ವತವಾದ, ಘಟ್ಟಿಯಾದ ಲೋಹದ ಮೇಲಿನ ಬರವಣಿಗೆಯನ್ನು 'ಶಾಸನ'ವೆಂದು ಕರೆದಿದ್ದು, ತಾಳಿಕೆ ಇರದ ಸಾಧನದ ಮೇಲಿನ ಬರಹವನ್ನು 'ಜಾನಪದ'ವೆಂದು ಕರೆದಿದೆ; ದಾನಶಾಸನಗಳ ಗುಣಲಕ್ಷಣಗಳನ್ನು ಖಚಿತವಾಗಿ ತಿಳಿಸಿದೆ. ದಾನಪತ್ರದಲ್ಲಿ– (೧) ದಾನಿಯ ಮೂರು ತಲೆಮಾರಿನ ಪೂರ್ವಜರ ವಿವರಗಳೂ, ದಾನದ ಭೂಮಿಯ ವಿಸ್ತಾರ ಮತ್ತು ಎಲ್ಲೆಯ ವಿವರಗಳನ್ನು ನಿರ್ದಿಷ್ಟವಾಗಿ ನಮೂದಿಸಿರಬೇಕು (೨) ರಾಜನು ದಾನ ನೀಡಿದ ಸಂದರ್ಭವನ್ನು ತಿಳಿಸುತ್ತಾ (೩) ನಿಶ್ಚಿತವಾದ ಸಂವತ್ಸರ, ಮಾಸ, ದಿನ, ನಕ್ಷತ್ರಗಳ ವಿವರವನ್ನು ಹೊಂದಿರುವ ದಾನಪತ್ರಕ್ಕೆ (೪) ರಾಜನ ಮುದ್ರೆ ಮತ್ತು ಸಹಿಯೂ ಇರಬೇಕೆಂದು ತಿಳಿಸಿದೆ (೫) ಈ ದಾನವನ್ನು ಸ್ವೀಕರಿಸಿದವನ ಹೆಸರು, ಕುಲ, ಗೋತ್ರಗಳನ್ನು ದಾಖಲಿಸುವ ದಾನಪತ್ರವು 'ಪ್ರಮಾಣಬದ್ಧವಾದ ರಾಜಶಾಸನ'ವಾಗಿರುತ್ತದೆ. ಇಂಥ ಶಾಸನಗಳನ್ನು ರಚಿಸಲು ಶ್ರೇಷ್ಠವಾದ ಅಧಿಕಾರಿಯೊಬ್ಬನನ್ನು ನೇಮಿಸಿಕೊಳ್ಳಬೇಕೆಂದೂ ತಿಳಿಸಿದೆ. ವ್ಯಾಸರ 'ಶಬ್ದಕಲ್ಪದ್ರುಮ' ಕೃತಿಯಲ್ಲಿ– "ಈ ದಾನಪತ್ರದ ಪಾಠವನ್ನು ಮೊದಲು ಹಲಗೆಯ ಮೇಲೆ ಸುಣ್ಣದಿಂದ ಬರೆದು ಲೋಪದೋಷಗಳಿದ್ದರೆ ಸರಿಪಡಿಸಿ, ನಂತರ ತಾಮ್ರಪಟದ ಮೇಲೆ ಕೆತ್ತಬೇಕೆಂದು" ತಿಳಿಸಿದೆ. ಹೀಗೆ ರಾಜರು ನೀಡುತ್ತಿದ್ದ ದಾನ ಶಾಸನಗಳಾದ 'ತಾಮ್ರ

* ನಂ.೧೬೭೬, ೫ನೆಯ 'ಎ' ಅಡ್ಡರಸ್ತೆ, ೧೧ನೆಯ ಮುಖ್ಯರಸ್ತೆ, ಬನಶಂಕರಿ ೧ನೆಯ ಘಟ್ಟ, ೨ನೆಯ ಬ್ಲಾಕ್, ಬೆಂಗಳೂರು–೫೬೦೦೫೦.

ಪಟಗಳು' ನಿಶ್ಚಿತ ದಾಖಲೆಗಳಾಗಿದ್ದು, ಇವುಗಳ ಒಂದು ಪ್ರತಿಯು ರಾಜ ಭಂಡಾರದಲ್ಲೂ ಸಂರಕ್ಷಿಸಲ್ಪಡುತ್ತಿತ್ತು. ಇದರಿಂದ ತಾಮ್ರಶಾಸನಗಳನ್ನು "ರಾಜಶಾಸನ"ಗಳೆಂದು ಕರೆಯುತ್ತಿದ್ದರು.

ಆರಂಭಕಾಲದಲ್ಲಿ ತಾಮ್ರಪತ್ರಗಳ ಆಕಾರವು ಗ್ರಂಥದ, ತಾಳೆಗರಿಗಳಂತೆ ಇರುತ್ತಿತ್ತು. ಅದರ ಬಲಬದಿಯಲ್ಲಿ ಒಂದು ರಂಧ್ರವನ್ನು ಕೊರೆದಿರುತ್ತಿದ್ದರು. ಶಾಸನ ಪಾಠವನ್ನು ಬರೆಯಲು ಹೆಚ್ಚು ತಾಮ್ರ ಪತ್ರಗಳನ್ನು ಬಳಸಿದ್ದರೆ, ಅವೆಲ್ಲವನ್ನು ಒಟ್ಟಾಗಿ ಬಳೆಯ ಮೂಲಕ ಪೋಣಿಸಿ, ಬೆಸುಗೆ ಹಾಕುತ್ತಿದ್ದರು. ಬೆಸುಗೆಯ ಮೇಲ್ಭಾಗದಲ್ಲಿ ರಾಜಮುದ್ರೆಯ ಲಾಂಛನವಿರುತ್ತದೆ. ಅನೇಕ ಪತ್ರಗಳುಳ್ಳ ತಾಮ್ರಶಾಸನಗಳಲ್ಲಿನ ಮೊದಲ ಪತ್ರದ ಮುಂಭಾಗದಲ್ಲಿ ಕೊನೆಪತ್ರದ ಹಿಂಭಾಗದಲ್ಲಿ ಬರಹವಿರುತ್ತಿರಲಿಲ್ಲ. ಒಳಪತ್ರಗಳಲ್ಲಿ ಎರಡು ಭಾಗದಲ್ಲೂ ಕೆತ್ತಿದ್ದು, ಪತ್ರದ ಸಂಖ್ಯೆಯನ್ನು ರಂಧ್ರದ ಬಳಿ ಕೆತ್ತಿರುತ್ತಾರೆ. ಮೊದಲು ಪಾಠವನ್ನು ಸಿದ್ಧಪಡಿಸಿ, ತಾಮ್ರಪತ್ರಗಳ ಮೇಲೆ ಮಸಿಯಿಂದ ಬರೆದು ನಂತರ ಅಕ್ಷರಗಳನ್ನು ಉಳಿಯಿಂದ ಕೆತ್ತುತ್ತಿದ್ದರು. ಒಮ್ಮೆ ಕೆತ್ತಿದ ಅಕ್ಷರಗಳು ತಪ್ಪಾದರೂ ಹಾಗೇ ಉಳಿದುಬಿಡುತ್ತಿತ್ತು. ಮಧ್ಯಕಾಲೀನ ಶಾಸನಗಳಲ್ಲಿ, ಪತ್ರದ ಅಂಚಿನಲ್ಲಿ ತಿದ್ದಿರುವ ಅಕ್ಷರವನ್ನು ಕೆತ್ತಿದ್ದು, ತಪ್ಪಾದ ಅಕ್ಷರವನ್ನು ಚಿತ್ತು ಮಾಡಿರುವುದು ಗಮನಾರ್ಹವಾಗಿದೆ.

ತಾಮ್ರಶಾಸನಗಳು ಆಕಾರದಲ್ಲಿ, ಗಾತ್ರದಲ್ಲಿ ಭಿನ್ನವಾಗಿರುತ್ತವೆ. ಕದಂಬರ ತಾಮ್ರಶಾಸನಗಳಲ್ಲಿ ಮೂರು ಪತ್ರಗಳಿದ್ದು, ಇವನ್ನು 'ತ್ರಿವಳಿ ಶಾಸನ' ಎನ್ನುವರು. ಪ್ರತಿ ಪತ್ರದಲ್ಲಿ ೪-೫ ಸಾಲುಗಳಿರುತ್ತವೆ. ಕದಂಬರ ತಾಮ್ರಪಟಗಳ ಬೆಸುಗೆಯ ಮೇಲೆ 'ಸಿಂಹ'ದ ಶಿಲ್ಪವಿರುತ್ತದೆ. ಗಂಗರ ತಾಮ್ರಶಾಸನಗಳ ಮೇಲೆ 'ಆನೆ'ಯ ಲಾಂಛನವೂ, ಚಾಲುಕ್ಯ ಮತ್ತು ವಿಜಯನಗರದ ತಾಮ್ರ ಶಾಸನಗಳಲ್ಲಿ 'ವರಾಹ' ಲಾಂಛನವೂ ಇರುತ್ತವೆ. ರಾಷ್ಟ್ರಕೂಟರ ಪಟಗಳು 'ಗರುಡ' ಲಾಂಛನವನ್ನೂ, ಆಳುಪರ ತಾಮ್ರಶಾಸನವು 'ಮತ್ಸ್ಯ' ಲಾಂಛನವನ್ನೂ ಹೊಂದಿರುತ್ತವೆ. ೧೫-೧೬ನೆಯ ಶತಮಾನದ ತಾಮ್ರಪಟಗಳಲ್ಲಿ ಕೆಲವು ಅಗಲವಾದ ಆಯತಾಕಾರದ ಒಂದೇ ಪತ್ರದಲ್ಲಿ ಕೆತ್ತಿರುವ ಶಾಸನಗಳೂ ಇವೆ. ಸಾಮಾನ್ಯವಾಗಿ ತಾಮ್ರಶಾಸನಗಳಲ್ಲಿ ಸಂಸ್ಕೃತ ಭಾಷೆಯನ್ನು ಬಳಸಲಾಗಿದೆ. ಕೆಲವು ತಾಮ್ರಶಾಸನಗಳು ಮಾತ್ರ ಕನ್ನಡ ಭಾಷೆಯಲ್ಲಿವೆ. ಉದಾ.ಗೆ ರಾಷ್ಟ್ರಕೂಟ ದೊರೆ ೩ನೆಯ ಗೋವಿಂದನ ತಾಮ್ರಪಟಗಳು ಆರಂಭಕಾಲದ ಶಾಸನಗಳ ಪಾಠದಲ್ಲಿ ದಾನಿಯ ಮಹತ್ವ, ಸಾಧನೆಗಳ ಬಗೆಗೆ, ಪೂರ್ವಜರ ಬಗೆಗೆ ಹೆಚ್ಚಿನ ವಿವರಗಳಿಲ್ಲ. ಇದರಿಂದ ಕೇವಲ ಮೂರು ಫಲಕಗಳಲ್ಲೇ ಶಾಸನ ಸಿದ್ಧವಾಗಿದೆ. ಕರ್ನಾಟಕದಲ್ಲಿ, ಗಂಗರು ಮತ್ತು ಕದಂಬರು ಹಾಗೂ ರಾಷ್ಟ್ರಕೂಟರ ಕಾಲದಲ್ಲಿ ಹೆಚ್ಚಾಗಿ ತಾಮ್ರಶಾಸನಗಳನ್ನು ಬಳಸಲಾಗಿದೆ. ರಾಷ್ಟ್ರಕೂಟ ದೊರೆ ಮೂರನೆಯ ಗೋವಿಂದನ ತಾಮ್ರಪಟವು ಕನ್ನಡ ಭಾಷೆಯಲ್ಲಿ ರಚಿಸಿರುವ ತಾಮ್ರಶಾಸನವಾಗಿದೆ. ಭಾರತದಲ್ಲಿನ ಅತ್ಯಂತ ದೊಡ್ಡ ತಾಮ್ರಶಾಸನವೆಂದರೆ, ತಮಿಳುನಾಡಿನ ಪುತ್ತೂರು ಗ್ರಾಮದಲ್ಲಿ ದೊರೆತ ಶಾಸನ. ಚೋಳದೊರೆ ೧ನೆಯ ರಾಜೇಂದ್ರ ಚೋಳನ ಈ ತಾಮ್ರಶಾಸನವು ೫೭ ಪಟಗಳನ್ನು ಹೊಂದಿದ್ದು ೨೫೦೦ ಸಾಲುಗಳುಳ್ಳ ಅತಿ ದೀರ್ಘವಾದ ಶಾಸನವಾಗಿದೆ; ಈ ಶಾಸನದ ಒಟ್ಟು ಪಟಗಳನ್ನು ಎರಡು ಉಂಗುರಗಳಿಂದ ಪೋಣಿಸಿದ್ದು, ಇಲ್ಲಿ ರಾಜ ಲಾಂಛನದ ಎರಡು ಮುದ್ರೆಗಳಿವೆ. ಈ ಶಾಸನದ ಫಲಕಗಳ ಒಟ್ಟು ತೂಕವು ೮೬೪೫ ತೊಲಗಳಾಗಿದ್ದು, ಎರಡು ಮುದ್ರೆಯುಳ್ಳ ಬಳೆಗಳ ತೂಕವು ೭೫೩ ತೊಲಗಳೆಂದು ತಿಳಿಯುತ್ತದೆ. ಇಂಥ ಬೃಹತ್ ಗಾತ್ರದ ತಾಮ್ರಪಟದ ಶಾಸನವು ಬ್ರಾಹ್ಮಣರಿಗೆ ದಾನ ನೀಡಿದ ವಿಷಯವನ್ನು ದಾಖಲಿಸಿದೆ. ಕರ್ನಾಟಕದಲ್ಲಿ ದೊರೆತಿರುವ ತಾಮ್ರ ಶಾಸನಗಳಲ್ಲಿ, ಮೈಸೂರಿನ ದೊರೆ ಇಮ್ಮಡಿ ಕೃಷ್ಣರಾಜ ಒಡೆಯರ ದಳವಾಯಿ ದೇವರಾಜನು ನೀಡಿರುವ ತಾಮ್ರಶಾಸನವು ಅತಿದೊಡ್ಡ ಶಾಸನವಾಗಿದೆ. ತಿರುಮಕೂಡಲು ನರಸೀಪುರದ ಈ ತಾಮ್ರ ಶಾಸನವು ೧೬ ಪಟಗಳುಳ್ಳ ಶಾಸನವಾಗಿದ್ದು, ೧೫೯೦ ಸಾಲುಗಳ ಶಾಸನವಾಗಿದೆ. ನಾಗರಿ ಲಿಪಿಯ ಈ ಶಾಸನದ ಭಾಷೆ ಸಂಸ್ಕೃತವಾಗಿದ್ದು ಭೂಮಿಯ ಸೀಮೆ ತಿಳಿಸುವಲ್ಲಿ ಕನ್ನಡ ಭಾಷೆ ಬಳಸಲಾಗಿದೆ.

ದಾನ ಶಾಸನಗಳ ಪಾಠವನ್ನು ನಿರ್ದಿಷ್ಟವಾದ ಕ್ರಮದಲ್ಲಿ ಸಿದ್ಧಪಡಿಸುತ್ತಿದ್ದು, ಈ ಶಾಸನ ಪಾಠದ ಸ್ವರೂಪವೇ ಮುಂದೆ ಎಲ್ಲಾ ವಿಧದ ಶಾಸನ ಪಾಠದ ಸ್ವರೂಪವಾಗಿದೆ. ಶಾಸನ ಆರಂಭದಲ್ಲಿ ಶುಭ ಸೂಚಕಗಳಾದ ಓಂ/ಸಿದ್ಧಂ/ಶ್ರೀ/ಸ್ವಸ್ತಿಶ್ರೀ ಎಂಬ ಒಂದು ಸಂಕೇತದೊಂದಿಗೆ ಆರಂಭವಾಗಿದ್ದು, ದಾನಿಯ ಅಪೇಕ್ಷೆಯಂತೆ ಅಥವಾ ದಾನದ ಸಂದರ್ಭೋಚಿತವಾಗಿ ದೇವತಾ ಪ್ರಾರ್ಥನೆಯ ಶ್ಲೋಕಗಳನ್ನು ಕೆತ್ತಲಾಗಿದೆ. ಹಲವೆಡೆ ಶಾಸನ ಕವಿಗಳು ತಮ್ಮ ಪ್ರತಿಭೆ ತೋರಿ ಸುಂದರವಾದ ಪ್ರಾರ್ಥನಾ ಪದ್ಯಗಳನ್ನು ರಚಿಸಿದ್ದಾರೆ. ಬಳಿಕ ದಾನ ನೀಡುತ್ತಿರುವ ರಾಜನ ವಂಶಾವಳಿಯ ಸುದೀರ್ಘವಾದ ವರ್ಣನೆಯ

ಭಾಗವಿರುತ್ತದೆ. ಈ ಭಾಗದಲ್ಲಿ ರಾಜನ ಪೂರ್ವಜರ ಪರಿಚಯ, ಸಾಧನೆಗಳ ವಿವರವೂ, ದಾನಿಯ ಸಾಧನೆಗಳ ವರ್ಣನೆಯನ್ನು ದಾಖಲಿಸಿದ್ದು, ಈ ಭಾಗವು ಆ ರಾಜವಂಶಗಳ, ಆ ರಾಜ್ಯದ ಇತಿಹಾಸ ಪುನಾರಚನೆಗೆ ನೆರವಾಗುವ ಮಹತ್ವದ ಅಂಶಗಳಾಗುತ್ತವೆ. ಉದಾ.ಗೆ ಕದಂಬ ದೊರೆ ರವಿವರ್ಮನ ಗುಡ್ನಾಪುರದ ಶಾಸನವು ಕದಂಬರ ವಂಶಾವಳಿಯನ್ನು ದಾಖಲಿಸಿದೆ. ವಂಶಾವಳಿಯ ಸಂದರ್ಭದಲ್ಲಿ ಹಲವೆಡೆ ರಾಜರ ಮಹತ್ವದ ಸಾಧನೆಗಳನ್ನು ಬಣ್ಣಿಸಿದೆ. ಮಹಾಕೂಟದ ಸ್ತಂಭ ಶಾಸನವು ಮಂಗಳೇಶನ ದಿಗ್ವಿಜಯದ ಬಗೆಗೆ ತಿಳಿಸುತ್ತದೆ. ಶಾಸನಗಳಲ್ಲಿ ದಾನ ನೀಡಿದ ಸಂದರ್ಭದ ಬಗೆಗೆ ತಿಳಿಸುವಲ್ಲಿ ಕಾಲ ನಿರ್ದೇಶನದ ಭಾಗವಿದ್ದು, ಸಾಮಾನ್ಯವಾಗಿ ಪ್ರಾಚೀನ ಶಾಸನಗಳಲ್ಲಿ ಆ ರಾಜನು ಪಟ್ಟವೇರಿದ ವರ್ಷದಿಂದ ಲೆಕ್ಕ ಮಾಡಿ ಆ ವರ್ಷವನ್ನು ಸೂಚಿಸಿದೆ. ಆ ವರ್ಷ ನಡೆಯುತ್ತಿದ್ದ ಸಂವತ್ಸರದ ಹೆಸರು, ಆಯನ, ಮಾಸ, ಪಕ್ಷ, ತಿಥಿ, ನಕ್ಷತ್ರಗಳನ್ನು ಖಚಿತವಾಗಿ ದಾಖಲಿಸುವರಲ್ಲದೆ ವಿಶೇಷವಾಗಿ ದಾನ ನೀಡಿದ ದಿನ, ಗ್ರಹಣ, ಸಂಕ್ರಮಣ ಮುಂತಾದ ನೈಮಿತ್ತಿಕಗಳನ್ನು ತಿಳಿಸಿರುತ್ತಾರೆ. ಉದಾ.ಗೆ: ಕದಂಬ ದೊರೆ ಶಿವಮೃಗೇಶವರ್ಮನ ಆಳ್ವಿಕೆಯ ಏಳನೇ ವರ್ಷ ಮಾರ್ಗಶಿರ ಶುಕ್ಲ ದಶಮಿಯಂದು ದಾನ ನೀಡಿದ್ದನ್ನು ಹಿಟ್ಟ ಹೆಬ್ಬಾಗಿಲಿನ ಶಾಸನವು ದಾಖಲಿಸಿದೆ (ಬನವಾಸಿ ಕದಂಬರು ಶಾ ಸಂ.೧೧).

ಈ ತೇದಿಯ ವಿವರಗಳ ನಂತರ ರಾಜರು ದಾನ ನೀಡಿರುವ ಸಂದರ್ಭ ಮತ್ತು ಉದ್ದೇಶವನ್ನು ತಿಳಿಸುತ್ತಾ, ದಾನ ಪ್ರತಿಗ್ರಹಿಯ ಕುಲಗೋತ್ರಗಳನ್ನು ದಾಖಲಿಸುತ್ತದೆ. ಭೂದಾನವಾಗಿದ್ದಲ್ಲಿ ದಾನದ ಭೂಮಿಯ ಎಲ್ಲೆಗಳನ್ನು ಗುರುತಿಸುವ ಭಾಗವಿದ್ದು, ಈ ಭಾಗವನ್ನು ತಾಮ್ರ ಶಾಸನಗಳಲ್ಲೂ ಕನ್ನಡ ಭಾಷೆಯಲ್ಲಿ (ದೇಶಭಾಷೆ) ತಿಳಿಸಲಾಗಿದೆ. ತಾನಿತ್ತ ದಾನವನ್ನು ಮುಂದಿನ ಪೀಳಿಗೆಯವರು, ಸೂರ್ಯ ಚಂದ್ರರಿರುವವರೆಗೆ ಸಂರಕ್ಷಿಸಬೇಕೆಂದು ದಾನಿಯ ಆಶಯವಾಗಿರುತ್ತದೆ. ಇದರಿಂದ, ಶಾಸನಾಂತ್ಯದಲ್ಲಿ ಕೆಲವೆಡೆ ಧರ್ಮಸೂತ್ರಗಳ 'ಶ್ಲೋಕ'ಗಳನ್ನು ಉಲ್ಲೇಖಿಸಿ ದಾನ ರಕ್ಷಿಸಿದವರಿಗೆ ಉಂಟಾಗುವ ಮಹತ್ವದ ಫಲವನ್ನು ತಿಳಿಸಿದರೆ, ದಾನ ನಶಿಸಿದರೆ ಉಂಟಾಗುವ ನರಕದ ಕಲ್ಪನೆಯನ್ನು ತಿಳಿಸಿದೆ. ಕೆಲವು ಶಾಸನಗಳಲ್ಲಿ ಇದೇ ವಿವರವನ್ನು ತಿಳಿಗನ್ನಡದಲ್ಲಿ ದಾಖಲಿಸಿದೆ. ವಿಜಯನಗರ ಕಾಲದ ಕೆಲವು ಶಾಸನಗಳಲ್ಲಿ ಶಾಪಾಶಯದ ಭಾಗವಾಗಿ ದೇಶೀಯ ಬೈಗುಳಗಳನ್ನೇ ಬಳಸಲಾಗಿದೆ. ಶಾಸನದ ಕೊನೆಯ ಅಂಶವಾಗಿ ಶಾಸನವನ್ನು ಬರೆದವರ, ಕಂಡರಿಸಿದವರ ಹೆಸರುಗಳನ್ನು ದಾಖಲಿಸಿರುವುದು ಗಮನಾರ್ಹ. ತಾಮ್ರ ಶಾಸನದಲ್ಲಿ ಶಾಪಾಶಯದ ನಂತರ, ಕೆತ್ತಿದವರ ಹೆಸರು, ಸಾಕ್ಷಿಗಳ ಉಲ್ಲೇಖ, ರಾಜನ ವೊಪ್ಪವಿದ್ದು, ಶಾಸನ ಮುಕ್ತಾಯ ಆಗುತ್ತದೆ. ಹೊಯ್ಸಳರ ತಾಮ್ರಶಾಸನಗಳಲ್ಲಿ ದಾನ ನೀಡಿದ ರಾಜರ ಹೆಸರೇ 'ಒಪ್ಪ'ವಾಗಿ ಬಂದಿದೆ; ವಿಜಯನಗರದ ತಾಮ್ರಶಾಸನಗಳಲ್ಲಿ ಶ್ರೀವಿರೂಪಾಕ್ಷ, ಶ್ರೀರಾಮಚಂದ್ರ- ಮುಂತಾದ ಒಪ್ಪಗಳಿವೆ. ವಿಶೇಷವಾಗಿ ಕೃಷ್ಣದೇವರಾಯನ ಕಾಲದಲ್ಲಿ, ತಾಮ್ರಶಾಸನಗಳನ್ನು ರಚಿಸಲು ವೀರಣಾಚಾರಿ ಎಂಬುವವನು ನಿಯುಕ್ತನಾಗಿದ್ದನೆಂದು ತಿಳಿಯುತ್ತದೆ.

ರಾಜಶಾಸನಗಳು ರೂಪುಗೊಳ್ಳಲು ನಾನಾ ಸಂದರ್ಭಗಳು ಪ್ರೇರಕವಾಗಿದ್ದವು. ಸಾಮಾನ್ಯವಾಗಿ ರಾಜರ ವೈಯಕ್ತಿಕ ಬದುಕಿನ ವಿಶೇಷ ಸಂದರ್ಭಗಳಲ್ಲಿ ದಾನ ದತ್ತಿಗಳನ್ನು ನೀಡಿದ್ದು ರಾಜಶಾಸನಗಳನ್ನು ಹಾಕಿಸಿದ್ದಾರೆ. ರಾಜರು ವಿವಾಹ ಮಹೋತ್ಸವ, ವಿಜಯಸಿದ್ಧಿ, ಪಟ್ಟಬಂಧೋತ್ಸವ, ಪುತ್ರೋತ್ಸವ ಮುಂತಾದ ಸಂದರ್ಭಗಳಲ್ಲಿ ದಾನ ಬಿಟ್ಟಿರುವುದನ್ನು ನೂರಾರು ಶಾಸನಗಳು ಉಲ್ಲೇಖಿಸಿವೆ. ಉದಾ.ಗೆ: ತಾಳಗುಂದದ ಶಾಸನವು ಕದಂಬ ವಂಶದ ಮೂಲದ ಬಗೆಗೆ ಬೆಳಕು ಚೆಲ್ಲುತ್ತಾ, ಮಯೂರವರ್ಮನು ಕಂಚಿಯ ಘಟಿಕಾಸ್ಥಾನದಲ್ಲಾದ ಅಪಮಾನದಿಂದ ನೊಂದು, ಅಸ್ತ್ರವನ್ನು ಧರಿಸಿ, ಅಂತಪಾಲ, ಬೃಹದ್ಬಾಣರನ್ನು ಸೋಲಿಸಿ ರಾಜ್ಯ ನಿರ್ಮಿಸಿದ್ದನ್ನು ತಿಳಿಸುತ್ತಾ, ಸ್ಥಾಣಕುಂದೂರಿನ ಮಹಾದೇವರಿಗೆ ಬಿಟ್ಟ ದಾನವನ್ನು ದಾಖಲಿಸಿದೆ (ಪುರಾತತ್ತ್ವ ಶೋಧನೆ-ಶಾ ಸಂ.೮). ಹೊಯ್ಸಳ ದೊರೆ ೨ನೇ ವೀರಬಲ್ಲಾಳನ ಪಟ್ಟ ಬಂಧೋತ್ಸವದ ನಿಶ್ಚಿತ ದಿನವನ್ನು ಶಾಸನಗಳು ದಾಖಲಿಸಿದ್ದು, ವಿಜಯ ಸಂವತ್ಸರದ ಶ್ರಾವಣ ಶುದ್ಧ ಏಕಾದಶಿ ಆದಿವಾರದಂದು (ಕ್ರಿ.ಶ. ೧೧೭೩, ಜುಲೈ ೨೨) ಅನೇಕ ಗ್ರಾಮಗಳಲ್ಲಿ ದಾನ ನೀಡಿರುವ ಉಲ್ಲೇಖಗಳಿವೆ. ಶೃಂಗೇರಿಯ ಶಾಸನವು ಕ್ರಿ.ಶ. ೧೩೪೬ರಲ್ಲಿ ಹರಿಹರನು ತನ್ನ ಸೋದರರೆಲ್ಲರೊಂದಿಗೆ ಶೃಂಗೇರಿಗೆ ಬಂದು ಗುರುಗಳಾದ ಭಾರತೀತೀರ್ಥ ಶ್ರೀಪಾದಂಗಳಿಗೆ ನಮಿಸಿ ಆಶೀರ್ವಾದ ಪಡೆದದ್ದನ್ನು ದಾಖಲಿಸುತ್ತಾ ಪರೋಕ್ಷವಾಗಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಕಡೆಗೆ ಬೆರಳು ತೋರಿದೆ. ಈ ಸಂದರ್ಭದಲ್ಲಿ ಯತಿಗಳಿಗೂ, ಬ್ರಾಹ್ಮಣರಿಗೂ ಬಿಟ್ಟ ಗ್ರಾಮದಾನವನ್ನು ಶಾಸನ ಉಲ್ಲೇಖಿಸಿದೆ (ಎಕ.೧೧; ಶೃಂಗೇರಿ ೧).

ಕೊಡಗಿನ ಮಾಲಂಬಿ ಗ್ರಾಮದ ಶಾಸನವೊಂದು– ದೊರೆ ರಾಜರಾಜ ಚೋಳನು, ಪನಸೋಗೆಯ ಕಾಳಗದಲ್ಲಿ ಶತ್ರುಗಳೊಂದಿಗೆ ಸೆಣಸಿ ಸಾಹಸವನ್ನು ಮೆರೆದ ಮನಿಜನೆಂಬುವನಿಗೆ ಪಟ್ಟವನ್ನು ಕಟ್ಟಿ ಆ ನಾಡನ್ನು ಕೊಡಲು, ಸೇನಾಪತಿಯಾದ ಪಂಚವನ್ ಮಹಾರಾಯನಿಗೆ ಆದೇಶಿಸಿದನು. ಇದರಂತೆ ಮನಿಜನಿಗೆ 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವ'ನೆಂಬ ಬಿರುದನ್ನಿತ್ತು ಮಾಲವ್ವಿ (ಮಾಲಂಬಿ) ಗ್ರಾಮವನ್ನು ಕೊಟ್ಟನೆಂದು ಶಾಸನ (ಎಕ.೧, ಕೊಡಗು ೬೫) ತಿಳಿಸಿದ್ದು, ಅಂದಿನಿಂದ ಕೊಂಗಾಳ್ವರ ರಾಜ್ಯ ಸ್ಥಾಪಿತವಾಗಿ ಕೊಂಗಾಳ್ವರ ಆಳ್ವಿಕೆ ಆರಂಭವಾಯಿತೆಂದು ತಿಳಿಯುತ್ತದೆ. ಹೊಯ್ಸಳ ದೊರೆ ವಿಷ್ಣುವರ್ಧನನು ಅದಿಯಮನನ್ನು ಸೋಲಿಸಿ ತಲಕಾಡನ್ನು ಗೆದ್ದು ಕೀರ್ತಿನಾರಾಯಣ ದೇವಾಲಯವನ್ನು ನಿರ್ಮಿಸಿ ದಾನ ಬಿಟ್ಟದ್ದನ್ನು ತಲಕಾಡಿನ ಶಾಸನವೊಂದು ಉಲ್ಲೇಖಿಸಿದೆ (ಎಕ.೫, ತಿ.ನ.೧೫೧). ರಾಜರು ತಮ್ಮ ಹುಟ್ಟುಹಬ್ಬದ ಸಂಭ್ರಮದಂದು ದಾನಬಿಟ್ಟ ಉದಾಹರಣೆಗಳೂ ಇವೆ. ಹೆಗ್ಗಡದೇವನಕೋಟೆಯ ಶಾಸನವೊಂದು (ಎಕ.೩, ಹೆಗ್ಗಡದೇವನಕೋಟೆ ೯೦) ಗಂಗರ ದೊರೆ ಶ್ರೀಪುರುಷ ಮಹಾರಾಜರ ಶ್ರೀ ನಕ್ಷತ್ರದ ದಿನದಂದು ತಿಂಗಳಿಗೆ ಒಮ್ಮೆ ಹನ್ನೆರಡು ಜನ ಬ್ರಾಹ್ಮಣರ ಭೋಜನವನ್ನು ನಡೆಸಲೆಂದು ದಾನ ನೀಡಿದ್ದನ್ನು ತಿಳಿಸಿದೆ.

ದಾನ ಶಾಸನದ ರಚನೆಗೆ ಇರುವ ಮತ್ತೊಂದು ಪ್ರೇರಣೆ ಎಂದರೆ ಪುಣ್ಯಾಪೇಕ್ಷೆಯ ಆಶಯ. ಇದರಂತೆ ಕದಂಬರ ದೊರೆ ರವಿವರ್ಮನ ಕೇರಳ ರಾಜ್ಯದ ನೀಲಂಬೂರ ತಾಮ್ರಶಾಸನವು ಅರಸ ರವಿವರ್ಮನ ಆಳ್ವಿಕೆಯ ಐದನೇ ವರ್ಷದಲ್ಲಿ ಹೊರಡಿಸಿದ್ದಾಗಿದೆ. ಈ ಶಾಸನವು – ರವಿವರ್ಮ ಧರ್ಮ ಮಹಾರಾಜನು ತನ್ನ ಪುಣ್ಯಾಭಿವೃದ್ಧಿಗಾಗಿ ಕಾಶ್ಯಪಗೋತ್ರದ ಯಜುರ್ವೇದ ಪಾರಗನಾದ ಗೋವಿಂದಸ್ವಾಮಿಗೆ ಮುಳ್ತಗಿ ಮಳ್ಳಾವು ಗ್ರಾಮಗಳನ್ನು ದಾನ ನೀಡಿದ್ದನ್ನು ತಿಳಿಸಿದೆ (ಬನವಾಸಿ ಕದಂಬರು – ಶಾ ಸಂ.೧೭). ಅಲ್ಲದೆ, ಕರಗಸೂರ ಶಾಸನವು ಮಹಾಪ್ರಧಾನಿ ಲಖಂಣದಂಡ ನಾಯಕನು– ರಾಯರಿಗೆ ಸಕಲ ಆಯುರಾರೋಗ್ಯ ಅಯಿಶ್ವರಿಯ ಅಭಿವೃದ್ಧಿ ಆಗಲೆಂದು ತಲಕಾಡಿನ ವೈದ್ಯನಾಥೇಶ್ವರ ದೇವರ ಪೂಜೆಗಾಗಿ ದಾನ ನೀಡಿದ್ದಾನೆ (ಎ.ಕ.೭, ಮಳವಳ್ಳಿ ೧೦೨).

ಕೆಂಬಾಳಿನ ಶಾಸನವು ವೀರಬಲ್ಲಾಳನ ರಾಣಿ ಚೋಳಮಹಾದೇವಿಯು 'ದುಷ್ಟಕಷ್ಟ'ರ ಮಾತನ್ನು ಕೇಳಿ ಜೇವೂರಿನ ಮೇಲೆ ದಾಳಿ ಮಾಡಲು ಹೇಳುತ್ತಾಳೆ. ಆದರೆ, ಸತ್ಯ ಸಂಗತಿ ತಿಳಿದಾಗ – 'ಎಮ್ಮ ಮಕ್ಕಳ ನೋಯಿಸಿದೆವು' ಎಂದು ಪಶ್ಚಾತ್ತಾಪಪಟ್ಟು ಸತ್ತ ವೀರನ ಮಗನಿಗೆ ದತ್ತಿಬಿಟ್ಟು, ಜನರಿಗೆ ಅಭಯ ನೀಡಿದ್ದಾಳೆ. ಈ ಶಾಸನವು ರಾಣಿಯ ಪ್ರಜಾಪಾಲಕತನಕ್ಕೆ ಉತ್ತಮ ಉದಾಹರಣೆ ಆಗಿದೆ (ಎಕ.೧೦, ಚ.ರಾ.ಪ. ೭೨).

ರಾಜರ ಮರಣದ ವಿಷಯವನ್ನು ಉಲ್ಲೇಖಿಸಿರುವ ಮತ್ತು ಗತಿಸಿದ ಕಾಲದಲ್ಲಿ ಅವರ ಹೆಸರಿನಲ್ಲಿ ದಾನದತ್ತಿಗಳನ್ನು ಬಿಟ್ಟಿರುವ ದಾನ ಶಾಸನಗಳು ಲಭ್ಯವಿವೆ. ಕದಂಬರ ದೊರೆ ಶಿವನಂದವರ್ಮನ ಅಣಜಿ ಶಿಲಾಶಾಸನವು ಶಿವನಂದವರ್ಮನು, ದೊರೆ ಕೃಷ್ಣವರ್ಮನ ಸೈನ್ಯ ಸೋತು ನಾಶವಾದಾಗ, ಸನ್ಯಾಸವನ್ನು ಸ್ವೀಕರಿಸಿ, ದರ್ಭಶಯನನಾಗಿ ಚಿರಕಾಲದ ಕೀತಿಯನ್ನು ಬಯಸಿ ದಿವಂಗತನಾದುದನ್ನು (ಬನವಾಸಿ ಕದಂಬರು – ಶಾ ಸಂ.೨೯) ತಿಳಿಸಿದೆ. ಇದರಂತೆ, ಚಿಕ್ಕಮಗಳೂರು ತಾಲೂಕಿನ ಹವಳ್ಳಿ ಗ್ರಾಮದ ಶಾಸನವೊಂದು (ಎಕ.೧೧, ಚಿ.ಮ. ೧೬೩) ಕ್ರಿ.ಶ. ೧೧೪೧–೪೨ರಲ್ಲಿ ಹಿರಿಯರಸ ಬಿಟ್ಟಿದೇವನು ಬಂಕಾಪುರದಲ್ಲಿ ಸತ್ತಿದ್ದು, ಅವನ ಶರೀರವನ್ನು ಬೊಪ್ಪದೇವರು ರಾಜಧಾನಿಗೆ ತಂದದ್ದನ್ನ ತಿಳಿಸಿದೆ. ಈ ಕೆಲವು ಶಾಸನಗಳು ರಾಜರ ಮರಣದ ದಾಖಲೆಗಳಾಗಿರುವುದು ಗಮನಾರ್ಹವಾದ ಸಂಗತಿ. ಹೀಗೆ, ಈ ಕೆಲವು ಶಾಸನಗಳು ವೈಯಕ್ತಿಕ ಜೀವನದ ಘಟನೆಗಳನ್ನು ದಾಖಲಿಸುತ್ತಿರುವ 'ರಾಜಶಾಸನ'ಗಳಾಗಿವೆ.

ರಾಜನಾದವನು ಲೋಕಕಲ್ಯಾಣಾರ್ಥವಾಗಿ ಪ್ರಜೆಗಳ ಸಂತುಷ್ಟಿಗಾಗಿ, ಯುದ್ಧದಲ್ಲಿ ಗೆದ್ದು ಬಂದಾಗ, ಹೋರಾಟದ ಸಮಯದಲ್ಲಾಗಿರಬಹುದಾದ ಹಿಂಸೆ, ಘೋರ ಪಾಪಕೃತ್ಯಗಳ ಪರಿಹಾರಕ್ಕಾಗಿ ಯಾಗಯಜ್ಞಗಳನ್ನು ಮಾಡುತ್ತಿದ್ದನು. ಯಜ್ಞಗಳ ಒಂದು ಭಾಗವಾಗಿ ಮಹಾದಾನಗಳನ್ನು ನೀಡುತ್ತಿದ್ದನು. ಇಂಥ ಸಂದರ್ಭದಲ್ಲಿ ನೀಡಿರುವ ದಾನಗಳು ಹೆಚ್ಚಾಗಿ 'ಬ್ರಹ್ಮದೇಯ'ವಾಗಿರುತ್ತವೆ. ಪ್ರಾಚೀನ ಕರ್ನಾಟಕದಲ್ಲಿ ರಾಜಶಾಸನಗಳ ಪಾಠದ ವಂಶಖ್ಯಾತಿಯ ಭಾಗವು ಛಂದೋಬದ್ಧವಾದ ಗದ್ಯಭಾಗವಾಗಿದ್ದು ಸಾಮಾನ್ಯವಾಗಿ ಎಲ್ಲಾ ಶಾಸನಗಳಲ್ಲೂ ಈ ಭಾಗವು ಪುನರುಕ್ತವಾಗಿದೆ. ಇದರಿಂದ ಆ ವಂಶದ ರಾಜರು ಮಾಡಿರುವ ಘನಕಾರ್ಯಗಳು, ಯಾಗಯಜ್ಞಗಳ ಬಗೆಗೆ ತಿಳಿಯುತ್ತದೆ. ಕದಂಬರ ತಾಮ್ರಶಾಸನಗಳಲ್ಲಿ ರಾಜರಾದ ರವಿವರ್ಮ, ವಿಷ್ಣುಶರ್ಮ, ಮಾಂಧಾತ ಮತ್ತು ಇಮ್ಮಡಿ ಕೃಷ್ಣಶರ್ಮರ ಶಾಸನಗಳಲ್ಲಿ 'ಅಶ್ವಮೇಧಾವಭೃತ ಸ್ನಾನದಿಂದ

ಪವಿತ್ರರಾದ' ಎಂದೂ, 'ಅಶ್ವಮೇಧಯಾಜಿ' ಎಂದೂ ಉಲ್ಲೇಖಿಸಲಾಗಿದೆ. ಮಂಗಳೀಶನು ನಾನಾ ಯಜ್ಞಗಳನ್ನು ಮಾಡಿದ್ದನು (I.A-IX-I-ಪು.೧೭-೧೮). ರಾಷ್ಟ್ರಕೂಟ ದಂತಿದುರ್ಗ, ನಾಲ್ಕನೇ ಗೋವಿಂದ- ಇವರು ರಾಜಸೂಯ, ವಾಜಪೇಯ ಮುಂತಾದ ಯಜ್ಞಗಳನ್ನು ಮಾಡಿದ್ದರೆಂದು ತಿಳಿಯುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ವಿಶೇಷವಾಗಿ 'ಗೋಸಹಸ್ರದಾನ'ಗಳು ನಡೆದಿದ್ದು ಅನೇಕ ಗೋಸಾಸಸ್ಮಾರಕಗಳು ಲಭ್ಯವಿವೆ. ಉದಾ.ಗೆ: ಮಾವಳಿ, ಮಹಾಕೂಟದ ವಿನಾಪೋಟಿ ಶಾಸನ. ಕಲ್ಯಾಣ ಚಾಳುಕ್ಯ ಚಕ್ರವರ್ತಿ ಹಿರಣ್ಯಗರ್ಭ ಮತ್ತು ತುಲಾಪುರುಷದಾನ ಮಾಡಿದ್ದನ್ನು ಹುಂಚದ ಶಾಸನವು ದಾಖಲಿಸಿದೆ.

ಹೊಯ್ಸಳರ ಅರಸರಲ್ಲಿ ವಿಷ್ಣುವರ್ಧನನ ದಾನದ ಹಿರಿಮೆಯನ್ನು ಶಾಸನವೊಂದು ವಿಷ್ಣುವರ್ಧನ ಮಾಡಿದ ದತ್ತಿಯು ಊರ್ಜಿತವಾದ ಅಗ್ರಹಾರಗಳಲ್ಲಿ ಇಂದ್ರನು ಹೆದರುವಂತೆ ನೂರಾರು ಯಜ್ಞಗಳು ನಡೆಯುತ್ತಿತ್ತು. ಭೂಮಿಗಿಳಿದ ಮೇರುವಿನಂತೆ ನಿರ್ಮಿಸಿರುವ ನೂರಾರು ಉನ್ನತ ದೇವಾಲಯಗಳಲ್ಲಿ ದೇವತೆಗಳು ನೆಲೆಸಲು ಚಿಂತಿಸುತ್ತಿದ್ದರು. ಅಲ್ಲಿದ್ದ ಸಾಗರದಂತಹ ವಿಸ್ತಾರವಾದ ಕೆರೆಗಳನ್ನು ಕಂಡು ಸೂರ್ಯನು ದಾರಿತಪ್ಪಿದನೇನೋ ಎಂದು ನಿಟ್ಟಿಸುತ್ತಿದ್ದನು- ಎಂದು ವಿಶೇಷವಾಗಿ ಬಣ್ಣಿಸಿದೆ (ಎಕ.೧೦, ಚ.ರಾ.ಪ.೩೩). ಹೊಯ್ಸಳ ಅರಸರಾದ ವೀರಬಲ್ಲಾಳದೇವರು, ಸೋಮೇಶ್ವರ, ೨ನೇ ನರಸಿಂಹದೇವ- ಇವರು ಹಿರಣ್ಯಗರ್ಭತುಳಾಪುರುಷ, ಪ್ರಮುಖಮಖಶತಮಖಂ- ಎಂಬ ಬಿರುದನ್ನು ಧರಿಸಿದ್ದರು (ಅದೇ. ಅಕೆರೆ.೨೩, ೩೧೪). ವಿಜಯನಗರದ ಅರಸರಲ್ಲಿ ೨ನೇ ಹರಿಹರನ ಶಾಸನವೊಂದು- ಇವನು ಮಾಡಿದ ಮಹಾದಾನಗಳಿಂದಾಗಿ ಹರಿದ ನೀರಿನಿಂದ ಧರ್ಮದ ವೃಕ್ಷ ಬೆಳೆಯುತೆಂದಿದೆ [ಎಕ.೭ (ಹಳೇ) ಚನ್ನಗಿರಿ ೧೩]. ಮತ್ತೊಂದು ಶಾಸನದಲ್ಲಿ ಇವನ ಧರ್ಮಕಾರ್ಯಗಳಿಂದ ಕಲಿಯುಗವು ಕೃತಯುಗವಾಯಿತೆಂದು ಬಣ್ಣಿಸಿದೆ. ವಿಜಯನಗರದ ಅರಸನಾದ ಸಾಳುವ ನರಸಿಂಹನು, ಮಕ್ಕಳು ಮಣ್ಣಿನಲ್ಲಿ ಆಟವಾಡುವಂತೆ ಸಂತಸದಿಂದ ನಿತ್ಯವೂ ಅಗ್ರಹಾರದಾನ ಷೋಡಶಮಹಾದಾನಗಳನ್ನು ನೀಡುತ್ತಿದ್ದನಂತೆ. ಕೃಷ್ಣದೇವರಾಯ, ಅಚ್ಯುತರಾಯರ ಅನೇಕ ದಾನ ಶಾಸನಗಳಲ್ಲಿ ನಾನಾ ಪುಣ್ಯಕ್ಷೇತ್ರಗಳ ಪಟ್ಟಿಯನ್ನು ಕೊಟ್ಟಿದ್ದು ಅನೇಕ ಬಾರಿ ಷೋಡಶ ಮಹಾದಾನಗಳನ್ನು ನೀಡಿರುವುದನ್ನು ಶಾಸನಗಳು ತಿಳಿಸಿವೆ. ಮೈಸೂರು ಅರಸರ ಕಾಲದಲ್ಲೂ ಈ ಮಹಾದಾನಗಳು ನಡೆದಿವೆ.

ಮಹಾದಾನಗಳಂತೆ ಬ್ರಾಹ್ಮಣರಿಗೆ ನೀಡುತ್ತಿದ್ದ ಗ್ರಾಮದಾನವೂ ವಿಶೇಷವಾಗಿತ್ತು. ಹಲವು ಸಂದರ್ಭಗಳಲ್ಲಿ ಈ ಅಗ್ರಹಾರಗಳು ಸರ್ವನಮಸ್ಯವಾಗಿದ್ದು ಅಕರವಾಗಿ, ಸಂಪೂರ್ಣ ಸ್ವಾಮ್ಯವನ್ನು ಹೊಂದಿರುತ್ತಿದ್ದವು. ಕೆಲವು ಶಾಸನಗಳಲ್ಲಿ ಅಗ್ರಹಾರವನ್ನು ಕಟ್ಟುಗುತ್ತಿಗೆಯಾಗಿ ಮಾಡಿದ್ದು, ಮಹಾಜನರು ನಿಗದಿತವಾದ ಹೊನ್ನನ್ನು ರಾಜನ ಬೊಕ್ಕಸಕ್ಕೆ ತೆರಬೇಕಾಗಿತ್ತು. ಕೆಲ್ಲವತ್ತಿ ಗ್ರಾಮದ ಶಾಸನವು (ಎಕ.೮ ಹಾಸನ ೭೬) ಕ್ರಿ.ಶ. ೧೧೨೩ರಲ್ಲಿ ಹೊಯ್ಸಳ ವಿಷ್ಣುವರ್ಧನ ದೇವರು ತನ್ನ ತಮ್ಮ ಉದಿಯಾದಿತ್ಯ ದೇವರಿಗೆ ಪರೋಕ್ಷ ವಿನಯವಾಗಿ ಕೆಲ್ಲವತ್ತಿಯನ್ನು ೧೮ ವೃತ್ತಿಗಳನ್ನಾಗಿಸಿ ಅಗ್ರಹಾರವನ್ನು ಮಾಡಿ ಆಶ್ರಿತ ಬ್ರಾಹ್ಮಣರಿಗೆ ಸರ್ವನಮಸ್ಯವಾಗಿ ಬಿಟ್ಟಿದ್ದನ್ನು ತಿಳಿಸಿದೆ. ಹಂದಿನಕೆರೆ ಶಾಸನವು (ಎಕ.೮ ಹಾಸನ ೧೧) ಕ್ರಿ.ಶ. ೧೪೦೬ರಲ್ಲಿ ೧ನೆಯ ದೇವರಾಯನು ಪಟ್ಟಕ್ಕೆ ಬಂದ ಸಂದರ್ಭದಲ್ಲಿ ಹಂದಿನಕೆರೆಗ್ರಾಮವನ್ನು 'ಪಟ್ಟದ ಅಗ್ರಹಾರ'ವಾಗಿ ಮಾಡಿ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ ದಾನಬಿಟ್ಟದ್ದನ್ನು ತಿಳಿಸಿದೆ.

ಪ್ರಾಚೀನ ಕಾಲದಲ್ಲಿ ಜನಹಿತ ಕಾರ್ಯಗಳನ್ನು ಧರ್ಮಕಾರ್ಯವೆಂದು ಭಾವಿಸಿ ನಡೆಸುತ್ತಿದ್ದರು. ಹೀಗೆ ಜನರ ಹಿತಕ್ಕಾಗಿ ಪ್ರಾಣಿಗಳ ಅನುವಿಗಾಗಿ, ಕೆರೆಬಾವಿಗಳನ್ನು ನಿರ್ಮಿಸಿದಾಗ ಅದರ ನಿರ್ವಹಣೆಗಾಗಿ ಬಿಟ್ಟದಾನವನ್ನು 'ಬಿತ್ತುವಟ್ಟ' ಎನ್ನುವರು. ಅರಣಿಗ್ರಾಮದ ಶಾಸನವು (ಎಕ.೭ ನಾಗಮಂಗಲ ೯೯) ಗಂಗರ ದೊರೆ ೨ನೆಯ ಮಾರಸಿಂಹನ ಮಂತ್ರಿ ಮಹೋತ್ತಮ ಮಾರ್ಬಲಯ್ಯನು ಕ್ರಿ.ಶ. ೯೭೨ರಲ್ಲಿ ಅರಣಿಯ ಕೆರೆಗೆ 'ಬಿತ್ತುವಟ್ಟ'ವನ್ನು ಬಿಟ್ಟಿದ್ದನ್ನು ದಾಖಲಿಸಿದೆ. ದಂಡಾಪುರದ ಶಾಸನವು (ಶಾಸನ ಸಂಗ್ರಹ ಶಾ.ಸಂ. ೮), ಕೆರೆಯ ನಿರ್ವಹಣೆಗಾಗಿ, ವಿವಾಹದೆರೆ ೩ ದ್ರವ್ಯ, ಮಾಣಿಯ ಉಪನಯನ ೨ ದ್ರವ್ಯ, ಶೂದ್ರರ ಮದುವೆ ೧ ದ್ರವ್ಯ ಮತ್ತು ಪ್ರಾಯಶ್ಚಿತ್ತದ ಆಯದ ಪಣ- ಈ ಒಟ್ಟು ಆದಾಯವನ್ನು ಬಳಸುವಂತೆ ದಾನ ಬಿಟ್ಟಿದ್ದನ್ನು ತಿಳಿಸಿದೆ. ಕ್ರಿ.ಶ. ೧೦೫೮ರ ನಾಗಾಯಿ ಶಾಸನವು (ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಚಿತಾ.೨೭), ಕಾಳಿದಾಸ ದಂಡಾಧಿಪನು ಒಂದನೇ ಸೋಮೇಶ್ವರನಿಂದ 'ಪರಮೇಶ್ವರದತ್ತಿ'ಯಾಗಿ ಪಡೆದ ನಾಗಾವಿಯಲ್ಲಿ ತ್ರೈಪುರುಷ ದೇವಾಲಯವನ್ನು ಕಟ್ಟಿಸಿ, ಘಟಿಕಾಸ್ಥಾನವನ್ನು ಮಾಡಿ ೪೦೦ ಜನ ಬ್ರಾಹ್ಮಣರಿಗೆ ದಾನವಿತ್ತನು. ಈ ಶಾಸನವು ಅಲ್ಲಿದ್ದ ವೇದಾಧ್ಯಾಯಿಗಳು, ಶಾಸ್ತ್ರಾಧ್ಯಾಯಿಗಳು, ಉಪಾಧ್ಯಾಯರುಗಳು, ಸರಸ್ವತಿ ಭಂಡಾರಿಗಳು, ವಿದ್ಯಾರ್ಥಿಗಳು ಮತ್ತು ಘಟಿಕಾ ಪ್ರಹಾರಿಗಳು- ಎಲ್ಲರನ್ನೂ ಉಲ್ಲೇಖಿಸಿದ್ದು, ಘಟಿಕಾಸ್ಥಾನದ ಬಗೆಗೆ ಹೆಚ್ಚಿನ ವಿವರಗಳನ್ನು ನೀಡಿದೆ.

**ಪ್ರಸಾದ ಶಾಸನಗಳು/ರಾಜಮಾನ್ಯ/ಕೊಡುಗೆ**

ವಿಶೇಷವಾಗಿ ರಾಜನಾದವನು, ತನ್ನ ಅಧಿಕಾರಿಯ/ ಪ್ರಜೆಯ ಸಾಧನೆಗಳನ್ನು ನೋಡಿ ಮೆಚ್ಚಿ ನೀಡಿರಬಹುದಾದ ದಾನ, ಬಹುಮಾನ, ಕೊಡುಗೆಗಳನ್ನು ದಾಖಲಿಸಿರುವ ಶಾಸನಗಳು, ಪ್ರಸಾದ ಶಾಸನಗಳು ಅಥವಾ ರಾಜಮಾನ್ಯ ಶಾಸನಗಳೆನ್ನಿಸಿವೆ. ಪ್ರಸಾದ ಶಾಸನಗಳಲ್ಲಿ, ವೀರಗಲ್ಲು ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ. ವೀರರು ತಮ್ಮ ರಾಜ್ಯದ ಸಂರಕ್ಷಣೆಗಾಗಿ ಮತ್ತು ಪ್ರಜೆಗಳ ಕಷ್ಟಪರಿಹಾರಕ್ಕಾಗಿ ತಮ್ಮ ಪ್ರಾಣವನ್ನು ಲೆಕ್ಕಿಸದೇ ಹೋರಾಡಿ ಮಡಿದಾಗ ಅವರ ಸಾಹಸ, ಶೌರ್ಯಗಳನ್ನು ಮೆಚ್ಚಿ ರಾಜರು ಕೊಡುಗೆ ನೀಡಿದ್ದಾರೆ. ರಾಜರ ಈ ಮನೋಭಾವವು ರಾಜನ ಸಾಹಸ ಪ್ರಿಯತೆಯನ್ನು, ಪ್ರಜಾಪರಿಪಾಲಕತನವನ್ನು ತೋರುತ್ತದೆ. ತನಗಾಗಿ ಸತ್ತ ವೀರನ ಕುಟುಂಬದ ರಕ್ಷಣೆಯ ಹೊಣೆ ಹೊತ್ತು ರಾಜನು ಅವರ ಕುಟುಂಬ ನಿರ್ವಹಣೆಗೆ ಅನುವಾಗುವಂತೆ ಕೊಡುಗೆಯನ್ನು ನೀಡಿದ್ದಾನೆ. ಶಾಸನಗಳಲ್ಲಿ ಹೀಗೆ ನೀಡಿರುವ ದಾನವನ್ನು, ಬಾಳ್ಗಳ್ಚು, ಕಲ್ನಾಟು, ರುಧಿರಮಾನ್ಯ, ನೆತ್ತರು ಕೊಡುಗೆ, ಉಂಬಳಿ, ಮಾನ್ಯ, ಕೊಡುಗೆ – ಎಂದು ನಾನಾ ವಿಧವಾಗಿ ಕರೆಯಲಾಗಿದೆ.

ವೀರನೊಬ್ಬನು ಯುದ್ಧದಲ್ಲಿ ತನ್ನ ಶತ್ರುಗಳೊಂದಿಗೆ ಹೋರಾಡಿ ಗೆದ್ದು ಬಂದಾಗ ಅವನ ರಕ್ತಸಿಕ್ತವಾದ ಕತ್ತಿಯನ್ನು (ಬಾಳ್) ತೊಳೆದು (ಕಳ್ಚಿ) ಗೌರವಿಸುತ್ತಿದ್ದ ಪರಿಯೇ ಬಾಳ್ಗಳ್ಚು. ಕ್ರಿ.ಶ.ಸು. ೪೫೦ರ ಹಲ್ಮಿಡಿ ಶಾಸನದಲ್ಲಿ ವಿಜಅರಸನು ಕೇಕಯ ಪಲ್ಲವರೊಂದಿಗೆ ಕಾದಿ ಜಯಗಳಿಸಿ ಬಂದಾಗ, ಪಲ್ಮಡಿ, ಮೂಳೆವಳ್ಳಿಗಳನ್ನು ಅಳಕದಂಬ ದೊರೆ ಬಾಳ್ಗಳ್ಚಾಗಿ ಕೊಟ್ಟನೆಂದು ತಿಳಿಸಿದೆ (ಎಕ್ರ್ ಬೇ.೨೩೬). ಗಂಗರ ಕಾಲದ ಶಾಸನಗಳಲ್ಲಿ ವಿಶೇಷವಾಗಿ 'ಕಲ್ನಾಟು' ಪದದ ಉಲ್ಲೇಖಗಳಿವೆ. ಬೇಗೂರಿನ ಶಾಸನವೊಂದು ಗಂಗರ ದೊರೆ ಎರೆಯಪ್ಪರಸನು ವೀರ ಮಹೇಂದ್ರನೊಂದಿಗೆ ಯುದ್ಧ ಮಾಡಲು ಸಾಮಂತ ಸಹಿತವಾಗಿ ಸೇನೆಯೊಂದಿಗೆ ಹೋಗಲು ನಾಗತ್ತರನಿಗೆ ಆದೇಶಿಸಿದನು. ತುಂಬೆಪಾಡಿಯ ಯುದ್ಧದಲ್ಲಿ ನಾಗತ್ತರನು "ಆನೆಯೊಳಾನ್ತಿರಿದು ಸತ್ತೊಡೆ"– ಇದನ್ನು ಕೇಳಿ ಮೆಚ್ಚಿದ ಎರೆಯಪ್ಪರಸನು, ಇರುಗನಿಗೆ ನಾಗತ್ತರಪಟ್ಟವನ್ನು ಕಟ್ಟಿ ಬೆಂಪೂರು–೧೨ನ್ನು ಕಲ್ನಾಡಾಗಿ ಕೊಟ್ಟನೆಂದು ಶಾಸನ ತಿಳಿಸಿದೆ (ಎಕ್ರ್, ಬೆಂ.೮೩). ವಿರಾಜಪೇಟೆ ತಾಲೂಕಿನ ಕೊತೂರು ಗ್ರಾಮದ ಶಾಸನವೊಂದು (ಎಕ.೧, ಕೊಡಗು ೯೭) ಗಂಗರ ದೊರೆ ರಾಚಮಲ್ಲ ಪೆರ್ಮ್ಮಾನಡಿಯು ಒಡಲ ಎರೆಯಂಗ ಗಾವಂಡನು ಸತ್ತಾಗ ಅವನ ಮಗನಿಗೆ 'ಪೆಮ್ಮಾಡಿಪಟ್ಟ'ವನ್ನು ಕಟ್ಟಿ ಕಲ್ನಾಡಾಗಿ ಕೊಟ್ಟದ್ದನ್ನು ದಾಖಲಿಸಿದೆ.

ಈ ಪ್ರಸಾದ ಶಾಸನಗಳು ರಾಜರು ಕೊಡುಗೆ ನೀಡಿದ್ದನ್ನು ತಿಳಿಸುವಲ್ಲಿ, ಅದಕ್ಕೆ ಹಿನ್ನೆಲೆಯಾಗಿ ನಡೆದಿರುವ ರಾಜಕೀಯ ಗಲಭೆ, ಯುದ್ಧ, ಸ್ಥಿತ್ಯಂತರಗಳನ್ನು ಉಲ್ಲೇಖಿಸುತ್ತಿದ್ದು, ಇವು 'ಐತಿಹಾಸಿಕ ಮಹತ್ವ'ವನ್ನು ಬಿಂಬಿಸುತ್ತಿರುವ ಶಾಸನಗಳಾಗಿವೆ. ಮಂಡ್ಯ ಜಿಲ್ಲೆ ಮದ್ದೂರು ತಾಲೂಕಿನ ಆತಕೂರಿನ ವೀರಗಲ್ಲು ಶಾಸನವು ಈ ದಿಸೆಯಲ್ಲಿ ಗಮನಾರ್ಹವಾಗಿದೆ (ಎಕ.೭, ಮದ್ದೂರು–೪೨). ರಾಷ್ಟ್ರಕೂಟರ ದೊರೆ ಮೂರನೆಯ ಕೃಷ್ಣನು ಮೂವಡಿ ಚೋಳ ರಾಜಾದಿತ್ಯನ ಮೇಲೆ ಆಕ್ರಮಣ ಮಾಡಿ ತಕ್ಕೋಲಂನಲ್ಲಿ ನಡೆದ ಯುದ್ಧದಲ್ಲಿ ಜಯಗಳಿಸಿ ಹಿಂತಿರುಗುತ್ತಿದ್ದ ಸಂದರ್ಭವನ್ನು ಬಣ್ಣಿಸಿದೆ; ಈ ಯುದ್ಧದಲ್ಲಿ ದೊರೆ ಮೂರನೇ ಕೃಷ್ಣನ ಪರವಾಗಿ ಗಂಗರ ದೊರೆ ಬೂತುಗನು ರಾಜಾದಿತ್ಯನನ್ನು 'ಬಿಸುಗೆಯ ಕಳನಾಗಿ ಸುರಿಗಿರಿದು ಕಾದಿ ಕೊನ್ದು'ದನ್ನು ಶಾಸನ ತಿಳಿಸುತ್ತಿದೆ. ಬೂತುಗನ ಈ ಸಾಹಸಕ್ಕೆ ಮೆಚ್ಚಿ ಕೃಷ್ಣನು ಬನವಸೆ ೧೨೦೦, ಬೆಳ್ವೊಲ ೩೦೦, ಪುರಿಗೆರೆ ೩೦೦, ಕಿಸುಕಾಡು ೭೦ನ್ನು ತನ್ನ ಮುಂದೆ ನಿಂತು ಇರಿದಿದ್ದಕ್ಕೆ ಮೆಚ್ಚುಗೊಟ್ಟು ನೀಡಿದ್ದನ್ನು ತಿಳಿಸಿದೆ. ಇದನ್ನು ಅನುಸರಿಸಿ ಬೂತುಗನು ತನ್ನ ಅಂಕಕಾರನಾದ ಮಣಲೇರನಿಗೆ ಯುದ್ಧದಲ್ಲಿ ಅವನು ತೋರಿದ ಸಾಹಸಕ್ಕೆ ಮೆಚ್ಚಿ 'ಬೇಡಿಕೊಳ್ಳು' ಎಂದಾಗ ಮಣಲೇರನು 'ಕಾಳಿ' ಎಂಬ ಬೇಟೆ ನಾಯಿಯನ್ನು ಮೆಚ್ಚಿ ಪಡೆದನೆಂದು ತಿಳಿಯುತ್ತದೆ*. ಈ ಕಾಳಿಯು ಮುಂದೆ ಪಿರಿಯಪನ್ದಿಯೊಂದಿಗೆ ಹೋರಾಡಿ ಅದನ್ನು ಕೊಂದು ತಾನೂ ಸಾಯುತ್ತದೆ. ಮಣಲೇರನು ನಾಯಿಯ ಶೌರ್ಯವನ್ನು ಮೆಚ್ಚಿ ವೀರಗಲ್ಲನ್ನು ಹಾಕಿಸಿದ್ದಾನೆ. ಹೀಗೆ ಈ ಶಾಸನವು ಶೌರ್ಯ ಸಾಹಸಗಳನ್ನು ಮೆಚ್ಚಿ ನೀಡಿರುವ ಅಪೂರ್ವವಾದ ಪ್ರಸಾದ ಶಾಸನವಾಗಿದೆ.

ಶ್ರವಣಬೆಳಗೊಳದ ಶಾಸನವೊಂದು (ಎಕ.೨, ಶ್ರ.ಬೆ.೮೨) ಹೊಯ್ಸಳ ದೊರೆ ವಿಷ್ಣುವರ್ಧನನು, ಚಾಳುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಸೈನ್ಯದೊಂದಿಗೆ ಕಣ್ಣೆಗಾಲದಲ್ಲಿ ನೆಲೆಸಿದ್ದಾಗ ನಡೆದ ಘೋರಯುದ್ಧದಲ್ಲಿ, ಗಂಗರಾಜನು

---

* ಈ ನಾಯಿಯನ್ನು ಮಣಲೇರನಿಗೆ ಕೊಟ್ಟವನು ಮುಮ್ಮಡಿ ಕೃಷ್ಣನೇ ಹೊರತು ಬೂತುಗನಲ್ಲ ಎಂದು ಕೆಲವರು ವಿದ್ವಾಂಸರು ಪ್ರತಿಪಾದಿಸಿದ್ದಾರೆ (ಸಂ).

ಮಹಾಸೇನಾನಿಯಾಗಿ 'ಇರುಳಬವರ'ವನ್ನು ಹೂಡಿ, ಎಲ್ಲಾ ಸಾಮಂತರನ್ನು ಸೋಲಿಸಿ, ಶತ್ರುಗಳ ವಸ್ತು ವಾಹನ ಸಮೂಹಗಳನ್ನು ತಂದೊಪ್ಪಿಸಿದನು. ವಿಷ್ಣುವರ್ಧನ ಅವನ ಸಾಹಸವನ್ನು ಮೆಚ್ಚಿ "ಮೆಚ್ಚಿದೆಂ ಬೇಡಿಕೊಳ್ಳಿಮೆನೆ"- ಗಂಗರಾಜನು ಜಿನಾರ್ಚನಾಲುಬ್ಧನಾಗಿ ಪರಮಗ್ರಾಮವನ್ನು ಬೇಡಿ ಪಡೆದು, ಅದನ್ನು ಶಾಸನ ಬಸದಿ ಪೂಜೆಗೆಂದು ದಾನಬಿಟ್ಟಿದ್ದನ್ನು ತಿಳಿಸಿದೆ. ಇಲ್ಲಿಯ ಮತ್ತೊಂದು ಶಾಸನವು (ಅದೇ ೩೫೫) ಚೋಳರೊಂದಿಗೆ ಹೋರಾಡಿ ತಳಕಾಡನ್ನು ಗೆದ್ದ ಸಂದರ್ಭದಲ್ಲಿ ಗಂಗರಾಜನು ರಾಜನ ಮೆಚ್ಚುಗೆಯಾಗಿ ಗೋವಿಂದವಾಡಿ ಗ್ರಾಮವನ್ನು ಪಡೆದು ಗೊಮ್ಮಟೇಶ್ವರನ ಪೂಜೆಗೂ, ತಿಪ್ಪೂರು ಗ್ರಾಮವನ್ನು ಪಡೆದು ಮೇಘಚಂದ್ರ ಸಿದ್ಧಾಂತ ದೇವರಿಗೂ ದಾನ ಬಿಟ್ಟನೆಂದು ತಿಳಿಯುತ್ತದೆ (ಎಕ.೭; ಮದ್ದೂರು ೫೪). ಹೊಯ್ಸಳ ದೊರೆ ವೀರಸೋಮೇಶ್ವರನು ಪಾಂಡ್ಯಮಂಡಲವನ್ನು ಗೆಲ್ಲುವಲ್ಲಿ ತಮ್ಮ ಪರಾಕ್ರಮವನ್ನು ಮೆರೆಸಿ 'ಪಾಂಡ್ಯರಾಜ್ಯ ದಿಶಾಪಟ್ಟ; ಚೋಳ ರಾಜ್ಯ ಪ್ರತಿಷ್ಠಾಪನಾಚಾರ್ಯ' ಮುಂತಾದ ಬಿರುದುಗಳಿಗೆ ಕಾರಣರಾದ ಮಾಂಡಲೀಕಮನ್ನೆಯ ಬೋಗಯ್ಯ ದಂಡನಾಯಕ ಮತ್ತು ಅವನ ತಮ್ಮ ಮುರಾರಿ ಮಲ್ಲಯ್ಯ ದಂಡನಾಯಕರಿಗೆ 'ಪರಮಪ್ರೇಮದಿಂದ' ಅಗ್ರಹಾರವನ್ನು ಮಾಡಲೆಂದು ಅವರ ಹಳ್ಳಿಗಳೂ ಸೇರಿದಂತೆ ತೆಂಗಿನಘಟ್ಟವನ್ನು ಧಾರಾಪೂರ್ವಕವಾಗಿ ಕೊಟ್ಟದ್ದನ್ನು ಗೋವಿಂದನಹಳ್ಳಿ ಶಾಸನವು (ಎಕ.೬; ಕೃ.ರಾ.ಪೇಟೆ ೩೯) ತಿಳಿಸಿದೆ. 'ನೆತ್ತರು ಕೊಡುಗೆ/ನೆತ್ತರುಪಡಿ' ಪದವು ಹೋರಾಡಿಬಂದ ವೀರನಿಗೆ ನೀಡಿರುವ 'ಮಾನ್ಯ'ವಾಗಿದ್ದು, ಇಲ್ಲಿ ವೀರನು ಸತ್ತಿರುವುದಿಲ್ಲ. ಶಾಸನವೊಂದು, ಸುಗಟೂರಿನ ಇಮ್ಮಡಿ ಚಿಕ್ಕರಾಯ ತಂಮೇಗೌಡರ ಅಯ್ಯನವರು ಕಾಡಜಕ್ಕನಹಳ್ಳಿಯನು ಆ ತಿಂಮನಿಗೆ ನೆತ್ತರ ಕೊಡುಗೆಯಾಗಿ ಕೊಟ್ಟ ಮಾನ್ಯ ಎಂದು ತಿಳಿಸಿದೆ. (ಎಂ.ಎ.ಆರ್. ೧೯೨೬) ಸು. ಹದಿನೈದನೇ ಶತಮಾನದ ನಂತರದ ಶಾಸನಗಳಲ್ಲಿ 'ಉಂಬಳಿ' 'ಮಾನ್ಯ' ಮೊದಲಾದ ಪದ ಪ್ರಯೋಗಗಳು ಹೆಚ್ಚಾಗಿರುವುದು ಗಮನಾರ್ಹ.

ಆರ್. ಶೇಷಶಾಸ್ತ್ರಿಯವರು- 'ವೃತ್ತಿ' ಎಂಬುದು ಅರಸನಾದವನು ತನ್ನ ಕುಮಾರ, ಲೆಂಕ, ಡಿಂಗರಿಗ (ಸೇವಕ), ವೀರರಿಗೆ ಅವರ ಪರಾಕ್ರಮವನ್ನು ಗುರುತಿಸಿ ಪುರಸ್ಕರಿಸಿ ಕೊಟ್ಟ ಮಾನ್ಯಗಳಾಗಿವೆ ಎಂದು ತೋರುತ್ತದೆ, ಎಂದು ಅಭಿಪ್ರಾಯಪಟ್ಟಿದ್ದಾರೆ (ಕರ್ನಾಟಕದ ವೀರಗಲ್ಲುಗಳು). ಕುಮಾರವೃತ್ತಿ, ಬೀಳವೃತ್ತಿಯಿಂದ ರಾಜ್ಯದ ಕೆಲಭಾಗಗಳನ್ನು ಆಳುತ್ತಿದ್ದಂತೆ ಉಲ್ಲೇಖಗಳಿವೆ. ಕ್ರಿ.ಶ. ೧೦೫೭ರ (ಕವಿ.ಶಾ.ಸಂ.೧; ಹಡಗಲಿ ೫೨) ವಿಕ್ರಮಾದಿತ್ಯ ಗಂಗ ಪೆರ್ಮಾನಡಿಯ ಗಂಗವಾಡಿ ೯೬೦೦೦, ಬನವಸೆ ೧೨೦೦೦, ನೊಳಂಬವಾಡಿ ೨೩೦೦೦ವನ್ನು ಕುಮಾರ ವೃತ್ತಿಯಿಂದ ಆಳುತ್ತಿದ್ದನೆಂದು ತಿಳಿಸಿದೆ. ಲಕ್ಕುಂಡಿಯ ಶಾಸನವು ಅತ್ತಿಮಬ್ಬೆಯ ಮಗ ಪಡೆವಳ ತೈಲನನ್ನು "ಪತಿಮೆಚ್ಚೆಗಂಡ"ನೆಂದು ಕರೆದಿದ್ದು ಮಾಸವಾಡಿ ೧೪೦ನ್ನು ಬೀಳವೃತ್ತಿಯಿಂದ ಆಳುತ್ತಿದ್ದನೆಂದು ತಿಳಿಸಿದೆ (ಎಸ್.ಐ.ಐ. IX, ನಂ.೫೨,೫೩). ಹೀಗೆ ರಾಜರು ನಾನಾ ಸಂದರ್ಭಗಳಲ್ಲಿ ವೀರರಿಗೆ ತಮ್ಮ ಅಧಿಕಾರಿಗಳಿಗೆ ಮೆಚ್ಚಿಗೆಯಾದವರಿಗೆ ಕೊಡುಗೆಗಳನ್ನು ವೃತ್ತಿಗಳನ್ನು ಬಿಟ್ಟಿರುವುದು ರಾಜರ ಉದಾರ ಹೃದಯವನ್ನು, ಆಡಳಿತ ಕೌಶಲ್ಯವನ್ನು ನಿದರ್ಶಿಸಿವೆ.

ರಾಜರು ತಮ್ಮ ಪ್ರಜೆಗಳಲ್ಲಿದ್ದ ಕಲಾಭಿಮಾನ ಸಾಹಿತ್ಯಾಸಕ್ತಿಯನ್ನು ಗುರುತಿಸಿದ್ದು, ತಮ್ಮ ರಾಜ್ಯದಲ್ಲಿದ್ದ ಕಲಾವಿದರನ್ನು, ವಿದ್ವಾಂಸರನ್ನು ಸನ್ಮಾನಿಸಿ ಕೊಡುಗೆಗಳನ್ನು ಕೊಟ್ಟಿರುವದನ್ನು ಶಾಸನಗಳು ಗುರುತಿಸಿವೆ. ವಿಶೇಷವಾಗಿ ಕವಿಗಳ, ಕಲಾವಿದರ, ಶಿಲ್ಪಿಗಳ ಪ್ರತಿಭೆಯನ್ನು ಗೌರವಿಸಿ ನೀಡಿರುವ ಗ್ರಾಮದಾನಗಳನ್ನು "ಪುರಧರ್ಮ"ವೆಂದು ಕರೆದಿರುವುದು ಗಮನಾರ್ಹವಾಗಿದೆ. ಕುರಿಕ್ಯಾಲದ ಜಿನವಲ್ಲಭನ ಶಾಸನವು- ಚಾಳುಕ್ಯ ವಂಶಪತಿಮಿಕ್ಕರಿಕೇಸರಿ ಸನ್ದ ವಿಕ್ರಮಾರ್ಜುನವಿಜಯಕ್ಕೆ ಧರ್ಮವುರಮೆನ್ದುಮದೇಯ ಮಿದೆನ್ದು ಕೀರ್ತಿ ಶಾಸನವನ್ನು ಕೊಟ್ಟನೆಂದಿದೆ (ಕವಿ.ಶಾ.ಸಂ.೫, ಭಾಗ-೨, ಕರೀಂನಗರ ೪೦೪). ಇದರಂತೆ ಅನೇಕ ಜನ ಶಾಸನಕವಿಗಳು ಅಂದಿನ ರಾಜರು ನೀಡಿರುವ, ಸಮಾಜ ಮನ್ನಿಸಿದ ಬಿರುದುಗಳನ್ನು ಧರಿಸಿದ್ದರು. ಉದಾ: ಬೊಪ್ಪಣ ಕವಿಯು 'ಸುಜನೋತ್ತಂಸ', 'ಸುಕವಿ ಸಮಾಜನುತಂ' ಎನಿಸಿದ್ದ. ಅಭಿನವ ಸರ್ವಜ್ಞನೆನಿಸಿದ್ದ ಸೋಮೇಶ್ವರಭಟ್ಟ, ಕವಿ ದೇವಪಾರ್ಯ ತನ್ನನ್ನು 'ಕವಿರಾಜ' ಎಂದು ಕರೆದುಕೊಂಡಿದ್ದಾನೆ. ತ್ರಿವಿಕ್ರಮ ಪಂಡಿತನು 'ಕವೀಶ್ವರ'ನೆನ್ನಿಸಿದ್ದನು.

ಬಾದಾಮಿ ಚಲುಕ್ಯ ದೊರೆ ೨ನೆಯ ವಿಕ್ರಮಾದಿತ್ಯನ ರಾಣಿಯರು, ಪಟ್ಟದಕಲ್ಲಿನಲ್ಲಿ ಲೋಕೇಶ್ವರ ದೇವಾಲಯವನ್ನೂ ತ್ರೈಲೋಕೇಶ್ವರ ದೇವಾಲಯವನ್ನೂ ನಿರ್ಮಿಸಿದ ಸೂತ್ರಧಾರಿ ಗುಣ್ಡನ್ ಅನಿವಾರಿತಾಚಾರಿ ಎಂಬುವನಿಗೆ ಮೂರು ಬಾರಿ 'ಪೆರ್ಜೆರಿಪು' ಪಟ್ಟವನ್ನು ಕಟ್ಟಿ 'ತ್ರಿಭುವನಾಚಾರಿ' ಎಂಬ ಬಿರುದನ್ನಿತ್ತು ಸನ್ಮಾನಿಸಿದರೆಂದು ಶಾಸನವೊಂದು ತಿಳಿಸಿದೆ (ಕ.ವಿ.ಶಾ.ಸಂ.೯, ಬಾದಾಮಿ ೭೦). ಇಲ್ಲಿಯ ಮತ್ತೊಂದು ಶಾಸನವು- ವಿಕ್ರಮಾದಿತ್ಯ ಭಟಾರನು ಕಂಚಿಯನ್ನು ಮೂರು

ಸಲ ಪರಾಜಯಗೊಳಿಸಿದಾಗ, ಲೋಕಮಹಾದೇವಿಯರು ಲೋಕೇಶ್ವರ ದೇವಾಲಯ ನಿರ್ಮಿಸಿದ ಸೂತ್ರಧಾರಿಗೆ ಮೂರು ಸಲ ಪೆರ್ಜ್ಜೆರೆಮುಗ್ಯೆದಿದ್ದನ್ನು ತಿಳಿಸುತ್ತದೆ. ಆ ಸರ್ವಸಿದ್ಧಿ ಆಚಾರಿಯು, ಸಕಲ ಗುಣಾಶ್ರಯನಾಗಿದ್ದು, ಅನೇಕ ರೂಪು ವಾಸ್ತು ಪಿತಾಮಹನ್ ಆಗಿದ್ದನೆಂದು ಶಾಸನ ತಿಳಿಸುತ್ತಿದೆ (ಅದೇ.೬೯). ಇದರಂತೆ ಹೊಯ್ಸಳ ರಾಜರು ದೇವಾಲಯಗಳನ್ನು ನಿರ್ಮಿಸಿದ ಶಿಲ್ಪಿಗಳಿಗೆ ಬಿರುದುಗಳನ್ನಿತ್ತಿದ್ದು, ಅವರು ಶಿಲ್ಪಗಳ ಕೆಳಗೆ ತಮ್ಮ ಬಿರುದನ್ನು, ಹೆಸರನ್ನು ದಾಖಲಿಸಿದ್ದಾರೆ. ಉದಾ: ಹೋಸಣಭುಜಬಳವೀರ ಗಂಗಹೋಸಣದೇವರ ವಿದ್ಯಾವಾಸ್ತು ರುವಾರಿ ಮಾಳೋಜ (ಎಕ.೫, ಬೇ.೭೭). ಶ್ರೀಮತ್ರಿಭುವನಮಲ್ಲಿ ದೇವರ ಬಿನ್ನಾಣಿ ಚಿನ್ನೋಜನ ಪುತ್ರ ಚಿಕ್ಕಹಂಪ (ಅದೇ ೮೭) ಹೊಯ್ಸಳ ನಾರಸಿಂಹದೇವನ ರೂವಾರಿ ಕೇದಾರೋಜ (ಅದೇ ೨೭೫), 'ಹೊಯ್ಸಳಾಚಾರಿ ದ್ರೋಹಗರಟ್ಟಾಚಾರಿ ಗಂಗಾಚಾರಿ'. ಹೀಗೆ ರಾಜರು ತಾವು ಮೆಚ್ಚಿದ ಆಚಾರಿಯನ್ನು 'ಹೊಯ್ಸಳಾಚಾರಿ' ಬಿರುದಿತ್ತು ಗೌರವಿಸಿದ್ದನ್ನು ಗಮನಿಸಬಹುದು.

ವೀರ ನೊಳಂಬಾಧಿರಾಜನು ಬೆದ್ದುಗೊಂಡೆಯ ಕೆರೆಗೆ ಒಡ್ಡುಕಟ್ಟಿದ್ದನ್ನು ಕಂಡು ಮೆಚ್ಚಿ, ಅಜ್ಜಪರ್ವರ ಭಿದಿಯರೆಯನಿಗೆ 'ನೊಳಮ್ಬದೊಡ್ಡ'ನೆಂದು ಕಡಗವನ್ನಿಟ್ಟನೆಂದು, (ಅನಂತಪುರ ಜಿಲ್ಲೆಯ) ಕಂಬದೂರಿನ ಶಾಸನವು ತಿಳಿಸಿದೆ (ಎಸ್.ಐ.ಐ.IX, ಭಾಗ-I, ಶಾ ಸಂ.೧೭). ಈ ಶಾಸನವು ಶ್ರೀಮುಖರಾಮ ಮತ್ತು ಪೊನ್ನೇರರು ಎಂಬುವರು 'ಶ್ರೀಮುಖದೊಡ್ಡ' ಮತ್ತು 'ಪೊನ್ನೇರದೊಡ್ಡ' ಎಂಬ ಹೆಸರನ್ನು ಕೊಟ್ಟು ಕಡಗಗಳನ್ನಿತ್ತು ಗೌರವಿಸಿದ್ದನ್ನು ತಿಳಿಸಿದೆ. ಹಿರಿಯೂರಿನ ಶಾಸನವೊಂದು (ಎಕ.೧೦, ಅಕೆ.೩೧೭) ಕುಂಜನಂಬಿಸೆಟ್ಟಿಯನ್ನು ಹೊಯ್ಸಳ ಚಕ್ರವರ್ತಿಯು ಮೆಚ್ಚಿದ್ದು, "ಮಂತ್ರವಿದ್ಯಾಧರ" "ಹೊಯ್ಸಳ ರಾಜ್ಯ ಪೂಜಿತ"ನಾಗಿದ್ದನೆಂದು ಶಾಸನ ಬಣ್ಣಿಸಿದೆ. ಅರಮನೆಯ ಆರ್ಥಿಕ ಸ್ಥಿತಿಗೆ ಸಹಕರಿಸುತ್ತಿದ್ದ ಗಣ್ಯವರ್ತಕರನ್ನು, 'ಪಟ್ಟಣಸೆಟ್ಟಿ', 'ಪೊಯ್ಸಳಸೆಟ್ಟಿ', 'ಮಹಾವಡ್ಡ ವ್ಯವಹಾರಿ' ಮುಂತಾದ ಸ್ಥಾನಗಳನ್ನಿತ್ತು ಗೌರವಿಸುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಇದರಂತೆ ರಾಜನಿಗೆ ಮೆಚ್ಚಿಗೆಯಾದ, ಅತುಳಸಾಹಸಿಯಾದ ಸೇನಾನಿ/ಭಟರನ್ನು ರಾಜನ ಪಟ್ಟದ ಆನೆಯಂತೆ ಎಂಬರ್ಥದಲ್ಲಿ 'ಗಂಧವಾರಣ' ಬಿರುದನ್ನಿತ್ತು ಗೌರವಿಸಿದಂತಿದೆ. ವೀರಬಲ್ಲಾಳದೇವನ-ಗಂಧವಾರಣ, ಮಹಾಪಸಾಯ್ತ ಕಾಡನಾಯಕ ಮಾವನಗಂಧವಾರಣ, ಅಮ್ಮನಗಂಧವಾರಣ, ಬೊಪ್ಪನಗಂಧವಾರಣ ಮುಂತಾದ ಉಲ್ಲೇಖಗಳು ದೊರೆಯುತ್ತವೆ.

### ಪ್ರಶಸ್ತಿ ಶಾಸನಗಳು ಮತ್ತು ಜಯಪತ್ರಗಳು

ಪ್ರಶಸ್ತಿ ಶಾಸನವು ಶಾಸನದ ಕರ್ತೃವಿನ ಘನ ಸಾಧನೆಯನ್ನು ಪ್ರಶಂಸಿಸುತ್ತ ಅವನ ವ್ಯಕ್ತಿತ್ವವನ್ನು ಚಿತ್ರಿಸುತ್ತದೆ. ಇವು ಅವನಿಗೆ ಇದ್ದ ಬಿರುದು ಬಾವಲಿಗಳನ್ನು, ಜ್ಞಾನ, ಪಾಂಡಿತ್ಯ, ಕೌಶಲ್ಯಗಳನ್ನು ಬಣ್ಣಿಸುವುದೇ ಹೊರತು, ಅದರೊಂದಿಗೆ ಬೇರಾವ ಘಟನೆ/ಕ್ರಿಯೆಗಳು ಉಲ್ಲೇಖವಾಗುವುದಿಲ್ಲ. ಇಂಥ ಪ್ರಶಸ್ತಿ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಿರದಿದ್ದರೂ, ಇವು ಸಾಂಸ್ಕೃತಿಕ ಕೊಡುಗೆಗಳಾಗಿ ಗಮನಾರ್ಹವಾಗಿವೆ. ಕರ್ನಾಟಕದ ಶಾಸನ ಕ್ಷೇತ್ರದಲ್ಲಿ ಕ್ರಿ.ಶ.ಸು. ೫೦೦ರ ತಮಟುಕಲ್ಲಿನ ಪ್ರಸಿದ್ಧಶಾಸನವು ಗುಣಮಧುರನೆಂಬ ವೀರನೊಬ್ಬನ ಘನವ್ಯಕ್ತಿತ್ವವನ್ನು ಪ್ರಶಂಸಿಸುತ್ತಿದೆ. ವೀರಗಲ್ಲಿನ ಶಿಲ್ಪವನ್ನು ಅನುಲಕ್ಷಿಸಿದರೆ ಇದೇ ಮೊದಲ ಪ್ರಶಸ್ತಿ ಶಾಸನವೆನ್ನಿಸುತ್ತದೆ. ಬಾದಾಮಿ ಚಲುಕ್ಯರ ದೊರೆ ಮಂಗಳೀಶನ ಮಹಾಕೂಟದ ಸ್ತಂಭ ಶಾಸನವು ಅವನ ದಿಗ್ವಿಜಯದ ಬಗೆಗೆ ತಿಳಿಸುತ್ತದೆ. 'ಜಯಸ್ತಂಭ'ವೆಂದೇ ಸೂಚಿಸಿದ್ದರೂ, ದುರ್ಲಭದೇವಿಯೊಂದಿಗೆ ಮಹಾಕೂಟೇಶ್ವರನಿಗೆ ಬಿಟ್ಟ ದಾನವನ್ನು ಉಲ್ಲೇಖಿಸಿರುವುದು ಗಮನಾರ್ಹವಾಗಿದೆ. ಈ ದಿಸೆಯಲ್ಲಿ ಗಮನಿಸಿ ಐಹೊಳೆಯ ಪುಲಕೇಶಿ ಶಾಸನವನ್ನು ವಿದ್ವಾಂಸರು ಪ್ರಶಸ್ತಿ ಶಾಸನವಲ್ಲ ಎಂದಿದ್ದಾರೆ.

ಪ್ರಶಸ್ತಿ ಶಾಸನಗಳಲ್ಲಿ ಕೀರ್ತಿಶಾಸನ, ಗುಣಶಾಸನ, ಧರ್ಮ ಕೀರ್ತಿಶಾಸನ ಮತ್ತು ಪ್ರಶಸ್ತಿ ಶಾಸನಗಳೆಂದು ನಾಲ್ಕು ಬಗೆಯ ಶಾಸನಗಳನ್ನು ಗುರುತಿಸುವರು. ಕುರ್ಕ್ಯಾಲದ ಜಿನವಲ್ಲಭನ ಶಾಸನವು, ಜಿನವಲ್ಲಭನು ವೃಷಭಾದ್ರಿಯ ದಕ್ಷಿಣ ಭಾಗದಲ್ಲಿ ಕುಲದೈವಗಳಾದ ಜಿನಬಿಂಬಗಳನ್ನು ಚಕ್ರೇಶ್ವರಿಯ ಪ್ರತಿಮೆಯನ್ನು ಮಾಡಿಸಿ ತ್ರಿಭುವನ ತಿಲಕವೆಂಬ ಬಸದಿಯನ್ನು, ಕವಿತಾಗುಣಾರ್ಣವ ಎಂಬ ಕೆರೆಯನ್ನು 'ಮದನವಿಳಾಸ'ವೆಂಬ ತೋಟವನ್ನು ಮಾಡಿಸುತ್ತಾನೆ. ಸತ್ಕವಿತ್ವದ ಪಂಪನ ತಮ್ಮನೂ, ವಾಗ್ವಧೂವರವಲ್ಲಭನೂ ಆದ ಜಿನವಲ್ಲಭನ ಈ ಕೃತ್ಯಗಳು ಪಂಪನಿಗೆ ಅರಿಕೇಸರಿ ಕೊಟ್ಟ ಕೀರ್ತಿಶಾಸನದಂತಿದೆ ಎಂದು ಶಾಸನ ತಿಳಿಸಿದೆ. ಪಂಪನಿಗೆ ಕೊಟ್ಟಿದ್ದ ತಾಮ್ರಶಾಸನಕ್ಕಿಂತ ಈ ಕೀರ್ತಿಶಾಸನವು ಚಿರಸ್ಥಾಯಿಯಾಗಿದೆ (ಶಾಸನ ಸಂಗ್ರಹ, ಶಾ.ಸಂ.೧೦). ವಿದ್ವಾಂಸನೊಬ್ಬನ ಸದ್ಗುಣ ಮತ್ತು ವಿದ್ವತ್ತಿಗಾಗಿ ಕೊಟ್ಟ ಶಾಸನವನ್ನು ಶ್ರೀನಿವಾಸ ರಿತ್ತಿಯವರು 'ಗುಣಶಾಸನ'ವೆಂದು

ಕರೆದಿದ್ದಾರೆ. ಕ್ರಿ.ಶ. ೧೪೧೩ರ ಕೋಟಿಪುರದ ಶಾಸನವು, ಇಮ್ಮಡಿ ಹರಿಹರನು 'ಕೋಟಿನಾಥ ಪುರಾಣ'ವನ್ನು ರಚಿಸಿದ ರಾಜಾದಿತೀರ್ಥ ಶ್ರೀಪಾದಂಗಳಿಗೆ ದಾನ ನೀಡಿದ್ದನ್ನು ತಿಳಿಸಿದೆ. ವೇದಗಳಿಗೆ ಭಾಷ್ಯ ಬರೆದ ಸಾಯಣರ ಕಾರ್ಯದಲ್ಲಿ ಸಹಾಯ ಮಾಡಿದ್ದ ನರಹರಿ ಸೋಮಯಾಜಿ, ಪಂಡರಿದೀಕ್ಷಿತ ಮತ್ತು ನಾರಾಯಣ ವಾಜಪೇಯಿಗಳಿಗೆ ದಾನ ನೀಡಿದ್ದನ್ನು ಶೃಂಗೇರಿಯ ಶಾಸನವೊಂದು ದಾಖಲಿಸಿದೆ.

ಧರ್ಮಕೀರ್ತಿ ಶಾಸನಗಳು ಪ್ರಶಸ್ತಿ ಶಾಸನಗಳ ಒಂದು ವಿಧವಾಗಿದ್ದು, ಈ ಶಾಸನದಲ್ಲಿ ವಿಶೇಷವಾಗಿ ಕರ್ತೃವು ನಡೆಸಿದ ಧರ್ಮಕಾರ್ಯಗಳನ್ನು ವರ್ಣಿಸುತ್ತದೆ. ಬಳ್ಳಿಗಾವೆಯ ಕೋಡಿಮಠದ ಶಾಸನವು, ಬಿಜ್ಜಳ ದೊರೆಯು ಬಳ್ಳಿಗಾವೆಯಲ್ಲಿ ಬೀಡುಬಿಟ್ಟಿದ್ದಾಗ ಅಲ್ಲಿಯ ಮಠದಲ್ಲಿ ಧರ್ಮಪ್ರಸಂಗ ನಡೆದದ್ದನ್ನು ಕಂಡು ಬಿಟ್ಟ ದಾನವನ್ನು ಉಲ್ಲೇಖಿಸಿದೆ {ಎಕ.೭ (ಹಳೇ) ಭಾಗ–೧ ಶಿ.ಪು.೧೦೨}. ಶಾಸನವೊಂದು ಸು.ಕ್ರಿ.ಶ.೧೨೧೫ರಲ್ಲಿ ಹೊಯ್ಸಳ ದೊರೆ ವೀರಬಲ್ಲಾಳದೇವನು ಶಾಂತಿ ಗ್ರಾಮದಲ್ಲಿ ನೆಲೆಸಿದ್ದ ಅಚಳ ಪ್ರಕಾಶ ಮುನಿಗಳು ಮಾಡಿದ 'ಯೋಗವಾಸಿಷ್ಠ'ದ ಬಗೆಗಿನ ವ್ಯಾಖ್ಯಾನವನ್ನು ಕೇಳಿ ಅವರು ಮಾಡಿಸಿದ ವರದನರಸಿಂಹ ದೇವಾಲಯಕ್ಕೆ ದಾನ ಬಿಟ್ಟಿದ್ದನ್ನು ತಿಳಿಸಿದೆ (ಎಕ.೮, ಹಾಸನ ೧೫೮). ಕ್ರಿ.ಶ. ೧೫೩೧ರ ಶಾಸನವೊಂದು, ಗಯಾದಲ್ಲಿರುವ ವಿಷ್ಣುಪಾದ ಗುಡಿಯಲ್ಲಿ ಇದ್ದು, ರಾಜನ ಪರವಾಗಿ ಬಂದು ರಾಜನ ವಂಶದ ಹಿರಿಯರಿಗೆ 'ಶ್ರಾದ್ಧ'ವನ್ನು ಮಾಡಿದ್ದನ್ನು ದಾಖಲಿಸಿದೆ. ಈ ಶಾಸನವನ್ನು 'ಧರ್ಮಶಾಸನ'ವೆಂದು ಕರೆದಿರುವುದಾಗಿ ಡಿ.ಸಿ. ಸರ್ಕಾರ್‌ರವರು ತಿಳಿಸಿದ್ದಾರೆ.

ಕನ್ನಡ ಶಾಸನಗಳ ಜಗತ್ತಿನಲ್ಲಿ ಪ್ರಾಚೀನವಾದ ಪ್ರಶಸ್ತಿ ಶಾಸನವೆಂದರೆ ರಾಷ್ಟ್ರಕೂಟ ದೊರೆ ಕನ್ನರದೇವನ ಜೂರ ಪ್ರಶಸ್ತಿಶಾಸನ (ಶಾಸನ ಸಂಗ್ರಹ, ಶಾ.ಸಂ.೧೧). ಈ ಶಾಸನದಲ್ಲಿ ವಿಶೇಷವಾಗಿ ಮೂರನೇ ಕೃಷ್ಣನು 'ಪರಾಂಗನಾ ಪುತ್ರ'ನಾಗಿದ್ದನೆಂದು ಬಣ್ಣಿಸಿದೆ. ಶಾಸನವು– ದೊರೆಯ ಮನಸ್ಸು ಪರಾಂಗನೆಯರನ್ನು ಕಂಡರೆ, ಅವರ ತೋಳು ಎತ್ತಿ ಆಡಿಸಿದ್ದ ತಾಯಿಯಂತೆ ತೋರಿ, ಅವಳ ಬಸಿರಲ್ಲಿ ಆಡಿದ ಮಗುವಿನಂತೆ ಭಾವಿಸುತ್ತಿತ್ತು, ಎಂದೂ ಪರಾಂಗನೆಯರನ್ನು ಕೂಡಿದ್ದಿಲ್ಲ ಎಂದು ಪ್ರಶಂಸಿಸಿದೆ. ಬಾದಾಮಿಯ ಕಪ್ಪೆ ಅರಭಟ್ಟನ ಶಾಸನದಲ್ಲಿ 'ಪ್ರಶಸ್ತಿಶಾಸನ'ವೆಂದು ಹೆಸರಿಸಿಲ್ಲವಾದರೂ, ಇದೊಂದು ಅರಭಟ್ಟನ ಘನವ್ಯಕ್ತಿತ್ವವನ್ನು ಚಿತ್ರಿಸಿರುವ ಪ್ರಶಸ್ತಿ ಶಾಸನವಾಗಿದೆ. ಶಾಸನವು, ಕಪ್ಪೆ ಅರಭಟ್ಟನು ಶಿಷ್ಟಜನಪ್ರಿಯನು, ಕಷ್ಟಜನ ವರ್ಜಿತನಾಗಿದ್ದನು; ಸಾಧುವಿಗೆ ಸಾಧು, ವೀರನಿಗೆ ಮಹಾವೀರ, ಮೇಲ್ಬರುವ ಶತ್ರುವಿಗೆ ಕಲಿಯುಗ ವಿಪರೀತನಾಗಿದ್ದನು; ಈತನೇ ಮಾಧವನು ಎಂದು ವಿಶೇಷವಾಗಿ ಬಣ್ಣಿಸಿದೆ (ಶಾಸನ ಸಂಗ್ರಹ, ಶಾ.ಸಂ.೪).

ಪ್ರಶಸ್ತಿ ಶಾಸನಗಳಲ್ಲದೇ, ಯಾವುದೇ ಶಾಸ್ತ್ರ, ಧಾರ್ಮಿಕ ವಿಚಾರವಾಗಿ ತರ್ಕವಿತರ್ಕಗಳು ನಡೆದಾಗ ವಾದವಿವಾದಗಳಲ್ಲಿ ಗೆದ್ದವರ ಜಯವನ್ನು ಘೋಷಿಸಿ ನೀಡುತ್ತಿದ್ದ ಪತ್ರಗಳೇ 'ಜಯಪತ್ರ'ಗಳು. ಶಾಸನ ಕ್ಷೇತ್ರದಲ್ಲಿ ಜಯಪತ್ರಗಳು ವಿರಳವೆನಿಸಿದರೂ, ಸಮಾಜದಲ್ಲಿ ಸು.೧೨–೧೩ನೆಯ ಶತಮಾನದಲ್ಲಿ ವಿಶೇಷವಾಗಿ ಇಂಥ ವಾದ ವಿವಾದಗಳು ನಡೆದಿತ್ತೆಂದು ಶಾಸನಗಳು ದಾಖಲಿಸಿವೆ. ಆ ಕಾಲದಲ್ಲಿ ಕರ್ನಾಟಕದಲ್ಲಿ ನೆಲೆಸಿದ್ದ ಜೈನಮುನಿಗಳಾದ ಗೋಪಣಂದಿಯತಿಯು– ವಾದಿಕುಳಧರ ವಜ್ರಾಯುಧ; ಪ್ರಭಾಚಂದ್ರಮುನಿ– ರುದ್ರವಾದಿಗಜಾಂಕುಶ; ಶ್ರೀಪಾಲತ್ರೈವಿದ್ಯ ದೇವರು– ಪರವಾದಿಮಲ್ಲ ಇತ್ಯಾದಿ ಬಿರುದುಗಳನ್ನು ಧರಿಸಿದ್ದರು. ಶೈವಯತಿಯಾದ ಚಂದ್ರಭೂಷಣ ಪಂಡಿತನನ್ನು ಶಾಸನವೊಂದು– ಕುಮತವಾದಿಗಳನ್ನು ಒಳ್ಪು ನುಡಿಗಳಿಂದ ಭಂಗಿಸಿದ ಶೈವಸಮಯ ಪ್ರತಿಪಾಳಕ ಎಂದಿದೆ {ಎಕ.೧೫, (ಹಳೇ)ಅ.ಕೆ.೨೧೬}. ಇಂಥ ಇನ್ನು ಹಲವು ಉದಾಹರಣೆಗಳು ದೊರೆಯುತ್ತವೆ. ಇಂಥ ಧಾರ್ಮಿಕ ವಿವಾದದ ಘಟನೆಯೊಂದನ್ನು ಅಬ್ಬಲೂರಿನ ಶಾಸನವು ದಾಖಲಿಸಿದೆ. ಇದರಂತೆ ರಾಮಯ್ಯನು ಅಬ್ಬಲೂರ ಬ್ರಹ್ಮೇಶ್ವರ ದೇವಸ್ಥಾನದಲ್ಲಿ ನೆಲೆಸಿ ಧ್ಯಾನದಲ್ಲಿದ್ದಾಗ ಆಗ ಕೆಲವು ಜೈನರು ಛಲದಿಂದ 'ಜಿನನೇ ದೈವವು' ಎಂದು ವಾದಿಸಲು, ರಾಮನಿಗೂ ಜೈನರಿಗೂ ವಾದವಾಗುತ್ತದೆ. ಜೈನರು, 'ಶಿವನ ಮಹತ್ವವನ್ನು ಸಾರಲು ನಿನ್ನ ಶಿರವನ್ನು ಕತ್ತರಿಸಿಕೊಟ್ಟು ಮತ್ತೆ ಶಿವನಿಂದ ಮರಳಿ ಪಡೆ, ಹಾಗಾದರೆ ನೀನೇ ಭಕ್ತ, ಆತನೇ ದೇವ ಎಂದು ಒಪ್ಪಬಹುದು' ಎಂದು ಹೇಳಿ, ಇದರಲ್ಲಿ ಅವನು ಗೆದ್ದರೆ, "ಜಿನನ ಕಿತ್ತು ಶಿವನ ನಿಲುಪೆವು" ಎನ್ನುತ್ತಾರೆ. ಈ ಮಾತಿಗೆ ಒಪ್ಪಿ ರಾಮನು ಅವರಿಂದ ಪತ್ರವನ್ನು ಪಡೆದುಕೊಂಡು ತನ್ನ ಶಿರವನ್ನು ಹುಲ್ಲಕಟ್ಟನ್ನು ಕತ್ತರಿಸುವಂತೆ ತರಿದು ಶಿವನ ಬಳಿ ಇಟ್ಟು ಶರಣಾಗುತ್ತಾನೆ. ಏಳು ದಿನಗಳ ನಂತರ ರಾಮಯ್ಯನು ಶಿವನಿಂದ ಮತ್ತೆ ಶಿರವನ್ನು ಪಡೆದು ಪವಾಡವನ್ನು ಮೆರೆದನು. ಜೈನರು ಬೆದರಿ ರಾಮನ ಕಾಲಿಗೆ ಬಿದ್ದು ಕ್ಷಮೆ ಕೇಳಿ 'ಜಿನಪ್ರಳಯ' ಮಾಡಬೇಡವೆಂದು ಬೇಡಿದರು. ಆದರೂ ಸಿಟ್ಟಿನಿಂದ ಜಿನನ ಶಿರ ಮುರಿದು ನಾಶಮಾಡಿದನು. ನೊಂದ ಜೈನರು ರಾಜನಲ್ಲಿ ದೂರು ಹೇಳಲು, ಬಿಜ್ಜಳರಾಯನು ರಾಮಯ್ಯನನ್ನು ಕರೆಸಿ ವಿಚಾರಿಸಲು, ಬೇಕಾದರೆ ಈ ಪರೀಕ್ಷೆಯನ್ನು ಮತ್ತೆ ಮಾಡು, ನನ್ನ ಕಡಿದ ತಲೆ ನಿನ್ನ ಭಂಡಾರದಲ್ಲಿರಲಿ ಅಥವಾ ಸುಟ್ಟಿರಲಿ,

ಆದರೆ ಶಿವನಿಂದ ಮತ್ತೆ ಶಿರ ಪಡೆದರೆ, ಪಣವಾಗಿ ಜೈನರು ಆನೆಸಜ್ಜೆ ಬಸದಿಯನ್ನು ಉಳಿದ ಬಸದಿಗಳನ್ನು ನೀಡುವರೇ? ಕೇಳು ಎನ್ನುವನು. ಈ ಛಲದ ಪ್ರಶ್ನೆಗೆ ಜೈನರು ಕೆರಳಿ ರಾಜನಿಗೆ– ನಾವು ಮೊದಲು ಒಡೆದ ಬಸದಿಯ ಬಗೆಗೆ ದೂರಲು ಬಂದಿಹೆವು, ವಿನಹ ಮತ್ತೆ ಪಣ ಒಡ್ಡಿ ಜಿನ ಪ್ರಳಯ ಮಾಡಲು ಅಲ್ಲವೆನ್ನಲು ರಾಜನು ನಕ್ಕು ಏಕಾಂತದ ರಾಮನಿಗೆ ಜಯಪತ್ರವನ್ನು ಕೊಟ್ಟನೆಂದು ಶಾಸನ ತಿಳಿಸಿದೆ. ಜಯಪತ್ರದಲ್ಲಿ ಶ್ರೀಮತ್ ಬಿಜ್ಜಳದೇವರು ರಾಮಯ್ಯನ ಪರಮ ಸಾಹಸಕ್ಕೆ ನಿರತಿಶಯವಾದ ಮಾಹೇಶ್ವರ ಭಕ್ತಿಗೆ ಮೆಚ್ಚಿ, ವೀರಸೋಮನಾಥ ದೇವರ ದೇಗುಲದ ಶ್ರೀಕಾರ್ಯಕ್ಕೆಂದು ಗೋಗಾವೆ ಗ್ರಾಮವನ್ನು ನೀಡಿದ್ದನ್ನು ಜಯಪತ್ರದಲ್ಲಿ ತಿಳಿಸಿದೆ (ಶಾಸನ ಸಂಗ್ರಹ, ಶಾ.ಸಂ.೨೧). ಜಯಪ್ರತ್ರಗಳಲ್ಲದಿದ್ದರೂ, ಕೆಲವು ಶಾಸನಗಳು ಆಗ ನಡೆದಿದ್ದ ವ್ಯಾಜ್ಯ, ಪ್ರತಿಭಟನೆ, ದೂರಿನ ಬಗೆಗೆ ಬೆಳಕು ಚೆಲ್ಲಿ ಕೊಟ್ಟ ನ್ಯಾಯ ನಿರ್ಣಯದ ಬಗೆಗೆ ಗಮನ ಸೆಳೆಯುತ್ತವೆ. ಬುಕ್ಕರಾಯನು ಜೈನರಿಗೂ, ವೈಷ್ಣವರಿಗೂ ನಡೆದ ವ್ಯಾಜ್ಯವನ್ನು ಪರಿಹರಿಸಿ ಇಬ್ಬರೂ ಸಾಮರಸ್ಯದಿಂದ ಬಾಳುವಂತೆ ಆದೇಶಿಸಿರುವುದು ಗಮನಾರ್ಹವಾಗಿದೆ.

### ರಾಜಶಾಸನಗಳಿಂದ ತಿಳಿದುಬರುವ ಇತರ ಅಂಶಗಳು

ರಾಜಶಾಸನಗಳಲ್ಲಿ ಬರುವ ಬಿರುದಾವಳಿಯ ಭಾಗವು ಅವರ ಘನಸಾಧನೆಗಳ ಸಂಕೇತವಾಗಿವೆ. ಅಂದಿನ ಐತಿಹಾಸಿಕ ಸ್ಥಿತ್ಯಂತರವನ್ನು ಸೂಚಿಸುವ ಮಹತ್ವದ ಅಂಶಗಳಾಗಿವೆ. ಉದಾ: ಬಾದಾಮಿ ಚಲುಕ್ಯರ ದೊರೆ ಇಮ್ಮಡಿ ಪುಲಕೇಶಿಯು ಉತ್ತರದ ಶ್ರೀಹರ್ಷನನ್ನು ಸೋಲಿಸಿದ ಮೇಲೆ – 'ರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ' – ಬಿರುದನ್ನು ಧರಿಸಿರುವುದು ಗಮನಾರ್ಹವಾಗಿದೆ*. ವಿಜಯನಗರದ ಸಂಗಮ ಅರಸರು ಮುಸ್ಲಿಮರ ಧಾಳಿಯನ್ನು ತಡೆಗಟ್ಟಿ ಕರ್ನಾಟಕ ಸಾಮ್ರಾಜ್ಯವನ್ನು ಉಳಿಸಲು ಯತ್ನಿಸಿದರು. ಹೀಗಾಗಿ ಇವರ 'ಹಿಂದೂರಾಯ ಸುರತ್ರಾಣ' ಬಿರುದು ಅನ್ವರ್ಥನಾಮವೆನಿಸಿತು. ಹೊಯ್ಸಳ ದೊರೆ ವೀರಬಲ್ಲಾಳನು ದುಸ್ಸಾಧ್ಯವಾದ ಉಚ್ಚಂಗಿ ದುರ್ಗವನ್ನು ಶನಿವಾರದಂದು ಗೆದ್ದು 'ಶನಿವಾರಸಿದ್ಧಿ' ಬಿರುದು ಗಳಿಸಿದನು. ಸೋಮೇಶ್ವರನು ದಕ್ಷಿಣದಲ್ಲಿ ಪಾಂಡ್ಯರನ್ನು ಹತ್ತಿಕ್ಕಿ ಚೋಳರೊಂದಿಗೆ ಸ್ನೇಹ ಬೆಳೆಸಿದ್ದನ್ನು ಚೋಳರಾಜ್ಯ ಪ್ರತಿಷ್ಠಾಪನಾಚಾರ್ಯ, ಮಗರ ರಾಜ್ಯ ನಿರ್ಮೂಲನ ಬಿರುದುಗಳು ಸಂಕೇತಿಸಿವೆ. ಹೀಗೆ ಬಿರುದುಗಳು ರಾಜಕೀಯ ಇತಿಹಾಸ ತಿಳಿಯುವಲ್ಲಿ ಅಗತ್ಯವಾಗಿವೆ. ರಾಜರು ತಮ್ಮ ವಿಶೇಷ ಸಾಧನೆಗಳ ನೆನಪಾಗಿ ಬಿರುದನ್ನು ಧರಿಸಿದ್ದಾರೆ. ಉದಾ: ಕಚ್ಚೆಗ, ತಲಕಾಡುಗೊಂಡ, ನೊಳಂಬಾಂತಕ ಇತ್ಯಾದಿ. ಅಧಿಕಾರಿಗಳು ನೀಡಿರುವ ದಾನ ಶಾಸನಗಳಿಂದ, ರಾಜರ ಆಡಳಿತ ಬಗೆಗೆ ತಿಳಿಯುತ್ತದೆ. ಪ್ರಾಚೀನ ಕರ್ನಾಟಕದಲ್ಲಿ ಆಡಳಿತವು ವ್ಯವಸ್ಥಿತವಾಗಿರಲೆಂದು ರಾಜ್ಯವನ್ನು ಮಂಡಲ, ವಿಷಯ, ನಾಡು, ಕಂಪಣ, ಗ್ರಾಮ ಮುಂತಾದ ವಿಭಾಗಗಳಾಗಿ ವಿಂಗಡಿಸಲಾಗಿದೆ. ಇದೇ ಕ್ರಮದಲ್ಲಿ ಆಯಾ ಪ್ರದೇಶಕ್ಕೆ ನೇಮಿಸಿದ ಅಧಿಕಾರಿಗಳನ್ನು ಮಂಡಳೇಶ್ವರ, ಮಹಾಮಂಡಳೇಶ್ವರ, ಸಾಮಂತ, ಮಹಾಸಾಮಂತ, ಗಾವುಂಡ ಮುಂತಾದ ಪಾರಿಭಾಷಿಕ ಪದಗಳು ಹೆಸರಿಸಿವೆ. ಉದಾ:ಮಹಾಮಂಡಳೇಶ್ವರ ವಿನಯಾದಿತ್ಯ, ಸಾಮಂತಗೊಗ್ಗರಸ, ಆದಿಗಾವುಂಡ ಇತ್ಯಾದಿ. ರಾಜ್ಯಾಡಳಿತದ ವಿವಿಧ ವಿಭಾಗಗಳಲ್ಲಿರುತ್ತಿದ್ದ ಅಧಿಕಾರಿ ವರ್ಗದ ಬಗೆಗೆ ತಿಳಿಸುವಲ್ಲಿ ಶಾಸನಗಳು– ದಂಡನಾಯಕ, ಮಹಾಸೇನಾನಿ, ಮಹಾಪಸಾಯಿತ, ಸಂಧಿವಿಗ್ರಹಿ, ಭಂಡಾರಿ, ಸಚಿವ ಮುಂತಾದ ಹುದ್ದೆಗಳನ್ನು ಸೂಚಿಸಿವೆ. ವಿಶೇಷವಾಗಿ ೧೨ನೆಯ ಶತಮಾನದ ಶಾಸನಗಳಲ್ಲಿ ಅಕ್ಷಪಟಲಾಧಿಕಾರಿ, ಬಾಹತ್ತರ ನಿಯೋಗಾಧಿಪತಿ, ತಂತ್ರಪಾಳ, ಸರ್ವಾಧಿಕಾರಿ, ಸುಂಕದಧಿಕಾರಿ ಮುಂತಾದ ಪದಗಳು ಪ್ರಯೋಗವಿದ್ದು, ಅಕ್ಷಪಟಲಾಧಿಕಾರಿಯು ರಾಜ್ಯದ ಪ್ರಮುಖ ದಾಖಲೆಗಳ ಮೇಲ್ವಿಚಾರಕ ಎನ್ನಿಸಿದ್ದಾನೆ.

ಆರ್ಥಿಕ ವಲಯದಲ್ಲಿ ಸುಭದ್ರತೆಯನ್ನು ಕಾಪಾಡಲು ರಾಜ್ಯದಲ್ಲಿ ಪ್ರಚಲಿತವಿದ್ದ ಅನೇಕ ತೆರಿಗೆಗಳನ್ನು ಶಾಸನಗಳು ಉಲ್ಲೇಖಿಸಿವೆ. ರಾಜರೇ ಆದೇಶವಿತ್ತು 'ಸಂತೆ'ಗಳನ್ನು ನಡೆಸಲು ಪಟ್ಟಣಸೆಟ್ಟಿಗಳಿಗೆ ಹೇಳುತ್ತಿದ್ದರು. ಸೆಟ್ಟಿಗಳು, ದೇಶೀವರ್ತಕರು, ನಾನಾ ದೇಶಿಗಳು, ಉಭಯದೇಶೀವರ್ತಕರು ಇದ್ದದ್ದನ್ನು ಶಾಸನಗಳು ಉಲ್ಲೇಖಿಸಿವೆ. ಮಹಾವಡ್ಡ ವ್ಯವಹಾರಿ ಪಟ್ಟಣಸೆಟ್ಟಿ, ಪೊಯ್ಸಳಸೆಟ್ಟಿ, ನೊಳಂಬಸೆಟ್ಟಿ ಮುಂತಾದ ಪದಗಳು ಅಂದಿನ ಆರ್ಥಿಕರಂಗದ ಸ್ಥಿತಿಯನ್ನು ತೆರೆದಿಟ್ಟಿವೆ. ಲೊಕ್ಕಿಗುಂಡಿ, ಸೊಂಡೂರುಗಳಲ್ಲಿ ಟಂಕಸಾಲೆಗಳಿದ್ದು ನಾಣ್ಯವನ್ನು ಟಂಕಿಸುತ್ತಿದ್ದರು. ಇಲ್ಲಿ ಟಂಕಿಸಿದ ನಾಣ್ಯಗಳನ್ನು ಲೊಕ್ಕಿಗದ್ಯಾಣ, ಕುಮಾರಗದ್ಯಾಣವೆಂದೇ ಕರೆದಿದೆ. ಹಲವು ಶಾಸನಗಳು ಹೊನ್ನು, ಪಣ, ವೀಸ, ಕಾಣಿನಾಣ್ಯಗಳ ಬಳಕೆಯನ್ನು ಸೂಚಿಸಿವೆ. ವಿಜಯನಗರದ ಶಾಸನಗಳಲ್ಲಿ ನಿಷ್ಕಾ, 'ವರಾಹ'ಗಳು ಪ್ರಚಲಿತವಿತ್ತು. ಶಾಸನಗಳು ಭೂಮಿ ಅಳತೆಯ ಮಾನವನ್ನು, ಮತ್ತರು, ಕಂಬಗಳೆಂದು ಸೂಚಿಸಿವೆ. ಇವುಗಳ ಅಳತೆಯಲ್ಲಿ ಪ್ರಾದೇಶಿಕವಾಗಿ ವ್ಯತ್ಯಾಸವಿರುತ್ತಿತ್ತು. ಕಂಬವನ್ನು ಹಲವೆಡೆ ಕೋಲು, ಗಳೆ ಎಂದು ಕರೆದಿದ್ದು, ವಿಷ್ಣುವರ್ಧನನ ಮೆಟ್ಟಿನ ಗಳೆ, ೪೮ ಮೆಟ್ಟಿನ ಗಳೆ ಮುಂತಾದ ಉಲ್ಲೇಖಗಳಿವೆ. ಸೊರಬ ತಾಲೂಕಿನ ಶಾಸನವೊಂದು ೧೦೦ ಕಂಬಗಳಿಗೆ ೧ ಮತ್ತರು ಎಂದು ಸೂಚಿಸಿದೆ.

---

* ಕ್ರಿ.ಶ. ೬೧೨-೧೩ರ ಹೈದರಾಬಾದ್ ಶಾಸನದಲ್ಲಿಯೇ ಇಮ್ಮಡಿ ಪುಲಕೇಶಿಗೆ ಪರಮೇಶ್ವರ ಎಂಬ ಬಿರುದು ಹೇಳಿರುವುದು ಸ್ಪಷ್ಟವಾಗಿದೆ (ಸಂ).

ಹೀಗೆ ರಾಜಶಾಸನಗಳು ಸಮಾಜದ ಎಲ್ಲ ಕ್ಷೇತ್ರಗಳಿಗೆ ಸಂಬಂಧಿಸಿದ್ದು, ನೂರಾರು ವಿವರಗಳನ್ನು ತೆರೆದಿಡುತ್ತಿವೆ. ಈ ಶಾಸನಗಳ ಹಾಸು-ಬೀಸು ವಿಶಾಲವಾಗಿದ್ದು, ಶಾಸನಗಳ ಎಲ್ಲ ಮುಖಗಳನ್ನೂ ಇಲ್ಲಿ ಪರಿಚಯಿಸಲಾಗಿಲ್ಲ. ರಾಜಶಾಸನಗಳೆಂದು ನೂರಾರು ಶಾಸನ ನಿದರ್ಶನಗಳು ದೊರೆತಿವೆಯಾದರೂ ಸ್ಥಳಾಭಾವದ ಕಾರಣದಿಂದ ಎಲ್ಲವನ್ನೂ ಇಲ್ಲಿ ನೀಡಲಾಗಿಲ್ಲ. ಇತಿಹಾಸ ಪುನಾರಚನೆಯಲ್ಲಿ ಪ್ರಮುಖ ಆಕರಗಳಾದ ರಾಜಶಾಸನಗಳ ಬಗೆಗಿನ ಅಧ್ಯಯನ ಇನ್ನೂ ವಿಸ್ತಾರವಾಗಿ ಆಗಬೇಕಾಗಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯ ಕರ್ನಾಟಕ** ಸಂಪುಟಗಳು – (ಪರಿಷ್ಕೃತ ಆವೃತ್ತಿ) ಮೈಸೂರು ವಿ.ವಿ.

೨. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು**, ಕ.ವಿ.ವಿ., ಹಂಪಿ.

೩. **ಬನವಾಸಿಯ ಕದಂಬರು**– (ಸಂ) ಬಾ.ರಾ. ಗೋಪಾಲ್– ಕದಂಬ ಅಧ್ಯಯನ ಸಂಸ್ಥೆ, ಶಿರಸಿ, ೧೯೮೩.

೪. **ಕಲ್ಬುರ್ಗಿ ಜಿಲ್ಲೆಯ ಶಾಸನಗಳು** – ಹನುಮಾಕ್ಷಿ ಗೋಗಿ, ಹುಬ್ಬಳ್ಳಿ, ೧೯೯೬.

೫. **ಪುರಾತತ್ತ್ವ ಶೋಧನೆ** – ಎಸ್. ಶ್ರೀಕಂಠಶಾಸ್ತ್ರಿ, ಮೈಸೂರು ವಿ.ವಿ. ೧೯೭೫ (ದ್ವಿಮು.)

೬. **ಶಾಸನ ಸಂಗ್ರಹ** – ಅಣ್ಣಿಗೇರಿ, ಎ.ಎಂ. ಮತ್ತು ಆರ್. ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭. **ಕರ್ನಾಟಕದ ವೀರಗಲ್ಲುಗಳು** – ಆರ್. ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨.

೮. **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** – ಎಂ. ಚಿದಾನಂದಮೂರ್ತಿ, ಮೈಸೂರು ವಿಶ್ವವಿದ್ಯಾನಿಲಯ, ೧೯೭೯ (ದ್ವಿಮು.)

೯. **ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ** – (ಸಂ) ಶ್ರೀನಿವಾಸರಿತ್ತಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೦.

೧೦. **ಕರ್ನಾಟಕದ ಸಂಕ್ಷಿಪ್ತ ಇತಿಹಾಸ** – ಸೂರ್ಯನಾಥ ಕಾಮತ್, ಬೆಂಗಳೂರು, ೧೯೭೩.

೧೧. **ಕರ್ನಾಟಕದ ಇತಿಹಾಸ** – ಬಾ.ರಾ. ಗೋಪಾಲ್, ಮೈಸೂರು ವಿಶ್ವವಿದ್ಯಾನಿಲಯ, ೧೯೮೬.

೧೨. **ಇತಿಹಾಸ ದರ್ಶನ** – ಸಂ. ೧೦, ೧೯೯೫. (ಸಂ) ಸೂರ್ಯನಾಥ ಕಾಮತ್, ಪಿ.ವಿ. ಕೃಷ್ಣಮೂರ್ತಿ.

೧೩. *Indian Epigraphy* - D.C. Sircar, Motilal Banarasidas, Delhi, 1996.

೧೪. *South Indian Inscriptions* - Vol. IX, Pt. I & II.

೧೫. *Indian Antiquary* Volumes.




# ಶಾಸನಗಳಲ್ಲಿ ಪ್ರಾರ್ಥನೆ

– ಸರ್ವೋತ್ತಮ ಆಚಾರ್ಯ ಎಂ.*

ಶಾಸನಗಳಲ್ಲಿ ಪ್ರಾರ್ಥನೆಯ ಸ್ವರೂಪವನ್ನು ತಿಳಿಯುವ ಮೊದಲು ಪ್ರಾರ್ಥನೆ ಎಂದರೇನು? ಎಂದು ತಿಳಿದುಕೊಳ್ಳೋಣ. ಪ್ರಸಿದ್ಧವಾದಂತಹ ಸಂಸ್ಕೃತ ಸಾಹಿತ್ಯದ ಒಂದು ಕವಲಾದಂತಹ ತರ್ಕಶಾಸ್ತ್ರದಲ್ಲಿ ಪ್ರಾರ್ಥನೆಯ ವಿವೇಚನೆಯನ್ನು ಕಾಣಬಹುದು. ತರ್ಕಶಾಸ್ತ್ರದ ಮೇರುಕೃತಿಯಾದಂತಹ 'ತರ್ಕಸಂಗ್ರಹ'ದಲ್ಲಿ ಇದರ ವಿವರಣೆಯನ್ನು ಹೀಗೆ ಕಾಣಬಹುದು:

"ಮಂಗಲಂ ನಾಮ ಅನಿಷ್ಟ ನಿವರ್ತಕಃ ಇಷ್ಟಪ್ರಾಪಕಃ ಕರ್ತವ್ಯ ಕರ್ಮ ವಿಶೇಷಃ" ಎಂದು. ಪ್ರಾರ್ಥನೆಯನ್ನು ಮಂಗಲಾಚರಣೆ ಎಂತಲೂ ಕರೆಯುತ್ತಾರೆ. "ಅನಿಷ್ಟಗಳನ್ನು ದೂರ ಮಾಡಿ, ಇಷ್ಟವನ್ನು ದೊರಕಿಸಿ ಕೊಡುವಂತಹ ಮಾಡಲೇಬೇಕಾದ ಕರ್ಮ ವಿಶೇಷವೇ ಪ್ರಾರ್ಥನೆ"ಯಾಗಿದೆ. ಕರ್ನಾಟಕದ ಶಾಸನ ಪ್ರಪಂಚದಲ್ಲಿ ಶಾಸನಗಳನ್ನು ಹೊರಡಿಸಿದಂತಹ ರಾಜರುಗಳ ಉದ್ದೇಶವು ಇದೇ ಆಗಿತ್ತು. ಪ್ರಾರ್ಥನೆಯು ಕಾಯಿಕ, ವಾಚಿಕ ಮತ್ತು ಮಾನಸಿಕ ಎಂಬುವುದಾಗಿ ಮೂರು ವಿಧವಾಗಿದೆ. ಶಬ್ದೋಚ್ಚಾರಣೆಯ ಮೂಲಕ ಮಾಡುವಂತಹ ಪ್ರಾರ್ಥನೆಯೇ ವಾಚಿಕ ಪ್ರಾರ್ಥನೆಯಾಗಿದೆ. ಶಾಸನಗಳಲ್ಲಿ ಕಂಡುಬರುವಂತಹ ವಾಚಿಕ ಪ್ರಾರ್ಥನೆಯು ವಿಶೇಷವೂ, ರಾಜಮನೆತನಗಳಿಂದ ವ್ಯತ್ಯಸ್ತವಾಗಿಯೂ, ಸಾಹಿತ್ಯಕವಾಗಿಯೂ, ಧಾರ್ಮಿಕವಾಗಿಯೂ ವಿಶೇಷವಾಗಿದೆ. ಕರ್ನಾಟಕದ ಶಾಸನಗಳಲ್ಲಿ ಅದರಲ್ಲೂ ವಿಶೇಷವಾಗಿ ಪ್ರತಿಯೊಂದು ರಾಜಮನೆತನಗಳ ಶಾಸನಗಳಲ್ಲಿ ಕಂಡುಬರುವಂತಹ ಪ್ರಾರ್ಥನಾ ಶ್ಲೋಕಗಳ ವಿವೇಚನೆಯನ್ನು ಮುಂದೆ ಮಾಡಲಾಗುವುದು. ಹೆಚ್ಚಾಗಿ ಪ್ರಾರ್ಥನಾಶ್ಲೋಕಗಳ ಪ್ರಾರಂಭದಲ್ಲಿ 'ಸ್ವಸ್ತಿ', 'ಸಿದ್ಧಂ' ಅಥವಾ 'ಭದ್ರಂ' ಮೊದಲಾದಂತಹ ಮಂಗಳಶಬ್ದಗಳು ಹೆಚ್ಚಾಗಿರುತ್ತವೆ.

ಸೃಷ್ಟಿಕರ್ತೃನಾದ ಪರಮಾತ್ಮನ ಅನುಗ್ರಹವಿಲ್ಲದೆ ಯಾವುದೇ ಒಂದು ಕಾರ್ಯವು ಸುಸೂತ್ರವಾಗಿ ನೆರವೇರುವುದಿಲ್ಲ. ದೇವರ ಅನುಗ್ರಹವಾಗಬೇಕಾದರೆ ಆತನ ಪ್ರಾರ್ಥನೆ ಅತ್ಯವಶ್ಯಕವಾಗಿದೆ. ನಮಗೆ ಜನ್ಮವನ್ನು ಕೊಟ್ಟಂತಹ ದೇವರ ಗುಣಗಾನ ಮಾಡಿದರೆ ನಮ್ಮ ಜೀವನವು ನಂದನವನವಾಗುವುದು, ಇಲ್ಲದೆ ಹೋದರೆ ಜೀವವಿಲ್ಲದ ವನದಂತೆ ಆಗುವುದು. ಯಾವುದೇ ಒಳ್ಳೆಯ ಕಾರ್ಯವನ್ನು ಪ್ರಾರಂಭಿಸುವ ಮೊದಲು ದೇವತಾ ಪ್ರಾರ್ಥನೆ ಮಾಡುವುದೇ ಹಿಂದೂ ಸಂಸ್ಕೃತಿಯ ವಾಡಿಕೆಯಾಗಿದೆ. ಅಂತಹ ಪ್ರಾರ್ಥನೆ ಮಾಡುವಂತಹ ಸಂಪ್ರದಾಯವು ಶಾಸನ ಪ್ರಪಂಚದಲ್ಲೂ ಪ್ರಸಿದ್ಧವಾಗಿದೆ.

### ಕದಂಬರ ಶಾಸನಗಳ ಪ್ರಾರ್ಥನಾಶ್ಲೋಕಗಳು

ಕದಂಬರ ಶಾಸನಗಳ ಪ್ರಾರಂಭದಲ್ಲಿ ಹೆಚ್ಚಾಗಿ 'ಸಿದ್ಧಂ' ಎಂಬ ಮಂಗಳ ಶಬ್ದವಿದ್ದು, ಪ್ರಾರ್ಥನಾಶ್ಲೋಕಗಳು ಬಹಳ ಅಪರೂಪವಾಗಿ ಕಂಡುಬರುತ್ತವೆ. ಕೆಲವೊಂದು ಶಾಸನಗಳಲ್ಲಿ ಜಿನನ ಕುರಿತಾದ, ಬ್ರಹ್ಮನ ಕುರಿತಾದ ಶ್ಲೋಕಗಳನ್ನು ಕಾಣಬಹುದಾಗಿದೆ. ಹೆಚ್ಚಿನ ಶಾಸನಗಳಲ್ಲಿ 'ಜಿತಂ ಭಗವತೇನ ಪದ್ಮನಾಭೇನ' (ಭಗವಂತನಾದ ಪದ್ಮನಾಭನಿಂದ ಜಯಿಸಲ್ಪಟ್ಟಿದೆ) ಎಂಬ ಪ್ರಾರ್ಥನಾ ವಾಕ್ಯವು ಕಂಡುಬರುತ್ತದೆ. ಕನ್ನಡ ಮೊದಲ ಶಾಸನವಾದ ಕಾಕುಸ್ಥವರ್ಮನ ಹಲ್ಮಿಡಿ ಶಾಸನದಲ್ಲಿ ಈ ಪ್ರಸಿದ್ಧ ಪ್ರಾರ್ಥನಾಶ್ಲೋಕವು ಕಂಡುಬರುತ್ತದೆ –

'ಜಯತಿ ಪರಿಷ್ವಜ್ಗಶ್ಯಾರ್ಙ್ಗ ವ್ಯಾನತಿರಚ್ಯುತಃ ।  
ದಾನವಾಕ್ಷ್ಣೋರ್ಯುಗಾನ್ತಾಗ್ನಿಃ ಶಿಷ್ಟಾನಾನ್ತು ಸುದರ್ಶನಃ ॥'

[ರಾಕ್ಷಸರ ಕಣ್ಣುಗಳಿಗೆ ಯುಗಾಂತದ ಅಗ್ನಿಯಂತಿರುವವನೂ, ಸಜ್ಜನರಿಗೆ ಸುದರ್ಶನನೂ, ಶಾರ್ಙ್ಗಧರನೂ ಆದಂತಹ ಅಚ್ಯುತನು ಜಯವನ್ನುಂಟು ಮಾಡಲಿ]

---

* ಸಂಸ್ಕೃತ ಅಧ್ಯಾಪಕರು, ಪ್ರಾರ್ಥನಾ ಶಾಲೆ, ಪದ್ಮನಾಭನಗರ, ಬೆಂಗಳೂರು–೫೬೦೦೭೦.

**ಗಂಗ ಅರಸರು**

ಗಂಗ ಅರಸರು ವಿಷ್ಣು ಆರಾಧಕರಾದುದರಿಂದ ಹೆಚ್ಚಾಗಿ ವಿಷ್ಣುವನ್ನು ಸ್ತುತಿಸುವಂತಹ ಪ್ರಾರ್ಥನಾ ವಾಕ್ಯಗಳೇ ಹೆಚ್ಚಾಗಿ ಕಂಡುಬರುತ್ತದೆ. ಈ ಅರಸ ಶಾಸನಗಳಲ್ಲಿ 'ಸಿದ್ಧಂ' ಮತ್ತು 'ಜಿತಂ ಭಗವತಾಗತಘನಗಗನಾಭೇನ ಪದ್ಮನಾಭೇನ' ಎಂಬಂತಹ ಪ್ರಾರ್ಥನಾ ವಾಕ್ಯವೂ ಹೆಚ್ಚಾಗಿ ಕಂಡುಬರುತ್ತದೆ. 'ಮೋಡಗಳಿಲ್ಲದ ನಿರ್ಮಲವಾದ ಆಕಾಶದಂತಿರುವ ಪದ್ಮನಾಭನಿಂದ ಜಯಿಸಲ್ಪಟ್ಟಿದೆ' ಎಂದು ಇದರರ್ಥವಾಗಿದೆ. ಈ ವಾಕ್ಯದಲ್ಲಿ 'ಭಗವತಾಗತ', 'ಗಗನಾಭೇನ ಪದ್ಮನಾಭೇನ' ಎಂಬುವುದಾಗಿ ದ್ವಿರುಕ್ತಿಯನ್ನು ಕಾಣಬಹುದು.

**ಬಾದಾಮಿಯ ಚಲುಕ್ಯರು**

ಬಾದಾಮಿಯ ಚಲುಕ್ಯರ ಶಾಸನಗಳು ಹೆಚ್ಚಾಗಿ ಪದ್ಯರೂಪವಾಗಿರುವುದರಿಂದ ಇಲ್ಲಿಂದ ಹೆಚ್ಚಾಗಿ ಪ್ರಾರ್ಥನೆಯು ಈ ಶ್ಲೋಕವು ರೂಪವನ್ನು ಪಡೆದಿವೆ. ಹೆಚ್ಚಿನ ಶಾಸನಗಳ ಪ್ರಾರಂಭದಲ್ಲಿ ಈ ಶ್ಲೋಕವು ಹೆಚ್ಚಾಗಿ ಕಂಡುಬರುತ್ತದೆ.

ಜಯತ್ಯಾವಿಷ್ಕೃತಂ ವಿಷ್ಣೋರ್ವರಾಹಂ ಕ್ಷೋಭಿತಾರ್ಣವಂ ।
ದಕ್ಷಿಣೋನ್ನತದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ ॥

[ಕ್ಷೋಭೆಗೊಂಡಂತಹ ಸಮುದ್ರದಲ್ಲಿ ಮುಳುಗಿದಂತಹ ಈ ಭೂಮಿಯನ್ನು ತನ್ನ ಉನ್ನತವಾದಂತಹ ಕೋರೆದಾಡೆಗಳಿಂದ ಉದ್ಧರಿಸಿದಂತಹ ವರಾಹ ಅವತಾರಿ ವಿಷ್ಣುವು ಜಯಿಸಲಿ]

**ರಾಷ್ಟ್ರಕೂಟರು**

ರಾಷ್ಟ್ರಕೂಟರ ಶಾಸನಗಳಲ್ಲಿ ಹೆಚ್ಚಾಗಿ ವಿಷ್ಣು ಮತ್ತು ಹರನನ್ನು ಕುರಿತಾದಂತಹ ಶ್ಲೋಕಗಳು ಕಂಡುಬರುತ್ತದೆ. ಈ ಶ್ಲೋಕವು ಹೀಗಿದೆ –

ಸವೋವ್ಯಾದ್ವೇದಸಾಧಾಮ ಯನ್ನಾಭಿಕಮಲಂಕೃತಂ ।
ಹರಶ್ಚ ಯಸ್ಯ ಕಾಂತೇಂದು ಕಲಯಾ ಕಮಲಂಕೃತಂ ॥

[ವೇದಗಳಿಗೆ ಧಾಮನಾದ ಬ್ರಹ್ಮನು ಯಾರ ನಾಭಿಕಮಲದಲ್ಲಿ ಆಲಂಕೃತನಾಗಿರುವನೋ ಅಂತಹ ಹರಿಯೂ ಮತ್ತು ಯಾರ ಕಾಂತೆಯು ಚಂದ್ರನ ಬೆಳದಿಂಗಳಿನಿಂದ ಆಲಂಕೃತನಾದ ಹರನೂ ನಿಮ್ಮನ್ನು ರಕ್ಷಿಸಲಿ]

ಈ ಶ್ಲೋಕವು ಶ್ಲೇಷೆಯಲ್ಲಿ ಬ್ರಹ್ಮನನ್ನು ಮತ್ತು ಪಾರ್ವತಿಯನ್ನು ಹೊಗಳುತ್ತಿರುವುದು ವಿಶೇಷವಾಗಿದೆ.

**ಹೊಯ್ಸಳರು**

ಹೊಯ್ಸಳರ ಶಾಸನಗಳು ಸಾಹಿತ್ಯದ ದೃಷ್ಟಿಯಿಂದ ವಿಶೇಷವಾಗಿದ್ದು, ಸರ್ವಧರ್ಮ ಸಮನ್ವಯತೆಯನ್ನು ಹೇಳುವಂತಹ ವಿಚಾರಗಳು ಹೆಚ್ಚಾಗಿ ಕಂಡುಬರುತ್ತದೆ. ಅವರ ಶಾಸನಗಳಲ್ಲಿ ಹೆಚ್ಚಾಗಿ ಕಂಡುಬರುವಂತಹ ಪ್ರಾರ್ಥನಾ ಶ್ಲೋಕವು ಈ ರೀತಿಯಾಗಿದೆ –

ನಿತ್ಯೋದ್ಭಾಸಿ ಮೃಣಾಳ ಕೋಮಲ ನಿಜಪ್ರೋತ್ತುಂಗದಂಷ್ಟ್ರೋತ್ಥಿತಂ ।
ಕ್ಷೋಣೀ ಚಕ್ರಮಭಿ ಪ್ರಸಾರಿತಪಯಃ ಪೂರಾಭಿಮಂ ಮಹತ್ ।
ಸಾನಂದಂ ವಿಕಸತ್ ವರೋರುಹ ಧಿಯಾ ಸದ್ಯಸ್ಸರೋಜಾಲಯಾಂ ।
ಆರೂಢಾಮವಲೋಕ್ಯ ಜಾತಹಸಿತಃ ಪೋತ್ರೀಹರಿ ಪಾತು ವಃ ॥

[ಕ್ಷೋಭೆಗೊಂಡಂತಹ ಸಮುದ್ರದಲ್ಲಿ ಮುಳುಗಿದ ಭೂಮಿಯನ್ನು ತನ್ನ ಕೋರೆದಾಡೆಗಳಿಂದ ಎತ್ತಿದಾಗ ಭೂಮಿಯು ಕಮಲದಂತೆ ಕಂಡುಬಂದಾಗ, ಇದು ವಿಷ್ಣುವಿನ ಹೊಟ್ಟೆಯಿಂದಲೇ ಹೊರಬಂದಂತಹ ಕಮಲವೆಂದು ತಿಳಿದು ಅದನ್ನು ಬ್ರಹ್ಮನು ಏರಲು ಹೊರಟಾಗ ಅದನ್ನು ನೋಡಿ ಮಂದಹಾಸ ಬೀರಿದಂತಹ ಹರಿಯು ನಿಮ್ಮನ್ನು ರಕ್ಷಿಸಲಿ]

**ವಿಜಯನಗರ**

ವಿಜಯನಗರದಸರು ಹಂಪಿಯ ವಿರೂಪಾಕ್ಷನ ಆರಾಧಕರಾದುದರಿಂದ ಹರನ ಕುರಿತಾದ ಪ್ರಾರ್ಥನಾ ಶ್ಲೋಕಗಳೇ ಹೆಚ್ಚಾಗಿ ಕಂಡುಬರುತ್ತದೆ. ಇವರ ಶಾಸನಗಳ ಪ್ರಾರಂಭದಲ್ಲಿ 'ಶ್ರೀ ಗಣೇಶಾಯ ನಮಃ', 'ಶ್ರೀ ವಿರೂಪಾಕ್ಷಾಯ ನಮಃ', 'ಶ್ರೀ ಶ್ರೀಕೃಷ್ಣದೇವರಾಯ ನಮಃ' ಎಂಬಂತಹ ವಾಕ್ಯಗಳು ಹೆಚ್ಚಾಗಿ ಕಂಡುಬರುತ್ತದೆ.

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭವೇ ॥

[ಉತ್ತುಂಗವಾದ ಶಿರಸ್ಸನ್ನು ಚುಂಬಿಸುತ್ತಿರುವ ಚಂದ್ರನನ್ನೇ ಚಾಮರವನ್ನಾಗಿಸಿಕೊಂಡು ಸುಂದರವಾದ ಕಾಣಿಸಿಕೊಳ್ಳುವವನೂ, ಮೂರು ಲೋಕಗಳ ಆರಂಭಕ್ಕೆ ಕಾರಣನೂ, ಆಧಾರಸ್ತಂಭನೂ ಆದಂತಹ ಶಂಭುವಿಗೆ ನಮಸ್ಕಾರಗಳು]

**ಮೈಸೂರು ಒಡೆಯರು**

ಮೈಸೂರು ಒಡೆಯರ ಶಾಸನಗಳ ಶೈಲಿಯು ವಿಜಯನಗರದರಸರ ಶೈಲಿಯನ್ನೇ ಹೋಲುತ್ತದೆ. ಪ್ರಾರ್ಥನ ಶ್ಲೋಕಗಳೂ ಕೂಡಾ ಅವೇ ಆಗಿವೆ. ಹೆಚ್ಚಿನ ಶಾಸನಗಳ ಪ್ರಾರಂಭದಲ್ಲಿ 'ಶ್ರೀ ರಾಮಾನುಜಾಯ ನಮಃ' ಎಂಬ ವಾಕ್ಯವು ಹೆಚ್ಚಾಗಿ ಬಂದಿವೆ. ಸಾಮಾನ್ಯವಾಗಿ ಬಳಸುವಂತಹ ದೇವತಾಸ್ತೋತ್ರಗಳೂ ಇವರ ಶಾಸನಗಳಲ್ಲಿ ಕಂಡುಬರುತ್ತವೆ.

**ಜೈನ ಶಾಸನಗಳು**

ಕರ್ನಾಟಕದಲ್ಲಿ ಜೈನ ಶಾಸನಗಳು ಬಹಳವಾಗಿ ಕಂಡುಬರುತ್ತವೆ. ಭಾಷೆಯ ದೃಷ್ಟಿಯಿಂದ ಜೈನ ಶಾಸನಗಳನ್ನು ಸುಲಭವಾಗಿ ಕಂಡುಹಿಡಿಯಬಹುದಾಗಿದೆ. ಅವರ ಶಾಸನಗಳ ಪ್ರಾರಂಭದಲ್ಲಿ 'ಭದ್ರಮಸ್ತು ಜಿನಶಾಸನಾಯ' ಎಂಬ ವಾಕ್ಯವು ಸಾಮಾನ್ಯವಾಗಿ ಕಂಡುಬರುತ್ತದೆ. ಅದಲ್ಲದೆಯೇ–

ಶ್ರೀಮತ್ಪರಮಗಂಭೀರ ಸ್ಯಾದ್ವಾದಾಮೋಘಲಾಂಛನಂ ।
ಜೀಯಾತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥

[ಪರಮಗಂಭೀರವಾದ ಸ್ಯಾದ್ವಾದಕ್ಕೆ ಅಮೋಘವಾದ ಲಾಂಛನದಂತಿರುವ, ತ್ರೈಲೋಕ್ಯನಾಥನ ಜಿನಶಾಸನವು ಜಯವನ್ನುಂಟು ಮಾಡಲಿ] ಎಂಬ ಶ್ಲೋಕವೂ ಇರಬಹುದು.

ಬುದ್ಧನ ಸ್ತುತಿ ಉಳ್ಳಂತಹ ಶಾಸನವೂ ದೊರೆಯುತ್ತದೆ. ಹೊನ್ನಾವರ ಶಾಸನ (E.I. Vol. ೨೭)ದಲ್ಲಿನ ಶ್ಲೋಕವು ಈ ರೀತಿಯಾಗಿದೆ–

ಜಯತ್ಯಮಿತ ಗುಣಭೃದ್ಬುಸ್ಸತ್ವ ಸಮಾಶ್ರಯಃ ।
ಶುದ್ಧೋದನ ಕುಲೋದ್ಭೂತಃ ಪದ್ಮಪತ್ರ ನಿಭೇಕ್ಷಣಃ ॥

[ಶುದ್ಧೋದನನ ಕುಲಜಾತನೂ. ಕಮಲ ದಳಕ್ಕೆ ಸಮಾನವಾದ ನೋಟ ಉಳ್ಳವನೂ, ಅಪರಿಮಿತವಾದ ಗುಣವನ್ನು ಹೊಂದಿರುವವನೂ, ಆದ ಬುದ್ಧನಿಗೆ ಜಯವಾಗಲಿ]

ಇದಲ್ಲದೆಯೇ ಹಲವಾರು ಪ್ರಾರ್ಥನಾ ಶ್ಲೋಕಗಳು ಸಾಹಿತ್ಯಕವಾಗಿಯೂ ಸಂಪದ್ಭರಿತವಾಗಿದೆ. ವಿಜಯನಗರದರಸರ ಮತ್ತು ಮೈಸೂರು ಅರಸರ ಶಾಸನಗಳಲ್ಲಿ ಇಂತಹ ವಿಶೇಷತೆಯನ್ನು ಕಾಣಬಹುದಾಗಿದೆ. ಬೇಲೂರಿನ ಶಾಸನದಲ್ಲಿ (E.C. X–೧೪೪) ಧಾರ್ಮಿಕ ಸಹಿಷ್ಣುತೆಯನ್ನು ಪ್ರಾರ್ಥನೆಯಲ್ಲಿ ಕಾಣಬಹುದಾಗಿದೆ. ಪ್ರಾರ್ಥನಾ ಶ್ಲೋಕಗಳು ಶಾಸನಗಳಲ್ಲಿ ವಿಷಯಾನುಪೂರ್ವಿಯ ದೃಷ್ಟಿಯಿಂದ ಮೊದಲು ಕಂಡುಬರುತ್ತವೆ. ಕೆಲವೊಮ್ಮೆ ಆ ಶಾಸನಗಳು ಯಾವ ರಾಜಮನೆತನಕ್ಕೆ ಸಂಬಂಧಿಸುವುದೆಂದು ಗುರುತಿಸಲೂ ಸುಲಭವಾದ ಮಾರ್ಗವಾಗಿ ಪರಿಣಮಿಸುತ್ತದೆ.*

* ಈ ಲೇಖನದಲ್ಲಿ ತೀರಾ ಪರಿಮಿತವಾಗಿ ಪ್ರಾರ್ಥನಾ ಶ್ಲೋಕಗಳ ಬಗ್ಗೆ ಬರೆಯಲಾಗಿದೆ. ಇದು ಒಂದು ನಿಬಂಧದ ವಿಷಯವೇ ಆಗಿದ್ದು ಮತ್ತು ಹೆಚ್ಚಿನ ವಿಚಾರ ವಿಮರ್ಶೆಗಳಿಗೆ ಅವಕಾಶವಿದೆ (ಸಂ).

# ಕರ್ನಾಟಕದ ಶಾಸನಗಳಲ್ಲಿ ಕಾಲಗಣನೆ

**– ಡಾ॥ ಪಿ.ವಿ. ಕೃಷ್ಣಮೂರ್ತಿ***

**ಕಾ**ಲಗಣನೆ ಎಂಬುದು ಮಾನವನ ಮನಸ್ಸಿನಲ್ಲಿ ನೆನಪು ನಿರೀಕ್ಷೆಗಳು ಉಂಟಾದಾಗಲೇ ಉದಯಿಸಿತೆನ್ನಬಹುದು. ಆಗ ಅವನು ಸೂರ್ಯ, ಚಂದ್ರಾದಿ, ಖಗೋಳ ವಸ್ತುಗಳ ಉಪಗೋಚರ ಚಲನೆಯು ಕಾಲದ ಅಳತೆಗೆ ಸಾಧಕವಾಗಬಲ್ಲ ಸಂಗತಿಯನ್ನು ಮನಗಂಡನು. ಸೂರ್ಯನ ಉದಯಾಸ್ತಮಗಳ ಆವೃತ್ತಿಯು ಒಂದು ದಿನವೆಂಬ ಕಾಲಾವಧಿಯ ಕಲ್ಪನೆಗೆ ಕಾರಣವಾಯಿತು. ಚಂದ್ರಬಿಂಬದ ವೈರೂಪ್ಯಗಳ ಆವೃತ್ತಿಯು ಒಂದು ಮಾಸವೆಂಬ ಕಾಲಾವಧಿಯ ಯೋಚನೆಗೆ ಕಾರಣವಾಯಿತು. ಋತುಗಳ ಆವೃತ್ತಿ ಮತ್ತು ನಕ್ಷತ್ರಗಳ ಹಿನ್ನೆಲೆಯಲ್ಲಿ ಸೂರ್ಯಚಂದ್ರರ ಉಪಗೋಚರ ಚಲನೆಗಳ ಆವೃತ್ತಿಗಳು ಒಂದು ಸಂವತ್ಸರವೆಂಬ ಕಾಲಾವಧಿಯ ನಿರ್ಮಾಣಕ್ಕೆ ಕಾರಣವಾದವು. ಹೀಗೆ ರೂಪುಗೊಂಡಿದ್ದ ಕಾಲಗಣನೆ, ವಿಶ್ವದಾದ್ಯಂತ ಬಹು ಪ್ರಾಚೀನ ಕಾಲದಿಂದಲೇ ಬೇರೆ ಬೇರೆ ಪ್ರದೇಶಗಳಲ್ಲಿ ವಿಭಿನ್ನ ರೀತಿ, ಹೆಸರುಗಳಲ್ಲಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಅವುಗಳಲ್ಲಿ *ಶಕವರ್ಷ, ಕಲಿಯುಗ ಸಂವತ್ಸರ, ಪ್ರಭವಾದಿ ಬಾರ್ಹಸ್ಪತ್ಯ ಸಂವತ್ಸರ, ಚಾಳುಕ್ಯ ವಿಕ್ರಮ ವರ್ಷ, ಹಿಜ್ರಿ, ಫಸ್ಲಿ, ಶುಹೂರ್ (ಸುರ್) ಮೌಲೂದಿ* ಹಾಗೂ *ಗ್ರೆಗೋರಿಯನ್ ಕ್ರಿಸ್ತಶಕೆಯ* ಉಲ್ಲೇಖಗಳಿರುವ ಶಾಸನಗಳು ಮತ್ತು ಕಾಗದ ಪತ್ರಗಳು ಕರ್ನಾಟಕದಲ್ಲಿ ಲಭ್ಯವಾಗಿವೆ. ಪ್ರಸ್ತುತ ಈ ಕಾಲಗಣನೆಗಳಿಗೆ ಸಂಬಂಧಿಸಿದ ವಿವರಗಳ ಒಂದು ಸ್ಥೂಲ ಅವಲೋಕನವನ್ನು ಇಲ್ಲಿ ನೀಡಲು ಪ್ರಯತ್ನಿಸಲಾಗಿದೆ.

ಕರ್ನಾಟಕದ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಕಾಲಗಣನೆಗೆ ಸಂಬಂಧಿಸಿದ ವಿವರಗಳನ್ನು ಗಮನಿಸಿದರೆ ಕ್ರಿ.ಶ. ಐದನೆಯ ಶತಮಾನದ ವರೆಗೆ ಯಾವುದೇ ನಿರ್ದಿಷ್ಟ ಶಕೆಯೊಂದು ಬಳಕೆಯಲ್ಲಿದ್ದ ಬಗ್ಗೆ ಸ್ಪಷ್ಟ ಆಧಾರಗಳು ದೊರೆತಿಲ್ಲ. ಅಶೋಕನ ಶಾಸನಗಳಲ್ಲಿ ರಾಜನ ಆಡಳಿತ ವರ್ಷವನ್ನು ಉಲ್ಲೇಖಿಸುತ್ತಿದ್ದುದು ಕಂಡು ಬರುತ್ತದೆ. ಉದಾಹರಣೆಗೆ **'ದುವಾದಸವಸಾಭಿಸಿತೇನ ಮೇ ಇಯಂ ಅನಪಯಿತೇ'** (ನನ್ನ ಪಟ್ಟಾಭಿಷೇಕವಾಗಿ ೧೨ ವರ್ಷಗಳು ಕಳೆದಾಗ ಈ ಆಜ್ಞೆಯನ್ನು ಹೊರಡಿಸಿದ್ದೇನೆ). ಇದೇ ಪ್ರವೃತ್ತಿ ದಖ್ಖನ್ನಿನ ಶಾತವಾಹನ ದೊರೆಗಳು, ಬಂಗಾಳದ ಪಾಲರು, ಚಂದ್ರರು, ಅಸ್ಸಾಮಿನ ಬ್ರಹ್ಮಸಾಲ ದೊರೆಗಳು, ದಕ್ಷಿಣ ಭಾರತದ ಚೋಳ, ಪಾಂಡ್ಯ, ಪಲ್ಲವರು; ಹಾಗೇ ಕ್ರಿ.ಶ. ೬ನೆಯ ಶತಮಾನಕ್ಕಿಂತ ಹಿಂದಿನ ಗಂಗ, ಕದಂಬ, ಹಾಗೂ ಬಾದಾಮಿಯ ಚಲುಕ್ಯರ ಆಳ್ವಿಕೆಯಲ್ಲೂ ಮುಂದುವರೆದಿರುವುದು ಕಂಡುಬರುತ್ತದೆ.

ಶಾತವಾಹನರ ಕಾಲದಲ್ಲಿ ಆಡಳಿತ ವರ್ಷದ ಉಲ್ಲೇಖದ ಜೊತೆಗೆ ಋತು, ಪಕ್ಷ ಮತ್ತು ದಿವಸಗಳನ್ನು ತಿಳಿಸುತ್ತಿದ್ದರು. ಉದಾ: ಶಾತವಾಹನರ ಮಾಂಡಲಿಕರಾಗಿದ್ದ ಚುಟುಗಳ ಬನವಾಸಿಯ ನಾಗಶಾಸನದಲ್ಲಿ **'ಸಂವತ್ಸರ ೧೦-೨, ಹೇಮಂತಾನ ಪಖೋ ೭, ದಿವಸ ೧'** (ಹನ್ನೆರಡನೆಯ ವರ್ಷದ ಹೇಮಂತ ಋತುವಿನ ೭ನೆಯ ಪಕ್ಷದ ೧ನೆಯ ದಿನ) ಎಂದು ಉಕ್ತವಾಗಿದೆ. ಇಲ್ಲಿ ಒಂದು ವರ್ಷಕ್ಕೆ ಮೂರು ಋತುಗಳು, ಅಂದರೆ ಗ್ರೀಷ್ಮ, ವರ್ಷ ಮತ್ತು ಹೇಮಂತ (ಬೇಸಿಗೆ, ಮಳೆಗಾಲ ಮತ್ತು ಚಳಿಗಾಲ), ಒಂದು ಋತುವಿಗೆ ೮ ಪಕ್ಷಗಳು, ಒಂದು ಪಕ್ಷಕ್ಕೆ ೧೫ ದಿನಗಳು ಎಂಬ ಗಣನೆ ಬಳಕೆಯಲ್ಲಿದ್ದಿತು.

ಶಾತವಾಹನರ ಅನಂತರ ಕರ್ನಾಟಕವನ್ನು ಕದಂಬ ಮತ್ತು ಗಂಗರಸರು ಆಳಿದರು. ಅವರ ಆರಂಭಿಕ ಶಾಸನಗಳಲ್ಲಿ ರಾಜನ ಆಡಳಿತವರ್ಷದ ಉಲ್ಲೇಖಗಳೊಂದಿಗೆ, ಋತು, ಪಕ್ಷ ಮತ್ತು ದಿನಗಳ ಗಣನೆ; ಕೆಲವು ವೇಳೆ ನಕ್ಷತ್ರದ ವಿವರ ಅಲ್ಲದೆ ಮುಹೂರ್ತದ ಉಲ್ಲೇಖಗಳಿರುವುದೂ ಕಂಡು ಬರುತ್ತದೆ. ಕದಂಬ ಮೃಗೇಶವರ್ಮನ ಎರಡನೆಯ ವರ್ಷದ ತಾಮ್ರಪಟದಲ್ಲಿ **'ಶ್ರೀ ವಿಜಯ ಶಿವಮೃಗೇಶವರ್ಮ್ಮಣಃ ವಿಜಯವೈಜಯಿಕಃ ಸಂವತ್ಸರಃ ದ್ವಿತೀಯಃ ಹೇಮಂತ ಪಕ್ಷಃ ಚತುರ್ತ್ಥ ತಿಥಿರ್ದ್ದಶಮೀ'** (ಎರಡನೆಯ ಸಂವತ್ಸರದ ಹೇಮಂತ ಋತುವಿನ ೪ನೆಯ ಪಕ್ಷ, ೧೦ನೆಯ ತಿಥಿ) ಎಂದು ಉಕ್ತವಾಗಿದೆ.

---

* ನಂ.೩೭, ಶ್ರೀಕೃಷ್ಣ ಕೃಪ, ೩ನೆಯ ಅಡ್ಡರಸ್ತೆ, ಸುಬ್ಬಣ್ಣ ಲೇಔಟ್, ಹರಿನಗರಕ್ರಾಸ್, ಬೆಂಗಳೂರು-೫೬೦೦೬೨.

ಕಾಕುಸ್ಥವರ್ಮನ ಹಲಸಿ ತಾಮ್ರಪಟದಲ್ಲಿ ೮೦ನೆಯ ವರ್ಷದ ಉಲ್ಲೇಖವಿದ್ದು ಅದು ಕದಂಬ ಮಯೂರಶರ್ಮನ ರಾಜ್ಯ ಸ್ಥಾಪನಾ ವರ್ಷವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮೃಗೇಶವರ್ಮನ ಮೂರನೆಯ ವರ್ಷದ ದೇವಗಿರಿ ತಾಮ್ರ ಪಟದಲ್ಲಿ **'ಶ್ರೀ ಮೃಗೇಶವರ್ಮ್ಮಾ ಆತ್ಮನಃ ರಾಜ್ಯಸ್ಯ ತೃತೀಯೇ ವರ್ಷೇ ಪೌಷೆ ಸಂವತ್ಸರೇ ಕಾರ್ತ್ತಿಕಮಾಸ ಬಹುಳ ಪಕ್ಷೇ ದಶಾಮ್ಯಾಮ್ ತಿಥೌ ಉತ್ತರಭದ್ರಪದೇ ನಕ್ಷತ್ರೇ'** ಎಂದು ಉಲ್ಲೇಖವಾಗಿದೆ. ಈ ಶಾಸನದಲ್ಲಿ ಪೌಷ ವರ್ಷವನ್ನು ಉಲ್ಲೇಖಿಸಲಾಗಿದೆ. ಅದು ೧೨ ಚಾಂದ್ರವರ್ಷ ಚಕ್ರದ (ಬೃಹಸ್ಪತ್ಯಮಾನ) ವರ್ಷದ ಉಲ್ಲೇಖವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಗಂಗರಸರ ಶಾಸನಕೋಟೆ (ಹಿಂದೂಪುರ ತಾ॥) ತಾಮ್ರ ಪಟದಲ್ಲಿ **'ಪ್ರಥಮೇ ಸಂವತ್ಸರೇ ಫಾಲ್ಗುನಮಾಸೆ ಶುಕ್ಲ ಪಕ್ಷೇ ತಿಥೌ ದಶಮ್ಯಾಂ'** ಎಂದು ಉಕ್ತವಾಗಿದೆ. ಮಾಧವವರ್ಮನ ಖಂಡಸಾಲ ತಾಮ್ರ ಶಾಸನವು**'ಸಮ್ವತ್ಸರೇ ನವಮೇ ಕಾರ್ತಿಕ ಶುಕ್ಲ ಪಕ್ಷ ದ್ವಾದಶ್ಯಾಮ್'** ಎಂದು ಉಲ್ಲೇಖಿಸುತ್ತದೆ. ಹಾಗೇ ದುರ್ವಿನೀತನ ಉತ್ತನೂರು ತಾಮ್ರಪಟದಲ್ಲಿ **'.... ವರ್ದ್ಧಮಾನೇ ವಿಂಶತ್ತಮೇ ವಿಜಯ ಸಂವತ್ಸರೇ ಕಾರ್ತ್ತಿಕಮಾಸೆ ಪೌರ್ಣ್ಣಮ್ಯಾಸಂ ತಿಥೌ ಕೃತ್ತಿಕಾ ನಕ್ಷತ್ರೇ ಅಭಿಜಿತ್ ಮುಹೂರ್ತ್ತೆ'** ಎಂದು ಮುಹೂರ್ತದ ಉಲ್ಲೇಖ ಸಹ ಬಂದಿದೆ. ಹೀಗೆ ಕದಂಬರ, ಗಂಗರಸರ ಆರಂಭ ಕಾಲದ ಅಂದರೆ ಕ್ರಿ.ಶ. ೬ನೇ ಶತಮಾನಕ್ಕೆ ಹಿಂದಿನ ಅವರ ಶಾಸನಗಳಲ್ಲಿ ಪ್ರಧಾನವಾಗಿ ಕೇವಲ ತಮ್ಮ ಆಡಳಿತವರ್ಷ, ಋತು/ಮಾಸ, ತಿಥಿ ನಕ್ಷತ್ರಾದಿ ವಿವರಗಳಿಂದ ಕೂಡಿದ್ದ ಕಾಲಗಣನಾ ಪದ್ಧತಿ ಹೆಚ್ಚು ಪ್ರಚಲಿತವಿದ್ದದ್ದು ಕಂಡು ಬರುತ್ತದೆ. ಕ್ರಿ.ಶ. ೬ನೆಯ ಶತಮಾನದ ನಂತರವೂ ತಮ್ಮ ಆಡಳಿತವನ್ನು ಮುಂದುವರಿಸಿದ ಗಂಗರಸರ ಶಾಸನಗಳಲ್ಲಿ ಮುಂದೆ ಶಕವರ್ಷದ ಪ್ರಸ್ತಾಪಗಳು ಕಂಡುಬರುತ್ತದೆ.

ಕರ್ನಾಟಕದಲ್ಲೇ ಏಕೆ; ಪ್ರಾಯಶಃ ಭಾರತದಲ್ಲೇ ಶಕವರ್ಷವನ್ನು ಹೆಚ್ಚು ಬಳಕೆಗೆ ತಂದವರು ಬಾದಾಮಿಯ ಚಲುಕ್ಯರು. **'ಶಕವರ್ಷೇಷು ಚತುಶ್ಯತೇಷು ಪಂಚಷಷ್ಟಿಯುತೇಷು'** (ಶಕ ೪೬೫ = ಕ್ರಿ.ಶ.೫೪೩) ಎಂಬ ಉಲ್ಲೇಖವಿರುವ ಬಂಡೆಗಲ್ಲು ಶಾಸನ ಬಾದಾಮಿಯಲ್ಲಿದ್ದು, ಆ ವಂಶದ ಒಂದನೆಯ ಪುಲಿಕೇಶಿಯ ಕಾಲಕ್ಕೆ ಸೇರಿದುದಾಗಿದೆ[೧] ಇದು ಕರ್ನಾಟಕದಲ್ಲಿ ದೊರೆತಿರುವ ಅತ್ಯಂತ ಪ್ರಾಚೀನವಾದ ಶಕವರ್ಷದ ಉಲ್ಲೇಖವಾಗಿದೆ. ಇದಕ್ಕಿಂತ ಹಿಂದಿನ ಶಕವರ್ಷವನ್ನು ಉಲ್ಲೇಖಿಸುವ ಇನ್ನೆರಡು ಶಾಸನಗಳು ಬೆಳಕಿಗೆ ಬಂದಿದ್ದು, ಅವು ಕರ್ನಾಟಕದ ಅರಸುಮನೆತನಗಳೊಡನೆ ನಿಕಟ ಸಂಪರ್ಕ ಹೊಂದಿದ್ದ ಭೋಜ ಮೌರ್ಯ ಮನೆತನದ ಸುಕೇತುವರ್ಮನ ಹಾಗೂ ವಾಕಾಟಕ ಮನೆತನದ ದೇವಸೇನನ ಆಳ್ವಿಕೆಯ ಕಾಲಕ್ಕೆ ಸೇರಿದವಾಗಿವೆ. ಇಂದಿನ ಮಹಾರಾಷ್ಟ್ರದ ಠಾಣಾ ಜಿಲ್ಲೆಯ ವಾಳ (ವಾಡಾ)ದಲ್ಲಿ ದೊರೆತಿರುವ ಸುಕೇತುವರ್ಮನ ಶಾಸನದಲ್ಲಿ **'ಶಕವರ್ಷೇ ದ್ವಾವಿಂಶತಿ ಅಧಿಕೆ ಶತತ್ರಯೇ ವ್ರಜತಿಸಕ ನರನಾಥ[ನಂ]'** ಎಂಬ ಉಲ್ಲೇಖವಿದ್ದು ಶಕ ೩೨೨ (ಕ್ರಿ.ಶ. ೪೦೦, ಏಪ್ರಿಲ್ ೨೨, ಮಂಗಳವಾರ)ಕ್ಕೆ ಸರಿಹೊಂದುತ್ತದೆ.[೨] ಮಧ್ಯಪ್ರದೇಶದ ಹಿಸ್ಸೆಬೊರೋಲದಲ್ಲಿ ಲಭ್ಯವಾಗಿರುವ ವಾಕಾಟಕ ದೇವಸೇನನ ಶಾಸನದಲ್ಲಿ **'ಸಿದ್ಧಂ ತಸ್ಯ ವ್ರಿತ್ತಸ್ಯ ವ್ರಾ ೨೦ ಸಪ್ತರ್ಷಯೂತ್ತರ ಸುವಚ್ಛ . . ಬ್ದ ಶಕಾನಾಂ ೩೮೦ ವಾಕಟಕಾನಾಂ ಶ್ರೀ ದೇವಾಸನಸ್ಯ'** ಎಂದಿದ್ದು ಇದು ಶಕ ೩೮೦ (ಕ್ರಿ.ಶ. ೪೫೮) ಕ್ಕೆ ಹೊಂದುತ್ತದೆ. ಶಕವರ್ಷದ ಉಲ್ಲೇಖವಿರುವ ವಾಕಾಟಕರ ಏಕೈಕ ಶಾಸನ ಇದಾಗಿದೆ.[೩]

ಚಲುಕ್ಯ ದೊರೆ ಮಂಗಲೀಶನ ಶಾಸನವೊಂದರಲ್ಲಿ **'ಶ್ರೀ ಮಂಗಲೀಶ್ವರ ರಣವಿಕ್ರಾನ್ತಃ ಪ್ರವರ್ಧ್ಧಮಾನ ರಾಜ್ಯ ಸಂವತ್ಸರೇ ದ್ವಾದಶೇ ಶಕನೃಪತಿ ರಾಜ್ಯಾಭಿಷೇಕ ಸಂವತ್ಸರೇಷ್ವತಿಕ್ರಾನ್ತೇಷು ಪಂಚಸುಶತೇಷು'** ಎಂದು ತನ್ನ ಆಡಳಿತದ ೧೨ನೆಯ ವರ್ಷ ಹಾಗೂ ಶಕನೃಪತಿ ರಾಜ್ಯಭಿಷೇಕದ ೫೦೦ನೆಯ ವರ್ಷವನ್ನು ಉಲ್ಲೇಖಿಸಲಾಗಿದೆ. ಇದೇ ವಂಶದ ವಿನಯಾದಿತ್ಯ, ಕೀರ್ತ್ತಿವರ್ಮ ಮೊದಲಾದವರ ಶಾಸನಗಳಲ್ಲೂ ಶಕವರ್ಷವನ್ನು ಬಳಸಿರುವುದು ಕಂಡುಬರುತ್ತದೆ. *ಶಕವರ್ಷ, ಶಕನೃಪತಿ ರಾಜ್ಯಾಭಿಷೇಕ ಸಂವತ್ಸರ, ಶಕಭೂಪಾಲ ಕಾಲ, ಸಕನೃಪ ಕಾಲಾತೀತ ಸಂವತ್ಸರ;* ಮುಂದೆ **ಶಾಲಿವಾಹನ ಶಕೆ**ಯೆಂದು[೪] ಮುಂತಾಗಿ ಕರ್ನಾಟಕದ ಶಾಸನಗಳಲ್ಲಿ ಇದು ವ್ಯಾಪಕವಾಗಿ ಬಳಕೆಯಾಗಿದೆ. ಇದು ಕ್ರಿ.ಶ. ೭೮ರಲ್ಲಿ ಪ್ರಾರಂಭವಾಗಿದೆ. ಕುಶಾನರ ದೊರೆ ಕಾನಿಷ್ಕನ ಆಡಳಿತವರ್ಷವನ್ನು 'ಅಬ್ದ' ಎಂಬ ಹೆಸರಿನಿಂದ ಅವರ ಅಧೀನ ದೊರೆಗಳಾಗಿದ್ದ ಶಕ, ಕ್ಷತ್ರಪರು ಬಳಸುತ್ತಿದ್ದರು.[೫] ಪಂಥರಾಪುರದಲ್ಲಿ ದೊರೆತ ಮರಾಠಿ ಶಾಸನವೊಂದರಲ್ಲಿನ ಶಾಲಿವಾಹನ ಶಕ ೧೧೧೦ (ಕ್ರಿ.ಶ. ೧೧೮೮) ಎಂಬುದೇ ಶಾಲಿವಾಹನ ಶಕೆಯ ಪ್ರಾಚೀನತಮ ಪ್ರಯೋಗವೆಂದು ತೋರುತ್ತದೆ. ಸೇಉಣ ಕೃಷ್ಣನ ತಸ್ಗಾಂ ತಾಮ್ರ ಪಟಗಳಲ್ಲಿ ಶಾಲಿವಾಹನ ಶಕ ೧೧೭೬ರ (ಕ್ರಿ.ಶ. ೧೨೫೧) ಉಲ್ಲೇಖಬಂದಿದೆ. ಆನಂತರದ ಅನೇಕ ಶಾಸನಗಳಲ್ಲಿ, ಅದರಲ್ಲೂ ವಿಶೇಷವಾಗಿ ವಿಜಯನಗರ ಅರಸರ ಕಾಲದ ಶಾಸನಗಳಲ್ಲಿ **'ಶಾಲಿವಾಹನ ಶಕೆ'** ಎಂಬ

ಪ್ರಯೋಗ ಹೆಚ್ಚು ಹೆಚ್ಚು ಪ್ರಚಾರ ಪಡೆದಿತ್ತು. ಶಕ ಮತ್ತು ಶಾಲಿವಾಹನ ಶಕೆ ಎಂಬುವು ಅಭಿನ್ನ. ಇಲ್ಲಿ ಉಕ್ತನಾಗಿರುವ ಶಾಲಿವಾಹನನು ಶಕಾರಿಯಾದ ಗೌತಮೀಪುತ್ರ ಶಾತಕರ್ಣಿಯೆಂದು ಭಾವಿಸಲಾಗಿದೆ. ಕಾಲಕ್ರಮದಲ್ಲಿ, ವಿಶೇಷವಾಗಿ ಕರ್ನಾಟಕದ ಅರಸುಮನೆತನದವರಾದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು – ಅವರ ಮಾಂಡಲಿಕರಾಗಿದ್ದಂಥ ಹೊಯ್ಸಳ, ಕಳಚುರ್ಯ, ಸೇಉಣರೇ ಮುಂತಾದವರು ಅದನ್ನು ವ್ಯಾಪಕವಾಗಿ ಬಳಸಿರುವುದು ಕಂಡುಬರುತ್ತದೆ. ಹಾಗಾಗಿ ಈ ಶಕವರ್ಷದ ಪ್ರಸ್ತಾಪವಿರುವ ಶಾಸನಗಳು ದೊರಕುವ ಪ್ರದೇಶಗಳು ಮೂಲತಃ ಪ್ರಾಚೀನ ಕರ್ನಾಟಕದ ಅವಿಭಾಜ್ಯ ಭಾಗಗಳೇ ಆಗಿದ್ದವೆಂದು ಮೇಲುನೋಟಕ್ಕೇ ಗ್ರಹಿಸಬಹುದಾಗಿದೆ. ಇಂದಿಗೂ ಭಾರತದಾದ್ಯಂತ ನಮ್ಮ ಪಾರಂಪರಿಕ ಪಂಚಾಂಗಗಳಲ್ಲಿ ವಿಶೇಷವಾಗಿ ಬಳಕೆಗೊಳ್ಳುತ್ತಿರುವ ಶಕೆಯೆಂದರೆ **'ಶಾಲಿವಾಹನಶಕೆ'**ಯೇ ಆಗಿದೆ. ಅಲ್ಲದೆ ಅದು ಇಂದು ಭಾರತ ಸರ್ಕಾರದ ರಾಷ್ಟ್ರೀಯ ಪಂಚಾಂಗದಲ್ಲೂ ತನ್ನ ಸ್ಥಾನವನ್ನು ದೃಢವಾಗಿ ಸ್ಥಾಪಿಸಿಕೊಂಡಿದೆ

ಬಾದಾಮಿಯ ಚಲುಕ್ಯರ ಕಾಲದಲ್ಲೇ ಕಲಿಯುಗ ಸಂವತ್ಸರದ ಉಲ್ಲೇಖ ಕಂಡುಬರುತ್ತದೆ. ಇದೊಂದು ಕೃತಕ ಸಂವತ್ಸರವೆಂದೂ, ಭಾರತೀಯ ಜ್ಯೋತಿಷಿಗಳ ಸೃಷ್ಟಿಯೆಂದು ಅಭಿಪ್ರಾಯವಿದೆ. ಇದನ್ನು **'ಭಾರತಯುದ್ಧ ಸಂವತ್ಸರ'**, **'ಯುಧಿಷ್ಠಿರ ಸಂವತ್ಸರ'** ಎಂದೂ ಕರೆಯಲಾಗಿದೆ. ಮಹಾಭಾರತದ ಯುದ್ಧವು ಕ್ರಿಪೂ. ೩೧೦೨ರಲ್ಲಿ ನಡೆಯಿತು. ಯುದ್ಧದ ನಂತರ ಕಲಿಯುಗ ಪ್ರಾರಂಭವಾಯಿತು. ಅಂದರೆ ಮಹಾಭಾರತದ ಧರ್ಮರಾಯ (ಯುಧಿಷ್ಠಿರ) ಪಟ್ಟಕ್ಕೆ ಬಂದ ಕಾಲ ಎಂಬ ಹೇಳಿಕೆಗಳ ಆಧಾರದ ಮೇಲೆ ಈ ಶಕೆಯ ಗಣನೆ ನಿಂತಿದೆ. ಇದು ಕರ್ನಾಟಕದ ಅನೇಕ ಶಾಸನಗಳಲ್ಲಿ – ಮೊದಮೊದಲು ಕ್ವಚಿತ್ತಾಗಿ, ಮುಂದೆ ಸ್ವಲ್ಪ ವ್ಯಾಪಕವಾಗಿ, ಬಹುತೇಕ ಸಂದರ್ಭಗಳಲ್ಲಿ ಶಕವರ್ಷದೊಂದಿಗೇ ಬಳಕೆಯಾಗಿ, ಇಂದಿಗೂ ಭಾರತದ ಪಾರಂಪರಿಕ ಪಂಚಾಂಗಗಳಲ್ಲಿ ತನ್ನ ಸ್ಥಾನವನ್ನು ಉಳಿಸಿಕೊಂಡಿದೆ. ಕ್ರಿ.ಶ. ೬೩೪ರ ಐಹೊಳೆ ಶಾಸನದಲ್ಲಿ ಈ ಕಾಲದ ಉಲ್ಲೇಖವಿದೆ.[೬]

**ತ್ರಿಂಶತ್ಸು ತ್ರಿಸಹಸ್ರೇಷು ಭಾರತಾದಾಹವಾದಿತಃ ।**
**ಸಪ್ತಾಬ್ದ ಶತಯುಕ್ತೇಷು ಶತೇಷ್ವಬ್ದೇಷು ಪಂಚಸು ।**
**ಪಂಚಾಶತ್ಸು ಕಲೌಕಾಲೇಷಟ್ಸು ಪಂಚ ಶತಾಸು ಚಾ ।**
**ಸಮಾಸು ಸಮತೀತಾಸು ಶಕನಾಮಪಿ ಭೂಭುಜಾಂ ॥**

[ಶಕ ೫೫೬, ಭಾರತಯುದ್ಧದಿಂದ ೩೭೩೫ವರ್ಷಗಳು ಸಂಧಿಸಿದ ಕಲಿಕಾಲದಲ್ಲಿ ಅಂದರೆ ಕಲಿಯುಗ ೩೭೩೫ನೆಯ ವರ್ಷ = ಕ್ರಿ.ಶ. ೬೩೪]

**'ಸ್ವಸ್ತಿ ಕಲಿವರುಷ ೪೫೧೮ ಶಕಾಬ್ದ ೧೩೭೯ನೆಯ ಮೇಲೆ ಸಲ್ಲುವ ಹೇವಿಳಂಬ ಸಂವತ್ಸರದ ಆಷಾಢ ಶು. ಸೋ'** ಎಂಬ ಉಲ್ಲೇಖ ಕೋಲಾರ ಜಿಲ್ಲೆಯ ಶಾಸನವೊಂದರಲ್ಲಿ ಬಂದಿದೆ[೭]. ಇಲ್ಲಿ ಪಕ್ಷ ಮತ್ತು ವಾರಗಳನ್ನು ಸೂಚಿಸಲು ಶು. ಸೋ. ಎಂಬ ಸಂಕ್ಷೇಪಗಳ ಬಳಕೆಯನ್ನು ಗಮನಿಸಬಹುದು. ಈ ರೀತಿ ಸಂಕ್ಷೇಪಗಳ ಬಳಕೆ ಶಾಸನಗಳ ಕಾಲಗಣನಾ ಭಾಗದಲ್ಲಿ ಬಹುಪ್ರಾಚೀನ ಕಾಲದಿಂದಲೇ ಬಳಕೆಗೊಂಡಿರುವುದನ್ನು ಕಾಣಬಹುದಾಗಿದೆ.[೮]

ರಾಷ್ಟ್ರಕೂಟರ ಸಮಕಾಲೀನರಾಗಿ ದಕ್ಷಿಣ ಕರ್ನಾಟಕದ ಭಾಗದಲ್ಲಿ ನೊಳಂಬರು, ಆನಂತರದಲ್ಲಿ ಚೋಳರು ತಮ್ಮ ಆಳ್ವಿಕೆಯನ್ನು ನಡೆಸಿದರು. ನೊಳಂಬರ ಶಾಸನಗಳಲ್ಲಿ ಕಾಲಗಣನಾ ಭಾಗವು ಬಹುಮಟ್ಟಿಗೆ ರಾಷ್ಟ್ರಕೂಟರ ರೀತಿಯಲ್ಲೇ ಇದ್ದುದು ಕಂಡುಬರುತ್ತದೆ. ಆದರೆ ಚೋಳರ ಶಾಸನಗಳಲ್ಲಿ ಅವರ ಪದ್ಧತಿಯಂತೆ ರಾಜನ ಆಳ್ವಿಕೆಯ ವರ್ಷದ ಉಲ್ಲೇಖದೊಂದಿಗೆ ಕರ್ನಾಟಕ ಪ್ರದೇಶದಲ್ಲಿ ಆಗ್ಗೆ ಹೆಚ್ಚು ಪ್ರಚಲಿತವಿದ್ದ ಶಕವರ್ಷದ ಉಲ್ಲೇಖ ಹಾಗೂ ಇತರ ವಿವರಗಳನ್ನು ದಾಖಲಿಸುತ್ತಿದ್ದುದು ಕಂಡುಬರುತ್ತದೆ. ಉದಾ: **"ಶ್ರೀ ರಾಜೇಂದ್ರ ಚೋಳದೇವರ್ಕ್ಕುಯಾಣ್ಡು ೩೧ ಆವದು ಸ್ವಸ್ತಿ ಶಕವರ್ಷ ೯೫೫ನೆಯ ಆಂಗಿರಸ ಸಂವತ್ಸರದ ಕಾರ್ತ್ತಿಕ ಮಾಸದ ಪುಣ್ಣಮ ತಲೆದೆವಸಮಾಗೆ ಬಿದಿಗೆ ಸೋಮವಾರಂ ರೋಹಿಣಿ ನಕ್ಷತ್ರದಲ್..."**[೯].

ರಾಷ್ಟ್ರಕೂಟರ ಅನಂತರ ಕಲ್ಯಾಣದ ಚಾಳುಕ್ಯರು ಕರ್ನಾಟಕದ ಭೂ ಪ್ರದೇಶದ ಮೇಲೆ ತಮ್ಮ ಆಳ್ವಿಕೆಯನ್ನು ಆರಂಭಿಸಿದರು. ಇವರೂ ಬಾದಾಮಿಯ ಚಲುಕ್ಯ, ರಾಷ್ಟ್ರಕೂಟರಂತೆ ಶಕವರ್ಷವನ್ನು ವ್ಯಾಪಕವಾಗಿ ಬಳಸಿರುವುದು ಕಂಡುಬರುತ್ತದೆ. ಆದರೆ ಈ ವಂಶದ ಪ್ರಸಿದ್ಧ ದೊರೆ ಆರನೇ ವಿಕ್ರಮಾದಿತ್ಯನು ತನ್ನದೇ ಆದ **ಚಾಳುಕ್ಯ ವಿಕ್ರಮವರ್ಷ**ವನ್ನು ಆರಂಭಿಸಿದ್ದನು. ಅದು ಆತನು ಪಟ್ಟಕ್ಕೆ ಬಂದ ಶಕ ೯೯೮ ಅಂದರೆ ಕ್ರಿ.ಶ. ೧೦೭೬ರಿಂದ ಆರಂಭಗೊಂಡಿತ್ತು. ಅದು

ಮುಂದೆ ಸುಮಾರು ಒಂದು ನೂರು ವರ್ಷಗಳ ಕಾಲ ಕಲ್ಯಾಣದ ಚಾಳುಕ್ಯ ಮತ್ತು ಅವರ ಮಾಂಡಳಿಕ ಅರಸರು ಅದನ್ನು ಬಳಸಿರುವುದು ಕಂಡುಬರುತ್ತದೆ. ಆರನೇ ವಿಕ್ರಮಾದಿತ್ಯನ ಆಡಳಿತ ಕಾಲವನ್ನು ಚಾಳುಕ್ಯರ ಸುವರ್ಣಯುಗವೆಂದು ಬಣ್ಣಿಸಲಾಗಿದೆ. ಚಾಳುಕ್ಯ ವಿಕ್ರಮವರ್ಷದ ಉಲ್ಲೇಖವಿರುವ ಶಾಸನಗಳು ಉತ್ತರ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಹಾಗೂ ಅವಕ್ಕೆ ಹೊಂದಿಕೊಂಡಿರುವ ಮಹಾರಾಷ್ಟ್ರ, ಆಂಧ್ರಪ್ರದೇಶದ ಗಡಿ ಜಿಲ್ಲೆಗಳ ಶಾಸನಗಳಲ್ಲಷ್ಟೇ ಅಲ್ಲದೆ ದಕ್ಷಿಣ ಕರ್ನಾಟಕದ ಚಿತ್ರದುರ್ಗ, ಶಿವಮೊಗ್ಗ, ದಾವಣಗೆರೆ ಜಿಲ್ಲೆಯ ಹಲವಾರು ಶಾಸನಗಳಲ್ಲಿ ಕಾಣಬಹುದಾಗಿದೆ. ಉದಾ: **ಚಾಳುಕ್ಯವಿಕ್ರಮ ಕಾಲದ ೪೮ ಕ್ರೋಧಿ ಸಂವತ್ಸರದ ಉತ್ತರಾಯಣ ಸಂಕ್ರಾಂತಿ ತ್ರಯೋದಶಿ ಆದಿವಾರದಂದು'** (ಈ ವಿವರಗಳು ಕ್ರಿ.ಶ. ೧೧೨೫ನೆಯ ಜನವರಿ ೪, ಭಾನುವಾರಕ್ಕೆ ಸರಿಹೊಂದುತ್ತದೆ.) ಆರನೆಯ ವಿಕ್ರಮಾದಿತ್ಯನ ಮರಣದ ನಂತರವೂ ಚಾಳುಕ್ಯವಿಕ್ರಮ ವರ್ಷದ ಬಳಕೆ ಕ್ವಚಿತ್ತಾಗಿ ಮುಂದುವರೆದಿತ್ತಾದರೂ; ಮುಂದೆ ಪಟ್ಟಕ್ಕೆ ಬಂದ ಅದೇ ವಂಶದ ಭೂಲೋಕಮಲ್ಲ ಮುಮ್ಮಡಿ ಸೋಮೇಶ್ವರ (೧೧೨೬-೧೧೩೮) ಜಗದೇಕಮಲ್ಲ (೧೧೩೮-೪೯) ತ್ರೈಲೋಕ್ಯಮಲ್ಲ (೧೧೪೯-೬೨); ತ್ರಿಭುವನಮಲ್ಲ (೧೧೫೮-೬೮) ಅಲ್ಲದೆ ಅವರ ಗಮನಾರ್ಹ ಸಾಮಂತ ಮಾಂಡಲಿಕರಾಗಿದ್ದ ಕಲಚುರ್ಯ ಬಿಜ್ಜಳ ಅಥವಾ ತ್ರಿಭುವನಮಲ್ಲ (೧೧೩೦-೮೦), ಸೋವಿದೇವ (೧೧೬೭-೭೬) ಸಂಕಮ (೧೧೭೫-೮೦), ಆಹವಮಲ್ಲ (೧೧೮೦-೮೩) ಮತ್ತು ಸಿಂಘಣರು (೧೧೮೩-೯೩), ಹೊಯ್ಸಳ ಇಮ್ಮಡಿ ವೀರಬಲ್ಲಾಳ (೧೧೭೩-೧೨೨೦), ದೇವಗಿರಿಯ ಸೇಉಣರ ಸಿಂಘಣ (೧೨೦೦-೪೭), ಕಂಧರ (೧೨೪೭-೬೧), ಮಹಾದೇವ (೧೨೬೧-೭೦) ಮತ್ತು ರಾಮಚಂದ್ರ (೧೨೭೧-೧೩೧೨) ಹಾಗೂ ಹಾನಗಲ್ ಕದಂಬರ ಕೀರ್ತಿದೇವ (೧೧೫೦-೮೦), ಕಾಮದೇವ (೧೧೮೦-೧೨೧೭), ಬರಮದೇವ (೧೨೧೭) ಮಲ್ಲಿದೇವ (೧೨೧೭) ಮತ್ತು ಶಿವಚಿತ್ತ ವೀರ ಪೆರ್ಮ್ಮಾಡಿದೇವ (ಕ್ರಿ.ಶ. ೧೧೪೬) ಮೊದಲಾದ ಸುಮಾರು ಹನ್ನೆರಡಕ್ಕೂ ಅಧಿಕ ಸಂಖ್ಯೆಯ ಅರಸರು ತಮ್ಮ ತಮ್ಮ ಹೆಸರಿನ ಆಡಳಿತ ವರ್ಷಗಳನ್ನು ಸ್ಥಾಪಿಸಿಕೊಂಡಿದ್ದುದು ಶಾಸನಗಳಿಂದ ಮನಗಾಣಬಹುದಾಗಿದೆ. ಇವೆಲ್ಲವೂ ಆಯಾ ಅರಸರ ಆಡಳಿತ ಅವಧಿಯಲ್ಲಷ್ಟೇ ಅಸ್ತಿತ್ವ ಪಡೆದಿದ್ದು ಅನಂತರದಲ್ಲಿ ಮೂಲೆಗುಂಪಾದವು.

ಕರ್ನಾಟಕದ ಶಾಸನಗಳಲ್ಲಿ ಸಾಮಾನ್ಯವಾಗಿ ಶಕವರ್ಷದೊಂದಿಗೆ ಪ್ರಭವಾದಿಯಿಂದ ಆರಂಭವಾಗುವ ೬೦ವರ್ಷಗಳ ಚಕ್ರದ **ಬೃಹತ್ಪತ್ಯಮಾನದ**[೧೦] ಗಣನೆಯ ಸಂವತ್ಸರಗಳ ಬಳಕೆ ಕೂಡ ವಿಶೇಷವಾಗಿ ಕಂಡುಬರುತ್ತದೆ. ಇವನ್ನು ಬಹುತೇಕ ಶಕವರ್ಷದೊಂದಿಗೆ ಉಲ್ಲೇಖಿಸುವುದು ನಿಯಮದಂತೆ ಕಂಡರೂ ಕೆಲವೊಮ್ಮೆ ಈ ಸಂವತ್ಸರವನ್ನು ಮಾತ್ರವೇ ಉಲ್ಲೇಖಿಸಿರುವ ಶಾಸನಗಳೂ ಕಂಡುಬರುತ್ತವೆ.[೧೧]

ಹದಿಮೂರು, ಹದಿನಾಲ್ಕನೆಯ ಶತಮಾನದ ನಂತರದಲ್ಲಿ ಕರ್ನಾಟಕದ ಮೇಲೆ ಮುಸ್ಲಿಮರ ಆಕ್ರಮಣಗಳು ಆರಂಭವಾದವು. ಅವರ ಕಾಲದಲ್ಲಿ ಅನೇಕ ಪಾರ್ಸಿ, ಅರಬ್ಬೀ ಮತ್ತು ಉರ್ದು ಶಾಸನಗಳಲ್ಲಿ ಮತ್ತು ಕಾಗದ ಪತ್ರಗಳಲ್ಲಿ **ಹಿಜ್ರ, ಫಸ್ಲಿ, ಮೃಗಸಾಲ್-ಸುರ್ ಹಾಗೂ ಮೌಲೂದಿ** ಸಂವತ್ಸರಗಳ ಉಲ್ಲೇಖಗಳು ಕಾಣಿಸಿಕೊಂಡವು.

ಹಿಜ್ರ ಎಂಬ ಶಬ್ದವು ಅರಬ್ಬಿಯ 'ಹಿಜ್ರ' ಎಂಬ ಧಾತುವಿನಿಂದ ಬಂದಿದೆ. ಅದಕ್ಕೆ ತೆರಳಿದ್ದು. ಪ್ರತ್ಯೇಕಿಸಿದ್ದು ಎಂಬ ಅರ್ಥಗಳಿವೆ. ಇಸ್ಲಾಂ ಧರ್ಮದ ಸ್ಥಾಪಕ ಮಹಮ್ಮದನು (ಕ್ರಿ.ಶ. ೬೨೨ ಜುಲೈ ೧೫ರಂದು) ಮಕ್ಕಾದಿಂದ ಮದೀನಕ್ಕೆ ತೆರಳಿದ ದಿನದಿಂದ ಈ ಕಾಲವನ್ನು ಗಣಿಸಲಾಗುತ್ತಿದೆ. ಈ ಶಕೆಯ ಪ್ರಸ್ತಾಪ, ಭಾರತದಲ್ಲಿ ಮೊದಲಿಗೆ ಕ್ರಿ.ಶ. ೧೦೨೭ರಲ್ಲಿ ಘಸ್ನಿ ಸುಲ್ತಾನ ಮಹಮ್ಮದನು ಹೊರಡಿಸಿದ ನಾಣ್ಯಗಳ ಮೇಲೆ ಕಂಡುಬರುತ್ತದೆ. **ಹಿಜ್ರ** ಸಂವತ್ಸರವು ಶುದ್ಧ ಚಂದ್ರಮಾನ ಪದ್ಧತಿಯದು. ಅಂದರೆ ಅಮವಾಸ್ಯೆಯ ನಂತರ ಚಂದ್ರನು ಕಾಣಿಸಿಕೊಳ್ಳುವ ದಿನದಿಂದ ತಿಂಗಳು ಆರಂಭವಾಗುತ್ತದೆ. ದಿನದ ಗಣನೆಗೆ ಆಯಾ ದಿನದ ಸಂಜೆಯಿಂದ ಮುಂದಿನ ದಿನದ ಸಂಜೆಯವರೆಗೆ ಆಗಿರುತ್ತದೆ. ಇದು ಸೌರವರ್ಷಕ್ಕಿಂತ ಸುಮಾರು ೧೧ ದಿನಗಳ ಕಾಲ ಕಿರಿದಾದುದು. ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲೂಕಿನ ನಾಲ್ತವಾಡದಲ್ಲಿನ ಪರ್ಷಿಯನ್ ಭಾಷೆಯ ಶಾಸನದಲ್ಲಿ ಅಲ್ಲಾವುದ್ದೀನ್ ಖಿಲ್ಜಿಯ ಆಸ್ಥಾನದ ಹುಟ್ಟುಗುಲಾಮನಾದ ಬಖ್ತಾಯಾರ್‌ಖಾನಿಯು ಹಿಜ್ರ ೭೧೫, ಧುಲ್ - ಖಿದರ್ (ಜಿಲ್-ಕದಾ)೧, ಅಂದರೆ ಕ್ರಿ.ಶ. ೧೩೧೫ ಜನವರಿ ೨೭ ರಂದು ತನ್ನ ಸ್ವಪ್ರಯತ್ನದಿಂದ ಮಸೀದಿಯೊಂದನ್ನು ಕಟ್ಟಿಸಿ ಪೂರ್ಣಗೊಳಿಸಿದ ವಿವರಗಳನ್ನು ನೀಡುತ್ತದೆ. ಹಿಜ್ರ ಶಕೆಯ ಉಲ್ಲೇಖ ಕನ್ನಡ ಶಾಸನಗಳಲ್ಲೂ ಕಾಣಿಸಿಕೊಂಡಿರುವುದುಂಟು.

ಮೊಗಲ್‌ದೊರೆ ಅಕಬರನು ಕ್ರಿ.ಶ. ೧೫೬೩ರಲ್ಲಿ ಶುದ್ಧ ಚಾಂದ್ರಮಾನವಾದ[೧೨] ಹಿಜ್ರ ವರ್ಷ-೯೭೧ನ್ನು ಸೌರಮಾನವಾಗಿ ಪರಿವರ್ತಿಸಿ 'ಫಸ್ಲಿ' ವರ್ಷವನ್ನು ಭಾರತದಲ್ಲಿ ಜಾರಿಗೆ ತಂದನು. ಇದು ಸೌರಚಾಂದ್ರಮಾನ[೧೩] ಪದ್ಧತಿಯದಾಗಿದೆ. ಇದು ಭಾರತದ ಬೇರೆ ಬೇರೆ ಭಾಗಗಳಲ್ಲಿ ಸುಮಾರು ೨ ೧/೪ ವರ್ಷಗಳ ವ್ಯತ್ಯಾಸದಲ್ಲಿ ಬಳಕೆಯಲ್ಲಿತ್ತು. ದಕ್ಷಿಣ ಭಾರತದ 'ಫಸ್ಲಿ' ಉತ್ತರ ಭಾರತದ ಫಸ್ಲಿವರ್ಷಕ್ಕಿಂತ ಸು.೨ ೧/೪ ವರ್ಷಗಳಷ್ಟು ಮುಂದಕ್ಕೆ ಇದೆ. ಷಹಜಹಾನನು ಹಿಜ್ರ ೧೦೪೬ ಅಂದರೆ ಕ್ರಿ.ಶ. ೧೬೩೬ರಿಂದ ದಕ್ಷಿಣ ಭಾರತದಲ್ಲಿ ಇದನ್ನು ಜಾರಿಗೆ ತಂದನು. ಪ್ರಚಲಿತ ಫಸ್ಲಿವರ್ಷಕ್ಕೆ ೫೯೦-೯೧ನ್ನು ಕೂಡುವುದರ ಮೂಲಕ ಫಸ್ಲಿವರ್ಷಕ್ಕೆ ಸಮನಾದ ಕ್ರಿಸ್ತ ಶಕೆಯನ್ನು ಪಡೆಯಬಹುದು. ಕ್ರಿ.ಶ. ೧೮೦೦ರಲ್ಲಿ ಜುಲೈ ೧೩ರಂದು ಆರಂಭವಾಗುತ್ತಿದ್ದ ಫಸ್ಲಿವರ್ಷ ಕ್ರಿ.ಶ. ೧೮೫೫ರಿಂದ ಜುಲೈ ೧ ರಿಂದ ಗಣಿಸಲಾಗುತ್ತದೆ. ಫಸ್ಲಿ ಎಂಬುದು ಫಸಲಿಗೆ ಅಂದರೆ ಬೆಳೆಗಳಿಗೆ ಸಂಬಂಧಿಸಿದ್ದು. ಮುಸ್ಲಿಂ ದೊರೆಗಳು ಕಂದಾಯಾದಿಗಳನ್ನು ಸಂಗ್ರಹಿಸಲು ಈ ಕಾಲಗಣನೆಯನ್ನು ಬಳಸಿದರು.

ಬಿಜಾಪುರದ ಆದಿಶಾಹಿಗಳು ಫರ್ಮಾನ್‌ಗಳಲ್ಲಿ ಹಿಜ್ರವರ್ಷದ ಮತ್ತೊಂದು ಪರಿವರ್ತಿತ **ಶುಹೂರ್, ಶಾಹುರ್,** ಅಥವಾ **ಸುರ್** ಎಂಬ ಹೆಸರಿನ ಸಂವತ್ಸರಗಳ ಗಣನೆ ಬಳಕೆಯಾಗಿರುವುದು ಕಂಡುಬರುತ್ತದೆ. ಇದೂ ಫಸ್ಲಿಯಂತೆ ಸೌರಮಾನಕ್ಕೆ ಪರಿವರ್ತಿತವಾದ ಸಂವತ್ಸರ ಗಣನೆಯಾಗಿದೆ. ಇದನ್ನು **'ಅರ್ಬಿ'** ಮತ್ತು **'ಮೃಗಸಾಲ್'** ಎಂದೂ ಕರೆಯುವುದುಂಟು. ಸೂರ್ಯನು ಮೃಗಶಿರಕ್ಕೆ ಪ್ರವೇಶಿಸುವ ತಿಂಗಳಿನಿಂದ ಈ ವರ್ಷವು ಆರಂಭವಾಗುವುದರಿಂದ ಇದಕ್ಕೆ 'ಮೃಗಸಾಲ್' ಎಂಬ ಅನ್ವಯಿಕ ಹೆಸರು ಪ್ರಾಪ್ತವಾಗಿದೆ. ಇದು ಕ್ರಿ.ಶ.೧೩೪೪ ಮೇ ೫ರಿಂದ ಆರಂಭವಾಗಿದೆ. (ವಿಕ್ರಮ ೧೪೦೧, ಜೇಷ್ಠ. ಸು ೨) ಉಲ್ಲೇಖಿತ ಶುಹೂರ್ ವರ್ಷಕ್ಕೆ ೫೯೯-೬೦೦ನ್ನು ಕೂಡುವುದರಿಂದ ಕ್ರಿಸ್ತ ಶಕೆಯನ್ನು ಪಡೆಯಬಹುದು ಈ ಸಂವತ್ಸರ ಸ್ಥಾಪಕರು ಯಾರು? ಎಂಬುದು ಖಚಿತವಾಗಿ ತಿಳಿದುಬಂದಿಲ್ಲ. ಆದರೆ ಸುಲ್ತಾನ್ ಮಹ್ಮದ್ ಬಿನ್ ತೊಗಲಕ್ (೧೩೨೫-೫೧)ನು ಸೇಉಣರ ರಾಜಧಾನಿಯಾದ ದೇವಗಿರಿಯನ್ನು (ದೌಲತಾಬಾದ್) ಆಕ್ರಮಿಸಿದಾಗಿನಿಂದ ಇದರ ಗಣನೆ ಆರಂಭವಾಗಿರಬೇಕೆಂಬ ಅಭಿಪ್ರಾಯವಿದೆ. ಇದು ಕರ್ನಾಟಕದಲ್ಲಿ ವಿಶೇಷವಾಗಿ ಮರಾಠರ ಕಾಲದ ದಾಖಲೆಪತ್ರಗಳಲ್ಲಿ ಕಂಡು ಬಂದಿದೆ.

ಕ್ರಿಸ್ತಶಕ ೧೭೮೩ರಲ್ಲಿ ಸಿಂಹಾಸನವೇರಿದ ಮೈಸೂರಿನ ಹುಲಿ ಟೀಪೂ ಸುಲ್ತಾನನು **'ಮೌಲೂದಿ'** ಎಂಬ ಸೌರ ಚಾಂದ್ರಪದ್ಧತಿಯ ಸಂವತ್ಸರದ ಗಣನೆಯನ್ನು ತನ್ನ ಆಳ್ವಿಕೆಯ ಕಾಲದಲ್ಲಿ ಜಾರಿಗೆ ತಂದನು. ಅದು ಪ್ರವಾದಿ ಮಹಮದನು ಹುಟ್ಟಿದ ಅಂದರೆ ಕ್ರಿ.ಶ. ೫೭೨ನೆಯ ವರ್ಷದಿಂದ ಸೌರಚಾಂದ್ರಪದ್ಧತಿಯಂತೆ ಸಂವತ್ಸರಗಳನ್ನು ಲೆಕ್ಕಮಾಡಿ ಶಕ ೧೭೦೫ ಶೋಭನ ಸಂವತ್ಸರ (೩೭) = ಕ್ರಿ.ಶ. ೧೭೮೩ನ್ನು ಮೌಲೂದಿ ವರ್ಷ ೧೨೧೧ ಎಂದು ಗುರುತಿಸಿ ಬಳಕೆಗೆ ತರಲಾಯಿತು. ಅದು ಟೀಪೂ ಸುಲ್ತಾನನು ಪಟ್ಟಕ್ಕೆ ಬಂದ ವರ್ಷವೂ ಹೌದು. ಇಲ್ಲಿ ಉಕ್ತವಾಗಿರುವ ಶೋಭನ ಸಂವತ್ಸರವು ಪ್ರಭವಾದಿ ಬ್ರಾಹಸ್ಪತ್ಯ ಚಕ್ರ ಸಂವತ್ಸರದ ೩೭ನೆಯದಾಗಿದ್ದು, ಆ ಸಂಖ್ಯೆಯನ್ನು ಅಬ್ಜಾದ್ ಪದ್ಧತಿಯಂತೆ ನಿರ್ಧರಿಸಲಾಗುತ್ತದೆ. ಅಬ್ಜಾದ್ ಪದ್ಧತಿಯೆಂದರೆ ಅರಾಬಿಕ್ ವರ್ಣಮಾಲೆಯ ಅಕ್ಷರಗಳಿಗೆ ಹಳೇ ಹಿಬ್ರುವರ್ಣಮಾಲೆಯ ಕ್ರಮದಲ್ಲಿ ಸಂಖ್ಯೆಗಳನ್ನು ಗೊತ್ತು ಮಾಡುವುದು (ಅಲಿಪ್=೧ ಬೇ=೨, ಜೀಮ್=೩ ಇತ್ಯಾದಿ) ಹಾಗಾಗಿ ಟೀಪೂ ಪಟ್ಟಕ್ಕೆ ಬಂದ ೩೭ನೆಯದಾದ ಶೋಭನ ಸಂವತ್ಸರವನ್ನು 'ಝುಕಿ' ಸಂವತ್ಸರ ಎಂದೂ ನಂತರದ ಸಂವತ್ಸರಗಳನ್ನು ಅಝುಲ್, ಜಲವ್, ದಲತ್ ಎಂದು ನಿರ್ದೇಶಿಸಲಾಗಿದೆ. ಟೀಪೂ ಸುಲ್ತಾನನ ಆಳ್ವಿಕೆಯ ಕಾಲದಲ್ಲಿ, ಶ್ರೀರಂಗಪಟ್ಟಣ ಮೊದಲಾದ ಕಡೆಗಳಲ್ಲಿ ಈ ರೀತಿ ಸಂಖ್ಯಾನ್ವಿತ ಸಂವತ್ಸರದೊಂದಿಗೆ ಈ ಮೌಲೂದಿ ವರ್ಷದ ಉಲ್ಲೇಖಗಳು ಅವನ ಕಾಲದ ಪರ್ಶಿಯನ್, ಅರ್‍ಯಾಬಿಕ್, ಉರ್ದು ಶಾಸನಗಳಲ್ಲಿ ಕಂಡುಬಂದಿದೆ. ಇದನ್ನು ಸ್ವತಂತ್ರವಾಗಿ ಇಲ್ಲವೆ, ಬಹುಮಟ್ಟಿಗೆ ಹಿಜ್ರ ವರ್ಷದ ಜೊತೆ ಜೊತೆಯಲ್ಲೇ ಉಲ್ಲೇಖಿಸಿರುವುದು ಕಂಡುಬರುತ್ತದೆ. ಉದಾ: ಕ್ರಿ.ಶ. ೧೭೯೦ ಸೆಪ್ಟಂಬರ್ ೧೩ಕ್ಕೆ ಸೇರಿದ ಟೀಪೂವಿನ ಸೈನ್ಯದ ಮುಖ್ಯಸ್ಥನಾಗಿದ್ದ ಮಹಮದ್ ಜಹಾಂಗೀರ್ ಎಂಬುವನು ಹುತಾತ್ಮನಾದ ಸಂಗತಿಯನ್ನು ತಿಳಿಸುವ ಶ್ರೀರಂಗಪಟ್ಟಣ ಶಾಸನದಲ್ಲಿ ಹಿಜರಿ ೧೨೦೫, ಮೊಹರಂ ೪, ಬುಧವಾರ ಮತ್ತು ಮೌಲೂದಿ ೧೨೧೮, ಸಂವತ್ಸರಷಿತ್, ಮಾಸ: ಹೈದರಿ, ದಿವಸ: ೬, ಬುಧವಾರ ಎಂದು ಉಲ್ಲೇಖಿಸುತ್ತದೆ.

ಇಂದು ವಿಶ್ವದಾದ್ಯಂತ ವಿಶೇಷವಾಗಿ ಪ್ರಚಲಿತವಿರುವ ಕಾಲಗಣನೆ ಎಂದರೆ **ಕ್ರಿಸ್ತಶಕೆ** ಅಥವಾ **ಗ್ರೆಗೋರಿಯನ್ ಶಕೆ. ಈ ಶಕೆಯ ಮೂಲ ರೋಮ್.** ಮೂಲತಃ ಅದೊಂದು ಶುದ್ಧ ಚಾಂದ್ರಮಾನ ಪದ್ಧತಿಯದಾಗಿತ್ತು. ಚಾಂದ್ರಪದ್ಧತಿಯ ಕಾಲಗಣನೆ, ಋತುಮಾನವನ್ನು ಅಂದರೆ ಬೇಸಿಗೆ, ಮಳೆಗಾಲ ಮತ್ತು ಚಳಿಗಾಲಗಳ ಆವೃತ್ತಿಗಳನ್ನು ಸರಿಯಾಗಿ

ಪ್ರತಿನಿಧಿಸುವುದಿಲ್ಲವಾದ ಕಾರಣ, ಕಾಲಮಾನವನ್ನು ಸರಿಸುಮಾರಾಗಿ ಪ್ರತಿನಿಧಿಸುವ ಸೌರಮಾನ ಪದ್ಧತಿಗೆ ಅದನ್ನು ಅಳವಡಿಸುವ ಅಗತ್ಯತೆ ಕಂಡುಬಂದಿತು. ಹಾಗಾಗಿ ಜೂಲಿಯಸ್‌ಸೀಸರ್‌ನ ಕಾಲದಲ್ಲಿ ನಡೆದ ಸುಧಾರಣೆಯ ಪರಿಣಾಮವಾಗಿ ಅದು ಸೌರಮಾನಕ್ಕೆ ಪರಿವರ್ತಿತವಾಯಿತು. ಆದರೂ ಕ್ರಿ.ಶ. ೧೫೭೨ರ ವೇಳೆಗೆ ಪುಣ್ಯಕಾಲಗಳ ಮತ್ತು ತಾರೀಖುಗಳ ಹೊಂದಾಣಿಕೆ ಸರಿಯಾಗಿ ಆಗದೆ ಸುಮಾರು ೧೦ದಿನಗಳ ವ್ಯತ್ಯಾಸ ಕಂಡುಬಂದಿತು. ಅಂದರೆ ವಿಷುವತ್ಪುಣ್ಯ ಕಾಲದ ತಾರೀಖು ಮಾರ್ಚಿ ೨೧ಕ್ಕೆ ಬದಲಾಗಿ ಮಾರ್ಚಿ ೧೧ಕ್ಕೆ ಬಿದ್ದಿತು. ಅಂದರೆ ಮಾರ್ಚಿ ೧೧ರಂದು ಅಹೋರಾತ್ರಿಗಳು ಸಮವಾಗಿದ್ದವು, ಹಾಗಾಗಿ ೧೦ ದಿನಗಳನ್ನು ಕಾಲಗಣನೆಯಿಂದ ವಿಸರ್ಜಿಸಬೇಕಾದ ಅಗತ್ಯ ಕಂಡುಬಂದಿತು. ಇದನ್ನು ಸರಿಪಡಿಸಲು ಮೂರನೆಯ ಪೋಪ್‌ಗ್ರೇಗೋರಿ ಕ್ರಮ ತೆಗೆದುಕೊಂಡನು, ಆದರೆ ಅದನ್ನು ಮಾರ್ಚ್‌ನಲ್ಲಿ ಮಾಡದೆ ಅಕ್ಟೋಬರ್ ೫ ರಿಂದ ೧೪ ರವರೆಗಿನ ೧೦ ದಿನಗಳನ್ನು ಗಣನೆಯಿಂದ ತೆಗೆದು ಹಾಗೆ ಅಕ್ಟೋಬರ್ ೫ನ್ನು ೧೫ನೆಯ ತಾರೀಖೆಂದು ಮಾರ್ಪಡಿಸಿ ಆಜ್ಞೆ ಹೊರಡಿಸಲಾಯಿತು. ಜನವರಿ ೧, ವರ್ಷದ ಆರಂಭವೆಂದು ಪರಿಗಣಿಸಲಾಯಿತು. ಮೂರನೆಯ ಪೋಪ್‌ಗ್ರೇಗೋರಿಯ ಈ ಸುಧಾರಣೆ ರೋಮನ್, ಸ್ಪಾನೀಷ್ ಮತ್ತು ಪೋರ್ಚುಗೀಸ್‌ಗಳಲ್ಲಿ ಕೂಡಲೇ ಜಾರಿಗೆ ಬಂದಿತು. ಫ್ರಾನ್ಸ್‌ನಲ್ಲಿ ಕ್ರಿ.ಶ. ೧೫೮೨ರ ಡಿಸೆಂಬರನಲ್ಲೂ, ಕ್ರಿ.ಶ. ೧೫೮೩ರಲ್ಲಿ ಜರ್ಮನಿಯ ಕ್ಯಾಥೋಲಿಕ್ ರಾಜ್ಯಗಳಲ್ಲಿ ಜಾರಿಯಾಯಿತು. ಆದರೆ ಪ್ರಾಟೆಸ್ಟಂಟ್ ದೇಶಗಳಲ್ಲಿ ಬಹಳ ಕಾಲದವರೆಗೆ ಜಾರಿಗೆ ಬಂದಿರಲಿಲ್ಲ. ಕ್ರಿ.ಶ.೧೯೧೭ರಲ್ಲಿ ರಷ್ಯನ್ನರು ಗ್ರೇಗೋರಿಯನ್ ಕ್ಯಾಲೆಂಡರನ್ನು ತಮ್ಮ ದೇಶದಲ್ಲಿ ಜಾರಿಗೆ ತಂದರು.

ನಮ್ಮ ದೇಶದ ಮೇಲೆ ಪಾಶ್ಚಾತ್ಯರ ಆಕ್ರಮಣಗಳು ಆರಂಭಗೊಂಡ ಮೇಲೆ ಈ ಕ್ರಿಸ್ತಶಕೆ ಅಥವಾ ಗ್ರೇಗೋರಿಯನ್ ವರ್ಷಗಳ ಗಣನೆ ಕರ್ನಾಟಕದ ಶಾಸನಗಳಲ್ಲೂ ಕಂಡು ಬಂದಿತು. ಉದಾ: 'ಇಂಗ್ಲಿಷು ಸಂ ೧೮೬೮ ವಿಬವ ಸಂ ೧ ವಇಶಾಕ ಬಉಳ'[೧೪], 'ಸನ್ ೧೮೬೦ನೇ ಮೇ ತಾರೀಕು ೫ಲ್ಲೂ ಯೀ ಮಹಾರಾಜ ಸಂತಾನಾಂಬುಜವು[೧೫], ಸನ್ ೧೮೫೫ನೇ ಯ್ಸಿವಿ ಪೆಪುರುವರ್‍ರಿ । ತ ॥ ೧೨[೧೬] ಯಫ್ರೆಲು ತಾರ್‍ರಿಕು ೨೬ಲು[೧೭] ಇತ್ಯಾದಿ.

ಶಕೆಗಳ ಗಣನೆಯನ್ನು ಅಂಕಿಗಳಲ್ಲಿ ಅಥವಾ ಅಕ್ಷರಗಳಲ್ಲಷ್ಟೇ ಅಲ್ಲದೆ ಕೆಲವೊಮ್ಮೆ ಸಂಕೇತಗಳ ಮೂಲಕವೂ ಬರೆದಿರುವುದುಂಟು. ಅಂಕಗಳಿಗೆ ಸಾಮಾನ್ಯವಾಗಿ ಕೆಳಗಿನ ಸಂಕೇತಗಳನ್ನು ಉಪಯೋಗಿಸಲಾಗಿರುತ್ತದೆ.

೧ ಶಶಿ, ಸೋಮ, ಶಶಾಂಕ ಇತ್ಯಾದಿ ಚಂದ್ರನ ಹೆಸರುಗಳು. ಪರಬ್ರಹ್ಮ, ಐರಾವತ, ಧ್ರುವ, ಪ್ರಪಂಚ ಇತ್ಯಾದಿ.
೨ ಅಕ್ಷಿ, ಬಾಹು, ಕರ್ಣ, ಔಷ್ಠ, ಪಕ್ಷ ಇತ್ಯಾದಿ.
೩ ಅಗ್ನಿ, ರಾಮ, ಪುರೀ, ಲೋಕ, ಗುಣ ಸಂಧ್ಯಾ ಇತ್ಯಾದಿ.
೪ ಅಬ್ಧಿ, ಸಾಗರ, ಉಪಾಯ, ಯಾಗ, ಆಶ್ರಮ, ವೇದ, ವ್ಯೂಹ, ವರ್ಣ, ಜಾತಿ ಇತ್ಯಾದಿ.
೫ ಇಂದ್ರಿಯ, ಇಕ್ಷು, ಭೂತ, ಪ್ರಾಣ, ತನ್ಮಾತ್ರ, ಕನ್ಯಾ, ಪಾಂಡವ ಇತ್ಯಾದಿ.
೬ ಶಾಸ್ತ್ರ, ರ್‍ಜು, ಋತು, ಅಂಗ, ರಸ ಇತ್ಯಾದಿ.
೭ ಶೈಲ, ದ್ವೀಪ, ವಾಯು, ಮುನಿ, ವಾರ, ರಾಜ್ಯಾಂಗ, ಸ್ವರ, ವಿಭಕ್ತಿ, ಇತ್ಯಾದಿ.
೮ ಗಜ, ದಿಕ್ಪಾಲ, ಸಿದ್ಧಿ, ಯೋಗ, ವಸ್ತು, ಅನುಷ್ಟುಪ್, ನಾಗ ಇತ್ಯಾದಿ.
೯ ನವರತ್ನ, ನಿಧಿ, ಖಂಡ, ದ್ವಾರ, ಗ್ರಹ, ಧೇನು ಇತ್ಯಾದಿ
೧೦ ಹಸ್ತಾಂಗುಲಿ, ರಾವಣಮೌಲಿ, ರೂಪಕ, ದಿಕ್, ಆಕಾರ, ನಾಟ್ಯ ಇತ್ಯಾದಿ.
೧೧ ಮಹಾದೇವ, ರುದ್ರ, ಕಾರಣ, ತ್ರಿಷ್ಟುಪ್, ಇತ್ಯಾದಿ.
೧೨ ಅರ್ಕ, ಮಾಸ, ರಾಶಿ. ದಿವಾಕರ ಇತ್ಯಾದಿ.
೧೩ ತಾಂಬೂಲ ಗುಣ, ವಿಶ್ವದೇವ, ಅತಿಗತೀ ಇತ್ಯಾದಿ.
೧೪ ವಿದ್ಯಾ, ಯಮ, ಮನು, ಭುವನ, ಶಾಕ್ವರೀ, ಇಂದ್ರ ಇತ್ಯಾದಿ
೧೫ ತಿಥಿ, ಸ್ತ್ರೀಕಲಾ, ಅತಿಶಕ್ವರೀ ಇತ್ಯಾದಿ.

೧೬ ಇಂದುಕಲಾ, ಅಂಬಿಕಾ, ಇತ್ಯಾದಿ.

೧೮ ದ್ವೀಪ, ಪರ್ವ.

೨೦ ರಾವಣಭುಜ, ಅಂಗುಲ,

೧೦೦ ಧಾರ್ತರಾಷ್ಟ್ರ, ಶಕ್ರಯಜ್ಞ, ರಾವಣಾಂಗುಲಿಯ

೧೦೦೦ ಜಾಹ್ನವೀವಕ್ತ್ರ, ವೇದಶಾಖಾ, ಶೇಷಶಿರ್ಷ ಇತ್ಯಾದಿ.

ಇವಲ್ಲದೆ ಇನ್ನೂ ಬೇರೆ ಬೇರೆ ಶಬ್ದಗಳನ್ನು ಪ್ರಯೋಗಿಸುವುದುಂಟು.

**"ಅಂಕಾನಾಂ ವಾಮತೋಗತಿಃ"** ಎಂಬಂತೆ ವಿಪರೀತವಾಗಿ (ಹಿಂದು ಮುಂದಾಗಿ) ಆ ಸಂಕೇತಗಳನ್ನು ಬರೆದು ಕಾಲದ ಅಂಕವನ್ನು ಗೊತ್ತು ಮಾಡಿಕೊಳ್ಳಬೇಕು. ಉದಾ:

೧) ***"ಸಮುದಂಭೋಧಿ ರನ್ಧ್ರೋಭಸಜ್ಞಾತ್ಮಕಮಾದನ್ದಾಂಗೀರಂ"***
ಅಂಬುಧಿ–೪, ರಂಧ್ರ–೯, ಇಭ–೮. ಶಾ.ಶಕ ೮೯೪ (ಇದಕ್ಕೆ ೭೮ನ್ನು ಕೂಡಿದರೆ ಪ್ರಚಲಿತ ಕ್ರಿಸ್ತಶಕೆ ಬರುತ್ತದೆ. ಕ್ರಿ.ಶ. ೯೭೨)[೧೭೮].

೨) ***"ಶಕಾಬ್ದೇ ನಿಧಿಗಗನ ಗುಣಕ್ಷ್ಮಾಮಿತೇ ಪ್ರಾಭವಾದ್ಯೇ ಮಾಸೇ ತತ್ಪೂರ್ಣಿಮಾಯಾಂ"***
ನಿಧಿ–೯, ಗಗನ–೦, ಗುಣ–೩, ಕ್ಷಮಾ–೧. ಶಾ.ಶಕ ೧೩೦೯, ಪ್ರಭವ ಸಂವತ್ಸರ, ಆದ್ಯಮಾಸೇ=ಚೈತ್ರಮಾಸ (ಕ್ರಿ.ಶ. ೧೩೮೭, ಏಪ್ರಿಲ್ – ೪).

೩) ***"ದೃಕ್ಪುರ ಶಿಖೀಂದು ಶಶಾಂಕ ಮಿರಲ್ ವಿರೋಧಿ ಸಂವತ್ಸರ ಫಾಲ್ಗುಣ........"***
ಇಲ್ಲಿ ದೃಕ್–೨, ಪುರ–೩, ಶಿಖಿ (ಅಗ್ನಿ)–೩, ಇಂದು – ೧. ಇದನ್ನು ವಾಮಗತಿಯಲ್ಲಿ ಬರೆದರೆ ಶಾ.ಶಕೆ. ೧೩೩೨ ಆಗುತ್ತದೆ. (ಕ್ರಿ.ಶ. ೧೪೧೦).

೪) ***"ಶಾಲೀಯಾಬ್ಧ ರಸಾಗ್ನಿವೇದವಿದು ಯುದ್ಭಾವೇ...."***
ರಸ–೬, ಅಗ್ನಿ–೩, ವೇದ–೪, ವಿದು–೧; ಅಂದರೆ ಶಾ. ಶಕ ೧೪೩೬ (ಕ್ರಿ.ಶ. ೧೫೧೪).

೫) ***"ಶಾಕೇ ಚಂದ್ರರಸಾಮರೇಂದ್ರ ಗಣತೇ........"***
ಇಲ್ಲಿ ಚಂದ್ರ – ೧, ರಸ – ೬, ಅಮರೇಂದ್ರ –೧೪ ಇದನ್ನು ವಾಮಗತಿಯಲ್ಲಿ ಬರೆದರೆ ಶಾ. ಶಕೆ.೧೪೬೧ (ಕ್ರಿ.ಶ.೧೫೩೯).

೬) ***"ನಾಗಪರ್ವತವೇದೆಂದು ........."***
ನಾಗ–೮, ಪರ್ವತ–೭, ವೇದ–೪, ಇಂದು–೧, ಶಾ.ಶಕೆ ೧೪೭೮ (ಕ್ರಿ.ಶ.೧೫೫೬).

೭) ***"ಶಕಾಬ್ದೇ ಗೃಹಶರರಸಭೂಸಮ್ಮಿತೇ ನಾಳ ನೈಜ ಜ್ಯೇಷ್ಠೇ ತತ್ಕೃಷ್ಣಪಞ್ಚಮ್ಯಸಮಗುರುದಿನೇ"***
[ ಗ್ರ ]ಹ–೯, ಶರ–೫, ರಸ–೬, ಭೂ–೧, ಶಾ.ಶಕೆ. ೧೬೫೯, ನಳ ಸಂವತ್ಸರ, ನಿಜ ಜ್ಯೇಷ್ಠ ಬಹುಳ ಪಂಚಮಿ, ಅಸಮ ಗುರುದಿನೇ = ಗುರುವಾರ (ಕ್ರಿ.ಶ. ೧೭೩೬, ಜೂನ್ –೧೭).

೮) ***"ಶಕಾಬ್ದೇ ನಗನಿಧಿರಸಭೂಗಣ್ಣ್ಯಮಾನೇ ಜಯಾಖ್ಯೇ ದ್ವಾದಶ್ಯಾಂ ಶುಕ್ಲಪಕ್ಷೇ ನಭಸಿ ಗುರುದಿನೇ"***
ನಗ–೭, ನಿಧಿ–೯, ರಸ–೬, ಭೂ–೧, ಶಾ.ಶಕೆ. ೧೬೯೭, ಜಯ ಸಂವತ್ಸರ, ನಭಸೀ = ಶ್ರಾವಣ ಮಾಸ ಶುಕ್ಲ ದ್ವಾದಶೀ, ಗುರುವಾರ (ಕ್ರಿ.ಶ. ೧೭೭೪, ಆಗಸ್ಟ್ – ೧೮).

ಕ್ವಚಿತ್ತಾಗಿ **'ಕಟಪಯಾದಿ'** ಎಂಬ ಇನ್ನೊಂದು ತೆರನಾದ ಅಂಕ ನಿರ್ದೇಶನ ಪದ್ಧತಿಯೂ ಬಳಕೆಯಲ್ಲಿದ್ದಿತು.

**ಕ** ದಿಂದ **ಞ** ವರೆಗಿನ ಅಕ್ಷರಗಳಿಗೆ ಕ್ರಮವಾಗಿ ೧ ರಿಂದ ೦, ಹಾಗೆಯೇ **ಟ** ದಿಂದ **ನ** ವರೆಗೆ ಮತ್ತು **ಯ** ದಿಂದ **ಕ್ಷ** ವರೆಗೆ, **ಪ** ದಿಂದ **ಮ** ವರೆಗೆ ೧ ರಿಂದ ೫.

ಉದಾ: **"ಸಕವರ್ಷ ಮಧ್ಯ ಹಸಿನಯ ಇಶ್ವರ ಸಂವತ್ಸರದ ಪಾಲ್ಗುಣ.........."**[೧೮] [ಹ–೮, ಸಿ–೭, ನ–೦, ಯ–೧, ಶಕ ೧೦೭೮ ಎಂದು ಓದಿಕೊಳ್ಳಬೇಕು].

ಶಾಸನಗಳಲ್ಲಿ ವಡ್ಡವಾರ, ಸ್ಥಿರವಾರ, ಬೃಹವಾರ ಇತ್ಯಾದಿಗಳ ಉಲ್ಲೇಖಗಳು ಕಂಡುಬರುತ್ತದೆ. ಇಲ್ಲಿ ಬೃಹವಾರ ಎಂಬುದು ಬೃಹಸ್ಪತಿ ಅಂದರೆ ಗುರುವಾರ ಎಂಬುದು ನಿಸ್ಸಂಶಯ. ಸ್ಥಿರವಾರ ಎಂಬುದು ಶನಿವಾರವೆಂದು ದೃಢಪಟ್ಟಿದೆ. ಆದರೆ ರೈಸ್, ಫ್ಲೀಟ್ ಹಾಗೂ ಕೀಲ್‌ಹಾರ್ನ್ ಮೊದಲಾದ ವಿದ್ವಾಂಸರು ವಡ್ಡವಾರವನ್ನು ವಿಭಿನ್ನವಾಗಿ ಅರ್ಥೈಸಿರುವುದು ಕಂಡುಬರುತ್ತದೆ. ಕೊನೆಗೆ ವಡ್ಡವಾರವೆಂದರೆ, ಶನಿವಾರವೆಂದು ತೀರ್ಮಾನವಾದಂತೆ ಕಾಣುತ್ತಿದೆ. ಬೃಹತ್ ಎಂಬುದರ ಪ್ರಾಕೃತ ರೂಪ 'ವಡ್ಡ' ಬೃಹತ್‌ಕಥಾ = ವಡ್ಡಕಥೆ, ಹಾಗಾಗಿ ವಡ್ಡವಾರವೆಂಬುದು ಬಹುಮಟ್ಟಿಗೆ ಗುರುವಾರವೇ ಆಗಿರುತ್ತದೆ. ಕೆಲವೇ ಸಂದರ್ಭಗಳಲ್ಲಿ ಅದು ಶನಿವಾರವಾಗಿರುವುದುಂಟು.

ವ್ಯತಿಪಾತ[೧೯] ಸೂರ್ಯಗ್ರಹಣ, ಚಂದ್ರಗ್ರಹಣ ಹಾಗೂ ಉತ್ತರಾಯಣ ಸಂಕ್ರಾಂತಿ ಮುಂತಾದ ಪುಣ್ಯ ದಿನಗಳಂದು ದಾನದತ್ತಿಗಳನ್ನು ನೀಡಿರುವ ಸಂಗತಿ ಶಾಸನಗಳಿಂದ ತಿಳಿದುಬರುತ್ತದೆ. ಹೇಮಾದ್ರಿ, ಯಾಜ್ಞವಲ್ಕ್ಯ, ಭೃಗು, ಭರದ್ವಾಜರೇ ಮುಂತಾದ ಸ್ಮೃತಿಕಾರರು ಈ ದಿನಗಳಂದು ದಾನಮಾಡಿದರೆ ಅಗಣಿತ ಪುಣ್ಯಪ್ರಾಪ್ತವಾಗುವುದೆಂದು ತಮ್ಮ ಕೃತಿಗಳಾದ **ದಾನಖಂಡ, ವರಾಹ ಪುರಾಣ, ಯಾಜ್ಞವಲ್ಕ್ಯಸ್ಮೃತಿ** ಮುಂತಾದ ಸ್ಮೃತಿ ಪುರಾಣಾದಿಗಳಲ್ಲಿ ಪ್ರತಿಪಾದಿಸಿರುವುದು ಸರಿಯಷ್ಟೆ. ಹಾಗಾಗಿ ಅಂತಹ ಪುಣ್ಯ ಕಾಲಗಳಂದು ದಾನ ನೀಡುವುದು ಶ್ರೇಯಸ್ಕರವೆಂದು ಭಾವಿಸಿ ದಾನಿಗಳು ದಾನದತ್ತಿಗಳನ್ನು ನೀಡಿರುತ್ತಾರೆ. ಅಂತಹ ಶಾಸನಗಳಲ್ಲಿ ಉಕ್ತವಾಗಿರುವ ತೇದಿ ವಿವರಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಅನೇಕ ಶಾಸನಗಳಲ್ಲಿ ಉಲ್ಲೇಖಿತ ದಿನಗಳಂದು ವಾಸ್ತವವಾಗಿ ಗ್ರಹಣವಾಗಲೀ, ಸಂಕ್ರಾತಿ ಅಥವಾ ವ್ಯತಿಪಾತಗಳಾಗಲೀ ಉಂಟಾಗುವ ಸಾಧ್ಯತೆಗಳೇ ಇರುವುದಿಲ್ಲ, ಆದರೂ ಆ ದಿನಗಳನ್ನು ಪುಣ್ಯದಿನಗಳನ್ನಾಗಿ ಗ್ರಹಿಸಿ ಆ ದಿನಕ್ಕೆ ಗೌರವ ಸೂಚಕವಾಗಿ ಅವನ್ನು ಜೋಡಿಸಿ ಉಲ್ಲೇಖಿಸುವ ಪರಂಪರೆಯು ಇದ್ದಿತೆಂದು ತೋರುತ್ತದೆ. ಹಾಗಾಗಿ ಶಾಸನೋಕ್ತ ಎಷ್ಟೋ ಕಾಲಗಣನೆಯ ವಿವರಗಳು ಹೊಂದಣಿಕೆಯಾಗದೇ ಹೋಗುವುದು ಸಾಮಾನ್ಯವಾಗಿರುತ್ತದೆ. ಸುಮಾರು ಶೇ ೪೦ರಷ್ಟು ಕಾಲಗಣನಾ ಉಲ್ಲೇಖಗಳು ಹೊಂದಾಣಿಕೆಯಾಗದೆ ಅಸಮಗ್ರತೆ ಅವ್ಯವಸ್ಥೆಗಳನ್ನು ಕಾಣಬಹುದಾಗಿದೆ. ಪ್ರಾಯಶಃ ಈ ತೊಡಕುಗಳನ್ನು ಗಮನಿಸಿಯೇ ವಿದ್ವಾಂಸರಾದ ಡಾ. ಎ. ವೆಂಕಟಸುಬ್ಬಯ್ಯನವರು ಆ ತೊಡಕುಗಳಿಗೆ ಕಾರಣವೇನಿದ್ದರಬಹುದು ಎಂಬುದನ್ನು ಮೊದಲಬಾರಿಗೆ ಶೋಧಿಸಿ ಅವುಗಳನ್ನು ಸರಿಪಡಿಸುವ ಬಗೆಯನ್ನು ತೋರಿಸಿದರು. ಆದರೆ ಮುಂದೆ ಯಾರೂ ಆ ಕ್ರಮವನ್ನು ಅನುಸರಿಸಿದಂತೆ ತೋರುತ್ತಿಲ್ಲ. ಆಗ ಜ್ಯೋತಿರ್ವಿಜ್ಞಾನಕ್ಕೆ ಸಂಬಂಧಿಸಿದಂತೆ ಬಳಕೆಯಲ್ಲಿದ್ದ ಆರ್ಯ, ಬ್ರಹ್ಮ ಮತ್ತು ಸೂರ್ಯ ಮುಂತಾದ ಸಿದ್ಧಾಂತಗಳ ರೀತ್ಯ ಗಣಿತ–ಗುಣಿತಗಳನ್ನು ನಡೆಸಿದರೆ ಕಾಲಗಣನೆಯ ತೊಡಕುಗಳು ಪರಿಹಾರವಾಗಬಹುದೆಂದು ಅವರು ಭಾವಿಸಿ ಶಾಸನೋಕ್ತವಾದ ತೇದಿಯನ್ನು ಎಷ್ಟು ವಿಧಗಳಲ್ಲಿ ಅರ್ಥಯಿಸಬಹುದು ಹಾಗೂ ಶಕೆಯ ತೇದಿಗೆ ಗೊತ್ತು ಮಾಡುವ ಒಂದು ದಿನವನ್ನಲ್ಲದೆ ಎಷ್ಟು ಬೇರೆ ಬೇರೆ ದಿನಗಳನ್ನು ಸೂಚಿಸಬಹುದು ಎಂಬುದನ್ನು ಅವರು ಆ ಮೂಲಕ ಕಂಡುಕೊಂಡರು. ಆ ರೀತಿ ಮಾಡುವುದರಿಂದ ಕೀಲ್‌ಹಾರ್ನ್, ಫ್ಲೀಟ್, ಸ್ವಾಮಿಕಣ್ಣುಪಿಳ್ಳೆ ಈ ಮೊದಲಾದವರು ಅವ್ಯವಸ್ಥಿತವೆಂದು ಕರೆದಿರುವ ಶಾಸನ ತೇದಿಗಳ ಕ್ಲೇಶಗಳು ಪರಿಹಾರವಾಗುತ್ತವೆಯೆಂದು ಸ್ಪಷ್ಟಪಡಿಸಿದರು.

ರಾಜಕೀಯ ಸಾಂಸ್ಕೃತಿಕ ಇತಿಹಾಸದ ರಚನೆಯಲ್ಲಿ ಕಾಲಗಣನೆ ಬಹುಮುಖ್ಯವಾದ ಸಾಧನವಾಗಿದೆ. ಕರ್ನಾಟಕದಲ್ಲಿ ಕಾಲಗಣನೆಯನ್ನು ಕುರಿತು ಪ್ರತ್ಯೇಕವಾಗಿ ಯಾವುದೇ ಕೃತಿಗಳು ರಚಿತವಾಗಿಲ್ಲ. ಇಂದು ನಾವು ಸ್ವಾಮಿಕಣ್ಣು ಪಿಳ್ಳೆಯವರ *Indian Ephimeries* ಕೃತಿಯನ್ನು ವ್ಯಾಪಕವಾಗಿ ಬಳಸುತ್ತಿದ್ದರೂ ಎ. ವೆಂಕಟಸುಬ್ಬಯ್ಯ, ಎಸ್. ಶ್ರೀಕಂಠಶಾಸ್ತ್ರಿ, ಆರ್. ಶಾಮಾಶಾಸ್ತ್ರಿ, ರಾಬರ್ಟ್ ಸಿವೆಲ್, ಎಫ್. ಕೀಲ್‌ಹಾರ್ನ್, ಜೆ.ಎಫ್. ಫ್ಲೀಟ್, ಗೋವಿಂದ ಪೈ ಮುಂತಾದವರ ಬರಹಗಳನ್ನು ಬಳಸಿಕೊಂಡಿಲ್ಲ ಮತ್ತು ಬಳಸಿಕೊಳ್ಳುತ್ತಿಲ್ಲ. ಶಾಸನೋಕ್ತ ಕಾಲಗಣನೆಯ ಬಗೆಗೆ ಪ್ರಕಟವಾಗಿರುವ ಎ. ವೆಂಕಟಸುಬ್ಬಯ್ಯನವರ ಕೃತಿಯಂತೂ ಈ ಕ್ಷೇತ್ರದ ಮೈಲಿಗಲ್ಲು ಎಂದರೆ ತಪ್ಪಾಗದು. ಕರ್ನಾಟಕದಲ್ಲಿನ ಕಾಲಗಣನೆಯನ್ನು ಕುರಿತು ವಿವೇಚಿಸುವ

ಬರಹಗಳೆಂದು ಪ್ರಮುಖವಾದ ಕೆಲವನ್ನು ಆಯ್ದು ಕೆಳಗೆ ನೀಡಲಾಗಿದೆ ಈ ಕೆಳಗೆ ನೀಡಲಾಗಿರುವ ಕೆಲವು ಲೇಖನಗಳು ಮತ್ತು ಕೃತಿಗಳು ಕರ್ನಾಟಕದ ಕಾಲಗಣನೆಗೆ ನೇರವಾಗಿ ಸಂಬಂಧಪಟ್ಟಿಲ್ಲವಾದರೂ ಎಲ್ಲಾ ರೀತಿಯ ದೇಶಕಾಲಗಳಿಗೂ ಹೊಂದುವ ಕಾಲಗಣನೆಯ ಬಗೆಗಿನ ಸಾಮಾನ್ಯ ವಿವರಗಳನ್ನು ಒಳಕೊಂಡಿದೆ. ಇಂತಹ ಹಲವು ಬರಹಗಳು, *Epigraphia Indica*, *Indian Antiquary* ಮುಂತಾದ ಕಡೆಗಳಲ್ಲಿ ಬಹು ಸಂಖ್ಯೆಯಲ್ಲಿ ಪ್ರಕಟವಾಗಿವೆ.


೧. *A Note on the epoch and reckoing of the Saka Era* - J.F. Fleet, *Indian Antiquary*, Volume-17, 1888, pp.205-210.

೨. *Examination of Questions connected with the Vikrama Era* - F. Kielhorn, *Indian Antiquary* Volume-19, 1890, pp.20-40, 166-187, 354-374; *Indian Antiquary*, Volume-20, 1891, pp.124-142, 397-414.

೩. *Festal days of the Hindu Lunar Calendar* - F. Kielhorn, *Indian Antiquary*, Volume-26, 1897, pp.177-187.

೪. *Methods and tables for verifying Hindu Dates, Tithis, Eclipses, Nakashtras & Co* –H. Jakobi *Indian Antiquary*, Volume-17, 1888, pp.145-181.

೫. *On the dates of the Saka Era in Inscriptions* - F. Kielhorn, *Indian Antiquary* -Volume-23, 1894, pp.113-134, *Indian Antiquary* -Volume-24, 1895, pp.1-17, *Indian Antiquary* -Volume-24, 1895, pp.181-211, *Indian Antiquary* -Volume-25, 1896, pp.266-272, *Indian Antiquary* -Volume-25,1896, pp.289-294, *Indian Antiquary* - Volume-26, 1897, pp.146-153.

೬. *Selected Dates from the Epigraphia Carnatica* - F. Kielhorn, *Indian Antiquary*, Volume-26, 1897, pp.329-333.

೭. *Elements of South Indian Palaeography* - A.C. Burnell , London, Trubner & Co. -1878, Second, Improved Edition.

೮. *Some Saka Dates in Inscriptions* - A. Venkatasubbiah, N. Subramaniam & Co, Chamraja Mohalla, Mysore-1918.

೯. *Indian Epigraphy* - D.C. Sirkar , Motilal Banarasidas, New Delhi-1965, 1996.

೧೦. **ಪುರಾತತ್ತ್ವ ಶೋಧನೆ** – ಡಾ॥ ಎಸ್. ಶ್ರೀಕಂಠಶಾಸ್ತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು–೧೯೬೦, ೧೯೭೫.

೧೧. *Shalivahana and Saka Era* - G. S. Gai, Studies In Indian History and Culture, Shri Hari Prakashana, Dharawad -1992, pp.56-59.

೧೨. *Salivahana Era And Earliest Date* - ಡಾ॥ ಎಸ್. ಶ್ರೀಕಂಠಶಾಸ್ತ್ರಿ, Q.J.M.S 17-4, 1927, pp.334-337.

೧೩. *Salivahana Saka* - ಡಾ॥ ಎಸ್. ಶ್ರೀಕಂಠಶಾಸ್ತ್ರಿ, Q.J.M.S 18-3, 1928, pp.230-231.

೧೪. *Who is the founder of the Saka Era* - M. Govind Pai, *Indiana*, Rashtrakavi Govind Pai Samshodhana Kendra, Udupi-1997, pp.75-134.

೧೫. *Indian Ephimeries* - Swamikannu Pillai, Agam Kala Prakashan, Delhi-1982 (Volumes 1 To 6 Reprint).

Volume-1, Part-1 [General Principles And Tables].

Volume-1, Part-2 [Method of the Ephemeris, Illvstrations From South Indian Chronology, Ephemeris 700 A.D.-799 A.D].

Volume-2 [800 A.D.-999 A.D].

Volume-3 [1000 A.D-1199 A.D].

Volume-4 [1200 A.D-1399 A.D].

Volume-5 [1400 A.D-1599 A.D].

Volume-6 [1600 A.D-1799 A.D].

Volume-7 [1800 A.D-2000 A.D]. ಪ್ರ.ಮು.–೧೯೧೫ [ಮರುಮುದ್ರಣದ ಮಾಹಿತಿ ತಿಳಿದು ಬಂದಿಲ್ಲ].

೧೬. **ಗ್ರಂಥ ರಚನಾ ಕಾಲನಿರ್ಣಯ** – ಗರ್ಗೇಶ್ವರಿ ವೆಂಕಟಸುಬ್ಬಯ್ಯ, **ಶಾಸ್ತ್ರ ಕುತೂಹಲ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೨೦೦೩, ಪು.೧೧೬–೧೨೮.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧ *Karnatak Inscriptions*, Volume-2, Number-2, (Ed) R.S.Panchamukhi, Kannada Research Institute, Dharwad - 1951.

೨ *Indian Epigraphy* {Vol-1} - K.V. Ramesh, Sandeep Prakashan, Delhi - 1984, p.80.

೩ *Epigraphia Indica*, Volume-37, Part-1, pp.1-8.

೪ **ಕೆಲವು ಶಾಸನಗಳಲ್ಲಿ ಶಕವರ್ಷವನ್ನು ಆಲಂಕಾರಿಕವಾಗಿ ಹೇಳಲಾಗುತ್ತದೆ.**

೫ ಉತ್ತರಭಾರತದಲ್ಲಿ ಈಗಲೂ ಬಳಕೆಯಲ್ಲಿರುವ **ವಿಕ್ರಮಶಕೆ** ಗಮನಾರ್ಹವಾದುದು. ಅದು ಕ್ರಿ.ಪೂ. ೫೮ರಲ್ಲಿ ಪ್ರಾರಂಭವಾಯಿತು. ಇದನ್ನು ಸಿಥೋ–ಪಾರ್ಥಿಯನ್ ಶಕೆಯೆಂದು ಕರೆಯುತ್ತಾರೆ. ಕಾಲಾಂತರದಲ್ಲಿ ಮಾಳವಜನಾಂಗ ಸಿಥೋ–ಪಾರ್ಥಿಯನ್ನರ ಅಧೀನಕ್ಕೊಳಗಾದರು. ನಂತರದಲ್ಲಿ ಅವರು ರಾಜಾಸ್ಥಾನ. ಜನಪ್ರಸ್ಥಗಳಿಗೆ ಬಂದು ನೆಲೆಸಿದ್ದರು. ಅವರು ನೆಲೆಸಿದ ಭಾಗವೇ ಮಾಳವ ಎನಿಸಿಕೊಂಡಿತು. ಅವರು ಸಿಥೋಪಾರ್ಥಿಯನ್ನರ ಶಕೆಯನ್ನು 'ಕೃತ' ಎಂಬ ಹೆಸರನಿಂದ ಬಳಸುತ್ತಿದ್ದರು. ಗುಪ್ತ ಸಾಮ್ರಾಟ ಚಂದ್ರಗುಪ್ತ ವಿಕ್ರಮಾದಿತ್ಯನು ಮಾಳವವನ್ನು ಆಕ್ರಮಿಸಿಕೊಂಡು ಮಾಳವಾಧೀಶನೆನಿಸಿಕೊಂಡನು. ಉಜ್ಜಯಿನಿ ಅವನ ೨ನೆಯ ರಾಜಧಾನಿಯಾಯಿತು. ಈ ಶಕೆಯನ್ನು **'ಮಾಳವ ಶಕೆ'**/ **'ವಿಕ್ರಮ ಶಕೆ'** ಎಂದು ಕ್ರಿ.ಶ. ೮ನೆಯ ಶತಮಾನದ ನಂತರದ ಶಾಸನಗಳಲ್ಲಿ ಕರೆದಿರುವುದು ಕಂಡುಬರುತ್ತದೆ.

೬ *Aihole Inscription of Pulikesin - 2*, (Ed) F. Kielhorn, *Epigraphia Indica*, Volume-6, pp.1-12.

೭ **ಎ.ಕ X ಕೋಲಾರ ೮೨, ರೈಸ್ ಆವೃತ್ತಿ**

೮ ನೋಡಿ: **'ಶಾಸನಗಳಲ್ಲಿ ಸಂಕೇತ ಮತ್ತು ಸಂಕ್ಷೇಪಗಳು'** – ಪಿ.ವಿ.ಕೃಷ್ಣಮೂರ್ತಿ. ಎಸ್. ಗೀತಾ. **ಇತಿಹಾಸ ದರ್ಶನ** – ೧೬, ೨೦೦೦. ಪು.೧೭.

೯ **ಎ.ಕ.–೩, ನಂಜನಗೂಡು ೨೧೫, ಸುತ್ತೂರು, ಕ್ರಿ.ಶ. ೧೦೩೨ ಅಕ್ಟೋಬರ್ ೨೮.**

೧೦ ಬೃಹಸ್ಪತ್ಯಮಾನ (ಬಾರ್ಹಸ್ಪತ್ಯ) ದ ಬಗೆಗೆ ಹೆಚ್ಚಿನ ಮಾಹಿತಿಗೆ ಕೆಳಕಂಡ ಆಕರಗಳನ್ನು ನೋಡಿ:

೧) *Book of Indian Eras*-Alexander Cunningham , Culcutta-1883, pp.18-30.

೨) *Indian Epigraphy* - D.C. Sirkar , Motilal Banarasidas, New Delhi-1965, 1996.

೩) *The Twelve Year Cycle of Jupiter* - Shankar Balakrishna Dikshit, *Indian Antiquary* -17, 1888, pp.1-7:312-317.

೪) *The Sixty Year Cycle of Jupiter* - F. Kielhorn, *Indian Antiquary* - 18, 1889, pp.193-209 : 380-386.

೫) *A New System of The Sixty Year Cycle of Jupiter* - J.F.Fleet, *Indian Antiquary,* Volume-18, 1889, pp.221-224.

೧೧ ದಕ್ಷಿಣ ಭಾರತದಲ್ಲಿ ಇಂದಿಗೂ ಹೆಚ್ಚು ಪ್ರಚಲಿತವಿದೆ. ಕರ್ನಾಟಕದಲ್ಲಿ ಮಹಾಕೂಟದ ಮಂಗಳೀಶನ ಶಾಸನದಲ್ಲಿನ 'ಸಿದ್ಧಾರ್ಥಿ' ಸಂವತ್ಸರವೇ ಪ್ರಾಚೀನತಮವಾದುದು. ಸಾಮಾನ್ಯವಾಗಿ ಶಕವರ್ಷದೊಂದಿಗೆ ಉಲ್ಲೇಖವಾಗುವ ಈ ಬ್ರಾಹಸ್ಪತ್ಯ ಸಂವತ್ಸರಗಳನ್ನು ನಿರ್ಧರಿಸಿಕೊಳ್ಳಲು ಗತ ಶಕವರ್ಷಕ್ಕೆ ೧೨ನ್ನು ಕೂಡುವುದು, ಅದನ್ನು ೬೦ರಿಂದ ಭಾಗಿಸಿದಾಗ ಉಳಿಯುವ ಶೇಷ ಸಂಖ್ಯೆಯೇ ಸಂವತ್ಸರದ ಸಂಖ್ಯೆ. ಪ್ರಭವ ಒಂದನೆಯಾದಾದರೆ, ಸಿದ್ಧಾರ್ಥಿ ೫೩ನೆಯದು, ಕ್ಷಯ (ಅಕ್ಷಯ) ೬೦ನೆಯದು ಇತ್ಯಾದಿ.

೧೨ ಚಂದ್ರನ ಗತಿಯಿಂದ ಲೆಕ್ಕ ಹಾಕುವ ಸಂವತ್ಸರ ಗಣನೆಗೆ **ಚಾಂದ್ರಮಾನ**ವೆಂದು ಹೆಸರು. ಚಾಂದ್ರಮಾನ ಉಗಾದಿಯಂದು ಸಾಧಾರಣವಾಗಿ ಉತ್ತರಾಭಾದ್ರ, ರೇವತಿ,ಅಶ್ವಿನಿ, ಭರಣಿ ನಕ್ಷತ್ರಗಳಿರುತ್ತವೆ. ಚಂದ್ರನು ಸಾಧಾರಣವಾಗಿ ಕಡೆಯ ಈ ನಾಲ್ಕು ನಕ್ಷತ್ರಗಳಲ್ಲಿಗೆ ಬಂದಾಗ ಚಾಂದ್ರಮಾನ ಆರಂಭವಾಗುತ್ತದೆ [ಕೃತ್ತಿಕಾ ನಕ್ಷತ್ರವನ್ನು ಮೊದಲನೆಯ ನಕ್ಷತ್ರವೆಂದು ಪರಿಗಣಿಸಲಾಗುತ್ತದೆ, ವೇದದಲ್ಲಿಯೂ ಕೃತ್ತಿಕೆಯೇ ಮೊದಲನೆಯ ನಕ್ಷತ್ರವಾಗಿದೆ].

೧೩ ಸೂರ್ಯನ ಗತಿಯಿಂದ ಲೆಕ್ಕಹಾಕುವ ವರ್ಷಗಣನೆಗೆ **ಸೌರಮಾನ**ವೆಂದು ಹೆಸರು. ಮೇಷರಾಶಿಗೆ ಸೂರ್ಯನು ಪ್ರವೇಶ ಮಾಡುವ ದಿನದಂದು ಸೌರಮಾನ ಆರಂಭವಾಗುತ್ತದೆ.

೧೪ **ಎ.ಕ.೪,** ಪಿರಿಯಾಪಟ್ಟಣ ೭೭.

೧೫ **ಎ.ಕ.೫,** ಮೈಸೂರು ೨೬.

೧೬ **ಎ.ಕ.೬,** ಶ್ರೀರಂಗಪಟ್ಟಣ ೯೬.

೧೬ಅ ಇದರ ಶುದ್ಧರೂಪ **'ಸಮುದಂಬೋಧಿರನ್ಧ್ರೇಭ ಸಂಜ್ಞಾತ್ಮಕಮಾದಾಂಗೀರಂ'** ಎಂದಿರಬೇಕು. ಸಮುದಂಬೋಧಿ ಶಬ್ದವನ್ನು ೭ ಎಂದು ಅರ್ಥೈಸಿ ಶಕ .೮೯೭ ಎಂದು ಪ್ರಶ್ನಾರ್ಥಕ ಚಿಹ್ನೆ ಹಾಕಲಾಗಿದೆ. ನೋಡಿ: ಹಂಪಿ **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೨ [ಕೊಪ್ಪಳ ಜಿಲ್ಲೆ] ಸಂಖ್ಯೆ–೧೦೧, ಪುಟ ೯೧.

೧೭ **ಎ.ಕ.** ೬, ಪಾಂಡವಪುರ ೨೬.

೧೮ **ಎ.ಕ.೩.** ನಂಜನಗೂಡು ೨೪೩.

೧೯ ವ್ಯತೀಪಾತವು ೨೭ ಯೋಗಗಳಲ್ಲಿ ಒಂದಾಗಿದೆ. ಇದು ಯಾವ ದಿನಗಳಲ್ಲಾದರೂ ಬರಬಹುದು. ಆದರೆ ಸಂಕ್ರಮಣ, ಗ್ರಹಣ, ಅಮಾವಾಸ್ಯೆ, ಹುಣ್ಣಿಮೆ ಮುಂತಾದ ದಿನಗಳಲ್ಲಿ ಬಂದರೆ ಅದು ಪರ್ವದಿನವೆನಿಸುವುದು. ಈ ದಿನಗಳಲ್ಲಿ ನಡೆಸುವ ಜಪ, ತಪ, ದಾನ, ತರ್ಪಣಾದಿಗಳು ಅತ್ಯಂತ ಫಲಪ್ರದವಾದವುಗಳೆಂದು ನಂಬಿಕೆ. ವ್ಯತೀಪಾತವೆಂದರೆ ಉಲ್ಕಾಪಾತವೆಂಬ ಅರ್ಥವೂ ಉಂಟು.

# ಶಾಸನಗಳಲ್ಲಿ ಒಪ್ಪ

– ಡಾ॥ ಎನ್. ನಂದೀಶ್ವರ*

'ಒಪ್ಪ' ಪದವು ಹೆಚ್ಚು ಬಳಕೆಯಲ್ಲಿಲ್ಲದ ಪದವಾಗಿದೆ. ಕೋಶಗಳಲ್ಲಿ 'ಒಪ್ಪ' ಎಂಬ ಪದಕ್ಕೆ ಸಮ್ಮತಿ, ಒಪ್ಪಿಗೆ, ಸಹಿ, ರುಜು, ಒಪ್ಪುವಂತಹ ಮಾತು, ಅಂಗೀಕರಿಸುವಂತಹ ಮಾತು ಎಂಬರ್ಥಗಳಿವೆ. ಕನ್ನಡ : ಒಪ್ಪ = ಸ್ವಹಸ್ತಾಂಕಿತ, ರುಜು. ಪತ್ರದಲ್ಲಿ ಉಕ್ತವಾಗಿರುವ ವಿಷಯಕ್ಕೆ ತನ್ನ ಒಪ್ಪಿಗೆಯಿದೆ ಎಂದು ಸೂಚಿಸಲು ಹಾಕಿರುವ ಸ್ವಹಸ್ತಾಂಕಿತವೇ 'ಒಪ್ಪು' ಅಥವಾ ಒಪ್ಪ; ತಮಿಳು : ಒಪ್ಪಂ = ಕೈಯೊಪ್ಪಂ; ಮಲೆಯಾಳ : ಒಪ್ಪು = ಕೈಯೊಪ್ಪು ; ತೊದ : ಕೊಯುಪಮ್; ತುಳು: ಕಯ್ಯೊಪ್ಪಿಗೆ ಎಂಬ ಅರ್ಥಗಳಿವೆ. ಈ ಎಲ್ಲ ಮಾತುಗಳಿಗೆ 'ರುಜು' ಎಂದೇ ಅರ್ಥ. 'ಒಪ್ಪು' ಎಂಬ ಧಾತುವಿಗೆ ಹೆಚ್ಚು ಕಡಿಮೆ ಎಲ್ಲ ದ್ರಾವಿಡ ಭಾಷೆಗಳಲ್ಲಿಯೂ ಸಮ್ಮತಿಸು ಎಂಬ ಅರ್ಥವಿದೆ.

'ಸಹಿ' ಲಿಪಿ ಬಳಕೆಯ ಇನ್ನೊಂದು ರೂಪವಾಗಿರುತ್ತದೆ. ಹಿಂದಿನ ಕಾಲದಲ್ಲಿ ಅನಕ್ಷರಸ್ಥರು ನೇಗಿಲ ಚಿತ್ರ ಬರೆಯುವ ಮೂಲಕ ಅಥವಾ ಅಡ್ಡಗೆರೆ, ಉದ್ದ ಗೆರೆಗಳನ್ನು ಸೂಚಿಸುವ ಮೂಲಕ ತಮ್ಮ ಸಹಿಯನ್ನು ಹಾಕುತ್ತಿದ್ದರು. ಇದನ್ನು ಲಿಪಿಕಾರ ಇಂತಹವರ ಸಹಿಯೆಂದು ಗುರುತಿಸಿ ಬರೆಯುತ್ತಿದ್ದ.[೧]

ರಾಜನು ಕೊಟ್ಟ ಶಾಸನಗಳಲ್ಲಿ ಅದರ ಕಾಲ ಹಾಗೂ ಅವನ ಸ್ವಹಸ್ತದ ಅಂಕಿತವಿರಬೇಕೆಂದು 'ಯಾಜ್ಞವಲ್ಕ್ಯ ಸ್ಮೃತಿ'ಯಲ್ಲಿ ವಿಧಿಸಲಾಗಿದೆ. "ಸ್ವಹಸ್ತ ಕಾಲ ಸಂಪನ್ನಂ ಶಾಸನಂ ಕಾರಯೇತ್ ಸ್ಥಿರಂ".[೨] ಕರ್ನಾಟಕದಲ್ಲಿ ಹತ್ತನೆಯ ಶತಮಾನದ ತನಕ ಯಾವ ತಾಮ್ರಪಟದಲ್ಲಾಗಲೀ ಶಿಲಾಶಾಸನದಲ್ಲಾಗಲೀ ರಾಜನ ಹಸ್ತಾಂಕಿತಗಳು ಕಂಡುಬರುವುದಿಲ್ಲ. ಉತ್ತರ ಭಾರತದಲ್ಲಾದರೋ ಏಳನೆಯ ಶತಮಾನದ ಹರ್ಷವರ್ಧನನ ಸ್ವಹಸ್ತಾಕ್ಷರಗಳು ದೊರೆಯುತ್ತವೆ. ಹರ್ಷನು ದೊಡ್ಡ ಕವಿಯಷ್ಟೇ ಅಲ್ಲದೆ ಉತ್ತಮ ಅಲಂಕಾರ ಲಿಪಿಕಾರನೂ (Calligraphist) ಆಗಿದ್ದನು. ಮಾಲ್‌ಖೇಡಿನ ರಾಷ್ಟ್ರಕೂಟರ ಶಾಖೆಯೊಂದು ಗುಜರಾತಿನಲ್ಲಿ ಒಂಬತ್ತನೆಯ ಶತಮಾನದಿಂದ ರಾಜ್ಯವಾಳಲಾರಂಭಿಸಿತು. ರಾಷ್ಟ್ರಕೂಟರಿಗೆ ಅಧೀನರಾಗಿದ್ದ ಅವರ ನಾಗರೀ ಲಿಪಿಯಲ್ಲಿರುವ ಹಲವು ತಾಮ್ರಪಟಗಳು ದೊರಕಿವೆ, ಕೆಲವು ಆ ಕಾಲದಲ್ಲಿ ಗುಜರಾತಿನಲ್ಲಿ ಪ್ರಚಲಿತವಾಗಿದ್ದ ಬೇರೆ ಲಿಪಿಗಳಲ್ಲೂ ಇವೆ. ಭಾಷೆ ಮಾತ್ರ ಸಂಸ್ಕೃತ. ಆದರೂ ತಾಮ್ರಪಟಗಳನ್ನು ನೀಡಿದ ರಾಜರ ಸ್ವಹಸ್ತದ ಅಂಕಿತವು ಮಾತ್ರ ಕನ್ನಡಾಕ್ಷರಗಳಲ್ಲಿದೆ. 'ಸ್ವಹಸ್ತೋಯಂ ಮಮ ಶ್ರೀಕರ್ಕರಾಜಸ್ಯ ಶ್ರೀಮದಿಂದ್ರರಾಜಸುತಸ್ಯ', 'ಮತಂ ಮಮ ಶ್ರೀ ಧ್ರುವರಾಜ ದೇವಸ್ಯ', 'ಶ್ರೀ ಕರ್ಕರಾಜ ಸುತಸ್ಯ ಯದುಪರಿ ಲಿಖಿತಂ' ಇತ್ಯಾದಿ. ರಾಷ್ಟ್ರಕೂಟ ದೊರೆಗಳ ಮನೆಯ ಮಾತು ಕನ್ನಡವಾದ್ದರಿಂದ ಅವರು ಗುಜರಾತಿನಲ್ಲಿದ್ದರೂ, ಕನ್ನಡಾಕ್ಷರಗಳಲ್ಲೇ ರುಜು ಹಾಕುತ್ತಿದ್ದರು.[೩]

ಶಿಲಾ ಶಾಸನಗಳಲ್ಲಿ, ತಾಮ್ರಪಟಗಳಲ್ಲಿ ರಾಜರ ಸ್ವಹಸ್ತಾಂಕಿತವಿರುವ ಸಂಪ್ರದಾಯವು ಉತ್ತರ ಭಾರತದಲ್ಲಿದ್ದರೂ, ಕನ್ನಡ ರಾಜರೇ ಬೇರೆ ಪ್ರಾಂತಗಳಲ್ಲಿ ಸ್ವ ಹಸ್ತಾಂಕಿತ ಹಾಕಿದ್ದರೂ, ಹನ್ನೊಂದನೇ ಶತಮಾನದ ವಿಜ್ಞಾನೇಶ್ವರನು ಯಾಜ್ಞವಲ್ಕ್ಯನ 'ಸ್ವಹಸ್ತಕಾಲ ಸಂಪನ್ನಂ' ಎಂಬ ಮಾತಿಗೆ 'ಸ್ವಹಸ್ತೇನ ಸ್ವಹಸ್ತ ಲಿಖಿತೇನ ಮತಂ ಮೇ ಅಮುಕ ನಾಮ್ನಃ ಅಮುಖ ಪುತ್ರಸ್ಯ ಯದತ್ರೋಪತಿ ಲೇಖಿತಮಿತ್ಯನೇನ ಸಂಪನ್ನಂ ಯುಕ್ತಂ' ಎಂದು ವ್ಯಾಖ್ಯಾನಿಸಿದ್ದರೂ ಕರ್ನಾಟಕದ ಯಾವ ಪ್ರಾಚೀನ ಶಿಲಾಶಾಸನದಲ್ಲಾಗಲೀ ತಾಮ್ರಪಟದಲ್ಲಾಗಲೀ ರಾಜರ ಸ್ವಹಸ್ತಾಂಕಿತಗಳು ಸಿಕ್ಕಿಲ್ಲ.

ಶ್ರವಣಬೆಳಗೊಳದಲ್ಲಿ ಸಿಕ್ಕಿರುವ 'ಶ್ರೀಕವಿರತ್ನ' ಎಂಬ ರತ್ನನ ರುಜುವೂ, ಬೇಲೂರಿನ ಕೇಶವ ದೇವಾಲಯದ ಮದನಿಕಾ ವಿಗ್ರಹಗಳ ಪೀಠಗಳ ಮೇಲೆ ಶಿಲ್ಪಿಗಳೇ ಕೊರೆದುಕೊಂಡಿರುವ ಅವರ ಹೆಸರುಗಳೂ ಸ್ವಹಸ್ತಾಂಕಿತಗಳೇ ಆದರೂ ಅವುಗಳನ್ನು ಒಪ್ಪಿಗಳೆಂದು ಕರೆಯಲು ಸಾಧ್ಯವಿಲ್ಲ. ಕೆಲವು ಶಾಸನಗಳಲ್ಲಿ 'ಲಾಂಛಿತ' ಎಂಬ ಮಾತು ಬಂದಿದೆ. ಇದು ವಿಶೇಷವಾಗಿ ಒರಿಸ್ಸ-ಆಂಧ್ರಗಳ ಗಡಿಯಲ್ಲಿರುವ ಗಂಜಂ-ಶ್ರೀಕಾಕುಳಂ ಪ್ರಾಂತದ ಶಾಸನಗಳಲ್ಲಿ ಕಂಡುಬರುತ್ತದೆ.

---

* ಪ್ರಾಂಶುಪಾಲರು, ಎಸ್.ಎಂ.ಆರ್. ಪಿ.ಯು. ಕಾಲೇಜ್ ಕಳ್ಳಂಬೆಳ್ಳ, ಸಿರಾ ತಾಲ್ಲೂಕು, ತುಮಕೂರು.

ಉದಾಹರಣೆಗೆ ಸ್ವಲ್ಪವೇಲುರ ದಾಖಲೆಯಲ್ಲಿ 'ಮಹಾದೇವಿ ಶ್ರೀನಿವಾಸ ಭಟ್ಟಾರಿಕೆಯಿಂದ ಲಾಂಛಿತ'ವೆಂದಿದೆ. ಮೂಲ ದಾಖಲೆಯ ಮೇಲೆ ರಾಜಲಾಂಛನವುಳ್ಳ ಮುದ್ರೆಯನ್ನೊತ್ತುವ ಕ್ರಿಯೆಯನ್ನು ಇದು ಸೂಚಿಸುತ್ತದೆ. ತಾಮ್ರಪಟಗಳಿಗೆ ಲಗತ್ತಾಗುತ್ತಿದ್ದುದು ಈ ಮುದ್ರೆಯ ಲೋಹಾಕೃತಿಯೇ.

ಪೂರ್ವಭಾರತದ ಕೆಲವು ಮಧ್ಯಕಾಲೀನ ಶಾಸನಗಳಲ್ಲಿ 'ಶ್ರೀ–ನಿ', 'ಸ್ರೀ–ನಿ ಮಹಾಸಾ–ನಿ', 'ಶ್ರೀನಿಮಹಾಸಾಂ–ಕರಣ–ನಿ' ಮುಂತಾದ ಸಂಕ್ಷೇಪಗಳು ಕಂಡುಬರುತ್ತವೆ. ಇಲ್ಲಿ 'ನಿ' ಎಂದರೆ 'ನಿರುದ್ಧ' (Registered) ಎಂದರ್ಥ. ನಿರೀಕ್ಷಿತ (ನೋಡಿ ಒಪ್ಪಿಗೆ ಕೊಟ್ಟಿದೆ) ಎಂದೂ ಆಗಬಹುದು. 'ಶ್ರೀ' ಎಂಬುದು 'ಶ್ರೀಹಸ್ತ' ಅಥವಾ 'ಶ್ರೀ ಚರಣ' (ಅರ್ಥಾತ್ ರಾಜ) ಎಂಬುದರ ಸಂಕ್ಷೇಪ. 'ಮಹಾಸಾ' ಅಥವಾ 'ಮಹಾಸಾಂ' ಎಂಬುದು 'ಮಹಾಸಾಂಧಿವಿಗ್ರಹಿಕ'ನನ್ನೂ, 'ಮಹಾಸಾಂ ಕರಣ' ಎಂಬುದು 'ಮಹಾಸಾಂಧಿವಿಗ್ರಾಧಿಕರಣ'ನನ್ನೂ ಸೂಚಿಸುತ್ತದೆ. ಇತರ ಅಧಿಕಾರಿಗಳ ಪದನಾಮೆಗಳೂ ಇಂಥ ದಾಖಲೆಗಳಲ್ಲಿ ಉಕ್ತವಾಗಿರುವುದುಂಟು. 'ಶ್ರೀ ಹಸ್ತ ನಿರೀಕ್ಷಿತಂ ತದನು ಮಹಾಕ್ಷ ಪಟಲಿಕ ನಿರೀಕ್ಷತಂ' ಎಂಬ ವಾಕ್ಯವೂ ಒಮ್ಮೊಮ್ಮೆ ಇರುವುದುಂಟು; 'ದೊರೆಯೂ ಅನಂತರ ಮಹಾಕ್ಷ ಪಟಲಿಕನೂ ನೋಡಿದ್ದಾರೆ' ಎಂಬುದು ಇದರ ಅರ್ಥ.

ತಾಮ್ರಶಾಸನಗಳಲ್ಲಿ ರಾಷ್ಟ್ರಕೂಟರ ಧ್ರುವ, ಹರ್ಷವರ್ಧನ, ಹೊಯ್ಸಳ ನರಸಿಂಹನ ಸಹಿಗಳು ಕಂಡುಬರುತ್ತವೆ. ಇಲ್ಲೆಲ್ಲಾ ಕನ್ನಡ ಲಿಪಿಯನ್ನು ಬಳಸಲಾಗಿದೆ.

ಕ್ರಿ.ಶ. ೧೦೮೩ರ ಮೇಮಲವಾಡದ ಕನ್ನಡ ಶಾಸನದ ಕೊನೆಯಲ್ಲಿ 'ಶ್ರೀಮನ್ಮಹಾಮಂಡಳೇಶ್ವರಂ ರಾಜಾದಿತ್ಯರಸರ ಸ್ವಹಸ್ತಲಿಖಿತಂ' ಎಂದಿದೆ.[5] ಹನ್ನೆರಡನೇ ಶತಮಾನದಲ್ಲಿ ಪ್ರಾರಂಭದಲ್ಲಿ (ಕ್ರಿ.ಶ. ೧೧೧೭ ಮಾರ್ಚ್ ೧೬) ಚನ್ನರಾಯಪಟ್ಟಣ ೧೪೨ರ ಹೊಯ್ಸಳ ಬಲ್ಲಾಳನ ಕಲ್ಲಿನ ಶಾಸನದಲ್ಲಿ,[6] 'ಸಾಸನಮನೆಂಬ ಪಾತಕನಾ.... ಹೌರವಕ್ಕೆ ಗಳಗಳನಿಳಿಗುಂ ಶ್ರೀ ಶಿಫದ' ಎಂಬ ರುಜು ಇದೆ. ಹನ್ನೆರಡನೇ ಶತಮಾನದ ಹಾಸನ ಜಿಲ್ಲೆಯ ಅರಸೀಕೆರೆ ೯೭ರ ಶಾಸನದಲ್ಲಿ[7] 'ಶ್ರೀ ಕಲಿನಾಥ, ಶ್ರೀ ಮಳೇಸ್ವರ, ಶ್ರೀ ಗೋಜೇಶ್ವರ, ಶ್ರೀ ಕಮಟೇಶ್ವರ, ಶ್ರೀ ಮೇಳೇಸ್ವರ, ಶ್ರೀ ರಾಮನಾಥ, ಶ್ರೀ ಬಿಲೇಶ್ವರ, ಶ್ರೀ ಮಾಚೇಶ್ವರ' ಎಂಬ ಒಪ್ಪಗಳ ಹೆಸರು ಕಂಡುಬರುತ್ತವೆ. ಹೊಯ್ಸಳ ೨ನೆಯ ಬಲ್ಲಾಳನ (ಕ್ರಿ.ಶ. ೧೧೯೦) ಹಾಸನ ಜಿಲ್ಲೆಯ ಅರಸೀಕೆರೆ ೧೦ರ ಶಾಸನವು,[8] 'ಹರಿಹರದೇವನ ವಪಿತ ಕಾಳವ ಕಡುಣಿ' ಎಂಬುದಾಗಿ ದಾಖಲಿಸಿದೆ.

ಹದಿಮೂರನೆಯ ಶತಮಾನದ ಶಾಸನಗಳಲ್ಲಿ ಶ್ರೀ ಸೋಮನಾಥ[9], ಶ್ರೀ ಮಹಾಲಕ್ಷ್ಮೀ, ಶ್ರೀ ಭೂಥಸಾಥ[10], ಶ್ರೀ ಚೈತ್ಯನಾರಾಯಣ, ಶ್ರೀ ಜೈತೇಸ್ವರ, ನಾರಾಯಣದೇವ[11], ಶ್ರೀ ವೀರನರಸಿಂಹದೇವಸ್ಯ[12], ಶ್ರೀನರಸಿಂಹ[13], ಶ್ರೀಮಾಕ್ಕಂಡೇಸ್ವರ[14], ಶ್ರೀ ವಿಸ್ವೇಸರ, ಶ್ರೀ ಕಂಬೇಶ್ವರ, ಶ್ರೀ ಮಲ್ಲಿಕಾರ್ಜುನ[15], ಶ್ರೀ ಚನ್ನಕೇಶವ[16], ಶ್ರೀ ಅಲ್ಲಾಳನಾಥ, ಶ್ರೀ ಯಲ್ಲಾಳನಾಥ[17], ಶ್ರೀ ಸೋಮೇಶ್ವರ[18], ಶ್ರೀ ಜಗತೇಶ್ವರ, ಶ್ರೀ ಸೇನೇಸ್ವರ, ಶ್ರೀ ಕಲ್ಲಿನಾಥ, ಶ್ರೀ ಬೆನಕ, ಶ್ರೀ ಹರಿಹರ, ಶ್ರೀ ಬಟ್ಟೇಶ್ವರ, ಶ್ರೀ ಮಾಚೇಶ್ವರ, ಶ್ರೀ ಚುಂಗನಾಥ, ಶ್ರೀ ರಾಮ[18], ಶ್ರೀ ಸಪ್ತನಾಥ, ಶ್ರೀ ವಿಶ್ವನಾಥ[19], ಶ್ರೀ ವೇದೇಶ್ವರ[20], ನರಸಿಂಹ[21], ಹೊಯ್ಸಣೇಶ್ವರ[22], ಶ್ರೀ ಚೆನ್ನಕೇಶವ[23], ಶ್ರೀ ಪ್ರಸಂನಕೇಸವರ[24] ದೇವರ ಹೆಸರಿನ ಒಪ್ಪಗಳು, ಶ್ರೀ ವೀರಬಲ್ಲಾಳ, ಶ್ರೀ ವೀರನರಸಿಂಹ[25], ವೀರಸೋಮೇಶ್ವರ[26], ಶ್ರೀ ಹರಹರ[27], ದಾಂಸಣ್ಣ, ಗೋಪಯ್ಯ[28], ಪೆರುಮಾಳೆ ದೇವದಂಣ್ನಾಯ್ಕರ ಶ್ರೀಹಸ್ತದ ವೊಪ್ಪು[29], ಚಿಕ್ಕಕೇತಯ್ಯ ದಂಡನಾಯಕ ಶ್ರೀ ಹಸ್ತದ ವೊಪ್ಪು[30], ನಿಂಗೆಯ ದಂಣಾಯಕರ ವೊಪ್ಪು[31], ಕಲ್ಲಯ್ಯ, ಶ್ರೀ ಅಂಕನಾಥ[32], ಕಾವಂಣ್ನ, ಚೂಡೆಯನ ಮಗ ದೇವಣ್ನ[33], ಬಖಿಚಣ್ನ, ಅಂಕಣ್ನ, ಮಾಯಣ್ನ[34], ಪೂಜಾರಿ ಕುಂಟ ಬೊಂಮಯ್ಯನ ಮಗ ಬಾಚಯ್ಯ ಬೋಗಾರ ಅಂಮಿ ಸೆಟ್ಟಿಯರು[35], ದೇವಪಿಳ್ಳೆಯಣ್ನಂಗಳ ಮಗ ಸಿದ್ದಂಣ್ನ[36], ಶ್ರೀ ವೇದೇಶ್ವರ[37], ನಿಂಗೆಯ ದಂಡಣಾಯಕ, ಶ್ರೀ ಬೈರವ[38], ವೀರಸೋಮೇಶ್ವರ[39], ಶ್ರೀ ಸಿದ್ದನಾಥ, ಶ್ರೀ ಗೋಪಿನಾಥ, ಶ್ರೀ ಮಲ್ಲಿನಾಥ[40] ಎಂಬ ವ್ಯಕ್ತಿಗಳ ಹೆಸರಿನಲ್ಲಿ ಒಪ್ಪಗಳು; ಗವುಡಗಳ ಒಪ್ಪ[41], ಊರ ವೊಪ್ಪ[42], ನಾಡ ವೊಪ್ಪ[43], ಹದಿನಾಲ್ಕು ನಾಡ ಸಮಸ್ತ ಮಹಾಪ್ರಭು ಗೌಡಗಳೊಪ್ಪ[44], ಮಹಾಜನಂಗಳ ಹಳ್ಳಿಗಳ ವೊಪ್ಪ[45]ಗಳೂ ಕಂಡುಬರುತ್ತವೆ.

ಹದಿನಾಲ್ಕನೇ ಶತಮಾನದ ಶಾಸನಗಳಲ್ಲಿ ಶ್ರೀ ಚನ್ನಕೇಶವ[46], ಶ್ರೀ ಹರಿಹರ[47], ಪ್ರಸನ್ನಕೇಶವ[48], ಶ್ರೀ ನಾರಾಯಣ, ಶ್ರೀ ನರಸಿಂಹ[49], ಶ್ರೀ ವಜ್ರೇಶ್ವರ ದೇವರ ಹೆಸರಿನಲ್ಲಿ ಒಪ್ಪ[50]ಗಳು ಕಂಡುಬರುತ್ತವೆ. ಹದಿನಾಲ್ಕನೇ ಶತಮಾನದ ಅಂದರೆ, ಕ್ರಿ.ಶ. ೧೩೭೮ರ ವಿಜಯನಗರ ತಾಮ್ರ ಶಾಸನಗಳಲ್ಲಿ ಹಂಪೆಯ ಅಧಿದೈವ 'ಶ್ರೀ ವಿರೂಪಾಕ್ಷ'[51] ಒಪ್ಪ ಮೊದಲಿಗೆ

ಕಂಡುಬರುತ್ತದೆ. ನಂತರ ಈ ಮನೆತನದ ಬಹಳಷ್ಟು ತಾಮ್ರ ಶಾಸನಗಳಲ್ಲಿ ಹಂಪೆಯ ಅಧಿದೈವ 'ಶ್ರೀ ವಿರೂಪಾಕ್ಷ[೫೨]' ದೇವರ ಹೆಸರಿನಲ್ಲಿ ಹಾಗೂ 'ಶ್ರೀ ವೆಂಕಟಾದ್ರಿ'[೫೩] ದೇವರ ಹೆಸರಿನಲ್ಲಿ ಒಪ್ಪಗಳು ಕಂಡುಬರುತ್ತವೆ. ವೀರಬಲ್ಲಾಳ ರಾಜನ ಹೆಸರಿನಲ್ಲಿ[೫೪] ಶ್ರೀ ಹಸ್ತದ ವೊಪ್ಪ[೫೫] ಹಾಗೂ ಮಾದರಸ[೫೬], ವಿಶ್ವನಾಥ, ಶ್ರೀ ಪ್ರತಾಪಹರಿಹರ[೫೭], ಮಾದಿಗಿ ದೇವ ದಂಡನಾಯಕರ ಸ್ವಹಸ್ತದ ವೊಪ್ಪ[೫೮], ನೀಲಕಂಠ[೫೯], ಶ್ರೀ ಅಣಿಲೇಶ್ವರ[೬೦], ಶ್ರೀ ಅಲ್ಲಾಳನಾಥ[೬೧], ಮಾದಜಿಯ, ಮಹಾದೇವ, ಶ್ರೀ ಸಿವನಂಕಕಾರ[೬೨], ವೀರಪ್ಪ[೬೩], ನಾಚಪ್ಪದೇವ[೬೪], ಮಲ್ಲಪ[೬೫], ಶ್ರೀ ಶಿವನಂಕಾರ[೬೬], ಗೋಪಿನಾಥ[೬೭], ಸೋಮನಾಥ[೬೮] ವ್ಯಕ್ತಿಗಳ ಹೆಸರಿನಲ್ಲಿ ಒಪ್ಪಗಳೂ, ಸಮಸ್ತ ಬಾಣಿಗರ ಒಪ್ಪ[೬೯], ಹುಲಿಯ ಕೆರೆಯ ಮಂಚೆಗವಡನ ಒಪ್ಪ, ಮಾಲಗಾರನಹಳಿಯ ಚಲುಡೆ ಗಲುಡನ ಒಪ್ಪ[೭೦], ಶ್ರೀ ಬಯಿರಮೇಶ್ವರ ದೇವರು ಹೊಣೆಗಾರರ ಒಪ್ಪ[೭೧], ಮಾನಿಸ ಹಾಸನ ಮಾದವೂರ ವೊಪ್ಪ[೭೨], ಊರ ವೊಪ್ಪ[೭೩], ವ್ರಿತ್ತಿವಂತರ ಸ್ವಹಸ್ತದ ವೊಪ್ಪ[೭೪], ವೈಷ್ಣವ ಮಹಾಜನಂಗಳೊಪ್ಪ[೭೫], ಬನದ ಚವುಡೇಶ್ವರಿ ನಾಡಿನ ವೊಪ್ಪ[೭೬], ಗವುಡಗಳ ವೊಪ್ಪ[೭೭] ಮುಂತಾದವುಗಳಲ್ಲಿ ಕಂಡುಬರುತ್ತವೆ.

ಹದಿನೈದನೇ ಶತಮಾನದ ಶಾಸನಗಳಲ್ಲಿ ಶ್ರೀ ಮಲ್ಲಿಕಾರ್ಜುನ[೭೮], ಶ್ರೀ ವಿರೂಪಾಕ್ಷ[೭೯], ಅಣಿಲೇಶ್ವರ[೮೦], ಚಲುಡೇಶ್ವರಿ ದೇವಿ[೮೧], ಶ್ರೀ ಮಯಿಲಾರದೇವ[೮೨], ಶ್ರೀ ಕದಿಯ ದೇವರು[೮೩], ಶ್ರೀ ರಂಗನಾಥ[೮೪] ದೇವರ ಹೆಸರಿನಲ್ಲೂ, ವರದಣ್ಣ ಸುಹಸ್ತ[೮೫], ಬೊಮಣ ಹೆಗ್ಗಡೆ, ಚಿಕ್ಕಂಣ ಹೆಗ್ಗಡೆ[೮೬], ಎಕ್ಕನಾಥ, ಶ್ರೀ ಮಹಾಲಕ್ಷ್ಮೀ[೮೭], ಸಂಕಂಣನ ಬರಹ, ಸಿದ್ದನ ಬರಹ, ಕೋಟಿನಾಥ[೮೮], ಸಂಕರದೇವ[೮೯], ನಾಗಂಣ[೯೦], ತಿಪ್ಪಸೆಟ್ಟಿ[೯೧], ತಿರುಮಲೆಯಪ್ಪ[೯೨], ಅಲ್ಲಪನಾಯಕರ ವೊಪ್ಪ[೯೩], ಸಿರಿಯ ಗವುಡನ ಮಗ ನಾಜಿಯ್ಯನ ಒಪ್ಪ[೯೪], ಶ್ರೀ ಮಹಾದೇವ[೯೫], ಶ್ರೀ ಗುಂಮ್ಮನಾಥ, ಶ್ರೀ ವಿಶ್ವನಾಥ[೯೬], ಶ್ರೀ ಶಾನ್ತಿನಾಥ, ಶ್ರೀ ಸೋಮನಾಥ[೯೭], ತಾಯೂರ ನಾಡ ಪ್ರಭುಗಳ ವೊಪ್ಪ, ವಾಸುದೇರು ಉಂಮತ್ತೂರು ಗವುಡಗಳ ವೊಪ್ಪಗಳು[೯೮], ಮಹಾಜನಂಗಳ ವೊಪ್ಪ[೯೯], ಗವುಗಡಗಳ ವೊಪ್ಪಗಳು[೧೦೦] ಕಂಡುಬರುತ್ತವೆ.

ಹದಿನಾರನೇ ಶತಮಾನದ ಶಾಸನಗಳಲ್ಲಿ ಶ್ರೀ ವಿರೂಪಾಕ್ಷ[೧೦೧], ಶ್ರೀ ಕಳಶನಾಥ[೧೦೨], ಶ್ರೀ ಮಹಾಲಕ್ಷಿ ಸಾಕ್ಷಿಗಳ ಒಪ್ಪ[೧೦೩], ದುರ್ಗಪರಮೇಶ್ವರಿ[೧೦೪], ಯಡನಾಳ ಗೋಪಿನಾಥ ದೇವರು[೧೦೫], ಶ್ರೀ ವೀರಭದ್ರ ದೇವರ ಹೆಸರಿನಲ್ಲೂ[೧೦೬]; ಅಯಿವತಿಬರ ಒಪ್ಪ, ಶ್ರೀ ನಾರಾಯಣ[೧೦೭], ಬೈರರಸ ಒಡೆಯರ ಒಪ್ಪ[೧೦೮], ಗುಂಮ್ಮಟದೇವ ಹೆಗ್ಗಡೆಯ ಒಪ್ಪ, ಮೇಲುವಳಿಯ ಮಾರಿಕವೆ ಸಾಕ್ಷಿಗಳ ಒಪ್ಪ[೧೦೯], ಶ್ರೀ ರಾಮಚಂದ್ರ ಭಾರತಿ ಒಡೆಯರ ಸ್ವಹಸ್ತದ ಒಪ್ಪ[೧೧೦], ಬೊಮ್ಮಣ ಹೆಗ್ಗಡೆಯವರ ಸುಹಸ್ತದ ವೊಪ್ಪ[೧೧೧], ಮಲ್ಲರಸಯ್ಯನ ವೊಪ್ಪ[೧೧೨], ಮಹಾಜನರ ಒಪ್ಪ[೧೧೩], ಪುರೋಹಿತರ ಸುಹ(ಸ್ತ)ದ ಒಪ್ಪ[೧೧೪], ಶ್ರೀ ಜಯಸಿಂಹ್ವ[೧೧೫], ಶ್ರೀ ಗೋಪಿನಾಥ[೧೧೬], ರಾಮರಾಜಯ್ಯ[೧೧೭], ಅಯಿಪತ್ತಿಬ್ಬರಯ್ಯನವರ ಒಪ್ಪ, ಶ್ರೀ ನಾರಾಯಣ, ಅಚಾಯ್ಯಪುರುಸರು, ಜೀಯರು ಶ್ರೀ ವಯಿಷ್ಣವರ ವೊಪ್ಪ[೧೧೮], ಸಮಸ್ತ ಮೂಲಿಗರ ಸುಹಸ್ತದ ಒಪ್ಪ[೧೧೯], ಪಿರಿಯ ರಾಜಯ್ಯಗ ವೊಪಿತಾ[೧೨೦], ರಾಮರಾಜನಾಯಿಕರ ವೊಪ್ಪಗಳು[೧೨೧] ಕಂಡುಬರುತ್ತವೆ.

ಹದಿನೇಳನೇ ಶತಮಾನದ ಶೃಂಗೇರಿಯ ತಾಮ್ರ ಶಾಸನಗಳಲ್ಲಿ ಶ್ರೀ ವಿದ್ಯಾಶಂಕರರ[೧೨೨] ಹೆಸರಿನಲ್ಲಿ ವೊಪ್ಪ ಇರುವುದು ಕಂಡುಬರುತ್ತದೆ. ಶ್ರೀಕೃಷ್ಣ[೧೨೩], ಶ್ರೀ ವೆಂಕಟಾದ್ರಿ[೧೨೪], ಶ್ರೀ ರಾಮ[೧೨೫] ದೇವರ ಹೆಸರಿನಲ್ಲಿ, ಚಾಮರಾಜ ಶ್ರೀ[೧೨೬], ಖಾನಸಾಹೇಬರು ವೊಪ್ಪಿತ[೧೨೭], ಶ್ರೀ ಜಯನಸಿಂಹ ವೀರರಾಜರ ವಪ್ಪಿತಾ[೧೨೮], ಶ್ರೀ ಚಿಕ್ಕದೇವರಾಜವೊಪ್ಪಗಳು[೧೨೯] ಶಾಸನಗಳಲ್ಲಿ ಕಂಡುಬರುತ್ತವೆ.

ಹದಿನೆಂಟನೇ ಶತಮಾನದ ಶಾಸನಗಳಲ್ಲಿ ವೆಂಕಟನಾಯಿನಾರ್, ಅರುಣಕಿಮೂಪ್ಪನ್, ವೀರ ಮೂಪ್ಪನ್, ಶ್ರೀ ವಿಯಪಿಳ್ಳೈ[೧೩೦], ಶ್ರೀ ಸದಾಶಿವ[೧೩೧], ಶಾನುಭೋಗ ವೆಂಕಟನಾರಾಣೈಯ ನವರ ಸಾಕ್ಷಿ, ಸ್ಥಳದ ನಾಡಿಗ ನಾರಶಿವ ದೇವರು ಚಿಕ್ಕ ತಂಮ್ಮಣನವರ ಸಾಕ್ಷಿ, ಅಠವಣೆ ಸೇರುಗಾರನ ವಪ್ಪಿತ, ಗರುಡಗಿರಿ ಅಠವಣೆ ಮಣಿಹ್ಯದಾಳುಗಳ ವಪ್ಪಿತ್ರ[೧೩೨], ಅಠವಣೆ ಶ್ಯಾನುಭಾಗ ತ್ತಿಂಮಪ್ಪೈಯನವರ ಸಾಕ್ಷಿ, ಸ್ಥಳದ ನಾಡಿಗ ನಾರಶಿದೇವರು ಚಿಕ್ಕತ್ತಂಮ್ಮಂಣನವರ ಸಾಕ್ಷಿ[೧೩೩], ಶ್ರೀಕ್ರುಷ್ಣಪ ನಾಯಕರೂ[೧೩೪], ಗುದೆಲಿಮಹಾಂತರ ಒಪ್ಪಿತಾ[೧೩೫], ಕೃಷ್ಣರಾಜ ಒಪ್ಪಗಳು[೧೩೬] ಶಾಸನಗಳಲ್ಲಿ ಕಂಡುಬರುತ್ತವೆ.

ಹಾಸನ ಜಿಲ್ಲೆಯ ಅರಸೀಕೆರೆಯ ೧೩೪ರ ತಾಮ್ರ ಶಾಸನವು[೧೩೭] ೧೭೪೪ ಡಿಸೆಂಬರ್ ೩೦ರ ಕಾಲದ್ದಾಗಿದೆ. ಶಾಸನದಲ್ಲಿ ದೇವರಿಗೆ ವಿವಿಧ ವೃತ್ತಿ ತೆರಿಗೆಗಳನ್ನು, ವಿವಿಧ ಪ್ರಾಣಿಗಳ ಮೇಲಿನ ತೆರಿಗೆಗಳನ್ನು ದೇವರ ನಿತ್ಯ ಪೂಜೆ ಹಾಗೂ ಆರಾಧನೆಗಾಗಿ ನೀಡಿದ ಅತಿ ಹೆಚ್ಚಿನ ಒಪ್ಪಿತವಿರುವ ಶಾಸನವಾಗಿದೆ. ಅಂದರೆ, 'ಸೂರ್ಯ ಸಂದ್ರಾದಿಗಳ ಸಾಕ್ಷಿ,

ತಮ್ಮ ಭಾಗದ ಜಗದೀಶ್ವರ ಸಾಕ್ಷಿ, ಸ್ಥಳ ಪರಸ್ಥಳದ ಮಹಾನಾಡಿನವರು ಬರೆದಿರುವ ಸಾಕ್ಷಿ, ಬಾಣಾವರದ ಸುಬೇದಾರ್ರು ವೆಂಕಟನಾರಪ್ಪೈಯನವರ ವಪ್ಪಿತ, ನಾಡಿನ ಚಿಕ್ಕತಂಮ್ಮಂಣವರ ವಪ್ಪಿತ, ನಾಡಿನ ನಾರಶಿದೇವರ ವಪ್ಪಿತ, ಸುಂಕದ ಮಣಿಹ್ಯಗಾರ ಶ್ಯಾಮಂಣನ ವಪ್ಪಿತ, ಶ್ಯಾನಭಾಗರ ವಪ್ಪಿತ, ಪಟಣಸೆಟ್ಟಿ ಮಲುಕಂಣನ ವಪ್ಪಿತ, ಪರಸ್ತಳದವರು ಬಳ್ಳಾರ್ರಿ ಗ್ರುಹಸ್ತರ ವಪ್ಪಿತ, ಬೂದಗುಂಟೆ ಗ್ರುಹಸ್ತರ ವಪ್ಪಿತ, ತೆಂಕಲಕೋಟೆ ಗ್ರುಹಸ್ತರ ವಪ್ಪಿತ, ಅದವಾನಿ ಗ್ರುಹಸ್ತರ ತುಂಮ್ಮಳದ ಗ್ರುಹಸ್ತರ ಒಪ್ಪಿತ, ಗುಂಡಮಟಿಕಲ್ಲು ನಾರಾಯಣಪೇಠೆ ಗ್ರುಹಸ್ತರ ವಪ್ಪಿತ, ಪಚ್ಚವಳ್ಳಿ ಗ್ರುಹಸ್ತರ ವಪ್ಪಿತ, ಮೋಕೆ ಗ್ರುಹಸ್ತರ ವಪ್ಪಿತ, ಚಿಂತ್ರಿಕಿ ಗ್ರುಹಸ್ತರ ವಪ್ಪಿತ, ಚಟಿನಹಳ್ಳಿ ಗ್ರುಹಸ್ತರ ವಪ್ಪಿತ, ಹುಬ್ಬಹಳ್ಳಿ ಗ್ರುಹಸ್ತರ ವಪ್ಪಿತ, ಸಾಗರದ ಗ್ರುಹಸ್ತರ ವಪ್ಪಿತ, ಚೆನ್ನರಾಯಪಟಣದ ಪೇಠೆ ಸ್ತಳ ಗ್ರುಹಸ್ತರ ವಪ್ಪಿತ, ನರಸಿಂಹ್ಯಪುರದ ಸ್ತಳ ಪರಸ್ತಳದ ಗ್ರುಹಸ್ತರ ವಪ್ಪಿತ, ಅರ್ಕಲಗೋಡ ಸ್ತಳದ ಗ್ರುಹಸ್ತರ ವಪ್ಪಿತ, ಬೆಳಗೋಡ ಸ್ತಳ ಪರಸ್ತಳ ಗ್ರುಹಸ್ತರ ವಪ್ಪಿತ, ಹಲುಗುಲಿಗೆಬೆದನೆ ಗ್ರುಹಸ್ತರ ವಪ್ಪಿತ, ಬೇಲೂರ್ರು ಶಿಂಗಾಪುರ ಯೆಸಳೂರು ಹೊಸಪೇಠೆ ಗ್ರುಹಸ್ತರ ವಪ್ಪಿತ, ಅಂಣಿಗರೆ ಗ್ರುಹಸ್ತರ ವಪ್ಪಿತ, ಗರುಗಲಕ್ಷ್ಮೇಶ್ವರದ ಗ್ರುಹಸ್ತರ ವಪ್ಪಿತ, ಕುರ್ತಕೋಠೆ ಗ್ರುಹಸ್ತರ ವಪ್ಪಿತ, ತಿರ್ಪಿಬೆಳಗುಪ್ಪೆ ಕೊಡಮಳೆವೀರಂಣ ಮಾಡುಕುದ್ದಲಿ ಪದುವಂಣನವರ ವಪ್ಪಿತ, ಧರ್ಮಾವಾರದ ಶೀಲವಂತಶೆಟ್ಟಿ ಕಾಡಶಿದ್ದಪ್ಪ ಹಳೇಬೀಡ ಅಚಗಂಣ ಕರಜಿಗೆ ನಾಗಂಣನವರ ವಪ್ಪಿತ, ಶಿವಪುರದ ದಾನಿಯಪ್ಪನ ವಪ್ಪಿತ, ಬಳ್ಳಾರಿ ಮುತ್ತಾದ್ರಿ ಸಳದಿ ಮುಳ್ಳೆಯನ ವಪ್ಪಿತ, ಮಧಳಘಲ್ಯಾಕುರುಶೀಲಕೋಟಾ ಸ್ತಳಂ ನುಗ್ಗಲ ನಾರಾಯಣಪ್ಪ ಜಂಗಮ ರಾಚೈಯ್ಯ ಸಂಮ್ಮತಿದೇಶಕರಣಂ ಕ್ರಿಷ್ಣಪ ವಪ್ಪಿತ, ರಾಯ ಸಂಸ್ತಾನಂ ಪುಂಗನೂರ್ರು ಮಲ್ಲೂರಿ ಬೈಯಂಣ ರಾಮಸಮುದ್ರ ಗೋವಿಂದಸೆಟ್ಟಿ ರಾಚಂಣ ಸಂಮ್ಮತಿ ದೇಶಕರಣಂ ಕ್ರಿಷ್ಣಪ್ಪ ವಪ್ಪಿತ, ಗುಡಿಬಂಡ್ಯ ತೇಚಂಣ ಹಂಪಂಣ ಕೆಂಟೆಗೆ ಶಿದ್ಧೆಯ ವಪ್ಪಿತ, ಬೇಡಿಪಳ್ಯ ನಲ್ಲವಾಬೈಯ ವಪ್ಪಿತ, ಬೆಂಗಳೂರ ಬಾಳಂಣನ ವಪ್ಪಿತ, ಹಿರೇಬಳ್ಳಾಪುರದ ಗೂಳಪ್ಪನ ವಪ್ಪಿತ, ಗಂಚಿಗುಂಟ್ಯ ಕರ್ಣಗಂಟಿನಾರಾಯಣಪ್ಪ ವಪ್ಪಿತ, ನಾಮಗುಂಡಲಪಾಳ್ಯಂ ಸಹಾ ಮಹಂತೈಯನ ವಪ್ಪಿತ, ಕೊರಟಗೆರ್ರೆ ಮುಂದಣನ ವಪ್ಪಿತ, ರಾಯದುರ್ಗದ ಹುಚ್ಚಂಣನ ವಪ್ಪಿತ, ಯೈಮಂಗಳದ ಮಳೇಚಂನಂಣ ಬೆರ್ರಿಗೆ ವೀರಂಣ ವಪ್ಪಿತ, ನಿಜಗಲ್ಲ ಹುಚ್ಚಂಣನ ವಪ್ಪಿತ, ಕೂರವಳ್ಳಿ ಮಾರ್ಗದ ಕುದಿ ಚನ್ನಮಲ್ಲಪ್ಪನ ವಪ್ಪಿತ, ಜೆವಣಿಗೆಸ್ತಳದ ಬಿಗ್ಗದೇವನಹಳ್ಳಿ ಶಿದ್ದಲಿಂಗ್ಯೆಯ ಮಲ್ಲಪ್ಪ ವಪ್ಪಿತ, ನಲ್ಲೂರ ಮುಳ್ಳೆಯನ ವಪ್ಪಿತ, ಬಿಲಿಯಲೆ ದಿರತ್ಯೆಯನ ವಪ್ಪಿತ, ಹೊಸದುರ್ಗದ ಕಳ್ಳೆಯನ ವಪ್ಪಿತ, ಲಿಂಗಂಚೆನ್ನೈಯ್ಯನ ವಪ್ಪಿತ, ಕಡಪೆ ವೆಂಕಟಪತಿ ದೇಶ ಮಹಾಜನರ ವಪ್ಪಿತ, ಕಂಣಿಸಮುದ್ರದ ಮಲ್ಲಂಣನ ವಪ್ಪಿತ, ನಾರಾಯಣಪೇಠೆ ನಾಗಪ್ಪನ ವಪ್ಪಿತ, ರಾವೂರ ಶಿವ ಲಿಂಗಪ್ಪನ ಕೊಮಾರ ಶಿವಪ್ಪನ ವಪ್ಪಿತ, ಬಾಳೇಕಾಯಿ ದೇವಂಣನ ವಪ್ಪಿತ, ಅರಳೇಪೇಠೆ ರಾಚಪ್ಪನ ವಪ್ಪಿತ, ಅರಳೇಪೇಠೆ ರಾಯಪ್ಪನ ವಪ್ಪಿತ, ಮಲ್ಲಂಣನ ವಪ್ಪಿತ, ಬೇಂಗಳೂರ್ ಮಾಮೂಲೆರ್ರೈಯಂಣನ ವಪ್ಪಿತ, ದೇಶಮುದ್ರೆ ವೆಂಕಟಪತ್ತಿ ಶೆಟ್ಟಿ ವಪ್ಪಿತ, ದೇಶಮುದ್ರೆ ಖಂಡೆಸೆಟ್ಟಿ ವಪ್ಪಿತ, ದೇಶಮುದ್ರೆ ಶಿದ್ದಂಣನ ವಪ್ಪಿತ, ಬಾಣಾವರದಕಸಬೆ ಸಂಕ್ಕೆಗೌಡ ಶ್ಯಾನಭಾಗರ ವಪ್ಪಿತ, ಬಿಳೀಮಗ್ಗದ ಗೌಡ ಪ್ರಜೆಗಳ ವಪ್ಪಿತ, ದೇವಾಂಗದ ಗೌಂಡ ಪ್ರಜೆಗಳ ವಪ್ಪಿತ, ಚಿನುವಾರದವರ ವಪ್ಪಿತ, ಸಮಸ್ತ ಪ್ರಜೆ ವರ್ತಕರ ವಪ್ಪಿತ, ಬಾಣಾವರದ ಶೀಮೆ ಗೌಡ ಹೆಬಾರ್ರು ಶ್ಯಾನುಭಾಗರ ವಪ್ಪಿತ, ಗರುಡಗಿರಿಶೀಮೆ ಗೌಡ ಹೆಬಾರ್ರು ಶ್ಯಾನಭಾಗರ ವಪ್ಪಿತ ಎಂಬುದಾಗಿ ಬರೆಸಲಾಗಿದೆ. ಈ ಶಾಸನವು ವಿವಿಧ ವ್ಯಕ್ತಿ, ಸ್ಥಳದವರು, ಗೌಡಗಳು, ಗೃಹಸ್ಥರು, ಮಹಾನಾಡಿನವರು, ಶಾನುಭೋಗರು ಮೊದಲಾದವರ ಒಪ್ಪವಿದ್ದು ಕನ್ನಡ ಶಾಸನಗಳಲ್ಲೇ ಹೆಚ್ಚು ಒಪ್ಪವಿರುವ ಶಾಸನವಾಗಿದೆ.

ಹತ್ತೊಂಬತ್ತನೇ ಶತಮಾನದ ಶಾಸನಗಳಲ್ಲಿ ಶ್ರೀ ಕೃಷ್ಣ[೧೩೮], ರುಜು ಶ್ರೀ ಕೃಷ್ಣ[೧೩೯], ಸುಬಶ್ಯಾತೃಗಳ ರುಜು[೧೪೦] ಎಂಬುದಾಗಿ ಬರೆದಿರುವುದು ಕಂಡುಬರುತ್ತದೆ.

ಕಾಗದದ ಬಳಕೆ ಬಂದ ಮೇಲೆಯೂ ಒಪ್ಪ ಮುಂದುವರೆಯುತ್ತದೆ. ಆದರೆ ಬ್ರಿಟೀಷರ ಆಗಮನದ ನಂತರ ಸಹಿ ಯಾರದೆಂದು ತಿಳಿಯಲಾರದಷ್ಟು ಗುಪ್ತವಾಗಿ ಗೀಚಿರುತ್ತಾರೆ. ಇದರ ಕೆಳಗೆ ಹೆಸರು ಬರೆದಲ್ಲಿ ಮಾತ್ರ ತಿಳಿಯುತ್ತದೆ. ಇಲ್ಲವಾದಲ್ಲಿ ಇಲ್ಲ. ಈ ಸಹಿಗೆ ಬಹು ಬೆಲೆಯೂ ಇರುತ್ತದೆ. ಹೀಗಾಗಿ ಈ ಪದ್ಧತಿ ಮುಂದುವರೆದಿದೆ. ಇಲ್ಲಿ ಬಳಸಿರುವ ಅಕ್ಷರಗಳು ವಕ್ರರೇಖೆಗಳಾಗಿಯೋ, ಸರಳರೇಖೆಗಳಾಗಿಯೋ ಪರಿವರ್ತಿತವಾಗಿರುತ್ತವೆ[೧೪೧].

ರಾಷ್ಟ್ರಕೂಟ ಧ್ರುವನ ಸಹಿ

ಹೊಯ್ಸಳ ಸೋಮೇಶ್ವರನ ಸಹಿ

ಹೊಯ್ಸಳ ನರಸಿಂಹನ ಸಹಿ

ಪ್ರಾಚೀನ ಕಾಲದಿಂದಲೂ ಒಪ್ಪಗಳನ್ನು ಶಾಸನಗಳ ಮೇಲೆ ಬರೆದುಕೊಂಡು ಬಂದಿರುವುದನ್ನು ಕಾಣಬಹುದು. ಶಾಸನಗಳಲ್ಲಿ ಒಬ್ಬ ವ್ಯಕ್ತಿಯ ಬಹಳಷ್ಟು ಒಪ್ಪಗಳು ಒಂದೇ ರೀತಿಯಲ್ಲಿ ಇರುವುದನ್ನು ನೋಡಿದರೆ ಮೊದಲು ಅವರು ಸುಣ್ಣ ಅಥವಾ ಬಣ್ಣದಿಂದ ಬರೆದು, ನಂತರ ಅದೇ ರೀತಿಯಲ್ಲಿ ಕೊರೆಯುತ್ತಿದ್ದರೆಂದು ತಿಳಿಯಬಹುದಾಗಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಡಾ॥ ದೇವರಕೊಂಡಾರೆಡ್ಡಿ, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ**, ಪು.೨೯೩-೨೯೪.

೨. 'ಸ್ವಹಸ್ತಕಾಲ ಸಂಪನ್ನಂ' ಎಂಬುದಕ್ಕೆ ವಿಜ್ಞಾನೇಶ್ವರ ವ್ಯಾಖ್ಯಾನವಿದು. ಸ್ವಹಸ್ತೇನ ಸ್ವಹಸ್ತಲಿಖಿತೇನ ಮತಂ ಮೇ ಅಮುಕನಾಮ್ನಃ ಅಮುಕ ಪ್ರತ್ರಸ್ಯ ಯದತ್ರೋಪರಿ ಲೇಖಿತಮಿತ್ಯ ನೇನ ಸಂಪನ್ನ ಯುಕ್ತ.

೩. ಎನ್. ಲಕ್ಷ್ಮೀನಾರಾಯಣರಾವ್, ಮಾಲ್‌ಖೇಡಿನ ರಾಷ್ಟ್ರಕೂಟರು ಎಲ್ಲಿಯವರು?, **ಪ್ರಬುದ್ಧ ಕರ್ಣಾಟಕ**, ೨೦.೩, ಪು.೮೨-೪.

೪. ಡಾ॥ ಎಂ. ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪು.೭೦. *A Dravidian Etymological Dictionary*, p.68.

೫. *Kannada Inscriptions of Andra Pradesh*, KN 7.

೬ ಎ.ಕ. ಹಾಸನ ಜಿಲ್ಲೆ, ಸಂ.೧೦(ಪ) ಚನ್ನರಾಯಪಟ್ಟಣ, ೧೪೨.

೭. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ) ಅರಸೀಕೆರೆ ೯೭.

೮. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೦.

೯. ಎ.ಕ. ಹಾಸನ ಜಿಲ್ಲೆ, ಸಂ.೮ (ಪ), ಆಲೂರು ೨೧; ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಚನ್ನರಾಯಪಟ್ಟಣ ೧೧೩; ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಕೊಳ್ಳೆಗಾಲ ೧೧೨; ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಮೈಸೂರು ೧೧೯; ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೧೮೩.

೧೦. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹಾಸನ ೩೮.

೧೧. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹಾಸನ ೧೪೫.

೧೨. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹೊಳೆನರಸೀಪುರ ೧೧೮; ಎ. ಕ, ಹಾಸನ ಜಿಲ್ಲೆ, ಸಂ.೧೦(ಪ), ಚನ್ನರಾಯಪಟ್ಟಣ ೪೦.

೧೩. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೩೧೨; ಎ. ಕ, ಮೈಸೂರು ಜಿಲ್ಲೆ, ಸಂ.೫(ಪ), ತಿ.ನರಸೀಪುರ ೩೧೬.

೧೪. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಚಿಕ್ಕಮಗಳೂರು ೧೫೩.

೧೫. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಮಂಡ್ಯ ೨೩.

೧೬. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹಾಸನ ೫೮; ಎ.ಕ. ಹಾಸನ ಜಿಲ್ಲೆ, ಸಂ.೧೦: (ಪ), ಅರಸೀಕೆರೆ ೨೨೩; ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೪೧; ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ನಾಗಮಂಗಲ ೬೭.

೧೭. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ನಾಗಮಂಗಲ ೭೪.

೧೮. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೨೯೪.

೧೯. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೮೯.

೨೦. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೨೯೧.

೨೧. ಎ. ಕ, ಮೈಸೂರು ಜಿಲ್ಲೆ, ಸಂ.೫(ಪ), ತಿ.ನರಸೀಪುರ ೩೧೬.

೨೨. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೨೯೪.

೨೩. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೪೨; ಎ.ಕ. ಮಂಡ್ಯ ಜಿಲ್ಲೆ, ಸಂ. ೭ (ಪ), ನಾಗಮಂಗಲ ೬೭.

೨೪. ಎ.ಕ. ಮಂಡ್ಯ ಜಿಲ್ಲೆ, ಸಂ.೬(ಪ), ಪಾಂಡವಪುರ ೩೧.

೨೫. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಚನ್ನರಾಯಪಟ್ಟಣ ೪೦.

೨೬. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹೊಳೆನರಸೀಪುರ ೧೧೯.

೨೭. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೨೮೯.

೨೮. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೮೯.

೨೯. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ನಾಗಮಂಗಲ ೭೪.

೩೦. ಎ.ಕ. ಮೈಸೂರು ಜಿಲ್ಲೆ, ಸಂ.೫(ಪ), ತಿ.ನರಸೀಪುರ ೮೮.
೩೧. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಅರಕಲಗೂಡು ೪೭.
೩೨. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಬೇಲೂರು ೪೩೯.
೩೩. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೨೮೯.
೩೪. ಎ.ಕ. ಹಾಸನ ಜಿಲ್ಲೆ, ಸಂ.೯(ಪ), ಬೇಲೂರು ೪೩೯.
೩೫. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೨೮೯.
೩೬. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೨೯೦.
೩೭. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೨೯೩.
೩೮. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಅರಕಲಗೂಡು ೪೭.
೩೯. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಚನ್ನರಾಯಪಟ್ಟಣ ೩೪; ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹೊಳೆನರಸೀಪುರ ೧೧೯.
೪೦. ಎ.ಕ. ಹಾಸನ ಜಿಲ್ಲೆ, ಸಂ.೯(ಪ), ಬೇಲೂರು ೩೭೫.
೪೧. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಮಂಡ್ಯ ೨೩.
೪೨. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೯೧.
೪೩. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧ (ಪ), ಚಿಕ್ಕಮಗಳೂರು ೧೫೩; ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೧೮೩.
೪೪. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಮೈಸೂರು ೧೧೯.
೪೫. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹೊಳೆನರಸೀಪುರ ೮೩.
೪೬. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೪೭.
೪೭. ಎ.ಕ. ಹಾಸನ ಜಿಲ್ಲೆ, ಸಂ.೯(ಪ), ಬೇಲೂರು ೨೭೮; ಕನ್ನಡ ವಿಶ್ವವಿದ್ಯಾಲಯ ಶಾಸನ ಕೊಪ್ಪಳ ಜಿಲ್ಲೆ, ಸಂ.೩, ಯಲಬುರ್ಗ ೪೮.
೪೮. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹೊಳೆನರಸೀಪುರ ೮೩.
೪೯. ಎ.ಕ. ಮೈಸೂರು ಜಿಲ್ಲೆ, ಸಂ.೫(ಪ), ತಿ. ನರಸೀಪುರ ೯೦.
೫೦. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧ (ಪ), ಚಿಕ್ಕಮಗಳೂರು ೫೭.
೫೧. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಚನ್ನರಾಯಪಟ್ಟಣ ೧೩೧.
೫೨. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹೊಳೆನರಸೀಪುರ ೮೭; ಎ.ಕ. ಹಾಸನ ಜಿಲ್ಲೆ, ಸಂ. ೮ (ಪ), ಹಾಸನ ೧೧೫; ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೩೩.
೫೩. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ. ಮೂಡಗೆರೆ ೧೦೮; ಅದೇ, ಶೃಂಗೇರಿ ೩೧, ಅದೇ, ಶೃಂಗೇರಿ ೩೩.
೫೪. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೯೭.
೫೫. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ನಾಗಮಂಗಲ ೭೫.
೫೬. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಮೂಡಗೆರೆ ೫೬.
೫೭. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೧೭೩.
೫೮. ಎ.ಕ. ಹಾಸನ ಜಿಲ್ಲೆ, ಸಂ. (ಪ), ಬೇಲೂರು ೪೨೫.
೫೯. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹಾಸನ ೧೮೮.
೬೦. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೨೬೩.
೬೧. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೩೦೬; ಅದೇ, ಚಾಮರಾಜನಗರ ೨೯೨, ಮೈಸೂರು ಜಿಲ್ಲೆ, ಸಂ.೪(ಪ), ಪಿರಿಯಾಪಟ್ಟಣ ೧೨೨; ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಮದ್ದೂರು ೧೧೦.
೬೨. ಮೈಸೂರು ಜಿಲ್ಲೆ, ಸಂ.೪(ಪ), ಕೊಳ್ಳೆಗಾಲ ೩೦.
೬೩. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೯೭.
೬೪. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೧೫.
೬೫. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಮಳವಳ್ಳಿ ೧೦೫.
೬೬. ಮೈಸೂರು ಜಿಲ್ಲೆ, ಸಂ.೪(ಪ), ಕೊಳ್ಳೆಗಾಲ ೬೬.
೬೭. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಮದ್ದೂರು ೮೯; ಅದೇ ಮದ್ದೂರು ೧೦೨.

೭೮. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ). ಮಳವಳ್ಳಿ ೨೫; ಅದೇ ಮದ್ದೂರು ೮೯. ಎ.ಕ. ಹಾಸನ ಜಿಲ್ಲೆ, ಸಂ.೧೧(ಪ). ಅರಕಲಗೂಡು ೧೧.
೭೯. ಎ.ಕ. ಮಂಡ್ಯ ಜಿಲ್ಲೆ, ಸಂ. ೭(ಪ), ಮದ್ದೂರು ೮೯.
೭೦. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಮದ್ದೂರು ೯೪.
೭೧. ಎ.ಕ. ಮಂಡ್ಯ ಜಿಲ್ಲೆ, ಸಂ.೬(ಪ), ಕೃಷ್ಣರಾಜಪೇಟೆ ೯೫.
೭೨. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹಾಸನ ೧೮೭.
೭೩. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹಾಸನ ೨೦೬.
೭೪. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಅರಕಲಗೂಡು ೯೬.
೭೫. ಎ.ಕ. ಮೈಸೂರು ಜಿಲ್ಲೆ, ಸಂ.೫(ಪ), ತಿ.ನರಸೀಪುರ ೯೦.
೭೬. ಮೈಸೂರು ಜಿಲ್ಲೆ, ಸಂ.೪(ಪ), ಕೊಳ್ಳೆಗಾಲ ೬೨.
೭೭. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೧೨೯.
೭೮. ಮೈಸೂರು ಜಿಲ್ಲೆ, ಸಂ.೪(ಪ), ಪಿರಿಯಾಪಟ್ಟಣ ೮೯; ಅದೇ, ಪಿರಿಯಾಪಟ್ಟಣ ೯೧.
೭೯. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹಾಸನ ೧೧; ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೩೭೨; ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೭೯; ಅದೇ, ಶೃಂಗೇರಿ ೩೪, ಅದೇ, ಶೃಂಗೇರಿ ೩೫.
೮೦. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೨೮೦.
೮೧. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೭೪.
೮೨. ಮೈಸೂರು ಜಿಲ್ಲೆ, ಸಂ.೪(ಪ), ಪಿರಿಯಾಪಟ್ಟಣ ೧೧೫.
೮೩. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ನಾಗಮಂಗಲ ೧೫೫.
೮೪. ಎ. ಕ, ಮೈಸೂರು ಜಿಲ್ಲೆ, ಸಂ.೫(ಪ), ತಿ.ನರಸೀಪುರ ೨೪೬.
೮೫. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೧೮೪.
೮೬. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೬೯.
೮೭. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಅರಕಲಗೂಡು ೨.
೮೮. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೬೫.
೮೯. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೭೧.
೯೦. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೭೪.
೯೧. ಮೈಸೂರು ಜಿಲ್ಲೆ, ಸಂ.೪(ಪ), ಪಿರಿಯಾಪಟ್ಟಣ ೧೧೫.
೯೨. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಪಾಂಡವಪುರ ೧೬೨.
೯೩. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ನಾಗಮಂಗಲ ೧೫೫.
೯೪. ಎ.ಕ. ಮೈಸೂರು ಜಿಲ್ಲೆ, ಸಂ.೫(ಪ), ತಿ.ನರಸೀಪುರ ೩೦೨.
೯೫. ಅದೇ, ತಿ.ನರಸೀಪುರ ೩೦೨.
೯೬. ಎ.ಕ. ಹಾಸನ ಜಿಲ್ಲೆ, ಸಂ.೯(ಪ), ಬೇಲೂರು ೧೬೨.
೯೭. ಮೈಸೂರು ಜಿಲ್ಲೆ, ಸಂ.೪(ಪ), ಪಿರಿಯಾಪಟ್ಟಣ ೨೬.
೯೮. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೧೦೪.
೯೯. ಎ.ಕ. ಹಾಸನ ಜಿಲ್ಲೆ, ಸಂ. ೮(ಪ), ಹಾಸನ ೨೦೧.
೧೦೦. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೨೮೦.
೧೦೧. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹಾಸನ ೮, ಅದೇ, ಅರಸೀಕೆರೆ ೨೪೦.
೧೦೨. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಮೂಡಗೆರೆ ೧೦೪; ಅದೇ, ಮೂಡಗೆರೆ ೧೦೯.
೧೦೩. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೪೩.
೧೦೪. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಮೂಡಗೆರೆ ೬೬.
೧೦೫. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಮೂಡಗೆರೆ ೬೭
೧೦೬. ಮೈಸೂರು ಜಿಲ್ಲೆ, ಸಂ.೪(ಪ), ಪಿರಿಯಾಪಟ್ಟಣ ೧೧೪.

೧೦೭. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಪಾಂಡವಪುರ ೧೩೫.
೧೦೮. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಮೂಡಗೆರೆ ೪೮.
೧೦೯. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಮೂಡಗೆರೆ ೬೬.
೧೧೦. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೫೨.
೧೧೧. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೪೯.
೧೧೨. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಯಳಂದೂರು ೧೬೯.
೧೧೩. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಪಾಂಡವಪುರ ೧೩೮.
೧೧೪. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೪೩.
೧೧೫. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹೊಳೆನರಸೀಪುರ ೪೭.
೧೧೬. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಹಾಸನ ೧೦೮.
೧೧೭. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಅರಕಲಗೂಡು ೧೯೦.
೧೧೮. ಎ.ಕ. ಮಂಡ್ಯ ಜಿಲ್ಲೆ, ಸಂ.೭(ಪ), ಪಾಂಡವಪುರ ೧೪೦.
೧೧೯. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಮೂಡಗೆರೆ ೧೧೯.
೧೨೦. ಮೈಸೂರು ಜಿಲ್ಲೆ, ಸಂ.೪(ಪ), ಪಿರಿಯಾಪಟ್ಟಣ ೧೨೦.
೧೨೧. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೨೧೬.
೧೨೨. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೪೪; ಅದೇ, ಶೃಂಗೇರಿ ೪೭.
೧೨೩. ಎ.ಕ. ಹಾಸನ ಜಿಲ್ಲೆ, ಸಂ.೬(ಪ), ಅರಕಲಗೂಡು ೬.
೧೨೪. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೩೬; ಅದೇ ಮೂಡಗೆರೆ ೧೦೬; ಅದೇ, ಮೂಡಗೆರೆ ೧೦೩.
೧೨೫. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಆಲೂರು ೨೬; ಅದೇ, ಅರಕಲಗೂಡು ೧೪೨; ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೩೭.
೧೨೬. ಎ.ಕ. ಹಾಸನ ಜಿಲ್ಲೆ, ಸಂ.೮(ಪ), ಅರಕಲಗೂಡು ೯೪.
೧೨೭. ಎ.ಕ. ಹಾಸನ ಜಿಲ್ಲೆ, ಸಂ.೭(ಪ), ಬೇಲೂರು ೫೧೧.
೧೨೮. ಎ.ಕ. ಮಂಡ್ಯ ಜಿಲ್ಲೆ, ಸಂ.೫(ಪ), ಕೃಷ್ಣರಾಜನಗರ ೧೮.
೧೨೯. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೧೧.
೧೩೦. ಎ.ಕ. ಮೈಸೂರು ಜಿಲ್ಲೆ, ಸಂ.೫(ಪ), ತಿ.ನರಸೀಪುರ ೧೧೨.
೧೩೧. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೩೮.
೧೩೨. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೩೬.
೧೩೩. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೩೮.
೧೩೪. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಮೂಡಗೆರೆ ೧೧.
೧೩೫. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೨೧೮.
೧೩೬. ಎ.ಕ. ಚಿಕ್ಕಮಗಳೂರು ಜಿಲ್ಲೆ, ಸಂ.೧೧(ಪ), ಶೃಂಗೇರಿ ೩೦; ಎ.ಕ. ಹಾಸನ ಜಿಲ್ಲೆ, ಸಂ. ೮(ಪ), ಹಾಸನ ೧೭೦; ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಯಳಂದೂರು ೧೪.
೧೩೭. ಎ.ಕ. ಹಾಸನ ಜಿಲ್ಲೆ, ಸಂ.೧೦(ಪ), ಅರಸೀಕೆರೆ ೧೩೪.
೧೩೮. ಎ.ಕ. ಮೈಸೂರು ಜಿಲ್ಲೆ, ಸಂ.೪(ಪ), ಚಾಮರಾಜನಗರ ೫.
೧೩೯. ಎ.ಕ. ಮೈಸೂರು ಜಿಲ್ಲೆ, ಸಂ.೫(ಪ), ಮೈಸೂರು ೪.
೧೪೦. ಎ.ಕ. ಮೈಸೂರು ಜಿಲ್ಲೆ, ಸಂ.೫(ಪ), ತಿ.ನರಸೀಪುರ ೧೪೦.
೧೪೧. ಡಾ॥ ದೇವರಕೊಂಡಾರೆಡ್ಡಿ, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ**, ಪು.೨೯೪.

卐卐卐

# ಶಾಸನಗಳಲ್ಲಿ ಪುಣ್ಯಾಶಯಗಳು

– ಡಾ॥ ಟಿ.ಡಿ. ರಾಜಣ್ಣ ತಗ್ಗಿ*

**ಶಾ**ಸನಗಳ ಅಧ್ಯಯನ ಅದರಲ್ಲೂ ದಾನ ಶಾಸನಗಳಲ್ಲಿ ಬರುವ ಶಾಪ ಮತ್ತು ಪುಣ್ಯಾಶಯಗಳ ಅಧ್ಯಯನವು ಬಹಳ ಕುತೂಹಲಕರವಾದ ಸಂಗತಿಯಾಗಿದೆ. ಶಾಸನಗಳನ್ನು ವಸ್ತು ವಿಷಯದ ದೃಷ್ಟಿಯಿಂದ ಹಲವಾರು ಭಾಗಗಳಾಗಿ ವಿಂಗಡಿಸಬಹುದು. ಅವುಗಳಲ್ಲಿ ದಾನ ಶಾಸನ, ವೀರಗಲ್ಲು ಮತ್ತು ಮಾಸ್ತಿಗಲ್ಲು ಹೀಗೆ ಹಲವಾರು ಬಗೆಗಳಲ್ಲಿ ಕಾಣಬಹುದಾಗಿದೆ. ಈ ಶಾಸನಗಳಲ್ಲಿ ಪ್ರಮುಖವಾಗಿ ಶಾಪ ಮತ್ತು ಪುಣ್ಯಾಶಯಗಳು ಹೆಚ್ಚಾಗಿ ಕಂಡುಬರುವುದೆಂದರೆ ದಾನಶಾಸನಗಳಲ್ಲಿ ಮಾತ್ರ. ಈ ದಾನ ಶಾಸನಗಳು ಬೇರೆಲ್ಲ ಶಾಸನಗಳಿಗಿಂತಲೂ ವಸ್ತು ವಿಷಯದ ದೃಷ್ಟಿಯಿಂದಲೂ ವಿಶಿಷ್ಟವಾಗಿ ಕಂಡುಬರುತ್ತವೆ.

ಈ ಶಾಸನಗಳ ಕಡೆಯಲ್ಲಿ ದಾನಿಯು ತಾನು ಕೊಟ್ಟ ದಾನವು ಯಾವುದೇ ಕಾರಣಕ್ಕೂ ಅಪವ್ಯಯವಾಗಬಾರದು, ಅದರ ಫಲಾನುಭವಿಗಳಲ್ಲದೆ ಬೇರೆಯವರು ಅನುಭವಿಸಬಾರದು ಅಥವಾ ದುರ್ವ್ಯಯವಾಗಬಾರದು ಎಂಬ ಕಾರಣದಿಂದ ತಾವು ನೀಡಿದ ದಾನವನ್ನು ಸಂರಕ್ಷಿಸುವ ಉದ್ದೇಶದಿಂದ ದಾನದ ವಿವರಗಳ ಜೊತೆಯಲ್ಲಿಯೇ ಫಲಶ್ರುತಿಗಳು ಎಂಬ ಕೆಲವು ವಿಚಾರಗಳನ್ನು ಸೇರಿಸತೊಡಗಿದರು. ಅವುಗಳು ಅಪಹರಣದ ಉದ್ದೇಶವನ್ನಿಟ್ಟುಕೊಂಡಿರುವ ವ್ಯಕ್ತಿಗಳನ್ನು ಭಯಪಡಿಸುವುದಕ್ಕೋಸ್ಕರ ಹಾಕುತ್ತಿದ್ದ ಕೆಡುಕು ಅಥವಾ ಹಾನಿಯನ್ನು ಸೂಚಿಸುವ ಪದಗಳಾಗಿರುತ್ತಿದ್ದವು. ಅದೇ ರೀತಿ ಅವುಗಳ ಜೊತೆಯಲ್ಲಿಯೇ ಅಪಹರಣಕಾರನನ್ನು ಆಮಿಷಕ್ಕೆ ಒಳಪಡಿಸಿ, ದಾನವನ್ನು ರಕ್ಷಿಸಿದರೆ ಅದರಿಂದ ಲಭಿಸುವ ಒಳಿತು ಅಥವಾ ಪುಣ್ಯಗಳನ್ನು ತಿಳಿಸುವ ಪದಗಳೂ ಇರುತ್ತಿದ್ದವು. ಇವೆರಡೂ ಆಶಯಗಳು, ನೀಡಿರುವ ದಾನವನ್ನು ರಕ್ಷಣೆ ಮಾಡುವುದಕ್ಕಾಗಿ ಸಾಧನಗಳಂತೆ ಬಳಕೆಯಾಗಿರುವುದನ್ನು ಗಮನಿಸಬಹುದು. ಇವು ಮೇಲ್ನೋಟಕ್ಕೆ ಫಲಶ್ರುತಿಗಳಂತೆ ಕಂಡುಬಂದರೂ ಇವನ್ನು ಕ್ರಮವಾಗಿ 'ದಾನಚ್ಛೇದೋಪವರ್ಣನ' ಮತ್ತು 'ಪುಣ್ಯಾಶಯಗಳು' ಎಂದು ವಿಭಾಗಿಸಿ ಕರೆಯಬಹುದು.

ಯಾವುದೇ ದಾನಿಯು ತಾನು ನೀಡಿದ ದಾನವು ಶಾಶ್ವತವಾಗಿ ಉಳಿದು ಬರಬೇಕೆಂದು ಹಂಬಲಿಸಿ ಅದು ಆಚಂದ್ರಾರ್ಕತಾರಂಬರಂ ಆಗಿ ಉಳಿದುಬರಬೇಕೆಂಬ ಆಶಯವನ್ನು ವ್ಯಕ್ತಪಡಿಸುತ್ತಾನೆ. ಔದಾರ್ಯಗುಣವನ್ನು ಹೊಂದಿರುವ ಯಾವುದೇ ವ್ಯಕ್ತಿಯು ತಾನು ನೀಡಿದ ದಾನವು ತಲೆತಲಾಂತರದವರೆಗೂ ಮುಂದುವರಿದುಕೊಂಡು ಹೋಗಬೇಕೆಂದು ಬಯಸುವುದು ಸಹಜವೇ ಆಗಿದೆ.

ದಾನವನ್ನು ರಕ್ಷಿಸುವುದಕ್ಕೆ ಅವರು ತೆಗೆದುಕೊಂಡ ಎಚ್ಚರಿಕೆಗಳು ಮತ್ತು ಅದರ ಸಲುವಾಗಿ ಅವರು ಶಾಸನದಲ್ಲಿ ಬಳಸಿದ ಶಾಪಾಶಯಗಳು ವಿಫಲತೆಯನ್ನು ಸಾಧಿಸಿದವು. ಆ ನಂತರ ಬಂದ ರಾಜರು ಅದೇ ರೀತಿಯ ಮಾರ್ಗವನ್ನು ತಾವೂ ಅನುಸರಿಸುವುದರಿಂದ ಯಾವುದೇ ಪ್ರಯೋಜನವಿಲ್ಲವೆಂದರಿತು ಶಾಸನದ ಕಡೆಯಲ್ಲಿ ಕೆಡುಕಿನ ಪದಗಳನ್ನು ಹಾಕಿಸತೊಡಗಿದರು, ಜೊತೆಗೆ, ತಾವು ನೀಡಿದ ದಾನವನ್ನು ರಕ್ಷಿಸಿದರೆ ಒದಗುವ ಫಲಗಳನ್ನು ತಿಳಿಸುತ್ತಾ ಆಮಿಷ ಒಡ್ಡುವುದರ ಮೂಲಕ ದಾನವನ್ನು ರಕ್ಷಣೆ ಮಾಡುವ ಪ್ರಯತ್ನವನ್ನು ಮಾಡತೊಡಗಿದರು. ಈ ದಿಶೆಯಲ್ಲಿ ಹುಟ್ಟಿಕೊಂಡವುಗಳೇ ಪುಣ್ಯಾಶಯಗಳು.

ಪುಣ್ಯಾಶಯಗಳು ಎಂದರೆ ಹೆಸರೇ ಸೂಚಿಸುವಂತೆ ಪುಣ್ಯದ ಆಶಯಗಳು. ಶಾಸನದ ಕಡೆಯಲ್ಲಿ ಹಾಕುವ ಫಲಶ್ರುತಿಗಳಲ್ಲಿ ಕೆಡುಕನ್ನು ಸೂಚಿಸದೆ ಕೇವಲ ದಾನವನ್ನು ರಕ್ಷಿಸುವವರ ಶ್ರೇಯವನ್ನು ಮತ್ತು ಅವರಿಗೆ ಮುಂದೆ ಒದಗಿ ಬರಲಿರುವ ಪುಣ್ಯ, ಪದವಿ ಮತ್ತು ಲಾಭಗಳನ್ನು ಕುರಿತು ತಿಳಿಸುವುವು.

ಶಾಸನಗಳಲ್ಲಿ ನೀಡಿದ ದಾನವನ್ನು ಕೆಡಿಸಿದರೆ ಅಥವಾ ಅಪಹರಿಸಿದರೆ ಒದಗುವ ಕೇಡು ಮತ್ತು ಅವರಿಗೆ ಒದಗುವ

* ಅತಿಥಿ ಉಪನ್ಯಾಸಕರು, ಕನ್ನಡ ವಿಭಾಗ, ಮದರಾಸು ವಿಶ್ವವಿದ್ಯಾನಿಲಯ, ಮರೀನಾ ಆವರಣ, ಚೆನ್ನೈ-೫.

ಪಾಪ ಮತ್ತು ಲಭಿಸಲಿರುವ ಹೀನ ಜನ್ಮದ ಬಗೆಗೆ ತಿಳಿಸುವುದರ ಮೂಲಕ ದಾನವನ್ನು ರಕ್ಷಿಸುವ ಪ್ರಯತ್ನವನ್ನು ಮಾಡಿದಂತೆಯೇ ನೀಡಿರುವ ದಾನವನ್ನು ಕೆಡಿಸದೆ ಅದನ್ನು ಕಾಪಾಡುವಂತೆ ಆಗ್ರಹಪೂರ್ವಕವಾಗಿ ಬೇಡಿಕೊಳ್ಳಲಾಗಿದೆ. ದಾನವನ್ನು ಕಾಪಾಡುವುದರಿಂದ ದೊರೆಯುವ ಅಥವಾ ಲಭಿಸುವ ಪುಣ್ಯವನ್ನೂ ಅದರ ಲಾಭವನ್ನೂ ತಿಳಿಸಿ ಆಮಿಷ ಒಡ್ಡುವುದರ ಮೂಲಕವೂ ದಾನವನ್ನು ರಕ್ಷಿಸುವ ಪ್ರಯತ್ನವನ್ನು ಮಾಡುತ್ತಾ ಬಂದರು. ದಾನ ನೀಡುವುದಕ್ಕಿಂತಲೂ ಈಗಾಗಲೇ ನೀಡಿರುವ ದಾನಗಳನ್ನು ಸಂರಕ್ಷಿಸುವುದರಿಂದಲೇ ಹೆಚ್ಚಿನ ಶ್ರೇಯಸ್ಸುಂಟಾಗುತ್ತದೆ ಎಂಬುದನ್ನು ಶಾಸನದಲ್ಲಿ ಹಾಕಿಸುವಲ್ಲಿ ದಾನಿಯು ತನ್ನ ದಾನವನ್ನು ರಕ್ಷಿಸಿಕೊಳ್ಳಬೇಕೆಂಬ ಆಶಯ ವ್ಯಕ್ತಪಡಿಸಿರುವುದನ್ನು ತಿಳಿಯಬಹುದಾಗಿದೆ.

ಭಾರತೀಯರು ದೇವರು ಧರ್ಮ ಮತ್ತು ಸತ್ತ ನಂತರದ ಜೀವನದ ಬಗ್ಗೆ ಹೆದರುವಷ್ಟು ಬೇರೆ ಯಾವುದಕ್ಕೂ ಹೆದರಲಾರರು. ಅದೇ ರೀತಿ ಹೊಗಳಿಕೆಗೆ ಮಣಿಯದ, ಆಮಿಷಕ್ಕೆ ಬಲಿಯಾಗದವರೂ ಇರಲಾರರು. ಇದನ್ನು ದಾನಿಯು ಅರಿತಂತಿದೆ. ಪುನರ್ಜನ್ಮದ ಬಗ್ಗೆ ನಂಬಿಕೆಯಿರುವ ವ್ಯಕ್ತಿಯು ಜನ್ಮಾಂತರಗಳ ಕಲ್ಪನೆಯನ್ನು ಇಟ್ಟುಕೊಂಡಿರುವುದರಿಂದ ನಂತರದ ಜನ್ಮದಲ್ಲಿ ಲಭಿಸುವ ಪುಣ್ಯಗಳು ಇಂದು ಮಾಡುವ ಕೆಲಸಗಳ ಮೇಲೆ ಆಧಾರಿತವಾಗಿವೆ ಎಂಬ ಅಂಶಗಳನ್ನು ದಾನಿಗಳು ಪುಣ್ಯಾಶಯಗಳಲ್ಲಿ ಸೇರಿಸುತ್ತಾ ಬಂದರು. ಹೀಗೆ ಹೊಗಳುವ ಮೂಲಕ ಅವರಿಗೆ ಲಭಿಸುವ ಪುಣ್ಯಫಲಗಳನ್ನು ತಿಳಿಸುತ್ತಾ ಅವರ ಆತ್ಮವನ್ನು ತೃಪ್ತಿಪಡಿಸುವ ನೆಪದಲ್ಲಿ ತಾನಿತ್ತ ದಾನವನ್ನು ಕಾಪಾಡಿಕೊಳ್ಳುವ ಪ್ರಯತ್ನವನ್ನು ಮಾಡಿರುವುದು ಈ ಪುಣ್ಯಾಶಯಗಳಿಂದ ತಿಳಿದುಕೊಳ್ಳಬಹುದಾಗಿದೆ.

'ದಾನವಾಂ ಪಾಲನಯೋರ್ಮಧ್ಯೇ ದಾನೇಶ್ರೇಯೋನುಪಾಲನಂ
ದಾನತ್ಸ್ವರ್ಗಮಾವಾಮ್ನೋತಿ ಪಾಲನಾದಚ್ಯುತಂ ಪದಂ'[೧]

ಯಾವುದೇ ವ್ಯಕ್ತಿಯು ದಾನ ಮಾಡುವುದರಿಂದ ಅವನಿಗೆ ಸ್ವರ್ಗವು ಲಭಿಸಿದರೆ, ಈಗಾಗಲೇ ಯಾರಾದರೂ ದಾನ ನೀಡಿರುವುದನ್ನು ಪಾಲನೆ ಮಾಡುವುದರಿಂದ ಅಥವಾ ಅದರ ರಕ್ಷಣೆಯಿಂದ ಅಚ್ಯುತ ಪದವಿಯು ದೊರೆಯುತ್ತದೆ ಎಂಬ ಅಂಶಗಳನ್ನು ಸೇರಿಸುತ್ತಾ ದಾನವನ್ನು ಕಾಪಾಡುವವನಿಗೆ ಇರುವ ಸ್ಥಿತಿ, ಸ್ಥಾನಮಾನಗಳಿಗಿಂತ ಹೆಚ್ಚಿನ ಮತ್ತು ಉತ್ತಮ ಸ್ಥಾನ ಲಭಿಸುವುದನ್ನು ತಿಳಿಸತೊಡಗಿದರು.

ಪುಣ್ಯದ ಅಂಶಗಳನ್ನು ತಿಳಿಸುವ ಸಂದರ್ಭಗಳಲ್ಲಿ ಮನುಷ್ಯನು ತಾನು ರಕ್ತಗತವಾಗಿ ಬೆರೆಸಿಕೊಂಡಿರುವ ಮತ್ತು ಹೆಚ್ಚಾಗಿ ನಂಬಿರುವ ಹಲವಾರು ಪುಣ್ಯಕ್ಷೇತ್ರಗಳನ್ನು ಬಳಸಿಕೊಂಡು ಯಾರು ದಾನವನ್ನು ರಕ್ಷಿಸಿ, ಕಾಪಾಡಿಕೊಂಡು ಬರುತ್ತಾರೋ ಅವರಿಗೆ ಇಂತಹ ಪುಣ್ಯಕ್ಷೇತ್ರಗಳಲ್ಲಿ ಪುಣ್ಯ ಕಾರ್ಯ ಮಾಡಿದ ಶ್ರೇಯಸ್ಸು ಮತ್ತು ಸಹಸ್ರ ಸಂಖ್ಯೆಯಲ್ಲಿ ಗೋವುಗಳನ್ನು ದಾನ ಮಾಡಿದ ಪುಣ್ಯವು ಲಭಿಸುತ್ತದೆ ಎಂಬ ಅಂಶಗಳನ್ನು ಹಾಕತೊಡಗಿದರು. ಇದಕ್ಕೆ ಉದಾಹರಣೆಯಾಗಿ ಈ ಕೆಳಗಿನ ಪುಣ್ಯಾಶಯವನ್ನು ನೋಡಬಹುದು :

'ಇನ್ತೀ ಧರ್ಮವಂ ಕಾದು ಪ್ರತಿಪಾಳಿಸಿದವರ್ಗೆ ಗಂಗೆ ವಾರಾಣಾಸಿ ಕುರುಕ್ಷೇತ್ರ ಪ್ರಯಾಗ ಯರ್ಗ್ಘ
ತೀರ್ಥಗಳೊಳು ಗ್ರಹಣ ಸಂಕ್ರಾನ್ತೀ ವ್ಯತಿಪಾತವೆಂಬ ತೀರ್ಥಂಗಳೊಳಂ ಚತುರ್ವೇದ ಪಾರಗುರಪ್ಪ
ದ್ವಿಜೋತ್ತಮರಿಗೆ ತಪೋಧನರ್ಗೆ ಯೊನ್ದು ಕೋಟಿ ಕವಿಲೆಯುಮಂ, ಕೋಡು ಕೊಳಗುಮಂ
ಸುವರ್ಣದೊಳು ಕಟ್ಟಿಸಿ ದಾನಗಯ್ದ ಫಳಮಕ್ಕುಂ'[೨]

ನಮ್ಮ ಹಿಂದೂ ಸಂಪ್ರದಾಯದಲ್ಲಿ ಹಲವಾರು ನಂಬಿಕೆಗಳಿಗನುಗುಣವಾಗಿ ಹಲವಾರು ಪುಣ್ಯಕ್ಷೇತ್ರಗಳಿವೆ. ಅವು ನಮ್ಮ ಪಾಪವನ್ನು ಪರಿಹಾರ ಮಾಡಿ ನಮಗೆ ಪುಣ್ಯವನ್ನು ಒದಗಿಸಿಕೊಡುವಂತಹ ಸ್ಥಳಗಳು ಅಥವಾ ಪವಿತ್ರ ಕ್ಷೇತ್ರಗಳು. ಇಂತಹ ಪಾಪನಿವಾರಕ ಅಥವಾ ಪುಣ್ಯದಾಯಕ ಸ್ಥಳಗಳಾದ ಗಂಗೆ, ವಾರಣಾಸಿ, ಕುರುಕ್ಷೇತ್ರ, ಪ್ರಯಾಗ ಮುಂತಾದ ಕ್ಷೇತ್ರವನ್ನು ದರ್ಶಿಸುವುದರಿಂದಲೇ ಏಳೇಳು ಜನ್ಮದ ಪಾಪವೆಲ್ಲ ಪರಿಹಾರವಾಗುವುದೆಂಬ ನಂಬಿಕೆ ಎಲ್ಲರಲ್ಲೂ ತುಂಬಿದೆ. ಅಂತಹ ಸ್ಥಳಗಳಲ್ಲಿ ದಾನ ಮಾಡುವುದು ಅದರಲ್ಲೂ ಭೂಸುರ ಅಥವಾ ದ್ವಿಜೋತ್ತಮರಾದ ಬ್ರಾಹ್ಮಣರಿಗೆ ಗೋ ದಾನ ಮಾಡುವುದು ಅತಿ ಪುಣ್ಯಕರವಾದುದು. ಸುವರ್ಣದಾನ, ಗೋದಾನ ಅತಿ ಪವಿತ್ರವೆಂದು ಭಾವಿಸುವ ನಮ್ಮ ಸಂಪ್ರದಾಯದಲ್ಲಿ ಕೋಟಿ ಗೋವುಗಳನ್ನು ದಾನ ಮಾಡುವುದು ತುಂಬಾ ಶ್ರೇಯಸ್ಕರವೆಂದು ಭಾವಿಸಲಾಗುತ್ತದೆ. ಇಂತಹ ಪುಣ್ಯವು ಕೇವಲ ಈಗಾಗಲೇ ಯಾರೋ ನೀಡಿರುವ ದಾನವನ್ನು ರಕ್ಷಿಸಿ ಕಾಪಾಡಿಕೊಂಡು ಬಂದರೆ ಸಿಗುವುದೆಂಬ ಅಭಿಪ್ರಾಯವನ್ನು ಪುಣ್ಯಾಶಯಗಳಲ್ಲಿ ತಿಳಿಸತೊಡಗಿದರು.

ಇನ್ನೊಂದು ಶಾಸನದಲ್ಲಿ ಇದೇ ರೀತಿಯ ಪುಣ್ಯಾಶಯವನ್ನು ಕಾಣಬಹುದು.

'ಇನ್ತೀ ಧರ್ಮಂಗಳಂ ಪ್ರತಿಪಾಳಿಯಿಸಿದವರು ಶ್ರೀ ವಾರಣಾಸಿ ಪ್ರಯಾಗೆ ಕುರುಕ್ಷೇತ್ರ ಅರ್ಗ್ಘ್ಯ ತೀರ್ಥ ಶ್ರೀ ಪರ್ವತಾದಿ ಪುಣ್ಯಕ್ಷೇತ್ರದ ತಡಿಯಲು ಸಹಸ್ರ ಕವಿಲೆಗಳುಂ ಕೋಡುಂ ಕೊಳುಗುವಂ ಸುವರ್ಣದಲು ಕಟ್ಟಿಸಿ ಸಹಸ್ರವೇದ ಪಾರಗರಪ್ಪ ಸುಬ್ರಾಹ್ಮಣರರ್ಗೆ ಸೂರ್ಯಗ್ರಹಣ, ಸೋಮಗ್ರಹಣ ಬ್ಯತಿಪಾತ ಸಂಕ್ರಮಣಾದಿ ಪುಣ್ಯಕಾಲದೊಳ್ವಿಧಿಯುಕ್ತವಾಗೆ ಕೊಟ್ಟ ಫಲವಂ ಪಡೆವರು'[೩]

ಈಗಾಗಲೇ ಹಿಂದಿನವರು ನೀಡಿರುವ ದಾನ ಧರ್ಮವನ್ನು ಪಾಲಿಸಿ, ಅವುಗಳನ್ನು ರಕ್ಷಿಸುವುದರಿಂದಲೇ ಗಂಗೆ, ವಾರಣಾಸಿ, ಕುರುಕ್ಷೇತ್ರ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಸಾವಿರ ಗೋವುಗಳನ್ನು ದಾನ ಮಾಡಿದ ಪುಣ್ಯವು ಲಭಿಸುತ್ತದೆ. ಅಷ್ಟೇ ಅಲ್ಲದೆ ಆ ಗೋವುಗಳಿಗೆ ಚಿನ್ನದ ಕೋಡುಗಳನ್ನು ಮಾಡಿಸಿ, ಭೂಸುರರಾದ ಸಹಸ್ರವೇದ ಪಾರಂಗತರಾದ ಬ್ರಾಹ್ಮಣರಿಗೆ ವ್ಯತಿಪಾತ ಸಂಕ್ರಮಣ ಕಾಲದಲ್ಲಿ ವಿಧಿಯುಕ್ತವಾಗಿ ದಾನ ಮಾಡಿದ ಫಲವು ಲಭಿಸುತ್ತದೆ ಎಂಬ ಅಂಶಗಳನ್ನು ಸೇರಿಸಿರುವುದನ್ನೂ ಕಾಣಬಹುದು.

ಇದೇ ಅರ್ಥದಂತೆ ಬೇರೊಂದು ಶಾಸನದಲ್ಲಿ ಕಂಡುಬರುವ ಪುಣ್ಯಾಶಯ ಹೀಗಿದೆ:

'ಈ ಧರ್ಮಮಂ ರಕ್ಷಿಸಿದವರ್ಗ್ಗೆ ಬಾರಣಾಸಿ ಪ್ರಯಾಗ ಕುರುಕ್ಷೇತ್ರ ದೊಳೆ
ಸಾಯಿರ ಕವಿಲೆಯ ಕೋಡುಂ ಕೊಳಗುಮಂ ಪೊನ್ನೊಲ್ಕಟ್ಟಿಕೊಟ್ಟ
ಫಲಮನಾಕ್ಷೇತ್ರದಲ್ಮಹಾ ಮುನಿಗಳ್ಗನ್ನ ದಾನಮುಮಂ ಕೊಟ್ಟ ಫಲಮನೆಯ್ದುವರ್'[೪]

ಈ ಪುಣ್ಯಾಶಯದಲ್ಲಿ ಪುಣ್ಯ ಅಥವಾ ಪವಿತ್ರ ಕ್ಷೇತ್ರದಲ್ಲಿ ದಾನ ಮಾಡುವ ಅಂಶವು ಕಂಡುಬರುವುದಲ್ಲದೆ ಮಹಾ ಮುನಿಗಳಿಗೆ ಅನ್ನದಾನವನ್ನು ಮಾಡಿದ ಪುಣ್ಯವೂ ಲಭಿಸುತ್ತದೆ ಎಂಬ ಅಂಶ ಇರುವುದನ್ನು ಕಾಣಬಹುದಾಗಿದೆ. ಅಂದರೆ ಆಗಿನ ಕಾಲದಲ್ಲಿ ಮುನಿಗಳಿಗೆ ಅನ್ನದಾನ ಮಾಡುವುದೂ ಸಹ ಅತ್ಯಂತ ಶ್ರೇಷ್ಠವಾದ ಕಾರ್ಯವಾಗಿತ್ತೆಂದು ಇದರಿಂದ ತಿಳಿದುಬರುತ್ತದೆ.

ಋಷಿ ಮುನಿಗಳಿಗೆ ಅನ್ನದಾನದ ಜೊತೆಗೆ ಚಿನ್ನದ ದಾನ ಮತ್ತು ಗೋದಾನವನ್ನು ಕೊಟ್ಟರೆ ಇನ್ನೂ ಶ್ರೇಯಸ್ಕರ ಎಂಬ ಅಂಶವನ್ನು ತೀರ್ಥಹಳ್ಳಿಯಲ್ಲಿ ದೊರೆತಿರುವ ಶಾಸನಗಳು ಈ ರೀತಿ ತಿಳಿಸುತ್ತವೆ.

'ಈ ಧರ್ಮವನು ಪಾಲಿಸಿದವರಿಗೆ ಸೋಮೋಪರಾಗ, ಸೂರಿಯೋಪರಾಗ ಮಹಾಪುಣ್ಯಕಾಲದಲು ವಾರಣಾಸಿಯಲು ಸಹಸ್ರ ಕಪಿಲೆಯನು ಸಹ ಅಲಂಕಾರ ಪ್ರದಕ್ಷಿಣೆ ಸಹಿತವಾಗಿ ಸಹಸ್ರ ಬ್ರಾಹ್ಮಣರಿಗೆ ಧಾರೆಯನೆರೆದು ಕೊಟ್ಟ ಫಲವಹುದು'[೫]

ದಾನವನ್ನು ಕೊಡುವ ಸಂದರ್ಭದಲ್ಲಿ ಕೊಡುವ ಸಮಯ ಅಥವಾ ಕಾಲವೂ ತುಂಬಾ ಪ್ರಾಮುಖ್ಯತೆಯನ್ನು ಪಡೆಯುತ್ತದೆ ಎಂಬುದು ಈ ಪುಣ್ಯಾಶಯದಿಂದ ತಿಳಿದುಬರುತ್ತದೆ. ಏಕೆಂದರೆ ನಮ್ಮ ಹಿಂದೂ ಸಂಪ್ರದಾಯದಲ್ಲಿ ಯಾವುದೇ ಪುಣ್ಯ ಕಾರ್ಯ ಮಾಡಬೇಕಾದರೆ ಅದಕ್ಕೆ ಸೂಕ್ತ ಕಾಲ, ತಿಥಿ, ನಕ್ಷತ್ರ ಎಲ್ಲವನ್ನೂ ನೋಡಿ ಅದು ಸರಿಯಾಗಿದ್ದರೆ ಮಾತ್ರ ಆ ಕಾರ್ಯವನ್ನು ನೆರವೇರಿಸುತ್ತಾರೆ. ಎಲ್ಲವೂ ಶುಭಮಯವಾಗಿ ಕಂಡುಬರುವಂತಹ ಪುಣ್ಯ ಕಾಲದಲ್ಲಿ ಚಿನ್ನದಿಂದ ಅಲಂಕಾರ ಮಾಡಿದ ಗೋವುಗಳನ್ನು ದಾನ ಮಾಡುವುದೆಂದರೆ ಅತಿ ಪುಣ್ಯಾತಿಪುಣ್ಯವಾಗಿರುತ್ತದೆ. ಇಂತಹ ಪುಣ್ಯವು ಕೇವಲ ದಾನವನ್ನು ಪಾಲಿಸಿಕೊಂಡು ಬಂದರೆ ಲಭಿಸುವುದು ಎಂಬ ಅಭಿಪ್ರಾಯವನ್ನು ಇದರಲ್ಲಿ ತಿಳಿಸುವುದು ಕಂಡುಬರುತ್ತದೆ.

'ಈ ಧರ್ಮವ ಪಾಲಿಸಿದವರು ವಾರಣಾಸಿ ಗಂಗೆ ಪಂಡರಂಗ ಪೊಳಗಾದ ಕ್ಷೇತ್ರಗಳಲಿ ವಸಿಷ್ಠ ವಾಮದೇವರಂತ ಬ್ರಾಹ್ಮಣರಿಗೆ ಸಕಾಲಂಕಾರ ಸಹಿತ ಗೋದಾನ ಹಿರಣ್ಯ ದಾನ ಕೊಟ್ಟ ಫಲವಹುದು'[೬]

'ಇನ್ತೀ ಧರ್ಮವಂ ಪ್ರತಿಪಾಳಿಸಿದವರ್ಗೆ ಗಂಗೆ ವಾರಣಾಸಿ ಕುರುಕ್ಷೇತ್ರಗಳಲಿ ಕೋಟ ಗೋದಾನಮುಮಂ ಕನ್ಯಾದಾನಮುಮಂ ಭೂದಾನಮುಮಂ ಮಾಡಿದ ಫಳ'[೭]

ಚಿನ್ನ, ಅನ್ನ, ಗೋವು, ಭೂದಾನ ಮುಂತಾದ ಹದಿನೆಂಟು ದಾನಗಳಲ್ಲಿ ಕನ್ಯಾದಾನವೂ ಒಂದಾಗಿದೆ. ಹಲವಾರು

ಪುಣ್ಯಕ್ಷೇತ್ರಗಳಲ್ಲಿ ಕನ್ಯೆಯನ್ನು ದಾನ ಮಾಡುವುದರಿಂದಲೂ ಪುಣ್ಯ ಲಭಿಸುವುದು ಎಂಬ ಅಂಶವನ್ನೂ ಈ ಪುಣ್ಯಾಶಯ ತಿಳಿಸುತ್ತದೆ.

ಹೀಗೆ ನಾವು ಹಲವಾರು ಪುಣ್ಯಕ್ಷೇತ್ರಗಳಿಗೆ ಹೋಗಿ ದಾನ ಮಾಡುವುದರಿಂದ ಲಭಿಸುವ ಪುಣ್ಯಕ್ಕಿಂತಲೂ ದಾನವನ್ನು ರಕ್ಷಿಸಿದರೆ ಒದಗುವ ಪುಣ್ಯವು ಹೆಚ್ಚು ಎಂಬುದು ತಿಳಿದು ಬರುತ್ತದೆ. ಅದೇ ರೀತಿ ಮತ್ತೊಂದು ಪುಣ್ಯಾಶಯದಲ್ಲಿ ಉಭಯಮುಖಿ ಗೋದಾನವನ್ನು ನೀಡಿದರೆ ಇನ್ನೂ ಹೆಚ್ಚಿನ ಪುಣ್ಯವು ಸಿಗುತ್ತದೆಂಬ ಅಂಶವನ್ನು ಶಾಸನಗಳಲ್ಲಿ ಕಾಣಬಹುದಾಗಿದೆ.

'ಮರ್ಯಾದೆಯ ಧರ್ಮಮಂ ಕಾದು ನಡೆಯಿಸಿದಂಗೆ
ಪ್ರಯಾಗ ಕುರುಕ್ಷೇತ್ರ ಬಾರಣಾಸಿ ಅರ್ಗ್ಘ್ಯ ತೀರ್ಥಮೆಂಬ
ತೀರ್ತ್ಥಂಗಳೊಳ್ ಪನ್ನಿರ್ಚ್ಛಾಸಿರ ಕವಿಲೆಯ ಕೋಡುವಂ
ಕೊಳಗಿನೊಳಂ ಪೊನ್ನುಂ ಬೆಳ್ಳಿಯೊಳಂ ಕಟ್ಟಿಸಿ ಪನ್ನಿ
ರ್ಚ್ಛಾಸಿರ ಮಹಾಬ್ರಾಹ್ಮಣರ್ಗುಭಯಮುಖಿಗೊಟ್ಟ ಫಲಮ್'[೪]

ಉಭಯಮುಖಿ ಎಂದರೆ ಹಸುವು ತುಂಬು ಗರ್ಭ ಧರಿಸಿ, ನಂತರ ಪ್ರಸವದ ಸಮಯದಲ್ಲಿ ಕರುವನ್ನು ಹೊರಹಾಕುವಾಗ ಅದರ ತಲೆಯು ಹೊರಬಂದಾಗ ಅದನ್ನು ದಾನ ನೀಡಿದರೆ ಅದು ಉಭಯಮುಖಿ ದಾನ ಎನಿಸಿಕೊಳ್ಳುತ್ತದೆ. ಏಕೆಂದರೆ ಉಭಯ ಎಂದರೆ ಎರಡು, ಮುಖಿ ಎಂದರೆ ಮುಖಗಳನ್ನು ಹೊಂದಿರುವುದು ಹಸುವಿನ ಮುಖ ಮತ್ತು ಕರುವಿನ ಮುಖ ಎರಡೂ ಕಂಡುಬರುವುದರಿಂದ ಅದನ್ನು ಉಭಯಮುಖಿ ಎಂದು ಕರೆಯುತ್ತಾರೆ. ಇಂತಹ ಹಸುವನ್ನು ದಾನ ಮಾಡಿದರೆ ಅದು ಅತ್ಯಂತ ಶ್ರೇಷ್ಠ ದಾನವೆನಿಸಿಕೊಳ್ಳುತ್ತದೆ.

ತಾನು ದಾನ ಕೊಟ್ಟದ್ದಕ್ಕೆ ಸಿಗುವ ಪುಣ್ಯಕ್ಕಿಂತಲೂ ಬೇರೆಯವರು ಕೊಟ್ಟ ದಾನವನ್ನು ಕಾಪಾಡಿಕೊಂಡು ಬರುವುದರಿಂದ ಸಿಗುವ ಪುಣ್ಯವು ಹೆಚ್ಚು ಎಂದು ತಿಳಿಸುವಲ್ಲಿ ದಾನ ನೀಡದೇ ಹೋದರೂ ಪರವಾಗಿಲ್ಲ ನೀಡಿರುವ ದಾನಕ್ಕೆ ಯಾವುದೇ ಚ್ಯುತಿಯನ್ನು ತಾರದೆ ಇದ್ದರೆ ಅಷ್ಟೇ ಸಾಕು ಎಂಬ ಅಭಿಪ್ರಾಯವು ಕಂಡುಬರುತ್ತದೆ. ಏಕೆಂದರೆ ಈ ದಾನವನ್ನು ಕಾಪಾಡಿಕೊಂಡು ಬರುವಲ್ಲಿ ಕ್ರಮೇಣ ಬರುವ ರಾಜರ ಪಾತ್ರವು ತುಂಬ ಮಹತ್ವದ್ದಾಗಿರುತ್ತದೆ. ಅವರು ಹಿಂದಿನ ರಾಜರ ಔದಾರ್ಯವನ್ನು ಎತ್ತಿ ಹಿಡಿಯುವ ಮನೋಭಾವದವರಾಗಿದ್ದರೆ ಅದನ್ನು ಕಾಪಾಡುವಲ್ಲಿ ನೆರವಾಗುತ್ತಾರೆ. ಇಲ್ಲ ಕೇವಲ ತನ್ನ ಹೆಸರು ಮಾತ್ರ ಜನತೆಯ ಮನದಲ್ಲಿ ನಿಲ್ಲಲಿ ಎಂಬ ಸ್ವಾರ್ಥ ಮನೋಭಾವವನ್ನು ಹೊಂದಿದ್ದರೆ ಹಿಂದೆ ನೀಡಿದ್ದ ರಾಜರ ದಾನವನ್ನು ಅಳಿಸಿ ತನ್ನ ದಾನವನ್ನು ಉಳಿಸುವ ಪ್ರಯತ್ನವನ್ನು ಮಾಡುವ ಅವಕಾಶಗಳು ಹೆಚ್ಚಾಗಿರುತ್ತವೆ. ಅದಕ್ಕೆ ಅಂತಹ ದಾನವನ್ನು ಕೊಟ್ಟು ಹೆಸರನ್ನು, ಪುಣ್ಯವನ್ನು ಪಡೆಯುವುದಕ್ಕಿಂತ ಹಿಂದಿನ ದಾನವನ್ನು ನಾಶಪಡಿಸದೇ ಕಾಪಾಡುವುದರಿಂದ ಹೆಚ್ಚಿನ ಪುಣ್ಯವು ಲಭಿಸುತ್ತದೆ. ಅದನ್ನು ಹೊರತುಪಡಿಸಿ ಬೇರೆಯವರು ಕೊಟ್ಟ ದಾನವನ್ನು ಅಪಹರಿಸಿದರೆ ಅಥವಾ ನಾಶಪಡಿಸಿದರೆ ತಾನು ಕೊಟ್ಟ ದಾನದ ಪುಣ್ಯವೂ ಸಹ ನಾಶವಾಗುತ್ತದೆ ಎಂಬ ಅಂಶವನ್ನು ತಿಳಿಸುವ ಶಾಸನವೊಂದು ಹೀಗಿದೆ.

'ಸ್ವದತ್ತಾಂ ದ್ವಿಗುಣಂ ಪುಣ್ಯಂ ಪರದತ್ತಾನುಂಪಾಲನಂ
ಪರದತ್ತಾಪಹರೇಣ ಸ್ವದತ್ತಂ ನಿಷ್ಫಲಂ ಭವೇತ್'[೫]

ಹೀಗೆ ಪುಣ್ಯಾಶಯಗಳೂ ದಾನವನ್ನು ರಕ್ಷಣೆಯನ್ನು ಮಾಡುವಲ್ಲಿ ತಮ್ಮದೇ ಆದ ಪಾತ್ರವನ್ನು ವಹಿಸಿರುವುದು ಕಂಡುಬರುತ್ತದೆ. ಇಂತಹ ಪುಣ್ಯಾಶಯಗಳಿಂದ ದಾನವನ್ನು ಯಾರಿಗೆ ಮಾಡಿದರೆ ಶ್ರೇಯಸ್ಕರ, ಎಂತಹ ಸಮಯದಲ್ಲಿ ಮಾಡಬೇಕು, ದಾನದಲ್ಲಿ ಎಷ್ಟು ದಾನಗಳಿವೆ, ಯಾರಿಗೆ ದಾನ ಮಾಡಿದರೆ ಅತ್ಯಂತ ಶ್ರೇಷ್ಠ ಪುಣ್ಯ ದೊರಕುತ್ತದೆ ಎಂಬುದನ್ನೆಲ್ಲ ಅರಿತುಕೊಳ್ಳಬಹುದಾಗಿದೆ.

ಶಾಸನ ಮತ್ತು ಸಾಹಿತ್ಯದಲ್ಲಿ ಕಂಡುಬರುವ ಶಾಪಾಶಯ ಮತ್ತು ಪುಣ್ಯಾಶಯ ಹಾಗೂ ವರಗಳನ್ನು ಅಧ್ಯಯನ ಮಾಡುತ್ತಾ ಹೋದಂತೆಲ್ಲ ಶಾಪಗಳು, ಮಾನವ ಸಂಬಂಧದ ವಿಶಿಷ್ಟ ನೆಲೆಗಟ್ಟುಗಳನ್ನು ಬೆಳಕಿಗೆ ತರುವಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ ಎಂಬುದು ಗಮನಾರ್ಹ ಸಂಗತಿ. ಹಾಗೆಯೇ ಸಮಾಜದಲ್ಲಿ ತನ್ನ ಸ್ಥಾನಮಾನವನ್ನು ಕಳೆದುಕೊಂಡು, ಕುಸಿಯುತ್ತಿರುವ ಜೀವನಮೌಲ್ಯಗಳನ್ನು ಅನಾವರಣಗೊಳಿಸುವಲ್ಲಿ ಈ ಶಾಪಗಳು ನೆರವಾಗುತ್ತವೆ. ಅಂದರೆ

ಸಮಾಜವು ಕುಸಿಯುವ ಜೀವನ ಮೌಲ್ಯ ಮತ್ತು ಸಾಮಾಜಿಕ ಮೌಲ್ಯಗಳನ್ನು ಉಳಿಸಿ, ಕಾಪಾಡಿಕೊಂಡು ಬರಲು, ತನ್ನ ಸುತ್ತಲೂ ಸಂಸ್ಕೃತಿಯ ಬೇಲಿಯನ್ನು ಅಥವಾ ಸಂಪ್ರದಾಯವೆಂಬ ಚೌಕಟ್ಟನ್ನು ಹಾಕುವುದರ ಮೂಲಕ ಸಮಾಜಕ್ಕೆ ಅಂಟಿಕೊಳ್ಳಬಹುದಾದ ಹಲವಾರು ಅನಿಷ್ಟಗಳನ್ನು ತೊಡೆದು ಹಾಕುವಲ್ಲಿ ಕಂಡುಕೊಂಡ ಉಪಾಯವನ್ನು ಅರಿಯಲು ಈ ಶಾಪ ಮತ್ತು ಪುಣ್ಯಾಶಯಗಳ ಪಾತ್ರ ಬಹು ದೊಡ್ಡದು ಎಂದು ತಿಳಿಯಬಹುದು. ಹೀಗೆ ಸಮಾಜವು ಕೆಲವು ಅಧರ್ಮ, ಅನ್ಯಾಯ, ಅಕ್ರಮಗಳನ್ನು ತಡೆಯಲು ಮತ್ತು ಜೀವನಮೌಲ್ಯಗಳಿಗೆ ನ್ಯಾಯ ಒದಗಿಸುತ್ತಾ ಸಾಮಾಜಿಕ ಮೌಲ್ಯಗಳನ್ನು ಉಳಿಸಿಕೊಂಡು ಬರಲು ನಿರ್ಮಿಸಿಕೊಂಡ ಈ ರೀತಿ ನೀತಿಗಳನ್ನು ಪ್ರತಿಯೊಬ್ಬರೂ ಗೌರವಿಸಬೇಕೆಂಬುದು ಸಮಾಜದ ಪ್ರಮುಖ ಧ್ಯೇಯೋದ್ದೇಶವಾಗಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. **ಎಪಿಗ್ರಾಫಿಯಾ ಕರ್ನಾಟಕಾ** – ೯, ಬೇಲೂರು ೧೭೦, (ಮೈ.ವಿ.ವಿ., ಪರಿಷ್ಕೃತ ಆವೃತ್ತಿ) ಕ್ರಿ.ಶ. ೧೨೬೧.

೨. **ಎಪಿಗ್ರಾಫಿಯಾ ಕರ್ನಾಟಕಾ** – V, ಅರಸೀಕೆರೆ ೧೨೪, (ರೈಸ್ ಆವೃತ್ತಿ) ಕ್ರಿ.ಶ. ೧೦೬೦.

೩. **ಎಪಿಗ್ರಾಫಿಯಾ ಇಂಡಿಕಾ** – V, ಪು.೨೪೫–೨೫೨, ಕ್ರಿ.ಶ. ೧೨೦೦.

೪. **ಎಪಿಗ್ರಾಫಿಯಾ ಕರ್ನಾಟಕಾ** – VIII, ನಗರ ೩೬, (ರೈಸ್ ಆವೃತ್ತಿ) ಕ್ರಿ.ಶ. ೯೫೦.

೫. **ಎಪಿಗ್ರಾಫಿಯಾ ಕರ್ನಾಟಕಾ** – VIII, ತೀರ್ಥಹಳ್ಳಿ ೧೨೨, (ರೈಸ್ ಆವೃತ್ತಿ) ಕ್ರಿ.ಶ. ೧೩೨೭.

೬. ಅದೇ, ಪುಟ ೫೮೨, ಕ್ರಿ.ಶ. ೧೩೨೬.

೭. ಅದೇ, ಪುಟ ೫೮೨, ಕ್ರಿ.ಶ. ೧೩೨೬.

೮. **ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್** - XI, Part - 1 (ಬಾಂಬೆ ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್–೧), ಶಾಸನ ಸಂಖ್ಯೆ ೫೨, ಪು.೪೨.

೯. **ಎಪಿಗ್ರಾಫಿಯಾ ಕರ್ನಾಟಕಾ** – IX, ಬೆಂಗಳೂರು ೮, (ರೈಸ್ ಆವೃತ್ತಿ) ಕ್ರಿ.ಶ. ೧೩೬೦.



# ದೇವರ ಬೆಟ್ಟ ಅಥವಾ ದೇವರಕೊಂಡ ಗ್ರಾಮ
## – ಒಂದು ಅವಲೋಕನ

– ಡಿ. ಸ್ಮಿತಾರೆಡ್ಡಿ*

**ದೇ**ವರಬೆಟ್ಟ ಅಥವಾ ದೇವರಕೊಂಡ ಗ್ರಾಮವು ಕರ್ನಾಟಕದ ದಕ್ಷಿಣ ಗಡಿಭಾಗದಲ್ಲಿ ಇರುವ ಒಂದು ಸಣ್ಣ ಗ್ರಾಮ. ಬೆಂಗಳೂರು ನಗರದಿಂದ ಸುಮಾರು ೫೦ ಕಿ.ಮೀ. ಹಾಗೂ ಆನೇಕಲ್‌ನಿಂದ ಸುಮಾರು ೧೦ ಕಿ.ಮೀ.ಗಳ ಅಂತರದಲ್ಲಿದೆ. ಭೌಗೋಳಿಕವಾಗಿ ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಯ ಡೆಂಕಣಿಕೋಟ ತಾಲ್ಲೂಕಿಗೆ ಸೇರಿದ್ದರೂ, ಭಾವನಾತ್ಮಕವಾಗಿ ಕರ್ನಾಟಕದೊಂದಿಗೆ ಬೆಸೆದುಕೊಂಡಿದೆ. ಈ ಗ್ರಾಮದ ನಿವಾಸಿಗಳ ವ್ಯಾವಹಾರಿಕ ಹಾಗೂ ಮಾತೃಭಾಷೆ ಕನ್ನಡವೇ. ಗ್ರಾಮದಲ್ಲಿರುವ ಬೆಟ್ಟ ಹಾಗೂ ಅದರ ಮೇಲೆ ಹಾಗೂ ತಲದಲ್ಲಿರುವ ದೇವಾಲಯದ ಕಾರಣ ಆ ಗ್ರಾಮಕ್ಕೆ ದೇವರಬೆಟ್ಟವೆಂದು ಹೆಸರು ಬಂದಿದೆ. ಕೊಂಡ ಎಂಬುದು ಬೆಟ್ಟದ ತೆಲುಗು ರೂಪ.

ದೇವರಬೆಟ್ಟ ಗ್ರಾಮವು ಅರಣ್ಯದ ಅಂಚಿನಲ್ಲಿದೆ ಹಾಗೂ ಸನತ್ಕುಮಾರಾದ್ರಿ ಶ್ರೇಣಿಯ ಪಾದದಲ್ಲಿದೆ. ಸನತ್ಕುಮಾರಾದ್ರಿ ಶ್ರೇಣಿ ಇಲ್ಲಿಂದಲೇ ಪ್ರಾರಂಭವಾಗುತ್ತದೆ. ಇಲ್ಲಿಂದ ಮುಂದುವರೆದು ದಕ್ಷಿಣದ ಕಡೆಗೆ ಸಾಗುತ್ತದೆ. ಐತಿಹ್ಯಗಳ ಪ್ರಕಾರ ಬ್ರಹ್ಮನ ಮಾನಸಪುತ್ರ ಸನತ್ಕುಮಾರ ತಪಸ್ಸು ಮಾಡಿದ್ದು ಇಲ್ಲೇ. ಬೆಟ್ಟದ ಬುಡದಲ್ಲಿ ಗುಹೆಯಂತಿರುವ ಒಂದಕ್ಕೊಂದು ತಾಗಿಕೊಂಡಿರುವ ಹುಟ್ಟು ಬಂಡೆಗಳ ನಡುವೆ ಇರುವ ಸ್ಥಳವನ್ನು ದೇವಾಲಯದಂತೆ ಮಾರ್ಪಡಿಸಿ ಈ ಹುಟ್ಟು ಬಂಡೆಗಳ ಕೆಳಗೆ ಲಿಂಗಾಕೃತಿಯ ಎರಡು ಗುಂಡುಕಲ್ಲುಗಳನ್ನಿಟ್ಟು ರುದ್ರಮುನೀಶ್ವರ ಅಥವಾ ಜಡೆಮುನೀಶ್ವರನೆಂದು ಪೂಜಿಸುತ್ತಾರೆ. ಗರ್ಭಗುಡಿ ತುಂಬಾ ಇಕ್ಕಟ್ಟಾಗಿದೆ. ಇದು ಭೂ ಮೇಲ್ಮಟ್ಟದಿಂದ ಸುಮಾರು ೬ ಅಡಿ ಕೆಳಭಾಗದಲ್ಲಿತ್ತು. ಇತ್ತೀಚೆಗೆ ಜೀರ್ಣೋದ್ಧಾರದ ಹೆಸರಿನಲ್ಲಿ ದೇವಾಲಯದ ಮೂಲ ರಚನೆಯನ್ನು ಸಂಪೂರ್ಣವಾಗಿ ಬದಲಾಯಿಸಿ ಆಧುನೀಕರಣಗೊಳಿಸಲಾಗಿದೆ.

ದೇವರಬೆಟ್ಟ ಗ್ರಾಮದ ಸ್ಥಳಮಹಿಮೆಯನ್ನು ತಿಳಿಸುವ ಐತಿಹ್ಯವೊಂದು ಹೀಗಿದೆ. ಒಮ್ಮೆ ರೇವಣಸಿದ್ಧೇಶ್ವರರು ಕೆರೆಯೊಂದನ್ನು ಕಟ್ಟಿಸುತ್ತಿದ್ದರು. ಕೆರೆಯನ್ನು ಕಟ್ಟಲು ಸಹಾಯಕಳಾಗಿ ಬಂದಿದ್ದ ಮಹಿಳೆ ರೇವಣಸಿದ್ಧೇಶ್ವರ ಕಣ್ಣದೃಷ್ಟಿಯಿಂದ ಗರ್ಭಿಣಿಯಾಗುತ್ತಾಳೆ. ಕೆರೆಯನ್ನೆಲ್ಲಾ ತೋಡಿ ಕಟ್ಟೆ ಕಟ್ಟುವ ಸಮಯ ಸಮೀಪಿಸುತ್ತದೆ. ಮಹಿಳೆಗೂ ಸಹ ನವಮಾಸಗಳು ತುಂಬಿ ಒಂದು ಸುಂದರವಾದ ಗಂಡುಮಗು ಜನಿಸುತ್ತದೆ. ಆದರೆ ರೇವಣಸಿದ್ಧೇಶ್ವರರು ಮಗುವಿದ್ದರೆ ಕೆಲಸ ಕಾರ್ಯಗಳಿಗೆ ಅಡ್ಡಿಯಾಗುತ್ತದೆಂದು ಭಾವಿಸಿ ಮಗುವನ್ನು ಕೆರೆಯ ಕಟ್ಟೆಯೊಳಗೆ ಸಮಾಧಿ ಮಾಡುವಂತೆ ಆಣತಿ ಮಾಡುತ್ತಾರೆ. ಮಹಿಳೆ ಅವರ ಆಜ್ಞೆಯನ್ನು ಪಾಲಿಸಿ ಮಗುವನ್ನು ಕಟ್ಟೆಯಲ್ಲಿಯೇ ಹೂತು ಸಮಾಧಿ ಮಾಡುತ್ತಾಳೆ.

ಕೆರೆಯ ಎಲ್ಲ ಕಾರ್ಯಗಳು ಪೂರ್ಣಗೊಂಡ ನಂತರ ಮಹಿಳೆ ರೇವಣಸಿದ್ಧೇಶ್ವರರನ್ನು ಕುರಿತು 'ನಿಮ್ಮ ಆಜ್ಞೆಯಂತೆ ನಾನು ಮಗುವನ್ನು ಕಟ್ಟೆಯೊಳಗಿಟ್ಟು ಸಮಾಧಿ ಮಾಡಿದೆ. ಈಗ ನನ್ನ ಮಗುವನ್ನು ನನಗೆ ಕೊಡಿ' ಎಂದು ಕೇಳುತ್ತಾಳೆ. ಆಗ ರೇವಣಸಿದ್ಧೇಶ್ವರರು ಅಲ್ಲಿಂದಲೇ(?) ಸುರಂಗ ಕೊರೆದು ಸುರಂಗ ಮಾರ್ಗದ ಮೂಲಕ ಆ ಮಹಿಳೆ ಮತ್ತು ಇತರ ಹಲವರೊಂದಿಗೆ ದೇವರಬೆಟ್ಟಕ್ಕೆ ಬಂದು ಅಲ್ಲಿ ಗುಹೆಯಲ್ಲಿದ್ದ ಮಗುವನ್ನು ತೋರಿಸುತ್ತಾರೆ. ಮಗುವಿಗೆ ಜಡೆಗಳು ಬೆಳೆದಿರುತ್ತವೆ. ಆದ್ದರಿಂದ ಮಗುವಿಗೆ ಜಡೆಮುನೀಶ್ವರನೆಂದು ನಾಮಕರಣ ಮಾಡುತ್ತಾರೆ. ನಂತರ ಅವರೆಲ್ಲರೂ ತಾವು ತಂದಿದ್ದ ಬುತ್ತಿಗಳನ್ನು ಬಿಚ್ಚಿ ಊಟ ಮಾಡುತ್ತಾರೆ. ಕೈ ತೊಳೆಯಲು ನೀರಿರುವುದಿಲ್ಲ. ರೇವಣಸಿದ್ಧರು ತಮ್ಮ ಕೈಯಿಂದ ಎದುರಿದ್ದ ಮತ್ತೊಂದು ದೊಡ್ಡಬೆಟ್ಟದ ಬುಡವನ್ನು ಕೊರೆದು ಚಿಲುಮೆಯನ್ನು ತೋಡುತ್ತಾರೆ. ನಂತರ ಊಟ ಮುಗಿಸಿ ತಮ್ಮ ತಳಿಗೆಗಳನ್ನು (ಊಟದ ತಟ್ಟೆ) ತೊಳೆಯುತ್ತಾರೆ. ಆ ನೀರು ಹರಿದು ಹೋಗಿ ದೇವರಬೆಟ್ಟ ಗ್ರಾಮದ ಕೆರೆ ತುಂಬಿ ಅಲ್ಲಿಂದ ತಳಿಕೆರೆಗೆ ಹೋಗಿ ಸೇರುತ್ತದೆ. ತಳಿಗೆ ತೊಳೆದದ್ದರಿಂದ ಹರಿದ ನೀರಿನಿಂದ ಕೆರೆ ತುಂಬಿದ್ದರಿಂದ ಆ ಕೆರೆಯ

* ಭಾಷಾಂತರಕಾರರು, ಕರ್ನಾಟಕ ವಿಧಾನ ಪರಿಷತ್ತು ಸಚಿವಾಲಯ, ನಂ.೨೧೬ಬಿ, ವಿಧಾನಸೌಧ, ಬೆಂಗಳೂರು–೫೬೦೦೦೧.

ಊರಿಗೆ ತಳಿ[೨] ಎಂಬ ಹೆಸರು ಬರುತ್ತದೆ. ಜಡೆಮುನೀಶ್ವರ ಇಲ್ಲಿಯೇ ಬೆಳೆದು ದೊಡ್ಡವನಾಗಿ ತಪಸ್ಸು ಮಾಡಿ ದೇವರಾಗುತ್ತಾನೆ.

ದೇವರಬೆಟ್ಟ ಅರಣ್ಯದ ಎಲ್ಲೆಯಲ್ಲಿ ಬರುವ ಸುಮಾರು ೪೦ ಮನೆಗಳಿರುವ ಪುಟ್ಟ ಗ್ರಾಮ. ಕುರುಚಲು ಕಾಡಿನಿಂದ ಆವೃತವಾಗಿರುವ ಸುಂದರವಾದ ರಮಣೀಯ ತಾಣ. ಇಲ್ಲಿಯ ಪ್ರಶಾಂತ ವಾತಾವರಣ ಎಂತಹ ನಾಸ್ತಿಕರನ್ನೂ ಆಕರ್ಷಿಸುತ್ತದೆ. ೧೯ನೆಯ ಶತಮಾನದಲ್ಲಿ ಇಲ್ಲಿ ಒಂದು ಫಾರೆಸ್ಟ್ ರೆಸ್ಟ್‌ಹೌಸ್ ಇತ್ತು. ಇಲ್ಲಿಗೆ ಆಗಮಿಸಿದ್ದ 'ಲಿಟ್ಲ್‌ಹುಡ್' ಎಂಬ ಆಂಗ್ಲ ಅಧಿಕಾರಿ ಇಲ್ಲಿಯ ದಟ್ಟವಾದ ಅಚ್ಚ ಹಸಿರು ಕಣಿವೆಗಳು ಮತ್ತು ಪ್ರಶಾಂತ ವಾತಾವರಣಕ್ಕೆ ಮನಸೋತು ದೇವರಬೆಟ್ಟ ಗ್ರಾಮವನ್ನು 'ಲಿಟ್ಲ್ ಇಂಗ್ಲೆಂಡ್' ಎಂದು ಕರೆದಿದ್ದ.[೨]

ಈ ಗ್ರಾಮವು ಹಿಂದೊಮ್ಮೆ ಬೃಹತ್ ಶಿಲಾಯುಗದ ಕಾಲದ ಮಾನವನ ನೆಲೆಯಾಗಿತ್ತು. ಇದಕ್ಕೆ ಪೂರಕವಾಗಿ ಸನತ್ಕುಮಾರಾದ್ರಿ ಕಣಿವೆ, ಅದಕ್ಕೆ ಹೊಂದಿಕೊಂಡಿರುವ ಆನೆಜಿದ್ದ ಹಳ್ಳ ಮತ್ತು ತಿರುಮಲವಾಡಿ ಕಣಿವೆಗಳಲ್ಲಿ ಅಸಂಖ್ಯ ಪ್ರಾಗೈತಿಹಾಸಿಕ ಕಾಲದ ಕಲ್ಮನೆಗಳು ಕಂಡುಬರುತ್ತವೆ. ದೇವರಬೆಟ್ಟ ಗ್ರಾಮದ ಬೆಟ್ಟದ ಮೇಲೆ ಪ್ರಾಗೈತಿಹಾಸಿಕ ಕಾಲದ ಕಲ್ಮನೆಗಳಂತಹ ನೂರಾರು ರಚನೆಗಳು ಕಂಡುಬರುತ್ತವೆ. ಅಲ್ಲಿ ಕಲ್ಲುಗಳನ್ನು ಒಂದರ ಮೇಲೊಂದಾಗಿ ಜೋಡಿಸಲಾಗಿದೆ. ಹೀಗೆ ಕಲ್ಲುಗಳನ್ನು ಜೋಡಿಸಿದರೆ ಮಕ್ಕಳಾಗದವರಿಗೆ ಮಕ್ಕಳಾಗುತ್ತವೆ, ಮದುವೆಯಾಗದವರಿಗೆ ಮದುವೆಯಾಗುತ್ತದೆ ಹಾಗೂ ಮನೆ ಕಟ್ಟದವರು ಮನೆ ಕಟ್ಟಿಸುತ್ತಾರೆಂಬ ನಂಬಿಕೆಯಿದೆ. ಸ್ಥಳೀಯ ನಂಬಿಕೆಗಳೇನೇ ಇರಬಹುದು, ಆದರೆ ಇವುಗಳ ಮೂಲ ರಚನೆಯನ್ನು ಗಮನಿಸಿದರೆ ಈ ಗ್ರಾಮವು ಹಿಂದೊಮ್ಮೆ ಪ್ರಾಗೈತಿಹಾಸಿಕ ಮಾನವನ ಕಾಲದ ನೆಲೆಯಾಗಿದ್ದಿರಬಹುದೆಂದು ತೋರುತ್ತದೆ.

ದೇವರಬೆಟ್ಟ ಗ್ರಾಮದಿಂದ ಉತ್ತರದ ಕಡೆ ಶಂಕರನ ಹಳ್ಳವಿದೆ. ಶಂಕರನ ಹಳ್ಳಕ್ಕೆ ಹೋಗುವ ಹಾದಿಯನ್ನು ಸ್ವಲ್ಪ ದೂರ ಕ್ರಮಿಸಿದರೆ, ಹಾದಿಬದಿಯಲ್ಲಿ ಲಿಪಿರಹಿತ ವೀರ ಮಾಸ್ತಿಕಲ್ಲೊಂದು ಕಂಡುಬರುತ್ತದೆ. ಶಿಲ್ಪದ ಹಿನ್ನೆಲೆಯಲ್ಲಿ ಇದನ್ನು ಹನ್ನೆರಡು-ಹದಿಮೂರನೆಯ ಶತಮಾನಕ್ಕೆ ಸೇರಿಸಬಹುದು. ವೀರಗಲ್ಲಿನ ಎಡಭಾಗ ತುಂಡಾಗಿದೆ. ವೀರ ಎಡಗಾಲನ್ನು ಮುಂದಿಟ್ಟು ಬಲಗಾಲನ್ನು ಹಿಂದೆ ಇಟ್ಟು ಆಲೀಢ ಭಂಗಿಯಲ್ಲಿ ನಿಂತಿದ್ದಾನೆ. ಕೈಯಲ್ಲಿ ಕತ್ತಿಯಿದೆ. ಸೊಂಟದಲ್ಲೂ ಒಂದು ಕತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ವೀರನ ಕೆಳಭಾಗದಲ್ಲಿ ಇಬ್ಬರು ಮಹಿಳೆಯರಿದ್ದಾರೆ. ಒಬ್ಬ ಮಹಿಳೆ ತಲೆಯ ಮೇಲೆ ಒಂದರ ಮೇಲೊಂದರಂತೆ ಆರು ಮಡಕೆಗಳನ್ನು ಪೇರಿಸಿಟ್ಟುಕೊಂಡಿದ್ದಾಳೆ. ಮತ್ತೊಬ್ಬ ಮಹಿಳೆಯ ಬಲಕೈಯಲ್ಲಿ ಸಾಮಾನ್ಯವಾಗಿ ಹರಿದಾಸರು ಕೈಯಲ್ಲಿ ಕಂಡುಬರುವಂತಹ ಚಿಟಿಕೆ ಇದೆ. ಎಡಗೈಯಲ್ಲಿ ತಟ್ಟೆಯಾಕಾರದ ಒಂದು ವಸ್ತುವಿದೆ. ವೀರಗಲ್ಲಿನ ಬಲ ಮಧ್ಯಭಾಗದಲ್ಲಿ ಒಂದು ಲಿಂಗವನ್ನು ಮತ್ತೊಂದು ಲಿಂಗದ ಮೇಲೆ ಜೋಡಿಸಿದಂತೆ ಕಾಣುವ ಒಂದು ಅಲಂಕಾರಿಕ ಕಂಬವಿದೆ. ವೀರಗಲ್ಲಿನ ಬಲ ಮೇಲ್ಭಾಗದಲ್ಲಿ ವೀರನನ್ನು ಅಪ್ಸರೆಯರು ಕೊಂಡೊಯ್ಯುತ್ತಿರುವಂತೆ ಕೆತ್ತಲಾಗಿದೆ. ವೀರಗಲ್ಲಿನ ಮೇಲ್ಭಾಗದಲ್ಲಿ ಲಿಂಗದ ಕೆತ್ತನೆಯಿದೆ.

ದೇವರಬೆಟ್ಟದಿಂದ ಉತ್ತರಕ್ಕೆ ಕಾಲುದಾರಿಯಲ್ಲಿ ಸುಮಾರು ೩ ಕಿ.ಮೀ. ಗಳನ್ನು ಕ್ರಮಿಸಿದರೆ ಶಂಕರನ ಹಳ್ಳವೆಂದು ಕರೆಯಲ್ಪಡುವ ಒಂದು ರಮಣೀಯವಾದ ಕಣಿವೆಯಿದೆ. ಮಳೆಗಾಲದ ಸಮಯದಲ್ಲಿ ಈ ಕಣಿವೆಯಲ್ಲಿ ನಿರಂತರವಾಗಿ ನೀರು ಹರಿಯುತ್ತದೆ. ಅಲ್ಲಿ ಹುಟ್ಟುಬಂಡೆಯಲ್ಲಿ ಜಟಾಧಾರಿ ಹಾಗೂ ಗಡ್ಡಧಾರಿಯಾದ ಒಬ್ಬ ಶೈವ ಯತಿಯನ್ನು ಕಂಡರಿಸಲಾಗಿದೆ. ಆತನ ಕರಸ್ಥಳದಲ್ಲಿ ಲಿಂಗವಿದೆ. ಕತ್ತಿನಲ್ಲಿ ಕರಂಡಕವಿದೆ. ಅರ್ಧ ನಿಮೀಲಿತ ನೇತ್ರವದನನಾಗಿ ಧ್ಯಾನಾವಸ್ಥೆಯಲ್ಲಿ ಪದ್ಮಾಸನದಲ್ಲಿ ಕುಳಿತಿದ್ದಾನೆ. ಈ ಉಬ್ಬು ಕೆತ್ತನೆಯಲ್ಲಿರುವ ವ್ಯಕ್ತಿಯನ್ನು ಸ್ಥಳೀಯರು ಶಂಕರೇಶ್ವರ ಸ್ವಾಮಿಯೆಂದು ಕರೆಯುತ್ತಾರೆ.

ಈ ಶಂಕರನ ಕುರಿತ ಐತಿಹ್ಯವೊಂದು ಹೀಗಿದೆ : ಬೇಡ ಜನಾಂಗಕ್ಕೆ ಸೇರಿದ ಶಂಕರಪ್ಪ ಮತ್ತು ಬಂಕದಪ್ಪ ಎಂಬ ಸಹೋದರರು ಹೈದರಾಬಾದಿನ ನಿಜಾಮನ ಸೈನ್ಯದಲ್ಲಿರುತ್ತಾರೆ. ಇವರ ಸೋದರತ್ತೆ ಹೊನ್ನಮ್ಮ ಗುಮ್ಮಳಾಪುರದಲ್ಲಿರುತ್ತಾಳೆ. ನಿಜಾಮನ ಸೈನ್ಯ ಗುಮ್ಮಳಾಪುರದ ಮೇಲೆ ದಾಳಿ ಮಾಡುತ್ತದೆಂಬ ಸಮಾಚಾರವನ್ನು ಕೇಳಿ ಈ ವಿಷಯವನ್ನು ತನ್ನ ಸೋದರತ್ತೆಗೆ ಮುಟ್ಟಿಸಿ ಗುಮ್ಮಳಾಪುರವನ್ನು ರಕ್ಷಿಸಬೇಕೆಂದು ಗುಮ್ಮಳಾಪುರದ ಕಡೆ ಧಾವಿಸುತ್ತಾರೆ. ಜರಿಹಳ್ಳವನ್ನು ದಾಟಿ ತಮ್ಮಾಪುರದ ಮೂಲಕ ಮುನೇಶ್ವರ ಖಾನೆಗೆ ಬರುವ ವೇಳೆಗೆ ನಿಜಾಮನ ಸೈನಿಕರು ಇವರ ಮೇಲೆರಗುತ್ತಾರೆ. ಬಂಕದಪ್ಪ ಹೇಗೋ ಪಾರಾಗಿ ಗುಮ್ಮಳಾಪುರವನ್ನು ರಕ್ಷಿಸುತ್ತಾನೆ. ಆದರೆ ಶಂಕರಪ್ಪ ಕತ್ತಿ ಇರಿತಕ್ಕೆ ಒಳಗಾಗುತ್ತಾನೆ. ಇರಿತದ ಗಾಯದೊಂದಿಗೆ

ಗುಮ್ಮಳಾಪುರಕ್ಕೆ ಬಂದು ನೀರು ಕೇಳುತ್ತಾನೆ. ಗುಮ್ಮಳಾಪುರದ 'ಕೊಟ್ಟಿಗಾರ' ಸಮುದಾಯದ ಜನರು ಅತನನ್ನು ಮುಟ್ಟಿಸಿಕೊಳ್ಳದೆ ಬಿದಿರಿನ ಗೊಟ್ಟದಿಂದ ನೀರನ್ನು ಕೊಡುತ್ತಾರೆ. ತಾನು ಗುಮ್ಮಳಾಪುರವನ್ನು ಕಾಪಾಡಲು ಬಂದರೂ ತನ್ನನ್ನು ಈ ರೀತಿ ಅವಮಾನಿಸುತ್ತಿದ್ದಾರೆಂದು ನೊಂದ ಶಂಕರಪ್ಪ ತಾನು ಗುಮ್ಮಳಾಪುರದಲ್ಲಿರುವುದಿಲ್ಲವೆಂದು ಹೇಳಿ ಗುಮ್ಮಳಾಪುರ ನಾಶವಾಗಲಿ ಎಂದು ಶಾಪ ಹಾಕಿ ಶಂಕರನ ಹಳ್ಳಕ್ಕೆ ಹೋಗಿ ಅಲ್ಲೇ ನೆಲೆಸುತ್ತಾನೆ.[೩]

ವಿರೂಪಾಕ್ಷನ ಪಂಡಿತನು ತನ್ನ ಚನ್ನಬಸವ ಪುರಾಣದಲ್ಲಿ ಗುಮ್ಮಣ್ಣ ಮತ್ತು ಪೆಮ್ಮಣ್ಣರೆಂಬ ಇಬ್ಬರು ಸಹೋದರರನ್ನು ಹೆಸರಿಸಿ, ಕಲ್ಯಾಣ ನಾಶವಾದ ನಂತರ ಅಲ್ಲಿ ತುರುಕರ ಉಪಟಳ ಹೆಚ್ಚಾದಾಗ, ಗುಮ್ಮಣ್ಣ-ಪೆಮ್ಮಣ್ಣ ಎಂಬ ಸಹೋದರರು ಅಲ್ಲಿಂದ ದಕ್ಷಿಣದ ಕಡೆ ಬಂದು ಗುಮ್ಮಳಾಪುರ ಪಟ್ಟಣವನ್ನು ಕಟ್ಟಿ ಉದ್ಧರಿಸಿದರೆಂದು ಹೇಳಿದ್ದಾರೆ. ಐತಿಹ್ಯದಲ್ಲಿ ಬರುವ ಶಂಕರಪ್ಪ-ಬಂಕದಪ್ಪನಿಗೂ, ಚನ್ನಬಸವ ಪುರಾಣದ ಗುಮ್ಮಣ್ಣ ಮತ್ತು ಪೆಮ್ಮಣ್ಣರಿಗೂ ಸಂಬಂಧವಿದೆಯೇ? ಅವರು ಅಭಿನ್ನರೇ? ಎಂಬ ಅಂಶವನ್ನು ಪರಿಶೀಲಿಸಬೇಕಾಗಿದೆ. ಏಕೆಂದರೆ ಚೆನ್ನಬಸವ ಪುರಾಣದ ಸಹೋದರರು ಗುಮ್ಮಳಾಪುರದ ನಿರ್ಮಾತೃಗಳಾದರೆ, ಐತಿಹ್ಯದ ಸಹೋದರರು ಆ ಊರಿನ ರಕ್ಷಕರಾಗಿ ಕಂಡುಬರುತ್ತಾರೆ. ಹಾಗಾಗಿ ಗುಮ್ಮಳಾಪುರದ ಸಾಂಸ್ಕೃತಿಕ/ಧಾರ್ಮಿಕ ಚರಿತ್ರೆಯಲ್ಲಿ ಇವರ ಪಾತ್ರವೇನು? ಎಂಬುದಕ್ಕೆ ಸುಸ್ಪಷ್ಟ ಆಧಾರಗಳ ಕೊರತೆಯಿದೆ. ಮತ್ತೊಂದು ಗಮನಾರ್ಹ ಅಂಶವೆಂದರೆ, ಗುಮ್ಮಳಾಪುರ ೧೫-೧೭ನೆಯ ಶತಮಾನದವರೆಗೆ ಪ್ರಸಿದ್ಧ ಶೈವ ಕ್ಷೇತ್ರವಾಗಿತ್ತು. ಗುಮ್ಮಳಾಪುರವನ್ನು ಹಲವಾರು ಕವಿಗಳು ಸ್ತುತಿಸಿದ್ದಾರೆ. ಲಕ್ಕಣ್ಣ ದಂಡೇಶ ತನ್ನ ಶಿವತತ್ವ ಚಿಂತಾಮಣಿ ಕೃತಿಯಲ್ಲಿ –

'ಶಿವನ ಕೈಲಾಸಾದ್ರಿಯೇ ಮನುಜರರಿಯಲಂ
ತವತರಿಸಿದಂತು ಬಸವೇಶ್ವರನ ಕಲ್ಯಾಣ
ಭುವನವರಿಯುತ ನೆಲಸಲುತ್ತರವ ಬಿಟ್ಟು ದಕ್ಷಿಣ ಭಾಗ ಕೆಯ್ದಿದಂತೆ...'
'ಆ ಪುರದ ಸೀಮೆಯೆಲ್ಲಂ ಪತ್ರ ಪುಷ್ಪಂಗ
ಳಾಪುರದ ಬಾಗಿ ಲಿಂಗಮುದ್ರೆಗಳೆಸೆವಾ
ಪುರಕೆ ಭವಿಯ ಸಂಚಾರವಿಲ್ಲದೆಸೆಯುವ ಭಕ್ತರುರೆ ನೆಲೆಸಿಪ್ಪರು
ಆ ಪುರದೊಳಗೆ ಲಿಂಗದಾಳಾಪವನುಭಾವ
ವಾ ಪುರದಿ ಶಿವಸಮಯ ಪಟ್ಟವರ್ಧನರಿಪ್ಪ
ರಾಪುರಂ ಗುಮ್ಮ ಹಾಳೆಂಬ ಪುರವವರ ಚರಣಾಂಬುಜಕೆ ಶರಣು'

ಎಂದು ಹೇಳುತ್ತಾ ಅಲ್ಲಿ ಮಠದ ದಾಸೋಹದಲ್ಲಿ ಚೊಕ್ಕದೇವಪ್ಪಯ್ಯ, ಗುಬ್ಬಿಯ ಮಲ್ಲಣ್ಣ, ಅಮ್ಮಣ್ಣನ ನಾಗಪ್ಪ, ಹೊನ್ನ ಮಲ್ಲಣ್ಣ, ಮಳವಳಿಯ ಬಸವಣ್ಣ, ಹಾನುಗಲ್ಲಿನ ನಾಗಪ್ಪ ಮುಂತಾದಂತಹ ಶತಗಣಂಗಳು ಭಾಗವಹಿಸುತ್ತಿದ್ದರೆಂದು ಹೇಳುತ್ತದೆ. ಇದಲ್ಲದೆ ಗುಬ್ಬಿಯ ಮಲ್ಲಣಾರ್ಯನ ಭಾವ ಚಿಂತಾರತ್ನ, ಇದೇ ಹೆಸರಿನ ಮತ್ತೊಬ್ಬ ಕವಿಯ ವೀರಶೈವಾಮೃತ ಪುರಾಣ, ರುದ್ರಕವಿಯ ಕರಸ್ಥಲ ನಾಗಲಿಂಗದೇವ ಚರಿತೆ, ಸಿದ್ಧನಂಜೇಶನ ಗುರುರಾಜ ಚಾರಿತ್ರ, ರಾಘವಾಂಕ ಚಾರಿತ್ರ, ಬೊಮ್ಮರಸನ ಸೌಂದರ ಪುರಾಣ ಮುಂತಾದ ಕೃತಿಗಳಲ್ಲಿ ಗುಮ್ಮಳಾಪುರವನ್ನು ಹೊಗಳಲಾಗಿದೆ. ಅಲ್ಲದೆ 'ಬಸವೇಶ್ವರನ ಕಲ್ಯಾಣ ಉತ್ತರವ ಬಿಟ್ಟು ದಕ್ಷಿಣ ಭಾಗದಲ್ಲಿ ನೆಲೆಗೊಂಡಿತೆಂದು' ಹೇಳಿರುವ ಮಾತನ್ನು ವಾಚ್ಯಾರ್ಥದ ಹೊರತಾಗಿ ಅನ್ಯ ಧ್ವನಿಯಲ್ಲಿ ಗ್ರಹಿಸಿದರೆ, ಬಹುಶಃ ಕಲ್ಯಾಣ ಕ್ರಾಂತಿಯ ನಂತರ ಅಲ್ಲಿದ್ದ ಹಲವಾರು ಶರಣರು ದಕ್ಷಿಣಕ್ಕೆ ಬಂದಾಗ ಅವರಲ್ಲಿ ಕೆಲವರು ಗುಮ್ಮಳಾಪುರದಲ್ಲಿ ನೆಲೆಸಿದ್ದಿರಬಹುದೆಂದು ಊಹಿಸಲು ಅವಕಾಶವಿದೆ.

ಇದಲ್ಲದೆ ಪ್ರಭುಗ, ಹಲಗ, ವೆಂಕಟಶರ್ಮ (ವೆಂಕಟೇಶ) ಮುಂತಾದ ಕವಿಗಳು ಹಾಗೂ ಶೂನ್ಯ ಸಂಪಾದಕರಾದ ಸಿದ್ಧಲಿಂಗಯತಿಯ ನೆಲೆ ಗುಮ್ಮಳಾಪುರವೇ ಆಗಿತ್ತು. ಅಲ್ಲಿ ನೂರ ಒಂದು ದೇವಾಲಯಗಳು, ನೂರ ಒಂದು ಕೆರೆಗಳು, ನೂರ ಒಂದು ಮಠಗಳು, ನೂರ ಒಂದು ಕುಂಟೆಗಳಿದ್ದವೆಂದು ಹಾಗೂ ಗುಮ್ಮಳಾಪುರ ಎರಡು ಸಾರಿ ಕೈಲಾಸಕ್ಕೆ ಹೋಗಿ ಬಂದಿದೆಯೆಂಬುದು ಸ್ಥಳೀಯ ಐತಿಹ್ಯ. ಐತಿಹ್ಯವನ್ನು ಚರಿತ್ರೆಯೊಂದಿಗೆ ತಳಕು ಹಾಕುವುದು ಸರಿಯಾದ ಕ್ರಮವಲ್ಲದಿದ್ದರೂ, ಅಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಗುಮ್ಮಳಾಪುರವೂ ಸೇರಿದಂತೆ ಆ ಗ್ರಾಮದ ಪರಿಸರದಲ್ಲಿ ಹತ್ತಾರು ಶಿಥಿಲಾವಸ್ಥೆಯಲ್ಲಿರುವ ದೇವಾಲಯಗಳು ಕಂಡುಬಂದಿವೆ. ಹೀಗಾಗಿ ಬಹುಶಃ ಐತಿಹ್ಯದಲ್ಲಿ ಹೇಳಿರುವಂತೆ ಶಂಕರಪ್ಪ-ಬಂಕದಪ್ಪನ ಕಾಲದಲ್ಲಲ್ಲದಿದ್ದರೂ, ತರುವಾಯದ ಅವಧಿಯಲ್ಲಿ ಗುಮ್ಮಳಾಪುರವೇನಾದರೂ ನವಾಬನ ದಾಳಿಗೆ ಒಳಗಾಗಿರುವ ಸಾಧ್ಯತೆ ಇದೆಯೇ? ಎಂಬ



ದೇವರ ಬೆಟ್ಟದ ಪ್ರಾಗೈತಿಹಾಸಿಕ ಕಲ್ಮನೆ



ಹರಕೆಗಾಗಿ ರಚಿಸಿರುವ ಕಲ್ಮನೆಗಳಂತಹ ರಚನೆಗಳು



ಶಂಕರನ ಹಳ್ಳದ ಹಾದಿಯಲ್ಲಿನ ವೀರಮಾಸ್ತಿಕಲ್ಲು



ದೇವರ ಬೆಟ್ಟದ ಪ್ರಾಗೈತಿಹಾಸಿಕ ಕಲ್ಮನೆ



ಸುಬ್ಬಯ್ಯನ ಶಾಸನ



ಸುಬ್ಬಯ್ಯನ ಶಾಸನ (ಒರಟು ಕೆತ್ತನೆ)


ನೈಸರ್ಗಿಕ ದೊಣೆ


ದೇವರಬೆಟ್ಟದ ಕಾಡಿನಲ್ಲಿ ಹರಿಯುವ ತೊರೆ


ಕವಿ ವೆಂಕಟನ ಪೂರ್ವಜರ ಶಾಸನ


ದೇವರ ಬೆಟ್ಟ


ಶಿವಶರಣ ಶಂಕರಪ್ಪನ ಶಿಲ್ಪ


ಸನತ್‌ಕುಮಾರ ಅಥವಾ ಮುನೇಶ್ವರ ದೇವರು

ಬಗ್ಗೆ ಅಧ್ಯಯನ ನಡೆಸಬೇಕಾಗಿದೆ. ಒಟ್ಟಾರೆಯಾಗಿ ಶಂಕರನ ಹಳ್ಳದ ಶೈವಯತಿ ಶಂಕರಪ್ಪನೇ ಎಂಬುದು ಸ್ಥಳೀಯರ ಅಭಿಪ್ರಾಯ. ಶಿಲ್ಪವಿರುವ ಸ್ಥಳ ಅರಣ್ಯದಲ್ಲಿದ್ದು ನಿರ್ಜನವಾಗಿದೆ. ಕೇವಲ ಸಂಕ್ರಾಂತಿಯಂದು ಮಾತ್ರ ಆ ಹಳ್ಳದಲ್ಲಿ ಜಾತ್ರೆ ನಡೆಯುತ್ತದೆ.

ದೇವರಬೆಟ್ಟ ಗ್ರಾಮದ ಮತ್ತೊಂದು ಬೆಟ್ಟದ ತಲದಲ್ಲಿ ನೈಸರ್ಗಿಕವಾಗಿ ನಿರ್ಮಿತವಾದ ಕೊಳವಿದೆ. ರೇವಣಸಿದ್ಧರು ತಮ್ಮ ಕೈಯಲ್ಲಿ ಗೋಕಿದ (ಕೊರೆದ) ಕೊಳ ಹಾಗೂ ಸನತ್ಕುಮಾರ ನದಿ ಉಗಮಸ್ಥಾನ ಇದೆ ಎಂಬುದು ಸ್ಥಳೀಯ ಐತಿಹ್ಯ. ಕೊಳ ಸುಮಾರು ೧೦ ಅಡಿಗಳಷ್ಟು ಆಳವಿದೆ ಹಾಗೂ ೮ ಅಡಿಗಳಷ್ಟು ವ್ಯಾಸದಿಂದಿದೆ. ಇಲ್ಲಿಗೆ ಆಗಮಿಸುವ ಭಕ್ತರು ಕೊಳದಲ್ಲಿ ಸ್ನಾನ ಮಾಡಿಕೊಂಡು ನಂತರ ದೇವಾಲಯಕ್ಕೆ ಹೋಗುತ್ತಾರೆ. ಕೊಳ ಕಿಡಿದಾಗಿರುವುದರಿಂದ ಕೊಳಕ್ಕಿಳಿಯಲು ಅನುಕೂಲವಾಗುವಂತೆ ದೊಡ್ಡದಾದ ಕಬ್ಬಿಣದ ಸರಪಳಿಯನ್ನು ಹಾಕಲಾಗಿದೆ. ಸರಪಳಿಯ ಜಾಗದಲ್ಲಿ ಒಂದು ಸಾಲಿನ ಸುಂದರವಾಗಿ ಕೆತ್ತಿರುವ ಶಾಸನವಿದೆ. ಅದರ ಪಾಠ ಈ ಕೆಳಗಿನಂತಿದೆ

**'ಅಳಿಬು ಪಾಳದ ಸುಬ್ಬೈಯ ಧರಮ'**

ಲಿಪಿಯ ಆಧಾರದಿಂದ ಇದರ ಕಾಲವನ್ನು ಕ್ರಿ.ಶ.ಸು. ೧೬ ಅಥವಾ ೧೭ನೆಯ ಶತಮಾನ ಎಂದು ಹೇಳಬಹುದು. ಅದರ ಪಕ್ಕದಲ್ಲೇ ೩ ಅಡಿಗಳ ಅಂತರದಲ್ಲಿ ಅದೇ ಶಾಸನವನ್ನು ಒರಟಾಗಿ ಮೇಲ್ಮಟ್ಟದಲ್ಲೇ ಕಂಡರಿಸಲಾಗಿದೆ. ಇದರ ಕಾಲವು ಕ್ರಿ.ಶ.ಸು. ೧೬ ಅಥವಾ ೧೭ನೆಯ ಶತಮಾನವೇ ಆಗಿದೆ. ಬಹುಶಃ ಸರಪಳಿಯನ್ನು ಹಾಕಿಸಿದವನು 'ಸುಬ್ಬಯ್ಯ'ನಿರಬಹುದು. ಅಲ್ಲಿಯೇ ಕೊಳದ ಬಲಭಾಗದ ಬಂಡೆಯಲ್ಲಿ ಭೂಮಟ್ಟದಿಂದ ಸುಮಾರು ೯ ಅಡಿಗಳ ಮೇಲೆ ಮೂರು ವಾಕ್ಯಗಳ ಮತ್ತೊಂದು ಅಪ್ರಕಟಿತ ಶಾಸನವಿದೆ. ಅದರ ಪಾಠ ಹೀಗಿದೆ :

**೧. ಪೌರಕುತ್ಸ ಗೋತ್ರಾಪಸ್ತಂಭ**

**೨. ಸೂತ್ರಾರುಣಗಿರಿ ದೀಕ್ಷಿತ**

**೩. ಪುತ್ರ ಗಿರೀಶ್ವರ ದೀಕ್ಷಿತರು**

ಶಾಸನೋಕ್ತ ಗೋತ್ರ-ಸೂತ್ರದ ಅರುಣಗಿರಿ ದೀಕ್ಷಿತ ಮತ್ತು ಗಿರೀಶ್ವರ ದೀಕ್ಷಿತರು ಗುಮ್ಮಳಾಪುರದ ದಾನ ಶಾಸನದಲ್ಲೂ ಉಕ್ತರಾಗಿದ್ದಾರೆ.[೪] ಅಲ್ಲಿ ಅರುಣಗಿರಿ ದೀಕ್ಷಿತರ ಮಗ ಗಿರೀಶ್ವರ ದೀಕ್ಷಿತರ ಮಗ ವೆಂಕಟೇಶೋಪಾಧ್ಯಾಯನಿಗೆ ಆ ಊರಿನ ಮಾಹೇಶ್ವರರು ದಾನ ನೀಡಿರುವ ವಿವರವಿದೆ. ಆ ಶಾಸನದ ಕಾಲ ಕ್ರಿ.ಶ. ೧೪೭೩. ಪ್ರಕೃತ ಶಾಸನದಲ್ಲಿ ವೆಂಕಟೇಶೋಪಾಧ್ಯಾಯನ ತಂದೆಯನ್ನು ಉಲ್ಲೇಖಿಸಿದೆ ಮತ್ತು ಲಿಪಿಯ ಆಧಾರದಿಂದಲೂ ಈ ಶಾಸನದ ಕಾಲವನ್ನು ಕ್ರಿ.ಶ. ೧೪೫೦ ಎಂದು ಹೇಳಬಹುದು. ಬಹುಶಃ ಗಿರೀಶ್ವರ ದೀಕ್ಷಿತರು ದೇವರಬೆಟ್ಟಕ್ಕೆ ನೀಡಿದ ಭೇಟಿಯ ಸ್ಮರಣೆಯಾಗಿ ಈ ಶಾಸನವನ್ನು ಹಾಕಿಸಿರಬಹುದು. ಇವರು ಗುಮ್ಮಳಾಪುರದ ಕವಿ ವೆಂಕಟಶರ್ಮ (ವೆಂಕಟೇಶನ) ಪೂರ್ವಿಕರಾಗಿದ್ದಾರೆ.[೫]

ಈಗಲೂ ಈ ಗ್ರಾಮಕ್ಕೆ ಆನೇಕಲ್ ತಾಲೂಕಿನ ವಣಕನಹಳ್ಳಿಯೂ ಸೇರಿದಂತೆ ಬೆಂಗಳೂರು ನಗರ, ದೊಡ್ಡಬಳ್ಳಾಪುರ, ಕನಕಪುರ, ರಾಮನಗರ, ತುಮಕೂರು ಹಾಗೂ ತಮಿಳುನಾಡಿನ ತಳಿ, ಡೆಂಕಣಿಕೋಟೆ, ಹೊಸೂರು ತಾಲ್ಲೂಕುಗಳ ಸಾವಿರಾರು ಭಕ್ತರು ಪ್ರತಿ ಭಾನುವಾರ ಮತ್ತು ಸೋಮವಾರ ಇಲ್ಲಿಗೆ ಆಗಮಿಸುತ್ತಾರೆ. ಈ ಕುಟುಂಬಗಳ ಮನೆದೇವರು/ ಮುಡಿದೇವರು ಇಲ್ಲಿನ ಸನತ್ಕುಮಾರ/ಜಡೆಮುನೀಶ್ವರ ಸ್ವಾಮಿಯೇ. ಪ್ರೊ. ಕೆ.ಎಸ್. ಮಧುಸೂಧನರವರು ಇಲ್ಲಿಯ ದೇವರ ಸನತ್ಕುಮಾರ ಎಂಬ ಹೆಸರು ಮತ್ತು ಆ ಪರಿಸರದಲ್ಲಿ ಕಂಡುಬರುತ್ತದೆಂದು ಹೇಳಲಾಗುವ ಗುಳ್ಳಕಾಯಜ್ಜಿ ಬಂಡೆಯ ಹಿನ್ನೆಲೆಯಲ್ಲಿ ಈ ಪ್ರದೇಶ ಒಂದೊಮ್ಮೆ ಜೈನಕ್ಷೇತ್ರವಾಗಿದ್ದಿರಬಹುದೇ? ಎಂಬ ಅನುಮಾನವನ್ನು ವ್ಯಕ್ತಪಡಿಸುತ್ತಾರೆ. ಮುಂದುವರೆಸುತ್ತಾ, ನಂತರದ ಹಂತಗಳಲ್ಲಿ ಇದು ನಾಥಪಂಥ ಕಾಪಾಲಿಕ, ನಕುಲೀಶ ಪಂಥಗಳಿಗೆ ನೆಲೆಯಾಗಿತ್ತೆಂದು ಅಭಿಪ್ರಾಯಪಡುತ್ತಾರೆ.

ಮೊದಲನೆಯದಾಗಿ ಅವರ ಅಭಿಪ್ರಾಯವನ್ನು ಅನುಮೋದಿಸುವುದಕ್ಕೆ ಅಗತ್ಯವಾದ ಜೈನಧರ್ಮ ಸಂಬಂಧಿ ಸಾಹಿತ್ಯ ಅಥವಾ ವಾಸ್ತುಶಿಲ್ಪದ ಆಧಾರಗಳು ಆ ಪರಿಸರದಲ್ಲೆಲ್ಲೂ ಕಂಡುಬರುವುದಿಲ್ಲ. ಎರಡನೆಯದಾಗಿ ದೇವರಬೆಟ್ಟ ಗ್ರಾಮದ ಪರಿಸರದಲ್ಲಿ ಕೆಲವು ಗುಹೆಗಳು ಕಂಡುಬರುತ್ತವಾದರೂ, ಕೇವಲ ಗುಹೆಗಳಿದ್ದ ಮಾತ್ರಕ್ಕೆ ಇಲ್ಲಿ ನಾಥಪಂಥ, ಲಕುಲೀಶ, ಕಾಪಾಲಿಕ ಪಂಥಗಳಿದ್ದವೆಂದು ಊಹಿಸಲಾಗುವುದಿಲ್ಲ. ಹಾಗೆಂದು ಈ ವಿವರಗಳನ್ನು ಪೂರ್ಣವಾಗಿ ತಿರಸ್ಕರಿಸಲೂ

ಸಾಧ್ಯವಾಗುವುದಿಲ್ಲ. ನಮಗೆ ಈ ಪರಿಸರದಲ್ಲಿ ಲಿಂಗಾಯತ ಧರ್ಮದ ಉಗಮದ ನಂತರವೇ ಶಾಸನಗಳು, ಸಾಹಿತ್ಯಕ ಆಧಾರಗಳು ದೊರೆಯುತ್ತವೆ.

ಪ್ರಾರಂಭದಲ್ಲಿಯೇ ಹೇಳಲಾದಂತೆ ದೇವರಬೆಟ್ಟ ಗ್ರಾಮವು ತ್ರಿಭಾಷಾ ವಲಯವಾದ್ದರಿಂದ ದೇವರಬೆಟ್ಟದ ತೆಲುಗು ರೂಪ 'ದೇವರಕೊಂಡ' ಎಂಬ ಹೆಸರನ್ನು ತೆಲುಗು ಕುಟುಂಬಗಳು ತಮ್ಮ ಮಕ್ಕಳಿಗೆ ಇಟ್ಟರೆ ಕನ್ನಡ ಕುಟುಂಬಗಳು ಸಹ ತಮ್ಮ ಮಕ್ಕಳಿಗೆ ದೇವರಬೆಟ್ಟಪ್ಪ, ದೇವರಕೊಂಡಪ್ಪ ಅಥವಾ ಬೆಟ್ಟಪ್ಪ ಎಂದೂ ಹಾಗೂ ಈ ಹೆಸರಿನ ಸಂಸ್ಕೃತೀಕರಣ ರೂಪವಾದ ಗಿರೀಶ್ವರ, ಗಿರೀಶ ಎಂದು ಹೆಸರಿಡುತ್ತಾರೆ (ಪೂರ್ವೋಕ್ತ ಶಾಸನದ ಗಿರೀಶ್ವರ ಎಂಬ ಹೆಸರಿನ ಔಚಿತ್ಯವನ್ನು ಈ ರೀತಿ ಮನಗಾಣಬಹುದು). ಹಾಗಾಗಿ ಈ ಬೆಟ್ಟದ ಹೆಸರನ್ನು ಕನ್ನಡ-ತೆಲುಗಿನ ಉಭಯ ಭಾಷಿಕರೂ ತಮ್ಮ ಮಕ್ಕಳಿಗೆ ಇಡುತ್ತಾರೆ. ಆನೇಕಲ್ ತಾಲ್ಲೂಕಿನ ಗ್ರಾಮದ ಜನಗಳ ಸಾಂಸ್ಕೃತಿಕ, ಭಾಷಿಕ ಮತ್ತು ಜನಾಂಗಿಕ ಇತಿಹಾಸದಲ್ಲಿ ದೇವರಕೊಂಡ/ದೇವರಬೆಟ್ಟ ಎಂಬ ಹೆಸರಿಗೆ ಒಂದು ವಿಶಿಷ್ಟ ಅಭಿವ್ಯಕ್ತಿಯಿದೆ ಹಾಗೂ ತನ್ನದೇ ಆದ ಅನನ್ಯತೆಯಿದೆ.[೬]

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ತಳಿ ಹೋಬಳಿಯಾಗಿದ್ದು, ಕೃಷ್ಣಗಿರಿ ಜಿಲ್ಲೆಯ ಡೆಂಕಣಿಕೋಟೆ ತಾಲ್ಲೂಕಿನಲ್ಲಿದೆ. ಇದು ದೇವರಬೆಟ್ಟದಿಂದ ೫ ಕಿ.ಮೀ. ಅಂತರದಲ್ಲಿದೆ.

೨. **ಸೇಲಂ ಜಿಲ್ಲಾ ಗೆಜೆಟಿಯರ್**.

೩. ಈ ಐತಿಹ್ಯವನ್ನು ನನಗೆ ತಿಳಿಸಿದವರು ಪ್ರೊ॥ ಕೆ.ಎಸ್. ಮಧುಸೂದನ್‌ರವರು. ಅವರಿಗೆ ಕೃತಜ್ಞತೆಗಳು.

೪. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ**-೪, [ತಮಿಳುನಾಡಿನ ಕನ್ನಡ ಶಾಸನಗಳು] (ಸಂ) ಡಾ॥ ಎಚ್.ಎಸ್. ಗೋಪಾಲರಾವ್, ಡಾ॥ ಪಿ.ವಿ. ಕೃಷ್ಣಮೂರ್ತಿ, ಹಂಪಿ.

೫. ಈ ವಿಷಯದ ಬಗ್ಗೆ ಪ್ರಕೃತ ಲೇಖಕಿಯ **'ಕವಿ ವೆಂಕಟೇಶನ ಪೂರ್ವಿಕರ ಅಪ್ರಕಟಿತ ಶಾಸನ ಹಾಗೂ ಕವಿ ವೆಂಕಟಶರ್ಮನ ಕಾಲ'** ಎಂಬ ಲೇಖನವನ್ನು ನೋಡಬಹುದು.

೬. ದೇವರ ಬೆಟ್ಟ ಗ್ರಾಮ ಮತ್ತು ಅದರ ಪರಿಸರದಲ್ಲಿ ಕ್ಷೇತ್ರಕಾರ್ಯ ಕೈಗೊಳ್ಳಲು ನೆರವಾದ ಚಿಕ್ಕಪ್ಪ ವಿ.ಎಂ. ರಾಮರೆಡ್ಡಿ ಮತ್ತು ಅವರ ಸ್ನೇಹಿತರಿಗೆ ಹಾಗೂ ನನ್ನೊಡನೆ ಕ್ಷೇತ್ರಕಾರ್ಯಕ್ಕೆ ಬಂದು ಸಹಕಾರ ನೀಡಿದ ಪತಿ ಶ್ರೀ ಎಸ್.ಸಿ. ಬಾಬುರೆಡ್ಡಿ ಮತ್ತು ಪುತ್ರಿ ಎಸ್.ಜಿ. ಸೃಷ್ಟಿಗೆ ಹಾಗೂ ಕುಮಾರಿ ಜಿ. ಸಿಂಧುಗೆ ಕೃತಜ್ಞತೆಗಳು.



# ಕರ್ನಾಟಕದ ಅಳತೆ ಮಾನಗಳು

– ಡಾ॥ ಜಗದೀಶ*

ದೈನಂದಿನ ವ್ಯವಹಾರದಲ್ಲಿ ಹಾಸು ಹೊಕ್ಕಾಗಿರುವ ವಿಷಯಗಳಲ್ಲಿ ಅಳತೆಯೂ ಒಂದು. ಅಳತೆಯು ವಿವಿಧ ವಸ್ತುಗಳಿಗೆ ವಿವಿಧ ಬಗೆಯಾಗಿರುತ್ತದೆ. ಅಳತೆಯೆಂದರೆ ಮೂಲಮಾನದೊಂದಿಗಿನ ಹೋಲಿಕೆ. ಅಳತೆಯು ಮೂಲಮಾನದ ಗುಣಾಂಕ. ಮೂಲಮಾನವು ಹೋಲಿಲ್ಪಡುವ ವಸ್ತುವಿಗೆ ಅನುಗುಣವಾಗಿರಬೇಕು. ವೈಜ್ಞಾನಿಕ ಬೆಳವಣಿಗೆಯ ಚಿಹ್ನೆಯೇ ಹೋಲಿಕೆ. ಈ ಹೋಲಿಕೆಯು ಗುಣಾಕಾರದ ಅಂಶಗಳಲ್ಲಿದೆ. ಸಂಖ್ಯೆಗಳನ್ನು ವಿಶಿಷ್ಟ ಬಗೆಯಲ್ಲಿ ಬಳಸಿ ಹೇಳುವುದು. ಕಾಡಿನ ಒಂದು ಸಮೂಹದಲ್ಲಿ ಇದ್ದ ಪ್ರಾಣಿಗಳು ಎಷ್ಟು? ಗಂಡು, ಹೆಣ್ಣು ಹಾಗೂ ಮರಿಗಳೆಷ್ಟು? ಬೇರೆ ಬೇರೆ ಗುಂಪುಗಳಿದ್ದವೆ? ಬೇರೆ ಬೇರೆ ಪ್ರಾಣಿಗಳಿದ್ದವೆ? ಕೊಂದ ಪ್ರಾಣಿಗಳೆಷ್ಟು? ಆರಿಸಿ ತಂದ ಹಣ್ಣುಗಳೆಷ್ಟು?

ಒಂದು ವಸ್ತುವು ಉದ್ದ ಅಥವಾ ಗಿಡ್ಡವಾಗಿದೆಯೇ? ಭಾರ ಅಥವಾ ಹಗುರವಾಗಿದೆಯೇ? ತಣ್ಣಗಿದೆಯೋ ಅಥವಾ ಬಿಸಿಯಾಗಿದೆಯೇ? ಆಃವಾಗಿದೆಯೇ ಅಥವಾ ಎತ್ತರವಾಗಿದೆಯೇ? ಮುಂತಾದ ಹೋಲಿಕೆಗಳು ಬೇಕಾಗುತ್ತವೆ. ಹೋಲಿಕೆಗೆ ಮೂಲ ಮಾನದ ಆವಶ್ಯಕತೆ ಇದೆ. ಸಂಖ್ಯೆಯು ಮಾನದ ಸೂಚಕ. ಮೂಲ ಮಾನವು ಅಳತೆಯ ವಸ್ತುವನ್ನು ಅವಲಂಬಿಸಿದೆ. ಅನುಕೂಲಕ್ಕಾಗಿ ಸರಳ ಮಾಪನ, ಚದರ ಮಾಪನ, ಗಾತ್ರ ಮಾಪನ, ತೂಕ ಮಾಪನ, ಸಮಯ ಮಾಪನ ಎಂದು ವಿಂಗಡಿಸಿಕೊಳ್ಳಲಾಗಿದೆ. ಸರಳ ಮಾಪನದಲ್ಲಿ ದೂರ ವಿವರಿಸುವಾಗ ಕಡಿಮೆ ಅಂತರಗಳನ್ನು ಮೀಟರುಗಳಲ್ಲಿ, ಹೆಚ್ಚಿನ ಅಂತರಗಳನ್ನು ಕಿಲೋಮೀಟರುಗಳಲ್ಲಿ, ಬಳಸುವುದು ವಾಡಿಕೆ. ಈ ದೂರವು ಬಹಳ ಹೆಚ್ಚಾದರೆ ನೆನಪಿನಲ್ಲಿಡಬೇಕಾದ ಸಂಖ್ಯೆ ಹೆಚ್ಚಾಗುತ್ತದೆ. ಅಂತಹ ಸಮಯದಲ್ಲಿ ಮೂಲಮಾನವನ್ನು ಬದಲಾಯಿಸಿಕೊಳ್ಳಲಾಗುತ್ತದೆ. ಉದಾಹರಣೆಗೆ ಸೂರ್ಯ ಮತ್ತು ಭೂಮಿಯ ನಡುವಿನ ಅಂತರ ೧೪೯,೫೬೭,೮೭೦ ಕಿಲೋಮೀಟರುಗಳು. ಇದು ಬಹಳ ಹೆಚ್ಚಾದ ಕಾರಣ ಈ ಎರಡು ವಸ್ತುಗಳ ಅಂತರವನ್ನು ಒಂದು ಅಂಕೆ ಎಂದು ಪರಿಗಣಿಸಿ ಅಂತರಿಕ್ಷ ಮಾನವೆಂದು ಕರೆಯುತ್ತಾರೆ. ಈ ಅಳತೆಯಿಂದ ಇತರ ಗ್ರಹಗಳು ಮತ್ತು ಸೂರ್ಯನ ನಡುವಿನ ಅಂತರಗಳು ನೆನಪಿಡಬಹುದಾದ ಅಂಕೆಗಳಾಗುತ್ತವೆ. ಉದಾಹರಣೆಗೆ ಸೂರ್ಯ ಮತ್ತು ಗುರು ಹಾಗೂ ಶನಿ ಗ್ರಹಗಳ ನಡುವಿನ ಅಂತರ ಕ್ರಮವಾಗಿ ೫.೨ ಮತ್ತು ೯.೫೪ ಅಂತರಿಕ್ಷ ಮಾನಗಳು. ಹೀಗಾಗಿ ಅಳತೆಯ ಮಾನಗಳು ಸಾಕ್ಷೇಪವಾಗಿವೆ.

ಮೂಲಮಾನಗಳು ಹೇಗೆ ಬಳಕೆಯಲ್ಲಿ ಬಂದಿವೆ ಹಾಗೂ ಇತಿಹಾಸದಲ್ಲಿ ಕಂಡುಬರುವ ಮಾನಗಳ ಕುರಿತಾಗಿ ಚರ್ಚೆಮಾಡುವುದು ಈ ಲೇಖನದ ಉದ್ದೇಶ. ಐತಹಾಸಿಕವಾಗಿ ಕರ್ನಾಟಕದ ಅನೇಕ ಶಾಸನಗಳಲ್ಲಿ ವಿವಿಧ ಮಾನಗಳ ಉಲ್ಲೇಖ ಬರುತ್ತದೆ. ಭೂಮಾಪನಕ್ಕೆ ಸಂಬಂಧಿಸಿದಂತೆ ಅನೇಕ ಅಳತೆ ಕೋಲುಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ. ಹಾಗಾದರೆ ಕರ್ನಾಟಕ ಮತ್ತು ಭಾರತದಲ್ಲಿ ಏಕ ರೂಪದ ಅಳತೆ ಬಳಕೆಯಲ್ಲಿರಲಿಲ್ಲವೇ? "ಪ್ರಾಚೀನ ಭಾರತದಲ್ಲಿ ಅನೇಕ ಭೂ ಮಾಪನಗಳಿದ್ದವು. ಇವುಗಳನ್ನು ಅರ್ಥೈಸಲು ಸಾಹಿತ್ಯ ಮತ್ತು ಶಾಸನಗಳ ಅಭ್ಯಾಸದ ಆವಶ್ಯಕತೆ ಇದೆ. ಮುಂದುವರಿದು ಒಂದು ಭೌಗೋಳಿಕ ಪ್ರದೇಶದಲ್ಲಿ ಎಲ್ಲ ಸ್ಥಳಗಳಲ್ಲಿ ಮತ್ತು ಎಲ್ಲ ಕಾಲ ಮಾನಗಳಲ್ಲಿ ಅಳತೆಯ ಮಾನವು ಒಂದೇ ಆಗಿರಲಾರದು" ಎಂದು ದೀಪಕ್‌ರಂಜನ್ ದಾಸ್ ಅಭಿಪ್ರಾಯಪಡುತ್ತಾರೆ.

ಪ್ರತಿ ಬಗೆಯ ಅಳತೆಯಲ್ಲಿ ಒಂದು ಪರಿವರ್ತನಾ ಕೋಷ್ಟಕವಿದೆ. ಈಗ ಬಳಕೆಯಲ್ಲಿರುವ ಪರಿವರ್ತಕಗಳು ದಶಮಾಂಶ ಪದ್ಧತಿಯಲ್ಲಿವೆ. ಇದಕ್ಕೂ ಹಿಂದೆ ಫುಟ್ ಪೌಂಡ್ ಮತ್ತು ಸೆಕೆಂಡ್ಸ್ ಪದ್ಧತಿ ಬಳಕೆಯಲ್ಲಿತ್ತು. ಮಧ್ಯಯುಗೀನ ಮತ್ತು ಪ್ರಾಚೀನ ಕಾಲದಲ್ಲಿ ದೇಶ ದೇಶಗಳ ನಡುವೆ ವಿವಿಧ ಬಗೆಯ ಅಳತೆ ಮಾನಗಳಿದ್ದವು. ಇದಲ್ಲದೇ ದೇಸವೊಂದರಲ್ಲೇ ಅನೇಕ ಪ್ರಾಂತ್ಯಗಳಿದ್ದು ಇಲ್ಲಿನ ಅಳತೆ ಪದ್ಧತಿಗಳು ಪ್ರಾದೇಶಿಕವಾಗಿದ್ದವು.

---

* ಪುರಾತತ್ತ್ವ ಸಂರಕ್ಷಣಾ ಇಂಜಿನಿಯರ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ವೆಂಕಟಪ್ಪ ಚಿತ್ರಶಾಲೆ, ಕಸ್ತೂರಬಾ ರಸ್ತೆ, ಬೆಂಗಳೂರು–೫೬೦೦೦೧.

ಆದಿ ಕದಂಬರ ಕಾಲದಲ್ಲಿ ರಾಜಮಾನ ಮತ್ತು ಕರ್ಪಟೇಶ್ವರಮಾನ ಎಂಬ ಅಳತೆ ಕೋಲುಗಳಿದ್ದವು. ಇವುಗಳ ಪ್ರಮಾಣ ಇಂದು ಮೂಲಗಳಿಂದಲೂ ತಿಳಿದು ಬಂದಿಲ್ಲ. ರಾಜಮಾನ ಪ್ರಾಯಶಃ ಯಾವುದೋ ರಾಜ ಹಸ್ತದ ಅಳತೆಯಾಗಿರಬೇಕು. ಕರ್ಪಟೇಶ್ವರಮಾನ ಹೆಸರೇ ಸೂಚಿಸುವಂತೆ ದೇವರ ಹೆಸರಿನಲ್ಲಿದ್ದ ಅಳತೆಯ ಕೋಲು. ದೇಹಾಂಗಗಳನ್ನು ಬಳಸಿ ಹೇಳಿದ ಕೋಲುಗಳಲ್ಲಿ ಇಂತಿಷ್ಟು ಮಾರು, ಮೆಟ್ಟಿನ ಉಲ್ಲೇಖಗಳಿವೆ. ಉದಾಹರಣೆಗೆ ನಾಲ್ಕು ಮಾರು ಒತ್ತೋಳ ಗಳೆ, ಐದು ಮಾರು ಒತ್ತೋಳ ಗಳೆ, ಏಳು ಮಾರು ಒತ್ತೋಳ ಗಳೆ, ಹನ್ನೊಂದು ಮಾರು ಗಳೆ, ಹನ್ನೊಂದು ಮಾರು ಒತ್ತೋಳ ಗಳೆ, ಮಾರು ಹನ್ನೆರಡು, ಪದಿನಾಲ್ಕು ಮಾರು ಒತ್ತೋಳ ಗಳೆ, ಹದಿನಾರು ಮೆಟ್ಟಿನ ಹಾಸು ಗಳೆ, ಹದಿನೆಂಟು ಮೆಟ್ಟಿನ ಗಳೆ, ಮೂವತ್ತಾರು ಮೆಟ್ಟಿನ ಗಳೆ, ನಾಲ್ವತ್ತೆರಡು ಮೆಟ್ಟಿನ ಗಳೆ, ನಾಲ್ವತ್ತನಾಲ್ಕು ಮೆಟ್ಟಿನ ಗಳೆ, ನಾಲ್ವತ್ತೆಂಟು ಮೆಟ್ಟಿನ ಗಳೆಗಳು ಇವೆ. ಒತ್ತೋಳು ಒಂದು ತೋಳಿನ ಅಳತೆ. ಇದನ್ನೇ ಹೇಳಿರುವ ಕಾರಣವೇನೆಂದರೆ, ಎರಡೂ ಕೈ ಅಗಲಿಸಿ ನಿಂತಾಗ ಕೈ ಬೆರಳುಗಳ ತುದಿಗಳ ಮಧ್ಯದ ದೂರವನ್ನು ಶಾಸ್ತ್ರದಲ್ಲಿ ವ್ಯಾಮ ಎಂದು ಹೆಸರಿಸಲಾಗಿದೆ. ಆದಿತ್ಯದೇವರ ಗಡಿಂಬ, ಕನ್ಯೇಶ್ವರದ ಕೋಲು. ಕ್ಷೇತ್ರಪಾಲನ ಗಡಿಂಬ, ದೇಗುಲದ ಗಡಿಂಬದ ಕೋಲು, ದೇವರ ತೋಟದ ಕೋಲು, ನಗರೇಶ್ವರ ಗಡಿಂಬದ ಕೋಲು, ಪಾಂಡೇಶ್ವರದ ಗಡಿಂಬ, ಭೇರುಂಡೆ ಗಳೆ, ಬೊಂತೇಶ್ವರದ ಗಡಿಂಬದ ಗಳೆ, ಮಲ್ಲಿನಾಥ ಕೋಲು, ಮಾಣಿಕೇಶ್ವರದ ಕೋಲು, ಪ್ರಣವೇಶ್ವರ ದೇವರ ಗಡಿಂಬ, ಸೊಗಲದಡಿಗೇಶ್ವರ ದೇವರ ಕೋಲು... ಹೀಗೆ ದೇವರ ಹೆಸರುಗಳನ್ನು ಹೊಂದಿರುವುದಲ್ಲದೆ, ಊರ ಹೆಸರುಗಳನ್ನು ಉಳ್ಳ ಕೋಲುಗಳೂ ಇವೆ. ಅಣ್ಣಿಗೇರಿಯ ಪಿರಿಯ ಕೋಲು, ಊರ ಕೋಲು, ಒಡ್ಡಹಟ್ಟಿಯ ಗಡಿಂಬದ ಗಳೆ, ಎಳರಾವೆಯ ತೀರ್ಥದ ಗಡಿಂಬ, ಕಚ್ಚವಿಯ ಕೋಲು, ಕಂಬಠಾಣಾ ಗಡಿಂಬ, ಕೋಗಳಿಯ ಗಡಿಂಬ, ಕುರಿತಕುಂಟೆಯ ಕೋಲು, ಕುಂದೂರ ಕೋಲು, ಕೂಂಡಿಯ ಕೋಲು, ಗುತ್ತೊಳಲ ಗಡಿಂಬ, ಬೆಳವಾಡಿಯ ಗಳೆ, ಬೆಲ್ತುರ ಗಡಿಂಬ, ಮರಗುಂಡಿಯ ಗಳೆ(ಗುಂಡಿಯ ಗಳೆ), ಮೊರಟನ ಕೋಲು, ಮೆಗೂರ ಗಡಿಂಬ, ಮುಳ್ಗುಂದ ಮಲ್ಲಹರ ಮಾರಿಯ ಕೋಲು, ನಾಗವಾವಿಯ ಗಡಿಂಬ, ನರೇಂದ್ರಪುರದ ಪಿರಿಯ ಕೋಲು, ನವಿಲ್ಗುಂದ ಕೋಲು, ಪುರಿಗೆರೆಯ ಗಳೆ, ವೇಣುಗ್ರಾಮದ ಗಳೆ, ವೂರ ಗಡಿಬ, ಹೊಳಲ್ಕೆರೆಯ ಬೆದ್ದಲೆರೆಯ ಗಡಿಂಬ ಇತ್ಯಾದಿಗಳು.

ವಿಷ್ಣುವರ್ಧನನ ಗಳೆ, ತಿಗುಳರ ಗಳೆ, ಹಾರುವ ಕೋಲು, ಹಿರಿಯ ಕೋಲು, ಪಿರಿಯ ಕೋಲು, ಕಿರಿಯ ಕೋಲು, ಹಂಗದ ಕೋಲು, ಕೆರೆಯಳತೆಯ ಕೋಲು ಗಡಿಬ, ತೋಟವನೆವಳೆವ ಗಡಿಬ, ಭರಣದ ಕೋಲು, ಗದ್ದೆ ಗಳೆ, ಬೆದ್ದಲೆ ಗಳೆ, ಮಾನ್ಯದ ಕೋಲು ಇತ್ಯಾದಿ. ಅಲ್ಲದೆ ಶನಿವಾರಸಿದ್ಧಿಯ ಕೋಲು, ಮಾವನ ಸಿಂಘನ ಕೋಲು, ಗಂಡರಾದಿತ್ಯನ ಪಿರಿಯ ಕೋಲು, ಗಂಡನ ಗಡಿಂಬ, ದಾನಚಿಂತಾಮಣಿಯ ಕೋಲು, ದಾನವಿನೋದದ ಕೋಲು, ಬೀರವೆಡಂಗನ ಕೋಲು, ಬನ್ಧುಚಿಂತಾಮಣಿಯ ಕೋಲು, ಭಂಟರ ಭಾವನ ಕೋಲು, ಬೆಂಕೊಳ್ವನ ಕೋಲು, ಗೋಮನ ಗಡಿಂಬ, ಘಟೆಯ ಮಾರ್ಕೊಳ್ವನ ಕೋಲು, ಮಲೆಪರ ಮಾರಿಯ ಕೋಲು, ನುಡಿದಂತೆ ಗಂಡನ ಗಡಿಂಬ ಹೆಸರಿನ ಕೋಲುಗಳಲ್ಲದೆ, ಪ್ರಮಾಣ ಸೂಚಕವಾದ ನಾಲ್ವತ್ತು ಗೇಣು ಹಂದಿಯ ಗಡಿಂಬದ ಗಳೆ (ವರಾಹ ಮುದ್ರೆಯುಳ್ಳ) ಮನಗೂಳಿಯಲ್ಲಿ ಉಲ್ಲೇಖವಾದರೆ, ಹದಿನೆಂಟು ಗೇಣು ಅಳತೆಯ ವರಾಹ ಮುದ್ರೆಯುಳ್ಳ ಕ್ರಿ.ಶ. ೬೩೦ಕ್ಕೆ ಸೇರಬಹುದಾದ ಅಳತೆಯ ಪ್ರಮಾಣ ಬಳ್ಳಾರಿ ಜಿಲ್ಲೆಯ ಕುರುಗೋಡಿನಲ್ಲಿದೆ.

ಅನೇಕ ಅಳತೆ ಪ್ರಮಾಣ ಸೂಚಕ ಗೇಣು, ಮಾರು, ಮೆಟ್ಟುಗಳ ಗಳೆಗಳಿವೆ. ಯಾವ ಗೊಂದಲವೂ ಇಲ್ಲದೆ ವಿವಿಧ ಪ್ರದೇಶಗಳಲ್ಲಿ ವಿವಿಧ ಪ್ರಮಾಣದ ವಿವಿಧ ಹೆಸರುಳ್ಳ ಕೋಲುಗಳು ಬಳಕೆಯಲ್ಲಿದ್ದವು. ವಿದೇಶೀ ಪ್ರವಾಸಿಗರಾದ ಬುಖಾನನ್, ಥ್ಯಾಕರೆ ಮುಂತಾದವರಿಗೆ ಪ್ರದೇಶವೊಂದರಲ್ಲೇ ಇದ್ದ ವಿವಿಧ ಅಳತೆಗಳು ಸ್ಥಳೀಯ ವ್ಯವಸಾಯ ಪದ್ಧತಿಯನ್ನು ಅರಿಯಲು ತೊಡಕಾದವು. ಈ ಪ್ರಮಾಣಗಳನ್ನು ಇಂದೂ ಪ್ರತ್ಯಕ್ಷವಾಗಿ ಕೆಲವು ಕಡೆ ಕಾಣಬಹುದಾಗಿದೆ.

ಕ್ರಿ.ಶ. ೬೩೦ರ ಕುರುಗೋಡ ಹದಿನೆಂಟು ಗೇಣು ಗಳೆ, ಕ್ರಿ.ಶ. ೧೦೨೯ರ ತಾಳಗುಂದ ಪ್ರಣವೇಶ್ವರದೇವ ಗಡಿಬ, ಕ್ರಿ.ಶ. ೧೦೯೯ರ ಡಂಬಳದ ಶ್ರೀ ಮಾಧವೇಶ್ವರದೇವರ ಹೊಲದ ಗಡಿಂಬ ಕ್ರಿ.ಶ. ೧೧೧೭ರ ಬೇಲೂರಿನ ದೇವಹಸ್ತದ ಖಂಡೇಯ, ಕ್ರಿ.ಶ. ೧೧೬೫ರ ಎಲೆಬೆತೂರಿನ ಗಿಘ್ಯಣಂ, ಕ್ರಿ.ಶ.ಸು. ೧೨೦೦ರ ಬಾಗಳಿಯ ತೋಟವನಳೆವ ಗಡಿಬ ಕ್ರಿ.ಶ. ಸು. ೧೨೦೦ರ ಶ್ರೀನಾಗದೇವನ ಸವಣ್ಬಾದ ಗಡಿಂಬ, ಕ್ರಿ.ಶ. ೧೨೦೬ರ ಅಮೃತಾಪುರ ಕೆರೆಯಳತೆಯ ಕೋಲ ಗಡಿಬ, ಕ್ರಿ.ಶ. ೧೨೩೦ರ ಗರಡಸಿಯ ಈಶ್ವರ ದೇವಾಲಯ ಕೆರೆ ಕೋಡಿಯ ಮೇಲಿರುವ ಕೋಲ ಅಳತೆ, ಕ್ರಿ.ಶ. ೧೨೭೮ರ

ಮೇಗೂರ ಭೂಮಿಯ ಅಳತೆಯ ಗಡಿಬ ಪ್ರಮಾಣು, ವಿಜಯನಗರ ಕಾಲದ ಗೂಳೂರಿನ ಗದ್ದೆ ಗಡಿಬ, ಕ್ರಿ.ಶ. ೧೫೪೨ರ ಜೋಡಿ ಮತ್ತಿಗೋಡಿನ ಬೇಳೆ ಗಡಿಬ ಇಂದು ದೊರಕುವ ಪ್ರತ್ಯಕ್ಷ ಪ್ರಮಾಣಗಳು. ಕೋಲು, ಗಳೆ, ಘಳೆ, ಗಡಿಂಬ, ಗಡಿಬ ಇವೆಲ್ಲ ಉದ್ದಳತೆಯ ಪರ್ಯಾಯ ಪದಗಳು.

ಕ್ರಿ.ಶ ೯೮೧ರಲ್ಲಿ ನಿರ್ಮಾಣವಾದ ಗೊಮ್ಮಟೇಶ್ವರ ಮೂರ್ತಿಯ ಪಾದದ ಕೆಳಗೆ ಇರುವ ಅಳತೆ ಪ್ರಮಾಣ, ಕ್ರಿ.ಶ ೧೧೧೭ರ ಬೇಲೂರಿನ ಚನ್ನಕೇಶವ ದೇವಸ್ಥಾನದ ಅಧಿಷ್ಠಾನದಲ್ಲಿರುವ ಅಳತೆ ಪ್ರಮಾಣ ಮತ್ತು ದೇವಹಸ್ತದ ಖಂಡೇಯ ಎಂಬ ಉಲ್ಲೇಖ, ಕ್ರಿ.ಶ. ೧೬೭೨-೧೬೭೯ರ ಅವಧಿಯಲ್ಲಿನ ಕೆಳದಿಯ ಶ್ರೀ ವೀರಭದ್ರ ದೇವಾಲಯದ ಹೊರ ಗೋಡೆಯಲ್ಲಿರುವ ಅಳತೆ ಪ್ರಮಾಣ, ಕ್ರಿ.ಶ. ೧೮೦೬ರ ಭಾಗಮಂಡಲದಲ್ಲಿನ ಭಗಂಡೇಶ್ವರ ದೇವಾಲಯದ ಅಧಿಷ್ಠಾನದಲ್ಲಿರುವ ಅಳತೆ ಪ್ರಮಾಣಗಳು ಒಂದೇ ಮಾದರಿಯಲ್ಲಿವೆ. ಕರ್ನಾಟಕದಲ್ಲಿ ದೊರೆಯುತ್ತಿರುವ ಒಂದೇ ಮಾದರಿಯ ಅಳತೆ ಪ್ರಮಾಣವು ೧೦೦೦ ವರ್ಷಗಳವರೆಗೆ ಇದ್ದ ಪ್ರಚಲಿತ ಪದ್ಧತಿಯನ್ನು ಸೂಚಿಸುತ್ತವೆ. ಈ ಪ್ರಮಾಣವು ಗಜ ಅಥವಾ ಹಸ್ತ ಅಳತೆಯಾಗಿದ್ದು, ಇದರಲ್ಲಿ ಮುಖ್ಯವಾಗಿ ೨೪ ಅಂಗುಲಗಳಿರುತ್ತವೆ. ಶಿವತತ್ವರತ್ನಾಕರ, ಮಾನಸೋಲ್ಲಾಸ, ಮತ್ತಿತರ ಶಿಲ್ಪ ಗ್ರಂಥಗಳಲ್ಲಿ ದೊರೆಯುವ ಪ್ರಮಾಣ ಸೂಚಕಗಳು ಹೀಗಿವೆ :

ಪರಮಾಣು(ಧೂಳಿನ ಕಣ), ವಾಲಾಗ್ರ(ಹಸುವಿನ ಕರುವಿನ ಬಾಲದ ಕೂದಲು), ಲೀಕ್ಷಾ(ಹೇನಿನ ಮೊಟ್ಟೆ), ಯೂಕಾ(ಹೇನು), ಯವ(ಗೋಧಿ ಕಾಳು), ಅಂಗುಲ ಇವು ಎಂಟರ ಗುಣಾಕಾರದಲ್ಲಿರುವ ಪ್ರಮಾಣಗಳು. ಉದಾಹರಣೆಗೆ ಒಂದು ಅಂಗುಲದಲ್ಲಿ ಎಂಟು ಯವಗಳಿವೆ. ಅಂಗುಲ ಮತ್ತು ಮಾತ್ರಾ ಇವು ಪರ್ಯಾಯ ಪದಗಳು. ಎರಡು ಅಂಗುಲಗಳು ಸೇರಿ ಗೋಲಕ, ಮೂರು ಅಂಗುಲಗಳು ಸೇರಿ ಕಲಾ, ನಾಲ್ಕಂಗುಲಗಳು ಸೇರಿ ಭಾಗ, ಮೂರು ಭಾಗ ಸೇರಿ ಒಂದು ವಿತಸ್ಥಿ. ವಿತಸ್ಥಿಯನ್ನು ತಾಲವೆಂದೂ ಹೇಳುವರು. ಎರಡು ವಿತಸ್ಥಿಗಳು ಒಂದು ಹಸ್ತ ಅಳತೆ. ಇದನ್ನು ಗಜ ಎಂದೂ ಹೇಳಲಾಗಿದೆ. ಒಂದು ಹಸ್ತ ಅಳತೆಯಲ್ಲಿ ೨೪ ಅಂಗುಲಗಳಿರುತ್ತವೆ.

ಇನ್ನೊಂದು ವಿವರ ಹೀಗಿದೆ : ನಾಲ್ಕು ಹಸ್ತ ಪ್ರಮಾಣ ಒಂದು ಚಾಪ. ಎರಡು ಸಾವಿರ ಚಾಪಗಳು ಸೇರಿದರೆ ಒಂದು ಕ್ರೋಶ, ನಾಲ್ಕು ಕ್ರೋಶಗಳು ಒಂದು ಯೋಜನ ಹೀಗೆ ಪ್ರಮಾಣ ಭೇದಗಳನ್ನು ಹೇಳಲಾಗಿದೆ.

ಒಂದು ಹಸ್ತ ಅಳತೆಯಲ್ಲಿನ ೧ ರಿಂದ ೨೪ ಅಂಗುಲಗಳ ಹೆಸರುಗಳು ಹೀಗಿವೆ: ಮಾತ್ರ(ಶಿವ), ಗೋಲಕ(ಕಲಾ/ವಾಯು), ಅದ್ಯರ್ಧಕಾ(ವಿಶ್ವದೇವ), ಭಾಗ(ಅಗ್ನಿ), ಬ್ರಹ್ಮ, ಸೂರ್ಯ, ರುದ್ರ, ಯಮ, ವಿಶ್ವಕರ್ಮ, ವಾಸು, ಗಣೇಶ, ವಿತಸ್ಥಿ(ವರುಣ), ಕಾರ್ತಿಕೇಯ, ಇಚ್ಛಾ, ಕ್ರಿಯಾ, ಗ್ಯಾನ, ಕುಬೇರ, ಚಂದ್ರಮ, ಜಯ, ವಾಸುದೇವ, ಬಲಭದ್ರ, ಕಾಮ, ವಿಷ್ಣು ಮತ್ತು ಹಸ್ತ. ಮೂರಂಗುಲಗಳ ಕಲೆ ಎಂಟು ಇವೆ. ಅವುಗಳ ಹೆಸರು : ರುದ್ರ, ವಾಯು, ವಿಶ್ವಕರ್ಮ, ಅಗ್ನಿ, ಬ್ರಹ್ಮ ಕಾಲ(ಯಮ), ವರುಣ ಮತ್ತು ಚಂದ್ರಮ(ದಂಡ).

ಯಾವುದೇ ಒಂದು ಅಳತೆಯ ಕೋಲು ಶಾಸನೋಕ್ತವಾಗಿ ಸೂಚಿತವಾಗುವ ಮೊದಲೂ ಬಳಕೆಯಲ್ಲಿರುತ್ತದೆ. ಅಂತೆಯೇ ಅದರ ಕೊನೆಯ ಬಳಕೆಯನ್ನು ಸೂಚಿಸುವ ಶಾಸನದ ಕಾಲದ ನಂತರದ ಅನೇಕ ವರ್ಷಗಳವರೆಗೂ ಬಳಕೆಯಲ್ಲಿರುವ ಸಾಧ್ಯತೆ ಇದೆ. ಆದ್ದರಿಂದ ಒಂದು ಕೋಲಿನ ಬಳಕೆಯ ಕಾಲಾವಧಿ ಶಾಸನಗಳಲ್ಲಿ ಸೂಚಿತವಾಗಿರುವ ಕಾಲಕ್ಕಿಂತ ಹೆಚ್ಚು ಇರುತ್ತದೆ.

ಕೆಲವು ಕೋಲುಗಳ ಶಾಸನೋಕ್ತ ಬಳಕೆಯ ಅವಧಿ ಹೀಗಿದೆ : ಕಚ್ಚವಿಯ ಕೋಲು ಕ್ರಿ.ಶ ೧೦೧೯–೧೧೭೯ ರ ಅವಧಿಯಲ್ಲಿ ೧೬೦ ವರ್ಷಗಳು, ಮಾಣಿಕೇಶ್ವರದ ಕೋಲು ಕ್ರಿ.ಶ ೧೦೫೮–೧೩೦೦ ರ ಅವಧಿಯಲ್ಲಿ ೨೪೨ ವರ್ಷಗಳು, ಅಣ್ಣಿಗೇರಿಯ ಕೋಲು ಕ್ರಿ.ಶ ೧೦೬೪–೧೧೭೩ ರ ಅವಧಿಯಲ್ಲಿ ೧೦೯ ವರ್ಷಗಳು, ಒರಂಟನ ಕೋಲು ಕ್ರಿ.ಶ ೧೦೭೭–೧೧೭೬ ರ ಅವಧಿಯಲ್ಲಿ ೯೯ ವರ್ಷಗಳು, ಬೆಂಕೊಳ್ವನ ಕೋಲು ಕ್ರಿ.ಶ ೧೧೩೦–೧೨೨೨ ರ ಅವಧಿಯಲ್ಲಿ ೯೩ ವರ್ಷಗಳು, ಮುಂಜನ ಕೋಲು ಕ್ರಿ.ಶ ೧೧೨೭–೧೨೦೬ ರ ಅವಧಿಯಲ್ಲಿ ೭೯ ವರ್ಷಗಳು.

ಅಳತೆಯನ್ನು ಕುರಿತಾದ ಶಾಪಾಶಯಗಳೂ ಇವೆ. ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲೂಕು ಚಿರಸ್ತಹಳ್ಳಿಯ ಕ್ರಿ.ಶ ೧೦೫೦ರ ಶಾಸನದಲ್ಲಿ, 'ಗಳೆಯುಂ ಪುಗಿಸುವುದೆಂಬಂ ಗಳಗಳನಿಳಿಗುಂ' – ಗಳೆಗಳನ್ನು ತುಂಡರಿಸುವವರು ನರಕಕ್ಕೆ

ಹೋಗುವರು ಎನ್ನಲಾಗಿದೆ. ಮಂಡ್ಯ ಜಿಲ್ಲೆ ನಾಗಮಂಗಲ ತಾಲೂಕು ದೊಡ್ಡ ಜಟಕಾ ಗ್ರಾಮದಲ್ಲಿನ ಶಾಸನದಲ್ಲಿ "ಈ ಅಯ್ವತ್ತ ಗೇಣು ಗಡಿಬವ ಸಲಿಸದೆ ಕಿತ್ತವಂಗೆ ಕುಂಬಿನೀ ನರಕ ಸಂತಾನ ಕ್ಷಯವಕ್ಕು" ಎಂದಿದೆ. ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಒಂದು ಶಾಪಾಶಯ ಶ್ಲೋಕ ಹೀಗಿದೆ :

'ಗಾಮೇಕಂ ರತ್ನಿಕಾಂ ಏಕಂ ಭೂಮೇರ್ ಅಪ ಏಕಂ ಅಂಗುಲಂ
ಹರಂ ನರಕಂ ಆಪ್ನೋತಿ ಯಾವದ್ ಆಭೂತ ಸಂಪ್ಲವಂ'

(ದಾನ ನೀಡಲಾದ ಹಸುಗಳು, ಪ್ರಶಸ್ತ ಹರಳುಗಳು, ಭೂಮಿಯ ಅಳತೆಯಲ್ಲಿ ಒಂದಂಗುಲವನ್ನು ಕಡಿಮೆ ಮಾಡಿದವನು ಯಾವಾಗಲೂ ನರಕದಲ್ಲಿರುತ್ತಾನೆ.)

## ಚಿತ್ರಗಳು

ಶ್ರವಣಬೆಳ್ಗೊಳ, ಬೇಲೂರು, ಕೆಳದಿ ಮತ್ತು ಭಾಗಮಂಡಲದಲ್ಲಿನ ೨೪ ಅಂಗುಲ **ಅಳತೆ ಪಟ್ಟಿಗಳು** :

ಗೂಳೂರ ಗಡಿಬ ೮.೫೦ ಮೀ. ಉದ್ದ ಗೆರೆ,

ಕೋಟಿಪುರ ಕೈಟಭೇಶ್ವರ ದೇವಾಲಯ ಗಡಿಬ ಅಳತೆ (ಅಂಗುಲ),

ಶಾಸನ ಪಡಿಯಚ್ಚು ಶ್ರೀ ಹತ್ತು ಗೇಣ ಕೋಲು (ತೀರ್ಥ, ಸೊಲ್ಲಾಪುರ),

ಮತ್ತು ತೋಟವನಳೆವ ಗಡಿಬ (ಬಾಗಳಿ),

ಮೋಗೂರು ಭೂಮಿಯ ಅಳತೆ ಗಡಿಬ ಪ್ರಮಾಣು

ಶ್ರವಣಬೆಳ್ಗೊಳ ೨೪ ಅಂಗುಲ ಅಳತೆ ಪಟ್ಟಿ

ಜೋಡಿ ಮತ್ತಿಗೋಡು ಬೇಳೆ ಗಡಿಬ

ಡಂಬಳ ಸೋಮೇಶ್ವರ ದೇವಾಲಯ ಶ್ರೀಮಾಧವೇಶ್ವರ ದೇವರ ಹೊಲದ ಗಡಿಂಬ.



# ಗಂಗರ ಕಾಲದ ನೀರಾವರಿ

– ಡಾ॥ ಟಿ.ವಿ.ನಾಗರಾಜ*

**ಪ್ರಾ**ಗೈತಿಹಾಸಿಕ ಮಾನವ ತನ್ನ ವಾಸಕ್ಕಾಗಿ ಗುರುತಿಸಿಕೊಂಡ ನೆಲೆಗಳು ಸಾಮಾನ್ಯವಾಗಿ ನೀರು ಸಿಗುವಂತಹ ನೈಸರ್ಗಿಕ ತಾಣಗಳೇ ಆಗಿದ್ದವು. ಸಸ್ಯ ಬೆಳವಣಿಗೆಯ ಪರಿಜ್ಞಾನದೊಂದಿಗೆ, ಮಾನವ ಕೃಷಿಕನಾದ ಕಾಲದಿಂದಲೇ ಮಳೆಯನ್ನು ಆಶ್ರಯಿಸಲಾಗಿದ್ದಿತು. ಕೃಷಿಯನ್ನು ತನ್ನ ಮುಖ್ಯ ಜೀವನಾಧಾರವಾಗಿ ರೂಡಿಸಿಕೊಂಡ ಕಾಲದಿಂದಲೇ ಮಳೆಯ ಮತ್ತು ಹೊಳೆಯ ನೀರನ್ನು ಸಾಕಷ್ಟುಕಾಲ ಹಿಡಿದಿಟ್ಟುಕೊಳ್ಳುವ ಆವಶ್ಯಕತೆ ಕಂಡು ಬಂದಿತು. ಜನ ವಸತಿ ಹೆಚ್ಚಿದಂತೆ ಕಡಿಮೆ ಮಳೆಯಾಗುವ ಪ್ರದೇಶಗಳಿಗೆ ಸಾಗಿ ಬಂದ ಜನತೆ ನೀರಿನ ಸಂಗ್ರಹಣಾ ತಂತ್ರಗಳನ್ನು ರೂಢಿಸಿಕೊಂಡು ನೀರಿನ ಕೊರತೆ ಅಥವಾ ಕನಿಷ್ಟ ಮಳೆಯ ದಿನಗಳಲ್ಲಿ ವ್ಯವಸಾಯಕ್ಕೂ ಬದುಕಿಗೂ ಬಳಸಿಕೊಳ್ಳಲು ತೊಡಗಿಸಿಕೊಂಡಿರಬೇಕು. ಹಳ್ಳಿಗಳಿಗೆ ಕಟ್ಟಿಗೆ, ಎಲೆ, ಬಳ್ಳಿ ಮತ್ತು ಮಣ್ಣನ್ನು ಬಳಸಿ ಕಟ್ಟೆಗಳನ್ನು ನಿರ್ಮಿಸಿಕೊಂಡಿರಬೇಕು. ಬಯಲುನಾಡಿನ ಪ್ರದೇಶಗಳಲ್ಲಿ ವಿಶೇಷವಾಗಿ ಕೆರೆ, ಕಾಲುವೆ, ಕಟ್ಟೆಗಳ ನಿರ್ಮಾಣಕಾರ್ಯ ಆರಂಭಗೊಂಡು ಕಾಲಕ್ರಮೇಣ ವಿಕಸನಗೊಳ್ಳುತ್ತಾ ಬಂದಿದೆ.

ಕರ್ನಾಟಕವನ್ನು ಆಳಿದ ಪ್ರಾರಂಭಿಕ ರಾಜಮನೆತನಗಳಲ್ಲಿ, ತಲಕಾಡಿನ ಗಂಗರು ಮೊದಲಿಗರು. ಕ್ರಿ.ಶ.ನಾಲ್ಕನೆಯ ಶತಮಾನದಿಂದ ಹನ್ನೊಂದನೆಯ ಶತಮಾನದವರೆಗೆ ಅವರ ಕಾಲಘಟ್ಟ ಹರಡಿಕೊಂಡಿದೆ. ಈ ಅವಧಿಯ ಸರಿ ಸುಮಾರು ೪೦–೪೫ ಶಾಸನಗಳಲ್ಲಿ ಉಲ್ಲೇಖಿತಗೊಂಡಿರುವ ದಾನ–ದತ್ತಿ ಸ್ವರೂಪದ ವಿವರಗಳಲ್ಲಿನ ಕೆರೆ ಕಾಲುವೆಗಳ ಪ್ರಸ್ತಾಪಗಳನ್ನು ಗಮನಿಸಿ ಅಂದಿನ ಕಾಲಘಟ್ಟದ ನೀರಾವರಿ ಚೌಕಟ್ಟನ್ನು ಸ್ಥೂಲವಾಗಿ ಗ್ರಹಿಸುವ ಪ್ರಯತ್ನ ಇದು.

ಮೈಸೂರು ಸಂಸ್ಥಾನದ ಅತ್ಯಂತ ಪ್ರಾಚೀನ ಭೌಗೋಳಿಕ ಹಾಗೂ ಜನಾಂಗೀಯ ಪ್ರದೇಶವಾದ 'ಗಂಗವಾಡಿ' ಪ್ರದೇಶದಲ್ಲಿ ರೂಪಗೊಂಡ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಪ್ರಸ್ತಾಪಿಸುವ ಬರ್ಟನ್ ಸ್ಟೈನ್ "ಗಂಗರಸರ ಆಳ್ವಿಕೆಯ ಕಾಲದಲ್ಲಿ ದಕ್ಷಿಣ ಭಾರತದ ಇತರೆಡೆಗಳಲ್ಲಿ ಆದಂತೆ ನಾಡಿನ ರೈತ ಗುಂಪುಗಳು ಕೃಷಿಗೆ, ಕೃಷಿ ಚಟುವಟಿಕೆಗಳಿಗೆ ಅಗತ್ಯವಾದ ನೀರಾವರಿ ವ್ಯವಸ್ಥೆಯನ್ನು ಸ್ಥಾಪಿಸಿದರು." ಎಂದು ಅಭಿಪ್ರಾಯ ಪಟ್ಟಿದ್ದಾರೆ[೧]. ಈ ನಿಟ್ಟಿನಲ್ಲಿ ಗ್ರಾಮೀಣ ಗಣ್ಯರು ಸಣ್ಣ ಪ್ರಮಾಣದ ನೀರಾವರಿ ಕಾಮಗಾರಿಗಳನ್ನು ನಿರ್ಮಿಸಿ, ಹಲವು ಸವಲತ್ತು ಹಾಗೂ ಸಾಮಾಜಿಕ ಪ್ರತಿಷ್ಠೆ ಗಳಿಸಿಕೊಂಡರು. ಪ್ರಾಚೀನ ರಾಜ್ಯವ್ಯವಸ್ಥೆಯ ಬಗ್ಗೆ ಇತ್ತೀಚಿನ ಸಂಶೋಧನೆಗಳು ರಾಜರು ಕೃಷಿ ಅಭಿವೃದ್ಧಿಯಿಂದ ಆರ್ಥಿಕ ಪ್ರಗತಿ ಸಾಧ್ಯ ಎಂದು ಮನಗಂಡಿದ್ದರೂ ಸಹ, ಈ ನಿಟ್ಟಿನಲ್ಲಿ ನೀರಾವರಿ ಚಟುವಟಿಕೆಗಳಲ್ಲಿ ನೇರವಾಗಿ ಭಾಗಿಯಾದದ್ದು ಕಂಡು ಬರುವುದಿಲ್ಲ. ರಾಜರು ಭೂಮಿಯನ್ನು ಬ್ರಾಹ್ಮಣರಿಗೆ, ದೇವಾಲಯಗಳಿಗೆ ದಾನ ಮಾಡುವುದು ಒಂದು ಪವಿತ್ರಕಾರ್ಯ ಎಂದು ಭಾವಿಸಿದ್ದರು. ನೀರಾವರಿ ಕಾಮಗಾರಿಗಳ ನಿರ್ಮಾಣದಂತಹ ಚಟುವಟಿಕೆಗಳನ್ನು 'ಧಾರ್ಮಿಕ ಉತ್ಕೃಷ್ಟತೆ' ಅಥವಾ 'ಸಪ್ತಸಂತಾನ' ಎಂದು ಪರಿಭಾವಿಸಲಾಗಿತ್ತು. ಈ ಧಾರ್ಮಿಕ ಮಹೋನ್ನತಿಯ ಉದ್ದೇಶಗಳ ಪ್ರತೀಕವಾಗಿ ಕೃಷಿ ಮತ್ತು ನೀರಾವರಿ ಚಟುವಟಿಕೆಗಳು ಪ್ರೋತ್ಸಾಹ ಪಡೆದವು.[೨]

ಗಂಗರ ಕಾಲದ ಕೆರೆ ನೀರಾವರಿ ಚೌಕಟ್ಟಿನಲ್ಲಿ ನಿರ್ಮಾಣ ಕುರಿತಂತೆ ಬೆಳಕು ಚೆಲ್ಲುವ ಶಾಸನಗಳು ಕ್ರಿ.ಶ.೮ನೆಯ ಶತಮಾನದಿಂದ ದೊರೆತಿವೆ. ಕ್ರಿ.ಶ. ೭೫೪ರ ಪಾವಗಡದ ಶ್ರೀಪುರುಷನ ಕಾಲದ ಶಾಸನ ಜವಣಿಯ ಮಗ ನಿಟ್ಟರಾವನ್ನಿ ಹಲವು ಭೂಮಿಗಳನ್ನು ದಾನ ನೀಡಿದ್ದನ್ನು ಪ್ರಸ್ತಾಪಿಸುತ್ತಾ, ಅಕಳತಿಗಳ್ ಕೆರೆಯ ನಿರ್ಮಾಪಕನೆಂದು ಉಲ್ಲೇಖಿಸಿದೆ[೩]. ಇದೇ ಸ್ಥಳದ ಮತ್ತೊಂದು ಶಾಸನ ಅಕಳತಿ ನಿರ್ಮಿಸಿದ "ಈ ಕೆರೆ ಜಗತ್ಪ್ರಸಿದ್ಧವೆಂದು" ಉಲ್ಲೇಖಿಸುತ್ತಿದೆ.[೪]

---

* ಇತಿಹಾಸ ಪ್ರಾಧ್ಯಾಪಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು.

ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಹಲ್ಕೂರಿನ ಕ್ರಿ.ಶ. ೭೮೦ರ ಗಂಗ ಅರಸ ಶ್ರೀಪುರುಷನ ಶಾಸನ ಅದ್ದೆಪೆರನೆಂಬುವನು ಕೆರೆಯನ್ನು, ಕಟ್ಟಿದನೆಂದು ಪ್ರಸ್ತಾಪಿಸುತ್ತದೆ[೫]. ಬೆಂಗಳೂರು ಜಿಲ್ಲೆಯ ಕ್ರಿ.ಶ.೮೭೦ ಶಾಸನದಲ್ಲಿ ಸಿರಿಯಯ್ಯ ಎರಡು ಕೆರೆಗಳಿಗೆ ತೂಬನ್ನು ಇರಿಸಿ, ಪೂರ್ವದ ಕೆರೆಯನ್ನು ನಿರ್ಮಿಸಿ, ಮೂರು ಕೆರೆಗಳಿಗೆ 'ಜಿತ್ತುವಟ್ಟ' ಪಡೆದುದನ್ನು ದಾಖಲಿಸಿದೆ[೬]. ಚಾಮರಾಜನಗರ ತಾಲ್ಲೂಕಿನ ೯ನೆಯ ಶತಮಾನದ ಎಲ್ಕೂರು ಶಾಸನ ಸಾಮೂಹಿಕವಾಗಿ ಹನ್ನೆರಡು ಮಂದಿ ಜೊತೆಗೂಡಿ ಕೆರೆ ನಿರ್ಮಿಸಿದರೆಂದು ದಾಖಲಿಸಿದೆ[೭]. ತುಮಕೂರು ಜಿಲ್ಲೆಯ ಕ್ರಿ.ಶ. ೯೬೩ರ ರಾಷ್ಟ್ರಕೂಟರ ಮುಮ್ಮಡಿ ಕೃಷ್ಣನ ಕುಣಿಗಲ್ ಶಾಸನದಲ್ಲಿ "ಶ್ರೀ ಪುರುಷ ಮಹಾರಾಜನ್ ಕಟ್ಟಿಸಿದ ಪಿರಿಯಕೆರೆ ಭಿಂನಮಾದೊಡೆ . . ಎಂದು ಸ್ಪಷ್ಟವಾಗಿ ಉಲ್ಲೇಖಿಸಿದೆ[೮]. ಮೈಸೂರು ಜಿಲ್ಲೆಯ ತಲಕಾಡಿನ ಕ್ರಿ.ಶ. ೯೩೪ರ ಶಾಸನ ಎಂಕಯ್ಯ ಮತ್ತು ೨೫ ಜನ ಕೆರೆಯೊಂದನ್ನು ಕಟ್ಟಿಸಿದುದನ್ನು ಪ್ರಸ್ತಾಪಿಸುತ್ತಿದೆ[೯]. ಮಂಡ್ಯ ಜಿಲ್ಲೆಯ ಮಳವಳ್ಳಿಯ ಶ್ರೀಪುರುಷನ ಕಾಲದ್ದೆಂದು ಹೇಳುವ ಶಾಸನ ೧೨ ಮಂದಿ ಪರಿವಾರದವರು 'ಕೊಂಗಣಿ ಕೆರೆ ನಿರ್ಮಿಸಿದರೆಂದು ಉಲ್ಲೇಖಿಸುತ್ತಿದೆ[೧೦]. ಸ್ಥಳೀಯ ಜನ ಸಮುದಾಯದ ವಿವಿಧ ವರ್ಗದ ಜನರು ಸಹ ನೀರಾವರಿ ಕಾಮಗಾರಿಗಳಲ್ಲಿ ತಮ್ಮನ್ನು ತೊಡಗಿಕೊಳ್ಳುತ್ತಿದುದು ಗಮನಾರ್ಹ! ಚಾಮರಾಜನಗರ ತಾಲ್ಲೂಕಿನ ಕ್ರಿ.ಶ.೯೪೮ರ ಶಾಸನದಲ್ಲಿ ವ್ಯಕ್ತಿಯೊರ್ವ ಕೆರೆ ನಿರ್ಮಿಸಿದುಕ್ಕಾಗಿ, ಎಣ್ನಾಲ್ಕು ನೂರು ಭೂಮಿಗಳನ್ನು ದಾನ ನೀಡಿರುವುದು ಉಲ್ಲೇಖಿತವಾಗಿದೆ[೧೧].

ನಂಜನಗೂಡು ತಾಲ್ಲೂಕಿನ ಗಟ್ಟವಾಡಿಯ ೧೦ನೆಯ ಶತಮಾನದ ಶಾಸನದಲ್ಲಿ ಕೆರೆ ನಿರ್ಮಾಣದ ಪ್ರಸ್ತಾಪ ಇದ್ದು, ಈ ಸಂಬಂಧ ನೀಡಿರುವ ಭೂದಾನದ ಭೂಮಿಯ ಎಲ್ಲೆ ಕಟ್ಟುಗಳನ್ನು ನಿರ್ಧರಿಸಿ ಕಲ್ಲನ್ನು ಹಾಕಿಸಿದ್ದನ್ನು ದಾಖಲಿಸಿದೆ[೧೨]. ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ರಾಂಪುರದ ೯೦೪–೯೦೫ರ ಶಾಸನದಲ್ಲಿ ಎರಡನೇ ರಾಜಮಲ್ಲ ಕೇಸಿಗನಿಗೆ ಸನ್ನದನ್ನು ನೀಡಿ, ಅದರಂತೆ ಪೆರಬನಮ್‌ಪಲ್ಲಿಯಲ್ಲಿ ಕೊಂಡುಕೊಂಡು, ತಳನೇರಿಯಲ್ಲಿ ಅಣೆಕಟ್ಟನ್ನು ಕಟ್ಟಸಿದ್ದಕ್ಕಾಗಿ ಮೊದಲನೆ ವರ್ಷ "ಅರಣೆ; ಎರಡನೇ ವರ್ಷ 'ಪತ್ತೊಂದಿ' ಮೂರನೆಯ ವರ್ಷ 'ಎಳಾಲಿ' ಹಾಗೂ ಆ ನಂತರ ಐದು "ಆಳಲಿ' ತೆರಿಗೆ ನೀಡಿ ಸನ್ನದು ಹಾಕಿಸಿರುವುದನ್ನು ದಾಖಲಿಸಿದೆ[೧೩]. ಕೃಷಿ ವಿಸ್ತರಣೆಗೆ ಪೂರಕವಾಗಿ, ನೀರಾವರಿ ಸೌಲಭ್ಯ ಕಲ್ಪಿಸಿ ಪ್ರೋತ್ಸಾಹದಾಯಕವಾಗಿ ಕೃಷಿಕರಿಗೆ, ಆರಂಭಿಕ ವರ್ಷಗಳಲ್ಲಿ ರಿಯಾಯಿತಿ ಪ್ರಮಾಣದ ತೆರಿಗೆ ಹೇರಿ, ಆ ನಂತರದ ವಾರ್ಷಗಳಲ್ಲಿ ಹೆಚ್ಚಿಸುತ್ತಾ ಬಂದಿರುವುದು ಕಂಡುಬರುತ್ತಿದೆ. ಚಿಕ್ಕಬಳ್ಳಾಪುರ ಜಿಲ್ಲೆ ಮತ್ತು ತಾಲ್ಲೂಕಿನ ಶಾಸನ ಪಟ್ಟನಹಳ್ಳಿ ಬಳಿಯ ಗೋಪಾಲಕೃಷ್ಣಕೆರೆಯನ್ನು ಅಲದಾವುನ ಪತ್ನಿ ಆಳಬ್ಬೆ ಎಂಬ ಮಹಿಳೆ ಕಟ್ಟಿಸಿರುವುದಾಗಿ ಪ್ರಸ್ತಾಪಿಸುತ್ತಿದೆ[೧೪]. ಕ್ರಿ.ಶ.೯೭೨ರ ಬೇಲೂರು ಶಾಸನದಲ್ಲಿ ಬಸಣ್ಣಯ್ಯ ಸಾಳಯ್ಯನಿಗೆ ಒಂದು ಗ್ರಾಮಕ್ಕೆ ಕೆರೆ ನಿರ್ಮಿಸಿದುದನ್ನು ತೂಬನ್ನು ಇಕ್ಕಿಸಿದುದನ್ನು ಪ್ರಸ್ತಾಪಿಸಿದ್ದಷ್ಟೆ[೧೫] ಅಲ್ಲದೆ ಆ ಕಾರ್ಯಕೈಗೊಂಡ ಕುಶಲಕರ್ಮಿಯಾದ ಮಾಲಿಯಕ್ಕಾಚಾರಿ 'ಕೆರೆ–ಕಟ್ಟೆ–ತೂಬನ್ನು ಇಟ್ಟ' ಎಂದು ದಾಖಲಿಸುವ ಮೂಲಕ ಅಂದಿನ ಕಾಲಘಟ್ಟದ ಕುಶಲಕರ್ಮಿ ಪಾತ್ರವನ್ನು ಗುರುತಿಸಲು ಸಹಾಯಕವಾಗಿದೆ.

ಗಂಗರ ಪ್ರಭುತ್ವದೆಯಲ್ಲಿ ಆಡಳಿತದ ಅಂಗವಾಗಿ ಕಾರ್ಯ ನಿರ್ವಹಿಸಿದ, ಮಂತ್ರಿಗಳು, ಸಹ ನೀರಾವರಿ ಕಾಮಗಾರಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬಂದಿದೆ. ನಂಜನಗೂಡಿನ ಕ್ರಿ.ಶ.೯೬೮ರ ಮಾರಸಿಂಹನ ಕಾಲದ ಶಾಸನ ಅವನ ಮಂತ್ರಿ ನಾಗವರ್ಮ 'ಪೆರಿಯಕೆರೆ' ಎಂಬ ಕೆರೆಯನ್ನು ಕಟ್ಟಿಸಿ, ಅದರ ನಿರ್ವಹಣೆಗಾಗಿ ೪ ಖಂಡುಗದ ತೆರಿಗೆ ಮುಕ್ತ ಭೂಮಿಯನ್ನು ನೀಡಿರುವುದನ್ನು ದಾಖಲಿಸಿದೆ[೧೬]. ಕೇವಲ ಕೆರೆ ನಿರ್ಮಿಸಿದ್ದು ಮಾತ್ರವಲ್ಲದೆ ಆ ಕೆರೆಯ ನಿರ್ವಹಣೆಗಾಗಿ ೪ ಖಂಡುಗದ ಬಿತ್ತನೆಯುಳ್ಳ ಅಚ್ಚುಕಟ್ಟು ಭೂಮಿಯನ್ನು ನಿರ್ವಹಣೆಗಾಗಿ ನೀಡುವ ಮೂಲಕ ಕೆರೆ ನೀರಾವರಿ ಚೌಕಟ್ಟಿನ ಸುಸ್ಥಿರ ಮುಂದುವರಿಕೆಗಾಗಿ ವಿಶೇಷ ಕ್ರಮ ಕೈಗೊಂಡಿರುವುದು ಗಮನಾರ್ಹ.

ಹಾಗೆಯೇ II ನಾಗವರ್ಮನ ಶಾಸನವೊಂದು ಅವನ ಮಂತ್ರಿ ಈಚಯ್ಯ ಕಲ್ಲಿನ ತೂಬನ್ನು ಹೊಂದಿದಂತೆ ಕೆರೆಯನ್ನು ನಿರ್ಮಿಸಿದನೆಂದು ದಾಖಲಿಸಿದೆ[೧೭]. ಪ್ರಾಯಶಃ ಆರಂಭಿಕ ಹಂತದ ಕೆರೆ ನಿರ್ಮಾಣದ ಚೌಕಟ್ಟಿನಲ್ಲಿ, ಸಾಂಪ್ರದಾಯಕ ಪಾರಂಪರಿಕವಾಗಿ ಮಣ್ಣ ಕಟ್ಟೆಗಳನ್ನು ನಿರ್ಮಿಸುತ್ತಿದ್ದಿರಬೇಕು. ಆ ನಂತರದ ತಂತ್ರಜ್ಞಾನ ಕೌಶಲ್ಯದ ಮುಂದುವರಿದ ಭಾಗವಾಗಿ ಕಲ್ಲಿನ ತೂಬನ್ನು ಇರಿಸುವ ಪದ್ಧತಿ ಆವಿಷ್ಕಾರಗೊಂಡಿರಬೇಕು.

ಟಿ. ನರಸೀಪುರ ತಾಲ್ಲೂಕು ೯ನೆಯ ಶತಮಾನದ ವಿಜಯಪುರದ ಶಾಸನ ತೂಬನ್ನು ನಿರ್ವಹಿಸುವ ಸಲುವಾಗಿ ನೊವಾಯ್ಯವಲ ರಾಯಣ್ಣನಿಗೆ ಭೂದಾನ ನೀಡಿರುವುದನ್ನು, ದಾಖಲಿಸುತ್ತಾ "ಧಾರ ತೂಬು" ಎಂದು ಉಲ್ಲೇಖಿಸಿದೆ[೧೮].

ಪ್ರಾಯಶಃ ನೀರಿನ ಪ್ರಮಾಣವನ್ನು ನಿಗದಿಗೊಳಿಸುವ ಪರಿಭಾವನೆಯ ಹಿನ್ನೆಲೆಯಲ್ಲಿ – ಅಂದರೆ ನೀರಿನ ಪ್ರಮಾಣಾಧಾರಿತ ಬಿಡುಗಡೆಯ ನಿರ್ವಹಣೆಗೆ ಈ ದಾನ ನೀಡಿರುವುದು ಖಚಿತವಾಗಿದೆ. ಇದೇ ತಾಲ್ಲೂಕಿನ ಅಲೋಡು ಶಾಸನ ಚಾವುಂಡಯ್ಯ ತೂಬನ್ನು ಕಟ್ಟಿಸಿದುದನ್ನು ದಾಖಲಿಸಿದೆ[೧೯]. ಪ್ರಾಯಶಃ ಇಲ್ಲಿ ಈಗಾಗಲೇ ಕೆರೆ ನಿರ್ಮಾಣವಾಗಿದ್ದು, ಬಳಕೆಯಾಗುತ್ತಿರಬಹುದು. ಅಲ್ಲಿನ ವ್ಯವಸ್ಥೆಯನ್ನು ಉತ್ತಮಪಡಿಸುವ ಪ್ರಕ್ರಿಯೆಯಾಗಿ ತೂಬನ್ನು ಇರಿಸಿರುವುದು ವ್ಯಕ್ತವಾಗುತ್ತದೆ. ಹಾಗೆಯೇ ೮೭೦ರ ಅಗರದ ಶಾಸನದಲ್ಲಿ ಸಿರಿಮಯ್ಯ ಅಲ್ಲಿನ ಎರಡು ಕೆರೆಗಳಿಗೆ ತೂಬುಗಳನ್ನು ಇರಿಸಿದ್ದನ್ನು ದಾಖಲಿಸಿದೆ[೨೦]. ಚಾಮುಂಡಯ್ಯ ಎಂಬ ಪೆರ್ಗಡೆ ತೂಬನ್ನು ನಿರ್ಮಿಸಿದನೆಂದು, ಆ ಮೂಲಕ ಅಧಿಕಾರಿಯೋರ್ವ ಇಂತಹ ಕಾಮಗಾರಿ ಕೈಗೊಂಡಿದ್ದುದು ದಾಖಲಾಗಿದೆ.

ಗಂಗರ ಆಡಳಿತಾವಧಿಯಲ್ಲಿ ಮಂತ್ರಿಗಳು ಮತ್ತು ಆಡಳಿತಾಧಿಕಾರಿಗಳು ಸಹ ನೀರಾವರಿ ಕಾಮಗಾರಿಗಳ ನಿರ್ಮಾಣ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತಿದೆ. ನಂಜನಗೂಡು ತಾಲ್ಲೂಕಿನ ಕ್ರಿ.ಶ. ೯೬೮ರ ಶಾಸನ ಮಂತ್ರಿ ನಾಗವರ್ಮ 'ಪೆರಿಯಕೆರೆ' ಎಂಬ ಕೆರೆಯನ್ನು ನಿರ್ಮಿಸಿ, ಅದರ ನಿರ್ವಹಣೆಗಾಗಿ ನಾಲ್ಕು ಖಂಡುಗ ಭೂಮಿಯನ್ನು 'ತೆರಿಗೆ ಮುಕ್ತವಾಗಿ' ನೀಡಿರುವುದನ್ನು ದಾಖಲಿಸಿದೆ[೨೧]. ಎರಡನೇ ನೀತಿಮಾರ್ಗನ ಒಂದು ಶಾಸನ ಮಂತ್ರಿ ಈಚಯ್ಯ ಕೆರೆಯೊಂದನ್ನು ಕಟ್ಟಿಸಿ, ಅದಕ್ಕೆ ತೂಬನ್ನು ಇರಿಸಿದ್ದನ್ನು ದಾಖಲಿಸಿದೆ[೨೨]. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಶಾಸನವೊಂದರಲ್ಲಿ ಬೂತುಗ ತನ್ನ ಪತ್ನಿ ಜಿಕ್ಕಬ್ಬೆ ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಿ, ಧಾರ್ಮಿಕ ಉದ್ದೇಶಕ್ಕಾಗಿ ಆ ಕೆರೆಯನ್ನು ಸಮರ್ಪಿಸಿರುವುದು ದಾಖಲಾಗಿದೆ[೨೩]. ಮೊದಲನೆ ನೀತಿಮಾರ್ಗನ ಆಳ್ವಿಕೆಯ ಕಾಲದಲ್ಲಿ ಅವನ ಅಧಿಕಾರಿಯಾಗಿದ್ದ ನಾಗಯ್ಯ ಕೆರೆಯನ್ನು ಕಟ್ಟಿಸಿದುದು ಉಲ್ಲೇಖಿತವಾಗಿದೆ. ಗ್ರಾಮದ ಗಾವುಂಡನೊಬ್ಬ ಕೆರೆಯನ್ನು ಕಟ್ಟಿಸಿರುವ ಪ್ರಸ್ತಾಪ, ರಾಮನಗರ ಜಿಲ್ಲೆ ಚೆನ್ನಪಟ್ಟಣ ತಾಲ್ಲೂಕಿನ ಶಾಸನ ಮಾಚಾಯ್ಯಗಾಂವುಂಡ ರಾಮಾಪುರದಲ್ಲಿ ಕೆರೆಯನ್ನು ಕಟ್ಟಿಸಿ, ತೂಬನ್ನು ಇರಿಸಿದನೆಂದು ದಾಖಲಿಸಿದೆ[೨೪]. ಇಮ್ಮಡಿ ಮಾಧವನ ಕಾಲದ್ದೆಂದು ಹೇಳಲಾದ ಶಾಸನದಲ್ಲಿ ಆಂಧ್ರಪ್ರದೇಶದ ಪರಿಗಿಯಲ್ಲಿ ದೊಡ್ಡ ಕೆರೆಯ ಪ್ರಸ್ತಾಪವಿದೆ[೨೫].

ಗಂಗ ಅರಸರ ಸಾಮಂತರೂ ಸಹ ನೀರಾವರಿ ಕಾಮಗಾರಿಗಳ ನಿರ್ಮಾಣ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದಕ್ಕೆ II ರಾಚಮಲ್ಲನ ಕಾಲದ ಶಾಸನವೊಂದರಲ್ಲಿ ಸಾಮಂತರೊಬ್ಬರ ಮಗಳಾದ ಸೂಳಬ್ಬೆಯ ಮಗಳಾದ ದಿವ್ವಬ್ಬೆ ಕೆರೆಯೊಂದಕ್ಕೆ ತೂಬನ್ನು ಇರಿಸಿರುವುದು ದಾಖಲೆಯಾಗಿದೆ[೨೬].

ನಂಜನಗೂಡಿನ ಶಾಸನವೊಂದರಲ್ಲಿ ಕಟ್ಟೆ ನಿರ್ಮಾಣದಿಂದ ಸಂಗ್ರಹಿತವಾದ ನೀರನ್ನು ಬಳಸಿಕೊಂಡು, ಜೋಳ ಬೆಳೆಯನ್ನು ಪ್ರಸ್ತಾಪಿಸಿದೆ[೨೭]. ಮೈಸೂರು ಜಿಲ್ಲೆಯ ಶಾಸನ (IVನೆಯ ರಾಚಮಲ್ಲನ ಕಾಲದ್ದು) ಬಾಗಳಿ ಕೆರೆಯ ಕೆಳಗಿನ ದಂಡೆಯಲ್ಲಿ ಒಂದು ದೊಡ್ಡ ಕಾಲುವೆ ಇದ್ದುದನ್ನು ಪ್ರಸ್ತಾಪಿಸುತ್ತದೆ[೨೮]. ಹೀಗಾಗಿ ಕಟ್ಟೆ, ಒಡ್ಡು, ತೂಬು, ಕಾಲುವೆ ಅಣೆಕಟ್ಟು – ಎಲ್ಲಾ ಬಗೆಯ ನೀರಾವರಿ ಕಾಮಗಾರಿಗಳ ಅಸ್ತಿತ್ವ ಗಂಗರ ಆಡಳಿತಾವಧಿಯಲ್ಲಿ ಕಂಡುಬಂದಿರುವುದು ಗಮನಿಸಬೇಕಾದ ಅಂಶ.

ನೀರಾವರಿ ಕಾಮಗಾರಿಗಳ ನಿರ್ಮಾಣದಷ್ಟೆ ದುರಸ್ತಿ ಮತ್ತು ನಿರ್ವಹಣಾ ರೂಪದ ಕಾಮಗಾರಿಗಳು ಅನುಷ್ಠಾನಗೊಳ್ಳುತ್ತಿದ್ದ ಅಂಶಗಳತ್ತ ಕೆಲವೇ ಶಾಸನಗಳಾದರೂ ಬೆಳಕು ಚೆಲ್ಲುತ್ತವೆ. ನಂಜನಗೂಡು ತಾಲ್ಲೂಕಿನ ಕ್ರಿ.ಶ. ೯೬೮ರ ಶಾಸನ 'ದೇಲಿ ಕೆರೆ' ಹಾಗೂ 'ಪೆರಿಯಕೆರೆ' ನಿರ್ವಹಣೆಗಾಗಿ ನಾಲ್ಕು ಖಂಡುಗ ಭೂಮಿಯನ್ನು 'ಬತ್ತುವಟ್ಟ' ರೂಪದಲ್ಲಿ ನೀಡಿರುವುದನ್ನು ದಾಖಲಿಸಿದೆ. ರಾಚಮಲ್ಲನ ಕಾಲದ ಶಾಸನವೊಂದ್ದು ಪರ್ಗಡೆ ಸಂಕಯ್ಯ ಕೆರೆಯೊಂದನ್ನು ದುರಸ್ತಿಗೊಳಿಸಿರುವುದನ್ನು ದಾಖಲಿಸಿದೆ.[೨೯]

ನನ್ನೆಯ ಗಂಗ ತಟ್ಟಕೆರೆಯಲ್ಲಿ ಕೆರೆಯನ್ನು ದುರಸ್ತಿಗೊಳಿಸಿರುವುದು ಸಹ ಶಾಸನವೊಂದರಲ್ಲಿ ಉಲ್ಲೇಖಿತವಾಗಿದೆ[೩೦]. ಹೀಗಾಗಿ ಕೆರೆ ನೀರಾವರಿ ಕಾಮಗಾರಿಗಳಲ್ಲಿ ದುರಸ್ತಿ ಮತ್ತು ನಿರ್ವಹಣೆ ನಿರಂತರ ಸ್ವರೂಪದ್ದಾಗಿದ್ದು ಪ್ರಾಯಶಃ ಸ್ಥಳೀಯ ಹಂತದಲ್ಲೇ ಈ ಕಾರ್ಯಗಳು ಜಾರಿಗೊಳ್ಳುತ್ತಿದ್ದಿರಬೇಕು ಎಂದು ಹೇಳಬಹುದು.

ಪೆನುಗೊಂಡೆಯ ೫ನೆಯ ಶತಮಾನದ ಶಾಸನದಲ್ಲಿ ೭೨ ಖಂಡುಗ ಬಿತ್ತನೆಯ ೬೫.. .. ನೀರಾವರಿ ಭೂಮಿ, ಪರುವಿ ಎಷ್ಟು ಪರುವಿ ದೊಡ್ಡ ಕೆರೆಯ ಅಚ್ಚುಕಟ್ಟಿನಲ್ಲಿ ದಾನ ನೀಡಿರುವುದು ಉಲ್ಲೇಖಿತವಾಗಿದೆ. ೫ನೆಯ ಶತಮಾನದ

ತುಮಕೂರು ತಾಲ್ಲೂಕಿನ ಮೆಳೆಕೋಟೆ ಶಾಸನದಲ್ಲಿ ವಿಹಾರವೊಂದಕ್ಕೆ ಮುಮ್ಮಡಿ ಮಾಧವ ನೀಡಿರುವ ದಾನಗಳೆಂದರೆ (i) ಎರಡೂ ಕೆರೆಗಳಿಂದ ಏಕಕಾಲಕ್ಕೆ ನೀರಾವರಿಯಾಗುವಂತಹ ಭೂಮಿ (ii) ಎರಡು ಬೆಳೆ ಬರುವಂತಹ, ಶಿಲಾ ತಟಾಕದ ಕೆಳಗಿನ ಆರು ಖಂಡುಗ ಭೂಮಿ. (iii) ೫ ಖಂಡುಗ ಭೂಮಿ (iv) ರಕ್ತ ತಟಾಕದ ಕೆಳಗಿನ ೩ ಖಂಡುಗ ಭೂಮಿ (v) ಅದೇ ಕೆರೆಗೆ ಹೊಂದಿಕೊಂಡಿರುವಂತೆ ೧೦ ಖಂಡುಗ (vi) ಆವನಿಯ ನದಿಯ ಪೂರ್ವಕ್ಕೆ ೧೮ ಖಂಡುಗ ಇಳುವರಿ ನೀಡುವ ಬೆಳೆಯ ಭೂಮಿ – ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕು ಉತ್ತನೂರು ೬ನೆಯ ಶತಮಾನದ ತಾಮ್ರಪಟ[೩೦]ಅ ದುರ್ವಿನೀತ ೪೮ ಬ್ರಾಹ್ಮಣರಿಗೆ ಕೆರೆಯ ಅಚ್ಚುಕಟ್ಟಿನ ಭೂಮಿಯನ್ನು ದಾನ ನೀಡಿರುವುದನ್ನು ದಾಖಲಿಸಿದೆ.

ಮಹಾರಾಷ್ಟ್ರದ ದಿವೇ ಅಗರ್‌ನ ೬ನೆಯ ಶತಮಾನದ ತಾಮ್ರಪಟದಲ್ಲಿ ದುರ್ವಿನೀತನು ಹಲವು ಗ್ರಾಮಗಳ ದಾನವಾಗಿ ನೀಡುತ್ತಾ, ಕುವಲಾಳ ವಿಷಯ ತಳವನ ಕುಂಟೆ ಎಂಬ ಕೆರೆ, ಅದಕ್ಕೆ ಹೊಂದಿಕೊಂಡಂತೆ ಇರುವ ಭೂಮಿಯನ್ನು ದಾನವಾಗಿ ನೀಡಿರುವುದು ದಾಖಲಾಗಿದೆ[೩೧]. ೫-೬ನೆಯ ಶತಮಾನದ ಮೊಕೋನಹಳ್ಳಿ ಶಾಸನದಲ್ಲಿ ವೈದಿಕ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ ಹನ್ನೆರಡು ಖಂಡುಗ ಭೂಮಿಯನ್ನು ಮಲೂನ ಕೆರೆಯ ಕೆಳಗಿನ ಭೂಮಿಯನ್ನು ದಾನವಾಗಿ ನೀಡಲಾಗಿರುವುದು ಉಲ್ಲೇಖಿತಗೊಂಡಿದೆ[೩೨]. ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲ್ಲೂಕು ಕಲ್ಲೂರು ತಾಮ್ರಪಟಗಳಲ್ಲಿ (೭ನೆಯ ಶತಮಾನದ) ಶ್ರೀ ವಿಕ್ರಮನ ಆಳ್ವಿಕೆಯಲ್ಲಿ ಜಡೆಯ ಎಂಬುವವನು ನಿಧನನಾದಾಗ, ಒಂದು ಖಂಡುಗ ಭತ್ತದ ಭೂಮಿಯನ್ನು ರಕ್ತ ಕೊಡುಗೆಯಾಗಿ ನೀಡಿದ್ದನ್ನು ದಾಖಲಿಸಿದೆ[೩೩]. ಕ್ರಿ.ಶ. ೧೫೩ರ ಕೋಲಾರ ಜಿಲ್ಲೆಯ ಶಾಸನದಲ್ಲಿ ಶ್ರೀಪುರುಷನ ಆಳ್ವಿಕೆಯಲ್ಲಿ ಒಂದು ಖಂಡುಗ ಭತ್ತದ ಭೂಮಿಯನ್ನು ದಾನವಾಗಿ ನೀಡಿದ ದಾಖಲೆಯಿದೆ[೩೪]. ಇದೇ ಜಿಲ್ಲೆಯ ಮುಳಬಾಗಿಲು ತಾಲೂಕಿನ ಶಾಸನ ಶ್ರೀಪುರುಷನ ಆಳ್ವಿಕೆಯಲ್ಲಿ ಅವನ ಮಗ ದುಗ್ಗಮಾರ ಕುವಲಾಳ ನಾಡಿನಲ್ಲಿ ಆಳ್ವಿಕೆ ನಡೆಸುವಾಗ ಪಾಂಡಪ್ಪ ಎಂಬುವನು ಸೈನಿಕ ಕಾರ್ಯಾಚರಣೆಯಲ್ಲಿ ಹತನಾದಾಗ ಎರಡನೂರು ಸತನೂರುಗಳಲ್ಲಿ ತೂಜಿನ ಬಳಿಯ ಭೂಮಿಯನ್ನು ದಾನ ನೀಡಿದ್ದನ್ನು ದಾಖಲಿಸಿದೆ[೩೫].

ಶ್ರೀಪುರುಷನ ಕಾಲದ ೮ನೆಯ ಶತಮಾನದ ಅಳ್ಳಾಲಸಂದ್ರದ ಶಾಸನದಲ್ಲಿ ಈಶ್ವರಭಟ್ಟನಿಗೆ 'ಮೊದಲ ಕಟ್ಟಿನೊಳ್' ಖಂಡುಗದ ಗದ್ದೆಯನ್ನು ದಾನವಾಗಿ ನೀಡಿರುವುದು ದಾಖಲಾಗಿದೆ. ಕೋಲಾರ ಜಿಲ್ಲೆಯ ಮುಳಬಾಗಿಲು ತಾಲೂಕಿನ ಹಳೆಕೊಪ್ಪಗ್ರಾಮದ ೮ನೇ ಶತಮಾನದ ತಾಮ್ರಪಟವೊಂದರಲ್ಲಿ ನಂಗಲಿಯಶೆಟ್ಟಿ ಪಟ್ಟದಕೆರೆ ಕೆಳಗಿನ ೧೦ ಕೊಳಗ ಭೂಮಿಯನ್ನು ದೇವತೆಯ ದೇವಭೋಗಕ್ಕಾಗಿ ದಾನ ನೀಡಿರುವುದು ಉಲ್ಲೇಖಿತಗೊಂಡಿದೆ[೩೬]. ಮಂಡ್ಯ ತಾಲ್ಲೂಕಿನ ಹುಲ್ಲೇನಹಳ್ಳಿಯ ೮ನೆಯ ಶತಮಾನದ ಒಂದು ತಾಮ್ರಪಟದಲ್ಲಿ ಶ್ರೀಪುರುಷ ನೀಡಿದ ಒಂದು ಗ್ರಾಮದ ದಾನಗಳಲ್ಲಿ ಎಲ್ಲೆಗಳನ್ನು ಗುರುತಿಸಿದ್ದು ಅದರಂತೆ, ಓಲಗಕೆರೆ, ಜಿದರೆಕೆರೆ, ಮಾಜಲ ಮಡಜಿಕೆರೆ, ಕೊಡಲಿಕೆರೆಗಳಲ್ಲದೆ ವೆಲಗಾಲಿಕೆರೆ ಕಾಲುವೆ ಮತ್ತು ನದಿಗಳನ್ನು ಹೆಸರಿಸಿದ್ದು, ಅಂದಿನ ನೀರಾವರಿ ಚೌಕಟ್ಟು ಎಲ್ಲಾ ಪ್ರಕಾರಗಳು ಉಲ್ಲೇಖಿತಗೊಂಡಿರುವುದು ಗಮನಾರ್ಹವಾದುದಾಗಿದೆ[೩೭].

ರಾಚಮಲ್ಲನ ಕ್ರಿ.ಶ. ೮೯೯ರ ಸಾಲಿಗ್ರಾಮ ಶಾಸನ ಎಡತೊರೆ ಬಳಿಯ ಹಳ್ಳಿಯಲ್ಲಿನ ಒಂದು ಭೂ ವ್ಯವಹಾರಕ್ಕೆ ಸಂಬಂಧಿಸಿದ್ದು, ಆ ಹಳ್ಳಿಯ ಸರಹದ್ದಿನಲ್ಲಿ ೧೪ ಕೆರೆಗಳು ಇದ್ದುದನ್ನು ದಾಖಲಿಸಿದೆ. ಅವುಗಳೆಂದರೆ – ಈಶಾನ್ಯ ಗಾಲುಗುಡ್ಡಕೆರೆ, ಪೂವಚಿನಿಲಾರಕೆರೆ, ಸ್ವಲ್ಪ ದೂರಕ್ಕೆ ಸೀಗೇಗೆರೆ ಕೆರೆ, ಆನಂತರ ಅಗಸರ ಕೆರೆ, ಮುಂದೆ ಮಹಾಮ್ರ ಕೆರೆಯ ನಾಲೆ, ಆ ಮೇಲೆ ತೊಂಡಿಕೆರೆ ಮತ್ತು ನಿಡುಗಟ್ಟಕೆರೆಯಿಂದ ದಕ್ಷಿಣಭಾಗ, ಮುಂದೆ ನೊಕ್ಕಿಕೆರೆ, ಅಲ್ಲಿಂದೀಚೆಗೆ ತೆನಂದಕಕೆರೆಯ ಆ ನಂತರ ಸಿರಕ್ಕಿಗೆರೆ, ಆಮೇಲೆ ನಲ್ಲೂರು ಕೆರೆಯ ದಕ್ಷಿಣಭಾಗ, ಮುಂದೆ ಮೊದಲಾದ ಕೆರೆಯ ದಕ್ಷಿಣಭಾಗ, ಆ ಮೇಲೆ ಕೆರಯ ದಕ್ಷಿಣಭಾಗ – ಹೀಗೆ ಉಲ್ಲೇಖಿತಗೊಳ್ಳುವ ಕೆರೆಗಳು ಅಂದಿನ ಕಾಲಘಟ್ಟಕ್ಕಾಗಲೇ ನೀರಾವರಿ ಚೌಕಟ್ಟು ವ್ಯವಸ್ಥಿತ ಹಂತ ತಲುಪಿದ್ದುದನ್ನು ದೃಢೀಕರಿಸುತ್ತದೆ[೩೮]. ಅದೇ ಅರಸನ ತಿಪಟೂರು ತಾಲ್ಲೂಕಿನ ಕೆರೆಗೋಡು-ರಂಗಾಪುರ ಶಾಸನ ದಾನವಾಗಿತ್ತ ಭೂಮಿಯ ಸರಹದ್ದಿನಲ್ಲಿ ಐದು ಕೆರೆ ಇದ್ದದನ್ನು ಸೂಚಿಸುತ್ತದೆ[೩೯] ಎಡತೊರೆಯ ಶಾಸನ (ಕೆ.ಆರ್. ನಗರದ) ಗಾಳಿಗಕೆರೆ ಸಹ ೫ ಕೆಗೆಗಳಿದ್ದುದನ್ನು ದಾಖಲಿಸಿದೆ[೪೦].

ಶ್ರೀಪುರುಷನ ಕಲ್ಲೂರು ಶಾಸನದಲ್ಲಿ ಹತ್ತು ತೂಬು ಭತ್ತದ ಭೂಮಿಯನ್ನು 'ನೆತ್ತರುಪಡಿ'ಯಾಗಿ ತುರುಕಾಳಗದಲ್ಲಿ ಮಡಿದವರಿಗೆ ನೀಡಿರುವುದು ದಾಖಲಾಗಿದೆ[೪೧]. ನಂದಿಯ ಎಂಟನೆಯ ಶತಮಾನದ ಶಾಸನ ಮೊರಸುನಾಡಿನ ಪುಸುರಿ ಅಥವಾ ಪೇರ್ಪಸರುಕೆರೆಯ ಕೆಳಗಿನ ಹತ್ತು ಖಂಡುಗ ಭೂಮಿಯನ್ನು ಕೌಂಡಿನ್ಯ ಗೋತ್ರದ ಶಕ್ತಿಶರವಣ ಎಂಬ

ಬ್ರಾಹ್ಮಣನಿಗೆ ದಾನ ನೀಡಿದ್ದನ್ನು ದಾಖಲಿಸಿದೆ[೪೨]. ೯ನೆಯ ಶತಮಾನದ ಮಡಿಕೇರಿಯ ತಾಮ್ರಪಟ ತಳವನಪುರದ ದೊಡ್ಡಕೆರೆಯ ಕೆಳಗಿನ ತಳವೃತ್ತಿ ಭೂಮಿಯನ್ನು ಪೂಗಾರಿಗೆಲೆ ಅಳತೆಯ ಕೋಲಿನಿಂದ ಅಳೆದು ಹನ್ನೆರಡು ಖಂಡುಗ ಭೂಮಿಯನ್ನು ದಾನವಾಗಿ ನೀಡಿದ್ದನ್ನು ದಾಖಲಿಸಿದೆ[೪೩].

ಚೆನ್ನಪಟ್ಟಣದ ಬಸವನಪುರದ ಶಾಸನದಲ್ಲಿ ಎರೆಯಪ್ಪರಸನ ಕಾಲದಲ್ಲಿ ಅವನ ಮಗ ಗೋವಿಂದರಸ ಉತ್ತಮಗಾವುಂಡನ ಕೆರೆಗೆ ಹಲವು ಷರತ್ತುಗಳನ್ನು ವಿಧಿಸಿ, ಅದರಂತೆ ಒಂದು ಖಂಡುಗ ಭೂಮಿಯನ್ನು ಆಡಳಿತಗಾರರು ಸಾಗುವಳಿಗೆ ಒಳಪಡಿಸಿದರೆ, ಒಡೆಯನಿಗೆ ತೆರಿಗೆರಹಿತ 'ಪತ್ತೊಂದಿ' ನೀಡುವ ಸೌಲಭ್ಯ ನೀಡಿದ್ದನ್ನು ದಾಖಲಿಸಿದೆ[೪೪]. ಇಲ್ಲಿ ಕೃಷಿಗೆ ಹೆಚ್ಚುವರಿ ಭೂಮಿಯನ್ನು ಸಾಗುವಳಿಗೆ ಒಳಪಡಿಸಲು ಪ್ರೋತ್ಸಾಹದಾಯಕ ಕ್ರಮವಾಗಿ 'ಪತ್ತೊಂದಿ' ನೀಡಿರುವುದು ಗಮನಾರ್ಹ!

ತುಮಕೂರು ಶಾಸನದಲ್ಲಿ ಕೋರಿಕುಂಡ ಪ್ರಾಂತದ ಪುಲ್ಲಿನೂರು ಗ್ರಾಮದ ದೊಡ್ಡಕೆರೆ ಕೆಳಗೆ ಏಳು ಖಂಡುಗ ಭೂಮಿ, ಕಬ್ಬಿನ ಬೆಳೆಯ ೫ ಖಂಡುಗ ಭೂಮಿ ಮತ್ತು ಒಂದು ಖಂಡುಗ ಅರಣ್ಯ ಭೂಮಿಯನ್ನು ದಾನ ನೀಡಿರುವುದು ದಾಖಲಾಗಿದೆ. ಇಲ್ಲಿ ಖುಷ್ಕಿ, ತರಿ ಮತ್ತು ಬಾಗಾಯಿತ ಸ್ವರೂಪದ ಭೂಮಿಗಳನ್ನು ಒಟ್ಟಾಗಿ ದಾನ ನೀಡುವ ಮೂಲಕ ಒಟ್ಟಾರೆ ಕೃಷಿ ಚೌಕಟ್ಟು ಪ್ರತಿಬಿಂಬಿತವಾಗಿದೆ[೪೫].

ಕೃಷ್ಣರಾಜನಗರ ತಾಲ್ಲೂಕಿನ (ಕ್ರಿ.ಶ. ೮೨೯-೩೦ರ) ಶಾಸನದಲ್ಲಿ (ಎರಡನೆ ಶಿವಮಾರ) ಗ್ರಾಮವೊಂದನ್ನು ದಾನವಾಗಿ ನೀಡಿದ್ದು, ಆ ದಾನದ ಭೂಮಿಯ ಎಲ್ಲೆಕಟ್ಟುಗಳನ್ನು ಗುರುತಿಸುವಲ್ಲಿ ಗ್ರಾಮಗುಡ್ಡದಕೆರೆ, ಚಿನಿವಾರ ಕೆರೆ, ಸಿರಿಕೆರೆ, ಮಹಾಕಾರಕೆರೆ, ತೊಂಡಿಗೆರೆ ನೊಕ್ಕಿಗೆರೆ, ತೇನಂದರಕೆರೆ, ಸಿರಿಕ್ಕಕೆರೆ, ನಲ್ಲೂರು ಕೆರೆ, ಕೆಲಾರ (?) ಕೆರೆಗಳ (ಒಟ್ಟು ೧೦ ಕೆರೆಗಳು) ಉಲ್ಲೇಖಗೊಂಡಿದ್ದು, ಆ ವೇಳೆಗೆ ಒಂದು ನಿರ್ದಿಷ್ಟ ಭೂಪ್ರದೇಶದಲ್ಲಿ ಇಷ್ಟೊಂದು ಕೆರೆಗಳ ಸಾಂದ್ರತೆ ಕಂಡುಬಂದಿರುವುದು, ಕೆರೆ ನೀರಾವರಿ ಚೌಕಟ್ಟಿನ ಮಹತ್ವವನ್ನು ದೃಢೀಕರಿಸಿದೆ[೪೬]. ನಂಜನಗೂಡು ತಾಲ್ಲೂಕಿನ ತಾಯನೂರಿನ ಕ್ರಿ.ಶ. ೮೨೬ರ ಶಾಸನದಲ್ಲಿ ಶಿವರಯ್ಯ ಉಂಬಳಿ ಗ್ರಾಮವನ್ನು ೧೨೦ ಪಾಲು ಮಾಡಿ, ಅದನ್ನು ಬ್ರಾಹ್ಮಣರಿಗೆ ನೀಡಿ, ಉಳಿದ ೬೦ನ್ನು ಅವನ ಮಗ-ಮೊಮ್ಮಗನಿಗೆ ಇರಿಸಿಕೊಂಡು - ಈ ದಾನದ ಎಲ್ಲೆಕಟ್ಟುಗಳನ್ನು ಪ್ರಸ್ತಾವಿಸುವಾಗ ಗಳಿಗೆ ಕೆರೆ ಉಲ್ಲೇಖಗೊಂಡಿದ್ದು, ಒಬ್ಬ ರಾಣಿಯಿಂದ ನಿರ್ಮಿತವಾದುದೆಂದು ದಾಖಲಿಸಿದೆ[೪೭].

೯ನೆಯ ಶತಮಾನದ ತಿಪಟೂರು ತಾಲ್ಲೂಕಿನ ಕೆರೆಗೋಡ ರಂಗಾಪುರ ತಾಮ್ರಪಟಗಳಲ್ಲಿ, ನಿರಗುಂದ ಸೀಮೆಯ ಕೆಡೆಸೂರು ಈಶ್ವರ ದೇವಾಲಯಕ್ಕೆ ದುರಸ್ತಿ ಹಾಗೂ ಜೀರ್ಣೋದ್ಧಾರಕ್ಕೆ ನೀಡಲ್ಪಟ್ಟ ದಾನಗಳನ್ನು, ಅದರ ಗಡಿಗಳನ್ನು ಗುರುತಿಸುವಾಗ ಬರದಕೆರೆ, ಬೆಲ್ಲವಾಗೆ, ಆಲಾರಿ, ಓಲಗಕೆರೆ, ಮಹಾರೆ ಕೆರೆಗಳ ಉಲ್ಲೇಖಿತಗೊಂಡಿರುವುದಲ್ಲದೆ, ಎಲತೋಗ ಹಳ್ಳದ ಉಲ್ಲೇಖ ಸಹ ಇದೆ[೪೮].

ಗಂಗರ ಆರಂಭದ ಕೇಂದ್ರಸ್ಥಾನವಾಗಿದ್ದ ಕೋಲಾರ ಪ್ರದೇಶದಲ್ಲಿ ವ್ಯಾಪಕ ಪ್ರಮಾಣದ ದಾನಶಾಸನಗಳು ಲಭ್ಯವಾಗಿದ್ದು, ಆ ಕಾಲಘಟ್ಟದ ವೇಳೆಗೆ ಗಣನೀಯ ಪ್ರಮಾಣದ ಕೆರೆ ಕಟ್ಟೆಗಳು ನಿರ್ಮಾಣಗೊಂಡಿದ್ದು, ಆ ಕೆರೆ ಕಟ್ಟೆಗಳ ಅಚ್ಚುಕಟ್ಟಿನ ಭೂದಾನಗಳೇ ಪ್ರಧಾನವಾಗಿ ಉಲ್ಲೇಖಿತಗೊಂಡಿರುವುದರಿಂದ ವಿಸ್ತೃತ ಕೆರೆ ನೀರಾವರಿ ಚೌಕಟ್ಟು ರೂಪುಗೊಂಡಿದ್ದಿತು. ಅನಂತರದ ಘಟ್ಟದಲ್ಲಿ ಬೆಂಗಳೂರು, ತುಮಕೂರು, ಪ್ರದೇಶಗಳಲ್ಲಿ ಕಂಡುಬಂದಂತಹ ಶಾಸನಗಳು ಸಹ ಕೆರೆ ನೀರಾವರಿ ಚೌಕಟ್ಟನ್ನು ಪ್ರತಿನಿಧಿಸುವ ಸ್ವರೂಪ ಹೊಂದಿರುವುದು ಕಂಡುಬರುತ್ತದೆ. ಕೆರೆ ನೀರಾವರಿ ಚೌಕಟ್ಟನ್ನು ಪ್ರತಿನಿಧಿಸುವ ಬಹುತೇಕ ಶಾಸನಗಳು ಭೂದಾನ ಸ್ವರೂಪ ಹೊಂದಿರುವುದರಿಂದಾಗಿ, ನಿರ್ಮಾಣ, ದುರಸ್ತಿ ಹಾಗೂ ನಿರ್ವಹಣೆಯ ಕಾರ್ಯ ಕೈಗೊಂಡುದಕ್ಕೆ ಶಾಸನದ ಅಗತ್ಯಕ್ಕಿಂತ ಭೂದಾನ ಪಡೆದಿರುವವರ ಅನುಕೂಲಕ್ಕೆ ಶಾಶ್ವತಗೊಳಿಸುವ ಹಿನ್ನೆಲೆಯಲ್ಲಿ ಅಗತ್ಯವಾಗಿದ್ದವು.

ಕೆರೆ ನಿರ್ಮಾಣ ಚಟುವಟಿಕೆಯ ವಿಸ್ತರಣೆಯ ಮಜಲುಗಳನ್ನು ಇಲ್ಲಿ ಗಮನಿಸಬಹುದಾಗಿದೆ. ಏಕೆಂದರೆ ಕೆಲವೇ ಶಾಸನಗಳು ಮಾತ್ರ "ಶಿಲಾತಟಾಕ' ಎಂದು ಉಲ್ಲೇಖಿಸುವ ಮೂಲಕ ಕಟ್ಟೆ-ಒಡ್ಡುಗಳಿಗೆ ಕಲ್ಲುಗಳನ್ನು ಜೋಡಿಸಿ ಭದ್ರಪಡಿಸುವ, ಕೋಡಿಗಳನ್ನು ನಿರ್ಮಿಸುವ ತೂಬುಗಳನ್ನು ಇರಿಸುವ ಪ್ರಕ್ರಿಯೆಯಲ್ಲಿ ತಾಂತ್ರಿಕ ಕೌಶಲ್ಯ ಬಳಕೆಯಾಗತೊಡಗಿರುವುದರ ಸ್ಪಷ್ಟ ಸೂಚನೆಗಳನ್ನು ನೀಡುತ್ತವೆ. ಅಲ್ಲದೆ ೭-೮ನೆಯ ಶತಮಾನದ ಗಂಗರ ಶಾಸನಗಳಲ್ಲಿ ತೂಬಿನ ಕುರಿತಂತೆ ಸ್ಪಷ್ಟ

ಉಲ್ಲೇಖಗಳು ದೊರೆಯಲಾರಂಭಿಸುವುದು. ಹೀಗಾಗಿ ಕೆರೆ ನೀರಾವರಿ ಚೌಕಟ್ಟಿನಲ್ಲಿ ತೂಬುಗಳನ್ನು ನಿರ್ಮಿಸುವ ಆವಿಷ್ಕಾರದ ವಿಕಸನ ಕ್ರಿಯೆ ಕೂಡ ಸ್ಪಷ್ಟರೂಪ ಪಡೆದಿದೆ.

ರಾಜರು, ಮಂತ್ರಿಗಳು, ಆಡಳಿತಾಧಿಕಾರಿಗಳು, ಸಾಮಂತರು, ಮಹಿಳೆ/ರಾಣಿಯರು, ಕೆರೆ ನೀರಾವರಿ ಚೌಕಟ್ಟಿನ ನಿರ್ಮಾಣದಲ್ಲಿ ತೊಡಗಿಸಿಕೊಂಡಿರುವುದು ಅತ್ಯಲ್ಪ ಹಾಗೂ ಪ್ರಾತಿನಿಧಿಕವೆಂಬಂತೆ ಹಲವೇ ಶಾಸನಗಳಿವೆ. ಸ್ಥಳೀಯ ರೈತ ಗುಂಪುಗಳು ತಮ್ಮ ನೆಲೆಗಳಲ್ಲಿ, ಪರಿಸ್ಥಿತಿಯ ಅಗತ್ಯಗಳಿಗೆ ತಕ್ಕ ಹಾಗೆ ಕಟ್ಟೆ, ಕೆರೆಗಳನ್ನು ನಿರ್ಮಿಸಿಕೊಂಡು, ನೀರನ್ನು ಸಂಗ್ರಹಿಸಿಕೊಳ್ಳುವ ಬಳಸಿಕೊಳ್ಳುವ ಕ್ರಮಗಳನ್ನು ರೂಡಿಸಿಕೊಳ್ಳುತ್ತಾ ಬಂದದ್ದು, ಅದು ಗಂಗರ ಕಾಲದ ವೇಳೆಗೆ ಒಂದು ವ್ಯವಸ್ಥಿತ ಚೌಕಟ್ಟಿನ ಸ್ವರೂಪ ಪಡೆದಿದ್ದಿತು. ಈ ಕಾಮಗಾರಿಗಳಲ್ಲಿ ಧಾರ್ಮಿಕ ಕೇಂದ್ರಗಳಾದ ದೇವಾಲಯಗಳು ಸಹ ತಳಕು ಹಾಕಿಕೊಂಡು ವ್ಯವಸ್ಥೆಗೆ ಪೂರಕವಾಗಿ ತೊಡಗಿಸಿಕೊಂಡಿರುವುದು ಉಂಟು.

ಒಟ್ಟಾರೆ, ಕುವಲಾಳ, ತಲಕಾಡು/ಗಂಗವಾಡಿ ಪ್ರದೇಶದ ವ್ಯಾಪ್ತಿಯಲ್ಲಿ ಕಾವೇರಿ ಹೊರತು ಪಡಿಸಿದರೆ, ಯಾವುದೇ ಜೀವನದಿಗಳಿಲ್ಲದೆ ಕೇವಲ ಮಳೆಯನ್ನಾಶ್ರಯಿಸಿದ ಹಳ್ಳ, ಕೆರೆ, ಕುಂಟೆ, ಕಾಲುವೆ ಈ ಪ್ರದೇಶದ ನೀರಿನ ಮೂಲಗಳಾಗಿ ಕೃಷಿ ಆರ್ಥಕಾಭಿವೃದ್ಧಿಗೆ ಪೂರಕವಾಗಿ ಬೆಳೆದು ಬಂದಿರುವುದು ಬಹುತೇಕ ದೇಶಿ ತಾಂತ್ರಿಕತೆಯ ವಿಸ್ತೃತರೂಪವೆ ಕೆರೆ ನೀರಾವರಿ ಚೌಕಟ್ಟು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. ಬರ್ಟನ್ ಸ್ಟೈನ್: *'The State and Agrarian order in Medieval South India' – A Historiographical Critique".* ESSAYS ON SOUTH INDIA. (Ed) Asian Studies, Honolulu. p.73.
೨. ಅದೇ, ಪು.೭೫.
೩. **ಎಪಿಗ್ರಾಫಿಯಾ ಕರ್ನಾಟಕ–೧೨**, ಪಾವಗಡ ೧೩ (ರೈಸ್ ಆವೃತ್ತಿ).
೪. ಅದೇ, ೧೨.
೫. ಅದೇ, ಸಿರಾ ೧೨೩.
೬ ಅದೇ, ೯, ಬೆಂಗಳೂರು ೭೯ (ರೈಸ್ ಆವೃತ್ತಿ).
೭. ಅದೇ, ೪, ಚಾಮರಾಜನಗರ–೮೧ (ಮೈ.ವಿ.ವಿ. ಆವೃತ್ತಿ).
೮. ಡಾ॥ ಪಿ.ವಿ. ಕೃಷ್ಣಮೂರ್ತಿ, ರಾಷ್ಟ್ರಕೂಟ ಅಕಾಲವರ್ಷದೇವ ಮುಮ್ಮಡಿ ಕೃಷ್ಣನ ಕುಣಿಗಲ್ ಕೆರೆ ಶಾಸನ. **ಇತಿಹಾಸ ದರ್ಶನ**, ಸಂ.೧೯.
೯. **ಎಪಿಗ್ರಾಫಿಯಾ ಕರ್ನಾಟಕ–೫**, ತಿ. ನರಸೀಪುರ (ಮೈ.ವಿ.ವಿ. ಆವೃತ್ತಿ).
೧೦. ಅದೇ, ೭, ಮಂಡ್ಯ ಜಿಲ್ಲೆ, ಮಳವಳ್ಳಿ ೧೨೨.
೧೧. ಅದೇ, ೪, ಚಾಮರಾಜನಗರ ೩೫೨.
೧೨. ಅದೇ, ೩, ನಂಜನಗೂಡು ೩೨೦.
೧೩. ಅದೇ. ೬ ಶ್ರೀರಂಗಪಟ್ಟಣ ೮೫.
೧೪. ಅದೇ, ೧೦, ಚಿಕ್ಕಬಳ್ಳಾಪುರ ೩ (ರೈಸ್ ಆವೃತ್ತಿ).
೧೫. ಅದೇ, ೮, ಬೇಲೂರು (ಮೈ.ವಿ.ವಿ. ಆವೃತ್ತಿ).
೧೬ ಅದೇ, ೩, ನಂಜನಗೂಡು ೧೯೨.
೧೭. M.A.R., ೧೯೧೬, ಸಂಖ್ಯೆ–೬೮, ಪು.೪೬
೧೮. ಎ.ಕ.–೫. ತಿ. ನರಸೀಪುರ ೧೨೩ (ಮೈ.ವಿ.ವಿ. ಆವೃತ್ತಿ).
೧೯. ಅದೇ.
೨೦. ಅದೇ, ೯, ಬೆಂಗಳೂರು (ರೈಸ್ ಆವೃತ್ತಿ).
೨೧. ಅದೇ, ೩, ನಂಜನಗೂಡು ೨೮೨ (ಮೈ.ವಿ.ವಿ. ಆವೃತ್ತಿ).
೨೨. M.A.R., ೧೯೧೬, ಸಂಖ್ಯೆ–೬೮, ಪು.೪೬

೨೩. **ಎಪಿಗ್ರಾಫಿಯಾ ಕರ್ನಾಟಿಕ,** ೭, ಶಿಕಾರಿಪುರ ೯೬ (ರೈಸ್ ಆವೃತ್ತಿ).

೨೪. M.A.R., ೧೯೧೨, ಪು.೮.

೨೫. E.I.–XIV, ಸಂಖ್ಯೆ–೨೪, ಪು.೩೩೬

೨೬. M.A.R. ೧೯೬–೪೬.

೨೭. **ಎಪಿಗ್ರಾಫಿಯಾ ಕರ್ನಾಟಿಕ,** ೩, ನಂಜನಗೂಡು ೯೭ (ಮೈ.ವಿ.ವಿ. ಆವೃತ್ತಿ).

೨೮. **ಎಪಿಗ್ರಾಫಿಯಾ ಕರ್ನಾಟಿಕ,** ೪, ೧೮೩, ಪು.೧೩ (ಮೈ.ವಿ.ವಿ. ಆವೃತ್ತಿ).

೨೯. **ಎಪಿಗ್ರಾಫಿಯಾ ಕರ್ನಾಟಿಕ,** ೧೪(ಮೈಸೂರು–ಮಂಡ್ಯ ಅನುಬಂಧ), ನಂಜನಗೂಡು, ೮–೩೩೧–೪೦, ಪು.೩೩೪–೩೩೫.

೩೦. **ಎಪಿಗ್ರಾಫಿಯಾ ಕರ್ನಾಟಿಕ,** ೧೨, ತುಮಕೂರು ೧೬ (ರೈಸ್ ಆವೃತ್ತಿ).

೩೦ಅ. ಎ.ಕ. ೧೬, (ತುಮಕೂರು ಜಿಲ್ಲೆ ಅನುಬಂಧ).

೩೧. ಕೆ.ವಿ. ರಮೇಶ್, ತಾಮ್ರಪಟ ೨೨.

೩೨. **ಎಪಿಗ್ರಾಫಿಯಾ ಕರ್ನಾಟಿಕ,** ೯, ಬೆಂಗಳೂರು ೧೬ (ರೈಸ್ ಆವೃತ್ತಿ).

೩೩. **ಎಪಿಗ್ರಾಫಿಯಾ ಕರ್ನಾಟಿಕ,** ೧೦, ಶ್ರೀನಿವಾಸಪುರ ೨೮ (ರೈಸ್ ಆವೃತ್ತಿ).

೩೪. ಅದೇ, ೧೦, ಕೋಲಾರ ೦೬.

೩೫. ಅದೇ, ೧೦, ಮುಳಬಾಗಿಲು ೧೧೨.

೩೬. M.A.R., ೨೨, ೨೩, ಪು.೬೪.

೩೭. *Inscriptions of The Western Gangas,* (Ed.) K.V. Ramesh–೬೫ (M.A.R., ೧೯೨೭).

೩೮. M.A.R., ೧೯೪೨, ಸಂಖ್ಯೆ–೭೫, ಪು.೨೦೮–೨೩೧.

೩೯. M.A.R., ೧೯೧೯, ಸಂಖ್ಯೆ–೬೭, ಪು.೨೭–೩೦.

೪೦. **ಎಪಿಗ್ರಾಫಿಯಾ ಕರ್ನಾಟಿಕ,** ೫, ಕೃಷ್ಣರಾಜನಗರ ೦೪ (ಮೈ.ವಿ.ವಿ. ಆವೃತ್ತಿ).

೪೧. K.V. Ramesh, Op.Cit. ೬೬

೪೨. **ಎಪಿಗ್ರಾಫಿಯಾ ಕರ್ನಾಟಿಕ,** ೧೦, ಚಿಕ್ಕಬಳ್ಳಾಪುರ ೦೩ (ರೈಸ್ ಆವೃತ್ತಿ).

೪೩. **ಎಪಿಗ್ರಾಫಿಯಾ ಕರ್ನಾಟಿಕ,** ೧, ಮಡಕೇರಿ ೧೭ (ಮೈ.ವಿ.ವಿ. ಆವೃತ್ತಿ).

೪೪. ಅದೇ, ೯, ಚೆನ್ನಪಟ್ಟಣ ೭೭ (ರೈಸ್ ಆವೃತ್ತಿ).

೪೫. ಅದೇ, ೧೨, ತುಮಕೂರು ೧೫ (ರೈಸ್ ಆವೃತ್ತಿ).

೪೬. ಅದೇ, ೫, ಕೃ.ರಾ.ಸಾಗರ ೦೪ (ಮೈ.ವಿ.ವಿ. ಆವೃತ್ತಿ).

೪೭. ಕೆ.ವಿ. ರಮೇಶ್, ತಾಮ್ರಪಟ ೧೧೯.

೪೮. **ಎಪಿಗ್ರಾಫಿಯಾ ಕರ್ನಾಟಿಕ,** ೧೨, ತಿಪಟೂರು ೧೧೩ (ರೈಸ್ ಆವೃತ್ತಿ).

## ಆಧಾರ ಸೂಚಿ


೧. B. Sheik Ali - *History of Western Gangas.*

೨. Srikatasastri S. - *Early Gangas of Talakad.*

೩. Krishna Rao M.V. - *The Gangas of Talakad.*

೪. Ramesh K.V. - *Inscriptions of The Western Gangas.*

೫. Malini Adiga - *The Making of Southern Karnataka.*




# ಕರ್ನಾಟಕದ ವೀರಗಲ್ಲು ಶಿಲ್ಪಗಳಲ್ಲಿ ಕೋಟೆ ಕಾಳಗ

– ಡಾ॥ ಕೆ. ಪ್ರಭಾಕರ ರಾವ್*

**ಯು**ದ್ಧಗಳಿಗೆ ಸಂಬಂಧಿಸಿದ ವೀರಗಲ್ಲು ಶಾಸನ ಪಠ್ಯಗಳಲ್ಲಿ ಕೋಟೆಗಳ ನೇರ ಉಲ್ಲೇಖಗಳು ಕಡಿಮೆಯೆನ್ನಬಹುದು. ಆದರೆ ಶಾಸನ ಪಠ್ಯಗಳಲ್ಲಿನ ಧಾಳಿಯ ಸ್ವರೂಪದ ವಿವರಣೆಯನ್ನು ಗಮನಿಸಿದರೆ ಅನೇಕ ಕೋಟೆಗಳು ಅಸ್ತಿತ್ವದಲ್ಲಿದ್ದುದು ಕಂಡು ಬರುತ್ತದೆ. ಶಿವಮೊಗ್ಗ ಜಿಲ್ಲೆಯೊಂದರಲ್ಲಿಯೇ ದೊರೆತಿರುವ ಹಲವು ವೀರಗಲ್ಲು ಶಾಸನಗಳಲ್ಲಿ ಅಂತಹ ಅನೇಕ ಉಲ್ಲೇಖಗಳು ಕಂಡು ಬರುತ್ತವೆ. ಕುಪ್ಪೆಯ ಮೇಲಿನ ಧಾಳಿಯ ಸಂದರ್ಭದಲ್ಲಿ 'ಕುಪ್ಪೆಯಂ ಮೂವಳಿಸಾಸಿರ್ಮುತ್ತಿ ಕಾದುತ್ತಮಿರಲು'[೧] ಎಂದು, ಕೊರಕೋಡಿನ ತುರುಗಳವು ಸಂದರ್ಭದಲ್ಲಿ ವೀರರಿಬ್ಬರು ಶತ್ರುಗಳನ್ನೆದುರಿಸುವಾಗ 'ಬಿಲ್ಲುಮಂಬುಮಂ ಕೊಂಡೀರ್ವರು ಹೆಬ್ಬಾಗಿಲೊಳಡ್ಡಂನಿಂದು'[೨] ಎಂದು, ಕುಪಟೂರು ಗ್ರಾಮದ ಮೇಲಿನ ಧಾಳಿಯನ್ನು 'ಮೂವಳಸಾಗಿ ಮುತ್ತಿಯಿರಿದು'[೩] ಎಂದು, ಬೆನವೂರು ಗ್ರಾಮದ ಧಾಳಿಯನ್ನು 'ಬೆನವೂರ ಬಾಗಿಲನು ಮುತ್ತಿ'[೪] ಎಂದು, ಸೇತುವಿನ ಧಾಳಿಯ ಸಂದರ್ಭದಲ್ಲಿ 'ಸೇತುವಿನಕಠಾರವಂ ಮುರಿದು'[೫] ಎಂದು ಕೂಡಲಿಯ ಧಾಳಿಯ ಸಂದರ್ಭದಲ್ಲಿ .ಸಮಸ್ತ ಸಂನಾಹಸಹಿತ ಕೂಡಲಿಯ ಮುತ್ತಿ[೬] ಎಂದು ಹಾಗೂ ಪಟಗುಪ್ಪೆ ಮೇಲಿನ ಧಾಳಿಯನ್ನು 'ಪಟಗುಪ್ಪೆಯ ಮುತ್ತಿ ಕಾದಿದಲ್ಲಿ'[೭] ಎಂದು ಮಾಡಲಾದ ವರ್ಣನೆಗಳು ಈ ಗ್ರಾಮಗಳಲ್ಲಿ ಕೋಟೆಗಳು ಅಸ್ತಿತ್ವದಲ್ಲಿದುದ್ದನ್ನು ಸ್ಪಷ್ಟಪಡಿಸುತ್ತವೆ. ಕರ್ನಾಟಕದ ಹಲವಾರು ಗ್ರಾಮಗಳಲ್ಲಿ ಈಗಲೂ ಕಂಡುಬರುವ ಮಣ್ಣಿನ ಗೋಡೆ ಮತ್ತು ಕಂದಕಗಳ ಅವಶೇಷಗಳು, ಅಸಂಖ್ಯಾತ ಕೋಟೆಗಳು ಅಸ್ತಿತ್ವದಲ್ಲಿದ್ದುದನ್ನು ಸಮರ್ಥಿಸುತ್ತವೆ.

ವೀರಗಲ್ಲು ಶಾಸನ ಪಠ್ಯಗಳಲ್ಲಿ ಬನವಾಸಿ[೮], ಹಾನಗಲ್[೯], ಉಚ್ಚಂಗಿ[೧೦], ಉದ್ದರೆ[೧೧], ಕೊಡಕಣಿ[೧೨], ಚಿಟ್ಟೂರು[೧೩], ಭಾರಂಗಿ[೧೪], ಮಾಸೂರು[೧೫], ಗುತ್ತಿ[೧೬], ಗಿಣ್ಣಲಗುಂಡಿ[೧೭], ಕುಂದದಕೋಟೆ[೧೮], ಹುಂಚ[೧೯], ಸಾಂತರಕೋಟೆ[೨೦], ಅಂಧಾಸುರ[೨೧], ಕೋಡೂರು[೨೨], ಹನಿಯ[೨೩], ಕುರುಗೋಡು[೨೪], ತಗರೆ[೨೫], ನಿಡುಗಲ್ಲು[೨೬], ಕೊರವದ ಕೋಟೆ[೨೭], ಸಾಲಿಯೂರು[೨೮], ಬೆಳವಗುತ್ತಿಯ ಕೊಪ್ಪಲಕೋಟೆ[೨೯] ಮೊದಲಾದ ಕೋಟೆಗಳ ಅಥವಾ ದುರ್ಗಗಳ ಉಲ್ಲೇಖಗಳು ಕಂಡುಬರುತ್ತವೆ.

ಕೋಟೆ ಕಾಳಗಕ್ಕೆ ಸಂಬಂಧಿಸಿದ ವೀರಗಲ್ಲು ಶಾಸನಶಿಲ್ಪಗಳು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕೊಡಕಣಿ, ಆನವಟ್ಟಿ ಮತ್ತು ಕುಪಟೂರು, ಶಿವಮೊಗ್ಗ ನಗರದ ಕೋಟೆ ಪೋಲೀಸ್ ಠಾಣೆ, ಶಿಕಾರಿಪುರ ತಾಲ್ಲೂಕಿನ ಬಂದಳಿಕೆ, ಬಳ್ಳಿಗಾವೆ ಮತ್ತು ಮಾಯಿತಮ್ಮನ ಮುಚಡಿ, ಹಾವೇರಿ ಜಿಲ್ಲೆಯ ಹಾನಗಲ್, ಕಲಕೇರಿ ಮತ್ತು ತಿಳವಳ್ಳಿ, ಹಿರೇಕೆರೂರಿನ ಕಛವಿ ಮತ್ತು ಅಬ್ಬಲೂರು, ಗದಗ ಜಿಲ್ಲೆಯ ಲಕ್ಷ್ಮೇಶ್ವರ, ದಾವಣಗೆರೆಯ ಬೇತೂರು, ಹೊನ್ನಾಳಿ ತಾಲ್ಲೂಕಿನ ಬೆಳಗುತ್ತಿ ಹಾಗೂ ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆ ಬಳಿ ಕಂಡುಬರುತ್ತವೆ. ಬಹುತೇಕ ಶಾಸನ ಶಿಲ್ಪಗಳಲ್ಲಿ ಕೋಟೆಗಳನ್ನು ಸಾಂಕೇತಿಕವಾಗಿ ಕೋಟೆಯ ಗೋಡೆ ಮೇಲಿನ ತೆನೆಗಳ ಕೆತ್ತನೆಯ ಮೂಲಕ ತೋರಿಸಲಾಗಿದೆ.

ಕೋಟೆಯ ಗೋಡೆ, ವಿನ್ಯಾಸ, ಬಾಗಿಲು ಮೊದಲಾದವುಗಳನ್ನು ಚಿತ್ರಿಸಲಾದ ಶಾಸನ ಶಿಲ್ಪಗಳು ಕೆಲವೇ ಆದರೂ ಅವು ಕೋಟೆಕಾಳಗಕ್ಕೆ ಸಂಬಂಧಿಸಿದಂತೆ ಮಹತ್ವದ ವಿಚಾರಗಳನ್ನು ತಿಳಿಸುತ್ತವೆ. ವೀರಗಲ್ಲು ಶಾಸನ ಶಿಲ್ಪಗಳಲ್ಲಿ ಕೋಟೆಕಾಳಗದ ವಿಸ್ತೃತ ಚಿತ್ರಣವನ್ನು ನೀಡದಿರುವುದಕ್ಕೆ, ವೀರಗಲ್ಲು ಶಾಸನ ಶಿಲ್ಪಗಳಿಗಿರುವ ಸ್ಥಳ ಮತ್ತು ತಾಂತ್ರಿಕ ಮಿತಿಗಳು ಮುಖ್ಯ ಕಾರಣಗಳಾಗಿವೆ. ಇಂತಹ ಮಿತಿಗಳನ್ನು ಕುರಿತು ಡಾ. ಡಿ.ವಿ. ಪರಮಶಿವಮೂರ್ತಿಯವರು ಈಗಾಗಲೇ ಪ್ರಸ್ತಾಪಿಸಿದ್ದಾರೆ.[೩೦] ಕೋಟೆಯ ತೆನೆಗಳ ಚಿತ್ರಣ ಮಾತ್ರ ಕಂಡು ಬರುವ ಶಾಸನ ಶಿಲ್ಪಗಳಲ್ಲಿ ಹೆಚ್ಚಿನವುಗಳಲ್ಲಿ ವೀರನು ಹೋರಾಡುತ್ತಿರುವ ದೃಶ್ಯ ಪಟ್ಟಿಕೆಯ ಕೆಳಭಾಗದಲ್ಲಿ ತೆನೆಗಳನ್ನು ತೋರಿಸಲಾಗಿದೆ. ಕೆಲವು ಶಾಸನ ಶಿಲ್ಪಗಳಲ್ಲಿ ಮಾತ್ರ ಇದಕ್ಕಿಂತ ಭಿನ್ನವಾದ ಕೆತ್ತನೆಯು ಕಂಡುಬರುತ್ತದೆ.

---

* ಇತಿಹಾಸ ಉಪನ್ಯಾಸಕರು, ಇಂದಿರಾಗಾಂಧಿ ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಸಾಗರ.

ಬಳ್ಳಿಗಾವೆಯ ವೀರಗಲ್ಲು ಶಾಸನ ಶಿಲ್ಪವೊಂದರಲ್ಲಿ ಹೋರಾಟ ದೃಶ್ಯದ ಅಕ್ಕಪಕ್ಕಗಳಲ್ಲಿ ತೆನೆಗಳ ಕೆತ್ತನೆಯನ್ನು ನೋಡಬಹುದು. ಬೆಳಗುತ್ತಿಯ ಶಾಸನ ಶಿಲ್ಪದಲ್ಲಿ ವೀರನ ಹಿಂಭಾಗ ಮತ್ತು ಕೆಳಭಾಗದಲ್ಲಿ ಸಾಲಾಗಿ 'ತೆನೆಗಳ' ಕೆತ್ತನೆಯಿದೆ. ಬಂದಣಿಕೆಯ ಶಾಸನ ಶಿಲ್ಪವೊಂದರಲ್ಲಿ ತೆನೆಗಳ ಚಿತ್ರಣದೊಂದಿಗೆ, ವೀರರಿಬ್ಬರು ಅಟ್ಟಣಿಗೆಯ ಮೇಲೆ ನಿಂತು ಬಾಣ ಪ್ರಯೋಗಿಸುತ್ತಿರುವ ದೃಶ್ಯವಿದೆ. ಇದು ಅಂದಿನ ಕೋಟೆ ಕಾಳಗದ ತಂತ್ರವೊಂದನ್ನು ತೋರಿಸುತ್ತದೆ. ಹಾನಗಲ್ ಮತ್ತು ತಿಳವಳ್ಳಿಯ ಶಾಸನಶಿಲ್ಪಗಳಲ್ಲಿ ಮೂರನೇ ಶಿಲ್ಪಪಟ್ಟಿಕೆಗಳಲ್ಲಿ ಕೋಟೆಯ ತೆನೆಗಳ ಕೆತ್ತನೆಯು ಕಂಡುಬರುತ್ತದೆ. ಮಾಯಿತಮ್ಮನ ಮುಚ್ಚಡಿಯಲ್ಲಿನ ತುರುಗೋಳ್ ಶಾಸನಶಿಲ್ಪವೊಂದರಲ್ಲಿ ಕಂಡು ಬರುವ ತೆನೆಗಳು ಉಳಿದವುಗಳಿಗಿಂತ ದೊಡ್ಡ ಗಾತ್ರದ್ದಾಗಿವೆ. ಎಲೇಬೇತೂರಿನ ಶಾಸನ ಶಿಲ್ಪವೊಂದರಲ್ಲಿ ಹೋರಾಟ ದೃಶ್ಯದ ಒಂದು ಪಕ್ಕ ಮತ್ತು ಮೇಲಿನ ಭಾಗದಲ್ಲಿ ಕೋಟೆಯ ತೆನೆಗಳ ಚಿತ್ರಣವಿದೆ. ಕೋಟೆಯ ಗೋಡೆ ಮತ್ತು ಆಕಾರ ಅಥವಾ ವಿನ್ಯಾಸದ ಚಿತ್ರಣವನ್ನು ನೀಡುವ ಶಾಸನ ಶಿಲ್ಪಗಳಲ್ಲಿ ಹಿರೇಕೆರೂರಿನ ಕಛವಿ ಗ್ರಾಮದ ಎರಡು ತುರುಗೋಳ್ ವೀರಗಲ್ಲು ಶಾಸನ ಶಿಲ್ಪಗಳು ಗಮನಾರ್ಹವಾಗಿವೆ. ಇವುಗಳು ಗಾತ್ರದಲ್ಲಿ ಚಿಕ್ಕದಾಗಿದ್ದು ಎರಡರಲ್ಲಿಯೂ ಒಂದೇ ರೀತಿಯ ಕೆತ್ತನೆಯಿದೆ. ಇವುಗಳಲ್ಲಿ ಕೋಟೆಯ ಒಂದು ಭಾಗದ ಗೋಡೆಯನ್ನು ತೆನೆಗಳ ಸಹಿತ ತೋರಿಸಲಾಗಿದೆ. ಅದನ್ನು ಗಮನಿಸಿದರೆ ಕೋಟೆಯು ಚೌಕಾಕಾರದ್ದೆನಿಸುತ್ತದೆ. ಕೋಟೆಯೊಳಗಿನಿಂದ ಓರ್ವನು ಕಹಳೆಯನ್ನೂದಿ ಎಚ್ಚರಿಕೆ ನೀಡುತ್ತಿರುವುದು ಕಂಡುಬರುತ್ತದೆ. ಇದು ಅಂದಿನ ದಿನಗಳಲ್ಲಿ ಶತ್ರುಗಳ ಧಾಳಿಯ ಎಚ್ಚರಿಕೆ ನೀಡಲು ಮಾಡಿಕೊಳ್ಳಲಾಗಿದ್ದ ವ್ಯವಸ್ಥೆಯನ್ನು ಸಂಕೇತಿಸುತ್ತದೆ. ಇದೇ ತಾಲ್ಲೂಕಿನ ಅಬ್ಬಲೂರಿನಲ್ಲಿರುವ ತುರುಗೋಳ್ ಮತ್ತು ಪೆಣ್‌ಬುಯ್ಯಲ್ ವೀರಗಲ್ಲು ಶಾಸನ ಶಿಲ್ಪವೊಂದರಲ್ಲಿ ಹೋರಾಟ ದೃಶ್ಯದ ಪಟ್ಟಿಕೆಯ ಮೇಲ್ಭಾಗದಲ್ಲಿ ವೀರನು ಎತ್ತಿ ಹಿಡಿದಿರುವ ಬಿಲ್ಲಿಗೆ ಹೊಂದಿಕೊಂಡಂತೆ ಸಾಲಾಗಿ ತೆನೆಗಳು ಮತ್ತು ಅದರ ಪಕ್ಕಕ್ಕೆ ಅಂದರೆ ಪಟ್ಟಿಕೆಯ ಮೇಲಿನ ಮೂಲೆಯಲ್ಲಿ ಕೋಟೆಯ ಹೆಬ್ಬಾಗಿಲಿನ ಕೆತ್ತನೆಯು ಕಂಡುಬರುತ್ತದೆ. ಕೋಟೆಯ ಹೊರಭಾಗದಲ್ಲಿ ನಡೆಯುತ್ತಿರುವ ಹೋರಾಟವನ್ನು ಶಿಲ್ಪಿಯು ಇಲ್ಲಿ ಈ ರೀತಿ ವರ್ಣಿಸಿದ್ದಾನೆ. ಕೋಟೆಯ ಪ್ರವೇಶ ದ್ವಾರವನ್ನು ಗಮನಿಸಿದರೆ ಇಲ್ಲಿ ಶಿಲ್ಪಿಯು ದೊಡ್ಡ ಕೋಟೆಯೊಂದನ್ನು ತೋರಿಸುವ ಉದ್ದೇಶವನ್ನು ಹೊಂದಿದ್ದುದು ಸ್ಪಷ್ಟವಾಗುತ್ತದೆ.

ಹಾನಗಲ್‌ನಲ್ಲಿ ಕೋಟೆ ಕಾಳಗಕ್ಕೆ ಸಂಬಂಧಿಸಿದ ಎರಡು ವೀರಗಲ್ಲು ಶಾಸನಶಿಲ್ಪಗಳು ಕಂಡುಬರುತ್ತವೆ. ಮೊದಲನೆಯದರಲ್ಲಿ ಮೂರನೇ ಹಂತದ ಶಿಲ್ಪ ಪಟ್ಟಿಕೆಯಲ್ಲಿ ತೆನೆಗಳನ್ನು ಸಾಲಾಗಿ ತೋರಿಸಲಾಗಿದೆ. ಅದರ ಕೆಳಭಾಗದಲ್ಲಿನ ಶಾಸನ ಪಠ್ಯದ ಪಟ್ಟಿಕೆಯ ಮೇಲೆ ಈ ತೆನೆಗಳು ಇರುವುದರಿಂದ, ಒಂದು ದೊಡ್ಡ ಗಾತ್ರದ ಕೋಟೆಯ ಗೋಡೆಯಂತೆ ಕಾಣಿಸುತ್ತದೆ. ತೆನೆಗಳ ಹಿಂಭಾಗದಲ್ಲಿ ಕೋಟೆಯ ರಕ್ಷಣೆಗೆ ಆಯುಧ ಮತ್ತು ಗುರಾಣಿಗಳನ್ನು ಹಿಡಿದಿರುವ ಸೈನಿಕರ ಸಾಲುಗಳು ಹಾಗೂ ಮಧ್ಯ ಭಾಗದಲ್ಲಿ ಓರ್ವನು ಧ್ವಜವನ್ನು ಹಿಡಿದಿರುವುದು ಕಂಡುಬರುತ್ತದೆ. ಈ ಪಟ್ಟಿಕೆಯ ಕೆಳಭಾಗದಲ್ಲಿ ಎರಡು ಹಂತಗಳಲ್ಲಿ ಹೋರಾಟದ ದೃಶ್ಯಗಳಿವೆ. ಇದರಿಂದಾಗಿ ಕೋಟೆಯ ಮುಂಭಾಗದಲ್ಲಿ ಯುದ್ಧ ನಡೆಯುತ್ತಿರುವಂತೆ, ಕೋಟೆಯ ಮೇಲೆ ನಿಂತಿರುವವರು ಹೋರಾಟವನ್ನು ನೋಡುತ್ತಿರುವಂತೆ ಕಾಣುತ್ತದೆ. ಶಾಸನ ಶಿಲ್ಪವು ದೊಡ್ಡಗಾತ್ರದ್ದಾಗಿದ್ದು ಶಿಲ್ಪಿಗೆ ಸ್ಥಳ ಅಭಾವವಿಲ್ಲದೇ ಹೋದುದರಿಂದ ಯುದ್ಧ ಚಿತ್ರಣವನ್ನು ವಿಸ್ತೃತವಾಗಿ ನೀಡಿದ್ದಾನೆ. ಅಶ್ವದಳ ಮತ್ತು ಗಜದಳಗಳಿಂದ ಕೂಡಿದ ಸೈನ್ಯಗಳು ಬಿರುಸಿನಿಂದ ಹೋರಾಟದಲ್ಲಿ ತೊಡಗಿರುವುದನ್ನು ಇಲ್ಲಿ ನೋಡಬಹುದಾಗಿದೆ.

ಅದೇ ಸ್ಥಳದ ಮತ್ತೊಂದು ವೀರಗಲ್ಲು ಶಾಸನ ಶಿಲ್ಪದಲ್ಲಿ ಹೋರಾಟ ದೃಶ್ಯವಿರುವ ಪಟ್ಟಿಕೆಯಲ್ಲಿ ಕೋಟೆಯ ಒಂದು ಪಾರ್ಶ್ವದ ಎತ್ತರವಾದ ಗೋಡೆ ಮತ್ತು ಅದರ ಮೇಲೆ ತೆನೆಗಳನ್ನು ಕೆತ್ತಲಾಗಿದೆ. ಇದು ದೊಡ್ಡ ಕೋಟೆಯೊಂದರ ಒಂದು ಭಾಗವನ್ನು ಸಂಕೇತಿಸುತ್ತದೆ. ಕೋಟೆಯ ತೆನೆಗಳ ಹಿಂದೆ ಮೂರು ಸಾಲಿನಲ್ಲಿ ಆಯುಧಧಾರಿಗಳಾಗಿ ಸೈನಿಕರಿದ್ದಾರೆ. ಕೋಟೆಯ ಹೊರಭಾಗದಲ್ಲಿ ಯುದ್ಧ ನಡೆಯುತ್ತಿರುವಂತೆ ಇಲ್ಲಿ ಚಿತ್ರಿಸಲಾಗಿದೆ. ಅದರಲ್ಲಿ ಮುಖಾಮುಖಿಯಾಗಿರುವ ಸೈನಿಕರು, ಓರ್ವ ಅಶ್ವಧಾರಿಯು ಕೈಮುಗಿದು, ಮತ್ತೋರ್ವನು ಕತ್ತಿ ಅಡ್ಡ ಹಿಡಿದು ಶರಣಾಗತಿ ಭಂಗಿಯಲ್ಲಿರುವುದನ್ನು ನೋಡಬಹುದು. ಹೋರಾಟದಲ್ಲಿ ಅಶ್ವದಳವೇ ಪ್ರಧಾನವಾಗಿರುವುದು ಕಂಡು ಬರುತ್ತದೆ. ಈ ಎರಡೂ ಶಾಸನ ಶಿಲ್ಪಗಳು ಹಾನಗಲ್ಲಿನ ಕೋಟೆಯ ಮೇಲಿನ ಧಾಳಿಗೆ ಸಂಬಂಧಿಸಿವೆ. ಆದರೆ ಅಲ್ಲಿನ ನಾಲ್ಕು ಸುತ್ತಿನ ಕೋಟೆಯನ್ನು ಶಾಸನ ಶಿಲ್ಪದಲ್ಲಿ ತೋರಿಸಲು ಶಿಲ್ಪದ ಮಿತಿಯಲ್ಲಿ ಸಾಧ್ಯವಿಲ್ಲದಿರುವುದರಿಂದ ಶಾಸನ ಶಿಲ್ಪಿಗಳು ಒಂದರಲ್ಲಿ ಕೋಟೆಯ ಗೋಡೆ ಮತ್ತೊಂದರಲ್ಲಿ ಕೋಟೆಯ ಒಂದು ಪಾರ್ಶ್ವವನ್ನು ಕೆತ್ತಿರುವರು.

ಹಾನಗಲ್ಲಿನ ಕಲಕೇರಿ ಎಂಬಲ್ಲಿನ ಒಂದು ಮಧ್ಯಮ ಗಾತ್ರದ ವೀರಗಲ್ಲು ಶಾಸನ ಶಿಲ್ಪದಲ್ಲಿ ಕೋಟೆ ಕಾಳಗವನ್ನು ಅರ್ಥಪೂರ್ಣವಾಗಿ ತೋರಿಸಲಾಗಿದೆ. ಇದರಲ್ಲಿ ವೀರನ ಮುಂಭಾಗದಲ್ಲಿ ಕೋಟೆಯ ಗೋಡೆ ಮತ್ತು ತೆನೆಗಳಿವೆ. ಕೋಟೆಯ ಒಳಭಾಗದಲ್ಲಿ ರಕ್ಷಣೆಗೆ ಭರ್ಜಿ ಹಿಡಿದ ಸೈನಿಕರಿದ್ದಾರೆ, ಮೇಲ್ಭಾಗದ ರಕ್ಷಣೆಗೆ ನಿಂತಿರುವ ಸೈನಿಕರಲ್ಲಿ ಓರ್ವನ ತಲೆ ಕತ್ತರಿಸಿ, ಅದನ್ನು ವೀರನು ಗುರಾಣಿ ಹಿಡಿದ ಕೈಯಲ್ಲಿ ಹಿಡಿದುಕೊಂಡಿದ್ದಾನೆ. ಆ ಸೈನಿಕನ ಮುಂಡವು ಕೋಟೆಯ ಮೇಲಿಂದ ಹಿಮ್ಮುಖವಾಗಿ ಬೀಳುವ ಭಂಗಿಯಲ್ಲಿದೆ. ವೀರನ ಒಂದು ಕಾಲು ಕೋಟೆಯ ತೆನೆಯೊಂದರ ಮೇಲಿದೆ. ಇದು ಕೋಟೆ ಮೇಲೆ ಹತ್ತಿ ಧಾಳಿ ಮಾಡುತ್ತಿರುವುದನ್ನು ಸಂಕೇತಿಸುತ್ತದೆ. ಆತನ ಹಿಂದೆ ಒಂದು ಕುದುರೆ ಮತ್ತು ಧ್ವಜಧಾರಿಯು ಇರುವ ದೃಶ್ಯವಿದೆ. ಇಲ್ಲಿ ಸ್ಥಳದ ಮಿತಿಯಿಂದಾಗಿ ಶಿಲ್ಪಿಯು ಹೆಚ್ಚಿನ ಸೈನಿಕರ ಕೆತ್ತನೆಯನ್ನು ಮಾಡಿರುವುದಿಲ್ಲ.

ಶಿವಮೊಗ್ಗದ ಕೋಟೆ ಪೊಲೀಸ್ ಠಾಣೆಯ ಮುಂಭಾಗದಲ್ಲಿ ನಿಲ್ಲಿಸಿರುವ ವೀರಗಲ್ಲು ಶಾಸನ ಶಿಲ್ಪದಲ್ಲಿ ಕೋಟೆಕಾಳಗದ ಚಿತ್ರಣವು ವಿಸ್ತೃತವಾಗಿದೆ. ಈವರೆಗೆ ರಾಜ್ಯದ ಬೇರೆ ಕಡೆಗಳಲ್ಲಿ ಇಂತಹ ಶಾಸನಶಿಲ್ಪವು ಕಂಡುಬಂದಿಲ್ಲ. ಇದು ಮಧ್ಯಕಾಲೀನ ಕೋಟೆ ಕಾಳಗದ ವಿಧಾನದ ಬಗ್ಗೆ ಒಂದು ಚಿತ್ರಣವನ್ನು ನೀಡುತ್ತದೆ. ಇಲ್ಲಿ ಶಿಲ್ಪಿಯು ಕೋಟೆಯನ್ನು ಮೇಲ್ಭಾಗದಿಂದ ನೋಡಿದಾಗ (ಪಕ್ಷಿ ನೋಟ) ಕಾಣುವಂತೆ ಕೆತ್ತಿದ್ದಾನೆ. ಕೋಟೆಯ ಸುತ್ತಲೂ ತೆನೆಗಳಿವೆ, ಮಧ್ಯದಲ್ಲಿ ಪ್ರವೇಶದ್ವಾರವಿದೆ. ಇದರಲ್ಲಿ ಧಾಳಿಕಾರರು ಕೋಟೆಗೆ ಮೂರು ದಿಕ್ಕುಗಳಿಂದ ಮುತ್ತಿಗೆ ಹಾಕಿದ್ದಾರೆ. ಇದನ್ನು ತೋರಿಸಲು ಮುತ್ತಿಗೆ ಹಾಕಿದ ಸೈನಿಕರನ್ನು ಮೂರು ಭಾಗಗಳಾಗಿ ವಿಭಾಗಿಸಲಾಗಿದೆ. ಮಧ್ಯದಲ್ಲಿರುವ ಸೈನಿಕರು ಕೋಟೆಯ ಮುಂದಿನ ದ್ವಾರದ ಬಳಿ ಒಳನುಗ್ಗಲು ಪ್ರಯತ್ನಿಸುತ್ತಿದ್ದಾರೆ. ಕೋಟೆಯ ರಕ್ಷಣೆಗೆ ನಿಂತವರು ದೊಡ್ಡ ಭರ್ಜಿ ಮತ್ತು ಬಿಲ್ಲು ಬಾಣಗಳನ್ನು ಹಿಡಿದು ಅವರನ್ನು ತಡೆಯುತ್ತಿರುವುದು ಕಂಡುಬರುತ್ತದೆ.

ಎರಡು ಪಾರ್ಶ್ವಗಳಲ್ಲಿ ಸೈನಿಕರು ಕೋಟೆಯ ಗೋಡೆಯನ್ನು ಹತ್ತಲು ಪ್ರಯತ್ನಿಸುತ್ತಿದ್ದಾರೆ. ಅವರ ಹಿಂದೆ ಸೈನಿಕರ ಸಾಲಿದೆ. ಕೋಟೆ ಹತ್ತುತ್ತಿರುವವರನ್ನು ಒಳಗಿರುವವರು ಉದ್ದವಾದ ಈಟಿಯಿಂದ ತಳ್ಳುತ್ತಿರುವುದು, ಅವರ ಮೇಲೆ ದೊಡ್ಡ ಕಲ್ಲು ಎತ್ತಿ ಹಾಕಲು ಸಿದ್ಧರಾಗಿರುವುದು ಹಾಗೂ ಬಾಣಗಳಿಂದ ಧಾಳಿ ಮಾಡುತ್ತಿರುವುದನ್ನು ಇದರಲ್ಲಿ ನೋಡಬಹುದಾಗಿದೆ. ಕೋಟೆಯ ಆಕ್ರಮಣದ ವೇಳೆಗೆ ಗಾಯಗೊಂಡವರನ್ನು ಕರೆದೊಯ್ಯಲು ಖಾಲಿ ಪಲ್ಲಕ್ಕಿಯನ್ನು ಹೊತ್ತು ತರುತ್ತಿರುವುದನ್ನು ಇಲ್ಲಿ ತೋರಿಸಲಾಗಿದೆ. ಈ ವೀರಗಲ್ಲು ಶಿಲ್ಪದ ಎರಡನೇ ಪಟ್ಟಿಕೆಯಲ್ಲಿನ ದೃಶ್ಯದಲ್ಲಿ ಧಾಳಿಗೆ ಹೊರಟಿರುವ ಸೈನ್ಯದ ಪ್ರಯಾಣದ ಚಿತ್ರವಿದೆ. ಎರಡು ಸಾಲುಗಳಲ್ಲಿ ಕತ್ತಿ-ಗುರಾಣಿ ಹೊಂದಿದ ಕಾಲಾಳುಗಳು, ಮೇಲಿನ ಸಾಲಿನಲ್ಲಿ ಸೈನಿಕರ ಹಿಂದೆ ಪಲ್ಲಕ್ಕಿಯಲ್ಲಿ ಪ್ರಯಾಣಿಸುತ್ತಿರುವ ವೀರನೋರ್ವ, ಆತನ ಹಿಂದೆ ಅಶ್ವಧಾರಿಗಳು, ಕೆಳಗಿನ ಸಾಲಿನಲ್ಲಿ ಕುದುರೆಯ ಹಿಂದೆ ಒಂಟೆಯ ಮೇಲೆ ನಗಾರಿ ಬಾರಿಸುತ್ತಾ ಬರುತ್ತಿರುವುದು ಕಂಡುಬರುತ್ತದೆ.

ಶಾಸನ ತಜ್ಞರು ಈ ಶಾಸನ ಶಿಲ್ಪದ ಪಠ್ಯವನ್ನು ಆಧರಿಸಿ ಇದು ಮೂಲತಃ ಹೊನ್ನಾಳಿಯ ಕುಳ್ಳಹಳ್ಳಿಯ ಶಾಸನ[೩೧] ಶಿಲ್ಪವೆಂದು ಹಾಗೂ ಕೂಡಲಿಯ ಕೋಟೆ ಕಾಳಗಕ್ಕೆ ಸಂಬಂಧಿಸಿದ್ದೆಂದು ಅಭಿಪ್ರಾಯಿಸಿದ್ದಾರೆ.

ಈ ಶಾಸನ ಪಠ್ಯವು ಸೇವುಣರ ಸೇನಾನಿಯಾದ ಶ್ರೀಧರ ದಂಡನಾಯಕನ ಧಾಳಿಯನ್ನು ಉಲ್ಲೇಖಿಸುತ್ತದೆ. ಕೂಡಲಿ ಎಂದರೆ ಇಂದಿನ ಶಿವಮೊಗ್ಗ ತಾಲ್ಲೂಕಿನ ಕೂಡ್ಲಿ ಎಂಬುದಾಗಿದೆ. ಇದು ತುಂಗಾ ಮತ್ತು ಭದ್ರ ನದಿಗಳ ಸಂಗಮ ಸ್ಥಳ. ಇಲ್ಲಿ ಕೋಟೆಯು ಎರಡು ನದಿಗಳ ನಡುವಿನ ಆಯಕಟ್ಟಿನ ಸ್ಥಳದಲ್ಲಿದ್ದುದರಿಂದ ಶಿಲ್ಪಿಯು ಬಾದಾಮಿ ಆಕಾರಕ್ಕೆ ಹೋಲುವಂತೆ ಕೆತ್ತಿದ್ದಾನೆ. ಈ ಶಾಸನ ಶಿಲ್ಪದಲ್ಲಿ ಶಾಸನ ಪಠ್ಯಗಳಲ್ಲಿನ ವಿವರಣೆಗೆ ಸಮೀಪವಾದ ದೃಶ್ಯ ವಿವರಣೆಯು ಕಂಡು ಬರುತ್ತದೆ. ಇಲ್ಲಿ ಧಾಳಿಕಾರರನ್ನು ತಡೆಯಲು ಉಪಯೋಗಿಸಿರುವ ದೊಡ್ಡ ಭರ್ಜಿಯಂತಹ ಆಯುಧವು 'ಸಬಳ'ವೆಂಬ ಆಯುಧವಾಗಿದೆ.

ದಾವಣಗೆರೆಯ ಬೇತೂರು ಗ್ರಾಮದ ತುರುಗೋಳ್ ಶಾಸನ ಶಿಲ್ಪವೊಂದರಲ್ಲಿ ಕೋಟೆಯ ಎತ್ತರವಾದ ಗೋಡೆ ಮೇಲೆ ತೆನೆಗಳ ನಡುವೆ ನಿಂತಿರುವ ಸೈನಿಕರ ಚಿತ್ರಣವಿದೆ. ವೀರನು ದೊಡ್ಡ ಭರ್ಜಿಯಿಂದ ಮೇಲಿರುವ ಸೈನಿಕನೋರ್ವನನ್ನು ತಿವಿಯುತ್ತಿರುವುದು ಕಂಡುಬರುತ್ತದೆ. ಲಕ್ಷ್ಮೇಶ್ವರದ ವೀರಗಲ್ಲು ಶಾಸನ ಶಿಲ್ಪವೊಂದರಲ್ಲಿ ಕೋಟೆಯ ಗೋಡೆ ಮತ್ತು ತೆನೆಗಳ ದೃಶ್ಯವಿದ್ದು, ತೆನೆಗಳ ಹಿಂದೆ ನಿಂತು ಸೈನಿಕನು ಬಾಣ ಪ್ರಯೋಗಿಸುತ್ತಿರುವುದನ್ನು ಇದರಲ್ಲಿ ತೋರಿಸಲಾಗಿದೆ.

ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯ ಮುಂದೆ ಇರುವ ವೀರಗಲ್ಲು ಶಾಸನ ಶಿಲ್ಪವೊಂದರ ಹೋರಾಟ ದೃಶ್ಯದ ಪಟ್ಟಿಕೆಯ ಮೇಲ್ಭಾಗದ ಮೂಲೆಯಲ್ಲಿ ಚಿಕ್ಕ ವೃತ್ತಾಕಾರದಲ್ಲಿ ತೆನೆಗಳ ಸಹಿತ ಕೋಟೆಯ ಕೆತ್ತನೆಯು ಕಂಡುಬರುತ್ತದೆ.

ಕೋಟೆಯ ಮಧ್ಯಭಾಗದಲ್ಲಿ ಪ್ರವೇಶ ದ್ವಾರವಿದೆ. ಅದರ ಮುಂಭಾಗದಲ್ಲಿ ಸೈನಿಕರು ಕೋಟೆಯ ರಕ್ಷಣೆಗಾಗಿ ಹೋರಾಡುತ್ತಿದ್ದಾರೆ. ಕೋಟೆಯ ಒಳಭಾಗದಲ್ಲಿಯೂ ರಕ್ಷಣೆಗಾಗಿ ಸೈನಿಕರಿದ್ದಾರೆ. ಧಾಳಿ ಮಾಡುತ್ತಿರುವ ಸೈನ್ಯದಲ್ಲಿ ಕಾಲ್ದಳದೊಂದಿಗೆ ಅಶ್ವದಳ ಮತ್ತು ಗಜದಳಗಳಿವೆ. ವೀರನೋರ್ವನು ಪಲ್ಲಕ್ಕಿಯಲ್ಲಿ ಬರುತ್ತಿರುವ, ಜೊತೆಗೆ ಒಂಟೆಯ ಮೇಲೆ ನಗಾರಿಯನ್ನು (ರಣವಾದ್ಯ) ಬಾರಿಸುತ್ತಿರುವ ಕೆತ್ತನೆಯಿದೆ. ಕೋಟೆಯ ಹೊರಭಾಗದಲ್ಲಿ ನಡೆಯುತ್ತಿರುವ ಹೋರಾಟ ದೃಶ್ಯವನ್ನು ಗಮನಿಸಿದರೆ ಇಲ್ಲಿ ಚಿತ್ರಿಸಿರುವ ಯುದ್ಧ ಘಟನೆಯು ಒಂದು ದೊಡ್ಡ ಯುದ್ಧವೇ ಆಗಿದೆ. ಇದರಲ್ಲಿ ಮಧ್ಯಕಾಲೀನ ಯುದ್ಧರಂಗವೊಂದರ ಗರಿಷ್ಠ ಚಿತ್ರಣವಿದೆ.

ಸಂಖ್ಯೆಯ ದೃಷ್ಟಿಯಿಂದ ಇಂತಹ ಶಾಸನ ಶಿಲ್ಪಗಳು ಕಡಿಮೆಯೆನಿಸಿದರೂ, ಅವು ನೀಡುವ ಮಾಹಿತಿಯ ದೃಷ್ಟಿಯಿಂದ ಮಹತ್ವ ಪೂರ್ಣವಾಗಿವೆ. ಈ ಶಾಸನ ಶಿಲ್ಪಗಳು ಮಧ್ಯಕಾಲೀನ ಕಾಲಘಟ್ಟಕ್ಕೆ ಸಂಬಂಧಿಸಿವೆ. ಹೀಗಾಗಿ ಮಧ್ಯಕಾಲೀನ ಕೋಟೆ ಕಾಳಗದ ಸ್ವರೂಪವನ್ನರಿಯಲು ಸೂಕ್ತ ಆಧಾರಗಳಾಗಿವೆ. ಈ ಶಿಲ್ಪಗಳಲ್ಲಿ ಕಂಡು ಬರುವ ಚಚ್ಚೌಕ, ಆಯತ, ವೃತ್ತಾಕಾರಾದ ಬಯಲಿನ ಕೋಟೆಗಳಲ್ಲಿ ತೆನೆಗಳಿಗಿದ್ದ ಮಹತ್ವ ತಿಳಿಯುತ್ತದೆ. ನಾನಾ ಆಕೃತಿಗಳ ಕೋಟೆಗಳ ಚಿತ್ರಣವು ಅಂದಿನ ಕೋಟೆಗಳ ವಿನ್ಯಾಸ (Plan)ವನ್ನು ತೋರಿಸುತ್ತವೆ. ಈ ಶಾಸನ ಶಿಲ್ಪಗಳಲ್ಲಿ ಕೋಟೆಯ ತೆನೆಗಳ ಕೆತ್ತನೆಗೆ ಪ್ರಾಮುಖ್ಯ ನೀಡಲಾಗಿದೆ. ಶಾಸನ ಶಿಲ್ಪಗಳಲ್ಲಿ ಕೋಟೆ ಕಾಳಗಕ್ಕೆ ಬಳಸಿರುವ ಆಯುಧಗಳು ಇತರ ಯುದ್ಧ ಸಂದರ್ಭದಲ್ಲಿ ಬಳಸಿರುವ ಆಯುಧಗಳಿಗಿಂತ ವಿಶೇಷವಾಗಿವೆ. ಒಂದೆರಡು ಶಾಸನ ಶಿಲ್ಪಗಳಲ್ಲಿ ಕಲ್ಲನ್ನು ಆಯುಧ ವಿಶೇಷವಾಗಿ ಬಳಸಿರುವುದು ಕಂಡುಬರುತ್ತದೆ. ಶಾಸನ ಶಿಲ್ಪಗಳಲ್ಲಿ ವ್ಯಕ್ತವಾಗಿರುವ ಯುದ್ಧ ಚಿತ್ರಣವು ಶಾಸನ ಪಠ್ಯ ವಿವರಣೆಗೆ ಹೆಚ್ಚು ಸಮೀಪವಾಗಿದೆ.

ಕೋಟೆ ಕಾಳಗದ ವರ್ಣನೆಯನ್ನು ವಿಸ್ತೃತವಾಗಿ ವಿವರಿಸಿರುವ ಶಾಸನ ಶಿಲ್ಪಗಳು ಹೊಯ್ಸಳ ಮತ್ತು ಯಾದವ ಚಕ್ರವರ್ತಿಗಳ ಧಾಳಿಗೆ ಸಂಬಂಧಿಸಿದವುಗಳಾಗಿವೆ. ಶಾಸನ ಶಿಲ್ಪಗಳನ್ನು ಗಮನಿಸಿದಾಗ ಶಿಲ್ಪಿಗಳು ತಮಗಿದ್ದ ಮಿತಿಗಳ ನಡುವೆಯೂ ಕೋಟೆ ಕಾಳಗದ ಚಿತ್ರಣವನ್ನು ತಕ್ಕಮಟ್ಟಿಗೆ ನೀಡುವಲ್ಲಿ ಯಶಸ್ವಿಯಾಗಿರುವುದು ಕಂಡು ಬರುತ್ತದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಎ.ಕ. VIII, (ರೈಸ್), ೧೯೦೪, ಸೊರಬ – ೧೭೪, ಕ್ರಿ.ಶ. ೧೧೭೭.
೨. ಎ.ಕ. VIII, (ರೈಸ್), ೧೯೦೪, ಸೊರಬ – ೧೭೨, ಕ್ರಿ.ಶ. ೧೧೫೬.
೩. ಎ.ಕ. VIII, (ರೈಸ್), ೧೯೦೪, ಸೊರಬ – ೨೫೧, ಕ್ರಿ.ಶ. ೧೧೭೭.
೪. ಎ.ಕ. VIII, (ರೈಸ್), ೧೯೦೪, ಸೊರಬ – ೩೫೮, ಕ್ರಿ.ಶ. ೧೨೫೭
೫. ಎ.ಕ. VIII, (ರೈಸ್), ೧೯೦೪, ಸಾಗರ – ೧೨೯, ಕ್ರಿ.ಶ. ೧೨೪೮.
೬ ಎ.ಕ. VII, (ರೈಸ್), ೧೯೦೨, ಹೊನ್ನಾಳಿ – ೫೪, ಕ್ರಿ.ಶ. ೧೨೪೫.
೭. ಎ.ಕ. VIII, (ರೈಸ್), ೧೯೦೪, ನಗರ – ೨೦, ಕ್ರಿ.ಶ. ೧೨೮೧.
೮. ಕ.ಇ.V (ಸಂ) ಗೋಪಾಲ್ ಜಿ.ಆರ್., ೧೯೬೯, ಸಂ.೭, ಕ್ರಿ.ಶ. ೧೦೭೧ ಮತ್ತು ಎ.ಕ. VIII, (ರೈಸ್), ೧೯೦೪, ಸೊರಬ ೨೮೭, ಕ್ರಿ.ಶ. ೧೧೬೩.
೯. ಜಾರ್ಜ್ ಎಂ. ಮೊರೆಸ್. ೧೯೯೦, 'ಕದಂಬ ಕುಲ', ಇದರಲ್ಲಿ ಉಲ್ಲೇಖಿತ ಸಂಖ್ಯೆ ೧೫ ಮತ್ತು ೧೬ರ ಶಾಸನಗಳು, ಪು.೪೫೦–೪೫೪ ಮತ್ತು ಎ.ಕ. V, (ರೈಸ್), ೧೯೦೧, ಬೇಲೂರು – ೨೦೨, ಕ್ರಿ.ಶ. ೧೧೩೮.
೧೦. ವಿಲಿಯಂ ಕೊಎಲೋ, ೧೯೫೦, 'ದಿ ಹೊಯ್ಸಳ ವಂಶ', ಪು.೨೫೮.
೧೧. ಎ.ಕ. VII, (ರೈಸ್), ೧೯೦೨, ಶಿಕಾರಿಪುರ ೨೪೪, ಕ್ರಿ.ಶ. ೧೨೦೩ ಮತ್ತು ಶಿಕಾರಿಪುರ ೨೪೩, ಕ್ರಿ.ಶ. ೧೨೧೪.
೧೨. ಎ.ಕ. VIII, (ರೈಸ್), ೧೯೦೪, ಸೊರಬ ೧೯, ಕ್ರಿ.ಶ. ೧೧೫೨
೧೩. ಎ.ಕ. VIII, (ರೈಸ್), ೧೯೦೪, ಸಾಗರ ೪, ಕ್ರಿ.ಶ. ೧೨೨೦.
೧೪. ಎಂ.ಎ.ಆರ್., ೧೯೩೮, ಸಂಖ್ಯೆ ೮೩.
೧೫. ಎ.ಕ. VIII, (ರೈಸ್), ೧೯೦೪, ಸಾಗರ ೧೪೦, ಕ್ರಿ.ಶ. ೧೨೬೬

೧೬. ಎ.ಕ. VIII, (ರೈಸ್), ೧೯೦೪, ಸೊರಬ ೪೧೬. ಕ್ರಿ.ಶ. ೧೧೫೯; ಸೊರಬ ೫೬೮, ಕ್ರಿ.ಶ. ೧೧೬೨; ಸೊರಬ ೨೮೭, ಕ್ರಿ.ಶ. ೧೧೬೩ ಮತ್ತು ಸೊರಬ – ೩೧೯, ಕ್ರಿ.ಶ. ೧೨೩೯.

೧೭. ಎಂ.ಎ.ಆರ್., ೧೯೮೨, ಸಂಖ್ಯೆ ೮೧, ಕ್ರಿ.ಶ. ೧೧೬೫, ಕ.ಇ. IV (ಸಂ.) ಅಣ್ಣಿಗೇರಿ ಎ.ಎಂ., ೧೯೬೧, ಸಂಖ್ಯೆ ೨೦, ಕ್ರಿ.ಶ. ೧೧೬೫.

೧೮. ಎ.ಕ. VIII, (ರೈಸ್), ೧೯೦೪, ನಗರ ೩೫, ಕ್ರಿ.ಶ. ೧೦೭೭.

೧೯. ಅದೇ,

೨೦. ಅದೇ, ಸೊರಬ ೧೪೧, ಕ್ರಿ.ಶ. ೧೧೨೭.

೨೧. ಅದೇ, ಸಾಗರ ೧೦೯, ಕ್ರಿ.ಶ. ೧೦೪೩.

೨೨. ಅದೇ, ಸಾಗರ ೧೩೮, ಕ್ರಿ.ಶ. ೧೨೭೦.

೨೩. ಅದೇ, ನಗರ ೨೦, ಕ್ರಿ.ಶ. ೧೨೭೭.

೨೪. ಎಂ.ಎ.ಆರ್. ೧೯೪೧, ಸಂಖ್ಯೆ ೧೪೭.

೨೫. ಎಂ.ಎ.ಆರ್. ೧೯೨೬, ಸಂ. ೧೫.

೨೬. ಎ.ಕ. XII, ಪಾವಗಡ ೫೪, ಕ್ರಿ.ಶ. ೧೬೮೭.

೨೭. ಎಂ.ಎ.ಆರ್., ೧೯೩೮, ಸಂ. ೨೨೧.

೨೮. ಕ.ಇ. IV (ಸಂ.), ಅಣ್ಣಿಗೇರಿ ಎ.ಎಂ., ಸಂಖ್ಯೆ ೨೪.

೨೯. ಹೊಸಗುಂದದಲ್ಲಿ ದೊರೆತಿರುವ ಶಾಸನದಲ್ಲಿ ಉಲ್ಲೇಖಿತವಾದ, ಪ್ರಕಟವಾಗಬೇಕಾಗಿರುವ ಈ ಶಾಸನದ ಪತ್ರದ ಪ್ರತಿಯನ್ನು ಡಾ॥ ಜಿ.ವಿ. ಕಲ್ಲಾಪುರರವರು ನೀಡಿರುವರು. ಇದರ ಕಾಲ ಸುಮಾರು ಕ್ರಿ.ಶ. ೧೨೪೨.

೩೦. ಡಾ॥ ಪರಮಶಿವಮೂರ್ತಿ, ಪೂರ್ವೋಕ್ತ, ಪುಟ – ೨೦೦.

೩೧. ಎ.ಕ. VII, (ರೈಸ್), ೧೯೦೨, ಹೊನ್ನಾಳಿ ೫೪, ಕ್ರಿ.ಶ. ೧೨೪೫.



# ಕರ್ನಾಟಕದಲ್ಲಿನ ಅರೇಬಿಕ್, ಪರ್ಶಿಯನ್, ಉರ್ದು ಶಾಸನಗಳ ಸ್ವರೂಪ

– ಕೆ. ಮೊಹಮ್ಮದ್ ಶರೀಫ್*

ಕರ್ನಾಟಕದ ಶಾಸನ ಸಂಪತ್ತು ಶ್ರೀಮಂತವಾದುದು. ಇದು ನಮ್ಮ ಜನಾಂಗದ ಆಸ್ತಿ. ಇಲ್ಲಿ ಕನ್ನಡ, ತಮಿಳು, ಸಂಸ್ಕೃತ ಮತ್ತು ಇತರ ಭಾಷೆಗಳ ಶಾಸನಗಳ ಹಾಗೆ ಅರೇಬಿಕ್ ಮತ್ತು ಪರ್ಶಿಯನ್ ಭಾಷೆಗಳಲ್ಲೂ ಶಾಸನಗಳಿವೆ. ಇವು ಇತರ ಭಾಷೆಗಳ ಶಾಸನಗಳಂತೆಯೇ ನಮ್ಮ ನಾಡಿನ, ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಘಟನೆಗಳ ಅಧ್ಯಯನಕ್ಕೆ ಅಮೂಲ್ಯವಾದ ಆಕರಗಳಾಗಿವೆ. ಇಲ್ಲಿ ಸಿಕ್ಕಿರುವುದರಲ್ಲಿ ಪರ್ಶಿಯನ್ ಶಾಸನಗಳೇ ಹೆಚ್ಚು. ಕೆಲವು ಶಾಸನಗಳು ಅರೇಬಿಕ್ ಭಾಷೆಯಲ್ಲೂ ಇನ್ನೂ ಕೆಲವು ಅರೇಬಿಕ್ ಮತ್ತು ಪರ್ಶಿಯನ್ ಭಾಷೆಗಳಲ್ಲೂ ಇವೆ. ಇವುಗಳಲ್ಲದೆ ಉರ್ದು, ಕನ್ನಡ, ಮರಾಠಿ ಮುಂತಾದ ಭಾಷೆಗಳಲ್ಲೂ ನಾವು ಮಹಮ್ಮದೀಯ ಅರಸರ ಶಾಸನಗಳನ್ನು ಕಾಣಬಹುದು. ಮಡಿಕೇರಿ, ಬಿಜಾಪುರ ಮುಂತಾದ ಸ್ಥಳಗಳಲ್ಲಿ ಕೆಲವು ದ್ವಿಭಾಷಾ ಶಾಸನಗಳು, ಶಿವಮೊಗ್ಗ ಜಿಲ್ಲೆಯ ಶಿರಗುಪ್ಪ ಎಂಬಲ್ಲಿ ತ್ರಿಭಾಷಾ ಶಾಸನಗಳು ಸಿಕ್ಕಿರುವುದಂತೂ ತುಂಬಾ ಕುತೂಹಲಕಾರಿಯಾದ ಸಂಗತಿ. ಇವು ಅಂದು ಬಳಕೆಯಲ್ಲಿದ್ದ ಸ್ಥಳೀಯ ಆಡು ಮಾತಿನ ಮಾದರಿಯನ್ನೊದಗಿಸುವುದರ ಜೊತೆಗೆ ಯಾವ ಯಾವ ಸ್ಥಳಗಳಲ್ಲಿ ಎಷ್ಟೆಷ್ಟರ ಮಟ್ಟಿಗೆ ಇವುಗಳ ಬಳಕೆ ಹಾಗೂ ಪ್ರಭಾವ ಇದ್ದಿತೆಂಬುದರ ಅಧ್ಯಯನಕ್ಕೆ ಸಹಾಯಕಾರಿಯಾಗಿವೆ. ದ್ವಿಭಾಷಾ ಶಾಸನಗಳಲ್ಲಿ ಹೆಚ್ಚಿನವು ಪರ್ಶಿಯನ್ ಮತ್ತು ಕನ್ನಡ ಭಾಷೆಯವು. ಇವು ನಮ್ಮ ನಾಡಿನ ಅನೇಕ ಹಿಂದೂ ಅರಸರು ಸಂಸ್ಕೃತ–ಕನ್ನಡ ದ್ವಿಭಾಷಾ ಶಾಸನಗಳನ್ನು ಬರೆಸಿ ಹಾಕಿಸಿದಂತಿವೆ. ಮಹಮ್ಮದೀಯ ಅರಸರು ಸ್ಥಳೀಯ ಜನರಿಗೆ ತಮ್ಮ ಆಜ್ಞೆಗಳ ಅರಿವಾಗಲೆಂದು ಇತರ ಭಾಷೆಗಳಲ್ಲೂ ಶಾಸನಗಳನ್ನು ಬರೆಸಿ ಹಾಕಿಸಿರಬಹುದು.

ಕರ್ನಾಟಕದಲ್ಲಿ ನಾವು ಅರೇಬಿಕ್ ಮತ್ತು ಪರ್ಶಿಯನ್ ಶಾಸನಗಳನ್ನು ಕ್ರಿ.ಶ. ಹದಿನಾಲ್ಕನೆಯ ಶತಮಾನದಿಂದೀಚೆಗೆ ಅಂದರೆ ಅಲ್ಲಾವುದ್ದೀನನ ಕಾಲ ಮತ್ತು ಅಲ್ಲಿಂದೀಚೆಗೆ ಕಾಣುತ್ತೇವೆ. ಅಲ್ಲದೆ ಇಲ್ಲಿ ಈವರೆಗೆ ಸಿಕ್ಕಿರುವ ಶಾಸನಗಳ ಸಂಖ್ಯೆ ಸುಮಾರು ಎಂಟುನೂರರಿಂದ ಒಂಭೈನೂರು. ಈ ಶಾಸನಗಳ ಪೈಕಿ ಏಳು ಶಾಸನಗಳನ್ನು ಖಿಲ್ಜಿ ಮತ್ತು ತುಘಲಕ್ ಅರಸರ ಕಾಲಕ್ಕೂ, ಸುಮಾರು ಇಪ್ಪತ್ತು ಶಾಸನಗಳನ್ನು ಹದಿನಾಲ್ಕನೆಯ ಶತಮಾನಕ್ಕೂ, ಮೂವತ್ತು ಶಾಸನಗಳನ್ನು ಹದಿನೈದನೆಯ ಶತಮಾನಕ್ಕೂ, ಒಂದುನೂರ ಐವತ್ತು ಶಾಸನಗಳನ್ನು ಹದಿನಾರನೆಯ ಶತಮಾನಕ್ಕೂ, ಎಪ್ಪತ್ತೈದು ಶಾಸನಗಳನ್ನು ಹದಿನೇಳನೆಯ ಶತಮಾನಕ್ಕೂ, ಅರವತ್ತು ಶಾಸನಗಳನ್ನು ಹದಿನೆಂಟನೆಯ ಶತಮಾನಕ್ಕೂ ಮತ್ತು ಎಪ್ಪತ್ತೈದು ಶಾಸನಗಳನ್ನು ಹತ್ತೊಂಭತ್ತನೆಯ ಶತಮಾನಕ್ಕೂ ಸೇರಿದವುಗಳೆಂದು ಗುರುತಿಸಬಹುದು. ಉಳಿದ ಶಾಸನಗಳು ಕಾಲ ಮತ್ತು ಚಾರಿತ್ರಿಕ ಅಂಶಗಳಿಲ್ಲದವು. ಇವುಗಳಲ್ಲಿ ಹೆಚ್ಚಿನವು ಬಿಜಾಪುರ, ಧಾರವಾಡ, ಗುಲ್ಬರ್ಗ, ರಾಯಚೂರು ಮತ್ತು ಬೀದರ್ ಜಿಲ್ಲೆಗಳಲ್ಲೂ ಕೆಲವು ಬೆಂಗಳೂರು, ಬೆಳಗಾಂ, ಮಂಡ್ಯ, ಹಾಸನ, ತುಮಕೂರು, ಚಿತ್ರದುರ್ಗ, ಶಿವಮೊಗ್ಗ ಮತ್ತು ಇತರೆ ಜಿಲ್ಲೆಗಳಲ್ಲೂ ದೊರಕಿವೆ. ಈ ಶಾಸನಗಳ ಪೈಕಿ ಅನೇಕ ಶಾಸನಗಳು ಖಿಲ್ಜಿ, ತುಘಲಕ್, ಬಹಮನಿ, ಆದಿಲ್‌ಷಾಹಿ, ಬರೀದ್‌ಷಾಹಿ, ನಿಜಾಮ್‌ಷಾಹಿ ಮುಂತಾದ ವಂಶಗಳ ಅರಸರಿಗೆ ಸೇರಿದವು. ಇವುಗಳಲ್ಲದೆ ಮೊಗಲರಿಗೂ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರಿಗೂ ಸೇರಿದ ಶಾಸನಗಳೂ ಇವೆ. ನಮಗೆ ಸಿಕ್ಕಿರುವ ಶಾಸನಗಳಲ್ಲೆಲ್ಲಾ ಬಿಜಾಪುರ ಜಿಲ್ಲೆಯ ರಕ್ಕಸಗಿ ಶಾಸನವೇ ಅತ್ಯಂತ ಪ್ರಾಚೀನವಾದುದು.[೧] ಇದು ಖಿಲ್ಜಿ ವಂಶದ ಅರಸ ಅಲ್ಲಾವುದ್ದೀನನ ಕಾಲದ್ದು. ಇದರ ಕಾಲ ಕ್ರಿ.ಶ. ೧೩೧೫.

ನಮ್ಮ ನಾಡಿನ ಅರೇಬಿಕ್ ಮತ್ತು ಪರ್ಶಿಯನ್ ಶಾಸನಗಳಲ್ಲಿ ಬಹುಪಾಲು ಮಸೀದಿ, ಗೋರಿ ಮುಂತಾದ ಧಾರ್ಮಿಕ ಕಟ್ಟಡಗಳು, ಕೋಟೆ, ಹೆಬ್ಬಾಗಿಲು, ಅರಮನೆ, ಕಣಜ ಮುಂತಾದ ಧಾರ್ಮಿಕೇತರ ಕಟ್ಟಡಗಳು ಹಾಗೂ ಕೆರೆ,

---

* ನಂ.೬೪೯, ೧೩ನೆಯ ಮುಖ್ಯರಸ್ತೆ, ೪ನೆಯ ಹಂತ, ತೊಣಚೀಕೊಪ್ಪಲು ಬಡಾವಣೆ, ಮೈಸೂರು–೯.

ಬಾವಿ, ಕಲ್ಯಾಣಿ, ಹೊಂಡ, ಉದ್ಯಾನವನ, ಅಣೆಕಟ್ಟು, ಏರಿ, ಮುಸಾಫರ್ ಖಾನ್, ರಸ್ತೆ, ದುರ್ಗದ ದಾರಿ ಮುಂತಾದ ಲೋಕೋಪಯೋಗಿ ವಸ್ತುಗಳಿರುವ ಸ್ಥಳಗಳಲ್ಲಿ ದೊರೆಯುತ್ತವೆ. ಇವು ಅವುಗಳ ನಿರ್ಮಾಣ, ನಿರ್ಮಿಸಿದ ವ್ಯಕ್ತಿಯ ಹೆಸರು, ಅಂದಿನ ಅರಸ, ಅದರ ಕಾಲ ಮುಂತಾದ ವಿಷಯಗಳನ್ನೊಳಗೊಂಡಿರುತ್ತವೆ. ಇವುಗಳಲ್ಲದೆ ತೋಪುಗಳು, ನಾಣ್ಯಗಳು, ಪಾತ್ರೆಗಳು ಮುಂತಾದ ಚರವಸ್ತುಗಳ ಮೇಲೂ ಈ ಶಾಸನಗಳನ್ನು ಕಾಣಬಹುದು.

ಈ ಅರೇಬಿಕ್ ಮತ್ತು ಪರ್ಶಿಯನ್ ಶಾಸನಗಳಲ್ಲಿ ಇತರ ಭಾಷೆಗಳ ಶಾಸನಗಳ ಹಾಗೆ ರಾಜಕೀಯ ವಿಷಯಗಳನ್ನು ತಿಳಿಸುವ ಶಾಸನಗಳು ಹೆಚ್ಚಾಗಿಲ್ಲ. ಕಾರಣ ಮಹಮ್ಮದೀಯ ಅರಸರು ಅಂತಹ ವಿಷಯಗಳನ್ನು ಹೆಚ್ಚು ಹೆಚ್ಚಾಗಿ ಕಾಗದಗಳ ಮೇಲೆ ಬರೆಸುತ್ತಿದ್ದರು. ಆದರೂ, ಕೆಲವು ಶಾಸನಗಳು ಒಂದು ಗೊತ್ತಾದ ವಂಶದ ಅಥವಾ ಕಾಲದ ರಾಜಕೀಯ ಅಥವಾ ಸಾಂಸ್ಕೃತಿಕ ಸ್ಥಿತಿಗತಿಗಳ ಅಧ್ಯಯನಕ್ಕೆ ಬಹುಮುಖ್ಯವಾದ ಆಕರಗಳಾಗಿವೆ ಎಂಬುದನ್ನು ನಾವು ಮರೆಯುವಂತಿಲ್ಲ. ಅವು ಅನೇಕ ವೇಳೆ ನಮಗೆ ರಾಜಕೀಯ ಘಟನೆಗಳನ್ನು ತಿಳಿಸುತ್ತವೆ ಎಂಬುದಕ್ಕೆ ಅನೇಕ ಉದಾಹರಣೆಗಳಿವೆ. ಕ್ರಿ.ಶ. ೧೫೨೨ರಲ್ಲಿ ವಿಜಯನಗರದ ಅರಸ ಕೃಷ್ಣದೇವರಾಯನು ಬಿಜಾಪುರವನ್ನು ಮುತ್ತಿದುದನ್ನು ಮತ್ತು ನಾಲ್ಕು ದಿವಸಗಳ ನಂತರ ಆ ಸ್ಥಳದಿಂದ ಹಿಂತಿರುಗಿದುದನ್ನು ಆ ಊರಿನ ಒಂದು ಶಾಸನದಿಂದ ನಾವು ತಿಳಿಯಬಹುದು.[೨] ರಕ್ಕಸತಂಗಡಿ ಅಥವಾ ತಾಳಿಕೋಟೆ ಯುದ್ಧದ ಉಲ್ಲೇಖ ಆ ವರ್ಷದಲ್ಲೇ ಬರೆಸಿ ಹಾಕಿಸಿದ ಒಂದು ಶಾಸನದಲ್ಲಿದೆ.[೩] ಬಿಜಾಪುರದ ಅರಸ ಅಲಿ ಆದಿಲ್ ಷಾಹ್‌ನು ಬಂಕಾಪುರದ ಕೋಟೆಯನ್ನು ವಶಪಡಿಸಿಕೊಂಡ ವಿಚಾರವು ಮುದಗಲ್ಲಿನ ಶಾಸನದಿಂದ ತಿಳಿಯುತ್ತದೆ.[೪] ಷಹಜಹಾನನ ದಳಪತಿಯಾದ ಖಾನ್-ಇ-ದೌರಾನ್‌ನು ಬೀದರ್ ಜಿಲ್ಲೆಯಲ್ಲಿರುವ ಉದ್‌ಗೀರ್ ಕೋಟೆಯನ್ನು ನೆಲಸಮ ಮಾಡಿದ ವಿಚಾರವು ನಮಗೆ ತಿಳಿಯುವುದು ಅಲ್ಲಿಯ ಒಂದು ಶಾಸನದಿಂದ.[೫] ಕ್ರಿ.ಶ. ೧೬೧೦-೧೧ರ ಉದ್‌ಗೀರ್‌ನ ಇನ್ನೊಂದು ಶಾಸನದಲ್ಲಿ ನಿಜಾಂಷಾಹಿ ಅಧಿಕಾರಿಯೊಬ್ಬನು ಯುದ್ಧದಲ್ಲಿ ಸತ್ತ ವಿಚಾರವಿದೆ.[೬] ಇವಲ್ಲದೆ ಹೈದರ್ ಅಲಿ, ಆತನ ಮಗ ಟಿಪ್ಪು ಸುಲ್ತಾನ್, ಆತನ ಮಗ ನಿಜಾಮುದ್ದೀನ್ ಮತ್ತು ಟಿಪ್ಪು ಸುಲ್ತಾನನ ಸೈನ್ಯದ ಅಧಿಕಾರಿ ಸಯ್ಯದ್ ಹಮೀದ್ ಮುಂತಾದ ಇತಿಹಾಸ ಪ್ರಮುಖ ವ್ಯಕ್ತಿಗಳು ದೈವಾಧೀನರಾದ ವಿಚಾರಗಳನ್ನು ತಿಳಿಸುವ ಶಾಸನಗಳು ಹೇರಳವಾಗಿವೆ.[೭]

ಕೆಲವೊಮ್ಮೆ ಈ ಶಾಸನಗಳು ರಾಜಕೀಯ ವಿಷಯಗಳನ್ನೊದಗಿಸುವುದರ ಜೊತೆಗೆ ಯಾವುದಾದರೊಂದು ಐತಿಹಾಸಿಕ ವಿಚಾರದಲ್ಲಿ ವಿದ್ವಾಂಸರಲ್ಲಿ ವಿರುದ್ಧಾಭಿಪ್ರಾಯಗಳಿದ್ದಾಗ ಅವುಗಳನ್ನು ಹೋಗಲಾಡಿಸಿ ಖಚಿತವಾದ ಅಭಿಪ್ರಾಯ ಏನೆಂಬುದನ್ನು ತಿಳಿಯಲು ತುಂಬ ಸಹಾಯಕಾರಿಯಾಗಿವೆ. ಉದಾಹರಣೆಗೆ ಅನೇಕ ಇಂಗ್ಲಿಷ್ ಬರಹಗಾರರು ಟಿಪ್ಪು ಸುಲ್ತಾನನನ್ನು ಮತಾಂಧ ಮತ್ತು ಕ್ರೂರಿ ಎಂದು ಚಿತ್ರಿಸಿದ್ದಾರೆ. ಆದರೆ ಅವನ ಶಾಸನಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿದವರಿಗೆ ಟಿಪ್ಪು ಸುಲ್ತಾನನು ಮುಸ್ಲಿಮೇತರರನ್ನು ಬಹಳ ಔದಾರ್ಯದಿಂದಲೇ ನಡೆಸಿಕೊಂಡನೆಂದು ತಿಳಿಯುತ್ತದೆ. ಹಿಂದೂಗಳ ದೇವಸ್ಥಾನಗಳಿಗೂ, ಧರ್ಮ ಸಂಸ್ಥೆಗಳಿಗೂ, ಬ್ರಾಹ್ಮಣ ಮುಂತಾದವರಿಗೂ ಬಿಟ್ಟ ದತ್ತಿಗಳನ್ನು ತಿಳಿಸುವ ಅನೇಕ ಶಾಸನಗಳು ಈ ಅಂಶವನ್ನು ಖಚಿತಗೊಳಿಸುತ್ತವೆ.[೮]

ಅನೇಕ ವೇಳೆ ಈ ಶಾಸನಗಳು ಒಂದು ವಂಶದ ರಾಜರ ಸರಿಯಾದ ವಂಶಾವಳಿಯನ್ನು ಕೊಡುವುದರಲ್ಲಿ ಸಹಕಾರಿಯಾಗಿವೆ. ಈ ಸಂದರ್ಭದಲ್ಲಿ ನಾವು ಗುಲ್ಬರ್ಗ ಜಿಲ್ಲೆಯ ಸಾಗರ ಎಂಬಲ್ಲಿ ದೊರೆತಿರುವ ಮೊಹಮದ್ ಷಾಹ್ ಬಹಮನಿಯ ಮಗ ವಲೀಉಲ್ಲಾಹ್‌ನ ಕಾಲಕ್ಕೆ ಸೇರಿರುವ ಒಂದು ಶಾಸನವನ್ನು ಉದಾಹರಿಸಬಹುದು.[೯] ಇದಲ್ಲದೆ ಕೆಲವು ಅರಸರ ಸರಿಯಾದ ಹೆಸರು, ಅವರ ಬಿರುದುಗಳು ಮುಂತಾದ ವಿಷಯಗಳನ್ನು ತಿಳಿಯುವಲ್ಲಿಯೂ ಇವು ತುಂಬ ಸಹಕಾರಿಯಾಗಿವೆ. ಬಿಜಾಪುರ ಸುಲ್ತಾನರ ಹೆಸರುಗಳ ಕಾಗುಣಿತ, 'ಸವಾಇ' ಎಂಬ ಬಿರುದಿನ ಸರಿಯಾದ ಅರ್ಥ, ಅಲ್ಲದೆ ಬೆಳಗಾವಿಯಲ್ಲಿ ಅದಿಲ್‌ಷಾಹಿ ಸುಲ್ತಾನರ ಪ್ರಾಂತಾಧಿಕಾರಿಯಾದ ಅಸದ್‌ಖಾನ್ ಎಂಬುವನ ಸರಿಯಾದ ಹೆಸರು ಮುಂತಾದ ವಿಷಯಗಳನ್ನು ತಿಳಿಯಲು ಅವರ ಶಾಸನಗಳೇ ಆಕರಗಳಾಗಿವೆ ಎಂಬುದನ್ನು ಇಲ್ಲಿ ನಾವು ಸ್ಮರಿಸಬಹದು.[೧೦]

ಈ ಶಾಸನಗಳು ಸ್ಥಳೀಯ ಇತಿಹಾಸ ರಚನೆಯಲ್ಲಿ ಮಹತ್ವವಾದ ಪಾತ್ರವನ್ನು ವಹಿಸುತ್ತವೆ ಎನ್ನುವುದು ಈ ಶಾಸನಗಳ ಅಧ್ಯಯನದಿಂದ ತಿಳಿದುಬರುವ ಇನ್ನೊಂದು ಅಂಶ. ಬಿಜಾಪುರ, ಬೀದರ್ ಜಿಲ್ಲೆಯ ಕಲ್ಯಾಣ, ರಾಯಚೂರು, ಸಾಗರ, ಗುಲ್ಬರ್ಗಾ ಜಿಲ್ಲೆಯ ಷಾಹ್‌ಪುರ ಮುಂತಾದ ಸ್ಥಳಗಳಲ್ಲಿ ಪ್ರಾಂತಾಧಿಕಾರಿಗಳಾಗಿಯೋ, ಪಟ್ಟಣಾಧಿಕಾರಿಗಳಾಗಿಯೋ ದಳವಾಯಿಗಳಾಗಿಯೋ ಅಥವಾ ಇನ್ನಾವ ಹುದ್ದೆಗಳಲ್ಲಿಯೋ ಸೇವೆ ಸಲ್ಲಿಸಿದವರಲ್ಲಿ ಅನೇಕರು ನಮಗ ತಿಳಿದುಬರುವುದೇ ಈ ಶಾಸನಗಳಿಂದ ಎಂದು ಹೇಳಿದರೆ ತಪ್ಪಾಗಲಾರದು. ಖಿಲ್ಜಿ ವಂಶದ ಸುಲ್ತಾನರ ಕಾಲಕ್ಕೆ ಸೇರಿದ ಬಖ್ತ್ಯಾರ್‌ಖಾನೀ

ಮತ್ತು ಮಾಲಿಕುಷ್ ಷರ್ಕ್ ಕರೀಮುದ್ದೀನ್, ತುಘಲಕ್‌ರ ಕಾಲಕ್ಕೆ ಸೇರಿದ ಅಲೀ ಜಖ್ಷೆರೀಯ ಮಗ ಅಹಮದ್, ಉಲುಫ್ ಖಿತ್ಲುಘ ಮಲೀಕುಷ್‌ಷರ್ಕ್, ಮಲೀಕ್ ಷಾಹಿತ್ ಸುಲ್ತಾನೀ ಮತ್ತು ಮಲಿಕುಷ್-ಷರ್ಕ್ ಖಿವಾಮುದ್ದೀನ್, ಬಹಮನಿ ಸುಲ್ತಾನರ ಕಾಲದ ಅಮೀರ್-ಇ-ತುರ್ಕ್ಕಾನ್, ರಜಬ್, ಅಬೂ ಮಹಮ್ಮದ್ ತಬ್ರೀಜಿ, ಅಜಂ ಹುಮಾಯೂನ್ ಕ್ವಾಜ ಜಹಾನ್, ಮಲಿಕುಷ್ ಷರ್ಕ್ ಅಬಾಜೀ, ಫಹೀಮ್‌ಖಾನ್ ಇ ಅಜಂ, ಗಾಲಿಬ್‌ಖಾನ್, ದಸ್ತೂರ್ ಖಾಣ್, ಜಗಪತೀ ರಾವ್ ಮತ್ತು ಕ್ವಾಜ ಬುಸ್ತಾನ, ಆದಿಲ್‌ಷಾಹಿ ಸುಲ್ತಾನರ ಕಾಲಕ್ಕೆ ಸೇರಿದ ಬಖ್ತಿಯಾರ್ ಖಾನ್, ಮಲೀಕ್ ಅಮೀನುಲ್ ಮುಲ್ಕ್, ಬಾಬಾಜಿ ದಾಬಿತ್‌ಖಾನ್, ಪೌಲಾಂಡ್ ಖಾನ್, ಮುಹಮ್ಮದ್ ಮುಸ್ತಾಫಾ ಖಾನ್, ಅರಬ್ ಖಾನ್, ಕಿಷ್‌ವರ್ ಖಾನ್, ಮುಹಮ್ಮದ್ ಹೈದರ್, ಮನ್‌ಸೂರ್‌ಖಾನ್ ಇನ್ನೂ ಮುಂತಾದ ವ್ಯಕ್ತಿಗಳ ಹೆಸರು ನಮಗೆ ತಿಳಿದಿರುವುದು ಆ ಕಾಲದ ಶಾಸನಗಳಿಂದಲೇ. ಮೇಲೆ ಹೇಳಿರುವ ಸ್ಥಳೀಯ ಅಧಿಕಾರಿಗಳಲ್ಲದೆ ಅರಮನೆಗೆ ಇಲ್ಲವೆ ಅರಸರಿಗೆ ಸಂಬಂಧಿಸಿದ ಅನೇಕರ ಹೆಸರುಗಳನ್ನು ಸಹ ಈ ಶಾಸನಗಳಲ್ಲಿ ನಾವು ಕಾಣಬಹುದು. ಉದಾಹರಣೆಗೆ, ಬಹಮನೀ ರಾಜಮಾತೆ ಬೀಬೀ ಷಹನಾಜ್, ಇಬ್ರಾಹಿಂ ಆದಿಲ್‌ಷಾಹನ ರಾಣಿ ತಾಜ್‌ಸುಲ್ತಾನ, ಆದಿಲ್‌ಷಾಹಿ ಸರದಾರ ಅಬ್ದುಲ್ ಮಹಮ್ಮದನ ಹೆಂಡತಿಯಾಗಿದ್ದ ಬೀಬೀ ಹಲೀಮ ಮುಂತಾದವರು.

ಹೀಗೆ ನಾನಾ ಇಲಾಖೆಗಳ ಅಧಿಕಾರಿಗಳ ಹೆಸರುಗಳನ್ನು ತಿಳಿದುಕೊಳ್ಳುವುದರ ಜೊತೆಗೆ ಅವರ ಸ್ಥಾನಮಾನ, ಆಡಳಿತಕ್ಕೆ ತಕ್ಕ ಪ್ರಾಂತ ವಿಂಗಡಣೆ, ಅವಕ್ಕೆ ತಕ್ಕ ಹುದ್ದೆಗಳು, ಮುಂತಾದ ಆಡಳಿತಕ್ಕೆ ಸಂಬಂಧಿಸಿದ ವಿವರಗಳನ್ನೂ ನಾವು ಈ ಶಾಸನಗಳಿಂದ ತಿಳಿಯಬಹುದು. ತುಘಲಕ್, ಬಹಮನಿ ಮತ್ತು ಬರೀದ್ ಷಾಹಿ ವಂಶಗಳಿಗೆ ಸೇರಿರುವ ಶಾಸನಗಳಲ್ಲಿ ಬರುವ 'ಇಖ್‌ಲಿಮ್' ಅಂದರೆ ಪ್ರಾಂತ, 'ಮುಆಮಲ' ಅಂದರೆ ಜಿಲ್ಲೆ, 'ಖಿಸ್ಬ' ಅಥವಾ 'ಥಾನಾ' ಅಂದರೆ ಪಟ್ಟಣ ಅಥವಾ ಉಪವಿಭಾಗ ಮುಂತಾದ ಭೂವಿಭಾಗಗಳ ಹೆಸರುಗಳನ್ನೂ; 'ದಿವಾನ್ ಇ ಕದಾ' ಅಂದರೆ ನ್ಯಾಯಾಂಗ ಇಲಾಖೆ, 'ನಾಯಿಬ್ ಇ ದಿವಾನ್ ಇ ಕದಾ' ಅಂದರೆ ನ್ಯಾಯಾಂಗ ಇಲಾಖೆಯ ಉಪ ಅಧಿಕಾರಿ ಎಂಬುದನ್ನೂ; 'ಕೊತ್ವಾಲ್', 'ಖತರ್‌ಖಾನ್', 'ನಾಯಿಬ್ ಇ ಸರ್‌ಪರ್‌ದಾರ್', 'ಥಾನಾದಾರ್' ಮುಂತಾದವುಗಳನ್ನೂ; ಆದಿಲ್‌ಷಾಹಿ ಶಾಸನಗಳಲ್ಲಿ ಬರುವ 'ದಿವಾನ್-ಇ-ಆಲಂ', 'ಸುಬೇದಾರ್', 'ಹವಾಲ್ದಾರ್', 'ಅಮೀರ್ ಇ ಜುಮ್ಲ', 'ಅಮೀನ್', 'ಮಹಾಜನ್' ಮುಂತಾದವುಗಳನ್ನೂ; ಮೊಗಲರ ಶಾಸನಗಳಲ್ಲಿ ಬರುವ 'ಫೌಜ್‌ದಾರ್', 'ಖಿಲಾದಾರ್' ಮತ್ತು ಟಿಪ್ಪು ಸುಲ್ತಾನನ ಶಾಸನಗಳಲ್ಲಿ ಬರುವ 'ಸಿಪಾಹ್‌ದಾರ್', 'ಸರ್ ಇ ಅಸ್ಕದ್' ಮುಂತಾದ ಹುದ್ದೆಗಳ ಹೆಸರುಗಳನ್ನೂ ನಾವು ಈ ಸಂದರ್ಭದಲ್ಲಿ ಉದಾಹರಿಸಬಹುದು.

ಇವುಗಳಿಂದ ತಿಳಿದುಬರುವ ಇನ್ನೊಂದು ಅಂಶವೆಂದರೆ ಅರಸರಿಂದಲೋ ಅಥವಾ ಇನ್ನಾವ ಅಧಿಕಾರಿಗಳಿಂದಲೋ ವಿಧಿಸಲ್ಪಟ್ಟ ಹೊಸ ತೆರಿಗೆಗಳು, ದಂಡ, ವಿನಾಯತಿ, ಬಲಾತ್ಕಾರದಿಂದ ಆಚರಣೆಗೆ ತಂದ ನ್ಯಾಯಬಾಹಿರ ಪದ್ಧತಿಗಳು ಮುಂತಾದ ಆಡಳಿತಕ್ಕೆ ಸಂಬಂಧಿಸಿದ ಪ್ರಮುಖ ಅಂಶಗಳು. ಕ್ರಿ.ಶ. ೧೫೧೩ರ ಶಾಸನವೊಂದರಲ್ಲಿ ನೇಕಾರರು, ಗಾಣಿಗರು, ಚಿಲ್ಲರೆ ವ್ಯಾಪಾರಿಗಳು ಮುಂತಾದವರಿಗೆ ತೆರಿಗೆ ಮನ್ನಾ ಮಾಡಿದ ವಿಚಾರವಿದೆ.[೧೧] ತೆರಿಗೆ ವಿನಾಯ್ತಿಯ ಜೊತೆಗೆ ಅವುಗಳನ್ನು ವಿಧಿಸಬೇಕಾದ ಸಂದರ್ಭಗಳಲ್ಲಿ ತೆರಿಗೆಯ ಪ್ರಮಾಣಗಳನ್ನು ತಿಳಿಸುವ ಶಾಸನಗಳು, ಅಲ್ಲದೆ ಕಟ್ಟಡ ಮುಂತಾದವುಗಳನ್ನು ಕಟ್ಟಲು ತಗುಲಿದ ವೆಚ್ಚ ಇತ್ಯಾದಿ ವಿವರಗಳನ್ನೊದಗಿಸುವ ಶಾಸನಗಳೂ ಇವೆ.[೧೨] ಇವು ಅಂದಿನ ಆರ್ಥಿಕ ಸ್ಥಿತಿಯನ್ನು ಅರಿಯಲು ನಮಗೆ ಸಹಕಾರಿಯಾಗಿವೆ. ಇವುಗಳಲ್ಲದೆ ಸಂತೆಗಳ ಅಥವಾ ಪಟ್ಟಣಗಳ ಪ್ರಾರಂಭ, ವ್ಯವಸಾಯ ಅಭಿವೃದ್ಧಿಗಾಗಿ ಸಿಕ್ಕ ಪ್ರೋತ್ಸಾಹ, ಮುಸಾಫರ್ ಖಾನ್ ಅಂದರೆ ಅತಿಥಿಗೃಹ, ರಸ್ತೆ, ಕೆರೆ, ಕಾಲುವೆಗಳ ನಿರ್ಮಾಣ ಮುಂತಾದ ಜನೋಪಕಾರಿ ಕಾರ್ಯಗಳ ಪ್ರಸ್ತಾಪವೂ ಕೆಲವು ಶಾಸನಗಳಲ್ಲಿವೆ.[೧೩] ಮೈಸೂರಿಗೆ ಸಮೀಪದ ಈಗಿನ ಕೃಷ್ಣರಾಜ ಸಾಗರ ಅಣೆಕಟ್ಟೆಯ ಹತ್ತಿರವೇ ಟಿಪ್ಪುಸುಲ್ತಾನನು ಕಾವೇರಿ ನದಿಗೆ ಅಡ್ಡಲಾಗಿ ಅಣೆಕಟ್ಟೆಯೊಂದನ್ನು ಕಟ್ಟಿಸಿ, ಅದರ ನಾಲೆಗಳಿಂದ ನೀರಾವರಿಯಾಗುವ ಜಮೀನಿನ ಒಡೆತನವನ್ನು ರೈತರು ಖಾಯಮ್ಮಾಗಿ ಅನುಭವಿಸಬಹುದೆಂದೂ, ಆ ಜಮೀನಿನ ಉತ್ಪತ್ತಿಯಲ್ಲಿ ಮೂರನೆಯ ಒಂದು ಭಾಗವನ್ನು ಸಹ ಅವರೇ ಇಟ್ಟುಕೊಳ್ಳಬಹುದೆಂಬ ಅಪ್ಪಣೆ ಇತ್ತನೆಂದೂ ಈಗಲೂ ಅಲ್ಲಿರುವ ಶಾಸನದಿಂದ ತಿಳಿದುಬರುತ್ತದೆ.[೧೪] ಧಾನ್ಯ ಸಂಗ್ರಹಣೆಗಾಗಿ ಕಣಜಗಳನ್ನು ಕಟ್ಟಿಸಿದ್ದು ಸಹ ಕೆಲವು ಶಾಸನಗಳಿಂದ ನಮಗೆ ತಿಳಿಯುತ್ತದೆ.[೧೫]

ಇವುಗಳ ಅಧ್ಯಯನದಿಂದ ಸಾಮಾಜಿಕ ಸ್ಥಿತಿಗತಿಗಳ ಬಗೆಗೂ ನಮಗೆ ಮಾಹಿತಿಗಳು ದೊರೆಯುತ್ತವೆ. ಉದಾಹರಣೆಗೆ

'ನಿಪುತ್ರಿಕ್' ಎಂಬ ಪದ್ಧತಿ. ಉತ್ತರ ಕರ್ನಾಟಕ ಮತ್ತು ಕೊಂಕಣದಲ್ಲಿ ಪ್ರಚಾರವಲ್ಲಿದ್ದ ಈ ಪದ್ಧತಿಯ ಪ್ರಕಾರ ಮಗನಿಲ್ಲದೆ ಮರಣಹೊಂದಿದ ವ್ಯಕ್ತಿಯ ಆಸ್ತಿಯು ಸರ್ಕಾರಕ್ಕೆ ಹೋಗುತ್ತಿತ್ತು. ಹೆಣ್ಣು ಮಕ್ಕಳಿಗಾಗಲೀ ಅಥವಾ ಹತ್ತಿರದ ಬಂಧುಗಳಿಗಾಗಲೀ ಇದರ ಮೇಲೆ ಹಕ್ಕಿರಲಿಲ್ಲ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ, ಈ ಪದ್ಧತಿ ಕೆಲವು ಸ್ಥಳಗಳಲ್ಲಿ ಎಲ್ಲ ಕೋಮಿನ ಜನರಿಗೂ ಇನ್ನೂ ಕೆಲವು ಸ್ಥಳಗಳಲ್ಲಿ ಕೆಲವೇ ಕೋಮಿನ ಜನರಿಗೂ ಅನ್ವಯಿಸುತ್ತಿತ್ತು.[೧೬] ಆದಿಲ್‌ಷಾಹಿ ಸುಲ್ತಾನರು ಈ ಪದ್ಧತಿಯನ್ನು ರದ್ದುಪಡಿಸಲೋಸುಗ ಹೊರಡಿಸಿದ ಅನೇಕ ಆಜ್ಞೆಗಳನ್ನು ಕಾಣಬಹುದು. ಇಲ್ಲಿ ತಿಳಿದುಬರುವ ಇನ್ನೊಂದು ಅಂಶವೆಂದರೆ ಕೆಲವು ಕೋಮಿನ ಜನರು ಕೆಲವು ಕೆಲಸಗಳನ್ನು ಕಡ್ಡಾಯವಾಗಿ ಮಾಡಲೇಬೇಕಿತ್ತು. ಇಂತಹ ಕಡ್ಡಾಯ ಸೇವೆಗಳನ್ನು ಕೆಲವು ಕೋಮಿನ ಜನರಿಗೆ ಮನ್ನಾ ಮಾಡಿ ಹೊರಡಿಸಿದ ಅಪ್ಪಣೆಗಳನ್ನು ಕಾಣಬಹುದು.[೧೭] ಉದಾಹರಣೆಗೆ ನಾಯಿಂದ ಕೋಮಿನ ಜನರು ಸೈನ್ಯದಲ್ಲಿ ಕಡ್ಡಾಯ ಸೇವೆ ಸಲ್ಲಿಸಬೇಕಾಗಿರಲಿಲ್ಲ.

ಕೆಲವು ಶಾಸನಗಳಲ್ಲಿ ಸ್ಥಳನಾಮಗಳ ವಿವರಣೆ, ಯಾವುದಾದರೊಂದು ಊರಿನ ಹಳೆಯ ಹೆಸರಿಗೆ ಬದಲಾಗಿ ಇಟ್ಟ ಹೊಸ ಹೆಸರು ಇತ್ಯಾದಿ ವಿವರಗಳಿವೆ. ರಾಯಬಾಗ್ ಅನ್ನು ಮುಸ್ತಫಾಬಾದ್ ಎಂದೂ, ಬಿಜಾಪುರವನ್ನು ಮಹಮ್ಮದ್‌ಪುರ ಎಂದೂ ಕರೆಯುತ್ತಿದ್ದುದನ್ನು ನಾವು ಇಲ್ಲಿ ಸ್ಮರಿಸಬಹುದು.

ಅಳತೆಗೆ ಸಂಬಂಧಿಸಿದಂತೆ ನೀತನ್, ಚಾವಾರ್, ಜಿಥಾ, ಗಜ್ ಮುಂತಾದ ಶಬ್ದಗಳ ಬಳಕೆಯನ್ನೂ, ನಾಣ್ಯಗಳಿಗೆ ಸಂಬಂಧಿಸಿದಂತೆ ಹೊನ್, ಪ್ರತಾಪ್, ಟಂಕ್, ಜೀಕಾಣಿ, ಜೀತಾಲ್ ಮುಂತಾದ ಶಬ್ದಗಳ ಬಳಕೆಯನ್ನೂ ಈ ಶಾಸನಗಳಲ್ಲಿ ಕಾಣಬಹುದು.[೧೮] ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಇರುವ ದೂರವನ್ನೋ, ಅರಸರಿಗೆ ಸೇರಿದ ರಾಜ್ಯದ ಎಲ್ಲೆಯನ್ನೋ ಅಥವಾ ಮಸೀದಿ, ಈದ್‌ಗಾಹ್ ಅಥವಾ ಪ್ರಾರ್ಥನಾ ಸ್ಥಳ, ಖಬರಸ್ಥಾನ ಅಥವಾ ಸ್ಮಶಾನಭೂಮಿ ಮುಂತಾದ ಧಾರ್ಮಿಕ ಸ್ಥಳಗಳಿಗ ದತ್ತಿಯಾಗಿ ನೀಡಿದ ಭೂಮಿಗಳ ಚಕ್ಕುಬಂದಿಗಳ ವಿವರಗಳನ್ನೋ ತಿಳಿಸುವ ಶಾಸನಗಳೂ ಇವೆ.[೧೯]

ಕರ್ನಾಟಕದಲ್ಲಿ ದೊರೆತ ತೋಪುಗಳ ಮೇಲಿರುವ ಅನೇಕ ಶಾಸನಗಳು ಅವುಗಳನ್ನು ತಯಾರು ಮಾಡಲು ಅಪ್ಪಣೆ ಕೊಟ್ಟ ಅರಸ, ಅವನ್ನು ರವಾನಿಸಿದ ಸ್ಥಳ, ಯಾವ ಯಾವ ಅರಸರ ಕಾಲದಲ್ಲಿ ಅವುಗಳನ್ನು ಹೆಚ್ಚು ಹೆಚ್ಚಾಗಿ ತಯಾರಿಸುತ್ತಿದ್ದರು ಎಂಬಂತಹ ಅನೇಕ ವಿಷಯಗಳನ್ನು ತಿಳಿಯಲು ಸಹಕಾರಿಯಾಗಿವೆ. ನಿಜಾಂಷಾಹಿ ಮತ್ತು ಬರೀದ್ ಷಾಹಿ ಸುಲ್ತಾನರು ಆದಿಲ್‌ಷಾಹಿ ಸುಲ್ತಾನರಿಗಿಂತ ಹೆಚ್ಚು ಫಿರಂಗಿಗಳನ್ನು ತಯಾರಿಸಿದಂತೆ ಕಂಡುಬರುತ್ತದೆ. ಹತ್ತೊಂಬತ್ತನೆಯ ಶತಮಾನದ ಆದಿಭಾಗದವರೆಗೂ ಈ ಕೈಗಾರಿಕೆಯು ಜೀವಂತವಾಗಿತ್ತೆಂಬುದು ಕಲ್ಯಾಣಿ ನವಾಬರ ಆರು ಫಿರಂಗಿಗಳ ಮೇಲಿರುವ ಶಾಸನಗಳಿಂದ ತಿಳಿದುಬರುತ್ತದೆ.[೨೦]

ನಮ್ಮ ನಾಡಿನ ಸಾಹಿತ್ಯ ಚರಿತ್ರೆಯ ಜೊತೆಗೆ ಲೇಖನ ಕಲೆಯ ದೃಷ್ಟಿಯಿಂದಲೂ ಈ ಶಾಸನಗಳ ಮೌಲ್ಯ ಹೆಚ್ಚಿನದು. ಅನೇಕ ಕವಿಗಳು, ಸುಂದರ ಲಿಪಿಕಾರರು ಮತ್ತು ಶಿಲ್ಪಿಗಳು ನಮಗೆ ತಿಳಿದಿರುವುದು ಈ ಶಾಸನಗಳಿಂದಲೇ. ಪದ್ಯರೂಪದಲ್ಲಿ ಬರೆದಿರುವ ಅನೇಕ ಶಾಸನಗಳಲ್ಲಿ ಕವಿಗಳ ಹೆಸರು ಉಳಿದು ಬಂದಿವೆ. ಇವರಲ್ಲಿ ಪರ್ಶಿಯನ್ ಭಾಷೆಗಳ ಕವಿಗಳೇ ಹೆಚ್ಚು. ಒಬ್ಬಿಬ್ಬರು ಅರಬ್ಬೀ ಭಾಷೆಯ ಕವಿಗಳೂ ಇದ್ದಾರೆ. ಇಲ್ಲಿ ಫರೀದ್, ನದೀಮ್, ಮುಹಮ್ಮದ್, ಅಮೀನ್, ಅಬ್ದುಲ್ ಖಾಸಿಮ್, ಆಬೀದ್, ಬಾದ್‌ಷಾಹ್, ಮೊಹಿಯುದ್ದೀನ್, ಮೀರ್‌ಹುಸೇನ್ ಅಲಿ, ಗುಲಾಂ ಹುಸೇನ್, ಷಗೀರ್ ಮುಂತಾದ ಕವಿಗಳನ್ನೂ ಮಹಮದ್ ಬಿನ್ ದಿಯಾ (೧೩೨೩), ಮಿರಾತ್ ಹಿರೆವೀ (೧೫೧೭), ಖಾಜಿ ನಿಜಾಮ್ ದವ್ವಾನೀ (೧೫೧೪), ಹಾಫೀಜ್ ನಿಜಾಮುದ್ದೀನ್ (೧೫೩೬-೩೭), ಹಿದಾಯತುಲ್ಲಾಹ್ (೧೫೮೧), ಕರೀಮುದ್ದೀನ್ ಅಲೀ (೧೫೮೩), ಅಬ್ದುಲ್ ಅಜೀಜ್ (೧೬೩೩-೩೪) ಮುಂತಾದ ಸುಂದರ ಲಿಪಿಕಾರರನ್ನೂ ಉದಾಹರಿಸಬಹುದು. ಬಿಜಾಪುರದ ಸುಲ್ತಾನನಾದ ಅಲಿ ಆದಿಲ್‌ಷಾಹನು ರಚಿಸಿದ ಪರ್ಶಿಯನ್ ಭಾಷೆಯ ಕವಿತೆಯೊಂದು ಶಾಸನವೊಂದರಲ್ಲಿ ಇಂದಿಗೂ ಸುರಕ್ಷಿತವಾಗಿದೆ.[೨೧]

ಹದಿನಾರು ಹದಿನೇಳನೆಯ ಶತಮಾನದಲ್ಲಿ ದಖನಿ ಎಂದು ಪ್ರಸಿದ್ಧವಾಗಿದ್ದ ಹಳೆಯ ಉರ್ದು ಭಾಷೆಯ ಮಾದರಿಯಲ್ಲಿ ಎರಡು ಶಾಸನಗಳು ದೊರಕಿರುವುದು ಗಮನಾರ್ಹ. ಇವುಗಳಲ್ಲೊಂದು ಹದಿನೈದು ಪದ್ಯಗಳನ್ನೊಳಗೊಂಡಿದೆ. ಮತ್ತೊಂದರಲ್ಲಿ ಎರಡು ಸಾಲಿನ ಒಂದೇ ಒಂದು ಪದ್ಯವಿದೆ.[೨೨] ಸ್ಥಳೀಯ ಭಾಷೆಗಳ ಅನೇಕ ಶಬ್ದಗಳು ಈ ಶಾಸನಗಳ ಮಧ್ಯೆ ಮಧ್ಯೆ ಕಂಡುಬರುವುದು ಭಾಷಾಶಾಸ್ತ್ರದ ದೃಷ್ಟಿಯಿಂದ ಅದರಲ್ಲೂ ಕನ್ನಡ ಮತ್ತು ಇತರ ಭಾಷೆಗಳಲ್ಲಿ ಎಷ್ಟರ ಮಟ್ಟಿಗೆ ಕೊಳು-

ಕೊಡುಗೆ ನಡೆದಿದೆ ಎಂಬುದನ್ನು ಅಭ್ಯಾಸ ಮಾಡಲು ಸಹಾಯಕವಾಗಿದೆ. ಉದಾಹರಣೆಗೆ ನಾವು ಈ ಶಬ್ದಗಳನ್ನು ಗಮನಿಸಬಹುದು : ಸುತನ್, ನೀತನ್, ಹುಲ್‌ಮಕ್, ಜಾಯಿನ್, ಜಾಪೀನ್, ಮಹಾಜನ್, ಜಾಲೋಕಿಯನ್, ಗಗನ್, ಘಗನ್, ದಿಡ್ಡಿ, ಜಾವರ್, ಕಾರಂಜಿ (ಇದು ಪರ್ಶಿಯನ್ ಭಾಷೆಯ ಕಾರೀಜ್ ಎಂಬುದರ ಅಪಭ್ರಂಶ), ಕಾಕ, ಪೇಟ್ ಅಥವಾ ಪೆಂಟ್, ನಾಡ್ ಇತ್ಯಾದಿ.

ಬೀದರ್, ಬಿಜಾಪುರ, ರಾಯಚೂರು, ಗುಲ್ಬರ್ಗಾ ಮತ್ತು ಇತರ ಸ್ಥಳಗಳಲ್ಲಿ ಬಳಕೆಯಲ್ಲಿದ್ದ 'ಷುಹುರ್' ಮತ್ತು 'ಹಿಜರಿ' ಶಕೆಗಳ ವಿಚಾರ ನಮಗೆ ತಿಳಿಯುವುದು ಈ ಶಾಸನಗಳಿಂದಲೇ.[೨೩] ಟಿಪ್ಪು ಸುಲ್ತಾನನು ಬಳಕೆಗೆ ತಂದ 'ಮೌಲಾದಿ ಶಕೆ' ಅವನ ಕೆಲವು ಶಾಸನಗಳಿಂದ ತಿಳಿಯುತ್ತದೆ.[೨೪] 'ಹಿಜರಿ ಶಕೆ'ಯನ್ನು ಬರೆಯುವಾಗ ಅಂಕೆಗಳನ್ನು ಎಡದಿಂದ ಬಲಕ್ಕೂ, 'ಮೌಲೂದಿ ಶಕೆ'ಯನ್ನು ಬರೆಯುವಾಗ ಅಂಕೆಗಳನ್ನು ಬಲದಿಂದ ಎಡಕ್ಕೂ ಸಾಮಾನ್ಯವಾಗಿ ಬರೆಯುವ ಪದ್ಧತಿ ಇದ್ದು ಈ ಪದ್ಧತಿಯನ್ನು ನಾವು ಟಿಪ್ಪು ಸುಲ್ತಾನನ ಕೆಲವು ಶಾಸನಗಳಲ್ಲಿ ಕಾಣಬಹುದು.[೨೫] ಟಿಪ್ಪು ಸುಲ್ತಾನನ ಅನೇಕ ಶಾಸನಗಳಲ್ಲಿ ಪರ್ಶಿಯನ್ ಭಾಷೆಯ ಪದ್ಯಗಳಿದ್ದು ಅವು ತೇದಿಯ ವಿವರಗಳನ್ನು ಹೊಂದಿವೆ.[೨೬] ಶ್ರೀರಂಗಪಟ್ಟಣದಲ್ಲಿರುವ ಆನೆಯ ಬಾಗಿಲಿನ ಮೇಲಿರುವ ಕ್ರಿ.ಶ. ೧೭೯೧ರ ಶಾಸನವು ಟಿಪ್ಪು ಸುಲ್ತಾನನು ಕಟ್ಟಿಸಿದ ಕೋಟೆಯ ಶಂಕುಸ್ಥಾಪನೆಯನ್ನೂ ಅದರ ಕಾಲವನ್ನೂ ತಿಳಿಸುತ್ತದೆ.[೨೭] ಈ ಶಾಸನದಲ್ಲಿ ಅತ್ಯಂತ ಗಮನಾರ್ಹವಾದ ಸಂಗತಿ ಎಂದರೆ ಗ್ರಹಗತಿಗಳ ವರ್ಣನೆ. ಇಂತಹ ಗ್ರಹಗತಿಗಳ ವರ್ಣನೆಗಳಿಂದ ಕೋಟೆಗಳನ್ನೋ, ಮಂದಿರಗಳನ್ನೋ ಕಟ್ಟಿಸಬೇಕಾದರೆ ಅಥವಾ ಇತರೆ ಶುಭಕಾರ್ಯಗಳನ್ನು ಮಾಡಬೇಕಾದರೆ ಜನತೆ ಜ್ಯೋತಿಷ್ಯ ಶಾಸ್ತ್ರಕ್ಕೆ ಕೊಡುತ್ತಿದ್ದ ಮಹತ್ವವನ್ನು ನಾವು ಕಾಣಬಹುದಾಗಿದೆ.

ಮುಸಲ್ಮಾನರ ಅನೇಕ ಕಟ್ಟಡಗಳ ಅವಶೇಷಗಳನ್ನು ಗುರುತಿಸುವುದರ ಜೊತೆಗೆ ಅವುಗಳನ್ನು ಕಟ್ಟಿಸಿದವರು, ಇಲ್ಲವೆ ಅವುಗಳ ಜೀರ್ಣೋದ್ಧಾರ ಮಾಡಿಸಿದವರ ಹೆಸರು, ಅವುಗಳ ಕಾಲ ಇನ್ನೂ ಮುಂತಾದ ವಿಚಾರಗಳನ್ನು ನಾವು ತಿಳಿಯುವುದು ಈ ಶಾಸನಗಳಿಂದಲೇ. ಮುಸ್ಲಿಂ ವಾಸ್ತುಶಿಲ್ಪದ ಅಧ್ಯಯನದ ದೃಷ್ಟಿಯಿಂದ ಈ ಶಾಸನಗಳ ಮೌಲ್ಯ ಅಮೋಘವಾದುದು. ಈ ವಾಸ್ತುಶಿಲ್ಪ ಬೆಳೆದು ಬಂದ ರೀತಿ, ಅದನ್ನು ಬೆಳೆಸಲು ಪ್ರೋತ್ಸಾಹಿಸಿದ ಅರಸರ ವಿಚಾರ, ಕಾಲಕಾಲಕ್ಕೆ ಬಂದ ವಾಸ್ತುಶಿಲ್ಪದ ವಿವಿಧ ಶೈಲಿಗಳ ಅಧ್ಯಯನ ಮುಂತಾದ ವಿಷಯಗಳ ದೃಷ್ಟಿಯಿಂದ ಈ ಶಾಸನಗಳು ತುಂಬಾ ಉಪಯುಕ್ತವಾಗಿವೆ. ಬೆಂಗಳೂರಿನ ಕೋಟೆಯಲ್ಲಿರುವ ಟಿಪ್ಪೂ ಸುಲ್ತಾನನ ಅರಮನೆಗೆ 'ಫರೂಕ್ ಮಹಲ್' ಎಂಬ ಹೆಸರಿದ್ದಿತೆಂದು ತಿಳಿಯುವುದೇ ನಮಗೆ ಅವನ ಶಾಸನದ ಅಧ್ಯಯನದಿಂದ.[೨೮]

ಮಸೀದಿ, ಗೋರಿ, ಈದ್‌ಗಾಹ್ (ಹಬ್ಬದ ದಿನ ಪ್ರಾರ್ಥನೆ ಮಾಡುವ ಸ್ಥಳ) ಮುಂತಾದ ಧಾರ್ಮಿಕ ಕಟ್ಟಡಗಳ ಮೇಲೆ ಕಂಡುಬರುವ ಶಾಸನಗಳಲ್ಲಿ ಖುರಾನಿನಲ್ಲಿರುವ ಪದ್ಯಗಳೇ ಹೆಚ್ಚು. ಅಲ್ಲದೆ ಈ ಶಾಸನಗಳಲ್ಲಿ ಅಲ್ಲಾಹ್‌ನ ಅಥವಾ ದೇವರ ಮತ್ತು ಇಸ್ಲಾಂ ಮತ ಸ್ಥಾಪಕ ಮೊಹಮ್ಮದ್ ಪೈಗಂಬರ್‌ರವರ ವಿವಿಧ ಹೆಸರುಗಳು ಇರುತ್ತವೆ.[೨೯] ಹೀಗೆ ಈ ಶಾಸನಗಳು ಧಾರ್ಮಿಕ ಇತಿಹಾಸದ ರಚನೆಯಲ್ಲಿ ಮಹತ್ವವಾದ ಪಾತ್ರವನ್ನು ವಹಿಸಿಕೊಂಡಿವೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. *Epigraphia Indo Moslemica* (E.I.M), 1927-28, p.17.

೨. *Annual Report on Indian Epigraphy* (A.R.I.E), 1964-65, No. D. 278.

೩. E.I.M., 1939-40, pp.17-18.

೪. A.R.I.E., 1959-60, No. D. 172.

೫. E.I.M., 1939-30, p.22.

೬ ಅದೇ, ಪು.೨೧.

೭. ನೋಡಿ : ಎಪಿಗ್ರಾಫಿಯಾ ಕರ್ನಾಟಿಕ (ಎ.ಕ.) ಸಂಪುಟ VI, ೧೯೭೭, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು ಶ್ರೀರಂಗಪಟ್ಟಣ ೫೯, ೬೦, ೬೧, ೬೪, ಇತ್ಯಾದಿ.

೮. ನೋಡಿ : ಅದೇ, ಪಾಂಡವಪುರ (ಪಾಂ.ಪು.) ಶಾ.ಸಂ. ೧೭೧ ಮತ್ತು ೧೯೭ ; ಶ್ರೀರಂಗಪಟ್ಟಣ ೧೨, ೧೩, ೧೪, ೧೬ ಇತ್ಯಾದಿ.

೯. E.I.M., 1931-32, pp.19-20.

೧೦. ವಿವರಗಳಿಗೆ ನೋಡಿ : Z.A. Desai; *Archaeology of Karnataka*, Ed. Dr. A.V. Narasimha Murthy; Mysore, 1978, pp.184-85.

೧೧. A.R.I.E., 1970-71, No. D. 127.

೧೨. ಅದೇ, ೧೯೭೦-೭೧, No. D. 126-127. 1963-64, No. D. 266, 1964-65, No. D. 284.

೧೩. ನೋಡಿ : ಅದೇ, ೧೯೫೮-೫೯, No. D. 49, 85, 138, 1963-64, No. D. 258 ಇತ್ಯಾದಿ

೧೪. ಅದೇ, ೧೯೫೮-೫೯, ನಂ.ಡಿ. ೨೫೮

೧೫. ಅದೇ, ೧೯೫೮-೫೯, ನಂ.ಡಿ. ೧೩೮

೧೬. Z.A. Desai, *Indian History Congress*, 33rd Session, Muzaffarpur, 1972, p.646.

೧೭. *Epigraphia India* - Arabic and Persian Supplement, 1962, pp.63-64.

೧೮. A.R.I.E., 1964-65, No. D. 287.

೧೯. ಅದೇ, ೧೯೫೨-೫೩. ಸಂ.ಡಿ. ೩೯; ೧೯೬೫-೬೬, ಸಂ.ಡಿ. ೨೩೩, ೨೩೪, ೨೪೨. ೨೪೩ ಇತ್ಯಾದಿ.

೨೦. ಅದೇ, ೧೯೬೫-೬೬, ಸಂ.ಡಿ. ೨೬೨-೬೬.

೨೧. ಅದೇ, ೧೯೬೪-೬೫, ಸಂ.ಡಿ. ೨೮೭.

೨೨. ಅದೇ, ೧೯೬೨-೬೩, ಸಂ.ಡಿ. ೧೬೩, ೧೯೬೫-೬೬, ಸಂ.ಡಿ. ೨೨೫.

೨೩. ಅದೇ, ೧೯೫೫-೫೬, ಸಂ.ಡಿ. ೧೦೯; ೧೯೬೨-೬೩, ಸಂ.ಡಿ. ೧೭೯, ೧೮೧; ೧೯೬೪-೬೫. ಸಂ.ಡಿ. ೩೩೦; ೧೯೬೮-೬೯, ಸಂ.ಡಿ. ೪೦೮ ಇತ್ಯಾದಿ.

೨೪. ಕೀರ್ಮಾನಿಯವರು ಈ ಶಕೆಯನ್ನು 'ಮಹಮ್ಮದಿ ಶಕೆ' ಎಂದು ಕರೆದಿದ್ದಾರೆ. ನೋಡಿ : Mohilbbul Hassan : *History of Tippu Sultan*, ಪುಟ ೪೦೦.

೨೫. ಅದೇ, ಪುಟ ೩೯೬ ಮತ್ತು ಎ.ಕ. ಸಂ. VI. ೧೯೭೭, ಶ್ರೀರಂಗಪಟ್ಟಣ ೯೨, ಇತ್ಯಾದಿ.

೨೬. ಎ.ಕ. ಸಂ. VI, ೧೯೭೭, ಶ್ರೀರಂಗಪಟ್ಟಣ ೪೮, ೬೦, ೬೧ ಇತ್ಯಾದಿ.

೨೭. ಅದೇ, ಶ್ರೀ.ಪ. ೪೬.

೨೮. A.R.I.E.; 1963-64, No. D. 242.

೨೯. ಎ.ಕ. ಸಂ. ೧೯೭೭. ಶ್ರೀರಂಗಪಟ್ಟಣ ೪೯. ೫೦; A.R.I.E. ೧೯೬೨-೬೩. No. D. ೧೬೫, ೧೬೭ ಮತ್ತು ೧೭೬, ೧೯೬೪-೬೫. No. D ೨೭೮, ೨೮೦-೮೨, ೨೮೮, ೨೯೬ ಇತ್ಯಾದಿ.



# ಶಾಸನ ಪದಕೋಶಗಳು – ಒಂದು ಸಮೀಕ್ಷೆ

– ಎಸ್.ಕಾರ್ತೀಕ್*

ಕರ್ನಾಟಕದ ಶಾಸನ ಸಂಪತ್ತು ಸಮೃದ್ಧವಾದದ್ದು. ವೈವಿಧ್ಯದಿಂದ ಕೂಡಿದ್ದು, ಇಂತಹ ಸಂಪತ್ತಿನ ವಿಪುಲತೆಯನ್ನು ಹೊರದೆಗೆದವರು ಆಗ ಮೈಸೂರು ಸರ್ಕಾರದ ಪುರಾತತ್ತ್ವ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಬಿ.ಲೂಯಿ ರೈಸ್ ಅವರು. ಅವರ ನಂತರ ಆರ್.ನರಸಿಂಹಾಚಾರ್ಯರು. ಉತ್ತರ ಕರ್ನಾಟಕದ ಭಾಗಗಳಲ್ಲಿ ಇವರುಗಳಂತೆ ಕೆಲಸ ಮಾಡಿದವರಲ್ಲಿ ಅಗ್ರಗಣ್ಯರು ಜೆ.ಎಫ್. ಫ್ಲೀಟ್ ಅವರು. ಇವರುಗಳು ಮತ್ತು ಇವರ ಉತ್ತರಾಧಿಕಾರಿಗಳು ಮಾಡಿದ ಸೇವೆ ಅವಿಸ್ಮರಣೀಯವಾದ್ದು. ಇವರು ಅಪರಿಮಿತ ಶಾಸನ ಸಂಪತ್ತನ್ನು ಹೊರದೆಗೆದು ಅವುಗಳನ್ನು ಪ್ರಕಟಿಸಿದ್ದರೂ ಕನ್ನಡ ಭಾಷೆಯಲ್ಲಿ. ಕರ್ನಾಟಕದಲ್ಲಿ ಶಾಸನ ಪದಕೋಶದ ರಚನೆಯಾಗದಿರುವುದು ತೀರ ದುರದೃಷ್ಟಕರ ವಿಚಾರವಾಗಿದೆ. ಎಪಿಗ್ರಾಫಿಯಾ ಕರ್ನಾಟಿಕಾ ಮತ್ತು ಮೈಸೂರು ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿಗಳ ಮೂಲಕ ಜಗದ್ವಿಖ್ಯಾತವಾದ ಕರ್ನಾಟಕದಲ್ಲಿ ಈ ರೀತಿಯ ಪ್ರವೃತ್ತಿ ಕಂಡು ಬರುತ್ತಿರುವುದು ಅಪಮಾನದ ಸಂಗತಿಯಾಗಿದೆ. ಇದೊಂದು ಕೊರತೆ ಎಂದು ಯಾರಿಗೂ ಅನ್ನಿಸಿಲ್ಲವೇನೋ?

ಕನ್ನಡದಲ್ಲಿ ಇಂತಹ ಪದಕೋಶದ ಅಗತ್ಯವನ್ನು ಅನೇಕ ವಿದ್ವಾಂಸರು ೧೯೦೦ರ ಸುಮಾರಿನಲ್ಲೇ ಮನಗಂಡು ಅದರ ಅಗತ್ಯ ಎಷ್ಟೆಂಬುದನ್ನು ತಮ್ಮ ಬರಹಗಳಲ್ಲಿ ಪ್ರತಿಪಾದಿಸಿದ್ದಾರೆ. ಜೆ.ಎಫ್. ಫ್ಲೀಟ್ ಅವರು ತಾವು ಸಂಪಾದಿಸಿದ ಪ್ರತಿಯೊಂದು ಶಾಸನಕ್ಕೂ ವಿವರವಾದ ಪ್ರಸ್ತಾವನೆ, ಟಿಪ್ಪಣಿ ಒದಗಿಸಿದ್ದಾರೆ. ಈ ಪ್ರಸ್ತಾವನೆ ಮತ್ತು ಟಿಪ್ಪಣಿಗಳಲ್ಲಿ ಶಾಸನಗಳಲ್ಲಿನ ಪಾರಿಭಾಷಿಕ ಶಬ್ದಗಳ ಬಗೆಗೂ ವಿಚಾರ ವಿಮರ್ಶೆಗಳಿವೆ. ಕನ್ನಡ ಭಾಷೆ, ಸಾಹಿತ್ಯ, ಇತಿಹಾಸಗಳ ಪರಮಾಚಾರ್ಯರಾಗಿದ್ದ ರಾ. ನರಸಿಂಹಾಚಾರ್ಯರು '೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿಯೂ' ಮತ್ತು 'ಕನ್ನಡಕ್ಕೆ ಪ್ರೋತ್ಸಾಹ' ಎಂಬ ಬರೆಹದಲ್ಲಿಯೂ (ನೋಡಿ – **ಪ್ರಾಕ್ತನ** (ಸಂ) ಟಿ.ವಿ. ವೆಂಕಟಾಚಲ ಶಾಸ್ತ್ರೀ, ಮೈಸೂರು ವಿಶ್ವವಿದ್ಯಾನಿಲಯ–೧೯೮೬, ಪುಟ.೪೦ ಮತ್ತು ೯೫--೯೬) ಕನ್ನಡಕ್ಕೆ ಬೃಹತ್ಕೋಶದ ಅಗತ್ಯ ಎಷ್ಟೆಂಬುದನ್ನು ಒತ್ತಿ ಹೇಳಿದ್ದಾರೆ. ಬೃಹತ್ಕೋಶವಿಲ್ಲದೆ ಆಗಿರುವ ಅನರ್ಥಕ್ಕೆ ಶಾಸನದ ಉದಾಹರಣೆಯನ್ನು ಎತ್ತಿ ತೋರಿಸಿದ್ದಾರೆ. ಇದೇ ರೀತಿಯಾಗಿ ಇನ್ನೂ ಅನೇಕ ಮಂದಿ ವಿದ್ವಾಂಸರು ಇದರ ಬಗೆಗೆ ಗಮನ ಸೆಳೆದಿದ್ದಾರೆ.

ಅಖಿಲ ಭಾರತ ಮಟ್ಟದಲ್ಲಿ ಡಿ.ಸಿ. ಸರ್ಕಾರ್ (=ದಿನೇಶ ಚಂದ್ರ ಸರ್ಕಾರ್) ಅವರಿಂದ **'ಇಂಡಿಯನ್ ಎಪಿಗ್ರಫಿಕಲ್ ಗ್ಲಾಸರಿ'** (ಮೋತಿಲಾಲ್ ಬನಾರಸಿದಾಸ್, ದೆಹಲಿ–೧೯೬೬) ಎಂಬ ಪದಕೋಶ ರಚನೆಯಾಗಿದೆ. ಸರ್ಕಾರ್ ಅವರು ತಮ್ಮ ಕೋಶಕ್ಕೆ ಇಂಡಿಯನ್ ಆ್ಯಂಟಿಕ್ವೆರಿ, ಸೌತ್ ಇಂಡಿಯನ್ ಇನ್ಸ್‌ಕ್ರಿಪ್‌ಷನ್ಸ್, ಎಪಿಗ್ರಾಫಿಯಾ ಇಂಡಿಕಾ ಮುಂತಾದ ಆಕರಗಳನ್ನು ಮತ್ತು ಇತರ ಗ್ರಂಥಗಳನ್ನು ಬಳಸಿ ಕೊಂಡಿದ್ದಾರೆ. ಆದರೆ ಎಪಿಗ್ರಾಫಿಯಾ ಕರ್ನಾಟಿಕಾ ಶಾಸನ ಸಂಪುಟಗಳ ಉಲ್ಲೇಖ ಮತ್ತು ಬಳಕೆ ಕಾಣಸಿಗದಿರುವುದು ಆಶ್ಚರ್ಯಕರ. ಆದರೂ ಹಲವು ಆಕರಗಳ ಬಳಕೆಯ ಕಾರಣವಾಗಿ ಈ ಕೋಶ ನಮ್ಮ ಪಾರಿಭಾಷಿಕ ಪದಗಳ ಗೊಂದಲ ನಿವಾರಿಸುವ ಮತ್ತು ಅರ್ಥಗಳನ್ನು ತಿಳಿಯುವ ಕೊರತೆ ನೀಗಿಸಬಲ್ಲದು. ಈ ಕೋಶದಲ್ಲಿ ಒಟ್ಟು ೩ ಅನುಬಂಧಗಳೂ ಮತ್ತು ಪದಸೂಚಿ ಸೇರ್ಪಡೆಯಾಗಿದೆ. ಅನುಬಂಧಗಳಲ್ಲಿ ದ್ರಾವಿಡ ಭಾಷೆಗಳಲ್ಲಿ ಕಂಡುಬರುವ ತೆರಿಗೆಗಳು, ನಾಣ್ಯಗಳು, ಲೋಹಗಳ ವಿವರಗಳು ಮತ್ತು ಅಳತೆಗಳನ್ನು ಅರ್ಥೈಸಲಾಗಿದೆ. ಗ್ಲಾಸರಿ ವಿಭಾಗವು ಪ್ರಧಾನವಾಗಿದ್ದು, ಅಕಾರಾದಿಯಾಗಿ ರಚನೆಯಾಗಿದೆ. ಯಾವುದೇ ಗೊಂದಲಕ್ಕೆ ಆಸ್ಪದವಿಲ್ಲದಂತೆ ಆರಂಭದಲ್ಲಿಯೇ ಗ್ಲಾಸರಿ ವಿಭಾಗದಲ್ಲಿ ಸಂಕೇತಾಕ್ಷರಗಳಲ್ಲಿ ಸೂಚಿಸಿರುವ ಆಕರಗಳನ್ನು ನೀಡಲಾಗಿದೆ. ಪ್ರಯೋಗಗಳನ್ನು ನೀಡಿಲ್ಲ. ಇದರಲ್ಲಿ ಕನ್ನಡ ಶಾಸನಗಳಲ್ಲಿನ ಶಬ್ದಗಳು ತುಂಬಾ ಮಿತ ಪ್ರಮಾಣದಲ್ಲಿವೆ. ತಮಿಳು ಶಾಸನಗಳಲ್ಲಿನ ಶಬ್ದಗಳ ಉಲ್ಲೇಖ ತುಸು ಹೆಚ್ಚೆಂದು ತೋರಬಹುದು. ಅಲ್ಲಲ್ಲಿ ಕೆಲವು ಶಬ್ದಗಳ ದಾಖಲಾತಿ ಅವುಗಳ ಅರ್ಥ, ನಿಷ್ಕರ್ಷೆಗಳು ತೃಪ್ತಿಕರವೆಂದು ತೋರದಿರಬಹುದು. ಆದರೂ ಕೂಡ ಇದು ಈ ಕ್ಷೇತ್ರದಲ್ಲಿ ಪ್ರಕಟವಾಗಿರುವ ಪ್ರಪ್ರಥಮ ಕೋಶವಾದುದರಿಂದ ಇದನ್ನು ಆಧಾರವಾಗಿಟ್ಟುಕೊಂಡು ಇನ್ನೂ

---

* # ೬೫ (೧ ಮಹಡಿ), ೩ನೆಯ ಅಡ್ಡರಸ್ತೆ , ಶಿಕ್ಷಕರ ಬಡಾವಣೆ, ೧ನೆಯ ಹಂತ, ಜೆ.ಪಿ.ನಗರ ಅಂಚೆ . ಬೆಂಗಳೂರು–೫೬೦೦೭೮.

ಹೆಚ್ಚಿನದಾಗಿ ಕೆಲಸವನ್ನು ಮುಂದುವರಿಸಬೇಕಾಗಿದೆ. ಈ ಕೋಶಕ್ಕಿಂತ ಮೊದಲೇ ಪ್ರಕಟವಾದ 'ಇಂಡಿಯನ್ ಎಪಿಗ್ರಫಿ' (ಮೋತಿಲಾಲ್ ಬನಾರಸಿದಾಸ್, ದೆಹಲಿ-೧೯೬೫, ಪುನರ್ಮುದ್ರಣ-೧೯೯೬) ಎಂಬ ತಮ್ಮ ಗ್ರಂಥದಲ್ಲಿ ಸರ್ಕಾರರು *TECHNICAL EXPRESSIONS* ಎಂಬ ಅಧ್ಯಾಯವನ್ನು ಪಾರಿಭಾಷಿಕ ಪದಗಳ ವಿವರಣೆಗೆ ಮೀಸಲಿರಿಸಿದ್ದಾರೆ. ಇದರಲ್ಲಿ ಭೂ ಅಳತೆಗಳು, ಆಡಳಿತ ಸಂಬಂಧಿ ಶಬ್ದಗಳು ಇತ್ಯಾದಿಗಳ ಬಗೆಗೆ ಚರ್ಚಿಸಿದ್ದಾರೆ. ಇವುಗಳನ್ನು ಶಾಸನ ಪದಕೋಶದ ರಚನೆಗೆ ಅಗತ್ಯವಾಗಿ ಬಳಸಿಕೊಳ್ಳಬೇಕು.

೧೯೬೭ರಲ್ಲಿ ಆಂಧ್ರ ಪ್ರದೇಶ ಸಾಹಿತ್ಯ ಅಕಾಡೆಮಿ, ಹೈದರಾಬಾದಿನಿಂದ ಕುಂದೂರಿ ಈಶ್ವರದತ್ ಅವರ **'ಶಾಸನ ಶಬ್ದಕೋಶಮು'** ಎಂಬ ತೆಲುಗು ನಿಘಂಟು ಪ್ರಕಟವಾಗಿದೆ. ಈ ಕೋಶದ ಆರಂಭದಲ್ಲಿ ಪಾರಿಭಾಷಿಕ ಶಬ್ದಗಳು ಮುಂತಾದ ವಿಷಯಗಳ ಬಗೆಗೆ ವಿಶದವಾಗಿ ಚರ್ಚಿಸಿರುವ ಬಹುವಿಸ್ತಾರ ಉಪೋದ್ಘಾತವಿದೆ. ಈ ಕೋಶದ ಪ್ರಧಾನ ವೈಶಿಷ್ಟ್ಯವೆಂದರೆ, ಪ್ರಯೋಗಗಳನ್ನು ನೀಡಿರುವುದು. ಪ್ರಯೋಗಗಳನ್ನು ಅವಲಂಬಿಸದೆ ಯಾವುದಕ್ಕೂ ಅರ್ಥನಿರ್ಣಯ ಮಾಡಲು ಹೋಗಿಲ್ಲ. ಈ ಪ್ರಯೋಗಗಳನ್ನು ಪೂರ್ಣವಾಗಿ ಸಂದರ್ಭ ಸ್ಪಷ್ಟವಾಗಿ ತಿಳಿಯುವಂತೆ ಉದಾಹರಿಸಿದೆ. ಇದರಿಂದಾಗಿ ಇದರ ಉಪಯುಕ್ತತೆ ಅತ್ಯಂತ ಹೆಚ್ಚಿನದಾಗಿದೆ. ಕಡೆಯಲ್ಲಿ ೪ ಅನುಬಂಧಗಳೂ ದೀರ್ಘವಾದ ಶುದ್ಧಾಶುದ್ಧ ಪತ್ರಿಕೆಯೂ ಇದೆ. ಅನುಬಂಧ-೨ ರಲ್ಲಿ ಪ್ರಾಕೃತ ಶಾಸನ ಪದಪಟ್ಟಿಕೆಯನ್ನು ನೀಡಲಾಗಿದೆ.

ಅನುಬಂಧ-೪ ರಲ್ಲಿ ಇನ್ನೂ ಅರ್ಥನಿರ್ಣಯ ಮಾಡಬೇಕಾದ ಪದಗಳ ಪಟ್ಟಿ ಇದೆ. ಅಕಾರಾದಿ ವರ್ಗೀಕರಣದ ವಿಧಾನ ಅತ್ಯಂತ ತೃಪ್ತಿಕರವಾಗಿದೆ. ಎಪಿಗ್ರಾಫಿಯಾ ಕರ್ನಾಟಿಕಾ, ಎಪಿಗ್ರಾಫಿಯಾ ಇಂಡಿಕಾ ಮುಂತಾದ ಬಹುಸಂಖ್ಯೆಯ ಆಕರಗಳ ಬಳಕೆ ಕಾರಣವಾಗಿ ಈ ನಿಘಂಟು ತನ್ನದೇ ಆದ ವೈಶಿಷ್ಟ್ಯ ಮತ್ತು ಪ್ರಾಮಾಣ್ಯದಿಂದ ಕೂಡಿದೆ.ಈ ಕೋಶದಲ್ಲಿ ನೀಡಿರುವ ಅನೇಕ ಪಾರಿಭಾಷಿಕ ಶಬ್ದಗಳು ಕನ್ನಡ ಶಾಸನಗಳಲ್ಲಿ ಬಳಕೆಯಾಗಿರುವುದೇ ಆಗಿದೆ. ಆದರೆ ಸಂವತ್ಸರಗಳು, ನಕ್ಷತ್ರಗಳು ಮುಂತಾದ ಹೆಸರುಗಳನ್ನು ಪ್ರತ್ಯೇಕ ಅನುಬಂಧವಾಗಿ ನೀಡಿದ್ದರೆ ಹೆಚ್ಚು ಉತ್ತಮವಿರುತ್ತಿತ್ತು. ಅಲ್ಲಲ್ಲಿ ಕೆಲವು ಶಬ್ದಗಳಿಗೆ ನೀಡಿರುವ ಅರ್ಥಗಳನ್ನು ಕನ್ನಡ ಭಾಷೆಯ ಸಹಾಯದಿಂದ ಪರಿಷ್ಕರಿಸಬಹುದೆಂದು ತೋರುತ್ತದೆ. ಈ ಕೋಶವನ್ನು ಬಳಸಿಕೊಂಡು ಕನ್ನಡ ಭಾಷೆಯಲ್ಲಿ ಶಾಸನ ಪದಕೋಶವನ್ನು ರಚಿಸಬೇಕಾದುದು ಅತ್ಯವಶ್ಯಕ ಕಾರ್ಯವಾಗಿದೆ.

ಕನ್ನಡದಲ್ಲಿ ಶಾಸನನಿಘಂಟಿನ ಅಗತ್ಯವನ್ನು ಮೊಟ್ಟಮೊದಲಿಗೆ ಮನಗಂಡು ಅದನ್ನು ಪ್ರತಿಪಾದಿಸಿದವರು ಆರ್. ರಾಮರಾಯರೆಂದು ತೋರುತ್ತದೆ. ಅವರು **'ಶಾಸನಗಳಲ್ಲಿ ಪರಿಭಾಷೆ'** (ಸಂಭಾವನೆ-ಬಿ.ಎಂ. ಶ್ರೀಕಂಠಯ್ಯನವರಿಗೆ ಅರ್ಪಿಸಿದ ಸಂಭಾವನಾ ಗ್ರಂಥ-೧೯೪೧, ಪುಟ ೨೦೧-೨೧೩) ಎಂಬ ತಮ್ಮ ಬರಹದಲ್ಲಿ ಕೆಲವು ಶಬ್ದಗಳನ್ನು ಮಾದರಿಯಾಗಿ ಎತ್ತಿಕೊಟ್ಟು, ಅವನ್ನು ಕುರಿತು ಚರ್ಚಿಸಿ ಕನ್ನಡ ಶಾಸನ ನಿಘಂಟಿನ ಅಗತ್ಯವನ್ನು ಎತ್ತಿ ತೋರಿಸಿದ್ದಾರೆ. ಈ ಕ್ಷೇತ್ರದ ಮೊದಲ ವಿಮರ್ಶಾತ್ಮಕ ಪ್ರಬಂಧವಾಗಿ ಇದಕ್ಕೆ ಚಾರಿತ್ರಿಕ ಮಹತ್ವವಿದೆ.

ಕನ್ನಡದಲ್ಲಿ ಈ ಕೆಲಸದ ಸಾಧ್ಯತೆಯನ್ನು ಮೊಟ್ಟಮೊದಲು ಮನಗಂಡವರು ಎಂ. ಚಿದಾನಂದಮೂರ್ತಿ ಅವರೆಂದು ತೋರುತ್ತದೆ. ಅವರ **'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'** (ಸಪ್ನ ಬುಕ್ ಹೌಸ್, ಬೆಂಗಳೂರು-೨೦೦೮, ೪ನೆಯ ಮುದ್ರಣ) ಎಂಬ ಪಿಎಚ್.ಡಿ. ನಿಬಂಧ ಇಂತಹ ಅಗತ್ಯವನ್ನೂ ಸಾಧ್ಯತೆಯನ್ನೂ ತೆಗೆದು ತೋರಿಸಿತು. ಮೂರ್ತಿ ಅವರು ಈ ನಿಬಂಧದಲ್ಲಿ ಶಾಸನಗಳಲ್ಲಿ ಕಂಡುಬರುವ ಸಾಮಾಜಿಕ, ಆರ್ಥಿಕ, ಯುದ್ಧ ಮುಂತಾದುವುಗಳ ಸಂಬಂಧವಾಗಿ ಕಂಡುಬರುವ ಪಾರಿಭಾಷಿಕ ಶಬ್ದಗಳ ಬಗೆಗೆ ಗಮನ ಸೆಳೆದು ಅವುಗಳ ಅರ್ಥೈಸುವಿಕೆಯಲ್ಲಿನ ತೊಡಕನ್ನು ಕುರಿತು ಚರ್ಚಿಸಿದ್ದಾರೆ. ಇಷ್ಟಾಗಿಯೂ ಹಲವು ಶಬ್ದಗಳ ತೊಡಕು ನಿವಾರಣೆಯಾಗಲು ಸಾಧ್ಯವಾಗದೇ ಇದೆ. ಮೂರ್ತಿಗಳು ಬಾಹ್ಯ ಆಧಾರಗಳು, ಇತರ ಸಾಕ್ಷ್ಯಗಳ ಬೆಂಬಲದಿಂದ ಇವುಗಳನ್ನು ನಿವಾರಿಸಲು ಪ್ರಯತ್ನಿಸಿದ್ದರೂ ಪೂರ್ಣ ಫಲಕಾರಿಯಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಮೂರ್ತಿಗಳು ಕೆಲವು ಶಬ್ದಗಳಿಗೆ ನೀಡಿರುವ ಅರ್ಥಗಳ ಬಗೆಗೆ **ನೋಡೋಣ:**

೧. ಭಿಂಡಿವಾಳ – ಇದಕ್ಕೆ ಮುಮ್ಮಡಿ ಕೃಷ್ಣ ಪ್ರಭುಗಳ ಚಾಮುಂಡಾ ಲಘು ನಿಘಂಟಿನಲ್ಲಿ ಭಿಂಡಿವಾಳವೆಂದೇ ಅರ್ಥ ಸೂಚಿಸಿದೆ. ಚಿದಾನಂದಮೂರ್ತಿ ಅವರು ಕೌಟಿಲ್ಯನ ಅರ್ಥಶಾಸ್ತ್ರದ ಸಹಾಯದಿಂದ ದಪ್ಪ ತುದಿಯಿರುವ ಕಬ್ಬಿಣದ ದಂಡ ಎಂದು ಅರ್ಥೈಸಿದ್ದಾರೆ.

೨. ತೋಮರ – ಇದಕ್ಕೂ ಚಾಮುಂಡಾ ಲಘು ನಿಘಂಟಿನಲ್ಲಿ ತೋ[illegible] [illegible]ದು ಅರ್ಥವನ್ನು ಸೂಚಿಸಿದೆ. ಮೂರ್ತಿ ಅವರು ೪, ೪.೫ ಅಥವಾ ೫ ಹಸ್ತಗಳಷ್ಟು ಉದ್ದವಿರುವ ಬಾಣದಂತಹ ತುದಿಯುಳ್ಳ ದಂಡ ಎಂದು ಸೂಚಿಸಿದ್ದಾರೆ ಕೌಟಿಲ್ಯನ ಅರ್ಥಶಾಸ್ತ್ರದ ಸಹಾಯದಿಂದ.

ಈ ರೀತಿಯಾಗಿ ಬಾಹ್ಯ ಆಧಾರಗಳು ಮತ್ತು ಇತರ ಅನೇಕ ಆಕರಗಳ ನೆರವಿನಿಂದ ಸೂಚಿಸಿರುವ ಅರ್ಥಗಳು ಬಹುಮಟ್ಟಿಗೆ ಗ್ರಾಹ್ಯವಾಗುವಂತಿವೆ. ಆದರೂ ಅನೇಕ ಶಬ್ದಗಳ ಪುನರ್ವಿಮರ್ಶೆ ಅಗತ್ಯವಾಗಿದೆ. ಉದಾಹರಣೆಗೆ: ಪೊತ್ಥ ಶಬ್ದವು ಪುಸ್ತಕದ ತದ್ಭವವೆಂದು ಸೂಚಿಸಿ ರಾಜ್ಯದ ದಾಖಲೆಗಳನ್ನು ಇಡುತ್ತಿದ್ದ ಅಧಿಕಾರಿಯಿರಬಹುದೆಂದು ಅರ್ಥ ಸೂಚಿಸಲಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಹಣದ ಚೀಲ, ಭಾಂಡಾರ ಎಂದು ಅರ್ಥ ನೀಡಲಾಗಿದೆ. ಇತರ ಶಾಸನ ಪ್ರಯೋಗಗಳನ್ನು ಗಮನಿಸಿದರೆ ಹಣದ ಚೀಲ, ಭಾಂಡಾರ ಎಂಬ ಅರ್ಥಗಳೇ ಸರಿಯಾದುವೆಂದು ಕಾಣುತ್ತದೆ. ಈ ಕೃತಿಯ ಅನುಬಂಧದಲ್ಲಿ ಪಾರಿಭಾಷಿಕ ಪದಗಳ ಪಟ್ಟಿಕೆಯೊಂದನ್ನು ನೀಡಿದ್ದರೆ ಉತ್ತಮವಾಗಿರುತ್ತಿತ್ತು. ಪಾರಿಭಾಷಿಕ ಶಬ್ದಗಳ ಪರಿಪೂರ್ಣ ಅಧ್ಯಯನಕ್ಕೆ ಭದ್ರ ಬುನಾದಿ ಹಾಕಿದ ಶ್ರೇಷ್ಠ ಕೃತಿ ಇದಾಗಿದ್ದು, ಈ ಕೃತಿಯಲ್ಲಿ ಪಾರಿಭಾಷಿಕ ಶಬ್ದಗಳ ಚರ್ಚೆ ನಡೆದಿರುವಂತೆಯೇ ಇನ್ನೂ ಹೆಚ್ಚಿನ ಚರ್ಚೆ ನಮ್ಮಲ್ಲಿ ನಡೆಯಬೇಕಾಗಿದೆ.

ಮೇಲಿನ ಕೃತಿಯ ನಂತರ ಶ್ರೀನಿವಾಸ ರಿತ್ತಿಯವರ ಸಂಪಾದಕತ್ವದಲ್ಲಿ ಕನ್ನಡ–ಇಂಗ್ಲಿಷ್ ದ್ವಿಭಾಷಾ ಕೋಶ ಪ್ರಕಟವಾಗಿದೆ. ಕನ್ನಡದಲ್ಲಿ ಇದರ ಹೆಸರನ್ನು **'ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ'** ಎಂದು ನೀಡಲಾಗಿದೆ. ಇಂಗ್ಲಿಷ್‌ನಲ್ಲಿ *'DESCRIPTIVE GLOSSARY OF ADMINISTRATIVE TERMS IN ANCIENT KARNATAKA'* ಎಂದು ನೀಡಲಾಗಿದೆ. ಕನ್ನಡ ಶೀರ್ಷಿಕೆಗೂ ಇಂಗ್ಲಿಷ್ ಶೀರ್ಷಿಕೆಗೂ ಸ್ವಲ್ಪವೂ ಹೊಂದಾಣಿಕೆಯೇ ಇಲ್ಲವಾಗಿದೆ. ಈ ಕೋಶವನ್ನು ಕ್ರಿ.ಶ. ೨೦೦೦ದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಪ್ರಕಟಿಸಿದೆ. ಆರಂಭದಲ್ಲಿ ಕನ್ನಡ ಇಂಗ್ಲಿಷ್ ಎರಡರಲ್ಲೂ ಪ್ರಸ್ತಾವನೆಯಿದ್ದು ಯಾವುದೇ ವಿಷಯಭರಿತವಾಗಿರದೆ ಸೊರಗಿದೆ. ನಂತರ ಪರಿವಿಡಿ, ಸಂಕ್ಷೇಪಗಳು ಮತ್ತು ಸಂಕೇತಗಳು ಎಂಬ ವಿಭಾಗಗಳಿವೆ. ಸಂಕ್ಷೇಪಗಳು ಮತ್ತು ಸಂಕೇತಗಳು ವಿಭಾಗದಲ್ಲಿ ಈ ಕೋಶಕ್ಕೆ ಬಳಸಿಕೊಂಡ ಆಕರಗಳು ಮತ್ತು ಅವುಗಳನ್ನು ಕೋಶದಲ್ಲಿ ಯಾವ ಸಂಕೇತಾಕ್ಷರಗಳಿಂದ ಸೂಚಿಸಿದೆ ಎಂಬ ವಿವರಗಳಿವೆ. ಈ ವಿಭಾಗಕ್ಕೆ ಸಂಕ್ಷೇಪಗಳು ಮತ್ತು ಸಂಕೇತಗಳು ಎಂಬ ಶೀರ್ಷಿಕೆ ಸ್ವಲ್ಪವೂ ಹೊಂದುವುದಿಲ್ಲ. ಈ ವಿಭಾಗದಲ್ಲಿಯೇ ನೀಡಿರುವ ಆಕರಗಳ ವಿವರಗಳು ನಿರ್ದಿಷ್ಟವಾಗಿಲ್ಲ. ಅನೇಕ ತಪ್ಪುಗಳಿಂದ ಕೂಡಿದೆ. ಈ ವಿಭಾಗವನ್ನು ಕನ್ನಡ ಮತ್ತು ಇಂಗ್ಲಿಷ್ ಎರಡರಲ್ಲೂ ನೀಡಿದೆ. ಆದರೆ ಎರಡಕ್ಕೂ ಹೊಂದಾಣಿಕೆಯೇ ಇಲ್ಲವಾಗಿದೆ. ಈ ಕೋಶದಲ್ಲಿ ಒಟ್ಟು ೧೫ ವಿಭಾಗಗಳಿವೆ. ೧೫ ವಿಭಾಗಗಳು ಅನೇಕ ಉಪವಿಭಾಗಗಳಿಂದ ಕೂಡಿದೆ. ಇದರ ಸಂಯೋಜನೆಯಲ್ಲಿ ಅಚ್ಚುಕಟ್ಟು ಸಾಲದೆಂದೇ ಹೇಳಬೇಕಾಗಿದೆ. ಈ ಕೋಶದಲ್ಲಿ ಕಾವ್ಯ, ಶಾಸ್ತ್ರ ಮತ್ತು ಶಾಸನಗಳಿಂದ ಪದಪ್ರಯೋಗಗಳನ್ನು ತೆಗೆದು ಸಂಕಲಿಸಲಾಗಿದೆ. ಆದರೆ ಚಾಣಕ್ಯ, ಸುಶ್ರುತ, ಮುಂತಾದ ವ್ಯಕ್ತಿಗಳ ಹೆಸರುಗಳನ್ನೆಲ್ಲಾ ಪಾರಿಭಾಷಿಕ ಶಬ್ದಗಳೆಂಬಂತೆ ತೋರಿಸಿರುವುದು ಸಮರ್ಥನೀಯವಲ್ಲ. ಪಾರಿಭಾಷಿಕವಲ್ಲದ ಅನೇಕ ಶಬ್ದಗಳೇ ಬಹುಸಂಖ್ಯೆಯಲ್ಲಿ ಸೇರ್ಪಡೆಗೊಂಡಿವೆ. ಎಂ. ಚಿದಾನಂದಮೂರ್ತಿ ಅವರ **'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'** ಕೃತಿಯಿಂದ ಬಹಳಷ್ಟು ಪ್ರಯೋಜನ ಪಡೆದುಕೊಂಡಿದ್ದರೂ ಅದನ್ನು ಸರಿಯಾಗಿ ದಾಖಲಿಸಿಲ್ಲ. ಇದರ ಜೊತೆಗೆ ಆಯ್ದ ಕೆಲವು ಶಬ್ದಗಳಿಗೆ ಮಾತ್ರ ಪ್ರಯೋಗಗಳನ್ನು ಕೊಟ್ಟು ಮಿಕ್ಕವುಗಳಿಗೆ ಪ್ರಯೋಗಗಳನ್ನು ನೀಡದಿರುವ ಕಾರಣವೇನೋ ತಿಳಿಯದಾಗಿದೆ. ಪ್ರಯೋಗಗಳ ಆಕರಗಳನ್ನು ಸೂಚಿಸಿರುವ ರೀತಿ ಅನೇಕ ಕಡೆ ಗೊಂದಲಕಾರಿಯಾಗಿದೆ. ಇದರಿಂದಾಗಿ ಇಲ್ಲಿ ಕೊಟ್ಟಿರುವ ಅರ್ಥಗಳನ್ನು ಪರೀಕ್ಷಿಸದೆ ಸ್ವೀಕರಿಸುವುದು ಕಷ್ಟಸಾಧ್ಯವಾಗುತ್ತದೆ. ಶಬ್ದಾರ್ಥಗಳ ಬಗೆಗೆ ನಡೆದಿರುವ ವಿಮರ್ಶೆಗಳನ್ನು ಸರಿಯಾಗಿ ಬಳಸಿಕೊಂಡಿಲ್ಲ. ಅನೇಕ ಶಬ್ದಗಳನ್ನು ಶುದ್ಧರೂಪದಲ್ಲಿ ಸರಿಯಾಗಿ ದಾಖಲಿಸಿಲ್ಲ. ಪಲವು ಶಬ್ದಗಳಿಗೆ ಕೊಟ್ಟಿರುವ ಅರ್ಥಗಳು ಸಮರ್ಥನೀಯವಲ್ಲ. ಕೆಲವು ಉದಾಹರಣೆಗಳೊಂದಿಗೆ ಇವುಗಳನ್ನು ಸ್ಪಷ್ಟಪಡಿಸಬಹುದಾಗಿದೆ:

೧. ಪುಟ–೩, **ದ್ರೋಣಮುಖ**. ಈ ಪದಕ್ಕೆ ನೀಡಿರುವ ಪ್ರಯೋಗದಲ್ಲಿ ದ್ರೋಣಮುಖ ಎಂದೇ ಇದೆಯಾದರೂ ಇದು ದ್ರೋಣಾಮುಖ ಎಂಬ ರೂಪದ ಅಪಲಿಖಿತವಾಗಿದೆ. ಆದ್ದರಿಂದ ಇಲ್ಲಿ ಸರಿಯಾದ ಶುದ್ಧ ರೂಪವನ್ನೇ ದಾಖಲಿಸಬೇಕಿತ್ತು.

೨. ಪುಟ–೧೯, **ಬಾಹತ್ತರ ನಿಯೋಗ**. ಇದಕ್ಕೆ ಆಕರವಾಗಿ ಕುಮಾರವ್ಯಾಸ ಭಾರತವನ್ನು ಸೂಚಿಸಿದೆ. ಪ್ರಯೋಗ ದಾಖಲಿಸಿಲ್ಲ. ಕುಮಾರವ್ಯಾಸ ಭಾರತದಲ್ಲಿ ಬಾಹತ್ತರ ನಿಯೋಗ ಎಂದಿದೆಯೇ ಹೊರತು ೭೨ ಬಾಹತ್ತರ ನಿಯೋಗಗಳ

ವಿವರಗಳಿಲ್ಲ. ಈ ೭೨ ನಿಯೋಗಗಳ ವಿವರಗಳನ್ನು ಕುಂದೂರಿ ಈಶ್ವರದತ್ತರ **'ಶಾಸನ ಶಬ್ದಕೋಶಮು'**ವಿನಿಂದ ತೆಗೆದುಕೊಂಡು ಯಾವುದೇ ವ್ಯತ್ಯಾಸವಿಲ್ಲದೆ, ಆಕರ ಸ್ಮರಣೆಯಿಲ್ಲದೆ ದಾಖಲಿಸಲಾಗಿದೆ.

೩. ಪುಟ–೬೯, **ಪೆಜೆಕುಳ** ಶಬ್ದಕ್ಕೆ ಹಿರಿಯ ಒಕ್ಕಲಿಗರ ಮನೆತನ ಎಂದು ಅರ್ಥ ನೀಡಲಾಗಿದೆ. ಪ್ರಯೋಗ ನೀಡಿಲ್ಲ. ಆಕರ ಸೂಚಿಸಿದೆ. ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್–೧ ರಲ್ಲಿ ೨ನೆಯ ಶಾಸನವಾಗಿ ಪ್ರಕಟವಾಗಿರುವ ಶಾಸನ ಪಾಠ ಈ ರೀತಿಯಾಗಿದೆ :– **"ದತ್ತಾನಿ ಸುಜ್ಕಾ [ನಿ] ವ್ರಿಜ್ತೆ x ಪೆಜೆ[ಕು]ಳ[ಕ್ಕೆ] ಮೊದಲಾಗೆ"**. ಇದರ ಅರ್ಥ ಸುಂಕ ಎಂದು. ಕಿಱುಕುಳ ಕಿರಿಯ ಸುಂಕವಾದರೆ ಪೆಜೆಕುಳ ಹಿರಿಯ ಸುಂಕವಾಗಿದೆ.

೪. ಪುಟ–೧೧೯, **ಪುಸ್ತಕ ಭಂಡಾರ** – ಇದರ ಬಗ್ಗೆ ವಿವರಣೆ ನೀಡುವಾಗ ನಾಗಾಯಿಯ ಶಾಸನದಲ್ಲಿ ಸರಸ್ವತೀ ಭಂಡಾರದ ನಿರ್ವಹಣೆಗೆ ಆರು ಮಂದಿ ಇದ್ದರೆಂದು ಹೇಳಲಾಗಿದೆ. ಆಕರ ಸೂಚಿಸಿಲ್ಲ. ಪ್ರಯೋಗ ದಾಖಲಿಸಿಲ್ಲ. ಇದು ಶಾಸನಪಾಠವನ್ನು ತಪ್ಪಾಗಿ ಓದಿರುವ ಕಾರಣ ಆಗಿರುವ ಪ್ರಮಾದ. **"ಸರಸ್ವತೀಭಣ್ಡಾರಿಗರೊರ್ವ್ವಗ್ಗಂ"** ಎಂದು ಇರಬೇಕಾದ ಪಾಠವನ್ನು **"ಸರಸ್ವತೀಭಣ್ಡಾರಿಗರಾರ್ವ್ವಗ್ಗಂ"** ಎಂದು ಓದಲಾಗಿದೆ. ಆರು ಜನರಿದ್ದಿದ್ದರೆ **"ಸರಸ್ವತೀಭಣ್ಡಾರಿಗರರ್ವ್ವರ್ಗ್ಗಂ"**ಎಂದು ಪಾಠವಿರಬೇಕಿತ್ತು. ಇಲ್ಲಿ ಇದ್ದವನು ಒಬ್ಬನೇ ಸರಸ್ವತೀ ಭಂಡಾರಿ, ಆರು ಜನರಲ್ಲ (ಹೆಚ್ಚಿನ ವಿವರಗಳಿಗೆ ನೋಡಿ:–**ಶಾಸನ ಸಾಹಿತ್ಯ ಸಂಚಯ** (ಸಂ) ಎಂ.ಎಂ. ಅಣ್ಣಿಗೇರಿ, ಮೇವುಂಡಿ ಮಲ್ಲಾರಿ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ–೧೯೬೧. ಪುಟ–೪೩ ಮತ್ತು ರಾ. ನರಸಿಂಹಾಚಾರ್ಯರ **ಶಾಸನಪದ್ಯ ಮಂಜರಿ**, ಪ್ರಸ್ತಾವನೆ– ಎಂ. ಚಿದಾನಂದಮೂರ್ತಿ, ಬೆಂಗಳೂರು ವಿ.ವಿ.–೧೯೭೫, ಪುಟ–xvii).

೫. ಪುಟ–೧೨೨, **ಕೌಮಾರ**–ಇದಕ್ಕೆ ಕಾತಂತ್ರವೆಂಬ ಪದ್ಧತಿಯ ಒಂದು ವ್ಯಾಕರಣ ಗ್ರಂಥ ಎಂದು ಅರ್ಥ ಸೂಚಿಸಲಾಗಿದೆ. ಆದರೆ ಕೌಮಾರ ವ್ಯಾಕರಣವೆಂದರೆ ಕಾತಂತ್ರ ಪದ್ಧತಿಯ ವ್ಯಾಕರಣವಾಗಿರದೆ ಕಾತಂತ್ರ ವ್ಯಾಕರಣವೇ ಆಗಿದೆ. ಇದರ ಕರ್ತೃ ಶರ್ವವರ್ಮ. ಈ ವ್ಯಾಕರಣಕ್ಕೆ ಕೌಮಾರ ವ್ಯಾಕರಣ, ಕುಮಾರ ವ್ಯಾಕರಣ, ಕಲಾಪ ವ್ಯಾಕರಣ ಎಂಬ ಹೆಸರುಗಳೂ ಇವೆ. (ಹೆಚ್ಚಿನ ಮಾಹಿತಿಗೆ ನೋಡಿ:–**ಪ್ರಾಚೀನ ಕನ್ನಡ ವ್ಯಾಕರಣಗಳು**–ಎಂ.ವಿ. ಸೀತಾರಾಮಯ್ಯ, ಮೈಸೂರು ವಿಶ್ವವಿದ್ಯಾನಿಲಯ – ೧೯೭೯, ಪುಟ–೩೨–೩೭).

೬. ಪುಟ–೧೨೨, **ಗ್ರಂಥಲಿಪಿ**–ಇದಕ್ಕೆ ತಮಿಳುನಾಡಿನಲ್ಲಿ ೭–೧೦ನೆಯ ಶತಮಾನಗಳಲ್ಲಿ ಪ್ರಚಲಿತವಿದ್ದ ಲಿಪಿ ಎಂದು ಅರ್ಥ ನೀಡಿ, ಭೀಮಕವಿಯ ಬಸವಪುರಾಣದ ಆಕರ ಸೂಚಿಸಿದ್ದಾರೆ. ಪ್ರಯೋಗ ದಾಖಲಿಸಿಲ್ಲ. ಆದರೆ ಇದರ ವಿವರಣೆ ಈ ರೀತಿ ಇರಬೇಕಿತ್ತು:–ಕ್ರಿ. ಶ. ೭ನೆಯ ಶತಮಾನದಿಂದ ಸಂಸ್ಕೃತ ಶಾಸನಗಳಿಗೆ ಪಲ್ಲವರ ಆಳ್ವಿಕೆಯ ಪ್ರದೇಶದಲ್ಲಿ ಬಳಸಿದ ಲಿಪಿ. ಈ ಕೋಶದಲ್ಲಿ ತಿಗುಳಲಿಪಿ (ತಮಿಳು), ತೆಲುಗು, ನಾಗರಿ ಯಾವ ಲಿಪಿಗಳ ಬಗೆಗೂ ಸರಿಯಾದ ಮಾಹಿತಿ ಇಲ್ಲ. ಸುಮ್ಮನೆ ತೆಲುಗು ಲಿಪಿ ಮುಂತಾಗಿ ದಾಖಲಿಸಿ ಭೀಮಕವಿಯ ಬಸವಪುರಾಣವನ್ನು ಸಾಮಾನ್ಯ ಆಕರವನ್ನಾಗಿ ಸೂಚಿಸಿದೆ. ಸರಿಯಾಗಿ ಪ್ರಯೋಗಗಳನ್ನು ದಾಖಲಿಸಿಲ್ಲ. ಆದ್ದರಿಂದ ಲಿಪಿಗಳ ಬಗೆಗೆ ಹೆಚ್ಚಿನ ಮಾಹಿತಿಗೆ ಎ.ವಿ. ನರಸಿಂಹಮೂರ್ತಿಗಳ **'ಕನ್ನಡ ಲಿಪಿಯ ಉಗಮ ಮತ್ತು ವಿಕಾಸ'** (ವಿವೇಕಹಂಸ ಪ್ರಕಾಶನ, ಬೆಂಗಳೂರು–೧೯೯೯, ೩ನೆಯ ಮುದ್ರಣ) ಹಾಗೂ ದೇವರಕೊಂಡಾರೆಡ್ಡಿಯವರ **'ಲಿಪಿಯ ಹುಟ್ಟು ಮತ್ತು ಬೆಳವಣಿಗೆ'** (ಕನ್ನಡ ಪುಸ್ತಕ ಪ್ರಾಧಿಕಾರ– ೨೦೦೨, ೨೦೦೬) ಗ್ರಂಥಗಳನ್ನು ನೋಡಿಕೊಳ್ಳಬಹುದು.

೭. ಪುಟ–೧೨೩, **ದತ್ತಕ ಸೂತ್ರ** – ಇದಕ್ಕೆ ಒಂದು ಗ್ರಂಥದ ಹೆಸರೆಂದು ಹೇಳಿದ್ದಾರೆ. ಪ್ರಯೋಗ ನೀಡಿಲ್ಲ. ಆಕರ ಎಂ.ವಿ. ಕೃಷ್ಣರಾಯರ ಗಂಗಾಸ್ ಆಫ್ ತಲಕಾಡು ಎಂದು ಸೂಚಿಸಲಾಗಿದೆ. ಈ ಗ್ರಂಥದ ಹೆಸರು ತಲಕಾಡು ಗಂಗರ ತಾಮ್ರಶಾಸನಗಳಲ್ಲಿ ಬಹಳವಾಗಿ ಕಂಡು ಬರುತ್ತದೆ. ಇದರ ಪ್ರಯೋಗ ಮತ್ತು ವಿವರಣೆ ಈ ರೀತಿ ಇರಬೇಕಿತ್ತು:– **"ವಿದ್ವತ್ಕವಿಕಾಞ್ಚನನಿಕಾಪೋಪಲಭೂತೋ ನೀತಿಶಾಸ್ತ್ರಸ್ಯ ವಕ್ತೃಪ್ರಯೋಕ್ತೃಕುಶಲೋ ದತ್ತಕಸೂತ್ರವೃತ್ತೇಪ್ರಣೇತಾ ಶ್ರೀಮಾನ್ಮಾಧವ ಮಹಾದಿರಾಜಃ"** (ಎಪಿಗ್ರಾಫಿಯಾ ಕರ್ನಾಟಿಕ–೧೬, ತುಮಕೂರು ಜಿಲ್ಲೆ ಅನುಬಂಧ, ಪ್ರಕಟನೆ: ಕೆ.ಎ. ನೀಲಕಂಠ ಶಾಸ್ತ್ರಿ, ಮೈಸೂರು ಪುರಾತತ್ತ್ವ ಇಲಾಖೆ–೧೯೫೮, ಶಾಸನ ಸಂಖ್ಯೆ–೭೫, ಗುಬ್ಬಿ ತಾಲ್ಲೂಕು, ಪುಟ ೩೯, ಕ್ರಿ.ಶ. ೭೩೩)

"ಪಾಟಲೀಪುತ್ರದ ಗಣಿಕೆಯರಿಗಾಗಿ ದತ್ತಕನೆಂಬಾತ ಸಂಸ್ಕೃತದಲ್ಲಿ ರಚಿಸಿರುವ ಒಂದು ಸ್ವತಂತ್ರ ಕಾಮಶಾಸ್ತ್ರ ಗ್ರಂಥ. ಇದಕ್ಕೆ ತಲಕಾಡು ಗಂಗರ ದೊರೆ ೧ನೆಯ ಮಾಧವನು ಸಂಸ್ಕೃತದಲ್ಲಿ ವೃತ್ತಿ ರಚಿಸಿದ್ದಾನೆ" (ಹೆಚ್ಚಿನ ಮಾಹಿತಿಗೆ ನೋಡಿ

: **ಮೈಸೂರು ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿ**–೧೯೨೦, ಪುಟ ೪೭; **ದತ್ತಕಸೂತ್ರ**–ಆರ್. ನರಸಿಂಹಾಚಾರ್ಯ, *Journal of The Royal Asiatic Society - Vol* - ೪೩, ೧೯೧೧, ಪುಟ ೧೮೩–೧೮೬).

೮. ಪುಟ–೧೨೩, **ಪ್ರಭಾಕರ ; ಪ್ರಾಭಾಕರ** – ಇದಕ್ಕೆ ವ್ಯಾಕರಣ ಎಂದು ಅರ್ಥವನ್ನು ನೀಡಿದ್ದಾರೆ. ಪ್ರಯೋಗ ದಾಖಲಿಸಿಲ್ಲ. ಆಕರ ಮಾತ್ರ ಸೂಚಿಸಿದ್ದಾರೆ. ಸೌತ್ ಇಂಡಿಯನ್ ಇನ್ಸ್‌ಕ್ರಿಪ್‌ಷನ್ಸ್, ಸಂಪುಟ–೨೦, ಶಾಸನ ಸಂಖ್ಯೆ–೩೦೦ ಎಂದು. ಪುಟ–೧೪೯ರಲ್ಲಿ ಪ್ರಭಾಕರದೆರೆ ಶಬ್ದವನ್ನು ದಾಖಲಿಸಿ ಪ್ರಭಾಕರ ಭಾಷ್ಯವನ್ನು ಕಲಿಸುವವರಿಗೆ ಕೊಟ್ಟ ಭೂಮಿ ಎಂದು ಅರ್ಥ ನೀಡಿದ್ದಾರೆ. ಪ್ರಯೋಗ ದಾಖಲಿಸಿಲ್ಲ. ಆಕರ ಮಾತ್ರ ಮೇಲೆ ನೀಡಿದುದೇ ಆಗಿದೆ. ಒಂದೇ ಆಕರದಲ್ಲಿನ ಶಬ್ದವನ್ನು ಬೇರೆ ಬೇರೆ ದಾಖಲಿಸಿ ತಪ್ಪು ಅರ್ಥಗಳನ್ನು ಮಾಡಿದ್ದಾರೆ. ಮೇಲೆ ಇರುವ ಆಕರದಲ್ಲಿ ಶಾಸನಪಾಠ ಈ ರೀತಿಯಾಗಿದೆ:– **"ಭಟ್ಟವೃತ್ತಿ ನ್ಯಾಸದೆರೆ ಮತ್ತರು ೧೫ ಹರಳ್ಮತ್ತರು ೧೦ ಪ್ರಭಾಕರದೆರೆ ಮತ್ತ ೨೦ ಪರಳ್ಮತ್ತ ೧೦"** ಈ ಶಾಸನದಲ್ಲಿ ಇರುವ ಶಬ್ದ ಪ್ರಭಾಕರವೂ ಅಲ್ಲ, ಪ್ರಾಭಾಕರವೂ ಅಲ್ಲ. ಪ್ರಭಾಕರದೆರೆ ಎಂದು. ಇದರ ಅರ್ಥ ವ್ಯಾಕರಣವಲ್ಲ. ಮೀಮಾಂಸಾ ಶಾಸ್ತ್ರದ ಕರ್ತೃ ಪ್ರಭಾಕರಭಟ್ಟನ ಮೀಮಾಂಸಾ ದರ್ಶನದ ಪಾಠ ಮಾಡುವವರಿಗೆ ಕೊಟ್ಟ ಭೂಮಿ ಎಂದು. ಆದ್ದರಿಂದ ಪುಟ–೧೪೯ರಲ್ಲಿ ದಾಖಲಾಗಿರುವ ಶಬ್ದರೂಪವೇ ಸರಿಯಾದುದಾಗಿದೆ. ಪುಟ–೧೨೩ರ ದಾಖಲಾತಿಗಳು ಸಮರ್ಥನೀಯವಲ್ಲ.

೯. ಪುಟ–೧೨೩, **ನ್ಯಾಸ**–ಇದಕ್ಕೆ ವ್ಯಾಖ್ಯಾನ ಎಂದು ಅರ್ಥೈಸಲಾಗಿದೆ. ಪ್ರಯೋಗ ನೀಡಿಲ್ಲ. ಆಕರ ಮಾತ್ರ ಸೂಚಿಸಿದ್ದಾರೆ ಸೌತ್ ಇಂಡಿಯನ್ ಇನ್ಸ್‌ಕ್ರಿಪ್‌ಷನ್ಸ್–೨೦, ಶಾಸನ ಸಂಖ್ಯೆ–೩೦೦ ಎಂದು. ಆದರೆ ಪುಟ–೧೪೯ ರಲ್ಲಿ ನ್ಯಾಸದೆರೆ ಶಬ್ದವನ್ನು ಕೊಟ್ಟು ನ್ಯಾಸವನ್ನು ಕಲಿಸುವುದಕ್ಕಾಗಿ ದಾನವಾಗಿ ಕೊಟ್ಟ ಭೂಮಿ ಎಂಬುದಾಗಿ ಅರ್ಥ ನೀಡಿದೆ. ಪ್ರಯೋಗವನ್ನು ದಾಖಲಿಸಿದೆ. ಆಕರ ಮೇಲೆ ಸೂಚಿತವಾದುದೆ ಆಗಿದೆ. ಆದ್ದರಿಂದ ಪುಟ–೧೪೯ ರ ದಾಖಲಾತಿಯೇ ಸರಿಯಾದುದಾಗಿದೆ. ಈ ಶಾಸನದಲ್ಲಿ ಇರುವ ಶಬ್ದ ಬರಿಯ ನ್ಯಾಸವಲ್ಲ. ನ್ಯಾಸದೆರೆ. ಪುಟ–೫೪ ರಲ್ಲಿ ಇದೇ ಶಾಸನದ ನ್ಯಾಸದೆರೆ ಶಬ್ದವನ್ನು ದಾಖಲಿಸಿ ನ್ಯಾಸವನ್ನು ಕಲಿಸುವುದಕ್ಕಾಗಿ ಸಂಗ್ರಹಿಸುವ ಹಣ ಎಂದು ಅರ್ಥೈಸಲಾಗಿದೆ. ಈ ಅರ್ಥವೂ ಸರಿಯಲ್ಲ. ಒಂದೇ ಆಕರದಲ್ಲಿನ ಶಬ್ದವನ್ನು ಬೇರೆಬೇರೆಯೆಂಬಂತೆ ದಾಖಲಿಸಿ ಈ ರೀತಿಯಾಗಿ ಅರ್ಥೈಸಿರುವುದು ಸರ್ವಥಾ ಸಮರ್ಥನೀಯವಲ್ಲ.

೧೦. ಪುಟ ೧೨೪, **ಭರತ** – ಇದಕ್ಕೆ ಭರತನಾಟ್ಯಶಾಸ್ತ್ರ ಎಂಬ ಅರ್ಥವನ್ನು ನೀಡಲಾಗಿದೆ. ಪ್ರಯೋಗ ದಾಖಲಿಸಿಲ್ಲ. ಸಂದರ್ಭ ತಿಳಿಯದು. ಭರತ ಎಂದರೆ ಭರತ ಕೃತ ನಾಟ್ಯಶಾಸ್ತ್ರವೆಂದೇ ಅರ್ಥವಲ್ಲ. ನರ್ತಕ ಎಂದೂ ಅರ್ಥವಿದೆ. ಭರತ ಶಬ್ದಕ್ಕೆ ನಾಟ್ಯಶಾಸ್ತ್ರ ಎಂದೇ ಅರ್ಥ ಮಾಡಲು ಸಾಧ್ಯವಿಲ್ಲ. ನಾಟ್ಯಕ್ಕೆ ಸಂಬಂಧಪಟ್ಟ ಇತರ ಗ್ರಂಥಗಳು ಎಂಬ ಅರ್ಥವನ್ನು ಕೂಡ ಮಾಡಬಹುದು (ಈ ಶಬ್ದದ ವಿಸ್ತಾರ ವಿಶ್ಲೇಷಣೆಗೆ ನೋಡಿ: **ಭಾರತೀಯ ಸಂಗೀತದಲ್ಲಿ ಪರಿಭಾಷಾ ಪ್ರಯೋಗ** – ಡಾ॥ ರಾ. ಸತ್ಯನಾರಾಯಣ, ಮೈಸೂರು ವಿ.ವಿ.–೧೯೮೬, ಪುಟ ೫೫–೬೬).

೧೧. ಪುಟ–೬೨, ೧೮೫, **ತ್ರಿಭೋಗ, ತ್ರಿಭೋಗಾಭ್ಯಂತರ ಸಿದ್ಧಿ**. ಇವೆರಡಕ್ಕೂ ಆಕರ ಸೂಚಿಸಿ ಪ್ರಯೋಗವನ್ನು ದಾಖಲಿಸಿಲ್ಲ. ಎರಡು ಕಡೆಗಳಲ್ಲಿಯೂ ಅರ್ಥಗಳನ್ನು ನೀಡಿರುವ ರೀತಿ ಸಮರ್ಥನೀಯವಲ್ಲ. ಇದಕ್ಕೆ ಎರಡು ವಿಧಗಳಲ್ಲಿ ಅರ್ಥೈಸಬಹುದಾಗಿ ತೋರುತ್ತದೆ. (ಅ) ಮೂರು ತಲೆಮಾರುಗಳು ಅನುಭವಿಸುವ ದಾನ (ನೋಡಿ:–**ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪುಟ–೪೧ ರ ಅಡಿಟಿಪ್ಪಣಿ) (ಆ) ದೇವರ ಅಂಗಭೋಗಕ್ಕೆ, ಅರ್ಚಕರು ವಾದ್ಯಗಾರರಿಗೆ, ತಪೋಧನರಿಗೆ ಮತ್ತು ಮಠದಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳ ಆಹಾರಕ್ಕೆ ನೀಡುವುದೇ ತ್ರಿಭೋಗ (ನೋಡಿ: ಕೆಂಬಾವಿ ಶಾಸನ–೩೧, **ಸುರಪುರ ತಾಲೂಕಿನ ಶಾಸನಗಳು**–(ಸಂ) ಹನುಮಾಕ್ಷಿ ಗೋಗಿ, ಮಹಿಳಾ ಸಾಹಿತ್ಯಿಕಾ, ನವನಗರ, ಹುಬ್ಬಳ್ಳಿ–೧೯೯೫. ಪುಟ.೭೦, ಈ ಶಾಸನದ ಕಡೆ ನನ್ನ ಗಮನ ಸೆಳೆದವರು ಡಾ॥ ಸೀತಾರಾಮ ಜಾಗೀರದಾರರು) ಈ ಶಬ್ದಗಳು ಪ್ರಾದೇಶಿಕವಾಗಿ ಅರ್ಥಭಿನ್ನತೆಯನ್ನು ಹೊಂದಿರುವ ಸಾಧ್ಯತೆಯೂ ಇದೆ.

೧೨. ಪುಟ–೧೮೦, ಇಲ್ಲಿ ನೀಡಿರುವ ತೋಮರ, ಭಿಂಡಿವಾಳ ಮುಂತಾದ ಆಯುಧಗಳ ಹೆಸರುಗಳಿಗೆ ಒಂದು ವಿಧದ ಆಯುಧ ಎಂದು ಸಾಮಾನ್ಯ ಅರ್ಥವನ್ನು ನೀಡಲಾಗಿದೆ. ಬದಲಿಗೆ ಚಿದಾನಂದಮೂರ್ತಿ ಅವರು ತಮ್ಮ ನಿಬಂಧದಲ್ಲಿ ನೀಡಿರುವ ಅರ್ಥಗಳನ್ನು ಧಾರಾಳವಾಗಿ ನೀಡಬಹುದಿತ್ತು. ಎಲ್ಲಾ ಆಯುಧಗಳಿಗೂ ಸಾಮಾನ್ಯವಾಗಿ ಪಂಪಭಾರತವನ್ನೇ

ಆಕರವಾಗಿ ನೀಡಲಾಗಿದೆ. ಶಾಸನ ಪ್ರಯೋಗಗಳು ಒಂದಾದರೂ ಇಲ್ಲವೇ ನೀಡುವುದಕ್ಕೆ?

೧೩. ಪುಟ – ೧೫೭ರಲ್ಲಿ **ಪಾಳವಿಗ** ಶಬ್ದಕ್ಕೆ ಪಾಳಿಯಿಂದ (ಸರತಿಯ ಮೇಲೆ) ದೇವರ ಸೇವೆ ಮಾಡುವವರು ಎಂದು ಅರ್ಥ ಕೊಟ್ಟು **"ತ್ರಿಕಾಳಭೋಗಂ ಮಾಡುವ ಪಾಳವಿಗಳಿರ್ಪ್ಪರು"** ಎಂದು ಪ್ರಯೋಗ ದಾಖಲಿಸಿದೆ. ಆಕರವನ್ನು ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್, ಸಂಪುಟ-೯, ಭಾಗ-೧, ಶಾಸನ ಸಂಖ್ಯೆ-೧೩೩ ಎಂಬುದಾಗಿ ಸೂಚಿಸಿದೆ. ಆದರೆ ರಿತ್ತಿಯವರು ದಾಖಲಿಸಿರುವ ಪ್ರಯೋಗ ೧೩೩ ನೆಯ ಸಂಖ್ಯೆಯ ಶಾಸನದಲ್ಲಿಲ್ಲ. ಶಾಸನ ಸಂಖ್ಯೆ-೧೩೩ರ ಪಾಠ ಈ ರೀತಿಯಾಗಿದೆ. **"ಪೂಜಾರಿಗೆ ಮತ್ತರು ೧೦ ಘಳಿಗೆಯ ಮಾಣಿಯರ್ಗೆ ಮತ್ತರು ೧೬ ಪಾಳವಿಗಂಗೆ ಮತ್ತರು ೧೨"**. ಆದ್ದರಿಂದ ರಿತ್ತಿಯವರು ದಾಖಲಿಸಿರುವ ಪ್ರಯೋಗದ ಆಕರ ತಪ್ಪಾಗಿದೆ. ನೀಡಿರುವ ಅರ್ಥವೂ ಸಮರ್ಥನೀಯವಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ "ಮದ್ದಳೆ ಮುಂತಾದ ಚರ್ಮವಾದ್ಯಗಳನ್ನು ನುಡಿಸುವವನು" ಎಂದು ಅರ್ಥನೀಡಿ ಪ್ರಶ್ನಾರ್ಥಕಚಿಹ್ನೆ ಹಾಕಿದೆ. ಚಿದಾನಂದಮೂರ್ತಿ ಅವರು ಪಳವಿಗೆ ಎಂದರೆ ಧ್ವಜ. ಪಳವಿಗೆಯನ್ನು ಹಿಡಿದುಕೊಂಡಿರುವವನು ಪಾಳವಿಗ ಎಂದು ಹೇಳಿದ್ದಾರೆ (ನೋಡಿ:-**ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪುಟ-೧೯೯). ಈ ಅರ್ಥವೇ ಸಮರ್ಥನೀಯವಾಗಿ ತೋರುತ್ತದೆ. ಪಳವಿಗೆ ಶಬ್ದ ಪಱಪಿಗೆ, ಪಱಯಿಗೆ ಎಂಬ ರೂಪಗಳಲ್ಲೂ ದೊರೆಯುತ್ತದೆ.

೧೪. ಪುಟ-೧೬೦ **ಆನಂದನಿಧಿ,** ಇದಕ್ಕೆ ಪ್ರಯೋಗ ದಾಖಲಿಸಿಲ್ಲ. ನೀಡಿರುವ ಅರ್ಥ ಇನ್ನೂ ವಿಮರ್ಶೆಗೆ ಒಳಪಡಬೇಕಾದ ಅಗತ್ಯವಿದೆ. ಬ್ರಾಹ್ಮಣರ ಶ್ರೇಯೋಭಿವೃದ್ಧಿಗೆ ಬಳಸಲಾದ ನಿಧಿ ಎಂದು ಅರ್ಥ ಮಾಡಬಹುದೇನೋ? (ನೋಡಿ:-ಆನಂದ ನಿಧಿ ವಿಜಯನಗರ ಕಾಲದ ಬ್ಯಾಂಕ್-ಶ್ರೀನಿವಾಸ ಹಾವನೂರ, ತುಂಗಭದ್ರೆ ನಾಡಿಗೆ ವರವೋ ಶಾಪವೋ?, ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು-೨೦೦೮, ಪುಟ ೨೯-೩೧).

೧೫. ಪುಟ-೧೬೨ **ಪರಮೇಶ್ವರದತ್ತಿ.** ಇದಕ್ಕೆ ಪರಮೇಶ್ವರನಿಂದಲೇ ಕೊಡಲ್ಪಟ್ಟುದೆಂದು ತಿಳಿಯಲಾದ ದತ್ತಿ, ದೇವರಿಂದಲೇ ಕೊಡಲ್ಪಟ್ಟ ದತ್ತಿ ಎಂದು ಅರ್ಥಗಳನ್ನು ನೀಡಿ 'ಪರಮೇಶ್ವರ ದತ್ತಿ ಮಾಡಿ ಬಿಡಿಸಿದ ಗ್ರಾಮ' ಎಂದು ಪ್ರಯೋಗ ದಾಖಲಿಸಿದೆ. ಆದರೆ ಈ ಪ್ರಯೋಗದಿಂದ ಸಂದರ್ಭ ತಿಳಿಯುತ್ತಿಲ್ಲ. ಜೊತೆಗೆ ನೀಡಿರುವ ಅರ್ಥವೂ ಸರಿಯಲ್ಲ. ಈ ಪ್ರಯೋಗದ ಪೂರ್ಣ ಪಾಠ ಮತ್ತು ವಿವರಣೆಗಳು ಈ ರೀತಿಯಿರಬೇಕಿತ್ತು.

**'ಅಂತು ಜಗದ್ಗುರುಗಳೆನಿಸಿದ ಶ್ರೀಪಾಲತ್ರೈವಿದ್ಯದೇವರ ಕಾಲಂ ಕರ್ಚ್ಚಿ ಶ್ರೀಮದಿಮ್ಮಡಿದಂಡನಾಯಕ ಬಿಟ್ಟಿಯಣ್ಣನೀ ಬಸದಿಯ ಖಂಡಸ್ಫುಟಿತಜೀರ್ಣ್ನೋದ್ಧಾರಕ್ಕಂ ದೇವತಾಪೂಜೆಗಮಿಲ್ಲಿರ್ಪ್ಪ ರಿಷಿಸಮುದಾಯದಾಹಾರದಾನಕ್ಕಂ ಶಕವರ್ಷ ೧೦೫೪ ನೆಯ ನಳಸಂವತ್ಸರದುತ್ತರಾಯಣ ಸಂಕ್ರಾಂತಿಯಂದು ಶ್ರೀ ವಿಷ್ಣುವರ್ಧನ ಪೊಯ್ಸಳದೇವರ ಶ್ರೀಹಸ್ತದಿಂ ಧಾರೆಯೆಱೆಯಿಸಿ ಪರಮೇಶ್ವರ ದತ್ತಿ ಮಾಡಿ ಬಿಡಿಸಿದ ಗ್ರಾಮ'** ( **ಎಪಿಗ್ರಾಫಿಯಾ ಕರ್ನಾಟಿಕ-೯, ಹಾಸನ ಜಿಲ್ಲೆ, ಬೇಲೂರು-೧೦೬, ಮೈಸೂರು ವಿ.ವಿ-೧೯೯೦, ಪರಿಷ್ಕೃತ**).

(ಈ ಪ್ರಯೋಗದ ಆಧಾರದ ಮೇಲೆ ಹೊಯ್ಸಳ ವಿಷ್ಣುವರ್ಧನನ ಕೈಯಲ್ಲಿ ಅವನ ಇಮ್ಮಡಿ ದಂಡನಾಯಕನಾದ ಬಿಟ್ಟಿಯಣ್ಣನು ಬಸದಿಯ ಜೀರ್ಣೋದ್ಧಾರಕ್ಕಾಗಿ ಋಷಿಗಳ ಆಹಾರದಾನಕ್ಕೆಂದು ಗ್ರಾಮವೊಂದನ್ನು ಪರಮೇಶ್ವರ ದತ್ತಿಯಾಗಿ ಕೊಡಿಸಿದ್ದಾನೆ ಎಂದು ನಾವು ತಿಳಿಯಬಹುದು. ಅಂದರೆ ರಾಜನು ನೀಡಿರುವ ದತ್ತಿ ಎಂದು ಅರ್ಥೈಸಬಹುದು).

**(ಅ)** ಬಾದಾಮಿ ಚಲುಕ್ಯರ ಬಿರುದುಗಳಲ್ಲಿ **ಪರಮೇಶ್ವರ** ಎಂಬುದು ಒಂದು. ಅವರಿಂದ ಕೊಡಲ್ಪಟ್ಟ ದತ್ತಿಗಳು ಪರಮೇಶ್ವರ ದತ್ತಿಗಳೆನಿಸಿಕೊಂಡವು. ಮುಂದೆ ಅರಸರು ನೀಡಿದ ದತ್ತಿಗಳು ಪರಮೇಶ್ವರ ದತ್ತಿಗಳೆಂದೇ ಖ್ಯಾತಿಪಡೆದವು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಮತ್ತು ನಂತರದ ಶಾಸನಗಳಲ್ಲಿ ಕಂಡುಬರುವ ಪಾರಮೇಶ್ವರ ದತ್ತಿ, ಪರಮೇಶ್ವರ ದತ್ತಿ ಎಂಬುದರ ಮೂಲರೂಪ ಪರಮೇಶ್ವರ ಭಟಾರರ ದತ್ತಿ ಎಂಬುದಾಗಿದೆ. ಅಂದರೆ ಇದರ ಪ್ರಾಚುರ್ಯ ಮೊಟ್ಟಮೊದಲು ಪ್ರಾಯಶಃ ಕಂಡು ಬರುವುದು ಬಾದಾಮಿ ಚಲುಕ್ಯರ ಶಾಸನಗಳಲ್ಲಿ. (ಆ ) ದೇವರ ಹೆಸರಿನಲ್ಲಿಯೇ ಕೊಡಲ್ಪಟ್ಟ ದತ್ತಿ (ಹೆಚ್ಚಿನ ಮಾಹಿತಿಗೆ ನೋಡಿ: **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪುಟ-೪೦ ರ ಅಡಿಟಿಪ್ಪಣಿ) ಪುಟ-೫೪ ರಲ್ಲಿ **ಶಿಕ್ಷಣ ಶುಲ್ಕಗಳು** ಶೀರ್ಷಿಕೆಯಡಿ ದಾಖಲಿಸಿರುವ ಶಬ್ದಗಳು ಮತ್ತು ಅರ್ಥಗಳು ಸ್ವಲ್ಪವೂ ಸರಿಯಿಲ್ಲ. ಒಂದೇ ಶಾಸನದ ಪ್ರಯೋಗವನ್ನು ನಾಲ್ಕು ಕಡೆ ನಾಲ್ಕು ರೀತಿಯಾಗಿ ಅರ್ಥೈಸಲಾಗಿದೆ. ಈ ಕೋಶದಲ್ಲಿ ಕುಂದೂರಿ ಈಶ್ವರದತ್ತರ ಕೋಶವನ್ನು

ವ್ಯಾಪಕವಾಗಿ ಬಳಸಿದೆಯಾದರೂ ಅದನ್ನು ಸರಿಯಾಗಿ ಸೂಚಿಸಿಲ್ಲ. ಕೊನೆಯಲ್ಲಿ ದ್ವಿಭಾಷೆಗಳಲ್ಲಿ ಪದಸೂಚಿಯನ್ನು ಅಕಾರಾದಿಯಾಗಿ ನೀಡಿದೆ. ಇದನ್ನು ಬಳಸುವಾಗ ಅತ್ಯಂತ ಎಚ್ಚರಿಕೆ ಅಗತ್ಯ.

ರಿತ್ತಿಯವರ ಕೋಶದ ನಂತರ ಕನ್ನಡದಲ್ಲಿ ಈ ರೀತಿಯ ಎರಡು ಗ್ರಂಥಗಳು ಪ್ರಕಟವಾಗಿವೆ. ಮೊದಲನೆಯದು ಎಸ್.ಎಂ. ಹಿರೇಮಠ ಅವರ **'ಶಾಸನ ಪರಿಭಾಷೆ'** (ವಿದ್ಯಾನಿಧಿ ಪ್ರಕಾಶನ, ಗದಗ-೨೦೦೫-೨೦೦೬) ಈ ಗ್ರಂಥದಲ್ಲಿ ಪರಿಭಾಷೆಗಳನ್ನು ಕುರಿತು ಒಂದು ಪುಟ್ಟ ಪೀಠಿಕೆಯಿದೆ. ಇದರ ನಂತರ ಅಕಾರಾದಿಯಾಗಿ ಪರಿಭಾಷಾ ಪ್ರಕರಣ ಆರಂಭವಾಗಿದೆ. ನಂತರ ಶಾಸನಗಳಲ್ಲಿ ಬಳಕೆಯಾಗಿರುವ ಸಂಖ್ಯಾವಾಚಿ ಪರಿಭಾಷೆಗಳನ್ನು ಡಿ.ಸಿ. ಸರ್ಕಾರರ ಗ್ರಂಥವನ್ನು ಅವಲಂಬಿಸಿ ಅಕಾರಾದಿಯಾಗಿ ನೀಡಲಾಗಿದೆ. ಈ ಗ್ರಂಥಕ್ಕೆ ಡಿ.ಸಿ. ಸರ್ಕಾರ್, ಶ್ರೀನಿವಾಸ ರಿತ್ತಿಯವರ ಕೋಶಗಳು ಮತ್ತು ಇತರ ಗ್ರಂಥಗಳು ಆಧಾರವಾಗಿವೆ. ಆದರೆ ಇಲ್ಲಿಯೂ ಸ್ವೋಪಜ್ಞತೆಯ ಕೊರತೆ ಕಂಡುಬರುತ್ತದೆ. ಅನೇಕ ಕಡೆಗಳಲ್ಲಿ ಶಬ್ದಾರ್ಥ ನಿಷ್ಕರ್ಷೆಗಳು ತೃಪ್ತಿಕರವೆಂದು ತೋರದು. ಅರ್ಧಕ್ಕರ್ಧ ಶಬ್ದಗಳನ್ನಂತೂ ನೇರವಾಗಿ ಶ್ರೀನಿವಾಸ ರಿತ್ತಿ ಮತ್ತು ಡಿ.ಸಿ. ಸರ್ಕಾರರ ಗ್ರಂಥಗಳಿಂದಲೇ ನೇರವಾಗಿ ತೆಗೆದುಕೊಂಡು ಅಲ್ಲಿ ನೀಡಿರುವ ಅರ್ಥಗಳನ್ನೇ ಯಥಾವತ್ತಾಗಿ ನೀಡಲಾಗಿದೆ.ಇಲ್ಲಿಯೂ ಕೂಡ ಅರ್ಧಭಾಗ ಶಬ್ದಗಳಿಗೆ ಪ್ರಯೋಗಗಳನ್ನು ನೀಡಿ ಮಿಕ್ಕ ಅರ್ಧಭಾಗ ಶಬ್ದಗಳಿಗೆ ಪ್ರಯೋಗಗಳನ್ನೇ ನೀಡಿಲ್ಲ. ಪೆಣ್ಬುಯ್ಯಲ್ ಎಂದರೆ ವೀರಗಲ್ಲಿನ ಒಂದು ಪ್ರಕಾರ ಎಂದು ಅರ್ಥೈಸಲಾಗಿದೆ. ಇದು ತೃಪ್ತಿಕರವಾಗಿ ತೋರದು. ಹಲವು ವಿವರಣೆಗಳು ಗೊಂದಲಗಳಿಂದ ಕೂಡಿದೆ. ಪೂರ್ಣ ಗ್ರಂಥದಲ್ಲಿ ಡಿ.ಸಿ.ಸರ್ಕಾರರ ಗ್ರಂಥದ ಹೆಸರನ್ನು *GLOSSARY OF INDIAN EPIGRAPHY* ಎಂದು ತಪ್ಪಾಗಿ ಬಳಸಲಾಗಿದೆ. ಆ ಚಂದ್ರ – ಆದಿತ್ಯ-ಕಾಲಯ, ಆ ಚಂದ್ರ ತಾರಕಮ್ ಎಂಬಂತಹ ಹಾರೈಕೆಯ ವಾಕ್ಯಗಳನ್ನು ಸಹ ಪರಿಭಾಷೆಗಳಾಗಿ ತೋರಿಸಲಾಗಿದೆ. ಆದ್ದರಿಂದ ಈ ಗ್ರಂಥವನ್ನು ಬಳಸುವಾಗ ಅತ್ಯಂತ ಎಚ್ಚರದಿಂದಿರಬೇಕು.

ಈ ಗ್ರಂಥದ ನಂತರ ಈ ಮಾದರಿಯ ೨ನೆಯ ಗ್ರಂಥವಾಗಿ ಕಾಣಿಸಿಕೊಳ್ಳುವುದು ಹಿರೇಮಠರ ಮಾರ್ಗದರ್ಶನದಲ್ಲಿಯೇ ರಚಿತವಾಗಿರುವ ಸಂಗೀತಾ. ಎಸ್. ಹೊನ್ನಳ್ಳಿ ಅವರ **'ಕನ್ನಡ ಶಾಸನ ಪರಿಭಾಷೆ ಸಾಂಸ್ಕೃತಿಕ ಅಧ್ಯಯನ'** (ಅಮರ ಪ್ರಕಾಶನ,ಗುಲಬರ್ಗಾ-೨೦೦೫) ಎಂಬ ಎಂ.ಫಿಲ್ ನಿಬಂಧ. ಇದರಲ್ಲಿಯೂ ಕೂಡ ಹಿಂದಿನ ಗ್ರಂಥದಂತೆಯೇ ರಚನಾ ವಿನ್ಯಾಸವಿದೆ. ಆದರೆ ಆರಂಭದಲ್ಲಿ ಮಾತ್ರ ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಮಹತ್ವ ಎಂಬ ಪ್ರಥಮಾಧ್ಯಾಯದಲ್ಲಿ ತಮ್ಮ ಅಧ್ಯಯನದ ಇತಿಮಿತಿಗಳನ್ನು ಪ್ರಸ್ತಾವಿಸಿ ಶಾಸನಗಳ ಬಗೆಗೆ ವಿವಿಧ ವಿದ್ವಾಂಸರು ಹೇಳಿರುವ ಮಾತುಗಳನ್ನು ಉದ್ಧರಿಸಿದ್ದಾರೆ. ಇದರ ನಂತರ ಶಾಸನ ಇತಿಹಾಸ ಒಂದು ಪಕ್ಷಿನೋಟ ಎಂಬ ಅಧ್ಯಾಯವಿದ್ದು ಇಲ್ಲಿ ಶಾಸನ ಅಧ್ಯಯನದ ಇತಿಹಾಸವನ್ನು ಸ್ಥೂಲವಾಗಿ ಅನೇಕ ತಪ್ಪು ವಿವರಗಳೊಡನೆ ಪರಿಚಯಿಸಿದೆ. ಆದರೆ ಈ ಭಾಗದಲ್ಲಿನ ಹೆಚ್ಚಿನ ಅಂಶಗಳು ಈಗಾಗಲೇ ಇತರೆಡೆ ಪ್ರಕಟವಾಗಿರುವಂತಹುದೇ ಆಗಿದೆ. ಕನ್ನಡದಲ್ಲಿ ಬೆಳೆದು ಬಂದಿರುವ ಶಾಸನ ಪರಂಪರೆ ಎಂಬ ಮುಂದಿನ ಅಧ್ಯಾಯದಲ್ಲಿನ ವಿವರಗಳನ್ನು ಹಿಂದಿನ ಅಧ್ಯಾಯದಲ್ಲೇ ಅಡಕಗೊಳಿಸಬಹುದಾಗಿತ್ತೆನ್ನಿಸುತ್ತದೆ. ಪ್ರಮುಖ ವಿದ್ವಾಂಸರ ಶಾಸನ ಸಂಗ್ರಹಣ ಕಾರ್ಯವನ್ನು ಬಹು ಅಡಕವಾಗಿ ಪರಿಚಯಿಸಲಾಗಿದೆಯಾದರೂ ಅನೇಕ ತಪ್ಪು ಮಾಹಿತಿಗಳು ಎಡೆವಡೆದಿವೆ. ಮುಂದೆ ಶಾಸನಗಳಲ್ಲಿ ಸಂಸ್ಕೃತಿ ಎಂಬ ಅಧ್ಯಾಯವಿದೆ. ಇಲ್ಲಿ ಇರುವ ವಿವರಗಳು ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನದಲ್ಲಿ ಕಂಡುಬರುವುದೇ ಆಗಿದೆ. ನಂತರ ಕನ್ನಡಶಾಸನ ಪರಿಭಾಷೆಗಳು ಅರ್ಥವಿವರಣೆ ಎಂಬ ಅಧ್ಯಾಯವಿದ್ದು ಕೇವಲ ೨೯೧ ಪರಿಭಾಷೆಗಳಿಗೆ ಮಾತ್ರ ವಿವರಣೆ ಮತ್ತು ಪ್ರಯೋಗಗಳಿವೆ. ಈ ಎಲ್ಲವೂ ಎಸ್.ಎಂ.ಹಿರೇಮಠರ ಶಾಸನ ಪರಿಭಾಷೆಯಲ್ಲಿ ಕಂಡುಬರುವಂತಹುದೇ ಆಗಿದೆ. ಆದ್ದರಿಂದ ಈ ಭಾಗ ಸ್ವತಂತ್ರ ಬರವಣಿಗೆಯಲ್ಲ. ಅನ್ಯಾಧಾರಿತವೇ ಆಗಿದೆ.ಈ ಪುಸ್ತಕದ ಕಡೆಯಲ್ಲಿ ಶಾಸನ ಪರಿಭಾಷೆಗಳಲ್ಲಿನ ಸಂಸ್ಕೃತಿಯ ಅನ್ವೇಷಣೆ ಎಂಬ ಅಧ್ಯಾಯವಿದೆ. ಇದನ್ನು ಶಾಸನಗಳಲ್ಲಿ ಸಂಸ್ಕೃತಿ ಎಂಬ ಅಧ್ಯಾಯದಲ್ಲೇ ಅಡಕಗೊಳಿಸಬಹುದಿತ್ತು. ವಿವರಗಳಲ್ಲಿ ಯಾವುದೇ ರೀತಿಯ ಸ್ವೋಪಜ್ಞತೆ ಇಲ್ಲವಾಗಿದೆ.

ಇಲ್ಲಿಯವರೆಗೂ ಸಮೀಕ್ಷಿಸಿದ ಕನ್ನಡದಲ್ಲಿ ರಚಿತವಾಗಿರುವ ಗ್ರಂಥಗಳು ಹೆಚ್ಚಾಗಿ ಮಿತವ್ಯಾಪ್ತಿಯ ಕೋಶಗಳಾಗಿವೆ ಡಿ.ಸಿ. ಸರ್ಕಾರ್ ಮತ್ತು ಕುಂದೂರಿ ಈಶ್ವರದತ್ತರ ಕೋಶಗಳು ಈ ಕ್ಷೇತ್ರದಲ್ಲಿ ಮಾರ್ಗದರ್ಶಕಗಳಾಗಿವೆ. ಇವುಗಳ ಮಾರ್ಗದರ್ಶನವಿದ್ದರೂ ಕೂಡ ಈಗ ಕನ್ನಡದಲ್ಲಿ ಪ್ರಕಟವಾಗಿರುವ ಕೋಶಗಳಲ್ಲಿ ಸ್ವೋಪಜ್ಞತೆಯ ಕೊರತೆ ತಪ್ಪು ದಾಖಲಾತಿ, ತಪ್ಪು ಅರ್ಥ, ವಿವರಣೆಗಳು ಕಂಡುಬರುತ್ತಿವೆ. ಶಬ್ದಗಳ ದಾಖಲಾತಿಯಂತೂ ಏನೇನೂ ಸಾಲದು ಕನ್ನಡದಲ್ಲಿ

ಪ್ರಕಟವಾಗಿವೆ ಎಂಬುದೇ ಸಮಾಧಾನಕರ ಸಂಗತಿಯಾಗಿದೆ. ಆದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಕನ್ನಡ ನಿಘಂಟು ಸಂಪುಟಗಳ ಮಾದರಿಯಲ್ಲಿ ಕನ್ನಡಶಾಸನ ಪದಕೋಶದ ರಚನೆಯಾಗಬೇಕಾದುದು ಅತ್ಯಗತ್ಯವಾಗಿದೆ. ಡಾ॥ ಎಸ್. ಶ್ರೀಕಂಠಶಾಸ್ತ್ರಿಗಳು **'ಪುರಾತತ್ತ್ವ ಶೋಧನೆ'** (ಮೈಸೂರು ವಿಶ್ವವಿದ್ಯಾನಿಲಯ-೧೯೬೦, ೧೯೭೫) ಎಂಬ ತಮ್ಮ ಕೃತಿಯಲ್ಲಿ ಅನೇಕ ಅನ್ಯಭಾಷಿಕ ಪಾರಿಭಾಷಿಕ ಶಬ್ದಗಳಿಗೆ ಸಮನಾದ ಕನ್ನಡ ಶಬ್ದಗಳನ್ನು ಬಳಸಿದ್ದಾರೆ. ಆದರೆ ಈ ಶಬ್ದಗಳನ್ನು ಪ್ರತ್ಯೇಕವಾಗಿ ಸೂಚಿಸದಿರುವುದು ಒಂದು ಕೊರತೆಯಾಗಿ ಕಾಣುತ್ತದೆ. ಎಂ.ಎಂ. ಕಲ್ಬುರ್ಗಿಯವರು, ಸೀತಾರಾಮ ಜಾಗೀರದಾರರು ತಮ್ಮ ಅನೇಕ ಬರಹಗಳಲ್ಲಿ ಪರಿಭಾಷಾ ಶಬ್ದಗಳನ್ನು ಕುರಿತು ವಿಶ್ಲೇಷಣೆ ನಡೆಸಿದ್ದಾರೆ. ಕನ್ನಡದಲ್ಲಿ ಇನ್ನೂ ಕೆಲವು ಗ್ರಂಥಗಳಲ್ಲಿ (ಪಿಎಚ್.ಡಿ. ನಿಬಂಧಗಳು, ಇತರ ಕೃತಿಗಳು) ಪಾರಿಭಾಷಿಕ ಶಬ್ದಗಳನ್ನು ಕುರಿತು ವಿಸ್ತೃತ ಚರ್ಚೆ ನಡೆದಿದೆ. ಜಿ.ಆರ್.ಕುಪ್ಪುಸ್ವಾಮಿ ಅವರ *'Economic conditions in Karnataka'* (ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೧೯೭೫). ಕೆ. ಎನ್. ಚಿಟ್ನೀಸ್ ಅವರ *'Keladi Polity'* (ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೧೯೭೪) ಗ್ರಂಥಗಳಲ್ಲಿ ಆರ್ಥಿಕ ಸಾಮಾಜಿಕ ವ್ಯವಸ್ಥೆಯ ಬಗೆಗೆ ವಿಸ್ತೃತ ಅಧ್ಯಯನವಿದ್ದು ಇಲ್ಲಿ ಅನೇಕ ಪರಿಭಾಷೆಗಳನ್ನು ಗಮನಿಸಿ ಚರ್ಚಿಸಿ ಅರ್ಥಗಳನ್ನು ನೀಡಿದ್ದಾರೆ. ಇದೇ ವರ್ಗಕ್ಕೆ ಸೇರುವ ಮತ್ತೊಂದು ಗ್ರಂಥವೆಂದರೆ ಬಿ.ಆರ್.ಹಿರೇಮಠರ **'ಶಾಸನಗಳಲ್ಲಿ ಕರ್ನಾಟಕದ ವರ್ತಕರು'** (ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೬) "ಇದರಲ್ಲಿ ಅನೇಕ ಪಾರಿಭಾಷಿಕ ಶಬ್ದಗಳಿಗೆ ಒಪ್ಪಬಹುದಾದಂತಹ ಅರ್ಥಗಳನ್ನು ನೀಡಲಾಗಿದೆ" ಎಂಬ ಬಾ.ರಾ. ಗೋಪಾಲರ ಮಾತನ್ನು ಒಪ್ಪಬಹುದು. ಆದರೆ ಪಾರಿಭಾಷಿಕ ಶಬ್ದಗಳನ್ನು ಗ್ರಂಥದ ಕೊನೆಯಲ್ಲಿ ಪ್ರತ್ಯೇಕವಾಗಿ ನೀಡದಿರುವುದು ಕೊರತೆಯಾಗಿ ಕಂಡುಬರುತ್ತದೆ. ಜೆ.ಎಂ. ನಾಗಯ್ಯ ಅವರ **'ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ '** (ವೀರಶೈವ ಅಧ್ಯಯನ ಅಕಾಡಮಿ, ಶ್ರೀನಾಗನೂರು ರುದ್ರಾಕ್ಷಿಮಠ, ಬೆಳಗಾವಿ-೧೯೯೨) ಎಂಬ ಕೃತಿ ಆರನೆಯ ವಿಕ್ರಮಾದಿತ್ಯನ ಆಡಳಿತವನ್ನು ಮಾತ್ರ ಗಮನದಲ್ಲಿರಿಸಿಕೊಂಡು ರಚಿತವಾಗಿರುವ ಪಿ.ಎಚ್.ಡಿ. ನಿಬಂಧವಾಗಿದೆ. ಈ ಕೃತಿಯಲ್ಲಿ ಅನೇಕ ಆಕರಗಳ ತುಲನಾತ್ಮಕ ಅಧ್ಯಯನದ ಫಲವಾಗಿ ಪಾರಿಭಾಷಿಕ ಶಬ್ದಗಳಿಗೆ ನೀಡಿರುವ ಅರ್ಥಗಳು ಗ್ರಾಹ್ಯವಾಗುವಂತಿವೆ. ಆರ್. ಶೇಷಶಾಸ್ತ್ರಿಗಳ **'ಕರ್ನಾಟಕದ ವೀರಗಲ್ಲುಗಳು'** (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೨) ಕೆಳದಿ ವೆಂಕಟೇಶ ಜೋಯಿಸರ **'ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ'** (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೯೬) ಹಂ.ಪ. ನಾಗರಾಜಯ್ಯನವರ **'ಸಾಂತರರು ಒಂದು ಅಧ್ಯಯನ'** (ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ, ಹೊಂಬುಜ ಜೈನಮಠ-೧೯೯೭) ಎಚ್.ಎಸ್. ಗೋಪಾಲರಾಯರ **'ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ'** (ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು-೧೯೯೩) ಕೃತಿಗಳಲ್ಲಿಯೂ ಅನೇಕ ಪರಿಭಾಷೆಗಳನ್ನು ವಿಶ್ಲೇಷಿಸಲಾಗಿದೆ. ಡಾ॥ ಎಸ್.ಕೆ. ರೆಡ್ಡಿ ಅವರ *'Social History of Andhra Pradesh'* (Agam kala prakashan, Delhi-1991) ಎಂಬ ಕೃತಿಯಲ್ಲಿಯೂ ಅನೇಕ ಪಾರಿಭಾಷಿಕ ಶಬ್ದಗಳ ವಿಶ್ಲೇಷಣೆ ನಡೆದಿದೆ. ಈ ರೀತಿಯಲ್ಲಿ ಇನ್ನೂ ಹಲವು ಗ್ರಂಥಗಳು ಪ್ರಕಟವಾಗಿವೆ. **'ಕೌಟಿಲ್ಯನ ಅರ್ಥಶಾಸ್ತ್ರ, ಸೋಮದೇವನ ನೀತಿವಾಕ್ಯಾಮೃತ'**ಗಳು ಪರಿಭಾಷಾ ಶಬ್ದಗಳ ವಿಶ್ಲೇಷಣೆಗೆ ವ್ಯಾಪಕ ನೆರವು ನೀಡುತ್ತವೆ. ಇವುಗಳ ಸಮರ್ಪಕ ಬಳಕೆ ಇದುವರೆಗೂ ನಡೆದಿರುವಂತೆ ತೋರುವುದಿಲ್ಲ.**ನೀತಿವಾಕ್ಯಾಮೃತ**ಕ್ಕೆ ಕನ್ನಡದಲ್ಲಿ ಟೀಕೆಯನ್ನು ರಚಿಸಿರುವ ನೇಮಿನಾಥನು ([ಸಂ] ಬಿ.ರಾಮಸ್ವಾಮಿ, ಜಿ.ಎಸ್. ದೀಕ್ಷಿತ್,ಶ್ರೀನಿವಾಸ ರಿತ್ತಿ.ಹಂಪಿ ಕನ್ನಡ ವಿಶ್ವವಿದ್ಯಾಲಯ-೨೦೦೦) ಅನೇಕ ಪರಿಭಾಷೆಗಳಿಗೆ ಸಮಾನ ಕನ್ನಡ ಶಬ್ದಗಳನ್ನು ಹೇಳಿದ್ದಾನೆ. ಈ ಶಬ್ದಗಳು ಕನ್ನಡ ಶಾಸನಗಳಲ್ಲಿಯೂ ಕಂಡುಬರುವುದರಿಂದ ಇವುಗಳ ವಿಶ್ಲೇಷಣೆಗೆ ಈ ಕೃತಿ ನೆರವಾಗುತ್ತದೆ. ಹಲವು ಪಾರಿಭಾಷಿಕ ಶಬ್ದಗಳು ಕನ್ನಡ ಮತ್ತು ತೆಲುಗು ಶಾಸನಗಳಲ್ಲಿ ಸಮಾನವಾಗಿ ಕಂಡುಬರುತ್ತವೆ. ಆದಕಾರಣ ತೆಲುಗು ಭಾಷೆಯ ಆಕರಗಳನ್ನು ಕನ್ನಡಶಾಸನ ಪದಕೋಶದ ರಚನೆಯಲ್ಲಿ ಸಮರ್ಥವಾಗಿ ಬಳಸಿಕೊಳ್ಳಬೇಕು. ತಮಿಳು ಭಾಷೆಯಲ್ಲಿ ಸಿ.ಗೋವಿಂದರಾಜನ್ ಅವರ **'ಕಲ್ವೆಟ್ಟು ಕಲೈಶೊಲ್ ಅಗರಮುದಲಿ'** [=ಶಾಸನ ಪರಿಭಾಷಾ ಕೋಶ, ೧೩ ನೆಯ ಶತಮಾನದವರೆಗೆ ಮಾತ್ರ] ಎಂಬ ನಿಘಂಟು ಪ್ರಕಟವಾಗಿದೆ (ಮಧುರೈ ಕಾಮರಾಜ್ ವಿಶ್ವವಿದ್ಯಾಲಯ-೧೯೮೭) *'South Indian Temple Inscriptions'* (=Tamilnadu Temple Inscriptions, Volume-3, Part-2, [Ed] T.N. Subramanyam, Government Oriental Manuscripts Library, Madras-1957) ಎಂಬ ಕೃತಿಯಲ್ಲಿ *Epigraphical Glossary* ಎಂಬ ಹೆಸರಿನಿಂದ ತಮಿಳುದೇಶದ ತಮಿಳು ಶಾಸನಗಳಲ್ಲಿ ಕಂಡುಬರುವ ಶಬ್ದಗಳನ್ನು ಇಂಗ್ಲಿಷ್ ಲಿಪಿಯಲ್ಲಿ ನೀಡಿ ಇಂಗ್ಲಿಷ್‌ನಲ್ಲಿ ಅರ್ಥಗಳನ್ನು ನೀಡಿದ್ದಾರೆ ಮತ್ತು ಈ ಕೃತಿ ಹಾಗೂ ಇದೇ ಕೃತಿಯ ಇತರ ಸಂಪುಟಗಳಲ್ಲಿ ಶಾಸನ

ಪತ್ರಗಳೂ ಪ್ರಕಟವಾಗಿವೆ. ಕನ್ನಡಶಾಸನ ಪದಕೋಶದ ರಚನೆಯಲ್ಲಿ ಮತ್ತು ಶಬ್ದಗಳ ನಿಷ್ಪತ್ತಿಯ ವಿಚಾರದಲ್ಲಿ ತಮಿಳು ಭಾಷೆಯ ಸಹಾಯ ಪಡೆಯುವುದು ಕೆಲವು ಸಂದರ್ಭಗಳಲ್ಲಿ ಅನಿವಾರ್ಯ ಮತ್ತು ಅತ್ಯಗತ್ಯ. *'Lexicon Of Travanc[o]re Inscriptions'* (Ed:-R. Vasudeva Poduval, Department of Archaeology, Travancore State, Trivandrum [Tiruvananthapuram]-1947) ಎಂಬ ಕೋಶದಲ್ಲಿ ಶಬ್ದಗಳನ್ನು ತಮಿಳು-ಮಲೆಯಾಳ-ರೋಮನ್ ಲಿಪಿಯಲ್ಲಿ ನೀಡಿ ಮಲೆಯಾಳ ಭಾಷೆ ಮತ್ತು ಇಂಗ್ಲಿಷ್‌ನಲ್ಲಿ ಪ್ರಯೋಗರಹಿತವಾಗಿ ಅರ್ಥಗಳನ್ನು ನೀಡಲಾಗಿದೆ. ೧೯೩೮ ರಲ್ಲಿಯೇ ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿಯಿಂದ ಪ್ರಕಟಗೊಂಡಿರುವ *'Epigraphical Glossary on Tirumala Tirupati Devasthanams Inscriptions'* (Complied and Edited by V. Vijayaraghavacharya, Volume-6, Part-2, Reprint-1998 ) ಗ್ರಂಥದಲ್ಲಿ ೫ ವಿಭಾಗಗಳಿವೆ. ಈ ವಿಭಾಗಗಳಲ್ಲಿ ತಿರುಪತಿ ದೇವಾಲಯಕ್ಕೆ ದಾನಧರ್ಮ ಮಾಡಿ ಶಾಸನಗಳನ್ನು ಹಾಕಿಸಿರುವ ರಾಜರು, ಸಾಮಂತರು, ಅಧಿಕಾರಿಗಳು, ವ್ಯಾಪಾರಿಗಳು, ಆಚಾರ್ಯರು, ಆಚಾರ್ಯಪುರುಷರು, ಖಾಸಗೀ ವ್ಯಕ್ತಿಗಳು ಮುಂತಾದವರ ಹೆಸರುಗಳನ್ನು ಅವರ ವಂಶವೃಕ್ಷಗಳ ಸಹಿತವಾಗಿ ನಿರೂಪಿಸಲಾಗಿದೆ ಮತ್ತು ಅವರು ನೀಡಿದ ದಾನಧರ್ಮಗಳನ್ನು ಹಾಗೂ ಅವರ ಶಾಸನಗಳ ಪಟ್ಟಿಕೆಯನ್ನು ಅತ್ಯಂತ ಅಚ್ಚುಕಟ್ಟಾಗಿ ವಿವರಣೆಯೊಂದಿಗೆ ನೀಡಲಾಗಿದೆ. ಈ ಮಾದರಿಯ ಕೋಶಗಳ ಪ್ರಕಟನೆ ಕರ್ನಾಟಕದಲ್ಲಿ ಇನ್ನು ಮೇಲಾದರೂ ನಡೆಯಬೇಕಾಗಿದೆ. ಎಸ್.ಪಿ. ತಿವಾರಿ ಅವರ *'Contributions of Sanskrit Inscriptions to Lexicography'* (Agam Kala Prakashan, Delhi-1987) ಎಂಬ ಕೃತಿಯಲ್ಲಿ ಸಂಸ್ಕೃತ ಶಾಸನಗಳಲ್ಲಿ ಕಂಡುಬರುವ ಶಬ್ದಗಳು ನಿಘಂಟು ಕ್ಷೇತ್ರಕ್ಕೆ ಹೇಗೆ ತಮ್ಮ ಕಾಣಿಕೆ ಸಲ್ಲಿಸಿವೆ ಎಂಬುದನ್ನು ವಿವರಣಾತ್ಮಕ ವಿಶ್ಲೇಷಣೆಯೊಂದಿಗೆ ವಿಶದಪಡಿಸಲಾಗಿದೆ. ಇಂತಹ ಅಧ್ಯಯನಗಳು ಕನ್ನಡದಲ್ಲಿ ಸಹ ನಡೆಯಬೇಕಾಗಿದೆ.

ಕನ್ನಡದಲ್ಲಿ ಶಾಸನ ಪದಕೋಶದ ಕೆಲಸ ೧೯೭೨-೭೫ರ ಸುಮಾರಿನಲ್ಲಿ ಕರ್ನಾಟಕ ಸಾಹಿತ್ಯ ಅಕಾಡಮಿ ಮೂಲಕ ನಡೆದಿತ್ತು. ಏನು ಕಾರಣವೋ ತಿಳಿಯದು ಅದು ಮುಂದುವರಿಯಲೇ ಇಲ್ಲ. ಬಹಳ ಹಿಂದೆಯೇ ಕನ್ನಡ ನುಡಿ, ಈಚೆಗೂ ಕನ್ನಡಸಾಹಿತ್ಯ ಪರಿಷತ್ಪತ್ರಿಕೆ, ಸಾಧನೆ, ಇತಿಹಾಸ ದರ್ಶನ ಮುಂತಾದ ಅನೇಕ ಪತ್ರಿಕೆಗಳಲ್ಲಿ ಪರಿಭಾಷಾ ಶಬ್ದಗಳನ್ನು ಕುರಿತು ವಿದ್ವಾಂಸರು ಲೇಖನಗಳನ್ನು ಬರೆದಿದ್ದಾರೆ. *'Temple Architectural Terms in Vijayanagara Inscriptions'* ("By Channabasappa.S.Patil, Vijayanagara Progress Research 1984-87, (Ed) D.V. Devaraj, Directorate of Archaeology and Museums, Mysore-1991, Page 167-173) ಎಂಬ ಲೇಖನದಲ್ಲಿ ವಾಸ್ತುಶಿಲ್ಪದ ಬಗೆಗಿನ ಪರಿಭಾಷಾ ಶಬ್ದಗಳ ವಿಶ್ಲೇಷಣೆಯಿದ್ದು ವಿಜಯನಗರದ ಶಾಸನಗಳಲ್ಲಿ ಕಂಡುಬರುವ ಈ ಶಬ್ದಗಳನ್ನು ಪಟ್ಟಿಮಾಡಿ ಕೊಡಲಾಗಿದೆ. *'Some Socio Economic Terms In The Vijayanagara Inscriptions'* (BY P. Shanmugam, Sankaram-Recent Researches on Indian Culture [Prof. Srinivasa Sankaranarayanan Festschrift] Harman Publishing House, New Delhi-2000, page 103-109) ಲೇಖನದಲ್ಲಿ ತಮಿಳುನಾಡಿನಲ್ಲಿನ ವಿಜಯನಗರದ ಶಾಸನಗಳಲ್ಲಿ ಕಂಡುಬರುವ ಸಾಮಾಜಿಕ-ಆರ್ಥಿಕ ಪರಿಭಾಷಾ ಶಬ್ದಗಳನ್ನು ಕುರಿತು ಚರ್ಚಿಸಲಾಗಿದೆ. *'Re-Examination of a Few Tax Terms'* (By C.A. Padmanabha Shastri, Journal of The Epigraphical Society of India, Volume-17, 1991, page 74-77) ಬರಹದಲ್ಲಿ ಆಂಧ್ರಪ್ರದೇಶದ ತೆಲುಗು ಶಾಸನಗಳಲ್ಲಿ ಕಂಡುಬರುವ ಕೆಲವು ತೆರಿಗೆಗೆ ಸಂಬಂಧಿಸಿದ ಶಬ್ದಗಳನ್ನು ಪುನರ್‌ವಿಮರ್ಶಿಸಲಾಗಿದೆ.ಈ ಶಬ್ದಗಳು ಕನ್ನಡ ಶಾಸನಗಳಲ್ಲಿಯೂ ಕಂಡುಬರುತ್ತವೆ. *'A Statistical Study of Revenue Terms in Vijayanagara Inscriptions'* (By P. Shanmugam, Madhava. N. Katti, N. Karashima, Y. Subbarayalu, Cynthia Talbot, Journal of The Epigraphical Society of India, Volume-19, 1993, page 37-51) ಎಂಬ ಲೇಖನದಲ್ಲಿ ವಿಜಯನಗರದ ದೊರೆಗಳ ಕನ್ನಡ, ತೆಲುಗು, ತಮಿಳು ಶಾಸನಗಳಲ್ಲಿ ಬಳಕೆಗೊಂಡಿರುವ ಕಂದಾಯ ಮತ್ತು ವರಮಾನ ಮುಂತಾದವುಗಳಿಗೆ ಸಂಬಂಧಿಸಿರುವ ಶಬ್ದಗಳನ್ನು ಕುರಿತು ವಿಸ್ತಾರವಾಗಿ ವಿವೇಚಿಸಲಾಗಿದೆ ಹಾಗೂ ಮೂರು ಭಾಷೆಗಳ ಶಾಸನಗಳಲ್ಲಿ ಈ ಶಬ್ದಗಳ ಬಳಕೆ ಎಷ್ಟಿದೆ ಮತ್ತು ಪ್ರದೇಶವಾರು ಇವುಗಳ ಬಳಕೆ ಯಾವ ಪ್ರಮಾಣದಲ್ಲಿದೆ ಎಂಬುದನ್ನು ಕೋಷ್ಟಕಗಳು ಮತ್ತು ನಕ್ಷೆಗಳ ಮೂಲಕ ಅತ್ಯಂತ ಅಚ್ಚುಕಟ್ಟಾಗಿ ತೋರಿಸಲಾಗಿದೆ. ಶಾಸನಗಳಲ್ಲಿಯ ಈ ಶಬ್ದಗಳನ್ನು ಪಟ್ಟಿಮಾಡಿಕೊಟ್ಟಿರುವುದಲ್ಲದೆ ಅವು ಯಾವ ಕಾಲದ್ದು, ಯಾವ ಸ್ಥಳದ್ದು ಎಂಬ ವಿವರಗಳನ್ನೆಲ್ಲಾ ವಿವರವಾಗಿ ನೀಡಲಾಗಿದೆ. *'A Short Glossary of Indian Political Terms'* ( By S.V. Viswanatha,

Q J M S 38-1, July 1947, Page 17-34 ; Q J M S 38-2 , October 1947, Page 61-70 ; Q J M S 38-3, January 1948 , Page 120-124) ಎಂಬ ಬರಹದಲ್ಲಿ ಶಬ್ದಗಳನ್ನು ಅಕಾರಾದಿಯಾಗಿ ದಾಖಲಿಸಿ ಇಂಗ್ಲಿಷ್‌ನಲ್ಲಿ ಅರ್ಥಗಳನ್ನು ನೀಡಲಾಗಿದೆ ಮತ್ತು ಹಲವು ಶಬ್ದಗಳು ಯಾವ ಮೂಲಗಳಿಂದ ಬಂದಿವೆ ಎಂಬುದನ್ನು ಸೂಚಿಸಲಾಗಿದೆ. ಇಲ್ಲಿ ದಾಖಲಾಗಿರುವ ಶಬ್ದಗಳು ಶಾಸನ ಮತ್ತು ಸಾಹಿತ್ಯಕೃತಿಗಳಲ್ಲಿ ಕಂಡುಬರುವುದೇ ಆಗಿದೆ. ಸಂಸ್ಕೃತ ಶಬ್ದಗಳು ಅಖಿಲ ಭಾರತ ವ್ಯಾಪ್ತಿಯನ್ನು ಹೊಂದಿರುವ ಕಾರಣ ಈ ಬರಹವು ಅನೇಕ ಶಬ್ದಗಳ ವಿಶ್ಲೇಷಣೆಗೆ ಹೆಚ್ಚಿನ ನೆರವು ನೀಡುತ್ತದೆ. ಕನ್ನಡದ ಲಭ್ಯ ಮೊದಲ ಹಲ್ಮಿಡಿ ಶಾಸನದ **'ಸಟ್ಟಂಗ'** (ಎಂ. ಚಿದಾನಂದ ಮೂರ್ತಿ, ಸಂಶೋಧನ ತರಂಗ-೨, ಬೆಂಗಳೂರು ವಿ.ವಿ-೧೯೭೦, ಪುಟ ೩೪-೩೭) ಅದೇ ಶಾಸನದ **'ಸಟ್ಟಂಗ ಮತ್ತು ಬಾಳ್ಗೞ್ಚು'** (ಕೆ.ವಿ. ರಮೇಶ್, ಪ್ರಬುದ್ಧ ಕರ್ನಾಟಕ ೫೧-೩) ಅಲ್ಲಿನದೇ **'ಕುಱುಮ್ಬಿಡಿ'** (ಎಂ.ಜಿ. ಮಂಜುನಾಥ, ಶಾಸನ ಪರಿಶೋಧನೆ, ಪ್ರಸಾದ್ ಏಜೆನ್ಸೀಸ್, ಮೈಸೂರು-೨೦೦೮, ಪುಟ ೪೫-೫೧) ಹಾಗೂ ಇತರ ಶಾಸನಗಳಲ್ಲಿ ಕಂಡುಬರುವ **'ವಡ್ಡರಾವುಳ ಮತ್ತು ಬಿಲ್ಕೊಡೆ'** (ಕೆ.ವಿ. ರಮೇಶ್, ಸಾಧನೆ ೧೦-೩, ಪುಟ ೧೮೯-೧೯೫) ಮುಂತಾದ ಶಬ್ದಗಳ ಬಗೆಗೂ ಪುನರ್ ವಿಮರ್ಶಿತ ಬರೆವಣಿಗೆಗಳು ಕನ್ನಡದಲ್ಲಿ ಪ್ರಕಟವಾಗಿವೆ. ಇವುಗಳನ್ನೆಲ್ಲಾ ವ್ಯಾಪಕವಾಗಿ ಒಳಕೊಂಡ ಕನ್ನಡಶಾಸನ ಪದಕೋಶ ಆದಷ್ಟು ಬೇಗ ಹೊರಬರಲು ಕೆಲಸ ನಡೆಯಬೇಕಾಗಿದೆ. ಈ ಶಾಸನ ಪದಕೋಶವು ಈಗಿನ ಕರ್ನಾಟಕವನ್ನು ಪ್ರತಿನಿಧಿಸುವುದಕ್ಕಿಂತ ಪ್ರಾಚೀನ ಬೃಹತ್ ಭಾಷಿಕ ಮತ್ತು ಸಾಂಸ್ಕೃತಿಕ ಕರ್ನಾಟಕವನ್ನು ಪ್ರತಿನಿಧಿಸಬೇಕು. ಶಾಸನ ಪದಕೋಶವು ಬರೀ ವಿದ್ವಾಂಸರ, ಸಂಶೋಧಕರ ಕೈ ಸ್ವತ್ತಾಗದೆ, ವಿದ್ಯಾರ್ಥಿಗಳ ಮತ್ತು ಜನಸಾಮಾನ್ಯರ ಹಾಗೂ ಆಸಕ್ತರ ಕೈದೀವಿಗೆಯೂ ಆಗಬೇಕು. ಆದ್ದರಿಂದ ಇದು ವಿಶ್ವಕೋಶಾತ್ಮಕ ಗುಣವನ್ನು ಹೊಂದಿದ್ದರೆ ಅತ್ಯಂತ ಸೂಕ್ತ. ಶಾಸನ ಪದಕೋಶ ಎಂದಿದ್ದರೂ ಪುರಾತತ್ತ್ವದ ಎಲ್ಲಾ ವಿವರಗಳನ್ನು ಹೊಂದಿರಬೇಕು.ಶಾಸನ ಪದಕೋಶವೊಂದರ ರಚನೆಗೆ ಅಗತ್ಯವಾದ ಕೆಲವು ಸೂಚನೆಗಳನ್ನು ಈ ಕೆಳಗೆ ನೀಡಲಾಗಿದೆ:-

೧. ಶಾಸನ ಪದಕೋಶದಲ್ಲಿ ಒಂದು ಶಬ್ದದ ದಾಖಲಾತಿಗೆ ಮೊದಲು ಸಾಧ್ಯವಿರುವ ಮಟ್ಟಿಗೂ ಆ ಶಬ್ದದ ಬಗೆಗೆ ವಿಚಾರ ವಿಮರ್ಶೆಗಳು ನಡೆದಿದ್ದರೆ ಅದರ ಸಂಪೂರ್ಣ ಪ್ರಯೋಜನ ಪಡೆದುಕೊಳ್ಳುವುದು ಉತ್ತಮ.

೨. ಒಂದು ಶಬ್ದದ ದಾಖಲಾತಿಗೆ ಮೊದಲು ಆ ಶಬ್ದರೂಪವನ್ನು ಸ್ಪಷ್ಟವಾಗಿ ನಿಷ್ಕರ್ಷಿಸಬೇಕು. ಕೆಲವು ವೇಳೆ ಆ ಶಬ್ದಗಳು 'ೞ' ಮತ್ತು 'ಱ' ಗಳಾಗಿದ್ದರೆ ಅವುಗಳ ಬಗ್ಗೆ ಅತ್ಯಂತ ಎಚ್ಚರಿಕೆ ಅಗತ್ಯ. 'ೞ' ಮತ್ತು 'ಱ' ಘಟಿತ ಶಬ್ದಗಳ ನಿಷ್ಕರ್ಷೆ ಸ್ವಲ್ಪ ತೊಡಕಿನ ವಿಚಾರವಾದರೂ ಆವರೆಗೂ ಬಂದಿರುವ ವಿಚಾರ ವಿಮರ್ಶೆಗಳ ಸಹಾಯದಿಂದ ಸಾಧ್ಯವಿರುವ ಮಟ್ಟಿಗೂ ಇದರ ಗೊಂದಲ ನಿವಾರಣೆ ಸಾಧ್ಯವಾಗ ಬಹುದು. ಉದಾಹರಣೆಗೆ 'ಉಂಬಳಿ' ಎಂಬ ಶಬ್ದವನ್ನು ಕೇಶಿರಾಜ 'ೞ' ಘಟಿತ ಶಬ್ದವನ್ನಾಗಿ ಹೇಳಿದ್ದಾನೆ. ಆದರೆ ಎಂ. ಚಿದಾನಂದ ಮೂರ್ತಿಗಳು ಹಸ್ತಪ್ರತಿಗಳಿಗಿಂತ ಶಾಸನಗಳು ಹೆಚ್ಚು ವಿಶ್ವಸನೀಯ ಎಂದು ಹೇಳಿ ಶಾಸನಗಳಲ್ಲಿ ಈ ಶಬ್ದ ಉಂಬಳಿ ಎಂದು ಕುಳವಾಗಿ ಲಿಖಿತವಾಗಿದೆ. ಆದ್ದರಿಂದ ಕುಳಘಟಿತ ಉಂಬಳಿ ಶಬ್ದವೇ ಸರಿಯಾದುದು ಎಂದು ಹೇಳಿದ್ದಾರೆ (ನೋಡಿ:-**ಉಂಬಳಿ ಅಥವಾ ಉಂಬೞಿ?** - ವಾಗರ್ಥ, ಬಾಪ್ಕೋ ಪ್ರಕಾಶನ, ಬೆಂಗಳೂರು-೧೯೮೧, ಪುಟ ೧೯೩-೧೯೭).

೩. ಶಾಸನಗಳಲ್ಲಿ ಅಪಲಿಖಿತಗೊಂಡ ಶಬ್ದಗಳು ಹೇರಳವಾಗಿ ಸಿಗುತ್ತವೆ. ಎಷ್ಟೋ ಬಾರಿ ಶಾಸನಗಳಲ್ಲಿ ಶಬ್ದಗಳು ಲಿಪಿಕಾರನಿಂದಲೋ ಕಂಡರಣೆಕಾರನಿಂದಲೂ ತಪ್ಪಾಗಿರುವ ಸಂಭವವುಂಟು. ಆ ಶಬ್ದಗಳು ಯಾವುವು ಎಂದು ಗುರುತಿಸಲು ಸಹ ಕೆಲವು ಬಾರಿ ಕಷ್ಟಸಾಧ್ಯವಾಗುತ್ತದೆ. ಅಂತಹ ಕಡೆಗಳಲ್ಲಿ ಮತ್ತು ಇತರತ್ರ ಅಗತ್ಯವಿರುವ ಎಡೆಗಳಲ್ಲಿ ಲಘು ಟಿಪ್ಪಣಿ ನೀಡಿದರೆ ತುಂಬಾ ಅನುಕೂಲವಾಗುತ್ತದೆ. ಆದ್ದರಿಂದ ಶಾಸನ ಪದಕೋಶದಲ್ಲಿ ಶಬ್ದಗಳ ದಾಖಲಾತಿಗೆ ಮೊದಲು ಆಯಾ ಶಬ್ದಗಳ ಶುದ್ಧ ರೂಪವನ್ನು ನಿಷ್ಕರ್ಷಿಸಿಕೊಂಡು ಅದನ್ನೇ ಪ್ರಧಾನ ಶಬ್ದವಾಗಿ ದಾಖಲಿಸಬೇಕು. ನಂತರ ಪುಷ್ಪಾವರಣದಲ್ಲಿ ಆ ಅಪಲಿಖಿತ ಶಬ್ದವನ್ನು ಸೂಚಿಸಬಹುದಾಗಿದೆ. ಇವೆಲ್ಲಕ್ಕಿಂತ ಮೊದಲು ಸುಸಂಪಾದಿತವಾದ ಶಾಸನ ಪಠ್ಯ ಅತ್ಯಗತ್ಯ. ಈ ವಿಷಯದಲ್ಲಿ ರಾ. ನರಸಿಂಹಾಚಾರ್ಯರ **'ಶಾಸನಪದ್ಯ ಮಂಜರಿ'** ಮಾರ್ಗದರ್ಶಕವಾಗಿದೆ. ಅರ್ಥ ಮಾಡಲು ಆಗದಿರುವ ಶಬ್ದಗಳನ್ನು ಪಟ್ಟಿ ಮಾಡಿ ಅನುಬಂಧದಲ್ಲಿ ನೀಡಬೇಕು.

೪. ಶಾಸನ ಪದಕೋಶದಲ್ಲಿ ಶಬ್ದದ ಪ್ರಧಾನ ದಾಖಲಾತಿಯ ನಂತರ ಅದರ ಅರ್ಥವನ್ನು ಯಾವುದೇ ಗೊಂದಲಕ್ಕೆಡೆಯಾಗದಂತೆ ನೀಡಬೇಕು. ಇದರ ನಂತರ ಪ್ರಯೋಗವನ್ನು ದಾಖಲಿಸಬೇಕು. ಆನಂತರ ದುಂಡುಕಂಸದೊಳಗೆ

ಪ್ರಯೋಗದ ಆಕರವನ್ನು ಸೂಚಿಸಬೇಕು. ಆಕರವನ್ನು ದಾಖಲಿಸಿ ಆಯಾ ಶಾಸನದ ಸಂಖ್ಯೆಯನ್ನು ಮತ್ತು ಶಾಸನದ ವರ್ಷವನ್ನು ದಾಖಲಿಸಬೇಕು. ಆಕರ ಸೂಚನೆ ಸಂಕೇತಾಕ್ಷರಗಳಲ್ಲಿ ಯಾವುದೇ ಗೊಂದಲಕ್ಕೆಡೆಯಾಗದಂತೆ ಇರಬೇಕು. ನಂತರ ನಿಷ್ಪತ್ತಿಯನ್ನು ದಾಖಲಿಸಬೇಕು. ಈ ನಿಷ್ಪತ್ತಿ ಸಂದೇಹದಿಂದ ಕೂಡಿದ್ದರೆ ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಬೇಕು. ಕಂಸಗಳನ್ನು ಯಾವ ರೀತಿಯಾಗಿ ಬಳಸಿದೆ ಎಂಬುದನ್ನು ಆರಂಭದಲ್ಲಿಯೇ ಸ್ಪಷ್ಟಪಡಿಸಬೇಕು.

ಶಾಸನ ಪದಕೋಶದಲ್ಲಿ ಅಕಾರಾದಿಯಾಗಿ ಶಬ್ದಗಳ ದಾಖಲಾತಿಯನ್ನು ನೀಡಿದರೆ ಅನುಕೂಲ. ಆದರೆ ಮುಂದೆ ಸೂಚಿಸಿರುವಂತೆ ಅನುಬಂಧಗಳಲ್ಲಿ ಶಬ್ದಗಳನ್ನು ದಾಖಲಿಸಿದರೆ ಅವು ಯಾವ ಎಡೆ ದಾಖಲಾಗಿವೆ ಎಂಬುದು ಕೆಲವು ಬಾರಿ ಗೊಂದಲ ಮೂಡಿಸುತ್ತದೆ. ಇಂತಹ ಸಂದರ್ಭಗಳಲ್ಲಿ ಶ್ರೀನಿವಾಸ ರಿತ್ತಿಯವರ ಕೋಶದ ರೀತ್ಯಾ ವಿಭಾಗಗಳನ್ನು ಮಾಡಿಕೊಂಡು ಗ್ರಂಥಾಂತ್ಯದಲ್ಲಿ ಪುಟಸಂಖ್ಯೆಯೊಡನೆ ಅಕಾರಾದಿ ಪದಸೂಚಿಯನ್ನು ನೀಡಬಹುದು.

೫. ಪ್ರತಿಯೊಂದು ಶಬ್ದಕ್ಕೂ ಪ್ರಯೋಗಗಳನ್ನು ನೀಡುವುದು ಕಡ್ಡಾಯ ಮತ್ತು ಅದೇ ಸಮರ್ಥನೀಯ ಮಾರ್ಗ. ಈ ಪ್ರಯೋಗಗಳನ್ನು ನೀಡುವಾಗ ಈ ಕೆಳಕಂಡ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಒಳ್ಳೆಯದು.

(ಅ) ಒಂದು ಶಬ್ದಕ್ಕೆ ಸಾಧ್ಯವಿರುವ ಮಟ್ಟಿಗೂ ಮೊದಲು ಪ್ರಾಚೀನಶಾಸನ ಪ್ರಯೋಗವನ್ನು ನೀಡಿ ನಂತರ ಮಧ್ಯಕಾಲದ ಪ್ರಯೋಗ ಆನಂತರ ಅರ್ವಾಚೀನ ಕಾಲದ ಪ್ರಯೋಗಗಳನ್ನು ನೀಡಿದರೆ ಹೆಚ್ಚು ಅನುಕೂಲವಾಗುತ್ತದೆ. ಏಕೆಂದರೆ ಆ ಶಬ್ದ ಕಾಲಾನುಕಾಲಕ್ಕೆ ಬದಲಾವಣೆ ಹೊಂದಿದ ಭಾಷಿಕ ವ್ಯತ್ಯಾಸದ ಹೊಳಹು ಸ್ಪಷ್ಟವಾಗಿ ತಿಳಿದುಬರುತ್ತದೆ. ಆ ಭಾಷಿಕ ವ್ಯತ್ಯಾಸ ಹೊಂದಿರುವ ಪದವನ್ನು ದಪ್ಪ ಅಕ್ಷರಗಳಲ್ಲಿ ತೋರಿಸುವುದು ಸೂಕ್ತವೆಂದು ಕಾಣುತ್ತದೆ (ಆದರೆ ಮೊದಲು ಅರ್ವಾಚೀನ ಪ್ರಯೋಗವನ್ನೇ ಪ್ರಧಾನ ದಾಖಲಾತಿಯನ್ನಾಗಿ ಮಾಡಿದರೆ ಸೂಕ್ತ). ಹಲವು ಶಬ್ದಗಳು ಪ್ರಾದೇಶಿಕವಾಗಿ ಭಿನ್ನಾರ್ಥಗಳನ್ನು ಹೊಂದಿರುತ್ತವೆ. ಅವುಗಳನ್ನು ಎಚ್ಚರಿಕೆಯಿಂದ ವಿಶ್ಲೇಷಿಸಿ ದಾಖಲಿಸಬೇಕು.

(ಆ) ಪ್ರತಿಯೊಂದು ಶಬ್ದಕ್ಕೂ ಇತರ ದ್ರಾವಿಡ ಭಾಷೆಗಳ ಜ್ಞಾತಿ ಪದಗಳ ವಿವರಣೆಯನ್ನು (ಲಭ್ಯವಿರುವ ಮಟ್ಟಿಗೂ) ನೀಡಬೇಕು ಮತ್ತು ಸಂಸ್ಕೃತ ಹಾಗೂ ಇತರ ಭಾಷೆಗಳ ಮೂಲದಿಂದ ಆ ಪದ ಕನ್ನಡಕ್ಕೆ ಸ್ವೀಕರಣವಾಗಿದ್ದರೆ ಅವುಗಳ ವಿವರ, ಕನ್ನಡದಿಂದಲೇ ಶಬ್ದಗಳನ್ನು ಇತರ ಭಾಷೆಗಳು ಸ್ವೀಕರಿಸಿದ್ದರೆ ಆ ವಿವರ ನೀಡುವುದು ವ್ಯಾಸಂಗಕ್ಕೆ ಹೆಚ್ಚು ಸಹಕಾರಿ. ಸಂಸ್ಕೃತ, ಪ್ರಾಕೃತ ಮತ್ತು ಇತರ ಭಾಷೆಗಳ ಹಾಗೂ ನಿಘಂಟುಗಳ ಪೂರ್ಣ ಪ್ರಯೋಜನ ಪಡೆದುಕೊಳ್ಳುವುದು ಅತ್ಯಗತ್ಯ.

(ಇ) ಎಷ್ಟೋ ಬಾರಿ ಕೆಲವು ಶಬ್ದಗಳಿಗೆ ಅರ್ಥೈಸಬೇಕಾದರೆ ಪ್ರಾಚೀನ ಕನ್ನಡ ಕಾವ್ಯಗಳು ಹಾಗೂ ಶಾಸ್ತ್ರ ಕೃತಿಗಳ ಸಹಾಯವೂ ಅತ್ಯಗತ್ಯ. ಅಂತಹ ಕಡೆಗಳಲ್ಲಿ ಆ ಕೃತಿಗಳ ಪ್ರಯೋಗಗಳನ್ನು ಸೂಕ್ತ ಸಂಕೇತಗಳೊಡನೆ ದಾಖಲಿಸತಕ್ಕದ್ದು.

೬. ಶಾಸನ ಪದಕೋಶದ ಆರಂಭದಲ್ಲಿ ಉಪೋದ್ಘಾತವನ್ನು ನೀಡಿ ನಂತರ ಈ ಕೋಶಕ್ಕೆ ಬಳಸಿಕೊಂಡಿರುವ ಆಕರಗಳನ್ನು ಯಾವುದೇ ಗೊಂದಲಕ್ಕೆಡೆಯಿರದಂತೆ ಕೃತಿ, ಕರ್ತೃ, ಕಾಲ, ಪ್ರಕಟನಾ ವಿವರಗಳೊಡನೆ ನೀಡಬೇಕು. ಕೋಶದೊಳಗೆ ಬಳಸಿರುವ ಸಂಕೇತಾಕ್ಷರಗಳೊಡನೆ, ಆಕರಗಳ ವಿವರ ನೀಡುವಾಗ ಯಾವ ಪರಿಷ್ಕರಣವನ್ನು ಬಳಸಲಾಗಿದೆಯೋ ಅದರ ಬಗ್ಗೆ ಮಾತ್ರ ವಿವರಗಳನ್ನು ನೀಡಿದರೆ ಗೊಂದಲಕ್ಕೆಡೆ ಯಾಗದು. ಆಯಾ ಆಕರಗಳ ವಿವರ ನೀಡುವಾಗ ಸಂಪಾದಕರು, ಪ್ರಧಾನ ಸಂಪಾದಕರು ಇವರುಗಳ ವಿವರಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

೭. ಶಾಸನ ಪದಕೋಶಕ್ಕೆ ಶಾಸನಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಮಾತ್ರ ಬಳಸಿಕೊಂಡರೆ ಸಾಲದು. ಶಾಸನಗಳಲ್ಲಿ ಬಂದಿರುವ ಪಾರಿಭಾಷಿಕ ಶಬ್ದಗಳು ಹಾಗೂ ಇತರ ವಿಷಯಗಳನ್ನು ಕುರಿತು ಬಿಡಿ ಬಿಡಿಯಾಗಿ ಅನೇಕ ಲೇಖನಗಳು ಪ್ರಕಟವಾಗಿವೆ. ಈ ಲೇಖನಗಳನ್ನೂ ಬಳಸಿಕೊಳ್ಳಬೇಕು. ಈ ಕ್ಷೇತ್ರದಲ್ಲಿ ಇವುಗಳದೇ ಸಿಂಹಪಾಲೆಂದರೂ ಸಲ್ಲುತ್ತದೆ. ಈ ರೀತಿ ಬಳಸಿಕೊಂಡ ಲೇಖನಗಳನ್ನು ಆರಂಭದಲ್ಲಿಯೇ ಪ್ರತ್ಯೇಕವಾಗಿ ಪಟ್ಟಿ ಮಾಡಿಕೊಡಬೇಕು.

೮. ಶಾಸನಗಳಲ್ಲಿ ಕಂಡು ಬರುವ ವ್ಯಕ್ತಿಗಳ ಹೆಸರುಗಳನ್ನೆಲ್ಲಾ (ಉದಾ: ಕೌಟಿಲ್ಯ ಅಥವಾ ಚಾಣಕ್ಯ, ಸುಶ್ರುತ, ಕುಮಾರಿಲಭಟ್ಟ, ದತ್ತಕ) ಪಾರಿಭಾಷಿಕ ಶಬ್ದಗಳೆಂಬಂತೆ ತೋರಿಸುವುದು ಸರಿಯಲ್ಲ. ಆದ್ದರಿಂದ ವ್ಯಕ್ತಿಗಳ ಹೆಸರುಗಳು

ಮತ್ತು ವಿವರಗಳನ್ನು ಹಾಗೂ ಬಿರುದುಗಳನ್ನು ಅನುಬಂಧವಾಗಿ ದಾಖಲಿಸುವುದು ಒಳ್ಳೆಯದು ಮತ್ತು ಶಾಸನಗಳಲ್ಲಿ ಕಂಡು ಬರುವ ಗ್ರಂಥಗಳು, ಗ್ರಂಥಕಾರರನ್ನು ಸಹ ಅನುಬಂಧವಾಗಿಯೇ ನೀಡುವುದು ಸೂಕ್ತ. ಗ್ರಂಥಗಳ ಹೆಸರುಗಳನ್ನು ನೀಡುವಾಗ ಅವುಗಳಿಗೆ ವಿವರಣೆ ನೀಡಬೇಕು. ಒಂದು ಗ್ರಂಥ ಎಂದು ಅರ್ಥ ನೀಡಿದರೆ ಏನೂ ಪ್ರಯೋಜನವಾಗದು. ಹಾಗೆ ನೋಡಿದರೆ ಇವುಗಳಿಗೆ ಪ್ರತ್ಯೇಕವಾದ ಕೋಶಗಳೇ ರಚಿತವಾಗಬೇಕಾಗಿವೆ.

೯. ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಆಯುಧಗಳು, ಪ್ರಾಣಿ ಪಕ್ಷಿಗಳು ಮುಂತಾದವುಗಳ ವಿವರಗಳನ್ನು ಪ್ರತ್ಯೇಕ ಅನುಬಂಧವಾಗಿಯೇ ದಾಖಲಿಸುವುದು ಒಳ್ಳೆಯದು. ಅಶ್ವಶಾಸ್ತ್ರ, ಗಜಶಾಸ್ತ್ರಕ್ಕೆ ಸಂಬಂಧಪಟ್ಟ ಶಬ್ದಗಳನ್ನು ಅನುಬಂಧದಲ್ಲಿಯೇ ನೀಡಬೇಕು. ಒಂದು ಪ್ರಾಣಿ, ಒಂದು ವಿಧದ ಆಯುಧ ಎಂದು ಅರ್ಥೈಸಿದರೆ ಏನೂ ಪ್ರಯೋಜನವಾಗದು. ಈ ಶಾಸ್ತ್ರಗಳಿಗೆ ಪ್ರತ್ಯೇಕ ಕೋಶಗಳೇ ಸಿದ್ಧವಾಗಬೇಕಾಗಿದೆ. ಗಜಶಾಸ್ತ್ರ ಕೋಶವೊಂದು ಈಗಾಗಲೇ ಪ್ರಕಟವಾಗಿದೆ (**ಗಜಶಾಸ್ತ್ರ ಶಬ್ದಕೋಶ**–ಟಿ.ವಿ. ವೆಂಕಟಾಚಲ ಶಾಸ್ತ್ರೀ, ಕಾವ್ಯಾಲಯ, ಮೈಸೂರು–೧೯೯೪). ಸ್ಥಳನಾಮಗಳ ಹೆಸರುಗಳನ್ನೇ ಪ್ರತ್ಯೇಕವಾಗಿ ದಾಖಲಿಸಬೇಕು. ಸ್ಥಳನಾಮಗಳನ್ನು ಕುರಿತು ಕನ್ನಡದಲ್ಲಿ ಅನೇಕ ಕೃತಿಗಳು ರಚಿತವಾಗಿವೆ. ಇವುಗಳ ನೆರವು ಪಡೆಯಬೇಕು. ಸ್ಥಳನಾಮಗಳು ಮತ್ತು ಭೌಗೋಳಿಕ ವಿವರಗಳನ್ನು ದಾಖಲಿಸುವ ನಿಟ್ಟಿನಲ್ಲಿ ಕುಂದೂರಿ ಈಶ್ವರದತ್ತರ **'ಪ್ರಾಚೀನಾಂಧ್ರ ಚಾರಿತ್ರಕ ಭೂಗೋಳಮು'** (ಆಂಧ್ರ ಪ್ರದೇಶ ಸಾಹಿತ್ಯ ಅಕಾಡೆಮಿ, ಹೈದರಾಬಾದ್–೧೯೭೭, ದ್ವಿತೀಯ ಮುದ್ರಣ) ಮತ್ತು ಡಿ.ಸಿ. ಸರ್ಕಾರ್ ಅವರ *'Studies in the Geography of Ancient and Medieval India'* (ಮೋತಿಲಾಲ್ ಬನಾರಸಿದಾಸ್, ದೆಹಲಿ–೧೯೭೧, ದ್ವಿತೀಯ ಪರಿಷ್ಕೃತ, ವಿಸ್ತೃತ ಮುದ್ರಣ) ಕೃತಿಗಳು ಮಾರ್ಗದರ್ಶಕಗಳಾಗಿವೆ.

೧೦. ಅಗತ್ಯವಿರುವೆಡೆಗಳಲ್ಲೆಲ್ಲಾ ಹೆಚ್ಚಿನ ವಿವರಣೆಯನ್ನು ನೀಡಬೇಕು ಮತ್ತು ಆ ವಿವರಣೆಯ ಮೂಲವೇನು ಎಂಬುದನ್ನು ಸ್ಪಷ್ಟವಾಗಿ ನಮೂದಿಸಬೇಕು. ಅತಿಯಾದ ಊಹೆಗಳಿಂದ ವಿವರಣೆಗಳನ್ನು ತುಂಬಬಾರದು.

೧೧. ಒಂದು ಶಬ್ದಕ್ಕೆ ಅರ್ಥವನ್ನು ನೀಡಿ ಪ್ರಯೋಗವನ್ನು ದಾಖಲಿಸುವುದು ಸರಿಯೇ. ಆದರೆ ಆ ಅರ್ಥ ತೃಪ್ತಿಕರವೆಂದು ತೋರದಿರಬಹುದು. ಹೆಚ್ಚಿನ ವಿಶ್ಲೇಷಣೆಗೆ ತೊಡಗಲು ಅಲ್ಲಿ ನೀಡಿರುವ ಪ್ರಯೋಗವನ್ನು ಆಶ್ರಯಿಸಬಹುದು. ಆದರೆ ಆ ಪ್ರಯೋಗವು ಸೀಮಿತ ಶಬ್ದವನ್ನು ಮಾತ್ರ ಒಳಕೊಂಡಿದ್ದರೆ ವಿಶ್ಲೇಷಣೆ ಸಾಧ್ಯವಾಗಲಾರದು. ಸಂದರ್ಭವೂ ಸ್ಪಷ್ಟವಾಗಿ ತಿಳಿಯುವಂತಿರಬೇಕು. ಕೆಲವು ಶಬ್ದಗಳು ಪ್ರಾದೇಶಿಕತೆಯ ಕಾರಣದಿಂದ ಭಿನ್ನ ಅರ್ಥವನ್ನು ಹೊಂದಿರುತ್ತವೆ. ಆದ್ದರಿಂದ ಶಬ್ದಗಳಿಗೆ ನೀಡಿರುವ ಪ್ರಯೋಗಗಳು ಸಂದರ್ಭವನ್ನು ಸೂಚಿಸುವಂತೆ ಪೂರ್ಣ ಪಠ್ಯವನ್ನೇ ಒಳಕೊಂಡಿದ್ದರೆ ಸೂಕ್ತವೆಂದು ಹೇಳಬಹುದು. ಈ ದಿಶೆಯಲ್ಲಿ ಕುಂದೂರಿ ಈಶ್ವರದತ್ತರ **'ಶಾಸನ ಶಬ್ದಕೋಶಮು'** ಮಾರ್ಗದರ್ಶಕವಾಗಿದೆ.

೧೨. ಶಾಸನ ಪದಕೋಶದಲ್ಲಿ ನಾಣ್ಯಗಳ ಬಗೆಗಿನ ವಿವರಗಳನ್ನೂ ನೀಡಬೇಕು. (ಸಾಧ್ಯವಾದರೆ ಅನುಬಂಧದಲ್ಲಿ) ನಾಣ್ಯ ಶಾಸ್ತ್ರಕ್ಕೆ ಪ್ರತ್ಯೇಕ ಕೋಶವೇ ಸಿದ್ಧವಾಗಬೇಕಾಗಿದೆ.

೧೩. ಶಾಸನ ಪದಕೋಶದಲ್ಲಿ ವಾಸ್ತುಶಿಲ್ಪ, ಶಿಲ್ಪಕಲೆ, ಜ್ಯೋತಿಷ್ಯ, ಸಂಗೀತ ಮುಂತಾದವುಗಳಿಗೆ ಸಂಬಂಧಪಟ್ಟ ಶಬ್ದಗಳನ್ನೂ ಸೇರ್ಪಡೆಗೊಳಿಸಬೇಕು. ಆದರೆ ಬಹುಮಟ್ಟಿಗೆ ಈ ವಿವರಗಳು ಬೇರೆಡೆ ದೊರಕುತ್ತಿದ್ದರೆ ಆ ಆಕರಗಳನ್ನು ಸೂಚಿಸಬಹುದೆಂದು ತೋರುತ್ತದೆ. ಸಂಗೀತಕ್ಕೆ ಸಂಬಂಧಪಟ್ಟ ಶಬ್ದಗಳಂತೂ ಶಾಸನಗಳಲ್ಲಿ ಹೇರಳವಾಗಿ ದೊರೆಯುತ್ತಿದ್ದು ಇವುಗಳ ವಿವರಣಾತ್ಮಕ ಕೋಶವೊಂದು ಪ್ರತ್ಯೇಕವಾಗಿಯೇ ಸಿದ್ಧವಾಗಬೇಕಾಗಿದೆ. ಜ್ಯೋತಿಷ್ಯಕ್ಕೆ ಸಂಬಂಧಿಸಿದ ಶಬ್ದಗಳು ,ಶಾಸನೋಕ್ತ ಗ್ರಹಣಗಳು ಮುಂತಾದ ವಿಚಾರಗಳನ್ನು ಒಳಕೊಂಡ ಕೋಶವೊಂದು ರಚನೆಯಾಗಬೇಕಾಗಿದೆ.

೧೪. ಶಾಸನಗಳಲ್ಲಿ ಕಂಡುಬರುವ ಸಂಕ್ಷೇಪಗಳು,ಸಂಕೇತಗಳು ಮತ್ತು ಚಿಹ್ನೆಗಳ ಬಗೆಗೆ ವಿಶ್ಲೇಷಿಸಿ ಅದನ್ನು ಪ್ರತ್ಯೇಕ ಅನುಬಂಧವಾಗಿ ದಾಖಲಿಸಬೇಕು. (ಇವುಗಳ ಬಗೆಗೆ ಮಾಹಿತಿಗೆ ನೋಡಿ:– 'ಶಾಸನಗಳಲ್ಲಿ ಸಂಕೇತ ಮತ್ತು ಸಂಕ್ಷೇಪಗಳ ಬಳಕೆ ಒಂದು ಅವಲೋಕನ' – ಪಿ.ವಿ. ಕೃಷ್ಣಮೂರ್ತಿ, ಎನ್. ಗೀತಾ. **ಇತಿಹಾಸ ದರ್ಶನ**–೧೬, ೨೦೦೧, ಪುಟ ೧೭–೨೧).

೧೫. ಶಾಸನಗಳಲ್ಲಿ ಕಂಡುಬರುವ ಹಬ್ಬಗಳು, ಉತ್ಸವಗಳು, ಸ್ಥಳಪುರಾಣಗಳು, ಸ್ಥಳೀಯ ಐತಿಹ್ಯಗಳು ಮುಂತಾದುವುಗಳನ್ನು ಪ್ರತ್ಯೇಕ ಅನುಬಂಧವಾಗಿ ನಮೂದಿಸಬೇಕು. ಸಾಮಾಜಿಕ ಧಾರ್ಮಿಕ ಮುಂತಾದ ಶಬ್ದಗಳನ್ನು ಮಾತ್ರ

ಅರ್ಥೈಸಲು ಪ್ರತ್ಯೇಕ ಸಮಾಜೋ ಸಾಂಸ್ಕೃತಿಕ ಪದಕೋಶಗಳು ಅಗತ್ಯ. ಶಾಸನಗಳಲ್ಲಿ ಕಂಡುಬರುವ ನಾಣ್ಯಗಳು, ಧರ್ಮ, ಕೃಷಿ, ಪರಿಸರ, ಅಳತೆಗಳು ಮುಂತಾದವುಗಳ ವಿವರಣೆ ಮತ್ತು ವಿಶ್ಲೇಷಣೆಗಳಿಗೆ ಪ್ರತ್ಯೇಕವಾದ ಕೋಶಗಳೇ ರಚನೆಯಾಗಬೇಕಾಗಿದೆ (ಈ ರೀತಿಯ ಪದಕೋಶಗಳ ಹೆಚ್ಚಿನ ವಿವರಗಳಿಗೆ ಮತ್ತು ಸಾಧ್ಯತೆಗಳಿಗೆ ನೋಡಿ:- **'ಕನ್ನಡ ಅಭಿಜಾತ ಸಾಹಿತ್ಯ, ಅಧ್ಯಯನದ ಅವಕಾಶಗಳು ಆಹ್ವಾನಗಳು'**- ಟಿ.ವಿ. ವೆಂಕಟಾಚಲ ಶಾಸ್ತ್ರೀ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೯).

೧೬. ಕರ್ನಾಟಕದ ಕನ್ನಡೇತರ ಶಾಸನಗಳಿಗೆ (ಸಂಸ್ಕೃತ, ಪ್ರಾಕೃತ, ತಮಿಳು, ತೆಲುಗು, ಪರ್ಷಿಯನ್ ಇತ್ಯಾದಿ ಭಾಷಾ ಶಾಸನಗಳು) ಸಂಬಂಧಪಟ್ಟಂತೆ ಪ್ರತ್ಯೇಕ ಶಾಸನ ಪದಕೋಶ ರಚನೆಯಾಗಬೇಕು.

೧೭. ಶಾಸನೋಕ್ತ ಸಂಕೇತ (ಸಂಖ್ಯಾ) ಶಬ್ದಗಳನ್ನು ಒಂದೆಡೆ ಕಲೆಹಾಕಿ ಪ್ರತ್ಯೇಕ ಕೋಶವನ್ನು ರಚಿಸಬಹುದಾಗಿದೆ.

ಈ ಮೇಲೆ ತಿಳಿಸಿರುವಂತೆ ಪ್ರತಿಯೊಂದು ಆಕರವನ್ನೂ, ಸಲಹೆ ಸೂಚನೆಗಳನ್ನೂ ಗ್ರಾಹ್ಯವಾದರೆ ಅವಲಂಬಿಸಿ ಶಾಸನ ಪದಕೋಶದ ಪ್ರಕಟನೆ ಕರ್ನಾಟಕದಲ್ಲಿ ಆಗಬೇಕಾಗಿದೆ. ಆಂಧ್ರಪ್ರದೇಶ, ತಮಿಳುನಾಡು, ಕೇರಳ ಮುಂತಾದ ಕಡೆಗಳಲ್ಲಿ ಶಾಸನ ಪದಕೋಶಗಳು ರಚಿತವಾಗಿ ಪ್ರಸಿದ್ಧವೂ ಆಗಿವೆ. ಕರ್ನಾಟಕದಲ್ಲಿ ಈ ಕೆಲಸ ಆದಷ್ಟು ಬೇಗ ನಡೆದು ಶಾಸನ ಪದಕೋಶವು ಕರ್ನಾಟಕದ ಹೆಮ್ಮೆಯ ಪ್ರಕಟನೆಯಾಗಬೇಕೆಂದು ಆಶಿಸುತ್ತೇವೆ.

(ಈ ಬರಹಮನ್ ರಚನೆಗ್ಯೆವಲ್ಲಿ ಮೈಸೂರು ಎಚ್.ಎಂ. ನಾಗರಾಜರಾಯರ್, ಬೆಙ್ಗಳೂರು ಎಂ. ಚಿದಾನಂದಮೂರ್ತಿಗಳ್, ಕ್ಯೆರಾ. ಗಣೇಶರ್, ಪಿ.ವಿ. ಕೃಷ್ಣಮೂರ್ತಿಗಳ್, ಎಚ್.ಎಸ್. ಗೋಪಾಲರಾಯರ್ಗ್ಗಳು ಮಾರ್ಗ್ಗದರ್ಶನಮಾನ್ ಗೈದಿರ್ಪರ್, ಇದಕ್ಕಾಗಿವರ್ಗ್ಗೆನ್ನ ಕೃತಜ್ಞತೆಯಾನ್ ಸಮರ್ಪ್ಪಿಪೆನ್)



# ಶಾಸನಗಳಲ್ಲಿ ಜಲವಿಜ್ಞಾನ – ತಂತ್ರಜ್ಞಾನ

– ಡಾ॥ ಹರಿಹರ ಶ್ರೀನಿವಾಸರಾವ್*

ನೀರು ಒಂದು ಜೀವನಾವಶ್ಯಕ ವಸ್ತು. ಮನುಷ್ಯನ ದೇಹದಲ್ಲಿ ಇರುವ ನೀರಿನ ಭಾಗ ಶೇಕಡಾ ೬೫.೭೦. ಜೀವದ್ರವವಾದ ಜೀನುಗಳು, ಜೀವಕೋಶಗಳಿಂದ ಪ್ರಾರಂಭವಾಗಿ ಭೂಮಿಯ ಮೇಳೆ ಹುಟ್ಟಿಬರುವ ಜೀವರಾಶಿಗಳು ಅವುಗಳ ಬದುಕು, ಸಂತಾನ ವಿಕಸನದ ಪ್ರತಿಯೊಂದು ಹಂತದಲ್ಲಿಯೂ ನೀರು ಪ್ರಮುಖ ಪಾತ್ರ ವಹಿಸುತ್ತದೆ. ಇದನ್ನೆ ಶಾಸನಕಾರರು 'ಸಕಲ ಜೀವರಾಶಿಗಳಿಗೆಲ್ಲಾ ಉದಕವೇ ಪ್ರಾಣಮಾಗೆ' ಎಂದು ಹೇಳುತ್ತಲೇ ಅದರ ವಿವಿಧ ರೂಪಗಳನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.

ಕೆಲವು ಮರಗಳು ಅವುಗಳ ಪರಿಸರದಲ್ಲಿ ಹುತ್ತ, ಕಾಶಿ ಹುಲ್ಲು ಇತ್ಯಾದಿಗಳಿದ್ದರೆ ಎಷ್ಟು ದೂರದಲ್ಲಿ ಮತ್ತು ಎಷ್ಟು ಆಳದಲ್ಲಿ ಯಾವ ಪ್ರಮಾಣದಲ್ಲಿ ನೀರು ದೊರೆಯುತ್ತದೆ ಎನ್ನುವುದನ್ನು 'ಲೋಕೋಪಕಾರ' (ಕ್ರಿ.ಶ. ೧೦೨೫) ಎನ್ನುವ ಕನ್ನಡ ಗ್ರಂಥದಲ್ಲಿ ಚಾವುಂಡರಾಯನು ವಿವರಿಸಿದ್ದಾನೆ. ಈ ಮರಗಳ ಈಗಿನ ಸಸ್ಯಶಾಸ್ತ್ರಿಯ ಹೆಸರುಗಳನ್ನು ಪಕ್ಕದಲ್ಲಿ ಸೂಚಿಸಲಾಗಿದೆ.

ತಿಲಕದ ಮರ, ಮಾವಿನ ಮರ, ಬೆಲ್ಲವತ್ತದ ಮರ ಎಂದರೆ ಹೆಬ್ಬೆಯ ಗಿಡ, ಬಾಗೆ ಅಥವಾ ಶಿರೀಷದ ಮರ, ಗೇರು ಮರ, ನೆಲ್ಲಿಮರ ಇಂತಹ ಮರಗಳ ಹತ್ತಿರ ಮೊದಲು ಹುತ್ತವಿದ್ದು ನಂತರ ಮರಗಳಿದ್ದರೆ, ಆ ಮರಗಳಿಂದ ಬಡಗಣ (ಉತ್ತರ) ದಿಕ್ಕಿನಲ್ಲಿ ಮೂರುವರೆ ಹಸ್ತಪ್ರಮಾಣ (ಸು. ೧೮ ಅಡಿ) ಬಿಟ್ಟು ತೋಡಿದಾಗ ನಾಲ್ಕು ಪುರುಷ ಪ್ರಮಾಣ (೨೪ ಅಡಿ)ದಲ್ಲಿ ನೀರು ಹುಟ್ಟುತ್ತದೆ. ಭೂಮಿಯನ್ನು ಸಮೀಕ್ಷಿಸಿದಾಗ ಯಾವ ಕಡೆಯಲ್ಲೂ ಹುತ್ತಗಳಾಗಲೀ, ಹಾಲನ್ನು ಹೊಂದಿರುವ ಮರಗಳಾಗಲೀ ಕಂಡುಬರದೇ ಇದ್ದಾಗ ಅಂತಹ ಎಡೆಗಳಲ್ಲಿ ತಿಗಡೆ ಮರ, ಅಣಿಲೆ ಅಥವಾ ಅಳಲೆ ಮರ, ಅಶೋಕ, ಪಾದರಿಯ ಮರ, ನೇರಳೆಮರ, ದರ್ಬೆಹುಲ್ಲು, ಕಾಶಿ ಅಥವಾ ಕಾಚಿಹುಲ್ಲು ಇವುಗಳಲ್ಲಿ ಯಾವುದಾದರೂ ಒಂದು ಸಸ್ಯವು ಕಂಡು ಬಂದರೆ, ಆ ಮರವಿರುವ ಸ್ಥಳದಿಂದ ಎರಡು ಹಸ್ತ ಪ್ರಮಾಣ (೧೨ ಅಡಿ) ಬಿಟ್ಟು ಉತ್ತರ (ಬಡಗಣ) ದಿಕ್ಕಿನಲ್ಲಿ ಭೂಮಿಯನ್ನು ತೋಡಿದಾಗ ಐದು ಪುರುಷ ಪ್ರಮಾಣ (ಸು. ೩೦ ಅಡಿ) ದಲ್ಲಿ ನೀರು ಹುಟ್ಟುತ್ತದೆ. ಬಾಗೆಮರ ಅಥವಾ ಶಿರೀಷ ಮರವಿರುವ ಸ್ಥಳದಿಂದ ಉತ್ತರಕ್ಕೆ ಹುತ್ತ ಇದ್ದರೆ, ಆ ಹುತ್ತದ ವಾಯವ್ಯ ದಿಕ್ಕಿನಲ್ಲಿ ಆರು ಹಸ್ತ (೨೪ ಅಡಿ) ಬಿಟ್ಟು ತೋಡಿದಾಗ ೫ ಪುರುಷ (೩೦ ಅಡಿ) ಪ್ರಮಾಣದಲ್ಲಿ ನೀರು ಹುಟ್ಟುತ್ತದೆ. ಮೂಡಣ (ಪೂರ್ವ) ದಿಕ್ಕಿನಿಂದ ನೀರಿನ ಸೆಲೆ ಹುಟ್ಟುತ್ತದೆ. ಇದರಲ್ಲಿ ಒಂದು ಪುರುಷ ಪ್ರಮಾಣ (೬ ಅಡಿ) ದಲ್ಲಿ ಅಗೆದಾಗ ಬಿಳಿಯ ಮಣ್ಣು, ಹಾವು, ಕಪ್ಪಾದ ಕಲ್ಲು ಕಾಣಸಿಗುತ್ತವೆ.

> ತರದಿಂ ಬಾಗೆ ಸೆವಿಪ್ಪೆಯಿಂ ಬಡಗ ಪುಲ್ತಾದಂದು ವಾಯವ್ಯದೊಳ್
> ಕರ ಷಟ್ಕಾಂತರದಿಂದಮಯ್ದು ಪುರುಷಂ ಗುಣ್ಪಾದೊಡಂತಲ್ಲಿ ನೀರ್ ॥
> ದೊರೆಕೊಳ್ಗುಂ ಬಿಳಿದಪ್ಪ ಮಣ್ಣನಹಿಯಂ ಕರ್ಗಲ್ಲುಮಂ ಕಾಣ್ಗೆಯೊ ।
> ಪ್ಪುರುಷಂಬೋದೊಡೆ ಮೂಡಣಿಂದೆ ಸೆಲೆಯಕ್ಕುಂ ಶಿಷ್ಟಕಲ್ಪದ್ರುಮಾ ॥

– ಲೋಕೋಪಕಾರ ೫–೨೯

---

* ನಂ.೭೫/೧೫, ಸಮರ್ಥ, ೫ನೇ ಬ್ಲಾಕ್, ೩ನೇ ಫೇಸ್, ಬನಶಂಕರಿ, ೩ನೇ ಹಂತ, ಬೆಂಗಳೂರು–೫೬೦೦೮೫.

## ಮೇಲು ನೀರು

ಇದರಲ್ಲಿ ೨ ಭಾಗಗಳುಂಟು,

೧) ಸಂಗ್ರಹಿತ/ಸ್ಥಾವಚರ (Stored water) ಜಲ ಉದಾ: ಕೆರೆ, ಕಟ್ಟೆ, ಬಾವಿ. ಪುಷ್ಕರಣಿ ಜಲಾಶಯ ಮುಂತಾದವು.

೨) ಜಂಗಮಜಲ (Flowing water) ಅಥವಾ ಹರಿವ ನೀರು, ಉದಾ : ನದಿ, ಹಳ್ಳ ಇತ್ಯಾದಿ.

## ಸಂಗ್ರಹಿತ ಜಲ

ಕೆರೆಗಳು : ಕೆಜ಼್ಯಂ ಕಟ್ಟಿಸು, ಬಾವಿಯಂ ಸವೆಸು....... ಎಂದು ಲಕ್ಷ್ಮೀಧರ ಅಮಾತ್ಯನ (ಮಂತ್ರಿ) ತಾಯಿ ಮಗುವಿಗೆ ಹಾಲೂಡಿಸುವಾಗ ಹೇಳುತ್ತಿದ್ದುದನ್ನು ಹಂಪೆಯ ಶಾಸನ ನಿರೂಪಿಸುತ್ತದೆ. ತುಮಕೂರು ಜಿಲ್ಲೆಯ ಕುಣಿಗಲ್ ತಾಲೂಕಿನ ಕೆರೆಯನ್ನು ಗಂಗರಾಜ ಶ್ರೀಪುರುಷನು ಕ್ರಿ.ಶ.ಸು. ೭೫೦ರಲ್ಲಿ ಕಟ್ಟಿಸಿದ್ದನ್ನು ಆ ಕೆರೆಯ ಬಳಿಯಲ್ಲಿಯೇ ದೊರೆತ ಮುಮ್ಮಡಿ ಕೃಷ್ಣನ ಶಾಸನ (ಕ್ರಿ.ಶ.೯೬೩) ವೊಂದರಿಂದ ಡಾ.ಪಿ.ವಿ.ಕೃಷ್ಣಮೂರ್ತಿಯವರು ಗುರುತಿಸಿದ್ದಾರೆ. ರಾಜನಾದವನು ಅಣೆಕಟ್ಟು, ಜಲಾಶಯ, ಇತ್ಯಾದಿಗಳನ್ನು ನಿರ್ಮಿಸಬೇಕು. ಇಂತಹ ಜಲ ಆಕರಗಳಿಗೆ ಬೇಕಾಗುವ ಸ್ಥಳ, ತೇಗ, ಕೆಲಸಗಾರರು ಮತ್ತಿತರ ಆವಶ್ಯಕ ಸಾಮಗ್ರಿಗಳನ್ನು ಅವರವರ ಅಗತ್ಯಕ್ಕೆ ತಕ್ಕಂತೆ ಒದಗಿಸಬೇಕೆಂದು ಕೌಟಿಲ್ಯನ ಅರ್ಥಶಾಸ್ತ್ರವು ತಿಳಿಸುತ್ತದೆ. ಆದಿಲ್‌ಶಾಹಿ ಅರಸ ಮಹಮ್ಮದ (ಕ್ರಿ.ಶ. ೧೬೨೬-೧೬೫೬)ನ ಜನಹಿತ ನೀತಿ, ಸೌಂದರ್ಯೋಪಾಸನೆಯನ್ನು ಮಮದಾಪುರದ ಪರ್ಷಿಯನ್ ಭಾಷೆಯ ಶಾಸನ ವಿವರಿಸುತ್ತದೆ. ತನ್ನ ಪ್ರಧಾನಿಯ ಮೂಲಕ ಕೊಂಕಣದಿಂದ ಗಿಡಗಳನ್ನು ತರಿಸಿ ನೆಡಿಸಿ, ಅವುಗಳ ಬೆಳವಣಿಗೆಗೆ ಕ್ರಿ.ಶ. ೧೬೩೩ರಲ್ಲಿ ಸುತ್ತಲಿನ ಹಳ್ಳಿಗಳನ್ನು ಸೇರಿಸಿ ಒಂದು ಹೊಸನಾಡನ್ನೇ ಸೃಷ್ಟಿಸಿ ಅದನ್ನು 'ಮಹಮ್ಮದಪುರ' ಎಂದು ಕರೆದ. ಅದೇ ಈಗಿನ ಬಿಜಾಪುರ ಜಿಲ್ಲೆಯ ಮಮದಾಪುರ. ಇತ್ತೀಚಿನ ದಾಖಲೆಗಳ ಪ್ರಕಾರ ಮಹಮ್ಮದ್ ಕಟ್ಟಿಸಿದ್ದ ಕೆರೆಯ ವಿಸ್ತೀರ್ಣ ೮೪೬ ಎಕರೆ. ಈಗ ಅಲ್ಲಿ ನಿಲ್ಲುವ ನೀರಿನ ಆಳ ಸರಾಸರಿ ೨೭ ಅಡಿ ೯ ಅಂಗುಲ.

## ಕೆರೆಯ ತಾಂತ್ರಿಕತೆ

ಅಣೆಕಟ್ಟು/ಕೆರೆಗಳ ತಾಂತ್ರಿಕತೆಗೆ ಸಂಬಂಧಿಸಿದಂತೆ ಇಡೀ ಭಾರತದಲ್ಲಿ ದೊರೆಯುವ ಏಕಮೇವ ಶಾಸನ ಆಂಧ್ರಪ್ರದೇಶದ ಕಡಪಾ ಜಿಲ್ಲೆಯಲ್ಲಿರುವ ವಿಜಯನಗರ ಕಾಲದ ಪೊರುಮಾಮಿಲ್ಲ ಶಾಸನ. ಇದರಲ್ಲಿ ಜಲಾಗಾರವನ್ನು ನಿರ್ಮಿಸಲು ಬೇಕಾಗುವ ೧೨ ಮುಖ್ಯಾಂಶಗಳನ್ನು ಕೆತ್ತಲಾಗಿದೆ,

೧. ಚಿರಕಾಲ ಶ್ರೀಮಂತಿಕೆ, ಧರ್ಮಶೀಲನೂ, ಸುಖಿಯೂ, ತನ್ನ ಹೆಸರು ಎಲ್ಲ ಕಾಲಕ್ಕೂ ಸಲ್ಲಬೇಕೆಂಬ (ಆಚಂದ್ರಾರ್ಕತಾರಂಬರಂ ಎಂದು ಹಲವು ಶಾಸನಗಳಲ್ಲಿದೆ) ಬಯಕೆಯನ್ನು ಹೊಂದಿರುವ ರಾಜ

೨. ಜಲಶಾಸ್ತ್ರ ಪಾರಂಗತನಾದ ಬ್ರಾಹ್ಮಣ

೩. ಗಟ್ಟಿ ಜೇಡಿಮಣ್ಣಿನಿಂದ ಕೂಡಿದ ಭೂಮಿ

೪. ಸಿಹಿ ನೀರನ್ನು ತರುವ ತನ್ನ ಮೂಲದಿಂದ ಮೂರು ಯೋಜನ ದೂರದಿಂದ ಹರಿದು ಬರುವ ನದಿ

೫. ಒಂದು ಗುಡ್ಡ, ಅದರ ಬದಿಯನ್ನು ಒಡ್ಡಾಗಿ ಬಳಸುವಂತೆ ಹಾಗೂ ಎರಡು ಗುಡ್ಡಗಳ ನಡುವಿನ ಕಣಿವೆಯ ಪ್ರದೇಶ

೬ ಈ ಬೆಟ್ಟಗಳ ನಡುವೆ ಕಟ್ಟದ ಬಿಗಿಯಾದ ಕಲ್ಲುಗೋಡೆಯ ಏರಿ. ಇದು ಅತಿ ಉದ್ದವಾಗಿ ಇರಬಾರದು. ಆದರೆ ಅತಿ ಭದ್ರವಾಗಿರಬೇಕು.

೭ ಫಲಪೀಯುವ ಭೂಮಿಯಿಂದ (ಫಲ-ಸ್ಥಿರ) ಹೊರ ಮುಖವಾಗಿರುವ ಎರಡು ಶಿಖರಗಳು

೮. ವಿಸ್ತಾರವೂ, ಆಳವೂ ಆದ ಕೆರೆಯ ಅಂಗಳ

೯. ನೇರವಾದ ಉದ್ದನೆಯ ಕಲ್ಲು ಇರುವ ಗಣಿ

೧೦. ಆಸುಪಾಸಿನಲ್ಲಿಯ ಅಚ್ಚುಕಟ್ಟು ಸಮತಲವಾಗಿದ್ದು ಫಲಭರಿತವಾದ ಹಣ್ಣುಗಳಿಂದ ಕೂಡಿರುವ, ಬೇಸಾಯ ಯೋಗ್ಯ ಭೂಮಿ

೧೧. ಉತ್ತಮವಾದ ಕಾಲುವೆಯ ನಿರ್ಮಾಣಕ್ಕೆ ಅನುಕೂಲವಾದ (ಭ್ರಮೆ) ಅಂದರೆ ಗಟ್ಟಿತಳ ಹೊಂದಿದ್ದು, ನೀರು ಹರಿಯುವಾಗ ಜುಳು ಜುಳು ಶಬ್ದ ಮಾಡಬಲ್ಲ ರಭಸದಿಂದ ಹರಿದು ಹೋಗುವಂತಹ ಭೂ ಪ್ರದೇಶದಿಂದ ಹರಿವಿನಿಂದ ಕೂಡಿದ (ಅದ್ರಿಸ್ಥಾನ) ಭೂಮಿ.

೧೨. ಉತ್ತಮ ಹಾಗೂ ಬಲಿಷ್ಠ ಕೂಲಿಕಾರರು

ಈ ಶಾಸನದ ಮಹತ್ವದ ಕಾಣಿಕೆ ಎಂದರೆ 'ಆರು ದೋಷಗಳನ್ನು' ನಿರೂಪಿಸಿ ರುವುದಲ್ಲದೇ ಅವು ಉಂಟಾಗದಂತೆ ವಹಿಸಬೇಕಾದ ಎಚ್ಚರಿಕೆಯನ್ನೂ ಹೇಳಿರುವುದು.

ಆರು ದೋಷಗಳು,

೧. ಲವಣದಿಂದ ನೀರು ಬಸಿಯುವಿಕೆ ಅಥವಾ ಜಿನುಗುವಿಕೆ

೨. ಲವಣದಿಂದ ಕೂಡಿದ ಮಣ್ಣು

೩. ಎರಡು ರಾಜ್ಯಗಳ ಗಡಿ ಪ್ರದೇಶ

೪. ಜಲಸ್ಥಳದ ಅಂಗಳದ ನಡುವಿನ ಎತ್ತರದ (ಕೂರ್ಮ ಪ್ರದೇಶ) ದಿಬ್ಬ

೫. ಅತ್ಯಲ್ಪ ಜಲ ಲಭ್ಯತೆ ಹಾಗೂ ವಿಸ್ತಾರವಾದ ಅಚ್ಚುಕಟ್ಟು

೬. ಅಲ್ಪಭೂಮಿ ಅತಿಯಾದ ನೀರು

ಭಾರತದ ಅನೇಕ ಪ್ರಾಚೀನ ಗ್ರಂಥಗಳಿಂದ ಕಶ್ಯಪ ಕೃಷಿ ಸೂಕ್ತ, ಕೌಟಿಲ್ಯನ ಅರ್ಥಶಾಸ್ತ್ರ ಇತ್ಯಾದಿ ಅನೇಕ ಗ್ರಂಥಗಳಲ್ಲಿ ಜಲಶಾಸ್ತ್ರಕ್ಕೆ ಸಂಬಂಧಿ ವಿವರಗಳಿಗೆ ಸಂವಾದಿಯಾಗಿರುವ ಈ ಶಾಸನವು ಇನ್ನೂ ಪೊರುಮಾಮಿಲ್ಲ ಜಲ ಆಕರದ ಬಳಿಯಲ್ಲಿಯೇ ಇದೆ. ಇದರಲ್ಲಿ ಬರುವ ರಾಜ ಮತ್ತು ಜಲಶಾಸ್ತ್ರ ಪಾರಂಗತನಾದ ಬ್ರಾಹ್ಮಣ ಎನ್ನುವುದರ ಬದಲಾಗಿ ಕೇಂದ್ರ ಅಥವಾ ರಾಜ್ಯಸರ್ಕಾರ ಮತ್ತು ಜಲತಂತ್ರಜ್ಞ ಎಂದಷ್ಟೇ ಪರಿಭಾವಿಸಿ ಅಳವಡಿಸಿಕೊಂಡರೆ ಸಾಕು. ಉಳಿದೆಲ್ಲಾ ನಿಯಮಗಳಿಗೂ ಇಂದಿನ ಜಲಾಕರದ ಪೂರ್ವ ಭಾವಿ ಸರ್ವೇಕ್ಷಣೆ (Preliminary survey of water bodies) ಯ ನಿಯಮಗಳಂತೆಯೇ ಇವೆ ಎನ್ನುವುದನ್ನು ನಾವು ಬಹುಮುಖ್ಯವಾಗಿ ಪರಿಗಣಿಸಬೇಕಾಗಿದೆ.

**ಸಿಂಗಾಯಭಟ್ಟನ ಕಾಲುವೆ**

ಕೆರೆ ಅಥವಾ ಜಲಾಶಯಗಳ ನಿರ್ಮಾಣ ಎಷ್ಟು ಮುಖ್ಯವೋ, ಅದರಲ್ಲಿ ನಿಂತ ನೀರನ್ನು ಸಾಗುವಳಿಗೆ ಬೇಕಾಗುವಂತೆ ಉಪಯೋಗಿಸುವಾಗ ನಿರ್ಮಿಸುವ ಕಾಲುವೆಗಳೂ ಅಷ್ಟೇ ಮುಖ್ಯ ಇದಕ್ಕೆ ಒಂದು ಅತ್ಯುತ್ತಮ ಶಾಸನೋಕ್ತ ಉದಾಹರಣೆ ಸಿಂಗಾಯಭಟ್ಟ ರಚಿಸಿದ ಕಾಲುವೆ.

ಪೆನುಗೊಂಡೆ ವಿಜಯನಗರದ ಒಂದು ಮುಖ್ಯ ಸಂಸ್ಥಾನ. ಅಲ್ಲಿಗೆ ಹೆಂನೆಯ (ಪೆನ್ನಾರ್) ನದಿಯಿಂದ ಸಿರುವೆರದ ಕೆರೆಗೆ ಕೊಂಡೊಯ್ಯಲು ಹರಿಹರನ ಮಗನಾದ ಪ್ರತಾಪ ಬುಕ್ಕರಾಯನು ಸಿಂಗಾಯಭಟ್ಟನೆಂಬುವನಿಗೆ ನಿರೂಪ (order) ಕೊಟ್ಟು ಬರೆಸಿದ್ದ ಕಲ್ಲೂಡಿ ಗ್ರಾಮದಲ್ಲಿ ಕಂಡುಬಂದಿದ್ದ ಈ ಶಾಸನವನ್ನು ಗೌರಿಬಿದನೂರಿನ ಆಚಾರ್ಯ ಜ್ಯೂನಿಯರ್ ಕಾಲೇಜಿನಲ್ಲಿ ಈಗ ಸಂರಕ್ಷಿಸಿ ಇಡಲಾಗಿದೆ. ಈ ನಿರೂಪ ಕೊಟ್ಟ ದಿನ ಗುರುವಾರ ವಿಭವ ಸಂವತ್ಸರದ ಅಶ್ವೀಜ ಬಹುಳ ೧೦ ಶಕ ವರುಷ ೧೩೧೧. ನದಿಯಿಂದ ಕೆರೆಗೆ ಕಾಲುವೆಯನ್ನು ತೋಡಿ ನೀರನ್ನು ಕೆರೆಗೆ ಒಯ್ದು ಅಲ್ಲಿಂದ ಪೆನುಗೊಂಡೆಯಂತಹ ದೊಡ್ಡ ಪಟ್ಟಣಕ್ಕೆ ನೀರುಣಿಸಿದ್ದನ್ನು ಶಾಸನ ಹೇಳುತ್ತದೆ. ನಮ್ಮ ಇಂದಿನ ಜಲವಿಜ್ಞಾನ ತಂತ್ರಜ್ಞಾನಿಗಳಿಗೆ

ಹಿಂದೆ ಇಂತಹ ಒಮದು ಉತ್ತಮ ಆನ್ವಯಿಕ ತಂತ್ರಜ್ಞಾನ ಗೊತ್ತಿತ್ತು ಎನ್ನುವುದಕ್ಕೆ ನಿಖರ ದಾಖಲೆಗಳು ಇವೆ ಎನ್ನುವ ವಿಷಯ ಇನ್ನೂ ಪ್ರಚಾರಗೊಳ್ಳಬೇಕಾಗಿದೆ. ಅವರ ಪ್ರಕಾರ ಜಲತಂತ್ರ ಜ್ಞಾನಕ್ಕೆ ನಮ್ಮಲ್ಲಿ ಪುರಾವೆಗಳು ಇಲ್ಲ ಎನ್ನುವ ಭಾವನೆ ಇನ್ನೂ ದಟ್ಟವಾಗಿಯೇ ಇದೆ. ಈ ಕಾಲುವೆಯು ಇನ್ನೂ ಜೀವಂತವಾಗಿದ್ದು ಪೆನುಗೊಂಡೆ ಕೆರೆಗೆ ನೀರೊದಗಿಸುವ ಸ್ಥಿತಿಯಲ್ಲಿದೆ. ಆದರೆ ಕೆರೆ ಒಣಗಿದ್ದರೆ ಅದು ನಮ್ಮ ಅಸಡ್ಡೆಯಿಂದ ಮಾತ್ರ ಎನ್ನುವುದನ್ನು ನಾವೇ ವಿಮರ್ಶಿಸಿಕೊಳ್ಳಬೇಕಾಗಿದೆ.

### ಪ್ರವಾಹ ನಿಯಂತ್ರಣ ವ್ಯವಸ್ಥೆ

ಹರಿದ್ರಾ ನದಿಗೆ ಬರುತ್ತಿದ್ದ ಪ್ರವಾಹವನ್ನು ತಡೆದು ನಿಲ್ಲಿಸಿ ಅದರಿಂದ ತೋಟ ಗದ್ದೆಗೆ ಇತ್ಯಾದಿಗಳಿಗೆ ನೀರು ಹರಿಸಿ ಸರಣಿ ಕೆರೆಗಳ ಸರಪಳಿಯೊಂದನ್ನು ನಿರ್ಮಿಸಿ ನೀರಾವರಿಗೆ ಬಳಸಿಕೊಂಡಿದ್ದ ಅಪರೂಪವೆನ್ನುವ ವಿಚಾರ ಒಂದನ್ನು ಹರಿಹರದ (ದಾವಣಗೆರೆ ಜಿಲ್ಲೆ) ಶಾಸನಗಳು ಬಿಂಬಿಸುತ್ತವೆ. ಇಲ್ಲಿ ಇಬ್ಬರು ನೀರಾವರಿ ತಜ್ಞರ ಹೆಸರುಗಳು ಕಂಡುಬರುತ್ತವೆ. 'ಬುಳ್ಳಪ' ಎನ್ನುವವನು ಕ್ರಿ.ಶ. ೧೪೧೦ರಲ್ಲಿ ಹರಿದ್ರಾ ನದಿಯ (ತುಂಗಭದ್ರೆಯ ಉಪನದಿ. ಈಗ ಇದನ್ನು ಬ್ಯಾಲದ ಹಳ್ಳಿ ಹಳ್ಳ ಎನ್ನುವರು. ಸೂಳೆಕೆರೆಯ ಕೋಡಿಯ ನೀರಿನಿಂದ ಉಂಟಾಗುವ ಹಳ್ಳವಿದು) ಪ್ರವಾಹವನ್ನು ತಿರುಗಿಸಿ ಬನ್ನಿಕೋಡು ಎನ್ನುವಲ್ಲಿ ಅಣೆಕಟ್ಟು ನಿರ್ಮಿಸಿದನು. ಅದು ೧೪ ವರ್ಷಗಳ (ಕ್ರಿ.ಶ. ೧೪೨೪) ನಂತರ ಒಡೆದು ಹೋದಾಗ ತನಗಿಂತ ಉತ್ತಮನಾದ ಚಾಮರಾಜನೆಂಬ ಇನ್ನೊಬ್ಬ ನೀರಾವರಿ ತಜ್ಞನನ್ನು ಹುಡುಕಿ, ಅವನು ಈ ಕಾರ್ಯ ಕೈಗೊಳ್ಳುವಂತೆ ಮನವೊಲಿಸಿ, ಅದಕ್ಕೆ ತಗುಲುವ ಖರ್ಚನ್ನು ತಾನೇ ಭರಿಸಿದನೆಂದು ಶಾಸನಗಳು ವಿವರಿಸುತ್ತವೆ. ಈಗಿನ ದಾವಣಗೆರೆ ತಾಲೂಕಿನ ಬನ್ನಿಕೋಡಿನಿಂದ ಹರಿಹರ ತಾಲ್ಲೂಕಿನ ಗಂಗ ನರಸಿಯವರೆಗೆ ೩೫,೦೦೦ ಹೆಕ್ಟೇರ್ ಭೂಮಿಗೆ ಅಣೆಕಟ್ಟು ನೀರನ್ನು ಒದಗಿಸಿತ್ತೆಂದು ಶಾಸನೋಕ್ತ ಊರುಗಳ ಭೂಮಿಯ ವಿಸ್ತೀರ್ಣದಿಂದ ತಿಳಿದುಬರುತ್ತದೆ. ತೀರ ಇತ್ತೀಚಿನವರೆಗೆ ಅಂದರೆ ೧೯೭೫-೮೦ರವರೆಗೆ ಈ ಅಣೆಕಟ್ಟಿನ ಕಾಲುವೆಯ ಕುರುಹುಗಳು ಹರಿಹರದಲ್ಲಿ ಕಂಡುಬರುತ್ತಿದ್ದವು. ಈ ಸಂಪೂರ್ಣ ನಾಶವಾಗಿದ್ದರೂ ಹರಿಹರದಲ್ಲಿ ಹಳ್ಳದ ಕೇರಿ ಎಂದು ಕರೆಯಲಾಗುತ್ತಿರುವ ಸ್ಥಳದಲ್ಲಿ ಕಾಲುವೆಯು ಚರಂಡಿಯಾಗಿ ಉಳಿದುಕೊಂಡಿದೆ. ತುಂಗಭದ್ರೆಯಲ್ಲಿ ಪ್ರವಾಹ ಉಂಟಾದಾಗ ನದಿ ಒತ್ತಿನ ನೀರು ಈ ಚರಂಡಿಯ ಮೂಲಕ ಹರಿದು ಹೋಗುವುದನ್ನು ಗುರುತಿಸಬಹುದಾಗಿದೆ.

### ಕೆರೆ ನೀರಿಗೆ ಕರಪದ್ಧತಿ

ನೀರಿಗಾಗಿ ಪ್ರಾಯಶ್ಚಿತ್ತ ಎಂದರೆ ದಂಡವಾಗಿ ತೆರಿಗೆಯನ್ನು ಸಮಾಜದ ವಿವಿಧ ಜನಾಂಗದ ಜನರಿಗೆ ಬೇರೆ ಬೇರೆ ಪ್ರಮಾಣದಲ್ಲಿ ವಿಧಿಸುತ್ತಿದ್ದ ಪದ್ಧತಿಯನ್ನು ಧಾರವಾಡ ಜಿಲ್ಲೆಯ ನರಗುಮದ ತಾಲ್ಲೂಕಿನ ದಂಡಾಪುರ (ಕ್ರಿ.ಶ. ೯೧೮) ಊರಿನ ಹೆಸರೇ ಹೇಳುವಂತೆ ಶಾಸನ ತಿಳಿಸುತ್ತದೆ. ಈ ಕರವು ಕಡ್ಡಾಯವಾಗಿತ್ತೆನ್ನುವುದು ಇನ್ನಷ್ಟು ಅಚ್ಚರಿ ಹುಟ್ಟಿಸುತ್ತದೆ. ಮಾಗಪ್ಪನಿಜಓಳೆಲ್ಲಮೊಸಗೆ ದ್ರಮ್ಮಮೂಱಂ ತಪ್ಪಾ(ದೆ) ಮಾಣಿಯೊಳೆರಡಂ ಕೆಪ್ಪಿದಲೀ ಶೂದ್ರಗಣದ ಮದುವೆಯೊಳ್ ಒನ್ದಂ ಪ್ರಾಯಶ್ಚಿತ್ತ ನಿಮಿತ್ತದೊಳಾಯದ ಪಣಮೆನೆತನಿತ್ತು.... ಬ್ರಾಹ್ಮಣರ ಮದುವೆಯಾದಲ್ಲಿ ಒಂದೊಂದು ಆಯಕ್ಕೆ ೩ ದ್ರಮ್ಮ, ಮಾಣಿಯ ಮುಂಜಿ ಮಾಡಿದಲ್ಲಿ ೨ ದ್ರಮ್ಮ ಹಾಗೆಯೇ ಶೂದ್ರಗಣದ ಮದುವೆಯಾದರೆ ಒಂದು ದ್ರಮ್ಮವನ್ನು ಪ್ರಾಯಶ್ಚಿತ್ತ ನಿಮಿತ್ತ ಕೊಡಬೇಕೆನ್ನುವ ಕಡ್ಡಾಯ ನಿಯಮವಾಗಿದ್ದಿತು.

### ನೀರಿನ ಒಪ್ಪಂದದ ನಿಯಮಗಳು

ಕೆರೆ ಅಥವಾ ಕೆರೆಗಳ ಸರಣಿಯನ್ನು ನಿರ್ಮಿಸಲು ಮೊದಲು ಊರಿನ/ಆ ಕ್ಷೇತ್ರದಲ್ಲಿ ನೀರಾವರಿಗೆ ಒಳಪಡುವ ಹಳ್ಳಿಗಳ ಜನರು ಒಂದೆಡೆ ಸೇರುವಂತೆ ಏರ್ಪಾಡು ಮಾಡುತ್ತಿದ್ದರು. ಇಂತಹ ಒಂದು ಸಭೆಯಲ್ಲಿ ತೆಗೆದುಕೊಳ್ಳುವ ನಿರ್ಣಯಗಳು ಅದು ನೀರಿನ ಹಂಚಿಕೆಯಾಗಿರಬಹುದು. ದಾರಿಗಳ/ಜಮೀನು ಮುಳುಗಡೆ ಪ್ರಕ್ರಿಯೆ ಆಗಿರಬಹುದು; ಇಂತಹ ಸಂದರ್ಭಗಳಲ್ಲಿ 'ಸರ್ವಾನುಮತ'ದಿಂದ ನಿರ್ಣಯಗಳನ್ನು ಅಂಗೀಕರಿಸುತ್ತಿದ್ದ ರಲ್ಲದೇ ಸಮಸ್ಯೆಗಳಿದ್ದರೆ ಅದಕ್ಕೆ ಬೇಕಾಗುವ ಪರಿಹಾರವನ್ನು ಸೂಚಿಸಿ ಅನುಷ್ಠಾನಗೊಳಿಸುತ್ತಿದ್ದರೆಂದು ತಿಳಿಯಲು ತುಮಕೂರು ಜಿಲ್ಲೆಯ ತುರುವೇಕೆರೆಯ ಶಾಸನಗಳು ಒಳ್ಳೆಯ ಆಕರವನ್ನು ಒದಗಿಸುತ್ತವೆ.

೧. ಹೊಸದಾಗಿ ಕೆರೆ ಕಟ್ಟುವಂತಹವರು ತಮ್ಮ ಊರ/ಹಳ್ಳಿಯ ಹಳ್ಳದ ಬಳಿಗೆ ಇರುವ ಜಮೀನುಗಳನ್ನೇ ಉಪಯೋಗಿಸಿಕೊಳ್ಳಬೇಕು.

೨. ಕೆರೆ, ಕುರುಗಟ್ಟೆಗಳನ್ನು ಕಟ್ಟುವಾಗ ಮತ್ತೊಬ್ಬರ ಕ್ಷೇತ್ರಕ್ಕೆ ಹಾನಿಯಾಗದಂತೆ ಮೊದಲೇ ಒಡಂಬಡಿಕೆ ಮಾಡಿಕೊಂಡು ಕಟ್ಟಬೇಕು.

೩. ಕೆರೆ (ಮೇಲಂಕಣ) ಎತ್ತರವನ್ನು ಹೆಚ್ಚಿಸುವಾಗ, ಅದರ ಹಿನ್ನೀರಿನಿಂದ ಮುಳುಗುವ ಭೂಮಿಯವರು ಹಾಗೆ ಮಾಡಬಾರದೆಂದು ತಡೆಯಲಾಗದು. ಇಂತಹ ಸಮಯದಲ್ಲಿ ಹೇಗೆ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕೆಂದು ಉದಾಹರಣೆ ಸಹಿತ ಶಾಸನದಲ್ಲಿ ಹೇಳಿದ್ದಾರೆ.

ಅಯ್ಯರಸರನ ಕೆರೆಯ ಎತ್ತರವನ್ನು ಹೆಚ್ಚಿಸಿದರೆ ಅದರ ನೀರೊತ್ತಿನಿಂದ ಅರಳಿಯ ಕೆರೆಯ ನೀರು ಹೆಚ್ಚಾಗಿ ಕೆರೆಯ ಹಿಂದಿನ ಗದ್ದೆಗಳು ಮುಳುಗಡೆಯಾಗುತ್ತದೆ. ಆಡನಹಳ್ಳಿಯಲ್ಲಿರುವ ಮೊದಲ ತೋಟದ ತುದಿಯ ಬಯಲಲ್ಲಿ ಇರುವಂಥ ಜಾಗದಲ್ಲಿ ಮಹಾಜನರು ರಾಜಗಟ್ಟೆ ಕಟ್ಟಿಸಬೇಕು. ಅದರ ಎರಡೂ ಕೋಡಿಗಳಿಂದ ಹರಿದು ಬರುವ ನೀರು ಗದ್ದೆಯ ಸ್ಥಳಕ್ಕೆ ಬಂದು ಅವರು ತಮ್ಮ ಬೆದ್ದಲಿಗೆ ಬದಲಾಗಿ ತಾಳಕೆರೆಯ ಹೊಲಗಳನ್ನು ತೆಗೆದುಕೊಳ್ಳುವರು. ಕೆಂಚಿನಕಟ್ಟೆಯವರು ಅವರ ಕೆರೆಯನ್ನು ತಾವೇ ಕಟ್ಟಿಸಿಕೊಳ್ಳಬೇಕು.

ರಾಜಘಟ್ಟದವರು ಕಟ್ಟಿಸಿ, ನೀರು ಹರಿಸಿಕೊಂಡ ಪಕ್ಷದಲ್ಲಿ ಕೆಂಚನ ಕಟ್ಟೆಯವರು ಕಟ್ಟೆ ಕಟ್ಟಿಸದೆ, ರಾಜಘಟ್ಟದ ಕೋಡಿಯ ನೀರು ಹರಿಸಿಕೊಂಡರೆ ಖಂಡುಗ ಒಂದಕ್ಕೆ ಒಂದು ಹೊನ್ನು ಮತ್ತು ೫೦ ಗದ್ಯಾಣಗಳನ್ನು ಅವರು ಅಗ್ರಹಾರದ ಮಹಾಜನಗಳಿಗೆ ಕೊಡಬೇಕು.

ಕೆರೆಕಟ್ಟುವ ಮುನ್ನವೇ ಇದ್ದ ಬಂಡೀಹಾರಿಗಳನ್ನು ಹಾಗೆಯೇ ಬಿಡಬೇಕು. ಆ ಜಾಗವನ್ನು ನಮ್ಮದು ಅಥವಾ ನಿಮ್ಮದು ಎಂದು ಜಗಳವಾಡಬಾರದು.

ಸೋಮನಾಥ ಸಮುದ್ರದ ಎರಡು ಕೋಡಿಗಳ ಕಾಲುವೆಯ ಮಾರ್ಗದ ಮೂಲಕ ನೀರು ಹರಿಯುವ ಸ್ಥಳದಲ್ಲಿ, ಕೋಡಿ ಬಿಟ್ಟು ಉಳಿದ ಒಣಭೂಮಿಗೆ ಹಾನಿಯುಂಟಾದರೆ ಅಥವಾ ಅದು ಜೌಳಿನಿಂದ ಕೂಡಿ ವ್ಯವಸಾಯಕ್ಕೆ ಹಾನಿಯುಂಟಾಗುವ ಸಂದರ್ಭಗಳಲ್ಲಿ ಮಹಾಜನರು ಅವರಿಗೆ ಆದ್ಯತೆಯ ಮೇಲೆ ಅವರವರ ಭೂಮಿಗೆ ತಕ್ಕ ಪ್ರತಿಯಾಗಿ ಬೇರೆ ಭೂಮಿಯನ್ನು ಸೋಮನಾಥ ಸಮುದ್ರದ ಜನರಿಗೆ ಕೊಡಬೇಕು.

ಪ್ರಜೆಗಳಿಗೆ ಯಾವ ತೊಡಕು ಬಂದರೂ ತುರುವೇಕೆರೆಯ ಅಗ್ರಹಾರದ ಮಹಾಜನಗಳು ನ್ಯಾಯ ಸಮ್ಮತವಾದ ತೀರ್ಮಾನವನ್ನು ಕೊಡುತ್ತಾರೆ.

ಪ್ರತಿಗೃಹಸ್ಥರೂ ಮಾಳಿಗೆಯ ಮನೆಯನ್ನು ಕಟ್ಟುವಾಗ ಬಾವಿ ಬಚ್ಚಲುಗಳನ್ನು ಕಟ್ಟುವಾಗ ಕೆರೆ ಕಟ್ಟೆಗಳ ದುರಸ್ತಿಗೆ ಬೇಕಾಗುವ ಕಲ್ಲುಗಳನ್ನು ಒದಗಿಸಬೇಕು. ಅಲ್ಲದೇ ಕೆರೆಗೆ ಹೆಚ್ಚು ನೀರು ಬಂದಾಗ, ಹಾನಿಯುಂಟಾದಾಗ ಅವುಗಳಲ್ಲಿ ಕೊರಕಲು ಇತ್ಯಾದಿಗಳು ಉಂಟಾದಾಗ ಅವುಗಳ ದುರಸ್ತಿ ಕಾರ್ಯಕ್ಕೆ ಸಹಾಯ ಮಾಡುವುದಿಲ್ಲ ಎಂದು ಹೇಳಬಾರದು.

ಈ ಶಾಸನವನ್ನು ಮೀರಿದೊಡೆ ಚಕ್ರವರ್ತಿ ವೀರ ನರಸಿಂಹದೇವರ ಆಣೆ, ಸೋವಣ್ಣ ದಂಡನಾಯಕರ ಆಣೆ, ಅಶೇಷ ಮಹಾಜನಗಳ ಸಾಕ್ಷಿಯಾಗಿ ತಮ್ಮ ತಮ್ಮ ಮಾತಾ ಪಿತೃಗಳ ಆಣೆಯಾಗಿ ತಂಮ ಇಷ್ಟದೇವತೆಯ ಆಣೆಯಾಗಿ ಪಾಲಿಸತಕ್ಕದ್ದು.

ಇದನ್ನು ತಪ್ಪದಂತೆ ನಡೆಸಿಕೊಡುತ್ತೇವೆ ಎನ್ನಲು ತುರುವೇಕೆಱೆಯ ಮಹಾಜನರು ಶ್ರೀಪ್ರಪನ್ನದೇವರ ಹೆಸರಿನಲ್ಲಿ ಸಾಕ್ಷಿ (ವೊಪು) ನೀಡುತ್ತಿದ್ದೇವೆ. 'ಸ್ವಹಸ್ತದೊಪ್ಪ ಶ್ರೀ ರಾಮನಾಥ'.

ಇಂತಹ ಶಾಸನಗಳ ಆಕರಗಳ ಪ್ರಾದೇಶಿಕ ಅಧ್ಯಯನ, ಅಲ್ಲಿಯ ಜಲಸಂಪನ್ಮೂಲ ಅಭಿವೃದ್ಧಿ, ಭೂಗುಣ, ಭೂ ಆಯ್ಕೆ, ಅವುಗಳ ಸಮರ್ಥ ನಿರ್ವಹಣೆ ಮತ್ತು ಬಳಕೆಗೆ ಬೇಕಾಗುವ ಸರ್ವ ಸಮ್ಮತ ನಿರ್ಣಯಗಳು, ಕಷ್ಟ–ನಿಷ್ಠೂರಗಳನ್ನು ಹಂಚಿಕೊಳ್ಳುವ 'ಸಹಕಾರಿ' ತತ್ವಕ್ಕೆ ತುರುವೇಕೆರೆಯ ಶಾಸನಗಳು ಸ್ಪಷ್ಟ ದಾಖಲೆಗಳನ್ನು ಒದಗಿಸುತ್ತವೆ.

ಹರಿಹರದ ಶಾಸನಗಳಲ್ಲಿ ಕ್ರಿ.ಶ. ೧೪೧೦ರಲ್ಲಿ ಬನ್ನಿಕೋಡ ಸೀಮೆಯಲ್ಲಿ ಹರಿದ್ರಾ ನದಿಗೆ ಅಣೆಕಟ್ಟು (ಸೇತುಬಂಧ) ಮತ್ತು ಕಾಲುವೆಗಳನ್ನು ನಿರ್ಮಿಸುವ ಮೊದಲು ಮಾಡಿಕೊಂಡ ಒಪ್ಪಂದದ ನಿಯಮಗಳ ಪಟ್ಟಿ

೧. ಹರಿಹರ ದೇವರಿಗೆ ಸಲ್ಲುವ ಬನ್ನಿಕೊಡ ಸೀಮೆಯೊಳಗೆ ಹರಿದ್ರೆಯೆಂಬ ನದಿಯಂ ಕಟ್ಟಿ.... ಬಂದ ಕಾಲುವೆಯ ಕೆಳಗೆ ನೀರಾವರಿಯಾದಷ್ಟು ಭೂಮಿಯನು ಮೂಱುಂಬಳಿ (೩ ಭಾಗ ಮಾಡಿ)ಯಂ ಮಾಡಿ ಯೆರಡು ಪಾಲು ಭೂಮಿಯನು ಶ್ರೀಹರಿಹರದೇವರು ಭೋಗಿಸುವರು ವೊಂದು ಪಾಲು ಭೂಮಿಯನು ಹೊಂಸನಿಕ್ಕಿ ಕಟ್ಟೆ ಕಾಲುವೆ ತಂದಂಥಾ ಮಹಾಜನಗಳು ಭೋಗಿಸುವರು.

೨. ಕಟ್ಟೆ ಕಾಲುವೆ ಮುಗಿದ ಮೇಲೆ ಮುಂದೆ ಪ್ರತಿ ವರುಷದಲ್ಲಿ ಕಟ್ಟೆ ಕಾಲುವೆಯ ಆರೈಕೆಯ ವೆಚ್ಚ ಮತ್ತೆ ಕಾಲಾಂತರದಲ್ಲಿ ದೈವಿಕದಿಂದ ಬರಿ ಕಟ್ಟೆ ಕಾಲುವೆಯ ವೆಚ್ಚವನೂ ಯೆರಡು ಪಾಲು ಬ್ರಾಹ್ಮಣರು ವೊಂದು ಪಾಲು ಯೀ ಮರಿಯಾದೆಯಲು ತೆತ್ತುಕೊಂಬರು

೩. ಕಾಲುವೆಯಲ್ಲಿ ಬಂದಷ್ಟು ನೀರನು ದೇವರು ಯೆರಡು ಪಾಲು ಬ್ರಾಹ್ಮಣರು ವೊಂದು ಪಾಲು ಮರಿಯಾದೆಯಲು ಅನುಭವಿಸುವರು

೪. ಯೀ ಕಾಳುವೆಯ ಕೆಳಗೆ ಹುಟ್ಟುವಂಥ ಕಟ್ಟೆ ಕುಂಟೆಗಳನ್ನು ಬಲಿತು ಕಟ್ಟಿಕೊಂಬ ಕೆಲಸ ನದಿಗೆ ಹತ್ತಿದಂಥಾ ವೆಚ್ಚವನು ದೇವರು ಯೆರಡು ಪಾಲು ಬ್ರಾಹ್ಮಣರು ವೊಂದು ಪಾಲು ಮರಿಯಾದೆಯಲು ತೆತ್ತು ಭಾಗ ಕ್ರಮದಿಂದ ಭೋವಿಸುವಿರಿಯೆಂದು ಕೊಟ್ಟ ತಾಮ್ರಶಾಸನ

೫. ತಾನು ಕಟ್ಟದ ಅಣೆಕಟ್ಟು (ಸೇತುಬಂಧ) ಒಡೆದು ಹೋಯಿತು. ಆದ್ದರಿಂದ ಅನೇಕ ಕಟ್ಟೆಗಳನ್ನು ಕಟ್ಟಿದಂತಹ ಚಾಮನೃಪಾಲನಿಗೆ ಹೇಳಿ ಅದಕ್ಕೆ ಬೇಕಾಗುವ ಖರ್ಚನ್ನು ತಾನೇ ನಿರ್ವಹಿಸಿದವನೆಂದು ತಿಳಿಸುವ ಸಾಲುಗಳು ಇವು.

'ಮತ್ತೊಬ್ಬರಿಲ್ಲವಾಯಿತು ನಿಮ್ಮಾ... ಧರ್ಮದ ಫಲಉ ಅಗಣಿತವೆಂದು ಹೇಳುವ ಈ ಶಾಸ್ತ್ರೋಕ್ತಂಗಳ ಅರ್ಥವನ್ನು ನೀವು ಬಲ್ಲಿರಾಗಿ ಯಿ ಧರ್ಮ್ಮವನು ನೀವು ಜೀರ್ಣ್ನೋದ್ಧಾರ ಮಾಡಬೇಕೆಂದು ಪೇಳ್ದ ವಾಕ್ಯವಂ ಕೇಳ್ದು ಪರಿಣಮಿಸಿ ಕೈಗೊಂಡು ಶಕವರುಷ ೧೩೪೬ (ಕ್ರಿ.ಶ. ೧೪೨೪)ನೆಯ ಕ್ರೋಧಿನಾಮ ಸಂವಚ್ಚರ ಕಾರ್ತಿಕ ಶುದ್ಧ ೧೨ ಸೋಮವಾರ ಕೂಡಿದ ಪುಣ್ಯ ತಿಥಿಯೊಳು ಆ ಕಟ್ಟೆಗೆ ಹತ್ತುವ ಧನವನೂ ಶ್ರೀ ಹರಿಹರ ದೇವರ ಬ್ರಾಹ್ಮಣರ ಪ್ರತಿಹಸ್ತವಾಗಿ ಬುಳ್ಳರಸ ಕೈಯಲಿ ಧಾರೆಯನೆಱೆದು ಕೊಟ್ಟನಂ ಪ್ರತಿಹಸ್ತವಾಗಿ .. ಕಟ್ಟೆಯ ಕಟ್ಟಿಸಿಥಾಯಂ.. ಗಸೆಂದು ಬುದ್ಧಿಗಲಿಸಿ ಕಲಿಸಿ ಕಳುಹಿಸಿ ಜೀರ್ನ್ನೋದ್ಧಾರವಂ ಮಾಡಿದ ಚಾಮನೃಪಾಲ....'



# ಚೋಳರ ಕನ್ನಡ ಶಾಸನಗಳು

– ಡಾ|| ಸಿ.ಎಸ್. ವಾಸುದೇವನ್*

ಒಂದು ನಾಡಿನ ಇತಿಹಾಸವನ್ನು ಅರಿಯಲು ಹಲವು ಮೂಲ ಆಕರಗಳು ದೊರಕುತ್ತವೆ. ಅವುಗಳಲ್ಲಿ ಶಾಸನಗಳು ಪ್ರಮುಖವಾಗಿದ್ದು, ಅವುಗಳ ಅಧ್ಯಯನವು ನಾಡಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಇತಿಹಾಸಗಳನ್ನು ಪರಿಚಯಿಸಿ ಕೊಡುತ್ತದೆ. ಮೌರ್ಯರ ಕಾಲದಿಂದ ಪ್ರಾರಂಭಿಸಿ ಭಾರತದಾದ್ಯಂತ ವಿವಿಧ ಅರಸು ಮನೆತನಗಳಿಗೆ ಸೇರಿದ ಸಹಸ್ರಾರು ಶಾಸನಗಳು ಇಂದು ನಮಗೆ ಲಭ್ಯವಿವೆ. ಎಲ್ಲಾ ಶಾಸನಗಳ ಸಂಗ್ರಹಣೆ, ಓದುವಿಕೆ ಮತ್ತು ಅವುಗಳ ವಿಶ್ಲೇಷಣೆಯು ನಿಜಕ್ಕೂ ಶ್ರಮದಾಯಕ ಕೆಲಸವಾಗಿದ್ದು, ಅವುಗಳು ಇಂದಿಗೂ ವಿದ್ವಾಂಸರ ಅವಿರತ ಶ್ರಮದಿಂದ ನಿರಂತರವಾಗಿ ನಡೆಯುತ್ತಲೇ ಬಂದಿದೆ.[೧]

ನಮಗೆ ದೊರಕಿರುವ ಪ್ರಥಮ ಹಾಗೂ ಪ್ರಾಚೀನ ಶಾಸನಗಳು ಪ್ರಾಕೃತ ಭಾಷೆಯದ್ದಾಗಿವೆ. ಕಾಲಕ್ರಮದಲ್ಲಿ ಭಾಷೆಗಳ ಬೆಳವಣಿಗೆಯ ಹಿನ್ನೆಲೆಯಲ್ಲಿ ಶಾಸನಗಳ ಭಾಷೆಯಲ್ಲಿಯೂ ಬದಲಾವಣೆ ಯಾಗಿರುವುದನ್ನು ಕಾಣಬಹುದು. ಕ್ರಿಸ್ತಶಕೆಯ ಆರಂಭಕಾಲಕ್ಕೆ ಸೇರಿದ ಶಾಸನಗಳ ಸಂಖ್ಯೆ ಕಡಿಮೆಯಿದ್ದು ನಂತರದ ಶತಮಾನಗಳಲ್ಲಿ ಅವುಗಳ ಸಂಖ್ಯೆಯು ಗಣನೀಯವಾಗಿ ಅಧಿಕವಾಗಿದೆ. ಹಲವು ಪ್ರಾಂತೀಯ ಭಾಷೆಗಳನ್ನು ಶಾಸನಗಳ ಭಾಷಾ ಮಾಧ್ಯಮವಾಗಿ ಬಳಸಲಾಗಿದೆ. ಈ ಪ್ರಕ್ರಿಯೆ ಕ್ರಿಸ್ತಶಕೆಯ ಪ್ರಾರಂಭದಿಂದ ಕ್ರಿ.ಶ. ೧೦ನೆಯ ಶತಮಾನದವರೆಗೆ ನಡೆದಿರುವುದನ್ನು ಕಾಣಬಹುದು. ಶಾಸನಗಳ ಸಂಖ್ಯೆಯು ಅಧಿಕರಿಸುವುದರೊಂದಿಗೆ ಅವುಗಳ ಲಿಪಿ ಮತ್ತು ಭಾಷೆಗಳಲ್ಲಿಯೂ ಹಲವು ಮಾರ್ಪಾಡುಗಳು ನಿರಂತರವಾಗಿ ನಡೆಯುತ್ತಲೇ ಬಂದಿರುವುದನ್ನು ಕಾಣಬಹುದು. ಪ್ರಾರಂಭದ ಶಾಸನಗಳಲ್ಲಿ ಬಳಸುತ್ತಿದ್ದ ಶಿಷ್ಟ ಭಾಷೆಯೊಂದಿಗೆ ಪ್ರಾದೇಶಿಕ ಭಾಷೆಯು ಸಹ ಶಾಸನಗಳಲ್ಲಿ ಬಳಕೆಗೆ ಬಂದವು. ಇವುಗಳೊಂದಿಗೆ ವಿವಿಧ ಅರಸು ಮನೆತನಗಳವರು ತಮ್ಮದೇ ಶೈಲಿಯಲ್ಲಿ ಶಾಸನಗಳನ್ನು ಹೊರಡಿಸಲು ಪ್ರಾರಂಭಿಸಿದರು. ಇವು ಶಾಸನಗಳ ಲಿಪಿ, ಭಾಷೆ, ವ್ಯಾಕರಣ, ವಿಷಯ ನಿರೂಪಣೆ ಮುಂತಾದ ಹಲವಾರು ಪ್ರಮುಖ ಅಂಶಗಳ ವೈವಿಧ್ಯತೆಗೆ ಎಡೆ ಮಾಡಿಕೊಟ್ಟಿವೆ. ವಿವಿಧ ಅರಸುಮನೆತನಗಳ ಅರಸರು ತಮ್ಮ ರಾಜ್ಯದ ಪರಿಮಿತಿಯಲ್ಲಿ ಹಾಗೂ ರಾಜ್ಯವನ್ನು ವಿಸ್ತರಿಸಿ ನೂತನ ಪ್ರದೇಶಗಳನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಾಗಲೂ ಶಾಸನಗಳನ್ನು ಹೊರಡಿಸುತ್ತಿದ್ದರು. ಹೊಸದಾಗಿ ಆಳ್ವಿಕೆಗೆ ಒಳಪಡಿಸಿದ ಪ್ರದೇಶವು ಬೇರೆ ಭಾಷಾ ಪ್ರಾಂತ್ಯಕ್ಕೆ ಒಳಪಟ್ಟಿದ್ದರೂ, ಗೆದ್ದ ಅರಸರ ಪ್ರಾಂತ್ಯದಲ್ಲಿ ಬಳಕೆಯಾಗುತ್ತಿದ್ದ ಶಾಸನಗಳ ಲಿಪಿ ಮತ್ತು ಭಾಷೆ ಹೊಸ ಪ್ರದೇಶಗಳಲ್ಲಿ ಕಂಡುಬರುತ್ತದೆ. ಅರಸು ಮನೆತನಗಳವರೊಂದಿಗೆ, ಸಮಾಜದ ವಿವಿಧ ವರ್ಗಗಳಿಗೆ ಸೇರಿದ ಜನಸಾಮಾನ್ಯರೂ ಇತರ ಭಾಷಾ ಪ್ರಾಂತ್ಯಗಳಲ್ಲಿ ಶಾಸನಗಳನ್ನು ಹಾಕಿಸಿರುವುದು ಕಂಡುಬರುತ್ತದೆ. ಪ್ರಮುಖವಾಗಿ ಪ್ರಸಿದ್ಧ ತೀರ್ಥಕ್ಷೇತ್ರಗಳಲ್ಲಿ ಅನೇಕ ಭಾಷೆ ಹಾಗೂ ವೈವಿಧ್ಯಮಯ ಲಿಪಿಯಿಂದ ಕೂಡಿದ ಶಾಸನಗಳು ಸಿಗುತ್ತವೆ. ಉತ್ತರ ಪ್ರದೇಶದಲ್ಲಿರುವ ಕಾಶಿ (ವಾರಣಾಸಿ), ಗಯಾ ಮತ್ತು ದಕ್ಷಿಣ ಭಾರತದ ರಾಮೇಶ್ವರ, ಕಂಚಿ, ಕಾಳಹಸ್ತಿ, ತಿರುಪತಿ, ಶ್ರೀರಂಗ ಮುಂತಾದ ತೀರ್ಥಕ್ಷೇತ್ರಗಳಲ್ಲಿ ಬಹು ಭಾಷೆ ಮತ್ತು ಲಿಪಿಯ ಶಾಸನಗಳು ದೊರಕಿವೆ.[೨]

ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸುವಾಗ ಅವುಗಳು ದೊರೆತ ಸಂದರ್ಭ, ಸ್ಥಳ, ಕಾಲ ಮತ್ತು ಇತರೆ ಅಂಶಗಳನ್ನು ಪರಿಗಣಿಸುವುದು ಅತ್ಯಂತ ಅವಶ್ಯಕವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ದಕ್ಷಿಣ ಭಾರತದ ಪ್ರಮುಖ ರಾಜಮನೆತನಗಳಲ್ಲಿ ಒಂದಾದ ಚೋಳರ ಶಾಸನಗಳನ್ನು ಇಲ್ಲಿ ಗಮನಿಸಲಾಗಿದೆ.

ಚೋಳರು ಮಧ್ಯಕಾಲೀನ ಯುಗದಲ್ಲಿ ಮುಂಚೂಣಿಯಲ್ಲಿದ್ದು ದಕ್ಷಿಣ ಭಾರತದ ರಾಜಕೀಯ ಇತಿಹಾಸಕ್ಕೆ ಅನೇಕ ತಿರುವುಗಳನ್ನು ನೀಡಿದವರಾಗಿದ್ದಾರೆ. ಅವರ ಕಾಲದಲ್ಲಿ ಕಲೆ, ವಾಸ್ತು, ಆಡಳಿತ ಸುಧಾರಣೆ, ರಾಜಕೀಯ ಭದ್ರತೆ ಮುಂತಾದ

---

* ಪ್ರವಾಚಕರು, ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಕ್ರಿಯೆಗಳು ಜರುಗಿದವು. ಚೋಳರು ಇಂದಿನ ತಮಿಳುನಾಡಿನ ತಂಜಾವೂರನ್ನು ತಮ್ಮ ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ನಡೆಸಿದರು. ಅವರ ಸಮಕಾಲೀನರಾಗಿ ನೆರೆ ರಾಜ್ಯಗಳಲ್ಲಿ ಆಳ್ವಿಕೆ ನಡೆಸುತ್ತಿದ್ದ ಹೊಯ್ಸಳ ಮತ್ತು ಚಾಲುಕ್ಯರ ರಾಜಕೀಯದೊಳಗೆ ಪ್ರವೇಶಿಸಿ ತಮ್ಮ ಆಧಿಪತ್ಯವನ್ನು ಸೂಚಿಸಿ ಪರೋಕ್ಷವಾಗಿ ಅವೆರಡೂ ರಾಜ್ಯಗಳ ಅಧಿಪತಿಗಳಾಗಿ ಕಾರ್ಯನಿರ್ವಹಿಸಿದರು. ಚೋಳರು ಕ್ರಿ.ಶ. ೯೫೦ರಿಂದ ಕ್ರಿ.ಶ. ೧೧೨೦ರವರೆಗೆ ಅಂದರೆ ಒಂದು ಶತಮಾನಕ್ಕೂ ಅಧಿಕ ಕಾಲ ಕರ್ನಾಟಕದ ದಕ್ಷಿಣ ಮತ್ತು ಪೂರ್ವ ಭಾಗಗಳನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಿದ್ದರು.[೩] ಇಂದಿನ ಮೈಸೂರು, ಚಾಮರಾಜನಗರ, ಮಂಡ್ಯ, ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳು ಅವರ ನೇರ ಅಧೀನಕ್ಕೆ ಒಳಪಟ್ಟಿದ್ದವು.

ಚೋಳರು ಇಂದಿನ ದಕ್ಷಿಣ ಕರ್ನಾಟಕದ ಬಹುಭಾಗಗಳಲ್ಲಿ ತಮ್ಮ ಆಧಿಪತ್ಯ ಮತ್ತು ಪ್ರಭಾವವನ್ನು ಎಲ್ಲಾ ಕ್ಷೇತ್ರಗಳಲ್ಲಿ ಬೀರಿದರು. ಈ ಭಾಗಗಳಲ್ಲಿ ಈಗಾಗಲೇ ಸಾಂಸ್ಕೃತಿಕ ಅಂಶಗಳು ಭದ್ರವಾಗಿ ನೆಲೆಯೂರಿದ್ದವು. ಶಾಸನಗಳಲ್ಲಿ ಬಳಸಲಾಗುತ್ತಿದ್ದ ಭಾಷೆ ಸಹ ಇದರಿಂದ ಹೊರತಾಗಿರಲಿಲ್ಲ. ಶಾಸನಗಳು ಸಾಮಾನ್ಯವಾಗಿ ಪ್ರಾಂತೀಯ ಮತ್ತು ಭಾಷಿಕ ಮೈತ್ರಿಯನ್ನು ಹೊಂದಿದ್ದು, ಎರಡು ಭಾಷೆಗಳ ಸಮ್ಮಿಶ್ರಣ ಹಾಗೂ ಪ್ರಭಾವಗಳನ್ನು ಹೊಂದಿರುವುದನ್ನು ಗಮನಿಸಬಹುದು. ಸಾಮಾನ್ಯವಾಗಿ ಸಾಂಸ್ಕೃತಿಕ ಕೊಡು-ಕೊಳ್ಳುವಿಕೆಯಿಂದ ಮತ್ತು 'ರಾಜಕೀಯ ಪ್ರಭಾವಗಳಿಂದ' ಶಾಸನಗಳಲ್ಲಿ ವೈವಿಧ್ಯತೆ ಕಂಡುಬರುತ್ತದೆ ಎಂಬುದು ಎಲ್ಲರ ಗ್ರಹಿಕೆ ಮತ್ತು ಅಭಿಪ್ರಾಯವಾಗಿರುತ್ತದೆ. ಒಂದು ಸಂಸ್ಕೃತಿಯ ಜನರು ಇನ್ನೊಂದು ಸಂಸ್ಕೃತಿಯ ಜನರೊಂದಿಗೆ ಬೆರೆತಾಗ ಮಾತ್ರವೇ ಕೊಡು ಕೊಳ್ಳುವಿಕೆಯ ಪ್ರಕ್ರಿಯೆಯು ಪ್ರಾರಂಭವಾಗುತ್ತದೆ. ಜನರು ತಮ್ಮ ಸಂಸ್ಕೃತಿಯ ಆಚಾರ ವಿಚಾರಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವುದಕ್ಕೆ ಸಾಕಷ್ಟು ಸಮಯಾವಕಾಶ ತೆಗೆದುಕೊಳ್ಳುತ್ತದೆ ಎಂಬುದು ನಿರ್ವಿವಾದ ಅಂಶ. ರಾಜಕೀಯ ಪ್ರಭಾವದಿಂದ ಒಂದು ದೇಶ ಅಥವಾ ರಾಜ್ಯವನ್ನು ವಶಪಡಿಸಿಕೊಂಡರೂ ಹೊಸ ಪರಿಸರದಲ್ಲಿ ಸಾಂಸ್ಕೃತಿಕ ಪ್ರಭಾವ ಬೀರಲು ಸಾಕಷ್ಟು ಸಮಯ ಬೇಕಾಗುತ್ತದೆ.[೪]

ಕರ್ನಾಟಕದಲ್ಲಿ ಚೋಳರ ಶಾಸನಗಳು ದೊರಕಿರುವ ಸ್ಥಳಗಳನ್ನು ಆಧರಿಸಿ ಅವನ್ನು ಮೂರು ವಲಯಗಳನ್ನಾಗಿ ವಿಂಗಡಿಸಬಹುದು. ಅವುಗಳು : ೧. ಕೇಂದ್ರ ವಲಯ (Core Zone) ೨. ಭಾಷಿಕ ವಲಯ (Lingual Zone) ಮತ್ತು ೩. ಹೊರ ವಲಯ (Distal Zone). ಕೇಂದ್ರ ವಲಯದಲ್ಲಿ ದೊರಕುವ ಶಾಸನಗಳು ಸಾಮಾನ್ಯವಾಗಿ ಆ ಪ್ರದೇಶದ ರಾಜಭಾಷೆಯಲ್ಲಿರುತ್ತವೆ. ಆ ಪ್ರಾಂತ್ಯದ ಮುಖ್ಯ ಲಿಪಿ ಮತ್ತು ಭಾಷೆಯನ್ನು ರಾಜಧಾನಿ ಮತ್ತು ರಾಜ್ಯದ ಇತರ ಮುಖ್ಯ ಪಟ್ಟಣಗಳಲ್ಲಿ, ಶಾಸನಗಳಲ್ಲಿ ಉಪಯೋಗಿಸಿರುವುದು ಕಾಣಸಿಗುತ್ತದೆ. ಲಿಪಿ ಮತ್ತು ಭಾಷೆಯ ಬಳಕೆಗಳಲ್ಲಿ ಒಂದು ವಿಧದ ಗುಣಮಟ್ಟವನ್ನೂ ಇವು ಕಾಯ್ದುಕೊಂಡಿರುವುದು ಗಮನಾರ್ಹ. ಭಾಷಿಕ ವಲಯದಲ್ಲಿ ರಾಜಧಾನಿ ಪ್ರದೇಶವನ್ನು ಹೊರತುಪಡಿಸಿ ರಾಜ್ಯದ ಉಳಿದ ಪ್ರದೇಶಗಳಲ್ಲಿ ಕಂಡುಬರುವ ಶಾಸನಗಳಲ್ಲಿ ಲಿಪಿ ಮತ್ತು ಭಾಷೆಯ ಬಳಕೆಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಹೊರವಲಯದಲ್ಲಿ, ಅಂದರೆ ರಾಜಧಾನಿ ಮತ್ತು ರಾಜ್ಯದ ಎಲ್ಲೆಯ ಹೊರಭಾಗದ ಪ್ರದೇಶದಲ್ಲಿರುವ ಶಾಸನಗಳು ಕೇಂದ್ರ ವಲಯ ಹಾಗೂ ಭಾಷಿಕ ಎರಡೂ ವಲಯಗಳಲ್ಲಿನ ಶಾಸನಗಳ ಗುಣಲಕ್ಷಣಗಳನ್ನು ಹೊಂದಿರುತ್ತವೆ. ಕೆಲವೊಮ್ಮೆ ಯಾವುದಾದರೂ ಒಂದು ವಲಯದ ಗುಣಲಕ್ಷಣಗಳನ್ನು ಮಾತ್ರವೇ ಹೊಂದಿರುವ ಸಾಧ್ಯತೆಗಳೂ ಇರುತ್ತವೆ.[೫]

ಕರ್ನಾಟಕದ ಚೋಳರ ಎಲ್ಲಾ ಶಾಸನಗಳ ಲಿಪಿ ಮತ್ತು ಭಾಷೆಗಳನ್ನು ಅವಲೋಕಿಸಿದಾಗ ಅವರು ಲಿಪಿ ಮತ್ತು ಭಾಷೆಗಳನ್ನು ನಾಲ್ಕು ವಿವಿಧ ಹಂತಗಳಲ್ಲಿ ಬಳಸಿರುವುದನ್ನು ಕಾಣಬಹುದು. ಮೊದಲನೆಯ ಹಂತದ ಶಾಸನಗಳಲ್ಲಿ ಕನ್ನಡ ಲಿಪಿ ಮತ್ತು ಭಾಷೆ ಬಳಸಿದರೆ, ಎರಡನೆಯ ಹಂತದಲ್ಲಿ ದ್ವಿಭಾಷಿಕತೆಯನ್ನು ಕಾಣಬಹುದು. ಇಲ್ಲಿ ಒಂದೇ ಶಾಸನದಲ್ಲಿ ಕನ್ನಡ ಲಿಪಿ, ಕನ್ನಡ ಭಾಷೆ ಹಾಗೂ ತಮಿಳು ಭಾಷೆಗಳನ್ನು ಬಳಸಲಾಗಿದೆ. ಮೂರನೆಯ ಹಂತದಲ್ಲಿ ಕನ್ನಡ ಲಿಪಿ ಮತ್ತು ತಮಿಳು ಭಾಷೆಯನ್ನು ಬಳಸಿರುವುದನ್ನು ಕಾಣಬಹುದು. ನಾಲ್ಕನೆಯ ಹಂತದ ಶಾಸನಗಳಲ್ಲಿ ಸಂಪೂರ್ಣವಾಗಿ ತಮಿಳು ಲಿಪಿ ಮತ್ತು ಭಾಷೆಯನ್ನು ಬಳಸಲಾಗಿದೆ. ಇದರಿಂದ ಒಂದು ನಿರ್ದಿಷ್ಟ ವಲಯದಲ್ಲಿ ಅಥವಾ ಪ್ರದೇಶದಲ್ಲಿ ಸಾಂಸ್ಕೃತಿಕ ಪ್ರಭಾವ ಆಗಬೇಕಾದರೆ ಸಾಕಷ್ಟು ಸಮಯಾವಕಾಶ ಬೇಕಾಗುತ್ತದೆ ಹಾಗೂ ಈ ಪ್ರಕ್ರಿಯೆಯು ಒಮ್ಮೆಗೇ ಆಗದೆ ತನ್ನದೇ ಆದ ವೇಗದಲ್ಲಿ ಆಗುತ್ತದೆ ಎಂದು ಸಾಬೀತಾಗಿದೆ.[೬]

ಮೈಸೂರು ಪ್ರಾಂತ್ಯವು ಮೊದಲಿಗೆ ಗಂಗರ ಆಳ್ವಿಕೆಗೆ ಒಳಪಟ್ಟಿದ್ದು, ನಂತರದಲ್ಲಿ ಚೋಳರ ಪ್ರಭಾವಕ್ಕೆ ಒಳಗಾಯಿತು. ಗಂಗರ ಶಾಸನಗಳು ಸಂಸ್ಕೃತ ಭಾಷೆಯಲ್ಲಿದ್ದು ಕೆಲವೊಂದು ತಮಿಳು ಪದಗಳ ಬಳಕೆಯನ್ನು ಸಹ ಶಾಸನಗಳಲ್ಲಿ

ಕಾಣಬಹುದು. ಉದಾಹರಣೆಗೆ 'ಪಲ್ಲವ ಕುಲತಿಲಕನ್', 'ವಯಿರಂಕಟ್ಟಿ ಎರೆದು', 'ಎಣ್ಣಪ್ಪಂ ಕೆರೆ ಅರಸಿಗಳ್ ಅಂತಿಗ್ಗ'– ಮುತಾದವುಗಳನ್ನು ಹೆಸರಿಸಬಹುದು.[೭]

ತಮಿಳು ಭಾಷೆಯು ಈ ಭಾಗದಲ್ಲಿ ಬಳಕೆಯಲ್ಲಿದ್ದರೂ ಆರಂಭದಲ್ಲಿ ಅದನ್ನು ಶಾಸನಗಳಲ್ಲಿ ಬಳಸುತ್ತಿರಲಿಲ್ಲ. ಮುಂದೆ ಕ್ರಮೇಣ ಬಳಸಲು ಮುಂದಾದರು. ಈ ಪ್ರಾಂತ್ಯವು ಚೋಳರ ಅಧೀನಕ್ಕೆ ಬಂದ ನಂತರ ತಮಿಳು ಭಾಷೆಗೆ ಹೊಸ ಚೈತನ್ಯ ದೊರೆತು ಅದು 'ಆಡು ಭಾಷೆ'ಯಾಯಿತು. ಈ ಕಾರಣದಿಂದಾಗಿ ಚೋಳರ ಶಾಸನಗಳು, ಮುಖ್ಯವಾಗಿ ೧೧ನೆಯ ಶತಮಾನದ ಶಾಸನಗಳು ತಮಿಳು ಭಾಷೆಯಲ್ಲಿರುವುದು ಗಮನಾರ್ಹ.[೮]

ಮೈಸೂರು ಮತ್ತು ತಮಿಳುನಾಡಿನ ಪ್ರಾಂತ್ಯಗಳ ಗಡಿ ಭಾಗಗಳ ಮೂಲಕ ವ್ಯಾಪಾರಕ್ಕೆ ಹಾಯ್ದುಹೋಗುತ್ತಿದ್ದ ಅನೇಕ ವರ್ತಕ ಸಮುದಾಯದವರು ಇಲ್ಲಿನ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡುವ ಸಂದರ್ಭಗಳಲ್ಲಿ ಶಾಸನಗಳನ್ನು ಹಾಕಿಸುತ್ತಿದ್ದರು. ಅವರ ಶಾಸನಗಳಲ್ಲಿಯೂ ಸಹ ವೈವಿಧ್ಯತೆಯನ್ನು ಕಾಣಬಹುದು. ಚೋಳರು ಉತ್ತಮ ಆಡಳಿತಗಾರರಾಗಿದ್ದು, ಅವರು ಕರ್ನಾಟಕದ ಭಾಗಗಳನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಾಗ ತಮ್ಮ ಲಿಪಿ ಮತ್ತು ಭಾಷೆಯನ್ನು ಇಲ್ಲಿಯ ನಿವಾಸಿಗಳ ಮೇಲೆ ಒತ್ತಾಯ ಪೂರ್ವಕವಾಗಿ ಹೇರದೆ, ಆ ಪ್ರಾಂತ್ಯದ ಜನಸಾಮಾನ್ಯರು ಅರಿತಿದ್ದ ಲಿಪಿ ಮತ್ತು ಭಾಷೆಯನ್ನು ಶಾಸನಗಳಲ್ಲಿ ಬಳಸಿದರು. ಅಲ್ಲದೆ ಅಲ್ಲಿಯ ನಿವಾಸಿಗಳು ಸಾಮಾನ್ಯ ವ್ಯವಹಾರಿಕ ತಮಿಳು ಜ್ಞಾನವನ್ನು ಮಾತ್ರ ಹೊಂದಿರುವ ಸಾಧ್ಯತೆಗಳೇ ಅಧಿಕ. ಈ ಕಾರಣಗಳಿಂದಾಗಿ ಚೋಳರ ಕಾಲದ ನಿಪುಣ ಆಡಳಿತಗಾರರು ಕನ್ನಡ ಮತ್ತು ತಮಿಳು ಭಾಷೆಗಳ ಸಮ್ಮಿಶ್ರಣವನ್ನು ಶಾಸನಗಳಲ್ಲಿ ಬಳಸಿರುವ ಸಾಧ್ಯತೆಗಳಿವೆ. ಇದರಿಂದಾಗಿ ಚೋಳರ ಪ್ರಶಸ್ತಿ ಭಾಗವು ತಮಿಳು ಭಾಷೆಯಲ್ಲಿದ್ದು, ಪಾಠವನ್ನು ನಿರೂಪಿಸುವಾಗ ಕನ್ನಡ ಭಾಷೆಯನ್ನು ಶಾಸನಗಳಲ್ಲಿ ಬಳಸಿದರು ಎಂದರೆ ತಪ್ಪಾಗಲಾರದು. ಈ ಪ್ರಕ್ರಿಯೆಯು ಮುಂದುವರಿದು ಕಾಲಕ್ರಮದಲ್ಲಿ ರೂಪಾಂತರ ಹೊಂದಿ ಶಾಸನಗಳಲ್ಲಿ ತಮಿಳು/ಗ್ರಂಥ ಲಿಪಿ ಮತ್ತು ಭಾಷೆಗಳನ್ನು ಬಳಸಿರುವುದನ್ನು ತಳ್ಳಿ ಹಾಕುವಂತಿಲ್ಲ.[೯]

ಚೋಳರ ಕನ್ನಡ ಶಾಸನಗಳು ಎರಡು ಪ್ರದೇಶಗಳ ಸಾಂಸ್ಕೃತಿಕ ಕೊಡು–ಕೊಳ್ಳುವಿಕೆಯತ್ತ ನಮ್ಮ ಗಮನ ಸೆಳೆಯುತ್ತವೆ. ಕನ್ನಡ ಭಾಷೆಯ ಶಾಸನಗಳಲ್ಲಿ ತಮಿಳು ಭಾಷೆಯ ಪ್ರಭಾವವನ್ನು ಕಾಣಬಹುದು. ಮೇಲುಕೋಟೆಯ ಸಮೀಪದ ತೊಣ್ಣೂರು ಗ್ರಾಮದ ಶಾಸನವು "ಕಾರಿಕುಡಿ ತಿಲಿ ಕುತ್ತಾಡಿ ದಂಡನಾಯಕ... ಯಾದವನಾರಾಯಣ ಚತುರ್ವೇದಿ ಮಂಗಲದ ಮಧ್ಯದೊಳು ಕಾರಿದುಡಿ ತಿಲ್ಲೆಕೂತ್ತ ವಿನ್ನಗರಂ ಮಾಡಿಸಿ ಶ್ರೀ ಲಕ್ಷ್ಮೀ ಶ್ರೀ ಭೂಮಿ ಸಹಿತವಾಗಿ ವಿಟ್ಟಿರುಂದ ಪೆರುಮಾಳ್ ತಿರುಪ್ರತಿಷ್ಠೆಯಂ ಮಾಡಿಸಿ ಆ ದೇವರಿಗೆ ..." ಎಂದು ಉಲ್ಲೇಖಿಸುತ್ತದೆ.[೧೦]

ಈ ಶಾಸನವು ಕಾರ್ಯೆಕುಡಿಯ ಅಧಿಕಾರಿ ಹಾಗೂ ಸೇನಾಪತಿ ಕೂತ್ತಾಡಿ ದಂಡನಾಯಕನು ವಿಷ್ಣುವಿಗೆ ಲಕ್ಷ್ಮಿ ಮತ್ತು ಭೂದೇವಿ ಸಹಿತ ಮಾಧವನಾರಾಯಣ ಚತುರ್ವೇದಿಮಂಗಲದ ಮಧ್ಯೆ ದೇವಾಲಯವನ್ನು ನಿರ್ಮಿಸಿ ಆ ದೇವಾಲಯಕ್ಕೆ 'ಕಾರ್ಯೆಕುಡಿ ತಿಲ್ಲೈಕೂತ್ತ ವಿಣ್ಣಗರ್' ಎಂದು ತನ್ನ ಹೆಸರನ್ನು ಇಡುತ್ತಾನೆ. ತಮಿಳಿನಲ್ಲಿ ತಿಲ್ಲೈಕೂತ್ತಾಡಿ ಎಂದರೆ ತಮಿಳುನಾಡಿನ ಚಿದಂಬರಂನಲ್ಲಿರುವ ಶಿವ ದೇವಾಲಯ ಮತ್ತು ಶಿವನನ್ನು (ನಟರಾಜ) ಅಚ್ಚ ತಮಿಳಿನಲ್ಲಿ 'ಕೂತ್ತಾಡಿ' ಎಂದು ಕರೆಯಲಾಗಿದೆ. ನಟರಾಜ ಅಥವಾ ಕೂತ್ತಾಡಿ ಎಂದರೆ ನಾಟ್ಯಗಾರ ಎಂಬುದಾಗಿದೆ. ಈ ಶಬ್ದವನ್ನು ಕನ್ನಡದಲ್ಲಿ 'ತಿಲ್ಲೆಕೂತ್ತಾ' ಎಂದು ಬದಲಿಸಿ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಇಲ್ಲಿಯ ಇನ್ನೊಂದು ತಮಿಳು ಶಾಸನವು 'ಕೂತ್ತಾದಿವಿಣ್ಣಗರ್' ಎಂದು ಉಲ್ಲೇಖಿಸಿದೆ. ಮೇಲೆ ಉಲ್ಲೇಖಿಸಿದ ಕೆಲವು ತಮಿಳು ಶಬ್ದಗಳನ್ನು ಇಲ್ಲಿನ ಕನ್ನಡ ಶಾಸನಗಳಲ್ಲಿ ಬಳಸಲಾಗಿದೆ.[೧೧]

ಇದೇ ಶಾಸನವು 'ವಿಟ್ಟಿರುಂದ ಪೆರುಮಾಳ್' ಅನ್ನು 'ತಿರುಪ್ರತಿಷ್ಠೆ' ಮಾಡಿಸಿರುವುದಾಗಿ ತಿಳಿಸುತ್ತದೆ. 'ವಿಟ್ಟಿರುಂದ ಪೆರುಮಾಳ್' ಎಂಬುದು 'ವೀಟ್ರಿರುಂದ ಪೆರುಮಾಳ್' ಎಂಬುದಾಗಿದೆ. ಸ್ಥಳೀಯ ಭಾಷೆಯ ಪ್ರಭಾವದಿಂದ ಅದನ್ನು ಕನ್ನಡದಲ್ಲಿ ಬಳಸಲಾಗಿದೆ. ಸಾಮಾನ್ಯವಾಗಿ ದೇವರನ್ನು ಪ್ರತಿಷ್ಠೆ ಮಾಡಿದರೆಂದು ಉಲ್ಲೇಖಿಸಲಾಗುತ್ತದೆ. ಆದರೆ ಈ ಶಾಸನವು 'ತಿರುಪ್ರತಿಷ್ಠೆ' ಎಂದು ಉಲ್ಲೇಖಿಸುತ್ತದೆ. 'ತಿರು' ಎಂದರೆ 'ಶ್ರೀ' ಎಂಬರ್ಥವಿದೆ. ತಮಿಳಿನ ಪದವನ್ನು ಯಥಾ ರೀತಿ ಇಲ್ಲಿ ಬಳಸಲಾಗಿದೆ. ಶಾಸನವು 'ವಿಟ್ಟಿರುಂದ ಪೆರುಮಾಳ್ ತಿರುಪ್ರತಿಷ್ಠೆಯಂ ಮಾಡಿ' ಎಂದು ದಾಖಲಿಸಿದೆ. ತಮಿಳು ವ್ಯಾಕರಣದ ಸಂದಿ ಪ್ರಕಾರ 'ತ' ಅಕ್ಷರವನ್ನು (ಪೆರುಮಾಳ್‌ತ–ತಿರು) ಪೂರ್ವಪದದೊಂದಿಗೆ ಸೇರಿಸುವ ಕ್ರಮವನ್ನು ಕನ್ನಡ ಶಾಸನದಲ್ಲಿಯೂ ಬಳಸಿರುವುದನ್ನು ಶ್ರೀನಿವಾಸನ್‌ರವರು ತೋರಿಸಿರುತ್ತಾರೆ.[೧೨]

ಪ್ರಸ್ತುತ ಶಾಸನದ ಕೊನೆಯ ಭಾಗದಲ್ಲಿ 'ಸಾಕ್ಷಿ ಮದ್ದೂರು ಸಭೆ ತೈಲೂರು ಸಭೆ' ಎಂದು ಉಲ್ಲೇಖಿಸಿದೆ. 'ಸಭೆ' ಎಂಬುದು ಚೋಳರ ಕಾಲದ ಬಹು ಮುಖ್ಯ ಆಡಳಿತ ಘಟಕ. ಅವರ ಶಾಸನಗಳಲ್ಲಿ ಈ ಆಡಳಿತ ನಿರ್ವಾಹಕ ಘಟಕವನ್ನು ಸಾಮಾನ್ಯವಾಗಿ ಉಲ್ಲೇಖಿಸಲಾಗುತ್ತದೆ. ಅವರ ಶಾಸನಗಳಲ್ಲಿ 'ಸಭೆ'ಯ ತೀರ್ಮಾನ ಮತ್ತು ಅದು ಹೊರಡಿಸುವ ಶಾಸನವು ಅಧಿಕೃತವಾಗಿರುತ್ತಿದ್ದವು. ಆ ಆಡಳಿತ ಘಟಕವನ್ನು ಸೂಚಿಸುವ ಪದವೇ ತಮಿಳಿನ 'ಸಭೈ'. ಅದನ್ನು ಕನ್ನಡದ ಶಾಸನದಲ್ಲಿ 'ಸಭೆ' ಎಂದು ಬಳಸಿರುವುದು ಗಮನಾರ್ಹ.[೧೩] ಚೋಳರು ತಮ್ಮ ಆಡಳಿತದಲ್ಲಿ ಪ್ರಸಿದ್ಧಿ ಪಡೆದವರೆಂಬುದನ್ನು ಈಗಾಗಲೇ ನಿರೂಪಿಸಲಾಗಿದೆ.

ಇವರ ಆಡಳಿತಕ್ಕೆ ಸಂಬಂಧಿಸಿದಂತೆ ಪ್ರಸ್ತಾಪಿಸುವುದಾದರೆ ಇವರು ರಾಜ್ಯವನ್ನು ಹಲವಾರು ಆಡಳಿತ ಘಟಕಗಳನ್ನಾಗಿ ವಿಭಜಿಸಿ ಸುಸೂತ್ರವಾಗಿ ಮತ್ತು ಸಮರ್ಥವಾಗಿ ನಿಭಾಯಿಸುತ್ತಿದ್ದರು. ಅವರ ಕಾಲದ ಆಡಳಿತ ವಿಭಾಗಗಳಲ್ಲಿ 'ಚತುರ್ವೇದಿ ಮಂಗಲ' ಎಂಬ ವಿಭಾಗವನ್ನು ಕುರಿತು ಪ್ರಸ್ತುತ ಶಾಸನವು ಉಲ್ಲೇಖಿಸಿರುವುದು ಗಮನಾರ್ಹ. 'ಚತುರ್ವೇದಿ ಮಂಗಲ' ಎಂಬುದು ಆಡಳಿತದ ವಿಭಾಗವಾಗಿದ್ದು, ಅದರಲ್ಲಿ ಸಾಮಾನ್ಯವಾಗಿ ನಾಲ್ಕು ವೇದಗಳನ್ನು ಬಲ್ಲ ಬ್ರಾಹ್ಮಣ ಕುಟುಂಬಗಳು ವಾಸವಿದ್ದರೆಂದು ತಿಳಿದುಬಂದಿದೆ.[೧೪]

ಚೋಳರ ಕಾಲದಲ್ಲಿ ತಮಿಳುನಾಡಿನಲ್ಲಿ ಹಲವಾರು ಚತುರ್ವೇದಿ ಮಂಗಲಗಳು ಇದ್ದವು. ಅರಸರು ಮತ್ತು ಅವರ ಮನೆತನಕ್ಕೆ ಸೇರಿದವರು ಹಾಗೂ ಪ್ರಮುಖರು ಹಲವಾರು ದಾನದತ್ತಿಗಳನ್ನು ನೀಡಿ ಇಂತಹ ಚತುರ್ವೇದಿಮಂಗಲಗಳ ಸ್ಥಾಪನೆಗೆ ಕಾರಣೀಭೂತರಾಗುತ್ತಿದ್ದರು. ಅಂತಹ ದಾನ ನೀಡುವ ವ್ಯಕ್ತಿಗಳ ಹೆಸರಿನೊಂದಿಗೆ 'ಚತುರ್ವೇದಿಮಂಗಲ' ಎಂಬ ಪದವನ್ನು ಜೋಡಿಸಿ ಗುರುತಿಸುತ್ತಿದ್ದರು. ಅದೇ ರೀತಿ ಕನ್ನಡನಾಡಿನಲ್ಲಿಯೂ ಚತುರ್ವೇದಿಮಂಗಲವನ್ನು ಸ್ಥಾಪಿಸಿರುವುದನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಚೋಳರ ಶಾಸನಗಳು ಆಡಳಿತ ನಿರ್ವಾಹಕರು ಮತ್ತು ಆಡಳಿತದ ಘಟಕಗಳನ್ನು ಉಲ್ಲೇಖಿಸುತ್ತವೆ. ಅಂತಹವುಗಳಲ್ಲಿ 'ಸಭೆ' ಎಂಬುದನ್ನು ಕುರಿತು ಈಗಾಗಲೇ ಪ್ರಸ್ತಾಪಿಸಲಾಗಿದೆ. ಇದರೊಂದಿಗೆ 'ಶ್ರೀಕಾರ್ಯಂ', 'ನಂಜಿಮಾರ' ಎಂಬ ಆಡಳಿತ ನಿರ್ವಾಹಕರನ್ನೂ ಶಾಸನಗಳು ದಾಖಲಿಸಿವೆ.

ಚೋಳರ ತಮಿಳು ಶಾಸನಗಳು ಸಾಮಾನ್ಯವಾಗಿ 'ಪ್ರಶಸ್ತಿ'ಯಿಂದ ಪ್ರಾರಂಭಗೊಳ್ಳುತ್ತವೆ. ಅವುಗಳನ್ನು 'ಮೆಯ್‌ಕೀರ್ತಿ'ಗಳು ಎಂದು ಸಹ ಕರೆಯಲಾಗುತ್ತದೆ. ಬಹುತೇಕ ಶಾಸನಗಳು ಅವರ 'ಮೆಯ್‌ಕೀರ್ತಿ' ಅಥವಾ ಪ್ರಶಸ್ತಿಯನ್ನು ಕಡ್ಡಾಯವಾಗಿ ಹೊಂದಿರುತ್ತವೆ. ಕೆಲವೊಮ್ಮೆ ಅನಿವಾರ್ಯ ಕಾರಣಗಳಿಂದ ಪ್ರಶಸ್ತಿಯ ಪೂರ್ಣಪಾಠವನ್ನು ಶಾಸನದಲ್ಲಿ ದಾಖಲಿಸಲು ಸಾಧ್ಯವಾಗದಿದ್ದಲ್ಲಿ, 'ಮೆಯ್‌ಕೀರ್ತಿಕ್ಕು ಮೇಲ್' ಎಂದು ದಾಖಲಿಸುತ್ತಾರೆ. ಇದರ ಅರ್ಥ 'ಮೆಯ್‌ಕೀರ್ತಿಯ ನಂತರ' ಎಂಬುದಾಗಿದೆ. ಅಲ್ಲಿಂದ ಶಾಸನದ ಪಾಠವು ಪ್ರಾರಂಭವಾಗುತ್ತದೆ. ತೊಣ್ಣೂರು ಶಾಸನವು 'ಮೆಯ್‌ಕೀರ್ತ್ತಿಕ್ಕು-ಮೇಲ್' ಎಂಬ ಪದದ ಬಳಕೆಗೆ ಪರ್ಯಾಯವಾಗಿ, 'ಸಮಸ್ತ ಪ್ರಶಸ್ತಿ ಸಹಿತಂ' ಎಂದು ಉಲ್ಲೇಖಿಸುತ್ತದೆ.

ವ್ಯಕ್ತಿನಾಮಗಳು ಹಾಗೂ ಆಡಳಿತಗಾರರ ಪದನಾಮಗಳು ಸಹ ಭಾಷಿಕ ಪ್ರಭಾವಗಳಿಗೆ ಒಳಗಾಗಿರುವುದನ್ನು ಚೋಳರ ಕನ್ನಡ ಮತ್ತು ತಮಿಳು ಭಾಷೆಯ ಶಾಸನಗಳ ಸೂಕ್ಷ್ಮ ಅಧ್ಯಯನಗಳಿಂದ ತಿಳಿಯಬಹುದು. ಕೆಲವೊಮ್ಮೆ ತಮಿಳು ವ್ಯಕ್ತಿನಾಮಗಳನ್ನು ಕನ್ನಡೀಕರಿಸಲಾಗಿದೆ. ಅದು ಸಾಧ್ಯವಾಗದಿದ್ದಾಗ, ಅವುಗಳನ್ನು ಯಥಾರೀತಿ ಬಳಸಿರುವುದನ್ನು ಕಾಣಬಹುದು. ದೇವರ ಹೆಸರುಗಳನ್ನು ಸಹ ಮೇಲೆ ಉಲ್ಲೇಖಿಸಿದ ರೀತಿಯಲ್ಲೇ ಬಳಸಿರುವುದನ್ನು ಶ್ರೀನಿವಾಸನ್‌ರವರು ನಿರೂಪಿಸಿದ್ದಾರೆ.

ಚೋಳರ ಕಾಲದ ಶಾಸನಗಳು ಅನೇಕ ವಿಷಯಗಳತ್ತ ನಮ್ಮ ಗಮನ ಸೆಳೆಯುತ್ತವೆ. ಲಿಪಿಯ ಬಳಕೆ, ಭಾಷೆಯನ್ನು ಸಮರ್ಥವಾಗಿ ಜನರಿಗೆ ತಲುಪುವಂತೆ ಮಾಡುವ ಆಡಳಿತಗಾರರ ನೈಪುಣ್ಯತೆ ಹಾಗೂ ಸಾಂಸ್ಕೃತಿಕ ಅಂಶಗಳು ಒಂದೆಡೆಯಾದರೆ, ಭಾಷಾಧ್ಯಯನ, ವ್ಯಾಕರಣ, ಇನ್ನೊಂದು ಭಾಷೆಯ ಪ್ರಭಾವ ಮತ್ತು ಭಾಷಾ ಮಾರ್ಪಾಡು ಮುಂತಾದವುಗಳು ಸಹ ಇಂತಹ ಅಧ್ಯಯನಗಳಿಂದ ಸಾಧ್ಯವಾಗುತ್ತವೆ ಮತ್ತು ಹಲವು ದೃಷ್ಟಿಕೋನ ಮತ್ತು ಮಜಲುಗಳಿಂದ ಕೂಡಿದ ಹೊಸ ಸಂಶೋಧನೆಗಳಿಗೆ ದಾರಿ ಮಾಡಿಕೊಡಬಲ್ಲವು ಎಂಬುದನ್ನು ಈ ಅಧ್ಯಯನಗಳು ಸಾಬೀತುಪಡಿಸುತ್ತವೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ವಾಸುದೇವನ್ ಸಿ.ಎಸ್., **'ಸ್ಕ್ರಿಪ್ಟಲ್ ಟ್ರಾನ್ಸ್‌ಮ್ಯೂಟಬಿಲಿಟಿ ಆಫ್ ಚೋಳ ಇನ್‌ಸ್ಕ್ರಿಪ್ಷನ್ಸ್ ಇನ್ ಕರ್ನಾಟಕ (ಮೈಸೂರ್ ಡಿಸ್ಟ್ರಿಕ್ಟ್)', ಜರ್ನಲ್ ಆಫ್ ದಿ ಎಪಿಗ್ರಫಿಕಲ್ ಸೊಸೈಟಿ ಆಫ್ ಇಂಡಿಯಾ,** ಸಂ.೧೮, ಪು.೧೧೦–೧೧೭: 'ಮೈಸೂರು ಜಿಲ್ಲೆಯ ಚೋಳರ ಶಾಸನಗಳಲ್ಲಿನ ಲಿಪಿಗಳ ರೂಪಾಂತರ ಒಂದು ಅಧ್ಯಯನ', **ಶಾಸನ ಅಧ್ಯಯನ,** ಸಂ.೨, ಪು.೪೭–೬೦.

೨. ಕೃಷ್ಣಮೂರ್ತಿ ಪಿ.ವಿ., **ತಮಿಳುನಾಡಿನ ಕನ್ನಡ ಶಾಸನಗಳು,** ಪು.೧–೨.

೩. ಅದೇ, ಪು.೨೫.

೪. ವಾಸುದೇವನ್ ಸಿ.ಎಸ್., ಪೂರ್ವೋಕ್ತ, ಪು.೧೧೦: ಪು.೪೭–೪೮.

೫. ಅದೇ, ಪು.೧೧೧; ಪು.೪೯.

೬. ಅದೇ, ಪು.೧೧೧–೧೧೨; ಪು.೪೯.

೭. ಅದೇ, ಪು.೧೧೨; ಪು.೫೦.

೮. ಅದೇ, ಪು.೧೧೨; ಪು.೫೦–೫೧.

೯. ಅದೇ, ಪು.೧೧೨–೧೧೩.

೧೦. ಶ್ರೀನಿವಾಸನ್ ಸಿ.ಆರ್., **'ಇಂಪಾಕ್ಟ್ ಆಫ್ ತಮಿಳ್ ಆನ್ ಕನ್ನಡ ಇನ್‌ಸ್ಕ್ರಿಪ್ಷನ್ಸ್', ಎಪಿಗ್ರಫಿ, ನ್ಯೂಮಿಸ್‌ಮಾಟಿಕ್ಸ್ ಅಂಡ್ ಅದರ್ ಆಸ್ಪೆಕ್ಟ್ಸ್ ಇನ್ ಕರ್ನಾಟಕ,** (ಸಂ.) ದೇವರಾಜ್ ಡಿ. ವಿ. ಮತ್ತು ಚನ್ನಬಸಪ್ಪ ಎಸ್. ಪಾಟೀಲ್, ಪು. ೩೩–೩೮.

೧೧. ಗೋಪಾಲ್ ಬಿ.ಆರ್., **'ಶ್ರೀರಾಮಾನುಜ ಇನ್ ಕರ್ನಾಟಕ',** ಪು.೪೬. ಇದು ೧೨ನೆಯ ಶತಮಾನದ ಶಾಸನ.

೧೨. ಶ್ರೀನಿವಾಸನ್ ಸಿ.ಆರ್., ಪೂರ್ವೋಕ್ತ, ಪು.೩೪.

೧೩. ಗೋಪಾಲ್ ಬಿ.ಆರ್., ಪೂರ್ವೋಕ್ತ, ಪು.೪೪–೪೫, ತೊಣ್ಣೂರು ಶಾಸನ ಸಂ. ೨; ಶ್ರೀನಿವಾಸನ್, ಪೂರ್ವೋಕ್ತ, ಪು. ೩೩–೩೪.

೧೪. ಶ್ರೀನಿವಾಸನ್ ಸಿ.ಆರ್., ಪೂರ್ವೋಕ್ತ, ಪು.೩೪.



# ಶಾಸನಗಳಲ್ಲಿ ಗಂಗರು ಮತ್ತು ಕೊಡಗು

– ಡಾ॥ ಎಂ.ಜಿ. ನಾಗರಾಜ್*

**ತಲೆಮಾರಿನ ಹಾದಿ**

ಗಂಗರು ಕರ್ನಾಟಕದ ಜನಪದದಿಂದ ಎದ್ದು ಬಂದವರು. ಅವರು ಕನ್ನಡ ನೆಲದ ಮಣ್ಣಿನ ಮಕ್ಕಳು. ಅವರ ಆಚಾರ, ವಿಚಾರ, ಭಾಷೆಯ ಸೊಗಡು, ಜೀವನ ಕ್ರಮ ಕನ್ನಡ ನೆಲದ ಜಾಯಮಾನದ್ದಾಗಿದೆ. ಅವರ ಸಂಸ್ಕೃತಿ ಈ ನೆಲದಲ್ಲಿ ವಿಕಸಿಸಿ ಬಂದಂಥದ್ದು. ಅವರ ವಂಶನಾಮ ನಿಸರ್ಗವಾಚಿಯಾಗಿರುವಂತೆ ಕಾಣುತ್ತದೆ. ಅರ್ಥಾತ್ ಸಸ್ಯವಾಚಿ ಮೂಲದಿಂದ ಬಂದಂತೆ ತೋರುತ್ತದೆ.

ಕೆಲವು ವಿದ್ವಾಂಸರು, ಗಂಗರು ಇದ್ದು ಆಳಿದ ಪ್ರದೇಶ ಮುಖ್ಯವಾಗಿ ಕಾವೇರಿ ತೀರ ಪ್ರದೇಶ. ಆ ಕಾವೇರಿಗೆ 'ದಕ್ಷಿಣಗಂಗೆ' ಎಂಬ ಹೆಸರಿದೆ. ಹೀಗಾಗಿ ಗಂಗರಿಗೆ ಕನ್ನಡ ನದಿ ಮೂಲದ ವಂಶನಾಮವಿದೆ ಎಂಬ ಅಭಿಪ್ರಾಯವನ್ನು ತಳೆದಿರುವುದುಂಟು[೧]. ಅಲ್ಲದೆ ಗಂಗರಿಗಿದ್ದ **'ಕೊಙ್ಗಣಿ'** ಎಂಬ ಉಪಾಧಿಯನ್ನು ಈ ಸಂದರ್ಭದಲ್ಲಿ ಗಮನಿಸಬೇಕಾಗುತ್ತದೆ.

ಗಂಗರ ಮೂಲದ ಕುರಿತ ಪೌರಾಣಿಕ ಅಥವಾ ಸಾಂಪ್ರದಾಯಿಕ ಕಥೆಗಳಲ್ಲಿ ಅವರು ದಶರಥನ ರಾಜಧಾನಿ ಅಯೋಧ್ಯೆಯಿಂದ ಬಂದರು, ಉತ್ತರ ಭಾರತದ ಕಣ್ವ ವಂಶದವರು ಸಿಂಹನಂದಿ ಜೈನಯತಿಯ ಶಿಷ್ಯರಾಗಿ ಆ ಗುರುವಿನಿಂದ ಆದೇಶಿತರಾಗಿ ರಾಜ್ಯ ಸ್ಥಾಪನೆ ಮಾಡಿದವರು, ಎನ್ನಲಾಗಿದೆ. ಆರೋಕ್ಯಸ್ವಾಮಿ, ವಿಶ್ವನಾಥ ಮುಂತಾದ ಈಚಿನ ಕೆಲವು ವಿದ್ವಾಂಸರು (**ಕೊಂಗುದೇಶ ರಾಜಕ್ಕಳ್** : ೧೭ನೆಯ ಶತಮಾನ) ಕೊಂಗುದೇಶದ ಸೇಲಂ ಜಿಲ್ಲೆಯಿಂದ ಬಂದ ತಮಿಳು ಮೂಲದವರೆಂಬ ಅಭಿಪ್ರಾಯ ತಳೆದಿರುವುಂಟು. ಈ ಮೊದಲು ಸಿವೆಲ್ ಅವರೂ ಪ್ರಾಚೀನ ಕೊಂಗು ವಂಶದ ಅರಸರೊಡನೆ ಗಂಗರು ಸಂಬಂಧಗೊಂಡಿದ್ದರು, ಎಂಬ ಊಹೆಯನ್ನು ಮುಂದಿರಿಸಿದ್ದರು. ಅದೇನೇ ಇರಲಿ ಗಂಗರು, ನಮ್ಮ ನಾಡಿನ ನಾಯಕತ್ವದ ರಾಜಕೀಯ ನಿರ್ವಾತ ಸ್ಥಿತಿ ಕಂಡು ಕನ್ನಡ ನೆಲದಲ್ಲಿ ಹುಟ್ಟಿ ಬಂದವರು ಎಂಬ ದೇಸೀ ಸಿದ್ಧಾಂತವೂ ಚಾಲ್ತಿಗಿದೆ.

ಅಚ್ಚರಿ ಎಂದರೆ ಕೆಲವು ಶಾಸನಗಳೂ ಗಂಗರ ಕುರಿತ ಐತಿಹ್ಯ ಆಧಾರಿತ ಕಥೆಗಳನ್ನೆ ಅವರ ಪ್ರಾಚೀನತೆ ಕುರಿತಂತೆ ಹೇಳಿವೆ. ಮೂಲ ಪುರುಷರಾದ ದಡಿಗ, ಮಾಧವರು ಉತ್ತರದ ಇಕ್ಷ್ವಾಕುವಂಶದವರೆಂದು ನಮೂದಿಸಿವೆ. ಕೆಲವು ಶಾಸನಗಳು ಅವರನ್ನು ಯಾದವ ವಂಶಕ್ಕೆ ಸೇರಿದವರೆಂದಿವೆ. ಕಾಣ್ವಾಯನ ಗೋತ್ರ, ಜಾಹ್ನವೇಯ ಕುಲಕ್ಕೆ ಸೇರಿದ ಉತ್ತರ ಭಾರತೀಯರೆಂದಿವೆ. ಇವೆಲ್ಲ ೧೦ನೆಯ ಶತಮಾನದ ಸುಮಾರಿನ ಪರಿಕಲ್ಪನೆಗಳಾಗಿ, ಗಂಗರು ಮೂಡಿದ ಸುಮಾರು ಆರು ಶತಮಾನದ ನಂತರ ಬಂದವಾಗಿವೆ. ಗಂಗರ ರಾಜಧಾನಿ ತಲಕಾಡು ಆಗಿದ್ದು, ಅದು ಕೊಂಗುದೇಶಕ್ಕೆ ಸೇರಿರಲಿಲ್ಲ; ಆದಾಗಿ ಕೊಂಗು ದೇಶದ ಮೂಲ ಗಂಗರಿಗೆ ಸೂಕ್ತವಲ್ಲ ಎಂಬುದು ಪ್ರೊ॥ ಷೇಕ್ ಆಲಿ ಅವರ ಅಭಿಮತ[೨]. ಹಾಗಾದರೆ ಒಂದನೆಯ ಮಾಧವನಿಗೆ **'ಕೊಙ್ಗಣಿವರ್ಮ'** ಎಂಬ ಬಿರುದು ಬಂದುದೇಕೆ! ಕೊಂಗುದೇಶಕ್ಕೆ (ಕೊಯಮತ್ತೂರು ಹಾಗೂ ಸೇಲಂ ಜಿಲ್ಲೆಯ) ತನ್ನ ರಾಜಧಾನಿಯನ್ನು ವರ್ಗಾಯಿಸಿದುದೇ ಕಾರಣವಾಗಿರಬೇಕು, ಎಂದೂ ಹೇಳಲಾಗಿದೆ. ಅಂದರೆ ಕೊಂಗು ದೇಶದವರೆಗೆ ಕೊಂಕಣ ದೇಶದವರೆಗೆ ರಾಜ್ಯ ವಿಸ್ತಾರ ಮಾಡಿದ್ದರಿಂದ ಈ ಬಿರುದು ಬಂದಿರಬಹುದೇ? ಎಂಬ ಪ್ರಶ್ನೆಯೂ ಇದೆ. ಕಾರಣ, ಕೊಂಗುಲಿ(ಳಿ)ವರ್ಮ, ಕೊಂಕಣಿವರ್ಮ ಎಂದೆಲ್ಲ ಅವನು ಕರೆಸಿಕೊಂಡಿದ್ದಾನೆ. ಗಂಗಡಿಕಾರರು, ಪೂರ್ಣವಾಗಿ ಕನ್ನಡಿಗರೆ, ಕೃಷಿಕ ಹಿನ್ನೆಲೆಯವರೆ, ಅವರಿಂದ ಗಂಗವಂಶ ಸ್ಥಾಪಕರಾದ ದಡಿಗರು ಮಾಧವ ಮೂಡಿಬಂದರು. ಹೀಗಾಗಿ ವೀರರ ಪಡೆಯನ್ನು ಕೃಷಿಕ ವರ್ಗದಿಂದ ಕಟ್ಟಲು ಅವರಿಗೆ ಅನುಕೂಲವಾಯಿತು. ಕಾವೇರಿ ಅವರಿಗೆ ತೀರ ಹತ್ತಿರದವಳು. ಅಂತಾಗಿ ಅವಳ ತೀರದಲ್ಲಿ ಅವರ ಕಾಲದ ಕೃಷಿ ಸಂವರ್ಧನೆಗೊಂಡು, ಸಮೃದ್ಧಿಯಿಂದ ಬೆಳಸುಗೊಂಡಿತ್ತು. ಕೊಡಗಿನ ವಿಷಯದಲ್ಲಿಯಂತು ಇದು ಎದ್ದು ಕಾಣುತ್ತದೆ. ಅಲ್ಲಿಯ ಶಾಸನಗಳು ಇದಕ್ಕೆ ಒಪ್ಪ ಹಾಕಿವೆ. ಬೆಳೆವೈವಿಧ್ಯವೂ,

---

* ನಂ.೨೨೧, ೬೭ನೆಯ ಅಡ್ಡರಸ್ತೆ, ೫ನೆಯ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦.

ಅಲ್ಲಿಯ ಮಣ್ಣಿನ ಗುಣಕ್ಕೆ ಅನುಗುಣವಾಗಿ ರೂಪುಗೊಂಡಿರುವುದು ಅಲ್ಲಿನ ಗಂಗರ ಕಾಲದ ಶಾಸನಗಳಿಂದ ವಿದಿತವಾಗುತ್ತದೆ. ಇಂಥ 'ಕವೇರಕನ್ಯೆ ಕಾವೇರಿ'ಯ ಸಖ್ಯಕ್ಕಾಗಿ ಚೋಳರು ಹಾತೊರೆದು ಬಂದವರೆ.

ಕೊಡಗಿನ ಸದ್ಯ ಲಭ್ಯವಿರುವ ಗಂಗರ ಅತ್ಯಂತ ಪ್ರಾಚೀನವೆನಿಸಿರುವ ಆದರೆ ಕೂಟಶಾಸನವೆಂದು ನಿರ್ಧರಿತವಾಗಿರುವ ಮಡಿಕೇರಿಯ ಈ ತಾಮ್ರಪಟದಲ್ಲಿ ಮಾಧವನಿಂದ ಅವನೀತನ ಕಾಲದವರೆಗೆ ಗಂಗ ವಂಶಾವಳಿಯಿದ್ದು, ಮಾಧವ ಹಾಗೂ ಅವಿನೀತನನ್ನು 'ಕೊಙ್ಗಣಿ' ಮಹಾಧಿರಾಜ ಎಂದು ಸಂಬೋಧಿಸಲಾಗಿದೆ[೩]. ಬಹುಶಃ ೯ನೆಯ ಶತಮಾನದಲ್ಲಿ ನಕಲು ಗೊಂಡ ಈ ಶಾಸನದಲ್ಲಿ ಉಕ್ತವಾಗಿರುವ ಕಾಲ ಕ್ರಿ.ಶ. ೪೬೬. ಅಂತಾಗಿ 'ಕೊಙ್ಗಣಿ' ಶಬ್ದ ಗಮನ ಸೆಳೆಯುತ್ತದೆ. ಅದನ್ನು ತೌಲನಿಕವಾಗಿ ಪರಿಶೀಲಿಸಬೇಕಾಗುತ್ತದೆ.

ಕ್ರಿ.ಶ. ೫೫೦ರ ದುರ್ವಿನೀತನ ಹುಟ್ಟುಹಬ್ಬದಲ್ಲಿ ಭೂ ಬಿತ್ತನೆ ಬೀಜ ನೀಡುವ ಸಂದರ್ಭವನ್ನು ಹೇಳುವ ಗುಮ್ಮರೆಡ್ಡಿಪುರ ಶಾಸನವನ್ನು ಕೆತ್ತಿದವನು **ಯೇನ ಕೊಙ್ಗಣಿ ಪೆರ್ನ್ದಟ್ಟಕಾರೇಣ ಲಿಖಿತ** ಎಂದಿದೆ[೪]. ಪುನ್ನಾಟದ ದೊರೆ ೩ನೆಯ ಸ್ಕಂದವರ್ಮನ ಮಗಳನ್ನು ಅವಿನನೀತ ಮದುವೆ ಆಗಿದ್ದ. ದುರ್ವಿನೀತನು ಅವರಲ್ಲಿ ಜನಿಸಿ ಪುನ್ನಾಟದ ಸ್ಕಂದವರ್ಮನ ದೌಹಿತ್ರನಾಗಿ ವಂಶಿಕ ಪರಂಪರೆಯನ್ನು ಹೊಂದಿದ್ದ. ಈ ಪುನ್ನಾಟ ಪ್ರದೇಶವೂ ಅತ್ಯಂತ ಕೃಷಿ ಸಂಪದ್ಭರಿತ ಪ್ರದೇಶ ಎಂಬುದು ಮಾಂಬಳ್ಳಿ ಶಾಸನದಿಂದಲೂ ವಿದಿತವಿದೆ[೫].

ಈ ಶಾಸನವು (ಗಂಗರು ಕೃಷಿ ಪರಿಸರದಲ್ಲಿ ಹುಟ್ಟಿ ಬೆಳೆದವರು ಎಂಬ ಸೂಚನೆಯಾಗಿ)

ಶಾಲಿವ್ರೀಹಿಯವ ಗೋಧೂಮರಾಡಕಾದಿ ಪ್ರತಿವರ್ಷ ನಿಷ್ಪನ್ನ ಸಸ್ಯಾಭರಣಸ್ಯ

ಕದಳೀ ಕ್ರಮುಕನಾಳಿಕೇರೇ ಕ್ಷುಪನಸಚಮ್ಪಕತಾಂಮಬ್ಬೂಲವಕುಲಾಸೋಕಪುನ್ನಗ

ಕಾವೇರಿ ಕಪಿನೀ ಶ್ರೀನದೀಭಿರಲಂಕೃತಸ್ಯ ವಿದೇಹ ಇವ ಬುಭ್ರಾಜ್ಯಮಾನಸ್ಯ

ಎಂದಿರುವಲ್ಲಿ ಕಾವೇರಿ, ಕಪಿನೀ, ಶ್ರೀ ನದಿಗಳಿಂದ ಅಲಂಕೃತವಾದ ಈ ಪ್ರದೇಶವು ಭತ್ತ, ಬಾರ್ಲಿ, ಗೋಧಿ, ಧಾನ್ಯಗಳಲ್ಲದೆ ಬಾಳೆ, ಅಡಕೆ, ತೆಂಗು, ಕಬ್ಬು, ಹಲಸು, ವೀಳೆಯದೆಲೆ, ಅಸೋಕ, ಪುನ್ನಾಗ, ಇತ್ಯಾದಿ ವೃಕ್ಷಸಂಪತ್ತಿನಿಂದ ಕೂಡಿತ್ತು ಎಂಬ ಅರ್ಥವಿದೆ.

ಬಹುಶಃ ಈ ಪುನ್ನಾಟ ಪ್ರದೇಶದಲ್ಲಿ ದುರ್ವಿನೀತನ ಹುಟ್ಟುಹಬ್ಬದಲ್ಲಿ ಭೂಬಿತ್ತನೆ ಬೀಜ ನೀಡಿದ್ದು, ಅದು ಕೃಷಿಕುಲದವರ ಸಂಪ್ರದಾಯವಾಗಿರಬೇಕು. ಇದೂ ಕೂಡ ಗಂಗರು ಇಲ್ಲಿಯ ಮಣ್ಣಿನ ಮಕ್ಕಳ ಸಂಪ್ರದಾಯದವರೆಂದು ಸೂಚುಸುವಂತಿದೆ. ಶಾಸನ ಕೆತ್ತಿದ/ಕೆತ್ತಿಸಿದವನು 'ಕೊಙ್ಗಣಿ' ಪ್ರದೇಶದವನಾಗಿದ್ದಿರಬಹುದು; ಗಂಗ ಮನೆತನದವನಿರಬಹುದು. ವಂಶಿಕ ಉಪಾಧಿಯಾಗಲು ಈ ಪ್ರಾದೇಶಿಕತೆಯೂ ಪೋಷಣೆ ನೀಡಿರಬಹುದು.

ಗಂಗರಲ್ಲಿ ಅವಿನೀತ, ಭೂವಿಕ್ರಮ, ಶಿವಮಾರರಿಗೆ 'ಕೊಙ್ಗಣಿ' ಎಂಬ ಉಪಾಧಿ ಇದ್ದಂತೆ ಶ್ರೀಪುರುಷನಿಗೂ (ಕ್ರಿ.ಶ. ೭೫೦) 'ಕೊಙ್ಗುಣಿ ಮಹಾರಾಜ' ಎಂದು ಸಂಬೋಧನೆ ಇದೆ[೬]. ೮-೯ನೆಯ ಶತಮಾನದ ಹೆಮ್ಮಿಗೆ ಶಾಸನದಲ್ಲಿ ಪೆರ್ಮಾನಡಿಗೆ 'ಕೊಙ್ಗುಣಿ ಮಾರಾಜಂ' ಎಂದಿದೆ[೭]. ಕ್ರಿ.ಶ. ೮೭೦-೭೧ರ ರಾಚಮಲ್ಲನಾಳ್ವಿಕೆಯಲ್ಲಿ 'ಕೊಙ್ಗಳ್ನಾಡು ಪುನಾಡು'ಗಳನ್ನು ಭೂತರಸ ಆಳುತ್ತಿದ್ದ ಶಾಸನೋಕ್ತ ವಿಷಯವಿದೆ[೮]. ೯ನೆಯ ಶತಮಾನದ ಸಂಪಿಗೆಪುರ ಶಾಸನದಲ್ಲಿ 'ಕೊಙ್ಗಳ್ಕೆಯ ಪುದಿಗಜು' ಗ್ರಾಮದಾನದ ವಿಷಯ[೯] ಹಾಗೂ ಕಟ್ಟೆಮನುಗನಹಳ್ಳಿ ಶಾಸನದಲ್ಲಿ 'ಕೊಙ್ಗುಣಿಗನ್ನಾಡ ನಾಙ್ಗಾಮುಣ್ಡತನ' ಕುರಿತು ಹೇಳಲಾಗಿದೆ[೧೦]. ಈ ಅಂಶಗಳು ಕೊಙ್ಗುಣಿ, ಕೊಙ್ಗೂಳ್ನಾಡು ಶಬ್ದಗಳಿಗೆ ಸಂಬಂಧ ಸೂಚಿಯಾಗುವಂತಿದೆ. ಕೊಙ್ಗಣಿ (ಕೊಙ್ಗುಣಿ) ಎಂಬುದು ಪ್ರದೇಶವಾಚಿಯಾಗಿ ಸೂಚನೆಗೊಳ್ಳುತ್ತದೆ.

ಗಂಗರು, ಮಣ್ಣಿನ ಮಕ್ಕಳಾಗಿ, ಕೃಷಿಕರೂ ಆಗಿದ್ದವರು. 'ಕೊಂಗು' ಎಂದರೆ 'ಅಡಕೆ' ಎಂಬ ಅರ್ಥವೂ (ಒಂದು ಬಗೆ ಸಸ್ಯ, ನವಣೆ ಧಾನ್ಯ) ಕನ್ನಡ-ಕನ್ನಡ ನಿಘಂಟುವಿನಲ್ಲಿದೆ[೧೧]. ಹೀಗಾಗಿ ಈ ಸಸ್ಯ ಬೆಳೆಯುವ, ಬಳಸುವ ಪ್ರದೇಶದವರು ಎಂದು ವ್ಯಾಖ್ಯಾನಿಸಿದರೆ, ಗಂಗರಿಗಿರುವ 'ಕೊಙ್ಗುಣಿ' ಉಪಾಧಿ, ನೈಸರ್ಗಿಕವಾದ ಸಸ್ಯವಾಚಿ ಮೂಲದತ್ತ ಬೆರಳು ತೋರುತ್ತದೆ. ಸೈನ್ಯ ಬಲಕ್ಕೆ ಮೂಲಾಧಾರ ಕೃಷಿಕರೆ. ಅದಾಗಿ, ಕೃಷಿಕ ಮೂಲವನ್ನು ಹೊಂದಿ ಈ ಪ್ರದೇಶದ ಒಡೆಯರಾಗಿ 'ವರ್ಮ'ರೆನಿಸಿ 'ಕೊಙ್ಗುಣಿವರ್ಮ' ಎಂಬ ನಾಮ ವಿಶೇಷಣವೂ ಅವರಿಗೆ ಅನ್ವಯವಾಗುತ್ತ ಬಂದಿರಬೇಕು; ಅವರು ನಮ್ಮ ಮಣ್ಣಿನ ಮಕ್ಕಳು ಎಂಬುದಕ್ಕೂ ಹೀಗಾಗಿ ಪುಷ್ಟಿ ದೊರೆಯುತ್ತದೆ.

ಅವರ ಶಾಸನಗಳಲ್ಲಿ ಬಳಸುವ ಗ್ರಾಮ್ಯಭಾಷೆಯೂ ಇದಕ್ಕೆ ಮತ್ತೊಂದು ಪುಷ್ಟಿ ನೀಡುತ್ತದೆ. ಉದಾಹರಣೆಗೆ ಶಿವಮಾರನ ದೇಬೂರು ಶಾಸನದ[೧೦] ಶಾಪಾಶಯದಲ್ಲಿ, ಕೊಟ್ಟ ದಾನ ಕೆಡಿಸಿದರೆ ಉಂಟಾಗುವ ಪರಿಣಾಮದ ಬಗ್ಗೆ ಹೇಳಿರುವುದು **'ಒಕ್ಕಲುಳ್ಪೊತ್ತಿ ಮಕ್ಕಳ್ಪುಟ್ಟದೆ ಕೆಡುಗೆ'** ೮ನೆಯ ಶತಮಾನದ ಕಣೆನೂರು ಶಾಸನಗಳಲ್ಲಿ[೧೧] ಹೀಗೆಯೇ

**'...ಉಳ್ಪೊತ್ತಿ ಮಕ್ಕಳ್ಪುಟ್ಟದೆ ಕೆಟ್ಟು ಪಞ್ಚ ಮಹಾಪಾತಕನಪ್ಪರ್';**

**'...ಅಟಿತ್ತೋನ್ಕೊಂಡುಮ್ಮಾರಿ ಪೋಗುವೋ.....**

**ರಾಣಾಸಿ ಅಟಿತ್ತಪಾಪ ಅಕ್ಕು ಒಕ್ಕಲುಳ್ಪೊ....ರ್ಮಕ್ಕಳ್ಪುಟ್ಟೆಲ್ಪೊ...'**

ಎಂದು ವಂಶನಾಶ ಸೂಚನೆಯ ಶಾಪಾಶಯಗಳನ್ನು ಹೇಳಿದೆ. ಮಾರಿ ಹೊತ್ತುಕೊಂಡು ಹೋಗುತ್ತಾಳೆ ಎಂದು ಹೇಳುವುದು ಗ್ರಾಮೀಣ ಸೊಗಡಿನ ಮಣ್ಣಿನ ಮಕ್ಕಳ ಮಾತಿನಂತಿದೆ.

೮ನೆಯ ಶತಮಾನದ ಹೊಳಲುವಾಡಿ ಶಾಸನದಲ್ಲಿ ಅಮಿತಭಟ್ಟರಿಗೆ ಕೆಸಿಲ್ಮನೆ ಗ್ರಾಮ ಮುಖ್ಯರು ಕೆರೆಯ ಕೆಳಗಣ ಗದ್ದೆದಾನ ನೀಡುವಲ್ಲಿ ಹೇಳುವ ಮಾತು : **'ಕೆಸಿಲ್ಮನೆ ಒಡೆಒರ್ಗ್ಗಳೆಲ್ಲ ತಮ್ಮ ಕೆಱೆಯ ಕೆೞಗೆ.... ಕೞನಿಮಣ್ ಅವರ ಮಗನ್ದಿ ಸೋಮ್ರ್ಮಡಿಗಳ್ ಕೊಟ್ಟರ್'**, ಎಂದಿರುವಲ್ಲಿ ಭಾಷೆಯ ದೇಸಿತನ ದಟ್ಟವಾಗಿ ಕಾಣುತ್ತದೆ.

ಡಾ. ಬಾ.ರಾ. ಗೋಪಾಲ್ ಅವರು, "ಗಂಗರ ಶಾಸನಗಳಲ್ಲಿ ಕನ್ನಡ ಭಾಷೆಯ ಹೆಚ್ಚು ಬಳಕೆ ಇದೆ. ಸಾಹಿತ್ಯಕ ದೃಷ್ಟಿಯಿಂದ ಅಷ್ಟು ಆಕರ್ಷಕವಲ್ಲದಿದ್ದರೂ ಭಾಷೆಯ ರಚನೆ ಭಾವವಾಹಿತ್ವ ಶಕ್ತಿ, ಬಳಕೆಯ ಉದ್ದಿಶ್ಯಗಳನ್ನು ಸ್ಪಷ್ಟಗೊಳಿಸುವಲ್ಲಿ ಯಶಸ್ವಿ ಆಗಿವೆ. ಕನ್ನಡ ಭಾಷೆಯ ಕನ್ನಡತನದ, ದೇಶೀಯತೆ (ಸಂಸ್ಕೃತ ರಚನಾನುಕರಣವಿಲ್ಲದೆ) ಎದ್ದು ಕಾಣುತ್ತದೆ. ಆದರೆ ಈ ಭಾಷೆ ಸುಧಾರಿಸಿದ ಭಾಷೆ ಅಲ್ಲ. ದಿನ ಬಳಕೆಯ ಆಡುಮಾತುಗಳನ್ನು (ಅಂದಿಗೆ ಅರ್ಥವಾಗುತ್ತಿದ್ದು) ಬಳಸಲಾಗಿದೆ. ಅಶ್ಲೀಲ ಬಯ್ಗುಳ ಪದವೂ ಇದೆ. ಪರಿಷ್ಕಾರವಾಗದ ಗ್ರಾಮೀಣ ಭಾಷೆ ಇದೆ" ಎಂದಿದ್ದಾರೆ. ಆದರೆ ಐತಿಹಾಸಿಕವಾಗಿ ಮಹತ್ವದ ಭಾಷೆ ಎನಿಸಿ, ಗಂಗರು ಈ ಪ್ರದೇಶದ ಮಣ್ಣಿನ ಮಕ್ಕಳು ಎಂಬ ಅಂಶ ಅದರಿಂದ ವಿದಿತಗೊಳ್ಳುತ್ತದೆ. ಹಾಗೂ ಗಂಗರ ಕನ್ನಡನಾಡಿನಲ್ಲಿಯ ಮೂಲ ಅಸ್ತಿತ್ವವನ್ನು ಸಾಬೀತುಗೊಳಿಸುವಂತಿದೆ.

## ಶಬ್ದವ್ಯಾಪ್ತಿ

ಕ್ರಿ.ಶ. ೧೦೧೮-೫೪ರ ೨ನೆಯ ರಾಜಾಧಿರಾಜನ ಕಾಲದ ಕೆಂಪನಪುರ[೧೨] ಶಾಸನದಲ್ಲಿ 'ಕೊಙ್ಗಮಂಡಲ'ದ ಪ್ರಸ್ತಾಪವಿದೆ. ಕ್ರಿ.ಶ. ೧೦೪೯-೫೦ರ ಮಂಗಲ ಶಾಸನದಲ್ಲಿ[೧೩] 'ವಙ್ಗಣರ್ ಕೊಙ್ಗಣರ್' (ಕೊಂಗಣರ್) ಎಂಬ ಪ್ರಯೋಗ ಕಾಣಬರುವಲ್ಲಿ 'ಕೊಙ್ಗಣ' ಎಂಬುದು ಒಂದು ಪ್ರದೇಶವೆಂದೂ ಸೂಚನೆಗೊಳ್ಳುತ್ತದೆ. ಕ್ರಿ.ಶ. ೧೧೮೮ರ 'ಬಸ್ನೂರು' ಶಾಸನದಲ್ಲಿ[೧೪] 'ತೞ್ಯೆಕ್ಕಾಡು **ಕೊಙ್ಗುನಙ್ಗಿಲ** ಕೊಯಮದೂರ್ ಉಚ್ಚಙ್ಗಿ' ೧೦-೧೧ನೆಯ ಶತಮಾನದ ತೆಳನೂರು ಶಾಸನಗಳಲ್ಲಿ[೧೫] **'ಕೊಂಗುಣಿಗರ** ಕಾಳ್ಗಾವುಂಡ', 'ಮಸ್ತಿಯ ವಿಸ್ವಕರ್ಮ ಕೊಂಗುಣಿಯರ ಮಾಯಣಾಚಾರಿ' ಎಂದಿರುವುದಿದೆ. ಹಾಗೂ ಕ್ರಿ.ಶ. ೧೧೨೩ರ ಕಲ್ಲವತ್ತಿ ಶಾಸನದಲ್ಲಿ[೧೬] 'ತೆಂಕಲು ಕೊಂಗು ಚೇರಮನಮಲೆ ಪಡುವಲು ಬಾರಕನೂರ ಗಟ್ಟಂ ಪಡಗಲು (ಬಡಗಲು) ಪೆದ್ದೊಜೆ ಆದಿಯಾಗೆ' - ಎಂದಿರುವಲ್ಲಿ ಕಾವೇರಿಯ ದಕ್ಷಿಣಕ್ಕಿದ್ದ ಕೊಂಗುನಾಡು, ಚೋಳರ ಕಾಲಕ್ಕೆ ಕೊಂಗಿನ ದೇಶವೆನಿಸಿ, ಅವರಿಗೆ ಆ ಭಾಗದ ಮೇಲೆ ಪ್ರಭಾವವಿದ್ದುದು ಕೊಙ್ಗು ಮತ್ತು ಕೊಯಮದೂರ್ (ಕೊಯಮತ್ತೂರು) ಎಂಬ ಬೇರೆ ಬೇರೆ ಪ್ರದೇಶಗಳಿದ್ದುದು ಹಾಗೂ ಅವುಗಳ ಸ್ಥಾನ ನಿರ್ದೇಶನವು ತಿಳಿಯುತ್ತದೆ (ಕಾವೇರಿಗೆ ಬಲ್ಗೆಜೆ ಎಂದೂ ನದಿಗೆ ಕೊಡಗಿನಲ್ಲಿ ರೂಢಿಗಿತ್ತು). ಇದಲ್ಲದೆ ವಿವಿಧ ಕಾಲಗಳಲ್ಲಿ ಕೊಙ್ಗು ಪ್ರದೇಶದ ವಿಸ್ತಾರದ ಸೂಚನೆಯೂ ತಿಳಿಯುವಂತಾಗುತ್ತದೆ. ಹೀಗಾಗಿ 'ಕೊಂಗುಣಿ' ಶಬ್ದವು ಸ್ಥಳವಾಚಿಯಲ್ಲದೆ ಕುಲವಾಚಿಯಾಗಿಯೂ ಬಳಕೆಗೊಂಡಿರುವುದು ಗಮನಕ್ಕೆ ಬರುತ್ತದೆ.

ಇನ್ನು 'ಕೊಙ್ಗಣ'ದಲ್ಲಿರುವ ಕೊಂಗ (ಕೊಙ್ಗ) ಅಥವಾ ಕೊಙ್ಗು ಎಂಬ ಸಸ್ಯವಾಚಿ ಮೂಲದ ಐದು ದೇಶ ಅಥವಾ ನಾಡುಗಳ ಆಳ್ವಿಕೆ ಹೊಂದಿದ್ದವರು. ಕೊಙ್ಗಣರು - ಕೊಙ್ಗಣಿಯರು ಎಂದೂ ಅರ್ಥೈಸಿಕೊಂಡರೆ (ಅಡಿಟಿಪ್ಪಣಿ ೧೧ ನೋಡಿ) ಕೊಂಗಣರನ್ನು ಗೆದ್ದವನು 'ಕೊಙ್ಗುಣಿವರ್ಮ' ಎಂಬ ಕ್ಷತ್ರಿಯ ಸೂಚಕ ಶಬ್ದ ಗಂಗರಸರಿಗೆ ಒದಗಿರಬಹುದೆನಿಸುತ್ತದೆ. ಅರ್ಥಾತ್ ಅದು ಕೊಙ್ಗಣಿ ಪ್ರದೇಶದ ಒಡೆಯರಾಗಿ ಕೃಷಿಕ ಗಂಗರು ಕ್ಷಾತ್ರರಾದ ಮೇಲೆ ಪಡೆದ ಉಪಾಧಿಯಾಗಿರಲೂಬಹುದು ಕ್ರಿ.ಶ. ೯೦೪ರ ಗಟ್ಟವಾಡಿ ಶಾಸನವು[೧೭]

'ಬೂತುಗೇನ್ದ್ರಃ....... ಗಜ ಮಹಾಶಾಸ್ತ್ರೇ ಕರೇಣಾತ್ಮಜಃ
ಕೊಂಙ್ಗಾನ್ವಾರಣ ಬನ್ದವಾರಣಕರಾಜ್ಛಿತ್ವಾ ರಣೇ ಪಞ್ಚವಾಯ್ರ್ಯುಕ್ತಪ್ರಾಕ್ತನ'
ಕ್ರಿ.ಶ. ೯೦೪-೦೬ರ ಕೆರೆಹಳ್ಳಿ ಶಾಸನವು[೧೮],
'ಬೂತುಗೇನ್ದ್ರಃ...... ಗಜ ಮಹಾಶಾಸ್ತ್ರೇ ಕರೇಣ್ವಾತ್ವಜಃ; ಕೊಂಗನ್ವಾರಣ
ಬನ್ದವಾರಕ ರಾಜ್‌ತ್ವಾ ರಣೇ ಪಂಚಮಯ್ರ್ಯುಕ್ತಂ ಪ್ರಾಕ್ತನ'

ಎಂದೆಲ್ಲ ಬೂತುಗೇಂದ್ರನನ್ನು ಕುರಿತು ಹೇಳಿವೆ.

– ಈ ಅಂಶಗಳನ್ನು ಗಮನಿಸಿದಾಗ ಗಜಶಾಸ್ತ್ರ ನೈಪುಣ್ಯ ಗಂಗರಲ್ಲಿ ವಂಶಪಾರಂಪರ್ಯವಾಗಿ ಬಂದಿರುವುದು, ಕ್ಷಾತ್ರಜಯ ಅವರಲ್ಲಿ ಮುಂದುವರಿದಿರುವುದು ಕಾಣುತ್ತದೆ (ಅವರಲ್ಲಿ ಗಂಗಲಾಂಛನ ರೂಪಗೊಳ್ಳಲು ಇದೂ ಒಂದು ಕಾರಣವಿರಬಹುದು). 'ಕೊಙ್ಗಾಣ' ಪ್ರದೇಶಕ್ಕೆ ತಲಕಾಡು, ಕೊಯಮತ್ತೂರು ಉಚ್ಚಙ್ಗಿ ಕೊಙ್ಗು ಇತ್ಯಾದಿ ನೆಲೆಗಳು ಸೇರಿದ್ದುವೆಂದಾಗುತ್ತದೆ. ೭-೮ನೆಯ ಶತಮಾನದ ಕುಲಗಾಣ ಶಾಶನದಲ್ಲಿಯೆ (ಚಾ.ನ. ೩೪೭)[೧೯] ಕೊಡುಗುನ್ನಾಡಾ ಕೆಲ್ಲಿಪುಸೂರು, ಪಾಣಾಟ, ಪುನ್ನಾಟ ಆಳುತ್ತಿದ್ದವ ಇಮ್ಮಡಿ ಶಿವಮಾರ, ಅವನ ಅನುಮತಿಯಿಂದ ಕೊಡಗುನಾಡಿನ (ಕೊಡಗೂರ್ವಿಷಯೇ) ಕೆಲ್ಲಿಪುಸೂರು ಗ್ರಾಮವನ್ನು ಜಿನಾಲಯಕ್ಕೆ ದಾನಕೊಟ್ಟ ವಿಷಯವಿದೆ. ತೆರಕಣಾಂಬಿ ಬಯಲ್ನಾಡು (ಕೇರಳದ ವೈನಾಡು)ಗಳನ್ನೊಳಗೊಂಡಿದ್ದು 'ಕೊಡಗೂರ್ವಿಷಯೆ ಕುಡುಗುನಾಡು' ಎಂದು ತಿಳಿಸಿದೆ. ಇದರಿಂದ ಅಂದಿನ ಕೊಡಗಿನ ಭೌಗೋಳಿಕ ಚಿತ್ತರದ ಕಲ್ಪನೆ ಒದಗುತ್ತದೆ. ತಮಿಳು ಸಂಗಂ ಸಾಹಿತ್ಯದಲ್ಲಿ ಕೊಡಗಿಗೆ 'ಕುಡುಕಂ' ಎಂಬ ಹೆಸರಿದ್ದು 'ಕುಡು' ಶಬ್ದದಿಂದ ಆ ಹೆಸರು ಬಂತು ಎನ್ನುವುದಿದೆ. 'ಕುಡ' ಎಂದಾಗ ಒಳಪಶ್ಚಮಕ್ಕೆ ಇರುವ ಭೂ ಪ್ರದೇಶ ಎಂದರೆ ಈ ಒಳಪಶ್ಚಿಮ ಪ್ರದೇಶದ ಅಂದಿನ ಭೂವಿಸ್ತಾರವು ಗುಂಡ್ಲುಪೇಟೆ, ತೆರಕಣಾಂಬಿಯವರೆಗೂ ಹಬ್ಬಿದ್ದ ಬಗ್ಗೆ ಶಾಸನದ ಹೇಳಿಕೆಗೆ ಸಾಕ್ಷ್ಯವೆನಿಸುತ್ತದೆ.

೧೧ನೆಯ ಶತಮಾನದ ಚಿಕ್ಕಹನಸೋಗೆಯ ಶಾಸನವು (ಕೃ.ನ. ೪೧)[೧೯] ಗಂಗವಂಶದ ವೀರನೊಬ್ಬ ಕೋಗಿಯೂರು ಯುದ್ಧದಲ್ಲಿ ವೀರಸ್ವರ್ಗವೇರಲು ಗಂಗರ ಗೋವಿನ್ದರನು 'ಕೊಂಗನಾಡೆಟ್ಟಿತ್ತು'. ಅನ್ನು ಕಲ್ನಾಡಾಗಿ ನೀಡಿದ ವಿಷಯವಿದೆ (ಗಂಗಾನ್ವಯ ಶೌರ್ಯ್ಯ ಸದ್ಗುಣವಂತನಿಗೆ); 'ಹೊಯಿಸಣದೇಶೇ ಕಾವೇರ್ಯಾ ಉತ್ತರ ತೀರೇ ಕೊಂಗನಾಡು ಸಜ್ಞಿಕೇ ವಿಷಯೇ' ಎಂದಿರುವ ಕ್ರಿ.ಶ. ೧೩೭೭ರ ಹೆಬಸೂರು ಶಾಸನ[೨೦] ಕೊಂಗನಾಡಿನ ಸ್ಥಳ ನಿರ್ದೇಶನ ಮಾಡಿದೆ. ಹೊಯ್ಸಳರ ಕಾಲದಲ್ಲೂ ಅದರ ಅಸ್ತಿತ್ವ ಮುಂದುವರಿದ ಸೂಚನೆ ನೀಡಿದೆ. ೧೧ನೆಯ ಶತಮಾನದ (ತಮಿಳು ಗ್ರಂಥ ಲಿಪಿಯ) ಮೂಡ್ಲುಕೊಪ್ಪಲು ಶಾಸನವು[೨೧] ಇರಣ್ [ಡಜು] ಸಾಯಿಜಿತ್ತು ತನ್ಶೈಮಾನಗರ ಗಙ್ಗಮಣ್ಡಲ ದೇಶಿಯಪನ್ ..... ಕೊಙ್ಗವಿನಾಟ್ಟಿಲ್ ಪಾಣ್ಡಿನಾಟ್ಟು .... ಕಟನಿಸ್ಸಲಾಗಿ ಕುತ್ತುವಿತ್ತುಮ್ .... [Gangamandala Desiyapan of Tanshaimanagara (the town of Tanjavur) of the two thousand five hundred division ...... anounces a gift of sowing land. Kalani salage in Kongavi-nad and pandi-nad ..... for the maintenance of the family kuttuvittu - kutumba - Vritti] ಎಂದಿರುವಲ್ಲಿ ಗಂಗ ದೇಶೀಯ ಸಾಮಂತ(!)ನೊಬ್ಬ ತಂಜಾವೂರಿನಲ್ಲಿದ್ದು ಕೊಙ್ಗವಿನಾಡಿನಲ್ಲಿ ಭೂದಾನವಿತ್ತಿರುವ ಬಗ್ಗೆ ಹೇಳಿರುವಂತಿದೆ. ಇದರಿಂದ ಕೊಙ್ಗನಾಡಿನ ಸಂಬಂಧಗಳು ೧೧ನೆಯ ಶತಮಾನದಲ್ಲಿಯೂ ವ್ಯಾಪಿಸಿದ್ದ ಪ್ರದೇಶದ ಪರಿಚಯ ಒದಗುತ್ತದೆ.

ಹೀಗೆಯೆ ವಿವಿಧ ಶಾಸನಗಳಿಂದ ಗಂಗರ ಆಳ್ವಿಕೆಯ ಪ್ರದೇಶದಲ್ಲಿ ಕೊಙ್ಗನಾಡು ಕೊಳ್ಳೆಗಾಲ, ಅರಕಲಗೂಡು, ಗುಂಡ್ಲುಪೇಟೆ, ಮಳವಳ್ಳಿ, ಹೆಗ್ಗಡದೇವನಕೋಟೆ, ಗಂಗವಾಡಿ, ತಲಕಾಡು, ಕೊಡಗು ಇತ್ಯಾದಿಗಳು ಸೇರಿದಂತೆ ಈ ಪ್ರದೇಶದ 'ಕೊಙ್ಗುಣಿವರ್ಮ' ರಾಗಿ ಗಂಗರು ಆಳುತ್ತಿದ್ದ ಬಗ್ಗೆ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಕೊಡಗಿನಲ್ಲಿ ಅವರ ಭೌಗೋಳಿಕ ಅಸ್ತಿತ್ವದ ಬಗೆಯನ್ನು ಪರಿಶೀಲಿಸಬೇಕಾಗುತ್ತದೆ. ಕೊಡಗು, ಗಂಗವಾಡಿಯ ಭಾಗವಾಗಿ ಗಂಗರ ಶಾಸನಗಳಿಂದ ಸೂಚಿತವಾಗಿದೆ.

**ಕೊಡಗಿನಲ್ಲಿ ಗಂಗರ ಅಸ್ತಿತ್ವ**

ಕೊಡಗಿನಲ್ಲಿ ಗಂಗರ ಕಾಲದ ಪ್ರಕಟಿತ ೯ ಶಾಸನಗಳಲ್ಲದೆ, ಅಪ್ರಕಟಿತ ಮೂರು ಶಾಸನಗಳು ಕಂಡುಬಂದಿವೆ. ಮಡಿಕೇರಿಯಲ್ಲಿದ್ದ ಕ್ರಿ.ಶ. ೪೬೬ರ ಶಾಸನವು ಕೊಂಗುಣಿ ಮಹಾಧಿರಾಜ ಅವಿನೀತನೆಂಬ ಗಂಗ ದೊರೆಯು ತಲವನ ನಗರದ ಶ್ರೀವಿಜಯ ಜಿನಾಲಯಕ್ಕೆ ಕೊಟ್ಟ ಗ್ರಾಮದಾನದ ವಿಷಯವನ್ನು ತಿಳಿಸುತ್ತದೆ. ಈ ಶಾಸನವು ಮೂಲ ಶಾಸನವೊಂದರ ಪ್ರತಿಯಾಗಿದ್ದು, ೯ನೆಯ ಶತಮಾನದ ಸುಮಾರಿಗೆ ಹುಟ್ಟಿರಬಹುದೆಂದೂ ಈ ಶಾಸನ ನೈಜವಲ್ಲದ ಕಾರಣ ಅದರಲ್ಲಿ ಉಕ್ತವಾದ ಅಕಾಲವರ್ಷ ಪ್ರಿಥ್ವೀವಲ್ಲಭ ಅಥವಾ ಅವನ ಮಂತ್ರಿ ಹಾಗೂ ದಾನದ ವಿವರಗಳ ಬಗ್ಗೆ ಗಮನಿಸುವ ಅಗತ್ಯವಿಲ್ಲ ಎಂದೂ ಶಾಸನ ಸಂಪುಟದಲ್ಲಿ ಹೇಳಿದೆ. ೫ನೆಯ ಶತಮಾನದ ಶಾಸನೋಕ್ತ ವಿಷಯವನ್ನು ನಕಲು ಮಾಡುವಲ್ಲಿ, ನಕಲುಕಾರ ತನ್ನ ಕಾಲದ ಹಾಗೂ ತನಗೆ ಪ್ರೀತಿಪಾತ್ರನಾದ ದೊರೆಯ (ರಾಷ್ಟ್ರಕೂಟ) ಹೆಸರನ್ನು ನಮೂದಿಸಿರುವ ಸಾಧ್ಯತೆಯಿದೆ. ಇದರಲ್ಲಿ ಉಕ್ತವಿರುವ ಪುನ್ನಾಟ (ಪೂನಾಡು), ಆರು ಸಹಸ್ರ ಎಡೆನಾಡು, ಗಂಜೆನಾಡು, ಬದಣಗುಪ್ಪೆ, ತಗಡೂರು, ಗಣಿಗನೂರು, ಉಮ್ಮತ್ತೂರು, ನೀರ್ಗ್ಗುನ್ದ, ಕೊಳೆಯನೂರು, ದಾಸನೂರು, ಮುಟ್ತಿಗಿ (ಮೊಳತೆ!) ಇತ್ಯಾದಿ ಅನೇಕ ಸ್ಥಳನಾಮಗಳು ಇಂದಿನ ಕೊಡಗಿಗೆ ದೂರವೇ ಸರಿ. ಆದರೆ ಕೊಡಗೂರ್ವಿಷಯ ಕುಡುಗುನಾಡೆನಿಸಿದ್ದ ಅಂದಿನ ಕೊಡಗಿಗೆ ಇವೆಲ್ಲ ಸಂಬಂಧಗೊಂಡಿದ್ದುವೆನ್ನಬೇಕು. ಇಂದಿನ ಕೊಡಗಿನಲ್ಲಿಯೂ ಕ್ರಿ.ಶ. ೪೬೬ರ ಶಾಸನದಲ್ಲಿ ಉಕ್ತವಿರುವ ನೀರಗುಂಡ ಎಡೆನಾಡು, ಗಣಿಗನೂರು, ಮುಳ್ತಗಿ ಗ್ರಾಮನಾಮಗಳು[೩] ಕಾಣಬರುತ್ತವೆ. 'ಎಡೆನಾಡು' ಎಂಬ ಹೆಸರೂ ಚಾಲ್ತಿಯಲ್ಲಿದೆ. ಸದ್ಯದ ಶಾಸನದಲ್ಲಿ ಗಂಗರ ವಂಶಾವಳಿಯೂ (ಮಾಧವ, ಹರಿವರ್ಮ, ವಿಷ್ಣುಗೋಪ, ಅವಿನೀತ) ಸಮರ್ಪಕವಿದೆ. ದೂರದ ಊರುಗಳಿಂದ ವಲಸೆ ಬಂದವರು ಇಂದಿನ ಕೊಡಗಿನಲ್ಲಿ ತಮ್ಮ ಹಳೆಯ ಊರಿನ ಹೆಸರನ್ನು ನೆಲೆಸಿದ ಸ್ಥಳಕ್ಕೆ ಆರೋಪಿಸಿ ರೂಢಿಗೆ ತಂದಿರಲೂಬಹುದು. (ತೆರಕಣಾಂಬಿಯವರೆಗೂ ಕೊಡಗು ಚಾಚಿದ್ದುದು ಶಾಸನಗಳಿಂದಲೂ ಗಮನಕ್ಕೆ ಬರುತ್ತದೆ).

ಇನ್ನು ಶಾಸನದಲ್ಲಿ ಜಿನಾಲಯಕ್ಕೆ ಗ್ರಾಮದಾನವಲ್ಲದೆ, ಗಡಿಗುರುತು ಸಹಿತವಾಗಿ ವೃಕ್ಷಗಳನ್ನು, ತಟಾಕವನ್ನು ದಿಕ್ಕು ಸಹಿತವಾಗಿ ನಿರ್ದೇಶಿಸಲಾಗಿದೆ. ಗ್ರಾಮದ ಪೂರ್ವಕ್ಕೆ ಕೆಂಜಿಗೆ ಮೊಜಿಡಿ, ಆಗ್ನೇಯಕ್ಕೆ ಕಾಗಣಿ ತಟಾಕ, ದಕ್ಷಿಣದಲ್ಲಿ ಬಲ್ಕಣಿ ವೃಕ್ಷ ಉತ್ತರ ಮತ್ತು ಪಶ್ಚಿಮದಲ್ಲಿ ಬಹುಮೂಲಿಕಾ ಪಂಕ್ತಿ, ಇಲ್ವವೃಕ್ಷ ತೊರವಳ್ಳಿ, ಕಥಕ ವೃಕ್ಷಗಳಿದ್ದುವು. ವಟವೃಕ್ಷ, ಚಿಂಚವೃಕ್ಷ, ಗದ್ದೆ ಇತ್ಯಾದಿ ವೃಕ್ಷಗಳಿದ್ದ ಬಗ್ಗೆಯೂ ಹೇಳಿದೆ. ದೇಸ ಸಾಕ್ಷಿ ಆಗಿ ಕುಟುಗೋವರು (ಗೇಣಿದಾರರು!), ತಗಡರು, ತೇನನ್ದಕರು (ಜೇನು ಕುರುಬರು!) ಬೆಳ್ಳುರರು, ಅಳಗೆಯರು (ಕಮ್ಮಾರರು!) ಮುಂತಾದವರಿದ್ದು ದಾನದ ಪ್ರಕ್ರಿಯೆಯನ್ನು ಸಾಂಗಗೊಳಿಸಿದ ರೀತಿ ಶಾಸನದಲ್ಲಿ ಕಂಡು ಬರುತ್ತದೆ. ಕೊಡಗಿನಲ್ಲಿ ಇಂದಿಗೂ ಪ್ರಚಲಿತವಿರುವ ದೇವರಕಾಡು, ಜಿನಾಲಯ ಕಾಡು (ಅಂಜನಗೇರಿ ಬೆಟ್ಟಗೇರಿಬಸದಿ ಕಾಡು) ನಿರ್ವಹಣಾ ವ್ಯವಸ್ಥೆಯ ಒಂದು ಪ್ರಾಚೀನ ರೂಪ ಈ ಶಾಸನದಲ್ಲಿ ಕಾಣಬರುತ್ತದೆ. ಹೀಗಾಗಿ ಒಂದು ನೈಜ ಶಾಸನವನ್ನು ಪುನರ್ ಲಿಖಿತ ಮಾಡುವಾಗ ಸಂಭವಿಸುವ ದೋಷಗಳಲ್ಲದೆ, ನಕಲುಗಾರನ ಅಜ್ಞಾನ ಮತ್ತು ಒಲವುಗಳೂ ಶಾಸನದಲ್ಲಿ ಇಣುಕಿವೆ ಎನ್ನಬೇಕು. ಈ ಶಾಸನದಲ್ಲಿ ಭಾಷಾ ದೋಷಗಳಿವೆ. ಆದರೆ ಸಂಸ್ಕೃತ ಭಾಷಾಲಯಗಾರಿಕೆಯ ಜೊತೆಗೆ ಕನ್ನಡ ಗದ್ಯದ ಗಂಭೀರಲಯವೂ ೩೯ ಸಾಲುಗಳ ಪೈಕಿ ೧೭ ಸಾಲುಗಳಷ್ಟು ಹರಿದಿರುವುದು ಗಮನ ಸೆಳೆಯುತ್ತದೆ.

ಈ ಶಾಸನವನ್ನು ೧೭ನೆಯ ಶತಮಾನದಲ್ಲಿ ಕೊಡಗಿನ ಹಾಲೇರಿ ವಂಶಿಕ ಸಿರಿಬಾಯಿ ದೊಡ್ಡವೀರಪ್ಪ ಒಡೆಯನು ಕ್ರಿ.ಶ. ೧೬೮೮–೯೦ರ ಸಮಯದಲ್ಲಿ ಕೊಡಗಿನ ಬಾಳೆಲೆ ಗ್ರಾಮದ ಮೇಲೇರಿ ಬಂದಿದ್ದ ಮೈಸೂರಿನ ಸೈನ್ಯವನ್ನು ಸೋಲಿಸಿ ಹೆಗ್ಗಡದೇವನಕೋಟೆಯ ಬಳಿಯ ಹಂಪಾಪುರದವರೆಗೂ ಬೆನ್ನಟ್ಟಿ ಹೋದ. ತನ್ನ ವಿಜಯದ ಸಂಕೇತವಾಗಿ ಅಲ್ಲಿ ವೀರಗಲ್ಲು ನೆಡಿಸುವ ಸಂದರ್ಭದಲ್ಲಿ ಲಭ್ಯವಾದ ಈ ಮಡಿಕೇರಿ ಶಾಸನವನ್ನು ಸೈನಿಕರು ತಂದಿಟ್ಟರೆಂಬ ಮಾತು ಇದೆ. ಗಂಗರ ಈ ಶಾಸನ ಕುರಿತ ಪ್ರೊ॥ ಷೇಕ್ ಅಲಿ ಅವರ ಅಭಿಪ್ರಾಯ ಗಮನಾರ್ಹವಾಗಿದೆ[೨೫].

ಕ್ರಿ.ಶ. ೪೬೬ರ ಮಡಿಕೇರಿ ಶಾಸನದ ನಂತರ ಶ್ರೀಪುರುಷನ ಕಾಲದ (ಕ್ರಿ.ಶ. ೭೨೬–೭೮೮) ಶಾಸನಗಳು ಮಾತ್ರ ಕೊಡಗಿನಲ್ಲಿ ಕಾಣಸಿಗುತ್ತವೆ. ಕೊಡಗು ಪ್ರದೇಶವು ಗಂಗರ ಆಳ್ವಿಕೆಗೊಳಪಟ್ಟಿದ್ದರೂ 'ಕೊಡಗೂರ್ವಿಷಯ'ದಲ್ಲಿ ಹರಡಿಕೊಂಡಿತ್ತು. ಅವೆಲ್ಲ ಅಂದಿನ ಕೊಡಗಿನವು.

ದಕ್ಷಿಣ ಕೊಡಗಿನ ಕ್ರಿ.ಶ. ೮೮೮ರ ಬಿಳಿಯೂರು, ಕೋತೂರು ಶಾಸನಗಳು ಗಂಗ ಅಧಿಕೃತ ಶಿಲಾಶಾಸನಗಳಾಗಿ ಅಲ್ಲಿ ಅವರ ಆಳ್ವಿಕೆಯನ್ನು ಸೂಚಿಸುತ್ತವೆ; ಇದರ ಜೊತೆಗೆ ಕ್ರಿ.ಶ. ೯೭೮ರ ಪೆಗ್ಗೂರು ಶಾಸನವು ಇದಕ್ಕೆ ಮತ್ತೊಂದು ಸಾಕ್ಷಿ

ಆಗಿದೆ[೨೭]. ಬಿಳಿಯೂರು ಮತ್ತು ಕೋತೂರು ಶಾಸನಗಳು ಸತ್ಯವಾಕ್ಯ ಕೊಂಗುಣಿವರ್ಮ ಶ್ರೀಮತ್‌ಪೆರ್ಮಾನಡಿಯಾದ ಇಮ್ಮಡಿ ರಾಚಮಲ್ಲನ ಆಳ್ವಿಕೆಯನ್ನು ಹೇಳುವಂತಿವೆ. ಈ ಶಾಸನವು ಅವನ ೧೮ನೆಯ ವರ್ಷದಾಳ್ವಿಕೆಯ ಸಂದರ್ಭದಲ್ಲಿ ಜೈನ ಮುನಿ ಶಿವಣನ್ದಿಸಿದ್ಧಾನ್ತ ಭಟಾರರ ಶಿಷ್ಯ ಸರ್ವಣನ್ದಿದೇವನಿಗೆ ಪೆಣ್ಣೆಗಡಙ್ಗದ ಸತ್ಯವಾಕ್ಯ ಜಿನಾಲಯಕ್ಕೆ ಬಿಳಿಯೂರಿನ ೧೨ ಉಪಗ್ರಾಮಗಳನ್ನು ದಾನ ನೀಡಿದ ಸಂಗತಿ ಹೇಳುತ್ತದೆ. ಬಿಳಿಯೂರಿನ ಈ ಶಾಸನದಲ್ಲಿ ಜಿನಾಲಯಕ್ಕೆ ದೊರೆತ ಗ್ರಾಮಗಳಲ್ಲಿ ಬಿಳಿಯೂರ್ ಮತ್ತು ಪನಿ ಇಟ್ಟಳ್ಳಿ (ಪನಿಇಜ್ಜಳ್ಳಿ>ಪನಿರ್ಪ್ಪಳ್ಳಿ!) ಎನ್ನುವಲ್ಲಿ ಲಕ್ಷ್ಮಣತೀರ್ಥ ಜಲಪಾತ (ಇರ್ಪು ಜಲಪಾತ)ವಿರುವ ಗ್ರಾಮವು ದಾನವಾಗಿರಬಹುದು. ಇದು ಅಲ್ಲಿನ ಪ್ರಸಿದ್ಧ ರಾಮೇಶ್ವರ ದೇಗುಲದ ಇತಿಹಾಸದ ಬಗ್ಗೆ ತಿಳಿಯಲನುಕೂಲಿಸುತ್ತದೆ. ಅಂದರೆ ೯ನೆಯ ಶತಮಾನದಲ್ಲಿ ಜೈನ ಪ್ರಭಾವವಿದ್ದು, ಚೋಳರು ಗಂಗವಾಡಿಯನ್ನು ಗೆದ್ದ ನಂತರ ಅಲ್ಲಿ ಶಿವಾಲಯ ನಿರ್ಮಾಣವಾಗಿರಬಹುದು. ಲಕ್ಷ್ಮಣತೀರ್ಥ ನದಿಗೆ ಆ ಕಾಲಕ್ಕೆ 'ಪೆರ್ದ್ದೊಱೆಗೆರೆ' ಎಂಬ ಹೆಸರು ಪ್ರಚಲಿತವಿದ್ದುದು ತಿಳಿಯುತ್ತದೆ. ಪೆಣ್ಣೆ (ಪನ್ಯ ಜಮೀನು) ಎಂಬ ರಾಜರ ಖಾಸಗಿ ಬಳಕೆಯ ಕೃಷಿ ಜಮೀನು ಸುತ್ತ 'ಕಡಂಗ' ಎಂಬ ರಕ್ಷಣಾತ್ಮಕ ಕಂದಕ ಸಹಿತವಾಗಿ ಜಿನಾಲಯಕ್ಕೆ ದಾನವಾಗಿತ್ತೆಂದರೆ. ಗಂಗರು ಮಾನಿಸಿದ್ದ ಜಿನಧರ್ಮದ ರಕ್ಷಣೆಯ ಕಲ್ಪನೆ ಸಿಗುತ್ತದೆ. ಹಾಲೇರಿ ಅರಸರಲ್ಲಿ ಬಹಳ ಪ್ರಚಲಿತವಾಗಿದ್ದ ರಕ್ಷಣಾತ್ಮಕ ಕಡಂಗ ವ್ಯವಸ್ಥೆ ಕೊಡಗಿನ ಗಂಗರ ಕಾಲದಲ್ಲಿಯೇ ಇದ್ದ ಬಗ್ಗೆ ಪೂರ್ವೇತಿಹಾಸದ ಪುಷ್ಟಿ ದೊರಕುತ್ತದೆ. ಇಲ್ಲಿನ ದಾನಕ್ಕೆ ರಕ್ಷಕ ಸಾಕ್ಷಿಗಳಾಗಿ ಎಂಟು ಒಕ್ಕಲುಗಳು, ಮಲೆಸಾಸಿರ್ವ್ವರು (ಮಲೆ ಬುಡಕಟ್ಟಿನವರು), ಮಯ್ದ್ಡಾಮರಿಗರುಂ (ಮನೆಮಕ್ಕಳು!) ಇದ್ದ ವ್ಯವಸ್ಥೆ ಗಂಗರ ಕಾಲದ ಕೊಡಗಿನಲ್ಲಿಯ ಅಚ್ಚುಕಟ್ಟಿನ ಆಡಳಿತ ವ್ಯವಸ್ಥೆಯ ಕುರುಹಾಗಿದೆ. ಈ ಗದ್ಯಾಣ, ಪೊನ್ನು ಸಿದ್ಧಾಯ ಮೊದಲಾದ ಆರ್ಥಿಕ ಸಂದಾಯಗಳ ವ್ಯವಸ್ಥೆ, ಇಂದಿಗೂ ಕೊಡಗಿನಲ್ಲಿ ಜನಪದ ಚಾಲ್ತಿಗಿರುವ ಭತ್ತದ ಪರಿಮಾಣ ಮತ್ತು ಜಮೀನಿನ ಅಳತೆಯ ಮಾನವಾದ '೧೦೦ ಭಟ್ಟ ಭೂಮಿ' (ಸುಮಾರು ಮೂರು ಎಕರೆ) ಎಂಬ ಮಾನಗಳ ಪ್ರಾಚೀನ ಶಬ್ದ ರೂಪ 'ನೂಱುಬತ್ತಮುಂ', 'ಎಣ್ಬುನೂಱು ಬತ್ತಮುಂ' ಎಂಬ ಶಬ್ದಗಳಲ್ಲಿ ಕಾಣ ಬಂದು ಗಂಗರ ಕಾಲದ ಅಳತೆ ಮಾನಗಳ ಸ್ವರೂಪ ಮತ್ತು ಸಾಂಸ್ಕೃತಿಕ ಜಾಯಮಾನವನ್ನು ನಿದರ್ಶಿಸುವಂತಿವೆ.

ಇಮ್ಮಡಿ ರಾಚಮಲ್ಲನ ಆಳ್ವಿಕೆಯು ಹೀಗಾಗಿ ಗಂಗರ ವರ್ಧಿಷ್ಣು ಪ್ರಾಬಲ್ಯ ಹಾಗೂ ವರ್ಚಸ್ಸುಗಳ ಸಂಕೇತವಾಗಿತ್ತೆನ್ನಬೇಕು. ರಾಚಮಲ್ಲನಿಗೆ ಸಮರ್ಥ ಸಹಕಾರಿ ಆಗಿದ್ದವನು ಅವನ ಕಿರಿಯ ಸೋದರ ಬೂತುಗ. ಅವನು ಸಿಂಹಾಸನಕ್ಕೆ ಪ್ರಬಲ ಶಕ್ತಿಯನ್ನು ತಂದುಕೊಟ್ಟವನಾಗಿದ್ದ. ಈ ಬೂತುಗ ಮತ್ತು ಇವನ ಮಗ ಇಮ್ಮಡಿ ನೀತಿಮಾರ್ಗರು ವಿವೇಚನಾಶೀಲ ಮಂತ್ರಿಗಳಾಗಿದ್ದರು ಹಾಗೂ ಸೇನಾದಂಡನಾಯಕರಾಗಿದ್ದರು. ಗಂಗವಾಡಿ ಅಱುಸಾವಿರಕ್ಕೆ ನೇಮಿತರಾಗಿದ್ದ ನೊಳಂಬರ ಮಹೇಂದ್ರನನ್ನು ಕ್ರಿ.ಶ. ೮೮೪ರಲ್ಲಿ ತಹಬಂದಿಗೆ ತಂದು ರಾಜ್ಯಕ್ಕೆ ಬಿಗಿಕಟ್ಟು ನಿರ್ಮಿಸಿದ್ದ ಬೂತುಗನು ಪಾಂಡ್ಯರ ಶ್ರೀಮಾರನ ಮೇಲೆ ಗಳಿಸಿದ ವಿಜಯದ ನಂತರ, ಬಹುಶಃ ಕೊಡಗಿನಲ್ಲಿ ಕ್ರಿ.ಶ. ೮೮೮ರಲ್ಲಿ ರಾಚಮಲ್ಲನು ಜಿನಾಲಯಕ್ಕೆ ದಾನ ನೀಡಲು ಮುಂದಾಗಿರುವಂತಿದೆ.

ಕೊಂಗಲ್ನಾಡು ೮೦೦ ಬೂತುಗನ ನೇರ ನಿರ್ವಹಣೆಯಲ್ಲಿತ್ತು. ಕೊಂಗುದೇಶದವರನ್ನು ಬೂತುಗ ಸೋಲಿಸಿದ್ದ. ಕೊಂಗು ಪ್ರದೇಶವು ಗಂಗವಾಡಿಗೆ ಸಮೀಪವೇ ಇತ್ತು. ಹೀಗಾಗಿ ಕೊಂಗು ಪ್ರದೇಶವಲ್ಲದೆ, ದಕ್ಷಿಣ ಇತರೆ ರಾಜಶಕ್ತಿಗಳನ್ನು (ಚೋಳ ಇತ್ಯಾದಿ) ತಹಬಂದಿಗೆ ತಂದಿದ್ದ[೨೮]. ಈ ಹಿನ್ನೆಲೆಗಳನ್ನು ಗಮನಿಸಿದರೆ ಇಮ್ಮಡಿ ರಾಚಮಲ್ಲನು ಬೂತುಗನ ನಿರ್ವಹಣೆಯ ಮೂಲಕ ಕೊಡಗನ್ನು ಆಳಿರಬಹುದು. ಕಾರಣ ಕೊಙ್ಗಪ್ರದೇಶದೊಡನೆ ಕೊಡಗಿನ ಸಂಬಂಧವೂ ಇತ್ತಲ್ಲ. ಬೂತುಗನು ರಾಚಮಲ್ಲ ನಾಳುತ್ತಿದ್ದಾಗಲೇ ತೀರಿಕೊಂಡ.

ಕೋತೂರು ಶಾಸನವೂ ಇಮ್ಮಡಿ ರಾಚಮಲ್ಲನ ಕಾಲದ್ದಾಗಿದ್ದು, ಅವನು 'ಸತ್ಯವಾಕ್ಯ ಕೊಂಗುಣಿವರ್ಮ್ಮ... ಶ್ರೀಮತ್ ಪೆರ್ಮ್ಮಾನಡಿಗಳ್' ಎನಿಸಿದ್ದ. 'ಜಡಲ ಎಱೆಯಂಗ ಗಾವುಣ್ಡನ ಮಗಂಗೆ ಪೆರ್ಮಡಿವಟ್ಟಂಗಟ್ಟಿ ಬಿಟ್ಟ ಸ್ತಿತಿ ಕ್ರಮವಾವುದೆನ್ದೊಡೆ', ಎಂದಿರುವಲ್ಲಿ 'ಪೆರ್ಮಡಿಪಟ್ಟ' ಎಂಬುದು ಹಣೆಗೆ ರಾಜನ ಬಿರುದನ್ನು ಚಿನ್ನದ ಪಟ್ಟಿಯ ಮೇಲೆ ಕೆತ್ತಿ ರಾಜಾನುಗ್ರಹ ತೋರುವ ಒಂದು ಸಾಂಸ್ಕೃತಿಕ ಪದ್ಧತಿಯಾಗಿತ್ತು. ಜಡಲ ಎಱೆಯಂಗ ಗಾವುಣ್ಡನ ಮಗನಿಗೆ ಈ ಪಟ್ಟಕಟ್ಟಿ ಭತ್ತದ ಗದ್ದೆ, ಹೊನ್ನುಗದ್ಯಾಣವನ್ನು ಕಲ್ನಾಡಾಗಿ ಕೊಟ್ಟು ತೋರಿಸುವ ಕೃಪೆ, ಗ್ರಾಮದ ಕೃಷಿ ಗೌರವವಾಗಿಯೂ ಕಾಣುತ್ತದೆ. 'ಬೆಟ್ಟಿಯ ಭತ್ತದೊಳ್ ನೂಱು ಭತ್ತಮುಮಂ ಎಲ್ಲಾ ಕಾಲಕ್ಕಂ ಸಾಸನಮಾಗೆ ಬಿಟ್ಟರ್' ಎಂದಿರುವುದು ಕೊಡಗಿನ ಬಿಳಿ ಭತ್ತದ ಬೆಳೆ, ಜನ್ಮತಃ ಬರುವ ಜನ್ಮದ ಭೂಮಿಯ ಹಕ್ಕನ್ನು ಸಲ್ಲಿಸಿದ ಸೇವೆಗಾಗಿ ರಾಜರು ಕೊಡುತ್ತಿದ್ದ ಪದ್ಧತಿಯ ಪ್ರಾಚೀನತೆ, ಗಂಗರ ಕಾಲದಲ್ಲಿ ಪ್ರಸ್ತುತವಾಗಿದ್ದುದರ ಸಾಕ್ಷಿಯಾಗಿ ಈ ಶಾಸನವಿದೆ. ಕೊಡಗಿನ ಕೊಡವ ಜನಪದ

ಗೀತೆಗಳಲ್ಲಿ 'ಕೆಂಗಳಮ ಕಿಗ್ಗಟ್ಟ್', 'ಪಾಬೊಳಿಯ ಮೇಂದಲೆ' ಎಂಬ ಕೊಡವ ಭಾಷೆಯ ನಾಣ್ಣುಡಿಗಳಿವೆ. ಕೆಂಪು ಭತ್ತ ಬೆಳೆಗೆ (ಕರ್ತ ಭತ್ತ) ಕಿಗ್ಗಟ್ಟುನಾಡು, ಬಿಳಿಭತ್ತದ ಬೆಳೆಗೆ ಮೇಂದಲೆನಾಡು ಪ್ರಸಿದ್ಧ ಎಂಬುದು ಆ ನುಡಿಗಳ ಅರ್ಥ. ಮೇಂದಲೆನಾಡು ಎಂದರೆ ಕಾವೇರಿಯ ಹರಿವಿನ ಉತ್ತರ ಭಾಗದ ಕೊಡಗು ಪ್ರದೇಶ, ಕಾವೇರಿಯ ದಕ್ಷಿಣದ ಪ್ರದೇಶದ ದಕ್ಷಿಣ ಕೊಡಗಿನ ಭಾಗವಾಗಿ ಕಿಗ್ಗಟ್ಟುನಾಡು ಇದೆ. ಕೋತೂರು ಕಿಗ್ಗಟ್ಟುನಾಡಿನ ಗ್ರಾಮ. ಇಲ್ಲಿ 'ಬೆಜ್ಜಿಯ ಭತ್ತದೊಳ್ ನೂರು ಭತ್ತಮುಮಂ' ಎಂದಿರುವುದು 'ಬಿಳಿ ಭತ್ತದ ನೂರು ಭಟ್ಟ ಭೂಮಿ' ಎಂಬ ಅರ್ಥ ಸೂಚಿಸುತ್ತದೆ. ಗಂಗರ ಕಾಲಕ್ಕೆ ದಕ್ಷಿಣ ಕೊಡಗಿನಲ್ಲಿಯೂ ಕೆಂಪು ಭತ್ತದ ಜೊತೆಗೆ ಬಿಳಿ ಭತ್ತವನ್ನು ಬೆಳೆಯುತ್ತಿದ್ದ ಸೂಚನೆ ಇಲ್ಲಿ ಕಾಣುತ್ತದೆ ಅಥವಾ ಉತ್ತರ ಕೊಡಗಿನ ಮೇಂದಲೆನಾಡು ಭಾಗವೂ ಅವರ ಆಳ್ವಿಕೆಗಿತ್ತು ಎಂಬ ಸೂಚನೆಯೂ ಇಲ್ಲಿರಬಹುದು. ಒಟ್ಟಿನಲ್ಲಿ ಕೃಷಿ ವಾತಾವರಣವು ಢಾಳವಾಗಿ ಗಂಗರಸರ ಜಾಯಮಾನಕ್ಕೆ ಕೊಡಗು ತೆರೆದುಕೊಂಡಿದ್ದ ಸಾಕ್ಷ್ಯವಾಗಿ ಈ ಶಾಸನವು ನಿಲ್ಲುತ್ತದೆ.

ಕೋತೂರು ಸನಿಹಕ್ಕೆ ಇರುವ ಪೆಗ್ಗೂರು ಶಾಸನವು ಕ್ರಿ.ಶ.೯೭೮ರದು. ಇಮ್ಮಡಿ ಮಾರಸಿಂಹನ ಮಕ್ಕಳಾದ ರಾಚಮಲ್ಲ, ರಕ್ಕಸಗಂಗ ಮತ್ತು ಅರುಮುಳಿದೇವರ ಪೈಕಿ 'ಅಣ್ಣನ ಬಣ್ಣ, ಬಡವರನಣ್ಣ'ನಾದ ರಕ್ಕಸಗಂಗನು ದಕ್ಷಿಣ ಕೊಡಗಿನ ಬೆದ್ದೊಜಿಗೆರೆ (ಪೆಗ್ಗೂರು)ಯ ರಾಜ್ಯಪಾಲನಾಗಿದ್ದ. ಇಮ್ಮಡಿ ಮಾರಸಿಂಹ (ಎ.ಕ. ೧ರಲ್ಲಿ 'ಇಮ್ಮಡಿ' ಎಂದರೆ ಷೇಕ್ ಅಲಿ ಅವರು ಮುಮ್ಮಡಿ ಎಂದಿದ್ದಾರೆ.)ನು ಸಲ್ಲೇಖನದಿಂದ ಕ್ರಿ.ಶ.೯೭೮ರಲ್ಲಿ ತೀರಿದ ಸಮಯದಲ್ಲಿ, ಸಿಂಹಾಸನಾರೋಹಣದಲ್ಲಿ ಗೊಂದಲವಾಗಿ ಸಾಮಂತ ಪಾಂಚಾಲದೇವ ೯೭೪ರಿಂದ ೯೭೭ರ ವರೆಗೆ ಸಿಂಹಾಸನವನ್ನು ಆಕ್ರಮಿಸಿದ. ರಾಚಮಲ್ಲನ ಬದಲು ತನಗೆ ಪಟ್ಟವಾಗಬೇಕೆಂದು ಮುಂದಾದ ಮಾರಸಿಂಹನ ಸೋದರ ಗೋವಿಂದರಸನನ್ನು (ಕ್ರಿ.ಶ. ೯೭೭ರ ಸುಮಾರಿನಲ್ಲಿ), ರಾಚಮಲ್ಲನ ಪರವಾಗಿದ್ದ ಆಡಳಿತದ ಸಂಪೂರ್ಣ ನಿರ್ವಹಣಾ ಮುಖ್ಯಸ್ಥನಾಗಿದ್ದ ಚಾವುಂಡರಾಯನು ಸೆರೆಗಿಟ್ಟ! ಈ ಸಂದರ್ಭದಲ್ಲಿ ಮೇಲುಗೈ ಪಡೆದಿದ್ದ ಪಾಂಚಾಲದೇವನನ್ನು ಸೋಲಿಸಿದ. ಕ್ರಿ.ಶ.೯೭೭ರಲ್ಲಿ ಚಾವುಂಡರಾಯನ ನೆರವಿನಿಂದ ಸಿಂಹಾಸನವೇರಿದ ರಾಚಮಲ್ಲನಿಗೆ 'ಅಣ್ಣನ ಬಣ್ಣ'ನಾಗಿ ರಕ್ಕಸಗಂಗನು ಬೆದ್ದೊಜಿಗೆರೆ (ಪೆಗ್ಗೂರ)ಯ ಆಡಳಿತಕ್ಕೆ ನಿಂತಿರುವಂತಿದೆ. 'ಅಣ್ಣನ ಬಣ್ಣ' ಎಂಬುವಲ್ಲಿ, ಸಿಂಹಾಸನಾರೋಹಣವಾದ ನಂತರ ಅಣ್ಣಾನಾಣತಿಯಂತೆ ಕೊಡಗು ಪ್ರದೇಶಕ್ಕೆ ರಕ್ಕಸಗಂಗ ರಾಜ್ಯಪಾಲನಾಗಿ ಬಂದಿರಬೇಕು. 'ಬಡವರ ನಣ್ಣ' ಎಂಬ ಉಪಾಧಿಯು, ಕೊಡಗಿನ ಜನರ ಅಂದಿನ ಕಷ್ಟಕ್ಕೆ ಆದ ಎಂಬ ಅರ್ಥವೂ ಒದಗುತ್ತದೆ. ಅಂದರೆ ಕ್ರಿ.ಶ. ೯೭೮–೭೭ರ ಅವಧಿಯಲ್ಲಿ ಕೊಡಗಿನಲ್ಲಿಯೂ ಕಷ್ಟನಿಷ್ಠುರಗಳು ಹೆಚ್ಚಿ ರಕ್ಕಸಗಂಗ ಆಡಳಿತಕ್ಕೆ ಬಂದು ಅದನ್ನೆಲ್ಲ ನೇರ್ಪುಗೊಳಿಸಿದಂತೆ ಕಾಣುತ್ತದೆ. 'ಶ್ರೀಮತ್ ರಾಜಮಲ್ಲಪೆರ್ಮ್ಮಡಿಗಳ್' ಹೆಸರೂ ಬಂದು ರಕ್ಕಸಗಂಗನ ರಾಜ ಸಾಮಂತಿಕೆಯನ್ನು ಸೂಚಿಸುತ್ತದೆ. ಪೆಗ್ಗೂರು ಮತ್ತು ಪೊಸವಾದಗ ಗ್ರಾಮಗಳನ್ನು ಗುಣಸೇನ ಪಣ್ಡಿತ ಭಟ್ಟಾರಕರ ಶಿಷ್ಯ ಅನನ್ತವೀರ್ಯ್ಯನಿಗೆ ಪೆಗ್ಗೂರು ಬಸದಿ ನಿರ್ವಹಣೆಗಾಗಿ ನೀಡಿದ ವಿಷಯವನ್ನು ಶಾಸನವು ಹೇಳಿದೆ. ರಕ್ಕಸಗಂಗ ಆಡಳಿತಕ್ಕೆ ನಿಯುಕ್ತನಾದ ಸಂದರ್ಭದ ಸಂತೋಷದ ಸಂಕೇತವಾಗಿ ಈ ಜಿನಾಲಯಕ್ಕೆ ದಾನ ನೀಡಿರುವಂತಿದೆ. ಗಂಗರು ಜೈನಧರ್ಮಕ್ಕೆ ತೋರಿದ ಆದರವಾಗಿ ಇದು ಕಾಣುತ್ತದೆ. ಇಲ್ಲಿ ಬಹಳ ಗಮನಾರ್ಹವಾಗಿ 'ಶ್ರೀಪುರುಷ ಮಹಾರಾಜರ ದತ್ತಿಯ ನಾವೊನೊರ್ಬ್ಬನಟಿದೊಂ' ಎಂಬ ಸಾಲು ಕಾಣುತ್ತದೆ. ಅಂದರೆ, ಬಹುಶಃ ಶ್ರೀಪುರುಷನ ಕಾಲದಲ್ಲಿಯೇ (ಕ್ರಿ.ಶ. ೭೨೬–೭೮೮) ಇದ್ದ ಈ ಜಿನಾಲಯಕ್ಕೆ ದತ್ತಿ ಒದಗಿದ್ದ ಸೂಚನೆ ಇಲ್ಲಿ ಕಾಣುತ್ತದೆ.

ಷೇಕ್ ಅಲಿ ಅವರು, "ಶ್ರೀಪುರುಷ' ಎಂಬ ಹೆಸರೇ ಅವನು ವೈದಿಕ ಪಂಥಾನುಯಾಯಿ ಎಂದು ಸೂಚಿಸಿದರೂ ಬ್ರಾಹ್ಮಣರು ಹಾಗೂ ಜೈನರಿಗೆ ಅವನ್ನು ನೀಡಿದ ಶಾಸನೋಕ್ತ ದಾನಗಳ ಉಲ್ಲೇಖವಿರುವಲ್ಲಿ ಅದೆಲ್ಲ ಆತನ ಧಾರ್ಮಿಕ ಸಹನೆ, ಸಾಮರಸ್ಯದ ದ್ಯೋತಕವಾಗಿತ್ತು[೨೯] ಎಂಬ ಅಭಿಪ್ರಾಯವನ್ನು ಸೂಚಿಸಿದ್ದಾರೆ. ನೀರ್ಗುಂದ ರಾಜ್ಯದ ಪೊನ್ನಾಳಿ ಗ್ರಾಮವನ್ನು ಕ್ರಿ.ಶ.೭೭೬ರಲ್ಲಿ ಜಿನಾಲಯದ ಜೀರ್ಣೋದ್ಧಾರಕ್ಕೆ ದಾನ ನೀಡಿದ ವಿಷಯ ದೇವನಹಳ್ಳಿ ತಾಮ್ರಪಟಗಳಲ್ಲಿದೆ. ನೀರ್ಗುಂದ ರಾಜ್ಯವು ಗಂಗರ ಕಾಲದ ಜಿಲ್ಲಾಕೇಂದ್ರವಾಗಿದ್ದು, ಹೊಸದುರ್ಗ ತಾಲೂಕಿನ ಆಸಂದಿ ಬಳಿ ಇತ್ತು ಎನ್ನಲಾಗಿದೆ. ನೀರ್ಗುಂದ ೧೦೦೦ ಎಂದೂ ಅದು ಕರೆಸಿಕೊಳ್ಳುತ್ತಿತ್ತು. ಮಡಿಕೇರಿಯ ತಾಮ್ರಪಟಗಳಲ್ಲಿ ಇದನ್ನು 'ಗಂಜೆನಾಡ ನೀರ್ಗ್ಗುನ್ದ' (ಮಡಿಕೇರಿ–೧) ಎಂದು ಕರೆಯಲಾಗಿದೆ. ನೀರ್ಗುಂದ ರಾಜನು ಗಂಗರ ಅಧೀನ ಸಾಮಂತನಾಗಿದ್ದ. ಈ ದೊರೆಯು ತನ್ನ ರಾಣಿಯ ಪರವಾಗಿ ಶ್ರೀಪುರುಷನಲ್ಲಿ ಬಿನ್ನವಿಸಿದಾಗ ಜಿನಾಲಯಕ್ಕೆ ಶ್ರೀಪುರುಷನು ದತ್ತಿ ನೀಡಿದನಂತೆ[೩೦]. ಪೆಗ್ಗೂರು ಶಾಸನದಲ್ಲಿ ಉಕ್ತವಿರುವ 'ಶ್ರೀಪುರುಷ ಮಹಾರಾಜರ ದತ್ತಿ' ಮೇಲ್ಸೂಚಿತ ವಿಷಯದ ಸಂಬಂಧಿಯಾಗಿರಬೇಕು. ಅಂದರೆ ನೀರ್ಗುನ್ದ ರಾಜನ ರಾಣಿ ಕಾಂದಚ್ಚಿಯ ಆಶಯಕ್ಕನುಗುಣವಾಗಿ ಈ ದಾನವನ್ನು ಪೆಗ್ಗದೂರು (ಪೆಗ್ಗೂರು) ಬಸದಿಗೆ ನೀಡಿದ್ದಿರಬೇಕು. ಕ್ರಿ.ಶ. ೯೭೮ರ ಶಾಸನವು 'ಶ್ರೀಪುರುಷ ಮಹಾರಾಜ ದತ್ತಿ' ಪುನರ್ನವೀಕರಣ ಮಾಡಿ ಕ್ರಿ.ಶ. ೭೭೬ರ

ಸುಮಾರಿನಲ್ಲಿ ನೀಡಿದ್ದ ದಾನಕ್ಕೆ ಮತ್ತಷ್ಟು ಸೇರಿಸಿ ಕೊಟ್ಟ ದಾನದ ಬಗ್ಗೆ ಹೇಳಿದಂತಿದೆ. ಶ್ರೀಪುರುಷನು ನೇಮಿಸಿದ್ದ ಅವನ ಪುತ್ರರು, ಸಾಮ್ರಾಜ್ಯದ ಆಡಳಿತದಲ್ಲಿ ತೊಡಗಿಸಿಕೊಂಡಿದ್ದರು ಹಾಗೂ ಶತ್ರುದಮನಕ್ಕಾಗಿ ಯುದ್ಧ ಮಾಡುವ ಸ್ವಂತ ತೀರ್ಮಾನದೊಡನೆ ಸಾಗಿ ಸಾಮ್ರಾಜ್ಯವನ್ನು ಬಿಗಿ ಬಂದೋಬಸ್ತಿನಲ್ಲಿಟ್ಟಿದ್ದರು. ಅವನ ಮಕ್ಕಳಾದ ದುಗ್ಗಮಾರ ಮತ್ತು ಸಿಯಗೆಲ್ಲರಲ್ಲಿ ಇಂಥ ಉದಾಹರಣೆಗಳಿವೆ. ದುಗ್ಗಮಾರನು ಕುವಳಾಲನಾಡಿನ ರಾಜ್ಯಪಾಲನಾಗಿ, ಗಂಗಜುಸಾವಿರ, ಪುಮ್ಮೆನಾಡು, ಪುಲವಕಿನಾಡು ೧೦೦೦, ಮುನ್ನಾಡು ೬೦೦ಗಳನ್ನು ಆಳಿದವ; ವಿಶೇಷತಃ ಕೊಡಗಿನ ನಾಗರಹೊಳೆ ನೆರೆಯ ಹೆಗ್ಗಡದೇವನಕೋಟೆ ಪ್ರದೇಶದ ಬೆಳತೂರು ನಾಡು, ಗಂಗರ ವಶದಲ್ಲಿದ್ದ ಕೊಂಗು ದೇಶದ ಭಾಗವಾಗಿ ಶ್ರೀಪುರುಷನ ಪುತ್ರ ದುಗ್ಗಮಾರ ಆಳುತ್ತಿದ್ದ ಎನ್ನುವುದೂ[೫೦] ಇದೆ. ಅಂದರೆ ಕೊಡಗಿನ ಭಾಗವಾಗಿ ಬೆಳತೂರು ಇದ್ದು, ಶ್ರೀಪುರುಷನ ಕಾಲದಲ್ಲಿ ದುಗ್ಗಮಾರನ ಆಳ್ವಿಕೆಗೆ ಕೊಡಗು ಸೇರಿದ್ದ ಸೂಚನೆ ದೊರಕುತ್ತದೆ. ಶ್ರೀಪುರುಷನ ನಂತರ ಅವನ ಮಕ್ಕಳಾದ ಶಿವಮಾರ (I) ಮತ್ತು ದುಗ್ಗಮಾರರ ನಡುವೆ ಸಿಂಹಾಸನಕ್ಕೆ ಸ್ಪರ್ಧೆ ಹಾಗೂ ಕಿರುಯುದ್ಧ ನಡೆದು, ನೊಳಂಬರ ಸಿಂಗಪೋತನು ನೆರವಾಗಲು ಇಮ್ಮಡಿ ಶಿವಮಾರನೇ ಇಡೀ ಗಂಗವಾಡಿಯ ದೊರೆಯಾದ. ಅವನು ಜೈನಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ.

ಶ್ರೀಪುರುಷ ಮಹಾರಾಜನ ದತ್ತಿ ವಿಷಯಕ್ಕೆ ಪೂರಕವಾಗುವಂತೆ ಅವನ ಆಳ್ವಿಕೆಯ (ದುಗ್ಗಮಾರನ ಮೂಲಕ!) ಕುರುಹೆಂಬಂತೆ, ಕೊಡಗಿನ ಹುದಿಕೇರಿ ಬಳಿ ಹೈಸೊಡ್ಲೂರಿನಲ್ಲಿ ದೇವರಕೆರೆ ಬಳಿ ೬ ಸಾಲಿನ ಕ್ರಿ.ಶ.೭-೮ನೇ ಶತಮಾನದ ಲಿಪಿಯ ಅಪ್ರಕಟಿತ ತುಂಡುಶಾಸನವೂ ಲಭ್ಯವಾಗಿದೆ. ಈ ಶಾಸನದಲ್ಲಿ 'ಧರ್ಮ'ವನ್ನು 'ಅಟಿತ್ತಡೆ' ಎಂಬ ಶಬ್ದಗಳಿರುವಲ್ಲಿ, ಈ ಗ್ರಾಮದ ನೆರೆಯಲ್ಲಿ ಜೈನ ಪ್ರಭಾವ ಹಾಗೂ ಜೈನಗುರುಗಳಿದ್ದ ಹಿನ್ನೆಲೆಯಲ್ಲಿ ಬಸದಿ ಅಥವಾ ದೇಗುಲವೊಂದಕ್ಕೆ ಕೊಟ್ಟ ದಾನಶಾಸನವಾಗಿ ಕಾಣುತ್ತದೆ. ಹಾಗೂ ಗಂಗರ ಕಾಲದ ಕೊಡಗಿನ ಮೊದಲ ಕನ್ನಡ ಶಿಲಾಶಾಸನವೆಂದೂ ಸದ್ಯಕ್ಕೆ ಗಮನಕ್ಕೆ ಬರುತ್ತದೆ[೫೧].

ಸೋಮವಾರಪೇಟೆ ತಾಲ್ಲೂಕು ಗುಡಗೂರಿನಲ್ಲಿ ದೊರೆತ ಅಪ್ರಕಟಿತ ಕೊಡಗಿನ ಪ್ರಥಮ ವೇಳವಾಳಿ ವೀರಶಿಲ್ಪ ಶಾಸನವು[೫೨] ಕ್ರಿ.ಶ. ೯೧೧ರದ್ದಾಗಿದ್ದು, ಗಂಗರ ಎರೆಯಮ್ಮನ ಕಾಲದ್ದಾಗಿದೆ. ಇವನನ್ನು ಎರೆಯಪ್ಪ ನೀತಿಮಾರ್ಗ I (೯೦೭-೯೧೯) ಎಂದೂ ತಿಳಿಯುವುದುಂಟು. ದಕ್ಷಿಣ ಕೊಡಗಿನಲ್ಲಿ ಮಾತ್ರ ಕಂಡುಬಂದಿದ್ದ ಗಂಗರ ಶಾಸನಗಳ ಜೊತೆಗೆ ಉತ್ತರ ಕೊಡಗು ಗಂಗರ ಆಳ್ವಿಕೆಗೆ ಸೇರಿತ್ತು ಎಂಬುದು ಈ ಶಾಸನದಿಂದ ಗಮನಕ್ಕೆ ಬರುತ್ತದೆ. ಕ್ರಿ.ಶ. ೮೮೭ರಿಂದ ಯುವರಾಜನಾಗಿ ಕ್ರಿ.ಶ. ೯೦೭ರಲ್ಲಿ ಪಟ್ಟವೇರಿದ ಎರೆಯಪ್ಪ ನೀತಿಮಾರ್ಗನು, ಕೊಂಗಳ್ನಾಡು ೮೦೦೦ವನ್ನು ನಿರ್ವಹಿಸುತ್ತಿದ್ದ. ಈ 'ಕೊಂಗಳ್ನಾಡು' ಕೊಡಗಿನ ಭಾಗವಾಗಿತ್ತೋ ಅಥವಾ ಕೊಂಗಳ್ನಾಡು ೮೦೦೦ರಲ್ಲಿ ಇವನ ಕಾಲದ ಕೊಡಗು ಸೇರಿತ್ತೋ ಎಂಬುದು ಸ್ಪಷ್ಟವಿಲ್ಲದಿದ್ದರೂ ಉಭಯ ಸಾಧ್ಯತೆಗಳಿಗೂ ಅವಕಾಶವಿದ್ದು, ಎರೆಯಪ್ಪನ ಇಲ್ಲಿನ ಆಳ್ವಿಕೆಯನ್ನು ದೃಢಪಡಿಸುತ್ತದೆ.

ಈ ಶಾಸನದ ರೀತ್ಯಾ ಪುಗುರೆ (ಹದರೆ!) ಅಥವಾ ಪೂಗೂರು (ಬೇಳೂರು!) ಬೊಪ್ಪಗಾಮುಂಡ ಮತ್ತು ಎಚಿಗಳ್ಗಳ್ಳಿ (ಹೆಗ್ಗಡಹಳ್ಳಿ)ಯ ರಾಚಮ್ಮನ ನಡುವೆ ಯುದ್ಧವಾಗುತ್ತದೆ. ಮಡಿದ ರಾಚಮ್ಮನಿಗೆ ವೇಳವಾಳಿಯಾಗಿ ಯಳೆಘಟು (ಉಲುಗುಲಿ)ಯ ಶಕ್ರಮನ್ ಅಗ್ನಿಪ್ರವೇಶ ಮಾಡುತ್ತಾನೆ. ಪರೋಕ್ಷವಿನಯದಲ್ಲಿ ಅವನಿಗಾಗಿ ದೇವಿರೆಯ ಕಲ್ಲನ್ನು ನಿಲ್ಲಿಸಿದ ಸಂಗತಿ ಇಲ್ಲಿದೆ. ಈ ವೀರಗಲ್ಲಿನ ಶಿಲ್ಪಗಳು ಅತ್ಯಂತ ಕಲಾತ್ಮಕ ಉಬ್ಬುಶಿಲ್ಪಗಳಾಗಿವೆ. ವೇಳವಾಳಿಯ ಅಗ್ನಿಪ್ರವೇಶ ವೀರ-ಅಪ್ಸರಾ ಸಹಯಾನ, ಸುರಲೋಕದ ಚಿತ್ರಗಳು ತುಂಬಾ ಪುಷ್ಟವಾಗಿ ಮೂಡಿ ಬಂದಿವೆ. ಅಗ್ನಿಪ್ರವೇಶ ಮಾಡುವ ಲೌಕಿಕ ವೇಳವಾಳಿಗಳ ಉಲ್ಲೇಖ ಮಾತ್ರ ಲಭ್ಯವಿದ್ದು, ಚಿತ್ರಗಳು ಗಮನಕ್ಕೆ ಬಂದಿಲ್ಲ[೫೩] ಎನ್ನುವ ಮಾತಿಗೆ ಉತ್ತರವಾಗಿ ಗಂಗರ ಕಾಲದ ಕೊಡಗಿನ ಈ ಪ್ರಥಮ ಅಗ್ನಿಪ್ರವೇಶದ ವೇಳೆವಾಳಿ ಶಾಸನ ಲಭ್ಯವಾಗಿದೆ. ಈ ವೀರಶಾಸನಶಿಲ್ಪದಲ್ಲಿ ಚಿತ್ರಿತವಾಗಿರುವ ಕೊಂಡಕ್ಕೆ ಗೋಪುರ ರೀತಿಯಲ್ಲಿ ನಿಲ್ಲಿಸಿದ ಬಿದಿರಿನ ರಾಶಿಯ ಉರಿ-ಕೆಂಡದ ಮಾದರಿಯು ವಿಶಿಷ್ಟವಾಗಿದೆ; ಕೊಡಗಿನ ಜನಪದ ಆಚರಣೆಯಲ್ಲಿರುವ 'ಚಾವುಂಡಿ ಮೇಲೇರಿ' ಎಂಬ ತಲವರ್ತುಲ ರಾಶಿಯ ಗೋಪುರ ಮಾದರಿಯ ಕೊಂಡಕ್ಕೆ ಈ ಶಿಲ್ಪ ಅತ್ಯಂತ ಪ್ರಾಚೀನ ಮಾದರಿಯಾಗಿ, ಗಂಗರ ಕಾಲದ ಜಾನಪದ ಆಚರಣೆಯ ಇತಿಹಾಸವು ಪ್ರೇರಣೆ ನೀಡಿರಬಹುದು ಎನ್ನುವಂತಿದೆ. ಕ್ರಿ.ಶ. ೯೦೦ರ ಇಂಥ ಅಗ್ನಿಪ್ರವೇಶದ ವೇಳೆವಾಳಿತನದ ಕೆಲವಾರು ಉದಾಹರಣೆಗಳು ನಡುವೆಯೂ ಇದು ವಿಶಿಷ್ಟವಾಗಿ ಕಾಣುತ್ತದೆ. ಕೊಡಗಿನ ಒಂದು ಸಾಂಸ್ಕೃತಿಕ ಚರ್ಯೆಗೆ ಸಾಕ್ಷ್ಯ ಒದಗಿಸಿದೆ ಎನ್ನುವಂತಾಗಿದೆ.

ಇದೇ ಗುಡಗೂರಿನಲ್ಲಿ ಹುಚ್ಚ ಬಸವೇಶ್ವರ ಗುಡಿಯ ಎದುರು ಹಾದಿಯಲ್ಲಿ ಅಪ್ರಕಟಿತ ನಿಸಿದಿ ಶಾಸನವೊಂದಿದ್ದು

ಗಂಗರಸ ರಾಚಮಲ್ಲನನ್ನು ಉಕ್ತ ಮಾಡಿ ೧೧ನೆಯ ಶತಮಾನದ ತನ್ನ ಪ್ರಾಚೀನತೆಯನ್ನು ತೋರಿಕೊಂಡಿದೆ. ದಕ್ಷಿಣ ಕೊಡಗಿನಿಂದ ಉತ್ತರ ಕೊಡಗಿನ ಸೋಮವಾರಪೇಟೆ ತಾಲ್ಲೂಕು ಗಡಿಯವರೆಗಿನ ಪ್ರದೇಶವು ರಾಚಮಲ್ಲನ ಆಳ್ವಿಕೆಗೆ ಸೇರಿತ್ತು ಎಂಬ ಅಂಶವೂ ಗಮನಕ್ಕೆ ಬರುತ್ತದೆ.

ಕ್ರಿ.ಶ. ೯೭೮ರ ಪೆಗ್ಗೂರು ಶಾಸನ, ಆ ಮುನ್ನಿನ ಕ್ರಿ.ಶ.೮೮೮ರ ಬಿಳಿಯೂರು, ಕೋತೂರು ಇತ್ಯಾದಿ ಶಾಸನಗಳ ಭಾಷೆಯ ಗತ್ತು ಸಂಸ್ಕೃತದ ತಿಳಿಲೇಪನದೊಂದಿಗೆ ವೀರ್ಯವತ್ತಾದ ದೇಸೀಶೈಲಿಯನ್ನು ಲಯಬದ್ಧ ಗದ್ಯದಲ್ಲಿ ಮೂಡಿಸುವಂತೆ ಕಾಣಬರುತ್ತದೆ. ಗಂಗರ 'ಮಣ್ಣಿನ ಮಕ್ಕಳತನಕ್ಕೂ ಪೂರಕವಾಗುವಂತೆ ತೋರುತ್ತದೆ', 'ಒನ್ದು ಬಾಟು ಪರಿಹಾರಂ', 'ಕಾಲಂ ಕಟ್ಟುಕೊಟ್ಟಂ ಬಿಟ್ಟ ಪೊನ್ನ ಮಣ್ಣಿಂಗ ವಟ್ಟದಿಂ', ಬೆಟ್ಟಿಯ ಭತ್ತದೊಳ್ ನೂಱು ಭತ್ತಮುಮಂ ಎಲ್ಲಾ ಕಾಲಕ್ಕಂ ಸಾಸನಮಾಗೆ ಬಿಟ್ಟರ್', 'ಅಣ್ಣನ ಬಣ್ಣ', 'ಬಡವರ ನಣ್ಣ' ಮುಂತಾದ ಮಣ್ಣಿನ ವಾಸನೆಯ ಶಬ್ದ ಪುಂಜಗಳು, ಪ್ರಾಸ ಗದ್ಯ ಶಬ್ದಗಳು, ಗಾದೆ ರೂಪದ ಮಾತುಗಳು ಗಂಗರ ಕಾಲದ ಕೊಡಗಿನ ಕನ್ನಡ ದೇಸಿ ಚೆಲುವನ್ನು ಪ್ರತಿಪಾದಿಸುತ್ತವೆ. ಸ್ಥಳನಾಮಗಳಾಗಿ, ಪೆಣ್ಣಿಗಡಜ್ಗ, ಬಿಳಿಯೂರು, ಪೆದ್ದೊಜಿಗೆರೆ, ಜಡಲ (ಚೌಡ್ಲು!), ಪೆಗ್ಗದೂರು (ಪೆಗ್ಗೂರು), ಪೊಸವಾದಗ (ಹೊಸಬಾಡಗ) ಇತ್ಯಾದಿಗಳಿದ್ದು ಇಂದಿಗೂ ಆ ಹೆಸರಿನ ಗ್ರಾಮಗಳು ಉಳಿದುಕೊಂಡು ಬಂದಿರುವುದು ಗಮನಾರ್ಹ. ಇದಲ್ಲದೆ ಆ ಕಾಲಕ್ಕೆ ದಕ್ಷಿಣ ಕೊಡಗಿನಲ್ಲಿ, ಜೈನ ಬಸದಿ ಹಾಗೂ ಜಿನಾಲಯಗಳ ಹೆಸರು ಹಾಗೂ ಧರ್ಮದ ಪ್ರಭಾವವನ್ನು, ಶಾಸನದಲ್ಲಿ ಉಕ್ತರಾದ ಜೈನಗುರುಗಳು, 'ಅನಭ್ಯನ್ತರ ಸಿದ್ಧಿ' ಇತ್ಯಾದಿ ಧಾರ್ಮಿಕ ಪಾರಿಭಾಷಿಕ ಶಬ್ದಗಳ ಪ್ರಯೋಗಗಳು ಮನನ ಮಾಡಿಕೊಡುತ್ತವೆ.

ಶಾಸನ ಶಿಲ್ಪಗಳ ದೃಷ್ಟಿಯಿಂದ ಬಿಳಿಯೂರು ಶಾಸನದ ಮೇಲ್ಭಾಗದಲ್ಲಿರುವ ಮುಕ್ಕೊಡೆ, ದೀಪಸ್ತಂಭ, ಕುಂಭ ಕಳಶ, ಆನೆ ಇತ್ಯಾದಿ ಉಬ್ಬುಶಿಲ್ಪಗಳು ಸಾಮಾನ್ಯ ಶಿಲ್ಪಗಳೆನಿಸುತ್ತವೆ. ಅದೇ ಪೆಗ್ಗೂರು ಶಾಸನದ ಮೇಲ್ಭಾಗದಲ್ಲಿ ಶಂಖ, ಮುಕ್ಕೊಡೆ ನೀಳ ದೀಪಸ್ತಂಭ (ಕುತ್ತುಂಬೊಳಿಚ), ತುಡಿ ಅರಳಿ ಎಲೆ ಇರುವ ಸ್ತಂಭ, ಅಗಲ ಉದರದ ಕುಂಭ ಕಳಶ, ಬಾಗಿದ ಸೊಂಡಿಲ ವಿನೀತ ಗಜ, ಸ್ಥಿರಚಕ್ರ ಇತ್ಯಾದಿಗಳು ಜೈನ ಧಾರ್ಮಿಕ ಸಾಂಸ್ಕೃತಿಕ ಹಿನ್ನೆಲೆಗನುಗುಣವಾದ ಅತ್ಯಂತ ಕಲಾತ್ಮಕ ಉಬ್ಬುಶಿಲ್ಪಗಳಾಗಿ ಕಂಗೊಳಿಸುತ್ತವೆ. ಹೀಗೆ ಕೊಡಗಿನಲ್ಲಿ ಗಂಗರ ಕಾಲದ ಸಾಂಸ್ಕೃತಿಕ ಜಾಯಮಾನವು ತನ್ನ ಪದರುಗಳನ್ನು ಹರಡಿ ತೋರಿದೆ.

ಕ್ರಿ.ಶ. ೯೧೧ರ ಗುಡಗೂರು ಶಾಸನದಲ್ಲಿ ಬರುವ ಎರಂಮ, ಗಂಗ ಎಱೆಯಪ್ಪನಿಗೆ ಅನ್ವಯವಾಗುವ ಬಗ್ಗೆ ಈಗಾಗಲೇ ತಿಳಿಸಿದೆ History of Western Gangas ಕೃತಿಯು ಎಱೆಯಪ್ಪ ನೀತಿಮಾರ್ಗ IIನ ಕಾಲವನ್ನು ಕ್ರಿ.ಶ. ೯೦೭–೯೧೯ಕ್ಕೆ ನಿಗದಿಗೊಳಿಸಿದೆ. ರೈಸರು ಶಾಸನದ ಕಾಲವನ್ನು ಕ್ರಿ.ಶ. ೯೨೦ಕ್ಕೆ ಹೊಂದಿಸಿದ್ದಾರೆ ಹಾಗೂ ಈ ಎಜೆಯಪ್ಪ ಕೊಂಗಲ್ನಾಡ್ ೮೦೦೦ವನ್ನು ಆಳುತ್ತಿದ್ದ ಬಗ್ಗೆ ಹೇಳಿದ್ದಾರೆ. ಇದು ಹೊಸ ಶಾಸನ ಸಂಪುಟದಲ್ಲಿ (ಎ.ಕ.ಸಂ.೪, ೧೯೭೧, ಪಿ.ಪಟ್ಟಣ ೮, ಕೋರಗಲ್ಲು, ೧೦ನೆಯ ಶತಮಾನ ಎಂದಿದೆ); ಕೊಜ್ಗಲಾಡೆಣ್ಟಾಸಿರಮನಿಜುಯಪ್ಪನಾಳುತ್ತಿರೆ, ಕುರ್ಗ್ಗಲ್ಲ ಬೂತುಗನರಸಿ ಪರಮಬ್ಬೆಯಾಳುತ್ತಿರೆ ಕುರ್ಗಲ್ಲ ಹಗಾವುಣ್ಡ ತಮ್ಮುತ್ತಿಬ್ಜೊರ್ ತುಜುಗೊಳೊಳ್ಕಾದಿ ಸತ್ತರ್ ಇದಕ್ಕೆ ಎಜಯಪ್ಪರಸರ್ ಕೊಟ್ಟ ಮಣ್ಣು ....", ಅಂದರೆ ಕೊಡಗಿನ ಉತ್ತರ ಭಾಗ ಹಾಗೂ ಪಿರಿಯಾಪಟ್ಟಣದ ಭಾಗವೂ ಸೇರಿದಂತೆ ಆ ಕಾಲಕ್ಕೆ ಕೊಡಗು ಇದ್ದು ಕೊಜ್ಗಲ್ನಾಡೆಣ್ಟಾಸಿರ (ಕೊಂಗಲ್ನಾಡು ೮೦೦೦)ವೆನಿಸಿರಬೇಕು. ಹೀಗಾಗಿ ಗುಡಗೂರು ಮತ್ತು ಕೊರಗಲ್ಲು ಶಾಸನಗಳು ಎಱೆಯಪ್ಪ ನೀತಿಮಾರ್ಗನ ಕಾಲವನ್ನು ಕ್ರಿ.ಶ. ೯೨೦ರವರೆಗೂ ತೋರುವಂತಿದೆ.

ಹರದೂರಿನ ೧೦ನೆಯ ಶತಮಾನದ ಶಾಸನವು[೩೬] ಎಱೆಯಪ್ಪನ ಆಳ್ವಿಕೆಯನ್ನು ಸೂಚಿಸುತ್ತದೆ. 'ಎಱೆಯಪ್ಪನ ... ದಾಪನು ರಣಾನ್ತ್ಯವಳೆಣ್ಣುವಳು ಸತ್ತು ಪಡೆದ ಕಲ್ನಾಡು', 'ಒನ್ದು ಬಾಟು ಪರಿಹಾರಂ' ಎಂಬ ಈ ಶಾಸನದ ವಾಕ್ಯಗಳಲ್ಲಿ, ಸ್ತ್ರೀ ವೀರೆಯೊಬ್ಬಳು ಮಡಿದು ಪಡೆದ ಕಲ್ನಾಡು ಇರಬಹುದು; ಪರಿಹಾರ 'ಒನ್ದು ಬಾಟು' ಎಂದಿರುವಲ್ಲಿ ಜೀವಿತಕ್ಕೆ ಕೊಡುತ್ತಿದ್ದ ಕಲ್ನಾಡುವಿಗೆ ಪಾರಿಭಾಷಿಕವಾಗಿ ಗಂಗರ ಕಾಲದ ಬಳಕೆಯ ಶಬ್ದವದಾಗಿರಬಹುದೆ ಎಂಬ ಅನುಮಾನಕ್ಕೆ ಕಾರಣವಾಗುತ್ತದೆ ಅಥವಾ ನಗರ್ಲೆಯ ಶಾಸನದಲ್ಲಿ (ಕ್ರಿ.ಶ. ೯೭೦-೭೧)[೩೭] ಕಂಡುಬರುವ 'ಮನವಗತಿ ನೀಲಬ್ಬೆಯ ಮಗಂ ರಾಚಮ್ಮ' ಎಂಬಂತೆ ಇಲ್ಲಿ ವೇಳೆವಾಳಿಯ ಮಗನೊಬ್ಬ ಕಾಳಗದಲ್ಲಿ ಮಡಿದ ಸಂಗತಿ ಆಗಿರಬಹುದೇ? ಎಂಬ ಅನುಮಾನವೂ ಕಾಣುತ್ತದೆ. ಇಲ್ಲಿ ಸೂಚಿತನಾದ ಎಱೆಯಪ್ಪನು ನೀತಿಮಾರ್ಗ II ಆಗಿರುವಂತಿದೆ.

ಕ್ರಿ.ಶ. ೧೦ನೆಯ ಶತಮಾನದ ಗಣಗೂರು ಶಾಸನದಲ್ಲಿ[೩೮] 'ರಣೆವೊಳಿಗನ ತಮ್ಮಂ ಲಲ್ಲುಗಂ... ತಲೆಗಡಿಸಿಕೊಣ್ಡು ಸತ್ತ' ಎಂದಿರುವುದು ಗಂಗರ ಕಾಲದ ಆತ್ಮಬಲಿಯ ಉದಾಹರಣೆಯಾಗಿ ಕಾಣುತ್ತದೆ. ಕೊಡಗಿನ ಗಂಗರ ಕಾಲದ

ಪ್ರಮುಖ ಜೈನಕೇಂದ್ರವಾದ ಮುಳ್ಳೂರಿನ ಶಾಸನವೊಂದರಲ್ಲಿ[೪೦] 'ಖಿಟ್ಗದಿಂದ ತಲೆಗಡಿಸಿ ಸತ್ತ' ಎಂದಿದೆ. ೧೧ನೆಯ ಶತಮಾನ ಅಂದರೆ ಚೋಳರು ೧೦೦೪ರಲ್ಲಿ ಕೊಡಗಿನಲ್ಲೂ ಗಂಗರನ್ನು ಸೋಲಿಸಿ ಕೊಂಗಾಳ್ವರ ಮೂಲಕ ತಮ್ಮ ಮೇಲಾಳಿಕೆ ನಡೆಸುವಲ್ಲಿ ಕೊಡಗಿನ ಆತ್ಮಬಲಿ ಆಚರಣೆ ಮುಂದುವರಿದಂತೆ ಕಾಣುತ್ತದೆ. ಇದು ಗಣಗೂರಿನ 'ಸಿಡಿದಲೆ' ಪದ್ಧತಿಯ ಒಂದು ರೂಪವಿದ್ದಿರಬಹುದು. ಮುಳ್ಳೂರಿನಲ್ಲಿ ಖಡ್ಗದಿಂದ ಕಡಿಸಿಕೊಂಡದ್ದು ಸ್ಪಷ್ಟ. ಕ್ರಿ.ಶ.೯೪೪ರ ಗಂಗರ ಕಾಲದ ಪ್ರಸಿದ್ಧ ಕೊಡಗಿನ ಜೈನ ಕೇಂದ್ರವಾಗಿದ್ದ ಅಂದಗೋವೆಯ ಕಲ್ಲೂರು ಶಾಸನದಲ್ಲಿಯೂ[೪೧] 'ತಲೆಗಡಿಸಿ ಸತ್ತ-ಬೂಚಗನ' ವಿಷಯ ಬಂದಿದೆ. ಬಹುಶಃ ದೇವರಿಗೆ ಅರ್ಪಿಸಿಕೊಳ್ಳುವ ಆತ್ಮಬಲಿಗಳ ರೂಢಿ ಕೊಡಗಿನಲ್ಲಿ ಗಂಗರ ಕಾಲಕ್ಕೆ ಪುಟಗೊಂಡಿದ್ದುವೆ? 'ಸಲ್ಲೇಖನ ವ್ರತ'ಕ್ಕೆ ಪರ್ಯಾಯವಾಗಿ ಪ್ರೇರಣೆಗೊಂಡು ಹೀಗೆ ಆತ್ಮಬಲಿಗೊಳ್ಳುತ್ತಿದ್ದರೆ? ಎಂಬ ಅನುಮಾನಗಳೂ ಕಾಡುತ್ತವೆ. ಇವೆಲ್ಲ ಇಮ್ಮಡಿ ಬೂತುಗನ ಆಳ್ವಿಕೆಯ ಕಾಲದವೆನಿಸುತ್ತವೆ. ಬೂತುಗನು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನೊಡಗೂಡಿ, ಚೋಳರನ್ನು ಪೂರ್ಣವಾಗಿ ತಹಬಂದಿಗೆ ತಂದಿದ್ದ ಅವಧಿ ಇದಾಗಿತ್ತು[೪೨] ಎಂಬುದು ಇಲ್ಲಿ ಗಮನಾರ್ಹವಾಗುತ್ತದೆ.

೧೦ನೆಯ ಶತಮಾನದ ಹಾರೋಹಳ್ಳಿಯ ಶಾಸನವೊಂದು[೪೩] 'ತೆಯ್ಯಲಯ್ಯ ಜೂಬು ಕಾಲಂ ಕಚ್ಚಿ ... ಕೊಟ್ಟಮ್ ಎಜೆಯ[ರ] ಸಂಗೆ ಬಿಟ್ಟಗ್ರಹಾರ । ಮತ್ತಂ ... ಕೊಜ್ಗಣಿವರ್ಮ್ಮಂ ಕಾಲಂ ಕಚ್ಚಿ ಕೊಟ್ಟಂ ಬಿಟ್ಟ ಪೊನ್ನ ಮಣ್ಣಿಂಗೆ ವಟ್ಟದಿಂ ...। ಎಂದಿರುವಲ್ಲಿ ಮೊದಲ ಭಾಗ ಎರೆಯರಸ ಎಂಬ 'ಗಂಗ'ರಸ ನಾಮ ಪ್ರಭಾವಿತ ಬ್ರಾಹ್ಮಣನಿಗೆ ಅಥವಾ ಜೈನ ಬ್ರಾಹ್ಮಣನಿಗೆ (!) ಕೊಟ್ಟ ದಾನ ವಿಷಯವಿದ್ದರೆ, ಎರಡನೆಯ ಭಾಗದಲ್ಲಿ ದೊರೆ ಕೊಜ್ಗಣಿವರ್ಮ್ಮನೂ ದಾನ ಕೊಟ್ಟ ವಿಷಯವಿದೆ. ಶಾಸನದ ಕಾಲವನ್ನು ೧೦ನೇ ಶತಮಾನದ ಎಂದಿರುವಲ್ಲಿ, 'ಕೊಜ್ಗಣಿವರ್ಮ' ಎಂಬ ಇಲ್ಲಿಯ ವ್ಯಕ್ತಿನಾಮವು, ಇಮ್ಮಡಿ ಬೂತುಗ (ಕ್ರಿ.ಶ. ೯೩೫–೯೬೦) ಅಥವಾ ನಾಲ್ವಡಿ ರಾಚಮಲ್ಲ (ಕ್ರಿ.ಶ. ೯೭೪–೯೮೫)ರಿಗೆ ಅನ್ವಯವಾಗುವಂತಿದೆ. ಕಾರಣ ಇಮ್ಮಡಿ ಬೂತುಗನು 'ಸತ್ಯವಾಕ್ಯ ಕೊಜ್ಗಣಿವರ್ಮ' ಎಂಬ ಬಿರುದನ್ನು ಧರಿಸಿದ್ದ; ನಾಲ್ವಡಿ ರಾಚಮಲ್ಲನೂ 'ಸತ್ಯವಾಕ್ಯ ಕೊಜ್ಗಣಿವರ್ಮ' ಎಂಬ ಬಿರುದನ್ನು ಧರಿಸಿದ್ದ[೪೪]. ಕೊಡಗಿನ ಕ್ರಿ.ಶ. ೯೭೮ರ ಶಾಸನದಲ್ಲಿ ನಾಲ್ವಡಿ ರಾಚಮಲ್ಲನಿಗೆ (ಕೊಡಗು ೯೮, ಪೆಗ್ಗೂರು) 'ಸತ್ಯವಾಕ್ಯ ಕೊಜ್ಜ್ಗಣಿವರ್ಮ' ಎಂಬ ಬಿರುದಾಂಕಿತವಿದ್ದು, ಹಾರೋಹಳ್ಳಿ ಶಾಸನದ 'ಕೊಜ್ಗಣಿವರ್ಮ' ನಾಲ್ವಡಿ ರಾಚಮ್ಮಲ್ಲಗೆ ಹೆಚ್ಚು ಅನ್ವಯ ಸೂಕ್ತವಾಗಿ ಅವನು ನೀಡಿದ ದಾನವೆಂದು ಪರಿಗಣಿಸಬೇಕಾಗುತ್ತದೆ. ಇವನ ಕಾಲದಲ್ಲಿ ಇವನ ಸೋದರ ಅಣ್ಣನ ಬಂಟ 'ರಕ್ಕಸಗಂಗ' ಬೆದ್ದೊಜಗರೆ (ಪೆಗ್ಗದೂರು–ಪೆಗ್ಗೂರು) ಆಳುತ್ತಿದ್ದು, ಕ್ರಿ.ಶ. ೯೮೫ರಲ್ಲಿ ನಾಲ್ವಡಿ ರಾಚಮಲ್ಲನ ನಂತರ ರಕ್ಕಸಗಂಗನೇ ಗಂಗ ಸಿಂಹಾಸನವನ್ನೇರಿದ.

ದಕ್ಷಿಣ ಕೊಡಗು ಮತ್ತು ಉತ್ತರ ಕೊಡಗಿನಲ್ಲಿ ೮ನೆಯ ಶತಮಾನದಿಂದ ೧೦ನೆಯ ಶತಮಾನದವರೆಗೆ ಜೈನಧರ್ಮಕ್ಕೆ ಗಂಗರಿಂದ ರಾಜಪೋಷಣೆ ದೊರಕಿತ್ತು. ಮಧ್ಯ ಕೊಡಗಿನಲ್ಲಿಯೂ ಇದರ ಪ್ರಭಾವವು ಬೆಳೆದಿತ್ತು ಎಂಬುದಕ್ಕೆ ಅರಮೇರಿಯ ಭಗವತಿ ದೇವಾಲಯದಲ್ಲಿ ದೊರೆತ 'ಚತುರ್ವಿಂಶತಿ ತೀರ್ಥಂಕರ'ರ ಶಿಲ್ಪದ ಶಿಲಾಫಲಕವು ಒಂದು ಪೂರಕ ಪುರಾವೆ ಆಗಿದೆ. ಈ ಪುಟ್ಟ ಫಲಕದ ಮೇಲೆ ೨೪ ತೀರ್ಥಂಕರನನ್ನು ಕಲಾತ್ಮಕ ಉಬ್ಬುಶಿಲ್ಪದಲ್ಲಿ ಬಿಡಿಸಿದೆ. ಮೊದಲ ಪಟ್ಟಿಕೆಯ ಮೇಲು ಸಾಲಿನಲ್ಲಿ ಐದು, ಎರಡನೆಯ ಪಟ್ಟಿಕೆಯಲ್ಲಿ ಏಳು, ಮೂರನೆಯ ಪಟ್ಟಿಕೆಯಲ್ಲಿ ಒಂಬತ್ತು ತೀರ್ಥಂಕರರು ಹೀಗೆ ಒಟ್ಟು ೨೧ ತೀರ್ಥಂಕರರು ಪದ್ಮಾಸನಸ್ಥ ಧ್ಯಾನಮುದ್ರೆಯಲ್ಲಿದ್ದಾರೆ. ಈ ಮೂರು ಪಟ್ಟಿಕೆಗಳ ಕೆಳಗೆ ಧ್ಯಾನಮುದ್ರಾ ತೀರ್ಥಂಕರನ ಶಿಲ್ಪ ಪೀಠಸ್ಥವಾಗಿದೆ. ಗುಂಗುರು ಕೇಶಗೊಂಡೆ ಹಾಗೂ ಮುಕ್ಕೊಡೆ ಶಿಲ್ಪವೂ ಶಿರದ ಮೇಲಿದೆ. ಕೆಳಗೆ ವೃಷಭ ಲಾಂಛನವಿದೆ. ಪಕ್ಕದಲ್ಲಿ ಪಾರ್ಶ್ವ–ಸುಪಾರ್ಶ್ವನಾಥರಿದ್ದು ಖಡ್ಗಾಸನ ಭಂಗಿಯಲ್ಲಿದ್ದಾರೆ. ಹೀಗಾಗಿ ಶ್ರೀವತ್ಸ ಚಿಹ್ನೆಯುಳ್ಳ ವರ್ಧಮಾನ ಮಹಾವೀರನ ಶಿಲ್ಪವನ್ನೊಳಗೊಂಡ ಚತುರ್ವಿಂಶತಿ ತೀರ್ಥಂಕರ ಶಿಲ್ಪವಿದಾಗಿದೆ. ಪಟ್ಟಿಕೆಗಳಲ್ಲಿ ತ್ರುಟಿತ ಶಾಸನ ಲಿಪಿಗಳಿದ್ದು ಸುಮಾರು ೯–೧೦ನೆಯ ಶತಮಾನದ ಲಿಪಿಯನ್ನು ಹೋಲುವಂತಿದೆ. ಹೀಗಾಗಿ ಇಮ್ಮಡಿ ರಾಚಮಲ್ಲರಿಂದ ನಾಲ್ವಡಿ ರಾಚಮಲ್ಲನ ಕಾಲಾವಧಿಯಲ್ಲಿ ರೂಪುಗೊಂಡ ಶಿಲ್ಪವಿದಾಗಿರುವಂತಿದೆ. 'ಅರನಾಥ' ತೀರ್ಥಂಕರನ ಬಸದಿಯು ಅರಮೇರಿಯಲ್ಲಿತ್ತು ಎಂಬ ಸೂಚನೆಯೂ ಸ್ಥಳನಾಮದಿಂದ ದೊರಕುವಂತಿದೆ. ಅರಮೇರಿಯ ಭಗವತಿ ದೇಗುಲದ ಮುಖಮಂಟಪದ ಪಶ್ಚಿಮ ದ್ವಾರದ ಬಾಗಿಲುವಾಡದ ಬಲ ಮೇಲ್ಬದಿಯಲ್ಲಿ ಧ್ಯಾನಮುದ್ರಾ ದಿಗಂಬರ ಮುನಿಯನ್ನು ಹೋಲುವಂಥ ಶಿಲ್ಪವಿರುವುದೂ ಗಮನಾರ್ಹವಾಗಿದೆ.

ಕೊಡಗಿನ ಬೆದ್ದೂಜಗೆರೆ ಆಳಿದ ರಕ್ಕಸಗಂಗನೇ ಗಂಗರ ಕೊನೆಯ ದೊರೆ. ಈತ ಸ್ವತಂತ್ರ ಗಂಗ ಅರಸನಾಗಿ ಕ್ರಿ.ಶ. ೧೦೦೪ರ ವರೆಗೆ ಆಳಿದರೂ ಆ ನಂತರ ಚೋಳರ ಸಾಮಂತನಾಗಿ ಕ್ರಿ.ಶ. ೧೦೨೪ರವರೆಗೆ ಇದ್ದ. ನಂತರ ಬಂದ ಅವನ ಸೋದರ ಅರುಮುಳಿದೇವ ಕೇವಲ ಸಾಮಂತ ದೊರೆ ಆಗಿದ್ದ.

ಮಡಿಕೇರಿಯ ಕ್ರಿ.ಶ. ೧೦೦೧ರ ಶಾಸನದ ರೀತ್ಯಾ ಗಣಗೂರ ಬಿಹಗಾಮುಣ್ಡನ ಮಗ ಹಞ್ಜಮಸೆಟ್ಟಿಯ ಕುಣಿನ್ದೋರುವಿನ ಕಾಳಗದಲ್ಲಿ ತೋರಿದ ಶೌರ್ಯಕ್ಕಾಗಿ ಕೂಡಲೂರು ಇತ್ಯಾದಿ ಗ್ರಾಮಗಳನ್ನು ದಾನವಾಗಿ ಪಡೆದ. ಬಹುಶಃ ಅವನು ಹರಸಿಕೊಂಡಿದ್ದಂತೆ (ಜಯಕ್ಕೆ) ತಲಕಾವೇರಿಯಲ್ಲಿ ಮಿಂದು ರಾಮೇಶ್ವರನಿಗೆ ಪೂಜೆ ಸಲ್ಲಿಸಿದ ವಿಷಯ ಹೇಳುತ್ತದೆ. ಈ ಶಾಸನ, ರಕ್ಕಸಗಂಗನು ತಲಕಾಡಿನಲ್ಲಿ ಆಳ್ವಿಕೆ ಮಾಡುತ್ತಿದ್ದಾಗ ಹಾಕಿಸಿದ್ದು. ಚೋಳಸೈನ್ಯದ ತುಕಡಿಯೊಡನಾದ ಯುದ್ಧದಲ್ಲಿ ಪಡೆದ ವಿಜಯವಿದಾಗಿರಬಹುದು.

ಚೋಳರು ಗಂಗರ ಪ್ರಬಲ ದಂಡನಾಯಕ ಮಂತ್ರಿ ಚಾವುಂಡರಾಯ ಬದುಕಿದ್ದವರೆಗೂ (ಕ್ರಿ.ಶ. ೯೯೦) ಗಂಗವಾಡಿಯ ಮೇಲೆ ಕಣ್ಣು ಹಾಯಿಸುವಂತಿರಲಿಲ್ಲ. ಅಂತಾಗಿ ಅವನ ನಂತರ ಕ್ರಿ.ಶ. ೯೯೧-೯೨ರ ಸುಮಾರಿಗೆ ಗಂಗವಾಡಿಯ ಭಾಗಗಳನ್ನು ಆಕ್ರಮಿಸುತ್ತ ಬಂದರು. ಕೊಡಗಿನ ಗಂಗರನ್ನು (ಅವರ ಸಾಮಂತರಾದ ಚಂಗಾಳ್ವರನ್ನು ಸೋಲಿಸುವ ಮೂಲಕ) ಚಂಗಾಳ್ವನನ್ನು ಕ್ರಿ.ಶ. ೧೦೦೪ರ ಪನಸೋಗೆ ಯುದ್ಧದಲ್ಲಿ ಸೋಲಿಸಿದ್ದನ್ನು ಕೊಡಗಿನ ಮಾಲಂಬಿ ಶಾಸನವು ತಿಳಿಸುತ್ತದೆ.

ರಕ್ಕಸಗಂಗನು ತಲಕಾಡಿನಲ್ಲಿ ಆಳ್ವಿಕೆಗೆ ಹೋದ ಮೇಲೆ, ಕೊಡಗಿನಲ್ಲಿ ಗಂಗರ ಪರವಾಗಿ ಗಂಗ ಗೋವಿಂದರಸನ ಮೇಲ್ವಿಚಾರಣೆಯಲ್ಲಿ ಚಂಗಾಳ್ವರ ಸಾಮಂತರಾಗಿ ಆಳುತ್ತಿದ್ದಂತೆ ಕಾಣುತ್ತದೆ; ಕಾರಣ ಕ್ರಿ.ಶ.೧೦೦೪ರ ಪನಸೋಗೆ ಯುದ್ಧದಲ್ಲಿ ಕೊಂಗಾಳ್ವರು (ಮುಂದಿನ ಶಾಸನಗಳಲ್ಲಿ ಒಱೆಯೂರು ಪುರವರಾಧೀಶ್ವರರು ಎಂದೂ ಹೇಳಿದ್ದಾರೆ) ತಮ್ಮ ಮೂಲ ವಂಶದ ಪುರುಷರೆಂದು ಚೋಳರಿಗೆ ನೆರವಾಗಿ, ಅವರ ಪೈಕಿಯ ಮನಿಜನು ಮಾಲವ್ವಿಯನ್ನು ದಾನವಾಗಿ ಪಡೆದ. ಕ್ರಿ.ಶ.ಸು. ೧೦೦೪ರ ಮಾಲಂಬಿ ಶಾಸನದ[೪೬] ಪ್ರಕಾರ ಸ್ಪಷ್ಟವಾಗಿ ರಾಜಕೇಸರಿವರ್ಮ 'ಪೆರ್ಮ್ಮನಡಿ' ಎಂಬ ಬಿರುದು[೪೭]ಹೊಂದಿದ್ದ ಒಂದನೆಯ ರಾಜರಾಜಚೋಳನು (ಕ್ರಿ.ಶ. ೯೮೫-೧೦೧೨), ಪನಸೋಗೆ ಯುದ್ಧದಲ್ಲಿ (ಗಂಗ ಸಾಮಂತ ಚಂಗಾಳ್ವರೆದುರು) ಮನಿಜನು ತೋರಿದ ಶೌರ್ಯವನ್ನು ಮೆಚ್ಚಿ 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವ' ಎಂಬ ಬಿರುದನ್ನು ನೀಡಿ ಕೊಂಗಾಳ್ವವಂಶದಾಳ್ವಿಕೆಯನ್ನು ಸ್ಥಾಪಿಸಿದ; ತನ್ನ ಸೇನಾ ಮಹಾದಂಡನಾಯಕ (ಹಾಗೂ ಪುತ್ರ)ನಾದ ಪಞ್ಚವನ್ ಮಾರಾಯ ಎಂಬ ಬಿರುದು[೪೮] ಪಡೆದಿದ್ದ ಒಂದನೇ ರಾಜೇಂದ್ರ ಚೋಳನ ಮೂಲಕ ಮನಿಜನನ್ನು ಕೊಡಗು ಮಲೆನಾಡಿನ ಮಾಲವ್ವಿಯಲ್ಲಿ ಪಟ್ಟಕ್ಕೆ ಕೂರಿಸಿದ ಗಂಗರ ಸಾಮಂತರಾಗಿ ಕ್ರಿ.ಶ. ೧೦೦೪ರಲ್ಲಿ ಚೋಳರ ಪರವಾಗಿ (ತನ್ನ ಪೂರ್ವಿಕವಂಶಿಕರೆಂದು) ಚಂಗಾಳ್ವರೆದುರು ಯುದ್ಧ ಮಾಡಿ ಕೊಡಗಿನ ಗಂಗರ ಆಳ್ವಿಕೆಗೆ ಮನಿಜ ಇತಿಶ್ರೀ ಹಾಡಿದನೆನ್ನಬೇಕು. ಕ್ರಿ.ಶ. ೧೦೦೬ರ (೨೨-೩-೧೦೦೬)ರ ಕಲಿಯೂರು (ತಲಕಾಡು ಪಟ್ಟಣಕ್ಕೆ ಅಭಿಮುಖವಾಗಿದ್ದ ಕಲಿಯೂರು) ಶಾಸನದ ಪ್ರಕಾರ ಗಂಗರ ಸಾಮಂತರು ಹಾಗೂ ಸ್ಥಳೀಯ ನಾಯಕರುಗಳಾದ ಗೊಜ್ಜಿಗ, ಬೂತುಗ, ಸೇನವಾರ, ಪೊಯ್ಸಳ ಸಂಚಿಗ, ರಕ್ಕಗ, ಸಿನ್ನಿವರ ಯೆಱೆಗಂಗ, ಚಂಡಿಗ ನೊಳಂಬ ಸಾಂತಲಿಗೆ ಬೀರುಗ, ಶಬರರ ನಾರಗ, ಅರಕಿಲ್ಲ ನಾಗವರ್ಮ, ನನ್ನಿಕದಂಬ, ಸಿರಿಗ, ಅರಿವರ್ ಮಹಾರಾಜ ಮುಂತಾದವರೆಲ್ಲ ಸೇರಿ ಚೋಳರನ್ನು ಎದುರಿಸಿದರು. ಈ ಸಂದರ್ಭದಲ್ಲಿ ಚೋಳರ ದಂಡನಾಯಕ ಅಪ್ರಮೇಯನು ಗಂಗರ ಮತ್ತು ಗಂಗರ ಪರ ನಾಯಕರನ್ನೆಲ್ಲ ನಿರ್ಣಾಯಕವಾಗಿ ಸೋಲಿಸಿ ಜಯಸ್ತಂಭವನ್ನು ಶಾಸನೋಕ್ತವಾಗಿ ನೆಡಿಸಿದರ್[೪೯]. ಈ ಹಿನ್ನೆಲೆಯಲ್ಲಿ ಕ್ರಿ.ಶ. ೧೦೦೬ರ ಮುನ್ನವೇ ಕ್ರಿ.ಶ. ೧೦೦೪ರ ಸುಮಾರಿನಲ್ಲಿ ಕೊಡಗಿನ ಭಾಗವಾಗಿದ್ದ ಪನಸೋಗೆಯಲ್ಲಿ ಯುದ್ಧ ನಡೆದು ಕೊಡಗು ಗಂಗರ ಕೈ ಬಿಟ್ಟಿತು. ಕೊಂಗಾಳ್ವರು, ಚಂಗಾಳ್ವರು ಮಾಂಡಲಿಕರಾಗಿ ಕೊಡಗಿನ ಭಾಗಗಳನ್ನು ಆಳತೊಡಗಿದರು ಎಂದು ತಿಳಿಯುತ್ತದೆ.

ಈ ಕಲಿಯೂರು ಯುದ್ಧವಂತೂ ಚೋಳರ ಆಧಿಪತ್ಯಕ್ಕೆ ಗಂಗರಷ್ಟೇ ಅಲ್ಲದೆ, ನಾಡಿನ ಎಲ್ಲ ನಾಯಕರೂ ವಿರೋಧವಾಗಿದ್ದುದರ ಸಂಕೇತವೇ ಆಗಿತ್ತು. ಅಪ್ರಮೇಯ ದಂಡನಾಯಕನೆದುರು ಆದ ಸೋಲು ಅವರನ್ನೆಲ್ಲ ಅಸಹಾಯಕರನ್ನಾಗಿ ಮಾಡಿತು. ಷೇಕ್ ಅಲಿ ಅವರು : 'ಈ ಕಾಳಗದಲ್ಲಿ ಸೋತಿದ್ದ ಹೊಯ್ಸಳ ನಾಯಕರಂತೂ ಮುಂದಿನ ಜಯಕ್ಕಾಗಿ ಟೊಂಕಕಟ್ಟಿ ಸಿದ್ಧವಾಗಲು ಮರೆಯಲಿಲ್ಲ; ಕಲಿಯೂರು ಯುದ್ಧ ಇದಕ್ಕೆ ನಾಂದಿ ಹಾಕಿತ್ತು. ಹೊಯ್ಸಳ ವಿಷ್ಣುವರ್ಧನನು, ಕರ್ನಾಟಕದಿಂದ ಸಂಪೂರ್ಣವಾಗಿ ಚೋಳರನ್ನು ಓಡಿಸುವಲ್ಲಿ ಯಶಸ್ವಿಯಾಗಿ, ಹೊಯ್ಸಳ ಸಾಮ್ರಾಜ್ಯ ಉದಿಸಲು ಅನುಕೂಲಿಸಿದ' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದು ನೆರವೇರಿದ್ದು ಕ್ರಿ.ಶ. ೧೧೧೬ರ ಸಮಯದಲ್ಲಿ ಅಂದರೆ ಗಂಗರು ಕಟ್ಟಿದ ಕೃಷಿಕ್ಷಾತ್ರನಾಡು ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಮರೆಯಲಿಲ್ಲವೆಂದಾಯಿತು.

ಕೊಡಗಿನ ರಕ್ಕಸಗಂಗನ ಸಂದರ್ಭದ ಒಂದೆರಡು ವಿಷಯಗಳನ್ನು ಪ್ರಸ್ತಾಪಿಸಬೇಕು. ಗಂಗ ಮಾರಸಿಂಹ IIIನಿಗೆ ರಾಚಮಲ್ಲ IV, ರಕ್ಕಸಗಂಗ ಮತ್ತು ಅರುಮುಳಿದೇವ ಎಂಬ ಮೂರು ಜನ ಮಕ್ಕಳು. ಅಲ್ಲದೆ ಹೊಂಬುಚದ

ಶಾಸನವು ಮಾರಸಿಂಹನಿಗೆ ಗೋವಿಂದರಸ ಎಂಬ ಸೋದರನೂ ಇದ್ದ ಎಂದಿದೆ. ಮಾರಸಿಂಹನು ಸಲ್ಲೇಖನದಿಂದ ತೀರಿದ ನಂತರ ಗೋವಿಂದರಸ ಸಿಂಹಾಸನದ ಹಕ್ಕಿಗೆ ಮುಂದೆ ಬಂದ, ರಾಚಮಲ್ಲನ ಪಟ್ಟಕ್ಕೆ ವಿರೋಧವಾಗಿದ್ದ ಎಂದು ಚಾವುಂಡರಾಯಪುರಾಣ ಮತ್ತು ಅಜಿತನಾಥಪುರಾಣಗಳು ತಿಳಿಸುತ್ತವೆ. ಆದರೆ ಅವನಿಗೆ ಗಂಗ ಸಾಮಂತರೂ, ಆಡಳಿತದ ಮುಖ್ಯವಾಗಿದ್ದ ದಂಡನಾಯಕ ಮಂತ್ರಿ ಚಾವುಂಡರಾಯನೂ ಅವನ ಪರವಿರಲಿಲ್ಲ. ಇವನ ಜೊತೆಗೆ ಗಂಗರ ಸೈನ್ಯಾಧಿಕಾರಿ ಮುದುರಾಚಯ್ಯ ಎಂಬುವನು ಗಂಗ ಸಿಂಹಾಸನವನ್ನು ಆಕ್ರಮಿಸಲು ನೋಡಿದ. ಇವನು ಚಾವುಂಡರಾಯನ ಸೋದರ ನಾಗವರ್ಮನನ್ನು ಕೊಂದ. ಈ ಸಂದರ್ಭದ ಗೊಂದಲಗಳಲ್ಲಿ ಗಂಗರ ಸಾಮಂತ, ಪುಲಿಗೆರೆ, ಬೆಳವಲ-೩೦ ಗ್ರಾಮಗಳ ಒಡೆಯನಾಗಿದ್ದ ಗಂಗವಂಶಿಕನಲ್ಲದ 'ಪಾಂಚಾಲದೇವ' ಗಂಗರ ಸಿಂಹಾಸನವನ್ನು ಕ್ರಿ.ಶ. ೯೭೪-೭೭ರವರೆಗೆ ಆಕ್ರಮಿಸಿದ. ಪಾಂಚಾಲದೇವನ ಆಡಳಿತ ದಕ್ಷತೆ ಕಂಡಿದ್ದ ಮಾರಸಿಂಹ ತಾನು ಧಾರ್ಮಿಕ ಆಚಾರಾಕಾಂಕ್ಷಿಯಾಗಿ ಹೋಗುವ ಮುನ್ನ ಗಂಗವಾಡಿ ೯೬೦೦೦ಕ್ಕೆ ರಾಜ್ಯಪಾಲನನ್ನಾಗಿ (ರಾಜತ್ವವನ್ನಲ್ಲ) ಮಾಡಿದ್ದ. ಅವನು ಈ ಸಂದರ್ಭವನ್ನೇ ಬಳಸಿಕೊಂಡು, ಸಿಂಹಾಸನವನ್ನು ಆಕ್ರಮಿಸಿದ್ದ. ಈ ಕಾರಣ ಗಂಗರಾಜಕುಮಾರರು ಅವನನ್ನು ಸಿಂಹಾಸನಚ್ಯುತನನ್ನಾಗಿಸಲು ಸಮಯ ಕಾಯುತ್ತಿದ್ದರು. ಈ ಹೊತ್ತಿಗೆ ಕಲ್ಯಾಣದ ಚಾಲುಕ್ಯರ ಇಮ್ಮಡಿ ತೈಲನು ಪಾಂಚಾಲದೇವನ ಮೇಲೇರಿ ಬಂದು ಯುದ್ಧದಲ್ಲಿ ಕೊಂದನು*. ಈ ಸಂದರ್ಭದಲ್ಲಿ ಚಾವುಂಡರಾಯನು ಸಮರ ಕುಶಲಿಯಾಗಿ ಮುಂದೆ ಬಂದು ಮುದುರಾಚಯ್ಯನನ್ನು ಯುದ್ಧದಲ್ಲಿ ಕೊಂದು ಗಂಗ ಸಿಂಹಾಸನದಲ್ಲಿ ನಾಲ್ವಡಿ ರಾಚಮಲ್ಲನನ್ನು ಕ್ರಿ.ಶ. ೯೭೭ರಲ್ಲಿ ಕೂರಿಸಿದ. ಈ ಯುದ್ಧಕ್ಕೆ ಮುನ್ನ ರಕ್ಕಸಗಂಗನನ್ನು ಸುರಕ್ಷಿತ ಸ್ಥಳಕ್ಕೆ 'ಬಾಗೆಯ' ಎಂಬ ವೀರನ ಹೊಣೆಗೆ ಒಪ್ಪಿಸಿ ಕಳುಹಿಸಿದ. ಆದರೆ ಅವನು ಗೋವಿಂದನನ್ನು ಕೊಂದ ಎನ್ನುವ ಬಗ್ಗೆ ತಾರ್ಕಣೆ ಸಾಲದು.

ರಕ್ಕಸಗಂಗನು ಕ್ರಿ.ಶ. ೯೭೮ರ ಕೊಡಗಿನ ಪೆಗ್ಗೂರು ಶಾಸನವು ರಕ್ಕಸಗಂಗನು ಬೆದ್ದೂಜಗೆರೆಯನ್ನು ಆಳುತ್ತಿದ್ದ ವಿಷಯ ಹೇಳುವಲ್ಲಿ ಕ್ರಿ.ಶ. ೯೭೭ರ ಸಮಯದಲ್ಲಿ ಅವನಿಗೆ ಒದಗಿಸಿದ ರಕ್ಷಣಾತ್ಮಕ ಸ್ಥಳವು ಕೊಡಗು ಎಂದಾಗುತ್ತದೆ. ಹೀಗಾಗಿ ಕ್ರಿ.ಶ. ೯೭೭ರಿಂದಲೇ ಕೊಡಗಿನಲ್ಲಿ ಆಳ್ವಿಕೆಗೆ ರಕ್ಕಸಗಂಗ ನಿಂತನೆಂದು ವಿದಿತವಾಗುತ್ತದೆ. ಆದರೆ ಈ 'ಗೋವಿಂದರಸ' ಹೆಸರಿನ ಇಬ್ಬರು ಗಂಗರಾಜವಂಶಿಕರು ಇದ್ದರೆ, ಎಂಬ ಅನುಮಾನಗಳು. ಕ್ರಿ.ಶ. ೯೭೭ರ ಸುಮಾರಿನಲ್ಲಿ ಚಾವುಂಡರಾಯ ಕೊಂದನೆನ್ನಲಾದ ಮಾರಸಿಂಹ IIIನ ಸೋದರ ಗೋವಿಂದರಸ ಮತ್ತು ಶಾಸನಾದಿಯಾಗಿ ರೈಸರು ಹೇಳುವ ಗಂಗವಂಶಿಕ 'ಕ್ರಿ.ಶ. ೯೯೯-೧೦೦೦ ಗೋವಿಂದರಸ'ನ ಕುರಿತಾಗಿ ಹುಟ್ಟುತ್ತವೆ. ಅಲ್ಲದೆ 'ಬೆಂಕೊಣ್ಡು ಗೋವಿಂದರಸನನ್ನು' ಎಂದಿರುವಲ್ಲಿ ಸೆರೆಯಾದ ಎಂಬ ಅರ್ಥವಾದೀತೇ ವಿನಹ, ಕೊಲ್ಲಲ್ಪಟ್ಟ ಎಂಬ ಅರ್ಥ ಬರುವುದಿಲ್ಲ.

೧೦-೧೧ನೆಯ ಶತಮಾನದ ಹಳೆಬೂದನೂರು ಶಾಸನವು[೫೧] [ಸ]ತ್ಯವಾಕ್ಯ ಗೋವಿಂದರ ಮತ್ತು ಮಹಾರಾಜಾಧಿರಾಜ ರಕ್ಕಸಗಂಗ ಪೆರ್ಮಾನಡಿಗಳ್ ಕೂಡಿ ಸೋವರಾಸಿ ಭಟ್ಟಾರಕರಿಗೆ ಬಿತ್ತುವಟ್ಟ ಕೊಟ್ಟ ಸಂಗತಿಯನ್ನು ತಿಳಿಸುತ್ತದೆ. ರಕ್ಕಸಗಂಗನು, ರಾಚಮಲ್ಲ IVನ ನಂತರ ಕ್ರಿ.ಶ. ೯೮೫ರಲ್ಲಿ ಗಂಗ ಸಿಂಹಾಸನವನ್ನೇರಿದ. ಹೀಗಾಗಿ ಈ ದಾನವು ಕ್ರಿ.ಶ. ೯೮೫-೧೦೦೦ರ ನಡುವಣ ಅವಧಿಯದಾಗಿರಬೇಕು. ಈ ಸಂದರ್ಭದಲ್ಲಿ ರಕ್ಕಸಗಂಗ ನೇರ ನಿರ್ವಹಣೆಗೆ ಕೊಡಗು ಇದ್ದಿರುವಂತಿದೆ.

ಕ್ರಿ.ಶ. ೯೯೯-೧೦೦೦ರ ಎಲ್ಲೂರು ಶಾಸನವು 'ನೀತಿಮಾರ್ಗಕೊಂಗುಣಿವರ್ಮ ಧರ್ಮ ಮಹಾರಾಜಾಧಿರಾಜ ಶ್ರೀಮತ್ಪೆರ್ಮಾನಡಿಗಳ್ ಪ್ರಿಥ್ವೀರಾಜ್ಯಂಗೆಯ್ಯುತಿರೆ ಶ್ರೀ ಗೋಬಿನ್ದರದೇವನ ಮನೋವಲ್ಲಭೆ ನೊಳಂಬ ವಂಶೋದ್ಭವ ಪಲ್ಲವ ಕುಲತಿಲಕೆ ... ಶ್ರೀ ಪ್ರಥುವಬ್ಬರಸಿಯರುಂ ... ಎಂದಿದ್ದು ನೀತಿಮಾರ್ಗ ರಾಚಮಲ್ಲ (ರಕ್ಕಸಗಂಗ ರಾಚಮಲ್ಲ!) ಹಾಗೂ ಗೋವಿಂದರಸರ ಪ್ರಸ್ತಾಪ ಮಾಡಿದೆ. ಈ ಎರಡೂ ಸಂದರ್ಭಗಳನ್ನು ಗಮನಿಸಿದರೆ ಚಾವುಂಡರಾಯ ಉಲ್ಲೇಖಿತ ಗೋವಿಂದರಸ ಬೇರೆ, ರಕ್ಕಸಗಂಗನ ಜೊತೆ ಉಲ್ಲೇಖಿತ ಗೋವಿಂದರಸನೆ ಬೇರೆ ಎಂದಾಗುತ್ತದೆ. ರಕ್ಕಸಗಂಗನ ಜೊತೆ ಹೆಚ್ಚು ಆತ್ಮೀಯವಾಗಿ ಶಾಸನಗಳಲ್ಲಿ ಸಂಪರ್ಕಿಸಿರುವುದನ್ನು ನೋಡಿದರೆ ಗಂಗವಂಶಿಕ ಸಾಮಂತನಾಗಿ ಇನ್ನೊಬ್ಬ ಗೋವಿಂದರಸನಿದ್ದು ಕೊಡಗು ಪ್ರದೇಶದ ನಿರ್ವಹಣೆ ಮಾಡುತ್ತಿರಬಹುದೆ ಎನಿಸುತ್ತದೆ. ಆದರೆ ಚಾವುಣ್ಡರಾಯಪುರಾಣದಲ್ಲಿ ಬರುವ: 'ಉಚ್ಚಂಗಿಯ ಕೋಟೆಯೊಳ್ ರಾಜಾಯ್ತನೊಳ್ ಓರ್ವನೆ ರಣಮಂ ಮೆಱೆದುದಱಿಂದೆ ರಣರಂಗ ಸಂಗಂ ಬಾಗೆಯೂರ ಕೋಟೆಯೊಳ್ ತ್ರಿಭುವನ ವೀರನಂ ಕೊಂದು ಗೋವಿಂದರನಂ ಪುಗಿಸಿದುದಱಿಂ ವೈರಿಕಾಲದಂಡಂ ... ತನ್ನ ತಮ್ಮನಂ ನಾಗವರ್ಮನಂ ಕೊಂಡ ಪಗೆಗೆ ಚಲದಂಕ ಗಂಗನುಂ ಗಂಗರ ಭಟನು'ಮೆನಿಸದ ಮುದುರಾಚಯನಂ ಕೊಂದುದಱಿಂ ಸಮರಪರಶುರಾಮಂ ...' ಎಂಬ ಸಾಲುಗಳನ್ನು ಅನುಸರಿಸಿ ಕರ್ನಾಟಕ ಕವಿಚರಿತೆಯಲ್ಲಿ ಚಾವುಂಡರಾಯನು ಗೋವಿಂದ ರಾಜನನ್ನು ಬೆಂಕೊಂಡು ರಾಚಯನನ್ನು ಕೊಂದು ಕೀರ್ತಿಯನ್ನು ಹೊಂದಿದಂತೆ ಹೇಳುತ್ತಾನೆ, ಎಂದಿದೆ[೫೨].

ಇಲ್ಲಿ 'ಬೆಂಕೊಂಡು' ಎಂಬ ಶಬ್ದಕ್ಕೆ 'ಕೊಂದು' ಎಂಬ ಅರ್ಥಕ್ಕಿಂತ ವಶಪಡಿಸಿಕೊಂಡು ಅಥವಾ 'ಸೆರೆ ಹಿಡಿದು' ಎಂಬ ಅರ್ಥ ಹೆಚ್ಚು ಸೂಕ್ತವಾಗುತ್ತದೆ. ಆದಾಗಿ ಕ್ರಿ.ಶ.೯೭೭ರ ಸಮಯದಲ್ಲಿ ಗೋವಿಂದರಸನನ್ನು, ಚಾವುಂಡರಾಯನು ಸೆರೆಗಿಟ್ಟನು ಎಂಬುದು ಸೂಕ್ತವಾಗಬಹುದು. ಕ್ರಿ.ಶ.೯೯೦ರಲ್ಲಿ ಚಾವುಂಡರಾಯನು ತೀರಿದ ಮೇಲೆ ಗೋವಿಂದರಸ ಸೆರೆಯಿಂದ ಬಿಡುಗಡೆಯಾಗಿ ರಕ್ಕಸಗಂಗನೊಡನೆ ಹೊಂದಿಕೊಂಡು ಹೋಗಿರುವಂತಿದೆ. ಹಾಗಾಗಿ ಅವನ ಹೆಸರು ಕ್ರಿ.ಶ. ೯೯೯– ೧೦೦೦ರವರೆಗೆ ಶಾಸನಗಳಲ್ಲಿ ಕಾಣಿಸಿಕೊಂಡಿರಬೇಕು. ಮಾರಸಿಂಹನ ಸೋದರನಾಗಿ ಆ ಹೊತ್ತಿಗೆ ವಯಸ್ಸು ಆಗಿ ತೀರಿರಬಹುದು, ಎನ್ನುವುದೇ ಸಮರ್ಪಕವಾಗಿ ಕಾಣುತ್ತದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. B. Sheik Ali, 1976, *History of the Western Gangas*, University of Mysore, p.14.

೨. Ibid, p.10-11.

೩. ಎ.ಕ.ಸಂ. ೧ (ಹೊಸತು), ೧೯೭೨, ಕೊಡಗು ಜಿಲ್ಲೆ (ಮಡಿಕೇರಿ ೧, ಕ್ರಿ.ಶ. ೪೬೬) ಮೈ.ವಿ.ವಿ.

೪. ಎ.ಕ.ಸಂ. ೧೭ (ಕೋಲಾರ ಜಿಲ್ಲೆ ಅನುಬಂಧ ಸಂಪುಟ), ೧೯೬೩. (ಸಂ) ಎಂ. ಶೇಷಾದ್ರಿ, ಶ್ರೀನಿವಾಸಪುರ ತಾ. ೧೨೦ (ದಲಸನೂರು ಹೋಬಳಿ ಗಮ್ಮರೆಡ್ಡಿಪುರ, ಕ್ರಿ.ಶ. ೫೫೦).

೫. ಎ.ಕ.ಸಂ. ೪ (ಹೊಸತು), ೧೯೭೫, ಮೈಸೂರು ಜಿಲ್ಲೆ (ಮಾಂಬಳ್ಳಿ, ಕ್ರಿ.ಶ. ೫೫೦), ಯಳಂದೂರು ೧೬೭.

೬. ಎ.ಕ. ೧೧ (ಹೊಸತು), ೧೯೯೮, ಚಿಕ್ಕಮಗಳೂರು ಜಿಲ್ಲೆ, ಮೂಡಗೆರೆ ೧೦೧ (ಮಾವಳಿ, ಕ್ರಿ.ಶ. ೭೫೦); ಎ.ಕ. ೫ (ಹೊಸತು), ೧೯೭೬, ಮೈಸೂರು ಜಿಲ್ಲೆ, ಕೃ.ರಾಜನಗರ ೧೦೫ (ಗಳಕೇಕೆರೆ, ಕ್ರಿ.ಶ. ೮೯೦).

೭. ಎ.ಕ. ೫ (ಹೊಸತು), ೧೯೭೬, ಮೈಸೂರು ಜಿಲ್ಲೆ, ತಿ.ನರಸೀಪುರ ೨೫೧ (ಹೆಮ್ಮಿಗೆ, ೮–೯ನೆಯ ಶತಮಾನ).

೮. ಎ.ಕ. ೩ (ಹೊಸತು), ೧೯೭೪, ನಂಜನಗೂಡು ೩೮೫ (ಹುಸುಕೂರು).

೯. ಅದೇ. ಗುಂ.ಪೇ. ೯೨ (ಸಂಪಿಗೆಪುರ, ೯ನೆಯ ಶತಮಾನ).

೧೦. ಅದೇ. ಹೆ.ಕೋ. ೫ (ಕಟ್ಟೆಮನುಗನಹಳ್ಳಿ, ೯ನೆಯ ಶತಮಾನ)

೧೧. ಕನ್ನಡ ಕನ್ನಡ ನಿಘಂಟು, ಸಂಪುಟ ೨ (ಪು.೨೧೫೧–೫೨), ೧೯೭೬.
ಕೊಂಗು : ಅಡಕೆ, ಪೂಗ (ಹೂವರಸಗಿಡ); ಪ್ರಯೋಗಗಳು : ಸಾಸಿರದಯ್ನೂಱು ಕೊಂಗಿನ ಮರದವಟ್ಟಿಗೆ (S.I.I. XX, 31-47; ಕ್ರಿ.ಶ. ೧೦೪೪) ತೆಂಗು ಕೊಂಗು ಜುಂಜುರಸ ಮಧುಫಲ (ಕ.ಇ.-I, ೩೦–೮, ಕ್ರಿ.ಶ. ೧೨೨೨); ಒಂದು ಬಗೆಯ ಸಸ್ಯ, ನವಣೆ (ಎಸ್.ಜಿ. ನರಸಿಂಹಾಚಾರ್, ಮೈಸೂರು ಔಷಧೀಯ ಗಿಡಗಳು, ೧೯೫೬); ಕೊಂಗು+ಉಣಿ=ಕೊಂಗುಣಿ – ಕೊಂಗು ತಿನ್ನುವವ, ಎಂದು ಅರ್ಥೈಸಬಹುದು. ಅರ್ಥಾತ್ ಈ ಸಸ್ಯ ಬೆಳೆಯುವ, ಬಳಸುವ ಪ್ರದೇಶದವನು ಎಂದೂ ವ್ಯಾಖ್ಯಾನಿಸಬಹುದು; 'ಣ' ಎಂಬುದು (ಗಣಿತ) 'ಐದು' ಎಂಬ ಸಂಖ್ಯೆಯ ಸಂಕೇತ. ಪದದ ಕೊನೆಗೆ ಸೇರುವ 'ಣಾಂತ' ಶಬ್ದ (೧೯೭೭ರ ಕ.ಕ. ನಿಘಂಟು, ಪು.೨೦೩೫' ಕೊಂಗುಣಿ=ಕೊಂಗಣಿ) 'ಕೊಜ್ಜಗಣ' ದಲ್ಲಿರುವಲ್ಲಿ ಕೊಣಗ ಅಥವಾ ಕೊಜ್ಜು ಎಂದರೆ ಸಸ್ಯವಾಚಿ ಪ್ರಾಧಾನ್ಯದ ಐದು ದೇಶ ಅಥವಾ ನಾಡುಗಳ ಆಳ್ವಿಕೆ ಹೊಂದಿದ್ದವರು 'ಕೊಜ್ಜಗಣರು–ಕೊಜ್ಜುಗಣಿಯರು' ಎಂಬ ಅರ್ಥ ಹೊರಡಬಹುದು. ಕೊಂಗಣರನ್ನು ಗೆದ್ದು 'ಕೊಜ್ಜುಗಣಿವರ್ಮ' ಎಂಬ ಹೆಸರನ್ನು ಪಡೆದಿರಬಹುದು.

೧೧ಅ. ಎ.ಕ. ೩ (ಹೊಸತು), ಅದೇ, ನಂ.ಗೂ. ೧೨೯ (ದೇಬೂರು).

೧೧ಆ. ಅದೇ., ನಂ.ಗೂ. ೧೪೨ (ಕಣೆನೂರು, ೮ನೆಯ ಶತಮಾನ); ನಂ.ಗೂ. ೧೪೭ (ಕಣೆನೂರು; ೮ನೆಯ ಶತಮಾನ).

೧೧ಇ. ಅದೇ., ನಂ.ಗೂ. ೧೮೭ (ಹೊಳಲುವಾಡಿ, ೮ನೆಯ ಶತಮಾನ).

೧೨. ಎ.ಕ.ಸಂ. ೪ (ಹೊಸತು), ೧೯೭೫, ಮೈಸೂರು ಜಿಲ್ಲೆ, ಚಾಮರಾಜನಗರ ೧೪೬ (ಕೆಂಪನಪುರ).

೧೩. ಅದೇ., ಚಾ.ನ. ೧೩೨ (ಮಂಗಲ – ತಮಿಳು ಶಾಸನ, ಕ್ರಿ.ಶ. ೧೦೪೯–೫೦).

೧೪. ಎ.ಕ. ೫ (ಹೊಸತು), ೧೯೭೬, ಮೈಸೂರು ಜಿಲ್ಲೆ, ತಿ.ನರಸೀಪುರ (ಬನ್ನೂರು, ಕ್ರಿ.ಶ. ೧೧೮೮).

೧೫. ಎ.ಕ. ೪ (ಹೊಸತು), ಅದೇ., ಚಾ.ನ. ೧೩೨ (ತಳನೂರು; ಕ್ರಿ.ಶ. ೧೦–೧೧ನೆಯ ಶತಮಾನ; ಚಾ.ನಗರ ೧೨೨; ತೆಳನೂರು, ಕ್ರಿ.ಶ. ೧೧೬೯).

೧೬. ಎ.ಕ. ೮ (ಹೊಸತು), ೧೯೮೪, ಹಾಸನ ಜಿಲ್ಲೆ, ಹಾಸನ ೭೬ (ಕಲ್ಲವತ್ತಿ, ಕ್ರಿ.ಶ. ೧೧೨೩).

೧೭. ಎ.ಕ.ಸಂ. ೩ (ಹೊಸತು), ಮೈಸೂರು ಜಿಲ್ಲೆ, ನಂ.ಗೂ. ೪೦೩ (ಗಟ್ಟವಾಡಿ, ಕ್ರಿ.ಶ. ೯೦೪).

೧೮. ಎ.ಕ.ಸಂ. ೪ (ಹೊಸತು), ೧೯೭೬, ಮೈಸೂರು ಜಿಲ್ಲೆ, ಚಾ.ನ. ೩೪೭ (ಕುಲಗಾಣ; ೭-೮ನೆಯ ಶತಮಾನ).

೧೯. ಎ.ಕ. ೫ (ಹೊಸತು), ೧೯೭೬, ಮೈಸೂರು ಜಿಲ್ಲೆ, ಕೃ.ನ. ೪೧ (ಚಿಕ್ಕಹನಸೋಗೆ, ೧೦ನೆಯ ಶತಮಾನ).

೨೦. ಅದೇ., ಕೃ.ನ. ೭೭ (ಹೆಬಸೂರು, ಕ್ರಿ.ಶ. ೧೭೭೭).

೨೧. ಅದೇ., ಕೃ.ನ. ೧೧೬ (ಮೂಡ್ಲುಕೊಪ್ಪಲು, ೧೧ನೆಯ ಶತಮಾನ); ಶಾಸನದಲ್ಲಿ ಬರುವ ಕುತ್ತುವಿತ್ತು – ಕುಟುಂಬವೃತ್ತಿ, ಕುರಿತಂತೆ ಗಮನಿಸಿದರೆ ಕ್ರಿ.ಶ.ಸು. ೪೫೦ರ (ಕ್ರಿ.ಶ. ೪೩೪!) ಹಲ್ಮಿಡಿ ಶಾಸನದ ;ಕುಜುಮ್ಬಿಡಿ' ಶಬ್ದಕ್ಕೆ ಡಾ. ಜಿ.ಎಸ್. ಗಾಯಿ ಅವರು ಕುತ್ತುಂಬಿತ್ತಿ – ಕುಟುಂಬವೃತ್ತಿ ಪರಿಕಲ್ಪನೆಗೆ ಸಮೀಕರಣ ಮಾಡಿರುವದು ಸಂವಾದಿ ಸಾಕ್ಷ್ಯವೆನಿಸುತ್ತದೆ. ಅಂದರೆ ೫ನೆಯ ಶತಮಾನದ ಗಂಗರಲ್ಲಿಯೂ ಅದು ಪ್ರಚಲಿತವಿದ್ದು, ಮೂಡ್ಲುಕೊಪ್ಪಲು ಶಾಸನದವರೆಗೂ ಹರಿದು ಬಂದಿರುವುದು ಗಮನಾರ್ಹ.

೨೨. ಎ.ಕ.ಸಂ. ೧ (ಹೊಸತು), ೧೯೭೨, ಕೊಡಗು ಜಿಲ್ಲೆ, ಮಡಿಕೇರಿ ೧, ಕ್ರಿ.ಶ. ೪೬೬, ಮೈಸೂರು ವಿ.ವಿ.

೨೩. ಅದೇ., ಕೊ. ಜಿಲ್ಲೆ ೨೮ (ಕಟ್ಟೆಪುರ, ಕ್ರಿ.ಶ. ೧೬೯೩, ತುಂಗನಾಡ ನೀರಗುಂದ).

೨೪. ಡಿ.ಎನ್. ಕೃಷ್ಣಯ್ಯ, ೧೯೭೮, ಕೊಡಗಿನ ಇತಿಹಾಸ, ಮೈ.ವಿ.ವಿ., ಪು.೯೨.

೨೫. B. Sheik Ali, op.cit., pp.19, 38, 39 : In a spurious record a copyisl of a much later date would try to imitate the writing of a much earlier date and would be cought in the process. The need for the spurious recored arose due to the fact that most of these records were grants and the exigency of these grants being lost, the grantees were eager to have a document to claim the grant and hence they would forge one. This spurious or forged one would contain almost the same information, atleast on fundamental issues. They could invent a new name for the donor. Thus, from the historical point of view, even the spurious record have a valuable part to play in so far as the contents of these records are concerned. Viewed from this stand point, the Mercara plates cannot be ignored as useless ....... Hence, the inconsistency in the details of dating may be taken as an indication of a grant being false only with reference to the object granted but not with regard to the existence of the grantor and the family.

೨೬ ಎ.ಕ.ಸಂ. ೧ (ಹೊಸಗು), ಅದೇ, ಕೊಡಗು ೯೬, ೯೭ (ಕ್ರಿ.ಶ. ೮೮೮! ಬಿಳಿಯೂರು, ಕೋತೂರು); ೯೮ (ಪೆಗ್ಗೂರು).

೨೭. B. Sheik Ali, op.cit., pp.110-112.

೨೮. Ibid.

೨೯. Ibid., p.87.

೩೦. Ibid., p.88; EC.IV, Ng 85, p.135; Mysore and Coorg from Inscriptions - B.L. Rice, p.39. ಆರ್.ಎಸ್. ಪಂಚಮುಖಿ, ಎನ್. ಲಕ್ಷ್ಮೀನಾರಾಯಣರಾಯರು, **ಕರ್ನಾಟಕದ ಅರಸು ಮನೆತನಗಳು**, ಪು.೧೬೧, ೧೯೪೬.

೩೧. Ibid. p.87.

೩೨. ಎಂ.ಜಿ. ನಾಗರಾಜ್, ಎಚ್.ಎಂ. ಸಿದ್ದನಗೌಡ, 'ಬೆಂಗಳೂರು ಮತ್ತು ಕೊಡಗು ಜಿಲ್ಲೆಗಳ ಕೆಲವು ಅಪ್ರಕಟಿತ ಶಾಸನಗಳು', **ಇತಿಹಾಸ ದರ್ಶನ** (ಸಂ) ಎಂ.ಜಿ. ನಾಗರಾಜ್, ಪಿ.ವಿ. ಕೃಷ್ಣಮೂರ್ತಿ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ಪು.೩೮–೩೯.

೩೩. ಎಂ.ಜಿ. ನಾಗರಾಜ್, '**ಕೊಡಗಿನ ಕೊಲೆಕಲ್ಲುಗಳು**' ಹರತಿಸಿರಿ (ಸಂ) ಲಕ್ಷ್ಮಣ್ ತೆಲಗಾವಿ, ೧೯೮೭, ಹರ್ತಿಕೋಟೆ, ಚಿತ್ರದುರ್ಗ ಜಿಲ್ಲೆ, ಪು.೭೨೭.

೩೪. B.Sheik Ali, op.cit., pp.114-115.

೩೫. ಡಾ. ಎಂ.ಎಂ. ಕಲಬುರ್ಗಿ, ೧೯೮೦, '**ಸಮಾಧಿ ಬಲಿದಾನ – ವೀರ ಮರಣ ಸ್ಮಾರಕಗಳು**', ಬೆಂಗಳೂರು, ಪು.೬೩.

೩೬ ಎ.ಕ.ಸಂ. ೧ (ಹೊಸತು), ಅದೇ ಕೊಡಗು ೬೪ (ಹರದೂರು, ಸೋ.ಪೇ.ತಾ; ಗಾಳಿಕಲ್ಲು ಎಂಬ ಶಿಲಾಶಾಸನ, ೧೦ನೆಯ ಶತಮಾನ).

*೩೮. ಎ.ಕ.ಸಂ. ೩ (ಹೊಸತು), ೧೯೭೧, ಮೈಸೂರು ಜಿಲ್ಲೆ, ನಂ.ಗೂ. ೨೪೩ (ನಗರ್ಲೆ, ಕ್ರಿ.ಶ. ೯೭೦–೭೧).

೩೯. ಎ.ಕ.ಸಂ. ೧ (ಹೊಸತು), ಅದೇ, ಕೊಡಗು ೫೬ (ಗಣಗೂರು, ಸೋ.ಪೇ.ತಾ., ೧೦ನೆಯ ಶತಮಾನ).

೪೦. ಅದೇ., ಕೊಡಗು ೮೨, ಮುಳ್ಳೂರು, ೧೧ನೆಯ ಶತಮಾನ.

೪೧. ಎ.ಕ.ಸಂ. ೧ (ಹೊಸತು), ಅದೇ ಕೊಡಗು ೩೭ (ಅಂದಗೋವೆ ಕಲ್ಲೂರು, ಸೋ.ಪೇ.ತಾ. ಕ್ರಿ.ಶ. ೯೪೪).

೪೨. B.Sheik Ali, op.cit., p.125.

೪೩. ಎ.ಕ.ಸಂ. ೧ (ಹೊಸತು), ಅದೇ ಕೊಡಗು ೯೦ (ಹಾರೋಹಳ್ಳಿ, ಸೋ.ಪೇ.ತಾ. ಕ್ರಿ.ಶ. ೧೦ನೆಯ ಶತಮಾನ)

೪೪. B.Sheik Ali, op.cit., pp.125, 153.

೪೫. ಎಂ.ಜಿ. ನಾಗರಾಜ್, 'ಕೊಡಗಿನ ಎರಡು ಅಪೂರ್ವ ಜೈನ ಮತ್ತು ಬೌದ್ಧ (!) ಶಿಲಾ ಶಿಲ್ಪ ಫಲಕಗಳು', **ಇತಿಹಾಸ ದರ್ಶನ**, (ಸಂ) ಡಾ. ಸೂರ್ಯನಾಥ ಕಾಮತ್, ಪಿ.ವಿ. ಕೃಷ್ಣಮೂರ್ತಿ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ಪು.೭೩–೭೪.

೪೬. ಎ.ಕ.ಸಂ. ೧ (ಹೊಸತು), ಅದೇ ಕೊಡಗು ೬೪ (೧೧ನೆಯ ಶತಮಾನ, ಕ್ರಿ.ಶ. ೧೦೦೪!).

೪೭. K.A. Neelakanta Sastri, 1955, *The Cholas*, University of Madras, p.169.

೪೮. (i) Ibid., p.172, (ii) G. Kuppuram, 1986, *Imperial Cholas in Karnataka*, New Delhi, p.4.

೪೯. ಎ.ಕ. ೫ (ಹೊಸತು), ೧೯೭೬, ಮೈಸೂರು ಜಿಲ್ಲೆ, ತಿ.ನ. ೨೨೦ (ಕಲಿಯೂರು, ೨೦೨೪).

೫೦. B. Sheik Ali, op.cit., p.149-152.

೫೧. ಎ.ಕ.ಸಂ. ೭ (ಹೊಸತು), ೧೯೭೦, ಮಂಡ್ಯ ಜಿಲ್ಲೆ, ಮಂಡ್ಯ ೫೪ (ಹಳೆಬೂದನೂರು, ೧೦–೧೧ನೆಯ ಶತಮಾನ).

೫೨. ಎ.ಕ.ಸಂ. ೫ (ಹೊಸತು), ೧೯೭೫, ಮೈಸೂರು ಜಿಲ್ಲೆ, ಚಾ.ನ. ೮೨ (ಎಲ್ಲೂರು, ಕ್ರಿ.ಶ. ೯೯೯–೧೦೦೦).

೫೩. ಆರ್. ನರಸಿಂಹಾಚಾರ್ಯ ವಿರಚಿತ **ಕರ್ಣಾಟಕ ಕವಿಚರಿತ** (ಪ್ರಥಮ ಸಂಪುಟ, ೨೦೦೫ರ ಆವೃತ್ತಿ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೫೧–೫೨.

---

* ೩೭ನೆಯ ಅಡಿಟಿಪ್ಪಣಿ ಇಲ್ಲವಾಗಿದೆ (ಸಂ).



# ಆವನಿಯ ತಮಿಳು ಶಾಸನಗಳು

– ಕೆ.ಆರ್. ನರಸಿಂಹನ್*

ಆವನಿಯು ಕೋಲಾರ ಜಿಲ್ಲೆಯ 'ರಾಷ್ಟ್ರೀಯ ಸ್ಮಾರಕ'ಗಳ ಸಾಲಿಗೆ ಸೇರಿದ ಐತಿಹಾಸಿಕ ಸ್ಥಳವಾಗಿದ್ದು, ತಾಲೂಕು ಕೇಂದ್ರವಾದ ಮುಳಬಾಗಿಲಿಗೆ ಹನ್ನೊಂದು ಕಿಲೋಮೀಟರ್. ದೂರದಲ್ಲಿದೆ.

ಮುಳವಾಯಿ (ಮುಳಬಾಗಿಲು) ರಾಜ್ಯವು ಅಸ್ತಿತ್ವಕ್ಕೆ ಬರುವುದಕ್ಕೆ ಮುಂಚಿನಿಂದಲೂ ಆವನಿನಾಡು ಅಸ್ತಿತ್ವದಲ್ಲಿತ್ತು. ಎಂದರೆ ಸುಮಾರು ಎಂಟನೆಯ ಶತಮಾನದ ಹೊತ್ತಿಗೆ ಆವನಿನಾಡು ಅಥವಾ ಆವನಿಯು ಶಾಸನಗಳಲ್ಲಿ ಪ್ರಸ್ತಾಪಗೊಂಡಿರುವುದು ಕಂಡುಬರುತ್ತದೆ. ಕುವಲಾಲ ನಾಡಿನ ಮುಖ್ಯ ಭಾಗವಾಗಿ ಆವನಿನಾಡು ಮತ್ತು ಆವನಿಗಳು ವಹಿಸಿರುವ ಪಾತ್ರವನ್ನು ಇತಿಹಾಸದ ಪುಟಗಳಲ್ಲಿ ಗಮನಿಸಬೇಕಾಗಿದೆ. ಗಂಗರ ದೊರೆ ಶ್ರೀಪುರುಷನ ಕಾಲದ ಶಾಸನಗಳಲ್ಲಿ, ಬಾಣರ ಶಾಸನಗಳಲ್ಲಿ "ಅವನ್ಯ-೩೦" ಎಂದಿರುವುದು ಇದನ್ನೇ ನಿರ್ದೇಶಿಸುತ್ತದೆ.

ಧರ್ಮ-ಸಂಸ್ಕೃತಿಗಳ ಸಾಮ್ರಾಜ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿ, ರಾಜಕೀಯ ವಿಪ್ಲವಕ್ಕೆ ಬಳುವಳಿಯನ್ನು ಕೊಟ್ಟಿರುವಂತೆ ಕಾಣುತ್ತಿರುವ ಆವನಿಯು ಸಾಮಾಜಿಕ ಜನಜೀವನದ ಅಧ್ಯಯನಕ್ಕೆ ವಸ್ತುವಾಗಿದೆ. ಆವನಿಯಲ್ಲಿರುವ ದೇವಾಲಯ ಸಂಕೀರ್ಣವು ಕಾಲದಿಂದ ಕಾಲಕ್ಕೆ ಮಾರ್ಪಾಡು ಹೊಂದಿದೆ. ಇಲ್ಲಿನ ಬಹುಪಾಲು ದೇವಾಲಯಗಳು ಬೃಹತ್ತಾದ ಶಿವಲಿಂಗಗಳಿಂದ ಕಂಗೊಳಿಸುತ್ತಿವೆ. ರಾಮಾಯಣದ ಶ್ರೀರಾಮಚಂದ್ರನ, ಆತನ ಪರಿವಾರದವರ ಹೆಸರಿನಲ್ಲಿ ಇಲ್ಲಿನ ಶಿವಲಿಂಗಗಳು ಮತ್ತು ಇಲ್ಲಿರುವ ದೇವಾಲಯಗಳು ತಲೆಯೆತ್ತಿವೆ. 'ಶ್ರೀರಾಮೇಶ್ವರ ದೇವಾಲಯ ಸಮೂಹ'ವೆಂದು ಒಟ್ಟಾರೆ ಇಲ್ಲಿನ ದೇವಾಲಯ ಸಂಕೀರ್ಣವನ್ನು ಹೆಸರಿಸುತ್ತಾರಾದರೂ ಇಲ್ಲಿರುವ ಒಂದೊಂದು ಪೂಜಾ ಮಂದಿರಕ್ಕೂ ಪ್ರತ್ಯೇಕವಾದ ಹೆಸರುಗಳಿವೆ. ದಕ್ಷಿಣ ಭಾರತದ ಇತಿಹಾಸದಲ್ಲಿ ತಮ್ಮದೇ ಛಾಪು ಮೂಡಿಸಿರುವ ಪ್ರಸಿದ್ಧ ರಾಜವಂಶಗಳು ಆವನಿಯ ಸ್ಥಳೀಯ ಇತಿಹಾಸದ ಅಧ್ಯಾಯದಲ್ಲಿ ಪ್ರಮುಖವಾದ ಪಾತ್ರ ವಹಿಸಿರುವುದನ್ನು ಇಲ್ಲಿನ ಶಾಸನಗಳು ಸಾರುತ್ತಿವೆ.

ಆವನಿಯ ಬಹುಪಾಲು ಶಾಸನಗಳು ಇಲ್ಲಿನ ದೇವಾಲಯಗಳ ತಳಹದಿ ಕಲ್ಲುಗಳಲ್ಲಿ ಹಾಗೂ ಗೋಡೆಯ ಭಾಗಗಳಲ್ಲಿ ಆಲಂಕರಿಸಿವೆ. ಹಲವಾರು ಶಾಸನಗಳನ್ನು ಇಲ್ಲಿರುವ ಗಿಂಡಿತೀರ್ಥ ಮತ್ತು ಅದರ ಸನಿಹದ ಬೃಹತ್ ಬಂಡೆಗಳ ಮೇಲೆ ನೋಡಬಹುದು. ಹಾಗೆಯೇ ಬೆಟ್ಟದ ಮೇಲೆ ವಿವಿಧ ಸ್ಥಳಗಳಲ್ಲಿ ಸಹ ಶಾಸನಗಳಿವೆ. ಆವನಿಯ ಗದ್ದೆ ಬಯಲುಗಳಲ್ಲೂ ವೀರಗಲ್ಲು ಶಾಸನಗಳನ್ನು ಕಾಣಬಹುದು. 'ಕನ್ನಡ-ತಮಿಳು-ತೆಲುಗು ಭಾಷೆಗಳ ತ್ರಿವೇಣಿ ಸಂಗಮ'ವಾಗಿ ಆವನಿಯ ಶಾಸನ ಸಮುದಾಯವು ಅಭ್ಯಾಸ ಮತ್ತು ಅಧ್ಯಯನ ಯೋಗ್ಯವಾಗಿವೆ.

ಇಲ್ಲಿನ ದೇವಾಲಯ ಸಂಕೀರ್ಣ ಮತ್ತು ಬೆಟ್ಟದ ಮೇಲಿರುವ ಏಕಾಂತರಾಮಸ್ವಾಮಿ ಆಲಯಗಳಲ್ಲಿ ತಮಿಳು ಶಾಸನಗಳನ್ನು ನೋಡಬಹುದು. ಇಲ್ಲಿರುವ ಶಾಸನಗಳ ದಟ್ಟತೆ ಕೋಲಾರದ ಕೋಲಾರಮ್ಮನ ದೇವಾಲಯವನ್ನು ನೆನಪಿಗೆ ತರುತ್ತದೆ. ತಮಿಳು ಭಾಷೆ ಮತ್ತು ಗ್ರಂಥಾಕ್ಷರಗಳ ಸಾಂದ್ರತೆ ಇಡೀ ಆಲಯದ ವಾತಾವರಣವನ್ನೆಲ್ಲ ತುಂಬಿ ನಿಂತಂತೆ ಕಂಡುಬರುತ್ತದೆ. ಶಾಸನಗಳಿಗಾಗಿಯೇ ಈ ದೇವಾಲಯ ನಿರ್ಮಾಣವಾಗಿದೆಯೇನೋ ಎಂಬ ಭ್ರಾಂತಿಯುಂಟಾಗುತ್ತದೆ. ಚೋಳರಾಜರು ಹಾಕಿಕೊಂಡ ಪದ್ಧತಿಯಂತೆ ದೇವಾಲಯಗಳ ತಳಪಾಯ, ಇಲ್ಲವೇ ಗೋಡೆಗಳ ಮೇಲೆ ಶಾಸನಗಳನ್ನು ಬರೆಸುತ್ತಿದ್ದ ಸಂಪ್ರದಾಯವನ್ನು ಆವನಿಯಲ್ಲಿ ಕೂಡಾ ಗಮನಿಸಬಹುದಾಗಿದೆ. ಇತರ ರಾಜವಂಶಗಳವರು, ತಾವು ದಾನ ನೀಡಿದ ಸ್ಥಳಗಳಲ್ಲಿ ಪ್ರತ್ಯೇಕವಾದ ಕಲ್ಲುಗಳ ಮೇಲೆ ಶಾಸನಗಳನ್ನು ಕೊರೆಸಿ ನೆಡಿಸುವ ಸಂಪ್ರದಾಯದವರಾಗಿದ್ದಾರೆ. ಚೋಳರಾಜರು ಈ ಪದ್ಧತಿಯನ್ನು ಬಿಟ್ಟು ಬಹುಪಾಲು ಶಾಸನಗಳನ್ನು ದೇವಾಲಯಗಳ ತಳಪಾಯ, ಭಿತ್ತಿಗಳ ಮೇಲೆಯೇ ಹಾಕಿಸಿರುತ್ತಾರೆ. ಆವನಿಯ ಆಲಯ ಸಮುದಾಯದಲ್ಲಿ ಹೆಸರುವಾಸಿಯಾಗಿರುವ ರಾಮೇಶ್ವರ, ಲಕ್ಷ್ಮಣೇಶ್ವರ, ಭರತೇಶ್ವರ, ಶತ್ರುಘ್ನ ದೇವಾಲಯಗಳಲ್ಲಿ ಹೆಚ್ಚಿನ ಸಂಖ್ಯೆಯ ಶಾಸನಗಳಿವೆ. ಅಲ್ಲದೆ ಗೌರಿ ದೇವಾಲಯ, ಅಂಗದ ದೇವಾಲಯಗಳೂ ತಮಿಳು ಶಾಸನಗಳನ್ನು ಹೊಂದಿವೆ.

---

* ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಮಿನಿ ವಿಧಾನಸೌಧ ಆವರಣ, ಗುಲಬರ್ಗಾ.

ಆವನಿಯಲ್ಲಿರುವ ಒಟ್ಟು ಸುಮಾರು ಅರವತ್ತು ಶಾಸನಗಳಲ್ಲಿ ಇಪ್ಪತ್ತು ಕನ್ನಡ-ತೆಲುಗು ಭಾಷೆಯವಾಗಿವೆ. ಉಳಿದವು ತಮಿಳು ಶಾಸನಗಳು. ಚೋಳವಂಶದ ರಾಜರು ತಮಿಳರಾದ ಕಾರಣ ಅವರ ಕಾಲದ ಶಾಸನಗಳು ತಮಿಳು ಭಾಷೆಯಲ್ಲಿರುವುದು ಸಹಜವೇ ಆಗಿದೆ. ಆದರೆ ಕನ್ನಡ ರಾಜರಾದ ಹೊಯ್ಸಳರೂ ಸಹ ಇಲ್ಲಿ ತಮಿಳು ಶಾಸನಗಳನ್ನು ಹಾಕಿಸಿದ್ದಾರೆ. ಹದಿನಾಲ್ಕನೆಯ ಶತಮಾನದ ನಂತರವಷ್ಟೇ ಇಲ್ಲಿ ಮತ್ತೊಮ್ಮೆ ಕನ್ನಡದ ಪ್ರಾಧಾನ್ಯ ಕಾಣುತ್ತದೆ.

ಆವನಿಯ ಮೂರು ಶತಮಾನಗಳ ಸುದೀರ್ಘ ಇತಿಹಾಸವು ತಮಿಳು ಭಾಷೆ, ಧರ್ಮಗಳಿಂದ ಅವಲಂಬಿತವಾಗಿದೆ. ಹನ್ನೊಂದನೆಯ ಶತಮಾನದ ಕಡೆಯ ಭಾಗದಿಂದ ಹದಿನಾಲ್ಕನೆಯ ಶತಮಾನದ ಅಂತ್ಯದವರೆಗೆ ಆವನಿಯನ್ನು ಧಾರ್ಮಿಕ ಕೇಂದ್ರವಾಗಿ ಪರಿಗಣಿಸಿ ಎಲ್ಲ ವಂಶದ ರಾಜರು, ಅವರ ಮಾಂಡಲಿಕರು, ರಾಜಪ್ರಮುಖರೆಲ್ಲರೂ ಇಲ್ಲಿನ ಅಭಿವೃದ್ಧಿಯ ಕಡೆ ಗಮನಕೊಟ್ಟಿದ್ದಾರೆ. ಇಲ್ಲಿರುವ ತಮಿಳು ಶಾಸನಗಳನ್ನು ರಾಜಕೀಯ ಸಂಬಂಧದ ಕಾರಣದಿಂದ ಮಾತ್ರವಲ್ಲದೆ ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ ವಿವೇಚಿಸಬೇಕಾದ ಆವಶ್ಯಕತೆಯಿದೆ.

ಆವನಿಯಲ್ಲಿರುವ ಮೊದಲ ತಮಿಳು ಶಾಸನಗಳು-ಇಲ್ಲಿಯವರೆಗೆ ಉಪಲಬ್ಧವಾದಂತೆ, ವೆಂಗಿ ಚಾಲುಕ್ಯ ಮೂಲದವನಾಗಿ ತನ್ನ ತಾಯಿಯ ಕಡೆಯಿಂದ ಚೋಳ ಸಿಂಹಾಸನವನ್ನು ಪಡೆದ-ರಾಜೇಂದ್ರ ಚೋಳನ ಕಾಲಕ್ಕೆ ಸೇರುತ್ತವೆ. ಇವನು ಮುಂದೆ ಕುಲೋತ್ತುಂಗ ಚೋಳನೆಂದು ಪ್ರಸಿದ್ಧನಾಗಿದ್ದಾನೆ. ಈತನ ತಾಯಿ ಅಮ್ಮಂಗ ದೇವಿಯು ಮೊದಲನೆಯ ರಾಜೇಂದ್ರ ಚೋಳನ ಮಗಳಾಗಿದ್ದಾಳೆ. ತನ್ನ ತಾಯಿಯ ಕಡೆಯಿಂದ ತಾತನೂ, ಹೆಂಡತಿಯ ಕಡೆಯಿಂದ ಮಾವನ ತಂದೆ(ತಾತ)ಯೂ ಆದ ಒಂದನೇ ರಾಜೇಂದ್ರನ ವಿಶೇಷ ಆರೈಕೆಗೆ ಪಾತ್ರನಾದ ಕುಲೋತ್ತುಂಗ ಚೋಳನು ಕೋಲಾರ ಜಿಲ್ಲೆಯ ಇತಿಹಾಸದಲ್ಲಿ ಗಮನಾರ್ಹ ಪಾತ್ರ ವಹಿಸಿರುವುದನ್ನು ಇಲ್ಲಿನ ಶಾಸನಗಳು ಸಾರುತ್ತಿವೆ. ಕಲ್ಯಾಣಿ ಚಾಲುಕ್ಯರ ಸಾಮ್ರಾಜ್ಯ ವಿಸ್ತರಣೆಯ ಕಾರ್ಯ, ದಾಯಾದಿಗಳ ಪಿತೂರಿಯಿಂದ ದೂರವುಳಿದ ವೆಂಗಿಯ ಚಾಲುಕ್ಯ ದೊರೆ ರಾಜರಾಜ ನರೇಂದ್ರನ ಮಗನಾದ ರಾಜೇಂದ್ರನು ಚೋಳ ಸಿಂಹಾಸನವನ್ನು ಪಡೆಯಲು ಎಲ್ಲ ರೀತಿಯ ಶಕ್ತಿ ಸಾಮರ್ಥ್ಯಗಳನ್ನು ಹೊಂದಿದವನಾಗಿ ಸಾಮ್ರಾಜ್ಯಾಧಿಪತಿಯಾಗಲು ಸಾಧ್ಯವಾಯಿತು.

ಕಲ್ಯಾಣದ ಚಾಲುಕ್ಯ ಅರಸ ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯ ಕಾಲಕ್ಕೆ ಹೆಚ್ಚುಕಡಿಮೆ ಹೊಂದಿಕೊಂಡಂತೆ ಚೋಳ ಸಾಮ್ರಾಜ್ಯಾಧಿಪತಿಯಾಗಿ ಪ್ರಖ್ಯಾತನಾದ ಕುಲೋತ್ತುಂಗ ಚೋಳನ ಸಮರ ವೃತ್ತಾಂತಗಳನ್ನು ವಿವರಿಸುವ ಆವನಿಯ ತಮಿಳು ಶಾಸನಗಳು ಅವನ ಧೀಮಂತ ಸಾಹಸಗಳಿಗೆ ಕನ್ನಡಿ ಹಿಡಿದಂತಿವೆ. ರಾಜನ ಮಂತ್ರಿಮಾಂಡಲಿಕರು, ಪ್ರಭಾವಿ ವ್ಯಕ್ತಿಗಳು, ರಾಜನ ನಿಕಟವರ್ತಿಗಳಾದವರು ಅವನ ಆದೇಶಗಳನ್ನು ಹೊತ್ತು ಇಲ್ಲಿನ ಶಾಸನಗಳನ್ನು ಹಾಕಿಸಿದ್ದಾರೆ, ರಾಜಾಜ್ಞೆಗಳನ್ನು ಸಾರುವ ಬರಹಗಳನ್ನು ಇಲ್ಲಿ ಬಿಡಿಸಿದ್ದಾರೆ. ಕುಲೋತ್ತುಂಗ ಚೋಳನು ಐವತ್ತು ವರ್ಷಗಳ ಕಾಲ (ಕ್ರಿ.ಶ. ೧೦೭೦ರಿಂದ ಕ್ರಿ.ಶ. ೧೧೨೦ರವರೆಗೆ) ಆಳ್ವಿಕೆಯನ್ನು ನಡೆಸಿದ ವಿಚಾರವನ್ನು ಈ ಶಾಸನಗಳು ಖಚಿತಪಡಿಸುತ್ತಿವೆ. ಇವನ ಕಾಲದ ಶಾಸನಗಳು ಆತನ ಆಳ್ವಿಕೆಯ ವರ್ಷವನ್ನು ಹೇಳುತ್ತವೆ. ಇದರಲ್ಲಿ ಶಕವರ್ಷದ ಉಲ್ಲೇಖವಿರುವುದು ಕೇವಲ ಮೂರ್‍ನಾಲ್ಕು ಶಾಸನಗಳಲ್ಲಿಯಷ್ಟೆ. ಆವನಿಯ ಶಾಸನಗಳು ಇವನ ಆಳ್ವಿಕೆಯ ಎರಡನೇ ವರ್ಷದಿಂದ ಆರಂಭವಾಗಿ ಮೂವತ್ತೊಂದನೇ ವರ್ಷದವರೆಗೆ ಹರಡಿ ನಿಂತಿವೆ.

ಇಲ್ಲಿರುವ ತಮಿಳು ಶಾಸನಗಳಲ್ಲಿ ಕುಲೋತ್ತುಂಗನ ಆಳ್ವಿಕೆಯ ಕಾಲಕ್ಕೆ ಸೇರಿದ ಹತ್ತು ಶಾಸನಗಳಿದ್ದು, ಇವುಗಳಲ್ಲಿ ಆರು ಶಾಸನಗಳು ಮಾತ್ರ ಆತನ ಆಳ್ವಿಕೆಯ ವರ್ಷವನ್ನು ದಾಖಲಿಸಿವೆ. ಉಳಿದ ನಾಲ್ಕು ಶಾಸನಗಳಲ್ಲಿ ಉಕ್ತವಾಗಿರುವ ವಿವರಗಳ ಆಧಾರದಿಂದ ಇವನ್ನು ಕುಲೋತ್ತುಂಗನ ಕಾಲಕ್ಕೆ ಸೇರಿಸಬಹುದಾಗಿದೆ. ಇಲ್ಲಿರುವ ಶಾಸನಗಳ ಅಖಂಡತೆ ಇಲ್ಲವೇ ನಿರಂತರತೆಯನ್ನು ಮನಗಾಣುವುದು ಕಷ್ಟದ ಕೆಲಸ. ಸಂಬಂಧಿಸಿದ ಪದ ಜೋಡಣೆಯಿಂದ ಇದರ ನಿರಂತರತೆಯನ್ನು ಅರಿಯಬೇಕಾಗುತ್ತದೆ. ಇದೂ ಅಲ್ಲದೆ ಶಾಸನಗಳಲ್ಲಿ ಉದ್ಧರಿಸಲಾದ ರಾಜರ ಹೆಸರುಗಳನ್ನು ಗುರುತು ಹಚ್ಚುವಲ್ಲಿ ಉಪಮಾನದಂತೆ ಕಂಡುಬರುವ, ಬಿರುದುಗಳಂತೆ ಭಾಸವಾಗುವ ಹೆಸರುಗಳೂ ಸಹ ತೊಡಕಾಗಿ ಕಂಡುಬರುತ್ತವೆ. ಹೆಸರುಗಳ ಜೊತೆಯಲ್ಲಿ ಅಲಿಯಾಸ್‌ಗಳನ್ನು ಲಗತ್ತಿಸಿರುವುದು ಮತ್ತೊಂದು ವಿಧದ ತೊಂದರೆಗೆ ಕಾರಣವಾಗಿದೆ. ಈ ಎಲ್ಲ ತೊಡಕುಗಳನ್ನು ನಿವಾರಿಸಿಕೊಂಡು ತಮಿಳು ಶಾಸನಗಳನ್ನು ಅರಿತುಕೊಳ್ಳಬೇಕಾಗಿದೆ.

ಆವನಿಯಲ್ಲಿ ದೊರಕಿರುವ ಕುಲೋತ್ತುಂಗನ ತಮಿಳು ಶಾಸನಗಳ ಆರಂಭದ ಚಾರಿತ್ರಿಕ ಭಾಗವು ಸುದೀರ್ಘವಾದ ವೃತ್ತಾಂತಗಳನ್ನು ಒಳಗೊಂಡಿವೆ. ಕುಲೋತ್ತುಂಗನು ಯುವರಾಜನಾಗಿದ್ದಾಗಲೇ ಸಾಕಷ್ಟು ಬಲಶಾಲಿಯೂ, ಸಮರದಲ್ಲಿ ಉತ್ಸುಕನೂ ಆಗಿದ್ದನು. 'ಶಕ್ಕರಗೊಟ್ಟಂನಲ್ಲಿ ವಿಜಯಗಳನ್ನು ಸಾಧಿಸಿದ್ದು, ಜಯಲಕ್ಷ್ಮಿಯನ್ನು ವರಿಸಿದಂತೆಯೇ ಆಗಿದೆ.

ವೈರಾಗರಂನಲ್ಲಿ ಮದಿಸಿದ ಆನೆಗಳನ್ನು ಹಿಡಿದದ್ದು ಅವನ ತೋಳ್ಬಲಕ್ಕೆ ನಿದರ್ಶನವಾಗಿದೆ. ಕೊಂತಳದವರನ್ನು ಮಣ್ಣು ಪಾಲಾಗುವಂತೆ ಮಾಡಿದ ಅವನ ಸಾಹಸಗಳ ಮೂಲಕ ಉತ್ತರ ದಿಕ್ಕಿನ ದಿಗ್ವಿಜಯವನ್ನು ಸಾಧಿಸಿದಂತಾಗಿದೆ. ಇವನ ಶ್ವೇತಛತ್ರಿಯ ಬೆಳಕು ಭುವನದಲ್ಲೆಲ್ಲ ಪಸರಿಸಿದಂತಾಗಿದೆ. ಇವನ ವ್ಯಾಘ್ರಚಿಹ್ನೆಯುಳ್ಳ ಧ್ವಜವು ಮೇರುಪರ್ವತದ ಮೇಲೆ ಹಾರಾಡುತ್ತಿದೆ. ಇವನ ಮುಂದೆ ಕಾಲೂರಿ ಕುಳಿತಿರುವ ಆನೆಯ ಸಾಲುಗಳು ಸಮುದ್ರ ದಂಡೆಯ ದ್ವೀಪಗಳಲ್ಲಿ ನೆಲೆಸಿದ ರಾಜರು ಗೌರವ ಸಲ್ಲಿಸುತ್ತಿರುವಂತೆ ಕಂಡುಬರುತ್ತಿದೆ.' ಈ ವರ್ಣನೆಗಳಲ್ಲಿ ತಮಿಳು ಭಾಷೆಯ ಶಾಸ್ತ್ರೀಯ ಗುಣವೈಭವಗಳನ್ನು ತುಂಬಿದ ಶಾಸನಕಾರರಿಗೆ ಆ ಭಾಷೆಯ ಬಗಗಿದ್ದ ಅಪಾರವಾದ ಪ್ರೇಮವೂ ಸಹ ವ್ಯಕ್ತವಾಗುತ್ತದೆ.

ಆವನಿಗೆ ಸಮೀಪವಿರುವ ನಂಗಲಿಯ ಪ್ರಸ್ತಾಪವನ್ನು ಸಹ ಶಾಸನಗಳು ಒಳಗೊಂಡಿವೆ. ಕುಲೋತ್ತುಂಗನು, ವಿಕ್ಕಲನನ್ನು (ಆರನೆ ವಿಕ್ರಮಾದಿತ್ಯ) ನಂಗಲಿಯಿಂದ ಮಣಲೂರಿನ ಮೂಲಕ ತುಂಗಭದ್ರೆಯವರೆಗೆ ಓಡಿಸಿ ಗಂಗಮಂಡಲ ಮತ್ತು ಸಿಂಗಣಗಳನ್ನು ವಶಪಡಿಸಿಕೊಂಡನೆಂದು ಇಲ್ಲಿ ಹೇಳಲಾಗಿದೆ. ಮಣಲೂರನ್ನು ಆಲಟ್ಟಿಯೆಂದೂ, ಕೊಂಕಣ ಪ್ರಾಂತವನ್ನು ಸಿಂಗಣವೆಂದೂ ಗುರುತಿಸಿದ್ದು, ಇದು ದೃಢಪಡಬೇಕಾಗಿದೆ. ವಿಕ್ಕಲನು ಮತ್ತು ಸಿಂಗಣನು (ವಿಕ್ರಮಾದಿತ್ಯನ ಸೋದರ ಜಯಸಿಂಹ) ಕುಲೋತ್ತುಂಗನಿಗೆ ವಿರುದ್ಧವಾಗಿ ಪಶ್ಚಿಮ ಸಮುದ್ರದಲ್ಲಿ ಆಸರೆ ಪಡೆದದ್ದನ್ನೂ ಈ ಶಾಸನಗಳು ತಿಳಿಸುತ್ತವೆ. ಈ ಇಬ್ಬರೂ ಸೋದರರ ವಿರುದ್ಧವಾಗಿ ಕುಲೋತ್ತುಂಗನು ನವಿಲೆ ಎಂಬಲ್ಲಿ ಯುದ್ಧ ಮಾಡಿ ಅವರ ದಂಡನಾಯಕರ ರಕ್ಷಣೆಯಲ್ಲಿದ್ದ ಸಾವಿರ ಆನೆಗಳನ್ನು ವಶಪಡಿಸಿಕೊಳ್ಳುತ್ತಾನೆ. ಇದಕ್ಕೆ ಪ್ರತಿಯಾಗಿ ವಿಕ್ರಮಾದಿತ್ಯನು ಚೋಳನೊಂದಿಗೆ ಸೆಣಸಾಡಿ ಕಾಂಚಿಯನ್ನು ವಶಪಡಿಸಿಕೊಳ್ಳುತ್ತಾನೆ. ಕುಲೋತ್ತುಂಗನು ತನ್ನ ತಾತನಾದ ರಾಜೇಂದ್ರನ ರಾಜಧಾನಿಯಾದ ಗಂಗೈಕೊಂಡ ಚೋಳಪುರವನ್ನು ತನ್ನ ರಾಜಧಾನಿಯಾಗಿ ಮುಂದುವರೆಸಿದ. ಆದರೂ ಕಂಚಿಯು ಅವನಿಗೆ ಎರಡನೆಯ ಮಹಾನಗರವಾಗಿ, ಐತಿಹಾಸಿಕ ಮಹತ್ವವನ್ನು ದೊರಕಿಸಿಕೊಟ್ಟ ನಗರವಾಗಿ ಪ್ರಸಿದ್ಧಿ ಹೊಂದಿರುತ್ತದೆ.

ಕುಲೋತ್ತುಂಗನು ಪಂಚಪಾಂಡ್ಯರೊಡನೆ ಹೋರಾಡಿ ಪಶ್ಚಿಮ ಪ್ರಾಂತ್ಯವನ್ನು ವಶಪಡಿಸಿಕೊಳ್ಳುತ್ತಾನೆ. ಇದರಲ್ಲಿ ಮನ್ನಾರ್ ಕಣಿವೆ, ಪೊದಿಯಲ್ ಬೆಟ್ಟಗಳು, ಕನ್ಯಾಕುಮಾರಿ ಮತ್ತು ಕೊಟ್ಟಾರಗಳು ಸೇರಿವೆ. ಪಾಂಡ್ಯ ನಾಡಿನ ಜೊತೆಯಲ್ಲಿಯೇ ಕುಡುಮಲೈ (ಪಶ್ಚಿಮ ಬೆಟ್ಟ ಪ್ರದೇಶ) ನಾಡನ್ನು ಇವನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುತ್ತಾನೆ. ಪಶ್ಚಿಮ ತೀರದ ವಿಲ್ಲಿನಮ್ ಮತ್ತು ಸಾಲೈಗಳು ಇವನ ಆಧಿಪತ್ಯಕ್ಕೆ ಸೇರಿಕೊಳ್ಳುತ್ತವೆ. ಕೊಟ್ಟಾರವನ್ನು ವಶಪಡಿಸಿಕೊಂಡಿದ್ದು ಮಾತ್ರವಲ್ಲದೆ ಅದನ್ನು ಸುಟ್ಟ ಘಟನೆಯೂ, ಸಾಲೈನಲ್ಲಿ ಎರಡು ಬಾರಿ ಚೇರಮನ್ನನ ಹಡಗುಗಳನ್ನು ವಶಪಡಿಸಿಕೊಂಡ ವೃತ್ತಾಂತವೂ ಇದರಲ್ಲಿ ಸೇರಿದೆ.

ಸಾಮಾನ್ಯವಾಗಿ ಯಾವ ವ್ಯಕ್ತಿ ರಾಜನಾದರೂ ತಾನು ವಶಪಡಿಸಿಕೊಂಡ ಪ್ರದೇಶದಲ್ಲಿನ ಪ್ರಮುಖ ಕೇಂದ್ರವನ್ನು ಗುರುತಿಸಿ ಅಲ್ಲಿ ತನ್ನ ಶಾಸನಗಳನ್ನು ಹಾಕಿಸುತ್ತಾನೆ. ಆ ಸ್ಥಳವು ಹಿಂದಿನ ಹಲವಾರು ರಾಜರುಗಳ ರಕ್ಷಣೆಗೆ ಸಹ ಒಳಪಟ್ಟುದಾಗಿರುತ್ತದೆ. ಆವನಿಯ ವಿಚಾರದಲ್ಲಿ ಸಹ ಇದು ಅನ್ವಯವಾಗುವ ವಿಚಾರವಾಗಿದೆ. ಇಲ್ಲಿನ ದೇವಾಲಯಗಳು ಬಾಣ-ಗಂಗ-ನೊಳಂಬರ ಕಾಲದ ಗಮನಾರ್ಹ ಸ್ಮಾರಕಗಳಾಗಿವೆ. ಐತಿಹಾಸಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ, ಶೈಕ್ಷಣಿಕ ಕೇಂದ್ರವಾಗಿ ಆವನಿಯು ಪ್ರಸಿದ್ಧಿ ಹೊಂದಿ ಸಾಗಿ ಬಂದಿದೆ. ಕುಲೋತ್ತುಂಗನನ್ನು ಆವನಿಯ ಪ್ರಬುದ್ಧ ವಾತಾವರಣವು ಆಕರ್ಷಿಸಿದ್ದು, ತನ್ನ ತಾತನಾದ ರಾಜೇಂದ್ರನ ಕಾಲದಲ್ಲಿ ಕೋಲಾರದ ಕೋಲಾರಮ್ಮ ದೇವಾಲಯವು ಪಡೆದುಕೊಂಡ ಕಾಯಕಲ್ಪವನ್ನು ತಾನೂ ಸಹ ಆವನಿಯ ದೇವಾಲಯಗಳ ವಿಚಾರದಲ್ಲಿ ಅನುಸರಿಸುವಂತಾಗಿರಬೇಕು. ಇದೆಲ್ಲದರ ಸಾಧನೆಯನ್ನು ಇಂದು ಇಲ್ಲಿರುವ ತಮಿಳು ಶಾಸನಗಳ ಮೂಲಕ ಮನಗಾಣಬೇಕಾಗಿರುತ್ತದೆ.

ಕುಲೋತ್ತುಂಗ ಚೋಳನ ಆಳ್ವಿಕೆಯ ಕಾಲದ ಶಾಸನಗಳ ಆರಂಭದ ಚಾರಿತ್ರಿಕ ಭಾಗದ ನಂತರ ವಸ್ತುವಿಷಯಗಳನ್ನು ಮನಗಾಣಬೇಕಾಗಿದೆ. ಗೋದಾನ, ಭೂದಾನಗಳನ್ನು ವಿಶೇಷವಾಗಿ ಈ ಶಾಸನಗಳು ತಿಳಿಸುತ್ತವೆ. ಇತರ ವಿಷಯಗಳೂ ಕ್ವಚಿತ್ತಾಗಿ ನಿರೂಪಿತವಾಗಿವೆ. ದೇವಾಲಯಗಳಲ್ಲಿ ದೇವರ ಮುಂದೆ ದೀಪವನ್ನು ಬೆಳಗುವ ಕಾರ್ಯವನ್ನು ಮಹತ್ತರವಾಗಿ ನಮ್ಮ ಪೂರ್ವಿಕರು ಭಾವಿಸಿದ್ದರು. ಇದೊಂದು ವಿಶೇಷವಾದ ಕೈಂಕರ್ಯವಾದ ಕಾರಣ ಹೇರಳ ದಾನ ಹರಿದು ಬಂದಿತು. ಕುಲೋತ್ತುಂಗ ಚೋಳನ ಹತ್ತನೆಯ ವರ್ಷದ ಆಳ್ವಿಕೆಯಲ್ಲಿ ಚೋಳ ಮಂಡಲದ ಕಲ್ಯಾಣಪುರವನ್ನೊಳಗೊಂಡ ಚೋಳವಳನಾಡಿನ ಪಾಂಬನಿಕ್ಕೂರಂನ ನೀಡೂರಿನ ಮುಖ್ಯಸ್ಥನಾದ ಅರಂಜಿ ಸಾದೈಯನ್, ತೆಂಡಿರೈನಾಡಿನ ಮೂವೆಂಡವೇಲನ್ ಎಂಬ ವ್ಯಕ್ತಿಗಳು ಆವನಿಯ ರಾಮೇಶ್ವರ ದೇವರಿಗೆ ದೀಪವನ್ನು ಬೆಳಗುವ ಕಾರ್ಯಕ್ಕೆ ಪಂಚಾಚಾರ್ಯ ದೇವಕಾಮಿಗಳ ವಶಕ್ಕೆ ಇಪ್ಪತ್ನಾಲ್ಕು ಹಸುಗಳನ್ನು ನೀಡುತ್ತಾರೆ.

ಈತನ ಆಳ್ವಿಕೆಯ ಇಪ್ಪತ್ತೇಳನೇ ವರ್ಷದಂದು ಚೋಳಮಂಡಲದ ನಿತ್ತವಿನೋದವಳ ನಾಡಿಗೆ ಸೇರಿದ ನರಿಯೂರಿನ ವಿಕ್ರಮ ಚೋಳ ಮೂವೆಂಡ ವೇಲನ್ ಅಲಿಯಾಸ್ ಸೂರ್ಯನ್ ಚಕ್ರಪಾಣಿಯು ಆವನಿಯ ರಾಮೇಶ್ವರ ದೇವರ

ಮುಂದೆ ದೀಪವನ್ನು ಬೆಳಗುವುದಕ್ಕಾಗಿ ಇಪ್ಪತ್ನಾಲ್ಕು ಹಸುಗಳನ್ನು ನೀಡಿದ್ದಾನೆ. ಇದೇ ವ್ಯಕ್ತಿಯು ಸೂರ್ಯದೇವರ ಮುಂದೆ ಮೂರು ದೀಪ ಬೆಳಗುವುದಕ್ಕೆ, ಪಿಡಾರಿಯ ಮುಂದೆ ಬೆಳಗುವ ಒಂದು ದೀಪಕ್ಕೆ ಮತ್ತು ದುರ್ಗಾದೇವಿಯ ಮುಂದೆ ಒಂದು ದೀಪ ಉರಿಸಲು ಐದು ಗೋವುಗಳನ್ನು ನೀಡಿದ್ದಾನೆ. ಇನ್ನೊಬ್ಬ ವರ್ತಕನು ರಾಮೇಶ್ವರ ದೇವರ ಮುಂದೆ ಬೆಳಗುವ ನಂದಾದೀಪಕ್ಕೆ ಇಪ್ಪತ್ನಾಲ್ಕು ಹಸುಗಳನ್ನು ದಾನವಾಗಿ ಕೊಟ್ಟಿದ್ದಾನೆ. ಇಲ್ಲಿನ ಮತ್ತೊಂದು ವಿಶೇಷವೆಂದರೆ ದೀಪಗಳಿಡುವುದಕ್ಕೆ ಬೇಕಾದ ಪೀಠಗಳಿಗೆ ಸಹ ದ್ರವ್ಯವನ್ನು ನಿಗದಿಪಡಿಸಿ ದಾನವಾಗಿ ನೀಡಿದ ವಿಚಾರವು ಶಾಸನದಲ್ಲಿದೆ.

ಚೋಳರ ಕಾಲದಲ್ಲಿ ಸೂರ್ಯದೇವರ ಆರಾಧನೆ ಮಹತ್ವ ಪಡೆದುಕೊಂಡಿದ್ದ ವಿಚಾರವು ಶಾಸನಗಳಲ್ಲಿ ಉಕ್ತವಾದ ದಾನದ ಪ್ರಸ್ತಾಪದಿಂದ ವ್ಯಕ್ತವಾಗಿದೆ. ಆವನಿಯಲ್ಲಿ ಸೂರ್ಯದೇವರ ಎರಡು ಕಲ್ಲಿನ ವಿಗ್ರಹಗಳಿವೆ. ಸೋಮಸೂತ್ರದಲ್ಲಿ ಸಹ ಸೂರ್ಯಶಿಲ್ಪವನ್ನು ಕೆತ್ತಿರುವುದನ್ನು ಗಮನಿಸಬಹುದಾಗಿದೆ. ಗರ್ಭಗೃಹಗಳಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿ ಮಕರ ಸಂಕ್ರಮಣ ದಿನಗಳಂದು ವಿಶೇಷವಾಗಿ ಸೂರ್ಯರಶ್ಮಿಯ ಸ್ಪರ್ಶವು ಶಿವಲಿಂಗಕ್ಕೆ ದೊರಕುವಂತೆ ಎದುರಾಗಿ ಬೆಳಕಿಂಡಿಗಳನ್ನು ಇಟ್ಟಿರುವುದು, ಸೂರ್ಯನೊಂದಿಗಿನ ಪವಿತ್ರ ಸಂಬಂಧವನ್ನು ಸ್ಥಿರಪಡಿಸುತ್ತದೆ. ಸೂರ್ಯನ್ ಚಕ್ರಪಾಣಿ ಮತ್ತು ಸೂರಿ ಆಳ್ವನ್ ಎಂಬ ವ್ಯಕ್ತಿಗಳ ಪ್ರಸ್ತಾಪವನ್ನು ಇಲ್ಲಿನ ಶಾಸನಗಳಲ್ಲಿ ಕಾಣುತ್ತೇವೆ. ಇಲ್ಲಿ ಹೆಸರುಗೊಂಡಿರುವ ದುರ್ಗಾದೇವಿ ವಿಗ್ರಹವು ಬೆಂಗಳೂರಿನ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿದೆ. ಕೋಲಾರದ ಪಿಡಾರಿಯಂತೆ ಆವನಿಯ ದುರ್ಗಾದೇವಿಯೂ ಅತಿ ಮಹತ್ವದ ಸ್ಥಾನವನ್ನು ಪಡೆದುಕೊಂಡ ದೇವಿಯಾಗಿರಬಹುದು.

ಕುಲೋತ್ತುಂಗನ ಇಪ್ಪತ್ತೊಂಬತ್ತನೆ ವರ್ಷದ ಆಳ್ವಿಕೆಯಲ್ಲಿ ಹಾಕಲಾದ ಶಾಸನವು ನಿಗರಿಲಿ ಚೋಳಮಂಡಲದ ಇಳನಗರ್ ನಾಡಿನ ಅಳಿಯಮ್ ವಾಸಸ್ಥನಾದ ಇಳಗರ್‌ನ ಗಾವುಂಡ ಚೋಳಮಾರ್ತಾಂಡ ಬ್ರಹ್ಮಮಾರಾಯ ಅಲಿಯಾಸ್ ಅಣ್ಣಮನ್ ಅತ್ತಿ ಎಂಬುವವನು ರಾಮೇಶ್ವರ ದೇವರ ಮುಂದೆ ದೀಪ ಬೆಳಗುವ ಕಾರ್ಯಕ್ಕಾಗಿ ಇಪ್ಪತ್ನಾಲ್ಕು ಹಸುಗಳನ್ನು ದಾನಕೊಟ್ಟಿದ್ದನ್ನು ತಿಳಿಸುತ್ತದೆ. ಆವನಿಯ ಸಮೀಪದಲ್ಲಿ ಅತ್ತಿಕುಂಟೆ ಎಂಬ ಗ್ರಾಮ ಇದೆ. ರಾಜನ ಆಳ್ವಿಕೆಯ ಮೂವತ್ತಮೂರನೇ ವರ್ಷದಲ್ಲಿ ಜಯಗೊಂಡ ಚೋಳ ಮಂಡಲದ ಉರಕ್ಕಾಟ್ಟು ಕೋಟಮ್‌ನ ತಂಗಡುಪಾಕ್ಕಂನ ಮುಖ್ಯಸ್ಥ ಅರೈಯನ್ ಅಲಿಯಾಸ್ ರಾಜೇಂದ್ರ ಚೋಳ ಅಲಿಯಾಸ್ ಗಾಂಗೇಯರಾಜನು ನಿಗರಿಲಿ ಚೋಳಮಂಡಲದ ಆವನಿಯ ರಾಮೇಶ್ವರ ದೇವರ ನಂದಾದೀಪ ವ್ಯವಸ್ಥೆಗಳಿಗಾಗಿ ಇಪ್ಪತ್ನಾಲ್ಕು ಹಸುಗಳನ್ನು ದಾನ ನೀಡಿರುತ್ತಾನೆ. ಇದನ್ನು ಪಂಚಾಚಾರ್ಯ ದೇವಕಾಮಿಗಳ ವಶದಲ್ಲಿಡಲಾಗಿದೆ. ಕುಲೋತ್ತುಂಗನ ಮೂವತ್ತೈದನೇ ವರ್ಷದ ಆಳ್ವಿಕೆಯ ಕಾಲದಲ್ಲಿ ಇಳನಗರ್ ನಾಡಿನ ಗಾಮುಂಡ ಅರುಮೊಳಿ ದೇವನ ಮಗ ರಾಜೇಂದ್ರಚೋಳ ಬ್ರಹ್ಮ ಮಾರಾಯನು ಆವನಿಯ ರಾಮೇಶ್ವರ ದೇವರ ಮುಂದೆ ದೀಪವನ್ನು ಬೆಳಗುವ ವ್ಯವಸ್ಥೆ ಮಾಡಲು ಶಿವಬ್ರಾಹ್ಮಣರ ವಶಕ್ಕೆ ಇಪ್ಪತ್ನಾಲ್ಕು ಹಸುಗಳನ್ನು ದಾನವಾಗಿ ಕೊಟ್ಟಿದ್ದಾನೆ.

ಕುಲೋತ್ತುಂಗ ಚೋಳನನ್ನು 'ಸುಂಗಂ ದರುವಿತ್ತನ್' ಎಂದರೆ ಸುಂಕಗಳನ್ನು ಮನ್ನಾ ಮಾಡಿದ ವ್ಯಕ್ತಿ ಎಂಬ ವಿಶೇಷಣದಿಂದ ಸಂಬೋಧಿಸಲಾಗಿದೆ. ಈ ರಾಜನ ತೆರಿಗೆ ಪದ್ಧತಿಗೆ ಹಲವಾರು ಶಾಸನಗಳು ನಿದರ್ಶನಗಳಾಗಿವೆ. ಆವನಿಯ ಒಂದು ಶಾಸನದಲ್ಲಿ ಸುದೀರ್ಘವಾದ ತೆರಿಗೆಗಳ ವಿಚಾರ ನಿರೂಪಿತಗೊಂಡಿದೆ. ಶಾಲಾ ಮಾಸ್ತರರಿಗೆ, ದೇವಾಲಯದ ವ್ಯವಸ್ಥಾಪಕನಿಗೆ, ಗ್ರಾಮದ ತಳವಾರನಿಗೆ ಸುಂಕವನ್ನು ಪಾವತಿಸುವುದರಿಂದ ರಿಯಾಯಿತಿ ನೀಡಿರುವುದನ್ನು ನೋಡಿದರೆ ಶಿಕ್ಷಣ, ಧರ್ಮ, ರಕ್ಷಣೆಗಳಿಗಿದ್ದ ಮಹತ್ವದ ಅರಿವಾಗುತ್ತದೆ. ಆಜೀವಿಕರಿಗೆ ತೆರಿಗೆ ವಿಧಿಸಲಾಗಿದೆ. ಕೋಲಾರ ಜಿಲ್ಲೆಯಲ್ಲಿ ಆಜೀವಿಕರಿದ್ದರೆಂಬ ವಿಚಾರವನ್ನು ಪ್ರಸ್ತುತ ಪಡಿಸುವುದಕ್ಕೆ ಆವನಿಯಲ್ಲಿನ ಶಾಸನಗಳು ಆಧಾರಗಳಾಗಿವೆ.

ರಾಜರ ಬದುಕಿನಲ್ಲಿ ಅವರ ರಾಣಿಯರು ಸಹ ಗಮನಾರ್ಹ ಪಾತ್ರವನ್ನು ನಿರ್ವಹಿಸಿ ಪ್ರಸಿದ್ಧರಾಗಿರುತ್ತಾರೆ. ಕುಲೋತ್ತುಂಗನಿಗೆ ನಾಲ್ವರು ರಾಣಿಯರಿದ್ದಂತೆ ಶಾಸನಗಳಿಂದ ತಿಳಿಯುತ್ತದೆ. ಇವರಲ್ಲಿ ರಾಜೇಂದ್ರದೇವನ ಮಗಳಾದ ಮಧುರಾಂತಕಿಗೆ ಅಗ್ರಸ್ಥಾನವಿದೆ. ಆದರೆ ಈಕೆಯ ಹೆಸರನ್ನು ನೇರವಾಗಿ ಯಾವ ಶಾಸನಗಳಲ್ಲಿಯೂ ಹೇಳಲಾಗಿಲ್ಲ. ಪರ್ಯಾಯವಾಗಿ ಪುವನಿ ಮುಳುದ್ ಉಡೆಯಾಳ್, ಆವನಿ ಮುಳುದ್ ಉಡೆಯಾಳ್ ಎಂಬ ಹೆಸರುಗಳಿವೆ. ಕೋಲಾರ ಜಿಲ್ಲೆಯಲ್ಲಿ ಗುರುತಿಸಲಾಗಿರುವ ಹದಿನಾಲ್ಕು ಶಾಸನಗಳಲ್ಲಿ ಈ ಹೆಸರುಗಳನ್ನು ಬಳಸಲಾಗಿದೆ. ಆವನಿಯ ಶಾಸನಗಳಲ್ಲಿ 'ಪುವನ ಮುಳುದ್ ಉಡೆಯಾಳ್' ಇಲ್ಲವೇ 'ಆವನಿ ಮುಳುದ್ ಉಡೆಯಾಳ್' ಎಂಬ ರಾಣಿಯರ ಹೆಸರಿನೊಂದಿಗೆ ಏಳ್ ಉಲಗಂ ಉಡೆಯಾಳ್ ಎಂಬ ಮತ್ತೊಬ್ಬ ರಾಣಿಯ ಹೆಸರೂ ದೊರೆಯುತ್ತದೆ. ತ್ಯಾಗವಲ್ಲಿ ಎಂಬ ಮತ್ತೊಬ್ಬ ರಾಣಿಯನ್ನೂ ಇಲ್ಲಿನ ಶಾಸನಗಳು ಹೆಸರಿಸುತ್ತವೆ. ಈ ಸಂದರ್ಭದಲ್ಲಿ ಒಂದು ವಿಶೇಷವನ್ನು ಸಹ ಗಮನಿಸಬೇಕಾಗಿದೆ. ಪುವನ ಮುಳುದ್ ಉಡೆಯಾಳ್ ರಾಣಿಯ ಹೆಸರು ಹನ್ನೊಂದನೇ ಶತಮಾನದ ಅಂತ್ಯದವರೆಗೆ ಎಂದರೆ ರಾಜನ ಸುಮಾರು ಮೂವತ್ತನೇ ವರ್ಷದ ಆಳ್ವಿಕೆಯವರೆಗೆ ಬಳಕೆಯಲ್ಲಿದ್ದು ನಂತರ ಮರೆಯಾಗಿದೆ. ನಂತರದಲ್ಲಿ ಆವನಿಯ ಮುಳುದ್ ಉಡೆಯಾಳ್

ಎಂಬ ರಾಣಿಯ ಹೆಸರು ಮಾತ್ರ ಬಳಕೆಯಲ್ಲಿ ಕಂಡುಬರುತ್ತದೆ.

ಆವನಿಯ ಶಾಸನಗಳಲ್ಲಿ ಹೆಸರುಗೊಂಡಿರುವ ಆವನಿ ಮುಳುದ್ ಉಡೆಯಾಳ್ ಬೇರೊಬ್ಬ ರಾಣಿಯಾಗಿರಬೇಕೆಂದು ಊಹಿಸಲು ಅವಕಾಶವಿದೆ. ಇಬ್ಬರು ರಾಣಿಯರನ್ನು ಕುರಿತು ಹೇಳುವಾಗ ಶಿವನಿಗೆ ಉಮೆಯಿದ್ದಂತೆ ಇರುವವಳೊಬ್ಬಳು ಎಂದು ಹೇಳಿದರೆ, ಮತ್ತೊಬ್ಬಳು ಗಂಗೆಯಂತಿರುವವಳು ಎನ್ನಲಾಗಿದೆ. "ಏಳ್ ಉಲಗಂ" ಹೆಸರಿನೊಂದಿಗೆ ಸಪ್ತಸ್ವರಗಳ ಹೋಲಿಕೆಯನ್ನು ಬೆಸೆದಿರುವುದು ರಾಜನ ಸಾಂಸ್ಕೃತಿಕ ಅಭಿರುಚಿಗೆ ಸಾಕ್ಷಿಯಾಗಿದೆ. ಕುಲೋತ್ತುಂಗನ ಚಾರಿತ್ರಿಕ ವೈಭವಗಳೊಂದಿಗೆ ಕೌಟುಂಬಿಕ ವಿಚಾರಗಳ ಅಂತಃಸತ್ವವು ಬೆರೆತು ಇವನ ಆಳ್ವಿಕೆಯ ಸಾಮರ್ಥ್ಯ ದ್ವಿಗುಣಗೊಂಡಂತೆ ಕಂಡುಬರುತ್ತದೆ. ಕುಲೋತ್ತುಂಗನ ತಾಯಿ ಅಮ್ಮಂಗದೇವಿಯ ಹೆಸರು ಶ್ರೀನಿವಾಸಪುರ ತಾಲೂಕಿನಲ್ಲಿರುವ ಯಲ್ದೂರಿಗೆ ಅನ್ವಯಿಸಿರುವುದನ್ನು ಕಂಡಾಗ ಆತನಿಗೆ ತಾಯಿಯ ಬಗೆಗಿದ್ದ ಮಾತೃಭಕ್ತಿಯ ದರ್ಶನವಾಗುತ್ತದೆ.

ಆವನಿ ದೇವಾಲಯಗಳ ಪುನರ್ನಿರ್ಮಾಣ ಮತ್ತು ಸಂರಕ್ಷಣಾ ಕಾರ್ಯಗಳಲ್ಲಿ ವಿಶೇಷವಾದ ಆಸಕ್ತಿಯನ್ನು ವಹಿಸಿರುವ ಕುಟುಂಬಗಳ ಅವಲೋಕನವನ್ನು ಇಲ್ಲಿರುವ ಶಾಸನಗಳ ಹಿನ್ನೆಲೆಯಲ್ಲಿ ಗಮನಿಸಬಹುದಾಗಿದೆ. ಇಳವಂಜಿರಾಯರ ವಂಶದವರು ಸುಮಾರು ಹದಿಮೂರನೆಯ ಶತಮಾನದಲ್ಲಿ ಆವನಿ, ಕುರುಡುಮಲೆ, ಮಡಿವಾಳಗಳನ್ನೊಳಗೊಂಡ ವಿಸ್ತಾರವಾದ ಪ್ರದೇಶಕ್ಕೆ ಅಧಿಪತಿಗಳಾಗಿದ್ದರು. ಈ ವಂಶದ ಮೂಲ ಪುರುಷ ಮಾರಾಳ್ವಾನ್. ಈತನ ಮಗ ಕೂತ್ತಾಡುಂ ದೇವ. ಈತನನ್ನು ಇಳವಂಜಿ ರಾಯನೆಂದೂ ಸಂಬೋಧಿಸಲಾಗಿದೆ. ಇವನ ಮಗ ವಾಸುದೇವರಾಯ. ಇವರು ಈ ಜಿಲ್ಲೆಯ ಪ್ರಮುಖವಾದ ಸ್ಥಳಗಳಲ್ಲಿ ಶಿವಾಲಯಗಳನ್ನು ನಿರ್ಮಿಸಿ ಶೈವಧರ್ಮಕ್ಕೆ ಕೋಡು ಮೂಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಆವನಿಯಲ್ಲಿರುವ ಇವರ ಕಾಲಾವಧಿಯ ಶಾಸನಗಳು ಗಮನಾರ್ಹವಾಗುತ್ತವೆ.

ಆವನಿಯಲ್ಲಿ ಇಳವಂಜಿರಾಯರ ಮನೆತನಕ್ಕೆ ಸೇರಿದ ಸುಮಾರು ಇಪ್ಪತ್ತಾರು ಶಾಸನಗಳಿವೆ. ಇವರ ಕಾಲದ ಶಾಸನಗಳನ್ನು ಆವನಿಯ ದೇವಾಲಯ ಸಂಕೀರ್ಣ, ಆವನಿ ಮಠದ ಹಿಂಭಾಗದಲ್ಲಿರುವ ಕಲ್ಲುಗುಂಡು, ಬೆಟ್ಟದ ಮೇಲಿನ ಏಕಾಂತರಾಮಸ್ವಾಮಿ ದೇವಾಲಯ, ಧನುಷ್ಕೋಟಿ ಬಂಡೆಗಳ ಮೇಲೆ ಕಾಣಬಹುದಾಗಿದೆ. ಕ್ರಿ.ಶ. ೧೨೨೫ರಿಂದ ೧೩೦೦ರವರೆಗೆ ಹರಡಿರುವ ಈ ಶಾಸನಗಳಲ್ಲಿ ವಿವಿಧ ದಾನ ದತ್ತಿಗಳು, ಸಾಂಸ್ಕೃತಿಕ ಸಂಬಂಧದ ವಿವರಗಳು, ದೇವರ ಕೈಂಕರ್ಯಗಳ ಕೆಲವು ವಿಶೇಷ ವಿಚಾರಗಳನ್ನು ಪ್ರಸ್ತಾಪಿಸಲಾಗಿದೆ.

ಆವನಿಯಲ್ಲಿನ ರಾಮೇಶ್ವರ ದೇವರಿಗೆ ಸುಪ್ರಭಾತ ಸೇವೆಯನ್ನು ನಡೆಸಲಾಗುತ್ತಿತ್ತೆಂಬ ಸಂಗತಿ ಇಲ್ಲಿರುವ ಎರಡು ಶಾಸನಗಳಿಂದ ತಿಳಿದು ಬರುತ್ತದೆ. ಕೂತ್ತಾಡುಂ ದೇವ ಅಲಿಯಾಸ್ ಜಯಗೊಂಡ ಚೋಳ ಇಳವಂಜಿರಾಯನ ಸೇವಕ ತಂತಿರಪಾಲನೆಂಬ ವ್ಯಕ್ತಿಯು ಈ ಸೇವೆಯನ್ನು ಸಲ್ಲಿಸಿರುತ್ತಾನೆ. ಇಲ್ಲಿನ ಶಿವಬ್ರಾಹ್ಮಣರ ವಶಕ್ಕೆ ಹೊನ್ನನ್ನು ಕೊಟ್ಟು ಅದರ ಮೇಲಿನ ಬಡ್ಡಿಯ ಹಣದಿಂದ ಸೇವೆ ನಡೆಸುವಂತೆ ಕಟ್ಟಪ್ಪಣೆ ವಿಧಿಸಿರುತ್ತಾನೆ. ಶಾಸನಗಳಲ್ಲಿ 'ಪಳ್ಳಿಯರೈ ಎಳಚ್ಚು' ಎಂಬುದಾಗಿ ಈ ಸೇವೆಯನ್ನು ಹೆಸರಿಸಲಾಗಿದೆ. 'ಪಳ್ಳಿ' ಎಂದರೆ ಹಾಸಿಗೆಯಿಂದ, 'ಎಳಚ್ಚು' ಎಂದರೆ ದೇವರನ್ನು ಎಬ್ಬಿಸುವುದು ಎಂಬ ಅರ್ಥವಿರುತ್ತದೆ. ದೇವರಿಗೆ ಸಲ್ಲಿಸಲಾಗುವ ಸೇವೆಗಳಲ್ಲಿ ರಂಗ ವೈಭವವು ಪ್ರಸಿದ್ಧವಾದುದು. ಭಗವಂತನ ಕೃಪೆಗೆ ಪಾತ್ರರಾಗುವುದಕ್ಕೆ ಭಕ್ತರಾದವರು ಪೂಜೆ ನೈವೇದ್ಯಗಳನ್ನು ಮಾತ್ರವಲ್ಲದೆ ಸಂಗೀತ, ನೃತ್ಯಗಳನ್ನು ಸಮರ್ಪಿಸುತ್ತಾರೆ. ಕೂತ್ತಾಡುಂ ದೇವನ ಸೇವಕನು ರಾಮೇಶ್ವರ ದೇವಾಲಯದಲ್ಲಿ ರಂಗಸೇವೆ ಮಾಡಿದವಳಿಗೆ ಪಡಿ ನೀಡುವುದಕ್ಕಾಗಿ ಆರು ಜನ ಭಟ್ಟರಿಗೆ ಹೊನ್ನಿನ ದಾನವನ್ನು ನೀಡಿರುತ್ತಾನೆ. 'ಕೂತ್ತಾರ್' ಎಂಬ ಹೆಸರಿನ ಈ ನರ್ತಕಿಯನ್ನು ಇಳವಂಜಿರಾಯನ ಕಾಲಕ್ಕೆ ಸೇರಿದ ಎರಡು ಶಾಸನಗಳಲ್ಲಿ ಪ್ರಸ್ತಾಪಿಸಲಾಗಿದೆ.

ಆವನಿ ಬೆಟ್ಟದ ಮೇಲಿರುವ ಈ ದೇವಾಲಯವನ್ನು ಮೂಲಸ್ಥಾನ ದೇವಾಲಯವೆಂದು ಕರೆಯಲಾಗಿದೆ. ರಾಮೇಶ್ವರ ದೇವರ ನೈವೇದ್ಯಕ್ಕೆ ಅಗತ್ಯವಾದ ಅಕ್ಕಿಯನ್ನು ಪೂರೈಸಲು, ಪೂಜೆಯಲ್ಲಿ ಬಳಸುವ ಸುಗಂಧ ದ್ರವ್ಯಗಳನ್ನು ಸರಬರಾಜು ಮಾಡಲು, ನಂದಾದೀಪವನ್ನು ಬೆಳಗಲು ಭೂದಾನ ನೀಡಲಾಗಿದೆ. ಇದನ್ನು ನೀಡಿದವಳು ಆವನಿ ನಾಡಿನ ನೊಳಂಬಾದಿ ರಾಯರ ಮಗಳೂ, ಕೂತ್ತಾಡುಂ ದೇವನ ಹೆಂಡತಿಯೂ ಆದ ಶಂಗಾಳ್ವಾರ್ ಎಂಬಾಕೆ. ಮತ್ತೊಂದು ಕುತೂಹಲದ ಸಂಗತಿಯೆಂದರೆ ಈಕೆಯು ತಾನು ನೀಡಿದ ಭೂಮಿಯನ್ನು 'ಹೊನ್ನು ಕೊಟ್ಟು ಮಣ್ಣು ಪಡೆದದ್ದು' ಎಂದೆನ್ನಲಾಗಿದೆ. ಮಣ್ಣಿಗೆ ಎಂದರೆ ನೆಲಕ್ಕಿರುವ ಮಹತ್ವ ಇದರಿಂದ ತಿಳಿಯುತ್ತದೆ.

ರಾಮೇಶ್ವರ ದೇವಾಲಯದ ಪಂಚಾಂಗದಲ್ಲಿ ಹಾಕಲಾಗಿರುವ ಒಂದು ಶಾಸನದಲ್ಲಿ ಸ್ವಾರಸ್ಯಕರವಾದ ಸಂಗತಿಯಿದೆ. ಆವನಿ ನಾಡಿನಲ್ಲಿರುವ ಸಂತಾನ ರಹಿತರ ಆಸ್ತಿಯನ್ನು ದಾನದತ್ತಿಗಳಿಗಾಗಿ ಸ್ವಾಧೀನಪಡಿಸಿಕೊಂಡಿರುವ ಕಾನೂನಿನ

ಸಂಬಂಧವಾದ ವಿಚಾರ ಇದರಲ್ಲಿ ಅಡಗಿದೆ. ಹೀಗೆ ಸ್ವಾಧೀನ ಪಡಿಸಿಕೊಂಡ ಆಸ್ತಿಯನ್ನು ನ್ಯಾಯವಾದಿಗಳಿಗೆ ಹಂಚಲಾಗಿರುವುದು ಕಾನೂನು ಪಾಲಕರಿಗೆ ನೀಡಲಾಗಿರುವ ಮನ್ನಣೆಗೆ ಸಾಕ್ಷಿ. ದೇವಾಲಯಗಳನ್ನು ದುರಸ್ತಿ ಮಾಡುವವರ ಕುಟುಂಬಗಳು ಸಹ ಇಲ್ಲಿ ನೆಲೆಸಿದ್ದ ಬಗ್ಗೆ ಇಲ್ಲಿನ ಶಾಸನಗಳಲ್ಲಿ ಉಲ್ಲೇಖವಿದೆ. ದೇವರ ಉತ್ಸವ ಕಾಲದಲ್ಲಿ ನಡೆಸಬೇಕಾದ ಅನ್ನಸಂತರ್ಪಣೆಗಾಗಿ ಮುಳಬಾಗಿಲಿನ ವರ್ತಕ ಶ್ರೇಷ್ಠರಿಂದ ಹೊನ್ನನ್ನು ಪಡೆದ ಅರ್ಚಕ ವರ್ಗದವರು ಈ ಸೇವೆಯನ್ನು ನಡೆಸಿಕೊಂಡು ಹೋಗುವ ಪ್ರತಿಜ್ಞೆ ಮಾಡಿರುತ್ತಾರೆ. ಅನ್ನದಾನದ ಮಹತ್ವಕ್ಕೆ ಇದರಿಂದ ಪುಷ್ಟಿ ದೊರೆಯುವಂತಾಗಿದೆ.

ಹೊಯ್ಸಳರ ಆಳ್ವಿಕೆಯ ಕಡೆಯ ವರ್ಷಗಳಲ್ಲಿ ಕೋಲಾರ ಜಿಲ್ಲೆಯ ಪ್ರದೇಶವನ್ನು ರಾಮನಾಥನ ವಶಕ್ಕೆ ನೀಡಲಾಯಿತು. ಹೀಗಾಗಿ ಇವನ ಕಾಲದ ಅನೇಕ ಶಾಸನಗಳನ್ನು ಜಿಲ್ಲೆಯಲ್ಲಿ ಕಾಣುತ್ತಿದ್ದೇವೆ. ಆವನಿಯಲ್ಲಿ ಸಹ ರಾಮನಾಥನ ಆಳ್ವಿಕೆಯ ಕಾಲಕ್ಕೆ ಸೇರಿದ ಮೂರು ಶಾಸನಗಳಿವೆ. ಈತನ ಮೂವತ್ನಾಲ್ಕನೇ ವರ್ಷದ ಆಳ್ವಿಕೆಯಲ್ಲಿ ಆವನಿಯಲ್ಲಿ ವಾಸಿಸುತ್ತಿದ್ದ ತಿರುನಾಲಂಗಿಳವರ್ ಎಂಬ ವ್ಯಕ್ತಿಯು ಅಣ್ಣೀಶ್ವರ ದೇವರ ನೈವೇದ್ಯ ಸಮರ್ಪಣೆಗಾಗಿ ಐದು ಹೊನ್ನನ್ನು ದಾನ ನೀಡಿ, ಅದರ ಬಡ್ಡಿಯಿಂದ ಬರುವ ಹಣದಲ್ಲಿ ಕೈಂಕರ್ಯವನ್ನು ನಡೆಸಬೇಕೆಂದು ವಿಧಿಸಲಾಗಿದೆ. ಈ ವಿಷಯವನ್ನು ಮತ್ತೂ ಒಂದು ಶಾಸನದಲ್ಲಿ ದಾಖಲಿಸಲಾಗಿದೆ. ಇಲ್ಲಿರುವ ಲಕ್ಷ್ಮಣೇಶ್ವರನನ್ನು ಇಲ್ಲಿನ ಶಾಸನವು ಅಣ್ಣೀಶ್ವರನೆಂದು ಹೆಸರಿಸಿದ್ದು, ಆ ಕಾಲಕ್ಕೆ ಇದೊಂದು ಪ್ರಸಿದ್ಧ ಆಲಯವಾಗಿರಬೇಕು. ನೊಳಂಬನ ರಾಣಿ ದೀವಬ್ಬರಸಿಯ ಕಾಲಕ್ಕೆ ಇದು ಇತಿಹಾಸದ ಪುಟಗಳಲ್ಲಿ ಸೇರಿರಬೇಕು.

ಆವನಿಯು ರಾಮನಾಥನ ಆಳ್ವಿಕೆಗೆ ಮುಂಚಿನಿಂದಲೇ ಹೊಯ್ಸಳರ ಅಧಿಪತ್ಯಕ್ಕೆ ಸೇರಿದ್ದಿರಬಹುದು. ಇದಕ್ಕೆ ನಿದರ್ಶನವಾಗಿ ಹೊಯ್ಸಳರ ದೊರೆ ಎರಡನೇ ಬಲ್ಲಾಳನ ಮೂರು ಶಾಸನಗಳನ್ನು ಇಲ್ಲಿ ಗುರುತಿಸಲಾಗಿದೆ. ಹೊಯ್ಸಳರಿಗೆ ಅನ್ವಯವಾಗುವ ಚಾರಿತ್ರಿಕ ವಿವರಣೆಯೂ ಇಲ್ಲಿದೆ. ಹೊಯ್ಸಳ ವೀರಬಲ್ಲಾಳ ದೇವನ ಮಹಾಮಂತ್ರಿ, ಸರ್ವಾಧಿಕಾರಿ ಜಯಗೊಂಡ ಚೋಳಮಂಡಲದ ಪುಲಿಯಾರ್‌ಕೋಟಮ್‌ನ ಪುಲಿಯೂರಿನ ಮುಖ್ಯಸ್ಥ, ಸಾಮಂತ ಚಕ್ರಾಧಿಪತಿ ಮತ್ತು ಮಹಾಪಸಾಯತನಾದ ಶ್ರೀಕರಣಮ್ ವಲ್ಲಾಳ ದಂಡನಾಯಕನ್ ಅಲಿಯಾಸ್ ನಾಯಗದೇವನ ಹೆಂಡತಿ ಪೆಮ್ಮಿಯಕ್ಕ ಎಂಬಾಕೆ ನಿಗರಿಲಿ ಚೋಳಮಂಡಲದ ಆವನಿ ನಾಡಿನ ಆವನಿಯಲ್ಲಿ ಇರುವ ರಾಮೇಶ್ವರ ದೇವಾಲಯದ ಇಬ್ಬರು ಬ್ರಾಹ್ಮಣರ ವಶಕ್ಕೆ ಹೊನ್ನನ್ನು ನೀಡಿ ಇದರಿಂದ ಬರುವ ಬಡ್ಡಿಯ ಹಣದಲ್ಲಿ ದೇವರ ಮುಂದೆ ನಂದಾದೀಪ ಬೆಳಗಬೇಕೆಂಬ ಕರಾರು ವಿಧಿಸಿದ್ದಾಳೆ.

ಆವನಿಯ ಬೆಟ್ಟದ ಮೇಲಿರುವ ಏಕಾಂತ ರಾಮೇಶ್ವರ ದೇವಾಲಯದ ಶಾಸನಗಳು ಹಲವು ವಿಚಾರಗಳನ್ನು ಬೆಳಕಿಗೆ ತಂದಿವೆ. ಇವುಗಳನ್ನು ಹದಿಮೂರನೆ ಶತಮಾನಕ್ಕೆ ಸೇರಿಸಬಹುದು. ಇಳವಂಜಿರಾಯನ ರಾಣಿಯ ನೆರವಿನಿಂದ ಆವನಿ ಬೆಟ್ಟದ ಮೇಲಿನ ದೇವಾಲಯವನ್ನು ಸಿರುತ್ತೊಂಡನ್ ಎಂಬ ವ್ಯಕ್ತಿಯು ದುರಸ್ತಿಗೊಳಿಸಿರುತ್ತಾನೆ. ಆವನಿ ನಾಡಿನ ಮುಖ್ಯಸ್ಥನಾದ ನೊಳಂಬಾದಿರಾಯನ ರಾಣಿಯು ಮೂಲಸ್ಥಾನ ದೇವರಿಗೆ ದಾನ ನೀಡಿದ ವಿಚಾರವನ್ನು ಇಲ್ಲಿನ ಒಂದು ಶಾಸನದಲ್ಲಿ ಹೇಳಲಾಗಿದ್ದರೆ, ಅವನ ಮಗಳು ನೀಡಿದ ದತ್ತಿಯ ವಿಚಾರವನ್ನು ಮತ್ತೊಂದು ಶಾಸನವು ಪ್ರಸ್ತಾಪಿಸುತ್ತದೆ. ಆವನಿ ಬೆಟ್ಟದ ಮೇಲಿರುವ ದೇವಾಲಯವು ಸಹ ಪ್ರಾಮುಖ್ಯತೆಯನ್ನು ಹೊಂದಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯ ಕರ್ನಾಟಿಕ**, ಸಂಪುಟ X. ಕೋಲಾರ ಜಿಲ್ಲೆ, ಬಿ.ಎಲ್.ರೈಸ್.

೨. **ಎಪಿಗ್ರಾಫಿಯ ಕರ್ನಾಟಿಕ**, ಸಂಪುಟ XVII, ಕೋಲಾರ ಜಿಲ್ಲೆ ಅನುಬಂಧ. ಪ್ರಕಟಣೆ: ಡಾ॥ ಎಂ. ಶೇಷಾದ್ರಿ, ೧೯೬೫.

೩. **ಎ ಹಿಸ್ಟರಿ ಆಫ್ ಸೌತ್ ಇಂಡಿಯ**, ಕೆ.ಎ. ನೀಲಕಂಠಶಾಸ್ತ್ರಿ.

೪. **ಕೋಲಾರ ಜಿಲ್ಲಾ ಗೆಝೆಟಿಯರ್.**

೫. **ದಿ ಚೋಳಾಸ್** – ಎನ್. ಸೇತುರಾಮನ್.

# ಕರ್ನಾಟಕದೊಂದಿಗೆ ಚೋಳರ ಸಂಬಂಧಗಳು

– ಸೀತಾರಾಮ ಜಾಗೀರ್‌ದಾರ್*

ಕರ್ನಾಟಕವನ್ನು ಮೊದಲು ಆಳಿದ ಸಾರ್ವಭೌಮ ರಾಜರೆಂದರೆ ಮೌರ್ಯರು. ಶ್ರವಣಬೆಳಗೊಳ ಮೂಲತಃ 'ಕಟವಪ್ರ' ಎನಿಸಿದ್ದು, ಮೌರ್ಯರ ಕೊನೆಯ ದುರ್ಗ ಎಂದೇ ಪ್ರಸಿದ್ಧವಾಗಿತ್ತು. ಅಶೋಕನ ಶಾಸನಗಳಲ್ಲಿ ದಕ್ಷಿಣ ಭಾರತದ ರಾಜ್ಯಗಳ ಉಲ್ಲೇಖ ಬಂದಿದೆ:

'ಸವತ ವಿಜಿತಂ ಹಿ ದೇವಾನಂ ಪ್ರಿಯಸಪಿಯದಸಿ ನೋರಾಞನೋ ಏವಮ ಪಿಪ್ರಚಂತೇಸು ಯಥಾಚೋಥಾಪಾಂಡ್ಯಾ ಸತಿಯಪುತೋ ಕೇರಲಪುತೋ ಆತಂಬ ಪಂಣಿ ಅಂತಿಯೋಕೋ ಯೋಜರಾಜಾ ಯೇವಾಪಿತನ ಅಂತಿಯಕಸ ಸಾಮೀಪ ರಾಜಾನೋ..........................[೧]

'ಚೋಡ', 'ಪಾಂಡ್ಯಾ', 'ಕೇರಲಪುತ', 'ಸತಿಯಪುತ', 'ತಂಬಪಂಣಿ (ಇಂದಿನ ಶ್ರೀಲಂಕಾ) ಇಲ್ಲಿ ಗಮನಾರ್ಹವಾದ ದೇಶಗಳು. 'ಚೋಡ' ಶಬ್ದದ ಉಲ್ಲೇಖ, ಮೌರ್ಯರ ರಾಜ್ಯದಲ್ಲೇ ಇದ್ದ 'ಸನ್ನತಿ' ಹಾಗೂ 'ಎರ್ರಗುಡಿ' ಸ್ಥಳಗಳಲ್ಲಿ ಹಾಕಿಸಲಾದ ೧೪ ಶಾಸನಗಳಲ್ಲೂ ಇದ್ದಿರಬೇಕು. ಈಗ ಆ ಶಾಸನಗಳ ಪಾಠಗಳು ಹಾಳಾಗಿರುವುದರಿಂದ ಇದಮಿತ್ಥಂ ಎಂದು ಹೇಳಬರುವುದಿಲ್ಲ.

ಚೋಡ, ಚೋಳ, ಚೋಲ, ಚೋಟಿ – ಈ ಭಿನ್ನ ರೂಪಗಳು ಮೂಲತಃ ಒಂದು ಶಬ್ದದ ಉಚ್ಚಾರದಲ್ಲಿ ಉದ್ಭವಿಸಿದ ಹಲವು ರೂಪಗಳು. 'ಚೋಲ' ಎಂಬುದು ಒಂದು ಬಗೆಯ ಯೋಧಗುಂಪನ್ನು ಸೂಚಿಸಿ ಅನಂತರ ಒಂದು ಮನೆತನದ ಹೆಸರಾಗಿರಬೇಕು. ಈ ಶಬ್ದದ ಮೂಲವನ್ನು ರೇಖೆಯಲ್ಲಿ ಹೀಗೆ ಗುರುತಿಸಬಹುದು.

ಚೋಲ (< ಚೋಲಕ = ಕಂಚುಕ = Armour)[೨]




'ಡ'ಕಾರಂ ಬೆಟ್ಟಿತ್ತಾಗಿ ಉಚ್ಚರಿಸುವುದು ದ್ರಾವಿಡ ಜನಾಂಗದ ಸ್ವಭಾವ. ಆ 'ಡ'ಕಾರ 'ಟ' ಕಾರ ಆಗುತ್ತದೆ. ಇನ್ನು ಸಂಸ್ಕೃತ 'ಲ' ಕಾರ ದ್ರಾವಿಡ (ಮೂಲ ದ್ರಾವಿಡ) ಭಾಷೆಗೆ ಬಂದಾಗ 'ಳ' (ಕ್ಷಳ) ಧ್ವನಿಯನ್ನೇ ಹೋಲುತ್ತದೆ. ತತ್ಕಾರಣ ಎರಡು ರೀತಿಯ ಸ್ವರ–ಧ್ವನಿಗಳ–ಜನ್ಮಕ್ಕೆ ಕಾರಣವಾಗುತ್ತದೆ. ಈ ಕಾರಣದಿಂದಲೇ 'ಚೋಟಿ' ಹಾಗೂ 'ಚೋಳ' ಎರಡೂ ರೂಪಗಳು ಅಸ್ತಿತ್ವಕ್ಕೆ ಬಂದವು.

ಚೋಲ, ಚೋಡ, ಚೋಳ, ಚೋಟಿ ಶಬ್ದ ಒಂದು ರಾಜಮನೆತನಕ್ಕೆ ಸಂಬಂಧಿಸಿದ್ದು, ಏನಿಲ್ಲವೆಂದರೂ ಕ್ರಿ.ಪೂ. ೩ನೆಯ ಶತಮಾನದಿಂದಲೇ ಅಸ್ತಿತ್ವದಲ್ಲಿ ಇದ್ದುದು ಕಂಡುಬರುತ್ತದೆ. ತಮಿಳುನಾಡಿನಲ್ಲಿ ತಂಜಾವೂರಿನ (ತಂಜೆ–ಕಚ್ಚಿಯುಂ

* ಕಲ್ಪ, ೪೦೬/ಜಿ,೧, ೩ನೆಯ ಮುಖ್ಯರಸ್ತೆ, ೭ನೆಯ ಅಡ್ಡರಸ್ತೆ, ಸರಸ್ವತಿಪುರಂ, ಮೈಸೂರು–೫೭೦೦೦೯.

ಕೊಂಡ – ಪರಿಶೀಲಿಸಿ) ಎಡಬಲದಲ್ಲಿ ಸಣ್ಣ ರಾಜ್ಯವನ್ನು ಕಟ್ಟಿಕೊಂಡ ರಾಜಮನೆತನವಾಗಿ ಮೆರೆಯಿತು. ಚೋಳರ ಇತಿಹಾಸವನ್ನು ನಿರೂಪಿಸಿದ. ಕೆ.ಎ. ನೀಲಕಂಠಶಾಸ್ತ್ರಿಗಳೇ ಮೊದಲು ಮಾಡಿಕೊಂಡು ಕೆಲವರು ಕೇವಲ ತಮಿಳುನಾಡಿಗೇ ಅವರನ್ನು ಸೀಮಿತಗೊಳಿಸಿದ್ದಾರೆ ಮತ್ತು ಬರೀ ಹಿರಿಮೆಗಳನ್ನು ಮಾತ್ರ ನಿರೂಪಿಸಿದ್ದಾರೆ.

ಚೋಳರು, ರಾಜ್ಯವನ್ನು ಆಳುತ್ತಿದ್ದ ರಾಜಮನೆತನ ಎಂಬುದು ಅನೇಕ ದಾಖಲೆಗಳಿಂದ ಸ್ಪಷ್ಟವಿದೆ.

i) ವಾತ್ಸಾಯನನ 'ಕಾಮಸೂತ್ರ' ಗ್ರಂಥದಲ್ಲಿ ಚೋಳರಾಜನೊಬ್ಬನು 'ಚಿತ್ರಸೇನೆ' ಎಂಬ ಗಣಿಕೆಯನ್ನು ಕೊಂದುದಾಗಿ ತಿಳಿಸಿದೆ.

'ರತಿಯೋಗೇಹಿ ಕೀಲಯಾ ಗಣಿಕಾಂ ಚಿತ್ರಸೇನಾಂ ಚೋಳರಾಜೋ ಜಘಾನ![೩]

ii) 'ಸಂಗಂ ಸಾಹಿತ್ಯ' ಪ್ರಾಚೀನ ಚೋಳರೊಂದಿಗೆ ಸಂಬಂಧ ಹೊಂದಿದಾಗಿ ತಿಳಿದುಬರುತ್ತದೆ. 'ಉತ್ತುಂಗ ಚೋಳ', 'ಕರವೀರಚೋಳ', 'ಕರವೂರ ಚೋಳ', 'ಕರಿಕಾಲ ಚೋಳ', 'ಉರ್ಯಯೂರ ಚೋಳ', 'ನರೇನ್ದ್ರ ಚೋಳ', 'ಪಗಲ್ ಚೋಳ' ಮುಂತಾದ ಹೆಸರುಗಳು ಅಲ್ಲಿ ಕಂಡುಬರುತ್ತವೆ. ಕರಿಕಾಲ ಚೋಳನು ಕ್ರಿ.ಶ. ೬೩೪ಕ್ಕೂ ಮುಂಚೆ ಇದ್ದ, ಇದು ಬಿದಿರೂರ ಶಾಸನದಿಂದ ಖಚಿತ.

iii) ಕ್ರಿ.ಶ. ೫೯೮-೬೧೦ರ ಚಾಳುಕ್ಯ ಚಕ್ರವರ್ತಿ ಮಂಗಲೀಶನ ಮಹಾಕೂಟದ (ಬಾದಾಮಿಯ ಬಳಿ) ಶಾಸನದ ಪ್ರಕಾರ ಚಾಳುಕ್ಯರು ಸೋಲಿಸಿದ ರಾಜಮನೆತನಗಳಲ್ಲಿ ಚೋಳಮನೆತನವೂ ಒಂದು.[೪] ಚೋಳರ ಚರಿತ್ರೆ ಬರೆದವರ ಕೃತಿಗಳಲ್ಲಿ ಈ ಬಗೆಗೆ ಒಂದಕ್ಷರವೂ ಇಲ್ಲ.

iv) ಇಮ್ಮಡಿ ಪುಲಿಕೇಶಿಯ ಆಸ್ಥಾನದಲ್ಲಿ ಇದ್ದ, ರವಿಕೀರ್ತಿ ಎಂಬ ಕವಿ ಬರೆದ ಐಹೊಳೆಯ ಶಾಸನದಲ್ಲಿ ಚೋಳರ ಕುರಿತಂತೆ ಈ ವಿವರಣೆ ಇದೆ :

ಕಾವೇರಿಧೃತ ಶಫರೀ ವಿಲೋಲ ನೇತ್ರಾ
ಚೋಳಾನ್ದಾ ಸಮಪದೀ ಜಯೋದ್ಯತಸ್ಯ ಯಸ್ಯ
ಪ್ರಶ್ಚೋತನ್ಮದಗಜ ಸೇತುರುದ್ಧನೀರಾ
ಸಸ್ಪರ್ಶಂ ಪರಿಹರತಿಸ್ಮ ರತ್ನರಾಶೇಃ ॥
ಚೋಳ ಕೇರಳ ಪಾಣ್ಡ್ಯಾನಾಂ ಯೋಭೂತ್ತತ್ರ ಮಹರ್ಧಯೇ
ಪಲ್ಲವಾನೀಕ ನೀಹಾರ ತುಹಿನೇತರ ದೀಧಿತಿಃ ॥
ಉತ್ಸಾಹ ಪ್ರಭುಮನ್ತ್ರಶಕ್ತಿ ಸಹಿತೇ ಯಸ್ಮಿನ್ಸಮಸ್ತಾದಿಶೇ
ಜಿತ್ವಾ ಭೂಮಿಪತೀರ್ನ ವಿಮೃಜ್ಯ ಮಹಿತಾನಾರಾಧ್ಯ ದೇವದ್ವಿಜಾನ್
ವಾತಾಪೀಂ ನಗರೀಂ ಪ್ರವಿಶ್ಯ ನಗರೀಮೇಕಾಮಿವೋರ್ವ್ವೀಮಿಮಾಂ
ಚಂಚನ್ನೀರಧಿ ನೀಲನೀರ ಪರಿಖಾಮ್ ಸತ್ಯಾಶ್ರಯೋ ಶಾಸತಿ ॥[೫]

[ಧರಿಸಿದ ಮೀನುಗಳೇ ನೇತ್ರವಾದ ವಿಲೋಲ ಕಂಗಳ ಕಾವೇರೀ ನದಿಯ ದೆಸೆಯಿಂದ ಸಮೃದ್ಧವಾದ ಪ್ರದೇಶದ ದಿಗ್ವಿಜಯಕೆ ಹೊರಟ ಅವನು (ಸತ್ಯಾಶ್ರಯ ಪುಲಿಕೇಶಿ) ಹಲವು ದೇಶಗಳನ್ನು ಗೆದ್ದನು. ಹೀಗೆ ಮಾಡುವಾಗ ಆ ಪ್ರದೇಶಗಳಿಗೆ ಒಡೆಯರಾದ ಪಲ್ಲವ, ಚೋಳ, ಪಾಂಡ್ಯ ಹಾಗೂ ಕೇರಳ(ಚೇರ) ರಾಜರನ್ನು ಸೋಲಿಸಿ ಸೇತು (ರಾಮಸೇತು) ಕ್ಷೇತ್ರದಲ್ಲಿದ್ದ ದೇವಾಯತನಗಳನ್ನೂ ದ್ವಿಜರನ್ನೂ ಪೂಜಿಸಿ ಪ್ರಪಂಚದಲ್ಲೇ ದೊಡ್ಡ ನಗರವೆನಿಸಿದ ನೀಲ ನೀರಿನ (ಆಳವಾದ) ಕಂದಕವನ್ನು (ಪರಿಖೆಯನ್ನು) ಹೊಂದಿದ ವಾತಾಪಿ (ಬಾದಾಮಿ) ನಗರವನ್ನು ಪ್ರವೇಶಿಸಿ ರಾಜ್ಯವನ್ನು ಆಳಲು ಉಪಕ್ರಮಿಸಿದ– ಪ್ರಭು ಮಂತ್ರ ಹಾಗೂ ಉತ್ಸಾಹ ಶಕ್ತಿ(ತ್ರಯ)ಗಳನ್ನು ಹೊಂದಿದ ಸತ್ಯಾಶ್ರಯ].

ಚಾಲುಕ್ಯರು ತಮಿಳುನಾಡಿನ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದರು. ಇಮ್ಮಡಿ ಪುಲಿಕೇಶಿ ಅದನ್ನು ಮೊದಲು ಗೆದ್ದವನು, ನಂತರ ಕ್ರಿ.ಶ. ೬೪೨ರ ಸುಮಾರಿಗೆ ಪಲ್ಲವ ನರಸಿಂಹವರ್ಮನಿಗೆ ಸೋತನು. ಆತ 'ವಾತಾಪಿ ಕೊಂಡ' ಎಂಬ

ಬಿರುದನ್ನು ಧರಿಸಿದ. ಆದರೆ ಮುಂದೆ ಬಾದಾಮಿಯ ಚಾಳುಕ್ಯರು ಕ್ರಿ.ಶ.ಸು. ೬೫೫ರ ವೇಳೆಗೆ ಪುನಃ ಸೇನೆಯನ್ನು ಕಟ್ಟಿಕೊಂಡು ಕಳೆದ ರಾಜ್ಯವನ್ನು ಕಟ್ಟಲು ಆರಂಭಿಸಿ ಇಮ್ಮಡಿ ವಿಕ್ರಮಾದಿತ್ಯನ ಕಾಲಕ್ಕೆ ಸಂಪೂರ್ಣ ದಕ್ಷಿಣ ಭಾರತದ ಮೇಲೆ ಸ್ವಾಮ್ಯವನ್ನು ಸ್ಥಾಪಿಸಿದರು. ಆತ ಮೂರು ಬಾರಿ ಕಂಚಿಯನ್ನು ಗೆದ್ದು – ಉದ್ಭಟರ ಸೊಕ್ಕನ್ನು ಮುರಿದಿದ್ದಾನೆ. ಈ ಸಂಬಂಧದಲ್ಲಿ ಆತನ ಶಾಸನಗಳು ಕರ್ನಾಟಕ ಹಾಗೂ ತಮಿಳುನಾಡಿನಲ್ಲಿ ದೊರೆತಿವೆ. 'ಕಂಚಿಯಾನ್ ಮೂಮೆ ಪರಾಜಿಸಿದೋರ್' ಎಂಬ ಬಿರುದನ್ನು ಆತ ಧರಿಸಿದ್ದ. ಪಟ್ಟದಕಲ್ಲು ಹಾಗೂ ಕಂಚಿಯ ರಾಜಸಿಂಹೇಶ್ವರ ದೇವಾಲಯಗಳಲ್ಲಿನ ಶಾಸನಗಳು ಇಂದಿಗೂ ಇದಕ್ಕೆ ಸಾಕ್ಷಿಯಾಗಿವೆ.

v) 'ಕಾವ್ಯಾದರ್ಶ' ಗ್ರಂಥದಲ್ಲಿ ದಂಡಿ ಚೋಳರ ರಾಜ್ಯದ ಗಡಿಗೆರೆಗಳನ್ನು ಒಂದಷ್ಟು ಹೇಳಿದ್ದಾನೆ :

ಚೋಲಾಃ ಕಾಲಾಗುರುಶ್ಯಾಮ ಕಾವೇರೀ ತೀರ ಭೂಮಾಯಃ
ಇತಿ ದೇಶವಿರೋಧಿನ್ಯಾ ವಾಚಃ ಪ್ರಸ್ಥಾನಮೀದೃಶಮ್ ॥[೬]

(ಚೋಳ ರಾಜ್ಯದ ಕಾವೇರೀ ತೀರದಲ್ಲಿ ಕಾಲಾಗರು ತರುಗಳಿಂದ ಕಪ್ಪಾದ ಭೂಮಿಯೇ ಇಲ್ಲದಿರುವಾಗ 'ಕಾಲಾಗರು ತರುಗಳಿಂದ ಕಪ್ಪಾದ ಭೂಮಿಗಳು – ಪ್ರದೇಶ – ಇದೆಯೆಂದು ಹೇಳುವುದು 'ದೇಶವಿರೋಧಿ' ಎಂಬ ಬಗಗೆ ನಿದರ್ಶನವಾಗುತ್ತದೆ). 'ದೇಶವಿರೋಧಿ' ಎಂಬ ದೋಷಕ್ಕೆ ನಿದರ್ಶನವಾದ ಈ ಉದಾಹರಣೆ ಚೋಳರ ರಾಜ್ಯದ ಎಲ್ಲೆಯನ್ನು ಕಾವೇರೀ ತಟದಲ್ಲಿ ನಿರ್ಧರಿಸಿಕೊಡುತ್ತದೆ. ಶ್ರೀಗಂಧ ಚಂದನದ ತರುಗಳು ಚೋಳ ದೇಶದಲ್ಲಿ ಕಾವೇರೀ ತಟದಲ್ಲಿ ಬೆಳೆಯುತ್ತಿದ್ದಿಲ್ಲ. ಸಸ್ಯ ಸೀಮಾರೇಖೆ (*Botanical border*) ಸ್ಥೂಲರೂಪದಲ್ಲಿ ಇಲ್ಲಿದೆ. 'ಕವಿರಾಜಮಾರ್ಗ' ಕೃತಿಯ ಕರ್ತೃ ಹೇಳಿದ ಕನ್ನಡ ನಾಡಿನ ಕಾವೇರೀ ತೀರವನ್ನು ಇಲ್ಲಿ ಗುರುತಿಸಲು ಸಾಧ್ಯವಿದೆ. ಚೋಳರ ರಾಜ್ಯದ ಸೀಮಾರೇಖೆಗೆ ಕರ್ನಾಟಕ ರಾಜ್ಯದ ಸೀಮಾರೇಖೆ ಆನಿಕೊಂಡಿತ್ತು ಎಂದು ಹೇಳಿದರೆ ತಪ್ಪಾಗದು.[೭] ಸಸ್ಯಶಾಸ್ತ್ರ ತಜ್ಞರಾದ ಶ್ರೀ ಕೆ.ಜಿ. ಸದಾನಂದ (ಸಸ್ಯಶಾಸ್ತ್ರ ತಜ್ಞ) ಗಂಧದ ಮರಗಳು ಚಂದನ ತರುಗಳು (ಕಾಲಾಗರು ವೃಕ್ಷಗಳು) ಕಾವೇರೀ ತೀರದಲ್ಲಿ ಇಂದಿಗೂ ಕರ್ನಾಟಕದ ಗಡಿಗೆರೆಗಳಲ್ಲೇ ಇವೆ ಮತ್ತು ತಮಿಳುನಾಡಿನಲ್ಲಿ ಇಲ್ಲವೆಂದು ತಿಳಿಸುತ್ತಾರೆ. ಈ ಪ್ರದೇಶದಲ್ಲಿ ಪ್ರಾಚೀನ ಕನ್ನಡ ಶಾಸನಗಳು ದೊರೆತಿದ್ದು ಇದನ್ನೇ ಸಾರುತ್ತವೆ. ಇತಿಹಾಸ, ಸಾಕ್ಷೀಕರಣದ ವಿಜ್ಞಾನ. ಅದು ಊಹಾಪೋಹಗಳ ಸರಮಾಲೆಯಲ್ಲ. ಇಮ್ಮಡಿ ಪುಲಿಕೇಶಿಯು ದಿಗ್ವಿಜಯದಲ್ಲಿ ರಾಮಸೇತುವಿನವರೆಗಿನ ಪ್ರದೇಶವನ್ನು ಗೆದ್ದದ್ದು ಐಹೊಳೆಯಲ್ಲಿ ಇರುವ ರವಿಕೀರ್ತಿ ಬರೆದ ಶಾಸನದಿಂದ ಸ್ಪಷ್ಟವಿದೆ. ಕ್ರಿ.ಶ. ೬೪೨ರ ಸುಮಾರಿಗೆ ಪಲ್ಲವ ದೊರೆ ನರಸಿಂಹವರ್ಮ–I (ಕ್ರಿ.ಶ. ೬೩೦–೬೬೮) ಯುದ್ಧದಲ್ಲಿ ಚಾಲುಕ್ಯರನ್ನು ಸುಮಾರು ಕಡೆ ಸೋಲಿಸಿ ಬಾದಾಮಿಯನ್ನು ಕೊಳ್ಳೆ ಹೊಡೆಯುತ್ತಾನೆ. ಇಮ್ಮಡಿ ಪುಲಿಕೇಶಿಯನ್ನೂ ಸಾಯಿಸುತ್ತಾನೆ. ೬೪೨–೬೫೪/೫೫ರವರೆಗಿನ ಕಾಲ ಕತ್ತಲೆಯ ಕಾಲ. ಈ ಅವಧಿಯ ಯಾವೊಂದು ದಾಖಲೆಯೂ ಉಪಲಬ್ಧವಾಗಿಲ್ಲ. ಕಾರಣ ತತ್ಕಾಲೀನ ಪರಿಸ್ಥಿತಿ ಊಹೆಗೆ ಎಡೆ ಮಾಡಿಕೊಟ್ಟಿದೆ. ಪಲ್ಲವರಿಂದ ಬಾದಾಮಿಯು ಮುತ್ತಲ್ಪಟ್ಟು ಆ ದುರ್ಗದ ಒಡೆಯ ಇಮ್ಮಡಿ ಪುಲಿಕೇಶಿ ಸೋತಾಗ – ಸತ್ತಾಗ – ಆ ದುರ್ಗವು ವೈರಿಗಳಿಂದ ಕೊಳ್ಳೆ ಹೊಡೆಯಲ್ಪಟ್ಟಿತು. ಪುಲಿಕೇಶಿಯ ಮಕ್ಕಳು ಕೆಲವರು ಬಾದಾಮಿಯಿಂದ ಹೊರಗೆ ಇದ್ದವರು ಸೇನೆಯನ್ನು ಸಾಕಷ್ಟು ದೊಡ್ಡ ಮೊತ್ತದಲ್ಲೇ ಕಟ್ಟಿಕೊಂಡು ಆಕ್ರಮಣಗೈದು ದುರ್ಗದ ಒಳಗೆ ಬೀಡುಬಿಟ್ಟ ವೈರಿಗಳನ್ನು ಸದೆಬಡಿಯಲು ಒಂದಷ್ಟು ಸಮಯ ತೆಗೆದುಕೊಂಡಿದ್ದರೆ ಅಚ್ಚರಿಪಡುವಂತಹುದೇನಿಲ್ಲ. ಈ ಅವಧಿಯ ವಿವರಗಳು ಸಧ್ಯ ದೊರಕಿಲ್ಲ. ಆದರೆ ಅಪ್ಪ ಸತ್ತನೆಂದು ಪುತ್ರ ವಿಕ್ರಮಾದಿತ್ಯ–I ಕೇವಲ ನೋವಿನ ಆಳದಲ್ಲಿ ಮುಳುಗದೆ ಶತ್ರುಗಳನ್ನು ಸದೆಬಡಿದ. 'ಚಿತ್ರಕಂಠ' ಎಂಬ ತನ್ನ ಶ್ರೇಷ್ಠ ಕುದುರೆಯನ್ನು ಏರಿ ಅನೇಕ ಸಮರಗಳಲ್ಲಿ ಏಕಾಂಗವೀರನಾಗಿ ವೈರಿಗಳ ಸೇನೆಯನ್ನು ತರಿದು ರಕ್ತದ ಕಾಲುವೆಯನ್ನು ಹರಿಸಿ ಜಯಶ್ರೀಯನ್ನು ವರಿಸಿ ಒರೆಯಲ್ಲಿ ಕೂರಿಸಿದ; ಅವನ ಖಡ್ಗ ಹೊರಗೆ ರಿಪುನೃಪರ ರುಧಿರ ಜಲವನ್ನು ಕುಡಿಯುತ್ತಿತ್ತು.[೮] ಚಾಲುಕ್ಯರ ಸಾಮ್ರಾಜ್ಯ ಮೂವರು ರಾಜರಲ್ಲಿ ಹಂಚಿ ಹೋಯಿತು. 'ಅವನಿಪತಿ ತ್ರಿತಯಾಂತರಿತ' ಆಯಿತು. ಈ ಮೂವರು ಯಾರು ಎನ್ನುವುದು ಈಗಲೂ ಸಮಸ್ಯೆಯೆ. ಏಕೆಂದರೆ ಪಲ್ಲವ, ಚೋಳ, ಪಾಂಡ್ಯ, ಕೇರಳ (ಚೇರ) ಹಾಗೂ ಸಿಂಹಳ ಎಂಬ ಐದು ರಾಜಮನೆತನಗಳು ಸೇರಿ ಸಂಚು ನಡೆಸಿ ಬಾದಾಮಿ ಚಾಳುಕ್ಯ ಸಾಮ್ರಾಜ್ಯವನ್ನು ನಾಶ ಮಾಡಿದ್ದವು. ಅದರಲ್ಲಿ ಕೆಲವರು ಎರಡೂ ಪಕ್ಷಗಳವರಾಗಿ (ಗದ್ದ ಎತ್ತಿನ ಬಾಲ ಹಿಡಿಯಲು) ಪ್ರತ್ಯಕ್ಷವೋ ಪರೋಕ್ಷವೋ ತಮ್ಮ ತಮ್ಮ ಬೇಳೆ ಬೇಯಿಸಿಕೊಳ್ಳುವುದೂ ಲೋಕ ರೂಢಿಯೆ. ಈ ದಿಶೆಯಲ್ಲಿ ಒಂದನೆಯ ವಿಕ್ರಮಾದಿತ್ಯನ ಗದ್ವಾಲಶಾಸನ ಬಹಳ ಮಹತ್ವದ್ದಾಗಿದೆ. ಇದನ್ನು ಅವನ ಆಳ್ವಿಕೆಯ ಕಾಲದಲ್ಲೇ ಬರೆಯಲಾಗಿದೆ.

ಅಚ್ಚರಿಯ ಸಂಗತಿ ಎಂದರೆ ಚೋಳ ಚರಿತ್ರೆಯನ್ನು ಬರೆದವರಾರೂ ಇದನ್ನು ಗಮನಿಸಿಲ್ಲ. ಚಾಳುಕ್ಯರ ಚರಿತ್ರೆಯನ್ನು ಬರೆದವರಲ್ಲಿ ಕೆಲವರು ಇದರ ವಸ್ತುವನ್ನು ಸರಿಯಾಗಿ ಗಮನಿಸಿ ಬರೆದಿಲ್ಲ. ಒಟ್ಟಾರೆ ಚರಿತ್ರೆ ಚರಿತ್ರೆಯಾಗಿಲ್ಲ. ಅದು ಕಾಕ-ಏಕ-ದೃಷ್ಟಿಯದ್ದಾಗಿದೆ.

ವಿಕ್ರಮಾದಿತ್ಯನ ಈ ಶಾಸನದಿಂದ ಎಂದರೆ ಕ್ರಿ.ಶ. ೬೭೪ರಿಂದ, ವಕ್ಕಲೇರಿಯಲ್ಲಿ ದೊರೆತ ಇಮ್ಮಡಿ ಕೀರ್ತಿವರ್ಮನ ಶಾಸನದ ಕಾಲದವರೆಗಿನ ಎಂದರೆ ಕ್ರಿ.ಶ. ೭೫೭ರ ವರೆಗಿನ ಉಪಲಬ್ಧ ಅನೇಕ ಶಾಸನಗಳಲ್ಲಿ ವಿಕ್ರಮಾದಿತ್ಯನ ಹಾಗೂ ಆತನ ಶ್ರೇಷ್ಠ ಕುದುರೆ 'ಚಿತ್ರ ಕಣ್ಠ' ವಾಹನದ ಪ್ರಸ್ತಾಪ ಬಂದಿದೆ.[೯] ಇಲ್ಲಿ ಒಂದು ಗಮನಾರ್ಹವಾದ ಚಾರಿತ್ರಿಕ ಸಂಗತಿ ಇದೆ. ಅದೇಂದರೆ ವಿಕ್ರಮಾದಿತ್ಯನು ಚೋಳರ ರಾಜಧಾನಿ ಉರಗಪುರದಲ್ಲಿ ದಿಗ್ವಿಜಯದ ಉಪ್ಪಯಣದ ಬೀಡನ್ನು ಬಿಟ್ಟಿದ್ದಾನೆ. ಆದರೆ ಅದನ್ನು ಕೊಳ್ಳೆ ಹೊಡೆದುದಕ್ಕೆ – ಹಾಳು ಮಾಡಿದುದಕ್ಕೆ ಸಾಕ್ಷಿ ಇಲ್ಲ. ಪ್ರತಿಯಾಗಿ ಪಲ್ಲವರ ರಾಜಧಾನಿ ಕಾಞ್ಚೀಪುರವನ್ನು ಮುರಿದಿದ್ದಾನೆ. ಅದರ ಒಡೆಯರಾದ ನರಸಿಂಹ ಮಹೇಂದ್ರ ಹಾಗೂ ಈಶ್ವರ ರಾಜರನ್ನು ಯುದ್ಧದಲ್ಲಿ ಸೋಲಿಸಿ 'ಶ್ರೀವಲ್ಲಭ', ರಣರಸಿಕ' ಮತ್ತು 'ರಾಜಮಲ್ಲ' (ಮಾಮಲ್ಲನನ್ನು ಸೋಲಿಸಿದುದಕ್ಕೆ) ಎಂಬ ಬಿರುದುಗಳನ್ನು ಧರಿಸಿದ್ದಾನೆ. 'ಅವನಿಪತಿತ್ರಿತ ಯಾಂತ್ವರಿತ' ರಾಜ್ಯ 'ವಿಕ್ರಮಾಕಾಂತದಿಂದ' ಕೈವಶವಾಯಿತು.[೧೦] ಉತ್ತರಾಪಥವನ್ನು ಗೆದ್ದುದಕ್ಕೆ 'ಅನಿವಾರಿತ' ಬಿರುದಿನೊಂದಿಗೆ 'ಪರಮೇಶ್ವರ' ಪದವಿಯು ದೊರೆಕೊಂಡಿತು. ಕ್ರಿ.ಶ. ೬೭೪ರ ಸುಮಾರಿಗೆ ಎಲ್ಲೆಲ್ಲೂ ಅವನದೇ ಅಧಿಕಾರ ಸ್ಥಾಪಿತವಾಗಿತ್ತು. ಶಾಂತ ಸಾಮ್ರಾಜ್ಯದಲ್ಲಿ ಆತನ ರಾಣಿ ಗಂಗಮಹಾದೇವಿಯು ಉರಗಪುರದಲ್ಲಿ ಇದ್ದಾಗ ಆ 'ಚೋಳಿಕ ವಿಷಯ' ಪ್ರದೇಶವಲ್ಲಿ ವೇದೂಳ್ಳಿ (ವೇದ್ವಲ್ಲಿ < ವೇದವಲ್ಲಿ) ಗ್ರಾಮವನ್ನು ದತ್ತಿಯನ್ನಾಗಿ ಈಯಲು ಇಚ್ಛಿಸಿದಳು. ರಾಣಿಯ ವಿಜ್ಞಾಪನೆಯ ಮೇರೆಗೆ ವೈಶಾಖ ಮಾಸದ ಪೌರ್ಣಮಿಯಂದು ದಾನವನ್ನು ನೀಡಲಾಯಿತು. ಈ ಸಮಯದ ಹಬ್ಬಗಳನ್ನು ಮನಗಂಡರೆ ದಾನ ಕೊಟ್ಟ ಸಂದರ್ಭ ವಿಶದವಾಗುತ್ತದೆ. ಔಚಿತ್ಯ ಕಣ್ಣ ಮುಂದೆ ನಿಲ್ಲುತ್ತದೆ. ವೈಶಾಖದ ಹುಣ್ಣಿಮೆಯಂದು ದತ್ತಿ ಕೊಟ್ಟ ವಿವರ ಹೀಗಿದೆ : ಆ ದಿವಸ ಕೂರ್ಮಜಯಂತಿ. ಅದಕ್ಕೂ ಮುನ್ನಾದಿನ ಎಂದರೆ ಚತುರ್ದಶಿ ದಿವಸ ನರಸಿಂಹ ಜಯಂತಿ. ನರಸಿಂಹದೇವರು ಇಂದಿಗೂ ಅನೇಕ ಮನೆಗಳಲ್ಲಿ ಕುಲದೇವರಾಗಿದ್ದು, ಅದು ಒಂದು ಉಪವಾಸದ ದಿನವಾಗಿದೆ. ಈ ಎರಡು ದಿವಸಗಳು ಉಪವಾಸ ಹಾಗೂ ಪಾರಣೆಯ ವಿಶೇಷ ಪೂಜಾ ದಿನಗಳಾಗಿವೆ. ಬಾದಾಮಿ ಚಾಳುಕ್ಯ ರಾಜರ 'ಜಯಸಿಂಹ' ಹಾಗೂ 'ಪುಲಿಕೇಶಿ' ಹೆಸರುಗಳು ನರಸಿಂಹ ದೇವರ ನೆನಪನ್ನು ತಂದುಕೊಡುತ್ತವೆ. ಇದೇ ತಿಂಗಳಲ್ಲಿ ಬನಶಂಕರಿಯ ಕುಲಧರ್ಮವೂ ಬರುತ್ತದೆ. ಆಕೆಯ ಪೂಜಾನಿಮಿತ್ತವೂ ಆಗಬಹುದು. ಶಬ್ದಶಃ ಹೇಳದಿದ್ದರೂ ನರಸಿಂಹ ಚತುರ್ದಶಿ ನಿಮಿತ್ತವೇ ದಾನವನ್ನು ನೀಡಿರಬೇಕು. ಕರ್ನಾಟಕದ ಚಕ್ರವರ್ತಿ ಹಾಗೂ ರಾಣಿ ತಮಿಳುನಾಡಿನಲ್ಲಿ ಚೋಳಿಕ ವಿಷಯದಲ್ಲಿನ ವಿಜಯಸ್ಕನ್ಧಾವರದ ನೆಲೆವೀಡಿನಲ್ಲಿ –ಉರಗಪುರದಲ್ಲಿ – ಅಲ್ಲಿನ ಒಂದು ಗ್ರಾಮವನ್ನು ದತ್ತಿಯಾಗಿತ್ತುದು ರಾಜಕೀಯವಾಗಿ ಸಾಂಸ್ಕೃತಿಕವಾಗಿ ಬಹಳ ಮಹತ್ವದ ಸಂಗತಿಯಾಗಿದೆ.

vi) ಗಂಗವಂಶದ ಭೂವಿಕ್ರಮನ ತಾಯಿ, ಕಾವೇರೀ ನದಿಗೆ (ತಮಿಳುನಾಡಿನಲ್ಲಿ) ಕಟ್ಟೆಯನ್ನು ಕಟ್ಟಿಸಿದ ಕರಿಕಾಲ ವಂಶದಲ್ಲಿನ ಚೋಳ ನೃಪ ಸಂಜಾತೆ ಎಂಬುದು ಭೂ ವಿಕ್ರಮನ ಬಿದಿರೂರು ಶಾಸನದಿಂದ ತಿಳಿದು ಬರುತ್ತದೆ. ಗಂಗ ಚೋಳರ ಸಂಬಂಧ ಗಮನಾರ್ಹ ಸಂಗತಿ. ಈ ಶಾಸನದ ಕಾಲ. ಶಾ.ಶ. ೫೫೬. ಎಂದರೆ ಕ್ರಿ.ಶ. ೬೩೪. ಈ ವರ್ಷಕ್ಕೆ ೨೫ ವರ್ಷ ಪೂರ್ವದಲ್ಲಿ ಭೂ ವಿಕ್ರಮನು ಪಟ್ಟಬಂಧೋತ್ಸವ ಮಾಡಿಕೊಂಡಿದ್ದನು. ಅರ್ಥಾತ್ ಅವನ ಆಳ್ವಿಕೆಯ ವರ್ಷ ಕ್ರಿ.ಶ. ೬೦೯ರಿಂದ ಆರಂಭವಾಗುತ್ತದೆ. ಇದು ಇಮ್ಮಡಿ ಪುಲಿಕೇಶಿಯ ಕಾಲವೇ ಆಗುತ್ತದೆ. ಐಹೊಳೆಯ ರವಿಕೀರ್ತಿಯ ಶಾಸನ (ಕ್ರಿ.ಶ. ೬೩೪) ಮತ್ತು ಈ ಬಿದಿರೂರ ಶಾಸನಗಳು ಒಂದೇ ವರ್ಷದಲ್ಲಿ ಬರೆಯಲ್ಪಟ್ಟವೆ.[೧೧]

vii) ರಾಷ್ಟ್ರಕೂಟ ಚಕ್ರವರ್ತಿ ದಂತಿದುರ್ಗನು ಸೋಲಿಸಿದ ರಾಜಮನೆತನಗಳಲ್ಲಿ ಚೋಳರದೂ ಒಂದು :

ಕಾಂಚೀಶ ಕೇರಳ ನರಾಧಿಪ ಚೋಳಪಾಣ್ಡ್ಯ । ಶ್ರೀಹರ್ಷ ವಜ್ರಟ ವಿಭೇದ ವಿಧಾನ ದಕ್ಷಂ
ಕರ್ನಾಟಕಂ ಬಲಮಚಿನ್ತ್ಯಮಜೇಯಮನ್ಯೈಃ । ಭೃತ್ಯೇಃ ಕಿಯತ್ಭಿಪಿಯಃ ಸಹಸಾಜಿಗಾಯ ॥[೧೨]

'ಸಾಮನಗಡ ಶಾಸನ' ಎಂದು ಪ್ರಸಿದ್ಧವಾದ ಈ ಶಾಸನವನ್ನು ಕ್ರಿ.ಶ. ೭೫೪ರಲ್ಲಿ ಬರೆಯಲಾಗಿದೆ. ಈ ದಂತಿದುರ್ಗನ ತಾಯಿ 'ಸೋಮಾಂಬಯೀ' ಚಾಳುಕ್ಯ ಕುಲ ಸಂಜಾತೆ.

viii) ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಓರ್ವ ಮಗಳನ್ನು ಗಂಗ ದೊರೆ ಒಂದನೆಯ ಬೂತುಗನಿಗೆ ಕೊಟ್ಟು ಮದುವೆ ಮಾಡಿದ್ದರೆ, ಇನ್ನೊಬ್ಬ ಮಗಳನ್ನು (ಶಂಖಾದೇವಿ) ಪಲ್ಲವ ನಂದಿವರ್ಮನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಆತನ ಮೊಮ್ಮಗಳನ್ನು ಚೋಳ ದೊರೆ ಆದಿತ್ಯ–I (ಕ್ರಿ.ಶ. ೮೭೧–೯೦೭) ಎಂಬುವನಿಗೆ ಕೊಟ್ಟು ಮದುವೆ ಮಾಡಲಾಗಿತ್ತು.[೧೩]

ಆಕೆಗೆ ಕನ್ನರ ದೇವ ಎಂಬ ಮಗನಿದ್ದನು. ಆದಿತ್ಯನ ಅನಂತರ ಸಿಂಹಾಸನಕ್ಕಾಗಿ ಆತನ ಮಕ್ಕಳಾದ ಪರಾಂತಕ–I ಹಾಗೂ ಕನ್ನರ ದೇವ ಇವರಲ್ಲಿ ಯುದ್ಧವಾಯಿತು. ಇಮ್ಮಡಿ ಕೃಷ್ಣನು ಯುದ್ಧದಲ್ಲಿ ಸೋತನು. ಪರಾಂತಕನ ಬೆಳವಣಿಗೆ ಉತ್ತಮ ರೀತಿಯಲ್ಲಿ ಆಯಿತು. ಪಲ್ಲವರ ಅಧೀನತೆ – ರಾಷ್ಟ್ರಕೂಟರ ಅಧೀನತೆ – ಎಲ್ಲ ತಪ್ಪಿ ಹೋದವು. ನಾಲ್ಕನೇ ಗೋವಿಂದನು ಕ್ರಿ.ಶ. ೯೨೮–೯೨೯ರಲ್ಲಿ ತನ್ನ ಅಣ್ಣ ಇಮ್ಮಡಿ ಅಮೋಘವರ್ಷನನ್ನು ತಳ್ಳಿ ರಾಷ್ಟ್ರಕೂಟ ಸಿಂಹಾಸನವನ್ನು ಅಲಂಕರಿಸಿದನು.[೧೪] ಇದು ಶಾ.ಶ. ೮೫೧, ವಿಕೃತಿ, ಪುಷ್ಯ ಬ.೫. ಬುಧವಾರ (ಕ್ರಿ.ಶ. ೯೨೯, ಡಿಸೆಂಬರ್ ೨೩) ದಿವಸದಂದು ಬರೆಯಲಾದ ಅಂದೂರಾ ಶಾಸನದಿಂದ ಖಚಿತವಿದೆ.

ಈ ನಾಲ್ಕನೆಯ ಗೋವಿಂದನಿಗೆ ಪರಾಂತಕನ–I ಪುತ್ರಿ ವೀರಮಾದೇವಿಯನ್ನು ಕೊಟ್ಟು ಮದುವೆಯಾಗಿತ್ತು. ಆಕೆಯನ್ನು 'ಶೋಟಿಪ್ಪೆರುಮಾನಡಿಗಳ್ ಪರಾನ್ತಕ ದೇವರ್ ತಿರುಮಗಳರ್' ಎಂದು ತಕ್ಕೋಲಂ ಶಾಸನವೊಂದು ವರ್ಣಿಸಿದೆ. ರಾಷ್ಟ್ರಕೂಟ ಸಾಮ್ರಾಜ್ಯದ ಸಿಂಹಾಸನಕ್ಕೆ ಮುಮ್ಮಡಿ ಇಂದ್ರನ ಪುತ್ರ ನಾಲ್ಕನೆಯ ಗೋವಿಂದ ಹಾಗೂ ಆತನ ತಮ್ಮ ಭದ್ರದೇವ ಹಾಗೂ ಆತನ ಮಗ ಮುಮ್ಮಡಿ ಕೃಷ್ಣ (ಕ್ರಿ.ಶ. ೯೩೯–೯೬೮) ಇವರಲ್ಲಿ ಜ್ಞಾತಿಯುದ್ಧ ಆರಂಭವಾಯಿತು. ಗೋವಿಂದನ ಗುಂಪು ಅವನ ಮಾವ ಪರಾನ್ತಕನ ನೇತೃತ್ವದಲ್ಲಿ ಮತ್ತು ಮುಮ್ಮಡಿ ಕೃಷ್ಣನ ಗುಂಪು ಅವನ ನೇತೃತ್ವದಲ್ಲಿ ತಕ್ಕೋಲಂ ಸ್ಥಳದಲ್ಲಿ ಸಂಧಿಸಿದವು. ಈ ಯುದ್ಧದಲ್ಲಿ ಪರಾಂತಕನ ಪುತ್ರ ರಾಜಾದಿತ್ಯನನ್ನು, ಅವನು ಕುಳಿತ ಆನೆಯ ಅಂಬಾರಿಯಲ್ಲೇ ಕೊಂದರು. ಬಿಸುಗೆಯೆ ಕಳನಾಗಿ ಮೆರೆಯಿತು. ಈ ಯುದ್ಧದಲ್ಲಿ ಪಂಪನ ಆಶ್ರಯದಾತ ಇಮ್ಮಡಿ ಅರಿಕೇಸರಿ ಹಾಗೂ ಗಂಗ ದೊರೆ ಇಮ್ಮಡಿ ಬೂತುಗ ವಿಶೇಷವಾದ ಪಾತ್ರಗಳನ್ನು ನಿರ್ವಹಿಸಿದರು; ಈ ಇಬ್ಬರೂ ಮುಮ್ಮಡಿ ಕೃಷ್ಣನಿಗೆ ಭಾವ ಮೈದುನರು. ಆತನ ಸೋದರಿಯರನ್ನು ಮದುವೆ ಆಗಿದ್ದರು. ಈ ತಕ್ಕೋಲಂ ಯುದ್ಧವು, ಕ್ರಿ.ಶ. ೯೪೦ಕ್ಕೆ ಎಂದರೆ ದೇವಳೀ ತಾಮ್ರ ಶಾಸನದ ಪ್ರಕಾರ ಅದರ ತೇದಿ ಶಾ.ಶ. ೮೬೨ ಶಾರ್ವರಿ ಸಂವತ್ಸರ ವೈಶಾಖ ಬಹುಳ ೫(೨೯–೦೪–೯೪೦, ಬುಧವಾರ)ರ ವೇಳೆಗೆ ಮುಗಿದು ಹೋಗಿತ್ತು. ಮುಮ್ಮಡಿ ಕೃಷ್ಣ ತನ್ನ ಆಡಳಿತವನ್ನು ತಮಿಳುನಾಡಿನಲ್ಲಿ ನೇರವಾಗಿಯೇ ನಡೆಸಿದನು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. ಗಿರಿನಗರ ಪಾಠ, **ಅಶೋಕ**, ಲೇ. ಪ್ರೊ. ನಾ.ಕಸ್ತೂರಿ, ೧೯೫೨, ಮೈಸೂರು ವಿಶ್ವವಿದ್ಯಾನಿಲಯ, ಪು.೧೪೯.

೨. **'ಚೋಲಕ'** ಧರಿಸಿದವನು ಚೋಲ. 'ಲ'ಕಾರ 'ಳ' ಕಾರಕ್ಕೆ ಎಡೆ ಕೊಟ್ಟು ಬದಲಿಯಾಗುತ್ತದೆ. ಆ 'ಲ' ಕಾರ 'ಡ' ಕಾರಕ್ಕೂ ಎಡೆ ಕೊಡುತ್ತದೆ ಮತ್ತು ಡ > ಟ ಕೂಡ ಆಗುತ್ತದೆ.

೩. ವಾತ್ಸಾಯನನ **'ಕಾಮಸೂತ್ರ'** ಗ್ರಂಥದ ಉಲ್ಲೇಖಗಳಿಗೆ ಆಕರ : *Sources of Karnataka History*, Vol.- I, ಎಸ್. ಶ್ರೀಕಂಠಶಾಸ್ತ್ರಿ ಪು.೧೦).

೪. *Ind. Art.* Vol. - XIX, p.16 (SKH. p.36).

೫. *Ep. Ind.* Vol. - VI, p.177.

೬. **ಕನ್ನಡ ಕಾವ್ಯಾದರ್ಶ,** (ಸಂ.) ಡಾ॥ ಕೆ. ಕೃಷ್ಣಮೂರ್ತಿ, ಪು.೧೨೩, ೧೯೭೫.

೭. **ಕವಿರಾಜಮಾರ್ಗ**, ೧–೩೬.

೮. **ಎಪಿಗ್ರಾಫಿಯಾ ಇಂಡಿಕಾ,** ಸಂಪುಟ–X, ವಿಕ್ರಮಾದಿತ್ಯನ (I) ತಾಮ್ರಶಾಸನ, ಪು.೧೦೩.

೯. (ಎ) ಬುದ್ಧನ 'ಕಂಟಕ', ಕುಮಾರರಾಮನ 'ಬೊಲ್ಲ' ಹಾಗೂ ರಾಣಾ ಪ್ರತಾಪನ 'ಚೇತಕ್' ಇವು ಬಹಳ ಪ್ರಸಿದ್ಧವಾದ ಕುದುರೆಗಳು; ಇವುಗಳಂತೆ 'ಚಿತ್ರಕಣ್ಣ' ಕೂಡ. 'ಬೊಲ್ಲ' ಎಂದರೆ ದೊಡ್ಡ ಹಣೆಪಟ್ಟಿ ಉಳ್ಳ ಕುದುರೆ. 'ಚಿತ್ರಕಣ್ಣ' ಎಂದರೆ ಕುತ್ತಿಗೆಯ ಮೇಲೆ ಎರಡು ಬಣ್ಣಗಳನ್ನು (ಕರಿಬಿಳಿ ಅಥವಾ ಕಂದು ಬಿಳಿ ಇತ್ಯಾದಿ) ಹೊಂದಿದ ಪಂಚಕಲ್ಯಾಣಿ ಕುದುರೆ.
(ಬಿ) S.I.I. Vol. - XX (Dr. G.S.Gai) Imsp. No. 4,5 & 6, pp.3-7.

೧೦. **'ರಾಜಮಲ್ಲ' > 'ರಾಚಮಲ್ಲ'** ಹೆಸರುಗಳು ಅಸ್ತಿತ್ವಕ್ಕೆ ಬಂದವು.

೧೧. *Sources of Karnataka History*, p.52.

೧೨. ಅದೇ, ಪು.೫೭–೫೮.

೧೩. *A History of South India*, K.A.N. Sastri, p.169.

೧೪. **ಅಂದೂರಾ ತಾಮ್ರಶಾಸನ** – (ವಿ.ವಿ. ಮಿರಾಶಿ) *Ep. Ind.* Vol. - XXXVI, p.257-272.


❋❋❋

# ಕಪ್ಪೆ ಅರಭಟ್ಟನ ಶಾಸನ ಮತ್ತು ಕೋಷ್ಠರಾಯ
## – ಒಂದು ಪರಿಶೀಲನೆ

– ಡಾ॥ ಎಸ್.ವಿ. ವೆಂಕಟೇಶಯ್ಯ*

**ಬಾ**ದಾಮಿಯ ಶಾಸನದ ಕಪ್ಪೆ ಅರಭಟ್ಟನು ಯಾರು ಎಂಬುದರ ಬಗ್ಗೆ ಈವರೆಗೆ ಸಾಕಷ್ಟು ವಾದವಿವಾದಗಳಾಗಿವೆ. ಆದರೆ ಯಾರೂ ಯಾವ ನಿರ್ಣಯಕ್ಕೂ ಇನ್ನೂ ಬರಲಾಗಿಲ್ಲ. ಕರ್ನಾಟಕ ಇತಿಹಾಸ ಅಕಾಡೆಮಿಯ ಪ್ರಕಟಣೆಯಾದ ಇತಿಹಾಸ ದರ್ಶನದ ೩೦ನೆಯ ಸಂಪುಟದಲ್ಲಿ ಡಾ॥ ಎಚ್.ಎಸ್. ಗೋಪಾಲರಾಯರು 'ಕಪ್ಪೆ ಅರಭಟ್ಟನನ್ನು ಗುರುತಿಸುವ ಒಂದು ಪ್ರಯತ್ನ' ಎಂಬ ಲೇಖನದಲ್ಲಿ. ಅವನನ್ನು ಬಾದಾಮಿ ಚಲುಕ್ಯರ ಇಮ್ಮಡಿ ಪುಲಿಕೇಶಿ ಎಂದು ಅಭಿಪ್ರಾಯಪಡುತ್ತಾರೆ. ಗೋಪಾಲರಾಯರೊಂದಿಗೆ ಈ ವಿಚಾರದಲ್ಲಿ ನಾನು ಚರ್ಚೆ ಮಾಡಿದ್ದೇನೆ. ಆದರೆ ಅವರು ಕೊಡುವ ಕಾರಣಗಳಿಂದ–ದೃಷ್ಟಿಕೋನಗಳಿಂದ ಭಿನ್ನವಾದ ರೀತಿಯಲ್ಲಿ ವಿವರಿಸಬಯಸುತ್ತೇನೆ.

ಇಡೀ ಶಾಸನವನ್ನು ಗಮನಿಸಿದಾಗ, ಕಪ್ಪೆ ಅರಭಟ್ಟ ಸಾಮಾನ್ಯ ವ್ಯಕ್ತಿಯಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಅವನು ಒಬ್ಬ ಮಹಾವ್ಯಕ್ತಿಯೋ ರಾಜವಂಶೀಯನೋ ಆಗಿರುವಂತೆ ತೋರುತ್ತದೆ.

ರವಿಕೀರ್ತಿ ರಚಿಸಿದ ಐಹೊಳೆಯಲ್ಲಿರುವ ಮೇಗುತಿಯ ಪ್ರಶಸ್ತಿ ಶಾಸನ, ಇಮ್ಮಡಿ ಪುಲಿಕೇಶಿಯ ದಿಗ್ವಿಜಯ ಸಾಧನೆಗಳ ಬಣ್ಣನೆಗೆ ಮೀಸಲಾಗಿದೆ. ಅವನು ನರ್ಮದಾ ನದಿಯ ತೀರದವರೆಗೆ ಹೋಗಿ ಹರ್ಷನನ್ನು ಸೋಲಿಸಿದ್ದು, ಪಲ್ಲವ ಮಹೇಂದ್ರವರ್ಮನನ್ನು ಜಯಿಸಿದ್ದು – ಮೊದಲಾದ ಪ್ರಮುಖ ವಿಚಾರಗಳನ್ನು ಆ ಶಾಸನ ಉಲ್ಲೇಖಿಸುತ್ತದೆ.

ಚೀನಾದೇಶದ ಪ್ರವಾಸಿ ಹೂಯೆನ್‌ತ್ಸಾಂಗ್ ಪುಲಿಕೇಶಿಯ ಆಸ್ಥಾನಕ್ಕೆ ಭೇಟಿ ನೀಡಿದ್ದ. ಅವನು ಪುಲಿಕೇಶಿಯ ಸಾಮ್ರಾಜ್ಯದ ಸ್ಥಿತಿಗತಿಗಳ ಬಗ್ಗೆ ಸಕಾರಾತ್ಮಕವಾಗಿ ಹೇಳಿದ್ದಾನೆ. ಪುಲಿಕೇಶಿಯ ದಿಗ್ವಿಜಯಗಳಿಂದ ಅಪಾರ ಸಂಪತ್ತಿನ ಸಂಗ್ರಹ, ವ್ಯಾಪಾರ ವಹಿವಾಟುಗಳ ಅಭಿವೃದ್ಧಿಯಾಗಿ, ಐಯ್ಯಾವೊಳೆ ಐನೂರ್ವರಂತಹ ವ್ಯಾಪಾರೀ ಶ್ರೇಣಿಗಳು ತಲೆಯೆತ್ತಿದ್ದವು. ಉತ್ತಮ ಆಡಳಿತದಿಂದಾಗಿ ಸಾಮ್ರಾಜ್ಯದ ಸರ್ವಾಂಗೀಣ ಪ್ರಗತಿ ಸಾಧ್ಯವಾಗಿತ್ತು.

ಬಾದಾಮಿಯ ಚಲುಕ್ಯರು ಮತ್ತು ಕಂಚಿಯ ಪಲ್ಲವರು ರಾಜಕೀಯ ಬದ್ಧವೈರಿಗಳಾಗಿದ್ದರು. ಇಮ್ಮಡಿ ಪುಲಿಕೇಶಿಯು ಪಲ್ಲವರ ಮೊದಲನೆಯ ಮಹೇಂದ್ರವರ್ಮನನ್ನು ಸೋಲಿಸಿ, ಅವನು ಕಂಚಿಯಲ್ಲಿ ಅಡಗಿಕೊಳ್ಳುವಂತೆ ಮಾಡಿದನೆಂದು ಶಾಸನವೊಂದು ಹೇಳುತ್ತದೆ.

ಮಹೇಂದ್ರವರ್ಮನ ಮಗನಾದ ಮೊದಲನೆಯ ನರಸಿಂಹವರ್ಮನು ತಮ್ಮ ತಂದೆಗಾದ ಅವಮಾನದ ಸೋಲನ್ನು ತೀರಿಸಿಕೊಳ್ಳಲು ಬಾದಾಮಿಯ ಮೇಲೆ ಧಾಳಿ ಮಾಡಿ, ಸುಮಾರು ಕ್ರಿ.ಶ. ೬೪೨ರಲ್ಲಿ ಅದನ್ನು ಆಕ್ರಮಿಸಿ 'ವಾತಾಪಿಕೊಂಡ' ಎಂಬ ಬಿರುದನ್ನು ಧರಿಸಿದ. ಆ ಘಟನೆಯ ನಂತರ ನಮಗೆ ಪುಲಕೇಶಿಯ ಬಗ್ಗೆ ಏನೂ ತಿಳಿದಿಲ್ಲ. ಯುದ್ಧದಲ್ಲಿ ಅವನು ಮಡಿದಿರಬಹುದು ಎಂದು ಹೇಳುತ್ತಾರೆ. ಆನಂತರದ ೧೩ ವರ್ಷಗಳು ಚಲುಕ್ಯ ಸಾಮ್ರಾಜ್ಯದ ಗ್ರಹಣ ಕಾಲ. ಸಂಪೂರ್ಣ ಅಲ್ಲದಿದ್ದರೂ ಪಲ್ಲವರ ವಶದಲ್ಲಿದ್ದ ಚಲುಕ್ಯ ಸಾಮ್ರಾಜ್ಯ ಮತ್ತೆ ತಲೆ ಎತ್ತಿದುದು ಪುಲಿಕೇಶಿಯ ಕಿರಿಯ ಮಗ ಮೊದಲನೆಯ ವಿಕ್ರಮಾದಿತ್ಯನು ಅಧಿಕಾರಕ್ಕೆ ಬಂದಾಗ. ಅವನು ಸೈನ್ಯವನ್ನು ಕಟ್ಟಿ, ಪಲ್ಲವರನ್ನು ಸೋಲಿಸಿ, ಬಾದಾಮಿಯಲ್ಲಿ ಮತ್ತೆ ಚಲುಕ್ಯ ರಾಜ್ಯವನ್ನು ಸ್ಥಾಪಿಸುತ್ತಾನೆ.

---

* ಪ್ರಾದೇಶಿಕ ನಿರ್ದೇಶಕರು (ದಕ್ಷಿಣ ಭಾರತ), ನಂ.೫೨೧, ೫ನೆಯ ಮಹಡಿ, ಬಿ–೪ ವಿಂಗ್, ಯಮುನಾ ಬ್ಲಾಕ್, ನ್ಯಾಷನಲ್ ಗೇಮ್ಸ್ ವಿಲೇಜ್, ಕೋರಮಂಗಲ, ಬೆಂಗಳೂರು–೫೬೦೦೪೭.

ಮೊದಲನೆಯ ವಿಕ್ರಮಾದಿತ್ಯ ಹಾಗೂ ಆತನ ಮಗ ವಿನಯಾದಿತ್ಯರು ಸೇರಿ ತ್ರೈರಾಜ್ಯಕಾಂಚೀಪತಿ ಅಥವಾ ತ್ರೈರಾಜ್ಯಪಲ್ಲವಪತಿಗಳನ್ನು ಸದೆಬಡಿದು ರಾಜ್ಯವನ್ನು ಮತ್ತೆ ಕಟ್ಟಿಕೊಂಡದ್ದನ್ನು-ಅವರ ಶಾಸನಗಳು ಉಲ್ಲೇಖಿಸುತ್ತವೆ.

ಇಮ್ಮಡಿ ಪುಲಿಕೇಶಿಯ ಸೋಲಿನ ನಂತರ ನರಸಿಂಹವರ್ಮನು ಬಾದಾಮಿಯನ್ನು ಲೂಟಿ ಮಾಡಿ ಬೆಂಕಿ ಹಚ್ಚಿದ್ದ. ಬಾದಾಮಿಯಲ್ಲಿದ್ದ ಮೊದಲನೆಯ ಪುಲಿಕೇಶಿಯ ಶಾಸನದ ಬಹುಭಾಗವನ್ನು ಅಳಿಸಿ, ತನ್ನ ಶಾಸನವನ್ನು ಹಾಕಿಸಿದ್ದ. ಇದನ್ನು ಬಾದಾಮಿಯ ಜನ ಮರೆತಿರಲಿಲ್ಲ. ಒಳಗೊಳಗೇ ರೊಚ್ಚಿಗೆದ್ದಿದ್ದ ಪುಲಿಕೇಶಿಯ ಪ್ರಜೆಗಳು ಸೋತ ತಮ್ಮ ಅಭಿಮಾನದ ದೊರೆಯನ್ನು ಸದಾ ನೆನೆಯುತ್ತಿದ್ದರು. ಪುಲಿಕೇಶಿಯು ತನ್ನ ರಾಜ್ಯದಲ್ಲಷ್ಟೇ ಅಲ್ಲ ಹೊರದೇಶದಲ್ಲಿ ಪ್ರಸಿದ್ಧನಾಗಿದ್ದ. ಪರ್ಶಿಯಾದ ದೊರೆ ಇಮ್ಮಡಿ ಖುಸ್ರುವಿನ ಆಸ್ಥಾನಕ್ಕೆ ತನ್ನ ರಾಯಭಾರಿಗಳನ್ನು ಕಳುಹಿಸಿದ್ದ ಪುಲಿಕೇಶಿ, ಆ ದೊರೆಯ ರಾಯಭಾರಿಗಳನ್ನು ತನ್ನ ಆಸ್ಥಾನಕ್ಕೆ ಕರೆಸಿಕೊಂಡಿದ್ದ, ಪರ್ಶಿಯಾದ ಇತಿಹಾಸಕಾರ ಟಬರಿ ಈ ವಿಷಯವನ್ನು ಉಲ್ಲೇಖಿಸುತ್ತಾನೆ. ಅಜಂತಾದ ಗುಹೆಯಲ್ಲಿರುವ ವರ್ಣಚಿತ್ರವೊಂದರಲ್ಲಿ ಪರ್ಶಿಯಾದ ರಾಯಭಾರಿಗಳನ್ನು ಸ್ವಾಗತಿಸುತ್ತಿರುವವ ದೊರೆ ಪುಲಿಕೇಶಿ ಎಂದು ವಿದ್ವಾಂಸರ ಗುರುತಿಸಲು ಬಯಸುತ್ತಾರೆ.

ಪುಲಿಕೇಶಿಯ ಈ ಸ್ವಾಭಿಮಾನ-ಆಡಳಿತ ವೈಖರಿಗಳನ್ನು ಜನ ಎಂದೂ ಮರೆಯಲಿಲ್ಲ. ಅದು ಅವನ ಮಗ ವಿಕ್ರಮಾದಿತ್ಯ ಹಾಗೂ ಮೊಮ್ಮಗ ವಿನಯಾದಿತ್ಯರ, ಪಲ್ಲವರ ಮೇಲಿನ ವಿಜಯದ ನಂತರ ಮತ್ತಷ್ಟು ನೆನಪಿಗೆ ಬಂದಿರಬೇಕು. ವಿಕ್ರಮಾದಿತ್ಯನಿಗೆ ಪಲ್ಲವರ ಮೇಲೆ ಪ್ರಭುತ್ವವನ್ನು ಸಾಧಿಸುವುದಕ್ಕೆ ಅಂತಹ ನೆನಪಿನ ಸ್ಫೂರ್ತಿಯೇ ಕಾರಣವಾಗಿರಬೇಕು. ೧೩ ವರ್ಷಗಳ ಕಾಲ, ಪಲ್ಲವರ ನೇರ ಆಡಳಿತದಲ್ಲಿಲ್ಲದ ರಾಜ್ಯವನ್ನು ಮತ್ತೆ ಸಾಧಿಸಬೇಕಾದಾಗ ಪಡೆದ ವೀರೋಚಿತ ಮನಸ್ಸಿನ ಪ್ರತೀಕ ಕಪ್ಪೆ ಅರಭಟ್ಟನ ಶಾಸನ. ಆರಂಭದ ಸಂಸ್ಕೃತಿದಲ್ಲಿರುವ ಪ್ರಶಸ್ತಿಯ ಭಾಗ ಬಿಟ್ಟರೆ, ಶಾಸನ ಅಂದಿನ ತ್ರಿಪದಿ ಛಂದಸ್ಸಿನಲ್ಲಿ ರಚಿತವಾಗಿದೆ.

ಕಪ್ಪೆ ಅರಭಟ್ಟನನ್ನು ಶಿಷ್ಟಜನಪ್ರಿಯನೆಂದೂ ಕಷ್ಟಜನವರ್ಜಿತನೆಂದೂ ಕಲಿಯುಗ ವಿಪರೀತನೆಂದೂ ಸಂಸ್ಕೃತ ಭಾಗದಲ್ಲಿ ಹೊಗಳಿದೆ. ಸಾಧುಗಳಿಗೆ ಸಾಧುಪುರುಷನಾಗಿಯೂ, ಮಹಾವೀರರಿಗೆ ಮಹಾವೀರನಂತೆಯೂ ಇರುವ ಅರಭಟ್ಟನನ್ನು 'ಮಾಧವ'ನಲ್ಲದೆ ಬೇರೆ ಅಲ್ಲ ಎಂದು ಶಾಸನದಲ್ಲಿ ಕೀರ್ತಿಸಿದೆ. ಒಳ್ಳೆಯದನ್ನು ಮಾಡುವವರಿಗೆ ಒಳ್ಳೆಯದನ್ನು, ಕೆಟ್ಟದನ್ನು ಮಾಡುವವರಿಗೆ ಕೆಟ್ಟದ್ದನ್ನು ಅವರವರಿಗೆ ತಕ್ಕಂತೆ ಫಲವನ್ನು ನೀಡುವವನು ಅರಭಟ್ಟ. ಅವನನ್ನು ಎದುರಿಸುವುದೆಂದರೆ, ಕಟ್ಟಿದ ಸಿಂಹವನ್ನು ಬಿಚ್ಚಿದರೆ ಏನು ಮಾಡುತ್ತದೆ ಎಂದು ಉದಾಸೀನ ಮಾಡಿದವರ ಸ್ಥಿತಿಯಂತಾಗುತ್ತದೆ ಎಂದು ಶಾಸನ ಹೊಗಳುತ್ತದೆ.

ತಾನು ಬದುಕಿಲ್ಲದಿದ್ದರೂ ತನ್ನ ಗುಣದಿಂದ ಎಲ್ಲರ ಮನಸ್ಸನ್ನು ತುಂಬಿದ್ದ ಪುಲಿಕೇಶಿಯೇ ಈ ಕಪ್ಪೆ ಅರಭಟ್ಟನೆಂದು ಜನರಿಂದ ತುಂಬಿದ್ದ ಪುಲಿಕೇಶಿಯೇ ಈ ಕಪ್ಪೆ ಅರಭಟ್ಟನೆಂದೂ ಜನರಿಂದ ಕೀರ್ತಿತನಾದನೆಂದು ಹೇಳುವುದು ಹೆಚ್ಚು ಸಮಂಜಸವಾಗುತ್ತದೆ. ಆಂಧ್ರಪ್ರದೇಶದ ಕನ್ನಡ ಶಾಸನವೊಂದು ಪುಲಿಕೇಶಿಯನ್ನು 'ಎರೆಯಿತಿ ಅಡಿಗಳ್' ಎಂದು ಕರೆದಿರುವುದು ಈ ವಿಚಾರದಲ್ಲಿ ನೆರವಾಗುತ್ತದೆ. ಹಿರಿಯ ಎಂಬ ಅರ್ಥದ ಈ 'ಎರೆಯಿತಿ ಅಡಿಗಳ್'. ಮುಂದೆ 'ಕಪ್ಪೆ ಅರಭಟ್ಟ' ಎಂದಾಗಿ ಜನರ ಹೊಗಳಿಕೆಗೆ ಪಾತ್ರವಾಗಿರಬಹುದು. ಶಾಸನದ ಪಾಠ ರಚನೆ ಪುಲಿಕೇಶಿಯ ಬದುಕಿನ ಕಾಲದಲ್ಲಂತೂ ಆಗಿಲ್ಲ. ಏಕೆಂದರೆ, ಅದರ ಲಿಪಿಯೂ ಸಹ ೭ನೆಯ ಶತಮಾನದ ಎರಡನೆಯ ಭಾಗಕ್ಕೆ ಸೇರುತ್ತದೆ. ಬಾದಾಮಿಯನ್ನು ಚಲುಕ್ಯರು ಮತ್ತೆ ವಶಪಡಿಸಿಕೊಂಡ ಮೇಲೆ ಪುಲಿಕೇಶಿಯ ಈ 'ಕಪ್ಪೆ ಅರಭಟ್ಟ' ಪ್ರಶಸ್ತಿ ರಚಿತವಾಗಿರಬೇಕು.

ಬಾದಾಮಿ ಪರಿಸರದ ನೈಸರ್ಗಿಕ ಗುಹೆಯೊಂದರಲ್ಲಿರುವ ರಾಜವಂಶಸ್ಥರಿಗೆ ಸೇರಬಹುದಾದ ಶಿಲ್ಪವೊಂದನ್ನು 'ಕೋಷ್ಠರಾಯ' ಎನ್ನುತ್ತಾರೆ. ಕಪ್ಪೆ ಕಾಯಿಲೆ ಎಂದರೆ ಕುಷ್ಠರೋಗ ಎನ್ನುತ್ತಾರೆ. ಆದ್ದರಿಂದ ಈ 'ಕೋಷ್ಠರಾಯ' ಕಪ್ಪೆ ಅರಭಟ್ಟನಾಗುತ್ತಾನೆ. ಬಾದಾಮಿ ಶಾಸನದಲ್ಲಿ ದಿನಾದಿನಾ ಅವಮಾನದಿಂದ ಸಾಯುವುದಕ್ಕಿಂತ ಒಂದೇ ಸಲ ಸಾಯುವುದು ಹೆಚ್ಚು ತೇಜಸ್ಸುಳ್ಳದ್ದು' ಎಂಬ ಮಾತು ಸಂಸ್ಕೃತದಲ್ಲಿದೆ. ಪುಲಿಕೇಶಿಗೆ ಆ ತರಹದ ಕುಷ್ಠರೋಗವೇನಾದರೂ ಇದ್ದಿತೆ. ತನ್ನ

ಜೀವಿತದ ಅವಧಿಯಲ್ಲಿಯೇ ಅವನಿಗೆ ಆ ರೋಗ ವಾಸಿಯಾಗಲಿ ಎಂಬ ಉದ್ದೇಶದಿಂದ ಕೋಪ್ಪರಾಯ ವಿಗ್ರಹವನ್ನು ಕೆತ್ತಿಸಿರಬಹುದು. ಇದನ್ನು ಯಾರು ಮಾಡಿಸಿದರು ಎಂಬ ಪ್ರಶ್ನೆಗೆ ಉತ್ತರ ಸುಲಭವಲ್ಲ. ಪುಲಿಕೇಶಿಗೆ ಬೆನ್ನುಫಣಿ ರೋಗವಿತ್ತು. ಅದರಿಂದ ಯುದ್ಧದಲ್ಲಿ ಸರಿಯಾಗಿ ಭಾಗವಹಿಸಲು ಸಾಧ್ಯವಾಗದೇ ಆತನಿಗೆ ಸೋಲಾಯಿತು ಎಂದೂ ಹೇಳುತ್ತಾರೆ.

ಹೀಗಾಗಿ ತನ್ನ ಜೀವಿತದ ಕೊನೆಯ ಸಮಯದಲ್ಲಿ ಪುಲಿಕೇಶಿಗೆ 'ಕಪ್ಪೆ ಅರಸ' ಎಂಬ ಹೆಸರು ಬಂದಿರಲೂ ಸಾಧ್ಯ. 'ಕಪ್ಪೆ ಅರಸ' ಎಂದ ಮಾತ್ರಕ್ಕೆ, ಸ್ವಾಭಿಮಾನ–ಶೌರ್ಯಗುಣಗಳು ದೂರವಾಗಿರಲಿಲ್ಲ ಎಂದು ಬಾದಾಮಿ ಶಾಸನ ಸ್ಪಷ್ಟಪಡಿಸುತ್ತದೆ. ಜೊತೆಗೆ ಅಜಂತಾದ ಮೊದಲನೆಯ ಗುಹೆಯಲ್ಲಿರುವ ವರ್ಣಚಿತ್ರದಲ್ಲಿರುವವನು ಪುಲಿಕೇಶಿ ಎಂದು ಹೇಳುತ್ತಾರೆ. ಅಂತಹದೇ ಒಂದು ವರ್ಣಚಿತ್ರ ಬಾದಾಮಿಯ ಮೂರನೆಯ ಗುಹೆಯಲ್ಲಿದೆ. ಈ ಚಿತ್ರ ಇಮ್ಮಡಿ ಪುಲಿಕೇಶಿಯ ಕಾಲದ್ದೆಂದು ಧಾರಾಳವಾಗಿ ಹೇಳಬಹುದು. ಇಮ್ಮಡಿ ಪುಲಿಕೇಶಿಯು ದಿಗ್ವಿಜಯಗಳ ಸಾಧನೆಯ ನಂತರ ಅಜಂತಾದ ಭೇಟಿ ನೀಡಿರುವ ಸಾಧ್ಯತೆಗಳು ಹೆಚ್ಚಾಗಿವೆ.

ಡಾ॥ ಎಚ್.ಎಸ್. ಗೋಪಾಲರಾಯರು, 'ರಣಕೇಸರಿಯ ಬಿಲ' ಎಂಬ ಬಾದಾಮಿಯ ಶಾಸನವನ್ನು ಉಲ್ಲೇಖಿಸಿ, ಪುಲಿಕೇಶಿ ಇಲ್ಲಿ ತಲೆಮರೆಸಿಕೊಂಡಿದ್ದನೆಂದು ಹೇಳುತ್ತಾರೆ. ಅವಮಾನದ ಮೃತ್ಯುವನ್ನು ಸಹಿಸದ ಪುಲಿಕೇಶಿ, ಹಾಗೆ ಅಡಗಿಕೊಂಡಿದ್ದು ಬದುಕಿದ್ದ ಎಂದು ಹೇಳುವುದು ಆತನ ವ್ಯಕ್ತಿತ್ವ ದೂರವಾದ ವಿಚಾರ.

'ಮಾಧವ' ಎಂದರೆ ಸಾಕ್ಷಾತ್ ನಾರಾಯಣನಂತೆಯೇ ಇದ್ದ ಕಪ್ಪೆ ಅರಭಟ್ಟನನ್ನು ಇಮ್ಮಡಿ ಪುಲಿಕೇಶಿಯೊಂದಿಗೆ ಸಮೀಕರಿಸಿ, ಬಾದಾಮಿಯ ಶಾಸನ ಸಮಕಾಲೀನವಾದುದಲ್ಲ, ಪುಲಿಕೇಶಿಯ ನಂತರ, ಅವನ ಮಗ ಮೊಮ್ಮಕ್ಕಳ ಕಾಲದಲ್ಲಿ ರಚನೆಯಾದುದು ಎಂದು ಹೇಳುವುದು ಹೆಚ್ಚು ಸೂಕ್ತ.

卐 卐 卐

# ಸೇಲಂ ಪ್ರಾಂತ್ಯದ ಹೊಯ್ಸಳ ಶಾಸನಗಳು

## (ಒಂದು ಪರಿಚಯ)

– ಮನೋಜ್ ಜಿ.*

ಕರ್ನಾಟಕದ ಇತಿಹಾಸದಲ್ಲಿ ೧೧ ಮತ್ತು ೧೨ನೆಯ ಶತಮಾನಗಳನ್ನು ಸುವರ್ಣಯುಗವೆಂದೇ ಪರಿಗಣಿಸಲಾಗಿದೆ. ಕರ್ನಾಟಕದ ವಾಸ್ತು, ಶಿಲ್ಪ, ಕಲೆ, ಸಾಹಿತ್ಯ, ಮುಂತಾದ ಕ್ಷೇತ್ರಗಳು ಈ ಸಮಯದಲ್ಲಿ ತಮ್ಮ ಉಚ್ಛ್ರಾಯವನ್ನು ಕಂಡಿತು ಎಂದರೆ ಅತಿಶಯೋಕ್ತಿಯಾಗದು. ಇದಕ್ಕೆ ಕಾರಣಭೂತರೆಂದರೆ ಆ ಕಾಲದಲ್ಲಿ ಇಲ್ಲಿ ಆಳ್ವಿಕೆ ನಡೆಸುತ್ತಿದ್ದ ಮನೆತನಗಳಾದ ಹೊಯ್ಸಳರು ಮತ್ತು ಕಲ್ಯಾಣದ ಚಾಲುಕ್ಯರು. ಕರ್ನಾಟಕದ ದಕ್ಷಿಣ ಭಾಗದ ಮೇಲೆ ಸುಮಾರು ನೂರೈವತ್ತು ವರ್ಷಗಳ ಕಾಲ ತಮ್ಮ ಸ್ವಾಮ್ಯವನ್ನು ಹೊಂದಿದ್ದ ಚೋಳರನ್ನು ಪರಾಭವಗೊಳಿಸಿದ ಕೀರ್ತಿ ಹೊಯ್ಸಳ ವಿಷ್ಣುವರ್ಧನನಿಗೆ ಸಂದುತ್ತದೆ. ರಾಜಕೀಯವಾಗಿ ಹೊಯ್ಸಳರು ಪ್ರಾರಂಭದ ದಿನಗಳಲ್ಲಿ ಉತ್ತರದ ಕಡೆ ರಾಜ್ಯವನ್ನು ವಿಸ್ತರಿಸಲು ಪ್ರಯತ್ನಿಸಿದಂತೆ ತೋರುವುದಿಲ್ಲ. ಇದಕ್ಕೆ ಪ್ರಾಯಶಃ ಆರನೆಯ ವಿಕ್ರಮಾದಿತ್ಯನ ಮೇಲಿದ್ದ ಗೌರವವೇ ಕಾರಣವಾಗಿರಬಹುದು. ಒಟ್ಟಾರೆ ತಮ್ಮ ರಾಜ್ಯವನ್ನು ಅವರು ದಕ್ಷಿಣದಲ್ಲಿ ವಿಸ್ತರಿಸಿದರೆಂಬುದು ಸಿದ್ಧ. ಚೋಳರನ್ನು ಗೆದ್ದ ಸಂದರ್ಭದಲ್ಲಿ ಹೊಯ್ಸಳರು ಅವರನ್ನು ಸೇಲಂ ಮತ್ತು ಕೊಯಮತ್ತೂರಿನ ವರೆಗೂ ಬೆನ್ನಟ್ಟಿದರು. ಮುಂದೆ ಹೊಯ್ಸಳ ದೊರೆಗಳು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಲು ಇದು ನಾಂದಿಯಾಯಿತು.

ಸಾಮ್ರಾಜ್ಯ ವಿಸ್ತರಣೆಯೇ ಅಲ್ಲದೆ ಹೊಯ್ಸಳರು ತಮಿಳು ಪ್ರಾಂತ್ಯಗಳ ರಾಜಕೀಯದಲ್ಲೂ ಪ್ರವೇಶಿಸಿರುವುದು ಕಂಡುಬರುವುದು. ಇದರಿಂದ ಹೊಯ್ಸಳರಿಗೆ 'ಚೋಳ ಸಾಮ್ರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದೂ ಬಂದಿತು. ಈ ರೀತಿ ತಮಿಳು ಪ್ರದೇಶಗಳಲ್ಲಿ ಆಳ್ವಿಕೆಗೆ ತೊಡಗಿದ ಹೊಯ್ಸಳರ ಹಲವಾರು ಶಾಸನಗಳು ನಮಗೆ ಕಾಣಸಿಗುವುದು. ಶಾಸನಗಳತ್ತ ಗಮನ ಹರಿಸುವ ಮುನ್ನ ಸಂಕ್ಷಿಪ್ತವಾಗಿ ಅಲ್ಲಿ ಹೊಯ್ಸಳರ ಇತಿಹಾಸವನ್ನು ತಿಳಿಯೋಣ. ವಿಷ್ಣುವರ್ಧನನ ಕಾಲದಲ್ಲಿ ನೇರ ಆಡಳಿತ ನಡೆಸಿದಂತೆ ಕಂಡುಬರುವುದಿಲ್ಲ. ನಂತರ ಒಂದನೆಯ ನರಸಿಂಹನ ಕಾಲಕ್ಕೂ ಇದೇ ಪರಿಸ್ಥಿತಿ ಮುಂದುವರೆದಂತೆ ಕಾಣುವುದು. ಇಮ್ಮಡಿ ಬಲ್ಲಾಳನು ಇಲ್ಲಿ ನೇರ ಆಳ್ವಿಕೆ ನಡೆಸಲು ಪ್ರಾರಂಭಿಸಿದನು. ಬಲ್ಲಾಳನ ನಂತರ ಇಮ್ಮಡಿ ನರಸಿಂಹನು ಪಟ್ಟಕ್ಕೆ ಬಂದನು. ಇವನು ತನ್ನ ತಂದೆಯಂತೆ ಚೋಳರೊಂದಿಗೆ ಸಖ್ಯವನ್ನು ಉಳಿಸಿಕೊಂಡಿದ್ದನು. ಇವನ ಕಾಲಕ್ಕೆ ಚೋಳರೊಂದಿನ ಸಖ್ಯವು ವಿವಾಹದ ಮೂಲಕ ಸಂಬಂಧವಾಯಿತು. ಇವನು ಚೋಳರೊಂದಿಗೆ ಶಕ್ತಿ ಸಮತೋಲನವನ್ನು ಕಾಪಾಡಿಕೊಳ್ಳುವುದರಲ್ಲಿ ಯಶಸ್ವಿಯಾದನು. ಇವನ ಕಾಲದಿಂದ ನಮಗೆ ಹೊಯ್ಸಳರ ಶಾಸನಗಳು ಹೇರಳವಾಗಿ ದೊರಕುತ್ತವೆ. ಇಮ್ಮಡಿ ನರಸಿಂಹನ ಮಗ ಸೋಮೇಶ್ವರನು ರಾಜ್ಯವನ್ನು ವಿಸ್ತರಿಸುವುದರಲ್ಲಿ ಆಸಕ್ತನಾಗಿದ್ದು ತಿರುಚಿನಾಪಳ್ಳಿಯವರೆಗೂ ವಿಸ್ತರಿಸಿದನು. ಈ ಕಾಲಕ್ಕೆ ಹೊಯ್ಸಳ ರಾಜ್ಯವು ಇಂದಿನ ಕೃಷ್ಣಗಿರಿ, ಧರ್ಮಪುರಿ, ಸೇಲಂ, ನಾಮಕ್ಕಲ್, ಉತ್ತರ ಆರ್ಕಾಟ್, ತಿರುಚಿನಾಪಳ್ಳಿ (ಕರೂರು ಹೊರತುಪಡಿಸಿ) ಜಿಲ್ಲೆಗಳು ಮತ್ತು ತಂಜಾವೂರು ಜಿಲ್ಲೆಯ ತಂಜಾವೂರು, ಮನ್ನಾರ್ ಗುಡಿ ಮತ್ತು ಪಾಪನಾಶಂ ತಾಲೂಕುಗಳನ್ನು ಒಳಗೊಂಡಿದ್ದ ಬೃಹನ್ಮಂಡಳವಾಗಿತ್ತು. ಇದಕ್ಕೆ ಉಪರಾಜಧಾನಿಯ ಅವಶ್ಯಕತೆಯಿದ್ದುದರಿಂದ ತಿರುಚಿನಾಪಳ್ಳಿಯ ಬಳಿಯ ಕಣ್ಣಾನೂರನ್ನು ಎರಡನೆಯ ರಾಜಧಾನಿಯಾಗಿ ಮಾಡಿಕೊಳ್ಳಲಾಯಿತು. ಇದಕ್ಕೆ ವಿಕ್ರಮಪುರವೆಂದು ನಾಮಕರಣ ಮಾಡಲಾಯಿತು.

ವೀರಸೋಮೇಶ್ವರನ ಕಾಲದಲ್ಲಿ ಹೊಯ್ಸಳರ ಇತಿಹಾಸದಲ್ಲಿ ಸಂಭವಿಸಿದ ಪ್ರಮುಖವಾದ ಘಟನೆಯೆಂದರೆ ಸಾಮ್ರಾಜ್ಯದ ವಿಭಜನೆ. ದ್ವಾರಸಮುದ್ರವನ್ನು ರಾಜಧಾನಿಯಾಗಿ ಹೊಂದಿದ್ದ ಉತ್ತರದ ಭಾಗವು ಮುಮ್ಮಡಿ ನರಸಿಂಹನ ಆಳ್ವಿಕೆಗೆ ಒಳಪಟ್ಟರೆ, ಇಂದಿನ ಚಿತ್ತೂರು ಜಿಲ್ಲೆ ಮತ್ತು ಕೋಲಾರ ಜಿಲ್ಲೆಗಳೂ ಸೇರಿದಂತೆ ಇಡೀ ತಮಿಳು ಪ್ರದೇಶವು ರಾಮನಾಥನ ಅಧೀನಕ್ಕೆ ಬಂದಿತು. ಆದರೆ ಈ ವಿಭಜನೆಯು ಅಷ್ಟು ಹಿತಕರವಾಗಿರಲ್ಲಿಲ್ಲ. ರಾಮನಾಥನು ತನ್ನ ಭಾಗದ

* ನಂ.೨೫, ಕೆ.ಆರ್. ಸಿಂದೆ ರಸ್ತೆ, ವಿಶ್ವೇಶ್ವರಪುರಂ. ಬೆಂಗಳೂರು-೫೬೦೦೦೪.

ದಕ್ಷಿಣದ ಪ್ರದೇಶಗಳನ್ನು ಕಳೆದುಕೊಂಡು, ಉತ್ತರದ ಕಡೆ ತನ್ನ ಅಣ್ಣನಿಗೆ ಕಿರುಕುಳ ಕೊಡಲುಪಕ್ರಮಿಸಿದನು. ಅಲ್ಲದೆ ರಾಜಧಾನಿಯನ್ನು ದೇವರ ಕುಂದಾಣಿಗೆ (ಇಂದಿನ ಕೃಷ್ಣಗಿರಿ ಜಿಲ್ಲೆಯಲ್ಲಿರುವ ವೇಪನಪಲ್ಲಿ ತಾಲೂಕಿನಲ್ಲಿದೆ) ವರ್ಗ ಮಾಡಲಾಯಿತು. ಆದರೆ ಈ ಪ್ರದೇಶಗಳಲ್ಲಿ ರಾಮನಾಥನು ನಿಸ್ಸಂದೇಹವಾಗಿ ಪ್ರಭಾವಶಾಲೀ ದೊರೆಯಾಗಿದ್ದನು. ಇವನ ನಂತರ ಇವನ ಮಗ ವೀರವಿಶ್ವನಾಥನು ಕೇವಲ ಎರಡು ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ನಂತರ ಮುಮ್ಮಡಿ ಬಲ್ಲಾಳನ ಕಾಲಕ್ಕೆ ಇಬ್ಭಾಗವಾಗಿದ್ದ ಸಾಮ್ರಾಜ್ಯವು ಒಗ್ಗೂಡಿದ್ದಲ್ಲದೆ, ತಿರುವಣ್ಣಾಮಲೈನವರೆಗೂ ಬೆಳೆಯಿತು.

### ಶಾಸನಗಳ ಸ್ವರೂಪ

ಈ ಪ್ರಾಂತ್ಯದ ಹೊಯ್ಸಳರ ಶಾಸಗಳು ತಮ್ಮ ಸ್ವರೂಪದಲ್ಲಿ ಚೋಳರ ಶಾಸನಗಳ ಪ್ರತಿರೂಪಗಳಾಗಿವೆ. ಕನ್ನಡ ಪ್ರದೇಶದಲ್ಲಿ ಕಂಡುಬರುವಂತೆ ಪ್ರತ್ಯೇಕವಾಗಿ ಶಾಸನಕ್ಕೆಂದೇ ಸಿದ್ಧಪಡಿಸಿದ ಶಿಲಾಫಲಕಗಳಲ್ಲಿ ಕಲಾತ್ಮಕವಾದ ಶಾಸನಗಳನ್ನು ಖಂಡರಿಸಿರುವುದು ಕಾಣಸಿಗುವುದಿಲ್ಲ. ಚೋಳರಂತೆಯೆ ಬಹುಪಾಲು ಶಾಸನಗಳನ್ನು ದೇವಾಲಯದ ಅಧಿಷ್ಠಾನದಲ್ಲೂ ಮತ್ತು ಭಿತ್ತಿಯಲ್ಲೂ ಕಾಣಬಹುದು. ಜೊತೆಗೆ ಕೆಲವು ಶಾಸನಗಳನ್ನು ಕಂಬಗಳ ಮೇಲೆ ಕೆತ್ತಲಾಗಿವೆ. ಇದು ಹೊಯ್ಸಳರ ಪದ್ಧತಿಯೆನ್ನಬಹುದು. ದಾನವಾಗಿ ಕೊಟ್ಟ ಭೂಮಿಗಳಲ್ಲಿ ಸಾಮಾನ್ಯವಾಗಿ ಚಪ್ಪಡಿಕಲ್ಲುಗಳ ಮೇಲೆ ಅಥವಾ ಅಲ್ಲಿಯೇ ಉಪಲಬ್ಧವಿರುವ ಬಂಡೆಗಲ್ಲುಗಳ ಮೇಲೆ ಕೆತ್ತಿರುವುದು ಕಾಣಬಹುದು.

### ಶಾಸನ ಪಾಠದ ಸ್ವರೂಪ

ಈ ಶಾಸನಗಳು ಬಹುತೇಕ ಯಾವುದೇ ನಾಂದಿ ಶ್ಲೋಕಗಳನ್ನು ಹೊಂದಿರುವುದಿಲ್ಲ. ಕೇವಲ 'ಸ್ವಸ್ತಿಶ್ರೀ' ಎಂಬ ಸ್ವಸ್ತಿ ವಾಚಕದಿಂದ ಪ್ರಾರಂಭವಾಗುವುದು. ಯಾವುದೇ ದೇವತಾ ಸ್ತೋತ್ರಗಳು ಸಿಗುವುದಿಲ್ಲ. ಸಾಮಾನ್ಯವಾಗಿ ಕಾಲದ ಉಲ್ಲೇಖ ದೊರೆಯ ಆಳ್ವಿಕೆಯ ಕಾಲವಾಗಿದ್ದು ಅಪರೂಪಕ್ಕೆ ಶಕ ವರ್ಷದ ಪ್ರಸ್ತಾಪವನ್ನು ಕಾಣಬಹುದು. 'ಸಾರ್ವಭೌಮ ಚಕ್ರವರ್ತಿ' ಎಂಬ ಬಿರುದು ಬಿಟ್ಟರೆ ಉಳಿದ ಬಿರುದುಗಳ ಬಳಕೆಯನ್ನು ಹೆಚ್ಚಾಗಿ ಕಾಣಲಾರೆವು. ಕನ್ನಡ ಶಾಸಗಳಲ್ಲಿ ಬಿರುದುಗಳೇ ಬಹಳ ಸಾಲುಗಳಿರುತ್ತವೆ. ಅಲ್ಲದೆ ಶಾಸನಗಳಲ್ಲಿ ಗದ್ಯ ಪ್ರಯೋಗವೇ ಹೊರತು ಪದ್ಯ ಪ್ರಯೋಗವನ್ನು ಮಾಡಿಲ್ಲ. ಒಟ್ಟಾರೆ ಈ ಶಾಸನಗಳಲ್ಲಿ ಚೋಳಶಾಸನಗಳ ಪ್ರಭಾವವೇ ಹೆಚ್ಚು.

### ಶಾಸನದ ಲಿಪಿ ಮತ್ತು ಭಾಷೆ

ಈ ಪ್ರಾಂತ್ಯದ ಹೊಯ್ಸಳರ ಶಾಸನಗಳು ತಮಿಳು ಭಾಷೆಯಲ್ಲಿಯೇ ಇವೆ. ಪ್ರಾಯಶಃ ವೀರಸೋಮೇಶ್ವರನು ಚೋಳರ ದೌಹಿತ್ರನಾಗಿದ್ದುದ್ದಲ್ಲದೆ, ಅಲ್ಲಿಯ ಆಡಳಿತ ಭಾಷೆಯನ್ನು ತಮಿಳಾಗಿಯೇ ಉಳಿಸಿಕೊಂಡಿರಬಹುದು. ಆದರೇ ಇಲ್ಲಿ ಗಮನಾರ್ಹ ವಿಷಯವೆಂದರೆ, ಇವರಿಗಿಂತ ಹಿಂದೆ ಈ ಪ್ರದೇಶದಲ್ಲಿ ಸ್ವಾಮ್ಯ ಹೊಂದಿದ್ದ ನೊಳಂಬರು, ಗಂಗರು ಮತ್ತು ಬಾಣರು ತಮ್ಮ ಶಾಸನಗಳನ್ನು ಕನ್ನಡದಲ್ಲಿಯೇ ಹಾಕಿಸಿದ್ದಾರೆ. ಹೊಯ್ಸಳರ ನಂತರ ಆಳ್ವಿಕೆ ನಡೆಸಿದ ವಿಜಯನಗರದ ಅರಸರು ಕನ್ನಡ ಮತ್ತು ತೆಲುಗು ಭಾಷೆಯಲ್ಲಿ ಶಾಸನಗಳನ್ನು ಹಾಕಿಸಿದ್ದಾರೆ. ಮತ್ತೊಂದು ವೈಶಿಷ್ಟ್ಯವೆಂದರೆ ತಿರುಚಿನಾಪಳ್ಳಿಯ ಲಾಲ್ಗುಡಿ ಬಳಿಯ ಮಹಿದೂರು ಗ್ರಾಮದಲ್ಲಿ ರಾಮನಾಥನ ಕಾಲಕ್ಕೆ ಸೇರಿದ ಒಂದು ಶಾಸನ ತೆಲುಗು ಭಾಷೆಯಲ್ಲಿದೆ. ಇದು ಹೊಯ್ಸಳರ ಏಕೈಕ ತೆಲುಗು ಶಾಸನವೆನ್ನಬಹುದು.

ಇಲ್ಲಿಯ ಹೊಯ್ಸಳ ಶಾಸನಗಳಲ್ಲಿ ಬಳಕೆಯಾದ ಲಿಪಿ ಬಹುತೇಕ 'ಅರವ ವಟ್ಟೆಳುತ್ತು' ಲಿಪಿ. ಒಂದೆರಡು ಶಾಸನಗಳು ಮಾತ್ರ ತಮಿಳು ಗ್ರಂಥ ಲಿಪಿಯಲ್ಲಿದೆ.

### ಸೇಲಂ ಪ್ರಾಂತ್ಯದ ಹೊಯ್ಸಳ ಶಾಸನಗಳು

ಈ ಪ್ರದೇಶದಲ್ಲಿ ಉಪಲಬ್ಧವಿರುವ ಹೊಯ್ಸಳರ ಪ್ರಾಚೀನತಮ ಶಾಸನವೆಂದರೆ ವಿಷ್ಣುವರ್ಧನನ ಉಲ್ಲೇಖವಿರುವ ಶಾಸನ. ಇದು ಧರ್ಮಪುರಿ ಜಿಲ್ಲೆಯ ಮೋದೂರು ಗ್ರಾಮದ, ಚಾಮುಂಡಿಯಮ್ಮನ್ ಮಂಡು ಎಂದು ಕರೆಯಲ್ಪಡುವ ಹೊಲದಲ್ಲಿ ಒಂದು ಬಂಡೆಗಲ್ಲಿನ ಮೇಲೆ ಕೊರೆಯಲಾಗಿದೆ. ಆದರೇ ಅಕ್ಷರಗಳು ಸಾಕಷ್ಟು ಸವೆದಿದೆ. ಇದರಲ್ಲಿ ವಿವಾಹದ ಸಂದರ್ಭದಲ್ಲಿ ಕಟ್ಟಬೇಕಾದ ತೆರಿಗೆಗಳ ವಿವರಗಳಿದ್ದು, ಇದನ್ನು ಹಾಕಿಸಿರುವ ಅಧಿಕಾರಿಯು ತನ್ನನ್ನು ವಿಷ್ಣುವರ್ಧನನಿಗೆ ಹೋಲಿಸಿಕೊಂಡಿರುವನು. ಆದ್ದರಿಂದ ಇದು ನೇರವಾಗಿ ವಿಷ್ಣುವರ್ಧನನ ಶಾಸನವಲ್ಲದಿದ್ದರೂ ಹೊಯ್ಸಳ ದೊರೆಯ ಉಲ್ಲೇಖವಿರುವ ಪ್ರಪ್ರಥಮ ಶಾಸನ.

ನಂತರ ನಮಗೆ ಇಮ್ಮಡಿ ನರಸಿಂಹನ ಕಾಲದ ಶಾಸನಗಳು ಕೃಷ್ಣಗಿರಿಯ ಪೆಣ್ಣೇಶ್ವರಮಡಂ ಮತ್ತು ಧರ್ಮಪುರಿಯ ಅಧಿಯಮಾನ್ ಕೋಟೆಯಲ್ಲಿ ದೊರಕಿವೆ. ಮೊದಲನೆಯ ಶಾಸನವು ಕ್ರಿ.ಶ. ೧೨೩೩ದೆಂದು ತೀರ್ಮಾನಿಸಬಹುದಾಗಿದೆ. ಇದರಲ್ಲಿ ಇಮ್ಮಡಿ ನರಸಿಂಹನ ಆಳ್ವಿಕೆಯ ೧೫ನೆಯ ವರ್ಷದಲ್ಲಿ ಅವನ ಸಾಮಂತ ವೀರನೊಳಂಬ ವೈರವನು ಪೆಣ್ಣೇಶ್ವರ ದೇವರಿಗೆ ದಾನ ಕೊಟ್ಟ ಉಲ್ಲೇಖವಿದೆ. ಎರಡನೆಯ ಶಾಸನವು ಅಧಿಯಮಾನ್ ಕೋಟೆಯ ಭೈರವ ದೇವಾಲಯದ ಅಧಿಷ್ಠಾನದಲ್ಲಿ ಕೆತ್ತಲಾಗಿದ್ದು, ಇದರಲ್ಲಿ ಕಾಲದ ಉಲ್ಲೇಖವಿದ್ದು ಕಲಿ ಸಂವತ್ಸರ ೪೩೩೬ ಎಂದೂ ದೊರೆಯ ೧೭ನೆಯ ಆಳ್ವಿಕೆಯ ವರ್ಷವೆಂದು ಹೇಳಲಾಗಿದೆ. ಆದ್ದರಿಂದ ಇದು ಕ್ರಿ.ಶ. ೧೨೩೪ ಎಂದು ಖಚಿತವಾಗಿ ಹೇಳಬಹುದು. ಇದು ಮಾಧವ ದಂಡನಾಯಕನ ಕೆಳಗೆ ಪ್ರಧಾನಿಯಾಗಿದ್ದ ಪರಮಯ್ಯ ಶಾಹನಿ ಎಂಬುವನು ಮಹೇಂದ್ರಮಂಗಲದಲ್ಲಿ ಪರಮೇಶ್ವರಮುಡಯ ನಾಯನಾರಿಗೆ ದೇಗುಲವನ್ನು ನಿರ್ಮಿಸಿ ಕುಂಭಾಭಿಷೇಕ ಮಾಡಿದನ್ನು ದಾಖಲಿಸುತ್ತದೆ. ಈ ದೇವಾಲಯಕ್ಕೆ ನಂದಿಮಂಗಳಕ್ಕೆ ಸೇರಿದ ಬ್ರಾಹ್ಮಣನನ್ನು ಅರ್ಚಕನನ್ನಾಗಿ ನೇಮಿಸಿ ಅವನಿಗೆ ಭೂಮಿಯನ್ನು ದತ್ತಿ ಕೊಟ್ಟ ಉಲ್ಲೇಖವಿದೆ.

ವೀರಸೋಮೇಶ್ವರನ ಶಾಸನಗಳು ಈ ಪ್ರಾಂತ್ಯದಲ್ಲಿ ಹೇರಳವಾಗಿ ದೊರಕುತ್ತದೆ. ಕ್ರಿ.ಶ. ೧೨೩೫ ರಿಂದ ಕ್ರಿ.ಶ. ೧೨೫೩ರ ವರೆಗಿನ ಕಾಲಘಟ್ಟದಲ್ಲಿ ಈ ಶಾಸನಗಳು ಹಾಕಿಸಲ್ಪಟ್ಟಿವೆ. ಇವುಗಳ ಸಂಖ್ಯೆ ಸುಮಾರು ೩೦ಕ್ಕೂ ಅಧಿಕವಾಗಿವೆ. ಈ ದೊರೆಯ ಶಾಸನಗಳಲ್ಲಿ ವಿಶೇಷವೆಂದರೆ ಬಹುಪಾಲು ಎಲ್ಲಾ ಶಾಸನಗಳು ರಾಜನ ಆರೋಗ್ಯಕ್ಕಾಗಿ ದಾನದತ್ತಿಗಳನಿತ್ತದ್ದಾಗಿ ಉಲ್ಲೇಖಿಸುತ್ತವೆ. ಅಲ್ಲದೆ ಇವನ ಜೀವಿತ ಕಾಲದಲ್ಲಿಯೇ ರಾಜ್ಯದ ವಿಭಜನೆಯೂ ಆಯಿತು. ಈ ಅಂಶಗಳನ್ನು ಗಮನಿಸಿದರೆ ಪ್ರಾಯಶಃ ಇವನಿಗೆ ಯಾವುದೋ ವ್ಯಾಧಿಯಿತ್ತೆಂದು ಅದಕ್ಕಾಗಿ ಇವನ ಸಾಮಂತರೂ ದಂಡನಾಯಕರು ದಾನಗಳನ್ನು ನೀಡುತ್ತಿದ್ದರು ಎನ್ನಬಹುದಾಗಿದೆ. ಇವನು ತನ್ನ ಆಳ್ವಿಕೆಯ ಬಹುಕಾಲವನ್ನು ವಿಕ್ರಮಪುರದಲ್ಲಿಯೇ ಕಳೆದನು.

ವೀರಸೋಮೇಶ್ವರನ ನಂತರ ರಾಜ್ಯದ ಈ ಭಾಗವು ರಾಮನಾಥನ ಅಧೀನವಾಯಿತು. ರಾಮನಾಥನು ಇಲ್ಲಿ ಬಹಳ ಪ್ರಭಾವಶಾಲಿಯಾಗಿ ಆಳಿದನು. ಇವನ ನೂರಾರು ಶಾಸನಗಳು ನಮಗೆ ಈ ಪ್ರಾಂತ್ಯದಲ್ಲಿ ಉಪಲಬ್ಧವಿದೆ. ಇವನು ಸುಮಾರು ೪೩ ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಇವನ ಕಾಲದಲ್ಲಿ ಇವನು ಹಲವು ದೇವಾಲಯಗಳ ನಿರ್ಮಾಣಕ್ಕೆ ಕಾರಣನಾದನು. ಸೇಲಂ ಜಿಲ್ಲೆಯ ಒಮಲೂರು ತಾಲೂಕಿನ ತಾರಮಂಗಲದ ಕೈಲಾಸನಾಥ ದೇವಾಲಯ, ಪರುತ್ತಿಪಳ್ಳಿಯ ಬಾಣೇಶ್ವರ ದೇವಾಲಯ, ನಾಮಕ್ಕಲ್ಲಿನ ಕಾರ್ಗುಡಿಯ ಕೈಲಾಸನಾಥ ದೇವಾಲಯ ಮೊದಲಾದುವುಗಳು ಇವನ ಕಾಲದಲ್ಲಿ ನಿರ್ಮಾಣಗೊಂಡು ಇವನಿಂದ ಪೋಷಿಸಲ್ಪಟ್ಟದ್ದಾಗಿವೆ. ಧರ್ಮಪುರಿಯ ಶಿವಾಡಿಯೆಂಬಲ್ಲಿ ಭಗ್ನ ದೇವಾಲಯದ ಗೂಢಮಂಟಪದ ಕಂಬದ ಮೇಲೆ ರಾಮನಾಥನ ಶಾಸನವಿದ್ದು ಆ ಕಂಬವು ತಮಿಳು ಪ್ರದೇಶದ ಹೊಯ್ಸಳ ಕಂಬಗಳ ಒಂದು ಪ್ರಬೇಧವೆನ್ನಬಹುದಾಗಿದೆ.

ರಾಮನಾಥನ ಮಗನಾದ ವೀರವಿಶ್ವನಾಥನು ಕೇವಲ ಎರಡು ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಆದರೂ ಇವನ ಶಾಸನಗಳನ್ನು ದೇವರಕುಂದಾಣಿ, ಕಂಬೆನಲ್ಲೂರಿನ ದೇಶಿನಾಥ ದೇವಾಲಯ, ಬಾರೂರಿನ ಈಶ್ವರ ದೇವಾಲಯ, ಹೊಸೂರಿನ ಚಂದ್ರಚೂಡೇಶ್ವರ ದೇವಾಲಯ ಮೊದಲಾದ ಕಡೆಗಳಲ್ಲಿ ಕಾಣಬಹುದು. ಇವುಗಳು ಬಹುತೇಕ ದಾನ ಶಾಸನಗಳು. ಇವನ ಕಾಲ ೧೨೯೭ಕ್ಕೆ ಮುಗಿಯುತ್ತದೆ.

ಇವನ ನಂತರ ವಿಭಜಿತ ಹೊಯ್ಸಳ ಸಾಮ್ರಾಜ್ಯವನ್ನು ಮುಮ್ಮಡಿ ಬಲ್ಲಾಳನು ಒಂದುಗೂಡಿಸಿದನು. ಇವನ ಶಾಸನಗಳೂ ಸಹ ನಮಗೆ ಹೇರಳವಾಗಿ ದೊರಕುತ್ತವೆ. ಇವನ ಸಾಮಂತರಾದಿ ಪೂರ್ವಾದಿರಾಜರೂ ಸಹ ಇಲ್ಲಿ ಪ್ರಭಾವಶಾಲಿಗಳಾಗಿದ್ದರು. ಹೊಸೂರಿನ ಸುತ್ತಮುತ್ತಲಿನ ಪ್ರದೇಶಗಳಲ್ಲಿ ವಿಶೇಷವಾಗಿ ಇವನ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳನ್ನು ಕಾಣಬಹುದು. ಆದರೆ ಇದು ಶಾಸನಗಳ ಪರಿಚಯವಾದ್ದರಿಂದ ಅವುಗಳ ಚರ್ಚೆಯು ಅಪ್ರಸ್ತುತ.

❖❖❖

# ಹಲ್ಮಿಡಿ ಶಾಸನದ ಪಾಠವಿಚಾರ – ಮರುಪರಿಶೀಲನೆ

– ಡಾ. ಎಂ.ಜಿ. ಮಂಜುನಾಥ*

**ಡಾ||** ಎಂ.ಎಚ್. ಕೃಷ್ಣ ಅವರು ೧೯೩೬ರಲ್ಲಿ ಪತ್ತೆ ಹಚ್ಚಿ ಪ್ರಕಟಿಸಿದ ಹಲ್ಮಿಡಿ ಶಾಸನದ ಬಗ್ಗೆ ಇದುವರೆಗೂ ಹಲವಾರು ಲೇಖನಗಳು ಪ್ರಕಟವಾಗಿವೆ. ಆದರೆ ಈ ಶಾಸನ ಪಾಠದ ಬಗ್ಗೆ, ಶಾಸನೋಕ್ತ ಶಬ್ದಗಳ ಅರ್ಥದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಇಂದಿಗೂ ಈ ಶಾಸನವು ಸಂಶೋಧಕರ ಕುತೂಹಲದ ಕೇಂದ್ರವಾಗಿಯೇ ಇದೆ. ಹಲ್ಮಿಡಿ ಶಾಸನದ ಬಗ್ಗೆ ಇದುವರೆಗೂ ಪ್ರಕಟವಾಗಿರುವ ಹೆಚ್ಚಿನ ಸಂಖ್ಯೆಯ ಲೇಖನಗಳು ಆ ಶಾಸನದ ಪ್ರಾಚೀನತೆಯ ಬಗ್ಗೆ, ಭಾಷಾ ಸ್ವರೂಪದ ಬಗ್ಗೆ, ಶಾಸನೋಕ್ತ ಶಬ್ದಾರ್ಥಗಳ ಬಗ್ಗೆ, ಐತಿಹಾಸಿಕ ಅಂಶಗಳ ಬಗ್ಗೆ ವಿಶ್ಲೇಷಿಸಿವೆಯೇ ಹೊರತು ಎಂ.ಎಚ್.ಕೃಷ್ಣ ಅವರು ನೀಡಿದ್ದ ಶಾಸನ ಪಾಠದ ಬಗ್ಗೆ ಹೆಚ್ಚಿನ ಚರ್ಚೆಯನ್ನು ನಡೆಸಿಲ್ಲ.

ಡಾ|| ಎಂ. ಚಿದಾನಂದಮೂರ್ತಿಯವರು 'ಸಟ್ಟಿಂಗ' ಎಂದರೇನು? ಎಂಬ ಲೇಖನವನ್ನು ಪ್ರಕಟಿಸಿದ್ದಾರೆ.[೧] ಡಾ|| ಎಂ.ಬಿ. ನೇಗಿನಹಾಳ ಅವರು ತಮ್ಮ ಪಿಎಚ್.ಡಿ. ಮಹಾಪ್ರಬಂಧದಲ್ಲಿ 'ಹಲ್ಮಿಡಿ ಶಾಸನದ ಭಾಷಾ ವೈಶಿಷ್ಟ್ಯತೆಯ ಬಗ್ಗೆ' ವಿಶ್ಲೇಷಣೆ ನಡೆಸಿದ್ದಾರೆ.[೨] ಡಾ|| ದೇವರಕೊಂಡಾರೆಡ್ಡಿಯವರು 'ಹಲ್ಮಿಡಿ ಶಾಸನ ಒಂದು ಅಧ್ಯಯನ' ಎಂಬ ಲೇಖನವನ್ನೂ,[೩] ಡಾ|| ಜಿ.ಎಸ್.ಗಾಯಿಯವರು 'ಹಲ್ಮಿಡಿ ಶಾಸನ ಒಂದು ಅಧ್ಯಯನ' ಎಂಬ ಲೇಖನವನ್ನೂ,[೪] ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರಿಯವರು 'ಹಲ್ಮಿಡಿ ಶಾಸನದ ಅರ್ಥ' ಎಂಬ ಲೇಖನವನ್ನೂ,[೫] ಡಾ|| ಎಂ.ಬಿ. ನೇಗಿನಹಾಳ ಅವರು 'ಹಲ್ಮಿಡಿ ಶಾಸನದ ಅರ್ಥ ವಿವೇಚನೆ' ಎಂಬ ಲೇಖನವನ್ನೂ,[೬] ಡಾ|| ಎಂ.ಎಂ. ಕಲಬುರ್ಗಿಯವರು 'ಹಲ್ಮಿಡಿ ಶಾಸನದ ಪ್ರೇಮಾಲಯ ಸುತನ್' ಎಂಬ ಲೇಖನವನ್ನೂ,[೭] ಡಾ|| ಎಂ.ಜಿ. ಮಂಜುನಾಥ ಅವರು 'ಹಲ್ಮಿಡಿ ಶಾಸನೋಕ್ತ ಕುಱುಮ್ಬಿಡಿ – ಅರ್ಥ ವಿವೇಚನೆ' ಎಂಬ ಲೇಖನವನ್ನೂ ಪ್ರಕಟಿಸಿದ್ದಾರೆ.[೮]

ಈ ಎಲ್ಲಾ ಲೇಖನಗಳೂ ಸಹ ಹಲ್ಮಿಡಿ ಶಾಸನದ ಐತಿಹಾಸಿಕ, ಭಾಷಿಕ, ಸಾಂಸ್ಕೃತಿಕ ಅಂಶಗಳ ಬಗ್ಗೆ ಮಾತ್ರ ವಿಶ್ಲೇಷಣೆ ನಡೆಸಿವೆಯೇ ಹೊರತು ಈ ಶಾಸನದ ಪಾಠದ ಬಗ್ಗೆ ಹೆಚ್ಚಿನ ವಿಶ್ಲೇಷಣೆ ನಡೆಸಿಲ್ಲ. ಬಹುತೇಕ ಈ ಎಲ್ಲ ವಿದ್ವಾಂಸರೂ ಎಂ.ಎಚ್.ಕೃಷ್ಣ ಅವರು ಕೊಟ್ಟಿದ್ದ ಪಾಠವನ್ನೇ ಒಪ್ಪಿಕೊಂಡಿದ್ದಾರೆ. ಎಪಿಗ್ರಾಫಿಯ ಕರ್ನಾಟಿಕದ ಪರಿಷ್ಕೃತ ಶಾಸನ ಸಂಪುಟ ೯ರಲ್ಲಿಯೂ ಎಂ.ಎಚ್.ಕೃಷ್ಣ ಅವರು ನೀಡಿರುವ ಪಾಠವನ್ನೇ ನೀಡಿರುವುದು ಗಮನಾರ್ಹ.[೯] ಅವರು ಕೊಟ್ಟಿರುವ ಹಲ್ಮಿಡಿ ಶಾಸನದ ಪಾಠ ಈ ಕೆಳಗಿನಂತಿದೆ.

**ಶಾಸನ ಪಾಠ**

೧. ಜಯತಿ ಶ್ರೀ ಪರಿಷ್ವಙ್ಗ ಶ್ಯಾರ್ಙ್ಗವ್ಯಾನತಿರಚ್ಯುತಃ ದಾನವಾಕ್ಷ್ಣೋರ್ಯುಗಾನ್ತಾಗ್ನಿಃ ಶಿಷ್ಟಾನಾನ್ತು ಸುದರ್ಶನಃ
೨. ನಮಃ ಶ್ರೀಮತ್ಕದಂಬಪನ್ತ್ಯಾಗ ಸಂಪನ್ನನ್ಕಲಭೋರಸಾ ಅರಿ ಕ
೩. ಕುಸ್ಥ ಭಟ್ಟೋರನಾಳೆ ನರಿದಾವಿಳೆ ನಾಡುಳ್ ಮೃಗೇಶ ನಾ
೪. ಗೇನ್ದ್ರಾಭೀಳರ್ಭ್ಬಟಹರಪ್ಪೋರ್ ಶ್ರೀಮೃಗೇಶನಾಗಾಹ್ವಯ
೫. ರಿರ್ವ್ವರಾ ಬಟರಿಕುಲಾಮಲವ್ಯೋಮ ತಾರಾಧಿನಾಥನ್ನಳಪ
೬. ಗಣಪಶುಪತಿ ಯಾದಕ್ಷಿಣಾಪಥ ಬಹುಶತಹವನಾ
೭. ಹವದುಳ್ ಪಶುಪ್ರದಾನ ಶೌರ್ಯೋದ್ಯಮಭರಿತೋನ್ದಾನಪ
೮. ಶುಪತಿಯೆನ್ದು ಪೊಗೞೆಪೊಟ್ಟಣ ಪಶುಪತಿ

* ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು–೬

೯. ನಾಮಧೇಯನಾ ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ
೧೦. ಸುತನ್ಗೆ ಸೇನ್ದ್ರಕ ಬಣೋಭಯ ದೇಶದಾ ವೀರಪುರುಷ ಸಮಕ್ಷ
೧೧. ದೆ ಕೇಕಯ ಪಲ್ಲವರಂ ಕಾದೆಜಿದು ಪೆತ್ತಜಯನಾ ವಿಜ
೧೨. ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮೂಚಿವಳ್ಳಿಉಂ ಕೊ
೧೩. ಟ್ಟಾರ್ ಬಟಾರಿಕುಲದೊನಳಕದಮ್ಬನ್ಕಳ್ದೋನ್ ಮಹಾಪಾತಕನ್
೧೪. ಇರ್ವ್ವರುಂ ಸಚ್ಬಜ್ಗದರ್ ವಿಜಾರಸರುಂ ಪಲ್ಮಡಿಗೆ ಕುಱು
೧೫. ಮ್ಬಿಡಿವಿಟ್ಟಾರ್ ಅದಾನಳಿವೊನ್ಗೆ ಮಹಾಪಾತಕಮ್ ಸ್ವಸ್ತಿ (ಇದೇ ಶಾಸನದ ಬಲಭಾಗದಲ್ಲಿನ ಬರಹ)
೧೬. ಭಟ್ಟರ್ಗ್ಗೀಗಟ್ಟಿ ಒಡ್ಡಲಿ ಆಪತ್ತೊನ್ಟಿ ವಿಟ್ಟಾರಕರ

ಎಂಬ ಪಾಠವನ್ನು ಡಾ॥ ಎಂ.ಎಚ್. ಕೃಷ್ಣ ಅವರು ನೀಡಿದ್ದರು. ಇತ್ತೀಚೆಗೆ ಡಾ॥ ಎಂ.ಎಚ್. ಕೃಷ್ಣ ಅವರ ಕಾಲದಲ್ಲಿಯೇ ತೆಗೆದಿದ್ದ ಹಲ್ಮಿಡಿ ಶಾಸನದ ಪ್ರಾಚೀನ ಛಾಯಾಚಿತ್ರವೊಂದು ದೊರೆಯಿತು. ಆ ಚಿತ್ರವನ್ನು ಪರಿಶೀಲಿಸುವಾಗ ಶಾಸನ ಪಾಠದ ಬಗ್ಗೆ ಹಲವಾರು ಅನುಮಾನಗಳುಂಟಾದವು. ಆ ಛಾಯಾ ಚಿತ್ರವನ್ನು ಸ್ಕ್ಯಾನ್ ಮಾಡಿ ಎನ್‌ಲಾರ್ಜ್ ಮಾಡಿ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಎಂ.ಎಚ್. ಕೃಷ್ಣ ಅವರು ನೀಡಿದ್ದ ಪಾಠಕ್ಕಿಂತ ಸ್ವಲ್ಪ ಭಿನ್ನವಾದ ಪಾಠವನ್ನು ನೀಡಬಹುದೆಂಬ ಅಂಶ ಖಚಿತವಾಯಿತು. ಅದರ ಫಲಿತವಾಗಿ ಈ ಸಂಪ್ರಬಂಧ ರೂಪುಗೊಂಡಿದೆ. ಡಾ॥ ಎಂ.ಎಚ್. ಕೃಷ್ಣ ಅವರು ನೀಡಿದ್ದ ಪಾಠದಲ್ಲಿ ಒಂದಕ್ಷರವನ್ನೂ ತಿದ್ದಲು ಸಾಧ್ಯವೇ ಇಲ್ಲವೆಂದು ಹಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಪ್ರಸ್ತುತ ಲೇಖನದಲ್ಲಿ ಸುಮಾರು ಇಪ್ಪತ್ತಾರು ಅಕ್ಷರಗಳನ್ನು ತಿದ್ದುಪಡಿ ಮಾಡಲಾಗಿದೆ.

ಎರಡನೆಯ ಸಾಲಿನಲ್ಲಿ 'ಸಂಪನ್ನನ್ಕಲಭೋರನಾ ಅರಿ' ಎಂಬಲ್ಲಿ 'ಸಂಪನ್ನ ಕಲಭ್ರನಾ ಅರಿ' ಎಂದು ಓದಬೇಕಾಗಿತ್ತು. ಮೂರನೆಯ ಸಾಲಿನಲ್ಲಿ 'ಭಟ್ಟೋರನಾಳೆ' ಎಂಬಲ್ಲಿ 'ಭಟ್ಟಾರಕನಾಳೆ'; ಐದನೆಯ ಸಾಲಿನಲ್ಲಿ 'ರಿರ್ವ್ವರಾ ಬಟರಿ' ಎಂಬಲ್ಲಿ 'ರೀರ್ವ್ವರಾ ಭಟರಿ'; ತಾರಾಧಿನ್ನಾಥನ್ನಳಪ' ಎಂಬಲ್ಲಿ 'ತಾರಾಧಿನಾಥನ್ನಳುಪ'; ಆರನೆಯ ಸಾಲಿನಲ್ಲಿ 'ಯಾದಕ್ಷಿಣಾಪಥ' ಎಂಬಲ್ಲಿ ಮಾದಕ್ಷಿಣಾಪಥ'; ಏಳನೆಯ ಸಾಲಿನಲ್ಲಿ 'ಭರಿತೋನ್ದಾನ' ಎಂಬಲ್ಲಿ 'ಭರಿತೋನ್ ದಾನ'; ಒಂಬತ್ತನೆಯ ಸಾಲಿನಲ್ಲಿ 'ನಾಮಧೇಯನಾ ಸರಕ್ಕೆಲ್ಲ' ಎಂಬಲ್ಲಿ 'ನ್ನಾಮಧೇಯನಾಸ್ವರಕ್ಕೆಲ್ಲ; ಹತ್ತನೆಯ ಸಾಲಿನಲ್ಲಿ 'ವೀರ' ಎಂಬಲ್ಲಿ 'ವೀರಾ'; ಹನ್ನೊಂದನೆಯ ಸಾಲಿನಲ್ಲಿ 'ಪಲ್ಲವರಂ' ಎಂಬಲ್ಲಿ 'ಪಲ್ಲವರುಮಂ'; ಹನ್ನೆರಡನೆಯ ಸಾಲಿನಲ್ಲಿ 'ಬಾಳ್ಗಚ್ಚು' ಎಂಬಲ್ಲಿ 'ವಾಳ್ಗಚ್ಚು'; ಹದಿಮೂರನೆಯ ಸಾಲಿನಲ್ಲಿ 'ಬಟಾರಿಕುಲ ದೊನಳಕದಮ್ಬನ್ಕಳ್ದೋನ್' ಎಂಬಲ್ಲಿ 'ಬಟಾರಿಕುಲದಾ ಅಳುಪವರ್ಮ್ಮನ್ಕಳ್ದೋನ್'; ಹದಿನಾಲ್ಕನೆಯ ಸಾಲಿನಲ್ಲಿ 'ಸಚ್ಬಂಗದರ್' ಎಂಬಲ್ಲಿ 'ಸಚ್ಬಂಗದರುಂ'; ಹದಿನಾರನೆಯ ಸಾಲಿನಲ್ಲಿ 'ಗಟ್ಟಿ' ಎಂಬಲ್ಲಿ ರಳದ ಬದಲಿಗೆ ಕುಳವಿರುವುದರಿಂದ 'ಗಳ್ದೆ' ಎಂದೂ ಓದಬೇಕು.

ಹಲ್ಮಿಡಿ ಶಾಸನದ ಛಾಯಾಚಿತ್ರವನ್ನು ಎನ್‌ಲಾರ್ಜ್ ಮಾಡಿ ಪ್ರತಿಸಾಲಿನ ಪ್ರತಿ ಅಕ್ಷರವನ್ನೂ ದೊಡ್ಡದು ಮಾಡಿ ನೋಡಿದ್ದರಿಂದ ಈ ತಿದ್ದುಪಡಿಗಳನ್ನು ಮಾಡಲು ಸಾಧ್ಯವಾಗಿದೆ. ಈ ತಿದ್ದುಪಡಿಗಳಿಂದ ಹಲ್ಮಿಡಿ ಶಾಸನದ ಭಾಷಾ ಸ್ವರೂಪದ ಬಗ್ಗೆ ತನ್ಮೂಲಕ ಪೂರ್ವದ ಹಳಗನ್ನಡ ಭಾಷಾ ಸ್ವರೂಪದ ಬಗ್ಗೆ ಖಚಿತ ತಿಳುವಳಿಕೆ ಮೂಡುತ್ತದೆ. ಹಲ್ಮಿಡಿ ಶಾಸನದ ಭಾಷಾ ಪ್ರಯೋಗವನ್ನೇ ಉದಾಹರಣೆ ನೀಡಿ ಐದನೆಯ ಶತಮಾನದ ಭಾಷೆಯ ಬಗ್ಗೆ ವಿದ್ವಾಂಸರು ನೀಡಿದ್ದ ಅಭಿಪ್ರಾಯಗಳನ್ನು ಮರುಪರಿಶೀಲಿಸಬೇಕಾದ ಅಗತ್ಯ ಪ್ರಸ್ತುತ ತಿದ್ದುಪಡಿಗಳಿಂದಾಗಿದೆ ಎಂದು ಹೇಳಬಹುದು.

ಈ ಶಾಸನದಲ್ಲಿನ ಒಂಬತ್ತನೆಯ ಸಾಲಿನಲ್ಲಿರುವ 'ಸರಕ್ಕೆಲ್ಲಭಟರಿ' ಎಂಬಲ್ಲಿ ಪ್ರಯೋಗದ ಬಗ್ಗೆ ಸರಕೆಲ್ಲ, ಅರಕೆಲ್ಲ, ಸೇವ್ಯಗೆಲ್ಲ ಎಂಬ ವ್ಯಕ್ತಿನಾಮದ ಹಿನ್ನೆಲೆಯಲ್ಲಿ ವಿದ್ವಾಂಸರು ಚರ್ಚಿಸಿದ್ದರು. ಆದರೆ ಇಲ್ಲಿ 'ಸ್ವರಕ್ಕೆಲ್ಲಭಟರಿ' ಎಂದಿದೆ. ಸ್ವರ ಎಂದರೆ ಆದೇಶ ಎಂಬ ಅರ್ಥವೂ ಬರುವುದರಿಂದ ಪಶುಪತಿಯ ಆದೇಶದಂತೆ ಎಲ್ಲಭಟರಿಯ ಪುತ್ರನಾದ ವಿಜಅರಸ ಯುದ್ಧ ಮಾಡಿದ ಎಂಬ ಅರ್ಥ ಸ್ಫುರಿಸುತ್ತದೆ.

ಹನ್ನೆರಡನೆಯ ಸಾಲಿನಲ್ಲಿರುವ 'ಬಾಳ್ಗಚ್ಚು' ಎಂಬಲ್ಲಿ 'ವಾಳ್ಗಚ್ಚು' ಎಂಬ ತಿದ್ದುಪಡಿ ಗಮನಾರ್ಹ. ವಾಸ್ತವವಾಗಿ ತೀರ ಪ್ರಾಚೀನ ಕಾಲಘಟ್ಟದಲ್ಲಿನ ಶಬ್ದಗಳಲ್ಲಿನ 'ವ'ಕಾರಗಳು ನಂತರದ ಕಾಲಘಟ್ಟದ ಪ್ರಯೋಗಗಳಲ್ಲಿ 'ಬ'ಕಾರವಾಗಿ ಬದಲಾದುದು ಎಲ್ಲರಿಗೂ ತಿಳಿದ ಸಂಗತಿ.

ಪದಿಮೂರನೆಯ ಸಾಲಿನಲ್ಲಿರುವ 'ಅಳಕದಮ್ಬ' ಎಂಬುದು ಅಳುಪ ವಂಶದ ಪಶುಪತಿ ಹಾಗೂ ಕದಂಬ ವಂಶದ ಲಕ್ಷ್ಮಿಯರ ಪುತ್ರನ ಹೆಸರಾಗಿರಬಹುದೆಂಬುದಾಗಿ ವಿದ್ವಾಂಸರು ಊಹಿಸಿದ್ದರು. ಆದರೆ ಈ ಊಹೆಗೆ ಯಾವ ಆಧಾರಗಳೂ ಇಲ್ಲ. ಅಳುಪವಂಶದ ಅರಸರಲ್ಲಿ 'ಅಳಕದಂಬ' ಎಂಬ ಯಾವ ಅರಸರೂ ಇರಲಿಲ್ಲ. ಆದರೆ ಪ್ರಸ್ತುತ ತಿದ್ದುಪಡಿಯಲ್ಲಿ 'ಅಳುಪವರ್ಮ್ಮ' ಎಂದು ಸೂಚಿಸಲಾಗಿದೆ. ಪ್ರಾಯಶಃ ಇದು ಅಳುಪವಂಶದ ಅರಸನೊಬ್ಬನ ಹೆಸರಿನಂತೆ ಕಾಣುತ್ತದೆ.

ಪದಿನಾರನೆಯ ಸಾಲಿನಲ್ಲಿನ 'ಗಜ್ಜ' ಎಂಬುದಕ್ಕೆ 'ಗಳ್ದೆ' ಎಂಬ ತಿದ್ದುಪಡಿ ಸೂಚಿಸಲಾಗಿದೆ. ಈ ಶಾಸನದಲ್ಲಿನ 'ರಳ' ಅಕ್ಷರಗಳಿಗೂ ಪ್ರಸ್ತುತ ಶಬ್ದದಲ್ಲಿನ ಅಕ್ಷರಕ್ಕೂ ಸಾಮ್ಯತೆಯಿಲ್ಲ. ಅದು 'ಕುಳ'ವನ್ನು ಹೋಲುತ್ತದೆ.

ಒಟ್ಟಾರೆ ಈ ಎಲ್ಲಾ ತಿದ್ದುಪಡಿಗಳಿಂದ ಹಲ್ಮಿಡಿ ಶಾಸನದ ಒಟ್ಟಾರೆ ಸಾರಾಂಶಕ್ಕೆ ಹೆಚ್ಚಿನ ವ್ಯತ್ಯಾಸವಾಗದಿದ್ದರೂ ಶಬ್ದ ಪ್ರಯೋಗಗಳಿಗೆ, ಶಬ್ದಾರ್ಥಗಳಿಗೆ ಹೊಸರೀತಿಯ ವ್ಯಾಖ್ಯಾನ ನೀಡಬಹುದು. ಅವೆಲ್ಲಕ್ಕಿಂತಲೂ ಮುಖ್ಯವಾಗಿ ಕನ್ನಡದ ಅತ್ಯಂತ ಪ್ರಾಚೀನ ಶಾಸನಗಳಲ್ಲಿ ಒಂದೆಂದು ಪ್ರಸಿದ್ಧವಾಗಿರುವ ಹಲ್ಮಿಡಿ ಶಾಸನದ ಪಾಠವನ್ನು ತಪ್ಪಿಲ್ಲದಂತೆ ಓದುವುದು ಮಹತ್ವದ ಅಂಶ*.

ಹಲ್ಮಿಡಿ ಶಾಸನದ ಕಾಲವನ್ನು ಕ್ರಿ.ಶ. ಸು. ೪೫೦ ಎಂದು ಬಹುತೇಕ ವಿದ್ವಾಂಸರು ಒಪ್ಪಿದ್ದಾರೆ. ಆದರೆ ಹಲ್ಮಿಡಿ ಶಾಸನವು ಕಾಕುತ್ಸವರ್ಮ ಆಳ್ವಿಕೆ ಮಾಡುತ್ತಿದ್ದ ಕಾಲದಲ್ಲಿ ರಚನೆಯಾಗಿರುವುದು ಗಮನಾರ್ಹ. ಕಾಕುತ್ಸವರ್ಮನು ಕ್ರಿ.ಶ. ೪೩೦ರವರೆಗೂ ಆಳ್ವಿಕೆ ಮಾಡುತ್ತಿದ್ದನು. ಆದ್ದರಿಂದ ಹಲ್ಮಿಡಿ ಶಾಸನದ ಕಾಲವನ್ನು ಕ್ರಿ.ಶ. ೪೩೦ ಎಂದೇ ಹೇಳಬೇಕು.

### ತಿದ್ದುಪಡಿ ಮಾಡಲಾದ ಹೊಸಪಾಠ

೧. ಜಯತಿ ಶ್ರೀ ಪರಿಷ್ವಙ್ಗ ಶ್ಯಾಙ್ರ್ಗವ್ಯಾನತಿರಚ್ಯುತಃ ದಾನವಾಕ್ಷ್ಣೋರ್ಯುಗಾನ್ತಾಗ್ನಿಃ ಶಿಷ್ಟಾನಾನ್ತು ಸುದರ್ಶನಃ
೨. ನಮಃ ಶ್ರೀಮತ್ಕದಂಬಪನ್ತ್ಯಾಗ ಸಂಪನ್ನಂ ಕಲಭ್ರನಾ ಅರಿಕ
೩. ಕುಸ್ಥ ಭಟ್ಟಾರಕನಾಳೆ ನರಿದಾವಿಳೆನಾಡುಳ್ ಮೃಗೇಶ ನಾ
೪. ಗೇನ್ದ್ರಾಭೀಳಭ್ರ್ಭಟಹರಪ್ಪೋರ್ ಶ್ರೀಮೃಗೇಶನಾಗಾಹ್ವಯ
೫. ರೀರ್ವ್ವರಾ ಭಟರಿ ಕುಲಾಮಲವ್ಯೋಮ ತಾರಾಧಿನಾಥನ್ನಳುಪ
೬. ಗಣಪಶುಪತಿ ಮಾದಕ್ಷಿಣಾಪಥ ಬಹುಶತಹವನಾ
೭. ಹವದುಳ್ ಪಶುಪ್ರದಾನ ಶೌರ್ಯ್ಯೋದ್ಯಮ ಭರಿತೋನ್‌ದಾನಪ
೮. ಶುಪತಿಯೆನ್ದು ಪೊಗಟೆಪ್ಪೊಟ್ಟಣ ಪಶುಪತಿ
೯. ನಾಮಧೇಯನಾ ಸ್ವರಕ್ಕೆಲ್ಲ ಭಟರಿಯಾ ಪ್ರೇಮಾಲಯ
೧೦. ಸುತನ್ಗೆ ಸೇನ್ದ್ರಕ ಬಣೋಭಯ ದೇಶದಾ ವೀರಾಪುರುಷ ಸಮಕ್ಷ
೧೧. ದೆ ಕೇಕಯ ಪಲ್ಲವರುಮಂ ಕಾದೆಜೆದು ಪೆತ್ತಜಯನಾ ವಿಜ
೧೨. ಅರಸನ್ಗೆ ವಾಳ್ಗಟ್ಟು ಪಲ್ಮಡಿಉಂ ಮೂಟೆವಳ್ಳಿಉಂ ಕೊ
೧೩. ಟ್ಟಾರ್ ಬಟಾರಿಕುಲದಾ ಅಳುಪವರ್ಮ್ಮನ್ಕಳ್ದೋನ್ ಮಹಾಪಾತಕನ್
೧೪. ಇರ್ವ್ವರುಂ ಸಟ್ಟಿಙ್ಗದರುಂ ವಿಜಾರಸರುಂ ಪಲ್ಮಡಿಗೆ ಕುಱು
೧೫. ಮ್ಬಡಿವಿಟ್ಟಾರ್ ಅದಾನಳಿವೊನ್ಗೆ ಮಹಾಪಾತಕಮ್ ಸ್ವಸ್ತಿ (ಇದೇ ಸ್ತಂಭದ ಎಡಭಾಗದಲ್ಲಿನ ಬರಹ)
೧೬. ಭಟ್ಟರ್ಗ್ಗೀಗಳ್ದೆ ಒಡ್ಡಲಿ ಆಪತ್ತೊನ್ದಿ ವಿಟ್ಟಾರಕರ

* ಈ ತಿದ್ದುಪಾಡಿಗೆ ಯಾವುದೇ ಆಧಾರಗಳಿಲ್ಲ, ಬರಿಯ ಊಹೆಗಳಿಂದ ತಿದ್ದುಪಾಡು ಮಾಡಿರುವ ಪಾಠಗಳು ಸಮರ್ಥನೀಯವಲ್ಲ (ಸಂ).

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಡಾ॥ ಎಂ. ಚಿದಾನಂದಮೂರ್ತಿ, **ಸಂಶೋಧನ ತರಂಗ**, ಸಂ.೨, ಪು.೨೪.

೨. ಡಾ॥ ಎಂ.ಬಿ. ನೇಗಿನಹಾಳ, **ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ**, ಪು.೫.

೩. ಪ್ರೊ॥ ಎಂ.ವಿ. ಸೀತಾರಾಮಯ್ಯ. **ಆಸ್ವಾದ**, ಪು.೨೯೭.

೪. ಡಾ॥ ಜಿ.ಎಸ್. ಗಾಯಿ, **ವಜ್ರದೀಪ್ತಿ**, ಪು.೧.

೫. ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿ, **ಶಬ್ದಾರ್ಥ ವಿಹಾರ**, ಪು.೧.

೬. ಡಾ॥ ಎಂ.ಬಿ. ನೇಗಿನಹಾಳ, **ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ**, ಪು.೭೩.

೭. ಡಾ॥ ಎಂ.ಎಂ. ಕಲಬುರ್ಗಿ, **ಮಾರ್ಗ** ಸಂ.೨, ಪು.೩.

೮. ಡಾ॥ ಎಂ.ಜಿ. ಮಂಜುನಾಥ, **ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ.**

೯. ಡಾ॥ ಬಾ.ರಾ. ಗೋಪಾಲ, ಎ.ಕ. ೯, ಬೇಲೂರು ೨೩೬, ಹಲ್ಮಿಡಿ, ಪು.೨೨೨.



# ಚಾಮರಾಜನಗರ ಜಿಲ್ಲೆಯ ನಾಲ್ಕು ಕನ್ನಡ ಶಾಸನಗಳು

– ಡಾ॥ ಎ.ವಿ. ನರಸಿಂಹಮೂರ್ತಿ*

ಇಲ್ಲಿ ಅಧ್ಯಯನಕ್ಕಾಗಿ ಆರಿಸಿಕೊಂಡಿರುವ ೪ ಕನ್ನಡ ಶಾಸನಗಳು ಚಾಮರಾಜನಗರ ಜಿಲ್ಲೆಯ ಕಬ್ಬಳ್ಳಿ, ಸಾಗಡೆ ಮತ್ತು ಚನ್ನಕಲ್ ಕಾವಲು ಎಂಬ ಗ್ರಾಮಗಳಲ್ಲಿ ಪತ್ತೆಯಾದವು[೧]. ಇವುಗಳು ಎಪಿಗ್ರಾಫಿಯಾ ಕರ್ನಾಟಿಕಾದ ಪರಿಷ್ಕೃತ ಆವೃತ್ತಿಗಳಲ್ಲಿಯೂ ಪ್ರಕಟಗೊಂಡಿರುವುದಿಲ್ಲ. ಇವುಗಳಲ್ಲಿ ಎರಡು ಶಾಸನಗಳು ತಲಕಾಡು ಗಂಗರಿಗೂ, ಮೂರನೆಯದು ಚಂಗಾಳ್ವರಿಗೂ, ಕೊನೆಯದು ವಿಜಯನಗರ ರಾಜವಂಶಕ್ಕೂ ಸೇರಿವೆ. ಸ್ಥಳೀಯ ಇತಿಹಾಸವನ್ನು ವಿಶದಪಡಿಸುವಲ್ಲಿ ಉಪಯುಕ್ತವಾಗಿವೆ. ಇವುಗಳನ್ನು ಮೊಟ್ಟಮೊದಲನೆಯ ಬಾರಿಗೆ ಇಲ್ಲಿ ಗಮನಿಸಲಾಗಿದೆ. ಕಾಲಾನುಕ್ರಮದಲ್ಲಿ ಈ ಶಾಸನಗಳನ್ನು ಅಧ್ಯಯನ ಮಾಡಲಾಗಿದೆ.

### ಶಾಸನ–೧

ಮೊದಲನೆಯ ಶಾಸನವು ಕಬ್ಬಳ್ಳಿಯಲ್ಲಿ ದೊರಕಿದ್ದು, ತಲಕಾಡು ಗಂಗ ರಾಜವಂಶಕ್ಕೆ ಸಂಬಂಧಿಸಿದೆ. ಗ್ರಾಮದ ದಕ್ಷಿಣ ಭಾಗದಲ್ಲಿರುವ ಹೊಲದಲ್ಲಿ ಈ ಶಾಸನಸ್ಥ ಕಲ್ಲು ಬಿದ್ದಿದೆ. ಕಗ್ಗಲ್ಲಿನಲ್ಲಿ ಕಡೆಯಲಾದ ಈ ಶಾಸನ ಅಷ್ಟೇನೂ ಸುಂದರವಾಗಿಲ್ಲ. ಈ ಶಾಸನದಲ್ಲಿ ಕ್ರಿ.ಶ.೮ನೆಯ ಶತಮಾನಕ್ಕೆ ಸೇರಬಹುದಾದ ಕನ್ನಡ ಲಿಪಿಯಲ್ಲಿ ಬರೆಯಲಾದ ಎಂಟು ಸಾಲುಗಳಿವೆ. ಶಾಸನದ ಭಾಷೆಯೂ ಕನ್ನಡ ಮೊದಲನೆಯ ಎರಡು ಸಾಲುಗಳಲ್ಲಿ ತಲಕಾಡು ಗಂಗ ರಾಜವಂಶದ ಶ್ರೀಪುರುಷನ (ಕ್ರಿ.ಶ. ೭೨೬–೭೮೮) ಹೆಸರಿದೆ. ಆನಂತರ ಈ ದೊರೆಯ ಕೈಕೆಳಗೆ ಮಾಂಡಲಿಕನಾಗಿದ್ದ ಎರ ಅರಕೇಸಿ ಎಂಬುವವನನ್ನು ಪರಿಚಯಿಸುತ್ತದೆ. ಇವನು ಪೆಂಕಚಿ (ಪ್ರಾಂತ)ಯ ರಾಜ್ಯಪಾಲನಾಗಿದ್ದನು. ಕ್ರಿ.ಶ. ೭೨೬ರ ತಲಕಾಡು ಶಾಸನದಲ್ಲಿ ಅರಕೇಸಿ ಎಂಬ ವ್ಯಕ್ತಿಯ ಪ್ರಸ್ತಾಪ ಕಂಡುಬರುತ್ತದೆ.[೨] ಆದುದರಿಂದ ಪ್ರಸ್ತುತ ಶಾಸನದ ಅರಕೇಸಿಯು ಇವನೇ ಆಗಿರಬೇಕೆಂದು ಭಾವಿಸಬಹುದು. ಈ ಅರಕೇಸಿಯು ಶ್ರೀ ಪರಮಕೂಳ ಎಂಬುವನ ಮಗನಾಗಿದ್ದನು. ಅರಕೇಸಿಯು ಗಂಗ ದೊರೆ ಶ್ರೀಪುರುಷನ ಅಪ್ಪಣೆ ಪಡೆದು ಸಿಂದರಸ, ದೇವಸತ್ತಿ ಅರಸ ಮತ್ತು ಮನಸ್ಯ ಎಂಬುವರ ಪ್ರಾರ್ಥನೆಯ ಮೇರೆಗೆ ದಾನವನ್ನು ಮಾಡಿದನು. ಇದರಿಂದ ಅರಕೇಸಿಯು ಪ್ರಭಾವಿ ವ್ಯಕ್ತಿಯಾಗಿದ್ದನೆಂದು ಭಾವಿಸಬಹುದು. ಇದರಲ್ಲಿ ತೇದಿಯ ಉಲ್ಲೇಖವಿಲ್ಲ. ಆದರೆ ಗಂಗ ಶ್ರೀಪುರುಷನನ್ನು ಉಲ್ಲೇಖಿಸುತ್ತದೆ. ಇವನ ಕಾಲ ಕ್ರಿ.ಶ. ೭೨೬–೭೮೮ ಆಗಿರುವುದರಿಂದಲೂ[೩] ಅರಕೇಸಿಯನ್ನು ಹೆಸರಿಸುವ ತಲಕಾಡು ಶಾಸನದ ಕಾಲ ಕ್ರಿ.ಶ. ೭೨೬ ಆಗಿರುವುದರಿಂದಲೂ[೪] ಪ್ರಸ್ತುತ ಶಾಸನದ ಕಾಲವನ್ನು ಕ್ರಿ.ಶ. ೭೨೬–೭೫೦ರ ವರೆಗೆ ಎಂದು ಭಾವಿಸಬಹುದು. ಈ ಶಾಸನದಲ್ಲಿ ೨ ಸ್ಥಳನಾಮಗಳ ಉಲ್ಲೇಖವಿದೆ. ಮೊದಲನೆಯದು ಕಬ್ಬಳು. ಇದು ಈ ಶಾಸನ ದೊರಕಿರುವ ಈಗಿನ ಕಬ್ಬಳ್ಳಿ ಎಂಬುದು ಖಚಿತ. ಇನ್ನೊಂದು ಪೆಂಕಚಿ. ಇದನ್ನು ಗುರುತಿಸುವುದು ಸಾಧ್ಯವಾಗಿಲ್ಲ. ಈ ಶಾಸನದಲ್ಲಿ ಕಾಣಬರುವ 'ಗೊಟ್ಟರ್' ಮತ್ತು 'ಅಟಿತ್ತೋ[ನ್]' ಎಂಬ ಪದಗಳು ಭಾಷಾಶಾಸ್ತ್ರ ದೃಷ್ಟಿಯಿಂದ ಗಮನಾರ್ಹ.

### ಶಾಸನ ಪಾಠ[೫]

೧. ಸ್ವಸ್ತಿ ಶ್ರೀಮ[ತು] ಶ್ರೀ
೨. ಪುರುಷ ಪ್ರಿಥುವಿ ರಾಜ್ಯಂ ಗೆ
೩. ಯೆ ಅ[ದಿ]ನ್ನದಿಯಜ್ಞ
೪. ಬ್ಬಳು ಆ[ಳೆ] ಪೆಞ್ಕಚಿಯ
೫. ಮಣ್ದಳಿಕ ಎಱ ಅರಕೇ
೬. ಸಿ ಸಿಸಿದುಗಲ್ಕಾಲೆನ್ವದು

* ೭ ಎ/೨ , ದೇವಗಿರಿ, ಗೋಕುಲಂ ರಸ್ತೆ, ಜಯಲಕ್ಷ್ಮೀಪುರಂ, ಮೈಸೂರು–೧೨.

೭. ಮ್ಪುಲಗೊಟ್ಟರ್ ಇದನಟಿತ್ತೋ[ನ್]
೮. ಪಞ್ಚಮಹಾಪಾತಕನಕ್ಕುಂ

### ಶಾಸನ–೨

ಈ ಶಾಸನವು ಚಾಮರಾಜನಗರ ತಾಲ್ಲೂಕಿನ ಸಾಗಡೆ ಎಂಬ ಗ್ರಾಮದಲ್ಲಿ ದೊರಕಿದೆ. ಈ ಶಾಸನವನ್ನು ಕಂಡರಿಸಿದ ಕಗ್ಗಲ್ಲು, ಗ್ರಾಮದ ಪಶ್ಚಿಮ ಭಾಗದಲ್ಲಿರುವ ಹೊಲದಲ್ಲಿ ಬಿದ್ದಿದೆ. ಈ ಶಾಸನದಲ್ಲಿ ಕ್ರಿ.ಶ.೧೦ನೆಯ ಶತಮಾನಕ್ಕೆ ಸೇರಬಹುದಾದ ಕನ್ನಡ ಲಿಪಿಯಲ್ಲಿ ಬರೆಯಲಾದ ಹನ್ನೊಂದು ಸಾಲುಗಳಿವೆ. ಶಾಸನದ ಭಾಷೆ ಹಳಗನ್ನಡ. ಈ ಶಾಸನವು ತಲಕಾಡು ಗಂಗವಂಶದ ದೊರೆ ಸತ್ಯವಾಕ್ಯ ಪೆರ್ಮಾನಡಿಯ ಕಾಲಕ್ಕೆ ಸೇರಿದೆ. ಇವನು ಕ್ರಿ.ಶ. ೯೬೩ ರಿಂದ ೯೭೪ರವರೆಗೆ ರಾಜ್ಯವಾಳಿದನು.[೬] ಇವನನ್ನು ಗಂಗ ದೊರೆ ಎರಡನೆಯ ಮಾರಸಿಂಹನೆಂದು ಭಾವಿಸಬಹುದು. ಸತ್ಯವಾಕ್ಯ ಪೆರ್ಮಾನಡಿ ಎನ್ನುವ ಬಿರುದಿನ ಆಧಾರದ ಮೇಲೆ ಈ ದೊರೆ ನಾಲ್ಕನೆಯ ರಾಚಮಲ್ಲನಿದ್ದರೂ ಇರಬಹುದು. ಇವನ ಕಾಲ ೯೭೪ರಿಂದ ೯೯೯ರವರೆಗೆ ಎಂದು ಭಾವಿಸಲಾಗಿದೆ. ಹೀಗಾಗಿ ಈ ಶಾಸನದ ಖಚಿತವಾದ ಕಾಲವನ್ನು ನಿರ್ಣಯಿಸುವುದು ಕಷ್ಟ. ಈ ಶಾಸನದಲ್ಲಿ ಶಕವರ್ಷ ನೀಡದೆ ರಾಜನ ಆಳ್ವಿಕೆಯ ವರ್ಷವನ್ನು ಮಾತ್ರ ನೀಡಲಾಗಿದೆ. ಇದು ಸತ್ಯವಾಕ್ಯ ಪೆರ್ಮಾನಡಿಯ ಆಳ್ವಿಕೆಯ ಏಳನೆಯ ವರ್ಷ (ಪಟ್ಟಗಟ್ಟಿದ ಏಳನೆಯ ವರಿಸದಂದು)ವನ್ನು ಉಲ್ಲೇಖಿಸುತ್ತದೆ. ವಾಸ್ತವವಾಗಿ ಗಂಗ ಮಾರಸಿಂಹನ ಪಟ್ಟಾಭಿಷೇಕವನ್ನು ರಾಷ್ಟ್ರಕೂಟ ದೊರೆ ಮುಮ್ಮಡಿ ಕೃಷ್ಣನು ನೆರವೇರಿಸಿದನು. ಕೆ.ವಿ. ರಮೇಶ್ ಅವರು ಶಕವರ್ಷ ೮೩೪ರ ಕೂಡಲೂರು ತಾಮ್ರಪಟದ ಆಧಾರದ ಮೇಲೆ ಇಮ್ಮಡಿ ಮಾರಸಿಂಹನು ಕ್ರಿ.ಶ. ೯೬೨–೬೩ ರಿಂದ ರಾಜ್ಯವಾಳಲು ಆರಂಭಿಸಿದನು ಎಂದು ಅಭಿಪ್ರಾಯ ಪಟ್ಟಿದ್ದಾರೆ.[೭] ಇದನ್ನು ಆಧಾರವಾಗಿ ಇಟ್ಟುಕೊಂಡರೆ ಪ್ರಸ್ತುತ ಶಾಸನದ ತೇದಿ ಕ್ರಿ.ಶ.೯೬೮–೬೯ ಎಂದಾಗುತ್ತದೆ. ಆದರೆ ಪ್ರಸ್ತುತ ಸಾಗಡೆ ಶಾಸನದಲ್ಲಿ ಉಲ್ಲೇಖಿತನಾಗಿರುವ ದೊರೆ ನಾಲ್ಕನೆಯ ರಾಚಮಲ್ಲ ಎಂದು ಭಾವಿಸುವುದಾದರೆ ಆಗ ಇದರ ತೇದಿ ಕ್ರಿ.ಶ. ೯೮೦–೮೧ ಎಂದಾಗುತ್ತದೆ. ಸದ್ಯಕ್ಕೆ ಈ ಎರಡೂ ತೇದಿಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ವಾಸ್ತವವಾಗಿ ಇದೊಂದು ವೀರಗಲ್ಲು ಶಾಸನ. ಸಾಗಡೆ ಗ್ರಾಮದ ಗಡಿಯ ವಿಚಾರದಲ್ಲಿ ನಡೆದ ಘರ್ಷಣೆಯಲ್ಲಿ ಅದೇ ಗ್ರಾಮಕ್ಕೆ ಸೇರಿದ ಪರಮಯ ಎಂಬ ವೀರನು ಮಡಿದನು. ಬಹುಶಃ ಅವನ ಮಗ ಕುಂದಿಗ ಎಂಬುವನು ಪರಮಯನ ಗೌರವಾರ್ಥ ಭೂದಾನವನ್ನು ಮಾಡಿ ಈ ಶಾಸನವನ್ನು ಸ್ಥಾಪಿಸಿದನು. ಶಾಪಾಶಯವೂ ಗಮನಾರ್ಹವಾದುದು. ಕವಿಲೆಯ ನಾಶದ ಜೊತೆಗೆ ಕೆರೆ ಮತ್ತು ವೃಕ್ಷಗಳ (ನಾರವೆ) ನಾಶವನ್ನೂ ಪಾಪಕಾರ್ಯದಲ್ಲಿ ಸೇರಿಸಿರುವುದು ಆಸಕ್ತಿಕರವಾಗಿದೆ. ಸಮಕಾಲೀನ ಜನಗಳಿಗೆ ಕೆರೆ–ಕಟ್ಟೆ ಹಾಗೂ ಗಿಡಮರಗಳ ಬಗೆಗೆ ಇದ್ದ ಕಾಳಜಿ ಇದರಿಂದ ವ್ಯಕ್ತವಾಗುತ್ತದೆ. ಶಾಸನದಲ್ಲಿ ಬಳಸಲಾಗಿರುವ ವಿಟ್ಟರ್ ಎಂಬ ಪದ ಕನ್ನಡ ಭಾಷಾಶಾಸ್ತ್ರ ದೃಷ್ಟಿಯಿಂದ ಗಮನಾರ್ಹವಾದದ್ದು. ಶಾಸನದಲ್ಲಿ ಈ ಗ್ರಾಮದ ಹೆಸರನ್ನು ಸಾಗಡೆ ಎಂದು ಉಲ್ಲೇಖಿಸಲಾಗಿದೆ. ಅಂದರೆ ಈ ಹೆಸರು ಸಾವಿರ ವರ್ಷಗಳ ಪ್ರಾಚೀನತೆಯನ್ನು ಹೊಂದಿದ್ದು, ಈ ಸಮಯದಲ್ಲಿ ಅದು ಬದಲಾವಣೆ ಹೊಂದಿಲ್ಲ ಎಂಬುದೂ ಆಸಕ್ತಿಕರ ಸಂಗತಿ.

### ಶಾಸನ ಪಾಠ [೮]

೧. ಸ್ವಸ್ತಿ ಶ್ರೀ ಸತ್ಯವಾಕ್ಯಪೆ
೨. ರ್ಮ್ಮಾನಡಿಗ(ಂ)ಳ ಪಟ್ಟಗಟ್ಟಿದ ಏ
೩. ಟನೆಯ ವರಿಸದನ್ದು ಸಾಗಡೆಯ
೪. ಪರಮಯ ಸೀಮಾನ್ತರದ . ಸ[ಮ]
೫. ರದೊಳ್ ಪರಿಯಟ್ಟ . . .
೬. ಸತ್ತ . . . ಸಾಗಡೆಯ ಗಾ
೭. ವುಣ್ದುಗಳು ಇಟ್ಟು ಮಣ್ಣು
೮. ಕುನ್ದಿಗಜ್ಗೆ ವಿಟ್ಟರ್ ಇ
೯. ಕೊಡಜ್ಗೆಯನಟಿದನ್ದು ಕೆಜ಼ಿಯನಾ
೧೦. ರವೆಯ ಕವಿಲೆಯ ವಾರಣಾಸಿ
೧೧. ಯ ಅಟಿದರು.

## ಶಾಸನ–೩

ಈ ಶಾಸನವು ಹೆಗ್ಗಡದೇವನಕೋಟೆ ತಾಲ್ಲೂಕು ಚನ್ನಕಲ್ ಕಾವಲ್ ಎಂಬ ಗ್ರಾಮದಲ್ಲಿ ಪತ್ತೆಯಾಗಿದೆ. ಈ ಶಾಸನವನ್ನು ನುಣುಪಾದ ಕರಿಕಲ್ಲಿನ ಮೇಲೆ ಕಂಡರಿಸಲಾಗಿದ್ದು, ಅದು ಈಗ ಇದೇ ಗ್ರಾಮದಲ್ಲಿ ಶಿಕ್ಷಕರಾಗಿರುವ ಸಿದ್ಧಯ್ಯ ಎಂಬುವರ ಹೊಲದಲ್ಲಿದೆ. ಇದೊಂದು ವೀರಗಲ್ಲು ಶಾಸನವಾಗಿದ್ದು, ಇದರಲ್ಲಿ ಕನ್ನಡ ಲಿಪಿಯ ಎಂಟು ಸಾಲುಗಳಿವೆ. ಶಾಸನ ಕನ್ನಡ ಭಾಷೆಯಲ್ಲಿದೆ. ಲಿಪಿಶಾಸ್ತ್ರದ ದೃಷ್ಟಿಯಿಂದ ಈ ಶಾಸನದ ತೇದಿ ಕ್ರಿ.ಶ. ಹನ್ನೆರಡನೆಯ ಶತಮಾನವೆಂದು ಭಾವಿಸಬಹುದು. ಶಾಸನದ ಮೊದಲನೆಯ ಎರಡು ಸಾಲುಗಳಲ್ಲಿ ಮಹಾಮಂಡಲೇಶ್ವರ ತ್ರಿಭುವನಮಲ್ಲ ವೀರನಂದಿದೇವನನ್ನು ಹೆಸರಿಸುತ್ತದೆ. ಆದರೆ ಇವನು ಯಾವ ರಾಜವಂಶಕ್ಕೆ ಸೇರಿದವನು ಎನ್ನುವುದನ್ನು ತಿಳಿಸುವುದಿಲ್ಲ. ಶಾಸನವು ದೊರಕಿರುವ ಪ್ರದೇಶ ಹಾಗೂ ತೇದಿಯನ್ನು ಪರಿಗಣಿಸಿ ಹೇಳುವುದಾದರೆ ಈ ನಂದಿದೇವ ಚಂಗಾಳ್ವ ವಂಶಕ್ಕೆ ಸೇರಿದವನಿರಬೇಕೆಂದೆನಿಸುತ್ತದೆ. ಇವನಿಗಿರುವ ಪ್ರಶಸ್ತಿಗಳು ಇದನ್ನು ದೃಢಪಡಿಸುತ್ತವೆ. ಇವೆಲ್ಲವನ್ನೂ ಗಮನಿಸಿದರೆ ಈ ನಂದಿದೇವನು ಹೊಯ್ಸಳ ವಿಷ್ಣುವರ್ಧನ ಅಥವಾ ಮೊದಲನೆಯ ನರಸಿಂಹ ಇಲ್ಲವೇ ಇಮ್ಮಡಿ ಬಲ್ಲಾಳರ ಕಾಲದಲ್ಲಿ ಮಹಾಮಂಡಲೇಶ್ವರನಾಗಿದ್ದಿರಬೇಕೆಂದು ಭಾವಿಸಬಹುದು.[೯] ಇದು ಲಿಪಿಶಾಸ್ತ್ರದ ತೇದಿಗೂ ಸರಿಹೊಂದುತ್ತದೆ.

ಈ ಶಾಸನವನ್ನು ತುರುಗೋಳ್ ಗುಂಪಿಗೆ ಸೇರಿಸಬಹುದು. ಹಸುಗಳನ್ನು ರಕ್ಷಿಸುವ ಸಲುವಾಗಿ ನಡೆದ ಘರ್ಷಣೆಯಲ್ಲಿ ಲಕ್ಕೆಯನು ಮರಣಿಸಿದುದನ್ನು ಉಲ್ಲೇಖಿಸುತ್ತದೆ. ಜೊತೆಗೆ ತಿಪ್ಪಯನಾಯಕ, ಸೋಮಯ್ಯನ ಮಗ ಹರಹೆಯ ದಣ್ಣಾಯಕ ಹಾಗೂ ಮಾದರಸರನ್ನು ಉಲ್ಲೇಖಿಸುತ್ತದೆ. ಇವರು ತುರುಗೋಳ್‌ನಲ್ಲಿ ಯಾವ ರೀತಿ ಭಾಗವಹಿಸಿದ್ದರು ಎಂಬುದು ತಿಳಿಯುವುದಿಲ್ಲ. ಬಹುಶಃ ಇವರೇ ಈ ವೀರಗಲ್ಲನ್ನು ನಿಲ್ಲಿಸಿದವರಾಗಿರಬೇಕು. ಚಣಗಾಲ ಗ್ರಾಮದ ಮಾದರಸನು ಈಶಾನ ಪಂಡಿತನಿಗೆ ಭೂದಾನವನ್ನು ಮಾಡಿದ ವಿವರಗಳನ್ನು ತಿಳಿಸುತ್ತದೆ. ಶಾಸನದಲ್ಲಿ ಈ ಗ್ರಾಮದ ಹೆಸರನ್ನು ಚಣಗಾಲ ಎಂದು ನೀಡಲಾಗಿದೆ. ಕಾಲಕ್ರಮದಲ್ಲಿ ಇದು ಬದಲಾಗಿ ಚನ್ನಕಲ್ ಕಾವಲು ಎಂದಾಗಿದೆ. ಕರ್ನಾಟಕದಲ್ಲಿ 'ಕಾವಲು' ಎಂಬ ಪದದಿಂದ ಕೊನೆಗೊಳ್ಳುವ ಅನೇಕ ಸ್ಥಳನಾಮಗಳಿವೆ.[೧೦] ಉದಾಹರಣೆಗೆ ಗರಿಕೆಕಟ್ಟೆ ಕಾವಲು, ಬೆಳಗನಹಳ್ಳಿ ಕಾವಲು, ಹೊದಕೆಕಟ್ಟೆ ಕಾವಲು, ಹುಸ್ಸೈನಿಪುರ ಕಾವಲು ಇತ್ಯಾದಿ.

### ಶಾಸನ ಪಾಠ [೧೦(ಅ)]

**ಒಂದನೆಯ ಪಟ್ಟಿ**

೧. ಸ್ವಸ್ತಿ ಶ್ರೀಮನ್ ಮಹಾಮಂಡಳೇಶ್ವರ ತ್ರಿಭುವನಮಲ್ಲ ವೀರನ
೨. ಂದಿದೇವ ಪ್ರಿಥ್ವೀರಾಜ್ಯಂಗೆಯುತವಿರಲು ಅವರತಿ ತಿಪ್ಪನಾಯ
೩. ಕ ಸೋಮಯನ ಮಗ ಹರಹೆಯ ದಣ್ಣಯಕನ ಲಕೆಯ

**ಎರಡನೆಯ ಪಟ್ಟಿ**

೪. ಚಣಗಾಲ ಮಾದರಸ ತುಱುಪರಿವಿನ ತುಱುವಮ
೫. ಗುಚಿ ಸತ್ತು ಸ್ವರ್ಗಸ್ತನಾದ . . . .
೬ . . . . . ದ ನಿಲಿಸಿದ ಸಾಸನ

**ಅಡ್ಡಪಟ್ಟಿ**

೭. ಚಣ್ಣಗಲ ಮಾದರಸ ಇಸಾನ ಪಣ್ಡಿತರಿಗೆ ಬಿಟ್ಟಭೂಮಿ
೮. ಗದ್ದೆ ಬೆದ್ದಲು ಇನ್ನುಱು . . . . .

## ಶಾಸನ–೪

ಈ ಶಾಸನವು ಮೇಲೆ ಗಮನಿಸಲಾದ ಕಬ್ಬಳ್ಳಿ ಗ್ರಾಮದಲ್ಲಿದೆ. ನಯ ಮಾಡಿದ ಕಲ್ಲಿನ ಫಲಕದ ಮೇಲೆ ಈ ಶಾಸನವನ್ನು ಕೆತ್ತಲಾಗಿದೆ. ಈ ಕಲ್ಲು ಹೊಲದ ಮಧ್ಯದಲ್ಲಿ ಬಿದ್ದಿದೆ. ಹದಿಮೂರು ಸಾಲುಗಳ ಈ ಶಾಸನ ಕ್ರಿ.ಶ. ೧೪ನೆಯ ಶತಮಾನದ ಕನ್ನಡ ಲಿಪಿಯಲ್ಲಿದೆ. ಶಾಸನದ ಭಾಷೆ ಕನ್ನಡ. ಶಾಸನವು ಶ್ರೀ ವೀರ ಬುಕ್ಕಣ್ಣವೊಡೆಯನನ್ನು ಪರಿಚಯಿಸುತ್ತದೆ. ಇವನು ವಿಜಯನಗರದ ದೊರೆ ಸಂಗಮ ವಂಶದ ಬುಕ್ಕರಾಯ ಎನ್ನುವುದರಲ್ಲಿ ಸಂದೇಹವಿಲ್ಲ. ಶಾಸನದಲ್ಲಿ ತೇದಿಯು

ಉಕ್ತವಾಗಿದೆ ಶಕವರ್ಷ ೧೩೦೪, ದುಂದುಭಿ ಸಂವತ್ಸರ ಮಾಘ ಬಹುಳ ೧೦ ಎಂದು. ಇದು ಕ್ರಿ.ಶ. ೧೩೮೩ರ ಜನವರಿ ೨೮ ಬುಧವಾರಕ್ಕೆ ಸರಿಹೊಂದುತ್ತದೆ. ಸಂಗಮವಂಶದಲ್ಲಿ ಇಬ್ಬರು ಬುಕ್ಕರಾಯ ಎನ್ನುವ ಹೆಸರಿನ ರಾಜರಿದ್ದರು. ಇವರಲ್ಲಿ ಮೊದಲನೆಯ ಬುಕ್ಕನು ಕ್ರಿ.ಶ. ೧೩೫೬–೧೩೭೭ ರವರೆಗೆ ರಾಜ್ಯವಾಳಿದನು. ಎರಡನೆಯ ಬುಕ್ಕರಾಯನ ಕಾಲ ಕ್ರಿ.ಶ. ೧೪೦೪–೧೪೦೬. ಪ್ರಸ್ತುತ ಶಾಸನದಲ್ಲಿ ಕೊಟ್ಟಿರುವ ತೇದಿ ಕ್ರಿ.ಶ. ೧೩೮೩ ಈ ಇಬ್ಬರ ಕಾಲಕ್ಕೂ ಹೊಂದಿಕೆಯಾಗುವುದಿಲ್ಲ. ವಾಸ್ತವವಾಗಿ ಶಾಸನದಲ್ಲಿ ಉಲ್ಲೇಖಗೊಂಡಿರುವ ಕ್ರಿ.ಶ. ೧೩೮೩ರಲ್ಲಿ ಇಮ್ಮಡಿ ಹರಿಹರನು (ಕ್ರಿ.ಶ. ೧೩೭೭–೧೪೦೪) ರಾಜ್ಯವಾಳುತ್ತಿದ್ದನು. ಇವನ ತಂದೆಯಾದ ಮೊದಲನೆಯ ಬುಕ್ಕನು ಕ್ರಿ.ಶ. ೧೩೭೭ರಲ್ಲಿ ಮರಣ ಹೊಂದಿದ್ದನು ಹಾಗೂ ಎರಡನೆಯ ಬುಕ್ಕರಾಯನು ಇನ್ನೂ ಪಟ್ಟಕ್ಕೆ ಬಂದಿರಲಿಲ್ಲ.[೧೧] ಆದುದರಿಂದ ಶಾಸನದಲ್ಲಿ ನೀಡಿರುವ ತೇದಿಯು ತಪ್ಪಿರಬೇಕು ಇಲ್ಲವೇ ಈ ಶಾಸನ ಇಮ್ಮಡಿ ಹರಿಹರನ ಕಾಲಕ್ಕೇ ಸೇರಿದ್ದಾಗಿರಬೇಕು. ಇದನ್ನು ಸಮರ್ಪಕವಾಗಿ ವಿವರಿಸುವುದು ಸಾಧ್ಯವಿಲ್ಲವಾಗಿದೆ.

ಈ ಶಾಸನದ ಉದ್ದೇಶ, ಕಬ್ಬಳ್ಳಿಯ ಗವುಡ ಪ್ರಜೆಗಳ ಸಮ್ಮುಖದಲ್ಲಿ ದಾನವನ್ನು ನೀಡಿರುವುದೇ ಆಗಿದೆ. ನರಸಮಂಗಲ ಗ್ರಾಮಕ್ಕೆ ಸೇರಿದ ಬಡಗಿ ಸವೋಜ ಎಂಬುವನ ಉಲ್ಲೇಖ ಶಾಸನದಲ್ಲಿದೆ. ಅವನನ್ನು ಬಯಕಾರ ಮತ್ತು ಶಂಖಪಾಲಕ ಎಂಬ ವಿಶೇಷಣಗಳಿಂದ ಉಲ್ಲೇಖಿಸಲಾಗಿದೆ. ಬಯಕಾರ ಎನ್ನುವುದು ಪರಿಚಿತವಾಗಿರುವ ವಿಶೇಷಣ. ಅದು ಸಂಗೀತಶಾಸ್ತ್ರ ವಿದ್ವಾಂಸನನ್ನು ಉಲ್ಲೇಖಿಸುತ್ತದೆ. ಈಗಾಗಲೇ ವಿಜಯನಗರ ಕಾಲದಲ್ಲಿದ್ದ ಬಯಕಾರ ರಾಮಪ್ಪಯ್ಯ ಅಥವಾ ರಾಮಾಮಾತ್ಯನನ್ನು ಇದು ನಮ್ಮ ಜ್ಞಾಪಕಕ್ಕೆ ತರುತ್ತದೆ.[೧೨] ಇನ್ನೊಂದು ವಿಶೇಷಣ ಶಂಖಪಾಲಕ. ಇದಕ್ಕೆ ಅನೇಕ ಅರ್ಥಗಳಿವೆ. ಮೊದಲನೆಯದಾಗಿ ಇದು ಅಷ್ಟಸರ್ಪಗಳಲ್ಲಿ ಒಂದಕ್ಕೆ ಅನ್ವಯಿಸುತ್ತದೆ.[೧೩] ಆದರೆ ಇಲ್ಲಿ ಅದು ಸರಿಹೊಂದುವುದಿಲ್ಲ. ಇನ್ನೊಂದು ಅರ್ಥ ಪಂಚಮಹಾಶಬ್ದಗಳಲ್ಲಿ ಒಂದಾದ ಶಂಖಕ್ಕೆ ಸಂಬಂಧಿಸಿದ್ದು. ರಾಜನು ಸಭೆಗೆ ಬಂದಾಗ ಶಂಖನಾದವನ್ನು ಮಾಡುವವನು ಹಾಗೂ ರಾಜನು ಹೊರಗೆ ಹೊರಟಾಗ ಅವನ ಪರಿವಾರದ ಜೊತೆಯಲ್ಲಿ ಶಂಖವಾದ್ಯವನ್ನು ತೆಗೆದುಕೊಂಡು ಹೋಗುವವನು ಎಂದು ಅರ್ಥ ಮಾಡಬಹುದು. ಶಂಖ ಎನ್ನುವ ಪದಕ್ಕೆ ಸೇನಾರಚನೆಯ ಒಂದು ಭೇದ ಮತ್ತು ಕುದುರೆಯ ಒಂದು ಅಂಗ ಎಂಬ ಅರ್ಥಗಳೂ ಇವೆ. ಆದರೆ ಇಲ್ಲಿ ಉಲ್ಲೇಖಿತನಾಗಿರುವ ಸವೋಜನು ಬಯಕಾರನಾಗಿರುವುದರಿಂದ ಶಂಖಪಾಲಕ ಎಂದರೆ ಶಂಖವಾದ್ಯವನ್ನು ಮಾಡುವವನು ಅಥವಾ ಶಂಖವನ್ನು ಒಯ್ಯುವವನು ಎನ್ನುವ ಅರ್ಥವೇ ಈ ಸಂದರ್ಭದಲ್ಲಿ ಹೆಚ್ಚು ಸಮಂಜಸವಾಗಿ ಕಾಣಬರುತ್ತದೆ.[೧೪] ಒಟ್ಟಿನಲ್ಲಿ ಸವೋಜನು ಅರಮನೆಯಲ್ಲಿ ಪ್ರಭಾವಿ ವ್ಯಕ್ತಿಯಾಗಿದ್ದನು ಎಂದು ಭಾವಿಸಬಹುದು.

ಸವೋಜನ ಮಗ ಲಕಣ. ಅವನೂ ಬಡಗಿಯಾಗಿದ್ದನು. ಕಬ್ಬಳ್ಳಿಯ ಮಹಾಜನರು ಸಭೆಯೋಜ ಎನ್ನುವವನಿಗೆ ಸರ್ವಮಾನ್ಯವಾಗಿ ಭೂದಾನ ಮಾಡಿದುದನ್ನು ಶಾಸನ ತಿಳಿಸುತ್ತದೆ. ಹೀಗೆ ಕಬ್ಬಳ್ಳಿಯಲ್ಲಿ ಈ ಕಲ್ಲಿನ ಶಾಸನವನ್ನು ಬರೆಸಿ ನೆಡಿಸಲಾಯಿತು. ಈ ಶಾಸನದಲ್ಲಿ ಹೆಸರಿಸಲಾದ ಇನ್ನೊಂದು ಸ್ಥಳನಾಮವೆಂದರೆ ನರಸಮಂಗಲ. ಇದು ಈಗಲೂ ಅದೇ ಹೆಸರಿನ ಗ್ರಾಮವಾಗಿದ್ದು ಗಂಗರ ಕಾಲದ ರಾಮಲಿಂಗೇಶ್ವರ ದೇವಾಲಯಕ್ಕೆ ಬಹಳ ಪ್ರಸಿದ್ಧಿಯಾಗಿದೆ. ಇದು ಕ್ರಿ.ಶ.ಎಂಟನೆಯ ಶತಮಾನದಲ್ಲಿ ನಿರ್ಮಿಸಲಾದ ದೇವಾಲಯ. ಇಲ್ಲಿರುವ ಸಪ್ತಮಾತೃಕೆಯರ ವಿಗ್ರಹಗಳು ಬಲು ಸುಂದರವಾಗಿವೆ. ಆದರೆ ಈ ಗ್ರಾಮಕ್ಕೆ ಹೋಗುವುದೇ ಬಹಳ ಪ್ರಯಾಸದ ಕೆಲಸ. ಹೀಗಾಗಿ ಈ ಸುಂದರ ಶಿಲ್ಪಗಳು ಇತಿಹಾಸಕಾರರ ಗಮನಕ್ಕೆ ಬರದೇ ಇರುವುದು ದುರದೃಷ್ಟಕರ. ಈ ಸಾವಿರ ವರ್ಷಗಳಲ್ಲಿ ಈ ಗ್ರಾಮದ ಹೆಸರು ಬದಲಾಗದೇ ಇರುವುದು ಇನ್ನೊಂದು ಹೆಚ್ಚಳ.

ಈ ರೀತಿ ಮೇಲಿನ ೪ ಹೊಸದಾಗಿ ಪತ್ತೆಯಾದ ಶಾಸನಗಳಾಗಿವೆ. ಆಗಲೇ ಗಮನಿಸಿರುವಂತೆ ಇವು ಸ್ಥಳೀಯ ಇತಿಹಾಸಕ್ಕೆ ಉಪಯೋಗಕರವಾಗಿವೆ. ಇನ್ನೂ ಹೆಚ್ಚಿನ ಅನ್ವೇಷಣೆ ನಡೆಸಿದರೆ ಅನೇಕ ಹೊಸ ಶಾಸನಗಳು ದೊರೆಯುತ್ತವೆ ಎಂಬ ಆಸೆಯನ್ನು ಇವು ಹುಟ್ಟುಹಾಕುತ್ತವೆ.

**ಶಾಸನ ಪಾಠ** [೧೦(ಅ)]

೧. ಸ್ವಸ್ತಿ ಸಮಸ್ತಪ್ರಸಸ್ತಿಸಹಿತಂ ಶ್ರೀ ವೀರಬುಕ್ಕಣ್ಣವೊಡೆ
೨. ಯರು ಪ್ರಿಥುವಿರಾಜ್ಯಂ ಗೆಯ್ಯುತ್ತಿರಲು ಶಕವರ್ಷ ೧೩೦
೩. [೪] ನೇ ದುಂಧುಬಿಸಂವತ್ಸರದ ಮಾಘ ಬ ೧೦ [ ಬು]

೪. ಶ್ರೀಮತು ಕಬ್ಬಳ್ಳಿಯ ಸಮಸ್ತಗವುಡುಪ್ರಜೆ
೫. ಗಳು ಆವೂರ ಬಡಗಿ ನರಸಮಂಗಲದ ಭ
೬. ಯಕಾಜಿ ಶಂಖಪಾಲಕ [ಸ]ವೋಜನ ಮಗ ಲ[ಕ]ಣ
೭. ತಂನ ಮ . . ಮಾ ಕಬ್ಬಳ್ಳ[ಯ] ಗೌಡುಪ್ರಜೆಗಳಿಗೆ .
೮. [ವ] ನಿದ್ದಲ್ಲಿ [ಆ] ಮಗ ಸಭೆಯೋಜಂಗೆಯಾಚಂದ್ರಾ
೯. ರ್ಕತಾರಾಂಬರ[ವು]ಳ್ಳಂನಬರ ಸರ್ವ್ವಮಾಂನ್ಯವಾಗಿ
೧೦. ಬಿಟ್ಟ ಕೊಡಗೆ ಸತ್ರದ ಸಾರಿಗೆ ಕಂಗುನಿ . . ೧೦೦
೧೧. ಕೊಂಡು ಮನೆಮಾನ್ಯವಾಗಿ ಬಿಟ್ಟ ಕೊಡಗೆಯ ಕಲ್ಲು
೧೨. ಇದಕೆ ಅಳಿಹಿದವರು ಕವಿಲೆಯ ಕೊಂದ ಪಾ
೧೩. ಪಕ್ಕೆ ಹೋಹರು

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಈ ೪ ಶಾಸನಗಳನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ವಿಭಾಗದಲ್ಲಿ ರೀಡರ್ ಆಗಿದ್ದ ಡಾ॥ ಎಸ್. ಪವಳಯ್ಯನವರು ಯು.ಜಿ.ಸಿ. ಸಂಶೋಧನಾ ಯೋಜನೆಯಡಿ ಪತ್ತೆ ಮಾಡಿದರು. ಆದರೆ ಈ ಲೇಖನದ ಇಂಗ್ಲಿಷ್ ರೂಪವು ಅಚ್ಚಾಗುವ ಮುನ್ನವೇ ಮರಣಹೊಂದಿದರು. ನನ್ನ ವಿದ್ಯಾರ್ಥಿಯೂ, ನಂತರ ಸಹೋದ್ಯೋಗಿಯೂ ಆಗಿದ್ದ ಇವರು ಶಾಸನತಜ್ಞರಾಗಿ ಹೊರಹೊಮ್ಮುತ್ತಿದ್ದರು. ನಾನು ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಇವರು ನನ್ನ ಜೊತೆ ಸೇರಿ ಅನೇಕ ಲೇಖನಗಳನ್ನೂ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾದ ನಿಯತಕಾಲಿಕೆಯಲ್ಲಿ ಪ್ರಕಟಿಸಿದ್ದರು. ಪ್ರಸ್ತುತ ಲೇಖನದ ಇಂಗ್ಲಿಷ್ ಅವತರಣಿಕೆಯಲ್ಲಿ ನನ್ನ ಸಹಲೇಖಕರಾಗಿದ್ದರು (ಜರ್ನಲ್ ಆಫ್ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ, ಸಂ.೩೧, ೨೦೦೫. ಪು.೧೧೪-೧೨೪).

೨. **ಎಪಿಗ್ರಾಫಿಯಾ ಕರ್ನಾಟಿಕ**, ಸಂ.೫ (ಮೈಸೂರು ಜಿಲ್ಲೆ, ಪರಿಷ್ಕೃತ ಆವೃತ್ತಿ) ತಿ.ನರಸೀಪುರ-೨೦೭, ಪು.೫೯೦

೩. **ಕರ್ನಾಟಕದ ಅರಸು ಮನೆತನಗಳು** (ಸಂ.೧) - ನೆಲಮಂಗಲ ಲಕ್ಷ್ಮೀನಾರಾಯಣರಾಯರು, ಆರ್.ಎಸ್. ಪಂಚಮುಖಿ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ-೨೦೦೮ [ದ್ವಿತೀಯ ಮುದ್ರಣ], ಪು.೧೨೯-೧೪೨.

೪. **ಎಪಿಗ್ರಾಫಿಯಾ ಕರ್ನಾಟಿಕ**, ಸಂಪುಟ-೫ (ಮೈಸೂರು ಜಿಲ್ಲೆ, ಪರಿಷ್ಕೃತ ಆವೃತ್ತಿ) ತಿ.ನರಸೀಪುರ-೨೦೭, ಪುಟ.೫೯೦.

೫. ಈ ಶಾಸನವು ಎಚ್.ಎಂ. ನಾಗರಾಜರಾಯರ **ಶಿವತೋಷ** (ರಚನಾ ಪ್ರಕಾಶನ, ಮೈಸೂರು-೨೦೦೮) ಕೃತಿಯಲ್ಲಿಯೂ ಪ್ರಕಟವಾಗಿದೆ. ಪು.೩೮೪.

೬. **ಕರ್ನಾಟಕ ಇತಿಹಾಸ** - ಬಾ.ರಾ. ಗೋಪಾಲ್, ಮೈಸೂರು ವಿಶ್ವವಿದ್ಯಾನಿಲಯ-೧೯೮೬, ಪು.೯೫.

೭. *Inscriptions of the Western Gangas* - (Ed) K.V. Ramesh, ICHR and Agam Prakashan, New Delhi - 1984, p.411.

೮. **ಶಿವತೋಷ** ಕೃತಿಯಲ್ಲಿನ ಪಾಠಕ್ಕೂ (ಪು.೩೮೩) ಇಲ್ಲಿ ನೀಡಿರುವ ಪಾಠಕ್ಕೂ ಅಲ್ಪಸ್ವಲ್ಪ ವ್ಯತ್ಯಾಸಗಳಿವೆ.

೯. **ದಿ ಹೊಯ್ಸಳ ವಂಶ** - ವಿಲಿಯಂ ಕೊಯೆಲ್ಹೊ, ಮುಂಬೈ-೧೯೫೦, ಪು.೭೮-೭೯.

೧೦. **ಪ್ಲೇಸ್ ನೇಮ್ಸ್ ಎಂಡಿಂಗ್ ವಿತ್ ಕಾವಲು** - ಎ.ವಿ. ನರಸಿಂಹಮೂರ್ತಿ, ಸ್ಟಡೀಸ್ ಇನ್ ಇಂಡಿಯನ್ ಪ್ಲೇಸ್ ನೇಮ್ಸ್, ಸಂ.೨೬, ಮೈಸೂರು-೨೦೦೫, ಪು.೧೧೬-೧೨೩

೧೦(ಅ) ಇವೆರಡೂ ಶಾಸನಗಳು **ಶಿವತೋಷ** ಕೃತಿಯಲ್ಲಿ ಪ್ರಕಟವಾಗಿವೆ. ಪು.೩೭೮ ಮತ್ತು ೩೮೫

೧೧. **ಕರ್ನಾಟಕದ ಸಂಕ್ಷಿಪ್ತ ಇತಿಹಾಸ** - ಸೂರ್ಯನಾಥ ಕಾಮತ್, ಎಂ.ಸಿ.ಸಿ. ಪಬ್ಲಿಕೇಷನ್ಸ್, ೨೦೦೮, ಪು.೧೫೩-೧೫೪.

೧೨. **ಬಯಕಾರ ರಾಮಪ್ಪಯ್ಯ** - ಎಸ್.ಎನ್. ಶಿವರುದ್ರಸ್ವಾಮಿ, ಹಂಪಿ ಕನ್ನಡ ವಿಶ್ವವಿದ್ಯಾಲಯ-೨೦೦೧; **ಕರ್ನಾಟಕ ಸಂಗೀತವಾಹಿನಿ** - ರಾ. ಸತ್ಯನಾರಾಯಣ, ಕನ್ನಡ ಪುಸ್ತಕ ಪ್ರಾಧಿಕಾರ-೨೦೦೧ [ದ್ವಿತೀಯ ಮುದ್ರಣ], ಪು.೧೪೯-೨೧೦.

೧೩. ಕನ್ನಡ ಸಾಹಿತ್ಯ ಪರಿಷತ್ತಿನ **ಕನ್ನಡ ನಿಘಂಟು**, ಸಂ.೮, ಪು.೮೦೬೪.

೧೪. ಕುಂದೂರಿ ಈಶ್ವರದತ್ತರ ಶಾಸನ ಶಬ್ದಕೋಶಮುಬಿನಲ್ಲಿನ ಶಂಕುಲಧಾರವಾಡು, ಶಂಕುಲವಾರು ಎಂಬ ಶಬ್ದಗಳು ಶಂಖಪಾಲಕ ಶಬ್ದಕ್ಕೆ ಸಂಬಂಧಿಸಿದವುಗಳಾಗಿವೆ (ನೋಡಿ:- **ಶಾಸನ ಶಬ್ದಕೋಶಮು**, ಆಂಧ್ರಪ್ರದೇಶ ಸಾಹಿತ್ಯ ಅಕಾಡಮಿ, ಹೈದರಾಬಾದ್-೧೯೬೭, ಪುಟ. ೨೮೪-೨೮೫). ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಈ ಅರ್ಥ ದಾಖಲಾಗಿಲ್ಲ. ಈ ವಿವರಗಳನ್ನು ಸೂಚಿಸಿದವರು ಬೆಂಗಳೂರಿನ ಸಂಶೋಧಕರಾದ ಎಸ್. ಕಾರ್ತೀಕ್ ಅವರು.

# ಅಪರೂಪದ ವಿಷಯ ತಿಳಿಸುವ ಕಕ್ಕೆಹಳ್ಳಿಯ ಶಾಸನ

– ಡಾ॥ ಪಿ.ಎನ್. ನರಸಿಂಹಮೂರ್ತಿ*

ಇತ್ತೀಚಿಗೆ ಉಡುಪಿ ಜಿಲ್ಲೆಯಲ್ಲಿ ನಾನು ಕೈಗೊಂಡ ಶೋಧ ಕಾರ್ಯದಲ್ಲಿ ಹಲವು ಹೊಸ ಶಾಸನಗಳು ಪತ್ತೆಯಾದವು. ಅವುಗಳಲ್ಲಿ ಪ್ರಸಕ್ತ ಶಾಸನ ಉಡುಪಿ ತಾಲೂಕಿನ ಬೆಳ್ಳಂಪಳ್ಳಿ ಗ್ರಾಮದ ಕಕ್ಕೇಹಳ್ಳಿ ಉಪಗ್ರಾಮದ ಗದ್ದೆಯೊಂದರಲ್ಲಿ ದೊರೆತದ್ದು. ಸ್ಥಳೀಯವಾಗಿ ಈ ಗದ್ದೆಯನ್ನು 'ಕಲ್ಲಕಂಡ' ಎಂದು ಕರೆಯುತ್ತಾರೆ. ತುಳುವಿನ 'ಕಲ್ಲಕಂಡ' ಕನ್ನಡದಲ್ಲಿ 'ಕಲ್ಲಿನಗದ್ದೆ' ಆಗುತ್ತದೆ. ಈ ಗದ್ದೆಯಲ್ಲಿ ನೆಟ್ಟಿರುವ ಈ ಶಾಸನ ಕಲ್ಲೊಂದನ್ನು ಹೊರತುಪಡಿಸಿ ಬೇರಾವ ಕಲ್ಲೂ ಇಲ್ಲ. ಹಾಗಾಗಿ ಈ ಗದ್ದೆಗೆ 'ಕಲ್ಲಕಂಡ' ಎಂಬ ಹೆಸರು ಬರಲು ಈ ಶಾಸನ ಕಲ್ಲೇ ಕಾರಣವಾಗಿದೆ.

ಶಾಸನದ ಬರಹ ಬಹಳ ಸ್ಫುಟವಾಗಿದೆ. ಗದ್ದೆಯಲ್ಲಿ ಉಳುಮೆ ಕಾರ್ಯ ನಿರಂತರವಾಗಿ ನಡೆದಿರುವ ಕಾರಣ ಕೊನೆಯ ೨-೩ ಸಾಲುಗಳು ಮಾಸಿಹೋಗಿವೆ. ಆದರೆ ಇದರಿಂದ ಮುಖ್ಯ ವಿಷಯಕ್ಕೇನೂ ಧಕ್ಕೆಯಾಗಿಲ್ಲ. ರಾಜಕೀಯ ಸ್ಥಿತ್ಯಂತರದ ಸಮಯದಲ್ಲಿ ಉಂಟಾದ ಧಾರ್ಮಿಕ ಲೋಪವೊಂದರ ಬಗ್ಗೆ ರಾಜ್ಯಾಡಳಿತವು ತನ್ನ ಅಧಿಕಾರಯುತವಾದ ಆದರೆ ಅಷ್ಟೇ ನ್ಯಾಯಸಮ್ಮತವಾದ ಕ್ರಮ ಕೈಗೊಂಡ ವಿಚಾರವೊಂದನ್ನು ಈ ಶಾಸನ ದಾಖಲಿಸಿದೆ.

ಶಾಸನದಲ್ಲಿ ಸುಮಾರು ೨೨ ಸಾಲುಗಳ ಬರಹ ಇದೆ. ೧೯ ಸಾಲುಗಳಲ್ಲಿ ಮಾತ್ರ ಬರಹ ಸ್ಪಷ್ಟವಾಗಿದೆ. ಇದರ ಲಿಪಿ ಮತ್ತು ಭಾಷೆ ಕನ್ನಡ ಗದ್ಯ. ಲಿಪಿ ಮತ್ತು ಭಾಷಾ ಪ್ರಯೋಗಗಳಲ್ಲಿ ದೋಷಗಳೇನೂ ಕಂಡುಬರುವುದಿಲ್ಲ. ಶಕಟರೇಫದ ಬಳಕೆಯೂ ಇಲ್ಲಿ ಒಂದು ಕಡೆ ಮಾತ್ರ ಆಗಿದೆ.

ಶಾಸನದ ಕಾಲ ಶಕವರ್ಷ ೧೩೨೧ನೆಯ ಪ್ರಮಾಥಿ ಸಂವತ್ಸರ, ಶ್ರಾವಣ ಶುದ್ಧ ಶ್ರೀ ಮಂಗಳವಾರ. ಇದು ಕ್ರಿ.ಶ. ೧೩೯೯, ಜುಲೈ ೮ಕ್ಕೆ ಸರಿ ಹೊಂದುತ್ತದೆ. ಚಕ್ರವರ್ತಿ ಇಮ್ಮಡಿ ಹರಿಹರ ಮಹಾರಾಯನ ಸಮಯೋಚಿತ ಆಡಳಿತ ಕ್ಷಮತೆ ಮತ್ತು ನಿರ್ಧಾರದಿಂದ ಹುಟ್ಟಿಕೊಂಡ ಶಾಸನ ಇದಾಗಿದೆ.

## ಮುಖ್ಯ ವಿಷಯ

ಚಕ್ರವರ್ತಿಯ ಆಜ್ಞೆಯ ಮೇರೆಗೆ ಮೊದ್ದೂರು (ಮದ್ದೂರು) ನಾಗರ್ಸನು ಬಾರಕೂರು ರಾಜ್ಯದ ರಾಜ್ಯಪಾಲನಾಗಿ ಆಗ ಕಾರ್ಯ ನಿರ್ವಹಿಸುತ್ತಿದ್ದ.[೧] ಇವನ ಆಳ್ವಿಕೆಯ ಕಾಲದಲ್ಲಿ ಉಡುಪಿಯಲ್ಲಿ ನಡೆದ ಘಟನೆಯೊಂದು ಚಕ್ರವರ್ತಿಯ ಗಮನ ಸೆಳೆದು ನೇರ ಕ್ರಮಕ್ಕೆ ಕೂಡಲೇ ಎಡೆ ಮಾಡಿತು. ಆ ಘಟನೆ ಮತ್ತು ನಂತರದ ನೇರ ಕ್ರಮ ಎರಡೂ ಈ ಶಾಸನದ ಮುಖ್ಯ ವಿಷಯಗಳಾಗಿವೆ.

ಘಟನೆಯನ್ನು ಶಾಸನ ಬಹಳ ಸೂಚ್ಯವಾಗಿ 'ಉಡುಪಿಯ ಶ್ರೀ ಮಹಾದೇವರ ಸ್ಥಾನವಳಿದ ಸಂಬಂಧ" ಎಂದು ತಿಳಿಸಿದೆ.[೨] ಶಾಸನದ ಕಾಲ ಕ್ರಿ.ಶ. ೧೩೯೯ ಜುಲೈ ೮ಕ್ಕೆ ಸ್ವಲ್ಪ ಮುಂಚೆ, ಉಡುಪಿಯ ಎರಡು ಮಹಾದೇವ ದೇವಸ್ಥಾನಗಳನ್ನು ಹಾನಿಗೊಳಿಸಲಾಗಿದ್ದಂತೆ ಶಾಸನದಿಂದ ತಿಳಿದುಬರುತ್ತದೆ. ಇವುಗಳನ್ನು 'ಪಡುದೇವ' ಮತ್ತು 'ಮೂಡುದೇವ' ಎಂದು ಶಾಸನ ಗುರುತಿಸಿದೆ.[೩] ಇವು ಕ್ರಮವಾಗಿ ಈಗಿನ ಅನಂತೇಶ್ವರ ಮತ್ತು ಚಂದ್ರಮೌಳೇಶ್ವರ ದೇವಾಲಯಗಳು. ಉಡುಪಿಯ ರಥ ಬೀದಿಯಲ್ಲಿ ಒಂದರ ಮುಂದೆ ಒಂದರಂತೆ ಇರುವ ಈ ಎರಡೂ ದೇವಾಲಯಗಳು ಕ್ರಿ.ಶ. ೮-೯ ನೆಯ ಶತಮಾನಕ್ಕೆ ಸೇರುವಷ್ಟು ಪ್ರಾಚೀನವಾದವು.[೪] ಅನಂತೇಶ್ವರ ದೇವಾಲಯವು ಪ್ರಾಚೀನ ಶಿವಳ್ಳಿ ಗ್ರಾಮದ ವಿದ್ಯಾಕೇಂದ್ರವಾಗಿ ಕಾರ್ಯ ನಿರ್ವಹಿಸಿತ್ತು. ದ್ವೈತ ಮತ ಸ್ಥಾಪಕರಾದ ಶ್ರೀಮಧ್ವಾಚಾರ್ಯರು ವೇದಾಧ್ಯಯನ ಮಾಡಿದ ಸ್ಥಳ ಇದು.[೫]

---

* ನಂ.೨೦೩೧, ಗುರುಕೃಪಾ, ೧೦ನೆಯ ಅಡ್ಡರಸ್ತೆ, ಕಲ್ಲಹಳ್ಳಿ, ವಿ.ವಿ.ನಗರ, ಮಂಡ್ಯ-೫೭೧೪೦೧.

ಈ ಪವಿತ್ರ ದೇವಾಲಯಗಳನ್ನು ಯಾರು ಮತ್ತು ಏಕೆ ಹಾಳು ಮಾಡಿದರು ಎಂಬ ಪ್ರಶ್ನೆಗಳು ಸಹಜವಾಗಿ ಉದ್ಭವಿಸುತ್ತವೆ. ಆದರೆ ಅವುಗಳಿಗೆ ಶಾಸನದಲ್ಲಿ ಉತ್ತರವಿಲ್ಲ. ಆದರೂ ಇದೊಂದು ಗಂಭೀರ ಘಟನೆ ಎಂದೇ ಕಾಣುತ್ತದೆ. ಇದರಿಂದ ಉದ್ಭವಿಸಿದ ಪರಿಸ್ಥಿತಿಯನ್ನು ನಿಭಾಯಿಸಲು ಚಕ್ರವರ್ತಿ ಹರಿಹರ ಮಹಾರಾಯನು ತನ್ನ ವಿಶೇಷ ಪ್ರತಿನಿಧಿಯನ್ನು ರಾಜಧಾನಿಯಿಂದಲೇ ಕಳುಹಿಸುತ್ತಾನೆ. 'ತುಳುನಾಡು ರಾಜಕಾರ್ಯ ನಿಮಿತ್ತ ಮೂಗಪ್ಪ ದಂಣಾಯಕರು ಸರ್ವ್ವದಳ ಸಹಿತ ಬಂದಲ್ಲಿ' ಎಂದು ಶಾಸನ ತಿಳಿಸುತ್ತದೆ.[೬] 'ರಾಜಕಾರ್ಯ'ದ ಗಂಭೀರತೆ ಎಷ್ಟೆಂದು ಊಹಿಸಲು ಸಾಧ್ಯವಿಲ್ಲ. ಆದರೆ ಆಲೋಚಿಸಬೇಕಾದ ಸಂಗತಿ. ಬಾರಕೂರಿನಲ್ಲಿ ಆ ರಾಜ್ಯದ ಆಡಳಿತದ ಜವಾಬ್ದಾರಿ ಹೊತ್ತ ರಾಜ್ಯಪಾಲನಿದ್ದರೂ ಅದಕ್ಕೆ ಸಮೀಪದ ಉಡುಪಿಯ ಘಟನೆಯಿಂದ ಉಂಟಾದ ಪರಿಸ್ಥಿತಿಯನ್ನು ನಿಭಾಯಿಸಿ ತತ್‌ಕ್ಷಣದ ನ್ಯಾಯೋಚಿತ ಪರಿಹಾರ ಕಾರ್ಯಕ್ಕಾಗಿ ಸರ್ವಸನ್ನದ್ಧ ತಯಾರಿಯೊಂದಿಗೆ ವಿಶೇಷಾಧಿಕಾರಿಯನ್ನು ಉಡುಪಿಗೆ ಕಳುಹಿಸಿದ ಕ್ರಮ ವಿಜಯನಗರದ ಆಡಳಿತದಲ್ಲಿ ಆಗ ಇದ್ದ ಚುರುಕುತನವನ್ನು ಸೂಚಿಸುತ್ತದೆ.

'ತುಳುನಾಡು ರಾಜಕಾರ್ಯ ನಿಮಿತ್ತ ಮಂಗಪ್ಪ ದಂಣಾಯಕರು ಸರ್ವದಳ ಸಹಿತ ಬಂದಲ್ಲಿ' ಎಂಬುದನ್ನು ಗಮನಿಸಬೇಕು. ಈ ನಿಟ್ಟಿನಲ್ಲಿ ಇದಕ್ಕೆ ಪೂರಕವಾಗಬಲ್ಲ ಎರಡು ವೀರಗಲ್ಲು ಶಾಸನಗಳನ್ನು ಇಲ್ಲಿ ಪರಿಶೀಲಿಸುವುದು ಸೂಕ್ತ.[೭] ಈ ವೀರಗಲ್ಲುಗಳು ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ತಾಲೂಕಿನ ಕಾಯ್ಕಿಣಿಯಲ್ಲಿ ದೊರೆತಿವೆ. ಎರಡೂ ಶಾಸನಗಳ ಕಾಲ ಕ್ರಿ.ಶ. ೧೩೯೮ ಡಿಸೆಂಬರ್ ೧೦ (ಗುರುವಾರ). ವಿಜಯನಗರದ ಪ್ರಭುತ್ವದ ವಿರುದ್ಧ ತುಳುನಾಡಿನಲ್ಲಿ ಪ್ರಾಯಶಃ ಪ್ರಪ್ರಥಮದ್ದೆನ್ನಬಹುದಾದ ದಂಗೆಯ ಚಿತ್ರಣವನ್ನು ಇವು ನೀಡುತ್ತವೆ.[೮] ದಂಗೆ ಎದ್ದವ ಒಬ್ಬ ಸಾಮಾನ್ಯ ರಾಜ-ಜೈನ ಚೌಟ ಅರಸು ಮನೆತನಕ್ಕೆ ಸೇರಿದವ. ಈತ ಯಾವ ಶಕ್ತಿ ಪ್ರಚೋದನೆಯಿಂದ ಪ್ರಭಾವಿತನಾಗಿ ಬಲಿಷ್ಠ ಪ್ರಭುತ್ವದ ವಿರುದ್ಧ ದಂಗೆ ಎದ್ದ ಎಂಬ ಪ್ರಶ್ನೆಗೆ ಇತಿಹಾಸ ಇನ್ನೂ ಉತ್ತರಿಸಬೇಕಾಗಿದೆ.

ಈ ದಂಗೆಯನ್ನು ಅಡಗಿಸಲು ಚಕ್ರವರ್ತಿ ಇಮ್ಮಡಿ ಹರಿಹರ ಮಹಾರಾಯನು ತನ್ನ ಮಹಾಪ್ರಧಾನಿ ಮಂಗಪ್ಪ ದಂಣಾಯಕನನ್ನು ಕಳುಹಿಸುತ್ತಾನೆ. ನಗಿರೆಯ ರಾಜ ಮಹಾಮಂಡಲೇಶ್ವರ ಹಯಿವಣ್ಣರಸನ ಸಹಕಾರದೊಂದಿಗೆ ಮಂಗಪ್ಪ ದಂಣಾಯಕನು ತುಳು ರಾಜ್ಯಕ್ಕೆ ಬಂದು ದಂಗೆಯೆದ್ದಿದ್ದ ಚೌಟ ಅರಸನನ್ನು ಸದೆಬಡಿದು ಇಲ್ಲಿಯ ಶಾಂತಿ ಕಾಪಾಡಿ ಚಕ್ರವರ್ತಿಯ ಅಧಿಕಾರಕ್ಕೆ ಚ್ಯುತಿ ಇಲ್ಲದಂತೆ ಮಾಡಿದ. ತನಗೆ ಸೈನಿಕ ಸಹಾಯವಿತ್ತ ನಗಿರೆ ರಾಜನ ಸೈನ್ಯವನ್ನು ಕ್ಷೇಮವಾಗಿ ಊರಿಗೆ ಹಿಂದಿರುಗಿಸುತ್ತಿದ್ದಾಗ ಚೌಟ ಅರಸನ ಸೈನ್ಯ ಹಿಂದಿನಿಂದ ಬಂದು ಇವರ ಮೇಲೆರಗಿದಾಗ ಭೀಕರ ಕಾಳಗ ನಡೆಯುತ್ತದೆ. ಆಗ ನಗಿರೆ ಅರಸನ ಕಡೆಯ ಸೈನಿಕರು ವೀರಾವೇಶದಿಂದ ಹೋರಾಡಿ ಚೌಟರ ಸೈನ್ಯವನ್ನು ಹಿಮ್ಮೆಟ್ಟಿಸಿದರು, ವಿಜಯಶಾಲಿಗಳಾದರು. ಇದರಲ್ಲಿ ಪ್ರಮುಖ ಪಾತ್ರ ವಹಿಸಿದ್ದ ತಂದೆ ಮತ್ತು ಮಗ-ಜಕ್ಕನಾಯಕ ಮತ್ತು ತಮ್ಮನಾಯಕ; ಮತ್ತು ನಗಿರೆ ರಾಜನ ರಾಜಗುರುವಾದ ಬೊಮ್ಮಣ್ಣ ನಾಯಕನ ಮಗನಾದ ಜಕ್ಕನಾಯಕ ವೀರ ಮರಣವನ್ನಪ್ಪಿದರು. ರಾಜ ಇವರಿಗಾಗಿ ಸ್ಮಾರಕ ಶಿಲೆಗಳನ್ನು ಸ್ಥಾಪಿಸಿದ. ಇದರಲ್ಲಿ ಒಂದು ತಂದೆ-ಮಗನ ಸ್ಮಾರಕ್‌ವಾದರೆ ಇನ್ನೊಂದು ರಾಜಗುರುವಿನ ಮಗನ ಸ್ಮಾರಕ.[೧೦] ದುರದೃಷ್ಟಕರ ಸಂಗತಿ ಎಂದರೆ ಈ ಎರಡೂ ಶಾಸನಗಳು ದಂಗೆಗೆ ಕಾರಣ ಮತ್ತು ದಂಗೆ ಎದ್ದ ಚೌಟ ರಾಜನ ಹೆಸರನ್ನು ತಿಳಿಸುವುದಿಲ್ಲ. ಹಾಗಾಗಿ ಇಲ್ಲಿ ಚೌಟರಾಜನೇ ಏಕಾಂಗಿಯಾಗಿ ದಂಗೆ ಎದ್ದನೇ ಅಥವಾ ಪ್ರಬಲ ಶಕ್ತಿಯೊಂದರ ಪರವಾಗಿ ಹೋರಾಡಿದನೇ ಎಂಬುದು ತಿಳಿಯುವುದಿಲ್ಲ.

ಚೌಟರು ಆಳಿದ್ದು ಒಂದು ಅತ್ಯಂತ ಪುಟ್ಟ ರಾಜ್ಯವನ್ನು. ಮೂಡಬಿದರೆಯ ಸಮೀಪ ಇರುವ ಪುತ್ತಿಗೆ ಇವರ ರಾಜಧಾನಿ. ಆರ್ಥಿಕವಾಗಿ ಇವರು ಸಬಲರಾಗಿರಲಿಲ್ಲ.[೧೧] ಆದರೂ ಬಲಿಷ್ಠ ಪ್ರಭುತ್ವದ ವಿರುದ್ಧ ದಂಗೆ ಎದ್ದರೆನ್ನುವುದೇ ಒಂದು ವಿಶೇಷ ಸಂಗತಿ. ಯುದ್ಧ ಮಾಡಲು ಭಟ್ಕಳದ ಭೂ ಪ್ರದೇಶ ಇವರಿಗೆ ಎಷ್ಟು ಪರಿಚಿತವಾಗಿತ್ತು ಎಂಬುದು ತಿಳಿಯುವುದಿಲ್ಲ. ಆದರೂ ಅದರ ಸಮೀಪ ಇವರದೊಂದು ಸೈನಿಕ ಠಾಣ್ಯ ಇತ್ತು ಎಂಬುದರ ಕುರುಹಾಗಿ ಬೈಂದೂರಿನ ಸಮೀಪ 'ಚೌಟರಹಕ್ಕಲು' ಎಂಬ ಸ್ಥಳವಿರುವುದನ್ನು ಈಗಲೂ ಕಾಣಬಹುದು. ಅತ್ಯಂತ ಬಲಿಷ್ಠನಾದ ಚಕ್ರವರ್ತಿ ಇಮ್ಮಡಿ ಹರಿಹರನ ಅಧಿಕಾರವನ್ನು ತುಳುನಾಡಿನ ಒಬ್ಬ ತುಂಡರಸನು ಪ್ರಶ್ನಿಸಿದುದು ಆಶ್ಚರ್ಯದ ಸಂಗತಿ ಎಂದು ಡಾ. ಕೆ.ವಿ. ರಮೇಶ್ ಅಭಿಪ್ರಾಯ ಪಟ್ಟಿದ್ದಾರೆ[೧೨].

ಪ್ರಸ್ತುತ ಅವಲೋಕನದಲ್ಲಿರುವ 'ಕಲ್ಲಕಂಡ' ಶಾಸನದಲ್ಲಿ 'ತುಳುನಾಡು ರಾಜಕಾರ್ಯ ನಿಮಿತ್ತ ಮಂಗಪ್ಪ ದಂಣಾಯಕರು ಸರ್ವ್ವದಳ ಸಹಿತ ಬಂದಲ್ಲಿ' ಎಂಬ ಮಾತು ಮೇಲಿನ ಘಟನೆಯನ್ನೇ ಆಧರಿಸಿ ಹೇಳಿರುವ ಮಾತಿರಬಹುದು. ಗಲಭೆಯನ್ನು

ಸಂಪೂರ್ಣವಾಗಿ ಅಡಗಿಸಿದ ನಂತರವೂ ಸ್ವಲ್ಪಕಾಲ ಮಹಾಪ್ರಧಾನಿ ಮಂಗಪ್ಪ ದಂಣಾಯಕನು ಪರಿಸ್ಥಿತಿಯ ಮೇಲೆ ನಿಗಾ ವಹಿಸುವ ಸಲುವಾಗಿ ಬಿದಿರೆ (ಮೂಡಬಿದರೆ) ಯಲ್ಲಿ ಬಿಡಾರ ಹೂಡಿದ್ದನೆಂದು ಕಾಣುತ್ತದೆ.[೧೩]

ಕಾಯ್ಕಿಣಿ ವೀರಗಲ್ಲುಗಳ ಕಾಲಕ್ಕೂ (ಕ್ರಿ.ಶ. ೧೩೯೮ ಡಿಸೆಂಬರ್ ೧೦), ಪ್ರಸ್ತುತ ಕಕ್ಕೆಹಳ್ಳಿ ಶಾಸನದ ಕಾಲಕ್ಕೂ (ಕ್ರಿ.ಶ. ೧೩೯೯ ಜುಲೈ ೮) ಇರುವ ಸಮಯ ವ್ಯತ್ಯಾಸ ಕೇವಲ ಏಳು ತಿಂಗಳುಗಳು. ಈ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಪ್ರಾಯಶಃ ಗಲಭೆ ಸಮಯದಲ್ಲಿ ಉಡುಪಿಯ ಎರಡೂ ಮಹಾದೇವ ದೇವಾಲಯಗಳು ಹಾನಿಗೀಡಾಗಿರಬಹುದು ಅಥವಾ ಪರಿಸ್ಥಿತಿಯ ಲಾಭವನ್ನು ಪಡೆದು ಅನ್ಯರಾರೋ ಈ ಕೃತ್ಯ ಎಸಗಿರಬಹುದು ಎನ್ನಿಸುತ್ತದೆ. ಆದರೆ ವಿಶ್ವಸನೀಯ ಸಮರ್ಥನೆಗೆ ಆಧಾರದ ಕೊರತೆ ಅಡ್ಡಿಯಾಗಿದೆ.

ಮುಂದೆ ಶಾಸನದಲ್ಲಿ 'ಹರಿಹರ ಮಹಾರಾಯರು ಆ ಶ್ರೀ ಮಹಾದೇವರ ಯೆರಡು ಸ್ಥಾನವನ್ನೂ ಪ್ರತಿಷ್ಠೆ ಮಾಡಿಸಿ'[೧೪] ಎಂದಿದೆ. ಹರಿಹರನು ಹಾಳಾದ ಎರಡೂ ದೇವಾಲಯಗಳನ್ನು ಸರಿಪಡಿಸಿ ಅಲ್ಲಿ ದೇವರ ಪುನರ್ ಪ್ರತಿಷ್ಠೆ ಕಾರ್ಯ ನೆರವೇರಿಸಿ ದೇವರ ಪೂಜಾಕಾರ್ಯ ನಿರಂತರ ನಡೆಯುವಂತೆ ಮಾಡಿದ. ಅದಕ್ಕಾಗಿ 'ಆ ದೇವರಿಗೆ ದಿನಂಪ್ರತಿ ಪಡುವದೇವರಿಗೆ 'ಯಿಪಾನೆ' ಅಕ್ಕಿ, ಮೂಡುದೇವರಿಗೆ 'ವೊಪಾನೆ' ಅಕ್ಕಿ ಅಂತೂ ಮೂವಾನೆ ಅಕ್ಕಿಯ ಅಮೃತ ಪಡಿಗೆ ಆಚಂದ್ರಾರ್ಕ ಸ್ಥಾಯಿಯಾಗಿ ನಡವಂತಾಗಿ ಮಾಡಿದ ಕಟ್ಟಳೆ'.[೧೫] ಪಡುವದೇವ ಅನಂತೇಶ್ವರನಿಗೆ ಎರಡು ಹಾನೆ ಮತ್ತು ಮೂಡದೇವ-ಚಂದ್ರಮೌಳೇಶ್ವರನಿಗೆ ಒಂದು ಹಾನೆ ಅಕ್ಕಿ ದೇವರ ದಿನಂಪ್ರತಿ ಅಮೃತಪಡಿ ವೆಚ್ಚಕ್ಕಾಗಿ ದೊರೆಯುವಂತೆ ಮಾಡಿದ ಕಟ್ಟಳೆಯನ್ನು ಈ ಶಾಸನ ದಾಖಲಿಸಿದೆ. ಇದಕ್ಕಾಗಿ ವಿಶಾಲವಾದ ಭೂಮಿಯನ್ನು ಬೆಳ್ಳಂಪಳ್ಳಿ ಗ್ರಾಮದಲ್ಲಿ ಶ್ರೀ ಮಹಾದೇವರ ಹೆಸರಿನಲ್ಲಿ ದಾನ ಮಾಡಲಾಯಿತು. ಭೂದಾನದ ವಿವರವನ್ನು ಶಾಸನ ನೀಡುತ್ತದೆ.[೧೬] ದಾನ ಕೊಟ್ಟ ಸ್ಥಳ ನದಿ ಬಯಲಿನ ಅತ್ಯಂತ ಫಲವತ್ತಾದ ಪ್ರದೇಶ. ಅಂದಿನಿಂದ ಕರ್ನಾಟಕದಲ್ಲಿ ಭೂ ಮಸೂದೆ ಬಂದಿರುವ ಇತ್ತೀಚಿನ ವರ್ಷಗಳವರೆಗೆ ನಿರಂತರವಾಗಿ ಈ ಭೂಮಿಯ ಉತ್ಪತ್ತಿ ಅನಂತೇಶ್ವರನಿಗೆ ಸಲ್ಲುತ್ತಿತ್ತು.[೧೭]

## ಸ್ಮಾರಕ

ಈ ಸಂದರ್ಭದಲ್ಲಿ ನಿರ್ಮಾಣಗೊಂಡ ಒಂದು ಸ್ಮಾರಕ ಅನಂತೇಶ್ವರ ದೇವಾಲಯದ ಮುಂದೆ ಇದೆ. ಅದುವೇ ಬೃಹತ್ ಶಿಲಾಧ್ವಜಸ್ತಂಭ. ಆದರೆ ಉಡುಪಿಯ ದೇವಾಲಯಗಳಲ್ಲಿ ಈ ಬಗ್ಗೆ ಯಾವ ಮಾಹಿತಿಯೂ ಇಲ್ಲ. ಪ್ರಾಚೀನವಾದ ಪ್ರಧಾನ ಬಲಿಪೀಠದ ತೀರ ಸಮೀಪದಲ್ಲಿ(ಪೂರ್ವಭಾಗಕ್ಕೆ) ಇದು ಇದ್ದರೂ ಜನರ ಗೋಚರಕ್ಕೆ ಬರುವುದು ಕಷ್ಟವಾಗಿದೆ. ಕಾರಣ ಇದರ ಸುತ್ತಮುತ್ತೆಲ್ಲಾ ಬೆಳೆದಿರುವ ಅಂಗಡಿಗಳು ಹಾಗೂ ಅವುಗಳ ಸಾಮಾನುಗಳು, ಕಸದ ಕಟ್ಟುಗಳು. ಕೆಲವೊಮ್ಮೆ ಸೋಮಾರಿಗಳ ವಿಶ್ರಾಂತಿ ಕಟ್ಟೆಯೂ ಇದಾಗಿರುತ್ತದೆ.

ದೇವಾಲಯಕ್ಕೆ ಎದುರಾಗಿ ಬರುವ ಈ ಬೃಹತ್ ಧ್ವಜಸ್ತಂಭದ ಮುಖದಲ್ಲಿ ರಾಜನೋರ್ವ ಕೈಮುಗಿದುಕೊಂಡು ನಿಂತಿರುವ ಶಿಲ್ಪ ಇದೆ. ವಿಜಯನಗರ ಕಾಲದಲ್ಲಿ ಚಕ್ರವರ್ತಿಗಳು ಮಾಡಿದ ದಾನ-ಧರ್ಮ ಕಾರ್ಯಗಳ ಜೊತೆ ಶಿಲೆ ಅಥವಾ ಲೋಹದಲ್ಲಿ ಮಾಡಿದ ಅವರ ಪ್ರತಿಮೆಗಳನ್ನು ಇಡುವ ರೂಢಿ ಬೆಳೆದಿತ್ತು. ತಿರುಪತಿ ದೇವಾಲಯದಲ್ಲಿರುವ ಕೃಷ್ಣದೇವರಾಯ ಹಾಗೂ ಆತನ ರಾಣಿಯರ ಲೋಹ ಶಿಲ್ಪಗಳು ಇದಕ್ಕೊಂದು ಸುಂದರ ಉದಾಹರಣೆ. ಈ ದೃಷ್ಟಿಯಲ್ಲಿ ನೋಡಿದಾಗ ಅನಂತೇಶ್ವರ ದೇವಾಲಯದ ಧ್ವಜಸ್ತಂಭದ ಪಶ್ಚಿಮ ಮುಖದಲ್ಲಿರುವ ರಾಜನ ಶಿಲ್ಪ ಚಕ್ರವರ್ತಿ ಇಮ್ಮಡಿ ಹರಿಹರನನ್ನು ಸಂಕೇತಿಸುತ್ತದೆ.

## ಮೂಲ ಬಸದಿಗಳೇ?

ಹದಿನಾಲ್ಕನೆಯ ಶತಮಾನದ ಕೊನೆಗಾಲದ ಈ ಸ್ತಂಭ ಶಿಲ್ಪವನ್ನು ಸರಿಯಾಗಿ ಅಭ್ಯಸಿಸದೆ, 'ಇದು ಮಾನಸ್ತಂಭ, ಇದರ ಸನಿಹದಲ್ಲಿರುವ ಎರಡೂ ದೇವಾಲಯಗಳು ಬಸದಿಗಳು. ಅವುಗಳನ್ನು ಶಂಕರಾಚಾರ್ಯರು ದೇವಾಲಯಗಳನ್ನಾಗಿ ಪರಿವರ್ತಿಸಿದರು' ಎಂದು ಗಣಪತಿರಾವ್ ಐಗಳು ತರ್ಕಿಸಿದ್ದಾರೆ.[೧೮] ಇವರ ಪ್ರಕಾರ ಅನಂತನಾಥ ಬಸದಿ ಅನಂತೇಶ್ವರ ದೇವಸ್ಥಾನವಾಯಿತು ಮತ್ತು ಚಂದ್ರನಾಥ ಬಸದಿ ಚಂದ್ರಮೌಳೇಶ್ವರ ದೇವಸ್ಥಾನವಾಯಿತು.[೧೯]

ಆದರೆ ಶಂಕರಾಚಾರ್ಯರ ಕಾಲಕ್ಕೂ ಮುಂಚಿನಿಂದಲೇ ಶಿವಳ್ಳಿ ಒಂದು ಬ್ರಹ್ಮಪುರಿಯಾಗಿ[೨೦] ಕಾಶಿಯಷ್ಟೇ ಪವಿತ್ರ ಕ್ಷೇತ್ರವಾಗಿ[೨೧] ಮೆರೆದಿತ್ತು. ಆಳುಪ ರಾಜ ರಣಸಾಗರನ ಉದಿಯಾವರ ಶಾಸನವು 'ಶಿವಳ್ಳಿಯ ಬ್ರಹ್ಮಪುರಮುಮಟಿದ ಮಹಾಪಾತಕನಕ್ಕು" ಎಂದು ತಿಳಿಸುತ್ತದೆ.[೨೨] ಎರಡನೆಯ ಆಳುವರಸನ ಬೆಳ್ಮಣ್ಣು ತಾಮ್ರಶಾಸನವು,

'ಇದನಳಿವೋರುಂ ಬಕ್ರಬರ್ಪ್ಪೋರುಂ ಪಞ್ಚಮಹಾ

ಪಾತಕರಪ್ಪೋರ್ ಇಪ್ಪತ್ತೊಂದು ನರಕದುಳಿರ್ಪ್ಪಾರ್

ವಾರಣಾಶಿಯುಂ ಶಿವಳ್ಳಿಯುಮನಟಿದ ಪಾಪಮಕ್ಕುಂ' ಎಂದು ಹೇಳುತ್ತದೆ.[೨೩]

ಇಂತಹ ಪವಿತ್ರ ಶಿವಳ್ಳಿಯ ಚಟುವಟಿಕೆಗಳ ಮುಖ್ಯಕೇಂದ್ರವಾಗಿದ್ದ ಸ್ಥಳ ಅನಂತೇಶ್ವರ ದೇವಾಲಯ. ಇದರ ಮುಂದಿರುವುದು ಧ್ವಜಸ್ತಂಭವೇ ಹೊರತು ಮಾನಸ್ತಂಭವಲ್ಲ. ಇದು ಈ ಪ್ರಾಚೀನ ದೇವಾಲಯಕ್ಕೆ ವಿಜಯನಗರ ಚಕ್ರವರ್ತಿ ಇಮ್ಮಡಿ ಹರಿಹರ ಮಹಾರಾಯನ ಕೊಡುಗೆ. ಅಂತೆಯೇ ಈ ಎರಡೂ ಬಸದಿಗಳಾಗಿರದೆ, ಮೂಲದಿಂದಲೂ (ಶಿವಾಲಯ) ದೇವಾಲಯಗಳಾಗಿಯೇ ಇದ್ದಂಥವು.

## ಹಿಂದಿನ ದಾನ ಧರ್ಮ ಕಾರ್ಯಗಳು

ಇದಕ್ಕೆ ಐದು ವರ್ಷ ಮೊದಲು ಇದೇ ಚಕ್ರವರ್ತಿ ಇಮ್ಮಡಿ ಹರಿಹರ ಮಹಾರಾಜನು ಉಡುಪಿಯ ಶ್ರೀಕೃಷ್ಣ ದೇವರಿಗೆ ಅಮ್ರುತಪಡಿ ನಂದಾದೀಪ ಇತ್ಯಾದಿಗಳಿಗಾಗಿ ಮೂಡನಿಡಂಬೂರು ಗ್ರಾಮದಲ್ಲಿ ವಿಸ್ತಾರವಾದ ಭೂಮಿಗಳನ್ನು ದಾನ ಮಾಡಿದ ಎಂದು ಕೃಷ್ಣ ಮಠದ ಒಂದು ಶಾಸನ ತಿಳಿಸುತ್ತದೆ.[೨೪] ಇಮ್ಮಡಿ ಹರಿಹರನು ಶ್ರೀಕೃಷ್ಣ ಮಠ ಹಾಗೂ ಅಲ್ಲಿಯ ದೇವಾಲಯಗಳಿಗೆ ಮಾಡಿದ ಭೂ ಮತ್ತು ಹೊನ್ನಿನ ದಾನಗಳ ವಿವರಗಳಿರುವ ಇನ್ನೂ ಕೆಲವು ಶಾಸನಗಳು ಶ್ರೀಕೃಷ್ಣ ಮಠದಲ್ಲಿವೆ.[೨೫] ಇದರಲ್ಲಿ ಎರಡು ಶಾಸನಗಳಲ್ಲಿ[೨೬] ಶ್ರೀಕೃಷ್ಣನಿಗೆ ಮಾಡಿದ ದಾನಗಳ ಜೊತೆ 'ಉಡುಪಿಯ ಮಹಾದೇವರಿಗೊಂದು ನಂದಾದೀಪ' ಮತ್ತು 'ಉಡುಪಿಯ ಮಹಾದೇವರ ನಂದಾದೀವಿಗೆ ೧೬ ಹೊಂನನ್ನು ನಡಸಿ ಬಹರು' ಎಂದು ಪ್ರತ್ಯೇಕವಾಗಿ ಅನಂತೇಶ್ವರನಿಗೆ ಮಾಡಿದ ಧರ್ಮವನ್ನು ತಿಳಿಸಿದೆ. ಅನಂತೇಶ್ವರ ದೇವಸ್ಥಾನದಲ್ಲೇ ಇರುವ ಒಂದು ಶಾಸನದಲ್ಲಿ[೨೭] ಮೂಡುದೇವರ ನೈವೇದ್ಯಕ್ಕೆ ಚಕ್ರವರ್ತಿ ಶ್ರೀ ಬುಕ್ಕರಾಯನು ಕ್ರಿ.ಶ. ೧೩೬೬ರಲ್ಲಿ ಮಾಡಿದ ದಾನ ದಾಖಲಾಗಿದೆ (ಇಲ್ಲಿ ಮೂಡುದೇವ ಎಂದರೆ ಚಂದ್ರಮೌಳೇಶ್ವರ).

ಈ ದಾಖಲೆಗಳೆಲ್ಲವೂ ಸಂಗಮ ವಂಶದ ಆಳ್ವಿಕೆಯ ಪೂರ್ವಾರ್ಧ ಕಾಲದಲ್ಲಿ ಉಡುಪಿಯಲ್ಲಿ ಸುವ್ಯವಸ್ಥೆ ಇದ್ದುದನ್ನು ಪರೋಕ್ಷವಾಗಿ ಸೂಚಿಸುತ್ತವೆ. ಆದರೂ ಈಗ ದೊರೆತಿರುವ ಬೆಳ್ಳಂಪಳ್ಳಿಯ ಶಾಸನದ ಘಟನೆ ಆಶ್ಚರ್ಯಕರವಾದುದಷ್ಟೇ ಅಲ್ಲದೆ ದುರದೃಷ್ಟಕರವಾದುದು.

ಶಾಸನದಲ್ಲಿ ಘಟನೆಯ ವಿಷಯವನ್ನು ಸೂಚ್ಯವಾಗಿ ಹೇಳಿರುವುದನ್ನು ಒಂದು ದೃಷ್ಟಿಯಲ್ಲಿ ಮೆಚ್ಚಲೇಬೇಕು. ಅದೇನೆಂದರೆ ಸಮಸ್ಯೆಯನ್ನು ಸೂಕ್ತವಾಗಿ ಪರಿಹರಿಸಿದ ಮೇಲೆ ಶಾಸನದಲ್ಲಿ ಅದರ ವಿವರಣೆ ಮಾಡದೇ ಘಟನೆಯ ನಂಜು ಉಳಿಯದಂತೆ ಮಾಡಿರುವುದು. ಪ್ರಾಯಶಃ ಇದು ಸಾಮಾಜಿಕ ಸ್ವಾಸ್ಥ್ಯ ರಕ್ಷಣೆಗೆ ಆಗ ಇದ್ದ ಸರ್ವಾದರಣೀಯ ಮಾರ್ಗ. ಇದು ವಿಜಯನಗರ ಚಕ್ರವರ್ತಿಗಳು ಆಗ ಅನುಸರಿಸುತ್ತಿದ್ದ ದಕ್ಷ ಆಡಳಿತ ನೀತಿಯನ್ನು ಪ್ರತಿಬಿಂಬಿಸುತ್ತದೆ.[೨೮]

### ಶಾಸನ ಪಾಠ

೧. ಶ್ರೀ ಗಣಾಧಿಪತಯೇ ನಮಃ ॥ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।

೨. ತ್ರೈಲೋಕ್ಯನಗರಾರಂಭಮೂಲಸ್ತಂಭಾಯ ಶಂಭವೇ ॥ ಸ್ವಸ್ತಿ ಶ್ರೀ ಜಯಾಭ್ಯುದಯ

೩. ಶಕವರುಷ ೧೩ ॥ ೧ನೆಯ ಪ್ರಮಾದಿ ಸಂವತ್ಸರದ ಸ್ರಾವಣ ಸುದ ೫ ಮಂ ಶ್ರೀ ಮಂ

೪. ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಹರಿಹರ ಮಹಾರಾ

೫. ಯರು ವಿಜಯನಗರಿಯಾ ರಾಜಧಾನಿಯಲು ಸುಖಸಂಕಥಾ ವಿನೋದದಿಂ

೬. ಸಕಲ ರಾಜ್ಯವನೂ ಪ್ರತಿಪಾಲಿಸುತ್ತ ಯಿಹಲ್ಲಿ ಮೊದ್ದೂರ ನಾಗರ್ಸರು ಬಾ
೭. ರಕೂರ ರಾಜ್ಯವನೂ ಆಳುವ ಕಾಲದಲು ತುಳುನಾಡು ರಾಜಕಾರ್ಯ ನಿಮಿತ್ತ ಮಂ
೮. ಗಪ್ಪ ದಂಣಾಯಕರೂ ಸರ್ವ್ವದಳ ಸಹಿತ ಬಂದಲ್ಲಿ ಉಡುಪಿಯ ಶ್ರೀ ಮಹಾ
೯. ದೇವರ ಸ್ಥಾನವಳಿದ ಸಂಮಂದ ಆ ಹರಿಹರ ಮಹಾರಾಯರು ಆ ಶ್ರೀ ಮ
೧೦. ಹಾದೇವರ ಯೆರಡು ಸ್ಥಾನವನೂ ಪುನಃ ಪ್ರತಿಷ್ಠೆಯ ಮಾಡಿಸಿ ಆ ದೇವರಿ
೧೧. ಗೆ ದಿನಂಪ್ರತಿ ಪಡುವದೇವರಿಗೆ ಯಿಪಾನೆ ಅಕ್ಕಿ ಮೂಡದೇವರಿಗೆ ವೊಪಾನೆ
೧೨. ಅಕ್ಕಿ ಅಂತು ಮೂವಾನೆ ಅಕ್ಕಿಯ ಅಮ್ರುತಪಡಿಗೆ ಆಚಂದ್ರಾರ್ಕ್ಕಸ್ಥಾಯಿಯಾ
೧೩. ಗಿ ನಡೆವಂತಾಗಿ ಮಾಡಿದ ಕಟ್ಟಳೆ ಕೊಟ್ಟ ಬಾಳಿನ ವಿವರ ಬೆಳ್ಳಂಪಳ್ಳಿಯ ಹರ
೧೪. ವರಿಯವೊಳಗೆ ಬಿದಿರ ಗದ್ದೆ ಹಂಗರ ಗದ್ದೆ ಬಂಕನಗದ್ದೆ ಬೆಟು ಬಳಿಗಳು
೧೫. ಯೇಕತ್ರ (ಜಾ)ಳದ 'ಗದೆ ಕಾಡದೂರು ಬ್ರಂಹರ ಬೆಟ್ಟ ದಾಸವಂತರ ಬೆಟ್ಟಿಂ
೧೬. ಂದಲೂ ಪಡುವಲು ತೆಂಕಲು ಪಾಂಡಿ ರಾ(ಸಾ)ವಂತನ ಬೆಟ್ಟಿಂದಲೂ ಬ ಪಡು
೧೭. ವಲೂ ಯಕ್ಕಿ ತಿವಜೌ ಚತುಸ್ಸೀಮೆಯ ವೊಳಗೆ(ವೊ)ಳಂತಾಕ್ಕೆ ಮಕ್ಕೆ ಮಡ ನೆಕ್ಕಿ ನಿಡಿ
೧೮. ಲು ನಿಧಿ ನಿಕ್ಷೇಪ ಜಲ ಪಾಷಾಣ ಸಿದ್ಧ ಸಾಧ್ಯ ಅಕ್ಷೀಣಿ ಆಗಾಮಿ ಸಹಿತ ವಾ
೧೯. (ಗಿ) ಯೇನು ಉಳಂತಾದನೂ ಧಾರಾಪೂರ್ವಕವಾಗಿ ಆ ಶ್ರೀ ಮಹಾದೇವರು
೨೦-೨೨ (ಬರಹ ಅಳಿಸಿಹೋಗಿದೆ).

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಶಾಸನ ಪಾಠ ಸಾಲು ೪-೭, ಈತನಿಗೆ ಸೇರಿದ ಒಂದು ಶಾಸನ ಬಾರಕೂರಿನಲ್ಲಿದೆ. S.I.I. Vol. VII, No.350.
೨. ಶಾಸನ ಪಾಠ, ಸಾಲು ೮-೯.
೩. ಅದೇ, ಸಾಲು ೧೧.
೪. Dr. P. Gururaja Bhatt; *Studies in Tuluva History and culture*, 1975, pp. ೨೮೨-೮೩.
ಪಿ.ಎನ್. ನರಸಿಂಹಮೂರ್ತಿ(ಸಂ) **ದಕ್ಷಿಣ ಕನ್ನಡ ದೇವಾಲಯಗಳು**, ೨೦೦೦, ಪು.೨೮೦-೮೧.
೫. **ದಕ್ಷಿಣ ಕನ್ನಡ ದೇವಾಲಯಗಳು**, ಪು.೨೬೧.
೬. ಶಾಸನ ಪಾಠ, ಸಾಲು ೮-೯.
೭. *Karnatak Inscriptions*. Vol. I, No.35 & 36.
೮. K.V. Ramesh, *A history of South Kanara* (AHSK) 1970. pp.೧೬೦, ೧೯೪.
೯. *Karnatak Inscriptions*, Vol. I. No.೩೫.
೧೦. Ibid. No.36
೧೧. ಪಿ.ಎನ್. ನರಸಿಂಹಮೂರ್ತಿ(ಸಂ) **ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ**, ೧೯೮೫, ಪು.೭-೧೧.
೧೨. AHSK. p.160.
೧೩. IBID, p.160.
೧೪. ಶಾಸನ ಪಾಠ, ಸಾಲು-೯-೧೦.

೧೫. ಅದೇ, ಸಾಲು, ೧೦–೧೩.

೧೬. ಅದೇ, ಸಾಲು, ೧೩–೧೭

೧೭. ಈ ಭೂಮಿಯ ಒಡೆಯರು ಈಗಲೂ ಇದನ್ನು ನೆನೆಯುತ್ತಾರೆ.

೧೮. ಗಣಪತಿರಾವ್ ಐಗಳ್ : **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ'** , ಎರಡನೇ ಆವೃತ್ತಿ ೨೦೦೪, ಪು.೬೫–೬೬.

೧೯. ಅದೇ, ಪು.೬೧. ಕೆ.ವೆಂಕಟರಾಮಾಚಾರ್ಯ, ಸಾಹಿತ್ಯ ದೀಪಿಕ, ೧೯೮೨, ಪು.೬೫–೬೬.

೨೦. S.I.I.Vol.-VII, No. ೨೮೪.

೨೧. ಕೆ.ವಿ. ರಮೇಶ್, ಎಂ.ಜೆ. ಶರ್ಮ, **ತುಳುನಾಡಿನ ಶಾಸನಗಳು**, ೧೯೭೮, ಸಂ.೧ ಮತ್ತು ೩.

೨೨. S.I.I. Vol, No. ೨೮೪.

೨೩. **ತುಳುನಾಡಿನ ಶಾಸನಗಳು**, ಸಂ.೩, ಶಾಸನ ಪಾಠ ಸಾಲು ೧೬–೧೯.

೨೪. S.I.I Vol. VII, No. ೨೯೯; **ತು.ನಾ.ಶಾ.** ಸಂ.೫೯.

೨೫. S.I.I. Vol. VII, No. 298, 300 and 303

೨೬. Ibid, No. 298 and 303.

೨೭. Ibid, No, 306.

೨೮. ಶಾಸನ ಪತ್ತೆ ಕಾರ್ಯದಲ್ಲಿ ನೆರವಾದ ಶ್ರೀಧರಭಟ್ ಮತ್ತು ಶಾಸನದ ಪ್ರತಿ ತೆಗೆಯಲು ಅನುಮತಿ ಇತ್ತು ಸಹಕರಿಸಿದ ಶ್ರೀ ರಾಜೀವ ಮಡಿವಾಳ ಇವರುಗಳಿಗೆ ನನ್ನ ಕೃತಜ್ಞತೆಗಳು.



# ಕೃಷ್ಣರಾಯನ ಪಟ್ಟಾಭಿಷೇಕದ ಹಂಪಿ ಶಾಸನ : ಮರುಪರಿಶೀಲನೆ

– ಡಾ॥ ಕೆ.ಜಿ. ಗೋಪಾಲಕೃಷ್ಣರಾವ್*

ಹಂಪೆಯ ವಿರೂಪಾಕ್ಷ ದೇವಸ್ಥಾನದ ಮಹಾರಂಗಮಂಟಪದ ಮುಂದಿರುವ ಶಾಸನದ ಬಗೆಗೆ[೧] ಅದರಲ್ಲಿನ ಅನೇಕ ಪಾರಿಭಾಷಿಕ ಶಬ್ದಗಳು, ಅವುಗಳ ಅರ್ಥಗಳ ಮೇಲೆ ವಿದ್ವಾಂಸರಿಂದ ಸಾಕಷ್ಟು ಚರ್ಚೆಗಳಾಗಿವೆ. ಆದರೂ ಕೆಲವು ಶಬ್ದಗಳ ಬಗೆಗೆ ಖಚಿತ ಸರ್ವಸಮ್ಮತ ಅಭಿಪ್ರಾಯಗಳಿಲ್ಲವಾದ್ದರಿಂದ ಚರ್ಚೆಗೆ ಇನ್ನೂ ಅವಕಾಶವಿದೆ.

ಈ ಶಾಸನ ಸರ್. ಟಿ.ಸಿ. ಹೋಪ್ ಅವರಿಂದ ಕ್ರಿ.ಶ. ೧೮೬೬ರಲ್ಲಿ, 'ಇನ್ಸ್‌ಕ್ರಿಪ್ಷನ್ಸ್ ಆಫ್ ಧಾರವಾಡ್ ಮತ್ತು ಮೈಸೂರ್' ಕೃತಿಯಲ್ಲಿ ಪ್ರಕಟಿಸಲ್ಪಟ್ಟಿತು. ಪಿಗೌ ಅವರ ಛಾಯಾ ಚಿತ್ರದೊಂದಿಗೆ ಇದೇ ಶಾಸನವು ಕ್ರಿ.ಶ. ೧೮೭೩ರಲ್ಲಿ, 'ಇಂಡಿಯನ್ ಆ್ಯಂಟಿಕ್ವರಿ'ಯ ಐದನೆಯ ಸಂಪುಟದಲ್ಲಿ ಫ್ಲೀಟರಿಂದ ಪ್ರಕಟಿಸಲ್ಪಟ್ಟಿತು. ಕ್ರಿ.ಶ. ೧೮೮೯ರಲ್ಲಿ ಬರ್ಗೆಸ್ ಅವರು ತೆಗೆದ ಪಡಿಯಚ್ಚಿನ ಆಧಾರದಿಂದ ಕ್ರಿ.ಶ. ೧೮೯೨ರಲ್ಲಿ ಸಂಪಾದಿಸಿದ ಎಪಿಗ್ರಾಫಿಯಾ ಇಂಡಿಕಾದ ಮೊದಲ ಸಂಪುಟದಲ್ಲಿ ಪ್ರಕಟಿಸಿದ ಲೇಖನ ಹುಲ್ಷ್ ಅವರದ್ದು.

ಆದರೆ ೧೯೨೮ರಲ್ಲಿ ಪ್ರಕಟವಾದ ಎಸ್.ಐ.ಐ.ನ ನಾಲ್ಕನೆಯ ಸಂಪುಟದಲ್ಲಿ ಎಚ್. ಕೃಷ್ಣಶಾಸ್ತ್ರಿಗಳ ಸಂಪಾದಕತ್ವದಲ್ಲಿ ಪ್ರಕಟವಾದ ಲೇಖನ ದ್ವಾರಗೋಪುರದ ಎಡಕ್ಕಿರುವ ಇದೇ ಶಾಸನದ 'ಪ್ರತಿ' ಎನ್ನಿಸಿಕೊಳ್ಳುವ ಬೇರೆಯೇ ಶಾಸನದ್ದು. ಇವೆರಡನ್ನೂ ಹೋಲಿಸಿದಾಗ ಮಹಾದ್ವಾರದ ಪ್ರತಿಯಲ್ಲಿನ ಕೆಲವು ಸಾಲುಗಳು ಮಹಾರಂಗ ಮಂಟಪದಲ್ಲಿನ ಪ್ರತಿಯಲ್ಲಿ (ಭೂಮಿಯಲ್ಲಿ ಹೂತಿರುವುದರಿಂದ) ಇಲ್ಲ ಹಾಗೂ ಕೆಲವು ಸಣ್ಣಪುಟ್ಟ ವ್ಯತ್ಯಾಸಗಳಿಂದ 'ಮಹಾದ್ವಾರ ಶಾಸನ'ವೇ ಮೂಲ ಶಾಸನವೆಂದೂ, 'ಮಹಾರಂಗ ಮಂಟಪ'ದ ಶಾಸನವು ಅದರ ಪ್ರತಿಯೆಂದೂ ಹೇಳಬಹುದಾಗಿದೆ. ಕೃಷ್ಣರಾಯನ ಪ್ರಸ್ತುತ ಶಾಸನದ ಕಾಲದ ಬಗೆಗೆ ಕೆಲವು ಗೊಂದಲಗಳಿದ್ದವು. ಈ ಶಾಸನದ ಕಾಲಕ್ಕೂ ನಾವು ಮುಂದೆ ಚರ್ಚಿಸಲಿರುವ 'ಗಜಪತಿ ಗಜಕೂಟ ಪಾಕಲೇನ' ಎಂಬ ಪ್ರಶಸ್ತಿಗೂ ನಂಟಿರುವುದರಿಂದ ಇಲ್ಲಿ ಶಾಸನದ ಕಾಲದ ಬಗ್ಗೆ ನಡೆದಿರುವ ಚರ್ಚೆಯನ್ನು ಉಲ್ಲೇಖಿಸಬೇಕು.

ಈ ಶಾಸನದ ಕಾಲದ ಬಗೆಗೆ ಚರ್ಚೆಯನ್ನು ಆರಂಭ ಮಾಡುತ್ತಾ ಸ್ಯುಯೆಲ್ಲರು 'ಶಾಸನೋಕ್ತ ಸಂವತ್ಸರವಾದ ಶುಕ್ಲ ಮತ್ತು ಶಕವರ್ಷವಾದ ೧೪೩೦ ಹೊಂದಾಣಿಕೆ ಯಾಗುವುದಿಲ್ಲ. ಶಕ ೧೪೩೦ರಲ್ಲಿ ವಿಭವ ಸಂವತ್ಸರವಿತ್ತು. ಶಾಸನೋಕ್ತ ಶುಕ್ಲ ಬಂದದ್ದು ಶಕ ೧೪೩೧ರಲ್ಲಿ. ಆದ್ದರಿಂದ ಈ ಶಾಸನದ ಕಾಲದ ಬಗ್ಗೆ ಗೊಂದಲವಿದೆ' ಎಂದು ಅಭಿಪ್ರಾಯಪಟ್ಟರು. ಹೀಗೆ ಈ ಶಾಸನದ ಕಾಲದ ಬಗೆಗಿನ ಗೊಂದಲ ಕ್ರಿ.ಶ. ೧೮೮೦ರ ಸುಮಾರಿಗೆ ಪ್ರಾರಂಭವಾಗಿ ೨೦ನೆಯ ಶತಮಾನದ ಕೊನೆಯಲ್ಲಿ ಸಿಂಗೆನಾಯಕನಹಳ್ಳಿಯ ಶಾಸನವು ಪತ್ತೆಯಾಗಿ ಅದರಲ್ಲಿ ಶಕವರ್ಷವು ಅನುಮಾನಕ್ಕೆಡೆಯಿಲ್ಲದಂತೆ ೧೪[illegible] ಎಂದು ನಮೂದಾಗಿರುವುದು ಪತ್ತೆಯಾಗುವವರೆಗೂ, ಎಂದರೆ ಒಂದು ಶತಮಾನದ ಕಾಲ ಈ ಶಾಸನದ ಕಾಲದ ಗೊಂದಲವಿದ್ದೇ ಇತ್ತು.

ಆದರೆ ಹತ್ತೊಂಬತ್ತನೇ ಶತಮಾನದಲ್ಲಿಯೇ ಸ್ಯುಯೆಲ್ಲರು ಎರಡು ಕಾರಣಗಳನ್ನು ಮುಂದು ಮಾಡಿ ಈ ಶಾಸನದ ಕಾಲವನ್ನು ಖಚಿತವಾಗಿ ಶುಕ್ಲವೆಂದೇ ನಿರ್ಧರಿಸ ಬಹುದಿತ್ತು.

೧. ಸಂವತ್ಸರ ಮತ್ತು ಶಕವರ್ಷ ಹೊಂದಾಣಿಕೆಯಾಗದಿದ್ದಾಗ ಸಾಧಾರಣವಾಗಿ ಶಾಸನತಜ್ಞರು ಅನುಸರಿಸುವ ಹಾಗೆ ಶಕವರ್ಷವನ್ನು ಕೈಬಿಟ್ಟು ಸಂವತ್ಸರವನ್ನೇ ಖಚಿತವೆಂದು ಹೇಳಬಹುದಿತ್ತು.

---

* ನಂ ೨೬೩/೧, ೪೪ನೆಯ ಕ್ರಾಸ್, ೭ನೆಯ ಮುಖ್ಯರಸ್ತೆ, ೫ನೆಯ ಬ್ಲಾಕ್, ಜಯನಗರ, ಬೆಂಗಳೂರು – ೪೧

೨. ೫೨ನೆಯ ಸಾಲಿನ ಒಕ್ಕಣೆ ಹೀಗಿದೆ – 'ಶಕ ೧೪೩೦ ಸಂದ ಮೇಲೆ ನಡೆವ ಶುಕ್ಲ.....' ಈ ಪದ 'ಸಂದ ಮೇಲೆ' ಶಾಸನದ ಕಾಲವನ್ನು ಖಚಿತವಾಗಿ ಶಕ ೧೪೩೧ ಎಂದೇ ನಿರ್ದೇಶಿಸುತ್ತದೆ. ಇದರ ಬಗ್ಗೆ ವಿದ್ವಾಂಸರ ಗಮನ ಹಿಂದೆಯೇ ಹರಿದಿದ್ದರೆ ಕೃಷ್ಣರಾಯನ ಪಟ್ಟಾಭಿಷೇಕದ ತೇದಿಯಂತಹ ಪ್ರಮುಖ ಸಂಗತಿಯು ಶತಮಾನ ಕಾಲ ನೆನೆಗುದಿಗೆ ಬೀಳುವುದನ್ನು ತಪ್ಪಿಸಬಹುದಿತ್ತು.

ಈ ಶಾಸನವು ಪಟ್ಟಾಭಿಷೇಕವನ್ನು ಪ್ರಸ್ತಾಪಿಸುತ್ತದೆ. ಪಟ್ಟಾಭಿಷೇಕದ ಕಾಲವನ್ನು ಖಚಿತವಾಗಿ ಸಂದ ೧೩೪೦ನೆಯ ಶಕವರ್ಷ, ಶುಕ್ಲ ಸಂವತ್ಸರದ ಮಾಘ ಶುದ್ಧ ೧೪ ಎಂದು ಹೇಳಿದೆ. ಆದ್ದರಿಂದ ಈ ಶಾಸನವನ್ನು ಹಾಕಿಸಿದ ಕಾಲವೂ ಅದೇ ಎಂದು ಹೇಳಿದರೆ ಸರಿಯಾಗಲಿಕ್ಕಿಲ್ಲ. ಈ ಶಾಸನವನ್ನು ದೀರ್ಘವಾಗಿ ವಿವೇಚಿಸಿ ಉತ್ತಮ ಲೇಖನವನ್ನು ಎಪಿಗ್ರಾಫಿಯ ಇಂಡಿಕಾ ಮೊದಲನೇ ಸಂಪುಟದಲ್ಲಿ ಪ್ರಕಟಿಸಿದ ಹುಲ್ಷ್ ಅವರೇ ಶಾಸನೋಕ್ತ ತೇದಿಗೂ ಶಾಸನವನ್ನು ಹಾಕಿಸಿದ ಕಾಲಕ್ಕೂ ವ್ಯತ್ಯಾಸವಿದೆ ಎನ್ನುತ್ತಾರೆ. 'ಈ ಶಾಸನವನ್ನು ಶಾಸನ ಹೇಳುವ ಪಟ್ಟಾಭಿಷೇಕದ ದಿನವೇ ಹಾಕಿಸಿದ್ದೋ ಅಥವಾ ಅದರ ವಾರ್ಷಿಕೋತ್ಸವದ್ದೆಂದೋ ಎಂದು ಹೇಳಲು ಸಾಧ್ಯವಿಲ್ಲ' ಎನ್ನುತ್ತಾರೆ. ಇದಕ್ಕೆ ಕಾರಣವನ್ನು ಅವರು ಹೇಳದಿದ್ದರೂ ಸ್ಪಷ್ಟವೇ ಇದೆ.

ಸಾಲು ೫೫–೫೬ರಲ್ಲಿ '......ಪಟ್ಟಾಭಿಷೇಕ ಮಹೋತ್ಸವದಂದು ದೇವರ ಸಂಮುಖದ ಮಹಾರಂಗಮಂಟಪವನ್ನೂ ಆ ಮುಂದಣ ಗೋಪುರವನ್ನೂ ಕಟ್ಟಿಸಿ, ಹಿರಿಯ ಗೋಪುರವನ್ನು ಜೀರ್ಣೋದ್ಧಾರ ಮಾಡಿಸಿ....' ಎಂಬ ಒಕ್ಕಣೆಯಿದೆ. ಮಹಾರಂಗಮಂಟಪವನ್ನೂ ಗೋಪುರವನ್ನೂ ಪಟ್ಟಾಭಿಷೇಕದ ದಿನದಂದೇ, ಒಂದೇ ದಿನದಲ್ಲಿ ಮಾಡಿ ಮುಗಿಸಿ ಸಮರ್ಪಿಸಲು ಸಾಧ್ಯವಿಲ್ಲ. ಈ ವಾಸ್ತು ಚಟುವಟಿಕೆಗೆ ಕೆಲವು ತಿಂಗಳುಗಳೇ ಹಿಡಿದಿರಬೇಕು. ಶಾಸನವು 'ಮಹಾರಂಗಮಂಟಪವನು ಕಟ್ಟಿಸಿ' ಎಂದು ಹೇಳುವುದರಿಂದ ಶಾಸನ ಹಾಕುವ ವೇಳೆಗೆ ಕಟ್ಟಡವು ಮುಗಿದಿರಬೇಕು. ಪಟ್ಟಾಭಿಷೇಕದಂದು ಪ್ರಾರಂಭಿಸಿ ಕೆಲವು ತಿಂಗಳ ನಂತರ ಕಟ್ಟಡವು ಮುಗಿದಾಗ ಶಾಸನವನ್ನು ಹಾಕಿಸಲಾಯಿತೆಂದರೆ ಸಮಂಜಸವಾದೀತು. ವೀರನರಸಿಂಹನ ಮರಣಾನಂತರ ಸಿಂಹಾಸನಕ್ಕೆ ಸ್ಪರ್ಧೆಯಿದ್ದುದನ್ನೂ, ಕೃಷ್ಣರಾಯನ ಪಟ್ಟಾಭಿಷೇಕವು ಸುಲಭವಾಗಿಯಾಗಲೀ, ಸರಳವಾಗಿಯಾಗಲೀ, ಪೂರ್ವ ನಿಯೋಜಿತವಾಗಿ ಯಾಗಲೀ ಆಗಿರಲಿಲ್ಲವೆಂಬುದನ್ನೂ ಜ್ಞಾಪಿಸಿಕೊಂಡರೆ ಮೇಲಿನ ಅಭಿಪ್ರಾಯವು ಸಾಧುವೆನಿಸುತ್ತದೆ. ಮುಂದೆ ನಾವು ಚರ್ಚೆಗೆ ಎತ್ತಿಕೊಳ್ಳಲಿರುವ ಪ್ರಶಸ್ತಿ ಪದವಾದ 'ಗಜಪತಿ ಗಜಕೂಟ ಪಾಕಲೇನ'ಕ್ಕೂ ಈ ಶಾಸನ ಹಾಕಿಸಿದ ತೇದಿಗೂ ಸಂಬಂಧವಿರುವುದರಿಂದ ಈ ಹಿನ್ನೆಲೆ ಅವಶ್ಯಕ.

ವಿಜಯನಗರದ ಎಲ್ಲ ಚಕ್ರವರ್ತಿಗಳಂತೆ ಕೃಷ್ಣರಾಯನೂ ಈ ಶಾಸನದಲ್ಲಿ ಪ್ರಶಸ್ತಿಗಳ ಸರಮಾಲೆಯನ್ನೇ ಧರಿಸಿಕೊಂಡಿದ್ದಾನೆ. ಉದಾಹರಣೆಗೆ, ಸಾಲು ೯ರಲ್ಲಿ 'ಅಂಗವಂಗ ಕಳಿಂಗಾದ್ಯ ರಾಜಭಿಃ ಸೇವ್ಯತೆ ಚಯಃ'; ಸಾಲು ೪೪ರಲ್ಲಿ 'ಪರಿಭೂತ ಸುರತ್ರಾಣೇನ, ಗಜಪತಿ, ಗಜಕೂಟ ಪಾಕಲೇನ...', ಸಾಲು ೪೮ರಲ್ಲಿ '.....ಭುಜವಿಜಿತ ಸಾಂಪರಾಯೇಣ ಕೃಷ್ಣರಾಯ ಮಹರಾಯೇಣ....' ಇತ್ಯಾದಿ. ಪಟ್ಟಾಭಿಷೇಕದ ಸಂದರ್ಭದಲ್ಲೇ ಅಂಗ, ವಂಗ, ಕಳಿಂಗ ರಾಜರಿಂದ ಸೇವಿಸಲ್ಪಡುವುದು, ಸುಲ್ತಾನರನ್ನು ಸೋಲಿಸುವುದು, ಗಜಪತಿಯ ಯುದ್ಧದಾನೆಗಳಿಗೆ ಜ್ವರ ಬರಿಸುವಂಥ ವೀರ್ಯ, ಶೌರ್ಯವುಳ್ಳವನು, ಸಾಂಪರಾಯನನ್ನು ತನ್ನ ಭುಜಬಲದಿಂದ ಗೆದ್ದವನು... ಅಧಿಕಾರಕ್ಕೆ ಬರುವುದಕ್ಕೆ ಮುಂಚೆಯೇ ಇಷ್ಟೆಲ್ಲ ಸಾಧನೆಗಳನ್ನು ಶಾಸನ ಹೇಳುವುದು ಇತಿಹಾಸಕಾರರು ಅನುಮಾನ ಪಡಲು ಕಾರಣವಾಗಿದೆ. ಹಾಗೆಂದು ಇವೆಲ್ಲವೂ ಪೊಳ್ಳು ಪ್ರಶಸ್ತಿಗಳೇನಲ್ಲ. ಕೃಷ್ಣರಾಯನ ಪೂರ್ವಜರು ಈ ಪ್ರಶಸ್ತಿಗಳು ಹೇಳುವ ಎಲ್ಲ ಕಾರ್ಯಗಳನ್ನೂ ಸಾಧಿಸಿಯೇ ಇದ್ದಾರೆ. ಆದರೂ ಈ ಪ್ರಶಸ್ತಿಗಳ ಬಗ್ಗೆ ದೀರ್ಘ ಚರ್ಚೆ ನಡೆದಿದೆ.

ಒರಿಸ್ಸಾದ ಇತಿಹಾಸಕಾರ ಪಾಣಿಗ್ರಾಹಿ ಅವರು ಈ ಎಲ್ಲ ಬಿರುದುಗಳೂ ಸುಳ್ಳೇ ಎಂದು ಹೇಳುತ್ತಾರೆ. ಪಿ. ಮುಖರ್ಜಿ ಅವರೂ ಈ ಎಲ್ಲ ಪ್ರಶಸ್ತಿಗಳನ್ನೂ, ಅದರಲ್ಲೂ 'ಗಜಪತಿ ಗಜಕೂಟ ಪಾಕಲೇನ' ಎಂಬುದನ್ನು ನಂಬಲು ಸಿದ್ಧರಿಲ್ಲ. ಎಸ್.ಕೆ. ಅಯ್ಯಂಗಾರ್ಯರು ಈ ಪ್ರಶಸ್ತಿಗಳು ಸಾಂಪ್ರದಾಯಿಕವಾಗಿ ಹೇಳುವ ಪ್ರಶಸ್ತಿಗಳೆಂದೂ ಅವುಗಳಿಗೆ ಪ್ರಾಮುಖ್ಯತೆ ಕೊಡುವ ಅವಶ್ಯಕತೆ ಇಲ್ಲವೆಂದೂ ಅಭಿಪ್ರಾಯ ಪಡುತ್ತಾರೆ. ಹೆಚ್. ಕೃಷ್ಣಶಾಸ್ತ್ರಿಗಳು ಕೂಡ ಈ ಬಿರುದುಗಳನ್ನು ನಂಬಲು ಸಿದ್ಧರಿಲ್ಲ. ಇತ್ತೀಚೆಗೆ (೧೯೯೯ ರಲ್ಲಿ) ಪ್ರೊ॥ ದೀಕ್ಷಿತ್ ಅವರು ಮಾತ್ರ 'ಪಟ್ಟಾಭಿಷೇಕಕ್ಕೆ ಮುಂಚೆ ಕೃಷ್ಣರಾಯನು

ಗಜಪತಿಯೊಂದಿಗೆ ಅಷ್ಟೇನೂ ಮುಖ್ಯವಲ್ಲದ ಮುಖಾಮುಖಿ ನಡೆಸಿದ್ದಿರಬಹುದೆಂದೂ, ಇದರಿಂದ ಪ್ರಮುಖ ಪರಿಣಾಮವೇನೂ ಆದಂತಿಲ್ಲ'ವೆಂದೂ ಅಭಿಪ್ರಾಯಪಡುತ್ತಾರೆ.

ಈ ಎಲ್ಲ ಪ್ರಶಸ್ತಿಗಳಲ್ಲದಿದ್ದರೂ 'ಪರಿಭೂತ ಸುರತ್ರಾಣೇನ', 'ಭುಜವಿಜಿತ ಸಾಂಪರಾಯೇಣ', 'ಗಜಪತಿ ಗಜಕೂಟ ಪಾಕಲೇನ' ಎಂಬ ಪ್ರಶಸ್ತಿಗಳ ಬಗ್ಗೆ ಅನೇಕ ಬಾರಿ ಚರ್ಚೆಯಾಗಿದ್ದರೂ ಇನ್ನೂ ಹೆಚ್ಚಿನ ವಿಶದೀಕರಣಕ್ಕೆ ಅವಕಾಶವಿದೆ. ಅದರಲ್ಲೂ 'ಗಜಪತಿ ಗಜಕೂಟ ಪಾಕಲೇನ' ಪ್ರಶಸ್ತಿಯು ಹೆಚ್ಚಿನ ಗಮನಕ್ಕೆ ಅರ್ಹವೆಂದು ನನ್ನ ಅಭಿಪ್ರಾಯ. ಆದ್ದರಿಂದ ಚರ್ಚೆಗೆ ಅದನ್ನೇ ಈಗ ಗುರಿಪಡಿಸಬಹುದು.

ಈ ಪ್ರಶಸ್ತಿಯ ಪದಶಃ ಅರ್ಥ 'ಗಜಪತಿಯ ಆನೆಗಳ ಹಿಂಡಿಗೆ ಜ್ವರ ಬರಿಸಿದವನು' ಎಂದು. ಸೂಚ್ಯವಾಗಿ ಕೃಷ್ಣರಾಯನ ಶೌರ್ಯಕ್ಕೆ ಗಜಪತಿಯ ಸೈನ್ಯದ ಆನೆಗಳು ಜ್ವರ ಬಂದಂತೆ ತತ್ತರಿಸಿದವು ಎಂದಾಗುತ್ತದೆ. ಹಾಗಾದರೆ ಕೃಷ್ಣರಾಯನು ಕ್ರಿ.ಶ. ೧೫೧೦ ಜನವರಿಗೆ ಮುಂಚೆಯೇ ಗಜಪತಿಯೊಂದಿಗೆ ಘನಘೋರ ಯುದ್ಧವೊಂದರಲ್ಲಿ ಭಾಗವಹಿಸಿ ಅವನನ್ನು ಸೋಲಿಗೀಡು ಮಾಡಿದ್ದನೆ? ಅಥವಾ ಇದೊಂದು ಪೊಳ್ಳು ಬಿರುದೆ? ಎಂಬ ಪ್ರಶ್ನೆ ಎದುರಾಗುತ್ತದೆ. ಈ ಪ್ರಶ್ನೆಗೆ ಉತ್ತರಗಳನ್ನು ಹುಡುಕಬೇಕಾದರೆ ಕೃಷ್ಣರಾಯನ ಮತ್ತು ಪ್ರತಾಪರುದ್ರ ಗಜಪತಿಯ ಕ್ರಿ.ಶ. ೧೫೦೯ ಮತ್ತು ಕ್ರಿ.ಶ. ೧೫೧೦ರ ಸೇನಾ ಚಟುವಟಿಕೆಗಳನ್ನು ಮತ್ತು ಪ್ರವಾಸದ ಮಾಹಿತಿಯನ್ನು ಎಚ್ಚರಿಕೆಯಿಂದ ಪರಿಶೀಲಿಸಬೇಕಾಗುತ್ತದೆ. ನಮಗೆ ಇಲ್ಲಿ ಸಹಾಯಕ್ಕೆ ಬರುವುದು ಸಾಹಿತ್ಯ ಮತ್ತು ಶಾಸನಗಳು.

ಕೃಷ್ಣದೇವರಾಯನ ದಿನಚರಿಯು ಕೃಷ್ಣರಾಯನ ಪಟ್ಟಾಭಿಷೇಕದ ತರುಣದ ರಾಜಕೀಯ/ಸೈನಿಕ ಪರಿಸ್ಥಿತಿಯನ್ನು ವಿವರಿಸುತ್ತದೆ. ಈ ಗ್ರಂಥದ ಪ್ರಕಾರ ಕೃಷ್ಣರಾಯನ ಕೀರ್ತಿ ಮತ್ತು ಸೈನಿಕ ಶಕ್ತಿಯನ್ನು ಅರಿತಿದ್ದ ಷಾಹೀ ಸುಲ್ತಾನರು ರಾಯನ ಪಟ್ಟವಾದ ತಕ್ಷಣ ರಾಯಭಾರಿಗಳ ಮೂಲಕ ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡರು. ತಮ್ಮ ತಮ್ಮ ಗಡಿ ಠಾಣ್ಯಗಳನ್ನು ಬಲಪಡಿಸಿ ಅಲ್ಲಿಗೆ ಹೆಚ್ಚುವರಿ ಸೈನ್ಯವನ್ನು ಅಟ್ಟಿ, ಕೋಟೆಗಳ ದುರಸ್ತಿಯ ಬಗ್ಗೆ ಗಮನ ಕೊಟ್ಟು, ಸಾಮಾನು ಸರಂಜಾಮನ್ನು ಸಾಗಿಸಿದ್ದೇ ಅಲ್ಲದೆ ಷಾಹೀ ಸುಲ್ತಾನರು ಗಜಪತಿಗೂ ಎಚ್ಚರಿಕೆ ನೀಡಿದರೆಂದು ವರದಿ ಮಾಡುತ್ತದೆ (ಪುಟ ೨೦-೨೧). ಗಜಪತಿಯೂ ಇವರ ಸೂಚನೆಗಳನ್ನು ಸ್ವೀಕರಿಸಿ ಗಡಿಠಾಣ್ಯಗಳನ್ನು ಬಲಪಡಿಸಿ ವ್ಯವಸ್ಥೆಯನ್ನು ಉತ್ತಮಪಡಿಸಿದನು. ಆದ್ದರಿಂದ ಕ್ರಿ.ಶ. ೧೫೦೯ರ ಕೊನೆ ಮತ್ತು ಕ್ರಿ.ಶ. ೧೫೧೦ರ ಮೊದಲ ಭಾಗದಲ್ಲಿ ವಿಜಯನಗರ ಮತ್ತು ನೆರೆಯ ರಾಜ್ಯಗಳಲ್ಲಿ ಯುದ್ಧ ಸಂಬಂಧಿತ ಪರಿಸ್ಥಿತಿಯಿತ್ತೆಂದು ಭಾವಿಸುವುದಾದರೆ ಯುದ್ಧ ನಡೆದಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ.

ಒರಿಸ್ಸಾ/ಬಂಗಾಳದ ವೈಷ್ಣವ ಗುರುವಾದ ಚೈತನ್ಯ ಮಹಾಪ್ರಭುವು ಇದೇ ಕಾಲದಲ್ಲಿ ಜೀವಿಸಿದ್ದವನು. ಈ ಧರ್ಮಗುರುವಿನ ಬಗೆಗೆ ಅನೇಕ ಸಮಕಾಲೀನ ಮತ್ತು ಸಮೀಪಕಾಲೀನ ಜೀವನ ಚರಿತ್ರೆಯೂ, ಸಾಹಿತ್ಯವೂ ಇವೆ. 'ಚೈತನ್ಯ ಭಾಗವತ', 'ಚೈತನ್ಯ ಚರಿತಾಮೃತ', 'ಚೈತನ್ಯ ಮಂಗಲ' ಇತ್ಯಾದಿ. ಚೈತನ್ಯ ಮಹಾಪ್ರಭುವು ೧೬ನೆಯ ಶತಮಾನದ ಮೊದಮೊದಲ ದಶಕಗಳನ್ನು ಪುರಿ, ಕಟಕ ಪಟ್ಟಣದಲ್ಲಿ ಕಳೆದದ್ದರಿಂದ ಈ ಜೀವನ ಚರಿತ್ರೆಗಳಲ್ಲಿ ಒರಿಸ್ಸಾದ ಇತಿಹಾಸವೂ, ಗಜಪತಿಯ ಅನೇಕ ವೃತ್ತಾಂತಗಳೂ ಲಭ್ಯವಿವೆ. ಕ್ರಿ.ಶ. ೧೫೦೯-೧೫೧೦ನೇ ವರ್ಷಗಳಲ್ಲಿ ಈ ಗ್ರಂಥಗಳು ಗಜಪತಿಯ ಪುರೀವಾಸ್ತವ್ಯ, ಆತನ ಚಲನವಲನಗಳ ಬಗೆಗೆ ಕೊಡುವ ಮಾಹಿತಿಯನ್ನು ನೋಡೋಣ.

'ಚೈತನ್ಯ ಭಾಗವತ'ವು ಸ್ಪಷ್ಟವಾಗಿ ಚೈತನ್ಯ ಮಹಾಪ್ರಭುವು ಕ್ರಿ.ಶ. ೧೫೦೯ರ ಆದಿಯಲ್ಲಿ ಪುರಿಗೆ ಬಂದರೆನ್ನುತ್ತದೆ. ಅಲ್ಲಿ ಕೆಲವು ಕಾಲವಿದ್ದು, ಗಜಪತಿಯು ವಿಜಯನಗರದ ವಿರುದ್ಧ ಯುದ್ಧದಲ್ಲಿ ನಿರತನಾಗಿದ್ದುದರಿಂದ ಗಜಪತಿಗೆ ದರ್ಶನವನ್ನು ಕೊಡದೆಯೇ ದಕ್ಷಿಣ ದೇಶದ ಯಾತ್ರಾಕ್ಷೇತ್ರಕ್ಕೆಂದು ಹೊರಟರೆಂದೂ ಚೈತನ್ಯ ಭಾಗವತವು ಹೇಳುತ್ತದೆ. 'ಚೈತನ್ಯ ಚರಿತಾಮೃತ'ವು ಮಹಾಪ್ರಭುವು ವಿಭವ ಸಂವತ್ಸರದ ವೈಶಾಖದಲ್ಲಿ ಎಂದರೆ ೧೫೦೯ರ ಏಪ್ರಿಲ್ ತಿಂಗಳಲ್ಲಿ ಪುರಿಯನ್ನು ತೊರೆದು ದಕ್ಷಿಣಕ್ಕೆ ತೆರಳಿದರೆನ್ನುತ್ತದೆ. ಹೀಗಾಗಿ ಸುಮಾರು ೧೫೦೯ರ ಆದಿಯಿಂದ ಗಜಪತಿಯು ಏಪ್ರಿಲ್ ೧೫೦೯ರ ವರೆಗಾದರೂ ಗಜಪತಿಯು ವಿಜಯನಗರದೊಂದಿಗೆ ಯುದ್ಧ ಮಾಡುತ್ತಿದ್ದಿರಬೇಕು.

ಪಾಣಿಗ್ರಾಹಿಯವರು ತಮ್ಮ ಒರಿಸ್ಸಾ ಚರಿತ್ರೆ ಗ್ರಂಥದಲ್ಲಿ ಇದರ ಸಮನಾದ ಅಭಿಪ್ರಾಯವನ್ನೇ ಹೇಳುತ್ತಾರೆ. ತಮಿಳು ರಾಜ್ಯವನ್ನು ಪುರುಷೋತ್ತಮ ಗಜಪತಿಯು ಗೆದ್ದ ನಂತರ ಸಾಳ್ವ ನರಸಿಂಹನು ಒಡ್ಡಿಯಾದಿ ಸೈನ್ಯವನ್ನು ಸೋಲಿಸಿ ತಮಿಳು ಭೂಭಾಗಗಳನ್ನು ವಾಪಸ್ಸು ಪಡೆದುಕೊಂಡನು. ಈ ತಮಿಳು ದೇಶಗಳನ್ನು ಪುನಃ ಗೆಲ್ಲಲು ಪ್ರತಾಪರುದ್ರ ಗಜಪತಿಯು ಸಮಯ ಕಾಯುತ್ತಿದ್ದು, ಕ್ರಿ.ಶ. ೧೫೦೯ರಲ್ಲಿ ವಿಜಯನಗರದಲ್ಲಿ ಸಿಂಹಾಸನಕ್ಕಾಗಿ ಗೊಂದಲ ತಲೆದೋರಿದಾಗ ವಿಜಯನಗರ ರಾಜ್ಯದ ಮೇಲೆ ಧಾಳಿ ಮಾಡಿದುದಾಗಿ ತೋರುತ್ತದೆ. ಆದರೆ ಈ ದಂಡಯಾತ್ರೆ ಬಿರುಸಾಗಿಯಾಗಲಿ, ದೀರ್ಘವಾಗಿಯಾಗಲಿ ನಡೆಯಲಿಲ್ಲ. ಏಕೆಂದರೆ ಬಂಗಾಳದ ನವಾಬನಾದ ಅಲಾವುದ್ದೀನ್ ಹುಸೇನ್‌ಷಾಹನು ಗಜಪತಿಯು ದಕ್ಷಿಣದ ಧಾಳಿಯಲ್ಲಿ ಮಗ್ನನಾಗಿದ್ದಾಗ ಕಳಿಂಗದ ಮೇಲೇರಿ ಬಂದನು. ರಾಜಧಾನಿ ಪುರಿಯವರೆಗೂ ಸಾಗಿ ಬಂದು ಪುರಿಯ ಜಗನ್ನಾಥ ದೇವಾಲಯದ ಮೂರ್ತಿಗಳನ್ನು ನಾಶಪಡಿಸಿದನೆಂದು ಪುರಿ ದೇವಾಲಯದ ಚಾರಿತ್ರಿಕ ದಾಖಲೆಯಾದ ಮಾಡಲಪಾಂಜಿ ಹೇಳುತ್ತದೆ. ಚೈತನ್ಯ ಭಾಗವತವು ಏಪ್ರಿಲ್ ೧೫೦೯ರವರೆಗೂ ಚೈತನ್ಯ ಪ್ರಭುವು ಪುರಿಯಲ್ಲಿ ಇದ್ದುದರ ಬಗ್ಗೆ ಹೇಳುವುದರಿಂದ ಅಲ್ಲಿಯವರೆಗೂ ಹುಸೇನ್ ಶಾಹನು ಪುರಿಯ ಮೇಲೆ ಧಾಳಿ ಮಾಡಿರಲಾರನೆಂದು ಹೇಳಬಹುದು. ಬಂಗಾಲದ ನವಾಬನ ದಾಳಿಯ ಸುದ್ದಿ ತಿಳಿದೊಡನೆ ಪ್ರತಾಪರುದ್ರನು ವಿಜಯನಗರದ ಗಡಿಯಿಂದ ಧಾವಿಸಿ ಬಂದು ಹುಸೇನ್‌ಷಾಹನನ್ನು ಸೋಲಿಸಿ ಬಂಗಾಳದ ಗಡಿಯವರೆಗೂ ಅಟ್ಟಿಸಿಕೊಂಡು ಹೋದನೆಂದು ಕಳಿಂಗ ಇತಿಹಾಸ ಹೇಳುತ್ತದೆ. ಹಾಗೆಯೇ ಗಜಪತಿಯು ನೆಲ್ಲೂರು ಪ್ರಾಂತ್ಯಕ್ಕೆ ಮತ್ತೆ ಧಾವಿಸಿ ದಕ್ಷಿಣಕ್ಕೆ ಬಂದನು. ಹೀಗಾಗಿ ೧೫೦೯ ವರ್ಷ ಪೂರ್ತಿ ಗಜಪತಿಯು ವಿಜಯನಗರದೊಡನೆ ಯುದ್ಧದಲ್ಲಿ ನಿರತನಾಗಿದ್ದನೆಂದು ಹೇಳಬಹುದು. ಇನ್ನೂ ವಿವರವಾಗಿ ಹೇಳುವುದಾದರೆ, ಚರಿತಾಮೃತವು ವೈಶಾಖದಲ್ಲಿ ಎಂದರೆ ಏಪ್ರಿಲ್ ೧೫೦೯ರ ವೇಳೆಗೆ ಚೈತನ್ಯ ಮಹಾಪ್ರಭುವು ದಕ್ಷಿಣಕ್ಕೆ ತೆರಳಿದರೆನ್ನುತ್ತದೆ. ಪುರಿಯ ದೇವಾಲಯವು ಹುಸೇನ್ ಶಾಹನಿಂದ ನಾಶವಾದದ್ದು ಏಪ್ರಿಲ್ ೧೫೦೯ರ ನಂತರವಿರಬೇಕು. ಇದರ ಕೆಲವು ದಿನಗಳ ನಂತರ ಎಂದರೆ ಸುಮಾರು ಮೇ ೧೫೦೯ರ ವೇಳೆಗೆ ಗಜಪತಿಯು ಪುರಿಯ ರಕ್ಷಣೆಗೆ ಧಾವಿಸಿರಬೇಕು. ವಂಗ ವಿಜಯದ ನಂತರ ಸೆಪ್ಟೆಂಬರ್ ವೇಳೆಗೆ ಪುನಃ ವಿಜಯನಗರದ ಗಡಿಗೆ ಧಾವಿಸಿದ್ದಾನೆ ಎಂದು ಭಾವಿಸಬಹುದು. ಹೀಗಾಗಿ ಕೃಷ್ಣರಾಯನ ಪಟ್ಟಾಭಿಷೇಕಕ್ಕೆ ಕೆಲವು ತಿಂಗಳು ಮುಂಚೆ ತನ್ನ ಮತ್ತು ವಿಜಯನಗರದ ಗಡಿ ಜಿಲ್ಲೆಯಾದ ನೆಲ್ಲೂರು ರಾಜ್ಯದಲ್ಲಿ ಗಜಪತಿಯು ವಾಸ್ತವ್ಯ ಹೂಡಿದುದಕ್ಕೆ ಆಧಾರ ಸಿಗುತ್ತದೆ.

'ನಾಡಿಮಿದೊಡ್ಡಿಪೂಂಡಿ ಕೈಫಿಯತ್ತು' ಕೃಷ್ಣರಾಯನು ರಾಜಧಾನಿಗೆ ಬರುವ ದಾರಿಯಲ್ಲಿ ತಿರುಪತಿಯಲ್ಲಿ ತನ್ನ ಪಟ್ಟಾಭಿಷೇಕವನ್ನು ಮಾಡಿಕೊಂಡು ನಂತರದ ಪಟ್ಟಾಭಿಷೇಕಕ್ಕೋಸ್ಕರ ವಿಜಯನಗರಕ್ಕೆ ಬಂದನೆನ್ನುತ್ತದೆ. ಗಜಪತಿಯು ೧೫೦೯ ಜನವರಿಯಿಂದ ೧೫೧೦ರ ಅಕ್ಟೋಬರ್‌ವರೆಗೆ ವಾಸ್ತವ್ಯ ಹೂಡಿದ್ದ ನೆಲ್ಲೂರು ರಾಜ್ಯವು ತಿರುಪತಿಯಿಂದ ಅತ್ಯಂತ ಸನಿಹದಲ್ಲಿರುವುದು ಗಮನಾರ್ಹವಾಗಿದ್ದು, ಗಜಪತಿ ಮತ್ತು ಕೃಷ್ಣರಾಯನ ನಡುವೆ ಯುದ್ಧ ನಡೆದಿರಬಹುದಾದ್ದನ್ನು ಸೂಚಿಸುತ್ತದೆ.

ಇನ್ನು ಶಾಸನಗಳಲ್ಲಿ ಪ್ರತಾಪರುದ್ರಗಜಪತಿಯ ನೆಲ್ಲೂರು ಜಿಲ್ಲೆಯ ಕ್ರಿ.ಶ. ೧೫೦೯-೧೦ರ ಶಾಸನಗಳು ಮತ್ತು ಸಾಳ್ವ ತಿಮ್ಮರಸನದೆನ್ನಲಾದ ಒಂದು ಶಾಸನ ಈ ಸಂದರ್ಭದಲ್ಲಿ ಪ್ರಮುಖವಾದವು. ಸಂಕ್ಷಿಪ್ತವಾಗಿ ಅವುಗಳನ್ನು ನೋಡುವುದಾದರೆ,

೧. ಗುಂಟೂರು ಜಿಲ್ಲೆಯ ತಂಗೇಡ ಗ್ರಾಮದ ೧೮-೧೧-೧೫೦೯ನೆಯ ಇಸವಿಯ, ಶಾಸನದಲ್ಲಿ ಗಜಪತಿಯು ಬ್ರಾಹ್ಮಣನೊಬ್ಬನಿಗೆ ದಾನವನ್ನು ನೀಡಿದ್ದಾನೆ.[೨]

೨. ನೆಲ್ಲೂರು ಜಿಲ್ಲೆಯ ಗುಂಡ್ಲುಪಾಳೆಂ ಶಾಸನವು ಪ್ರತಾಪರುದ್ರನು ೨೪-೧-೧೫೧೦ ರಂದು ನೀಡಿದ ಮತ್ತೊಂದು ದಾನವನ್ನು ದಾಖಲಿಸುತ್ತದೆ.

೩. ಅದೇ ನೆಲ್ಲೂರು ಜಿಲ್ಲೆಯ ವೇಲಿಚೆರ್ಲದ ೪-೧೦-೧೫೧೦ ರ ಶಾಸನವೂ ಗಜಪತಿಯ ಮತ್ತೊಂದು ದಾನಶಾಸನವಾಗಿದೆ.

೪. ಒಂಗೊಳೆ ಸಮೀಪದ ಅಮ್ಮನಬ್ರೋಲು ಪ್ರಾಂತದ (ಇಂದಿನ ಪ್ರಕಾಶಂ ಜಿಲ್ಲೆ) ಗೋಣುಗುಂಟ ಗ್ರಾಮದ

ಒಂದು ದಾನಶಾಸನವು (ಅಕ್ಟೋಬರ್, ೧೫೧೦) ಸಾಳ್ವ ತಿಮ್ಮರಸನ ಒಳಿತಿಗಾಗಿ ಸ್ಥಳೀಯ ಅಧಿಕಾರಿಯೊಬ್ಬನು ಕೊಟ್ಟ ದಾನವನ್ನು ದಾಖಲಿಸುತ್ತದೆ.[೩]

ಈ ಶಾಸನಗಳ ತೇದಿಯನ್ನು ಗಮನಿಸಿದರೆ ಗಜಪತಿಯು ಕ್ರಿಶ. ೧೫೦೯ರ ನವೆಂಬರ್ ತಿಂಗಳಿನಿಂದ (ಕಡೆಯಪಕ್ಷ) ೧೫೧೦ರ ಜನವರಿಯವರೆಗೆ ವಿಜಯನಗರದ ನೆರೆ ರಾಜ್ಯವಾದ ನೆಲ್ಲೂರಿನಲ್ಲಿ ಸಂಚರಿಸುತ್ತಿದ್ದನೆಂದು ಹೇಳಬಹುದು. ನಂತರ ೧೫೧೦ರ ಅಕ್ಟೋಬರ್‌ವರೆಗೂ ಗಜಪತಿಯ ಶಾಸನಗಳು ಈ ಪ್ರದೇಶದಲ್ಲಿ ಇಲ್ಲದಿರುವುದನ್ನು ಗಮನಿಸಿದರೆ ಹುಸೇನ್ ಶಾಹನ ದಾಳಿಯನ್ನೆದುರಿಸಲು ಜನವರಿ/ಫೆಬ್ರವರಿ ೧೫೧೦ರಿಂದ ಸುಮಾರು ಅಕ್ಟೋಬರ್‌ವರೆಗೂ ಉತ್ತರಕ್ಕೆ ಧಾವಿಸಿ ಸುಲ್ತಾನನನ್ನು ಬಂಗಾಳಕ್ಕೆ ಅಟ್ಟಿ ಪುನಃ ಅಕ್ಟೋಬರ್ ೧೫೧೦ರಲ್ಲಿ ದಕ್ಷಿಣದ ನೆಲ್ಲೂರಿಗೆ ಧಾವಿಸಿದನೆಂದು ಹೇಳಬಹುದು. ನವೆಂಬರ್ ೧೫೦೯ ಮತ್ತು ಜನವರಿ ೧೫೧೦ರ ಎರಡು ಶಾಸನಗಳು ವಿಜಯನಗರದ ನೆರೆಯಲ್ಲಿ ಗಜಪತಿಯ ಅಸ್ತಿತ್ವವನ್ನು ಸಾಬೀತುಪಡಿಸುತ್ತವೆ. ಕೃಷ್ಣರಾಯನ ಪಟ್ಟಾಭಿಷೇಕದ ತೇದಿ ಜನವರಿ ೧೫೧೦. ಆದ್ದರಿಂದ ಪಟ್ಟಕ್ಕೆ ಬರುವ ಮುಂಚೆ ಕೃಷ್ಣರಾಯನು ನಾಡಿಮಿದೊಡ್ಡಿ ಕೈಫಿಯತ್ತಿನ ಪ್ರಕಾರ ಸುಮಾರು ಡಿಸೆಂಬರ್-ಜನವರಿಯಲ್ಲಿ ತಿರುಪತಿಯಲಿದ್ದನೆಂದು ನಂಬಿದರೆ, ಗಜಪತಿ-ಕೃಷ್ಣರಾಯನ ಮುಖಾಮುಖಿಯು ಪಟ್ಟಾಭಿಷೇಕಕ್ಕೆ ಸ್ವಲ್ಪ ತಿಂಗಳುಗಳ ಮುಂಚೆ ನಡೆದಿರುವ ಸಾಧ್ಯತೆ ಇದೆ.

ಇದೇ ಸಂದರ್ಭದಲ್ಲಿ ಅನೇಕ ವಿದ್ವಾಂಸರು ಉಲ್ಲೇಖಿಸಿರುವ ಗೋಣುಗುಂಟ್ಲ ಶಾಸನವನ್ನು ಸೂಕ್ಷ್ಮವಾಗಿ ಗಮನಿಸಬೇಕು.

ಬಟರ್‌ವರ್ತ್ ಮತ್ತು ಚೆಟ್ಟಿಯವರ 'ನೆಲ್ಲೂರು ಜಿಲ್ಲಾ ಶಾಸನಗಳು' ಗ್ರಂಥದಲ್ಲಿ ೯೭೪ನೆಯ ಪುಟದಲ್ಲಿ ಒಂಗೋಳೆ ೪೬ ನಂಬರಿನ ಈ ತಾಮ್ರಶಾಸನದ ಇಂಗ್ಲಿಷ್ ಸಾರಾಂಶವನ್ನು ಈ ಕೆಳಕಂಡಂತೆ ಕೊಡಲಾಗಿದೆ. ಶಾಸನದ ಕಾಲ ಪ್ರಮೋದೂತ ಕಾರ್ತೀಕ ಶುದ್ಧ ಏಕಾದಶಿ, ಶಕವರ್ಷ ೧೪೩೩ ಎಂದರೆ, ೧೩-೧೦-೧೫೧೦.

'.....When Krishna Raya was ruling, Suranayani Abbayya nayanivaru was pleased to give Gonuguntla Village, attached to Kocherla Kota Kataka in Ammanabrolu Sima which Salva Timmarasu was pleased to give Suranayani Abbayyanayanigaru and which is situated in Kondavidu Rajya which was given to him (Salva Timmarasu) by the Raja for religious merit of Salva Timmarasu for providing Amrutapadi to Amareswara of Gonuguntla which is subject to him (Satyanayani Abbanayani garu) for the merit of Salva Thimmarasu. Suryanayani Abbayyanayanigaru gave the grant...'

ಈ ಶಾಸನದ ಗಮನ ಸೆಳೆಯುವ ಅಂಶಗಳೆಂದರೆ,

ಶಾಸನದ ಕಾಲವು ಅಕ್ಟೋಬರ್ ೧೫೧೦ - ಎಂದರೆ ಪಟ್ಟಾಭಿಷೇಕದ ಒಂಭತ್ತು ತಿಂಗಳ ನಂತರದ್ದು.

ದಾನಕಾಲದಲ್ಲಿ ಈ ಭೂಭಾಗವನ್ನು ಕೃಷ್ಣರಾಯನು ಆಳುತ್ತಿದ್ದಂತೆ ಹೇಳಿ, ಕೊಂಡವೀಡು ರಾಜ್ಯವು ರಾಯನಿಂದ ತಿಮ್ಮರಸನಿಗೆ ಕೊಟ್ಟಂತೆ ಹೇಳಿದೆ. ಶಾಸನೋಕ್ತ ಕೊಂಡವೀಡು ರಾಜ್ಯ, ಅಮ್ಮನ ಬ್ರೋಲು ಸೀಮೆ, ಇವೆರಡು ನೆಲ್ಲೂರು ರಾಜ್ಯ(ಉದಯಗಿರಿ) ದಿಂದ ಕನಿಷ್ಠ ೧೫೦ ಕಿ.ಮೀ. ದೂರದಲ್ಲಿವೆ.

೧೫೧೦ರ ಅಕ್ಟೋಬರ್ ತಿಂಗಳಲ್ಲಿ ಕೃಷ್ಣರಾಯನು ಉಮ್ಮತ್ತೂರಿನ ವಿರುದ್ಧ (ದಕ್ಷಿಣ ದಂಡೆಯಾತ್ರೆ) ಯುದ್ಧ ಸಿದ್ಧತೆಯಲ್ಲಿ ತೊಡಗಿದ್ದನೆಂದು ಫಾದರ್ ಲೂಯಿ ತನ್ನ ಪತ್ರದಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ.

ಸಾಮರ್ಲಕೋಟ ಕೈಫಿಯತ್ತು ಕೃಷ್ಣರಾಯನು ಉದಯಗಿರಿಯನ್ನು ಗೆದ್ದ ನಂತರವೇ ಅಮ್ಮನಬ್ರೋಲು ಸೀಮೆಯನ್ನು ಗೆದ್ದನೆನ್ನುತ್ತದೆ. ಅಮ್ಮನಬ್ರೋಲು ಉದಯಗಿರಿಗೆ ೨೦೦ ಕಿ.ಮೀ. ಉತ್ತರಕ್ಕೆ ಇರುವುದರಿಂದ ಇದು ಸಹಜವಾಗಿ ನಂಬಬಹುದಾದದ್ದು.

ಕೃಷ್ಣರಾಯನು ಕಳಿಂಗ ದಂಡಯಾತ್ರೆಯನ್ನು ಪ್ರಾರಂಭಿಸಿದ್ದು. ಕ್ರಿ.ಶ. ೧೫೧೩ ರಲ್ಲಿ ಮತ್ತು ಉದಯಗಿರಿಯನ್ನು ಗೆದ್ದದ್ದು ಕ್ರಿ.ಶ. ೧೫೧೪ರಲ್ಲಿ. ಉದಯಗಿರಿಗೂ ಉತ್ತರದಲ್ಲಿ (ಸುಮಾರು ೨೦೦ ಕಿ.ಮೀ.) ಇರುವ ಅಮ್ಮನಬ್ರೋಲು ಪ್ರಾಂತ್ಯವನ್ನು (ಇಂದಿನ ಗುಂಟೂರು/ಪ್ರಕಾಶಂ ಜಿಲ್ಲೆ) ಕ್ರಿ.ಶ. ೧೫೧೬ಕ್ಕೆ ಮುಂಚೆ ಗೆದ್ದಿರಲು ಸಾಧ್ಯವಿಲ್ಲ. ಹಾಗಾಗಿ ಸಾಳ್ವ ತಿಮ್ಮರಸನಿಗೆ ಆ ಭಾಗವನ್ನು ಕೊಡುವುದು, ಆತನು ಸೂರನಾಯನಿಯಿಂದ ತನಗೆ ಪುಣ್ಯವಾಗಲಿ ಎಂದು ದಾನ ಕೊಡಿಸುವುದೂ, ೧೫೧೦ ಅಕ್ಟೋಬರಿನಲ್ಲಿ ಅಸಾಧ್ಯವಾದ ಮಾತೇ ಸರಿ. ಆದ್ದರಿಂದ ಪಿ.ಮುಖರ್ಜಿಯವರು ಹೇಳುವ ಹಾಗೆ ಈ ಶಾಸನವನ್ನು ಕ್ರಿ.ಶ. ೧೫೧೧ಕ್ಕೆ ಹಾಕುವುದು ಸಾಧುವಲ್ಲ. ಈ ಶಾಸನವನ್ನು ನಂಬಿ ಇತಿಹಾಸಕಾರರು ಕ್ರಿ.ಶ. ೧೫೧೦ರ ಅಕ್ಟೋಬರ್ ವೇಳೆಗೇ ಗಜಪತಿಗೂ ಕೃಷ್ಣರಾಯನಿಗೂ ಯುದ್ಧಗಳಾಗಿ ಕೃಷ್ಣರಾಯನು ಗುಂಟೂರು ಜಿಲ್ಲೆಯವರೆಗೂ ಭೂಭಾಗವನ್ನು ಗೆದ್ದಿದ್ದನೆಂದು ಹೇಳಿ ಗಜಪತಿ ಗಜಕೂಟ ಪಾಕಲೇನ' ಪ್ರಶಸ್ತಿಗೆ ಈ ಶಾಸನವನ್ನು ಪ್ರಮುಖ ಆಧಾರವಾಗಿ ತೋರಿಸುವುದೂ ಸಾಧುವಾಗಲಿಕ್ಕಿಲ್ಲ. ಶಾಸನದ ತೇದಿಯಲ್ಲಿ ತಪ್ಪಾಗಿದೆಯೆಂದು ಭಾವಿಸಿ ಈ ಶಾಸನದ ಸಾಕ್ಷ್ಯವನ್ನು ದೂರ ಸರಿಸುವುದೇ ಒಳಿತೆಂದು ಕಾಣುತ್ತದೆ.

ನಾವು ಈ ಮುಂಚೆ ಚರ್ಚಿಸಿದ ಇತರ ಶಾಸನಗಳನ್ನು ಗಮನಿಸಿದರೆ ಗಜಪತಿಯ ವಾಸ್ತವ್ಯವನ್ನು ಸುಮಾರು ಕ್ರಿ.ಶ. ೧೫೦೯ ಜನವರಿಯಿಂದ ೧೫೧೦ ಅಕ್ಟೋಬರ್ ವರೆಗೂ ತೋರಿಸಿದ ಮಾತ್ರಕ್ಕೆ ಕೃಷ್ಣರಾಯನು ಅಲ್ಲಿದ್ದನೆಂದೂ ಅವರಿಬ್ಬರ ನಡುವೆ ಮುಖಾಮುಖಿ ಯಾಗಿತ್ತೆಂದೂ ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಅಂತಿಮವಾಗಿ ಈ 'ಗಜಪತಿ ಗಜಕೂಟ ಪಾಕಲೇನ' ಪ್ರಶಸ್ತಿಯು ಪ್ರಾಯಶಃ 'ಅಂಗ ವಂಗ ಕಳಿಂಗಾದಿ' ಎಂಬ ಪ್ರಶಸ್ತಿಗಳಂತೆ ಕೇವಲ ಸಾಂಪ್ರದಾಯಿಕ ಪ್ರಶಸ್ತಿಯೆಂದು ಹೇಳಬಹುದು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. ಇ. ಹುಲ್ಷ್ : ಎಪಿಗ್ರಾಫಿಯ ಇಂಡಿಕಾ, ಸಂ.೧, ಪು.೩೬೧.

೨. *A.R.I.E.* – ೩೭೫/೧೯೨೬.

೩. ಎಸ್.ಡಿ.ಐ. II, ಸಂಖ್ಯೆ ೯೭೪.




# ಉಚ್ಚಂಗಿದುರ್ಗದ ಒಂದು ಶಾಸನದಲ್ಲಿ ಉಚ್ಚಂಗಿಯ ವಿಶೇಷ ಪ್ರಸ್ತಾಪ

– ಡಾ|| ಕೆ.ಎಂ. ವೀರಭದ್ರ ಶರ್ಮ*

**ಅ**ವಿಭಜಿತ ಬಳ್ಳಾರಿ ಜಿಲ್ಲೆ ಹರಪನಹಳ್ಳಿ ತಾಲ್ಲೂಕಿನ ಉಚ್ಚಂಗಿ ದುರ್ಗದ ಒಂದು ಶಾಸನವು, ಚಾಳುಕ್ಯ ದೊರೆ ಆಹವಮಲ್ಲದೇವ ಮತ್ತು ಆತನ ಮಗ ವೆಂಗಿಮಂಡಲೇಶ್ವರ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯದೇವ ನೊಳಂಬವಾಡಿ–೩೨ನ್ನು ಆಳುತ್ತಿದ್ದುದಾಗಿ ಹೇಳುತ್ತದೆ. ಶಾಸನದ ಕಾಲ ಕ್ರಿ.ಶ. ೧೦೬೪ ಏಪ್ರಿಲ್, ೪ ಭಾನುವಾರ.[೧]

ಉಚ್ಚಂಗಿದುರ್ಗವು ತಾಲ್ಲೂಕಿನ ದಕ್ಷಿಣ ಭಾಗದಲ್ಲಿರುವ ಒಂದು ಗ್ರಾಮವಾಗಿದ್ದು, ಇಲ್ಲಿನ ಜನಸಂಖ್ಯೆ ಸುಮಾರು ಐದುಸಾವಿರ. ಇಲ್ಲಿ ಇತಿಹಾಸ ಪ್ರಸಿದ್ಧವಾದ ಒಂದು ಬೆಟ್ಟವಿದೆ. ಈ ಬೆಟ್ಟದ ಮೇಲೆ ಉಚ್ಚಂಗಮ್ಮ ದೇವತೆಯಿರುವುದರಿಂದ ಈ ಸ್ಥಳಕ್ಕೆ ಉಚ್ಚಂಗಿಯೆಂಬ ಹೆಸರು ಬಂದಿತೆಂದು ಹೇಳಲಾಗುತ್ತದೆ. ಬೆಟ್ಟ ಅಷ್ಟೇನೂ ಎತ್ತರವಾಗಿಲ್ಲ. ಆದರೆ ಬಹಳ ಕಡಿದಾಗಿದೆ. ಉತ್ತರ–ದಕ್ಷಿಣವಾಗಿ ಒಂದೂವರೆ ಕಿಲೋಮೀಟರು ಗಳಷ್ಟು ಹಬ್ಬಿಕೊಂಡಿದೆ. ದುರ್ಗದಲ್ಲಿ ಕಲ್ಲಿನಿಂದ ನಿರ್ಮಿಸಿದ ಕೋಟೆ ಕೊತ್ತಳ, ದೇವಾಲಯ ಮತ್ತು ಪಾಳು ಕೊಳಗಳ ಅನೇಕ ಭಗ್ನಾವಶೇಷಗಳನ್ನು ಕಾಣಬಹುದಾಗಿದೆ.[೨]

ರಾಜ ಮಹಾರಾಜರು, ದಂಡಾಧಿಪತಿಗಳು, ಪಾಳೇಗಾರರು ಮುಂತಾಗಿ ಉಚ್ಚಂಗಿದುರ್ಗದಲ್ಲಿ ರಾಜ್ಯಭಾರ ಮಾಡಿದ್ದಾರೆ. ಮುಖ್ಯವಾಗಿ ಉಚ್ಚಂಗಿಯ ಪಾಂಡ್ಯರು, ಚಾಳುಕ್ಯರು ಮತ್ತು ಹೊಯ್ಸಳರು ಇಲ್ಲಿ ಭೂಪಾಲರಾಗಿ ಮೆರೆದಿದ್ದಾರೆ. ಸಾಮಾನ್ಯವಾಗಿ ಶಾಸನಗಳಲ್ಲಿ ಊರಿನ ದನಗಳನ್ನು ಕದ್ದೊಯ್ದ ಕಳ್ಳರ ಜೊತೆಯಲ್ಲಿ ಪರಾಕ್ರಮದಿಂದ ಕಾದಾಡಿ ಅವುಗಳನ್ನು ಬಿಡಿಸಿಕೊಂಡು ಕಳ್ಳರನ್ನು ಶಿಕ್ಷಿಸಿದ ವೀರಬಂಟರ ಸಾಹಸದ ಸಂಗತಿಯ ಬಗೆಗೆ, ವೀರವನಿತೆಯಾಗಿ ಕಾದಾಡಿ ಮಡಿದ ಮಾಸತಿಯ ಬಗೆಗೆ, ಊರಿನ ಪ್ರಧಾನ ದೇವರಿಗೆ ಧರ್ಮಕಾರ್ಯಗಳಿಗೆಂದು ಬಿಟ್ಟುಕೊಟ್ಟ ಬಳುವಳಿಯ ಬಗೆಗೆ, ವಿದ್ಯಾರ್ಥಿಗಳ ಪಾಠಶಾಲೆ, ಧರ್ಮಛತ್ರ ನಿರ್ಮಿಸಿದ ಬಗೆಗೆ, ಇಲ್ಲವೆ ಆಳ್ವಿಕೆ ನಡೆಸುತ್ತಿರುವ ಅಧೀಶನ ಬಗೆಗೆ ವಿವರಗಳಿರುವುದನ್ನು ಕಾಣಬಹುದು.

ಆದರೆ ಉಚ್ಚಂಗಿದುರ್ಗದ ತವಕೇಶ್ವರಸ್ವಾಮಿ ದೇವಸ್ಥಾನದ ಹತ್ತಿರ ಕಡೆದು ನಿಲ್ಲಿಸಲಾದ ಶಾಸನದಲ್ಲಿ ತುಂಬ ಅಪರೂಪವೆಂಬಂತೆ ಉಚ್ಚಂಗಿದುರ್ಗದ ಬೆಟ್ಟಕ್ಕೆ ಉಚ್ಚಂಗಿ ಎಂಬ ಸ್ಥಳನಾಮ ಬರಲು ಕಾರಣವಾದ ಸಂಗತಿಯನ್ನು ಅತಿಶಯ ಬಣ್ಣನೆಯೊಡನೆ ಕಥೆಯಾಗಿ ಹೇಳಲಾಗಿದೆ. ಸ್ಥಳನಾಮಗಳ ಬಗೆಗಿನ ಶಾಸನಕಾರನ ಆಸಕ್ತಿ ಮತ್ತು ಕುತೂಹಲ ಇಲ್ಲಿ ಪ್ರಶಂಸನೀಯ ಅಂಶ. ಇದು ಶಾಸನದ ಉತ್ತರಾರ್ಧದಲ್ಲಿ ಕಂಡುಬರುವ ವಿಷಯ. ಶಾಸನದ ಪೂರ್ವಾರ್ಧದಲ್ಲಿ ದಂಡನಾಯಕನಾದ ಮೂಕರಾಜನು ಬಿನ್ನವಿಸಿದ ಪ್ರಕಾರವಾಗಿ ಸುರುಚಿರ ಕೀರ್ತಿದಾನನಿಧಿಯಾದ ಬಿಜ್ಜಳದೇವನು ಗಳಗೇಶ್ವರ ದೇವರಿಗೆ ಪರ್ವ ನಿಮಿತ್ತವಾಗಿ ಭೂಮಿಯನ್ನು ದಾನ ಮಾಡಿದ ವಿಷಯ ತಿಳಿದುಬರುತ್ತದೆ. ಶಾಸನದ ಪೂರ್ವಾರ್ಧದಲ್ಲಿ ಹತ್ತೊಂಬತ್ತು ಮತ್ತು ಉತ್ತರಾರ್ಧದಲ್ಲಿ ಹತ್ತೊಂಬತ್ತು ಸಾಲುಗಳನ್ನು ಸಮನಾಗಿ ಕೆತ್ತಲಾಗಿದೆ. ಒಟ್ಟು ಮೂವತ್ತೆಂಟು ಸಾಲುಗಳಿವೆ. ಶಾಸನದ ಪೂರ್ವಾರ್ಧದ ಆರಂಭಿಕ ಸಾಲುಗಳಲ್ಲಿ ಸಾಂಪ್ರದಾಯಿಕ ಬಿರುದುಗಳ, ಶಾಸನದ ಕಾಲದ ಪ್ರಸ್ತಾಪವಿದೆ. ನಂತರ

೧೨. ಸಕ ವರ್ಷ ೯೮೬ನೆಯ ಕ್ರೋಧಿ ಸಂವತ್ಸರದ ಚೈತ್ರದ ಪೌರ್ಣ್ನಮಾ

೧೩. ಸೆಯಾದಿತ್ಯವಾರಂ ವನದಪರ್ವ ನಿಮಿತ್ತಂಗಳಗೇಶ್ವರ ದೇವರ್ಗೆಯುಚ್ಚಂಗಿ ಕೋಟೆಯಲು ತೆಂಕ ಬಣ್ಡಸಿಗೆರೆಯುಮಂ

೧೪. ಕಳೇಶ್ವರ ಪಣ್ಡಿತರ ಕಾಲಂ ಕರ್ಚಿ ಧಾರಾಪೂರ್ವಕಂ ಸರ್ವ್ವನಮತ್ಯಮಾಡಿ ಗಳಗೇಶ್ವರ ದೇವರ್ಗೆ ಬಿಟ್ಟರೀ ಭೂಮಿ[೩]

* ನಿವೃತ್ತ ಪ್ರಾಂಶುಪಾಲರು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ, ದಾವಣಗೆರೆ–೫೭೭೨೧೭.

ಹೀಗಿರುವ ಪ್ರಸ್ತುತ ಪಾಠವು ಸಾಮಾನ್ಯವಾಗಿ ಶಾಸನಗಳನೇಕವು ಹೇಳುವ ವಿಷಯವನ್ನೇ ಹೇಳುತ್ತದೆಯಾದ್ದರಿಂದ ನಮಗೆ ಅಷ್ಟೇನೂ ಪ್ರಮುಖವಾಗಿ ತೋರುವುದಿಲ್ಲ. ಅಲ್ಲದೆ ವಿವೇಚಿಸುವ ಯಾವ ವಿಶೇಷತೆ ಇರುವುದಿಲ್ಲ ಎಂದು ಹೇಳಬಹುದು. ಆದರೆ ಈ ಶಾಸನದ ಉತ್ತರಾರ್ಧದಲ್ಲಿ ದಿಢೀರನೆ ಅಪ್ರಸ್ತುತ ಘಟನೆಗಳ ಪ್ರಸ್ತಾಪವಾಗಿ ರುವುದು ಮುಖ್ಯವಾಗಿ ಕಾಣಸಿಗುತ್ತದೆ. ಅಲ್ಲದೆ ವಿಷಯಾಂತರವಾದಂತೆ ತೋರುತ್ತದೆ.

ಶಾಸನದ ಆ ಭಾಗದ ಪಾಠವನ್ನು ಕೆಳಗೆ ಕಾಣಿಸಿದೆ.

೨೦. ಕದಂಬ ನಾಡಿನ ಮಧ್ಯದೊಳ್ಮೇರುವಿಪ್ಪತಿಳ್ದುದುಚ್ಚಂಗಿಯ ಪರ್ವ್ವತಂ ಅದಕ್ಕೆ ನಾಲ್ಕು ನಾಮವದೆಂ-
೨೧. ತೆಂದೊಡೆ ಕೃತಯುಗದೊಳು ಮೇ(ಘನಾ)ದನೆಂಬ ರಾಕ್ಷಸ ನಿವಾಸಮಪ್ಪುದರಿಂ ಮೇಘನಾ-
೨೨. ದವೆಂಬುದು ತ್ರೇತೆಯೊಳ್ ಹಿರಣ್ಯಕ ನಿವಾಸಮಾತನಂ ನಾರಾಯಣಂ ವಧೆಗೆಯ್ದಂದಿನೊಸ-
೨೩. ಗೆಯೊಳ್ ಸ್ವರ್ಣ್ನವ್ರಿಷ್ಟಿ ಕರೆದುದರಿಂದ ವೀರಕನಕಗಿರಿಯೆಂಬುದು ದ್ವಾಪಾರದೊಳುತ್ತುಂಗಮ-
೨೪. ಹರಿಷಿ ಆಶ್ರಮಮಪ್ಪುದರಿಂದ ಉತ್ತುಂಗಪರ್ವ್ವತಮೆಂಬುದು ಕಲಿಯುಗದೊಳ್ ಉಚ್ಚಂಗಿಯ-
೨೫. ಬ್ಬೆಯೆಂಬಳು ಮೊದಲಾಗಿ ಮೂವರು ಬ್ರಾಹ್ಮಣ ಕನ್ನಿಕೆಯರು ತಪಂಗೆಯ್ದೀಶ್ವರವರ
೨೬. ಪ್ರಸಾದದಿಂ ದೇವತ್ವಮಂ ಪಡೆದರದರಿಂದುಚ್ಚಂಗಿಯಾಪರ್ವ್ವತಮೆಂಬುದು ಆ ಪ
೨೭. ರ್ವತದೆ ಮೂಡಣ ದೆಸೆಯೊಳು ಹಿಡಿಂಬವನಮಾಬನದೊಳಗೆ ಸ್ವಯಂಭು ಕಲಿದೇ-
೨೮. ವಸ್ವಾಮಿಯೆಂಬುದು ಆ ದೇವರ್ಗ್ಗೆ ದೇಗುಲವಮ್ಮಾಡಿಸಿದಳು ಹಿಡಿಂಬೆ ... ದಿತ್ತ
೨೯. ಹಿಡಿಂಬೇಸ್ವರಮೆಂಬುದು ಆ ಲಿಂಗಂ ಪೆರ್ಚ್ಚೆ ಪೆರ್ಚ್ಚುವೆ ಕಾರಣದಿಂ ಕಳೇಶ್ವರಮದಮೃತಲಿಂಗದೇ(ವರ್)
೩೦. ಪ್ರಸನ್ನತೆಯಿಂ ಕಣ್ಣುಶ್ರೀಮದ್ದಣ್ಡನಾಯಕ ದೇವಪಯ್ಯ ಉಚ್ಚಂಗಿ ಮೂವತ್ತು ಮನಾಳುತ್ತ ಮಿ
೩೧. ಳ್ದು ದೇಗುಲದೆ ಅಧಿಷ್ಠಾನಮಂ ಕಟ್ಟಿಸಿ ಮಠ ಮಗ್ಗಲು ಬಾವಿಯೆಂಬಿವಂ ಮಾಡಿಸಿ ಪ್ರಧಾನರ್ಗ್ಗರಿಪಿದಳ್

ಕದಂಬವಾಡಿ ನಾಡಿನ ಮಧ್ಯದಲ್ಲಿ ಮೇರುಪರ್ವತದಂತೆ ಕಾಣುತ್ತಿರುವ ಉಚ್ಚಂಗಿಯ ಪರ್ವತಕ್ಕೆ ನಾಲ್ಕು ಹೆಸರುಗಳಿವೆ. ಕೃತಯುಗದಲ್ಲಿ ಮೇಘನಾದನೆಂಬ ರಾಕ್ಷಸನ ನಿವಾಸವಾಗಿದ್ದುದರಿಂದ ಅದಕ್ಕೆ ಮೇಘನಾದವೆಂದೂ, ತ್ರೇತಾಯುಗದಲ್ಲಿ ಹಿರಣ್ಯಕನೆಂಬುವವನ ನಿವಾಸವಾಗಿದ್ದು ಆತನನ್ನು ನಾರಾಯಣನು ವಧೆ ಮಾಡಿ ಸುವರ್ಣ ವೃಷ್ಟಿಗರೆದಿದ್ದರಿಂದ ವೀರಕನಕ ಗಿರಿಯೆಂದೂ, ದ್ವಾಪರದಲ್ಲಿ ಉತ್ತುಂಗ ಮಹರ್ಷಿಯ ವಾಸವಾಗಿದ್ದುದರಿಂದಾಗಿ ಉತ್ತುಂಗ ಪರ್ವತ ಎಂದೂ, ಕಲಿಯುಗದಲ್ಲಿ ಉಚ್ಚಂಗಿಯಮ್ಮ ಎಂಬುವವಳು ಮೊದಲಾಗಿ ಮೂವರು ಬ್ರಾಹ್ಮಣ ಕನ್ನಿಕೆಯರು ಈಶ್ವರನನ್ನು ಕುರಿತು ತಪಸ್ಸನ್ನಾಚರಿಸಿ ದೇವತ್ವವನ್ನು ಪಡೆದರು. ಅದರಿಂದಾಗಿ ಉಚ್ಚಂಗಿ ಪರ್ವತ ಎಂದು ಹೆಸರಾಯಿತು.

ಇಲ್ಲಿ ಒಂದು ಪ್ರಶ್ನೆ ಮತ್ತು ಕುತೂಹಲದ ವಿಷಯವೆಂದರೆ ಶಾಸನಗಳಲ್ಲಿ ಕಂಡರಿಸುವ ಮಾಮೂಲೀ ಸಂಗತಿಗಳನ್ನು ಹೇಳ ಹೊರಟ ಶಾಸನಕಾರನು ಒಟ್ಟು ಶಾಸನದ ಮೂವತ್ತೆಂಟು ಸಾಲುಗಳ ಪೂರ್ವಾರ್ಧದಲ್ಲಿ ಸಾಮಾನ್ಯ ಸಂಗತಿಗಳನ್ನು ನಿರೂಪಿಸಿ ಉತ್ತರಾರ್ಧದ ಏಳುಸಾಲುಗಳಲ್ಲಿ ಅಚ್ಚರಿ ತರುವ ವಿಷಯವನ್ನು ಹೇಳಿದ್ದಾನೆ. ಉಚ್ಚಂಗಿ ದುರ್ಗದ ಮಹತ್ವತೆ ಶ್ರೇಷ್ಠತೆ ಮತ್ತು ಪಾರಮ್ಯತೆಗಳನ್ನು ಲೋಕ ಪ್ರಚುರಪಡಿಸುವ ಉದ್ದೇಶ ಅವನಿಗಿರುವಂತೆ ಕಾಣುತ್ತದೆ. ಶಾಸನಕಾರನು ಪ್ರಾಕೃತಿಕವಾದ ಸಂಗತಿಯೊಂದನ್ನು ಐತಿಹಾಸಿಕ ಮತ್ತು ಪೌರಾಣಿಕ ಸಂಗತಿಯನ್ನಾಗಿಸಲು ಹೊರಟಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ವಾಸ್ತವ ಏನೆಂದರೆ ಉಚ್ಚಂಗಿ ಶಬ್ದದ ನಿಷ್ಪತ್ತಿ ಉಚ್ಚಶೃಂಗಿ ಎಂದು. ಅತ್ಯಂತ ಎತ್ತರವಾದ ಶಿಖರವುಳ್ಳದ್ದು ಎಂಬುದು ಅದರರ್ಥ. ಕಾಲಕ್ರಮೇಣ ಉಚ್ಚಾರಣೆಯಲ್ಲಿ ಆ ಪದ ಹೀಗೆ ಬದಲಾವಣೆ ಹೊಂದಿದೆ ಎಂದು ಭಾವಿಸಲು ಏನೂ ಅಡ್ಡಿಯಿಲ್ಲ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. **ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್**, ಸಂ.೯, ಪು.೧೦೭

೨. **ಕನ್ನಡ ವಿಷಯ ವಿಶ್ವಕೋಶ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪು.೮೬.

೩. **ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್**, ಸಂ.೯, ಪು.೧೦೭-೧೦೮.

೪. **ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್**, ಸಂ.೯, ಪು.೧೦೭-೧೦೮.

# ಸ್ವರ್ಣವಲ್ಲೀ ಮಠಕ್ಕೆ
# ಸೋದೆಯ ಇಮ್ಮಡಿ ಅರಸಪ್ಪ ನಾಯಕರ ಧರ್ಮಸಾಧನ

– ಡಾ॥ ಎ.ಕೆ. ಶಾಸ್ತ್ರಿ*

ಸುಮಾರು ಹನ್ನೆರಡುನೂರು ವರ್ಷಗಳ ಹಿಂದೆ ಆದಿಶಂಕರರು ಭಾರತದ ನಾಲ್ಕು ದಿಕ್ಕುಗಳಲ್ಲಿ ಚತುರಾಮ್ನಾಯ ಮಠಗಳನ್ನು ಸ್ಥಾಪಿಸಿ, ತನ್ಮೂಲಕ ಸನಾತನ ವೈದಿಕ ಧರ್ಮವನ್ನು ಪ್ರಚುರಪಡಿಸಿ, ಅದ್ವೈತ ಸಿದ್ಧಾಂತವನ್ನು ಪ್ರಕಾಶಿಸಿ, ಪ್ರಜೆಗಳ ಅಭ್ಯುದಯ ಮತ್ತು ದೇಶದ ಐಕ್ಯತೆಗಾಗಿ ಭಕ್ತಿ, ಕರ್ಮ ಮತ್ತು ಎಲ್ಲವುಗಳಿಗಿಂತ ಮಿಗಿಲಾಗಿ, ಅತಿಶ್ರೇಷ್ಠವಾದ ಆತ್ಮಜ್ಞಾನ ಮಾರ್ಗವನ್ನು ಪ್ರತಿಪಾದಿಸಿದರೆಂಬುದು ಐತಿಹಾಸಿಕ ಸತ್ಯ. ಆಚಾರ್ಯರು ಪ್ರತ್ಯಕ್ಷವಾಗಿ ಮತ್ತು ತಮ್ಮ ಶಿಷ್ಯರ ಮೂಲಕ ಪರೋಕ್ಷವಾಗಿ, ದೇಶದ ಅನೇಕ ಭಾಗಗಳಲ್ಲಿ ಮಠಗಳನ್ನು ಸ್ಥಾಪಿಸಲು ಕಾರಣರಾದರು. ಅಂಥ ಅದ್ವೈತ ಮಠಗಳ ಪರಂಪರೆಯು ಇಂದಿಗೂ ಸಾಗಿ ಬಂದಿದೆ. ಸ್ವಣವಲ್ಲೀ, ಮಠ ಅಂಥ ಮಠಗಳಲ್ಲಿ ಒಂದು. ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನಲ್ಲಿರುವ ಸ್ವರ್ಣವಲ್ಲೀ ಶಾಲ್ಮಲಾ ನದಿ ದಂಡೆಯ ಮೇಲೆ ನಿಸರ್ಗದ ಮಡಿಲಲ್ಲಿ ನೆಲೆಸಿದೆ. ಹೈವ ದ್ರಾವಿಡ ಬ್ರಾಹ್ಮಣನಾದ ಗುಣನಿಧಿಯು ಆದಿಶಂಕರರನ್ನು ಕಂಡು, ಅವರ ಶಿಷ್ಯರಾದ ಭಾಸ್ಕರೇಂದ್ರ ಸರಸ್ವತಿಗಳಿಂದ ಸನ್ಯಾಸ ಸ್ವೀಕರಿಸಿ, ವಿಶ್ವವಂದ್ಯ ಸರಸ್ವತಿ ಎಂದು ನಾಮಾಂಕಿತರಾಗಿ ಕಾಶಿಯ ದಶಾಶ್ವಮೇಧ ಘಾಟದಲ್ಲಿ ಸ್ಥಾಪಿತವಾದ ಮಠಕ್ಕೆ ಪ್ರಥಮ ಸ್ವಾಮಿಗಳಾದರು. ಅವರ ಶಿಷ್ಯರಾದ ನಾರಾಯಣೇಂದ್ರ ಸರಸ್ವತಿಗಳನ್ನು ಸಕಲ ಮರ್ಯಾದೆಗಳಿಂದ ಸತ್ಕರಿಸಿ, ಉಜ್ಜಯಿನಿಯಲ್ಲಿ ಅವರಿಗಾಗಿ ಮಠ ಕಟ್ಟಿಸಿಕೊಟ್ಟವನು ವಿಕ್ರಮಾರ್ಕ ಅರಸ. ಕಾಲಕ್ರಮೇಣ, ಮಠ ಉಜ್ಜಯಿನಿಯಿಂದ ಗೋಕರ್ಣಕ್ಕೆ, ಅಲ್ಲಿಂದ ಕಡತೋಕೆಗೆ, ಕಡತೋಕೆಯಿಂದ ಸಹಸ್ರಲಿಂಗಕ್ಕೆ ಮತ್ತು ಕ್ರಿ.ಶ. ೧೫೫೮ರಲ್ಲಿ ಇಂದಿನ ಸ್ವರ್ಣವಲ್ಲಿಗೆ ಸ್ಥಳಾಂತರಗೊಂಡಿತು. ಹೀಗೆ ವಿಶ್ವವಂದ್ಯ ಸರಸ್ವತಿಗಳಿಂದ ಪ್ರಾರಂಭವಾದ ಗುರುಪರಂಪರೆಯು, ಪೀಠದಲ್ಲಿ ೫೪ನೆಯವರಾದ ಇಂದಿನ ಶ್ರೀಗಂಗಾಧರೇಂದ್ರ ಸರಸ್ವತಿಗಳವರೆಗೆ ಅವಿಚ್ಛಿನ್ನವಾಗಿ ಸಾಗಿ ಬಂದಿದೆ.[೨]

ಪ್ರಸ್ತುತ ವಿಷಯವು ಸೋದೆಯ ಇಮ್ಮಡಿ ಅರಸಪ್ಪನಾಯಕರು ಸ್ವರ್ಣವಲ್ಲಿ ಮಠಕ್ಕೆ ಬರೆಸಿಕೊಟ್ಟ ಧರ್ಮಸಾಧನಕ್ಕೆ ಸೀಮಿತವಾಗಿರುವುದರಿಂದ, ಆ ಧರ್ಮಸಾಧನ ಕುರಿತು ವಿವೇಚಿಸಲಾಗಿದೆ. ಹದಿನಾರನೆಯ ಶತಮಾನದ ಮಧ್ಯಕಾಲದಿಂದ ಹದಿನೆಂಟನೆಯ ಶತಮಾನದ ಮಧ್ಯಕಾಲದವರೆಗಿನ ಅವಧಿಯನ್ನು ಸ್ವಾದಿರಾಜ್ಯದ ಉಚ್ಛ್ರಾಯ ಕಾಲ ಎಂದು ಪರಿಗಣಿಸಬಹುದು. ಈ ಅವಧಿಯಲ್ಲಿ ಒಟ್ಟು ಎಂಟು ನಾಯಕರು ಆಳಿದರು. ಪ್ರಸ್ತುತ ಧರ್ಮಶಾಸನವು ಇಮ್ಮಡಿ ಅರಸಪ್ಪನಾಯಕರ ಕಾಲ (ಕ್ರಿ.ಶ. ೧೫೫೫–೧೬೦೩)ಕ್ಕೆ ಸೇರಿದ್ದು, ಅವರ ಸಮಕಾಲೀನರಾಗಿದ್ದವರು ಪೀಠದಲ್ಲಿ ೩೪ನೆಯವರಾದ ಶ್ರೀಚಂದ್ರಶೇಖರ ಸರಸ್ವತಿಗಳು (ಕ್ರಿ.ಶ. ೧೫೫೬–೧೫೯೭).

ತಮ್ಮ ವಂಶಸ್ಥರಿಗೆಲ್ಲ ಶಿವಸಾಯುಜ್ಯ ಮೋಕ್ಷ ಪದವಿ ಸ್ಥಿರವಾಗಬೇಕೆಂದು ಶಾಲಿವಾಹನ ಶಕ ೧೪೭೭ನೇ ರಾಕ್ಷಸ ಸಂವತ್ಸರದ ಮಾಘ ಬ. ೧೪(೧೦.೨.೧೫೫೬) ಸೋಮವಾರದಂದು, ಇಮ್ಮಡಿ ಅರಸಪ್ಪನಾಯಕರು ಸೋದೆ ಶ್ರೀ ಸಹಸ್ರಲಿಂಗ ಮಠದ[೩] ಶ್ರೀಚಂದ್ರಶೇಖರ ಸರಸ್ವತೀ ಶ್ರೀಪಾದಂಗಳಿಗೆ, ಗೋಸೂರು ಕಾನನ್ನು ಕಡಿಸಿ, ಪೂಗಾರಾಮ (ಅಡಕೆ ತೋಟ)ವನ್ನು ಮಾಡಿಸಿ, ಅಲ್ಲಿ ಯೋಗ್ಯವಾಗಿದ್ದ ಸ್ಥಳದಲ್ಲಿ ಮಠವನ್ನು ಕಟ್ಟಿಸಿ, ತನ್ಮಧ್ಯದಲ್ಲಿ ಶ್ರೀನರಸಿಂಹದೇವರಿಗೆ ಒಂದು ಮತ್ತು ಶ್ರೀಕಾಶಿ ವಿಶ್ವೇಶ್ವರ ಮತ್ತು ಶ್ರೀ ಶಂಕರಾಚಾರ್ಯರಿಗೆ ಒಂದು, ಹೀಗೆ ಎರಡು ಶಿಲಾಮಯ ದೇವಾಲಯಗಳನ್ನು ನಿರ್ಮಿಸಿ, ಈ ಮಠಕ್ಕೆ 'ಸ್ವರ್ನವಲ್ಲಿ' (ಸ್ವರ್ಣವಲ್ಲಿ') ಮಠವೆಂದು ಹೆಸರಿಟ್ಟು, ಪೂಜೆ ವಿನಿಯೋಗ ಪ್ರತಿನಿತ್ಯ ನಿಯಮದಂತೆ ನಡೆಯಬೇಕೆಂದು, ಪೂಗಾರಾಮಕ್ಕೆ 'ಹೊಂನೆಹಳ್ಳಿ'[೪] ಗ್ರಾಮವೆಂದು ಹೆಸರಿಟ್ಟು, ಸಹಿರಣ್ಯೋದಕ ದಾನ ಧಾರಾಪೂರ್ವಕವಾಗಿ

---

* ಭವಾನಿ ಟಿ.ಎನ್.ಎಸ್. ರೈಸ್ ಮಿಲ್ ಕೆಳಗೆ, ಎಡ್ಕಾಗಿರಿ, ಉತ್ತರ ಕನ್ನಡ ಜಿಲ್ಲೆ–೫೮೧೪೦೨.

ಸಮರ್ಪಿಸಿದರೆಂದು ಧರ್ಮಸಾಧನವು ತಿಳಿಸುತ್ತದೆ. ಸೋದೆ ಅರಸರ ವಂಶವೃದ್ಧಿ ಆಗಲೆಂದು ಸೋದೆಯ ಅರಸರಿಂದಲೇ ನಿರ್ಮಾಣವಾಗಿದ್ದ ಸಹಸ್ರಲಿಂಗ ಮಠದಲ್ಲಿ ಶ್ರೀನರಸಿಂಹ ಮತ್ತು ಶ್ರೀಚಂದ್ರಮೌಳೀಶ್ವರ ದೇವರನ್ನು ಸ್ವಾಮಿಗಳು ಆರಾಧಿಸುತ್ತಿದ್ದಾಗ, ಆ ಸಹಸ್ರಲಿಂಗ ಮಠಕ್ಕೆ ಕಳ್ಳರ ಉಪದ್ರವವಾಗಿದ್ದರಿಂದ, ಗುರುಗಳ ತಪೋಯೋಗಾನುಷ್ಠಾನ ಸರಾಗದಿಂದ ನಡೆಯಬೇಕೆಂದು, ಇಮ್ಮಡಿ ಅರಸಪ್ಪನಾಯಕರು ಹೊನ್ನೇಹಳ್ಳಿಯಲ್ಲಿ ಸ್ವರ್ಣವಲ್ಲೀ ಮಠವನ್ನು ನಿರ್ಮಾಣ ಮಾಡಿಸಿದರೆಂದೂ ಧರ್ಮಶಾಸನವು ತಿಳಿಸುತ್ತದೆ. ಹೊನ್ನೇಹಳ್ಳಿ ಎಂಬ ತೋಟ ಗ್ರಾಮವನ್ನು ಪೂಜಾ ವಿನಿಯೋಗದಲ್ಲಿ ನಿರ್ವಹಿಸಿಕೊಳ್ಳುತ್ತಾ, ಸರ್ವಮಾನ್ಯವಾಗಿ, ಸರ್ವಬಾಧಾ ಪರಿಹಾರವಾಗಿ, ಪೂರ್ವ ಮರ್ಯಾದೆ ಪ್ರಕಾರ ಶಿಬಿಕ ಮುಂತಾದ ಬಿರುದುಗಳನ್ನು ಕೂಡಾ ಆಳಿ ಅನುಭವಿಸಿಕೊಂಡು ನಿರುಪದ್ರವದಿಂದ ತಪೋಯೋಗಾನುಷ್ಠಾನವನ್ನು ಮಾಡಿಕೊಳ್ಳುತ್ತ ಇಚ್ಛಾನುಸಾರವಾಗಿ ಶ್ರೀಗಳವರು ಇರಬೇಕೆಂಬ ಅಂಶವನ್ನೂ ಶಾಸನದಲ್ಲಿ ನಮೂದಿಸಲಾಗಿದೆ. ಶಾಸನದ ಕೊನೆಯಲ್ಲಿ ಸಾಕ್ಷಿಗ್ರಂಥಗಳನ್ನೂ ಉಲ್ಲೇಖಿಸಲಾಗಿದೆ. ಶಾಸನದಲ್ಲಿ ಇಮ್ಮಡಿ ಅರಸಪ್ಪ ನಾಯಕರನ್ನು, 'ಶ್ರೀಮನ್ನಾಳ್ವ ಮಹಾಪ್ರಭು ಸೊದೆ ಸಧರ್ಮ ಸಿಂಹಾಸನಾಧೀಶ್ವರರಾದಾ ಶ್ರೀ ಅರಸಪ್ಪ ನಾಯ್ಕರವರು' ಎಂದು ಉಲ್ಲೇಖಿಸಲಾಗಿದೆ. ಶಾಸನದ ಪ್ರಾರ್ಥನಾ ಶ್ಲೋಕದಲ್ಲಿ ಸೋದೆಯನ್ನು 'ಸೋಮದಾಪುರಿ' ಎಂದು ಉಲ್ಲೇಖಿಸಲಾಗಿದೆ.

**ಶಾಸನದ ಪಾಠ**

೧. ಸ್ವಸ್ತಿ ಶ್ರೀ ಜಯಾಭ್ಯುದಯ ನ್ರುಪಶಾಲಿವಾಹನ ಶಕವರುಷ ೧೪೭೮ನೇ ರಾಕ್ಷಸಸಂ । ರದ ಮಾಘ
೨. ಬಹುಳ ೧೪ ಯಲ್ಲು ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾ
೩. ವಾರಪಾರೀಣ ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ದಾನಧಾರಣ ಸಮಾಧ್ಯಾಷ್ಟಾಂಗ
೪. ಯೋಗನಿರುತರಾದ ಶ್ರೀ ಸೋದೆ ಸಹಸ್ರಲಿಂಗ ಮಠದ ಶ್ರೀಚಂದ್ರಶೇಖರ ಸರಸ್ವತಿ ಶ್ರೀಪಾದಂಗಳಿಗೆ ಶ್ರೀ
೫. ಮಂನಾಳ್ವ ಮಹಾಪ್ರಭು ಸೋದೆ ಸಧರ್ಮ ಸಿಂಹಾಸನಾಧೀಶ್ವರರಾದ ಶ್ರೀಅರಸ್ಸಪ್ಪನಾಯ್ಕರವರು
೬. ಬರಕೊಟ್ಟ ಧರ್ಮಸಾಧನ ಕ್ರಮವೆಂತೆಂದರೆ ॥ ನಾವು ಸತ್ಕಥಾ ವಿನೋದದಿಂ ರಾಜ್ಯವಂ ಪ್ರತಿಪಾಲಿಸುತ್ತಾ ಇ
೭. ದ್ದ ಕಾಲದಲ್ಲು ದೇವರು ನಂಮ ವಂಶಾಭಿವೃದ್ಧಿಯಾಗಬೇಕೆಂದು ನಂಮ ವಂಶಸ್ಥರಿಂದ ಶಾಲ್ಮಲೀ ತೀರದಲ್ಲು
೮. ನಿರ್ಮಾಣವಾಗಿದ್ದ ಸಹಸ್ರಲಿಂಗ ಮಠದಲ್ಲು ಯೋಗಾನಂದಾನುಷ್ಠಾನದಿಂದಲು ಶ್ರೀನರಸಿಂಹ ದೇವರನ್ನು
೯. ಚಂದ್ರಮೌಳೇಶ್ವರ ದೇವರಂನು ಆರಾಧಿಸುತ್ತಲಿರುವಾಗ್ಯೆ ಆ ಸಹಸ್ರಲಿಂಗ ಮಠಕ್ಕೆ ಎರಡು ಮೂರು ಭಾರಿ ಸ್ತಿ
೧೦. ನೋಪದ್ರವ ಆದ್ದರಿಂದ ತಪೋಯೋಗಾನುಷ್ಠಾನಕ್ಕೆ ವಿಘ್ನವಿಲ್ಲದೆ ಸರಾಗದಿಂದ ನಡೆಯಬೇಕೆಂದು ಚಿತ್ತ
೧೧. ಕ್ಕೆ ಗೋಚರವಾದ ಕಾರಣ ಗೋಸೂರ ಅಡವಿಯೆಂಬ ಕಾನಂನ್ನು ಕಡಿಶಿ ಪೂಗಾರಾಮವಂನು ಮಾಡಿಶಿ ಅ
೧೨. ಲ್ಲಿ ಯೋಗ್ಯವಾಗಿದ್ದ ಸ್ಥಳದಲ್ಲು ಈ ಮಠವನ್ನು ಕಟ್ಟಿಶಿ ತನ್ಮಧ್ಯದಲ್ಲು ಶ್ರೀನರಸಿಂಹ ದೇವರಿಗೆ ೧ ಶ್ರೀ
೧೩. ಕಾಶಿ ವಿಶ್ವೇಶ್ವರ ದೇವರಿಗೆ ಶ್ರೀಶಂಕರಾಚಾರ್ಯರಿಗೆ ೧ ಹೀಗೆ ಯರಡು ಶಿಲಾಮಯ ದೇವಾಲಯ
೧೪. ವಂ ನಿರ್ಮಿಶಿ ಈ ಮಠಕ್ಕೆ ಶ್ರೀಸ್ವರ್ನವಲೀ ಮಠವೆಂದು ನಾಮಧೇಯವಿಟ್ಟು ಪೂಜೆ ವಿನಿಯೋಗ
೧೫. ನಿತ್ಯದಲ್ಲು ನೇಮದಿಂದ ನಡೆಯಬೇಕೆಂದು ಪೂಗಾರಾಮಕ್ಕೆ ಹೊಂನೆಹಳ್ಳಿ ಗ್ರಾಮವೆಂದು
೧೬. ಹೆಸರು ನಿರ್ಮಿಶಿ ಆ ಗ್ರಾಮವಂನು ನಾವು ಕಟ್ಟಿಸಿದ ಶ್ರೀಸ್ವರ್ನವಲಿ ಯಂಬ ಮಠವಂನು
೧೭. ಕೂಡಾ ನಂಮ ವಂಶಸ್ಥರಿಗೆಲ್ಲಾ ಶ್ರೀ ಶಿವಸಾಯುಜ್ಯ ಮೋಕ್ಷಪದವಿ ಸ್ಥಿರವಾಗಬೇಕೆಂದು ಶ್ರೀಪಾ
೧೮. ದಂಗಳಿಗೆ ಸಹಿರಂಣ್ಯೋದಕ ದಾನ ಧಾರಾಪೂರ್ವಕವಾಗಿ ವಪ್ಪಿಸಿಕೊಟ್ಟು ಇದ್ದೇವೆ ನಾವು ಸಮರ್ಪಿ
೧೯. ಶಿದ ಈ ಮಠವನ್ನು ಅಂಗೀಕರಿಸಿಕೊಂಡು ಶ್ರೀಸ್ವರ್ನವಲಿ ಮಠವೆಂಬ ನಾಮದಿಂದಲೆ ಇಂದಿನ ದಿನ
೨೦. ದಿಂದ ಬೆಳಗಿಕೊಂಡು ನಾವು ವಪ್ಪಿಶಿರುವ ಹೊಂನೆಹಳ್ಳಿಯೆಂಬ ತೋಟ ಗ್ರಾಮವಂನು ಪೂ
೨೧. ಜಾ ವಿನಿಯೋಗದಲ್ಲಿ ನಿರ್ವಹಿಸಿಕೊಳ್ಳುತ್ತಾ ನಾವು ಕೊಟ್ಟಿರುವ ಪ್ರಮಾಣ ಸರ್ವಮಾನ್ಯವಾಗಿ ಸ

೨೨. ರ್ವಬಾಧಾ ಪರಿಹಾರವಾಗಿ ಪೂರ್ವ ಮರ್ಯಾದಿಯಲ್ಲಿ ಶಿಬಿಕ ಮುಂತಾದ ಬಿರುದುಗಳನ್ನು ಕೂಡಾ ಆಳಿ
೨೩. ಅನುಭವಿಸಿಕೊಂಡು ನಿರುಪದ್ರವದಿಂದ ತಪೋಯೋಗಾನುಷ್ಠಾನವಂನೆ ಮಾಡಿಕೊಳ್ಳುತ್ತ ಇ
೨೪. ಥಾನುಸಾರವಾಗಿ ಬರುವಿರಿ ಯಂದು ಬರ್ಶಿಕೊಟ್ಟ ಧರ್ಮಸಾಧನದ ಯಥಾಪ್ರತಿ ನಕಲು ಸಾಕ್ಷಿ
೨೫. ಗ್ರಂಥಗಳು ಉಂಟು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಶೃಂಗೇರಿ, ದ್ವಾರಕಾ, ಬದರಿ ಮತ್ತು ಜಗನ್ನಾಥಪುರಿ. ಋಗ್ವೇದಕ್ಕೆ ಜಗನ್ನಾಥಪುರಿ, ಯಜುರ್ವೇದಕ್ಕೆ ಶೃಂಗೇರಿ, ಸಾಮವೇದಕ್ಕೆ ದ್ವಾರಕಾ ಮತ್ತು ಅಥರ್ವಣ ವೇದಕ್ಕೆ ಬದರಿ.

೨. ಸ್ವರ್ಣವಲ್ಲೀ ಮಠದ ಚರಿತ್ರೆ ಕುರಿತು ಹೆಚ್ಚಿನ ಮಾಹಿತಿಗಾಗಿ ಲೇಖಕರ ಈ ಕೆಳಗಿನ ಗ್ರಂಥಗಳನ್ನು ಓದಿರಿ. ಸ್ವರ್ಣವಲ್ಲಿ ಮತ್ತು ಸ್ವಾದಿಯ ಸಂಬಂಧವನ್ನರಿಯಲೂ ಈ ಗ್ರಂಥಗಳು ಉಪಯುಕ್ತ.

೧. 'ಶ್ರೀ ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು' ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೧೯೯೭.

೨. 'ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ', ಶ್ರೀ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ ಸ್ವರ್ಣವಲ್ಲೀ, ೧೯೯೭.

೩. '*A History of the Swarnavalli Mahasamsthana*', Sri Bhagavatpada Prakasana, Swarnavalli, 2004.

೩. ಇಂದಿನ ಸ್ವರ್ಣವಲ್ಲೀ ಮಠದ ಸಮೀಪದಲ್ಲಿಯೇ ಶಾಲ್ಮಲಾ ನದಿಯ ದಂಡೆಯ ಮೇಲೆ ಮಠವಿತ್ತೆಂದೂ, ಈ ಸ್ಥಳ ಸಹಸ್ರಹಳ್ಳಿಯ ಸಹಸ್ರಲಿಂಗವಾಗಿತ್ತೆಂದೂ ಹೇಳಲಾಗುತ್ತಿದೆ. ಈ ಮೂಲ ಸ್ಥಳದಿಂದ, ಹುಳಗೋಳದ ಸಮೀಪವಿರುವ, ಶಾಲ್ಮಲಾ ನದಿಯಲ್ಲಿರುವ, ಇಂದು ಪ್ರವಾಸಿಗರನ್ನು ಆಕರ್ಷಿಸಿ ಪ್ರಸಿದ್ಧಿ ಪಡೆದಿರುವ ಸಹಸ್ರಲಿಂಗದವರೆಗಿನ ನದಿಯ ವಿಸ್ತಾರವಾದ ಸ್ಥಳದಲ್ಲಿ ಸಹಸ್ರಲಿಂಗಗಳನ್ನು ನಿರ್ಮಿಸಿದ್ದ ಕುರುಹುಗಳು ಇಂದಿಗೂ ಗೋಚರಿಸುತ್ತವೆ. ಹೀಗಾಗಿ, ಸಹಸ್ರಲಿಂಗದ ಸಮುಚ್ಚಯ ಸಾಕಷ್ಟು ವಿಸ್ತಾರವಾಗಿತ್ತೆಂದು ಕಂಡುಬರುತ್ತದೆ.

೪. ಇಂದಿಗೂ, ಗ್ರಾಮಾಂತರ ಪ್ರದೇಶದ ಜನರು ಸ್ವರ್ಣವಲ್ಲೀ ಮಠವನ್ನು 'ಹೊನ್ನಳ್ಳಿ ಮಠ' ಎಂದೇ ಕರೆಯುತ್ತಾರೆ.



# ಹೊಯ್ಸಳರ ಆಳ್ವಿಕೆಯಲ್ಲಿ ದಂಡನಾಯಕರ ಪಾತ್ರ

– ಡಾ. ಸಿ.ಯು. ಮಂಜುನಾಥ್*

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಸಾಮಾನ್ಯವಾಗಿ ಯಾವ ಆಡಳಿತ ವಿಧಾನ ಬೆಳೆದು ಬಂದಿದ್ದಿತೋ ಹೆಚ್ಚೂ ಕಡಿಮೆ ಅದೇ ಆಡಳಿತ ವಿಧಾನವನ್ನು ಹೊಯ್ಸಳರೂ ಅನುಸರಿಸಿದ್ದಾರೆ. ಅಧಿಕಾರ ನಿರ್ವಹಣೆಯಲ್ಲಿ, ಅಧಿಕಾರ ವಿಸ್ತರಣೆಯಲ್ಲಿ ಹೊಯ್ಸಳರು ಕೆಲವು ಹೊಸ ಉಪಕ್ರಮಗಳನ್ನು ಪ್ರಯೋಗಿಸಿರುವುದು ಕಂಡುಬರುತ್ತದೆ. ಆ ವಿಷಯಗಳ ಕೆಲವು ಮುಖ್ಯ ಅಂಶಗಳನ್ನು ಮಾತ್ರ ಪ್ರಸ್ತುತ ಲೇಖನದಲ್ಲಿ ಚರ್ಚಿಸಲಾಗಿದೆ.

ಪ್ರಾಚೀನ ಕರ್ನಾಟಕದ ಆಡಳಿತದಲ್ಲಿ ದಂಡನಾಯಕ ಹುದ್ದೆ ಬಹು ಮುಖ್ಯ ಹುದ್ದೆಗಳಲ್ಲಿ ಒಂದಾಗಿದ್ದಿತು. ದಂಡನಾಯಕ ಪದಕ್ಕೆ ಪರ್ಯಾಯವಾಗಿ ದಣ್ಣಾಯಕ, ದಣಾಯಕ, ದಣ್ಣಾಯ್ಕ, ಡಣ್ಣಾಯಕ, ದಂಡವಳ, ದಳಪತಿ, ಸೇನಾಪತಿ, ಸೇನಾಧಿಪತಿ, ಚಮೂಪತಿ, ಚಮೂಪ, ಚಮೂನಾಥ, ಚಮೂವಲ್ಲಭ ಮುಂತಾದ ಪದಗಳು ಬಳಕೆಯಾಗಿವೆಯಾದರೂ ಶಾಸನಗಳಲ್ಲಿ ದಂಡನಾಯಕ ಎಂಬ ಪದವೇ ವ್ಯಾಪಕವಾಗಿ ಬಳಕೆಯಾಗಿದೆ. ದಂಡನಾಯಕ, ದಣ್ಣಾಯಕ, ಸೇನಾಪತಿ ಮುಂತಾದ ಪದಗಳಿಗೆ ಮಹಾ, ಪ್ರಚಂಡ ಮುಂತಾದ ವಿಶೇಷಣಗಳೂ ಬಳಕೆಯಾಗಿರುವುದುಂಟು. 'ದಂಡ' ಎಂಬ ಮೂಲ ರೂಪದಿಂದ ರೂಪುಗೊಂಡ ಈ ಪದ, ದಂಡ (= ಸೈನ್ಯ, ಪಡೆ) + ನಾಯಕ (= ಮುಖ್ಯಸ್ಥ) = ದಂಡನಾಯಕ < ದಣ್ಣಾಯಕ ಹೀಗೆ ಅನೇಕ ಬಗೆಯಲ್ಲಿ ಅರ್ಥವ್ಯಾಪ್ತಿಯನ್ನು ಪಡೆದಿದೆ. ಅನ್ಯಾರ್ಥಗಳನ್ನು ಬಿಟ್ಟು ಪ್ರಸ್ತುತ ಕೇಂದ್ರಾರ್ಥದ ಕಡೆ ಗಮನಿಸಿದರೆ ಚತುರೋಪಾಯಗಳಲ್ಲಿ ಒಂದಾದ (ಸಾಮ, ದಾನ, ಭೇದ ಮತ್ತು ದಂಡ) ಇದು (ಶಿಕ್ಷಿಸಲೊಡಂಬಟ್ಟೊಡದು ದಂಡಮೆನಿಕ್ಕುಂ– ಮಂಗರಾ, ೭೯–೬) ಶಿಕ್ಷೆಯ ಮೂಲಕ ಒಪ್ಪಿತವಾಗುವುದೇ ದಂಡವಾಗಿದೆ. ಸಾಮೂಹಿಕ ಮಟ್ಟದಲ್ಲಿ ದಂಡ ಪ್ರಯೋಗಕ್ಕೆ ಸೈನ್ಯ, ಪಡೆಯ ಅಗತ್ಯವಿರುತ್ತದೆ. ದಂಡಕ್ಕೆ ದಂಡು, ಸೈನ್ಯ ಎಂಬ ಅರ್ಥಗಳೂ ಇವೆ. ಕೋಲು, ಬಡಿಗೆ ಎಂಬ ಅರ್ಥಗಳೂ ಇದ್ದು, ಅಧಿಕಾರ ಸೂಚಕವಾದ ದಂಡ, ಬೆಳ್ಳಿ, ಚಿನ್ನದಿಂದ ಮಾಡಿದ ಕೋಲು ಅಥವಾ ಚಿನ್ನ–ಬೆಳ್ಳಿಯ ಕವಚ ಹಾಕಿದ ಕೋಲು ಎಂಬ ಅರ್ಥವಿದ್ದು, ಅದು ಅಧಿಕಾರ/ಹುದ್ದೆಯ ಸಂಕೇತವಾಗಿದೆ. ಈ ಹಿನ್ನೆಲೆಯಲ್ಲಿ ಸೈನ್ಯದ ಮುಖ್ಯಾಧಿಕಾರಿ (ನಾಯಕ, ಮುಖ್ಯಸ್ಥ) ಸೈನ್ಯಾಧಿಪತಿ, ಸೇನಾನಾಯಕ, ಸೇನಾಪತಿ ಎಂಬ ಅರ್ಥಗಳು ಪ್ರಚಲಿತವಿದ್ದು ಆ ಹುದ್ದೆಯ ಸಂಕೇತವಾಗಿ ದಂಡಧಾರಿಗಳೂ ಆಗಿರುತ್ತಿದ್ದರೆಂದು ಭಾವಿಸಬಹುದಾಗಿದೆ.

ಚಮೂ ಪದಕ್ಕೆ ಪಡೆ/ಸೈನ್ಯ ಎಂಬ ಅರ್ಥಗಳಿದ್ದು, ಅದು ಒಂದು ನಿರ್ದಿಷ್ಟ ಸಂಖ್ಯೆಯ ಸೈನ್ಯ ಪಡೆಯನ್ನು ಸೂಚಿಸುತ್ತದೆ. ಚಮೂನಾಥ, ಚಮೂಪ, ಚಮೂಪತಿ, ಚಮೂ ವಲ್ಲಭ – ಇವೆಲ್ಲವೂ ಸಂಸ್ಕೃತ ಮೂಲರೂಪಗಳೇ ಆಗಿವೆ. ಕಾವ್ಯಗಳಲ್ಲಿ ಈ ರೂಪಗಳು ಹೆಚ್ಚಾಗಿ ಬಳಕೆಯಾಗಿವೆ. 'ಚಮೂವಲ್ಲಭ' ಶಾಸನವೊಂದರಲ್ಲಿ ಬಳಕೆಯಾಗಿರುವುದೂ ಉಂಟು.೧

ಮೇಲಿನ ವಿವರಣೆಯಿಂದ ದಂಡನಾಯಕ ಪದಕ್ಕೆ ಪರ್ಯಾಯಪದಗಳು ಇವೆಯಾದರೂ ಅವೆಲ್ಲವೂ ಸೈನ್ಯದ ಮುಖ್ಯಸ್ಥನನ್ನು ಸೂಚಿಸಲು ಬಳಕೆಯಾಗಿವೆ ಎಂದು ತಿಳಿಯುತ್ತದೆ. ಆ ಹುದ್ದೆಯಲ್ಲಿ ಇರುವವರು ಯುದ್ಧಗಳಲ್ಲಿ ನೇತೃತ್ವ ವಹಿಸುವುದು ಸಾಮಾನ್ಯವಾಗಿದ್ದಿತು. ಮಹಾಭಾರತವನ್ನು ಗಮನಿಸಿದರೆ ಯುದ್ಧದ ಮೊದಲು ಸೇನಾಪತಿಯ ಆಯ್ಕೆ ಮಾಡುವುದು ಕಂಡುಬರುತ್ತದೆ. ಆದರೆ ಪ್ರಾಚೀನ ಕನ್ನಡ ಶಾಸನಗಳನ್ನು ಗಮನಿಸಿದರೆ ದಂಡನಾಯಕನ ಹುದ್ದೆ ಸ್ಥಿರವಾಗಿದ್ದು, ಯುದ್ಧ ಮತ್ತು ಶಾಂತಿ ಸಮಯಗಳೆರಡರಲ್ಲೂ ಏಕ ರೀತಿಯಾಗಿ ಇರುವುದು ಕಂಡುಬರುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಸೇನಾಪತಿಯ ಹುದ್ದೆಯನ್ನು ಶಾಶ್ವತವೆಂದು ಪರಿಗಣಿಸಿ ಅದಕ್ಕೆ ೪೮,೦೦೦ ಪಣಗಳನ್ನು ವೇತನವೆಂದು ಹೇಳಲಾಗಿದೆ.೨

---

* ನಂ.೧೪೮, ೧೭ನೆಯ 'ಸಿ' ಮುಖ್ಯರಸ್ತೆ, ೩ನೇಕ್ರಾಸ್, ವಿಜಯನಗರ ೨ನೆಯ ಹಂತ, ಬೆಂಗಳೂರು–೫೬೦೦೪೦.

ಯುದ್ಧಗಳ ನೇತೃತ್ವ ವಹಿಸುತ್ತಿದ್ದ ದಂಡನಾಯಕರು ರಾಜ್ಯದಲ್ಲಿ ಪ್ರಭಾವಿ ವ್ಯಕ್ತಿಗಳಲ್ಲಿ ಒಬ್ಬರಾಗಿರುತ್ತಿದ್ದರು. ಬಲ್ಲಾಳನ ಸೇನಾಪತಿಯಾದ ಸೊಸಿಯಪ್ಪನನ್ನು 'ಬಲಗಯ್ಯ ಸೇನಾಧಿಪತಿ' ಎಂದು ಒಂದು ಶಾಸನದಲ್ಲಿ ಕರೆಯಲಾಗಿದೆ.[೩] ದಂಡನಾಯಕರು ರಾಜರ ಪರವಾಗಿ ಯುದ್ಧಗಳನ್ನು ಮಾಡಿ ರಾಜ್ಯಗಳ ರಕ್ಷಣೆ ಮಾಡುತ್ತಿದ್ದಂತೆಯೇ ಯುದ್ಧಗಳ ಮೂಲಕ ಸಾಮ್ರಾಜ್ಯಗಳ, ರಾಜ್ಯಗಳ ಗಡಿಗಳನ್ನು ವಿಸ್ತರಿಸುತ್ತಿದ್ದರು.

ದಂಡನಾಯಕ ಹುದ್ದೆ ರಾಜ್ಯಾಡಳಿತದಲ್ಲಿ ಅತಿ ವಿಶಿಷ್ಟವಾಗಿದ್ದು ಅತ್ಯುನ್ನತ ಪದವಿಗಳಲ್ಲಿ ಒಂದಾಗಿದ್ದಿತು. ಆ ಪದವಿಗೆ ಆಯ್ಕೆಯಾಗುವ ವ್ಯಕ್ತಿ ವಿಶೇಷ ಅರ್ಹತೆ ಪಡೆದವನಾಗಿರಬೇಕಿತ್ತು. ಸೇನಾಪತಿ ಸ್ಥಾನಕ್ಕೆ ಬರುವ ವ್ಯಕ್ತಿ ಮಂತ್ರಿ ಮತ್ತು ಸಂಧಿ ವಿಗ್ರಹಿಗಳಿಗೆ ಇರುವ ಅರ್ಹತೆ ಮತ್ತು ಯೋಗ್ಯತೆಗಳನ್ನು ಮತ್ತು ಯುದ್ಧಕೌಶಲ, ವ್ಯೂಹರಚನೆ, ಹಲವು ಲಿಪಿಗಳ ಜ್ಞಾನ ಮುಂತಾದ ಹಲವಾರು ವಿಷಯಗಳಲ್ಲಿ ಪರಿಣತಿ ಪಡೆದಿದ್ದು, ಧೈರ್ಯ ಸಾಹಸ ಉತ್ಸಾಹಗಳನ್ನು ಒಳಗೊಂಡ ವ್ಯಕ್ತಿತ್ವ ಹೊಂದಿದ್ದು ವಿಶೇಷವಾದ ಮತ್ತು ವಿಶಿಷ್ಟವಾದ ತರಬೇತಿಯನ್ನು ಪಡೆದಿರಬೇಕೆಂದು ಪ್ರಾಚೀನ ರಾಜನೀತಿ ಗ್ರಂಥಗಳು ಮತ್ತು ಇತರ ಕೃತಿಗಳು ನಿರೂಪಿಸಿವೆ.[೪]

ಪ್ರಾಚೀನ ಶಾಸನಗಳನ್ನು ಗಮನಿಸಿದರೆ ಕೆಲವು ಅಧಿಕಾರಿಗಳಿಗೆ ನಾಲ್ಕೈದು ಅಧಿಕಾರದ ವಿಶೇಷಣಗಳು ಬಳಕೆಯಾಗಿರುವುದು ಕಂಡುಬರುತ್ತದೆ. ಅಂಥ ಕಡೆಗಳಲ್ಲಿ ಆ ವ್ಯಕ್ತಿ ನಿಶ್ಚಿತವಾಗಿ ಯಾವ ಅಧಿಕಾರವನ್ನು ಹೊಂದಿದ್ದನೆಂಬುದನ್ನು ಹೇಳುವುದು ಸಂದಿಗ್ಧವಾಗುತ್ತದೆ. 'ದಂಡನಾಯಕ' ಕೆಲವು ಸಾರಿ ಅನೇಕ ಅಧಿಕಾರ ವಿಶೇಷಣಗಳೊಂದಿಗೆ ಒಂದಾಗಿ ವರ್ಣಿಸಲ್ಪಟ್ಟಿರುವುದುಂಟು. ಇಂಥ ಕಡೆ ಸಂದಿಗ್ಧತೆಗೆ ಅಷ್ಟಾಗಿ ಅವಕಾಶವಿರುವುದಿಲ್ಲ. ಹಲವು ಅಧಿಕಾರ ನಾಮಗಳೊಂದಿಗೆ ದಂಡನಾಯಕ ಪದ ಬಳಕೆಯಾಗಿರುವುದನ್ನು ಗಮನಿಸಿದ ಡಾ. ಟಿ.ವಿ. ಮಹಾಲಿಂಗಮ್. 'ಪ್ರಾಚೀನ ಕಾಲದಲ್ಲಿ ಸೈನ್ಯದ ಅಧಿಕಾರಿಗಳಿಗೂ ಆಡಳಿತದ ಅಧಿಕಾರಿಗಳಿಗೂ ಅಷ್ಟೇನೂ ವ್ಯತ್ಯಾಸವಿರಲಿಲ್ಲವೆಂದು' ಅಭಿಪ್ರಾಯಪಟ್ಟಿದ್ದಾರೆ.[೫] ಡಾ.ಬಿ.ಆರ್.ಗೋಪಾಲ್ ಅವರು, 'ಬಹುತೇಕ ಅಧಿಕಾರಿಗಳು ದಂಡನಾಯಕರೆಂದು ಕರೆಯಲ್ಪಡಲು ಕಾರಣ ಅವರೆಲ್ಲರೂ ಸೈನ್ಯ ಸೇವೆಯನ್ನು ಮಾಡಬೇಕಾಗಿದ್ದುದು' ಎಂದು ಅಭಿಪ್ರಾಯಪಟ್ಟಿದ್ದಾರೆ.[೬] 'ದಂಡನಾಯಕರು ಸೇನಾಪತಿಗಳಾಗಿ ಮಾತ್ರವಲ್ಲದೆ ರಾಜ್ಯದ ವಿವಿಧ ಆಡಳಿತ ಶಾಖೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದರೆ'ಂದು ಡಾ. ಎ.ವಿ. ನರಸಿಂಹಮೂರ್ತಿ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೭] 'ಸೈನ್ಯದ ಅಧಿಕಾರಿಗಳಲ್ಲದ ವಿವಿಧ ಶಾಖೆಗಳ ಹಿರಿಯ ಅಧಿಕಾರಿಗಳಿಗೂ ದಂಡನಾಯಕರೆಂಬ ವಿಶೇಷಣಗಳನ್ನು ಬಳಸುತ್ತಿದ್ದುದು ಆ ಕಾಲದ ಪದ್ಧತಿಯಾಗಿದ್ದಿತ್ತೆ'ಂದು ಡಾ. ಪಿ.ಬಿ. ದೇಸಾಯಿ ಅವರು ಭಾವಿಸುತ್ತಾರೆ.[೮] ಡಾ. ಜಿ.ಎಸ್. ದೀಕ್ಷಿತ್ ಅವರು, 'ಚಿಕ್ಕ ಅಥವಾ ದೊಡ್ಡ ಪ್ರಾದೇಶಿಕ ವಿಭಾಗಗಳನ್ನು ಆಳುವ ಅಧಿಕಾರಿಗಳು ಹೊಂದಿರುತ್ತಿದ್ದ ವಿಶೇಷಣಗಳೆ'ಂದು ಭಾವಿಸುತ್ತಾರೆ.[೯] ಮಧುವಪಯ್ಯ ನಾಯಕ ಎಂಬುವವನಿಗೆ ದಂಡನಾಯಕ ಮತ್ತು ಸೇನಾಧಿಪತಿ ಎಂಬುವು ಬೇರೆ ಬೇರೆ ವಿಶೇಷಣಗಳಾಗಿ ಬಂದಿರುವುದನ್ನು ಡಾ. ಎಂ. ಚಿದಾನಂದಮೂರ್ತಿಯವರು ಗಮನಕ್ಕೆ ತಂದಿದ್ದಾರೆ.[೧೦] ಬಲ್ಲಾಳನ ಮಂತ್ರಿ ಅಚ್ಯುತಮಯ್ಯನನ್ನು ಮಹಾಪ್ರಧಾನ. ಸರ್ವಾಧಿಕಾರಿ, ಸೇನಾಧಿಪತಿ, ಮಹಾಪಸಾಯ್ತಂ, ದಂಡನಾಯಕ ಎಂಬ ವಿಶೇಷಣಗಳಿಂದ ಉಲ್ಲೇಖಿಸಲಾಗಿದೆ.[೧೧] ಒಬ್ಬ ಅಧಿಕಾರಿ ಅಷ್ಟೊಂದು ಅಧಿಕಾರವನ್ನು ಹೊಂದಿದ್ದನು ಎಂದು ಅದು ಸೂಚಿಸುವುದಾದರೂ ವಾಸ್ತವವಾಗಿ ಇದು ಸಾಧ್ಯವೆ ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ. ಡೆರೆಟ್ ಅವರು, ಇವುಗಳಲ್ಲಿ ಅನೇಕ ಪದಗಳು ಅಧಿಕಾರ ಸೂಚಕವಲ್ಲ ಎಂದು ಅಭಿಪ್ರಾಯಪಡುತ್ತಾರೆ.[೧೨] ಅಧಿಕಾರಿಗಳು ತಾವು ಹೊಂದಿದ್ದ ಹಿಂದಿನ ಅಧಿಕಾರ ವಿಶೇಷಣಗಳನ್ನು ಮುಂದೆಯೂ ಬಳಸಿಕೊಳ್ಳುತ್ತಿದ್ದ ಪದ್ಧತಿ ಇದ್ದುದರಿಂದ ಅನೇಕ ಅಧಿಕಾರ ವಿಶೇಷಣಗಳು ಒಬ್ಬ ಅಧಿಕಾರಿಗೆ ಬಳಕೆಯಾಗಿರುವ ಸಾಧ್ಯತೆ ಇದೆಯೆಂದು ಕೆಲವು ವಿದ್ವಾಂಸರು ಭಾವಿಸಿರುವುದುಂಟು. ಬಹು ಅಧಿಕಾರ ಉಲ್ಲೇಖಗಳಿಗೆ ನಿರ್ದಿಷ್ಟ ಕಾರಣವನ್ನು ಹೇಳುವುದು ಸದ್ಯಕ್ಕೆ ಕಠಿಣವಾಗಿದೆ.

ಹೊಯ್ಸಳರ ಕಾಲದ ಶಾಸನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ದಂಡನಾಯಕ ಎಂಬುದು ಮೂಲತಃ ಸೈನ್ಯ ಸಂಬಂಧಿ ವರಿಷ್ಠ ಅಧಿಕಾರದ ಹುದ್ದೆಯನ್ನು ಸೂಚಿಸುವುದಾದರೂ ಆ ವಿಶೇಷಣ ಎಲ್ಲ ಸಾರಿಯೂ ಸೈನ್ಯಾಡಳಿತವನ್ನು ಸೂಚಿಸುವಂತೆ ಕಾಣುವುದಿಲ್ಲ. ಅದು ಬಹುಮಟ್ಟಿಗೆ ರಾಜ್ಯಾಡಳಿತದ ವರಿಷ್ಠ ಹುದ್ದೆಯನ್ನು ಸೂಚಿಸುತ್ತದೆ; ಕೆಲವು ನಿರ್ದಿಷ್ಟ ಸಂದರ್ಭ ಸನ್ನಿವೇಶಗಳಲ್ಲಿ ಸೈನ್ಯಾಡಳಿತದ ವರಿಷ್ಠ ಹುದ್ದೆಯನ್ನು ಸೂಚಿಸುವಂತೆ ಕಾಣುತ್ತದೆ. ಹೆಚ್ಚು ಸಂದರ್ಭಗಳಲ್ಲಿ ಅದು ಒಂದು ವರಿಷ್ಠ ಅಲಂಕರಣ ವಿಶೇಷಣವಾಗಿ ಬಳಕೆಯಾಗಿರುವಂತೆ ಭಾಸವಾಗುತ್ತದೆ.

ರಾಜನು ಪ್ರವಾಸ ಕಾಲದಲ್ಲಿ ಪಂಚಪ್ರಧಾನರನ್ನು ತನ್ನೊಂದಿಗೆ ಕರೆದೊಯ್ಯುತ್ತಿದ್ದುದು ಕಂಡುಬರುತ್ತದೆ. ಪಂಚಪ್ರಧಾನರ ಮಂಡಳಿಯಲ್ಲಿ ಸಂಧಿವಿಗ್ರಹಿ, ಶ್ರೀಕರಣಾಧಿಕಾರಿ, ಹಿರಿಯ ಭಂಡಾರಿ, ಸೇನಾಪತಿ ಮತ್ತು ಮಹಾಪಸಾಯಿತರು ಸೇರ್ಪಡೆಯಾಗುತ್ತಾರೆ ಎಂದು ಡಾ. ಎಂ.ವಿ. ಕೃಷ್ಣರಾವ್ ಅಭಿಪ್ರಾಯಪಟ್ಟಿದ್ದಾರೆ.೧೩ ಪಂಚಪ್ರಧಾನರಲ್ಲಿ ಸೇನಾಪತಿಯೂ ಸೇರ್ಪಡೆಯಾಗುವುದರಿಂದ ಆ ಹುದ್ದೆಯ ಗುರುತ್ವ ಮತ್ತು ಮಹತ್ವ ಅರಿವಾಗುತ್ತದೆ.

ದಂಡನಾಯಕ ಹುದ್ದೆ ತುಂಬ ಜವಾಬ್ದಾರಿಯುತವಾದುದು ಮತ್ತು ಸಂಪೂರ್ಣ ಬದ್ಧತೆ, ನಂಬಿಕೆ, ನಿಷ್ಠೆ ಪ್ರಾಮಾಣಿಕತೆ ಹಾಗೂ ಸಮರ್ಪಣೆಯನ್ನು ಅಪೇಕ್ಷಿಸುವಂತಹುದು. ಹೊಯ್ಸಳ ವೀರ ಸೋಮೇಶ್ವರನ (ಕ್ರಿ.ಶ. ೧೨೩೩-೧೨೫೪) ಆಶ್ರಯದಲ್ಲಿದ್ದ ಚಿದಾನಂದ ಮಲ್ಲಿಕಾರ್ಜುನನಿಂದ ಸಂಯೋಜಿತವಾದ ಕೃತಿ 'ಸೂಕ್ತಿಸುಧಾರ್ಣವಂ'. ಅದರಲ್ಲಿ ದಂಡನಾಯಕನ ಲಕ್ಷಣಗಳನ್ನು ಹೀಗೆ ಗುರುತಿಸಲಾಗಿದೆ.

ಮಧುರಾಳಾಪ ಪ್ರಸಂಗಂ ಪರಹಿತನಮಳಂ ಸರ್ವ ಸನ್ನಾಹ ಶಸ್ತ್ರಾ

ಯುಧಸಾರಂ ಭಾರಕಾರ್ಯ್ಯಂ ರಿಪುಜಯಪಟು ಸಾಮಂತ ನಿರ್ಶ್ಚೇಷ್ಟ ನಾನಾ

ವಿಧ ತಂತ್ರಂ ನಿಷ್ಕಳಂಕಂ ಋಜುಮತಿ ಕುಶಲಂ ಸತ್ಯ ಶೌಚಾಭಿಮಾನಾಂ

ಬುಧಿಯರ್ಥೋರ್ದ್ಯೋಗಿ ಶಕ್ತಿತ್ರಯ ನಿಧಿಯೆನೆ ಸಂದಿರ್ದವಂ ದಂಡನಾಥಂ॥೧೪

ಮಧುರವಾಗಿ ಮಾತನಾಡಬಲ್ಲವನೂ, ಪರಹಿತ ಬುದ್ಧಿಯುಳ್ಳವನೂ, ಪರಿಶುದ್ಧನೂ, ವಿವಿಧ ಶಸ್ತ್ರಾಯುಧಗಳ ಬಳಕೆ ತಿಳಿದವನೂ, ಯಾವಾಗಲೂ ಸಿದ್ಧವಾಗಿರುವವನೂ, ಕಾರ್ಯಭಾರ ಹೊತ್ತವನೂ, ಶತ್ರುಗಳನ್ನು ಸೋಲಿಸಬಲ್ಲವನೂ, ಸಾಮಂತ ಮತ್ತು ಇತರ ಆಪ್ತ ಜನರನ್ನು ಹೊಂದಿದವನೂ, ವಿವಿಧ ತಂತ್ರಗಳಲ್ಲಿ ನಿಪುಣನೂ, ನೇರವಾದ ಮನಸ್ಸುಳ್ಳವನೂ, ಬುದ್ಧಿವಂತನೂ, ಸತ್ಯವಂತನೂ, ಶುಚಿವಂತನೂ. ಸಮುದ್ರದಂತೆ ಸದಾ ಚೈತನ್ಯಶೀಲನೂ ಆಗಿದ್ದು, ಮೂರೂ ಶಕ್ತಿಗಳನ್ನು೧೫ ಹೊಂದಿರುವವನು ದಂಡನಾಥನಾಗಲು ಸೂಕ್ತ ವ್ಯಕ್ತಿಯಾಗಿರುತ್ತಾನೆ ಎಂದು ಹೇಳಲಾಗಿದೆ.

ಪ್ರಾಚೀನ ಕಾಲದಲ್ಲಿ ಸಾಮಾನ್ಯವಾಗಿ ದಂಡನಾಯಕ ಹುದ್ದೆಗೆ ಕ್ಷತ್ರಿಯರನ್ನು ಆಯ್ಕೆ ಮಾಡುವ ಪದ್ಧತಿ ಕಂಡುಬರುವುದಾದರೂ ಬ್ರಾಹ್ಮಣ, ವೈಶ್ಯ, ಜೈನ ಹಾಗೂ ಇತರ ವರ್ಗದಿಂದ ಬಂದವರನ್ನು ನೇಮಕ ಮಾಡಿರುವುದೂ ಕಂಡುಬರುತ್ತದೆ.೧೬ ಈ ಅಧಿಕಾರಿಗಳ ಆಯ್ಕೆಯಲ್ಲಿ ವರ್ಗದ ಹಿನ್ನೆಲೆಗಿಂತಲೂ ಅರ್ಹತೆ ಮತ್ತು ಯೋಗ್ಯತೆಗಳಿಗೆ ಪ್ರಾಮುಖ್ಯವಿದ್ದಿತು. ಬ್ರಾಹ್ಮಣ ವರ್ಗದಿಂದ ಬಂದ ಅನೇಕ ದಂಡನಾಯಕರು ಹೊಯ್ಸಳ ವಂಶದ ರಾಜರಲ್ಲಿ ಸೇವೆ ಸಲ್ಲಿಸಿರುವುದು ಕಂಡುಬರುತ್ತದೆ. ಹೊಯ್ಸಳರ ಪ್ರಸಿದ್ಧ ದಂಡನಾಯಕನಾಗಿದ್ದ ಚಂದ್ರಮೌಳಿಯು ಬ್ರಾಹ್ಮಣ ವರ್ಗದಿಂದ ಬಂದಿದ್ದು, ಅನೇಕ ಯುದ್ಧಗಳಲ್ಲಿ ಭಾಗವಹಿಸಿರುವುದು ಕಂಡುಬರುತ್ತದೆ. ಅವನನ್ನು ಒಂದು ಶಾಸನ 'ನುತಬಲ್ಲಾಳ ನೃಪಾಳ ದಕ್ಷಿಣ ಭುಜಾದಂಡಂ' ಎಂದು ಕರೆದಿದೆ. ಇನ್ನೊಬ್ಬ ಪ್ರಸಿದ್ಧ ಮಂತ್ರಿ ಪೋಲಾಳ್ವ ದಂಡನಾಥನೂ ಬ್ರಾಹ್ಮಣನಾಗಿದ್ದು ಅಸಾಧಾರಣ ದಂಡಾಧಿಪತಿಯಾಗಿದ್ದು 'ಸಮರಕ್ಕಾಯುಧಂ ಈವ ಕಯ್' ಎಂದು ಖ್ಯಾತನಾಗಿ ಚಕ್ರವರ್ತಿಗೆ ಎಲ್ಲ ವಿಷಯಗಳಲ್ಲಿಯೂ ಬೆಂಬಲವಾಗಿ ನಿಲ್ಲುತ್ತಿದ್ದುದು ಕಂಡುಬರುತ್ತದೆ. ಬಿಲ ಚೊಕ್ಕಯ್ಯ ಎಂಬುವವನು ಮೂರನೆಯ ವೀರಬಲ್ಲಾಳನ ಮಂತ್ರಿಯಾಗಿದ್ದು, ಆಡಳಿತದಲ್ಲಿ ವಿಶೇಷ ಸಾಮರ್ಥ್ಯ ಹೊಂದಿದ್ದನು. ಒಂದು ಶಾಸನ ಅವನನ್ನು ಅನೇಕ ವಿಶೇಷಣಗಳಿಂದ ಕೀರ್ತಿಸುತ್ತಾ 'ಸಮಸ್ತ ಸೇನಾಧಿಪತಿ', 'ಬಿಲುವಿದ್ಯೆರಾಮ', 'ಶ್ರೀವೀರ ಬಲ್ಲಾಳ ದೇವರ ಕಟ್ಟದಲಗಂದು' ನಿರೂಪಿಸುತ್ತದೆ.೧೮

ದಂಡನಾಯಕ ಹುದ್ದೆಯನ್ನು ಸಾಮಾನ್ಯವಾಗಿ ದೀರ್ಘಕಾಲದಿಂದ ಪರಿಚಿತ ಕುಟುಂಬ ವರ್ಗದಿಂದ ಬಂದ ನಂಬಿಕಸ್ಥರಿಗೆ ಕೊಡುತ್ತಿದ್ದರು. ಹಲವು ಬಾರಿ ಹತ್ತಿರದ ರಕ್ತ ಸಂಬಂಧಿಗಳಿಗೆ ಆ ಹುದ್ದೆಯನ್ನು ನೀಡುತ್ತಿದ್ದುದೂ ಗಮನಾರ್ಹ. ಮೂರನೆಯ ಬಲ್ಲಾಳನ ಪ್ರಸಿದ್ಧ ದಂಡನಾಯಕರಲ್ಲಿ ಒಬ್ಬನಾದ ಬಲ್ಲಪ್ಪ ದಂಡನಾಯಕನು ಚಕ್ರವರ್ತಿಗೆ ಅತ್ಯಂತ ಆಪ್ತನಾಗಿದ್ದು ಆಡಳಿತದಲ್ಲಿ ವಿಶೇಷ ನೆರವನ್ನು ನೀಡುತ್ತಿದ್ದನು. ಅನೇಕ ಕ್ಷೋಭೆಗಳನ್ನು ಹತೋಟಿಗೆ ತಂದು ಪರಿಸ್ಥಿತಿಯನ್ನು ಸುಧಾರಿಸಿ ರಾಜ್ಯದಲ್ಲಿ ಶಾಂತಿ ಸ್ಥಾಪನೆಯನ್ನು ಮಾಡಿದನು. ಅವನು ಬಲ್ಲಾಳನ ಸಹೋದರಿಯ ಮಗನಾಗಿದ್ದು ಒಂದನೆಯ ಹರಿಪರನ ಅಳಿಯನೂ ಆಗಿದ್ದನು.೧೯

ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಶ್ರೇಷ್ಠ ಗರುಡನೆಂದು ಖ್ಯಾತಿ ಗಳಿಸಿರುವ ಕುವರ ಲಕ್ಷ್ಮ ಚಮೂಪನು ಬಲ್ಲಾಳ ಚಕ್ರವರ್ತಿಯ ಆಪ್ತವಲಯದಿಂದ ಬಂದವನು.

ಅರಮನೆ ತೊಟ್ಟಿಲೆನೆ ನೆಗಳ್ದಾ
ದರಮದು ಬಾಯ್ವೆಣ್ಣೆ ದಾದಿಯರ್ತ್ತಂ ನಂತಃ
ಪುರಮೆನೆ ಬಲ್ಲಾಳ ನೃಪಂ
ಪೊರೆದ ಮಗಂ ಕುವರಲಕ್ಷ್ಮ ದಂಡಾಧೀಶಂ॥೨೦

ಅರಮನೆಯೇ ತೊಟ್ಟಿಲೆಂಬಂತೆ ಬಾಲ್ಯದಿಂದ ಅರಮನೆಯ ಒಡನಾಟದಲ್ಲಿ ಬೆಳೆದ ಕುವರಲಕ್ಷ್ಮನು ಬಲ್ಲಾಳನ ಸಾಕಿದ ಮಗನಾಗಿದ್ದನು. ಅವನ ಮತ್ತು ಚಕ್ರವರ್ತಿಯ ಮಧ್ಯೆ ಆಳರಸರೆಂಬ ಭೇದವೂ ಇರಲಿಲ್ಲ. ಕುವರಲಕ್ಷ್ಮ ತಾನು ಕೊಟ್ಟ ಮಾತಿನಂತೆ ತನ್ನ ಮಡದಿ ಮತ್ತು ಸಾವಿರ ವೀರಯೋಧರೊಂದಿಗೆ ಆತ್ಮಾರ್ಪಣೆ ಮಾಡಿದ ವಿಷಯವನ್ನು ಹಳೆಯ ಬೀಡಿನ ಪ್ರಸಿದ್ಧ ಶಾಸನ ನಿರೂಪಿಸುತ್ತದೆ.

ದಂಡನಾಯಕರು ರಾಜರಿಗೆ ಬಲಗೈಯಂತೆ ಇದ್ದು ಗೂಢಚಾರರಿಂದ ಸತತ ಮಾಹಿತಿ ಪಡೆಯುತ್ತಾ ಸದಾ ಕಟ್ಟೆಚ್ಚರದಿಂದಿದ್ದು ದೇಶದೊಳಗೆ ಮತ್ತು ಹೊರಗೆ ನಡೆಯುವ ಆಗುಹೋಗುಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿರಬೇಕಿತ್ತು. ಅದರಲ್ಲೂ ಗಡಿಭಾಗಗಳ ನಿರಂತರ ಸಂಪರ್ಕ ಇಟ್ಟುಕೊಂಡು ಆ ಪ್ರದೇಶದ ಪರಿಸ್ಥಿತಿಗಳನ್ನು ಗಮನಿಸುತ್ತಿರಬೇಕಿತ್ತು. ರಾಜ್ಯದಲ್ಲಿ ಶಾಂತಿ ನೆಮ್ಮದಿಗಳು ನೆಲೆಸುವಂತೆ ನೋಡಿಕೊಳ್ಳುತ್ತಾ ಅವಕಾಶವಾದಾಗಲೆಲ್ಲಾ ರಾಜ್ಯ ವಿಸ್ತಾರವನ್ನೂ ಮಾಡಬೇಕಾಗುತ್ತಿತ್ತು. ಅಗತ್ಯ ಪರಿಸ್ಥಿತಿಗಳಲ್ಲಿ ರಾಜ್ಯದಲ್ಲಿ ಪ್ರವಾಸ ಮಾಡುತ್ತಾ ಎಲ್ಲ ಬಗೆಯ ರಾಜಕೀಯ ಮಾಹಿತಿಗಳನ್ನೂ ಪಡೆಯುತ್ತಾ ರಾಜನೊಂದಿಗೆ ನಿಕಟ ಸಂಪರ್ಕ ಇಟ್ಟುಕೊಂಡು ಜವಾಬ್ದಾರಿಯುತವಾಗಿ ಆಡಳಿತ ನಿರ್ವಹಣೆ ಮಾಡಬೇಕಾಗುತ್ತಿತ್ತು.

ದಂಡನಾಯಕರು ಸದಾ ಸಮರೋತ್ಸಾಹಿಗಳಾಗಿದ್ದು, ಇತರ ಆಡಳಿತಾತ್ಮಕ, ಧಾರ್ಮಿಕ ಚಟುವಟಿಕೆಗಳಲ್ಲಿ ಅಷ್ಟಾಗಿ ಭಾಗವಹಿಸುತ್ತಿರಲಿಲ್ಲವೆಂದು ಭಾವಿಸುವಂತಿಲ್ಲ. ದಂಡನಾಯಕರು ಆಡಳಿತಾತ್ಮಕ, ಧಾರ್ಮಿಕ ಮತ್ತು ಅಭಿವೃದ್ಧಿ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವುದಕ್ಕೆ ಹೇರಳವಾದ ನಿದರ್ಶನಗಳು ದೊರೆಯುತ್ತವೆ. ಹೊಯ್ಸಳರ ಪ್ರಸಿದ್ಧ ದಂಡನಾಥರಲ್ಲಿ ಒಬ್ಬನಾಗಿದ್ದ ಪೋಲಾಳ್ವನು 'ಸಮರಕ್ಕಾಯುಧ'ನೆನಿಸಿದ್ದು, ಅವನು ಪುನರ್‌ನಿರ್ಮಿಸಿದ ಹರಿಹರದ ಸುಪ್ರಸಿದ್ಧ ಹರಿಹರೇಶ್ವರ ದೇವಾಲಯವು ೧೧೫ ಹೊನ್ನ ಕಳಶಗಳನ್ನು ಒಳಗೊಂಡಿದ್ದು ಆ ಕಾಲದ ಅದ್ಭುತ ದೇವಾಲಯವೆಂಬ ಕೀರ್ತಿಗೆ ಪಾತ್ರವಾಗಿದೆ.೨೧ ದೇವಾಲಯದ ಶಿಲ್ಪ, ವಾಸ್ತು ಮತ್ತು ಇತರ ಮಹತ್ವಗಳನ್ನು ಅಲ್ಲಿರುವ ಶಾಸನಗಳು ನಿರೂಪಿಸುತ್ತವೆ. ಆ ದೇವಾಲಯದ ವಾಸ್ತು ಮತ್ತು ಕಂಬಗಳು ಅದ್ಭುತ ರಚನಾವಿನ್ಯಾಸದಿಂದ ಕೂಡಿದ್ದು ಇಂದಿಗೂ ಕಲಾರಸಿಕರ ಗಮನವನ್ನು ಸೆಳೆಯುತ್ತಿವೆ. ಪೋಲಾಳ್ವ ದಂಡನಾಥನು ಹೊಯ್ಸಳ ನರಸಿಂಹನಿಗೂ ಅನಂತರದಲ್ಲಿ ಬಲ್ಲಾಳನಿಗೂ ಅಮಾತ್ಯನಾಗಿದ್ದನು. ಚಕ್ರವರ್ತಿಯ ಪರಮಾಪ್ತರಲ್ಲಿ ಒಬ್ಬನಾಗಿದ್ದ ಅವನನ್ನು ಶಾಸನಗಳು ವಿಶೇಷವಾಗಿ ಕೀರ್ತಿಸಿವೆ. 'ಚಕ್ರವರ್ತಿಯ ಕಾಯ್ಪಿನಂತೆ, ಕಯ್ದುಗೆ ಕೂರ್ಪಿನಂತೆ, ಮಂತ್ರಕ್ಕೆ ಶಕ್ತಿಯಂತೆ, ರಾಜ್ಯಕ್ಕೆ ವಜ್ರ ಸಂನಾಹದಂತೆ' ಇದ್ದನೆಂದು ಶಾಸನವೊಂದು ಕೀರ್ತಿಸುತ್ತದೆ.

ಬಗೆಗೇನುಂ ಕವಲಿಲ್ಲ ವಾಕ್ಯವೆರಡಿಲ್ಲೌದಾರ್ಯ್ಯದೊಳ್ ಮಾಂದ್ಯಮಿ
ಲ್ಲ ಗುಣ ಪ್ರೀತಿಯೊಳಾತ್ಮ ಪಕ್ಷಪರಪಕ್ಷಾಸಂಗಮಿಲ್ಲಾಳ್ದನು
ಜ್ಜುಗದೊಳ್ ಲಾಭದ ಲೋಭಮಿಲ್ಲ ಸಿರಿಯೊಳ್ ಸೊಕ್ಕಿಲ್ಲ ಪೋಲಾಳ್ವನಂ
ಪೊಗಳ್ದಿಂದನ್ಯರನಂಣ್ಣ ಪೇಳ್ ಪೊಗಳ್ವುದೇ ಹಾಲುಂಡ ಮೇಲುಣ್ಬುದೇ॥
ಸಮರಕ್ಕಾಯುಧಮೀವ ಕಯ್ ವಿತರಣಕ್ಕಾಲೋಚನಕ್ಕಾಪ್ತ ಮಂ
ತ್ರಿ ಮಿಗಿಲ್ಗಗ್ ಪರದುರ್ಗವರ್ಗ ವಿಜಯಕ್ಕಾಸ್ಥಾನ ರಂಗಕ್ಕೆ ರ
ತ್ನಮಯಾಕಲ್ಪಮೆನಿಪ್ಪಿನಂ ನೆಗಬ್ದಿ ಬಲ್ಲಾಳಂಗಮಾ ನಾರಸಿಂ
ಗಮಹೀಶಂಗಮಮಾತ್ಯನಾದನಧಿಕಂ ಪೋಲಾಳ್ವ ದಂಡಾಧಿಪಂ॥೨೨

ಮನಸ್ಸಿನಲ್ಲಿ ಭಿನ್ನತೆ ಇಲ್ಲದ, ನುಡಿಭೇದವಿಲ್ಲದ, ಉದಾರತೆಯಲ್ಲಿ ನಿಧಾನವಿಲ್ಲದ, ಗುಣಗಳನ್ನು ಮೆಚ್ಚುವುದರಲ್ಲಿ ಸ್ವಪಕ್ಷ ಮತ್ತು ಶತ್ರುಪಕ್ಷವೆಂಬ ಭಿನ್ನತೆ ಇಲ್ಲದ, ರಾಜಕಾರ್ಯದಲ್ಲಿ ಲಾಭಲೋಭವಿಲ್ಲದ, ಐಶ್ವರ್ಯವಿದ್ದೂ ಗರ್ವವಿಲ್ಲದ, ಯುದ್ಧವೆಂದರೆ ಆಯುಧದಂಥವನೂ, ವಿತರಣಕ್ಕೆ ನೀಡುವ ಕೈ, ಆಲೋಚನೆಗೆ ಆಪ್ತಮಂತ್ರಿಯೂ, ಶತ್ರುಗಳ ಕೋಟೆಗಳನ್ನು ವಶಪಡಿಸಿಕೊಳ್ಳಬಲ್ಲವನಾಗಿದ್ದನೆಂದೂ ಶಾಸನ ಅವನನ್ನು ಕೀರ್ತಿಸಿದೆ. ಅವನ ಕಾರ್ಯವ್ಯಾಪ್ತಿ ವಿಶೇಷವಾಗಿದ್ದು ಅವನ ಪ್ರತಿಭಾವಂತ ವ್ಯಕ್ತಿತ್ವ ಸ್ಫುಟವಾಗಿ ಶಾಸನದಲ್ಲಿ ಮೂಡಿಬಂದಿದೆ.

ಹೊಯ್ಸಳ ಚಕ್ರವರ್ತಿಗೆ ಚಂದ್ರಮೌಳಿ ಮಂತ್ರಿಯೂ ಆಪ್ತನಾಗಿದ್ದು, 'ಬಲ್ಲಾಳ ನೃಪಾಳ ದಕ್ಷಿಣ ಭುಜಾದಂಡ'ನಾಗಿದ್ದನೆಂದು ತಿಳಿದುಬರುತ್ತದೆ. ಅವನು ಪರಾಕ್ರಮಿಯಾಗಿದ್ದಂತೆ ವಿದ್ಯಾ ಸಂಸ್ಕಾರ ಪಡೆದು ವಿದ್ವಜ್ಜನರಿಂದ ಕೀರ್ತಿತನಾಗಿದ್ದನು.

ಭರತಾಗಮ ತರ್ಕವ್ಯಾ
ಕರಣೋಪನಿಷತ್ಪುರಾಣ ನಾಟಕ ಕಾವ್ಯೋ
ತ್ಕರ ವಿದ್ವಜ್ಜನ ನುತನೆನಿಪ
ಸ್ಥಿರ ಪುಣ್ಯಂ ಚಂದ್ರಮೌಳಿ ಮಂತ್ರಿಲಲಾಮಂ ॥೨೩

ಚಂದ್ರಮೌಳಿಯು ಭರತಾಗಮ, ತರ್ಕಶಾಸ್ತ್ರ, ವ್ಯಾಕರಣ, ಉಪನಿಷತ್ತು, ಪುರಾಣ, ನಾಟಕ, ಕಾವ್ಯ ಮುಂತಾದುವುಗಳನ್ನು ಅರಿತವನಾಗಿದ್ದು ಈ ಕಾರಣಗಳಿಂದ ವಿದ್ವಜ್ಜನ ಅವನನ್ನು ಕೀರ್ತಿಸುತ್ತಿದ್ದರು.

ಕೆಲವು ಅಮಾತ್ಯರು, ದಂಡಾಧೀಶರು ರಾಜವಂಶಗಳಿಗೆ ವಂಶಪಾರಂಪರ್ಯವಾಗಿ ಸೇವೆ ಸಲ್ಲಿಸುತ್ತಾ ಬಂದಿರುವುದುಂಟು. ಇದಕ್ಕೆ ಉತ್ತಮ ನಿದರ್ಶನವೆಂದರೆ ಕೇಶಿರಾಜ ಚಮೂಪತಿಯದು. ವೀರಬಲ್ಲಾಳನ ಮಂತ್ರಿಯಾಗಿದ್ದ ಕೇಶಿರಾಜ ಮಾಳ್ವರಿಗೆ, ಚೋಳರಿಗೆ, ವರಾಳ ಅಧಿಕಾರಿಗಳಿಗೆ ಭಯಂಕರನಾಗಿದ್ದನು. ಹೊಯ್ಸಳ ವಂಶದೊಂದಿಗೆ ಸಮಾನಾಂತರವಾಗಿ ಇವರ ವಂಶವೂ ಬೆಳೆದು ಬಂದಿತೆಂದು ಶಾಸನವೊಂದು ನಿರೂಪಿಸುತ್ತದೆ.

ಹೊಯ್ಸಳ ರಾಜ ವಿನಯಾದಿತ್ಯನ ಆಪ್ತನಾಗಿ ರಾಮದಂಡನಾಥನಿದ್ದನು. ವಿನಯಾದಿತ್ಯನ ಮಗ ಎರೆಯಂಗನ ಪ್ರಿಯ ಮಂತ್ರಿಯಾಗಿ ಶ್ರೀಧರ ದಂಡನಾಥನಿದ್ದನು (ಇವನು ರಾಮದಂಡನಾಥನ ಮಗ). ಶ್ರೀಧರ ದಂಡನಾಥನ ಮಕ್ಕಳಾದ ವಿಭುಮಲ್ಲಿದೇವ ದಂಡನಾಥ, ಸಚಿವೋತ್ತಮ ದಾಮರಾಜ ಮತ್ತು ಮುಖ್ಯ ಸೇನಾಧಿಪತಿಯಾಗಿ ಕೇಶಿರಾಜ ಈ ಮೂವರೂ ವಿಷ್ಣುವರ್ಧನನ ರಾಜ್ಯಾಭ್ಯುದಯಕ್ಕೆ ಕಾರಣವಾಗಿದ್ದರು. ಮಲ್ಲಿದೇವ ದಂಡನಾಥನಿಗೆ ಮೂವರು ಮಕ್ಕಳಿದ್ದರು. ಅಮಾತ್ಯ ಮಾಧವ, ಮಂತ್ರಿ ಬೆಟ್ಟರಸ, ದಾಮ ದಂಡಾಧೀಶ. ಇವರು ಹೊಯ್ಸಳ ನರಸಿಂಹನಿಗೆ ರಾಜ್ಯಾಭ್ಯುದಯಕ್ಕೆ, ಶತ್ರುನಾಶಕ್ಕೆ ಸಹಾಯ ಮಾಡಿದರು. ಬೆಟ್ಟರಸನಿಗೆ ಹರಿಹರದೇವ, ಮಾಧವ ಚಮೂಪ, ಆಚಣ ದಂಡನಾಥ, ದೇವರಸ, ಕೇಶವ ಚಮೂಪ, ಮಲ್ಲಪ ಮತ್ತು ಮಾರಮಯ್ಯ ಎಂಬ ಮಕ್ಕಳಿದ್ದರು. ಇವರೆಲ್ಲರೂ, ಪ್ರಸ್ತುತ ಶಾಸನದ ಕೇಶವ ಚಮೂಪನೂ ಸೇರಿ ಎರಡನೆಯ ಬಲ್ಲಾಳನ ರಾಜ್ಯದಲ್ಲಿ ವಿವಿಧ ಹುದ್ದೆಗಳಲ್ಲಿದ್ದರು. ಕೇಶವ ಚಮೂಪನಿಗೆ ಬಲ್ಲಾಳ ದಂಡೇಶ, ಮಾಧವ ಮಂತ್ರಿ, ಬೆಟ್ಟ ಸೇನಾಪತಿ ಎಂಬ ಮಕ್ಕಳಿದ್ದರು. ಹೀಗೆ ತಲೆಮಾರಿನಿಂದ ತಲೆಮಾರಿಗೆ ಹೊಯ್ಸಳ ರಾಜವಂಶದಲ್ಲಿ ಸೇವೆ ಸಲ್ಲಿಸಿದ ಈ ಮನೆತನದ ವಂಶವೃಕ್ಷ ಗಮನಾರ್ಹವಾಗಿದೆ.೨೪ ಮುಂದಿನ ಕಾಲದ ಶಾಸನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಈ ದಂಡನಾಯಕರ ವಂಶದ ಸೇವೆ ಮುಂದಿನ ತಲೆಮಾರುಗಳಲ್ಲಿಯೂ ನಡೆದಿರುವುದನ್ನು ಗುರುತಿಸುವುದು ಸಾಧ್ಯವಾಗಬಹುದು.

ಹೊಯ್ಸಳ ನರಸಿಂಹನಲ್ಲಿ ಅಡ್ಡಾಯುಧದ೨೫ ಹರಿಹರನು ದಂಡನಾಥಾಗ್ರಗಣ್ಯ ನಾಗಿದ್ದನು. ಅವನ ವಂಶದ ಹಿರಿಯರೂ ಅಮಾತ್ಯರಾಗಿ ಸೇವೆ ಸಲ್ಲಿಸಿದವರು. ಚಿಕ್ಕ ಹಡೆವಳ್ಳನು ವಿಷ್ಣುವರ್ಧನನಿಂದ 'ವಾಹನ ದಂಡಿಗೆ ಪೊದಳ್ಗಡಪ ಪಿಂಚ್ಛಾತಪತ್ರಾನ್ವಿತಾಸನಂ' ಪಡೆದಿದ್ದನು. ಅವನ ಮಗ ಮಲ್ಲೆಯ ನಾಯಕ. ಇವನಿಗೆ ಸಿಂಗೆಯ ನಾಯಕ, ಮಾರೆಯ ನಾಯಕ ಮತ್ತು ಹರಿಹರನು ಹುಟ್ಟಿದರು. ಇವರಲ್ಲಿ ಹರಿಹರ ನರಸಿಂಹನ ದಂಡನಾಥಾಗ್ರಗಣ್ಯನಾಗಿದ್ದು ಸಹೋದರರೊಂದಿಗೆ ಸೇರಿ ತಂದೆಯ ಹೆಸರಿನಲ್ಲಿ ಮಲ್ಲಿಕಾರ್ಜುನ ದೇವಾಲಯವನ್ನು ಬಸರಾಳಿನಲ್ಲಿ ಕಟ್ಟಿಸಿದನು. ಅಡ್ಡಾಯುಧದ ಹರಿಹರ ಸೇವುಣರ ಮೇಲಿನ ಯುದ್ಧದಲ್ಲಿ ಭಾಗವಹಿಸಿ ಜಯಶೀಲನಾಗಿದ್ದನು.೨೬

ವೀರಬಲ್ಲಾಳನ ಮಂತ್ರಿ ಅಮೃತ ದಂಡನಾಥನನ್ನು 'ವೀರಬಲ್ಲಾಳದೇವ ರಾಜ್ಯಾಭ್ಯುದಯ ಕರಣಕಾರಣ'ನೆಂದು ಶಾಸನವೊಂದರಲ್ಲಿ ಕೀರ್ತಿಸಲಾಗಿದೆ. ಶಾಸನ ಮುಂದುವರಿದು ಸಂಧಿವಿಗ್ರಹದಲ್ಲಿ ಅವನು ನಿಪುಣನೆಂದೂ 'ಮಂತ್ರಿಮಂಡಲ ನಿತ್ಯಾವಲೋಕರತ್ನದರ್ಪಣಂ' ಎಂದಿರುವುದಲ್ಲದೆ 'ಶಸ್ತ್ರ ಶ್ರಮಾಚಾರ್ಯ್ಯ ಭಾರದ್ವಾಜ'ನೆಂದೂ ಕರೆದಿದೆ. ಅವನು ಅಮೃತೇಶ್ವರ ದೇವಾಲಯವನ್ನು ಕಟ್ಟಿಸಿ ಹುಣಸೆಕಟ್ಟೆಯನ್ನು ಅಗ್ರಹಾರವಾಗಿ ಪರಿವರ್ತಿಸಿ ಕೊಟ್ಟು ಅದರೊಂದಿಗೆ ಅನೇಕ ದಾನಗಳನ್ನೂ ನೀಡಿದ್ದಾನೆ.೨೭

ಯಾವುದೇ ಕಾರಣದಿಂದ ಒಂದು ರಾಜಮನೆತನ ಅವನತಿ ಹೊಂದಿದಾಗ ಬೇರೊಂದು ರಾಜಾಶ್ರಯ ಅರಸಿ ಅಧಿಕಾರಿಗಳು ವಲಸೆ ಹೋಗುತ್ತಿದ್ದರು. ಕಳಚೂರ್ಯರಲ್ಲಿ ಮಂತ್ರಿಯಾಗಿದ್ದ ರಾಚಮಯ್ಯ ಅನಂತರದಲ್ಲಿ ಹೊಯ್ಸಳ ಬಲ್ಲಾಳನಲ್ಲಿ ಸುಪ್ರಸಿದ್ಧ ಸೇನಾಪತಿಯಾಗಿ ಹೆಸರು ಪಡೆದಿದ್ದನ್ನು ಕಾಣಬಹುದು. ಬಿಜ್ಜಳನ ಸಂಪತ್ತು ಅಭಿವೃದ್ಧಿಗಳಿಗೆ ಕಾರಣನಾಗಿದ್ದ ರಾಚಮಯ್ಯ ಬಲ್ಲಾಳನಲ್ಲಿ ಮಹಾದಂಡನಾಯಕನಾಗಿ ಸೇವೆ ಸಲ್ಲಿಸಿದ. ಅವನು 'ವಸುಧೈಕ ಬಾಂಧವ'ನೆಂದು ಹೆಸರು ಪಡೆದಿದ್ದನು. ಇವನು ಅರಸೀಕೆರೆಯಲ್ಲಿ ಕಟ್ಟಿಸಿದ್ದ ಸಹಸ್ರಕೂಟ ಚೈತ್ಯಾಲಯ ಅವನ ಭಕ್ತಿ ಮತ್ತು ಕಲಾಭಿರುಚಿಗೆ ಸಾಕ್ಷಿಯಾಗಿದೆ.೨೮ ಇವನು ಜಿನನಾಥಪುರದಲ್ಲೂ ಶಾಂತಿನಾಥ ಬಸದಿಯನ್ನು ನಿರ್ಮಿಸಿರುವ ವಿಷಯ ತಿಳಿದುಬರುತ್ತದೆ.

ಮುಮ್ಮಡಿ ನರಸಿಂಹನ ದಂಡನಾಯಕ ಸೋಮನಾಥ ಕ್ರಿ.ಶ. ೧೨೫೮ರಲ್ಲಿ ಅಗ್ರಹಾರವನ್ನು ಸ್ಥಾಪಿಸಿ ಸೋಮನಾಥಪುರವೆಂದು ಹೆಸರಿಟ್ಟು ಅಲ್ಲಿ ವಿಷ್ಣುದೇವಾಲಯ, ಶಿವಾಲಯಗಳನ್ನು ನಿರ್ಮಿಸಿದ. ಅಲ್ಲದೆ ಲಕ್ಷ್ಮೀನರಸಿಂಹ, ಯೋಗನಾರಾಯಣ, ನಾರಸಿಂಹೇಶ್ವರ ಮತ್ತು ಸೋವಲೇಶ್ವರ ದೇವಾಲಯಗಳನ್ನೂ ನಿರ್ಮಿಸಿದ್ದಾನೆ. ಸೋಮನಾಥಪುರದ ಕೇಶವ ದೇವಾಲಯ ಮೂರು ಗರ್ಭಗೃಹಗಳುಳ್ಳ ತ್ರಿಕೂಟಾಚಲ. ಬೇಲೂರಿನ ಚನ್ನಕೇಶವ ದೇವಾಲಯಕ್ಕಿಂತ ಚಿಕ್ಕದಾಗಿದ್ದರೂ ಇಲ್ಲಿ ಕೆತ್ತನೆಯ ಅಲಂಕಾರದ ಕೆಲಸಗಳು ಹೆಚ್ಚು. ಇದು ಹೊಯ್ಸಳ ಶೈಲಿಯ ಉತ್ತಮ ದೇವಾಲಯಗಳಲ್ಲಿ ಒಂದೆಂದು ಪ್ರಸಿದ್ಧವಾಗಿದೆ.೨೯ ಸೋಮನಾಥನು ಹರಿಹರದ ದೇವಾಲಯದ ಮಹಾದ್ವಾರ, ಗೋಪುರ ಮತ್ತು ಕಳಶಗಳನ್ನು ಸ್ಥಾಪಿಸಿರುವುದು ಕಂಡುಬರುತ್ತದೆ.

ಹೊಯ್ಸಳ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ಬೊಮ್ಮಣ್ಣ ದಂಡನಾಯಕ ನುಗ್ಗೇಹಳ್ಳಿಯಲ್ಲಿ ಅಗ್ರಹಾರ ಮಾಡಿಸಿ (ಕ್ರಿ.ಶ. ೧೨೪೬) ಕೇಶವ, ನರಸಿಂಹ, ಗೋಪಾಲ ದೇವರುಗಳ ವಿಗ್ರಹಗಳನ್ನು ಪ್ರತಿಷ್ಠಾಪಿಸಿದನು. ಊರಿನ ಮಧ್ಯದಲ್ಲಿ ವಿಷ್ಣುದೇವಾಲಯ, ಈಶಾನ್ಯ ಭಾಗದಲ್ಲಿ ಶಿವದೇವಾಲಯವನ್ನು ಕಟ್ಟಿಸಿದನು. ಇವನ ಅಕ್ಕ ಲಖ್ಖವ್ವೆ ಮತ್ತು ಬಲು ಮನುಷ್ಯ ಕಮ್ಮಟದ ಬಸವಣ್ಣ ಇವರಿಬ್ಬರೂ ಸೇರಿ ಅಲ್ಲಿ ಛತ್ರಗಳನ್ನು ಕಟ್ಟಿಸಿ ದತ್ತಿ ಬಿಟ್ಟಿದ್ದಾರೆ.೩೦ ಮೂರನೆಯ ನರಸಿಂಹನ ದಂಡನಾಯಕ ಗೋಪಾಲನು ಸೆಟ್ಟಿಕೆರೆಯಲ್ಲಿ ಅಗ್ರಹಾರವನ್ನು ನಿರ್ಮಿಸಿದ ವಿಷಯ ತಿಳಿದುಬರುತ್ತದೆ.೩೧

ವಿಷ್ಣುವರ್ಧನನ ದಂಡನಾಯಕ ಕೇತಮಲ್ಲ ಹಳೆಯ ಬೀಡಿನಲ್ಲಿ ಹೊಯ್ಸಳೇಶ್ವರ ದೇವಾಲಯವನ್ನು ಕಟ್ಟಿಸಿದನು. ಕ್ರಿ.ಶ. ೧೧೨೧ಕ್ಕೂ ಮೊದಲು ಈ ದೇವಾಲಯ ನಿರ್ಮಾಣವಾಗಿರಬೇಕೆಂದು ಭಾವಿಸಲಾಗಿದೆ. ಇದು ಹೊಯ್ಸಳ ಶೈಲಿಯ ದೇವಾಲಯಗಳಲ್ಲೆಲ್ಲಾ ದೊಡ್ಡದಾಗಿದ್ದು ಅದ್ಭುತವಾದ ಕಲಾಕೌಶಲ್ಯದಿಂದ ಕೂಡಿ ಸುಪ್ರಸಿದ್ಧವಾಗಿದೆ.೩೨

ದಂಡನಾಯಕರಂತೆ ಅವರ ಆಪ್ತ ಬಂಧುಗಳೂ, ಆಪ್ತ ವರ್ಗದವರೂ ಅನೇಕ ದೇವಾಲಯ ನಿರ್ಮಾಣ, ದಾನ ದತ್ತಿಗಳನ್ನು ಮಾಡಿರುವ ನಿದರ್ಶನಗಳು ಹೇರಳವಾಗಿ ದೊರೆಯುತ್ತವೆ. ಎರಡನೆಯ ಬಲ್ಲಾಳನ ಸಂಧಿವಿಗ್ರಹಿ ಮಂತ್ರಿಯಾದ ಚಂದ್ರಮೌಳಿಯ ಹೆಂಡತಿ ಜೈನಳಾದ ಆಚಿಯಕ್ಕ ಶ್ರವಣಬೆಳಗೊಳದಲ್ಲಿ ಕಟ್ಟಿಸಿದ ಬಸದಿಗೆ ಅಕ್ಕನ ಬಸದಿಯೆಂದು ಹೆಸರು ಬಂದಿದೆ. ಚಂದ್ರಮೌಳಿ ಚಕ್ರವರ್ತಿಯಿಂದ ಇದೇ ಬಸದಿಗೆ ಅನೇಕ ದಾನಗಳನ್ನು ಕೊಡಿಸಿದ ವಿಷಯ ಶಾಸನದಿಂದ ತಿಳಿದುಬರುತ್ತದೆ.೩೩

ದಂಡನಾಯಕರು ನಿರ್ಮಾಣ ಕಾರ್ಯಗಳನ್ನು ಮಾತ್ರವಲ್ಲ, ದುರಸ್ಥಿ ಕಾರ್ಯಗಳನ್ನೂ ಆಸಕ್ತಿಯಿಂದ ನಿರ್ವಹಿಸುತ್ತಿದ್ದರು. ಬೇಲೂರು ಚನ್ನಕೇಶವ ದೇವಾಲಯ ಶಿಖರದ ಮರಗೆಲಸ ಕೊಳೆತು ಮುರಿದು ಬಿದ್ದಾಗ ಮಹಾಪ್ರಧಾನಿ ಖಂಡೆಯರಾಯ ಸೋಮಯ್ಯನು ದಂಡನಾಯಕನ ಅಧೀನ ಅಧಿಕಾರಿ ರಂಗಣ್ಣನಿಗೆ ಹೇಳಿ ಮರಗೆಲಸವನ್ನು ಬಲಿಷ್ಠ ಮಾಡಿಸಿ ಬಿದ್ದ ಇಟ್ಟಿಗೆಗಳೆಲ್ಲವನ್ನೂ ಸರಿಪಡಿಸಿದನು.೩೪

ದಂಡನಾಯಕ ವೃತ್ತಿ ಬಹುಮುಖಿಯಾಗಿದ್ದು ಸ್ಪರ್ಧಾತ್ಮಕವಾಗಿಯೂ ಇರುತ್ತಿತ್ತು. ಇಂಥದರಲ್ಲೂ ಕೆಲವು ದಂಡನಾಯಕರು ಸ್ವತಃ ಕಾವ್ಯ ರಚಿಸಿರುವುದು ಕುತೂಹಲಕರವಾಗಿದೆ. ಹೊಯ್ಸಳರ ಪ್ರಸಿದ್ಧ ದಂಡನಾಯಕ ಪೋಲಾಳ್ವನು ಷಟ್ಪದಿಯಲ್ಲಿ 'ಹರಿಚಾರಿತ್ರ' ರಚಿಸಿರುವುದು ತಿಳಿದುಬರುತ್ತದೆ. ಆದರೆ ಆ ಕೃತಿ ಲಭ್ಯವಾಗಿಲ್ಲ. ಹೊಯ್ಸಳ ಮಂತ್ರಿ ಚಂದ್ರಮೌಳಿ, ಜಗನ್ನಾಥ ವಿಜಯವನ್ನು ರಚಿಸಿದ ರುದ್ರಭಟ್ಟನಿಗೆ ಪೋಷಕನಾಗಿದ್ದನೆಂದು ತಿಳಿದುಬಂದಿದೆ. ದಂಡನಾಯಕರು ಸಾಹಿತ್ಯ ಹಾಗೂ ಕಲಾಪ್ರೇಮಿಗಳಾಗಿದ್ದರೆಂಬುದಕ್ಕೆ ಇವು ನಿದರ್ಶನಗಳಾಗಿವೆ.

ರಾಜರಿಗೆ ಎಲ್ಲ ಸಾರಿಯೂ ವಿಧೇಯರಾದ, ಪ್ರಾಮಾಣಿಕರಾದ ದಂಡನಾಯಕರು ದೊರೆಯುತ್ತಿದ್ದರೆಂದು ಭಾವಿಸುವಂತಿಲ್ಲ. ಬಹುಮಟ್ಟಿಗೆ ಉತ್ತಮ ಮತ್ತು ಸಮರ್ಥ ಅಧಿಕಾರಿಗಳೇ ಇರುತ್ತಿದ್ದರಾದರೂ ಕೆಲವು ಸಾರಿ ಯುದ್ಧವೆಂದರೆ ಭೀತಿ ಪಡುವ, ಒಡೆಯನ ಹಣವನ್ನು ಅಪಹರಿಸುವ ಅಸಮರ್ಥ 'ದಂಡ'ನಾಯಕರೂ ಇದ್ದರೆಂದು ಒಂದು ಶಾಸನ ತಿಳಿಸುತ್ತದೆ.೩೫

ದಂಡನಾಯಕರು ತಪ್ಪಾಗಿ ನಡೆದುಕೊಂಡಾಗ, ಅಪ್ರಾಮಾಣಿಕರಾಗಿ ನಡೆದುಕೊಂಡಾಗ, ಅವಿಧೇಯರಾದಾಗ ಅವರನ್ನು ಶಿಕ್ಷಿಸಿ ಸರಿದಾರಿಗೆ ತರುತ್ತಿದ್ದುದಕ್ಕೆ ಒಂದು ನಿದರ್ಶನ ಕೊಡಬಹುದು. ಹೊಯ್ಸಳ ನರಸಿಂಹನು ವೀರಚಿಕ್ಕಕೇತಯ ದಣ್ಣಾಯಕನ ಮೇಲೆ ಮುನಿದು (ಮುನಿಸಿಗೆ ಕಾರಣ ಸ್ಪಷ್ಟವಾಗಿಲ್ಲ) ಅವನನ್ನು ಬಂಧಿಸಿ ಅವನ ಭಂಡಾರಿಯಾದ ಮೆಯೆ ದೇವನನ್ನು ಅಧಿಕಾರದಿಂದ ಪದಚ್ಯುತಗೊಳಿಸಿದನು.೩೬

ಹೊಯ್ಸಳರ ಆಳ್ವಿಕೆಯ ಕೊನೆಯ ಭಾಗದಲ್ಲಿ ದಂಡನಾಯಕರು ಅತ್ಯಂತ ಮಹತ್ವದ ಆಡಳಿತಾತ್ಮಕ ಪಾತ್ರ ವಹಿಸಿರುವುದು ವಿಶೇಷವಾಗಿ ಗಮನಿಸಬೇಕಾದ ಅಂಶವಾಗಿದೆ. ದಂಡನಾಯಕರು ರಾಜ್ಯಾಡಳಿತದಲ್ಲಿ, ರಾಜ್ಯವಿಸ್ತರಣೆಯಲ್ಲಿ, ಯುದ್ಧಗಳಲ್ಲಿ, ಶಾಂತಿಸ್ಥಾಪನೆಯಲ್ಲಿ, ದಾನ ಧರ್ಮಗಳಲ್ಲಿ, ದೇವಾಲಯ ನಿರ್ಮಾಣ, ದೇವಾಲಯ ದುರಸ್ಥಿ, ಅಗ್ರಹಾರ ಸ್ಥಾಪನೆ, ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಯಲ್ಲಿ ಗಣ್ಯ ಪಾತ್ರ ವಹಿಸಿರುವುದನ್ನು ಇದುವರೆಗೂ ಸ್ಥೂಲವಾಗಿ ಗಮನಿಸಲಾಗಿದೆ. ಹೊಯ್ಸಳರ ಆಳ್ವಿಕೆಯ ಕೊನೆಯ ಭಾಗದಲ್ಲಿ ಅಂದರೆ ಮೂರನೆಯ ಬಲ್ಲಾಳನ (ಕ್ರಿ.ಶ. ೧೨೯೧-೧೩೪೨) ಕೊನೆಯ ಎರಡು ದಶಕಗಳಲ್ಲಿ, ಚಕ್ರವರ್ತಿ ತನ್ನ ಇಳಿ ವಯಸ್ಸಿನಲ್ಲಿ ಬಹುದೊಡ್ಡ ಹೋರಾಟದ ಬದುಕನ್ನು ನಡೆಸಬೇಕಾಯಿತು. ಮಲ್ಲಿಕಾಫರನ ಆಕ್ರಮಣದಿಂದ ನಲುಗಿದ ಹೊಯ್ಸಳ ರಾಜಧಾನಿ ದೋರಸಮುದ್ರ ಆಕ್ರಮಣದ ನೋವನ್ನು ಅನುಭವಿಸಿದ ನಂತರ ಅಲ್ಲಿಂದ ಬಲ್ಲಾಳನು ಬೇಲೂರಿಗೆ ತೆರಳಿ ಮತ್ತೆ ಆರು ವರ್ಷಗಳಲ್ಲಿ ದೋರಸಮುದ್ರವನ್ನು ಪುನರ್ ನಿರ್ಮಾಣ ಮಾಡಿಸಿ (ಕ್ರಿ.ಶ. ೧೩೧೬), ಮತ್ತೆ ಎರಡು ವರ್ಷಗಳ ನಂತರ ತನ್ನ ವಾಸವನ್ನು ತಿರುವಣ್ಣಾಮಲೆಗೆ ಸ್ಥಳಾಂತರಿಸಿದನು. ಸಾಮ್ರಾಜ್ಯದ ಅನೇಕ ಭಾಗಗಳಲ್ಲಿ ಇದ್ದ ದೆಹಲಿ ಸುಲ್ತಾನರ ಪ್ರತಿನಿಧಿಗಳನ್ನು ಎದುರಿಸುವುದು ಸುಲಭದ ವಿಷಯವಾಗಿರಲಿಲ್ಲ. ಅದಕ್ಕಾಗಿ ಬಲ್ಲಾಳನು ತನ್ನ ಅಧೀನ ಮಾಂಡಳಿಕರ, ಅಧಿಕಾರಿಗಳ ಮತ್ತು ದಂಡನಾಯಕರ ನೆರವನ್ನು ಪಡೆದು ಅಧಿಕಾರ ವಿಕೇಂದ್ರೀಕರಣದ ಹೊಸ ಆಡಳಿತಾತ್ಮಕ ತಂತ್ರ ಪ್ರಯೋಗದಿಂದ ಶತ್ರುಗಳನ್ನು ಎದುರಿಸಲು ಮುಂದಾದನು.

ಸಾಮಾನ್ಯವಾಗಿ ರಾಜರು ತಮ್ಮ ಆಡಳಿತ ನಿರ್ವಹಣೆಯ ಅಧಿಕಾರವನ್ನು ರಾಣಿಯರು, ರಾಜಕುಮಾರರು ಮತ್ತು ರಾಜವಂಶದವರೊಂದಿಗೆ ಹಂಚಿಕೊಳ್ಳುವುದು ಒಪ್ಪಿತ ರೂಢಿಯಾಗಿದೆ. ಆದರೆ ಮೂರನೆಯ ಬಲ್ಲಾಳನ ಅಧೀನ ಅಧಿಕಾರಿಗಳು, ದಂಡನಾಯಕರು ಅಧಿಕೃತವಾಗಿ ಜಂಟಿಯಾಗಿ ರಾಜ್ಯಾಡಳಿತದ ಜವಾಬ್ದಾರಿ ಹೊತ್ತಿರುವುದು ಶಾಸನಗಳಲ್ಲಿ ದಾಖಲಾಗಿದೆ. ಅಷ್ಟೇ ಅಲ್ಲದೆ ಕೆಲವು ಶಾಸನಗಳಲ್ಲಿ ರಾಜರ ಉಲ್ಲೇಖವೂ ಇಲ್ಲದೆ ಸ್ವತಂತ್ರವಾಗಿ ಅಧಿಕಾರಿಗಳು ದಾನ ನೀಡಿರುವ ಉಲ್ಲೇಖಗಳು ಕಂಡುಬರುತ್ತವೆ. ಇಂಥ ಉಲ್ಲೇಖಗಳ ಕಡೆ ಗಮನ ಸೆಳೆದು ಡಾ. ಪಿ.ಬಿ.ದೇಸಾಯಿ ಅವರು ಬಲ್ಲಾಳನ ಹೊಸ ರೀತಿಯ ಆಡಳಿತಾತ್ಮಕ ಉಪಕ್ರಮವನ್ನು ಸ್ಪಷ್ಟಪಡಿಸಿದ್ದಾರೆ.

ಒಂದು ಶಾಸನ ಬಲ್ಲಾಳನನ್ನು ಹೆಸರಿಸಿ ಬಲಶಾಲಿ ಭೀಮರಾಯ, ರಾಜಕುಮಾರರಾದ ಕಥೋರಹರ, ಸಿಂಹರಘುನಾಥ, ಕಾಲಮೇಘ, ವೀರಶಾಂತರನ್ನು ಹೆಸರಿಸಿ ಅಮಾತ್ಯ ಬೈಚೆಯ, ಮಹಾಮಂತ್ರಿ ಬಲ್ಲಪ್ಪ ದಂಡನಾಯಕ ಮತ್ತು ಮಹಾಮಂತ್ರಿ ಸಿಂಗೆಯ ದಂಡನಾಯಕರು ಆಡಳಿತ ಮಾಡುತ್ತಿದ್ದರು ಎಂಬ ನಿರೂಪಣೆ ಇದೆ.

ಮತ್ತೊಂದು ಶಾಸನದಲ್ಲಿ ಬಲ್ಲಾಳ ದೊರೆ ವಿರೂಪಾಕ್ಷ ಹೊಸದುರ್ಗದಲ್ಲಿರುವಾಗ, ಅವನು ಮತ್ತು ಮಹಾಮಂತ್ರಿ ಕಾಮೆಯ ದಂಡನಾಯಕರು ಆಡಳಿತ ಮಾಡುತ್ತಿರುವಾಗ ಎಂಬ ಉಲ್ಲೇಖವಿದೆ.

ಈ ಎಲ್ಲ ಉಲ್ಲೇಖಗಳು ಹೊಯ್ಸಳ ಆಡಳಿತದಲ್ಲಿ ದಂಡನಾಯಕರು ವಹಿಸಿದ ಮಹತ್ವದ ಪಾತ್ರವನ್ನು ಸ್ಪಷ್ಟಪಡಿಸುತ್ತವೆ. ಬಲ್ಲಾಳನು ಬದಲಾದ ರಾಜಕೀಯ ಪರಿಸ್ಥಿತಿಯಲ್ಲಿ ಒಂದು ರೀತಿಯಲ್ಲಿ ಸ್ವಾಯತ್ತ ಅಥವಾ ಅರೆಸ್ವಾಯತ್ತ ಆಡಳಿತಾಧಿಕಾರವನ್ನು ನೀಡಿ ಸೂಕ್ಷ್ಮ ಪರಿಸ್ಥಿತಿಯನ್ನು ನಿಭಾಯಿಸಿದ ರೀತಿ ಕರ್ನಾಟಕದ ಇತಿಹಾಸದಲ್ಲಿ ಅವಿಸ್ಮರಣೀಯ ಎನ್ನಬಹುದು. ಬಲ್ಲಾಳನ ಈ ಆಡಳಿತಾತ್ಮಕ ತಂತ್ರಕ್ಕೆ, ನವವಿಧಾನಕ್ಕೆ ಸ್ಪಂದಿಸಿದ ಅಧಿಕಾರಿಗಳು, ದಂಡನಾಯಕರು ವಿಜಯನಗರ ಸ್ಥಾಪನೆಯ ಹಿನ್ನೆಲೆಯಲ್ಲಿ ಗಣ್ಯಪಾತ್ರ ವಹಿಸಿದ್ದಾರೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. ದಂಡನಾಯಕ ಮತ್ತು ಚಮೂಪತಿ ಪದಗಳ ಅರ್ಥ ವಿವರಣೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುಗಳ ಸಂಪುಟಗಳ ನೆರವನ್ನು ಬಳಸಿಕೊಳ್ಳಲಾಗಿದೆ. ಚಮೂವಲ್ಲಭ ಪದ ಪ್ರಯೋಗ S.I.I. XX 74 -9, ಕ್ರಿ.ಶ. ೧೧೧೨ – ಈ ಶಾಸನದಲ್ಲಿ ಪ್ರಯೋಗವಾಗಿದೆ.

೨. V.R. Ramachandra Dixitar, *War in Ancient India*, p.228.

೩. (ಮೈ) ಎ.ಕ. VII, ಮಂಡ್ಯ ೭೮, ಕ್ರಿ.ಶ. ೧೧೯೧.

೪. ಡಾ. ಶ್ರೀಧರ ಎಚ್.ಜಿ. : **ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ**, ಪು.೩೭–೩೮.

೫. Dr. T.V. Mahalingam : *South Indian Polity*, p.120.

೬. Dr. B.R. Gopal, *The Chalukya of Kalyana and the Kalachuris*, p.395.

೭. ಡಾ. ಎ.ವಿ. ನರಸಿಂಹಮೂರ್ತಿ, ಕರ್ಣಾಟಕದ ಸೇವುಣರ ಇತಿಹಾಸ, ಪು.೮೦.

೮. Dr. P.B. Desai, *Basaveswara and His Times*, p.180-81.

೯. Dr. G.S. Dixit, *Local self - Government in Medieval Karnataka*, p.38.

೧೦. ಡಾ. ಎಂ.ಚಿದಾನಂದ ಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪು.೩೩೨.

೧೧. (ಮೈ) ಎ.ಕ. VI, ಪಾಂಡವಪುರ ೭೪, ಕ್ರಿ.ಶ. ೧೧೮೯.

೧೨. Derrett D, *The Hoysalas*, p.191.

೧೩. Dr. M.V. KrishnaRao, *Public Administration under Hoysalas, Karnataka Darshana*, p.55.

೧೪. **ಸೂಕ್ತಿ ಸುಧಾರ್ಣವಂ** : (ಸಂ) ಎನ್. ಅನಂತ ರಂಗಾಚಾರ್ ೧೬:೧೬.

೧೫. ಮೂರು ಶಕ್ತಿಗಳು/ಶಕ್ತಿ ತ್ರಯಗಳು : ಮಂತ್ರಶಕ್ತಿ (ಜ್ಞಾನಬಲ), ಪ್ರಭುಶಕ್ತಿ (ಕೋಶ, ದಂಡ ಬಲ), ಉತ್ಸಾಹ ಶಕ್ತಿ (ವಿಕ್ರಮಬಲ).

೧೫ಎ. ನಾಲ್ಕನೆಯ ವರ್ಣದವರನ್ನು ಅಧಿಕಾರಿಗಳನ್ನಾಗಿ ನೇಮಿಸಿಕೊಂಡಿದ್ದರೂ ಅವರನ್ನು ಆ ರೀತಿ ಹೆಸರಿಸಿ ನಿರ್ದೇಶಿಸುವುದು ಅತ್ಯಂತ ವಿರಳ, 'ನಾಗಮಂಗಲದ ಹೊಯ್ಸಳ ಇಮ್ಮಡಿ ನರಸಿಂಹನ ಶಾಸನದಲ್ಲಿ ಸೇನಾನಾಯಕ ಕಾಚಿದೇವನನ್ನು ಚತುರ್ಥ ವಂಶವೆಂದು ಕರೆಯಲಾಗಿದೆ'. ನೋಡಿ ಎಂ.ಪಿ. ಮಹದೇವಯ್ಯ, 'ಪ್ರಾಚೀನ ಕರ್ನಾಟಕದ ಮಂತ್ರಿಗಳು ಮತ್ತು ಅಧಿಕಾರಿಗಳು – ಕೆಲವು ವಿಚಾರಗಳು' ಇತಿಹಾಸ ದರ್ಶನ ಸಂ. ೭, ಪು.೭೮.

೧೬. (ರೈ) ಎ.ಕ. II, ಶ್ರವಣಬೆಳಗೊಳ ೫೭೧, ಕ್ರಿ.ಶ. ೧೧೮೧.

೧೭. (ರೈ) ಎ.ಕ. XI, ದಾವಣಗೆರೆ ೨೫, ಕ್ರಿ.ಶ. ೧೨೨೪.

೧೮. (ರೈ) ಎ.ಕ. IV, ಚಾಮರಾಜನಗರ ೨೯೫, ಕ್ರಿ.ಶ. ೧೩೩೭.

೧೯. Dr. B.Sheik Ali, *The Hoysala Dynasty* (ed), p.333-34.

೨೦. (ರೈ) ಎ.ಕ. V, ಬೇಲೂರು ೧೧೨, ಕ್ರಿ.ಶ. ೧೨೨೦.

೨೧. (ರೈ) ಎ.ಕ. XI, ದಾವಣಗೆರೆ ೨೫, ಕ್ರಿ.ಶ. ೧೨೨೪.

೨೨. ಅದೇ.

೨೩. (ಮೈ) ಎ.ಕ. II, ಶ್ರವಣಬೆಳಗೊಳ ೫೭೧, ಕ್ರಿ.ಶ. ೧೧೮೧.

೨೪. (ರೈ) ಎ.ಕ. V, ಚನ್ನರಾಯಪಟ್ಟಣ ೨೪೪. ಕ್ರಿ.ಶ. ೧೨೧೦.

ಐದು ತಲೆಮಾರಿಗೆ ಹರಿದು ಬಂದಿರುವ ಸೇವೆಯನ್ನು ಹೀಗೆ ಗುರುತಿಸಬಹುದು.

| **ಹೊಯ್ಸಳ ವಂಶದ ಅರಸರು** | | **ದಂಡನಾಯಕರು** |
|---|---|---|
| ವಿನಯಾದಿತ್ಯ | – | ರಾಮ ದಂಡನಾಯಕ |
| (೧೦೪೭–೧೦೯೮ | | ↓ |
| ↓ | | |
| ಎರೆಯಂಗ | – | ಶ್ರೀಧರ ದಂಡನಾಥ |
| (೧೦೬೩–೧೧೦೦) | | |
| ↓ | | ↓ |
| ವಿಷ್ಣುವರ್ಧನ | – | ವಿಭುಮಲ್ಲಿದೇವ ದಂಡನಾಥ |
| (೧೧೦೦–೧೧೫೨ | | ಸಚಿವೋತ್ತಮದಾಮರಾಜ |
| | | ಮುಖ್ಯ ಸೇನಾಪತಿ ಕೇಶವರಾಜ |
| ↓ | | ↓ |
| ನರಸಿಂಹ ೧ | – | ಮಾಧವ ಮಂತ್ರಿ |
| (೧೧೫೨–೧೧೭೩ | | ಬೆಟ್ಟರಸ |
| | | ದಾಮದಂಡಾಧೀಶ |
| ↓ | | ↓ |
| ೨ನೆಯ ಬಲ್ಲಾಳ | – | ಹರಿಹರದೇವ, ಮಾಧವಚಮೂಪ |
| (೧೧೭೦–೧೨೨೦ | | ಆಚಣ ದಂಡನಾಥ, ದೇವರಸ |
| | | ಕೇಶವಚಮೂಪ, ಮಲ್ಲಪ, ಮಾರಮಯ್ಯ |
| | | ↓ |

ಬಲ್ಲಾಳದಂಡೇಶ, ಮಾಧವ ಮಂತ್ರಿ, ಬೆಟ್ಟಸೇನಾಪತಿ

೨೫. ಡಾ. ಎಂ. ಚಿದಾನಂದಮೂರ್ತಿ : **ಭಾಷಾವಿಜ್ಞಾನ ಮತ್ತು ಛಂದಸ್ಸು**, ಪು.೨೩೭–೩೮. ಚಿದಾನಂದಮೂರ್ತಿಯವರು ಸಂಸ್ಕೃತ 'ಅರ್ಧ'ಕ್ಕೆ ಸಂವಾದಿಯಾಗಿ ಪ್ರಾಕೃತದಲ್ಲಿ '**ಅಡ್ಢ**' ಇದೆ. ಇದು ಕನ್ನಡಕ್ಕೆ ಬಂದಾಗ ಅಡ್ಡ ಆಗುತ್ತದೆ. ಅಡ್ಡಕ್ಕೆ ಮೂಲದಲ್ಲಿ ಅರ್ಧ ಎಂಬ ಅರ್ಥದ ಜೊತೆಗೆ ಸ್ವಲ್ಪ, ಚಿಕ್ಕದು ಎಂಬ ಅರ್ಥವೂ ಇದ್ದು ಈ ಅರ್ಥವನ್ನು ಗ್ರಹಿಸಿದರೆ ಅಡ್ಡಾಯುಧವು ಚಿಕ್ಕ ಆಯುಧ, ಚಿಕ್ಕ ಖಡ್ಗ ಎಂಬ ಅರ್ಥಗಳು ಹೊಮ್ಮುವುದನ್ನು ಸೂಚಿಸಿ, ಈ ರೀತಿಯ

ಪದಗಳಾದ ಅಡ್ಡಗಯ್ದು, ಅಡ್ಡಕವಿತೆ, ಅಡ್ಡಾವುಜ ಮುಂತಾದ ಪದಗಳ ನಿಷ್ಪತ್ತಿಗೆ ದಾರಿ ಮಾಡಿಕೊಡುತ್ತದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಅಡ್ಡಾಯುಧದ ಹರಿಹರ ಬಹುಶಃ ಚಿಕ್ಕ ಖಡ್ಗ ಹಿಡಿದು ಹೋರಾಡುವುದರಲ್ಲಿ ಪರಿಣತನಾಗಿದ್ದನೆಂದು ತೋರುತ್ತದೆ.

೨೬. (ರೈ) ಎ.ಕ. VIII, ಮಂಡ್ಯ ೨೯, ಕ್ರಿ.ಶ. ೧೨೩೪.

೨೭. (ರೈ) ಎ.ಕ. VI, ತರೀಕೆರೆ ೪೫, ಕ್ರಿ.ಶ. ೧೧೯೪.

೨೮. (ರೈ) ಎ.ಕ. V, ಅರಸೀಕೆರೆ ೭೭, ಕ್ರಿ.ಶ. ೧೨೨೦.

೨೯. ಡಾ. ಎಸ್.ಶ್ರೀಕಂಠಶಾಸ್ತ್ರಿ, **ಹೊಯ್ಸಳ ವಾಸ್ತುಶಿಲ್ಪ**, ಪು.೫೦.

೩೦. ಅದೇ, ಪು.೧೧೪.

೩೧. ಅದೇ, ಪು.೧೮೨-೧೮೩.

೩೨. (ರೈ) ಎ.ಕ. V, ಬೇಲೂರು ೧೪೭, ಕ್ರಿ.ಶ. ೧೨ನೆಯ ಶತಮಾನ.

೩೩. ಡಾ. ಎಸ್. ಶ್ರೀಕಂಠಶಾಸ್ತ್ರಿ, ಪೂರ್ವೋಕ್ತ, ಪು.೨೦೪.

೩೪. ಡಾ.ಸಿ.ಯು. ಮಂಜುನಾಥ್, **ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ** (ಅಪ್ರಕಟಿತ ಪಿಎಚ್.ಡಿ. ನಿಬಂಧ, ಪು.೪೩೫.

೩೫. ಡಾ.ಎಂ. ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪು.೩೩೨, 'ಅವಸರಮಾರ್ದುಕಿವಿರ್ಚುವ ಸಂಗರವಾಗೆ ನೋಡೆ ಬೆರ್ಚುವ ಪತಿಯರ್ಥಮಂ ಕಳಲೊಡರ್ಚು'.

೩೬. (ರೈ) ಎ.ಕ. VII, ಶಿಕಾರಿಪುರ ೧೩೭, ಕ್ರಿ.ಶ. ೧೧೧೪.

೩೭. ಹೆಚ್ಚಿನ ವಿವರಗಳಿಗೆ ಗಮನಿಸಿ : *The Hoysala Dynasty*, ಪೂರ್ವೋಕ್ತ, ಪು.೩೩೩-೩೩೪.



# ವಿಜಯನಗರದ ಚರಿತ್ರೆ : ಕೆಲವು ಟಿಪ್ಪಣಿಗಳು

– ಶ್ರೀನಿವಾಸ ರಿತ್ತಿ*

ವಿಜಯನಗರದ ಚರಿತ್ರೆಯನ್ನು ಶಾಸನಗಳು ಮತ್ತು ಇತರ ಆಧಾರಗಳ ಮೂಲಕ ಅಭ್ಯಸಿಸುವಾಗ ಒಮ್ಮೊಮ್ಮೆ ಕೆಲವು ಸಮಸ್ಯೆಗಳು ಸಂದೇಹಗಳು ಉಂಟಾಗುತ್ತವೆ. ಹೊಸ ವಿಚಾರಗಳು ಹೊಳೆಯುತ್ತವೆ. ಅಂಥವುಗಳನ್ನು ಬೆಳಕಿಗೆ ತರುವುದು ಅಗತ್ಯವಾಗುತ್ತದೆ. ಅಂಥ ಕೆಲವು ಟಿಪ್ಪಣಿಗಳು ಇಲ್ಲಿವೆ.

## ೧. ಸಾಮ್ರಾಜ್ಯದ ಹೆಸರು

ಈ ಸಾಮ್ರಾಜ್ಯವು ವಿಜಯನಗರ ಸಾಮ್ರಾಜ್ಯವೆಂದೇ ಎಲ್ಲೆಡೆಯೂ ಜನಜನಿತವಾಗಿದೆ. ನಾವು ಓದುವ ಇತಿಹಾಸ ಗ್ರಂಥಗಳಲ್ಲಿ, ಲೇಖನಗಳಲ್ಲಿ ಇದನ್ನು ವಿಜಯನಗರ ಸಾಮ್ರಾಜ್ಯವೆಂದೇ ಕರೆಯಲಾಗಿದೆ. ಆದರೆ ಇದು ಇದರ ನಿಜವಾದ ಹೆಸರೇ ಎಂಬ ಪ್ರಶ್ನೆ ಬಹಳ ಹಿಂದಿನಿಂದಲೂ ಇದೆ. ಒಂದೆರಡು ಕಡೆ ಚರ್ಚೆಯೂ ನಡೆದಿದೆ. ಇದನ್ನು ವಿವಿಧ ಆಧಾರಗಳ ಮೂಲಕ ವಿಶದವಾಗಿ ಚರ್ಚಿಸಿ ಸರಿಯಾದ ಸಂಗತಿಯನ್ನು ನಿರೂಪಿಸುವುದು ಅಗತ್ಯವಾಗಿದೆ.

ಹಾಗೆ ನೋಡಿದರೆ ಇದರ ನಿಜವಾದ ಹೆಸರು ಕರ್ನಾಟಕ ಸಾಮ್ರಾಜ್ಯ ಎಂದಿರಬೇಕು. ಈ ಸಂಗತಿಯನ್ನು ಒಬ್ಬಿಬ್ಬರು ವಿದ್ವಾಂಸರು ಹಿಂದೆಯೇ ಎತ್ತಿ ತೋರಿಸಿದ್ದಾರಾದರೂ ಈ ಹೆಸರು ಬಳಕೆಗೆ ಬಂದಿಲ್ಲ. ಇದನ್ನು ವಿದ್ವಾಂಸರು ಪರಿಶೀಲಿಸುವುದು ಅಗತ್ಯವಾಗಿದೆ.

ಈ ಸಾಮ್ರಾಜ್ಯದ ಮೂಲವು ಕರ್ನಾಟಕದಲ್ಲಿಯೇ ದೊರೆಯುತ್ತದೆ. ಇದು ಉಗಮವಾದದ್ದು, ಕಾರಣಾಂತರಗಳಿಂದ ನಾಶ ಹೊಂದಿದ ಹೊಯ್ಸಳ ಸಾಮ್ರಾಜ್ಯದ ಭೂಮಿಯಲ್ಲಿ. ಅಲ್ಲಿಂದ ಅದು ಉತ್ತರಾರ್ಧದಲ್ಲಿ ಕೃಷ್ಣಾ ನದಿಯಿಂದ ದಕ್ಷಿಣದಲ್ಲಿ ಕನ್ಯಾಕುಮಾರಿ ಯವರೆಗೆ ವಿಶಾಲವಾಗಿ ಹಬ್ಬಿತು. ಇದರ ಸ್ಥಾಪನೆಗಾಗಿ ಹೊಯ್ಸಳ ಮನೆತನದ ಕೊನೆಯ ಅರಸನಾದ ಹೊಯ್ಸಳ ಮೂರನೇ ಬಲ್ಲಾಳನ ಕೊಡುಗೆ ಅಷ್ಟಿಷ್ಟಲ್ಲ. ಮುಸಲ್ಮಾನರ ಧಾಳಿಗಳಿಂದಾಗಿ ಈ ರಾಜ್ಯವು ಶಕ್ತಿಯನ್ನು ಕಳೆದುಕೊಂಡಿದ್ದರೂ ಬಲ್ಲಾಳನು ಧೃತಿಗೆಡದೆ ಅವರನ್ನೆದುರಿಸಿ ಹೊಸ ರಾಜ್ಯವನ್ನು ಕಟ್ಟಲು ಅವಿರತವಾಗಿ ಶ್ರಮಿಸಿದನು. ಆನುವಂಶಿಕ ರಾಜಧಾನಿಯಾದ ದೋರಸಮುದ್ರವನ್ನು ತ್ಯಜಿಸಿ ಹೊಸಪಟ್ಟಣ ಅಥವಾ ವಿರೂಪಾಕ್ಷ ಹೊಸಪಟ್ಟಣ ಎಂಬ ನಗರವನ್ನು ಕಟ್ಟಿದನು. ಹಂಪೆಯ ಅಧಿದೇವತೆಯಾದ ವಿರೂಪಾಕ್ಷನ ಹೆಸರಿನಲ್ಲಿ ಇದನ್ನು ಕಟ್ಟಿಸಿದನು (ಬಲ್ಲಾಳನ ಮಗನ ಹೆಸರೂ ವಿರೂಪಾಕ್ಷನೆಂದೇ ಇದ್ದಿತು). ಇದೇ ನಗರವೇ ಮುಂದೆ ವಿಜಯನಗರ ಅಥವಾ ವಿದ್ಯಾನಗರ ಎಂದು ಹೆಸರಾಗಿ ಸಮಕಾಲೀನ ಜಗತ್ತಿನಲ್ಲಿ ಅತ್ಯಂತ ವೈಭವಯುತವಾದ ನಗರ ಎಂದು ಹೆಸರಾಯಿತು. ಬಲ್ಲಾಳನ ಬಂಟರಾದ, ಸಾಮಾನ್ಯವಾಗಿ ಹಕ್ಕ-ಬುಕ್ಕ ಎಂದು ಗುರುತಿಸಲ್ಪಡುವ, ಒಂದನೇ ಹರಿಹರ ಮತ್ತು ಒಂದನೇ ಬುಕ್ಕ ಇಲ್ಲಿ ಒಂದು ಬಲಿಷ್ಠವಾದ ಸಾಮಾಜ್ರವನ್ನು ಕಟ್ಟುವ ಸಾಹಸಕ್ಕೆ ಕೈಹಾಕಿ ಯಶಸ್ವಿಯಾದರು. ಆಗಿನ ಕಾಲದ ಚಿಕ್ಕ ಪುಟ್ಟ ಅರಸರು, ಸಾಮಂತರು, ಯತಿಗಳು, ಪ್ರಜೆಗಳು ಇವರಿಗೆ ಬೆಂಬಲವಾಗಿ ನಿಂತರು. ಹೊಯ್ಸಳರಿಗೂ ಇವರಿಗೂ ಇದ್ದ ನಂಟನ್ನು ಅನೇಕ ಶಾಸನಗಳು ಸೂಚಿಸುತ್ತವೆ. ಒಂದು ದೃಷ್ಟಿಯಿಂದ ಕರ್ನಾಟಕದಲ್ಲಿ ಇವರು ಹೊಯ್ಸಳರ ವಾರಸುದಾರರೆಂದೇ ಹೇಳಬಹುದಾಗಿದೆ. ಒಂದು ಸ್ವತಂತ್ರ, ಬಲಿಷ್ಠ ರಾಜ್ಯವಾಗಿದ್ದ ಹೊಯ್ಸಳ ರಾಜ್ಯವು ಈಗ ಈ ಸಾಮ್ರಾಜ್ಯದ ಒಂದು ಆಡಳಿತ ಪ್ರಾಂತವಾಯಿತು. ಹೊಸ ಸಾಮ್ರಾಜ್ಯದಲ್ಲಿಯೂ ಹೊಯ್ಸಳ ದೇಶವೆಂಬ ಹೆಸರನ್ನೇ ಈ ಅರಸರು ಮುಂದುವರೆಸಿದರು. ಒಂದನೇ ಬುಕ್ಕನು ಹೊಯ್ಸಳ ಅರಸರಿಗೆ ಸೇರಿದ ವಿಶಾಲ ಪ್ರದೇಶವನ್ನು ಹೊಸಪಟ್ಟಣದಿಂದ ಆಳುತ್ತಿರುವುದಾಗಿ ಶಾಸನಗಳಲ್ಲಿ ಹೇಳಲಾಗಿದೆ (ಹೊಯ್ಸಳಾನ್ವಯ ಮಹೀಪಾಲರ ಮೇದಿನೀಮಂಡಲವನೂ ನಿಜಮಂಡಲವಾಗಿ ಪಾಲಿಸುತ ಹೊಸಪಟ್ಟಣದಲಿ

---

* ಭಾರತೀ, ನವೋದಯನಗರ, ಧಾರವಾಡ-೫೮೦೦೦೩.

ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತ).[೧] ವಿಜಯನಗರದ ಆರಂಭದ ಕಾಲದ ಅರಸರು ತಾವು ದೋರಸಮುದ್ರದಿಂದ ಆಳುತ್ತಿರುವುದಾಗಿ ಹೇಳಿಕೊಳ್ಳುತ್ತಾರೆ. ಅಷ್ಟೇ ಏಕೆ, ನಂತರ ಬಂದ ಅರಸನಾದ ಮಲ್ಲಿಕಾರ್ಜುನನು ಸಹ ಆ ಹೊತ್ತಿಗಾಗಲೇ ವಿಜಯನಗರವು ದೊಡ್ಡರಾಜಧಾನಿಯಾಗಿ ಬೆಳೆದಿದ್ದರೂ, ತಾನು ದೋರಸಮುದ್ರದಿಂದ ಆಳುತ್ತಿರುವುದಾಗಿ ಹೇಳಿಕೊಳ್ಳುತ್ತಾನೆ.[೨] ಇದು ಇವರ ಮತ್ತು ಹೊಯ್ಸಳ ರಾಜ್ಯದ ಗಾಢವಾದ ಸಂಬಂಧವನ್ನು ಬಿಂಬಿಸುತ್ತದೆ. 'The glorious empire of Vijayanagara was faithful trustee of the inheritance of Hoysalas' ಎಂಬ ಫಾದರ್ ಹೆರಾಸ್ ಅವರ ಮಾತು ಯಥಾರ್ಥವೇ ಆಗಿದೆ.[೩]

ಹೊಯ್ಸಳ ದೇಶದೊಂದಿಗೆ ತಮ್ಮ ನಿಕಟ ಸಂಬಂಧದಿಂದಾಗಿ ಈ ಅರಸರು ತಮ್ಮ ಸಾಮ್ರಾಜ್ಯವನ್ನು 'ಕರ್ನಾಟಕ ಸಾಮ್ರಾಜ್ಯ'ವೆಂದು ಕರೆದರು. ಎರಡನೇ ಹರಿಹರನು ಕರ್ನಾಟಕ ವಿದ್ಯಾವಿಲಾಸ ಎಂಬ ಬಿರುದನ್ನು ಹೊಂದಿದ್ದನು.[೪] ಒಂದು ಶಾಸನದಲ್ಲಿ ಈ ಸಾಮ್ರಾಜ್ಯವನ್ನು ಚಾರು ಕರ್ನಾಟಕದೇಶವೆಂದು ಕರೆಯಲಾಗಿದ್ದು ಎರಡನೇ ದೇವರಾಯನು ಅದನ್ನು ಆಳುತ್ತಿದ್ದನೆಂದು ಹೇಳಲಾಗಿದೆ.[೫] ಈ ಶಾಸನದಲ್ಲಿಯೇ ಈ ಸಾಮ್ರಾಜ್ಯವನ್ನು ಕರ್ನಾಟಸಂಪೂರ್ಣಭೂಮಂಡಲ ಮತ್ತು ಕರ್ನಾಟದೇಶ ಎಂದು ಕರೆಯಲಾಗಿದೆ. ಇನ್ನೂ ಒಂದು ಶಾಸನದಲ್ಲಿ ಮೊದಲ ಅರಸನಾದ ಸಂಗಮನು *ಕರ್ನಾಟಲಕ್ಷ್ಮೀಕರ್ಣಾವತಂಸ* ಎಂದು ಕರೆಯಲ್ಪಟ್ಟಿದ್ದಾನೆ. ಇನ್ನೊಬ್ಬ ಅರಸ ವಿರೂಪಾಕ್ಷನು *ಕರ್ನಾಟಕಚತುಸ್ಸಮುದ್ರದ ಅಧಿಪತಿ*ಯಾಗಿದ್ದನೆಂದು ಹೇಳಿದೆ. *ಕರ್ನಾಟೇಶ್ವರರಾಯಕುಂಜರ* ಎಂಬುದು ಅವನ ಬಿರುದಾಗಿತ್ತು. ಈ ಮನೆತನದ ಪ್ರಸಿದ್ಧ ಅರಸನಾದ ಕೃಷ್ಣದೇವರಾಯನಿಗೆ *ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ* ಎಂಬ ಬಿರುದಿದ್ದಿತು.[೬] *ಕರ್ನಾಟಕ ಸಿಂಹಾಸನಾರೂಢ* ಎಂದೂ ಅವನು ಕರೆಯಲ್ಪಟ್ಟಿದ್ದಾನೆ.[೭] ಒಂದು ತಮಿಳು ಶಾಸನದಲ್ಲಿ ಇವನು ಕರ್ನಾಟಕ ಸಿಂಹಾಸವನ್ನೇರಿದನೆಂದು ಹೇಳಿದೆ.[೮] ನಂತರದ ಅರಸನಾದ ಅಚ್ಯುತರಾಯನಿಗೆ *ಕರ್ಣಾಟಾಧಿಪ* ಎಂಬ ಹೆಸರಿದೆ.[೯] ಅಳಿಯ ರಾಮರಾಯನು ಪ್ರಾಚ್ಯಕರ್ನಾಟಕರಾಜ್ಯ ಸ್ಥಾಪನಾಚಾರ್ಯ ಎಂದು ಕರೆಯಲ್ಪಟ್ಟಿದ್ದಾನೆ.[೧೦] ಅರವೀಡು ಮನೆತನದ ಎರಡನೇ ವೆಂಕಟಪತಿಯು ಕರ್ನಾಟ ಸಿಂಹಾಸನವನ್ನು ಪಡೆದನೆಂದು ಹೇಳಲಾಗಿದೆ.[೧೧]

ತೆಲುಗು ಶಾಸನಗಳಲ್ಲಿಯೂ ಇಂಥದೇ ವರ್ಣನೆ ಬರುತ್ತದೆ. ಒಂದು ಶಾಸನವು ಕೃಷ್ಣದೇವರಾಯನನ್ನು *ಕರ್ನಾಟ ವಿಜಯನಗರಾಧೀಶ್ವರ ಕೃಷ್ಣರಾಯ* ಎಂದು ಬಣ್ಣಿಸುತ್ತದೆ.[೧೨] ಅಚ್ಯುತರಾಯನಿಗೆ *ಕರ್ನಾಟ ರಾಜ್ಯಲಕ್ಷ್ಮೀಮನೋಹರ* ಎಂಬ ಬಿರುದಿದ್ದಿತು.[೧೩] ಇನ್ನೊಂದು ಶಾಸನದಲ್ಲಿ ಇವನು *ಕರ್ನಾಟಭೂಪ ಅಚ್ಯುತರಾಯ* ಎಂದು ಕರೆಯಲ್ಪಟ್ಟಿದ್ದಾನೆ.[೧೪]

ಸಾಹಿತ್ಯದಿಂದಲೂ ಇದೇ ಮಾತು ದೃಢಪಡುತ್ತದೆ. ಗಂಗಾದೇವಿಯ *ಮಧುರಾವಿಜಯಂ* ಅಥವಾ *ವೀರಕಂಪರಾಯಚರಿತಂ* ಎಂಬ ಕಾವ್ಯದಲ್ಲಿ ಒಂದನೇ ಬುಕ್ಕನು *ಕರ್ನಾಟ ಲೋಕ ನಯನೋತ್ಸವ ಪೂರ್ಣಚಂದ್ರ* ಎಂದು ಬಣ್ಣಿಸಲ್ಪಟ್ಟಿದ್ದಾನೆ.[೧೫] ತೆಲುಗು ಕವಿ ಶ್ರೀನಾಥನು ದೇವರಾಯನನ್ನು *ಕರ್ನಾಟ ಕ್ಷಿತಿಪಾಲ* ಎಂದು ಕರೆದು,[೧೬] ಈ ಸಾಮ್ರಾಜ್ಯವನ್ನು *ಕರ್ನಾಟ ರಾಜ್ಯಲಕ್ಷ್ಮೀ* ಎಂದು ಬಣ್ಣಿಸಿದ್ದಾನೆ.[೧೭] *ಕ್ರೀಡಾಭಿರಾಮಮ್* ಎಂಬ ಕಾವ್ಯನಾಮದಲ್ಲಿ ಬುಕ್ಕನಿಗೆ *ಕರ್ನಾಟ ಕ್ಷಿತಿನಾಥ* ಎಂಬ ಬಿರುದು ಕೊಡಲ್ಪಟ್ಟಿದೆ.[೧೮] ಕೃಷ್ಣದೇವರಾಯನ *ಅಮುಕ್ತಮಾಲ್ಯದಾ* ಎಂಬ ಕಾವ್ಯದಲ್ಲಿ ಈ ಸಾಮ್ರಾಜ್ಯವು *ಕರ್ಣಾಟ ಧರಾ* ಎಂದು ಹೆಸರಿಸಲ್ಪಟ್ಟಿದೆ.[೧೯] ಅವನದೇ ಆದ *ಜಾಂಬವತೀ ಕಲ್ಯಾಣ*ದಲ್ಲಿ ಹಂಪೆಯ ಶ್ರೀ ವಿರೂಪಾಕ್ಷ ದೇವರಿಗೆ *ಕರ್ಣಾಟರಾಯರಕ್ಷಾಮಣಿ* ಎಂಬ ಹೆಸರಿದೆ.[೨೦] ಭಟ್ಟಮೂರ್ತಿಯ *ವಸುಚರಿತ್ರ*ದಲ್ಲಿ ಈ ಸಾಮ್ರಾಜ್ಯವನ್ನು *ಕರ್ನಾಟಸಾಮ್ರಾಜ್ಯ*ವೆಂದು ಕರೆಯಲಾಗಿದೆ.[೨೧] ಇದೇ ರೀತಿಯಾಗಿ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು. ಆದರೆ ಈ ಸಾಮ್ರಾಜ್ಯದ ಹೆಸರು ಕರ್ನಾಟಕ ಸಾಮ್ರಾಜ್ಯ ಎಂದೇ ಇದ್ದಿತು ಎಂದು ತೋರಿಸಲು ಇಷ್ಟು ಸಾಕು ಎಂದೆನಿಸುತ್ತದೆ.

ಹಾಗೆ ನೋಡಿದರೆ ಶಾಸನಗಳಲ್ಲಿಯೇ ಆಗಲಿ ಇತರ ಆಧಾರಗಳಲ್ಲಿಯೇ ಆಗಲಿ ವಿಜಯನಗರವು 'ಸಾಮ್ರಾಜ್ಯ' ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟೇ ಇಲ್ಲ. ಎಲ್ಲ ಕಡೆಗಳಲ್ಲಿಯೂ ಅದು ಕರ್ನಾಟಕ ಸಾಮ್ರಾಜ್ಯದ ರಾಜಧಾನಿಯೆಂದೇ ಕರೆಯಲ್ಪಟ್ಟಿದೆ. ಉದಾಹರಣೆಗೆ ಒಂದು ಶಾಸನದಲ್ಲಿ ವಿಜಯನಗರವು ಕರ್ನಾಟಕ ದೇಶದ ರಾಜಧಾನಿ ಎಂದು ಕರೆಯಲ್ಪಟ್ಟಿದೆ.[೨೨] ಇನ್ನೊಂದರಲ್ಲಿ *ಕರ್ನಾಟದೇಶ ಅದರೊಳು ವಿದ್ಯಾನಗರಿ* ಎಂದು ಹೇಳಲಾಗಿದೆ.[೨೩] ಮತ್ತೊಂದರಲ್ಲಿ *ಕರ್ನಾಟಕದ ಮಹಾರಾಜಧಾನಿ ವಿಜಯನಗರ* ಎಂದು ಹೇಳಿದೆ.[೨೪] *ಕರ್ನಾಟಕದ ರಾಜಧಾನಿ ವಿದ್ಯಾನಗರ, ಕರ್ನಾಟಕ ಮಹಾರಾಜ್ಯ ವಿದ್ಯಾನಗರ ಸಿಂಹಾಸನ* ಇತ್ಯಾದಿ ಅನೇಕ ಪ್ರಯೋಗಗಳು ದೊರೆಯುತ್ತವೆ.

ಹೆಚ್ಚು ಕಡಿಮೆ ವಿಜಯನಗರದ ಚರಿತ್ರೆಯನ್ನು ಕುರಿತು ಬರೆದ ಎಲ್ಲ ಆಧುನಿಕ ಇತಿಹಾಸಕಾರರೂ ಇದನ್ನು ವಿಜಯನಗರ ಸಾಮ್ರಾಜ್ಯವೆಂದೇ ಕರೆದಿದ್ದಾರೆ. ಶ್ರೀಮತಿ ಡಾ॥ ವಸುಂದರಾ ಫಿಲಿಯೋಝಾ ಇವರು ಸೂಚಿಸಿದಂತೆ ಈ ತಪ್ಪು 'Forgotton Empire' ಎಂಬ ಗ್ರಂಥದ ಕರ್ತೃವಾದ ರಾಬರ್ಟ್ ಸಿವೆಲ್ ಎಂಬುವವರಿಂದ ಆರಂಭವಾಗಿರಬೇಕು.[೨೫] ಮುಂದಿನ ಎಲ್ಲ ಲೇಖಕರೂ ಹೆಚ್ಚಿನ ವಿವೇಚನೆಯಿಲ್ಲದೆ ಇದನ್ನು ಅನುಸರಿಸಿದಂತೆ ತೋರುತ್ತದೆ. ೧೯೩೬ನೆಯ ಇಸವಿಯಷ್ಟು ಹಿಂದೆಯೇ ಡಾ॥ ಪಾಂಡುರಂಗ ರಾವ್ ದೇಸಾಯಿ ಇವರು ತಮ್ಮ ವಿಜಯನಗರ ಸಾಮ್ರಾಜ್ಯ ಎಂಬ ಗ್ರಂಥದಲ್ಲಿ ಸಾಕಷ್ಟು ಆಧಾರಗಳೊಂದಿಗೆ ಇದರ ಹೆಸರು ಕರ್ನಾಟಕ ಸಾಮ್ರಾಜ್ಯವೆಂಬುದನ್ನು ಎತ್ತಿ ತೋರಿಸಿದರು.[೨೬] ಇತ್ತೀಚೆಗಷ್ಟೇ ವಸುಂಧರಾ ಫಿಲಿಯೋಝಾ ಅವರು ಈ ಮಾತನ್ನು ಸ್ಪಷ್ಟವಾಗಿ ನಿರೂಪಿಸಿ, ತಮ್ಮ 'Vijayanagar' ಎಂಬ ಗ್ರಂಥದಲ್ಲಿ ವಿಜಯನಗರದ ಬದಲು ಕರ್ನಾಟಕ ಸಾಮ್ರಾಜ್ಯ ಎಂಬ ಹೆಸರನ್ನೇ ಬಳಸಿದ್ದಾರೆ. ಈ ಮಾತನ್ನೇ ಇನ್ನಷ್ಟು ಪುಷ್ಟೀಕರಿಸಿ ವಿದ್ವಾಂಸರ, ಅಭ್ಯಾಸಿಗಳ ಗಮನಕ್ಕೆ ತರುವುದು ಈ ಟಿಪ್ಪಣಿಯ ಉದ್ದೇಶವಾಗಿದೆ.

ಹೀಗಿದ್ದರೂ ಈ ಹೆಸರನ್ನು ಒಡನೆಯೇ ಬಳಕೆಯಲ್ಲಿ ತರುವುದು ಕಠಿಣವಾಗುತ್ತದೆ. ಯಾಕೆಂದರೆ ಬಹಳ ಹಿಂದಿನಿಂದಲೇ ಈ ಪ್ರಯೋಗ ಬಳಕೆಯಲ್ಲಿದೆ. ಪಠ್ಯಪುಸ್ತಕಗಳಲ್ಲಿ ಸಹ ಇದೇ ಮಾತೇ ಇದೆ. ಆದರೂ ಸರಿಯಾದ ಹೆಸರನ್ನು ಬಳಕೆಯಲ್ಲಿ ತರುವುದು ಅತ್ಯಗತ್ಯ. ವಿಜಯನಗರದ ಇತಿಹಾಸವನ್ನು ಬರೆಯುವ ಇನ್ನು ಮುಂದಿನ ಇತಿಹಾಸಕಾರರು ಈ ವಿಷಯವನ್ನು ಲಕ್ಷ್ಯದಲ್ಲಿಡುವುದು ಅವಶ್ಯವಾಗಿದೆ.

**೨. ಪಟ್ಟಕ್ಕಾಗಿ ಒಳಸಂಚುಗಳು, ಕುತಂತ್ರಗಳು, ಕೊಲೆಗಳು**

ವಿಜಯನಗರ ಚರಿತ್ರೆಯ ಮಧ್ಯಭಾಗದಲ್ಲಿ ಅಂದರೆ ಸಾಳುವ ಮತ್ತು ತುಳುವ ಮನೆತನಗಳ ಆಳಿಕೆಯಲ್ಲಿ ಎದ್ದು ಕಾಣುವ ಒಂದು ಸಂಗತಿಯೆಂದರೆ ಬಹುತೇಕ ಇತಿಹಾಸಕಾರರು ಹೇಳುವಂತೆ ಈ ಕಾಲದಲ್ಲಿ ಪಟ್ಟಕ್ಕಾಗಿ ಅನೇಕ ಒಳಸಂಚುಗಳು, ಕೊಲೆಗಳು ನಡೆದವು. ಇತಿಹಾಸಕಾರರು ಬಿಂಬಿಸುವಂತೆ ಈ ಅವಧಿಯಲ್ಲಿ ಕ್ರಮಾನುಗತವಾಗಿ ಯಾರೂ ಪಟ್ಟಕ್ಕೆ ಬರಲೇ ಇಲ್ಲವೆಂಬ ಮಟ್ಟಿಗೆ ಗೊಂದಲಗಳಿದ್ದವು. ಇಂಥ ಒಂದು ಪರಿಸ್ಥಿತಿ ಹೇಗೆ ಉಂಟಾಯಿತು ಎಂಬುದನ್ನು ವಿವರಿಸುವುದು ಕಷ್ಟವಾಗುತ್ತದೆ. ಇಂಥ ಮಾಹಿತಿಯು ವಿಶೇಷವಾಗಿ ಈ ಕಾಲದ ಚರಿತ್ರೆಯನ್ನರಿಯಲಿಕ್ಕೆ ಇದ್ದ ಮುಖ್ಯ ಆಧಾರಗಳಾದ ಫೆರಿಸ್ತಾ ಮುಂತಾದ ಮುಸ್ಲಿಮ್ ಲೇಖಕರ ಗ್ರಂಥಗಳು, ನ್ಯೂನಿಜ್ ಮುಂತಾದ ಇತರ ವಿದೇಶಿ ಲೇಖಕರ ಹೇಳಿಕೆಗಳಿಂದ ದೊರೆಯುತ್ತದೆ. ಇಂಥ ಘಟನೆಗಳು ನಡೆದ ಬಗ್ಗೆ ಮಾಹಿತಿಯು ಈ ಕಾಲದ ಇತರ ಸಾಹಿತ್ಯಕ ಗ್ರಂಥಗಳಲ್ಲಿ ಕ್ವಚಿತ್ತಾಗಿ ಸಿಗುತ್ತದೆ. ಈ ಚರಿತ್ರೆಗೆ ಪ್ರಮುಖ ಆಧಾರಗಳಾದ ಶಾಸನಗಳಲ್ಲಿ ಇಂಥ ಸುದ್ದಿ ಇಲ್ಲವೇ ಇಲ್ಲ. ಹೀಗಾಗಿ ಇಂಥ ಘಟನೆಗಳ ಐತಿಹಾಸಿಕತೆಯ ಬಗ್ಗೆ ಸಂಶಯ ಉಂಟಾಗುತ್ತದೆ. ಈ ಹಿನ್ನೆಲೆಯಲ್ಲಿ ಆಗ ಪಟ್ಟಕ್ಕಾಗಿ ನಡೆದವು ಎಂದು ಹೇಳಲಾದ ಕೆಲವು ಘಟನೆಗಳನ್ನು ಇಲ್ಲಿ ಪರಿಶೀಲಿಸಬಹುದಾಗಿದೆ.

ಎರಡನೇ ಹರಿಹರನ ತರುವಾಯ ಎರಡನೆ ಬುಕ್ಕನು ಪಟ್ಟಕ್ಕೆ ಬಂದನೆಂದೂ ಆದರೆ ಅವನ ತಮ್ಮನಾದ ಎರಡನೇ ವಿರೂಪಾಕ್ಷನು ಅವನನ್ನು ತಳ್ಳಿ ಮತ್ತು 'ಪಟ್ಟಕ್ಕಾಗಿ ಹವಣಿಸುತ್ತಿದ್ದ ಎಲ್ಲರನ್ನೂ ಕೊಂದು' ಪಟ್ಟವನ್ನು ಪಡೆದನೆಂದು ಹೇಳಿದೆ.[೨೭] ಈ ಮಾತು ವಿರೂಪಾಕ್ಷನಿಂದ ಬಹಳ ಕಾಲದ ನಂತರ ರಚಿತವಾದ 'ಪ್ರಪನ್ನಾಮೃತಂ' ಎಂಬ ಶ್ರೀವೈಷ್ಣವ ಗ್ರಂಥದಲ್ಲಿ ಬಂದಿದೆ. ಇದನ್ನು ಪುಷ್ಟೀಕರಿಸುವ ಯಾವ ಇತರ ಆಧಾರವೂ ಇಲ್ಲ. ಅಲ್ಲದೆ ಇಲ್ಲಿ ಬಣ್ಣಿಸಲಾದ ಕಥೆಯನ್ನು ನೋಡಿದರೆ ಅದು ಘಟನೆಯನ್ನು ವಿವರಿಸುವುದಕ್ಕಿಂತ ಶ್ರೀವೈಷ್ಣವ ಮತವನ್ನು ವೈಭವೀಕರಿಸುವ ಪ್ರಯತ್ನವಾಗಿದೆ ಎಂದು ಹೇಳಬಹುದು.

ನ್ಯೂನಿಜ್‌ನ ಹೇಳಿಕೆಯನ್ನು ಅವಲಂಬಿಸಿ ಎನ್. ವೆಂಕಟರಮಣಯ್ಯನವರು ಮಲ್ಲಿಕಾರ್ಜುನನ ಮರಣದ ನಂತರ ಮೂರನೇ ವಿರೂಪಾಕ್ಷನು ಪಟ್ಟವನ್ನು ಆಕ್ರಮಿಸಿದನು ಎಂದು ಹೇಳುತ್ತಾರೆ.[೨೮] ಈ ಕಾಲಕ್ಕೆ ಪಟ್ಟಕ್ಕಾಗಿ ಕ್ರಾಂತಿಗಳೂ ನಡೆದವೆಂದು ಹಯವದನರಾಯರೂ ಅಭಿಪ್ರಾಯಪಡುತ್ತಾರೆ. ವಿರೂಪಾಕ್ಷನು ತನ್ನ ಮಗನಿಂದಲೇ ಕೊಲ್ಲಲ್ಪಟ್ಟನೆಂದು ಮತ್ತು ಈ ಮಗನನ್ನು ಅವನ ಸೋದರನು ಕೊಂದನೆಂದು ಹೇಳುವ ನ್ಯೂನಿಜ್‌ನ ಮಾತನ್ನು ಹಯವದನರಾಯರು ಒಪ್ಪುತ್ತಾರೆ.[೨೯] ಸಾಳುವ ನರಸಿಂಹನು ಸಂಗಮ ವಂಶದ ಕೊನೆಯ ಅರಸನಿಂದ ಪಟ್ಟವನ್ನು ಕಸಿದುಕೊಂಡನೆಂದು ಹೆಚ್ಚು ಕಡಿಮೆ ಎಲ್ಲ ಇತಿಹಾಸಕಾರರೂ ಹೇಳುತ್ತಾರೆ. ನ್ಯೂನಿಜ್‌ನನ್ನು ನಂಬುವುದಾದರೆ, ನರಸಿಂಹನೂ ಅವನ ನೆಚ್ಚಿನ ಬಂಟ

ನರಸನಾಯಕನೂ ಅರಮನೆಗೆ ಹೋಗುವ ದಾರಿಯಲ್ಲಿ ಬಂದ ಎಲ್ಲರನ್ನೂ ಕಡಿದು ಹಾಕಿದರು.[೩೦] ಇಷ್ಟಾದರೂ ಅವನು ಅಧಿಕಾರವನ್ನು ವಹಿಸಿಕೊಂಡು ಒಳ್ಳೆಯದನ್ನೇ ಮಾಡಿದನೆಂದು ಇತಿಹಾಸಕಾರರು ಹೊಗಳುತ್ತಾರೆ.

ಇನ್ನು ನರಸನಾಯಕನ ಸರದಿ. ಇವನು ಸಾಳುವ ಅರಸರ ನಂಬಿಗಸ್ಥ ಸೇವಕ ಮತ್ತು ದಕ್ಷ ಅಧಿಕಾರಿ. ಆದರೂ ಸಾಳುವ ಇಮ್ಮಡಿ ಒಂದನೇ ನರಸಿಂಹನು ಮಡಿದೊಡನೆ ನರಸನಾಯಕನು ಇಮ್ಮಡಿ ನರಸಿಂಹನ ವಾರಸುದಾರಿಕೆಯನ್ನು ಬದಿಗೊತ್ತಿ ತಾನೇ ಅರಸನಾದನೆಂದು ಹೇಳಲಾಗುತ್ತದೆ.[೩೧] ಫೆರಿಸ್ತಾ ಮತ್ತು ನ್ಯೂನಿಜರ ಹೇಳಿಕೆಯ ಮೇಲೆ ನರಸನಾಯಕನು ಒಂದನೇ ನರಸಿಂಹನ ಇಬ್ಬರು ಮಕ್ಕಳನ್ನು ಕೊಂದು ಹಾಕಿದನೆಂದು ಹಯವದನರಾಯರು ಹೇಳುತ್ತಾರೆ. ನರಸನಾಯಕನು ನರಸಿಂಹನನ್ನು ಸೆರೆಯಲ್ಲಿಟ್ಟುದುದಲ್ಲದೇ ಅವನನ್ನು ಕೊಂದದ್ದಾಗಿಯೂ ಒಂದು ಹೇಳಿಕೆಯಿದೆ.[೩೨] ಆದರೆ ಅವನು ಬದುಕಿ ಉಳಿದನೆಂದು ಅವರೇ ಹೇಳುತ್ತಾರೆ.[೩೩]

ಇನ್ನು ಕೃಷ್ಣದೇವರಾಯನ ವಿಷಯ. ನರಸನಾಯಕನ ನಂತರ ಅವನ ಮಗ ವೀರನರಸಿಂಹನು ಪಟ್ಟಕ್ಕೆ ಬಂದನು. ತನ್ನ ನಂತರ ಕೃಷ್ಣದೇವರಾಯನು ಪಟ್ಟಕ್ಕೆ ಬರಬಾರದೆಂದು ಅವನು ನಂಬಿಗಸ್ಥ ಮಂತ್ರಿಯಾದ ಸಾಳುವ ತಿಮ್ಮನ ಮುಖಾಂತರ ಕೃಷ್ಣದೇವರಾಯನ ಕಣ್ಣುಗಳನ್ನು ಕೀಳಿಸಲು ಯತ್ನಿಸಿದನೆಂಬ ಕಥೆ ಜನಜನಿತವಾಗಿದೆ. ಇತಿಹಾಸದ ಎಲ್ಲ ಪಠ್ಯಪುಸ್ತಕಗಳಲ್ಲಿಯೂ ಇದು ನಮೂದಿತವಾಗಿದೆ. ಆದರೆ 'ರಾಯವಾಚಕಮು' ಎಂಬ ತೆಲುಗು ಗ್ರಂಥದಲ್ಲಿ ವೀರನರಸಿಂಹನು, 'ಕೃಷ್ಣದೇವರಾಯನ ಪಟ್ಟಾಭಿಷೇಕಕ್ಕಾಗಿ ಎಲ್ಲ ಏರ್ಪಾಡುಗಳನ್ನೂ ಮಾಡಬೇಕೆಂದು' ತನ್ನ ಅಧಿಕಾರಿಗಳಿಗೆ ತಿಳಿಸಿದುದಾಗಿ ಹೇಳಿದೆ.[೩೪] ಅಲ್ಲದೆ, ವೀರನರಸಿಂಹನು ಮಡಿದ ನಂತರ ಕೃಷ್ಣದೇವರಾಯನು ವಿಧ್ಯುಕ್ತವಾಗಿ ಪಟ್ಟಕ್ಕೆ ಬಂದನೆಂದು ಒಂದು ಶಾಸನದಲ್ಲಿ ಸ್ಪಷ್ಟವಾಗಿ ಹೇಳಿದೆ (*ತಸ್ಮಿನ್ ಗುಣೇನ ವಿಖ್ಯಾತೇ ಕ್ಷಿತೇರಿಂದ್ರೇ ದಿವಂಗತೇ ತತೋಪ್ಯವಾರ್ಯ ವೀರಶ್ರೀಃ ಕೃಷ್ಣರಾಯಮಹೀಪತಿಃ ಬಿಭರ್ತಿ ಮಣಿಕೇಯೂರ ನಿರ್ವಿಶೇಷಂ ಮಹೀಮಂ ಭುಜೇ*).[೩೫]

ಕೃಷ್ಣದೇವರಾಯನು ತನ್ನ ಮಗನು ಅರಸನಾಗುವುದನ್ನು ನೋಡಬೇಕೆಂಬ ಆಸೆಯಿಂದ ಅತಿ ಚಿಕ್ಕ ವಯಸ್ಸಿನಲ್ಲಿಯೇ ಅವನನ್ನು ಪಟ್ಟಕ್ಕೆ ಕುಳ್ಳಿರಿಸಿದನೆಂದೂ, ಆದರೆ ಆ ಚಿಕ್ಕ ಮಗುವನ್ನು ವಿಷ ಹಾಕಿ ಕೊಲ್ಲಿಸಲಾಯಿತು ಎಂಬ ಹೇಳಿಕೆಯೂ ಒಂದಿದೆ. ಆದರೆ ಇದನ್ನು ಅಲ್ಲಗಳೆದು, 'ಸತತ ಆರು ತಿಂಗಳುಗಳವರೆಗೆ ನಡೆದ ಪಟ್ಟಾಭಿಷೇಕದ ಗೊಂದಲಮಯ ಆಚರಣೆಯಿಂದುಂಟಾದ ದೈಹಿಕ ಶ್ರಮವನ್ನು ಸಹಿಸಲಾರದೆ ಅವನು ಮರಣ ಹೊಂದಿರಬೇಕೆಂಬ' ಒಂದು ಊಹೆಯೂ ಇದೆ.[೩೬]

ಕೃಷ್ಣದೇವರಾಯನ ಅಳಿಯನಾದ ಅಳಿಯ ರಾಮರಾಯನಂತೂ ಧಾಡಸಿ ಆಕ್ರಮಣಕಾರನೆಂಬ ವಿಷಯ ಇತಿಹಾಸ ಪ್ರಸಿದ್ಧವಿದೆ. ಕೃಷ್ಣದೇವರಾಯನ ಮರಣದ ನಂತರ ಅಳಿಯ ರಾಮರಾಯನು ಎಲ್ಲ ಅಧಿಕಾರಗಳನ್ನೂ ತನ್ನ ಕೈಯಲ್ಲಿಟ್ಟುಕೊಂಡು ಮುಂದಿನ ಅರಸರಾದ ಅಚ್ಯುತರಾಯ ಮತ್ತು ಸದಾಶಿವದೇವರಾಯರನ್ನು ಬದಿಗೊತ್ತಿ, ಸೆರೆಯಲ್ಲಿಟ್ಟು ತಾನೇ ಆಳತೊಡಗಿದನೆಂದು ಎಲ್ಲ ಇತಿಹಾಸಕಾರರೂ ಹೇಳುತ್ತಾರೆ. ವಿಶೇಷವಾಗಿ ಮುಸ್ಲಿಂ ಮತ್ತು ಇತರ ವಿದೇಶಿ ಬರಹಗಾರರ ಹೇಳಿಕೆಗಳೇ ಇದಕ್ಕೆ ಮುಖ್ಯ ಕಾರಣಗಳಾಗಿವೆ.

ರಕ್ಕಸಗಿ ತಂಗಡಗಿ ಯುದ್ಧದ ನಂತರ ರಾಮರಾಯನೊಡನೆ ಹೆಚ್ಚು ಕಡಿಮೆ ವಿಜಯನಗರದ ವೈಭವವೂ ಅಳಿದು ಹೋಯಿತು. ಈ ಗೊಂದಲಮಯ ಪರಿಸ್ಥಿತಿಯಲ್ಲಿ ರಾಮರಾಯನ ತಮ್ಮನಾದ ತಿರುಮಲರಾಯನು ಕೈಗೆ ಸಿಕ್ಕಷ್ಟು ಧನಕನಕಾದಿಗಳನ್ನು ಎತ್ತಿಕೊಂಡು ಸದಾಶಿವರಾಯನೊಡನೆ ಪೆನುಗೊಂಡೆಗೆ ಓಡಿಹೋದನೆಂಬ ವಿಷಯ ಇತಿಹಾಸ ಪ್ರಸಿದ್ಧವಾಗಿದೆ. ಭಗ್ನವಾದ ವಿಜಯನಗರ ಹೆಸರಿಗೆ ಮಾತ್ರ ಹೇಗೋ ಉಳಿದುಕೊಂಡಿದ್ದಿತು. ಮುಂದಿನ ಕಾಲದಲ್ಲಿ ಇಡೀ ಸಾಮ್ರಾಜ್ಯವು ನಶಿಸಿ ಅದು ಅನೇಕ ನಾಯಕರುಗಳ ಪಾಲಾಯಿತು.

ಇದರಿಂದ ಏಳುವ ಒಂದು ಪ್ರಶ್ನೆಯೆಂದರೆ ಪಟ್ಟಕ್ಕಾಗಿ ಈ ಎಲ್ಲ ಒಳಸಂಚುಗಳು, ಆಕ್ರಮಣಗಳು, ಕೊಲೆಗಳು ನಿಜವಾಗಿ ನಡೆದವೇ ಎಂಬುದು. ಯಾಕೆಂದರೆ ಈ ವಿಷಯ ನಮಗೆ ದೊರೆಯುವುದು ಮುಖ್ಯವಾಗಿ ಫೆರಿಸ್ತಾ, ನ್ಯೂನಿಜ್ ಮುಂತಾದವರ ಹೇಳಿಕೆಗಳಿಂದ. ಮೇಲು ನೋಟಕ್ಕೆ ಇವೆಲ್ಲ ಕಟ್ಟುಕಥೆಗಳಂತೆ, ಅತಿಶಯೋಕ್ತಿಗಳಂತೆ ಕಾಣುತ್ತವೆ. ಒಬ್ಬೊಬ್ಬ ಲೇಖಕನೂ ತನಗೆ ಕಂಡಂತೆ ಕಥೆಯನ್ನು ಹೇಳುತ್ತಾನೆ. ಈ ಹೇಳಿಕೆಗಳಲ್ಲಿ ತಾಳಮೇಳವಿಲ್ಲ. ಅಲ್ಲದೆ ಇತರ ಸಾಹಿತ್ಯ ಕೃತಿಗಳಿಂದ ಮತ್ತು ಶಾಸನಗಳಿಂದ ಇವುಗಳಿಗೆ ಪುಷ್ಟಿ ದೊರೆಯುವುದಿಲ್ಲ. ಸಂಪೂರ್ಣ ಇತಿಹಾಸವನ್ನು, ನಡೆದ ಎಲ್ಲ

ಘಟನೆಗಳನ್ನು ವಿವರಿಸುವುದು ಶಾಸನಗಳ ಉದ್ದೇಶವಾಗಿರದಿದ್ದರೂ ಅರಸನನ್ನು ಕೊಲ್ಲುವಂತಹ ಒಳಸಂಚುಗಳು ನಡೆಯುವಂತಹ ಘಟನೆಗಳ ಸೂಚನೆ ಅಲ್ಲೊಂದು ಇಲ್ಲೊಂದು ಆದರೂ ಇರಬಹುದಿತ್ತು. ಅಲ್ಲದೆ ಇಂಥ ನಿಷ್ಕರುಣ, ನಿರ್ದಾಕ್ಷಿಣ್ಯ ಕೊಲೆಗಳು, ಆಕ್ರಮಣಗಳು ಭಾರತದ ಇತಿಹಾಸದ ಗುಣಧರ್ಮಕ್ಕೆ ಅಷ್ಟಾಗಿ ಹೊಂದುವುದಿಲ್ಲ. ದೇಶದ ಇತಿಹಾಸದಲ್ಲಿ ಇಂಥ ಘಟನೆಗಳು ನಡೆದಿಲ್ಲವೆಂದಲ್ಲ. ಅತಿ ಪ್ರಾಚೀನ ಕಾಲದಿಂದ ಹಿಡಿದು ವಿಜಯನಗರದ ಸಾಮ್ರಾಜ್ಯದ ಆರಂಭದವರೆಗಿನ ದೀರ್ಘ ಕಾಲದಲ್ಲಿ ಬೆರಳೆಣಿಕೆಯಷ್ಟು ಮಾತ್ರ ಇಂಥ ಘಟನೆಗಳು ದೊರೆತಾವು. ಆದರೆ ಈ ಕೃತಿಗಳಲ್ಲಿ ಸುಮಾರು ಒಂದು ನೂರು ವರ್ಷಗಳ ಅವಧಿಯಲ್ಲಿ ಒಳಸಂಚುಗಳನ್ನು ಕೊಲೆಗಳನ್ನು ಬಿಟ್ಟು ಬೇರೆ ಏನೂ ನಡೆದೇ ಇಲ್ಲ ಎಂಬಂತೆ ಭಾಸವಾಗುತ್ತದೆ. ಹಿಂದೆ ಇಲ್ಲದ ಇಂಥ ಘಟನೆಗಳು ಒಮ್ಮೆಲೇ ಭುಗಿಲೆಂದು ಹೇಗೆ ಎದ್ದವು ಎಂಬ ಸಂಶಯ ಉಂಟಾಗುತ್ತದೆ. ಈ ಹಿನ್ನೆಲೆಯಲ್ಲಿ ಮೇಲೆ ಉಲ್ಲೇಖಿಸಲಾದ ಘಟನೆಗಳನ್ನು ಪರೀಕ್ಷಿಸೋಣ.

ಉದಾಹರಣೆಗೆ ಮಲ್ಲಿಕಾರ್ಜುನ ಮತ್ತು ವಿರೂಪಾಕ್ಷ ಇವರ ನಡುವಿನ ಗೊಂದಲ. ಇಲ್ಲಿ ಒಬ್ಬರಿಗೊಬ್ಬರ ಹೊಡೆದಾಟಕ್ಕಿಂತ ಇಬ್ಬರೂ ಏಕಕಾಲಕ್ಕೆ ತಾವೇ ಅರಸರು ಎಂಬುದಾಗಿ ಹೇಳಿಕೊಳ್ಳುತ್ತಿದ್ದುದು ಎದ್ದು ಕಾಣುತ್ತದೆ. ಒಂದೇ ಕಾಲಕ್ಕೆಯೇ ಇಬ್ಬರೂ ತಾವೇ ಅರಸರೆಂದು ಹೇಳಿಕೊಳ್ಳುವ ಇಬ್ಬರ ಶಾಸನಗಳೂ ಹಲವಾರು ದೊರೆಯುತ್ತವೆ. ಆದ್ದರಿಂದ ಇದು ಪಟ್ಟಕ್ಕಾಗಿ ತಮ್ಮ ತಮ್ಮ ಹಕ್ಕು ಸ್ಥಾಪನೆಯ ಪ್ರಯತ್ನವೇ ಹೊರತು ಹೋರಾಟವಲ್ಲ.

ಸಾಳುವ ನರಸಿಂಹನು ಪಟ್ಟವನ್ನಾಕ್ರಮಿಸಿದನೆಂಬ ವಿಷಯಕ್ಕೆ ಬಂದರೆ ಇವನು ವಿರೂಪಾಕ್ಷನ ನಂಬಿಗಸ್ಥ ಅಧಿಕಾರಿ ಎಂದೂ, ಸಾಮ್ರಾಜ್ಯದ ಪರಿಸ್ಥಿತಿ ಹದಗೆಟ್ಟಾಗ ತಾನೇ ಅಧಿಕಾರ ವಹಿಸಿಕೊಂಡು ಸಂಕಟದ ಸಮಯದಲ್ಲಿ ಸಾಮ್ರಾಜ್ಯವನ್ನು ರಕ್ಷಿಸಿದನೆಂದೂ ಎಲ್ಲ ಇತಿಹಾಸಕಾರರೂ ಹೇಳುತ್ತಾರೆ. ಸಾಮ್ರಾಜ್ಯದ ಹಿತದ ದೃಷ್ಟಿಯಿಂದ ಇವನ ಕ್ರಮ ಸ್ತುತ್ಯವಾದುದೆಂದೇ ಅವರು ಹೇಳುತ್ತಾರೆ. ಪಟ್ಟದ ಆಕ್ರಮಣ ಎಂದರೆ ಅಲ್ಲಿ ವಂಚನೆ, ಮೋಸ, ಕೊಲೆ ಇಂಥವು ನಡೆಯುತ್ತವೆ. ಅಂಥದೇನೂ ಇಲ್ಲಿ ಆಗಲೇ ಇಲ್ಲ. ಅಲ್ಲದೆ ಇಡೀ ಸಾಮ್ರಾಜ್ಯದ ಆಡಳಿತವನ್ನು ವಹಿಸಿಕೊಂಡರೂ ಇವನು ತನ್ನನ್ನು ಮಹಾಮಂಡಲೇಶ್ವರನೆಂದೇ ಕರೆದುಕೊಳ್ಳುತ್ತಾನೆ.

ನರಸನಾಯಕನ ಕಥೆಯೂ ಅಷ್ಟೇ. ಅವನು ಸಾಮ್ರಾಜ್ಯದ ಹಿತದಲ್ಲಿ ತೀವ್ರ ಆಸಕ್ತಿಯುಳ್ಳ ಒಬ್ಬ ದಕ್ಷ ಮಂತ್ರಿಯೂ ದಂಡನಾಯಕನೂ ಎಂದು ಹೆಸರಾದವನು. ಅನೇಕ ವರ್ಷ ನಂಬಿಗಸ್ಥನಾಗಿ ಸೇವೆಯನ್ನು ಸಲ್ಲಿಸಿದ ಅವನು ಒಡನೆಯೇ ಮಹತ್ವಾಕಾಂಕ್ಷಿಯಾಗಿ ಈ ದುಃಸಾಹಸಕ್ಕೆ ಕೈ ಹಾಕಿದನೆಂದು ಹೇಳುವುದು ಕಠಿಣ. ಸಾಳುವ ನರಸಿಂಹನ ಎರಡು ಚಿಕ್ಕ ಮಕ್ಕಳನ್ನು ಇವನು ಕೊಂದು ಹಾಕಿದನೆಂಬುದು ನಂಬಲಾಗದ ಕಥೆಯೇ ಸರಿ.

ಕೃಷ್ಣದೇವರಾಯನು ಪಟ್ಟಕ್ಕೆ ಬಂದಾಗಿನ ಪರಿಸ್ಥಿತಿಯನ್ನು ಮೇಲೆಯೇ ವಿವರಿಸಲಾಗಿದೆ. ಹಿಂದಿನ ಅರಸನ ನಂತರ ವಿಧ್ಯುಕ್ತವಾಗಿ ಪಟ್ಟಕ್ಕೆ ಬಂದನೆಂದು ಹೇಳುವ ಸಮಕಾಲೀನ ಶಾಸನವು ಅವನ ಕಣ್ಣು ಕೀಳಿಸುವ ಪ್ರಯತ್ನ ನಡೆಯಿತೆಂಬ ಕಥೆಗಿಂತ ಹೆಚ್ಚು ನಂಬಲರ್ಹವಾದುದೆಂಬುದು ನಮ್ಮ ಅಭಿಮತ.

ಇನ್ನು ಅಳಿಯ ರಾಮರಾಯ. ಅವನು ಅಚ್ಯುತರಾಯನನ್ನು ನಂತರ ಸದಾಶಿವರಾಯನನ್ನು ದಿಗ್ಬಂಧನದಲ್ಲಿಟ್ಟು ಮನಬಂದಂತೆ ರಾಜ್ಯವಾಳಿದ ಕಥೆ. ಶಾಸನಗಳಲ್ಲಿ ಇಂಥ ವಿವರಗಳೇನಿಲ್ಲ. ಫೆರಿಸ್ತಾ ಮುಂತಾದವರ ಲೇಖನಗಳಿಂದ ಅವನೊಬ್ಬ ಸ್ವೇಚ್ಛಾ ಪ್ರವೃತ್ತಿಯ, ಗರ್ವಿಷ್ಠ ಆಡಳಿತಗಾರನಾಗಿದ್ದನೆಂಬ ಕಲ್ಪನೆ ಉಂಟಾಗುತ್ತದೆ. ಒಂದು ಶಾಸನವು ಅವನ ಬಗ್ಗೆ 'ಮಹಾ ಮಂಡಲೇಶ್ವರ ಅಳಿಯ ರಾಮರಾಜಯ್ಯದೇವಮಹಾ ಅರಸರು ತುರುಕರ ರಾಜಕಾರ್ಯಕ್ಕಾಗಿ ಅಸ್ತಮಾನವಾಗಲಾಗಿ ಪಟ್ಟಣ ಸಿಂಹಾಸನ ರಾಜ್ಯ ದೇಶವೆಲ್ಲ ಕೆಟ್ಟು ಖಿಲವಾಗಲಾಗಿ' ಎಂದು ಹೇಳುವ ಮಾತು ಪರಿಸ್ಥಿತಿಯ ಗಂಭೀರತೆಯನ್ನು ಸೂಚಿಸುತ್ತದೆ. ಅಚ್ಯುತರಾಯ ಮತ್ತು ಸದಾಶಿವರಾಯ ಇವರಿಬ್ಬರೂ ರಾಮರಾಯನ ಕೈದಿಗಳಾಗಿ, ಕೈಗೊಂಬೆಗಳಾಗಿದ್ದರೆ ಅವರು ಅನುಕ್ರಮವಾಗಿ ೧೩ ವರ್ಷ ಮತ್ತು ೩೪ ವರ್ಷಗಳ ಕಾಲ ಹೇಗೆ ರಾಜ್ಯವಾಳುತ್ತಿದ್ದರು? ಗಮನಿಸಬೇಕಾದ ವಿಷಯವೇನೆಂದರೆ ಕನ್ನಡದಲ್ಲಿಯೇ ಅಚ್ಯುತರಾಯನಿಗೆ ಸಂಬಂಧಿಸಿದ ಕುರಿತಾದ ೨೮೫ ಶಾಸನಗಳು ಮತ್ತು ಸದಾಶಿವರಾಯನಿಗೆ ಸಂಬಂಧಿಸಿದ ೩೨೪ ಶಾಸನಗಳು ದೊರೆತಿದ್ದು ಅವರು ಸುಖದಿಂದ ರಾಜ್ಯಭಾರವನ್ನು ಮಾಡುತ್ತಿದ್ದರೆಂದು ಅವು ಹೇಳುತ್ತವೆ. ಅವರು ನಿಜವಾಗಿಯೂ ಕೈದಿಗಳಾಗಿದ್ದರೆ, ರಾಮರಾಯನೇ ಇವೆಲ್ಲ ಶಾಸನಗಳನ್ನೂ ಮೋಸದಿಂದ ಸೃಷ್ಟಿಸಿದನೆಂದು ಹೇಳಬೇಕೇ? ಅದು ತೀರ ಅಸಂಭವವೆನಿಸುತ್ತದೆ.

ಮುಸ್ಲಿಮ್ ಮತ್ತು ಇತರ ವಿದೇಶಿ ಲೇಖಕರ ಹೇಳಿಕೆಗಳನ್ನಾಧರಿಸಿ ಈ ವಿದ್ಯಮಾನಗಳನ್ನು ನಮ್ಮ ಇತಿಹಾಸಕಾರರೆಲ್ಲರೂ ಯಥಾವತ್ತಾಗಿ ನಿರೂಪಿಸಿದ್ದಾರೆ. ಇವುಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸುವ ಗೋಜಿಗೆ ಹೋದವರು ಕಡಿಮೆ. ೧೯೩೭ರಷ್ಟು ಹಿಂದೆಯೇ ಡಾ॥ ಪಿ.ಬಿ. ದೇಸಾಯಿ ಅವರು ಫೆರಿಸ್ತಾನ ಅನೇಕ ಹೇಳಿಕೆಗಳು ನಂಬಲರ್ಹವೆಂದು ತೋರಿಸಿಕೊಟ್ಟಿದ್ದಾರೆ.[೩೭] ಇತ್ತೀಚೆಗೆ ಡಾ॥ ವಸುಂಧರಾ ಫಿಲಿಯೋಜಾ ಅವರು ಇಂಥ ಹೇಳಿಕೆಗಳ ಬಗ್ಗೆ ತಮ್ಮ ಸಂದೇಹವನ್ನು, ಅಪನಂಬಿಕೆಯನ್ನು ವ್ಯಕ್ತಪಡಿಸಿದ್ದಾರೆ. ಉದಾಹರಣೆಗೆ ಸಾಳುವ ನರಸಿಂಹನು ಪಟ್ಟವನ್ನಾಕ್ರಮಿಸಿದನೆಂಬ ಕುರಿತು 'ನ್ಯೂನಿಜನ ಹೇಳಿಕೆಯನ್ನು ಆಧರಿಸಿ ಸಾಳುವ ನರಸಿಂಹನು ಒಬ್ಬ ಆಕ್ರಮಣಕಾರಿ ಎಂದು ಆಧುನಿಕ ಇತಿಹಾಸಕಾರರು ತೋರಿಸುತ್ತಾರೆ. ಆದರೆ ಸಾಳುವಾಭ್ಯುದಯ ಎಂಬ ಕಾವ್ಯವು ಬೇರೆ ಕಥೆಯನ್ನೇ ಹೇಳುತ್ತದೆ' ಎಂದು ಹೇಳುತ್ತಾರೆ.[೩೮] ಸಾಳುವ ನರಸಿಂಹನು ವಿರೂಪಾಕ್ಷನನ್ನು ಕೊಲ್ಲಲು ಒಳಸಂಚು ನಡೆಸಿದನೆಂಬ ಮಾತಿಗೆ ಅವರು ಮಹತ್ವ ಕೊಡುವುದಿಲ್ಲ. ಈ ಹೇಳಿಕೆಗೆ ಇತರ ಆಧಾರಗಳ ಬೆಂಬಲವಿಲ್ಲದಿರುವುದರಿಂದ ಅದನ್ನು ಅಷ್ಟಕ್ಕೇ ಕೈಬಿಡುವುದು ಲೇಸು ಎಂದು ಅಭಿಪ್ರಾಯಪಡುತ್ತಾರೆ.

ಆದ್ದರಿಂದ ಈ ಸೀಮಿತ ಅವಧಿಯಲ್ಲಿ ಹಿಂದೆಂದೂ ಇಲ್ಲದಷ್ಟು ಒಳಸಂಚುಗಳು, ಆಕ್ರಮಣಗಳು ಈಗ ನಡೆದವೆಂದು ನಂಬುವುದು ಸಮರ್ಪಕವಾಗಲಾರದು. ವಿದೇಶಿ ಲೇಖಕರ ಬರಹಗಳನ್ನು ಆಧಾರಗಳೆಂದು ಎತ್ತಿಕೊಳ್ಳುವಾಗ ಅವುಗಳನ್ನು ಬಹು ಎಚ್ಚರಿಕೆಯಿಂದ ಸೂಕ್ಷ್ಮವಾಗಿ, ಸ್ಥಳೀಯ ಆಧಾರಗಳ ಹಿನ್ನೆಲೆಯಲ್ಲಿ ಪರಿಶೀಲಿಸುವುದು ಅಗತ್ಯವಾಗಿದೆ.

**೩. ವಿಭಿನ್ನ ಮನೆತನಗಳು**

ವಿಜಯನಗರ ಸಾಮ್ರಾಜ್ಯವು ಒಂದೇ ಇದ್ದು ಒಬ್ಬರಾದ ಮೇಲೆ ಒಬ್ಬ ಅರಸರು ಕಾಲಾನುಕ್ರಮವಾಗಿ ಆಳಿದರೂ, ವಿಭಿನ್ನ ಮನೆತನಗಳ ಅರಸರು ಹಿಂದಿನವರಿಂದ ಮುಂದಿನವರು ಅಧಿಕಾರವನ್ನು ಕಿತ್ತುಕೊಂಡು ಪಟ್ಟವನ್ನಾಕ್ರಮಿಸಿಕೊಂಡು ರಾಜ್ಯವನ್ನಾಳಿದರೆಂದು ಇತಿಹಾಸಕಾರರು ಗ್ರಹಿಸಿದ್ದಾರೆ. ಅವರ ಪ್ರಕಾರ ಇಂಥ ಮನೆತನಗಳು ನಾಲ್ಕು; ಒಂದು ಸಂಗಮ, ಎರಡನೆಯದು ಸಾಳುವ, ಮೂರನೆಯದಾದ ತುಳುವ ಮತ್ತು ನಾಲ್ಕನೆಯದು ಅರವೀಡು. ಹೀಗೆ ಮನೆತನಗಳಿಗೆ ಹೆಸರು ಕೊಡುವಲ್ಲಿ ಯಾವುದೇ ಒಂದು ಕ್ರಮವನ್ನು ಅನುಸರಿಸಿದಂತೆ ತೋರುವುದಿಲ್ಲ. ಮೊದಲನೆಯ ಮನೆತನದ ಹೆಸರು ಆ ಮನೆತನದ ಮೂಲಪುರುಷನ ಹೆಸರಿನಿಂದ ಬಂದಿದೆ. ಮೂರನೆಯದು ತುಳು ಎಂಬುದು ಇವರು ತುಳು ವಂಶಕ್ಕೆ ಸೇರಿದವರು ಎಂಬ ಮಾತಿನಿಂದ ಬಂದಿದೆ. ತುಳು ಎಂಬುದು ಮುಖ್ಯತಃ ಒಂದು ಪ್ರದೇಶ. ಪಶ್ಚಿಮ ಕರಾವಳಿಯ, ಮುಖ್ಯವಾಗಿ ಇಂದಿನ ದಕ್ಷಿಣ ಕನ್ನಡ ಜಿಲ್ಲೆಯ ಪ್ರದೇಶ. ನರಸನಾಯಕನ ಅಜ್ಜನಾದ ತಿಮ್ಮಭೂಪನು 'ತುಳುವೇಂದ್ರ'ರಲ್ಲಿ ಅಂದರೆ ತುಳು ಅರಸರಲ್ಲಿ ಒಬ್ಬ ಯಶಸ್ವಿ ಅರಸನೆಂದು (ಯಶಸ್ವೀ ತುಳುವೇಂದ್ರೇಷು) ಕರೆಯಲ್ಪಟ್ಟಿದ್ದಾನೆ.[೪೦] ಕೃಷ್ಣದೇವರಾಯನೂ ತುಳುವೇಂದ್ರನೆಂದು ಕರೆಯಲ್ಪಟ್ಟಿದ್ದಾನೆ. ಅವನ ತಂದೆ ನರಸನಾಯಕನು ತುಳು ವಂಶದಲ್ಲಿ ಹುಟ್ಟಿದವನೆಂದು[೪೧] ಶಾಸನಗಳು ಹೇಳುತ್ತವೆ (ತೌಳವ ವಂಶಾಬ್ಧಿಚಂದ್ರ). ಈ ಬಿರುದುಗಳ ಹೊರತಾಗಿ ಇವರು ತುಳು ದೇಶದಿಂದ ಬಂದವರೆಂದಾಗಲೀ ತುಳುನಾಡಿನಲ್ಲಿ ಮಾಂಡಲಿಕ ರಾಗಿದ್ದಾರೆಂದಾಗಲೀ ಯಾವ ಸೂಚನೆಯೂ ಇಲ್ಲ. ಆಧುನಿಕ ಇತಿಹಾಸ ಕಾರರಾರೂ ಇವರ ತುಳುನಾಡಿನ ಸಂಬಂಧವನ್ನು ಕುರಿತು ಚರ್ಚಿಸಿದಂತಿಲ್ಲ.

ಹಯವದನರಾಯರು ಹೇಳುವಂತೆ ಬಿ.ಎಲ್. ರೈಸರಾಗಲಿ, ರಾಬರ್ಟ್ ಸಿವೆಲ್‌ರಾಗಲಿ ಸಾಳುವ ಮತ್ತು ತುಳುವ ಮನೆತನಗಳು ವಿಭಿನ್ನವೆಂದು ಪರಿಗಣಿಸುವುದಿಲ್ಲ. ಮತ್ತು ಎಚ್. ಕೃಷ್ಣಶಾಸ್ತ್ರಿಗಳು ಸಾಳುವ ಮತ್ತು ತುಳುವ ಒಂದೇ ಎಂದು ಪರಿಗಣಿಸಿ ಅದನ್ನು ಎರಡನೆಯ ವಿಜಯನಗರ ಮನೆತನ ಎಂದು ಕರೆದಿದ್ದಾರೆ.[೪೨] ಕೃಷ್ಣದೇವರಾಯನ ಒಂದು ಶಾಸನವಂತೂ ಅವನ ತಂದೆ ನರಸನಾಯಕನು ಸಂಗಮ ವಂಶದಲ್ಲಿ ಹುಟ್ಟಿದವನೆಂದು ಹೇಳಿದೆ.[೪೩] ಇನ್ನೊಂದು ಶಾಸನದಲ್ಲಿ ಕೃಷ್ಣದೇವರಾಯನು (ಸಂಗಮ ವಂಶದ) ದೇವರಾಯನ ಸಿಂಹಾಸನದ ಮೇಲೆ ಕುಳಿತಿದ್ದನೆಂದು ಹೇಳುತ್ತದೆ (ವೀರದೇವರಾಯ ಮಹಾರಾಜ ಸಿಂಹಾಸನವನಾಳುವ ವೀರನರಪತಿ ಕೃಷ್ಣರಾಯ).[೪೪] ಇದಕ್ಕೂ ನಂತರದ ಕಾಲದ ಸದಾಶಿವರಾಯನು ಹರಿಹರನ ಅಂದರೆ ಸಂಗಮ ಮನೆತನದಲ್ಲಿ ಹುಟ್ಟಿದವನೆಂದು ಇನ್ನೊಂದು ಶಾಸನವು ಹೇಳುತ್ತದೆ (ಹರಿಹರರಾಯ ಮಹಾರಾಯರ ವಂಶೀಭೂತರಾದ ಶ್ರೀ ಸದಾಶಿವಮಹಾರಾಯರು).[೪೫] ಹೀಗಿರುವಾಗ ಈ ಅರಸರ ತುಳುದೇಶದ ಸಂಬಂಧವನ್ನು ನಿರ್ಧರಿಸುವುದು ಕಷ್ಟವಾಗುತ್ತದೆ. ಅರವೀಡು ಮನೆತನದ ವಿಷಯ ಬೇರೆಯಾಗುತ್ತದೆ. ಇವರು ಅರವೀಡು ಎಂಬ ಗ್ರಾಮದಿಂದ ಬಂದು ವಿಜಯನಗರ ಅರಸರಲ್ಲಿ ಸೇವೆಯನ್ನು ಕೈಕೊಂಡವರು. ರಕ್ಕಸಗಿ ತಂಗಡಗಿ ಯುದ್ಧದ ನಂತರ

ಉಂಟಾದ ಅವಕಾಶವನ್ನು ಬಳಸಿಕೊಂಡು ಅರಸರಾದರು. ಹೀಗೆ ಇದಕ್ಕೆ ಅರವೀಡು ಮನೆತನ ಎಂಬ ಹೆಸರು ಸೂಕ್ತವೆನಿಸುತ್ತದೆ. ಮೊದಲಿನ ಮೂರು ಮನೆತನಗಳಿಗೆ ಸೇರಿದವರೆಂದು ಹೇಳಲಾದ ಅರಸರು ವಸ್ತುತಃ ಒಂದೇ ವಂಶಕ್ಕೆ ಸೇರಿದವರೇ. ಒಂದು ಮನೆತನವು ಇನ್ನೊಂದನ್ನು ಉರುಳಿಸಿ ಅಧಿಕಾರವನ್ನು ಪಡೆಯಿತೆಂಬುದಕ್ಕೂ ಸ್ಪಷ್ಟವಾದ ಆಧಾರಗಳಿಲ್ಲ. ಆದ್ದರಿಂದ ಈ ಅರಸರನ್ನು ವಿಭಿನ್ನ ಮನೆತನಗಳಲ್ಲಿ ವರ್ಗೀಕರಿಸುವುದರ ಸಮಂಜಸತೆಯನ್ನು ಪುನಃ ಪರಿಶೀಲಿಸುವುದು ಅಗತ್ಯವೆನಿಸುತ್ತದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. *Inscriptions of Vijayanagara Rulers,* Vol. I, Ed. Shrinivasa Ritti and B.R. Gopal, No. 33, p.54 also see Ibid. No. 35, p.59 and No. 37, p.66.

೨. ಈ ಅರಸರ ಮತ್ತು ದೋರಸಮುದ್ರದ ಸಂಬಂಧವನ್ನು ಸೂಚಿಸುವ, ಇದೇ ಗ್ರಂಥದ ಸಂಖ್ಯೆ ೨೧೪, ೨೧೯, ೨೩೫ ಇತ್ಯಾದಿ ನೋಡಿರಿ.

೩. *The Aravidu Dynasty*, p.977.

೪. *Inscriptions of Vijayanagara Rulers*, Vol. I, No. 210, p.452.

೫. Ibid. No. 412, p. 977.

೬. Ibid. Vol. II, No. 211.

೭. Ibid. No. 179.

೮. *Annual Report on South Indian Epigraphy*, 1912, Part-II, p.80, para 55.

೯. *South Indian Inscriptions*, Vol. IX, pt. II, No. 542.

೧೦. *ARSIE*, 1924-25, Part-II, p.90, para 34.

೧೧. *Epigraphica Indica* III, p.244.

೧೨. *Nellore District Inscriptions*, Vol. III, p.36.

೧೩. Ibid, Ka. 77.

೧೪. S.I.I., XVI, No. 121.

೧೫. **ವಿಜಯನಗರ ಸಾಮ್ರಾಜ್ಯ**, ಪಿ.ಬಿ.ದೇಸಾಯಿ, ಪರಿಶಿಷ್ಟ-೧, ಪು.೩೨೧.

೧೬. *Sources of Vijayanagara History*, p.61.

೧೭. Ibid. p.62.

೧೮. Ibid. p.56.

೧೯. Ibid. p.137.

೨೦. Ibid. p.142.

೨೧. *Further Sources of Vijayanagara History*, Vol. I, p.298.

೨೨. *Inscriptions of Vijayanagara Rulers*, Vol. I, No. 639, p.1540.

೨೩. Ibid. No.. 567, p.1338.

೨೪. Ibid. No. 815, p.1961.

೨೫. *Vijayanagara*, (National Book Trust, New Delhi) p.3.

೨೬. **ವಿಜಯನಗರ ಸಾಮ್ರಾಜ್ಯ**, ಪರಿಶಿಷ್ಟ-೧, ಪುಟ ೩೧.

೨೭. *Mysore Gazetteers*, Vol. II, Part III, p.1534.

೨೮. *Further Sources*, Vol. I.

೨೯. *Mysore Gazetteers*, Op.Cit. p.1612.
೩೦. Ibid, pp.1616-17.
೩೧. *Further Sources*, p.153.
೩೨. *Mysore Gazetteers*, Op.Cit. p.1730.
೩೩. Ibid, p.1735.
೩೪. *Further Sources*, Vol. I, p.186.
೩೫. S.I.I. - IX, Part II, No.489.
೩೬. Vasundhara Filliozat, *Vijayanagara*, p.49.
೩೭. ವಿಜಯನಗರ, ಪು.೩೩೬.
೩೮. *Vijayanagara*, p.42.
೩೯. Ibid.
೪೦. S.I.I. - IX, Part. II, No.489.
೪೧. S.I.I. - IX, Part. II, No.507.
೪೨. *Mysore Gazetteers,* Op. Cit. p.1756.
೪೩. *Epigraphia Carnatica,* Vol. VII (Rev. Edn). Ng.160.
೪೪. E.C. Vol. IV, (Rev. Edn) Ch.407.
೪೫. E.C. Vol. VIII, (Old Edn), Nr. 1.



# ಪೂರ್ವಕರ್ನಾಟಕದ ಪಾಳೆಯಗಾರರು – ಒಂದು ಸಮೀಕ್ಷೆ

– ಡಾ॥ ಸಿ.ಆರ್. ಶ್ಯಾಮಲ*

ವಿಜಯನಗರದ ಅರಸರ ಕಾಲದಲ್ಲಿ ವಿಸ್ತಾರವಾಗಿದ್ದ ಸಾಮ್ರಾಜ್ಯದ ಸುಗಮವಾದ ಆಡಳಿತಕ್ಕಾಗಿ, ಅವರು ಅಲ್ಲಲ್ಲಿಯ ಮಾಂಡಲಿಕರು, ಸಾಮಂತರುಗಳಲ್ಲದೆ, ಕೆಲವು ಶೂರ, ಸಾಹಸಿ ಬೇಡರುಗಳಿಗೆ ಭೂದಾನ ನೀಡಿ ಸ್ಥಾನಿಕ ಪ್ರಭುಗಳನ್ನಾಗಿ ನೇಮಿಸಿದರು. ಈ ಸ್ಥಾನಿಕ ಪ್ರಭುಗಳು ಸೈನ್ಯವನ್ನು ಕಟ್ಟಿಕೊಂಡು ಪಾಳ್ಯಗಳಲ್ಲಿ ನೆಲೆಸುತ್ತಿದ್ದುದರಿಂದ ಇವರನ್ನು 'ಪಾಳೆಯಗಾರರು' ಎಂದು ಸಂಬೋಧಿಸುತ್ತಿದ್ದರು. ಹೊಸ ರಾಜ್ಯಗಳನ್ನು ಗೆಲ್ಲಲು, ವಿಸ್ತರಿಸಲು, ಸಾಮ್ರಾಜ್ಯದಲ್ಲಿ ಶಾಂತಿ–ಸಮೃದ್ಧಿ ನೆಲೆಸಲು, ಆಡಳಿತ ಸುಗಮವಾಗಿ ಸಾಗಲು ವಿಜಯನಗರದ ಅರಸರಿಗೆ ಇವರು ಸಹಾಯಕರಾಗಿದ್ದರಲ್ಲದೆ ಅವರಿಗೆ ಅಧೀನರಾಗಿದ್ದು ಮಧ್ಯಯುಗೀನ ದಕ್ಷಿಣ ಭಾರತದ ಚರಿತ್ರೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದರು.

ವಿಜಯನಗರ ಸ್ಥಾಪನೆಗೆ ಮೊದಲೇ ಪ್ರಬಲರಾದ ಕೆಲವು ಪಾಳೆಯಗಾರರು ಪಾಳೆಯಪಟ್ಟುಗಳನ್ನು ಕಟ್ಟಿದರೆಂಬುದು ಕರ್ನಾಟಕದ ಇತಿಹಾಸದಿಂದ ತಿಳಿಯುತ್ತದೆ. ಕ್ರಿ.ಶ. ೧೪೪೯ರಿಂದ ೧೮೦೦ರವರೆಗಿನ ಕಾಲವು, ದಕ್ಷಿಣ ಕರ್ನಾಟಕದಲ್ಲಿ, ಪಾಳೆಯಗಾರರ ಏಳ್ಗೆಯ ಕಾಲವಾಗಿತ್ತು. ವಿಜಯನಗರ ಸಾಮ್ರಾಜ್ಯದ ಪತನದ ಹೊತ್ತಿಗೆ ಕರ್ನಾಟಕದಲ್ಲಿ ಎಂಬತ್ತಕ್ಕೂ ಹೆಚ್ಚು ಪಾಳೆಯಪಟ್ಟುಗಳಿದ್ದವು. ಇವರುಗಳು ವಿಜಯನಗರದ ಪತನದ ನಂತರ ಸ್ವತಂತ್ರರಾಗಿ ತಮ್ಮನ್ನು ನಾಯಕ, ರಾಜ, ಒಡೆಯ, ಅರಸು, ಗೌಡ, ಹೆಗ್ಗಡೆ ಎಂದೆಲ್ಲಾ ಕರೆದುಕೊಂಡು ರಾಜರಂತೆ ಆಳತೊಡಗಿದರು. ಈ ಕಾಲದಲ್ಲಿದ್ದ ಪೂರ್ವ ಕರ್ನಾಟಕದ ಪಾಳೆಯಗಾರರು ಮಿಕ್ಕ ಪಾಳೆಯಗಾರರಿಗಿಂತ ಭಿನ್ನವಾಗಿದ್ದು, ತಮ್ಮ ರಾಜ್ಯದ ಕೀರ್ತಿಯನ್ನು ಶಿಖರಕ್ಕೇರಿಸಿದರೆಂದರೆ ತಪ್ಪಾಗಲಾರದು. ಈ ಪಾಳೆಯಗಾರರು ವೀರವರ್ಗಕ್ಕೆ ಸೇರಿದವರು, ಪರಾಕ್ರಮಿಗಳು. ಶತ್ರುಗಳಿಗೆ ಭಯಂಕರರಾಗಿದ್ದು ಆಶ್ರಯಿಸಿದವರನ್ನು ಕಾಪಾಡುತ್ತಿದ್ದರು. ಪೂರ್ವ ಕರ್ನಾಟಕದಲ್ಲಿರುವ ಬಳ್ಳಾರಿ, ಚಿತ್ರದುರ್ಗ ಹಾಗೂ ತುಮಕೂರು ಪ್ರದೇಶಗಳಲ್ಲಿ ಒಟ್ಟು ೨೯–೩೦ ಪಾಳೆಯಗಾರರು ಆಗಿ ಹೋಗಿದ್ದಾರೆ.

ಪೂರ್ವ ಕರ್ನಾಟಕ ಪ್ರದೇಶಗಳ ಪಾಳೆಯಗಾರರ ನಡುವೆ ಪರಸ್ಪರ ಸಂಬಂಧವಿತ್ತು. ಮೊದಲು ಚಿತ್ರದುರ್ಗ ಹಾಗೂ ಹರಪನಹಳ್ಳಿಯವರ ಸಂಬಂಧ ಚೆನ್ನಾಗಿಯೇ ಇತ್ತು. ಆಗ ಚಿತ್ರದುರ್ಗದ ಕನ್ಯೆಯನ್ನು ಹರಪನಹಳ್ಳಿಯ ಪಾಳೆಯಗಾರನಿಗೆ ಕೊಟ್ಟು ಮದುವೆಯಾಗಿತ್ತು. ಕಾರಣಾಂತರದಿಂದ ಚಿತ್ರದುರ್ಗದ ಮೂರನೆಯ ಪಾಳೆಯಗಾರನಾದ ಕಸ್ತೂರಿ ರಂಗಪ್ಪ ನಾಯಕನ ಕಾಲದಿಂದ ಅವರು ಬದ್ಧ ವೈರಿಗಳಾದರು. ಜರಿಮಲೆಯವರು ಮೊದಲಿನಿಂದಲೂ ತಮ್ಮ ಕನ್ಯೆಯರನ್ನು ಚಿತ್ರದುರ್ಗದ ಪಾಳೆಯಗಾರರಿಗೆ ಕೊಟ್ಟು ಅವರೊಡನೆ ಸಂಬಂಧವನ್ನು ಬೆಳೆಸಿದ್ದರು. ಇವರಂತೆ ಗುಡೇಕೋಟೆ, ರಾಯದುರ್ಗ, ಕನಕಗಿರಿ, ತರೀಕೆರೆ, ಆನೆಗೊಂದಿ, ಸಿರಾ, ಮತ್ತೋಡು ಇವರುಗಳೂ ಚಿತ್ರದುರ್ಗದವರಿಗೆ ಕನ್ಯೆಯರನ್ನು ಕೊಟ್ಟು ತೆಗೆದುಕೊಂಡು, ಸಂಬಂಧಗಳನ್ನು ಬೆಳೆಸಿದ್ದರೂ ಅವರವರುಗಳಲ್ಲಿ ಮನಸ್ತಾಪ ಅಥವಾ ಹೊಟ್ಟೆಯ ಕಿಚ್ಚಿನಿಂದಾಗಿ ಪಿತೂರಿ ನಡೆಸುತ್ತಿದ್ದರು. ಇದು ಯುದ್ಧಕ್ಕೆ ಕಾರಣವಾಗುತ್ತಿತ್ತು. ತುಮಕೂರು ಪ್ರದೇಶದ ಪಾಳೆಯಗಾರರು ಬಳ್ಳಾರಿ ಹಾಗೂ ಚಿತ್ರದುರ್ಗದವರೊಡನೆ ರಕ್ತಸಂಬಂಧ ಬೆಳೆಸದಿದ್ದರೂ ರಾಜಕೀಯ ಸಂಬಂಧವನ್ನು ಇಟ್ಟುಕೊಂಡಿದ್ದರು.

ಬಳ್ಳಾರಿ, ಚಿತ್ರದುರ್ಗ ಹಾಗೂ ಹರಪನಹಳ್ಳಿ ಪಾಳೆಯಗಾರರ ವಂಶದಲ್ಲಿ ಒಟ್ಟು ಆರುಜನ ನಾಗತಿಯರು ರಾಜ್ಯವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಆಳಿದ್ದಾರೆ. ಆದರೂ ಅವರ ಹೆಸರುಗಳನ್ನು ಗೆಜೆಟಿಯರ್‌ಗಳಲ್ಲಿ ನಮೂದಿಸಿಲ್ಲ. ಆದರೆ ಶಾಸನಗಳಿಂದ ಇದು ತಿಳಿದುಬರುತ್ತದೆ.

ಚಿತ್ರದುರ್ಗದ ಪಾಳೆಯಗಾರರಂತೂ ಇಕ್ಕೇರಿ ಅರಸರಿಗೂ, ಮೈಸೂರು ಒಡೆಯರಿಗೂ ಸರಿಸಮಾನರಾಗಿದ್ದರು.

---

* ಆರ್.ಬಿ. IV/೨/೫, ಸೆಂಟ್ರಲ್ ರೈಲ್ವೇ ಆಫೀಸರ್ಸ್ ಕ್ವಾರ್ಟರ್ಸ್, ಮಾತುಂಗ(ಪೂ.), ಮುಂಬಯಿ–೧೯.

ಹರಪನಹಳ್ಳಿ, ಹಾಗಲವಾಡಿ, ಮಧುಗಿರಿ ಪಾಳೆಯಗಾರರೂ ಕಡಿಮೆ ಏನಿರಲಿಲ್ಲ. ಚಿತ್ರದುರ್ಗದ ಮತ್ತಿ ತಿಮ್ಮಣ್ಣ ನಾಯಕ, ಇಮ್ಮಡಿ ಮದಕರಿ ನಾಯಕ, ಚಿಕ್ಕಣ್ಣ ನಾಯಕ, ಭರಮಣ್ಣ ನಾಯಕ, ಹಿರೇ ಮದಕರಿ ನಾಯಕ, ಕೊನೆಯ ರಾಜಾವೀರ ಮದಕರಿ ನಾಯಕ, ಮಧುಗಿರಿಯ ಮಾರೇಗೌಡ, ದೊಡ್ಡಗೌಡ, ಇಮ್ಮಡಿ ಚಿಕ್ಕಪ್ಪಗೌಡ, ಮುಮ್ಮಡಿ ಚಿಕ್ಕಪ್ಪಗೌಡ; ಹಾಗಲವಾಡಿಯ ಸಾಲಿ ನಾಯಕ, ಭೈರಪ್ಪ ನಾಯಕ, ಇಮ್ಮಡಿ ಭೈರಪ್ಪ ನಾಯಕ. ಇಮ್ಮಡಿ ಮುದಿಯಪ್ಪ ನಾಯಕ, ಮುದ್ದು ವೀರಪ್ಪ ನಾಯಕ; ಹರಪನಹಳ್ಳಿಯ ದಾದೇ ನಾಯಕ, ಮೊದಲ ಬಸವಂತ ನಾಯಕ, ಮೊದಲ ಸೋಮಶೇಖರ ನಾಯಕ; ಬಳ್ಳಾರಿಯ ಹಂಡೆ ಹನುಮಪ್ಪ ನಾಯಕ, ಮುಂತಾದವರು ರಾಜಕೀಯವಾಗಿ ಧಾರ್ಮಿಕವಾಗಿ ಸಾಂಸ್ಕೃತಿಕವಾಗಿ ಪೂರ್ವ ಕರ್ನಾಟಕದ ಕೀರ್ತಿ ಎಲ್ಲೆಡೆಗೂ ಹರಡುವಂತೆ ಮಾಡಿದರು. ಚಿತ್ರದುರ್ಗದವರ ಕೀರ್ತಿಯನ್ನು ಕೇಳಿ ಆಗಿನ ಬಲವತ್ತರವಾದ ಎರಡು ಶಕ್ತಿಗಳು – ಹೈದರಾಲಿ ಹಾಗೂ ಮರಾಠರು – ಚಿತ್ರದುರ್ಗದ ಪಾಳೆಯಗಾರರ ಸ್ನೇಹವನ್ನು ಯಾಚಿಸಿ, ಸ್ನೇಹ ಹಸ್ತವನ್ನು ಮುನ್ನೀಡಿದ್ದರು. ಕೊನೆಗೆ ಚಿತ್ರದುರ್ಗದ ಪಾಳೆಯಗಾರರು ಮಹಾ ಶಕ್ತಿಗಳಾದ ಹೈದರಾಲಿ, ಟಿಪ್ಪೂ ಸುಲ್ತಾನ, ಮರಾಠ ಹಾಗೂ ಇಂಗ್ಲಿಷರನ್ನು ಧೈರ್ಯವಾಗಿ ಎದುರಿಸಿ, ತಮ್ಮ ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿ, ಒಳಗಿನ ಶತ್ರುಗಳ ಕುತಂತ್ರದಿಂದ ಸೋತು, ಕೊನೆಯುಸಿರೆಳೆಯಬೇಕಾಯಿತು.

ಪೂರ್ವ ಕರ್ನಾಟಕದ ಪಾಳೆಯಗಾರರ ಕಾಲದಲ್ಲಿ ಹೊರಗಿನ ಶತ್ರುಗಳ ದಾಳಿ, ಈ ಸಂಸ್ಥಾನಗಳ ಮೇಲೆ ಬಹಳವಾಗಿತ್ತು. ಮೊಗಲರು ಹಾಗೂ ಬಿಜಾಪುರ ಸುಲ್ತಾನರು ಸಿರಾದವರೆಗೆ ಯುದ್ಧ ಮಾಡುತ್ತಾ ಬಂದು ಸಿರಾವನ್ನು ಆಕ್ರಮಿಸಿಕೊಂಡರು. ಸಿರಾ ಕೊನೆಯವರೆಗೂ ಸುಲ್ತಾನರ ವಶದಲ್ಲಿಯೇ ಇತ್ತು. ಅನಂತರ ಮರಾಠರು ಪ್ರಬಲರಾಗಿ ಚಿತ್ರದುರ್ಗದವರ ಸ್ನೇಹ ಬೆಳೆಯಿಸಿಕೊಂಡು, ದಕ್ಷಿಣದಲ್ಲಿ ಯುದ್ಧ ಮಾಡಿದರು. ಇದೇ ವೇಳೆಗೆ ಮೈಸೂರಿನವರು ಉತ್ತರದ ಕಡೆಗೆ ಹೊರಟು ತುಮಕೂರು ಪ್ರದೇಶವನ್ನು ಆಕ್ರಮಿಸಿದರು. ಚಿತ್ರದುರ್ಗ ಮೈಸೂರಿನವರ ವಶವಾಗಲಿಲ್ಲ. ಇಷ್ಟರಲ್ಲಿ ಇಂಗ್ಲಿಷರು ಪ್ರಬಲರಾದ ಕಾರಣ ಮರಾಠರಿಗೆ ಬಳ್ಳಾರಿಯನ್ನು ವಶಪಡಿಸಿಕೊಳ್ಳಲಾಗಲಿಲ್ಲ. ಹೈದರಾಲಿ, ಟಿಪ್ಪೂ ಸುಲ್ತಾನರು ಈ ವೇಳೆಗಾಗಲೇ ಪೂರ್ವ ಕರ್ನಾಟಕದ ಪಾಳೆಯಗಾರರನ್ನೆಲ್ಲಾ ಮೋಸದಿಂದ, ಕುಹಕದಿಂದ, ಅವರಲ್ಲಿ ಒಗ್ಗಟ್ಟಿಲ್ಲದಿದ್ದರಿಂದ ಸೋಲಿಸಿ, ಈ ಸಂಸ್ಥಾನಗಳನ್ನು ಮೈಸೂರಿಗೆ ಸೇರಿಸಿಕೊಂಡಿದ್ದರು. ಟಿಪ್ಪೂ ಸುಲ್ತಾನನ ಮರಣದ ನಂತರ ಈ ಸಂಸ್ಥಾನಗಳು ಇಂಗ್ಲಿಷರ ವಶವಾದವು.

ಪೂರ್ವ ಕರ್ನಾಟಕದ ಪಾಳೆಯಗಾರರ ರಾಜ್ಯಾಡಳಿತದ ಮೂಲತತ್ತ್ವವು ಒಂದೇ ಆಗಿದ್ದಿತು. ಕಾಲಕ್ಕೆ ತಕ್ಕಂತೆ, ತಮಗೆ ಅನುಕೂಲವಾಗುವಂತೆ, ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡು, ನೀತಿಶಾಸ್ತ್ರಗಳಲ್ಲಿ ಹೇಳಿರುವಂತೆಯೇ ಇವರು ಆಡಳಿತ ಕ್ರಮವನ್ನು ಅನುಸರಿಸಿದ್ದಾರೆ. ಇವರು ವಿಜಯನಗರ ಅರಸುಗಳಿಗೆ ಕಪ್ಪವನ್ನೂ, ಯುದ್ಧ ಕಾಲದಲ್ಲಿ ಸೈನ್ಯವನ್ನೂ ಒದಗಿಸುತ್ತ, ವಿಧೇಯರಾಗಿದ್ದು, ಅವರಂತೆಯೇ ಆಡಳಿತ ಕ್ರಮವನ್ನು ಅನುಸರಿಸುತ್ತಿದ್ದರು. ಇವರು, 'ಸಪ್ತಾಂಗ ಸೂತ್ರ'ದ ಪ್ರಕಾರ, ಎಂದರೆ ರಾಜ, ಮಂತ್ರಿಮಂಡಲ, ಪ್ರಾಂತಾಡಳಿತ, ಕೋಶ, ಬಲ, ದುರ್ಗ ಹಾಗೂ ನ್ಯಾಯಾಂಗದ ಪದ್ಧತಿಯ ಮೇರೆಗೆ ಆಡಳಿತ ನಡೆಸಿಕೊಂಡು ಹೋಗುತ್ತಿದ್ದರು. ಅಲ್ಲದೆ, ಆಡಳಿತ ಕ್ರಮವನ್ನು ಕೇಂದ್ರಾಡಳಿತ, ರಾಜ್ಯಾಡಳಿತ, ಊರಾಡಳಿತ ಹಾಗೂ ಗ್ರಾಮಾಡಳಿತಗಳೆಂದು ವಿಂಗಡಿಸಿಕೊಂಡಿದ್ದರು. ಗ್ರಾಮಾಧಿಕಾರಿಗಳು ಊರಿನಧಿಕಾರಿಗಳಿಗೂ, ಅವರು ರಾಜ್ಯಾಧಿಕಾರಿಗಳಿಗೂ, ಅವರು ಕೇಂದ್ರಾಧಿಕಾರಿಗಳಿಗೂ ಉತ್ತರಿಸಬೇಕಾಗುತ್ತಿತ್ತು. ಕೇಂದ್ರಾಡಳಿತದಲ್ಲಿ – ಪಾಳೆಯಗಾರ, ಅವನ ನಾಗತಿಯರು, ಕುಮಾರರು, ಮಂತ್ರಿಮಂಡಲ, ರಾಜಗುರುಗಳು ಇರುತ್ತಿದ್ದರು. ಮಂತ್ರಿಮಂಡಲದಲ್ಲಿ ಅಮಾತ್ಯ, ಪುರೋಹಿತ, ಸೇನಾಧಿಪತಿ, ಸಂಧಿವಿಗ್ರಹಿ, ದಂಡನಾಯಕ, ದ್ವಾರನಾಯಕ, ಅಂಗರಕ್ಷಕ, ದೂತ, ನ್ಯಾಯಾಧೀಶ ಹಾಗೂ ಇತರೇ ಅಧಿಕಾರಿಗಳಿರುತ್ತಿದ್ದರು. ಇವರ ಆಸ್ಥಾನಗಳಲ್ಲಿ ರಾಜಗುರುಗಳಿಗೆ ಮುಖ್ಯಸ್ಥಾನವಿತ್ತು. ಅವರು ರಾಜಕೀಯದಲ್ಲೂ, ಜ್ಯೋತಿಷ್ಯ ಶಾಸ್ತ್ರದಲ್ಲೂ, ಇತರ ಅನೇಕ ಶಾಸ್ತ್ರಗಳಲ್ಲಿಯೂ ಪ್ರವೀಣರಾಗಿರುತ್ತಿದ್ದರು. ರಾಜನು, ರಾಜಕೀಯ ಅಥವಾ ವ್ಯಕ್ತಿಗತವಾಗಿ ಸಲಹೆಗಳನ್ನು ಕೇಳಿದಾಗ ಮಾತ್ರ ಇವರು ಅವನಿಗೆ ಸಮಾಧಾನದ ಉತ್ತರವನ್ನು ಕೊಡುತ್ತಿದ್ದರು. ರಾಜನೇ ನ್ಯಾಯಾಂಗದ ಮುಖ್ಯಾಧಿಕಾರಿ ಆಗಿರುತ್ತಿದ್ದನು. ನ್ಯಾಯದ ತೀರ್ಪನ್ನೀಯುವಾಗ, ತನಗೆ ಅಧಿಕಾರವಿದ್ದರೂ, ನ್ಯಾಯಾಂಗದ ಇತರ ಅಧಿಕಾರಿಗಳೊಡನೆ ಚರ್ಚಿಸಿ, ತೀರ್ಪನ್ನು ಕೊಡುತ್ತಿದ್ದನು. ಕೆಲವೊಮ್ಮೆ ಬ್ರಾಹ್ಮಣರ ಸಲಹೆಯನ್ನೂ ಕೇಳುತ್ತಿದ್ದನು. ನ್ಯಾಯಾಂಗದ ತೀರ್ಪಿನಲ್ಲಿ ತಳವಾರ, ಬಾಗಿಲು ಕಾಯುವವನು, ದೂತರು ಮೊದಲಾದವರೂ ಕೆಲವೊಮ್ಮೆ ಭಾಗವಹಿಸಬೇಕಾಗುತ್ತಿತ್ತು. ಸಣ್ಣಪುಟ್ಟ ವ್ಯಾಜ್ಯಗಳು, ತಮ್ಮ ಗ್ರಾಮಗಳಲ್ಲಿ ಅಥವಾ ಊರುಗಳಲ್ಲಿಯೇ ತೀರ್ಮಾನವಾಗುತ್ತಿತ್ತು. ದೊಡ್ಡ ದೊಡ್ಡ ವ್ಯಾಜ್ಯಗಳು ಅಥವಾ ಗ್ರಾಮಗಳಲ್ಲಿ ನಿರ್ಧರಿಸಲಾಗದ ವ್ಯಾಜ್ಯಗಳು ಸಂಸ್ಥಾನದಲ್ಲಿ ನಾಯಕನ ಮುಂದೆ

ತೀರ್ಮಾನವಾಗುತ್ತಿತ್ತು. ಇವರಲ್ಲದೆ ಬೊಕ್ಕಸದ ಅಧಿಕಾರಿಗಳು, ಕೋಶಾಧಿಕಾರಿಗಳು, ಸುಂಕದ ಅಧಿಕಾರಿಗಳು ಮುಂತಾದ ಇತರೇ ಅಧಿಕಾರಿಗಳೂ ಇರುತ್ತಿದ್ದರು. ರಾಜ್ಯಾಡಳಿತವನ್ನು ಪ್ರಾಂತಾಡಳಿತ, ನಾಡಾಡಳಿತವೆಂದೂ ಹೇಳುತ್ತಿದ್ದರು. ಇದರಲ್ಲಿ ಕೆಲವು ವಿಭಾಗ, ಉಪವಿಭಾಗಗಳು ಇರುತ್ತಿದ್ದವು.

ಇದರ ನಂತರ ಬರುವುದು ಊರಾಡಳಿತ. ಪಟ್ಟಣ, ಅಗ್ರಹಾರ, ಊರು, ಕಂಪಣ, ಮಾಗಣಿ, ಮೊದಲಾದುವು ಊರಾಡಳಿತದ ಮುಖ್ಯ ಘಟಕಗಳಾಗಿದ್ದುವು. ಗ್ರಾಮವು ರಾಜ್ಯಾಡಳಿತದ ಅತ್ಯಂತ ಸಣ್ಣ ಘಟಕವಾಗಿದ್ದು, ಗ್ರಾಮಾಡಳಿತದಲ್ಲಿ ತಮ್ಮದೇ ಆದ ಗ್ರಾಮ ಸಭೆಗಳನ್ನು ಮಾಡಿಕೊಂಡಿದ್ದರು. ವಿಶೇಷ ಸಂದರ್ಭಗಳಲ್ಲಿ ರಾಜ್ಯಗಳೊಂದಿಗೆ ಇವು ಸಂಪರ್ಕವನ್ನು ಇಟ್ಟುಕೊಂಡು ಅವುಗಳಿಗೆ ಸಹಕಾರ ನೀಡುತ್ತಿದ್ದವು. ಕೇಂದ್ರಾಡಳಿತದಲ್ಲಿ ಮಂತ್ರಿ ಮಂಡಲವಿದ್ದಂತೆ, ಗ್ರಾಮಾಡಳಿತದಲ್ಲಿ ಆಯಗಾರ ಪದ್ಧತಿ ಇರುತ್ತಿತ್ತು. ಆಯಗಾರ ಪದ್ಧತಿಗೆ ಬಾರಾಬಲೂತಿ ಪದ್ಧತಿ ಅಥವಾ ಕೈವಾಡದವರೆಂದೂ ಹೇಳುತ್ತಿದ್ದರು. ಆಯಗಾರ ಪದ್ಧತಿಯಲ್ಲಿ ಸಮಾಜದ ಪ್ರತಿಯೊಂದು ವೃತ್ತಿಯ ಮುಖ್ಯಸ್ಥರಿದ್ದು, ಗ್ರಾಮಾಡಳಿತವನ್ನು ನಡೆಸುತ್ತಿದ್ದರು. ರಾಜ್ಯದ ರಕ್ಷಣೆಗಾಗಿ ಪಾಳೆಯಗಾರರು ಸಮರ ವ್ಯವಸ್ಥೆಗೆ ಬಹಳ ಮಹತ್ವ ಕೊಟ್ಟಿದ್ದರು. ಆದ್ದರಿಂದ ಸುವ್ಯವಸ್ಥಿತವಾದ ಸೈನ್ಯ ಬಲವನ್ನು ಇಟ್ಟುಕೊಂಡಿದ್ದರು. ಸೈನ್ಯ ಬಲದಲ್ಲಿ ಕಾಲ್ಬಲ, ಕುದುರೆದಳ, ಗಜಸೇನೆ, ಒಂಟೆ ಸೇನೆ ಹಾಗೂ ಗೋಲಂದಾಜರಿದ್ದರು. ಇವರಲ್ಲಿ ಆಯುಧ ಪೂಜೆಯ ಪದ್ಧತಿ ಇತ್ತು. ಸಪ್ತಾಂಗಗಳಲ್ಲಿ ದುರ್ಗವೂ ಒಂದಾದುದರಿಂದ ತಮ್ಮ ರಕ್ಷಣೆಗಾಗಿ ಪಾಳೆಯಗಾರರು ಕೋಟೆಗಳನ್ನು ಕಟ್ಟಿಕೊಂಡಿದ್ದರು.

ಆಡಳಿತಕ್ಕೆ ಆರ್ಥಿಕ ವ್ಯವಸ್ಥೆ ಬೆನ್ನೆಲುಬಾಗಿರಬೇಕು. ಆರ್ಥಿಕ ವ್ಯವಸ್ಥೆ ಸರಿಯಾಗಿರಬೇಕು. ಆಡಳಿತ ಸುಸೂತ್ರವಾಗಿ ನಡೆಯಬೇಕಿದ್ದರೆ, ರಾಜಕೋಶ ತುಂಬಿರಬೇಕು. ಇದಕ್ಕೆ ವನಸ್ಪತಿ, ಭೂಮಿ, ಪ್ರಾಣಿಗಳ ಸಂಪತ್ತು ಸಹಾಯವಾಗಿರುತ್ತದೆ. ಅದಕ್ಕೆ ರಾಜ್ಯದ ವ್ಯಾಪಾರ, ಸುಂಕ, ತೆರಿಗೆ ಮೊದಲಾದುವುಗಳು ವ್ಯವಸ್ಥಿತವಾಗಿರಬೇಕು. ಇದಕ್ಕೆ ವಾಣಿಜ್ಯದ ಪ್ರೋತ್ಸಾಹವಿರಬೇಕು. ವರ್ತಕ ಸಮೂಹ ಸಹಕಾರವನ್ನು ಒದಗಿಸಿದರೆ ಮಾತ್ರ ಇದು ಸಾಧ್ಯವಾಗುವುದು. ಆದ್ದರಿಂದ ಪೂರ್ವ ಕರ್ನಾಟಕದ ಪಾಳೆಯಗಾರರು ತಮ್ಮ ಸಂಸ್ಥಾನಗಳಲ್ಲಿ ವರ್ತಕರ ಸಂಘಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟಿದ್ದರು. ಪೂರ್ವ ಕರ್ನಾಟಕದ ಪಾಳೆಯಗಾರರು ಭೂ ಒಡೆತನಗಳನ್ನು ಕೊಟ್ಟಿದ್ದುದರಿಂದ ಗೇಣಿದಾರ, ಜೀತದಾಳುಗಳ ವರ್ಗ ಹುಟ್ಟಿಕೊಂಡವು. ವರ್ತಕರು, ಅವರ ಸಂಘಗಳು ಹುಟ್ಟಿಕೊಂಡವು. ಪೂರ್ವ ಕರ್ನಾಟಕಕ್ಕೆ ಹೊರಗಿನಿಂದ ವ್ಯಾಪಾರಿಗಳು ಬಂದು, ಇಲ್ಲಿ ವ್ಯಾಪಾರ ಮಾಡುತ್ತಿದ್ದುದರಿಂದ ಈ ಸಂಸ್ಥಾನಗಳ ಆರ್ಥಿಕ ಸ್ಥಿತಿ ಉತ್ತಮಗೊಂಡುದಲ್ಲದೆ, ಇಲ್ಲಿಯ ಸಂಸ್ಕೃತಿಯು ಹೊರಗಿನವರಿಗೆ ಪರಿಚಯವಾಗಿ ಸ್ನೇಹ ಸಂಬಂಧಗಳು ಬೆಳೆಯುತ್ತಿದ್ದವು. ಅಲ್ಲದೆ ಇಲ್ಲಿಯ ವ್ಯಾಪಾರಿಗಳು ವಿದೇಶಗಳಿಗೆ ಹೋಗಿ, ವ್ಯಾಪಾರದ ಮುಖಾಂತರ ಸಂಸ್ಥಾನದ ಕೀರ್ತಿಯನ್ನು ಹರಡಿದರು. ವ್ಯಾಪಾರ ಹೆಚ್ಚಿದಂತೆ ಸಾಗುವಳಿಯ ಅನುಕೂಲಕ್ಕಾಗಿ ರಸ್ತೆಗಳೂ, ಬೀದಿಗಳೂ ಹುಟ್ಟಿಕೊಂಡವು. ಇದರಿಂದ ಪ್ರತಿಯೊಂದು ಗ್ರಾಮಗಳೂ, ಊರುಗಳೂ, ಪಟ್ಟಣಗಳೂ ಹತ್ತಿರವಾದವು. ಇಲ್ಲಿಯ ವ್ಯಾಪಾರಿಗಳು ಪ್ರತಿಯೊಂದು ವಸ್ತುಗಳ ವ್ಯಾಪಾರಕ್ಕಾಗಿ, ಅವುಗಳ ಹೆಸರಿನಲ್ಲಿಯೇ ಸಂಘಗಳನ್ನು ಶುರು ಮಾಡಿಕೊಂಡರು. ಪ್ರತಿಯೊಂದು ವೃತ್ತಿಯವರೂ ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡರು. ವರ್ತಕರು ತಮ್ಮ ರಕ್ಷಣೆಗಾಗಿ, ಸಂಪತ್ತಿನ ರಕ್ಷಣೆಗಾಗಿ ಸೈನಿಕರನ್ನು ಇಟ್ಟುಕೊಂಡಿದ್ದರು. ಈ ವ್ಯಾಪಾರಿ ಸಂಘಗಳು ಕ್ಷಾಮ, ಅತಿವೃಷ್ಟಿ, ಅನಾವೃಷ್ಟಿ, ಯುದ್ಧ, ಮೊದಲಾದ ಆಪತ್ಕಾಲದಲ್ಲಿ ರಾಜನಿಗೆ ಧನಸಹಾಯದ ಜೊತೆಗೆ ಇತರೇ ಸಹಾಯವನ್ನೂ ಮಾಡುತ್ತಿದ್ದವು. ವರ್ತಕರ ಸಂಘಗಳು ರಾಜನ ಹತೋಟಿಯಲ್ಲಿರುತ್ತಿದ್ದವು. ಹೀಗೆ ವಾಣಿಜ್ಯದಿಂದ ಪೂರ್ವ ಕರ್ನಾಟಕದ ಸಂಸ್ಥಾನಗಳು ಅಭಿವೃದ್ಧಿ ಹೊಂದಿದ್ದವು.

ತೆರಿಗೆಗಳನ್ನೂ, ಸುಂಕಗಳನ್ನೂ ನಿಶ್ಚಯಿಸಿ ಅವುಗಳನ್ನು ವಸೂಲಿ ಮಾಡಲು ಅಧಿಕಾರಿಗಳನ್ನು ನೇಮಿಸಿದ್ದರು. ತೆರಿಗೆ, ಸುಂಕಗಳು ಪ್ರಜೆಗಳಿಗೆ ಭಾರವಾಗದಂತೆ ನೋಡಿಕೊಳ್ಳುತ್ತಿದ್ದರು. ಭೂಮಿಯ ಅಳತೆ, ಅದನ್ನು ಅಳೆಯುವ ಪದ್ಧತಿ, ತೂಕಗಳು, ನಾಣ್ಯಗಳ ಅಳತೆ.... ಹೀಗೆ ಪ್ರತಿಯೊಂದರ ಕಡೆಗೂ ಲಕ್ಷ್ಯವಿಟ್ಟು ಗೊತ್ತುಪಡಿಸಿದರು. ಇದರಿಂದ ಪೂರ್ವ ಕರ್ನಾಟಕದ ಪಾಳೆಯಗಾರರ ಆಡಳಿತದಲ್ಲಿ ಆರ್ಥಿಕ ವ್ಯವಸ್ಥೆ ಸಮತೋಲನವಾಗಿತ್ತೆಂದು ತಿಳಿದುಬರುತ್ತದೆ. ತೆರಿಗೆ, ಸುಂಕಗಳೊಂದಿಗೆ, ದಂಡ ಹಾಗೂ ದೋಷ ಕಾಣಿಕೆಗಳೂ ಇದ್ದುವು. ಇವುಗಳೂ ರಾಜಕೋಶವನ್ನು ತುಂಬುವ ಆದಾಯಗಳೆಂದೇ ಹೇಳಬಹುದು. ಕಾಣಿಕೆಯೂ ಒಂದು ರೀತಿಯ ಆದಾಯವೇ. ಆದಾಯದಂತೆ ವ್ಯಯವೂ ಬಹಳ ಮುಖ್ಯವಾದುದು. ಏಕೆಂದರೆ ಆದಾಯ-ವ್ಯಯಗಳಿಂದ ಆ ಸಂಸ್ಥಾನ ಆರ್ಥಿಕವಾಗಿ ಎಷ್ಟು ಗಟ್ಟಿಯಾಗಿದೆ ಎಂಬುದು ತಿಳಿದುಬರುತ್ತದೆ.

ಕರ್ನಾಟಕದ ಇತಿಹಾಸದ ಮೇಲೆ ಕಣ್ಣಾಡಿಸಿದಾಗ, ಕರ್ನಾಟಕದಲ್ಲಿ ಆಳುತ್ತಿದ್ದ ರಾಜರುಗಳು ಒಂದಿಲ್ಲೊಂದು ಧರ್ಮವನ್ನು ಅನುಸರಿಸಿ ಅದಕ್ಕೆ ಪ್ರೋತ್ಸಾಹ ಕೊಟ್ಟಿರುವುದು ಗೋಚರವಾಗುತ್ತದೆ. ಇದಕ್ಕೆ ಕಾರಣ ರಾಜಕೀಯ ಹಾಗೂ ಧರ್ಮ ಒಂದೇ ನಾಣ್ಯದ ಎರಡು ಮುಖಗಳಾಗಿರುವುದು. ರಾಜರಂತೆ ಅವರ ಅಧಿಕಾರಿಗಳೂ, ಸಾಮಂತರೂ ಯಾವುದಾದರೊಂದು ಧರ್ಮವನ್ನು ಅವಲಂಬಿಸಿರುವುದು ತಿಳಿದು ಬರುತ್ತದೆ. ಧಾರ್ಮಿಕ ವಿಷಯದಲ್ಲಿ, ಪೂರ್ವ ಕರ್ನಾಟಕದ ಪಾಳೆಯಗಾರರು ಯಾವುದೇ ರೀತಿಯ ಭೇದ ಭಾವವನ್ನು ತೋರಿಸದೇ, ಎಲ್ಲಾ ಧರ್ಮಗಳನ್ನೂ ಸಮಾನ ಭಾವದಿಂದ ನೋಡಿಕೊಳ್ಳುತ್ತಿದ್ದುದರಿಂದ, ಅವರ ಆಡಳಿತದಲ್ಲಿ ಎಲ್ಲಾ ಧರ್ಮದ ಅಧಿಕಾರಿಗಳೂ ಇದ್ದರು. ಇವರ ಇತಿಹಾಸದಲ್ಲಿ ಬೌದ್ಧ ಧರ್ಮದಿಂದ ವೀರಶೈವ ಧರ್ಮದವರೆಗೂ; ಆನಂತರ ಇಸ್ಲಾಂ ಧರ್ಮವೂ ಬೆಳೆದು ಬಂದಿರುವುದು ಗೋಚರವಾಗುತ್ತದೆ. ವೈಷ್ಣವಾವಲಂಬಿಗಳಾಗಿದ್ದ ಪಾಳೆಯಗಾರರು ಶೈವ ದೇವಾಲಯಗಳನ್ನೂ, ವೀರಶೈವ ಧರ್ಮಾವಲಂಬಿಗಳಾಗಿದ್ದ ಪಾಳೆಯಗಾರರು ವೈಷ್ಣವ ದೇವಾಲಯಗಳನ್ನೂ, ಧರ್ಮದ ಬೆಳವಣಿಗೆಗಳಿಗಾಗಿ ಕಟ್ಟಿಸಿ, ಅವುಗಳಲ್ಲಿ ಪೂಜೆ, ಉತ್ಸವ, ಅಂಗ–ರಂಗ ವೈಭೋಗಗಳು, ಜೀರ್ಣೋದ್ಧಾರದ ವ್ಯವಸ್ಥೆಗಾಗಿ ಅನೇಕ ದಾನ ದತ್ತಿಗಳನ್ನು ಬಿಟ್ಟಿದ್ದಾರೆ.

ನಾಗತಿಯರು, ಅಧಿಕಾರಿಗಳು, ಪ್ರಜೆಗಳೂ ದಾನ ದತ್ತಿ ಬಿಡುವಂತೆ ಪ್ರೋತ್ಸಾಹಿಸಿದ್ದಾರೆ. ತೋಟಗಳನ್ನೂ, ಬಾವಿಗಳನ್ನೂ ಕಟ್ಟಿಸಿ, ದತ್ತಿ ಬಿಟ್ಟಿದ್ದಾರೆ. ಅಗ್ರಹಾರಗಳನ್ನು ನಿರ್ಮಾಣ ಮಾಡಿ ದಾನವಾಗಿ ಕೊಟ್ಟಿದ್ದಾರೆ. ವೀರಶೈವ ಧರ್ಮದ ತತ್ವಗಳ ಪ್ರಚಾರಕ್ಕಾಗಿ ಕೆಲವು ಪಾಳೆಯಗಾರರು ಮಠಗಳನ್ನು ಕಟ್ಟಿಸಿಕೊಟ್ಟಿದ್ದರೆ, ಕೆಲವು ಪಾಳೆಯಗಾರರು ವೀರಶೈವ ಗುರುಗಳ ಮೇಲಿನ ಭಕ್ತಿಗೌರವಗಳಿಗಾಗಿ ಮಠಗಳನ್ನು ಕಟ್ಟಿಸಿಕೊಟ್ಟಿದ್ದಾರೆ. ಬಳ್ಳಾರಿ ಹಾಗೂ ತುಮಕೂರು ಪ್ರದೇಶಗಳಲ್ಲಿ ಅನೇಕ ವೀರಶೈವ ಮಠಗಳನ್ನು ಕಾಣಬಹುದು. ಇದಕ್ಕೆ ಕಾರಣ, ಅಲ್ಲಿಯ ಪಾಳೆಯಗಾರರು ವೀರಶೈವರಾಗಿದ್ದುದು. ಇನ್ನು ಚಿತ್ರದುರ್ಗದ ಪಾಳೆಯಗಾರರು ವೈಷ್ಣವ ಧರ್ಮಿಗಳಾಗಿದ್ದರೂ, ವೀರಶೈವ ಗುರುಗಳ ಮೇಲಿನ ಭಕ್ತಿಯಿಂದಾಗಿ ಮಠಗಳನ್ನೂ, ವೀರಶೈವ ದೇವಾಲಯಗಳನ್ನೂ ಕಟ್ಟಿಸಿದರು. ಇವು ವಿದ್ಯಾಕೇಂದ್ರಗಳೂ ಆಗಿದ್ದವು. ಆದರೆ ಇಂತಹುವು ಕಡಿಮೆ. ಈ ಮಠಗಳು ಹಾಗೂ ದೇವಸ್ಥಾನಗಳು ರಾಜ ಮತ್ತು ಪ್ರಜೆಗಳ ನಡುವಿನ ಕೊಂಡಿಯಂತಿದ್ದು, ಸಮಾಜದ ಪ್ರತೀಕಗಳಾಗಿದ್ದವು.

ಹಿಂದಿನಂತೆ, ಪೂರ್ವ ಕರ್ನಾಟಕದ ಪಾಳೆಯಗಾರರ ಕಾಲದಲ್ಲಿಯೂ, ಸಮಾಜವು ಜಾತಿ ಪದ್ಧತಿಯ ಮೇಲೆ ರೂಪುಗೊಂಡಿದ್ದಿತು. ಒಂದು ನಾಡಿನ ಅಭಿವೃದ್ಧಿಗೆ, ಶ್ರಮಿಕ ವರ್ಗದ ದೇಣಿಗೆ ಬಹಳವಾಗಿರುತ್ತದೆ. ಅದರಂತೆ ಇಲ್ಲಿಯೂ ಶ್ರಮಿಕ ವರ್ಗದವರು ತಮ್ಮ ವಿವಿಧ ವೃತ್ತಿಗಳಿಂದ, ಸಮಾಜಕ್ಕೆ, ತಮ್ಮ ಕಾಣಿಕೆಯನ್ನು ಅರ್ಪಿಸಿದ್ದಾರೆ. ಅಕ್ಕಸಾಲಿಗ, ಬಡಗಿ, ಕಮ್ಮಾರ, ಕುಂಬಾರ, ಶಿಲ್ಪಿ, ಅಗಸ, ಕಂಚುಗಾರ, ಉಪ್ಪಾರ, ಮಾದಿಗ, ಕಲ್ಲುಕುಟಿಗ, ಬೇಡ, ಗೊಲ್ಲ, ನಾವಿಂದ ಮುಂತಾದ ಶ್ರಮಿಕ ವರ್ಗದವರು ವಂಶಪಾರಂಪರ್ಯವಾಗಿ ಬಂದ ತಮ್ಮ ವೃತ್ತಿ ವೈಶಿಷ್ಟ್ಯವನ್ನು ಉಳಿಸಿಕೊಳ್ಳುವ ಭಿನ್ನತೆಯೇ ಜಾತಿ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿತು. ಸಮಾಜದ ವಿವಿಧ ಅಂಗಗಳಲ್ಲಿ ಕುಟುಂಬ ಒಂದು ಮೂಲಭೂತ ಸಂಸ್ಥೆ. ವಿವಾಹ, ಬಳುವಳಿ, ಕನ್ಯಾಶುಲ್ಕ, ಬಹುಪತ್ನಿತ್ವ, ದಾಂಪತ್ಯ, ಸಂತಾನ, ಸತಿಪದ್ಧತಿ, ಬಲಿದಾನ, ಶವಸಂಸ್ಕಾರ ಮುಂತಾದುವು ಇದರ ಅಂಗಗಳಾಗಿವೆ. ಇವುಗಳನ್ನು ಸಮಾಜದ ಸ್ತ್ರೀ ಪುರುಷರು ಅನುಸರಿಸುತ್ತಾ, ಸಮಾಜದ ಕಾರ್ಯಗಳು ಸುಗಮವಾಗುವಂತೆ ಮಾಡಿದ್ದಾರೆ. ಇಂತಹ ಒಳ್ಳೆಯ ಸಂಪ್ರದಾಯಗಳೊಡನೆ, ಸಮಾಜದಲ್ಲಿ ಕೆಟ್ಟ ಸಂಪ್ರದಾಯಗಳಾದ ತೊತ್ತು, ವೇಶ್ಯಾವೃತ್ತಿಗಳೂ ಇದ್ದವು. ಪೂರ್ವ ಕರ್ನಾಟಕದ ಪಾಳೆಯಗಾರರ ಕಾಲದಲ್ಲಿ ಸ್ತ್ರೀಯರಿಗೂ ಸಮಾನವಾದ ಸ್ಥಾನಮಾನವಿದ್ದಿತು. ಅವರಿಗೂ ವಿದ್ಯಾಭ್ಯಾಸದ ಹಕ್ಕು ಇತ್ತು. ಅವರಿಗೆ ವೃತ್ತಿ ಶಿಕ್ಷಣವನ್ನೂ ಕೊಡುತ್ತಿದ್ದರು. ಸಂಗೀತ, ನೃತ್ಯ, ಅಲ್ಪ ಸ್ವಲ್ಪ ರಾಜಕೀಯ, ಕುದುರೆ ಸವಾರಿ, ಖಡ್ಗ ಯುದ್ಧ ಮುಂತಾದ ಶಿಕ್ಷಣವನ್ನೂ ಕೊಡುತ್ತಿದ್ದರು. ಪೂರ್ವ ಕರ್ನಾಟಕದ ಪಾಳೆಯಗಾರರ ವಂಶವೃಕ್ಷವನ್ನು ನೋಡಿದಾಗ ಕೆಲವು ಸ್ತ್ರೀಯರೂ ರಾಜಕೀಯದಲ್ಲಿ ಆಸಕ್ತಿ ವಹಿಸಿರುವುದೂ, ಆಳಿರುವುದೂ ತಿಳಿದುಬರುತ್ತದೆ. ಇವರು ಬುಡಕಟ್ಟಿನ ಶಿಕ್ಷಣಕ್ಕೂ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ. ಹಬ್ಬ–ಹರಿದಿನಗಳೂ ಸಮಾಜದ ಐಕ್ಯತೆಗೆ, ಒಗ್ಗಟ್ಟಿಗೆ ಕಾರಣವಾಗಿದ್ದವು. ಆದ್ದರಿಂದ ಅವುಗಳನ್ನು ಆಚರಿಸುವಂತೆ, ಉತ್ಸವಗಳನ್ನೂ, ಪಂದ್ಯಗಳನ್ನೂ ನಡೆಸುವಂತೆ ಪ್ರೋತ್ಸಾಹ ಕೊಡುತ್ತಿದ್ದರು. ದೇವಸ್ಥಾನಗಳನ್ನೂ ಮಠಗಳನ್ನೂ ಕಟ್ಟಿಸುತ್ತಿದ್ದರು. ಇವು ವಿದ್ಯಾಕೇಂದ್ರಗಳೂ ಮನೋರಂಜನಾ ಕೇಂದ್ರಗಳೂ ಧರ್ಮ ಪ್ರಚಾರಕ ಕೇಂದ್ರಗಳೂ ಆಗಿದ್ದುವು.

ಪೂರ್ವ ಕರ್ನಾಟಕದ ಪಾಳೆಯಗಾರರು ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಂತೆ ಸಾಹಿತ್ಯ ಕ್ಷೇತ್ರಕ್ಕೂ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಇವರಲ್ಲಿ ಕೆಲವರು ಸ್ವತಃ ಕವಿಗಳಾಗಿದ್ದು, ಕೆಲವು ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ ಸಾಹಿತ್ಯದಲ್ಲೂ ಅಭಿರುಚಿ ಇದ್ದುದರಿಂದ ಪಂಡಿತರುಗಳಿಗೂ, ಸಾಹಿತಿಗಳಿಗೂ, ಕವಿಗಳಿಗೂ ಆಶ್ರಯ ನೀಡಿ, ಅವರಿಂದ ಉತ್ತಮವಾದ ಕೃತಿಗಳು ರಚನೆಯಾಗುವಂತೆ ಪ್ರೋತ್ಸಾಹಿಸಿದ್ದಾರೆ. ಈ ಕಾಲದಲ್ಲಿ ರಚನೆಯಾದ ಕೃತಿಗಳನ್ನು

ನೋಡಿದಾಗ, ಕೆಲವೆಡೆ ವೈಷ್ಣವ, ಶ್ರೀವೈಷ್ಣವ ಧರ್ಮಗಳನ್ನು ಅವಲಂಬಿಸುವವರಿದ್ದರೂ, ವೀರಶೈವ ಸಾಹಿತ್ಯಗಳೇ ಹೆಚ್ಚಾಗಿ ರಚನೆಯಾಗಿರುವುದು ಕಂಡುಬರುತ್ತದೆ. ಇದರಿಂದ ಆ ಕಾಲದಲ್ಲಿ ವೀರಶೈವ ಧರ್ಮ ಹೆಚ್ಚು ಪ್ರಚಲಿತವಾಗಿ, ಜನಪ್ರಿಯವಾಗಿತ್ತೆಂಬುದು ತಿಳಿದುಬರುತ್ತದೆ. ಇವರು ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಹಿಂದಿನ ಕಾಲದ ಪಂಡಿತರು, ಪದ್ಯರೂಪದಲ್ಲಿ ಸಾಹಿತ್ಯ ರಚಿಸುವುದು ಪಾಂಡಿತ್ಯದ ಲಕ್ಷಣವೆಂದು ತಿಳಿದಿದ್ದರು. ಆದರೆ ಈ ಕಾಲದಲ್ಲಿ ವೀರಶೈವರು, ಜನಸಾಮಾನ್ಯರಿಗೆ ಅರ್ಥವಾಗಬೇಕಿದ್ದರೆ, ಸಾಹಿತ್ಯ ಅವರವರೆಗೂ ತಲುಪಬೇಕಿದ್ದರೆ, ಗದ್ಯರೂಪದಲ್ಲಿ ರಚಿಸಬೇಕೆಂದು ತಿಳಿದಿದ್ದರು. ಹೀಗಾಗಿ ಅನೇಕ ಕೃತಿಗಳು ಗದ್ಯ ರೂಪದಲ್ಲಿವೆ. ಇವರ ಕಾಲದಲ್ಲಿ ಬೆರಳೆಣಿಕೆಯಷ್ಟಾದರೂ ಸ್ತ್ರೀಯರು ಸಾಹಿತ್ಯಕ್ಕೂ ತಮ್ಮ ಕೊಡುಗೆಯನ್ನು ಇತ್ತಿದ್ದಾರೆ.

ಇವರ ಕಾಲದ ವಾಸ್ತುಶಿಲ್ಪವನ್ನು ಗಮನಿಸಿದಾಗ, ವಿಜಯನಗರ ಕಾಲದ ವಾಸ್ತುಶಿಲ್ಪದ ಪ್ರಭಾವವೇ ಇವರ ಕಾಲದಲ್ಲಿಯೂ ಮುಂದುವರೆದುಕೊಂಡು ಬಂದಿದೆ. ಅವರಂತೆ ವಿಶಾಲವಾದ, ಭವ್ಯವಾದ ದೇವಾಲಯಗಳನ್ನು ಕಟ್ಟಿಸದಿದ್ದರೂ, ಅವರ ವಾಸ್ತುಶಿಲ್ಪದ ವೈಶಿಷ್ಟ್ಯ, ಕಂಬಗಳ ಮೇಲಿನ ಶಿಲ್ಪ ಕೆತ್ತನೆಗಳನ್ನೇ ಅನುಸರಿಸಿದ್ದಾರೆ. ಈ ಶಿಲ್ಪಗಳು ಆಗಿನ ಸಮಾಜದ ಪ್ರತಿಬಿಂಬವಾಗಿದ್ದವು. ಆ ಕಾಲದಲ್ಲಿ ನಡೆಯುತ್ತಿದ್ದ ಜನಪದ ಕಲೆಗಳು, ಕುಸ್ತಿ, ನೃತ್ಯಗಳಿಗೆ ಈ ಶಿಲ್ಪಗಳು ಸಾಕ್ಷಿಯಾಗಿವೆ. ಸಂಗೀತ ವಾದ್ಯಗಳ, ರಣವಾದ್ಯಗಳ ವೈವಿಧ್ಯತೆಯನ್ನೂ, ಸೈನಿಕರ ಸ್ಥಾನಮಾನಗಳನ್ನೂ, ಆಯುಧಗಳು, ಆನೆ, ಕುದುರೆ, ಒಂಟೆಗಳನ್ನೂ ಅವರ ದೇವಾಲಯದ ಕಂಬಗಳ ಮೇಲೆ ಕಾಣಬಹುದು. ಕೆಲವು ದೇವಾಲಯದ ಕಂಬಗಳ ಮೇಲೆ ಯೋಗಾಸನಗಳ ಶಿಲ್ಪಗಳೂ ಇವೆ. ಇವಲ್ಲದೆ ಪುರುಷಮೃಗ, ಒಂದೇ ದೇಹಕ್ಕೆ ಒಂದಕ್ಕಿಂತ ಹೆಚ್ಚು ಮುಖಗಳಿರುವ ಹಸುಗಳು, ಕೆಲವು ಬಹುಮುಖ ಹಸುಗಳ ಕೆಳಗೆ ಶಿವಲಿಂಗ ಅಥವಾ ಹಾಲು ಕುಡಿಯುತ್ತಿರುವ ಕರುವಿನ ವಿಶಿಷ್ಟ ಶಿಲ್ಪಗಳಿವೆ. ದೇವಾಲಯಗಳಿಗೆ ಹೆಚ್ಚಾಗಿ ಗೋಪುರಗಳಿರುವುದಿಲ್ಲ. ಅಪರೂಪಕ್ಕೆ ಕೆಲವು ದೇವಾಲಯಗಳ ಮುಖ್ಯ ದ್ವಾರಗಳಿಗೆ ಗೋಪುರಗಳಿವೆ. ದೇವಾಲಯದ ಹೊರಗಡೆ, ಮೇಲ್ಭಾಗದಲ್ಲಿ, ಸುತ್ತಲೂ ಗೂಡುಗಳಿದ್ದು ಅವುಗಳಲ್ಲಿ, ಆ ದೇವರಿಗೆ ಸಂಬಂಧಪಟ್ಟ ದೇವರುಗಳ ವಿಗ್ರಹಗಳಿರುತ್ತಿದ್ದವು. ಈಶ್ವರನ ದೇವಾಲಯಗಳ ಮೇಲ್ಭಾಗದ ನಾಲ್ಕೂ ಮೂಲೆಗಳಲ್ಲಿ, ಎರಡು ದೇಹ ಒಂದು ಮುಖವಿರುವ ಬಸವಣ್ಣಗಳಿವೆ. ದೇವಾಲಯದ ಶಿಲ್ಪಗಳಲ್ಲದೇ ವೀರಗಲ್ಲುಗಳೂ, ಸತೀಕಲ್ಲುಗಳೂ, ಆಗಿನ ಶಿಲ್ಪಗಳ ಹೆಚ್ಚಳಿಕೆಯನ್ನು ಎತ್ತಿ ಹಿಡಿಯುತ್ತವೆ. ಕುದುರೆಗಳು, ಆನೆಗಳು, ನಾಯಿಗಳಿಗೂ ವೀರಗಲ್ಲುಗಳನ್ನು ನೆಟ್ಟಿರುವುದನ್ನು ಕಾಣುತ್ತೇವೆ. ದೇವಾಲಯಗಳಲ್ಲದೆ, ಮಠಗಳೂ ವೈಶಿಷ್ಟ್ಯ ಪೂರ್ಣವಾಗಿವೆ. ಇದರಂತೆ ಅರಮನೆ, ಕೋಟೆಗಳಲ್ಲಿಯೂ ವಾಸ್ತುಶಿಲ್ಪದ ಭವ್ಯತೆಯನ್ನು ಕಾಣಬಹುದು. ಚೌಕಾಕಾರದ, ವರ್ತುಲಾಕಾರದ ಬುರುಜುಗಳನ್ನು ಕೋಟೆಗಳಿಗೆ ಮೊದಲಿನಿಂದಲೂ ಕಟ್ಟಿಕೊಂಡು ಬಂದಿದ್ದಾರೆ. ಪಾಳೆಯಗಾರರು ಷಟ್ಕೋನ, ಅಷ್ಟಕೋನ, ದಶಕೋನಗಳಿರುವ ಬುರುಜುಗಳನ್ನೂ, ಹತ್ತು ಕಣ್ಣಿನ ಬಾವಿಗಳನ್ನೂ, ಮದ್ದು ತಯಾರಿಸುವ ಬೀಸುವ ಕಲ್ಲನ್ನೂ ಕಟ್ಟಿರುವುದನ್ನು ನೋಡಿದರೆ, ಅವರು ವಾಸ್ತುಶಿಲ್ಪಕ್ಕೆ ಕೊಟ್ಟಿದ್ದ ಪ್ರೋತ್ಸಾಹ ತಿಳಿದುಬರುವುದಲ್ಲದೆ, ಅವರಿಗಿದ್ದ ತಂತ್ರ ವಿಜ್ಞಾನದ ಪರಿಚಯವನ್ನೂ ಇವು ಮಾಡಿಕೊಡುತ್ತವೆ. ವಾಸ್ತುಶಿಲ್ಪದ ಜೊತೆಗೆ ಚಿತ್ರಕಲೆ, ವರ್ಣಕಲೆಗಳಿಗೂ ಅವರ ಪ್ರೋತ್ಸಾಹವಿದ್ದುದು ಎರಡು ಮೂರು ಕಡೆ ಸಿಕ್ಕಿರುವ ಚಿತ್ರಕಲೆಗಳಿಂದ ಗೊತ್ತಾಗುತ್ತದೆ.

ಹೀಗೆ ಮೂರು ಶತಮಾನಗಳವರೆಗೆ, ಮಧ್ಯಕಾಲೀನ ಪೂರ್ವ ಕರ್ನಾಟಕದಲ್ಲಿ ಪಾಳೆಯಗಾರರು ವಿಜಯನಗರದ ಅರಸರ ಮಾದರಿಯನ್ನೇ ಅನುಸರಿಸಿ ರಾಜಕೀಯ, ಆರ್ಥಿಕ, ಧಾರ್ಮಿಕವಾಗಿ ಆಡಳಿತವನ್ನು ನಡೆಸಿದ್ದರೂ, ಆರ್ಥಿಕ ವ್ಯವಸ್ಥೆಯಲ್ಲಿ ಇನ್ನೂ ಸೂಕ್ಷ್ಮಾತಿಸೂಕ್ಷ್ಮವಾದ ಕೊಂಡಿಗಳು ಎಂದರೆ ಕೂಲಿ, ಸಂಬಳ, ವ್ಯಾಪಾರದ ರೀತಿ, ವ್ಯಯದ ಪರಿಮಾಣ ಮುಂತಾದುವು ಸಿಕ್ಕಿಲ್ಲ. ಅವುಗಳು ಸ್ಪಷ್ಟವಾಗಬೇಕಾಗಿದೆ. ಎಷ್ಟೋ ದೇವಾಲಯಗಳು, ಕೋಟೆಗಳು, ಅರಮನೆಗಳು ನಾಶವಾಗಿ, ಕೆಲವು ದುಃಸ್ಥಿತಿಯಲ್ಲಿರುವ ಕಾರಣ, ಅವುಗಳ ಪರಿಚಯ ನಮಗೆ ಈಗ ಆಗುವುದು ಅಸಾಧ್ಯವಾಗಿದೆ. ಶಾಸನಗಳಲ್ಲಿ ಪಾಳೆಯಗಾರರ ವಂಶಗಳ ಕ್ರಮ ತಪ್ಪಿ ಹೋಗಿರುವುದರಿಂದ, ಕೆಲವು ಪಾಳೆಯಗಾರರ ಹೆಸರುಗಳು ಅಪಭ್ರಂಶವಾಗಿ ಕೆತ್ತಿರುವುದರಿಂದ, ಶಾಸನಗಳನ್ನು ಕೆತ್ತಿರುವ ತೇದಿಗಳು ಕೆಲವು ಕಡೆ ತಪ್ಪಾಗಿರುವುದರಿಂದ ಅವರ ಚರಿತ್ರೆ, ವಂಶಾವಳಿ ತಿಳಿಯುವುದು ಕಷ್ಟವಾಗುತ್ತದೆ. ಈಗಿರುವ ಪಾಳೆಯಗಾರರ ವಂಶಸ್ಥರಲ್ಲಿ ಕೆಲವರು ತಮ್ಮಲ್ಲಿರುವ ಕಾಗದ ಪತ್ರಗಳನ್ನು ನೋಡಲೂ ಕೊಡದ ಕಾರಣ, ಆಗಬೇಕಾದ ಕೆಲಸಗಳು ತುಂಬಾ ಇವೆ. ಇವೆಲ್ಲಾ ದೊರೆತರೆ ಪೂರ್ವ ಕರ್ನಾಟಕದ ಪಾಳೆಯಗಾರರ ಚರಿತ್ರೆ ಯಾವ ಮಹಾನ್ ಸಾಮ್ರಾಜ್ಯಗಳ ಚರಿತ್ರೆಗೂ ಕಡಿಮೆ ಎನಿಸಲಾರದು.

# ಶಾಸನೋಕ್ತ ವೀರಶೈವ ಪ್ರಮುಖರು

– ಶಿವಪ್ಪ ನ. ನೀರಲಗಿ*

ಕರ್ನಾಟಕ ಸಂಸ್ಕೃತಿ ಮತ್ತು ಪರಂಪರೆಗೆ ವೀರಶೈವ ಧರ್ಮದ ದಂಡನಾಯಕರು, ಸೇನಾಪತಿಗಳು ಹಾಗೂ ಶರಣ ಶರಣೆಯರು ಬಹು ಅಮೂಲ್ಯವಾದ ಕೊಡುಗೆಯನ್ನಿತ್ತಿದ್ದಾರೆ. ಹನ್ನೆರಡನೇ ಶತಮಾನದಲ್ಲಿ ಬಸವಣ್ಣ ಮತ್ತು ಅವನ ಸಂಗಡಿಗರು ಕೈಗೊಂಡ ಸಮಾಜೋಧಾರ್ಮಿಕ ಆಂದೋಲನದಿಂದ ಕನ್ನಡ ಸಾಹಿತ್ಯಕ್ಕೆ ವಚನವೆಂಬ ಹೊಸದೊಂದು ಪ್ರಕಾರವನ್ನು ನೀಡಿದ್ದಾರಲ್ಲದೇ ಜನರ ಪ್ರಾತಿನಿಧಿಕ ಭಾಷೆಯಾದ ಕನ್ನಡದಲ್ಲಿಯೇ ತಮ್ಮ ವಚನಗಳನ್ನು ರಚಿಸಿ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ.

**ಶಂಕರ ದಾಸಿಮಯ್ಯ (ಕ್ರಿ.ಶ. ೧೦೪೦)**

ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನಲ್ಲಿರುವ ಕಂದಗಲ್ಲ ಶಂಕರ ದಾಸಿಮಯ್ಯನ ಜನ್ಮಸ್ಥಳವಾಗಿದೆ. ನವಿಲೆಯ ಅದರ ಉತ್ತರಕ್ಕೆ ೧೨ ಮೈಲುಗಳ ಅಂತರದಲ್ಲಿ, ತಾಳಿಕೋಟೆಯಿಂದ ದಕ್ಷಿಣಕ್ಕೆ ೨೨ ಮೈಲುಗಳ ಮೇಲೆ ಕೃಷ್ಣಾನದಿಯ ಪೂರ್ವ ದಂಡೆಯಲ್ಲಿದೆ. ಈ ನವಿಲೆಯಲ್ಲಿರುವ ಮೂರು ಶಾಸನಗಳಲ್ಲಿ ಶ್ರೀ ಜಡೇಶಂಕರ ದೇವರ ಉಲ್ಲೇಖವಿದ್ದು ಲಿಂಗದ ತಲೆಯ ಮೇಲೆ ಹಿಂಭಾಗದ ಕಡೆಗೆ ಕೂದಲು ಹಿಕ್ಕಿದಂತೆ ಇರುವುದರಿಂದ ಈ ಲಿಂಗವನ್ನು ಜಡೆಯ ಶಂಕರ ದೇವನೆಂದು ಕರೆಯಲಾಗಿದೆ.

ಕ್ರಿ.ಶ. ೧೮೨೮ರ ಕರ್ಜಗಿ ಶಾಸನವು ಶಂಕರ ದಾಸಿಮಯ್ಯನ ಹೆಸರನ್ನೊಳಗೊಂಡ ಮೊದಲ ಶಾಸನವಾಗಿದೆ. ಈ ಶಾಸನದಲ್ಲಿ 'ಶ್ರೀ ಜಡೆಯ ಶಂಕರ ಲಿಂಗಸ್ವಾಮಿ' ಜೊತೆಗೆ 'ಶ್ರೀ ಶಂಕರ ದಾಸ' ಎಂಬ ಹೆಸರೂ ಉಲ್ಲೇಖಗೊಂಡಿದೆ. ಹಂಪಿಯ ಹೇಮಕೂಟ ಪರಿಸರದಲ್ಲಿ ಜಡೆಯಶಂಕರ ದೇವಾಲಯವಿದ್ದು ಅದಕ್ಕೆ ಕ್ರಿ.ಶ. ೧೩೭೯ರಲ್ಲಿ ಇಮ್ಮಡಿ ಹರಿಹರನ ಹೆಂಡತಿ ಬುಕ್ಕಾಯವ್ವೆಯು ದೀಪಸ್ತಂಭ ನಿಲ್ಲಿಸಿದುದನ್ನು ಅಲ್ಲಿನ ಶಾಸನವು ಉಲ್ಲೇಖಿಸುತ್ತದೆ. ಕೌಲೆದುರ್ಗದ ಕ್ರಿ.ಶ. ೧೬೬೧ರ ತಾಮ್ರಶಾಸನವು 'ಮನೋಹರದ ಜಟಾಶಂಕರ ದೇವರ' ಎಂಬ ಉಲ್ಲೇಖವನ್ನೊಳಗೊಂಡಿದೆ. ಕ್ರಿ.ಶ. ೧೨೮೦ರ ಮಂಡ್ಯ ಜಿಲ್ಲೆಯ ಮರಡಿಪುರ ಶಾಸನವು 'ಶ್ರೀ ಜಡೆಯಶಂಕರದೇವ ಮಲ್ಲಯ್ಯ'ನೆಂಬ ಹೆಸರುನ್ನೊಳಗೊಂಡಿದೆ.

**ಕೊಂಡಗುಳಿ ಕೇಶಿರಾಜ (ಕ್ರಿ.ಶ. ೧೧೦೭)**

ಕೇಶಿರಾಜನ ಊರು ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಡೋಣಿ ಕೊಂಡಗೂಳಿಯಾಗಿದೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಈ ಊರು ಒಂದು ಅಗ್ರಹಾರವಾಗಿತ್ತು. ಕೊಂಡಗುಳಿಯ ಎರಡು ಶಾಸನಗಳು ಹಾಗೂ ಹರಿಹರ ಕವಿಯ ಕೃತಿಯಲ್ಲಿ ಕೊಂಡಗುಳಿಯನ್ನು ಅಗ್ರಹಾರವೆಂದೇ ಕರೆಯಲಾಗಿದೆ. ಕ್ರಿ.ಶ. ೧೧೦೭ರ ಶಾಸನದಲ್ಲಿ ಕೇಶಿರಾಜನ ತಂದೆ ನಿಂಬಣ್ಣಯ್ಯ ಕಲ್ಯಾಣದ ಚಾಲುಕ್ಯರ ಭುವನೈಕ ಮಲ್ಲನ (ವಿಕ್ರಮಾದಿತ್ಯ VI) ದಂಡನಾಯಕನಾಗಿದ್ದನು ಎಂದು ಹೇಳಲಾಗಿದೆ. ನಿಂಬ ದಂಡನಾಥನನ್ನು 'ವಾಜಿಕುಳಾಂಬರ ದ್ಯುಮಣಿ' ಎಂದು ಕರೆದ ಈ ಶಾಸನ, ಮಗ ಕೇಶಿರಾಜನನ್ನು ಈ ಕೆಳಗಿನಂತೆ ವರ್ಣಿಸಿದೆ.

'.... ಕೊಣ್ಡಂಗುಳಿಯಲು ನಿಂಬ
....ಗಳ ಮಗ ಸ್ವಸ್ತಿ ಸಮಧಿಗತಪಞ್ಚ
ಮಹಾಶಬ್ದ ಮಹಾಸಾಮನ್ತಾಧಿಪತಿ (ಪ)

---

* ಉಪವಿದ್ಯುತ್ ಪರಿವೀಕ್ಷಕರ ಕಛೇರಿ, ನಂ. ೨೪೦, ಜಿಲ್ಲಾ ಆಡಳಿತ ಭವನ, ಬಾಗಲಕೋಟೆ.

ಮಹಾಪ್ರಚಣ್ಡ ದಣ್ಡನಾಯಕ ದುಷ್ಟ ವಿದ್ವಿಷ್ಟ
ವಿಧೇಯಕ ವಾಜಿಕುಳಾರ್ಣ್ಣವ ಪಾರಿಜಾತ
ಸುಕವಿಶುಕಚುಡ ಬನ್ದುವಸವಸಸ್ತ ವಚಶ್ರೀವಧೂ
ಕಾನ್ತ ಸಾಹಿತ್ಯ ಸರೋರುಹಮಧುಬ್ರತ ಸತ್ಯಸ
ತ್ಯಬ್ರತ ಹರಚರಣ ರಜೋರಂಜಿತೋತ್ತಮಾಂಗನ
ಯ್ಯನಸಿಂಗ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮನ್ಮಹಾಪ್ರ
ಧಾನಂ ಹೇರಿಲಾಳ ಸನ್ಧಿ ವಿಗ್ರಹಿ ದಣ್ಣನಾ[ಯ]ಕಂ ಕೇಸಿರಾಜರಸರು.

ಇಲ್ಲಿ 'ವಾಜಿಕುಳಾರ್ಣವ ಪಾರಿಜಾತ' ಎಂದು ಕರೆದಿರುವುದರಿಂದ ಇವರದು 'ವಾಜಿಕುಲ' ವೆಂಬುದು ಸ್ಪಷ್ಟವಾಗುತ್ತದೆ. ಮೇಲಿನ ಶಾಸನದಲ್ಲಿರುವ ಕೇಶಿರಾಜನನ್ನು ಕುರಿತು ಇರುವ ಒಕ್ಕಣಿಕೆ ಅವನ ರಾಜಕೀಯ ಮತ್ತು ಸಾಹಿತ್ಯಕ ಕಾರ್ಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಕೊಂಡಗುಳಿಯು ಪ್ರಾಚೀನ ಕರ್ನಾಟಕದ ಪ್ರಸಿದ್ಧ ಅಗ್ರಹಾರಗಳಲ್ಲಿ ಒಂದು. ದಂಡನಾಯಕ ನಿಂಬಣಯ್ಯಗಳ ಮಗ, ದಂಡನಾಯಕ ಕೇಶಿರಾಜ. ಕೇಶಿರಾಜನನ್ನು ಶಾಸನಗಳಲ್ಲಿ ಅಯ್ಯನ ಸಿಂಗನೆಂದು ಕರೆದಿದೆ. ಶಿವಶರಣರಿಂದ ಶಿವಕವಿಗಳಿಂದ ಕೇಶಿರಾಜನು ಸ್ತುತಿಸಲ್ಪಟ್ಟಿದ್ದಾನೆ. ಹೊಯ್ಸಳ ವೀರಬಲ್ಲಾಳನ ಕ್ರಿ.ಶ. ೧೨೮೦ರ ಶಾಸನವು ಕೇಶಿರಾಜನನ್ನು ಈ ಕೆಳಗಿನಂತೆ ಹೊಗಳುತ್ತದೆ.

'....... ಸಕಳ ಗಣ ಪರವೇಷ್ಟಿತ ಯಕ್ಕೋಟಿಗಳು ಪೂಜಿತ ಮತ್ತಂ
ಮರ್ತ್ಯಲೋಕದ ಗಣಂಗಪಸ್ತ್ರಿಯಳವ ದಾಸ ದಶವರ್ಮ್ಯದಿಹಿ
ಉದ್ಭಟ ನಂಬಿ ಕುಂಬಾರಗೊಂಡ ಅಂಡವಲ ಕರಿಕಾಲ ಚೋಲ ಭೋಗದೇವ
ಬಾಣ ಮಯೂರ ಕಾಳಿದಾಸ ಕೇಶಿರಾಜ ದಣ್ಣಾಯಕ ಸುರಿಗೆಯ ಚೆಲ್ವಡ
ರಾಯ ಸಂಗನಬಸವಯ್ಯ ಲಿನಿಮಿತಿ ಕೇಶಿರಾಜ ಜಗದೇವ ದಣ್ಣಾಯಕ
ಏಕಾಂತದ ರಾಮಯ್ಯ ಸೊನ್ನಲಿಗೆಯ ರಾಮಯ್ಯ ಹುಲಿಗೆರೆಯ ಹೊನ್ನಯ್ಯ
ನೆಲುವಿಗೆಯ ಸಾಂತಯ್ಯ ಸಕಳ ಗಣ ಪರಿವೇಷ್ಟಿತ ಶ್ರೀ ಕಲಿದೇವರ ಪ್ರಶಸ್ತಿ ಮಂಗಳಂ'

{ಎ.ಕ. III–i, (ರೈಸ್ ಆವೃತ್ತಿ), ಮಂಡ್ಯ ೮೩, ಹೊಯ್ಸಳ ವೀರಬಲ್ಲಾಳ III, ಕ್ರಿ.ಶ. ೧೨೮೦}

### ಭಕ್ತಿಭಂಡಾರಿ ಬಸವೇಶ್ವರ (ಕ್ರಿ.ಶ. ೧೧೩೧–೧೧೬೭)

ಕರ್ನಾಟಕದಾದ್ಯಂತ ಅನೇಕ ವಿದ್ವಾಂಸರು ಪತ್ತೆ ಹಚ್ಚಿರುವ ಶಾಸನಗಳು ಬಸವಣ್ಣನವರ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ಅವುಗಳಲ್ಲಿ ಅರ್ಜುನವಾಡ ಶಾಸನ (ಕ್ರಿ.ಶ. ೧೨೬೦), ಹಿರಿಯೂರು ಶಾಸನ (ಕ್ರಿ.ಶ. ೧೨೯೫), ಚೌಡದಾನಾಪುರ (ಕ್ರಿ.ಶ. ೧೨೬೦) ಮರಡಿಪುರ (ಕ್ರಿ.ಶ. ೧೨೮೦) ಮುಂತಾದ ಶಾಸನಗಳು ಬಹುಪ್ರಮುಖವಾಗಿವೆ. ಅರ್ಜುನವಾಡದ ಶಾಸನವು ಬಸವಣ್ಣನವರನ್ನು 'ಮಾದಿರಾಜನ ತನೂಭವಂ' ಎಂದು ಕರೆದಿದೆ.

### ತಾಳಿಕೋಟೆಯ ಶಿವದೇವ (ಶಿವಸ್ವಾಮಿ–ಕ್ರಿ.ಶ. ೧೧೫೦)

ಅಕ್ಕನಾಗಲಾಂಬಿಕೆಯ ಪತಿ ಚೆನ್ನಬಸವಣ್ಣನ ತಂದೆ ಶಿವದೇವ ಅಥವಾ ಶಿವಸ್ವಾಮಿಯು ಶಾಸನೋಕ್ತ ಶಿವಶರಣನಾಗಿದ್ದು ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲೂಕಿನ, ತಾಳಿಕೋಟೆಯವನೆಂದು ಇತ್ತೀಚಿನ ಸಂಶೋಧನೆಗಳಿಂದ ತಿಳಿದುಬರುತ್ತದೆ.

ಚೌಡದಾನಪುರದ ಒಟ್ಟು ಆರು ಶಾಸನಗಳು ಈ ಶಿವದೇವ ಯತಿಯ ತಪಸ್ಸು, ಕಲ್ಯಾಣ ಕ್ರಾಂತಿಯಲ್ಲಿ ಅವನು ವಹಿಸಿದ ಪಾತ್ರ ಮುಂತಾದ ಅವನ ವರ್ಣ ರಂಜಿತ ವ್ಯಕ್ತಿತ್ವವನ್ನು ವರ್ಣಿಸುತ್ತವೆ. ಇವುಗಳಿಂದ ಇವನು ತನ್ನ ಕೊನೆಗಾಲದಲ್ಲಿ ತಾಳಿಕೋಟೆಯಲ್ಲಿಯೇ ಲಿಂಗೈಕ್ಯನಾದನೆಂದು ನಮಗೆ ತಿಳಿದುಬರುವುದು.

ಗೋಪೆ ಶಿವಪುರ, ಶಿವದೇವಪುರ, ಮುಕ್ತಿಕ್ಷೇತ್ರ ಇವು ಚೌಡದಾನಪುರಕ್ಕಿರುವ ಪರ್ಯಾಯ ನಾಮಗಳಾಗಿವೆ. ಶಿವದೇವ ಶರಣನು ಕಲ್ಯಾಣ ಕ್ರಾಂತಿಯ ನಂತರ ಕೆಲವು ದಿನಗಳವರೆಗೆ ಇಲ್ಲಿ ಬಾಳಿದ್ದಾನೆ. ಈ ಚೌಡದಾನಪುರದಲ್ಲಿ

ಶಾಸನಗಳು ಈ ವೀರ-ವ್ರತಿಯನ್ನು ವಿಶೇಷವಾಗಿ ಬಣ್ಣಿಸುತ್ತವೆ. ಈ ಕೆಳಗಿನ ಶಾಸನ ಪದ್ಯ ಒಂದು ಶಿವಸ್ವಾಮಿಯ ವ್ಯಕ್ತಿತ್ವಕ್ಕೆ ಕೈಗನ್ನಡಿಯಾಗಿದೆ.

'ಲಿಂಗಕ್ಕೆ ಜಂಗಮಕ್ಕಂ ।
ಹಿಂಗದೇ ದಾಸತ್ವ ಮಾಳ್ಪುದೆ ಬೆಸನೆಂದಾ ।
ಸಂಗನ ಬಸವ ಬೆಸಸೆ ಮ
ನಂಗೊಡರ್ಚೆ ಸುವಾನುಭವ ಲಿಂಗವ ಮುದದಿಂ
ಮೃಡಗಣ ವರ ಪ್ರಸಾದಂ ।
ಪಡೆದಂ ಜಗವರಿಯಲಂದು ಸಂಗನಬಸವಂ
ಪಡೆದಾ ಪ್ರಸಾದ ಸಿದ್ಧಿಯ ।
ಕಡುವೀರಬ್ರತದಿ ಪಡೆದನೀ ಶಿವದೇವಂ ।'

ಚೌಡದಾನಪುರ ಶಾಸನ (ಕ್ರಿ.ಶ. ೧೨೬೩)

ಲಿಂಗಪೂಜೆ ಜಂಗಮ ದಾಸೋಹಗಳು ಬಸವಣ್ಣನವರ ನಿತ್ಯ ಬದುಕು, ಪ್ರಸಾದ ಸಿದ್ಧಿ ಈ ಅಂಶಗಳನ್ನು ಉಲ್ಲೇಖಿಸುವ ಪ್ರಸ್ತುತ ಶಾಸನ ಅವರ ವ್ಯಕ್ತಿತ್ವ ಸಿದ್ಧಿಗೆ ಹಿಡಿದ ಕೈಗನ್ನಡಿಯಾಗಿದೆ. ಆ ಕಾಲದ ಜನತೆಗೆ ಬಸವಣ್ಣನವರ ಬದುಕು ಪರಮ ಆದರ್ಶವಾಗಿತ್ತೆಂದೂ ಅವರ ಅನಂತ ಆಚರಣೆಗಳು ಧರ್ಮದ ಅನುಶಾಸನಗಳಾಗಿದ್ದು, ಶಿವ ದೇವನಂಥವರು ಅವುಗಳನ್ನು ಅನುಷ್ಠಾನಗೊಳಿಸುತ್ತಿದ್ದರೆಂದೂ ಇದರಿಂದ ತಿಳಿದುಬರುತ್ತದೆ. ಅಲ್ಲದೇ ಈ ಶಾಸನದಲ್ಲಿ ಇನ್ನೊಂದೆಡೆಗೆ ಹೇಳಲಾದ 'ಶಿವದೇವ ಮುನಿಪತಿ ತೋರಿಮೆರೆದಂ, ಲಿಂಗಜಂಗಮ ಮೈಕ್ಯಮಂ ಮತ್ತಂ ಪುರಾತನರ ಚರಿತ್ರೆ ನಿರಳ ಚಿತ್ರಮಾಗಿ ಲಿಂಗಾರ್ಚನಂಗೆಯುತ್ತಮಿರೆ' ಎಂಬ ಮಾತುಗಳು ಬಸವಣ್ಣನವರು ಬಿತ್ತಿದ ತತ್ವಗಳ ಜೀವಂತಿಕೆಗೆ ಸಾಕ್ಷಿಯಾಗಿವೆ.

## ಶಿವಯೋಗಿ ಸಿದ್ಧರಾಮ (ಕ್ರಿ.ಶ. ೧೧೬೦)

ಹಿಂದಿನ ಸೊನ್ನಲಾಪುರದ (ಸೊಲ್ಲಾಪುರ) ಮುಖ್ಯಸ್ಥನಾದ ಮುದ್ದೇಗೌಡ, ಸುಗ್ಗಲಾದೇವಿಯರ ಸತ್ಪುತ್ರನಾಗಿ ಸಿದ್ಧರಾಮನು ಜನಿಸಿದನು. ಇವರು ಮೂಕೊಡೆಯರ ಪರಂಪರೆಗೆ ಸೇರಿದವರಾಗಿದ್ದಾರೆ. ಇಂದಿನವರೆಗೂ ಸೊಲ್ಲಾಪುರದ ಮಧ್ಯದಲ್ಲಿ ಸಿದ್ಧರಾಮನು ಕಟ್ಟಿಸಿದ ಕೆರೆಯಿದ್ದು, ಅದರ ಮಧ್ಯದಲ್ಲಿ ಈ ಶಿವಯೋಗಿಯ ಸಮಾಧಿ ಇದೆ. ಅದರ ಜೊತೆಯಲ್ಲಿಯೇ ಸಿದ್ಧರಾಮನು ಸ್ಥಾಪಿಸಿದ ಅನೇಕ ಶಿವಲಿಂಗಗಳೂ ಇಲ್ಲಿವೆ.

ಕಲ್ಯಾಣ ಕ್ರಾಂತಿಯ ನಂತರ ಚನ್ನಬಸವಣ್ಣನವರು ಉಳಿವಿಗೆ ಹೋದ ಮೇಲೆ ಶೂನ್ಯಪೀಠದ ಅಧ್ಯಕ್ಷತೆಯನ್ನು ಸಿದ್ಧರಾಮರು ವಹಿಸಿಕೊಂಡರು. ಕಲ್ಯಾಣ ಕ್ರಾಂತಿಯಲ್ಲಿ ಬಿಜ್ಜಳನ ಕೊಲೆಯಾದ ನಂತರ ಸಿದ್ಧರಾಮರು ತಮ್ಮ ಶೂನ್ಯಪೀಠವನ್ನು ಕಲ್ಯಾಣದಿಂದ ಸೊಲ್ಲಾಪುರಕ್ಕೆ ವರ್ಗಾಯಿಸಿ ಅಲ್ಲಿಯೇ ಅವರು ಲಿಂಗೈಕ್ಯರಾದರೆಂದು ಅವರ ಚರಿತ್ರೆಯಿಂದ ನಮಗೆ ತಿಳಿದುಬರುವುದು. ಅವರು ಕರ್ನಾಟಕದಾದ್ಯಂತ ಸಂಚಾರ ಕೈಗೊಂಡರು. ಕರ್ನಾಟಕದಾದ್ಯಂತ ಇವರ ಹೆಸರಿನ ದೇವಾಲಯ ಮತ್ತು ಮಠಗಳಿವೆ. ಕರ್ನಾಟಕದ ಅನೇಕ ಶಾಸನಗಳಲ್ಲಿ ಸಿದ್ಧರಾಮರ ಹೆಸರು ಪ್ರಯೋಗವಾಗಿದ್ದು ಅವುಗಳಲ್ಲಿ ಪ್ರಮುಖವಾದವುಗಳೆಂದರೆ, ಪಡೇಕನೂರ, ಚೂರ್ಗಿ, ಚಡಚಣ, ಸಂಖ, ಟಾಕಳಿ ಮುಂತಾದವುಗಳು.

## ಒಂದನೇ ರಾಚಮಲ್ಲ (ಕ್ರಿ.ಶ. ೧೧೮೫-೧೧೭೭)

ದೇವರ ದಾಸಿಮಯ್ಯನ ಕಾಲದಲ್ಲಿಯೇ ವೀರಶೈವದ ಕಡೆಗೆ ವಾಲಿದ್ದ ಈ ಸಿಂಧಮನೆತನದ ಅರಸರು ದಂಡಾಧೀಶನಾಗಿದ್ದ ಬಿಜ್ಜಳನ ಮಂತ್ರಿ ಬಸವಣ್ಣನವರ ಧಾರ್ಮಿಕ ಸುಧಾರಣೆಯ ಪ್ರಭಾವಕ್ಕೊಳಗಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿದರು. ಕಲ್ಯಾಣದ ಕ್ರಾಂತಿಯ ನಂತರ, ಶರಣರು ಕಲ್ಯಾಣದಿಂದ ಅನೇಕ ಕಡೆಗೆ ಚದುರಿದರು.

ಇಂತಹ ಸಂದರ್ಭದಲ್ಲಿ ಹಂಪಿಯತ್ತ ಪಯಣಿಸಿದ ಶರಣರ ರಕ್ಷಣೆಗಾಗಿ ಕುರುಗೋಡ ಸಿಂಧರು ಕಾವಲುಭಟರನ್ನು ನೇಮಿಸಿ ಅವರಿಗೆ ಬೆಂಗಾವಲಾಗಿ ನಿಂತರು. ಒಂದನೇ ರಾಚಮಲ್ಲನನ್ನು 'ಶಿವಪಾದ ಶಿಖಾಮಣಿ', ಶಿವೈಕ್ಯ ಚೂಡಾಮಣಿ',

ಅರ್ಜಿತ ಶಿವಪಾದನೆಂದು', ಶಿವಪಾದ ಶೇಖರಂ ಮಹೇಶ್ವರಂ ಎಂದು ದೇವರಗುಡಿ ಶಾಸನ ಹಾಗೂ ಇತರೇ ಶಾಸನಗಳು ಇವನನ್ನು ಬಣ್ಣಿಸಿವೆ. ಇದರಿಂದ ಇವನು ಕಟ್ಟಾ ವೀರಶೈವಧರ್ಮದ ಅನುಯಾಯಿ ಯಾಗಿದ್ದನೆಂದು ತಿಳಿದುಬರುವುದಲ್ಲದೇ ಈ ಕೆಳಗಿನ ಪದ್ಯವು ಸಿಂಧರ ರಾಜಧಾನಿ ಕುರುಗೋಡನ್ನು ಈ ಕೆಳಗಿನಂತೆ ವರ್ಣಿಸುತ್ತದೆ.

ಭಕ್ತಿಯ ಮನೆ, ಭಕ್ತಿಯ ನೆಲೆ
ಭಕ್ತಿಯವತಿ, ಭಕ್ತಿಯೇಳ್ಗೆ, ಭಕ್ತಿಯ ರಾಜ್ಯಂ ।
ಭಕ್ತಿಯ ಭಂಡಾರಂ
ಶಿವಭಕ್ತಿಯ ಸಿರಿಬಂದು ನೆಲೆಸಿತ್ತೀ ಕುರುಗೊಡೊಳ್ ।

**ಮಹಾಮಂಡಳೇಶ್ವರ ವಿರೂಪರಸ (ಕ್ರಿ.ಶ. ೧೧೮೪)**

ಕಲ್ಯಾಣ ಕ್ರಾಂತಿಯ ನಂತರ, ಕಲ್ಯಾಣದಿಂದ ಹೊರಟ ಶರಣರಿಗೆ ಆಶ್ರಯ ಮತ್ತು ರಕ್ಷಣೆಯನ್ನು ಕೊಟ್ಟವರಲ್ಲಿ ತಾಳಿಕೋಟೆಯ ಭೈಸಕುಲದರಸು ಮಹಾಮಂಡಳೇಶ್ವರ ವಿರೂಪರಸನು ಒಬ್ಬನಾಗಿದ್ದಾನೆ. ಇವನು ಕಲ್ಯಾಣದ ಚಾಲುಕ್ಯರ ನಾಲ್ಕನೆಯ ಸೋಮೇಶ್ವರ (ಕ್ರಿ.ಶ. ೧೧೮೧–೧೧೮೯) ಹಾಗೂ ದೇವಗಿರಿಯ ಸೇಉಣರ ಭಿಲ್ಲಮನ (ಕ್ರಿ.ಶ. ೧೧೮೭–೮೯) ಮಹಾಮಂಡಳೇಶ್ವರನಾಗಿ ಹಗರಟಗಿ ೩೦೦ರ ನಾಡನ್ನು ಪ್ರತಿನಿಧಿಸಿದ್ದಾನೆ. ಕ್ರಿ.ಶ. ೧೧೮೪ರ ನಾಲ್ಕನೆಯ ಸೋಮೇಶ್ವರನ ಶಾಸನದ ಪ್ರಕಾರ ಅನೇಕ ದೇಶಾಂತರದಲ್ಲಿ ಎದುರಾದ ಪರಸಮಯಿಗಳಾದ ಜೈನ ಮತ್ತು ಬೌದ್ಧರನ್ನು ನಿರ್ನಾಮಗೊಳಿಸಿ ಆ ಸ್ಥಳಗಳಲ್ಲಿ ಶಿವಲಿಂಗ ಸಿಂಹಾಸನವನನ್ನೂ ಪ್ರತಿಷ್ಠಾಪಿಸಿ ವೀರ ಮಾಹೇಶ್ವರ ನಿಷ್ಠೆಯನ್ನು ಮೆರೆದಿದ್ದಾನೆ. ಈ ಶಾಸನವು ಪುರಾತನ ನೂತನರೆನಿಸಿದ ಅಸಂಖ್ಯಾತ ಗಣಗಳನ್ನು ಉಲ್ಲೇಖಿಸುತ್ತದೆ.

ಅದೇ ರೀತಿಯಾಗಿ ಮಿಣಜಿಗಿಯ ಕ್ರಿ.ಶ. ೧೧೮೪ರ ಶಾಸನವು ನಾಲ್ಕನೆಯ ಸೋಮೇಶ್ವರನು ಗೋದಾವರಿ ತೀರದ 'ಮಂಜಿರ ತೀರ್ಥ'ದ ನೆಲವೀಡಿನೊಳಗೆ ರಾಜ್ಯಭಾರ ಮಾಡುವಾಗ ಮಿಣಜಿಗಿಯ ಮಹಾಪ್ರಭು ಮಾಚಯ್ಯನು ಕಟ್ಟಿಸಿದ ತ್ರಿಕೂಟೇಶ್ವರ ದೇವಾಲಯಕ್ಕೆ ಮುದ್ರಹಸ್ತ ವಿಠ್ಠರಸ ದಂಡನಾಯಕರ ವಿನಂತಿಯ ಮೇರೆಗೆ ಮನ್ನೆಯ ವಿರೂಪರಸ ಹಾಗೂ ಅವರ ಹಿರಿಯ ಹೆಗ್ಗಡೆ ದೇಶಿಯ ದಂಡನಾಯಕ ನನ್ನರಸ, ಕರಣ ತಂತ್ರಪಾಳ ಚಿಕ್ಕಯ್ಯ, ಎಂಟು ಹಿಟ್ಟು ಮೊದಲಾದವರಿಂದ ಭೂಮಿ, ನಿವೇಶನ, ಗಾಣ ಮತ್ತು ಆದಾಯ ದಾನಗಳನ್ನು ಅಮೃತರಾಶಿ ಪಂಡಿತರ್ಗೆ ಕಾಲಂಕರ್ಚಿ ಧಾರಾಪೂರ್ವಕಂ ಮಾಡಿಬಿಟ್ಟರೆಂದು. ಅದೇ ರೀತಿಯಾಗಿ ಕುರುಬಗಾವುಂಡುಗಳು ಅದೇ ದೇಗುಲಕ್ಕೆ 'ಹೊಸ್ತಿಲಹಾಗ–ಒಂದು–ಹೊನ್ನು' ದಾನ ಬಿಟ್ಟರೆಂದು ಈ ಶಾಸನದಿಂದ ನಮಗೆ ತಿಳಿದುಬರುವುದು. ಮಹಾಪ್ರಧಾನ ಸೇನಾಧಿಪತಿ ಕುಮಾರ ನಾರಸಿಂಹ ದೇವರು ಈ ಮೇಲಿನ ಧರ್ಮಕಾರ್ಯಗಳಿಗೆಲ್ಲ ಸಾಕ್ಷಿಯಾಗಿದ್ದರು.

ಕ್ರಿ.ಶ. ೧೧೮೭ರಲ್ಲಿ ಈ ಪ್ರದೇಶವು ಸೇಉಣರ ಭಿಲ್ಲಮನ ಆಳ್ವಿಕೆಗೆ ಒಳಪಟ್ಟಿತ್ತು, ಭಿಲ್ಲಮನ ಕಾಲದ ಕಲಕೇರಿಯ ಶಾಸನವು, ಕಲ್ಲುಕೆರೆಯ ಮಹಾರಾಜರಲ್ಲಿ ಒಬ್ಬನಾದ ಕಮ್ಮೆಕುಲದ ರೇಚಿಭಟ್ಟನು ವಿಕ್ರಮ ದಂಡಾಧಿಪನಿಂದ ಭೂಮಿಯನ್ನು ಕೊಂಡು ಸತ್ರಕ್ಕೆ ದಾನಮಾಡಿದನೆಂದು ತಿಳಿಸುತ್ತದೆ. ಅದೇ ರೀತಿಯಾಗಿ ಕ್ರಿ.ಶ. ೧೧೮೯–೯೦ರಲ್ಲಿ ಯಾದವರ ಭಿಲ್ಲಮನ ಆಳ್ವಿಕೆಯಲ್ಲಿಯೇ ಮಹಾಪ್ರಧಾನ ದೇಶೀಯ ದಂಡನಾಯಕ ಹಿರಿಯ ಹೆಗ್ಗಡೆ ನನ್ನರಸ ಹಾಗೂ ಲಕ್ಷ್ಮೀದೇವನಾಯಕರು ಪೀರಾಪುರದಲ್ಲಿ ಪ್ರತಿಷ್ಠಾಪಿಸಿದ ಈಸಪೇಶ್ವರ (ಸಂಗಮೇಶ್ವರ) ಮತ್ತು ಸಿರಿಯಮೇಶ್ವರ (ಲಕ್ಷ್ಮೀಗುಡಿ) ದೇಗುಲಗಳಿಗೆ ಮಹಾಮಂಡಲೇಶ್ವರ ವಿರೂಪದೇವರಸರ ಅನುಮತಿಯಿಂದ ಈ ದೇವಾಲಯದ ಯತಿ ಪದ್ಮಜೀಯನಿಗೆ ಭೂಮಿ ಹಾಗೂ ನಿವೇಶನಗಳನ್ನು ದಾನ ಮಾಡಿದರು. ಮಹಾಮಂಡಳೇಶ್ವರ ವಿರೂಪರಸನು ಬಸವಣ್ಣನವರ ಸಮಕಾಲೀನನಾಗಿದ್ದು 'ಮನ್ನೆಯ ವಿರೂಪರಸ', ಮಹಾಮಂಡಳೇಶ್ವರ ವಿರೂಪರಸ' ಹಾಗೂ 'ವಿರೂಪ ದೇವರಸ' ನೆಂದು ಶಾಸನಗಳು ಇವನನ್ನು ಹೊಗಳಿವೆ.

ತುರುಕರುಗಳಿಂದ, ಕೆರೆ ಕಾಲುವೆ – ತೋಟಗಳಿಂದ, ದೇವತಾ ಭವನಗಳಿಂದ ಹಾಗೂ ಅರವಟ್ಟಿಗೆ ಸತ್ರಗಳಿಂದ ಹಗರಟಗೆ ನಾಡು ಶೋಭಿಸುತ್ತಿದೆ ಎಂದು ಕಲ್ಕೇರಿ ಶಾಸನವು ಮಹಾಮಂಡಳೇಶ್ವರ ವಿರೂಪರಸನನ್ನು ಬಣ್ಣಿಸುತ್ತಿದೆ. ಕಲಕೇರಿಯನ್ನು 'ದಶ್ಮತಟಾಕಂ' ಎಂದು ಕರೆದಿರುವರೂ. ಸಿಂದಗಿ ತಾಲೂಕಿನ ಶಾಸನವು ಮಹಾಸ್ರಗ್ಧರೆ, ಕಂದ, ಉತ್ಪಲಮಾಲಗಳಿಂದೊಡಗೂಡಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ವಿರೂಪರಸನ ಕಾಲದಲ್ಲಿಯೇ ಕ್ರಿ.ಶ. ೧೧೮೪ರ

ನಾಲ್ಕನೆಯ ಸೋಮೇಶ್ವರನ ಶಾಸನ ಎದುರಾದ ಪರಸಮಯಿಗಳಂ ಪಡಲ್ವಿಡ್ಡಿ ಲೋಕಮನಾಕಂಪಗೊಳ್ಸಿ ಬಸದಿಗಳಂ ಹೊಸೆದು ಮತ್ತು ಶಿವಲಿಂಗ ಸಿಂಹಾಸನ ಚಲಮಂ ಮೆರೆದು ಧೀರರೊಳ್ ಮೆರೆದು ಪರಸಮಯಿಗಳೊಡನೆ ಹೋರಾಡಿ ಅವರ ಧಾರ್ಮಿಕ ಸ್ಥಳಗಳಲ್ಲಿ ಶಿವಲಿಂಗ ಸಿಂಹಾಸನವನ್ನು ಪ್ರತಿಷ್ಠಾಪಿಸಿದ ಬಗ್ಗೆ ಸವಿಸ್ತಾರವಾಗಿ ತಿಳಿಸುತ್ತದೆ.

ಹೀಗೆ ಮಹಾಮಂಡಳೇಶ್ವರ ವಿರೂಪರಸನ ಧರ್ಮಕಾರ್ಯಗಳನ್ನು ಶಾಸನಗಳು ಮೇಲಿನಂತೆ ವರ್ಣಿಸಿವೆ. ಭೈಸಕುಲದರಸು ಹಗರಟಗಿ ಮುನ್ನೂರರ ನಾಡಿನ ಅಧಿಪತಿ ಶ್ರೀಮಾನ್ ಮಹಾಮಂಡಳೇಶ್ವರ ವಿರೂಪರಸನ ಆರಾಧ್ಯ ದೈವ ತಾಳಿಕೋಟೆಯ ಶ್ರೀ ವೀರಭಯ್ಸೇಶ್ವರ ಘನಮಠದ ಅಧಿದೇವತೆ ಶ್ರೀ ವೀರಭೈಯ್ಸೇಶ್ವರ ದೇವರು, ಶ್ರೀಮಾನ್ ಮಹಾಮಂಡಳೇಶ್ವರ ವಿರೂಪರಸನು ನೀಡಿದ ದಾನವನ್ನು ಈ ಘನಮಠದ ಅಧಿಪತಿ ಶ್ರೀ ವೀರದಾಸನು ಸ್ವೀಕರಿಸಿದ್ದಾನೆ. ಪ್ರಮುಖವಾಗಿ ವೀರದಾಸನ ವಂಶಜೆ ವೈಜವ್ವೆ, ಬಾಗೇನಾಯಕ ಶ್ರೀ ಮಠದ ಹೆಗ್ಗಡೆ ಸಂಕಯ್ಯ, ಚಾವಿಶೆಟ್ಟಿ ಹಾಗೂ ದಶವಂದ ಸಂಕಯ್ಯ ಮುಂತಾದ ಅಸಂಖ್ಯಾತ ಗಣಂಗಳು ಈ ಶಾಸನದಿಂದ ನಮಗೆ ತಿಳಿದುಬರುವುದು ಮಿಣಜಿಗಿಯ ಶಾಸನವು ಶ್ರೀ ವಿರೂಪರಸನನ್ನು ಭೈಸಕುಳಕಮಳ ಮಾರ್ತಂಡ ಶ್ರೀಮತ್ ಕಪಾಳೇಶ್ವರ ದೇವರ ಪಾದಾರಾಧಕಂ ಎಂದು ಹೇಳಿದರೆ ಕಲಕೇರಿಯ ಶಾಸನವು ವಿರೂಪರಸನನ್ನು ಭೈಸಕುಳಾಂಬರ ಭಾನು ಎಂದು ಕರೆದಿದೆ. (ಇತಿಹಾಸ ದರ್ಶನ ಸಂಪುಟ ೨೨, ಪುಟ ೨೭೩).

## ಹೊನ್ನಬೊಮ್ಮಿಶೆಟ್ಟಿ (ಕ್ರಿ.ಶ. ೧೧೮೪)

ಆದಿಗಣಾವತಾರ ನೆನಿಸಿದ ಹೊನ್ನಬೊಮ್ಮಿ ಶೆಟ್ಟಿಯನ್ನು ರಟ್ಟಿಹಳ್ಳಿ ಶಾಸನವು ಈ ಕೆಳಗಿನಂತೆ ವರ್ಣಿಸಿದೆ.

ಜಂಗಮಯ್ಯ ಜಂಗಮದ ನಚ್ಚಿಕೆ ಜಂಗಮದಚ್ಚು ಮತ್ತವಾ
ಜಂಗಮದಾಟ ಜಂಗಮದ ನೋಟಮ ಜಂಗಮ ಕೂಟವಾಗಳುಂ
ಜಂಗಮದಾಸೆ ಜಂಗಮದ ಭಾಷಯುಳುದ್ಭವಿಕಾಸೆ ರಾಜೆಸಿ
ಪ್ಪಂ ಗಡನೆಂದು ಬಣ್ಣಿಪುದು ಭೂವಳವೆನ್ನವೆ ಹೊನ್ನಬೊಂನಂ ॥

ಹೊನ್ನಬೊಮ್ಮಶೆಟ್ಟಿಯು ತನ್ನ ತಂದೆ ತಾಯಿಯರಿಗೆ ಪುಣ್ಯಪ್ರಾಪ್ತಿಯಾಗಲೆಂದು ಅವರ ಹೆಸರಿನಲ್ಲಿ ಲಿಂಗಪ್ರತಿಷ್ಠಾಪನೆ ಮಾಡಿ, ಕಡಂಬೇಶ್ವರ ದೇಗುಲವನನ್ನೂ ತ್ರಿಕೋಟದೇವಾಲಯವನ್ನಾಗಿ ಪರಿವರ್ತಿಸಿ ಮುಖ್ಯ ದೇವರ ಸನ್ನಿಧಿಯಲ್ಲಿ ಮಲ್ಲೇಶ್ವರ ಹಾಗೂ ರಾಜೇಶ್ವರ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿದನೆಂದು ರಟ್ಟಹಳ್ಳಿ ಶಾಸನವು ಹೇಳುತ್ತದೆ.

ಅಲ್ಲದೇ ಕ್ರಿ.ಶ. ೧೧೮೪ರ ತಾಳಿಕೋಟೆಯ ನಾಲ್ಕನೇ ಸೋಮೇಶ್ವರನ ಶಾಸನವೂ ಸಹ ಈ ಹೊನ್ನಬೊಮ್ಮಿಶೆಟ್ಟಿಯು ಪರಸಮಯಿಗಳೊಡನ ಹೋರಾಡಿ ವಿಜಯಿಯಾದ ಸಂಗತಿಯನ್ನು ನಮಗೆ ತಿಳಿಸುತ್ತದೆ. ಕಡಂಬೇಶ್ವರ ದೇವಾಲಯವು ತ್ರಿಕೂಟವಾಗಿ ಮಾರ್ಪಾಡುಗೊಳ್ಳುವಲ್ಲಿ ಪರ್ವತಾವಳಿಯ ಶಕ್ತಿಪರ್ಷೆಯ ಕಿಟ್ಟಿಗಾಂವಿ ಸಂತತಿಯ ಯತಿ ಪರಂಪರೆಯಲ್ಲಿ ಬರುವ ಮೂರುಜಾವಿ ದೇವರ ಪ್ರಭಾವವು ಕಾರಣವಾಗಿದೆ. ಈ ಯತಿಯು ಅತ್ಯಂತ ಪ್ರಭಾವಿ ವ್ಯಕ್ತಿಯಾಗಿದ್ದು 'ರಾಜಗುರು'ವೆಂದು ಮನ್ನಣೆ ಪಡೆದವರಾಗಿದ್ದರು. 'ಸಪ್ತಾಹತ್ತರಿ' ಸ್ಥಾನಾಚಾರ್ಯರುಮಪ್ಪ ಶ್ರೀಮದ್ರಾಜಗುರು ಮಹಾವಾದಿ ಮೂರುಜಾವಿದೇವ ಎನ್ನುವಲ್ಲಿ ಎಪ್ಪತ್ತೇಳು ದೇವಾಲಯಗಳಿಗೆ ಸ್ಥಾನಾಚಾರ್ಯರಾಗಿದ್ದರೆಂದು ತಿಳಿದುಬರುತ್ತದೆ. ರಟ್ಟಿಹಳ್ಳಿ ಕಡಂಬೇಶ್ವರ ಅವರ ಕೇಂದ್ರ ಸ್ಥಾನವಾಗಿದ್ದು ಸುತ್ತಲಿನ ಸಣ್ಣ ಪುಟ್ಟ ದೇವಾಲಯ ಆಡಳಿತವನ್ನು ಇವರು ನೋಡಿಕೊಳ್ಳುತ್ತಿದ್ದರು (KI Vol. VI, No. 7 & ಇತಿಹಾಸ ದರ್ಶನ ಸಂಪುಟ ೨೨ ಪುಟ ೪೧).

## ಲಕ್ಕಣ್ಣ ದಂಡೇಶ (ಕ್ರಿ.ಶ. ೧೪೨೮)

'ಮಾತಿಗೊಮ್ಮೆ ಶಿವ ಶರಣರ ಚರಣಾಂಬುಜಗಳಿಗೆ ಶರಣು ಶರಣಾರ್ಥಿ' ಎನ್ನುವ ಲಕ್ಕಣ್ಣ ದಂಡೇಶನು ವಿಜಯ ನಗರದ ಪ್ರೌಢ ದೇವರಾಯನ (ಇಮ್ಮಡಿ) ಮಂತ್ರಿಯೂ ಹಾಗೂ ದಂಡನಾಯಕನೂ ಆಗಿದ್ದನು. ಲಕ್ಕಣ್ಣ ದಂಡೇಶನು ಕವಿ ಹಾಗೂ ಕಲಿಯಾಗಿದ್ದನು. ಇವನನ್ನು ಕೋಲಾರ ಜಿಲ್ಲೆಯ ಮುಳುಬಾಗಿಲಿನ ಶಾಸನಗಳು (ನಂ:೨೮ ಮತ್ತು ೨೯)

ಲಕ್ಕಣ್ಣಾಮಾತ್ಯ ಮತ್ತು ಲಕ್ಕಣ್ಣ ಒಡೆಯನೆಂದು ಕರೆದಿವೆ. ಇವನಿಗೆ ಮಾದಣ್ಣ ದಂಡನಾಯಕನೆಂಬ ಸೋದರನೂ ಹೆಗ್ಗಡದೇವ ಮತ್ತು ಒಮ್ಮಯಮ್ಮ ಎಂಬ ಇಬ್ಬರು ಪುತ್ರರೂ ಇದ್ದರು. ಪ್ರೌಢದೇವರಾಯನ ಆಸ್ಥಾನಕ್ಕೆ ಭೇಟಿಕೊಟ್ಟ ವಿದೇಶಿ ಪ್ರವಾಸಿಗನಾದ ಹಾಗೂ ರಾಯಭಾರಿಯಾದ ಅಬ್ದುಲ್ ರಜಾಕನು ಲಕ್ಕಣ್ಣನು ಶೂರ ಸೇನಾನಿ ಹಾಗೂ ಕವಿಯಾಗಿದ್ದನೆಂದು ವರ್ಣಿಸಿದ್ದಾನೆ. ಲಕ್ಕಣ್ಣ ದಂಡೇಶನು ತನ್ನ 'ಶಿವತತ್ವ ಚಿಂತಾಮಣಿಯಲ್ಲಿ' ತನ್ನ ಸಮಕಾಲೀನರಾದ ನೂರೊಂದು ವಿರಕ್ತರ ಚರಿತ್ರೆಯನ್ನು ದಾಖಲಿಸಿದ್ದಾನೆ.

### ಶ್ರೀ ತೋಂಟದ ಸಿದ್ಧಲಿಂಗ ಯತಿಗಳು (ಕ್ರಿ.ಶ. ೧೪೭೦)

ತುಮಕೂರು ಜಿಲ್ಲೆಯ ಎಡೆಯೂರಿನಲ್ಲಿ ತೋಂಟದ ಸಿದ್ಧಲಿಂಗ ಯತಿಗಳ ಸಮಾಧಿಯ ಮೇಲೆ ಕಟ್ಟಿರುವ ಗುಡಿ ಇದೆ ಹಾಗೂ ಈ ದೇಗುಲದೊಳಗಿರುವ ಕ್ರಿ.ಶ. ೧೫೦೦ರ ಶಾಸನವು ಶ್ರೀಯುತರ ಜೀವನದ ಮೇಲೆ ಹೊಸ ಬೆಳಕು ಚೆಲ್ಲಿದೆಯಲ್ಲದೇ ಶ್ರೀಯುತರ ಶಿಷ್ಯ ಪರಂಪರೆಯನ್ನು ತಿಳಿಸುತ್ತದೆ.

'ಶಾಸನದಲ್ಲಿ ನಿರೂಪಿತವಾಗಿರುವ ಶ್ರೀ ಸಿದ್ಧಲಿಂಗೇಶ್ವರರ ವ್ಯಕ್ತಿತ್ವ ಈ ಕೆಳಗಿನಂತಿದೆ. ಶ್ರೀ ಸಿದ್ಧಲಿಂಗೇಶ್ವರರು ಅಸಾಧಾರಣ ಧಾರ್ಮಿಕ ಪುರುಷರೆಂಬುದನ್ನು ಶಾಸನ ಅತ್ಯಂತ ಉಜ್ವಲವಾಗಿ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವಂತೆ ವರ್ಣಿಸಿದೆ. ಶಾಸನದಲ್ಲಿ ವೀರಶೈವ ಧರ್ಮದ ಪರಿಭಾಷೆಯನ್ನು ಧಾರಾಳವಾಗಿ ಬಳಸಿದೆ. ಅದು ಅವರ ಭೌತಿಕ ರೂಪದ ಜೊತೆಗೆ ಆಧಿಭೌತಿಕ (ಆಧ್ಯಾತ್ಮಿಕ, ಯೋಗಿಕ) ಸ್ವರೂಪವನ್ನು ಬಣ್ಣಿಸಿದೆ. ಭೌತಿಕವಾಗಿ ಅವರು.... ಜಟಾಬಂಧ, ವಿಭೂತಿ, ರುದ್ರಾಕ್ಷಿ, ಕಮಂಡಲು, ಕಂತೆ, ಕಟಿಸೂತ್ರ, ಪಂಚಮುದ್ರೆ, ದಂಡ, ಕರ್ಪರ, ಮಠ ಇವುಗಳನ್ನು ಹೊಂದಿದ್ದರೂ ಆಧಿಭೌತಿಕವಾಗಿ ಶ್ರೀಯುತರು ಜ್ಞಾನಕ್ರಿಯಾ ಸ್ವರೂಪ, ಸರ್ವಾಂಗಲಿಂಗಿ, ಷಟ್‌ಸ್ಥಲಜ್ಞಾನಿ, ಸರ್ವಾಚಾರ ಸಂಪನ್ನ, ಪಾದೋದಕ ಪ್ರತಿಷ್ಠಾಚಾರ್ಯ, ಅಷ್ಟಾವರಣಾಲಂಕರಣ, ದ್ವೈತಾದ್ವೈತ ತಿಮಿರ ಮಾರ್ತಾಂಡನಾಗಿದ್ದರು. ವೀರಶೈವ ಧರ್ಮದ ತಾತ್ವಿಕ ಅಂಗಗಳೂ, ವಿಶ್ವದ ನಾನಾ ಅಂಗಗಳು ಮೇಳೈಸಿ 'ಅನಾದಿ ಜಂಗಮವೇ' ಜಗತ್ ಕಲ್ಯಾಣದ ಸಲುವಾಗಿ 'ದಿವ್ಯ ಶಿವಯೋಗಿಯಾಗಿ' ರೂಪ ತಾಳಿಬಂದಂತೆ ಸಿದ್ಧಲಿಂಗೇಶ್ವರರು ಇದ್ದರು (ಇತಿಹಾಸ ದರ್ಶನ, ಸಂಪುಟ ೨೨, ೨೦೦೭, ಪುಟ ೧೩೬, ಪ್ರೊ. ಬಿ. ರಾಜಶೇಖರಪ್ಪ)

### ಶಿವಪ್ಪನಾಯಕ (ಕ್ರಿ.ಶ. ೧೬೪೫–೧೬೬೦)

ಶಿಸ್ತಿನ ಶಿವಪ್ಪನಾಯಕನೆಂದು ಖ್ಯಾತಿವೆತ್ತ ಶಿವಪ್ಪ ನಾಯಕನು ಕೆಳದಿಯ ಅರಸರಲ್ಲಿಯೇ ಪ್ರಖ್ಯಾತನಾಗಿದ್ದು, ಕೆಳದಿರಾಜ್ಯದಲ್ಲಿ ಮನೆಮಾತಾಗಿದ್ದನು. ಶಿವಪ್ಪ ನಾಯಕ ಮತ್ತು ವೆಂಕಟಪ್ಪ ನಾಯಕರು ವಾರಣಾಸಿಯ ಹತ್ತಿರವಿರುವ 'ಕಪಿಲಧಾರ ತೀರ್ಥ'ದಲ್ಲಿ ಕೆರೆಯೊಂದನ್ನು ದುರಸ್ತಿಗೊಳಿಸಿ ಆ ಕೆರೆಯ ಆಡಳಿತಕ್ಕಾಗಿ ದಾನದತ್ತಿಗಳನ್ನು ಬಿಟ್ಟರೆಂದು ನಮಗೆ ಕಪಿಲಧರ ತೀರ್ಥದ ಶಾಸನದಿಂದ ತಿಳಿದುಬರುತ್ತದೆ. ಕೆಳದಿ ಮನೆತನಕ್ಕೆ ಸಂಬಂಧಿಸಿದಂತೆ ಕಪಿಲಧರ ತೀರ್ಥದ ಮೂರು ಶಾಸನಗಳಲ್ಲಿ ಎರಡು ನಾಗರಿ ಲಿಪಿಯಲ್ಲಿದ್ದು, ಅವುಗಳಲ್ಲೊಂದು ಸಂಸ್ಕೃತ ಭಾಷೆಯಲ್ಲಿದೆ. ಮೂರನೇ ಶಾಸನವು ಕನ್ನಡ ಭಾಷೆಯಲ್ಲಿದೆ. ಈ ಶಾಸನಗಳ ಜೊತೆಜೊತೆಗೆ, ಪರ್ಶಿಯನ್ ಭಾಷೆಯಲ್ಲಿಯೂ ಕೂಡ ಮೂರು ಶಾಸನಗಳನ್ನು ಕೆತ್ತಿಸಲಾಗಿದೆ. ಈ ಪರ್ಶಿಯನ್ ಶಾಸನಗಳು ೨೫ ಮೇ ೧೬೫೫ರ ಮೊಘಲ ಬಾದಷಹ ಷಾಜಹಾನನ ಕಾಲಕ್ಕೆ ಸೇರಿದವುಗಳಾಗಿವೆ. ಇವು ಕೆಳದಿ ಅರಸರಾದ ಶಿವಪ್ಪನಾಯಕ ಮತ್ತು ಇಮ್ಮಡಿ ವೆಂಕಟಪ್ಪ ನಾಯಕರ ಕಾಲಕ್ಕೆ ಸೇರಿದವುಗಳಾಗಿದ್ದು, ಇವರಿಬ್ಬರೂ ಸಿದ್ಧಪ್ಪ ನಾಯಕನ ಮಕ್ಕಳು ಹಾಗೂ ಸದಾಶಿವ ನಾಯಕನ ಮೊಮ್ಮಕ್ಕಳಾಗಿದ್ದರೆಂದು ಈ ಶಾಸನಗಳಿಂದ ತಿಳಿದುಬರುವುದಲ್ಲದೇ, ಈ ಶಾಸನಗಳಲ್ಲಿರುವ ಕೆಳದಿ ಅರಸರ ವಂಶಾವಳಿಯು ಉಳಿದ ಇತರೇ ದಾಖಲೆಗಳೊಂದಿಗೆ ಸರಿ ಹೊಂದುತ್ತದೆ. ಶಾಸನಗಳಲ್ಲಿ ಉಕ್ತವಾಗಿರುವಂತೆ ಇವುಗಳ ಕಾಲವು ವಿಕ್ರಮವರ್ಷ ೧೭೧೨ ಮತ್ತು ಶಕವರ್ಷ ೧೫೭೭ ಅಂದರೆ ಕ್ರಿ.ಶ. ೧೬೫೫ಕ್ಕೆ ಸಮನಾಗುತ್ತದೆ. ಇಬ್ಬರು ಸಹೋದರರರೂ ಪುಣ್ಯಕ್ಷೇತ್ರವಾದ ಕಪಿಲಧರ ತೀರ್ಥದ ಕೆರೆಯನ್ನು ದುರಸ್ತಿಗೊಳಿಸಿದ ಬಗ್ಗೆ ಹಾಗೂ ಇಬ್ಬರು ಜಂಟಿಯಾಗಿಯೇ ಕೆಳದಿ ರಾಜ್ಯವನ್ನಾಳುವ ಬಗ್ಗೆ ಶಾಸನಗಳು ಪ್ರಸ್ತಾಪಿಸುತ್ತವೆ. (ARIE, 1963-64, APP B, Nos 484-86)

### ರಾಣಿ ಚೆನ್ನಮ್ಮಾಜಿ (ಕ್ರಿ.ಶ. ೧೬೭೧-೯೭)

ಚೆನ್ನಮ್ಮಾಜಿ ಕಾಲದ ಸಂಸ್ಕೃತ ಶಾಸನವೊಂದು ಶ್ರೀರಂಗಪಟ್ಟಣದ ಕೋಟೆಯೊಳಗೆ ದೊರೆತಿದ್ದು ಅದರಲ್ಲಿ ಕೆಳದಿ ರಾಜರು ಮೈಸೂರಿನ ಸೈನ್ಯವನ್ನು ಜಯಿಸಿ 'ಗಂಗಾಧರ'ನೆಂಬ ಹೆಸರಿನ ಆನೆಯನ್ನು ಸಂಹರಿಸಿದನೆಂದು ತಿಳಿದುಬರುತ್ತದೆ. ('ನಿರ್ಜತ್ಯಸೇನಾಂ ಕೆಳದಿನೃಪಾಣಾಂ ಗಂಗಾಧರಾಖ್ಯಂ ಗಜಮಾಜಹಾರ' – ಕೆಳದಿ ಅರಸರ ಶಾಸನ ಸಂಪುಟ, ಪುಟ ೪೬೩, ಇತಿಹಾಸ ದರ್ಶನ, ಸಂಪುಟ ೯ ಪುಟ ೧೫೮). ಆದರೆ ಶಾಸನದ ಸಂಪೂರ್ಣ ಪಾಠ ಉಪಲಬ್ಧವಿರದ ಕಾರಣ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಈ ಶಾಸನದಿಂದ ಕ್ರಿ.ಶ. ೧೬೭೮ರಲ್ಲಿ ಕೆಳದಿಯ ಅರಸರಿಗೂ, ಮೈಸೂರಿನವರಿಗೂ ಶ್ರೀರಂಗಪಟ್ಟಣದಲ್ಲಿ ಯುದ್ಧ ನಡೆದಿರುವುದು ಖಚಿತವಾಗುತ್ತದೆ. ಮೈಸೂರು ಮತ್ತು ಕೆಳದಿ ಇತಿಹಾಸದಲ್ಲಿ ಚೆನ್ನಮ್ಮಾಜಿಯ ಈ ಸಂಸ್ಕೃತ ಶಾಸನವು ಒಂದು ಮಹತ್ವದ ಮೈಲುಗಲ್ಲಾಗಿದ್ದು, ಇದರ ಕಾಲ ಶಾಲಿವಾಹನ ಶಕ ೧೬೦೦ ಇದೆ. (ಇತಿಹಾಸ ದರ್ಶನ, ಸಂಪುಟ ೫, ಪುಟ ೧೫೨, ಇತಿಹಾಸ ದರ್ಶನ ಸಂಪುಟ ೯, ಪುಟ ೧೫೪).

### ದಳವಾಯಿ ಕಳಲೆ ನಂಜರಾಜ (ಕ್ರಿ.ಶ. ೧೭೩೯-೧೭೫೯)

ಮೈಸೂರ ಅರಸರಲ್ಲಿ ಪ್ರಸಿದ್ಧನಾದ ಕಳಲೆಯ ನಂಜರಾಜ ದಳವಾಯಿಯು, ವೀರರಾಜನ ಮಗ ಮತ್ತು ದಳವಾಯಿ ದೇವರಾಜನ ತಮ್ಮ. ಇವನು ಕ್ರಿ.ಶ. ೧೭೩೪ ರಿಂದ ೧೭೩೯ರವರೆಗೆ ಅಣ್ಣನ ಸಹಾಯಕನಾಗಿದ್ದು, ಕ್ರಿ.ಶ. ೧೭೩೯ರಿಂದ ೧೭೫೯ರವರೆಗೆ ಕಿರಿಯ ದಳವಾಯಿಯೂ ಆಗಿದ್ದನು. ಕನ್ನಂಬಾಡಿಯ ಬ್ರಾಹ್ಮಣ ವೆಂಕಟಪತಯ್ಯನು ಇವನಿಗೆ ಪ್ರಧಾನಿಯಾಗಿದ್ದನು. ಕರಾಚೂರಿ ನಂಜರಾಜನೆಂದೆ ಅಡ್ಡ ಹೆಸರು ಪಡೆದಿದ್ದ ಇವನು ಮಹತ್ವಾಕಾಂಕ್ಷೆಯ ಸಂಚುಗಾರನೂ ಆಗಿದ್ದನು. ದಾಯಾದಿ ಆದ ತನ್ನ ಅಣ್ಣನ ಜೊತೆಗೆ ಸೇರಿಕೊಂಡು ಆರನೆಯ ಚಾಮರಾಜನನ್ನು ಪದಚ್ಯುತಿಗೊಳಿಸುವ ಸಂಚು ಹೂಡಿದ್ದನು. ಅದಕ್ಕಾಗಿ ಅನೇಕ ಜನ ಬ್ರಾಹ್ಮಣರಿಗೆ ಒಂದು ದೊಡ್ಡ ಅಗ್ರಹಾರವನ್ನು ನಿರ್ಮಿಸುವ ಯೋಜನೆಯನ್ನು ಅವನು ಹಾಕಿಕೊಂಡನು. ಕನ್ನಂಬಾಡಿಯವರೇ ಆದ ವೆಂಕಟಪತಯ್ಯನ ಪ್ರಭಾವದಿಂದಾಗಿ ಕನ್ನಂಬಾಡಿಯನ್ನೇ ಅಗ್ರಹಾರವನ್ನಾಗಿ ಪರಿವರ್ತಿಸುವ ಯೋಜನೆ ಉಳ್ಳವನಾಗಿ ಕ್ರಿ.ಶ. ೧೭೪೧ರ ಆಗಸ್ಟ್ ೨೨ನೆಯ ದಿನಾಂಕ ಶನಿವಾರ ಗೋಕುಲಾಷ್ಟಮಿಯ ಶುಭದಿನದಂದು ಬ್ರಾಹ್ಮಣರಿಗೆ ದಾನಗೈದನು.

ಕಳಲೆ ನಂಜರಾಜನ ಅಗ್ರಹಾರದ ವಿವರಗಳು ದೊರೆಯುವುದು ಕನ್ನಂಬಾಡಿಯ ೫ ಹಲಗೆಗಳ ತಾಮ್ರಶಾಸನದಿಂದ. ಇದರಲ್ಲಿ ನಂಜರಾಜ ಸಮುದ್ರವೆಂಬ ಪ್ರದೇಶ ನಾಮವುಳ್ಳ ಅಗ್ರಹಾರವನ್ನು ೧೨೦ ಜನ ವಿಪ್ರರಿಗೆ ದಾನಗೈದ ದಾಖಲೆ ಇದೆ. ಅಲ್ಲಿ ಬ್ರಾಹ್ಮಣರಿಗೆ ಮನೆಗಳನ್ನು ನಿರ್ಮಿಸಿದಲ್ಲದೇ ಅವುಗಳಲ್ಲಿ ಆಹಾರ ಧಾನ್ಯಗಳು, ಪೂಜಾವಸ್ತುಗಳು, ಆಸನಾದಿಗಳಲ್ಲದೇ ವಸ್ತ್ರಗಳು, ಆಭರಣಗಳು ಮೊದಲಾದವುಗಳನ್ನು ತುಂಬಿಟ್ಟ ಬಗ್ಗೆ ಶಾಸನ ಹೇಳುತ್ತದೆ. ಅನಂತರ ಶಾಸನದಲ್ಲಿ ದಾನ ಪಡೆದ ೧೨೦ ಜನ ಬ್ರಾಹ್ಮಣರ ಹೆಸರು, ತಂದೆಯ ಹೆಸರು, ವೇದದ ಗೋತ್ರ ಸೂತ್ರಗಳ ಹೆಸರುಗಳಿವೆ. ಒಟ್ಟು ೩೩ ಜನ ಋಗ್ವೇದ ಬ್ರಾಹ್ಮಣರಿಗೂ ೮೦ ಜನ ಯಜುರ್ವೇದದವರೆಗೂ ೭ ಜನ ಸಾಮವೇದದವರೆಗೂ ವೃತ್ತಿಗಳನ್ನು ಕೊಡಲಾಯಿತೆಂದು ಶಾಸನ ಹೇಳುತ್ತದೆ.

ವೀರಶೈವ ಧರ್ಮದ ನಂಜರಾಜನು ಇಂತಹ ದೊಡ್ಡ ಅಗ್ರಹಾರವನ್ನು ಬ್ರಾಹ್ಮಣರಿಗೇಕೆ ದಾನಕೊಟ್ಟನೆಂಬ ಪ್ರಶ್ನೆ ಈ ಬ್ರಹ್ಮದೇಯದಿಂದ ಉದ್ಭವಿಸುತ್ತದೆ. ವೀರಶೈವನಾಗಿಯೂ ಬ್ರಾಹ್ಮಣರಿಗೆ ದಾನಕೊಟ್ಟದ್ದು ಅವನ ಧಾರ್ಮಿಕ ಸಹಿಷ್ಣುತೆಗೆ ಹಿಡಿದ ಕನ್ನಡಿಯಾಗಿದೆ ಈ ಶಾಸನ. ಇದು ಕಳಲೆಯ ಮನೆತನದ ರಕ್ತದಲ್ಲಿಯೇ ಬಂದ ಸಾತ್ವಿಕ ಗುಣವಾಗಿದೆಯಲ್ಲದೇ, ನಂಜರಾಜನು ಸ್ವತಃ ಪಂಡಿತನಾಗಿದ್ದು, 'ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಂ' ಎಂಬಂತೆ ವಿದ್ವಾಂಸನಾದ ನಂಜರಾಜನಿಗೆ ಅಂದಿನ ವಿದ್ವಾಂಸರಾದ ಬ್ರಾಹ್ಮಣರ ಪಾಂಡಿತ್ಯವು ಆತನನ್ನು ಆಕರ್ಷಿಸಿರಬೇಕು. ಕೊನೆಯದಾಗಿ ಶಾಸನದಲ್ಲಿಯೇ ಹೇಳಿರುವಂತೆ ಆತ 'ಧರ್ಮದಲ್ಲಿ ವಾತ್ಸಲ್ಯ ಉಳ್ಳವನಾಗಿದ್ದುದರಿಂದ (ಧರ್ಮೈಕವತ್ಸಲಂ) ಆಗಿನ ಧಾರ್ಮಿಕ ಪರಂಪರೆಯನ್ನು ಮುಂದುವರೆಸುವ ಸಲುವಾಗಿ ವೀರಶೈವ ದಳವಾಯಿಯಾದ ಈ ನಂಜರಾಜನು ಯಾವ ಸಂಕೋಚ ಅಡೆತಡೆಯಿಲ್ಲದೆ ಈ ಬ್ರಹ್ಮದೇಯವನ್ನು ನೀಡಿರಬೇಕು. (ಇತಿಹಾಸ ದರ್ಶನ, ಸಂಪುಟ ೯, ೧೯೯೪, ಪುಟ ೧೯೬, ಎ.ಕ. (ಎಚ್) ಮೈಸೂರು ೧೯೭೬ ಸಂಪುಟ ೫, ಸಂಖ್ಯೆ ೧೧೭, ಕ್ರಿ.ಶ. ೧೭೪೧).

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. *Hand book of Virasaivism*, S.C. Nandimath.

೨. *A Studies in Keladi History*, G.S. Dixit.

೩. ಬಸವಣ್ಣನವರನ್ನು ಕುರಿತ ಶಾಸನಗಳು, ಡಾ॥ ಎಂ.ಎಂ. ಕಲ್ಬುರ್ಗಿ.

೪. ಶಂಕರ ದಾಸಿಮಯ್ಯ ಪುರಾಣ ಒಂದು ಅಧ್ಯಯನ, ಡಾ॥ ಅನ್ನಪೂರ್ಣ ಎಂ. ಜಾಲವಾದಿ.

೫. ಕುರುಗೋಡ ಸಿಂಧರು ಒಂದು ಅಧ್ಯಯನ, ಡಾ॥ ಚೆನ್ನಬಸವಯ್ಯ ಹಿರೇಮಠ.

೬. ಕೊಂಡಗುಳಿ ಕೇಶಿರಾಜ, ಡಾ॥ ಎಂ.ಎಂ. ಪಡಶೆಟ್ಟಿ.

೭. ಇತಿಹಾಸ ದರ್ಶನ ಸಂಪುಟಗಳು.

೮. ದಕ್ಷಿಣ ಭಾರತದ ಶಾಸನ ಸಂಪುಟಗಳು.

೯. ಪವಿತ್ರ ಕೂಡಲಸಂಗಮ ಕ್ಷೇತ್ರ, ಸಿ.ಜಿ.ಬಿ. ಹಿರೇಮಠ.




# ಸ್ಥಳನಾಮಗಳಲ್ಲಿ ಐತಿಹ್ಯಗಳು

– ಗುರುಮೂರ್ತಿ ಪೆಂಡಕೂರು*

ಕರ್ನಾಟಕವು ಮರಾಠಿ, ತೆಲುಗು, ತಮಿಳು, ಮಲಯಾಳಂ ಭಾಷಾ ಪ್ರದೇಶಗಳಿಂದ ಸುತ್ತುವರಿದಿದೆ. ನಾನಾ ಕಾರಣಗಳಿಂದ ಮರಾಠರು, ತಮಿಳರು, ತೆಲುಗರು ಮತ್ತು ಇಂಗ್ಲಿಷರು, ಮೊಘಲರು, ಬಹುಮನಿ ಸುಲ್ತಾನರು, ನಿಜಾಮರು ಆಡಳಿತ ನಡೆಸಿದ ಕಾರಣ ಆಯಾ ಭಾಷೆಗಳ ಪ್ರಭಾವವು ಸ್ಥಳನಾಮಗಳ ಮೇಲಾಗಿದೆ, ಪರ್ಯಾಯ ನಾಮಗಳು ನೀಡಲ್ಪಟ್ಟಿವೆ, ಅಪಭ್ರಂಶವಾಗಿವೆ. ಕೆಲವೆಡೆ ಸಂಸ್ಕೃತೀಕರಣವೂ ಆಗಿದೆ. ಹೀಗೆ ಕರ್ನಾಟಕದ ಸ್ಥಳನಾಮ ಅಧ್ಯಯನವು ಇನ್ನೂ ಆವಿಷ್ಕರಣಗೊಳ್ಳದ ರಂಗವಾಗಿದೆ. ದೇಜಗೌ ಅವರು ಸ್ಥಳನಾಮಗಳನ್ನು ಹನ್ನೆರಡು ವಿಧದಲ್ಲಿ ವರ್ಗೀಕರಿಸಿದ್ದಾರೆ. ಶಂಬಾ ಜೋಶಿ ಅವರು ಇಪ್ಪತ್ತೆರಡು ವಿಧದಲ್ಲಿ ಕಂಡಿದ್ದಾರೆ.

ದೇಜಗೌ ಪ್ರಕಾರ, 'ಶಂಬಾ ಜೋಶಿಯವರು ರೂಪಿಸಿರುವ ವರ್ಗೀಕರಣ ಅವರ ದೀರ್ಘ ವ್ಯಾಸಂಗದ ಫಲವಾಗಿ ಸಂಲಬ್ಧವಾಗಿದೆಯೆಂದು ಹೇಳಬಹುದು. ಅದು ಹೀಗಿದೆ. ೧ ಪ್ರಾಣಿಗಳಿಂದ, ೨ ಗಿಡಗಂಟೆಗಳಿಂದ, ೩ ದೇಹದ ಅಂಗಾಂಗಗಳಿಂದ, ೪ ಬಳಗದವರಿಂದ, ೫ ಮನೆಗಳಿಂದ, ೬ ದಿನಸಿಗಳಿಂದ, ೭ ಬಣ್ಣಗಳಿಂದ, ೮ ಹರಳುಗಳಿಂದ, ೯ ಬಂಗಾರದಿಂದ, ೧೦ ಅಂಕೆಗಳಿಂದ, ೧೧ ಗ್ರಹಾದಿಗಳಿಂದ, ೧೨ ಮಳೆ-ಮಿಂಚು ಮುಂತಾದುವುಗಳಿಂದ, ೧೩ ದಿಕ್ಕುಗಳಿಂದ, ೧೪ ನೆಲದಿಂದ, ೧೫ ಬೇಸಾಯದಿಂದ, ೧೬ ಕಾಲದಿಂದ, ೧೭ ಊರುಗಳ ಗಾತ್ರದಿಂದ, ೧೮ ಕೂಡಿಕೆಗಳಿಂದ, ೧೯ ದೇವತಾದಿಗಳಿಂದ, ೨೦ ಜನರಿಂದ, ೨೧ ವ್ಯವಸಾಯ, ಉದ್ಯೋಗ, ಅಧಿಕಾರದಿಂದ ೨೨ ವ್ಯಕ್ತಿಗಳಿಂದ. ಈ ಪಟ್ಟಿ ಉದ್ದವಾಗಿ ಕಂಡರೂ ಅತಿವ್ಯಾಪ್ತಿದೋಷದಿಂದ ಮುಕ್ತವಾಗಿ ವೈಜ್ಞಾನಿಕವಾಗಿದೆ.'

ಕತೆ ಕಟ್ಟುವ ಸಾಮರ್ಥ್ಯದ ಗ್ರಾಮಾಂತರದ ಜನರು ಊರುಗಳ ಕುರಿತು ನಾನಾ ರೀತಿಯ ಐತಿಹ್ಯಗಳನ್ನು ಸೃಷ್ಟಿಸಿದ್ದಾರೆ. ದಂತಕಥೆಗಳನ್ನು ನೇಯ್ದಿದ್ದಾರೆ. ಅಲ್ಲಲ್ಲಿಯ ಜನರ ಸೃಜನಶೀಲತೆಯ ಬಲದ ಮೇಲೆ ದಂತಕಥೆಗಳು ಸ್ಥಳಪುರಾಣಗಳಾಗಿ ದೈವಿಕ ಪವಾಡಗಳನ್ನು ಕಲ್ಪಿಸಿಕೊಂಡಿವೆ. ಸಾಧಾರಣವಾಗಿ ಯಾವುದೇ ಊರಿನ ನಿಷ್ಪತ್ತಿ ಸ್ಪಷ್ಟವಾಗಿ ಸಿಗದಿದ್ದಾಗ ಕತೆಗಳು ಹುಟ್ಟಿರುತ್ತವೆ. ಆದರೆ 'ಐತಿಹ್ಯ' ಅಂದರೇನು? ಐತಿಹ್ಯ ಎಂಬ ಪದವನ್ನು ಒಬ್ಬ ವ್ಯಕ್ತಿ, ಸ್ಥಳ ಅಥವಾ ಘಟನೆಯನ್ನು ಕುರಿತು ಹೇಳಿದ, ವಾಸ್ತವಾಂಶವನ್ನು ಕುರಿತಿದೆ ಎಂದು ಹೇಳಲಾಗುವ ಹಾಗೂ ಸಾಂಪ್ರದಾಯಿಕ ಅಂಶಗಳನ್ನು ಮೇಳವಿಸಿಕೊಂಡ ಕಥೆಗೆ ಅನ್ವಯಿಸಲಾಗಿದೆ.

ದಂತಕಥೆ ಎಂದರೆ 'ಹಲ್ಲಿ'ನ ಕತೆಯಲ್ಲ. ಮಾಸ್ತಿಯವರು ವಿವರಿಸಿದಂತೆ ಅದು ಉದಂತ ಕಥೆ. ಉದಂತ ಎಂದರೆ ಸಂಸ್ಕೃತದಲ್ಲಿ ವೃತ್ತಾಂತ, ವಾರ್ತೆ. ಉದಂತದಲ್ಲಿ 'ಉ' ಮಾಯವಾಗಿ ದಂತ ಮಾತ್ರ ಉಳಿದಿದೆ. ಉದಂತ ಎಂದರೂ ಕತೆಯೆಂದೇ ಅರ್ಥ. ಪಾ.ವೆಂ ಆಚಾರ್ಯ(ಪದಾರ್ಥ ಚಿಂತಾಮಣಿ)ರ ಪ್ರಕಾರ 'ಐತಿಹ್ಯ' ಎಂದರೆ ಇತಿ-ಹ (ಹೀಗಂತೆ) ಎಂದರ್ಥ. ಇದಕ್ಕೆ ಇತಿಹಾಸದ ಹರಹು ಇರಬೇಕಿಲ್ಲ. ಒಂದೂರಿನ, ಒಬ್ಬನ ಯಾವುದಾದರೂ ಅರ್ಥಪೂರ್ಣ ಘಟನೆಯ ಪರಂಪರಾಗತ ನಿರೂಪಣೆಯೇ ಇದು. ಕಿಂವದಂತಿ ಐತಿಹ್ಯದಷ್ಟು ಹಳೆಯದಲ್ಲ. ಅದು ಅಂತೆಕಂತೆ ಸುದ್ದಿ. ಅದು ಗಾಳಿಯಂತೆ ಅದೃಶ್ಯವಾದರೂ ಗಾಳಿಯಂತೆಯೇ ಹವಾಮಾನವನ್ನು ಪ್ರಭಾವಿಸುವಂಥಾದ್ದು. ಕನ್ನಡದ 'ಅಂತೆ' ಕೂಡಾ ವದಂತಿಯೇ. ಐತಿಹ್ಯವು ಹೀಗೆ ಬಾಯಿಂದ ಬಾಯಿಗೆ ತಲೆಮಾರಿನಿಂದ ತಲೆಮಾರಿಗೆ ತೇಲಿ ಬಂದ ಊರ ಮಹಿಮೆ.

ಸ್ಥಳನಾಮಗಳನ್ನು ಅರ್ಥೈಸುವಲ್ಲಿ 'ಐತಿಹ್ಯ'ದ ಪಾತ್ರ ತುಂಬಾ ಹಿರಿದು. ನಮ್ಮ ದೇಶದ ಎರಡು ಮಹಾಕಾವ್ಯಗಳಾದ ಮಹಾಭಾರತ ಮತ್ತು ರಾಮಾಯಣದ ಸಂಬಂಧವನ್ನು ಹಚ್ಚಿಕೊಂಡ ಕಿಷ್ಕಿಂಧ, ಪಂಚವಟಿ, ಸೇತುಸಮುದ್ರ, ದಂಡಕಾರಣ್ಯ,

---

* ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ.

ವಾಲೀಭಂಡಾರ, ಸೀತೆಯ ಸೆರಗು, ಲೇಪಾಕ್ಷಿ ಮುಂತಾದ ಸಾವಿರಾರು ಸ್ಥಳಗಳಿವೆ. ಹಾಗೆಯೇ ವಿರಾಟನಗರ, ವಿದರ್ಭ, ಗಾಂಧಾರ, ಏಕಛತ್ರಾನಗರ, ಮಣಿಪುರ, ಹಸ್ತಿನಾಪುರ, ದ್ವಾರಕಾ ಮುಂತಾದ ಸಾವಿರಾರು ಊರುಗಳು ರಾಷ್ಟ್ರದ ಎಲ್ಲೆಡೆ ಸಿಗುತ್ತವೆ. ಹೀಗೇ ನವಗ್ರಹಗಳಿಗೆ ಸಂಬಂಧಿಸಿದಂತೆ, ನಾನಾ ರಾಕ್ಷಸರಿಗೆ ಸಂಬಂಧಿಸಿದಂತೆ, ಆತ್ಮಲಿಂಗ, ಜ್ಯೋತಿರ್ಲಿಂಗ, ದೇವಿ ಮಹಾತ್ಮೆಯ ಕ್ಷೇತ್ರಗಳು, ಗಂಗೆ, ತುಂಗೆ, ಕಾವೇರಮ್ಮನ ಕತೆಗಳಿವೆ. ಋಷಿ ಮುನಿಗಳಿಗೆ ಸಂಬಂಧಿಸಿದ ಸ್ಥಳಗಳು, ಪೌರಾಣಿಕ ಚಕ್ರವರ್ತಿಗಳಿಗೆ ಸಂಬಂಧಿಸಿದ ಸ್ಥಳಗಳೂ ಇವೆ.

ಕಲಬುರ್ಗಿ ಅವರ ಪ್ರಕಾರ 'ಪುರೋಹಿತರು ಇಂತಹ ಕತೆಗಳನ್ನು ರೂಪಿಸುತ್ತಾರೆ. ಊರಲ್ಲಿ ಪಂಡಿತರೆಂದು ಪ್ರಸಿದ್ಧರಾಗಿರುವ ಇವರ ಹೇಳಿಕೆಯನ್ನು ಸಾಮಾನ್ಯರು ನಿಜವೆಂದೇ ನಂಬುತ್ತಾರೆ. ಏಕೆಂದರೆ ದೇವಾಲಯವನ್ನು ಶೋಷಣೆಯ ಕೇಂದ್ರವನ್ನಾಗಿ ಬೆಳೆಸುವುದಕ್ಕೆ ಇಂಥ ವೈಭವಯುತ ಕಥೆಗಳನ್ನು ಸೃಷ್ಟಿಸುವುದು ಅವರಿಗೆ ಅವಶ್ಯವಾಗಿರುತ್ತದೆ. ಗೋಕರ್ಣದ ಮಹಾಬಲೇಶ್ವರ ಲಿಂಗವನ್ನು ರಾವಣ ಸ್ಥಾಪಿಸಿದನೆಂಬ ಕತೆ ಇದಕ್ಕೆ ಉತ್ತಮ ಉದಾಹರಣೆಯಾಗಿದೆ.

ಇತಿಹಾಸ ಕಾಲದಲ್ಲಿಯೂ ಇಂತಹ ಐತಿಹ್ಯಗಳು ಉಂಟಾದವು. ಚೆನ್ನಗಿರಿ ತಾಲೂಕಿನ ಉಡುಮರಡಿ ಗ್ರಾಮದಲ್ಲಿ ರಂಗನಾಥ ಸ್ವಾಮಿಯ ದೇವಾಲಯ ಸ್ಥಾಪನೆಯಾದಾಗ ಅದು 'ದೇವರಹಳ್ಳಿ' ಎಂದಾಯಿತು. ಉಡುಮರಡಿ ಎಂದಾದದ್ದು ಏಕೆಂದರೆ, ವಿಜಯನಗರದ ರಾಯರ ಕಾಲದಲ್ಲಿ ಬೇಟೆಗಾರರಿಗೆ 'ಧೂಪದ ಮರಡಿ'ಯ ಹತ್ತಿರ ಒಂದು ಉಡ ಕಾಣಿಸಿತು. ಅದು ಬೆಳ್ಳಿಗನೂರಿನಲ್ಲಿ ಬೆಳ್ಳಿಯಾಯಿತು. ಚಿನ್ನಾಪುರದಲ್ಲಿ ಚಿನ್ನದಂತೆ, ಚಿಕ್ಕೂಡದಲ್ಲಿ ಚಿಕ್ಕದಾಗಿ, ಹಿರೇವುಡದಲ್ಲಿ ದೊಡ್ಡದಾಗಿ, ಕಗಸೂರಿನಲ್ಲಿ ಕಾದಾಡಿ, ರಾಮಗೊಂಡನಹಳ್ಳಿಯಲ್ಲಿ 'ರಾಮ' ಎಂದು, ನಿಂತಾಪುರದಲ್ಲಿ ಸ್ವಲ್ಪ ಹೊತ್ತು ನಿಂತು, ನೀತಿಗೆರೆಗೆ ಹೋಗಿ ಅಲ್ಲಿಂದ ದೇವರಹಟ್ಟಿಗೆ ಬಂದು ಮರೆಯಾಯ್ತು. ಆ ಉಡ ಯಾರೂ ಅಲ್ಲ ದೇವರಾದ ರಂಗನಾಥಸ್ವಾಮಿ. ಈ ಕಾರಣದಿಂದ ಇಲ್ಲಿ ಉಡಗಳನ್ನು ಕೊಲ್ಲುವುದು ನಿಷಿದ್ಧ. ಇಲ್ಲಿ ಊರ ಹೆಸರಿಗೂ (ಉಡುಮರಡಿ), ದೇವರ ಹೆಸರಿಗೂ, ಉಡ ಕೊಲ್ಲದಿರುವುದಕ್ಕೂ ಕಥೆಯನ್ನು ಸೊಗಸಾಗಿ ತಳಕು ಹಾಕಿದ್ದಾರೆ(ನಾಮವಿಜ್ಞಾನ – ಎಂ.ಎಂ.ಕಲಬುರ್ಗಿ). 'ಹೀಗೆ ಐತಿಹ್ಯ ಎಂದರೆ LEGEND ಎಂದೂ, ಪುರಾಣ ಎಂದರೆ MYTH ಎಂದೂ, ಇತಿಹಾಸವೆಂದರೆ HISTORY ಎಂದೂ ಕರೆಯಬಹುದು.'

ದೇಜಗೌ ಅವರು ಹಳೆಮೈಸೂರು ಕಡೆಯ ರೋಚಕ ಐತಿಹ್ಯಗಳನ್ನು ಪಟ್ಟಿ ಮಾಡುತ್ತಾರೆ: "೧. ಅಪ್ರಮೇಯನ ಅನುಗ್ರಹದಿಂದ ಸಾರಂಗಧರನ ಕತ್ತರಿಸಿದ ಕೈಕಾಲುಗಳು ಮೊಳೆಯಲಾಗಿ ಚನ್ನಪಟ್ಟಣ ತಾಲೂಕಿನ ಒಂದೂರು ಮೊಳತೂರು (ಈಗಿನ ಮಳೂರು) ಆಯಿತು. ೨. ಮಳವಳ್ಳಿಗೆ ಅನೇಕ ಕತೆಗಳು. ಮಲ್ಲೇಹಳ್ಳಿ ಮಳವಳ್ಳಿ ಆಯಿತು. ಮೊಲದಹಳ್ಳಿ ಮೊಲವಳ್ಳಿಯಾಗಿ ನಂತರ ಮಳವಳ್ಳಿಯಾಯಿತು. ೩. ಪರಶುರಾಮರಿಗೊಮ್ಮೆ ತೊನ್ನು ಬಂದಿತಂತೆ. ಆಗ ಅವರು 'ಹೆಜ್ಜಿಗೆ'ಯಲ್ಲಿ ಹೆಜ್ಜೆಯೂರಿ, 'ಮುಳ್ಳೂರಿ'ನಲ್ಲಿ ಮುಳ್ಳು ತುಳಿದು, 'ಗೋಳೂರಿ'ನಲ್ಲಿ ಗೋಳಾಡಿ, 'ಸುವರ್ಣಾವತಿ'ಯಲ್ಲಿ ಸ್ನಾನಮಾಡಿ ತೊನ್ನು ಕಳೆದುಕೊಂಡರಂತೆ. ಈ ಮೂರೂ ಊರುಗಳು ನಂಜನಗೂಡು ತಾಲೂಕಿನಲ್ಲಿವೆ. ಕನ್ನಡದ ನೆಲದಲ್ಲಿ ಎಲ್ಲಿ ಹೆಜ್ಜೆಯಿಟ್ಟರೂ ಇಂಥ ದಂತಕಥೆಗಳು ಹೊರವಾಗಿ ಸಿಗುತ್ತವೆ" ಎಂದಿದ್ದಾರೆ.

ಕೋಲಾರವು ಕುವಲಾಲಪುರ / ಕೋಲಾಹ ಪುರ / ಕೋಳಾಲ ಮುಂತಾದ ಹೆಸರು ಪಡೆದ ಐತಿಹಾಸಿಕ ನಗರ. ಇದು ಕಾರ್ತವೀರ್ಯಾರ್ಜುನನು ಪರಶುರಾಮನ ತಂದೆ ಜಮದಗ್ನಿಯ ಮೇಲೆ ಸೇಡು ತೀರಿಸಿಕೊಂಡ ಸ್ಥಳವಂತೆ. ಕೋಲನೆಂಬ ಗೊಲ್ಲನು ನೇಗಿಲಿನಿಂದ (ಹಲದಿಂದ) ಭೂಮಿಯನ್ನು ಮೊದಲ ಬಾರಿಗೆ ಉತ್ತಾಗ ಕೋಲಾಹಲವಾಯಿತಂತೆ. ಕೋಲನಿಗೆ ಆಗ ಭೂಮಿಯಲ್ಲಿ ದೊರೆತ ನಿಧಿಯಿಂದ ಕೋಲಾರಮ್ಮನ ದೇವಸ್ಥಾನವನ್ನು ಕಟ್ಟಿದನಂತೆ. ತಲಕಾಡಿನ ಗಂಗರು ಕೋಲಾರದವರಾದ ಕಾರಣ ತಮ್ಮನ್ನು ಕುವಲಾಲಪುರವರೇಶ್ವರರೆಂದು ಕರೆದುಕೊಂಡರು.

ಕೋಲಾರ ಸಮೀಪದ ಶತಶೃಂಗ ಪರ್ವತದ ಮೇಲಿರುವ ಏಳು ಗ್ರಾಮಗಳಲ್ಲಿ ಅತ್ಯಂತ ಎತ್ತರದಲ್ಲಿರುವ ಹಳ್ಳಿ – ತೇರಹಳ್ಳಿ, ಕರ್ನಾಟಕದಲ್ಲಿಯೇ ಅತಿ ಎತ್ತರದ ಪ್ರದೇಶವೆಂದು ಕರೆಯಲಾಗುವ ಈ ಸ್ಥಳಕ್ಕೆ ಅಂತರಗಂಗೆಯೆಂದು ಹೆಸರು. ಕೋಲಾರ ಜಿಲ್ಲೆಯ ಮಾಲೂರು > ಮಲ್ಲಿಕಾಪುರ, ಅಂದರೆ ಮಲ್ಲಿಗೆ ತೋಟಗಳ ಊರು. ಕೋಲಾರ ಜಿಲ್ಲೆಯ ಪುಣ್ಯಕ್ಷೇತ್ರ ಆವನಿ – ದಕ್ಷಿಣ ಗಂಗೆಯೆಂದೇ ಪ್ರಸಿದ್ಧ. ರುದ್ರಭಟ್ಟಾರಕನೆಂಬ ಮಹರ್ಷಿಯು 'ಆಹವನೀಯ' ಕುಂಡದಲ್ಲಿ ಯಾಗ ಮಾಡಿದನಂತೆ. ಅಂದಿನ ಆಹವನೀಯವೇ ಇಂದಿನ ಆವನಿ. ಆವನಿಗೆ ಮತ್ತೊಂದು ಹೆಸರು ಆವಂತಿಕಾ.

ಮಿಡಿಗೇಶಿಗೆ ಆ ಹೆಸರು ಬರಲು ಆ ಊರ ಅರಸಿಯ ಕೇಶರಾಶಿಯು ಹಿಮ್ಮಡಿವರೆಗಿದ್ದುದೇ ಕಾರಣವಂತೆ!

ಹಿಂದೂಪುರದ ಹತ್ತಿರವಿರುವ ವಿಜಯನಗರ ಕಾಲದ ಪ್ರಸಿದ್ಧ ಕ್ಷೇತ್ರ ಲೇಪಾಕ್ಷಿಯ ಹೆಸರು ರಾಮಾಯಣ ಕಾಲಕ್ಕೆ ಸರಿಯುತ್ತದೆ. ರಾವಣನನ್ನು ಎದುರಿಸಿ ಸೀತೆಯನ್ನು ಬಿಡಿಸಲು ಹೋದ ಜಟಾಯುವನ್ನು ರಾವಣನು ಖಡ್ಗದಿಂದ ಕತ್ತರಿಸಲು ಮರಣಾಸನ್ನವಾಗಿ ಬಿದ್ದ ಪಕ್ಷಿಯನ್ನು ಕಂಡು ಶ್ರೀರಾಮನು 'ಲೇ ಪಕ್ಷಿ!' ಎಂದು ಸಂಬೋಧಿಸಿ ಮೋಕ್ಷ ಪ್ರಸಾದಿಸಿದನಂತೆ. ಅದರಿಂದ ಆ ಊರು ಲೇಪಾಕ್ಷಿ ಎಂದಾಯಿತಂತೆ!

ಬಳ್ಳಾರಿ ನಗರದ ಬಗ್ಗೆ ಅನೇಕ ಕತೆಗಳಿವೆ. ಅಲ್ಲಿ ಬಲಹರಿ ಎಂಬ ರಾಕ್ಷಸನಿದ್ದನೆಂತಲೂ ಅವನನ್ನು ದೇವಿ ಸಂಹಾರ ಮಾಡಿದ ಕಾರಣ ಅದು ಬಳರಿ ಎಂದಾಯಿತಂತೆ. ಕರ್ನಾಟಕದ ಅನೇಕ ವಿದ್ವಾಂಸರ ಪ್ರಕಾರ 'ಬಳರಿ' ಎಂಬುದೇ ಕರ್ನಾಟಕದ ಪ್ರಾಚೀನ ಸ್ತ್ರೀದೇವತೆಗಳಲ್ಲಿ ಒಂದು ಪ್ರಮುಖ ದೇವತೆ. ಬಳರಿ>ಬಟರಿ>ಬಳ್ಳಾರಿ ಇರಬಹುದು. ಭಟ್ಟಾರಿಕಾ–ಬಳರಿ–ಬಳ್ಳಾರಿ ಕೂಡ ಇರಬಹುದು. ಕಲಬುರ್ಗಿ ಅವರ ಪ್ರಕಾರ ಕೊಲ್ಲೂರು ಮೂಕಾಂಬಿಕಾ, ಕೊಲ್ಲಾಪುರದ ಮಹಾಲಕ್ಷ್ಮೀ, ಕಂಚಿಯ ಕಾಮಾಕ್ಷಿ, ಎಕ್ಕಲದೇವಿ ಮಸಣಿ, ಮಾರಬ್ಬೆ, ಮಾಳಚಿ, ಚಂಡಿಕಾ, ಲಕ್ಕಮ್ಮನಂತಹ ಶಕ್ತಿ ದೇವತೆ ಬಳರಿ. ಹಿರೇಮಠರ ಪ್ರಕಾರ ಪ್ರಾಚೀನ ಬುಡಕಟ್ಟಾದ ಬಳರಿಕುಲದ ಸ್ತ್ರೀದೈವವೇ ಬಳರಿ. ಚಂಡಮಾರಿಯ ಅಷ್ಟೋತ್ತರದಲ್ಲಿ ಬಳರಿ ಎಂಬ ಹೆಸರು ಇದೆ.

ರಾವಂದೂರು ಪಿರಿಯಾಪಟ್ಟಣ ತಾಲೂಕಿನ ಒಂದು ಗ್ರಾಮ. ಜನರ ನಂಬಿಕೆಯ ಪ್ರಕಾರ ರಾಮ ಈ ಊರಿಗೂ ಬಂದಿದ್ದನಾದ ಕಾರಣ ರಾಮಂದೂರು ಆಯಿತು. ಅದು ಕಾಲಾನುಕಾಲಕ್ಕೆ ರಾವಂದೂರು ಎಂದಾಯಿತು. ಆದರೆ ವೀರಶೈವರ ಪ್ರಕಾರ ಅದು ಪಂಚಾಚಾರ್ಯರಲ್ಲಿ ಒಬ್ಬರಾದ ಏಕೋರಾಮಾರಾಧ್ಯರ ಊರು. ವಿಜಯನಗರದ ಅರಸ ಪ್ರೌಢದೇವರಾಯನ ಸೇನಾಪತಿ ಲಕ್ಕಣದಂಡೇಶನು ತನ್ನ 'ಶಿವತತ್ತ್ವ ಚಿಂತಾಮಣಿ' ಯಲ್ಲಿ ಈ ಊರನ್ನು 'ರಾಮಂದೂರ್' ಎಂದು ಉಲ್ಲೇಖಿಸಿದ್ದಾನೆ.

ಶತ್ರುಗಳು ಮೊಳಕಾಲ್ಮೂರಿಗೆ ಮುತ್ತಿಗೆ ಹಾಕಿದಾಗ ಊರವರೆಲ್ಲಾ ಪಕ್ಕದ ಬೆಟ್ಟವನ್ನೇರಿ ಕುಳಿತರಂತೆ. ಅಲ್ಲದೇ ಮೇಲಿಂದ ಏರುವ ದಾರಿಗೆ ರಾಗಿ ಸುರಿದರಂತೆ. ರಾಗಿಯ ಮೇಲೆ ಕಾಲಿಟ್ಟ ಶತ್ರು ಕಾಲ್ದಳ, ಕುದುರೆಗಳು ಜಾರಿ ಬಿದ್ದು ಮೊಳಕಾಲು ಮುರಿದುಕೊಂಡವಂತೆ. ಅದರಿಂದ ಆ ಊರು ಮೊಳಕಾಲ್ಮೂರು ಎಂದಾಯಿತು ಎಂಬುದು ಕತೆ. ಅಂದರೆ ಶತ್ರುಗಳು ಧಾಳಿ ಮಾಡುವ ಮೊದಲು ಊರಿದ್ದಂತಾಯಿತಲ್ಲ. ನಮ್ಮವರು ಕತೆಕಟ್ಟುವಲ್ಲಿ ಜಾಣರು. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಗುಣಸಾಗರ ಸಾಕಷ್ಟು ದೊಡ್ಡ ಗ್ರಾಮ. ಸಂಸ್ಕೃತದ ಗೌಣಸಾಗರ ಗುಣಸಾಗರವಾಯಿತೆಂದು ಹೇಳುತ್ತಾರೆ. ಇದು ನಂಬಲರ್ಹವಲ್ಲ. ಜನಪದ ಕತೆಯೊಂದರ ಪ್ರಕಾರ ಗುಣವಂತಿ ಎಂಬ ಗರತಿಯು ಅತ್ಯಂತ ಶ್ರದ್ಧಾ ಭಕ್ತಿಯಿಂದ ಕಟ್ಟಿಸಿದ ಕೆರೆಯಿಂದ ಬಂದ ಹೆಸರು. ಆದರೆ ಗುಣವಂತಿಯ ಸೋದರಿ ಮತಿವಂತಿಯು ಬಿಂಕದಿಂದ ಕಟ್ಟಿಸಿದ ಪಕ್ಕದೂರಿನ ಕೆರೆ ಎಷ್ಟು ಕಟ್ಟಿದರೂ ಒಡೆದು ಹೋಯಿತಂತೆ. ಆದ್ದರಿಂದ ಗುಣವಂತಿ ಕಟ್ಟಿಸಿದ ಕೆರೆಯ ಊರು ಗುಣಸಾಗರವಾದರೆ, ಮತಿವಂತಿಯ ಒಡೆದ ಕೆರೆಯ ಊರು ಹರಕ > ಹಾರಕಬಾವಿ ಎಂದಾಗಿದೆ. ಪ್ರಾಯಶಃ ಈ ನಿಷ್ಪತ್ತಿಯನ್ನು ಒಪ್ಪಬಹುದು. ಆದರೆ ಪಂಡಿತರ ಪ್ರಕಾರ ಇದು ಮಹಾಭಾರತದಲ್ಲಿ ಪಾಂಡವರು ವನವಾಸ ಕಾಲದಲ್ಲಿ ಬಕಾಸುರನನ್ನು ಸಂಹರಿಸಿದ–ಏಕಚಕ್ರನಗರ. ಇಲ್ಲೊಂದು ವೇಣುಗೋಪಾಲ ದೇವಾಲಯವಿದೆ.

ಹೀಗೆ ಅನೇಕ ಕತೆಗಳ ಸುತ್ತ ಮೆರೆಯುವ ಮತ್ತೊಂದು ಗ್ರಾಮವೆಂದರೆ ಹಗರಿಬೊಮ್ಮನಹಳ್ಳಿ ತಾಲೂಕಿನ 'ಹಂಪಸಾಗರ'. ವಿಜಯನಗರದ ಮಹಾಸೈನ್ಯದಲ್ಲಿ ಬೇಡರ ಪಡೆಯ ಮುಖ್ಯಸ್ಥನಾಗಿ ಯುದ್ಧವೀರನೆಂದು ಮನ್ನಣೆ ಗಳಿಸಿದ ಹಂಪಯ್ಯನು ರಾಯರಿಂದ ಉಂಬಳಿಯಾಗಿ ಪಡೆದ ಊರು. ಮೃಗಯಾ ವಿಹಾರದಲ್ಲಿ ದಾರಿ ತಪ್ಪಿ ಬಹು ದೂರ ಬಂದ ಬೇಡರು ತುಂಬಿ ಹರಿಯುವ ತುಂಗಭದ್ರೆಗೆ ಮನಸೋತು ತಮ್ಮ ನಾಯಕ 'ಹಂಪಯ್ಯ'ನ ಮುಂದಾಳ್ತನದಲ್ಲಿ ನಿರ್ಮಿಸಿ ನೆಲೆಸಿದ ಊರು ಹಂಪಸಾಗರ ಎಂದು ಮತ್ತೊಂದು ಕತೆ.

ತುಂಬಾ ವಿಚಿತ್ರವಾದ ಕತೆಯೆಂದರೆ ಹಾಸನ ಜಿಲ್ಲೆಯ 'ಮಗನ ತಿಂದ ಮಾರಾಯನ ದುರ್ಗ'ದ್ದು. ಇಲ್ಲಿ ಆಳುತ್ತಿದ್ದ ಪಾಳೇಗಾರ ವೀರರಾಜನಿಗೆ ಅವನ ಮಗನನ್ನೇ ಕೊಂದು ಅಡಿಗೆ ಮಾಡಿ ನೀಡಿದ್ದರು. ಅರಿವಿಲ್ಲದೇ ಅವನು ಅದನ್ನು ತಿಂದ. ಅನಂತರ ನಡೆದ ವಂಚನೆಯ ಅರಿವಾಗಿ ಓಡುವ ಕುದುರೆಯ ಮೇಲಿಂದ ಕಮರಿಗೆ ಹಾರಿ ಜೀವ ತೆತ್ತ ಕಾರಣ, 'ಮಗನ ತಿಂದ ಮಾರಾಯನ ದುರ್ಗ' ಎಂಬ ಹೆಸರಾಯಿತು. ಎಷ್ಟು ದುರಂತಮಯವಾದ ಕತೆ. ಐತಿಹ್ಯಗಳಲ್ಲಿ ಜಯ, ಅಪಜಯ,

ವಂಚನೆ, ಮೋಸ, ಸಾಧನೆಯ ಕತೆಗಳಷ್ಟೇ ಅಲ್ಲದೆ ದೇವ–ರಾಕ್ಷಸ, ರಾಜ–ರಾಣಿ, ಭಕ್ತರ, ಸಾಧು ಸಜ್ಜನರ ಕತೆಗಳೂ ನಿಬಿಡವಾಗಿವೆ. ಉಡುಪಿಯ ಕನಕನ ಕಿಂಡಿಯ ಕತೆ, ಅಹೋಬಿಲದ ನರಸಿಂಹಸ್ವಾಮಿಯ ಗುಹೆಯ ಕತೆ, ಗಜೇಂದ್ರಗಡದ ಕಾಲಕಾಲೇಶ್ವರ ದೇವಾಲಯದ ಬೆಳೆಯುವ ನಂದಿ, ಹಾರಿ ಹೋದ ಗಂಟೆಯ ಐತಿಹ್ಯಗಳು ಇಂದಿಗೂ ಜನರಿಗೆ ಅಪಾರ ನಂಬುಗೆಯ ವಸ್ತುಗಳಾಗಿವೆ.

ಸ್ಥಳನಾಮಗಳನ್ನು ಅಧ್ಯಯನ ಮಾಡುವವರು ಐತಿಹ್ಯಗಳನ್ನು ಗಮನಿಸಲೇಬೇಕು. ಅವುಗಳಲ್ಲಿ ಗಟ್ಟಿಕಾಳಿನ ನೆರವಿನಿಂದ ಊರ ಹೆಸರಿನ ಅರ್ಥವನ್ನು ತೀರ್ಮಾನಿಸ ಬೇಕಾಗುತ್ತದೆ. ಪ್ರತಿಯೊಂದು ಗ್ರಾಮದವರೂ ತಮ್ಮೂರಿನ ಮಹತ್ವವನ್ನು ಇಮ್ಮಡಿ – ಮುಮ್ಮಡಿಗೊಳಿಸಲು ಈ ರೀತಿಯ ಕತೆಗಳನ್ನು ಕಾಲಕಾಲಕ್ಕೆ ಹೆಣೆಯುವುದು ಪ್ರಪಂಚದ ಎಲ್ಲಾ ಸಂಸ್ಕೃತಿಗಳಲ್ಲಿ ಸಹಜವಾಗಿದೆ.

## ಆಧಾರ ಸೂಚಿ


೧. **ಸ್ಥಳನಾಮ ವ್ಯಾಸಂಗ**, ದೇಜಗೌ.

೨. **ಸ್ಥಳನಾಮಗಳು**, ಡಾ॥ ವಿಶ್ವನಾಥ್.

೩. **ಎಡೆಗಳು ಹೇಳುವ ಕಂನಾಡ ಕತೆ**, ಶಂಬಾ ಜೋಷಿ.

೪. **ಕನ್ನಡ ನಾಮ ವಿಜ್ಞಾನ**, ಡಾ॥ ಎಂ.ಎಂ. ಕಲಬುರ್ಗಿ,

೫. **ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು**, ಗುರುಮೂರ್ತಿ ಪೆಂಡಕೂರು,

೬. **ಕನ್ನಡ ಜಾನಪದ ವಿಶ್ವಕೋಶ**, ಸಂ. ಡಾ॥ ಚಂದ್ರಶೇಖರ ಕಂಬಾರ.

೭. **ಸ್ಥಳನಾಮ ಅಧ್ಯಯನಗಳು**, ಡಾ॥ ವಿ. ಗೋಪಾಲಕೃಷ್ಣ.

೮. **ಪದಾರ್ಥ ಚಿಂತಾಮಣಿ**, ಪಾ.ವೆಂ. ಆಚಾರ್ಯ,

೯. *The Book of Place Names*, Lambert and Pie,

೧೦. **ನಾಮ ವಿಜ್ಞಾನಂ (ತೆಲುಗು)**, ಡಾ॥ ವೈ. ಗಂಗಾಧರ ರಾವ್.




# ಸ್ಥಳನಾಮ ಅಧ್ಯಯನದಲ್ಲಿ ಸ್ವಾರಸ್ಯಗಳು

(ಕೋಲಾರ ಜಿಲ್ಲೆಯ ಸ್ಥಳನಾಮಗಳನ್ನು ಅನುಲಕ್ಷಿಸಿ)

– ಡಾ॥ ವಿ. ಗೋಪಾಲಕೃಷ್ಣ*

ಸ್ಥಳನಾಮಗಳ ಶಾಸ್ತ್ರೀಯ ಅಧ್ಯಯನ ಪ್ರಾರಂಭವಾದದ್ದು ಈ ಶತಕದ ಆದಿ ಭಾಗದಲ್ಲಿ. ಹಿಂದಿನ ವಿದ್ವಾಂಸರು ಸ್ಥಳನಾಮಗಳನ್ನು ಕುರಿತು ಅಲ್ಲಲ್ಲಿ ಪ್ರಸ್ತಾಪ ಮಾಡಿದ್ದಾರೆ. ಆದರೆ ಅವೆಲ್ಲವೂ ಬಹುಮಟ್ಟಿಗೆ ಸ್ಥಳ ಮಹಿಮೆಗಳನ್ನು ವಿವರಿಸುವ ಕಟ್ಟು ಕತೆಗಳು. ಜೊತೆಗೆ ತಮ್ಮ ಊರಿನ ಕೀರ್ತಿಯನ್ನು, ಅಂತಸ್ತನ್ನು ಹೆಚ್ಚಿಸಿಕೊಳ್ಳುವ ಉದ್ದೇಶದಿಂದ ಒಂದಲ್ಲ ಒಂದು ರೀತಿಯಲ್ಲಿ ಪುರಾಣ ವ್ಯಕ್ತಿಗಳೊಡನೆ ಸಂಬಂಧ ಕಲ್ಪಿಸುವ ಪ್ರಯತ್ನಗಳಾಗಿವೆ. ಶಾಸ್ತ್ರೀಯವಾಗಿ ಸ್ಥಳನಾಮಗಳ ವಿಶ್ಲೇಷಣೆ ನಡೆಸುವ ಪ್ರಯತ್ನಗಳು ಪ್ರಾಮಾಣಿಕವಾಗಿ ಆರಂಭದಲ್ಲಿ ನಡೆಯಲಿಲ್ಲವೆಂದೇ ಹೇಳಬಹುದು.

ವ್ಯಕ್ತಿಗಳಿಗೆ ಅಥವಾ ಇತರೆ ವಸ್ತುಗಳಿಗೆ ಕೊಟ್ಟಿರುವ ಎಲ್ಲಾ ಹೆಸರುಗಳು ಅರ್ಥವತ್ತಾಗಿರುತ್ತವೆ ಎಂದು ಹೇಳಲಾಗುವುದಿಲ್ಲ. ಒಂದು ವಸ್ತುವಿಗೂ ಅದರ ಹೆಸರಿಗೂ ಯಾವುದೇ ಸಂಬಂಧವಿಲ್ಲದೆ ಹೋಗಬಹುದು. ವ್ಯಕ್ತಿಯ ವ್ಯಕ್ತಿತ್ವಕ್ಕೂ ಅವನಿಗೆ ನೀಡಲಾಗಿರುವ ಹೆಸರಿಗೂ ತೀರಾ ವೈರುಧ್ಯವಿರಬಹುದು. ಸುಂದರಯ್ಯ ಕುರೂಪಿಯಾಗಿರಬಹುದು; ಕುಬೇರಪ್ಪ/ ಸಂಪತ್‌ಕುಮಾರ್ ನಿರ್ಧನಿಕನಾಗಿರಬಹುದು; ಭೀಮಣ್ಣ ಭೀಮಕಾಯನಾಗಿರದೆ ಇರಬಹುದು, ಆದರೆ ಪ್ರಾಚೀನ ಸ್ಥಳನಾಮಗಳ ವಿಚಾರದಲ್ಲಿ ಹಾಗಿರುವುದಿಲ್ಲ. ಅವು ಅರ್ಥಗರ್ಭಿತವಾಗಿರುತ್ತವೆ. ಮರಡಿಹಳ್ಳಿ, ಗಾಜಲದಿನ್ನೆ ಎತ್ತರವಾದ ಸ್ಥಳದಲ್ಲಿರುತ್ತದೆ; ತೇಕಲ್‌ನಲ್ಲಿ ತೇವದ ಕಲ್ಲುಗಳೂ, ಚೆಂಗಲ್ಪಟ್ಟುವಿನಲ್ಲಿ ಕೆಂಪುಬಣ್ಣದ ಕಲ್ಲುಗಳೂ ಇರುತ್ತವೆ; ಗುಡಿಬಂಡೆಯಲ್ಲಿ ಗುಡಿಯೂ ಬಂಡೆಯೂ ಸೇರಿಕೊಂಡಿರುತ್ತದೆ, ಕೆರೆವಳಗಿನಹಳ್ಳಿ, ಕಟ್ಟೆ ಮೇಲಿನ ಹಳ್ಳಿ – ಹೀಗೆ ಅನೇಕ ಉದಾಹರಣೆಗಳನ್ನು ಕೊಡಬಹುದು. ಈ ಹಿನ್ನೆಲೆಯಲ್ಲಿ ಸ್ಥಳನಾಮಗಳನ್ನು ಕುರಿತು ನಾವು ಅಧ್ಯಯನ ನಡೆಸಿದಾಗ ಅನೇಕ ಸ್ವಾರಸ್ಯಕರ ಸಂಗತಿಗಳು ಬೆಳಕಿಗೆ ಬರುತ್ತವೆ. ಸ್ಥಳಗಳ ವಿಚಾರದಲ್ಲಿ ನಮಗೆ ಹೆಚ್ಚು ಹೆಚ್ಚು ವಿವರಗಳನ್ನು ಅವು ನೀಡುತ್ತವೆ.

ಸ್ಥಳಗಳಿಗೆ ಹೆಸರು ಕೊಡುವವರು ಯಾರು? ನಮ್ಮ ಹೆಸರನ್ನು ನಾವೇ ಇಟ್ಟುಕೊಳ್ಳುವುದಿಲ್ಲ. ಅಲ್ಲವೇ ? ಹಾಗೆಯೇ ಸ್ಥಳಗಳಿಗೆ, ಊರುಗಳಿಗೆ ನಾಮಕರಣ ಮಾಡುವವರು ಹೆಚ್ಚಾಗಿ ಬೇರೆಯವರೇ ಆಗಿರುತ್ತಾರೆ. ಆಯಾ ಸ್ಥಳದ ಆಸುಪಾಸಿನ ಜನ. ಈಗೀಗ ನಗರ/ಪಟ್ಟಣಗಳಲ್ಲಿ ಹೊಸ ಹೊಸ ಬದಲಾವಣೆಗಳು ಹುಟ್ಟಿಕೊಂಡಂತೆಲ್ಲಾ ದಿಢೀರನೆ ಅವುಗಳಿಗೆ ಹೆಸರುಗಳೂ ಉದ್ಭವವಾಗುತ್ತವೆ. ಪ್ರಾಚೀನ ಸ್ಥಳಗಳ ಹೆಸರುಗಳು ಹೀಗೆ ಒಮ್ಮೆಲೇ ಹುಟ್ಟಿಕೊಂಡದ್ದಲ್ಲ.

ಇತ್ತೀಚಿನ ಸ್ಥಳನಾಮಗಳಲ್ಲಿ ಬಹುಮಟ್ಟಿಗೆ ನಮಗೆ ಬೇಕಾದ ಮೂಲರೂಪ ಯಥಾವತ್ತಾಗಿ ದೊರೆಯುವುದರಿಂದ ಸಂಶೋಧಕರಿಗೆ ಅಂತಹ ಸ್ಥಳನಾಮಗಳ ನಿಷ್ಪತ್ತಿ ಕುರಿತ ವಿಶ್ಲೇಷಣೆ ಹೆಚ್ಚು ಸಮಸ್ಯೆಯಾಗುವುದಿಲ್ಲ. ಸಮಸ್ಯೆ ಬರುವುದು ಪ್ರಾಚೀನ ಸ್ಥಳನಾಮಗಳ ನಿಷ್ಪತ್ತಿಯನ್ನು ವಿವರಿಸುವಾಗ. ಅದರಲ್ಲೂ ಪ್ರತ್ಯೇಕವಾಗಿ ಮೂಲರೂಪಗಳನ್ನು ಕಳೆದುಕೊಂಡು ಅರ್ಥಹೀನವಾದ ಇಲ್ಲವೇ ಅರ್ಥ ಬದಲಾವಣೆಯಾಗಿರುವ ಸ್ಥಳನಾಮಗಳನ್ನು ವಿವರಿಸುವಾಗ. ಈ ಹಂತದಲ್ಲಿ ಸ್ಥಳನಾಮ ಶಾಸ್ತ್ರಜ್ಞನು ಭಾಷಾಶಾಸ್ತ್ರ, ಶಾಸನಶಾಸ್ತ್ರ ಅಲ್ಲದೆ ಇತರೆ ವೈಜ್ಞಾನಿಕ ಆಧಾರಗಳನ್ನು ಅವಲಂಬಿಸಬೇಕಾಗುತ್ತದೆ.

ಸ್ಥಳನಾಮಗಳ ಮೂಲರೂಪ ಬದಲಾವಣೆಯಾಗಲು ಏನು ಕಾರಣ? ಊರಿನ ಹೆಸರು ಬಹುಮಟ್ಟಿಗೆ ಆಯಾ ಪ್ರದೇಶದ ಆಡುಮಾತಿನಲ್ಲಿರುತ್ತದೆ. ಇವು ದಿನನಿತ್ಯವೂ ಬಳಸುವ ಪದಗಳಾಗಿರುತ್ತವೆ. ವಿದ್ಯಾವಂತ, ಅವಿದ್ಯಾವಂತರೆನ್ನದೆ ಎಲ್ಲರೂ ಒಂದಲ್ಲ ಒಂದು ಸಂದರ್ಭದಲ್ಲಿ ಪ್ರತಿನಿತ್ಯವೂ ಬಳಸಲೇಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಪದಗಳ ಸರಿಯಾದ ಅರ್ಥ ತಿಳಿಯದೆ ತಪ್ಪುಚ್ಚಾರಣೆ, ಮಿತವ್ಯಯ, ಅನ್ಯಭಾಷಾ ಪ್ರಭಾವ ಮುಂತಾದ ಭಾಷಿಕ ಕಾರಣಗಳಿಂದ ಸ್ಥಳನಾಮಗಳು ತಮ್ಮ ಮೂಲರೂಪಗಳನ್ನು ಬದಲಾಯಿಸಿಕೊಳ್ಳುತ್ತವೆ. ಅರಸಂಪಳ್ಳ → ಆಚಂಬಳ್ಳಿ, ವಿಜಯಾದಿತ್ಯ

* ಎಸ್.ಎಸ್.ಇ.ಎಸ್. ಸಂಶೋಧನ ಕೇಂದ್ರ, ೭೧/೨, ೨ನೆಯ ಮುಖ್ಯರಸ್ತೆ, ಗಾಂಧಿನಗರ, ಅಡ್ಯಾರ್, ಚೆನ್ನೈ–೨೦.

ಮಂಗಲ → ಬೇತಮಂಗಲ, ಹಾರುವನಹಳ್ಳಿ → ಹಾರೋಹಳ್ಳಿ ಮುಂತಾದವು ಹೀಗೆ ಬದಲಾಗಿರುವ ಸ್ಥಳನಾಮ ರೂಪಗಳು.

ಮದರಾಸ್ ನಗರದ 'ಹಾಮಿಲ್‌ಟನ್ ಬ್ರಿಡ್ಜ್'ನ ಹೆಸರಿನ ಬದಲಾವಣೆ ಬಹಳ ಜನರಿಗೆ ತಿಳಿದ ವಿಷಯವೇ ಆಗಿದೆ. ಬ್ರಿಟಿಷರ ಕಾಲದ ಹ್ಯಾಮಿಲ್ಟನ್ ಎಂಬ ವ್ಯಕ್ತಿನಾಮ ತಪ್ಪುಚ್ಚಾರಣೆಯಿಂದಾಗಿ ಅಮಿಲ್ಟನ್→ಅಮಿಟ್ಟನ್, ಅನಂತರ ಅಂಬಟ್ಟನ್ ಆದದ್ದು; ಅದರ ಇಂಗ್ಲಿಷ್ ಭಾಷಾಂತರ 'ಬಾರ್ಬರ್ಸ್ ಬ್ರಿಡ್ಜ್' ಆಗಿ ತದನಂತರ ಮೊದಲಿನ ರೂಪಕ್ಕೆ ಬಂದದ್ದು ಸ್ಥಳನಾಮಗಳಲ್ಲಿ ನಡೆಯುವ ರೂಪ ಬದಲಾವಣೆ/ಅರ್ಥಬದಲಾವಣೆಗೆ ಒಂದು ಉತ್ತಮ ನಿದರ್ಶನ. ಹೀಗೆ ಮೂಲಾರ್ಥವನ್ನು ಕಳೆದುಕೊಂಡ ಭಾಷಿಕ ಘಟಕಗಳು ಊಹಿಸಲಾರದಷ್ಟು ಬದಲಾವಣೆಯನ್ನು ಹೊಂದುತ್ತವೆ. ಜೊತೆಗೆ ಅನೇಕ ದಂತಕತೆಗಳು ಅವುಗಳ ಸುತ್ತಲೂ ಹೆಣೆದುಕೊಂಡು ಅಂತಹವುಗಳನ್ನು ಮತ್ತಷ್ಟು ಗೊಂದಲಮಯವಾಗಿ ಮಾಡುತ್ತವೆ. ಇಂತಹ ಎಲ್ಲಾ ಸಮಸ್ಯೆಗಳನ್ನು ಬಿಡಿಸಿ ಮೂಲರೂಪವನ್ನು ಶೋಧಿಸಿ ಪುನಃ ರಚಿಸಿ ಅದರ ಅರ್ಥ ನಿರ್ಣಯವನ್ನು ಮಾಡಬೇಕಾದಾಗ ಸಂಶೋಧಕನು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ; ಅದು ಒಂದು ಸವಾಲಾಗುತ್ತದೆ.

ಸ್ಥಳನಾಮಗಳು ಅರ್ಥವತ್ತಾದ ಪದಗಳು/ಪದಪುಂಜಗಳಾದರೂ ಅವುಗಳ ಸಾಮಾನ್ಯ ಬಳಕೆ ಬಹಳ ಸೀಮಿತವಾದದ್ದು; ಅವು ನಿರ್ದಿಷ್ಟ ಸ್ಥಳಗಳಿಗೆ ಅಂಟಿಕೊಂಡಿರುವ ಗುರುತುಚೀಟಿ ಮಾತ್ರ. ಆಡುಭಾಷೆಯಲ್ಲಿ ಅಥವಾ ಗ್ರಾಂಥಿಕ ಭಾಷೆಯಲ್ಲಿ ರೂಢಿಯಲ್ಲಿರುವ ಇತರೆ ಶಬ್ದಗಳಂತೆ ಬೇರೆ ಬೇರೆ ಪರಿಸರದಲ್ಲಿ ಅರ್ಥವಿಸ್ತಾರ ಮಾಡಿಕೊಳ್ಳುವ ಸಾಮರ್ಥ್ಯ ಅಲ್ಲಿನ ಭಾಷಿಕ ಘಟಕಗಳಿಗೆ ಇರುವುದಿಲ್ಲ. ಉದಾ : ಮರಡಿಹಳ್ಳಿ. ಅದು ಆ ಸುತ್ತಮುತ್ತಲಿನ ನಿವಾಸಿಗಳಿಗೆ ಮಾತ್ರ ಎತ್ತರವಾಗಿರುವ ಸ್ಥಳವಾಗಿರಬಹುದೇ ಹೊರತು ಅರ್ಥಕ್ಕನುಗುಣವಾಗಿ ಅದು ಅತ್ಯಂತ ಎತ್ತರವಾದ ಸ್ಥಳದಲ್ಲಿರಬೇಕಾಗಿಲ್ಲ. ನಾಮಕರಣಗೊಂಡಾಗ ಇದ್ದ ಭೂಸ್ಥಿತಿಯೂ ಇಂದಿನ ಭೂಸ್ಥಿತಿಯೂ ವ್ಯತ್ಯಾಸವಾಗಿ ಮೂಲರೂಪದ ಅರ್ಥವನ್ನು ತಿಳಿಸುವ ಕಿಂಚಿತ್ತು ಕುರುಹೂ ಅಲ್ಲಿ ದೊರೆಯದೆ ಇರಬಹುದು. ಯಾವುದೋ ಕಾಲದಲ್ಲಿ ಒಂದು ಮನೆ ಮಾತ್ರವಿದ್ದ ಹಳ್ಳಿ 'ಒಂಟಿಮನೆ ಹಳ್ಳಿ'ಯಲ್ಲಿ ಈಗ ಹಲವಾರು ಮನೆಗಳಿರಬಹುದು. ಭೂಸ್ಥಿತಿ, ಸಸ್ಯ ಮುಂತಾದ ವಿಶೇಷಣಗಳಲ್ಲಿ ಕಾಲಾನುಕ್ರಮದಲ್ಲಿ ಅನೇಕ ಬದಲಾವಣೆಗಳು ಉಂಟಾಗಿ, ಈಗ ಮೂಲದ ಅರ್ಥವನ್ನು ಕೊಡದಿರಬಹುದು. ಆದರೆ ಮೊದಲು ನಾಮಕರಣಗೊಂಡಾಗ ಅದು ಅರ್ಥವತ್ತಾದ ಪದವಾಗಿರುತ್ತದೆ. ಅಂತಹ ಮೂಲ ರೂಪವನ್ನು ಅನ್ವೇಷಿಸುವುದು ಬಹುಮುಖ್ಯ.

ಸಹಜ ಕಾರಣಗಳಿಂದ ಸ್ಥಳನಾಮಗಳು ರೂಪದಲ್ಲಿಯೂ ಅರ್ಥದಲ್ಲಿಯೂ ಒಂದೆಡೆ ಬದಲಾವಣೆಯಾದರೆ; ಮತ್ತೊಂದೆಡೆ ಜನರು ಸ್ವತಃ ಮಾಡುವಂತಹ ಬದಲಾವಣೆಯೂ ಕಾರಣವಾಗಿರುತ್ತದೆ. ಹಿಂದಿನ ಕಾಲದಲ್ಲಿ ರಾಜರು ತಾವು ಗೆದ್ದ ರಾಜ್ಯಗಳಿಗೆ ತಮ್ಮ ವಂಶದ ಹೆಸರನ್ನಿಡುವುದು, ಅಗ್ರಹಾರವನ್ನು ದಾನಮಾಡುವಾಗ ಅಥವಾ ವಿಜಯ ಸಂಕೇತವಾಗಿ ತಮ್ಮ ಹೆಸರನ್ನೋ, ಪೂರ್ವಿಕರ ಹೆಸರುಗಳನ್ನೋ ಇಟ್ಟು ಪುನರ್ನಾಮಕರಣ ಮಾಡಿರುವ ಉದಾಹರಣೆಗಳಿವೆ. ನಿಖಿಲಿ ಚೋಳಮಂಡಲಂ, ಗಂಗಪಾಡಿ ಮುಂತಾದವು. ಹಿರೇಬಿದನೂರಿಗೆ ನರಸಿಂಹಾಪುರ ಮತ್ತು ಕೃಷ್ಣರಾಯಪುರ ಎಂದು ಎರಡು ಸಲ ಪುನರ್ನಾಮಕರಣ ನಡೆದಿದೆ. ಇಂತಹ ಹಲವು ಉದಾಹರಣೆಗಳು ನಮಗೆ ದೊರೆಯುತ್ತವೆ.

ಪುನರ್ನಾಮಕರಣದಲ್ಲಿ ಇನ್ನೊಂದು ಬಗೆಯೂ ಇದೆ. ಸಂಸ್ಕೃತೀಕರಣ–ದೇಸಿ ಭಾಷೆಯಲ್ಲಿರುವ ಸ್ಥಳನಾಮವನ್ನು ಸಂಸ್ಕೃತಕ್ಕೆ ಭಾಷಾಂತರ ಮಾಡಿ ಹೇಳುವ ಕ್ರಮ. ಇದು ಸಂಸ್ಕೃತ ಪಂಡಿತರಿಂದ ನಡೆದಿರುವ ಕೆಲಸ. ಸ್ಥಳಪುರಾಣಗಳಲ್ಲಿ ಸ್ಥಳ ಮಹಿಮೆಯನ್ನು ವಿವರಿಸುವ ಸಂದರ್ಭ ಬಂದಾಗ, ರಾಜಮಹಾರಾಜರುಗಳ ಬಿರುದಾವಳಿಗಳನ್ನು ವಂಶಾವಳಿಗಳನ್ನು ವಿವರಿಸುವಾಗ, ವಿದ್ವಾಂಸರು ಅನಿವಾರ್ಯವಾಗಿ ಸ್ಥಳನಾಮಗಳನ್ನು ಬಳಸಲೇಬೇಕಾದ ಸಂದರ್ಭ ಒದಗಿದಾಗ ಸ್ಥಳೀಯ ಭಾಷೆಯಲ್ಲಿ ದೊರೆಯುವ ಸ್ಥಳನಾಮಗಳನ್ನು ಸಂಸ್ಕೃತೀಕರಿಸಿ ವಿವರಿಸಿರುವುದನ್ನು ನಾವು ಶಿಲಾಶಾಸನ, ತಾಮ್ರಶಾಸನ, ತಾಳೆಯೋಲೆ ಮುಂತಾದ ದಾಖಲೆಗಳಲ್ಲಿ ಕಾಣಬಹುದು.

ವಿದ್ವಾಂಸರ ಈ ಪ್ರವೃತ್ತಿಗೆ ಕೆಲವು ಮುಖ್ಯ ಕಾರಣಗಳನ್ನು ನಾವಿಲ್ಲಿ ಊಹಿಸ ಬಹುದಾಗಿದೆ.

೧. ವಿದ್ವಾಂಸರಿಗಿದ್ದ ಸಂಸ್ಕೃತ ಭಾಷೆಯ ಮೇಲಿನ ಅತಿ ವ್ಯಾಮೋಹ.
೨. ಸಂಸ್ಕೃತ ದೇವಭಾಷೆ, ಗೀರ್ವಾಣ ಭಾಷೆ – ಎಂದು ಪರಿಗಣಿತವಾಗಿದ್ದು ಅಂತಹ ಶ್ರೇಷ್ಠ ಭಾಷೆಯಲ್ಲಿ ಹೇಳುವುದು ಪುಣ್ಯಪ್ರದ, ಮಂಗಳದಾಯಕ ಹಾಗೂ ಶ್ರೇಯಸ್ಕರ ಎಂಬ ಭಾವನೆ.

೩. ತಮ್ಮ ಕೃತಿ ಹೆಚ್ಚು ಸಂಸ್ಕೃತ ಭೂಯಿಷ್ಠವಾಗಿದ್ದರೆ ರಾಜನ ಹಾಗೂ ವಿದ್ವಜ್ಜನರ ಮೆಚ್ಚುಗೆ ಗಳಿಸುತ್ತದೆ ಎಂಬ ನಂಬಿಕೆ.
೪. ದೇಸಿ ಶಬ್ದಗಳಿಂದ ಕೂಡಿರುವ ಸ್ಥಳನಾಮಗಳನ್ನು ಸಂಸ್ಕೃತ ಪದಗಳ ಮಧ್ಯೆ ಬಳಸುವುದರಿಂದ ಭಾಷೆಯ ಅಂದ ಕೆಡುತ್ತದೆ ಎಂಬ ಮಡಿವಂತಿಕೆ ಮುಂತಾದವು.

ಇಂತಹ ಮನೋಭಾವನೆಯ ಪರಿಣಾಮವಾಗಿ ಮುಳುಬಾಗಿಲು–ಪೂರ್ವ ಕವಾಟಪುರ; ಚಿಕ್ಕಬಳ್ಳಾಪುರ–ಅಣುಪ್ರಸ್ಥಪುರ; ಹೊಸಹಳ್ಳಿ–ನೂತನಪುರ; ಹುಲ್ಲಹಳ್ಳಿ–ತೃಣಪುನಿ; ಆನೆಗೊಂದಿ–ಗಜಗಹ್ವರ; ಓರಂಗಲ್ಲು–ಏಕಶಿಲಾನಗರ; ಕುಣಿಗಲ್ಲು–ನರ್ತನಶಿಲಾಪುರ; ಮೊಸರುಕಲ್ಲು–ದಧಿಪಾಷಾಣ ಮುಂತಾಗಿ ಸಂಸ್ಕೃತೀಕರಣವಾದದ್ದು ಹೀಗೆ. ಭಾಷಾಂತರ ಮಾಡುವಾಗ ಮೂಲಾರ್ಥದ ತಪ್ಪು ಗ್ರಹಿಕೆಯಿಂದಾಗಿ ಅನೇಕ ತಪ್ಪುಗಳೂ ನಡೆದಿವೆ. ಮುಳುಬಾಗಿಲು–ಕಂಟಕದ್ವಾರ, ಮುಡಿಯನೂರು–ಚೂಡಾಗ್ರಾಮ, ಜಾನುಕಲ್ಲು–ಮಧುಶಿಲೆ ಮುಂತಾದವುಗಳನ್ನು ಇದಕ್ಕೆ ಉದಾಹರಿಸಬಹುದು.

ಸಂಸ್ಕೃತೀಕರಣದ ಜೊತೆಗೆ ಅರಬಿ, ಪಾರಸಿ, ಉರ್ದು, ಇಂಗ್ಲಿಷ್ – ಈ ಭಾಷೆಗಳೂ ಪುನರ್ನಾಮಕರಣದಲ್ಲಿ ಪಾಲು ಪಡೆಯುತ್ತವೆ. ಬಿದನೂರು–ಹೈದರ್‌ನಗರ, ಹೀರೋಡೆ–ಫ್ರೆಂಚ್‌ರಾಕ್ಸ್, ಚಿತ್ರದುರ್ಗ–ಫರೂಕಾಬಾದ್ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು. ಇಂತಹ ಪುನರ್ನಾಮಕರಣ/ಸಂಸ್ಕೃತೀಕರಣ ಜನಸಾಮಾನ್ಯರ ಮೇಲೆ ಯಾವುದೇ ಪರಿಣಾಮ ಬೀರಲಿಲ್ಲ. ಅವು ಹೆಚ್ಚಾಗಿ ದಾಖಲೆಗಳಲ್ಲಿ ಮಾತ್ರ ಉಳಿದುಕೊಂಡು ಬಂದವು. ಚಲಾವಣೆಗೆ ಬಂದ ಬದಲಾವಣೆಗಳು ತೀರಾ ಕಡಿಮೆ.

ರಾಜರಾಣಿಯರು, ಪಾಳೇಗಾರರು, ದಂಡನಾಯಕರು, ಸೈನಿಕರು ಮೊದಲಾದ ವ್ಯಕ್ತಿಗಳ ಸಾಹಸ ಪರಾಕ್ರಮಗಳನ್ನು ವಿವರಿಸುವ ಹಿನ್ನೆಲೆಯಲ್ಲಿ ಅನೇಕ ಸ್ಥಳನಾಮಗಳು ಪ್ರಚಲಿತವಾಗಿವೆ. ಇಂತಹ ಕತೆಗಳಲ್ಲಿ ಸತ್ಯ ಯಾವುದು ಮಿಥ್ಯ ಯಾವುದು ಎಂದು ಸರಿಯಾದ ಆಧಾರಗಳಿಲ್ಲದೆ ತೀರ್ಮಾನಿಸಲು ಸಾಧ್ಯವಾಗುವುದಿಲ್ಲ. ಸಾಮಾನ್ಯ ಜನಪದ ನಿರುಕ್ತಿ ಮತ್ತು ಪಂಡಿತ ನಿರುಕ್ತಿ ಎಂದು ಎರಡು ಬಗೆಯಲ್ಲಿ ಇವುಗಳನ್ನು ವಿವರಿಸಲಾಗುತ್ತದೆ. ದಂತಕತೆಗಳನ್ನು ಹೆಣೆಯುವುದರಲ್ಲಿ ಪಂಡಿತ ಪಾಮರರೆನ್ನದೆ ಎಲ್ಲರೂ ಪಾಲ್ಗೊಂಡಿರುವ ಸಂಗತಿ ಸ್ಪಷ್ಟವಾಗುತ್ತದೆ. ಪರಂಪರೆಯಾಗಿ ಕೇಳಿಬಂದ ಕತೆಯನ್ನು ಕರ್ಣ ಪರಂಪರೆಯಾಗಿ ಕೇಳಿದ ಪರಿಣಾಮವಾಗಿ ಅವು ಸಾಕಷ್ಟು ಮಾರ್ಪಾಡಾಗಿರುವುದಲ್ಲದೆ ಪಂಡಿತರು ಹೆಣೆದಿರುವ ದಂತಕತೆಗಳು ನಿಜಸಂಗತಿಯನ್ನು ಮೀರಿಸುವಂತಹ ಘಟನೆಗಳಿಂದ ಕೂಡಿರುತ್ತವೆ.

ಜನಪದ ದಂತಕತೆಗಳು ಸ್ಥಳನಾಮಗಳಿಗೆ ಸಂಬಂಧಪಟ್ಟಂತೆ ಮುಖ್ಯವಾಗಿ ಈ ರೀತಿಯಲ್ಲಿರುತ್ತವೆ.

೧. ಹಸು ತಾನೇ ತಾನಾಗಿ ಯಾವುದೋ ಒಂದು ಹುತ್ತದ ಬಳಿ ಬಂದು ಹಾಲು ಕರೆಯುವುದು. ಅದನ್ನು ತಿಳಿದ ರಾಜ/ಪಾಳೆಗಾರ ಅಂತಹ ಸ್ಥಳ ಪವಿತ್ರವಾದದ್ದೆಂದು ಬಗೆದು ಅಲ್ಲಿ ಊರನ್ನು ಸ್ಥಾಪಿಸಿ ದೇವಾಲಯವನ್ನು ಕಟ್ಟಿಸಿ ಊರಿಗೆ ಒಂದು ಹೆಸರು ಇಡುವುದು.
೨. ಮೊಲವು ಬೇಟೆ ನಾಯಿಯ ಮೇಲೆ ಎರಗಿ ಬೀಳುವುದನ್ನು ಕಂಡು, ಅದು ಗಂಡುಭೂಮಿಯೆಂದು ಭಾವಿಸಿ ಅಲ್ಲಿ ಊರಿನ ಸ್ಥಾಪನೆ, ಅದಕ್ಕೆ ಒಂದು ಹೆಸರು.
೩. ವೇಶ್ಯೆಯು ತನ್ನ ಪಾಪದ ಪ್ರಾಯಶ್ಚಿತ್ತವಾಗಿ ಬಲಿದಾನ ಮಾಡಿಕೊಳ್ಳುವುದು. ಅವಳ ಹೆಸರು ಆ ಊರಿಗೆ.

ರಾಮಾಯಣ, ಮಹಾಭಾರತ, ಭಾಗವತ ಮುಂತಾದವುಗಳಲ್ಲಿ ಕೆಲವು ಮುಖ್ಯ ಪಾತ್ರಗಳ ಆದರ್ಶಕ್ಕೆ ನಾವು ಮೊದಲಿನಿಂದಲೂ ಮಾರು ಹೋಗಿದ್ದೇವೆ. ಅವುಗಳತ್ತ ನಾವು ಆಕರ್ಷಿತರಾಗಿದ್ದೇವೆ. ಈ ಜನಪ್ರಿಯ ಪುರಾಣ ವ್ಯಕ್ತಿಗಳೊಡನೆ ಅನೇಕ ಸ್ಥಳನಾಮಗಳು ಬೆಸುಗೆಯಾಗಿವೆ. ರಾಮಸಾಗರ, ಲಕ್ಷ್ಮಣತೀರ್ಥ, ಕುಂತಿಬೆಟ್ಟ ಮುಂತಾದವು ಕೆಲವು ಉದಾಹರಣೆಗಳು. ರಾಮ, ಸೀತೆ, ಕೃಷ್ಣ, ಭೀಮ, ಹನುಮ, ಲಕ್ಷ್ಮೀ, ಶ್ರೀನಿವಾಸ, ಬಸವ, ಸೋಮ, ಸೂರ್ಯ, ಸಿದ್ಧ, ನಂಜುಂಡ ಅಲ್ಲದೇ ಅನೇಕ ಋಷಿಗಳ ಹೆಸರುಗಳೂ ಜನಪ್ರಿಯವಾಗಿವೆ. ಇಂತಹ ಐತಿಹ್ಯವುಳ್ಳ ಸ್ಥಳನಾಮಗಳು ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾಗಿಲ್ಲ; ಇಡೀ ಭಾರತದಲ್ಲಿ ಪ್ರಚಲಿತವಾಗಿದೆ. ಪಾಂಡವರು ವನವಾಸ ಮಾಡಿದ್ದು ಅದೆಷ್ಟೋ ವನಗಳಲ್ಲಿ ! ಭೀಮನು ಬಕಾಸುರನನ್ನು ಸಂಹಾರ ಮಾಡಿದ್ದು ಒಂದು ಜಾಗದಲ್ಲಲ್ಲ, ಹಲವಾರು ಕಡೆ. ಕಲ್ಲುಕಲ್ಲಿಗೂ ಗುಹೆಗುಹೆಗೂ ಮರಮರಕ್ಕೂ ಕತೆಯನ್ನು ಹೆಣೆಯುವುದು ನಮ್ಮ ಜನಪದ ಪ್ರವೃತ್ತಿ. ಇಂತಹ ದಂತಕತೆಗಳ ಹಿಂದಿನ ಮೂಲೋದ್ದೇಶವೆಂದರೆ ತಮ್ಮ ಸ್ಥಳಗಳಿಗೆ ಪಾವಿತ್ರ್ಯ ಬರಲಿ, ಮಂಗಳದಾಯಕವಾಗಲಿ ಹಾಗೂ ವೀರಭೂಮಿ ಎಂದು ಖ್ಯಾತಿ ಪಡೆಯಲಿ ಎಂಬುದೇ ಆಗಿದೆ. ದೇಶಭಕ್ತಿ, ದೈವಾನುಗ್ರಹ, ಸಾಹಸ, ಐಶ್ವರ್ಯ ಮುಂತಾದ ಅಂಶಗಳುಳ್ಳ ಯಾವುದೇ ಹೆಸರು ತಮ್ಮ ಊರಿನ ಹೆಸರಿನೊಡನೆ ಸೇರಿಕೊಂಡಾಗ ಅದು ಕೀರ್ತಿ, ಶ್ರೇಯೋಭಿವೃದ್ಧಿಯ ಸಂಕೇತವಾಗುತ್ತದೆಂದು ನಂಬಿಕೆ.

ಸ್ಥಳನಾಮ ಅಧ್ಯಯನದ ಅಗತ್ಯ ಏನು ? ಅದರಿಂದಾಗುವ ಪ್ರಯೋಜನವೇನು ಎಂಬ ವಿಚಾರಕ್ಕೆ ಬಂದಾಗ ಇದುವರೆಗೆ ನಡೆದಿರುವ ಕೆಲವು ಅಧ್ಯಯನಗಳು ಅನೇಕ ಉಪಯುಕ್ತ ಮಾಹಿತಿ ನೀಡಿವೆ ಎಂಬ ವಿಷಯ ಆಶಾದಾಯಕವಾಗಿದೆ. ಇದನ್ನು ಗಮನಿಸಿದಾಗ ಇಂತಹ ಅಧ್ಯಯನದ ಉಪಯುಕ್ತತೆ ಸ್ಪಷ್ಟವಾಗುತ್ತದೆ.

ಸ್ಥಳನಾಮಗಳು ಬಹುಪಾಲು ಅರ್ಥಗರ್ಭಿತವಾಗಿರುತ್ತವೆ. ಒಂದು ಪ್ರದೇಶದ ನದಿ, ಬೆಟ್ಟ, ಕಲ್ಲು ಮಣ್ಣು, ಗಿಡ-ಮರ, ಕೋಟೆ, ದೇವಾಲಯ ಮುಂತಾದವು ಹೇಗೆ ಆ ಪ್ರದೇಶದ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುತ್ತವೆಯೋ ಹಾಗೆಯೇ ಸ್ಥಳನಾಮಗಳೂ ಸಹ ಚರಿತ್ರೆಯನ್ನು ಹೇಳಲು ಪೂರಕವಾದ ಅನೇಕ ಮಾಹಿತಿಗಳನ್ನು ಒದಗಿಸುತ್ತವೆ. ನಮ್ಮ ಪೂರ್ವಿಕರ ವಿದ್ಯಾಸಂಪನ್ನತೆ, ಸೌಂದರ್ಯಪ್ರಜ್ಞೆ, ಧಾರ್ಮಿಕ ದೃಷ್ಟಿ, ಮೂಢನಂಬಿಕೆ, ಆಳರಸರ ಹಾಗೂ ಮೂಲನಿವಾಸಿಗಳ ಹೆಸರು, ಜನ ಸಮುದಾಯದ ನಾನಾ ವೃತ್ತಿ ಕಸುಬುಗಳು, ನೈಸರ್ಗಿಕ ಸಂಪತ್ತು ಮುಂತಾದ ವಿವರಗಳನ್ನು ತಿಳಿಯಲು ಅವು ಸಹಾಯಕವಾಗುತ್ತವೆ. ಭಾಷಾಶಾಸ್ತ್ರ, ಮಾನವಶಾಸ್ತ್ರ, ಮುಂತಾದ ಬೇರೆ ಬೇರೆ ವಿಷಯಗಳಿಗೆ ಉಪಯುಕ್ತ ಮಾಹಿತಿ ನೀಡುತ್ತವೆ.

ರಾಮಸಂದ್ರ, ಕೋಲದೇವಿ, ತೊಂಡೇಭಾವಿ, ಆನೆಮಡಗು ಇವು ಜಲಸೂಚಕ ಗಳಾದರೆ, ಭೂಸ್ಥಿತಿಯನ್ನು ತಿಳಿಸುವ ಸುದ್ದೆಕುಂಟೆ, ಮರಳುಕುಂಟೆ, ಕುರುಡಮಲೆ, ಮಿಣಕನಕುರ್ಕಿ ಮುಂತಾದ ಸ್ಥಳಗಳಿವೆ. ಶಿಲೆ, ವೃಕ್ಷ, ಪಶುಪಕ್ಷಿ ಸೂಚಕಗಳಾದ ಅಡ್ಡಗಲ್ಲು, ಬಂಡಕೋಟೆ, ತಾವರೆಕೆರೆ, ಸೀಗೆಹಳ್ಳಿ, ತಂಗಡಿಕುಂಟೆ, ಚಿಂಕಲಪಲ್ಲಿ, ಗೂಬಲಹಳ್ಳಿ ಮುಂತಾದವುಗಳನ್ನು ಕಾಣಬಹುದು.

ಸಾಮಾಜಿಕ ಅಂಶಗಳನ್ನು ತಿಳಿಸುವ ಕುಂಬಾರಹಳ್ಳಿ, ಬ್ರಾಹ್ಮಣಹಳ್ಳಿ, ಗೊಲ್ಲರಹಳ್ಳಿ, ಬೆಸ್ತರಹಳ್ಳಿ, ಹೊಲೇರಹಳ್ಳಿ, ಜಂಗಮಕೋಟೆ, ವೈಷ್ಣವಾರಿಪಲ್ಲಿ, ಅರಾಜಿಕೊತ್ತನೂರು, ಸೂಸೈಪಾಳ್ಯ, ಲಂಬಾಣಿತಾಂಡ, ಮರಾಠಿಪಾಳ್ಯ, ಬೌರಿಂಗ್‌ಪೇಟೆ ಮುಂತಾದ ಸ್ಥಳನಾಮಗಳೂ ಇವೆ.

ದೇವತಾ ಸೂಚಕಗಳಾದ ಸೋಮೇಶ್ವರ, ನಂದಿ, ರಂಗಸ್ಥಳ, ರಾಮೇಶ್ವರ; ಬಿರುದು ಸೂಚಕ ಸುಲ್ತಾನ್ ತಿಪ್ಪಸಂದ್ರ, ಸೋಮಯಾಜಿಲಪಲ್ಲಿ; ಘಟನಾಸೂಚಕ ಜಪ್ತಿ ಹೊಸಹಳ್ಳಿ, ದಂಡುಪಾಳ್ಯ ಮುಂತಾದವುಗಳ ಜೊತೆಗೆ ರಾಜವಂಶಗಳ ವ್ಯಕ್ತಿಗಳ ಹೆಸರುಗಳಾದ ನೊಣಮಂಗಲ (ನೊಳಂಬಮಂಗಲ), ಗಂಗಸಲ್ಲೂರು, ಶಿವಮಾರಪಟ್ಟಣ, ಬೇತಮಂಗಲ (ಬಿಜಯಾದಿತ್ಯ ಮಂಗಲ) ಮುಂತಾದವು ಅವರ ರಾಜಕೀಯ ಚರಿತ್ರೆಯನ್ನು ತಿಳಿಯಲು ಸಹಾಯಕವಾಗಿವೆ.

ಕೋಲಾರ ಜಿಲ್ಲೆಯಲ್ಲಿ ನಡೆಸಿದ ಒಂದು ಸಮೀಕ್ಷೆಯ ಪ್ರಕಾರ ಸುಮಾರು ೩೮೦ ಜಾತಿ, ಕುಲ, ಗೋತ್ರ ಇಲ್ಲವೆ ಕುಟುಂಬ ನಾಮಗಳನ್ನು ಸ್ಥಳನಾಮಗಳಲ್ಲಿ ಗುರುತಿಸಲಾಗಿದೆ. ಕುಟುಂಬದ ಮೂಲ ಪುರುಷನ ಹೆಸರು, ವಲಸೆ ಬಂದವರ ಮೂಲ ಸ್ಥಳ, ಅವರ ಕುಲಗೋತ್ರಗಳ ಬಗೆಗೆ ಅನೇಕ ವಿವರಗಳು ಇಲ್ಲಿ ದೊರೆಯುತ್ತವೆ. ಜನಾಂಗಿಕ ಅಧ್ಯಯನಕ್ಕೆ ಇಂತಹ ಮಾಹಿತಿ ಎಷ್ಟು ಉಪಯುಕ್ತವಾದುದು ಎಂದು ಒತ್ತಿ ಹೇಳಬೇಕಾಗಿಲ್ಲ.

ಇಂತಹ ಬಹೂಪಯೋಗಿ ವಿವರಗಳನ್ನು ಕೊಡುವ ಪ್ರಾಚೀನ ಸ್ಥಳನಾಮಗಳನ್ನು ನಮ್ಮ ಇಷ್ಟಾನುಸಾರ ಬದಲಾವಣೆ ಮಾಡುವುದು ಸಾಧುವಲ್ಲ. ಬದಲಾವಣೆ ಮಾಡುವುದರಿಂದ ನಮ್ಮ ಚರಿತ್ರೆಯ ದಾಖಲೆಗಳನ್ನು ನಾವೇ ನಾವಾಗಿ ಅಳಿಸಿ ಹಾಕಿದಂತಾಗುತ್ತದೆ. ಕೆಲವು ವರ್ಷಗಳ ಹಿಂದೆ ಮದರಾಸಿನ ಕೆಲವು ರಸ್ತೆ ಹೆಸರುಗಳಲ್ಲಿ ಕಂಡುಬರುವ ಜಾತಿವಾಚಕಗಳನ್ನು ತೊಡೆದುಹಾಕಬೇಕೆಂಬ ಪ್ರಯತ್ನ ನಡೆದು ಅನಾವಶ್ಯಕ ಗೊಂದಲ, ಅಸ್ತವ್ಯಸ್ತ ಉಂಟಾದದ್ದು; ಇದರಿಂದ ಸ್ಥಳನಾಮಗಳ ಮೂಲೋದ್ದೇಶವೇ ವಿಫಲವಾದದ್ದು ನಮಗೆ ಜ್ಞಾಪಕವಿದೆ. ಒಂದು ಸ್ಥಳನಾಮ ಕುರೂಪವಾಗಿದ್ದರೆ ಅದರ ಮೂಲರೂಪವನ್ನು ಚಲಾವಣೆಗೆ ತರಲು ಸಕ್ರಿಯವಾಗಿ ಪ್ರಯತ್ನ ಮಾಡಬಹುದು. ಇತ್ತೀಚೆಗೆ ಟ್ರಿವೇಂಡ್ರಮ್-ತಿರುವನಂತಪುರಂ ಆಗಿ ಮಾರ್ಪಾಡಾದದ್ದು ಒಂದು ಸ್ವಾಗತಾರ್ಹ ಬದಲಾವಣೆ.

ನಮ್ಮ ಜನಾಂಗದ, ಭೂಮಿಯ, ನಾಗರಿಕತೆಯ ಹಾಗೂ ಸಂಸ್ಕೃತಿಯ ಜೀವಂತ ಪಳೆಯುಳಿಕೆಗಳು ಸ್ಥಳನಾಮಗಳು. ಅವುಗಳ ಶಾಸ್ತ್ರೀಯ ಅಧ್ಯಯನದಿಂದ ನಾವು ಹೆಚ್ಚು ಉಪಯೋಗ ಪಡೆಯಬಹುದು.

# ಹೈದರಾಬಾದ್ ಕರ್ನಾಟಕದ ಶಾಸನಗಳಲ್ಲಿ ಸ್ಥಳನಾಮಗಳು

– ಡಾ|| ಲಿಂಗಪ್ಪ ಗೋನಾಲ*

ಜಗತ್ತಿನ ಪ್ರತಿಯೊಂದು ಜೀವಿ, ವಸ್ತು, ಪ್ರದೇಶ, ಮುಂತಾದವುಗಳನ್ನು ಬಣ್ಣ, ಆಕಾರ, ವಾಸನೆ, ಇರುವಿಕೆಗಳ ಹಿನ್ನೆಲೆಯಲ್ಲಿ ಅವುಗಳನ್ನು ಗುರುತಿಸಲಾಗುತ್ತದೆ. ಮನುಷ್ಯನಾಗಿದ್ದರೆ, ಅವನ ಹೆಸರಿನಿಂದ, ಪ್ರಾಣಿಗಳನ್ನು, ಒಂದು ನಿಶ್ಚಿತ ವರ್ಗದಿಂದ, ಪಕ್ಷಿಗಳನ್ನು ಕೂಡ ಹಾಗೆ ಗುರುತಿಸಿ, ಇದು ನಾಯಿ, ಹುಲಿ, ಸಿಂಹ, ಕೋಗಿಲೆ, ಕಾಗಿ, ಗಿಳಿ ಹೀಗೆ ಮುಂತಾದ ಹೆಸರುಗಳಿಂದ ಅವುಗಳನ್ನು ಕರೆಯಲಾಗುತ್ತದೆ. ಸ್ಥಳವನ್ನು ಕೂಡ ಒಂದು ನಿರ್ದಿಷ್ಟವಾದ ಹೆಸರಿನಿಂದ ಕರೆಯಲಾಗುತ್ತದೆ. ಒಂದು ಪ್ರದೇಶ, ಊರುಗಳಿಗೆ ಅದರದೆ ಆದ ಹೆಸರಿರುವುದರಿಂದ ನಾವು ಕೆಂಭಾವಿಯಲ್ಲಿದ್ದೇವೆ, ಅವನು ಆಳಂದನಲ್ಲಿದ್ದಾನೆ, ಎಂದು ಹೀಗೆ ಹೇಳಲು ಸಾಧ್ಯವಾಗುತ್ತದೆ. ಒಂದು ಪ್ರದೇಶಕ್ಕೆ ಬಂದಿರುವ ಹೆಸರಿನ ಹಿಂದೆ ಆ ಸ್ಥಳದ ಮಹಿಮೆ, ಐತಿಹ್ಯ, ಪೌರಾಣಿಕ ಹಿನ್ನೆಲೆ, ಐತಿಹಾಸಿಕ ಮಹತ್ವ, ಧಾರ್ಮಿಕ ಮಹತ್ವ ಹೀಗೆ ಮುಂತಾದ ಅಂಶಗಳು ಕಾರಣವಾಗಿರುತ್ತವೆ. ಅವುಗಳನ್ನು ಗುರುತಿಸುವುದು ಹೇಗೆ? ಅಲ್ಲಿಯ ಸ್ಥಳಪುರಾಣಗಳು, ಜಾನಪದ ಆಚರಣೆ, ಕಥೆ, ಐತಿಹ್ಯ, ಇಲ್ಲವೆ ನಿರ್ದಿಷ್ಟವಾದ ಆಕರ ಸಾಮಗ್ರಿ. ಅಂಥ ಆಕರ ಸಾಮಗ್ರಿಗಳಲ್ಲಿ ಶಾಸನ ಸಾಹಿತ್ಯವು ಒಂದು. ಇತಿಹಾಸದ ರಚನೆಗೆ ಶಾಸನಗಳು ಗಟ್ಟಿಯಾದ ಪುರಾವೆಗಳನ್ನು ಒದಗಿಸುವ ಆಕರಗಳು. ಅವುಗಳಲ್ಲಿ ಉಕ್ತಗೊಂಡ ಸ್ಥಳನಾಮಗಳು ಪರಿಶೀಲನಾರ್ಹವಾಗಿವೆ. ವಿಶೇಷವಾಗಿ ಹೈದರಾಬಾದ್ ಕರ್ನಾಟಕದ ಶಾಸನಗಳಲ್ಲಿ ಉಲ್ಲೇಖವಾಗಿರುವ ಸ್ಥಳನಾಮಗಳನ್ನು ಇಲ್ಲಿ ಗುರುತಿಸುವುದೇ ಇಲ್ಲಿಯ ಉದ್ದೇಶವಾಗಿದೆ. ಹೈದರಾಬಾದ್ ಕರ್ನಾಟಕದ ಶಾಸನಗಳಲ್ಲಿ ಉಲ್ಲೇಖಗೊಂಡ ಕೆಲವು ಪ್ರಮುಖ ಸ್ಥಳನಾಮಗಳನ್ನು (ಜಿಲ್ಲಾವಾರು) ಈ ಕೆಳಗಿನಂತೆ ಗುರುತಿಸಲಾಗಿದೆ.

### ಬೀದರ ಜಿಲ್ಲೆಯ ಶಾಸನಗಳಲ್ಲಿ ಸ್ಥಳನಾಮಗಳು

ಬೀದರ ಜಿಲ್ಲೆಯ ಶಾಸನಸಂಪುಟದಲ್ಲಿ ಸುಮಾರು ೧೨೭ ಸ್ಥಳನಾಮಗಳು ಶಾಸನಗಳಲ್ಲಿ ಉಲ್ಲೇಖವಾಗಿವೆ. ಇಲ್ಲಿ ಈ ಎಲ್ಲ ಸ್ಥಳಗಳು ವಿಶಿಷ್ಟವೂ ವೈವಿಧ್ಯಮಯವೂ ಆಗಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸುವೆ. ಆಂಧ್ರ (೧೨೦), ಆದಿಕಲ್ಯಾಣ>ಬಸವಕಲ್ಯಾಣ (೪೦), ಕಲ್ಯಾಣ> ಬಸವಕಲ್ಯಾಣ (೪೯), ಕಲ್ಯಾಣಕೋಟೆ (೪೩,೧೦೦), ಕಲ್ಯಾಣ ನಗರ (೩೪), ಕಲ್ಯಾಣ ಪಟ್ಟಣ (೪೭,೫೨), ಕಲ್ಯಾಣಸೀಮೆ (೫೦), ಆದಿಕಲ್ಯಾಣವೆಂಬ ಹೆಸರು ಮಂಟೇಸ್ವಾಮಿ ಕಾವ್ಯದಲ್ಲಿಯೂ ಉಲ್ಲೇಖಗೊಂಡಿದೆ. ಆದ್ದರಿಂದ ಹಿಂದಿನ ಬಿಜ್ಜಳನ ರಾಜಧಾನಿ ಕಲ್ಯಾಣವೇ ಕಲ್ಯಾಣ, ಆದಿಕಲ್ಯಾಣ, ಕಲ್ಯಾಣಕೋಟೆ, ಕಲ್ಯಾಣನಗರ, ಕಲ್ಯಾಣಪಟ್ಟಣವೆಂದು ಶಾಸನಗಳಲ್ಲಿ ಉಲ್ಲೇಖವಾಗಿದೆ. "ಕಲ್ಯಾಣ ಅಥವಾ ಜಯನ್ತೀಪುರದ ನೆಲೆವೀಡು" ಎಂದು ಶಾಸನಗಳಲ್ಲಿ ಉಲ್ಲೇಖವಾಗಿರುವುದು ನೋಡಿದರೆ, ಕಲ್ಯಾಣವನ್ನು ಹಿಂದೆ ಜಯಂತೀಪುರವೆಂದು ಕರೆಯಲಾಗುತ್ತಿತ್ತು ಅನ್ನುವುದು ತಿಳಿದು ಬರುತ್ತದೆ. ಉದೆಯಗಿರಿ > ಉದ್ಗೀರ್(೧೦೩), ಇಂದು ಈ ಊರು ಮಹಾರಾಷ್ಟ್ರದಲ್ಲಿದೆ. ಕಂಬಟಾಣ > ಕಂಮ್ಮಟಾಣ (೧೭೬), ಕಲುಂಬರಗೆ > ಕಲಬುರ್ಗಿ (೨೯),) ಗುರುಕುಂಟೆ > ಕುರುಕುಂಟಾ (೧೭೬), ಜಫರಬಾದ್ > ಜಹೀರಾಬಾದ್ (೧೩೭), ಜಲಶಿವ > ಜಲಸಂಗ್ವಿ (೫೪), ಸಿರಿಸಿಗೆ > ಸಿರ್ಸಿ (೧೭೨), ಸೇಡಿಂಬ > ಸೇಡಂ (೩೦), ಹಳ್ಳಿಖೇಡ (೫), ಭಲ್ಲುಂಕೆ > ಭಾಲ್ಕಿ (೯೪, ೯೫, ೧೦೭), ಭಲ್ಲುಂಕೆ ಎಂಭತ್ತುನಾಲ್ಕು (೬೫) ಹಿಂದೆ ಭಾಲ್ಕಿಯು ಆಡಳಿತ ವಿಭಾಗವಾಗಿತ್ತು. ಮನ್ನೆಯಕೆರೆ > ಮನ್ನಾಎಖೇಡ, ಮಳೆಯಖೇಡ > ಮಳಖೇಡ (೩೦), ಗಾಹಣ್ಣನಕೇರಿ > ಹೊನ್ನಕೇರಿ ಈ ಮುಂತಾದ ಸ್ಥಳನಾಮಗಳು ಅಲ್ಪ ಸ್ವಲ್ಪ ಪರವರ್ತಿತ ರೂಪದಲ್ಲಿ ಈಗ ಬಳಕೆಯಲ್ಲಿವೆ.

---

* ಮುಖ್ಯಸ್ಥರು, ಕನ್ನಡ ವಿಭಾಗ, ಉಸ್ಮಾನಿಯಾ ವಿಶ್ವವಿದ್ಯಾಲಯ, ಹೈದರಾಬಾದ್.

## ಕಲಬುರ್ಗಿ ಜಿಲ್ಲೆಯ ಶಾಸನಗಳಲ್ಲಿ ಸ್ಥಳನಾಮಗಳು

ಕಲಬುರ್ಗಿಯ ಜಿಲ್ಲೆಯ ಶಾಸನೋಕ್ತವಾದ ಕೆಲವು ಸ್ಥಳನಾಮಗಳನ್ನು ಇಲ್ಲಿ ಉದಾಹರಿಸಲಾಗಿದೆ.

ಅಲಂದೆ ಸಾಸಿರ (ಪು.೨೯, ೩೦, ಅಲಂದೆ ಶಾಸನ-೧೦೮೨), ಅಲಂದೆವೆಡಂಗಂ, ಅಲಂದೆನಾಡು (ಪು.೬೦. ಹುಣಸೀ ಹಡಗಲಿ ಶಾಸನ-೧೦೯೯), ಅಲಂದೆ ಸಾಸಿರ (ಪು.೧೭೮, ಕೀರಣಗಿ ಶಾಸನ-೧೧೫೮), ಅವರವಾದಿ > ಅವರಾದಿ (ಪು.೭೧.ಕೆಲ್ಲೂರ ಶಾಸನ-೧೧೦೭), ಅತ್ತಿನೂರೆಂಬತ್ತು (ಅತನೂರು) (ಪು.೧೮೬, ಚಿಮಳ್ಳಿ ಶಾಸನ-೧೧೬೭), ಆನೆಮಗೆರೆ (ಪು.೧೧೬, ಹಂದರಕಿ ಶಾಸನ-೧೧೧೯) ಇಂದು ಆಣೆಗೇರಿ ಎಂದು ಕರೆಯಲಾಗುತ್ತಿದೆ. ಇಟ್ಟಿಗೆ, ಮಹಾಗ್ರಹಾರವಿಟ್ಟಿಗೆಯೆಸೆಗುಂ (ಪು. ೯೫. ಇಟ್ಟಿಗಿ ಶಾಸನ-೧೧೦೮) ಇಟ್ಟಿಗೆ ಎಂದರೆ ಕಾಜಿವಾರದ ಮರ, ಅಲ್ಲದೆ ಈಟಿ, ಶಲ್ಯ, ಯಾಗ, ಯಜ್ಞ ಅನ್ನುವ ಅರ್ಥಗಳೂ ಇವೆ. ಇಟ್ಟಿಗೆ ಮಹಾಗ್ರಹಾರವಾಗಿತ್ತು. ಅಂದರೆ ಅಲ್ಲಿ ಯಜ್ಞ-ಯಾಗಗಳು ನಡೆಯುತ್ತಿದ್ದವು. ಹಿಂದಿನ ಇಟ್ಟಿಗೆ ಇಂದೂ ಅದೇ ಹೆಸರಿನಿಂದ ಗುರುತಿಸಲ್ಪಡುತ್ತಿದೆ. ಎಂಮ್ಮವಾಡಿಗೆ > ಎಮ್ಮಡಿಗೆ > ಎಮ್ಮಡಿಗಿ, ಎಂಮವಾಡಿಗೆ ಪು. ೨೩, ಎಮ್ಮಡಿಗಿ ಶಾಸನ-೧೧೮೪), ಎಂವಾಡಿಗೆಯ ಪ್ರಭುಗಳು (ಅದೇ) ಎಮ್ಮಡಿಗೆ ಈ ಊರು ಸುರಪುರ ತಾಲೂಕಿನಲ್ಲಿದ್ದು, ಹಿಂದೆ ಶಾಸನೋಕ್ತವಾದಂತೆ ಕಾಲಾನುಕ್ರಮದಲ್ಲಿ ಕೆಲವು ಅಕ್ಷರಗಳ ಪಲ್ಲಟವಾಗಿವೆ. ಎಮ್ಮಡಿಗೆ ಎಂದು ಇಂದು ಅದರ ಹೆಸರು ಚಾಲ್ತಿಯಲ್ಲಿದೆ. ಎಮ್ಮಡಿಗೆ ಪ್ರಭುದೇವ ಈ ಊರಿನ ಬಹು ಮಹತ್ವದ ತತ್ವಪದಕಾರ. ಸಂತ ಈ ಪ್ರಭುದೇವನಿಂದ ಎಮ್ಮಡಿಗೆ ಇವತ್ತಿಗೂ ಪ್ರಸಿದ್ಧಿ ಹೊಂದಿದೆ. ಎಳಮಲೆ (ಪು.೨೫, ಐವೂರ ಶಾಸನ-೧೦೭೮) ಎಳಮಲೆ ಅನ್ನುವ ಹೆಸರೆ ಇಂದು ಪ್ರಚಲಿತವಿದೆ. ಎಳರಾಮೆ > ಎಡರಾಮಿ > ಎಡ್ರಾಮಿ > ಯಡ್ರಾಮಿ, ಜನ್ನದಬಾವಿಯ (ಎಡರಾವೆ) (ಪು. ೫೬, ಯಡ್ರಾಮಿ ಶಾಸನ-೧೦೯೫), ಎಳರಾವೆಯ (ಪು.೧೦೪, ಯಡ್ರಾಮಿ ಶಾಸನ-೧೧೧೧) ಐಹೂರು < ಬಹುತೇಕವಾಗಿ ಪ್ > ಹ್ ಆಗಿ (ಪುರ>ಹುರ) ಅನಂತರ ಹ್ > ವ್ ಪ್ರಕ್ರಿಯೆಯಿಂದ ಐವೂರ ಎಂದೀಗ ಉಚ್ಚಾರಣೆಗೊಳ್ಳುವುದನ್ನು ಗಮನಿಸಬಹುದು.(ಪು.೨೦), ಐಹೂರ (ಪು. ೨೫. ಐವೂರ ಶಾಸನ-೧೦೭೮), ಯೇವೂರ (ಪು. ೮೨, ಐವೂರ ಶಾಸನ-೧೧೦೬). "ಚಂತಾನ ಐವೂರ ಸಂಜಾದಮ್ಯಾಲ ಯಾವೂರ" ಅನ್ನುವ ಜನಪದರ ಮಾತೊಂದಿದೆ. ಅಂದರೆ ನಿರವಯಲಾದ ಈ ಊರಿನ ಪ್ರದೇಶದಲ್ಲಿ ಹಿಂದೆ ಕಾಲ್ನಡಿಗೆಯಿಂದ ಸಂಚರಿಸುವಾಗ ಅಲ್ಲಿ ಕಳ್ಳತನ ನಡೆಯುತ್ತಿರಬಹುದೆಂದು ಈ ಮೇಲಿನ ಮಾತಿನಿಂದ ಊಹಿಸಿಕೊಳ್ಳಬಹುದಾಗಿದೆ. ಶ್ರೀಮನ್ಮಹಾ ರಾಜಧಾನಿ ಕೆಂಭಾವಿ (ಪು.೭, ಕೆಂಭಾವಿ ಶಾಸನ-೧೦೫೩), ಕೆಂಭಾವಿ (ಪು. ೧೯. ಬೈಚಬಾಳ ಶಾಸನ-೧೦೭೬), ಕೆಂಭಾವಿ (ಪು. ೫೬. ಯಡ್ರಾಮಿ ಶಾಸನ-೧೦೯೫), ಕಂಬಾವಿ (ಪು.೭೧, ಕೆಲ್ಲೂರ ಶಾಸನ-೧೧೦೭),ಈ ಶಾಸನವೊಂದರಲ್ಲಿ ಮಾತ್ರ ಕಂಬಾಯಲಯ ಎಂದಿದೆ. ಉಳಿದ ಬಹಳಷ್ಟು ಶಾಸನಗಳಲ್ಲಿ ಕೆಂಭಾವಿಯೆಂದೇ ಉಕ್ತವಾಗಿದೆ. ಇಂದಿಗೂ ಆ ಹೆಸರೆ ಉಳಿದು ಬಂದಿದೆ. ಹಿಂದೆ ಕೆಂಭಾವಿಯು ಚಂದಿಮರಸನ ರಾಜಧಾನಿಯಾಗಿತ್ತೆಂಬುದು ಶಾಸನದಿಂದಲೇ ತಿಳಿದು ಬರುತ್ತದೆ. ಕನ್ನೂರನಾಡ ರಾಜಧಾನಿ (ಕೊಳೂ)ರ (ಪು. ೭. ನಾಗಾಯಿಶಾಸನ-೧೦೫೮), ಕೆಲವೂರ > ಕೆಲ್ಲೂರು, ಕೆಲವೂರಾ (ಪು. ೭೧. ಕೆಲ್ಲೂರ ಶಾಸನ-೧೧೦೭), ಕಾಳುಗೆ > ಕಾಳಿಗೆ > ಕಾಳ್ಗಿ, ಕಾಳುಗೆ (ಪು. ೭೫. ಕಾಳಿಗಿ ಶಾಸನ-೧೧೦೩), ರಾಜಧಾನಿ ಕಾಳುಗೆ (ಕಾಳಿಗಿ) (ಪು.೧೮೫, ಕಾಳಿಗಿ ಶಾಸನ-೧೧೬೩), ಗೊಂಕರಸ ಏಂನೆಯ ದಂಡನಾಥ ರಾಜಧಾನಿ ಕಾಳುಗೆ (ಪು.೨೦. ಕಾಳಗಿ ಶಾಸನ-೧೧೭೩), ಕುಣಿಲಂಗೇರಿಯ ಹಂಪ ಕವಿಯ (ಕುಳಗೇರಿ) (ಪು. ೭೯. ಕುಳಗೇರಿ ಶಾಸನ-೧೧೦೫), ಕುಕ್ಕನೂರು ೨ (ಪು.೧೦೧, ಇಟ್ಟಿಗಿ ಶಾಸನ-೧೧೦೮), ಕುಕ್ಕನೂರ (ಪು.೨೦೬, ಇಟ್ಟಿಗಿ ಶಾಸನ-೧೧೭೮), ಕೊಪ್ಪಣ (ಪು.೯೫, ಹರಸೂರು ಶಾಸನ-೧೧೭೨), ಕರಡಿಕಲ್ಕೂಡಲಿಗೆಯಿಂ (ಪು.೭, ಕೆಂಭಾವಿ ಶಾಸನ-೧೦೫೩) = ಕರಡಿಕಲ್ > ಕಡಕಲ್, ಕೂಡಡಲಿಗೆ > ಕೂಡಲಿಗಿ, ಮಹಾನದಿ ಭೀಮರಥಿಯ ತಡಿಯ ಕವಿಟಗೆಯ (ಪು. ೪೧, ಬಸವಪಟ್ಟಣ ಶಾಸನ-೧೦೮೮), ಕಕ್ಕಸಗೆರೆ (ಪು.೧೬೩, ಗೊಬ್ಬೂರ ಶಾಸನ-೧೧೪೨), ಕವಿಲಿಗೆಯ ಸೆಟ್ಟಿ (ಪು.೧೮೮, ಚಿನಮಳ್ಳಿ ಶಾಸನ), ಕಲಂಬರಿಗೆ ನೃಪ (ಪು.೧೮೮, ಚಿನಮಳ್ಳಿ ಶಾಸನ), ಕಜ್ಜಿಗನೂರು (ಪು. ೧೯. ಬೈಚಬಾಳ ಶಾಸನ-೧೦೭೬). ಜೋಳದಾವೆವಾಡ > ಜೋಳದಾಡ (ಪು. ೬೮. ಚಿಕ್ಕಮುದನೂರು ಶಾಸನ-೧೧೦೦), ದಿಗ್ಗುಗೆ (ಪು. ೧೦, ದಿಗ್ಗಾವಿ ಶಾಸನ-೧೦೫೪), ಶ್ರೀಮದಗ್ರಹಾರಂ ದಿಗ್ಗುವಿಗೆಯಂ ಪರಮೇಶ್ವರ ದತ್ತಿಯುಂ ಯಿಶ್ವರ ದತ್ತಿಯಾಗಿ ಪಡೆದು.. (ಪು.೧೧, ದಿಗ್ಗಾವಿ ಶಾಸನ-೧೦೫೪), ದಿಗ್ಗುವಾವೀ (ಅದೇ ಪು., ಶಾಸನ), ಶ್ರೀಮತ್ ಸರ್ವನಮಸ್ಯದಗ್ರಹಾರಂ ದಿಗ್ಗುವಿಗೆಯ ಶೇಷ ಮಹಾಜಣಗಳು. (ಪು.೧೨, ಅದೇ), ದಿಗ್ಗುವಿಗೆ (ಪು೧೩. ಅದೇ),

ದಿಗ್ಗವಿಗೆಯ > ದಿಗ್ಗಾಂವ (ಪು೧೬. ಅದೇ), ಮಹಾಗ್ರಹಾರಂ ನಾಗವಾಪಿಯೊಳನೇಕ(ಪು. ೧೫. ನಾಗಾಯಿ ಶಾಸನ-೧೦೫೮), ನರಿಯುಂಬೊಳೆಳ್ಪತ್ತರ > ನರಬೋಳ (ಪು.೨೫,ಏವೂರ ಶಾಸನ೧೦೭೮), ಕಿರಿಯ ಬೆಳ್ಳುಂಬಟ್ಟೆ (ಪು. ೨೫, ಏವೂರ ಶಾಸನ-೧೦೭೮), ಪಿರಿಯ ಬೆಳ್ಳುಂಬಟ್ಟೆ (ಪು. ೨೫, ಏವೂರ ಶಾಸನ-೧೦೭೮), ಯಳಿಮೇಲ (ಪು. ೧೮, ವಡಿಗೇರಿ ಶಾಸನ-೧೦೭೬), ವಡಗೇರಿ (ಪು. ೧೮, ವಡಗೇರಿ ಶಾಸನ-೧೦೭೬), ಶಿವಪುರ (ಪು. ೨೫), ಸಗರ ಮುನ್ನೂರು (ಪು. ೨೫, ಏವೂರ ಶಾಸನ-೧೦೭೮).

**ರಾಯಚೂರು ಜಿಲ್ಲೆಯ ಶಾಸನಗಳಲ್ಲಿ ಸ್ಥಳನಾಮಗಳು**

ರಾಯಚೂರು ಜಿಲ್ಲೆಯ ಶಾಸನಗಳಲ್ಲಿ ಸ್ಥಳನಾಮಗಳು ಸುಮಾರು ೩೬೮ ಇವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉಲ್ಲೇಖಿಸುವೆ.

ಅತನೂರು > ಆತನೂರು (೨೯೨), ಆದವನಿ<ಆದೋನಿ (೩೦), ಆನೆಗುಂಡಿ (೩೭೮), ಆನೆಗೊಂದಿ > ಆನೆಗುಂದಿ (೩೭೦). ಏತಗಿರಿ < ಯಾತಗಿರಿ > ಯಾದಗಿರಿ (೩೦೯), ಕಕ್ಕಸಗೆರೆ > ಕಕ್ಕಗೇರಿ (೬೯), ಕರಡಿಕಲ್ಲು (೬,೧೨೦), ಬಹುಶಃ ಹಿಂದೆ ಈ ಪ್ರದೇಶದಲ್ಲಿ ಕರಡಿಗಳು ಹೆಚ್ಚಾಗಿದ್ದಿರಬಹುದು. ಇಲ್ಲವೆ ಸುತ್ತಲು ಕಲ್ಲು-ಗುಡ್ಡದಿಂದ ಆವರಿಸಿರುವ ಸ್ಥಳದಲ್ಲಿ ಸಹಜವಾಗಿ ಕರಡಿಗಳು ವಾಸವಾಗಿರುತ್ತಿರಬೇಕು. ಆದ್ದರಿಂದ ಕರಡಿಕಲ್ಲು ಎಂದು ಕರೆಯಲ್ಪಟ್ಟಿದೆ. ಕರಡಿಕಲ್ಮೂನೂರು [ಆ.ವಿ] (೧೨೪, ೧೩೯), ಇದು ಹಿಂದೆ ಆಡಳಿ ವಿಭಾಗವಾಗಿತ್ತು. ಕಲುಕೆರೆ > ಕಲಕೇರಿ (೩೯೨), ಕಲುಮಲೆ > ಕಲ್ಮಲ(೩೨), ಕುಪವಣ > ಕೊಪಣ > ಕೊಪ್ಪಳ (೩೭೦), ಗದಗು > ಗದಗ (೨೭೩), ಗೊಬ್ಬೂರು (೩೬೦, ೩೬೫). ಚಿಕಲಪರವಿ (೨೪೩), ದೇವದುರ್ಗ(೧೧೪,೧೧೭), ಬೆಳ್ಳರೆ > ಬಳ್ಳಾರಿ(೩೬೫), ಮಾನುವೆ (೨೨೮, ೨೪೧೦), ಮಾನುವ ಪಟ್ಟಣ > ಮಾನವಿ > ಮಾನ್ವಿ (೨೩೪), ಮಾರ್ಲದಿಂನೆ > ಮಾರ್ಲದಿನ್ನೆ (೧೮೦), ಯಿಭರಮುಪುರ > ಇಬ್ರಾಹಿಂಪುರ (೧೫೫, ೧೫೬), ಯೆಂಮೆಗನೂರು > ಎಮ್ಮೆಗನೂರು (೩೮೪), ಯೆಡಯಪಳ್ಳಿ > ಯೆಡಹಳ್ಳಿ (೩೮೧), ರಾಚೂರ ವಿಲಾಯತಿ (೨೫೪), ರಾಚೂರ ಸೀಮೆ (೩೮, ೪೦), ರಾಚೂರು ಸೀಮೆ (೨೩೨,೨೩), ರಾಯಚೂರಿ ಪಟ್ಟಣ (೩೦), ರಾಯಿಚೂರು > ರಾಯಚೂರು ಎಂದಾಗಿದೆ. ಸುರಪುರ (೧೧೫) ಇದು ಹಿಂದೆ ಬೇಡರ ರಾಜ್ಯವಾಗಿತ್ತು. ಶೂರರಪುರ, ದೇವತೆಗಳ ನೆಲೆವೀಡು ಎಂಬ ಅರ್ಥವನ್ನು ಹೊಂದಿರುವ ಸುರುಪುರ ಅನ್ನುವ ಹೆಸರೇ ಇವತ್ತಿಗೂ ಅದೆ ಇದೆ. ಹಾವಿನಹಾಳು > ಹಾವಿನಾಳು (೭೦), ಹುಣಸೆಕೆರೆ > ಹುಣಸಗಿ (೧೫), ಹೆಬ್ಬಾಳ (೩೩೭), ಚಿಕ್ಕಹೆಬ್ಬಾಳ, ಹಿರಿಹೆಬ್ಬಾಳ, ಪರಮಾನಂದ ಹೆಬ್ಬಾಳವೆಂದು ಅನೇಕ ಸ್ಥಳಗಳ ಏಕನಾಮವೂ ಇದೆ.

**ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಸ್ಥಳನಾಮಗಳು**

ಕೊಪ್ಪಳವು ಈ ಹಿಂದೆ ರಾಯಚೂರು ಜಿಲ್ಲೆಯಲ್ಲಿ ತಾಲೂಕು ಪಟ್ಟಣವಾಗಿತ್ತು. ಈಗ ಜಿಲ್ಲೆಯಾಗಿ ಮಾರ್ಪಟ್ಟಿದೆ. ಈ ಜಿಲ್ಲೆಯ ಶಾಸನ ಸಂಪುಟದಲ್ಲಿ ಸುಮಾರ ೪೨೧ ಕ್ಕಿಂತ ಹೆಚ್ಚು ಸ್ಥಳನಾಮಗಳ ದಾಖಲೆ ಸಿಗುತ್ತದೆ. ಅವುಗಳಲ್ಲಿಯ ಕೆಲವನ್ನು ಇಲ್ಲಿ ಕೊಡಲಾಗಿದೆ.

ಅಗ್ರಹಾರ ಸಿಂದನೂರು > ಸಿಂಧನೂರು (೨೬೯), ಅಣ್ನಿಗೆರೆ > ಅಣ್ಣಿಗೆರೆ (೬೬, ೧೦೪), ಆನಗುಂದಿ (೩೩೯), ಆನೆಗು(ಗೊ)ಂದಿ > ಆನೆಗುಂದಿ (೧೫೯, ೩೩೯). ಆನೆಗೊಂದಿ ಸಂಸ್ತಾನ[ಆ.ವಿ] (೩೩೪೧), ಆನೆಗುಂದಿಯು ಹಿಂದೆ ಸಂಸ್ಥಾನವಾಗಿತ್ತು. ಇದು ಮೊದಲು ಆನೆಗಳು ವಾಸಿಸುವ ಕಾಡಾಗಿರಬೇಕು ಇಲ್ಲವೆ ಆನೆಗಳನ್ನು ಪಳಗಿಸುವ ಸ್ಥಳವಾಗಿರಬೇಕು ಎಂದು ಊಹಿಸಬಹುದಾಗಿದೆ. ಎಡೆಯಹಳ್ಳಿ (೯, ೨೦೮), ಎಡೆಹಳ್ಳಿ (೨೦೮), > ಯಡಹಳ್ಳಿ ಆಗಿದೆ. ಕಂಪಪುರ (೨೨೫), ಕಂಪಣ (೨೮೦), ಕಂಪಲಿ (೨೯೦), ಕಂಪಿಲೆ (೩೧೪, ೩೧೬), ಈ ಹೆಸರುಗಳನ್ನು ಗಮನಿಸಿದಾಗ ಹೊಸಮಲೆ ದುರ್ಗದ ಅರಸ ಕಂಪಣನಾಗಿದ್ದ. ಕುಮಾರರಾಮ ಸಾಂಗತ್ಯದ ನಾಯಕ ಕುಮಾರ ರಾಮನ ತಂದೆಯೆ ಕಂಪಣ. ಕಂಪಪುರ, ಕಂಪಣ, ಕಂಪಲಿ, ಕಂಪಲೆ > ಕಂಪ್ಲಿ ಇವು ಅರಸನ ನೆನಪಿಗಾಗಿ ಇಟ್ಟ ಸ್ಥಳದ ಹೆಸರುಗಳಾಗಿರಬೇಕು! ಕುಕ್ಕನೂರು (೧೯೫, ೨೦೩, ೨೦೮, ೨೦೯, ೨೧೩), ಕುಕ್ಕನೂರು ಹಿಂದೆ ಮಹಾಗ್ರಹಾರವಾಗಿದ್ದ ಸಂಗತಿ ಶಾಸನಗಳಿಂದ ತಿಳಿದು ಬರುತ್ತದೆ. ಅಂದಿನಿಂದ ಇಂದಿಗೂ ಕುಕ್ಕನೂರು ಎಂದೇ ಉಳಿದುಕೊಂಡುಬಂದಿದೆ. ಕುಷ್ಟಗಿ(೧೭೧), ಕುಸ್ಟಿಗಿಯ ಸೀಮೆ ಆಡಳಿದ ವಿಭಾಗ (೧೩೧), ಇಂದು ಅದೇ ಹೆಸರಿನಿಂದ ಕರೆಯಲ್ಪಡುತ್ತದೆ. ಕೊಪಣ(೩೦,೪೩,೪೪)

ಕೊಪಣತೀರ್ಥ(೧೬೨), ಕೊಪಣನಾಡು ಆಡಳಿತ ವಿಭಾಗ (೧೩೧), ಕೊಪಣವೇಂಟೆ > ಕೊಪಣಪೇಟೆಯಾಗಿರಬೇಕು ಆಡಳಿತ ವಿಭಾಗವಾಗಿತ್ತು. ಕೊಪ್ಪಲ(೨೦೨) ಲ ಕಾರವು ಳ ಕಾರವಾಗಿ ಇಂದು ಕೊಪ್ಪಳ ವೆಂದು ಗುರುತಿಸುವ ಪಟ್ಟಣವಾಗಿದೆ. ಕೋಳಿವಾಡ (೬೬), ಇದು ಗದುಗಿನ ನಾರಾಯಣಪ್ಪನ ಜನ್ಮ ಸ್ಥಳವೆಂದು ತಿಳಿದು ಬರುತ್ತದೆ. ಪಂಪಾಸ್ಥಳ (೨೬೬), ಪಂಪೆಯ ಬೀಡು (೨೫೪), ಪಂಪಾಸ್ಥಾನ (೭೯೭) ಹಳಗನ್ನಡದ ಪ ಕಾರಕ್ಕೆ ಹ ಕಾರವಾಗಿ ಬಳಕೆಯಾಗುವುದು ಭಾಷೆಯ ಸಹಜ ಪ್ರಕ್ರಿಯೆಯಾಗಿದೆ. ಆದ್ದರಿಂದ ಪಂಪೆ > ಹಂಪೆಯಾಗಿದೆ. ಬಳ[ಳ್ಳ]ಗೆರೆ (೧೭೫,೧೯೫), ಬಳ್ಳಂಗೆರೆ (೧೭೫), ೧೯೫,೨೦೮,೨೧೩), ಬಳ್ಳಂಗೆರೆಯ ಸೀಮೆ (೧೭೨), ಬಳಾರಿಯಕೆಯ ಸೀಮೆ (೧೭೭), ಬಳಿಗೇರೆ (೨೨೧), ಬಳ್ಳಿಗೆರೆ (೧೬೯), > ಬಳ್ಳಾರಿಯಾಗಿದೆ. ಮನ್ನಖೇಟ > ಮಾನ್ಯಖೇಟ > ಮಳಖೇಡ ಎಂದಾಗಿದೆ. ಹಿಂದೆ ಮಾನ್ಯಖೇಟವು ರಾಷ್ಟ್ರಕೂಟರ ರಾಜಧಾನಿಯಾಗಿತ್ತು. ಮಯಿಲಾಪುರ > ಮೈಲಾಪುರ ಆಗಿದೆ. ಯಲಬರ್ಗೆ (೧೬೨), ಯಲಬರಿಗೆ (೩೭೮), ಯಲಬರಿಗೆಯ ಸೀಮೆ ಆಡಳಿತ ವಿಭಾಗವಾಗಿತ್ತು. (೩೮೦), ಇಂದು ಯಲಬರ್ಗಾವೆಂದು ಕರೆಯಲಾಗುತ್ತದೆ.

ಈ ಮೇಲೆ ನಾಲ್ಕು ಜಿಲ್ಲೆಗಳಲ್ಲಿಯ ಕೆಲವು ಸ್ಥಳನಾಮಗಳನ್ನು ಮಾತ್ರ ನನ್ನ ಪರಿಮಿತ ತಿಳುವಳಿಕೆಯಲ್ಲಿ ಅವುಗಳಿಗೆ ವಿವರ ಕೊಡಲಾಗಿದೆ. ಶಾಸನಗಳಲ್ಲಿ ಉಲ್ಲೇಖಗೊಂಡ ಊರುಗಳನ್ನು ಐತಿಹಾಸಿಕ, ಸಮಾಜಿಕ, ಸಾಂಸ್ಕೃತಿಕ, ರಾಜಕೀಯ ಈ ಮುಂತಾದ ಅಂಶಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಇಂದು ಅವಶ್ಯವಿದೆ. ಈ ಊರುಗಳಿಗೆ ಬಂದ ಹೆಸರುಗಳನ್ನು ಇನ್ನೂ ಖಚಿತವಾಗಿ ತಿಳಿಯಲು ಕ್ಷೇತ್ರಕಾರ್ಯದ ಜರೂರಿ ಇದೆ. ಆದರೆ ಇಲ್ಲಿ ಕೇವಲ ಶಾಸನೋಕ್ತ ಸ್ಥಳಗಳನ್ನು ಹೆಸರಿಸಲಾಗಿದೆ. ಶಾಸನಗಳಲ್ಲಿ ಉಕ್ತವಾದ ಸ್ಥಳಗಳು ಅಂದಿನ ಕಾಲದಲ್ಲಿ ಅವು ರಾಜಧಾನ, ಆಡಳಿತ ವಿಭಾಗಗಳಾಗಿ, ಅಗ್ರಹಾರಗಳಾಗಿ, ಘಟಿಕಾಲಯಗಳಾಗಿ, ಬ್ರಹ್ಮಪುರಿಗಳಾಗಿ, ಶಿವಪುರಿಗಳಾಗಿ, ಆಡಳಿತ ವಲಯಗಳಾಗಿ, ಸಾಮಾನ್ಯ ಗ್ರಾಮವಾಗಿರುವ ಸಂಗತಿಯನ್ನು ಶಾಸನಗಳು ತಿಳಿಸುತ್ತವೆ. ಗ್ರಾಮಗಳನ್ನು ದತ್ತಿಯಾಗಿ ಬಿಡುವಾಗ, ದತ್ತಿಯಾಗಿ ಕೊಟ್ಟ ಭೂಮಿಯನ್ನು ಗುರುತಿಸಲು ಸ್ಥಳಗಳನ್ನು ಹೆಸರಿಸಿರುವುದಿದೆ. ಹೈದರಾಬಾದ್ ಕರ್ನಾಟಕದ ಶಾಸನಗಳಲ್ಲಿ ದಾಖಲೆಯಾಗಿರುವ ಸ್ಥಳಗಳೆಲ್ಲವು ಹತ್ತು-ಹಲವು ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ. ಶಾಸನಗಳಲ್ಲಿ ದಾಖಲಾಗಿರುವ ಸ್ಥಳಗಳನ್ನು ಕುರಿತು ಅನೇಕ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲು ಅವಕಾಶವಿದೆ. ಇದರಿಂದ ನಮ್ಮ ಊರುಗಳ ಪ್ರಾಚೀನತೆ, ಸಾಂಸ್ಕೃತಿಕ ಪರಂಪರೆ, ಚಾರಿತ್ರಿಕ ಮಹತ್ವ, ಈ ಮುಂತಾದ ವಿಷಯಗಳನ್ನು ಕಟ್ಟಿಕೊಳ್ಳಲು ಸಾಧ್ಯವಾಗುತ್ತದೆ.

## ಆಧಾರ ಸೂಚಿ


೧. **ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು,** (ಸಂ) ಡಾ॥ ವಿ.ಶಿವಾನಂದ, ಕನ್ನಡ ಪೀಠ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨.

೨. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ:** ೮, ಬೀದರ ಜಿಲ್ಲೆ, (ಪ್ರ. ಸಂ) ಡಾ॥ ದೇವರಕೊಂಡಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೩. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ:** ೭, ರಾಯಚೂರು ಜಿಲ್ಲೆ, (ಸಂ) ಡಾ॥ ದೇವರಕೊಂಡಾರೆಡ್ಡಿ ಹಾಗೂ ಇತರರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೪. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ:** ೨, ಕೊಪ್ಪಳ ಜಿಲ್ಲೆ, (ಸಂ) ಡಾ॥ ದೇವರಕೊಂಡಾರೆಡ್ಡಿ ಹಾಗೂ ಇತರರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೫. **ಶಾಸನ ಸಂಗ್ರಹ** (ಸಂ) ಎ.ಎಂ.ಅಣ್ಣಿಗೇರಿ, ಆರ್.ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩.

# ತುಳುನಾಡಿನ ಶಾಸನಗಳಲ್ಲಿ ಮಹಿಳೆ

– ಡಾ॥ ಇಂದಿರಾ ಹೆಗ್ಗಡೆ*

**ತು**ಳುನಾಡಿನ ಶಾಸನಗಳಲ್ಲಿ ಮಹಿಳೆ ಪಟ್ಟದ ಪಿರಿಯರಸಿಯಾಗಿ, ಆಳುವ ರಾಣಿಯಾಗಿ, ಅಧಿಕಾರಿಯಾಗಿ, ಸೇನಬೋವತಿಯಾಗಿ ಕಾರ್ಯನಿರ್ವಹಿಸಿದ ಬಗ್ಗೆ ಉಲ್ಲೇಖಗಳಿವೆ. ಕ್ರಿ.ಶ. ೧೨೬೨ರ ಶಾಸನದಲ್ಲಿ 'ಯಧಿಕಾರಿತಿ ನಾಚಿ'ಯ ಉಲ್ಲೇಖವಿದೆ.[೧] ಬಂಗವಾಡಿಯ ಕಾಮಿರಾಯ ಬಂಗರಸನ ಕ್ರಿ.ಶ. ೧೪೧೬ರ ಶಾಸನದಲ್ಲಿ 'ಸೇನಬೋಯತ್ತಿ ದೇವಕ್ಕ ಸೆಟ್ಟಿತಿ'ಯ ಉಲ್ಲೇಖ ಬರುತ್ತದೆ.[೨] ಕ್ರಿ.ಶ. ೧೫೧೩ರ ಬೈಂದೂರಿನ ಶಾಸನದಲ್ಲೂ ಸೇನಬೋವಯಿತಿಯ ಉಲ್ಲೇಖ ಬರುತ್ತದೆ.[೩]

**ರಾಣಿಯರು :** ಕ್ರಿ.ಶ. ೧೨೬೧ ಮತ್ತು ೧೨೬೨ರ ಕೋಟೇಶ್ವರದ ಶಾಸನಗಳಲ್ಲಿ ಪಟ್ಟಮಹಾದೇವಿ ಒಡ್ಡೋಲಗದಲ್ಲಿ ಭಾಗಿಯಾಗಿರುವ ಮಾಹಿತಿ ಸಿಗುತ್ತದೆ. ಈ ಶಾಸನಗಳ ಪಾಠದಲ್ಲಿ ಈಕೆಯ ಹೆಸರು ಮೊದಲು ಲಿಖಿತವಾಗಿದ್ದು ಅನಂತರ ಶ್ರೀಮತ್ಪಾಂಡ್ಯ ದೇವಾಳುಪೇಂದ್ರನ ಹೆಸರಿಸಿದೆ.[೪] ಬಲ್ಲಮಹಾದೇವಿಯ ಯಾವುದೇ ಶಾಸನದಲ್ಲಿ 'ಆಳುಪರಾಣಿ ಅಥವಾ ಆಳುಪರಸಿ ಬಲ್ಲಮಹಾದೇವಿ' ಎಂಬ ಶಾಸನ ಪಾಠ ಇಲ್ಲ. ಆದರೆ ಈಕೆ ಒಡ್ಡೋಲಗಗೊಟ್ಟಿರುವ ವಿಚಾರ ಇದೆ. ಕಿಕ್ಕಾಯಿ ತಾಯಿಯನ್ನು 'ಶ್ರೀ ವೀರಬಲ್ಲಾಳ ದೇವರಸರ ಪಟ್ಟದ ಪಿರಿಯರಸಿ ಕಿಕ್ಕಾಯಿ ತಾಯಿ' ಎಂದು ಉಲ್ಲೇಖಿಸುತ್ತದೆ.[೫] ಕ್ರಿ.ಶ. ೧೧೫೫ರ ಶಾಸನವೊಂದು ಆ ಊರನಾಳ್ವ ಪಾಂಡ್ಯಮಹಾದೇವಿಯನ್ನು ಉಲ್ಲೇಖಿಸುತ್ತದೆ.[೬] ಕಿಕ್ಕಾಯಿ ತಾಯಿಯ ಜೊತೆ ಆಕೆಯ ಮಗ ಕುಲಶೇಖರನೂ ಒಡ್ಡೋಲಗದಲ್ಲಿ ಇರುತ್ತಿದ್ದ. ತುಳುನಾಡಿನಲ್ಲಿ ಮಹಿಳೆಗೆ ವಿಧಿವತ್ತಾಗಿ ಪಟ್ಟ ಆಗುವ ಸಂಭವ ಇಲ್ಲ, ಪದ್ಧತಿಯೂ ಇಲ್ಲ. ಕಾರಣ ಇಲ್ಲಿಯ ಸಂಪ್ರದಾಯವು ಪೂರ್ವ ಕಟ್ಟಳೆಯಂತೆ ನಡೆಯುವುದೇ ಹೆಚ್ಚು. ತುಳುನಾಡಿನಲ್ಲಿ ಅನೇಕ ರಾಣಿಯರು ಬರುತ್ತಾರೆ. ಹೊಂನಾದೇವಿ, ಭೈರಾದೇವಿ, ಉಳ್ಳಾಲದ ಅಬ್ಬಕ್ಕ, ಮೂಲರ ರಾಣಿ ಸೋಮಲಾದೇವಿ ಮುಂತಾದವರು. ಇವರೆಲ್ಲ ಆಡಳಿತ ನಡೆಸಿರಬಹುದು. ಆದರೆ ಇವರಾರಿಗೂ ಪಟ್ಟಾಭಿಷೇಕವಾಗಿರಲಾರದು. ತುಳು ಪದ್ಧತಿಯಲ್ಲಿ ಯಾವ ಮಹಿಳೆಯೂ ಅಧಿಕೃತವಾಗಿ ಆಡಳಿತಗಾರಳಾಗುವಂತಿಲ್ಲ. ಆಕೆ ಮಗನ ಪರವಾಗಿ, ಗಂಡನ ಪರವಾಗಿ, ಸೋದರನ ಪರವಾಗಿ ಅಧಿಕಾರ ನಡೆಸುವ ಪದ್ಧತಿ ಮಾತ್ರ ಇದೆ.

**ಪಿರಿಯರಸಿ :** ತುಳುನಾಡಿನ ಕ್ರಿ.ಶ. ೧೨೬೧ರ ಶಾಸನವು ವೀರ ಪಾಂಡ್ಯ ದೇವಾಳುಪೇಂದ್ರನ ತಾಯಿಯನ್ನು ಪಿರಿಯರಸಿ ಪಟ್ಟಮಹಾದೇವಿ ಎನ್ನುತ್ತದೆ. ಆಕೆ ಒಡ್ಡೋಲಗದಲ್ಲಿ ಭಾಗಿಯಾಗಿರುವ ಮಾಹಿತಿ ಈ ಶಾಸನದಲ್ಲಿದೆ.[೭] ಪಟ್ಟ ಮಹಾದೇವಿ ಇಲ್ಲಿ ಪಿರಿಯರಸಿ ಆಗಿರಬೇಕು. ನಾಗದೇವನನ್ನು ಪಿರಿಯರಸಿ ಬಲ್ಲಮಹಾದೇವಿಯ ಪುತ್ರ ಎನ್ನುತ್ತದೆ ಶಾಸನ.[೮] ಕ್ರಿ.ಶ. ೧೪೫೫ರ ಶಾಸನವು, 'ಶ್ರೀ ಚಂದಲದೇವಿಯರ ಕುಮಾರ ಅರಿರಾಯ ಗಂಡರಧಾವಣಿ ಶ್ರೀ ವೀರ ಪಾಂಡ್ಯಪ್ಪೊಡೆಯರು'[೯] ಎಂದು ಆತನ ತಾಯಿಯನ್ನು ಸ್ಮರಿಸುತ್ತದೆ. ಕಿರಿತಾಯಿಗೂ ಇಲ್ಲಿ ಅಧಿಕಾರ ಇರುತ್ತದೆ. ಕ್ರಿ.ಶ. ೧೫೪೬ರ ಕುಂದಾಪುರ ತಾಲೂಕಿನ ಹಾಡುವಳ್ಳಿ ಶಾಸನದಲ್ಲಿ, '... ಚಿಕ್ಕ ಅರಮನೆಯ ಕಿರಿತಾಯಿ ಬಸವನಾಯಕಿತಿ ಹಾಕಿಸಿದ ಕಲ್ಲು' ಎಂದಿದೆ.[೧೦] 'ಶ್ರೀ ಮದ್ಭೈರವರಾಜ ತುಂಗ ಭಗಿನೀ ಶ್ರೀ ಗುಮ್ಮಟಾಂಬಸುತ...' ಎಂದು ಭೈರವರಾಜನ ಅಳಿಯ ತನ್ನನ್ನು ಕರೆದುಕೊಳ್ಳುತ್ತಾನೆ.[೧೧] 'ಶ್ರೀ ಚಂದಲ ದೇವಿಯರ ಕುಮಾರ ಅರಿರಾಯ ಗಂಡರಧಾವಣಿ ಶ್ರೀ ವೀರ ಪಾಂಡ್ಯಪ್ಪೊಡೆಯರೂ' ಎನ್ನುವಲ್ಲಿಯೂ ತಾಯಿಯೇ ಪ್ರಧಾನಳಾಗುತ್ತಾಳೆ. ಅನೇಕ ಶಾಸನಗಳು ತಾಯಿಯ ಮೂಲಕವೇ ಅರಸನನ್ನು ಹೆಸರಿಸುತ್ತವೆ.

ತುಳುನಾಡಿನಲ್ಲಿ ಹೆಚ್ಚಾಗಿ ಆಸ್ತಿ–ಭೂಮಿ ಮಹಿಳೆಯರ ಹೆಸರಲ್ಲಿ ಇರುತ್ತಿತ್ತು. ತಳಂಗರೆಯ ಜಯಸಿಂಹನ ೧೧ನೆಯ ಶತಮಾನದ ಶಾಸನದಲ್ಲಿ, 'ಜೋಗವ್ವೆ ಹೆಣ್ಣು ಸಂತಾನಕ್ಕೆ ಆಸ್ತಿ ಮುಂದುವರಿಯಬೇಕು; ಹೆಣ್ಣು ಸಂತಾನವಿಲ್ಲದಿದ್ದರೆ ಮಾತ್ರ

---

* ನಂ.೬, ಕೃಷ್ಣಾ ರೆಸಿಡೆನ್ಸಿ, ೪ನೆಯ ತಿರುವು, ಅಮರಜ್ಯೋತಿ ನಗರ, ವಿಜಯನಗರ, ಬೆಂಗಳೂರು–೫೬೦೦೪೦.

ಗಂಡು ಮಕ್ಕಳಿಗೆ ಹೋಗಬಹುದು' ಎಂಬ ಉಲ್ಲೇಖ ಇದೆ.[೧೨] ಯಾರ ಹೆಸರಲ್ಲಿ ಆಸ್ತಿಯ ದಾಖಲೆ ಇರುತ್ತದೆಯೋ ಆಕೆಯನ್ನು ಪಟ್ಟಾದಾರ್ತಿ, ಕುಡ್ತಲೆದಾರ್ತಿ ಎನ್ನುತ್ತಾರೆ. ಪಡು ಅಲೆವೂರಿನ ಶಾಸನದಲ್ಲಿ 'ಪಟ್ಟದ ಭೂಮಿಯ ಮೇಲೆ' ಎಂಬ ಬರಹ ಇದೆ.[೧೩] ಪಟ್ಟದ ಭೂಮಿ ಎಂದರೆ ವರ್ಗದ ಭೂಮಿ, ಸ್ವಂತ ಭೂಮಿ. ಯಾವುದೇ ರೂಪದ ಗೇಣಿಗೆ ಪಡೆದ ಭೂಮಿಯಲ್ಲ. ತುಳುನಾಡಿನಲ್ಲಿ ಇರುವ ಹೆಚ್ಚಿನ ಶಾಸನಗಳು ಭೂಮಿ ದಾನ ನೀಡಿದ ಶಾಸನಗಳು. ಭೂಮಿಯು ಹೆಚ್ಚಾಗಿ ಮಹಿಳೆಯ ಹೆಸರಲ್ಲಿ ಇರುತ್ತಿದ್ದುದರಿಂದ ಮಹಿಳೆಯರು ಇಂತಹ ದಾನ ಶಾಸನಗಳಲ್ಲಿ ಹೆಚ್ಚಾಗಿ ಕಾಣಬರುತ್ತಾರೆ. ಉದಾಹರಣೆಗೆ 'ಶ್ರೀ ಮಹಾ ಮಂಡಲೇಶ್ವರ ಬೊಮ್ಮದೇವಿಯರ ಕುಮಾರ ಇಮ್ಮಡಿ ಬೈರರಸರು....'[೧೪]

**ಮಹಿಳೆ ಮತ್ತು ಉಪನಾಮ**

ಆಳುಪರಾಣಿ ಚಿಕ್ಕಾಯಿಯನ್ನು ಕೆಲವು ಶಾಸನಗಳು ಕಿಕ್ಕಾಯಿ ತಾಯಿಯೆಂದೂ ಇನ್ನು ಕೆಲವು ಶಾಸನಗಳು ಚಿಕ್ಕಾಯಿ ತಾಯಿ[೧೫] ಎಂದೂ ಉಲ್ಲೇಖಿಸುತ್ತವೆ. ತುಳುನಾಡಿನ ಸಂಪ್ರದಾಯದ ಪ್ರಕಾರ ಆಕೆ ಚಿಕ್ಕಾಯಿ ತಾಯಿಯಾಗಬೇಕು.

ತುಳುನಾಡಿನ ರೂಢಿಯಲ್ಲಿ ಮಹಿಳೆಯ ಉಪನಾಮದ ಕೊನೆಯ ಅಕ್ಷರಕ್ಕೆ ಇಕಾರವು ಸೇರ್ಪಡೆಯಾಗುತ್ತದೆ. ಉದಾಹರಣೆಗೆ ಸೆಟ್ಟಿ–ಸೆಡ್ತಿ, ಹೆಗ್ಗಡೆ–ಹೆಗ್ಗಡತಿ, ನಾಯ್ಗ–ನಾಯ್ಗದಿ, ಬಲ್ಲಾಳ–ಬಲ್ಲಾಳ್ತಿ, ಮಾಡ–ಮಾಡೆದಿ... ಹೀಗೆ. ಈಗಲೂ ಹಳೆಯ ತಲೆಮಾರಿನವರು ಇದೇ ರೂಢಿಯನ್ನು ಮುಂದುವರೆಸಿದ್ದಾರೆ. ಶಾಸನಗಳಲ್ಲೂ ಈ ರೂಢಿಯನ್ನು ಕಾಣಬಹುದು. ತಂಗಿ ಅಡಹಿತಿ[೧೬], ಹೆಗ್ಗಡಿತಿ[೧೭], ಮಾರಾಳ್ತಿ[೧೮], ಬೆಂಮಕ್ಕ ಆಳುವಿತಿ[೧೯], ಬಾಲೆಯಕ್ಕ ಸೆಟ್ಟಿತಿ[೨೦], ಬೆಂಮಕ್ಕೆ ಸೆಟ್ಟಿತ್ತಿ[೨೧], ನಾಗು ಬಾಲೆ ಸೆಟ್ಟಿತಿ[೨೨], ತಂಗಾಯಿ ಸೆಟ್ಟಿತಿ[೨೩], ಆಳ್ವ ಜಿರ್ಮಕ್ಕ ಸೆಟ್ಟಿತಿ[೨೪] ಇತ್ಯಾದಿ. ಕ್ರಿ.ಶ. ೧೫೧೫ರ ಶಾಸನದಲ್ಲಿ ಮುದುರಾಡಿಯ ಅಕ್ಕಮ್ಮ ಪೆರ್ಗಡಿತಿ...'[೨೫] ಎಂದಿದೆ. ಈಕೆ ಪಟ್ಟದ, ಜೀಡಿನ ಪಿರಿಯರಸಿ ಆಗಿರಬೇಕು. ಇದೇ ಶಾಸನದ ಕೊನೆಯಲ್ಲಿ ಈಕೆಯನ್ನು 'ಅಕ್ಕಮ್ಮ ಹೆಗ್ಗಡಿತಿ' ಎನ್ನಲಾಗಿದೆ. ತುಳುನಾಡಿನಲ್ಲಿ ಪೆರ್ಗಡೆ ಎನ್ನುವುದು ಜೀಡಿನ ರಾಜಕೀಯ ಅಧಿಕಾರ ಆಗಿತ್ತು. ಪೆರ್ಗಡೆ ಮುಂದೆ ಹೆಗ್ಗಡೆ ಆಗಿದೆ. ಧರ್ಮಸ್ಥಳ, ನಂದಳಿಕೆ ಚಾವಡಿ, ಮುಂಡೊಟ್ಟು ಮುಂತಾದ ಕಡೆ ಪಟ್ಟ ಆಗುವಾಗ 'ಪೆರ್ಗಡೆ' ಎನ್ನುವುದು ಪಟ್ಟದ ಅಧಿಕಾರದ ಹೆಸರು.

**ಮಾತೃವಂಶೀಯ ಅಥವಾ ಸೋದರಳಿಯ (ಸೋದರಿಯ ಮಗ) ಸಂತಾನ ಕುಟುಂಬ ಪದ್ಧತಿ**

ತುಳುವರಲ್ಲಿ ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಆಗುವುದಿಲ್ಲ. ಇಲ್ಲಿ ಕನ್ಯಾದಾನ ಇಲ್ಲ. ಹೀಗಾಗಿ ಕಿಕ್ಕಾಯಿ ತಾಯಿ ೩ನೆಯ ಹೊಯ್ಸಳ ಬಲ್ಲಾಳನ ಪಟ್ಟದ ಪಿರಿಯರಸಿ ಆಗಿದ್ದರೂ ಆಕೆ ತನ್ನ ಸೋದರಮಾವ ಸೋಯಿದೇವ ಆಳುಪೇಂದ್ರನು ಆಳಿದ್ದ ಬಾರ್ಕೂರಿನಿಂದಲೇ ಆಳುತ್ತಾಳೆ. ಹೊಯ್ಸಳರು ತುಳುನಾಡಿನ ಮೇಲೆ ಪ್ರಭುತ್ವ ಸಾಧಿಸಿದ್ದರೂ ಆಳುಪ ರಾಜಕುಮಾರಿ ಕಿಕ್ಕಾಯಿ ತಾಯಿಯೊಂದಿಗೆ ೩ನೆಯ ಬಲ್ಲಾಳನ ಮದುವೆ ಆಗುವುದರ ಮೂಲಕ ಎರಡೂ ಮನೆತನದ ರಾಜಕೀಯ ದ್ವೇಷ ಕೊನೆಗೊಂಡಿತ್ತು. 'ಶ್ರೀ ವೀರ ಬಲ್ಲಾಳದೇವರಸರ ಪಟ್ಟದ ಪಿರಿಯರಸಿ ಕಿಕ್ಕಾಯಿ ತಾಯಿ' ಎಂದು ಒಂದೆರಡು ಶಾಸನದಲ್ಲಿ ಹೇಳಿದರೂ ಕಿಕ್ಕಾಯಿ ತಾಯಿ ಹೊಯ್ಸಳ ಬಲ್ಲಾಳನ ರಾಜ್ಯಕ್ಕೆ ಹೋಗದೆ ತುಳುನಾಡಿನಲ್ಲೇ ಉಳಿದು ತನ್ನ ಹಿರಿಯರ ರಾಜ್ಯಕ್ಕೆ (ಕ್ರಿ.ಶ. ೧೩೩೬) ರಾಣಿಯಾಗುತ್ತಾಳೆ. ಇವಳ ಮಗ ಕುಲಶೇಖರ ಬಾರ್ಕೂರಿನಿಂದ ರಾಜ್ಯ ಆಳುತ್ತಾನೆ. ತಾನು ಹೊಯ್ಸಳ ಬಲ್ಲಾಳನ ಮಗನೆಂದು ಆತ ಹೇಳಿಕೊಳ್ಳುವುದಿಲ್ಲ.[೨೬] ಈ ಕಾಲದಲ್ಲಿ ಅಳಿಯ ಸಂತಾನ ಅರ್ಥಾತ್ ಮಾತೃವಂಶೀಯ ಕುಟುಂಬ ಪದ್ಧತಿ ರೂಢಿಯಲ್ಲಿ ಇತ್ತು. ಅಳಿಯ ಸಂತಾನ ಪದ್ಧತಿಯನ್ನು ಭೂತಾಳ ಪಾಂಡ್ಯ ಜಾರಿಗೆ ತಂದಿರುವ ಬಗ್ಗೆ ದಂತ ಕಥೆಯಿದೆ. ಆದರೆ ಭೂತಾಳ ಪಾಂಡ್ಯ ಇತಿಹಾಸದಲ್ಲಿ ಕಾಣಬರುವುದಿಲ್ಲ. ಕ್ರಿ.ಶ. ೧೪೭೪ರ ವಿರೂಪಾಕ್ಷನ ಚೊಕ್ಕಾಡಿಯ ಶಾಸನವು ಭೂತ ಪಾಂಡ್ಯನನ್ನು ಗಡಿನಿರ್ದೇಶನ ನೀಡುವಾಗ ಹೆಸರಿಸುತ್ತದೆ.[೨೭] ಸುಮಾರು ೧೫ನೆಯ ಶತಮಾನದ ಶಾಸನದಲ್ಲಿ 'ಯೆಲ್ಲೂರು ಐಕಳದಲು ಬಾಳುವ ಬಲ್ಲಾಳುಗಳಿಗೆ (ಕ)ಂನಿಕ ಹೆಗ್ಗಡೆಯರು (ಅವರ) ಅಳಿಯ ಕೇಸಂಣ ಹೆಗ್ಗಡೆಯರು, ಮುಂತಾದ ಸಂತಾನ ಪಾರಂಪರೆಯಲಿ ಬಾಳುವ ಬಲ್ಲಾಳುಗಳು... ಈ ಶಿಲಾ ಶಾಸನ ಕಟ್ಟಿಗೆ ತಪ್ಪಿದರೆ ಯೆಲ್ಲೂರ ಐಕಳದಲು ಬಾಳುವ ಕರ್ತರು ಬಿದಿರೆಯ ಬಾಳು ಜನನದಲೂ ಮಾವ ತಪ್ಪಿದರೆ ಆತನ ತೆಗೆದು ಅಳಿಯನ ಕುಳ್ಳಿರಿಸಿ ಬರದ ಕಟ್ಟಿಗೆ ನಿರಿಸಿ ಬಾಳಿಸಿ ಕೊಡುವುದು–ಅಂಣ ತಪ್ಪಿದರೆ ತಂಮನ ಕುಳ್ಳಿರಿಸಿ ಬಾಳುವ ಕೊಡುವುದು'[೨೮] ಎಂದು ಸ್ಪಷ್ಟವಾಗಿ ಅಳಿಯ ಸಂತಾನ ಪದ್ಧತಿಯನ್ನು ಉಲ್ಲೇಖಿಸಿದೆ. ಈಗಲೂ ಪಟ್ಟಾಭಿಷೇಕ ಅಳಿಯ ಸಂತಾನ ಪದ್ಧತಿಯಲ್ಲಿಯೇ ಮುಂದುವರಿಯುತ್ತಿದೆ. ಅಪರೂಪದ ಸಂದರ್ಭದಲ್ಲಿ ಬದಲಾವಣೆ ಆಗಿರಬಹುದು.

ವೀರ ಕುಲಶೇಖರದೇವನು (ಕ್ರಿ.ಶ. ೧೨೦೪) ಮುಗುರುನಾಡಿನ ರಾಜ್ಯಭಾರವನ್ನು ಅಳಿಯ ಬಂಕಿದೇವನಿಗೆ ಬಿಟ್ಟುಕೊಡುತ್ತಾನೆ. ವೀರಪಾಂಡ್ಯನ ಆಸ್ಥಾನದಲ್ಲಿ ಇದ್ದ ಆತನ ಅಳಿಯ ದತ್ತಾಳುಪ ಬಳಿಯ ಬಂಕಿದೇವನು ಕೆಲವು ಕಾಲ ಬಲ್ಲಮಹಾದೇವಿಯೊಂದಿಗೆ ರಾಜ್ಯವನ್ನು ಹಂಚಿಕೊಂಡಿದ್ದರೂ ಮುಂದೆ ತಾನೇ ಇಡಿಯ ತುಳುನಾಡಿನ ಅರಸನಾಗುತ್ತಾನೆ. 'ಅಳಿಯಂದಿರು ಯೀ ಧರ್ಮವನ್ನು ನಡೆಸಿ ಬರುವ' ಬಗ್ಗೆ ಅನೇಕ ಶಾಸನಗಳಲ್ಲಿ ಉಲ್ಲೇಖ ಬರುತ್ತದೆ.[೨೯] ಮೂಡಬಿದರೆಯ ಶಾಸನದಲ್ಲಿ 'ಪುತ್ತಿಗೆಯ ಜನನದಲ್ಲು ಬಾಳುವ ಅಲ್ಲಪ್ಪಶೇಖರಾದ ಚೌಟರು ಅವರು ತಮ್ಮ ದೇವರು ಸೇಖ ಬಿಮ್ಮಣ ಶೇಖ, ಬೊಮ್ಮಣಶೇಖ ಅಮುಳಿಂಜೆಯಲಿ ಬಾಳಿಹ ಕಂರ್ಮರಂಬಳಿಯ ಬಂಗ ಮಂಜ ಅಳಿಯ ಮಂಜಣ ಶೇಖ, ಆತನ ಒಡಹುಟ್ಟಿದ ದೇವಕ್ಕಳ ಸಂತತಿ ಬೆರ್ಮಕ್ಕ ನಾಯಕತ್ತಿಯವರಿಗೆ ಬರೆಸಿಕೊಟ್ಟ ಶಾಸನದಲ್ಲಿ[೩೦] ಅಳಿಯ ಸಂತಾನ ಕ್ರಮದ ಮಾತೃ ಕುಟುಂಬದ ಸದಸ್ಯರನ್ನು ಹೆಸರಿಸಿದುದನ್ನು ಕಾಣಬಹುದು.

ಕ್ರಿ.ಶ. ೧೧೮೨ರ ಕೂರ್ಸಿಯ ಶಾಸನ ಈ ನಿಟ್ಟಿನಲ್ಲಿ ಮಹತ್ವದ ಶಾಸನ. ಆಳುಪ ಕುಲಶೇಖರನು ರಾಜ್ಯವಾಳುತ್ತಿದ್ದಾಗ ತನ್ನ ಸೋದರಳಿಯ ಪಾಂಡ್ಯ ಪಟ್ಟಿಗದೇವ, ಬಲ್ಲಹದೇವರುಂ, ಕುಲಶೇಖರ ದೇವರುಂ ಕೀರ್ತಿದೇವ, ಪಟ್ಟಮಹಾದೇವಿ, ಬಮ್ಮಲದೇವಿ ಹಾಗೂ ಬಮ್ಮಲದೇವಿಯ ಮಕ್ಕಳಾದ ಬಂಕಿದೇವ, ಸಾಂತರದೇವ ಮತ್ತು ಇವರ ಕೂಡೆ ಹುಟ್ಟಿದ ಗಂಡು ಹೆಂಣುಗಳು ಅರ್ಥಾತ್ ಇವರ ಸೋದರ ಸೋದರಿಯರು – ಸಗೋತ್ರ ಕುಟುಂಬ ಒಂದು ವಂಶ/ಬಳಿಯ ಕುಟುಂಬ ಸೇರಿ (ಕುಂಡಣನ ಶಾಸನದ ಪ್ರಕಾರ ಇವರು ನಲ್ಲಿಂ ಬಳಿಯವರು) ಕೂರ್ಸಿಯ ಭೂಮಿಯನ್ನು ಕುಲಶೇಖರ ಅರಸನ ಅಷ್ಟಾಂಗ ಲಕ್ಷ್ಮಿಯರಾದ ಚಂದಲದೇವಿ ಮತ್ತು ಪದುಮಲದೇವಿ (ಕುಲಶೇಖರನ ಮಡದಿಯರು) ಇವರ ಮಕ್ಕಳು ಕುಮಾರಿ ಅರಸಿಲ ದೇವಿ, ಸುಗ್ಗಲ ದೇವಿ, ಚಂದಲದೇವಿ ಮತ್ತು ಅಕ್ಕಾ ದೇವಿ ಹಾಗೂ ಅವರ ಗಂಡು ಹೆಂಣಿಗಂ – ಅವರ ವಂಶ ವಂಶಾವಳಿಗೆ ಕನ್ಯಾದಾನವಾಗಿ ನೀಡುತ್ತಾರೆ.[೩೧] ಆಳುಪ ಕುಲಶೇಖರ ಅರಸನಾದರೂ ತನ್ನ ಮಾತೃ ಕುಟುಂಬಕ್ಕೆ ಸೇರಿದ ಭೂಮಿಯನ್ನು ಮಡದಿ ಮಕ್ಕಳಿಗೆ ಪರಭಾರೆ ಮಾಡುವಾಗ ಕುಟುಂಬ ಸದಸ್ಯರೆಲ್ಲರ ಸಮಕ್ಷಮದಲ್ಲಿ ಸಹಮತ ಪಡೆಯುತ್ತಾನೆ. ತುಳು ಪರಂಪರೆಯಂತೆ ಕುಟುಂಬದ ಆಸ್ತಿಯನ್ನು ಸೋದರ ಮಾವನಾಗಿರುವ ಯಜಮಾನ ಅಥವಾ ಪುರುಷ ಸದಸ್ಯ ತನ್ನ ಮಡದಿ ಮಕ್ಕಳಿಗೆ ನೀಡಿದರೂ ಅದು ಪರಭಾರೆ ಎನಿಸುತ್ತದೆ.

ಕುಟುಂಬ ಸದಸ್ಯರೆಲ್ಲರ ಒಪ್ಪಿಗೆ ಪಡೆದು ಅವರ ಸಮಕ್ಷಮದಲ್ಲಿ ದಾನ ನೀಡುವುದನ್ನು ಅನೇಕ ಶಾಸನ ಪಾಠಗಳಲ್ಲಿ ನೋಡಬಹುದು. 'ಬಾರ್ಕೂರು ಮುದುರಾಡಿಯ ಹೊಸಬು ಸಾಮಂತ ಹೆಗ್ಗಡೆಯವರ ಮೊಮ್ಮಗಳು ಬೆಂಮಕ್ಕ ಸಾಮಂತತಿಯು ಮಗಳಹ ಚೆಂನಕ್ಕ ಬಾಣಂತಿಯರ (ಸಾಮಂತತಿಯರ) ಮಗ ಅಂಣ ಸಾಮಂತ ಹೆಗ್ಗಡೆಯವರು ತಂನ ತಮ್ಮಂದಿರು ಜೋಕಿ ಸಾಮಂತರು ತಿರು ಸಾಮಂತರು.... ಒಡಂಬಡಿಕೆಯಿಂದ...' ತ್ರಿಭುವನ ಚೂಡಾಮಣಿಗೆ ನೀಡಿದ ದಾನದಲ್ಲಿ ಸಮಸ್ತ ಕುಟುಂಬ ಸದಸ್ಯರ ಅನುಮತಿ ಇದೆ.[೩೨] ಇಲ್ಲಿ ಸೋದರ ಸೊಸೆಯ ಮಗಳನ್ನು ಮೊಮ್ಮಗಳು ಎಂದು ಹೇಳಲಾಗಿದೆ. ಕ್ರಿ.ಶ. ೧೪೮೨ರ ಮೂಡಬಿದಿರೆಯ ಶಾಸನದಲ್ಲಿ 'ಪುಲಿ ಸೆಟ್ಟಿ ಬಳಿಯ ಎಡ ಬಿರ್ಮು ಸೆಟ್ಟಿಯ ಅಳಿಯಂದಿರು ವೋಣಿ ನೇಮಣ ಸೆಟ್ಟಿ ಆತನ ತಂಗಿಯರು ಮಾಣಿಕ ಸೆಟ್ಟಿ, ಆಳ್ವ ಬಿರ್ಮುಕ್ಕ ಸೆಟ್ಟತಿ...'[೩೩] ಎಂದು ಕುಟುಂಬ ಸದಸ್ಯರ ಹೆಸರನ್ನು ಅವರ ಬಳಿಯನ್ನು ಹೆಸರಿಸಿ ಸೂಚಿಸಲಾಗಿದೆ. ಕ್ರಿ.ಶ. ೧೫೪೨ರ ಶಾಸನದಲ್ಲಿ ಮುಲ್ಕಿಯ ಕನ್ನಿಕಾ ಸಾವಂತರ ಅಳಿಯ ದುಗ್ಗಣ ಸಾವಂತನು ದಾನ ನೀಡುವಾಗ ತನ್ನ ಅಕ್ಕ ಚೆನ್ನಮ್ಮದೇವಿಯ ಅನುಮತಿಯನ್ನು ಪಡೆಯುತ್ತಾನೆ.[೩೪] ಹೀಗೆ ತುಳುನಾಡಿನ ಮಾತೃ ಕುಟುಂಬದ ಎಲ್ಲಾ ಹೆಣ್ಣು ಗಂಡು ಸದಸ್ಯರು ಮುಖ್ಯ ನಿರ್ಣಯಗಳಲ್ಲಿ ಭಾಗಿಗಳಾಗುತ್ತಾರೆ. ಇದು ಇಂದಿಗೂ ಮುಂದುವರಿದಿರುವ ಪದ್ಧತಿ. ಉಪ್ಪುಂದದ ಕ್ರಿ.ಶ. ೧೫೫೮ರ ತಾಮ್ರಶಾಸನದಲ್ಲಿ 'ಕುಟುಂಬ' ಪದವನ್ನು ಬಳಸುವುದನ್ನು ಕಾಣಬಹುದು. '... ಸಿರಿ ಊರ (ಈಗಿನ ಸಿರಿಯಾರ) ಅರಸು ಹೆಗ್ಗಡೆಯ ಕುಟುಂಬದವರು ಯೆಕ್ಕು ಹೆಗ್ಗಡೆ ಅರಸು ಜನ್ನಿ, ಅವನ ಒಭಾಗಿ ತಿಮ್ಮನಾಯಕ, ಅರಸು ಜನ್ನಿ ಒಳಗೆ ಪಾಲು ತೆಗೆದುಕೊಂಬ ಯೆಲ್ಲಪ್ಪ ನಾಯಕ, ಕರಿಯಹೆಗ್ಗಡೆ ಮುಂತಾದ ಕುಟುಂಬ ಸಮಸ್ತರು ವೊಡಂಬಟು ಕೊಟ್ಟ ಧರ್ಮಮೂಲ ಶಾಸನ...' ಮುಂದೆ ಸಾಲು ೪೨ರಲ್ಲಿ ಮೇಲಿನ.... 'ಯೆಲ್ಲಪ್ಪ ನಾಯಕ, ಕರಿಯ ಹೆಗ್ಗಡೆ ಮುಂತಾದ ಕುಟುಂಬ ಸಮಸ್ತರಿಗೆ ಸಲೆ ಸಲ್ಲಿಸಿ ಕೊಟ್ಟು...' ಎಂದಿದೆ.[೩೫] ಹೀಗೆ ಅನೇಕ ಶಾಸನಗಳಲ್ಲಿ ಕುಟುಂಬದ ಪ್ರಸ್ತಾಪ ಇದೆ. ಮಾತೃವಂಶೀಯತೆಯಲ್ಲಿ ತಾಯಿಯ ಕಡೆಯ ಹೆಣ್ಣು ಗಂಡುಗಳು, ಹೆಣ್ಣುಗಳ ಹೆಣ್ಣು ಗಂಡುಮಕ್ಕಳು – ಹೀಗೆ ಸಂತಾನ ಪಾರಂಪರ್ಯದ ಸದಸ್ಯರು ಕುಟುಂಬ ಆಗುತ್ತಾರೆ.

## ಬಳಿ ಪದ್ಧತಿ

ತುಳುನಾಡಿನ ಹೆಚ್ಚಿನ ಶಾಸನಗಳಲ್ಲಿ ಹೆಚ್ಚಾಗಿ ವ್ಯಕ್ತಿಗಳನ್ನು ಅವರವರ ಬಳಿಯ ಮೂಲಕ ಹೆಸರಿಸಿರುವುದನ್ನು ಕಾಣಬಹುದು. ೮ನೆಯ ಶತಮಾನದ ಕರಿಯಂಗಳ ಶಾಸನದಲ್ಲಿ ಕಯ್ತ್ರ ವಂಶದ ಬಗ್ಗೆ ಉಲ್ಲೇಖವಿದೆ.[೩೬] ವಂಶದ ಬಗ್ಗೆ ದೊರಕುವ ಮೊದಲ ಶಾಸನ ಇದು. ಕಯ್ತ್ರ ವಂಶದ ಅನೇಕ ಕುಟುಂಬಗಳು ಈಗಲೂ ಇವೆ. ಕುಂಡಣನ ವರಾಂಗ ಶಾಸನವು ನಲ್ಲಿ ಬಳಿಯ ಪಾಂಡ್ಯ ಪಟ್ಟಿಯೊಡೆಯನನ್ನು ಹಾಗೂ ಆತನ ವಂಶದಲ್ಲಿ ಬಂದ ಕವಿಯಾಳುವ, ಕುಲಶೇಖರಾಳುವನನ್ನು ಹೆಸರಿಸುತ್ತದೆ. ೨ನೆಯ ಬಂಕಿದೇವನು ದತ್ತಾಳುಪ ಬಳಿಯವನು.[೩೭] ವೇಣೂರಿನ ಅಜಿಲರು ಬಿನ್ನಾಣಿ ಬಳಿಯವರು.[೩೮] 'ಪಹಿಲನ ಬಳಿಯ ವೀರಗಜದೇವರಸರು ಶ್ರೀಮತ್ ಪಟ್ಟಮಹಾದೇವಿ ಯರುಂ ಪಾಂಡ್ಯ ದೇವರಸರುಂ ಸ್ಥಿರ ಸಿಂಹಾಸನದಿಂದ....' ಎಂಬ ಉಲ್ಲೇಖವೂ ಇದೆ.[೩೯] ಕ್ರಿ.ಶ. ೧೧೧೮ರ 'ಶಾಸನ ಬನ್ನಿವರ್ಗಡೆ ಬಳಿಯ ಕಾಜುವ ಮೈನ್ನಾಳುವ'[೪೦] ಎನ್ನುತ್ತದೆ. 'ಮುಲಿಗೊಳಾಲ್ಕೆ ಬಳಿಯ ನರಸಿಂಗ ಆಳುವ...'[೪೧], ಅಧಿಕಾರಿ 'ಕೋವಿರಿ ಬಳಿಯ ದೇವಿರಿಯಾಳುವ'[೪೨] 'ಪುಲಿಸೆಟ್ಟಿ ಬಳಿಯ ಆಳ್ವ ಬಿರುಮ ಸೆಟ್ಟಿ'[೪೩] ಕ್ರಿ.ಶ. ೧೨೦೫ರ ಶಾಸನದಲ್ಲಿ 'ಬಿಕ್ರಾಯ ಸೆಟ್ಟಿ ಬಳಿಯ ಅಮ್ಮಣ(ತಿ) ಗುಳಪರಸರು' ಎಂಬ ಉಲ್ಲೇಖಗಳಿವೆ.[೪೪] ಹೀಗೆ ಆಳುವ ಉಪನಾಮದಲ್ಲಿ ಬೇರೆ ಬೇರೆ ವಂಶದವರು ಕಾಣಬರುತ್ತಾರೆ. ಇಷ್ಟಲ್ಲದೆ ಅನೇಕ ವ್ಯಕ್ತಿಗಳ ಬಳಿಗಳನ್ನು ಶಾಸನಗಳಲ್ಲಿ ಕಾಣಬಹುದು. ಶಾಸನದಲ್ಲಿ ಇರುವ ಕೆಲವೇ ಕೆಲವು ಬಳಿಗಳು ಈಗ ಉಳಿದಿವೆ. ಒಂದು ಬಳಿಯಲ್ಲಿ ಹೆಣ್ಣು ಸಂತಾನ ಇಲ್ಲವಾದರೆ ಆ ಬಳಿ ಮುಂದುವರಿಯದು. ಆ ಬಳಿ/ವಂಶ ನಿರ್ವಂಶವಾಗುತ್ತದೆ. ಗಂಡ ಹೆಂಡತಿ ಒಂದೇ ಬಳಿಯವರಾದರೆ ಮದುವೆಯಾಗಲು ನಿಷೇಧವಿದೆ. ಅವರು ಸೋದರ ಸೋದರಿಯರಾಗುತ್ತಾರೆ. ಶಾಸನದಲ್ಲಿ 'ಸಲಿಯಂ ಬಳಿಯ ವಿಕ್ರಂತತಿ ಅವನ ಹೆಂಡತಿ ಭಾಗ್ಯಂಬಳಿಯ ಬಗ್ಗು ಸೆಟ್ಟಿ...'[೪೫] ಎಂದು ಗಂಡ ಹೆಂಡತಿಯರ ಬೇರೆ ಬೇರೆ ಬಳಿಗಳು ದಾಖಲಾಗಿವೆ.

**ಶಾಪವಾಕ್ಯದಲ್ಲಿ ತಂಗಿ :** ತುಳುವರ ಸಂತಾನ ಲಕ್ಷ್ಮಿ ಹೆಣ್ಣು. ಆಕೆಯಿಂದ ವಂಶ ಮುಂದುವರಿಯುತ್ತದೆ. ಕ್ರಿ.ಶ. ೧೪೪೬ರ ಶಾಸನದ ಶಾಪ ವಾಕ್ಯದಲ್ಲಿ 'ವಾರಣಾಸಿಯಲಿ ಸಹಸ್ರ ಕಪಿಲೆಯ ಕೊಂದ ದೋಷದ ಜೊತೆಗೆ ಶಿಲಾ ಶಾಸನಕ್ಕೆ ತಪ್ಪಿದವ ತಂನ ತಂಗಿಯ ಕೊಂದವ....' ಎನ್ನುತ್ತದೆ.[೪೬] ತುಳುನಾಡಿನಲ್ಲಿ ಸೋದರಿಯರ/ಹೆಣ್ಣಿನ ರಕ್ಷಣೆಯ ಬಗ್ಗೆ ಇರುವ ಕಾಳಜಿ ಇದರಿಂದ ವ್ಯಕ್ತವಾಗುತ್ತದೆ.

**ಮದವಳಿಗೆ :** ಕ್ರಿ.ಶ. ೧೧೭೬ರ ಬಸ್ರೂರು ದಾನ ಶಾಸನದಲ್ಲಿ 'ವೊಡೆಯರ ಮದವಳಿಗೆ ರಾಜಪ್ಪ ಸೆಟ್ಟಿಯವರ ಮಗಳು ಚಂಡಬ್ಬೆ...'[೪೭] ಎಂದು ಉಲ್ಲೇಖವಾಗಿದೆ. ಕ್ರಿ.ಶ. ೧೪೩೮ರ ಕುಂದಾಪುರದ ಶಾಸನದಲ್ಲಿ 'ಮಾಳನಾಯಕನ ಮದವಳಿಗೆ ಗಂನಾಯಿ ಮಾಳನಾಯಕನ ಕೊಟ್ಟ ಭಾಷೆಗೆ ಉತ್ತರವಾಗಿ ಅಗ್ನಿ ಪ್ರವೇಶ ಮಾಡಿದಳು'[೪೮]. ಹೀಗೆ ಉಲ್ಲೇಖಗಳು ಬರುತ್ತವೆ. ತುಳುವ ಪುರುಷರಲ್ಲಿ ಅವರ ಮಡದಿಯರ ಬಗ್ಗೆ ವಿಚಾರಿಸುವಾಗ 'ನಿನ್ನ ಮಡದಿ... ಹೆಂಡತಿ... ಎಂದು ಹೇಳುವ ಪದ್ಧತಿ ಇರಲಿಲ್ಲ. ನಿನ್ನ ಮದ್ಮಲ್ (ಮದುಮಗಳು) ಎಂದು ಮಾತನಾಡಿದುದನ್ನು ನಾನು ಬಾಲ್ಯದಲ್ಲಿ ಕೇಳಿದ್ದೆ. ಅದರಲ್ಲೂ ಕೆಳವರ್ಗದವರಲ್ಲಿ ಈ ರೀತಿ ಹೆಚ್ಚಾಗಿ ಹೇಳುತ್ತಿದ್ದರು. ಕೆಳವರ್ಗದವರಲ್ಲಿ ಪರಂಪರಾಗತ ಜನಪದ ಸೊಗಡು ಉಳಿಯುವುದು ಹೆಚ್ಚು. ಕ್ರಿ.ಶ. ೧೪೧೨ರ ಬಾರ್ಕೂರು ಶಾಸನದಲ್ಲಿ '.... ಜೋಗಿ ಸೆಟ್ಟಿ ಆತನ ಮದವಳಿಗೆ ರಾಮಕ್ಕ ಅವರಿಬ್ಬರ ಮಗ ಚಿಕ್ಕಿ ಸೆಟ್ಟಿ'[೪೯] ಎಂಬ ಉಲ್ಲೇಖ ಇದೆ. ಮದುವೆ ನಿಶ್ಚಯ ಆದರೂ ಹುಡುಗಿಯನ್ನು ಗಂಡಿನ ಮದುಮಗಳು ಎನ್ನುವ ಪದ್ಧತಿ ಇಲ್ಲ. ಹೀಗಾಗಿ ಮದುವೆ ಆದ ಮಡದಿಯನ್ನು ಮದುಮಗಳು/ಮದವಳಿಗೆ ಎನ್ನುತ್ತಾರೆ. ಈ ಮಾತನ್ನು ಮೇಲಿನ ಶಾಸನಗಳು ಸಾಕ್ಷೀಕರಿಸುತ್ತವೆ.

## ತೆರ ಮತ್ತು ವಿಚ್ಛೇದನ

ತುಳುನಾಡಿನಲ್ಲಿ ಹಿಂದೆ ತೆರ ನೀಡುವ ಪದ್ಧತಿಯೂ ಇತ್ತು, ವಿಚ್ಛೇದನವೂ ಇತ್ತು. ಈ ಮಾತಿಗೆ ಸಿರಿ ಪಾಡ್ದನವೂ ಆಧಾರ ಒದಗಿಸುತ್ತದೆ. ಆಕೆ ವಿಚ್ಛೇದನ ಸಮಯದಲ್ಲಿ ತೆರ ಮರಳಿಸಿ ಬರ (ವಿಚ್ಛೇದನ) ಪಡೆಯುತ್ತಾಳೆ. ಕ್ರಿ.ಶ. ೧೧೫೫ರ ಶಾಸನದಲ್ಲಿ 'ಆ ಊರನಾಳ್ವ ಪಾಂಡ್ಯಮಹಾದೇವಿಯರಂ ನಗರ ಸಮೂಹಕ್ಕೆ ಮೂಲಸ್ಥಾನ ಮಾರ್ಕಂಡೇಶ್ವರ ದೇವರಲ್ಲು ವಿಚ್ಛೇದನ(ಗೆ)ಯ್ದರೆ ಸಲ್ವರಾಗಿ ತೆಜೆಯ ಸರ್ವಬಾಧಾ ಪರಿಹಾರವಾಗಿ ಯಿರಿಸಿಕೊಂಡ ತಪ್ಪುಭೂಮಿ'[೫೦] ಎಂಬ ಉಲ್ಲೇಖ ಇದೆ. ರಾಣಿಯಾದರೂ ಆಕೆ ವಿಚ್ಛೇದನ ಸಮಯದಲ್ಲಿ ಗಂಡನಿಗೆ ನೀಡಬೇಕಾದ ತೆರದ ಹಣದ ಬದಲಿಗೆ ದೇವರಿಗೆ

ತಪ್ಪುಭೂಮಿ ನೀಡಿರಬೇಕು. ಸುಮಾರು ೧೨ನೆಯ ಶತಮಾನದವರೆಗೂ ತೆರ ನೀಡುವ ಪದ್ಧತಿ ಜಾರಿಯಲ್ಲಿ ಇತ್ತು ಎನ್ನುವುದಕ್ಕೆ ಶಾಸನ ದಾಖಲೆ ದೊರಕಿದಂತಾಯಿತು. ತುಳು ಸಂಪ್ರದಾಯದಲ್ಲಿ ವಿಚ್ಛೇದನ ಈಗಲೂ ನಡೆಯುತ್ತಿದೆ. ಈಗ ವರದಕ್ಷಿಣೆ ಇರುವುದರಿಂದ ವಿಚ್ಛೇದನ ಕಾಲದಲ್ಲಿ ವರದಕ್ಷಿಣೆಯನ್ನು ಮರಳಿಸುತ್ತಾರೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, ಸಂ.೪೩.

೨. ವೈ. ಉಮಾನಾಥ ಶೆಣೈ, ಇತಿಹಾಸ ದರ್ಶನ, ಸಂ.೨೦–೦೫.

೩. S.I.I., Vol. XXVII, No. 409.

೪. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, ಸಂ.೪೨, ೪೩.

೫. S.I.I., Vol. XXVII, No. 312.

೬. S.I.I., Vol. VII, No. 376.

೭. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, ಸಂ.೪೨.

೮. A.R.S.I.E., 1927 - 28 Appx B. No. 415.

೯. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, ಸಂ.೮೬.

೧೦. ಡಾ॥ ಪಿ.ಎನ್. ನರಸಿಂಹಮೂರ್ತಿ, ಕುಂದನಾಡಿನ ಶಾಸನಗಳು, ಸಂ.೫೬.

೧೧. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, ಸಂ.೮೮.

೧೨. ಅದೇ, ಸಂ. ೨೭.

೧೩. S.I.I., Vol. XXVII, No. 298.

೧೪. S.I.I., Vol. XVII, No. 252.

೧೫. S.I.I., Vol. XXVII, No. 36, 37, 38, 39.

೧೬. S.I.I., Vol. VII, No. 338.

೧೭. ಅದೇ, ಸಂ.೩೧೧.

೧೮. ಅದೇ, ಸಂ.೧೮೭.

೧೯. S.I.I., Vol. XXVII, No. 362.

೨೦. ಅದೇ, No. 127.

೨೧. ಅದೇ, ಸಂ.೩೬೨.

೨೨. ಅದೇ, ಸಂ.೧೯೪.

೨೩. S.I.I., Vol. VII, No. 379.

೨೪. ಅದೇ, ಸಂ.೨೦೦.

೨೫. S.I.I., Vol. XXVII, No. 164.

೨೬. S.I.I., Vol. XVII, No. 237, 238.

೨೭. ಅದೇ, ಸಂ.೧೪೨.

೨೮. ಅದೇ, ಸಂ.೩೮೮.

೨೯. S.I.I., Vol. IX, Part II, No. 448, S.I.I., Vol. VII, 382.

೩೦. S.I.I., Vol. IX, Part II, No. 460.

೩೧. ಡಾ॥ ಪಿ.ಎನ್. ನರಸಿಂಹಮೂರ್ತಿ, ಕುಂದನಾಡಿನ ಶಾಸನಗಳು, ಸಂ.೩೦.

೩೨. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, ಸಂ.೭೮.

೩೩. ಅದೇ, ಸಂ.೭೫.

೩೪. ಅದೇ, ಸಂ.೮೫.

೩೫. ಡಾ॥ ಪಿ.ಎನ್. ನರಸಿಂಹಮೂರ್ತಿ, ಕುಂದನಾಡಿನ ಶಾಸನಗಳು, ಸಂ.೬೯.

೩೬. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, ಸಂ.೧೦.

೩೭. S.I.I., Vol. XXVII, No. 216, 1281.

೩೮. S.I.I., Vol. VII, No. 242.

೩೯. ಅದೇ, ಸಂ.೩೮೦.

೪೦. ಅದೇ, ಸಂ.೨೫೮.

೪೧. ಅದೇ, ಸಂ.೩೩೭.

೪೨. ಅದೇ.

೪೩. ಅದೇ, ಸಂ.೨೪೨.

೪೪. ಅದೇ, ಸಂ.೨೨೩.

೪೫. ಅದೇ, ಸಂ.೨೫೪.

೪೬. ಡಾ॥ ಪಿ.ಎನ್. ನರಸಿಂಹಮೂರ್ತಿ, ಕುಂದನಾಡಿನ ಶಾಸನಗಳು, ಸಂ.೫೮.

೪೭. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, ಸಂ.೩೫.

೪೮. ಡಾ॥ ಪಿ.ಎನ್. ನರಸಿಂಹಮೂರ್ತಿ, ಕುಂದನಾಡಿನ ಶಾಸನಗಳು, ಸಂ.೪೮.

೪೯. S.I.I., Vol. VII, No. 310.

೫೦. ಅದೇ, ಸಂ.೩೭೬.



# ಶಾಸನಗಳಲ್ಲಿ ನೃತ್ಯ

– ಡಾ॥ ಜಿ. ರಾಧಿಕಾ ರಂಜನಿ*

**ಭಾ**ರತೀಯ ಸಂಸ್ಕೃತಿಯಲ್ಲಿ ದೇವಾಲಯಗಳ ಪಾತ್ರವು ಬಹಳ ಪ್ರಮುಖವಾದದ್ದು. ಆಹಾರ, ಅಭಯ, ಭೈಷಜ್ಯ, ಶಾಸ್ತ್ರ ಮತ್ತು ದಾನಿ(ನ)ಗಳಿಗೆ ದೇವಾಲಯಗಳು ಕೇಂದ್ರವಾಗಿದ್ದವು. ಇದರಿಂದಾಗಿ ದೇವಾಲಯವು ನೃತ್ಯಕಲೆ, ಶಿಲ್ಪಕಲೆ, ಸಂಗೀತ, ಚಿತ್ರಕಲೆಗಳಿಗೆ ಪ್ರೋತ್ಸಾಹಿಸುವ ಕೇಂದ್ರವಾಯಿತು. ವ್ಯಕ್ತಿ ಮತ್ತು ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ಈ ದೇವಾಲಯಗಳು ನಿರ್ಮಾಣಗೊಂಡಿವೆ. ಪ್ರಾಚೀನ ಕಾಲದಲ್ಲಿ ಇದೊಂದು ಸಾಮಾಜಿಕ ಸಂಸ್ಥೆ ಎನಿಸಿತ್ತು. ಇದರ ಆಡಳಿತ ನಿರ್ವಹಣೆಗೆ ಒಂದು ಸುಸಂಘಟಿತವಾದ ವ್ಯವಸ್ಥೆಯಿದ್ದು, ಅದು ಪುರೋಹಿತನಿಂದ ಮೊದಲಾಗಿ ರೂವಾರಿಯವರೆಗೆ ಬೆಳೆದಿತ್ತು. ಪರೆಕಾರ, ದೇಶಿಗ, ವಂಶಿಗ, ಮದ್ದಳೆಕಾರ, ಜ್ಯೋತಿಷ್ಯ ಶಾಸ್ತ್ರಜ್ಞ, ಪಳವಿಗ, ಮಾಲೆಕಾರ, ಕುಂಬಾರ, ಸುನ್ನವಸೆದವ, ನಟ್ಟುವ, ನಂದನವನದಾತ, ಸೂಳೆ ಮುಂತಾದವರು ಇವರಲ್ಲಿ ಮುಖ್ಯವಾಗುತ್ತಾರೆ. ಮದ್ದಳೆಕಾರ, ವಂಶಿಗ, ನಟುವ, ಸೂಳೆಯೆಂಬ ಶಬ್ದಗಳು ನರ್ತನಕ್ಕೆ, ನರ್ತನಗಾರರಿಗೆ ಮತ್ತು ಹಿಮ್ಮೇಳದವರಿಗೆ ನೀಡುತ್ತಿದ್ದ ಪ್ರಾಮುಖ್ಯತೆಯನ್ನು ವಿಶದಪಡಿಸುತ್ತವೆ.

ಶಾಸನಗಳ ಹುಟ್ಟಿಗೆ ಸ್ತ್ರೀಯರೂ ಸಹ ಕಾರಣಕರ್ತರೆಂಬುದನ್ನು ಮರೆಯುವಂತಿಲ್ಲ. ಗೃಹಿಣಿ ಸಮಾಜಕ್ಕೆ ತದ್ವಿರುದ್ಧವಾದ ಇನ್ನೊಂದು ವರ್ಗವೆ ಸೂಳೆ ಸಮಾಜ.

ಇವರು ಮೇಲ್ನೋಟಕ್ಕೆ ಒಂದೇ ವರ್ಗದಂತೆ ಕಂಡರೂ, ಆಳವಾಗಿ ವಿವೇಚಿಸಿದಲ್ಲಿ ಹತ್ತಾರು ಉತ್ತಮ ವರ್ಗಗಳಿರುವುದು ದೃಗ್ಗೋಚರವಾಗುತ್ತದೆ. ಇದರಲ್ಲಿನ ಪ್ರಧಾನ ವರ್ಗಗಳು ಅಂಗಭೋಗ ಮತ್ತು ರಂಗಭೋಗದ ಸೂಳೆಯರದಾಗಿವೆ. ಇವರ ಪಾತ್ರ ನೃತ್ಯ ಸಂಗೀತಗಳಿಗೆ ಮಹತ್ವದ್ದಾಗಿದೆ. ಅಂಗಭೋಗ ಸೂಳೆಯರು ದೇವರ ಗರ್ಭಗೃಹಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಮಾಡುವ ವರ್ಗಕ್ಕೆ ಸೇರಿದವರಾಗಿದ್ದಾರೆ. ಇವರುಗಳನ್ನು ಪೆರಿಯವಾಳ, ಪೆರ್ಗಡೆವಾಳ, ತೆರೆಯ ಸೂಲೆ, ತೆರೆಮರೆಯ ಸೂಳೆ ಮುಂತಾದ ಹೆಸರುಗಳಿಂದ ಗುರುತಿಸುತ್ತಾರೆ. ಬಾದಾಮಿ ಚಲುಕ್ಯರು ತಮ್ಮ ಶಾಸನಗಳಲ್ಲಿ ವಾರಾಂಗನೆಯರನ್ನು ಮತ್ತು ದೇವದಾಸಿಯರನ್ನು 'ಪೋಡಿ' ಮತ್ತು 'ಬೋದಿ' ಎಂಬ ಹೆಸರುಗಳಿಂದ ಗುರುತಿಸಲಾಗಿದೆ. ಕಲ್ಯಾಣದ ಚಾಲುಕ್ಯರು ಸೂಳೆಯರೆಂದೇ ಸಂಬೋಧಿಸುತ್ತಿದ್ದರು. ಹೊಯ್ಸಳರ ಕಾಲದಲ್ಲಿ "ಸೂಳೆಯರ್" ಮತ್ತು "ಪಾತ್ರದವರ್" ಎಂದು ಕರೆಯುವ ವಾಡಿಕೆಯಿತ್ತು. ವಿಜಯನಗರದ ರಾಜ್ಯಾಡಳಿದಲ್ಲಿ ಇವರನ್ನು ಹೊಯ್ಸಳರಂತೆ "ಪಾತ್ರದ" ಎಂದು ಸಂಬೋಧಿಸಲಾಗುತ್ತಿತ್ತು.

ಹಲವಾರು ಶಾಸನಗಳಲ್ಲಿ "ದೇವದಾಸಿ"ಯರಾದ ವಾರಾಂಗನೆಯರು ತಮ್ಮ ಸಂಪತ್ತೆಲ್ಲವನ್ನು ದೇವಾಲಯಗಳ ನಿರ್ಮಾಣಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಇವರನ್ನು ರಾಜನರ್ತಕಿಯರೆಂದು, ಸಂಗೀತಗಾರರನ್ನು "ಆಸ್ಥಾನ–ವಿದೂಷಿ"ಗಳೆಂದು ಕರೆಯುತ್ತಿದ್ದರು. ಇವರು ತಮ್ಮ ಕಲೆಯನ್ನು ರಾಜಮನೆತನಗಳಲ್ಲಿನ ಸಮಾರಂಭಗಳಲ್ಲಿ ಪ್ರದರ್ಶಿಸುವ ಮೂಲಕ ಸೇವೆ ಸಲ್ಲಿಸುತ್ತಿದ್ದರು. ದೇವದಾಸಿ ಪದ ಕನ್ನಡ ಶಾಸನಗಳಲ್ಲಿ ಬರುವುದು ಅತಿ ವಿರಳ. ಆಲಹಳ್ಳಿ ಗ್ರಾಮದ ಶಾಸನದಲ್ಲಿ "ಬನ್ನಿ ಕೆಲೆಯಲು ಕಲ್ಲುಕುಟಿಗ ಕಾಳೋಟ" ದೇವದಾಸಿಗಳ ಕೇವಲ ದತ್ತಿಯ ಉಲ್ಲೇಖವಿದೆ. ಇವರು ದೇವರ ಅಲಂಕಾರದ ವ್ಯಕ್ತಿಗಳಾಗಿದ್ದು, ಯುವತಿಯರೂ, ಸುಂದರಿಯರೂ, ಜೊತೆಗೆ ನೃತ್ಯ ಸಂಗೀತಶಾಸ್ತ್ರ ಕಲೆಗಳಲ್ಲಿ ಪರಿಣಿತರು ಆಗಿರಬೇಕಿತ್ತು. ಕರ್ನಾಟಕದಲ್ಲಿ ಈ ಸಂಪ್ರದಾಯ ಏನಿಲ್ಲವೆಂದರೂ ಕ್ರಿ.ಶ. ೭೮೮–೮೯ರವರೆಗೆ ಕಂಡುಬರುತ್ತದೆ. ಕೆಲವು ಶಾಸನಗಳ ಉಲ್ಲೇಖಗಳಾದ ದೇವದಾಸಿ, ರಾಜದಾಸಿ ಹಾಗೂ ಸಾಮಾನ್ಯದಾಸಿಯರ ಕಾರ್ಯ ವೈಖರಿ ಮತ್ತು ಕಲೆಗಳ ಬಗ್ಗೆ ಬೆಳಕನ್ನು ಚೆಲ್ಲುತ್ತವೆ.

---

* ನಂ.೪೬೦/೯, ೨ನೆಯ ಮುಖ್ಯರಸ್ತೆ, ಬಿ.ಎಸ್.ಕೆ. ೧ನೆಯ ಹಂತ, ೨ನೆಯ ಬ್ಲಾಕ್, ಬೆಂಗಳೂರು–೫೬೦೦೫೦.

ಕ್ರಿ.ಶ. ೧೦೨೬ರಲ್ಲಿ ಘಜನಿ ಮಹಮ್ಮದ್ ಸೋಮನಾಥ ದೇವಸ್ಥಾನವನ್ನು ನಾಶಪಡಿಸಿದಾಗ ಇಂತಹ ೫೦೦ ಜನ ದೇವಸೂಳೆಯರಿದ್ದು, ಅವರು ಹಗಲೂ, ರಾತ್ರಿ ಸಂಗೀತನೃತ್ಯ ಸಮಾರಾಧನೆಗೈಯುತ್ತಿದ್ದರೆಂದು ತಿಳಿದು ಬರುತ್ತದೆ. ಕ್ರಿ.ಶ. ೪೦೨ರ ತಾಮ್ರಪಟವೊಂದರಲ್ಲಿ ಜಿನಭವನದಲ್ಲಿ ನಡೆಯುವ "ವಾರವಿಲಾಸಿನಿ" ವಿರಚಿತ ನೃತ್ಯ, ಸಂಗೀತ, ವಾದ್ಯ ಇತ್ಯಾದಿಗಳಿಗೆ ದಾನ ನೀಡಲಾಗಿದೆ ಎಂಬ ವಿವರಗಳು ದೇವದಾಸಿಯರ ಬಗ್ಗೆ ಬೆಳಕು ಚೆಲ್ಲುತ್ತದೆ.

ಕ್ರಿ.ಶ. ೧೦೮೪ರಲ್ಲಿ ಕಿಸುಕಾಡು ಎಪ್ಪತ್ತು ಮುಂತಾದ ಗ್ರಾಮಗಳನ್ನು ಆಳುತ್ತಿದ್ದ "ಅಕ್ಕಾದೇವಿ" ಎಂಬಾಕೆ ಸೊಂಡೆಯಲ್ಲಿ ಅರ್ಕೇಶ್ವರ ದೇವಸ್ಥಾನವನ್ನು ಕಟ್ಟಿಸಿ ಅದಕ್ಕೆ ದತ್ತಿಯನ್ನು ಬಿಟ್ಟುಕೊಟ್ಟಿದ್ದಾಳೆ. ಇದರಲ್ಲಿ ಹೆಚ್ಚಾಗಿ "ಕಂಬ ಸೂಳೆ"ಯರನ್ನು ಉಲ್ಲೇಖಿಸಿದೆ. ಇದಕ್ಕೆ ಹೊಂದಿಕೊಂಡಂತೆ ಅನವೇರಿಯ ಶಾಸನದಲ್ಲಿ "ಅಂಕಬಾಯಿಯ ಮಗ(ಳು) ಮೊದಲ ಚಾಮರ ಕಂಬದ ಸೂಳೆ ಕಾಳಬ್ಬೆಗೆ ೫ ಮತ್ತರು ೧ ಕಳಮೆ ಭೂಮಿ ದಾನ ಮಾಡಿದ ವಿಷಯ ವ್ಯಕ್ತವಾಗಿದೆ. ಇದರೊಂದಿಗೆ ಬಲದೆನೆಯ ಮೊದಲ ಕಂಬದ ಸೂಳೆ" ಎರಡನೆಯ ಮೊದಲ ಕಂಬದ ಸೂಳೆ ದೇವಕಟ್ಟೆ ಅಲ್ಲಿಯ ಕಂಬಸೂಳೆ (ಗುಜರಾತಿನ ದೇವಸ್ಥಾನದಲ್ಲಿ ೩೦ ಸಾವಿರ ನರ್ತಕಿಯರನ್ನು ೪,೦೦೦ ದೇವಸ್ಥಾನಗಳಿಗೆ ಹಂಚಿ ದಿನಕ್ಕೆರಡು ಬಾರಿ ಸಂಗೀತ ಸೇವೆ ಮತ್ತು ಪ್ರಸಾದ ವಿನಿಯೋಗಕ್ಕಾಗಿ ನಿಯೋಜಿಸಲಾಗಿತ್ತೆಂದು ಶಾಸನವಿದೆ. ಅಗಸಬ್ಬೆ ... ಎಂದು ನಾಲ್ಕು ಜನ ಸೂಳೆಯರಿಗೆ ಕಂಬಗಳ ಎಡಬಲ ಕಾರಣವಾಗಿ ದತ್ತಿಗಳಲ್ಲಿ ಅಂತರವಿರುವುದನ್ನು ಗಮನಿಸಬಹುದಾಗಿದೆ. ಇದು ರಂಗಮಂಟಪ ಮತ್ತು ನೃತ್ಯ ಸಂಯೋಜನೆಗಳಿಗೆ ಆಗಿನಿಂದಲೂ ಪ್ರೋತ್ಸಾಹವಿತ್ತೆಂಬುದನ್ನು ದೃಢಪಡಿಸುತ್ತದೆ. ಡಾ॥ ಚೆನ್ನಕ್ಕ ಎಲಿಗಾರರು ತಮ್ಮ "ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ" ಗ್ರಂಥದಲ್ಲಿ ರಂಗಭೋಗವನ್ನು ದೇವಸ್ಥಾನದ ಗರ್ಭಗೃಹದ ಮುಂಬಾಗಿಲ ನವರಂಗ ಅಥವಾ ರಂಗಮಂಪಟದಲ್ಲಿ ನಡೆಯುವ ದೇವರ ಸೇವೆಯೆಂದು ಅರ್ಥೈಸಿ, ಕಂಬದ ಸೂಳೆಯರ ಬಗ್ಗೆ, ರೇಖಾಚಿತ್ರಗಳನ್ನು, ವರ್ಣನಾತ್ಮಕ ಸೂಚಿಯೊಂದಿಗೆ ಉಲ್ಲೇಖಿಸಿರುವುದು ಗ್ರಂಥದ ವೈಶಿಷ್ಟ್ಯವಾಗಿದೆ. ಕರ್ನಾಟಕದಲ್ಲಿನ ಹಾಗೂ ಇತರೆಡೆಗಳ ದೇವದಾಸಿ, ಸೂಳೆ ಅಂಗಭೋಗ ಮತ್ತು ರಂಗಭೋಗಗಳ ಬಗ್ಗೆ ತಿಳಿದ ನಂತರ, ಕೆಲವು ಶಾಸನಗಳಲ್ಲಿ ಗದ್ಯರೂಪದಿಂದ ಪದ್ಯರೂಪಕ್ಕೆ, ಕಾವ್ಯಮಯವಾದ ವರ್ಣನೆಗೆ ರೂಪು ಪಡೆದ ನೃತ್ಯ, ಸಂಗೀತಗಳ ಬಗ್ಗೆ ಬೆಳಕನ್ನು ಚೆಲ್ಲುವ ವಿವರಗಳನ್ನು ಇಲ್ಲಿ ವಿಶ್ಲೇಷಿಸಿದೆ. ಇದರೊಂದಿಗೆ ಸಾಹಿತ್ಯ, ಸಂಗೀತ, ವಾದ್ಯಗಳನ್ನು ಉಲ್ಲೇಖಿಸಿರುವ ಕೆಲವೇ ಶಾಸನಗಳನ್ನು 'ಅಭಿನಯ'ಕ್ಕೆ ಪೂರಕವಾಗಿ ನಿರೂಪಿಸಿದೆ.

ಕ್ರಿ.ಶ.ಸು. ೪೫೦ರ ತಾಳಗುಂದದ ಶಾಸನವು "ನಾನಾವಿಧ ದ್ರವಿಣಸಾರ ಸಮುಚ್ಚಯೇಷು, ದ್ವಿಪೇಂದ್ರ ಮದವಾಸಿತ ಗೋಪುರೇಷು, ಸಂಗೀತವಲ್ಗು ನಿನದೇಷು ಹೃದೇಷು" ಎಂದು ಆ ಗ್ರಾಮದ ಒಂದೊಂದು ಮನೆಯು ಸಂಗೀತದ ಮನೋಹರ ನಿನಾದದಿಂದ ಮುಖರಿತವಾಗಿತ್ತೆಂದು ವರ್ಣಿಸುತ್ತದೆ. ಜೊತೆಗೆ ಶ್ರೀರಂಗಪಟ್ಟಣದಲ್ಲಿ ಗಾಯಕ, ನಟ, ಪರಿಹಾಸಕ ಇವರು, ಮದ್ದಳೆಗಾರರು, ನಾಗಸ್ವರ, ಮೌರಿ ವಾದ್ಯಗಳನ್ನು ನುಡಿಸುವವರಿದ್ದ ಪ್ರತ್ಯೇಕ ಬೀದಿಗಳೇ ಇದ್ದವೆಂಬ ವರ್ಣನೆ ಶಾಸನದ ಹೇಳಿಕೆಗೆ ಪೂರಕವಾಗಿ ನಿಲ್ಲುತ್ತದೆ. ಜೊತೆಗೆ ಪುರಂಧ್ರಿಯರು ಸಹ ಅಲ್ಲಿನ ಬೀದಿ ಬೀದಿಗಳಲ್ಲಿ ಮಂಗಳೋತ್ಸವದ ಶೋಭನದ ಹಾಡುಗಳನ್ನು ಹಾಡುತ್ತ ಸಂಚರಿಸುತ್ತಿದ್ದರೆಂಬ ವರ್ಣನೆ, ಆಗಿನ ಕಾಲದಲ್ಲಿದ್ದ ನೃತ್ಯ, ಗೀತ, ವಾದ್ಯಗಳ ಬಗೆಗಿನ, ಗೌರವ, ಘನತೆ ಹಾಗೂ ಪೋಷಣೆಗಳ ಬಗ್ಗೆ ಆಧಾರವನ್ನು ಒದಗಿಸುತ್ತದೆ. ಕ್ರಿ.ಶ.ಸು. ೧೭೩೫ರಲ್ಲಿನ ಕಮಲಭವನ "ಶಾಂತೀಶ್ವರ ಪುರಾಣ'ದಲ್ಲಿ ನರ್ತನಕ್ಕೆ ಹಿನ್ನೆಲೆಯೊದಗಿಸುವ ಸಂಗೀತದ ಸಮಗ್ರ ಚಿತ್ರಣ ದೊರಕುತ್ತದೆ. ರತ್ನಾಕರನ "ಭರತೇಶ ವೈಭವ", ಅಗ್ಗಳನ ಚಂದ್ರಪ್ರಭ ಪುರಾಣ ಮತ್ತು ಕಮಲಭವನ ಶಾಂತೀಶ್ವರ ಪುರಾಣ ಗ್ರಂಥಗಳಲ್ಲಿ ಸಂಗೀತ, ವಾದ್ಯ, ನರ್ತನಗಳ ಬಗ್ಗೆ ವಿವರಗಳಿವೆ. ಆಗಿನ ಕಾಲದಲ್ಲಿ ಭರತನ ನಾಟ್ಯಶಾಸ್ತ್ರ ಹಾಗೂ ನಂದಿಕೇಶ್ವರನ ಅಭಿನಯದರ್ಪಣ ಗ್ರಂಥಗಳಲ್ಲಿನ ವಿವರಗಳು ಕಲಾವಿದರು ನೃತ್ಯದ ಪ್ರಾಯೋಗಿಕ ಪ್ರದರ್ಶನಗಳಲ್ಲಿ ಪ್ರಯೋಗಿಸುತ್ತಿದ್ದರೆಂಬುದು ಇದರಿಂದ ದೃಢಪಡುತ್ತದೆ. ಆದರೆ ಈ ಎಲ್ಲಾ ಸಾಹಿತ್ಯಗಳ ವಿವರಗಳಲ್ಲಿ ಕಂಡುಬರುವ ಅಂಶವೆಂದರೆ ಸಂಗೀತಗಾರರು ಮೊದಲಿಗೆ ದೇವತಾಸ್ತುತಿಯನ್ನು ಹಾಡಿ ನಂತರ ಇತರ ಸಂಗೀತ ರಚನೆಗಳನ್ನು, ರಾಗ, ತಾಳ, ಲಯಬದ್ಧವಾಗಿ ಹಾಡುತ್ತಿದ್ದರೆಂದು ತಿಳಿದುಬರುತ್ತದೆ. ಈ ಹಾಡುಗಾರರು ನರ್ತನ ಕಲಾವಿದರಿಗೆ ಹಿಮ್ಮೇಳವಾಗಿದ್ದರೂ, ಅವರ ಸಂಗೀತಗಳಲ್ಲಿನ ಸಾಹಿತ್ಯ, ಕೃತಿ, ರಚನೆಗಳ ಬಗ್ಗೆ ಬೆಳಕನ್ನು ಚೆಲ್ಲುವುದಿಲ್ಲ. ಜಿನಸ್ತುತಿ, ರಾಜನ ಸ್ತುತಿಯನ್ನು ಹಾಡುತ್ತಿದ್ದರೆಂದರೂ ಸಾಹಿತ್ಯದ ಬಗ್ಗೆ ಸ್ಪಷ್ಟವಾಗಿ ತಿಳಿಸದಿರುವುದು ವಿಷಾದನೀಯ. ಇವುಗಳಿಗೆ ಪೂರಕವಾಗಿ ಶಾಸನಗಳಲ್ಲಿಯೂ ಸಾಹಿತ್ಯ ರಚನೆಗಳಿರುವುದನ್ನು ಕೆಲವು ಶಾಸನಗಳ ಮೂಲಕ ವಿವರಿಸಿದೆ.

ಕ್ರಿ.ಶ. ೧೯೫೫ರ ಶಾಸನವು, ರಾಜರ ಆಸ್ಥಾನಗಳಲ್ಲಿ ಕಾವ್ಯ, ನಾಟಕಗಳ ವಿಚಾರ ನಡೆಯುತ್ತಿದ್ದುದರೊಂದಿಗೆ, ಅಲ್ಲಿ ಸುಂದರಿಯರಾದ ಸ್ತ್ರೀಯರಿಂದ ಗೀತ, ವಾದನ, ನೃತ್ಯ, ವೇಣು, ವೀಣಾರವಗಳು ಕೇಳಿಬರುತ್ತಿದ್ದವೆಂದು ಉಲ್ಲೇಖಿಸುತ್ತದೆ. ಎಂ. ಚಿದಾನಂದಮೂರ್ತಿಯವರು ತಮ್ಮ ಕೃತಿಯಲ್ಲಿ ಸಂಗೀತದಲ್ಲಿ ಬಳಸಿದ ಕೆಲವು ಸಾಹಿತ್ಯದ ರಚನೆಗಳ ಬಗ್ಗೆ ಬೆಳಕನ್ನು ಚೆಲ್ಲಿದ್ದಾರೆ. ಕ್ರಿ.ಶ. ೮೫೦ರಲ್ಲಿನ ಕನ್ನಡದ ಮೊದಲ ಲಕ್ಷಣ ಗ್ರಂಥ "ಕವಿರಾಜಮಾರ್ಗ"ದಲ್ಲಿ "ಬೆದಂಡೆ" ಎಂಬ ಹಾಡುಗಬ್ಬವಿದ್ದು, ಅದು ಹಾಡಲಿಕ್ಕಾಗಿಯೇ ರಚಿತವಾಗಿದ್ದ ಸಾಹಿತ್ಯವೆಂದು ವಿವರಿಸಿದ್ದಾರೆ. "ದಂಡದ ಬೇಳಂಬಿಗರ ಬೆದಂಡೆಯ ತಳಗೆಯ ಮಹೇಂದ್ರಜಾಲಿಗಳ ಮನಂಗೊಂಡೆಸೆವ ನೆಗ[ಟ್ವಂಚೆ]ಯ ತಂಡಂಗಳಿವಾವ ದೆಸೆಯೊಳಂ ಕಡುರಯ್ಯಂ"(೧೧-೨೦) ಎಂದು ಇಮ್ಮಡಿ ನಾಗವರ್ಮನು "ವರ್ಧಮಾನಪುರಾಣ"ದಲ್ಲಿ ವರ್ಣಿಸಿದ್ದಾನೆ. ಸೂಳೆಗೇರಿಗಳಲ್ಲಿ ಇದನ್ನು ಹಾಡುತ್ತಿದ್ದರೆಂದೂ ವಿವರಿಸುತ್ತದೆ. ಬೆದಂಡೆಯ ಬಗೆಗಿದ್ದ ಪ್ರಚಾರದಿಂದ ಅದನ್ನು ಲೌಕಿಕದ ಅತಿಶೃಂಗಾರದ, ಈಗಿನ ಹೋಳಿ ಹಾಡುಗಳನ್ನು ಹೋಲುವ ರಚನೆಗಳಿರಬೇಕೆಂದು ಚಿದಾನಂದಮೂರ್ತಿಯವರು ಅಭಿಪ್ರಾಯಿಸಿದ್ದಾರೆ. ಆದರೆ ಈ ಹಾಡುಗಳು ದೊರಕದಿರುವುದು ವಿಷಾದನೀಯ.

ಕ್ರಿ.ಶ.ಸು. ೭೫೫ ಬಾದಾಮಿ ಚಲುಕ್ಯರ ಕಾಲದಲ್ಲಿನ ಶಾಸನ ಮಹತ್ವದ್ದಾಗಿದೆ. ಪಟ್ಟದಕಲ್ಲಿನ ಈ ಶಾಸನವು ಲೋಕೇಶ್ವರ ದೇವಾಲಯದ ಮುಂಬಾಗಿಲ ಮಂಟಪದ ಎಡಬದಿಯ ಕಂಬದ ಒಳಮುಖದಲ್ಲಿದೆ. ಶ್ರೇಷ್ಠ ನಟನ ಪ್ರಶಂಸೆ ಇರುವುದು ಪುರುಷರು ನೃತ್ಯದಲ್ಲಿ ಹೆಚ್ಚು ಪರಿಣಿತರಾಗಿದ್ದರೆಂಬುದನ್ನು ಸೂಚಿಸುತ್ತದೆ. ಭರತಾಗಮ ಜ್ಞಾನವನ್ನು ಹೊಂದಿ ಅಭಿನಯದಲ್ಲಿ ಪ್ರಾಯೋಗಿಕವಾಗಿ ಪ್ರಯೋಗಿಸುತ್ತಿದ್ದುದರ ಬಗ್ಗೆ ಆಧಾರವನ್ನೊದಗಿಸಿದೆ ಈ ಶಾಸನ. ಅದರ ಪಾಠ ಕೆಳಗಿನಂತಿದೆ:

೧ ಭರತನುತವಚನರಚನಾವಿರಚಿತ ನಟಸೇವ್ಯ
೨ ಸಿಂಘನಾದೇನ ಪರನಟ ಮದಾನ್ಧ ಹಸ್ತೀ ಪರಿಹೀನ ಮದೋ
೩ ಭವತ್ಯೇವ ॥ ನಟಸೇವ್ಯ ಭರತಮತಯುತ ಪಟುತ
೪ ರ ವಚನಾಶನಿಪ್ರಪಾತೇನ ಕುಟಿಲೋನ್ನತ ನಟಶೈಲಃ
೫ ಸ್ಫುಟಿತಾನತ ಮಸ್ತಕಜ್ಜಿತಂತಿ ॥ ಅಚಲನ್

– ಪಟ್ಟದಕಲ್ಲ ಗುಡಿಗಳು – ಎಂ.ಎಂ. ಅಣ್ಣಿಗೇರಿ. ಕನ್ನಡ ಸಂಶೋಧನ ಸಂಸ್ಥೆ. ಧಾರವಾಡ. ೧೯೬೦. ಪು.೮೧.

ಭರತನ ನಾಟ್ಯಶಾಸ್ತ್ರದಲ್ಲಿ ಸಂಪೂರ್ಣ ಪರಿಣತಿಯನ್ನು ಪಡೆದಿದ್ದ, ಈ ಶಾಸನೋಕ್ತ ನಟನ ಗರ್ಜನೆಯನ್ನು ಕೇಳಿದರೆ ಸಾಕು ಉಳಿದ ನಟರು ತಮ್ಮ ಅಹಂಕಾರವನ್ನು ಉಡುಗಿಸಿಕೊಂಡು ತೆಪ್ಪಗಾಗುತ್ತಿದ್ದರಂತೆ. ಇದರಿಂದ ಅಚಲನು ಒಬ್ಬ ನಟನಾಗಿ, ನಾಟಕಕಾರನು, ನರ್ತಕನೂ ಆಗಿದ್ದನೆಂಬುದನ್ನು ಹಾಗೂ ಶಿಕ್ಷಣವನ್ನೂ, ನೃತ್ಯ ಸಂಯೋಜನೆಯನ್ನು ಮಾಡುವಲ್ಲಿ ಪರಿಣತನಾಗಿದ್ದನೆಂಬುದು ದೃಢಪಡುತ್ತದೆ.

ಚಾಲುಕ್ಯರ ಕಾಲದಲ್ಲಿ ವಿಶೇಷವಾಗಿ "ಅಭಿನಯ"ಕ್ಕೆ ಒತ್ತು ಕೊಡುವ ಕೆಲವು ಶಾಸನಗಳು ಸಾಹಿತ್ಯ ಮತ್ತು ಸಂಗೀತ ರಚನೆಗಳ ಬಗ್ಗೆ ಹೆಚ್ಚಿನ ಸಂಶೋಧನೆಯನ್ನು ಅಪೇಕ್ಷಿಸುತ್ತವೆ. ಚಾಲುಕ್ಯರ ಕಾಲದಲ್ಲಿ ಚಿಕ್ಕದಾಗಿ ಗದ್ಯರೂಪವಿದ್ದ ಶಾಸನಗಳು ವಿಸ್ತಾರವಾಗಿ, ಕಾವ್ಯಮಯ ಪದ್ಯಗಳಾಗಿ ರೂಪು ಪಡೆದು, ಕಲೆಯು ಉಚ್ಛ್ರಾಯ ಸ್ಥಿತಿಯನ್ನು ತಲುಪಿದ ಬಗ್ಗೆ ಆಧಾರಗಳು ಸಿಗುತ್ತವೆ. ಹೊಯ್ಸಳರ ಕಾಲ ವಿಷ್ಣುವರ್ಧನನ ಕಾಲವೆಂದೇ ಪ್ರಸಿದ್ಧಿ. ವಿಷ್ಣುವರ್ಧನ ಹಾಗೂ ಪಟ್ಟಮಹಿಷಿ ಶಾಂತಲಾದೇವಿ ಇಬ್ಬರೂ ಸ್ವತಃ ಕಲಾವಿದರಾಗಿ ಕಲೆಗಾಗಿ ತಮ್ಮ ತನು, ಮನ ಧನಗಳನ್ನರ್ಪಿಸಿ, ಅವರಳಿದರೂ ಶಾಶ್ವತವಾಗಿ ನೆಲೆನಿಂತು ಇತರರಿಗೆ ಸ್ಫೂರ್ತಿಯ ನೆಲೆಯಾಗಿದ್ದಾರೆ. ಇವರ ಕಾಲದಲ್ಲಿ ಸ್ತ್ರೀಯರೂ ಹೆಚ್ಚಿನ ಸಂಖ್ಯೆಯಲ್ಲಿ ಕಲಾವಿದರಾಗಿ, ಕಲಾಭಿವೃದ್ಧಿಗೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ.

ಕ್ರಿ.ಶ. ೧೧೧೭ರ ಬೇಲೂರಿನ ಚೆನ್ನಕೇಶವ ದೇವಾಲಯದ ಗೋಡೆಯಲ್ಲಿ ಇರುವ ಶಾಸನವು ವಿಷ್ಣುವರ್ಧನನನ್ನು ಶ್ರೇಷ್ಠ ರೀತಿಯಲ್ಲಿ ಹೊಗಳಿ ಆತನ ಪರಾಕ್ರಮ, ವಿಕ್ರಮತೆಗಳನ್ನು ವಿಜೃಂಭಿಸಿ ಉಲ್ಲೇಖಿಸಿದೆ. ಇನ್ನೊಂದು ಶಾಸನ ಕ್ರಿ.ಶ. ೧೧೩೦ರಲ್ಲಿ ಇದೇ ದೇವಾಲಯದ ಮುಖಮಂಪಟದ ಎಡಭಾಗದ ಕಲ್ಲಿನಲ್ಲಿದ್ದು ರಾಜನು ದೇವರ ಸೇವೆಯೊಂದಿಗೆ ಸಂಗೀತ, ನೃತ್ಯ, ವಾದ್ಯಗಳಿಗೂ ದಾನ, ದತ್ತಿಗಳನ್ನು ನೀಡಿದ ವಿವರಗಳನ್ನು ನೀಡುತ್ತದೆ. ಕ್ರಿ.ಶ. ೧೧೩೫ರಲ್ಲಿ ನಾಗಮಂಗಲದ ಭುವನೇಶ್ವರಿ ದೇವಸ್ಥಾನದಲ್ಲಿರುವ ಶಿಲಾಶಾಸನವು ವಿಷ್ಣುವರ್ಧನನ ಆಸ್ಥಾನ ನಿತ್ಯವೂ ವಿದ್ವನ್ಮಣಿಗಳಿಂದ, ಕಲಾಕಾರರಿಂದ ತುಂಬಿರುತ್ತಿತ್ತು. ಪಾಂಡಿತ್ಯ ಪ್ರದರ್ಶನಕ್ಕೆ ಶ್ರೇಷ್ಠವಾದ ವೇದಿಕೆಯಾಗಿತ್ತು. ವಿಷ್ಣುವರ್ಧನನು ಸಂಗೀತ, ವಿದ್ಯೆ, ತರ್ಕಶಾಸ್ತ್ರಗಳಲ್ಲಿ

ಬುದ್ಧಿವಂತನಾಗಿ ಪರಿಣತಿ ಪಡೆದಿದ್ದನು. ಈತನು ಪ್ರದರ್ಶನ ಕಲೆಯಲ್ಲಿ ನಿಜವಾದ "ಭರತ"ನೇ ಎಂದು ಉಲ್ಲೇಖಿಸಿದೆ. ಇದರಿಂದ ಭರತನ ನಾಟ್ಯಶಾಸ್ತ್ರ ಹಾಗೂ ಅದರಲ್ಲಿನ ಇತರ ಕಲೆಗಳ ಪ್ರಾಮುಖ್ಯತೆ, ಅಭಿವೃದ್ಧಿ ಮತ್ತು ರಾಜನ ಕಲಾವಂತಿಕೆ, ಆತನ ಪಟ್ಟಮಹಿಷಿ "ಕಲಾಸರಸ್ವತಿ" ಬಿರುದಾಂಕಿತ ನಾಟ್ಯರಾಣಿ ಶಾಂತಲೆಯ ಬಗ್ಗೆ ಹಾಗೂ ಅವಳ "ಅಭಿನಯ"ದ ಬಗ್ಗೆ ಬೆಳಕನ್ನು ಚೆಲ್ಲುವ ಅಮೂಲ್ಯ ಆಕರವಾಗಿದೆ.

ಪ್ರಥಮವಾಗಿ ಕ್ರಿ.ಶ. ೧೧೨೦ರ ಕಾಲಾವಧಿಯ ಬೇಲೂರಿನ ದೇವಸ್ಥಾನದಲ್ಲಿನ ಶಿಲಾಶಾಸನವು ಶಾಂತಲಾದೇವಿಯನ್ನು ವರ್ಣಿಸಲು ಯಾವುದೇ ಬಿರುದಾವಳಿಗಳು ಅನರ್ಹವೆಂದು ತಿಳಿಸುತ್ತದೆ. ಶಿಲ್ಪಿ ಚಾವಣನು ಶಾಂತಲೆಯ ಪ್ರತಿಬಿಂಬವನ್ನು ಶಿಲೆಯಲ್ಲಿ ಪಡಿಮೂಡಿಸಿರುವುದು ಜ್ಞಾನದೇವತೆ, ಕಲಾಸರಸ್ವತಿಯೇ ನೆಲೆಸಿರುವಂತೆ, ಶಾಂತಲೆಯ ದರ್ಪಣದ ಮುಂದಿನ ನಿಲುವಿನಲ್ಲಿ ಮೂಡಿದೆ. ಭರತಾಗಮನಲದಲ್ಲಿ ಲಯ, ವೇದಾಂತ, ನಾಟ್ಯರಂಗದ ಅಭಿನಯ ಭಾವಗಳಿಗೆ ಮುಖ್ಯ ಪ್ರವಾಹಿನಿಯೇ ಇವಳಾಗಿದ್ದಾಳೆ. ಇವಳು ಎರಡು ರೀತಿಯ ನಾಟ್ಯಗಳಲ್ಲಿ ಲಾಲಿತ್ಯವನ್ನು ಸಂಪಾದಿಸಿರುವಳು. ಅವುಗಳು ತಾಂಡವ-ಲಾಸ್ಯ ಅಥವಾ ನೃತ್ತ-ನೃತ್ಯ ಅಥವಾ ಮಾರ್ಗ-ದೇಸೀ ಎಂಬ ಪ್ರಭೇದಗಳಲ್ಲೊಂದಾಗಿದೆ. ಶಾಂತಲೆ ಸಂಗೀತದಲ್ಲೂ ಹಿಂದುಳಿದಿಲ್ಲ. ಶ್ರುತಿಯ ಇಂಪಿನೊಂದಿಗೆ ಭಾವನಾತ್ಮಕ ರಾಗಗಳಿಂದ ಮನಮೋಹಕಗೊಳಿಸುತ್ತಾಳೆ. ಇದರೊಂದಿಗೆ ರಸಯುಕ್ತ ನೋಟದ ನೃತ್ಯ ಹಾಗೂ ಕೈಶಿಕೀ ವೃತ್ತಿಯಲ್ಲಿ ಹೆಚ್ಚು ಮನೋಜ್ಞವಾದ, ಭಕ್ತಿಪೂರ್ವಕವಾದ ಅಭಿನಯವನ್ನು ನೀಡಿ ಅದರಲ್ಲಿ ತಾದಾತ್ಮ್ಯತೆಯನ್ನು ಹೊಂದುತ್ತಾಳೆ. ಈಕೆಯನ್ನು ಸವಿವರವಾದ ನೃತ್ಯಾಭಿನಯವನ್ನು ಕಾವ್ಯಾತ್ಮಕತೆಯಲ್ಲಿ ವರ್ಣಿಸಿದೆ. ಪ್ರಥಮವಾಗಿ ಅಭಿನಯದಲ್ಲಿನ ಸವಿವರಗಳು ಕಾಣುತ್ತವೆ. ಭಾವರಸಗಳಲ್ಲಿ ಚತುರ್ವಿಧಾಭಿನಯಗಳ ಬಗ್ಗೆಯೂ ಬೆಳಕು ಚೆಲ್ಲುತ್ತದೆ. ಆದರೆ ಯಾವ ಕೃತಿ, ಸಾಹಿತ್ಯ ಮತ್ತು ಸಂಗೀತಗಳನ್ನು ಆಧರಿಸಿ ಅಭಿನಯಿಸುತ್ತಿದ್ದಳು ಎಂಬುದರ ಬಗ್ಗೆ ನಿಖರವಾದ ಮಾಹಿತಿ ಸಿಗುವುದಿಲ್ಲ. ಇದಕ್ಕೆ ಪೂರಕವಾದ ಇನ್ನೊಂದು ಶಾಸನವು ಸಂಗೀತ ಮತ್ತು ಸಾಹಿತ್ಯ ರಚನೆಯ ಬಗ್ಗೆ ಕ್ವಚಿತ್ತಾಗಿ ಬೆಳಕನ್ನು ಚೆಲ್ಲುತ್ತದೆ.

ನರಸಿಂಹನಾಳ್ವಿಕೆಯ ಬೇಲೂರಿನ ಶಿಲಾಶಾಸನದಲ್ಲಿ ಹಳ್ಳಿಯ ಯಜಮಾನನು ಹಾಡುಗಾರರಿಗೆ "ಸಹಾಯಧನವನ್ನು" ನೀಡುತ್ತಿದ್ದುದರ ಬಗ್ಗೆ ವಿವರಿಸಿದೆ. ಆ ಹಾಡುಗಾರರನ್ನು "ಜಾವಳಿ" ಹಾಡುಗಾರರೆಂದು ಗುರುತಿಸಿರುವುದು ಪ್ರಮುಖ ಅಂಶವಾಗಿದೆ. ನೃತ್ಯಾಭಿನಯಕ್ಕೆ ಸಂಗೀತಗಾರರು ಜಾವಳಿಯಂತಹ ಸಂಗೀತ ರಚನೆಗಳ "ಅಭಿನಯ"ಕ್ಕೆ ಪೂರಕವಾಗಿದ್ದರೆಂಬ ಅಂಶವು ಇದರಿಂದ ದೃಢಪಟ್ಟಿದೆ. ಮೈಸೂರು ಶೈಲಿಯ ಅಭಿನಯದಲ್ಲಿ ಈ ಜಾವಳಿಗಳನ್ನು ಅಭಿನಯಕ್ಕೆ ಹೆಚ್ಚಾಗಿ ಪ್ರಯೋಗಿಸಿ, ಜಟ್ಟಿತಾಯಮ್ಮ, ಡಾ॥ ವೆಂಕಟಲಕ್ಷ್ಮಮ್ಮನಂತಹವರು ಇದರಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದುದರ ಬಗ್ಗೆ ಪ್ರಾಯೋಗಿಕವಾಗಿಯೂ ತಿಳಿದಿರುವ ಹಿನ್ನೆಲೆಯಲ್ಲಿ ನೃತ್ಯಕ್ಕೆ ಈ ಶಾಸನ ಮಹತ್ತರ ಕೊಡುಗೆ ನೀಡಿದೆ. ಹೊಯ್ಸಳರನ್ನೇ ಅನುಸರಿಸಿದ ವಿಜಯನಗರದ ಅರಸರ ಆಳ್ವಿಕೆಯಲ್ಲಿ ಕ್ವಚಿತ್ತಾದ ನೃತ್ಯ, ಅಭಿನಯ, ಸಂಗೀತ ಮತ್ತು ವಾದ್ಯಗಳವರಿಗೆ ದಾನದತ್ತಿಗಳನ್ನು ನೀಡಿರುವ ಉಲ್ಲೇಖಗಳು ಮಾತ್ರ ಕಾಣಸಿಗುತ್ತವೆ.

ಕ್ರಿ.ಶ. ೧೫೩೮ರ ಕಾಲಾವಧಿಯ ಅಚ್ಯುತರಾಯನಾಳ್ವಿಕೆಯ ಅನಂತಪುರ ಜಿಲ್ಲೆಯ ಹಿಂದೂಪುರ ತಾಲೂಕಿನ ಗೊರ್ರಪಳ್ಳಿಯ ಲಕ್ಷ್ಮೀದೇವಿಯ ದೇವಸ್ಥಾನದ ದಕ್ಷಿಣ ಗೋಡೆಯ ಪ್ರಾಕಾರದ ಶಿಲಾಶಾಸನದಲ್ಲಿ ವೀರಣ್ಣ ನಾಯಕನು ಪ್ರತಿ ಶುಕ್ರವಾರ ಲಕ್ಷ್ಮೀದೇವಿಯ ಪೂಜಾ ಸೇವೆಗಾಗಿ ನೃತ್ಯಕಾರ್ಯಕ್ರಮಗಳನ್ನು ಏರ್ಪಡಿಸುವ ಸಲುವಾಗಿ ಸಹಾಯಧನವನ್ನು ಕಲೆಗಾಗಿ ವಿನಿಯೋಗಿಸಲು ನೀಡಿದನೆಂದು ಉಲ್ಲೇಖವಿದೆ. ಕ್ರಿ.ಶ. ೧೫೫೫ರ ಸದಾಶಿವರಾಯರ ಆಳ್ವಿಕೆಯಲ್ಲಿನ ಉತ್ತರ ಕನ್ನಡ ಜಿಲ್ಲೆಯ ಸಿರಸಿ ತಾಲ್ಲೂಕಿನ ಬನವಾಸಿಯ ಮಧುಕೇಶ್ವರ ದೇವಸ್ಥಾನದ ಹಿಂಭಾಗದಲ್ಲಿನ ಶಾಸನದಲ್ಲಿ ಚಂದ್ರಗುತ್ತಿಯಲ್ಲಿ ಆಳುತ್ತಿದ್ದಂತಹ ಮಹಾಮಂಡಲೇಶ್ವರ, ರಾಮೇಶ್ವರಬ್ಬಯ್ಯ, ವೆಂಕಟಾದ್ರಿರಬ್ಬಯ್ಯ ಮತ್ತು ಪದುಮಪ್ಪನವರು ಜೊತೆಯಾಗಿ ಎರಡು ರಂಗಮಂಟಪ, ವೇದಿಕೆಗಳನ್ನು ಪ್ರದರ್ಶನ ಕಲೆಯಾದ ನೃತ್ಯ ಮತ್ತು ಸಂಗೀತ, ಹಾಗೂ ನಾಟಕ ಪ್ರದರ್ಶನಗಳು ಮಧುಕೇಶ್ವರ ದೇವಾಲಯದ ದೇವರ ಸೇವೆಗಾಗಿ ನಡೆಯುವಂತೆ ಕಟ್ಟಿಸಿದರೆಂದು ಶಾಸನವು ವಿವರಿಸುತ್ತದೆ.

ಕ್ರಿ.ಶ. ೧೧೫೨ರ ಪಾಂಡವಪುರ ಶಾಸನದಲ್ಲಿ ತೊಣ್ಣೂರಿನ ನರಸಿಂಹ ದೇವಾಲಯವನ್ನು ಚೊಕ್ಕಣ್ಣಪರ್ಗ್ಗಡಿ ಎಂಬಾತನು ಕಟ್ಟಿಸಿದನೆಂದು, ಅದರಲ್ಲಿನ ಒಂದು ಗುಡಿಯಲ್ಲಿ ಕೃಷ್ಣನನ್ನು ಮಟ್ಟಿಯ ಬಾಕ್ಸಂ ಗ್ರಾಮದ "ಆಂಡಾಳ್" ಎಂಬಾಕೆ ಪ್ರತಿಷ್ಠಾಪಿಸಿದಳೆಂದು ಉಲ್ಲೇಖವಿದೆ. ಇದು "ಆಂಡಾಳ್" ವಿಷ್ಣುಭಕ್ತೆಯಾಗಿದ್ದರ ಹಿನ್ನೆಲೆಯಲ್ಲಿ ಹಾಗೂ ಆಕೆ ರಚಿಸಿದ ಪಾಶುರಗಳನ್ನು "ತಿರುಪ್ಪಾವೈ" ಪ್ರಬಂಧಗಳಾಗಿ ಇಂದೂ ತಮಿಳುನಾಡಿನಲ್ಲಿ ಹಾಡಿ ನರ್ತಿಸುತ್ತಾರೆ. ಇದನ್ನು "ಆಂಡಾಳ್" ವೇಷ-ಭೂಷಣಗಳೊಂದಿಗೆ ನರ್ತಿಸುವ ಪರಿಪಾಠವನ್ನು ಇಂದಿನ ಕಲಾವಿದರಲ್ಲೂ ಕಾಣುತ್ತೇವೆ. ಕಾಲಘಟ್ಟಗಳಲ್ಲಿ

ವ್ಯತ್ಯಾಸಗಳಿರುವುದರ ಹಿನ್ನೆಲೆಯಲ್ಲಿ "ಆಂಡಾಳ್" ಬೇರೆಯಾಗಿಯೇ ಕಾಣುತ್ತಾಳೆ.

ಕೆಳದಿ ಸಂಸ್ಥಾನದಲ್ಲಿನ "ಇಕ್ಕೇರಿ" ಹಾಗೂ "ನಾಡಕಳಸಿ" ಗ್ರಾಮಗಳಲ್ಲಿಯೂ. ನೃತ್ಯದ ಬಗ್ಗೆ ಬೆಳಕನ್ನು ಚೆಲ್ಲುವ ಶಿಲಾಶಾಸನಗಳೂ ದೊರಕುತ್ತವೆ. ಜೊತೆಗೆ ಗೀತಗೋವಿಂದದ ಪೂರ್ಣಾಧ್ಯಾಯದ ತಾಳೆಯೋಲೆಗಳು ಹಾಗೂ ನಾಟ್ಯಶಾಸ್ತ್ರಗ್ರಂಥದ ಸಂಗ್ರಹದಲ್ಲಿ "ತಾಳೋತ್ಪತ್ತಿ" ಅಧ್ಯಯನದ ನಾಲ್ಕು ತಾಳೆಯೋಲೆಗಳು ಹಸ್ತಪ್ರತಿಯ ರೂಪದಲ್ಲಿ ದೊರಕಿ ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ. ಈ ತಾಳೋತ್ಪತ್ತಿ ಕೆಳದಿಯ "ರಾಮೇಶ್ವರ" ದೇವಾಲಯದಲ್ಲಿದೆ. ಇಲ್ಲಿ ಏಕದ್ವಾರವಿದ್ದು. ಮುಖಮಂಟಪವನ್ನು ಬಳಸಿ ಗರ್ಭಗುಡಿಗೆ ಪ್ರದಕ್ಷಿಣಾಪಥವಿದೆ. ಆ ಕಂಬಗಳ ನವರಂಗದಲ್ಲಿ ಮೊದಲ ಕಂಬದ ಬುಡದಲ್ಲಿ ಶಾಸನವಿದೆ. ಹೆಚ್ಚಿನ ಜನಸಂಖ್ಯೆಯ ಕಾಲ್ತುಳಿತದಿಂದ ಹಾಗೂ ಹವಾಮಾನಗಳಿಂದ ನಶಿಸಿ ಕ್ವಚಿತ್ತಾಗಿ ತಾಳದ ಸಂಖ್ಯೆಗಳಿರುವುದು ಕಂಡುಬರುತ್ತದೆ. ಛಾಯಾಪ್ರತಿಯಲ್ಲಿ ೧೧.೦೧೧.೦೦೦೧ ಹೀಗೆ ಲಿಖಿತಗೊಂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ, ಎಪಿಗ್ರಾಫಿಯಾ ಕರ್ನಾಟಿಕಾದ ಸಂಪುಟ ೮ (ರೈಸ್ ಆವೃತ್ತಿ) ಸಾಗರ ೧೫೮ರಲ್ಲಿನ ಶಾಸನವು ನೃತ್ಯ ಮತ್ತು ರಸಾಭಿನಯಕ್ಕೆ ಆಧಾರವನ್ನೊದಗಿಸುತ್ತದೆ.

ಕ್ರಿ.ಶ. ೧೨೧೮ರ ವೀರಗಲ್ಲಿನ ಶಾಸನವು ವೀರತ್ವದ ಅನೇಕ ವರ್ಣನೆಗಳು ಭೀಭತ್ಸರಸಕ್ಕೆ ನಿದರ್ಶನವಾಗಿ ನಿಲ್ಲುತ್ತದೆ. ಇದರಲ್ಲಿನ ಒಂದು ಪಂಕ್ತಿಯಲ್ಲಿ, ಸತ್ತು ಪಿಶಾಚಿಗಳಾದ ಸೂಳೆಯರು ಶತ್ರುಗಳ ಹಸಿತೊಗಲನ್ನು ಆಭರಣಗಳಾಗಿ ಧರಿಸಿ, ಹಸಿ ಹಸಿ ಮೆದುಳನ್ನು ಕೈಯಲ್ಲಿ ಹಿಡಿದು, ತಮ್ಮ ಬಾಳೆಯಮವೇರ್ಗಡೆಯ ಶೌರ್ಯವನ್ನು ನೃತ್ಯದ ಮೂಲಕ ವರ್ಣಿಸಿ, ಸತ್ತ ಸೈನಿಕರನ್ನೇ ಹೆದರಿಸಿ ಓಡಿಸಿದರೆಂಬ ವಿವರಣೆ ನೀಡುತ್ತದೆ. ಇದು "ನೃತ್ಯನಾಟಕ'ವನ್ನು ಪ್ರತಿಬಿಂಬಿಸುವುದರೊಂದಿಗೆ ಆ ಕಲಾವಿದರ ಸಾಮರ್ಥ್ಯವನ್ನು ಪ್ರತಿಭೆಯನ್ನು "ಅಭಿನಯ"ದಲ್ಲಿ ಅಭಿವ್ಯಕ್ತಿಸಿರುವುದು ಶಾಸನಕಾರನ ಸಾಮರ್ಥ್ಯವನ್ನು ತೋರಿಸುತ್ತದೆ. ಇದಕ್ಕೆ ಪೂರಕವಾಗಿ ನಾಡಕಳಸಿ ಗ್ರಾಮದಲ್ಲಿ ಸುಮಾರು ೧೬ನೆಯ ಶತಮಾನದ ಆದಿಭಾಗದಲ್ಲಿ ಹೊಯ್ಸಳ ಶೈಲಿಯಲ್ಲಿ ನಿರ್ಮಿತವಾದ ಎರಡು ದೇವಾಲಯಗಳಿವೆ. ಅವು ರಾಮೇಶ್ವರ ದೇವಾಲಯ ಹಾಗೂ ಮಲ್ಲಿಕಾರ್ಜುನ ದೇವಾಲಯ. ಇಲ್ಲಿನ ರೇಖಾಶಿಲ್ಪಚಿತ್ರಗಳು ರಂಗಭೋಗದ ಸೇವೆಯು ದೇವಾಲಯದಲ್ಲಿ ನಡೆಯುತ್ತಿದ್ದುದರ ಬಗ್ಗೆ ಆಧಾರವನ್ನೊದಗಿಸುತ್ತದೆ. ಬಲಿದಾನ, ಧೈರ್ಯ, ಶೌರ್ಯತೆಗಳಿಗಾಗಿ ಮಡಿದ ವೀರರ ಮರಣೋತ್ತರ ಕಾರ್ಯಗಳಲ್ಲಿ ನೃತ್ಯ, ಸಂಗೀತಸೇವೆಗಳನ್ನು ಮಾಡುವ ಪದ್ಧತಿಗಳು ಇದ್ದುವೆಂಬ ವಿವರವು ಕೆಳದಿ ವಸ್ತು ಸಂಗ್ರಹಾಲಯದಲ್ಲಿನ ಮೂರು ವೀರಗಲ್ಲುಗಳಿಂದ ವಿವರವಾಗಿ ತಿಳಿದು ಬರುತ್ತದೆ. ಇದರೊಂದಿಗೆ ರಾಜಾಂಗನೆಯರು ದೇವದಾಸಿಯರೆಂಬ ನಿಖರವಾದ ಮಾಹಿತಿಗಳು ಕೆಳದಿ ಗುಂಡಾಜೋಯಿಸ್ ಹಾಗೂ ಕೆಳದಿ ವೆಂಕಟೇಶ್ ಜೋಯಿಸ್ ಅವರ ಸಂಶೋಧಿತ ಗ್ರಂಥಗಳಿಂದ ದೃಢಪಡುತ್ತದೆ.

ನೃತ್ಯದಲ್ಲಿನ "ಅಭಿನಯ"ದ ದೃಷ್ಟಿಕೋನದಿಂದ ಹೊಯ್ಸಳರ ಕಾಲದಲ್ಲಿನ ಶಿಲಾಶಾಸನಗಳು ಹೆಚ್ಚು ಮಹತ್ವದ್ದಾಗಿವೆ. ಇತರ ಶಾಸನ ಮತ್ತು ವೀರಗಲ್ಲುಗಳು ಅದಕ್ಕೆ ಪೂರಕವಾಗಿ ಆಧಾರಗಳನ್ನೊದಗಿಸುತ್ತವೆ. ಈ ಕೆಲವೇ ಶಾಸನಗಳ ಅಧ್ಯಯನಗಳು ನೃತ್ಯಕ್ಕೆ ಪೂರಕವಾದ ಮಾಹಿತಿಯನ್ನೊದಗಿಸಿ ಸಂಶೋಧಕರಿಗೆ ಮೂಲನೆಲೆಯನ್ನೊದಗಿಸುವಲ್ಲಿ ಹೆಚ್ಚು ಸಹಕಾರವನ್ನು ಒದಗಿಸುತ್ತದೆ. ಇದೊಂದು ಅದ್ಭುತ ಕಲಾಲೋಹವಿಹಾರ. ಸಮುದ್ರದಿಂದ ಮೊಗೆದಷ್ಟು ದೊರೆಯುತ್ತಲೇ ಇರುವ ಮುತ್ತು, ರತ್ನಗಳಂತೆ. ಇದರ ಬಗೆಗೆ ಹೆಚ್ಚಿನ ವಿವರಗಳನ್ನು ಮೂಲಶಾಸನ ಹಾಗೂ ಪ್ರಕಟವಾಗಿರುವ ಗ್ರಂಥಗಳು ಲೇಖನಗಳಿಂದಲೂ ಪಡೆಯಬಹುದಾಗಿದೆ.

## ಆಧಾರ ಸೂಚಿ

೧. ಇಂಡಿಯನ್ ಆ್ಯಂಟಿಕ್ವರಿ ೭ನೆಯ ಭಾಗ.

೨. ಭರತನ ನಾಟ್ಯಶಾಸ್ತ್ರ, (ಸಂ.) ಡಾ॥ ಮನಮೋಹನ್ ಘೋಷ್, ೨೫ನೆಯ ಅಧ್ಯಾಯ.

೩. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ.

೪. ಕನ್ನಡ ಸಾಹಿತ್ಯ ಶಾಸನಗಳಲ್ಲಿ ಸಂಗೀತದ ವಿಚಾರ.

೫. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.

೬. ಎಪಿಗ್ರಾಫಿಯ ಕರ್ನಾಟಿಕ ಸಂಪುಟ ೮ (ರೈಸ್ ಆವೃತ್ತಿ) ಸಾಗರ.

೭. ಹೊಯ್ಸಳ ವಾಸ್ತುಶಿಲ್ಪ, ಎಸ್. ಶ್ರೀಕಂಠಶಾಸ್ತ್ರಿ, ಮೈಸೂರು ವಿಶ್ವವಿದ್ಯಾನಿಲಯ, ೧೯೬೫.

೮. ಡಾ॥ ವೆಂಕಟೇಶ್ ಜೋಯಿಸ್, ಕೆಳದಿ ವಸ್ತು ಸಂಗ್ರಹಾಲಯ ಕ್ಯುರೇಟರ್ ಕೆಳದಿಯಲ್ಲಿ ಭೇಟಿಯಾದ ಸಂದರ್ಭದಲ್ಲಿ ನೀಡಿದ ಸಂಗ್ರಹ.

# ಕರ್ನಾಟಕದಲ್ಲಿ ಪಾಳೆಯಗಾರ ವ್ಯವಸ್ಥೆ

– ಡಾ॥ ಡಿ.ಎಸ್. ಯೋಗೀಶ್ವರಪ್ಪ*

ದಕ್ಷಿಣ ಭಾರತದಲ್ಲಿ ವಿಜಯನಗರ ಮತ್ತು ವಿಜಯನಗರೋತ್ತರ ಕಾಲಾವಧಿಯನ್ನು ಒಂದು ರಾಜಕೀಯ ಮತ್ತು ಸಾಂಸ್ಕೃತಿಕ ಸಂಕ್ರಮಣ ಕಾಲವೆಂದು ಗುರುತಿಸಬಹುದು. ವಿಜಯನಗರೋತ್ತರ ಕಾಲದಲ್ಲಿ ವಿಶಾಲ ಸಾಮ್ರಾಜ್ಯಗಳ ಅಸ್ತಿತ್ವ ಕಳೆಗುಂದುತ್ತಾ ಬಂದು, ಜನಪದರಿಗೆ ಹತ್ತಿರವಿರುವ ಸ್ಥಳೀಯ ಅರಸರೆಂದೇ ಕರೆಯಲ್ಪಡುವ ಪಾಳೆಯಗಾರರು ಪ್ರಭಾವೀ ರಾಜಕೀಯ ಶಕ್ತಿಗಳಾಗಿ ಮೂಡಿಬಂದರು. ಇವರು ಮೂಲತಃ ಮಿಜಯನಗರದ ಅರಸರಿಂದ ರಾಜಕೀಯ ಅಸ್ತಿತ್ವವನ್ನು ಪಡೆದುಕೊಂಡವರಾಗಿದ್ದಾರೆ. ಈ ಕಾರಣಕ್ಕಾಗಿಯೇ ಹೆಸರಾಂತ ಇತಿಹಾಸಕಾರ ಬರ್ಟನ್‌ಸ್ಟೈನ್ ವಿಜಯನಗರ ಸಾಮ್ರಾಜ್ಯದ ಸ್ವರೂಪವನ್ನು ಕುರಿತಂತೆ 'ಸೆಗ್‌ಮೆಂಟರಿ ಸಿದ್ಧಾಂತ'ದ ಹಿನ್ನೆಲೆಯಲ್ಲಿ ವ್ಯಾಖ್ಯಾನ ಮಾಡಿದ್ಧಾನೆ. ಅವನ ಪ್ರಕಾರ 'ವಿಜಯನಗರ ಸಾಮ್ರಾಜ್ಯವು ಒಂದು ಖಂಡಾಂತರ ರಾಜ್ಯವಾಗಿದೆ. ಈ ಸಾಮ್ರಾಜ್ಯ ಅದೇ ರೀತಿಯ ಅನೇಕ ತುಂಡು ರಾಜ್ಯಗಳಿಂದ ಕೂಡಿದ್ದು, ಅವುಗಳಿಂದ ಆವೃತವಾಗಿದೆ. ರಾಜನ ಅಧಿಕಾರವು ತಿರುಳು ಭಾಗದ ಮೇಲೆ ಇದ್ದಿತೇ ವಿನಃ ಬೇರೆ ಭಾಗಗಳ ಮೇಲಿರಲಿಲ್ಲಿ. ಆದರೆ ಬೇರೆ ಭಾಗಗಳ ಜೊತೆ ಅವನ ಸಂಬಂಧವು ಕೇವಲ ಧಾರ್ಮಿಕಾಚರಣೆಗೆ ಸೀಮಿತವಾಗಿತ್ತು[೧]. ಆದರೆ ಈ ಸಿದ್ಧಾಂತದ ಬಗೆಗೆ ಅನೇಕ ವಿದ್ವಾಂಸರು ಆಧಾರ ಪೂರ್ವಕವಾಗಿ ವಿರೋಧ ವ್ಯಕ್ತಪಡಿಸಿದ ಹಿನ್ನೆಲೆಯಲ್ಲಿ ಸ್ಟೈನ್‌ರವರು ತಮ್ಮ ಅಭಿಪ್ರಾಯವನ್ನು ಬದಲಿಸಿಕೊಳ್ಳಬೇಕಾಯಿತು. ಅಂತಿಮವಾಗಿ ಅವರು ಬಹುಪಾಲು ತಮ್ಮ ಸಿದ್ಧಾಂತವನ್ನೇ ರದ್ದು ಮಾಡಿದರೆನ್ನಬಹುದು. ಒಟ್ಟಿನಲ್ಲಿ ಬರ್ಟನ್‌ಸ್ಟೈನ್‌ರವರು 'ರಾಜ ಮತ್ತು ಪಾಳೆಯಗಾರರ ನಡುವೆ ರಾಜಕೀಯ ಸಂಬಂಧವಿರಲಿಲ್ಲ, ಪಾಳೆಯಗಾರರು (Magnetes in the locality) ಸ್ಥಳೀಯ ಪ್ರತಿಷ್ಠಿತ ವ್ಯಕ್ತಗಳಾಗಿದ್ದರು' ಎನ್ನುವರು. ಜಪಾನಿನ ಇತಿಹಾಸಕಾರರಾದ ಖರಾಷಿಮಾರವರು 'ವಿಜಯನಗರ ಸಾಮ್ರಾಜ್ಯವು ಕೇಂದ್ರೀಕೃತ ಮತ್ತು ವಿಕೇಂದ್ರೀಕೃತಗಳ ಎರಡೂ ಅಂಶಗಳನ್ನು ಸಮನ್ವಯ ಮಾಡಿಕೊಂಡಿತ್ತೆಂದು' ಅಭಿಪ್ರಾಯಪಟ್ಟಿದ್ದಾರೆ. ಆದರೆ ವಿಜಯನಗರ ಸಾಮ್ರಾಜ್ಯದಲ್ಲಿ ವಿಕೇಂದ್ರೀಕರಣಕ್ಕೆ ಅವಕಾಶವಿತ್ತು. ಉದಾ: ನ್ಯೂನಿಜ್‌ನ ಬರವಣಿಗೆಯಲ್ಲಿ ಮಿಜಯನಗರ ಸಾಮ್ರಾಜ್ಯದ ಒಂದು ಸ್ಪಷ್ಟವಾದ ಚಿತ್ರ ದೊರಕುತ್ತದೆ[೨]. ಇವನು ನೀಡಿರುವ ಮಾಹಿತಿಯನ್ನು ನೋಡಿದರೆ ವಿಜಯನಗರ ಸಾಮ್ರಾಜ್ಯದಲ್ಲಿ, ಅದರಲ್ಲೂ ೧೬ನೆಯ ಶತಮಾನದ ಉತ್ಕರ್ಷ ಕಾಲದಲ್ಲಿ ರಾಜಕೀಯ ಅಧಿಕಾರ ವಿಕೇಂದ್ರೀಕರಣಗೊಂಡಿದ್ದು ಸ್ಪಷ್ಟವಾಗಿ ಕಾಣುತ್ತದೆ. ಕೆಳಹಂತಗಳಲ್ಲಿ ಬೇರೆ ಬೇರೆ ದರ್ಜೆಯ ಕ್ಯಾಪ್ಟನ್ನಗಳು ಇದ್ದರೆಂದು ಇವರು ಬರೆಯುತ್ತಾರೆ. ಈ ಮಾಹಿತಿಯನ್ನಾಧರಿಸಿ ಹೇಳುವುದಾದರೆ ಈ ಕ್ಯಾಪ್ಟನ್‌ಗಳನ್ನು ವಿಜಯನಗರ ಸಾಮ್ರಾಜ್ಯದಲ್ಲಿ ಉಲ್ಲೇಖವಾಗಿರುವ ಅಮರನಾಯಕರಿಗೆ ಪಾಳೆಯಗಾರರನ್ನು ಸಮೀಕರಿಸಬಹುದು. ಆದ್ದರಿಂದ ವಿಜಯನಗರ ಸಾಮ್ರಾಜ್ಯದಲ್ಲಿ ರಾಜಕೀಯ ಅಧಿಕಾರ ವಿಕೇಂದ್ರೀಕರಣಗೊಂಡಿದ್ದು ಸ್ಪಷ್ಟವಾಗಿ ಕಾಣುತ್ತದೆ. ವಿದ್ವಾಂಸರು ಈ ಪಾಳೆಯಗಾರರ ಮೂಲವನ್ನು ಎಲ್ಲಿಗೇ ಕೊಂಡೊಯ್ದರೂ ಅವರು ಅಸ್ತಿತ್ವ ಪಡೆದದ್ದು ಮಾತ್ರ ವಿಜಯನಗರ ಕಾಲದಲ್ಲಿಯೇ ಅದರಲ್ಲೂ ತುಳುವ ವಂಶದ ಕಾಲದಲ್ಲಿಯೇ ಎನ್ನಬಹುದು. ವಿಜಯನಗರ ಸಾಮ್ರಾಜ್ಯ ಕ್ರಿ.ಶ. ೧೫೬೫ರಲ್ಲಿ ಸೋಲು ಕಂಡಾಗ ಈ ಪಾಳೆಯಗಾರರು ತಮ್ಮ ಪ್ರದೇಶಗಳಲ್ಲಿ ಸ್ವತಂತ್ರವಾಗಿ ಆಳ್ವಿಕೆ ಮಾಡಲಾರಂಭಿಸಿದರು. ಆದ್ದರಿಂದಲೇ ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಜಯನಗರೋತ್ತರ ಕಾಲಾವಧಿಯನ್ನು ಅಮರನಾಯಕರ ಅಥವಾ ಪಾಳೆಯಗಾರರ ಕಾಲವೆಂದು ಕರೆಯಬೇಕಾಗುತ್ತದೆ.

ಅಮರನಾಯಕತನ ಅಥವಾ ಪಾಳೆಯಗಾರತನ ಎಂದರೆ 'ಒಬ್ಬ ಅರ್ಹ ವ್ಯಕ್ತಗೆ ಕೆಲ ನಿರ್ದಿಷ್ಟ ಪ್ರದೇಶದ ಆಡಳಿತವನ್ನು ನೀಡುವುದರ ಮೂಲಕ, ಅವನಗೇ ಆ ಪ್ರದೇಶವನ್ನು ದಾನವಾಗಿ ನೀಡುವುದಾಗಿದೆ'. ಇದಕ್ಕೆ ಪ್ರತಿಯಾಗಿ ಆ ಪ್ರದೇಶವನ್ನು ಸ್ವೀಕರಿಸಿದ ನಾಯಕ ತನ್ನ ಸಾರ್ವಭೌಮನಿಗೆ ನಿಷ್ಠನಾಗಿರಬೇಕಾದುದಲ್ಲದೆ, ತನಗೆ ನೀಡಿದ ಪ್ರದೇಶದ ರಕ್ಷಣೆಗೆ ನಿರ್ದಿಷ್ಟಪಡಿಸಿದ ಸೇನಾಬಲವನ್ನು ಇಟ್ಟುಕೊಂಡು ಅಗತ್ಯ ಬಿದ್ದಾಗ ಅದನ್ನು ಸಾರ್ವಭೌಮನ ಸೇವೆಗ

---

* ಪ್ರಾಧ್ಯಾಪಕರು, ಶ್ರೀ ಸಿದ್ಧಗಂಗಾ ಮಹಿಳಾ ಪದವಿ ಕಾಲೇಜು, ತುಮಕೂರು.

ಉಪಯೋಗಿಸಬೇಕಾಗಿತ್ತು ಹಾಗೂ ಆ ಪ್ರದೇಶದ ಕಂದಾಯ, ತೆರಿಗೆಗಳನ್ನು ವಸೂಲಿ ಮಾಡಿ ಅದರಲ್ಲಿ ೧/೩ ಭಾಗವನ್ನು ತನ್ನ ಸಾರ್ವಭೌಮರಿಗೆ ಪ್ರತಿವರ್ಷ ಸೆಪ್ಟೆಂಬರ್ ತಿಂಗಳಲ್ಲಿ ಸಲ್ಲಿಸಬೇಕಾಗಿತ್ತು. ಇಂತಹ ಪದ್ಧತಿ ಇಬ್ಬರಿಗೂ ಅಂದರೆ ಸಾರ್ವಭೌಮರಿಗೂ, ಅಮರನಾಯಕ ಅಥವಾ ಪಾಳೆಯಗಾರರಿಗೂ ಅನುಕೂಲಕರವಾಗಿತ್ತು ಮತ್ತು ಇದು ಎರಡನೆಯ ಹಂತದ ರಕ್ಷಣಾ ವ್ಯವಸ್ಥೆಯನ್ನು ಸೃಷ್ಟಿಸಿತ್ತು. ಇದರಿಂದ ಸಾಮ್ರಾಜ್ಯದ ಆಡಳಿತ ಸುಲಭವಾಯಿತು.

ವಿಜಯನಗರ ಸಾಮ್ರಾಜ್ಯಾವಧಿಯಲ್ಲಿ ಪಾಳೆಯಗಾರರು ರಾಜ್ಯದ ಕೇಂದ್ರಬಿಂದುವಾದರು. ಅವರು ಸಾರ್ವಭೌಮ ಮತ್ತು ಜನತೆಯ ಮಧ್ಯವರ್ತಿಗಳಾದರು. ಇದು ಅಲ್ಲಿಯವರೆಗಿನ ವ್ಯವಸ್ಥೆಗಿಂತ ತುಸು ಭಿನ್ನವಾಗಿ ಕಾಣುತ್ತದೆ ಎಂದು ಬರ್ಟನ್‌ಸ್ಟೈನ್ ಅಭಿಪ್ರಾಯಪಟ್ಟಿದ್ದಾರೆ[೩]. ವಿಜಯನಗರ ಸಾಮ್ರಾಜ್ಯ ಪತನಗೊಂಡನಂತರ ಈ ಪಾಳೆಯಗಾರರು ಆಡಳಿತ ಮುಖ್ಯವಾಹಿನಿಯಲ್ಲಿ ಕಾಣಿಸಿಕೊಳ್ಳತೊಡಗಿ ಸ್ವತಂತ್ರಗೊಂಡರು. ಈ ಅವಧಿಯಲ್ಲಿ ಅಧಿಕ ಸಂಖ್ಯೆಯಲ್ಲಿ ನಾಯಕರು ಅಥವಾ ಪಾಳೆಯಗಾರರು ಸೃಷ್ಟಿಯಾದರು. ಬಿಜಾಪುರ ಸುಲ್ತಾನರು, ಗೋಲ್ಕೊಂಡ ಸುಲ್ತಾನರು, ನಿಜಾಮ, ಮರಾಠರು, ಅನೇಕ ನಾಯಕ ಅಥವಾ ಪಾಳೆಯಗಾರರನ್ನು ಸೃಷ್ಟಿಸಿದರು. ಡೆಕ್ಕನ್ ಪ್ರದೇಶದ ಉತ್ತರದಲ್ಲಿ ಇವರನ್ನು ಜಾಗೀರುದಾರರು ಅಥವಾ ವತನದಾರರು ಎಂದು ಕರೆಯುವರು.

ಅಮರನಾಯಕತನ ಅಥವಾ ಪಾಳೆಯಗಾರಿಕೆಯನ್ನು ನೀಡುವ ಪದ್ಧತಿ ಯಾರಿಂದ ಆರಂಭವಾಯಿತು? ಕಾಕತೀಯರಿಂದಲೇ? ಹೊಯ್ಸಳರಿಂದಲೇ? ಇದಕ್ಕೆ ಉತ್ತರ ನೀಡುವುದು ಕಷ್ಟಸಾಧ್ಯ. ಈ ಪ್ರಶ್ನೆಯನ್ನು ಕೈಗೆತ್ತಿಕೊಂಡ ಪ್ರೊ. ಖರಾಷಿಮಾ ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಾ, ಈ ನಾಯಕ ವ್ಯವಸ್ಥೆಯನ್ನು ಸಮಕಾಲೀನ ಇಸ್ಲಾಮಿಕ್ ರಾಜಕೀಯ ಸಂಪ್ರದಾಯ ಮೊದಲು ಇಸ್ಲಾಮಿಕ್ ರಾಷ್ಟ್ರಗಳಲ್ಲಿತ್ತು ಎನ್ನುವರು[೪]. ಪಿ.ಬಿ. ವ್ಯಾಗೋನರ್ ಎಂಬ ವಿದ್ವಾಂಸರು[೫], ವಿಜಯನಗರ ನಾಯಕ ವ್ಯವಸ್ಥೆಯ ಮೂಲವನ್ನು ಇಸ್ಲಾಮಿಕ್ ರಾಷ್ಟ್ರಗಳಲ್ಲಿದ್ದ ಇಕ್ತಾ ವ್ಯವಸ್ಥೆಗೆ ಕೊಂಡೊಯ್ದಿದ್ದಾರೆ. ನಿಕೋಲಾಸ್ ಬಿ. ಡರ್ಕ್ಸ್, ದಾನ ಸ್ವೀಕರಿಸುವ ಸಂಪ್ರದಾಯ ಬ್ರಾಹ್ಮಣ ವರ್ಗದಲ್ಲಿ ಮಾತ್ರವಿತ್ತು. ನಂತರ ಇದು ಕ್ರಮೇಣ ರಾಜಕೀಯ ಉಪಕರಣವಾಗಿ ಅನೇಕ ವಿಭಿನ್ನ ಸಂಸ್ಕೃತಿಯಲ್ಲಿ ಸಾಮಾನ್ಯವಾಗಿ ಇಂತಹ ಒಂದು ವ್ಯವಸ್ಥೆಗೆ ನಾಂದಿಯಾಯಿತು[೬] ಎನ್ನುವರು. ಪ್ರೊ. ಲಕ್ಷ್ಮಣ ತೆಲಗಾವಿಯವರು ಈ ಪದ್ಧತಿ ಕಾಕತೀಯರಿಂದ ಆರಂಭವಾಯಿತು ಎನ್ನುವರು[೭]. ಒಟ್ಟಾರೆ ಹೇಳುವುದಾದರೆ ನಾಯಕತನದ ಮೂಲ ಯಾವುದೇ ಇರಲಿ, ಅದರ ಸ್ವರೂಪವನ್ನು ಗಮನಿಸಿದರೆ, ಧಾರ್ಮಿಕವಾಗಿದ್ದ ಈ ಹಿಂದಿನ ಹಿಂದೂ ಪದ್ಧತಿಯನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಅದನ್ನು ರಾಜಕೀಯವಾಗಿ ಬಳಸಿಕೊಂಡಿದ್ದು ವಿಜಯನಗರ ಕಾಲದಲ್ಲಿ ಎನ್ನಬಹುದು.

ವಿಜಯನಗರ ಸಾಮ್ರಾಜ್ಯದಲ್ಲಿ ಪಾಳೆಯಗಾರರ ಆಯ್ಕೆ ಅರ್ಹತೆಯ ಆಧಾರದ ಮೇಲೆ ನಡೆಯುತ್ತಿತ್ತು. ನಾಯಕತನ ಅಥವಾ ಪಾಳೆಯಗಾರಿಕೆ ನೀಡಲು ಜಾತಿ ಸಂಬಂಧವು ಸೈದ್ಧಾಂತಿ ತಳಹದಿಯಾಗಿರಲಿಲ್ಲ. ಅದನ್ನು ಆ ವ್ಯಕ್ತಿಯ ಚಾರಿತ್ರ್ಯ, ಅರ್ಹತೆಯನ್ನು ಅಳತೆಗೋಲಾಗಿಟ್ಟುಕೊಂಡು ನೀಡಲಾಗುತ್ತಿತ್ತು. ಆದ್ದರಿಂದ ನಾಯಕತನ ಪಡೆಯಲು ಜಾತಿ ಅಡ್ಡಿಯಾಗಿರದೆ ಅವನ ಧೈರ್ಯ ಸಾಹಸಗಳು ಮುಖ್ಯವಾಗಿದ್ದವು. ಆದ್ದರಿಂದಲೇ ಇಂತಹ ಗುಣ ಹೊಂದಿದ್ದ ಬಹುಪಾಲು ಬೇಡ ಸಮುದಾಯದವರಿಗೇ ವಿಜಯನಗರ ಸಾಮ್ರಾಜ್ಯದಲ್ಲಿ ಪಾಳೆಯಗಾರಿಕೆ ಪ್ರಾಪ್ತಿಯಾಗಿದೆ. ಸ್ಥಳೀಯ ವೀರರನ್ನು ಅವರ ಸ್ವಂತ ಪ್ರದೇಶದಲ್ಲಿ ನಾಯಕರನ್ನಾಗಿ ಅಥವಾ ಪಾಳೆಯಗಾರರನ್ನಾಗಿ ಮಾಡಿರುವುದು ಬಹಳ ಅಪರೂಪವಾಗಿದೆ. ತಮಿಳುನಾಡಿನಲ್ಲಿ ಕಂಡುಬರುವ ನಾಯಕರು ಬಹುಪಾಲು ಕನ್ನಡಿಗರು ಇಲ್ಲವೇ ತೆಲುಗರು. ವಿಜಯನಗರದ ಚಕ್ರವರ್ತಿಗಳು ಅವರನ್ನು ತಮಿಳುನಾಡಿಗೆ ಮಿಲಿಟರಿ ನಾಯಕರಾಗಿ ಮತ್ತು ಆಡಳಿತಗಾರರಾಗಿ ಕಳುಹಿಸಿದ್ದಾರೆ ಎಂದು ಖರಾಷಿಮಾ ಅಭಿಪ್ರಾಯ ಪಡುವರು (Karashima - A Concor Dance of Nayaka's, 2002). ಅದೇ ರೀತಿ ಕರ್ನಾಟಕದಲ್ಲಿ ಕಂಡುಬರುವ ನಾಯಕರು ತೆಲುಗು ಇಲ್ಲವೇ ತಮಿಳುನಾಡಿನಿಂದ ಬಂದವರಾಗಿದ್ದಾರೆ. ಆದ್ದರಿಂದ ನಾಯಕತನ ಅಥವಾ ಪಾಳೆಯಗಾರಿಕೆಯನ್ನು ನೀಡುವಾಗ ಸ್ಥಳೀಯ ವೀರರನ್ನು ಅವರ ಪ್ರದೇಶಗಳಿಗೇ ನೇಮಕ ಮಾಡದೆ ಅವರನ್ನೇ ಬೇರೆ ಪ್ರದೇಶಗಳಿಗೆ ಕಳುಹಿಸುತ್ತಿದ್ದರು. ಏಕೆಂದರೆ ನಾಯಕ ವೀರರನ್ನು ಅವರ ಸ್ವಂತ ಪ್ರದೇಶಗಳಿಗೆ ನೇಮಕ ಮಾಡಿದರೆ ಪ್ರಾಯಶಃ ಅವರು ಅಲ್ಲಿ ಬಲಾಢ್ಯರಾಗಿ ಬೆಳೆದು ಭವಿಷ್ಯದಲ್ಲಿ ರಾಜ್ಯದ ಹಿತಕ್ಕೆ ಧಕ್ಕೆ ತರಬಹುದು ಎಂಬ ಆಲೋಚನೆಯಿದ್ದಿರಬಹುದು. ಆದ್ದರಿಂದ ಇಲ್ಲಿ ಸಾರ್ವಭೌಮರು ಪಾಳೆಯಗಾರರು ತಮ್ಮ ಪ್ರದೇಶದ ಭೂಮಿಯ ಹಿತವನ್ನು ಪರಿಗಣಿಸುತ್ತಿದ್ದರೆನ್ನಬಹುದು. ಪಾಳೆಯಗಾರರು ತಮ್ಮ ಪ್ರದೇಶದ ಭೂಮಿಯ ಹಕ್ಕಿನ ವಾರಸುದಾರರಾಗಿದ್ದು ತಮ್ಮದೇ ಆದ ಸೇನಾಬಲವನ್ನಿಟ್ಟುಕೊಂಡು ತಮ್ಮ ಆಳ್ವಿಕೆಯನ್ನು ಸಂಸ್ಥೀಕರಣಗೊಳಿಸಿಕೊಂಡಿದ್ದರು. ಈ ಪಾಳೆಯಗಾರರನ್ನು, ವಿಜಯನಗರವು ಉತ್ತುಂಗ ಶಿಖರದಲ್ಲಿದ್ದಾಗ ಒಂದು ಕಡೆಯಿಂದ ಮತ್ತೊಂದು ಕಡೆಗೆ ವರ್ಗಾವಣೆ ಮಾಡಲಾಗುತ್ತಿತ್ತು. ಉದಾ: ಕೃಷ್ಣಪ್ಪ ನಾಯಕ ಎಂಬ ಪಾಳೆಯಗಾರನು ಕ್ರಿ.ಶ. ೧೫೪೭ರಿಂದ ೧೫೭೩ರವರೆಗೆ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ನಾಯಕನಾಗಿ ಸೇವೆ ಸಲ್ಲಿಸಿ ೧೫೭೩ರ ನಂತರ

ಜಿಂಜಿಯಲ್ಲಿ ನೆಲೆಗೊಂಡನು. ಇದರಿಂದ ನಾಯಕರ ಮೇಲೆ ವಿಜಯನಗರದ ಚಕ್ರವರ್ತಿಗಳ ನಿಯಂತ್ರಣವಿತ್ತೆಂದು ಸ್ಪಷ್ಟವಾಗುವುದು. ಕೆಲವೊಮ್ಮೆ ಪಾಳೆಯಗಾರರಿಗೆ ಎರಡೆರಡು ಕಡೆ ಪಾಳೆಯಗಾರಿಕೆ ಕೊಟ್ಟಿದ್ದರ ಬಗ್ಗೆಯೂ ಉಲ್ಲೇಖಗಳಿವೆ. ಆದ್ದರಿಂದ ೧೬ನೆಯ ಶತಮಾನದ ಪೂರ್ವಾರ್ಧದ ತುಳುವ ಸಂತತಿಯ ಆಳ್ವಿಕೆಯ ಕಾಲದಲ್ಲಿ ನಾಯಕರಿಗೆ ಸೀಮಿತವಾದ ಕಾಲಾವಧಿಗೆ ಭೂಪ್ರದೇಶಗಳನ್ನು ನೀಡಲಾಗುತ್ತಿತ್ತು. ಅವರು ತಾವು ಪಡೆದ ಸೀಮೆಯ ಮೇಲೆ ನಿಯಂತ್ರಣ ಪಡೆಯುವುದರೊಳಗಾಗಿ ಅವರನ್ನು ಬೇರೆ ಕಡೆಗೆ ವರ್ಗಾವಣೆ ಮಾಡಲಾಗುತ್ತಿತ್ತು. ಆದರೆ ಕೇಂದ್ರ ಪ್ರಭುತ್ವವು ಕ್ರಿ.ಶ. ೧೫೬೫ರ ನಂತರ ದುರ್ಬಲವಾದಾಗ, ಅರವೀಡು ಮನೆತನದವರಿಗೆ ಅನಿವಾರ್ಯವಾಗಿ ರಾಜಕೀಯ ವಾತಾವರಣದಲ್ಲಿ ಆತ್ಮವಿಶ್ವಾಸ ಕುಂದಿತು. ಈ ವರ್ಗಾವಣಾ ನೀತಿ ಸ್ಥಗಿತಗೊಂಡಿತು. ಅರವೀಡು ಮನೆತನದವರು, ಒಂದೇ ಸ್ಥಳದಲ್ಲಿ ನಾಯಕರು ವಂಶ ಪಾರಂಪರ್ಯವಾಗಿ ಆಡಳಿತ ನಡೆಸುವ ಹೊಸ ನೀತಿಯನ್ನು ಅನುಸರಿಸಿದರು. ಈ ನೀತಿಯಿಂದ ಪಾಳೆಯಗಾರರು ತಮ್ಮ ಪ್ರದೇಶದಲ್ಲಿ ಬಲಶಾಲಿಗಳಾಗಿ ಸ್ವತಂತ್ರವಾಗಿ ಆಳ್ವಿಕೆ ಮಾಡತೊಡಗಿದರು.

ತಾಳಿಕೋಟೆ ಕದನದ ನಂತರ ಅರವೀಡು ಮನೆತನದವರ ಕಾಲದಲ್ಲಿ ಪಾಳೆಯಗಾರರು ತಮ್ಮ ಪ್ರದೇಶಗಳಲ್ಲಿ ಹೊಸ ರಾಜಕೀಯ ಶಕ್ತಿಯಾಗಿ ನೆಲೆ ನಿಂತರು. ಅಂದಿನಿಂದ ಆ ಪ್ರದೇಶದಲ್ಲಿ ಅವರಿಗೆ ಆಳುವ ಹಕ್ಕು ವಂಶಪಾರಂಪರ್ಯವಾಗಿ ನಂತರದವರಿಗೆ ಪ್ರಾಪ್ತವಾಯಿತು. ಇದರಿಂದ ಅವರಿಗೆ ತಮ್ಮ ಆಳ್ವಿಕೆಯನ್ನು ಶಾಸನಬದ್ಧ ಮಾಡಿಕೊಳ್ಳುವುದಕ್ಕೋಸ್ಕರ ವಂಶಾವಳಿಗಳನ್ನು ರಚನೆ ಮಾಡಿಕೊಳ್ಳುವ ಅಗತ್ಯ ಉಂಟಾಯಿತು. ಹೀಗೆ ಅನೇಕ ಕುಟುಂಬ ಚರಿತ್ರೆಗಳು ರಚನೆಯಾದವು. ಹೀಗೆ ರಾಜಕೀಯವಾಗಿ ನೆಲೆಗೊಂಡ ಅಮರನಾಯಕರು ತಮ್ಮ ಉಗಮವನ್ನು ಆ ಮೂಲಕ ರಾಜಕೀಯ ಪ್ರಭುತ್ವಗಳ ಕೊಡುಗೆಯ ಪರಿಣಾಮವಾಗಿ ದಾಖಲಿಸಿಕೊಂಡರು. ಈ ನಾಯಕರು ತಮ್ಮ ಆಡಳಿತ ಕೇಂದ್ರದ ಮತ್ತು ಮುಖ್ಯ ಪಟ್ಟಣಗಳ ರಕ್ಷಣೆಗೆ ಕೋಟೆಗಳನ್ನು ಕಟ್ಟಿ, ಆ ಕೋಟೆಯ ಒಳಗಡೆ ನಗರೀಕರಣ ಲಕ್ಷಣಗಳಾದ ಅರಮನೆ, ಉದ್ಯಾನವನವಲ್ಲದೆ ಆಸ್ಥಾನಿಕರಿಗೆ ಸಂಬಂಧಿಸಿದ ಕಟ್ಟಡಗಳನ್ನು ನಿರ್ಮಿಸುವುದರ ಮೂಲಕ ತಮ್ಮ ಶಕ್ತಿಯನ್ನು ಪ್ರದರ್ಶಿಸಿದರು. ಇವುಗಳನ್ನು Symbol of Expression of Power ಎಂದು ಹೇಳಲಾಗಿದೆ. ಹೀಗೆ ಸ್ಥಳೀಯವಾಗಿ ತಮ್ಮ ರಾಜಕೀಯ ಅಸ್ತಿತ್ವವನ್ನು ಪಡೆದುಕೊಂಡ ಅವರು ತಮ್ಮ ಪ್ರದೇಶಗಳಲ್ಲಿ ತಮಗಿಂತ ಹಿಂದಿನ ದೇವಾಲಯಗಳನ್ನು ನವೀಕರಿಸಿದ್ದಲ್ಲದೆ ತಮಗೆ ಬೇಕಾದ ದೇವಾಲಯ, ಮಠಗಳನ್ನು ನಿರ್ಮಿಸಿ ಅವುಗಳಿಗೆ ದತ್ತಿ ನೀಡಿದರು. ಇಂತಹ ಕಾರ್ಯಗಳ ಮೂಲಕ ಅವರು ತಮ್ಮ ರಾಜಕೀಯ ಪ್ರಭುತ್ವ ವಿಸ್ತರಿಸಿ ತಮ್ಮ ರಾಜಕೀಯ ಶಕ್ತಿಯನ್ನು ಹೆಚ್ಚಿಸಿಕೊಂಡರು.

ಒಟ್ಟಾರೆ ಹೇಳುವುದಾದರೆ ಹದಿನೈದುನೆಯ ಶತಮಾನದ ಕೊನೆಯ ಭಾಗದಲ್ಲಿ ಆಳುವ ವ್ಯವಸ್ಥೆಯಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಾಪನೆಯಾದ ನಾಯಕ ಅಥವಾ ಪಾಳೆಯಗಾರ ವ್ಯವಸ್ಥೆಯು ಹದಿನಾರನೆಯ ಶತಮಾನದ ಕೊನೆಯವರೆಗೂ ತೃಪ್ತಿಕರವಾಗಿ ಕಾರ್ಯ ನಿರ್ವಹಿಸುತ್ತಿತ್ತು. ಬದಲಾದ ರಾಜಕೀಯ ವಾತಾವರಣದಲ್ಲಿಯೂ ಕೂಡಾ ವಿಜಯನಗರದವರ ಮೇಲೆ ನಿಷ್ಠೆ ಇಟ್ಟುಕೊಂಡಿದ್ದ ಇವರು ೧೭ನೆಯ ಶತಮಾನದ ಮೊದಲ ಭಾಗದ ನಂತರ ಸ್ವಾತಂತ್ರ ಪಡೆದು ೧೮ನೆಯ ಶತಮಾನದ ಕೊನೆಯ ಭಾಗದವರೆಗೂ ಮುಂದುವರೆದರು. ಅಂತಿಮವಾಗಿ ಹೈದರಾಲಿಯ ರಾಜಕೀಯ ಶಕ್ತಿಗೆ ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಕಣ್ಮರೆಯಾದವು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. Burton Stein - *Peasant state and soceity in Medieval South India*, New Delhi, 1980.

೨. Robert Sewell - *A Forgotten Empire*, London, 1900.

೩. Burton Stein - *Peasant state and society in Medieval South India*, New Delhi, 1980, p. 369.

೪. Karashima - *Kingship in Indian History*, p.157.

೫. Wagoner - *Discusses the Problem of Islamic Culture Adopted in the Vijayanagara Court*, 1996.

೬. Nicholas B. Dirks - *Hollow Crown*, Orient Longman, Bombay, 1989.

೭. ಪ್ರೊ॥ ಲಕ್ಷ್ಮಣ ತೆಲಗಾವಿ, **ಕರ್ನಾಟಕದ ಬೇಡ ಸಮುದಾಯದ ಇತಿಹಾಸ**. ಪ್ರಾಥ ಚರಿತೆ (ಸಂ) ಮಂಜುನಾಥ ಬೇವಿನ ಕಟ್ಟಿ, ಪ್ರಸಾರಾಂಗ, ಹಂಪಿ, ೨೦೦೭.

# ಕನ್ನಡ ಪರಂಪರೆ ಮತ್ತು ಶಾಸನಗಳು: ಸಮಸ್ಯಾತ್ಮಕ ಆಯಾಮಗಳು

– ಡಾ॥ ಡೊಮಿನಿಕ್ ಡಿ.*

## ೧. ಪ್ರಸ್ತಾವನೆ

'ಕರ್ನಾಟಕದ ಶಾಸನ[೧]ಗಳು' ಎಂದಾಕ್ಷಣ ಕುವೆಂಪುರವರ 'ಕೂಗುತ್ತಿದೆ ಕಲ್ಲು...' ಎನ್ನುವ ಕವನ ನೆನಪಾಗುತ್ತದೆ. ಅಂದರೆ ಶಾಸನಗಳಲ್ಲಿ ಹಲವಾರು ವಿಷಯಗಳು ತುಂಬಿವೆ, ಅದನ್ನು ಅರಿಯಲು ವಿಭಿನ್ನವಾದ ತಯಾರಿಯ ಅಗತ್ಯ ಇದೆ ಎನ್ನುವುದನ್ನು ಈ ಕವನ ಧ್ವನಿಸುತ್ತಿದೆ. ಆದರೆ ಅವುಗಳನ್ನು ಅರ್ಥೈಸುವ ಕ್ರಮದ ಬಗ್ಗೆ ಮಾತ್ರ ಒಮ್ಮತದ ಅಭಿಪ್ರಾಯವೇನೂ ಇಲ್ಲ. ಇತಿಹಾಸ ರಚನಾ ಶಿಸ್ತಿನ ಬಗ್ಗೆ ಅನೇಕ ಗುಮಾನಿಗಳನ್ನು ಆಧುನಿಕೋತ್ತರವಾದಿಗಳು ಎತ್ತಿರುವುದನ್ನು ನಾವೀಗ ಗಮನಿಸಿದಲ್ಲಿ ಶಾಸನಗಳ ಬಗ್ಗೆ ಇಲ್ಲೀ ತನಕ ನಾವು ಕಟ್ಟಿಕೊಂಡಿರುವ ಸ್ಥಾಪಿತ ಸತ್ಯಗಳನ್ನು ಕೈಬಿಡಬೇಕಾಗಿದೆ. ಕಾರಣ ಚರಿತ್ರೆ ಎನ್ನುವುದೇ ಒಂದು ಮಿಥ್ಯೆ. ಅದು ಒಂದು ವಿಧದ ನೈವ್ ರಿಯಲಿಸಂನ್ನು ಪ್ರತಿಪಾದಿಸುತ್ತದೆ. ಅಂದರೆ ವರ್ತಮಾನದ ಸಮರ್ಥನೆಗಾಗಿ ನೆನಪುಗಳನ್ನು ಅದು ಚರಿತ್ರೆ ಎಂದು ತಪ್ಪಾಗಿ ವಾದಿಸುತ್ತದೆ. ಇಂಥ ನಿರೂಪಣೆಗಳು ನಮಗೆ ಸಾಧ್ಯವಾಗಿದ್ದು ಫೂಕೋನ 'ಸಂಕಥನ' (ಡಿಸ್ಕೋರ್ಸ್)[೨] ಎಂಬ ಪರಿಭಾಷೆಯಿಂದ. ಈ ಚಿಂತನೆಯ ಪ್ರಕಾರ ಚರಿತ್ರೆ ಎನ್ನುವುದು ಆಗುವುದೇ ಈ 'ಸಂಕಥನ' ಮತ್ತು 'ಸಂಕೇತ'ಗಳಿಂದ. ಅಂದರೆ ಈ ಸಂಕಥನ ಮತ್ತು ಸಂಕೇತಗಳು ನಮಗೆ ದೊರೆಯುವುದೇ 'ಭಾಷೆ'ಯಿಂದ. ಇಲ್ಲಿ ಭಾಷೆಯೆಂದಕ್ಷಣ ಡಿ.ಆರ್. ನಾಗರಾಜ್‌ರವರು **ಸಾಹಿತ್ಯ ಕಥನ** ಕೃತಿಯಲ್ಲಿ ಚರ್ಚಿಸಿರುವ 'ಭರ್ತೃಹರಿ' ಮತ್ತು 'ನಾಗಾರ್ಜುನ'ರ ಕೆಲವು ವಿಚಾರಗಳನ್ನು ಚರ್ಚಿಸುವುದು ಮುಖ್ಯ ಎಂದು ಭಾವಿಸುತ್ತೇನೆ. ಭರ್ತೃಹರಿ ವೇದಾಂತದರ್ಶನದ ಮೂಲಕ ಭಾಷೆಯನ್ನು 'ಬ್ರಹ್ಮನಾದ' ಎಂದು ಭಾವಾವೇಶದಿಂದ ದೈವೀಕರಿಸಿಬಿಡುತ್ತಾನೆ. ಆದರೆ ಬೌದ್ಧ ಮೀಮಾಂಸಕನಾದ ನಾಗಾರ್ಜುನ ಮಾತ್ರ ಭಾಷೆ ಎಂದಕ್ಷಣ ಒಂದು ರೀತಿಯ 'ಸಂದೇಹ' ಕಾಡುತ್ತದೆ. ಕಾರಣ ಭಾಷೆ ಎನ್ನುವುದು ವಾಸ್ತವವನ್ನು ತಿರುಚುತ್ತದೆ ಮತ್ತು ಆ ಮೂಲಕ ನಮ್ಮ ಪ್ರಜ್ಞೆಯನ್ನು ದಿಕ್ಕು ತಪ್ಪಿಸಿ, ಅವಾಸ್ತವದತ್ತ ಕೊಂಡೊಯ್ಯುತ್ತದೆ.

ಈ ಮೇಲಿನ ವಿವರಣೆಯಲ್ಲಿ ನಾನು ಹೆಚ್ಚು ಹೆಚ್ಚು ನಾಗಾರ್ಜುನನತ್ತ ಸರಿದು, ಆಧುನಿಕೋತ್ತರವಾದಿಗಳು ಪ್ರತಿಪಾದಿಸುವ 'ಡಿಸ್ಕೋರ್ಸ್' ಬಳಸಿ ಶಾಸನಗಳ ಅಧ್ಯಯನ ಎನ್ನುವುದು ಒಂದು ಡಿಸ್ಕೋರ್ಸ್ ಆಗಿ ಒಂದು ಐಡಿಯಾಲಜಿಯನ್ನು ನಮ್ಮ ಮುಂದಿಡುತ್ತದೆ. ಆದರೆ ಇದಾವುದನ್ನು ಗಮನಿಸದೆ ಅದನ್ನು ಒಂದು ವಿಧದ 'ನೈವ್ ರಿಯಲಿಸಂ'ನ ಬಿಂಬವಾಗಿ, ಭೂತದ ಖಚಿತ ಸಾಕ್ಷಿ ಎಂಬಂತೆ ಪ್ರತಿನಿದಿಸಲಾಗಿದೆ. ಆದ್ದರಿಂದ ಪ್ರಸ್ತುತ ಲೇಖನ ಇಂಥ ಗ್ರಹಿಕೆಗಳ ಹಿಂದಿರುವ ಗ್ರಹೀತಗಳನ್ನು ಚರ್ಚಿಸಲು ಪ್ರಯತ್ನಿಸುತ್ತದೆ. ಹೀಗೆ ಮಾಡುವಾಗ ಶಾಸನಗಳ ಬಗ್ಗೆ ಸಂಕಥಿಸಿರು ಬೃಹತ್ ಕಥನಗಳನ್ನು (ಮಾಸ್ಟರ್ ನರೆಟಿವ್) ಪ್ರಶ್ನಿಸುತ್ತದೆ. ಅಂದರೆ ವಾಸ್ತವದ ಬಗ್ಗೆ ಅಥವಾ ಭೂತದ ಬಗ್ಗೆ ಶಾಸನಗಳು 'ಯಾವುದೇ ವಿಧದ ಸಾರ್ವತ್ರಿಕತೆ ಮತ್ತು ಸಮಗ್ರತೆಯನ್ನು ನೀಡುವುದಿಲ್ಲ' ಎಂಬ ಅಂಶವನ್ನು ನಾವು ತಿಳಿಯಬೇಕಾಗಿದೆ. ಹಾಗೇನಾದರೂ ಶಾಸನಗಳು ಒಂದು ಸಮಗ್ರವಾದ ಭೂತದ ಕಲ್ಪನೆಯನ್ನು ನೀಡುತ್ತದೆಯಾದರೆ, ನಾಗಾರ್ಜುನ ಹೇಳುವಂತೆ ಅದು ಬರೀ ಭಾಷೆಯ ಭ್ರಮೆಯಷ್ಟೆ ('ಲಿಂಗ್ವಿಸ್ಟಿಕ್ ಟರ್ನ್'). ಹಾಗಾದರೆ ನಾವು ಭೂತವನ್ನು ಬಿಟ್ಟುಬಿಡಬೇಕಾ? ಖಂಡಿತವಾಗಿಯೂ ಇಲ್ಲ. ಬದಲಾಗಿ ಭೂತ ಎನ್ನುವುದು ಅತಾರ್ಕಿಕ ನೆಲೆ ಸ್ಥಿತಿಯಾಗಿರುವುದರಿಂದ ಅದಕ್ಕೆ ನಾವು ನೆನಪಿನ ಪಾಲಿಟಿಕ್ಸ್ ಅನ್ನು ಆರೋಪಿಸುತ್ತೇವೆ. ಇದರಿಂದ ಮುಕ್ತರಾಗಿ ಇಲ್ಲೀತನಕ ಕನ್ನಡ ಜಗತ್ತನ್ನು ನಿರೂಪಿಸಿರುವ ಭೂತದ ಬಗ್ಗೆ ಏಕ ರೀತಿಯಾದ ನಿಲುವನ್ನು ತಾಳಲು ಸಾಧ್ಯವೇ? ಸಾಧ್ಯವಿಲ್ಲ. ಆದ್ದರಿಂದ ಸಾಮಾನ್ಯ ಹುಲುಮಾನವರನ್ನು ಮತ್ತೆ ಚಾರಿತ್ರೆಯ ಕರ್ತೃಗಳನ್ನಾಗಿ ಮಾಡಿ ಭವಿಷ್ಯದತ್ತ ಕೊಂಡೊಯ್ಯಬೇಕಾದರೆ ಸೀದಾ-ಸಾದಾ ಅಧ್ಯಯನ ಮಾದರಿಗಳನ್ನು ಸಂದೇಹಿಸುವುದು ಅಗತ್ಯವಾದುದು. ಆದ್ದರಿಂದ ಯಾವುದೇ ಸಂಗತಿಯ ನಿತ್ಯಾತ್ಮಕವಾದ ತೀರ್ಮಾನ ಕೈಗೊಳ್ಳುವುದರ

---

* ಇಮೇಲ್: dd64@in.com

ಬದಲು, ಕೆಲವು ಸೂಚನೆಗಳನ್ನು ನೀಡುವುದರ ಮೂಲಕ ವಿಭಿನ್ನ ಮಾದರಿಗಳ ಶೋಧದತ್ತ ಸಾಗಬಹುದಾಗಿದೆ. ಅಂದರೆ ಚಾರಿತ್ರಿಕ ಆಕರಗಳು ಭೂತವನ್ನು ಶೋಧಿಸುವುದಿಲ್ಲ. ಬದಲಾಗಿ ಭೂತವನ್ನು ಒಂದು ಐಡಿಯಾಲಜಿಯಲ್ಲಿ ಪ್ರತಿನಿಧಿಸುತ್ತವೆ ಅಷ್ಟೆ ಆದ್ದರಿಂದ ಶಾಸನಗಳು ಪ್ರತಿನಿಧಿಸಿರುವ ಕನ್ನಡ ಜಗತ್ತಿನ ಸ್ವರೂಪವನ್ನು ಮತ್ತದರ ವಂಶಾವಳಿಯನ್ನು ಚರ್ಚಿಸಬೇಕಾಗುತ್ತದೆ.

**೨. ಶಾಸನಗಳ ಮೂಲಕ ಬ್ರಿಟಿಷ್ ವಸಾಹತುಶಾಹಿಯ ಮತ್ತು ಸಂಸ್ಕೃತ ಪರಂಪರೆಯ ವಂಶಾವಳಿಯನ್ನು ಸಂಘಟಿಸುವ ಬಗೆ**

(ಬ್ರಿಟಿಷ್) "ಭಾರತದಲ್ಲಿ ಕ್ರಮಬದ್ಧವಾದ ಶಾಸನ ವ್ಯಾಸಂಗ ಆರಂಭವಾದುದು ೧೮ನೆಯ ಶತಮಾನದ ಮಧ್ಯಭಾಗದಲ್ಲಿ. ಕ್ರಿ.ಶ. ೧೭೮೪ರಲ್ಲಿ ಸರ್ ವಿಲ್ಲಿಯಂ ಜೋನ್ಸ್ ಎಂಬಾತನು ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್ ಎಂಬ ಸಂಸ್ಥೆಯನ್ನು ಇತರರ ನೆರವಿನೊಂದಿಗೆ ಸ್ಥಾಪಿಸಿದನು"[೩]. ಇದಾದ ನಂತರದಲ್ಲೇ ಶಾಸನಗಳನ್ನು ಓದುವ ಮತ್ತು ವಿವರಿಸುವ ಕ್ರಮ ಆರಂಭವಾಗುವುದು. "೧೮೩೭ ರಿಂದ ಭಾರತೀಯ ಶಾಸನ ಸಂಶೋಧಾನಾ ಇತಿಹಾಸದ ಸುವರ್ಣಯುಗವು ಪ್ರಾರಂಭವಾಯಿತು ಎನ್ನಬಹುದು. ಕ್ರಿ.ಶ. ೧೮೮೮ರಲ್ಲಿ ಭಾರತದ ಇತಿಹಾಸ ಪುನಾರಚನೆಗೆ ಅತ್ಯಪಯುಕ್ತವಾದ ಶಾಸನಗಳನ್ನು ಪರಿಷ್ಕರಿಸಿ ಪ್ರಕಟಿಸುವ ಸಲುವಾಗಿ ಇಂಡಿಯನ್ ಆಂಟಿಕ್ವರಿ ಎಂಬ ಪ್ರಸಿದ್ಧ ನಿಯತಕಾಲಿಕವು ಸರ್ಕಾರದ ಅನುಗ್ರಹದಿಂದ ಆರಂಭವಾಯಿತು"[೪]. ಹೀಗೆ ಶಾಸನಗಳ ವಂಶಾವಳಿಯು ಆರಂಭವಾಗುವುದು ೧೮ನೆಯ ಶತಮಾನದ ಕೊನೆಯಲ್ಲಿ. "ಆದರೆ, ಸುಸಂಬದ್ಧವಾಗಿ ಕರ್ನಾಟಕದ (ಆಗ ಕರ್ನಾಟಕ ಎಂದು ಇರಲಿಲ್ಲ) ಶಾಸನಗಳ ಪ್ರಕಟನೆ ಆರಂಭವಾದುದು ಕ್ರಿ.ಶ. ೧೮೩೫ರಲ್ಲಿ. ಕ್ರಿ.ಶ. ೧೮೦೭ರಲ್ಲಿ ಕರ್ನಲ್ ಕೊಲಿನ್ ಮೆಕಂಜಿ ತಾನು ಸಂಗ್ರಹಿಸಿದ್ದ ಅನೇಕ ತಾಮ್ರ ಪಟಗಳನ್ನೂ, ಶಾಸನಗಳನ್ನೂ ಏಷಿಯಾಟಿಕ್ ಸೊಸೈಟಿಗೆ ಕಳುಹಿಸಿಕೊಟ್ಟನು. ಅವುಗಳಲ್ಲಿ ಸುಮಾರು ಹನ್ನೆರಡು ಶಾಸನಗಳ ಸಾರಾಂಶ ಕ್ರಿ.ಶ. ೧೮೩೬ರಲ್ಲಿ ಪ್ರಕಟವಾಯಿತು. ಕನ್ನಡ ಶಾಸನಗಳ ಸುವ್ಯವಸ್ಥಿತವಾದ ಅಧ್ಯಯನ ಆರಂಭವಾದದ್ದು ವಾಲ್ಟರ್ ಇಲಿಯಟ್ ಎಂಬಾತನಿಂದ ಕ್ರಿ.ಶ. ೧೮೩೭ರಲ್ಲಿ ಅವನು ಪ್ರಕಟಿಸಿದ ಹಿಂದೂ ಶಾಸನಗಳು ಎಂಬ ಲೇಖನದಿಂದ"[೫]. ಇಂಥ ವ್ಯಾಖ್ಯಾನಗಳು ಬ್ರಿಟಿಷ್ ಓರಿಯಂಟಲ್ ವಿದ್ಯಾವಾಂಸರಿಂದ ಬರುವುದಿಲ್ಲ. ಬದಲಾಗಿ ಆಧುನಿಕ ಕರ್ನಾಟಕದ ವಿದ್ವಾಂಸರಿಂದ ಎನ್ನುವುದನ್ನು ನಾವು ಗಮನಿಸಬೇಕಾದ ಸಂಗತಿ. ಏಕೆಂದರೆ ಬ್ರಿಟಿಷ್ ಭಾರತದಲ್ಲಿ 'ಇತಿಹಾಸ ರಚಿಸಲು ಯಾವುದೇ ರೀತಿಯ ಆಕರಗಳು ಇಲ್ಲ ಎನ್ನುವ ಕೊರತೆ ಓರಿಯಂಟಲಿಸ್ಟರನ್ನು ಕಾಡಿದಾಗ, ಅವರಿಗೆ ದೊರೆತ ಆಕರಗಳೆಂದರೆ ಈ ಶಾಸನಗಳೇ. ಅವನ್ನು ಭಾರತದ ಚರಿತ್ರೆಯನ್ನು ವಸಾಹತುಶಾಹಿ ರಾಜಕೀಯಕ್ಕೆ ಪೂರಕವಾಗಿ ಕಟ್ಟಲು ಬಳಸಿಕೊಳ್ಳಲಾಗುತ್ತದೆ. ಆದರೆ ಇದೇ ಮಾದರಿಯನ್ನು ನಮ್ಮ ವಿದ್ವಾಂಸರೂ ಸಹ ಅನುಸರಿಸಿದ್ದಾರೆನ್ನುವುದು ಮೇಲಿನ ಮಾತುಗಳು ಸ್ಪಷ್ಟ ಪಡಿಸುತ್ತವೆ. ಇದನ್ನೆ ನಾನು ಈಸ್ಟ್ ಇಂಡಿಯಾ ಕಂಪನಿಯ ರಾಜ್ಯಾಧಿಕಾರದ ವಂಶಾವಳಿಯ ಆರಂಭ ಎನ್ನುವುದು. ಇದು ಮುಂದೆ ಸಾಗಿ ಬ್ರಾಹ್ಮಣ/ಹಿಂದೂ ರಾಷ್ಟ್ರೀಯತೆಯ ವಂಶಾವಳಿವೂ ಆಗುತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ.

ಶಾಸನಗಳ ವಸ್ತು, ರೀತಿ ಮತ್ತು ಉದ್ದೇಶವನ್ನು ವಿವರಿಸಿಕೊಳ್ಳುವಾಗ ಅಂದಿನ ಸ್ವಯಂತಂತ್ರವಾದಿ ವರಸೆ ಅಥವಾ ಪೊಸಿಟಿವಿಸ್ಟ್ ನಿಲುವುಗಳೇ ಕೆಲಸ ಮಾಡಿವೆ ಮತ್ತು ಇಂತಹ ನಿಲುವುಗಳನ್ನು ಬ್ರಾಹಣೀಯ ಮಾದರಿಗಳಲ್ಲಿ ಮುಚ್ಚಿಡುವುದನ್ನು ನಾವು ಕಾಣುತ್ತೇವೆ. ಉದಾಹರಣೆಗೆ ಶಾಸನಗಳು ಮೂರನೆಯ ಶತಮಾನದಿಂದ ಕಂಡುಬಂದರೂ ಅವುಗಳು ಹೀಗೆ ಇರಬೇಕೆಂದು ಕಟ್ಟು ಮಾಡಿದ್ದು ಈಚೆಗೆ – ಸ್ಮೃತಿಗಳ ಕಾಲಕ್ಕೆ. ಶುಕ್ರನೀತಿಸಾರ, ಕೌಟಿಲ್ಯನ ಅರ್ಥಶಾಸ್ತ್ರ, ಬೃಹಸ್ಪತಿ ಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ ಮೊದಲಾದ ಗ್ರಂಥಗಳಲ್ಲಿ ದಾನಶಾಸನಗಳು ಹೇಗಿರಬೇಕೆಂಬುದನ್ನು ವಿವರಿಸಿದೆ. ಶಾಸನಗಳಲ್ಲಿ ರಾಜನ ಸ್ವಂತ ರುಜುವೂ, ಆ ಆಜ್ಞೆ ಹೊರಟ ದಿನಾಂಕವೂ ಇರಬೇಕು ಮತ್ತು ಹೀಗೆ ಆರಂಭವಾಗಬೇಕು 'ನೀವೆಲ್ಲ ಕೇಳಿರಿ ನೀವೆಲ್ಲ ಹೀಗೆ ಮಡಬೇಕು ಮತ್ತು ಈ ಆಜ್ಞೆಯಂತೆ ನಡೆಯಬೇಕು' ಇತ್ಯಾದಿ. ಲೇಖನದ ಮೂಲಕ ಆಜ್ಞೆ ಮಾಡದ ರಾಜ, ರಾಜನ ಆಜ್ಞಾಪತ್ರ ಪತ್ರವಿಲ್ಲದೆ ಅಧಿಕಾರ ನಡೆಯಿಸುವ ಅಧಿಕಾರಿ–ಇಬ್ಬರೂ ಚೋರರು; ರಾಜಮುದ್ರಾ ಸಹಿತವಾದ ಲೇಖನವೇ ನಿಜವಾದ ರಾಜ. ಬರಿಯ ರಾಜನೇ ಅಲ್ಲ. ಹೀಗೆ ಒಂದು ಸ್ಮೃತಿ ಗ್ರಂಥ ಹೇಳುತ್ತದೆ"[೬] (ದಾನ ಶಾಸನಗಳು ರಾಜ್ಯವಿಸ್ತಾರದ ಭಾಗವಾಗಿ ಬಂದದ್ದು. ಈ ಸಂಗತಿಯನ್ನು ಡಾ. ಎಂ.ಎಂ. ಕಲಬುರ್ಗಿಯವರು ಈ ಹಿಂದೆಯೇ ಹೇಳಿರುವುದನ್ನು ನಾನಿಲ್ಲಿ ಚರ್ಚೆಗೆ ತೆಗೆದುಕೊಳ್ಳುವುದಿಲ್ಲ). ಮೇಲಿನ ವಿವರಗಳಲ್ಲಿ ಎದ್ದು ಕಾಣುವ ಸಂಗತಿಯನ್ನು ನಾವು ಗಮನಿಸಬೇಕಾಗುತ್ತದೆ – ವಸಾಹತುಶಾಹಿ ವಿಚಾರಧಾರೆಯ ತರ್ಕ ಒಂದೆಡೆಯಿದ್ದರೆ, ಅದನ್ನು ಬ್ರಾಹ್ಮಣೀಯ ಮಾದರಿಗಳಲ್ಲಿ ವಿವರಿಸಿಕೊಳ್ಳುವುದನ್ನು ನಾವು ಇಲ್ಲಿ ಗಮನಿಸಬಹುದಾಗಿದೆ. ಅಂದರೆ ಕ್ರಿ.ಪೂ. ಮೂರನೆಯ ಶತಮಾನದಲ್ಲೇ ಶಾಸನಗಳು ಸಿಕ್ಕರೂ ಸಹ ಅವನ್ನು ವಿವರಿಸಿಕೊಳ್ಳುವ ಗ್ರಂಥಗಳು ಮಾತ್ರ ಸಂಸ್ಕೃತ ಮೂಲವೇ ಆಗುತ್ತವೆ. ಆದರೆ ಪ್ರಾಕೃತ

ಮತ್ತು ಪಾಳಿ ಭಾಷೆಗಳಲ್ಲಿ ಇರುವ ಅಬ್ರಾಹ್ಮಣೀಯ ಅಥವಾ ಶ್ರಮಣ ಪರಂಪರೆಗಳಲ್ಲಿನ ಗ್ರಂಥಗಳಾವುವು ಪರಿಗಣನೆಗೆ ಇಲ್ಲಿ ತೆಗೆದುಕೊಳ್ಳಲಾಗುವುದಿಲ್ಲ[೭]. ಅಂದರೆ ಇಲ್ಲಿ ಯಾವುದೇ ಗೊಂದಲವಿಲ್ಲದೆ ಅಪೊಲಿಟಿಕಲ್ಆಗಿ ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುತ್ತದೆ. ಆದರೆ ಈ ಅಪೊಲಿಟಿಕಲ್ ಎನ್ನುವುದು ವಸಾಹತುಶಾಹಿ ರಾಜಕೀಯಕ್ಕೆ ಅತ್ಯಗತ್ಯವಾಗಿತ್ತು. ಇದೇ ಸಂದರ್ಭದಲ್ಲಿ ಈ ವಸಾಹತುಶಾಹಿ ವಿದ್ವಾಂಸರಿಗೆ ನೆರವಾದವರೆಂದರೆ ಬ್ರಾಹ್ಮಣ ಪಂಡಿತರೇ ಆಗಿದ್ದರು. ಆದ್ದರಿಂದ ಅವರು ಈ ಬ್ರಾಹ್ಮಣರನ್ನೇ ನೆಚ್ಚಿಕೊಂಡು ಅವರ ಹಿತಾಸಕ್ತಿಗಳ ಮೇರೆಗೆ ಈ ಶಾಸನ ಅಧ್ಯಯನವನ್ನು ಮಾಡಿದರು ಎನ್ನುವುದನ್ನು ನಾವು ಗಮನಿಸಬೇಕಾಗುತ್ತದೆ.

ಅದಕ್ಕೆ ಮೊದಲು ಶಾಸನಗಳನ್ನು ಕನ್ನಡ ವಿದ್ವಾಂಸರು ಹೇಗೆ ಗಮನಿಸಿದರು ಎನ್ನುವುದನ್ನು ಚರ್ಚೆಗೆ ತೆಗೆದುಕೊಳ್ಳುವುದು ಮುಖ್ಯವಾಗುತ್ತದೆ ಎಂದು ಭಾವಿಸುತ್ತೇನೆ. ಇದಕ್ಕೊಂದು ಉತ್ತಮ ನಿದರ್ಶನ ಹೀಗೆ ದೊರೆಯುತ್ತದೆ – "ಶಾಸನಗಳ ಮಹತ್ವ ಸಾಹಿತ್ಯಿಕವಾಗಿ ಗೌಣ. ಅಂದರೆ ಸಾಹಿತ್ಯ ದೃಷ್ಟಿಯಿಂದ ಶಾಸನಗಳನ್ನು ಅಧ್ಯಯನ ಮಾಡಬಾರದೆಂದಲ್ಲ. ಉತ್ತಮವಾದ ಸಾಹಿತ್ಯಕಾಂಶಗಳಿಂದ, ಕಾವ್ಯಾಂಶಗಳಿಂದ ಕೂಡಿದ ಶಾಸನಗಳು ಇಲ್ಲವೆಂದಲ್ಲ. ಸಾಹಿತ್ಯಕಾಂಶಗಳಿಗಿಂತ ಅವು ಕೊಡುವ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಇತ್ಯಾದಿ ವಿವರಗಳು ಅತ್ಯಂತ ಪ್ರಮುಖವಾದುವು... ಹೀಗಾಗಿ ಪ್ರಾಚೀನ ಭಾರತದ ರಾಜಕೀಯ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿವರಗಳನ್ನು ತಿಳಿಯಬೇಕೆನ್ನುವವನಿಗೆ ಶಾಸನಗಳನ್ನು ಬಿಟ್ಟರೆ ವಿಧಿಯಿಲ್ಲ"[೮]. ಇದರ ತಾತ್ಪರ್ಯವೆಂದರೆ ಸಾಹಿತ್ಯವನ್ನು ಸಾಂಪ್ರದಾಯಿಕ ಮಾದರಿಗಳಲ್ಲೇ ಅಂದರೆ "ರಸಾನುಭವದ ಸುಂದರ ಅಭಿವ್ಯಕ್ತಿಯೇ ಸಾಹಿತ್ಯ" ಎನ್ನುವ ಸಂಸ್ಕೃತ ಕಾವ್ಯ ಮೀಮಾಂಸೆಯ ವಿವರವನ್ನೇ ಒಪ್ಪಿಕೊಂಡಿರುವುದು, ಅಲ್ಲದೆ ಸಾಹಿತ್ಯ ಎನ್ನುವುದು ಒಂದು ಶಿಸ್ತು. ಅಷ್ಟೆ! ಆದರೆ ಅದನ್ನು ಛಿದ್ರಿಸುವ ವ್ಯಾಖ್ಯಾನಗಳು ಇತ್ತೀಚಿಗೆ ಕಾಣುತ್ತೇವೆ – ಉದಾಹರಣೆಗೆ, "ಜ್ಞಾನಾಧಿಕಾರ ಸಂಬಂಧಗಳ ಸೃಜನಾತ್ಮಕ ಅನುಸಂಧಾನವೇ ಸಾಹಿತ್ಯ". ಇಂಥ ವ್ಯಾಖ್ಯಾನಗಳು ಯಾವುದೇ ಸ್ವತಂತ್ರವಾದ ಜ್ಞಾನ ಶಿಸ್ತನ್ನು ಭಂಗಿಸುತ್ತವಲ್ಲದೆ, ವಿಶ್ಲೇಷಣೆ ಎನ್ನುವುದು ಬಹುಶಿಸ್ತೀಯವಾಗಿ 'ಜ್ಞಾನಾಧಿಕಾರ' ಸಂಬಂಧಗಳನ್ನು ನಿಭಾಯಿಸಿಕೊಳ್ಳಬೇಕಾಗುತ್ತದೆ ಎಂಬುದನ್ನು ಸಾರುತ್ತದೆ. ಆದರೆ ನಮ್ಮ ಸಂಶೋಧನೆಗಳು ಇನ್ನೂ ಸಹ ಇತ್ತ ಮುಖಮಾಡಲು ಅಂಜಿಕೊಂಡಂತೆ ಕಾಣುತ್ತದೆ.

ಪಶ್ಚಿಮ ರಾಷ್ಟ್ರಗಳು ಪೂರ್ವದ ರಾಷ್ಟ್ರಗಳ ಮೇಲೆ ಸಾಂಸ್ಕೃತಿಕ್ ಅಧಿಕಾರ ಸ್ಥಾಪಿಸಿದ್ದು ಹಾಗೂ ಅಲ್ಲಿನ ಪೊಲಿಟಿಕಲ್ ಎಕಾನಮಿಯನ್ನು ಶೋಷಿಸಿದ್ದು ಒಂದು ರೀತಿಯಾದ ಜ್ಞಾನ/ಚಿಂತನಾ ಕ್ರಮದಿಂದ. ಆದ್ದರಿಂದ ಮೂಲತಃ ಅದೊಂದು ಬೌದ್ಧಿಕ ಆಳ್ವಿಕೆ. ಇದನ್ನೇ ಫೂಕೋ 'ಜ್ಞಾನಾಧಿಕರ ಸಂಬಂಧ' ಎಂದು ವ್ಯಾಖ್ಯಾನಿಸಿದರೆ, ಆಂಟೊನಿಯೋ ಗ್ರಾಂಶಿ ಅದನ್ನು 'ಹೆಜಮನಿ' ಎಂದು ಕರೆಯುತ್ತಾನೆ. ಆದರೆ ಅದನ್ನು ಬೌದ್ಧ ಪರಿಭಾಷೆಯಲ್ಲಿ ವಿಚಾರಾಕೃತಿಯ ವಿಕಲ್ಪ ಎಂದು ಸಧ್ಯಕ್ಕೆ ಕರೆಯೋಣ. ಈ ವಿಚಾರಾಕೃತಿಯ ದಬ್ಬಾಳಿಕೆ ಇಲ್ಲಿನ ಜೀವಂತ ಜ್ಞಾನ ಪರಂಪರೆಗಳನ್ನು ಅಧಿಕಾರ ಸಂಬಂಧಗಳಿಂದ ಪತ್ಯೇಕಿಸಿ, ಶಕ್ತಿಹೀನಗೊಳಿಸಿ ಮೂಲೆಗುಂಪಾಗಿಸುತ್ತದೆ. ಹೀಗೆ ನಮ್ಮ ಚಿಂತನಾ ಸಾಮರ್ಥ್ಯವೇ ಒಂದು ರೀತಿಯ ವಸಾಹತೀಕರಣಕ್ಕೊಳಗಾಗುತ್ತದೆ. ಇಲ್ಲೇ ಪಾಶ್ಚಾತ್ಯ ಮತ್ತು ಪೌರ್ವಾಸ್ತ್ಯ ಎನ್ನೋ ಪರಿಭಾಷಿಕ ಪದಗಳು ಭವಿಷ್ಯವನ್ನು ರೂಪಿಸಿಕೊಳ್ಳುವ ಮತ್ತು ವರ್ತಮಾನವನ್ನು ವಿವರಿಸಿಕೊಳ್ಳುವ ಮಾದರಿಗಳಾಗಿ ನಮ್ಮ ಆಯ್ಕೆಗೆ ಸಿಗುವುದು. ಆದರೆ ಈ ಪೌರಾಸ್ತ್ಯ ಎನ್ನುವುದೂ ಸಹ ಅಂತಿಮವಾಗಿ ಸಂಸ್ಕೃತ ಪರಂಪರೆ ಅಥವಾ ವೇದ ಮೂಲದ ಜ್ಞಾನ ಶಾಸ್ತ್ರವಾಗಿ ಎಲ್ಲವನ್ನೂ ವಿವರಿಸಿಕೊಳ್ಳುವ ಅಹಂನ್ನು ಮೆರೆಯುತ್ತದೆ. ಈ ಎರಡು ಪರಿಭಾಷೆಗಳು ಒಂದಾಗಿ, ೧೯ನೆಯ ಶತಮಾನದ ಕೊನೆಯ ವೇಳೆಗೆ 'ಕನ್ನಡ ಜಗತ್ತನ್ನು' ನೀಟಾಗಿ ಭಟ್ಟಿ ಇಳಿಸಿ, ಅದನ್ನು ವಸಾಹತೀಕರಿಸಿದಲ್ಲದೆ ಏಕರೂಪಿಯಾದ ಭೂತವೊಂದನ್ನು ಅದರ ಚರಿತ್ರೆ ಎಂದು ನಿರೂಪಿಸಿ ಕೊಡುತ್ತದೆ. ಇಂಥ ಚರಿತ್ರೆಗೆ ಪೂರಕವಾಗಿಯಷ್ಟೆ ಶಾಸನಗಳು ಬಳಕೆಯಾಗಿರುವುದು. ಹೀಗೆ ಶಾಸನ ಎನ್ನುವ 'ಸಾಂಸ್ಕೃತಿಕ ಪಠ್ಯ'ವೊಂದು ತಯಾರಾಗಿ ಕನ್ನಡ ಜಗತ್ತನ್ನು ವಿವರಿಸಿಕೊಳ್ಳುವ (ಅ)ಚಾರಿತ್ರಿಕ ಸತ್ಯಗಳಾಗಿ ನಮ್ಮ ಗಮನವನ್ನು ಸೆಳೆಯುತ್ತವೆ.

ಈ ಪ್ರಕ್ರಿಯೆಯಲ್ಲಿ ಪಶ್ಚಿಮವು ಹೇಗೆ ಪೂರ್ವದ ದೇಶಗಳ ನಾಗರೀಕತೆ ಮತ್ತು ಆಧುನಿಕತೆಗೆ ಪರ್ಯಾಯವಾದ ಹೆಸರಾಯಿತೋ ಹಾಗೆಯೇ ಸಂಸ್ಕೃತ ಪರಂಪರೆ ಅಂದರೆ ವೇದಾಂತ ದರ್ಶನಗಳೂ ಸಹ ಅವೈದಿಕ/ಅಬ್ರಾಹ್ಮಣೀಯ ಅಂದರೆ ಶ್ರಮಣಪರಂಪರೆ (ಮುಂದೆ ಈ ಸಾಂಘಿಕ ಐಡೆಂಟಿಟಿಯನ್ನು ವಿವರಿಸಿಕೊಳ್ಳಲಾಗುವುದು) ಗಳಿಗೆಲ್ಲಾ ಯಜಮಾನ/ಪ್ರಧಾನ ಚಿಂತನಾ ಮಾಧರಿಗಳಾಗಿ ಮಾರ್ಪಟ್ಟವು. ಆದ್ದರಿಂದ ಇಲ್ಲಿ 'ನಮ್ಮವರು' ಅಂದರೆ ದ್ವಿಜರು ಅಥವಾ ಸವರ್ಣೀಯರು ಎಂದಾಗಿ, 'ಪರರು' ಎಂದರೆ ಶೂದ್ರ, ಅತಿಶೂದ್ರ ಮತ್ತು ದಾಸ್ಯು/ಆದಿವಾಸಿ ಸಮುದಾಯಗಳಾಗಿ (ಅದೇ ವೇದ ಜ್ಞಾನದಲ್ಲಿ) ವರ್ಗೀಕರಣಗೊಳ್ಳುತ್ತವೆ. ಆದರೆ ಇಲ್ಲಿರುವ ವಿಪರ್ಯಾಸ ಅಥವಾ ವಿಕಲ್ಪವೆಂದರೆ ಅದು ಅಂತಿಮವಾಗಿ ಒಂದು 'ಪುರುಷತ್ವ'ದ

ಒಂದು 'ವಂಶಾವಳಿ'ಯನ್ನು ನಮ್ಮೆದುರು ಸಂಘಟಿಸುತ್ತದೆ. ಅಂದರೆ ಇಲ್ಲಿರುವ ಅಂಸಖ್ಯಾತ ಶ್ರಮಣಧಾರೆಯ ಐಡೆಂಟಿಟಿಗಳೆಲ್ಲಾ ಸಂಸ್ಕೃತ ಪರಂಪರೆಯ ಅನೈತಿಕ ಸಂಬಂಧದ ಕೂಸುಗಳಾಗಿ, ನಾಗರೀಕತೆ ಅಥವಾ ಆಧುನಿಕತೆಯಲ್ಲಿ ಹಿಂದುಳಿದವಾಗಿ, ಪುರಾತನ ಸ್ಥಿತಿಯವಾಗಿ ಅಸ್ಪೃಶ್ಯ ನೆಲೆಯಲ್ಲಿ ಪ್ರತಿನಿಧೀಕರನಗೊಳ್ಳುತ್ತವೆ. ಹೀಗೆ ಪ್ರತಿನಿಧೀಕರನಗೊಂಡ ಸಮುದಾಯಗಳು ತಮ್ಮದಲ್ಲದ ಸಾಂಸ್ಕೃತಿಕ ಅಧಿಕಾರದ ಗದ್ದುಗೆಯನ್ನು ಪರಿಕಲ್ಪಿಸಿಕೊಳ್ಳುತ್ತಾ, ಅದಕ್ಕೆ ಪೂರಕವಾಗಿ ತಾವೂ ಸಹ 'ಜೀವಸಂಕುಲದ ವಶಾಹತೀಕರಣ'ದಲ್ಲಿ ಪಾಲ್ಗೊಳ್ಳುವಂಥ ಒತ್ತಡದಲ್ಲಿ ಸಿಲುಕುತ್ತವೆ. ಇಂಥ ಸಂದಿಗ್ಧ ಸ್ತೀತಿಯನ್ನೇ 'ಕನ್ನಡ ಜಗತ್ತು' ಇಂದಿಗೂ ಎದುರಿಸುತ್ತಿದೆ! ಆದ್ದರಿಂದ ಇಂಥ ಸಂದಿಗ್ಧ ಸ್ಥಿತಿಗೆ ಕಾರಣವಾದ ಕನ್ನಡ ರಾಷ್ಟ್ರೀಯತೆಯನ್ನು ಹಾಗೂ ಅದಕ್ಕೆ ಪೂರಕವಾಗಿ ಕಟ್ಟಲಾದ ಭಾರತೀಯ ರಾಷ್ಟ್ರೀಯತೆಯನ್ನು ಇಂದು ನಾವು ಮರುವಿಶ್ಲೇಷಣೆಗೆ ಒಳಪಡಿಸಬೇಕಾಗಿದೆ. ಅಂದರೆ ಈ ರಾಷ್ಟ್ರೀಯತೆಗೆ ಅಡಿಪಾಯವಾಗಿ ಕಟ್ಟಲಾದ ಚರಿತ್ರೆಯನ್ನು ಹಾಗೂ ಅದರ ಆಕರ ಸಾಮಾಗ್ರಿಗಳನ್ನು ನಾವಿಂದು ಧೈರ್ಯವಾಗಿ ಪ್ರಶ್ನಿಸಿಕೊಳ್ಳಬೇಕಾಗಿದೆ.

ಈ ಹಿನ್ನೆಲೆಯಲ್ಲಿ ವಸಾಹತುಶಾಹಿಯ ಸಂದರ್ಭದಲ್ಲಿ ಉದಯಿಸಿದಂಥ ಅನೇಕ ರಾಷ್ಟ್ರೀಯತೆಗಳು ಹಾಗೂ ಅವುಗಳ ಸಂಕಥನಗಳು ತಮಗೆ ಪೂರಕವಾದ ಅನೇಕ ಗತಕಾಲಗಳನ್ನು ಸೃಷ್ಟಿಸಿಕೊಂಡವು. ಇಂಥ ಕಥನಗಳು ವರ್ತಮಾನದ ಅಧಿಕಾರ ಪೈಪೋಟಿಯನ್ನು ನಿಭಾಯಿಸಿಕೊಳ್ಳಲು ಬಳಕೆಯಾಗಿ, ಗತವೇ ವರ್ತಮಾನವಾಗಿ ಭವಿಷ್ಯತ್ತನ್ನು ನಿರ್ಧರಿಸುವ ಕರ್ಮಸಿದ್ಧಾಂತವಾಗಿ ಮಾರ್ಪಡುತ್ತದೆ ಎಂಬುದನ್ನು ಗಮನಿಸಬೇಕಾಗುತ್ತದೆ.

ಆದ್ದರಿಂದ ೧೯ನೆಯ ಶತಮಾನದ ಕೊನೆಯಲ್ಲಿ ಬಂದಂಥ ಚಿಂತನಾ ಕ್ರಮಗಳು ಅಂದಿನ ವೈಜ್ಞಾನಿಕ ಮಾದರಿಯನ್ನು ಅನುಸರಿಸಿ, ನಮ್ಮ ಇತಿಹಾಸ ಮತ್ತು ವರ್ತಮಾನವನ್ನು ಸಂಘಟಿಸುತ್ತವೆ. ಇಂಥ ನಿರೂಪಣೆಯಲ್ಲಿರುವ ಗ್ರಹೀತಗಳೆಂದರೆ:

೧. **ತರ್ಕ ಮತ್ತು ಕಾರ್ಯ-ಕಾರಣಗಳ** ಮೂಲಕ ಮಾನವ ಜಗತ್ತು ಮತ್ತು ಸ್ವಾಭಾವಿಕ ಜಗತ್ತಿನ ಜ್ಞಾನವನ್ನು ಅರ್ಥೈಸಿ, ಕ್ರಮಬದ್ಧಗೊಳಿಸುವುದು.

೨. **ಎಂಪಿರಿಸಿಸಂ**: ಇದೊಂದು ತಾತ್ತ್ವಿಕ ಸಿದ್ಧಾಂತ. ಅಂದರೆ ಜಗತ್ತಿನ ಜ್ಞಾನವನ್ನು ಪಡೆಯುವುದು ಅಂತಿಮವಾಗಿ ಪಂಚೇಂದ್ರಿಯಗಳ ಮೂಲಕ (ಅನುಭವ ಜನ್ಯ ಜ್ಞಾನ. ಇದನ್ನೇ ಪ್ರತ್ಯಕ್ಷ ಅನುಭವವೇ ನಿಜವಾದ ಜ್ಞಾನ ಎಂದು ವೇದಾಂತ ಹೇಳುತ್ತದೆ).

೩. ಸಮಕಾಲೀನ ಸಮಾಜದಲ್ಲಿ **ವಿಜ್ಞಾನ** ಒಂದು ಮುಖ್ಯ ಸಾಂಸ್ಕೃತಿಕ ಮತ್ತು ಬೌದ್ಧಿಕ ಸಂಗತಿಯಾಗಿ ಮಾನ್ಯತೆ ಪಡೆದಿರುವುದು. ಇದು ತೀವ್ರಗತಿಯ ತಂತ್ರಜ್ಞಾನ ಆವಿಷ್ಕಾರದ ಪರಿಣಾಮವಾಗಿ ಸ್ವಾಭಾವಿಕ ಜಗತ್ತನ್ನು ನಿಯಂತ್ರಿಸುತ್ತದೆ ಮತ್ತು ಪರಿವರ್ತಿಸುತ್ತದೆ. ಇದು ಯೂರೋಪಿನ ಸಮಾಜದಲ್ಲಿ ಪೌರೋಹಿತ್ಯದ ವಿರುದ್ಧವಾಗಿಯೂ ಕಾಣಿಸಿಕೊಳ್ಳುತ್ತದೆ.

೪. **ಸಾರ್ವತ್ರಿಕತೆ**: ತರ್ಕ ಮತ್ತು ವಿಜ್ಞಾನದ ನಿಯಮಗಳನ್ನು ಸಾರ್ವತ್ರಿಕವಾಗಿ ಅನ್ವಯಿಸಬಹುದೆನ್ನುವ ನಂಬಿಕೆಗೆ ಸಂಬಂಧಿಸಿದ್ದು. ಅಂದರೆ ಸಾರ್ವಕಾಲಿಕ ಕಾರ್ಯ-ಕಾರಣದ ವೈಜ್ಞಾನಿಕ ನಿಯಮಗಳಿದ್ದು ಅವನ್ನು ಮಾನವ ಜಗತ್ತು ಹಾಗೂ ಇಡೀ ವಿಶ್ವಕ್ಕೂ ಅನ್ವಯಿಸಬಹುದು. ಈ ನಿಯಮಗಳನ್ನು ಶೋಧಿಸುವುದೇ ಎನ್‌ಲೈಟನ್ಮೆಂಟ್ ಪ್ರಾಜೆಕ್ಟ್‌ನ ಗುರಿಯಾಗುತ್ತದೆ.

೫. **ಚರಿತ್ರೆಯ ಪ್ರಗತಿಪರ ನಿಲುವು**: ಅಂದರೆ ವರ್ತಮಾನದ ಸಮಾಜವು ಅನೇಕ ಚಾರಿತ್ರಿಕ ಯುಗಗಳ ಮೂಲಕ ವಿಕಾಸಗೊಂಡಿದೆ. ಅನಾಗರೀಕತೆಯಿಂದ ನಾಗರೀಕತೆಯೆಡೆಗೆ ಮಾನವ ಸಮಾಜ ಪ್ರಗತಿಹೊಂದಿದೆ. ಅಜ್ಞಾನದಿಂದ ಜ್ಞಾನೋದಯದೆಡೆಗೆ, ಸಾಮಾಜಿಕ ಕಟ್ಟುಪಾಡುಗಳಿಂದ ಸ್ವಾತಂತ್ರ್ಯದೆಡೆಗೆ, ಸಾಂಪ್ರದಾಯಿಕತೆಯಿಂದ ಸ್ವಯಂ ತಂತ್ರವಾದಿ ವರಸೆ (ಉದಾರವಾದ)ಯೆಡೆಗೆ ಹಾಗೂ ಮುಕ್ತ ಅಭಿವ್ಯಕ್ತಿ ಮತ್ತು ವಿಮೋಚನೆಯತ್ತ ಮಾನವ ಸಮಾಜ ವಿಕಾಸಗೊಂಡಿದೆ.

೬ **ವ್ಯಕ್ತಿವಾದ**: ಮಾನವ ಸಮಾಜ ಮತ್ತು ಚರಿತ್ರೆಯ ಮುಖ್ಯ ಘಟಕ ಎಂದರೆ **ವ್ಯಕ್ತಿ** ಎನ್ನುವ ಚಿಂತನೆ. ಇದರೊಡನೆ,

೭ **ಸಹನೆ** ಎನ್ನುವ ಮೌಲ್ಯದ ಘೋಷಣೆ. ಇದೇ ಮುಂದೆ ವ್ಯಕಿ/ಮಾನವ ಹಕ್ಕುಗಳ ಪ್ರತಿಪಾದನೆಯಲ್ಲಿ ತೊಡಗುವುದು. ಫ್ರೆಂಚ್ ಕ್ರಾಂತಿಯ ಮುಖ್ಯ ಘೋಷಣೆಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರತ್ವಗಳು ಪ್ರಶ್ನಾತೀತವಾದುವು.

೮. **ಅಧಿಕಾರಯುತವಾದ ಸ್ವಾತಂತ್ರ್ಯದ ಘೋಷಣೆ:** ವಾಣಿಜ್ಯ, ವ್ಯವಹಾರ, ಲೈಂಗಿಕತೆ ಮತ್ತು ಖಾಸಗೀ ಒಡೆತನದ ಮೇಲಿದ್ದ ಊಳಿಗಮಾನ್ಯ ಹಿಡಿತವನ್ನು ಈ ಮೌಲ್ಯದ ಮೂಲಕ ನಿಷೇಧಿಸುವುದು.

೯. ಮಾನವರೆಲ್ಲರೂ **ಸರಿಸಮಾನವಾದ ಲಕ್ಷಣಗಳನ್ನು** ಹೊಂದಿದ್ದಾರೆ. ಅವು ಗಡಿ, ಸಮಾಜ, ಚರಿತ್ರೆ ಮತ್ತು ಸಂಸ್ಕೃತಿಗಳನ್ನು ಮೀರಿ ನಿಂತಿವೆ.

೧೦. **ಧರ್ಮನಿರಪೇಕ್ಷತೆ/ಜಾತ್ಯತೀತ ಧೋರಣೆ:** ಲೌಕಿಕ ಜಗತ್ತಿನ ಅಲೌಕಿಕ ವಿವರಣೆಯ ನಿರಾಕರಣೆ. ಇದು ಮುಖ್ಯವಾಗಿ ೧೮-೧೯ನೆಯ ಶತಮಾನದಲ್ಲಿನ ಚರ್ಚ್‌ನ ಯಾಜಮಾನ್ಯದ ಸತ್ಯಗಳನ್ನು ವಿರೋಧಿಸುವ ಮೌಲ್ಯವಾಗಿ ಬರುತ್ತದೆ[೧೦].

ಈ ಮೇಲಿನ ತಾತ್ತ್ವಿಕತೆಯು ಇಂಡೊಲಜಿಯ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಾಮ್ರಾಜ್ಯಶಾಹಿ ರೂಪಕವಾದ 'ಯಂತ್ರ-ದೇಹ'ವನ್ನು ಆಧರಿಸಿರುತ್ತದೆ. ಇದನ್ನು ವಿನ್ಸೆಂಟ್ ಸ್ಮಿತ್ (೧೮೪೮-೧೯೨೦)ನ **ಇಂಡಿಯಾದ ಚರಿತ್ರೆಯಲ್ಲಿ**[೧೧] ಗಮನಿಸಬಹುದು.

ಈ ಗ್ರಹೀತಗಳನ್ನು ಅನುಸರಿಸಿ ವಸಾಹತುಶಾಹಿ ಭಾಷಾಶಾಸ್ತ್ರ ಅಭಿವೃದ್ಧಿಗಳ್ಳುತ್ತದೆ. ಈ ಭಾಷಾಶಾಸ್ತ್ರದ ಮೂಲಕ ಸಂಸ್ಕೃತ ವ್ಯಾಕರಣ ಮಾದರಿಯಾಗಿ, ಕನ್ನಡ ಭಾಷೆ ಎನ್ನುವುದು ಸಂಘಟಿತಗೊಳ್ಳುತ್ತದೆ. ಇದು ಮುಂದೆ ಸ್ಥಳೀಯ ಭಾಷಾವಾರು ಪ್ರಾಂತ್ಯಗಳಾಗಿ/ಕರ್ನಾಟಕ ಏಕೀಕರಣವಾಗಿ ಚಳುವಳಿ ರೂಪುಗೊಳ್ಳುವುದನ್ನು ನಾವು ಕಾಣುತ್ತೇವೆ. ಆದರೆ ಈ ಗ್ರಹೀತಗಳೊಳಗೆ ಇರುವ ಒಂದು ವಿಧಾನ ಎಂದರೆ ಸತ್ಯವನ್ನು ಸ್ಥಾಪಿಸುವ ಸಾಮಾನ್ಯೀಕರಣ/ಯೂನಿವರ್ಸಲ್‌ಗಳನ್ನು ತರ್ಕವಾಗಿ ಮುಂದಿಡುವುದು. ಇದನ್ನು ಅನುಸರಿಸಿಯೇ ಶಾಸನಗಳ ಅಧ್ಯಯನ ಕನ್ನಡ ಜಗತ್ತಿನಲ್ಲಿ ಆರಂಭವಾಗುವುದು ಮತ್ತು ಅವುಗಳನ್ನು ಸಾಂಸ್ಕೃತಿಕ ಆಕರಗಳನ್ನಾಗಿ ಸಂಘಟಿಸುವುದು.

ಹಾಗೆಯೇ ದೇಶೀ ಎನ್ನುವ ಅಧ್ಯಯನಗಳೂ ಸಹ ಅಂತಿಮವಾಗಿ ಮೇಲಿನ ಸರಳೀಕೃತ ನಿರೂಪಣೆಯನ್ನು ಅನುಸರಿಸಿ **ವೇದ ಪ್ರಣೀತ ಜ್ಞಾನ** ಕ್ರಮಗಳನ್ನೇ ನಮ್ಮ ಗ್ರಾಹ್ಯಕ್ಕೆ ನೀಡುತ್ತಾ, ಇಲ್ಲಿನ ಶ್ರಮಣ ಪರಂಪರೆಗಳನ್ನು ಮರೆಗುಳಿತನಕ್ಕೆ ಒಳಪಡಿಸಲಾಗುತ್ತದೆ. ಅಂದರೆ ಈ ಪೂರ್ವ-ಪಶ್ಚಿಮಗಳೆಂಬ ದ್ವಂದ್ವಾತ್ಮಕ ನಿಲುವುಗಳಿಗಿಂತ ಗಹನವಾದ ಶ್ರಮಣ ಪರಂಪರೆಗಳ ಜ್ಞಾನ ಪ್ರಮೇಯಗಳು ಇದೇ ಮಣ್ಣಲ್ಲಿ ಅನೇಕವಿದ್ದರೂ ಸಹ ಅವುಗಳನ್ನು ತಾರ್ಕಿಕವಾಗಿ, ಕೆಲವೊಮ್ಮೆ ಬಹಿರಂಗವಾಗಿ, ಕೆಲವೊಮ್ಮೆ ತೆರೆಮರೆಯಲ್ಲಿ ಮೆಟ್ಟುತ್ತಾ ನಿರಸನಗೊಳಿಸುವುದನ್ನು ನಾವು ಇತಿಹಾಸದಲ್ಲಿ ಕಾಣುತ್ತೇವೆ. ಆದರೆ ಈ ಪ್ರಕ್ರಿಯೆಯಲ್ಲಿ ಈ ಶ್ರಮಣ ಪರಂಪರೆಗಳ ಸಾಕ್ಷಿಗಳನ್ನು ನಾಶಮಾಡಿರುವುದನ್ನೂ ಸಹ ನಾವು ನೆನಪಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ.

ಈ ಸಂಗತಿಗಳನ್ನು ಅನಾವರಣಗೊಳಿಸುವ ಮೊದಲೇ ವಸಾಹತುಶಾಹಿ ಆಧುನಿಕತೆಯ ಮತ್ತು ಬ್ರಾಹ್ಮಣೀಯ ಸವಾಲುಗಳನ್ನು ದಿಟ್ಟವಾಗಿ ಎದುರಿಸಿದ ನಾಯಕರಿಗೆ (ಶೂದ್ರ ಮತ್ತು ಅತಿಶೂದ್ರ ಸಮುದಾಗಳೆಂದು ಪರಿಗಣಿತವಾಗಿ, ಆಧುನಿಕತೆಯಲ್ಲಿ ತಮ್ಮ ಪಾಲನ್ನು ಪಡೆಯಲು ಹೋರಾಟವನ್ನು ಸಂಘಟಿಸಿದ ಫೂಲೆ, ಅಂಬೇಡ್ಕರ್, ಪೆರಿಯಾರ್ ಮುಂತಾದವರನ್ನು ಇಲ್ಲಿ ನೆನಪಿಸಿಕೊಳ್ಳಬಹುದು) ಪಶ್ಚಿಮದ ಚಿಂತನಾ ಕ್ರಮಗಳು ಅನುಕರಣೀಯವಾಗಿ ಪೌರಾಸ್ತ್ಯ ಅಧ್ಯಯನಕಾರನ್ನು ಮತ್ತು ಬ್ರಾಹ್ಮಣೀಯ ರಾಷ್ಟ್ರೀಯತೆಯನ್ನು ದುಃಸ್ವಪ್ನವಾಗಿ ಕಂಡು, ಅದನ್ನು ತಿರಸ್ಕರಿಸಲು ತಮ್ಮದೇ ಆದ ಸಾಂಸ್ಕೃತಿಕ ಹೋರಾಟಗಳನ್ನು ನಡೆಸಿರುವುದನ್ನು ನಾವು ಕಾಣುತ್ತೇವೆ.

ಅಂದರೆ ವಸಾಹತುಶಾಹಿ ಸಂದರ್ಭದಲ್ಲಿ ವಿದ್ಯಾವಂತರಾದ ಭಾರತೀಯ ಸಮುದಾಯಗಳು ತನ್ನ-ತಮ್ಮವರ ಭವಿಷ್ಯವನ್ನು ಪಶ್ಚಿಮದ ಆಧುನಿಕತೆಯಲ್ಲೇ ಸಂಘಟಿಸಿಕೊಂಡರು ಎನ್ನುವುದನ್ನು ನಾವು ಗಮನಿಸುತ್ತೇವೆ. ಆದರೆ ಪಶ್ಚಿಮದ ವಸಾಹತುಶಾಹಿ ಮಾದರಿಗಳು ಇಲ್ಲಿನವರನ್ನು ನೇಟಿವ್ಸ್ ಎನ್ನುತ್ತಾ, ಅವರ ಭಾಷೆ, ಚಿಂತನೆ ಮತ್ತು ನಡಾವಳಿಯನ್ನು ತಿದ್ದುತ್ತವಲ್ಲದೆ, ಅವರ ಭೂತದ ಹಾಗೂ ಭವಿಷ್ಯದ ಕಲ್ಪನೆಗಳನ್ನು ಅಮೂಲಾಗ್ರವಾಗಿ ಬದಲಾಯಿಸುತ್ತದೆ. ಹಾಗಾಗಿ ತಮ್ಮಷ್ಟಕ್ಕೇ ಬದುಕನ್ನು ನಿರೂಪಿಸಿಕೊಳ್ಳುತ್ತಿದ್ದ ಬಣಗಳು ಈ ವಸಾಹತುಶಾಹಿ ಆಧುನಿಕತೆಯಿಂದ ಒಂದು ಹೊಸ ಲೋಕದೃಷ್ಟಿಯನ್ನು ಪಡೆದುಕೊಂಡು, ತಮ್ಮ ಬಗ್ಗೆ ವಿಭಿನ್ನವಾದ ಚರಿತ್ರೆ ಮತ್ತು ಪುರಾಣ ಪ್ರತೀಕಗಳನ್ನು ಸೃಷ್ಟಿಸಿಕೊಳ್ಳುತ್ತಾರೆ. ಇದಕ್ಕೆ ಪೂರಕವಾಗಿ ತಮ್ಮ ನೆನಪುಗಳನ್ನು ಸಹ ಸಂಗಟಿಸಿಕೊಳ್ಳುತ್ತಾರೆ. ಉದಾಹರಣೆಗೆ ಫೂಲೆಯವರಿಗೆ 'ಬಲಿರಾಜ' ಆದರ್ಶವಾದರೆ, ಅಂಬೇಡ್ಕರ್‌ರವರಿಗೆ ಬೌದ್ಧದರ್ಶನ ಅನಿವಾರ್ಯವಾಗುತ್ತದೆ. ಹಾಗೆಯೇ ಪೆರಿಯಾರ್‌ರವರಿಗೆ ರಾವಣನೇ ಆದರ್ಶನಾಗುತ್ತಾನೆ. "ಐತಿಹಾಸಿಕವಾಗಿ ಒಂದು ವರ್ಣಧರ್ಮ ಕಲ್ಪನೆಯನ್ನು ಆಶ್ರಯಿಸಿದ ರಾಜ್ಯವು ಇಂಥ ಪ್ರಾದೇಶಿಕ

ಸಮುದಾಯಗಳ ಮೇಲೆ ತನ್ನ ಆಳ್ವಿಕೆಯನ್ನು ರಚಿಸಿದ ಸಂಗತಿ ವಾಮನ ಪುರಾಣದಲ್ಲಿ ಇತಿಹಾಸದ ರೂಪ ತಳೆಯುತ್ತದೆ. ಫುಲೆಯವರು ಈ ಕಾರಣದಿಂದ ಬಲಿಯನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದ ಸಂಸ್ಕೃತಿ ರಾಷ್ಟ್ರವನ್ನು ರಚಿಸಿದರೆ ಅದು 'ಬಲಿರಾಜ್ಯ'ದ ಪ್ರಜೆಗಳಾಗಲು ಸಾಧ್ಯವಿಲ್ಲ ಎಮದು ನಿರಾಕರಿಸುತ್ತಾರೆ... ಬಲಿ ರಾಜ್ಯವನ್ನು ಧ್ವಂಸ ಮಾಡಿದವರು 'ಆರ್ಯ ಬ್ರಾಹಣರು'. ೧೯ನೆಯ ಶತಮಾನದ 'ಆರ್ಯ-ಬ್ರಾಹ್ಮಣರು' ವೈಷ್ಣವ ಸಂಸ್ಕೃತ ಪುರಾಣಗಳನ್ನು ಹಾಗೂ ಅವುಗಳ ವರ್ಣಧರ್ಮದ ಮೌಲ್ಯಗಳನ್ನು ತಮ್ಮ 'ರಾಷ್ಟ್ರ' ಎಂದು ಮುಂದೊತ್ತಿ ಕೊಳ್ಳುತ್ತಿದ್ದಾಗ 'ಬಲಿರಾಜ್ಯ'ವನ್ನು ಫುಲೆಯವರು ಮುಂದೊತ್ತಿ ಅವರನ್ನು (ಹಿಂದೂ ರಾಷ್ಟ್ರೀಯವಾದಿಗಳನ್ನು) ಎದುರಿಸುತ್ತಾರೆ. ಫುಲೆಯವರಿಗೆ 'ಬಲಿರಾಜ್ಯ' ಕೇವಲ ಪೌರಾಣಿಕ ಹಾಗೂ ಜಾನಪದೀಯ ಕಲ್ಪನೆಗಳೆಲ್ಲಾ, ಅವು 'ರಾಷ್ಟ್ರ' ಕಲ್ಪನೆಯಲ್ಲಿನ ಭೂತ, ವರ್ತಮಾನ ಮತ್ತು ಭವಿಷ್ಯ ಮೂರೂ ಆಗುತ್ತವೆ"[೧೨]. ವಾಮನ ಆದರೆ ಈ ಎಲ್ಲಾ ನಿರೂಪಣೆಗಳಿಗೆ ಆಧಾರವಾಗಿ ನಿಲ್ಲುವಂಥದ್ದು ಶ್ರಮಣ ಪರಂಪರೆಗಳು ಎಂದೂ ಆಗ ಯಾರಿಗೂ ಅನಿಸದಿದ್ದದ್ದು ಸೋಜಿಗದ ಸಂಗತಿಯೇ ಸರಿ! "ಬ್ರಾಹ್ಮಣೇತರ ಸಮುದಾಯಗಳು ಲೌಕಿಕವಾಗಿ ಉನ್ನತ ಸ್ಥಾನಮಾನವನ್ನು ಹೊಂದಿದ್ದರೂ ಬ್ರಾರ್ಹಣಿಕೆಯನ್ನು ಶ್ರೇಷ್ಠ ಎಂದು ಗ್ರಹಿಸಿದ್ದವು... ಅಂದರೆ ವಸಾಹತುಪೂರ್ವ ಕಾಲದ ಬ್ರಾಹ್ಮಣೇತರ ರಾಜರು ಹಾಗೂ ಆಳುವ ವರ್ಗದ ಸ್ಥಾನವನ್ನು ಈ ಬದಲಾದ ಆಧುನಿಕ ಕಾಲದಲ್ಲಿ 'ಆರ್ಯ-ಬ್ರಾಹ್ಮಣರು' ತುಂಬುತ್ತಾರೆ"[೧೩]. ಆದರೆ ಇವರ್‍ಯಾರಿಗೂ ಸಹ ಭೂತವನ್ನು ವಿವರಿಸಿಕೊಳ್ಳುವ ಭಿನ್ನ ಸಾಧ್ಯತೆಗಳು ಅಪಥ್ಯವಾಗಿಬಿಡುತ್ತವೆ. ಆದ್ದರಿಂದಲೇ ಇವರೆಲ್ಲಾ "ಆಧುನಿಕ ಸ್ವಯಂತಂತ್ರವಾದಿ ಮೌಲ್ಯಗಳು ವರ್ಣ ಧರ್ಮದ ಚವಕಟ್ಟಿನಿಂದ ತಪ್ಪಿಸಿಕೊಳ್ಳುವ ನೈತಿಕ ಹಾಗೂ ತಾತ್ವಿಕ ಮಾರ್ಗವನ್ನು ನೀಡಿದವು"[೧೪]

ಹೀಗೆ ಶೋಷಣೆ, ದಾಸ್ಯ, ದಬ್ಬಾಳಿಕೆ, ಹಿಂಸೆ ಮುಂತಾದುವುಗಳೆಲ್ಲಾ ಸಾಂಸ್ಕೃತಿಕ ಶಕ್ತಿ ಅಥವಾ ಶಕ್ತಿಹೀನತೆಯ ಸಂಬಂಧಗಳಲ್ಲೇ ಅಭಿವ್ಯಕ್ತಿ ಪಡೆಯುತ್ತಾಲೇ ಹೊಸ ಸಾಂಸ್ಕೃತಿಕ ಪ್ರತೀಕಗಳ ಹುಡುಕಾಟವನ್ನು ಹುಡುಕಿಕೊಳ್ಳುತ್ತಾ ಹೋರಾಟಮಾಡುವುದನ್ನು ಮತ್ತು ಅವುಗಳನ್ನು ಭವಿಷ್ಯದ ಗುರಾಣಿಗಳಾಗಿ ಮಾಡಿಕೊಳ್ಳುವ ಪ್ರಕ್ರಿಯೆಗಳನ್ನು ಕಾಣುತ್ತೇವೆ. ಹೀಗೆ ಆಧುನಕತೆ, ಬ್ರಾಹ್ಮಣ್ಯ, ಶೂದ್ರತ್ವ, ಅಸ್ಪೃಶ್ಯತೆ, ವರ್ಣ, ಜಾತಿ, ಧರ್ಮ, ಹಿಂದುತ್ವ, ಆರ್ಯ-ದ್ರಾವಿಡ ಮುಂತಾದ ಪರಿಭಾಷೆಗಳು ಇದೆ ಸಂದಭರ್ದಲ್ಲಿ ಚಲಾವಣೆಗೆ ಬರುತ್ತವೆ. ಇ.ಜಿ. ಹಾಬ್ಸ್‌ಬಾಮ್ ಹೇಳುವಂತೆ ಮೂರನೆಯ ಜಗತ್ತಿನ ಪ್ರಜೆಗಳು ರಾಷ್ಟ್ರೀಯ ಹೋರಾಟಗಳನ್ನು ನಡೆಸಿ ರಾಜಕೀಯವಾಗಿ ಒಂದು ರಾಷ್ಟ್ರವನ್ನು ಪಡೆಯುತ್ತಾರೆ. ರಾಜಕೀಯ ರಾಷ್ಟ್ರೀಯತೆ ಇದ್ದ ಮೇಲೆ ಸಾಂಸ್ಕೃತಿಕವಾಗಿಯೂ ಒಂದು ರಾಷ್ಟ್ರೀಯತೆ ಇರಲೇಬೇಕೆಂದು ಭಾವಿಸಿ, ಆ ನಿಟ್ಟಿನಲ್ಲಿ ಏಕರೂಪತೆಯನ್ನು ಸಾಧಿಸಲು ಪಣತೊಡುತ್ತವೆ[೧೫]. ಈ ಪ್ರಯತ್ನದಲ್ಲಿ ಪ್ರಪ್ರಥಮವಾಗಿ ಮುಸ್ಲಿಮರು ಮತ್ತು ಹಿಂದೂ ರಾಷ್ಟ್ರೀಯವಾದಿಗಳು ಯಶಸ್ಸನ್ನು ಪಡೆಯುತ್ತಾರೆ (ಆದರೆ ಇಂಥ ರಾಷ್ಟ್ರೀಯತೆಗಳಲ್ಲಿರುವ ಹಿಂಸೆಯ ತಾಪವನ್ನು ಎಲ್ಲರೂ ಅನುಭವಿಸಿದ್ದವರೇ ಆಗಿದ್ದಾರೆ).

ಇಲ್ಲಿ ಮತ್ತೊಂದು ವಿಷಯ ನಮ್ಮ ಗಮನ ಸೆಳೆಯುತ್ತವೆ. ಶೂದ್ರ-ಅತಿಶೂದ್ರ ಎನ್ನುವ ಈ ಬಹುರೂಪಿ ಸಮುದಾಯಗಳು ತಮ್ಮದೇ ಆದ ಪಾರಂಪರಿಕ ಚಿಂತನಾಕ್ರಮಗಳಲ್ಲಿ ಆಧುನಕತೆಯನ್ನು ಅರಗಿಸಿಕೊಳ್ಳಲು ಪ್ರಯತ್ನಿಸಿದಾಗ ಎರಡು ಪ್ರಬಲ ನಿಲುವುಗಳು ಅವಕ್ಕೆ ಆಘಾತಕಾರಿ ಪಟ್ಟವನ್ನು ನೀಡುತ್ತವೆ:

೧. ಯೂರೋಪಿನ ಜ್ಞಾನಪರ್ವದ ವೈಚಾರಿಕತೆ, ವಿಜ್ಞಾನ, ಸ್ವಂತಂತ್ರವಾದಿ ಮೌಲ್ಯಗಳು ಪಾರಂಪರಿಕ ಜ್ಞಾನವನ್ನು ಮೌಢ್ಯ ಎಂದು ಪರಿಗಣಿಸಿದ್ದು.

೨. ಈ ಯೂರೋಪಿನ ವಿಚಾರಧಾರೆಯಿಂದ ಮೈಗೊಡವಿಕೊಂಡು ಎದ್ದ ಸಂಸ್ಕೃತ ಪರಂಪರೆ ಅಥವಾ ವೇದ ಮೂಲ ಚಿಂತನಾ ಕ್ರಮಗಳು ಮತ್ತೊಮ್ಮೆ ಶ್ರಮಣಪರಂಪರೆಗಳನ್ನು ಮೈಲಿಗೆಯ ನೆಲೆಯನ್ನಾಗಿ ತಮ್ಮ ಚಾಕರಿಗೆ ಬಗ್ಗುಬಡಿಯುತ್ತವೆ.

ಇಂಥ ಸಂದರ್ಭದಲ್ಲಿ ಉದಯಿಸಿದ ಸುಧಾರಣಾವಾದಿಗಳೆಲ್ಲಾ ಬ್ರಾಹ್ಮಣ ಹಿನ್ನೆಲೆಯಿಂದಲೇ ಬಂದವರಾಗಿದ್ದು ತಮ್ಮ ಸುಧಾರಣೆಗೆ ವೇದ ಮೂಲದ ಧರ್ಮಗ್ರಂಥಗಳನ್ನೇ ಆಧಾರಗಳಾನ್ನಾಗಿ ಮಾಡಿಕೊಂಡು ಆಧುನಿಕತೆಯನ್ನು ಸನಾತನಿಯನ್ನಾಗಿ ಪರಿವರ್ತಿಸಿಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲೆ ಸತಿಪದ್ಧತಿಯ ನಿರ್ಮೂಲನೆ, ವಿಧವಾ ವಿವಾಹ, ಸ್ತ್ರೀ ಶಿಕ್ಷಣ, ಬಾಲ್ಯವಿವಾಹ ನಿಷೇಧ ಮುಂತಾದ ಕಾರ್ಯಕ್ರಮಗಳು ಜಾರಿಯಾಗುತ್ತಾ, ಅದೇ ಜಾತಿ ವ್ಯವಸ್ಥೆಯನ್ನು ಸಮರ್ಥಿಸುವಂಥ ಗ್ರಂಥಗಳನ್ನು ಸಂಸ್ಕೃತ ಪರಂಪರೆಯಿಂದಲೇ ಪಡೆದುಕೊಳ್ಳಲಾಗುತ್ತದೆ. ಇವೆಲ್ಲಕ್ಕೂ ಮೂಲಭೂತವಾಗಿ ಬಳಸಿಕೊಂಡ

ವಿಚಾರಾಕೃತಿಯೆಂದರೆ ಶಂಕರಾಚಾರ್ಯನ ಅದ್ವೈತ ವೇದಾಂತವನ್ನೇ. ಹೀಗೆ ಸಂಸ್ಕೃತ ಮೂಲ 'ಪುರುಷತ್ವ' ಆದರ್ಶಪ್ರಾಯವಾಗಿ ಆನಂದ ಮಠ, ಇಂದಿರಾಬಾಯಿ ಮುಂತಾದ ಕಾದಂಬರಿಗಳಲ್ಲಿ ಕಾಣುವುದು. ಇದರ ಮುಕಟಪ್ರಾಯದಂತೆ ಆರ್.ಎಸ್.ಎಸ್ ಸಂಘಟನೆಗಳು ಉದಯಿಸಿವುದು. ಹೀಗೆ ಆಧುನೀಕರಣ ಎನ್ನುವುದು ವಿಭಿನ್ನವಾದ ಸಮಾಜೋ-ಆರ್ಥಿಕ ವ್ಯವಸ್ಥೆಗೆ ಅಡಿಪಾಯ ಹಾಕುತ್ತದೆ. ಆದರೆ ಈ ಆಧುನೀಕರಣ ಎನ್ನುವುದು ಸಂಸ್ಕೃತ ಪರಂಪರೆಯ ಜಾತಿ ವ್ಯವಸ್ಥೆಯನ್ನು ಹೇಗೆ ಪ್ರಭಾವಿಸುತ್ತದೆ ಎನ್ನುವುದನ್ನು ನಾವು ಸೂಕ್ಷ್ಮವಾಗಿ ಗಮನಸಬಹುದು. "ಈ ರೀತಿಯಲ್ಲಿ ಆಧುನೀಕರಣದ ನೀತಿ ಮತ್ತು ಧೋರಣೆಗಳು ಜಾತಿ ಪದ್ಧತಿಯನ್ನು ಆಧುನಿಕತೆಯ ಪೂರ್ವಘಟ್ಟದ, ಅಂದರೆ, ಬಂಡವಾಳಶಾಹೀ ಪದ್ಧತಿಯ ಉಗಮವಾಗುವುದಕ್ಕೆ ಮುಂಚೆ ಅಸ್ತಿತ್ವದಲ್ಲಿದ್ದ ವ್ಯವಸ್ಥೆಯ ಪಳೆಯುಳಿಕೆ ಎಂದು ವ್ಯಾಖ್ಯಾನಿಸುತ್ತವೆ. ಈ ರೀತಿಯ ವ್ಯಾಖ್ಯಾನಕ್ಕೆ ವಸಾಹತುಶಾಹಿ ಭೌದ್ಧಿಕ ಪರಂಪರೆಯೂ ಮಾನ್ಯತೆಯನ್ನು ಕೊಡುತ್ತದೆ. ಆದ್ದರಿಂದ ಸಮಾಜ ಮತ್ತು ಆರ್ಥಿಕ ವ್ಯವಸ್ಥೆ ಆಧುನಿಕವಾಗುತ್ತಿದ್ದಂತೆ ಜಾತಿ ಪದ್ಧತಿ ಸತ್ವ ಕಳೆದುಕೊಳ್ಳುತ್ತಾ ಹೋಗಿ ಕೊನೆಗೆ ಸಹಜವಾಗಿಯೇ ನಾಶವಾಗಿಬಿಡುತ್ತದೆ ಎಂಬುದೇ ಚಲಾವಣೆಯಲ್ಲಿದ್ದ ಗ್ರಹಿಕೆಯಾಗಿತ್ತು"[೧೬]. ಆದರೆ, "ಬಂಡವಾಳಶಾಹಿ ವ್ಯವಸ್ಥೆ ಹಿಂದೆ ಇದ್ದ ವ್ಯವಸ್ಥೆಯ ಜಾತಿ ಪದ್ಧತಿ, ಮತ-ಆಧಾರಿತ ದೇವಸ್ಥಾನ, ಮದ್ರಸ ಇತ್ಯಾದಿ ಸಂಸ್ಥೆಗಳು ಹಾಗೂ ಬುಡಕಟ್ಟು ಆಚರಣೆಗಳೊಂದಿಗೆ ಬಹಳಷ್ಟು ಮಟ್ಟಿಗೆ ಹೊಂದಾಣಿಕೆ ಮಾಡಿಕೊಂಡುಬಿಟ್ಟಿತು"[೧೭]. ಇಲ್ಲಿರುವ ಸಮಸ್ಯೆ ಎಂದರೆ ವಸಾಹತುಶಾಹಿ ಆದುನಿಕತೆ ಎಲ್ಲರಿಗು ಪರಂಪರೆಯಿಂದ ವಿಮೋಚನೆಯನ್ನು ನೀಡುತ್ತದೆ ಎನ್ನುವ ಹುಸಿ ಭ್ರಮೆಯೊಂದು ಕ್ರಿಯಾಶೀಲವಾಗಿರುವುದನ್ನು ಗಮನಿಸಬಹುದು. ಆದ್ದರಿಂದ ಅದನ್ನು ಹೊಂದಾಣಿಕೆಗಿಂತ ಸಂಸ್ಕೃತ ಪರಂಪರೆಯ ಚಿಂತನಾ ಕ್ರಮಗಳೇ ಇಂಥ ವಾಸ್ತವವನ್ನು ಸಾಧ್ಯವಾಗಿಸಿತ್ತಲ್ಲದೆ, ವಸಾಹತುಶಾಹಿ ಆಧುನಿಕತೆಯನ್ನು ತನ್ನ ವಿಸ್ತಾರಕ್ಕಾಗಿ ಬಳಸಿಕೊಂಡಿತು. ಈ ಮೂಲಕ ಬಂಡವಾಳಶಾಹಿ ಮಾರುಕಟ್ಟೆಯನ್ನು ವಶಪಡಿಸಿಕೊಂಡಿತು ಎಂದರೆ ತಪ್ಪಾಗುವುದಿಲ್ಲ. ಹೀಗೆ ಆಧುನಿಕತೆಯಿಂದ ಸಂಸ್ಕೃತ ಪರಂಪರೆ ಮರುಜೀವ ಪಡೆಯುತ್ತದೆ ಮತ್ತು ಶತಮಾನಗಳ ಹಿಂದಿನ ಶ್ರೇಣೀಕೃತ ವ್ಯವಸ್ಥೆಯನ್ನು ಮರು ಸ್ಥಾಪಿಸುತ್ತದೆ.

ಈ ಮೇಲಿನ ವಿಶ್ಲೇಷಣೆಯ ಮೂಲಕ ನಾವು ಶಾಸನಗಳ ಅಧ್ಯಯನಗಳನ್ನು ಸಂಘಟಿಸಿರುವ ವಿವಿಧ ಆಯಾಮಗಳನ್ನು ದೀರ್ಘವಾಗಿ ಚರ್ಚಿಸಲಾಗಿದೆ. ಹಾಗಾದರೆ ಮತ್ತೊಂದು ರೀತಿಯ ಬಗೆಯನ್ನು ನಾವು ಕಾಣಬಹುದೇ? ಇದು ಸಾಧ್ಯವಾಗಬೇಕಾದರೆ ಈ ಹಿಂದೆ ನಾವು ಹೇಳಿದ ಶ್ರಮಣ ಪರಂಪರೆಗಳನ್ನು ಮತ್ತು ಅವುಗಳ ಚಿಂತನಾಕ್ರಮಗಳನ್ನು ಪರಿಶೀಲಿಸಬೇಕಾಗುತ್ತದೆ.

### ೩. ಶಾಸನಗಳನ್ನು ಅಧ್ಯಯನ ಮಾಡುವ ಮತ್ತೊಂದು ಆಯಾಮ: ಶ್ರಮಣಧಾರೆ ಪರಂಪರೆಗಳು

ಯಾವುದೇ ಭಾವಾವೇಶವಿಲ್ಲದೆ ದಲಿತ ಸಿದ್ಧಾಂತಿಯಾದ ಗೋಪಾಲ್ ಗುರು, "ಭಾರತದಲ್ಲಿ ಸಾಮಾಜಿಕ ವಿಜ್ಞಾನಗಳು ಎಷ್ಟರ ಮಟ್ಟಿಗೆ ಸಮಾನತೆಯನ್ನು ಎತ್ತಿಹಿಡಿಯುತ್ತವೆ?" (ಗೋಪಾಲ್ ಗುರು, ೨೦೦೨) ಎಂಬ ಲೇಖನವನ್ನು ಬರೆಯುತ್ತಾರೆ. ಅವರ ಪ್ರಕಾರ, "ಕಚ್ಚಾ ಅನುಭವಜನ್ಯ ಮೀಮಾಂಸೆ (ಜ್ಞಾನವನ್ನು ಹೊರಡಿಸುವ ಒಂದು ವಿಧಾನ. ಇದನ್ನೇ ಡಾ. ಲಕ್ಷ್ಮಿಪತಿಯವರು 'ವಲ್ಗರ್ ಎಂಪಿರಿಸಿಸಂ' ಎಂದು ಕರೆದಿದ್ದಾರೆನ್ನುವುದನ್ನು ನೆನಪಿಸಿಕೊಳ್ಳಬಹುದು) ಲ್ಲಿದ್ದುಕೊಂಡು ದಲಿತರು ಬರೆಯುವುದೆಂದರೆ ಅದು ಯಾತನೆಯಲ್ಲದಿದ್ದರೂ ಸಹ ಬೇಸರದ ಸಂಗತಿಯೇ ಸರಿ" ಎಂದು ಹೇಳುವ ಗೋಪಾಲ್ ಗುರು, ಮತ್ತೆ ಮುಂದುವರೆದು "... ಥಿಯರೆಟಿಕಲ್ ಬ್ರಾಹ್ಮಣರು ಮತ್ತು ಎಂಪಿರಿಕಲ್ ಶೂದ್ರರ ನಡುವೆ ಭಾರತೀಯ ಸಾಮಾಜಿಕ ವಿಜ್ಞಾನಗಳಲ್ಲಿ ಒಂದು ಕೆಟ್ಟ ರೀತಿಯ ವಿಭಾಗೀಕರಣ ಇದೆ" ಎನ್ನುತ್ತಾರೆ. ಅಂದರೆ ಈ ಎಚ್ಚರವನ್ನಿಟ್ಟುಕೊಂಡು ನಾವು ಶಾಸನಗಳ ಅಧ್ಯಯನದ ಕಡೆಗೆ ಸಾಗಬೇಕಾಗುತ್ತದೆ. ಅಂದರೆ ಇಲ್ಲಿಯವರೆಗೆ ಇದ್ದ ಜ್ಞಾನ ಮೀಮಾಂಸೆಯನ್ನು ಸಾಂಸ್ಕೃತಿಕ ರಾಜಕಾರಣವನ್ನು ಗಮನದಲ್ಲಿಟ್ಟುಕೊಂಡು **'ಕುಲಮೂಲೀಯ'**ಗೊಳಿಸಬೇಕಾಗಿದೆ. ಕುಲಮೂಲೀಯಗೊಳಿಸುವುದು ಎಂದರೆ ಸಂಸ್ಕೃತ ಪರಂಪರೆ ಪ್ರಣೀತ ಜ್ಞಾನಕ್ರಮಗಳನ್ನು ವಿಭಿನ್ನವಾಗಿ ವಿವರಿಸಿಕೊಳ್ಳುವುದೇ ಆಗಿದೆ. ಈ ಮೂಲಕ ಸಾಮಾಜಿಕ ವಿಜ್ಞಾನಗಳ ಮಿತಿಗಳನ್ನು ಮೀರಬಹುದಾಗಿದೆ. ನಮ್ಮಲ್ಲಿ 'ಕುಲದೈವ'ದ ಕಲ್ಪನೆ ಇದೆ. ಈ ಕುಲದೈವ ಮೂಲತಃ ಮಾತೃಮೂಲೀಯವಾಗಿ ತದನಂತರದಲ್ಲಿ ಅದು ಕುಲಮೂಲೀಯವಾಗುತ್ತದೆ. ಈ ಕುಲ ಸಂಸ್ಕೃತಿಯ ಮೂಲಕವೇ "ಶ್ರಮಣ ಪರಂಪರೆ"ಗಳು ಭಾರತೀಯ ಎನ್ನುವ ಜಗತ್ತಿನಲ್ಲಿ ಚಾರಿತ್ರಿಕವಾಗಿ ಬೆಳೆಯುವುದು.

ಇಂಥ ಚಾರಿತ್ರಿಕ 'ಶ್ರಮಣಧಾರೆ ಪರಂಪರೆ'ಗಳು 'ಅವೈದಿಕ ಪರಂಪರೆಗಳು' ಅಥವಾ ಅಬ್ರಾಹ್ಮಣೀಯ ಚಿಂತನಾ ಕ್ರಮಗಳು ಎಂದು ಈ ಹಿಂದೆ ಅನೇಕರು ಕರೆದಿದ್ದರು. ಅದನ್ನೇ ನಾನು ಮತ್ತೆ ಬಳಸಿಕೊಂಡು ಶಾಸನಗಳ ಅಧ್ಯಯನವನ್ನು ಮಾಡುವ ಒಂದು ಕ್ರಮವನ್ನು ಮುಂದಿಡಲು ಪ್ರಯತ್ನಿಸುತ್ತೇನೆ.

ಸ್ಥೂಲವಾಗಿ ವೈದಿಕ ಪರಂಪರೆಗಳನ್ನು 'ಆಸ್ತಿಕ' ಎಂದು ಕರೆದರೆ ಶ್ರಮಣ ಪರಂರೆಗಳನ್ನು 'ನಾಸ್ತಿಕ' ಪರಂಪರೆ ಎಂದು ಕರೆಯುತ್ತಾರೆ. ವೇದಗಳನ್ನೂ ಅವುಗಳ ಶಾಖೆಗಳನ್ನು ಅಥವಾ ಪರಿವಾರವನ್ನು ಪರಮ ಪ್ರಮಾಣವೆಂದು ಸ್ವೀಕರಿಸುವ ದರ್ಶನಗಳನ್ನು 'ಆಸ್ತಿಕ' ಎಂದು ವಿವರಿಸಿಕೊಳ್ಳಲಾಗಿದೆ. ಆದರೆ ಇದು ಯಹೂದಿ ಧರ್ಮ, ಕ್ರೈಸ್ತಧರ್ಮ ಮತ್ತು ಇಸ್ಲಾಂ ಧರ್ಮಗಳು ಸೂಚಿಸುವಂತೆ 'ಈಶ್ವರವಾದ'ವನ್ನು ಪ್ರತಿಪಾದಿಸುವುದಿಲ್ಲ. ಆದರೆ ವಸಾಹತುಶಾಹಿ ಆಧುನಿಕತೆ ಈ ನೆಲದಲ್ಲಿ ಕಾಣಿಸಿಕೊಂಡಾಗ ಈ ವೇದಿಕ ಪಂಥಗಳು ಈಶ್ವರವಾದಿ ಪಂಥಗಳನ್ನಾಗಿ ಪರಿಭಾವಿಸಿಕೊಳ್ಳುತ್ತಾ ಪಶ್ಚಿಮದ ಜ್ಞಾನ ಪರಂಪರೆಗಳ ಆಧುನಿಕತೆಯನ್ನು ತಮ್ಮದನ್ನಾಗಿ ಮಾಡಿಕೊಂಡವು. ಈ ಪ್ರಕ್ರಿಯೆಯಲ್ಲಿ ಈ ವೈದಿಕ ಅಥವಾ ಆಸ್ತಿಕ ಪರಂಪರೆಗಳು ಪಶ್ಚಿಮ ಪ್ರಣೀತ ಆಧುನಿಕತೆಯನ್ನು ಶ್ರಮಣಧಾರೆ ಪಂಥಗಳು ಅಥವಾ ಸಮುದಾಗಳಿಂದ ವಂಚಿಸಿವೆ. ಹಾಗಾದರೆ ಈ ಶ್ರಮಣಧಾರೆ ಪರಂಪರೆಗಳು ಅಂದರೆ ಏನು? ಈ ಶ್ರಮಣ ಪರಂಪರೆಗಳು ಎಂದಾಗ ಚಾರಿತ್ರಿಕವಾಗಿ ನಮಗೆ ನೆನಪಾಗುವ ಮೊತ್ತಮೊದಲ ಪಂಥವೆಂದರೆ ಯಕ್ಷಜನಾಂಗದ 'ಲೋಕಾಯತ ದರ್ಶನ' ಅಥವಾ ಇದರ ವಿರೋಧಿಗಳು ಅದನ್ನು 'ಚಾರ್ವಾಕ' ಪಂಥವೆಂದು ಕರೆದು ಅದನ್ನು ಅವಮಾನಗೊಳಿಸುವ ಸಲುವಾಗಿ ಆ ತಾತ್ವಿಕತೆಯನ್ನು ಬರೀ 'ತಿನ್ನುವ' ಸಂಸ್ಕೃತಿಗೆ ಬಗ್ಗುಬಡಿಯಿತು. ಆದರೆ ಕಾಲಕ್ರಮೇಣ ಈ ಲೋಕಾಯತ (ಜನ ಕೇಂದ್ರಿತ) ಪಂಥವು ಮುಂದುವರೆದು ಶ್ರಮವನ್ನೇ ಬದುಕಿನ ಮೂಲ ಬಿಂದುವನ್ನಾಗಿಸುತ್ತಾ ಆ ಶ್ರಮದ ಮೂಲಕ ಒಂದು ಸಾಂಸ್ಕೃತಿಕವಾದ ಜ್ಞಾನ ಪರಂಪರೆಗಳನ್ನು ರೂಪಿಸಿಕೊಂಡವು. ಈ ಕ್ರಿಯಾಜ್ಞಾನದ ಮುಕುಟವಾಗಿ ಬೌದ್ಧಜ್ಞಾನ ಪರಂಪರೆ, ಜೈನ ಬದುಕಿನ ಕ್ರಮಗಳು ತದನಂತರದಲ್ಲಿ ಹೊರಹೊಮ್ಮಿ ಬಹು ಜನಪ್ರಿಯತೆಯನ್ನು ಪಡೆದುಕೊಂಡವು. ಇಂಥ ಮಹಾನ್ ನೈತಿಕತೆಯ ಬೇರುಗಳನ್ನು ಒಳಗೊಂಡಂಥದ್ದೇ 'ಶ್ರಮಣಧಾರೆ ಪರಂಪರೆಗಳು' ಅಥವಾ 'ಅವೈದಿಕ ನಾಸ್ತಿಕ ಪಂಥಗಳು' ಎಂದು ಜನ ಸಮುದಾಯಗಳು ಮಾನ್ಯ ಮಾಡಿದ್ದು.

ಇಂಥ ಪರಂಪರೆಗಳು ಯಾವುದೇ ಅಭೌತಿಕ ಕಾರ್ಯ-ಕಾರಣವನ್ನು ನಿರಾಕರಿಸಿದ್ದಲ್ಲದೆ ಭೌತಿಕ ವಿದ್ಯಮಾನಗಳ ಸುತ್ತಲಿನ ಬೆರಗುಗೊಳಿಸುವ ಸಾಂಸ್ಕೃತಿಕ ಸಂಗತಿಗಳನ್ನು ವಿಭಿನ್ನವಾಗಿ ಸಂಘಟಿಸಿಕೊಂಡು ಸಾಂಘಿಕ ಬದುಕಿಗೆ ಅಗತ್ಯವಾದ ನೈತಿಕತೆಯನ್ನು ಅವೆಲ್ಲಾ ಎತ್ತಿಹಿಡಿದವು. ಈ ಶ್ರಮಣ ಪರಂಪರೆಗಳ ತಾತ್ವಿಕತೆಯನ್ನು ನಾನಿಲ್ಲಿ ಚರ್ಚಿಸಲು ಹೋಗದೆ ಅವುಗಳು ಪ್ರಸ್ತುತ ಸಂದರ್ಭದಲ್ಲಿ ನಮ್ಮ ಮುಂದಿಡುವಂಥ ಸೂಕ್ಷ್ಮಗಳನಷ್ಟೆ ಗಮನಿಸುತ್ತೇನೆ. ಈ ಸೂಕ್ಷ್ಮಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು:

೧. ಈ ಶ್ರಮಣ ಪರಂಪರೆಗಳೆಲ್ಲವೂ ಸಹ ವೇದ ಪ್ರಾಮಣ್ಯವನ್ನು ಧಿಕ್ಕರಿಸುವಂಥವುಗಳಾಗಿವೆ.

೨. ಸಂಸ್ಕೃತ ಪರಂಪರೆ ವಿಧಿಸುವ ವರ್ಣ ಮತ್ತು ಆಶ್ರಮ ಧರ್ಮವನ್ನು ನಿರಾಕರಿಸುತ್ತವಲ್ಲದೆ ಬೇಧವಿಲ್ಲದೆ ಎಲ್ಲರನ್ನು ತಮ್ಮ ಸಾಂಘಿಕ ಬದುಕಿನೊಳಗೆ ಬರಮಾಡಿಕೊಳ್ಳುತ್ತವೆ.

೩. ಈ ಪರಂಪರೆಗಳೆಲ್ಲಾ ಸಾಂಘಿಕವಾದ ನೈತಿಕತೆಯ ಮೌಲ್ಯಗಳನ್ನು ಅನುಸರಿಸುತ್ತಿದ್ದವು.

೪. ಈ ಶ್ರಮಣಧಾರೆಗಳು ಸಾಮಾಜಿಕವಾಗಿ ಅಥವಾ ಪ್ರಾಪಂಚಿಕವಾಗಿ ಬೇರುಬಿಟ್ಟಿರುವ ದುಃಖವನ್ನು ಪರಿಹರಿಸಿಕೊಳ್ಳುವ ಸಲುವಾಗಿ ನಿರ್ಲಿಪ್ತವಾದ ಬದುಕನ್ನು ಆಚರಣೆಯನ್ನಾಗಿ ಮಾಡಿಕೊಂಡಿದ್ದವು.

೫. ಇಂಥ ನಿರ್ಲಿಪ್ತವಾದ ಬದುಕನ್ನು ಆಚರಿಸಲು ಬಾಲ್ಯವಸ್ಥೆ ಕಳೆದ ಬಳಿಕ ಯಾವಾಗಲಾದರೂ ಸ್ವೀಕರಿಸಬಹುದಿತ್ತು.

೬. ಈ ಪರಂಪರೆಗಳಲ್ಲಿ ಲಿಂಗ ಸಮಾನತೆ ಎನ್ನುವುದು ಇದ್ದು ಅಲ್ಲಿ ಮಹಿಳೆ ತನ್ನದೇ ಸಾಧನೆಯಲ್ಲಿ ತೊಡಗಿಕೊಳ್ಳುವುದನ್ನು ಕಾಣಬಹುದಿತ್ತು.

ಈ ಮೇಲಿನ ಸೂಕ್ಷ್ಮಗಳನ್ನು ಗಮನಿಸಿದರೆ ಇಲ್ಲಿನ ಬದುಕಿನ ಕ್ರಮಗಳು ಬಹುತ್ವವನ್ನು ಮಾನ್ಯಮಾಡಿದಲ್ಲದೆ ಅವು ಅನುಸರಿಸಿದ ಜ್ಞಾನ ಮೀಮಾಂಸಾ ಕ್ರಮಗಳು ವಿಭಿನ್ನವಾಗಿದ್ದವು.

ಇಂಥ ಶ್ರಮಣಧಾರೆಗಳ ಅಥವಾ ಪಂಥಗಳ ಬಗೆಗೆ ನಮಗೆ ದೊರೆಯುವ ವಿವರಗಳು ಬೌದ್ಧ ಮತ್ತು ಜೈನರ ಸಾಹಿತ್ಯದಲ್ಲಿ ಹೇರಳವಾಗಿ ಕಂಡುಬರುತ್ತವೆ. ಆದರೆ ವೈದಿಕ ಬರವಣಿಗೆಗಳಲ್ಲಿ ಅವು ಯಾವತ್ತೂ ಸಹ ವಿರೋಧಿಸುವ ಸಂಗತಿಗಳಾಗಿ ಕಂಡುಬರುತ್ತವೆ. ಆದ್ದರಿಂದ ಅವರನ್ನು ಪಾಷಾಂಡಿಗಳು ಎಂದು ತಿರಸ್ಕರಿಸಿ ಬಿಡುತ್ತಿದ್ದರು. ಅಲ್ಲದೆ ಇಂಥ ಪಂಥಗಳಿಗೆ ಸೇರಿರುವವರನ್ನು ನಿರ್ದಯೆಯಿಂದ ಹತ್ತಿಕ್ಕಲಾಗುತ್ತಿತ್ತು.

ಆದರೆ ಶ್ರಮವನ್ನು ತಿರಸ್ಕರಿಸಿ ಬದುಕನ್ನು ಕಟ್ಟಿಕೊಳ್ಳಲಾದೀತೆ. ಖಂಡಿತವಾಗಿಯೂ ಸಾಧ್ಯವಿಲ್ಲ. ಹೀಗಿರುವಾಗ ಚಾರಿತ್ರಿಕವಾಗಿ ಅಂಥ ಪಂಥಗಳಲ್ಲಿ ಅನೇಕ ಧಾರೆಗಳು ಕಾಣಿಸಿಕೊಂಡವು. ಈ ಎಲ್ಲಾ ಧಾರೆಗಳು ಆಯಾ ಪ್ರದೇಶ ಮತ್ತು ವಾತಾವರಣಕ್ಕನುಗುಣವಾಗಿ ತಮ್ಮದೇ ಆದಂಥ ವೈಶಿಷ್ಟ್ಯಗಳನ್ನು ಭಿನ್ನತೆಗಳನ್ನು ಉಳಿಸಿಕೊಂಡವು. ಇಂಥ ಪಂಥಗಳಲ್ಲಿ ಬಹುಮುಖ್ಯವಾದ ಸಾಂಘಿಕ ಪಾತ್ರವನ್ನು ವಹಿಸಿ ಪ್ರಸಿದ್ಧಿಗೆ ಬಂದ ಪಂಥಗಳೆಂದರೆ:

೧. ಬೌದ್ಧ ಪಂಥಗಳು

೨. ಜೈನ ಪಂಥಗಳು

೩. ಶೈವ ತಾತ್ರಿಕ ಪಂಥಗಳು

ಈ ಪಂಥಗಳು ತಮ್ಮದೆ ಒಳಪಂಥಗಳಾಗಿ ಅಂದಿನ ಬದುಕಿಗೆ ಅಗತ್ಯವಾದಂಥ ಜ್ಞಾನ ಪರಂಪರೆಗಳನ್ನು ತಮ್ಮ ಅನುಯಾಯಿಗಳಿಗೆ ಕಲಿಸುವ ಮತ್ತು ಜೀವಿಸುವ ಕೇಂದ್ರಗಳಾಗಿ ಮಾರ್ಪಟ್ಟವು. ಇದಕ್ಕೆ ಕರ್ನಾಟಕದಲ್ಲಿ ಬಳ್ಳಿಗಾವೆ ಮತ್ತು ಸನ್ನತಿಕೇಂದ್ರಗಳು ಹಾಗೆಯೇ ನಳಂದ ವಿದ್ಯಾಲಯ ಬೌದ್ಧ ಪಂಥಗಳ ಮುಖ್ಯ ಬೆಳವಣಿಗೆಗಳಾಗಿ ಕಂಡು ಬರುತ್ತವೆ. ಹಾಗೆಯೇ ಜೈನರ ನೆಲೆಗಳೂ ಸಹ ಕರ್ನಾಟಕದಲ್ಲಿ ಸಾಕಷ್ಟಿರುವುದನ್ನು ಇಂದಿಗೂ ಕಾಣುತ್ತೇವೆ.

ಈ ಪರಂಪರೆಗಳು ಬರು ಬರುತ್ತಾ ತಮ್ಮದೇ ಆದ ಪ್ರಾಬಲ್ಯವನ್ನು ಪಡೆದುಕೊಂಡು ಯುದ್ಧವನ್ನು ಸಮರ್ಥಿಸಿಕೊಳ್ಳುಂತಹ ಸಂದರ್ಭಕ್ಕೆ ಮುಖಾಮುಖಿಯಾಗುತ್ತವೆ. ಆಗ ಅವೆಲ್ಲಾ ಅನಿವಾರ್ಯವಾಗಿ ತಮ್ಮದೇ ಆದಂಥ ಸಾಂಸ್ಕೃತಿಕ ರಾಜಕಾರಣಕ್ಕೆ ತುತ್ತಾಗುತ್ತವೆ. ಇಂಥ ವಿಷಮಕಾರಿ ಸ್ಥಿತಿಯಲ್ಲಿ ಅವು ಮತ್ತದೇ ವೇದ ಪ್ರಣೀತ ಅದ್ವೈತ ಸಿದ್ಧಾಂತ ಮತ್ತು ದ್ವೈತ ಸಿದ್ಧಾಂತ ಪ್ರತಿಪಾದಕರಿಂದ ತೀವ್ರವಾದ ಹಿಂಸೆಗೆ ಒಳಗಾಗುತ್ತವೆ. ಇದರಿಂದ ತಪ್ಪಿಸಿಕೊಳ್ಳಲು ಅವೆಲ್ಲಾ ಗುಪ್ತ ಪರಂಪರೆಗಳಾಗಿ ಮಾರ್ಪಡುತ್ತವೆ. ಇದಕ್ಕೆ ನಿದರ್ಶನಗಳನ್ನು ನಾವು ಶಂಕರಾಚಾರ್ಯನ ಬಗ್ಗೆ ಅವರ ಬ್ರಾಹ್ಮಣ ಶಿಷ್ಯೋತ್ತಮರು ಬರೆದಿರುವ ಶಂಕರವಿಜಯ ಮತ್ತು ಶಂಕರ ದಿಗ್ವಿಜಯ ಪುಸ್ತಕಗಳಲ್ಲಿ ಗಮನಸಬಹುದು. ಇದಕ್ಕೆ ನದರ್ಶನವಾಗಿ ಶಂಕರಾಚಾರ್ಯ ದೇಶದ ಉದ್ದಗಳಕ್ಕೂ ಪ್ರತಿಷ್ಠಾಪಿಸಿದ ಶಂಕರಮಠಗಳನ್ನು ಗಮನಿಸಬಹುದು. ಉದಾಹರಣೆಗೆ ಇಂದು ದೇಶದಲ್ಲಿ ಸೀರೆಗೆ ಪ್ರಸಿದ್ಧಿಯಾಗಿರುವ ಕಾಂಚಿಪುರಂ ಪಟ್ಟಣವನ್ನು ಗಮನಿಸಿಬಹುದು. ಈ ಸೀರೆಗಳ ಪಟ್ಟಣದಲ್ಲಿ ಕಾಂಚಿಕಾಮಾಕ್ಷಿ ದೇವತೆಯ ಗುಡಿ ಇದ್ದು ಅದು ಶ್ರಮಣ ಪರಂಪರೆಗಳ ಮುಕುಟಪ್ರಾಯದಂತೆ ಇತ್ತು. ಆದರೆ ಅಲ್ಲಿ ಮತ್ತೆ ಶಂಕರನ ದಿಗ್ವಿಜಯ ಆರಂಭವಾದಾಗ ಆ ಗುಡಿಯಲ್ಲಿನ ದೇವತೆಯ ವಿಗ್ರಹವನ್ನು ಪಕ್ಕದಲ್ಲಿನ ಕೊಳದೊಳಕ್ಕೆ ಬಿಸಾಡಿ ವೇದಪ್ರಣೀತ ಅಗ್ರಹಾರದ ಮಠವನ್ನಾಗಿ ಪರಿವರ್ತಿಸಲಾಗುತ್ತದೆ.

ಆದರೆ ಅಂಥ ಸಂದರ್ಭದಲ್ಲಿ ಮತ್ತೆ ಈ ದ್ವೈತ–ಅದ್ವೈತ ವೇದ ಪ್ರಣೀತ ಕ್ರಮಗಳನ್ನು ಧಿಕ್ಕರಿಸಿ ಬೆಳೆದುಕೊಂಡ ಪರಂಪರೆಗಳೆಂದರೆ ಶೈವ ತಾಂತ್ರಿಕ ಪರಂಪರೆಗಳು. ಈ ಪರಂಪರೆಗಳು ಶಿವನನ್ನು ಕೇಂದ್ರವಾಗಿಟ್ಟುಕೊಂಡು ಕುಶಲಕರ್ಮಿಗಳ ಸಂಘಟನೆಗೆ ಕಾರಣವಾಗುತ್ತವೆಯಲ್ಲದೆ ಹೆಣ್ಣಿನ ಸೃಷ್ಟಿಶಕ್ತಿಯನ್ನು ಮತ್ತಷ್ಟು ಪೂಜನೀಯಗೊಳಿಸುತ್ತದೆ. ಇದಕ್ಕೆ ಮೇಲಿನ ಎರಡು ಪುಸ್ತಕಗಳಲ್ಲಿ ಬರುವ ಮತ್ತೊಂದು ಘಟನೆಯನ್ನು ಇಲ್ಲಿ ಉಲ್ಲೇಖಿಸಲೇ ಬೇಕು – ಒಬ್ಬ ಕಪಾಲಿಕ (ಮನುಷ್ಯನ

ತಲೆಬುರುಡೆಯನ್ನು ಕೈಯಲ್ಲಿ ಹಿಡಿದವನು) ಬೈರಾಗಿಯ ವೇಷಧಾರಿಯಾಗಿ ಸಾಗುತ್ತಿರುತ್ತಾನೆ. ಆತನಿಗೆ ಎದುರಾಗಿ ಶಂಕರಾಚಾರ್ಯ ಕಾಣಿಸಿಕೊಳ್ಳುತ್ತಾನೆ. ಆಗ ಮಹಾ ಗೌರವದಿಂದ ವಂದಿಸಿದ ಕಪಾಲಿಕ ಹೇಳುತ್ತಾನೆ, "ಮಹಾತ್ಮರೇ ನೀವು ಮಹಾ ವಿರಕ್ತರು. ಬದುಕಿನ ಬ್ರಹ್ಮ ಜ್ಞಾನವನ್ನು ಸಾಧಿಸಿರುವವರು. ಆದರೆ ನಾನು ಶಿವನ ಸಾನಿಧ್ಯ ಬಯಸಿ ತಪಸ್ಸನ್ನು ಕೈಗೊಂಡಿರುವವನು. ಹೀಗಿರುವಾಗ ನಿಮ್ಮಂಥ ವಿರಕ್ತರ ರುಂಡವನ್ನು ಆ ಶಿವನಿಗೆ ಅರ್ಪಿಸಿದಲ್ಲಿ ನಾನು ಆ ಶಿವ ಸಾನಿಧ್ಯವನ್ನು ಪಡೆಯುತ್ತೇನೆ. ಆದ್ದರಿಂದ ಪೂಜ್ಯರಾದ ನೀವು ನಿಮ್ಮದೇಹವನ್ನು ಈಗಾಗಲೇ ತ್ಯಾಗ ಮಾಡಿರುವವರು. ಆದ್ದರಿಂದ ನನ್ನನ್ನು ಕರುಣಿಸಿ ನಿಮ್ಮ ರುಂಡವನ್ನು ತೆಗೆದುಕೊಳ್ಳಲು ನನಗೆ ಅನುವು ಮಾಡಿಕೊಡಬೇಕು" ಎನ್ನುತ್ತಾನೆ. ಆಗ ಶಂಕರನು ಆತನ ಮನವಿಗೆ ಓಗೊಟ್ಟು ಹಾಗೆಯೇ ಆಗಲೆಂದು ಧ್ಯಾನಸ್ಥನಾಗುತ್ತಾನೆ. ಅಷ್ಟರಲ್ಲಿ ಮತ್ತೆಲ್ಲೋ ಇದ್ದ ಶಂಕರನ ಶಿಷ್ಯನಿಗೆ ತನ್ನ ಗುರುವಿಗೆ ಪ್ರಾಣಾಪಾಯವಾಗಿದೆಯೆಂದು ಜ್ಞಾನೋದಯವಾಗಿ, ತಕ್ಷಣವೇ ಬಂದು ಆ ಕಪಾಲಿಕನನ್ನು ಸಂಹರಿಸಿ ಶಂಕರನನ್ನು ಉಳಿಸಿಕೊಳ್ಳುತ್ತಾನೆ. ಅಂದರೆ ದ್ವೈತ-ಅದ್ವೈತ ವೇದ ಪ್ರಣೀತ ಕ್ರಮಗಳನ್ನು ಧ್ವಂಸಮಾಡುವಂಥ ಪರಂಪರೆಗಳು ಈ ದೇಶದ ಉದ್ದಗಲಕ್ಕೂ ಇದ್ದವು. ಇವುಗಳ ನಡುವೆ ತೀವ್ರವಾದ ಸೆಣಸಾಟಗಳೂ ಸಹ ನಡೆದಿದ್ದವು. ಈ ಪಂಥಗಳಲ್ಲಿ ಇದ್ದವರು ಪರಸ್ಪರ ಮತಾಂತರಗೊಳ್ಳುತ್ತಿದ್ದು ಇಂದು ನಾವು ಕಾಣುವ ಮಾಧ್ಯಮಗಳು ಪೋಷಿಸುವಂಥ ಮತಾಂತರದ ವರಸೆಗಳೇನೂ ಆಗಿರಲಿಲ್ಲ.

ಆದರೆ ಇಲ್ಲಿ ಗಮನಸಬೇಕಾಗಿರುವ ಒಂದು ಮುಖ್ಯ ಸಂಗತಿ ಎಂದರೆ ವೇದ ಪಂಥಗಳು ಮತ್ತು ಶ್ರಮಣ ಪಂಥಗಳ ನಡುವೆ ಯಾವುದೇ ರೀತಿಯ ಕೊಳುಕೊಡುಗೆ ಸಾಧ್ಯವಿಲ್ಲದೇ ಹೋದಾಗ ಅವು ಯುದ್ಧಗಳ ಮೂಲಕ ತಮ್ಮ ಪಂಥಗಳನ್ನು ಉಳಿಸಿಕೊಂಡಿರುವುದನ್ನು ನಾವು ಚರಿತ್ರೆಯಲ್ಲಿ ಕಾಣುತ್ತೇವೆ.

ಈ ಹಿನ್ನೆಲೆಯಲ್ಲಿ ನಾವು ಶಾಸನಗಳನ್ನು ನೋಡಿದಾಗ ಅವುಗಳ ವಿಭಿನ್ನವಾದ ಚಾರಿತ್ರಿಕ ಸತ್ಯಗಳನ್ನು ತಮ್ಮಲ್ಲಿ ಹುದುಗಿಸಿಟ್ಟುಕೊಂಡಿವೆ ಎಂಬುದನ್ನು ಗಮನಿಸಬಹುದಾಗಿದೆ. ಇಂಥದೊಂದು ಸಾಧ್ಯತೆಯನ್ನು ನಾವು ತಿರಸ್ಕರಿಸಲಾದೀತೆ?

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧ ಶಾಸನ ಎಂದರೆ ಸಾಮಾನ್ಯವಾಗಿ ಬಹುಕಾಲ ಉಳಿಯುವಂಥ ಶಿಲೆ, ಲೋಹ ಮುಂತಾದುವುಗಳ ಮೇಲಿನ ಬರಹ. ಈ ಬರಹ ರಾಜನ ಆಜ್ಞೆಯನ್ನು ಒಳಗೊಂಡಿರುತ್ತದೆ. ಅಂದರೆ ರಾಜನ ಅಧಿಕೃತ ಮುದ್ರೆ ಇರಬೇಕು. ಆದರೆ ಇದರೊಡನೆ ದಾನ ಶಾಸನಗಳು ಇವೆ. ಇಲ್ಲಿ ರಾಜ ಮಾತ್ರ ದಾನ ಮಾಡಬೇಕಾಗಿರಲಿಲ್ಲ. ಯಾರು ಬೇಕಾದರೂ ದಾನ ಮಾಡುವಾಗ, ಆ ದಾನ ಕುರಿತಂತೆ ಶಾಸನ ಹೊರಡಿಸುತ್ತಿದ್ದರು. ಆದ್ದರಿಂದ ಶಾಸನದ ಉದ್ದೇಶ ಮತ್ತು ಕಾರಣಗಳು ಬಹುರೂಪಿಯಾಗಿ ಇವೆ ಎಂಬುದನ್ನು ಇಲ್ಲಿ ಗಮನಿಸಬೇಕಾಗುತ್ತದೆ.

೨ The work of Michel Foucault, especially his concept of 'discourses' became widely acclaimed and influential among historians open to postmodern ideas. Histories emerged making use of discourse and symbols, there was an emphasis on language and identity, and on the literary and narrative quality of historical explanation.

೩ ನೋಡಿ, ಹು.ಕಾ. ಜಯದೇವ್, ೧೯೭೫, **ಶಾಸನ ಮತ್ತು ಗದ್ಯ**, ಬೆಂ.ವಿ.ವಿ., ಬೆಂಗಳೂರು, ಪು.೩೭.

೪ ಅದೇ ನೋಡಿ, ಪು.೩೭-೩೮.

೫ ಅದೇ ನೋಡಿ, ಪು.೩೮.

೬ ನೋಡಿ, ಹು.ಕಾ.ಜಯದೇವ್, ೧೯೭೫, **ಶಾಸನ ಮತ್ತು ಗದ್ಯ**, ಬೆಂ.ವಿ.ವಿ., ಬೆಂಗಳೂರು, ಪು.೨೧.

೭ ಅದೂ ಸಹ ಈ ದೇಶದಲ್ಲಿ ಸಂಸ್ಕೃತ ಬಾಷೆಯನ್ನು ಅಭಿಜಾತ ಭಾಷೆಯೆಂದು ಸಂವಿಧಾನಾತ್ಮವಾಗಿ ಘೋಷಣೆಮಾಡಿದಾದ ಮೇಲೆ ಕ್ರಮವಾಗಿ ತಮಿಳನ್ನು, ಕನ್ನಡವನ್ನು ಮತ್ತು ತೆಲುಗನ್ನೂ ಸಹ ಅದೇ ಸಾಲಿನಲ್ಲಿ ಶಾಸ್ತ್ರೀಯ ಭಾಷೆಯೆಂದು ಇತ್ತೀಚೆಗಷ್ಟೆ ಮಾನ್ಯ ಮಾಡಲಾಗಿದೆ. ಆದರೆ ಸಂಸ್ಕೃತಕ್ಕಿಂತಲು ಪ್ರಾಚೀನವಾದ ಪ್ರಾಕೃತವಾಗಲಿ ಅಥವಾ ಪಾಳಿ ಭಾಷೆಯಾಗಲಿ ನಮ್ಮ ಸರ್ಕಾರದ ಗಮನಕ್ಕೆ ಬರುವುದಿಲ್ಲ. ಅಂದರೆ ಈ ಭಾಷೆಗಳು ಬ್ರಾಹ್ಮಣೀಕರಣಕ್ಕೆ ಒಳಗಾಗುವುದಿಲ್ಲ. ಏಕೆಂದರೆ ಇವುಗಳು ಮೂಲತಃ ಶ್ರಮಣ ಪರಂಪರೆಗೆ ಸೇರಿದವುಗಳಾಗಿದ್ದು ಅವು ಸಂಸ್ಕೃತ ಪರಂಪರೆಯ ಜ್ಞಾನ ಮೀಮಾಂಸೆಯನ್ನು ಒಪ್ಪಿಕೊಳ್ಳುವುದಿಲ್ಲ.

೮ ನೋಡಿ, ಹು.ಕಾ.ಜಯದೇವ್, ೧೯೭೫, **ಶಾಸನ ಮತ್ತು ಗದ್ಯ**, ಬೆಂ.ವಿ.ವಿ., ಬೆಂಗಳೂರು, ಪು.೩೪.

೯ ಈ ಪದವನ್ನು ನಾನು ಒಂದು ಪರಿಕಲ್ಪನೆಯಾಗಿ ಬಳಸಿದಾಗ ಅದು ಬರೀ ಸಂಸ್ಕೃತಿಯನ್ನು ಮಾತ್ರ ಪ್ರತಿನಿಧಿಸುವುದಿಲ್ಲ. ಅದು ಬಹುಶಿಸ್ತೀಯ ಮಾದರಿಯಾಗಿ ಜ್ಞಾನವನ್ನು ಸಂಘಟಿಸುವ ಬಗೆಯನ್ನು ವಿವರಿಸುತ್ತದೆ. ಆದ್ದರಿಂದ ಆ ಪದವು ಏಕ ಕಾಲದಲ್ಲಿ ನಾಮ ವಿಶೇಷಣವಾಗಿಯೂ ನಾಮಪದವಾಗಿಯೂ ಈ ಲೇಖನದಲ್ಲಿ ಚರ್ಚೆಯಾಗುತ್ತದೆ. ಇದಕ್ಕೆ ಉದಾಹರಣೆಯಾಗಿ ಈ ಪದವನ್ನು ನಾವು ಗಮನಿಸಬಹುದು: **'ಸಾಂಸ್ಕೃತಿಕ ಪಠ್ಯ'** ಎಂಬ ಪದವನ್ನು ನಾವೆಲ್ಲಾ ಬಳಸುತ್ತಿರುತ್ತೇವೆ. ಆದರೆ ಅದು ಸಂಘಟಿತವಾಗುವ ಬಗೆಯಾಗಲೀ, ಅಥವಾ ಅದನ್ನು ಬಳಸುವ ವಿಧಾನದ ಬಗ್ಗೆಯಾಗಲೀ ಕನ್ನಡ ವಿಮರ್ಶೆಯಲ್ಲಿ ಸ್ಪಷ್ಟತೆ ಇಲ್ಲ. ಆದರೆ ಬಾರ್ತಸ್ ಎನ್ನುವ ವಿದ್ವಾಂಸ ಅದನ್ನು ವಿವರಿಸಿಕೊಳ್ಳುವುದು ಹೀಗೆ. ಒಂದು ಸಾಹಿತ್ಯ ಕೃತಿ ಎನ್ನುವುದು ಸಂಘಟಿತವಾಗುವುದೇ ಅನೇಕ ಸಂಸ್ಕೃತಿಗಳಲ್ಲಿರುವ ಮಿಲಿಯಗಟ್ಟಳೆ ಜೀವಕೋಶಗಳನ್ನು ಹೆಕ್ಕಿ ಹೊಸೆಯುವ ವಿಧಾನ ಎನ್ನುತ್ತಾನೆ. ಆದ್ದರಿಂದಲೇ ಆತ ಕೃತಿಯೊಂದಕ್ಕೆ ಒಬ್ಬ ಲೇಖಕನನ್ನು ಆರೋಪಿಸುವುದು ಸರಿಯಲ್ಲ ಎಂದು ಹೇಳಿ, **'ದಿ ಆಥರ್ ಇಸ್ ಡೆಡ್'** ಎನ್ನುವ ಪರಿಕಲ್ಪನೆಯನ್ನು ನಮ್ಮ ಮುಂದಿಡುತ್ತಾನೆ.

೧೦ ವಿವರಗಳಿಗೆ ನೋಡಿ, ರಿಚರ್ಡ್ ಕಿಂಗ್, ೧೯೯೯, **ಓರಿಯಂಟಲಿಸಂ ಅಂಡ್ ರಿಲಿಜನ್: ಪೋಸ್ಟ್ ಕಲೋನಿಯಲ್ ಥಿಯರಿ, ಇಂಡಿಯ ಅಂಡ್ ದಿ ಮಿಸ್ಟಿಕ್ ಈಸ್ಟ್**, ಆಕ್ಸಫರ್ಡ್ ಯುನಿವರ್ಸಿಟಿ, ನ್ಯೂ ಡೆಲ್ಲಿ, ಪು.೪೧-೪೨.

೧೧ ವಿವರಗಳಿಗೆ ನೋಡಿ, Ronald Inden, Imagining India, Black Well Ltd, Cambridge, 1990, p.7.

೧೨ ನೋಡಿ, ರಾಜಾರಾಮಹೆಗ್ಗಡೆ, ೨೦೦೫, **ಗತ-ಕಥನ – ರಾಷ್ಟ್ರೀಯ ಇತಿಹಾಸ ಮತ್ತು ಕನ್ನಡ ಜಗತ್ತು**, ಆನಂದಕಂದ ಗ್ರಂಥಮಾಲೆ, ಚಿತ್ರದುರ್ಗಜಿಲ್ಲೆ, ಪು.೨೦.

೧೩ ಅದೇ ನೋಡಿ, ಪು.೨೧.

೧೪ ಅದೇ ನೋಡಿ, ಪು.೨೧.

೧೫ ನೋಡಿ, ಹಾಬ್ಸ್‌ಬಾಮ್. ಇ.ಜಿ., ೧೯೯೧, **ನೇಶನ್ಸ್ ಆ್ಯಂಡ್ ನ್ಯಾಶನಲಿಸಂ ಸಿನ್ಸ್ ೧೭೮೦**, ಕೇಂಬ್ರಿಡ್ಜ್ ಯುನಿವರ್ಸಿಟಿ ಪ್ರೆಸ್, ಪು.೧೭೦.

೧೬ ನೋಡಿ, ಆನಂದ್ ತೇಲ್ತುಂಬ್ಡೆ, ಕನ್ನಡಕ್ಕೆ, ಶಿವಸುಂದರ್. ೨೦೦೯, ಖೈರ್ಲಾಂಜಿ, ಲಂಕೇಶ್ ಪ್ರಕಾಶನ, ಬೆಂಗಳೂರು, ಪು.೯.

೧೭ ಅದೇ ನೋಡಿ, ಪು.೯.

೧೮ ಅದೇ ನೋಡಿ, ಪು.೯.



# ಪ್ರಾಚೀನ ಭಾರತದ ಇತಿಹಾಸ : ಹೊಸ ನೋಟಗಳು

– ಡಾ॥ ಸೂರ್ಯನಾಥ ಕಾಮತ್*

'ನಾನು ಭಾರತದ ಉದ್ದಗಲಕ್ಕೆ ಪ್ರವಾಸ ಮಾಡಿದ್ದೇನೆ. ಅಲ್ಲಿ ಭಿಕ್ಷುಕರಿಲ್ಲ. ಕಳ್ಳಕಾಕರಿಲ್ಲ. ಅವಿದ್ಯಾವಂತರಿಲ್ಲ. ಜನರು ಅತ್ಯಂತ ಶ್ರಮಪೂರ್ವಕ ಜೀವನ ನಡೆಸುತ್ತಿದ್ದಾರೆ. ಅವರ ಶ್ರೇಷ್ಠ ಪರಂಪರೆಯನ್ನು ನಾಶ ಮಾಡದಿದ್ದರೆ, ಅವರಲ್ಲಿ ಪಾಶ್ಚಾತ್ಯ ಸಂಸ್ಕೃತಿ ತಮ್ಮ ಸಂಸ್ಕೃತಿಗಿಂತ ಉತ್ತಮ ಎಂಬ ಭ್ರಮೆಯನ್ನು ಮೂಡಿಸದಿದ್ದರೆ, ನಮ್ಮಿಂದ ಭಾರತವನ್ನು ಆಳಲು ಸಾಧ್ಯ ಆಗದು. ನಾನು ಇಂದು ಸಭೆಯ ಮುಂದಿಡುವ ನಿರ್ಣಯ ಜಾರಿಗೆ ತಂದಲ್ಲಿ ಇನ್ನು ೩೦ ವರ್ಷಗಳಲ್ಲಿ ಭಾರತೀಯರು ಕೇವಲ ಉಡುಪು ಮತ್ತು ಮೈ ಬಣ್ಣಗಳಲ್ಲಿ ಭಾರತೀಯರಾಗಿ ಉಳಿದು ಅವರ ಚಿಂತನೆ ಪಾಶ್ಚಾತ್ಯ ಚಿಂತನೆಯಾಗಿ ಮಾರ್ಪಡುತ್ತದೆ' (ಮೆಕಾಲೆ ೧೮೩೫ರಲ್ಲಿ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಮಾಡಿದ ಭಾಷಣ).

ಮೆಕಾಲೆ ಭಾರತೀಯ ಸಮಾಜದ ಬಗ್ಗೆ ಮೇಲೆ ಹೇಳಿದ ಮಾತುಗಳು ಇಂಗ್ಲೆಂಡಿನ ಸಮಾಜದ ಜೊತೆ ಭಾರತವನ್ನು ತುಲನೆ ಮಾಡಿ ಹೇಳಿದ್ದು. ಏಕೆಂದರೆ ಇಂಗ್ಲೆಂಡಿನ ಸಮಾಜ ಭಾರತದ ಸಮಾಜಕ್ಕಿಂತ ನಿಕೃಷ್ಟವಾಗಿತ್ತು. ಇಂಥ ಮಾತುಗಳು ಅನೇಕ ಆಂಗ್ಲರಿಂದ ಬಂದಿವೆ. ಸಕಲೇಶಪುರದಲ್ಲಿ ಕಾಫಿ ತೋಟ ಮಾಡಿಕೊಂಡಿದ್ದ ಎಲಿಯಟ್ ಎಂಬ ಆಂಗ್ಲ ಗೃಹಸ್ಥ ಇಲ್ಲಿನ ಗ್ರಾಮೀಣ ಸಮಾಜದ ನೈತಿಕ ಮಟ್ಟ ತಮ್ಮ ಸಮಾಜಕ್ಕಿಂತ ಎಷ್ಟೋ ಮೇಲು ಎಂದಿದ್ದಾನೆ.

ಹೊಸದಾಗಿ ಬರೆಯಲಾಗುತ್ತಿದ್ದ ಭಾರತದ ಇತಿಹಾಸವನ್ನು ತಮಗೆ, ತಮ್ಮ ನಂಬಿಕೆಗಳಿಗೆ ಅನುಗುಣವಾಗಿ ಬರೆಯುವಂತೆ ಆಂಗ್ಲ ಸರಕಾರ ಬಹುಪಾಲು ಇತಿಹಾಸಕಾರರನ್ನು ಪ್ರೇರೇಪಿಸುತ್ತಿತ್ತು. ತಮ್ಮ ದಾರಿ ತುಳಿದ ಇತಿಹಾಸಕಾರರನ್ನು ಸ್ತುತಿಸಿ, ತದ್ವಿರುದ್ಧವಾಗಿ ಬರೆದವರನ್ನು ಟೀಕಿಸಲಾಯಿತು. ಪಠ್ಯಪುಸ್ತಕಗಳಲ್ಲಿ ಪಾಶ್ಚಾತ್ಯರನ್ನೂ, ಆಂಗ್ಲರನ್ನೂ ಹೊಗಳಿ ಅಟ್ಟಕ್ಕೇರಿಸಲಾಯಿತು. ಇಂದಿಗೂ ನಮ್ಮ ಪಠ್ಯ ಪುಸ್ತಕಗಳು ಮೆಕಾಲೆಯ ಧಾಟಿಯಲ್ಲಿವೆ. ಪಟ್ಟಭದ್ರ ಇತಿಹಾಸಕಾರರು ಅದೇ ಧಾಟಿಯಲ್ಲಿ ಹಾಡುತ್ತಾರೆ!

ಭಾರತ ಹಿಂದೆ ಕೈಗಾರಿಕೆಗಳಿಂದ ತುಂಬಿ ತುಳುಕುತಿದ್ದ ದೇಶ, ವಿದೇಶಗಳ ಜೊತೆ ವ್ಯಾಪಾರ, ಸಾಂಸ್ಕೃತಿಕ ಸಂಪರ್ಕಗಳನ್ನು ಹೊಂದಿದ್ದ ದೇಶ. ನಮ್ಮ ಇತಿಹಾಸವನ್ನು ಮೊಟಕುಗೊಳಿಸಿ–ಗಾತ್ರದಲ್ಲಿ ಕುಗ್ಗಿಸಿ–ತಮ್ಮ ಕಲ್ಪನೆಯಂತೆ ಭಾರತದ ಇತಿಹಾಸ ರಚಿಸಿದವರು ಅವರು. ಮ್ಯಾಕ್ಸ್ ಮುಲ್ಲರ್‌ನಿಂದ ಆರಂಭಿಸಿ ಅನೇಕ ಇತಿಹಾಸಕಾರರು ಕ್ರೈಸ್ತರು, ಕ್ರೈಸ್ತ ಪುರಾಣ (ಒಡಂಬಡಿಕೆ)ಗಳನ್ನು ಬಲವಾಗಿ ನಂಬಿದವರು. ಬೈಬಲ್‌ನಲ್ಲಿ ಹೇಳಿರುವ ಲೆಕ್ಕಾಚಾರದಂತೆ ಜಗತ್ತು ಕ್ರಿ.ಪೂ. ೪೦೦೪ರ ಅಕ್ಟೋಬರ್ ೨೩ರಂದು ಸೃಷ್ಟಿಯಾಯಿತು. ಹೀಗಾಗಿ ಈಜಿಪ್ಟ್ ಇರಲಿ, ಮೆಸಪೊಟೋಮಿಯ ಇರಲಿ, ಆ ಎಲ್ಲ ದೇಶಗಳ ಸಂಸ್ಕೃತಿ ಹುಟ್ಟಿದ್ದು ಮೇಲೆ ಹೇಳಿದ ತಾರೀಖಿನ ನಂತರವೇ ಎಂದು ಸಾಧಿಸಿದರು. ಅದರೊಂದಿಗೆ ಭಾರತದ ವೇದಕಾಲ ತಾವು ರಚಿಸಿದ ಚೌಕಟ್ಟಿಗೆ ಒಳಪಡಬೇಕೆಂದು, ಋಗ್ವೇದದ ಕಾಲ ಕ್ರಿ.ಪೂ. ೧೫೦೦ ಎಂದರು. ಮುಂದೆ ೧೯೨೦ರ ದಶಕದಲ್ಲಿ ಮೊಹೆಂಜೊದಾರೋ ಹಾಗೂ ಹರಪ್ಪ ಸಂಸ್ಕೃತಿಗಳು ಪತ್ತೆಯಾದಾಗ ಅವು ವೇದಕಾಲಕ್ಕೆ ಸುಮಾರು ೧೦೦೦ ವರ್ಷ ಹಳೆಯವು ಎಂದರು. ಏನಿದ್ದರೂ ಕ್ರಿ.ಪೂ. ೪೦೦೪ಕ್ಕಿಂತ ಈ ಸಂಸ್ಕೃತಿಗಳು ಕುಬ್ಜ, ಕಿರಿದು ಎಂದರು. ಇತ್ತೀಚೆಗೆ ಕ್ರಿ.ಪೂ. ೫–೬ ಸಾವಿರ ವರ್ಷಗಳಷ್ಟು ಹಳೆಯ ನೆಲೆಗಳನ್ನು ಪ್ರಾಚ್ಯವಸ್ತುಗಳನ್ನು ಭಾರತದಲ್ಲಿ ಕಂಡುಕೊಂಡರೂ, ಕೆಲವು ಪಾರಂಪರಿಕ ಇತಿಹಾಸಕಾರರೂ (ಮೆಕಾಲೆ ಹಾಕಿದ ಗೆರೆ ದಾಟಲು ಸಿದ್ಧರಿಲ್ಲದೆ) ಒಪ್ಪಲು ತಯಾರಿಲ್ಲ.

ಹರಪ್ಪ ಸಂಸ್ಕೃತಿಯೇ ವೇದಕಾಲದ ಸಂಸ್ಕೃತಿ. ಅಲ್ಲಿರುವ ಪುರಾತತ್ತ್ವ ನಿವೇಶನಗಳು ವೇದ ಕಾಲದ ನಿವೇಶನಗಳು. ನಗರಪೂರ್ವದ ಗ್ರಾಮೀಣ ಹಿನ್ನೆಲೆಯಲ್ಲೇ ವೇದಗಳ ರಚನೆ ಆಗಿತ್ತು ಎಂಬ ಹೊಸ ಶೋಧನೆಗಳನ್ನು, ಪಠ್ಯಪುಸ್ತಕಗಳಲ್ಲಿ ಇದೂ ಒಂದು ದೃಷ್ಟಿಕೋನ ಎಂದು ಸೂಚಿಸಲೂ ಕೂಡ ಪಟ್ಟಭದ್ರ ಇತಿಹಾಸಕಾರರು ಸಿದ್ಧರಿಲ್ಲ.

---

* ಕೀರ್ತಿ, ೭೯೮, ೧೧ನೆಯ ಮುಖ್ಯರಸ್ತೆ, ೬ನೆಯ ಅಡ್ಡರಸ್ತೆ, ಹನುಮಂತನಗರ, ಬೆಂಗಳೂರು–೫೬೦೦೧೯.

ಮೆಕಾಲೆಯ ಪರಂಪರೆಯಂತೆ ದ್ರಾವಿಡರೆಂಬ ಜನಾಂಗ ಹರಪ್ಪ ಸಂಸ್ಕೃತಿಯನ್ನು ಸೃಷ್ಟಿಸಿತು. ಆರ್ಯರೆಂಬ ಜನ ಅವನ್ನು ಆಕ್ರಮಿಸಿ ಅವರನ್ನು ಚದುರಿಸಿದರು. ಹರಪ್ಪ ಸಂಸ್ಕೃತಿ 'ಅಬ್ಬಬ್ಬಾ' ಎಂದರೆ ಕ್ರಿಪೂ. ೨೫೦೦–೨೭೫೦ರಲ್ಲಿ ಆಯಿತು. ಮುಂದೆ ವೇದಗಳನ್ನು ರಚಿಸಿದ ಆರ್ಯರೆಂಬ ಜನ ದ್ರಾವಿಡರ ನಗರಗಳನ್ನು ನಾಶ ಮಾಡಿದರು. ಆರ್ಯರು 'ಇಂಡೋ ಆರ್ಯನ್' ಎಂಬ ಐರೋಪ್ಯರಿಗೆ ನಿಕಟರಾದ ಜನ. 'ದ್ರಾವಿಡ' ಎಂಬುವರು ಇಲ್ಲಿನ ಮೂಲನಿವಾಸಿಗಳಾದ ಅಥವಾ ಮೊದಲೇ ವಲಸೆ ಬಂದ ಜನ ಎಂದು ವಾದಿಸಿದರು. ಕಾಲ್ಡ್‌ವೆಲ್ ಎಂಬ ವಿದ್ವಾಂಸ ಇಂಡೋ ಆರ್ಯನ್ ಮತ್ತು ದ್ರವಿಡಿಯನ್ ಎಂಬ ಭಾಷಾಭೇದವನ್ನು ಪ್ರಾದೇಶಿಕ ಹಾಗೂ ಜನಾಂಗಿಕ ಭೇದವಾಗಿ ಚಿತ್ರಿಸಲು, ವಿದ್ವಾಂಸರು ಅದನ್ನು ಸ್ವೀಕರಿಸಿದರು (ಸೇಡಿಯಾಪು ಕೃಷ್ಣಭಟ್ಟರಂಥ ಹಲವು ವಿದ್ವಾಂಸರು ಕಳೆದ ೩–೪ ದಶಕಗಳಲ್ಲಿ ಇದನ್ನು ವಿರೋಧಿಸಿದ್ದಾರೆ). ಈ 'ಆರ್ಯ' ಎಂಬ ಜನಾಂಗದ ಕಲ್ಪನೆಯನ್ನು ಸ್ವೀಕರಿಸಿ ತಾವು ಯಹೂದಿಗಳೆಂಬ ಜನಾಂಗದಿಂದ ಪ್ರತ್ಯೇಕವೆಂದು ಪ್ರಚಾರ ಮಾಡಿ ಹಿಟ್ಲರ್ ಮಾಡಿದ ಅನಾಹುತ ಸರ್ವವಿದಿತ.

ವೇದ ಸಂಸ್ಕೃತಿಯ ರಚನೆಕಾರರು 'ಆರ್ಯರು' (ಐರೋಪ್ಯ ಮೂಲದವರು) ಎಂದರು. ಈ 'ಆರ್ಯ' ಶಬ್ದ ಋಗ್ವೇದದಲ್ಲಿ ಅಪರೂಪಕ್ಕೆ ಬಂದಿದೆ. ಅದು ಕೂಡ ಒಂದು ಜನಾಂಗ, ಪ್ರತ್ಯೇಕ ಜನ ಸಮುದಾಯ ಎಂಬ ಅರ್ಥದಲ್ಲಲ್ಲ. 'ಸಭ್ಯ', 'ಸಜ್ಜನ' ಎಂಬ ಅರ್ಥದಲ್ಲಿ 'ಆರ್ಯ' ಶಬ್ದ ಬಳಕೆಯಾಗಿದೆ. 'ಕೃಣ್ವಂತೋ ವಿಶ್ವಮಾರ್ಯಂ ಎಂದುದು ಜಗತ್ತನ್ನು ಸಭ್ಯರಾಗಿ ಮಾಡುತ್ತೇವೆ ಎಂಬ ಅರ್ಥದಲ್ಲಿ. ಜನಾಂಗ ಪರಿವರ್ತನೆ ಸಾಧ್ಯವೇ?

ನಾವೂ ಇಂಡೋ–ಆರ್ಯನರಾದ ನೀವೂ ಒಂದೇ ಎಂದು ಆಂಗ್ಲರು ಹೇಳಲಾರಂಭಿಸಿದ್ದು ಸಾಮ್ರಾಜ್ಯಶಾಹಿ ಕಾರಣಗಳಿಗಾಗಿ. ಆರ್ಯರು ಭಾರತವನ್ನು ಸುಸಂಸ್ಕೃತ ದೇಶವಾಗಿ ಮಾಡಿದರು. 'ಮುಸಲ್ಮಾನರ ಆಳ್ವಿಕೆಯಿಂದ ಈ ದೇಶದ ಸಂಸ್ಕೃತಿ ಕುಲಗೆಟ್ಟಿತು. ಮತ್ತೆ ಈ ದೇಶವನ್ನು ಹಿಂದಿನ ಆರ್ಯರಂತೆ ಸುಧಾರಿಸಲು, ಸುಸಂಸ್ಕೃತವನ್ನಾಗಿ ಮಾಡಲು' ಬ್ರಿಟಿಷರು ಬಂದಿದ್ದಾರೆ ಎಂಬ ಪ್ರಚಾರ ಸಾಗಿತು. ಸಾವಿರಾರು ವರ್ಷಗಳ ನಂತರ ಅಗಲಿದ ಆರ್ಯನ್ ದಾಯಾದಿಗಳು (ಆಂಗ್ಲರೂ ಭಾರತೀಯರೂ) ಈಗ ಒಂದಾಗಿದ್ದಾರೆ ಎಂದು ಹೇಳಿದರು. ಇದೇ ಧಾಟಿಯಲ್ಲಿ ಮೆಕಾಲೆ ಶಿಕ್ಷಣ ನೀತಿ ರೂಪಿಸಿದ. ಆದರೆ ಗಂಗಾನಾಥ ಝಾ, ಡಿ.ಎಸ್.ತ್ರಿವೇದಿ, ಎಲ್.ಪಿ. ಕಲ್ಲಾ, ಶ್ರೀಕಂಠಶಾಸ್ತ್ರಿ, ವಿ.ಎಸ್. ವಾಕಣ್‌ಕರ್, ಸುಭಾಷ್ ಕಾಕ್, ಎನ್.ಎಸ್. ರಾಜಾರಾಮ್ ಮುಂತಾದವರು ಈ ವಾದವನ್ನು ವಿರೋಧಿಸಿದ್ದಾರೆ. ಸ್ವಾಮಿ ವಿವೇಕಾನಂದರೂ, ಮಹರ್ಷಿ ಅರವಿಂದರೂ ಈ ವಾದವನ್ನು ಕಟುವಾಗಿ ವಿರೋಧಿಸಿದ್ದರು. ಐರೋಪ್ಯ ವಿದ್ವಾಂಸರಲ್ಲಿ ಜೇಕಬ್ ಹಿಲ್ಡಿ ಬ್ರ್ಯಾಂಡ್, ವಿಂಟರ್ ನಿಟ್ಸ್, ಡೇವಿಡ್ ಫ್ರಾಲಿ, ಕೋನಾರ್ಡ್ ಎಲ್‌ಸ್ಟ್, ಕೆ. ಕಜಾನಾಸ್, ಎಡ್ಮಂಡ್ ಲೀಚ್ ಇವರೂ ಕೂಡ 'ಆರ್ಯ–ದ್ರಾವಿಡ' ಭೇದಗಳನ್ನು ಖಂಡಿಸಿದ್ದಾರೆ.

ಆರ್ಯರು ಒಂದು ಜನಾಂಗವಲ್ಲ ಮತ್ತು ಧಾಳಿ ಮಾಡಿ ಬಂದ ಆಕ್ರಮಣಶೀಲರಲ್ಲ ಎಂದು ಹೊಸ ಶೋಧನೆಗಳು ತೋರಿವೆ. ಇನ್ನು ಕೆಲವರು ಆರ್ಯರು ಧಾಳಿ ಮಾಡಿಲ್ಲ. ವಲಸೆ ಬಂದರು ಎಂದು ರಿಯಾಯಿತಿ ತೋರಲು ಮುಂದಾಗಿದ್ದಾರೆ! ಮಿಥಿಕ್ ಸೊಸೈಟಿ ೧೯೯೧ರಲ್ಲಿ 'ಆರ್ಯನ್ ಪ್ರಾಬ್ಲಂ' ಎಂಬ ವಿಷಯದ ಬಗ್ಗೆ ಒಂದು ದೀರ್ಘ ವಿಚಾರ ಸಂಕಿರಣವನ್ನು ನಡೆಸಿತು. ಪುಣೆಯ ಪ್ರೊ.ಎಸ್.ಬಿ. ದೇವ್ ಮತ್ತು ಈ ಲೇಖಕ ಅಲ್ಲಿನ ಪ್ರಬಂಧಗಳ ಸಂಪಾದಕರು. ಅದು ಪ್ರಕಟ ಆದದ್ದು ೧೯೯೩ರಲ್ಲಿ.

ಸ್ಕಂದಪುರಾಣದ ಸಹ್ಯಾದ್ರಿ ಖಂಡದಲ್ಲಿ ವಿಂಧ್ಯ ಪರ್ವತದ ದಕ್ಷಿಣಕ್ಕಿರುವ ಬ್ರಾಹ್ಮಣರನ್ನು 'ಪಂಚದ್ರಾವಿಡ'ರೆಂದೂ, ಉತ್ತರಕ್ಕಿರುವವರನ್ನು ಪಂಚಗೌಡರೆಂದೂ ವರ್ಗೀಕರಿಸಿದೆ. ಎಂದರೆ ಆಂಧ್ರ, ದ್ರಾವಿಡ (ತಮಿಳ), ಕರ್ನಾಟಕ, ಮರಾಠ ಮತ್ತು ಗುರ್ಜರ(ಗುಜರಾತ್)ರು ಪಂಚದ್ರಾವಿಡರೆಂದೂ; ಸಾರಸ್ವತ (ಸರಸ್ವತೀ ತೀರ), ಕನ್ಯಾಕುಬ್ಜ (ಕನೋಜ), ಗೌಡ (ಬಂಗಾಲ), ಉತ್ಕಲ (ಉಡಿಯಾ) ಮತ್ತು ಮೈಥಿಲಿ (ಮಿಥಿಲಾ) ಬ್ರಾಹ್ಮರು ಪಂಚಗೌಡರೆಂದೂ ಕರೆದಿದೆ.

ಮಹಾರಾಷ್ಟ್ರಾಂಧ್ರ ದ್ರಾವಿಡಾಃ ಕರ್ನಾಟಕಶ್ಚೈವ ಗೂರ್ಜರಾಃ ।
ದ್ರಾವಿಡಾ ಪಂಚದಾ ಪ್ರೋಕ್ತಾ ವಿಂಧ್ಯಾ ದಕ್ಷಿಣ ವಾಸಿನಃ ॥
ಸಾರಸ್ವತಾಃ ಕನ್ಯಾಕುಬ್ಜಾ ಗೌಡೋತ್ಕಲ ಮೈಥಿಲಾಃ ।
ಗೌಡಾಃ ಪಂಚವಿದಾ ಪ್ರೋಕ್ತಾ ವಿಂಧ್ಯೋತ್ತರ ವಾಸಿನಃ ॥

(ಸ್ಕಂದ ಪುರಾಣ, ಸಹ್ಯಾದ್ರಿ ಖಂಡ, ಅಧ್ಯಾಯ ೧, ಶ್ಲೋಕ ೧–೨)

ಬ್ರಾಹ್ಮಣರನ್ನಷ್ಟೇ ಅಲ್ಲ ಆಯಾ ಪ್ರದೇಶದ ಇತರ ಜಾತಿಯ ಜನರನ್ನೂ ಹೀಗೇ ವರ್ಗೀಕರಿಸಿದೆ.

ಹೀಗೆ 'ಗೌಡ' ಮತ್ತು 'ದ್ರಾವಿಡ'ಗಳು ಪ್ರದೇಶಗಳೇ ಅಲ್ಲದೆ ಜನಾಂಗಗಳಲ್ಲ. 'ದ್ರಾವಿಡರೆಂಬ ಜನಾಂಗವಿರಲಿಲ್ಲವೆಂದು ಮಾನವ ಜನನ ಶಾಸ್ತ್ರ (ಆಂತ್ರೋಪಾಲಜಿ)ದ ವಿದ್ವಾಂಸರು ಹೇಳಿದ್ದಾರೆ' ಎಂದು ಡಾ.ಆರ್.ನಾಗಾಸ್ವಾಮಿ ತಿಳಿಸಿದ್ದಾರೆ. 'ದ್ರಾಮಿಡ ಎಂಬ ಶಬ್ದ ತಮಿಳು ಭಾಷೆಗೆ ಮಾತ್ರ ಸಂವಾದಿಯಾಗಿದೆ' ಎಂದೂ ಅವರು ಹೇಳಿದ್ದಾರೆ, ಜನಾಂಗವೆಂದಿಲ್ಲ.

ಋಗ್ವೇದದಲ್ಲಿ ಉಲ್ಲೇಖಿತವಾಗಿರುವ ಭಾರೀ ನದಿ (ನದೀತಮೇ) ಸರಸ್ವತಿಯ ಬಗ್ಗೆ ಈಗ ಹೆಚ್ಚಿನ ಶೋಧವಾಗಿದೆ. ಸ್ಯಾಟ್‌ಲೈಟ್ ಚಿತ್ರಗಳಿಂದ ಅದರ ಪಥ ಶೋಧಿತವಾಗಿದೆ. 'ಇಸ್ರೋ' ಮತ್ತು 'ನಾಸಾ'ಗಳು ಆ ನದಿಯ ನಕಾಶೆಯನ್ನು ಪ್ರಕಟಿಸಿದೆ. ಭೂವೈಜ್ಞಾನಿಕ ರೀತ್ಯಾ ಈ ಬೃಹದ್ ನದಿ (ಸಿಂಧೂವಿಗೆ ಸಮಾಂತರವಾಗಿ) ಸಿವಾಲಿಕ್ ಪರ್ವತ ಹರಿಯಾಣ, ರಾಜಸ್ತಾನ, ಗುಜರಾತ್‌ಗಳ ಮುಖಾಂತರ ಹರಿದು ಕಚ್‌ನಲ್ಲಿ ಸಾಗರ ಸೇರುತ್ತಿತ್ತು. ಈ ವಿಶಾಲ (ಕೆಲವೆಡೆ ೭-೮ ಮೀಟರ್ ಅಗಲ) ನದಿಯೇ ವೇದ ಸಂಸ್ಕೃತಿಯ ಮೂಲ ಸ್ರೋತ. ಅದು ಭೂಗತವಾದಾಗ ಎಷ್ಟೋ ನಗರಗಳು ನಿರ್ಜನವಾಗಿ ವೇದ ಸಂಸ್ಕೃತಿಯ ನಿವೇಶನಗಳು ಲುಪ್ತವಾದವು. ರಾಜಸ್ತಾನ ಮರುಭೂಮಿ ಆಯಿತು. ಇದು ಕ್ರಿ.ಪೂ. ೧೮೦೦-೨೦೦೦ದ ನಡುವೆ ಆಯಿತು.

ಉಜ್ಜೈನಿ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ಪದ್ಮಶ್ರೀ ಡಾ. ವಿ.ಎಸ್. ವಾಕಣ್‌ಕರ್ ಎಂಬ ಪುರಾತತ್ತ್ವ ತಜ್ಞರು, ಹಲವು ಪುರಾತತ್ತ್ವಜ್ಞರು, ಭೂಗರ್ಭಶಾಸ್ತ್ರಜ್ಞರು, ಜಲತಂತ್ರ ನಿಪುಣರು, ನಕಾಶೆ ರಚಿಸುವವರು, ಛಾವಚಿತ್ರ ಪರಿಣಿತರ ಜೊತೆ ಕಾಲುನಡೆಯಲ್ಲಿ 'ಇಸ್ರೋ' ಒದಗಿಸಿದ ನದಿಯ ನಕಾಶೆಯ ಉದ್ದಕ್ಕೂ ಒಂದು ತಿಂಗಳು ಸಂಶೋಧನೆ ಮಾಡಿದರು. ಈ ದಾರಿಯಲ್ಲಿ ಎಲ್ಲಿ ಎರಡಡಿ ಆಳ ಅಗೆದರೂ ನೀರು ಸಿಗುತ್ತಿತ್ತು. ರಾಜಸ್ತಾನ, ಕಚ್ಛ್ ಮುಂತಾದೆಡೆ ಸಿಕ್ಕ ನೀರು ಹಳೆಯ (ಪ್ಯಾಲಿಯೊ) ಹಾಗೂ ಹಿಮಾಲಯದಿಂದ ಹರಿದ ಬಂದಿದ್ದ ನೀರು ಎಂದು ಪತ್ತೆ ಹಚ್ಚಿದ್ದಾರೆ. ಕಾಲಿಬಂಗನ್ ಪಟ್ಟಣ ಹಾಗೂ ಇನ್ನೂ ಅನೇಕ ಪ್ರಾಚ್ಯ ನಿವೇಶನಗಳು ಈ ನದಿದಂಡೆಯಲ್ಲೇ ಇದ್ದವು ಎಂದು ಗುರುತಿಸಿದ್ದಾರೆ. ಅವರು ಮರಾಠಿಯಲ್ಲಿ ಬರೆದ ವರದಿ ನನ್ನಲ್ಲಿ ಇದೆ.

ಬಿ.ಎಸ್. ಥಾಪ್ಪರ್, ಬಿ.ಬಿ. ಲಾಲ್, ಎಸ್.ಆರ್.ರಾವ್, ಜಿ.ಬಿಷ್ಟ್ (ಇವರು ಧೋಲರ್ವಿರಾ ಬಂದರು ಶೋಧಿಸಿದವರು) ಇವರೆಲ್ಲ ಈ ಹೊಸ ಶೋಧನೆಯನ್ನು ಒಪ್ಪಿದ್ದಾರೆ. ಇದನ್ನು 'ಸಿಂಧೂ-ಸರಸ್ವತಿ ಸಂಸ್ಕೃತಿ' ಎಂದು ಕರೆದಿದ್ದಾರೆ. ಬಲೂಚಿಸ್ತಾನದಿಂದ ಉತ್ತರ ಪ್ರದೇಶದ ಪಶ್ಚಿಮ ಗಡಿವರೆಗೆ ಉತ್ತರದ ಕಾಶ್ಮೀರದಿಂದ ದಕ್ಷಿಣದಲ್ಲಿ ದೈಮಾಬಾದ್ (ಮಹಾರಾಷ್ಟ್ರ)ವರೆಗೆ ಈ ಸಂಸ್ಕೃತಿಯ ೨೦೦೦ಕ್ಕೂ ಹೆಚ್ಚು ನಿವೇಶನಗಳು ಸಿಕ್ಕಿದ್ದು, ಮೊಹೆಂಜೊದಾರೋ, ಹರಪ್ಪ, ಬನವಲ್ಲಿ, ಲೋಥಾಲ್ ಇವೆಲ್ಲ ಇದೇ ಸಂಸ್ಕೃತಿಗೆ ಸೇರಿದವು. ಬಹುಪಾಲು ಇವೆಲ್ಲ ನಿವೇಶನಗಳು ಸರಸ್ವತಿ ಕಣಿವೆಯಲ್ಲಿವೆ. ಇವುಗಳನ್ನು ಆರ್ಯ-ದ್ರಾವಿಡ ಸಂಸ್ಕೃತಿಯವು ಎಂದು ವರ್ಗೀಕರಿಸಲಾಗಿದ್ದು, ಋಗ್ವೇದದ ರಚನೆ ಸುಮಾರು ಕ್ರಿ.ಪೂ. ೪-೫ ಸಾವಿರ ವರ್ಷಗಳ ಹಿಂದೆ ಆಯಿತು ಎಂದು ಲೆಕ್ಕ ಹಾಕಲಾಗಿದೆ. ಈ ಬಗ್ಗೆ ಇತಿಹಾಸದ ವಿದ್ಯಾರ್ಥಿಗಳು, ಸಂಶೋಧಕರು ತೆರೆದ ಮನಸ್ಸಿನಿಂದ ಚಿಂತನೆ ನಡೆಸಬೇಕು. ಇನ್ನೂ ಮೆಕಾಲೆಯ ಉದ್ದೇಶಗಳ ಬಂಧಿಗಳಾಗಬಾರದು.

(ವಿವಿಧ ಆಧಾರಗಳಿಂದ)



# ಮಲ್ಯ ಮನೆತನದ ಚರಿತ್ರೆಯ ಅನಾವರಣ

– ಡಾ॥ ಜ್ಯೋತ್ಸ್ನಾ ಕಾಮತ್*

ನಮ್ಮ ಊರು ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ. ಶರಾವತಿ ನದಿ ತೀರದ ಈ ಊರು, ಬಹಳಷ್ಟು ಹಳೆ ಗುಡಿ-ಗುಂಡಾರಗಳಿಂದ, ಐತಿಹಾಸಿಕ ಸ್ಮಾರಕಗಳಿಂದ, ಅವಶೇಷಗಳಿಂದ ಮೆರೆಯುತ್ತಿದೆ. ಅತಿ ಅಪರೂಪದ ಬೌದ್ಧ ಅವಶೇಷಗಳು, ತಾಮ್ರಪಟಗಳೂ ಇಲ್ಲಿ ಸಿಕ್ಕಿವೆ.

ಇಂತಹ ಜಿಲ್ಲೆ ಮತ್ತು ಊರಿನಾಕೆಯಾದ ನನಗೆ, ಐತಿಹಾಸಿಕವಾಗಿ ಪ್ರಸಿದ್ಧವಾದ ಮನೆತನವೊಂದರ ನೆರೆಯಲ್ಲೇ ಇರುವ ಕಾಮತ ಕುಟುಂಬದ ಮನೆಗೆ ಸೇರಿದ್ದೆ ಎಂಬ ಅರಿವೇ ಇರಲಿಲ್ಲ. ತಮ್ಮದು ಹಿಂದೊಮ್ಮೆ, ೩೫೦ ವರ್ಷಗಳ ಹಿಂದೆ, ಕೆಳದಿ ಸಂಸ್ಥಾನದಲ್ಲಿ ವೈಭವೋಪೇತವಾದ ಪ್ರತಿಷ್ಠಿತ ಕುಟುಂಬವಾಗಿತ್ತು ಎಂಬ ಕಲ್ಪನೆಯೇ ನೆರೆಮನೆಯವರಿಗಿರಲಿಲ್ಲ!

ಹೊನ್ನಾವರದ ರಥಬೀದಿಯಲ್ಲಿ ಕಾಮತರ ಹಿರಿಯರ ಮನೆಯ ಪಕ್ಕದಲ್ಲಿ ವೆಂಕಟರಮಣ ದೇವಸ್ಥಾನವಿದೆ. ಕೆಳದಿ ಕಾಲದಲ್ಲಿ ಮಲ್ಯ ಕುಟುಂಬದವರು ಕಟ್ಟಿಸಿದ್ದು. ಅದರ ಆವರಣದಲ್ಲಿ ಮಹಾಲೆ[1] ಕುಟುಂಬದ ಚಿಕ್ಕ ಮನೆಯಿದೆ. ನಾವು ಕಂಡಾಗ ಅತ್ಯಂತ ದೀನ ಅವಸ್ಥೆಯಲ್ಲಿತ್ತು. ಐವರ ಕುಟುಂಬದಲ್ಲಿ ತಂದೆ ಆಗಷ್ಟೇ ತೀರಿಕೊಂಡಿದ್ದರು. ಮೆದುಳಿನ ಗಡ್ಡೆಯಿಂದಾಗಿ ಹಿರಿಮಗ ಕಾಲವಾಗಿದ್ದ. ಇಬ್ಬರು ಹೆಣ್ಣುಮಕ್ಕಳಿಗೆ ಬಡತನದಿಂದಾಗಿ ಮದುವೆ ಆಗಿರಲಿಲ್ಲ. ಒಬ್ಬ ಮಗ ಚಿಕ್ಕ ಸರ್ಕಾರಿ ನೌಕರಿ ಹಿಡಿಯಲು ಹೊರಗೆ ಹೋಗಿದ್ದ. ಸುಮಾರು ಹದಿನೆಂಟು ವರ್ಷದ ತರುಣನೇ ಆ ಕುಟುಂಬಕ್ಕೆ ಆಧಾರವಾಗಿದ್ದ. ಆತನಿಗೆ ವೆಂಕಟರಮಣ ದೇವಸ್ಥಾನದ ಹಾಗೂ ಊರಿನ ಇನ್ನೆರಡು ದೇವಾಲಯಗಳ ರಥೋತ್ಸವ ಕಾಲದಲ್ಲಿ ಅಗ್ರಮಾನ್ಯತೆ ಸಲ್ಲುತ್ತಿತ್ತು. ಅಂದರೆ, ರಥಯಾತ್ರೆಯ ದಿನ, ಬೆಳ್ಳಿಯ ದಂಡ ಹಿಡಿದು ಛತ್ರ, ಚಾಮರ, ಪಂಚಮಹಾವಾದ್ಯಗಳೊಂದಿಗೆ, ಉತ್ಸವ ಮೂರ್ತಿಯ ಮೆರವಣಿಗೆಯನ್ನು ಮುನ್ನಡೆಸುವ ಯಜಮಾನಿಕೆ ಅವನದಾಗಿತ್ತು. ಬೆಂಗಳೂರಿನಲ್ಲಿದ್ದ ನಮಗೆ, (ಆ ವರ್ಷ ಹೊನ್ನಾವರಕ್ಕೆ ಹೋದಾಗ [೧೯೯೦] 'ಐತಿಹಾಸಿಕ ಪರಂಪರೆ ಉಳಿಸಿ!' ಘೋಷಣೆ ಕೂಗಿದಾಕೆಗೆ) ಈ ವಿಚಾರ ತಿಳಿದಾಗ, ಆ ತರುಣನ ಬಳಿ ಅವನಿಗಿದ್ದ ವಿಶೇಷ ವಾರ್ಷಿಕ ಸವಲತ್ತಿನ ಬಗ್ಗೆ ವಿಚಾರಿಸಿದೆ. ನೂರಾರು ವರ್ಷಗಳಿಂದ ಮಲ್ಯ ಕುಟುಂಬದವರಿಗೆ ಈ ಗೌರವ ಸಲ್ಲುತ್ತ ಬಂದಿದೆ ಎಂದು ಹೇಳಿದನಾದರೂ, ಹೆಚ್ಚಿನ ಮಾಹಿತಿ ಅವನ ಬಳಿ ಇರಲಿಲ್ಲ. ನನ್ನ ಪತಿ, ಡಾ. ಕೃಷ್ಣಾನಂದ ಕಾಮತರು ಅಷ್ಟಕ್ಕೇ ಬಿಡದೆ ಅವರ ಮನೆಯಲ್ಲಿದ್ದ ತೀರ ಹಳೆ ಸಾಮಾನುಗಳಲ್ಲಿ ಏನಾದರೂ ಕುರುಹುಗಳು ಸಿಗುತ್ತವೆಯೇ? ಎಂದು ಶೋಧಯತ್ನ ಪ್ರಾರಂಭಿಸಿದರು.

ನಮ್ಮಲ್ಲಿ ಹಳೇ ಸಂಪ್ರದಾಯಗಳು ಒಮ್ಮಿಂದೊಮ್ಮೆಗೇ ಇಲ್ಲವಾಗುವುದಿಲ್ಲ. ಜಿಲ್ಲೆಯಲ್ಲಿ ಮಲ್ಯ ಕುಟುಂಬದವರು ಕಟ್ಟಿಸಿದ ಮೂರು ದೇವಾಲಯಗಳಿಗೂ ಮಹಾಲೆ ಕುಟುಂಬಕ್ಕೆ ಸಲ್ಲುತ್ತಿದ್ದ ಅಗ್ರಪೂಜೆಯ ಮರ್ಯಾದೆಗೂ ಸಂಬಂಧವಿರಬೇಕು! ಎಂದು ಒಳಮನಸ್ಸು ಹೇಳುತ್ತಿತ್ತು. ಹೊನ್ನಾವರದಿಂದ ಎಂಟು ಹತ್ತು ಮೈಲಿ ದೂರದ ವೆಂಕಟಾಪುರದ ಮತ್ತು ಭಟ್ಕಳದ ವೆಂಕಟೇಶ ದೇವಾಲಯಗಳನ್ನು ಕಾಮತರು ನೋಡಿದ್ದರು. ಕ್ಲಿಕ್ಕಿಸಿದ್ದರು. ಅವನ್ನು ನಾರಾಯಣ ಮಲ್ಯನೆಂಬಾತ ಕಟ್ಟಿಸಿದ್ದ.

ಮಲ್ಯರ ಮನೆಯಲ್ಲಿ ಮೊದಲಿಗೆ ಸಿಕ್ಕಿದ್ದು ಬಚ್ಚಲೊಲೆಯ ಬೂದಿ ತೆಗೆಯಲು ಉಪಯೋಗಿಸುತ್ತಿದ್ದ ಹಿಡಿಕೆಯಿದ್ದ ಧಾತುವಿನ ಹಲಗೆ. ಚೆನ್ನಾಗಿ ತೊಳೆದು ನೋಡಿದಾಗ ಸವೆದ ಅಕ್ಷರಗಳು ಕಂಡವು. ಬಳಿಕ ಅವರ ಅಟ್ಟದ ಹಳೇಸಾಮಾನುಗಳ ಎಡೆಯಲ್ಲಿ ಅಂಥವೇ ಮೂರು ಫಲಕಗಳು ಸಿಕ್ಕವು. ತಾಮ್ರದ್ದಾಗಿದ್ದು, ಕಿಲುಬು ಹತ್ತಿ ಎರಡು ಶತಕವೇ ಕಳೆದಿರಬೇಕು! ಅಂಟಾಳಕಾಯಿ, ಹುಣಸೆ ಹಣ್ಣಿನ ಲೇಪದಿಂದ ತಿಕ್ಕಿ ಅವನ್ನು ತೊಳೆದದ್ದೇ ತೊಳೆದದ್ದು. ಬಳಿಕ ಅವು ದಾನಶಾಸನವೆಂದು ತಿಳಿಸುವ ತಾಮ್ರಫಲಕಗಳೆಂಬುದರಲ್ಲಿ ಅನುಮಾನ ಉಳಿಯಲಿಲ್ಲ.

---

* ೧೧೦, ಶಶಿಕಿರಣ, ೧೮ನೆಯ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-೫೬೦೦೫೫.

ಆದರೆ ನಮ್ಮಿಬ್ಬರಿಗೂ ಶಾಸನ-ಒಕ್ಕಣಿಕೆ ಓದಲು ಬರುತ್ತಿರಲಿಲ್ಲ. ಕಾಮತರು, ವಿದ್ವಾಂಸರೂ, ಶಾಸನತಜ್ಞರೂ ಆಗಿದ್ದ ತಮ್ಮ ಸ್ನೇಹಿತ ಡಾ. ದೇವರಕೊಂಡಾರೆಡ್ಡಿ ಯವರನ್ನು ನೆನಪಿಸಿಕೊಂಡರು. ೧೯೮೦ರ ದಶಕದಲ್ಲಿ ಡಾ. ರೆಡ್ಡಿ ಗುಂಡ್ಲುಪೇಟೆಯಲ್ಲಿದ್ದ ನೆನಪು. ಕ್ಯಾಮರಾಧಾರಿ ಕಾಮತರು ಅವರೊಂದಿಗೆ ಆ ಪ್ರದೇಶದಲ್ಲಿ ಸುತ್ತಾಡಿದ್ದರು. ಹಳೇ ದೇವಾಲಯಗಳೊಂದಿಗೆ, ಅಲ್ಲಿಯ ಕಾಡುಕುರುಬ, ಜೇನುಕುರುಬರ ಜನಜೀವನವನ್ನು ಕ್ಲಿಕ್ಕಿಸಿದ್ದರು. ಈಗ ಮಲ್ಯ ಮನೆತನಕ್ಕೆ ಸಂಬಂಧಿಸಿದ ತಾಮ್ರಪಟಗಳ ಸ್ಪಷ್ಟ ಚಿತ್ರಗಳನ್ನು ತೆಗೆದು ಅವನ್ನು ಓದಿ ವಿಷಯ ನೀಡುವಂತೆ, ಕಾಮತರು ಕೇಳಿಕೊಂಡಾಗ ಸಂತೋಷದಿಂದಲೇ ಡಾ. ದೇವರಕೊಂಡಾರೆಡ್ಡಿ ಆ ಕೆಲಸ ಮಾಡಿಕೊಟ್ಟರು.

ಕ್ರಿ.ಶ. ೧೬೬೧ರಿಂದ ೧೬೯೭ರವರೆಗೆ ಕೆಳದಿ ಸಂಸ್ಥಾನದಲ್ಲಿ ಭಂಡಾರಿಗಳಾಗಿದ್ದವರು, ಪೋರ್ಚುಗೀಸರ ರಾಯಭಾರಿತ್ವ ವಹಿಸಿಕೊಂಡಿದ್ದ ನಾರಾಯಣ ಮಲ್ಯ ಮತ್ತು ವಿಠ್ಠಲ ಮಲ್ಯರು. ಮೂಲತಃ ಉತ್ತರ ಕನ್ನಡ ನಿವಾಸಿಯಾಗಿದ್ದ ಗಣೇಶ ಮಲ್ಯನು ಉದ್ಯೋಗ ಅರಸುತ್ತ ಕೆಳದಿಗೆ ಹೋಗಿ, ಪರಿಶ್ರಮ, ಪ್ರಾಮಾಣಿಕತೆಗಳಿಂದ ಶೀಘ್ರವೇ ಆಳರಸರ ವಿಶ್ವಾಸ ಸಂಪಾದಿಸಿದ. ಈ ಕುಟುಂಬದ ರಾಮಚಂದ್ರ ಮಲ್ಯನು ತನ್ನ ದೊರೆ ಇಮ್ಮಡಿ ವೆಂಕಟಪ್ಪ ನಾಯಕನ (ಕ್ರಿ.ಶ. ೧೬೬೦-೬೨) ಒಳಿತನ್ನು ಹಾರೈಸಿ, ಶಿರಾಲಿ ಹೊಳೆಯ ಸಮೀಪದಲ್ಲಿ ವೆಂಕಟಾಪುರ ಹಾಗೂ ದೇವುಳ ನಿರ್ಮಿಸಿ, ವಿರಕ್ತಮಠಕ್ಕೆ ದತ್ತಿ ಕೊಟ್ಟ, ಮುಂದೆ ಭದ್ರಪ್ಪ ನಾಯಕ (ಕ್ರಿ.ಶ. ೧೬೬೨-೬೪) ಇಲ್ಲಿ ಅಗ್ರಹಾರವನ್ನು ನಿರ್ಮಿಸಿದ. ಇದಕ್ಕೂ ಮೊದಲು ಶಿವಪ್ಪ ನಾಯಕನು ಕ್ರಿ.ಶ. ೧೬೫೩ರಲ್ಲಿ ಮ್ಹಾಳಪ್ಪ ಮಲ್ಯ ಎಂಬಾತನನ್ನು ಪೋರ್ಚುಗೀಸ ರೊಂದಿಗೆ ಮಾತುಕತೆಗೆ ಕಳಿಸಿದ್ದ.[೧] ಮುಂದೆ ರಾಣಿ ಚೆನ್ನಮ್ಮಾಜಿ ನಾರಾಯಣ ಮಲ್ಯನನ್ನು ವ್ಯಾಪಾರ-ವಹಿವಾಟಿಗಾಗಿ ಪೋರ್ಚುಗೀಸರ ಬಳಿ ಕಳಿಸಿದ ದಾಖಲೆ ಇದೆ.[೨]

ಮಲ್ಯ ಕುಟುಂಬದವರು ಮಂಗಳೂರು, ಭಟ್ಕಳಗಳ ಅಂತರರಾಷ್ಟ್ರೀಯ ವ್ಯಾಪಾರವನ್ನು ಕೆಳದಿ ಸಂಸ್ಥಾನದ ಪರವಾಗಿ ನಿಯಂತ್ರಿಸುತ್ತಿದ್ದರು. ಗೋಕರ್ಣಕ್ಷೇತ್ರದಲ್ಲಿ ನಿತ್ಯ ಅನ್ನದಾನದ ವ್ಯವಸ್ಥೆಯೂ ಈ ಕುಟುಂಬದ ಮೂಲಕ ನಡೆದಿದೆ.

ಮೂರುವರೆ ಶತಮಾನಗಳ ಬಳಿಕ ಅದೇ ಕುಟುಂಬಕ್ಕೆ ಒದಗಿದ ದುಃಸ್ಥಿತಿ ನೋಡಿ ನಿಟ್ಟುಸಿರು ಬಿಡುವಂತೆ ಆಯಿತು. ಪಿತ್ರಾರ್ಜಿತವಾಗಿ ಬಂದ ಭೂಮಿಯೆಲ್ಲವೂ ಮುರಾರ್ಜಿ ದೇಸಾಯಿ ಮುಂಬೈ ಪ್ರಾಂತದ ಮುಖ್ಯಮಂತ್ರಿಯಾದಾಗ ಟೆನೆನ್ಸಿ ಆಕ್ಟ್ (ಉಳುವವನಿಗೇ ನೆಲ!) ತಂದಿದ್ದರಿಂದ ಕೈ ಬಿಟ್ಟು ಹೋಗಿತ್ತು. ನೂರಾರು ಜನಕ್ಕೆ  ನಿತ್ಯ ಅನ್ನ ಒದಗಿಸಿದ ಪೀಳಿಗೆಯವರು ಅನ್ನಾನ್ನ ಗತಿಕರಾಗಿದ್ದರು.[೩]

ನಮಗೆ ಕಡುಬಡವರು ಆಗರ್ಭ ಶ್ರೀಮಂತರಾದ ಕತೆಗಳನ್ನು ಓದಿ ಕೇಳಿ ರೂಢಿ ಇದೆ. ಆದರೆ ಪ್ರತಿಷ್ಠಿತ, ಶ್ರೀಮಂತ ಮನೆತನಗಳು ಮಣ್ಣುಗೂಡಿ ಹೋಗುವುದು, ಸಾಮಾನ್ಯವಾದ್ದರಿಂದಲೋ ಏನೋ, ಅವರ ಕುರಿತ ಕುರುಹುಗಳು ಇರುವುದಿಲ್ಲ. ಮಲ್ಯ ಮನೆತನದ ಕುರುಹು ಅಕಸ್ಮಾತ್ತಾಗಿ ಪತ್ತೆ ಹತ್ತಿತು. ತಾಮ್ರಪತ್ರಗಳ ಅನಾವರಣದಿಂದಾಗಿ. ವಾಸ್ತವ ಎಷ್ಟು ಕಠೋರವಾಗಿರುತ್ತದೆ ಎಂದು ಕಣ್ಣಾರೆ ಕಾಣುವಂತೆ ಆಯಿತು! ಕಾಲಾಯ ತಸ್ಮೈ ನಮಃ!

**ಮಹಾಲೆ (ಮಲ್ಯ) ಮನೆತನದ ಅನಾವರಣ**

ಗಣೇಶ ಮಲ್ಯ

↓

- ವಿಠ್ಠಲ
  - ಮ್ಹಾಳಪ್ಪ
  - ನಾರಾಯಣ
    - ↓ (ಮುಂದಿನ ತಲೆಮಾರಿನ ಹೆಸರು ಸಿಗುತ್ತಿಲ್ಲ)
- ರಾಮಚಂದ್ರ

↓ ↓

ಆತ್ಮಾರಾಮ ಮಹಾಲೆ  ಲಕ್ಷ್ಮಣ ಮಹಾಲೆ

↓ ↓

ಮೂವರು ಗಂಡು  ಇಬ್ಬರು ಹೆಣ್ಣು

↓




## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. **ಕೆಳದಿ ಅರಸರು ಹಾಗೂ ಪೋರ್ಚುಗೀಸರು**, ಡಾ॥ ಬಿ.ಎಸ್. ಶಾಸ್ತ್ರಿ.

೨. 'ಮಲ್ಯ' ಎಂಬ ಹೆಸರನ್ನು, ಗೋವಾ ಹಾಗೂ ಉತ್ತರಕನ್ನಡ ಜಿಲ್ಲೆಯ ಜನರು ಮಹಾರಾಷ್ಟ್ರದ ಪ್ರಭಾವದಿಂದ 'ಮಹಾಲೆ' ಎಂದು ಪರಿವರ್ತಿಸಿಕೊಂಡಿದ್ದಾರೆ.

೩. ಇತ್ತೀಚಿನ ವರ್ಷಗಳಲ್ಲಿ ತರುಣ ಮಹಾಲೆಗೆ ಬ್ಯಾಂಕ್ ಉದ್ಯೋಗ ಸಿಕ್ಕಿದೆ. ಓರ್ವ ಸೋದರಿಗೆ ಮದುವೆ ಆಗದಿದ್ದರೂ ಚಿಕ್ಕ ನೌಕರಿಯಿದೆ ಎಂದು ತಿಳಿಯಿತು. ಇದ್ದುದರಲ್ಲಿ ನೆಮ್ಮದಿಯಾಗಿದ್ದಾರೆ.



# ಕಾವಲಿ ವೆಂಕಟ ಬೋರಯ್ಯ

**– ಕುಸುಮಾ***

**ಶಾ**ಸನ ಕ್ಷೇತ್ರದಲ್ಲಿ ವಿದೇಶೀ ವಿದ್ವಾಂಸರ ಪರಿಶ್ರಮದ ಹಿಂದೆ ದೇಸಿ ತಜ್ಞರು ಇಲ್ಲದಿದ್ದರೆ ಶಾಸನ ಕ್ಷೇತ್ರದಲ್ಲಿ ಆ ವಿದೇಶಿ ವಿದ್ವಾಂಸರು ಸಮರ್ಥವಾಗಿ ಕೆಲಸ ಮಾಡಲು ಸಾಧ್ಯವಿಲ್ಲ ಎನ್ನುವುದಕ್ಕೆ ನಮ್ಮ ಕಾವಲಿ ವೆಂಕಟ ಬೋರಯ್ಯ ಸಾಕ್ಷಿಯಾಗಿದ್ದಾರೆ. ಬೋರಯ್ಯ ಕ್ರಿ.ಶ. ೧೭೭೬ರಲ್ಲಿ ಜನಸಿದ. ಇವನ ಊರು ಆಂಧ್ರದ ಪಶ್ಚಿಮ ಗೋದಾವರಿ ಜಿಲ್ಲೆಗೆ ಸೇರಿದ ಏಲೂರು. ಇಲ್ಲಿಯೇ ಬೋರಯ್ಯ ೧೦ ವರ್ಷಗಳ ಕಾಲ ವಿದ್ಯಾಭ್ಯಾಸ ನಡೆಸಿ ಬಾಲ್ಯದಲ್ಲಿಯೇ ಸಂಸ್ಕೃತ ಕಾವ್ಯಗಳನ್ನು ಅಧ್ಯಯನ ಮಾಡಿದ.

ಬೋರಯ್ಯನಿಗೆ ಐದು ಜನ ಅಣ್ಣ ತಮ್ಮಂದಿರು – ವೆಂಕಟನಾರಾಯಣ, ವೆಂಕಟ ಬೋರಯ್ಯ, ವೆಂಕಟಲಕ್ಷ್ಮಯ್ಯ, ವೆಂಕಟರಾಮಸ್ವಾಮಿ ಮತ್ತು ಸೀತಯ್ಯ, ಇವರು ಮೂಲತಃ ಪಶ್ಚಿಮ ಗೋದಾವರಿ ಜಿಲ್ಲೆ ಆರವೇಲ ನಿಯೋಗಿ ಬ್ರಾಹ್ಮಣರೆಂಬ ಪಂಗಡಕ್ಕೆ ಸೇರಿದವರು. ವೆಂಕಟನಾರಾಯಣಪ್ಪ ಸರ್ಕಾರಿ ಸಂಸ್ಥೆಯ ಉದ್ಯೋಗಿ. ಅಣ್ಣನಂತೆ ತಾನು ದೊಡ್ಡ ಉದ್ಯೋಗಿಯಾಗಬೇಕೆಂದು ಅದಕ್ಕೆ ತಕ್ಕಂತೆ ಪಾರ್ಸಿ, ಹಿಂದೂಸ್ಥಾನಿ ಭಾಷೆಗಳ ಕಲಿತು, ಸುಮಾರು ೧೪ನೆಯ ವರ್ಷದಲ್ಲಿ ಬಂದರಿನಲ್ಲಿದ್ದ ಇಂಗ್ಲಿಷ್ ಶಾಲೆಯಲ್ಲಿ ಇಂಗ್ಲಿಷ್ ಕಲಿತ. ಇವನ ಚತುರತೆಯನ್ನು ಕಂಡು ಕರ್ನಲ್ ಪಿಯರ್ಸ್ ಎಂಬುವವನು ಬೋರಯ್ಯನಿಗೆ ಬಂದರಿನಲ್ಲಿಯೇ ಸಣ್ಣ ಉದ್ಯೋಗವನ್ನು ನೀಡಿದ. ಬೋರಯ್ಯ ಎಲ್ಲವನ್ನೂ ಕರತಲಾಮಲಕ ಮಾಡಿಕೊಂಡು ಅಧಿಕಾರಿಗಳ ವಿಶ್ವಾಸಕ್ಕೆ ಪಾತ್ರನಾದ. ಮುಂದೆ ಕೊಂಡಪಲ್ಲಿ ಸುತ್ತಮುತ್ತಲ ಪ್ರದೇಶಗಳ ಸೈನಿಕರಿಗೆ ಸಂಬಳ ಕೊಡುವುದಕ್ಕೆ ಈತನನ್ನು ನೇಮಿಸಿದರು. ನಂತರ ಪಿಯರ್ಸ್ ಬಳಿಯೇ ಹೆಡ್‌ರೈಟರ್ ಆಗಿ ಬೋರಯ್ಯನು ನಿಯಮಿತನಾದ.

### ಬೋರಯ್ಯ ಮತ್ತು ಮೆಕೆಂಜಿ ಪರಿಚಯ

ಮೆಕೆಂಜಿ ಭಾರತಕ್ಕೆ ೧೭೮೩ರಲ್ಲಿ ಬಂದ. ಇವನು ಹುಟ್ಟಿದ್ದು ಲೂಯಿಸ್ ದ್ವೀಪ ಸ್ವಾರ್ನಾವ್ ಗ್ರಾಮ. ಇವನು ಭಾರತಕ್ಕೆ ಬಂದದ್ದು ಭಾರತೀಯ ಗಣಿತಶಾಸ್ತ್ರವನ್ನು ವಿಸ್ತೃತವಾಗಿ ಪರಿಶೋಧನೆ ಮಾಡುವುದಕ್ಕೆ. ಮೆಕೆಂಜಿ ದಕ್ಷಿಣ ಭಾರತವನ್ನು ಸುತ್ತುತ್ತಿದ್ದ ಸಂದರ್ಭದಲ್ಲಿ ಬೋರಯ್ಯನ ಪರಿಚಯವಾಯಿತು. ಮುಂದೆ ಆತನನ್ನು ತನ್ನ ಭಾಷಾಂತರಕಾರನನ್ನಾಗಿ ನೇಮಿಸಿಕೊಂಡ ಮೆಕೆಂಜಿಯವರ ಸಹಾಯಕನಾಗಿ ಕಾವಲಿ ಬೋರಯ್ಯ ಕಾರ್ಯ ನಿರ್ವಹಿಸುತ್ತಿದ್ದಾಗಲೇ ಗಣಿತಶಾಸ್ತ್ರ, ರೇಖಾಗಣಿತ, ಭೂಗೋಳಶಾಸ್ತ್ರ, ಖಗೋಳಶಾಸ್ತ್ರ ಮುಂತಾದ ಶಾಸ್ತ್ರಗಳನ್ನು ಕಲಿತು ಪೌರಾತ್ಯ ಹಾಗೂ ಪಾಶ್ಚಾತ್ಯ ಜ್ಞಾನವನ್ನು ತನ್ನದಾಗಿ ಮಾಡಿಕೊಂಡನು. ಇದರೊಂದಿಗೆ ವಿವಿಧ ಭಾಷೆಗಳ ಮತ್ತು ಲಿಪಿಗಳ ಅಭ್ಯಾಸ, ಭೂಗೋಳ ಪಟಗಳ ರಚನೆ ಬೋರಯ್ಯನಿಗೆ ತಿಳಿಯುವಂತಾಯಿತು. ಮೆಕೆಂಜಿ ಸಂಗ್ರಹಿಸಿದ್ದ ತಮಿಳು, ಕನ್ನಡ ಸಂಸ್ಕೃತ ಶಾಸನಗಳನ್ನು ಓದಿ ಅರ್ಥವನ್ನು ಮೆಕೆಂಜಿಯವರಿಗೆ ತಿಳಿಸುವುದು ಇವನ ಕೆಲಸವಾಗಿತ್ತು. ಇಂಗ್ಲಿಷ್ ಪ್ರಾವೀಣ್ಯತೆ ಪಡೆದಿದ್ದ ತನ್ನ ತಮ್ಮಂದಿರಾದ ಲಕ್ಷ್ಮಯ್ಯ ಮತ್ತು ರಾಮಸ್ವಾಮಿಯವರನ್ನು ಸಹ ಮೆಕೆಂಜಿಯವರ ಹತ್ತಿರ ಕೆಲಸಕ್ಕೆ ಸೇರಿಸಿದ.

ಬ್ರಿಟಿಷರು ೧೭೯೯ರಲ್ಲಿ ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಸ್ವತಃ ಯುದ್ಧ ಭೂಮಿಯಲ್ಲಿ ಇದ್ದು, ವೀಕ್ಷಿಸಿ ಅಲ್ಲಿಯ ಕೋಟೆಯನ್ನು ಆಕ್ರಮಿಸಿದ ರೀತಿ, ಜರುಗಿದ ಭೀಬತ್ಸ ಯುದ್ಧದ ದೃಶ್ಯಗಳನ್ನು ನೋಡಿದ ಬೋರಯ್ಯ ಅದರ ಮೇಲೆ ಪದ್ಯಗಳನ್ನು ಬರೆದಿದ್ದಾನೆ. ಅದಲ್ಲದೆ ಕೋಟೆಯ ಬುರುಜಿನ ಮೇಲೆ ಬ್ರಿಟಿಷ್ ಸರ್ಕಾರದ ಪತಾಕೆಯನ್ನು ಪ್ರತಿಷ್ಠಾಪಿಸಿದುದನ್ನು ಅಮೋಘವಾಗಿ ವರ್ಣಿಸಿದ್ದಕ್ಕಾಗಿ ಮೆಕೆಂಜಿ ಬೋರಯ್ಯನನ್ನು ಪ್ರಶಂಸಿಸಿ ಸತ್ಕರಿಸಿದ. ಈ ಶ್ರೀರಂಗಪಟ್ಟಣದ ಘಟನೆಯನ್ನು, ಮೈಸೂರು ಅರಸರ ಚರಿತ್ರೆಯನ್ನು "ಶ್ರೀರಂಗರಾಜ ಚರಿತಂ" ಎಂಬ ಹೆಸರಿನಲ್ಲಿ ರಚಿಸಿದ್ದಾನೆ. ಹೈದರಾಬಾದಿನಿಂದ ಶ್ರೀರಂಗಪಟ್ಟಣಕ್ಕೆ ಸೈನ್ಯ ಸಮೇತ ಬರುವಾಗ ದಾರಿಯಲ್ಲಿ ಗದ್ವಾಲದ ಸೈನಿಕರು ಕೆಲವರು

---

* ಸ್ಪೆಲ್ವರ್ಥ್, ೫/೫. ೪ನೆಯ ಮುಖ್ಯರಸ್ತೆ. 'ಶ್ರೀಕೃಷ್ಣ ನಿಲಯ' ಟಾಟಾ ಸಿಲ್ಕ್ ಫಾರಂ, ಬೆಂಗಳೂರು–೫೬೦೦೮೨.

ಮೆಕೆಂಜಿಯ ಬಳಿ ಇದ್ದ ಸೈನ್ಯ ಹಾಗೂ ಕಚೇರಿಗೆ ಸಂಬಂಧಿಸಿದ್ದ ಪತ್ರಗಳನ್ನು ಕದ್ದಿದ್ದರು. ಅವುಗಳನ್ನು ಹೇಗಾದರೂ ಹುಡುಕಿ ತಂದು ಕೊಡಬೇಕೆಂದು ಬೋರಯ್ಯನಿಗೆ ಮೆಕೆಂಜಿಯು ಹೇಳಿದ. ಈ ಕಾರ್ಯವನ್ನು ಸಾಧಿಸುವ ಪ್ರಯತ್ನದಲ್ಲಿ ಬೋರಯ್ಯ ಗದ್ವಾಲದ ಸೈನಿಕರಿಗೆ ಸೆರೆ ಸಿಕ್ಕಿಕೊಂಡ. ಬೋರಯ್ಯ ತನ್ನ ಸೌಮ್ಯವರ್ತನೆಯಿಂದ ಸಾಹಿತ್ಯ ಪ್ರತಿಭೆಯಿಂದ ಎಲ್ಲರನ್ನು ಒಳ್ಳೆಯವರನ್ನಾಗಿ ಮಾಡಿಕೊಂಡು ಗದ್ವಾಲ ಸಂಸ್ಥಾನಾಧಿಪತಿಯ ಮೇಲೆ ಪದ್ಯಗಳನ್ನು ಹೇಳಿ, ಅವರ ಕಟಾಕ್ಷಕ್ಕೆ ಪಾತ್ರನಾದನಲ್ಲದೆ, ಮಾನ ಸನ್ಮಾನಗಳನ್ನು ಪಡೆದುಕೊಂಡ. ಮುಂದೆ ಟಿಪ್ಪುಸುಲ್ತಾನನ ಪತನವಾದ ನಂತರ ಬ್ರಿಟಿಷರು ಮೈಸೂರು ರಾಜ್ಯವನ್ನು ಸರ್ವೆ ಮಾಡುವುದಕ್ಕೆ ಮೆಕೆಂಜಿಯನ್ನು ನಿಯಮಿಸಿದರು. ಆ ಸಮಯದಲ್ಲಿ ಇಬ್ಬರೂ ಅನೇಕ ಊರುಗಳನ್ನು ಸುತ್ತುತ್ತಾ ಅಲ್ಲಿನ ಸ್ಥಳೀಯ ಐತಿಹ್ಯಗಳನ್ನು ಸಂಗ್ರಹಿಸಿದರು. ಬೋರಯ್ಯನು ಮೆಕೆಂಜಿಯೊಂದಿಗೆ ಭೂಪಟಗಳನ್ನು ರಚಿಸುತ್ತಾ ಇದರೊಂದಿಗೆ ದಕ್ಷಿಣ ಭಾರತದ ಚರಿತ್ರೆಗೆ ಸಂಬಂಧಿಸಿದ ಸಾಕಷ್ಟು ಮಾಹಿತಿಗಳನ್ನು ಸಂಗ್ರಹಿಸಿದ. ಈ ಸಂಚಾರದ ಸಂದರ್ಭದಲ್ಲಿ ತಿಮ್ಮಪ್ಪ ಎಂಬುವವನು ಹೇಳಿದ ಕಥೆಯ ಆಧಾರದ ಮೇಲೆ ಆನೆಗೊಂದಿ ರಾಜನ ವೃತ್ತಾಂತವನ್ನು, ನಿಜಗಲ್ಲಿನ ಭಟ್ರಾಜಲ ವೃತ್ತಾಂತವನ್ನು, ಬೋರಯ್ಯ ಸಂಪಾದಿಸಿ, ಇಂಗ್ಲಿಷ್‌ಗೆ ಅನುವಾದಿಸಿದ. ಇವುಗಳನ್ನು ಮುಂದೆ ರಾಯಲ್ ಏಷಿಯಾಟಿಕ್ ಸೊಸೈಟಿ ಜರ್ನಲ್‌ನಲ್ಲಿ ಪ್ರಕಟಿಸಿದ. ಶ್ರೀರಂಗರಾಜ ಚರಿತ್ರೆಯನ್ನು ರಚಿಸಿದ. ಇದರಲ್ಲಿ ಉಮ್ಮತ್ತೂರು ರಾಜ್ಯಸ್ಥಾಪನೆಯಿಂದ ಯಾದವ ರಾಜರ ಪ್ರಾಬಲ್ಯದವರೆಗೆ ಸವಿಸ್ತರವಾದ ಚರಿತ್ರೆ ಇದೆ.

ಹರಿಹರದಲ್ಲಿ ಸರ್ ಆರ್ಥರ್ ವೆಲ್ಲಸ್ಲಿ ಕ್ರಿ.ಶ. ೧೮೦೦ರಲ್ಲಿ ಮಹಾರಾಷ್ಟ್ರ ನಾಯಕನಾದ ದೊಂಡೋವಾಘನನ್ನು ದೊಂಡಯ್ಯ ಹಿಡಿದುಕೊಂಡ ಸಂದರ್ಭವನ್ನು ಬೋರಯ್ಯ ಪದ್ಯಗಳ ಮುಖಾಂತರ ಹೇಳಿದ್ದಾನೆ. ಆನಂತರ "ಸತ್ಪುರುಷವರ್ಣನಂ" ಎಂಬ ಸಂಸ್ಕೃತ ಶತಕವನ್ನು ರಚಿಸಿದ. ಬೋರಯ್ಯನ ಪ್ರತಿಭಾ ವಿಶೇಷವನ್ನು ಕಂಡು ಜನರಲ್ ಕ್ಯಾಂಬೆಲ್, ಕರ್ನಲ್ ಥಾಮಸ್ ಹಾಗೂ ಪೂರ್ಣಯ್ಯನವರು ಅಭಿನಂದಿಸಿದ್ದಾರೆ. ಬೋರಯ್ಯ ಈ ಓಡಾಟದಲ್ಲಿ ಹಳೆಯ ನಾಣ್ಯಗಳನ್ನು ಸಂಪಾದಿಸಿದ, ಅನೇಕ ಪ್ರಾಚೀನ ಲಿಪಿಯ ಶಾಸನಗಳನ್ನು ನಕಲು ಮಾಡಿದ ಹಾಗೂ ಒಂದು ಹಳಗನ್ನಡ ಶಾಸನವನ್ನು ಸ್ಥಳದಲ್ಲಿಯೇ ಓದಿ, ಅದರ ಅರ್ಥವನ್ನು ಮೆಕೆಂಜಿಗೆ ಹೇಳಿದ. ಈ ನೈಪುಣ್ಯವನ್ನು ಪ್ರಶಂಸಿಸಿ ಮೆಕೆಂಜಿ ಆ ಶಾಸನದ ಕೆಳಗೆ ಬೋರಯ್ಯನ ಹೆಸರು ಕೆತ್ತಿಸಿದನಂತೆ. ಈ ಶಿಲಾಶಾಸನವನ್ನು ಕಲ್ಕತ್ತಾದ ರಾಯಲ್ ಏಷಿಯಾಟಿಕ್ ಸೊಸೈಟಿಗೆ ಕಳುಹಿಸಿದನು (ಈ ಶಾಸನ ಬಹುಶಃ ಕುರುಗೋಡಿನಿಂದ ಕಲ್ಕತ್ತೆಗೆ ತೆಗೆದುಕೊಂಡು ಹೋಗಿರುವ ಶಾಸನವಿರಬಹುದು). ಬೋರಯ್ಯನು ಮೆಕೆಂಜಿ ಕೈಕೆಳಗೆ ಹೊಸದಾಗಿ ಗುಮಾಸ್ತನಾಗಿ ಬಂದು ಸೇರಿದವರಿಗೆಲ್ಲರಿಗೂ ವಿಷಯ ಸಂಗ್ರಹಣೆ ಮಾಡುವುದು. ಪ್ರತಿ ದೇಶದ ಚರಿತ್ರೆ, ಸ್ಥಳಚರಿತ್ರೆ, ಭೂಗೋಳ, ವೈದ್ಯ, ಸಾಹಿತ್ಯ, ರಸಾಯನಶಾಸ್ತ್ರ, ಪ್ರಾಚೀನ ಶಾಸನಗಳು, ನಾಣ್ಯಗಳು, ಪ್ಲಾನುಗಳು, ಡ್ರಾಯಿಂಗ್, ಪ್ರಾಚೀನ ವಸ್ತುಸಂಗ್ರಹ ಮುಂತಾದ ವಿವರಗಳನ್ನು ಸಂಗ್ರಹಿಸುವ ವಿಧಾನಗಳನ್ನು ಸಂಶೋಧನೆಯ ಪದ್ಧತಿಯನ್ನು ಹೇಳಿಕೊಡುತ್ತಿದ್ದ.

ಬೋರಯ್ಯ ಮೆಕೆಂಜಿ ಜೊತೆ ಇದ್ದದ್ದು ಕೇವಲ ೬ ವರ್ಷಗಳ ಕಾಲ ಮಾತ್ರ. ಇಷ್ಟು ಕಡಿಮೆ ಅವಧಿಯಲ್ಲಿ ಸಾಧಿಸಿದ ಸಾಧನೆ ಆಶ್ಚರ್ಯ ಪಡುವಂತಹದ್ದಾಗಿದೆ. ಪ್ರತಿಭಾವಂತನಾದ ಈ ಬೋರಯ್ಯ ಒಬ್ಬ ಮನುಷ್ಯ ಬದುಕಿರುವಷ್ಟು ಕಾಲ ಮಾಡಬಹುದಾದ ಕೆಲಸವನ್ನು ಕೇವಲ ೬ ವರ್ಷಗಳ ಕಾಲದಲ್ಲಿ ಮಾಡಿದ್ದಾನೆ ಎಂದರೆ ಇವನ ಪ್ರತಿಭೆ ಎಂತಹುದಿತ್ತೆಂದು ಊಹಿಸಬಹುದು. ಕ್ರಿ.ಶ. ೧೮೦೩ರಲ್ಲಿ ಬೋರಯ್ಯ ತನ್ನ ೨೬ ವಯಸ್ಸಿನಲ್ಲಿ ಸನ್ನಿಪಾತದಿಂದ ಮರಣ ಹೊಂದಿದ. ಮೆಕೆಂಜಿ ಬೋರಯ್ಯನನ್ನು ದಹನ ಮಾಡಿದ ಸ್ಥಳದಲ್ಲಿ ಅವನ ಜ್ಞಾಪಕಾರ್ಥವಾಗಿ ಸಮುದ್ರ ತೀರದಲ್ಲಿ ಒಂದು ಶಿಲಾಶಾಸನವನ್ನು ಹಾಕಿಸಿದನಂತೆ. ಈ ಶಿಲಾಶಾಸನವು ೧೮೪೭ರ ವರೆಗೆ ಮದರಾಸಿನಲ್ಲಿ ಇತ್ತೆಂದು ನಂತರ ಏನಾಯಿತೆಂದು ತಿಳಿದಿಲ್ಲ. ಬೋರಯ್ಯ ೧೮೦೩ರಲ್ಲಿ ಮರಣ ಹೊಂದಿದ್ದರೂ ಮೆಕೆಂಜಿಯ ಮನಸ್ಸಿನಲ್ಲಿ ಅವನ ನೆನಪು ಅನೇಕ ವರ್ಷಗಳ ಕಾಲ ಅಚ್ಚಳಿಯದೆ ಉಳಿದಿತ್ತು. ಮೆಕೆಂಜಿ ತನ್ನ ಸ್ನೇಹಿತರಿಗೆ ೧೮೧೭ರ ಫೆಬ್ರವರಿಯಲ್ಲಿ ಬರೆದ ಪತ್ರವೊಂದರಲ್ಲಿ ಒಬ್ಬ ದೇಶೀಯ ಬ್ರಾಹ್ಮಣನ ಸಾಹಚರ್ಯದಿಂದ ಭಾರತೀಯ ಸಂಶೋಧನೆಯ ಬಾಗಿಲ ಮೂಲಕ ಪ್ರವೇಶಿಸುವುದಕ್ಕೆ ನನ್ನಿಂದ ಸಾಧ್ಯವಾಯಿತು. ಆ ದಿನಗಳಲ್ಲಿ ಇನ್ನೂ ಚಿಗುರು ಮೀಸೆಯ ಯುವಕನಾಗಿದ್ದ ಬೋರಯ್ಯ ಅತ್ಯಂತ ಕುಶಾಗ್ರಮತಿ, ಪ್ರತಿಭಾಶಾಲಿ. ತನ್ನ ಕಾರ್ಯ ನಿರ್ವಹಣೆಯ ಎಲ್ಲ ವರ್ಗದಲ್ಲಿ ಸಮದೃಷ್ಟಿ, ಸಹನಶೀಲ ಸಹೃದಯಿಯಾಗಿದ್ದ ಈ ಮನುಷ್ಯನು ಪ್ರತಿಭಾ ವಿಶೇಷದಿಂದ ಭಾರತೀಯ ಭಾಷಾಜ್ಞಾನದ ಅರಿವಿಲ್ಲದ ನನಗೆ ಅರಿವು ಮೂಡುವಂತೆ ಮಾಡಿದ. ಕೆಲವು ಕಾಲದಿಂದ ಸಂಪಾದಿಸಿದ ಕನ್ನಡ, ತಮಿಳು ಸಂಸ್ಕೃತ ಶಾಸನಗಳಲ್ಲಿನ ಹಳೆ ಲಿಪಿಗಳು ಗೊತ್ತಿಲ್ಲದೇ ಪರದಾಡುತ್ತಿದ್ದ ನನಗೆ ಬೋರಯ್ಯ ತನ್ನ ಬುದ್ಧಿಶಕ್ತಿಯಿಂದ ಭಾರತೀಯ ಸಂಶೋಧನಾ ವಿಜ್ಞಾನಕ್ಕೆ ನೂತನ ಆಯಾಮಗಳನ್ನು ಗುರುತಿಸುವಂತೆ ಮಾಡಿದ. ಇವನು ಕೊಟ್ಟಂತಹ

ಶಿಕ್ಷಣದಿಂದ ಆತನ ಸೋದರರೂ, ಶಿಷ್ಯರೂ ಸಂತೋಷವಾಗಿ ಆತನನ್ನು ಅನುಸರಿಸುತ್ತ ನಡೆದಿದ್ದಾರೆ" ಎಂದಿದ್ದಾನೆ. ಬೋರಯ್ಯ ಭಾರತದಲ್ಲಿ ಬಳಕೆಯಲಿದ್ದ ತೆಲುಗು, ಕನ್ನಡ, ಮರಾಠಿ, ಸಂಸ್ಕೃತ ಪರ್ಷಿಯಾ, ಹಿಂದೂಸ್ತಾನಿ, ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪರಿಣತನಾಗಿದ್ದ. ಇಷ್ಟು ಚಿಕ್ಕವಯಸ್ಸಿಯನಲ್ಲಿ ಏಳು ಭಾಷೆಗಳು ಇವನಿಗೆ ತಿಳಿದಿತ್ತೆಂಬುದು ಇವನ ಅಸಾಧಾರಣ ಬುದ್ಧಿಶಕ್ತಿಯನ್ನು ತೋರಿಸುತ್ತದೆ.

**ಮೊದಲ ಭಾರತೀಯ ಆಂಗ್ಲ ಬರಹಗಾರ ಹಾಗೂ ಶಾಸನ ತಜ್ಞ**

ಮೆಕೆಂಜಿ ಸಹಚರ್ಯದಲ್ಲಿ ಬೋರಯ್ಯನ ಸಾಧನೆ ಭಾಷಾನುವಾದಗಳನ್ನು ಕಂಡಾಗ ಇವನನ್ನು ಮೊದಲ ಭಾರತೀಯ ಆಂಗ್ಲ ಬರಹಗಾರನೆನ್ನಬಹುದು. ೧೭೯೪ರಲ್ಲಿ ಡೀನ್ ಮಹಮದ್‌ರವರು The Travels of Dean Mohamet ಎಂಬ ಕೃತಿಯ ಆಧಾರದ ಮೇಲೆ ಮೈಕಲ್ ಫಿಷರ್ ಎಂಬುವವರು ಡೀನ್ ಮಹಮದ್ ಭಾರತದ ಮೊದಲನೆಯ ಆಂಗ್ಲ ಗ್ರಂಥಕರ್ತ ಎಂದು ಗುರುತಿಸಿದ್ದಾರೆ. ಆದರೆ ಈ ಫಿಷರ್ ಅವರಿಗೆ ಬೋರಯ್ಯನ ಸಾಧನೆಯ ಬಗ್ಗೆ ತಿಳಿದಿರಲಿಲ್ಲ.

೧೮೦೩ರಲ್ಲಿ ಬೋರಯ್ಯ On the Manner and Customs of the Jain ಎಂಬ ಲೇಖನವನ್ನು ಬರೆದಿದ್ದ. ಅದು ಅವನ ಮರಣವಾದ ೭ ವರ್ಷಗಳನಂತರ Journal of the Royal Asiatic Society Volume V ರಲ್ಲಿ ಮುದ್ರಣಗೊಂಡಿದೆ. ಇದರ ಲೇಖಕ ಬೋರಯ್ಯನೆಂದೂ, ಇವನು ತೆಲುಗು ಕವಿಯೆಂದೂ ಅಲ್ಲಿ ನಮೂದಿಸಲಾಗಿದೆ.

The Political condition of the Carnatic during Moghal time which made its appearance in Dalrymple's oriental Repertory with Mackenzies comment's ಎಂಬುದಾಗಿ ಬರೆದಿದ್ದಾನೆ ಹಾಗೂ ಬೋರಯ್ಯನು ಸಂಗ್ರಹಿಸಿರುವ Athavanavyavaharatantramu – ಇದು ತೆಲುಗಿನಲ್ಲಿ ಬರೆದಿರುವ ಲೇಖನವಾಗಿದೆ – ಈ ಲೇಖನವನ್ನು ಇಂಗ್ಲಿಷ್ ಭಾಷೆಗೆ ಬೋರಯ್ಯ ಅನುವಾದಿಸಿ ಮೆಕೆಂಜಿಯವರಿಗೆ ಉಡುಗೊರೆಯಾಗಿ ಕೊಟ್ಟಿದ್ದಾನೆ. ೧೮೦೨ರಲ್ಲಿ ೧೬–೧೭ನೆಯ ಶತಮಾನದ ವಿಜಯನಗರ ಕಾಲದ ಗ್ರಾಮಾಡಳಿತ, ಕಂದಾಯದ ಸ್ವರೂಪಗಳ ಬಗ್ಗೆ ಹಾಗೂ ಆ ಕಾಲದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಇದು ತಿಳಿಸುತ್ತದೆ. ಮಿಲ್ಸ್‌ನ ಮೆಕೆಂಜಿ ಸಂಗ್ರಹದಲ್ಲಿನ The Historical collection of Mysore and an Account of Srirangapatanam of Mysore country ಎಂಬುದರ ಲೇಖಕರು ಬೋರಯ್ಯ ಎಂದು ಬರೆದಿದ್ದಾರೆ.

ಆದರೆ ಮೆಕೆಂಜಿಗೆ ಸಂಬಂಧಿಸಿದಂತಹ ಯಾವ ಮಾಹಿತಿಯನ್ನು ತೆಗೆದುಕೊಂಡರೂ ಮೆಕೆಂಜಿ ಇಲ್ಲದೆ ಕಾವಲಿ ಸಹೋದರರು ಇಲ್ಲ. ಕಾವಲಿ ಸಹೋದರರಿಲ್ಲದೆ ಮೆಕೆಂಜಿ ಇಲ್ಲ ಎನ್ನುವಷ್ಟರ ಮಟ್ಟಿಗೆ ಮೆಕೆಂಜಿ ಕಾವಲಿ ಅಣ್ಣ ತಮ್ಮಂದಿರ ಸಂಬಂಧವಿತ್ತು.

ಭಾರತದ ಪರ್ಯಾಯ ದ್ವೀಪಗಳಲ್ಲಿ ದೊರೆತ ಕೆಲವು ಶಾಸನಗಳನ್ನು ಬೋರಯ್ಯ ಹೊಸ ಲಿಪಿಗೆ ಅನುವಾದಿಸಿದ್ದಾನೆ ಹಾಗೂ ತೆಲುಗು ಮತ್ತು ಸಂಸ್ಕೃತ ಭಾಷೆಯಲ್ಲಿದ್ದ ಶಾಸನಗಳನ್ನು ಇಂಗ್ಲಿಷ್ ಭಾಷೆಗೆ ಅನುವಾದಿಸಿದ್ದಾನೆ. ಇವೆಲ್ಲವೂ ಕೂಡ ಲಂಡನ್‌ನಲ್ಲಿ ಇರುವ ಇಂಡಿಯನ್ ಆಫೀಸ್‌ನ ಮೆಕಂಜಿ ಸಂಗ್ರಹದಲ್ಲಿ ಇದೆ. ಹಾಗೂ ೧೮೦೧, ೬ನೆಯ ನವೆಂಬರ್‌ನಲ್ಲಿ ಬೋರಯ್ಯ ಸಂಸ್ಕೃತ ತಾಮ್ರಪಟ ಶಾಸನವನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದಾನೆ. ಇದು ವಿಜಯನಗರದ ಇಮ್ಮಡಿ ಹರಿಹರನ ಕ್ರಿ.ಶ. ೧೩೯೫ರ ದಾನಪತ್ರವಾಗಿದೆ. ಇದಲ್ಲದೆ ೧೮೦೨ರಲ್ಲಿ ಸಾಕಷ್ಟು ಶಾಸನಗಳನ್ನು ಇಂಗ್ಲಿಷ್ ಭಾಷೆಗೆ ಅನುವಾದಿಸಿದ್ದಾನೆ. ಕುರುಗೋಡಿನಲ್ಲಿ (ಈಗಿನ ಬಳ್ಳಾರಿ ತಾಲ್ಲೂಕು) ಇದ್ದ ಹಳಗನ್ನಡಕ್ಷರದ ಶಾಸನವನ್ನು ಮೆಕೆಂಜಿಯವರು ಏಷಿಯಾಟಿಕ್ ಸೊಸೈಟಿ ಆಫ್ ಬೆಂಗಾಲ್‌ಗೆ ಕಳುಹಿಸಿದರು. ಈ ಪಾಠವನ್ನು ಅನುವಾದಿಸಿದವನು ಕಾವಲಿ ಬೋರಯ್ಯ. ೧೮೦೧ರಲ್ಲಿ Fort St. George ಸರಕಾರವು ಮೆಕೆಂಜಿಯವರನ್ನು ಮದರಾಸಿಗೆ ಹಿಂತಿರುಗಬೇಕೆಂದು ಆಜ್ಞಾಪಿಸಿತು. ಆಗ ಬೋರಯ್ಯ ಸಹ ಮದರಾಸಿನಲ್ಲಿ ೨ ವರ್ಷಗಳ ಕಾಲ Athavanayanaratantram ಹಾಗೂ ಕೆಲವು ಕೃತಿಗಳನ್ನು ಅನುವಾದಿಸಿದ್ದನು. ಇಂತಹ ಬೋರಯ್ಯ ೭ನೆಯ ಜನವರಿ ೧೮೦೩ರಲ್ಲಿ ಅಕಾಲ ಮರಣಹೊಂದಿದ್ದ. ಬೋರಯ್ಯನ ಬಗ್ಗೆ ಆತನ ತಮ್ಮ ರಾಮಸ್ವಾಮಿ ಹೇಳುವ ಪ್ರಕಾರ 'highly esteemed on account of his sweet temper and unimpeachable character' ಎಂದು There is no wonder that such man won the esteem and affection of colonel Mackenzie.

## ದಕ್ಷಿಣ ಭಾರತದ ಇತಿಹಾಸದ ಬಗ್ಗೆ ಬೋರಯ್ಯನವರ ದೃಷ್ಟಿಕೋನ

ಅವನು ಕರ್ನಾಟಕ ಪ್ರದೇಶದ ಇತಿಹಾಸವನ್ನು ಸ್ಪಷ್ಟವಾಗಿ ರಚಿಸುವುದಕ್ಕೆ, ಸಾಂಸ್ಕೃತಿಕ ಪುನಾರಚನೆಯಲ್ಲಿ ಪುರಾತನ ವಾಸ್ತುಶಾಸ್ತ್ರ, ದೇವಾಲಯ ಮುಂತಾದ ಕಟ್ಟಡಗಳ ಬಳಿ ಇರುವ ಶಾಸನ ನಾಣ್ಯಗಳು ಮತ್ತು ಸಾಹಿತ್ಯದ ದಾಖಲೆಗಳನ್ನು ಬಳಸಿಕೊಳ್ಳಬೇಕೆಂಬ ದೃಷ್ಟಿಯುಳ್ಳವನಾಗಿದ್ದುದನ್ನು ತಿಳಿಯಬಹುದು. ಇದರ ಆಧಾರದಲ್ಲಿ ೨-೧೧-೧೮೦೨ರಲ್ಲಿ ಮೆಕೆಂಜಿಗೆ ಒಂದು ಪ್ರಬಂಧವನ್ನು ಸಲ್ಲಿಸಿದ್ದ. ಅದೇನೆಂದರೆ ೩೫ ಶೀರ್ಷಿಕೆಯನ್ನೊಳಗೊಂಡ ಈ ಪ್ರಬಂಧದಲ್ಲಿ ದಕ್ಷಿಣ ಭಾರತವನ್ನು ಮುಖ್ಯವಾಗಿ ಕರ್ನಾಟಿಕ್ ಎಂದು ಗುರುತಿಸುವ ಪ್ರದೇಶದ ವಿವರಗಳಿದ್ದವು. ಈ ಪ್ರಬಂಧದಲ್ಲಿ ಬೋರಯ್ಯ ದಕ್ಷಿಣ ಭಾರತವನ್ನಾಳಿದ ರಾಜರ ಇತಿಹಾಸವನ್ನು ಕಲಿಯುಗದಿಂದ ಆರಂಭಿಸಬೇಕೆಂದು ತಿಳಿಸಿದ್ದ. ಈ ಇತಿಹಾಸ ಸಮಕಾಲೀನನಾಗಿದ್ದ ಟಿಪ್ಪು ಸುಲ್ತಾನನ ಪತನದ ನಂತರ ಬ್ರಿಟಿಷರು ಈ ಪ್ರದೇಶವನ್ನು ಆಳುವವರೆಗೆ ರಚಿಸಲು ಸೂಚಿಸಿದ್ದ. ಬರೀ ರಾಜಕೀಯ ಇತಿಹಾಸವಲ್ಲದೆ, ಸಾಮಾಜಿಕ, ಧಾರ್ಮಿಕ ಸಾಂಸ್ಕೃತಿಕ ಮತ್ತು ಆರ್ಥಿಕ ವಿವರಗಳನ್ನು ವಿವರಿಸಲು ತಿಳಿಸಿದ್ದ. ಧರ್ಮದ ವಿವರಣೆಯಲ್ಲದೆ ಜನರ ವಿಶಿಷ್ಟ ಆಚರಣೆಗಳನ್ನು ದಾಖಲಿಸಬೇಕೆಂದಿದ್ದ. ಕರ್ನಾಟಕ ಪ್ರದೇಶದ ವಿಭಾಗಗಳು ನಗರಗಳು, ಕಟ್ಟಳೆಗಳು, ಭಾಷೆ-ಸಾಹಿತ್ಯ, ಶಾಸನ, ಕಟ್ಟಡಗಳ ವಿವರಗಳನ್ನು ವಿವರಿಸಬೇಕೆಂದಿದ್ದ. ಆದರೆ ಬೋರಯ್ಯನ ಅನಾರೋಗ್ಯದ ಕಾರಣದಿಂದ ಇದನ್ನು ಸಾಧಿಸಲು ಸಾಧ್ಯವಾಗಲಿಲ್ಲ. ಮುಂದಿನ ವರ್ಷ ಅಂದರೆ ೧೮೦೩ರಲ್ಲಿ ಈತ ಮೃತನಾದ ಆದರೂ ಇವನ ಟಿಪ್ಪಣಿ ಇತ್ಯಾದಿಗಳ ಆಧಾರದ ಮೇಲೆ Political events in the Carnatic from 1564-1687 ಎಂಬ ವಿಸ್ತೃತ ಪ್ರಬಂಧ 'ಜರ್ನಲ್ ಆಫ್ ದಿ ಏಷಿಯಾಟಿಕ್ ಸೊಸೈಟಿ ಆಫ್ ಬೆಂಗಾಲ್' XIII 1844 ಪು.೪೨೧-೪೬೩ ಮತ್ತು ೫೭೮-೬೯೯ರಲ್ಲಿ ಪ್ರಕಟವಾಯಿತು.

ಇದಲ್ಲದೆ ಕಲಿಯುಗದಿಂದ ಆರಂಭಿಸಿ ತಾಳಿಕೋಟೆ ಅಥವಾ ರಕ್ಕಸತಂಗಡಿವರೆಗೆ ಇತಿಹಾಸ ಹೇಳುವ ವಿವರವುಳ್ಳ The Historical collections of the Mysore ಎಂಬ ಪ್ರಬಂಧ ಬರೆದ. ೧೮೦೩ರಲ್ಲಿ ಕಮಲಾಪುರ ಮತ್ತು ಆನೆಗೊಂದಿ ಗ್ರಾಮಗಳ ಜನರಿಂದ ಪಡೆದ ವಿವಿಧ ಮಾಹಿತಿ ಆಧಾರದ ಮೇಲೆ A History of the Kings of Beejanagar and Anegondy ಎಂಬ ಪ್ರಬಂಧ ರಚಿಸಿದ. ಇದರಲ್ಲಿ ೩ನೆಯ ವೆಂಕಟಪತಿರಾಯನ ವಶದಲ್ಲಿದ್ದ ಬಹಳಷ್ಟು ಭಾಗವನ್ನು ಔರಂಗಜೇಬನು ಗೆದ್ದ ಬಗ್ಗೆ ಹೇಳಿದ್ದಾನೆ. ೧೮೦೦-೧೮೦೧ರಲ್ಲಿ ಶ್ರವಣಬೆಳಗೊಳದ ಜೈನ ಸಮಾಜದವರೊಂದಿಗೆ ನಡೆಸಿದ ಪ್ರಶ್ನಾವಳಿ ಮತ್ತು ಪಡೆದ ಉತ್ತರಗಳನ್ನು ಆಧಾರವಾಗಿಟ್ಟುಕೊಂಡು ಮೆಕೆಂಜಿಯೊಡನೆ ಸೇರಿ ಶ್ರವಣಬೆಳಗೊಳದ ವಿವರಗಳನ್ನು ಬರೆದ.

## ಬೋರಯ್ಯನವರ ಪ್ರಮುಖ ಲೇಖನಗಳು

ಮೆಕೆಂಜಿಯ ಮೈಸೂರು ಪ್ರಾಂತ್ಯದ ಮೋಜಣಿ ಮಾಡುವ ಕಾಲದಲ್ಲಿ ಅಂದರೆ (೧೮೦೦-೧೮೦೪) ಬೋರಯ್ಯ ಮೆಕೆಂಜಿಗೆ ಸ್ಥಳೀಯ ವಿಶ್ಲೇಷಣಕಾರನಾಗಿ, ವಿಷಯ ಸಂಗ್ರಹಕಾರನಾಗಿ ಕೆಲಸ ಮಾಡಿದ ಈ ಅವಧಿಯಲ್ಲಿ ಈತ ಅನೇಕ ಕೈಫಿಯತ್ತುಗಳನ್ನು ಸಂಗ್ರಹಿಸಿದನಲ್ಲದೆ ಕೆಲವನ್ನು ಸ್ಥಳೀಯರು ನೀಡಿದ ಮಾಹಿತಿಯನ್ನಾಧರಿಸಿ ತಾನೇ ರಚಿಸಿದ್ದಾನೆ. ಹೀಗೆ ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ಕನ್ನಡ, ತೆಲುಗು, ಮರಾಠಿಯವೂ ಸೇರಿರುತ್ತವೆ. ಕೆಲವು ಕೈಫಿಯತ್ತುಗಳನ್ನು ಸ್ಥಳೀಯ ಚರಿತ್ರೆಯಲ್ಲಿ ರಚಿಸಿದ್ದಾನೆ. ಸಂಗ್ರಹಿಸಿದ ಕೆಲವು ಪ್ರಮುಖ ಕೈಫಿಯತ್ತುಗಳನ್ನು ಇಂಗ್ಲಿಷಿಗೆ ಅನುವಾದಿಸಿದ್ದಾನೆ. ಕೆಲವನ್ನು ಮರಾಠಿಯಿಂದ ಕನ್ನಡಕ್ಕೆ, ಕನ್ನಡದಿಂದ ಇಂಗ್ಲಿಷ್‌ಗೆ, ತೆಲುಗಿನಿಂದ ಇಂಗ್ಲಿಷಿಗೆ ಅನುವಾದಿಸಿದ್ದಾನೆ. ಈತ ಕೆಲವು ಪಂಗಡಗಳ ಕುಲಾಚಾರಗಳ ಬಗ್ಗೆಯೂ ಬರೆದಿದ್ದಾನೆ.

## ಮರಾಠಿಯಿಂದ ಇಂಗ್ಲಿಷ್‌ಗೆ ಅನುವಾದ ಮಾಡಿದ ಮುಖ್ಯ ಲೇಖನಗಳು

೧. Historical Account of the Establishment of Europeans at Madras.

೨. Account of Gutti fort (1801 A.D).

೩. Ramaraje Charita based on Kannada work or Ramaraja Charita and Ramaraja Bakhari in Marathi.

೪. Hyderally Charita (its in Marathi verse) 1803 A.D.

### ತೆಲುಗಿನಿಂದ ಇಂಗ್ಲಿಷ್‌ಗೆ

ನರಪತಿ ವಿಜಯಮು (ಮೈಸೂರು ದೇಶದ ಅರಸರ ಇತಿಹಾಸ) ೧೮೦೦ A.D ಬೋರಯ್ಯ ಸಂಗ್ರಹಿಸಿದ ಪ್ರಮುಖ ಕೈಫಿಯತ್ತುಗಳು ಮತ್ತು ಇಂಗ್ಲಿಷ್‌ಗೆ ಅನುವಾದಿಸಿದವುಗಳು:

೧. An Account of Bellary (1800 A.D).

೨. An Account of Savanur (1800 A.D).

೩. An Account of Madhwaguru (1801 A.D).

೪. Memoirs of the District of Herial in ceded Districts (1801).

೫. Narrative of Secular Affairs 1801.

### ಶಿಲ್ಪಶಾಸ್ತ್ರದ ಲೇಖನಗಳು

೧. Iconographical features of Vishnu images with special reference.

೨. An illustrated article on the sculptures in the temple of Lingod Bhavesvara in Chandolu (ಇಂಗ್ಲಿಷ್ ಮತ್ತು ತೆಲುಗಿನಲ್ಲಿ).

೩. Manners and customs of the Jains (1803) Paper on Basavesvara (1802 A.D).
So many Sthalamahatmyams on Kanchi Sandur, Sriranga, *etc*.

೧. A memoir on the Hill tribes of the Northern Circars (1797) A.D An Account of the Boyarwar on Bedar tribe in the Mysore State.

ಬೋರಯ್ಯನವರ ಸಾವು ಅಕಾಲ ಹಾಗೂ ಅನಿರೀಕ್ಷಿತ ಹೀಗಾಗಿ ಕೆಲವು ಲೇಖನಗಳನ್ನು ಈತ ಅಪೂರ್ಣ ಮಾಡಿದ್ದ ಅವನ್ನು ಇವನ ತಮ್ಮ ಕಾವಲಿ ವೆಂಕಟ ಲಕ್ಷ್ಮಯ್ಯ ಪೂರ್ಣ ಮಾಡಿ ಪ್ರಕಟಿಸಿದ್ದಾನೆ. ಹೀಗೆ ಮೆಕೆಂಜಿಯ ಸಂಗ್ರಹದ ಹಿರಿಯ ಶಕ್ತಿ ಇವರಾಗಿದ್ದರು. ಬಹು ಚಿಕ್ಕ ವಯಸ್ಸಿನಲ್ಲಿನ ಈತನ ಬೃಹತ್ ಸಾಧನೆ ಅಚ್ಚರಿ ಮೂಡಿಸುವುದಾಗಿದೆ.

### ಆಧಾರ ಸೂಚಿ

೧. *The Kavali brothers Col. Colin Machenzie and the reconstruction of South Indian History and Cultural Resurgence in South India.*

೨. **ಸಮಗ್ರ ಆಂಧ್ರ ಸಾಹಿತ್ಯಂ.**

೩. **ಹೊಸಗನ್ನಡದ ಅರುಣೋದಯ – ಶ್ರೀನಿವಾಸ ಹಾವನೂರ.**



# ಕರ್ನಾಟಕದ ಕೈಫಿಯತ್ತುಗಳ ವೈಶಿಷ್ಟ್ಯಗಳು

– ಡಾ|| ಬಿ.ಎಸ್. ಪುಟ್ಟಸ್ವಾಮಿ*

ಕ್ರಿ.ಶ. ೧೭೮೩ರಲ್ಲಿ ಭಾರತಕ್ಕೆ ಬ್ರಿಟೀಷ್ ಸೇನೆಯಲ್ಲಿ ಇಂಜಿನಿಯರ್ ಆಗಿ ಬಂದ ಕರ್ನಲ್ ಮೆಕೆಂರ್ಝಿ ಭಾರತಕ್ಕೆ ಸಂಬಂಧಿಸಿದ ಪುರಾತನವಾದುದೆಲ್ಲವನ್ನೂ ಸಂಗ್ರಹಿಸತೊಡಗಿದ. ಆತನ ಸಂಗ್ರಹ ಅತ್ಯಮೂಲ್ಯವೂ ಹಾಗೂ ಅತ್ಯುಪಯುಕ್ತವೂ ಆಗಿದೆ. ಆ ಸಂಗ್ರಹದಲ್ಲಿ ಕೈಫಿಯತ್ತುಗಳೂ ಸೇರಿವೆ. ಕೈಫಿಯತ್ ಎನ್ನುವುದು ಅರೇಬಿಕ್ ಪದ. ಕನ್ನಡದಲ್ಲಿ ಕೈಫಿಯತ್ ಎಂದರೆ ಸ್ಥಳಪುರಾಣ, ಐತಿಹ್ಯ, ಜಾನಪದ ಮತ್ತು ಇತಿಹಾಸ ಅಂಶಗಳನ್ನು ಒಳಗೊಂಡಂತಹ ದಾಖಲೆ ಎನ್ನಬಹುದು.

ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯಲ್ಲಿ ಅಧಿಕಾರಿಯಾಗಿದ್ದ ಕರ್ನಲ್ ಮೆಕೆಂರ್ಝಿ ೧೮೦೦ರಿಂದ ೧೮೨೧ರ ಅವಧಿಯಲ್ಲಿ ತಾನು ಸಂದರ್ಶಿಸಿದ ಸ್ಥಳಗಳಲ್ಲಿ ವಾಸಿಸುತ್ತಿದ್ದ ಸ್ಥಳೀಯರಿಂದ ಈ ಕೈಫಿಯತ್ತುಗಳನ್ನು ಬರೆಸಿದನು. ಈ ಕೈಫಿಯತ್ತುಗಳು ಒಂದರ್ಥದಲ್ಲಿ ಸ್ಥಳ ಪುರಾಣಗಳೆನಿಸಿವೆ. ಪ್ರಾಚೀನ, ಮಧ್ಯಕಾಲೀನ ಹಾಗೂ ಸಮಕಾಲೀನ ಭೌಗೋಳಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಮೊದಲಾದ ಕ್ಷೇತ್ರಗಳ ಬಗ್ಗೆ ಅನೇಕ ವಿವರಗಳನ್ನು ಈ ಕೈಫಿಯತ್ತುಗಳು ಒದಗಿಸುತ್ತವೆ.

ಆ ಮೂಲಕ ವಸಾಹತುಶಾಹಿ ಆಳ್ವಿಕೆಗೆ ಅಗತ್ಯವಾದ ಸ್ಥಳೀಯ ಜ್ಞಾನದ ಕಿಟಕಿಯನ್ನು ಈತ ತೆರೆಯುತ್ತಾನೆ. ಹಸ್ತಪ್ರತಿಗಳ ರೂಪದಲ್ಲಿದ್ದ ಕೈಫಿಯತ್ತುಗಳನ್ನು ಸಂಪಾದಿಸಿ ಅವುಗಳನ್ನು ಪ್ರಕಟಿಸಿದವರಲ್ಲಿ ಪ್ರಸಿದ್ಧರಾದವರೆಂದರೆ ಎಂ.ಹೆಚ್. ಕೃಷ್ಣ, ತಿ.ತಾ. ಶರ್ಮ, ಬೆನಗಲ್ ರಾಮರಾವ್, ಹುಲ್ಲೂರು ಶ್ರೀನಿವಾಸ ಜೋಯಿಸ್ ಮತ್ತು ಎಂ.ಎಂ. ಕಲಬುರ್ಗಿಯವರು. ಇವರೆಲ್ಲಾ ಕೈಫಿಯತ್ತುಗಳ ಮೂಲಕ ಚರಿತ್ರೆಯನ್ನು ಭಿನ್ನವಾಗಿ ಸಂಶೋಧನೆ ಮಾಡಬಹುದೆಂಬ ಆಶಯ ಹೊಂದಿದ್ದವರಾಗಿದ್ದರು. ಹೀಗೆ ಇತಿಹಾಸ ಸಂಶೋಧಕರಿಗೆ ಅವರೆಲ್ಲಾ ನೆರವಾಗಿದ್ದಾರೆ. ನಿರ್ಲಕ್ಷ್ಯಕ್ಕೆ ಒಳಗಾದ ಕೈಫಿಯತ್ತಿನ ಮಾಹಿತಿಯನ್ನು ನಿಜವಾದ ಚಾರಿತ್ರಿಕ ಸಾಮಗ್ರಿಯನ್ನಾಗಿ ಬಳಸಬಹುದೆಂದು ಸ್ಪಷ್ಟವಾಗಿ ಹೇಳಬಹುದು.

ವಸಾಹತುಶಾಹಿಯು ರಾಜಕೀಯ ಮತ್ತು ಆರ್ಥಿಕವಾಗಿ ಸಂಪೂರ್ಣ ನಿಯಂತ್ರಣವನ್ನು ಸಾಧಿಸುವ ಪ್ರಕ್ರಿಯೆಯಲ್ಲಿರುವಾಗಲೇ ಕನ್ನಡ ಸಾಹಿತ್ಯದಲ್ಲಿ, ಕರ್ನಾಟಕ ಚರಿತ್ರೆಯಲ್ಲಿ ಬಹಳಷ್ಟು ಖ್ಯಾತಿ ಪಡೆದಿರುವ ಕರ್ನಲ್ ಮೆಕೆಂರ್ಝಿ ದಕ್ಷಿಣ ಭಾರತದಲ್ಲಿ ಕಾಣಿಸಿಕೊಳ್ಳುವುದು ಗಮನಾರ್ಹ. ಈತ ಇಂಜಿನಿಯರ್ ಪದವೀಧರನಾಗಿದ್ದು ೧೭೮೩ರಲ್ಲಿ ಪ್ರದೇಶ ವೀಕ್ಷಣಾಧಿಕಾರಿಯಾಗಿ ಮದ್ರಾಸ್ ಪ್ರಾಂತ್ಯದಲ್ಲಿ ಸೇರಿಕೊಳ್ಳುತ್ತಾನೆ. ಇಲ್ಲಿನ ಪ್ರದೇಶಗಳ ಸರ್ವೇ ಮತ್ತು ನಕಾಶೆಗಳು ಯುದ್ಧ ತಂತ್ರವನ್ನು ರೂಪಿಸಲು ಬ್ರಿಟೀಷರಿಗೆ ಅಗತ್ಯವಾಗಿ ಬೇಕಾಗಿದ್ದವು.

ಆತನ ಮೊದಲ ಜವಾಬ್ದಾರಿಯೇ ಶ್ರೀರಂಗಪಟ್ಟಣದ ಕಡೆ ಬ್ರಿಟೀಷ್ ಸೈನ್ಯದೊಡನೆ ಸಾಗಿ, ಅಲ್ಲಿನ ಪ್ರದೇಶ ಸಮೀಕ್ಷೆ ಮತ್ತು ಟಿಪ್ಪುವಿನ ವಿರುದ್ಧ ಜನಾಭಿಪ್ರಾಯವನ್ನು ಸಂಗ್ರಹಿಸುವುದೇ ಆಗಿತ್ತು. ಅದಕ್ಕಾಗಿ ಆತ ಆ ಪ್ರದೇಶಕ್ಕೆ ಬರುತ್ತಾನೆ. ಟಿಪ್ಪುವಿನಿಂದ ಮೈಸೂರನ್ನು ಪಡೆದಾಕ್ಷಣ ಆತ ಅಲ್ಲಿ ಸರ್ವೇಯರ್ ಆಗುತ್ತಾನೆ. ಈಸ್ಟ್ ಇಂಡಿಯಾ ಕಂಪನಿಯ ಅತ್ಯುತ್ತಮ ವ್ಯಕ್ತಿಯಾಗಿ ಕೊನೆಗೆ ಬ್ರಿಟೀಷ್ ಇಂಡಿಯಾದ ಸರ್ವೇಯರ್ ಜನರಲ್ ಆಗಿ ನಿವೃತ್ತಿ ಹೊಂದುತ್ತಾನೆ. ವಸಾಹತುಶಾಹಿ ನೆಲೆಯಾದೆಡೆಯಲ್ಲೆಲ್ಲಾ ಸುತ್ತಿ, ಕೇವಲ ಆ ಪ್ರದೇಶಗಳ ನಕಾಶೆಯನ್ನಷ್ಟೇ ತಯಾರಿಸದೆ, ಅಲ್ಲಿ ದೊರೆಯುವ ಸ್ಥಳನಾಮ, ಪುರಾಣ, ಚರಿತ್ರೆಗಳನ್ನು ಜನರ ಆಚಾರ ನಂಬಿಕೆಗಳ ಬಗ್ಗೆ ಸ್ಥಳೀಯರ ಮೂಲಕ ಚಾಚೂ ತಪ್ಪದೆ ಮಾಹಿತಿಗಳನ್ನು ಸಂಗ್ರಹಿಸಲಾರಂಭಿಸುತ್ತಾನೆ.

---

* ಉಪನ್ಯಾಸಕರು, ಇತಿಹಾಸ ವಿಭಾಗ, ವಿ.ವಿ.ಪುರಂ ಕಲಾ ಮತ್ತು ವಾಣಿಜ್ಯ ಕಾಲೇಜು, ಬೆಂಗಳೂರು –೫೬೦೦೦೪.

ಮೆಕೆಂಝಿಯೇನೂ ಮಹಾನ್ ವಿದ್ವಾಂಸನೆಂದು ಅರ್ಥೈಸಬೇಕಿಲ್ಲ. ಈತ ಜನರನ್ನು ಬಳಸಿಕೊಳ್ಳುವುದರಲ್ಲಿ ಪಳಗಿದವನು. ಈತನ ಸಂಗ್ರಹಕಾರ್ಯದಲ್ಲಿ ನೆರವಾದ ಸ್ಥಳೀಯರೆಂದರೆ ಕಾವಲಿ ಬೋರಯ್ಯ, ಕಾವಲಿ ಲಕ್ಷ್ಮಯ್ಯ, ಹುಲಿಗುಡ್ಡ ಲಕ್ಷ್ಮಯ್ಯ ಮುಂತಾದವರು. ಕನ್ನಡವನ್ನು ಬಹಳ ತೀವ್ರವಾಗಿ ಸಂಘಟಿಸಿ ಅದರ ದೇಶೀರೂಪವನ್ನು ಆತ ಕಟ್ಟುತ್ತಾ ಸಾಗುತ್ತಾನೆ. 'ಕೈಫಿಯತ್ತು ಒಳಗೊಂಡಂತೆ ಈ ಬಗೆಯ ಆಕರ ಸಾಮಗ್ರಿಯನ್ನು ಬರೆಯಿಸಿದ, ಸಂಗ್ರಹಿಸಿದ ವಿದ್ವಾಂಸ ವ್ಯಕ್ತಿಗಳಲ್ಲಿ ಕರ್ನಲ್ ಮೆಕೆಂಝಿ ಕರ್ನಾಟಕದಲ್ಲಿ ಪ್ರಥಮನೆನಿಸಿದ್ದಾನೆ, ಪ್ರಮುಖನೆನಿಸಿದ್ದಾನೆ' ಎಂಬ ಎಂ.ಎಂ. ಕಲಬುರ್ಗಿಯವರ ಮಾತುಗಳು, ಪರೋಕ್ಷವಾಗಿ ಕರ್ನಾಟಕವನ್ನು ವಸಾಹತುಶಾಹಿ ಎಷ್ಟರ ಮಟ್ಟಿಗೆ ಪ್ರಭಾವಿಸಿತ್ತು ಎನ್ನುವುದನ್ನು ಸೂಚಿಸುತ್ತವೆ. ಅಂಥ ಪ್ರಭಾವವನ್ನು ಮೆಕೆಂಝಿ ಅಚ್ಚರಿ ಎಂಬಂತೆ ಮಾಡುತ್ತಾನೆ. ಈತ ೧೫೦೦೦ ಪೌಂಡ್ ಸ್ವಂತ ಹಣವನ್ನು ಖರ್ಚು ಮಾಡಿ ಸಂಗ್ರಹಿಸಿದ ವಿವರಗಳು ಹೀಗಿವೆ : ೧೫೬೮ ಹಸ್ತಪ್ರತಿಗಳು, ೨೦೭೦ ಕೈಫಿಯತ್ತುಗಳು, ೮೦೭೦ ಶಾಸನ ನಕಲುಗಳು, ೭೯ ನಕ್ಷೆಗಳು, ೨೬೩೦ ಚಿತ್ರಗಳು, ೬೨೧೮ ನಾಣ್ಯಗಳು, ೧೦೬ ಪ್ರಾಚೀನ ವಿಗ್ರಹಗಳು. ಹೀಗೆ ಮೆಕೆಂಝಿಯ ಸಂಗ್ರಹ ಕಾರ್ಯ ಊಹೆಗೂ ಮೀರಿ ಬೆಳೆದು, ಕೊನೆಗೆ ಆ ಸಂಗ್ರಹ ಇಂಗ್ಲೆಂಡ್‌ನ ವಸ್ತು ಸಂಗ್ರಹಾಲಯ, ಮದ್ರಾಸಿನ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿ ಮುಂತಾದ ಕಡೆ ಸೇರುತ್ತವೆ.

ಕೈಫಿಯತ್ತುಗಳ ಮೂಲಕ ಕನ್ನಡ ನಾಡಿನ ಚರಿತ್ರೆಯನ್ನು ಸರಳ-ರೇಖಾತ್ಮಕ ಕಾಲಗತಿಯಲ್ಲಿ ಕಟ್ಟಿಕೊಡುವ ಹಾದಿಯನ್ನು ಮೆಕೆಂಝಿ ಸುಗಮಗೊಳಿಸುತ್ತಾನೆ. ಮೆಕೆಂಝಿ ಇಂಥ ಸೂಕ್ಷ್ಮಗಳತ್ತ ಏಕೆ ಗಮನಹರಿಸಿದ? ಬಹುಶಃ ಆತನ ಹಿನ್ನೆಲೆಯೇ ಇದಕ್ಕೆ ಕಾರಣವಿರಬಹುದು. ಆತನ ಬದುಕಿನ ಲೋಕ ಬ್ರಿಟೀಷರ ಅನುಭವ ಲೋಕಕ್ಕಿಂತ ಭಿನ್ನವಾದುದ್ದಾಗಿತ್ತು.

ಆದ್ದರಿಂದ ಮೆಕೆಂಝಿ ತನ್ನ ಲೋಕವನ್ನು ಅರ್ಥೈಸಿಕೊಳ್ಳಲು ತನ್ನ ವ್ಯಕ್ತಿ ವೈಶಿಷ್ಟ್ಯವನ್ನು ಕಾಯ್ದುಕೊಂಡಿದ್ದನೇನೋ ಅನಿಸುತ್ತದೆ. ಕರ್ನಲ್ ಮೆಕೆಂಝಿ ಸೈನ್ಯದ ಚಲನೆಗಾಗಿ ಭೂ ಸ್ವರೂಪವನ್ನು ಶೋಧಿಸುವ ಅಧಿಕಾರಿಯಾಗಿದ್ದ ಎಂಬುದನ್ನು ಗಮನಿಸಿದ್ದೇವೆ. ಆದ್ದರಿಂದ ಆ ದೇಶದ ಬಯಲು ಪ್ರದೇಶ, ಗುಡ್ಡಗಾಡು, ಅರಣ್ಯ, ನದಿ, ಹಳ್ಳ, ಬೆಳೆ, ಕೈಗಾರಿಕಾ ಉತ್ಪಾದನೆ, ವಾಣಿಜ್ಯ ಸ್ವರೂಪ ಇತ್ಯಾದಿಗಳ ವಿವರ ಸಂಗ್ರಹಿಸುವುದು ಆತನ ಮುಖ್ಯ ಉದ್ದೇಶವಾಗಿತ್ತು. ಈ ಕಾರಣದಿಂದಾಗಿ ಆಯಾ ಕೈಫಿಯತ್ತುಗಳಲ್ಲಿ ಅಲ್ಲಿಯ ಭೂಸ್ವರೂಪ, ಗುಡ್ಡ-ಬೆಟ್ಟ, ಹಳ್ಳಿ, ನದಿಗಳ ಹೆಸರುಗಳನ್ನು ಅವುಗಳ ವಿಷಯವಾಗಿ ಜನತೆಗೆ ಇದ್ದ ನಂಬಿಕೆ - ಹೇಳಿಕೆಗಳನ್ನು ಅವನು ತುಂಬಾ ವಿವರವಾಗಿಯೇ ಸಂಗ್ರಹಿಸಿದ್ದಾನೆ. ಈ ಮಾತುಗಳ ಹಿಂದಿನ ತಾತ್ವಿಕ ನೆಲೆಯನ್ನು ಗುರುತಿಸುವುದಾದರೆ ಇಲ್ಲಿ ಎಲ್ಲವೂ ಪರಿವೀಕ್ಷಣೆಗೆ ಒಳಗಾಗಿ ಅನಂತರ ದಾಖಲಾಗುತ್ತವೆ. ಹೀಗೆ ದಾಖಲಾದದ್ದು, ಮಾಹಿತಿ/ಆಕರ ಸಾಮಗ್ರಿಯಾಗಿ ವಸಾಹತನ್ನು ಪಳಗಿಸುವ ಜ್ಞಾನವಾಗಿ ಮಾರ್ಪಡುತ್ತದೆ. ಈ ಜ್ಞಾನ ಮೀಮಾಂಸೆಯ ಪ್ರಯೋಗಶಾಲೆಯು ಈಸ್ಟ್ ಇಂಡಿಯಾ ಕಂಪನಿಯಾಗುತ್ತದೆ.

ಅದನ್ನು ನಿರ್ವಹಿಸುವವರು ಸ್ಥಳೀಯ ಅಕ್ಷರ ಕಲಿತ ದ್ವಿ-ಭಾಷಿಗಳು. ಇವರೊಡನೆ ಓರಿಯಂಟಲಿಸ್ಟ್ ವಿದ್ವಾಂಸರೂ ಸೇರುತ್ತಾರೆ. ಹೀಗಿರುವಾಗಲೂ ಮೆಕೆಂಝಿ ಸಂಗ್ರಹಿಸಿದ ಚಾರಿತ್ರಿಕ ಸಾಮಗ್ರಿಗಳು ಆತನಿಂದಾಗಲಿ ಅಥವಾ ಇತರರಿಂದಾಗಲಿ ಯಾವುದೇ ರೀತಿಯ ವಿಶ್ಲೇಷಣೆಗೆ ಒಳಗಾಗುವುದಿಲ್ಲ. ಈ ಕೆಲಸದಲ್ಲಿ ಕಾವಲಿ ಬೋರಯ್ಯ, ಈತನ ತಮ್ಮ ಲಕ್ಷ್ಮಯ್ಯ ಮತ್ತು ಪುಲಗಡ್ಡ ಮಲ್ಲಯ್ಯ ಮೊದಲಾದ ಸ್ಥಳೀಯ ವಿದ್ವಾಂಸರು ಈತನಿಗೆ ನೆರವಾದರು. ಇಲ್ಲಿ ಒಂದು ಸೂಕ್ಷ್ಮವಿದೆ - ವಸಾಹತುಶಾಹಿ ಆಳ್ವಿಕೆ ಎನ್ನುವುದು ತನ್ನೊಳಗೇ ಬಲಶಾಲಿಯಾಗಿತ್ತು ಎನ್ನುವ ಸತ್ಯವನ್ನು ಅನೇಕರು ಕಟ್ಟಿಕೊಟ್ಟಿದ್ದಾರೆ. ಆದರೆ ಮೇಲಿನ ವಿವರಗಳು ಅಂತಹ ಸಿದ್ಧ ಮಾದರಿ ಸತ್ಯವನ್ನು ಒಡೆಯುತ್ತವೆ. ಕಾರಣ ಸ್ಥಳೀಯ ಜ್ಞಾನದ ನೆರವಿಲ್ಲದ ವಸಾಹತುಶಾಹಿ ತನ್ನನ್ನು ಸ್ಥಾಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಆದ್ದರಿಂದ ಸ್ಥಳೀಯರ ಬಗ್ಗೆ ವಸಾಹತುಶಾಹಿಗೆ ಅಗತ್ಯವಾದ ಮಾಹಿತಿಯನ್ನು ಈ ಕೈಫಿಯತ್ತುಗಳು ಒದಗಿಸಿದವು ಎಂದರೆ ತಪ್ಪಾಗುವುದಿಲ್ಲ. ಆದ್ದರಿಂದ ಕೈಫಿಯತ್ತುಗಳು ಅನೇಕ ಅರ್ಥಗಳನ್ನು ಹೊರಡಿಸುವ ಮೂಲಗಳೂ ಹೌದು.

ಟಿಪ್ಪುವಿನ ಮರಣಾನಂತರ (೧೭೯೯) ಮೆಕೆಂಝಿ ಕರ್ನಾಟಕ ಭೂಪರಿವೀಕ್ಷಣಾ ಕಾರ್ಯ ಕೈಗೊಂಡು ೧೮೧೧ರಲ್ಲಿ ಜಾವಾಕ್ಕೆ ಹೋಗುವವರೆಗೆ ಬಹುಪಾಲು ಕೈಫಿಯತ್ತುಗಳನ್ನು, ಮೊದಲು ಸೂಚಿಸಿದ ಸ್ಥಳೀಯ ವಿದ್ವಾಂಸರಿಂದ ಹಾಗೂ

ಇತರರಿಂದಲೂ ಬರೆಯಿಸಿಕೊಂಡ, ಕೆಲವೆಡೆ 'ಕುಂಪಣಿ ಸರಕಾರಕ್ಕೆ ಬರೆಸಿ ಕೊಟ್ಟ ಕೈಫಿಯತ್ತು ನಾಮೆ' (ಕಂಬಕಾನಿ ಸ್ಥಳದ ಕುಂಬೇಶ್ವರನ ಕೈಫಿಯತ್ತು) ವಾಕ್ಯಗಳು ಬರುವುದರಿಂದ ಇವು ಸರಕಾರಿ ದಾಖಲೆಗಳಾಗಿ ರೂಪುಗೊಂಡಿವೆಯೆಂಬುದು ಸ್ಪಷ್ಟವಾಗುವುದು. 'ಮಳಿಗೆ ಹೆಬ್ಬಾರ ಅನಂತಯ್ಯನ ರುಜು, ಸುಬ್ಬಯ್ಯನ ರುಜು' (ಪೆಡೂರು ಮಾಗಣ ದೇವಾಲಯದ ಕೈಫಿಯತ್ತು) ಎಂಬ ಹೇಳಿಕೆಗಳು ಕೈಫಿಯತ್ತುಗಳ ಅಧಿಕೃತತೆಗೆ ಸಾಕ್ಷಿ. 'ಈ ಕೈಫಿಯತ್ತು ಬರ್ಸಿದವ ಶ್ರೀ ಕೃಷ್ಣಯ್ಯಗೌಡ ಶಾ॥ ವೆಂಕಟಪತಯ್ಯ ಗುಮಾಸ್ತೆ....... ಕವ್ಯ ಅರವತ್ತು ವರುಷದವ' (ತಾಲೂಕು ಕಂಪಲಿ ಕೈಫಿಯತ್ತು) ಹೀಗೆ ವಯಸ್ಸನ್ನು ಹೇಳುವ ವಾಕ್ಯಗಳೂ ಇವುಗಳ ಅಧಿಕೃತತೆಯನ್ನು ದೃಢಪಡಿಸುತ್ತವೆ.

ಕೈಫಿಯತ್ತುಗಳ ಅಧ್ಯಯನವು ವರ್ತಮಾನದ ರಾಜಕೀಯ ಚರಿತ್ರೆಯ ದೃಷ್ಟಿಯಿಂದಲೂ ವಿಶಿಷ್ಟವಾಗಿದೆ. ಇದನ್ನು ಸಮರ್ಥಿಸಲು ಕೆಲವು ಕಾರಣಗಳನ್ನು ನೀಡಬಹುದು. ಇಲ್ಲಿಯವರೆಗೆ ಆಧುನಿಕ ಪೂರ್ವ ಕಾಲದ ಕರ್ನಾಟಕದ ರಾಜಕೀಯ ಚರಿತ್ರೆಯನ್ನು ಹೆಚ್ಚಾಗಿ ಸಾಹಿತ್ಯ ಮತ್ತು ಶಾಸನಗಳನ್ನವಲಂಬಿಸಿ ರಚಿಸಲಾಗಿದೆ. ಆದರೆ ಈಗಾಗಲೇ ನಿರೂಪಿತವಾಗಿರುವಂತೆ ಶಾಸನಗಳೆಂದರೆ ರಾಜನ ರಾಜ್ಯ ವಿಸ್ತಾರದಲ್ಲಿ ನೆರವಾದವರಿಗೆ ದಾನ ಮಾಡಿದ ವಿವರಗಳು ಮಾತ್ರ ಇವೆಯೇ ಹೊರತು ಮತ್ತೇನೂ ಇಲ್ಲ. ಆದ್ದರಿಂದ ರಾಜರ ಆಸ್ಥಾನಗಳಲ್ಲಿ ರಚಿಸಲ್ಪಟ್ಟ ಸಾಹಿತ್ಯ ಕೃತಿಗಳು ನಾಡಿನ ರಾಜಕೀಯ ಚರಿತ್ರೆಯನ್ನು ಅರಿತುಕೊಳ್ಳುವ ದಿಸೆಯಲ್ಲಿ ಹೆಚ್ಚು ಸಹಾಯಕವೆಂದು ಭಾವಿಸಿದ್ದು ಸರಿಯಾದುದಲ್ಲ. ಇದರಿಂದ ಇಲ್ಲಿಯವರೆಗೂ ನಡೆದಿರುವ ರಾಜಕೀಯ ಚರಿತ್ರೆಯ ಕ್ಷೇತ್ರದ ಸಂಶೋಧನೆಯಲ್ಲಿ ಹೆಚ್ಚು ಅನಿರ್ದಿಷ್ಟತೆ ತಲೆದೋರಿರುವುದು ಸಹಜವಾಗಿದೆ. ಈ ಕಾರಣದಿಂದ ಹಿಂದಿನ ಜ್ಞಾನವೆಂದರೆ ರಾಜ್ಯ ವಿಸ್ತರಣೆಗೆ ಉಪಯೋಗಿಸಲಾದುದೆಂದೇ ಅರ್ಥೈಸಬೇಕಾಗಿದೆ. ಅಲ್ಲದೆ ಮದ್ಯಯುಗೀನ ಕಾಲದವರೆಗೂ ರಚನೆಯಾದ ಹೆಚ್ಚಿನ ಶಾಸನಗಳು ಮತ್ತು ಕೃತಿಗಳು ರಾಜಾಶ್ರಯದಲ್ಲಿ ತಯಾರಾಗಿದ್ದರಿಂದ ಅವನ್ನು ಜನ ಸಾಮಾನ್ಯರ ಚರಿತ್ರೆ ಎನ್ನುವಂತಿಲ್ಲ. ಆದರೆ ಎಲ್ಲ ಕೈಫಿಯತ್ತುಗಳೂ ಪೂರ್ಣವಾಗಿ ಜನರ ನಡುವೆಯೇ ರಚನೆಗೊಂಡಿವೆ.

ಕನ್ನಡ ನಾಡಿನ ಚರಿತ್ರೆಯನ್ನು ತಿಳಿದುಕೊಳ್ಳಲು ಇತ್ತೀಚೆಗೆ ಹೊಸ ಆಕರಗಳಾದ ಕೈಫಿಯತ್ತುಗಳು ಬೆಳಕಿಗೆ ಬಂದಿವೆ. ಆದಾಗ್ಯೂ ಈ ನವೀನ ಆಕರಗಳನ್ನು ಚರಿತ್ರ ರಚನಾ ದೃಷ್ಟಿಯಿಂದ ಇಲ್ಲಿಯವರೆಗೂ ಅಧ್ಯಯನ ಮಾಡಿಲ್ಲ. ಕರ್ನಾಟಕ ಇತಿಹಾಸ ವಿಶಿಷ್ಟ ರೀತಿಯಲ್ಲಿ ವಿಕಾಸಗೊಂಡಿರುವುದು ಇಲ್ಲಿಯವರೆಗಿನ ಸಂಶೋಧನೆಯಿಂದ ಸ್ಪಷ್ಟವಾಗಿದೆ. ಈ ಪ್ರದೇಶ ವಿಜಯನಗರ ಸಾಮ್ರಾಜ್ಯದ ಹೃದಯವಾಗಿತ್ತು. ಇಂತಹ ಸಾಮ್ರಾಜ್ಯದ ಬಗೆಗೆ ಕೈಫಿಯತ್ತುಗಳು ಹಲವಾರು ವಿವರಗಳನ್ನು ನೀಡಿವೆ. ಅಂತಹ ವಿವರಗಳನ್ನು ಆಧುನಿಕ ವಿಚಾರಧಾರೆಯಾಗಿ ಪರಿಶೀಲಿಸುವುದೇ ಕೈಫಿಯತ್ತುಗಳ ವೈಶಿಷ್ಟ್ಯತೆ. ಕೈಫಿಯತ್ತುಗಳು ವಿಜಯನಗರ ಪೂರ್ವಕಾಲದ ಬಗ್ಗೆ ಕೆಲವು ವಿಚಾರಗಳನ್ನು ತಿಳಿಸುತ್ತವೆ. ಎಲ್ಲಕ್ಕಿಂತ ಮಿಗಿಲಾಗಿ ವಿಜಯನಗರೋತ್ತರ ಕಾಲ ಮೈಸೂರಿನ ಇತಿಹಾಸದಲ್ಲಿ ಒಂದು ಸ್ವಾರಸ್ಯಕರ ರಾಜಕೀಯ ಘಟ್ಟ. ಏಕರೂಪಿಯಾದ ಸಾಮ್ರಾಜ್ಯದ ಕನಸು ಭಗ್ನವಾಗಿ ಸಣ್ಣಪುಟ್ಟ ಪಾಳೆಪಟ್ಟುಗಳು ಸ್ವತಂತ್ರವಾಗಿ ಆಳುತ್ತಾ ಇದ್ದ ಕಾಲ. ಜೊತೆಗೆ ಮೈಸೂರಿನ ಒಡೆಯರು ರಾಜ್ಯ ಸ್ಥಾಪಿಸಿ ವಿಸ್ತರಣೆ ಮಾಡಿದ್ದು ಈ ಕಾಲದಲ್ಲೇ. ಹೈದರಾಲಿ ಮತ್ತು ಟಿಪ್ಪು ಮೈಸೂರು ಸಂಸ್ಥಾನವನ್ನು ವಿಸ್ತರಿಸಲು ಪ್ರಯತ್ನಿಸುತ್ತಿದ್ದುದು ಸಹ ಈ ಕಾಲದಲ್ಲೇ. ಕೋಟೆ ಕೊತ್ತಲಗಳು, ಮಿಲಿಟರಿ ಆಡಳಿತ ಮುಂತಾದ ವಿವರಗಳು ದಾಖಲಾಗಿರುವುದು ಕೈಫಿಯತ್ತುಗಳಲ್ಲಿ ಮಾತ್ರ.

'ಚರಿತ್ರೆಯ ಬಗ್ಗೆ ಸಾಕಷ್ಟು ಸಾಹಿತ್ಯಾಧಾರಗಳು ಮತ್ತು ಪ್ರಾಕ್ತನ ಶಾಸ್ತ್ರಾಧಾರಗಳನ್ನಾಧರಿಸಿ ಅಧ್ಯಯನ ನಡೆಸಿದ್ದಾರೆಯೇ ಹೊರತು ಕೈಫಿಯತ್ತುಗಳನ್ನು ಬಳಸಿ ಯಾರೊಬ್ಬರೂ ಇತಿಹಾಸ ರಚಿಸಿಲ್ಲ.' ಕೈಫಿಯತ್ತುಗಳ ಬಗ್ಗೆ ಬೆರಳೆಣಿಕೆಯಷ್ಟು ಕೃತಿಗಳು ಮಾತ್ರ ಬಂದಿವೆ. ಆದರೂ ಕೈಫಿಯತ್ತುಗಳು ವಿದ್ವಾಂಸರಿಗೆ ಸಂಪೂರ್ಣವಾಗಿ ದೊರೆಯುವ ಮುನ್ನ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯನ್ನು ಪುನರ್ ರಚಿಸಲು ಪ್ರಯತ್ನಪಟ್ಟ ಸಂಶೋಧಕರಿಗೆ ಪ್ರಧಾನವಾಗಿ ಮಾಹಿತಿ ದೊರೆಯುತ್ತಿದ್ದುದು ಶಾಸನಗಳಿಂದ ಮಾತ್ರ. ಶಾಸನಾಧಾರಗಳಿಗೆ ಪೂರಕವಾಗಿ ಸಾಹಿತ್ಯ ಕೃತಿಗಳು ಸಹಾಯ ಮಾಡುತ್ತಿದ್ದುವಲ್ಲದೆ, ವಿದೇಶೀ ಬರವಣಿಗೆಗಳು ಅಲ್ಲಲ್ಲಿ ಬೆಳಕು ಚೆಲ್ಲುತ್ತಿದ್ದವು. ಆದಾಗ್ಯೂ ದೊರೆಯುತ್ತಿದ್ದ ಕರ್ನಾಟಕದ ಆಧುನಿಕ ಹಾಗೂ ಪೂರ್ವ

ಕಾಲದ ಅನೇಕ ವಿಷಯಗಳು ಅಸಮರ್ಪಕವಾಗಿಯೇ ಉಳಿದುಕೊಂಡಿದ್ದವು. ಈಗ ಉಪಲಬ್ಧವಿರುವ ಕೈಫಿಯತ್ತುಗಳು ಬೇರೆ ಬೇರೆ ಆಕರಗಳು ಅಲಕ್ಷಿಸಿದ್ದ ಅನೇಕ ಅಮೂಲ್ಯ ವಿವರಗಳನ್ನು ಅಧ್ಯಯನಕಾರರಿಗೆ ಒದಗಿಸುತ್ತವೆ. ಕೈಫಿಯತ್ತುಗಳನ್ನು ಬರೆಸಿ ಸಂಗ್ರಹಿಸಿದ ಕರ್ನಲ್ ಮೆಕೆಂಝಿಗೆ ಇತಿಹಾಸಕಾರ, ಸಂಶೋಧಕ ಮತ್ತು ವಿದ್ವಾಂಸರು ಕೃತಜ್ಞರಾಗಿರಲೇಬೇಕು. ಭಾರತದಲ್ಲಿ ತನ್ನ ೩೮ ವರ್ಷಗಳ ಸೇವಾ ಅವಧಿಯಲ್ಲಿ ಸೈನ್ಯದ ಕೆಲಸದ ಜೊತೆಗೆ ಈತ ಇತಿಹಾಸಕ್ಕೆ ಸಂಬಂಧಪಟ್ಟ ಕ್ಷೇತ್ರಕಾರ್ಯವನ್ನು ಮಾಡಿರುವುದು ಗಮನಾರ್ಹವಾಗಿದೆ.

ಕೈಫಿಯತ್ತುಗಳು ವಿಜಯನಗರ ಪೂರ್ವ ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ನೀಡಿರುವ ಮಾಹಿತಿ ಅನೇಕ ಸಂದರ್ಭಗಳಲ್ಲಿ ಕುತೂಹಲಕಾರಿಯಾಗಿದ್ದು ನವೀನತೆಯನ್ನೂ ಹೊಂದಿದೆ. ಶಾಸನಗಳಲ್ಲಿ ಮತ್ತು ಸಾಹಿತ್ಯ ಕೃತಿಗಳಲ್ಲಿ ಕಂಡು ಬರುವ ಅನೇಕ ವಿಷಯಗಳನ್ನು ಇವು ಪ್ರಸ್ತಾಪಿಸುತ್ತವೆ. ಕೈಫಿಯತ್ತುಗಳು ನೀಡಿರುವ ಮಾಹಿತಿಗಳೆಲ್ಲಾ ಸತ್ಯಾಂಶಗಳಿಂದ ಕೂಡಿವೆ ಎಂದು ಹೇಳಲಾಗುವುದಿಲ್ಲ. ಐತಿಹ್ಯ, ಪುರಾಣ ಮತ್ತು ದಂತ ಕತೆಗಳ ನಡುವೆ ಐತಿಹಾಸಿಕ ಅಂಶಗಳು ಬೆರೆತುಕೊಂಡಿವೆ. ಕೈಫಿಯತ್ತುಗಳಿಂದ ಉಲ್ಲೇಖಿಸಿರುವ ಸಾಮಗ್ರಿಯನ್ನು ಪರಿಶೀಲಿಸಿದರೆ ಈ ವಿಷಯ ಸ್ಪಷ್ಟವಾಗುತ್ತದೆ. ಅನೇಕ ವೇಳೆ ಕೈಫಿಯತ್ತುಗಳು ನೀಡುವ ಕಾಲಗಣನೆ ಸರಿಹೊಂದುವುದಿಲ್ಲ. ಐತಿಹ್ಯ, ಪುರಾಣ, ಕಟ್ಟುಕತೆ, ದಂತಕತೆಗಳು ಒದಗಿಸುವ ಸಂಗತಿಗಳನ್ನು ಬಿಟ್ಟು ಪರಿಶೀಲಿಸಿದರೂ ರಾಜಕೀಯ ಚರಿತ್ರೆಯ ಮೇಲೆ ಇವು ಅಲ್ಪ ಸ್ವಲ್ಪ ಬೆಳಕನ್ನು ಮಾತ್ರ ಚೆಲ್ಲುತ್ತವೆ ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ವಿಜಯನಗರ ರಾಜ್ಯವನ್ನು 'ಕುರುಬ ಸಂಸ್ಥಾನ' ಎಂದು ಕೈಫಿಯತ್ತುಗಳು ಕರೆದಿವೆ. ವಿಜಯನಗರ ಸಂಸ್ಥಾಪಕರು 'ಗೊಲ್ಲರು' ಎಂದೂ ಕೆಲವು ಕೈಫಿಯತ್ತುಗಳು ದಾಖಲಿಸಿವೆ. ಕೈಫಿಯತ್ತುಗಳು ವಿಜಯನಗರದ ಅರಸರು ಮತ್ತು ಅವರ ಅಧಿಕಾರ ವರ್ಗದವರು ಹಾಗೂ ಅಮರನಾಯಕರು ಅಂದಿನ ರಾಜಕೀಯ ವ್ಯವಸ್ಥೆಯಲ್ಲಿ ಸರ್ವಾಧಿಕಾರಿ ಗಳಾಗಿರಲಿಲ್ಲ ಹಾಗೂ ಪ್ರಜಾಪೀಡಕರಾಗಿರಲಿಲ್ಲ ಎಂಬುದನ್ನು ದಾಖಲಿಸಿವೆ.

ವಿಜಯನಗರ ಸಾಮ್ರಾಜ್ಯದ ಕೇಂದ್ರ ಶಕ್ತಿ ನಾಶವಾದಾಗ ಅಥವಾ ದುರ್ಬಲಗೊಂಡಾಗ ಸ್ಥಳೀಯ ರಾಜಕೀಯ ಶಕ್ತಿಗಳು ಸ್ವತಂತ್ರವಾಗಲು ಯತ್ನಿಸಿದವು ಎಂಬುದು ಕೈಫಿಯತ್ತುಗಳಿಂದ ಗೋಚರವಾಗುತ್ತದೆ. ಅನೇಕ ಪಾಳೆಪಟ್ಟುಗಳು ಈ ಕಾಲದಲ್ಲಿ ಕಾಣಿಸಿಕೊಂಡವು. ಮೈಸೂರು, ಕೆಳದಿ, ತರೀಕೆರೆ ಮತ್ತು ಚಿತ್ರದುರ್ಗದ ಪಾಳೆಗಾರ ಮನೆತನಗಳು, ಕರಾವಳಿ ಪ್ರದೇಶದ ಸೋಂದೆ, ಚಾಟ, ಭಂಗ ಮುಂತಾದ ಪಾಳೆಪಟ್ಟುಗಳು ಇದಕ್ಕೆ ನಿದರ್ಶನ. ಮೂಲದಲ್ಲಿ ಇವು ವಿಜಯನಗರಕ್ಕೆ ಅಧೀನವಾಗಿದ್ದು ನಂತರ ಸ್ವತಂತ್ರವಾದವು. ಕೈಫಿಯತ್ತುಗಳು ರಾಜಕೀಯ ವಂಶಗಳ ಮೂಲವನ್ನು ಕುರಿತಂತೆ ಹೇಳಲಾಗುವ ಜಾನಪದ, ಪುರಾಣ, ಐತಿಹ್ಯ ಮಾದರಿಗಳನ್ನು ಬಳಸಿಕೊಂಡಿವೆ. ಚರಿತ್ರೆಯನ್ನು ದಾಖಲಿಸುವ ಕೈಫಿಯತ್ತುಗಳ ಪದ್ಧತಿ ಅಂದಿನ ಜನರ ಮನೋಧರ್ಮವನ್ನು ಪ್ರತಿಬಿಂಬಿಸಿದೆ. ಮಧ್ಯಕಾಲೀನ ಮನಸ್ಸು ಹೆಚ್ಚಾಗಿ ಪೌರಾಣಿಕ ಪ್ರಭಾವದಿಂದ ಪ್ರೇರೇಪಿತವಾಗಿದ್ದಿತು. ಆದುದರಿಂದ ನೈಜವಾದ ರಾಜಕೀಯ ವ್ಯಕ್ತಿಗಳನ್ನು ಪೌರಾಣಿಕ ಅಥವಾ ಕಲ್ಪಿತ ಮಹಾಪುರುಷರೊಡನೆ ಹೋಲಿಸುವುದರ ಜೊತೆಗೆ, ಅವರಿಗೆ ಮಹಾಪುರುಷರ ಲಕ್ಷಣಗಳನ್ನು ಆರೋಪಿಸುವುದು ಮಧ್ಯಕಾಲೀನ ಮನಸ್ಸಿನ ಒಂದು ಲಕ್ಷಣವಾಗಿದ್ದಿತ್ತು. ಎಲ್ಲಕ್ಕಿಂತ ಮಿಗಿಲಾಗಿ ಅನೇಕ ಪಾಳೆಪಟ್ಟುಗಳ ಮೂಲ ಸ್ಥಾಪಕರು ಅತ್ಯಂತ ಕೆಳಹಂತದಿಂದ ಬಂದವರಾಗಿದ್ದು ಸಮಕಾಲೀನ ರಾಜಕೀಯ ಸನ್ನಿವೇಶಗಳನ್ನು ಬಳಸಿಕೊಂಡು ಸಾಹಸಿಗಳಾಗಿ ಪ್ರಭು ಶಕ್ತಿಗೆ ಬುನಾದಿ ಹಾಕಿದರು. ಕೈಫಿಯತ್ತುಗಳು ಇವರ ಮೂಲದ ಬಗೆಗೆ ನೀಡುವ ಮಾಹಿತಿ ಕುತೂಹಲಕಾರಿಯಾಗಿದೆ. ಪಾಳೆಯಗಾರರನ್ನು ಸಾಮಾನ್ಯವಾಗಿ ರಾಜಕೀಯ ದೃಷ್ಟಿಯಿಂದ ಪರಿಶೀಲಿಸಿದಾಗ ಪುಂಡ-ಪುಢಾರಿಗಳು ಎಂಬಂತಹ ಅಭಿಪ್ರಾಯ ವ್ಯಕ್ತವಾಗುತ್ತದೆ. ಆದರೆ ವಿಜಯನಗರ ಕ್ಷೇತ್ರದ ಕಾಲದ ರಾಜಕೀಯ ಚರಿತ್ರೆಯಲ್ಲಿ, ಕೈಫಿಯತ್ತುಗಳನ್ನು ಆಧಾರವಾಗಿಟ್ಟುಕೊಂಡು ಹೇಳುವುದಾದರೆ ಅವರು ಸ್ಥಳೀಯ ಜನಗಳಿಗೆ ಅವರ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗೆ ಸಹಾಯ ಮಾಡುತ್ತಿದ್ದರು ಎಂಬುದು ಗೊತ್ತಾಗುತ್ತದೆ. ಕೋಟೆ ನಿರ್ಮಾಣ, ಕೆರೆ ಕಟ್ಟೆ ಕಾಲುವೆಗಳ ನಿರ್ಮಾಣ ಹಾಗೂ ಅಗ್ರಹಾರಗಳ ಸ್ಥಾಪನೆಯನ್ನು ಕೈಫಿಯತ್ತುಗಳು ಪ್ರಸ್ತಾಪಿಸುತ್ತವೆ. ಅಂದಿನ ರಾಜಕೀಯದಲ್ಲಿ ಪುರುಷರಲ್ಲದೆ ಸ್ತ್ರೀಯರೂ ಪಾತ್ರವಹಿಸಿರುವುದನ್ನು ಕೈಫಿಯತ್ತುಗಳು ತಿಳಿಸುತ್ತವೆ. ಉದಾಹರಣೆಗೆ ದೊಡ್ಡಭೋಗಸಾನಿ, ಚಿಕ್ಕಭೋಗಸಾನಿ, ಹಂಡೆ ಮನೆತನದ ನೀಲಮ್ಮ, ಸಿದ್ಧಮ್ಮ, ಪದ್ದಮ್ಮ ಮುಂತಾದವರು ರಾಜಕಾರ್ಯದಲ್ಲಿ ಭಾಗವಹಿಸಿದ್ದನ್ನು ನೋಡಬಹುದು. ಬಳ್ಳಾರಿ ಕೈಫಿಯತ್ತು ಸಂಗನಾಗರಿ ರಾಣಿಯ ಯುದ್ಧವನ್ನು

ದಾಖಲಿಸುತ್ತದೆ. ಇದೆಲ್ಲಕ್ಕೂ ಮಿಗಿಲಾಗಿ ಕೆಳದಿ ರಾಣಿಯರ ಇತಿಹಾಸ ಪ್ರಸಿದ್ಧ ರಾಜ್ಯಭಾರ, ಹೋರಾಟಗಳು ಇಲ್ಲಿ ದಾಖಲಾಗಿವೆ. ಚನ್ನಮ್ಮಾಜಿ, ವೀರಮ್ಮಾಜಿ ಮೊದಲಾದವರ ಬಗೆಗೆ ಅನೇಕ ವಿವರಗಳು ಇಲ್ಲಿ ದೊರಕುತ್ತವೆ. ಈ ದೃಷ್ಟಿಯಿಂದ ಕೈಫಿಯತ್ತುಗಳು ಅಮೂಲ್ಯ ಆಕರಗಳಾಗಿವೆ.

ಕನ್ನಡದ ಕೈಫಿಯತ್ತುಗಳು ವಿಭಿನ್ನವಾದ ಭಾಷೆ, ಶೈಲಿ ರಚನಾತಂತ್ರದಿಂದ ಕೂಡಿರುವುದರಿಂದ ಆರಂಭದಲ್ಲಿ ಅವುಗಳು ಇತಿಹಾಸಕಾರರ ಮನ್ನಣೆ ಪಡೆಯಲು ಸಾಧ್ಯವಾಗಿರಲಿಲ್ಲ. ಅವುಗಳಲ್ಲಿ ಕಾಲಗಣನೆ ಮತ್ತು ವಂಶಾವಳಿಗಳ ಬಗ್ಗೆ ಗೊಂದಲವಿದ್ದುದರಿಂದ ಅವು 'ಶುದ್ಧ ಐತಿಹಾಸಿಕ' ವಿವರಗಳಲ್ಲವೆಂದು ಕೆಲವರು ಭಾವಿಸಿದ್ದರು. ಆದರೆ ಕರ್ನಾಟಕ ಇತಿಹಾಸ ರಚನೆ ವೃದ್ಧಿಯಾದಂತೆ ಹೊಸ ಹೊಸ ಆಕರಗಳ ಅಗತ್ಯವನ್ನು ಮನಗಂಡ ವಿದ್ವಾಂಸರು ಕೈಫಿಯತ್ತುಗಳನ್ನು ಅವಲಂಬಿಸುವುದು ಅನಿವಾರ್ಯವಾಯಿತು. ಅನೇಕ ಕೃತಿಗಳು ಸಮಕಾಲೀನ ಅಥವಾ ಘಟನೆಗಳಿಗೆ ಅತಿ ಸಮೀಪದ ರಚನೆಗಳಾಗಿದ್ದುದರಿಂದ ಅವುಗಳ ಅಧ್ಯಯನಕ್ಕೆ ಹೆಚ್ಚು ಪ್ರಾಮುಖ್ಯತೆ ದೊರಕಿತು. ನಮ್ಮ ಪ್ರಾಚೀನರು ಭಿನ್ನವಾದ ರೀತಿಯಲ್ಲಿ ಯೋಚಿಸುತ್ತಿದ್ದರು ಹಾಗೂ ಬರೆಯುತ್ತಿದ್ದರು ಎಂಬುದನ್ನು ಗಮನದಲ್ಲಿಟ್ಟುಕೊಂಡು ಕೈಫಿಯತ್ತುಗಳನ್ನು ಅರ್ಥೈಸುವ ಪ್ರಯತ್ನಗಳನ್ನು ಕೈಗೊಳ್ಳಲಾಯಿತು. ಕೈಫಿಯತ್ತುಗಳಲ್ಲಿ ಕಂಡು ಬರುವ ಜಾನಪದ ಸೊಗಡು ವಿದ್ವಾಂಸರನ್ನು ಆಕರ್ಷಿಸಲು ಮತ್ತೊಂದು ಮುಖ್ಯ ಕಾರಣವಾಯಿತು. ಇತಿಹಾಸದ ವಿವಿಧ ಆಯಾಮಗಳನ್ನರಿಯಲು ಇವು ಅಮೂಲ್ಯ ಆಧಾರಗಳೆಂಬ ಸತ್ಯ ಅರಿವಾಯಿತು. ಇಂದು ನಾಡಿನ ಇತಿಹಾಸದ ವಿವಿಧ ಅಂಶಗಳನ್ನು ವಿದ್ವಾಂಸರು ಬಹು ಗಂಭೀರವಾಗಿ ಶೋಧಿಸಲು ಪ್ರಾರಂಭಿಸಿದ್ದಾರೆ. ಈ ನಿಟ್ಟಿನಲ್ಲಿ ಕನ್ನಡದ ಕೈಫಿಯತ್ತುಗಳು ಬಹು ಉಪಯುಕ್ತ ಮೂಲಾಧಾರಗಳಾಗಿ ನಾಡಿನ ಸಮಗ್ರ ಇತಿಹಾಸ ರಚನೆಗೆ ಸಹಾಯಕವಾಗುತ್ತಿವೆ.



# ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ 'ಸೌಗಂಧಿಕಾ ಪರಿಣಯ' ಹಸ್ತಪ್ರತಿಗಳು ಮತ್ತು ಮುದ್ರಣ ವಿವರ

– ಡಾ|| ಬಿ. ನಂಜುಂಡಸ್ವಾಮಿ*

ಕರ್ನಾಟಕ ರಾಜ್ಯದಲ್ಲಿ ಸಾಹಿತ್ಯ–ಸಂಸ್ಕೃತಿಗೆ ಹೆಸರುವಾಸಿಯಾದ ಮೈಸೂರು ನಗರದ ಇತಿಹಾಸ ಬಹಳ ರೋಚಕವಾದದ್ದು. ಹೈದರ್ ಮತ್ತು ಟಿಪ್ಪುವಿನ ಆಡಳಿತದಲ್ಲಿ ಸಾಹಿತ್ಯ ಸಂಸ್ಕೃತಿಗಳು ಬಿರುಗಾಳಿಗೆ ಸಿಲುಕಿ ನಲುಗಿ ಹೋದಾಗ ಅದರ ಉದ್ಧಾರಕರಂತೆ ಪ್ರತ್ಯಕ್ಷರಾದವರು ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು. ಬ್ರಿಟೀಷರ ಕುತಂತ್ರದ ನಡುವೆ, ನಾನಾ ವಿಧವಾದ ಅಡಚಣೆಗಳ ನಡುವೆ, ವೈಯಕ್ತಿಕವಾದ ನಾನಾ ವಿಧವಾದ ತೊಂದರೆಗಳ ನಡುವೆಯೂ ಅವರು ಬಹುದೊಡ್ಡ ಸಾಧನೆ ಮಾಡಿದ್ದಾರೆ. ಇವರ ಕೃಪಾಶ್ರಯದಲ್ಲಿ ಶಕ್ತಿ ವಿಶಿಷ್ಟಾದ್ವೈತ, ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ಜೈನ, ಶಾಕ್ತ, ಗಾಣಾಪತ್ಯ, ಕ್ರೈಸ್ತ ಮತ್ತು ಇಸ್ಲಾಂ ತತ್ತ್ವಗಳ ಬೋಧಕರು ದತ್ತಿಯನ್ನು, ಇನಾಂ ಅನ್ನು ಪಡೆದು ನಿಶ್ಚಿಂತೆಯಿಂದ ತಮ್ಮ ಧರ್ಮ ಪ್ರಚಾರ ಮಾಡಿದ ಹತ್ತಾರು ಉದಾಹರಣೆಗಳು ಇವೆ. ನೂರಾರು ಮಠಮಾನ್ಯಗಳಿಗೆ ಮುಮ್ಮಡಿಯವರು ಕೊಟ್ಟ ರಾಜನಿರೂಪಗಳನ್ನು ಇಂದಿಗೂ ನೋಡಬಹುದು.

'ಅರಮನೆ ಶಿಸ್ತು' ಎಂಬುದು ಬಹಳ ಪ್ರಸಿದ್ಧಿಯಾದ ಮಾತು. ಅಲ್ಲಿಯ ನಡೆನುಡಿ, ಆಚಾರ ವಿಚಾರ, ರೀತಿ ರಿವಾಜುಗಳನ್ನು ತಿಳಿಯಲು ನಮಗೆ ಇರುವಂತಹ ಬಹುದೊಡ್ಡ ಆಕರವೆಂದರೆ 'ಸೌಗಂಧಿಕಾ ಪರಿಣಯ.'

ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರು ಕರ್ಣಾಟಕ ಕವಿಚರಿತೆಯ ಮೂರನೆಯ ಸಂಪುಟದಲ್ಲಿ ಸೌಗಂಧಿಕಾ ಪರಿಣಯದ ಬಗ್ಗೆ ಇಷ್ಟು ವಿವರವನ್ನು ನೀಡಿದ್ದಾರೆ.

ಮುಮ್ಮಡಿ ಕೃಷ್ಣರಾಜರು (೧೭೯೪–೧೮೬೮) ಈ ಗ್ರಂಥವನ್ನು ಪದ್ಯರೂಪವಾಗಿಯೂ ಗದ್ಯರೂಪವಾಗಿಯೂ ರಚಿಸಿದ್ದಾರೆ. ಪದ್ಯಗ್ರಂಥವು ಭಾಮಿನೀ ಷಟ್ಪದಿಯಲ್ಲಿ ಬರೆದಿದೆ. ಸಂಧಿಗಳು ೧೦೦, ಪದ್ಯಗಳು ೬೦೪೦. ಗದ್ಯಗ್ರಂಥವು ೩೬ ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಇದಕ್ಕೆ 'ಸಂಕ್ಷೇಪ ಸೌಗಂಧಿಕಾ ಪರಿಣಯ' ಎಂಬ ಹೆಸರೂ ಇರುವಂತೆ ತೋರುತ್ತದೆ. 'ಇಂದ್ರನು ದೂರ್ವಾಸ ಮುನಿಯ ಶಾಪದಿಂದ ರತ್ನಪುರಿಯ ರಾಜನಾದ ಸುಚರಿತ್ರನಿಗೂ ಅವನ ರಾಣಿ ಗುಣವತಿಗೂ ಸುಗಂಧರಾಯನೆಂಬ ಹೆಸರಿನಿಂದ ಮಗನಾಗಿ ಹುಟ್ಟಿ, ಸೌಗಂಧಿಕೆಯಾಗಿ ಹುಟ್ಟಿದ ಶಚಿದೇವಿಯನ್ನು ಮದುವೆಯಾಗಿ ಕೊನೆಗೆ ತನ್ನ ಪದವಿಯನ್ನು ಹೊಂದುತ್ತಾನೆ' – ಇದೇ ಕಥಾಗರ್ಭ. ಪದ್ಯಗ್ರಂಥದ ಆರಂಭದಲ್ಲಿ ಚಾಮುಂಡಿಕೆ, ನಂಜುಂಡೇಶ್ವರ ಇವರುಗಳ ಸ್ತುತಿ ಇದೆ. ಈ ಕಥೆಯನ್ನೇ ಸಂಗ್ರಹವಾಗಿ ದೇವಲಾಪುರದ ನಂಜುಂಡ ಕವಿಯು ಸಾಂಗತ್ಯದಲ್ಲಿ ಬರೆದಿದ್ದಾನೆ'.

ಕವಿಚರಿತೆಕಾರರು ನೋಡಿದ ಭಾಮಿನಿ ಷಟ್ಪದಿಯಲ್ಲಿ ರಚನೆಯಾದ ನೂರು ಸಂಧಿ ಇರುವ ೬೦೪೦ ಪದ್ಯದ ಹಸ್ತಪ್ರತಿ ಬಗ್ಗೆ ಈಗ ಯಾವ ವಿವರವೂ ಲಭ್ಯವಿಲ್ಲ. ಕವಿಚರಿತೆಕಾರರು ನಾಲ್ಕು ಪದ್ಯಗಳನ್ನಾದರೂ ಹಸ್ತಪ್ರತಿಯಿಂದ ಪ್ರತಿ ಮಾಡಿ ಉದಾಹರಣೆಯಾಗಿ ಉದಾಹರಿಸಿದ್ದರೆ ಚೆನ್ನಾಗಿತ್ತು.

ಕವಿಚರಿತೆಕಾರರು ಅಂದಿನ ದಿನಮಾನಕ್ಕೆ ಕಲ್ಲಚ್ಚಿನಲ್ಲಿ ಅಚ್ಚಾದ ಗದ್ಯಗ್ರಂಥದ ಮೂಲ ಹಸ್ತಪ್ರತಿಯನ್ನು ಪರಿಶೀಲಿಸಿರಬೇಕು. ಅವರು ಪರಿಶೀಲಿಸಿದ್ದು ಓಲೆಪ್ರತಿಯೇ, ಕಾಗದದ ಪ್ರತಿಯೇ ಎಂಬುದು ತಿಳಿದು ಬರುವುದಿಲ್ಲ. ೩೬ ಆಶ್ವಾಸಗಳ ಗ್ರಂಥ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ಚಿತ್ರಗಳ ಬಗ್ಗೆ ಯಾವ ಮಾತನ್ನೂ ಹೇಳಿಲ್ಲ. ಗದ್ಯಗ್ರಂಥಕ್ಕೆ 'ಸಂಕ್ಷೇಪ ಸೌಗಂಧಿಕಾ

---

* ಪಂಡಿತ್ ತಾರಾನಾಥ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಶಾಪಿಂಗ್ ಕಾಂಪ್ಲೆಕ್ಸ್, ಬಿ.ಎಚ್.ರಸ್ತೆ, ತುಮಕೂರು–೫೭೨೧೦೨.

ಪರಿಣಯ' ಎಂಬ ಹೆಸರು ಕೊಟ್ಟಿದ್ದುದನ್ನು ದಾಖಲಿಸಿದ್ದಾರೆ. ಮುಮ್ಮಡಿಯವರು ಜೀವಂತವಾಗಿದ್ದಾಗಲೇ 'ಸೌಗಂಧಿಕಾ ಪರಿಣಯ' ಕಲ್ಲಚ್ಚು ಮುದ್ರಣ ಯಂತ್ರದಿಂದ ಮುದ್ರಣವಾದುದರಿಂದ ಅವರೇ 'ಸಂಕ್ಷೇಪ' ತೆಗೆದು ಬಿಟ್ಟಿದ್ದಾರೆ. ಕವಿಚರಿತೆಕಾರರು ಪರಿಶೀಲಿಸಿದ ಹಸ್ತಪ್ರತಿಗಳು ಮೈಸೂರು ಅರಮನೆಯ ಸರಸ್ವತಿ ಭಂಡಾರದ ಮೂಲ ಹಸ್ತಪ್ರತಿಗಳಾಗಿರಬೇಕು.

'ಸೌಗಂಧಿಕಾ ಪರಿಣಯ' ಕೃತಿ ಮುಮ್ಮಡಿಯವರ ಕೆಲವು ಶಾಸನಗಳಲ್ಲಿ ನೇರವಾಗಿ ಉಲ್ಲೇಖವಾಗಿದೆ. ಮೈಸೂರು ಕೋಟೆಯಲ್ಲಿರುವ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದ ಮುಂದಿರುವ ಶಾಸನ ಮತ್ತು ಮೈಸೂರು ಜಗನ್ಮೋಹನ ಬಂಗಲೆಯಲ್ಲಿ ಹಿತ್ತಾಳೆ ತಗಡಿನ ಮೇಲೆ ಕೆತ್ತಿ ಇಟ್ಟಿರುವ ಮೈಸೂರರಸರ ವಂಶಾಂಬುಜದಲ್ಲಿ ಈ ಕೃತಿಯ ಹೆಸರು ಉಲ್ಲೇಖಗೊಂಡಿರುವುದನ್ನು ನೋಡಬಹುದು.

### ಮೈಸೂರಿನ ಕೋಟೆಯಲ್ಲಿರುವ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದ ಮುಂದಿರುವ ಶಾಸನ

ಕ್ರಿ.ಶ. ೧೮೨೯ ಮಾರ್ಚ್ ೧೫ ಶನಿವಾರ ಎ.ಕ. ೫ (ರೈಸ್ ಆವೃತ್ತಿ), ಮೈಸೂರು ೩೭

೨೧. ............................................. ಶ್ರೀ ಭಾಗವತ ಅಧ್ಯಾ

೨೨. ತ್ಮ ರಾಮಾಯಣ ಮೊದಲಾದ ಪುರಾಣೇತಿಹಾಸಂಗಳಿಗೆ ಕರ್ನಾಟಕ ಭಾಷಾ ವ್ಯಾಖ್ಯಾನಗಳು ಸೌಗಂಧಿಕಾ ಪರಿಣಯಾದಿ ಕಾವ್ಯ ಪ್ರಬಂಧಂಗಳೆಂ

೨೩. ಬ ಸಾರಸ್ವತ ರತ್ನ ॥೧॥ ಯೀ ವಂಭತ್ತು ಬಗೆಯಾದ ರತ್ನಂಗಳ ನಿರ್ಮಾಣ ವಂ ಗೈದು ಯಿದರೊಳ್ ಸೇವಾರತ್ನಕೆ ವಳಿತವಾದ ಮಹಿಶೂರು ಪ್ರ

೨೪. ಸನ್ನ ಕೃಷ್ಣಸ್ವಾಮಿದೇವರ ಸನ್ನಿಧಿಗೆ ಬರಶಿ ವಪ್ಪಿಸಿದ ಶಿಲಾಶಾಸನದ ಕ್ರಮವೆಂತೆಂದರೆ ಅರಮನೆ ಬಲಭಾಗದೊಳ್ ವೇದ ಶೃಂಗಸಹಿತ ಪಂ ........................................

### ಮೈಸೂರಿನ ಜಗನ್ಮೋಹನ ಬಂಗಲೆಯಲ್ಲಿ ಹಿತ್ತಾಳೆ ತಗಡಿನ ಮೇಲೆ ಕೆತ್ತಿ ಇಟ್ಟಿರುವ ಮೈಸೂರರಸರ ವಂಶಾಂಬುಜ

ಕ್ರಿ.ಶ. ೧೮೬೦ ಮೇ ೫ ಶನಿವಾರ, ಎ.ಕ. ೫, (ರೈಸ್ ಆವೃತ್ತಿ), ಮೈಸೂರು ೨೬

೩೫. ಶ್ರೀ

೩೬. ಕೃಷ್ಣ

೩೭. ಕಥಾ

೩೮. ಸಾರ ಸಂ

೩೯. ಗ್ರಹ। ಸ

೪೦. ಕಲ ದೇವತಾ

೪೧. ಧ್ಯಾನ ನವವಿಧ್ಯಾ

೪೨. ತ್ಮಕ ಶ್ರೀ ತತ್ತ್ವನಿಧಿ

೪೩. ಆರ್ಯಾಭಿನಂದನೀಯ

೪೪. ದಶರಥನಂದನ ಚರಿತ್ರ । ಸೌ

೪೫. ಗಂಧಿಕಾ ಪರಿಣಯ। ಸಮಸ್ತ ಕೋಶ

**ಸೌಗಂಧಿಕಾ ಪರಿಣಯದ ಓಲೆಗರಿ ಪ್ರತಿಗಳು**

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿ ರಕ್ಷಿಸಲ್ಪಟ್ಟ ಓಲೆಗರಿ ಹಸ್ತಪ್ರತಿಗಳು

೧. ಕೆ.ಎ. ೩೩೫ /ಕಾಗದ ಪ್ರತಿ

| | |
|---|---|
| ೧೨.೭" ಉದ್ದ × ೮" ಅಗಲ | ಒಂದು ಗರಿಯಲ್ಲಿ ೨೩ ಪಂಕ್ತಿ |
| ೭೫೭ ಪತ್ರ | ಒಂದು ಸಾಲಿನಲ್ಲಿ ೨೩ ಅಕ್ಷರ |

ಮೂಲ ಗ್ರಂಥ ರಚನೆಯಾದ ಕಾಲ ಸ್ಪಷ್ಟವಾಗಿ ಈ ಹಸ್ತಪ್ರತಿಯಲ್ಲಿ ದಾಖಲಾಗಿದೆ. ಶಾ.ಶ. ೧೭೪೨ನೇ ಸಂದ ವರ್ತಮಾನದ ವಿಕ್ರಮ ಸಂವತ್ಸರದ ಆಶ್ವೀಜ ಶುದ್ಧ ದಶಮಿ ಗುರುವಾರದಲ್ಲೂ ಕ್ರಿ.ಶ. ೧೮೨೦ರಲ್ಲಿ ಕೃತಿ ರಚನೆಯಾಗಿದೆ ಎಂದು ನಿರ್ಧರಿಸಬೇಕಾಗುತ್ತದೆ. ನಮಗೆ ಲಭ್ಯವಾಗಿರುವ ಮುದ್ರಿತ ಪ್ರತಿಯಲ್ಲಿ ಶಾ.ಶ. ೧೭೪೭ ಎಂದು ಇರುವುದರಿಂದ ಕೃತಿ ರಚನೆಯ ಕಾಲ ಕ್ರಿ.ಶ. ೧೮೨೭ನೇ ವಿಜಯದಶಮಿಯ ದಿನ ಬರೆಯಲು ಪ್ರಾರಂಭಿಸಿದ್ದು ಸ್ಪಷ್ಟವಾಗಿ ಪುಷ್ಪಿಕೆಯಿಂದ ತಿಳಿದು ಬರುತ್ತದೆ. ಕೃತಿ ರಚನೆಗೆ ಮೂರು ವರ್ಷ ಸಮಯ ತೆಗೆದುಕೊಂಡಿರಬಹುದು. ಕೋಟೆ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದ ಶಾಸನದ ಕಾಲ ಕ್ರಿ.ಶ. ೧೮೨೯. ಆ ಸಮಯಕ್ಕೆ ಈ ಕೃತಿ ರಚನೆ ಮುಗಿದಿರಬಹುದು.

೨. ಕೆ. ೭೦೨ / ಓಲೆ ಪ್ರತಿ

| | |
|---|---|
| ಉದ್ದ ೨೫.೧" x ೨" ಅಗಲ | ಒಂದು ಗರಿಯಲ್ಲಿ ೮ ಪಂಕ್ತಿ, |
| ೧-೪೯೧ ಪತ್ರ | ಒಂದು ಸಾಲಿನಲ್ಲಿ ೧೦೦ ಅಕ್ಷರ |

೩. ಕೆ. ೧೬೧೮ / ಓಲೆ ಪ್ರತಿ

| | |
|---|---|
| ಉದ್ದ ೨೫.೫" ಅಗಲ ೨" | ಒಂದು ಗರಿಯಲ್ಲಿ ೧೦ ಪಂಕ್ತಿ |
| ೧-೪೩೯ ಪತ್ರ | ಒಂದು ಸಾಲಿನಲ್ಲಿ ೧೨೪ ಅಕ್ಷರ |

೪. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಬಿ. ೧೧೯೩ ಕಾಗದದ ಹಸ್ತಪ್ರತಿ ಇದೆ.

**ಕಲ್ಲಚ್ಚು ಮುದ್ರಣ ಪ್ರತಿ ಅಥವಾ ಶಿಲಾಯಂತ್ರ ಪ್ರತಿ**

ಬೆಂಗಳೂರು ವಿಶ್ವವಿದ್ಯಾಲಯದ ಸರಸ್ವತಿ ಭಂಡಾರದಲ್ಲಿ ಬಿ. ೧೧೯೨, (೧-೧೨೨೦) ಪುಟಗಳ ಸಚಿತ್ರ ಹಸ್ತಪ್ರತಿ ಇದೆ.

ಅಪರೂಪದ ಕನ್ನಡ ಪುಸ್ತಕಗಳ ಸಂಗ್ರಹ ಇಟ್ಟುಕೊಂಡಿರುವ ಬೆಂಗಳೂರಿನ ಪ್ರೊ. ಜಿ. ಅಶ್ವತ್ಥನಾರಾಯಣರವರ ಸಂಗ್ರಹದಲ್ಲಿ ಕಲ್ಲಚ್ಚಿನ ಎರಡು ಪ್ರತಿಗಳು ಇದ್ದು, ಅವುಗಳ ಅವಲೋಕನೆಗೆ ಅವಕಾಶ ಮಾಡಿಕೊಟ್ಟರು. ಎರಡು ಸಂಪುಟಗಳಲ್ಲೂ ಮುಖಪುಟ ಉಳಿದಿಲ್ಲ.

೧. **ಪ್ರೊ|| ಜಿ. ಅಶ್ವತ್ಥನಾರಾಯಣರವರ ಸಂಗ್ರಹದ ಕಲ್ಲಚ್ಚಿನ ಪ್ರತಿ.**

ಮೊದಲ ಸಂಪುಟ (ಕಲ್ಲಚ್ಚು ಪ್ರತಿ, ಫುಲ್‌ಸ್ಕೇಪ್ ಹಾಳೆ, ೧-೫೦೦ ಪುಟಗಳಿವೆ):

ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೭೪೭ ಸಂದ ವರ್ತಮಾನವಾದ ವಿಕ್ರಮ ಸಂವತ್ಸರದ ಆಶ್ವೀಜ ಶುದ್ಧ ೧೦ ಗುರುವಾರದಲ್ಲು ೧ ಆತ್ರೇಯ ಗೋತ್ರ .......................... (ಪುಟ ೩)

ಎರಡನೇ ಸಂಪುಟ (ಕಲ್ಲಚ್ಚು ಪ್ರತಿ, ೫೦೧ ರಿಂದ ೧೯೮ಲ ಪುಟಗಳಿವೆ) :

ನೀಲಿ ಬಣ್ಣದ, ಕಾರ್ಖಾನೆಯಲ್ಲಿ ತಯಾರಾದ ಕಾಗದ. ಬಹಳ ಸುಂದರವಾದ ಬರಹ ಮತ್ತು ಸುಂದರವಾದ ಚಿತ್ರಗಳನ್ನು ಒಳಗೊಂಡ ಪುಸ್ತಕ.

**೨. ಮೈಸೂರು ವಿಶ್ವವಿದ್ಯಾನಿಲಯದ ಸರಸ್ವತಿ ಭಂಡಾರದ ಕಲ್ಲಚ್ಚಿನ ಪ್ರತಿ**

ನಂ. ಕೆ.ಎ. ೫೭೭

| | |
|---|---|
| ೧೨.೫" × ೮" | ಒಂದು ಹಾಳೆಯಲ್ಲಿ ೧೧ ಪಂಕ್ತಿ |
| ೬೦ ಪತ್ರ | ಒಂದು ಸಾಲಿನಲ್ಲಿ ೩೮ ಅಕ್ಷರ |

ವಿಶೇಷ : ಕಲ್ಲಚ್ಚಿನ ಪ್ರತಿ. ಕೃತಿಯ ಭಾಷೆ ಕನ್ನಡವಾಗಿದ್ದರೂ ಲಿಪಿ ದೇವನಾಗರಿಯಲ್ಲಿದೆ.

ಕನ್ನಡ ಭಾಷೆ ಬರದೆ ಇರುವವರಿಗೂ ಕೃತಿಯ ಪರಿಚಯವಾಗಲಿ ಎನ್ನುವ ಉದ್ದೇಶದಿಂದ ಕನ್ನಡ ಕೃತಿಯನ್ನು ದೇವನಾಗರಿ ಲಿಪಿಯಲ್ಲಿ ಬರೆದು ಅಚ್ಚು ಮಾಡಿದ್ದಾರೆ.

**'ಸೌಗಂಧಿಕಾ ಪರಿಣಯ'ದ – ಮುದ್ರಣ ವಿವರ**

ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಕಲ್ಲಚ್ಚಿನಲ್ಲಿ ಸುಂದರ ಕಪ್ಪು ಬಿಳುಪು ರೇಖಾಚಿತ್ರಗಳ ಸಹಿತ ಮುದ್ರಣವಾದ ವಿವರವನ್ನು ಆಗಲೇ ತಿಳಿಸಲಾಗಿದೆ. ಅರಮನೆಯ ಸರಸ್ವತಿ ಭಂಡಾರದ ಸಂಪುಟಗಳಲ್ಲಿ ಬಹಳ ಸುಂದರವಾದ ಬಣ್ಣ ತುಂಬಿರುವಂತಹ ವರ್ಣಚಿತ್ರಗಳಿರುವುದನ್ನು, ೨೦೦೪ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಪ್ರಕಟಗೊಂಡ ಸೌಗಂಧಿಕಾ ಪರಿಣಯದ ಪೀಠಿಕೆಯ ೧೨ನೇ ಪುಟದಲ್ಲಿ ಸಂಪಾದಕಿ ಎಚ್.ಎಸ್.ಶ್ರೀಮತಿಯವರು ತಿಳಿಸುತ್ತಾರೆ. ಈ ವಿಷಯವಾಗಿ ಹಿರಿಯ ಚಿತ್ರಕಲಾ ವಿದ್ವಾಂಸರಾದ ಡಾ.ಅ.ಲ. ನರಸಿಂಹನ್‌ರವರು 'ಕಲ್ಲಚ್ಚಿನಲ್ಲಿ ಮುದ್ರಣವಾದ ಪುಸ್ತಕದ ಚಿತ್ರಗಳಿಗೆ ಬಣ್ಣ ತುಂಬಿರಬಹುದು' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಈ ಮುದ್ರಿತ ಪುಸ್ತಕವನ್ನು ಕುರಿತು ಹಂಪಿ ಕನ್ನಡ ವಿಶ್ವವಿದ್ಯಾಲಯದ 'ಪುಸ್ತಕ ಮಾಹಿತಿ'ಯ ಸಂಪುಟ ೧೨, ಸಂಚಿಕೆ ೧-೨, ಏಪ್ರಿಲ್-ಜೂನ್ ೨೦೦೫ರಲ್ಲಿ 'ಚಿತ್ರ ರಸಿಕರಿಗೆ ಆಕರ ಗ್ರಂಥ' ಶೀರ್ಷಿಕೆ ಅಡಿಯಲ್ಲಿ ವಿವರವಾಗಿ ಬರೆಯಲಾಗಿದೆ.

ಮುಮ್ಮಡಿ ಕೃಷ್ಣರಾಜ ಒಡೆಯರ್ ನಂತರ ಮೈಸೂರು ರತ್ನಸಿಂಹಾಸನವನ್ನು ಆರೋಹಣ ಮಾಡಿದ ಶ್ರೀಚಾಮರಾಜೇಂದ್ರ ಒಡೆಯರವರ ಕಾಲದಲ್ಲಿ ಈ ಕೃತಿಯ ಉತ್ತರಭಾಗ ಮುದ್ರಣವಾದ ವಿವರ 'Mysore Star' ಪತ್ರಿಕೆಯವರ ಪ್ರಕಟಣೆಯಿಂದ ತಿಳಿದುಬರುತ್ತದೆ. ಸಂಪೂರ್ಣ ವಿವರ ಲಭ್ಯವಿಲ್ಲ. ಲಿಂ॥ ಎಸ್. ಶಿವಣ್ಣನವರ ಹತ್ತಿರ ಈ ವಿಷಯ ಚರ್ಚೆ ಮಾಡಿದ್ದೆ. ಕೆಲವು ವಿವರವಿದೆ ತಿಳಿಸುತ್ತೇನೆ ಎಂದು ಹೇಳಿದ್ದರು. ಶಿಲಾಯಂತ್ರ ಮುದ್ರಣ ಹೊರಬಂದ ಮೇಲೆ, ಚಿತ್ರಗಳು ಇಲ್ಲದೆ ಮತ್ತೊಂದು ಮುದ್ರಣ ಹೊರಬಂದಿರಬೇಕು. ಕಾಲಗರ್ಭದಲ್ಲಿ ಅಡಗಿರುವ ಈ ವಿಷಯವನ್ನು ಕುರಿತು ಸಂಶೋಧನೆ ಮಾಡಬೇಕಾಗಿದೆ. ಸೌಗಂಧಿಕಾ ಪರಿಣಯದ ಪ್ರಾರಂಭದ ೨೨ ಅಧ್ಯಾಯಗಳನ್ನು 'ಮೈಸೂರು ಸ್ಟಾರ್' ಪತ್ರಿಕೆಯಲ್ಲಿ ಪ್ರತಿ ವಾರವೂ ಮುದ್ರಣ ಮಾಡುವ ಮುಂಚೆ ಆ ಪತ್ರಿಕೆಯಲ್ಲಿ ಒಂದು ಪ್ರಕಟಣೆ ಕೊಟ್ಟಿದ್ದಾರೆ. ಅದನ್ನು ಯಥಾವತ್ತಾಗಿ ಇಲ್ಲಿ ಕೊಡಲಾಗಿದೆ :

॥ ಸೌಗಂಧಿಕಾ ಪರಿಣಯ ॥ ॥ ಶ್ರೀ ಶಾರದಾಗಣಪತಿ ಗುರುಭ್ಯೋ ನಮಃ ॥

ಈ ಗ್ರಂಥವು ಮೈಸೂರ್ ಅರಮನೆ ಪುಸ್ತಕ ಭಂಡಾರದಲ್ಲಿತ್ತು. ಇದು ಗತಿಸಿದ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕಾಲದಲ್ಲಿ ವಿರಚಿತವಾದುದು. ಇದರಲ್ಲಿ ಅನೇಕ ಲೋಕೋಪಯುಕ್ತವಾದ ವಿಷಯಗಳು ಅಡಗಿಕೊಂಡಿವೆ. ಇದು ವಚನ ಕಾವ್ಯವಾಗಿಯೂ ಸರಸವಾದ ಕಥೆಯಿಂದ ಗಂಭೀರವಾಗಿಯೂ, ಶಾಸ್ತ್ರೀಯ ಸಂಗತಿಗಳನ್ನೆಲ್ಲಾ ಒಳಗೊಂಡ ದ್ದಾಗಿಯೂ ಇರುವುದರಿಂದ ಪಂಡಿತ ಪಾಮರರಿಗೆಲ್ಲ ಅತ್ಯುಪಯುಕ್ತವಾಗಿದೆ. ಗತಿಸಿದ ಶ್ರೀಚಾಮರಾಜೇಂದ್ರ ವಡೆಯರವರು ಇದರ ಉತ್ತರ ಭಾಗವನ್ನು ಮುದ್ರಣಗೊಳಿಸಿದ್ದರು. ಇದರಿಂದಲೇ ಈ ಗ್ರಂಥದ ಪ್ರಯೋಜಕತ್ವವನ್ನು ಅವರು ಎಷ್ಟು ಮಟ್ಟಿಗೆ ತಿಳಿದಿದ್ದರೆಂಬುದು ವ್ಯಕ್ತವಾಗುತ್ತದೆ. ಆದಿಭಾಗವು ಪ್ರಕಟಿಸಲ್ಪಟ್ಟಿರಲಿಲ್ಲ.

ಇದು ದೊಡ್ಡಗ್ರಂಥ. ಎಲ್ಲಾದರೂ ಅಚ್ಚಾದೀತೇ ಯೆಂದು ಅನೇಕರು ಅಪೇಕ್ಷಿಸುತ್ತಿರುವರು. ಪ್ರಕಟವಾದರೆ ಸರ್ವರೂ ಸುಲಭವಾಗಿ ಇದನ್ನು ಓದಿಕೊಳ್ಳುವುದಕ್ಕೆ ಅನ್ಕೂಲವಾಗುವುದೆಂದು ಅನೇಕರು ಸಲಹೆಗಳನ್ನು ಕೊಡುತ್ತಿದ್ದರು. ಅದು ಕಾರಣ ಇದು ನಮ್ಮ ಪತ್ರಿಕಾ ವಾಚಕರಿಗೆ ಪ್ರಯೋಜನಕಾರಿಯಾಗದೆ ಹೋಗುವುದಿಲ್ಲವೆಂದು ನಂಜಿ ಪ್ರತಿವಾರದಲ್ಲಿಯೂ ಸ್ವಲ್ಪ ಸ್ವಲ್ಪ ಮುದ್ರಿಸುತ್ತ ಬರುತ್ತೇವೆ.

ತಾರೀಖು ೨೬.೧.೧೯೦೩ ವೈ. ವಿರೂಪಾಕ್ಷಪ್ಪ

ಮೈಸೂರು ಪ್ರೊಪ್ರೈಟರ್

ಮೈಸೂರ್ ಸ್ಟಾರ್

ಅಂದಿನ ಪತ್ರಿಕಾ ವಾಚಕರಲ್ಲಿ ಒಬ್ಬರು, ಮೈಸೂರು ಸ್ಟಾರ್ ಪತ್ರಿಕೆಯಲ್ಲಿ ಕೃತಿ ಪ್ರಕಟವಾದಂತೆ ಅದರ ಬಗ್ಗೆ ಬರೆಯುತ್ತಾ ಹೋಗಿದ್ದಾರೆ. ೨೨ನೆಯ ಅಧ್ಯಾಯದವರೆಗೆ ಬರೆಯಲ್ಪಟ್ಟಿದೆ.

'ಸೌಗಂಧಿಕಾ ಪರಿಣಯ' ೧೯೦೯ರಲ್ಲಿ ಮೈಸೂರು ನಗರದ ಆರ್ಯ ಮತಗ್ರಂಥ ಪ್ರವರ್ಧನೀ ಸಭಾ ಮ್ಯಾನೇಜರ್ ಗುಂಡ್ಲುಪಂಡಿತರು ಲಕ್ಷ್ಮಣಾಚಾರ್ಯರಿಂದ ಪ್ರಕಟಿಸಲ್ಪಟ್ಟಿತು. ೪+೧೧೭೪ ಪುಟದ ಪುಸ್ತಕದ ಅಂದಿನ ಬೆಲೆ ೪-೮-೦ (ನಾಲ್ಕು ರೂ. ಎಂಟಾಣೆ). ಕೃತಿಯ ಮುಖಪುಟದಲ್ಲಿ "ಶ್ರೀಮನ್‌ಮಹಿಶೂರ ಪುರವರಾಧೀಶ ಶ್ರೀಕೃಷ್ಣರಾಜ ವಡೆಯರವರಿಂದ ಕರ್ನಾಟಕ ಭಾಷೆಯಲ್ಲಿ ರಚಿಸಲ್ಪಟ್ಟ 'ಸೌಗಂಧಿಕಾ ಪರಿಣಯ'ವೆಂಬ ನವೀನ ಕಥೆಯು" ಎಂದಿದೆ. ಆರ್ಯ ಮತಗ್ರಂಥ ಪ್ರವರ್ಧಿನೀ ಸಭಾದ ಮ್ಯಾನೇಜರ್ ವಿಜ್ಞಾಪನಾ ಪತ್ರವನ್ನು ಮುದ್ರಿಸಿದ್ದಾರೆ. ಅದನ್ನೂ ಕೆಳಗೆ ಯಥಾವತ್ತಾಗಿ ನೀಡಲಾಗಿದೆ.

ವಿಜ್ಞಾಪನಾ : ಶ್ರೀಮದ್ರಾಜಾಧಿರಾಜ ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್‌ರವರಿಂದ ಲೋಕೋಪಕಾರಾರ್ಥವಾಗಿಯೂ ರಸಿಕಜನಾನಂದಕರಮಾಗಿಯೂ ರಚಿಸಿದ 'ಸೌಗಂಧಿಕಾ ಪರಿಣಯ'ವೆಂಬ ನವೀನ ಕಥೆಯನ್ನು ಪ್ರಿಂಟು ಮಾಡಿಸಿ ಪ್ರಚಾರ ಮಾಡಲು ಶ್ರೀಮನ್ಮಹಾರಾಜ್ಞೀಯವರಾದ ರೀಜಂಟರು ವಾಣೀವಿಲಾಸ ಮಹಾಸನ್ನಿಧಾನದಿಂದ ಎಂ. ಶ್ರೀನಿವಾಸಮೂರ್ತಿರಾಯರಿಗೆ ಅಪ್ಪಣೆ ಆದುದನ್ನು ಸದರಿಯವರಿಂದ ಲಿಖಿತ ಮೂಲಕ ಹಕ್ಕನ್ನು ಪಡೆದು ಪ್ರಿಂಟು ಮಾಡಿಸಿರುತ್ತೇವೆ.

ಆಸ್ತಿಕ ಮಹಾಶಯರು ಈ ಪುಸ್ತಕದಲ್ಲಿ ಪ್ರಿಂಟು ಮಾಡಿಸಿದ ಇರತಕ್ಕ ನ್ಯೂನಾತಿ ರಕ್ತಗಳನ್ನು ನೋಡದೆ ವಿಷಯಾನುವಾದದಿಂದ ಮನಸ್ಸಂತೋಷಪಡಬೇಕೆಂದು ಪ್ರಾರ್ಥಿಸುವ

ಗುಂಡ್ಲು ಪಂಡಿತರು ಲಕ್ಷ್ಮಣಾಚಾರ್ಯಃ

ಮ್ಯಾನೇಜರ್

ಆರ್ಯಮತಗ್ರಂಥ ಪ್ರವರ್ಧಿನೀ ಸಭಾ,

ಮೈಸೂರು ಕೋಟೆ, ಡೋರ್ ನಂ ೫೧೩

ಅಂದಿನ ದಿನಮಾನಕ್ಕೆ ೩೬ ಅಧ್ಯಾಯಗಳನ್ನು ಒಳಗೊಂಡ ಸಮಗ್ರ ಗ್ರಂಥದ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟರು.

❋❋❋

# ಇತಿಹಾಸ ಮತ್ತು ಪುರಾತತ್ತ್ವ ಆಕರಗಳಾಗಿ ಹಸ್ತಪ್ರತಿ ಪ್ರಶಸ್ತಿಗಳು

– ಡಾ॥ ಎಫ್.ಟಿ. ಹಳ್ಳಿಕೇರಿ*

**ಯಾ**ವುದೇ ಹಸ್ತಪ್ರತಿಯಲ್ಲಿ ಎರಡು ಘಟಕಗಳು ಇರುತ್ತವೆ. ೧. ಕವಿನಿರ್ಮಿತ ಕೃತಿ ೨. ಲಿಪಿಕಾರ ನಿರ್ಮಿತ ಕೃತಿ. ಕವಿನಿರ್ಮಿತ ಕೃತಿಯ ಬಗೆಗೆ ನಮ್ಮಲ್ಲಿ ಸಾಕಷ್ಟು ಅಧ್ಯಯನಗಳು ನಡೆದಿವೆ. ಆದರೆ ಲಿಪಿಕಾರ ನಿರ್ಮಿತ ಪ್ರತಿಯ ಬಗೆಗೆ ಈಗೀಗ ಅಧ್ಯಯನಗಳು ನಡೆಯುತ್ತಿವೆ. ಲಿಪಿಕಾರ ನಿರ್ಮಿತ ಪ್ರತಿ ಎಂದರೆ ಒಂದು ಹಸ್ತಪ್ರತಿಯನ್ನು ಲಿಪಿಗೊಳಿಸಿದ ಸಮಯ, ಸಂದರ್ಭ, ಪರಿಸರ, ಇತಿವೃತ್ತವಿಚಾರ, ಲಿಪಿ ಮಾಡಿದ ಉದ್ದೇಶಗಳನ್ನು ಲಿಪಿಕಾರ ಹಸ್ತಪ್ರತಿಯ ಆದಿ ಅಂತ್ಯ ಭಾಗಗಳಲ್ಲಿ ದಾಖಲಿಸುತ್ತಾನೆ. ಹೆಚ್ಚಾಗಿ ಅಂತ್ಯಭಾಗದಲ್ಲಿ ಇವುಗಳನ್ನು ಗುರುತಿಸಬಹುದು. ಇವುಗಳಿಗೆ ಇಂಗ್ಲಿಷಿನಲ್ಲಿ Colophone ಎಂದು ಕರೆದರೆ ಕನ್ನಡದಲ್ಲಿ ಪುಷ್ಪಿಕೆ ಅಥವಾ ಪ್ರಶಸ್ತಿ ಎಂದು ಕರೆಯುತ್ತೇವೆ. ಸಾಹಿತ್ಯ, ಸಂಸ್ಕೃತಿ, ಇತಿಹಾಸ ಮತ್ತು ಪುರಾತತ್ವ ಅಧ್ಯಯನದ ಪುನಾರಚನೆಗೆ ಇವು ಹೇಗೆ ನೆರವಾಗುತ್ತವೆ ಎಂಬುದನ್ನು ಕುರಿತಂತೆ ಎಂ.ಎಂ.ಕಲಬುರ್ಗಿ, ಬಿ.ಆರ್.ಹಿರೇಮಠ, ಎಸ್.ಶಿವಣ್ಣ, ಸಿ.ನಾಗಭೂಷಣ, ನಂಜುಂಡಸ್ವಾಮಿ ಮುಂತಾದ ವಿದ್ವಾಂಸರು ಚರ್ಚಿಸಿದ್ದಾರೆ. ವಿಶೇಷವಾಗಿ ಇತಿಹಾಸ ಮತ್ತು ಪುರಾತತ್ವ ಅಧ್ಯಯನಕ್ಕೆ ಆಕರಗಳಾಗಿ ಈ ಹಸ್ತಪ್ರತಿ ಪ್ರಶಸ್ತಿಗಳು ಉಪಯೋಗವಾಗುವ ಕುರಿತು ವಿವೇಚಿಸುವುದು ಈ ಸಂಪ್ರಬಂಧದ ಮುಖ್ಯ ಆಶಯವಾಗಿದೆ.

### ಇತಿಹಾಸ ರಚನೆಯಲ್ಲಿ ಹಸ್ತಪ್ರತಿ ಪ್ರಶಸ್ತಿಗಳು

ವಿಜಯನಗರೋತ್ತರ ಕಾಲದ ಪಾಳೆಯಗಾರರ, ಚಿಕ್ಕಚಿಕ್ಕ ಅರಸು ಮನೆತನಗಳ ಬಗೆಗೆ ಈ ಪ್ರಶಸ್ತಿಗಳಲ್ಲಿ ಕೆಲವು ಮಾಹಿತಿಗಳನ್ನು ಲಿಪಿಕಾರರು ದಾಖಲಿಸಿದ್ದಾರೆ. ಮುಖ್ಯವಾಗಿ ಬಿಜ್ಜಾವರ ಮತ್ತು ಮಧುಗಿರಿಯ ಮಹಾನಾಡ ಪ್ರಭುಗಳು, ಎಳಂದೂರಿನ ಹಂದಿನಾಡ ಪ್ರಭುಗಳು, ಬಳ್ಳಾರಿಯ ಹಂಡೆಪಾಳೆಯಗಾರರು, ಮೈಸೂರು ಅರಸರು, ಬೀಳಗಿ, ಸ್ವಾದಿ, ಸಾಸಲ, ಹಾಗಲವಾಡಿ, ಸಿರಸಂಗಿ ಮುಂತಾದ ಅರಸು ಮನೆತನಗಳ ಬಗೆಗೆ ಕೆಲವು ಮಹತ್ವದ ವಿವರಗಳು ಇಲ್ಲಿವೆ.

### ೧. ಮಹಾನಾಡ ಪ್ರಭುಗಳು

ಕರ್ನಾಟಕದ ಆಗ್ನೇಯ ಭಾಗದಲ್ಲಿ ಆಳಿದ ಈ ಮನೆತನ ೩ನೆಯ ಶತಮಾನದಷ್ಟು ಪ್ರಾಚೀನವಾದುದು ಎಂಬುದು ಐತಿಹಾಸಿಕ ಆಧಾರಗಳಿಂದ ದೃಢಪಟ್ಟಿದೆ. ಕಂಚಿಪಲ್ಲವ, ನೊಳಂಬಪಲ್ಲವ ಹಾಗೂ ಮಹಾನಾಡಪ್ರಭು ಹೀಗೆ ಮೂರು ಹೆಸರುಗಳಲ್ಲಿ ಈ ರಾಜಪರಂಪರೆಯ ಇತಿಹಾಸ ಸಾಗಿಬಂದಿದೆ. ೧೩ನೆಯ ಶತಮಾನದ ಹೊತ್ತಿಗೆ ಮಹಾನಾಡಪ್ರಭು ಎಂಬ ಹೆಸರಿನಿಂದ ತಲೆಯೆತ್ತಿದ ಈ ಮನೆತನ ವಿಜಯನಗರ ಅರಸರ ಪ್ರೀತಿಯನ್ನು ಸಂಪಾದಿಸಿ ನಂತರ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದುದು ಮಹತ್ತರ ಸಾಧನೆಯಾಗಿದೆ. ಮಾರೇಗೌಡ, ಕಾಳಣ್ಣಗೌಡ, ಚನ್ನಪ್ಪಗೌಡ, ಕಾಳಚಿಕ್ಕಪ್ಪಗೌಡ, ರಾಮಪ್ಪಗೌಡ, ಸಂಗಪ್ಪಗೌಡ ಮತ್ತು ಚಿಕ್ಕಪ್ಪಗೌಡ ಎಂಬ ಏಳು ಜನ ಸಹೋದರರು ಈ ಮನೆತನದಲ್ಲಿ ಆಗಿಹೋಗಿದ್ದಾರೆ. ಇವರು ಕೋರಾ ತೆರಿಯೂರು, ಚೇಳೂರು, ಗುಬ್ಬಿ ಹೊಸಹಳ್ಳಿ, ಎಣ್ಣೆಗೆರೆ, ಬಿದರೆ ಗ್ರಾಮಗಳಲ್ಲಿ ನೆಲೆನಿಂತು ರಾಜ್ಯಭಾರ ಮಾಡಿದರು. ಈ ಏಳೂ ಗ್ರಾಮಗಳ ಪ್ರದೇಶವೇ ಮಹಾನಾಡು, ಇವುಗಳ ನಾಯಕರೇ ಮಹಾನಾಡಪ್ರಭುಗಳು ಎಂದು ಚರಿತ್ರೆಯಲ್ಲಿ ಕರೆಯಲ್ಪಟ್ಟಿದ್ದಾರೆ. ಇವರಲ್ಲಿ ಇಮ್ಮಡಿ ಚಿಕ್ಕಭೂಪಾಲ ಅತ್ಯಂತ ಪ್ರಭಾವಶಾಲಿ ನಾಯಕ. ತೋಂಟದ ಸಿದ್ಧಲಿಂಗರ ಪರಮಭಕ್ತನಾದ ಈತ ಕವಿಗಳಿಗೆ ಆಶ್ರಯ ನೀಡಿದ್ದಲ್ಲದೇ ತನ್ನ ಅರಮನೆಯಲ್ಲಿ ಅಪೂರ್ವವಾದ ಗ್ರಂಥಭಂಡಾರವನ್ನು ಹೊಂದಿದ್ದನೆಂದು ತಿಳಿದುಬಂದಿದೆ. ಆತನನ್ನು ಕುರಿತಂತೆ ಪ್ರಶಸ್ತಿಗಳು ಹೀಗೆ ಹೇಳುತ್ತವೆ:

---

* ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೫೮೩೨೭೬.

"ರೌದ್ರಿ ಸಂವತ್ಸರದ ಶ್ರಾವಣಶುದ್ಧ ೧೧ಲ್ಲು ಶ್ರೀಮನ್ಮಹಾನಾಡಪ್ರಭು ಬಿಜ್ಜವರದ ಇಮ್ಮಡಿ ಚಿಕ್ಕಪ್ಪಗೌಡರಯ್ಯನವರ ಶಾರದಾ ಭಂಡಾರಕ್ಕೆ ಅನುಭವದ ಸೊಂಪದೇವರ ಮಕ್ಕಳು ವೀರಸೊಂಪದೇವರು ಬರದ ಸ್ತೋತ್ರ ಭಾಷ್ಯಗಳ ಪುಸ್ತಕ"

"ಇದು ಪರಮೇಶ್ವರಾಂಘ್ರಿಸರಸೀರುಹ ಷಟ್ಪದ ಶಾತ್ರವರ್ಗದ ಪರ್ವತಶತಹೃದ ಕಾಮಿನೀಜನ ಲಸತ್ಕುಸುಮಾ ಸ್ತ್ರೀ ಸತ್ಯಪ್ರಾಕಾರ ಬುಧಕಲ್ಪಮಹೀರುಹ ಸದ್ಗುರುಲಿಂಗಜಂಗಮ ಸೇವಾದುರಂಧರ ವೀರಶೈವ ನಿಷ್ಠಾ ಸಮವರ್ತಿ ತೋಟಭೂಪಾಲ ಗರ್ಭಾಬ್ಧಿ ಪೂರ್ಣಹಿಮಕರ ಸಂಗಮಾಂಬಾ ತನೂಜ ಪ್ರಭುಲಲಾಮಲಾಮ ಯಿಂಮಡಿ ತೋಟಭೂಪಾಲಕಂ ಬರಯಿಸಿದ ಮದನತಿಲಕದ ಪುಸ್ತಕ ..........ಸಿದ್ಧಾರ್ಥಿ ಸಂವತ್ಸರದ ಕಾರ್ತ್ತಿಕ ಶು.೫ ಬುಧವಾರದಲೂ ತ್ತೋಂಟದೈಯ್ಯ ನಾಯಕರವರಿಗೆ ಚಿಟ್ಟನಹಳ್ಳಿಯ ಸೇನಭಾಗ ಲಿಂಗಪ್ಪನು ಬರೆದು ಕೊಟ್ಟ ಮದನತಿಲಕದ ಪುಸ್ತಕ"

" ಪಂಚಪ್ರಕಾರ ಗದ್ಯವನು ಶ್ರೀಮದ್ವೀರ ಶೈವಾಚಾರ ವಿಸ್ತಾರ ವೀರಮಹೇಶ್ವರಾಗ್ರಣಿ ವಿರಕ್ತಶಿಖಾಮಣಿ ಗೂಳೂರ ಶಿದ್ಧವೀರೇಶ್ವರ ದೇವರ ಶ್ರೀಪಾದಪದ್ಮಕ್ಕೆ ಬಿಜ್ಜವರ ಪುರವರ ಗುರುಲಿಂಗಜಂಗಮಾಚಾರ ದಿವಾಚರಣ ದೀಕ್ಷಾಪರಾಯಣನಾದ ಇಮ್ಮಡಿ ಚಿಕ್ಕಭೂಪಾಲ ಬರಯಿಸಿ ಸಮರ್ಪಿಸಿದ......."

"ಪ್ಲವ ಸಂವತ್ಸರ ಮಾರ್ಗಶಿರ ಬ. ೧೦ರಲ್ಲು ಶ್ರೀಮನ್ಮಹಾನಾಡ ಪ್ರಭು ಬಿಜ್ಜಾವರದ ಇಮ್ಮಡಿ ಚಿಕ್ಕಪ್ಪಗೌಡರು ಬರಯಿಸಿದ ಸಾನಂದಪುರಾಣಂ. ಇದನು ಬರೆದಾತನು ಯಜ್ಞನಾರಾಯಣ ದೀಕ್ಷಿತರ ಮಗ ವಿಶ್ವನಾಥನು. ಇದು ಬರಯಿಸಿದ ಇಮ್ಮಡಿ ಚಿಕ್ಕಪ್ಪಗೌಡರಿಗೆ........ ಅಷ್ಟೈಶ್ವರ್ಯವೂ ಈಶ್ವರ ಕೃಪಾದೃಷ್ಟಿಯೂ ಆಚಂದ್ರಾರ್ಕಮಸ್ತು......"

ಈ ನಾಲ್ಕು ಪುಷ್ಪಿಕೆಗಳಿಂದ ಮಹಾನಾಡ ಪ್ರಭುಗಳು ಬಿಜ್ಜಾವರವನ್ನು ರಾಜಧಾನಿ ಯನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡುತ್ತಿದ್ದರು ಎಂಬದು ತಿಳಿದುಬರುತ್ತದೆ. ಇವರಲ್ಲಿ ವೀರಶೈವ ಧರ್ಮದಲ್ಲಿ ನಿಷ್ಠೆವುಳ್ಳವರಾದ ಇಮ್ಮಡಿ ಚಿಕ್ಕಭೂಪಾಲ ಅಥವಾ ಒಂದನೆಯ ತೋಂಟದ ಭೂಪಾಲ ಮಹಾನಾಡಪ್ರಭು (ಕ್ರಿ.ಶ. ೧೫೬೧-೧೬೦೩) ಮತ್ತು ಈತನ ಪಟ್ಟದರಾಣಿ ಸಂಗಮಾಂಬಾ (ಈಕೆಯನ್ನು ಪರ್ಯಾಯವಾಗಿ ಚೆನ್ನಾಜಮ್ಮ ಎಂದೂ ಕಾವ್ಯಗಳಲ್ಲಿ ಕರೆಯಲಾಗಿದೆ; ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ೪-೫೬), ಇವರ ಮಗ ಇಮ್ಮಡಿ ತೋಂಟದ ಭೂಪಾಲ. ಈತ ಮದನತಿಲಕ ಪುಸ್ತಕವನ್ನು ಬರೆಯಿಸಿದ ಎಂಬ ಸಂಗತಿ ತಿಳಿದುಬರುತ್ತದೆ. ಅಲ್ಲದೆ, ಇಮ್ಮಡಿ ಚಿಕ್ಕಭೂಪಾಲನ ಅರಮನೆಯಲ್ಲಿ ಶಾರದಾ ಭಂಡಾರ ಎಂಬ ಹೆಸರಿನ ಗ್ರಂಥಾಲಯವಿದ್ದು, ಅದರಲ್ಲಿ ಸ್ತೋತ್ರ ಭಾಷ್ಯ, ಪಂಚ ಪ್ರಕಾರ ಗದ್ಯ, ಸಾನಂದ ಪುರಾಣ ಮೊದಲಾದ ಕಾವ್ಯ ಪುರಾಣಗಳನ್ನು ಬರೆಯಿಸಿ ಸಂಗ್ರಹಿಸಿದ್ದು, ತೋಂಟದ ಸಿದ್ಧಲಿಂಗೇಶ್ವರನ ಶಿಷ್ಯ ಗೂಳೂರು ಸಿದ್ಧವೀರಣ್ಣ ಈತನ ಸಮಕಾಲೀನನಾಗಿದ್ದನೆಂಬುದು ಇವುಗಳಿಂದ ಸ್ಪಷ್ಟವಾಗುತ್ತದೆ.

**೨. ಹದಿನಾಡ ಪ್ರಭುಗಳು**

ಮೈಸೂರು ಜಿಲ್ಲೆ ಎಳಂದೂರು, ಹದಿನಾಡು ಪ್ರಭುಗಳ ರಾಜಧಾನಿ. ಈ ಅರಸು ಮನೆತನದಲ್ಲಿ ಕೆಲವು ಅರಸರು ಹಸ್ತಪ್ರತಿಗಳನ್ನು ಲಿಪಿ ಮಾಡಿಕೊಟ್ಟದ್ದನ್ನು ಪ್ರಶಸ್ತಿಗಳು ಉಲ್ಲೇಖಿಸುತ್ತವೆ.

"ಸ್ವಸ್ತಿ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೫೦೨ನೆಯ ವಿಕ್ರಮ ಸಂವತ್ಸರದ ಕಾರ್ತಿಕ ಬಹುಳ ೩ ಮಂಗಳವಾರದಲ್ಲು ಸರ್ವಾಚಾರ ಸಂಪನ್ನ ಏಕಲಿಂಗಾನಿಷ್ಠಾಪರ ವೀರಶೈವ ಸಂಪಂನ ಗುಮ್ಮಳಾಪುರದ ಸಿಂಹಾಸನಕ್ಕೆ ಕರ್ತರಾದ ವಿರಕ್ತ ಸಿದ್ಧಲಿಂಗದೇವರಿಗೆ ಹದಿನಾಡ ಯಳವಂದೂರ ಅರಸು ಚೆಂನೊಡೆಯರು ಈ ಶೂನ್ಯಸಂಪಾದನೆಯ ವಚನಸಂಗ್ರಹವನು ಬರಸಿ ಸೇವಾರ್ಪಿತವಾಗಿ ನಮಸ್ಕರಿಸಿದರು"

"ವಿಕೃತಿ ಸಂವತ್ಸರದ ಚಯಿತ್ರ ಶುದ್ಧ ತ್ರಯೋದಶಿಯ ಸೋಮವಾರ ಹದಿನಾಡ ಯಿಂಮಡಿ ರಾಮರಾಜ ನಾಯಕರಿಗೆ ತಳಕಾಡ ದೇವರಸರ ಉಪಾಧ್ಯಾಯರು ಬರೆದ ಲೀಲಾವತಿಗಂ ಮಂಗಲಂ ಮಹಾ"

"......ಪದಿನಾಡ ಭೂವರ ಲಿಂಗರಾಜೇಂದ್ರ ತನೂಭವ ಲಿಂಗರಾಜಯ್ಯನವರಿಗೆ ವೇದೋಕ್ತಾಯುಶ್ಯ ಸಂತತಾರೋಗ್ಯ ಸಮಾಧಿವೈಶ್ವರ್ಯ ಮಿಶ್ರಕಳತ್ರ ಪುತ್ರ......ಶಿವಗಣ ಕೃಪೆಯಿಂದ ಸರ್ವರ್ತ ಸರ್ವದಸಿದ್ಧ ಸುಸ್ತಿರಲಿ ಎಂಬ ಸಂಭ್ರತಿ ಇಂದಾಶೀರ್ವಾದ ಗೈದು ಬರೆದ ಬಸವಪುರಾಣ. ಶ್ರೀಮದ್ ಶಾಲಿವಾಹನ ಶಕವರ್ಷ ೧೪೯೪ನೆಯ ಪರಿಧಾವಿ ಸಂವತ್ಸರದ ಆಶ್ವೀಜ ಶುದ್ಧ ೫ ಮೇಲುವಾರಕ್ಕೆ ಬರೆದು ಪೂರ್ಣವಾದ ಬಸವೇಶ್ವರನ ಪುರಾಣಕ್ಕೆ ಗ್ರಂಥ ೧೦೩೫೦ ಮಂಗಳಮಸ್ತು. ಶ್ರೀಮತ್ಕನಕ ಪುರವರಾಧೀಶ ಭುಜಂಗ ಲಿಂಗಾಯ ನಮಃ"

ಹದಿನಾಡ ಪ್ರಭುಗಳಲ್ಲಿ ಪ್ರಮುಖ ಅರಸನಾದವನು ಚೆನ್ನರಾಜ ಭೂಪಾಲ (ಕ್ರಿ.ಶ. ೧೫೭೬–೧೫೯೫). ಈತ ಗುಮ್ಮಳಾಪುರದ ಸಿದ್ಧಲಿಂಗದೇವರ ಪರಮಭಕ್ತ. ಈತ ಸಾಹಿತ್ಯ ಸಂಸ್ಕೃತಿಯಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದನು. ಈ ಮನೆತನದ ಮತ್ತೊಬ್ಬ ಅರಸ ಇಮ್ಮಡಿ ರಾಮರಾಜ ನಾಯಕ. ಈತನಿಗೆ ತಳಕಾಡ ದೇವರಸರ ಉಪಾಧ್ಯಾಯರು ಲೀಲಾವತಿ ಗ್ರಂಥವನ್ನು ಬರೆದುಕೊಟ್ಟ ಸಂಗತಿ ಮೇಲಿನ ಉಲ್ಲೇಖಗಳಿಂದ ಗೊತ್ತಾಗುತ್ತದೆ. ಅಲ್ಲದೇ ಈ ಮನೆತನದ ಮತ್ತೊಬ್ಬ ಅರಸ ತಿರುಮಲರಾಜ ಒಡೆಯನಿಗೆ ಲಿಂಗರಾಜೇಂದ್ರ (ಕ್ರಿ.ಶ. ೧೬೨೮–೧೬೫೪) ಹಾಗೂ ಮುದ್ದುರಾಜಯ್ಯ (ಕ್ರಿ.ಶ. ೧೬೫೫–೧೬೬೭) ಎಂಬ ಇಬ್ಬರು ಮಕ್ಕಳಿದ್ದರೆಂಬುದನ್ನು ಶಾಸನವೊಂದು ತಿಳಿಸುತ್ತದೆ. ಇನ್ನೂ ಮುಂದುವರೆದು ಮೇಲಿನ ಪ್ರಶಸ್ತಿಯಿಂದ ಮಹತ್ವದ ಸಂಗತಿಯೊಂದು ಬೆಳಕಿಗೆ ಬಂದಂತಾಗುತ್ತದೆ. ಅದೇನೆಂದರೆ, ಈ ಲಿಂಗರಾಜೇಂದ್ರನಿಗೆ ಲಿಂಗರಾಜಯ್ಯನೆಂಬ ಮಗನಿದ್ದ ಸಂಗತಿ. ಈ ಹಸ್ತಪ್ರತಿಯು ಕ್ರಿ.ಶ. ೧೬೭೨ರಲ್ಲಿ ಲಿಪಿಗೊಂಡಿದ್ದರಿಂದ ಇದೇ ಸಮಯದಲ್ಲಿ ಲಿಂಗರಾಜಯ್ಯನು ಅಧಿಕಾರದಲ್ಲಿದ್ದನೆಂಬುದು ಸ್ಪಷ್ಟವಾಗುತ್ತದೆ. ಈತನ ನಂತರದಲ್ಲಿ ಹದಿನಾಡ ಅರಸರ ರಾಜ್ಯಾಧಿಕಾರದ ಬಗೆಗೆ ಏನೂ ತಿಳಿದುಬರುವುದಿಲ್ಲ. ಬಹುಶಃ ಮೈಸೂರಿನ ದೊರೆ ಚಿಕ್ಕದೇವರಾಯ ಒಡೆಯರು ಕ್ರಿ.ಶ. ೧೬೬೫ರ ವೇಳೆಗೆ ಹದಿನಾಡನ್ನು ತಮ್ಮ ಪ್ರಾಂತ್ಯದಲ್ಲಿ ವಿಲೀನಗೊಳಿಸಿಕೊಂಡಂತೆ ಕಾಣುತ್ತದೆ.

**೩. ಮೈಸೂರು ಅರಸರು**

ವಿಜಯನಗರ ಕಾಲದ ನಂತರದ ದೊಡ್ಡ ಅರಸುಮನೆತನವೆಂದರೆ, ಮೈಸೂರು ಒಡೆಯರ ವಂಶ. ಬೆಟ್ಟದ ಚಾಮರಸ ಒಡೆಯರು, ಚಿಕ್ಕದೇವರಾಜ ಒಡೆಯರು, ಮುಮ್ಮಡಿ ಕೃಷ್ಣರಾಜ ಒಡೆಯರು, ಚಾಮರಾಜ ಒಡೆಯರು ಮೊದಲಾದವರು ಈ ಮನೆತನದ ಪ್ರಸಿದ್ಧ ಅರಸರು. ಇವರ ಆಳ್ವಿಕೆಯಲ್ಲಿ ಸಾಹಿತ್ಯ ಸಂಸ್ಕೃತಿ ಸಂಗೀತಾದಿ ಕಲೆಗಳು ಅತ್ಯಂತ ವೈಭವೋಪೇತವಾಗಿ ಬೆಳವಣಿಗೆ ಹೊಂದಿರುವುದಕ್ಕೆ ಸಾಕಷ್ಟು ಪುರಾವೆಗಳಿವೆ. ಅವುಗಳ ಬಗ್ಗೆ ಹಸ್ತಪ್ರತಿ ಪ್ರಶಸ್ತಿಗಳೂ ಪ್ರಮುಖ ಅಂಶಗಳನ್ನು ತಿಳಿಸಿಕೊಡುತ್ತವೆ. ಬೆಟ್ಟದ ಚಾಮರಸ ಒಡೆಯರ ಕುಮಾರ ಕಂಠೀರವ ನರಸರಾಜೇಂದ್ರ ಒಡೆಯರ ಕುರಿತ ಒಂದು ಪ್ರಶಸ್ತಿ ಹೀಗೆ ಹೇಳುತ್ತದೆ :

"ಸ್ವಸ್ತಿ ಶ್ರೀ ಸಕಲ ಕಲ್ಯಾಣಾಭ್ಯುದಯ ಶಾಲಿವಾಹನ ಶಕವರ್ಷ ೧೪೩೨ನೆಯ ವಿಳಂಬಿ ಸಂವತ್ಸರದ ಫಾಲ್ಗುಣ ಶುದ್ಧ ೧೨ ಆದಿತ್ಯವಾರದಲ್ಲು ಶ್ರೀಮದ್ರಾಜಾಧಿರಾಜರಾದ ಬೆಟ್ಟದ ಚಾಮರಸ ವೊಡೆಯರವರ ಕುಮಾರಕರಾದ ಕಂಠೀರವ ನರಸರಾಜೇಂದ್ರ......."

ಮುಮ್ಮಡಿ ಕೃಷ್ಣರಾಜ ಒಡೆಯರು, ಮೈಸೂರು ಅರಸರಲ್ಲಿ ಹೆಚ್ಚು ಪ್ರಸಿದ್ಧಿ ಪಡೆದವರು. ರಾಜರಾಗಿದ್ದುಕೊಂಡು ಅನೇಕ ಕೃತಿಗಳನ್ನು ರಚಿಸಿದ ಇವರು ಸಾಹಿತಿಗಳಿಗೆ, ಲಿಪಿಕಾರರಿಗೆ ಪ್ರೋತ್ಸಾಹ ನೀಡುತ್ತಿದ್ದರೆಂದು ಈ ಪ್ರಶಸ್ತಿಗಳಿಂದ ತಿಳಿದುಕೊಳ್ಳಬಹುದು.

"ಶಾಲಿವಾಹನ ಶಕವರ್ಷಗಳು ೧೭೫೬ ನೇ ವರ್ತಮಾನವಾದ ವಿಜಯ ಸಂವತ್ಸರದ ಆಷಾಢ ಶು.೧೧ ಶುಕ್ರವಾರದಲ್ಲು ಶ್ರೀಕೃಷ್ಣರಾಜ ಮಹಾರಾಜ ಕಂಠೀರವರು........"

"ಶಾಲಿವಾಹನ ಶಕವರುಷಂಗಳು ೧೭೫೮ ನೇ ವರ್ತಮಾನವಾದ ದುರ್ಮುಖಿ ನಾಮ ಸಂವತ್ಸರದ ವೈಶಾಖ ಶುದ್ಧ ೧೫ ಭಾನುವಾರದಲ್ಲೂ......... ಮಹೀಶೂರ ಪುರವರಾಧೀಶ ಶ್ರೀಕೃಷ್ಣರಾಜ ಒಡೆಯರವರಿಂದ ರಸಿಕ ಜನಾನಂದಕರಮಾಗಿ ವಿರಚಿತಮಾದ ಚಾಮುಂಡಿಕಾ ಲಘುನಿಘಂಟೆಂಬ ನವೀನಕೋಶದೊಳ್ ಮೂರು ಪ್ರಕರಣಕ್ಕೂ ಮಂಗಳಮಹಾಶ್ರೀಶ್ರೀ"

"ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷಂಗಳು ೧೭೬೧ ಸಂದ ವರ್ತಮಾನ ವಿಕಾರಿನಾಮ ಸಂವತ್ಸರದ ಮಾಘ ಶುದ್ಧ ೧ ಮಂಗಳವಾರ ಯೀ ಶುಭ ದಿವಸದಲ್ಲೂ ಶ್ರೀಮನ್ಮಹೀಶೂರ ಪುರವರಾಧೀಶರಾದ ಶ್ರೀಕೃಷ್ಣರಾಜ ಒಡೆಯರು..."

"ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷಂಗಳು ೧೭೯ನೇ ಸರ್ವಜಿನ್ನಾಮ ಸಂವತ್ಸರ ಪುಷ್ಯ ಶು.೧೦ಲ್ಲು ಮಹಾರಾಜ ಶ್ರೀಕೃಷ್ಣರಾಜಯ್ಯರಶಿನವರ ಪುತ್ರರಾದ ನಾರಣರಾಜಯ್ಯ ಅರಶಿನವರ ಸಂನಿಧಾನಕ್ಕೆ........"

**೪. ಕಳಲೆ ಅರಸರು**

ಮೈಸೂರು ಒಡೆಯರ ದಳವಾಯಿಗಳಾಗಿದ್ದವರು, ಕಳಲೆ ಮನೆತನದವರು. ಈ ಮನೆತನದಲ್ಲಿ ನರಸರಾಜನು ಅತ್ಯಂತ ಪ್ರಭಾವಶಾಲಿ ವ್ಯಕ್ತಿ. ಈತನ ವಂಶಾವಳಿಯನ್ನು ಪ್ರಶಸ್ತಿಯೊಂದು ಹೀಗೆ ನಿರೂಪಿಸುತ್ತದೆ.

"ಇತಿ ಶ್ರೀಮದಮಿತನಮಿತಾಂಭೋಜ ಸಂಭವಜಂಭಾರಿ ಪ್ರಮುಖ ಸುರಾಸುರವಂದ್ಯಮಾನ ಗರಳ ಪುರಾಧಿನಾಥ ಚರಣವಿಂದಸೇವಾ ಸಮಸಾದಿತ ಗೀರ್ವಾಣಾಂಧ್ರ ಕರ್ನಾಟಕಾದಿ ನಾನಾ ಭಾಷಾ ವಿಶೇಷ ಕಾವ್ಯರಚನಾಚತುರೀಧುರೀಣ ಶ್ರೀಮನ್ಮಹಾರಾಜಾಧಿರಾಜಾ ರಾಜಪರಮೇಶ್ವರ ರಾಜಮಾರ್ತಾಂಡ ಪ್ರೌಢಪ್ರತಾಪಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಬಿರುದಾಂಕಿತ ಶಂಖಚಕ್ರಮಕರಮತ್ಸ್ಯ ಹನೂಮದ್ಗರುಡ ಗಂಢಬೇರುಂಡ ಸಿಂಹಶರಭ ಸಾಲ್ವಭೂವರಾಹಾದಿ ನಾನಾವಿಧ ದೇವಧ್ವಜ ಬಿರುದಾಂಕಿತ ಸಕಲ ದೇಶಾಧೀಶ ಕಿರೀಟಮಣಿ ಘೃಣನಿರಾಜಿತ ಚರಣಯುಗಳ ಯಾದವ ವಂಶ ತಿಲಕ ಮಹೀಶೂರ ಕೃಷ್ಣರಾಜ ಸೇನಾಧಿಪ ದೊಡ್ಡರಾಜ ಪೌತ್ರ ವೀರರಾಜ ತನೂಜ ದಳಪತಿ ದೇವರಾಜಾನುಜ ಪರರಾಜಮದೇಭ ಪಂಚಾನನ ದಾಮಕ್ಷಾತ್ರಾಧೀಶ್ವರ ಹನೂಮಧ್ವಜ ಬಿರುದಾಂಕಿತ ಶಿವಪೂಜಾದುರಂಧರ ಭಾರದ್ವಾಜಸಗೋತ್ರ ಅಶ್ವಲಾಯನಸೂತ್ರ ಋಕ್ಷಾಖಾಧ್ಯಾಯಿಕ ವಿಭುದಜನವಿಧೇಯ ರಾಜಮಾನ್ಯ ರಾಜಶ್ರೀ ಕಳಲೆನಂಜರಾಜ ವಿರಚಿತಮಾಗಿ ಕರ್ಣಾಟಕ ಭಾಷಾವಿರಚಿತಮಾದ ನಂಜರಾಜ ವಾಣಿವಿಲಾಸವೆಂಬ ಮಹಾಭಾರತ ತಾತ್ಪರ್ಯ ಟೀಕಿನಲ್ಲಿ ವ್ಯಾಸಕೃತಮಾದ ಸಂಹಿತೆಯಲ್ಲಿ ಹರಿವಂಶವು ಸಂಪೂರ್ಣಂ."

ಕಳಲೆ ಅರಸು ಮನೆತನದವರು ಭಾರದ್ವಾಜ ಗೋತ್ರ, ಅಶ್ವಲಾಯನ ಸೂತ್ರ ದವರಾಗಿದ್ದು, ಅವರಲ್ಲಿಯೇ ನಂಜರಾಜನು ಪರರಾಜಮಧೇಭ, ದಾಮಕ್ಷಾತ್ರಾಧೀಶ್ವರ, ವಿಭುದಜನರಲ್ಲಿ ವಿಧೇಯ ಮುಂತಾದ ಬಿರುದುಗಳನ್ನು ಹೊಂದಿದ್ದನೆಂಬುದು ಇದರಿಂದ ಗೊತ್ತಾಗುತ್ತದೆ. ಜೊತೆಗೆ ಈತನ ಆಶ್ರಯದಾತ ಕೃಷ್ಣರಾಜ ಒಡೆಯರರು ನಾನಾ ಭಾಷಾ ವಿಶಾರದರೂ, ಕಾವ್ಯರಚನಚಾತುರ್ಯರೆಂದೂ ವರ್ಣಿಸಲಾಗಿದೆ.

"...ಕಳಲೆ ಪುರಾಧಿಪರಾದ ರಾಜೈಯ್ಯರಸಿನವರ ಪ್ರಪೌತ್ರರಾದ ಕೆಂಪರಾಜೈಯ್ಯರಸಿನವರ ಪೌತ್ರರಾದ ಲಕ್ಷ್ಮೀಕಾಂತಯ್ಯರಸಿನವರ ಪುತ್ರರಾದ ಕಾಂತರಾಜೈಯ್ಯರಸಿನವರು ಸ್ವಹಸ್ತಾಕ್ಷರದಿಂದ ಬರೆದು ಪೂರ್ಣಮಾದ ಸಾರಸಂಗ್ರಹದ ಪುಸ್ತಕಕ್ಕೆ ಸಿದ್ಧಿರಸ್ತು."

ಮೇಲಿನ ಉಲ್ಲೇಖದಲ್ಲಿ ಕಾಂತರಾಜಯ್ಯನವರ ವಂಶಾವಳಿಯನ್ನು ಲಿಪಿಕಾರನು ರಾಜೈಯ್ಯ > ಕೆಂಪರಾಜೈಯ್ಯ > ಲಕ್ಷ್ಮೀಕಾಂತಯ್ಯ > ಕಾಂತರಾಜೈಯ್ಯ ಹೀಗೆ ದಾಖಲಿಸಿದ್ದಾನೆ. ಅಲ್ಲದೇ ಈ ಮನೆತನದ ರಾಜಶೇಖರ, ಮಲ್ಲರಾಜ, ಲಕ್ಷ್ಮೀಕಾಂತಯ್ಯ ಮೊದಲಾದ ಅರಸರ ಬಗೆಗೂ ವಿಪುಲ ಮಾಹಿತಿ ಇಲ್ಲಿ ಲಭಿಸುತ್ತದೆ.

**೫. ಮೂಗೂರು ಅರಸರು**

ಮೈಸೂರು ಒಡೆಯರ ಅಧೀನದಲ್ಲಿದ್ದ ಮೂಗೂರು ಅರಸರಲ್ಲಿ ವೀರರಾಜ ಒಡೆಯರ್ ತುಂಬ ಪ್ರಖ್ಯಾತ ಅರಸ. ಆಲೂರು ವೆಂಕಪ್ಪ ಎಂಬಾತ ಈತನಿಗೆ ಸೂಪಶಾಸ್ತ್ರ ಕೃತಿಯನ್ನು ಬರೆದುಕೊಟ್ಟ ವಿಷಯ ಪ್ರಶಸ್ತಿ (ಮದ್ರಾಸ್ ಗವರ್ನಮೆಂಟ್ ಓರಿಯಂಟಲ್ ಲೈಬ್ರರಿಯ ಕನ್ನಡ ಹಸ್ತಪ್ರತಿ ಸೂಚಿ, ಸಂಪುಟ ೭, ೧೯೫೮) ಯೊಂದರಿಂದ ತಿಳಿಯುತ್ತದೆ. "ಶ್ರೀಮಾನ್ ವೀರರಾಜ ವೊಡೆಯರಯ್ಯನವರಿಗೆ ಆಯುರಾರೋಗ್ಯೈಶ್ವರ್ಯ ಅಷ್ಟಪುತ್ರರಾಗಲಿಯೆಂದು ಆಲೂರ ವೆಂಕಪ್ಪನು ಬರೆದ ಸೂಪಶಾಸ್ತ್ರಕ್ಕೆ ಮಂಗಳಮಹಾ.... ನರಸಿಂಹಪುರದ ಗುಂಜಾನರಸಿಂಹನು ವೀರರಾಜನೃಪ ಕುಲಿಮಣಿಗಂ ವರಪುತ್ರ ಪೌತ್ರರೇಳ್ಗೆಯ ಭರದಿಂದೈಶ್ವರ್ಯವಿತ್ತು ಸಲಹಲಿ ವಿರುತಂ" ಎಂಬ ಲಿಪಿಕಾರನ ಹೇಳಿಕೆಯೊಂದು ವೀರರಾಜನ ಬಗ್ಗೆ ತಿಳಿಸುತ್ತದೆ. ಇಲ್ಲಿಯವರೆಗೆ ಈತನನ್ನು ಮೈಸೂರು ಅರಸನೆಂದು ತಿಳಿಯಲಾಗಿತ್ತು. ಆದರೆ ಇತ್ತೀಚೆಗೆ ಬಿ. ನಂಜುಂಡಸ್ವಾಮಿಯವರು ತಮ್ಮ ಲೇಖನ (ಹಸ್ತಪ್ರತಿ ಅಧ್ಯಯನ, ಸಂ. ೧-೧, ೨೦೦೩, ಪುಟ ೩೬)ವೊಂದರಲ್ಲಿ ವೀರರಾಜ ಒಡೆಯ ಮೈಸೂರು ಅರಸನಲ್ಲ, ಮೂಗೂರು ಅರಸನೆಂದು ಶಾಸನದ ಆಧಾರದಿಂದ ಸ್ಪಷ್ಟಪಡಿಸಿದ್ದಾರೆ.

೬. ಬಾಗಳಿ ಅರಸರು

ಹರಪನಹಳ್ಳಿ ಪಾಳೇಗಾರರೆಂದು ಹೆಸರಾದ ಬಾಗಳಿ ಅರಸರು ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದಂತೆ ಅನೇಕ ವಿಧಾಯಕ ಕಾರ್ಯಗಳನ್ನು ಮಾಡಿದ್ದಾರೆ. ಇದಕ್ಕೆ ಶಾಸನ, ಕಾವ್ಯ, ಪುರಾಣ ಮತ್ತು ಇನ್ನಿತರ ಆಕರಗಳಲ್ಲಿ ಸ್ಪಷ್ಟ ಉಲ್ಲೇಖಗಳಿವೆ. ಈ ಮನೆತನದ ಆಳ್ವಿಕೆಯಲ್ಲಿ ದೇವಕವಿಯ 'ಮರುಳುಸಿದ್ಧನ ಕಾವ್ಯ' ಎಂಬ ಒಂದು ಕೃತಿ ಮಾತ್ರ ರಚನೆಗೊಂಡಿದ್ದ ಬಗೆಗೆ ಪುರಾವೆಗಳಿದ್ದವು. ಆದರೆ ಇತ್ತೀಚೆಗೆ ನಾನು ಶೋಧಿಸಿದ ಹಸ್ತಪ್ರತಿಗಳಲ್ಲಿ ಕಿರುಕೃತಿಯೊಂದು ಲಭ್ಯವಾಯಿತು. ಅದು ಹಿರಿಯಣ್ಣ ಕವಿಯ 'ಹಯರತ್ನಶ್ರೇಣಿ' ಎಂಬ ಅಶ್ವಶಾಸ್ತ್ರಕ್ಕೆ ಸಂಬಂಧಿಸಿದ ಕೃತಿ. ಲಿಪಿಕಾರರಾದ ಶೇಷೇಂದ್ರಾಚಾರ್ಯರು ಈ ಹಸ್ತಪ್ರತಿಯ ಅಂತ್ಯದಲ್ಲಿ,

"........ಗೀರ್ವಾಣ ಭಾಷೆಯಲ್ಲಿ ಗ್ರಂಥರೂಪದಿಂದಿರ್ದ ರುಷಿಪ್ರಣೀತಕ್ಕೆ ಈ ಕಾಲದ ಪಂಡಿತರು ಅಂದರೆ ಹರಪನಹಳ್ಳಿ ಶೀಮೆಗೆ ಅರಸನಾದ ಬಾಗಳಿ ಬೂದಿಬಸಪ್ಪ ನಾಯಕನ ಅರಮನೆ ಪುರೋಹಿತರೂ ಉಚ್ಚಂಗಿದುರ್ಗದ ಹಿರಿಯಣ್ಣಪ್ಪನೆಂಬ ಕವಿಯೂ ಕನ್ನಡ ಭಾಷೆಯ ಭಾಮಿನಿ ಷಟ್ಪದಿರೂಪದಿಂ ಬರೆದು ಲೋಕೋಪಕಾರ ಮಾಡಿರುವನು......."

ಎಂದು ಹೇಳಿದ್ದಾರೆ. ಇದರಿಂದ ಹರಪನಹಳ್ಳಿ ಸೀಮೆಗೆ ಅರಸನಾದ ಬೂದಿಬಸಪ್ಪ ನಾಯಕನ ಅರಮನೆ ಪುರೋಹಿತನಾದ ಉಚ್ಚಂಗಿದುರ್ಗದ ಹಿರಿಯಣ್ಣಪ್ಪನೆಂಬ ಕವಿ 'ಋಷಿ ಪ್ರಣೀತ'ವನ್ನು ಕನ್ನಡ ಭಾಷೆಯ ಭಾಮಿನಿ ಷಟ್ಪದಿ ರೂಪದಲ್ಲಿ ಬರೆದ 'ಋಷಿಪ್ರಣೀತ'ವನ್ನೂ ಸಂಗತಿ ತಿಳಿಯುತ್ತದೆ.

ಹೀಗೆಯೇ ಸಾಸಲು, ಸ್ವಾದಿ, ಬೀಳಗಿ, ಹಾಗಲವಾಡಿ, ಸಿರಸಂಗಿ ಮೊದಲಾದ ರಾಜಮನೆತನಗಳ ಅರಸರ ಆಳ್ವಿಕೆಯ ಕಾಲ, ಅವರು ಸಾಹಿತ್ಯಕ್ಕೆ ನೀಡಿದ ಪ್ರೋತ್ಸಾಹ ಇತ್ಯಾದಿ ವಿವರಗಳನ್ನು ಪ್ರಶಸ್ತಿಗಳಿಂದ ತಿಳಿದುಕೊಳ್ಳಬಹುದು.

ರಾಜವರ್ಗದವರ ಪರಿವಾರದಲ್ಲಿ ಅನೇಕ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಿದ್ದ ಬಗೆಗೆ ಅನೇಕ ವಿವರಗಳು ಇವುಗಳಲ್ಲಿ ದಾಖಲುಗೊಂಡಿವೆ. ದಳವಾಯಿ, ಸುಬೇದಾರ, ಭಂಡಾರಿ, ಬೊಕ್ಕಸದವರು, ಟಂಕಸಾಲೆಯವರು, ಕರಣಿಕರು, ಹೆಗ್ಗಡೆಯವರು, ಉಗ್ರಾಣದವರು, ಶಾನಭೋಗರು, ಪಾರುಪತ್ಯಗಾರರು, ಸುಂಕದ ಅಧಿಕಾರಿಗಳ ಕುರಿತು ಇಲ್ಲಿ ಕೆಲವು ಅಪರೂಪದ ಮಾಹಿತಿಗಳು ಲಭ್ಯವಾಗುತ್ತವೆ. ದನಗೂರು ದಳವಾಯಿ, ದಳವಾಯಿ ಬೈಲಪ್ಪ, ಬೊಕ್ಕಸದ ಚಾಮಯ್ಯ, ಬೊಕ್ಕಸದ ನಂಜಪ್ಪ, ಬೊಕ್ಕಸದ ಚಂಗಣ್ಣ, ಬೊಕ್ಕಸದ ನರಸಯ್ಯ, ರಾಯಸದ ಲಕ್ಷ್ಮೀಪತಿ, ರಾಯಸದ ಪ್ರಸನ್ನಯ್ಯ, ರಾಯಸದ ಕಾಳಯ್ಯ, ರಾಯಸದ ವೆಂಕಣ್ಣ ಗುರಿಕಾರ ಪುಟ್ಟಪ್ಪ, ಗುರಿಕಾರ ದೇವಯ್ಯ, ಗುರಿಕಾರ ತಿಮ್ಮನಾಯಕ, ಗುರಿಕಾರ ಬಸವಲಿಂಗಪ್ಪ, ಪಾರುಪತ್ಯಗಾರ ಸಿದ್ಧಯ್ಯ, ಪಾರುಪತ್ಯಗಾರ ವೀರಸಂಗಪ್ಪ, ಸೇರುವೆಗಾರ ಪುಟ್ಟನಯ್ಯ, ಸುಂಕದ ಅಪ್ಪಣ್ಣ, ಉಗ್ರಾಣದ ಸಿದ್ಧಯ್ಯ, ಉಗ್ರಾಣದ ದೊಡ್ಡಯ್ಯ, ಅರಮನೆ ಲೇಖರಿ ದಾಸಪ್ಪ, ಅರಮನೆ ಬಸಮ್ಮ, ಶಾನುಭೋಗ ದೇವಯ್ಯ, ಶಾನುಭೋಗ ಭಾಸ್ಕರಪ್ಪ, ಶಾನುಭೋಗ ಮಲ್ಲಿಕಾರ್ಜುನ, ಮುನಿಷಿ ನಾರಾಣಪ್ಪ, ಕೊತ್ವಾಲ್ ಪಾಟೀಲ ತಿಮ್ಮನಗೌಡ ಮೊದಲಾದ ವಿವಿಧ ಅಧಿಕಾರಿ ವರ್ಗದವರ ನೂರಾರು ಹೆಸರುಗಳನ್ನು ಹಸ್ತಪ್ರತಿಗಳ ಪುಷ್ಪಿಕೆಗಳಲ್ಲಿ ಗುರುತಿಸಲು ಸಾಧ್ಯವಿದೆ. ಈ ಹೆಸರುಗಳನ್ನು ಗಮನಿಸಿದಾಗ ಒಂದು ರಾಜಮನೆತನದಲ್ಲಿ ಹಲವಾರು ರೀತಿಯ ಅಧಿಕಾರಿವರ್ಗದವರು ಇರುತ್ತಿದ್ದರೆಂಬುದು ಗೊತ್ತಾಗುತ್ತದೆ. ಇವರು ತಮ್ಮ ಕಾಯಕವನ್ನು ಮಾಡುವುದರ ಜೊತೆಗೆ ಹಸ್ತಪ್ರತಿಗಳನ್ನು ಲಿಪಿಗೊಳಿಸುವುದರಲ್ಲಿಯೂ ಪ್ರವೀಣರಾಗಿದ್ದರು. ಇದಕ್ಕೆ ಮುಖ್ಯ ಕಾರಣ ಅವರೆಲ್ಲ ಸಾಮಾನ್ಯವಾಗಿ ಅಕ್ಷರಸ್ಥರಾದವರು. ಇವರೆಲ್ಲ ವಿಜಯನಗರೋತ್ತರ ಕಾಲದ ಪಾಳೆಯಗಾರರು, ಚಿಕ್ಕಚಿಕ್ಕ ಅರಸುಮನೆತನದವರು, ಮೈಸೂರು ಅರಸರು ಮತ್ತು ಅವರ ನಂತರದ ಕಾಲದಲ್ಲಿದ್ದವರು. ಹೀಗಾಗಿ ಕಳೆದ ಐದಾರು ಶತಮಾನಗಳ ಅವಧಿಯಲ್ಲಿ ಆಡಳಿತದ ವಿಕೇಂದ್ರೀಕರಣ ಯಾವ ರೀತಿಯಾಗಿ ಇತ್ತೆಂಬುದು ಇದರಿಂದ ತಿಳಿಯಲು ಅನುಕೂಲವಾಗುತ್ತದೆ. ಈ ನಿಟ್ಟಿನಲ್ಲಿ ಇನ್ನೂ ವ್ಯಾಪಕವಾದ ಅಧ್ಯಯನಕ್ಕೆ ಸಾಕಷ್ಟು ಅವಕಾಶಗಳಿವೆ.

ಜೈನ ವೀರಶೈವ ಮಠಗಳ, ಮಠಾಧಿಪತಿಗಳ ಗುರುಪರಂಪರೆ, ಶಿಷ್ಯಪರಂಪರೆಯನ್ನು ತಿಳಿದುಕೊಳ್ಳುವಲ್ಲಿ ಇವು ಹೇಗೆ ಸಹಾಯಕಾರಿಯಾಗುತ್ತವೆ ಎಂಬುದನ್ನು ಈಗ ನೋಡಬಹುದು:

" ಸಂಗೀತಪುರದ ಶ್ರೀಮಜ್ಜಯಕೀರ್ತಿದೇವರುಗಳ ಅತಿ ಪ್ರೀತಿಯ ಶಿಷ್ಯರಾದ ದ್ವಿಜಕುಲದ ದುಗ್ಗರಸನ ಅನುಜನಾದ ತಮ್ಮಣ್ಣನು. ........."

"ಶ್ರೀಮದಕಳಂಕ ದೇವರುಗಳ ಪ್ರಿಯ ಶಿಷ್ಯರಾದ ಹೊನ್ನಾವರದ ಜಯಕೀರ್ತಿದೇವರು."

"........ಕೊಲ್ಲಾಪುರದ ಶ್ರೀ ಜಿನಸೇನ ಭಟ್ಟಾರಕಸ್ವಾಮಿ ಕರಕೃತ ಸಂಜಾತ ಗುಣಭದ್ರಸ್ವಾಮಿಗಳ ಶಿಷ್ಯರು ಶಾಂತಿಮತಿ ಕಂತಿಯರು........"

".........ಜಯಸೇನರ ಶಿಷ್ಯ ಶೀಲಾಬ್ಧಿಯ ವರಶಿಷ್ಯ ಆದಪ್ಪನು......."

".........ಗುಡಿಕೋಟೆ ಬೋಳವಡೇರ ಮಠದಾ ಗುರಪ್ಪದೇವರ ಕುಮಾರು ಸಾಂತವೀರವಡೇರ ಕುಮಾರು ಬಂಡೇವಡೇರವರ ಕುಮಾರು ಚಂನಾಬಸವದೇವರು ವರಕುಮಾರ ಬಸವಲಿಂಗದೇವರ ಕುಮಾರ ಸಿದ್ಧರಾಮಯ್ಯನು ಬರೆದ......"

"ಮರವಂಜಿ ಮಠದ ಮರುಳಪ್ಪನವರ ಮಗ ಮರುಳಯ್ಯನವರು ತಂಮನಾದ ಗುರುಪಾದಯ್ಯನಿಗೆ ಪಾಠ ಹೇಳಿಕೊಳ್ಳುವುದಕ್ಕೆ ಬರೆದಂತ ಕಾಶ್ಮೀರರಾಯನ ಪ್ರಸಂಗ......"

ಸಂಗೀತಪುರ, ಹೊನ್ನಾವರ, ಕೊಲ್ಲಾಪುರ, ಗುಡಿಕೋಟೆ, ಮರವಂಜಿಯಲ್ಲಿರುವ ಜೈನ ವೀರಶೈವ ಮಠಾಧಿಪತಿಗಳ ವಂಶಪರಂಪರೆ, ಗುರುಪರಂಪರೆ ಹಾಗೂ ಶಿಷ್ಯಪರಂಪರೆಯನ್ನೂ ಇದರಿಂದ ಗುರುತಿಸಬಹುದು. ಗುಡಿಕೋಟೆ ಬೋಳವಡೇರ ಮಠದ ಪರಂಪರೆಯೊಂದನ್ನೇ ಹೇಳುವುದಾದರೆ, ಗುರುವಪ್ಪದೇವ > ಶಾಂತವೀರ > ಬಂಡೇವಡೇರ > ಚೆಂನಾಬಸವದೇವರು > ಬಸವಲಿಂಗದೇವರು > ಸಿದ್ಧರಾಮಯ್ಯ ಹೀಗೆ ಆರು ತಲೆಮಾರನ್ನು ಲಿಪಿಕಾರ ದಾಖಲಿಸಿದ್ದಾನೆ. ಹೀಗೆ ಮಠಗಳ ಇತಿಹಾಸವನ್ನು ದಾಖಲಿಸಿದ ಕೀರ್ತಿಗೂ ಲಿಪಿಕಾರರು ಭಾಜನರಾಗಿದ್ದರೆ.

ಹಸ್ತಪ್ರತಿ ಪ್ರಶಸ್ತಿಗಳಲ್ಲಿ ಉಲ್ಲೇಖಗೊಂಡ ಸ್ಥಳನಾಮಗಳಿಂದ ಆಯಾ ಗ್ರಾಮದ ಭೌಗೋಳಿಕತೆಯನ್ನು ತಿಳಿಯಲು ಸಾಧ್ಯವಿದೆ. ಲಿಪಿಕಾರರು ವಾಸಿಸುತ್ತಿದ್ದ ಗ್ರಾಮ ಅಥವಾ ಆ ಸ್ಥಳವು ಯಾವ ಪ್ರಾಂತ, ಸೀಮೆ, ಕಸಬೆ, ಪರಗಣೆ, ಮಾಗಣಿ, ಹೋಬಳಿ, ತಾಲೂಕು, ಜಿಲ್ಲೆ, ಸಂಸ್ಥಾನಕ್ಕೆ ಸೇರಿವೆ ಎಂಬುದರ ದಾಖಲೆಗಳಾಗಿ ಇವು ಕಂಡುಬರುತ್ತವೆ.

ಕೆಲವು ಲಿಪಿಕಾರರು ಪ್ರತಿ ಮಾಡಿದ ಸ್ಥಳ ಯಾವುದೆಂಬುದನ್ನೂ ದಾಖಲಿಸಿದ್ದಾರೆ. ಈ ದಾಖಲೆಗಳು ಆಯಾಸ್ಥಳದ ಚರಿತ್ರೆಯನ್ನು ರಚಿಸುವಲ್ಲಿ ಪೂರಕ ಆಕರಗಳಾಗಿ ನೆರವಾಗುತ್ತವೆ. ಸಾಮಾನ್ಯವಾಗಿ ಲಿಪಿಕಾರರು ಮಠಮಾನ್ಯಗಳಲ್ಲಿ ದೇವಾಲಯಗಳಲ್ಲಿ ಪ್ರತಿಕಾರ್ಯ ಮಾಡುತ್ತಿದ್ದರೆಂಬುದು ಇವುಗಳನ್ನು ಅವಲೋಕಿಸಿದಾಗ ಗೊತ್ತಾಗುತ್ತದೆ.

"ತರಿಕೆರೆ ಚರದ ರುದ್ರಸ್ವಾಮಿಯವರ ಮರಿದೇವರು ಮದ್ದುಬಸಪ್ಪನ ಹಳ್ಳಿಯಲ್ಲಿರುವಂಥ ಶಂಕರದೇವರಿಗೆ ನಿಂಬಲಗೇರಿಯಲ್ಲಿರುವ ವಾರಸ್ತಾಪುರದ ಶೀಲವಂತ ಶಿವಲಿಂಗಪ್ಪ........." ಎಂಬ ಉಲ್ಲೇಖದಿಂದ ಉತ್ತಂಗಿ ಶ್ರೀ ಶಂಕರಮಠದ ಮೂಲಮಠ ಯಾವುದೆಂಬುದು ಶೋಧವಾಯಿತು. ಚಿಕ್ಕಮಗಳೂರು ಜಿಲ್ಲೆ ತರಿಕೆರೆಯ ಶಂಕರಮಠ ಈ ಪರಂಪರೆಯ ಮೂಲಮಠ. ಈಗಲೂ ತರಿಕೆರೆಯಲ್ಲಿ ಈ ಹೆಸರಿನ ಮಠ ಅಸ್ತಿತ್ವದಲ್ಲಿದೆ. ಈ ಮಾಹಿತಿ ದೊರೆತದ್ದು ಮೇಲಿನ ಉಲ್ಲೇಖದಿಂದ ಎಂಬುದು ಗಮನಾರ್ಹ ಸಂಗತಿ.

"ಕಡೆಕಲ್ಲ ವಿರಕ್ತ ಮಠದಲ್ಲು ಲಿಖಿಸಿದ ಧನರಾಜಯ ನಿಘಂಟು........."

"ಧಾರವಾಡ ಮಂಗಳವಾರಪೇಟ ವಿರಕ್ತಮಠದಲ್ಲಿ ಬರೆಸಿದ ಪುಸ್ತಕ........"

"ಗದುಗಿನ ತೋಂಟದಾರ್ಯಸ್ವಾಮಿಗಳ ಮಠದಿಂದ ತಂದ ಪುಸ್ತಕದ ಮರುಪ್ರತಿ........."

"ಮಿಡಿಗೆ ಸೀತಾವರಣ ವೀರಣ್ಣನ ಗುಡಿಯೊಳಗೆ......"

"ಕುಂದಗೋಳದ ಸಾದುಗೇರಿಯ ಮೂಕಬಸವೇಶ್ವರನ ಗುಡಿಯಲ್ಲಿ......"

"ಮೌಜಮಾಗೇರಿ ಹನುಮಂತದೇವರ ಗುಡಿಯಲ್ಲಿ........"

"ಯಲಬುರಿಗೆ ಸೀಮೆಯೊಳಗಣ ಮು ಕಲ್ಲೂರ ಸ್ಥಳಕ್ಕೆ ಮುಖ್ಯ ಕರ್ತೃವಾಗಲ್ಪಟ್ಟಂಥ ಕಲ್ಲೇಶ್ವರನ ದೇವಾಲಯದ

ರಂಗಮಧ್ಯದಲ್ಲಿ ಕುಳಿತು ಎಡದಲ್ಲಿ ಕಲಿನಾಥ ಬಲದಲ್ಲಿ ಬಸವೇಶ್ವರನ ಸನ್ನಿಧಿಯಲ್ಲಿ ಕುಳಿತುಕೊಂಡು ಬರಕೊಂಡ ಪುಸ್ತಕವು..."

"ಸಂಕಿಗಟ್ಟದ ಶ್ರೀವೀರವರ್ಧಮಾನ ಸ್ವಾಮಿಯವರ ದಿವ್ಯ ಚೈತ್ಯಾಲಯದಲ್ಲಿ"

"ಮೈಸೂರ ಶಾಂತೀಶ್ವರ ಸ್ವಾಮಿಯವರ ಬಸದಿಯಲ್ಲಿ"

"ಕೊಡೊಲಿ ಗ್ರಾಮದೊಳೊಪ್ಪುವ ಶ್ರೀ ಆದಿಜಿನಾಲಯದೊಳು..."

"ಕೇಸಾಪುರದ ಪಾರಿಶ್ವನಾಥ ಚೈತ್ಯಾಲಯದಲ್ಲು......."

"ಹುವ್ವಿನಬಾಗೆಯ ಶ್ರೀ ಅನಂತನಾಥನ ಚೈತ್ಯಾಲಯದಲ್ಲಿ..."

ಇಂಥ ಹಲವಾರು ಪ್ರಶಸ್ತಿಗಳು ಮಠ, ಗುಡಿ, ಬಸದಿಗಳು ಅಸ್ತಿತ್ವದಲ್ಲಿದ್ದ ಬಗೆಗೆ ಮಾಹಿತಿ ನೀಡುತ್ತವೆ.

ಇನ್ನು ಹಸ್ತಪ್ರತಿಗಳ ಆದಿಯಲ್ಲಿ ಬರುವ ಮಂಗಲವಾಚಕಗಳು ಲಿಪಿಕಾರರ ಇಷ್ಟದೈವ, ಗುರುಪರಂಪರೆಯನ್ನು ತಿಳಿಸುವುದರೊಂದಿಗೆ ಆಯಾ ಗ್ರಾಮಗಳಲ್ಲಿದ್ದ ಜೈನ ವೀರಶೈವ ಬ್ರಾಹ್ಮಣ ಮತ್ತು ಇತರೆ ದೇವಾಲಯಗಳ ವಿಶೇಷತೆಯನ್ನೂ ತಿಳಿಸುತ್ತವೆ.

"ಆದವಾನಿ ಯಲ್ಲಮ್ಮನ ಪಾದವೆ ಗತಿ..."

"ಕನಕಗಿರಿ ವಿಜಯಪಾರ್ಶ್ವನಾಥಾಯ ನಮಃ..."

"ಮಲೆಯೂರ ಆದಿಪರಮೇಶ್ವರಾಯ ನಮಃ..."

"ಗದುಗಿನ ವೀರನಾರಾಯಣಸ್ವಾಮಿಯವರ ಚರಣಾರವಿಂದವೆ ಗತಿ..."

"ಕಲ್ಲಗಾರ ಲಕ್ಷ್ಮೀನಾರಾಯಣದೇವರ ಪಾದವೆ ಗತಿ..."

"ಕಂದಿಗೆರೆಯ ಕೊಳಲ ಗೋಪಾಲಕೃಷ್ಣಸ್ವಾಮಿಯವರ ಶ್ರೀಚರಣಾರವಿಂದವೆ ಗತಿ..."

"ಹಿರೂರ ಚಂನಬಸವೇಶ್ವರಾಯ ನಮಃ...."

"ಕಾಲಿಹಳ್ಳಿ ಬಸವೇಶ್ವರನ ಪಾದವೇ ಗತಿ..." ಹೀಗೆ ಆರಂಭದಲ್ಲಿ ಮಂಗಲ ವಾಚಕಗಳನ್ನು ಹೇಳಿಯೇ ಲಿಪಿಕಾರ ಮುಂದುವರೆಯುತ್ತಾನೆ.

ಒಟ್ಟಿನಲ್ಲಿ ಹಸ್ತಪ್ರತಿ ಪ್ರಶಸ್ತಿಗಳಿಂದ ಇತಿಹಾಸ ಮತ್ತು ಪುರಾತತ್ವ ಅಧ್ಯಯನಕ್ಕೆ ಸಂಬಂಧಿಸಿದ ಸಂಗತಿಗಳನ್ನು ಹೀಗೆ ಕ್ರೋಡೀಕರಿಸಬಹುದು.

೧. ವಿಜಯನಗರೋತ್ತರ ಕಾಲದ ಪಾಳೆಯಗಾರರ ಇತಿಹಾಸಕ್ಕೆ ಸಂಬಂಧಿಸಿದಂತೆ, ಅದರಲ್ಲಿಯೂ ವಿಶೇಷವಾಗಿ ಅವರ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ತಿಳಿದುಕೊಳ್ಳಲು ಇವು ಪೂರಕ ಆಕರಗಳಾಗಿವೆ.

೨. ರಾಜಪರಿವಾರ, ಆಡಳಿತ ವರ್ಗ ಹಾಗೂ ಆಡಳಿತ ವಿಭಾಗಗಳ ವಿವರಗಳನ್ನು ತಿಳಿಯುವಲ್ಲಿ ಇವು ಉಪಯುಕ್ತ ಆಕರಗಳಾಗಿ ಸಹಕಾರಿಯಾಗಿವೆ.

೩. ಇಲ್ಲಿ ಉಕ್ತವಾದ ಬಸದಿಗಳು, ಮಠಮಾನ್ಯಗಳು, ಗುಡಿಗಳು, ದೇವಾಲಯಗಳು ಕರ್ನಾಟಕದ ಧಾರ್ಮಿಕ ಅನನ್ಯತೆಯನ್ನು ತಿಳಿಸಿಕೊಡುತ್ತವೆ.

೪. ಜೈನ ವೀರಶೈವ ವೈದಿಕ ಮಠಾಧೀಶರ ಗುರುಪರಂಪರೆ, ವಂಶಪರಂಪರೆ ಮತ್ತು ಶಿಷ್ಯ ಪ್ರಶಿಷ್ಯ ಪರಂಪರೆಯನ್ನು ತಿಳಿದುಕೊಳ್ಳಲು ಇವು ನೆರವಾಗುತ್ತವೆ.

೫. ಪ್ರಾದೇಶಿಕ ಇತಿಹಾಸ (Regional History) ರಚನೆಯಲ್ಲಿ ಹಸ್ತಪ್ರತಿ ಪ್ರಶಸ್ತಿಗಳೂ ಸಹ ಸಹಾಯಕಾರಿಯಾಗುತ್ತವೆ.

ಈ ನಿಟ್ಟಿನಲ್ಲಿ ಹಸ್ತಪ್ರತಿ ಪ್ರಶಸ್ತಿಗಳಂಥ ಆಕರಗಳನ್ನು ಬಳಸಿಕೊಂಡು ಇತಿಹಾಸವನ್ನು ಪುನಾರಚಿಸುವ ಕಡೆಗೆ ನಾವು ಮುನ್ನಡೆಯಬೇಕಾಗಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. **ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ,** (ಸಂಪುಟ ೧ ರಿಂದ ೯), ಮೈಸೂರು ವಿ.ವಿ.

೨. ಟಿ. ಚಂದ್ರಶೇಖರನ್ (ಸಂ), **ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ,** ಸಂ.೭, ೧೯೫೮.

೩. ಎಫ್.ಟಿ. ಹಳ್ಳಿಕೇರಿ, ಕೆ. ರವೀಂದ್ರನಾಥ (ಸಂ), **ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸೂಚಿ,** ಸಂ.೧, ೨೦೦೦.

೪. **ಡಿ. ಪರಮಶಿವಮೂರ್ತಿ, ಸಂಶೋಧನೆಯ ಸಿರಿ,** ೧೯೯೬.

೫. **ಬಿ.ಆರ್. ಹಿರೇಮಠ, ಕನ್ನಡ ಹಸ್ತಪ್ರತಿ ಲಿಪಿಕಾರರು, ಪ್ರಶಸ್ತಿಗಳು,** ೧೯೯೩

೬ **ಎಫ್.ಟಿ. ಹಳ್ಳಿಕೇರಿ, ಕಂಠ ಪತ್ರ,** ೨೦೦೩.

೭. **ಎಸ್. ಶಿವಣ್ಣ (ಸಂ), ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು,** ೧೯೯೪.

೮. ಎಂ.ಎಂ. ಕಲಬುರ್ಗಿ, ಬಿ.ಆರ್. ಹಿರೇಮಠ, ಎಸ್. ವಿ. ಅಯ್ಯನಗೌಡರ (ಸಂ), **ಕೊಲ್ಹಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿಯ ಹಸ್ತಪ್ರತಿ ಸೂಚಿ,** ೧೯೮೮.

೯. ಅಕ್ಕಮಹಾದೇವಿ ಎಸ್. ರೊಟ್ಟಿಮಠ, **ಕನ್ನಡ ಹಸ್ತಪ್ರತಿ ಪ್ರಶಸ್ತಿಗಳು : ಒಂದು ಅಧ್ಯಯನ** (ಅಪ್ರಕಟಿತ ಮಹಾಪ್ರಬಂಧ), ೨೦೦೨.




# ಮೋಡಿ ಲಿಪಿ – ದಾಖಲೆಗಳು

– ಕೆಳದಿ ಗುಂಡಾಜೋಯಿಸ್*

**ಭಾ**ಷಾ ವಿಜ್ಞಾನದಲ್ಲಿ 'ಮೋಡಿ ಲಿಪಿ' ವಿಶ್ವವ್ಯಾಪಿಯಾಗಿದ್ದು ವೈವಿಧ್ಯಮಯ ಅರ್ಥಗಳಿಂದ ಕೂಡಿ ಪದ ಸಂಪತ್ತುಗಳನ್ನು ಹೊಂದಿದೆ. ದೇಶ ವಿದೇಶಗಳ ಪತ್ರಾಗಾರ ಹಾಗೂ ಖಾಸಗೀ ಸಂಗ್ರಹಗಳಲ್ಲಿ ಆಯಾ ಭಾಷೆಗಳಿಗನುಗುಣವಾಗಿ ಮೋಡಿ ಲಿಪಿ ಸಂಗ್ರಹಗಳು ಗರಿಷ್ಠ ಮಟ್ಟದಲ್ಲಿ ಲಭಿಸುತ್ತವೆ. ನಿಘಂಟು ತಜ್ಞ ಡಾ. ಎಫ್.ಕಿಟ್ಟೆಲ್ ಮೋಡಿ ಲಿಪಿಯನ್ನು ಕುರಿತು –

ಮೋಡಿ > A Kind of Craft to try the ability of another (2) Hasty and illegible writing.

A running hand; the business characters in Marathi (2) A Kind of drng (3) a style, fashion (of speach ets.,)

Moreseness, sullenness, want of openness.

ಈ ರೀತಿ ಅರ್ಥೈಸಿದ್ದಾರೆ.[೧]

**ಮೋಡಿ ಲಿಪಿ ಹೇಮಾದ್ರಿ ಪಂತ**

ಹೇಮಾದ್ರಿ ಪಂತನು ಮೋಡಿ ಲಿಪಿ ಆದ್ಯ ಪ್ರವರ್ತಕನೆಂದು ಇತಿಹಾಸದಲ್ಲಿ ಪ್ರತಿಪಾದಿಸಲಾಗಿದೆ. ಕ್ರಿ.ಶ. ೧೨೬೦ರಿಂದ ೧೩೦೯ರವರೆಗೆ ದೇವಗಿರಿಯನ್ನಾಳಿದ ಅರಸು ಪರಂಪರೆಯಲ್ಲಿ ಹೇಮಾದ್ರಿ ಪಂತನು ಭಂಡಾರಿಯಾಗಿದ್ದವನು. ಈತನ ಹುದ್ದೆಯ ಹೆಸರು 'ಶ್ರೀ ಕರಣಾಧಿಪ' ಎಂದು. 'ಹೇಮಾಡಿ ಪಂತ' ಎಂಬುದಾಗಿ ಪ್ರಸಿದ್ಧಿ ಹೊಂದಿದ್ದ ಈತನ ನಿಜನಾಮ 'ಹೇಮಾದ್ರಿ ಪಂಡಿತ' ಪ್ರೊ. ವೆಬರ್‌ರವರು 'ಕೃಷ್ಣ ಜನ್ಮಾಷ್ಟಮಿ' ತಮ್ಮ ಪ್ರಬಂಧದಲ್ಲಿನ ವಿಷಯವನ್ನು Correspondance and miscellanea ವಿಭಾಗದಲ್ಲಿ ಗರ್ಭೀಕರಿಸಿದ ಹೇಮಾದ್ರಿ ಪಂತನ ಇತಿಹಾಸವನ್ನು ಕುರಿತು ವಿವರಿಸುತ್ತಾರೆ.[೨]

**ಮೋಡಿಲಿಪಿಯ ಪತ್ರಾಗಾರಗಳು**

ಪತ್ರಾಗಾರಗಳೇ ಮೋಡಿ ಲಿಪಿಯ ಸಮಗ್ರ ದಫ್ತರ ಖಾನೆಗಳು.

**ರಾಜ್ಯ ಪತ್ರಾಗಾರಗಳು**

| ನಂ. | ಪತ್ರಾಗಾರಗಳು | ಸ್ಥಾಪನೆ | ದಾಖಲೆಗಳ ಕಾಲಗಳು | ವಿಶೇಷ |
|---|---|---|---|---|
| ೧. | ಮದರಾಸ್ | ೧೯೦೯ | ೧೬೭೨-೧೮೭೬ | ಬಹಳಷ್ಟು ಕಣ್ಮರೆಯಾಗಿವೆ. |
| ೨. | ಮಹಾರಾಷ್ಟ್ರ | ೧೮೨೧ | ೧೬೭೭-೧೯೪೮ | ಬೊಂಬಾಯಿ, ಪುಣೆ, ಕೊಲ್ಹಾಪುರ ಸೌರಾಷ್ಟ್ರ ನಾಗಪುರ, ಔರಂಗಾಬಾದ್‌ಗಳಲ್ಲಿ ಶಾಖಾ ಕೇಂದ್ರಗಳು ಕನ್ನಡ ದಾಖಲೆಗಳು ಸೇರಿವೆ |
| ೩. | ಪಶ್ಚಿಮಬಂಗಾಳ | ೧೯೧೩ | ೧೯೫೬-೧೮೫೮ | |

* ನಿವೃತ್ತ ಕ್ಯೂರೇಟರ್, ಕೆಳದಿ ವಸ್ತುಸಂಗ್ರಹಾಲಯ, ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ.

೪. ಬಿಹಾರ ೧೯೫೪ ೧೮೬೪-೧೮೮೪
೫. ಪಂಜಾಬ್ ೧೯೪೭ ೧೮೫೬-೧೯೪೯, ೧೬೯೬-೧೭೦೨
೬. ಉತ್ತರಪ್ರದೇಶ ೧೯೫೦ ೧೭೬೨-೧೮೬೩
೭. ಒರಿಸ್ಸಾ ೧೯೪೮ ೧೮೦೩-೧೮೯೫
೮. ಅಸ್ಸಾಂ ೧೯೨೦ ೧೮೨೩-೧೯೫೦
೯. ಆಂಧ್ರಪ್ರದೇಶ ೧೯೫೦ ೧೭೨೦-೧೯೪೭
೧೦. ಮಧ್ಯಪ್ರದೇಶ ೧೯೫೪ ೧೮೩೩-೧೯೪೮
೧೧. ರಾಜಾಸ್ತಾನ್ – ೧೬೩೧-೧೬೪೧ ರಾಜಾಸ್ತಾನ್ ಸರಕಾರದ ವಿಶೇಷ ಸಂಚಿಕೆ, ಸುಜಸ್ ನೋಡಿರಿ.
೧೨. ಕಾಶ್ಮೀರ – ೧೭೨೪-೧೯೫೦
೧೩. ಕೇರಳ – ೧೬೨೫-೧೮೬೯
೧೪. ಕರ್ನಾಟಕ ೧೯೭೩ –

ಕರ್ನಾಟಕ ಇತಿಹಾಸ ಕುರಿತ ಮೋಡಿ ಲಿಪಿ ಸಂಗ್ರಹಗಳು ದೇಶ ವಿದೇಶಗಳಲ್ಲಿ ಚದುರಿ ಹೋಗಿವೆ. ಇದಕ್ಕೆ ಕನ್ನಡ ಮೋಡಿ ಲಿಪಿಯೂ ಹೊರತಾಗಿಲ್ಲ. ಕರ್ನಾಟಕ ಇತಿಹಾಸದಲ್ಲಿ ವಿಜಯನಗರ ಕೆಳದಿ ಇತಿಹಾಸಗಳು ಪ್ರಬುದ್ಧಮಾನ ಸಂಪನ್ಮೂಲ ಕೇಂದ್ರಗಳಾಗಿದ್ದರಿಂದ ಪ್ರೊ. ಜಿ.ಎಸ್.ದೀಕ್ಷಿತ್, ಡಾ. ದೇಶಿಕಾಚಾರ್‌ರವರು ದೆಹಲಿಯ ರಾಷ್ಟ್ರೀಯ ಪತ್ರಾಗಾರ ಮಹಾ ನಿರ್ದೇಶಕ ಡಾ. ಎಸ್.ಎನ್.ಪ್ರಸಾದ್‌ರವರನ್ನು ಬೆಂಗಳೂರು ಮತ್ತು ಕೆಳದಿ ಸಂಶೋಧನಾಲಯಕ್ಕೆ ಆಹ್ವಾನಿಸಿ, ಕರ್ನಾಟಕಕ್ಕೆ ಪತ್ರಾಗಾರದ ಅವಶ್ಯಕತೆಯನ್ನು ಮನಗಾಣಿಸಿಕೊಟ್ಟುದರಿಂದ ಇದಕ್ಕೆ ನಾಂದಿಯಾಯಿತು. ಇದಕ್ಕಾಗಿ ಅವರು ಅಭಿನಂದನೆಗೆ ಪಾತ್ರರಾಗಿದ್ದಾರೆ. ಮೊಟ್ಟ ಮೊದಲ ನಿರ್ದೇಶಕರಾಗಿದ್ದ ಡಾ. ದೇಶಿಕಾಚಾರ್ಯರು ಹಾಗೂ ನಾನು ಸೇರಿದ್ದು ಡಾ. ದೀಕ್ಷಿತರು, ಡಾ. ಸೂರ್ಯನಾಥ ಕಾಮತ್‌ರವರ ಮಾರ್ಗದರ್ಶನದಲ್ಲಿ ಈ ಇಲಾಖೆಯಲ್ಲಿ ವಿವಿಧ ಯೋಜನೆಗಳನ್ನು ಕೈಗೊಂಡಿದ್ದುದು ಈಗ ಇತಿಹಾಸ. ರಾಜ್ಯ ಪತ್ರಾಗಾರಗಳನ್ನು ಅಭಿವೃದ್ಧಿಪಡಿಸುವಲ್ಲಿ ಮಹಾರಾಷ್ಟ್ರವು ಅತೀವ ಆಸ್ಥೆ ವಹಿಸಿತ್ತು.

ಕರ್ನಾಟಕದಲ್ಲಿ ದೇಶ-ವಿದೇಶಗಳಲ್ಲಿರುವ ಕೆಳದಿ ಮತ್ತು ಮೈಸೂರು ಸಂಪದ್ಭರಿತ ಇತಿಹಾಸ ಸಂಪನ್ಮೂಲಗಳನ್ನು ಮನಗಂಡು ಇದನ್ನು ಉಪಪತ್ರಾಗಾರ ಕೇಂದ್ರವನ್ನಾಗಿಸಲು ನಿರ್ದೇಶಕರು ಸರಕಾರಕ್ಕೆ ವರದಿ ಸಲ್ಲಿಸಿದ್ದು, ಶಿವಮೊಗ್ಗದಲ್ಲಿ ಆರಂಭಿಸಲು ಪ್ರಯತ್ನಿಸಿತು. ಏಕೋ ಏನೋ ಇದೂ ಕೈಬಿಟ್ಟು ಹೋದುದು ಕೆಳದಿ ಇತಿಹಾಸ ದುರ್ದೈವ! ಆದರೆ ಭಾರತ ಸರಕಾರದ ಹಸ್ತಪ್ರತಿ ಅಭಿಯಾನವು ಕೆಳದಿ ಸಂಶೋಧನಾಲಯವನ್ನು ಕೆಳದಿ ಹಸ್ತಪ್ರತಿ ಸಂಪನ್ಮೂಲ ಕೇಂದ್ರವೆಂದು ಮಾನ್ಯ ಮಾಡಿ ಅಭಿವೃದ್ಧಿಪಡಿಸುತ್ತಿದೆ! ಇದು ಕೆಳದಿ ಪತ್ರಾಗಾರಕ್ಕೆ ಸಂದ ಗೌರವವಾಗಿದೆ. ಇದೇ ರೀತಿಯಲ್ಲಿ ಮರಾಠಿಯ ರುಮಾಲುಗಳ ಸಂಗ್ರಹಣೆ ಆದಿಯಾಗಿ ದೇಶೀಯ ಸಂಸ್ಥಾನಗಳ ಖಾಸಗೀ ಸಂಗ್ರಹಗಳಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸಗಳ ಸಂಪತ್ತು ಹೇರಳವಾಗಿ ಮೋಡಿ ಲಿಪಿಗಳಲ್ಲಿವೆ. ಇದಲ್ಲದೆ ಅಂಡಮಾನ್, ಅಜ್ಮೀರ್, ತ್ರಿಪುರ, ಅಮೆರಿಕಾ, ಪಶ್ಚಿಮ ಜರ್ಮನಿ, ಫ್ರಾನ್ಸ್, ಸ್ಪೆಯಿನ್, ಪೋರ್ಚುಗಲ್, ಜಪಾನ್, ಹಾಲೆಂಡ್, ಇಟಲಿ, ಇಂಗ್ಲೆಂಡ್, ಪೂರ್ವ ಯೂರೋಪ್, ಇಸ್ತಾಂಬುಲ್, ಸಿಲೋನ್, ಅರೇಬಿಯಾ ಮುಂತಾದ ದೇಶಗಳಲ್ಲಿಯೂ ಮೋಡಿ ಲಿಪಿ ಪತ್ರಾಗಾರಗಳಿವೆ. ಮಾದರಿಗಾಗಿ ಇಟಲಿ ಪಿಯತ್ರೋ ಡೆಲ್ಲವಲ್ಲೆಯ ಇಟಲಿ ಭಾಷೆಯಲ್ಲಿರುವುದರ ಮಾದರಿ ಪತ್ರವನ್ನು ಅನುಬಂಧದಲ್ಲಿ ನೀಡಲಾಗಿದೆ.[೩]

**ವಿದೇಶಿಯರು ಕಂಡ ಇತಿಹಾಸದ ಕೆಳದಿ ಪತ್ರಾಗಾರ**

ಪ್ರಾಚೀನ ಓಲೆಗರಿಗಳು, ಕಡತಗಳು, ಕೋರಿ ಕಾಗದಗಳು ಮುಂತಾದವುಗಳಲ್ಲಿ ಚಾರಿತ್ರಿಕಾಂಶಗಳ ಮೋಡಿ ಲಿಪಿಗಳಿವೆ. ಕ್ರಿ.ಶ. ೧೬೩೭ರಲ್ಲಿ ಕೆಳದಿ ರಾಜಧಾನಿಯ ಅರಮನೆಯಲ್ಲಿ ಇಂಗ್ಲೆಂಡಿನ ಪೀಟರ್ ಮೋಡಿಯಲ್ಲಿ ದಾಖಲಿಸಿದುದು ಗಮನಾರ್ಹವಾಗಿದೆ.

ಪತ್ರಾಗಾರದ ಚರಿತ್ರೆಯಲ್ಲಿ ಕೆಳದಿ ಇತಿಹಾಸದ ಈ ಪಳೆಯುಳಿಕೆ ದೇಶದಲ್ಲಿಯೇ ಅಪೂರ್ವವಾದುದೆಂದು ಪತ್ರಾಗಾರ ತಜ್ಞ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮಾದರಿಯೊಂದು ಕೆಳದಿ ಸಂಶೋಧನಾಲಯದಲ್ಲಿದ್ದು, ಕೆಳದಿ ಹಸ್ತಪ್ರತಿ ಸಂಪನ್ಮೂಲ

ಕೇಂದ್ರದ ಮಹತ್ವವನ್ನು ಪ್ರತಿಬಿಂಬಿಸುತ್ತದೆಯೆಂದರೆ ಉತ್ಪ್ರೇಕ್ಷೆಯಾಗಲಾರದು. ತಾಳೆಯೋಲೆಯಲ್ಲಿರುವ ಕೆಳದಿ ರಾಣಿ ಚೆನ್ನಮ್ಮಾಜಿಯ ನಿರೂಪವೊಂದೂ ಅಮೂಲ್ಯವಾದುದು.

ಮೋಡಿ ಲಿಪಿ ಇತಿಹಾಸ ಕುರಿತು ಗ್ವಾಲಿಯರ್‌ನಲ್ಲಿ ೧೯೦೪ರಲ್ಲಿ ಬ್ರಿಟಿಷ್ ಅಧಿಕಾರಿ ಮಿ. ಬೇನ್ಸ್‌ರವರ ಲಿಪಿಗಣತಿ. ಪರ್ಶಿಯನ್ 'ಶಿಕಸ್ತಾ' ಬಾಲಾಜಿ ಆವಾಜಿ ಚಿಟ್ನೀಸ್, ಬಿವಲ್ಕಾರಿ, ಕಿಟ್ವಾ, ಶಿವಾಜಿ ಕಾಲದ ಕಲಂದಾನ್, ಖರೀತಾ ಮುಂತಾದ ಸುದೀರ್ಘ ವಿವರಣೆಗಳನ್ನು ಕ.ಸಾ.ಪರಿಷತ್ಪತ್ರಿಕೆ ಸಂ. ೮೦, ಸಂ. ೩; 'ಕನ್ನಡ ಮೋಡಿ ಲಿಪಿ' ನನ್ನ ಲೇಖನದಲ್ಲಿ ನೀಡಿರುವುದರಿಂದ ಪುನರುಕ್ತಿಯ ಅಗತ್ಯವಿಲ್ಲವೆಂದು ಕೈಬಿಡಲಾಗಿದೆ. ಮೋಡಿ ಲಿಪಿಯಲ್ಲಿರುವ ರಾಜಕೀಯ, ಆರ್ಥಿಕ ಸಾಮಾಜಿಕ, ಸಾಂಸ್ಕೃತಿಕ ದಾಖಲೆಗಳನ್ನು ಈ ಕೆಳಕಂಡಂತೆ ವಿಂಗಡಿಸಬಹುದು. (ಸ್ಥೂಲವಾಗಿ)




**ಮೋಡಿ ಲಿಪಿ ಸಾಮಗ್ರಿಗಳು**

ಹಿಂದೆಯೇ ನಿರೂಪಿಸಿದಂತೆ ತಾಳೆಯೋಲೆಗಳು, ಕಡತಗಳು, ಕೋರಿ ಕಾಗದಗಳು, ಸ್ಟ್ರೇ ಕಾಗದಗಳು, ಮಹಾರಾಷ್ಟ್ರದಲ್ಲಿರುವ ರುಮಾಲುಗಳ ಸಂಗ್ರಹದಲ್ಲಿ ಮೋಡಿ ಲಿಪಿ ದಾಖಲೆಗಳು ವಿಪುಲವಾಗಿವೆ. ತಮಿಳುನಾಡಿನಲ್ಲಿ ಆನಂದ ರಂಗಪಿಳ್ಳೆಯ ಸಂಗ್ರಹಗಳು ಹಾಗೂ Tirupporur and vadakkuppath (18th century locality Accounts) ಓಲೆಗರಿಯಲ್ಲಿ ಗೋಚರಿಸಿವೆ. ಕಾಂಚೀಪುರಂನ ಚಂಗಲ್‌ಪಟ್ಟು ಕಲೆಕ್ಟರ್ ಆಫೀಸಿನಲ್ಲಿ ಮೋಡಿ ಲಿಪಿಯ ಪತ್ರಗಳಿವೆ.

**ಪುರಾತನ ಕಡತಗಳು**

ಕಡತಗಳು ಅಮೂಲ್ಯ ಚಾರಿತ್ರಿಕ ದಾಖಲೆಗಳು. ಇದರ ಮಹತ್ವವನ್ನರಿತ ಸ್ವೀಡನ್ ಸರಕಾರದ ಲಂಡ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರು ಡಾ. ನೀಲಾಂಬರ್ ಹಾಟಿ ಮತ್ತು ಮೇಜರ್ ಎಸ್.ಸಿ.ಜೇಮ್ಸ್ ಹೀಮಾನ್ (Dr. Nilambar Hatti : Major Sc. James Heiman) ರವರು 'NIA Snytt Nordic News letter of Asian Studies' ಅಂತರಾಷ್ಟ್ರೀಯ ಸಂಚಿಕೆಗಳಲ್ಲಿ ಪ್ರಕಟಿಸಿ ವಿಶ್ವದ ಗಮನ ಸೆಳೆದಿದ್ದಾರೆ. ದೇಶದಲ್ಲಿಯೇ ಕರ್ನಾಟಕ ಕಡತಗಳ 'ಅಮೂಲ್ಯ ಚಾರಿತ್ರಿಕ ಸಂಪತ್ತುಗಳನ್ನು ಖಜಾನೆಯಾಗಿದ್ದುದನ್ನು ಹಾಗೂ ಬ್ರಿಟಿಷರ ವಿರೋಧಾಂಶ ಮಾಹಿತಿಗಳನ್ನೂ ಮನಗಂಡ ಬ್ರಿಟಿಷ್ ಅಧಿಕಾರಿ ಥಾಮಸ್ ಮನ್ರೋವಿನ ಈ ಕೆಳಗಿನ ಮಾಹಿತಿಯಿಂದ –

'The only accounts showing the local incidence of the revenue in the old days seem to have been the 'Kaddatan' of Block Books kept by the Shanbhognes but their use was prohibited under the Mysore Government and many of them had been lost before the commencements of the British adiministration'.

(ದಿ. ೩೧.೫.೧೮೦೦ರ ಥಾಮಸ್ ಮನ್ರೋ ಪತ್ರದ ಪ್ಯಾರಾ ನಂ. ೫)

ಕೆಳದಿ ಸಂಶೋಧನಾಲಯ ಇದಕ್ಕೆ ಆದ್ಯತೆ ನೀಡಿ ದೇಶದಲ್ಲಿಯೇ ಅಮೂಲ್ಯವೆಂದು ಸಂಗ್ರಹಿಸಿ ರಕ್ಷಿಸುತ್ತಿದೆ. ಬೊಂಬಾಯಿ

ಪತ್ರಾಗಾರದಲ್ಲಿರುವ 'ರುಮಾಲು' ಸಂಗ್ರಹಗಳೂ ಇದೇ ಮಾಲೆಗೆ ಸೇರಿದ್ದು ಪ್ರಾಮಾಣಿಕ ಸಂಶೋಧಕರನ್ನು ಹುಡುಕುತ್ತಿದೆ. ಕುವೆಂಪು ವಿಶ್ವವಿದ್ಯಾನಿಲಯ ಕೆಳದಿ ಸಂಶೋಧನಾಲಯದ ಮಹತ್ವವನ್ನು ಮನಗಂಡು ಗೌ॥ ಉಪಕುಲಪತಿ ಡಾ.ಬಿ.ಎಸ್.ಶೇರಿಗಾರ್ ಮತ್ತು ಪ್ರಾಧ್ಯಾಪಕ ಡಾ.ರಾಜಾರಾಮ ಹೆಗ್ಗಡೆಯವರ ಮುಖಾಂತರ ಅಭಿವೃದ್ಧಿಪಡಿಸುತ್ತಿದೆ. ಈಚೆಗೆ ಕೆಳದಿ ಸಂಶೋಧನಾಲಯ ಕ್ಯೂರೇಟರ್ ಡಾ.ವೆಂಕಟೇಶ್ ಜೋಯಿಸ್ ಬಿಳಿ ಬಟ್ಟೆಯಲ್ಲಿರುವ ಅಮೂಲ್ಯ ಕಡತವೊಂದನ್ನು ಪತ್ತೆ ಮಾಡಿದ್ದಾರೆ. ಕೆಳದಿ ಇತಿಹಾಸ ಸಂಗತಿಗಳನ್ನೊಳಗೊಂಡ ಮೋಡಿ ಲಿಪಿ ಸಂಗ್ರಹಗಳು ಹಾಲೆಂಡಿನ ನೆದರ್‌ಲ್ಯಾಂಡ್ಸ್ ಪತ್ರಾಗಾರದಲ್ಲಿದ್ದು ಅಲ್ಲಿನ ನಿರ್ದೇಶಕರು ಕೆಳದಿಗೂ ಭೇಟಿ ನೀಡಿದ್ದಾರೆ.

**ಬ್ರಿಟಿಷರ ಕಾಲದ ಶಿವಮೊಗ್ಗ ಜಿಲ್ಲಾ ಕಛೇರಿ**

ಶಿವಮೊಗ್ಗದ ಹಳೇ ಜಿಲ್ಲಾಧಿಕಾರ ಕಟ್ಟಡ ಮೋಡಿ ಲಿಪಿ ಸಂಗ್ರಹಗಳ ಖಜಾನೆಯೊಂದಾಗಿತ್ತು. ೧೭೬೩ರಲ್ಲಿ ಕೆಳದಿ ರಾಜ್ಯದ ಪತನಾನಂತರ ಬ್ರಿಟಿಷರ ಕಾಲದಲ್ಲಿದ್ದ ಈ ಕಟ್ಟಡದಲ್ಲಿ ಸೂಪರಿಂಟೆಂಡ್ ಆಗಿ (ನಗರ ಡಿವಿಜನ್) ಜನರಲ್ ಮ್ಯಾಥ್ಯೂಸ್, ಟಿಪ್ಪು ಮುಂತಾದವರು ಆಡಳಿತ ನಡೆಸಿದರು. ವಿಜಯನಗರ ಹಾಗೂ ಕೆಳದಿ ಇತಿಹಾಸೋತ್ತರ ಕಾಲದ ಅಪಾರ ಕರ್ನಾಟಕ ಇತಿಹಾಸದ ಸಂಪನ್ಮೂಲ ಸಾಮಗ್ರಿಗಳು ಬ್ರಿಟಿಸರು ಶೇಖರಿಸಿ ಇಲ್ಲಿಂದಲೇ ಲಂಡನ್‌ಗೆ ಕೊಂಡೊಯ್ದರು. ಕರ್ನಲ್ ಮೆಕೆಂಝಿಯು ಸಂಗ್ರಹಿಸಿದ (ಕೆಳದಿ ಜೋಯ್ಸರ ಮನೆಯಲ್ಲಿದ್ದ) ಕೆಳದಿ ನೃಪ ವಿಜಯ ಓಲೆಗರಿ ಹಸ್ತಪ್ರತಿಯೂ ಲಂಡನ್‌ನಲ್ಲಿದೆ. ಚಾರಿತ್ರಿಕ ಮಹತ್ವವುಳ್ಳ ಇದನ್ನು ಮೆಕೆಂಝಿಯು ಇಂಗ್ಲಿಷ್‌ನಲ್ಲಿ ಭಾಷಾಂತರಿಸಿದ್ದಾನೆ.

**ಕನ್ನಡ ಮೋಡಿ ಲಿಪಿ**

ದೇಶದಲ್ಲಿಯೇ ಕನ್ನಡ ಮೋಡಿ ಲಿಪಿ ದಾಖಲೆಗಳ ಮಾಹಿತಿ ಹೀಗಿದೆ.

| ನಂ. | ಕ್ಯಾಟಲಾಗ್ ವಿವರ | ಸರಕಾರ ಖಾಸಗಿ | ವಿಶೇಷ |
|---|---|---|---|
| ೧. | ಪರ್ತಗಾಳಿ ಜೀವೋತ್ತಮ ಮಠ, ಗೋವಾ | ಸರಕಾರ | Hand List ಸರಕಾರಕ್ಕೆ ೧೯೭೭ರಲ್ಲಿ ಸಲ್ಲಿಸಿದೆ. |
| ೨. | ಹುಬ್ಬಳ್ಳಿ ೩೦೦೦ ಮಠ ಹುಬ್ಬಳ್ಳಿ | ಸರಕಾರ | ಪುಸ್ತಕ ಪ್ರಕಟವಾಗಿದೆ. ಇಂದಿರಾಗಾಂಧಿ ರಾಷ್ಟ್ರೀಯ ಕಲಾಕೇಂದ್ರ ಇದನ್ನು Mycro film ಸಿದ್ಧಪಡಿಸಿದೆ. |
| ೩. | ಶೃಂಗೇರಿ ಮಠ (Dr. A.K Shastri) | ಸರಕಾರ | |
| ೪. | ಶ್ರೀ ಕ್ಷೇತ್ರ ಧರ್ಮಸ್ಥಳ | ಖಾಸಗಿ | ಕ್ಯಾಟಲಾಗ್ ಸಲ್ಲಿಸಿದ್ದು ಮುದ್ರಣ ವಾಗಿಲ್ಲ ಲೇಖನಗಳು ಪ್ರಕಟವಾಗಿವೆ. |
| ೫. | ಜಂಗವಾಡಿ ಮಠ, ಬೆನಾರಸ್ | ಖಾಸಗಿ | ಲೇಖನ ಪ್ರಕಟವಾಗಿದೆ. |
| ೬. | ಶ್ರೀ ಮಂತ್ರಾಲಯ | ಖಾಸಗಿ | ಭಾರತ ಸರಕಾರದ ಯೋಜನೆಯಡಿ |
| ೭. | ಶ್ರೀ ಉತ್ತರಾದಿ ಮಠ ಕೆಳದಿ ಮ್ಯೂಜಿಯಂ | ಕೆಳದಿ ಮ್ಯೂಜಿಯಂ | |
| ೮. | ಶ್ರೀ ರಾಮಚಂದ್ರಾಪುರ ಮಠ | ಸರಕಾರ | ಮೂರು ಸಂಪುಟಗಳು ಪ್ರಕಟವಾಗಿವೆ. |
| ೯. | ಶಿವಮೊಗ್ಗ ಜಿಲ್ಲಾಧಿಕಾರಿ ಕಚೇರಿ | ಸರಕಾರ | ವಿವರಗಳು ಹಿಂದೆಯೇ ಬರೆದಿದೆ. |

| | | |
|---|---|---|
| ೧೦. ಶ್ರೀ ವ್ಯಾಸರಾಯ ಸ್ವಾಮಿ ಮಠ, ತಿರುಮಕೂಡ್ಲು ನರಸೀಪುರ | ಖಾಸಗಿ | – |
| ೧೧. ಎ) ಉಡುಪಿಯಲ್ಲಿ ೨ ಮಠಗಳು | ಖಾಸಗಿ | – |
| ಬಿ) ಶ್ರೀ ಅಕ್ಷೋಭ್ಯ ತೀರ್ಥ ಮಠ | ಖಾಸಗಿ | – |
| ೧೨. ಬೆಂಗಳೂರಿನ ಶೃಂಗೇರಿ ಮಠ | ಖಾಸಗಿ | – |
| ೧೩. ಶ್ರೀವಾದಿರಾಜ ಸ್ವಾಮಿ ಮಠ, ಸೋದೆ | ಖಾಸಗಿ | – |
| ೧೪. ಕಳಸೇಶ್ವರ ದೇವಸ್ಥಾನ ಮುಜರಾಯಿ | ಖಾಸಗಿ | ಕಡತಗಳು ಕೆಳದಿ ಮ್ಯೂಸಿಯಂನಲ್ಲಿವೆ |
| ೧೫. ಗೋವಾ(ಡಾ.ವೆಂಕಟೇಶ್ ಜೋಯಿಸ್) | ICHR ಸರಕಾರ | |

ಅಧ್ಯಯನ ಶೀಲರಿಗೆ ಕನ್ನಡ ಮೋಡಿ ಲಿಪಿ ಸಂಶೋಧನೆಗಳು ಆಸಕ್ತಿದಾಯಕವಾಗಿವೆ. ವೈವಿಧ್ಯಮಯ ಪ್ರಾದೇಶಿಕ ಕನ್ನಡ ಮೋಡಿ ಲಿಪಿ ಸಾಮಗ್ರಿಗಳು ಹೇರಳವಾಗಿವೆ. ಗೋವಾದಲ್ಲಿ ಇದಕ್ಕೆ 'ಖಾಂಡೇವಿ' ಎಂಬುದಾಗಿ ಕರೆಯಲಾಗಿದೆ. ಗೋವಾ ಚರ್ಚುಗಳಲ್ಲಿ ಕೊಂಕಣಿ ಭಾಷೆಯ ಕನ್ನಡ ಮೋಡಿ ಲಿಪಿ ಸಂಗ್ರಹಗಳಿವೆ.[೫] ಪೋರ್ಚುಗೀಸ್ ಅಸೆಂಟೋ ಸಂಪುಟಗಳಲ್ಲಿರುವ ಕೆಳದಿ ಇತಿಹಾಸದ ನಿರೂಪಗಳನ್ನು ಪೋರ್ಚುಗೀಸ್ ಭಾಷಾ ತಜ್ಞ ಪಿಸುರ್ಲೆಕರ್ ಮತ್ತು ದಿ.ಡಾ.ಬಿ.ಎಸ್.ಶಾಸ್ತ್ರಿಗಳು ಬೆಳಕಿಗೆ ತಂದಿದ್ದಾರೆ. ಶಿವಾಜಿಯ ಜನನ ಪ್ರದೇಶದಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿದ್ದ ಕನ್ನಡ ಮೋಡಿ ಲಿಪಿ ಸಂಗ್ರಹಗಳು ಗೋಚರಿಸಿವೆ.[೬] ಸರಕಾರದ ಪತ್ರಾಗಾರದ ರಾಬರ್ಟ್ ಸೀವೆಲ್‌ರವರ '*Never to be forgotten Empire*' ಸ್ವಹಸ್ತಾಕ್ಷರ ಹಸ್ತಪ್ರತಿ ರಾಜ್ಯ ಪತ್ರಾಗಾರದಲ್ಲಿದೆ.

**ಕನ್ನಡ ಮೋಡಿ ಲಿಪಿ ಉಗಮ ವಿಕಾಸ (ಮಾದರಿ)**

ಕನ್ನಡ ಮೋಡಿ ಲಿಪಿಯ ವರ್ಣಮಾಲೆ ಮಾದರಿಯ ನಕ್ಷೆಯನ್ನು ಅನುಬಂಧದಲ್ಲಿ ನೀಡಲಾಗಿದೆ.[೭]

ಮೋಡಿ ಲಿಪಿ ಅಧ್ಯಯನಕ್ಕೆ ಮಧ್ಯಕಾಲೀನ ಚರಿತ್ರೆಯಲ್ಲಿ ಕಂಡುಬರುವ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪದ ಸಮೂಹಗಳ ಪರಿಚಯ ಅತ್ಯಗತ್ಯ. ಕ್ರಿ.ಶ. ೧೩ನೆಯ ಶತಮಾನದ ಹೇಮಾದ್ರಿ ಪಂತನಿಂದ ಆರಂಭಿಸಿ ರುಮಾಲುಗಳು, ರಾಜವಾಡೆಗಳು, ಶಿವಾಜಿ, ಹೈದರಾಲಿ, ದಿವಾನ್ (ಪ್ರಧಾನಿ) ವೆಂಕಪ್ಪಯ್ಯ, ದಿವಾನ್ ಪೂರ್ಣಯ್ಯ, ಮೆಕೆಂಝಿ ಮುಂತಾದವರ ಕಾಳದ ಕನ್ನಡ ಮೋಡಿ ಲಿಪಿ ಪದಗಳು ರೋಚಕ ಸಂಗತಿಗಳು ತಿಳಿಸುತ್ತವೆ. ದಿವಾನ್ ಪೂರ್ಣಯ್ಯನು ಸ್ವಹಸ್ತಾಕ್ಷರಗಳಲ್ಲಿ ಇನಾಂ ರಿಜಿಸ್ಟರನ್ನು ಬರೆದಿದ್ದಾನೆ. ಬಿಜಾಪುರ ಆಲಿ ಅದಿಲ್‌ಷಾಹನ ಕಾಲದ ಉತ್ತರ ಕರ್ನಾಟಕ ಇನಾಂ ರಿಜಿಸ್ಟರ್‌ನ ಅಮೂಲ್ಯ ಹಸ್ತಪ್ರತಿಯೊಂದು ಲಭಿಸಿದೆ.

**ಮಾದರಿ ಮರಾಠಿ ಪದಗಳು ಮತ್ತು ಅರ್ಥ**

ಮಗ್ಗವನ ಲಯಮಾನ್ಯ > rent free land granted for the mainance of his horses

ಜೂಡಿ ಮಾನ್ಯ > a quit rent

ಡುಮಾಲೆ ಇನಾಂ > Inam lands, Bhogavatiya patra

| | | |
|---|---|---|
| ದೇಸ್‌ಗತ್ | > | Donee |
| ವತನ್ | > | Adopted son |
| ಕರ್ನಾಟಕ ಜಮಾಲ್ | > | Karnataka Iran |
| ಚವರಾತಿ ವರ್ತನೆ | > | Lands were granted and how long with the villages |
| ರೋಸನಾಯ್ | > | Daptar Kharch |
| ತಾಳೇಬಂದ್ | > | Income and Expenditure Statement |

ಇತ್ಯಾದಿ –

**ಮದರಾಸ್ ಪ್ರಾಂತ್ಯ**

| | | |
|---|---|---|
| ಕನಕ್ಕ ಪಿಳ್ಳೈ | > | Traditional Tamil Account Keepers |
| ಮಣಿಯಂ > ಮಾನ್ಯಂ | > | Honour, Revenue free assignment |
| ತಾರಪ್ಪಾಡಿ ವಗ್ಗೈ ಏಡು | > | The lands and house holds in the locality |
| ಬೇರಿಜ್ ತುಗ್ಗೈ ಏಡು | > | The assessed Revenue |
| ಸುಸಂತಿರವ್ | > | Swathantram |
| ಮಿರಾಯಿಸ್ | > | 1/3 of the produce |

ಇತ್ಯಾದಿ –

**ಗೋವಾ ಪ್ರಾಂತ್ಯ**

| | | |
|---|---|---|
| ಗೋವೆ ವಿಜರ್ರೈಯರು | > | ಗೋವಾ ವೈಸ್‌ರಾಯರು |
| ಜಿಫೆ | > | ಭೂ ಅಳತೆ |
| ಅದಾಲತು | > | ನ್ಯಾಯಸ್ಥಾನ |
| ಪಾಂಡರ್ರಿ | > | ಹೊಲದ ಹೆಸರು |
| ಕೈಪೆತ್ತು | > | ಕೈಫಿಯತ್ತು |

ಇತ್ಯಾದಿ –

**ಕರ್ನಾಟಕ (ಕನ್ನಡ ನಾಡು)**

| | | |
|---|---|---|
| ಅಮೀಲರು | > | ಅಮಲ್ದಾರರು, ತಹಶೀಲ್ದಾರರು |
| ಪರಿಣಾಮ | > | ಕ್ಷೇಮ ಸಮಾಚಾರ |
| ಆಹಾ ಕಾರ್ಯ | > | ಆಯಾ ಕೆಲಸ |
| ಮೀರಾಸಿದಾರ | > | ಜೋಡಿದಾರ |

| | | |
|---|---|---|
| ಹಾತಕರ್ಡಾ | > | ಕೈ ಟಿಪ್ಪಣಿ |
| ರಕ್ವಾಲ | > | ರಕ್ಷಣೆ |
| ರೇವನಿ | > | ರಕ್ಷಣೆ |
| ತಾಕೀದಿ | > | ಆಜ್ಞೆ |
| ತಿರ್ವೆ | > | ಭೂ ಕಂದಾಯ |
| ಆವಕ ಜಾವಕ | > | ಇಂದಾ-ಗೆ-ರಿಜಿಸ್ಟರು |
| ಲಿಫಾಫೆ | > | ಮುದ್ದಾಂ ಟಪ್ಪಾಲು |
| ತಬ್ಲಕ್ | > | ವಿವರಣೆ |
| ಪಡಕ | > | ಮುಕ್ತಾಯ |
| ಬಾರಾ ಬಲೂತಿ | > | ಗ್ರಾಮ ನಮೂನೆ ರಿಜಿಸ್ಟರು |

ಇತರೆ ಪ್ರಾಂತ್ಯಗಳಲ್ಲಿಯೂ ಸಾಮಾನ್ಯವಾಗಿ ಮೋಡೀ ಲಿಪಿ ಭೇದದಲ್ಲಿ ಕಂಡುಬಂದರೂ ಇದು ಅಪರೂಪ.

## ಉಪಸಂಹಾರ

ಸ್ವಾತಂತ್ರ್ಯ ಪೂರ್ವದಲ್ಲಿ ಅಂತರರಾಷ್ಟ್ರೀಯ - The Book of Knowledge, Encyclopedia Britanica ಮುಂತಾದ ಬೃಹತ್ ಸಂಪುಟಗಳಲ್ಲಿ ಹಾಗೂ ಆಯಾ ದೇಶಗಳ ಅಗ್ರಮಾನ್ಯ ರಾಷ್ಟ್ರಗಳ ಪತ್ರಾಗಾರ ಮತ್ತು ವಿಶ್ವವಿದ್ಯಾಲಯ, ಮ್ಯೂಜಿಯಂಗಳಲ್ಲಿ ಮೋಡೀ ಲಿಪಿ ಸಾಮಗ್ರಿಗಳು ವಿಪುಲವಾಗಿವೆ. ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಚರಿತ್ರೆಗಳನ್ನೊಳಗೊಂಡು ಸರಕಾರಕ್ಕೇ ಅಲ್ಲದೆ ಸಂಶೋಧಕರಿಗೂ ಜ್ಞಾನದ ಗಣಿಯಾಗಿವೆ. ಖಾಸಗೀ ಸಂಗ್ರಹಗಳಲ್ಲಿಯೂ ಇವುಗಳನ್ನೂ ಕಾಣಬಹುದು. ಪ್ರತಿ ಘಂಟೆಗೊಮ್ಮೆ ಎರಡು ಲಿಪಿಗಳು ಕಣ್ಮರೆಯಾಗುತ್ತಿರುವುದನ್ನು ಯುನೆಸ್ಕೊ ವರದಿ ಮಾಡಿದೆ. ಈ ನಿಟ್ಟಿನಲ್ಲಿ ಕನ್ನಡ ಹಾಗೂ ಇತರೆ ಮೋಡಿ ಲಿಪಿಗಳೂ ದುರಂತಕ್ಕೀಡಾಗಿವೆ. ಇವುಗಳನ್ನು ಮನಗಂಡ ಕೆಳದಿ ಸಂಶೋಧನಾಲಯ ದೇಶದಲ್ಲಿಯೇ ಮೊಟ್ಟ ಮೊದಲನೇದಾಗಿ ಮೋಡೀ ಲಿಪಿಯನ್ನೊಳಗೊಂಡ ಅಪೂರ್ವ ಕಡತಗಳನ್ನು ಶೇಖರಿಸಿ ಸಂರಕ್ಷಿಸುತ್ತಿದೆ. ಯುನೆಸ್ಕೋಕ್ಕೆ ಶ್ರೀ ಚಿರಂಜೀವಿಸಿಂಗ್‌ರವರು ಈ ಕಾರಣದಿಂದಲೇ Protection of Endangared cultural heritage ಯೋಜನೆಯಡೆಯಲ್ಲಿ ಕೆಳದಿಯನ್ನು ಸೇರಿಸಿ ಅಭಿವೃದ್ಧಿಪಡಿಸಲು ವರದಿ ಮಾಡಿದ್ದರು.

ಜನಸಾಮಾನ್ಯರೀಗೂ ಸಾಂಸ್ಕೃತಿಕ ಕ್ರಾಂತಿಗೆ ಗ್ರಾಮಾಂತರ ಸಂಶೋಧನಾ ಕೇಂದ್ರವೆನಿಸಿದ ಕೆಳದಿಗೆ ವಿಶೇಷ ಮಾನ್ಯತೆಯಿತ್ತು ಮುಂದಿನ ಪೀಳಿಗೆಗೆ ಇವುಗಳನ್ನು ರಕ್ಷಿಸಿ ಕಾಪಾಡುವುದು ಸರಕಾರ-ವಿಶ್ವವಿದ್ಯಾನಿಲಯದ ಆದ್ಯ ಕರ್ತವ್ಯ. ಅಗ್ರಮಾನ್ಯ ರಾಷ್ಟ್ರಗಳ ಕೆಲವೇ ವಿಶ್ವವಿದ್ಯಾನಿಲಯದಲ್ಲಿ ಮೋಡಿ ಲಿಪಿ ಸ್ನಾತಕೋತ್ತರ ವಿಭಾಗಗಳಿವೆ. ಕೆಳದಿ ಇತಿಹಾಸವನ್ನೊಳಗೊಂಡ ಇಟಲಿಯ ಮೋಡೀ ಲಿಪಿ ಹಸ್ತಪ್ರತಿಯನ್ನು ಕಷ್ಟಪಟ್ಟು ಅಭ್ಯಸಿಸಿ ಎಡ್ವರ್ಡ್ ಗ್ರೇರವರು ನೂತನ ಬೆಳಕು ಚೆಲ್ಲಿದ್ದಾರೆ.[೧೦] ೧೯೫೦ರವರೆಗೂ ಮಹಾರಾಷ್ಟ್ರದ ಶಾಲೆಯಲ್ಲಿ ಮೋಡಿ ಲಿಪಿ ತರಗತಿಯಿದ್ದು ಏಕೋ ರದ್ದಾಯಿತು. ಇಷ್ಟು ವಿಸ್ತಾರವಾದ ಮೋಡೀ ಲಿಪಿ ಜ್ಞಾನವು ಕಣ್ಮರೆಯಾಗುವುದಕ್ಕೆ ಮುಂಚೆಯೇ ಸರಕಾರ ಎಚ್ಚತ್ತುಕೊಳ್ಳುವುದು ಅಗತ್ಯ. ಕೇವಲ ಕೈಬೆರಳಿನಷ್ಟು ತಜ್ಞರಿರುವ ಮೋಡಿ ಲಿಪಿ ತಜ್ಞರ ಸೇವೆಯನ್ನು ಸರಕಾರವು ಪಡೆದುಕೊಂಡು ಮುಂದಿನ ಪೀಳಿಗೆಗೆ ತರಬೇತುಗೊಳಿಸಿ ರಕ್ಷಿಸುವುದು ಸರಕಾರದ ಆದ್ಯ ಕರ್ತವ್ಯವಲ್ಲವೇ? ಈಚೆಗೆ ಬಜೆಟ್‌ನಲ್ಲಿ ಇದಕ್ಕೆ ಆರ್ಥಿಕ ಸೌಲಭ್ಯವಿತ್ತರೂ ಅದೇಕೋ ಕಾರ್ಯವಾಗದಂತಾಗಿದೆ. ರಾಜ್ಯಪತ್ರಾಗಾರದ ಮೊಟ್ಟಮೊದಲ ಸಂಚಾಲಕ ಡಾ.ದೇಶಿಕಾಚಾರ್ ಹಾಗೂ ನಾನೂ ಸೇರಿ ಸರಕಾರಕ್ಕೆ ಹಮ್ಮಿಕೊಂಡ ಯೋಜನಾ ವರದಿಗಳು ಯಾವ ಬೀರುವಿನಲ್ಲಿದೆಯೋ ತಿಳಿಯದು! ಈಗಲಾದರೂ ಅಭಿವೃದ್ಧಿಯ ದೃಷ್ಟಿಯಿಂದ ಯ೫೩ಗಾವ ಪ್ರತಿಫಲವೂ ಇಲ್ಲದೆ ನಾನು ಕೆಳದಿ ಸಂಶೋಧನಾ ಕೇಂದ್ರವನ್ನು ಕುವೆಂಪು ವಿಶ್ವವಿದ್ಯಾನಿಲಯಕ್ಕೆ ವಿಲೀನಗೊಳಿಸಿದ್ದರಿಂದ ಇವುಗಲನ್ನು ಕಾರ್ಯಗತಗೊಳಿಸುವರೆಂದು ಆಶಿಸೋಣವೇ? ಕಾಲವೇ ಹೇಳಬೇಕು.



## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. Bunchers *Kannada English Dictionary.*

೨. Prof. Weber (*Indian Antiquary* Vol. VI, p. 161, and notes) and Ind. Ant Sept. 1877, p.277.


೩. ಕ್ರಿ.ಶ. ೧೬೨೩ರಲ್ಲಿ ಇಟಲಿ ಪ್ರವಾಸಿ ಪಿಯತೋ ಡೆಲ್ಲಾವಲ್ಲೆ ರಚಿಸಿದ ಕೆಳದಿ ಇತಿಹಾಸ ಇಟಾಲಿಯನ್ ಮೋಡಿ ಲಿಪಿಯಲ್ಲಿದೆ. ಅನುಬಂಧ –I ನೋಡಿರಿ.

* ಲಂಡನ್ ವಿಶ್ವವಿದ್ಯಾನಿಲಯ ಪ್ರಾಧ್ಯಾಪಕರು ನನ್ನನ್ನು ಹಾಗೂ ಡಾ. ವೆಂಕಟೇಶ್ ಜೋಯಿಸ್‌ರವರನ್ನು ಸ್ವೀಡನ್‌ಗೆ ಆಹ್ವಾನಿಸಿದ್ದು, (ಸರಕಾರದ ವತಿಯಿಂದ) ಇದು ಕೈ ತಪ್ಪಿ ಹೋದಂತಾಯಿತು! ಮೈಕ್ರೋಫಿಲ್ಮ್‌ನ ಅಧ್ಯಯನ ಕೈಗೊಳ್ಳಲು ಮಾದರಿಯೊಂದನ್ನು ನನಗೆ ಕಳಿಸಿದ್ದಾರೆ.

೪. **ಕನ್ನಡ ಮೋಡಿ ಲಿಪಿ ವರ್ಣಮಾಲೆ,** ಅನುಬಂಧ – VII

೫. ಆನಂದರಂಗ ಪಿಳ್ಳೆಯ ದಿನಚರಿ ತಮಿಳು ಮೋಡಿ ಲಿಪಿಯಲ್ಲಿದ್ದುದನ್ನು ಡಾಡ್‌ವೆಲ್ ಪರಿಶೋಧಿಸಿದ್ದು – ನನ್ನ ಲೇಖನಗಳನ್ನು ಕರ್ನಾಟಕ ಇತಿಹಾಸ ದರ್ಶನದಲ್ಲಿ ಅವಲೋಕಿಸಬಹುದು. ಸರಕಾರದ ವತಿಯಿಂದ ನಾನು ತಮಿಳುನಾಡಿನ ನಿಯೋಗಿಯಾಗಿದ್ದಾಗ ಸುಮಾರು ೮೬,೦೦೦ ದಾಖಲೆಗಳು ಅಗ್ನಿಗಾಹುತಿಯಾದ ಸಂಗತಿ ಪತ್ರಿಕೆಯಲ್ಲಿ ಕಂಡು ಹಿಂದಿರುಗುವಂತಾಯಿತು.

೬ ಪೂರ್ವೋಕ್ತ.

(ಈ ಲೇಖನಕ್ಕೆ ಮಾಹಿತಿಯಿತ್ತ ಪೂನಾ ವಿಶ್ವವಿದ್ಯಾನಿಲಯದ ಡಾ॥ ಚಿಟ್ನೀಸ್, ದಿ.ಪ್ರೊ. ಜಿ.ಎಸ್. ದೀಕ್ಷಿತ್, ಡಾ॥ ಎಚ್.ಎಸ್. ಗೋಪಾಲರಾವ್, ಡಾ॥ ಗೋಪಾಲಕೃಷ್ಣ, ಚೆನ್ನೈ, ಡಾ॥ ವೆಂಕಟೇಶ್ ಜೋಯಿಸ್, ಡಾ॥ ರಾಜಶೇಖರಪ್ಪನವರಿಗೆ ಕೃತಜ್ಞತೆಗಳು.)

# ಇತಿಹಾಸದಲ್ಲಿ ಬೀದರ್

– ಡಾ॥ ಎಸ್.ಕೆ. ಜೋಶಿ*

**ಮಾ**ನವನ ಇತಿಹಾಸ ತ್ರಿಕಾಲಗಳಲ್ಲಿ ಹೆಣೆಯಲ್ಪಟ್ಟಿದೆ. ಭೂತಕಾಲವು ಒಂದು ಪರಿಮಿತಿಯಲ್ಲಿ, ಒಂದು ಚೌಕಟ್ಟಿನಲ್ಲಿ ಹಾಯ್ದು ಬಂದಿರುವುದರಿಂದ ಅದರ ಪರಿಣಾಮ ಅದಾಗಲೇ ಗೊತ್ತಾಗಿರುತ್ತದೆ. ಭವಿಷ್ಯವು ಘಟನೆಗಳನ್ನು ಇನ್ನೂ ಅನಾವರಣಗೊಳಿಸಬೇಕಾಗಿರುವುದರಿಂದ ಅದರ ಪರಿಮಿತಿಯ ಅರಿವಾಗುವುದಿಲ್ಲ. ಆದರೆ ವರ್ತಮಾನವು ನಮ್ಮ ಸಮಕಾಲೀನವಾಗಿರುವುದರಿಂದ ಹಾಗೂ ನಾವು ಅದರ ಜೊತೆಗೆ ಬದುಕುತ್ತಿರುವುದರಿಂದ (Living in Present), ವರ್ತಮಾನಕ್ಕೆ ನೂರು ಹೆಜ್ಜೆಗಳು ನೂರು ಪಥಗಳು. ನಾವು ನಡೆದಂತೆ ಹಾಗೂ ನಡೆದತ್ತ ಅದರ ನಡಿಗೆ; ನಾವು ಕೈಕೊಂಡಂತೆ ಅದರ ಇತಿಹಾಸದ ನಿರ್ಮಾಣ ಹಾಗೂ ಪರಿಣಾಮ.

ಈ ಮೇಲಣ ಸಿದ್ಧಾಂತಕ್ಕೆ ಇಡೀ ಮನುಕುಲದ ಇತಿಹಾಸವು ಬದ್ಧವಾಗಿದೆ. ಇದಕ್ಕೆ ಪ್ರಸ್ತುತ ಬೀದರಿನ ಇತಿಹಾಸವೂ ಬದ್ಧವಾಗಿದೆ. ಬೀದರಿನ ಇತಿಹಾಸವು ಬಹಮನಿಶಾಹಿಗಳ ಪೂರ್ವದಲ್ಲಿ ನಿಮ್ನವಾಗಿರುವುದನ್ನು ಕಾಣುತ್ತೇವೆ. ಕಲ್ಯಾಣ ಚಾಲುಕ್ಯರಾಗಲೀ, ದೇವಗಿರಿಯ ಯಾದವರಾಗಲೀ, ಕಲಬುರ್ಗಿಯ ಕಲಚೂರ್ಯರಾಗಲೀ, ಮಂಗಳವೇಢೆಯ ಬಿಜ್ಜಳರಾಗಲೀ ವಂಶಗಳು ತಮ್ಮ ಯಾವುದೇ ಶಾಸನಗಳಲ್ಲಿ 'ಬೀದರ್' ಎಂದು ಸ್ಮರಿಸಿಲ್ಲ. ಅಷ್ಟೇ ಏಕೆ, ಬಸವ ಕಲ್ಯಾಣವೆಂದು ನಾವು ಈಗ ಕರೆಯುವ ಕಲ್ಯಾಣವು ಬೀದರಿನ ಪಶ್ಚಿಮಕ್ಕೆ ಕೇವಲ ೫೦ ಮೈಲಿ ದೂರದಲ್ಲಿದ್ದರೂ ಕೂಡ ಆ ಮಹಾಮನೆಯ ೧೨ನೆಯ ಶತಮಾನದ ನೂರಾರು ಶಿವಶರಣರು ಹಾಗೂ ಶಿವಶರಣೆಯರು ತಮ್ಮ ವಚನ ಸಾಹಿತ್ಯದಲ್ಲಿ 'ಬೀದರ್' ಎಂಬ ತಾಣದ ಒಂದು ಶಬ್ದವನ್ನೂ ಉಪಯೋಗಿಸಿಲ್ಲ.

ಕ್ರಿ.ಶ. ೯೫೦ರಿಂದ ೧೩೧೦ರವರೆಗೂ ಇಲ್ಲಿ ಕಲ್ಯಾಣ ಚಾಲುಕ್ಯರ ಆಳ್ವಿಕೆಯಿತ್ತು. ಅದೇ ಸಮಯದಲ್ಲಿ ಕ್ರಿ.ಶ. ೧೨೯೮ರಲ್ಲಿ ಮಲ್ಲಿಕಾಫರನ ಧಾಳಿಯಲ್ಲಿ ಪಂಡರಾಪುರ, ಸೋಲಾಪುರ ಹಾಗೂ ಕಲ್ಯಾಣಗಳು ಸೂರೆಗೊಂಡುದನ್ನು ಇತಿಹಾಸ ದಾಖಲಿಸುತ್ತದೆ. ಆದರೆ ಬೀದರಿನ ಬಗ್ಗೆ ಚಕಾರ ಶಬ್ದವಿಲ್ಲ.

ಅಲ್ಲದೆ ೧೨ನೆಯ ಶತಮಾನದ ಸುತ್ತಮುತ್ತಲಿನ ನೂರಾರು ಕನ್ನಡ ಶಾಸನಗಳು ದೊರೆತಿವೆ. ಆದರೆ ಆ ಸಂಶೋಧಿತ ಶಾಸನಗಳಲ್ಲಿ 'ಬೀದರ್' ಎಂಬ ಸ್ಥಳವಾಚಕ ಹೆಸರಿನಲ್ಲಿ ಒಂದು ಶಾಸನವೂ ದೊರೆತಿಲ್ಲ. ಅಂದರೆ ಆ ಸಮಯದಲ್ಲಿ ಅದೊಂದು ಪುಟ್ಟ ಗ್ರಾಮವಾಗಿರಲಿಕ್ಕೆ ಸಾಕು.

ಮಧ್ಯಯುಗದ ಪ್ರಾರಂಭದಲ್ಲಿ ಕ್ರಿ.ಶ. ೯೫೦ರಿಂದ ೧೩೧೦ರವರೆಗೂ ಕಲ್ಯಾಣವು ಚಾಲುಕ್ಯರ (ಈಗಿನ ಭಾಲ್ಕಿ), ಆಳಂದೂರು-೩೦೦ (ಈಗಿನ ಆಳಂದಿ) ಅಥವಾ ಬೋಧನ ನಾಡು ಹಾಗೂ ಕೊಂಗಿನಾಡು ಇವುಗಳ ಮಧ್ಯದಲ್ಲಿ ಹರಡಿಕೊಂಡಿದ್ದ 'ಮನದಡಿ ಸಾಸಿರ' ನಾಡಿನ ಮಧ್ಯಂತರದಲ್ಲಿ ಹೇಳಲು ಹೆಸರಿಲ್ಲದಂತಹ ಒಂದು ಸಣ್ಣ ಗ್ರಾಮವಾಗಿರಲು ಸಾಕು. ಅದಾಗಿ ಬೀದರ ನಗರವು ಕ್ರಿ.ಶ. ೧೩೪೭ರ ನಂತರ ಬೆಳೆದು ಬಂದಿರಬೇಕು. ಕ್ರಿ.ಶ. ೧೩೪೭, ಆಗಸ್ಟ್ ೩ನೆಯ ತಾರೀಖಿನಂದು ಹಸನಗಂಗೂ ಬಹಮನಿ (ಆತನ ಪೂರ್ಣ ಹೆಸರು ಅಲ್ಲಾ ಉದ್ದೀನ ಹಾಸನ್ ಬಹಮನ್ ಶಹಾ) ಎಂಬ ಮುಹಮ್ಮದ್ ತುಘಲಕ್‌ನ (ದಿಲ್ಲಿಯಿಂದ ದೇವಗಿರಿಗೆ ರಾಜಧಾನಿ ಬದಲಿಸಿ, ಮರಳಿ ಮತ್ತೆ ದಿಲ್ಲಿಗೆ ಹೋದಂತಹ ಇತಿಹಾಸ ಪ್ರಸಿದ್ಧ ಪಾಗಲ್ ತುಘಲಕ್) ಅಮೀರನು ಸ್ವತಂತ್ರ ರಾಜ್ಯ ಸ್ಥಾಪಿಸಿದನು. ಕಲಬುರ್ಗಿ ಪ್ರಾಂತ್ಯವನ್ನು ಆಳುತ್ತಿದ್ದ ಮುಹಮ್ಮದ್ ತುಘಲಕನು ದಿಲ್ಲಿಗೆ ಮರಳಿದ ತರುವಾಯ ಇವನು ಸ್ವತಂತ್ರನಾದನು.

ಆ ಸಮಯದಲ್ಲಿ ದಕ್ಷಿಣ ರಾಜ್ಯ – 'ತರಫ್' ಎಂದು ಕರೆಯಲ್ಪಟ್ಟಿದ್ದು, ಮಹಾರಾಷ್ಟ್ರದ ದಾಬೋಳ್‌ನಿಂದ ಹಿಡಿದು

* ನಂ. ೬೦, ಸಿಲ್ವರ್ ಆರ್ಚರ್ಡ್, ಶ್ರೀರಂಗಮಾರ್ಗ, ಧಾರವಾಡ.

ಪೇನ್‌ಗಂಗಾ ಹಾಗೂ ಕೃಷ್ಣಾನದಿಗಳ ಪ್ರದೇಶದಲ್ಲಿ ಹಬ್ಬಿದ ಭೂ ಪ್ರದೇಶದಲ್ಲಿ ನಾಲ್ಕು ಪ್ರಾಂತಗಳಾದವು. ಕಲಬುರ್ಗಿ, ಬಿದರೆ, ದೌಲತಾಬಾದ್ ಮತ್ತು ಬಿರಾರ್ ಎಂಬ ಭಾಗಗಳಾಗಿ ಅವು ವಿಂಗಡಣೆ ಹೊಂದಿ, ಒಬ್ಬೊಬ್ಬ ಪ್ರಾಂತಾಧಿಕಾರಿಗಳ ಆಡಳಿತಕ್ಕೆ ಒಳಪಟ್ಟವು. ಆ ಸಮಯದಲ್ಲಿ ಕಲಬುರ್ಗಿ ಅಘಸಾನಾಬಾದ್ ಎಂದು ನಾಮಕರಣ ಹೊಂದಿ ಒಂದು ರಾಜಧಾನಿಯ ಸ್ಥಾನ ಪಡೆಯಿತು. ಹಾಗೆಯೇ 'ಬಿದರೆ' ಬೆಳೆದು ಪ್ರಾಂತೀಯ ಆಡಳಿತದ ಸ್ಥಾನ ಪಡೆಯಿತು. ಇವೆಲ್ಲವುಗಳಲ್ಲಿ ಕೋಟೆ ಕೊತ್ತಲಗಳು, ಅರಮನೆಗಳು, ಸರಕಾರಿ ಕಚೇರಿಗಳು ಕಟ್ಟಲ್ಪಟ್ಟವು. ಅಂದಿನಿಂದ ಕ್ರಿ.ಶ. ೧೩೪೭ರಿಂದ ೧೫೩೮ರವರೆಗೆ ಬೀದರಿನ ರಾಜಕೀಯ ಬದುಕು ಪಸರಿಸಿಕೊಂಡಿತು. ಮೂಲತಃ ಕಲಬುರ್ಗಿಯಿಂದ ರೂಪುಗೊಂಡ ಈ ರಾಜ್ಯವು ಬೀದರಿಗೆ ಆಡಳಿತದ ಪ್ರಮುಖ ತಾಣವನ್ನು ಕೊಟ್ಟಿತು ಹಾಗೂ ಮಹಾರಾಷ್ಟ್ರದ ಕೆಲವು ಭಾಗಗಳು, ಕೃಷ್ಣಾ-ತುಂಗಭದ್ರಾ ನದಿಗಳ ದೊಆಬ್‌ದ ಕೆಲ ಪ್ರದೇಶಗಳು ಮತ್ತು ಆಂಧ್ರಪ್ರದೇಶದ ಪಶ್ಚಿಮದ ಕೆಲವು ಭಾಗಗಳು ಸೇರಿ 'ಡೆಕ್ಕನ್ ಬಹಮನಿ ಸುಲ್ತಾನೇಟ್' (Deccan Bahamani Sultanate) ಎಂದು ಪ್ರಸಿದ್ಧಿ ಪಡೆಯಿತು. (ಚಿತ್ರ ನೋಡಿ)

'ಬಹಮನಿ ಸುಲ್ತಾನ' ಅರಸು ಮನೆತನಕ್ಕೆ ಸಂಬಂಧಿಸಿದಂತೆ ಅದರ ಹೆಸರಿನ ಐತಿಹಾಸಿಕ ಕಥನವೂ ಇದೆ. ಹಸನ ಅಲ್ಲಾ ಉದ್ದೀನ ಗಂಗೂ ಬಹಮನನು ಕ್ರಿ.ಶ. ೧೩೪೭ರಲ್ಲಿ ಈ ಬಹಮನಿ ಮನೆತನದ ಅರಸೊತ್ತಿಗೆ ಸ್ಥಾಪಿಸಿದನು. ಇತಿಹಾಸಕಾರ ಫೆರಿಸ್ತಾನು ಬರೆದಂತೆ 'ಈ ಅಲ್ಲಾ ಉದ್ದೀನ್ ಹಾಸನ್‌ನು ಮುಂದೆ ಪ್ರತಿಭಾನ್ವಿತನಾಗುವನು' ಎಂದು ಭವಿಷ್ಯ ನುಡಿದ ಗಂಗೂ ಎಂಬ ಬ್ರಾಹ್ಮಣನ ಹೇಳಿಕೆ ನಿಜವಾಯಿತು. ಈ ವ್ಯಕ್ತಿ ಆ ಗಂಗೂ ಬ್ರಾಹ್ಮಣನ ಅಭಿದಾನವನ್ನೇ ಇಟ್ಟುಕೊಂಡು 'ಬಾಹಮನ್ (ಬಮ್ಮನ್) ಹೆಸರಿನ ಮೂಲಪುರುಷನಾದರು. 'ಅಲ್ಲಾಉದ್ದೀನ ಹಾಸನ್ ಗಂಗೂ ಬಹಮನಿ' ಎಂದು ಪ್ರತೀತನಾದನು (ಡಾ. ಸೂರ್ಯನಾಥ ಕಾಮತ್). ದಕ್ಷಿಣ ಭಾರತದಲ್ಲಿ ಸಂಸ್ಥಾಪಿಸಿದ ಪ್ರಪ್ರಥಮ ಮುಸ್ಲಿಂ ರಾಜ್ಯವಿದು.

*'ಭಾಸುರೇ ಭವಾಜಿ ವಾಹಿನಿ ಸಮೇತನಾಗಿ ತಾಂ*
*ಸಾಸದಿಂದಿದಿರ್ಚಿದಾ ಬರೀದ ಬಾದಷಹನಂ*
*ಘಾಸಿ ಮಾಡಿ ಗೆಲ್ದು ಯುದ್ಧ ರಂಗದೊಳ್ ತುರುಷ್ಕ ಸೇ*
*ನಾ ಸಮುದ್ರಮಂ ಕಲಂಕಿದಂ ಸದಾಶಿವೋರ್ವಿಪಂ'*

ಎಂಬ ಐತಿಹಾಸಿಕ ಘಟನೆಯನ್ನು ಕೆಳದಿ ನೃಪವಿಜಯವು ದಾಖಲಿಸುತ್ತದೆ.

ಬಹಮನಿ ಸುಲ್ತಾನರಲ್ಲಿ ೨೮ ಅರಸರು ಆಗಿಹೋದರು. ಅವರುಗಳೆಲ್ಲ ಕ್ರಿ.ಶ. ೧೩೪೭ರಿಂದ ಕ್ರಿ.ಶ. ೧೫೩೮ರವರೆಗೆ ಆಳಿದ್ದಾರೆ. ಅವರಲ್ಲಿ ಕೆಲವರು ಬರೀ ಹೇಡಿಗಳು, ಕೆಲವರು ಪಕ್ವರು, ಕೆಲವರು ಪ್ರಜಾಹಿತರು ಹಾಗೂ ವಾಸ್ತುಕಲಾ ಪ್ರಿಯರು. ಹಸನ್ ಗಂಗೂ ಬಹಮನಿಯಿಂದ ಆರಂಭಿಸಿ ಕೊನೆಯವನಾದ 'ಕರೀಮುಲ್ಲಾ ಇಲ್ಲ ಮುಲ್' ಎಂಬ 'ಪ್ರೇತ'ದಂತಿರುವ (ಅಂದರೆ ಕೆಲಸಕ್ಕೆ ಬಾರದ) ಅರಸನ ಆಳ್ವಿಕೆಯಲ್ಲಿ ಈ ಬಹಮನಿ ಮನೆತನ ಅಸ್ತಂಗತವಾಯಿತು. ಮುಂದೆ ಕ್ರಿ.ಶ. ೧೫೩೮ರ ನಂತರ ಆದಿಲ್‌ಶಾಹಿ, ಬರೀದ್‌ಶಾಹಿ, ಇಮಾದಶಾಹಿ, ನಿಜಾಮಶಾಹಿ ಹಾಗೂ ಕುತುಬಶಾಹಿಗಳೆಂಬ ಐದು ಸುಲ್ತಾನ ಮನೆತನಗಳು (The five Deccan Sultanates) ಮೇಲೆದ್ದವು. ಇವರಿಂದ ಬಲಾಢ್ಯ ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೫೬೫ರಲ್ಲಿ ಮುಳುಗಿದುದು ಐತಿಹಾಸಿಕ ಸತ್ಯ.

ಬಹಮನಿ ಸುಲ್ತಾನರಲ್ಲಿ ಕೆಲವು ಅಪ್ರತಿಮರನ್ನು ಇಲ್ಲಿ ಸ್ಮರಿಸಲೇಬೇಕು. ತಾಜುದ್ದೀನ್ ಫಿರೋಜ್‌ಶಾಹ್ (ಕ್ರಿ.ಶ. ೧೩೯೭-೧೪೨೨) ಪಾಂಡಿತ್ಯ ಪೂರ್ಣ ಅರಸ, ಮದುರೈವರೆಗೆ ಸಾಮ್ರಾಜ್ಯ ಬೆಳೆಸಿದ. ಜ್ಞಾನಿಗಳ ಸಹವಾಸ ಇವನಿಗೆ ಎಲ್ಲಿಲ್ಲದ ಪ್ರೀತಿ. ದೌಲತಾಬಾದ್‌ನಲ್ಲಿ ಖಗೋಳ ವೀಕ್ಷಣಾ ಮಂದಿರವನ್ನು, ಭೀಮಾ ದಂಡೆಯಲ್ಲಿ 'ಫಿರೋಜಾಬಾದ್' ಎಂಬ ಹೊಸ ನಗರವನ್ನು ಕಟ್ಟಿಸಿದನು.

ತದನಂತರ ಅಹಮ್ಮದ್‌ಶಾಹ್ I ಹಾಗೂ ಅಹಮ್ಮದ್ ಶಾಹ್ II [ಕ್ರಿ.ಶ. ೧೪೨೨-೩೬ ಹಾಗೂ ೧೪೩೬-೫೮] ಇವರ ಕಾಲವು ಉಚ್ಛ್ರಾಯದ ಕಾಲ. ಆಗ ಪರ್ಶಿಯಾ ದೇಶದ ಶ್ರೀಮಂತ ಮಹಮ್ಮದ ಗವಾನನು ಇಲ್ಲಿಗೆ ಬಂದು 'ಮದರಸಾ ಆಫ್ ಮಹಮ್ಮದ್ ಗವಾನ್' ಎಂಬ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದನು. ಅಲ್ಲಿ ಕೇವಲ ಶ್ರೀಮಂತ ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶವಿದ್ದು, ಯುದ್ಧಕಲೆ, ರಾಜ್ಯಶಾಸ್ತ್ರ, ನ್ಯಾಯ, ಕಂದಾಯ, ಸಾಮಾಜಿಕ ಶಾಸ್ತ್ರ, ಇಸ್ಲಾಂ ಇತ್ಯಾದಿ ವಿಷಯಗಳಲ್ಲಿ ತರಬೇತಿ ಸಿಗುತ್ತಿತ್ತು. ಇದಲ್ಲದೆ ಅಲಂಕಾರ ಲಿಪಿ, ಬಿಲ್ಲುಗಾರಿಕೆ, ಪೋಲೋ, ಕುದುರೆ ಹತ್ತುವುದು ಇತ್ಯಾದಿಗಳನ್ನು ಇಲ್ಲಿ ಕಲಿಸುತ್ತಿದ್ದರು. ಇದರ ಕಟ್ಟಡವು ಮೂರು ಮಹಡಿಗಳ ಭವ್ಯ ಇಮಾರತಿ. ಪ್ರೊಫೆಸರ್‌ಗಳು, ವಿದ್ಯಾರ್ಥಿಗಳು (೧೫೮) ಕೂಡಿ ಇರುವ 'ವಸತಿಶಾಲೆ' ಹಾಗೂ ೩೦,೦೦೦ ಪುಸ್ತಕಗಳುಳ್ಳ ಲೈಬ್ರರಿಯೂ ಕೂಡ ಇಲ್ಲಿ ಇತ್ತು. ಶಬಾತಬಾ ಎಂಬ




ಚಿತ್ರ ೧ : ಬಹಮನಿ ರಾಜ್ಯ (ಕ್ರಿ.ಶ. ೧೩೪೭–೧೫೩೮)



ಚಿತ್ರ ೨ : ಬೀದರ್ ಫೋರ್ಟ್ – ಸೋಲಾಖಂಬಾ ಐತಿಹಾಸಿಕ ಕಟ್ಟಡ ಹಾಗೂ ಅದರ ವಿಸ್ತಾರ ಪ್ರಾಂಗಣ. ಈ ಮಸೀದಿಯು ಇಂಡೋ ಸೆರ್ಸೆನಿಕ್ ಆರ್ಕಿಟೆಕ್ಚರಿನ ಒಂದು ಉತ್ತಮ ಉದಾಹರಣೆ ಆಗಿದೆ.



**ಚಿತ್ರ ೩** : ಬೀದರ್ – 'ಮದರಸಾ ಆಫ್ ಮಹಮ್ಮದ್ ಗವಾನ್' ಡೆಕ್ಕನ್‌ನಲ್ಲಿಯೇ ಅತ್ಯಂತ ಪ್ರತಿಷ್ಠಿತ ಇಸ್ಲಾಂ ವಿಶ್ವವಿದ್ಯಾಲಯ. ಗವಾನನು ಪರ್ಶಿಯಾದಿಂದ ೧೪೪೭ರಲ್ಲಿ ಬೀದರಿಗೆ ಬಂದು ಎರಡನೆಯ ಅಲ್ಲಾಉದ್ದೀನ ದೊರೆಯ ಸೈನ್ಯದಲ್ಲಿ ಸೇರಿದ ಒಳ್ಳೆಯ ಆಡಳಿತಗಾರ, ಮಂತ್ರಿ, ಶಿಕ್ಷಣವೇತ್ತ. ಹಾಗಾಗಿ ಆ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಿದ.



**ಚಿತ್ರ ೪** : ಬೀದರ್ – ಒಳಕೋಟೆಯ ಒಂದು ನಿರ್ಣಾಯಕ ಆಯಕಟ್ಟಿನ ಭಾಗ, ಕೋಟೆ ಗೋಡೆಗಳ ತೆನೆಗಳಲ್ಲಿ 'ಗನ್‌ಸ್ಲಿಟ್ಸ್' ಕಾಣಬಹುದು.



**ಚಿತ್ರ ೫** : ಬೀದರ್ ಫೋರ್ಟ್ – ಕೇಂದ್ರ ಸರಕಾರ ಸಂರಕ್ಷಿತ ಪ್ರಾಚ್ಯವಸ್ತು ಸಂಗ್ರಹಾಲಯ,
ಕನ್ನಡ ನಾಡಿನ ಐತಿಹಾಸಿಕ ಅವಶೇಷಗಳ ಶ್ರೀಮಂತ ಸಂಗ್ರಹ.

ಪರ್ಶಿಯಾದ ಇತಿಹಾಸಕಾರನು ಮಹಮ್ಮದ ಗವಾನ್‌ನನ್ನು 'ಅಪ್ರತಿಮ ಮಂತ್ರಿ' ಎಂದು ಕರೆದಿದ್ದಾನೆ. ಮಹಮ್ಮದ್ ಗವಾನನ ಉತ್ಕರ್ಷೆ ನೋಡಿ ಸಹನವಾಗದ ಕೆಲವರು ರಾಜನ ಬಳಿ ಚಾಡಿ ಹೇಳಿದುದರಿಂದ ಆ ಹಿರಿಯ ಜೀವಿಯನ್ನು (೭೩ ವರ್ಷ) ಗಲ್ಲಿಗೇರಿಸಲಾಯಿತು (ಕ್ರಿ.ಶ. ೧೪೮೧). ಒಬ್ಬ ಪ್ರಾಮಾಣಿಕ ರಾಜನೀತಿಜ್ಞನ ದುರಂತಕ್ಕಾಗಿ ಮುಂದೆ, ರಾಜನು ಪಶ್ಚಾತ್ತಾಪಪಟ್ಟನು. ಮಾಡುವುದೇನು ಕಾಲ ಮಿಂಚಿ ಹೋಗಿತ್ತು.

ವಾಸ್ತುಶಿಲ್ಪಕ್ಕೂ ಇವರ ಕೊಡುಗೆ ಶ್ರೀಮಂತವಾಗಿದೆ. ಇವರ ಕಾಲದಲ್ಲಿ ಇಂಡೋ ಸೆರ್ಸೆನಿಕ್ ವಾಸ್ತು, ಕ್ಯಾಲಿಗ್ರಾಫಿ, ಯುದ್ಧಶಾಸ್ತ್ರ, ಪರ್ಶಿಯನ್ ಸಾಹಿತ್ಯ, ನೀರಿನ ವ್ಯವಸ್ಥೆ, ರಕ್ಷಣಾ ಕೋಟೆಗಳು ಇತ್ಯಾದಿಗಳು ವೈಭವೋಪೇತವಾಗಿ ಬೆಳೆದವು. ಅವರ ವಾಸ್ತುಶಿಲ್ಪದ ಕೃತಿಗಳಲ್ಲಿ ಕಲಬುರ್ಗಿಯ ಜಾಮೀ ಮಸೀದಿ, ಬಿದರೆಯ ಸಮೀಪದ ಅಷ್ಟೂರಿನಲ್ಲಿಯ ಸುಲ್ತಾನರ ಗುಂಬಝ್‌ಗಳು, ಬೀದರಿನ ಮಹಮ್ಮದ್ ಗವಾನನ ಮದರಸಾ, ರಂಗೀನ ಮಹಲ್, ಗಗನ ಮಹಲ್, ಹಪ್ತಗುಂಬಝ್, ಸಗೀನಾ ಮಹಲ್, ಸೋಲಾಖಾಂಬ್ ಮಸೀದಿ, ಚೀನೀ ಮಹಲ್, ಬೀದರೀ ಕೋಟೆ, ಕಲಬುರ್ಗಿ ಕೋಟೆ ಇತ್ಯಾದಿಗಳು ಅವರ ಕೊಡುಗೆಗಳು. ತದನಂತರ ಬೆಳೆದ ಬಿಜಾಪುರ ಆದಿಲ್‌ಶಾಹಿಗಳಿಗೂ, ಬಿರಾರಿನ ಇಮಾದ್ ಶಾಹಿಗಳಿಗೂ, ಗೋಲ್ಕೊಂಡದ ಕುತುಬ್‌ಶಾಹಿಗಳಿಗೂ ಇವು ಮಾರ್ಗದರ್ಶನ ಗಳಾದವು. ಭಾರತದ ಇಸ್ಲಾಮಿಕ್ ಜಗತ್ತಿನಲ್ಲಿ ಬೀದರಿನ ವಾಸ್ತುಕಲೆ ತನ್ನದೇ ಆದ ವಿಶಿಷ್ಟ ಸಂಪತ್ತನ್ನು ನೀಡಿದೆ.

ಇಂತಹ ಐತಿಹಾಸಿಕ ಬೀದರ್ ನಗರವನ್ನು ರೋಮ್, ಇಟಲಿ, ವ್ಯಾಟಿಕನ್, ಕೈರೋ, ಮಕ್ಕಾ, ಮದೀನಾ, ಮಾಸ್ಕೋ, ದಿಲ್ಲಿ, ಸಿಕ್ರಿ, ಬಿಜಾಪುರ ಇತ್ಯಾದಿ ಐತಿಹಾಸಿಕ ನಗರಗಳ ಸಾಲಿನಲ್ಲಿ ಜೋಡಿಸಬಹುದು. ಐತಿಹಾಸಿಕ ನಗರಗಳು ಎಂದೂ ಸಾಯುವುದಿಲ್ಲ. ಅವುಗಳ ಪ್ರಾಚೀನ ಸಾಂಸ್ಕೃತಿಕ ಸ್ತರಗಳ ಮೇಲೆ ಮತ್ತೆ ಮತ್ತೆ ನಾಗರಿಕತೆಯ ಸ್ತರಗಳು ಏರುತ್ತವೆ. ಬೀದರ್ ಇನ್ನೂ ಜೀವಂತವಾಗಿ ಉಳಿದಿದೆ, ಬೆಳೆಯುತ್ತಿದೆ.

'ಐತಿಹಾಸಿಕ ನಗರಗಳು ಸಾಯುವುದಿಲ್ಲ
ಧರ್ಮಫಲದಿಂದೇರಿ, ಕರ್ಮಫಲದಿಂದಿಳಿದು
ಮರ್ಮದೊಳು ನೆಡುವಂತೆ ಸಪ್ರಯೋಗಿಕವಾಗಿ
ಕಲಿಸುವುವು ತತ್ವವೊಂದು'

– (ದ.ರಾ. ಬೇಂದ್ರೆ)

## ಆಧಾರ ಸೂಚಿ

೧. Prof. S. Nilakanta Shastri, *An advanced History of India*, Bombay, 1970.

೨. Dr. Suryanath kamath (Ed), *A Hand Book of Karnataka*, Karanataka Gazetteer Department, Bangalore, 1956.

೩. ಸೂರ್ಯನಾಥ ಕಾಮತ್, **ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ ೧**, ಪರಿಶ್ರೀ ಪ್ರಿಂಟರ್ಸ್, ಬೆಂಗಳೂರು, ೧೯೮೪.

೪. Jawaharlal Nehru, *The Discovery of India*, Meridian Books Ltd. Landon, 1956.

೫. Dr. Shrinivasa Ritti, *Anand Kumbar Inscriptions from Solapur District*, Srihari Prakasan, Dharwad, 1988.

೬ The Sevunas (Yadavas of Devgiri) Dr. S.H. Ritti, *The Sevunas*, Srihari prakasana, Dharwad, 1980.

೭. ಡಾ. ಶಂ.ಬಾ. ಜೋಶಿ, **ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ** (ಪ್ರಥಮ ಭಾಗ), ಸಮಾಜ ಬುಕ್ ಡಿಪೋ, ಧಾರವಾಡ.

೮. ಕೇಶವ ಉಮರ್ಜಿ, **ಬರೀದ್ ಶಹರು ಹಾಗೂ ಆದಿಲ್ ಶಹರು**, ತ್ವರಿತ ಮುದ್ರಣಾಲಯ, ಗದಗ, ೧೯೮೪.

೯. ಲೇಖಕನ ಸ್ಥಳ ಸಮೀಕ್ಷೆ ಹಾಗೂ ವಿದ್ವಾಂಸರಾದ ಡಾ. ಹನುಮಾಕ್ಷಿಗೋಗಿ, ಡಾ.ಚೆನ್ನಕ್ಕ ಪಾವಟೆ, ಸ್ವರೂಪರಾಣಿ ಮಹಿಷಿ, ಡಾ. ಆರ್.ಎಂ.ಷಡಕ್ಷರಯ್ಯ ಇವರೊಂದಿಗೆ ಚರ್ಚೆ.

೧೦. ಚಿತ್ರಗಳು ಕೃಪೆ ಭಾರತೀಯ ಪುರಾತತ್ತ್ವ ಇಲಾಖೆ, ಧಾರವಾಡ ಸರ್ಕಲ್ ಹಾಗೂ ಬೀದರ್ ಸಬ್ ಸರ್ಕಲ್, ಬೀದರ್.

卐卐卐

# ಮೈಸೂರು ಒಡೆಯರ ಕಾಲದ ಸಂಗೀತ ತರಬೇತಿ ಶಾಲೆಗಳು

– ಪ್ರೊ॥ ಕನಕತಾರ*

**ಮೈ**ಸೂರು ಅರಸರ ಕಾಲದಲ್ಲಿ ಚಂದ್ರಶಾಲ ತೊಟ್ಟಿ, ಚಾಮುಂಡಿ ವಿಹಾರ, ಅರಸು ಬೋರ್ಡಿಂಗ್ ಸ್ಕೂಲ್, ಸಂಸ್ಕೃತ ಪಾಠಶಾಲೆ, ಗುಡ್ ಶೆಫರ್ಡ್ ಸಂಗೀತ ತರಬೇತಿ ಶಾಲೆ, ಬೆಂಗಳೂರು, ಲಂಡನ್ನಿನ ಟ್ರಿನಿಟಿ ಸಂಗೀತ ಕಾಲೇಜು, (ಅರಮನೆಯ) ಪ್ಯಾಲೇಸ್ ಬ್ಯಾಂಡ್, ಲಂಡನ್ನಿನ ರಾಯಲ್ ಸ್ಕೂಲ್ ಮತ್ತು ಸಂಗೀತ ಕಾಲೇಜು, ಮೈಸೂರು ದಿ ರಾಯಲ್ ಅಕಾಡೆಮಿ ಆಫ್ ಮ್ಯೂಸಿಕ್ ಮುಂತಾದವು ಸಂಗೀತ ತರಬೇತಿ ನೀಡುವ ಪ್ರಮುಖ ಕೇಂದ್ರಗಳಾಗಿದ್ದವು. ಸಂಗೀತಕ್ಕೆ ಪರಿಧಿಯಿಲ್ಲ ಎನ್ನುವಂತೆ ಮೈಸೂರು ಒಡೆಯರ ಕಾಲದಲ್ಲಿನ ಸಂಗೀತ ಪಾಠವು ವಿಶ್ವದ ಯಾವುದೇ ಸಂಗೀತ ಪ್ರಕಾರವನ್ನೂ ಬಿಡದೆ ಎಲ್ಲವನ್ನೂ ಒಳಗೊಂಡಿದ್ದಿತು.

## ಚಂದ್ರಶಾಲ ತೊಟ್ಟಿ

೧೯೧೬ರಲ್ಲಿ ಆರಂಭವಾದ ಚಂದ್ರಶಾಲ ತೊಟ್ಟಿಯ ಮೊದಲ ಹೆಸರು 'ಕರ್ನಾಟಕ ಸಂಗೀತ ಶಾಲೆ' ಎಂದಾಗಿತ್ತು. ವೀಣೆ ಶೇಷಣ್ಣ ಮತ್ತು ವೀಣೆ ಸುಬ್ಬಣ್ಣ ಇದರ ನೇತೃತ್ವವನ್ನು ವಹಿಸಿದ್ದರು. ಆಗ ನಾಲ್ಕು ಜನ ವಿದ್ಯಾರ್ಥಿಗಳು ಮಾತ್ರ ಇಲ್ಲಿದ್ದರು (ಜಗನ್ಮೋಹನ ಶಾಲೆಯಿಂದ ತಂದ ೨ ವೀಣೆ ಮತ್ತು ೧ ತಂಬೂರ ಇಲ್ಲಿದ್ದವು). ಸಂಗೀತ ವಿದ್ವಾನ್ ಪದವಿಗೇರಲು ಕನಿಷ್ಠ ೮ ವರ್ಷಗಳು ಅಧ್ಯಯನವನ್ನು ಮಾಡಿರಬೇಕಾಗಿತ್ತು. ಚಂದ್ರಶಾಲಾ ತೊಟ್ಟಿ ಅರಮನೆಯ ಸಂಗೀತ ಪಾಠಶಾಲೆಯಾಗಿತ್ತು. ೧೯೨೪ರಲ್ಲಿ ಇಲ್ಲಿ ೨೧ ಜನ ವಿದ್ಯಾರ್ಥಿಗಳೂ, ೧೬ ಜನ ಹಿರಿಯ ಮತ್ತು ಕಿರಿಯ ಸಂಗೀತ ವಿದ್ವಾಂಸರೂ ಇದ್ದರು. ವಾರ್ಷಿಕ, ದ್ವೈವಾರ್ಷಿಕ, ತ್ರೈವಾರ್ಷಿಕ ಹಾಗೂ ಮಾಸಿಕ ಪರೀಕ್ಷೆಗಳಿದ್ದವು. ೧೬ ವಿದ್ವಾಂಸರಲ್ಲಿ ૩ ಜನ ಮೃದಂಗಂ ಅಥವಾ ತಬಲಾ ಮತ್ತು ૩ ಜನ ವಿಶೇಷ ನೋಟೇಷನ್ ಗುರುಗಳಿದ್ದರು. ಮೃದಂಗ, ಪಿಟೀಲು, ಕೊಳಲು, ವೀಣೆ, ಹಾರ್ಮೋನಿಯಂ, ಸಿತಾರ್, ಸಾರಂಘ, ಜಲತರಂಗ, ದಿಲ್‌ರುಬಾ ಮುಂತಾದ ವಾದ್ಯಗಳಿದ್ದವು. ವಾರದಲ್ಲಿ ૩ ದಿನ ಕರ್ನಾಟಕ ಸಂಗೀತ, ೨ ದಿನ ಹಿಂದೂಸ್ಥಾನಿ ಮತ್ತು ೧ ದಿನ ಪಾಶ್ಚಿಮಾತ್ಯ ಸಂಗೀತ ತರಬೇತಿ ನೀಡಲಾಗುತ್ತಿತ್ತು. ಸಂಗೀತ ಶಾಲೆಯ ಸಮಯ ಪ್ರತಿದಿನ ಸಂಜೆ ೫ರಿಂದ ೭ ಗಂಟೆಯವರೆಗೆ. ವಿದ್ವಾಂಸರಿಗೂ ಮತ್ತು ವಿದ್ಯಾರ್ಥಿಗಳಿಗೂ ಹಾಜರಾತಿ ಕಡ್ಡಾಯವಾಗಿತ್ತು. ಮೊದಲ ಒಂದು ಗಂಟೆಯಲ್ಲಿ ವಿದ್ಯಾರ್ಥಿಗಳು ರಾಜರು ಆಯ್ಕೆ ಮಾಡಿದ ವಾದ್ಯಗಳನ್ನು ಅಭ್ಯಾಸ ಮಾಡಿ ನುಡಿಸಬೇಕಾಗಿತ್ತು. ಒಂದು ಹೊಸ ರಾಗ ಕಲಿಯಲು ವಿದ್ಯಾರ್ಥಿಗೆ ૩ ತಿಂಗಳ ಅವಕಾಶವಿತ್ತು. ಹೀಗೆ ೪೦ ಮೇಳಕರ್ತ ರಾಗಗಳು ಬಳಕೆಗೆ ಬಂದವು. ವಿದ್ಯಾರ್ಥಿಗಳಿಗಾಗಿ ಸಂಗೀತ ಗ್ರಂಥಗಳನ್ನೊಳಗೊಂಡ ಗ್ರಂಥಾಲಯವಿತ್ತು.

## ಚಾಮುಂಡಿ ವಿಹಾರ ಶಾಲೆ

ಚಾಮುಂಡಿ ವಿಹಾರ ಶಾಲೆಯಲ್ಲಿ ರಾಜಮನೆತನದ ಮಕ್ಕಳಿಗೆ ಪ್ರತ್ಯೇಕವಾಗಿ ಸಂಗೀತ ಕಲಿಯಲು ಅವಕಾಶವಿತ್ತು. ಇಲ್ಲಿನ ವಿದ್ಯಾರ್ಥಿಗಳಾದ ರಾಜಕುಮಾರಿ ಲೀಲಾವತಿ ಹಾಗೂ ಜಯ ಪರೀಕ್ಷೆಗಳನ್ನು ತೆಗೆದುಕೊಂಡಿದ್ದರು. ೧೯೩೦ರಲ್ಲಿ ಮೈಸೂರಿನ ಗುಡ್ ಶೆಫರ್ಡ್ ಕಾನ್ವೆಂಟಿನ ಸಿಸ್ಟರ್ ಮಾರಿಸ್, ೧೯೩೨ರಲ್ಲಿ ಡಾ॥ ಸಿ.ಇ. ಫೋರ್ಡ್, ೧೯೩೩ರಲ್ಲಿ ಮಿಸ್ಟರ್ ಮಲ್ಲಿಕ್ ಸನ್ ಇವರುಗಳು ಇಲ್ಲಿ ಟ್ರಿನಿಟಿ ಸಂಗೀತ ಕಾಲೇಜು ಲಂಡನ್‌ನ ಪರೀಕ್ಷೆಗಳನ್ನು ನಡೆಸಿದರು. ೧೯೩೭ರಲ್ಲಿ ಲಂಡನ್ನಿನ ಟ್ರಿನಿಟಿ ಕಾಲೇಜಿನ ಡಾ॥ ಮಿಸ್ಸೋರಿ ಮೈಸೂರಿಗೆ ಬಂದು ಪರೀಕ್ಷಕರಾಗಿ, ಪರೀಕ್ಷೆಗಳನ್ನು ನಡೆಸಿದರು.

* ಇತಿಹಾಸ ವಿಭಾಗ, ಸರ್ಕಾರಿ ಪ್ರಥಮದರ್ಜೆ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು – ೧೨

**ಅರಸು ಬೋರ್ಡಿಂಗ್ ಸ್ಕೂಲ್**

ಅರಸು ಬೋರ್ಡಿಂಗ್ ಸ್ಕೂಲಿನಲ್ಲಿ ಐಸಾಕ್ ಮರಿಯನ್ ಎಂಬುವವರು ವಾರದಲ್ಲಿ ಮೂರು ದಿನ ಸಂಜೆ ವಿದ್ಯಾರ್ಥಿಗಳಿಗೆ ಡ್ರಮ್‌ಗಳು ಹಾಗೂ ಪೈಪ್‌ಗಳನ್ನು (ಸ್ಕಾಟ್ಸ್) ನುಡಿಸಲು ತರಬೇತಿ ನೀಡಿದರಲ್ಲದೆ ಪಾಶ್ಚಿಮಾತ್ಯ (ಸಂಗೀತದ) ನೋಟು ಸಂಗೀತವನ್ನು ಹೇಳಿಕೊಟ್ಟರು.

**ಸಂಸ್ಕೃತ ಪಾಠಶಾಲೆ**

೧೦ನೆಯ ಚಾಮರಾಜ ಒಡೆಯರ ಕಾಲದಲ್ಲಿ 'ಸಂಸ್ಕೃತ ಪಾಠಶಾಲೆ'ಯಲ್ಲೂ ಸಂಗೀತ ಶಿಕ್ಷಣವನ್ನು ಹೇಳಿಕೊಡುವ ಏರ್ಪಾಡಾಯಿತು. ಸಂಗೀತ ವಿದ್ವಾನ್ ಶ್ರೀವಾಸುದೇವಾ ಚಾರ್ಯರೂ ಸೇರಿದಂತೆ ಇಲ್ಲಿ ಅನೇಕ ವಿದ್ಯಾರ್ಥಿಗಳು ಸಂಗೀತವನ್ನು ಕಲಿತರು. ವಾಣಿವಿಲಾಸ ಬಾಲಕಿಯರ ಶಾಲೆಯಲ್ಲೂ ಇದೇ ರೀತಿಯ ವ್ಯವಸ್ಥೆಯಿದ್ದು ಬಾಲಕಿಯರು ಸಂಗೀತ ಕಲಿಯಲು ಪೂರ್ಣ ಉತ್ತೇಜನ ನೀಡಲಾಯಿತು.

**ಗುಡ್ ಶೆಫರ್ಡ್ ಕಾನ್ವೆಂಟ್, ಮೈಸೂರು ಮತ್ತು ಬೆಂಗಳೂರು**

ಗುಡ್ ಶೆಫರ್ಡ್ ಕಾನ್ವೆಂಟನಲ್ಲಿ ಪ್ರತಿ ವರ್ಷ ಲಂಡನ್ನಿನ ಟ್ರಿನಿಟಿ ಕಾಲೇಜ್ ಆಫ್ ಮೈಸೂರಿನ ಮ್ಯೂಸಿಕ್ ಪರೀಕ್ಷೆಗಳನ್ನು ತೆಗೆದುಕೊಳ್ಳಲು ವಿದ್ಯಾರ್ಥಿಗಳಿಗೆ ಅವಕಾಶವಾಯಿತು. ಮೈಸೂರಿನ ಗುಡ್ ಶೆಫರ್ಡ್ ಕಾನ್ವೆಂಟಿನಲ್ಲಿ ಈಗಲೂ (ಸಿಸ್ಟರ್ ಜೋನ್ಸ್) ಅನೇಕ ವಿದ್ಯಾರ್ಥಿಗಳಿಗೆ ಪಿಯಾನೋ ವಾದನವನ್ನು ಕಲಿಸುತ್ತಿದ್ದಾರೆ. ಬೆಂಗಳೂರಿನ ಗುಡ್ ಶೆಫರ್ಡ್ ಕಾನ್ವೆಂಟಿನಲ್ಲಿ ಟ್ರಿನಿಟಿ ಕಾಲೇಜ್ ಆಫ್ ಮ್ಯೂಸಿಕ್‌ನ ವಾರ್ಷಿಕ ಪರೀಕ್ಷೆಗಳನ್ನು ತೆಗೆದುಕೊಳ್ಳಲು ಅವಕಾಶವಿದೆ. ಇದರ ಜೊತೆಗೆ ಸೇಕ್ರೆಡ್ ಹಾರ್ಟ್ ಮ್ಯೂಸಿಕ್ ತರಬೇತಿ ಶಾಲೆ, ಬೆಂಗಳೂರು ಇಲ್ಲಿಯೂ ಇದೇ ವಾರ್ಷಿಕ ಪರೀಕ್ಷೆಗಳನ್ನು ನಡೆಸಲಾಗುತ್ತಿದೆ. ಈಗಲೂ ವಿದ್ಯಾರ್ಥಿಗಳಿಗೆ ಉತ್ತಮ ತರಬೇತಿ ನೀಡಲಾಗುತ್ತಿದೆ.

**ಲಂಡನ್ನಿನ ಟ್ರಿನಿಟಿ ಕಾಲೇಜ್ ಆಫ್ ಮ್ಯೂಸಿಕ್**

ಮೈಸೂರು ದೊರೆಗಳು ಪ್ರತಿವರ್ಷ ಟ್ರಿನಿಟಿ ಕಾಲೇಜ್ ಆಫ್ ಮ್ಯೂಸಿಕ್, ಲಂಡನ್ – ಇಲ್ಲಿಗೆ ೧೦೦೦ ರೂ.ಗಳನ್ನು ದೇಣಿಗೆಯಾಗಿ ನೀಡುತ್ತಿದ್ದರು. ಈ ಹಣದಲ್ಲಿ ಅವರು ಒಂದು ಪಿಯಾನೋವನ್ನು ಖರೀದಿಸುತ್ತಿದ್ದರು ಮತ್ತು ಅದರಲ್ಲಿ ೧೦೦ ರೂ.ಗಳನ್ನು ಅಲ್ಲಿನ ವಾರ್ಷಿಕ ಪರೀಕ್ಷೆಯಲ್ಲಿ ಯಾವುದೇ ವಿಭಾಗದಲ್ಲಿ ಮೊದಲ ದರ್ಜೆಯಲ್ಲಿ ಉತ್ತೀರ್ಣವಾದ ವಿದ್ಯಾರ್ಥಿಗೆ ಕೊಡುವ ರೋಲಿಂಗ್ ಶೀಲ್ಡ್‌ಗಾಗಿ ಉಪಯೋಗಿಸಲಾಗುತ್ತಿತ್ತು. ಆ ರೋಲಿಂಗ್ ಶೀಲ್ಡ್ ಒಂದು ಬೆಳ್ಳಿಯ ಕಪ್ ಆಗಿದ್ದು, ಅದು ರಾಜನ ಹೆಸರು ಹಾಗೂ ಮೈಸೂರು ಸೈನ್ಯದ ಕೋಟಿನ ಚಿತ್ರವನ್ನು ಒಳಗೊಂಡಿತ್ತು. ಟ್ರಿನಿಟಿ ಸಂಗೀತ ಕಾಲೇಜಿನಲ್ಲಿ ೧೨ನೇ ಗ್ರೇಡ್‌ವರೆಗೆ ಪರೀಕ್ಷೆ ನಡೆಯುತ್ತಿತ್ತು. ಈ ೧೨ನೇ ಗ್ರೇಡ್‌ನ ಪರೀಕ್ಷೆಯನ್ನು (LTCL - Licentiate of Trinity College of London) ಜಯಚಾಮರಾಜ ಒಡೆಯರು ಮತ್ತು ಅವರ ಸೋದರಿ ರಾಣಿ ವಿಜಯಾದೇವಿ ಅವರು ಪಡೆದುಕೊಂಡಿದ್ದರು. ಅಲ್ಲಿನ ಪಠ್ಯಕ್ರಮದಲ್ಲಿ ರಾಯಲ್ ಇಂಗ್ಲಿಷ್ ಅಪೆರಾ, ಹಾಸ್ಯ ಸಂಗೀತ, ಶಾಸ್ತ್ರೀಯ ಸಂಗೀತ ಹಾಗೂ ಭಾಷಣ ಕಲೆ ಎಂಬ ಕಲೆಗಳಿದ್ದವು. ಲಂಡನ್ನಿನ ಟ್ರಿನಿಟಿ ಕಾಲೇಜಿನಿಂದ ಡಾ॥ ಮಿಸ್ ಬೋವರಿ ರೆವರೆಂಡ್, ಮದರ್ ಸುಪಿರಿಯೋರೆಸ್, ಡಾ॥ ಸಿ.ಎಡ್ಗರ್ ಫೋರ್ಡ್, ಮಿಸ್ಟರ್ ಮಲ್ಲಿನ್‌ಸನ್ ಮುಂತಾದವರು ಮೈಸೂರಿಗೆ ಬಂದು ವಾರ್ಷಿಕ ಪರೀಕ್ಷೆಗಳನ್ನು ನಡೆಸಿದ್ದರು.

**ದಿ ರಾಯಲ್ ಸ್ಕೂಲ್ ಆಫ್ ಮ್ಯೂಸಿಕ್, ಲಂಡನ್ ಮತ್ತು ದಿ ರಾಯಲ್ ಕಾಲೇಜ್ ಆಫ್ ಮ್ಯೂಸಿಕ್ ಲಂಡನ್**

ಮೈಸೂರು ದೊರೆಗಳು ಈ ಎರಡೂ ಸಂಸ್ಥೆಗಳ ಪೋಷಕರಾಗಿದ್ದು ಲಂಡನ್ನಿನ ದಿ ರಾಯಲ್ ಅಕಾಡೆಮಿ ಆಫ್ ಮ್ಯೂಸಿಕ್‌ನ ಜೊತೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದರು. ಹೀಗಾಗಿ ಮೈಸೂರಿಗೆ ಈ ಸಂಸ್ಥೆಯ ಮುಖ್ಯಸ್ಥರಾದ ಡಾ॥ ಲೀ ಭೇಟಿ ಕೊಟ್ಟಿದ್ದರು.

**ಪ್ಯಾಲೇಸ್ ಬ್ಯಾಂಡ್**

೧೮೬೮ರಲ್ಲಿ ೧೦ನೆಯ ಚಾಮರಾಜ ಒಡೆಯರಿಂದ ಸ್ಥಾಪಿತವಾದ ಪ್ಯಾಲೇಸ್ ಬ್ಯಾಂಡ್ ಬಹಳ ವಿಶಿಷ್ಟವಾಗಿದ್ದು

ಭಾರತದಲ್ಲೇ ಪ್ರಪ್ರಥಮವಾಗಿತ್ತು. ಫ್ರಾನ್ಸಿನ ಸಂಗೀತಗಾರ ಡೆಫ್ರಿಸ್ ಮೊದಲ ಬ್ಯಾಂಡ್ ಮಾಸ್ಟರ್. ಜರ್ಮನಿಯ (ಲೀಪ್ ಜಿಗ್) ಆಟ್ಟೋ ಸ್ಮಿತ್ ಸಂಗೀತ (ಬ್ಯಾಂಡ್) ನಿರ್ದೇಶಕರಾಗಿ ೧೯೨೩ರಲ್ಲಿ ನೇಮಕವಾದರು. ಜೆ.ಎಂ. ಫರೀರಾ ೨ ದಶಕಗಳ ಕಾಲ ಇದರ ನಿರ್ದೇಶಕರಾಗಿದ್ದರು. ೧೯೧೪ರಲ್ಲಿ ಕರ್ನಾಟಕ ಬ್ಯಾಂಡ್ ಎಂದಾಗಿ ಸಂಗೀತ ವಿದ್ವಾನ್ ವೆಂಕಟಯ್ಯ ಎಂಬುವರು ಮೊದಲ ಬ್ಯಾಂಡ್ ಮಾಸ್ತರಾದರು. ಲಾಹೋರಿನ ಉಸ್ತಾದ್ ನಾಸಿರ್‌ಖಾನ್ ಕೃಷ್ಣರಾಜ ಒಡೆಯರ ಆಹ್ವಾನದ ಮೇರೆಗೆ ಮೈಸೂರಿಗೆ ಬಂದು ಉತ್ತರ ಭಾರತೀಯ ರಾಗಗಳಲ್ಲಿ ಬ್ಯಾಂಡ್‌ನ ಸಂಗೀತಗಾರರನ್ನು ತರಬೇತುಗೊಳಿಸಿದರು. ಹೀಗಾಗಿ ಪ್ಯಾಲೇಸ್ ಬ್ಯಾಂಡ್ ಆರ್ಕೆಸ್ಟ್ರಾ ಕರ್ನಾಟಕ ಬ್ಯಾಂಡ್ ಮತ್ತು ಇಂಗ್ಲಿಷ್ ಬ್ಯಾಂಡ್ ಎಂಬ ೨ ವಿಭಾಗಗಳು ಕಂಡುಬಂದವು. ಜೊತೆಗೆ ಹಿಂದೂಸ್ತಾನಿ ಆರ್ಕೆಸ್ಟ್ರಾ ಕೂಡ ಇದ್ದಿತು. ಉಸ್ತಾದ್ ಆಲಿ ಜಾನ್ ಇಂಗ್ಲಿಷ್ ಬ್ಯಾಂಡ್‌ನ ಮುಖ್ಯಸ್ಥರಾಗಿಯೂ, ರಾಮಯ್ಯ ಮತ್ತು ಆಂಜನಪ್ಪ ಕರ್ನಾಟಕ ಬ್ಯಾಂಡ್‌ನ ಮುಖ್ಯಸ್ಥರಾಗಿಯೂ ನೇಮಕವಾದರು. ೧೯೫೧ರಲ್ಲಿ ಇವೆರಡೂ ಬ್ಯಾಂಡ್‌ಗಳು ಪೊಲೀಸ್ ಇಲಾಖೆಯಲ್ಲಿ ವಿಲೀನವಾಗಿ ಈಗಲೂ ಪೊಲೀಸ್ ಬ್ಯಾಂಡ್ ಮುಂದುವರೆದುಕೊಂಡು ಬಂದಿದೆ. ಮತ್ತೆ ೧೯೫೪ರಲ್ಲಿ ಈ ಪೊಲೀಸ್ ಬ್ಯಾಂಡ್ ಹೊಸ ಹೆಸರನ್ನು ಪಡೆದುಕೊಂಡು ಕರ್ನಾಟಕ ಬ್ಯಾಂಡ್ ಅಥವಾ ಮೈಸೂರು ಸರ್ಕಾರದ ಆರ್ಕೆಸ್ಟ್ರಾ ಎಂದೂ, ಇಂಗ್ಲಿಷ್ ಬ್ಯಾಂಡ್ ಮೈಸೂರು ಸರ್ಕಾರದ ಬ್ಯಾಂಡ್ ಎಂಬುದಾಗಿ ಕರೆಯಲ್ಪಟ್ಟು ಮುಂದುವರೆದಿದೆ. ಕರ್ನಾಟಕ ಸರ್ಕಾರದಿಂದ ಈಗಲೂ ಪ್ಯಾಲೇಸ್‌ನ ಮುಂಭಾಗದಲ್ಲಿ ಕರ್ನಾಟಕ ಸಂಗೀತದ ಕೃತಿಗಳನ್ನು ಕೇಳಬಹುದಾಗಿದೆ. ಇಂಗ್ಲಿಷ್ ಅಥವಾ ಯುರೋಪಿಯನ್ ಬ್ಯಾಂಡ್ ವಿಭಾಗದಲ್ಲಿ ರೀಡ್ ಬ್ಯಾಂಡ್ ಮತ್ತು ಸ್ಟ್ರಿಂಗ್ ಬ್ಯಾಂಡ್ ಎಂಬ ೨ ಮುಖ್ಯ ಭಾಗಗಳಿವೆ. ಭಾರತೀಯ ಹಾಡುಗಳನ್ನು ಇಂಗ್ಲಿಷ್ ನೊಟೇಷನ್‌ನಲ್ಲಿ ಬರೆಯುವುದು ಸಾಮಾನ್ಯವಾಗಿತ್ತು. ಆಲಿ ಜಾನ್ ಅವರು ಹಿಂದೂಸ್ತಾನಿ ಸಂಗೀತದಲ್ಲಿ ತರಬೇತಿ ನೀಡಿ ಹಿಂದೂಸ್ತಾನಿ ಸಂಗೀತ ಬಳಕೆಗೆ ಬಂದಿತು. ಪ್ಯಾಲೇಸ್ ಆರ್ಕೆಸ್ಟ್ರಾದ ಪಿಯಾನೋ ವಾದಕ ಎ ಹಂಟ್ ಅವರಿಂದ ಇಂಗ್ಲಿಷ್ ನೋಟೇಷನ್‌ನಲ್ಲಿ ತರಬೇತಿ ನೀಡಲಾಯಿತು. ೧೯೨೧ರಲ್ಲಿ ಪಿಯಾನೋ ವಾದಕರಾದ ವಿ.ನರಸಿಂಗರಾವ್ ಅವರಿಗೆ ಮೈಸೂರಿನ ಗುಡ್ ಶೆಫರ್ಡ್ ಕಾನ್ವೆಂಟಿನಲ್ಲಿ ತರಬೇತಿ ನೀಡಿ ಕೊನೆಗೆ ೧೯೨೨ರಲ್ಲಿ ಟ್ರಿನಿಟಿ ಕಾಲೇಜಿನಲ್ಲಿ ಪಿಯಾನೋ ವಾದಕರ ಪರೀಕ್ಷೆಯನ್ನು ತೆಗೆದುಕೊಳ್ಳಲು ಅನುವು ಮಾಡಿಕೊಡಲಾಯಿತು. ಪ್ಯಾಲೇಸ್ ಬ್ಯಾಂಡ್‌ಗೆ ಸಂಬಂಧಿಸಿದ ವಿವಿಧ ದೇಶಗಳ ಸಂಗೀತ ಗ್ರಂಥಗಳು, ಪತ್ರಿಕೆಗಳು, ನಿಯತಕಾಲಿಕೆಗಳು, ಮೈಸೂರಿನ ಗ್ರಂಥಾಲಯದಲ್ಲಿದ್ದವು.

ಒಟ್ಟಾರೆ ಮೈಸೂರು ಒಡೆಯರ ಪ್ರೋತ್ಸಾಹದಿಂದ ಸಂಗೀತ ಕ್ಷೇತ್ರದ ಪ್ರಭಾವವು ಸಮುದ್ರ ಸಾಗರಗಳಾಚೆಗೂ ಹರಡಿದ್ದಿತಲ್ಲದೇ ವಿಶ್ವಮಾನ್ಯತೆ ಪಡೆಯಿತು.

## ಆಧಾರ ಗ್ರಂಥಗಳು


೧. *Annuals of the Royal Family*, Part I & II, Divisional Archives Office, Mysore Palace, Mysore.

೨. *Avaasaarad Hobli*, 1879-1957.

೩. *Chamundi Thotti*, 1864-1952.

೪. Palace Band (files).

೫. Q.J.M.S., Bangalore.

೬. Shek Ali B & Sebastian Joseph, *Karnataka Charitre*, Vol. 6, Prasaranga, Kannada University, Hampi, 1997.

೭. Selection from the records of the Mysore Palace, Vol. I & II.

೮. Sastry BVK, Murali Vani Publications, *BV Shastri Felicitation* Committee, Bangalore - 1990.

೯. Vasudevacharya, *Nenapugalu*, Kavyalaya First Edition, Mysore, 1965, 1978.

೧೦. Vasudevacharya, *Na Kanda Kalavidaru*, Kavyalaya First Edition, Mysore, 1965.

# ಮುಂಬೈ ಕನ್ನಡಿಗರು ಮತ್ತು ಮೈಸೂರು ಅಸೋಸಿಯೇಷನ್
## (೧೯೨೬-೨೦೦೮)

– ಡಾ. ಬಿ. ಲೀಲಾ*

ಮುಂಬೈನಲ್ಲಿ ನೆಲೆಸಿದ ಜನರು ತಾವು ನೆಲೆಸಿದ ಈ ನೆಲವನ್ನು ಹೆಚ್ಚು ಪ್ರೀತಿಸಿ ಪ್ರಗತಿಗೆ ಕಾರಣರೂ ಆಗಿರುವುದಲ್ಲದೆ, ಸಾಕಷ್ಟು ಲಾಭವನ್ನೂ ಪಡೆದಿದ್ದಾರೆ. ಇದರಲ್ಲಿ ಕನ್ನಡಿಗರ ಪಾತ್ರ ಮಹತ್ವದ್ದಾಗಿದೆ.

ಕರ್ನಾಟಕಕ್ಕೂ ಮುಂಬೈಗೂ ಮೊದಲ ಸಂಪರ್ಕ ಆದದ್ದು ಸಮುದ್ರದ ಮೂಲಕ. ಕರಾವಳಿ ತೀರದ ಜನರು ಮುಂಬೈಗೆ ಮೊದಲು ಬಂದರು. ೧೯ನೇ ಶತಮಾನದಲ್ಲಿ ಮುಂಬೈನಲ್ಲಿ ರೈಲ್ವೆ ಬೆಳವಣಿಗೆಯಾದ ನಂತರ ಕನ್ನಡಿಗರು ಮುಂಬೈ ಜನಸಂಖ್ಯೆಯನ್ನು ವರ್ಧಿಸಿ ತಮ್ಮತನವನ್ನು ಕಂಡುಕೊಂಡರು. ಆಗ ಧಾರವಾಡ, ಬೆಳಗಾಂ, ಬಿಜಾಪುರ, ಬಳ್ಳಾರಿ, ಗುಲಬರ್ಗ, ರಾಯಚೂರುಗಳು ಮುಂಬೈಗೆ ಸೇರಿದ್ದವು, ಉತ್ತರ ಕರ್ನಾಟಕ ಮುಂಬೈ ಬಂದರಿಗೆ ಸಮೀಪವಾದ್ದರಿಂದ ಅಲ್ಲಿನ ವ್ಯಾಪಾರದಲ್ಲಿ ಸಾಕಷ್ಟು ಪಾತ್ರ ವಹಿಸಿರುವುದು ಕಂಡುಬರುತ್ತದೆ.

ಹೀಗೆ ವಲಸೆ ಬಂದ ಕನ್ನಡಿಗರು ಇಲ್ಲಿ ತಮ್ಮದೇ ಆದ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದರು. ಅಂತಹ ಸಂಸ್ಥೆಗಳಲ್ಲಿ ಮುಂಬೈನ ಸಂಸ್ಕೃತಿಯ ವಲಯದಲ್ಲಿ ಮನೆಮಾತಾಗಿರುವ ಪ್ರತಿಷ್ಠಿತ 'ಮೈಸೂರು ಅಸೋಸಿಯೇಷನ್'ನ ಪರಿಚಯ ಮಾಡಿಕೊಡುವುದು ಈ ಪ್ರಬಂಧದ ಮುಖ್ಯ ಉದ್ದೇಶ.

ಮುಂಬೈನ ಔದ್ಯೋಗಿಕ ಕ್ಷೇತ್ರದಲ್ಲಿ ಮೊದಲು ಕಂಡುಬರುವ ಹೆಸರು ಶ್ಯಾಮರಾವ್ ವಿಠಲ್ ಕೈಂಣಿ (೧೮೬೦). ಪ್ರಸಿದ್ಧ ಮುಂಬೈ ಹೈಕೋರ್ಟ್ ವಕೀಲರಾಗಿದ್ದ ವಿಠಲ್ ಕೈಂಣಿ, ಸಾಂಸ್ಕೃತಿಕ ವಲಯದಲ್ಲಿ ಮಾನ್ಯರು. ಇವರು ಥಾಣಾದಲ್ಲಿ ಸಮುದ್ರದ ನೀರಿನಿಂದ ತಯಾರು ಮಾಡುವ 'Plaster of Paris', ಬರೆಯುವ ಸೀಮೆಸುಣ್ಣ, ಊಟದ ಉಪ್ಪು ಇವುಗಳನ್ನು ತಯಾರಿಸುವ ಉದ್ಯಮವನ್ನು ಬೆಳೆಸಿ, ಹಲವರಿಗೆ ಉದ್ಯೋಗ ಒದಗಿಸಿದರು. ಇದಲ್ಲದೆ ಧಾರವಾಡದ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿದ್ದುದರಿಂದ ಕರ್ನಾಟಕ-ಮುಂಬೈಗೆ ಸೇತುವೆಯಂತೆ ದುಡಿದರು.

ಎನ್.ಡಿ.ಶಿರೂರ್ ಉತ್ತರ ಕರ್ನಾಟಕದಿಂದ ಬಂದವರು. 'ಮಾರ್ಡನ್ ಮಿಲ್ಸ್' ಇವರ ಶ್ರಮದ ಫಲ. ವೆಂಕಟರಾವ್ ಮತ್ತು ಶ್ರೀನಾಯಕ ಅವರು ಶಸ್ತ್ರ ಚಿಕಿತ್ಸೆಯನ್ನು ಮಾಡುವ ಯಂತ್ರೋಪಕರಣವನ್ನು ತಯಾರಿಸಿದವರಲ್ಲಿ ಪ್ರಮುಖರು. ಈ ಇಬ್ಬರ ಪರಿಶ್ರಮದ ಫಲವಾಗಿ ನಾವು 'ಯಮುನಾಬಾಯಿ ನಾಯರ್ ಚಾರಿಟಬಲ್ ಹಾಸ್ಪಿಟಲ್' ಅನ್ನು ಕಾಣುತ್ತೇವೆ. ವರ್ಣದ್ರವ್ಯ, ರಾಸಾಯನಿಕ ಉತ್ಪನ್ನ, ಬ್ಯಾಟರಿ ಈ ಉದ್ಯಮಗಳಲ್ಲೂ ಕನ್ನಡಿಗರನ್ನು ನೋಡಬಹುದು. ಕೆ.ಎಚ್. ಕಬ್ಲೂರ್ ವರ್ಣದ್ರವ್ಯ ವ್ಯಾಪಾರದಲ್ಲಿ ಪ್ರಮುಖರು. ಇನ್ನು ಪ್ರಪಂಚಕ್ಕೆ ಮಾನ್ಯತೆ ತಂದ ಸರ್.ಎಂ. ವಿಶ್ವೇಶ್ವರಯ್ಯನವರು ಮೋಟಾರು ತಯಾರಿಸುವ ಕಾರ್ಖಾನೆಯನ್ನು ಮುಂಬೈನಲ್ಲಿ ಆರಂಭಿಸಬೇಕೆಂದು ಯತ್ನಿಸಿದರೂ ರಾಜಕೀಯ ಪಗಡೆಯಾಟದಿಂದ ಅದು ಸಾಧ್ಯವಾಗಲಿಲ್ಲ. ಆದರೆ ವಾಲ್‌ಚಂದ್ ಹೀರಾಚಂದ್ 'ಪ್ರೀಮಿಯರ್ ಆಟೋಮೊಬೈಲ್' ಎಂಬ ಸಂಸ್ಥೆಯನ್ನು ಆರಂಭಿಸಿದರು. ಇದರಲ್ಲಿ ವಿಶ್ವೇಶ್ವರಯ್ಯನವರ ಕೈವಾಡ ಇತ್ತು.

ಮುಂಬೈಗೆ ಸರ್.ಎಂ. ವಿಶ್ವೇಶ್ವರಯ್ಯನವರ ಕಾಣಿಕೆ ಅಪಾರ.[೧] ಇವರ ಪ್ರೋತ್ಸಾಹದ ಫಲವಾಗಿ ೧೮೮೪ರಲ್ಲಿ ಮುಂಬೈ ಪ್ರಾಂತದಲ್ಲಿ ಹಲವರು ಹಲವಾರು ಜವಾಬ್ದಾರಿಯುತ ಪದವಿಯನ್ನು ನಿರ್ವಹಿಸಿದರು. ಪೂನಾದ ಲಕ್ಕಡಿಪೂಲ್ ಎಂಬ ಸೇತುವೆಯ ನಿರ್ಮಾಣದ ಹಿಂದಿದ್ದವರು ಮೈಸೂರಿನವರಾದ ಎಂ.ಆರ್.ವರದರಾಜನ್. ಇವರು 'ಹಿಂದೂಸ್ತಾನ್

---

* ಫ್ಲಾಟ್ ನಂ.೪೬, ಶ್ಯಾಮಲಾ, ಮಾತುಂಗ, ಮುಂಬೈ.

ಕನ್‌ಸ್ಟ್ರಕ್ಷನ್ ಕಂಪೆನಿ'ಯ ಮುಖ್ಯ ಅಧಿಕಾರಿಯಾಗಿ ಹಲವಾರು ವರ್ಷ ಮಾಟುಂಗಾದಲ್ಲಿ ಇದ್ದವರು. ಲಕ್ಕಡಿಪೂಲ್ ಸೇತುವೆ ಮುಗಿದ ಸಮಾರಂಭದಲ್ಲಿ ಡಾ. ಆರ್.ಕೆ. ನಾಯ್ಡುರವರು ಅವರನ್ನು ಹೀಗೆ ಶ್ಲಾಘಿಸಿದರು : 'I take the opportunity to congratulate the firm and its able young Engineer Mr. M.R. Varadarajan for the wonderful reward and the highly satisfactory manner in which the work has been completed. But for Mr. M.R. Varadarajan enthusiasm and indifatigabel energy it would not have been possible to complete the work with in such a short time (only two months) and in much creditable manner'[೨] ಸ್ವತಃ ಎಂ. ವಿಶ್ವೇಶ್ವರಯ್ಯನವರು ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಎಂ.ಆರ್. ವರದರಾಜನ್ ಸಾಂಸ್ಕೃತಿಕ ವಲಯದಲ್ಲೂ ಪ್ರತಿಷ್ಠಿತರಾಗಿದ್ದರು ಮತ್ತು ಅನೇಕ ಕಲಾಕಾರರನ್ನು ತಮ್ಮ ಮನೆಯಲ್ಲಿಟ್ಟುಕೊಂಡು ಪ್ರೋತ್ಸಾಹಿಸಿದರು.

ಮುಂಬೈನ ಪ್ಲೇಗ್ ಪಿಡುಗು (೧೮೯೭) ಎಲ್ಲರಿಗೂ ಗೊತ್ತಿರುವ ವಿಷಯ. ಆಗ ಗೋಪಾಲಕೃಷ್ಣ ಗೋಖಲೆ ಮುನಿಸಿಪಲ್ ಪ್ರೆಸಿಡೆಂಟ್. ಆಗ ಪುಣೆಯಲ್ಲಿದ್ದ ವಿಶ್ವೇಶ್ವರಯ್ಯನವರು Public works Departmentನಲ್ಲಿ ಚೀಫ್ ಇಂಜಿನಿಯರ್ ಆಗಿದ್ದರು. ಪೂನಾದ ನಾಲೆಗಳ ಚರಂಡಿ ವ್ಯವಸ್ಥೆ ಮಾಡಿಸಿ, ಅವುಗಳನ್ನು ಮಾದರಿಯಾಗಿ ಮಾಡಿದರು. ಫೀಫಿ ಎಂಬ ಕಾಲುವೆಯನ್ನು ವಿಸ್ತರಿಸಿ ಪುಣೆಯ ಜನರಿಗೆ ಹೆಚ್ಚಿನ ನೀರನ್ನು ಒದಗಿಸಿದರು. ಪೂನಾ ಆಸುಪಾಸು ಪ್ರದೇಶಗಳಿಗೆ ನೀರಿನ ಸೌಕರ್ಯವನ್ನು ಒದಗಿಸಿದರು. ಇದಕ್ಕೆ ಭೋಟಗಾರ ಕಾಲುವೆಯ ಉಪಯೋಗ ಪಡೆದು, ನೀರಿನ ವಿಸ್ತರಣೆಯಿಂದ ಜನರನ್ನು ಬೇರ್ಪಡಿಸುವಿಕೆಯ ಯೋಜನೆಯನ್ನು ಕೈಗೊಂಡಿದ್ದರು. ಎಂ. ವಿಶ್ವೇಶ್ವರಯ್ಯನವರು ಲಕ್ಕಡಿಪೂಲ್ ಉದ್ಘಾಟನೆಯ ದಿನ ಎಂ.ಆರ್.ವರದರಾಜನ್‌ರವರನ್ನು ಮನತುಂಬಿ ಹೊಗಳಿರುವುದನ್ನು[೩] ನೋಡಬಹುದು.

ಮೈಸೂರಿನಿಂದ ಬಂದ ಹಲವಾರು ಇಂಜಿನಿಯರ್‌ಗಳು ಮುಂಬೈಗೆ ಬಂದು, ಉನ್ನತ ಅಧಿಕಾರದಲ್ಲಿದ್ದು, ಮುಂಬೈನ ಸರ್ವತೋಮುಖವಾದ ಬೆಳವಣಿಗೆಗೆ ಕಾರಣರಾಗಿದ್ದಾರೆ. ಇದರಲ್ಲಿ ಆರ್.ಡಿ.ಚಾರ್, ಬಿ.ವಿ.ಎಸ್. ಐಯಂಗಾರ್, ಎನ್.ಎನ್. ಐಯಂಗಾರ್, ಪಿ.ಎನ್. ಚಾರ್ ಪ್ರಮುಖವಾಗಿ ಕಂಡುಬರುವರು. ಇವರೆಲ್ಲಾ ಕನ್ನಡದ ಬೆಳವಣಿಗೆಗೆ ಸಾಕಷ್ಟು ಶ್ರಮಿಸಿದವರು. ಇದಕ್ಕೆ ಸಾಕ್ಷಿಯಾಗಿ ವಡಾಲಾದಲ್ಲಿರುವ 'ನ್ಯಾಷನಲ್ ಕನ್ನಡ ಎಜುಕೇಷನ್ ಸಂಸ್ಥೆ' ಬಹುತೇಕ ಇಂದು ಬೆಳೆದು ಹಲವಾರು ವಿದ್ಯಾರ್ಥಿಗಳ ಜೀವನವನ್ನು ರೂಪಿಸಿದೆ. ಇದರ ರೂವಾರಿ ಬಿ.ವಿ.ಎಸ್. ಐಯಂಗಾರ್. ಮೈಸೂರಿನವರಿಗೆ ಒಂದು ತಾಣವನ್ನು ಕಲ್ಪಿಸಿರುವ ಮುಂಬಯಿನ ಚಂಬೂರಿನಲ್ಲಿರುವ 'ಮೈಸೂರು ಕಾಲೋನಿ' ವಸತಿ ಸಂಕೀರ್ಣಗಳ ಮಾದರಿಯಾಗಿದೆ. ಹಲವಾರು ಕುಟುಂಬಗಳು ತಮ್ಮದೇ ಆದ ಪುಟ್ಟ ಮನೆ, ಕೈದೋಟ ಹೊಂದಿವೆ.

ಇನ್ನು ಪತ್ರಿಕಾ ಪ್ರಪಂಚದಲ್ಲಿ ಸಾಕಷ್ಟು ಹೆಸರು ಮಾಡಿ ಕನ್ನಡವನ್ನು ಉಳಿಸಲು ಅತ್ಯಂತ ಶ್ರಮಪಟ್ಟವರು ಆರ್.ವಿ.ಮೂರ್ತಿ.[೪] ಇವರು 'ಹಿಂದೂಸ್ತಾನ್ ಟೈಮ್ಸ್', 'ಭಾರತ್ ಜ್ಯೋತಿ', 'ಕಾಮರ್ಸ್'ನಂತಹ ಪತ್ರಿಕೆಗೆ ಸಂಪಾದಕರು ಮತ್ತು ಪ್ರೆಸ್ ಗಿಲ್ಡ್ ಆಫ್ ಇಂಡಿಯಾದ ಚೇರ್‌ಮನ್ ಆಗಿದ್ದವರು. ಸಾಂಸ್ಕೃತಿಕ ವಲಯದಲ್ಲಂತೂ ಇವರ ಹೆಸರು ಚಿರಪರಿಚಿತ.

ಮುಂಬೈನ ಪ್ರಸಿದ್ಧ ವಕೀಲರಾದ ಬಿ. ನಾರಾಯಣಸ್ವಾಮಿಗಳು, 'ನ್ಯಾಷನಲ್ ಕನ್ನಡ ಎಜುಕೇಷನ್' ಮಾಟುಂಗದಲ್ಲಿರುವ 'ಶಂಕರಮಠ', 'ಸೌತ್ ಇಂಡಿಯನ್ ಎಜುಕೇಷನ್ ಸೊಸೈಟಿ', 'ಶಾರದಾ ಪೀಠ' ಮತ್ತು 'ಷಣ್ಮುಖಾನಂದ ಹಾಲ್' ಮುಂತಾದ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದವರು. ಇವರ ಪುತ್ರ ಹಾಗೂ ಮುಂಬೈಯ ಪ್ರತಿಷ್ಠಿತ ನ್ಯಾಯಮೂರ್ತಿ ಬಿ.ಎನ್. ಶ್ರೀಕೃಷ್ಣ ಅವರೂ ಸಾಂಸ್ಕೃತಿಕ ವಲಯದಲ್ಲಿ ಸಾಕಷ್ಟು ಸೇವೆ ಸಲ್ಲಿಸಿರುವರು. ವಿ.ಕೆ.ಮೂರ್ತಿ ಫೋಟೋಗ್ರಾಫಿಕ್ ಆರ್ಟ್‌ನಲ್ಲಿ ಹಲವಾರು ಪ್ರಶಸ್ತಿಗಳನ್ನು ಪಡೆದಿದ್ದಾರೆ. ಮೈಸೂರಿನ ಘನತೆಯನ್ನು ಎತ್ತರಕ್ಕೆ ಏರಿಸಿದ ಮತ್ತು ಸಾಂಸ್ಕೃತಿಕ ವಲಯದಲ್ಲಿ ಮೈಸೂರು ಅಸೋಸಿಯೇಷನ್ ಎದ್ದು ಕಾಣುವಂತೆ ಮಾಡಿದ ಡಾ.ಮಂಜುನಾಥ್ ಮತ್ತು ಮಂಜುನಾಥಯ್ಯ ಇವರೆಲ್ಲಾ ಮೈಸೂರು ಅಸೋಸಿಯೇಷನ್ ಕಟ್ಟಿ ಬೆಳೆಸಿದವರು.

**ಮೈಸೂರು ಅಸೋಸಿಯೇಷನ್‌ನ ಉದಯ ೧೯೨೬**

ಮೈಸೂರು ಅಸೋಸಿಯೇಷನ್ ಉದಯವಾದದ್ದು (೧೯೨೫) ಮುಂಬೈನ ಗಿರಿಗಾಮ್‌ನ ಒಂದು ಚಿಕ್ಕ ಕೊಠಡಿಯಲ್ಲಿ. ಒಂದು ಭಾನುವಾರ ಸಂಜೆ ಐದು ಜನ ಮೈಸೂರಿನವರು – ಕೃಷ್ಣಪ್ಪ, ಹೆಚ್. ಐಯಂಗಾರ್, ಚಿದಂಬರರಾವ್, ಎಮ್.ಎಸ್. ನಾರಾಯಣರಾವ್ ಮತ್ತು ಬಿ.ಎನ್. ಐಯ್ಯಂಗಾರ್ – ಮುಂಬೈ ಗಿರಿಗಾವ್‌ನಲ್ಲಿ ಸೇರಿ ಪ್ರತಿ ಭಾನುವಾರ ತಾವು ಕೂಡಬೇಕೆಂದೂ, ಇದರಿಂದ ಮನಸ್ಸು ವಿಕಾಸ ಹೊಂದುವುದೆಂದೂ ಮತ್ತು ಮಹಾನಗರಿಯಲ್ಲಿ ಒಬ್ಬರನ್ನೊಬ್ಬರು ಅರಿಯಲು ಸಹಾಯವಾಗುವುದೆಂದೂ ಮತ್ತು ಇದು ಒಂದು ಸಾರ್ವಜನಿಕ ವೇದಿಕೆಗೆ ಅಸ್ತಿಭಾರವೆಂದೂ ಇದನ್ನು ಪ್ರಾರಂಭಿಸಿದರು. ಆದರೆ ಕಾಲಕ್ರಮೇಣ ಸದಸ್ಯರ ಸಂಖ್ಯೆ ಸಾಕಷ್ಟು ಹೆಚ್ಚಿ ಗಿರಿಗಾವ್‌ನಲ್ಲಿ ಜಾಗ ಸಾಕಾಗದೆ ಮಾಟುಂಗಾದಲ್ಲಿರುವ ನೆಪ್ಪುಗಾರ್ಡನ್ ಬಳಿ ಇರುವ ವಲಜಿಬಾಯಿ ಹಾಲ್ ಅನ್ನು ಬಾಡಿಗೆಗೆ ತೆಗೆದುಕೊಂಡು ತಮ್ಮ ಚಟುವಟಿಕೆಯನ್ನು ಮುಂದುವರೆಸಿದರು. ಇದಕ್ಕೆಲ್ಲಾ ಒಬ್ಬ ಮುಖ್ಯಸ್ಥ ಮತ್ತು ಜವಾಬ್ದಾರಿ ಹೊರುವ ವ್ಯಕ್ತಿ ಬೇಕೆಂದು ಮನಗಂಡು ಆಗ ಮುಂಬೈನಲ್ಲಿ ಹೆಸರು ಮಾಡಿದ್ದ ದಿವಾನ ಬಹದ್ದೂರ್ ಕೆ. ರಾಮಸ್ವಾಮಿಯವರಲ್ಲಿ ತಮ್ಮ ಅನಿಸಿಕೆಯನ್ನು ಮುಂದಿಟ್ಟರು. ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರು ತಮ್ಮ ಒಪ್ಪಿಗೆಯನ್ನು ತಕ್ಷಣ ಕೊಟ್ಟರು. ಮೈಸೂರು ಅಸೋಸಿಯೇಷನ್ ಉದಯವಾದದ್ದು ವಿಧ್ಯುಕ್ತವಾಗಿ ಪ್ರೊ.ಎನ್.ಎಸ್. ಸುಬ್ಬರಾಯರಿಂದ (ಆಗ ಮೈಸೂರು ವಿಶ್ವವಿದ್ಯಾನಿಲಯದ ವೈಸ್ ಚಾನ್ಸಲರ್ ಆಗಿದ್ದವರು) ಜನವರಿ ೯, ೧೯೨೭ರಂದು ಆರಂಭಿಸಲ್ಪಟ್ಟಿತು. ೧೮೬೦ರ ಸೊಸೈಟಿ ರಿಜಿಸ್ಟ್ರೇಷನ್ ಪ್ರಕಾರ ೧೯೩೪ರಲ್ಲಿ ರಿಜಿಸ್ಟರ್ ಆಗಿ ಮತ್ತೆ ೧೯೫೦ರಲ್ಲಿ ಪಬ್ಲಿಕ್ ಟ್ರಸ್ಟ್ ಆಕ್ಟ್ ಪ್ರಕಾರ ರೆಜಿಸ್ಟ್ರೇಷನ್ ಆಯಿತು. ಕೆ. ರಾಮಸ್ವಾಮಿಗಳು ಪ್ರೆಸಿಡೆಂಟ್‌ರಾಗಿಯೂ, ಚಂದ್ರಶೇಖರ್ ಶರ್ಮ ಮೊದಲನೆ ಸೆಕ್ರೆಟರಿಯಾಗಿಯೂ ಕಾರ್ಯ ನಿರ್ವಹಿಸಿದ್ದಾರೆ.

ಚಂದ್ರಶೇಖರ ಶರ್ಮ ಬರಹಗಾರರು. ಇವರು (೧೯೨೭) ಪ್ರಬೋಧ ಎಂಬ ಮಾಸಪತ್ರಿಕೆ ನಡೆಸುತ್ತಿದ್ದರು. ಆದರೆ ಈ ಪತ್ರಿಕೆ ಹೆಚ್ಚು ಕಾಲ ನಡೆಯದೆ ಮೂರು ವರ್ಷಕ್ಕೆ ನಿಂತಿತು.[೫]

ಮಾಟುಂಗಾದಲ್ಲಿ ಕೊಠಡಿಯನ್ನು ಬಾಡಿಗೆಗೆ ತೆಗೆದುಕೊಂಡು ನಡೆಸುತ್ತಿದ್ದ ಅಸೋಸಿಯೇಷನ್‌ಗೆ ತನ್ನ ಸ್ವಂತ ಕಟ್ಟಡದ ಅವಶ್ಯಕತೆ ಕಂಡುಬಂದು, ಇದು ಸಾಕಾರವಾದದ್ದು (೧೯೩೨), ಬಹುದಾಜಿ ರೋಡ್, ಮಾಟುಂಗಾದಲ್ಲಿ. ಆಗ ಅಸಿಸ್ಟೆಂಟ್ ಇಂಜಿನಿಯರ್ ಆಗಿದ್ದ ಎಂ.ಎ.ಎಸ್.ಅಯ್ಯಂಗಾರ್ ಮುಂಬೈ ಕಾರ್ಪೋರೇಷನ್‌ನಲ್ಲಿ ಅಧಿಕಾರಿಯಾಗಿದ್ದರು. ಬಾಂಬೆ ಮುನಿಸಿಪಲ್ ಕಾರ್ಪೋರೇಷನ್ ಲೀಸ್ ಮೇಲೆ ಜಾಗ ಕೊಟ್ಟಿತು. ಕಟ್ಟಡದ ಅಸ್ತಿಭಾರವನ್ನು ಹಾಕಿದವರು ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿ. ಇದಕ್ಕೆ ಸಹಾಯ ಮಾಡಿದವರು ಬಿ.ವಿ.ಎಸ್. ಅಯ್ಯಂಗಾರ್, ಪಿ. ಶೇಷನ್, ಸಿ.ಎನ್. ಗರುಡಾಚಾರ್ ಮತ್ತು ಎಲ್ಲಾ ಸದಸ್ಯರು ಕೊಟ್ಟಂತಹ ಸಹಕಾರ. ಇವುಗಳಿಂದ, 'ವಾಣಿ ವಿಲಾಸ ಮೆಮೋರಿಯಲ್ ಹಾಲ್' (೧೯೩೪), ತನ್ನದೇ ಆದ ಒಂದು ಪುಟ್ಟ ವರಾಂಡ ಮತ್ತು ಅಡಿಗೆ ಶಾಲೆ (ಮೆಸ್) ಇಷ್ಟನ್ನು ಕಟ್ಟಿತು. ೧೯೪೦ರಲ್ಲಿ ಸದಸ್ಯರು ಹೆಚ್ಚಿದ್ದರಿಂದ ಕಟ್ಟಡಕ್ಕೆ ಮೊದಲನೆ ಮಹಡಿ ಹಾಕಲಾಯ್ತು. ಇದಕ್ಕೆ ಹೆಚ್ಚು ಶ್ರಮ ವಹಿಸಿದವರು ಮತ್ತು ಪೂರ್ಣ ಜವಾಬ್ದಾರಿ ವಹಿಸಿದವರು ಬಿ.ವಿ.ಎಸ್. ಅಯ್ಯಂಗಾರ್. ಸಂಘ ಬೆಳೆದು ಹಲವಾರು ಚಟುವಟಿಕೆ ಹಮ್ಮಿಕೊಂಡಿದ್ದರಿಂದ ಮೊದಲನೆ ಮಹಡಿಯ ಅಸ್ತಿಭಾರವನ್ನು ಎನ್.ಎಸ್. ಅಯ್ಯಂಗಾರ್ ಹಾಕಿದರು.

ತಮ್ಮ ಊರು ಬಿಟ್ಟು ಮುಂಬೈಗೆ ಬಂದ ಹಲವಾರು ಯುವಕರಿಗಾಗಿ ಆರಂಭವಾದದ್ದು ಭೋಜನಶಾಲೆ. ಊಟ, ಓದು. ಆಟ ಮೂರೂ ಬೆಳವಣಿಗೆಗೆ ಅವಶ್ಯಕ. ಇದನ್ನು ಗಮನಿಸಿ ಪ್ರೆಸಿಡೆಂಟರಾದ ಎನ್.ಎಸ್. ಅಯ್ಯಂಗಾರರು ಹಲವಾರು ಪುಸ್ತಕಗಳು, ಕಪಾಟು ಸಮೇತ ದತ್ತಿಯಾಗಿ ಕೊಟ್ಟು, ಗ್ರಂಥ ಭಂಡಾರವನ್ನು ಆರಂಭಿಸಿದರು. ಇದರಿಂದ ಸದಸ್ಯರು ತಮ್ಮ ಸಮಯವನ್ನು ಹೆಚ್ಚು ಕಾಲ ಅಸೋಸಿಯೇಷನ್‌ನಲ್ಲಿ ಕಳೆಯುವಂತಾಯಿತು. ನಾನಜ ದೇವಸಹೆ ಎಂಬುವರು ಒಂದು 'Billiard Table' ಕೊಟ್ಟರು. ಮುಂದೆ ಅಸೋಸಿಯೇಷನ್ ಟೀಮು 'Billiard"ನಲ್ಲಿ ಅತ್ಯಂತ ಯಶಸ್ವಿಯಾಗಿ ಸದಸ್ಯರು ಹಲವಾರು ಪ್ರಶಸ್ತಿಗಳನ್ನು ಗಳಿಸಿದರು.

ಇದರಿಂದ ಅಸೋಸಿಯೇಷನ್ ಸದಸ್ಯರಿಗೆ ತಮ್ಮದೇ ಆದ ತಾಣ ಮತ್ತು ಚಟುವಟಿಕೆಗೊಂದು ಮಾರ್ಗ ದೊರೆತಂತಾಯಿತು. ಪ್ರತಿ ತಿಂಗಳೂ ನಾಟಕ, ವಿಶೇಷ ದಿನಗಳಲ್ಲಿ ಗಣಪತಿ ಹಬ್ಬ, ರಾಮನವಮಿ, ದೀಪಾವಳಿಯನ್ನು

ಸದಸ್ಯರು ಆಚರಿಸುತ್ತಿದ್ದರು. ಕರ್ನಾಟಕ ಸಂಗೀತ ತರಗತಿಯನ್ನು ಆರಂಭಿಸಲಾಯಿತು. ಅದಲ್ಲದೆ ಮಾಹುಲಿ ಗೋಪಾಲಾಚಾರ್ಯರ ಪ್ರವಚನ ಪಾಠಗಳು ನಡೆಯುತ್ತಿದ್ದವು. ೧೯೧೯ ರಲ್ಲಿ ಹುಟ್ಟಿದ ಪಂಡಿತ ರತ್ನ ಪಂಡಿತರಾಜ ಮಾಹುಲಿ ಗೋಪಾಲಾಚಾರ್ಯರು ಪಾಶ್ಚಾತ್ಯ, ಪೌರ್ವಾತ್ಯ, ಎರಡೂ ವಿದ್ಯೆಯಲ್ಲಿ ಪರಿಣತಿ ಹೊಂದಿದ್ದವರು. ಆಚಾರ್ಯರು, ಎಂ.ಎ. ಮುಗಿಸಿ ಮುಂಬೈಗೆ ಬಂದ ಮೇಲೆ, ತಾವು ಒಂದು ವಿದ್ಯಾಪೀಠ ಸ್ಥಾಪಿಸಬೇಕು. ಅಲ್ಲಿ ಮಕ್ಕಳು ಊಟ, ವಸತಿ ಪಡೆದು ಉತ್ತಮ ವಿದ್ಯೆ ಹೊಂದಿ ಸತ್ಪ್ರಜೆಗಳಾಗಬೇಕು, ತಾವು ಕಲಿತ ವಿದ್ಯೆಯನ್ನು ಮಕ್ಕಳಿಗೆ ಕಲಿಸಬೇಕು ಎಂಬ ಹಂಬಲದಿಂದ ೧೯೩೭ರಲ್ಲಿ ಮಾಟುಂಗಾದಲ್ಲಿ ಒಂದು ಚಿಕ್ಕ ಕೋಣೆಯಲ್ಲಿ ಪಾಠ, ಪ್ರವಚನ ಆರಂಭಿಸಿದರು. ಆಗ ಅವರ ಹತ್ತಿರ ಇದ್ದುದು ಕೇವಲ ೭ ರೂಪಾಯಿ. ಆದರೆ ಧೈರ್ಯ, ಸಾಹಸ ಅಪಾರವಾಗಿತ್ತು. ಮಾಟುಂಗಾದಲ್ಲಿರುವ ಆಚಾರ್ಯರ ಮನೆಯಲ್ಲಿ ಈಗಲೂ ಪ್ರವಚನ ನಡೆಯುತ್ತದೆ. ಆಚಾರ್ಯರು ಸ್ಥಾಪಿಸಿದ 'ವಾಣಿ ವಿಹಾರ ವಿದ್ಯಾಲಯ' ಎಂಬ ವಿದ್ಯಾಸಂಸ್ಥೆ ಮಾಲುಂಡದಲ್ಲಿದೆ. ಪಾಶ್ಚಾತ್ಯ, ಪೌರ್ವಾತ್ಯ, ಲೌಕಿಕ ಮತ್ತು ವೈದಿಕ ವಿದ್ಯೆಯನ್ನು ಕಲಿಸಿಕೊಡುತ್ತದೆ. ಮಾಹುಲಿ ಗೋಪಾಲಾಚಾರ್ಯರ ನಿಧನದ ನಂತರ (೧೯೮೪) ಮಾಹುಲಿಯವರ ಮಗ ವಿದ್ಯಾನರಸಿಂಹಾಚಾರ್ 'ವಾಣಿ ವಿಹಾರ ವಿದ್ಯಾಲಯ'ದ ಕುಲಪತಿಯಾಗಿ ಅತ್ಯಂತ ಸಮರ್ಪಕವಾಗಿ ನಡೆಸುತ್ತಿದ್ದಾರೆ. ಇವರು ಮೈಸೂರು ಅಸೋಸಿಯೇಷನ್ ಹಿತೈಷಿಗಳು ಮತ್ತು ಬೆಳವಣಿಗೆಗೆ ಕಾರಣರು.[೬]

೧೯೩೭ರಲ್ಲಿ ಮೈಸೂರು ಅಸೋಸಿಯೇಷನ್ ಮತ್ತು ಕರ್ನಾಟಕ ಸಂಘ ಕೂಡಿ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಜರುಗಿಸಿದ್ದು ಅಸೋಸಿಯೇಷನ್ ಇತಿಹಾಸದಲ್ಲಿ ಮೈಲಿಗಲ್ಲು. ಅದನ್ನು ಹಿರಿಯ ತಲೆಮಾರಿನವರು ಈಗಲೂ ನೆನಪಿಸುತ್ತಾರೆ.

ಮುಂಬೈನಿಂದ ಬಂದ ಅನಿವಾಸಿಗಳಿಗೆ ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಶಾಲೆಯ ಅವಶ್ಯಕತೆ ಇತ್ತು. ಶಾಲೆ ೧೯೨೭ರಲ್ಲಿ ಒಂದು ಚಿಕ್ಕ ರೂಮಿನಲ್ಲಿ ಆರಂಭಿಸಿ, ೧೯೩೯ರಲ್ಲಿ ಅಸೋಸಿಯೇಷನ್‌ನಲ್ಲಿ ಶಾಲೆಯನ್ನು ಮುಂದುವರೆಸಲಾಯಿತು. ಹೀಗೆ ಶುರುವಾದ ಸ್ಕೂಲಿಗೆ ಸದಸ್ಯರ ಮಕ್ಕಳುಗಳೆಲ್ಲಾ ವಿದ್ಯಾರ್ಥಿಗಳು. ೧೯೪೮ರ ತನಕ ಸ್ಕೂಲ್ ಬಹುದಾಜಿ ರೋಡಿನಲ್ಲಿತ್ತು. ೧೯೪೪ ರಲ್ಲಿ ಸಯಾನಿಗೆ ವಿಸ್ತರಿಸಲಾಯಿತು. ಮಕ್ಕಳ ಸಂಖ್ಯೆ ಹೆಚ್ಚಾಗಿ ಒಂದು ಸ್ಥಿರವಾದ ಕಟ್ಟಡಕ್ಕೆ ಜಾಗ ದೊರಕಿದ್ದು ೧೯೫೪ರಲ್ಲಿ. ಇದರ ಜವಾಬ್ದಾರಿಯನ್ನು ಹೊತ್ತವರು ಆರ್.ಡಿ.ಚಾರ್, ಆರ್.ವಿ. ಮೂರ್ತಿ, ಬಿ. ನಾರಾಯಣಸ್ವಾಮಿ ಮತ್ತು ಮಾಹುಲಿ ಗೋಪಾಲಾಚಾರ್ಯರು. ವಡಾಲದಲ್ಲಿರುವ ನ್ಯಾಷನಲ್ ಎಜುಕೇಷನ್ ಸೊಸೈಟಿಯ ಭವ್ಯ ಕಟ್ಟಡ ಇವರೆಲ್ಲರ ಪರಿಶ್ರಮದ ಫಲ.

ಇದರಲ್ಲಿ ಮಹಿಳೆಯರ ಪಾತ್ರವನ್ನು ಮರೆಯಲಾಗದು. ಶ್ರೀಮತಿ ವೈದೇಹಿಚಾರ್, ಸರೋಜಮ್ಮ ಮೂರ್ತಿ, ಶ್ಯಾಮಲಾಂಬ ವರದರಾಜನ್, ಶಾರದಾಬಾಯಿ ನಾರಾಯಣಸ್ವಾಮಿ, ರತ್ನಾಬಾಯಿ ರಾಘವೇಂದ್ರ ಇವರೆಲ್ಲ ಎಲ್ಲರ ಮನೆಗೆ ಬರುವ ವರ್ತಮಾನ ಪತ್ರಿಕೆಗಳನ್ನು ಪ್ರತಿ ತಿಂಗಳೂ ಕೂಡಿಸಿ ತಿಂಗಳಿಗೆ ಬರುವ ಹಣವನ್ನು ಸ್ಕೂಲಿಗೆ ಕೊಡುವುದನ್ನು ಆರಂಭಿಸಿದರು. ಸ್ಕೂಲು ಭವ್ಯವಾಗಿ ಬೆಳೆದು ಈಗ ಕನ್ನಡ, ಇಂಗ್ಲಿಷ್ ಮಾಧ್ಯಮದಲ್ಲಿ ವಿದ್ಯೆಯನ್ನು ನೀಡುತ್ತಿದೆ. ಇಲ್ಲಿ ವಿದ್ಯಾಭ್ಯಾಸ ಹೊಂದಿದ ಹಲವಾರು ವಿದ್ಯಾರ್ಥಿಗಳು ದೇಶದ ಉತ್ತಮ ಪ್ರಜೆಗಳಾಗಿ, ಉನ್ನತ ಉದ್ಯೋಗದಲ್ಲಿದ್ದಾರೆ.

೧೯೬೭ರಲ್ಲಿ ಮೈಸೂರು ಅಸೋಸಿಯೇಷನ್ ಕಟ್ಟಡವನ್ನು ವಿಸ್ತರಿಸಿ ಒಂದು ರಂಗ ಮಂಟಪ ಮತ್ತು ಹೊರಗಿನಿಂದ ಬರುವ ಹುಡುಗರು ತಾತ್ಕಾಲಿಕವಾಗಿ ಇಳಿದು ಕೊಳ್ಳುವುದಕ್ಕೆ ೨-೩ ರೂಮು ವ್ಯವಸ್ಥೆ ಮಾಡಲಾಯಿತು.

### ಥಿಯೇಟರ್ ಚಟುವಟಿಕೆ

೧೯೨೬ರಲ್ಲಿ ಥಿಯೇಟರ್ ಚಟುವಟಿಕೆ ಗಂಗಾಧರಯ್ಯನವರ ನೇತೃತ್ವದಲ್ಲಿ ಆರಂಭವಾಯಿತು. ಮೊದಲು ಪೌರಾಣಿಕ ಮತ್ತು ಸಂಗೀತವನ್ನು ಒಳಗೊಂಡ ನಾಟಕವನ್ನು ಆಡುತ್ತಿದ್ದರು. ೧೯೪೭ರ ಹೊತ್ತಿಗೆ ಕೈಲಾಸಂರವರ ಪ್ರಭಾವ ಅಸೋಸಿಯೇಷನ್ ಮೇಲೆ ಬೀರಿ ಅವರಲ್ಲಿ ತರಬೇತಿ ಪಡೆದು ಕೈಲಾಸಂ ನಾಟಕವನ್ನು ಆಡಲಾಗಿದೆ.

೧೯೪೪ರಲ್ಲಿ ಜಯಚಾಮರಾಜೇಂದ್ರ ಪಾಲಿಟೆಕ್‌ನಲ್ಲಿ ತರಬೇತಿ ಹೊಂದಿದ ಹಲವು ಯುವಕರು ಮುಂಬೈಗೆ

ಬಂದರು. ಇದರಲ್ಲಿ ಪ್ರಮುಖರಾದವರು ಭಾರತ ಮತ್ತು ಹೊರನಾಡಿನಲ್ಲಿ ಪ್ರಸಿದ್ಧವಾಗಿರುವ ಸಿನಿಮಾ ಛಾಯಾಗ್ರಾಹಕ ವಿ.ಕೆ. ಮೂರ್ತಿ. ಇವರ ಮತ್ತು ಮೈಸೂರು ಅಸೋಸಿಯೇಷನ್ ಸಂಬಂಧವನ್ನು ಉಮಾರಾವ್[೭] ತಮ್ಮ 'ಬಿಸಿಲು ಕೋಲು' ಎಂಬ ವಿ.ಕೆ. ಮೂರ್ತಿಯವರ ಜೀವನಚರಿತ್ರೆಯಲ್ಲಿ ಸ್ವಾರಸ್ಯವಾಗಿ ಕೊಟ್ಟಿದ್ದಾರೆ.

ವಿ.ಕೆ.ಮೂರ್ತಿಯವರ ನೇತೃತ್ವದಲ್ಲಿ, ನಾಟಕಗಳಲ್ಲಿ ಗಂಡಸರು ಹೆಂಗಸರ ಪಾತ್ರ ಮಾಡುವ ಬದಲು ಹೆಂಗಸರೇ ಪಾತ್ರ ವಹಿಸಿದರು. ಮಧುರ ಕೃಷ್ಣಸ್ವಾಮಿ (ಕೃಷ್ಣಸ್ವಾಮಿ ರಿಸರ್ವ್ ಬ್ಯಾಂಕಿನ ಅತ್ಯುನ್ನತ ಹುದ್ದೆಯಲ್ಲಿದ್ದು, ಬೆಂಗಳೂರಿನಲ್ಲಿ ನೆಲೆಸಿರುವರು), ಸುಶೀಲರಾವ್, ಶಾರದಾ ನಾರಾಯಣಸ್ವಾಮಿ ಇವರುಗಳು ಮುಂದೆ ಬಂದು ಸ್ತ್ರೀ ಪಾತ್ರವನ್ನು ಅಭಿನಯಿಸಿದರು. ಇವರಿಂದ ಸ್ಫೂರ್ತಿಗೊಂಡ ಹಲವಾರು ಕಿರಿಯರು ಮುಂದೆ ತಮ್ಮದೇ ಆದ ನಾಟಕ ತಂಡವನ್ನು ನಿರ್ಮಿಸಿದ್ದೇ ಅಲ್ಲದೆ ಇತ್ತೀಚಿನ ಟೆಲಿವಿಷನ್‌ನಲ್ಲಿ ಕೂಡ ಹೆಸರು ಮಾಡಿರುವರು.

೧೯೬೭ರಲ್ಲಿ ಒಂದು ರಂಗಮಂಟಪ ಶುರುವಾಯಿತು. ೧೯೭೦ರ ದಶಕದಲ್ಲಿ ಅಸೋಸಿಯೇಷನ್ ಕೈಲಾಸಂ ನಾಟಕವನ್ನು ಕಡಿಮೆ ಮಾಡಿ 'ಅಸಂಗತ ನಾಟಕ'ಕ್ಕೆ ಎಡೆಕೊಟ್ಟಿತ್ತು. ೧೯೭೦-೮೦ರ ಕಾಲ ಅಸೋಸಿಯೇಷನ್ ಕಲೆಯ ಪರ್ವಕಾಲವೆನ್ನಬಹುದು.

೧೯೮೯ರಲ್ಲಿ ಅಸೋಸಿಯೇಷನ್ ತನ್ನದೇ ಆದ ರಂಗಭವನದ ಕನಸನ್ನು ಹೊಂದಿ ಅದು ೧೯೯೫ರಲ್ಲಿ ಸಾಕಾರವಾಯಿತು. ಇಂದು ಮುನ್ನೂರು ಜನ ಹವಾನಿಯಂತ್ರಣ ಭವನದಲ್ಲಿ ಕೂತು ಸಂತೋಷವಾಗಿ ನಾಟಕ, ಸಂಗೀತ, ನೃತ್ಯ, ಚರ್ಚೆ ನೋಡಲು ಸಾಧ್ಯವಾಗಿದೆ. ಎ. ನಾಗಭೂಷಣರಾವ್ ಅಧ್ಯಕ್ಷರಾಗಿದ್ದಾಗ (ಇವರು ಹಿಂದೂಸ್ತಾನ್ ಕನ್‌ಸ್ಟ್ರಕ್ಷನ್ ಕಂಪನಿಯ ಜನರಲ್ ಮ್ಯಾನೇಜರ್ ಆಗಿದ್ದವರು) ಇದು ಸಾಕಾರವಾಯಿತು. ಆಗ ಮಹಾರಾಷ್ಟ್ರದ ಗೌರ್ನರ್ ಆಗಿದ್ದ ಅಲೆಗ್ಸಾಂಡರ್ ಉದ್ಘಾಟನೆ ಮಾಡಿದರು.

### ಸಂಗೀತ ಮತ್ತು ಅಸೋಸಿಯೇಷನ್

ಮೈಸೂರು ಅಸೋಸಿಯೇಷನ್ ಸಂಗೀತದ ಚರ್ಚೆ ಮತ್ತು ಸಂಗೀತ ಕಲಿಸಿ ಕೊಡಲು ಗುರುಗಳ ಏರ್ಪಾಡು ಮಾಡುವುದರಲ್ಲಿ ಯಾವಾಗಲೂ ಮುಂಚೂಣಿಯಲ್ಲಿದೆ. ಮೊಟ್ಟ ಮೊದಲ ಗುರು ವೀಣೆ ಶಂಕರನಾರಾಯಣರಾವ್‌ರವರನ್ನು ಜ್ಞಾಪಿಸಬೇಕು. ಇವರು ಅಸೋಸಿಯೇಷನ್‌ನಲ್ಲಿ ಸಂಗೀತ ಕಲಿಸುತ್ತಿದ್ದರು. ಇವರು ಅಸೋಸಿಯೇಷನ್‌ನಲ್ಲಿ ಕಲಿಸುವುದಲ್ಲದೆ, ಇವರು ನಡೆಸುತ್ತಿದ್ದ 'ತರಂಗಿಣಿ ಅಕಾಡೆಮಿ'ಯಲ್ಲಿ ಹಲವಾರು ಶಿಷ್ಯರನ್ನು ತಯಾರು ಮಾಡಿರುವರು. ಮೈಸೂರು ವೀಣಾಪರಂಪರೆಯನ್ನು ಮುಂಬಯಿಯಲ್ಲಿ ನೆಲಸುವಂತೆ ಮಾಡಿರುವರು. 'ವೀಣೆ ಸಾರ್ವಭೌಮ ವಾದ' ಅವರ ಮುಖ್ಯ ಕೃತಿ. ಇದನ್ನು ಕರ್ನಾಟಕ ನೃತ್ಯ ಅಕಾಡೆಮಿ ಪ್ರಕಟಿಸಿದೆ. ಅಪೂರ್ವ ವಿಚಾರ ಈ ಕೃತಿಯಲ್ಲಿದೆ. 'ಗಿಜಜಟಿಚಿ ಖಟಿಣಡಿಣ-ಟಜಟಣ ಜಿಂಡಿ ಜಥಭಿಜಟಟಜಟಿಛಿಜ' ಎಂಬ ಕೃತಿಗೆ ಕೂಡ ಬಹಳ ಬೇಡಿಕೆ ಇದೆ. ಇತ್ತೀಚೆಗೆ ಪುರಂದರದಾಸರ ಕೃತಿಗಳ ಬಗ್ಗೆ ಕೂಡ ಮೂರು ಪುಸ್ತಕ ಪ್ರಕಟಿಸಿದ್ದಾರೆ.

ಹಿಂದೂಸ್ತಾನಿ ಮತ್ತು ಕರ್ನಾಟಕ ಸಂಗೀತ ಎರಡೂ ಪದ್ಧತಿಯನ್ನು ಅಸೋಸಿಯೇಷನ್ ಯಾವಾಗಲೂ ಪ್ರೋತ್ಸಾಹಿಸಿದೆ. ಎರಡೂ ಪದ್ಧತಿಯ ಶ್ರೇಷ್ಠ ಕಲಾವಿದರು ಸಂಘಕ್ಕೆ ತಮ್ಮ ಕಲಾಪ್ರತಿಭೆಯನ್ನು ತೋರಿಸಿದ್ದಾರೆ.

ಮೊದಲು ಸಂಗೀತ ವಾದ್ಯ ಸಂಯೋಜನೆ ವಿ.ಕೆ ಮೂರ್ತಿಯವರಿಂದ ನಿರ್ವಹಿಸಲ್ಪಡುತ್ತಿತ್ತು. ಅತ್ಯಂತ ಹಿರಿಯರಾದ ದಿವಂಗತ ಸೀತಮ್ಮರಾವ್‌ರವರ ದಿಗ್ದರ್ಶನ, ನಿರ್ದೇಶನದಲ್ಲಿ ಹಲವಾರು ಸದಸ್ಯರು ಜಾನಪದ ಸಂಗೀತವನ್ನು ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಅಳವಡಿಸಿ ಹಲವು ಕಡೆ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಿದ್ದಾರೆ. ಸಂಪ್ರದಾಯದ ಹಾಡುಗಳನ್ನು ಕ್ಯಾಸೆಟ್ ಮಾಡಿ ಅಸೋಸಿಯೇಷನ್‌ಗೆ ಕೊಟ್ಟ ಸೀತಮ್ಮರಾವ್ ಇನ್ನಿಲ್ಲ.

ಅಸೋಸಿಯೇಷನ್ ನಡೆಸುವ ಪ್ರತಿವರ್ಷದ ಗಣಪತಿ ಹಬ್ಬದಲ್ಲೂ ಹಲವಾರು ಕಿರಿಯ ಹಿರಿಯ ಕಲಾವಿದರು ತಮ್ಮ ಪ್ರತಿಭೆ ತೋರಿದ್ದಾರೆ. ಆರ್.ಕೆ. ಶ್ರೀಕಂಠನ್ ಮತ್ತು ಆರ್.ಕೆ ಪದ್ಮನಾಭನ್ ಅವರು ನಡೆಸಿಕೊಟ್ಟ ಸಂಗೀತದ

ಸೆಮಿನಾರ್ ಮತ್ತು ವರ್ಕ್‌ಶಾಪ್ ಅಸಾಧಾರಣವಾದದ್ದು. ಇದು ಸದಸ್ಯರ ಸಂಗೀತ ಜ್ಞಾನವನ್ನು ಹೆಚ್ಚಿಸಲು ಕಾರಣವಾಗಿದೆ ಮತ್ತು ಇದರಿಂದ ಎಲ್ಲರಿಗೂ ಕಲಾವಂತರ ಭೇಟಿ ಸಾಧ್ಯವಾಗಿದೆ ಮತ್ತು ಪರಸ್ಪರ ವಿನಿಮಯ ಮಾಡಲು ಕೂಡ ಸಹಾಯವಾಗಿದೆ.

ಅಸೋಸಿಯೇಷನ್ ೧೯೭೬ ರಲ್ಲಿ ಸುವರ್ಣ ಮಹೋತ್ಸವ ಆಚರಿಸಿತು. ಆ ವರುಷವೆಲ್ಲಾ ಸಂಭ್ರಮ. ಆಗ ಹಮ್ಮಿಕೊಂಡ ಅತ್ಯುತ್ತಮ ಕಾರ್ಯಕ್ರಮಗಳ ಪೈಕಿ ಒಂದು ಮುಂಬಯಿ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ಮತ್ತು ಅಸೋಸಿಯೇಷನ್ ನಡೆಸಿಕೊಡುವ 'ಉಪನ್ಯಾಸ ಮಾಲಿಕೆ'. ಇದಕ್ಕಾಗಿ ಮೈಸೂರು ಅಸೋಸಿಯೇಷನ್ ಮುಂಬೈ ವಿಶ್ವವಿದ್ಯಾನಿಲಯಕ್ಕೆ ದತ್ತಿ ಕೊಟ್ಟಿತ್ತು. ಈ ದತ್ತಿ ನಿಧಿಯಿಂದ ಮುಂಬಯಿ ವಿಶ್ವವಿದ್ಯಾನಿಲಯ ಪ್ರತಿವರ್ಷ ಕರ್ನಾಟಕದಲ್ಲಿ ಇರುವ ಯಾರಾದರೂ ವಿದ್ವಾಂಸರನ್ನು ಬರಮಾಡಿಕೊಂಡು ಅವರಿಂದ ಎರಡು ದಿನ ಉಪನ್ಯಾಸ, ಚರ್ಚೆ ಹಮ್ಮಿಕೊಳ್ಳುತ್ತದೆ.

ಅಸೋಸಿಯೇಷನ್ ಯಾವಾಗಲೂ ಭಾಷಾ ಸಮನ್ವಯ ಕಾಪಾಡಿದೆ. ಹಲವಾರು ಭಾಷೆಗಳ ನಾಟಕಗಳನ್ನು ಸದಾ ಪೋಷಿಸಿದೆ.

ಉತ್ತಮ ಗ್ರಂಥಭಂಡಾರ ಹೊಂದಿರುವ ಅಸೋಸಿಯೇಷನ್‌ನಲ್ಲಿ ಹಲವಾರು ಪತ್ರಿಕೆಗಳು, ಸದಸ್ಯರಿಗೆ ಬೇಕಾಗುವ ಸಂದರ್ಭಗ್ರಂಥ, ಅವಲೋಕನ ಗ್ರಂಥಗಳು ಎಲ್ಲಾ ಲಭ್ಯವಿವೆ. ಇತ್ತೀಚೆಗೆ ಎರಡು ವರ್ಷದಿಂದ ಕನ್ನಡ ಪುಸ್ತಕ ಪ್ರಾಧಿಕಾರದವರು ತಮ್ಮ ಒಂದು ಮಳಿಗೆಯನ್ನು ಅಸೋಸಿಯೇಷನ್ ಪ್ರಾಂಗಣದಲ್ಲಿ ಇಟ್ಟಿದ್ದಾರೆ. ಇದರಿಂದ ಮುಂಬೈನಲ್ಲೂ ಕನ್ನಡ ಪುಸ್ತಕ ದೊರೆಯುವಂತಾಗಿದೆ.

### ನೇಸರು

ಮೈಸೂರು ಅಸೋಸಿಯೇಷನ್ ಮುಖವಾಣಿ 'ನೇಸರು' ಸದಸ್ಯರೆಲ್ಲರ ನೆಚ್ಚಿನ ಪತ್ರಿಕೆ. ತಿಂಗಳೋಲೆಯಾದ 'ನೇಸರು'ಗೆ ಈಗ ಇಪ್ಪತ್ತೊಂದು ವರುಷದ ಸಂಭ್ರಮ. ಇದು ಅಸೋಸಿಯೇಷನ್‌ನ ಆಗುಹೋಗುಗಳ ಪತ್ರಿಕೆಯಾದರೂ ಇದರಲ್ಲಿ ಸಾಧಾರಣವಾಗಿ ಮುಂಬೈ ಕನ್ನಡ ಸಂಘಗಳ ಚಟುವಟಿಕೆಗಳ ದಾಖಲೆಗಳು ಇರುತ್ತವೆ. ಸುಮಾರು ೧೨ ಪುಟಗಳು ಇದರ ಗಾತ್ರ. ಇದು ವಿವಿಧ ಪ್ರಕಾರದ ಲೇಖನಗಳನ್ನೂ ಮುಂಬೈನ ಪ್ರಮುಖ ಸುದ್ದಿ, ಕವಿಗಳ ಪರಿಚಯ, ವ್ಯಕ್ತಿಗಳ ಸಂದರ್ಶನ ಮತ್ತು ಸಂವೇದನಾ ಬರಹಗಳು, ಓದುಗರ ಅನಿಸಿಕೆ ಇವೆಲ್ಲವನ್ನೂ ಒಳಗೊಂಡಿದೆ. 'ನೇಸರು' ಎಲ್ಲವನ್ನೂ ಜತನವಾಗಿ ಕೂಡಿಸಿಟ್ಟರೆ ಮುಂದಿನ ಪೀಳಿಗೆಗೆ ಒಂದು ಆಕರ ಸಾಮಗ್ರಿಯಾಗಿ ಬಳಸಿಕೊಳ್ಳಬಹುದು. ಮುಂಬೈ ಅಲ್ಲದೆ ಕರ್ನಾಟಕದಲ್ಲೂ 'ನೇಸರು'ಗೆ ಅಪಾರ ಮನ್ನಣೆ ಸಂದಿದೆ.

೨೦೦೮ಕ್ಕೆ ಮೈಸೂರು ಅಸೋಸಿಯೇಷನ್‌ಗೆ ೮೨ ವರುಷ. ೧೯೫೧, ೧೯೭೬ ಮತ್ತು ೧೯೮೬ರಲ್ಲಿ ರಜತ, ಸುವರ್ಣ ಮತ್ತು ವಜ್ರ ಮಹೋತ್ಸವ ಆಚರಿಸಿದೆ. ಪ್ರತಿ ಹಂತದಲ್ಲೂ ಒಳಿತನ್ನು ಸಮಾಜಕ್ಕೆ ತಲುಪಿಸುವ ಕಾರ್ಯವನ್ನು ಕೈಗೊಂಡಿರುವ ಅಸೋಸಿಯೇಷನ್ ಕಾರ್ಯವನ್ನು ಮೆಚ್ಚಿ ಕರ್ನಾಟಕ ಸರ್ಕಾರ ೨೦೦೦ರಲ್ಲಿ, ರಾಜ್ಯೋತ್ಸವ ಪ್ರಶಸ್ತಿ ನೀಡಿದೆ. ಕರ್ನಾಟಕದ ಹೊರಗಿನ ಕನ್ನಡ ಸಂಘಗಳಿಗೆ ನೀಡಿದ ಮೊದಲ ಪ್ರಶಸ್ತಿ 'ಮೈಸೂರು ಅಸೋಸಿಯೇಷನ್'ಗೆ ಸಂದಿದೆ.

ಸಾಂಸ್ಕೃತಿಕ ವಲಯದಲ್ಲಿ ತಮ್ಮನ್ನು ಗುರುತಿಸಿಕೊಂಡು, ಹಲವು ವರ್ಷಗಳಿಂದ ಮೈಸೂರು ಅಸೋಸಿಯೇಷನ್‌ನ ಅಧ್ಯಕ್ಷ ಪದವಿಯನ್ನೂ ಅಲಂಕರಿಸಿ, ಮಾರ್ಗದರ್ಶನ ನೀಡುತ್ತಿರುವ ಎಸ್. ದೊರೆಸ್ವಾಮಿ ಅಯ್ಯಂಗಾರ್ ಅವರು ಅಸೋಸಿಯೇಷನ್‌ನ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ.

ಮೈಸೂರು ಅಸೋಸಿಯೇಷನ್ ಬರೇ ಸಾಂಸ್ಕೃತಿಕ ವಿದ್ಯಮಾನಗಳಿಗೆ ಮಾತ್ರ ಸೀಮಿತವಾಗಿಲ್ಲ. ನಾಡಿನ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಆಗುಹೋಗುಗಳಿಗೂ ಸ್ಪಂದಿಸುತ್ತಾ ಬಂದಿದೆ. ಕರ್ಣಾಟಕ–ಮಹಾರಾಷ್ಟ್ರಗಳ ಸಾಂಸ್ಕೃತಿಕ ಕೊಂಡಿಯಾಗಿ ಕೆಲಸ ಮಾಡುತ್ತಾ ಬಂದಿದೆ ಎಂಬುದಕ್ಕೆ ಅಸೋಸಿಯೇಷನ್ನಿನಲ್ಲಿ ಇತ್ತೀಚೆಗೆ ವಿರಾಜಗೊಂಡ ಉಭಯ ಸಂಸ್ಕೃತಿಗಳನ್ನು ಬಿಂಬಿಸುವ ಭಿತ್ತಿ ಶಿಲ್ಪಗಳೇ ಸಾಕ್ಷಿ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಮೈಸೂರು ಅಸೋಸಿಯೇಷನ್‌ಗೆ ಸರ್.ಎಂ. ವಿಶ್ವೇಶ್ವರಯ್ಯನವರ ಪ್ರೋತ್ಸಾಹವಿತ್ತು ಮತ್ತು ಮೈಸೂರು ಮಹಾರಾಜರಾದ ಕೃಷ್ಣರಾಜ ಒಡೆಯರ್ ಮೊದಲನೇ ಪೇಟ್ರನ್. ಅವರ ನಂತರ ಮಹಾರಾಜ ಜಯಚಾಮರಾಜೇಂದ್ರ ಒಡೆಯರ್ ಅಸೋಸಿಯೇಷನ್‌ಗೆ ಭೇಟಿ ಕೊಟ್ಟಿರುತ್ತಾರೆ.

೨. *Daily Mail,* ೨೦-೨-೨೮.

೩. *Bombay Chronicle,* ೨೬.೦೨.೧೯೨೮. Answer to Lakdipool Adress, 'Some Personal Remini Science'.

೪. ಆರ್. ವಿ. ಮೂರ್ತಿಗಳು ಮಹಾರಾಜಾ ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಪ್ರಿನ್ಸಿಪಲ್ ಎನ್.ಎಸ್. ಸುಬ್ಬರಾವ್ ಪ್ರಭಾವ ತಮ್ಮ ಮೇಲೆ ಹೇಗೆ ಬೀರಿತ್ತು ಮತ್ತು ಬಿ.ಎಂ.ಶ್ರೀಕಂಠಯ್ಯ ಮತ್ತು ಜೆ.ಸಿ. ರಾಲೋ ಸ್ವತಃ ಆಡಿಸಿದ್ದ ನಾಟಕಗಳನ್ನು ಎಷ್ಟು ಉತ್ಸಾಹದಿಂದ ತಾವು ಮಾಡುತ್ತಿದ್ದರೆಂದು ತಿಳಿಸಿದ್ದಾರೆ. ಮುಂಬೈಗೆ ಬಂದ ಮೇಲೂ ಒಂದೆರಡು ಬಾರಿ ನಾಟಕ/ಅಣಕು ಮಾಡಿದ್ದಾಗಿ ತಿಳಿದುಬರುತ್ತದೆ (R.V. Murthy, Good Old days in Maharajas College, *Centenary Volume* ೧೮೩೩-೫೧, ಪು.೧೪೫).

೫. (ಎ) ಮೈಸೂರು ಅಸೋಸಿಯೇಷನ್ ಮುಂಬೈ, **ಸ್ಮರಣ ಸಂಚಿಕೆ** ೨೦೦೬.

(ಬಿ) S. Subramanian, The Mysore Association ೧೯೨೬ to ೨೦೦೧, an Over view (in) Platinum Jubilee 1926-2001 and (ಸಿ) Mysore Association has issued so far many booklets which gives historical perspective of the Association and the writer is and abled to the Association.

೬ ಪಿ.ಆರ್. ನಾಗರಹಳ್ಳಿ, **'ಮಹಾಚಾರ್ಯ'**, ದಿ. ಪರಮಪೂಜ್ಯ ಮಾಹುಲಿ ಗೋಪಾಲಚಾರ್ಯರ ಸಂಕ್ಷಿಪ್ತ ಜೀವನ ಚರಿತ್ರೆ, ಧರ್ಮಸಂದೇಶ ಮಾಸ ಪತ್ರಿಕೆಯ ವಿಶೇಷಾಂಕ, ಮುಂಬೈ, ೧೯೮೫.

೭. ಉಮಾರಾವ್, **ಬಿಸಿಲುಕೋಲು**; ಸಿನಿ ಛಾಯಾಗ್ರಾಹಕ ವಿ.ಕೆ. ಮೂರ್ತಿ ಅವರ ನೆರಳು ಬೆಳಕಿನ ಪಯಣ, ಬೆಂಗಳೂರು, ಪ್ರಿಸಮ್ಸ್ ಬುಕ್ ೨೦೦೬.

卐 卐 卐

# ಗೀತೆ ಮತ್ತು ಭಗವದಾರಾಧನೆ

– ಎಂ.ಎನ್. ಪ್ರಭಾಕರ್*

ಗೀತಾ ಸುಗೀತಾ ಕರ್ತವ್ಯಾ ಕಿಂ ಅನ್ಯೈಃ ಶಾಸ್ತ್ರ ವಿಸ್ತರೈಃ
ಯಾ ಸ್ವಯಂ ಪದ್ಮನಾಭಸ್ಯ ಮುಖ ಪದ್ಮಾತ್ ವಿನಿಸ್ಸೃತಾ

ಭಗವದ್ಗೀತೆಯ ಮೇಲೆ ಮೊದಲ ಭಾಷ್ಯ ರಚಿಸಿದ ಶಂಕರಾಚಾರ್ಯರಿಗೆ, ಪ್ರಾಚೀನ ಭಾಷ್ಯಕಾರರಲ್ಲಿ ವಿಶೇಷ ಸ್ಥಾನವಿದೆ. ಮಹಾಭಾರತದಿಂದ ಭಗವದ್ಗೀತೆಯನ್ನು ಪ್ರತ್ಯೇಕಿಸಿ, ಅದರ ಹಿರಿಮೆಯನ್ನು ಪ್ರಪಂಚಕ್ಕೆ ತಿಳಿಯಪಡಿಸಲು ಅವರಿಗೆ ಒದಗಿ ಬಂದ ಸ್ಫೂರ್ತಿ ಎಲ್ಲಿಯದು ಎಂದು ಗಮನಿಸಬೇಕು.

ಬ್ರಹ್ಮಸೂತ್ರಗಳಿಗೆ ಹಾಗೂ ಉಪನಿಷತ್ತುಗಳಿಗೆ ಶಂಕರಾಚಾರ್ಯರು ಭಾಷ್ಯವನ್ನು ರಚಿಸಿದ್ದಾರೆ. ಉಪನಿಷತ್ತುಗಳ ಮೇಲೆ ಭಾಷ್ಯ ರಚಿಸುವಾಗ, ಈ ಸಾಹಿತ್ಯವು ವೇದ ಭಾಗದಿಂದ ಆಯ್ಕೆಗೊಂಡದ್ದು ಎಂದು ಗಮನಿಸಿದರು. ಉಪನಿಷತ್ತುಗಳು ತಾತ್ವಿಕ ವಿವೇಚನೆಯಿಂದ ಕೂಡಿದ್ದರೂ, ಹೆಚ್ಚು ತಾರ್ಕಿಕವೆನಿಸದೆ ಪ್ರಾತಿಭಾತ್ಮಕವಾದದ್ದು ಎಂದು ಗುರುತಿಸಿದರು. ಇಂತಹ ಸ್ವರೂಪವನ್ನು ಗೀತೆಯ ಅಧ್ಯಾಯಗಳಲ್ಲಿ ಕಂಡು, ಮಹಾಭಾರತದಿಂದ ಪ್ರತ್ಯೇಕಿಸಿ, ಈ ಅಧ್ಯಾಯಗಳಿಗೆ ಭಾಷ್ಯ ರಚಿಸಿದರು. ಇದು ಗೀತೆಯ ವಿಶೇಷ ಅಧ್ಯಯನಕ್ಕೆ ನಾಂದಿಯಾಯಿತು. ಭಗವದ್ಗೀತೆಗೂ ಇದರಿಂದ ಒಂದು ಉಪನಿಷತ್ತಿನ ಸ್ಥಾನಮಾನ ದೊರೆಯಿತೆನ್ನಬಹುದು.

ಸರ್ವೋಪನಿಷದೋ ಗಾವೋದೋಗ್ಧಾ ಗೋಪಾಲ ನಂದನಃ
ಪಾರ್ಥೋವತ್ಸಃ ಸುಧಿರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್

ಭಗವದ್ಗೀತೆಯನ್ನು ಯೋಗಶಾಸ್ತ್ರವೆಂದು ಗುರುತಿಸಲಾಗಿದೆ. ಗೀತೆಯ ಮಹತ್ವವನ್ನು ತಿಳಿಯಪಡಿಸಿದ ನಂತರವೇ ಈ ವಿಶೇಷಣ ಸಹಜವಾಗಿ ಪ್ರಾಪ್ತವಾಗಿದೆ. ಗೀತೆಯ ಆರಂಭದಲ್ಲಿ ಸಾಂಖ್ಯದ ಮೂಲಕ ನಿರೀಶ್ವರ ವಾದವನ್ನು ವಿವರಿಸಲಾಗಿದೆ. ಗೀತೆಯಲ್ಲಿ ಸಾಂಖ್ಯದ ಶಾಸ್ತ್ರ ಸಂಹಿತೆ ಮತ್ತು ಆಚಾರ ಸಂಹಿತೆಯನ್ನು ಪ್ರತ್ಯೇಕಿಸಿ ವಿವರಿಸಲಾಗಿದೆ.

ಪ್ರಾಚೀನ ಭಾರತದಲ್ಲಿ ಯಜ್ಞ ಯಾಗಾದಿಗಳ ಮೂಲಕ ಬಳಕೆಯಲ್ಲಿದ್ದ ದೇವತಾರಾಧನೆಯನ್ನು ಉಲ್ಲೇಖಿಸಲಾಗಿದೆ. ಧ್ಯಾನವು ನಿರೀಶ್ವರ ಪರವಾದರೂ ಸೇಶ್ವರ ಚಿಂತನೆಗೂ ಹೊಸ್ತಿಲು. ಆಸನ, ಪ್ರಾಣಾಯಾಮಗಳ ವಿವರಗಳಿವೆ. ತದನಂತರ ಈಶ್ವರನಲ್ಲಿ ಭಕ್ತಿ, ಸಾಕಾರ ರೂಪೀ ಭಗವಂತನ ಚಿತ್ರಣ, ಸ್ವರೂಪ ದರ್ಶನ ಇವು ವಿಗ್ರಹಾರಾಧನೆಯೆಡೆಗೆ ಕೊಂಡೊಯ್ದು ನಿಲ್ಲಿಸುತ್ತವೆ. ಯಜ್ಞಗಳಿಂದ ಆರಂಭಗೊಂಡ ಭಗವದಾರಾಧನೆ, ವಿಗ್ರಹಾರಾಧನೆಯವರೆಗೆ ಮುಂದುವರೆದಿದೆ. ಈ ಹಂತಗಳ ಪರಿಶೀಲನೆಯೇ ಈ ಲೇಖನದ ಮೂಲ ಉದ್ದೇಶ.

ಯೋಗವೆನ್ನುವ ಪದ, ಗೀತೆಯಲ್ಲಿ ಹಲವು ಬಾರಿ, ಹಲವು ವಿಧದಲ್ಲಿ ಪ್ರಯೋಗಗೊಂಡಿದೆ. ಇದರ ಅರ್ಥವನ್ನು ಮೊದಲಿಗೆ ಖಚಿತವಾಗಿ ತಿಳಿಯಬೇಕು. ಯೋಗವೆನ್ನುವ ಪದಕ್ಕೆ ಎರಡು ಮೂಲದ ಧಾತು ಪಾಠಗಳಿವೆ. 'ಯುಜಿರ್ ಯೋಗೇ' – ಇತ್ಯಸ್ಮಾತ್ ಸಂಯೋಗಾರ್ಥ ಇತ್ಯರ್ಥಃ, 'ಯುಜ ಸಮಾಧೌ' – ಇತ್ಯಸ್ಮಾದ್ ವ್ಯುತ್ಪನ್ನಃ ಸಮಾಧ್ಯರ್ಥೋ ನ ತು.[೧]

ಯೋಗವೆಂದರೆ ಸಂಯೋಗ ಎನ್ನುವುದು ಒಂದು ಅರ್ಥ; ಮತ್ತೊಂದು ಸಮಾಧಿ ಎಂದು ಅರ್ಥ. ಸಂಯೋಗ ಎರಡು ವಸ್ತುಗಳ ಸೇರುವಿಕೆಯನ್ನು ಸೂಚಿಸುತ್ತದೆ. 'ಇದೊಂದು ಯೋಗಾನುಯೋಗ ಸಂಬಂಧ' ಎಂಬ ಉದ್ಗಾರ, ಉನ್ನತವಾದ ಸಂಬಂಧವನ್ನು ಸೂಚಿಸುವುದಕ್ಕಾಗಿ ಬಳಕೆಗೊಳ್ಳುತ್ತದೆ. ಅಂತಿಮವಾಗಿ ಎರಡು ಸದ್ವಸ್ತುಗಳಾದ ಆತ್ಮ ಮತ್ತು ಪರಮಾತ್ಮರ ಸಂಬಂಧವನ್ನು ಸೂಚಿಸುವ ಸಲುವಾಗಿ ಬಳಕೆಗೊಳ್ಳುತ್ತದೆ. ಸಂಯೋಗ ಎನ್ನುವ ಅರ್ಥ ತಾತ್ವಿಕ ನಿಲುವನ್ನು ಗುರುತಿಸುವಂಥದ್ದು.

---

* ನಂ.೪೨, ೧೭ನೆಯ ಬ್ಲಾಕ್, ಬ್ಯಾಂಕ್ ಕಾಲೋನಿ, ಶ್ರೀರಾಮಪುರ, ೨ನೆಯ ಹಂತ, ಮೈಸೂರು–೫೭೦೦೨೩.

ಯೋಗದ ಇನ್ನೊಂದು ಅರ್ಥ ಸಮಾಧಿ. ಅಷ್ಟಾಂಗಯೋಗದ ಅಂತಿಮ ಹಂತವೇ ಸಮಾಧಿ. ಅನುಷ್ಠಾನ ಹಂತದಲ್ಲಿ ಇದು ತುರೀಯಾವಸ್ಥೆ. 'ಧ್ಯಾನಂ ನಿರ್ವಿಷಯ ಮನಃ.' ಧ್ಯಾನದ ನಂತರವೇ ಸಮಾಧಿ.

ಗೀತೆಯ ಅಧ್ಯಾಯಗಳನ್ನು ವಿಷಾದಯೋಗ, ಸಾಂಖ್ಯಯೋಗ, ಕರ್ಮಯೋಗ ಇತ್ಯಾದಿಯಾಗಿ ಹೆಸರಿಸಲಾಗಿದೆ. ಇಲ್ಲಿ ಯೋಗವೆನ್ನುವ ಪದ, ಸರಳವಾಗಿ ಅಧ್ಯಾಯವೆನ್ನುವ ಪದಕ್ಕೆ ಪರ್ಯಾಯವಾಗಿ ಪ್ರಯೋಗಗೊಂಡಿದೆ.

'ಯೋಗಃ ಕರ್ಮಸು ಕೌಶಲಂ' – ಯೋಗವೆನ್ನುವ ಪದಕ್ಕೆ ಗೀತೆಯಲ್ಲಿ ಮತ್ತೊಂದು ಸರಳವಾದ ವಿವರಣೆ ಇದೆ. ಈ ಪದವು ಕರ್ಮ ಮತ್ತು ಕೌಶಲ್ಯಗಳ ಸಂಗಮವನ್ನು ಸೂಚಿಸುತ್ತದೆ. ಯಾವುದೇ ಕರ್ಮ–ಕೆಲಸದಲ್ಲಿ ತೊಡಗಿಕೊಂಡಾಗ ಕೌಶಲ್ಯದಿಂದ ನಿರ್ವಹಿಸುವ ವ್ಯವಸ್ಥೆಗೆ ಯೋಗವೆನ್ನುವ ಹೆಸರಿದೆ.

ಗೀತೆಯ ವಕ್ತಾರ ಯೋಗೇಶ ಕೃಷ್ಣ; ಇವನು ಶಿಸ್ತುಗಾರ. ಕಷ್ಟ ಸುಖಗಳು ಒಟ್ಟಿಗೆ ಬಂದಾಗ ಸಮವಾಗಿ ತೂಗುವಂತೆ, ಸಮತ್ವಭಾವದಿಂದ ಕಾರ್ಯಗಳನ್ನು ನಿರ್ವಹಿಸುವಂತೆ ಆದೇಶಿಸಿದ್ದಾನೆ. ಇದೊಂದು ಶಿಸ್ತು (discipline) ಎಂದು ಗುರುತಿಸಬಹುದು. ಗೀತೆಯ ಪ್ರತಿ ಅಧ್ಯಾಯದ ಕೊನೆಯಲ್ಲಿ, 'ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ, ಯೋಗಶಾಸ್ತ್ರೇ....' ಎಂದು ವರ್ಣಿತವಾಗಿದೆ. ಭಗವದ್ಗೀತೆಯನ್ನು ಉಪನಿಷತ್ತು, ಬ್ರಹ್ಮವಿದ್ಯೆ, ಯೋಗಶಾಸ್ತ್ರ ಮುಂತಾಗಿ ಬಣ್ಣಿಸಿದ್ದು, ಬಹುವಿಧದಲ್ಲಿ 'discipline' ಎಂದೂ ಗುರುತಿಸಬಹುದು.

ದುಃಖವೇ ಭಗವದ್ಗೀತೆಯ ಉಪದೇಶಕ್ಕೆ ಕಾರಣ. ಬುದ್ಧ ಜ್ಞಾನೋದಯಕ್ಕೆ ತಡಕಾಡಿದ್ದು ದುಃಖದ ಮೂಲ ಕಾರಣದಿಂದ. ಅರ್ಜುನ ತನಗೆ ಆವರಿಸಿದ ದುಃಖವನ್ನು ವಿಷಾದಯೋಗದಲ್ಲಿ ಹೇಳಿಕೊಂಡಿದ್ದಾನೆ.

ಗೀತೆಯ ಎರಡನೆಯ ಅಧ್ಯಾಯಕ್ಕೆ ಸಾಂಖ್ಯಯೋಗವೆನ್ನುವ ಹೆಸರಿದೆ. ಸಾಂಖ್ಯವೆನ್ನುವ ಪದ 'ಸಂಖ್ಯ' ಪದದಿಂದ ರೂಪುಗೊಂಡಿದೆ. 'ಸಾಂಖ್ಯ' ಸಂಖ್ಯೆಗಳಷ್ಟೇ ಖಚಿತವಾದದ್ದು. ಒಂದಕ್ಕೆ ಒಂದು ಸೇರಿದರೆ ಎರಡು ಎನ್ನುವುದು ಎಷ್ಟು ಖಚಿತವೋ ಅಷ್ಟು, ಸಾಂಖ್ಯ ದರ್ಶನವೂ ಖಚಿತ ಮಾರ್ಗವನ್ನು ಅನುಸರಿಸುತ್ತದೆ. 'ಸಾಂಖ್ಯಕಾರಿಕಾ' ಸಾಂಖ್ಯ ದರ್ಶನಕ್ಕೆ ಸಂಬಂಧಿಸಿದ ಪ್ರಾಚೀನ ಗ್ರಂಥ. ಈ ಗ್ರಂಥವೂ ಆರಂಭದಲ್ಲಿ ದುಃಖ ನಿವೃತ್ತಿಯ ಮುನ್ನ ದುಃಖವು ತ್ರಿವಿಧಾತ್ಮಕ ಎಂದು ಉಲ್ಲೇಖಿಸುತ್ತದೆ.

ಜಗತ್ತಿನ ಕ್ಲೇಶಗಳನ್ನು ಪರಿಹರಿಸುವ ಸಲುವಾಗಿ ಗೀತೆ, ಬುದ್ಧ, ಸಾಂಖ್ಯ ಎಲ್ಲವೂ ಪ್ರಯತ್ನಿಸಿವೆ. ಗೀತೆಯಲ್ಲಿ ಅನಾವರಣಗೊಂಡ ಸಾಂಖ್ಯ ದರ್ಶನ ಅತಿ ಪ್ರಾಚೀನವೆನ್ನಬಹುದು.

ಯೋಗವೂ ಸಾಂಖ್ಯದಂತೆ ಷಡ್ದರ್ಶನಗಳಲ್ಲಿ ಒಂದು. ಸಾಂಖ್ಯವು ನಿರೀಶ್ವರ ಸಾಂಖ್ಯ ಎಂದು ಗುರುತಿಸಲ್ಪಟ್ಟರೆ, ಯೋಗವು ಸೇಶ್ವರ ಸಾಂಖ್ಯ ಎಂದು ಹೆಸರಿಸಲ್ಪಟ್ಟಿದೆ. ಸೇಶ್ವರ ಸಾಂಖ್ಯದಲ್ಲಿ ಈಶ್ವರನ ಅಸ್ತಿತ್ವದಲ್ಲಿ ನಂಬಿಕೆಯುಂಟು.

ಗೀತೆಯಲ್ಲಿ ಮೊದಲಿಗೆ ಸಾಂಖ್ಯದ ವಿವರಣೆ ಇದೆ. ಗೀತೆಯ ಮೂರನೆಯ ಅಧ್ಯಾಯದಲ್ಲಿ ಸಾಂಖ್ಯದ ಶಾಸ್ತ್ರೀಯ ಭಾಗವನ್ನು ಜ್ಞಾನ ಅಥವಾ ಬುದ್ಧಿ ಯೋಗವೆಂದೂ, ಅನುಷ್ಠಾನ ಭಾಗವನ್ನು ಕರ್ಮಯೋಗವೆಂದೂ ಹೆಸರಿಸಲಾಗಿದೆ.

ಲೋಕೇಽಸ್ಮಿನ್ ದ್ವಿಧಾ ನಿಷ್ಠಾಪುರಾಪ್ರೋಕ್ತಾ ಮಯಾನಘ

ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ (೩.೩)

ಸಾಂಖ್ಯದರ್ಶನಕ್ಕೆ ಗೀತೆಯಲ್ಲಿ ಉನ್ನತ ಸ್ಥಾನ ದೊರೆತಿದೆ. ಎರಡನೆಯ ಅಧ್ಯಾಯದಲ್ಲಿ ಇದನ್ನು ವಿಸ್ತಾರವಾಗಿ ಪ್ರಸ್ತುತಪಡಿಸಲಾಗಿದೆ. ಜ್ಞಾನಯೋಗದಲ್ಲಿ ಗೀತಾಚಾರ್ಯನು ಆತ್ಮದ ಸ್ವರೂಪ, ಲಕ್ಷಣಗಳನ್ನು ವಿವರಿಸಿದ್ದಾನೆ. ಈ ವಿವರಣೆಯಲ್ಲಿ ಕಠೋಪನಿಷತ್ತಿನ ಪ್ರಭಾವವನ್ನು ಕಾಣಬಹುದು. ಕಠೋಪನಿಷತ್ತು ಕೃಷ್ಣ ಯಜುರ್ವೇದಕ್ಕೆ ಸಂಬಂಧಿಸಿದ್ದು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

'ಅಸತೌ ಸದಜಾಯತ' – ಅಸತ್ತಿನಿಂದ ಸತ್ ಹುಟ್ಟಿತು ಎಂದು ಋಗ್ವೇದದಲ್ಲಿ ಜಗತ್ತಿನ ಹುಟ್ಟಿನಿಂದ ಆರಂಭಗೊಂಡರೆ, ಗೀತೆಯಲ್ಲಿ 'ಅಸತ್ತಿಗೆ ಭವವಿಲ್ಲ' ಸತ್ತಿಗೆ ಅಭವವಿಲ್ಲ ಎಂಬ ಲಕ್ಷಣದ ವಿವರಣೆಯೊಂದಿಗೆ ಆರಂಭಗೊಳ್ಳುತ್ತದೆ.

ನಾ ಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ (೨.೧೬)

ಸತ್ ಎನ್ನುವುದು ಆತ್ಮಸ್ವರೂಪಿ, ಇದು ನಾಶರಹಿತವಾದದ್ದು, ಇದು (ಜಗತ್ತಿನ) ಸರ್ವಸ್ವವನ್ನೂ ವ್ಯಾಪಿಸಿದೆ ಎನ್ನುವುದು ತಾತ್ವಿಕ ನಿಲುವು.

'ಅವಿನಾಶೀ ತು ತದ್ವಿದ್ಧಿ', ತತ್ – ಅದು ಅವಿನಾಶಿ, ನಾಶ ರಹಿತವಾದದ್ದು ಎಂದು ನಿರ್ದೇಶಿಸಲಾಗಿದೆ. ತತ್ ಎನ್ನುವುದು ಆತ್ಮವೆಂದು ವಿದ್ವಾಂಸರು ಗುರುತಿಸುತ್ತಾರೆ. ಭಗವದ್ಗೀತೆಯ ಪ್ರಸಂಗಕ್ಕೆ ಅನುಗುಣವಾಗಿ, ಆತ್ಮವು ಕೊಲ್ಲಲಾಗದು, ಕೊಲ್ಲಲ್ಪಡುವುದಿಲ್ಲ. ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಅದು ಶಾಶ್ವತವಾದುದು, ಪುರಾತನವಾದುದು. ಈ ವಿವರಣೆಗಳಲ್ಲಿ ಕಠೋಪನಿಷತ್ತಿನ ವಾಕ್ಯ ಸರಣಿಯನ್ನೂ ಕಾಣಬಹುದು.

ನ ಜಾಯತೇ ಮ್ರಿಯತೇ ವಾ ಕದಾಚಿತ್
ನಾಯಂ ಭೂತ್ವಾ ಭವಿತಾ ವಾ ನ ಭೂಯಃ
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ೨ (೨.೨೦)
ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ
ಉಭೌತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ೩ (೨.೧೯)

ಆತ್ಮ ಸ್ವರೂಪವನ್ನು ವಿವರಿಸುವಲ್ಲಿ ಗೀತೆ ಕಾವ್ಯಗುಣವನ್ನೂ ಪ್ರದರ್ಶಿಸಿದೆ. ಆತ್ಮ ಮತ್ತು ಶರೀರಗಳ ಸಂಬಂಧ, ಹಳೆಯ ಬಟ್ಟೆಯನ್ನು ಕಳಚಿ ಹೊಸಬಟ್ಟೆ ತೊಡುವಂತೆ ಎಂದು ಸ್ಫುಟವಾಗಿ ವ್ಯಕ್ತಗೊಳಿಸಿದೆ.

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾನಿ ನರೋಽಪರಾಣಿ
ತಥಾ ಶರೀರಾಣಿ ವಿಹಾಯ ಜೀರ್ಣಾನಿ
ಅನ್ಯಾನಿ ಸಂಯಾತಿ ನವಾನಿ ದೇಹೀ (೨.೨೨)

ಕಠೋಪನಿಷತ್ತಿನ ಕೆಳಕಂಡ ಶ್ಲೋಕವು ಗೀತೋಪದೇಶದ ಚಿತ್ರಣವನ್ನು ಪ್ರತಿಮಾ ರೂಪದಲ್ಲಿ ಸುಂದರವಾಗಿ ಬಿಂಬಿಸಿದೆ ಎನ್ನಬಹುದು.

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು
ಬುದ್ಧಿಂತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ೪

ಆತ್ಮದ ಲಕ್ಷಣಗಳ ವಿವರಣೆ ಹಲವು ಶ್ಲೋಕಗಳಲ್ಲಿ ಪುನರಾವರ್ತನೆಗೊಂಡಿದೆ. ಇದೂ ಸಹಜವಾದ ಕಾವ್ಯ ಲಕ್ಷಣ ಎನಿಸುವಂಥದ್ದು. ಬುದ್ಧಿಯೋಗದ ವಿವರಣೆಯ ನಂತರ ಯೋಗೇಶ ಕೃಷ್ಣ 'ಬುದ್ಧೌ ಶರಣ ಮನ್ವಿಚ್ಛ' – ಬುದ್ಧಿ ಅಥವಾ ಜ್ಞಾನಕ್ಕೆ ಶರಣಾಗು ಎಂದು ಉಪದೇಶಿಸುತ್ತಾನೆ.

ಬುದ್ಧಿಯೋಗದ ನಂತರ ಕರ್ಮಯೋಗವಿದೆ. ಇದು ಸಾಂಖ್ಯದ ಆಚಾರ ಸಂಹಿತೆ. ಆತ್ಮವು ಅವಿನಾಶಿ ಎಂದಲ್ಲ. ಆತ್ಮದ ತುಣುಕನ್ನು ಹೊಂದಿರುವ ಜೀವಿ, ಆತ್ಮದ ಬಗ್ಗೆ ಚಿಂತಿಸುವ ಅಗತ್ಯವಿಲ್ಲ. ನೀನು ಮಾಡುವ ಕೆಲಸವನ್ನು ಫಲಾಪೇಕ್ಷೆ ಇಲ್ಲದೆ ಮಾಡು ಎಂದು ಆದೇಶಿಸಲ್ಪಟ್ಟಿದೆ.

ಕರ್ಮಯೋಗದ ಆರಂಭದಲ್ಲಿ 'ವ್ಯವಸಾಯಾತ್ಮಿಕಾ ಬುದ್ಧಿಃ' – ಬುದ್ಧಿ ಅಥವಾ ಮನಸ್ಸು ನಿಶ್ಚಿತ ಸ್ವಭಾವವುಳ್ಳದ್ದು ಎಂದು ಉಲ್ಲೇಖಗೊಂಡಿದೆ. 'ನಿರ್ದ್ವಂದ್ವೋ ನಿತ್ಯ ಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್' – ದ್ವಂದ್ವವಿಲ್ಲದವನೂ, ಶಾಶ್ವತನೂ, ಸಾತ್ವಿಕ ಗುಣವುಳ್ಳವನೂ, ಯೋಗಕ್ಷೇಮಗಳ ಕಡೆ ಗಮನವಿಲ್ಲದ ಆತ್ಮವುಳ್ಳವನೂ ಎಂದು ವಿವರಣೆಗೊಂಡಿದೆ.

ಆತ್ಮವೆನ್ನುವ ಪದ ಇಲ್ಲಿ ಮೊದಲ ಬಾರಿಗೆ ಪ್ರಯೋಗಗೊಂಡಿದೆ ಎಂಬುದನ್ನು ಗಮನಿಸಬೇಕು. ಜ್ಞಾನಯೋಗದಲ್ಲಿ 'ತತ್' ಎಂದಿದ್ದು, ಕರ್ಮಯೋಗದಲ್ಲಿ ಆತ್ಮವೆಂದೇ ಹೆಸರಿಸಲಾಗಿದೆ. 'ತತ್' ಎನ್ನುವುದು 'ಸತ್' ಅನ್ನು ಉದ್ದೇಶಿಸಿದ್ದು, ಸಾಂಖ್ಯದ ಪರಿಭಾಷೆಯಲ್ಲಿ ಆತ್ಮ ಸ್ವರೂಪಿ ಹಾಗೂ ಈ ದೇಹದಲ್ಲಿ ಆತ್ಮದ ತುಣುಕೊಂದಿದೆ ಎಂಬ ಅರ್ಥ ಪಡೆದುಕೊಂಡಿದೆ.

ಕರ್ಮಯೋಗದಲ್ಲಿ 'ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾ ಜಯೌ' ಎನ್ನುವುದು ಉಪದೇಶ ವಾಕ್ಯವೆನಿಸಿದರೆ, 'ಸಿಧ್ಯಸಿಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ' – ಎನ್ನುವುದು ಲಕ್ಷಣ ವಾಕ್ಯ. ಇದು ಯೋಗ ಪದಕ್ಕೆ ಮತ್ತೊಂದು ವಿವರಣೆಯನ್ನು ನೀಡುತ್ತದೆ. ಕರ್ಮಯೋಗದ ಮತ್ತೊಂದು ಉಲ್ಲೇಖ ಅಧಿಕಾರಿ ಭಾಷೆಯುಳ್ಳದ್ದು; 'ಕರ್ಮಣ್ಯೇವ ಅಧಿಕಾರಸ್ತೇ ಮಾಫಲೇಷು ಕದಾಚನ' – ನಿಶ್ಚಯಿಸಿದ ಕರ್ಮಗಳನ್ನು ಮಾಡಲು ನೀನು ಅಧಿಕಾರಿಯೇ ಹೊರತು ಫಲಕ್ಕಾಗಿ ಎಂದೆಂದಿಗೂ ಅಲ್ಲ ಎಂದು ಕರ್ತವ್ಯ ಪ್ರಜ್ಞೆಯನ್ನು ಜಾಗೃತಗೊಳಿಸುತ್ತದೆ. ಕರ್ಮವು ಕೇವಲ ಕರ್ತವ್ಯವೆನಿಸದೆ ಜೀವನೋಪಾಯವೂ ಹೌದು; ಕರ್ಮ ಮಾಡುವಾಗ ಪ್ರಕೃತಿ ಸಹಜವಾದ ಆಕರ್ಷಣೆಯುಂಟು. ಮುಂದಿನ ಶ್ಲೋಕದಲ್ಲಿ ದೇವತಾರಾಧನೆಯ ಹಂತಗಳನ್ನು ಕಾಣಬಹುದು.

ಆರಂಭದಲ್ಲಿ ಯಜ್ಞಗಳ ಆಚರಣೆಯೂ ಕರ್ತವ್ಯವೆನಿಸಿತ್ತು. ಯಜ್ಞಗಳು ಕೇವಲ ಕರ್ಮ ಯಜ್ಞಗಳಾಗಿ ಉಳಿಯದೆ ಕಾರ್ಯ ಯಜ್ಞಗಳಾಗಿ ಪರಿವರ್ತಿತವಾದವು. ಯಜ್ಞಗಳ ಮೂಲಕ ದೇವತಾರಾಧನೆಯನ್ನು ಹಂತಹಂತವಾಗಿ ವಿವರಿಸಲಾಗಿದೆ.

ಸಹಯಜ್ಞಾ ಪ್ರಜಾ ಸೃಷ್ಟ್ವಾ ಪುರೋವಾಚಃ ಪ್ರಜಾಪತಿಃ
ಅನೇನ ಪ್ರಸವಿಷ್ಯಧ್ವಂ ಏಷವೋಽಸ್ತ್ವಿಷ್ಟಕಾಮಧುಕ್ (೩.೧೦)
ದೇವಾನ್ ಭಾವಯತಾನೇನ ತೇ ದೇವಾ ಭಾವಯಂತುವಃ
ಪರಸ್ಪರಂ ಭಾಷಯಂತಃ ಶ್ರೇಯಃ ಪರಮ ವಾಪ್ಸ್ಯಥ (೩.೧೧)

ದೇವತೆಗಳ ಮತ್ತು ಪ್ರಜೆಗಳ ಸಂಬಂಧ ಅತ್ಯಂತ ನಿಕಟವಾಗಿತ್ತು. ಯಜ್ಞಗಳಿಂದ ಸಂತುಷ್ಟರಾದ ದೇವತೆಗಳು ಅವರವರ ಇಚ್ಛೆಯಂತೆ ಭೋಗಾದಿಗಳನ್ನು ದಯಪಾಲಿಸುತ್ತಿದ್ದರು.

ಕರ್ಮಗಳಲ್ಲಿ ಆಸಕ್ತಿ ಇರಲಿ, ಇಲ್ಲದಿರಲಿ, ಜ್ಞಾನಿಯಾಗಲಿ, ಅಜ್ಞಾನಿಯಾಗಲಿ ಕರ್ಮಗಳನ್ನು ಮಾಡಬೇಕೆಂಬ ನಿರ್ಬಂಧವಿದೆ. ಕರ್ಮದಲ್ಲಿ ಆಸಕ್ತಿಯುಳ್ಳ ಅಜ್ಞಾನಿಗಳ ಶ್ರದ್ಧೆಯನ್ನು ಪ್ರಾಜ್ಞರು ಚಂಚಲಗೊಳಿಸಬಾರದು ಎಂದು ಗೀತಾಚಾರ್ಯನು ನಿರ್ದೇಶಿಸಿದ್ದಾನೆ. ಇಲ್ಲಿ ಗೀತೆ ಸರಳ ಮನಸ್ಸಿನ ಸಾಮಾನ್ಯರನ್ನು ಉಪೇಕ್ಷಿಸಿಲ್ಲ ಎಂಬುದನ್ನು ಗಮನಿಸಬಹುದು.

ನ ಬುದ್ಧಿ ಭೇದಂ ಜನಯೇತ್ ಅಜ್ಞಾನಾಂ ಕರ್ಮ ಸಂಗಿನಾಂ (೩.೨೬)

ಸಾಂಖ್ಯದಂತೆ ಧ್ಯಾನವೂ ನಿರೀಶ್ವರವಾದವನ್ನು ಸಮರ್ಥಿಸುತ್ತದೆ. ಧ್ಯಾನವೂ ಆತ್ಮಚಿಂತನೆಯಲ್ಲಿ ತೊಡಗಿಸಿಕೊಂಡಿದೆ. ಇದನ್ನೂ ಆಚಾರ ಸಂಹಿತೆಯ ಭಾಗವೆಂದೇ ತಿಳಿಯಬೇಕು.

ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮನ ಮಾತ್ಮನಾ
ಅನ್ಯೇ ಸಾಂಖ್ಯೇನ ಯೋಗೇನ ಕರ್ಮ ಯೋಗೇನ ಚಾಪರೇ (೧೩.೨೪)

ಗೀತೆಯಲ್ಲಿ ಸಾಂಖ್ಯದ ಬುದ್ಧಿಯೋಗ, ಕರ್ಮಯೋಗಗಳಂತೆ ಧ್ಯಾನವನ್ನೂ ಗುರುತಿಸಲಾಗಿದೆ. ದರ್ಶನಗಳ ಕಾಲದಲ್ಲಿ ಧ್ಯಾನವನ್ನು ಅಷ್ಟಾಂಗಯೋಗದ ಅಡಿಯಲ್ಲಿ ವಿವರಿಸಲಾಗಿದೆ. ಜ್ಞಾನಕ್ಕಿಂತ ಧ್ಯಾನವೇ ವಿಶಿಷ್ಟವಾದುದು ಎಂಬ ಭಾವನೆಯನ್ನು ಗೀತೆಯಲ್ಲಿ ಕಾಣಬಹುದು.

ಶ್ರೇಯೋ ಹಿಜ್ಞಾನಮಭ್ಯಾಸಾ ಜ್ಞಾನಾದ್ಧ್ಯಾನಂ ವಿಶಿಷ್ಯತೇ (೧೨.೧೨)

ಧ್ಯಾನವೂ ಆತ್ಮಸ್ವರೂಪವನ್ನು ತಿಳಿಯುವಲ್ಲಿ ಸಾಧನ ಮಾರ್ಗ. ಸರ್ವವ್ಯಾಪೀ ಆತ್ಮನನ್ನು ತನ್ನೊಳಗಿರುವ ಆತ್ಮನ ಮೂಲಕ ತಿಳಿಯಬೇಕು.

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿಚಾತ್ಮನಿ
ಈಕ್ಷತೇ ಯೋಗಯುಕ್ತಾತ್ಮ ಸರ್ವತ್ರ ಸಮದರ್ಶನಃ (೬.೨೯)

ಧ್ಯಾನ, ಯೋಗಗಳ ಮೂಲಕ ಚಿಂತನೆಯ ಹಾದಿಯನ್ನು ಮೊದಲ ಬಾರಿಗೆ ಸುಗಮಗೊಳಿಸಿದವನು ಬುದ್ಧ ಎಂದು ಗುರುತಿಸಲಾಗಿದೆ. ಸದಾಚಾರ, ಧ್ಯಾನ ಹಾಗೂ ತಾತ್ವಿಕ ಚಿಂತನೆಗಳು ಇವನ ಹಾದಿ.[೫]

ಯೋಗದರ್ಶನದಲ್ಲಿ ಧ್ಯಾನವನ್ನು 'ತತ್ರ ಪ್ರತ್ಯಯೈಕತಾನತಾ ಧ್ಯಾನಂ' ಎಂದು ವಿವರಿಸಲಾಗಿದೆ. ಧ್ಯಾನದಲ್ಲಿ ಧ್ಯಾತೃ, ಧ್ಯೇಯಗಳಿವೆ. ಧ್ಯಾತೃವಿನ ಧ್ಯೇಯದಲ್ಲಿ ಏಕತಾನತೆ ಇರಬೇಕು. ಆತ್ಮಸ್ವರೂಪವನ್ನು ತಿಳಿಯುವುದೇ ಧ್ಯೇಯ. ಆಸನ, ಪ್ರಾಣಾಯಾಮಗಳಿಗೆ ಸಂಬಂಧಿಸಿದಂತೆ ಕೆಲವು ಅಂಶಗಳನ್ನು ಗೀತೆಯಲ್ಲಿ ಕಾಣಬಹುದು. ಇದು ಧ್ಯಾನಕ್ಕೆ ಸಿದ್ಧತೆ ಎನ್ನಬಹುದು.

ಯೋಗೀ ಯುಂಜೀತ ಸತತಮಾತ್ಮನಂ ರಹಸಿಸ್ಥಿತಃ
ಏಕಾಕೀ ಯತಚಿತ್ತಾತ್ಮಾ ನಿರಾಶೀರ ಪರಿಗ್ರಹಃ (೬.೧೦)

ಧ್ಯಾನವು ಮೊದಲಿಗೆ ಸ್ಥಳ ಶುದ್ಧಿಯನ್ನೂ, ಏಕಾಂತತೆಯನ್ನೂ, ಮನಸ್ಸು ಇಂದ್ರಿಯಗಳ ಶುದ್ಧಿಯನ್ನೂ ಅಪೇಕ್ಷಿಸುತ್ತದೆ.

ಶುಚೌದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ
ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನ ಕುಶೋತ್ತರಂ (೬.೧೧)

ಎತ್ತರವಾಗಿರದ ಅಥವಾ ತಗ್ಗಾಗಿರದ, ಶುಚಿಗೊಳಿಸಿದ ಸ್ಥಳದಲ್ಲಿ ಕೃಷ್ಣಾಜಿನ ಅಥವಾ ದರ್ಭೆಗಳನ್ನು ಹರಡಿದ ಸ್ಥಿರವಾದ ಆಸನವನ್ನು ರಚಿಸಿಕೊಂಡು ಅದರ ಮೇಲೆ ಪ್ರತಿಷ್ಠೆಗೊಳ್ಳಬೇಕು.

ಸಮಂ ಕಾಯ ಶಿರೋಗ್ರೀವಂ ಧಾರಯನ್ನಚಲ ಸ್ಥಿರಂ
ಸಂಪ್ರೇಕ್ಷ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ (೬.೧೩)

ಶರೀರ, ತಲೆ, ಕೊರಳುಗಳನ್ನು ಸಮಾನವಾಗಿ, ಅಚಲವಾಗಿ, ಸ್ಥಿರವಾಗಿ ಇರಿಸಿಕೊಂಡು ಇತರ ಕಡೆಯಲ್ಲಿ ದೃಷ್ಟಿ ಹಾಯದಂತೆ, ಮೂಗಿನ ತುದಿಯಲ್ಲಿ ಕೇಂದ್ರೀಕರಿಸಿಕೊಂಡು ಧ್ಯಾನಾಸಕ್ತನಾಗಬೇಕು.

ತತ್ರೈಕಾಗ್ರ ಮನಃ ಕೃತ್ವಾ ಯತ ಜಿತೇಂದ್ರಿಯ ಕ್ರಿಯಃ
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮ ಶುದ್ಧಯೇ (೬.೧೨)

ಆಸನದ ಮೇಲೆ ಕುಳಿತು ಮನಸ್ಸು ಇಂದ್ರಿಯಗಳನ್ನು ಸ್ಥಿರಗೊಳಿಸಿ ಆತ್ಮಶುದ್ಧಿಯಿಂದ ಧ್ಯಾನಕ್ಕೆ ತೊಡಗಬೇಕು.

ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ
ಪ್ರಾಣಾಪಾನೌ ಸಮೌಕೃತ್ವಾ ನಾಸಾಭ್ಯಂತರ ಚಾರಿಣೌ (೫.೨೭)

ಹೊರಗಿನ ವಿಷಯಗಳ ಆಲೋಚನೆಗಳನ್ನು ತ್ಯಜಿಸಿ, ಹುಬ್ಬುಗಳ ಮಧ್ಯದಲ್ಲಿ ಕಣ್ಣಿನ ದೃಷ್ಟಿಯನ್ನು ನೆಲೆಗೊಳಿಸಿ ಮೂಗಿನ ಮೂಲಕ ಪ್ರಾಣಾಸನಗಳನ್ನು ಸಮನಾಗಿಸಿ, ಧ್ಯಾನಕ್ಕೆ ತೊಡಗಬೇಕು.

ಯಥಾ ದೀಪೋನಿವಾತಸ್ಥೋ ನೇಂ ಗತೇ ಸೋಽಪಮಾಸ್ಮೃತಾಃ
ಯೋಗಿನೋಯತ ಚಿತ್ತಸ್ಯ ಯುಂಜತೋ ಯೋಗಮಾತ್ಮನಃ (೬.೧೯)

ನಿರ್ವಾತ ಸ್ಥಳದಲ್ಲಿ ದೀಪವು ಡೋಲಾಯಮಾನವಾಗಿ ಚಲಿಸದೆ, ಸ್ಥಿರವಾಗಿ ಉರಿಯುವಂತೆ, ಧ್ಯಾನಿಯ ಮನಸ್ಸೂ, ಧ್ಯಾನದಲ್ಲಿ ಕೇಂದ್ರೀಕೃತಗೊಳ್ಳಬೇಕು.

ಯತ್ರೋ ಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ
ಯತ್ರ ಚೈವಾತ್ಮಾನಾತ್ಮನಂ ಪಶ್ಯನಾತ್ಮನಿ ತುಷ್ಯತಿ (೬.೨೦)

ಯೋಗಾಭ್ಯಾಸದಿಂದ ನಿಗ್ರಹಿಸಲ್ಪಟ್ಟ ಮನಸ್ಸುಳ್ಳ ಧ್ಯಾನದಲ್ಲಿ ಲೀನವಾದ ಆತ್ಮವು, ಆತ್ಮನನ್ನು ವೀಕ್ಷಿಸುತ್ತಾ ಸಂತುಷ್ಟಿಯನ್ನು ಪಡೆಯುತ್ತದೆ. ಮೇಲೆ ವಿವರಿಸಿರುವ ಧ್ಯಾನವನ್ನು ನಿರೀಶ್ವರ ಧ್ಯಾನವೆಂದು ಗುರುತಿಸಬಹುದು. ಅಷ್ಟಾಂಗಯೋಗದಲ್ಲಿ ಈಶ್ವರ ಪ್ರಣಿಧಾನತ್ವ ಅಥವಾ ಈಶ್ವರನಲ್ಲಿ ಭಕ್ತಿಯನ್ನು ವಿವರಿಸಲಾಗಿದೆ. ಗೀತೆಯಲ್ಲಿ ಕೃಷ್ಣ, ಜ್ಞಾನ ಮತ್ತು ಧ್ಯಾನಗಳಿಗೆ ಪರ್ಯಾಯವಾಗಿ ಭಕ್ತಿ ಮಾರ್ಗವನ್ನು ಸೂಚಿಸುತ್ತಾನೆ. ಸೇಶ್ವರ ಧ್ಯಾನ ಚಿಂತನೆಗಳೇ ಭಗವದ್ಭಕ್ತಿ.

ಮಯ್ಯೇವ ಮನ ಆದತ್ಸ್ವ ಮಯಿ ಬುದ್ಧಿಂ ನಿವೇಶಯ
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ (೧೨.೮)

ಅಷ್ಟಾಂಗಯೋಗದಲ್ಲಿ ಜಪ, ಸ್ವಾಧ್ಯಾಯಗಳನ್ನು ಈಶ್ವರ ಪ್ರಣಿಧಾನತ್ವಕ್ಕೆ ಪೂರಕವಾಗಿ ವಿವರಿಸಲಾಗಿದೆ. ಈಶ್ವರನ ಮೂಲಕ ಭಕ್ತಿಯನ್ನು ವಿವರಿಸುವಾಗ ತಸ್ಯವಾಚಕಃ ಪ್ರಣವಃ, ತಜ್ಜಪಸ್ತದರ್ಥಭಾವನಂ ಎಂಬ ಸೂಚನೆ ಇದೆ. ಜಪವೂ ಧ್ಯಾನದ ಮತ್ತೊಂದು ರೂಪ. ಯಜ್ಞಾನಾಂ ಜಪ ಯಜ್ಞೋಽಸ್ಮಿ – ಎಂದು ಜಪದ ಹಿರಿಮೆಯನ್ನು ಎತ್ತಿ ಹಿಡಿದಿರುವುದನ್ನು ಗೀತೆಯಲ್ಲಿ ಕಾಣಬಹುದು.

ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ
ಆರ್ತೋ ಜಿಜ್ಞಾಸುರರ್ಥಾರ್ಥಿ ಜ್ಞಾನಿ ಚ ಭರತರ್ಷಭ (೭.೧೬)

ಭಗವದಾರಾಧನೆಯಲ್ಲಿ ನಿರತರಾದ ಜನರನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಬಹುದು. ಒಬ್ಬನು ಜ್ಞಾನಿ, ತಾತ್ವಿಕವಾಗಿ ಎಲ್ಲವನ್ನೂ ತಿಳಿದವನು; ಎರಡನೆಯವನು ಜಿಜ್ಞಾಸು, ದೇವರು ದೈವತ್ವದ ಚಿಂತನೆ ಧ್ಯಾನಗಳಲ್ಲಿ ಮುಳುಗಿರುವವನು; ಮೂರನೆಯವನು ಆರ್ತ, ಭಗವದ್ಭಕ್ತಿಯಲ್ಲಿ ತನ್ನನ್ನೇ ಸಮರ್ಪಿಸಿಕೊಂಡಿರುವವನು, ಅತಿ ಭಾವುಕನೂ ಹೌದು. ಎಲ್ಲೆಡೆ ದೇವರನ್ನು ಕಾಣುವವನು; ನಾಲ್ಕನೆಯವನು ಅರ್ಥಾರ್ಥಿ, ಇವನ ಭಕ್ತಿ ಆಚರಣೆಗಳು ಬೇಡಿಕೆಗೆ ಸೀಮಿತ, ಕಾಮ್ಯಕವಾದದ್ದು.

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಜಿತು ಮಿಚ್ಛತಿ
ತಸ್ಯ ತಸ್ಯಾಚಲಾಂ ಶ್ರದ್ಧಾಂತಾಮೇವ ವಿವಿಧಾಮ್ಯಹಂ (೭.೨೧)

ಭಕ್ತನು ಯಾವ ರೂಪದಲ್ಲಿ ಶ್ರದ್ಧೆಯಿಂದ ಆರಾಧಿಸಲು ಇಚ್ಛಿಸುತ್ತಾನೋ, ಆಯಾ ಶ್ರದ್ಧಾ ರೂಪದಲ್ಲಿ ನಾನು ಅವನಿಗೆ ಲಭ್ಯ ಎಂದು ಗೀತಾಚಾರ್ಯನು ಉಲ್ಲೇಖಿಸಿದ್ದಾನೆ. ಇಲ್ಲಿ ದೇವರು ಪುರುಷ ರೂಪಿ. ತನುಂ – ಎನ್ನುವ ಪದ ಪೈರುಷ ಶರೀರವನ್ನು ಸೂಚಿಸಿದೆ.

ಗೀತೆ, ಪುರುಷಾಕೃತಿಯನ್ನು ಆರೋಪಿಸುವಾಗ ಪುರುಷ ಸೂಕ್ತವನ್ನು ಅವಲಂಬಿಸಿದೆ. ಪುರುಷ ಸೂಕ್ತವು ಮೂರು ವೇದಗಳಲ್ಲಿಯೂ ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ ಉಲ್ಲೇಖಗೊಂಡಿದೆ.

ರೂಪಂ ಮಹತ್ತೇ ಬಹು ವಕ್ತ್ರನೇತ್ರಂ
ಮಹಾ ಬಾಹೋ ಬಹು ಬಾಹೂರುಪಾದಂ (೧೧.೨೩)
ದ್ಯಾವಾ ಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯ್ಯೈಕೇನ ದಿಶಶ್ಚ ಸರ್ವಾಃ (೧೧.೨೦)

ಪುರುಷ ಸ್ವರೂಪಿ ದೇವರು. ಆತ್ಮ ಸ್ವರೂಪಿಯೂ ಹೌದು, ಬ್ರಹ್ಮ ಸ್ವರೂಪಿಯೂ ಹೌದು. ದೇವರು ಮತ್ತು ದೇವತೆಗಳಲ್ಲಿ ಅಂತರವಿದೆ ಎಂದು ಗಮನಿಸಬೇಕು. ಆಗಮಗಳಲ್ಲಿ ವಿವರಿಸಿರುವ ದೇವತೆಗಳು ಅರ್ಚನೆಗಾಗಿ ಇಳಿದು ಬಂದವರು. ಇಂತಹ ಸ್ವರೂಪವನ್ನು ಗೀತೆಯೂ ಸೃಷ್ಟಿಸಿದೆ.

ಕಿರೀಟಿನಂ ಗದಿನಂ ಚಕ್ರ ಹಸ್ತೆಮಿಚ್ಛಾಮಿ
ತ್ವಾಂ ದ್ರಷ್ಟುಮಹಂ ತಥೈವ
ತೇನೈವ ರೂಪೇಣ ಚತುರ್ಭುಜೇನ
ಸಹಸ್ರ ಬಾಹೋ ಭವ ವಿಶ್ವಮೂರ್ತೇ (೧೧.೪೬)

ಗದೆ, ಚಕ್ರಗಳನ್ನು ಧರಿಸಿರುವ, ಕಿರೀಟಧಾರಿಯಾದ ದೇವತೆಯು ಚತುರ್ಭುಜ ರೂಪಿ. ಗೀತೆಯಲ್ಲಿ ಕಂಡ ಚತುರ್ಭುಜ ರೂಪಿಯನ್ನು ಆಗಮಗಳು ಸ್ಪಷ್ಟವಾಗಿ ಸ್ವೀಕರಿಸಿವೆ.

## ಉಪಸಂಹಾರ

ಮಹಾಭಾರತದ ರಚನೆಯ ಕಾಲಕ್ಕೆ ವಿಗ್ರಹಾರಾಧನೆ ಇತ್ತು ಎನ್ನುವುದು ಸ್ಪಷ್ಟವಾಗದಿದ್ದರೂ, ಮೂರ್ತ ಸ್ವರೂಪಕ್ಕೆ ನೆರವಾಗುವ ಅಂಶಗಳನ್ನು ಗುರುತಿಸಬಹುದಾಗಿದೆ.

ಪತ್ರ ಪುಷ್ಪ ಫಲಂ ತೋಯಂ ಯೋಮೇ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ (೯.೨೬)

ಆಗಮಗಳು ವಿವರಿಸುವ ಪಂಚೋಪಚಾರ ಪೂಜೆಯೂ ಶೈಶವಾವಸ್ಥೆಯಲ್ಲಿತ್ತು ಎಂದು ಒಪ್ಪಿಕೊಳ್ಳಬೇಕಾಗಿದೆ. ಆಲಯಾರ್ಚನೆ ಮತ್ತು ವಿಗ್ರಹಾರಾಧನೆಗಳು ಬೆಳೆದು ಬಂದ ಹಾದಿಯಲ್ಲಿ, ಇವೆಲ್ಲವನ್ನೂ ಮತ್ತೊಮ್ಮೆ ಮತ್ತಷ್ಟು ಹೊಸ ಬೆಳಕಿನ ಅಡಿಯಲ್ಲಿ ಪುನರವಲೋಕಿಸುವ ಅಗತ್ಯತೆ ಇದೆ. ಇದು ಮೂರ್ತಿಶಿಲ್ಪದ ಅಧ್ಯಯನಕ್ಕೆ ಪೂರಕವಾಗಬಹುದು.

## ಆಧಾರಗಳು

೧. ಸ್ವಾಮಿ ಆದಿದೇವಾನಂದ, **ಪಾತಂಜಲ ಯೋಗದರ್ಶನ**, ಶ್ರೀರಾಮಕೃಷ್ಣಾಶ್ರಮ, ಮೈಸೂರು, ೧೯೯೮, ಪುಟ vii.

೨. ಸ್ವಾಮಿ ಆದಿದೇವಾನಂದ, **ಕಠೋಪನಿಷತ್**, ಶ್ರೀರಾಮಕೃಷ್ಣಾಶ್ರಮ, ಮೈಸೂರು, ೨೦೦೧, ಪುಟ. ೪೬.

೩. ಅದೇ, ಕಠೋಪನಿಷತ್ತಿನ ಪಾಠ : ಹಂತಾಚೇನ್ಮನ್ಯತೇ ಹಂತುಂ ಹಂತಶ್ಚೇತ್ ಮನ್ಯತೇ ಹತಂ..........

೪. ಅದೇ, ಪುಟ ೫೨.

೫. ಸುರೇಂದ್ರನಾಥ ಗುಪ್ತಾ, **ಯುಗಯಾತ್ರೀ ಭಾರತೀಯ ಸಂಸ್ಕೃತಿ** (ಮೂರನೇ ಸಂಪುಟ), ಮೈಸೂರು ವಿಶ್ವವಿದ್ಯಾನಿಲಯ, ೧೯೭೫, ಪುಟ ೬.

卐卐卐

# ಶಿಲ್ಪ ಪ್ರಕಾರಗಳ ಪರಂಪರೆ : ಪುರಾತತ್ತ್ವ ಮತ್ತು ಶಾಸ್ತ್ರಗಳು

– ಅ. ಸುಂದರ*

## ಹಿನ್ನೆಲೆ ಪುರಾತತ್ತ್ವ ಮತ್ತು ಶಿಲ್ಪ

ಬಹುಮಟ್ಟಿನ ಜನವಾಸ್ತವ್ಯದ ನೆಲೆಗಳಲ್ಲಿ, ಆಯಾಯ ಕಾಲದಲ್ಲಿ, ಆಯಾಯ ಪರಿಸರದಲ್ಲಿ ತನ್ನ ಸಮಾಜದ ಲೌಕಿಕ ಹಾಗೂ ಪಾರಮಾರ್ಥಿಕ ಪರಂಪರೆಯ ನಡವಳಿಕೆಗಳಿಗೆ ಭಾವನಾಪರವಶನಾಗಿ ಸ್ಪಂದಿಸುವ ಇಲ್ಲವೇ ನಿಸರ್ಗದ ಅಸಾಮಾನ್ಯ ಚೆಲುವಿನಿಂದ ಸ್ಫೂರ್ತಿಗೊಂಡಾಗ ಇಲ್ಲವೇ ಆಧ್ಯಾತ್ಮಿಕ ದೀರ್ಘ ಚಿಂತನೆಯಿಂದ ತಾನು ಕಂಡುಕೊಂಡ ಅವ್ಯಕ್ತ ನಿತ್ಯನೂತನ ಸತ್ಯದರ್ಶನದಿಂದ ಸ್ಫುರಿಸುವ ಇಂದ್ರಿಯಾತೀತ ಭಾವನೆಗಳಿಗೆ ಯಾವುದೇ ಮಾಧ್ಯಮದಲ್ಲಿ ತನ್ನ ಸಮಾಜಕ್ಕೂ ತಿಳಿಯುವಂತೆ ಮತ್ತು ಅವರಿಗೆ ಕ್ಷಣಕಾಲವಾದರೂ ತತ್ಸಮಾನ ಅನುಭವ ಬರುವಂತೆ ಮಾಡುವ ಹಾಗೆ ಸೃಷ್ಟಿಸುವ ಪ್ರತಿಭಾನ್ವಿತ ಸಾಕಾರಗಳಿಗೆ ಶಿಲ್ಪವೆಂದು ಹೇಳಬಹುದು. ಇದು ಎಲ್ಲೋರದ ಏಕಶಿಲೆ ಕೈಲಾಸ ಇಲ್ಲವೇ ಕೋನಾರ್ಕಿನ ಅಸಾಮಾನ್ಯ ಸೂರ್ಯ ದೇವಾಲಯ, ಜಾವಾದಲ್ಲಿಯ ಬೋರೋಬೊದೂರಿನ ಬೌದ್ಧ ದೇವಾಲಯ, ಈಜಿಪ್ತಿನ ಪಿರಮಿಡ್ಡುಗಳು; ೨೦೦೧ರವರೆಗೂ ಇದ್ದ ೫೩ ಮೀ. ಎತ್ತರದ ಬೃಹದಾಕಾರದ ಅದ್ವಿತೀಯ ಬುದ್ಧ, ಶ್ರವಣಬೆಳಗೊಳದ ಬಾಹುಬಲಿ, ಎಲಿಫೆಂಟಾದಲ್ಲಿಯ ಮಹೇಶ ಮೂರ್ತಿಶಿಲ್ಪ, ಲಿಯೊನಾರ್ಡೊ ಡಾವಿಂಚಿಯ ಮೊನಾಲಿಸಾ ವರ್ಣಚಿತ್ರ ಹೀಗೆ ಹತ್ತು ಹಲವಾರು ಅನುಪಮ ಶಿಲ್ಪವೋ. ವರ್ಣಚಿತ್ರವೋ ಆಗಿರಬಹುದು. ಇಂಥ ಪ್ರಯತ್ನಗಳು ಇಂದು ನಿನ್ನೆಯದಲ್ಲ ಅಥವಾ ಇದೀಗ ಹೇಳಿದ ಉದಾಹರಣೆಗಳು ಸೂಚಿಸುವ ಹಾಗೆ ಸಾವಿರಾರು ವರ್ಷಗಳಷ್ಟೇ ಹಿಂದಿನದೂ ಅಲ್ಲ. ಒಂದು ನಿಗದಿ ಪಡಿಸಿದ ಪರಂಪರೆ, ಕಟ್ಟು ಕಟ್ಟಳೆ, ಬರವಣಿಗೆ ತಂತ್ರವನ್ನು ಸ್ಪಷ್ಟವಾಗಿ ರೂಪಿಸಿಕೊಳ್ಳುತ್ತಿದ್ದ ಹಂತದಿಂದ ಆಶ್ಚರ್ಯ ಪಡುವಷ್ಟು ಬಹಳ ಹಿಂದೆಯೇ ಆರಂಭವಾಗಿದೆ. ಈಗಿನ ಮಾನವ ಪೀಳಿಗೆಯ ಹಿಂದಿನವರ ಅಸ್ತಿತ್ವವು ಕನಿಷ್ಠ ೩೦ ಲಕ್ಷ ವರ್ಷಗಳಷ್ಟು ಹಿಂದಿನದೆಂದು ೧೯೭೪ರಲ್ಲಿ ಕೆಲವು ಮಹತ್ವದ ಶೋಧನೆಗಳಿಂದ ತಿಳಿದು ಬಂದಿದೆ. ಉದಾಹರಣೆಗೆ ಇಥಿಯೋಪಿಯಾದ ಈಶಾನ್ಯ ಭಾಗದ ಅಫರ್ ಪ್ರದೇಶದಲ್ಲಿ ಕಂಡುಬಂದ ಒಬ್ಬ ಬಾಲಕಿಯ ಅಸ್ಥಿಪಂಜರದ ಪಳೆಯುಳಿಕೆಗಳ ಈ ಕಾಲಮಾನವು 'ಪೊಟಾಷಿಯಂ ಆರ್ಗಾನ್' ಎಂಬ ವೈಜ್ಞಾನಿಕ ತಂತ್ರದಿಂದ ಖಚಿತವಾಗಿದೆ. ೧೯೭೫ರಲ್ಲಿ ಇದೇ ಪ್ರದೇಶದ ಇನ್ನೊಂದು ನೆಲೆ ಹಡರಿನಲ್ಲಿ ಸ್ತ್ರೀ–ಪುರುಷರು ಸೇರಿದಂತೆ ಸುಮಾರು ೧೩ ವಯಸ್ಕರ, ಮಕ್ಕಳ ಅಸ್ಥಿಗಳ ಪಳೆಯುಳಿಕೆಗಳು ಒಂದೆಡೆಯಲ್ಲಿ ದೊರೆತಿರುವುದು ತುಂಬ ಕುತೂಹಲಕಾರಿಯಾಗಿದೆ. ಇವರೆಲ್ಲ ಒಂದೇ ಕುಟುಂಬದವರಾಗಿದ್ದಿರಬಹುದೇ ಎಂಬ ಅನುಮಾನವೂ ಇದೆ. ೧೯೮೦ರ ದಶಕದಲ್ಲಿ ಪುರಾತತ್ವಜ್ಞ ಲೀಕಿ ಮತ್ತು ಇವರ ಸಹೋದ್ಯೋಗಿಗಳು ಸುಮಾರು ೧೬ ಲಕ್ಷ ವರ್ಷಗಳ ಹಿಂದಿನ ೬ ಅಡಿ (೧.೮೦ ಮೀ) ಎತ್ತರ ಬೆಳೆಯಬಹುದಾಗಿದ್ದ ೧೨ ವರ್ಷದ ಒಬ್ಬ ಬಾಲಕನ ಪಳೆಯುಳಿಕೆಗಳನ್ನು ಟರ್ಕನ ಪ್ರದೇಶದಲ್ಲಿ ಶೋಧಿಸಿದರು. ಇವರೆ ೧೯೫೦ರ ದಶಕದಲ್ಲಿ ಪೂರ್ವ ಆಫ್ರಿಕದಲ್ಲಿಯ ಓಲ್ದುವಾಯ್ ಕಣಿವೆಯಲ್ಲಿ ಶೋಧಿಸಿದ ೧೭ ೧/೨ ಲಕ್ಷ ವರ್ಷಗಳ ಹಿಂದಿನ ಸಹಜವಾಗಿ ಸ್ವಲ್ಪ ಮುಂಬಾಗಿದ ಬೆನ್ನೆಲುಬು, ಉಬ್ಬಿದ ಹುಬ್ಬು, ಮುಂಚಾಚಿದ ಗಲ್ಲ, ಮೈಯೆಲ್ಲ ದಟ್ಟ ರೋಮವಿದ್ದ ೫ ಅಡಿ (೧.೫೦ ಮೀ) ಎತ್ತರದ ಗಟ್ಟಿಮುಟ್ಟಾದ ಮನುಷ್ಯನ ಪಳೆಯುಳಿಕೆಗಳು ಮತ್ತು ಅವನು ತಯಾರಿಸಿದ ಕಲ್ಲಿನ ಉಪಕರಣಗಳನ್ನು ಪತ್ತೆ ಮಾಡಿದ್ದರು. ಮಾನವನ ದೈಹಿಕ ವಿಕಸನ ಹಂತದಲ್ಲಿ ಇವನು ಈಗಿನ ಮಾನವನ ಪೂರ್ವ ಹಂತದವನೆಂದು (Homo habilis) ಮತ್ತು ಕಾಲಕಾಲಕ್ಕೂ ಆದ ದೈಹಿಕ ವಿಕಸನದಲ್ಲಿ ಈಗಿನ ಸ್ವರೂಪವನ್ನು ಸುಮಾರು ೪೦–೫೦ ಸಾವಿರ ವರ್ಷಗಳ ಹಿಂದೆ ಪಡೆದಿರಬೇಕೆಂದು ತರ್ಕಿಸಲಾಗಿತ್ತು. ಆದರೆ ಟರ್ಕನ ಬಾಲಕನು ಸ್ವಲ್ಪ ಮಟ್ಟಿಗೆ ಬೆನ್ನೆಲುಬು, ಪೃಷ್ಠ, ಕಾಲುಗಳನ್ನು ಬಿಟ್ಟರೆ ಬಹುಮಟ್ಟಿಗೆ ಆಧುನಿಕ ಮಾನವನನ್ನು ಹೋಲುತ್ತಿರುವುದು ಮತ್ತಷ್ಟು ಕುತೂಹಲಕಾರಿಯಾಗಿದೆ. ಅಷ್ಟು ದೂರ ಏಕೆ ನಮ್ಮ ಕರ್ನಾಟಕದ ಇಸಂಪುರ (ಗುಲ್ಬರ್ಗ ಜಿಲ್ಲೆ)ದಲ್ಲಿ ಪುರಾತತ್ತ್ವ ಶೋಧನೆಯಿಂದ ತಿಳಿದಂತೆ ಅತ್ಯಂತ ಪ್ರಾಚೀನತಮ ಸಾಂಸ್ಕೃತಿಕ ಹಂತ ಅಂದರೆ ಆದಿ ಹಳೆ

---

* ಪುರಾತತ್ತ್ವವಿದ, ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ.

ಶಿಲಾಯುಗ (Lower Palaeolithic)ದ ಪುರಾತತ್ತ್ವ ಅವಶೇಷಗಳ ವೈಜ್ಞಾನಿಕ ವಿಶ್ಲೇಷಣೆಯಿಂದ ಅದು ಸುಮಾರು ಹತ್ತೂವರೆ ಲಕ್ಷ ವರ್ಷಗಳಷ್ಟು ಪ್ರಾಚೀನವೆಂದು೨ ೨೦೦೮ರಲ್ಲಿ ತಿಳಿದುಬಂದಿದೆ. ಇಸಂಪುರದ ಹತ್ತಿರ ಹುಣಸಗಿಯ ಬಯಲು ಪ್ರದೇಶದ ನೆಲೆಯಲ್ಲಿದ್ದ ಜನರು ಕಲ್ಲಿನಲ್ಲಿ ತಮ್ಮ ಉಪಕರಣಗಳನ್ನು ಮಾಡಿಕೊಳ್ಳುತ್ತಿದ್ದ ಸ್ಥಳದಲ್ಲಿ ಮಾಡಿಕೊಂಡ ನೆರಳನ್ನು ಒದಗಿಸುವಂಥ ತಾತ್ಕಾಲಿಕ ಅಡ್ಡ ಮರೆಯ ನಿರ್ಮಿತಿಯ೩ ಗುರುತುಗಳೂ ಸಿಕ್ಕಿವೆ. ಹೀಗೆ ಮಾನವನು ಉದ್ದೇಶಪೂರ್ವಕವಾಗಿ ನಿರ್ಮಿಸಿದ ಅತ್ಯಂತ ಪ್ರಾಚೀನತಮ ಸರಳ ಕಟ್ಟಡ ಸದ್ಯಕ್ಕೆ ತಿಳಿದಮಟ್ಟಿಗೆ ಇದೊಂದೇ.

ಎರಡನೆಯದಾಗಿ, ಅತ್ಯಂತ ಕ್ಷುದ್ರಾವಸ್ಥೆಯಲ್ಲಿ ಇದ್ದರೆಂದು ತಿಳಿಯಲಾದ ಈ ಜನರು ತಾವು ಮಾಡಿಕೊಂಡ ಒರಟು ಕಲ್ಲಿನ ಉಪಕರಣಗಳಲ್ಲಿಯೂ ಕ್ರಮೇಣ ತಮ್ಮ ಸೌಂದರ್ಯ ಪ್ರಜ್ಞೆಯನ್ನು ತೋರಿದ್ದಾರೆ. ತ್ರಿಕೋಣಾಕೃತಿಯ ಕಲ್ಲಿನ ಉಪಕರಣದ ಎರಡೂ ಬದಿಗಳಲ್ಲಿ ಒಂದೇ ಪ್ರಮಾಣದ ಉಬ್ಬು ಇರುವಂತೆ ಮತ್ತು ಮಧ್ಯ ಲಂಬ ರೇಖೆಯ ಎರಡೂ ಬದಿಗಳು ಒಂದೇ ಅಳತೆಯಲ್ಲಿದ್ದು ಸಮಾನವಾಗಿರುವಂತೆ ಮಾಡಲಾಗುತ್ತಿತ್ತು. ಇಲ್ಲಿ ಗಮನಿಸಬೇಕಾದುದು ಯಾವುದೇ ಒಂದು ನಿಶ್ಚಿತ ನಿರ್ಮಾಣಕ್ಕೆ ಮೂಲಭೂತ ಅಂಗಗಳೆಂದರೆ ಉದ್ದೇಶಕ್ಕನುಗುಣವಾಗಿ ನಿರ್ಮಾಣ ಮಾಡಬೇಕೆಂದಿರುವ ಕೃತಿಯ ರೂಪದ ಹದವರಿತ ಕಲ್ಪನೆ, ಪ್ರಮಾಣ ಹಾಗೂ ಮಧ್ಯ ಲಂಬ ರೇಖೆಯ ಎರಡು ಬದಿಯ ಭಾಗಗಳ ಸರಿಸಮಾನತೆ ಮತ್ತು ಸೂಕ್ತ ವಸ್ತುವಿನ ಆಯ್ಕೆ, ಅದರಲ್ಲಿ ನಿಶ್ಚಿತ ಆಕೃತಿಯನ್ನು ರೂಪಿಸುವ ತಂತ್ರ. ಸುಮಾರು ಎರಡೂವರೆ ಸಾವಿರ ವರ್ಷಗಳಿಂದೀಚಿನ ದೇವಾಲಯ, ಚೈತ್ಯಾಲಯ ರಚನೆಗಳಲ್ಲಿ ಏಕಪ್ರಕಾರವಾಗಿ ಪ್ರಚಲಿತವಿದ್ದ ಈ ಶಿಲ್ಪ ಕುಶಲತೆಯನ್ನು ಲಕ್ಷ ಲಕ್ಷಾಂತರ ವರ್ಷಗಳ ಹಿಂದಿನ ಈ ಕ್ಷುದ್ರ ಜನರು ಹುಟ್ಟು ಹಾಕಿ ಬೆಳೆಸುತ್ತಿದ್ದುದನ್ನು ಅವರ ತೀರ ಸಾಮಾನ್ಯ ಕಲ್ಲಿನ ಉಪಕರಣಗಳಲ್ಲಿ ಕಾಣುತ್ತೇವೆ. ವ್ಯತ್ಯಾಸವಿಷ್ಟೆ, ಮೊದಲನೆಯದು ಆಧ್ಯಾತ್ಮಿಕ; ಎರಡನೆಯದು ಲೌಕಿಕ. ಈಗ ಶಿಲ್ಪದಲ್ಲಿ ಲೌಕಿಕದೊಡನೆ ಪಾರಮಾರ್ಥಿಕತೆಯೂ ಹೇಗೆ ಬೆಳೆದು ಬಂತೆಂಬುದನ್ನು ನೋಡೋಣ.

ಮಾನವನಿಗೆ ಆಹಾರವಾಗುವಂತಹ ಪ್ರಾಣಿ-ಸಸ್ಯ ಸಂಪತ್ತು ಬದಲಾವಣೆ ಯಾದಂತೆಲ್ಲ ಅದಕ್ಕನುಗುಣವಾಗಿ ಇಂಥ ಜನರ ಆವಶ್ಯಕತೆಗಳೂ ಮತ್ತು ತತ್ಸಂಬಂಧ ತಂತ್ರಜ್ಞಾನ ಬದಲಾವಣೆಯಾಗುತ್ತ, ಬೆಳೆಯುತ್ತ ಸುಧಾರಣೆಯತ್ತ ಸಾಗುತ್ತಿತ್ತು. ಈ ಪ್ರಗತಿ ಕೇವಲ ಲೌಕಿಕವಾಗಿರಲಿಲ್ಲ. ಕ್ರಮೇಣ ಸೃಷ್ಟಿ ವೈಚಿತ್ರ್ಯದ, ಮನುಷ್ಯನ ಹುಟ್ಟು-ಸಾವಿನ ಬಗ್ಗೆ ಅವರ ಗಮನ ಹರಿಯತೊಡಗಿತು. ತತ್ಪರಿಣಾಮವಾಗಿ ವಿವಿಧ ಪ್ರದೇಶಗಳಲ್ಲಿ ಭಿನ್ನ ಭಿನ್ನ ನಂಬಿಕೆ, ಸಂಪ್ರದಾಯಗಳು ಹುಟ್ಟು ಹಾಕಿತು. ಸ್ಪೇನ್, ಫ್ರಾನ್ಸ್, ಆಸ್ಟ್ರಿಯ, ಭಾರತ ಮೊದಲಾದ ದೇಶಗಳಲ್ಲಿ ಇವುಗಳನ್ನು ಪ್ರತಿಬಿಂಬಿಸುವ ಗವಿ ವರ್ಣ ಹಾಗೂ ಕುಟ್ಟಿ ಬಿಡಿಸಿದ ಚಿತ್ರಗಳು, ಜೇಡಿಮಣ್ಣು ಶಿಲೆಗಳಲ್ಲಿ ರೂಪಿಸಿದ ಪ್ರಾಣಿ/ಸ್ತ್ರೀ ಪುರುಷಾಕೃತಿಯ ಗೊಂಬೆಗಳು, ಪ್ರಾಣಿ ಎಲುಬಿನ, ಕಲ್ಲಿನ ಮೇಲಿನ ಗೀರು ಚಿತ್ರಗಳು೪ ಹಲವಾರೆಡೆಗಳಲ್ಲಿ ಶೋಧವಾಗಿವೆ. ಇವುಗಳು ಸುಮಾರು ೮/೧೦೦೦೦೦ ದಿಂದ ೪೦,೦೦೦ ವರ್ಷಗಳಷ್ಟು ಪುರಾತನವಾದವು. ಬಾದಾಮಿ ಚಾಲುಕ್ಯರ ಕಾಲದ ಪ್ರಾಚೀನ ಭವ್ಯ ದೇವಾಲಯಗಳ ಆಗರವಾದ ಬಾದಾಮಿ, ಪಟ್ಟದಕಲ್ಲು, ಐಹೊಳೆ(ಬಾದಾಮಿ ತಾ. ಬಾಗಲಕೋಟೆ ಜಿ.)ಯಲ್ಲಿ ಸುಮಾರು ೪,೦೦೦ದಿಂದ ೧೨,೦೦೦ ವರ್ಷಗಳಷ್ಟು ಪ್ರಾಚೀನ ಗವಿವರ್ಣ ಚಿತ್ರಗಳಿವೆ.೫ ಈ ನೆಲೆಗಳ ಸಮೀಪ ಸಿದ್ಧಾಪುರದಲ್ಲಿ ಕೆಲವು ವರ್ಷಗಳ ಹಿಂದೆ ಒಂದು ಸಣ್ಣ ಬಿಡಿ ತುಂಡು ಕಲ್ಲಿನ ಮೇಲೆ ಬಿಡಿಸಿದ ರೇಖಾ ಚಿತ್ರದ ಒಂದು ಭಾಗವು ಆಕಸ್ಮಿಕವಾಗಿ ಸಿಕ್ಕಿತು. ಇದು ಸೂಕ್ಷ್ಮ ಶಿಲಾಯುಗ (Mesolithic) ಹಂತದ್ದು. ಸುಮಾರು ೭,೦೦೦ದಿಂದ ೧೦,೦೦೦ ವರ್ಷಗಳಷ್ಟು ಹಿಂದಿನದು. ನಾನಾ ಪ್ರಕಾರದ ಇಂಥ ಪ್ರಾಚೀನ ಸೃಜನಾತ್ಮಕ ಕೃತಿಗಳು ಕರ್ನಾಟಕದಲ್ಲಿ ಮಾತ್ರವಲ್ಲ, ಭಾರತದ ಇತರೆಡೆಗಳಲ್ಲಿ ಅಷ್ಟೇ ಅಲ್ಲ, ವಿಶ್ವದ ಹಲವಾರೆಡೆಗಳಲ್ಲಿ ಶೋಧವಾಗಿವೆ.೬

### ಆಧ್ಯಾತ್ಮಿಕ ಹಂತ

ಹೀಗೆ ಎಡೆ ಬಿಡದ ಪ್ರಗತಿ ಮಾರ್ಗದಲ್ಲಿ ಮಾನವನ ದೀರ್ಘ ಕಾಲದ ಸತತ ಗಂಭೀರ ಚಿಂತನೆ ಮತ್ತು ಪ್ರಯತ್ನ ತಪಸ್ಸಾಗಿ ಮಾರ್ಪಟ್ಟಾಗ ಜಗತ್ತು-ಜೀವ-ಸೃಷ್ಟಿಕರ್ತ ಇವುಗಳ ನಡುವಿನ ಪರಸ್ಪರ ಸಂಬಂಧ ಹಾಗೂ ಆದ್ಯಂತ ರಹಿತ, ಶುದ್ಧ ಆನಂದಮಯ ನಿತ್ಯ ನೂತನ ಸತ್ಯದ ಪರಿಚಯ ದರ್ಶನವಾಗುತ್ತಾ ಬಂತು. ಇದರ ಅತಿ ಪ್ರಾಚೀನ ಘಟ್ಟವನ್ನು ಪ್ರತಿಬಿಂಬಿಸುವ ಅತ್ಯಂತ ಪುರಾತನ ಸಾಹಿತ್ಯವೆಂದರೆ ಸುಮಾರು ೪/೫,೦೦೦ ವರ್ಷಗಳ ಹಿಂದಿನ ಬೃಹತ್ ವೇದ ಸಾಹಿತ್ಯ. ಇದರಲ್ಲಿ ಪ್ರಾಗಿತಿಹಾಸ ಕಾಲದಿಂದಲೂ ಬಹುಮಟ್ಟಿನ ಜನಾಂಗೀಯ ಭಾವನೆ, ಸಂಪ್ರದಾಯ, ಕಟ್ಟು ಕಟ್ಟಳೆಗಳು ಶುದ್ಧವಾಗುತ್ತ ಪರಿಷ್ಕಾರವಾದ ಹಾಗೂ ಮಂತ್ರ-ದ್ರಷ್ಟಾರರ ಕ್ರಮಬದ್ಧವಾದ ಶ್ರೇಷ್ಠ, ಉದಾತ್ತ ಅನುಪಮ ತತ್ವವಿಚಾರಗಳು

ವಿಪುಲವಾಗಿವೆ. ಆ ಚಿರ ನೂತನ ಸತ್ಯ ಆನಂದಮಯ ಸೃಷ್ಟಿ ಮೂಲಶಕ್ತಿ ಅಂದರೆ ಬ್ರಹ್ಮನ್. ಇದರ ಸಾಕ್ಷಾತ್ಕಾರಕ್ಕೆ ಯಜ್ಞ ಕರ್ಮ ಪ್ರಧಾನವಾದ ಹಂತದಲ್ಲಿ ಯಜ್ಞಶಾಲೆ, ವೇದಿಕೆ, ಕುಂಡ ನಿರ್ಮಾಣ ತಂತ್ರ ಮತ್ತು ಕ್ರಮ ಒಂದು ವಿಶಿಷ್ಟ ಶಾಸ್ತ್ರವಾಗಿ ಬೆಳೆಯಿತು. ಅವೇ ವೇದ ಸಾಹಿತ್ಯದ ಪ್ರಮುಖ ಭಾಗವಾದ ಬ್ರಾಹ್ಮಣ ಮತ್ತು ವೇದಾಂಗಗಳಲ್ಲಿ ಒಂದಾದ ಶುಲ್ವ ಸೂತ್ರ ಸಾಹಿತ್ಯ ಗ್ರಂಥಗಳು. ಬೌಧಾಯನ, ಆಪಸ್ತಂಭ, ಕಾತ್ಯಾಯನ ಮೊದಲಾದ ಸೂತ್ರ ಸಾಹಿತ್ಯದಲ್ಲಿ ವಿಶೇಷವಾಗಿ ದರ್ಶಪೌರ್ಣಮಾಸ, ಚಾತುರ್ಮಾಸ್ಯ, ನಿರೂಢ ಪಶುಬಂಧ, ಸೋಮ, ಸೌತ್ರಮಣಿ ಮೊದಲಾದ ಯಾಗಗಳಿಗೆ ಸಂಬಂಧಿಸಿದ ಕ್ರಮಬದ್ಧ, ಸೂಕ್ಷ್ಮ ಲೆಕ್ಕಾಚಾರದ ವಿವಿಧ ಪ್ರಕಾರಗಳ ಯಜ್ಞ ವೇದಿಕೆ, ಶಾಲೆ ಮತ್ತು ಗಾರ್ಹಪತ್ಯ, ಆಹವನೀಯ ಮತ್ತು ದಾಕ್ಷಿಣಾತ್ಯಾಗ್ನಿ ಕುಂಡಗಳ ನಿರ್ಮಾಣ, ಇವುಗಳ ನಿರ್ಮಿತಿಯಲ್ಲಿ ಉಪಯೋಗಿಸಬೇಕಾದ ವಿವಿಧ ಆಕೃತಿಗಳ ಇಟ್ಟಿಗೆಗಳು, ಒಂದೊಂದು ಸಾಲಿನಲ್ಲೂ ಇರಬೇಕಾದ ಇಟ್ಟಿಗೆಗಳ ಸಂಖ್ಯೆ, ನಿರ್ಮಾಣದ ರೀತಿ ಮೊದಲಾದ ವಿಷಯಗಳನ್ನೂ ಕೂಲಂಕಷವಾಗಿ ವಿವರಿಸಲಾಗಿದೆ. ಇವುಗಳ ರಚನೆಯಲ್ಲಿ ಅನುಸರಿಸಬೇಕಾದ ನಿರ್ಮಿತಿ ರೇಖಾ ಸೂತ್ರಗಳು, ತತ್ಸಂಬಂಧ ರೇಖಾಕೃತಿಗಳು ತರುವಾಯ ಇತಿಹಾಸ ಕಾಲದ ಪ್ರತ್ಯೇಕ ಶಿಲ್ಪ ಪ್ರಕಾರಗಳಿಗೆ, ಕ್ರಮೇಣ ಶಿಲ್ಪ ಶಾಸ್ತ್ರ ಬೆಳವಣಿಗೆಗೆ ಮೂಲವಾದವು. ಈ ಸಾಹಿತ್ಯ ವಿವರಣೆಗಳನ್ನು ಹಾಗೂ ಅಂದಿನಿಂದ ಇಂದಿನವರೆಗೂ ಯಜ್ಞವೇದಿ, ಕುಂಡ ಮೊದಲಾದ ರಚನೆಗಳಲ್ಲಿ ಅದೇ ರೀತಿ ನಿರ್ಮಿತಿ ಸೂತ್ರಗಳನ್ನು ಅನುಸರಿಸುವುದನ್ನು ಪರಿಶೀಲಿಸಿದಾಗ ನಮ್ಮ ಪ್ರಾಚೀನ ಪುರಾಣಗಳಲ್ಲಿ ಯುಗಯುಗಾಂತರದ ದೇವತೆ/ಮಾನವರ ಇತಿಹಾಸ ಮತ್ತು ಮೂರ್ತಿ ಶಿಲ್ಪ ಪರಿಕಲ್ಪನೆಗಳು ಸತ್ಯಕ್ಕೆ ತೀರ ದೂರವಾಗಿಲ್ಲವೆಂದು ಸ್ಪಷ್ಟವಾಗುತ್ತ ಬರುತ್ತಿದೆ.

**ಶಿಲ್ಪ : ವೇದ ಸಾಹಿತ್ಯ ಮತ್ತು ಸಿಂಧು – ಸರಸ್ವತಿ ಬಯಲಿನ ನಾಗರಿಕತೆ**

ಸುಮಾರು ೧೫ ವರ್ಷಗಳಿಂದೀಚೆಗೆ ಗಂಗಾ ಮತ್ತು ಸಿಂಧೂ ನದಿಗಳ ನಡುವೆ 'ಇನ್ಸಾಟ್ ಇಮೆಜರಿ' ಎಂಬ ವೈಜ್ಞಾನಿಕ ತಂತ್ರದಿಂದ, ಇಂದಿನ ಸಟ್ಲೇಜ್ (ವೇದ ಕಾಲದ ಶುತದ್ರೀ) ಮತ್ತು ಯಮುನೆಯ ನಡುವಿನ ಪ್ರದೇಶದಲ್ಲಿ ಹಿಮಾಲಯ ತಪ್ಪಲಿನ ಆದಿ ಬದ್ರಿಯಿಂದ ಪಶ್ಚಿಮಕ್ಕೆ ಅಂದರೆ ಅರಬ್ಬಿ ಸಮುದ್ರದ ಕಡೆಗೆ ಹರಿಯುತ್ತಿದ್ದ ಸಾವಿರ ವರ್ಷಗಳ ಹಿಂದೆ ಬತ್ತಿ ಹೋದ ಅಲ್ಲಲ್ಲಿ ಸುಮಾರು ೧೫ ಕಿ.ಮೀ.ನಷ್ಟು ವಿಶಾಲವಾದ ನದಿಯೊಂದರ ಪಾತ್ರವನ್ನು ಗುರುತಿಸಲಾಯಿತು. ಈ ಪ್ರದೇಶದಲ್ಲಿ ಸುಮಾರು ಕ್ರಿ.ಪೂ. ೩೩೦೦–೨೬೦೦ ಕಾಲದ ಆದಿ ಹಂತದ ಜನ ವಾಸ್ತವ್ಯದ ನೆಲೆಗಳೂ ಶೋಧವಾಗಿವೆ.

ಋಗ್ವೇದದಲ್ಲಿ 'ಇಮಂ ಮೆ ಗಂಗೆ ಯಮುನೆ ಸರಸ್ವತಿ ಶುತದ್ರಿ ಸ್ತೋಮಂಗ್ ಸಚತಾ ಪರುಷ್ಣ್ಯ ಅಸಿಕ್ನಿಯಾ ಮರುದ್ವೃಧೆ ವಿತಸ್ತಯಾರ್ಜಿಕೀಯೆ ಶೃಣುಹ್ಯಾ ಸುಷೋಮಯಾ' ಎಂಬ ನದಿಗಳ ಪ್ರಶಂಸೆ ಇರುವುದು ಸರಿಯಷ್ಟೆ. ವಿಶೇಷವಾಗಿ ಸರಸ್ವತಿ ನದಿಯನ್ನು 'ನದೀತಮೆ' ಎಂದೆಲ್ಲ ಬಹಳಷ್ಟು ಹೊಗಳಿರುವುದು; ಮಹಾಭಾರತದಲ್ಲಿ ಶ್ರೀಕೃಷ್ಣನ ಅಣ್ಣ ಬಲರಾಮನ ಪ್ರಭಾಸ್ ಪಠಣ್ಣಿನಿಂದ ಆದಿ ಬದ್ರಿಯವರೆಗಿನ ತೀರ್ಥಯಾತ್ರೆ ಮಾರ್ಗದ ವಿವರಣೆ ಈ ಸಂದರ್ಭದಲ್ಲಿ ಗಮನಾರ್ಹ. ಇವೆಲ್ಲ ಅಂಶಗಳನ್ನು ಕೂಲಂಕಷವಾಗಿ ವಿಮರ್ಶಿಸಿ ಶೋಧಿಸಲ್ಪಟ್ಟ ನದಿಯ ಬೃಹತ್ ಪಾತ್ರವು ಋಗ್ವೇದದ ಸರಸ್ವತಿ ನದಿಯಾಗಿರಬಹುದೆಂಬುದು ಕೆಲವು ಪುರಾತತ್ವಜ್ಞರ ಅನುಮಾನ. ಆದರೆ ವೈದಿಕ ಸಂಪ್ರದಾಯದ ಜನವರ್ಗದವರು ಮಧ್ಯ ಏಷ್ಯಾ ಪ್ರದೇಶದಿಂದ ವಲಸೆ ಬಂದು ಆಫ್ಘಾನಿಸ್ಥಾನದ ಭೂಪ್ರದೇಶದಲ್ಲಿಯ ಒಂದು ಬೃಹತ್ ಸರೋವರವನ್ನು ಸೇರುತ್ತಿದ್ದ ಇಂದಿನ ಹೆಲ್ಮಾಂಡ್ ಎಂಬ ಬೃಹತ್ ನದಿ ಪ್ರದೇಶದಲ್ಲಿ ನೆಲೆಸಿದ್ದು ಅದನ್ನು ಸರಸ್ವತಿಯೆಂದು ಕರೆಯುತ್ತಿದ್ದರೆಂದು ಆ ಸಮಯದಲ್ಲಿ ಋಗ್ವೇದದ ಪ್ರಾಚೀನ ಭಾಗವನ್ನು ಸಂಕಲಿಸಿದರೆಂದು; ಋಗ್ವೇದದ ಅನಂತರ ಕಾಲದ ಇದರ ಪ್ರತಿರೂಪವೆಂಬಂತಿರುವ ಝೆಂದ್ ಅವೆಸ್ತಾದಲ್ಲಿ ಈ ನದಿಯನ್ನು ಹರೈಕ್ವತಿಯೆಂದು ನೆನಪಿಸಲಾಗಿದೆಯೆಂದು; ತರುವಾಯ ಅಂದರೆ ಸುಮಾರು ೩೫೦೦ ವರ್ಷಗಳ ಹಿಂದೆ ಇವರಲ್ಲಿ ಕೆಲವು ವರ್ಗದವರು ಪ್ರಾಚೀನ ಭಾರತದ ವಾಯವ್ಯ ಪ್ರದೇಶಕ್ಕೆ ಬಂದು ನೆಲೆಸಿ ಈ ವೇದದ ಉಳಿದ ಭಾಗವನ್ನು ಸಂಕಲಿಸಿದರೆಂದು ಹೇಳುತ್ತಾರೆ. ಸುಮಾರು ೨೦೦ ವರ್ಷಗಳಿಂದ ಬ್ರಿಟಿಷ್ ವಿದ್ವತ್ ಜನರಿಂದ ಬಂದ ಪ್ರಮೇಯವನ್ನು ಇಂದಿನವರೆಗಿನ ತತ್ಸಂಬಂಧ ಸಂಶೋಧನೆಗಳನ್ನು ಗಮನಿಸಿ ಪುನರ್ವಿಮರ್ಶಿಸಿ ಅದನ್ನು ಗಟ್ಟಿಯಾಗಿಸುವ ಪ್ರಯತ್ನದಲ್ಲಿರುವ ಇಂದಿನ ಕೆಲವು ವಿದ್ವಾಂಸರು ಈ ಅನುಮಾನವನ್ನು ಅಲ್ಲಗಳೆಯುತ್ತಾರೆ. ವೈದಿಕ ಜನರು ಇಂದಿನ ಹೆಲ್ಮಾಂಡ್ ನದಿಯನ್ನೇ ಸರಸ್ವತಿ ಎಂದು ಕರೆಯುತ್ತಿದ್ದು ಋಗ್ವೇದದಲ್ಲಿ ವರ್ಣಿಸಿದ ಸರಸ್ವತಿ ನದಿಯೇ ಅದೆಂದು ಮತ್ತು ಕ್ರಮೇಣ ಸಿಂಧೂ ನದಿಯ ಪೂರ್ವ ಪ್ರದೇಶಕ್ಕೆ ಬಂದಾಗ ಅಲ್ಲಿ ಆಗ ಹರಿಯುತ್ತಿದ್ದ ನದಿಯನ್ನೂ ಸರಸ್ವತಿಯೆಂದು ವರ್ಣಿಸಿದರೆಂದು ಮತ್ತು ಅದು ಅಷ್ಟು ದೊಡ್ಡ ನದಿಯಾಗಿರಲಿಲ್ಲವೆಂದು ಅದು ಪಶ್ಚಿಮ ಸಮುದ್ರವನ್ನು ಸೇರುತ್ತಿದ್ದುದೆಂಬುದಕ್ಕೆ ಋಗ್ವೇದದಲ್ಲಿ ಉಲ್ಲೇಖವಿಲ್ಲವೆಂದು ಆದ್ದರಿಂದ ಋಗ್ವೇದದ ಸರಸ್ವತಿಯು

ಇದಾಗಿರದೆ ಆಫ್ಘಾನಿಸ್ಥಾನದ ಹರೈಕ್ಷತಿಯೆಂದು ಪ್ರಬಲವಾಗಿ ವಾದಿಸುತ್ತಾರೆ.೮ ಆದರೆ ಈ ವಾದದಲ್ಲಿ ಆ ಜನರು ಪೂರ್ವದ ಕಡೆ ವಲಸೆ ಬರುತ್ತಿದ್ದಾಗ ಅವರಿಂದ ಸಿಂಧೂ ಎಂದು ಕರೆಯಲ್ಪಟ್ಟ ಬೃಹತ್ ನದಿ ಪ್ರದೇಶಕ್ಕೆ ಬಂದು ಮೊದಲು ನೆಲೆಸಿದಾಗ ನದಿತಮೆ ಎಂದು ಹೊಗಳಲ್ಪಟ್ಟ ಹೆಲ್ಮಾಂಡದಂತಿರುವ ಅದನ್ನು ಸರಸ್ವತಿಯೆಂದು ಕರೆಯದೆ ಇದರ ಪೂರ್ವಕ್ಕಿದ್ದ ಅಷ್ಟೇನೂ ದೊಡ್ಡದಲ್ಲದ ನದಿಯನ್ನು ಸರಸ್ವತಿಯೆಂದು ನಾಮಕರಣ ಮಾಡಲು ಕಾರಣವನ್ನು ಮತ್ತು ಹೆಲ್ಮಾಂಡ್ ಪ್ರದೇಶದಲ್ಲಿ ಈ ಜನರ ವಿಶಿಷ್ಟ ಸಾಂಸ್ಕೃತಿಕ ಪುರಾತತ್ವ ಅವಶೇಷಗಳು ಶೋಧವಾದುದರ ಬಗ್ಗೆ ವಿವರಣೆಗಳನ್ನು; ಪೂರ್ವ-ಪಶ್ಚಿಮಾಭಿಮುಖವಾಗಿ ನದಿಗಳ ಹೆಸರುಗಳನ್ನು ಪ್ರಾರ್ಥಿಸುವ ಋಕ್ಕಿನಲ್ಲಿ ಸಿಂಧೂ ಸಮೂಹದ ನಂತರ ಅವರು ಹಿಂದೆ ನೆಲೆಸಿದ್ದ ಬೃಹತ್ ಸರಸ್ವತಿಯನ್ನು ನೆನೆಯದೆ ಯಮುನೆ ಶುತದ್ರಿಗಳ ನಡುವಿನ ಸಣ್ಣ ಸರಸ್ವತಿಯನ್ನು ಏಕೆ ಪ್ರಶಂಸಿದರೆಂಬುದನ್ನು ತಿಳಿಯಲು ಪ್ರಯತ್ನಿಸಿಲ್ಲ. ಒಟ್ಟಾರೆ ಈ ವಿಷಯದಲ್ಲಿ ಇದು ಇಂದಿನ ಸಂಶೋಧನೆಯ ಘಟ್ಟ.

## ಸಿಂಧೂ-ಸರಸ್ವತಿ ನಾಗರಿಕತೆ ವಾಸ್ತು ಶಿಲ್ಪ

ಸರಸ್ವತಿ ನದಿ ಪ್ರದೇಶದಲ್ಲಿಯ ಹರಪ್ಪಾ ಸಂಸ್ಕೃತಿಯ ಉತ್ಖನನ ಮಾಡಿದ ಕಾಳಿಬಂಗನ್ ಮೊದಲಾದ ನೆಲೆಗಳಲ್ಲಿ ಯಜ್ಞಕುಂಡಗಳೆಂದು ಅನುಮಾನ ಪಡಬಹುದಾದ ಅಗ್ನಿಕುಂಡಗಳು ಕಂಡುಬಂದಿವೆ. ಇವುಗಳಲ್ಲಿ ವರ್ತುಲಾಕಾರದ ಇಲ್ಲವೆ ತ್ರಿಕೋಣಾಕೃತಿಯ ಸುಟ್ಟ ಮಣ್ಣಿನ ಬಿಲ್ಲೆಗಳು ಇದ್ದುವು. ಇಂಥ ಬಿಲ್ಲೆಗಳನ್ನು ದೇವತೆಗಳಿಗೆ ಅರ್ಪಿಸುವ ಹವಿಸ್ಸನ್ನಿಡಲು ಉಪಯೋಗಿಸಲಾಗುತ್ತಿತ್ತೆಂದು ಯಜ್ಞ-ಯಾಗಾದಿಗಳನ್ನು ಮಾಡಿಸುವಂಥ ಸುಪ್ರಸಿದ್ಧರಾದ ಮತ್ತೂರಿನ ಶ್ರೋತ್ರಿಯ ಬ್ರಾಹ್ಮಣರಾದ ಶ್ರೀ ಮಾರ್ಕಂಡೇಯ ಅವಧಾನಿಗಳು ಹೇಳುತ್ತಾರೆ. ಈ ನಾಗರಿಕತೆಯ ಕಾಲದಲ್ಲಿ ಇಟ್ಟಿಗೆ ಕಟ್ಟಡ ನಿರ್ಮಾಣದಲ್ಲಿ ಬಳಸಿದ ತಂತ್ರ ಯಜ್ಞವೇದಿ ನಿರ್ಮಾಣ ತಂತ್ರದ ವರ್ಣನೆಯಂತಿದೆ. ಅದು ಹೀಗೆ : ನಿರ್ಮಿತಿಯಲ್ಲಿ ಮೊದಲನೆ ಅಂದರೆ ಅತ್ಯಂತ ಕೆಳಗಿನ ಸಾಲಿನಲ್ಲಿ ಇಟ್ಟಿಗೆಗಳನ್ನು ಉದ್ದವಾಗಿ ಇಟ್ಟರೆ ಇದರ ಮೇಲಿನ ಸಾಲಿನಲ್ಲಿ ಅಡ್ಡಲಾಗಿ ಜೋಡಿಸಲಾಗುವುದು. ಈ ಕ್ರಮದಲ್ಲಿ ನಿರ್ಮಿತಿಯ ತುದಿಯವರೆಗೂ ಇಟ್ಟಿಗೆ ಸಾಲುಗಳನ್ನು ರಚಿಸಲಾಗುವುದು. ೧೯೨೦-೨೧ರ ಹರಪ್ಪಾ ಮತ್ತು ಮೊಹೆಂಜೋದಾರೋನಲ್ಲಿಯ ಪ್ರಥಮ ಉತ್ಖನನದಲ್ಲಿ ಕಂಡುಬಂದ ನೂರಾರು ಇಟ್ಟಿಗೆ ಕಟ್ಟಡಗಳ ನಿರ್ಮಾಣದಲ್ಲಿ ಈ ತಂತ್ರವು ಇದ್ದುದನ್ನು ಗಮನಿಸಲಾಯಿತು. ಇದನ್ನು ಉತ್ಖನನಕಾರರಾದ ಸರ್ ಜಾನ್ ಮಾರ್ಷಲ್ ಅವರು 'ಇಂಗ್ಲಿಷ್ ಬಾಂಡ್ ಸಿಸ್ಟಮ್' (English bond system) ಎಂದಿದ್ದಾರೆ. ಈ ತಂತ್ರದಿಂದ ಗೋಡೆಯಲ್ಲಿ ಬಿರುಕು ಬಿಡುವುದಿಲ್ಲ. ಎರಡನೆಯದಾಗಿ, ನಿರ್ಮಿತಿಯಲ್ಲಿ ಇಟ್ಟಿಗೆಗಳ ಜೋಡಣೆಗೆ ಅಂಟು ಕಲಸುಮಣ್ಣನ್ನು ಎಷ್ಟು ಚಾಣಾಕ್ಷತನದಿಂದ ಅತಿ ಸೂಕ್ಷ್ಮವಾಗಿ ಉಪಯೋಗಿಸಲಾಗಿದೆ ಯೆಂದರೆ, ಸುಮ್ಮನೆ ಇಟ್ಟಿಗೆಗಳನ್ನು ಕ್ರಮವಾಗಿ ಒಂದರ ಮೇಲೆ ಒಂದರಂತೆ ಇಡಲಾಗಿದೆಯೆಂಬಂತಿದೆ. ಗೋಡೆಯ ಹೊರಮೈ ಮತ್ತು ಒಳಮೈಯಲ್ಲಿ ಎಲ್ಲಿಯೂ ಒರಸಿದ ಮಣ್ಣು ಕಾಣಿಸುವುದಿಲ್ಲ. ನೋಡಲು ಹಿತವಾಗಿರುತ್ತದೆ. ಮೂರನೆಯದಾಗಿ, ನಿರ್ಮಿತಿಗಳಲ್ಲಿ ಸಮಬಾಹು ಚತುರ್ಭುಜ, ಆಯತಾಕಾರವಲ್ಲದೆ, ವರ್ತುಳ, ವಿವಿಧ ವಿನ್ಯಾಸಗಳಿಗೆ ಅಡ್ಡ ಪಟ್ಟಿಕೆಗಳಿಗೆ ಬೇಕಾಗುವ ತ್ರಿಕೋಣ, ಅರ್ಧ ಹಾಗೂ ಕಾಲು ವೃತ್ತ, ತ್ರಾಪಿಜ್ಯ ಆಕೃತಿಯ ಇಟ್ಟಿಗೆಗಳ ತಯಾರಿಕೆ ಅದರ ಉಪಯೋಗಗಳನ್ನೂ ಗಮನಿಸಬೇಕು. ಇದರಿಂದ ಯಾವುದೇ ಪ್ರಕಾರದ ತಳ ಹಾಗೂ ಊರ್ಧ್ವ ವಿನ್ಯಾಸಗಳಲ್ಲಿ ಯಾವುದೇ ಆಕಾರದ ಉಬ್ಬು-ತಗ್ಗುಗಳನ್ನು ಪಡೆಯಲು ಸಾಧ್ಯ. ತ್ರಾಪಿಜ್ಯ ಇಲ್ಲವೆ ಒಳ ಮತ್ತು ಹೊರಬದಿಗಳು ಸಮಾನಾಂತರವಾಗಿ ಬಾಗಿರುವ ಆಕೃತಿಯ ಇಟ್ಟಿಗೆಗಳಿಂದ ಕಟ್ಟಿದ ವರ್ತುಳ ವಿನ್ಯಾಸದ ಬಾವಿ, ಬತ್ತ ಕುಟ್ಟುವ ಇಲ್ಲವೇ ಕಾಳು ಒಡೆಯುವ ಕಟ್ಟೆ ಹರಪ್ಪಾದ ನಾಗರಿಕತೆಯ ಒಂದು ವಿಶಿಷ್ಟ ನಿರ್ಮಿತಿ. ಇತರ ವಿವಿಧ ಪ್ರಕಾರಗಳ ಇಟ್ಟಿಗೆಗಳನ್ನು, ಋಗ್ವೇದದ ಕಾಲದಿಂದ ಇಂದಿನವರೆಗೂ ನಡೆಮಕೊಂಡು ಬಂದಂಥ ಆಯಾಯ ಯಜ್ಞ ವಿಧಿಯಂತೆ ನಿರ್ಮಿಸುತ್ತಿದ್ದ ಭಿನ್ನ ಭಿನ್ನ ವೇದಿಗಳ ನಿರ್ಮಿತಿಗಳಲ್ಲಿ ಉಪಯೋಗಿಸಲಾಗುತ್ತಿತ್ತು. ಯಜ್ಞಕಾರ್ಯ ಮುಗಿದ ಮೇಲೆ ಸಾಮಾನ್ಯವಾಗಿ ಅಂಥ ವೇದಿಗಳನ್ನು ತೆಗೆದು ಹಾಕಲಾಗುವುದು. ಆದ್ದರಿಂದ ಪ್ರಾಚೀನ ನೆಲೆಗಳ ಉತ್ಖನನಗಳಲ್ಲಿ ವೇದಿ ಅವಶೇಷಗಳು ಅಲಭ್ಯವೇ ಸರಿ. ಕಾರಣಾಂತರದಿಂದ ಉಳಿದಿದ್ದರೆ ಸಿಗಬಹುದು. ಒಟ್ಟಿನಲ್ಲಿ ದೊರೆತಿರುವ ಅವಶೇಷಗಳು ಆದಿ ವೈದಿಕ ಸಾಹಿತ್ಯದಲ್ಲಿ ವಿವರಿಸಿದ ನಿರ್ಮಾಣ ಕ್ರಮ, ತಂತ್ರ, ವಿವಿಧ ಆಕಾರಗಳ ಇಟ್ಟಿಗೆ ತಯಾರಿಕೆ, ಶಾಲೆ, ವೇದಿ ಕುಂಡಗಳ ಮೊದಲಾದ ವೈವಿಧ್ಯಮಯ ರಚನೆಗಳನ್ನು ಸ್ವಲ್ಪ ಮಟ್ಟಿಗಾದರೂ ಪುಷ್ಟೀಕರಿಸುವಂತಿವೆ, ಸಿಂಧೂ-ಸರಸ್ವತಿ ನಾಗರಿಕತೆಯ ಕೆಲವು ನಿರ್ಮಿತಿಗಳು. ಮೇಲೆ ಸಂಕ್ಷಿಪ್ತವಾಗಿ ತಿಳಿಸಿದಂತೆ ಒಂದು ಹಂತದಲ್ಲಿ ಇವೆರಡು ಸಮಕಾಲೀನವಾಗಿರಬಹುದು. ಒಂದು ವೇಳೆ ಹಾಗಿಲ್ಲದಿದ್ದರೂ ಇವೆರಡರ ನಡುವಿನ ಕಾಲದ ಅಂತರ ಕಡಿಮೆಯೆಂಬುದನ್ನು ಇಲ್ಲಿ ಗಮನಿಸಬೇಕು.

ಇವೆರಡೂ ಸಂಸ್ಕೃತಿಗಳಿಂದ ನಿರ್ವಿವಾದವಾಗಿ ಮತ್ತು ಲೌಕಿಕ ಮತ್ತು ದೈವಿಕ ಮೂರ್ತಿ ಶಿಲ್ಪಗಳ ಬಗ್ಗೆ ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ವೇದ ಸಾಹಿತ್ಯದಲ್ಲಿ ಯಜ್ಞ-ಯಾಗಾದಿ ಕರ್ಮಗಳ ಹೊರತಾಗಿ ಮನೆಯಲ್ಲಿ ಕುಟುಂಬದವರು ಇಲ್ಲವೇ ಸಾರ್ವಜನಿಕ ಸ್ಥಳಗಳಲ್ಲಿ, ಧಾರ್ಮಿಕ ಮಂದಿರಗಳಲ್ಲಿ ಸಮಾಜದವರು ಸೇರಿ ಅವರವರ ಸಾಂಸ್ಕೃತಿಕ ಪರಂಪರೆಗನುಗುಣವಾಗಿ ಕ್ರಮಬದ್ಧ ನಿಯಮದಂತೆ ಒಂದು ಸಂಕೇತ ಇಲ್ಲವೇ ಮೂರ್ತಿಯನ್ನು ಆರಾಧಿಸುವ ಪದ್ಧತಿ ಇದ್ದುದರ ಬಗ್ಗೆ ನಿರ್ವಿವಾದ ಉಲ್ಲೇಖಗಳಿಲ್ಲ. ಹರಪ್ಪಾ ನಾಗರಿಕತೆಯ ನೆಲೆಗಳ ಉತ್ಖನನಗಳಲ್ಲಿ ದೇವ ಮಂದಿರವೆಂದು ಗುರುತಿಸಬಹುದಾದ ಅವಶೇಷಗಳು ದೊರೆತಿಲ್ಲ. ಬನಾವಲಿಯಲ್ಲಿ ಗಜಪೃಷ್ಠ ವಿನ್ಯಾಸದ ಒಂದು ಕಟ್ಟಡ ಸಿಕ್ಕಿದೆ. ಈ ಪ್ರಕಾರದ ಕಟ್ಟಡವು ಇತಿಹಾಸ ಆರಂಭಕಾಲದಿಂದ ಅಂದರೆ ಸುಮಾರು ೨,೩೦೦ ವರ್ಷಗಳಿಂದೀಚೆನಿಂದ ೮ನೆಯ ಶತಮಾನದವರೆಗೆ, ಮಥುರಾದಿಂದ ಕಾಂಚಿಯವರೆಗೆ, ಅನಂತರ ಪಶ್ಚಿಮ ಘಟ್ಟ ಮತ್ತು ಕಡಲ ತೀರ ಪ್ರದೇಶವಾದ ಕರ್ನಾಟಕ-ಕೇರಳದಲ್ಲಿ ೧೩-೧೪ನೆಯ ಶತಮಾನದವರೆಗೂ ದೇವಾಲಯ ಇಲ್ಲವೆ ಚೈತ್ಯಾಲಯವಾಗಿರುತ್ತದೆ. ಆದ್ದರಿಂದ ಮನೆವಾರ್ತೆ ವಸ್ತು ಅವಶೇಷಗಳೇನೂ ಇಲ್ಲದ ಬನಾವಲಿಯ ನಿರ್ಮಿತಿಯೂ ಕೂಡ ಒಂದು ದೇವ ಮಂದಿರವಾಗಿರಬಹುದೆಂಬ ಅನುಮಾನವಿದೆ. ಈಜಿಪ್ಟ್, ಬಾಬಿಲೋನಿಯಾ, ಸುಮೇರಿಯಾ ಮೊದಲಾದ ವಿಶ್ವದ ಪ್ರಾಚೀನ ನಾಗರೀಕತೆಗಳಲ್ಲಿ ಸಿಂಧೂ-ಸರಸ್ವತಿ ನಾಗರಿಕತೆಯ ಅತಿ ವಿಶಿಷ್ಟ,ಸಂಗತಿಯೆಂದರೆ ವ್ಯವಸ್ಥಿತ ಕೋಟೆ, ನಗರ ವಿನ್ಯಾಸ. ಮಹಾದ್ವಾರದಿಂದ ಕೂಡಿದ ಕೋಟೆಯೊಳಗಿನ ನಗರದಲ್ಲಿ ಎರಡು ಭಾಗಗಳು : ಎತ್ತರದಲ್ಲಿಯ ಆಡಳಿತ ಕೇಂದ್ರದ ವಾಡೆ (Citadel) ಮತ್ತು ಭೂಮಿ ಮಟ್ಟದಲ್ಲಿಯ ಜನವಸತಿಯ ನಗರ (Lower city). ನಗರದ ಮಧ್ಯಭಾಗದಲ್ಲಿ ಉತ್ತರ-ದಕ್ಷಿಣ ಮತ್ತು ಪೂರ್ವ-ಪಶ್ಚಿಮಾಭಿಮುಖವಾಗಿ ಹಾದು ಹೋಗುವ ಪ್ರಮುಖ ಬೀದಿಗಳು. ಇದರಿಂದುಂಟಾದ ಚತುರ್ಭಾಗಗಳ ಪ್ರತಿಯೊಂದರಲ್ಲೂ ಸಮಾನಾಂತರ ಓಣಿಗಳು. ಇವುಗಳ ನಡುವೆ ನೀರಿನ ಬಾವಿ, ಸರಾಗವಾಗಿ ನೀರು ಹೋಗಲು ಶಿಲಾಜಿತ್ (bitumen) ಹಾಕಿದ ನೆಲದ ಬಚ್ಚಲು ಮನೆ ಮೊದಲಾದ ಅವಶ್ಯ ಅನುಕೂಲತೆಯುಳ್ಳ ಸಾಲು ಮನೆಗಳು. ಬೀದಿಯ ಎರಡೂ ಬದಿಗಳಲ್ಲಿ ಚರಂಡಿಗಳು. ಚರಂಡಿ ಸೇರಿಸಲಾದ ಮನೆಯ ಬಚ್ಚಲಿನ ನೀರು ಹರಿವ ಸಣ್ಣ ಕಾಲುವೆ, ಚರಂಡಿಯಲ್ಲಿ ಅಲ್ಲಲ್ಲಿ ಸ್ವಚ್ಛ ಮಾಡಲು ಅವಶ್ಯವಾದ ಚರಂಡಿಗುಂಡಿಗಳು (Man-holes), ಚರಂಡಿಯ ಕೊಳಚೆ ನೀರು ನಗರದ ಹೊರಗೆ ಬಿಡುವ ವ್ಯವಸ್ಥೆ, ಕುಂಬಾರ, (ತಾಮ್ರ, ಚಿನ್ನ) ಲೋಹಗಾರ, ಪೋಣಿಸುವ ಪ್ರಶಸ್ತ ಕಲ್ಲಿನ ಮಣಿ, ಶಂಖದ ಬಳೆ ಮೊದಲಾದ ಆಭರಣಗಳನ್ನು ಮಾಡುವವರಿಗೆ ಪ್ರತ್ಯೇಕ ಕಾರ್ಯಾಗಾರಗಳು... ಇವೆಲ್ಲವನ್ನೂ ಗಮನಿಸಿದರೆ ಮೂಗಿನ ಮೇಲೆ ಬೆರಳಿಟ್ಟು ಆಶ್ಚರ್ಯಪಡುವಂತಿದೆ. ಏಕೆಂದರೆ, ಪ್ರಾಚೀನ ಕಾಲ ಹೋಗಲಿ, ಇಂದಿಗೂ ವಿಶ್ವದ ಹಲವಾರು ನಗರಗಳಲ್ಲಿ ಇಂಥ ಸುವ್ಯವಸ್ಥೆ ಇಲ್ಲದಿರುವುದು. ತರುವಾಯ ಕಾಲದ ಹಟ್ಟಿಯಂಗಡಿ (ತರೀಕೆರೆ ತಾ., ಶಿವಮೊಗ್ಗ ಜಿ.) ಮೊದಲಾದ ಮೌರ್ಯ-ಶಾತವಾಹನ ಕಾಲದ ನೆಲೆಗಳಲ್ಲಿ ಈ ಪ್ರಕಾರದ ವಿನ್ಯಾಸವಿದ್ದ ಅಸ್ಪಷ್ಟ ಕುರುಹುಗಳಿವೆ. ಈಗ ತಿಳಿದ ಮಟ್ಟಿಗೆ ೨,೩೦೦ ವರ್ಷಗಳ ಹಿಂದಿನ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ೧೦ ಸಂಕ್ಷಿಪ್ತವಾಗಿ ವಿವರಿಸಿದ ರಾಜಧಾನಿಯ ವಿನ್ಯಾಸವು ಬಹುಮಟ್ಟಿಗೆ ಹರಪ್ಪಾ ನಾಗರಿಕತೆಯ ಸಮಕಾಲೀನ ಅವಶ್ಯಕತೆಗಳಿಗನುಗುಣವಾಗಿ ಸುಧಾರಿಸಿದ ನಗರದ ಸಾಮಾನ್ಯ ವಿವರಣೆಯಂತಿದೆ.

**ಇತರ ಪೂರ್ವಭಾವಿ ಇತಿಹಾಸ ಸಂಸ್ಕೃತಿಗಳು : ವಾಸ್ತು**

ಇತಿಹಾಸ ಕಾಲದ ವಾಸ್ತು/ಮೂರ್ತಿ ಶಿಲ್ಪ ವಿಷಯಗಳನ್ನೊಳಗೊಂಡ ಕೌಟಿಲ್ಯನ ಅರ್ಥಶಾಸ್ತ್ರ, ವರಾಹಮಿಹಿರನ ಬೃಹತ್ಸಂಹಿತೆ, ಮಾನಸಾರ, ವೈಖಾನಸ ಆಗಮ ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ ವಿವೇಚಿಸಿದ ನಗರ, ಗ್ರಾಮ ವಿನ್ಯಾಸ, ಮೂಲಭೂತ ಸಮಬಾಹು ಚತುರ್ಭುಜ, ಆಯತಾಕಾರ, ವೃತ್ತ, ಆಯತ ವೃತ್ತ, ಅರ್ಧ ವೃತ್ತಾಯತ ಅಥವಾ ಗಜಪೃಷ್ಠ ಮೊದಲಾದ ತಳವಿನ್ಯಾಸಗಳು ಗ್ರಂಥಸ್ಥವಾಗುವ ಬಹಳ ಹಿಂದೆಯೇ ಈ ಎಲ್ಲ ವಿನ್ಯಾಸಗಳಲ್ಲಿ ನಿರ್ಮಿಸಿದ ಧಾರ್ಮಿಕ ಕಟ್ಟಡಗಳ ಅವಶೇಷಗಳು ಪುರಾತತ್ವ ಉತ್ಖನನಗಳಲ್ಲಿ ಶೋಧವಾಗಿವೆ. ಸಮಬಾಹು ಚತುರ್ಭುಜ ಮತ್ತು ವೃತ್ತ ವಿನ್ಯಾಸಗಳು ತೀರ ಸರಳ. ಈ ವಿನ್ಯಾಸಗಳಲ್ಲಿ ಸಾಮಾನ್ಯವಾಗಿ ನಿರ್ಮಿಸಿದ ವಾಸದ ಮನೆಗಳ ಭಗ್ನಾವಶೇಷಗಳು ಸುಮಾರು ಏಳೆಂಟು ಸಾವಿರ ಹಾಗೂ ಮೂರು-ನಾಲ್ಕು ಸಾವಿರ ವರ್ಷಗಳ ಹಿಂದಿನ ಹಲವಾರು ಸೂಕ್ಷ್ಮ ಶಿಲಾಯುಗ (Mesolithic) ಮತ್ತು ನೂತನ ಶಿಲಾ-ತಾಮ್ರಯುಗ (Neolithic - Chalcolithic)ದ ಜನವಾಸ್ತವ್ಯ ನೆಲೆಗಳ ಉತ್ಖನನಗಳಲ್ಲಿ ಕಂಡುಬಂದಿವೆ. ಗಂಡ್ಲೂರಿ (ಗುಂಟೂರು ಜಿಲ್ಲೆ, ಆಂಧ್ರಪ್ರದೇಶ)ನಲ್ಲಿಯ ನೂತನ ಶಿಲಾಯುಗ ನೆಲೆಯಲ್ಲಿ ಚತುರ್ಭುಜ ವೃತ್ತ ವಿನ್ಯಾಸದ ಗುಡಿಸಲು ಮನೆಗಳಲ್ಲದೆ, ಗಜಪೃಷ್ಠ ವಿನ್ಯಾಸದವೂ ಇದ್ದುವು೧೧. ಈಗಾಗಲೇ ಬನಾವಲಿಯಲ್ಲಿ ಹರಪ್ಪಾ ನಾಗರಿಕತೆಯ

ಗಜಪೃಷ್ಠ ವಿನ್ಯಾಸದ ಇಟ್ಟಿಗೆ ಕಟ್ಟಡವಿದ್ದುದನ್ನು ಗಮನಿಸಲಾಗಿದೆ. ನಿಜ, ಇವೆಲ್ಲವೂ ಲೌಕಿಕ ನಿರ್ಮಿತಿಗಳು. ಆದರೂ ವೇದ ಸಾಹಿತ್ಯದಲ್ಲಿ, ವಾಸದ ಮನೆಗಳಲ್ಲಿಯೂ ವಿಶಿಷ್ಟ ತಾತ್ವಿಕತೆಯನ್ನು ಕಂಡುಕೊಳ್ಳಲಾಗಿದೆ. ಸಮಬಾಹು ಚತುರ್ಭುಜದ ಮನೆಯ ಮಧ್ಯಗಂಭವನ್ನು ಧರ್ಮ, ಮುಂದಿನ ಬಾಗಿಲಿನ ಎಡ-ಬಲ ಬದಿಯ ಶಾಖೆಗಳನ್ನು ದಿವಾ ಮತ್ತು ರಾತ್ರಿ, ಮುಂದಿನ ಮೂಲೆಗಂಬಗಳನ್ನು ಸತ್ಯ ಮತ್ತು ಶ್ರದ್ಧೆ, ಬಲಬದಿಯ ಮೂಲೆಗಂಬಗಳನ್ನು ಯಜ್ಞ ಮತ್ತು ದಾನ, ಹಿಂದಿನ ಮೂಲೆಗಂಬಗಳನ್ನು ಶಕ್ತಿ ಮತ್ತು ಪ್ರಭುತ್ವ, ಎಡಬದಿಯ ಮೂಲೆಗಂಬಗಳನ್ನು ಬ್ರಾಹ್ಮಣ ಮತ್ತು ಕ್ಷತ್ರಿಯ ಮತ್ತು ಮೇಲಿನ ಕಡುಮಾಡನ್ನು ವರ್ಷಾ ಎಂದು ಸಂಕೇತಿಸಲಾಗಿದೆ.೧೨ ವೇದ ಸಾಹಿತ್ಯದಲ್ಲಿ ಗೃಹ ವಾಸ್ತುವಿಗೆ ಸಂಬಂಧಿಸಿದ ಉಪಮಿತ್, ಪ್ರತಿಮಿತ್, ವಂಶ, ಫಲದ ಮೊದಲಾದ ತಾಂತ್ರಿಕ ಪದಗಳಲ್ಲದೆ ಮೂರು ಮಹಡಿಯ ಮನೆ, ಸಾವಿರಕಂಬ ಮತ್ತು ಬಾಗಿಲುಗಳುಳ್ಳ ಅರಮನೆ, ಕೋಟೆಯಿಂದ ಸುತ್ತುವರೆಯಲ್ಪಟ್ಟ ಗ್ರಾಮ ನಗರಗಳ ಉಲ್ಲೇಖಗಳಿವೆ.೧೩ ಅಮೆರಿಕದ ಹಾರ್ವರ್ಡ್ ವಿಶ್ವವಿದ್ಯಾಲಯದ ಘನ ವಿದ್ವಾಂಸರೂ ಸಂಸ್ಕೃತ ಪ್ರಾಧ್ಯಾಪಕರೂ ಆದ ವೀಟ್‌ಜೆಲ್೧೪ ಅವರು ಆ ಪದಗಳನ್ನು ಈ ರೀತಿ ಅರ್ಥೈಸಲು ಬರುವುದಿಲ್ಲವೆಂದೂ; ಆದಿ ವೈದಿಕ ಜನರ ವಾಸ್ತವ್ಯ ನೆಲೆಯಲ್ಲಿ ಅಂಥ ಕಟ್ಟಡವೇನೂ ಇರಲಿಲ್ಲವೆಂದೂ ಮತ್ತು ಅವೆಲ್ಲ ಬರಿ ಕಲ್ಪನೆಗಳೆಂದೂ ಅಭಿಪ್ರಾಯಪಟ್ಟಿದ್ದಾರೆ. ನನಗೆ ತಿಳಿದ ಮಟ್ಟಿಗೆ ವರ್ಣನೆಯಲ್ಲಿ ಸ್ವಲ್ಪ ಉತ್ಪ್ರೇಕ್ಷೆಯಿದ್ದರೂ ಅಂಥ ಕಲ್ಪನೆಗಳಿಗೆ ಸ್ವಲ್ಪವಾದರೂ ಆಧಾರವಿರಬೇಕಲ್ಲವೇ? ವೈದಿಕ ಜನವರ್ಗದವರು ಸುಮಾರು ೩೫೦೦ ವರ್ಷಗಳ ಹಿಂದೆ ಭಾರತಕ್ಕೆ ವಲಸೆ ಬಂದರೆಂಬ ವಾದವನ್ನು ಒಪ್ಪಿಕೊಂಡವರಲ್ಲಿ ಒಬ್ಬರಾದ ಇವರು ಸ್ವಲ್ಪ ಹಿಂದೆ ನಿರ್ಜನವಾಗಿದ್ದ ಸಿಂಧೂ ನದಿ ಬಯಲಿನ ಹರಪ್ಪಾ ನಾಗರಿಕತೆ ನೆಲೆಗಳಲ್ಲಿ ಬಹಳಷ್ಟು ಸುಸ್ಥಿತಿಯಲ್ಲಿದ್ದ ಇಟ್ಟಿಗೆ ಕಟ್ಟಡಗಳನ್ನು ನೋಡಿರುವ ಸಾಧ್ಯತೆ ಇದ್ದಂತಿಲ್ಲ.

ಮರಣಾನಂತರ ಪ್ರತಿಷ್ಠಿತ ವ್ಯಕ್ತಿಗಳ ಅಸ್ಥಿ ಅವಶೇಷಗಳನ್ನೊಳಗೊಂಡ, ಇಲ್ಲವೇ ಅವರ ನೆನಪಿನಲ್ಲಿ ನಾಲ್ಕು ಬೀದಿಗಳು ಸಂಧಿಸುವ ಸ್ಥಳದಲ್ಲಿ ನಿರ್ಮಿಸಲಾಗುತ್ತಿದ್ದ ಸರಳ ಗುಮ್ಮಟಾಕಾರದ ಸ್ತೂಪಗಳ ಉಲ್ಲೇಖ ಋಗ್ವೇದದಲ್ಲಿದೆ. ತರುವಾಯ ಮಹಾಪರಿನಿಬ್ಬಣ ಸುತ್ತ (ಮಹಾಪರಿನಿರ್ವಾಣ ಸೂತ್ರ) ಎಂಬ ಬೌದ್ಧ ಗ್ರಂಥದಲ್ಲಿ ಹೇಳಿದಂತೆ ಈ ಮಾದರಿ ನಿರ್ಮಿತಿಯನ್ನು ಭಗವಾನ್ ಬುದ್ಧನ ಸೂಚನೆಯಂತೆ ಬುದ್ಧ ಹಾಗೂ ಘನತೆವೆತ್ತ ಬೌದ್ಧ ಭಿಕ್ಷುಗಳ ಅಸ್ಥಿ ಅವಶೇಷಗಳನ್ನು ಸಂಸ್ಕರಿಸಲು ಇಲ್ಲವೇ ಅವರ ನೆನಪಿನಲ್ಲಿ ವೇದಿಯ ಮೇಲೆ ಏರಿಸಿದ ಗುಮ್ಮಟದ ಮೇಲ್ಭಾಗದಲ್ಲಿ ಹರ್ಮಿಕಾ, ಅದರ ಮಧ್ಯದಲ್ಲಿ ಮುಕ್ಕೊಡೆಯನ್ನು ಹೊತ್ತ ಯಷ್ಟಿ ಮೊದಲಾದ ಬೌದ್ಧ ಧರ್ಮದ ಕೆಲವು ವಿಶಿಷ್ಟ ಸಂಕೇತಗಳನ್ನು ಅಳವಡಿಸಿದ ಭವ್ಯ ಮತ್ತು ದಿವ್ಯ ಬೌದ್ಧ ಸ್ತೂಪವನ್ನು ರೂಪಿಸಲು ಬಳಸಿಕೊಳ್ಳಲಾಯಿತು. ಜೈನ ಮತದವರು ಕೂಡ ತೀರ್ಥಂಕರ/ಘನ ಆಚಾರ್ಯರ ಹೆಸರಿನಲ್ಲಿ ಸ್ತೂಪ ನಿರ್ಮಿಸುವ ಪರಂಪರೆಯನ್ನು ಸ್ವಲ್ಪ ಕಾಲ ಅನುಸರಿಸಿದರು. ಮಥುರೆಯ 'ಕಂಕಾಳಿ ಟೀಲ'ದಲ್ಲಿಯ ಹಲವಾರು ವಿವಿಧ ಜೈನ ಶಿಲ್ಪಗಳ ಆಗರವಾಗಿದ್ದ ಸ್ತೂಪ, ಉದಯಗಿರಿ-ಖಂಡಗಿರಿ (ಒಡಿಸ್ಸಾ) ಮತ್ತು ವಡ್ಡಮಾನು(ಆಂಧ್ರಪ್ರದೇಶ)ಗಳಲ್ಲಿ ಸ್ತೂಪಾವಶೇಷಗಳಿವೆ.೧೫

ಈ ತಾತ್ವಿಕ ಹಿನ್ನೆಲೆಯಲ್ಲಿ ಇವೆಲ್ಲ ವಿನ್ಯಾಸಗಳಲ್ಲಿ ನಿರ್ಮಿಸಿದ ಸುಮಾರು ೨೦೦೦ ವರ್ಷಗಳ ಹಿಂದಿನ ದೇವಾಲಯ ಬೌದ್ಧ-ಜೈನ ಚೈತ್ಯಾಲಯ/ಸ್ತೂಪಗಳು ಬಯಲು ಪ್ರದೇಶದಲ್ಲಿ ಪ್ರತ್ಯೇಕವಾಗಿ ಇವೆ ಮತ್ತು ಆದಿ ಇತಿಹಾಸ ನೆಲೆಗಳ ಉತ್ಖನನಗಳಲ್ಲಿ ಸಿಕ್ಕಿವೆ. ಉದಾಹರಣೆಗೆ, ೨೩೦೦-೨೨೦೦ ವರ್ಷಗಳ ಹಿಂದಿನ ಬಿಹಾರಿನ ಗಯಾ ಹತ್ತಿರ ಬರಾಬರ್ ಮತ್ತು ನಾಗಾರ್ಜುನ ಪರ್ವತ ಶ್ರೇಣಿಗಳಲ್ಲಿ ಉತ್ಖನನ ಮಾಡಿದ ಗಜಪೃಷ್ಠ ವಿನ್ಯಾಸದ ಚೈತ್ಯಾಲಯಗಳು; ಬೈರಾಟ್ (ರಾಜಸ್ಥಾನ)ದಲ್ಲಿಯ ಬೌದ್ಧ ಚೈತ್ಯಾಲಯ, ರಾಜಗೃಹದಲ್ಲಿಯ ನಾಗದೇವರ ಮಣಿಯಾರ್ ದೇವಾಲಯಗಳು ವೃತ್ತ ವಿನ್ಯಾಸದಲ್ಲಿದ್ದರೆ, ಬೆಸ್ ನಗರದ ದೇವ ದೇವನಾದ ವಾಸುದೇವನ ದೇವಾಲಯವು ಆಯತ ವೃತ್ತದಲ್ಲೂ; ೧-೨ನೇ ಶತಮಾನದ ಮಥುರೆಯ ವಿಷ್ಣು, ಬನವಾಸಿ (ಉತ್ತರ ಕನ್ನಡ ಜಿ.)ಯ ಕಾರ್ತಿಕೇಯ, ನಾಗಾರ್ಜುನ ಕೊಂಡದಲ್ಲಿಯ ೩-೪ನೇ ಶತಮಾನದ ಶೈವ, ವೈಷ್ಣವ ದೇವಾಲಯಗಳು ಮತ್ತು ಬೌದ್ಧ ಚೈತ್ಯಾಲಯಗಳು ಗಜಪೃಷ್ಠ ವಿನ್ಯಾಸದಲ್ಲಿವೆ. ಲಾಕ್ಷಣಿಕವಾಗಿ ಸಮಬಾಹು ಚತುರ್ಭುಜ, ವೃತ್ತ ಮತ್ತು ಗಜಪೃಷ್ಠ ಹಾಗೂ ಆಯತ ವೃತ್ತ ವಿನ್ಯಾಸಗಳನ್ನು ಕ್ರಮವಾಗಿ ನಾಗರ, ದ್ರಾವಿಡ ಮತ್ತು ವೇಸರವೆಂದು ಹೇಳುವ ಪರಿಪಾಠವೂ ಇದೆ. ಆದರೆ, ಸುಮಾರು ೭-೮ನೆಯ ಶತಮಾನದ ನಂತರದ ಶೈವಾಗಮಗಳಲ್ಲಿ ದಕ್ಷಿಣ ಭಾರತದ ವಿಮಾನ ಮಾದರಿಯ ದೇವಾಲಯದ ಗರ್ಭಗುಡಿಯ ಮೇಲಿನ ಏಕ/ದ್ವಿ/ತ್ರಿತಳದ ತಲೆಯ ಭಾಗದ ಸ್ತೂಪಿಗಳು ಚೌಕೋನ, ವೃತ್ತ ಮತ್ತು ಅಷ್ಟಕೋನ ವಿನ್ಯಾಸದಲ್ಲಿದ್ದರೆ, ಕ್ರಮವಾಗಿ ಅವುಗಳನ್ನು ನಾಗರ, ವೇಸರ ಮತ್ತು ದ್ರಾವಿಡವೆಂದು ಹೆಸರಿಸಲಾಗಿದೆ.

ಊರ್ಧ್ವ ವಿನ್ಯಾಸದ ಮೂಲಭೂತ ಪ್ರಮುಖ ದೇವಾಲಯ ಮಾದರಿಗಳೆಂದರೆ ಉತ್ತರ ಭಾರತದಲ್ಲಿ ರೇಖಾ ನಾಗರ ಪ್ರಾಸಾದ (Indo-Aryan of the Northern) ಮತ್ತು ದಕ್ಷಿಣ ಭಾರತದಲ್ಲಿ ವಿಮಾನ (Dravidian or the Southern). ವಾಸ್ತುಶಿಲ್ಪ ಗ್ರಂಥಗಳಲ್ಲಿ ಸಾಮಾನ್ಯವಾಗಿ ಈ ಮಾದರಿಗಳನ್ನು ನಾಗರ ಮತ್ತು ದ್ರಾವಿಡ ಎಂದು ಹೆಸರಿಸಲಾಗಿದೆ. ದಖನ್ ಪ್ರಸ್ಥಭೂಮಿಯ ಉತ್ತರ ಭಾಗದಲ್ಲಿ ಅಂದರೆ ಈಗಿನ ಉತ್ತರ ಕರ್ನಾಟಕ ಮತ್ತು ಇದರ ನೆರೆಹೊರೆಯ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದಲ್ಲಿ ಇವೆರಡರ ಕೆಲವೊಂದು ಲಕ್ಷಣಗಳ ಹದವರಿತ ಸಮ್ಮಿಲನದಿಂದ ಒಂದು ಹೊಸ ಮಾದರಿಯನ್ನು ಚಾಲುಕ್ಯ ಶಿಲ್ಪಿಗಳು ರೂಪಿಸಿದರು. ಅದನ್ನು ವೇಸರವೆಂದು ಕರೆಯಲಾಗಿದೆ. ಇದರ ಪ್ರಥಮ ಪ್ರಯತ್ನವನ್ನು ಪಟ್ಟದಕಲ್ಲಿನ ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯಗಳಲ್ಲಿ ಕಾಣಬಹುದು. ಈ ಪ್ರಯತ್ನವನ್ನು ಪೂರ್ಣಗೊಳಿಸಿದುದು ಸುಮಾರು ೧೧ನೆಯ ಶತಮಾನದ ಕೊನೆಯಲ್ಲಿ. ಕಲ್ಯಾಣ ಚಾಲುಕ್ಯ, ಸೇವುಣ, ಕಾಕತೀಯ, ಹೊಯ್ಸಳ ದೇವಾಲಯಗಳು ಸಾಮಾನ್ಯವಾಗಿ ಈ ಮಾದರಿಯಲ್ಲಿವೆ. ಉತ್ತರ ಭಾರತದ ಯಾವುದೇ ವಾಸ್ತು ಶಿಲ್ಪ ಗ್ರಂಥಗಳಲ್ಲಿ ಈ ಮಾದರಿಯ ಬಗ್ಗೆ ವಿವರಣೆಗಳಿಲ್ಲ. ಇನ್ನು ಆಯಾಯ ಪ್ರದೇಶದ ಭೌಗೋಳಿಕ ಪರಿಸರ ಮತ್ತು ಸಾಂಸ್ಕೃತಿಕ ಪರಂಪರೆಗನುಗುಣವಾಗಿ ಕೆಲವೊಂದು ಪ್ರಾದೇಶಿಕ ಮಾದರಿಗಳನ್ನು ಸೃಷ್ಟಿಸಲಾಯಿತು. ಉದಾ: ಒಡಿಸ್ಸಾದಲ್ಲಿ ಪೀಢಾ ಅಥವಾ ಫಾಂಸನ (ಇದನ್ನು ಕರ್ನಾಟಕದಲ್ಲಿ ಕದಂಬ ನಾಗರವೆಂದು ಹೆಸರಿಸಲಾಗಿದೆ. ಉದಾ: ಬನವಾಸಿಯ ಮಧುಕೇಶ್ವರ); ಮಲೆನಾಡು ಕಡಲ ತೀರ ಪ್ರದೇಶದಲ್ಲಿ ಛತ್ರಿ; ರೇಖಾ ನಾಗರ ಮಾದರಿಯಿಂದ ಲತಿನ, ಶೇಖರಿ, ಭೂಮಿಜ ಮೊದಲಾದ ವಿವಿಧ ಮಾದರಿಗಳು ವಿಕಸನಗೊಂಡವು.೧೬ ಇವುಗಳ ವಿವರಣೆಗಳು ಆಯಾಯ ಪ್ರಾದೇಶಿಕ ವಾಸ್ತು ಗ್ರಂಥಗಳಲ್ಲಿವೆ. ಇವುಗಳ ಜೊತೆಗೆ ಮಾನಸಾರ ಮೊದಲಾದ ವಾಸ್ತುಗ್ರಂಥಗಳಲ್ಲಿ ೪೫ ರಿಂದ ೧೦೦ರವರೆಗಿನ ವಿವಿಧ ಮಾದರಿಗಳನ್ನು೧೭ ವಿವರಿಸಲಾಗಿದೆ. ಆದರೆ ವಾಸ್ತವಿಕವಾಗಿ ಮೊದಲಿನ ಎರಡು, ಕದಂಬ ನಾಗರ, ಲತಿನ, ಶೇಖರಿ ಭೂಮಿಜ ಮಾದರಿಗಳ ದೇವಾಲಯಗಳು ವಿಶೇಷವಾಗಿ ಮತ್ತು ಹೆಚ್ಚು ವ್ಯಾಪಕವಾಗಿ ಇವೆ.

ರೇಖಾನಾಗರ ಮಾದರಿಯ ಒಂದು ಚಿತ್ರವನ್ನು ೧-೨ನೆಯ ಶತಮಾನದ ಘಂಟಶಾಲ೧೮ ಶಿಲ್ಪ ಪಟ್ಟಿಕೆಯಲ್ಲಿ ಉಬ್ಬು ಕೆತ್ತನೆಯಲ್ಲಿ ತೋರಿಸಲಾಗಿದೆ. ತದನಂತರ ಗುಪ್ತ ಸಾಮ್ರಾಜ್ಯ ಕಾಲದ ೫-೬ನೆಯ ಶತಮಾನದ ದೇವಗಢದಲ್ಲಿಯ ದಶಾವತಾರ, ಭೀತರ್ಗಾಂವ್‌ದಲ್ಲಿಯ ಶಿವ, ಭೂಮಾರದ ಪಾರ್ವತಿ (ಮಧ್ಯ ಪ್ರದೇಶ), ಗೋಪ (ಗುಜರಾತ್) ಮತ್ತು ಗಯೆಯಲ್ಲಿಯ ಬೌದ್ಧ ದೇವಾಲಯಗಳಲ್ಲಿ ರೇಖಾ ನಾಗರ ಮಾದರಿಯ ದೇವಾಲಯ ಶಿಖರದ ಬೆಳವಣಿಗೆಯ ಪ್ರಾಯಶಃ ಪ್ರಥಮ ಹಂತವನ್ನು ನೋಡಬಹುದು. ಇದರಂತೆಯೇ ಬಾದಾಮಿ-ಹೊಸ ಮಹಾಕೂಟ-ಪಟ್ಟದಕಲ್ಲಿನಲ್ಲಿ ೬-೭ನೇ ಶತಮಾನದ ವಿಮಾನ ಮಾದರಿಯ ದೇವಾಲಯದ ವಿಕಸನವನ್ನು ನಾಲ್ಕು ಹಂತ (ಬಾದಾಮಿಯಲ್ಲಿಯ ಮೇಗಣ ಹಾಗೂ ಕೆಳಗಣ ಮತ್ತು ಮಾಲೆಗಿತ್ತಿ ಶಿವಾಲಯಗಳು, ಹೊಸ-ಮಹಾಕೂಟದ ಬಾಣಂತಿ, ಮಲ್ಲಿಕಾರ್ಜುನ ಮತ್ತು ಪಟ್ಟದಕಲ್ಲಿನ ಸಂಗಮೇಶ್ವರ{ವಿಜಯೇಶ್ವರ} ದೇವಾಲಯ)ಗಳಲ್ಲಿ೧೯ ಕಾಣಬಹುದು. ಪಟ್ಟದಕಲ್ಲಿನ ಚಾಲುಕ್ಯ ಇಮ್ಮಡಿ ವಿಕ್ರಮಾದಿತ್ಯ ಅರಸನ ಪಟ್ಟಮಹಿಷಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ್ಯ ಮಹಾದೇವಿಯರು ಸು. ೭೪೦ರಲ್ಲಿ ಕಟ್ಟಿಸಿದ ವಿರೂಪಾಕ್ಷ (ಲೋಕೇಶ್ವರ) ಮತ್ತು ಮಲ್ಲಿಕಾರ್ಜುನ (ತ್ರೈಲೋಕೇಶ್ವರ) ದೇವಾಲಯಗಳಲ್ಲಿ ವೇಸರ ಮಾದರಿಯ ಪೂರ್ವಭಾವಿ ಹಂತವನ್ನು ಗುರುತಿಸಬಹುದು. ಇದನ್ನು ಕೂಲಂಕಷವಾಗಿ ಬೇರೆಡೆಯಲ್ಲಿ ಚರ್ಚಿಸಿದ್ದೇನೆ.೨೦

**ಕೊನೆಯ ಮಾತು**

ಮೇಲೆ ವಿವರಿಸಿದಂತೆ ಪುರಾತತ್ವ ಶೋಧನೆಗಳಿಂದ ಶಿಲ್ಪ ಗ್ರಂಥಗಳಲ್ಲಿಯ ವಾಸ್ತು-ಮೂರ್ತಿ ಶಿಲ್ಪ ವಿವರಣೆಗಳಿಗೆ ಒಂದು ಸುದೀರ್ಘ ಪರಂಪರೆಯೇ ಇದ್ದು ಪ್ರಾಚೀನ ಹಂತದಿಂದ ಗ್ರಂಥಸ್ಥವಾಗುವವರೆಗಿನ ಹಂತದವರೆಗೆ ಅದು ಹೇಗೆ ಬೆಳೆದು ಬಂದಿದೆಯೆಂಬುದರ ಬಗ್ಗೆ ಕೆಲವು ಅಂಶಗಳನ್ನು ತಿಳಿಯಲು ಸಾಧ್ಯವಾಗಿದೆ. ಗ್ರಂಥಗಳ ಸಹಾಯದಿಂದ ಗ್ರಂಥಸ್ಥ ಪೂರ್ವದ ಶಿಲ್ಪ ಪ್ರಕಾರಗಳು ಕೆಲಮಟ್ಟಿಗಾದರೂ ಸರಿಯಾಗಿ ಅರ್ಥೈಸಲು ನೆರವಾಗಬಹುದು. ಇಂಥ ಪ್ರಯತ್ನದಿಂದ ಗ್ರಂಥಸ್ಥ ವಾಸ್ತುಶಿಲ್ಪ ಪ್ರಕಾರಗಳನ್ನು ಐತಿಹಾಸಿಕ/ಸಾಂಸ್ಕೃತಿಕ ಹಿನ್ನೆಲೆ ಮತ್ತು ಬೆಳವಣಿಗೆಯನ್ನು ಯಥೋಚಿತವಾಗಿ ತಿಳಿದುಕೊಳ್ಳಲು ಅನುಕೂಲವಾಗುವುದು. ಹೀಗೆ ಪುರಾತತ್ವ ಮತ್ತು ಪ್ರಾಚೀನ ಸಂಸ್ಕೃತ ಸಾಹಿತ್ಯದ ಅಧ್ಯಯನವು ಪರಸ್ಪರ ಪೂರಕವಾಗಿವೆ. ಆದ್ದರಿಂದ ಶಿಲ್ಪ ಮತ್ತು ಇತರ ಅಧ್ಯಯನ ಕ್ಷೇತ್ರಗಳಲ್ಲಿ ಪುರಾತತ್ವ ಮತ್ತು ಸಂಸ್ಕೃತ ವೇದ-ಶಾಸ್ತ್ರ-ಪುರಾಣ ವಿದ್ವಾಂಸರ ಪರಸ್ಪರ ತಿಳುವಳಿಕೆ ಮತ್ತು ಸಮನ್ವಯದ ಮೂಲಕ ನಮ್ಮ ದೇಶದ ಅಮೂಲ್ಯ ಪರಂಪರೆಯನ್ನು ಉಳಿಸಿ ಬೆಳೆಸುವ ಆವಶ್ಯಕತೆ ತುಂಬ ಇದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. ಪೌಲ್ ಜಿ. ಬಹ್ನ್; ೧೯೯೬: **ಆರ್ಕಿಯಾಲಜಿ**, ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ಕೇಂಬ್ರಿಡ್ಜ್, ಪುಟ ೩೨೬–೨೭.

೨. ಪದ್ದಯ್ಯ ಕೆ.; ೧೯೮೨ : **ದಿ ಅಶೂಲಿಯನ್ ಕಲ್ಚರ್ ಆಫ್ ದಿ ಹುಣಸಗಿ ವ್ಯಾಲಿ**, ಡೆಕ್ಕನ್ ಕಾಲೇಜ್ ಪೋಸ್ಟ್ – ಗ್ರಾಜುಯೇಟ್ ಅಂಡ್ ರೀಸರ್ಚ್ ಇನ್‌ಸ್ಟಿಟ್ಯೂಟ್, ಪುಣೆ.

೩. ಅದೇ ಕಡೆ.

೪. ಪೊವೆಲ್ ಟಿ.ಜಿ. : **ಎ ಪ್ರೀ ಹಿಸ್ಟಾರಿಕ್ ಆರ್ಟ್**, ಪೆಲಿಕಾನ್ ಸೀರಿಸ್.

೫. ಸುಂದರ ಅ; ೧೯೯೪ : **ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ**, ಕರ್ನಾಟಕ ಲಲಿತ ಕಲಾ ಅಕಾದೆಮಿ, ಬೆಂಗಳೂರು.

೬. ಚಕ್ರವರ್ತಿ ಕೆ.ಕೆ. ಮತ್ತು ಬೆಡ್ನಾರಿಕ್ ಆರ್.ಜಿ.; ೧೯೯೭ : **ಇಂಡಿಯನ್ ರಾಕ್ ಆರ್ಟ್ ಅಂಡ್ ಇಟ್ಸ್ ಗ್ಲೋಬಲ್ ಕಾಂಟೆಕ್ಸ್ಟ್**, ಮೋತಿಲಾಲ ಬನ್ಸಾರಿದಾಸ್, ಪ್ರೈಲಿ., ದೆಹಲಿ.

೭. ಕುಲಕರ್ಣಿ ಆರ್.ಪಿ; ೧೯೯೭ : **ಲೇ ಔಟ್ ಫಾರ್ ಡಿಫರೆಂಟ್ ಸ್ಯಾಕ್ರಿಫೈಸಸ್**, ಮಹರ್ಷಿ ಸಾಂದೀಪನಿ ರಾಷ್ಟ್ರೀಯ ವೇದ ವಿದ್ಯಾ ಪ್ರತಿಷ್ಠಾನ, ಉಜ್ಜಯಿನಿ.

೮. ರಾಜೇಶ್ ಕೋಚರ್, ೨೦೦೦ : **ದಿ ವೇದಿಕ್ ಪೀಪಲ್**, ದೇರ್ ಹಿಸ್ಟ್ರಿ ಅಂಡ್ ಜಿಯಾಗ್ರಫಿ, ಓರಿಯಂಟಲ್ ಲಾಂಗ್‌ಮನ್, ದೆಹಲಿ.

೯. ಲಾಲ್ ಬಿ.ಬಿ; ೧೯೯೭ : **ದಿ ಅರ್ಲಿಯೆಸ್ಟ್ ಸಿವಿಲೈಜೇಷನ್ ಇನ್ ಸೌತ್ ಏಷ್ಯಾ**, ದಿ ಆರ್ಯನ್ ಇಂಟರ್ ನ್ಯಾಷನಲ್ ಪಬ್ಲಿಷರ್ಸ್, ದೆಹಲಿ.

೧೦. ರಂಗರಾಜನ್ ಎಲ್.ಎನ್; ೧೯೯೨ : **ಅರ್ಥಶಾಸ್ತ್ರ** (ಕೌಟಿಲ್ಯ), ಪೆನ್ಗ್ವಿನ್ ಬುಕ್ಸ್, ಪುಟ ೧೮೪–೯೩.

೧೧. **ಇಂಡಿಯನ್ ಆರ್ಕಿಯಾಲಜಿ ಎ ರಿವ್ಯೂ** : ೧೯೮೩–೮೪, ಆರ್ಕಿಯಾಲಜಿಕಲ್ ಸರ್ವೆ ಆಫ್ ಇಂಡಿಯಾ, ದೆಹಲಿ, ಪುಟ ೧–೨.

೧೨. ಭಟ್ಟಾಚಾರ್ಯ; **ಕ್ಯಾನನ್ಸ್ ಆಫ್ ಇಂಡಿಯನ್ ಆರ್ಟ್**

೧೩. ಆಚಾರ್ಯ ಪಿ.ಕೆ; ೧೯೮೧ (೨ನೆ ಸಂ.): **ಇಂಡಿಯನ್ ಆರ್ಕಿಟೆಕ್ಚರ್** (ಅಕಾರ್ಡಿಂಗ್ ಟು ಮಾನಸಾರ ಶಿಲ್ಪಶಾಸ್ತ್ರ), ಸಂ ೨, ಓರಿಯೆಂಟಲ್ ಬುಕ್ಸ್ ಕಾರ್ಪೋರೇಷನ್, ದೆಹಲಿ.

೧೪. ಮೀಡ್ ಜೆಲ್ ಎಮ್; ೨೦೦೨ (೧೩. ಆಗಸ್ಟ್) : **ಫಿಲಾಲಜಿ ವ್ಯಾನಿಷ್ಡ್, ಫ್ರಾಲೆಸ್ ಋಗ್ವೇದ** – ೨' ಓಪನ್ ಪೇಜ್, ದಿ ಹಿಂದು. ಪುಟ ೧೩.

೧೫. ಸ್ಮಿತ್ ವಿ.ಎ; ೧೯೨೯ : (ಪುನರ್ಮುದ್ರಣ) : **ದಿ ಜೈನ ಸ್ತೂಪ ಅಂಡ್ ಅದರ್ ಆಂಟಿಕ್ವಿಟಿಸ್ ಆಫ್ ಮಥುರಾ**. ಇಂಡಲಾಜಿಕಲ್ ಬುಕ್ ಹೌಸ್, ದೆಹಲಿ.

೧೬. ಧಾಕಿ ಎಂ.ಎ. : **ಇಂಡಿಯನ್ ಟೆಂಪಲ್ ಫಾರ್ಮ್ಸ್** (ಇನ್ ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್) ಅಭಿನವ್ ಪಬ್ಲಿಕೇಷನ್ಸ್, ದೆಹಲಿ.

೧೭. ಸ್ಟೆಲ್ಲಾ ಕ್ರಾಮ್ರಿಷ್; ೧೯೯೧ (ಪುನರ್ಮುದ್ರಣ) : **ದಿ ಹಿಂದು ಟೆಂಪಲ್**, ಸಂ. ೧. ಮೋತಿಲಾಲ್ ಬನ್ಸಾರಿದಾಸ್, ದೆಹಲಿ.

೧೮. ಹರ್ಲೆ ಜೆ.ಸಿ.; ೧೯೯೪ : **ದಿ ಆರ್ಟ್ ಅಂಡ್ ಆರ್ಕಿಟೆಕ್ಚರ್ ಆಫ್ ದಿ ಇಂಡಿಯನ್ ಸಬ್ ಕಾಂಟಿನೆಂಟ್**, ಯೇಲ್ ಯೂನಿವರ್ಸಿಟಿ, ಪುಟ ೪೩–೪೫.

೧೯. ಸುಂದರ ಅ; ೧೯೭೮ : **ಸಮ್ ಶೈವ ಟೆಂಪಲ್ಸ್ ಆಫ್ ದಿ ಚಾಲುಕ್ಯ ಪಿರಿಯಡ್ – ಎ ಸ್ಟಡಿ'** ಚಾಲುಕ್ಯಸ್ ಆಫ್ ಬಾದಾಮಿ, ಮಿಥಿಕ್ ಸೊಸೈಟಿ, ಬೆಂಗಳೂರು.

೨೦. ಅದೇ.




# ಕರ್ನಾಟಕದ ಪುರಾತತ್ತ್ವ ನೆಲೆಗಳು

– ಮುತ್ತುರಾಜು*

ವಿಶ್ವದ ಗಮನಾರ್ಹ ಸ್ಥಳಗಳಲ್ಲಿ ಕರ್ನಾಟಕವೂ ಒಂದು. ಬುದ್ಧಿಜೀವಿಯಾದ ಮನುಷ್ಯಪ್ರಾಣಿಯು ಇಲ್ಲಿ ಜಗತ್ತಿನ ಇತರೆಡೆಗಳಂತೆ ಆರಂಭದಲ್ಲೇ ಕಾಣಿಸಿಕೊಂಡರೂ ತನ್ನ ಜೀವನೋಪಾಯದ ಚಟುವಟಿಕೆಗಳನ್ನು ವಿಸ್ತರಿಸಿಕೊಂಡಿರುವುದು ಶಿಲಾಯುಗಗಳಿಂದಲೇ ಆಗಿದೆ. ಬರವಣಿಗೆಯ ಪೂರ್ವದ ಹಂತಗಳನ್ನು ಪ್ರಾಗಿತಿಹಾಸ, ಇಲ್ಲವೇ ಪುರಾತತ್ವ ಅಧ್ಯಯನ ಎಂದು ವಿದ್ವಾಂಸರು ಪರಿಗಣಿಸಿದ್ದಾರೆ. ಅಂದಿನ ಮಾನವರು ಕಾಡುಗಳಲ್ಲಿ ಅಲೆದಾಡುತ್ತಾ ತಮ್ಮ ಜೀವನೋಪಾಯಕ್ಕಾಗಿ ಬೇಟೆಯಾಡಲು ಸುಲಭವೂ, ಸರಳವೂ ಆದ ಕಲ್ಲಿನ ಆಯುಧಗಳನ್ನು ರಚಿಸಿ ಬಳಸಿಕೊಳ್ಳುತ್ತಾ ತಮ್ಮ ದೈನಂದಿನ ಆಹಾರ ಪೋಷಣೆಯನ್ನು ಪೂರೈಸಿಕೊಳ್ಳುತ್ತಿದ್ದರು.

ಬುದ್ಧಿಜೀವಿಯಾದ ಮಾನವ ಕುಲದ ಚರಿತ್ರೆಯಲ್ಲಿ ಹಳೆಯ ಶಿಲಾಯುಗದ ಕಾಲದಿಂದ ಹಿಡಿದು ಲಿಪಿ ಕಾಣಿಸಿಕೊಳ್ಳುವ ಕಾಲದ ಹಂತವನ್ನು ಪ್ರಾಗೈತಿಹಾಸಿಕ ಕಾಲವೆಂದು ಪರಿಗಣಿಸಲಾಗಿದೆ. ಈ ಹಂತಗಳ ಮಾನವರ ಜೀವನ ವಿಧಾನ, ಪದ್ಧತಿ, ಬೇಟೆ, ಪಶುಪಾಲನೆ, ಆಯುಧ, ಆಹಾರ ಪದ್ಧತಿ ಮತ್ತು ಅನ್ಯ ವಸ್ತುಗಳ ಕುಶಲತೆಯ ಆಧಾರಗಳ ಮೇಲ ಪ್ರಾಗೈತಿಹಾಸಿಕ ಕಾಲಮಾನವನ್ನು, ೧. ಹಳೆಯ ಶಿಲಾಯುಗ (ಕಾಲ ಕ್ರಿ.ಪೂ. ಸುಮಾರು ೫೦೦,೦೦೦ ವರ್ಷಗಳಿಂದ ಕ್ರಿ.ಪೂ. ಸುಮಾರು ೧೦,೦೦೦); ೨. ಸೂಕ್ಷ್ಮ ಶಿಲಾಯುಗ (ಕಾಲ ಕ್ರಿ.ಪೂ. ಸುಮಾರು ೧೦,೦೦೦ ದಿಂದ ಕ್ರಿ.ಪೂ. ಸುಮಾರು ೩,೦೦೦); ೩. ಬೃಹತ್ ಶಿಲಾಯುಗ (ಕಾಲ ಕ್ರಿ.ಪೂ. ಸುಮಾರು ೩,೦೦೦ ದಿಂದ ಕ್ರಿ.ಪೂ. ಸುಮಾರು ೮೦೦) ಎಂದು ವಿಭಜಿಸಿದ್ದರೂ ಅಧ್ಯಯನದ ಅನುಕೂಲತೆ ಮತ್ತು ವ್ಯಾಪ್ತಿಗಳಿಗೆ ಅನುಗುಣವಾಗಿ ಇನ್ನೂ ಒಳವಿಭಾಗಗಳನ್ನು ಮಾಡಿಕೊಳ್ಳಲಾಗಿದೆ.

ಪ್ರಾಗೈತಿಹಾಸಿಕ ಕಾಲದ ವಿವಿಧ ಬಗೆಯ ಅವಶೇಷಗಳಾದ ಕಲ್ಲಿನ ಆಯುಧಗಳು, ಲೋಹ, ಮೂಳೆಯ ವಸ್ತುಗಳು, ಆಭರಣಗಳು, ಶವಸಂಸ್ಕಾರ ಪದ್ಧತಿಯು ಸಮಾಧಿ ರಚನೆಗಳು ಮತ್ತು ಇತರ ವಸ್ತುಗಳನ್ನು ಐರೋಪ್ಯ ವಿದ್ವಾಂಸರು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದ್ದಾರೆ. ಇದೇ ಮಾರ್ಗವನ್ನು ಅನುಸರಿಸಿದ ಭಾರತೀಯ ಪುರಾತತ್ವಜ್ಞರ ಅದರಲ್ಲೂ ಕರ್ನಾಟಕದ ಪುರಾತತ್ವ ವಿದ್ವಾಂಸರ ಅಧ್ಯಯನ ವೈಖರಿ ಶ್ಲಾಘನೀಯವಾದುದು.

ಕರ್ನಾಟಕದಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ ಹಾಗೂ ಕರ್ನಾಟಕ ಪುರಾತತ್ವ ಇಲಾಖೆಗಳು ಈ ನಿಟ್ಟಿನಲ್ಲಿ ಕೆಲಸ ಮಾಡುತ್ತಿವೆ. ವಿವಿಧ ವಿಶ್ವವಿದ್ಯಾಲಯಗಳ ವಿಭಾಗಗಳು ಇವುಗಳು ತಮ್ಮ ಕೈಜೋಡಿಸಿ ಉತ್ಖನನ, ಅನ್ವೇಷಣೆ, ಸಂಶೋಧನೆಗಳಲ್ಲಿ ನೆರವಾಗಿ ಕರ್ನಾಟಕದ ಪ್ರಾಗೈತಿಹಾಸಿಕ ಆಕರಗಳನ್ನು ಹೊರತೆಗೆಯುತ್ತಿವೆ.

ಹಳೆಯ ಶಿಲಾಯುಗಕ್ಕೆ ಸಂಬಂಧಿಸಿದ ಶಿಲಾಯುಧಗಳನ್ನು ರಾಬರ್ಟ್ ಬ್ರೂಸ್ ಫುಟ್, ಮಾರ್ಟಿಮರ್ ವೀಲರ್, ಸಂಪತ್ತೈಯ್ಯಂಗಾರ್, ಎಂ.ಎಸ್. ನಾಗರಾಜರಾವ್ ಅನ್ಸಾರಿ, ಆರ್.ವಿ.ಜೋಶಿ ಮುಂತಾದವರು ಕರ್ನಾಟಕದ ತುಮಕೂರು, ಬೆಂಗಳೂರು, ಕಡೂರು, ನಿಡಘಟ್ಟ, ಲಿಂಗದಹಳ್ಳಿ ತಾಳ್ಯ, ಹಳಕುಂಡಿ, ನ್ಯಾಮತಿ, ಖ್ಯಾಡಾ, ಕಿಬ್ಬನಹಳ್ಳಿ, ಕೊಂಚೀಗೇರಿ, ಮಲಪ್ರಭ ನದಿಯ ದಂಡೆ ಹಾಗೂ ಕೃಷ್ಣ, ಘಟಪ್ರಭ ನದಿಯ ದಂಡೆ, ಭೀಮಾ-ಕೃಷ್ಣಾ ನದಿಗಳ ಸಂಗಮಸ್ಥಳ, ಸುರಪುರ ಹಾಗೂ ಅಮರಜಾ ನದಿ ಪ್ರದೇಶಗಳ ಬಯಲಿನಲ್ಲಿ ಪತ್ತೆ ಮಾಡಿದ್ದಾರೆ. ಇವುಗಳು ಆಕಾರದಲ್ಲಿ ದಪ್ಪ ಶಿಲೆಗಳಾಗಿದ್ದು ಅನುಕೂಲಕ್ಕೆ ತಕ್ಕ ಹಾಗೆ ಕಲ್ಲಿನ ಚೆಕ್ಕೆಗಳನ್ನು ಎಬ್ಬಿಸಿ ರೂಪಿಸಿಕೊಂಡವುಗಳಾಗಿವೆ. ಅನ್ವೇಷಣೆ ಮತ್ತು ಉತ್ಖನನಗಳಿಂದ ಲಭ್ಯವಾಗಿರುವ ಈ ಶಿಲಾಯುಧಗಳನ್ನು ಆದಿ, ಮಧ್ಯ ಹಾಗೂ ಅಂತ್ಯ ಹಳೆಯ ಶಿಲಾಯುಗದ ಆಯುಧಗಳು ಎಂಬುದಾಗಿ ವಿಭಜಿಸಿಕೊಳ್ಳಲಾಗಿದೆ. ಈ ಮೂರೂ ಹಂತಗಳ ಕಾಲಾವಧಿಗೆ ಸಂಬಂಧಿಸಿದ ಶಿಲಾಯುಧಗಳು ಕರ್ನಾಟಕದಾದ್ಯಂತ ವಿಪುಲವಾಗಿ ದೊರೆತಿವೆ.

---

* ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ, ಉಡುವಳ್ಳಿ, ಹಿರಿಯೂರು, ಚಿತ್ರದುರ್ಗ.

ಮಧ್ಯ ಶಿಲಾಯುಗ ಅಥವಾ ಸೂಕ್ಷ್ಮ ಶಿಲಾಯುಗದ ಶಿಲಾಯುಧಗಳು ಕರ್ನಾಟಕದ ೫೦ಕ್ಕೂ ಹೆಚ್ಚು ವಿವಿಧ ಸ್ಥಳಗಳಲ್ಲಿ ಪತ್ತೆ ಆಗಿವೆ. ಈ ಹಂತದಲ್ಲಿ ಮಾನವನು ದೊಡ್ಡ ದೊಡ್ಡ ಶಿಲಾಯುಧಗಳ ರಚನೆಗಳಿಗಿಂತ ಸೂಕ್ಷ್ಮವೂ ಪರಿಣಾಮಕಾರಿಯೂ ಆದ ಪುಟ್ಟ ಆಯುಧಗಳನ್ನು ರೂಪಿಸಿಕೊಂಡದ್ದರಿಂದ ಈ ಶಿಲಾಯುಗವನ್ನು ಸೂಕ್ಷ್ಮ ಶಿಲಾಯುಗ ಎಂದು ಪರಿಗಣಿಸಲಾಗಿದೆ. ಈ ಸೂಕ್ಷ್ಮ ಶಿಲಾಯುಧಗಳು ಕೊಲ್ಲಲು, ಕತ್ತರಿಸಲು, ಎಸೆಯಲು ಸಹಾಯಕವಾಗಿವೆ. ಇವು ಬೆಣಚು ಮತ್ತ ಚರ್ಟ್ ಕಲ್ಲುಗಳಿಂದ ಸಿದ್ಧಪಡಿಸಿಕೊಂಡ ಆಯುಧಗಳಾಗಿವೆ.

ನವಶಿಲಾಯುಗವನ್ನು ತಾಮ್ರ ಶಿಲಾಯುಗವೆಂತಲೂ ಕರೆಯಲಾಗಿದ್ದು ಈ ಹಂತದಲ್ಲಿ ಆಯುಧಗಳ ಬಳಕೆಯಲ್ಲಿ ವಿಶೇಷವಾದ ಪರಿಣತಿಯು ಕಂಡುಬರುತ್ತದೆ. ಜೊತೆಗೆ ತಾಮ್ರ ಲೋಹದ ಬಳಕೆಯೂ ಬೆಂಕಿಯಿಂದ ಬೇಯಿಸುವ ಪದ್ಧತಿಗಳೂ ಈ ಕಾಲದಲ್ಲಿ ಬೆಳೆದು ಬಂದಿವೆ. ಪಶುಪಾಲನೆ, ಕೃಷಿ, ಮೀನುಗಾರಿಕೆಗಳಲ್ಲಿ ಪಳಗಿದ ಮಾನವರು ಗುಹೆ ಹಾಗೂ ಕಲ್ಲಾಸರೆಗಳನ್ನು ತ್ಯಜಿಸಿ ಗ್ರಾಮವಾಸ್ತವ್ಯವನ್ನು ರೂಢಿಸಿಕೊಂಡು ಸಾಂಘಿಕ ಜೀವನವನ್ನು ಆರಂಭಿಸಿದರು. ವಿವಿಧ ಬಗೆಯ ಮಣ್ಣಿನ ಆಯುಧಗಳ ಬಳಕೆಯೂ ಈ ಹಂತದಿಂದಲೇ ಹೆಚ್ಚಾಗಿರುವುದರಿಂದ ಈ ಹಂತದ ನೆಲೆಗಳಿಂದ ವೈವಿಧ್ಯಪೂರ್ಣವಾದ ಮಡಕೆಯ ಚೂರುಗಳ ಅವಶೇಷಗಳು ಲಭ್ಯವಾಗಿವೆ. ಇವುಗಳಲ್ಲಿ ತೆಳುವಾದ ಕೆಂಪು–ಕಪ್ಪು ಬಣ್ಣದ ಸುಡಾವೆ ಮಡಕೆಗಳು ಹೆಚ್ಚಾಗಿವೆ. ಇವುಗಳ ಮೇಲೆ ಬಿಳಿ ಇಲ್ಲವೇ ಕೆಂಪು ಬಣ್ಣದ ರೇಖಾ ಚಿತ್ರಗಳುಳ್ಳ ಚಿತ್ರಗಳೂ ಸಹ ಅಪಾರ ಸಂಖ್ಯೆಯಲ್ಲಿ ಲಭಿಸಿದ್ದು, ಅಂದಿನ ಪ್ರಗತಿಯ ದ್ಯೋತಕವಾಗಿದೆ. ಈ ಹಂತದಲ್ಲಿಯೇ ಕರ್ನಾಟಕದ ವಿವಿಧೆಡೆಗಳ ಗುಹೆ, ಕಲ್ಲಾಸರೆ ಹಾಗೂ ಬಯಲು ಬಂಡೆಗಳ ಮೇಲೆ ಬಣ್ಣಗಳಿಂದ ಬರೆದೋ ಅಥವಾ ಲೋಹ ಸಾಧನಗಳಿಂದ ಕೊರೆದೋ ಚಿತ್ರಗಳನ್ನು ಮೂಡಿಸಿದ್ದಾರೆ. ಕರ್ನಾಟಕದ ಚಿತ್ರದುರ್ಗ, ರಾಯಚೂರು, ಬಳ್ಳಾರಿ, ಕೊಪ್ಪಳ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುವ ಚಿತ್ರಗಳು ಇತರೆಡೆಗಳಲ್ಲಿಯೂ ಅಲ್ಲಲ್ಲಿ ಕಂಡುಬಂದಿದ್ದು, ಇವು ಆಯಾ ಪ್ರದೇಶದ ಪುರಾತತ್ತ್ವ ನೆಲೆಗಳ ಕುರುಹುಗಳ ಆಕರಗಳಾಗಿವೆ.

ಈ ಹಂತದ ನೆಲೆಗಳು ನದಿಗಳ ತೀರಗಳಲ್ಲಿ ಹೆಚ್ಚಾಗಿ ಕಂಡುಬಂದಿದ್ದರೂ ಸಹ ಜಲಸಂಪತ್ತಿರುವ ಇತರ ಸ್ಥಳಗಳಲ್ಲಿಯೂ ಲಭ್ಯವಾಗಿವೆ. ಆಯುಧಗಳ ಮಾರ್ಪಾಡಿನಲ್ಲಿ ಪ್ರಮುಖ ಬದಲಾವಣೆಯಾಗಿರುವುದು ಈ ಹಂತದಲ್ಲಿಯೇ. ತ್ರಿಕೋನಾಕಾರದ ಕೈಗೊಡಲಿ, ಕೈ ಬಾಚಿಗಳು, ಉಂಡೆ ಕಲ್ಲುಗಳ ಉಪಯೋಗವೂ ಈ ಕಾಲದಲ್ಲಿ ಕಂಡುಬಂದಿದೆ. ಕಪ್ಪು ಬಣ್ಣದ ಗಟ್ಟಿಕಲ್ಲುಗಳಿಂದ ಉಜ್ಜಿ ನಯ ಮಾಡಿ ತಯಾರಿಸಿಕೊಳ್ಳುತ್ತಿದ್ದ ಇವುಗಳ ಮಾದರಿಗಳು ಅನ್ವೇಷಣೆ ಮತ್ತು ಉತ್ಖನನಗಳಿಂದ ಲಭ್ಯವಾಗಿವೆ. ಇಂದಿಗೂ, ವಿಶೇಷವಾದ ಲಕ್ಷಣಗಳನ್ನುಳ್ಳ ಈ ಆಯುಧಗಳನ್ನು ಪುಟ್ಟ ಗುಡಿಗಳನ್ನು ಕಟ್ಟಿ ಅದರಲ್ಲಿಟ್ಟು ಪೂಜಿಸಲಾಗುತ್ತಿದೆ.

ವ್ಯವಸಾಯ ಪದ್ಧತಿಯಿಂದಾಗಿ ಆರ್ಥಿಕ ಸುಧಾರಣೆಯ ಕಾರಣಕ್ಕಾಗಿ ವ್ಯಾಪಾರ ಆರಂಭವಾಗಿರುವುದು ಈ ಹಂತದಿಂದಲೇ. ಒಂದೆಡೆ ನೆಲೆ ನಿಂತ ಮಾನವರು ಆಯುಧಗಳಷ್ಟೆ ಅಲ್ಲದೇ ಆಭರಣಗಳ ತಯಾರಿಕೆಯಲ್ಲಿಯೂ, ಪೋಷಾಕಿನಲ್ಲಿಯೂ ಪರಿಣತಿ ಪಡೆದುಕೊಂಡಿರುವುದು ವಿಶೇಷವಾಗಿದೆ. ಈವರೆಗೆ ವಿವಿಧ ಬಗೆಯ ಮಣಿಗಳು, ದಂತ ಹಾಗೂ ಲೋಹಗಳ ಆಭರಣಗಳು ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಾಗಿವೆ. ಸಾಕುಪ್ರಾಣಿಗಳನ್ನು ಪಳಗಿಸಿ ಕೃಷಿ ಹಾಗೂ ಬೇಟೆಯ ಕಾರಣಕ್ಕೆ ಬಳಸಿಕೊಂಡಿರುವುದು ಗಮನಾರ್ಹ. ಈ ಹಂತದಿಂದಲೇ ಗ್ರಾಮನಾಮಗಳ ಆರಂಭವೂ ಸಹ ಆಗಿರುವುದು. ಟಿ. ನರಸೀಪುರ, ತಲಕಾಡು, ಬ್ರಹ್ಮಗಿರಿಗಳಲ್ಲಿ ನಡೆದ ಉತ್ಖನನಗಳಿಂದ ಅಸಂಖ್ಯಾತ ಆಯುಧಗಳೂ, ಆಭರಣಗಳೂ ಲಭ್ಯವಾಗಿವೆ.

ಕ್ರಿ.ಪೂ.ಸು. ೩,೦೦೦ ದಿಂದ ಕ್ರಿ.ಪೂ. ೮೦೦ರ ಕಾಲಮಾನವನ್ನು ಬೃಹತ್ ಶಿಲಾಯುಗ ಎಂದು ಪರಿಗಣಿಸಲಾಗಿದ್ದು ಪ್ರಾಗೈತಿಹಾಸಿಕ ಕಾಲಗತಿಯಲ್ಲಿ ಅತ್ಯಂತ ಹೆಚ್ಚಿನ ಆಕರಗಳನ್ನು ಇದು ಒದಗಿಸುತ್ತದೆ. ಈ ನೆಲೆಗಳಲ್ಲಿ ನೆಲೆಸಿದ್ದ ಮಾನವನು ಜನ್ಮ, ಪುನರ್ಜನ್ಮ, ಧಾರ್ಮಿಕತೆಗಳಲ್ಲಿ ನಂಬಿಕೆಗಳನ್ನು ಹೆಚ್ಚಿಸಿಕೊಂಡಿದ್ದರಿಂದ ಶವಸಂಸ್ಕಾರ ಪದ್ಧತಿಯಲ್ಲಿ ವೈವಿಧ್ಯಮಯವಾದ ಮಾರ್ಪಾಡುಗಳನ್ನು ಮಾಡಿಕೊಂಡನು. ಬಿಡಿಯಾಗಿ ಅಥವಾ ಸಾಮೂಹಿಕವಾಗಿ ಸಂಸ್ಕಾರ ಮಾಡುವ ಈ ಪದ್ಧತಿಗಳಲ್ಲಿ ವೃತ್ತಗಳು, ಶಿಲಾಕುಳಿಗಳು, ಕಂಡಿಕಲ್ಲು ಗೋರಿಗಳು, ಹಾದಿಕೋಣೆ ಗೋರಿಗಳು ಕಂಡುಬರುತ್ತವೆ. ಸುಮಾರು ೫೫ ಅಡಿ ವ್ಯಾಸದ ಗೋರಿಗಳನ್ನು ಸಹ ನಿರ್ಮಿಸಿರುವುದನ್ನು ಕಂಡಾಗ ಅಂದಿನ ಮಾನವನ ಅಭಿರುಚಿ ವ್ಯಕ್ತವಾಗುತ್ತದೆ. ಇವುಗಳ ಜೊತೆಗೆ ನಿಲುವು ಕಲ್ಲುಗಳನ್ನು ನಿಲ್ಲಿಸುವುದು ಬೆಳೆದು ಬಂದ ಮತ್ತೊಂದು ಶವಸಂಸ್ಕಾರ ಪದ್ಧತಿಯಾಗಿದೆ. ದೊಡ್ಡ ದೊಡ್ಡ

ಮಡಕೆಗಳಲ್ಲಿ, ಶವಪೆಟ್ಟಿಗೆಗಳಲ್ಲಿ ಮಾನವರ ಅಸ್ಥಿಗಳನ್ನಿಟ್ಟು ಜೊತೆಗೆ ಅವರ ಬಳಕೆಯ ವಸ್ತುಗಳನ್ನಿಟ್ಟು ಸಂಸ್ಕರಿಸುವ ಪದ್ಧತಿಯಿದ್ದು, ಕರ್ನಾಟಕದಲ್ಲಿ ಈವರೆಗೂ ವಿಪುಲ ಸಂಖ್ಯೆಯಲ್ಲಿ ಇದಕ್ಕೆ ಆಧಾರಗಳು ಲಭ್ಯವಾಗಿವೆ. ಪುಟ್ಟ ಮಕ್ಕಳಿಗೆ ಪುಟ್ಟ ಆಕಾರದ ಶವಕುಣಿಗಳೂ ನಿರ್ಮಾಣ ವಾಗಿರುವುದು ಗಮನಾರ್ಹ ಅಂಶವಾಗಿದೆ. ಜನರು ಇವುಗಳನ್ನು ಪಾಂಡವರ ಗುಡಿ, ಪಾಂಡವರ ಮನೆ, ಪಾಂಡವರ ಗುತ್ತಿ, ಮೋರೇರ ಮನೆಗಳು ಎಂದು ಕರೆಯುತ್ತಾರೆ. ಚಿಕ್ಕಜಾಲ, ಜಡಿಗೇನಹಳ್ಳಿ, ಸಾವನದುರ್ಗದ ಇಟ್ಟಿಗೆ ಬಯಲು, ಬ್ರಹ್ಮಗಿರಿ, ಚಂದ್ರವಳ್ಳಿ ಮುಂತಾದ ಕಡೆಗಳಲ್ಲಿ ವೈಜ್ಞಾನಿಕ ಉತ್ಖನನಗಳು ನಡೆದಿವೆ.

ಕಬ್ಬಿಣದ ಆಯುಧಗಳು ವಿಪುಲ ಸಂಖ್ಯೆಯಲ್ಲಿ ಹಳ್ಳೂರು, ಹೂನೂರು, ಬ್ರಹ್ಮಗಿರಿ, ಹೆಗ್ಗಡೆಹಳ್ಳಿ, ತಿ.ನರಸೀಪುರ ಮುಂತಾದೆಡೆಯಲ್ಲಿ ದೊರೆತಿದ್ದು ಈ ಹಂತವನ್ನು ಕಬ್ಬಿಣ ಯುಗವೆಂತಲೂ ಕರೆಯಲಾಗಿದೆ. ದಪ್ಪನಾದ ಬೂದುಬಣ್ಣದ ಮಡಕೆಗಳ ನಿರ್ಮಾಣದ ಮಾರ್ಪಾಡು ಈ ಹಂತದಲ್ಲಾಗಿದೆ. ಚಿತ್ರಕಲೆಯಲ್ಲಿ ಪ್ರಾವೀಣ್ಯತೆ ಪಡೆದ ಮಾನವರು ವಿವಿಧ ಬಗೆಯ ಗುಹಾ ಹಾಗೂ ಬಯಲು ಬಂಡೆಗಳ ರೇಖಾಚಿತ್ರಗಳನ್ನು ರಚಿಸಿದ್ದಾರೆ. ಇವು ಅಂದಿನ ಮಾನವರ ಜೀವನ ವಿಧಾನ, ಆಹಾರ ಪದ್ಧತಿ, ಬೇಟೆ, ಮನೋರಂಜನೆಗಳನ್ನು ತಿಳಿಸಿಕೊಡುತ್ತವೆ.

ಅಪಾರ ಉತ್ಕೃಷ್ಟತೆಯ ಶಿಲಾವರ್ಗಗಳನ್ನು ಹೊಂದಿರುವ ಬೆಂಗಳೂರು ಗ್ರಾಮಾಂತರ, ರಾಮನಗರ ಜಿಲ್ಲೆಗಳಲ್ಲಿನ ವೈವಿಧ್ಯತೆಯಿಂದಾಗಿ ಈ ಪ್ರದೇಶವನ್ನು ಬೃಹತ್ ಶಿಲಾಯುಗದ ಕಣಜ ಎಂದರೆ ಅತಿಶಯೋಕ್ತಿಯಾಗಲಾರದು.

ಕ್ರಿ.ಪೂ. ೫೦೦,೦೦೦ ವರ್ಷಗಳಿಂದ ಕ್ರಿ.ಪೂ. ೮೦೦ರವರೆಗಿನ ಪುರಾತತ್ವ ನೆಲೆಗಳಲ್ಲಿ ಕರ್ನಾಟಕದ ಪುರಾತತ್ವ ನೆಲೆಗಳಿಗೆ ಒಂದು ಗಮನಾರ್ಹ ಸ್ಥಾನವಿದೆ ಎಂಬುದು ಮಹತ್ವದ ವಿಷಯವಾಗಿದೆ.

## ಆಧಾರ ಸೂಚಿ


೧. **ಕರ್ನಾಟಕ ವಿಷಯ ವಿಶ್ವಕೋಶ,** ಮೈಸೂರು ವಿಶ್ವವಿದ್ಯಾನಿಲಯ.

೨. **ಕರ್ನಾಟಕದಲ್ಲಿ ನವಶಿಲಾಯುಗ,** ಬಾ.ರಾ. ಗೋಪಾಲ್.

೩. **ಕರ್ನಾಟಕ ಲೋಚನ,** ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ.

೪. ಕರ್ನಾಟಕ ಇತಿಹಾಸ ಅಕಾದೆಮಿಯ **ಇತಿಹಾಸ ದರ್ಶನ** ಸಂಪುಟಗಳು.

೫. **ಹರತಿಸಿರಿ,** ಹರತಿ.

೬. **ಸಂಶೋಧನೆ,** ಬೆಂಗಳೂರು.

# "ದಾಕ್ಷಿಣಾತ್ಯ ದೇವಾಲಯಗಳ ವರ್ಗೀಕರಣ"

– ಡಾ॥ ಕೂ.ಸ. ಅಪರ್ಣ*

**ವಾ**ಸ್ತುಶಿಲ್ಪ ಗ್ರಂಥಗಳಲ್ಲಿ ದೇವಾಲಯಗಳನ್ನು ಭೌಗೋಳಿಕ ಪ್ರದೇಶ, ರಚನಾ ವಿನ್ಯಾಸ, ಅಳತೆ, ನಿರ್ಮಾಣ ಸಾಮಗ್ರಿ – ಹೀಗೆ ವಿವಿಧ ಆಧಾರಗಳಿಂದ ವರ್ಗೀಕರಿಸಲಾಗಿದೆ. ಇವುಗಳೆಲ್ಲದರೊಂದಿಗೆ ಶಿಖರ ರಚನೆಯ ಮಾದರಿಯನ್ನು ಅನುಸರಿಸಿ ಇನ್ನೊಂದು ರೀತಿಯ ವರ್ಗೀಕರಣವನ್ನೂ ಮಾಡಲಾಗಿದೆ. ಭೌಗೋಳಿಕವಾಗಿ ಹೇಳುವುದಾದರೆ, ಪೂರ್ಣ ಭರತಖಂಡದ ದೃಷ್ಟಿಯಿಂದ ನಾಗರ, ದ್ರಾವಿಡ, ವೇಸರ ಎಂಬ ವರ್ಗೀಕರಣವಿದೆ. ಇದರಂತೆ, ಹಿಮಾಲಯ ಮತ್ತು ವಿಂಧ್ಯ ಪರ್ವತಗಳ ನಡುವಿನ ಪ್ರದೇಶಗಳಲ್ಲಿ ಬಳಕೆಯಲ್ಲಿರುವುದು – 'ನಾಗರ' ರೀತಿಯ ದೇವಾಲಯಗಳು; ವಿಂಧ್ಯಪರ್ವತದಿಂದ ಕೃಷ್ಣಾನದೀ ತೀರದವರೆಗೆ ಬಳಕೆಯಲ್ಲಿರುವುದು – 'ವೇಸರ' ರೀತಿಯ ದೇವಾಲಯಗಳು; ಅಂತೆಯೇ, ಕೃಷ್ಣಾನದಿಯಿಂದ ಕನ್ಯಾಕುಮಾರಿಯವರೆಗೆ ಬಳಕೆಯಲ್ಲಿರುವುದು – 'ದ್ರಾವಿಡ' ರೀತಿಯ ದೇವಾಲಯಗಳು.[೧] ಈ ನಾಗರ–ದ್ರಾವಿಡ–ವೇಸರಗಳ ವರ್ಗೀಕರಣವು ದಾಕ್ಷಿಣಾತ್ಯ ಗ್ರಂಥಗಳಲ್ಲೂ ಕಂಡುಬರುತ್ತಿದ್ದು, ಅದನ್ನು 'ಶಿಖರ'ಕ್ಕೆ ಅನ್ವಯಿಸಿ ವರ್ಗೀಕರಿಸಲಾಗಿದೆ. ಇದರೊಂದಿಗೆ, ರಚನಾ ವಿನ್ಯಾಸದ ಹಿನ್ನೆಲೆಯಲ್ಲಿ ಶಿಖರದ ವಿಶಿಷ್ಟ ಮಾದರಿಗಳ ದೇವಾಲಯಗಳನ್ನು ಷಡ್ವರ್ಗ ದೇವಾಲಯ, ರೇಖಾನಾಗರ, ಭೂಮಿಜ, ಲತಿನ, ವಿಮಾನನಾಗರ, ಪಾಂಸನಾ, ಲುಪಾ, ಔತ್ತರೇಯ ದ್ರಾವಿಡ' ಮುಂತಾಗಿಯೂ ವರ್ಗೀಕರಿಸಲಾಗಿದೆ. ಈ ಎಲ್ಲ ರೀತಿಯ ದೇವಾಲಯಗಳ ಬಗ್ಗೆ ವಿವರಗಳು ಗ್ರಂಥಗಳಲ್ಲಿದ್ದು, ಕರ್ನಾಟಕದಲ್ಲಿ ಈ ಎಲ್ಲ ರೀತಿಯ ದೇವಾಲಯಗಳು ನಿರ್ಮಾಣಗೊಂಡಿದೆ.

ದಕ್ಷಿಣ ಭಾರತದಲ್ಲಿ ಸಾಮಾನ್ಯವಾಗಿ ಕಂಡುಬರುವ ದೇವಾಲಯಗಳ ಮಾದರಿಯನ್ನು 'ದಾಕ್ಷಿಣಾತ್ಯ' ಸಂಪ್ರದಾಯದ ದೇವಾಲಯಗಳು ಎಂದು ಗುರುತಿಸುವುದುಂಟು. ಇವು ಉತ್ತರ ಭಾರತದ ದೇವಾಲಯಗಳಿಗಿಂತ ಅನೇಕ ರೀತಿಯಲ್ಲಿ ಭಿನ್ನವಾಗಿರುತ್ತವೆ. ಇವುಗಳಲ್ಲಿ ಮುಖ್ಯವಾಗಿ ಊರ್ಧ್ವಮುಖದಲ್ಲಿ ಆರು ವರ್ಗ(–ಭಾಗ)ಗಳಿರುತ್ತವೆ. ಅಂದರೆ, ಅಧಿಷ್ಠಾನ (Base), ಭಿತ್ತಿ (wall), ಪ್ರಸ್ತರ (Entablature), ಗ್ರೀವ (Attic), ಶಿಖರ (Roof), ಸ್ತೂಪಿ (Finial)– ಎಂಬ ಆರು ಭಾಗಗಳಿರುತ್ತವೆ. ಇವುಗಳನ್ನು 'ಷಡ್ವರ್ಗ ದೇವಾಲಯಗಳು' ಎನ್ನುವುದುಂಟು. ಹೆಚ್ಚಿನ ತಲ (Storey)ಗಳಿಲ್ಲದ ಈ ದೇವಾಲಯಗಳನ್ನು 'ಏಕತಲ' ದೇವಾಲಯಗಳು ಎಂದೂ ಕರೆಯುವುದುಂಟು. ಇವುಗಳಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರಗಳು ಆಲಯದಲ್ಲಿ ಕೆಳಭಾಗದಲ್ಲಿದ್ದು, ಗ್ರೀವ, ಶಿಖರ, ಸ್ತೂಪಿಗಳು ಮೇಲ್ಭಾಗಕ್ಕೆ ಸೇರುತ್ತದೆ. ಈ ಮೂರು ಭಾಗಗಳಿಂದ ಕೂಡಿದ ಮೇಲ್ಭಾಗದ ಕಟ್ಟಡವನ್ನು 'ಮೇಲ್ಕಟ್ಟಡ' (Superstructure) ಎಂದು ಅನುಕೂಲದ ದೃಷ್ಟಿಯಿಂದ ಗುರುತಿಸಬಹುದಾಗಿದೆ. ಈ ಷಡ್ವರ್ಗ ದೇವಾಲಯಗಳ ವಿನ್ಯಾಸವು ಚೌಕ, ವೃತ್ತ – ಹೀಗೆ ವಿವಿಧ ಆಕಾರಗಳಿಂದ ಕೂಡಿರುತ್ತವೆ. ಇವು ಮೂಲದಿಂದ ತುದಿಯವರೆಗೂ ಒಂದೇ ಆಕಾರದಲ್ಲಿರಬಹುದು ಅಥವಾ (ಗ್ರೀವವೂ ಸೇರಿದಂತೆ ೫ನೇ ಭಾಗವಾದ ಶಿಖರ ಮಾತ್ರವೇ ಬೇರೆ ಆಕಾರದಲ್ಲಿರಬಹುದು. ಈ ವಿವಿಧ ಆಕಾರಗಳ ಹಿನ್ನೆಲೆಯಲ್ಲಿ ದೇವಾಲಯವು ಬೇರೆ ಬೇರೆ ಹೆಸರನ್ನು ಪಡೆಯುತ್ತದೆ. ಈ ಏಕತಲ ದೇವಾಲಯಕ್ಕೆ ಒಂದು 'ತಲ'ವನ್ನು ಸೇರಿಸಿ ರಚಿಸಿದ್ದರೆ ಅದು 'ದ್ವಿತಲ ದೇವಾಲಯ' ಎನಿಸುತ್ತದೆ (ಹೀಗಿದ್ದಾಗ, ಅಧಿಷ್ಠಾನದಿಂದ ಪ್ರಸ್ತರದವರೆಗಿನ ಭಾಗವನ್ನು 'ಆದಿತಲ' ಎಂದು ಗುರುತಿಸಲಾಗುತ್ತದೆ). ದ್ವಿತಲವಿರುವ ದೇವಾಲಯಗಳಲ್ಲಿ ಈ ಎರಡನೇ ತಲದಲ್ಲಿ (-Storey) ಮೂಲೆಗಳಲ್ಲಿ ಚೌಕಾಕಾರದ – ಕೂಟ (square Aediculae), ಮಧ್ಯದಲ್ಲಿ ಆಯತಾಕಾರದ ಶಾಲಾ (Elongated Aediculae), ಅದರ ಅಕ್ಕಪಕ್ಕಗಳಲ್ಲಿ ಗಜಪೃಷ್ಠಾಕಾರದ ಪಂಜರ ಅಥವಾ ನಾಸಿಕೋಷ್ಠಗಳು (Intermediate aediculae) ಇರುತ್ತವೆ. ಇವುಗಳನ್ನು ಒಟ್ಟಾರೆ 'ಹಾರ' ಎಂದೂ ಹೇಳಬಹುದು. ಕೂಟ–ಶಾಲಾ–ಪಂಜರಗಳು 'ಹಾರ'ದಲ್ಲಿದ್ದರೆ ನಾಸಿಕೋಷ್ಠಗಳು ಹಾರಾಂತರದಲ್ಲಿರುತ್ತವೆ. 'ಹಾರ' ದಲ್ಲಿರುವ ಅಂಗಗಳಿಗೆ ಸಾಮಾನ್ಯವಾಗಿ 'ವೇದಿ' (Stereobate) ಇರುತ್ತದೆ. ಶಿಖರದಲ್ಲಿ ಇಂತಹ ತಲಗಳು (೧೨ರ ವರೆಗೆ) ಎಷ್ಟಾದರೂ

---

* ೧೬೭೬, ೫ನೆಯ 'ಎ' ಅಡ್ಡರಸ್ತೆ, ೧೦ನೆಯ ಮುಖ್ಯರಸ್ತೆ, ಬನಶಂಕರಿ ಮೊದಲನೆಯ ಹಂತ, ಎರಡನೇ ಬ್ಲಾಕ್, ಬೆಂಗಳೂರು– ೫೬೦ ೦೫೦.

ಇರಬಹುದಾಗಿದೆ. ಈ 'ತಲ'ಗಳು ಮೇಲ್ಕಟ್ಟಡದ ಮೂಲ ಭಿತ್ತಿಗೆ ಸೇರಿದಂತಿರಬಹುದು ಅಥವಾ ಪ್ರತ್ಯೇಕವಾಗಿರಬಹುದು. ಸೇರಿಕೊಂಡಿದ್ದರೆ ಅದನ್ನು 'ಅರ್ಪಿತಹಾರ' ಎಂದೂ, ಪ್ರತ್ಯೇಕವಾಗಿದ್ದಲ್ಲಿ 'ಅನರ್ಪಿತಹಾರ' ವೆಂದೂ ಹೆಸರು (ಮಯ.೨೧.೬೪-೬೫). ಅನರ್ಪಿತ ಹಾರವಿದ್ದಲ್ಲಿ ಆದಿತಲದಲ್ಲಿರುವ ಗರ್ಭಗೃಹದ ಸುತ್ತ ಪ್ರದಕ್ಷಿಣಾಪಥ (circumambulatory)ವಿದ್ದು, ಎರಡು ಭಿತ್ತಿಗಳಿರುತ್ತವೆ. ಇವೇ ಭಿತ್ತಿಗಳು ಮೇಲ್ಕಟ್ಟಡದಲ್ಲೂ ಅದೇ ನೇರದಲ್ಲಿ ಮುಂದುವರಿಯುತ್ತವೆ. ಹೀಗಿದ್ದಾರೆ, ಗರ್ಭಗೃಹದ ಸುತ್ತ ಹಾಗೂ ಅದರ ಮೇಲ್ಭಾಗದಲ್ಲಿರುವ ಮೂಲಭಿತ್ತಿಗೆ ಗರ್ಭಭಿತ್ತಿ 'ಗೃಹಪಿಂಡಿ' ಎಂದೂ, ಹೊರಭಾಗದ ಭಿತ್ತಿಗೆ – 'ಅಂಧಾರಿಕಾ' ಎಂದೂ ಹೆಸರು. ಎರಡೂ ಭಿತ್ತಿಗಳ ನಡುವೆ ಅಥವಾ ಅನರ್ಪಿತ ತಲಗಳ ನಡುವೆ ಇರುವ ಸ್ಥಳಕ್ಕೆ 'ಅಲಿಂದ್ರ' (Aisle) ಎಂದು ಹೆಸರು. ಇಂತಹ ರಚನೆಯಲ್ಲಿ ಆದಿತಲದ ಪ್ರಸ್ತರದ ಮೇಲೆ ('ಅಂಧಾರಿಕಾ' ಭಾಗದಲ್ಲಿ) ಸುತ್ತಲೂ ಕೂಟ-ಶಾಲಾಗಳ ಹಾರವಿದ್ದು, ಅದಕ್ಕೆ 'ಖಂಡಹರ್ಮ್ಯ' (Engaged Structures) ಎಂದು ಹೆಸರು. ತಲಗಳ ಸಂಖ್ಯೆ ಹೆಚ್ಚಾದಷ್ಟೂ ತಲಗಳಲ್ಲಿ ಶಾಲಾ-ಕೂಟಗಳ ಸಂಖ್ಯೆಯೂ ಹೆಚ್ಚಾಗುತ್ತದೆಯಲ್ಲದೆ. ದೇವಾಲಯಗಳ ಎತ್ತರವೂ ಹೆಚ್ಚಾಗುತ್ತದೆ. ವಿವಿಧ ತಲಗಳುಳ್ಳ ದೇವಾಲಯಗಳನ್ನು ವಾಸ್ತುಗ್ರಂಥಗಳು ವಿವರಿಸಿದೆ. ಈ 'ತಲ'ಗಳ ಸಂಖ್ಯೆ, ಅವುಗಳಲ್ಲಿರುವ ಶಾಲಾ-ಕೂಟಗಳ ಸಂಖ್ಯೆ, ಶಿಖರದ ಆಕಾರ, ನಾಸಿಗಳ ಸಂಖ್ಯೆ ಈ ಎಲ್ಲ ಹಿನ್ನೆಲೆಯಲ್ಲಿ ದೇವಾಲಯಗಳನ್ನು ವಿವಿಧ 'ರೀತಿ'ಗಳಾಗಿ ಗುರುತಿಸಿ, ಹೆಸರಿಸುವುದುಂಟು[೨]. ದಾಕ್ಷಿಣಾತ್ಯ ಸಂಪ್ರದಾಯದ ದೇಗುಲಗಳಿಗೆ ಸಂಬಂಧಿಸಿದಂತಿರುವ ಪ್ರಮುಖ ವಾಸ್ತುಗ್ರಂಥವಾದ 'ಮಯಮತ' ದ ಹಿನ್ನೆಲೆಯಲ್ಲಿ ಈ ವಿವಿಧ ಪ್ರಕಾರಗಳನ್ನು ವಿಶ್ಲೇಷಿಸುವುದೇ ಈ ಲೇಖನದ ಉದ್ದೇಶ.

ದಾಕ್ಷಿಣಾತ್ಯ ದೇವಾಲಯುಗಳಿಗೆ ಸಂಬಂಧಿಸಿದಂತೆ, ನಾಗರ-ದ್ರಾವಿಡ-ವೇಸರ ಎಂಬ 'ಧಾಮ(ದೇವಾಲಯ)ಭೇದ'ವನ್ನು ಗ್ರಂಥವು ಗುರುತಿಸಿದೆ.

"ನಾಗರಂ ದ್ರಾವಿಡಂ ಚೈವ ವೇಸರಂ ಚ ತ್ರಿಧಾಮತಃ ।
ಚತುರಶ್ರಾಯತಾಶ್ರಂ ಯನ್ನಾಗರಂ ಪರಿಕೀರ್ತಿತಂ ॥
ಅಷ್ಟಾಶ್ರಂ ಚ ಷಡಶ್ರಂ ಚ ತತ್ತದಾಯಾಮಮೇವಚ ।
ಸೌಧಂ ದ್ರಾವಿಡ ಮಿತ್ಯುಕ್ತಂ ವೇಸರಂ ತು ಪ್ರಕಥ್ಯತೇ ॥
ವೃತ್ತಂ ವೃತ್ತಾಯತಂ ದ್ವ್ಯಶ್ರಂ ವೃತ್ತಂ ಚಾನ್ಯಂ ಪ್ರಕಥ್ಯತೇ ।
ಸ್ತೂಪ್ಯಂ ತಂ ಚತುರಶ್ರಂ ಯಸ್ನಾಗರಂ ಪ್ರಕೀರ್ತಿತಂ ॥
ಗ್ರೀವಾತ್ ಪ್ರಭೃತಿ ವಸ್ವಶ್ರಂ ವಿಮಾನಂ ದ್ರಾವಿಡಂ ಭವೇತ್ ।
ಗ್ರೀವಾತ್ ಪ್ರಭೃತಿ ವೃತ್ತಂ ಯದ್ ವೇಸರಂ ತದುದಾಹೃತಂ ॥

(ಮಯಮತ – ೧೯.೩೫-೩೮)

ಇದರಂತೆ, ಮೂಲದಿಂದ ತುದಿಯವರೆಗೂ ಅಂದರೆ, ಅಧಿಷ್ಠಾನದಿಂದ ಸ್ತೂಪಿಯವರೆಗೂ ಚತುರಶ್ರ ಅಥವಾ ಆಯತಾಕಾರವಾಗಿರುವ ದೇವಾಲಯವು –'ನಾಗರ' ' ಅಂತೇ, ಪೂರ್ಣ ಷಡಶ್ರ (೬ ಮುಖ) ಅಥವಾ ಅಷ್ಟಾಶ್ರ (೮ ಮುಖ) ವಾಗಿರುವ ದೇವಾಲಯವು –'ದ್ರಾವಿಡ'; ಅಲ್ಲದೆ, ಅಧಿಷ್ಠಾನದಿಂದ ಪ್ರಸ್ತರದವರೆಗೂ ಚರುತಶ್ರ ಅಥವಾ ಆಯತಾಕಾರವಾಗಿದ್ದು, ಗ್ರೀವದಿಂದ ಸ್ತೂಪಿಯವರೆಗೆ ಮಾತ್ರ ಷಡಶ್ರ ಅಥವಾ ಅಷ್ಟಾಶ್ರವಾಗಿದ್ದರೂ ಅದು ದ್ರಾವಿಡ ರೀತಿಯ ದೇವಾಲಯವು ಅಧಿಷ್ಠಾನದಿಂದ ಸ್ತೂಪಿಯವರೆಗೆ ವೃತ್ತ, ವೃತ್ತಾಯತ, ದ್ವ್ಯಶ್ರವೃತ್ತಾಕಾರ (–ಹಸ್ತಿಪೃಷ್ಠ) ವಾಗಿದ್ದಲ್ಲಿ ಅವು 'ವೇಸರ' ರೀತಿಯ ದೇವಾಲಯ ಎನಿಸಿಕೊಳ್ಳುತ್ತದೆ. ಇದರೊಂದಿಗೆ, ಗ್ರೀವದಿಂದ ಸ್ತೂಪಿಯವರೆಗೆ ಮಾತ್ರವೇ ಈ ಆಕಾರದಲ್ಲಿದ್ದರೆ, ಅವೂ ಕೂಡಾ 'ವೇಸರ' ರೀತಿಯ ದೇವಾಲಯವೇ ಎನಿಸುತ್ತದೆ. ಇಲ್ಲಿ ದೇವಾಲಯವು ಮೂಲದಿಂದ ತುದಿಯವರೆಗೂ ಒಂದೇ ಆಕಾರದಲ್ಲಿರಲಿ ಅಥವಾ ಶಿಖರ ಮಾತ್ರ ಆಯಾ ಆಕಾರದಲ್ಲಿದ್ದು ಮೂಲವು ಚೌಕ/ ಆಯತಾಕಾರದಲ್ಲಿರಲಿ, ಅದರ ಪ್ರಭೇದವನ್ನು ಶಿಖರದ ಆಕಾರದ ಆಧಾರದ ಮೇಲೇ ಗುರುತಿಸಲಾಗುತ್ತದೆ[೩]. ಈ ನಾಗರ-ದ್ರಾವಿಡ-ವೇಸರ ಪ್ರಭೇದಗಳು ಏಕತಲ ಅಥವಾ ಎಷ್ಟೋ ತಲಗಳಿರುವ ದೇವಾಲಯಗಳಿಗೂ ಅನ್ವಯವಾಗುತ್ತವೆ. ಷಡ್ವರ್ಗ ದೇವಾಲಯಗಳ ಶಿನೇ ಭಾಗಗಳಿಗೂ ಶಿಖರದ ಆಕಾರದ ಆಧಾರದಿಂದ ಈ ಪ್ರಭೇದವನ್ನು ಗುರುತಿಸಲಾಗುತ್ತದೆ. ಕಂಬದಹಳ್ಳಿಯಲ್ಲಿರುವ ಪಂಚಕೂಟ ಬಸದಿಯಲ್ಲಿ ಈ ಮೂರು – ಪ್ರಭೇದಗಳನ್ನು ಕಾಣಬಹುದಾಗಿದೆ.

ಮೇಲ್ಕಟ್ಟಡ (Superstructure)ದಲ್ಲಿ ಎಷ್ಟು ತಲಗಳಿವೆ ಎಂಬುದರ ಆಧಾರದ ಮೇಲೆ ಅವುಗಳನ್ನು ಅಲ್ಪವಿಮಾನ, ಜಾತಿವಿಮಾನ ಮತ್ತು ಮುಖ್ಯವಿಮಾನ ಎಂದು ವಿಂಗಡಿಸುವ ಪದ್ಧತಿ ಇದೆ. ಎರಡರಿಂದ ನಾಲ್ಕು ತಲಗಳನ್ನು ಹೊಂದಿರುವ ದೇವಾಲಯಗಳನ್ನು 'ಜಾತಿವಿಮಾನ' ಎಂದೂ, ಐದರಿಂದ ಹನ್ನೆರಡು ತಲಗಳನ್ನು ಹೊಂದಿರುವ ದೇವಾಲಯಗಳನ್ನು 'ಮುಖ್ಯವಿಮಾನ' ಎಂದೂ ಹೇಳುವರು[೪], ಹಾರ/ತಲರಹಿತವಾದ ಏಕತಲ ದೇವಾಲಯಗಳು 'ಅಲ್ಪವಿಮಾನ' ಎನಿಸುತ್ತವೆ. ಬೇಗೂರಿನ ಚೋಳೇಶ್ವರ, ಕಂಬದಹಳ್ಳಿಯ 'ತ್ರಿಕೂಟಬಸದಿ' – ಇವು ದ್ವಿತಲವನ್ನು ಹೊಂದಿದ್ದು, 'ಜಾತಿವಿಮಾನ' ಎನಿಸಿಕೊಳ್ಳುತ್ತವೆ. ಹಂಪೆಯ ಹಜಾರರಾಮ, ಪಟ್ಟದಕಲ್ಲಿನ ಸಂಗಮೇಶ್ವರ ದೇವಾಲಯಗಳು 'ತ್ರಿತಲವಿಮಾನ' ವಾಗಿದ್ದರೆ, ಪಟ್ಟದಕಲ್ಲಿನ ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ಮತ್ತು ಎಲ್ಲೋರದ ಕೈಲಾಸ ದೇವಾಲಯಗಳಲ್ಲಿ ಚತುಷ್ಠಲ ವಿಮಾನವಿದೆ. ಇವುಗಳೆಲ್ಲವೂ ಕೂಡಾ 'ಜಾತಿವಿಮಾನ'ದ ಗುಂಪಿಗೇ ಸೇರುತ್ತವೆ. ಅತಿ ಹೆಚ್ಚಿನ ತಲಗಳುಳ್ಳ ದೇವಾಲಯವೆಂದರೆ, ತಂಜಾವೂರಿನ ಬೃಹದೀಶ್ವರ ದೇವಾಲಯ' ಇದರಲ್ಲಿ ಹದಿಮೂರು ತಲಗಳಿವೆ. ಇದನ್ನು 'ಮುಖ್ಯ ವಿಮಾನ' ಎನ್ನಬಹುದು. ಮಯಮತದಲ್ಲಿ ಈ ರೀತಿಯ ವರ್ಗೀಕರಣವಿಲ್ಲ. ಬದಲಿಗೆ, ಕ್ಷುದ್ರ, ಅಲ್ಪ, ಮಧ್ಯಮ ಮತ್ತು ವರಾದಿ – ಎಂಬ ವರ್ಗೀಕರಣವಿದೆ[೫].

ಆದರೆ ಇದು ಅಳತೆಗೆ ಸಂಬಂಧಿಸಿದ್ದು, ಮೇಲೆ ಹೇಳಿದ ಅಲ್ಪ, ಜಾತಿ ವಿಮಾನಗಳೊಂದಿಗೆ ಹೋಲಿಸಲಾಗುವುದಿಲ್ಲ.

ವಿವಿಧ 'ತಲ'ಗಳಿಂದ ಕೂಡಿ ವೈವಿಧ್ಯಮಯವಾಗಿ ದೇವಾಲಯ ರಚಿಸುವುದನ್ನು ಮಯಮತದ ಅಧ್ಯಾಯ ೧೯ ರಿಂದ ೨೨ರಲ್ಲಿ ವಿವರಿಸಿದೆ. ಇದರಲ್ಲಿ ಒಂದೆಡೆ ೧೬ ತಲಗಳ ಬಗ್ಗೆ ಸೂಚನೆ ಇದ್ದರೂ[೬], ಒಟ್ಟು ೨ ರಿಂದ ೧೨ ತಲಗಳ ಬಗ್ಗೆ ಮಾತ್ರ ವಿವರವಿದೆ; ಹಾಗೂ ಅವುಗಳ ವಿವಿಧ ಮಾನದ ಅಳತೆಗಳ ಬಗ್ಗೆಯೂ ವಿವರವಿದೆ. ಇದರೊಂದಿಗೆ, ಈ ಅಳತೆಗಳನ್ನು ಚೆನ್ನಾಗಿ ತಿಳಿದವರು ೧೦ ರಿಂದ ೧೨ ತಲಗಳ ದೇವಾಲಯ ನಿರ್ಮಿಸಬೇಕು ಎಂದೂ ಅದು ಹೇಳಿದೆ. (೧೧.೧೨).[೭] ಈ ಹಿನ್ನೆಲೆಯಲ್ಲಿ, ಮಯಮತವು ಹೇಳುವ ಶಿಖರ ಪ್ರಭೇದಗಳನ್ನು ಏಕತಲ ಆದಿಯಾಗಿ ಇಲ್ಲಿ ಗಮನಿಸಲಾಗಿದೆ. ಇದರಂತೆ, ಮಯಮತದಲ್ಲಿರುವ ಏಕತಲದ ೮ ಪ್ರಭೇದಗಳೆಂದರೆ – ಶ್ರೀಕರ, ವೈಜಯಂತ, ಸ್ವಸ್ತಿಬಂಧ, ಸ್ಕಂದಕಾಂತ, ಹಸ್ತಿಪೃಷ್ಠ, ಶ್ರೀಭೋಗ, ಶ್ರೀವಿಶಲ ಮತ್ತು ಕೇಸರ. (೧೯.೩೧–೩೪) ಇವುಗಳನ್ನು ವಿವರಿಸುವಾಗ ಶಿಖರ ಮತ್ತಿತರ ಅಂಶಗಳ ಬಗ್ಗೆ ಹೇಳಿದ್ದರೂ, ತಳವಿನ್ಯಾಸ/ಆಕಾರದ ಬಗ್ಗೆ ಹೇಳಿಲ್ಲ. ಆದರೆ, ತಳವಿನ್ಯಾಸವು ಬಹುಶಃ ಚೌಕಾಕಾರವಾಗಿರುವುದೆಂದು ಸಂಪಾದಕರು ಹೇಳಿದ್ದಾರೆ.[೮]

ಏಕತಲ 'ಶ್ರೀಕರ' ರೀತಿಯ ದೇವಾಲಯದಲ್ಲಿ 'ಗಲ'(–ಗ್ರೀವ) ಮತ್ತು ಶಿರ (–ಶಿಖರ) –ಇವು ಚತುರಶ್ರವಾಗಿರುತ್ತವೆ (ಅಂದರೆ, ಇದು ಪೂರ್ಣ ಚತುರಶ್ರಾಕಾರದ ದೇವಾಲಯ ಎಂದು ಹೇಳಬಹುದು). ಬೇಗೂರಿನ ಕಮಠೇಶ್ವರ ದೇವಾಲಯ, ಉಳ್ಳಾಲದ ಸೋಮನಾಥ ದೇವಾಲಯ ಸಂಕೀರ್ಣದ ಗಣೇಶ ದೇವಾಲಯ. (ಚಿತ್ರ–೨) ಶ್ರವಣಬೆಳಗೊಳದ ಚಂದ್ರಗುಪ್ತ ಬಸದಿ, ಮುಳೂರುಪಟ್ಣದ 'ಅರ್ಕೇಶ್ವರ' ದೇವಾಲಯ–ಇವು ಚತುರಶ್ರಾಕಾರವಾಗಿದ್ದು, 'ಶ್ರೀಕರ' ರೀತಿಗೆ ಸೇರುತ್ತವೆ. ಗಲ ಮತ್ತು ಶಿಖರಗಳು ವೃತ್ತಾಕಾರವಾಗಿದ್ದರೆ ಅದು 'ವೈಜಯಂತ' ರೀತಿ ಎನಿಸಿಕೊಳ್ಳುತ್ತದೆ. ಅಂತೇ, ಶೀರ್ಷಕ (–ಶಿಖರ)ವು ಅಷ್ಟಾಶ್ರವಾಗಿದ್ದರೆ ಅದನ್ನು 'ಸ್ವಸ್ತಿಬಂಧ' ರೀತಿ ಎಂದೂ ಷಡಶ್ರವಾಗಿದ್ದರೆ ಅದನ್ನು 'ಸ್ಕಂಧಕಾಂತ' ರೀತಿ ಎಂದೂ ಗುರುತಿಸಲಾಗುತ್ತದೆ.[೯] 'ಹಸ್ತಿಪೃಷ್ಠ' ರೀತಿಯಲ್ಲಿ ಶಿಖರವು ಗಜಪೃಷ್ಠಾಕಾರದಲ್ಲಿರುತ್ತದೆ. 'ಶ್ರೀಭೋಗ' ರೀತಿಯ ರಚನೆಯಲ್ಲಿ ಗ್ರೀವ ಮತ್ತು ಮಸ್ತಕಗಳು ವೃತ್ತಾಕಾರವಾಗಿರಬೇಕಲ್ಲವೆ ಅದು ಕರ್ಣಕೂಟದಿಂದ ಕೂಡಿರಬೇಕು, ಎಂದೂ ಗ್ರಂಥವು ಹೇಳಿದೆ. ಹಿಂದಿನದರಂತೇ ವೃತ್ತಾಕಾರದ ಗ್ರೀವ, ಮಸ್ತಕ (–ಶಿಖರ)ವಿದ್ದು, ಕರ್ಣಕೂಟದ – ಮಧ್ಯದಲ್ಲಿ 'ಭದ್ರ' (–ಮುಂಚಾಚು)ವೂ ಇದ್ದರೆ ಅದು 'ಶ್ರೀವಿಶಾಲ' ಎನಿಸಿಕೊಳ್ಳುತ್ತದೆ. 'ಕೇಸರ' ಪ್ರಭೇದದಲ್ಲಿ ಗಲ ಮತ್ತು ಶಿರ(–ಶಿಖರ)ಗಳು ವೃತ್ತಾಕಾರ ಅಥವಾ ಚತುರಶ್ರವಾಗಿರುತ್ತವೆ. ಇದರಲ್ಲಿ ಕರ್ಣಕೂಟ, ಕೋಷ್ಠಕ (–ಶಾಲಾ)ಗಳಿರುವುದಲ್ಲದೆ. ಅವುಗಳ ಮಧ್ಯೆ 'ಭದ್ರ' ('ಮಧ್ಯಭದ್ರಕ') ವಿದ್ದು, ಅದರ ಮೇಲೆ ನಾಸಿ (–'ಭದ್ರನಾಸ್ಯಂಗ') ಇರುತ್ತದೆ. ಇಲ್ಲಿ ವಿವರಿಸಿರುವುದು ಏಕತಲದ ದೇವಾಲಯಗಳನ್ನಾದರೂ ಇಲ್ಲಿ ಶಾಲಾ ಕೂಟಗಳ ಬಗ್ಗೆ ಏಕೆ ಹೇಳಿದೆಯೇ ತಿಳಿಯುವುದಿಲ್ಲ.

ಒಟ್ಟಾರೆ, ಈ ವಿವರಗಳು ಹಿಂದೆ ಹೇಳಿದ ನಾಗರ–ದ್ರಾವಿಡ ಹಾಗೂ ವೇಸರಗಳ ವರ್ಗೀಕರಣಕ್ಕೆ ಹತ್ತಿರವಾಗಿರುವಂತಿದೆ. 'ನಾಗರ ಇತ್ಯಾದಿಗಳಲ್ಲೂ ಶಿಖರದ ಆಕಾರವೇ ಪ್ರಧಾನ; ಆದರೂ, ತಳವಿನ್ಯಾಸ ಅಥವಾ ಅಧಿಷ್ಠಾನವು ಶಿಖರದ ಆಕಾರ ಅಥವಾ ಯಾವುದೇ ಆಕಾರದಲ್ಲಿರಬಹುದು ಎಂದೇ ಹೇಳಿದೆ. ಅಂತೇ ಇಲ್ಲಿಯೂ ಕೂಡಾ, 'ತತ್ತನ್ನಾಮ್ನಾತತ್ತದಾಯಾಮಯುಕ್ತೇ' ಎಂದು ಹೇಳಿ ಕೆಳಕಟ್ಟಡವು ಯಾವುದೇ ಆಕಾರದಲ್ಲಿರಬಹುದು ಎಂಬ ಸೂಚನೆ ನೀಡಿದೆ. ಪೂರ್ಣ ದೇವಾಲಯವು

ಒಂದೇ ಸ್ವರೂಪದಲ್ಲಿರಬಹುದು – ಅಥವಾ 'ಗಲ'ದಿಂದ ಕೆಳಗೆ ಬೇರೆ ಆಕಾರದಲ್ಲಿರಬಹುದು. ಹೇಗಿದ್ದರೂ, ದೇವಾಲಯಕ್ಕೆ ಅದರದೇ ಹೆಸರು ಬರುತ್ತದೆ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.[೧೦] ವ್ಯತ್ಯಾಸವೆಂದರೆ, ಶ್ರೀಕರ ವೈಜಯಂತ ಮುಂತಾದ ಪ್ರಭೇದಗಳು ಏಕತಲ ದೇವಾಲಯಕ್ಕೆ ಮಾತ್ರ ಅನ್ವಯವಾಗುತ್ತದೆ. ಅಲ್ಲದೆ, ಇದರಲ್ಲಿ ಹೆಚ್ಚಿನ ಪ್ರಭೇದಗಳನ್ನು ಗುರುತಿಸಲಾಗಿದೆ.

ಮಯಮತವು ಎರಡು ತಲವಿರುವ (ದ್ವಿತಲ) ದೇವಾಲಯಗಳಿಗೆ ಸಂಬಂಧಿಸಿದಂತೆ ೧೫ ವಿಧಿಗಳನ್ನು ಹೇಳಿದೆ.[೧೧] ಅವುಗಳೆಂದರೆ, ಸ್ವಸ್ತಿಕ, ವಿಪುಲಸುಂದರ, ಕೈಲಾಸ, ಸ್ವಸ್ತಿಬಂಧ, ಕಲ್ಯಾಣ ಪಾಂಚಾಲ, ಸುಮಂಗಲ, ಈಶ್ವರಕಾಂತ, ಪರ್ವತ, ಕುಬೇರಕಾಂತ, ವಿಷ್ಣುಕಾಂತ, ಗಾಂಧಾರ, ಹಸ್ತಿಪೃಷ್ಠ, ಮನೋಹರ ಮತ್ತು ವೃತ್ತಹರ್ಮ್ಯ (೨೦.೬–೫೧ ಎ). ಇವುಗಳಿಗೆ ೫ ರೀತಿಯ ಅಳತೆಗಳನ್ನು ಹೇಳಿದೆ (೨೦.೧–೨ಎ). ಇದರಂತೆ, 'ಸ್ವಸ್ತಿಕ' ರೀತಿಯ ರಚನೆಯಲ್ಲಿ ಅಧಿಷ್ಠಾನವು ಚತುರಶ್ರವಾಗಿದ್ದು, ಕಂಧರ (–ಗ್ರೀವ) 'ಮಸ್ತಕ' (–ಶಿಖರ)ಗಳೂ ಚತುರಶ್ರವಾಗಿರಬೇಕು. ಇದರಲ್ಲಿ ೪ ಕೂಟ, ೫ ಕೋಷ್ಠ (–ಶಾಲಾ) ಹಾಗೂ 'ಭದ್ರನೀಡ' (ಮುಂಚಾಚಿದ ನಾಸಿಕೋಷ್ಠ)ದ ಮೇಳೆ ೮ ಅಲ್ಪನಾಸಿಗಳೂ, ಶಿಖರದ ಮೇಲೆ ೪ 'ನೀಡ' (–ನಾಸಿ)ಗಳೂ ಇರಬೇಕು. ಹಾರಾಂತರದ ಮಧ್ಯೆ ಭಿತ್ತಿಯಲ್ಲಿ 'ಕುಂಭಲತಾ' ಇರಬೇಕು. ನಾನಾ ಪ್ರಕಾರಗಳ ತೋರಣ, ವೇದಿಕಾ ಇರಬೇಕು; ನಾನಾ ಚಿತ್ರಗಳಿಂದ ಕೂಡಿರಬೇಕು. ಇದು ಎಲ್ಲ ದೇವರಿಗೂ ಸೂಕ್ತವಾದುದು. ಇದರಲ್ಲಿ ಒಟ್ಟು ೪೮ ಅಲ್ಪನಾಸಿಗಳಿರುವುದಾಗಿಯೂ ಹೇಳಲಾಗಿದೆ (೨೦.೬–೯ಎ). ಒಂದೊಂದು ಕೂಟ, ಒಂದೊಂದು ಶಾಲಾಗಳಲ್ಲಿ ನಮಗೆ ಕಾಣುವಂತೆ ಕ್ರಮವಾಗಿ ೨ ಮತ್ತು ೩ ನಾಸಿಗಳಿರುತ್ತವೆ. ಇವು ಮುಂಭಾಗದಲ್ಲಿ ಮತ್ತು ಪಾರ್ಶ್ವಗಳಲ್ಲಿ ('ಶಾಲಾ' ಗಳಲ್ಲಿ ಎರಡು ಪಾರ್ಶ್ವಗಳು) ಇರುತ್ತವೆ. ೪ ಕೂಟ, ೪ ಕೋಷ್ಠ ಎಂದರೆ ಅವುಗಳ ಮೇಲೆ ಒಟ್ಟು ೨೦ ನಾಸಿಗಳೂ, 'ಭದ್ರನೀಡ'ದ ೮ ನಾಸಿಗಳೂ, ತಲಪ್ರಸ್ತರದಲ್ಲಿ ೧೬ ಹಾಗೂ ಶಿಖರದಲ್ಲಿ ೪ ನಾಸಿಗಳೂ (–ಮಹಾನಾಸಿ) ಸೇರಿ, ಇಲ್ಲಿ ಒಟ್ಟು ೪೮ ನಾಸಿಗಳಾಗುತ್ತವೆ.[೧೨] ಇದರೊಂದಿಗೆ, 'ಕುಂಭಲತಾ' ಇರಬೇಕೆಂದೂ ಗ್ರಂಥವು ಹೇಳಿದೆ. ಆದರೆ, ಸಾಮಾನ್ಯವಾಗಿ ಅದು ಮೇಲ್ಕಟ್ಟಡದಲ್ಲಿರುವುದಿಲ್ಲ; ಕೆಲವೆಡೆ ಅದರದೇ ಮಾದರಿಯಾದ 'ವೃತ್ತಸ್ಫುಟಿತ' ಇರುತ್ತದೆ.[೧೩] ಬೇಗೂರಿನ ಚೋಳೇಶ್ವರ ದೇವಾಲಯವು 'ದ್ವಿತಲ ಸ್ವಸ್ತಿಕ' ರೀತಿಯ ದೇವಾಲಯ ಎಂದು ಉದಾಹರಣೆಗೆ ಹೇಳಬಹುದಾಗಿದೆ. ಇದರಲ್ಲಿನ ಹಾರ ಮತ್ತು ಹಾರಾಂತರಗಳ ಅಂಗಗಳು ಮೇಲೆ ಹೇಳಿದಂತೇ ಇದ್ದು, ಗ್ರಂಥೋಕ್ತಿಯಂತೆ ೪೮ ನಾಸಿಗಳಿವೆ. ಸುಂದರವಾದ ಶಿಖರವಿರುವ ಭವನಾಸೀ ಸಂಗಂನ ಭುಜಂಗೇಶ್ವರ ದೇವಾಲಯ, ಹರದನಹಳ್ಳಿಯ ದಿವ್ಯ ಲಿಂಗೇಶ್ವರ ದೇವಾಲಯ – ಇವುಗಳ ಶಿಖರಗಳೂ ಚೌಕಾಕಾರದಲ್ಲಿದ್ದು[೧೪], ಇವು 'ದ್ವಿತಲ ಸ್ವಸ್ತಿಕ' ದೇವಾಲಯಗಳಾಗಿವೆ. ಇವುಗಳಲ್ಲಿ ತಲಾ ೪–೪ ಕೂಟ–ಶಾಲಾಗಳೂ, ವೃತ್ತಸ್ಫುಟಿತ/ಕುಂಭಲತಾದ ಬದಲು ೮ ನಾಸಿಕೋಷ್ಠಗಳೂ ಇದ್ದು, ಒಟ್ಟು ೪೮ ನಾಸಿಗಳು ಸರಿಯಾಗಿವೆ.

ದ್ವಿತಲದ 'ವಿಪುರಸುಂದರ' ಪ್ರಭೇದವು ಸ್ವಸ್ತಿಕ ರೀತಿಯಂತೇ ಇರುವುದು. ಅಂದರೆ, ಪೂರ್ಣ ಚತುರಶ್ರವಾಗಿದ್ದು, ೪ ಕೂಟ, ೪ ಕೋಷ್ಠ (–ಶಾಲಾ) 'ಭದ್ರನೀಡ'ದ ಮೇಲೆ ೮ ಅಲ್ಪನಾಸಿಗಳು ಮತ್ತು ಶಿಖರದಲ್ಲಿ ೪ ನೀಡ (–ನಾಸಿ)ಗಳಿರುತ್ತವೆ. ಕೋಷ್ಠವು ಕೂಟಕ್ಕಿಂತ ಎತ್ತರವಾಗಿರುತ್ತದೆ. ಅಂದರೆ, ಕೋಷ್ಠಕ್ಕೆ ವೇದಿ ಇರಬೇಕು (೨೦.೯ಬಿ–೧೦ಎ) (ಸ್ವಸ್ತಿಕಕ್ಕೂ ಇದಕ್ಕೂ ಇರುವ ವ್ಯತ್ಯಾಸವೆಂದರೆ– ಇದೇ). ಗ್ರಂಥದಲ್ಲಿ ಹೀಗೆ ಹೇಳಿದ್ದರೂ, ಸಾಮಾನ್ಯವಾಗಿ ಕೂಟ, ಶಾಲಾಗಳು ಒಂದೇ ಎತ್ತರದಲ್ಲಿರುತ್ತವೆ. ಇಲ್ಲಿ ಕೂಟವನ್ನು 'ಸೌಷ್ಠಿಕ' ಎಂದೂ, 'ವೇದಿ'–ಯನ್ನು 'ಅಂತರಪ್ರಸ್ತರ' ಎಂದೂ ಪರ್ಯಾಯವಾಗಿ ಹೇಳಿದೆ.

'ಕೈಲಾಸ' ರೀತಿಯ ದೇವಾಲಯವು 'ವಿಪುಲಸುಂದರ' ರೀತಿಯಂತೇ ಪೂರ್ಣ ಚತುರರ್ಶರವಾಗಿದ್ದರೂ, ಇದರಲ್ಲಿ ಕೋಷ್ಠಕವು ನಿಮ್ನವಾಗಿದ್ದು, ಸೌಷ್ಠಿಕ(–ಕೂಟ) ವು ಎತ್ತರವಾಗಿರುತ್ತದೆ; ಅಂದರೆ, ಕೂಟದ ಕೆಳಗೆ 'ಅಂತರಪ್ರಸ್ತರ(–ವೇದಿ) ಇರುತ್ತದೆ (೨೦.೧೨ಬಿ–೧೩ಎ). 'ಸ್ವಸ್ತಿಬಂಧ' ಪ್ರಭೇದದಲ್ಲೂ ಗ್ರೀವ, ಶಿಕ (–ಶಿಖರ)ಗಳು, ಚೌಕಾಕಾರವಾಗಿರುತ್ತವೆ. 'ಶಿಖರ' (–ಮೇಲ್ಕಟ್ಟಡ)ದಲ್ಲಿ ೪ ಅರ್ಧಕೋಷ್ಠಕ, ೪ ಕೂಟ, ೪೮ ಅಲ್ಪನಾಸಿಗಳಿರುತ್ತವೆ. ಇದು ನಾನಾ ರೀತಿಯ ಅಧಿಷ್ಠಾನಗಳಿಂದ ಕೂಡಿದ್ದು ನಾನಾ ಅವಯವಗಳಿಂದ ಶೋಭಿಸುತ್ತದೆ. (೨೦.೧೬ಬಿ–೧೮ಎ) ಸ್ವಸ್ತಿಕ ಅಥವಾ ಇತರ ರೀತಿಗಳಿಗಿಂತ ಇಲ್ಲಿ ಭಿನ್ನವಾದದ್ದೆಂದರೆ, ಇಲ್ಲಿ 'ಹಾರ'ದಲ್ಲಿರುವ ಕೋಷ್ಠಕದ ಬದಲು ಶಿಖರದಲ್ಲಿ ೪ ಅರ್ಧಕೋಷ್ಠಕವಿರುವುದು. ಅರ್ಧಕೋಷ್ಠಕದ ಬಗ್ಗೆ ಸಂಪಾದಕರು, 'Gable frontage of those half koshtha makes up a kind of miniature protruding porch' ಎಂದಿದ್ದಾರೆ. ಇಲ್ಲಿ ಕೋಷ್ಠವನ್ನು ಹೇಳಿಲ್ಲದಿರುವುದರಿಂದ ಮತ್ತು ೪೮ ಅಲ್ಪನಾಸಿಗಳಿರಬೇಕು ಎಂದಾಗ ಕೋಷ್ಠವು (–ಶಾಲಾ) ಇರಬೇಕಾಗುತ್ತದಾದ್ದರಿಂದ ಇಲ್ಲಿ ಕೋಷ್ಠಕದ ಮುಂದಿರುವ ಗೂಡಿನಂತಹ ಭಾಗವನ್ನು

ಪರೋಕ್ಷವಾಗಿ ಹೇಳುತ್ತಿದೆ ಎಂದು ಊಹಿಸಬಹುದು. ಹಾಗಿದ್ದಲ್ಲಿ ಅದು ಪೂರ್ತಿಯಾಗಿ ಕೋಷ್ಠವೆಂದೇ ನೇರವಾಗಿ ಹೇಳಬಹುದಿತ್ತೆನಿಸುತ್ತದೆ. ಆದ್ದರಿಂದ ಈ ಬಗ್ಗೆ ಅನುಮಾನ ಮೂಡುತ್ತದೆ. ಅರ್ಧಕೋಷ್ಠಕವು ಶಿಖರದಲ್ಲಿರುವುದು ಎಂದಿರುವುದರಿಂದ, ಬಹುಶಃ ಇದು ಗ್ರೀವದ ಮೇಲೆ ಶಿಖರದ ಅಂಚಿನವರೆಗು ಇರುವ ಗ್ರೀವಕೋಷ್ಠವನ್ನು ಹೇಳುತ್ತಿರಬಹುದೇ ಎನಿಸುತ್ತದೆ. ಇದು ಅರ್ಧಕೋಷ್ಠದಂತೇ ಚಿಕ್ಕದಾಗಿರುತ್ತದೆ. ಪಟ್ಟದಕಲ್ಲಿನ ಸಂಗಮೇಶ್ವರ ದೇವಾಲಯದಲ್ಲಿ ಗ್ರೀವಕೋಷ್ಠದಲ್ಲಿ ಶಾಲಾ ಇದ್ದು. ಇದನ್ನೂ 'ಅರ್ಧ ಕೋಷ್ಠಕ' ಎಂದು ಗುರುತಿಸಬಹುದೆನಿಸುತ್ತದೆ.

'ಕಲ್ಯಾಣ' ರೀತಿಯ ರಚನೆಯಲ್ಲಿ 'ಸೌಷ್ಠಿಕ' (-ಕೂಟ) ಮತ್ತು ಕೋಷ್ಠ (ಶಾಲಾ)ಗಳು ಅಂತರ ಪ್ರಸ್ತರದ (-ವೇದಿ) ಮೇಲಿರುವುದು ಹಾಗೂ ಹಾರ(?) ಅಲ್ಪ ಪಂಜರ(ನಾಸಿಕೋಷ್ಠ)ಗಳು ಅದಕ್ಕಿಂತಲೂ ಕೆಳಗಿರುವುದು. ಇದರೊಂದಿಗೆ, ೭೨ ಅಲ್ಪನಾಸಿಕಗಳೂ ಇರುತ್ತವೆ (೨೦.೧೮ಬಿ-೧೯).[೧೬] ಇದರಲ್ಲಿ ಶಿಖರದ, ಆಕಾರದ ಬಗ್ಗೆ ಹೇಳಿಲ್ಲವಾದರೂ, ಸ್ವಸ್ತಿಬಂಧದಿಂದ ಮುಂದುವರಿದು, 'ತದೇವ' ಎಂದು ಹೇಳಿರುವುದರಿಂದ ಇದರ 'ಶಿರ' ಭಾಗವು ಚತುರಶ್ರವಾಗಿರುತ್ತದೆ- ಎಂದು ತಿಳಿಯಬಹುದು; ಅದರಂತೆ, ಬಹುಶಃ ಇದರಲ್ಲೂ ಅರ್ಧಕೋಷ್ಠಕಗಳಿರುತ್ತವೆ. ವ್ಯತ್ಯಾಸವೆಂದರೆ, ಇದರಲ್ಲಿ ಹಾರ, ಅಲ್ಪಪಂಜರಗಳಿವೆ. ಅಲ್ಪಪಂಜರವೆಂದರೆ, ನಾಸಿ ಮಾತ್ರವಾಗಿರದೆ, ನಾಸಿಕೋಷ್ಠವನ್ನೂ ಸೂಚಿಸುವಂತಿದೆ. ಇಲ್ಲಿ ಕೂಟ. ಕೋಷ್ಠ ಯಾವುದಕ್ಕೂ ಸಂಖ್ಯೆಯನ್ನು ಹೇಳಿಲ್ಲ. ದ್ವಿತಲದಲ್ಲಿ ಸಾಮಾನ್ಯವಾಗಿರುವಂತೆ ೪ ಕೂಟ, ೪ ಕೋಷ್ಠಗಳಿರುವುದೆಂದು ತಿಳಿಯಬಹುದಾಗಿದೆ. ಇದರೊಂದಿಗೆ ಶಾಲಾ ಅಕ್ಕಪಕ್ಕ ಎರಡೆರಡರಂತೆ ೧೬ ಅಲ್ಪಪಂಜರ/ನಾಸಿಕೋಷ್ಠಗಳು ಇರುತ್ತವೆ. ಅಲ್ಲದೆ. ಗ್ರೀವದಲ್ಲಿ ೪ ಅರ್ಧಕೋಷ್ಠಕಗಳೂ (೧೨ ನಾಸಿ) ಮತ್ತು ೮ ನಾಸಿಗಳಿರುತ್ತವೆ- (-ಶಿಖರದಲ್ಲಿ). ಹೀಗಿದ್ದರೂ ಇಲ್ಲಿ ಒಟ್ಟು ೫೬ ನಾಸಿಗಳಾಗುತ್ತವೆ. ಉಳಿದ ೧೬ ನಾಸಿಗಳು ಬಹುಶಃ 'ತಲಪ್ರಸ್ತರ'ದಲ್ಲಿರುವುದೆಂದು ತಿಳಿಯಬಹುದಾಗಿದೆ. ಸಾಮಾನ್ಯ ರಚನೆಯ ಹಿನ್ನೆಲೆಯಲ್ಲಿ 'ಕಲ್ಯಾಣ' ರೀತಿಯ ಮೇಲ್ಕಟ್ಟಡದಲ್ಲಿರುವ ಕೂಟ, ಶಾಲಾ ಹಾಗೂ ನಾಸಿಗಳ ಸಂಖ್ಯೆಯನ್ನು ಈ ರೀತಿ ಊಹಿಸಬಹುದಾಗಿದೆ.

ದ್ವಿತಲವಿರುವ ಶಿಖರದಲ್ಲಿ 'ಅರ್ಧಕೋಷ್ಠಕ'ಗಳಿರದೆ. ೪ ನೀಡ (-ನಾಸಿ)ಗಳಿದ್ದರೆ, ಅದು 'ಪಾಂಚಾಲ' ರೀತಿ ಎಂದು ಮಯಮತವು ಹೇಳಿದೆ (೨೦.೨೦). ಹೆಚ್ಚಿನ ವಿವರಗಳಿರುವ ಇದರ ರಚನೆಯನ್ನು 'ಹಿಂದಿನದರಂತೇ ಎಂದು ಗ್ರಹಿಸಬಹುದಾಗಿದೆ (ಅಂದರೆ, ಮುಖ್ಯವಾಗಿ ಶಿಖರವು ಚತುರಶ್ರವಾಗಿರುತ್ತದೆ). 'ಸುಮಂಗಲ' ರೀತಿಯ ರಚನೆಯಲ್ಲಿ ಕೂಟ-ಶಾಲಾಗಳಿಗೆ 'ಅಂತರಪ್ರಸ್ತರ' ಇರುವುದಿಲ್ಲ. ವೇದೀ ಕಂಧರ (-ಗ್ರೀವ), ಶಿಖರಗಳು ಆಯತಾಶ್ರವಾಗಿರುತ್ತವೆ ಹಾಗೂ ೩ ಸ್ತೂಪಿಗಳಿರುತ್ತವೆ (೨೦.೨೨-೨೩). ಆಯತಾಕಾರದ ಶಿಖರವೆಂದಾಗ ಅದು ಶಾಲಾ ರೀತಿಯಲ್ಲೇ ಇರುತ್ತದೆ ಹಾಗೂ ಸಾಲಾಗಿ ೩ ಸ್ಥೂಪಿಗಳಿರುತ್ತವೆ. ಹೀಗಾಗಿ, ಶಾಲಾಕಾರದ ಶಿಖರವಿರುವ ದೇವಾಲಯಗಳು ಇದಕ್ಕೆ ಉದಾಹರಣೆಯಾಗಿ ನಿಲ್ಲುತ್ತವೆ. ಕೋಲಾರದ ಕೋಲಾರಮ್ಮ ದೇವಾಲಯವನ್ನಿಲ್ಲಿ ನೆನೆಯಬಹುದು.

"ತದೇವ ಜನ್ಮಾದ್ಯಾ ಕುಂಭಾದ ವೃತ್ತಂ ಚೇತಿ ಬಹಿರ್ಬಹಿ;" (೨೦.೨೭ಬಿ-೨೮ಎ) -ಅಂದರೆ, 'ಜನ್ಮ' (-ಉಪಾನ)ದಿಂದ 'ಕುಂಭ'(ಸ್ಥೂಪಿ/ಕಲಶ)ದವರೆಗೆ ವೃತ್ತಾಕಾರದಲ್ಲಿರಬೇಕು. ಎಂಬುದು 'ಈಶ್ವರಕಾಂತ' ರಚನೆಯ ವಿಶೇಷ. (ಉಳಿದದ್ದು ಹಿಂದೆ ಹೇಳಿದಂತೆ). ಇಲ್ಲಿ 'ಬಹಿರ್ಬಹಿ;' ಎಂಬುದರ ಅರ್ಥ ಸ್ಪಷ್ಟವಾಗಿಲ್ಲ. ಸಂಪಾದಕರು ಇದನ್ನು 'within and without' ಎಂದಿದ್ದಾರೆ. ಇದನ್ನು ಒಳಭಾಗ ಮತ್ತು ಹೊರಭಾಗ – ಎರಡೂ ಕಡೆ ವೃತ್ತಾಕಾರದಲ್ಲಿರಬೇಕು ಎಂದು ಅರ್ಥೈಸಬಹುದಾಗಿದೆ. 'ಪರ್ವತ' ರೀತಿಯ ರಚನೆಯೂ ಕೂಡಾ ವೃತ್ತಾಕಾರದ ರಚನೆಯೇ ಆಗಿದೆ. ಇದರಲ್ಲಿ- ವೇದಿ. ಕಂಧರ, ಶಿಖರ, ಘಟ- ಇವು ವರ್ತುಲಾಕಾರದಲ್ಲಿರಬೇಕು. ೮ ಕೂಟ, ೮ ಶಾಲಾ ಹಾಗೂ ೫೬ ನಾಸಿಗಳಿರಬೇಕು. ಕೂಟ, ಕೋಷ್ಠಕಗಳ ಗ್ರೀವ, ಶಿರಗಳು ಸಮವಾಗಿರಬೇಕು. ನಾನಾ ಅಧಿಷ್ಠಾನ, ನಾನಾ ಪಾದ (Pillar)ಗಳಿಂದ ಕೂಡಿರಬೇಕು (೨೦.೧೩ಬಿ-೧೬ಎ). ಇಂತಹ ರಚನೆಯ 'ಪರ್ವತ' ರೀತಿ ಎನಿಸಿದ್ದು, ಇದು ಎಲ್ಲೆಡೆ (ಅಂದರೆ, ಎಲ್ಲ ದೇವಾಲಯಗಳಿಗೂ) ಸೂಕ್ತವಾದುದು. ಇದರಲ್ಲಿ ೮ ಕೂಟ, ೪ ಕೋಷ್ಠ, ಹೇಳಿ, ೫೬ ನಾಸಿಗಳನ್ನು ಹೇಳಿರುವುದರಿಂದ, ಶಿಖರದಲ್ಲಿ ೪ ನಾಸಿಗಳಿರುತ್ತವೆಂದು ಊಹಿಸಬಹುದಾಗಿದೆ. ಬೇಗೂರಿನ – ನಾಗೇಶ್ವರ ದೇವಾಲಯವು ವೃತ್ತಾಕಾರದ ಶಿಖರವನ್ನು ಹೊಂದಿದ್ದು, ಇದು 'ದ್ವಿತಲ ಪರ್ವತ' ರೀತಿಗೆ ಒಂದು ಉದಾಹರಣೆಯಾಗಬಲ್ಲುದಾಗಿದೆ. ಇದರಲ್ಲಿ ೧೬ ವೃತ್ತ ಸ್ಫುಟಿತಗಳೂ ಇವೆ. ಗ್ರಂಥದಲ್ಲಿ ಹೇಳಿರುವಂತೆ ೮ ಕೂಟಗಳಿದ್ದು, ೪ ಕೂಟಗಳು, ತಲಗಳಲ್ಲಿದ್ದು, ಉಳಿದ ೪ ಕೂಟಗಳು ಗ್ರೀವ ಭಾಗದಲ್ಲಿ ಮೂಲೆಗಳಲ್ಲಿವೆ. (ಬಹುಶಃ ಗ್ರಂಥವೂ ಇಂತಹ ಜೋಡಣೆಯನ್ನೇ ಹೇಳಿರಬೇಕು; ಏಕೆಂದರೆ ತಲದ ಮೂಲೆಗಳಲ್ಲಿ

೪ಕ್ಕಿಂತ ಹೆಚ್ಚು, ಇರುವುದು ಸಾಧ್ಯವಿಲ್ಲ). ಗ್ರಂಥದಲ್ಲಿ ೫೬ ನಾಸಿಗಳನ್ನು ಹೇಳಿದೆ. ಇಲ್ಲಿ ೮ ಕೂಟಗಳ ಮೇಲೆ ಒಟ್ಟು ೧೬ ನಾಸಿಗಳೂ, ೪ ಶಾಲಾಗಳ ಮೇಲೆ ಒಟ್ಟು ೧೨ ನಾಸಿಗಳೂ ಇವೆ. ವೃತ್ತಸ್ಫುಟಿತದ ೧೬ ನಾಸಿಗಳೂ, ಶಿಖರದ ೪ ನಾಸಿಗಳೂ ಸೇರಿ ಒಟ್ಟು ೪೮ ನಾಸಿಗಳಾಗುತ್ತವೆ. ೨೪ ನಾಸಿಗಳು ತಲಪ್ರಸ್ತರದ್ದಾಗಿದ್ದು, ಒಟ್ಟು ೫೬ ನಾಸಿಗಳನ್ನು ಹೇಳುವ ಗ್ರಂಥಕ್ಕೆ ಅನುಗುಣವಾಗಿರದೆ ೧೬ ನಾಸಿಗಳು ಹೆಚ್ಚಾಗಿವೆ[೧೭]. ಕುಂಭಲತಾ ವೃತ್ತಸ್ಫುಟಿತವನ್ನು ಇಲ್ಲಿ ಹೇಳಿರದಿದ್ದರೂ ವಿಶೇಷವಾಗಿ ರಚಿಸಲಾಗಿದೆ.

ದ್ವಿತಲ ದೇವಾಲಯಗಳ ಅಧಿಷ್ಠಾನವು ಆಯತಾಕಾರವಾಗಿದ್ದು, ಕಂಧರ, ಶಿರಗಳು ಷಡಶ್ರವಾಗಿದ್ದರೆ, ಅದು 'ಕುಬೇರಕಾಂತ' ರೀತಿ ಎನಿಸುತ್ತದೆ (೨೦.೨೯ಬಿ–೩೦ಎ); ಅದೇ ರೀತಿಯಾಗಿ ಮೇಲ್ಕಟ್ಟಡದ ವೇದಿ, ಕಂಧರ, ಶಿಖರ, ಘಟ–ಎಲ್ಲವೂ ೮ ಮುಖವಾಗಿದ್ದು ಶಿಖರದಲ್ಲಿ ೮ ಮಹಾನಾಸಿಗಳಿದ್ದರೆ ಅದು 'ವಿಷ್ಣುಕಾಂತ' ರೀತಿ (೨೦.೨೧). ಇಲ್ಲಿ 'ಘಟ' (–ಸ್ಥೂಪಿ)ವನ್ನೂ 'ಅಷ್ಟಮುಖ' ವೆಂದು ಹೇಳಿರುವುದು ವಿಶೇಷವಾಗಿದೆ. ಕಂಬದಹಳ್ಳಿಯ ತ್ರಿಕೂಟ ಬಸದಿಯಲ್ಲೊಂದು ಬಸದಿಯ (ಪಶ್ಚಿಮದಿಕ್ಕಿನಲ್ಲಿರುವುದು) ಶಿಖರವು ಅಷ್ಟಾಶ್ರವಾಗಿದ್ದು ಅದನ್ನು 'ವಿಷ್ಣುಕಾಂತ' ರೀತಿ ಎಂದು ಗುರುತಿಸಬಹುದು (ಇದರಲ್ಲಿ ಈಗ ಸ್ತೂಪಿ ಇಲ್ಲ; ಆದರೂ, ಅದು ೮ ಮುಖವಾಗಿತ್ತೆಂದು ಊಹಿಸಬಹುದಾಗಿದೆ.[೧೮]

ವೇದಿಕಾ, ಕಂಧರ, ಶಿರವು ಆಯತವೃತ್ತಾಕಾರ (Elliptical)ದಲ್ಲಿದ್ದು, ಸರ್ವಾವಯವ ಸಂಯುಕ್ತವಾಗಿದ್ದರೆ, ಅದು 'ಗಾಂಧಾರ' ರೀತಿ ಎನಿಸುತ್ತದೆ (೨೦.೨೪) ಇದರಲ್ಲಿ ತಳವಿನ್ಯಾಸವು ಆಯತ ಅಥವಾ ಚತುರಶ್ರಾಕಾರದಲ್ಲಿರುತ್ತದೆ. ಇದೇ ದ್ವ್ಯಶ್ರಾಕಾರದ ಮತ್ತೊಂದು ರೀತಿಯ ರಚನೆಯೆಂದರೆ, 'ಹಸ್ತಿಪೃಷ್ಠ' ರೀತಿ ಇದರಲ್ಲಿ ಮಸೂರಕವು ದ್ವ್ಯಶ್ರವಾಗಿರಬೇಕು; ಶಿರವೂ ದ್ವ್ಯಶ್ರವೃತ್ತಾಕಾರದಲ್ಲಿದ್ದು, ಮುಖಭಾಗವು 'ನೇತ್ರಶಾಲಾ'ದಿಂದ, ಅಂದರೆ, ಜೋಡಿ 'ಶಾಲಾ'ದಿಂದ ಕೂಡಿರಬೇಕು (–'ನೇತ್ರಶಾಲಾ ಮುಖಾನ್ವಿತಂ').[೧೮ಅ] ಈ ರೀತಿಯದನ್ನು 'ಹಸ್ತಿಪೃಷ್ಠ' ರೀತಿ ಎಂದು ಗುರುತಿಸಲಾಗಿದೆ (೨೦.೨೫–೨೬ಎ) ತಳವಿನ್ಯಾಸ ಆಯತಾಕಾರವಾಗಿರಬೇಕೆಂದು ಒಂದೆಡೆ ಹೇಳಿದ್ದರೂ, ಇನ್ನೊಂದೆಡೆ ಮಸೂರಕ (Base)ಕ್ಕೆ ದ್ವ್ಯಶ್ರವೃತ್ತಾಕಾರ (Apsidal)ವನ್ನೇ ಹೇಳಿದೆ.[೧೯] ಹಳೆಯ ಮಹಾಕೂಟದ ಶಿವ ದೇವಾಲಯ, ಐಹೊಳೆಯ ದುರ್ಗ ದೇವಾಲಯ ಮತ್ತು ಚಿಕ್ಕಗುಡಿಯ ಉತ್ತರದಲ್ಲಿರುವ ದೇವಾಲಯ, ಈಸೂರಿನ ಒಂದು ದೇವಾಲಯ – ಇವೆಲ್ಲವೂ ಗಜಪೃಷ್ಠಾಕಾರದಲ್ಲಿದ್ದರೂ, ಇವುಗಳ ಮೇಲೆ ಶಿಖರ ಇಲ್ಲದಿರುವುದರಿಂದ (ದುರ್ಗಾ ದೇವಾಲಯದಲ್ಲಿ ಮಾತ್ರ ಭಿನ್ನ ರೀತಿಯಲ್ಲಿದೆ) ಈ ರೀತಿಯ ಪ್ರಭೇದವು ಕರ್ನಾಟಕದಲ್ಲಿ ಉಳಿದಿಲ್ಲ ಎನ್ನಬಹುದು.

'ಮನೋಹರ' ರೀತಿಯಲ್ಲಿ ಅಧಿಷ್ಠಾನವು ಚತುರಶ್ರವಾಗಿದ್ದು, – ಗರ್ಭಗೇಹವು ವೃತ್ತಾಕಾರವಾಗಿರಬೇಕು. ಹಾಗೂ ಸರ್ವಾಲಂಕಾರಗಳಿಂದ ಕೂಡಿರಬೇಕು (೨೦.೨೬ಬಿ–೨೭ಎ) ಇದರಲ್ಲಿ ಶಿಖರದ ಬಗ್ಗೆ ಯಾವುದೇ ವಿವರವನ್ನೂ ನೀಡಿಲ್ಲ. 'ಅಧಿಷ್ಠಾನವು ಚತುರಶ್ರವಾಗಿರಬೇಕು' ಎಂದಿರುವುದರಿಂದ ಬಹುಶಃ ಮೇಲ್ಭಾಗವೂ, ಅಂದರೆ ಶಿಖರವೂ ಅದೇ ಆಕಾರದಲ್ಲಿರುವುದೆಂದು ಊಹಿಸಬಹುದಾಗಿದೆ. ಗರ್ಭಗೃಹಕ್ಕೆ ವೃತ್ತಾಕಾರವನ್ನು ಹೇಳಿರುವುದರಿಂದ, ಇಂತಹ ದೇವಾಲಯದಲ್ಲಿ ಗರ್ಭಗೃಹದ ಹೊರಭಾಗ ಚತುರಶ್ರವಾಗಿದ್ದು, ಒಳಭಾಗ ಮಾತ್ರ ವೃತ್ತಾಕಾರವಾಗಿರುತ್ತದೆ ಎನ್ನಬಹುದು. ಮನೋಹರ ರೀತಿಗೆ ವಿರುದ್ಧವಾದ ರಚನೆಯೇ–ವೃತ್ತಹರ್ಮ್ಯ. ಇದರಲ್ಲಿ ಗರ್ಭಗೇಹವು ಚೌಕಾಕಾರವಾಗಿದ್ದು, ಮಸೂರಕವು ವರ್ತುಲಾಕಾರದಲ್ಲಿರುತ್ತದೆ. ತಳವಿನ್ಯಾಸವು 'ಜನ್ಮದಿಂದ ಸ್ತೂಪಿಯವರೆಗೂ ವರ್ತುಲಾಕಾರದಲ್ಲಿರುತ್ತದೆ. ಇಂತಹ ರಚನೆಯನ್ನು 'ವೃತ್ತಹರ್ಮ್ಯ' ರೀತಿ ಎಂದು ಗುರುತಿಸಲಾಗಿದೆ (೨೦.೨೮ಬಿ–೨೯ಎ).

ತ್ರಿತಲ[೨೦] ದೇವಾಲಯಗಳಲ್ಲಿ ೮ ವಿಧಗಳನ್ನು ಮಯಮತವು ಹೇಳಿದೆ. ಅವುಗಳೆಂದರೆ, ಸ್ವಸ್ತಿಕ, ಗಾಂಧಾರ, ಭದ್ರಕೋಷ್ಠ, ವಿಮಲಾಕೃತಿ, ಸುಮಂಗಲ, ಶ್ರೀಭೋಗ, ವೃತ್ತಕೂಟ ಮತ್ತು ಹಸ್ತಿಪೃಷ್ಠ (ಇವುಗಳಲ್ಲಿ ಒಂದೊಂದರಲ್ಲೂ ೫ ರೀತಿಯ ಅಳತೆಗಳಿವೆ). ಮೊದಲಿಗೆ, 'ಸ್ವಸ್ತಿಕ' ರೀತಿಯ ರಚನೆಯ ಬಗ್ಗೆ ಹೇಳುವುದಾದರೆ, ಇದರಲ್ಲಿ 'ಜನ್ಮ'ದಿಂದ ಸ್ತೂಪಿಯವರೆಗೂ ಚತುರಶ್ರವಾಗಿರಬೇಕು. ೮ ಕೂಟ, ೮ ನೀಡ (–ಪಂಜರ), ೮ ಕೋಷ್ಠಕ ಹಾಗೂ ಮೇಲಿನ ಹಂತದಲ್ಲಿ ೧೬ ಅಲ್ಪನೀಡ (–ಅಲ್ಪನಾಸಿ) ಇರಬೇಕು. 'ಮೂರ್ಧನ್ಯ' (–ಶಿಖರ)ದಲ್ಲಿ ೪ ಅಭ್ರನಾಸಿ ಇರಬೇಕು.[೨೧] ಒಟ್ಟು ೯೬ ನಾಸಿ ಇರಬೇಕು. ಕೋಷ್ಠಕವು ಕೂಟಕ್ಕಿಂತ ಎತ್ತರವಾಗಿರಬೇಕು. ಮತ್ತು ಕೋಷ್ಠಗಳು ಒಂದಕ್ಕೊಂದು ಸಮನಾಗಿರಬೇಕು. ನಾನಾ ಅಧಿಷ್ಠಾನ, ವೇದಿ, ಅಂಘ್ರಿ (–ಪಾದ)ಗಳಿಂದ ಕೂಡಿರಬೇಕು. ಇದು ಸ್ವಸ್ತಿಕ ರೀತಿಯ ದೇವಾಲಯವಾಗಿದ್ದು, ಇದು ಶಿವನಿಗೆ ಸೂಕ್ತವಾದುದು (೨೧.೨೨ಬಿ–೧೦). 'ಊರ್ಧ್ವಭೂವತಾ ತ್ರಿಭಾಗೇನ ಮಧ್ಯೇ ಭದ್ರಂ ವಿಧೀಯತೇ' ಎಂದು ಮೂರನೇ

ತಲವನ್ನು ವಿವರಿಸುವ ಸಂದರ್ಭದಲ್ಲಿ ಬಂದಿದೆ. 'ಭದ್ರ' ಎಂದರೆ 'ಚಾಚಿರುವ ಭಾಗ' ಅಂದರೆ, ಸಾಂಧರ್ಭಿಕವಾಗಿ ಯೋಚಿಸಿದರೆ, ಕೊನೆಯ ತಲದಲ್ಲಿ ಮಧ್ಯಭಾಗವು ಚಾಚಿರಬೇಕು ಎಂದು ಹೇಳಬಹುದಾಗಿದೆ. ಹೀಗೆ ಮುಂಚಾಚುಗಳಿದ್ದಲ್ಲಿ ಅದು ತಳದಿಂದಲೇ ಅಂದರೆ, ಅಧಿಷ್ಠಾನದಿಂದಲೇ ಮುಂಚಾಚಿರುತ್ತದೆಂಬುದನ್ನಿಲ್ಲಿ ಗಮನಿಸಬೇಕು. ಇದರಲ್ಲಿ, ಮೇಲಿನ ಹಂತದಲ್ಲಿ ೧೬ ಅಲ್ಪನೀಡಗಳು ಇರಬೇಕು ಎಂದು ಹೇಳಿರುವುದು 'ತಲಪ್ರಸ್ತರ'ದಲ್ಲಿರುವ ನಾಸಿಗಳ ಬಗ್ಗೆ ಎಂದು ತಿಳಿಯಬಹುದಾಗಿದೆ. ಶಿಖರದ ೪ ನಾಸಿಗಳನ್ನು 'ಅಭ್ರನಾಸಿ' ಎಂದು ಇಲ್ಲಿ ಹೇಳಿರುವುದು ವಿಶೇಷವಾಗಿದೆ. ಇಲ್ಲಿ ಒಟ್ಟು ೯೬ ನಾಸಿಗಳನ್ನು ಹೇಳಿದ್ದರೂ, ಕೂಟ ಇತ್ಯಾದಿಗಳ ಲೆಕ್ಕಾಚಾರದಲ್ಲಿ ಒಟ್ಟು ೬೮ ನಾಸಿಗಳಿದ್ದು – ಉಳಿದ ೨೮ ನಾಸಿಗಳು ತಲಪ್ರಸ್ತರದ ನಾಸಿಗಳಿರಬಹುದಾಗಿದೆ. 'ತ್ರಿತಲ ಸ್ವಸ್ತಿಕ' ರೀತಿಗೆ ಉದಾಹರಣೆಯಾಗಿ ನರಸಮಂಗಲದ ರಾಮೇಶ್ವರ ದೇವಾಲಯವನ್ನು ಹೇಳಬಹುದಾಗಿದೆ. ಗ್ರಂಥದಲ್ಲಿ ಹೇಳಿರುವಂತೆ ಇದು ಪೂರ್ಣ ಚತುರಶ್ರ ದೇವಾಲಯ. ಕೂಟ-ಕೋಷ್ಠಗಳ ಸಂಖ್ಯೆಯು ಗ್ರಂಥದಂತೆಯೇ ಕ್ರಮವಾಗಿ ೮-೮ ಇದೆ; ಆದರೆ, ೮ ನೀಡ (ಪಂಜರ)ಗಳಿಲ್ಲ. ಬದಲಿಗೆ, ಮೊದಲ ಹಂತದಲ್ಲಿ ೧೬ ನಾಸಿಕೋಷ್ಠಗಳೂ, ಮೇಲಿನ ಹಂತದಲ್ಲಿ ೮ ನಾಸಿಕೋಷ್ಠಗಳೂ ಇವೆ. ಮೊದಲನೆಯ ಮತ್ತು ಎರಡನೆಯ ತಲಪ್ರಸ್ತರಗಳಲ್ಲಿ ಕ್ರಮವಾಗಿ ೨೪ ಮತ್ತು ೧೬ ನಾಸಿಗಳಿವೆ. ಇದರೊಂದಿಗೆ ಶಿಖರದಲ್ಲಿ ೪ ಅನುನಾಸಿಗಳೂ ಸೇರಿ ಒಟ್ಟು ೮ ನಾಸಿಗಳಿವೆ. ಒಟ್ಟಾರೆ ಇದರಲ್ಲಿ ೧೧೨ ನಾಸಿಗಳಿದ್ದು, ಗ್ರಂಥದಲ್ಲಿ ಹೇಳಿರುವುದಕ್ಕಿಂತ (೯೬) ೧೬ ನಾಸಿಗಳು ಹೆಚ್ಚಾಗಿವೆ. ಬಹುಶಃ ತಲಪ್ರಸ್ತರದಲ್ಲಿನ ನಾಸಿಗಳು ಹೆಚ್ಚಾದಂತೆ ತೋರುತ್ತದೆ. ಕೂಟ-ಕೋಷ್ಠಗಳ ಎತ್ತರವೂ ಕೂಡಾ ಗ್ರಂಥೋಕ್ತಿಯಂತಿರದೆ, ಸಮನಾಗಿದೆ.

ತ್ರಿತಲದ 'ಸುಮಂಗಲ' ರೀತಿಯ ದೇವಾಲಯದ ರಚನೆಯನ್ನು ಈ ಕೆಳಗಿನಂತೆ ಹೇಳಿದೆ:

"ತದೇವಷ್ಟಾಂಶಮಾಧಿಕ್ಯ ಮಾಯತಂ ಚತುರಶ್ರಕಂ ।
ಕರ್ಣಕೂಟಂ ಯುಗಾಶ್ರಂ ಸ್ಯಾದಾಯತಂ ವೃತ್ತಮಸ್ತಕಂ ।
ಕೋಷ್ಠಭದ್ರಂ ವಿನಾ ತತ್ರ ಶೇಷಂ ಪೂರ್ವವದಾಚರೇತ್ ।
ಸ್ಥೂಪಿತ್ರಯ ಸಮಾಯುಕ್ತ ಮೇತನ್ನಾಮ್ನಾ ಸುಮಂಗಲಂ ॥

ಇದರಂತೆ, ಸುಮಂಗಲ ರೀತಿಯ ರಚನೆಯಲ್ಲಿ ದೇವಾಲಯವು ಆಯತಾಕಾರವಾಗಿರಬೇಕು. ಕರ್ಣ ಕೂಟವು ೪ ಮೂಲೆಗಳಿಂದ ಕೂಡಿರಬೇಕು ಹಾಗೂ ಆಯತಾಕಾರವಾಗಿರಬೇಕು; ವೃತ್ತದ ಆಕಾರದಲ್ಲಿ 'ಮಸ್ತಕ' (-ಶಿರ) ಇರಬೇಕು. ಕೋಷ್ಠ-ಭದ್ರ' ಇರಬಾರದು. ಮೂರು ಸ್ಥೂಪಿಗಳಿಂದ ಕೂಡಿರಬೇಕು (೨೧.೫೦-೫೧) ಇದರ ಬಗ್ಗೆ ಅನುವಾದದಲ್ಲಿ 'ಆಯತಾಕಾರದ ಕರ್ಣಕೂಟಕ್ಕೆ ಆಯತವೃತ್ತ (Elliptical)ದ ಮಸ್ತಕ ಇರಬೇಕೆಂದು ಹೇಳಿದ್ದಾರೆ. ರಚನೆಯ ದೃಷ್ಟಿಯಿಂದ ಹೇಳುವುದಾದರೆ, ಆಯತವೃತ್ತದ ಮಸ್ತಕ (roof) ಇದ್ದರೆ ಅದು ಕರ್ಣ ಕೂಟ ಎನಿಸುವುದಿಲ್ಲ; 'ಪಂಜರ' ಎನಿಸುತ್ತದೆ. ಹಾಗೇ 'ಕೋಷ್ಠಭದ್ರ'ವನ್ನು ಗ್ರಂಥದಲ್ಲಿ ಕೋಷ್ಠ ಮತ್ತು ಭದ್ರ ಎಂದು ಹೇಳಲಾಗಿದೆ. ಆದರೆ, ಇವುಗಳ ಬಗ್ಗೆ ಮೇಲೆ ಹೇಳಿರುವ ವಿವರಗಳೇ ಸರಿ ಎನಿಸುತ್ತದೆ.

ತ್ರಿತಲ ದೇವಾಲಯಗಳ ಇನ್ನೊಂದು ವಿಧವೆಂದರೆ – 'ಗಾಂಧಾರ' ರೀತಿ. ಈ ರೀತಿಯ ರಚನೆಯಲ್ಲಿ ಅಧಿಷ್ಠಾನ, ಕಂಧರ, ಮಸ್ತಕಗಳು ಚತುರಶ್ರವಾಗಿರುತ್ತವೆ. ಅಥವಾ ಅಧಿಷ್ಠಾನವು ಮಾತ್ರ ಚತುರಶ್ರವಾಗಿದ್ದು, ಗಲ, ಶಿರಗಳು ಅಷ್ಟಾಶ್ರವಾಗಿಯೂ ಇರಬಹುದು. ಅಲ್ಲದೆ, ಅಲಿಂದ್ರ (Aisle) ಇದ್ದು, (ಅದರ) ಹೊರಭಾಗದಲ್ಲಿ 'ಖಂಡಹರ್ಮ್ಯ'ವು ಕ್ರಮವಾಗಿರಬೇಕು. (ಅಂದರೆ, ಇದು ಅನರ್ಪಿತ ಹಾರವಿರುವ ದೇವಾಲಯವಾಗಿರುವುದು). ಕೂಟ, ಕೋಷ್ಠ, ಪಂಜರಗಳಿರಬೇಕು. ಊರ್ಧ್ವಭೂಮಿ (ಮೇಲಿನ ಹಂತ)ಯಲ್ಲಿ ಸೌಷ್ಠಿಕ ಇರಬೇಕು. 'ಹಾರ'ಕ್ಕಿಂತಲೂ ಕೋಷ್ಠಕವು ಎರಡರಷ್ಟಿರಬೇಕು. ಅದರ ಮೇಲೆ (-ಮೇಲಿನ ತಲ?) ಮಧ್ಯ ನಿರ್ಗಮ (Projection) ಇರಬೇಕು. ೮ ಕೂಟ, ೮ ಕೋಷ್ಠಕಗಳಿರಬೇಕು; ಮೇಲೆ ೮ 'ಲಂಬ ನೀಡ'ಗಳಿರಬೇಕು. ಹಾಗೂ ನೀರು ಹೋಗಲು ಸ್ಥಳ (-ವರ್ಷಸ್ಥಲ')[೨೩] ಇರಬೇಕು. ಸ್ವಸ್ತಿಕಾಕಾರದ ನಾಸಿಕಾ[೨೪] ಎಲ್ಲೆಡೆ ಇರಬೇಕು. ಇದರಲ್ಲಿ ಕೂಟ-ಕೋಷ್ಠಗಳು ಎತ್ತರವಾಗಿದ್ದು, 'ಅಂತರಪ್ರಸ್ತರ'ದಿಂದ (-ವೇದಿ) ಕೂಡಿರುತ್ತವೆ. ಇದು ಗಾಂಧಾರ ರೀತಿ (೨೧.೫೨-೫೯). ಇಲ್ಲಿ ಬಳಸಿರುವ 'ಲಂಬನೀಡ' ಪದ ವಿಶೇಷವಾಗಿದೆ. 'ನೀಡ' ಎಂಬುದನ್ನು ನಾಸಿ, ನಾಸಿಕೋಷ್ಠ, ಪಂಜರ – ಎಲ್ಲಾ ಅರ್ಥಗಳಲ್ಲಿ ಗ್ರಂಥದಲ್ಲಿ ಬಳಸಿದೆ. ಇಲ್ಲಿ 'ಲಂಬನೀಡ'ವು ಕೋಷ್ಠದ ಮೇಲಿರುವುದೆಂದು ಹೇಳಿರುವುದರಿಂದ ಅದರ

ಮೇಲಿರುವ 'ನಾಸಿಯುಕ್ತ ಗೂಡಿನಂತಹ ಭಾಗ' ಎಂದು ಹೇಳಬಹುದಾಗಿದೆ. ೮ ಕೋಷ್ಠ ಮತ್ತು ೮ ಲಂಬನೀಡ ಎಂದು ಹೇಳಿರುವುದೂ ಕೂಡಾ ಇದಕ್ಕೆ ಹೊಂದುತ್ತದೆ. ಇದು ಮುಂಚಾಚಿರಬೇಕು ಎಂಬುದನ್ನು ಸೂಚಿಸುವ ಉದ್ದೇಶದಿಂದ 'ಲಂಬನೀಡ' ಎಂದು ಹೇಳಿರಬೇಕು.

'ಭದ್ರಕೋಷ್ಠ' ರೀತಿಯ ರಚನೆಯಲ್ಲಿ ಅಧಿಷ್ಠಾನವು ಚತುರಶ್ರವಾಗಿರಬೇಕು. ಗಲ–ಮಸ್ತಕಗಳು ೮ ಮುಖವಾಗಿರಬೇಕು. ೮ ಕೂಟ, ೮ ನೀಡ,[೨೫] ೮ ಕೋಷ್ಠಕಗಳು ಇರಬೇಕು. ಕೋಷ್ಠದ ಮಧ್ಯೆ ನಿರ್ಗಮ (Projection)ವೂ, ಹಾರದಲ್ಲಿ 'ಪಂಜರ'ಗಳೂ ಇರಬೇಕು. ಕ್ಷುದ್ರನೀಡ (ಕ್ಷುದ್ರನಾಸಿ)ಗಳಿದ್ದು, ಸ್ವಸ್ತಿಕಾಕಾರದ, 'ಗಲನಾಸಿಕ' ('ಗಲ' ಭಾಗದಲ್ಲಿರುವ ನಾಸಿ)ವೂ ಇರಬೇಕು. ಅಂಧಾರ (Aisle), ಅಂಧಾರಿಕಾ (Outside Wall of the aisle) ಹೇಳಿರುವುದರಿಂದ ಇದು ಅನರ್ಪಿತ ಹಾರದ ದೇವಾಲಯವಾಗಿದೆ. ಇದರಲ್ಲಿ ಆದಿತಲದಲ್ಲಿರುವ (=ಎರಡನೇ ತಲ) ಸೌಷ್ಠಿಕ (–ಕೂಟ)ಗಳ ಮಸ್ತಕವು ೪ ಮೂಲೆಯುಳ್ಳದ್ದಾಗಿರಬೇಕು ಹಾಗೂ ಊರ್ಧ್ವತಲದ ಸೌಷ್ಠಕಗಳ ಮಸ್ತಕವು ೮ ಮೂಲೆಯುಳ್ಳದ್ದಾಗಿರಬೇಕು[೨೬]. ಊರ್ಧ್ವಭಾಗದಲ್ಲಿ ಕೋಷ್ಠಗಳ ಮಧ್ಯೆ ಹೊರಚಾಚಿದಂತೆ ನಾಸಿ/ನಿರ್ಗಮ ಇರಬೇಕು – (೨೧.೪೦ಬಿ–೪೮ಎ). ಗ್ರಂಥದಲ್ಲಿ 'ಅಷ್ಟಕೂಟಂ ತಥಾ ನೀಡಂ ಕೋಷ್ಠಕಂ ತು' ಎಂಬುದನ್ನು ಅನುವಾದದಲ್ಲಿ 'ಎಷ್ಟಾದರೂ ನೀಡ, ಕೋಷ್ಠಕ ಇರಬಹುದು' ಎಂದಿದೆ. 'ಅಷ್ಟಕೂಟಂ ತಥಾ' ಎಂಬುದು ನೀಡ, ಕೋಷ್ಠಕಗಳಿಗೂ ಅನ್ವಯವಾಗುತ್ತದೆಂಬ ಕಾರಣದಿಂದ ಇಲ್ಲಿ ೮ ಕೂಟ, ೮ ನೀಡ ಇರಬೇಕು ಎಂದು ಇಲ್ಲಿ ಅರ್ಥೈಸಲಾಗಿದೆ. ಅಂತೇ, ಕ್ಷುದ್ರನೀಡಂ ತಥಾಪ್ಯಷ್ಟಾವಷ್ಟೌಸ್ಯುರ್ಗಲ ನಾಸಿಕಾ' ಎಂದಿರುವುದನ್ನೂ ಅನುವಾದದಲ್ಲಿ 'ಕ್ಷುದ್ರನೀಡ'ಗಳೂ, ೬೪ 'ಗಲನಾಸಿಕಾ'ಗಳೂ ಇರಬೇಕು' ಎಂದು ಹೇಳಲಾಗಿದೆ. 'ಗಲ' ಭಾಗದಲ್ಲಿ ೬೪ ನಾಸಿಕಾ ಇರಬೇಕೆಂಬುದು ರಚನೆಯ ದೃಷ್ಟಿಯಿಂದ ಸರಿಹೊಂದುವುದಿಲ್ಲ. ಆದ್ದರಿಂದ ಇಲ್ಲಿ ಕ್ಷುದ್ರನೀಡಗೂ ೬೪ ಇರಬೇಕೆಂದು ಅರ್ಥೈಸುವುದು ಸೂಕ್ತವೆನಿಸುತ್ತದೆ. ಇದರಿಂದ ಮುಂದೆ 'ಸ್ವಸ್ತಿಕಾಕಾರ ಸಂಯುಕ್ತಂ ನಾಸಿಕಾ ಭೂಷಣಂ ಭವೇತ್' ಎಂದೂ ಗ್ರಂಥದಲ್ಲಿದ್ದು, ಇದನ್ನು 'ಗಲಭಾಗದ ಮೇಲೆ ಸ್ವಸ್ತಿಕಾಕಾರದ ನಾಸಿಕಾ ಇರಬೇಕು' ಎಂದು ಅರ್ಥೈಸಲು ಸಾಧ್ಯವಿದೆ. ಈ ಮೇಲ್ಕಟ್ಟಡದ ವಿವರಣೆಗಳನ್ನು ನೀಡುವಾಗ ಮೊದಲಿಗೆ 'ಆದ್ಯೌತಲೇ' (ಆದಿತಲ) ಎಂದು ಹೇಳಿದೆ. ಸಾಮಾನ್ಯವಾಗಿ ಅಧಿಷ್ಠಾನದಿಂದ ಪ್ರಸ್ತರದವರೆಗಿನ ಭಾಗವು 'ಆದಿತಲ' ಎನಿಸುತ್ತದೆ; ಅದರ ಮೇಲೆ ಕೂಟ–ಶಾಲಾಗಳ ಹಾರವಿರುವ ಭಾಗಗಳು (–ತಲ) ಕೂಟ–ಕೋಷ್ಠಗಳನ್ನೂ ಇಲ್ಲಿ ಹೇಳಿರುವುದರಿಂದ ಇದು ಮೇಲ್ಕಟ್ಟಡಕ್ಕೆ ಸಂಬಂಧಿಸಿದ ಶಬ್ದವಾಗಿದೆ. ಕ್ರಮವಾಗಿ ದ್ವಿತೀಯ ತಲ, ಮೂರನೇ ತಲ ಎನಿಸುತ್ತವೆ. ಆದ್ದರಿಂದ ಇಲ್ಲಿ ಆದಿತಲವೆಂದರೆ, 'ತಲಗಳಲ್ಲಿ ಮೊದಲನೆಯದು' ಎಂದು ಅರ್ಥೈಸಬೇಕಾಗುತ್ತದೆ. ಸಂಪಾದಕರು ನೀಡಿರುವ ಚಿತ್ರವೂ ಇದಕ್ಕೆ ಹೊಂದುತ್ತದೆ. – ಒಂದೆಡೆ, 'ಕೋಷ್ಠ ಮಧ್ಯೇ ತ್ರಿದಂಡೇನ ನಾಸೀ ನಿರ್ಗಮನಾನ್ವಿತಂ' ಎಂದಿರುವುದರ ಬಗ್ಗೆ ಹೇಳುತ್ತಾ ಸಂಪಾದಕರು, 'ಕೋಷ್ಠದಿಂದ ಮಧ್ಯೆ ಮುಂಚಾಚಿದಂತೆ(–ಭದ್ರ) ನಾಸೀ ಇರುವುದರಿಂದ ಇದನ್ನು 'ಭದ್ರಕೋಷ್ಠ' ಎಂದು ಹೆಸರಿಸಿರುವುದು ಸರಿಯಾಗಿದೆ ಎಂದು ಹೇಳಿದ್ದಾರೆ.[೨೭]

'ವಿಮಲಾಕೃತಿ' ರೀತಿಯ ತ್ರಿತಲ ದೇವಾಲಯದಲ್ಲಿ ಮಸ್ತಿಕ, ವೇದೀ, ಕಂಧರಗಳು ಅಷ್ಟಾಶ್ರವಾಗಿರಬೇಕು. ೮ (ಕರ್ಣ) ಕೂಟಗಳು, ೧೨ ಕೋಷ್ಠಗಳು, ೮ 'ನೀಡ'ಗಳು ಇರಬೇಕು; ಶಿಖರದಲ್ಲಿ ೮ ನಾಸಿಗಳಿದ್ದು, ಒಟ್ಟು ೧೨೦ ಅಲ್ಪನಾಸಿಗಳು ಇರಬೇಕು. ಇಂತಹ ದೇವಾಲಯವು ಶಿವನಿಗೆ ಯೋಗ್ಯವಾದುದು (೨೧.೧೧–೧೩). ತ್ರಿತಲ ದೇವಾಲಯಗಳಲ್ಲಿ ಸಾಮಾನ್ಯವಾಗಿ ೮ ಕೋಷ್ಠಗಳಿರುತ್ತವೆ. ಆದರೆ ಇಲ್ಲಿ ೧೨ ಕೋಷ್ಠಗಳನ್ನು ಹೇಳಿರುವುದರಿಂದ, ಬಹುಶಃ ೪ ಕೋಷ್ಠಗಳು ಗ್ರೀವಭಾಗದಲ್ಲಿ ಇರುತ್ತವೆಂದು ಹೇಳಬಹುದಾಗಿದೆ. ಕೂಟ, ನೀಡ, ಶಿಖರ – ಈ ಎಲ್ಲವುಗಳ ಮೇಲಿನ ನಾಸಿಗಳು ಒಟ್ಟು ೬೮ ಆಗುತ್ತವೆ. ಉಳಿದ ೫೨ ನಾಸಿಗಳು ತಲಪ್ರಸ್ತರದ ನಾಸಿಗಳಿರಬಹುದೇ ಎಂಬುದನ್ನು ಯೋಚಿಸಬೇಕಾಗಿದೆ.

'ತ್ರಿತಲ' ದೇವಾಲಯಗಳ 'ಶ್ರೀಭೋಗ' ರೀತಿಯ ರಚನೆಯಲ್ಲಿ ವೇದಿ, ಕಂಧರ, ಶಿಖರಗಳು ವರ್ತುಲಾಕಾರದಲ್ಲಿರಬೇಕು; ಉಳಿದದ್ದು ಹಿಂದಿನಂತಿರಬೇಕು (೨೧.೬೦). ಇಲ್ಲಿ ವೇದಿ ಎಂದರೆ ಗ್ರೀವದ ಕೆಳಗಿರುವ ವೇದಿ (–'ವಿಮಾನವೇದಿಕಾ') ಎಂದು ಪರಿಗಣಿಸಬೇಕು. ಶಿಖರವು ಯಾವ ಆಕಾರದಲ್ಲಿರುವುದೋ, ಅದರ ಕೆಳಗಿರುವ ಗ್ರೀವ ಮತ್ತು ಅದರ ಕೆಳಗಿನ ವೇದಿ – ಇವೂ ಸಹಜವಾಗಿ ಅದೇ ಆಕಾರದಲ್ಲಿರುವುದು. 'ವೃತ್ತಕೂಟ' ರೀತಿಯ ರಚನೆಯಲ್ಲಿ ಮಸ್ತಕವು ವೃತ್ತಾಕಾರದಲ್ಲಿದ್ದು, ೪ ನಾಸಿಗಳಿಂದ ಕೂಡಿರಬೇಕು. ಎಲ್ಲ 'ಭೂಮಿ' (–ತಲಗಳಲ್ಲೂ) ಕರ್ಣಕೂಟಗಳು ವೃತ್ತಾಕಾರದಲ್ಲಿರಬೇಕು. ಇದು ಯಾವ ದೇವರಿಗೂ ಸೂಕ್ತವಾದುದು (೨೧.೪೮ಬಿ–೪೯). ಕರ್ಣಕೂಟಗಳಲ್ಲಿ ವೃತ್ತಾಕಾರದ ಮಸ್ತಕ (–ಶಿರ)ವಿರುವ ದೇವಾಲಯಗಳು ಇರುವುದು ಸದ್ಯಕ್ಕೆ ನನಗೆ ತಿಳಿದಿಲ್ಲ.

'ಹಸ್ತಿಪೃಷ್ಠ' ರೀತಿಯ ಇನ್ನೊಂದು ರಚನೆಯಲ್ಲಿ ಅಧಿಷ್ಠಾನ, ವೇದಿಕಾ, ಕಂಧರ, ಮಸ್ತಕಗಳು ದ್ವ್ಯಶ್ರವೃತ್ತಾಕಾರವಾಗಿರಬೇಕು. ಅಧಿಷ್ಠಾನವು ಚತುರಶ್ರ ಅಥವಾ ಆಯತಾಕಾರವಾಗಿರಬಹುದು. ಉಪಪೀಠ ಇರಬಹುದು ಅಥವಾ ಇಲ್ಲದಿರಬಹುದು. ಕೂಟ, ಕೋಷ್ಠಕ, ನೀಡ ಇದ್ದು, ಕೋಷ್ಠಕವು 'ಹಾರ' ಕ್ಕಿಂತಲೂ ಎರಡರಷ್ಟಿರಬೇಕು (೨೧.೧೫–೧೮ಎ) ಎಂದಿದೆ. ಮುಂದುವರಿದು, "ಮಸ್ತಕೇ ಪುರತೋ ನೇತ್ರಶಾಲಾವಕ್ತ್ರ ಸಮನ್ವಿತಂ । ಗರ್ಭಕೂಟೋಪಸಂಪನ್ನಂ ಕ್ಷುದ್ರನಾಸ್ಯಂಘ್ರಿಸಂಯುತಂ ॥" – ಎಂದು ಹೇಳಿದೆ. ಅಂದರೆ, ಶಿಖರದ ಮುಂಭಾಗದಲ್ಲಿ 'ನೇತ್ರಶಾಲಾ ವಕ್ತ್ರ' (–ಎರಡು ಶಾಲಾ) ಇರಬೇಕು; ಹಾಗೂ ಗರ್ಭಕೂಟವು 'ಕ್ಷುದ್ರನಾಸ್ಯಂಘ್ರೀ' (–ಕ್ಷುದ್ರನಾಸಿಗಳಿಂದ ಕೂಡಿದ ಸಣ್ಣಸ್ತಂಭ)ಗಳಿಂದ ಕೂಡಿರಬೇಕು (೨೧.೨೪ಬಿ–೨೫). ಇಷ್ಟೇ ಅಲ್ಲದೆ, ಕೂಟಕೋಷ್ಠಗಳಿಂದ ಕೂಡಿ ಅಲಂಕಾರಯುತವಾಗಿರಬೇಕು. ಶಿಖರದಲ್ಲಿ ೧೦ ನಾಸಿ ('ದಶನಾಸಿ')ಗಳಿದ್ದು[೨೭], 'ಪಾದ'ಗಳಿಂದ ಕೂಡಿರಬೇಕು. ೮ ಕೂಟ, ೮ ಕೋಷ್ಠ, ೧೨ ನೀಡ ಇರಬೇಕು. ಹಾರದಲ್ಲಿ ೨೪ ಕ್ಷುದ್ರನೀಡ(–ಕ್ಷುದ್ರನಾಸಿ)ಗಳಿರಬೇಕು. ನಾನಾ ಮಸೂರಕ, ಸ್ತಂಭ, ವೇದಿಗಳಿಂದ ಅಲಂಕೃತಗೊಂಡಿರಬೇಕು. 'ಪಾದ'ದ ಮೇಲೆ 'ಸ್ವಸ್ತಿಬಂಧ'[೨೮] ನಾಸಿ ಇರಬೇಕು. ಈ ಹಸ್ತಿಪೃಷ್ಠ ರೀತಿಯ ರಚನೆಯು ಎಲ್ಲ ದೇವರಿಗೂ ಸೂಕ್ತವಾದುದು. ಬಲಯುತವಾಗಿ ಹಾಗೂ ಸೂಕ್ತವಾದ ರೀತಿಯಲ್ಲಿ ನಿರ್ಮಿಸಬೇಕು. (೨೧.೩೪ಬಿ–೪೦ಎ) ಇದರಲ್ಲಿ ಹೇಳಿರುವ ಶಿಖರದ ೧೦ ನಾಸಿಗಳು ಶಿಖರದ ಪಾರ್ಶ್ವಗಳಲ್ಲಿರುತ್ತವೆ. ಕೂಟ–ಕೋಷ್ಠಗಳು ಅದರ ಕೆಳಗಿನ ಚತುರಶ್ರ ತಲಗಳಲ್ಲಿರುತ್ತದೆ. 'ಗರ್ಭಕೂಟ'ದ ಬಗ್ಗೆ ಬರೆಯುತ್ತಾ ಸಂಪಾದಕರು, 'seems to designate a kind of lantern placed on the Garbhagrha and shaped like an aediculae (kuta) ಎಂದು ಹೇಳಿದ್ದಾರೆ. ಅಲ್ಲದೆ, ಈ ರೀತಿಯ ರಚನೆಯನ್ನು ಕಂಚೀಪುರದ ವೀರಟ್ಟಾನೇಶ್ವರ ದೇವಾಲಯದ ಶಿಖರದ ಮುಂಭಾಗದಲ್ಲಿ ಕಾಣಬಹುದು ಎಂದೂ ಹೇಳಿದ್ದಾರೆ.[೨೯]

ಚತುಷ್ತಲ ದೇವಾಲಯಗಳಿಗೆ ೮ ರೀತಿಯನ್ನು ಮಯಮತವು ಹೇಳಿದೆ. ಅವುಗಳೆಂದರೆ– ಸುಭದ್ರಕ, ಆವಂತಿಕಾ, ಜಯಾವಹ, ಭದ್ರಕೂಟ, ಮನೋಹರ, ಶ್ರೀವಿಶಾಲ, ಸುಖಾವಹ ಮತ್ತು ಭದ್ರಕೋಷ್ಠ. ಇವುಗಳ ರಚನೆಯ ಬಗ್ಗೆ ಸ್ಥೂಲವಾಗಿ ಹೇಳಬೇಕೆಂದರೆ, 'ಸುಭದ್ರಕ' ರೀತಿಯಲ್ಲಿ ದೇವಾಲಯವು ಪೂರ್ಣ ಚತುರಶ್ರವಾಗಿರುತ್ತದೆ. ೧೨ ಸೌಷ್ಠೀ (–ಕೂಟ) ಗಳೂ, ೧೨ ಕೋಷ್ಠಕ, ೧೨ ಪಂಜರಗಳೂ ಇದ್ದು, ಶಿಖರದಲ್ಲಿ ೪ ನಾಸಿಗಳಿರಬೇಕು. ಅಲ್ಪನಾಸಿಗಳೂ ಇದ್ದು, ಸ್ವಸ್ತಿಕಾಕಾರದ ನಾಸಿಗಳಿರಬೇಕು. ಸ್ತಂಭಾಲಂಕಾರ, ತೋರಣ, ಸರ್ವಾಲಂಕಾರದಿಂದ ಕೂಡಿರಬೇಕು (೨೨.೩–೧೩ಎ) (ನೋಡಿ: ರೇಖಾಚಿತ್ರ) 'ಆವಂತಿಕಾ' ರೀತಿಯ ರಚನೆಯಲ್ಲಿ ಕಂಧರ, ಶಿರಗಳು ಚತುರಶ್ರವಾಗಿದ್ದು, 'ಸುಭದ್ರಕ' ರೀತಿಗಿಂತ ಬೇರೆ ರೀತಿಯ ಅಲಂಕಾರ ಇರಬೇಕು. ನಾನಾ ಮಸೂರಕ (–ಅಧಿಷ್ಠಾನ), ಸ್ತಂಭ, ವೇದಿ ಇತ್ಯಾದಿಗಳಿಂದ ಅಲಂಕರಿಸಲ್ಪಟ್ಟಿರಬೇಕು. ಇದು ಶಿವನಿಗೆ ಸರಿಯಾಗಿರುವಂತಹುದು (೨೨.೪೭ಬಿ–೪೮). 'ಜಯಾವಹ' ರಚನೆಯಲ್ಲಿ ಅಧಿಷ್ಠಾನವು ಚತುರಶ್ರವಾಗಿದ್ದು, ಗಲ, ಮಸ್ತಕಗಳು ಅಷ್ಟಾಶ್ರವಾಗಿರಬೇಕು. 'ಅಲಿಂದ್ರ'ವಿದ್ದು, ಸುತ್ತ 'ಖಂಡಹರ್ಮ್ಯ' (engaged structures) ಇರಬೇಕು. ೧೨ ಕೋಷ್ಠ, ೧೨ ಸೌಷ್ಠಿಕ, ೮ ಪಂಜರ, ಹಾರಾಂತರದಲ್ಲಿ ೮ ಲಂಬಪಂಜರ.[೩೦] ೧೬ ಕ್ಷುದ್ರನೀಡಗಳೂ ಇದ್ದು, 'ಗಲನಾಸಿ' (ಗಲಭಾಗದಲ್ಲಿರುವ ನಾಸಿ) ೮ ಇರಬೇಕು. ಕೋಷ್ಠಕವು ಉನ್ನತವಾಗಿರಬೇಕು. 'ಜಲಸ್ಥಲ'ವೂ ಇರಬೇಕು. ಉಪಪೀಠ ಬೇಕಾದರೆ ಮಾಡಬಹುದು. ವಿವಿಧ ರೀತಿಯ ಮಸೂರಕ, ಸ್ತಂಭ, ವೇದೀ, ಜಾಲಕ, ತೋರಣ ಇರಬೇಕು. ನಾನಾ ಚಿತ್ರಗಳಿಂದ ಕೂಡಿರಬೇಕು.[೩೧] ಹಾಗೂ ಸ್ವಸ್ತಿಕಾಕಾರದ ನಾಸಿ ಇರಬೇಕು (೨೨.೨೪ಜ–೩೪ಎ). 'ಭದ್ರಕೂಟ' ರೀತಿಯ ರಚನೆಯ ಬಗ್ಗೆ ಗ್ರಂಥವು ಹೆಚ್ಚಿನ ವಿವರವನ್ನು ನೀಡಿಲ್ಲ. ಇದರಲ್ಲಿರುವ ವಿವರಗಳೆಂದರೆ, ಗೃಹಪಿಂಡಿ (–ಗರ್ಭಗೃಹದ ಗೋಡೆ), ಅಂಧಾರ ಮತ್ತು ಸುತ್ತ ಕಂಡಹರ್ಮ್ಯ ಇರಬೇಕು. ಕೂಟ, ಕೋಷ್ಠ ಮುಂತಾದ ಇಲ್ಲ ಅಂಗಗಳ ಸಂಖ್ಯೆಯು ಹಿಂದನದರಂತೇ ಇರಬೇಕು. ಕೂಟ, ಕೋಷ್ಠ, ನೀಡಗಳಿಗೆ 'ಅಂತರಪ್ರಸ್ತರ' (–ವೇದಿ) ಇರಬೇಕಂದೂ, 'ಜಲಸ್ಥಲ' ಇರಬೇಕೆಂದೂ ಹೇಳಿದೆ. ಕೂಟ–ಕೋಷ್ಠದ ಮಧ್ಯೆ 'ಪಂಜರ' ಇರಬೇಕು ಹಾಗೂ ೧೬ 'ಮಹಾನೀಡ' ಇರಬೇಕು. ಇದರಲ್ಲಿ, ೪ನೇ ತಲದ ಬಗ್ಗೆ ಹೇಳುವಾಗ ಗ್ರಂಥವು 'ವಿಜಯ'ದ ರೀತಿಯಂತಿರಬೇಕೆಂದು ಹೇಳಿದ್ದು, ಇದನ್ನು ಸಂಪಾದಕರು, 'ಹಿಂದೆ ಹೇಳಿದ' 'ಜಯಾವಹ' ರೀತಿಯನ್ನೇ ಇದು ಸೂಚಿಸುತ್ತಿದೆ' ಎಂದಿದ್ದಾರೆ.[೩೨] ಹೀಗಾಗಿ 'ಭದ್ರಕೂಟ' ರೀತಿಯು 'ಜಯಾವಹ'ದಂತೇ ಚತುರಶ್ರವಾದ ಅಧಿಷ್ಠಾನ, ಅಷ್ಟಾಶ್ರವಾದ ಗಲ, ಮಸ್ತಕಗಳನ್ನು ಹೊಂದಿರುತ್ತದೆ ಎಂದು ಹೇಳಬಹುದು[೩೩]. ವ್ಯತ್ಯಾಸವೆಂದರೆ, 'ಜಯಾವಹ' ರೀತಿಯಲ್ಲಿ ಕೋಷ್ಠವು ಉನ್ನತವಾಗಿದ್ದರೆ, ಇದರಲ್ಲಿ ಕೂಟ, ಕೋಷ್ಠ, ನೀಡ –ಎಲ್ಲವೂ ಉನ್ನತವಾಗಿದ್ದು, ಒಂದೇ ಎತ್ತರದಲ್ಲಿರುತ್ತವೆ (೨೨.೩೪ಬಿ–೩೬, ೪೩–೪೪ಎ).

ಚತುಷ್ತಲ ದೇವಾಲಯಗಳ ಇನ್ನೊಂದು ವಿಧವೆಂದರೆ –ಭದ್ರಕೋಷ್ಠ' ರೀತಿಯ ರಚನೆ. ಈ ರೀತಿಯ ರಚನೆಯಲ್ಲಿ ಅಧಿಷ್ಠಾನವು ಚತುರಶ್ರವಾಗಿರಬೇಕು. ಗಲ, ಮಸ್ತಕಗಳು ಅಷ್ಟಾಶ್ರವಾಗಿರಬೇಕು. ಸಭಾ (–ಕೂಟ) ಶಾಲಾ, ನೀಡ ಇದ್ದು, ಶಾಲಾ ಮಧ್ಯೆ ನಾಸಿ ಇರಬೇಕು. 'ಅಲಿಂಧ್ರ'ವಿದ್ದು, ಸುತ್ತ 'ಖಂಡಹರ್ಮ್ಯ' ಇರಬೇಕು. ಕೂಟ–ಕೋಷ್ಠಗಳ ಸಂಖ್ಯೆಯು ಹಿಂದನಂತೇ ಇರಬೇಕು. ಕರ್ಣಕೂಟವು ೮ ಮುಖವಾಗಿದ್ದು, ಕೋಷ್ಠವು 'ಕ್ರಕರೀಕೃತ' (cruciform) ಆಕಾರದಲ್ಲಿರಬೇಕು.[೩೩ಅ] ಮಹಾಶಿಖರ'ದಲ್ಲಿ ೮ ನಾಸಿಗಳಿರಬೇಕು. ಜಲಸ್ಥಲ, ಪಂಜರ, ಕ್ಷುದ್ರಪಂಜರ, ಲಂಬಪಂಜರಗಳನ್ನೂ ಗ್ರಂಥವು ಹೇಳಿದೆ. ಇದು ಭದ್ರಕೋಷ್ಠ ರೀತಿಯ ರಚನೆ (೨೨.೧೫ಬಿ–೨೪).

'ಮನೋಹರ' ರೀತಿಯ ರಚನೆಯಲ್ಲಿ ಗ್ರೀವ, ಶಿರಗಳು ವೃತ್ತಾಕಾರವಾಗಿದ್ದು, ಶಾಲಾ ಮಧ್ಯದಲ್ಲಿ 'ಭದ್ರ' ಇರಬೇಕು; ಅಂದರೆ, ಶಾಲಾದ ಮಧ್ಯಭಾಗ ಮುಂಚಾಚಿರಬೇಕು. ಭಿನ್ನ ರೀತಿಯ ಅಲಂಕಾರವನ್ನು ಹೊಂದಿರಬೇಕು (೨೨.೪೬ಬಿ–೪೭ಎ) ಇನ್ನೊಂದು ರೀತಿಯ ರಚನೆಯಲ್ಲಿ ಮಸ್ತಕವು ಮಂಡಲಾಕಾರದಲ್ಲಿದ್ದು, 'ಸಭಾ'ದ (–ಕರ್ಣಕೂಟದ) ಶಿರವೂ ವೃತ್ತಾಕಾರದಲ್ಲಿರುತ್ತದೆ. 'ಆವೃತಾವಾಸಪಿಂಡಿ', ಅಂಧಾರ ಇರುತ್ತದೆಂದು ಹೇಳಿರುವುದರಿಂದ, ಇದು ಅನರ್ಪಿತಹಾರದ ದೇವಾಲಯವಾಗಿದ್ದು, – ಶಿಖರದಲ್ಲಿ ತಲಗಳ ಮಧ್ಯೆ (ಓಡಾಡಲು) ಸ್ಥಳ (ಅಲಿಂಧ್ರ) ಇರುತ್ತದೆ. ಎಲ್ಲ ರೀತಿಯ ಕಂಬ, ವೇದಿಗಳು ಇದಕ್ಕೆ ಸೂಕ್ತವಾಗುತ್ತದೆ. ಇಂತಹ ರಚನೆಯನ್ನು 'ಶ್ರೀವಿಶಾಲ' ರೀತಿ ಎಂದು ಹೇಳಬಹುದು (೨೨.೧೩ಬಿ–೧೫ಎ). ಇದರಲ್ಲಿ 'ಕೂಟ'ಕ್ಕೆ 'ಸಭಾ' ಎಂಬ ಪದವನ್ನು ಬಳಸಿರುವುದು ವಿಶೇಷವಾಗಿದೆ. ಅಂತೇ 'ಆವೃತಾವಾಸಪಿಂಡಿ' ಎಂಬ ಪದನ್ನು ಬಳಸಿದ್ದು, ಅದನ್ನು 'ಗೃಹಪಿಂಡಿ' ಎಂದು ಸಂಪಾದಕರು ಗುರುತಿಸಿದ್ದಾರೆ.[೩೪] 'ಸುಖಾವಹ' ರೀತಿಯ ರಚನೆಯ ಬಗ್ಗೆ ಗ್ರಂಥವು ಹೆಚ್ಚಿನ ವಿವರಗಳನ್ನು ನೀಡಿದೆ. ಕಂಧರ, ವಿತರ್ದಿಕ (–ವೇದಿ) ಮತ್ತು ಮಸ್ತಕಗಳು ವೃತ್ತಾಕಾರವಾಗಿರಬೇಕು; ಆದಿತಲದಲ್ಲಿ ಕೂಟ, ನೀಡ (–ಪಂಜರ) ಮತ್ತು ಕೋಷ್ಠಕಗಳು 'ಮಧ್ಯಮಮಂಚ'(–ವೇದಿ)ದ ಮೇಲಿದ್ದು, ಎತ್ತರವಾಗಿರುತ್ತವೆ. ಮಧ್ಯದ ತಲದಲ್ಲಿ 'ಶಾಲಾ' ಇದ್ದು, ಇದು ಕೂಟಕ್ಕಿಂತ ಎತ್ತರವಾಗಿರುತ್ತದೆ. ಹಾಗೂ ಕೂಟದ




ಚತುಷ್ತಲ 'ಸುಭದ್ರಕ' ದೇವಾಲಯದ ರೇಖಾಚಿತ್ರ (ಕೃಪೆ : ಮಯಮತ)

ವಿನ್ಯಾಸವು (ಮೊದಲ ತಲದಂತೆ (ಪೂರ್ಣ) ಚತುರಶ್ರವಾಗಿರದೆ) ವೃತ್ತಾಕಾರವಾಗಿದ್ದು, ಶಿರಭಾಗವು ಅಷ್ಟಮುಖವಾಗಿರುತ್ತದೆ. ಕೊನೆಯ ತಲದಲ್ಲಿ ಮಧ್ಯಭಾಗವು ಚಾಚಿದ್ದು ('ಮಧ್ಯಭದ್ರ') ಇದರ ಮೇಲೆ 'ಭದ್ರನೀಡ' (ನಾಸಿ) ಇರಬೇಕು. 'ಗಲನಾಸಿಕಾ' ಇರುತ್ತದೆಂದೂ ಇಲ್ಲಿ ಹೇಳಿದೆಯಲ್ಲದೆ, ೪ 'ಅಭ್ರನಾಸಿಕ' ಮತ್ತು ೮ ಅಲ್ಪನಾಸಿಕಗಳೂ ಇರುತ್ತವೆಂದಿದೆ. 'ಜಲಸ್ಥಲ' ಮತ್ತು 'ಅಂಧಾರ'ವೂ ಇರುವುದು; ಅಂದರೆ, ಗರ್ಭಗೃಹವು 'ಸಾಂಧಾರ'ವಾಗಿದ್ದು, ಶಿಖರದಲ್ಲಿ 'ಅನರ್ಪಿತ ಹಾರ' ಇರುವುದು ಒಂದೆಡೆ, 'ನಾಸಾಲ್ಪಕಂಪ್ಯುಪರಿ ವೇದವಿಹೀನ ಬಂಧಂ' ಎಂದಿದ್ದು (ಶ್ಲೋ.೫೪) ಇದನ್ನು 'ನಿರಲಂಕೃತನಾಸಿ' ಎಂದು ಹೇಳಲಾಗಿದೆ. ಇದರ ಪಾಠಾಂತರದಲ್ಲಿ 'ಸ್ವಸ್ತಿಕಬಂಧಯುಕ್ತಂ' ಎಂದು ಇರುವುದರಿಂದ, ಅದನ್ನೇ ಸ್ವೀಕರಿಸಿ, ನಾಸಿಯು ಸ್ವಸ್ತಿಕಾಕಾರದಲ್ಲಿ ಇರುವುದೆಂದು ಹೇಳುವುದು ಸೂಕ್ತವೆನಿಸುತ್ತದೆ. ನಾನಾ ರೀತಿಯ ಅಧಿಷ್ಠಾನ, ಅಂಘ್ರಿ (–ಸ್ತಂಭ)ಗಳಿಂದ ಶೋಭಿಸುತ್ತಿದ್ದು, ವಾತಾಯನ, ಮಕರತೋರಣಗಳಿಂದ ಕೂಡಿರಬೇಕು (೨೨.೪೯–೫೪).ಇದರಲ್ಲಿ 'ಭದ್ರನೀಡ' ಎಂಬ ಶಬ್ದವನ್ನು ಬಳಸಿದೆ. ಇದನ್ನು ಸಂದರ್ಭಕ್ಕೆ ತಕ್ಕಂತೆ ಚಾಚಿದ ಭಾಗದ ಮೇಲಿರುವ ನಾಸಿ/ನಾಸಿಕೋಷ್ಠ ಎಂದು ಹೇಳಬಹುದಾಗಿದೆ. ಅಲ್ಲದೆ, 'ಅಭ್ರನಾಸಿಕ' ಶಬ್ದವನ್ನು ಶಿಖರಕ್ಕೆ ಅನ್ವಯಿಸಿ ಹೇಳಿರುವಂತೆ ತೋರುತ್ತದಾದ್ದರಿಂದ, ಇದನ್ನು ಶಿಖರದ ಮೇಲಿರುವ ೪ 'ಮಹಾನಾಸಿ'ಗಳೆಂದು ಗುರುತಿಸಬಹುದಾಗಿದೆ. ಅದರಿಂದ ಮುಂದೆ ೮ ಅಲ್ಪನಾಸಿಕಗಳನ್ನೂ ಹೇಳಿರುವುದು ಯಾವುದೆಂದು ತಿಳಿಯುವುದಿಲ್ಲ. 'ವೇದಿ' ಶಬ್ದಕ್ಕೆ ಪರ್ಯಾಯವಾಗಿ ಇದರಲ್ಲಿ ವಿತರ್ದಿಕ, ಮಧ್ಯಮಮಂಚ ಶಬ್ದಗಳನ್ನು ಬಳಸಿರುವುದೂ ವಿಶೇಷವಾಗಿದೆ.[೩೪೮]

ಚತುಷ್ತಲದಿಂದ ಮುಂದುವರಿದು ಗ್ರಂಥದಲ್ಲಿ, ಅದೇ ೨೨ನೇ ಅಧ್ಯಾಯದಲ್ಲಿ, ೫ ತಲ (೫೫–೫೭), ೬ ರಿಂದ ೧೧ ತಲ (೫೮–೬೬ಎ) ಮತ್ತು ೧೨ ತಲಗಳಿರುವ ದೇವಾಲಯಗಳನ್ನು (೬೬ಬಿ–೭೩) ರಚಿಸುವುದರ ಬಗ್ಗೆ ವಿವರಗಳಿವೆ. ಇವುಗಳಲ್ಲಿ ಬಹುಪಾಲು, 'ತಲ'ಗಳನ್ನು ಸೇರಿಸುವುದು ಹಾಗೂ ಅಳತೆಗಳ ಬಗ್ಗೆ ಮಾತ್ರ ವಿವರವಿದ್ದು, ಹೆಚ್ಚಿನ ವ್ಯತ್ಯಾಸಗಳನ್ನು ಸೂಚಿಸಿಲ್ಲ. ಬಹುಶಃ ಹಿಂದೆ ಹೇಳಿದ ಪ್ರಭೇಧಗಳಲ್ಲೇ ಯಾವುದಾದರೊಂದರ ಸ್ವರೂಪವನ್ನು ಆರಿಸಿಕೊಳ್ಳಬಹುದೆಂಬ ಚಿಂತನೆ, ಉದ್ದೇಶ ಇರಬಹುದು. ಇದರೊಂದಿಗೆ ಇಲ್ಲಿರುವ ಒಂದು ನಿರ್ದೇಶನವೆಂದರೆ, ಖಂಡಹರ್ಮ್ಯವು. ೪ ತಲದ ದೇವಾಲಯದಲ್ಲಿ ಮೊದಲ ತಲದವರೆಗಿನ ಎತ್ತರದಲ್ಲಿರಬೇಕು ಎಂದಿದೆ; ಹೀಗೇ ಕ್ರಮವಾಗಿ ಮುಂದುವರಿದು, ೧೨ ತಲದ ದೇವಾಲಯದಲ್ಲಿ ೫ನೇ ತಲದವರೆಗೂ ಖಂಡಹರ್ಮ್ಯ ಇರಬೇಕು ಎಂದಿದೆ (೨೨.೭೪). ಇದೇ ಅಧ್ಯಾಯದಲ್ಲಿ ಕೂಟ–ಕೋಷ್ಠಗಳನ್ನು ಯಾವ ರೀತಿ ರಚಿಸಬೇಕು ಎಂಬ ನಿರ್ದೇಶನವೂ ಇದೆ. ಕೂಟ, ಕೋಷ್ಠ ಇತ್ಯಾದಿಗಳನ್ನು ರಚಿಸುವಾಗ, ಮೊದಲ ತಲದಿಂದ ಆರಂಭಿಸಿ, ಹಂತದಿಂದ ಹಂತಕ್ಕೆ ಅದರ ಅಳತೆಯನ್ನು ಕಡಿಮೆ ಮಾಡಬೇಕು (೨೨.೭೬). ಅವು ಮೂಲ 'ಹಾರ; ದಂತೆಯೇ 'ಖಂಡಹರ್ಮ್ಯ'ದಲ್ಲಿಯೂ ಇರಬೇಕು. ೧೨ ತಲಗಳಲ್ಲಿಯೂ (=೧೧ ತಲಗಳು) ಕೂಟಗಳು ಮೂಲೆಯಲ್ಲೂ, ಕೋಷ್ಠಗಳು ಮಧ್ಯದಲ್ಲೂ ಮತ್ತು ಪಂಜರವು ಇವುಗಳ ಮಧ್ಯದಲ್ಲಿಯೂ ಇರಬೇಕು (೨೨.೭೮ಬಿ–೭೯ಎ). ಈ ಅಂಗಗಳು ಮಾನಸೂತ್ರಕ್ಕೆ ಹೊಂದಿಕೊಂಡು ಹೊರಚಾಚಿರಬೇಕು (ಅದೇ. ೭೯ಬಿ) ಕರ್ಣ ಕೂಟದ ಮಸ್ತಕ ಭಾಗವು ಚತುರಶ್ರ, ಅಷ್ಟಮುಖ, ವೃತ್ತಾಕಾರ ಅಥವಾ ೧೬ ಮುಖವಾಗಿರಬಹುದು. ಮತ್ತು ಅದಕ್ಕೆ ಸ್ತೂಪಿಯೂ ಇರಬೇಕು. ಮಧ್ಯದಲ್ಲಿ ನಾಸಿ ಇದ್ದು, ಅದರಲ್ಲಿ 'ಅರ್ಧ ಕೋಟಿ'[೩೫] ಇರುವುದು (ನಾಸಿಗೆ) ಮುಖಪಟ್ಟಿ ಮತ್ತು ಶಕ್ತಿಧ್ವಜಗಳು ಇರುವುದು. ಕೋಷ್ಠಕವು ಮಧ್ಯದಲ್ಲಿದ್ದು ಅದರ ಮೇಲೆ ಅನೇಕ ಸ್ತೂಪಿಗಳಿರುತ್ತವೆ. ಇದರ ಹಿಂಭಾಗವು ಹಸ್ತಿಪೃಷ್ಠದಂತಿದ್ದು, ಮುಂಭಾಗವು ಮಾತ್ರ ಶಾಲಾಕಾರದ ರೀತಿ ಇರುತ್ತದೆ. ಪಂಜರವು ಕೂಟ–ಕೋಷ್ಠಕದ ಮಧ್ಯೆ ಇರಬೇಕು. ಇದರ ಪಾರ್ಶ್ವಮುಖವು 'ಹಸ್ತಿತುಂಡ' (ಆನೆಯ ಸೊಂಡಿಲು)ದಂತೆ ಅಲಂಕೃತವಾಗಿರಬಹುದು (೨೨.೮೨–೮೫) ಶಾಲಾ–ಕೂಟಗಳ ಬಗ್ಗೆ ಹೀಗೆ ವಿವರಗಳನ್ನು ನೀಡಿದ್ದರೂ, ಇದರಲ್ಲಿ 'ಷಡ್ವರ್ಗ' ಶಾಲಾ–ಕೂಟಗಳನ್ನು ಇಲ್ಲಿ ಹೇಳಿಲ್ಲ. ಇಂತಹ ರಚನೆಯಲ್ಲಿ, ಅವು ಪೂರ್ಣ ದೇವಾಲಯದಂತೇ ತಲಗಳಲ್ಲಿದ್ದು, ಅಧಿಷ್ಠಾನ, ಭಿತ್ತಿ ಮುಂತಾಗಿ ೬ ಅಂಗಗಳನ್ನು ಹೊಂದಿರುತ್ತವೆ. ಇಂತಹ ರಚನೆಯು ಮಹಾಕೂಟದ ಮಹಾಕೂಟೇಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳು, ಬಾದಾಮಿಯ ಮಾಲೆಗತ್ತಿ ಶಿವಾಲಯ–ಮಂತಾದ ದೇವಾಲಯಗಳಲ್ಲಿ ಕಂಡುಬರುತ್ತದೆ.

ಹೀಗೆ ಕೂಟ ಇತ್ಯಾದಿ ಅಂಗಭಾಗಗಳನ್ನು (ಮೇಲ್ಕಟ್ಟಡದಲ್ಲಿ ಜೋಡಿಸುವ ಕ್ರಮವನ್ನು, ಜಾತಿ, ಛಂದ, ವಿಕಲ್ಪ ಆಭಾಸ ಎಂದು ವಿವಿಧ ಪ್ರಭೇಧಗಳಲ್ಲಿ ಗುರುತಿಸಿದೆ. ಮೇಲೆ ಹೇಳಿದ ಕ್ರಮದಲ್ಲಿ ಅವುಗಳನ್ನು ಜೋಡಿಸುವುದನ್ನು 'ಜಾತಿ' ಕ್ರಮ ಎಂದು ಹೇಳಿದೆ. ಬದಲಿಗೆ, ಕೂಟವು ಮಧ್ಯದಲ್ಲಿದ್ದು (ಕೋಷ್ಠವು ಮೂಲೆಗಳಲ್ಲಿರುವುದು), ಅವುಗಳ ಮಧ್ಯೆ ಕ್ಷುದ್ರಕೋಷ್ಠಾದಿಗಳಿಂದ ಅಲಂಕರಿಸಿದ್ದರೆ ಅದು 'ಛಂಧ' ಕ್ರಮಕ್ಕೆ ಸೇರುತ್ತದೆ. ಅಂತೇ, ಕೂಟ ಅಥವಾ ಕೋಷ್ಠವು 'ಅಂತರ

ಪ್ರಸ್ತರ'ದ ಮೇಲಿದ್ದು, ಒಂದಕ್ಕಿಂತ ಇನ್ನೊಂದು ಎತ್ತರವಾಗಿದ್ದರೆ ಅದು 'ವಿಕಲ್ಪ' ಕ್ರಮಕ್ಕೆ ಸೇರುತ್ತದೆ. 'ಆಭಾಸ' ಕ್ರಮದಲ್ಲಿ ಇವು ಮಿಶ್ರಗೊಂಡಿರುತ್ತವೆ(?) ಎಂದು ಗ್ರಂಥವು ಹೇಳಿದೆ. ಈ ಕ್ರಮದಲ್ಲಿ 'ಅಂತರ ಪ್ರಸ್ತರ'ವು ಕೂಟ-ಕೋಷ್ಠದ ಕೆಳಗೆ ಇರುತ್ತದೆ ಎಂದು ಸಂಪಾದಕರು ಹೇಳಿದ್ದಾರೆ[೩೬]. ಕ್ಷುದ್ರ, ಅಲ್ಪ ಮಧ್ಯಮ, ಉತ್ಕೃಷ್ಟ ಹರ್ಮ್ಯಗಳು ಈ ರೀತಿ ಇರುತ್ತವೆ ಎಂದೂ, ಹೀಗೆ ಜಾತಿ ಇತ್ಯಾದಿ ಕ್ರಮದಲ್ಲಿ ಕಟ್ಟಿದ ದೇವಾಲಯಗಳು ಯಶಸ್ಸನ್ನು ನೀಡುತ್ತವೆ ಎಂದೂ ಗ್ರಂಥದಲ್ಲಿದೆ (೨೨.೮೬-೮೯).

ಹೀಗೆ, ಮೇಲ್ಕಟ್ಟಡದ ಬಗ್ಗೆ ಅನೇಕ ವಿವರಗಳನ್ನು ನೀಡಿರುವ ಮಯಮತವು ವಿವರಣೆಯಲ್ಲಿ ಅನೇಕ ಪರ್ಯಾಯ ಪದಗಳನ್ನು ಬಳಸಿದೆ. 'ಗ್ರೀವ'ಕ್ಕೆ –ಕಂಧರ, ಗಲ; 'ವೇದಿ'ಗೆ[೩೬ಅ]–ವಿತರ್ದಿಕ, ಮಧ್ಯಮಮಂಚ, ಅಂತರಪ್ರಸ್ತರ; 'ಶಿಖರ'ಕ್ಕೆ – ಶಿರ, ಮಸ್ತಕ, ಫಲಿಕಾ, ಮೂರ್ಧನ್ಯ' 'ಸ್ತೂಪಿ'ಗೆ – ಕಲಶ, ಘಟಾ, ಕುಂಭ; 'ಮಹಾನಾಸಿ'ಗೆ– ಅಭ್ರನಾಸಿ; 'ನಾಸಿ'ಗೆ ನೀಡ, ಪಂಜರ; 'ಕೂಟ'ಕ್ಕೆ – ಸೌಷ್ಟಿಕ, ಸಭಾ; 'ಶಾಲಾ'ಗೆ ಕೋಷ್ಠಕ; 'ಅಧಿಷ್ಠಾನ'ಕ್ಕೆ – ಮಸೂರಕ, ತಲಿಪ, ಜನ್ಮ; 'ತಲ'ಕ್ಕೆ ಭೂಮಿ; 'ಗೃಹಪಿಂಡಿ'ಗೆ – ಆವೃತಾವಾಸಪಿಂಡಿ – ಹೀಗೆ ವಿವಿಧ ಶಬ್ದಗಳನ್ನು ಒಂದೆರಡು ಕಡೆ ಮಾತ್ರ ಹೇಳಿದೆ. ಮಹಾನಾಸಿಯನ್ನು ಕೆಲವೆಡೆ 'ಅಲ್ಪನಾಸಿ' ಎಂಬ ಶಬ್ದದಿಂದಲೇ ಗುರುತಿಸಿದೆ. ವಿವರಣೆಯಲ್ಲಿ ಸಾಮಾನ್ಯವಾಗಿ ಬಳಸುವ 'ತಲಪ್ರಸ್ತರ' 'ನಾಸಿಕೋಷ್ಠ' ಶಬ್ದಗಳು ಇದರಲ್ಲಿಲ್ಲ.

ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಷಯವೆಂದರೆ, ಕೆಲವು ದೇವಾಲಯಗಳಲ್ಲಿ ಕಾಣಬರುವ 'ಶುಕನಾಸಿ'ಯ ಬಗ್ಗೆ ಮಯಮತವು ಏನನ್ನೂ ಹೇಳಿದಂತೆ ತೋರುವುದಿಲ್ಲ. 'ಶುಕನಾಸಿ' ಶಬ್ದವನ್ನು ಒಂದೆಡೆ ಮಾತ್ರ ಬಳಸಿದ್ದು (೨೧.೮೫), ಅದು 'ವೃತ್ತಸ್ಫುಟಿತ'ದ ಮೇಲಿನ ನಾಸಿಯನ್ನು ಸೂಚಿಸುತ್ತಿದೆ. ಭದ್ರ, ಮಧ್ಯಭದ್ರ ಪದಗಳನ್ನು ಕೆಲವೆಡೆ ಇದರಲ್ಲಿ ಬಳಸಿದೆ. 'ಮಧ್ಯಭದ್ರ'ವನ್ನು ಇದು ತ್ರಿತಲ, ಚತುಷ್ತಲಗಳ ಸಂದರ್ಭದಲ್ಲಿ ಹೇಳಿದೆ. ಒಂದೆಡೆ 'ಊರ್ಧ್ವಭೂಮೌ ತ್ರಿಭಾಗೇನ ಮಧ್ಯೇ ಭದ್ರಂ ವಿಧೀಯತೇ' ಎಂದು (೨೧.೫), ಇನ್ನೊಂದೆಡೆ, '...ತದರ್ಧಭಾಗಂ । ಚೋರ್ಧ್ವಂ ಯುಗಾಂಶಿನಯನಾಂಶಕ ಮಧ್ಯಭದ್ರಂ। ದಂಡೇನ ನಿರ್ಗಮಮುಪರ್ಯಪಿ ಭದ್ರನೀಡಂ॥ (೨೨.೫೧-೫೨) ಎಂದೂ ಹೇಳಿದೆ. ಮಧ್ಯದಲ್ಲಿ ಚಾಚಿರಬೇಕು ಮತ್ತು ನಾಸಿ ಇರಬೇಕು ಎಂದು ಹೇಳಿರುವುದು 'ಸುಖನಾಸಿ'ಯ ಬಗ್ಗೆ ಎನಿಸುವುದಾದರೂ, ಅಲ್ಲಿ ಊರ್ಧ್ವತಲದ ಬಗ್ಗೆ ಹೇಳಿರುವುದರಿಂದ ಇದು ಸುಖನಾಸಿಯ ವಿಷಯವಲ್ಲ (ಏಕೆಂದರೆ, ಶುಕನಾಸಿಯು ಮೇಲ್ಕಟ್ಟಡದ ಮೊದಲ ತಲದಿಂದ ಆರಂಭವಾಗುತ್ತದೆ). ಈ ಕೃತಿಯಲ್ಲಿ ಒಂದೆಡೆ, ಕೋಷ್ಠದ ಹಿಂಭಾಗವು ಹಸ್ತಿಪೃಷ್ಠದಂತಿದ್ದು, ಮುಂಭಾಗವು 'ಶಾಲಾ'ಕಾರದಲ್ಲಿರುತ್ತದೆ ಎಂಬ ಹೇಳಿಕೆ ಇದೆ (೨೨.೮೪). ಶಾಲಾ ಬಗೆಗಿನ ಈ ವಿವರವು ಗೊಂದಲಮಯವಾಗಿದೆ ಎಂದು ಸಂಪಾದಕರು ಹೇಳಿದ್ದಾರೆ[೩೭] ಇಲ್ಲಿ ಮಧ್ಯದ ಸಾಲುಗಳು ಬಿಟ್ಟುಹೋಗಿರುಬಹುದೇ ಎಂದ ಅನುಮಾನದ ಜೊತೆಗೆ, ಇದು 'ಶುಕನಾಸಿ'ಯ ಬಗ್ಗೆ ಹೇಳುತ್ತಿರಬಹುದೇ ಎಂಬ ಸಂಶಯವೂ ಇದೆ.

ಹೀಗೆ ಮಯಮತವು ನೀಡಿರುವ ವಿವರಗಳ ಹಿನ್ನೆಲೆಯಲ್ಲಿ ಕೆಲವು ದಾಕ್ಷಿಣಾತ್ಯ ದೇವಾಲಯಗಳ ಪ್ರಭೇಧಗಳನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.[೩೮] ಇನ್ನೂ ಕೆಲವು ದೇವಾಲಯಗಳ ಪ್ರಭೇದಗಳನ್ನು ಈ ಕೃತಿಯ ಹಿನ್ನೆಲೆಯಲ್ಲಿ ಗುರುತಿಸಬಹುದಾಗಿದೆ. ಕುರುಡುಮಲೆಯ ಸೋಮೇಶ್ವರ ದೇವಾಲಯವು 'ದ್ವಿತಲಪರ್ವತ' ರೀತಿಗೆ ಸೇರಿದೆ. ಇದರಲ್ಲಿ ಶಿಖರವು ವೃತ್ತಾಕಾರವಾಗಿದ್ದು, ಕೂಟ-ಕೋಷ್ಠಗಳು ಗ್ರಂಥದಂತೇ ಇದೆ; ನಾಸಿಗಳೂ ಕೂಡಾ ಗ್ರಂಥದಂತೇ ಇದೆ. ಅಂತೇ ಹಂಪೆಯ ಅನಂತಶಯನಗುಡಿಯ ತಲಗಳು 'ದ್ವಿತಲ ಗಾಂಧಾರ' ರೀತಿಗೆ ಸೇರುತ್ತದೆ. 'ತ್ರಿತಲ ಶ್ರೀಭೋಗ' ರೀತಿಯನ್ನು ಬೆಂಗಳೂರಿನ ವೆಂಕಟರಮಣ, ಮಂಗಾಪುರದ ಕಲ್ಯಾಣ ವೆಂಕಟೇಶ್ವರ, ಇಕ್ಕೇರಿಯ ಅಘೋರೇಶ್ವರ ಮತ್ತು ಹಂಪೆಯ ಚಂದ್ರಶೇಖರ – ಈ ದೇವಾಲಯಗಳಲ್ಲಿ ಕಾಣಬಹುದು. ತ್ರಿತಲ-ಅಷ್ಟಮುಖದ ಶಿಖರವಿರುವ ಹಲಸೂರಿನ ಸೋಮೇಶ್ವರ ದೇವಾಲಯವು 'ತ್ರಿತಲ ವಿಮಲಾಕೃತಿ' ಪ್ರಭೇಧಕ್ಕೆ ಸೇರುವುದಾಗಿದ್ದು, ಇದರಲ್ಲಿ ಗ್ರಂಥದಲ್ಲಿ ಹೇಳಿರುವಂತೆ ೧೨೦ ನಾಸಿಗಳಿವೆ. ಮಯಮತವು ಹೇಳುವ ದೇವಾಲಯಗಳ ಲಕ್ಷಣಗಳು ಈ ದೇವಾಲಯಗಳಿಗೆ ಹೊಂದಾಣಿಕೆಯಾಗುತ್ತವೆ. ಆದರೆ, ಮಯಮತ ಗ್ರಂಥದ ಕಾಲವನ್ನು ೯ನೇ ಶತಮಾನದ ಆರಂಭದಿಂದ ೧೨ನೇ ಶತಮಾನದವರೆಗೆ ಎಂದು ಗುರುತಿಸಲಾಗಿದೆ (ಪು.ಥಟಋ). ಮೇಲೆ ಹೇಳಿದ ದೇವಾಲಯಗಳ ಕಾಲವು ವಿಜಯನಗರ ಹಾಗೂ ನಂತರದ ಕಾಲದವಾಗಿವೆ. ಹೀಗಾಗಿ, ಬೇರೆ ಕೃತಿಗಳ ಸಹಾಯದಿಂದ ಇವುಗಳ ಬೇರೊಂದು ಪ್ರಭೇದಗಳನ್ನೂ ಗುರುತಿಸಲು ಸಾಧ್ಯವಿರಬಹುದು ಎಂಬ ಅನುಮಾನದಿಂದ ಇಲ್ಲಿ ಅವುಗಳನ್ನು ಕೈಬಿಡಲಾಗಿದೆ. ಇದು ಈ ಲೇಖನದ ಪರಿಮಿತಿಯ ಜೊತೆಗೆ ಮುಂದಿನ ಅಧ್ಯಯನದ ದಿಕ್ಸೂಚಿಯೂ ಆಗಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. **ಕಾಶ್ಯಪಶಿಲ್ಪ** – ೨೫.೧೮–೨೦.

೨. ಈ ಬಗ್ಗೆ 'ಭೂಮಿಲಂಬ' ಎಂಬ ಪದವನ್ನು ಮಯಮತವು ಬಳಸಿದೆ. ಈ ಶಬ್ದವು ತಲಗಳಿಗೆ ಮಾತ್ರ ಅನ್ವಯಿಸುವುದೋ ಅಥವಾ ಶಿಖರದ ಆಕಾರ ಮತ್ತು ಅಳತೆಗೂ ಅನ್ವಯಿಸುವುದೋ ಸ್ಪಷ್ಟವಿಲ್ಲ.

೩. ನಾಗರ–ದ್ರಾವಿಡ–ವೇಸರಗಳಿಗೆ ಪರ್ಯಾಯವಾಗಿ ಶಿಖರವನ್ನು ಕ್ರಮವಾಗಿ ಬ್ರಹ್ಮಛಂದ, ವಿಷ್ಣುಛಂದ ಮತ್ತು ರುದ್ರಛಂದ ಎಂದೂ ಗುರುತಿಸುವ ಪದ್ಧತಿ ಇದೆ (*Encyclopaedia of Indian Temple Architrecture volumes*); ಇದಕ್ಕೆ ಇರುವ ಆಧಾರ ನನಗೆ ಗೊತ್ತಿಲ್ಲ.

೪. ಕೆಲವೆಡೆ ಈ ರೀತಿಯ ಉಲ್ಲೇಖ ದೊರೆಯುವುದಾದರೂ ನನಗೆ ಆಧಾರ ಸಿಕ್ಕಿಲ್ಲ.

೫. 'ಕ್ಷುದ್ರಾಲ್ಪ ಮಧ್ಯಮ ವರಾದಿ ವಿಮಾನಂ' (೧೧–೨೭) ಎಂದಿದೆ.

೬. ಇದನ್ನು 'ಪ್ರಕ್ಷಿಪ್ತ' ಎಂದು ಗ್ರಂಥದ 'ಪರಿಚಯ'ದಲ್ಲಿ ಹೇಳಿದೆ (p.xliii)

೭. ಆವರಣದಲ್ಲಿರುವ ಸಂಖ್ಯೆಗಳು ಮಯಮತ ಗ್ರಂಥದ ಅಧ್ಯಾಯ ಮತ್ತು ಶ್ಲೋಕಸಂಖ್ಯೆಯನ್ನು ಹೇಳಿದೆ.

೮. ಅ.೧೯, ಟಿಪ್ಪಣಿ–೧೭.

೯. ಕರ್ನಾಟಕದಲ್ಲಿ 'ಷಡಶ್ರ ಆಕಾರದ ಶಿಖರ ಇಲ್ಲವೆನಿಸುತ್ತದೆ.

೧೦. ನಾಗರ–ದ್ರಾವಿಡ–ವೇಸರ ಪ್ರಭೇಧದಲ್ಲಿ, ಆರು ಮತ್ತು ಎಂಟು ಮುಖದ ಶಿಖರವನ್ನು 'ದ್ರಾವಿಡ' ಎಂಬ ಒಂದೇ ಹೆಸರಿನಿಂದ ಕರೆದಿದೆ. ಆದರೆ, ಇದರಲ್ಲಿ ೬ ಮುಖದ ಶಿಖರವನ್ನು 'ಸ್ಕಂಧಕಾಂತ' ಎಂದೂ, ೮ ಮುಖದ ಶಿಖರವನ್ನು 'ಸ್ವಸ್ತಿಬಂಧ' ಎಂದೂ ಹೆಸರಿಸಿದೆ. ಹೀಗೆ ಇದರಲ್ಲಿ ಹೆಚ್ಚಿನ ಪ್ರಭೇದಗಳಿವೆ.

೧೧. ಇದರಲ್ಲಿ ಕೂಟ–ಶಾಲಾಗಳ ಒಂದು ತಲ/ಹಾರ ಮಾತ್ರ ಇರುತ್ತದೆ.

೧೨. ನಾನು ಈ ಹಿಂದೆ ಈ ಬಗ್ಗೆ ಬರೆದ ಲೇಖನ ('ಶಾಸ್ತ್ರಗ್ರಂಥಗಳಲ್ಲಿ ನಿರೂಪಿತವಾದ ದೇವಾಲಯ ಮೇಲ್ಕಟ್ಟಡದ ರಚನೆ'– **ಇತಿಹಾಸ ದರ್ಶನ**, ಸಂ.೧೦, (ಸಂ.) ಸೂರ್ಯನಾಥ ಕಾಮತ್ ಮತ್ತು ಪಿ.ವಿ. ಕೃಷ್ಣಮೂರ್ತಿ, ೧೯೯೬, ಪು.೧೬೮–೧೭೫) ಮತ್ತು ಮಿಥಿಕ್ ಸೊಸೈಟಿಯ ಭಾಷಣದಲ್ಲಿ (೨೪–೧೧–೨೦೦೭) ನಾಸಿಗಳ ಸಂಖ್ಯೆಯು ಹೊಂದುತ್ತಿಲ್ಲವೆಂದು ಹೇಳಿದ್ದೆ. ಈಗ ಅದನ್ನು ಹೊಂದಿಸಲು ಸಾಧ್ಯವಾಗಿದೆ.

೧೩. ವಿವರಗಳಿಗೆ ನೋಡಿ; ಕೂ.ಸ.ಅಪರ್ಣ –"ಶಿಲ್ಪಶಾಸ್ತ್ರಗ್ರಂಥಗಳ ಹಿನ್ನೆಲೆಯಲ್ಲಿ ದೇವಾಲಯದ ಭಿತ್ತಿಯ ಬೆಳವಣಿಗೆ– ಒಂದು ಅಧ್ಯಯನ" (ಸಂ) ಸೂರ್ಯನಾಥ ಕಾಮತ್, **ಇತಿಹಾಸ ದರ್ಶನ**, ಸಂ.೮, ೧೯೯೩ (ಪು.೨೭–೪೦)

೧೪. ಇದನ್ನು 'ವೃತ್ತಾಕಾರದ ರುದ್ರಛಂದ ಶಿಖರ' ಎಂದು ತಪ್ಪಾಗಿ ಗುರುತಿಸಲಾಗಿದೆ (*Encyclopaedia of Indian Temple Architecture*, Vol.1, pt.4A, p.12).

೧೫. ಅ.೨೦, ಟಿಪ್ಪಣಿ.೧೧.

೧೬. ೬೨ ಅಲ್ಪನಾಸಿಗಳಿರುತ್ತವೆ ಎಂದು ಅನುವಾದದಲ್ಲಿದೆ. ಆದರೆ, 'ನವಾಷ್ಟೈ' ಎಂದಿರುವುದರಿಂದ ಇಲ್ಲಿ ೭೨ ಅಲ್ಪನಾಸಿಗಳಿರುತ್ತವೆ.

೧೭. ಸಾಮಾನ್ಯ ರಚನೆಯ ಹಿನ್ನೆಲೆಯಲ್ಲಿ ನೋಡಿದರೆ ತಲಪ್ರಸ್ತರ ಮತ್ತು ವೃತ್ತಸ್ಫುಟಿತಗಳ ಸಂಖ್ಯೆ ಹೆಚ್ಚಾಯಿತೆಂದು ತೋರುತ್ತದೆ.

೧೮. K.R.Srinivasan – Jaina Art and Architecture under Ganga's of Talakad(p.169); (ed)U.P.Shah and M.A Dhaky- *Some Aspects of Jaina Architecture* - 1975(p.161-184).

೧೮ಅ. ಹಂಪೆಯ ಪಿತಲ ದೇವಾಲಯದಲ್ಲಿ ದ್ವಿತೀಯ ತಲದಲ್ಲಿ ಮಧ್ಯದಲ್ಲಿ ಶಾಲಾ ಇದ್ದು, ಅದರ ಮೇಲೆ 'ಗೃಹಪಿಂಡಿ' ಮತ್ತು 'ತಲಪ್ರಸ್ತರ' ಸೇರಿದಂತೆ ಮತ್ತೊಂದು ಶಾಲಾ ಇದೆ. ಬಹುಶಃ 'ಸೀತ್ರಶಾಲಾ' ಎಂದರೆ ಇದೇ ರಚನೆಯೇ ಇರಬೇಕು. ಇದು ಇಲ್ಲಿ 'ಹಸ್ತಿಪೃಷ್ಠ' ರೀತಿಗೆ ಸಂಬಂಧಿಸಿರುವುದರಿಂದ, ಅದರ ಕೆಳಭಾಗವು 'ಶಾಲಾ'ದಂತಿದ್ದು, ಅದರ ಮುಚ್ಚಿಗೆ (ಶಿಖರ)ಯ ನಾಸಿಯಲ್ಲೂ 'ಶಾಲಾ' ಇರಬೇಕೆಂದು ಹೇಳುತ್ತಿರಬಹುದು.

೧೯. ಇದರಂತೆ, ಆಯತಾಕಾರದ ಅಧಿಷ್ಠಾನಕ್ಕೆ – ಅವಕಾಶವಿದ್ದರೂ, ಹಸ್ತಿಪೃಷ್ಠ ದೇವಾಲಯಗಳ ಅಧಿಷ್ಠಾನವು ಹಸ್ತಿಪೃಷ್ಠಾಕಾರಲ್ಲೂ ಇರುತ್ತದೆ.

೨೦. ತ್ರಿತಲ ದೇವಾಲಯಗಳಲ್ಲಿ ಕೂಟ–ಶಾಲಾಗಳ ೨ ತಲ ಇರುತ್ತದೆ.

೨೧. ಶ್ಲೋಕದಲ್ಲಿ 'ಅಷ್ಟಾರ್ಧನಾಸಿಕಮದಲ್ಪಮಥಾಲ್ಪಮಷ್ಟೌ' ಎಂದಿದೆ. ಇದನ್ನು ಅನುವಾದದಲ್ಲಿ 'Eight engaged niches (=ನಾಸಿ) and 8 small ones in the roof' ಎಂದು ಹೇಳಿದ್ದಾರೆ.

೨೨. ಇಲ್ಲ–

೨೩. ವರ್ಷಸ್ಥಲ/ಜಲಸ್ಥಲ =(gutter) is placed behind the row of aediculae crowning the entablature of the first

storey, it runs along the wall making the level of pillars of the second storey. (ಅ.೨೨, ಟಿಪ್ಪಣಿ.೯)

೨೪. ಈ ರೀತಿಯ ನಾಸಿಯ ಬಗ್ಗೆ ವಿವರ ದೊರೆತಿಲ್ಲ.

೨೫. 'ನೀಡ' ಎಂದರೆ 'ಪಂಜರ' ಎಂದು ಇಲ್ಲಿ ಹೇಳಿದ್ದೇನೆ. ಏಕೆಂದರೆ, ಇದನ್ನು ಗ್ರಂಥವು ಕೂಟ-ಶಾಲಾಗಳ ಜೊತೆಯಲ್ಲಿ ಹೇಳಿ, ಅದರಷ್ಟೇ ಎತ್ತರವನ್ನು ಹೇಳಿದೆ.

೨೬. 'ಸೌಷ್ಠಿಕಗಳ ಮಸ್ತಕ' ಎಂದರೆ, ಕೂಟಗಳ ಮೇಲಿನ ಮುಚ್ಚಿಗೆಯ ಭಾಗ.

೨೭. ಅ.೨೧, ಟಿಪ್ಪಣಿ.೩೦.

೨೭ಅ. ಅನುವಾದದಲ್ಲಿ ಇದನ್ನು ೩೦ ನಾಸಿಗಳು ಎಂದು ಹೇಳಲಾಗಿದೆ.

೨೮. ಇಂತಹ ನಾಸಿಯ ಬಗ್ಗೆ ವಿವರವಿಲ್ಲ.

೨೯. ಅ.೨೧, ಟಿಪ್ಪಣಿ.೨೦.

೩೦. 'ಲಂಬಪಂಜರ'ವನ್ನು ಹಾರಾಂತರದಲ್ಲಿ ಹೇಳಿರುವುದರಿಂದ ಇದು ನಾಸಿಕೋಷ್ಠವನ್ನು ಸೂಚಿಸುವಂತಿದೆ.

೩೧. 'ನಾನಾಚಿತ್ರೈರ್ವಿಚಿತ್ರಿತಂ' ಎಂಬುದನ್ನು 'various colours' ಎಂದು ಅನುವಾದಿಸಲಾಗಿದೆ. ಅದು ಬಣ್ಣಕ್ಕಿಂತಲೂ ಚಿತ್ರ/ಶಿಲ್ಪವನ್ನು ಸೂಚಿಸುತ್ತಿರುವಂತಿದೆ.

೩೨. ಅ.೨೨, ಟಿಪ್ಪಣಿ.೧೩.

೩೩. 'ಕರ್ಣಕೂಟದ ಮಧ್ಯೆ ಮುಂಚಾಚು ಇರುವುದರಿಂದ ಇದಕ್ಕೆ 'ಭದ್ರಕೂಟ' ಎಂದು ಹೆಸರು' ಎನ್ನಲಾಗಿದೆ (ಅ.೨೨, ಟಿಪ್ಪಣಿ.೧೪)

೩೩ಅ. 'ಕ್ರಕರೀಕೃತ' ಬಗ್ಗೆ ಸಂಪಾದಕರು, 'The term seems to imply that aediculae are shaped like buildings with four cardinal foreparts' ಎಂದಿದ್ದಾರೆ (ಅ.೨೨, ಟಿಪ್ಪಣಿ-೭)

೩೪. ಟಿಪ್ಪಣಿಯಲ್ಲಿ 'ಅವೃತಾವಾಸಪಿಂಡಿ'ಯ ಬದಲು 'ವೃತಾವಾಸಪಿಂಡಿ' ಎಂದು ಹೇಳಲಾಗಿದೆ (ಅ.೨೨, ಟಿಪ್ಪಣಿ.೫)

೩೪ಅ. ಚತುಷ್ತಲ ದೇವಾಲಯಗಳಲ್ಲಿ ಇರಬೇಕಾದ ಒಟ್ಟುನಾಸಿಗಳ ಸಂಖ್ಯೆಯನ್ನು ಹೇಳಿಲ್ಲ. ಕೂಟ, ಶಾಲಾಗಳ ಸಂಖ್ಯೆಯನ್ನು ಹೇಳಿದ್ದರೂ. ತಲಪ್ರಸ್ತರದ ನಾಸಿಗಳ ಸಂಖ್ಯೆಯನ್ನು ಹೇಳಿಲ್ಲ. ಹೀಗಾಗಿ ಎಷ್ಟು ನಾಸಿಗಳಿರಬೇಕು ಎಂದು ಲೆಕ್ಕ ಹಾಕಲು ಆಗುವುದಿಲ್ಲ.

೩೫. 'ಅರ್ಧಕೋಟ' ಯ ಬಗ್ಗೆ ಸಂಪಾದಕರಕು, 'Literally, curved end' – thus it may represent an element of timber work of a wagon roof gable (or naturally) as it is the case, here, the same element used as a decorative feature' ಎನ್ನಲಾಗಿದೆ (ಅ.೨೨, ಟಿಪ್ಪಣಿ.೨೭).

೩೬. ಅ.೨೨, ಟಿಪ್ಪಣಿ.೩೦.

೩೬ಅ. 'ವೇದಿಕಾ'ವು ನಾಸಿಯಿಂದ ಅಲಂಕೃತಗೊಂಡಿರಬೇಕೆಂದು ಒಂದೆಡೆ ಹೇಳಿದೆ.

೩೭. ಅ.೨೨, ಟಿಪ್ಪಣಿ.೨೮.

೩೮. ಬಾದಾಮಿಯ ಮಾಲೆಗಿತ್ತಿ ಶಿವಾಲಯ, ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯ, ಶ್ರವಣಬೆಳಗೊಳದ ಚಾವುಂಡರಾಯ ಬಸದಿ-ಮುಂತಾದೆಡೆಗಳಲ್ಲಿ, ಮೊದಲ ತಲದ ಮೇಲೆ ಸುತ್ತ 'ಖಂಡಹರ್ಮ್ಯ'ವಿದ್ದು, ಇವುಗಳ ಬಗ್ಗೆ ಯಾವ ರೀತಿ ಲೆಕ್ಕ ಹಾಕಬೇಕೆಂದು ತಿಳಿದಿಲ್ಲ.

## ಗ್ರಂಥಋಣ


೧. ಮಯಮತಂ– (ಸಂಸ್ಕೃತ ಮತ್ತು ಇಂಗ್ಲೀಷ್ ಅನುವಾದ) – ಬ್ರೂನೋ ಡಗೆನ್ಸ್, ಇಂದಿರಾಗಾಂಧಿ ನ್ಯಾಶನಲ್ ಸೆಂಟರ್ ಫಾರ್ ದಿ ಆರ್ಟ್ಸ್ – ನವದೆಹಲಿ, ೧೯೮೫.

೨. ಕೂ.ಸ.ಅಪರ್ಣ – ದೇವಾಲಯ ವಾಸ್ತುಶಿಲ್ಪ ಪರಿಚಯ – ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

3. Mich el W.Meister & M.A.Dhaky (Ed) –*Encyclopaedia of Indian Temple Architecture*- Vol.I pt.2 & 4A –American Institute of Indian Studies, New Delhi 1986.

# ಕರ್ನಾಟಕದ ಬೌದ್ಧ ಕೇಂದ್ರಗಳು

– ಡಾ|| ಜಯದೇವಿ ಗಾಯಕವಾಡ*

ಕರ್ನಾಟಕದಲ್ಲಿ ಮೌರ್ಯರ ಅಶೋಕನಿಂದ ಬೌದ್ಧಧರ್ಮ ಹೆಚ್ಚಿನ ಪ್ರಾಧಾನ್ಯ ಪಡೆಯಿತು. ಬಾದಾಮಿ ಬೌದ್ಧರ ಕೇಂದ್ರವಾಗಿತ್ತು. ಚಾಲುಕ್ಯರು ಸಹ ಧರ್ಮ ಸಮನ್ವಯದ ಹಾದಿ ತುಳಿಯಲು ಪ್ರಾಧಾನ್ಯತೆ ನೀಡಿದ್ದಾರೆ. ಹ್ಯುಯೆನ್‌ತ್ಸಾಂಗನು ಇಮ್ಮಡಿ ಪುಲಕೇಶಿಯು ಬಾದಾಮಿ ಐಹೊಳೆಗಳ ಬೌದ್ಧ ಸ್ಮಾರಕ, ವಿಹಾರಗಳನ್ನು ಕಟ್ಟಿಸಿದನೆಂದು ಹೇಳುತ್ತಾನೆ. ಬಾದಾಮಿಯಲ್ಲಿ ಬೌದ್ಧ ಶಿಲ್ಪವನ್ನು ಗುಹೆ ಎರಡರ ಮತ್ತು ಮೂರರ ನಡುವೆ ನೈಸರ್ಗಿಕ ಗುಹೆಯಲ್ಲಿ ಕಾಣಬಹುದು. ಇದು ಬೋಧಿಸತ್ವ ಪದ್ಮಪಾಣಿಯದೆಂದು ಗುರುತಿಸಲಾಗಿದೆ. ಅಷ್ಟಭಯಗಳ ದೃಶ್ಯವನ್ನು ಐಹೊಳೆಯಲ್ಲಿ ಕಾಣಬಹುದು. ಇದನ್ನು ಮೊದಲು ಜಿನ ಶಿಲ್ಪವೆಂದು ಹೇಳಿದ್ದರು. ನಂತರ ಡಾ.ಎಸ್. ಶೆಟ್ಟರ್ ಬೌದ್ಧ ವಿಹಾರವೆಂದು ಗುರುತಿಸಿದರು. ಬುದ್ಧನ ಜೀವನ ಘಟನೆ ಜಾತಕ ಕಥೆಗಳ ಕುರಿತಾದ ಸನ್ನಿವೇಶಗಳ ಶಿಲ್ಪಗಳು ಇಲ್ಲಿವೆ. ರಾಷ್ಟ್ರಕೂಟರ ಕಾಲದಲ್ಲಿ ಬೌದ್ಧ ಧರ್ಮ ಅವನತಿ ಹೊಂದಿತು. ಬಾದಾಮಿಯಲ್ಲಿರುವ ಮಯಣದ ಬಸದಿ, ಮೇಣದ ಬಸದಿಗಳು ಪ್ರಾಚೀನ ಕಾಲದಲ್ಲಿ ಬೌದ್ಧಾಲಯಗಳಾಗಿದ್ದವು. ಇಲ್ಲಿಯ ಶಾಸನಗಳು ಮೂರನೆಯ ಶತಮಾನಕ್ಕೆ ಸೇರಿದವು. ಇವು ಪ್ರಾಕೃತ ಭಾಷೆಯ ಬೌದ್ಧ ಶಾಸನಗಳೆಂದು ಗುರುತಿಸಲಾಗಿದೆ. ೧೯೮೬ರಲ್ಲಿ ಹಂಪಿ ಪುರಾತತ್ವ ಶೋಧದಿಂದ ಬೌದ್ಧರಿಗೆ ಸಂಬಂಧಪಟ್ಟ ಕೆಲ ಅಂಶಗಳು ಬೆಳಕಿಗೆ ಬಂದಿವೆ.

ಕ್ರಿ.ಶ. ೬೦೦ಕ್ಕಿಂತ ಪೂರ್ವದಲ್ಲಿ ಕನ್ನಡ ನಾಡಿನಲ್ಲಿ ಬೌದ್ಧ ಧರ್ಮ ನೆಲೆಗೊಂಡಿತ್ತೆಂಬುದಕ್ಕೆ ಬಳ್ಳಿಗಾವೆಯ ಕ್ರಿ.ಶ. ೧೦೬೪ ಮತ್ತು ೧೦೬೭ರ ಶಾಸನಗಳು ಸ್ಪಷ್ಟ ಆಧಾರಗಳಾಗಿವೆ. ಇವು ರೂಪಭಟ್ಟಯ್ಯ ಎಂಬುವವನು ಹದಿನೆಂಟು ಅಗ್ರಹಾರ ಹೊಂದಿದ ವಡ್ಡರಾವುಳ ಗ್ರಾಮದಲ್ಲಿ ಚಾಲುಕ್ಯ ಚಕ್ರವರ್ತಿಗಳು ನಿರ್ಮಾಣ ಮಾಡಿದ್ದನ್ನು ಹೇಳುತ್ತವೆ. ತಾರಾಭಗವತಿ ಹಾಗೂ ಲೋಕೇಶ್ವರಗಳು ಬೌದ್ಧರ ದೇವತೆಗಳು. ಚಾಲುಕ್ಯ ತ್ರೈಲೋಕ್ಯ ಹಂಪಭಟ್ಟನ ಹೆಂಡತಿ ನಾಗಿಯಕ್ಕ ಬಳ್ಳಿಗಾವೆಯ ತಾರಾಭಗವತಿ ದೇಗುಲ ನಿರ್ಮಿಸಿ ಬೌದ್ಧ ಬಳಾರಿಗೆ ಕೊಟ್ಟ ಭೂದಾನವನ್ನಿವು ಹೇಳುತ್ತವೆ. ಬಳ್ಳಿಗಾವೆಯ ಹತ್ತಿರದ ಪುಲ್ಲೆಯ ಬಯಲ್ ಬೌದ್ಧರಿಗೆ ಪ್ರಿಯವಾದ ಕ್ಷೇತ್ರವಾಗಿತ್ತೆಂದು ಹಯವದನರಾಯರು ಉಲ್ಲೇಖಿಸಿದ್ದಾರೆ.

ಉತ್ತರ ಕರ್ನಾಟಕದ ಗೋಕರ್ಣದ ಬಳಿಯ ತೊರ್ಕೆಯಲ್ಲಿ ಸಹ ಬೌದ್ಧ ಗುಹೆಗಳಿದ್ದವೆಂದು ಕೆ.ಜಿ. ಕುಂದಣಗಾರರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪ್ರಾಚೀನ ಕಾಲದ ತಗರ ನಗರವೇ ತೊರ್ಕೆ ಆಗಿತ್ತು. ಶಿಲಾಹಾರರು ಒಂದೆಡೆ ಕೊಪಣ ಪುರವಾಧೀಶ್ವರರು ಎಂದು ಹೇಳಿಕೊಂಡಂತೆ, ಇಲ್ಲಿ ತಗರ ಪುರವಾಧೀಶ್ವರರು ಎಂದು ಹೇಳಿಕೊಂಡಿದ್ದಾರೆ. ಕೊಪ್ಪಳ ತೊರ್ಕೆ(ಗೋಕರ್ಣ)ಗಳು ಬೌದ್ಧರ ಕೇಂದ್ರಗಳಾಗಿದ್ದವು. ಕರಾವಳಿ ಪ್ರದೇಶದಲ್ಲಿ ಬೌದ್ಧರ ಕೇಂದ್ರಗಳು ಇದ್ದವೆಂದು ರ್‍ಹಿಸ್‌ಡೇವಿಡ್ಸ್ ಅವರು ಹೇಳುತ್ತಾರೆ. ಉಡುಪಿ, ಗೋಕರ್ಣ, ಮಹಾಬಲ, ಕದರಿಯ ಲೋಕೇಶ್ವರ ಈ ಎಲ್ಲಾ ಹೆಸರುಗಳೂ ಹಿಂದೆ ಬೌದ್ಧರ ದೇವತೆಗಳೇ ಆಗಿದ್ದವು.

ಮಂಗಳೂರು ಹತ್ತಿರದ ಕದರಿ ಪ್ರಾಚೀನ ಬೌದ್ಧರ ನೆಲೆಯಾಗಿತ್ತು. ಇದನ್ನು 'ಕದರಿ ವಿಹಾರ' ಎಂದು ಕರೆಯುವುದು ವಾಡಿಕೆ. ಕದರಿ ಗುಡ್ಡದ ಗುಹೆಗಳು ಪಾಂಡವರ ಗುಹೆಗಳೆಂದು ಪ್ರಚಲಿತವಾಗಿವೆ. ಇವು ಬೌದ್ಧರ ಸ್ತೂಪಗಳಾಗಿದ್ದು ಅವಶೇಷಗಳನ್ನು ಹೊಂದಿವೆ. ಕಾರವಾರದ ಸಮೀಪದಲ್ಲಿರುವ ದೀಪಕ್‌ನಾಡ್ ಸುಂದರಿಕಾ ಗ್ರಾಮವು ವಿಹಾರ, ಸಂಘಗಳಿಗೆ ಹೋಲುತ್ತದೆ. ಬನವಾಸಿ ಹತ್ತಿರದ ಕಾಡುಗೋರುದಲ್ಲಿ ಕ್ರಿ.ಶ.೧೯೭೯ರಲ್ಲಿ ಭೂ ಅಗೆತದ ಹೊತ್ತಿಗೆ ಬೌದ್ಧ ಸ್ತೂಪಗಳು ದೊರಕಿದ್ದವು. ಇವುಗಳಿಗೆ ಉಪಯೋಗಿಸಿರುವ ಇಟ್ಟಿಗೆಗಳ ಆಧಾರದಿಂದ ಅವುಗಳು ಕ್ರಿ.ಶ. ಎರಡು ಅಥವಾ ಮೂರನೆಯ ಶತಮಾನದ್ದೆಂದು ಹೇಳಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಬಾರಕೂರಿನಲ್ಲಿ ಹಿಂಗುಳಾ ಗುಡಿಯಿದೆ. ಇದು ಇಂದು ಶೈವ ದೇವತೆಯಾಗಿ ಮಾರ್ಪಟ್ಟು ಆರಾಧನಾ ಕೇಂದ್ರವಾಗಿದೆ. ಸನ್ನತಿಯ ಚಂದ್ರಲಾಂಬ, ಕುಕನೂರಿನ ಮಹಾಮಾಯೆ ಇವು

---

* ಉಪನ್ಯಾಸಕರು, ಸರ್ಕಾರಿ ಪ್ರಥಮದರ್ಜೆ ಕಾಲೇಜು, ಬಸವಕಲ್ಯಾಣ, ಬೀದರ – ೫೮೫೩೨೭

ಕೂಡ ಹಿಂಗಳಾ ದೇವತಾ ಹಿನ್ನೆಲೆ ಹೊಂದಿವೆ. ಇವು ಪ್ರಾಚೀನ ಕಾಲದಲ್ಲಿ ಬೌದ್ಧರ ಗುಡಿಗಳಾಗಿದ್ದವು. ಚಂದ್ರವಳ್ಳಿ, ಕೊಪ್ಪಳ, ಸನ್ನತಿಗಳು ಸಹ ಶಾತವಾಹನರ ಆಡಳಿತ ಕ್ಕೊಳಪಟ್ಟಿದ್ದವು. ಆ ಹೊತ್ತಿಗೆ ಮಹಾಯಾನ ಪ್ರಾಬಲ್ಯ ಪಡೆದಿತ್ತು.

ಡಂಬಳದ ಶಾಸನಗಳಲ್ಲಿ ಉಲ್ಲೇಖಗೊಂಡ 'ಪ್ರಜ್ಞಾ' ಎಂಬ ಪದವು ಬೌದ್ಧರ ಧಾರಣೆಯಾಗಿದೆ. ಡಂಬಳ ಶಾಸನ ೧೧೯೫-೯೬ಕ್ಕೆ ಸೇರಿದ ಶಾಸನ. ಬೌದ್ಧರ ಶಾಸನ ತಾರಾದೇವಿ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ. ಕೋಳಿವಾಡ, ಮುಳಗುಂದದ ಶಾಸನ ಕ್ರಿ.ಶ. ೧೧೧೦ಳ ರಲ್ಲಿ ಬೌದ್ಧಧರ್ಮದ ಭರ್ತ್ಸನೆ ಮಾಡುತ್ತದೆ. ಇಲ್ಲಿ ಬೌದ್ಧಮದೇಭ ಪಂಚಾನನ ಎಂಬ ಸನ್ಯಾಸಿಯೊಬ್ಬರ ಹೆಸರಿದೆ. ಶ್ರವಣಬೆಳಗೊಳ ಜೈನರ ಕೇಂದ್ರವಾದರೂ ಇಲ್ಲಿ ಬೌದ್ಧರ ಕುರಿತಾದ ಶಾಸನ (೧೧೨೯)ವಿದೆ. ಶೃಂಗೇರಿ ಮಠದ ಶಾಸನ ಕ್ರಿ.ಶ. ೧೩೮೦ರಲ್ಲಿ ಬೌದ್ಧರ ಮಹಿಮೆ ಹೇಳಿದೆ. ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಚಕ್ಕಿಂಡಿಯಲ್ಲಿ ಕ್ರಿ.ಶ. ೧೧೯೬ರ ಶಾಸನದ ಸಾಲು ಹೀಗಿದೆ :

ಹರಿಗೃಹದಿಂ ಹರಗೃಹದಿಂ ।
ಸುರಗೃಹದಿಂದರಾಹ ಗೃಹದೆ ಬೌದ್ಧಾಲಯದಿಂ ।
ಗೊರವರ ಸವಣರ ಬೌದ್ಧರ
ನೆರವಿಗಳಿಂದಿಂಡೆನಾಡೆ ಸೊಗಯಿಸಿ ತೋರ್ಕುಂ ।

ಇದರಿಂದ ವಿವಿಧ ಮತ ಧರ್ಮಗಳು ಇಲ್ಲಿ ಇದ್ದು, ಅದರಲ್ಲಿ ಬೌದ್ಧಾಲಯ ಬೌದ್ಧರನ್ನು ಸೂಚಿಸುವುದರಿಂದ ಇಂಡಿ ಸುತ್ತಲೂ ಬೌದ್ಧರ ಕೇಂದ್ರಗಳಿದ್ದುವೆಂದು ತಿಳಿಯಬಹುದು. ಕೋಲಾರದ ಅನೇಕ ಭಾಗಗಳಲ್ಲಿ ಬೌದ್ಧ ಧರ್ಮ ಪ್ರಚಾರ ಹೊಂದಿತ್ತು. ಇಲ್ಲಿಯ ಕೆಲವು ಊರುಗಳ ಹೆಸರು ಸಹ ಬೌದ್ಧರ ಮೂಲ ಸೂಚಿಸುತ್ತವೆ. ಅವುಗಳೆಂದರೆ ಮಂಜಲೊಣೆ, ಸುಗಟೂರು, ಮಂಜುಗುಳಿ ಮುಂತಾದವು ಅಲ್ಲದೇ ಶ್ರೀನಿವಾಸಪುರದ ಹರಳಕೋಟೆಯಲ್ಲಿ ಬೌದ್ಧ ಸ್ತೂಪವಿರುವುದು ಕಂಡುಬರುತ್ತದೆ. ಅಲ್ಲಿ ೧೨ ಅಡಿ ಎತ್ತರದ ೪೦ ಅಡಿ ವ್ಯಾಸದ ದಿಬ್ಬವಿದೆ.

'ಚಂದ್ರವಳ್ಳಿ' ಚಿತ್ರದುರ್ಗ ತಾಲೂಕಿನ ಪ್ರಮುಖ ಊರಾಗಿದೆ. ಇದರಲ್ಲಿ ಬೋಧಿವೃಕ್ಷದ ಚಿತ್ರವಿರುವ ನಾಣ್ಯಗಳು ದೊರೆತಿವೆ. ಇಲ್ಲಿ ಬುದ್ಧನ ಕುರಿತಾದ ಸಣ್ಣ ಪುಟ್ಟ ವಿಗ್ರಹಗಳ ಆಕಾರದ ಶಿಲ್ಪ ದೊರೆತಿವೆ. ಚಿತ್ರದುರ್ಗ ಜಿಲ್ಲೆ ಬೌದ್ಧರ ಕೇಂದ್ರವಾಗಿತ್ತೆಂಬುದಕ್ಕೆ ಅಲ್ಲಿಯ ಶಿಲ್ಪಗಳೇ ಸಾಕ್ಷಿ.

'ಕೊಪ್ಪಳ' ಶಿಲಾಯುಗದಲ್ಲಿ ಅಶೋಕನ ಎರಡು ಶಾಸನಗಳು ದೊರೆತಿವೆ. ಶಾತವಾಹನರು ಈ ನಾಡನ್ನು ಆಳಿದರು. ಇದರಿಂದ ಇದು ಬೌದ್ಧ ಧರ್ಮದ ಕೇಂದ್ರವಾಗಿತ್ತೆಂದು ಎಲ್ಲರ ಅಭಿಪ್ರಾಯ. ಜೊತೆಗೆ ಶಾಸನಗಳೂ ಸಹ ದೊರಕಿವೆ. ಇಲ್ಲಿಯ ಬೌದ್ಧ ವಿಹಾರವೂ ಇದಕ್ಕೆ ಸಾಕ್ಷಿಯಾಗಿದೆ. ಗವಿಮಠದ ಹತ್ತಿರವಿರುವ ಪಾಲ್ಕಿಗುಂಡು, ಮಳೆಯ ಮಲ್ಲೇಶ್ವರ ಗವಿಗಳೂ ಬೌದ್ಧರ ವಿಹಾರವಾಗಿದ್ದವು. ಅಲ್ಲದೆ ಬಿಚ್ಚುಗೊಂದಿ ಗ್ರಾಮ ಭಿಕ್ಷುಗಳ ಗೊಂದಿ ಗ್ರಾಮವಾಗಿತ್ತೆಂದು ಡಾ. ದೇವರಕೊಂಡಾರೆಡ್ಡಿಯವರು ಕೊಪ್ಪಳ ಜಿಲ್ಲೆಯ ಶಾಸನಗಳು ಸಂಪುಟದ ಪ್ರಸ್ತಾವನೆಯಲ್ಲಿ ಬರೆದಿದ್ದಾರೆ. ಅಲ್ಲಿ ಶಾತವಾಹನರ ಕಾಲದ ಶಾಸನಗಳೂ, ನಾಣ್ಯಗಳೂ ದೊರೆತಿವೆ. ಕುಕನೂರಿನಲ್ಲೂ ಸಹ ಬೌದ್ಧರ ವಿಹಾರಗಳಿದ್ದವು. ಅಲ್ಲಿದ್ದ ವಿಹಾರಗಳು ಈಗ ದೇವಾಲಯಗಳಾಗಿ ಮಾರ್ಪಾಡಾಗಿ ನಿಂತಿವೆ.

'ಕನಕಗಿರಿ' ಕೊಪ್ಪಳ ಜಿಲ್ಲೆಯ, ಗಂಗಾವತಿ ತಾಲೂಕಿನ ಊರು. ಅಶೋಕ ತನ್ನ ಸುವರ್ಣಗಿರಿಯನ್ನು ಮಾಡಿಕೊಂಡಿದ್ದು ಇಲ್ಲಿಯೇ ಎಂಬ ಐತಿಹ್ಯ. ಮಸ್ಕಿ, ಚಂದ್ರವಳ್ಳಿ, ಸಿದ್ಧಾಪುರ, ಬ್ರಹ್ಮಗಿರಿಗಳೂ ಸಹ ಬೌದ್ಧರ ಕೇಂದ್ರಗಳಾಗಿದ್ದವು ಎಂಬುದನ್ನು ಮರೆಯುವ ಹಾಗಿಲ್ಲ. ಅಶೋಕನ ಕಾಲ ಬೌದ್ಧರ ಕಾಲದ ಸುವರ್ಣಯುಗವಾಗಿತ್ತೆಂದು ಊಹಿಸಬಹುದು.

ಇವುಗಳೆಲ್ಲಕ್ಕಿಂತ ಮುಖ್ಯವಾಗಿ ಪ್ರಾಚೀನ ಬೌದ್ಧ ವಿದ್ಯಾಕೇಂದ್ರಗಳಲ್ಲಿ ಸನ್ನತಿಯೂ ಒಂದಾಗಿತ್ತು. ಸನ್ನತಿ ಗುಲಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿನಲ್ಲಿದೆ. ಇದರ ಪಕ್ಕದಲ್ಲಿರುವ ಕಣಗಿನಹಾಳ ಕೂಡಾ ಬೌದ್ಧರ ಕೇಂದ್ರವಾಗಿದೆ. ಅನೇಕ ಉಪಾಸಕರು, ಭಿಕ್ಷುಗಳೆಲ್ಲ ಇಲ್ಲಿಗೆ ಬಂದು ಆಡಳಿತ, ಧಾರ್ಮಿಕ, ವಾಣಿಜ್ಯ ಮುಂತಾದುವುಗಳ ಕೇಂದ್ರವನ್ನಾಗಿ ಸನ್ನತಿಯನ್ನು ಪರಿವರ್ತಿಸಿದರು. ಕರ್ನಾಟಕ ಪ್ರಾಚ್ಯವಸ್ತು ಸಂಶೋಧನಾ ಸಂಸ್ಥೆ ಮತ್ತು ಇತರ ಸಂಸ್ಥೆಗಳು ಇಲ್ಲಿ ಅಧ್ಯಯನ, ಸಂಶೋಧನೆ ಕೈಗೊಂಡು ಅನೇಕ ವಿಷಯಗಳನ್ನು ಬೆಳಕಿಗೆ ತಂದಿವೆ. ಡಾ॥ ಪಿ.ಬಿ. ದೇಸಾಯಿ, ಎಸ್.ಎಚ್.ರಿತ್ತಿ, ಕಪಟರಾಳಕೃಷ್ಣರಾಯರು, ಸೀತಾರಾಮ ಜಾಗೀರದಾರ, ರು.ಮ.ಷಡಕ್ಷರಯ್ಯ, ತಾಳ್ತಜೆ ವಸಂತಕುಮಾರ, ಪೂಜಾರಿ, ಎಚ್.ಟಿ.ತಳವಾರ, ಅ.ಸುಂದರ

ಮುಂತಾದವರು ಅಧ್ಯಯನ ಮಾಡಿ ಸನ್ನತಿಯ ಪ್ರಾಚೀನತೆಯನ್ನು ಎತ್ತಿ ಹೇಳಿದ್ದಾರೆ.

ಸನ್ನತಿಯಲ್ಲಿ ವಿಹಾರಗಳು, ಚೈತ್ಯಾಲಯ ಸ್ತೂಪ ನಿರ್ಮಿಸಿದ್ದಾರೆ. ಕ್ರಿ.ಪೂ. ೩೫೦ರಿಂದ ಕ್ರಿ.ಶ. ೧೩ನೆಯ ಶತಮಾನದವರೆಗೆ ಸನ್ನತಿಯಲ್ಲಿ ಬೌದ್ಧ ಧರ್ಮದ ಕುರುಹುಗಳಿವೆ. ಸನ್ನತಿ ಕೃಷ್ಣೆಯ ಉಪನದಿ ಭೀಮೆಯ ಬಲದಂಡೆಯ ಹತ್ತಿರವಿದೆ. ಇಲ್ಲಿ ಮೂವತ್ತಕ್ಕೂ ಹೆಚ್ಚು ಸಣ್ಣ ಸಣ್ಣ ಪ್ರಾಕೃತ ಶಾಸನಗಳು ದೊರಕಿವೆ. ಮಣ್ಣಿನ ಗೊಂಬೆ, ಶಾಸನ, ಶಿಲ್ಪ, ಫಲಕಗಳೂ ದೊರಕಿವೆ.

ಸನ್ನತಿ ಕರ್ನಾಟಕದಲ್ಲಿಯೇ ಒಂದು ಪ್ರಮುಖ ಬೌದ್ಧ ಕೇಂದ್ರ, ಹಾಗೇ ಪ್ರಾಚೀನ ಬೌದ್ಧರ ವಿದ್ಯಾಕೇಂದ್ರವಾಗಿದೆ.

ಕರ್ನಾಟಕದ ಬೌದ್ಧ ಕೇಂದ್ರಗಳ ಕುರಿತು ಈಗಾಗಲೇ ಅನೇಕ ಸಂಶೋಧಕರು ಅಧ್ಯಯನ ಮಾಡಿದ್ದಾರೆ. ಕರ್ನಾಟಕದ ಬೌದ್ಧರ ಕೇಂದ್ರಗಳ ಕುರಿತು ಸಂಶೋಧನೆ ಇದುವರೆಗೂ ನಡೆದ ಸಂಶೋಧನೆಗಿಂತಲೂ ನಡೆಯಬೇಕಾದ ಸಂಶೋಧನೆ ಇನ್ನೂ ಹೆಚ್ಚಿದೆ.

೧. ಇದುವರೆಗೂ ಗುರುತಿಸಿದ ಬೌದ್ಧಕೇಂದ್ರಗಳ ಕುರಿತು ಅಧ್ಯಯನವಾಗಬೇಕು.

೨. ಬೌದ್ಧರ ಕುರಿತಾದ ಸಮಗ್ರ ಶಾಸನಗಳನ್ನು ಒಂದೆಡೆ ಸೇರಿಸಿ ಅವುಗಳ ಪಠ್ಯ ಹಾಗೂ ಜೊತೆಗೆ ವಿಶ್ಲೇಷಣೆ ಆಗಬೇಕು.

೩. ಜನಪದರ ದೃಷ್ಟಿಯಲ್ಲಿನ ಬೌದ್ಧ ನಂಬಿಕೆಗಳನ್ನು ಒಂದೆಡೆ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ ಪ್ರಕಟಿಸಬೇಕು.

೪. ಬೌದ್ಧರ ಕಾಲದ ಪ್ರಾಚೀನ ವಿದ್ಯಾಕೇಂದ್ರಗಳ ಕುರಿತು ಅಧ್ಯಯನ ಆಗಬೇಕು.

೫. ಬೌದ್ಧರ ವಿಹಾರಗಳು–ಸ್ತೂಪ–ಶಿಲ್ಪಕಲೆಗಳ ಕುರಿತು ಸಂರಕ್ಷಣೆ ಹಾಗೂ ಅವುಗಳ ಬಗ್ಗೆ ಹೆಚ್ಚಿನ ಅಧ್ಯಯನ ಸಂಶೋಧನೆ ಆಗಬೇಕು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. **ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ,** ಡಾ॥ ತಾಳ್ತಜೆ ವಸಂತಕುಮಾರ್, ೧೯೮೮.

೨. **ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ,** ಡಾ॥ ಜಯದೇವಿ ಗಾಯಕವಾಡ, ೨೦೦೨.




# ಕರ್ನಾಟಕದಲ್ಲಿ ಗಜಪೃಷ್ಠಾಕಾರದ ದೇವಾಲಯಗಳು

– ಡಾ॥ ಎಚ್.ಎಸ್. ಗೋಪಾಲ ರಾವ್*

**ಭಾ**ರತೀಯ ವಾಸ್ತು ಎಂದ ತಕ್ಷಣ ನೆನಪಿಗೆ ಬರುವುದು ದೇವಾಲಯಗಳು. ಈವರೆಗೆ ಉಳಿದುಬಂದಿರುವ ಬಹಳ ಕಟ್ಟಡಗಳು ಈ ವರ್ಗಕ್ಕೇ ಸೇರಿರುವುದೂ ಸಹ ವಾಸ್ತುವಿನ ಅಧ್ಯಯನವನ್ನು ದೇವಾಲಯಗಳಿಂದಲೇ ಆರಂಭಿಸಬೇಕಾದ್ದು ಸ್ವಾಭಾವಿಕ. ಈ ಹಿನ್ನೆಲೆಯಲ್ಲಿ ಈವರೆಗೆ ಅಧ್ಯಯನಕ್ಕೆ ಒಳಪಟ್ಟಿರುವ ದೇವಾಲಯಗಳನ್ನು ಅಧಿಷ್ಠಾನದ ವಿನ್ಯಾಸವನ್ನು ಆಧರಿಸಿ, ನಾಲ್ಕು ವರ್ಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ,

೧. ಗಜಪೃಷ್ಠ ೨. ಚಚ್ಚೌಕ ೩. ಆಯತ ಮತ್ತು ೪. ವೃತ್ತ

ಸಾಮಾನ್ಯವಾಗಿ ಭಾರತದ ಯಾವುದೇ ದೇವಾಲಯವನ್ನು ನೋಡಿದರೂ, ಮೊದಲ ನೋಟಕ್ಕೆ ಎಲ್ಲವೂ ಒಂದೇ ರೀತಿಯಲ್ಲಿವೆ ಎನಿಸುತ್ತದೆ. ದೇವರ ನೆಲೆಯೇ ದೇವಾಲಯ ಎಂಬುದು ಒಪ್ಪಿತವಾಗಿರುವ ಮಾತು. ಇದರ ಮೂಲ ಏನು ಎಂಬ ಬಗ್ಗೆ ಸರ್ವಸಮ್ಮತಿಯ ಅಭಿಪ್ರಾಯ ಇನ್ನೂ ಲಭ್ಯವಿಲ್ಲ. ಸಮಾಧಿ ಮಂದಿರಗಳೇ ದೇವಾಲಯಗಳ ಮೂಲ ಎಂಬ ಒಂದು ಅಭಿಪ್ರಾಯವಿದ್ದರೆ, ದೇವಾಲಯಗಳ ಮೂಲ ಬೌದ್ಧ ಚೈತ್ಯಗಳು ಎಂಬ ಅಭಿಪ್ರಾಯವೂ ಇದೆ. ವೈದಿಕ ಯಜ್ಞಸ್ಥಾನಗಳೇ ದೇವಾಲಯಗಳಾಗಿ ಬೆಳೆದು ಬಂದಿವೆ ಎಂಬ ಅಭಿಪ್ರಾಯವೂ ಇದೆ.

ಐಹೊಳೆಯ ದುರ್ಗ ದೇವಾಲಯ ಮತ್ತು ಭಾರತದಲ್ಲಿರುವ ಗಜಪೃಷ್ಠಾಕಾರದ ದೇವಾಲಯಗಳ ಬಗ್ಗೆ ವಿವರವಾಗಿ ಚರ್ಚಿಸಿರುವ ಕೆ.ಆರ್. ಶ್ರೀನಿವಾಸನ್ ೧೮೬೩ರಲ್ಲಿ ಮೊದಲ ಬಾರಿಗೆ ಬೆಳಕಿಗೆ ಬಂದ ದುರ್ಗ ದೇವಾಲಯದ ಹಿನ್ನೆಲೆಯಲ್ಲಿ ಭಾರತದಲ್ಲಿನ ಗಜಪೃಷ್ಠಾಕಾರದ ದೇವಾಲಯಗಳ ಮೂಲವನ್ನು ಕುರಿತು ಚರ್ಚಿಸಿದ್ದಾರೆ. ಪಾಶ್ಚಾತ್ಯ ವಿದ್ವಾಂಸರು ಗಜಪೃಷ್ಠಾಕಾರದ ದೇವಾಲಯಗಳ ಮೂಲವನ್ನು ಬೌದ್ಧ ಚೈತ್ಯಗಳಲ್ಲಿ ಕಾಣುವ ಪ್ರಯತ್ನ ಮಾಡಿದ್ದಾರೆ. ಬೌದ್ಧ ಸ್ಮಾರಕಗಳನ್ನು ಚೈತ್ಯ ಎಂಬ ಹೆಸರಿನಲ್ಲಿ ಗುರುತಿಸುವ ಪ್ರಯತ್ನ ಮಾಡಿದವರು ಪಾಶ್ಚಾತ್ಯ ವಿದ್ವಾಂಸರು. ಅದನ್ನೇ ಭಾರತೀಯ ವಿದ್ವಾಂಸರೂ ಒಪ್ಪಿಕೊಂಡಿದ್ದ ಕಾಲ ಇತ್ತು. ಚೈತ್ಯ ಶಬ್ದದ ಮೂಲ ಇರುವುದು ಚಿತಿ ಶಬ್ದದಲ್ಲಿ; ಚಿತಿಯು ಅಗ್ನಿಮೂಲದ ಸ್ಥಾನ; ಸಾವಿನ ನಂತರ ಮನುಷ್ಯನ ದೇಹವನ್ನು ಅಗ್ನಿಯಲ್ಲಿ ದಹಿಸುವ ಸಂಪ್ರದಾಯ ಭಾರತೀಯರಲ್ಲಿದೆ. ಮನುಷ್ಯನ ದೇಹವನ್ನು ದಹಿಸುವ ಅಗ್ನಿಕುಂಡವೇ ಚಿತಿ. ಬದುಕಿದ್ದಾಗ ಇದ್ದ ಯಜ್ಞಕುಂಡವೇ ಸತ್ತಾಗ ಚಿತಿ; ಇದು ಸಾಮಾನ್ಯವಾಗಿ ದಹನ ಕಾರ್ಯಕ್ಕೆ ಒಗ್ಗಿರುವ ಜನರಿಗೆ ತಿಳಿದಿದೆ. ಆದ್ದರಿಂದ ಚಿತಿಯಾಗಲೀ, ಚೈತ್ಯವಾಗಲೀ ಬೌದ್ಧ ಸಂಪ್ರದಾಯಕ್ಕೆ ಮಾತ್ರ ಸಂಬಂಧಿಸುವುದಿಲ್ಲ. ಬುದ್ಧನ ಅಸ್ತಿ ಮತ್ತು ಅವನ ಬಳಕೆಯ ಪೂಜಾರ್ಹ ವಸ್ತುಗಳನ್ನು ರಕ್ಷಿಸಿಟ್ಟಿದ್ದ ಸ್ಥಳಗಳನ್ನು ಚೈತ್ಯಗಳು ಎಂದು ಗುರುತಿಸಲಾಗುವುದು ಸತ್ಯವಾದರೂ, ಅಲ್ಲೂ ಬುದ್ಧನ ಸ್ಮರಣಿಕೆಗಳೇ ಇದ್ದು, ಅವುಗಳನ್ನು ಇಟ್ಟ ಸ್ಥಳಗಳನ್ನು ಚೈತ್ಯಗಳು ಎಂದು ಸಂಬೋಧಿಸುವುದು ಸೂಕ್ತವೇ ಆಗಿದೆ. ಚಿತಿಯಾಗಲೀ, ಚೈತ್ಯವಾಗಲೀ ಕೇವಲ ಬೌದ್ಧ ಧರ್ಮಕ್ಕೆ ಸಂಬಂಧಿಸಿದ್ದು ಎಂದು ತೀರ್ಮಾನಿಸುವುದು ಸರಿಯಾಗಲಾರದು ಎಂಬುದು ಕೆ.ಆರ್. ಶ್ರೀನಿವಾಸನ್ ಅವರ ಅಭಿಪ್ರಾಯ.[೧೦]

ಈಗ್ಗೆ ಸುಮಾರು ೩೦–೪೦ ವರ್ಷಗಳ ಹಿಂದೆ ಬನವಾಸಿಯಲ್ಲಿ ಉತ್ಖನನ ನಡೆದಾಗ ಅಲ್ಲಿ ಒಂದು ಗಜಪೃಷ್ಠಾಕಾರದ ಕಟ್ಟಡದ ಅವಶೇಷ ಕಂಡಿತ್ತು. ಹೀಗೆ ದೊರೆತ ಅವಶೇಷವು ಬೌದ್ಧ ಚೈತ್ಯ ಅಥವಾ ಹಿಂದೂ ದೇವಾಲಯವೊಂದರ ಅವಶೇಷ ಎಂದು ತಿಳಿಯಲಾಗಿತ್ತು.

ಚೈತ್ಯವು ಸಮಾಧಿಯನ್ನು ಸೂಚಿಸುತ್ತದೆ. ಬೃಹತ್‌ಶಿಲಾಯುಗದ ಕೆಲವು ಸಮಾಧಿಗಳು ಚೈತ್ಯವನ್ನು ಹೋಲುವುದು ಆಕಸ್ಮಿಕವೇನಲ್ಲ. ಚಂದ್ರವಳ್ಳಿಯ ಉತ್ಖನನದಲ್ಲಿ ಗಜಪೃಷ್ಠಾಕಾರದ ಅವಶೇಷಗಳು ಪತ್ತೆಯಾಗಿವೆ. ಅದು ಬೌದ್ಧ ಅಥವಾ

---

* ಸ್ವಸ್ತಿಶ್ರೀ ಸ್ಕಂದ, ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ–೫೬೨೧೨೩.

ಹಿಂದೂ ದೇವಾಲಯವೊಂದರ ಭಾಗವಾಗಿ ಇದ್ದಿರಬಹುದೆಂದು ಊಹಿಸಲಾಗಿದೆ.[೧]

ಇದರಂತೆಯೇ ಬೆಳಗಾವಿ ಸಮೀಪದ ವಡಗಾಂವ್ ಮಾಧವಪುರದಲ್ಲಿ ನಡೆದ ಉತ್ಖನನದಲ್ಲೂ ಇಂತಹ ಒಂದು ನಿವೇಶನ ಪತ್ತೆಯಾಗಿದೆ. ಎರಡು ಕೊಠಡಿಗಳು ಹಾಗೂ ಅವುಗಳಿಗೆ ಸೇರಿದಂತೆ ಒಂದು ಕೈಸಾಲೆ ಇರುವ ಕಟ್ಟಡದ ನಿವೇಶನವೊಂದು ಪತ್ತೆಯಾಗಿದೆ.[೨] ಬನವಾಸಿಯ ಸಮೀಪದ ಗುಡ್ನಾಪುರದಲ್ಲಿ ನಡೆದ ಉತ್ಖನನದಲ್ಲಿ ಕಾಮಜಿನಾಲಯದ ಗಜಪೃಷ್ಠಾಕಾರದ ತಳಪಾಯ ಕಂಡುಬಂದಿದೆ. ಇವೆಲ್ಲವನ್ನೂ ಗಮನಿಸಿದಾಗ ಕರ್ನಾಟಕದಲ್ಲಿ ಬೃಹತ್‌ಶಿಲಾಯುಗದ ಕಾಲದಿಂದಲೂ ಗಜಪೃಷ್ಠಾಕಾರದ ಕಟ್ಟಡಗಳು ನಿರ್ಮಾಣವಾಗುತ್ತಿದ್ದ ವಿಷಯ ಸ್ಪಷ್ಟವಾಗುತ್ತದೆ.

೨೦೦೧ನೆಯ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟದ ಬಳಿ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಇಲಾಖೆ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗಗಳು ಜಂಟಿಯಾಗಿ ನಡೆಸಿದ ಉತ್ಖನನದಲ್ಲಿ ಶಾತವಾಹನರ ಕಾಲದ ಚೈತ್ಯಾಲಯವೊಂದು ಬೆಳಕಿಗೆ ಬಂದಿದೆ.[೩] ಅಲ್ಲೇ ಕೆಲವು ಬೃಹತ್ ಶಿಲಾಯುಗದ ಕಿಂಡಿ ಕೋಣೆಗಳೂ ದೊರಕಿವೆ. ಇದರಿಂದ ರಾಜಘಟ್ಟವು ಬೃಹತ್ ಶಿಲಾಯುಗದ ಕಾಲದಿಂದ ಶಾತವಾಹನರ ಕಾಲದವರೆಗೆ ನಿರಂತರ ಜನವಸತಿಯ ನೆಲೆಯಾಗಿತ್ತು ಎಂದು ತಿಳಿಯುತ್ತದೆ. ಇಲ್ಲಿ ದೊರೆತಿರುವ ಬೌದ್ಧ ಚೈತ್ಯಾಲಯವು ಸುಟ್ಟ ಇಟ್ಟಿಗೆಗಳಿಂದ ನಿರ್ಮಿತವಾಗಿದೆ. ೧೧.೫ ಮೀ. ಉದ್ದ ಮತ್ತು ೯.೫ ಮೀ. ಅಗಲ ಇರುವ ಈ ಚೈತ್ಯಾಲಯದ ಮುಂಭಾಗದ ಹಜಾರದ ಉದ್ದ ೪.೩ ಮೀ. ಮತ್ತು ಅಗಲ ೨.೫ ಮೀ. ಈ ಹಜಾರದಲ್ಲಿ ಕಂಬಗಳಿಲ್ಲ. ಒಳಭಾಗದ ಹಿಂಭಾಗವು ಗಜಪೃಷ್ಠಾಕಾರದಲ್ಲಿದೆ. ಮುಂಭಾಗವು ಸಮಚತುರಸ್ರಾಕಾರದಲ್ಲಿದೆ. ಈ ಹಜಾರದ ಹೊರಭಾಗವು ಸಮಚತುರಸ್ರಾಕಾರದಲ್ಲಿಯೇ ಇದೆ. ಹಜಾರದ ಸುತ್ತಲೂ ೦.೭೫ ಮೀ. ಅಗಲದ ಪ್ರದಕ್ಷಿಣಾಪಥವಿದೆ. ಒಳಪ್ರದಕ್ಷಿಣಾ ಪಥವೂ ಇರುವುದರಿಂದ ಇದು ಸಾಂಧಾರ ದೇವಾಲಯದ ಲಕ್ಷಣಗಳನ್ನು ಒಳಗೊಂಡಿದೆ. ಇಲ್ಲಿ ದೊರೆತಿರುವ ಅವಶೇಷಗಳನ್ನು ಗಮನಿಸಿದಾಗ ಗಾರೆಯನ್ನು ಬಳಸಿ ನಿರ್ಮಿತವಾಗಿರುವ ಈ ಚೈತ್ಯಾಲಯವು ಅಲಂಕರಣದಲ್ಲೂ ಮೇಲುಗೈ ಸಾಧಿಸಿತ್ತು ಎನಿಸುತ್ತದೆ. ವರದಿಯ ಪ್ರಕಾರ ಚೈತ್ಯಾಲಯವು ಅತ್ಯಂತ ಸುಂದರವಾಗಿ ಅಲಂಕರಣಗೊಂಡಿತ್ತು ಮತ್ತು ವಿನ್ಯಾಸವೂ ಒಂದು ಸಿದ್ಧಮಾದರಿಯನ್ನು ಅನುಸರಿಸಿತ್ತು ಎಂದು ಸ್ಪಷ್ಟವಾಗುತ್ತದೆ. ಇಲ್ಲಿ ದೊರೆತಿರುವ ವಿವಿಧ ವಸ್ತುಗಳನ್ನು, ವಿಶೇಷವಾಗಿ ಹರಕೆಯ ಸ್ತೂಪಗಳನ್ನು ಗಮನಿಸಿ, ಈ ಬೌದ್ಧ ಚೈತ್ಯದ ಕಾಲವನ್ನು ಕ್ರಿ.ಶ.ಸು.೪ರಿಂದ ೬ನೆಯ ಶತಮಾನ ಎಂದು ನಿರ್ಧರಿಸಲಾಗಿದೆ. ಕರ್ನಾಟಕದ ಉತ್ತರ ಭಾಗದಲ್ಲಿ ಶಾತವಾಹನ ಮತ್ತು ಕದಂಬರ ಹಾಗೂ ದಕ್ಷಿಣ ಭಾಗದಲ್ಲಿ ಗಂಗರ ಆಳ್ವಿಕೆ ಇದ್ದ ಸಂದರ್ಭದಲ್ಲಿ ಬನವಾಸಿ ಮತ್ತು ರಾಜಘಟ್ಟಗಳಲ್ಲಿ ಗಜಪೃಷ್ಠಾಕಾರದ ಚೈತ್ಯಗಳು ನಿರ್ಮಾಣಗೊಂಡಿವೆ.

ಗಜಪೃಷ್ಠಾಕಾರದ ಪ್ರಾಚೀನ ದೇವಾಲಯ ಎಂದು ಸದ್ಯಕ್ಕೆ ಸುಲಭವಾಗಿ ಗುರುತಿಸಿರುವ ಅಥವಾ ಬಹುತೇಕ ಪ್ರವಾಸಿಗಳ ಗಮನಕ್ಕೆ ಬಂದಿರುವ ಪ್ರಾಚೀನ ದೇವಾಲಯವೇ ಐಹೊಳೆಯ ದುರ್ಗಾ ದೇವಾಲಯ. ಆದರೆ, ಇದಕ್ಕೂ ಮೊದಲಿನ ಒಂದು ಗಜಪೃಷ್ಠಾಕಾರದ ದೇವಾಲಯವನ್ನು ಐಹೊಳೆಗೆ ಸಮೀಪದ ಹಳೆಯ ಮಹಾಕೂಟದಲ್ಲಿ ಕಾಣಬಹುದು. ಕೆಲವು ವಿದ್ವಾಂಸರ ಪ್ರಕಾರ ಕ್ರಿ.ಶ. ಸು.೫ನೆಯ ಶತಮಾನಕ್ಕೆ ಸೇರುವ ಹಳೆಯ ಮಹಾಕೂಟದ ಶಿವ ದೇವಾಲಯವು ಗಜಪೃಷ್ಠಾಕಾರದ ಗರ್ಭಗೃಹ, ಕಂಬಗಳಿರುವ ಸಣ್ಣ ಮಂಟಪ ಮತ್ತು ಮುಖಮಂಟಪಗಳನ್ನು ಹೊಂದಿದೆ. ಈ ವಿನ್ಯಾಸವು ಚೈತ್ಯದ ಮಾದರಿ ಎಂಬುದು ಡಾ॥ ಅ. ಸುಂದರ ಅವರ ಅಭಿಪ್ರಾಯ.[೪] ಗರ್ಭಗೃಹ ಮತ್ತು ಅದರ ಸುತ್ತಲ ಪ್ರದಕ್ಷಿಣಾಪಥದ ಜೊತೆಗೆ ಮುಖಮಂಟಪದ ಅಧಿಷ್ಠಾನ ಮಾತ್ರ ಉಳಿದಿದೆ. ಗರ್ಭಗೃಹದ ಈ ವಿನ್ಯಾಸವು ಈವರೆಗೆ ಗಮನಿಸಲಾದ ಬೌದ್ಧ ಚೈತ್ಯಗಳನ್ನು ನೆನಪಿಗೆ ತರುತ್ತದೆ. ಇದು ಐಹೊಳೆಯ ದುರ್ಗಾ ದೇವಾಲಯದ ಅಧಿಷ್ಠಾನದ ವಿನ್ಯಾಸವನ್ನು ನೆನಪಿಗೆ ತರುತ್ತದೆ. ಬನವಾಸಿ ಮತ್ತು ರಾಜಘಟ್ಟಗಳ ಬೌದ್ಧ ಚೈತ್ಯಗಳು ಹಾಗೂ ಐಹೊಳೆಯ ದುರ್ಗಾ ದೇವಾಲಯಗಳ ನಡುವಿನ ಕಾಲದ ಉಳಿದಿರುವ ವಾಸ್ತುವೇ ಹಳೆಯ ಮಹಾಕೂಟದ ಶಿವ ದೇವಾಲಯ. ದುರ್ಗಾ ದೇವಾಲಯವು ಜಿನ ಬಸದಿಯೂ ಆಗಿದ್ದಿರಬಹುದು ಎಂಬ ಅಭಿಪ್ರಾಯ ಕೆಲವು ವಿದ್ವಾಂಸರದು. ಈ ಅಭಿಪ್ರಾಯಕ್ಕೆ ಅದೇ ದೇವಾಲಯದ ಅಧಿಷ್ಠಾನದ ಮೇಲಿರುವ 'ಶ್ರೀಜಿನಾಲಯನ್' ಎಂಬ ಶಾಸನ ಮಾತ್ರವೇ ಕಾರಣ.[೫] ದುರ್ಗಾ ದೇವಾಲಯವು 'ಆದಿತ್ಯ ಭಟರ'ನ ಎಂದರೆ ಸೂರ್ಯನ ದೇಗುಲ ಎಂಬ ಅಭಿಪ್ರಾಯವೂ ಇದೆ.[೬] ಈ ಎಲ್ಲ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಯಾವುದೇ ವಾಸ್ತುವು

ಆಯಾ ಸಂದರ್ಭದ ಅನುಕೂಲಕ್ಕೆ ತಕ್ಕಂತೆ ರೂಪುಗೊಳ್ಳುತ್ತದೆ ಎಂಬ ಸರಳ ಸಿದ್ಧಾಂತವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಬೃಹತ್ ಶಿಲಾಯುಗದ ಸಮಾಧಿಯಾಗಲಿ, ಆರಂಭಿಕ ಕಾಲದ ಬೌದ್ಧ ಚೈತ್ಯಗಳೇ ಆಗಲಿ, ದುರ್ಗ ದೇವಾಲಯವೇ ಆಗಲಿ, ಅವುಗಳ ವಾಸ್ತು ವಿನ್ಯಾಸವು ಗರ್ಭ ಎಂದು ಪರಿಗಣಿಸಿದ ಜಾಗದಲ್ಲಿ ಸ್ಥಿತವಾದ ಪ್ರತಿಮೆ/ವಸ್ತುವಿನ ಸುತ್ತ ಪ್ರದಕ್ಷಿಣೆ ಮಾಡಲು ಅಥವಾ ಪೂಜೆ ಸಲ್ಲಿಸಲು ಮಾಡಿಕೊಂಡ ವ್ಯವಸ್ಥೆಗೆ ತಕ್ಕಂತೆ ಇರುವುದು ಅನಿವಾರ್ಯ. ಇಂತಹ ಪ್ರಯೋಗಗಳು ನಿರಂತರವಾಗಿ ನಡೆಯುತ್ತಿರುತ್ತವೆ. ಅದಕ್ಕೆ ಒಂದು ಉದಾಹರಣೆ ರಂಗಸ್ಥಳದ ರಂಗನಾಥಸ್ವಾಮಿ ದೇವಾಲಯದ ಗರ್ಭಗೃಹದ ಅಧಿಷ್ಠಾನದ ತಳ ವಿನ್ಯಾಸ. ಇದು ವೃತ್ತಾಯತವಾಗಿದೆ.[೭] ಇಲ್ಲಿನ ಪ್ರತಿಷ್ಠಾಪಿತ ಮೂರ್ತಿಯು ಶೇಷಶಯನ ರಂಗನಾಥ. ಆದ್ದರಿಂದ ಪ್ರತಿಷ್ಠಾ ಮೂರ್ತಿ ಆಯತಾಕಾರದಲ್ಲಿರುವುದು ಸಹಜ. ಆಯತಾಕಾರದ ಮೂರ್ತಿಯ ಪ್ರದಕ್ಷಿಣೆ ಮತ್ತು ಪೂಜಾ ಕೈಂಕರ್ಯ ನಡೆಸುವವರಿಗೆ ಅನುಕೂಲವಾಗಲೆಂದು ವೃತ್ತಾಯತ ವಿನ್ಯಾಸ ಆವಶ್ಯಕ. ಈ ಅಭಿಪ್ರಾಯದ ಹಿನ್ನೆಲೆಯಲ್ಲಿ ವೃತ್ತ ಮಾದರಿಯ ತಳ ವಿನ್ಯಾಸದ ಚಿತಿ/ಚೈತ್ಯಗಳ ತಳವಿನ್ಯಾಸವು ಗಜಪೃಷ್ಠಾಕಾರದಲ್ಲಿರಬೇಕಾದ್ದು ಆವಶ್ಯಕ. ಈ ವಿನ್ಯಾಸವನ್ನು ಒಂಟಿಯಾಗಿ ಪ್ರತಿಷ್ಠೆಗೊಳ್ಳುವ ಮೂರ್ತಿ ಇರುವ ಯಾವುದೇ ದೇವಾಲಯದ ಗರ್ಭಗೃಹಕ್ಕೂ ಅನ್ವಯಿಸಬಹುದು. ಆದ್ದರಿಂದ ಶಿವ/ಶಕ್ತಿ ದೇವಾಲಯಗಳ ಗರ್ಭಗೃಹಗಳ ತಳವಿನ್ಯಾಸವು ಗಜಪೃಷ್ಠಾಕಾರದಲ್ಲಿರುವುದು ಸೂಕ್ತ. ಈ ವಿನ್ಯಾಸವು ಮೊದಲಿಗೆ ಗರ್ಭಗೃಹದ ಒಳಭಾಗಕ್ಕೆ ಮಾತ್ರ ಅನ್ವಯವಾಗಿ, ನಂತರ ಹೊರಭಾಗಕ್ಕೂ ವಿಸ್ತರಗೊಂಡು, ಕ್ರಮೇಣ ಹೊರಭಾಗಕ್ಕಷ್ಟೇ ಉಳಿದಂತೆ ತೋರುತ್ತದೆ. ಮೊದಲಿನಿಂದಲೂ ಗರ್ಭಗೃಹವು ಹಲವು ಬದಲಾವಣೆಗಳಿಗೆ ಅವಕಾಶ ಕಲ್ಪಿಸಿದೆ. ದೇವಾಲಯದ ವಿನ್ಯಾಸದಲ್ಲಿ ಯಾವುದೇ ಬದಲಾವಣೆಯಾದರೂ ಅದು ಮೊದಲಿಗೆ ಗರ್ಭಗೃಹಕ್ಕೆ ಅನ್ವಯವಾಗುತ್ತದೆ. ಹೊಯ್ಸಳರ ಕಾಲದ ದೇವಾಲಯಗಳ ಶೈಲಿಯಲ್ಲಿ ನಕ್ಷತ್ರಾಕಾರದ ಆವಿಷ್ಕಾರ ಆಗಿರುವುದೂ ಪ್ರಯೋಗದ ಒಂದು ಭಾಗವಾಗಿ ಎಂದು ತಿಳಿದಿದೆ. ಆಯತಾಕಾರ ಮತ್ತು ವೃತ್ತಾಕಾರದ ಸಮ್ಮಿಶ್ರ ವಿನ್ಯಾಸವೇ ಗಜಪೃಷ್ಠಾಕಾರ ಎನಿಸುತ್ತದೆ.

ಐಹೊಳೆಯ ದುರ್ಗಾ ದೇವಾಲಯವನ್ನು ಕ್ರಿ.ಶ. ೧೮೬೬ರಲ್ಲೇ ಬೆಳಕಿಗೆ ತರಲಾಗಿದೆ.[೮] ಆ ಹೊತ್ತಿಗೆ ಅದು ಕೋಟೆಯ ಒಂದು ಭಾಗವಾಗಿ ಸೇರಿ, ವಿನಾಶದ ಅಂಚಿನಲ್ಲಿತ್ತು. ಇದರ ಕಾಲ ಕ್ರಿ.ಶ.ಸು. ೬೦೦ ಕ್ಕೂ ಮೊದಲು ಎಂಬ ಅಭಿಪ್ರಾಯವಿದೆ. ಐಹೊಳೆಯ ದುರ್ಗಾ ಗುಡಿಯು ಬೌದ್ಧ ಚೈತ್ಯದ ಮಾದರಿಯಲ್ಲಿದೆ ಎಂಬ ಅಭಿಪ್ರಾಯವಿದೆ. ಶಿಲ್ಪಗಳನ್ನು ಗಮನಿಸಿದಾಗ ಅದು ಒಂದು ಶೈವ ದೇವಾಲಯದಂತೆ ಕಾಣುತ್ತದೆ. ಭಾರತದಲ್ಲಿ ಒಂದು ಧರ್ಮದ ಪ್ರಭಾವ ಮತ್ತೊಂದು ಧರ್ಮದ ಮೇಲಿರುವುದು ಸಹಜವೇ ಆಗಿದೆ. ಶೈವ ದೇವಾಲಯದ ವಿನ್ಯಾಸದ ಮೇಲೆ ಬೌದ್ಧ ಚೈತ್ಯಗಳ ಪ್ರಭಾವ ಇಲ್ಲವೆಂದು ಸಾರಾಸಗಟಾಗಿ ಅಲ್ಲಗಳೆಯುವಂತಿಲ್ಲ. ಜೊತೆಗೆ ಗುಹಾ ನಿರ್ಮಿತಿಗಳ ಪ್ರಭಾವವೂ ದುರ್ಗ ದೇವಾಲಯದ ನಿರ್ಮಿತಿಯ ಹಿಂದೆ ಇದೆ ಎಂಬುದನ್ನೂ ಮರೆಯುವಂತಿಲ್ಲ. ಯಾವ ಧರ್ಮಕ್ಕೆ ಸಂಬಂಧಿಸಿದ ದೇವಾಲಯವಾದರೂ ಒಂದರ ಪ್ರಭಾವ ಮತ್ತೊಂದರ ಮೇಲೆ ಇದ್ದೇ ಇರುತ್ತದೆ.

ದುರ್ಗಾ ದೇವಾಲಯದ ಮುಂಭಾಗವು ಆಯತಾಕಾರದಲ್ಲೇ ಇದೆ. ಮುಂಭಾಗದಿಂದ ಆಯತಾಕಾರದಲ್ಲಿ ಆರಂಭವಾಗುವ ದೇವಾಲಯದ ಗೋಡೆಗಳು ಪಾರ್ಶ್ವಕ್ಕೆ ಹಾಗೆಯೇ ಮುಂದುವರಿದು, ಹಿಂಭಾಗದಲ್ಲಿ ಸೇರುವ ವೇಳೆಗೆ ಗಜಪೃಷ್ಠಾಕಾರವನ್ನು ಪಡೆದಿದೆ. ಎತ್ತರದ ಅಧಿಷ್ಠಾನದ ಮೇಲೆ ಮುಖಮಂಟಪದ ಮೂಲಕ ಸಣ್ಣ ಗೋಡೆಯ ಮೇಲೆ ಸುತ್ತಲೂ ಕಂಬಗಳನ್ನು ಜೋಡಿಸಿ, ಅದರ ಸುತ್ತಲೂ ಗರ್ಭಗೃಹ, ಸುಖನಾಸಿ ಮತ್ತು ಮುಖಮಂಟಪಸಹಿತ ದೇವಾಲಯವಿದೆ. ಹೊರಭಾಗ ತೆರೆದ ಪ್ರದಕ್ಷಿಣಾ ಪಥವನ್ನು ಪ್ರತಿನಿಧಿಸಿದರೆ, ಒಳಭಾಗದ ಭಿತ್ತಿ, ಜಾಲಂಧ್ರ ಮತ್ತು ಗೂಡುಗಳಲ್ಲಿನ ವಿಶಿಷ್ಟ ಶಿಲ್ಪಗಳು ಆ ಕಾಲದ ವಾಸ್ತು ಶಿಲ್ಪದ ಉತ್ತುಂಗಾವಸ್ಥೆಯನ್ನು ನೆನಪಿಗೆ ತರುತ್ತವೆ.

ಡಾ॥ ಎಸ್. ರಾಜಶೇಖರ್ ಅವರ ಪ್ರಕಾರ 'ಕರ್ನಾಟಕ ಹಾಗೂ ಆಂಧ್ರದ ಕೆಲವು ಪ್ರದೇಶಗಳಲ್ಲಿ ಶಾತವಾಹನ ಕಾಲದ, ಇಂತಹ ತಲವಿನ್ಯಾಸ ಹೊಂದಿದ ಕಟ್ಟಡಗಳ ಅವಶೇಷಗಳು ದೊರೆತಿವೆ. ಗಜಪೃಷ್ಠಾಕಾರದ ತಲವಿನ್ಯಾಸ ಬೌದ್ಧ ಧರ್ಮೀಯರಲ್ಲಿ ಹೆಚ್ಚು ಪ್ರಚಲಿತವಿತ್ತು. ಬಾದಾಮಿಯ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿರುವ ಹಳೆಯ ಮಹಾಕೂಟ, ಐಹೊಳೆ, ಸತ್ಯವೋಲು ಮತ್ತು ಪಾಪನಾಶನಂಗಳಲ್ಲಿ ಇಂತಹ ತಲವಿನ್ಯಾಸದ ದೇವಾಲಯಗಳನ್ನು ಕಾಣಬಹುದು. ಇವುಗಳಲ್ಲಿ ಹಳೆಯ ಮಹಾಕೂಟದ ದೇವಾಲಯವೇ ಅತ್ಯಂತ ಪ್ರಾಚೀನ. ಐಹೊಳೆಯಲ್ಲಿ ಇಂತಹ ಗಜಪೃಷ್ಠಾಕಾರದ ಎರಡು ದೇವಾಲಯಗಳಿದ್ದು ಒಂದು ಸಂಪೂರ್ಣ ನಾಶವಾಗಿದೆ. ಅಧಿಷ್ಠಾನ ಮಾತ್ರ ಕಾಣುತ್ತಿದೆ. ಇನ್ನೊಂದು ದೇವಾಲಯ ಸುಪ್ರಸಿದ್ಧ ದುರ್ಗ ದೇವಾಲಯ. ಇದು ಗಜಪೃಷ್ಠಾಕಾರದ ಗರ್ಭಗೃಹ, ಅದರ ಸುತ್ತು ಗಜಪೃಷ್ಠಾಕಾರದ ಪ್ರದಕ್ಷಿಣಾಪಥ,

ಸಭಾಮಂಟಪ, ಚಿಕ್ಕಮುಖಮಂಟಪ ಮತ್ತು ಇವೆಲ್ಲ ಭಾಗಗಳನ್ನು ಒಳಗೊಂಡಂತೆ ಇನ್ನೊಂದು ಗಜಪೃಷ್ಠಾಕಾರದ ಪ್ರದಕ್ಷಿಣಾಪಥ ಇವೆಲ್ಲವನ್ನೂ ಒಳಗೊಂಡಿದೆ. ಈ ಹೊರ ಪ್ರದಕ್ಷಿಣಾಪಥ ಅರೆ ತೆರೆದಿದ್ದು, ಹೊರಮಗ್ಗುಲು ಕಂಬಗಳ ಸಾಲನ್ನು ಹೊಂದಿದೆ. ಈ ದೇವಾಲಯದ ಗರ್ಭಗೃಹದಲ್ಲಿರುವ ಪೀಠ ವೃತ್ತಾಕಾರವಾಗಿದೆ'.[೯]

ಡಾ॥ ಎಸ್. ರಾಜಶೇಖರ್ ಪ್ರಸ್ತಾಪಿಸಿರುವ ಐಹೊಳೆಯ ಗಜಪೃಷ್ಠಾಕಾರದ ಎರಡು ದೇವಾಲಯಗಳ ಪೈಕಿ ಒಂದು ಪ್ರಸಿದ್ಧ ದುರ್ಗಾ ದೇವಾಲಯ; ಮತ್ತೊಂದು ಉತ್ಖನನದ ಸಂದರ್ಭ ದುರ್ಗಾ ದೇವಾಲಯದ ಹಿಂಭಾಗಕ್ಕೆ ಸ್ವಲ್ಪ ದೂರದಲ್ಲಿ, ಚಿಕ್ಕಿಗುಡಿ ಸಮೂಹದ ಸಮೀಪ ಕಂಡುಬಂದಿದ್ದುದು ಗಜಪೃಷ್ಠಾಕಾರದ ಅಧಿಷ್ಠಾನ ಮಾತ್ರ. ಇಲ್ಲಿ ಬೃಹತ್ ಪಾಣಿಪೀಠ ಸಹಿತ ಲಿಂಗವಿದೆ. ಅಲಂಕೃತ ತೋರಣಗಳಿವೆ. ದುರ್ಗ ದೇವಾಲಯದ ಕಾಲವನ್ನು ಹಲವು ಆಧಾರಗಳ ಹಿನ್ನೆಲೆಯಲ್ಲಿ ಕ್ರಿ.ಶ.ಸು.ಏಳನೇಯ ಶತಮಾನ ಎಂದು ತಿಳಿಯಲಾಗಿದೆ.

ಐಹೊಳೆಯ ದುರ್ಗಾ ದೇವಾಲಯವನ್ನು ಹೆಸರನ್ನು ಅನುಲಕ್ಷಿಸಿ, ದುರ್ಗೆ/ದುರ್ಗಾ ದೇವಾಲಯ ಎಂದು ತಿಳಿಯಬಹುದಷ್ಟೇ ಹೊರತು ವಾಸ್ತವವಾಗಿ ಅದು ಯಾವುದೇ ದೇವಿಗೆ ಸಂಬಂಧಿಸಿದ ದೇವಾಲಯವಲ್ಲ ಎಂದು ಈಗ ಒಪ್ಪಿತವಾಗಿದೆ. ಕೋಟೆಗೆ ಹೊಂದಿಕೊಂಡಂತೆ ಇದ್ದ ದೇವಾಲಯವಾದ್ದರಿಂದ ಮರಾಠರ ಕಾಲದಲ್ಲಿ ಇದಕ್ಕೆ ದುರ್ಗಾ ದೇವಾಲಯ ಎಂಬ ಹೆಸರು ಬಂದಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ದಕ್ಷಿಣ ಭಾರತದ ವಾಸ್ತು ಶೈಲಿಯ ಅಧಿಷ್ಠಾನದ ಮೇಲೆ ಉತ್ತರ ಭಾರತ ಶೈಲಿಯ ಶಿಖರ ಇರುವುದು ಆಶ್ಚರ್ಯಕ್ಕೆ ಕಾರಣವಾಗಿದೆ. ಶಿಖರವು ಯಾವುದೇ ರೀತಿಯಲ್ಲೂ ತಳದ ವಿನ್ಯಾಸಕ್ಕೆ ಹೊಂದುವುದಿಲ್ಲ. ಇದರಿಂದ ದುರ್ಗಾ ದೇವಾಲಯದ ಮೂಲವಿನ್ಯಾಸವೇ ಬೇರೆ ಇದ್ದು, ನಂತರ ಶಿಖರವು ಬದಲಾವಣೆಗೊಂಡಿರುವ ಅಥವಾ ಸೇರ್ಪಡೆಯಾಗಿರುವ ಸಾಧ್ಯತೆಗಳಿವೆ.

ಬೃಹತ್ ಶಿಲಾಯುಗದ ಸಮಾಧಿಗಳಲ್ಲಿ, ಶಾತವಾಹನರ ಕಾಲದ ಬೌದ್ಧ ಚೈತ್ಯಗಳ ಗರ್ಭಗೃಹಗಳಲ್ಲಿ ಕಾಣುವ ಗಜಪೃಷ್ಠಾಕಾರದ ವಿನ್ಯಾಸವನ್ನು ಕರ್ನಾಟಕದಲ್ಲಿ ಮೊದಲಿಗೆ ಹಳೆಯ ಮಹಾಕೂಟ, ನಂತರ ಐಹೊಳೆಯಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ನಂತರ ಇದು ಪ್ರಯೋಗಾತ್ಮಕವಾಗಿಯೇ ಮುಂದುವರಿದಂತೆ ಕಾಣುತ್ತದೆ. ಈ ಮಾದರಿಯ ದೇವಾಲಯಗಳ ನಿರ್ಮಾಣದ ಪ್ರಮಾಣ ಕಡಿಮೆ ಎನ್ನುವುದು ಬಹುತೇಕ ವಾಸ್ತು ನಿರ್ಮಿತಿಗಳ ಅಧ್ಯಯನ ಮಾಡಿರುವವರಿಗೆಲ್ಲ ತಿಳಿದ ವಿಷಯ.

ಗಜಪೃಷ್ಠಾಕಾರ ವರ್ಗದ ದೇವಾಲಯಗಳು ಸಂಖ್ಯೆಯ ದೃಷ್ಟಿಯಿಂದ ಕಡಿಮೆ ಎನಿಸಿದರೂ, ಹಳೆಯ ಮಹಾಕೂಟ ಮತ್ತು ಐಹೊಳೆಯನ್ನು ಹೊರತುಪಡಿಸಿ, ವಿಶೇಷ ಆಕರ್ಷಣೆಯ ದೇವಾಲಯಗಳ ನಿರ್ಮಾಣ ಆಗಿಯೇ ಇಲ್ಲ ಎನಿಸಿದರೂ, ಕರ್ನಾಟಕದ ಪಶ್ಚಿಮ ಕರಾವಳಿಯ ಭಾಗದಲ್ಲಿ ಗಜಪೃಷ್ಠಾಕಾರದ ದೇವಾಲಯಗಳ ನಿರ್ಮಾಣ ಗಮನಾರ್ಹ ಎನ್ನುವಂತೆಯೇ ಆಗಿದೆ. ತುಳುನಾಡಿನ ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ವಿಶೇಷ ಅಧ್ಯಯನ ಮಾಡಿರುವ ಡಾ॥ ಪಿ. ಗುರುರಾಜ ಭಟ್ಟರು ತುಳುನಾಡಿನಲ್ಲೇ ಕ್ರಿ.ಶ. ೭ರಿಂದ ೧೧ನೆಯ ಶತಮಾನದ ಅವಧಿಯಲ್ಲಿ ನಿರ್ಮಾಣಗೊಂಡಿರುವ ಸುಮಾರು ೨೦ ಗಜಪೃಷ್ಠಾಕಾರದ ದೇವಾಲಯಗಳನ್ನು ಗುರುತಿಸಿದ್ದಾರೆ.[೧೧] ಇವುಗಳಲ್ಲಿ ಅವರೇ ಗುರುತಿಸಿರುವ ಕೆಲವು ದೇವಾಲಯಗಳು ಈ ಕೆಳಕಂಡಂತಿವೆ.

೧. ಶಂಭುಕಲ್ಲು ದೇವಾಲಯ, ಉದಯಾವರ; ೨. ಪಂಚಲಿಂಗ ದೇವಾಲಯ, ಬಾರಕೂರು; ೩. ಪಂಚಲಿಂಗ ದೇವಾಲಯ, ವಿಟ್ಲ; ೪. ಅನಂತೇಶ್ವರ ದೇವಾಲಯ, ಉಡುಪಿ; ೫. ಮಹಾಲಿಂಗೇಶ್ವರ ದೇವಾಲಯ, ಆಡೂರು; ೬. ಮಹತೋಭಾರ ಮಹಾಲಿಂಗ ದೇವಾಲಯ, ಬ್ರಹ್ಮಾವರ; ೭. ಗೌರಿ ದೇವಾಲಯ, ಮೂಡಬಿದರೆ; ೮. ಹಿರಿಯ ದೇವಾಲಯ, ಕೋಟ; ೯. ಅನಂತೇಶ್ವರ ದೇವಾಲಯ, ಮಧುಪುರ, ಮಧೂರು; ೧೦. ಮಹಾದೇವ ದೇವಾಲಯ, ಪುತ್ತೂರು; ೧೧. ಕಾರಿಂಜೇಶ್ವರ ದೇವಾಲಯ, ಕಾರಂಜೆ; ೧೨. ಅಖಿಲೇಶ್ವರ ದೇವಾಲಯ, ಪೊಳಲಿ; ೧೩. ಮಹಾಲಿಂಗೇಶ್ವರ ದೇವಾಲಯ, ಪಂಜಾ; ೧೪. ಶಿವ ದೇವಾಲಯ, ಬಂಟ್ರಾ; ೧೫. ಶಿವ ದೇವಾಲಯ, ಅಂಬರ; ೧೬. ಶಿವ ದೇವಾಲಯ, ಇನವಳ್ಳಿ; ೧೭. ಮಹಾಲಿಂಗೇಶ್ವರ ದೇವಾಲಯ, ಹೆಜಮಾಡಿ; ೧೮. ಮಹಾದೇವ ದೇವಾಲಯ, ಪುನರೀರು; ೧೯. ಶಿವ ದೇವಾಲಯ, ಕುಂಜಾರು; ೨೦. ಸದಾಶಿವ ದೇವಾಲಯ, ಸುರತ್ಕಲ್

ಸಂಖ್ಯಾತ್ಮಕವಾಗಿ ತುಳು ನಾಡಿನಲ್ಲಿ ಹೆಚ್ಚು ಸಂಖ್ಯೆಯ ಗಜಪೃಷ್ಠಾಕಾರದ ದೇವಾಲಯಗಳು ಉಳಿದಿರುವುದು ಸ್ಪಷ್ಟ. ಸಮುದ್ರದ ಸಮೀಪವಿದ್ದರೂ ಇವು ಉಳಿದಿರುವುದನ್ನು ಗಮನಿಸಿದಾಗ ಕರಾವಳಿ ಪ್ರದೇಶಗಳಲ್ಲೇ ಇವುಗಳ ನಿರ್ಮಾಣ ಹೆಚ್ಚು ಎನಿಸುತ್ತದೆ.

ಆಳುಪರ ಒಂದು ರಾಜಧಾನಿಯೂ ಆಗಿದ್ದ ಉದ್ಯಾವರದ ಶಂಭುಕಲ್ಲು ದೇವಾಲಯದ ಅಧಿಷ್ಠಾನವು ಗಜಪೃಷ್ಠಾಕಾರದಲ್ಲಿದೆ. ಇದರ ಕಾಲವನ್ನು ಕ್ರಿ.ಶ.ಸು ೮ನೆಯ ಶತಮಾನ ಎಂದು ಒಪ್ಪಿಕೊಳ್ಳಲಾಗಿದೆ. ಕೆಲವು ವಿದ್ವಾಂಸರ ಪ್ರಕಾರ ಇದು ಕ್ರಿ.ಶ.ಸು. ೭ನೆಯ ಶತಮಾನದ ನಿರ್ಮಿತಿ. ಕ್ರಿ.ಶ. ೭ ಮತ್ತು ೮ನೆಯ ಶತಮಾನದಲ್ಲಿ ಪಶ್ಚಿಮ ಕರಾವಳಿ ಪ್ರದೇಶ ಎಂದರೆ ತುಳುನಾಡಿನಲ್ಲಿ ಹೆಚ್ಚು ಸಂಖ್ಯೆಯ ಗಜಪೃಷ್ಠಾಕಾರದ ದೇವಾಲಯಗಳ ನಿರ್ಮಾಣ ಆಗಿದೆ. ಇದಕ್ಕೆ ನಿರ್ದಿಷ್ಟ ಕಾರಣ ಏನು ಎಂದು ಹೇಳುವುದು ಸಾಧ್ಯವಿಲ್ಲ. ವಿಜಯನಗರದ ಅರಸರ ಕಾಲಕ್ಕೆ ಹೆಚ್ಚಿನ ಪ್ರಸಿದ್ಧಿಗೆ ಬಂದ ಬಾರಕೂರು, ಕ್ರಿ.ಶ.೭ನೆಯ ಶತಮಾನದ ಹೊತ್ತಿಗಾಗಲೇ ಪ್ರಮುಖ ಜನವಸತಿಯ ನೆಲೆಯಾಗಿತ್ತು. ಬಾರಕೂರಿನ ಪ್ರಸಿದ್ಧ ಪಂಚಲಿಂಗೇಶ್ವರ ದೇವಾಲಯವು ಕ್ರಿ.ಶ. ೭ನೆಯ ಶತಮಾನದ ವೇಳೆಗಾಗಲೇ ನಿರ್ಮಾಣವಾಗಿತ್ತು. ವಿಶಾಲವಾದ ಪ್ರಾಕಾರದ ಒಳಗಿರುವ ಶಿವಾಲಯದ ಗರ್ಭಗೃಹದ ವಿನ್ಯಾಸವು ಸ್ಪಷ್ಟವಾಗಿ ಗಜಪೃಷ್ಠಾಕಾರದಲ್ಲಿದೆ. ಇದೇ ಕಾಲದ ನಿರ್ಮಿತಿಯಾದ ವಿಟ್ಲದ ಪಂಚಲಿಂಗೇಶ್ವರ ದೇವಾಲಯವೂ ಇದೇ ವಿನ್ಯಾಸದಲ್ಲಿದೆ. ಉಡುಪಿಯ ಅನಂತೇಶ್ವರ ದೇವಾಲಯವು ಗಜಪೃಷ್ಠಾಕಾರದ ದೇವಾಲಯಗಳಿಗೆ ಒಳ್ಳೆಯ ಉದಾಹರಣೆಯಾಗಿದೆ. ಕೇವಲ ಗರ್ಭಗೃಹವಲ್ಲದೆ, ಇಡಿಯಾಗಿ ದೇವಾಲಯವು ಗಜಪೃಷ್ಠಾಕಾರದ ವಿನ್ಯಾಸದಲ್ಲಿದೆ. ಈ ವಿನ್ಯಾಸವು ಐಹೊಳೆಯ ದುರ್ಗ ದೇವಾಲಯದ ವಿನ್ಯಾಸವನ್ನು ನೆನಪಿಗೆ ತರುತ್ತದೆ. ಹೀಗೆ ಪಶ್ಚಿಮ ಕರಾವಳಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣುವ ಗಜಪೃಷ್ಠಾಕಾರದ ದೇವಾಲಯಗಳಲ್ಲಿ ಹೆಚ್ಚು ದೇವಾಲಯಗಳು ಶಿವಪರವಾಗಿರುವುದನ್ನು ಗಮನಿಸಿದಾಗ, ವೃತ್ತಾಕಾರದ ಶಿವಲಿಂಗಗಳು ಪೂಜಿಸಲ್ಪಡುವ ದೇವಾಲಯಗಳ ಗರ್ಭಗೃಹದ ತಳಪಾಯವು ಗಜಪೃಷ್ಠಾಕಾರದಲ್ಲಿರುತ್ತವೆ ಎಂದು ಊಹಿಸಲು ಹೆಚ್ಚು ಅವಕಾಶಗಳಿವೆ. ಕರಾವಳಿ ಪ್ರದೇಶದಲ್ಲಿ ಗಮನಿಸಲಾಗಿರುವ ಗಜಪೃಷ್ಠಾಕಾರದ ದೇವಾಲಯಗಳ ಪೈಕಿ ಕೆಲವು ಮಾತ್ರ ಉಳಿದಿವೆ. ಕೆಲವಂತೂ ಗುರುತಿಸಲಾಗದಷ್ಟು ಹಾಳಾಗಿವೆ. ಕೆಲವು ಸಂರಕ್ಷಣೆಯ ಹೆಸರಿನಲ್ಲಿ ತಮ್ಮ ಸ್ವರೂಪವನ್ನು ಬದಲಾಯಿಸಿಕೊಂಡಿವೆ. ಉಳಿದಿರುವ ಅಲ್ಪ ಸ್ವಲ್ಪ ಭಾಗಗಳಿಂದ ಇವುಗಳ ಸ್ವರೂಪ ಮತ್ತು ಕಾಲವನ್ನು ಗುರುತಿಸಲು ಸಾಧ್ಯವಾಗಿದೆ. ೧೧ನೆಯ ಶತಮಾನದ ನಂತರ ಗಜಪೃಷ್ಠಾಕಾರದ ದೇವಾಲಯಗಳ ನಿರ್ಮಾಣ ಕಡಿಮೆ ಎನ್ನುವುದಕ್ಕಿಂತ ಇಲ್ಲವೇ ಇಲ್ಲ ಎನ್ನುವಂತಾಗಿದೆ.

ಗಜಪೃಷ್ಠಾಕಾರದ ದೇವಾಲಯಗಳು ಶೈವ/ಶಕ್ತಿ ಪ್ರಧಾನ ಆಗಿರುವುದನ್ನು ಗಮನಿಸಲಾಗಿದೆ. ಅಪರೂಪಕ್ಕೆ ಗಜಪೃಷ್ಠಾಕಾರ ಎನ್ನುವುದಕ್ಕಿಂತ ವೃತ್ತಾಕಾರದ ಗರ್ಭಗೃಹವಿರುವ ಒಂದು ವಿಷ್ಣುಪರ/ಲಕ್ಷ್ಮೀನರಸಿಂಹ ದೇವಾಲಯವು ಕ್ರಿ.ಶ.ಸು. ೧೦ನೆಯ ಶತಮಾನದಲ್ಲಿ ಚಾಮರಾಜನಗರ ಜಿಲ್ಲೆಯ ಅಗರದಲ್ಲಿ ನಿರ್ಮಾಣವಾಗಿದೆ.[೨] ಅಪರೂಪದ ಈ ವಿಷ್ಣು ದೇವಾಲಯ ಮತ್ತು ಕ್ರಿ.ಶ. ೧೬ನೆಯ ಶತಮಾನದಲ್ಲಿ ನಿರ್ಮಾಣಗೊಂಡಿರುವ ಬೆಳ್ಳೆಯ ಆದಿತ್ಯ/ಸೂರ್ಯ ದೇವಾಲಯಗಳ ಗರ್ಭಗೃಹಗಳು ವೃತ್ತಾಕಾರದಲ್ಲಿವೆ.

ಆದಿತ್ಯ ಭಟರ ದೇಗುಲ ಎಂದು ಗುರುತಿಸುವ ಐಹೊಳೆಯ ದುರ್ಗಾ ದೇವಾಲಯವನ್ನು ಹೊರತುಪಡಿಸಿದರೆ, ಉಳಿದಂತೆ ಬಹುತೇಕ ಎಲ್ಲ ಗಜಪೃಷ್ಠಾಕಾರದ ಗರ್ಭಗೃಹಗಳಿರುವ ದೇವಾಲಯಗಳು ಶಿವ ಅಥವಾ ಶಕ್ತಿಪರವೇ ಆಗಿವೆ. ೧೧ನೆಯ ಶತಮಾನದ ನಂತರ ಹೊಯ್ಸಳ ವಾಸ್ತುತಜ್ಞರ ಪ್ರಯೋಗಗಳ ಮೂಲಕ ಗಜಪೃಷ್ಠಾಕಾರದ ಗರ್ಭಗೃಹ ವಿನ್ಯಾಸವು ನಕ್ಷತ್ರಾಕಾರಕ್ಕೆ ತಿರುಗಿರುವ ಸಾಧ್ಯತೆಗಳಿವೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಡಾ॥ ಬಾ.ರಾ. ಗೋಪಾಲ್, **ಕರ್ನಾಟಕದ ಕಲೆಗಳು**, ನಾಲ್ಕನೆಯ ಸಂಪುಟ, ವಾಸ್ತು, ಬೆಂಗಳೂರು, ೧೯೯೩, ಪು.೧೫.

೨. ಅದೇ, ಪು.೧೫.

೩. ಡಾ॥ ಎಂ.ಎಸ್. ಕೃಷ್ಣಮೂರ್ತಿ, ಡಾ॥ ಎಂ.ಪಿ. ಮಹದೇವಯ್ಯ, **ಕರ್ನಾಟಕದ ಬೌದ್ಧ ಧರ್ಮದ ಮೇಲೆ ಹೊಸ ಬೆಳಕು**–ರಾಜಘಟ್ಟ ಉತ್ಖನನ, ಇತಿಹಾಸ ದರ್ಶನ, ಸಂ. ೧೭, ಸಂ. ಎಂ.ಜಿ.ನಾಗರಾಜ್, ಡಾ॥ ಪಿ.ವಿ. ಕೃಷ್ಣಮೂರ್ತಿ, ೨೦೦೨ ಪು.೧–೧೧.

೪. Dr. A. Sundara, *Some aspects of the Saiva temples of the Badami Chalukya period*, Ed. Dr. M.S. Nagaraja Rao, The Chalukyas of Badami (Seminar papers), Bangalore, 1978, pp.276.

೫. ಎ.ಎಂ. ಅಣ್ಣಿಗೇರಿ, **ಐಹೊಳೆ: ಸಂಸ್ಕೃತಿ ಮತ್ತು ಕಲೆ**, ಧಾರವಾಡ, ೧೯೭೪, ಪು.೩೩.

೬ ಪ್ರೊ. ಶ್ರೀನಿವಾಸ ವೆಂ. ಪಾಡಿಗಾರ, **ಬಾದಾಮಿಯ ಚಾಲುಕ್ಯರ ಶಾಸನಗಳು**, ವಾಸ್ತು ಮತ್ತು ಶಿಲ್ಪಕಲೆ. ಧಾರವಾಡ, ೨೦೦೮, ಪು.೫೨.

೭. ಡಾ॥ ಎಂ.ಎಸ್. ಕೃಷ್ಣಮೂರ್ತಿ, ಶ್ರೀಮತಿ ವಿ. ಅನುರಾಧ, **ಅದ್ವಿತೀಯ ವಾಸ್ತುಕೃತಿ: ರಂಗಸ್ಥಳದ ರಂಗನಾಥಸ್ವಾಮಿ ದೇವಾಲಯ**, ಇತಿಹಾಸ ದರ್ಶನ, ಸಂ. ೨೨, ಸಂ. ಡಾ॥ ಎಂ.ಜಿ. ನಾಗರಾಜ್, ಡಾ॥ ಪಿ.ವಿ. ಕೃಷ್ಣಮೂರ್ತಿ, ೨೦೦೭, ಪು.೪೪-೪೯.

೮. K.R. Srinivasan, *The Durga temple at Ihole*, Art and architecture in Karnataka, Ed. D.V. Devaraj, C.S. Patil, Mysore, 1985, pp.172-191.

೯. ಡಾ॥ ಎಸ್. ರಾಜಶೇಖರ್, **ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ**. ಧಾರವಾಡ, ೧೯೮೮, ಪು.೪೭-೪೮.

೧೦. K.R. Srinivasan, *The Durga temple at Ihole*, Art and architecture in Karnataka, Ed. D.V. Devaraj, C.S. Patil, Mysore, 1985, pp 172-191.

೧೧. Prof. P. Gururaja Bhatt, *Studies in Tuluva History and Culture*, New Delhi, 1975, pp.407-08.

೧೨. Suryanatha Kamat (Ed.) *Karnataka State Gazetteer*, Mysore District, Bangalore, 1988, pp.833.




# ಕರ್ನಾಟಕದ ಪ್ರಾಚೀನ ಸರಸ್ವತೀ ದೇವಾಲಯಗಳು ಮತ್ತು ಶಿಲ್ಪಗಳು

– ಡಾ॥ ಬಿ.ಆರ್. ಸತ್ಯನಾರಾಯಣ*

**ಭಾ**ರತದಲ್ಲಿ ಇದುವರೆಗೆ ಉಪಲಬ್ಧವಿರುವ ಪ್ರಾಚೀನ ಸರಸ್ವತೀ ಶಿಲ್ಪಗಳೆಂದು ಮೂರನ್ನು ಗುರುತಿಸಲಾಗಿದೆ. ಈ ಮೂರೂ ಶಿಲ್ಪಗಳು ಸುಮಾರು ಕ್ರಿ.ಶ. ೨ನೆಯ ಶತಮಾನಕ್ಕೆ ಸೇರಿದವುಗಳು. ಉತ್ತರಪ್ರದೇಶದ ಮಥುರಾ ಬಳಿಯಿರುವ ಕಂಕಾಲಿತಿಲಾ ಎಂಬಲ್ಲಿ ದೊರೆತಿರುವ ಶಿಲ್ಪ, ಅದರ ರಚನೆಯ ದೃಷ್ಟಿಯಿಂದ ಅತ್ಯಂತ ಪ್ರಾಚೀನವಾದುದೆಂದು ವಿದ್ವಾಂಸರ ಅಭಿಪ್ರಾಯ.[೨] ಜೈನ ಚೈತ್ಯವೊಂದರಲ್ಲಿ ಸಿಕ್ಕು, ಈಗ ಲಕ್ನೋ ಮ್ಯೂಸಿಯಂನಲ್ಲಿ ಇರುವ ಈ ಶಿಲ್ಪದ ಕೆಳಗೆ ಬ್ರಾಹ್ಮೀಲಿಪಿಯಲ್ಲಿರುವ ಶಾಸನದಲ್ಲಿ ಸರಸ್ವತೀ ಎಂದು ಸ್ಪಷ್ಟ ಉಲ್ಲೇಖವಿದೆ. ಈ ಉಲ್ಲೇಖವಿಲ್ಲದಿದ್ದರೆ ಅದನ್ನು ಸರಸ್ವತೀ ಶಿಲ್ಪ ಎಂದು ಗುರುತಿಸುವುದೇ ಕಷ್ಟವಾಗುತ್ತಿತ್ತೇನೊ! ಚೌಕಾಕಾರದ, (ಶಾಸನವಿರುವ) ಎರಡು ಅಂತಸ್ತಿನ ಪೀಠದ ಮೇಲೆ ಕುಕ್ಕರುಗಾಲಿನಲ್ಲಿ ಕುಳಿತಿರುವ ಈ ಶಿಲ್ಪದ ತಲೆಯ ಭಾಗ ಮತ್ತು ಎಡ ಸ್ತನದ ಭಾಗ ಭಗ್ನವಾಗಿದೆ. ಎಡಬಲಗಳಲ್ಲಿ ಇಬ್ಬರು ಸೇವಕಿಯರಿದ್ದಾರೆ. ಬಲಗೈಯಲ್ಲಿ ಅಕ್ಷಮಾಲೆ ಮತ್ತು ಎಡಗೈಯಲ್ಲಿ ಹಸ್ತಪ್ರತಿ ಇದೆ ಎನ್ನಲಾಗಿದ್ದರೂ,[೩] ಪ್ರಕಟಿತ ಚಿತ್ರಗಳಲ್ಲಿ ಅಕ್ಷಮಾಲೆ ಕಾಣುವುದಿಲ್ಲ. ತ್ರುಟಿತ ಬಲಗೈಯಲ್ಲಿ ಬಹುಶಃ ಕಮಲವಿದ್ದಿರಬೇಕು ಎಂಬ ಅಭಿಪ್ರಾಯವೂ ಇದೆ.[೪] ಎಡಗೈಯಲ್ಲಿ ಕಾಣುವಂತಹ ಬಳೆಯ ರೀತಿಯಲ್ಲೇ, ಮುರಿದು ಹೋಗಿರುವ ಬಲಭಾಗದ ಕೈಯಲ್ಲೂ ಬಳೆಯ ಭಾಗ ಕಾಣುತ್ತಿದೆ. ಅದನ್ನೇ ಅಕ್ಷಮಾಲೆ ಎಂದು ಭಾವಿಸಿರುವಂತಿದೆ.

ಭಹೂತ್‌ನಲ್ಲಿ ದೊರೆತಿರುವುದೂ ಸಹ ದ್ವಿಭುಜ ಶಿಲ್ಪವಾಗಿದ್ದು, ಹಸ್ತಪ್ರತಿಯೊಂದನ್ನು ಎರಡೂ ಕೈಗಳಲ್ಲಿ ಹಿಡಿದು ನಿಂತಿರುವಂತಿದೆ. ಕಮಲದ ಮೇಲೆ ನಿಂತಿರುವ ಈ ಶಿಲ್ಪವು ಕಂಬವೊಂದರ ಮೇಲಿನ ಉಬ್ಬು ಶಿಲ್ಪವಾಗಿದೆ.[೫] ಈ ಶಿಲ್ಪದ ಕಾಲದ ಬಗ್ಗೆ ಭಿನ್ನಾಭಿಪ್ರಾಯವಿದೆ.

ಆಂಧ್ರಪ್ರದೇಶದ ಘಂಟಸಾಲದಲ್ಲಿ ದೊರೆತಿರುವ ಚತುರ್ಭುಜ ಸರಸ್ವತೀ ಶಿಲ್ಪವು ದಕ್ಷಿಣ ಭಾರತದಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ಸರಸ್ವತೀ ಶಿಲ್ಪವಾಗಿದೆ. ಸಮಪಾದ ಭಂಗಿಯಲ್ಲಿರುವ ಈ ಸ್ಥಾನಕ ಶಿಲ್ಪದ ಹಿಂಬದಿಗೆ ಹಂಸವನ್ನು ಕೆತ್ತಲಾಗಿದೆ. ಬಲಭಾಗದ ಮೇಲಿನ ಕೈಯಲ್ಲಿ ಕಮಲದ ಮೊಗ್ಗಿದ್ದರೆ, ಕೆಳಗಿನ ಕೈಯನ್ನು ಹಂಸದ ತಲೆಯ ಮೇಲೆ ಬರುವಂತೆ ಕೆತ್ತಲಾಗಿದೆ. ಎಡಭಾಗದ ಮೇಲಿನ ಕೈಯಲ್ಲಿ ಪುಸ್ತಕವಿದ್ದರೆ, ಕೆಳಗಿನ ಕೈಯಲ್ಲಿ ಏನೂ ಇರದೆ ಕಟಿ ಅವಲಂಬಿತ ಹಸ್ತವಾಗಿದೆ. ವೃತ್ತಾಕಾರವಾದ ಕರ್ಣಕುಂಡಲಗಳನ್ನು ಬಿಟ್ಟರೆ ಬೇರಾವುದೇ ಆಭರಣಗಳಿಲ್ಲ.

ಕ್ರಿ.ಶ. ೬೭೫–೭೦೦ರ ಸುಮಾರಿಗೆ ರಚಿತವಾಗಿರುವ ಐಹೊಳೆಯ ರಾವಳಫಡಿ ಗುಹಾಲಯದಲ್ಲಿರುವ ಗಂಗಾಧರನ ಶಿಲ್ಪದ ತಲೆಯ ಮೇಲಿರುವ ಮೂರು ದೇವಿಯರನ್ನು ಗಂಗಾ, ಯಮುನಾ ಮತ್ತು ಸರಸ್ವತೀ ಎಂದು ಗುರುತಿಸಲಾಗಿದೆ.[೬] ಕೇವಲ ಶಿರೋಭಾಗವಷ್ಟೇ ಇರುವ ಈ ದೇವಿಯರಲ್ಲಿ ಸರಸ್ವತೀ ಯಾರು ಎಂಬುದು ಸ್ಪಷ್ಟವಾಗುವುದಿಲ್ಲ. ಗಂಗಾಧರನ ತಲೆಯಲ್ಲಿ ಗಂಗೆಯು ನೆಲೆಸಿರುತ್ತಾಳೆ ಎಂಬ ಪೌರಾಣಿಕ ಕಲ್ಪನೆ, ಗಂಗೆ ಎಂದರೆ ಗಂಗಾ–ಯಮುನಾ–ಸರಸ್ವತಿಯರ ಪ್ರಾತಿನಿಧಿಕ ರೂಪ ಎಂಬ ಕಲ್ಪನೆಯ ಮೇಲೆ ಈ ಶಿಲ್ಪ ರಚಿತವಾಗಿರಬಹುದು. ಈ ಮೂವರಲ್ಲಿ ಒಬ್ಬರನ್ನು ಸರಸ್ವತಿಯೆಂದು ಒಪ್ಪಿಕೊಂಡರೂ ಅದು ನದೀ ದೇವತೆಯ ಪ್ರತೀಕವಾಗುತ್ತದೆ. ಆದ್ದರಿಂದ ಕರ್ನಾಟಕದಲ್ಲಿ ಪ್ರಬಲವಾಗಿ ಪ್ರಚಲಿತದಲ್ಲಿದ್ದ, ಸರಸ್ವತಿಯು ವಿದ್ಯಾದೇವತೆಯ ಸ್ವರೂಪ ಎಂಬ ಕಲ್ಪನೆಗೆ ಇದು ಇಂಬುಕೊಡುವ ಶಿಲ್ಪವಾಗಲಾರದು.

ಕರ್ನಾಟಕವನ್ನು ಆಳಿದ ರಾಷ್ಟ್ರಕೂಟ ಅರಸರು ನಿರ್ಮಿಸಿದ ಎಲ್ಲೋರಾದ (ಈಗ ಮಹಾರಾಷ್ಟ್ರ ರಾಜ್ಯದಲ್ಲಿದೆ) ಕೈಲಾಸ ದೇವಾಲಯದಲ್ಲಿ ಸ್ಥಾನಕ ದ್ವಿಭುಜ ಸರಸ್ವತಿಯ ಶಿಲ್ಪವಿದೆ. ಕಮಲದ ಹೂವಿನ ಮೇಲೆ ತ್ರಿಭಂಗಿಯಲ್ಲಿ ನಿಂತಿರುವಂತೆ

---

* ಗ್ರಂಥಪಾಲಕರು, ಸುರಾನಾ ಕಾಲೇಜು, ಜಯನಗರ, ಬೆಂಗಳೂರು.

ಶಿಲ್ಪ ರಚಿತವಾಗಿದೆ. ಕೈಗಳೆರಡೂ ಭಿನ್ನವಾಗಿವೆ. ಈ ಶಿಲ್ಪದ ಸಾಲಿನಲ್ಲಿ ಬರುವ ಇನ್ನೆರಡು ಸ್ತ್ರೀದೇವತೆಗಳನ್ನು ಗಂಗಾ ಮತ್ತು ಯಮುನಾ ಎಂಬುದಾಗಿ ಗುರುತಿಸಲಾಗಿದ್ದರೆ, ಈ ಶಿಲ್ಪವನ್ನು ಸರಸ್ವತಿಯದ್ದಾಗಿರಬಹುದು ಎನ್ನಲಾಗಿದೆ.[೭] ಈ ಮಾತು ನಿಜವಾಗಿದ್ದರೆ, ಇದೂ ಒಂದು ನದೀದೇವತೆ ಸರಸ್ವತಿಯ ಶಿಲ್ಪವಾಗಲಿದೆ.

ಬನವಾಸಿಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಒಂದು ಸರಸ್ವತಿಯ ಶಿಲ್ಪವಿದೆ. ಅದರ ರೇಖಾಚಿತ್ರವನ್ನು ಎಸ್.ಕೆ.ರಾಮಚಂದ್ರರಾಯರು ತಮ್ಮ 'ಪ್ರತಿಮಾಕೋಶ[೮]'ದಲ್ಲಿ ಬಳಸಿಕೊಂಡಿದ್ದಾರೆ. ಅದಕ್ಕೆ 'Sarasvati – early Kadamba stone' ಎಂಬ ವಿವರಣೆ ನೀಡಲಾಗಿದೆ. ಅಂದರೆ ಆ ಶಿಲ್ಪದ ಕಾಲ ಸುಮಾರು ನಾಲ್ಕರಿಂದ ಆರನೇ ಶತಮಾನ. ಆದರೆ ಆ ಶಿಲ್ಪವನ್ನು ಖುದ್ದಾಗಿ ವೀಕ್ಷಿಸಿದಾಗ, ರೇಖಾಚಿತ್ರದಲ್ಲಿರುವಂತೆ ದ್ವಿಭುಜ ಶಿಲ್ಪವಾಗಿರದೆ ಚತುರ್ಭುಜ ಶಿಲ್ಪವಾಗಿತ್ತು. ಹಿಂದಿನ ಎರಡೂ ಕೈಗಳು ಮುರಿದು ಹೋಗಿರುವುದರ ಸ್ಪಷ್ಟವಾದ ಕುರುಹುಗಳು ಶಿಲ್ಪದಲ್ಲಿವೆ. ಮುಂದಿನಿಂದ ನೋಡಿದಾಗ ಮಾತ್ರ ದ್ವಿಭುಜ ಶಿಲ್ಪವಾಗಿಯೇ ಕಾಣುವುದು. ಆ ಸರಸ್ವತಿಯ ಶಿಲ್ಪದ ಲಕ್ಷಣಗಳು, ಕರ್ನಾಟಕದ ಬೇರೆಡೆ ದೊರೆಯುವ ಕಲ್ಯಾಣದ ಚಾಲುಕ್ಯ ಮತ್ತು ಹೊಯ್ಸಳ ಶೈಲಿಯ ಚತುರ್ಭುಜ ಸರಸ್ವತಿಯ ಶಿಲ್ಪಗಳನ್ನು ಹೋಲುತ್ತವೆ. ಆದ್ದರಿಂದ ಅದು ಆದಿಕದಂಬರ ಕಾಲದ ಶಿಲ್ಪವಾಗಿರದೆ, ಸುಮಾರು ಕ್ರಿ.ಶ. ೧೧–೧೨ನೆಯ ಶತಮಾನಕ್ಕೆ ಸೇರಿದ ಶಿಲ್ಪವೆಂದು ಹೇಳಬೇಕಾಗುತ್ತದೆ.

ಬನವಾಸಿಯ ಮಧುಕೇಶ್ವರ ದೇವಾಲಯದ ಒಳ ಆವರಣದಲ್ಲಿ ಆದಿಮಾಧವನ ಶಿಲ್ಪವಿದೆ. ಶೈಲಿಯ ದೃಷ್ಟಿಯಿಂದ ಆ ಶಿಲ್ಪವನ್ನು ೮ನೆಯ ಶತಮಾನದ ಕೊನೆ ಅಥವಾ ೯ನೆಯ ಶತಮಾನದ ಮೊದಲಭಾಗ ಎಂದು ನಿರ್ಧರಿಸಲಾಗಿದ್ದರೂ, ಅದೇ ಕಾಲದ ವಿಷ್ಣುಮೂರ್ತಿಗಳಲ್ಲಿ ಕಾಣದ ಕೆಲವು ವಿಶಿಷ್ಟ ಲಕ್ಷಣಗಳಿವೆ. 'ಅಂಡಾಕಾರದ ಮಕರತೋರಣ, ಮಾಧವನ ಎಡ ಬಲ ಬದಿಗಳಲ್ಲಿ ಸರಸ್ವತಿ–ಲಕ್ಷ್ಮಿಯರಿದ್ದು, ಪದ್ಮಪೀಠದ ಎಡ ಬಲ ಬದಿಗಳಲ್ಲಿ ದುರ್ಗೆ ಮತ್ತು ಮೊಣಕಾಲೂರಿ ನಮಿಸುತ್ತಿರುವ ಗರುಡನ ಶಿಲ್ಪಗಳಿವೆ. ತೋರಣದ ಮೇಲಿನ ದಶಾವತಾರಗಳಲ್ಲಿ ಮತ್ಸ್ಯ, ಕೂರ್ಮ, ವರಾಹ ಮತ್ತು ನರಸಿಂಹ ಇವುಗಳನ್ನು ಬಿಟ್ಟು ಉಳಿದೆಲ್ಲ ಅವತಾರಗಳ ರೂಪಣವು ಒಂದೇ ಮಾದರಿಯದು. ಈ ಬಗೆಯ ಲಕ್ಷಣಗಳು ಬಾದಾಮಿ ಚಾಲುಕ್ಯರ ಕಾಲದಿಂದ ವಿಜಯನಗರದ ಕಾಲದವರೆಗಿನ ಯಾವುದೇ ವಿಷ್ಣು ಶಿಲ್ಪ ಮಾದರಿಗಳಲ್ಲಿಲ್ಲ. ಮುಖ್ಯವಾಗಿ ಲಕ್ಷ್ಮಿ, ಸರಸ್ವತಿ ಮತ್ತು ದುರ್ಗಾ ಇವರನ್ನು ತೋರಿಸಿರುವುದು ಗಮನಾರ್ಹ.[೯] ಗುಪ್ತರ ಕಾಲಕ್ಕೆ ಸೇರಿದ, ಎಡ ಬಲಬದಿಗಳಲ್ಲಿ ಲಕ್ಷ್ಮಿ–ಸರಸ್ವತಿಯರನ್ನುಳ್ಳ ವಿಷ್ಣುವಿನ ಶಿಲ್ಪಗಳು ಉತ್ತರಭಾರತದಲ್ಲಿ ಅದರಲ್ಲೂ ವಿಶೇಷವಾಗಿ ಬಂಗಾಳ ಪ್ರಾಂತ್ಯದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಹೆಚ್ಚಿನ ಶಿಲ್ಪಗಳಲ್ಲಿ, ಲಕ್ಷ್ಮಿ–ಸರಸ್ವತಿಯರಿಬ್ಬರ ಕೆತ್ತನೆಯೂ ವಿಷ್ಣು ಶಿಲ್ಪಕ್ಕೆ ಹೋಲಿಸಿದರೆ ತೀರಾ ಸಣ್ಣಪ್ರಮಾಣದ್ದಾಗಿರುತ್ತದೆ. ಸರಸ್ವತಿಯು ದ್ವಿಭುಜೆಯಾಗಿದ್ದು ವೀಣೆ ಹಿಡಿದಿರುತ್ತಾಳೆ. ಇದಕ್ಕೆ ಬಿರ್ಲಾ ಕುಟುಂಬದವರ ಸಂಗ್ರಹಾಲಯದಲ್ಲಿರುವ ವಿಷ್ಣುಶಿಲ್ಪ ಅತ್ಯಂತ ಉತ್ತಮ ಉದಾಹರಣೆಯಾಗಿದೆ.[೧೦] ಇದರಲ್ಲಿ ಲಕ್ಷ್ಮಿ–ಸರಸ್ವತಿಯರನ್ನು ವಿಷ್ಣುವಿನ ತೊಡೆಯ ಎತ್ತರಕ್ಕೆ ಕೆತ್ತಲಾಗಿದೆ. ಕರ್ನಾಟಕದಲ್ಲಿ ಈ ಬಗೆಯ ಶಿಲ್ಪಗಳಿಲ್ಲ. ಬನವಾಸಿಯ ಆದಿಮಾಧವನ ಶಿಲ್ಪವನ್ನು ಹೋಲುವ ಯಾವ ಶಿಲ್ಪಗಳೂ ಕರ್ನಾಟಕದಲ್ಲಿ ಇಲ್ಲ ಎಂಬ ಅ.ಸುಂದರ ಅವರ ಅಭಿಪ್ರಾಯ ಸಾಧುವಾದದ್ದು. ಬಾದಾಮಿ ಚಾಲುಕ್ಯರ ಕಾಲಕ್ಕೂ ಹಿಂದೆ ಇದ್ದಿರಬಹುದಾದ ಆದಿಮಾಧವನ ಶಿಲ್ಪ ಹಾಳಾಗಿದ್ದರಿಂದ ಅದನ್ನೇ ಹೋಲುವಂತಹ ಶಿಲ್ಪ ಸುಮಾರು ೮–೯ನೆಯ ಶತಮಾನದಲ್ಲಿ ನಿರ್ಮಾಣವಾಗಿರಬೇಕು ಎಂಬ ಅಭಿಪ್ರಾಯವನ್ನೂ ಅ.ಸುಂದರ ಅವರು ವ್ಯಕ್ತಪಡಿಸಿದ್ದಾರೆ. ಆದಿಮಾಧವನ ಶಿಲ್ಪದ ಭಾಗವಾಗಿ ಬಂದಿರುವ ಸರಸ್ವತೀ ಶಿಲ್ಪದ ಕಾಲವೂ ಅದೇ ಆಗುವುದರಿಂದ, ಈ ಶಿಲ್ಪವೇ ಕರ್ನಾಟಕದ ಅತ್ಯಂತ ಪ್ರಾಚೀನ ಸರಸ್ವತೀ ಶಿಲ್ಪ ಎಂದಾಗುತ್ತದೆ. ಪದ್ಮಾಸನದಲ್ಲಿ ಕುಳಿತಿರುವ ಸರಸ್ವತಿಯ ಬಲಗೈ ಅಭಯಮುದ್ರೆಯಲ್ಲಿದೆ. ಎಡಗೈಯಲ್ಲಿ ಪುಸ್ತಕವಿದೆ. ಬಳೆ, ತೋಳಬಂದಿ, ಹಾರ, ಕುಂಡಲಗಳು ಅಸ್ಪಷ್ಟವಾಗಿ ಗೋಚರಿಸುತ್ತವೆ. ಕೆತ್ತನೆಗಳಿಂದ ಕೂಡಿದ ಕರಂಡಮಕುಟವಿದೆ; ಪ್ರಭಾವಳಿ ಇಲ್ಲ. ಸರಸ್ವತಿಯ ವಾಹನವಾದ ಹಂಸವೂ ಇಲ್ಲ.

ಕರ್ನಾಟಕದ ಅತ್ಯಂತ ಪ್ರಾಚೀನ ಸರಸ್ವತೀ ಶಿಲ್ಪ, ನದೀದೇವತೆಯ ರೂಪದಲ್ಲಿ ಶಿವನ ತಲೆಯಲ್ಲಿ, ಶಿವನ ಶಿಲ್ಪದ ಒಂದು ಭಾಗವಾಗಿ ಬಂದಿದ್ದರೆ, ವಿದ್ಯಾದೇವತೆ ಸ್ವರೂಪದ ಶಿಲ್ಪ ವಿಷ್ಣು ಶಿಲ್ಪದ ಒಂದು ಭಾಗವಾಗಿ ಬಂದಿರುವುದು ವಿಶೇಷ. ಪ್ರಾಚೀನವೆನ್ನಬಹುದಾದ ಸ್ವತಂತ್ರ ಸರಸ್ವತೀ ಶಿಲ್ಪ ರಾಷ್ಟ್ರಕೂಟರ ಕಾಲಕ್ಕೆ ಸೇರಿದ್ದಾಗಿದೆ. ಹರಪನಹಳ್ಳಿ ತಾಲ್ಲೋಕು ಬಾಗಳಿಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿರುವ ಚತುರ್ಭುಜ ಸರಸ್ವತೀ ಶಿಲ್ಪ ಸುಮಾರು ಹತ್ತನೇ ಶತಮಾನಕ್ಕೆ ಸೇರಿದ್ದೆಂದು ಹೇಳಬಹುದು. ಮುಖಭಾವ, ಅಲಂಕಾರ, ಪಾಶ–ಅಂಕುಶಗಳನ್ನು ಹಿಡಿದಿರುವ ಶೈಲಿ, ಪಾಶದ ಆಕಾರ, ಪ್ರಭಾವಳಿಯ ಆಕಾರ ಮತ್ತು ಶಿಲ್ಪದ ಒಟ್ಟು ನೋಟದ ಹಿನ್ನೆಲೆಯಲ್ಲಿ, ೧೧–೧೨ನೆಯ ಶತಮಾನಕ್ಕೆ ಸೇರಿದ ಕರ್ನಾಟಕದಲ್ಲಿ ದೊರೆತಿರುವ ಸರಸ್ವತೀ

ಶಿಲ್ಪಗಳಿಗಿಂತ ಇದು ಭಿನ್ನವಾದುದಾಗಿದೆ. ಶಿಲ್ಪ ಸುಮಾರು ಮೂರೂವರೆ ಅಡಿ ಎತ್ತರವಿದೆ. ಪದ್ಮಾಸನದಲ್ಲಿರುವ ಮೂರ್ತಿಗೆ ಇದ್ದ ಪ್ರಭಾವಳಿ ಈಗ ಭಗ್ನವಾಗಿದೆ. ಬಲಬದಿಯ ಮುಂದಿನ ಕೈ ಅಕ್ಷಮಾಲೆಯೊಂದಿಗೆ ಅಭಯಮುದ್ರೆಯಲ್ಲಿದ್ದರೆ, ಹಿಂದಿನ ಕೈಯಲ್ಲಿ ಅಂಕುಶವಿದೆ. ಎಡಬದಿಯ ಮುಂದಿನ ಕೈಯಲ್ಲಿ ಪುಸ್ತಕವಿದ್ದರೆ, ಹಿಂದಿನ ಕೈಯಲ್ಲಿ ಪಾಶವಿದೆ. ಕಾಲುಂಗುರ, ಕಾಲಂದಿಗೆ, ಕಾಲ್ಗೆಜ್ಜೆಗಳನ್ನು ಕೆತ್ತಲಾಗಿದೆ. ಉಟ್ಟಿರುವ ವಸ್ತ್ರವನ್ನು ರೇಖೆಗಳಿಂದ ಸೂಚಿಸಲಾಗಿದೆ. ಅಲಂಕೃತ ಸೊಂಟಪಟ್ಟಿ, ನಿಮ್ನನಾಭಿ, ಸಣ್ಣದಾದ ನಡು ಮತ್ತು ದೊಡ್ಡದಾದ ಸ್ತನಗಳು ಶಿಲ್ಪದ ನಿಲುವಿಗೆ ಗಾಂಭೀರ್ಯವನ್ನೂ ಔನ್ನತ್ಯವನ್ನೂ ತಂದುಕೊಟ್ಟಿವೆ. ಕೈಬೆರಳ ಉಂಗುರ, ಕೈಬಳೆ, ತೋಳಬಂದಿ, ಭುಜಕೀರ್ತಿಗಳು ಸರಳವಾಗಿವೆ. ಸ್ತನಹಾರ ಮತ್ತು ಕಂಠಿಕೆಯ ನಡುವೆ ಎರಡು ಹಾರಗಳು ಇವೆ. ಸುರುಳಿಯಾಕಾರದ ಗುಂಗುರುಗೂದಲು ಭುಜಕೀರ್ತಿಯವರೆಗೂ ವಿಸ್ತರಿಸಿದೆ. ವೃತ್ತಾಕಾರದ ಕುಂಡಲಗಳು, ಮಣಿಯಿಂದ ಅಲಂಕೃತವಾದ ಕರಂಡಮಕುಟ ಗಮನ ಸೆಳೆಯುತ್ತವೆ. ತಲೆಯ ಹಿಂಬದಿಗೆ ಪ್ರಭಾಮಂಡಲವಿದೆ. ಇವುಗಳ ಆಧಾರದ ಮೇಲೆ ಹತ್ತನೇ ಶತಮಾನದ ಆದಿಭಾಗಕ್ಕೆ ಸೇರಿದ ಶಿಲ್ಪವೆಂದು ಊಹಿಸಬಹುದು. ಈ ಕಾಲನಿರ್ಣಯಕ್ಕೆ ಇನ್ನೊಂದು ಪೂರಕ ಆಕರವೆಂದರೆ ಬಾಗಳಿಯ ಕಲ್ಲೇಶ್ವರ ದೇವಾಲಯದ ಕಾಲ. ಬಾಗಳಿಯ ಕಲ್ಲೇಶ್ವರ ದೇವಾಲಯದ ಆವರಣದಲ್ಲಿ ಬೇರೆ ಬೇರೆ ದೇವಾಲಯಗಳಿದ್ದು ಅವು ಈಗ ಶಿಥಿಲವಾಗಿವೆ. ಹೀಗಾಗಿ ಹಿಂದೆ ಇದ್ದಿರಬಹುದಾದ ದೇವಾಲಯದಲ್ಲಿನ ಶಿಲ್ಪ ಇದಾಗಿರುವ ಸಾಧ್ಯತೆಯೂ ಇದೆ. ದಾಖಿಯವರ ಅಭಿಪ್ರಾಯದಂತೆ ಬಾಗಳಿಯ ದೇವಾಲಯಗಳ ಕಾಲ ಸುಮಾರು ಕ್ರಿ.ಶ. ೮೮೦–೯೭೩.[೧೧] ಅಂದರೆ ಹತ್ತನೇ ಶತಮಾನದ ಆದಿಭಾಗ ಎನ್ನಲು ಅಡ್ಡಿಯಿಲ್ಲ. ಬಹುಶಃ ದೇವಾಲಯ ನಿರ್ಮಾಣವಾದಾಗಲೇ ಸರಸ್ವತಿಯ ಶಿಲ್ಪದ ನಿರ್ಮಾಣವೂ ಆಗಿರಬೇಕು. ಆದ್ದರಿಂದ ಬಾಗಳಿಯ ಸರಸ್ವತಿ ಶಿಲ್ಪವೇ ಕರ್ನಾಟಕದ ಅತ್ಯಂತ ಪ್ರಾಚೀನ ಸ್ವತಂತ್ರ ಶಿಲ್ಪ ಎನ್ನಬಹುದಾಗಿದೆ. ಬಾಗಳಿ ಕಲ್ಲೇಶ್ವರ ದೇವಾಲಯದ ಗರ್ಭಗುಡಿಯ ಹಿಂಬದಿಯ ಪಟ್ಟಿಕೆಯಲ್ಲಿ ಹನ್ನೆರಡನೇ ಶತಮಾನಕ್ಕೆ ಸೇರಿದ 'ಗಗಯ್ಯ ಮಾಡಿಸಿದ ಸರಸ್ವತಿಯ ಪ್ರತಿಮೆ'[೧೨] ಎಂಬ ಶಾಸನವಿದೆ. ಇಲ್ಲಿ ಚಿಕ್ಕದಾದ ಸರಸ್ವತಿಯ ಶಿಲ್ಪ(ಚಿಕಣಿ ಶಿಲ್ಪ) ಇದೆ. ಬಾಗಳಿಯ ಮ್ಯೂಸಿಯಂನಲ್ಲೇ ಇನ್ನೊಂದು ಸರಸ್ವತೀ ಶಿಲ್ಪವಿದ್ದು, ಅದು ಹನ್ನೆರಡನೇ ಶತಮಾನಕ್ಕೆ ಸೇರಿದ್ದಾಗಿದೆ. ಆದ್ದರಿಂದ ಈ ಶಾಸನಕ್ಕೂ ಮೇಲೆ ಹೇಳಿದ ಪ್ರಾಚೀನ ಸರಸ್ವತೀ ಶಿಲ್ಪಕ್ಕೂ ಯಾವುದೇ ಸಂಬಂಧವಿಲ್ಲ.

ಹಾವೇರಿ ಜಿಲ್ಲೆ ರಾಣಿಬೆನ್ನೂರು ತಾಲ್ಲೂಕಿನ ಉಕ್ಕುಂದ ರಾಷ್ಟ್ರಕೂಟರ ಕಾಲದ ಒಂದು ಹಳ್ಳಿ. ಇಲ್ಲಿ ಕಲ್ಯಾಣದ ಚಾಲುಕ್ಯರ ಎರಡು ಶಾಸನಗಳು ಪತ್ತೆಯಾಗಿವೆ. ಈ ಊರಿನಲ್ಲಿರುವ ಕಲಿದೇವರ (ಶಾಸನೋಕ್ತ ಕಲ್ಲೇಶ್ವರ) ಗುಡಿ ಬಹುಶಃ ರಾಷ್ಟ್ರಕೂಟರ ಕಾಲದ ಅಂದರೆ ಸುಮಾರು ಹತ್ತನೇ ಶತಮಾನದ ರಚನೆಯಾಗಿರಬಹುದು ಎಂದು ಭಾವಿಸಲಾಗಿದೆ. ಈ ಸಾಧಾರಣವಾದ ದೇವಾಲಯದ ಆವರಣದಲ್ಲಿರುವ ಗಣಪತಿ, ಆದಿತ್ಯ ಮತ್ತು ಇತರೆ ಶಿಲ್ಪಗಳು ರಾಷ್ಟ್ರಕೂಟರ ಕಾಲದವು ಎನ್ನಲಾಗಿದೆ. ಇಲ್ಲಿರುವ ಸರಸ್ವತೀ ಶಿಲ್ಪ ಕೇವಲ ಎರಡು ಅಡಿ ಎತ್ತರವಿದ್ದು ಸಾಧಾರಣ ಶಿಲ್ಪವಾಗಿದೆ. ಆಸೀನ ಚತುರ್ಭುಜ ಮೂರ್ತಿಯಾಗಿರುವ ಇದರ ಕೈಗಳಲ್ಲಿ ಅಕ್ಷಮಾಲೆ, ಅಂಕುಶ, ಪಾಶ ಮತ್ತು ಪುಸ್ತಕಗಳಿವೆ. ಪೀಠದಲ್ಲಿ ಹಂಸವಿದೆ. ಕರ್ನಾಟಕದಲ್ಲಿ ಸಿಗುವ ಬಹುತೇಕ ಆಸೀನ ಚತುರ್ಭುಜ ಶಿಲ್ಪಗಳ ಲಕ್ಷಣ ಇದೇ ಆಗಿದೆ.

ಇವುಗಳಲ್ಲದೆ ಸುಮಾರು ಕ್ರಿ.ಶ. ೧೧೯೯ರ ಕಾಲದ ಹಾವೇರಿ ತಾಲ್ಲೂಕಿನ ಕಳ್ಳಿಹಾಳದ ಪಾರ್ವತಿ ಪರಮೇಶ್ವರ (ಈಗಿನ ಬಸವಣ್ಣ) ದೇವಾಲಯ, ಕ್ರಿ.ಶ. ೧೦೫೩ಕ್ಕೆ ಸೇರಿದ ಹಾನಗಲ್ ತಾಲ್ಲೂಕಿನ ಕಲಕೇರಿಯ ಜಯಸಿಂಘೇಶ್ವರ ದೇವಾಲಯ, ೧೦೫೬ಕ್ಕೂ ಹಿಂದಿನದು ಎನ್ನಲಾಗಿರುವ ಹಾವೇರಿ ತಾಲ್ಲೂಕಿನಲ್ಲಿರುವ ಗಳಗನಾಥದ ಗಳಗನಾಥೇಶ್ವರ ದೇವಾಲಯ ಮತ್ತು ಕ್ರಿ.ಶ. ೧೦೬೩ಕ್ಕೆ ಸೇರಿದ ಹಾವೇರಿ ತಾಲ್ಲೂಕಿನ ದೇವಿಹೊಸೂರಿನ ಬಯಲಿನಲ್ಲಿ ನಿಂತಿರುವ ಬಾಗಿಲುವಾಡದಲ್ಲಿರುವ ಶಿಲ್ಪಗಳೂ ಪ್ರಾಚೀನವಾದವು. ದಕ್ಷಿಣಕನ್ನಡ ಜಿಲ್ಲೆ ಬಾರಕೂರಿನ ಮೂಡುಕೇರಿಯಲ್ಲಿರುವ ಸೋಮನಾಥ ದೇವಾಲಯದಲ್ಲಿನ ಸರಸ್ವತೀ ಶಿಲ್ಪವನ್ನು ಸುಮಾರು ೧೦–೧೧ನೇ ಶತಮಾನದ್ದೆಂದು ಹೇಳಲಾಗಿದೆ.[೧೩] ಆದರೆ ಆ ಶಿಲ್ಪದ ಲಕ್ಷಣಗಳನ್ನು ಗಮನಿಸಿ ಹಾಗೂ ಲೇಖಕರೇ ಕೊಟ್ಟಿರುವ ವಿವರಣೆಯಂತೆ ಅದು ಕಲ್ಯಾಣದ ಚಾಲುಕ್ಯರ ಸುಮಾರು ೧೧–೧೨ನೆಯ ಶತಮಾನದ ಕಾಲಕ್ಕೆ ಸೇರಿದ್ದೆಂದು ನಿಸ್ಸಂಶಯವಾಗಿ ಹೇಳಬಹುದು. ಕರ್ನಾಟಕದಲ್ಲಿ ಸುಮಾರು ಹತ್ತನೇ ಶತಮಾನದಿಂದ ಸರಸ್ವತೀ ಶಿಲ್ಪಗಳು ಹೆಚ್ಚು ಹೆಚ್ಚಾಗಿ ಕಾಣಸಿಗುತ್ತವೆ. ಕಲ್ಯಾಣದ ಚಾಲುಕ್ಯ ಮತ್ತು ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಸರಸ್ವತೀ ಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿವೆ.

'ಸರಸ್ವತಿಯು ವೈದಿಕ ಮತ್ತು ಅಕ್ಷರ ದೇವತೆಯಾಗಿದ್ದುದರಿಂದ ಜನಪದರ ಬಳಿಗೆ ಬರಲಿಲ್ಲ. ಸ್ವತಂತ್ರವಾಗಿ ಬಂದಾಗ ಆಕೆಗೆ ಯಾವುದೇ ಪ್ರಾಮುಖ್ಯತೆಯಿಲ್ಲ. ಈ ಕಾರಣಗಳಿಂದಾಗಿ ಸರಸ್ವತಿಗೆ ಪ್ರತ್ಯೇಕ ದೇವಾಲಯವಾಗಲೀ, ಅರ್ಚನೆಯಾಗಲೀ ಇಲ್ಲ'[೧೪] ಎಂಬ ಅಭಿಪ್ರಾಯವಿದೆ. ಇದು ಅವಸರದ ಅಭಿಪ್ರಾಯವೆಂಬುದಕ್ಕೆ, ಕರ್ನಾಟಕದ ಉದ್ದಗಲಕ್ಕೆ ಸಿಗುತ್ತಿರುವ ನೂರಾರು ಸರಸ್ವತಿಯ ಶಿಲ್ಪಗಳು ಹಾಗೂ ಸಹದೇವತೆಯಾಗಿ, ಪ್ರಧಾನದೇವತೆಯಾಗಿ ಸರಸ್ವತಿಯನ್ನು ಪೂಜಿಸುತ್ತಿರುವ ಹಲವಾರು ಸರಸ್ವತಿಯ ದೇವಾಲಯಗಳು ಸಾಕ್ಷಿಯಾಗಿವೆ. ಹಿಂದೆ ಹಲವಾರು ಸರಸ್ವತಿಯ ದೇವಾಲಯಗಳು ಇದ್ದುದಕ್ಕೆ ಶಾಸನಗಳ ಆಧಾರಗಳೂ ಇವೆ.

ಗದುಗಿನ ತ್ರಿಕೂಟೇಶ್ವರ ದೇವಾಲಯದ ಆವರಣದಲ್ಲಿರುವ ಸರಸ್ವತೀ ದೇವಾಲಯ ಕಲ್ಯಾಣದ ಚಾಲುಕ್ಯ ಶೈಲಿಯ ಅತ್ಯುತ್ತಮ ಕೃತಿಗಳಲ್ಲೊಂದು. ಧಾರವಾಡ ಜಿಲ್ಲೆಯ ಇತರ ಎಲ್ಲಾ ದೇವಾಲಯಗಳಿಗಿಂತಲೂ ಗದುಗಿನ ಸರಸ್ವತಿಯ ದೇವಾಲಯವು ಉತ್ತಮ ವಾಸ್ತುಶಿಲ್ಪಕೌಶಲ್ಯದ ಪ್ರತೀಕವಾಗಿದೆ. ಏಕೆಂದರೆ, ಇಲ್ಲಿ ಮೂಡಿ ಬಂದಿರುವ ಕಲಾಸೂಕ್ಷ್ಮತೆ, ಆಕರ್ಷಕ ಶಿಲ್ಪ ಪ್ರೌಢಿಮೆ ಮತ್ತು ಚಾಲುಕ್ಯರ ಕಲಾ ಪ್ರಾವೀಣ್ಯತೆಗಳು, ಸಮಕಾಲೀನ ದೇವಾಲಯಗಳಿಗೆ ಹೋಲಿಸಿದಾಗ ವಾಸ್ತುಶಿಲ್ಪ ಪರಿಪಕ್ವತೆಯಲ್ಲಿ ಪ್ರಥಮವಾಗಿದೆ ಎಂದು ಹೆನ್ರಿ ಕಸಿನ್ಸ್ ಸರಸ್ವತೀ ದೇವಾಲಯಕ್ಕೆ ನುಡಿತೋರಣ ಕಟ್ಟಿದ್ದಾರೆ.[೧೫] ಗರ್ಭಗುಡಿಯಲ್ಲಿ ಪ್ರಸನ್ನ ಮುಖಭಾವದಿಂದ ಪದ್ಮಾಸೀನ ಭಂಗಿಯಲ್ಲಿ ಕುಳಿತಿರುವ ಸರಸ್ವತಿಯ ನಾಲ್ಕೂ ಕೈಗಳು ಮುರಿದು ಹೋಗಿವೆ.

ಶಿಲ್ಪದ ವಿವರಗಳು ಹೀಗಿವೆ : ಸರಸ್ವತಿಯು ಕುಳಿತಿರುವ ಭದ್ರಪೀಠದ ಮುಂಭಾಗದ ಮಧ್ಯೆ ಹಂಸವಿದೆ. ಪೀಠದ ಸುತ್ತಲೂ ನರ್ತಕಿಯರಿದ್ದಾರೆ. ಎರಡೂ ಕಡೆ ಆನೆಗಳಿವೆ. ಪೀಠದ ಮೇಲೆ ಮೇಲ್ಮುಖವಾಗಿರುವ ಕಮಲದ ಮೇಲೆ ಸರಸ್ವತಿ ಪದ್ಮಾಸನದಲ್ಲಿ ಕುಳಿತಿದ್ದಾಳೆ. ಕಾಲಿನ ಬೆರಳಿನಲ್ಲಿ ಕಾಲುಂಗುರಗಳಿವೆ. ಕಾಲಿನಲ್ಲಿ ಸರಪಳಿ (ಪಾದಜಾಲಕ) ಮತ್ತು ಕಾಲಂದಿಗೆಗಳು ಇವೆ. ಧರಿಸಿರುವ ವಸ್ತ್ರವು ಕಾಲಂದಿಗೆಯವರೆಗೂ ಇದ್ದು, ಅತ್ಯಂತ ಸೂಕ್ಷ್ಮ ರೇಖಾಚಿತ್ರಗಳಿಂದಲೂ, ನಿರಿಗೆಗಳಿಂದಲೂ ಚಿತ್ತಾರಗೊಂಡಿದೆ. ಕಟಿಯಿಂದ ಇಳಿಬಿದ್ದಿರುವ ಉರಹಾರವು ಮಣಿಗಳಿಂದ ಕೂಡಿದೆ. ಸೊಂಟಪಟ್ಟಿಕೆಯ ಮೇಲಿಂದ ಜಾರಿರುವ ವಸ್ತ್ರದ ಕುಚ್ಚು, ಕಾಲಿನ ಮೇಲಿಂದ ಜಾರಿ ಕಮಲದ ದಳಗಳನ್ನು ಮುಟ್ಟುತ್ತಿದೆ. ಉನ್ನತವಾದ ಸ್ತನಗಳ ಮೇಲಿಂದ ನಾಭಿಯವರೆಗೂ ವಿಸ್ತರಿಸಿರುವ ಸ್ತನಹಾರ, ತ್ರಿವಳಿ ಸರ, ಏಕಾವಳಿ ಸರ ಮತ್ತು ಕಂಠಿಕೆಗಳು ಕೊರಳನ್ನು ಅಲಂಕರಿಸಿವೆ. ಕೈಗಳು ಮುರಿದಿರುವುದರಿಂದ ಅವುಗಳಲ್ಲಿ ಇದ್ದಿರಬಹುದಾದ ಕಡಗಗಳಾಗಲೀ ಮತ್ತಾವುದೇ ಆಭರಣಗಳನ್ನಾಗಲೀ ಗುರುತಿಸಲಾಗುವುದಿಲ್ಲ. ತೋಳಬಂದಿಗಳು ಮತ್ತು ಭುಜಕೀರ್ತಿಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿವೆ. ಸುರುಳಿಗೂದಲು ಭುಜದವರೆಗೂ ವಿಸ್ತರಿಸಿ ಭುಜಕೀರ್ತಿಯ ಹಿಂಬದಿಯನ್ನು ಮುಚ್ಚಿದೆ. ಕಿವಿಗಳಲ್ಲಿ ಮಕರಕುಂಡಲಗಳಿವೆ. ಧರಿಸಿರುವ ಕರಂಡಮಕುಟವು ಸುಂದರವಾಗಿದ್ದು, ಅದರಲ್ಲಿ ಕರ್ಣಪುಷ್ಪ, ಮುಕ್ತಾಫಲಗಳನ್ನು ಕಾಣಬಹುದಾಗಿದೆ. ಮುಂಗುರುಳು ಕರಂಡಮಕುಟ ಹೊರಗೆ ಚಾಚಿರುವುದನ್ನೂ ಕಾಣಬಹುದಾಗಿದೆ. ಹಿಂಬದಿಗೆ ಪ್ರಭಾಚಕ್ರವಿದೆ. ಪ್ರಭಾವಳಿ ಇರುವುದಿಲ್ಲ. ಕಣ್ಣುಗಳು ಅರೆಬಿರಿದಿವೆ. ಮುಖದ ಮೇಲೆ ಮುಗುಳುನಗೆ ಲಾಸ್ಯವಾಡುತ್ತಿದ್ದು ಇಡೀ ಶಿಲ್ಪವೇ ಜೀವಂತ ಪುತ್ಥಳಿಯಂತೆ ಕಂಗೊಳಿಸುತ್ತದೆ.

ಹಿರೇಕೆರೂರು ತಾಲ್ಲೂಕು ಮೇದೂರಿನಲ್ಲಿ ಅತ್ಯಂತ ಸಾಧಾರಣವಾದ ಗುಡಿಯೊಂದಿದೆ. ಇದು ಯಾವುದೇ ದೇವಾಲಯದ ಭಾಗವಾಗಿರದೆ ಸ್ವತಂತ್ರ ಗುಡಿಯಾಗಿದೆ. ಆದರೆ ಅದರಲ್ಲಿರುವ, ಸುಮಾರು ಹನ್ನೊಂದನೇ ಶತಮಾನಕ್ಕೆ ಸೇರಿದ ಸರಸ್ವತೀ ಶಿಲ್ಪವನ್ನು ಗಮನಿಸಿದರೆ, ಒಂದು ಕಾಲದಲ್ಲಿ ಅದು ಒಂದು ಉತ್ತಮ ದೇವಾಲಯವಾಗಿದ್ದಿರಬಹುದಾದ ಎಲ್ಲಾ ಸಾಧ್ಯತೆಗಳಿವೆ. ಸುಮಾರು ನಾಲ್ಕು ಅಡಿ ಎತ್ತರವಿರುವ ಆಸೀನ ಚತುರ್ಭುಜ ಸರಸ್ವತಿಯ ಶಿಲ್ಪದ ಕೈಗಳಲ್ಲಿ ಅಕ್ಷಮಾಲೆ, ಅಂಕುಶ, ಪವಿತ್ರ ಮತ್ತು ಪುಸ್ತಕಗಳು ಇವೆ. ಪೀಠದಲ್ಲಿ ಹಂಸವಿದೆ. ಅಷ್ಟೊಂದು ಸೂಕ್ಷ್ಮ ಕುಸುರಿ ಕೆಲಸಗಳಿಲ್ಲದಿದ್ದರೂ, ಗದಗಿನ ಶಿಲ್ಪವನ್ನೇ ಹೋಲುವ ಈ ಶಿಲ್ಪಕ್ಕೆ ಪ್ರಭಾವಳಿ ಇದೆ.

ಹಾಸನ ಜಿಲ್ಲೆ ಅಡಗೂರಿನಲ್ಲಿ ಸುಮಾರು ಹನ್ನೊಂದನೇ ಶತಮಾನದಲ್ಲಿ ನಿರ್ಮಾಣವಾಗಿರುವ ತ್ರಿಕೂಟಾಚಲ ಲಕ್ಷ್ಮೀನಾರಾಯಣ ದೇವಾಲಯವಿದೆ. ಮುಖ್ಯಗರ್ಭಗುಡಿಯಲ್ಲಿ ಲಕ್ಷ್ಮೀನಾರಾಯಣ, ಎಡಭಾಗದಲ್ಲಿ ವೇಣುಗೋಪಾಲನ ಶಿಲ್ಪವಿದ್ದರೆ, ಉತ್ತರದ (ಎಡಭಾಗದ) ಗರ್ಭಗುಡಿಯಲ್ಲಿ ಸರಸ್ವತಿಯ ವಿಗ್ರಹವಿದೆ. ಸುಮಾರು ಎರಡು ಅಡಿ ಎತ್ತರದ ಹಂಸಪೀಠದಮೇಲೆ ನಾಲ್ಕು ಅಡಿ ಎತ್ತರದ ಶಿಲ್ಪವಿದೆ. ಪದ್ಮಾಸೀನಳಾಗಿರುವ ಸರಸ್ವತಿಯ ಕಾಲಿನ ನೀಳವಾದ ಬೆರಳುಗಳಲ್ಲಿ

## ಪ್ರಾಚೀನ ಕರ್ನಾಟಕದ ಸರಸ್ವತೀ ಶಿಲ್ಪಗಳು













ಪ್ರಾಚೀನ ಕರ್ನಾಟಕದ ಸರಸ್ವತೀ ಶಿಲ್ಪಗಳು






ಉಂಗುರಗಳೂ, ಕಾಲಿನಲ್ಲಿ ಕಾಲಂದಿಗೆಗಳೂ, ಸರಪಳಿಯೂ ಇವೆ. ವಸ್ತ್ರವು ಕಾಲಂದಿಗೆಗಳವರೆಗೂ ವಿಸ್ತರಿಸಿದ್ದು, ಅದರ ನಿರಿಗೆಗಳೂ ಸ್ಪಷ್ಟವಾಗಿ ಮೂಡಿ ಬಂದಿವೆ. ಸೊಂಟಪಟ್ಟಿಕೆಯ ಮೇಲಿಂದ ಜಾರಿರುವ ವಸ್ತ್ರದ ಕುಚ್ಚು ಪದ್ಮಪೀಠದವರೆಗೂ ವಿಸ್ತರಿಸಿದೆ. ಯಜ್ಞೋಪವೀತವೂ ಪದ್ಮದವರೆಗೂ ಇಳಿಜಿದ್ದಿದ್ದು, ಸ್ತನಹಾರ ನಾಭಿವರೆಗೂ ಅಗಲವಾದ ಪದಕದೊಂದಿಗೆ ವಿಸ್ತರಿಸಿದೆ. ಕೊರಳಲ್ಲಿ ಪದಕಯುಕ್ತ ತ್ರಿವಳಿ ಹಾರವೂ ಮತ್ತು ರತ್ನಖಚಿತ ಕಂಠಿಕೆಯೂ ಇವೆ. ಅಕ್ಷಮಾಲೆಯೊಂದಿಗೆ ಚಿನ್ಮುದ್ರೆಯಲ್ಲಿ ಒಂದು ಕೈಯಿದ್ದರೆ, ಉಳಿದ ಮೂರರಲ್ಲಿ ಅಂಕುಶ, ಪವಿತ್ರ ಮತ್ತು ಪುಸ್ತಕ ಇವೆ. ಕೈಗಳಲ್ಲಿ ಬಳೆಗಳು ಮತ್ತು ಕಡಗ, ತೋಳಿನಲ್ಲಿ ತೋಳಬಂದಿಗಳಿದ್ದು, ಭುಜಕೀರ್ತಿಗಳೂ ಇವೆ. ಭುಜವನ್ನು ತಾಕುತ್ತಿರುವ ಮಕರಕುಂಡಲಗಳು ಮತ್ತು ಭುಜಕೀರ್ತಿಗಳವರೆಗೂ ವಿಸ್ತರಿಸಿರುವ ತಲೆಗೂದಲನ್ನು ಸೂಕ್ಷ್ಮವಾಗಿ ಬಿಡಿಸಲಾಗಿದೆ. ಉನ್ನತವಾದ ಕರಂಡಮಕುಟ ಮತ್ತು ಅದರ ಹಿಂಬದಿಗೆ ಪ್ರಭಾಚಕ್ರವಿದೆ. ಪುಷ್ಪ, ಲತೆ ಮತ್ತು ಚಕ್ರಗಳಿಂದ ಕೂಡಿದ ಪ್ರಭಾವಳಿಯಿದ್ದು ಅದರ ಮಧ್ಯಭಾಗದಲ್ಲಿ ಸಿಂಹಮುಖದ ಕೀರ್ತಿಮುಖವಿದೆ.

ಹಾವೇರಿ ಜಿಲ್ಲೆ ಕಲಕೇರಿಯಲ್ಲಿ ಸೂರ್ಯನಾರಾಯಣ ದೇವಾಲಯವಿದೆ. ಇದರ ಶಾಸನೋಕ್ತ ಹೆಸರು ಜಯಸಿಂಗೇಶ್ವರ ದೇವಾಲಯ. ಕಾಲ ಸುಮಾರು ಕ್ರಿ.ಶ. ೧೧೮೬. ಇದೊಂದು ಚತುಷ್ಕೂಟ ದೇವಾಲಯವಾಗಿದ್ದು, ಮುಖ್ಯ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಎಡಬದಿಯ ಗುಡಿಯು ವಿಷ್ಣುವಿನದಾಗಿದ್ದು ಈಗ ಅದರಲ್ಲಿದ್ದ ಶಿಲ್ಪವನ್ನು ಪಕ್ಕಕ್ಕೆ ಇಡಲಾಗಿದೆ. ಬಲಬದಿಯ ಗುಡಿ ಸರಸ್ವತಿಯದಾಗಿದ್ದು, ಅಲ್ಲಿದ್ದ ಶಿಲ್ಪವನ್ನು ವಿಷ್ಣುವಿನ ಗರ್ಭಗುಡಿಯ ಒಳಗೆ ಮೂಲೆಯಲ್ಲಿಡಲಾಗಿದೆ. ಅಲ್ಲಿದ್ದ ಹಂಸಪೀಠದ ಮೇಲೆ ಈಗ ನಾಗದಂಪತಿಗಳ ಶಿಲ್ಪಗಳನ್ನಿಡಲಾಗಿದೆ. ಪೂರ್ವದ ಗರ್ಭಗುಡಿಯಲ್ಲಿ ಸುಮಾರು ಆರು ಅಡಿ ಎತ್ತರದ ಸೂರ್ಯನ ಶಿಲ್ಪವಿದೆ. ನಡುವೆ ಸುಮಾರು ಆರು ಅಡಿ ಎತ್ತರದ ನಂದಿಯಿದೆ. ಇಲ್ಲಿನ ಸರಸ್ವತೀ ಶಿಲ್ಪ ಬಹುತೇಕ ಅಡಗೂರಿನ ಶಿಲ್ಪವನ್ನೇ ಹೋಲುತ್ತದೆಯಾದರೂ ಅದರ ಎರಡು ಕೈಗಳು, ಸ್ತನದ ಭಾಗ ಮತ್ತು ಕಿರೀಟದ ಭಾಗ ಭಗ್ನವಾಗಿ ಹೋಗಿವೆ.

ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕು ಬಗ್ಗವಳ್ಳಿಯಲ್ಲಿರುವ ತ್ರಿಕೂಟ ಕೇಶವ ದೇವಾಲಯದ ಬಲಬದಿಯ ಗರ್ಭಗುಡಿಯಲ್ಲಿ ಸರಸ್ವತೀ ಶಿಲ್ಪವಿದೆ. ಅದರ ಲಕ್ಷಣಗಳು ಬಹುತೇಕ ಅಡಗೂರಿನ ಶಿಲ್ಪವನ್ನೇ ಹೋಲುತ್ತದೆ. ಆದರೆ ಅಡಗೂರಿನಲ್ಲಿ ಪಾಶ ಪವಿತ್ರದ ಗಂಟಿನ ಆಕಾರದಲ್ಲಿದ್ದು ಅಲಂಕಾರಮಯವಾಗಿದ್ದರೆ, ಬಗ್ಗವಳ್ಳಿಯ ಶಿಲ್ಪದಲ್ಲಿ ಎರಡು ಮಡಿಕೆ ಹಗ್ಗದಂತೆ ಸರಳವಾಗಿ ಚಿತ್ರಿತವಾಗಿದೆ. ಪುಸ್ತಕ ಕುದುರೆಲಾಳಾಕೃತಿಯಲ್ಲಿ ಹೆಚ್ಚು ಬಾಗಿದೆ. ಪ್ರಭಾವಳಿಯಲ್ಲಿ ಎರಡು ಪಟ್ಟಿಗಳು ಮಾತ್ರ ಇವೆ.

ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದ ಬಳಿಯಿರುವ ಸರಸ್ವತೀ ದೇಗುಲದ ಶಿಲ್ಪವೂ ಮೇಲಿನ ಶಿಲ್ಪಗಳನ್ನೇ ಹೋಲುತ್ತದೆ. ಇಲ್ಲಿನ ಪ್ರಭಾವಳಿಯಲ್ಲಿ ಯಕ್ಷರನ್ನು ಬಿಡಿಸಲಾಗಿದ್ದು, ಕೆಳಭಾಗದಲ್ಲಿ ಚಾಮರಧಾರಿಣಿಯರಿದ್ದಾರೆ. ಇದೇ

ಲಕ್ಷಣಗಳನ್ನುಳ್ಳ ಶಿಲ್ಪವೊಂದು ಹಾವೇರಿ ಜಿಲ್ಲೆ ಗಳಗನಾಥದ ಗಳಗನಾಥೇಶ್ವರ ದೇವಾಲಯದಲ್ಲಿದೆ.

ಸುಮಾರು ಕ್ರಿ.ಶ. ೧೨–೧೩ನೆಯ ಶತಮಾನಕ್ಕೆ ಸೇರಿದ ಗದಗ ಜಿಲ್ಲೆ ನಿಡಗುಂದಿಯಲ್ಲಿರುವ ಶಾಸನೋಕ್ತ ದಾಸಿಮೇಶ್ವರ ದೇವಾಲಯವು ತ್ರಿಕೂಟವಾಗಿದ್ದು, ಪ್ರಧಾನ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಎಡಗಡೆಯ ಗರ್ಭಗುಡಿಯಲ್ಲಿ ಗರುಡಪೀಠದಮೇಲೆ ವಿಷ್ಣುವಿನ ಶಿಲ್ಪವಿದ್ದರೆ, ಬಲಗಡೆಯ ಗರ್ಭಗುಡಿಯ ಹಂಸಪೀಠದಲ್ಲಿ ಯಾವುದೇ ಶಿಲ್ಪವಿಲ್ಲ. ಅಲ್ಲಿ ಸರಸ್ವತಿಯ ಶಿಲ್ಪವೇ ಇತ್ತೆಂಬುದಕ್ಕೆ ದೇವಾಲಯದ ಪ್ರಾಕಾರದಲ್ಲಿರುವ ಶಾಸನದ ಶಿರೋಭಾಗದಲ್ಲಿರುವ ಸರಸ್ವತಿ, ಲಿಂಗ ಮತ್ತು ವಿಷ್ಣುವಿನ ಶಿಲ್ಪಗಳೇ ಸಾಕ್ಷಿಯಾಗಿವೆ. ಕಲಕೇರಿಯ ದೇವಾಲಯದಂತೆ ಇಲ್ಲಿಯೂ ಬ್ರಹ್ಮಸ್ಥಾನವನ್ನು ಅವನ ಶಕ್ತಿಯಾದ ಸರಸ್ವತಿಗೆ ನೀಡಲಾಗಿದೆ. ಅಲ್ಲಿದ್ದ ಸರಸ್ವತಿಯ ಶಿಲ್ಪವನ್ನು ಈಗ ಊರೊಳಗಿರುವ ಬಸವಣ್ಣನ ಗುಡಿಯಲ್ಲಿ ಇಡಲಾಗಿದೆ. ಶಿಲ್ಪ ಕೇವಲ ಎರಡೂವರೆ ಅಡಿ ಎತ್ತರವಿದ್ದು, ತೀರಾ ಸಾಧಾರಣವಾಗಿದೆ. ಅದು ಅಕ್ಷಮಾಲೆ, ಅಂಕುಶ, ಪಾಶ ಮತ್ತು ಪುಸ್ತಕವನ್ನು ಧರಿಸಿರುವ ಆಸೀನ ಚತುರ್ಭುಜ ಮೂರ್ತಿಯಾಗಿದೆ.

ಗುಲಬರ್ಗಾ ಜಿಲ್ಲೆ ಚಿತ್ತಾಪುರ ತಾಲ್ಲೂಕು ನಿಪ್ಪಾಣಿಯ ಶಾಸನದಲ್ಲಿ ಸರಸ್ವತೀ ಮಂಟಪವೊಂದರ ಉಲ್ಲೇಖವಿದೆ. ಶಾಸನದ ಕಾಲ ಕ್ರಿ.ಶ. ೧೦೩೭. ಜಗದೇಕಮಲ್ಲನ ರಾಣಿ ಸೋಮಲಾದೇವಿಯು ಸುಪಾಣಿಯನ್ನು (ನಿಪ್ಪಾಣಿಯ ಶಾಸನೋಕ್ತ ಹೆಸರು) ಆಳುತ್ತಿದ್ದಾಗ ಸರಸ್ವತಿಯನ್ನು ಪ್ರತಿಷ್ಠಾಪಿಸಿ, ದೇವಿಯ ಆರಾಧನೆಗೆ ಹಾಗೂ ಅಲ್ಲಿಯ ವಿದ್ಯಾರ್ಥಿಗಳ ಊಟ ವಸತಿಗೆಂದು ೩೨ ಮತ್ತರು ಹೊಲ ಹಾಗೂ ೨ ಮತ್ತರು ತೋಟಗಳನ್ನು ದಾನ ಕೊಟ್ಟ ಅಂಶವನ್ನು ಆ ಶಾಸನ ಉಲ್ಲೇಖಿಸುತ್ತದೆ. ರಾಣಿ ಸೋಮಲಾದೇವಿಯ ಮನೆವೆರ್ಗಡೆ ದುರ್ಗಸಿಂಹನು ಕವಿಜನಾಶ್ರಯ ನಿಷ್ಠನಾಗಿದ್ದು ಸುಪಾಣಿಯಲ್ಲಿ ಸರಸ್ವತೀ ಮಂಟಪವನ್ನು ಮಾಡಿಸಿದ ಉಲ್ಲೇಖವೂ ಅದರಲ್ಲಿ ಇದೆ. ಈಗ ನಿಪ್ಪಾಣಿಯಲ್ಲಿ ಮಲಖಾನ್ (ಮಲ್ಲಿಕಾರ್ಜುನ) ದೇವಾಲಯವೆಂದು ಕರೆಯುವ ಹದಿನಾರು ಕಂಬಗಳ ಮಂಟಪವೊಂದಿದೆ. ಅದರ ಸುತ್ತಲಿನ ಗೋಡೆ ಇತ್ತೀಚಿನದು. ಉತ್ತರಾಭಿಮುಖವಾಗಿರುವ ಮಂಟಪದಲ್ಲಿ ಹಿಂಗೋಡೆಗೆ ಅಂಟಿಕೊಂಡಂತೆ ಒಂದು ಪೀಠವೂ ಇದೆ. ಪೀಠದಲ್ಲಿ ಯಾವುದೇ ಲಾಂಛನವಿರುವುದಿಲ್ಲ. ಇದೇ ಶಾಸನೋಕ್ತ ಸರಸ್ವತೀ ಮಂಟಪವೆಂದು ಊಹಿಸಲಾಗಿದೆ.[೧೬] ಆದರೆ ಇಲ್ಲಿದ್ದಿರಬಹುದಾದ ಸರಸ್ವತೀ ಶಿಲ್ಪ ಮಾತ್ರ ಪತ್ತೆಯಾಗಿಲ್ಲ.

ಕ್ರಿ.ಶ. ೧೦೮೭ಕ್ಕೇ ಸೇರಿದ ಗದಗ ಜಿಲ್ಲೆಯ ಕುರ್ತುಕೋಟಿಯ ಶಾಸನವು ಎರ್ಮ್ಮೆಗನೂರ ಬಳಿಯ ಕುರುಪಟ್ಟಿಯಲ್ಲಿ ಸುಂದರವಾದ ಸರಸ್ವತೀ ದೇವಾಲಯವನ್ನು ನಿರ್ಮಿಸಿದ್ದನ್ನು ಉಲ್ಲೇಖಿಸುತ್ತದೆ. ಆದರೆ ಸರಸ್ವತೀ ಶಿಲ್ಪವಾಗಲೀ, ದೇವಾಲಯವಾಗಲೀ ಪತ್ತೆಯಾಗಿಲ್ಲ.[೧೭]

ನವಲಗುಂದ ತಾಲ್ಲೂಕಿನ ಬೆಳವಟಿಗೆಯ, ಕ್ರಿ.ಶ. ೧೧೯೩ರ ಶಾಸನದಲ್ಲಿ ಬೈರುಂಬರ ಮಲ್ಲಮಯ್ಯನು ಭೈರುಂಭೇಶ್ವರ ಮತ್ತು ಸರಸ್ವತೀ ದೇವತೆಗಳಿಗೆ ಅರವತ್ತು ಮತ್ತರು ಭೂಮಿಯನ್ನು ದಾನ ಮಾಡಿದ ಉಲ್ಲೇಖವಿದೆ. ಆದರೆ ಸಾಧಾರಣ ರಚನೆಯಾಗಿರುವ ಭೈರುಂಭೇಶ್ವರ ದೇವಾಲಯ ಬೆಳವಟಿಗೆಯಲ್ಲಿದೆಯಾದರೂ ಸರಸ್ವತೀ ಶಿಲ್ಪ ಪತ್ತೆಯಾಗಿಲ್ಲ.[೧೮]

ಸರಸ್ವತಿಗೆ ಪ್ರತ್ಯೇಕ ದೇವಾಲಯಗಳಿದ್ದುದರ ಜೊತೆಗೆ, ಬೇರೆ ಬೇರೆ ದೇವಾಲಯಗಳಲ್ಲೂ ಸರಸ್ವತಿಗೆ ಪ್ರಾಧಾನ್ಯ ದೊರೆತಿದೆ. ಹೊಯ್ಸಳ ಮತ್ತು ಚಾಲುಕ್ಯರ ಕಾಲದ ದೇವಾಲಯಗಳ ನವರಂಗದಲ್ಲಿ ಮತ್ತು ನವರಂಗದ ಗೂಡುಗಳಲ್ಲಿ ಸರಸ್ವತಿಯ ಬಿಡಿ ಶಿಲ್ಪಗಳು ದೊರೆಯುತ್ತವೆ. ಉದಾಹರಣೆಗೆ, ಹಾಸನ ಜಿಲ್ಲೆ ಬೇಲೂರಿನ ಕಪ್ಪೆಚನ್ನಿಗರಾಯ, ಮೊಸಳೆಯ ನಾಗೇಶ್ವರ, ಕೊರವಂಗಲದ ಬೂಚೇಶ್ವರ, ಹಾರ್ನಹಳ್ಳಿಯ ಸೋಮೇಶ್ವರ, ಅಗ್ರಹಾರ ಬೆಳಗುಲಿಯ ಕೇಶವೇಶ್ವರ, ಚಿಕ್ಕಮಗಳೂರು ಜಿಲ್ಲೆ ಅಮೃತಾಪುರ, ದಾವಣಗೆರೆ ಜಿಲ್ಲೆ ನಂದಿತಾವರೆಯ ಮಾಣಿಕೇಶ್ವರ, ಹಾವೇರಿ ಜಿಲ್ಲೆ ಉಕ್ಕುಂದದ ಕಲ್ಲೇಶ್ವರ, ಮಂಡ್ಯ ಜಿಲ್ಲೆ ಬಸರಾಳು ಮಲ್ಲಿಕಾರ್ಜುನ, ಬಳ್ಳಾರಿ ಜಿಲ್ಲೆ ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯಗಳು ಸೇರಿದಂತೆ ಅನೇಕ ಕಡೆ ಈ ಬಿಡಿ ಶಿಲ್ಪಗಳನ್ನು ಕಾಣಬಹುದಾಗಿದೆ. ನವರಂಗದ ಗೂಡುಗಳಲ್ಲಿ ಮತ್ತು ನವರಂಗದಲ್ಲಿರುವ ಬಹುತೇಕ ಶಿಲ್ಪಗಳು ಆಸೀನ ಚತುರ್ಭುಜ ಸರಸ್ವತೀ ಶಿಲ್ಪಗಳಾಗಿವೆ.

ನವರಂಗದ ಕಂಬಗಳ ಪೀಠಭಾಗದ ಮೇಲೂ ಸರಸ್ವತಿಯ ಉಬ್ಬು ಶಿಲ್ಪಗಳನ್ನು ಕಾಣಬಹುದು. ಐಹೊಳೆಯ ವಿರೂಪಾಕ್ಷಗುಡಿ, ಧಾರವಾಡ ಜಿಲ್ಲೆ ಅಮರಗೋಳದ ಕೇಶವ (ಈಗ ಬನಶಂಕರಿ), ಹಾವೇರಿ ಜಿಲ್ಲೆ ಶೇಷಗಿರಿಯ ರೇವೇಶ್ವರ, ಕೊಪ್ಪಳ ಜಿಲ್ಲೆ ಇಟಗಿಯ ಮಹಾದೇವ, ಬಳ್ಳಾರಿ ಜಿಲ್ಲೆ ಬಾಗಳಿಯ ಕಲ್ಲೇಶ್ವರ ಮೊದಲಾದ ದೇವಾಲಯಗಳಲ್ಲಿ

ನವರಂಗದ ಕಂಬದ ಮೇಲೆ ಸರಸ್ವತಿಯ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಗದುಗಿನ ಸರಸ್ವತೀ ದೇವಾಲಯದ ತೆರೆದ ನವರಂಗದ ಕಂಬಗಳಲ್ಲಿ ಕೇವಲ ನಾಲ್ಕೈದು ಇಂಚು ಎತ್ತರದ ಸುಮಾರು ಒಂದು ನೂರಕ್ಕೂ ಹೆಚ್ಚು ಸರಸ್ವತೀ ಉಬ್ಬು ಶಿಲ್ಪಗಳಿವೆ. ಕಿರಿದಾದ (ಸುಮಾರು ೮ರಿಂದ ೧೦ ಸೆಂ.ಮೀ. ಎತ್ತರವಿರುವ) ಬಿಡಿ ಶಿಲ್ಪಗಳನ್ನು ಈ ಸಣ್ಣ ಆಧಾರ ಸ್ತಂಭಗಳ ಮೇಲೆ ಅತ್ಯಂತ ಜಾಣ್ಮೆಯಿಂದ ಕೆತ್ತಿರುವುದು ಚಾಲುಕ್ಯರ ಶಿಲ್ಪಕಲಾ ಪ್ರೌಢಿಮೆಯ ಪ್ರತೀಕವಾಗಿದೆ.[೧೯]

ಸರಸ್ವತೀ ಶಿಲ್ಪಗಳು, ಉಬ್ಬು ಶಿಲ್ಪಗಳಾಗಿ ಕಂಬಗಳ ಮೇಲೆ, ಭಿತ್ತಿಯಲ್ಲಿ, ಗೂಡುಗಳ ಲಲಾಟದಲ್ಲಿ, ಬಾಗಿಲುವಾಡದಲ್ಲಿ, ಭಾವಣಿಯಲ್ಲಿ ಮತ್ತು ಶಿಖರಗಳಲ್ಲೂ ರಚಿತವಾಗಿವೆ. ಭಿತ್ತಿಯಲ್ಲಿ ಅತಿ ಹೆಚ್ಚು ವೈವಿಧ್ಯಮಯವಾದ ಸರಸ್ವತೀ ಶಿಲ್ಪಗಳು ಕಾಣಸಿಗುತ್ತವೆ. ದ್ವಿಭುಜದಿಂದ ಹಿಡಿದು ದಶಭುಜಗಳನ್ನು ಹೊಂದಿರುವ ನೃತ್ಯ ಸರಸ್ವತೀ ಶಿಲ್ಪಗಳು ಸಿಗುವುದು ಭಿತ್ತಿಯಲ್ಲಿ ಮಾತ್ರ. ಹಳೇಬೀಡಿನ ಹೊಯ್ಸಳೇಶ್ವರ–ಶಾಂತಲೇಶ್ವರ ದೇವಾಲಯವೊಂದರಲ್ಲೇ ಸುಮಾರು ೫೦ಕ್ಕೂ ಹೆಚ್ಚು ಬಗೆಯ ಸರಸ್ವತೀ ಶಿಲ್ಪಗಳನ್ನು ಕಾಣಬಹುದು. ಲಕ್ಷ್ಮೀ ಮತ್ತು ಪಾರ್ವತಿಯರ ಜೊತೆಯಲ್ಲಿ, ಗಣಪತಿ ಮತ್ತು ಹಯಗ್ರೀವರ ನಡುವೆ, ಶಿವ ಮತ್ತು ಗಣಪತಿಯರ ಜೊತೆಗೆ, ಬ್ರಹ್ಮನ ಜೊತೆ, ಲಕ್ಷ್ಮೀ ನರಸಿಂಹರ ಜೊತೆ ಇರುವಂತೆ ಸರಸ್ವತೀ ಶಿಲ್ಪಗಳನ್ನು ಕೆತ್ತಲಾಗಿದೆ. ಕರ್ನಾಟಕದಲ್ಲಿ ಹೀಗೆ ಸುಮಾರು ೩೦೦ಕ್ಕೂ ಹೆಚ್ಚು ಸರಸ್ವತೀ ಶಿಲ್ಪಗಳು ಕಂಡುಬಂದಿವೆ.

ಗಮನಿಸಬೇಕಾದ ಮತ್ತೊಂದು ಅಂಶವೆಂದರೆ, ಕರ್ನಾಟಕದ ಮಟ್ಟಿಗೆ ಸರಸ್ವತೀ ಶಿಲ್ಪಗಳಲ್ಲಿ, ಜೈನ ಮತ್ತು ವೈದಿಕ ಪರಂಪರೆಯ ಶಿಲ್ಪಗಳೆಂದು ಪ್ರತ್ಯೇಕಿಸುವುದು ಸಾಧ್ಯವಿಲ್ಲ. ಶಿಲ್ಪವು ಜೈನರಿಗೆ ಸಂಬಂಧಿಸಿದ ಜಾಗದಲ್ಲಿದ್ದರೆ, ಜೈನಪರಂಪರೆಯದೆಂದು ಹೇಳಬಹುದೇ ಹೊರತು, ಜೈನಶಿಲ್ಪಗಳಿಗೆಂದು ಬೇರಾವ ವಿಶಿಷ್ಟವಾದ ಶೈಲಿಯೂ ಸರಸ್ವತಿಯ ಶಿಲ್ಪಗಳಲ್ಲಿ ಕಂಡುಬರುವುದಿಲ್ಲ.

ಜೈನ ಸರಸ್ವತೀ ಎಂದಾಕ್ಷಣ ಅದು ಸಿದ್ಧಾಯಿಕೆ ಎಂಬ ಸಾಮಾನ್ಯ ಅಭಿಪ್ರಾಯವಿದೆ. 'ಯಕ್ಷಿ ಸಿದ್ಧಾಯಿಕೆಯನ್ನು ಸರಸ್ವತಿಯ ಪ್ರತಿಮೆಯೆಂದೇ ಭಾವಿಸುವರು'[೨೦] ಮತ್ತು 'ಜೈನಧರ್ಮದಲ್ಲಿ ಸರಸ್ವತಿಯು ಮಹಾವೀರ ತೀರ್ಥಂಕರನ ಯಕ್ಷಿದೇವತೆಯಾಗಿ ಕಾಣಿಸಿಕೊಳ್ಳುತ್ತಾಳೆ'[೨೧] ಎಂಬ ಮಾತುಗಳಿಗೆ ಯಾವುದೇ ಆಧಾರವಿಲ್ಲ. ಸರಸ್ವತೀ ಮತ್ತು ಸಿದ್ಧಾಯಿಕೆ ಇಬ್ಬರೂ ಬೇರೆ ಬೇರೆ ಎಂಬುದು ಸ್ಪಷ್ಟ. ಸಿದ್ಧಾಯಿಕೆ, ಸಿದ್ಧಾಯಿಕಾ, ಸಿದ್ಧಾಯಿಣಿ ಮತ್ತು ಸಿದ್ಧಾ ಮುಂತಾದ ಹೆಸರುಗಳಿರುವ ಜೈನ ಪರಂಪರೆಯ ದೇವತೆ ಮಹಾವೀರನ ಯಕ್ಷಿ. ಶಿಲ್ಪ ಲಕ್ಷಣಗಳ ದೃಷ್ಟಿಯಿಂದ ಸಿದ್ಧಾಯಿಕೆಗೆ ಜೈನ ಪರಂಪರೆಯ ಎರಡೂ ಪಂಥಗಳಲ್ಲೂ ವಿಶಿಷ್ಟ ಲಕ್ಷಣಗಳಿವೆ. ದಿಗಂಬರ ಪಂಥದಲ್ಲಿ ಆಕೆ ದ್ವಿಭುಜೆಯಾಗಿದ್ದು, ಒಂದು ಕೈಯಲ್ಲಿ ಪುಸ್ತಕ ಹಿಡಿದಿದ್ದರೆ, ಇನ್ನೊಂದು ಕೈ ವರದ ಮುದ್ರೆಯಲ್ಲಿರುತ್ತದೆ. ಭದ್ರಾಸನದಲ್ಲಿ ಆಸೀನಳಾಗಿರುವ ಸಿದ್ಧಾಯಿಕೆಯ ಬಣ್ಣ ಸುವರ್ಣ. ಸಿಂಹ ಆಕೆಯ ವಾಹನ. ಶ್ವೇತಾಂಬರ ಪಂಥದಲ್ಲಿ ಸಿದ್ಧಾಯಿಕೆಗೆ ಎರಡು ರೀತಿಯ ಲಕ್ಷಣಗಳನ್ನು ಹೇಳಲಾಗಿದೆ. ಎರಡೂ ರೀತಿಗಳಲ್ಲಿ ಆಕೆ ಚತುರ್ಭುಜಳಾಗಿದ್ದಾಳೆ. ಒಂದರಲ್ಲಿ; ಮೂರು ಕೈಗಳಲ್ಲಿ ಪುಸ್ತಕ, ಬೀಜಪೂರ, ವೀಣೆ ಹಿಡಿದಿದ್ದು, ಇನ್ನೊಂದು ಕೈ ಅಭಯಮುದ್ರೆ ಯಲ್ಲಿರುತ್ತದೆ. ಸಿಂಹ ಇಲ್ಲಿ ಆಕೆಯ ವಾಹನ. ಇನ್ನೊಂದರಲ್ಲಿ; ಮೂರು ಕೈಗಳಲ್ಲಿ ಪುಸ್ತಕ, ಪಾಶ, ಕಮಲಗಳು ಇದ್ದು ಇನ್ನೊಂದು ಕೈ ಅಭಯಮುದ್ರೆಯಲ್ಲಿರುತ್ತದೆ. ಇಲ್ಲಿ ಆನೆ ವಾಹನವಾಗಿರುತ್ತದೆ. ಈ ಎರಡೂ ರೀತಿಯ ಸಿದ್ಧಾಯಿಕೆಯ ಬಣ್ಣ ಹರಿತ್.[೨೨] ಸಂಸ್ಕೃತ 'ಮಹಾಪುರಾಣ'ದಲ್ಲಿ ಸರಸ್ವತಿಯು ಆದಿಜಿನನ ಮೊಗದಿಂದ ಉದಯಿಸಿ, ಲೋಕವನ್ನು ವ್ಯಾಪಿಸಿದರೂ, ಆದಿಜಿನನ ಮುಖದಲ್ಲಿಯೇ ನೆಲೆಸಿದ ವಿವರಗಳಿವೆ.[೨೩]

'ಜೈನವೇದ–ಶಾಸ್ತ್ರವೆಂದರೂ, ಶ್ರುತವೆಂದರೂ ಒಂದೇ ಅರ್ಥವೆಂದೂ, ಆ ಶಾಸ್ತ್ರವೇ ಸರಸ್ವತೀ ಅಥವಾ ಶಾರದಾದೇವಿ ಎಂದು ಹೇಳಲಾಗಿದೆ' ಎಂಬುದು ಜೈನಪರಂಪರೆಯ ನಂಬಿಕೆ.[೨೪] ಜೈನಶಾಸ್ತ್ರಗ್ರಂಥಗಳು, ಸಾಹಿತ್ಯ ಕೃತಿಗಳು ಸರಸ್ವತಿಯನ್ನು ವಾಗ್ದೇವತೆಯಾಗಿ, ವಿದ್ಯಾದೇವತೆಯಾಗಿ ಸ್ವೀಕರಿಸಿ ಆರಾಧಿಸುತ್ತಾ ಬಂದಿವೆ. ಕೈಗಳಲ್ಲಿ ಪುಸ್ತಕ ವೀಣೆ ಮೊದಲಾದ ಸರಸ್ವತಿ ಸಂಬಂಧೀ ಪರಿಕರಗಳನ್ನು ಹಿಡಿದಾಕ್ಷಣ ಸಿದ್ಧಾಯಿಕೆಯನ್ನು ಸರಸ್ವತೀ ಎನ್ನಲಾಗುವುದಿಲ್ಲ. ಈ ಕಾರಣದಿಂದ, ಮಹಾವೀರನ ಯಕ್ಷಿ ಸಿದ್ಧಾಯಿಕೆ ಮತ್ತು ವಾಗ್ದೇವತೆ ಸರಸ್ವತೀ ಇಬ್ಬರೂ ಭಿನ್ನರಾಗುತ್ತಾರೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. K. Bhattacharya: Sarasvati – *A study on her Concept and Iconography*, P.78. ಮತ್ತು ವಸಂತಲಕ್ಷ್ಮಿ ಕೆ.: **ಕರ್ನಾಟಕ ಸರಸ್ವತಿ ಶಿಲ್ಪಗಳು**, ಇತಿಹಾಸ ದರ್ಶನ ಸಂಪುಟ-೭, ೧೯೯೨, ಪು.೭೪.

೨. ಅದೇ.

೩. Niranjan Ghosh: *Sri Sarasvati in Indain Art and Literature*, p.87.

೪. K. Bhattacharya: Sarasvati – *A study on her Concept and Iconography*, p.78.

೫. ಅಣ್ಣಿಗೇರಿ ಎ.ಎಂ.: ಐಹೊಳೆ: **ಸಂಸ್ಕೃತಿ ಮತ್ತು ಕಲೆ**, ಪು.೬೮.

೬. Susan L Huntington: *The Art of Ancient India – Buddhist, Hindus, Jaina*,. Weather Hill Publications, New York, 1999.

೭. Ramachandra Rao S.K.: *Prtimakosha – Encyclopedia of Indian Iconography*, Vol. VI, p.೨೫೯.

೮. ಸುಂದರ ಅ.: ಬನವಾಸಿ ವಾಸ್ತು ಮತ್ತು ಮೂರ್ತಿಶಿಲ್ಪ, ಲೇಖನ: **ಬನವಾಸಿ – ಸಮಗ್ರ ಪರಿಚಯ**, ಪು.೧೨೭–೧೨೮.

೯. Collector's Dream: *Collection of Basantkumar & Saraladevi*, Birla Marg Publications, Bombay, 1987.

೧೦. Dhaky M.A.: *Encyclopaedia of Indian Temple Architecture*, Vol. I, Part -2, p.160.

೧೧. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** –೧. ಶಾಸನ ಸಂಖ್ಯೆ–೧೪೯.

೧೨. ಗುರುರಾಜಭಟ್ ಪಿ: **ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್**, ೧೯೭೫, ಪು. ೩೧೨. ಪ್ಲೇಟ್ ೧೫೫ಎ.

೧೩. ಕಲವೀರ ಮನ್ಸಾಚಾರ: **ಮಾತೃದೇವತಾ ಆರಾಧನೆ** (ಅಪ್ರಕಟಿತ ಮಹಾಪ್ರಬಂಧ), ಪು.೧೧೪.

೧೪. **ಕರ್ನಾಟಕ ಗ್ಯಾಸೆಟಿಯರ್**, ಧಾರವಾಡ ಜಿಲ್ಲೆ, ಪು.೯೨೬.

೧೫. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಗುಲ್ಬರ್ಗಾ ಜಿಲ್ಲೆ, ಪು.೭೩೭.

೧೬. SII – XI-ii 134.

೧೭. SII – XI-ii 138.

೧೮. **ಕರ್ನಾಟಕ ಗ್ಯಾಸೆಟಿಯರ್**, ಧಾರವಾಡ ಜಿಲ್ಲೆ, ಪು. ೯೨೬.

೧೯. ವಸಂತಲಕ್ಷ್ಮಿ ಕೆ.: ಶಾರದಾ ಉಪಾಸನೆ ಒಂದು ಅಧ್ಯಯನ (**ಇತಿಹಾಸ ದರ್ಶನ**, ಸಂ. ೬) ೧೯೯೧. ಪು.೮೩–೯೩.

೨೦. ವಸಂತಲಕ್ಷ್ಮಿ ಕೆ.: ಕರ್ನಾಟಕದ ಸರಸ್ವತಿ ಶಿಲ್ಪಗಳು (**ಇತಿಹಾಸ ದರ್ಶನ** ಸಂ. ೭), ೧೯೯೨, ಪು. ೭೪–೭೮.

೨೧. ಹಂಪ ನಾಗರಾಜಯ್ಯ: **ಯಕ್ಷ–ಯಕ್ಷಿಯರು**, ಪು. ೯೪.

೨೨. **ಮಹಾಪುರಾಣ**, ೧–೧೮೪.

೨೩. ಎರ್ತೂರು ಶಾಂತಿರಾಜ ಶಾಸ್ತ್ರೀ – **ಜೈನವೇದ ಮತ್ತು ಶ್ರುತಪಂಚಮಿ**, ೧೯೯೮. ಪು.೧೪ ಮತ್ತು ೧೪೨.




# ಹಂಪಿ ಪ್ರಾಚ್ಯವಸ್ತು ಸಂಗ್ರಹಾಲಯದ ಭೈರವಮೂರ್ತಿಗಳು

– ಕೃಷ್ಣ*

ಶಿವ ಹಾಗೂ ವಿಷ್ಣು ತತ್ತ್ವಗಳನ್ನಾಧರಿಸಿ ಮೂರ್ತಿಶಿಲ್ಪಗಳ ಉತ್ಪತ್ತಿ, ವ್ಯಾಪ್ತಿ ಹಾಗೂ ಬೆಳವಣಿಗೆಯ ತಾಕಲಾಟದಲ್ಲಿ ಅವಿರ್ಭವಿಸಿರುವ, ಪ್ರಮುಖ ಶಿವ ತತ್ತ್ವದ ವಿಭಿನ್ನ ಉಪಾಂಗಗಳನ್ನು ಅಳವಡಿಸಿಕೊಂಡು ಅರವತ್ತನಾಲ್ಕು ಪ್ರಕಾರಗಳಾಗಿ ವಿಸ್ತೃತವಾದ ಮೂರ್ತಿಶಿಲ್ಪದ ಶಿವನ ಸಂಹಾರ ಮೂರ್ತಿಗಳೇ ಭೈರವ. ಶಿಲ್ಪಶಾಸ್ತ್ರದ ಅನುಸಾರ ಈ ಭೈರವ ಮೂರ್ತಿಗಳು ತ್ರಿಗುಣಗಳಾದ ರಜೋ, ತಮೋ ಹಾಗೂ ಸಾತ್ವಿಕ ಅಂಶಗಳಲ್ಲಿ ಒಂದಾದ ತಮೋಗುಣಗಳನ್ನು ವ್ಯಕ್ತಪಡಿಸುತ್ತವೆ.

ಭೈರವನ ರೂಪಗಳಲ್ಲಿ ಹಲವು ವಿಧಗಳಿವೆ. ಅವುಗಳಲ್ಲಿ ವಟುಕಭೈರವ ಹಾಗೂ ಸ್ವರ್ಣಾಕರ್ಷಣಭೈರವ ಮುಖ್ಯವಾದವು. ರೂಪಮಂಡನದಲ್ಲಿ ವಿವರಿಸಿರುವಂತೆ ವಟುಕಭೈರವನು ಎಂಟು ಕೈಗಳನ್ನು ಹೊಂದಿದ್ದು, ಆರು ಕೈಗಳಲ್ಲಿ ಖಟ್ವಾಂಗ, ಪಾಶ, ಶೂಲ, ಡಮರು, ಕಪಾಲ, ಶಂಖವನ್ನು ಹಾಗೂ ಇನ್ನುಳಿದ ಒಂದು ಕೈಯಲ್ಲಿ ಮಾಂಸದ ತುಂಡನ್ನು ಹೊಂದಿದ್ದು ಮತ್ತೊಂದು ಅಭಯ ಮುದ್ರೆಯಲ್ಲಿರುತ್ತದೆ. ಆದರೆ, ವಟುಕಭೈರವಕಲ್ಪವು ಭೈರವನು ಚತುರ್ಭುಜನಾಗಿದ್ದು ಕೈಗಳಲ್ಲಿ ಶೂಲ, ಪಾಶ, ಡಮರು ಹಾಗೂ ಕಪಾಲಗಳನ್ನು ಹಿಡಿದಿದ್ದು, ಕೆಂಜೆಡೆ, ತ್ರಿನೇತ್ರ ಮತ್ತು ಕೆಂಬಣ್ಣದ ದೇಹವುಳ್ಳವನಾಗಿರುತ್ತಾನೆಂದು ತಿಳಿಸುತ್ತದೆ. ರೂಪಮಂಡನದಲ್ಲಿ ವಿವರಿಸಿರುವ ಅಷ್ಟಭುಜ ಭೈರವನು ಎಲ್ಲೂ ಕಂಡುಬರುವದಿಲ್ಲ. ಸ್ವರ್ಣಾಕರ್ಷಣ ಭೈರವನು ಹಳದಿ ವರ್ಣದಿಂದ ಕೂಡಿದ್ದು, ಚತುರ್ಭುಜಗಳನ್ನು ಹೊಂದಿದ್ದು, ತ್ರಿನೇತ್ರವುಳ್ಳವನಾಗಿರುತ್ತಾನೆ. ಹಳದಿವಸ್ತ್ರ ಧರಿಸಿ, ಸ್ವರ್ಣಾಭರಣ ಭೂಷಿತನಾಗಿ ಹಸನ್ಮುಖನಾಗಿರುತ್ತಾನೆ. ಒಂದು ಕೈಯಲ್ಲಿ ಚಿನ್ನ ಮತ್ತು ವಜ್ರವೈಢೂರ್ಯಗಳನ್ನು ಉಳಿದವುಗಳಲ್ಲಿ ಚಾಮರ, ತೋರಣ ಹಾಗೂ ಶೂಲವನ್ನು ಹಿಡಿದಿರುತ್ತಾನೆ.

ಭೈರವನ ಎಂಟು ಉಪಾಂಗ ರೂಪಗಳಿದ್ದು ಅವುಗಳನ್ನು ಪುನಃ ಎಂಟೆಂಟು ಪ್ರಕಾರಗಳಾಗಿ ವಿಂಗಡಿಸಿ ಒಟ್ಟಾರೆ ಅರವತ್ತನಾಲ್ಕು ಭೈರವನ ಮೂರ್ತಿಗಳನ್ನು ರೂಪಿಸಲಾಗಿದೆ. ಅಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಾಪಾಲ, ಭೀಷಣ ಹಾಗೂ ಸಂಹಾರರೂಪಗಳೆ ಭೈರವನ ಉಪಾಂಗರೂಪಗಳು. ವಿಷ್ಣುಧರ್ಮೋತ್ತರದಲ್ಲಿ ವರ್ಣಿಸಿರುವಂತೆ, ಭೈರವನು ಅನೇಕ ಕೈಗಳನ್ನು ಹೊಂದಿದ್ದು, ಸರ್ಪಾಭರಣ ಭೂಷಣನಾಗಿ, ರುಂಡಮಾಲೆಯನ್ನು ಧರಿಸಿ ಮೇಘವರ್ಣವನ್ನು ಹೊಂದಿರುತ್ತಾನೆ. ರೂಪಮಂಡನದಲ್ಲಿ ತಿಳಿಸಿರುವಂತೆ ಭೈರವನು ಕೈಗಳಲ್ಲಿ ಶೂಲ, ಪಾಶ, ಡಮರು ಹಾಗೂ ಕಪಾಲಭಗ್ನುಗಳನ್ನು ಧರಿಸಿದ್ದು ಶ್ವಾನ–ವಾಹನನಾಗಿರುತ್ತಾನೆ. ವಟುಕಭೈರವನು ಸಂಪೂರ್ಣ ನಗ್ನನಾಗಿರುತ್ತಾನೆ. ಮುಖದಲ್ಲಿ ರೌದ್ರತೆಯನ್ನು ಬಿಂಬಿಸಲು ಜಡೆ ಜ್ವಾಲೆ ಅಥವಾ ಜಿರಿಹೊಯ್ದಂತಿದ್ದು, ಉಗ್ರವಾದ ಕೋರೆಹಲ್ಲು ಹಾಗೂ ಕ್ರೋಧಭರಿತ ತೆರೆದ ತ್ರಿನೇತ್ರಗಳನ್ನು ಹೊಂದಿರುತ್ತಾನೆ.

### ಭೈರವನ ಎಂಟು ರೂಪಗಳು

ಭೈರವನ ಈ ಎಂಟು ರೂಪಗಳ ಮೊದಲನೆಯ ಗುಂಪಿನ ಅಸಿತಾಂಗದಲ್ಲಿ ವಿಶಾಲಾಕ್ಷ, ಮಾರ್ತಂಡ, ಮೋದಕಪ್ರಿಯ, ಸ್ವಚ್ಛಂದ, ವಿಘ್ನಸಂತುಷ್ಟ, ಖೇಚರ ಹಾಗೂ ಸಚಾರಚರ ರೂಪದಲ್ಲಿರುವ ಭೈರವನು ಸ್ವರ್ಣವರ್ಣನಾಗಿದ್ದು ಹಸನ್ಮುಖನಾಗಿರುತ್ತಾನೆ ಮತ್ತು ಕೈಗಳಲ್ಲಿ ಶೂಲ, ಡಮರು, ಪಾಶ ಹಾಗೂ ಖಡ್ಗಗಳನ್ನು ಹಿಡಿದಿರುತ್ತಾನೆ. ಎರಡನೆಯ ರುರು ವರ್ಗದಲ್ಲಿ ಕ್ರೋಧಧಂಷ್ಟ್ರ, ಜಟಾಧರ, ವಿಶ್ವರೂಪ, ವಿರೂಪಾಕ್ಷ, ನಾನಾರೂಪಧರ, ವಜ್ರಹಸ್ತ ಹಾಗೂ ಮಹಾಕಾಯ ರೂಪಗಳ ಭೈರವನು ಶ್ವೇತವರ್ಣನಾಗಿರುತ್ತಾನೆ. ಅಲ್ಲದೆ ಸರ್ವಾಭರಣಭೂಷಿತನಾಗಿದ್ದು ಕೈಗಳಲ್ಲಿ ಅಕ್ಷಮಾಲಾ, ಅಂಕುಶ, ಪುಸ್ತಕ ಹಾಗೂ ವೀಣೆಯನ್ನು ಹಿಡಿದಿರುತ್ತಾನೆ. ಮೂರನೆಯ ಗುಂಪಾದ ಚಂಡದಲ್ಲಿ, ಪ್ರಳಯಾಂತಕ, ಭೂಮಿಕಂಪ, ನೀಲಕಂಠ,

* ಸಹಾಯಕ ಪುರಾತತ್ತ್ವವಿದ, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ಬೆಂಗಳೂರು ವಲಯ, ಕೇಂದ್ರೀಯ ಸದನ, ಕೋರಮಂಗಲ, ಬೆಂ.–೦೩೪.

ವಿಷ್ಣು, ಕುರುಪಾಲಕ, ಮುಂಡಪಾಲ ಹಾಗೂ ಕಾಮಪಾಲ ರೂಪಗಳ ಭೈರವನು ನೀಲವರ್ಣ ಹಾಗೂ ಹಸನ್ಮುಖನಾಗಿರುತ್ತಾನೆ. ಕೈಗಳಲ್ಲಿ ಅಗ್ನಿ, ಶಕ್ತಿ, ಗದೆ ಹಾಗೂ ಕುಂಡವನ್ನು ಹಿಡಿದಿರುತ್ತಾನೆ. ಪಿಂಗಳೇಕ್ಷಣ, ಅಭ್ರರೂಪ, ಧರಾಪಾಲ, ಕುಟಿಲ, ಮಂತ್ರನಾಯಕ, ರುದ್ರ ಹಾಗೂ ಪಿತಾಮಹ ಭೈರವರು ನಾಲ್ಕನೆಯ ಕ್ರೋಧ ಗುಂಪಿಗೆ ಸೇರಿದವರಾಗಿದ್ದಾರೆ. ಇವರೆಲ್ಲಾ ಬೂದುವರ್ಣದವರಾಗಿದ್ದು ಕೈಗಳಲ್ಲಿ ಖಡ್ಗ, ಖೇತಕ, ಉದ್ದನೆಯಕತ್ತಿ ಹಾಗೂ ಪರಶುವನ್ನು ಹಿಡಿದಿರುತ್ತಾರೆ. ಐದನೆಯ ಉನ್ಮತ್ತ ಭೈರವನ ಗುಂಪಿನಲ್ಲಿ ವಟುಕನಾಯಕ, ಶಂಕರ, ಭೂತ-ಬೇತಾಳ, ತ್ರಿನೇತ್ರ, ತ್ರಿಪುರಾಂತಕ, ವರದ ಹಾಗೂ ಪರ್ವತವಾಸ ರೂಪಗಳಿವೆ. ಶ್ವೇತವರ್ಣ ಹಾಗೂ ಹಸನ್ಮುಖನಾದ ಚತುರ್ಭುಜ ಭೈರವನು ರುಂಡ, ಖೇಟಕ, ಪರಿಗ ಹಾಗೂ ಭಿಂಡಿವಾಳವನ್ನು ಹೊಂದಿರುತ್ತಾನೆ. ಶಶಿಭೂಷಣ, ಹಸ್ತಿಚರ್ಮಾಂಭರಧರ, ಯೋಗೀಶ, ಬ್ರಹ್ಮರಾಕ್ಷಸ, ಸರ್ವಜ್ಞ, ಸರ್ವದೇವತ, ಸರ್ವ-ಭೂತಾಹೃದಿ-ಸ್ಥಿತ ರೂಪಗಳು ಆರನೆಯದಾದ ಕಾಪಾಲ ಭೈರವನ ಗುಂಪಿಗೆ ಸೇರುತ್ತವೆ. ಹಳದಿ ಹಾಗೂ ಹಸನ್ಮುಖನಾಗಿರುವ ಚತುರ್ಭುಜ ಭೈರವನು ಕೈಗಳಲ್ಲಿ ರುಂಡ, ಖೇಟಕ, ಪರಿಗ ಹಾಗೂ ಭಿಂಡಿವಾಳವನ್ನು ಹಿಡಿದಿರುತ್ತಾನೆ. ಏಳನೆಯ ಗುಂಪಿಗೆ ಸೇರಿದ ಭೀಷಣಕ್ಕೆ ಭಯಹರ, ಸರ್ವಜ್ಞ, ಕಾಲಾಗ್ನಿ-ಮಹಾರುದ್ರ, ದಕ್ಷಿಣಾಮುಖಿರ ಹಾಗೂ ಆಸ್ತಿಕ ರೂಪಗಳು ಸೇರಿದ್ದು, ಭೈರವನು ಕೆಂಪುವರ್ಣ ಹಾಗೂ ಚತುರ್ಭುಜನಾಗಿದ್ದು ಮೇಲಿನ ಗುಂಪಿನ ರೀತಿಯಲ್ಲಿಯೇ ಆಯುಧಗಳನ್ನು ಹೊಂದಿದ್ದಾರೆ. ಎಂಟನೆಯ ಹಾಗೂ ಕೊನೆಯ ಗುಂಪಾದ ಸಂಹಾರ ಭೈರವನ ಗುಂಪಿನಲ್ಲಿ ಅತಿರಕ್ತಾಂಗ, ಕಾಲಾಗ್ನಿ, ಪ್ರಿಯಂಕರ, ಘೋರನಾದ, ವಿಶಾಲಾಕ್ಷ, ಯೋಗೀಶ, ದಕ್ಷಸಂಸ್ಥಿತ ರೂಪಗಳು ಸೇರಿದ್ದು, ಮಿಂಚಿನವರ್ಣದ ಚತುರ್ಭುಜ ಭೈರವನು ರುಂಡ, ಖೇಟಕ, ಪರಿಗ ಹಾಗೂ ಭಿಂಡಿವಾಳವನ್ನು ಹೊಂದಿರುತ್ತಾರೆ.

ಈ ವೈವಿಧ್ಯಮಯ ಭೈರವನ ವಿವಿಧ ರೂಪಗಳ ಆರಾಧನೆ ಪುರಾತನ ಕಾಲದಿಂದಲೂ ಪ್ರಚಲಿತವಿದೆ. ಅದೇ ರೀತಿ, ಕರ್ನಾಟಕದಲ್ಲಿ ಗಂಗ, ನೊಳಂಬ, ಬಾದಾಮಿ ಚಳುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಳುಕ್ಯ, ಹೊಯ್ಸಳ ಹಾಗೂ ವಿಜಯನಗರ ಅರಸರ ಕಾಲದಲ್ಲಿ ಅತೀಸುಂದರ ಹಾಗೂ ನಯನ ಮನೋಹರವಾದ ವಿವಿಧ ರೂಪದ ಭೈರವ ಮೂರ್ತಿಗಳನ್ನು ಆರಾಧಿಸಲಾಗುತ್ತಿತ್ತು.

### ವಿಜಯನಗರದ ಭೈರವಮೂರ್ತಿಗಳು

ಸಂಗಮ ಸಹೋದರರಾದ ಹಕ್ಕ ಮತ್ತು ಬುಕ್ಕರಿಂದ ಕ್ರಿ.ಶ. ೧೩೩೬ರಲ್ಲಿ ಸ್ಥಾಪಿತ ವಿಜಯನಗರ ಸಾಮ್ರಾಜ್ಯ ಹಾಗೂ ಅದೇ ಹೆಸರಿನ ರಾಜಧಾನಿಯು ಸುಮಾರು ಎರಡೂ-ಕಾಲು ಶತಮಾನ ಅತ್ಯಂತ ಪ್ರಸಿದ್ಧ ಹಾಗೂ ವೈಭವಯುತವಾಗಿ ಮೆರೆದ ಮಧ್ಯಕಾಲೀನ ಕರ್ನಾಟಕದ ಸಾಮ್ರಾಜ್ಯ. ವಿಜಯನಗರದ ಅರಸರು ರಾಜ್ಯಾಡಳಿತಕ್ಕೆ ನೀಡಿದಷ್ಟೆ ಪ್ರಾಮುಖ್ಯತೆಯನ್ನು ಧರ್ಮ, ಸಾಹಿತ್ಯ, ಕಲೆ, ಕ್ರೀಡೆ ಹಾಗೂ ಮನರಂಜನೆ, ಉತ್ತಮ ಆರ್ಥಿಕ ವ್ಯವಸ್ಥೆ ಮತ್ತು ನೀರಾವರಿ ಪದ್ಧತಿಗಳಿಗೂ ಸಹ ನೀಡಿದ್ದರು.

ತುಂಗಭದ್ರಾ ನದಿಯ ದಕ್ಷಿಣ ತಟದಲ್ಲಿರುವ ವಿಜಯನಗರ-ಇಂದಿನ ಹಂಪಿಯು, ಸಮಕಾಲೀನ ಇತಿಹಾಸದಲ್ಲಿ ಅತ್ಯಂತ ಸುವ್ಯವಸ್ಥಿತ ಹಾಗೂ ಸಂಪತ್ಭರಿತ ರಾಜಧಾನಿಯೆಂದು ದೇಶ ವಿದೇಶಗಳಲ್ಲಿ ಪ್ರಖ್ಯಾತಿಯನ್ನು ಪಡೆದಿತ್ತು. ವಿಶಾಲ ದೇವಾಲಯಗಳು, ಭವ್ಯ ಅರಮನೆಯ ಅವಶೇಷಗಳು, ಸುಂದರ ಪುಷ್ಕರಣಿಗಳು, ಬಲಾಢ್ಯ ಕೋಟೆ-ಕೊತ್ತಲಗಳು, ಉತ್ತಮ ನೀರಾವರಿ ಪದ್ಧತಿಯ ಅಣೆಕಟ್ಟು-ಕೆರೆ-ಬಾವಿಗಳು ಹಾಗೂ ಮಹಾದ್ವಾರಗಳು ಇಂದಿಗೂ ವಿಜಯನಗರದ ಗತವೈಭವವನ್ನು ಸಾರುತ್ತಿವೆ.

ವಿಜಯನಗರದ ವಾಸ್ತುಶಿಲ್ಪದಲ್ಲಿ ಯುದ್ಧೋತ್ಸಾಹವನ್ನು ಪ್ರತಿಬಿಂಬಿಸುವಂತಹ ವೀರಭದ್ರ, ಭೈರವ, ಭೈರವಿ, ಗಣೇಶ, ಕಾರ್ತಿಕೇಯ, ಮಹಿಷಮರ್ದಿನಿಯಂತಹ ಅನೇಕ ಶಿಲ್ಪಗಳಿವೆ. ಸೈನಿಕರಿಗೆ ಯುದ್ಧೋತ್ಸಾಹವನ್ನೂ ಹಾಗೂ ಶತ್ರುಗಳನ್ನು ಸದೆಬಡಿಯಲು ಬೇಕಾದ ರೌದ್ರಾವಸ್ಥೆ ಹಾಗೂ ಗೆಲ್ಲಲೇಬೇಕೆಂಬ ಛಲವನ್ನು ಪ್ರೇರೇಪಿಸಲು ಇಂತಹ ಅನೇಕ ದೇವತಾಮೂರ್ತಿಗಳನ್ನು ಪೂಜಿಸಲಾಗುತ್ತಿತ್ತು.

ವಿಜಯನಗರದ ಪರಿಸರದಲ್ಲಿರುವ ಈ ವಿವಿಧ ಸ್ಮಾರಕಗಳಿಂದ ದೊರೆತ ಅನೇಕ ಮೂರ್ತಿ, ವಾಸ್ತುಭಾಗ, ವೀರಗಲ್ಲು ಮುಂತಾದ ಅವಶೇಷಗಳನ್ನು ಸಂಗ್ರಹಿಸಿ ಅವುಗಳನ್ನು ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶಿಸಲಾಗಿದೆ. ೧೯೫೪ರಲ್ಲಿ ಹಂಪಿಯ ಆನೆ-ಲಾಯದ ಆವರಣದಲ್ಲಿ ಪ್ರಾರಂಭವಾದ ಈ ವಸ್ತುಸಂಗ್ರಹಾಲಯ ೧೯೭೨ರಿಂದ ಕಮಲಾಪುರದ


೧. ಚತುರ್ಭುಜ


೨. ಭೈರವ


೩. ಭೈರವ


೪. ಭೈರವ


೫. ಭೈರವ

ಉತ್ತರ ಹೊರಭಾಗದಲ್ಲಿ ಹೊಸದಾಗಿ ನಿರ್ಮಿಸಿರುವ ವಿಶಾಲವಾದ ಕಟ್ಟಡದಲ್ಲಿ ಕಾರ್ಯನ್ಮುಖವಾಗಿದೆ. ಈ ಸಂಗ್ರಹಾಲಯದಲ್ಲಿರುವ ಕೆಲವೊಂದು ವಿಶಿಷ್ಟವಾದ ಭೈರವಮೂರ್ತಿಗಳ ಒಂದು ವಿವರಣಾತ್ಮಕ ಅಧ್ಯಯನವೇ ಈ ಲೇಖನದ ಪ್ರಮುಖ ಉದ್ದೇಶ.

ಈ ವಿವಿಧ ಭೈರವನಮೂರ್ತಿಗಳಲ್ಲಿ, ಮೊದಲನೆಯದು ಕಪ್ಪುಶಿಲೆಯಲ್ಲಿ ಖಂಡರಿಸಿರುವ ಚತುರ್ಭುಜ ಹಾಗೂ ತ್ರಿಭಂಗಿಯಲ್ಲಿರುವ ಭೈರವ (Acc.No.83; 127x64x24cm; Pl.1). ನಾಲ್ಕು ಕೈಗಳ ಬಲಭಾಗದ ಮುಂಬದಿಯ ಕೈಯಲ್ಲಿ ಖಡ್ಗ ಮತ್ತು ಹಿಂಬದಿಯ ಕೈಯಲ್ಲಿ ಡಮರುಗಳಿವೆ ಹಾಗೂ ಎಡಭಾಗದ ಹಿಂಬದಿಯ ಕೈಯಲ್ಲಿ ತ್ರಿಶೂಲವೂ ಮತ್ತು ಮುಂದಿನ ಕೈಯಲ್ಲಿ ಕಪಾಲವಿದ್ದು ಅದರ ಕೆಳಭಾಗದಲ್ಲಿ ರುಂಡವು ಜೋತಾಡುತ್ತಿದೆ. ಬೆಂಕಿಯ ಜ್ವಾಲೆಯಂತಿರುವ

ತಲೆ, ಕೋರೆದಂತ ಹಾಗೂ ಕೊರಳಲ್ಲಿರುವ ರುಂಡಮಾಲೆಗಳು ಭೈರವನ ಉಗ್ರರೂಪವನ್ನು ಬಿಂಬಿಸುತ್ತವೆ. ಕಂಠಹಾರ, ಭುಜಕೀರ್ತಿ, ಕೇಯೂರ, ಕುಂಡಲ, ಕಂಕಣಬಂಧ, ಬಂಧಿ ಹಾಗೂ ಯಜ್ಞೋಪವೀತವನ್ನು ಧರಿಸಿದ್ದಾನೆ. ಎಡಕ್ಕೆ ಮುಖಮಾಡಿ ನಿಂತಿರುವ ಶ್ವಾನವು ಕಪಾಲದ ರುಂಡದಿಂದಿಳಿಯುತ್ತಿರುವ ಬಿಸಿನೆತ್ತರನ್ನು ಹೀರುತ್ತಿರುವಂತೆ ಚಿತ್ರಿಸಲಾಗಿದೆ.

ಎರಡನೆಯ ಭೈರವಮೂರ್ತಿಯು ತ್ರಿಭಂಗಿಯಲ್ಲಿದ್ದು ಜಡೆಯು ಅಗ್ನಿಜ್ವಾಲೆಯಂತಿದೆ (Acc.No.03; 112x58x35cm; Pl.2). ತ್ರಿಶೂಲ, ಖಡ್ಗ, ಡಮರು ಹಾಗೂ ಕಪಾಲ-ರುಂಡಹಸ್ತನಾಗಿರುವ ಭೈರವನು ಕರ್ಣಕುಂಡಲ, ಕಂಠಹಾರ, ಕೊರಳಹಾರ ಹಾಗೂ ರುಂಡಮಾಲೆಗಳನ್ನು ಧರಿಸಿದ್ದಾನೆ. ಎಡಕ್ಕೆ ಮುಖಮಾಡಿ ನಿಂತಿರುವ ಶ್ವಾನವು ರುಂಡದಿಂದಿಳಿಯುತ್ತಿರುವ ನೆತ್ತರನ್ನು ಆಸ್ವಾದಿಸುತ್ತಿದೆ.

ಇನ್ನೊಂದು ಮೂರ್ತಿಯು ನಗ್ನ ಭೈರವನ ಗುಂಪಿಗೆ ಸೇರಿದ್ದು ತ್ರಿಭಂಗಿಯಲ್ಲಿದೆ (Acc.No.754; 226x96x50cm; Pl.3). ಚತುರ್ಭುಜ ಭೈರವನು, ಬಲಭಾಗದ ಎರಡು ಕೈಗಳಲ್ಲಿ ಖಡ್ಗ ಹಾಗೂ ಡಮರು ಮತ್ತು ಎಡಭಾಗದ ಕೈಗಳ ಒಂದರಲ್ಲಿ ತ್ರಿಶೂಲ ಮತ್ತೊಂದರಲ್ಲಿ ಕಪಾಲ ಹಾಗೂ ರುಂಡವನ್ನು ನೇತಾಡುವಂತೆ ಹಿಡಿದಿದ್ದಾನೆ. ಜ್ವಾಲಾಮಕುಟ ಹಾಗೂ ಕೋರೆದಂತಗಳಿರುವ ಭೈರವನು ಕೊರಳಲ್ಲಿ ಕಂಠಹಾರ, ಕಿವಿಯಲ್ಲಿ ಕರ್ಣಕುಂಡಲಗಳಿಂದ ಆಭೂಷಿತನಾಗಿ ಯಜ್ಞೋಪವೀತ ಧರಿಸಿದ್ದಾನೆ. ರುಂಡಮಾಲೆಯು ಎಡಭುಜದಿಂದ ಬಲಗಡೆಗೆ ಇಳಿಬಿಟ್ಟಂತೆ ಇದೆ. ಎರಡು ಕಾಲುಗಳನ್ನು ಮೇಲೆತ್ತಿ ನಿಂತಿರುವ ಶ್ವಾನವು ಎಡಭಾಗದ ಮುಂಬದಿಯ ಕೈಯಲ್ಲಿ ನೇತಾಡುವ ರುಂಡವನ್ನು ಕಚ್ಚುವಂತೆ ಕಂಡರಿಸಲಾಗಿದೆ. ಭೈರವನು ನಿಂತಿರುವ ಪೀಠದ ಮೇಲೆ ವೃಚಿಕವನ್ನು ಚಿತ್ರಿಸಲಾಗಿದೆ.

ನಾಲ್ಕನೆಯ ಭೈರವನು ತ್ರಿಭಂಗಿಯಲ್ಲಿದ್ದು ಚತುರ್ಭುಜನಾಗಿದ್ದಾನೆ (Acc.No.748; 130x69x21cm; Pl. 4). ಬಲಭಾಗದ ಕೈಗಳಲ್ಲಿ ಖಡ್ಗ ಹಾಗೂ ಡಮರು ಮತ್ತು ಎಡಭಾಗದ ಕೈಗಳ ಒಂದರಲ್ಲಿ ತ್ರಿಶೂಲ ಮತ್ತೊಂದರಲ್ಲಿ ಕಪಾಲ ಹಿಡಿದಿದ್ದು ಅದರ ಕೆಳಭಾಗದಲ್ಲಿ ರುಂಡವು ನೇತಾಡುತ್ತಿದೆ. ಅದನ್ನು ಹಿಡಿಯಲು ಶ್ವಾನವು ಹಿಂಗಾಲಿನ ಮೇಲೆ ನಿಂತಿದೆ. ದೊಡ್ಡದಾದ ಕಣ್ಣುಗಳು, ಕೋರೆಹಲ್ಲುಗಳು ದಪ್ಪನಾದ ಮೀಸೆಯನ್ನು ಹೊಂದಿದ್ದು, ತಲೆಗೆ ಸಾಧಾರಣ ಪಟ್ಟಿ, ಕಿವಿಗಳಿಗೆ ಕರ್ಣಕುಂಡಲ, ಕೊರಳಲ್ಲಿ ಕಂಠಾಭರಣ ಹಾಗೂ ವಕ್ಷಹಾರಗಳನ್ನು ಧರಿಸಿದ್ದಾನೆ. ರುಂಡಮಾಲೆಯು ಎಡಭುಜದಿಂದ ತೊಡೆಯವರೆಗಿದ್ದು ನಗ್ನನಾಗಿದ್ದಾನೆ.

ಮತ್ತೋರ್ವ ಚತುರ್ಭುಜ ಭೈರವನು ನಗ್ನನಾಗಿದ್ದಾನೆ (Acc.No.668; 91x56x17cm; Pl.5). ಬಲಗಡೆಯ ಕೈಗಳಲ್ಲಿ ಖಡ್ಗ ಮತ್ತು ತ್ರಿಶೂಲವನ್ನೂ ಎಡಗಡೆಯ ಒಂದು ಕೈಯಲ್ಲಿ ಡಮರು ಮತ್ತೊಂದರಲ್ಲಿ ಕಪಾಲವನ್ನು ಹಿಡಿದಿದ್ದಾನೆ. ಮುಖದ ಭಾಗವು ತ್ರುಟಿತಗೊಂಡಿದೆ. ತಲೆಗೆ ಕರಂಡಮಕುಟ, ಕಿವಿಯಲ್ಲಿ ಕರ್ಣಕುಂಡಲ, ಕೊರಳಲ್ಲಿ ಕಂಠಾಭರಣ ಹಾಗೂ ವಕ್ಷಾಭರಣ ಮತ್ತು ರುಂಡಮಾಲೆಯನ್ನು ಧರಿಸಿದ್ದಾನೆ. ಭೈರವನ ಬಲಭಾಗದಲ್ಲಿ ಸರ್ಪ ಹಾಗೂ ವೃಚಿಕಗಳಿವೆ. ಎಡಬದಿಯಲ್ಲಿ ಶ್ವಾನವು ಕಪಾಲದಿಂದ ಜೋತಾಡುವ ತಲೆಯನ್ನು ಕಚ್ಚುತ್ತಿದೆ.

ಇನ್ನೊಂದು ಭೈರವಮೂರ್ತಿಯು ತ್ರುಟಿತಗೊಂಡಿದ್ದು ಜೀರ್ಣಾವಸ್ಥೆಯಲ್ಲಿದೆ (Acc.No.2146; 80x45x30cm; Pl.6). ತ್ರಿಭಂಗಿಯಲ್ಲಿರುವ ಭೈರವನ ಚತುರ್ಭುಜಗಳ ಬಲಕೈಗಳಲ್ಲಿ ಖಡ್ಗ ಮತ್ತು ತ್ರಿಶೂಲ ಹಾಗೂ ಎಡಕೈಗಳಲ್ಲಿ ಡಮರು ಮತ್ತು ಕಪಾಲಗಳಿವೆ. ಕಣ್ಣುಗಳು ದಪ್ಪನಾಗಿದ್ದು ಕೋರೆಹಲ್ಲು ಹಾಗೂ ಮೀಸೆಯನ್ನು ಹೊಂದಿದ್ದಾನೆ. ತಲೆಗೆ ಜ್ವಾಲಾಮುಕುಟ, ಕಿವಿಗಳಲ್ಲಿ ಕರ್ಣಕುಂಡಲ, ಕೊರಳಲ್ಲಿ ಕಂಠಹಾರ ಮತ್ತು ವಕ್ಷಹಾರ, ಕಟಿಬಂಧ, ಕಾಲುಬಂದಿ, ಯಜ್ಞೋಪವೀತ ಹಾಗೂ ರುಂಡಮಾಲೆಗಳನ್ನು ಧರಿಸಿದ್ದಾನೆ. ಭೈರವನ ಬಲಭಾಗದಲ್ಲಿ ಮಕರ ಹಾಗೂ ಎಡಭಾಗದಲ್ಲಿ ಶ್ವಾನವಿದೆ.

ಏಳನೆಯ ಹಾಗೂ ಕೊನೆಯ ಭೈರವಮೂರ್ತಿಯು ನರ್ತನಭಂಗಿಯಲ್ಲಿದ್ದು ಭಗ್ನಗೊಂಡಿದೆ (Acc.No. 1623;79x38x21cm; Pl.7). ಚತುರ್ಭುಜ ಭೈರವನ ಬಲಭಾಗದ ಕೈಗಳಲ್ಲಿ ಖಡ್ಗ ಮತ್ತು ಡಮರು ಹಾಗೂ ಎಡಭಾಗದ ಕೈಗಳ ಒಂದರಲ್ಲಿ ತ್ರಿಶೂಲ ಮತ್ತು ಮೇಲೆತ್ತಿದ ಇನ್ನೊಂದರಲ್ಲಿ ಕಪಾಲಗಳಿವೆ. ಸರ್ಪಮಕುಟ, ಕರ್ಣಕುಂಡಲ, ಕಂಠಹಾರ, ವಕ್ಷಹಾರ, ಉದರಬಂಧ, ಹಾಗೂ ಕಟಿಬಂಧ ಧರಿಸಿದ್ದು ಎಡಗಡೆಯ ಭುಜದಿಂದ ಇಳಿಬಿಟ್ಟ ರುಂಡಮಾಲೆ ಕಾಲಿನ ಮಂಡಿಯವರೆಗಿದೆ. ಕಂಕಣ, ಕೇಯೂರ, ಭಜಬಂಧ, ಕಾಲುಬಂದಿ ಹಾಗೂ ಕಾಲುಮುರಿಯಿಂದ ಆಭೂಷಿತನಾಗಿದ್ದಾನೆ. ಭೈರವನ ಬಲಬದಿಯಲ್ಲಿ ಹೆಡೆಬಿಚ್ಚಿದ ಸರ್ಪ ಹಾಗೂ ಎಡಬದಿಯಲ್ಲಿ ಮೇಲೆ ಜಿಗಿಯುವ ಶ್ವಾನಗಳನ್ನು ಚಿತ್ರಿಸಿದೆ.



೬. ಭೈರವ



೭. ಭೈರವ

**ಚರ್ಚೆ**

ಮೂರ್ತಿಗಳ ಶೈಲಿ, ಹಾವಭಾವ, ಭಂಗಿ, ಹೊಂದಿರುವ ಆಯುಧಗಳು, ವೇಷಭೂಷಣಗಳನ್ನು ಅವಲೋಕಿಸಿದಾಗ. ಈ ಮೇಲೆ ವಿವರಿಸಿದ ಎಲ್ಲಾ ಮೂರ್ತಿಗಳು ಭೈರವನ ಸಂಹಾರರೂಪಗಳ ಮೊದಲನೆಯ ಅಸಿತಾಂಗ ರೂಪದ ಗುಂಪಿಗೆ ಸೇರುತ್ತವೆ ಎಂದು ಹೇಳಬಹುದು. ಈ ಎಲ್ಲಾ ಮೂರ್ತಿಗಳ ಹಾವಭಾವ ಹಾಗೂ ಹೊಂದಿರುವ ಆಯುಧಗಳಾದ ಖಡ್ಗ, ತ್ರಿಶೂಲ, ಡಮರು ಹಾಗೂ ಕಪಾಲ ಒಂದೇ ರೀತಿಯಲ್ಲಿವೆ. ಇದಲ್ಲದೆ, ಇವರೆಲ್ಲಾ ನಗ್ನಭೈರವರಾಗಿದ್ದಾರೆ. ಇನ್ನು ಅಲಂಕಾರ ಹಾಗೂ ಧರಿಸಿರುವ ಆಭರಣಗಳೂ ಸಹ ಸಾಮಾನ್ಯವಾಗಿ ಒಂದೇ ತೆರನಾಗಿವೆ. ಈ ಎಲ್ಲಾ ಲಕ್ಷಣಗಳು ಅಸಿತಾಂಗ ಭೈರವನ ಮೂರ್ತಿಗಳ ಮಾದರಿಯಲ್ಲಿವೆ.

ಅಸಿತಾಂಗ ಗುಂಪಿನ ಹೊರತು ಉಳಿದ ವರ್ಗದ ಭೈರವರು ಬೇರೆ ಬೇರೆ ಆಯುಧ ಹಾಗೂ ಹಾವಭಾವಗಳನ್ನೊಳಗೊಂಡಿದ್ದಾರೆ. ರುರು ಗುಂಪಿನ ಭೈರವನು ವಿಶೇಷ ಅಲಂಕಾರಭೂಷಿತನಾಗಿ ಅಕ್ಷಮಾಲೆ, ಅಂಕುಶ, ಪುಸ್ತಕ ಮತ್ತು ವೀಣೆಗಳನ್ನು ಹೊಂದಿರುತ್ತಾನೆ. ಚಂಡ ಗುಂಪಿನ ಭೈರವನು ಅಗ್ನಿ, ಶಕ್ತಿ, ಗದೆ, ಹಾಗೂ ರುಂಡಗಳನ್ನು ಹೊಂದಿದ್ದರೆ ಕ್ರೋಧ ವರ್ಗದ ಭೈರವನು ಖಡ್ಗ, ಖೇಟಕ, ಉದ್ದನೆಯ ಕತ್ತಿ ಹಾಗೂ ಪರಶುವನ್ನು ಹಿಡಿದಿರುತ್ತಾನೆ. ಅದೇ ರೀತಿ, ಉನ್ಮತ್ತ ಭೈರವ, ಕಾಪಾಲ,ಭಿಷಣ ಹಾಗೂ ಸಂಹಾರ ಭೈರವನೂ ಸಹ ವಿವಿಧ ರೀತಿಯ ಆಯುಧಗಳನ್ನು ಹೊಂದಿದ್ದಾರೆ.

ಈಗ ಅಧ್ಯಯನಮಾಡಿದ ಯಾವುದೇ ಭೈರವನ ಮೂರ್ತಿಗಳು ಮೇಲೆ ವಿವರಿಸಿದ ರುರು, ಚಂಡ, ಕ್ರೋಧ, ಉನ್ಮತ್ತ, ಕಾಪಾಲ, ಭಿಷಣ ಹಾಗೂ ಸಂಹಾರ ಭೈರವರಿಗೆ ಹೋಲದೆ ಅಸಿತಾಂಗ ಭೈರವನನ್ನು ಹೋಲುತ್ತವೆ. ಆದ್ದರಿಂದ, ಹಂಪಿ ವಸ್ತುಸಂಗ್ರಹಾಲಯದಲ್ಲಿರುವ ಬಹುತೇಕ ಭೈರವನ ಮೂರ್ತಿಗಳು ಅಸಿತಾಂಗ ಭೈರವನ ಗುಂಪಿಗೆ ಸೇರಿದವುಗಳೆಂದು ಹಾಗೂ ವಿಜಯನಗರದ ಕಾಲದಲ್ಲಿ ಬಹಳ ಪ್ರಚಲಿತವಾಗಿದ್ದವೆಂದು ಹೇಳಬಹುದು.

**ಕೃತಜ್ಞತೆಗಳು**

ಶ್ರೀ ಕೆ. ಎನ್. ಶ್ರೀವಾಸ್ತವ್, ಮಹಾ ನಿರ್ದೇಶಕರು, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ನವ ದೆಹಲಿ ಹಾಗೂ ಡಾ॥ ಎಸ್.ವಿ.ಪಿ. ಹಳಕಟ್ಟಿ ಮತ್ತು ಜಿ.ಎಸ್. ನರಸಿಂಹನ್ ಪುರಾತತ್ತ್ವ ಅಧೀಕ್ಷಕರು, ಧಾರವಾಡ/ ಬೆಂಗಳೂರು ವಲಯ ಇವರು ಪುರಾತತ್ತ್ವ ಸಂಶೋಧನೆಗಳಿಗೆ ನೀಡುತ್ತಿರುವ ಪ್ರೋತ್ಸಾಹ ಹಾಗೂ ಮಾರ್ಗದರ್ಶನ ಅವಿಸ್ಮರಣೀಯ. ಈ ಲೇಖನವನ್ನು ಪ್ರಸ್ತುತ ಪಡಿಸಲು ಸೂಕ್ತ ಸಲಹೆಗಳನ್ನೀಡಿದ ಶ್ರೀಯುತ ಸಿ.ಬಿ. ಪಾಟೀಲ, ಟಿ.ಎಂ. ಕೇಶವ, ಮತ್ತು ಎಂ.ವಿ. ವಿಶ್ವೇಶ್ವರ ಉಪ ಅಧೀಕ್ಷಕ ಪುರಾತತ್ತ್ವವಿದರು ಹಾಗೂ ಡಾ॥ ಸಿ. ಎಸ್. ಶೇಷಾದ್ರಿ, ಸಹಾಯಕ ಅಧೀಕ್ಷಕ ಪುರಾತತ್ತ್ವವಿದರು ಮತ್ತು ಮೂವೇಂದ್ರನ್, ಸಹಾಯಕ ಪುರಾತತ್ವವಿದರು ಹಾಗೂ ಎಲ್ಲಾ ಸಹೋದ್ಯೋಗಿ ಮಿತ್ರರಿಗೆ ಧನ್ಯವಾದಗಳು.



## ಆಧಾರ ಸೂಚಿ

೧. ಗೋಪಿನಾಥ ರಾವ್, ಟಿ.ಎ. ೧೯೬೮: **ಎಲಿಮೆಂಟ್ಸ್ ಆಫ್ ಹಿಂದು ಐಕನೋಗ್ರಫಿ**, ಸಂ.೨, ಭಾಗ ಒಂದು(ಪುನರ್ ಮುದ್ರಣ). ದೆಹಲಿ, ಮೋತಿಲಾಲ್ ಬನಾರಸಿದಾಸ್, ಪು.೧೬೭-೧೮೨.

೨. ರಾಮಚಂದ್ರರಾವ್, ಎಸ್.ಕೆ. ೧೯೮೮: **ಪ್ರತಿಮಾ ಕೋಶ**, ಸಂಪುಟ ಒಂದು. ಬೆಂಗಳೂರು, ಐ.ಬಿ.ಎಚ್. ಪ್ರಕಾಶನ, ಪು.೯೭-೯೯; ೧೦೭-೧೦೮.



# Some Unique Sculptures of Sarasvatè: Reflections

- Prof. Hampa. Nagarajaiah*

The displaced four- armed dancing image of Sarasvatè, now in the Museum of Haêebèãu (Hassan Dt.), and the sculpture of náûya Sarasvatè on the outer wall of excellent Hoysaêeùvara temple (Haêebèãu), are matchless images in the entire hoard of extant images of Sarasvatè.

1. Sarasvatè holds a palm-leaf manuscript in her left arm and it is in accordance with iconographic prescription. The three layers of palm-leaves placed one above the other is distinctly visible. Deity wears a highly embellished conical crown. The big sized ear rings dangling from the earlobe, beads of rosary, armlet, anklet, necklace, girdle, stana-hára, 'breast ornament', and kaûi-hára, `waist ornament', bangles are attractive. Though front portion of the round shaped face in one image is a bit mutilated its beauty has not diminished. The rosary held in her stretched right palm looks as though freely swinging because of the dancing gesture. The two action oriented male musicians in the flank are beating the drums and their big sized coiffure draws our attention. Their knees are bent to give support to the drum. Except for the far bigger sized goad and noose, which does not go well with the symmetry, the whole frame is vigorous and full of life. The graceful movement of the classical dance and equally graceful bend in the right leg with her prominently thrust out to her right, depicted in the sculpture confirms that Sarasvatè alias Ùrutadevè is indeed goddess of knowledge, art and music.

Their iconographic details are unusual in holding symbols of páùa 'noose', and añkuùa,' goad', in two of their upper arms. It is not in line with approved norms, though the two lower arms holding pustaka, 'book', and japamaïi or akúamála, 'rosary', is in accordance with the description of the deity. This peculiar combination of benific and malefic iconographic aspects featuring in these two rare images needs a detailed description and discussion.

2. Another dancing image of Sarasvati in the Haêebèãu Hoysaêeùvara temple needs a special mention in the sequel. It is an extraordinary piece of art in the context of dancing sculptures. The air of divine grace shown in her face is remarkable. As usual with contemporary images, she is decorated with necklace, armlets, wristlets, anklets, waist-band, breast ornament and other attributes. The two symbols of páùa and añkuùa are conspicuous with their absence in this image.

This magnificent four-armed náûya Sarasvatè on the bhitti, 'wall', of the glorious Hoysaêeùvara Deválaya is sui-generous. The deeply immersed in the act of performing nøtta, 'dance', denoting sentiments through gesticulation with the support of táêa, 'concordance of beating metal cymbals', and laya, 'rythm'.

---

* ಸ್ವನಿಮಾ, ೧೦೭೯, ೧೮ 'ಎ' ಮುಖ್ಯರಸ್ತೆ, ೫ನೆಯ ಬ್ಲಾಕ್, ರಾಜಾಜಿನಗರ, ಬೆಂಗಳೂರು–೫೦೦೦೧೦.

Standing on the full-bloomed double lotus in the typical dancing posture, Sarasvati wears a karaïã-mukuûa, 'boxed-crown'. Above the crowned head is an embellished umbrella with a reversed lotus bud in the centre. Still above the umbrella is the makára-toraïa with a vignette row of foliate motif. Her right lower arm is in the posture of abhayákúamálá, 'holding rosary in the fear-not palm'. Her left lower arm is the palm-leaf book, suggesting she is the deity of knowledge. The two upper hands are depicted as nøtta-haútas. The right upper arm lifted upwards is in vismaya-hasta or svarga-hasta, i.e., posture of marvel. The greacefully stretched left arm is in gaja-hasta, 'elephant's trunk like arm' posture. Both the arms are ornamented with ratna-kañkañas, 'diamond studded bracelets', and the elongated nail-polished fingers with rings look attractive. Her up raised and bent right leg depicts gentle gait of dance. Her right leg is firmly placed on the ground. Miniature figures of a drummer, a peacock (her mount) and another musical accompanyist holding a pair of flat bronze cymbals-are depicted in the flank near Sarasvatè's feet. The physiognomy of the sculpture strikes the beholder with awe at the equisite and realistic craftsmanship. It is to be noted that the noose and goad are not depicted. Albeit, the unknown sculptor has aimed to achieve and create most perfect image of náûya Sarasvatè.

Thus both the bejeweled sculptures of Sarasvatè of dancing pose, contributed to the overwhelming visual exuberance of the temple's exterior. "The Hoysaêa sculptors seem to have developed special fascination for the theme of dance and music in the temple architecture of the period, as is evident from the magnificent dancing figures at Belür, Haêebèâu, Jinanáthapura, Nuggehaêêi, Somanáthapura and Ùravaïabeêagoêa. As evidences collaborate, the two Jaina celebrities of the time, Paûûamahiúi Ùántaládevè, chief queen of Viúïuvardhana (1108-52), the Hoysaêa chief, and Bácaladevè, who had the cognomen of pátra-jagadale, 'chief of the world of dancers', spouse of Bhujabala Gañga Permáãideva (1103-18), ruler of the Maïãaêi-Thousand, were responsible for the renaissance of this performing arts. Contribution of the Jaina iconography for the resurrection of Temple architecture is considerable. The age of the Hoysaêas is the golden age" [Nagarajaiah, Hampa : 2002 : 34-35].

But when compared to similar images in the Haêebèâu Museum, and an image in the temple of Hosahoêalu, we can clearly notice the influence of contemporary Hoysaêa architectural style. The image under discussion has its similarity with the (three) Sarasvatè images found at Jinanáthapura, Khidrápura (Maháráshûra) and the eight-armed bracket figure in the VimalaVasahi at Mt. Abu (Rajasthan)1. mong the three seated four-armed Ùrutadevatá images on the outer wall of Jinanáthapura Ùántinátha Jinálaya (1200 CE), one is in padmásana and the other is in lalitásana. The seated four-armed Sarsvatè has páùa and añkuùa in her upper arms and has palm-leaf manuscript in her left lower arm where as the right lower arm shows abhayákúa, i.e., holding rosary and showing no-fear posture. The Khidrápur sculpture of Sarasvatè on the outer wall of Jain temple, is identical with this in all its details.

Similarly, the four-armed image of Padmávatèdevè seated in padmásana posture on the wall of the same Jinanáthapura temple, and the one consecrated in the Akkana Basadi at Ùravaïabeêagoêa, partially resembles the sculptures of Jinanáthapura in some of its details, particularly

in holding páùa and añkuùa in her two upper arms . Such images are found in large number from different places in the State. For instance , the images of Padmávatè in Gonka Jinálaya at Teridala in Bijapur District and in the Museum at Maãakeri (Coorg),and hundreds of images elsewhere show such features in holding páùa and añkuùa. Not only Padmávatèdevè, even some other goddesses are shown in the similar fashion. The seated image of Sarasvatè preserved in the KRI Museum of Dháraváãa, belongs to the Ráùûrakùûa- Cálukya transition epoch. Its lower arm and the instrument held in the upper arm confirm that it is the image of Sarasvatè. Paradoxically, holding páùa in her left upper-arm and obviously añkuùa (broken) in her right-arm are not in conformity with the description of her attributes.

One more unprecedented image to be noted in the sequel is that of Padmávati in the sanctum of Ammanavara basadi (s.a. Padmávatè temple) at Hombuja (Shivamogga Dt.). This 16 inches figure of four-armed seated Padmávatè, carved in black stone, has the usual attributes of páùa and añkuùa in the two upper hands and abhaya and pustaka in the lower hands. Evidently this iconographic feature makes one doubt whether it is Sarasvatè. Nevertheless, the presence of a small figure of the Kukkuûa-sarpa near the foot of goddess clears the doubt and confirms the image as that of Padmávatè , the presiding deity of the place [Hampana: 1997: 206]. The Kukkuûa Sarpa or Kukkuûoraga, 'cock-serpent' , a legendary wild cock with a snake's head and both the laòcana and vehicle of Padmávatè, tutelary goddess of Párùvanátha, the 23rd and penultimate Tèrthankara. The peculiar animal is depicted with the tail of a cock and the head of snake [supra 3 & 49ff].

One common feature of all the above cited examples is that these are all seated images. One may ask, 'Is there an example of a standing image of goddess holding goad and noose ?' The answer is yes, and are extant in good number. One of the examples come from Kumárabèãu village near Mysore. An handsome stele of fourarmed Padmávatè, profusely ornamented, wears bejewelled karaïãa mukuûa, 'boxed crown' , and stands in the classic flexed posture tribhanga, 'three-bend posture', holds páùa and añkuúa in her upper arms. [Hampana: 2007: 158]. The páùa 'noose', and añkuúa, ' goad', principal attributes of Indra, Varuna, and Yama are suggestive of power to control the wicked.

"It is peculiar feature of the text of the recently discovered Praùnavyákaraïa that, unlike other angasütras, it is entirely in versified form, but is not presented in the form of dialogue. It begins with an invocation to Mahávèra and Ùrutadevi, the embodiment of the entire canonical knowledge. [Ùrutadevatá ( Pkt. Sudadevada / Suyadevaya) is mentioned also in the Bhagavatèsütra, Mahániùithasütra and some other Jain texts.2 In the Jain tradition, the twelve angasutras are described as her limbs and the fourteen pürvas as her ornaments.3 Jain scholar Paul Dundas takes the Ùrutadevata referred to in the Bhagavatèsütra not as Sarasvatè but rather as an all purpose category. Yet, another Jain scholar, Nagasaki Hojun (p.c.) interprets it as Sarasvatè . With the discovery of Jèvabhogin's commentary on the Païhavágaraïa, it is clear that Ùrutadevata was identified with the Mayüraváhinè Sarasvatè by the end of the seventh century, the date of our commentary. In the third gáthá, Païha appears as the title of the text together with an epithet Jiïapáyaãa.4 The full Prakrit title appears only in the mantra of Maüraváhinè Sudadevadá, found in the appendix at the

end of the manuscript, where the goddess is identified as the païhaváyaraïavidyá, the vidyá venerated in the Païhaváyaraïa ( not to be confused with the vidyádevis of later times). The Sanskrit title Praùnavyákaraïa, however, can be found in chapter colophons of the commentary."5

Poet Malliúeïa appropriately says that Sarasvatè is the common heritage of all Indian religions;

Sánkhya –Bhantika-Cárváka-Mèmámsa-Digambarah

Sauagatastepi devi tvam dhyayánti jòána-hetave II

[Mallisena , Bhairava Padmávatè-kalpa, appendix 12]

Albeit, Sarasvatè has an unique place in the Jaina tradition from ab initio to ad finim. The Vividha-tèrtha-kalpa of Jianaprabhasüri (14th century), and the Ácáradinakara of Vardhamánasüri (1415) have recorded her form :" Ùrutadevatá is white, puts on white garments and rides on a swan. Rays of light radiate from her person and she sits on a white lion-throne. She is four-armed : the two left hands hold the white lotus and the vèïá, and the two right carry the book and the rosary of pearls". It may be recalled that holding the usual attribute of akúasütra and padma are traditionally associated with Brahma. Sarasvatè is always depicted with a single face though the number of arms may vary from two to sixteen. Worship of two and six –armed Sarasvatè is widely prevalent among the Buddhists.

The Mathurá excavations yielded 157 ancient sculptures and inscriptions, and according to Luder's computation, 89 among 157 are of Jaina affiliation. The cult of Sarasvatè developed first in the Jaina tradition. She frequently figures in the Jaina plastic art. The earliest extant image of Sarasvatè, dated 132CE also belongs to Jaina tradition [Museum, Lucknow]. Sarasvatè "is accorded an extraordinary place of honour with a special epithet of Ùrutadevi, 'the canongoddess', or 'goddess of scripture', whose brilliantly chiselled sculptures that belong to the early centuries of current era are extant. Her images are enshrined and adorned in all sects of Jainism." (infra). Ùrutabhakti, Ùrutapuje, Ùrutaskanda-Vrata, Ùrutadevata-tapas and Ùrutajòána-vratas are frequently used in Jaina literature. Literally Ùrutadevè means 'goddess of ùruti i.e., the teachings of Jina'. She is the foremost of all goddesses and is worshipped prior to that of other subordinate deities, particularly in the Digambara tradition. Generally, Haýsa 'Swan' figures as her mount and sometimes Mayüra, ' Peacock' also finds a place. The Sárasvata-Yantra- Püjá, of Ùubhacandra, refers to her as "Mayüraváhinè, white like moon, shining with trinetra , 'three eyes', and riding on a Peacock and holds the rosary and the book". The Jinasaýhita of Äkasandhi records that the three eyed and four-armed Váïi is white and sits in paryankásana on a lotus.

The special feature of Sarasvatè is that she presides over the teachings of all the 24 Jinas. The sui generis image of Deogadh stands in triple flexion shows her right hand in varadákúa mudrá, 'charity-rosary posture', and carries a lotus in the raised left hand. Remarkably the images of 24 Tèrthañkaras are carved on Sarasvati's right, left and top. Evidently, she is Ùrutadevi. The small figure of a male attendant holding a pitcher is depicted on her right flank, analogous to the earliest extant Mathurá image of 132 CE. Another very rare sculpture in the Jaina temple no.1, at Deogadh (Lalitpur District of Madhya Pradesh), shows three Jinas (tri-tèrthi) in káyotsarga posture –Ajitanátha

and Sambhavanátha—, and a four- armed Sarasvatè beside the figure of Ajitanátha! Sarasvatè is depicted in the same size as the two jinas and on the same simhásana. This representation establishes the highest place that the Jaina parampara has accorded to Sarasvatè alias Ùrutadevi. Jaina writers like Bappabhaûûisüri, Arhaddása and Malliúeïa have composed the Sarasvatè-kalpa, analogous with the Bhairava-Padmávatèkalpa, Ambikákalpa and Jválinèkalpa. On the door-frame of Jaina temple no.14 at Khajuráho is the figure of Cakresvarè in the centre flanked by Laksmè and Sarasvatè. Prof. M.N.P. Tiwari has noticed eight Sarasvatè sculptures, including those carved on the door-lintels and adhiúhûána of the Páraùvanátha temple (950-70CE) at Khajuráho [ Tiwari:1983:113].

Standing figures of Sarasvatè are not rare. Such sculptures are found in the Ráïakpur, Deogadh, Arthuna (Banswara), now in the Ajmere Museum, Dilwára, Táranga, Pallu (Bikaner) etc. An unique metal image (c. 7th cent.), originally from Vasantagadh, now in Pindawara (Sirohi), stands on a lotus and holds a book and lotus ; "Her silvery eyes lend further charm to the beauty of her form. The goddess wears ornaments, a lower garment and a scarf reaching the ankles. An auspicious water-jar is placed on each side of the lotus on which the goddess is standing. (A water–jar can also be seen in the hands of the attendant on the right of Sarasvatè in the Mathurá image. It seems that the pitcher usually figured in the earlier sculptures of this goddess). The image represents the earliest tradition and is valuable also as a beautiful specimen of the Early Western Indian School of Sculpture" [Shah 199].

Similarly the standing image in triple flexion in temple no. 19 at Deogadh is magnificent and an inscription on the figure states "Viracandra's disciple was Tribhuvanakirti. This name was bestowed as a fitting one because he was dedicated to pious works. N.N. was the splendour of the full moon in the sky of the Mathurapatanvaya. His son was the thakur Siraka who had a wife called Mohini. She was a river formed by the stream of the waters of virtue. She was a bee on the foot-lotuses of the monks of the Jina. She was called 'Mohini' because she had brought into confusion the minds of all intelligent people by virtue of her loyalty to her husband. This lady donated the goddess Padmávatè who bestows the desired success. Written by pandit Gopala in samvat 1126." [Klaus Bruhn 207]. She stands on her graceful pose and ornaments on her body are tastefully displayed.

From the early centuries of the current era Sarasvatè sculptures are extant. She is portrayed over the railing of pillar of Bharhut. She is mentioned as the deity of wisdom, intelligence, music, and all arts in the Angavijjá, Bhagavatèsütra and Paumacariya. The Jaina Cosmology and Pantheon has conceived a collective body of sixteen Vidyádevis which is entirely different from the conception of Sarasvatè / Ùrutadevi. The genesis of these goddesses can be traced to ancient texts. The Rüpamaïäana lists only two Ṡarasvatès – Mahávidyá and Sarasvatè (5.61). The Pradhánika-Rahasya mentions ten names and their forms – Mahávidyá, Mahávâïi, Bháratè, Vak, Sarasvatè, Áryá, Bráhmè, Kámadhenu, Vedagarbha, and Dhiùvari. The Devatámürti-prakaraïam (8.79-85) lists twelve Sarasvatès – Mahávidyá, Mohinè, Bhárati, Sarasvati, Áryá, Bráhmè, Mahadhenu, Vedagarbha, Èsvari, Mahálaksmi, Mahákáli, and Mahásarasvati. The Dèpárïava (17.1-15) also lists the same twelve with slight variations in their names. But the concept of 16 idyádevis or Mahávidyás with

their iconographic features is exclusively a Jaina innovation. They are mentioned in the Tijjayapahutta of Mánadevasuri ( 9th century), the Saýhitátasara of Indranandi ( 939), and the Stuti-Caturvimsatika of Sobhana (937).

Similarly there is one more Sarasvatè rarely appearing in the sculptures in the form of an Yaksi or Ùásanadevi ; "A beautiful sculpture of Sarasvatè, preserved in the British Museum, London, has an inscription in Nágari on its pedestal wherein she is 'treated as the protectress of the sixth Tèrthañkara'. This sculpture is interesting as it shows Sarasvati in an altogether new role of a Ùásanadevata or an attendant Yaksini. A sculpture from Deogarh (c. 5th cent. A.D.) shows Sarasvati in a standing attitude and holding a chowrie in her right hand while the left rests on the left thigh. The inscription on both the sides shows that she was respected as the Yakúiïi of the Tèrthankara Abhinandana. Sarasvatè as a yakúiïi should have nothing to do with Sarasvati, the goddess of learning. Moreover this tradition of Sarasvati as a yakúiïi seems to have been current for a very short time and was probably limited to Central India" [ Shah: 1941: 212-213].

However, Sarasvati is not associated with any one Jina, where as Ùásanadevatas ( yakúa-yakúis), are associated with particular Jinas. In other words and in the Jaina context Sarasvati is Ùrutadevi or Jinaváïi , 'speech of Jina' and thus significantly differs from non-Jaina conception of this goddess : "The iconographic constant among Sarasvatè images is the book, which she carries to proclaim her role as the goddess of learning "[Pal 172]. Sarasvatè has many aliases like Bháratè, Bráhmi, Ùárada, Ùrutadevata, Ùrutadevi, Vágèùvari, Vágvádini, Vák, Vákdevata, Váïi etc. It is interesting to note that one of the coharts of Jaina monks is called the Sarasvati and Ùáradá gaccha , which is more popular as the Pustaka gaccha. She invariably carries the book in her left hand.

The four-armed figure of Ùrutadevi in the Hombuja collection is singular for its delicate execution. It represents the traditional trend in its stylistic idiom and resembles the two dancing images at Halebiãu except that Hombuja image is seated on a full bloomed lotus on the lion-throne. The displaced Hombuja image, of late Rásûøaküûa and early Cálukya age, has lost its right front – arm, possibly in abhayákúa-mudrá. The arch in the parikara, 'surround', is broken and missing. Albeit, the 32 inches sculpture with boxed crown, prabhámaïãala, 'lustrous halo', behind the head, and opulent jewelry is unequalled [Hampana: 1997:197].

From among the standing Sarasvatè images, the marble image procured from Pallu( Rajasthan), is nonpareil for its remarkable iconographic details. Possessing four arms, the metallic-like figure in tribhanga stance, is bejewelled in graiveyaka, necklaces, mekhala with suspended loops, anklets, bracelets, armlets, small but richly worked conical tiara and stellate cut double halo behind the diadem. Goddess is flanked by two attendants on either side of her head, and two more near her feet holding single stringed musical instrument. Two more devotees are sitting in namaskára mudrá, near her feet. A tiny image of seated Jina is at the crest of her crown. Another four-armed stone sculpture of Sarasvatè in the Bikaner (Rajasthn) Museum, depicts her as holding varadákúa, lotus, manuscript, and water vase (kamaïãalu) . With a serene smile over her face and usual attributes, she is adorned with karaïãa-mukuûa having miniature figure of seated Jina. In brief, it is a superb speciman of the Cáhamána art.

The image of Ùrutadevi in the State Museum (Hyderabad), originally from Paûanceru or Poûûalakere (AP), is another charming sculpture in the series of notable standing images in the context of Halebidu images. In fact it could be verily treated as a paòca-tèrthi , because above the profusely ornamented crown of Ùrutadevi are figures of Five Tèrthakaras. The craftsmanship of the image deserves to be complimented . The icon- ' is endowed with suppleness of form and flexibility of bhangas. She is bedecked with all sorts of ornaments. The minor icons in the comlex, the prabha and the Tèrthankaras above are all left without polish , while the main image is highly polished. The inscription in Devanágari script is dated 1178' [Ghosh (ed), Vol. 3;1975: 573-74]. Poûûalakere (s.a. Paûanceru) thrived as an important Jaina seat up to the 13th century.

The two and four armed images are found at many places. Six, eight and sixteen armed Sarasvati images are not many. The six- armed image in the Luna Vasahi (Mt.Abu), eight-armed image in the Táranga (Gujarat), and the sixteen-armed image in the ceiling of Vimala Saha's temple (Mt. Abu) are outstanding; Attended by a dancing male figure on each side, the goddess sits in bhadrásana showing the lotus, the book and the kamaïäala in the three left ones. All other hands, along with the symbols, are mutilated beyond recognition. The figure of swan can however be seen on the pedestal. A small figure of a Tirthankara is seated above the crown" [Shah:1941: 210].

Pampa (941 CE) states that parama Jinendra-váïi, 'the words of supreme Lord Jina, is Sarasvati'. Keùiraja (1235 CE), the greatest Kannada grammarian, commences his work, the Ùabda-maïi-darpaïa, 'Jewel-mirror-of (Kannada) Grammar', with eulogy to Vágdevi, reflecting his esteem for goddess of speech.

As a result of religious rivalry, many Jaina temples with lovely sculptures were destroyed in the vicinity of Belür and Haêebèâu in the late medieval times. Whatever is extant and recovered from the ruined sites are rare and remarkable for their artistic elegance and delicate workmanship.

Dance has been accorded a prominent place in the Jaina Art from the last centuries of BCE. A relief, of the late first century BCE, depicting the dance of celestial Nèláòjana and the consequent retirement of Øúabhadeva, the first Tèrthankara, is extant from Mathurá hoard [no. J.354,Museum Lucknow]. "Singularity of Indra in Jaina tradition is that he performs 32 types of dances mentioned in the Rájapraùnèya (Sk. Rájaprasenajit, c. 1st – 3rd cent. CE), and Tiloya-Païïatti (Sk.Triloka-Prajnapti, 550 CE). Ancient Jaina texts mention different tata, vitata, ánaddha and Ghana instruments and the names of highly accomplished dancers like Campá, Kosa, Upakosa, and Devadattá.

Indra's dance is a favourite theme in Jaina art, architecture and literature. Apart from the brilliant description of poetic excellence of Jinasenácárya and others in Sanskrit, of Puúpadanta and others in Prakrit, of Pampa and others in Kannada, visul exposition of the same concept are not lacking. Folios of Palmleaf manuscripts, colour paintings on the temple walls and ceilings are adorned with illustrations of Indra's dance. Magnificent sculptures of Indra's dance come from the Jaina Cave at Aihoêe (late 6th century), Choûakailása monolithic shrine in the Jaina group of rock-cut caves at Ellora or Cáraïádri ('Hill of sages who levitate') of the ninth century, on the ornate doorway of Bhaïäára Basadi (1159), at Ùravaïabeêagoêa in the ceiling of the converted Jinálaya into

Mallikárjuna Deválaya at Puúpagiri (1148), in the ceiling of the Mahávira Basadi at Aãagur (12th cent.) and on the lintel of the vestibule doorframe in the famous Kamala Basadi (1204) at Belgaum."[Hampana: 2002: 23-25, 33-34, 51-52]. Apart from Indra and Nèlánjaná's dance sculptures , the two images of dancing Sarasvatè in the Haêebèãu Museum and the one at Hoysaêeùvara temple are unprecedented and of historical importance. And the third one in the Hoysaleùvara temple should also be considered in the context.

Distinction in Indian Iconography is an interesting field of research. It may be noted that the southern images differ from the northern in style and sculptural details so distinctively that one can easily differentiate. The frequent symbols held by Sarasvatè, pustaka( manuscript), akúamála (rosary), vèïá (the stringed musical instrument), abhaya or varada mudrá, lotus and her mount swan or peacock- are common. The most important departure of the southern from the northern is of páùa and añkuùa held in the two upper arms, which, however, correspond fairly well with other southern images. In the north, Sarasvatè holds kamaïãalu, 'water vase', in one of her hands and in the south kamandala is conspicuous by its bsence. Náûya Sarasvatè, concept and sculptures, is found exclusively in Karnataka and as such it is an unique contribution of the Hoysaêa sculptors. I've copiously illustrated the article to show the similarities and differences.

**Epitome**

The two (three) images of dancing Sarasvatè under discussion are definitely of Jaina affiliation. They belong to one of the destroyed Jaina temples (Arhadáyatana, Basadi, Devakula, Jinálaya, Jinendra Bhavana are the variants employed to denote a Jaina temple). The anatomy of the Sarasvatè figures under discussion is indeed charming vying with grace, inviting aesthetically, as any other elegant image of the Hoysaêa eon. As regards the structure and treatment of the neck, waist, hip, arms and feet ornaments, they do not differ much from the highly decorated images of the Hoysaêa period and deserves to be treated, discussed and grouped under the masterpieces of the Hoysaêa sculptors. The plasticity in body and posture, and proportioned rhythmic linear movements are brilliantly brought out. Thus these two supplement the innovative imagination of the Hoysaêa sculptors.

This and other displaced images, now mostly in the Haêebèãu Museum, including the 12 foot mutilated Jina image, belonged to one of the six or eight Jaina temples that once existed in the vicinity. Based on the quality and quantity of the extant Jaina vestiges at the site, we can safely conclude that the destroyed Jinendra Bhavanas were beautifully and richly sculptured analogous to the existing Belür, Haêebèãu and Somanáthapura temples. But the sculptures were based on the Jaina themes similar to Jinanáthapura and Khidrápura Basadis. All of the collapsed / destroyed Basadis seem to belong to the Hoysaêa age and style.

## End notes

1. Hampana: *Morphology of Jaina Architecture:* 2007:63-66.
2. See Shah 1941:196f.

3. See Shah 1941:196, Ludvik 2007:245. as Ludvik 2007:234, n. 38 in her recent book on Sarasvatè reports.

4. Jèvabhogin, the commentator. records a variant reading Jaápáyaäa (Skt. Jayaprákøta) for Jiïapáyaäa ( Skt. Jinaprákøta).

5. Diwakar Acharya, 'The Original Païhaváyaraïa / Praùnavyákaraïa Discovered', *International Journal of Jaina Studies*, Vol 1-3, 2005-2007, Ed. Peter Flugel, Hindi Granth Karyalay, Mumbai 2008: 183-192.

6. Bibliography; Bajpai, K.D, "Jain Image of Saraswati in the Lucknow Museum', *Jaina Antiquary*, Vol. XI, No.II, Jan. 1946.

7. Bruhn, Klaus, *The Jina - Images of Deogarh, Leiden*, 1969. 'Introduction', Cauppanna-Mahapurusa-Cariyam, (ed) A.M. Bhojak, Prakrit Text Society, Varanasi, 1961, pp.1-31.

8. Diwakar, Acharya, 'The Original Païhaváyaraïa / Praùnavyákaraïa Discovered', *International Journal of Jaina Studies*, Volume 1-3, 2005-2007, Ed: Peter Flugel, Hindi Granth Karyalay, Mumbai, 2008.

9. Ghosh, A (ed) *Jaina Art And Architecture*, New Delhi, 1975.

10. Jain, Jyoti Prasad 'Genesis of Jaina Literature and the Sarasvatè Movement', *Bulletin of Museums and Archaeology* in U.P.( Lucknow), No.9, June 1972 : 30-33.

11. Ludvik, Catherine Sarasvatè : Riverine Goddess of Knowledge, From the Manuscript-Carrying Vina-Player to the Weapon- Wielding Defender of the Dharma, Leiden : E. J. Brill 2007.

12. Nagar, Shantilal *Indian Gods and Goddesses*, Vol.3, Delhi, 2005.

13. Nagarajaiah, Hampa, *Yakúa- Yakúiyaru* (Kannada), Bangalore, 1975.

14. *Morphology of Jaina Architecture*, Shravanabeêagoêa, 2007.

15. *Indra in Jaina Iconography*, Hombuja, 2002.

16. *A History of the Ráùûrakûûas of Maêkhed and Jainism*, Bangalore, 2000.

17. *Báhubali and Bádámi Calukyas*, Shravanabelagola, 2006.

Sántararu; Ondu Adhyayana (Kannada), Hombuja, 1997.

18. Pal , Pratapaditya, The Peaceful Liberators-*Jaina Art from India*, Los Angeles, 1996.

19. Shah , U.P *Jaina Rüpamaïäana* , Vol 1, Delhi, 1987.

20. 'Iconography of the Jaina Goddess Sarasvati', *Journal of the Bombay University*, Vol. X, (New Series), Pt, 1-2, September 1941; 195-217.

21. Sharma, J.P. *Jaina Yakshas*, Jodhpur, 1996.

22. Sivaramamurti, C *Panorama of Jaina Art* , New Delhi, 1983.

23. Tiwari , M.N.P *Elements of Jaina Iconography*, Varanási, 1983.

24. Tiwari, M.N.P & Mrs. Kamal Giri 'Sarasvati in Jaina Tantric Worship', *Archaeology of Jaina Art* , pp. 311-25.



# ಕಂಬದಹಳ್ಳಿಯ ಶಾಂತಿನಾಥ ಬಸದಿಯ ಅಷ್ಟ ದಿಕ್ಪಾಲಕರ ಪಟ್ಟಿಕೆ

– ಡಾ॥ ಎಸ್.ಎನ್. ಶಿವರುದ್ರಸ್ವಾಮಿ*

'ಕಂಬದಹಳ್ಳಿ' ಮಂಡ್ಯಜಿಲ್ಲೆಯ ನಾಗಮಂಗಲ ತಾಲೂಕಿನಲ್ಲಿರುವ ಒಂದು ಸಣ್ಣ ಗ್ರಾಮ. ಇದು ಪ್ರಾಚೀನ ಜೈನಧರ್ಮದ ಕೇಂದ್ರವೂ ಹೌದು. ಇದು ಮಹತ್ವದ ವಾಸ್ತು ಮತ್ತು ಶಿಲ್ಪಕಲೆಯ ನೆಲೆವೀಡಾಗಿದ್ದರೂ, ಜನಪ್ರಿಯತೆಯನ್ನು ಪಡೆದಿಲ್ಲ. ಇದರ ಹತ್ತಿರದಲ್ಲೇ ಜಗತ್ಪ್ರಸಿದ್ಧವಾದ ಜೈನಧರ್ಮದ ಕೇಂದ್ರವಾದ ಶ್ರವಣಬೆಳಗೊಳ ಇರುವುದರಿಂದ ಕಂಬದಹಳ್ಳಿಯ ಪ್ರಾಮುಖ್ಯ ಮಸುಕಾಗಿರಲೂಬಹುದು.

ಕಂಬದಹಳ್ಳಿಗೆ ಆ ಹೆಸರು ಬಂದಿರುವುದು ಅಲ್ಲಿರುವ ಸುಂದರವೂ ಸಪೂರವೂ ಆದ ಬ್ರಹ್ಮಸ್ತಂಭದಿಂದ.[೧] ಈ ಸ್ತಂಭವು ಸುಮಾರು ೩೦ ಅಡಿ ಎತ್ತರವಿದೆ. ಅದರ ತುದಿಯಲ್ಲಿ ಕುಳಿತಿರುವ ಬ್ರಹ್ಮನ ವಿಗ್ರಹವಿದೆ. ಸ್ತಂಭದ ಮುಂದೆ ದಕ್ಷಿಣಕ್ಕೆ ಪಂಚಕೂಟ ಬಸದಿ ಇದೆ. ಇದು ವಾಸ್ತವವಾಗಿ ತ್ರಿಕೂಟಾಚಾಲ ಬಸದಿ. ಇದರ ಮುಖ್ಯ ಗರ್ಭಗೃಹ ಆದಿನಾಥನಿಗೆ ಅರ್ಪಿತವಾಗಿದೆ, ಇದು ಉತ್ತರಾಭಿಮುಖವಾಗಿದೆ. ಪೂರ್ವದ ಗರ್ಭಗೃಹದಲ್ಲಿ ನೇಮಿನಾಥ ಮತ್ತು ಪಶ್ಚಿಮದ ಗರ್ಭಗೃಹದಲ್ಲಿ ಶಾಂತಿನಾಥನ ಪೂಜಾವಿಗ್ರಹಗಳಿವೆ. ಈ ಮೂರು ಗರ್ಭಗೃಹಗಳಿಗೂ ಒಂದೇ ನವರಂಗವಿದೆ. ನವರಂಗದ ಮಾಡಿನಲ್ಲಿ ಅಷ್ಟದಿಕ್ಪಾಲಕರ ಪಟ್ಟಿಕೆ ಇದೆ. ಇದರ ಮಧ್ಯದ ಪಟ್ಟಿಕೆಯಲ್ಲಿ ಧರಣೇಂದ್ರ ಯಕ್ಷನ ಕೆತ್ತನೆ ಇದೆ. ಇದರ ಮುಂದೆ ಎರಡು ಏಕಕೂಟಾಚಲ ಜಿನಾಲಯಗಳು ಎದುರುಬದುರಾಗಿದ್ದು, ಪಂಚಕೂಟ ಬಸದಿಯ ಕಲ್ಪನೆಯನ್ನು ನೀಡುತ್ತವೆ. ಇವು ಆದಿನಾಥನ ತ್ರಿಕೂಟಾಚಲ ಬಸದಿಯಂತೆ ನಿರ್ಮಾಣವಾಗಿವೆ. ಇವುಗಳ ನವರಂಗದಲ್ಲೂ ಅಷ್ಟದಿಕ್ಪಾಲಕರ ಪಟ್ಟಿಕೆಗಳಿವೆ. ಮಧ್ಯದ ಪಟ್ಟಿಕೆಯಲ್ಲಿ ಧರಣೇಂದ್ರ ಯಕ್ಷನ ಉಬ್ಬುಗೆತ್ತನೆಯ ಶಿಲ್ಪವಿದೆ. ಪಂಚಕೂಟ ಬಸದಿಯು ಮೂಲಸಂಘ, ಕೊಂಡಕುಂದಾನ್ವಯ, ಪುಸ್ತಕಗಚ್ಚ ಮತ್ತು ದೇಶಿಗಣಕ್ಕೆ ಸೇರಿದೆ. ಈ ಬಸದಿಯ ಸಂಕೀರ್ಣವು ಕ್ರಿ.ಶ. ೯೦೦ರ ಸುಮಾರಿಗೆ ನಿರ್ಮಾಣವಾಗಿರಬಹುದು.[೨]

ಪಂಚಕೂಟ ಬಸದಿಯ ಉತ್ತರಕ್ಕೆ ಹತ್ತು ಅಡಿ ದೂರದಲ್ಲಿ ದೊಡ್ಡದಾದ ಶಾಂತಿನಾಥ ಬಸದಿ ಇದೆ. ಇದನ್ನು 'ಭಂಡಾರ ಬಸದಿ' ಎಂದು ಕರೆಯಲಾಗುತ್ತಿತ್ತು.[೩] ಇದನ್ನು ಹೊಯ್ಸಳ ಶೈಲಿಯಲ್ಲಿ ನಿರ್ಮಿಸಲಾಗಿದೆ. ಇದನ್ನು ಹೊಯ್ಸಳ ಅರಸ ವಿಷ್ಣುವರ್ಧನನ ದಂಡನಾಯಕನಾದ ಗಂಗರಾಜನ ಮಗ ಬೊಪ್ಪ ನಿರ್ಮಿಸಿದ್ದಾನೆ.[೪] ಇವನಿಗೆ ಏಚ ಮತ್ತು ದೇಚಿರಾಜ ಎಂಬ ಹೆಸರಿದ್ದವು. ಈ ಜಿನಾಲಯವನ್ನು ಕ್ರಿ.ಶ. ೧೧೨೦ ಮತ್ತು ಕ್ರಿ.ಶ. ೧೧೩೦ರ ನಡುವೆ ನಿರ್ಮಿಸಿರಬೇಕು. ಬೊಪ್ಪನ ತಂದೆ ಗಂಗರಾಜನು ತಲಕಾಡನ್ನು ಗೆದ್ದಾಗ, ವಿಷ್ಣುವರ್ಧನ ಸಂತಸಗೊಂಡ. ಆಗ ಗಂಗರಾಜನ ವಿನಂತಿಯ ಮೇರೆಗೆ, ಅರಸನು ಕಂಬದಹಳ್ಳಿಯ ಕೊಂಡಕುಂದಾನ್ವಯ, ಮೂಲಸಂಘ, ದೇಶಿಗಣ ಮತ್ತು ಪುಸ್ತಕ ಗಚ್ಛದ ಶುಭಚಂದ್ರ ಸಿದ್ಧಾಂತ ದೇವರಿಗೆ ಕ್ರಿ.ಶ. ೧೧೧೮-೯ರಲ್ಲಿ ಭೂದಾನ ನೀಡಿದ.[೫] ಈ ಮೊದಲು ಶಾಂತಿನಾಥ ಜಿನಾಲಯದ ಉಲ್ಲೇಖ ಶಾಸನಗಳಲ್ಲಿ ದೊರೆಯುವುದಿಲ್ಲ. ಇದಾದ ನಂತರವೇ ಇವನ ಮಗ ಬೊಪ್ಪ ಶಾಂತಿನಾಥ ಜಿನಾಲಯವನ್ನು ನಿರ್ಮಿಸಿರಬೇಕು. ಗರ್ಭಗುಡಿಯಲ್ಲಿ ಸುಮಾರು ಹತ್ತಡಿ ಎತ್ತರದ ಶಾಂತಿನಾಥನ ವಿಗ್ರಹ ಕಾಯೋತ್ಸರ್ಗ ಭಂಗಿಯಲ್ಲಿದೆ.

ಶಾಂತಿನಾಥ ಜಿನಾಲಯದ ನವರಂಗದಲ್ಲಿ ಅಷ್ಟ ದಿಕ್ಪಾಲಕರ ಪಟ್ಟಿಕೆಗಳಿವೆ. ಇದು ಪಂಚಕೂಟ ಜಿನಾಲಯಗಳಲ್ಲಿರುವ ಮೂರು ದಿಕ್ಪಾಲಕರ ಪಟ್ಟಿಕೆಗಳಿಗಿಂತ ಭಿನ್ನವಾದುದು. ಇವುಗಳ ದಿಕ್ಪಾಲಕರ ಪಟ್ಟಿಕೆಗಳು ಮಧ್ಯದಲ್ಲಿ ಧರಣೇಂದ್ರ ಯಕ್ಷನನ್ನು ಕೆತ್ತಿದ್ದರೆ, ಶಾಂತಿನಾಥ ಜಿನಾಲಯದ ದಿಕ್ಪಾಲಕರ ಪಟ್ಟಿಕೆಯ ಮಧ್ಯದಲ್ಲಿ ತೀರ್ಥಂಕರನೊಬ್ಬನನ್ನು ನಿರೂಪಿಸಲಾಗಿದೆ.

---

* ಸಮೃದ್ಧ, ಎಂ.ಆರ್. ಆಗ್ರೋ ಇಂಡಸ್ಟ್ರೀ ಎದುರು, ಶಾರದಾನಗರ, ತಿಪಟೂರು, ತುಮಕೂರು ಜಿಲ್ಲೆ-೫೭೨೨೦೨.

**ದಿಕ್ಪಾಲಕರ ಪಟ್ಟಿಕೆ (ಚಿತ್ರ –೧)**

ಶಾಂತಿನಾಥ ದೇಗುಲದ ನವರಂಗದ ದಿಕ್ಪಾಲಕರ ಪಟ್ಟಿಕೆ ಅತ್ಯಂತ ಸುಂದರವಾದುದು. ಕರ್ನಾಟಕದ ಸುಂದರವಾದ ಕೆಲವೇ ಶಿಲ್ಪಗಳಲ್ಲಿ ಇದೂ ಒಂದು ಎಂದು ಹೇಳಿದರೆ ಉತ್ಪ್ರೇಕ್ಷೆ ಆಗಲಾರದು. ಇದೇ ತೆರನಾದ ದಿಕ್ಪಾಲಕರ ಪಟ್ಟಿಕೆಯನ್ನು ತುಮಕೂರು ಜಿಲ್ಲೆಯ ಅರಳಗುಪ್ಪೆಯಲ್ಲಿ ಕಾಣಬಹುದು. ಇದರ ಪ್ರಭಾವ ಶಾಂತಿನಾಥ ಜಿನಾಲಯದ ದಿಕ್ಪಾಲಕರ ಪಟ್ಟಿಕೆಯ ಮೇಲೆ ಆಗಿರುವ ಸಾಧ್ಯತೆ ಇಲ್ಲದೇ ಇಲ್ಲ. ಇದನ್ನು ನಿರ್ಮಿಸಿರುವ ರೂವಾರಿ ಅರಳಗುಪ್ಪೆಯ ಕಲ್ಲೇಶ್ವರ ದೇಗುಲದ ಅಷ್ಟದಿಕ್ಪಾಲಕರ ಪಟ್ಟಿಕೆಯನ್ನು ನೋಡಿರಲೇಬೇಕು.

ಶಾಂತಿನಾಥ ಜಿನಾಲಯದ ಅಷ್ಟ ದಿಕ್ಪಾಲಕರ ಪಟ್ಟಿಕೆಯಲ್ಲಿ ಒಂಭತ್ತು ಚೌಕಟ್ಟುಗಳಿವೆ. ಮಧ್ಯದ ಚೌಕಟ್ಟಿನಲ್ಲಿ ಜಿನನಿದ್ದಾನೆ. ಉಳಿದ ಎಂಟು ಚೌಕಟ್ಟುಗಳಲ್ಲಿ ದಿಕ್ಪಾಲಕರಿದ್ದಾರೆ. ಈ ಚೌಕಟ್ಟುಗಳ ನಡುವೆ ಮೂರು ಪಟ್ಟಿಗಳಿವೆ. ಮಧ್ಯದ ಪಟ್ಟಿಯಲ್ಲಿ ಸುರುಳಿ ಅಲಂಕಾರವಿದ್ದರೆ, ಉಳಿದ ಇಕ್ಕೆಡೆಯ ಪಟ್ಟಗಳನ್ನು ಕಮಲದ ದಳಗಳಿಂದ ಸಿಂಗರಿಸಲಾಗಿದೆ. ಪ್ರತಿಯೊಂದು ಚೌಕಟ್ಟಿನಲ್ಲೂ ದಿಕ್ಪಾಲಕರು ತಮ್ಮ ಸತಿಯರ ಕೂಡಿ, ತಮ್ಮ ತಮ್ಮ ವಾಹನಗಳ ಮೇಲೆ ನಾಗಾಲೋಟದಲ್ಲಿ ಧಾವಿಸುತ್ತಿದ್ದಾರೆ. ಇವರನ್ನು ಚಿತ್ರಿಸುವಲ್ಲಿ ಶಿಲ್ಪಿ ಶಿಲ್ಪ ಗ್ರಂಥಗಳನ್ನು ಅನುಕರಿಸದೆ ಸ್ವಾತಂತ್ರ್ಯವನ್ನು ವಹಿಸಿದ್ದಾನೆ. ಆದರೂ 'ವಿಷ್ಣುಧರ್ಮೋತ್ತರ ಪುರಾಣ'ವನ್ನು ಅನುಸರಿಸಿರುವುದು ಕಾಣಿಸುತ್ತದೆ.

**ಮಹಾವೀರ (ಚಿತ್ರ ೨)**

ಈ ಅಷ್ಟ ದಿಕ್ಪಾಲಕರ ಪಟ್ಟಿಕೆಯ ಮಧ್ಯದಲ್ಲಿರುವ ಜಿನ ಯಾರು? ಈ ಜಿನಾಲಯದ ಬಗ್ಗೆ ವರದಿ ಮಾಡಿದ ಆರ್. ನರಸಿಂಹಾಚಾರ್ಯರಾಗಲೀ[೬] ಎಂ.ಎಚ್. ಕೃಷ್ಣರಾಗಲೀ[೭] ಮೈಸೂರು ಪುರಾತತ್ವ ವರದಿಗಳನ್ನು ಸಿದ್ಧ ಮಾಡುವಾಗ ಗುರುತಿಸಿಲ್ಲ. ಕೇವಲ ಒಬ್ಬ 'ಜಿನ' ಎಂದಷ್ಟೇ ಹೇಳಿಬಿಟ್ಟಿದ್ದಾರೆ. ಜಿನ ಸಿಂಹಪೀಠದ ಮೇಲೆ ವಿರಾಜಮಾನವಾಗಿದ್ದಾನೆ. ಸಿಂಹಪೀಠವಿರುವುದರಿಂದ ಮಹಾವೀರ ಎಂದು ಹೇಳಬಹುದು. ಜಿನನ ಪೀಠದ ಇಕ್ಕೆಡೆಗಳಲ್ಲಿ ಎರಡು ಆನೆಗಳನ್ನು ಚಿತ್ರಿಸಲಾಗಿದೆ. ಆನೆ ಎರಡನೇ ತೀರ್ಥಂಕರನಾದ ಅಜಿತನಾಥನ ಲಾಂಛನ. ಈ ಶಿಲ್ಪ 'ಅಜಿತನಾಥ'ನಿರಬಹುದೇ ಎಂಬ ಅನುಮಾನ ಮೂಡಿಸುತ್ತದೆ. ಜಿನನ ಪಟ್ಟಿಕೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಅವನ ಶಾಸನ ದೇವತೆಯರಾದ ಯಕ್ಷ–ಯಕ್ಷಿಯರ ಕೆತ್ತನೆಗಳು ಜಿನನನ್ನು ನಿಖರವಾಗಿ ಗುರುತಿಸಲು ನೆರವಾಗುತ್ತವೆ. ಗಜವಾಹನನಾದ ಮಾತಂಗ ಯಕ್ಷನನ್ನು ಜಿನನ ಬಲಪಾರ್ಶ್ವದಲ್ಲಿ, ಸಿಂಹಾರೂಢಳಾದ ಸಿದ್ಧಾಯಿಕಾ ಯಕ್ಷಿಯನ್ನು ಎಡ ಪಾರ್ಶ್ವದಲ್ಲಿ ಚಿತ್ರಿಸಿರುವುದರಿಂದ ಈ ಜಿನ ಮಹಾವೀರನೆಂದು ಸಿದ್ಧವಾಗುತ್ತದೆ.[೮]

ಕೊನೆಯ ತೀರ್ಥಂಕರನಾದ ಮಹಾವೀರನು ಪದ್ಮಾಸನದಲ್ಲಿ ತ್ರಿಪಟ್ಟ ಪೀಠದ ಮೇಲೆ ಧ್ಯಾನಾಸಕ್ತನಾಗಿದ್ದಾನೆ. ಪೀಠದ ಮೇಲೆ ಮೂರು ಸಿಂಹಗಳನ್ನು ಕೆತ್ತಲಾಗಿದೆ. ಅವನ ಹಿಂದೆ ಅರೆವೃತ್ತಾಕಾರದ ಕಕ್ಷಾಸನವಿದೆ. ಅದರ ಹೊರ ಅಂಚಿನಲ್ಲಿ ಸವಾರರಿಂದ ಕೂಡಿದ ಸಿಂಹಗಳನ್ನು ಸೂಕ್ಷ್ಮವಾಗಿ ಕೆತ್ತಲಾಗಿದೆ. ಈ ಸಿಂಹಗಳು ಮಹಾವೀರನ ಇಕ್ಕೆಡೆಗಳಲ್ಲಿರುವ ಆನೆಗಳ ಮಸ್ತಕಗಳ ಮೇಲೆ ನಿಂತಿವೆ. ಅವನ ಶಿರದ ಹಿಂದೆ ಪ್ರಭಾವಳಿ ಇದೆ. ಅದರ ಮೇಲೆ ಮುಕ್ಕೊಡೆ ಇದೆ. ಶಿರದ ಕೇಶ ಗುಂಗುರುಗುಂಗುರಾಗಿದ್ದು ಸುರುಳಿ ಅಲಂಕಾರದ ಸುಂದರ ಉಬ್ಬುಗೆತ್ತನೆಯಿಂದ ಕೂಡಿದೆ. ಇದು ಬುದ್ಧನ ಪ್ರತಿಮೆಯನ್ನು ಹೋಲುತ್ತದೆ.

ಮಾತಂಗ ಯಕ್ಷ ಬಲಗೈಲಿ ಕುಂಡಿಕೆಯನ್ನು, ಎಡಗೈಲಿ (ಬೀಜಾಪೂರ) ಫಲವನ್ನು ಹಿಡಿದಿದ್ದಾನೆ. ಸರ್ವಾಭರಣ ಭೂಷಿತನಾಗಿದ್ದಾನೆ. ಕರಂಡ ಮಕುಟ, ವಿವಿಧ ಬಗೆಯ ಕಂಠಿಹಾರಗಳು, ಛನ್ನವೀರ ಮುಂತಾದ ಆಭರಣಗಳನ್ನು ಧರಿಸಿದ್ದಾನೆ. ಯಕ್ಷಿ ಸಿದ್ಧಾಯಿಕ ಬಲಗೈಲಿ ಕಮಲದ ಮೊಗ್ಗು, ಎಡಗೈಲಿ ಪುಸ್ತಕ ಹಿಡಿದಿದ್ದಾಳೆ. ಈಕೆ ಕರಂಡಮಕುಟ, ಕಂಠಿಹಾರ, ಕರ್ಣಕುಂಡಲ, ತೋಳ್ಬಂದಿ, ಕಾಲ್ಬಳೆ, ಸೊಂಟಪಟ್ಟಿ, ಬಳೆ, ಪಾದವಲಯ – ಮುಂತಾದ ಆಭರಣಗಳನ್ನು ಧರಿಸಿದ್ದಾಳೆ. ಧರಿಸಿರುವ ಬಟ್ಟೆಯ ನೆರಿಗೆಗಳು ಸ್ಪಷ್ಟವಾಗಿ ಸುರುಚಿರವಾಗಿ ಕಾಣುತ್ತಿವೆ. ಮಹಾವೀರನ ಸುತ್ತಲೂ ವೆಂತರವಾಸಿ ದೇವತೆಗಳು ಚಾಮರಧಾರಿಗಳಾಗಿ ಅವನ ಸೇವೆಯಲ್ಲಿ ತೊಡಗಿದ್ದಾರೆ. ಐದೆಡೆಯ ಮಹೋರಗರು ಆಭರಣ ಮತ್ತು ಅಲಂಕಾರ ಭೂಷಿತರಾಗಿ ತೀರ್ಥಂಕರನ ಇಕ್ಕೆಡೆಗಳಲ್ಲಿ ಚಾಮರವನ್ನು ಹಿಡಿದು ನಿಂತಿದ್ದಾರೆ. ಯಕ್ಷಯಕ್ಷಿಯರನ್ನು ಹೊರತುಪಡಿಸಿ, ಎಂಟು ಮಂದಿ ವೆಂತರವಾಸಿ ದೇವತೆಗಳಿದ್ದಾರೆ. ಎಲ್ಲರೂ ಒಂದೇ ಬಗೆಯ ಆಭರಣಗಳನ್ನು ಧರಿಸಿದ್ದಾರೆ

ಮತ್ತು ಅಲಂಕೃತರಾಗಿದ್ದಾರೆ. ಮಹಾವೀರನ ಚೌಕಟ್ಟಿನ ನಾಲ್ಕು ಮೂಲೆಗಳಲ್ಲಿ ಗಂಧರ್ವರನ್ನು ಚಿತ್ರಿಸಲಾಗಿದೆ. ಇವರಲ್ಲಿ ಈಶಾನ್ಯ ಮತ್ತು ನೈರುತ್ಯ ದಿಕ್ಕುಗಳಲ್ಲಿರುವ ಗಂಧರ್ವರು ಪುಷ್ಪಮಾಲೆಯನ್ನು ಹಿಡಿದು, ಮಹಾವೀರನಿಗೆ ಅರ್ಪಿಸಲು ಬರುತ್ತಿದ್ದಾರೆ. ವಾಯುವ್ಯ ಮತ್ತು ಆಗ್ನೇಯ ಮೂಲೆಗಳಲ್ಲಿರುವ ಗಂಧರ್ವರು ಬಲಗೈಲಿ ಕಮಲದ ಮೊಗ್ಗುಗಳನ್ನು ಹಿಡಿದಿದ್ದಾರೆ. ಅವರ ಎಡಗೈ ಪತಾಕ ಹಸ್ತದಲ್ಲಿದೆ. ಇವರೂ ಸಹ ಕರಂಡಮಕುಟ, ಕರ್ಣಕುಂಡಲ, ಕಂಠಿಹಾರ, ಉಪಗ್ರೀವ, ಗ್ರೈವೇಯ, ಯಜ್ಞೋಪವೀತ, ಸೊಂಟಪಟ್ಟಿ ಮುಂತಾದ ಆಭರಣಗಳನ್ನು ಧರಿಸಿದ್ದಾರೆ. ಗಂಧರ್ವರ ಉಬ್ಬುಗೆತ್ತನೆ ಉನ್ನತವಾಗಿದೆ.

### ಅಷ್ಟ ದಿಕ್ಪಾಲಕರು

ಅಷ್ಟ ದಿಕ್ಪಾಲಕರ ಪರಿಕಲ್ಪನೆ ವೇದಗಳ ಕಾಲದಿಂದ ಬಂದಿದೆ. ಇದನ್ನೇ ಜೈನ ಪರಂಪರೆಯಲ್ಲೂ ಒಪ್ಪಿಕೊಳ್ಳಲಾಗಿದೆ. ಇಲ್ಲಿ ದಿಕ್ಪಾಲಕರನ್ನು ಅವರ ಸತಿಯರ ಜೊತೆಯಲ್ಲಿ ಚಿತ್ರಿಸಲಾಗಿದೆ. ಸತಿಯರು ಚಾಮರವನ್ನು ಹಿಡಿದು, ಈ ಪಟ್ಟಿಕೆಯ ಪ್ರಮುಖ ದೇವನಾದ ಮಹಾವೀರನ ಸೇವೆಗೆ ನಿರತರಾಗಿರುವಂತೆ ಚಿತ್ರಿಸಲಾಗಿದೆ. ವೈದಿಕ ಪರಂಪರೆಯಲ್ಲಿ ದಿಕ್ಪಾಲಕರಿಗೆ ತಮಗೆ ದತ್ತವಾಗಿರುವ ದಿಕ್ಕುಗಳನ್ನು ಕಾಯುವ ಸ್ವತಂತ್ರವಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದು. ಆದರೆ ಜೈನ ಪರಂಪರೆಯಲ್ಲಿ ದಿಕ್ಪಾಲಕರು ತಮ್ಮ ದಿಕ್ಕುಗಳ ಆಧಿಪತ್ಯ ನಿರ್ವಹಿಸುವುದರ ಜೊತೆಗೆ, ತಮ್ಮ ದಿಕ್ಕುಗಳಿಂದ ಜಿನನನ್ನು ಸೇವಿಸುವ ಕರ್ತವ್ಯವನ್ನು ಶಾಂತಿನಾಥ ಜಿನಾಲಯದ ಪಟ್ಟಿಕೆಗಳಲ್ಲಿ ಕಾಣಬಹುದು.

**ಇಂದ್ರ :** ಇವನು ಪೂರ್ವ ದಿಕ್ಕಿನ ಅಧಿಪತಿ; ಆಕಾಶ ಮತ್ತು ಜಲ ಎಲ್ಲವನ್ನೂ ವ್ಯಾಪಿಸಿದವನು. 'ಅಂಶುಮದ್ ಭೇದಾಗಮ'ವು ಇಂದ್ರನು ಎರಡು ತೋಳುಗಳನ್ನು ಪಡೆದಿರುವಂತೆ ತಿಳಿಸುತ್ತದೆ.[೯] ಅದೇ ರೀತಿ ಇಲ್ಲೂ ಚಿತ್ರಿತವಾಗಿದೆ. ಇಂದ್ರ ತನ್ನ ಸತಿ ಇಂದ್ರಾಣಿ ಅಥವಾ ಶಚಿಯ ಜೊತೆಯಲ್ಲಿ ಐರಾವತದ ಮೇಲೆ ಇದ್ದಾನೆ. ಇವರಿಬ್ಬರ ಆಭರಣಗಳು ಮಿತವಾಗಿವೆ. ಇಂದ್ರನು ಕಿರೀಟಮಕುಟ, ವೃತ್ತಕುಂಡಲ, ಕಂಠಿಕೆ, ಗ್ರೈವೇಯ, ಕೇಯೂರ, ಕಟಕ, ಸೊಂಟಪಟ್ಟಿ, ಸೊಂಟ ಉತ್ತರೀಯ, ಕಡಗ, ಪಾದವಲಯಗಳನ್ನು ಧರಿಸಿದ್ದಾನೆ. ಕಿರೀಟದ ಮೇಲೆ ಕೊಡೆ ಇದೆ. ಬಲದ ಹಸ್ತದಲ್ಲಿ ವಜ್ರವನ್ನು ಹಿಡಿದಿದ್ದಾನೆ; ಎಡಗೈ ಪತಾಕಹಸ್ತ ಮುದ್ರೆ (ಅಥವಾ ಅರ್ಧಚಂದ್ರ ಹಸ್ತ) ಯಲ್ಲಿದೆ. ಅವನ ಸತಿ ಶಚಿಯು ಕಿರೀಟ ಮಕುಟವನ್ನು ಧರಿಸಿದ್ದಾಳೆ. ಅವಳ ಕಿರೀಟದ ಮೇಲೆ ಕೊಡೆ ಇದೆ. ವೃತ್ತಕುಂಡಲ, ಕಂಠಿಹಾರ, ಗ್ರೈವೇಯ, ಕೇಯೂರ, ಬಳೆಗಳು, ಸೊಂಟದವರೆಗೂ ಇಳಿಬಿದ್ದಿರುವ ಸ್ತನಸೂತ್ರ,ಮೇಖಲ, ಸೊಂಟದಿಂದ ಪಾದದ ಮಣಿಕಟ್ಟಿನವರೆಗೂ ಇರುವ ಸೀರೆ, ಪಾದವಲಯ ಇವುಗಳನ್ನು ಧರಿಸಿದ್ದಾಳೆ. ಆಕೆಯ ಬಲಗೈ ಪತಾಕಾ ಹಸ್ತದಲ್ಲಿದೆ. ಎಡಗೈಲಿ ಚಾಮರವನ್ನು ಹಿಡಿದಿದ್ದಾಳೆ. ಇಂದ್ರ ಮತ್ತು ಶಚಿಯರ ಮುಖಗಳಲ್ಲಿ ಜೀವಂತಿಕೆಯನ್ನು ಮೂಡಿಸುವಲ್ಲಿ ಶಿಲ್ಪಿ ಸಫಲನಾಗಿದ್ದಾನೆ. ಅವರನ್ನು ದೈಹಿಕ ಸೌಂದರ್ಯದ ಪ್ರತೀಕವಾಗಿ ರೂಪಿಸಿದ್ದಾನೆ. ಐರಾವತವನ್ನು ವೀರಾವೇಶದಿಂದ ಮುನ್ನುಗ್ಗುತ್ತಿರುವಂತೆ ಚಿತ್ರಿಸಲಾಗಿದೆ. ಇದಕ್ಕೆ ಜೋಡಿ ದಂತಗಳಿವೆ (ಐರಾವತಕ್ಕೆ ಒಂದೊಂದು ಪಾರ್ಶ್ವಕ್ಕೆ ಎರಡು ದಂತಗಳಿರುತ್ತವೆ. ಅದರಂತೆ ಇಲ್ಲೂ ಶಿಲ್ಪಿ ಮೂಡಿಸಿದ್ದಾನೆ). ಐರಾವತವನ್ನು ಸರಳವಾಗಿ ಅಲಂಕರಿಸಲಾಗಿದೆ. ಇದು ಹೊಯ್ಸಳ ದೇಗುಲಗಳಲ್ಲಿ ಅಪರೂಪದ ಸಂಗತಿ. ಈ ಅಂಶವೇ ಶಿಲ್ಪದ ಮಹತ್ತನ್ನು ಹೆಚ್ಚಿಸಿದೆ. ಐರಾವತದ ಮೇಲೆ ಇಂದ್ರ–ಇಂದ್ರಾಣಿಯರು ಕುಳಿತುಕೊಳ್ಳುವುದಕ್ಕೆ ಹಿಂಭಾಗದಲ್ಲಿ ವೃತ್ತಾಕಾರವಾಗಿರುವ ಆಸನವನ್ನಿಟ್ಟು, ಅದನ್ನು ಐರಾವತದ ಉದರಕ್ಕೆ ಮೂರು ಎಳೆಗಳಿರುವ ಹಗ್ಗದಿಂದ ಬಿಗಿಯಲಾಗಿದೆ. ಇದನ್ನು ಅದರ ತಲೆಗೂ ಕಟ್ಟಲಾಗಿದೆ. ಕಿರುಗಂಟೆಗಳ ಸರಪಳಿಯನ್ನು ಅದರ ಪೃಷ್ಠ ಮತ್ತು ಕೊರಳು ಹಾಯುವಂತೆ ಆಸನದ ಹಿಂಭಾಗಕ್ಕೆ ಬಿಗಿಯಲಾಗಿದೆ. ಇದರ ಕೊರಳಲ್ಲಿ ಆಭರಣಗಳಿದ್ದರೂ, ವಿಶಾಲವಾದ ಕಿವಿಗಳ ಮರೆಯಲ್ಲಿ ಗುರುತಿಸಲು ಆಗುವುದಿಲ್ಲ. ಐರಾವತವು ತನ್ನ ಸೊಂಡಿಲಿನಲ್ಲಿ ಮೂರು ಕಮಲದ ಮೊಗ್ಗುಗಳನ್ನು ಸುತ್ತಿಕೊಂಡು ಮೇಲೆತ್ತಿದೆ. ಆನೆಯ ನೈಜತೆ ಐರಾವತದ ಮುಖದಲ್ಲಿ ಸಹಜವಾಗಿ ಮೂಡಿದೆ.

**ಅಗ್ನಿ :** ಇಂದ್ರ ಮೇಲುಮುಖವಾಗಿ ಚಲಿಸುತ್ತಿರುವಂತೆ ಚಿತ್ರಿಸಿದ್ದರೆ ಅಗ್ನಿ ಕೆಳಮುಖವಾಗಿ ಮುಂದುವರೆಯುತ್ತಿರುವಂತೆ ರೂಪಿಸಲಾಗಿದೆ. ಅಗ್ನಿ ಆಗ್ನೇಯ ದಿಕ್ಕಿನ ಅಧಿಪತಿ. ಇವನು ಟಗರನ್ನು ವಾಹನವನ್ನಾಗಿ ಮಾಡಿಕೊಂಡು, ಪತ್ನಿ ಸ್ವಾಹಾದೇವಿಯ ಜೊತೆಯಲ್ಲಿರುವಂತೆ ಚಿತ್ರಿಸಲಾಗಿದೆ. ದೇವತೆಗಳು ತಕ್ಷಣಕ್ಕೆ ಏಕರೂಪವಾಗಿ ಕಾಣಿಸಿದರೂ, ಸೂಕ್ಷ್ಮವಾಗಿ ಗಮನಿಸಿದರೆ ಸಾಕಷ್ಟು ಬದಲಾವಣೆಗಳು ಗೋಚರಿಸುತ್ತವೆ. (ಚಿತ್ರ ೩).

ಅಗ್ನಿಯು ಕರಂಡಮಕುಟ, ವೃತ್ತಕುಂಡಲ, ಕಂಠಿಕೆ, ಗ್ರೈವೇಯ, ಕೊರಳಪಟ್ಟಿ, ಪದ್ಮಾಕಾರದ ಭುಜವಲಯ,











ತೋಳ್ಬಂದಿ, ಕಂಕಣ, ಸೊಂಟಪಟ್ಟಿ, ಸೊಂಟವಸ್ತ್ರ, ಕಾಲಕಡಗ, ಪಾದವಲಯ ಧರಿಸಿದ್ದಾನೆ. ಕಿರೀಟದ ಮೇಲೆ ಕೊಡೆ ಇದೆ. ಸೊಂಟ ವಸ್ತ್ರದ ಕೆಳಗಿನ ಅಂಚು ಡೊಂಕುಡೊಂಕಾಗಿ ಸುಂದರವಾಗಿ ಕಾಣುತ್ತದೆ. ಅವನು ಬಲಗೈಲಿ ಶಕ್ತ್ಯಾಯುಧ ಅಥವಾ ಅನ್ನಪಾತ್ರೆಯನ್ನು ಹಿಡಿದಿದ್ದಾನೋ, ಕೆತ್ತನೆ ಸ್ಪಷ್ಟವಾಗಿ ಕಾಣುವುದಿಲ್ಲ; ಎಡಗೈ ಪತಾಕ ಹಸ್ತದಲ್ಲಿದೆ. ಅವನ ಹಿಂದೆ ಅವನ ಪತ್ನಿ ಸ್ವಾಹಾದೇವಿ ಟಗರಿನ ಮೇಲೆ ಕುಳಿತಿದ್ದಾಳೆ. ಈಕೆಯೂ ಸಹ ಕರಂಡ ಕಿರೀಟ, ವೃತ್ತಕುಂಡಲ, ಕಂಠಿಹಾರ, ಗ್ರೈವೇಯ, ಸೊಂಟದವರೆಗೂ ಇಳಿಬಿದ್ದಿರುವ ಸ್ತನಸೂತ್ರ, ನಾಗತೋಳ್ಬಂದಿ, ಬಳೆಗಳು, ಮೇಖಲ, ಸೊಂಟಪಟ್ಟಿ, ಸೊಂಟದಿಂದ ಪಾದದವರೆಗೂ ಸುತ್ತಿರುವ ವಸ್ತ್ರ, ಕಾಲಂದುಗೆ, ಪಾದವಲಯ – ಇವುಗಳನ್ನು ಧರಿಸಿದ್ದಾಳೆ. ತಲೆಯ ಮೇಲೆ ಕೊಡೆ ಇದೆ. ಬಲಗೈಲಿ ಚಾಮರವಿದೆ ಮತ್ತು ಎಡಗೈ ಪತಾಕಹಸ್ತದಲ್ಲಿದೆ. ಟಗರನ್ನು ನೈಜವಾಗಿ ರೂಪಿಸಲಾಗಿದೆ. ಟಗರಿನ ಕೊಂಬು ಹಿಂಜಾಗಿದೆ. ಅದರ ಕೊರಳನ್ನು ಮೂರು ಬಗೆಯ ಪಟ್ಟಿಕೆಗಳು ಅಲಂಕರಿಸಿವೆ. ಅದಕ್ಕೆ ಶಿರಪಟ್ಟಿ ಹಾಕಲಾಗಿದೆ. ಅದರ ಬಾಯಿಗೆ ಹಗ್ಗವನ್ನು ಬಿಗಿದು, ಕೊರಳಿಗೆ ಕಟ್ಟಲಾಗಿದೆ. ಅದರ ಬೆನ್ನಿನ ಮೇಲೆ ಆಸನವಿದೆ. ಇದನ್ನು ಅದರ ಉದರಕ್ಕೆ ಅಗಲವಾದ ಪಟ್ಟಿಯಿಂದ ಕಟ್ಟಲಾಗಿದೆ. ಗಂಟೆಗಳ ಸರಪಳಿಯನ್ನು ಅದರ ಕೊರಳು ಮತ್ತು ದೇಹದ ಉದ್ದಕ್ಕೂ ಹಾಕಿ ಅಲಂಕರಿಸಲಾಗಿದೆ. (ಚಿತ್ರ – ೪)

**ಯಮ :** ಮೃತ್ಯುಲೋಕದ ಅಧಿಪತಿ ಮತ್ತು ದಕ್ಷಿಣ ದಿಕ್ಕಿನ ಒಡೆಯ. ಇವನು ತನ್ನ ವಾಹನವಾದ ಮಹಿಷ (ಕೋಣ)ನ ಮೇಲೆ ಪತ್ನಿಯಾದ ಧೊರ್ವೋರ್ಣಾಳ ಜೊತೆಯಲ್ಲಿ ಆಸೀನನಾಗಿದ್ದಾನೆ.. ಮಹಿಷ ನಾಗಾಲೋಟದಲ್ಲಿ ಓಡುತ್ತಿದೆ. ಯಮನು ಕರಂಡಮಕುಟ, ವೃತ್ತಕುಂಡಲಗಳು, ನಾಗತೋಳ್ಬಂದಿ, ಭುಜವಲಯ, ಕಂಠಿಕೆ, ಗ್ರೈವೇಯ, ಕಟಕ, ಸುಂದರ ವಿನ್ಯಾಸದಲ್ಲಿರುವ ಸೊಂಟಬಟ್ಟೆ, ಕಾಲಕಡಗ, ಪಾದವಲಯ – ಇವುಗಳನ್ನು ಧರಿಸಿದ್ದಾನೆ. ಬಲಗೈಲಿ ಜ್ವಾಲೆಯಿಂದ ಕೂಡಿದ ಶಕ್ತ್ಯಾಯುಧವನ್ನು ಹಿಡಿದಿದ್ದಾನೆ; ಎಡಗೈ ಪತಾಕಹಸ್ತದಲ್ಲಿದೆ. ಅವನ ಸತಿ ಕರಂಡಮಕುಟ, ವೃತ್ತಕುಂಡಲ, ತೋಳ್ಬಂದಿ, ಕಂಠಿಕ, ಗ್ರೈವೇಯ, ಸ್ತನಗಳ ಮಧ್ಯೆ ಇಳಿಬಿದ್ದಿರುವ ಹಾರ, ಮೇಖಲ, ಮೊಳಕಾಲಿನವರೆಗೂ ಧರಿಸಿರುವ ಸೀರೆ, ಕಾಲ್ಬಳೆ, ಪಾದವಲಯ – ಇವುಗಳನ್ನು ಧರಿಸಿದ್ದಾಳೆ. ಸೀರೆಯ ನೆರಿಗೆಗಳು ಸ್ಪಷ್ಟವಾಗಿ ಕಾಣುತ್ತಿವೆ. ಬಲಗೈಲಿ ಚಾಮರವನ್ನು ಹಿಡಿದಿದ್ದಾಳೆ; ಎಡಗೈ ಪತಾಕ ಹಸ್ತದಲ್ಲಿದೆ. ಯಮನ ವಾಹನ ಮಹಿಷ ದಷ್ಟಪುಷ್ಟವಾಗಿದೆ. ಅದಕ್ಕೆ ಹಣೆಪಟ್ಟಿಯನ್ನು ಹಾಕಲಾಗಿದೆ. ಕೊರಳಿಗೆ ಗಂಟೆಯನ್ನು ನೇತುಹಾಕಲಾಗಿದೆ. ಮತ್ತೊಂದು ಕೊರಳ ಪಟ್ಟಿಯ ಆಭರಣವಿದೆ. ಮಹಿಷನ ದೇಹದ ಸುತ್ತಲೂ ಗಂಟೆಗಳ ಮತ್ತು ಕೊರಳಲ್ಲಿ ಮತ್ತು ಸಣ್ಣದಾಗಿರುವ ಗಂಟೆಗಳ ಸರಪಳಿ ಇದೆ. ಇದರ ಬಾಲವು ಹಿಂಗಾಲುಗಳ ಮಧ್ಯೆ ಬಂದು, ಬಲಗಾಲನ್ನು ಬಳ್ಳಿಯಂತೆ ಸುತ್ತಿಕೊಂಡಿದೆ. ಯಮ ಮತ್ತು ಅವನ ಪತ್ನಿಗೆ ಕೊಡೆಗಳನ್ನು ಚಿತ್ರಿಸಿಲ್ಲ. (ಚಿತ್ರ ೫)

**ನಿರ್ಋತಿ :** ಇವನು ನೈಋತ್ಯ ದಿಕ್ಕಿನ ಅಧಿಪತಿ. ಇವನು ಭೂತ ಮತ್ತು ರಾಕ್ಷಸರ ಅಧಿಪತಿಯೂ ಹೌದು. ನರವಾಹನನ ಮೇಲೆ ಇವನು ಮತ್ತು ಇವನ ಪತ್ನಿ ಚಂಡಿಕಾ ನರನ ಭುಜಗಳ ಮೇಲೆ ಕುಳಿತಿದ್ದಾರೆ. ನಿರ್ಋತಿಯು ಕರಂಡಮಕುಟ, ವೃತ್ತಕುಂಡಲ, ಗ್ರೈವೇಯ, ಯಜ್ಞೋಪವೀತ, ತೋಳ್ಬಂದಿ ಸೊಂಟಪಟ್ಟಿ, ತ್ರಿವಳಿ ಕಡಗ, ಸೊಂಟಬಟ್ಟೆ, ಕಾಲ್ಬಳೆ, ಪಾದವಲಯಗಳನ್ನು ಧರಿಸಿದ್ದಾನೆ. ಇವನ ಕಿರೀಟದ ಮೇಲೆ ಕೊಡೆ ಇದೆ. ಬಲಗೈ ಕುಂಡಿಕೆ ಹಿಡಿದಿದ್ದರೆ, ಎಡಗೈ ಪತಾಕ ಹಸ್ತದಲ್ಲಿದೆ. ಇವನ ಪತ್ನಿ ಚಂಡಿಕಾ ಕರಂಡಮಕುಟ ಧರಿಸಿದ್ದಾಳೆ. ಅದರ ಮೇಲೆ ಕೊಡೆ ಇದೆ. ಈಕೆ ವೃತ್ತಕುಂಡಲ, ಕಂಠಿಹಾರ, ಗ್ರೈವೇಯ, ಸ್ತನಸೂತ್ರ, ಮೇಖಲ, ಕಾಲಂದುಗೆ, ಪಾದವಲಯ – ಇವುಗಳಿಂದ ಅಲಂಕೃತಳಾಗಿದ್ದಾಳೆ. ಸೊಂಟದಿಂದ ಕಣಕಾಲವರೆಗೆ ಧರಿಸಿರುವ ಬಟ್ಟೆಯ ಅಲಕಾವಳಿಯನ್ನು ಸುಂದರವಾಗಿ ರೂಪಿಸಲಾಗಿದೆ. ಆಕೆ ಬಲಗೈಲಿ ಚಾಮರವನ್ನು ಹಿಡಿದಿದ್ದಾಳೆ. ಚಾಮರದ ಎಳೆಗಳು ಸುಸ್ಪಷ್ಟವಾಗಿ ಹಾಗೂ ಚೆಲುವಿನಿಂದ ಕಾಣುತ್ತವೆ. ಎಡಗೈ ಪತಾಕಹಸ್ತದಲ್ಲಿದೆ. (ಚಿತ್ರ ೬)

ನಿರ್ಋತಿ ಮತ್ತು ಆತನ ಪತ್ನಿ ಚಂಡಿಕಾ ವಾಹಕನಾದ ನರನ ಮೇಲೆ ಹಾರಿ ಹೋಗುತ್ತಿರುವಂತೆ ಚಿತ್ರಿಸಲಾಗಿದೆ. ನರನು ಕರಂಡ ಮಕುಟ, ವೃತ್ತಕುಂಡಲ ಮತ್ತು ಮಕರಕುಂಡಲ, ಗ್ರೈವೇಯ, ಯಜ್ಞೋಪವೀತ, ತೋಳ್ಬಂದಿ, ಕಂಕಣ, ಸೊಂಟಪಟ್ಟಿ, ಕಾಲ್ಕಡಗ, ಪಾದವಲಯ – ಇವುಗಳನ್ನು ಧರಿಸಿದ್ದಾನೆ. ಸೊಂಟದ ಉತ್ತರೀಯವನ್ನು ಬಹು ಕಲಾತ್ಮಕವಾಗಿ ಸಂಯೋಜಿಸಲಾಗಿದೆ. ಇವನ ಚಾಚಿದ ಬಲಭುಜದ ಮೇಲೆ ನಿರ್ಋತಿ ಮತ್ತು ಅವನ ಸತಿ ಆಸೀನರಾಗಿದ್ದಾರೆ. ಅವನ ಎಡಗೈ ಪತಾಕಹಸ್ತದಲ್ಲಿದೆ.

**ವರುಣ :** ವೈದಿಕ ಸಾಹಿತ್ಯದಲ್ಲಿ ಇಂದ್ರನಷ್ಟೇ ಪ್ರಾಮುಖ್ಯವನ್ನು ಪಡೆದಿರುವ ಮತ್ತೊಬ್ಬ ದೇವತೆ, ವರುಣ. ಆಕಾಶ ಮತ್ತು ನೀರಿನ ಪ್ರತೀಕವೆಂದು ಇವನನ್ನು ಪರಿಗಣಿಸಲಾಗಿದೆ. ವರುಣ ಪಶ್ಚಿಮ ದಿಕ್ಕಿನ ಅಧಿಪತಿ. ವರುಣ ಮತ್ತು ಅವನ ಪತ್ನಿ ಗೌರಿ/ವಾರಣಿ ಅಥವಾ ಜೇಷ್ಠಾ ಮಕರದ ಮೇಲೆ ಆಸೀನರಾಗಿದ್ದಾರೆ. ವರುಣ ಕರಂಡ ಮಕುಟ, ವೃತ್ತಕುಂಡಲ, ಗ್ರೈವೇಯ, ಯಜ್ಞೋಪವೀತ, ತೋಳಬಂದಿ, ಕಂಕಣ, ಸೊಂಟ ವಸ್ತ್ರ, ಕಾಲ್ಬಳೆ, ಪಾದವಲಯ – ಇವುಗಳನ್ನು ಧರಿಸಿದ್ದಾನೆ. ಇವನ ಕಿರೀಟದ ಮೇಲೆ ಕೊಡೆ ಇದೆ. ಇವನು ಬಲಗೈಲಿ ರತ್ನಪಾತ್ರವನ್ನು ಹಿಡಿದಿದ್ದಾನೆ. ಎಡಗೈ ಪತಾಕಹಸ್ತ ಮುದ್ರೆಯಲ್ಲಿದೆ. ಇವನ ಪತ್ನಿ ಜೇಷ್ಠಾ ಕರಂಡಮಕುಟ, ವಿವಿಧ ಬಗೆಯ ಕಂಠಿಹಾರಗಳು, ಸ್ತನಸೂತ್ರ, ಸೊಂಟಬಟ್ಟೆ, ಕೈಬಳೆ, ಕಾಲಂದುಗೆ, ಪಾದವಲಯ – ಇವುಗಳನ್ನು ಧರಿಸಿದ್ದಾಳೆ. ಸೊಂಟದಿಂದ ಪಾದದವರೆಗೆ ಸೀರೆ ಧರಿಸಿದ್ದಾಳೆ. ಈಕೆಯ ಕಿರೀಟದ ಮೇಲೆ ಕೊಡೆ ಇದೆ. ಇವಳು ಬಲಗೈಲಿ ಚಾಮರವನ್ನು ಹಿಡಿದಿದ್ದರೆ, ಎಡಹಸ್ತ ಪತಾಕ ಮುದ್ರೆಯಲ್ಲಿದೆ. ಇವರ ವಾಹನ ಮಕರವು ಸುರುಳಿ ಆಕಾರದಿಂದ ಚಿತ್ರಿತವಾಗಿದೆ. (ಚಿತ್ರ –೭)

**ವಾಯು :** ವಾಯು ಅಂತರಿಕ್ಷದ ದೇವತೆ. ಜಗತ್ತಿನ ಸಮಸ್ತ ಜೀವದ ಪ್ರತೀಕ. ಇವನು ವಾಯುವ್ಯ ದಿಕ್ಕಿನ ಪಾಲಕ.

ಇವನು ಜಿಂಕೆಯ ಮೇಲೆ ಪತ್ನಿ ಮೋಹಿನಿಯ ಜೊತೆಯಲ್ಲಿದ್ದಾನೆ. ವಾಯು ಕರಂಡಮಕುಟ, ಪತ್ರಕುಂಡಲ, ಕಂಠಿಕೆ, ಗ್ರೈವೇಯ, ತೋಳಬಂದಿ, ಕಂಕಣ, ಯಜ್ಞೋಪವೀತ, ಸೊಂಟಪಟ್ಟಿ, ಸೊಂಟ ಉತ್ತರೀಯ, ಕಾಲ್ಬಳೆ, ಪಾದವಲಯ ಧರಿಸಿದ್ದಾನೆ. ಬಲಗೈಲಿ ಶಕ್ತ್ಯಾಯುಧವನ್ನು ಹಿಡಿದಿದ್ದಾನೆ. ವಾಯು ಶಕ್ತ್ಯಾಯುಧ ಹಿಡಿದಿರುವ ಬಗ್ಗೆ ಆಗಮ ಅಥವಾ ಶಿಲ್ಪ ಗ್ರಂಥಗಳು ತಿಳಿಸುವುದಿಲ್ಲ. ಆದರೆ ವಾಯು ಅಂಕುಶವನ್ನು ಹಿಡಿಯುವುದಕ್ಕೆ ಶಾಸ್ತ್ರ ಗ್ರಂಥಗಳಲ್ಲಿ ಅವಕಾಶವಿದೆ. ಬಲಗೈ ಪತಾಕಹಸ್ತದಲ್ಲಿದೆ. ಅವನ ಪತ್ನಿ ಮೋಹಿನಿ ಸಹ ಸರ್ವಾಭರಣಭೂಷಿತೆಯಾಗಿ ಕರಂಡಮಕುಟ, ವೃತ್ತ ಕುಂಡಲ, ಕಂಠಿಹಾರ, ಗ್ರೈವೇಯ, ಸ್ತನಸೂತ್ರ, ತೋಳಬಂದಿ, ಬಳೆ, ಮೇಖಲ, ಸೊಂಟದಿಂದ ಕಾಲಿನವರೆಗೂ ಮುಚ್ಚಿರುವ ಸೀರೆ, ಕಾಲ್ಬಳೆ, ಪಾದವಲಯ ಧರಿಸಿದ್ದಾಳೆ. ಸೀರೆಯ ನೆರಿಗೆಗಳು ಬಹು ಸ್ಪಷ್ಟವಾಗಿ ಚೆಲುವಾಗಿವೆ. ಬಲಗೈಲಿ ಚಾಮರವನ್ನು ಹಿಡಿದಿದ್ದಾಳೆ. ಎಡಗೈ ಪತಾಕಹಸ್ತದಲ್ಲಿದೆ. ಇಬ್ಬರ ಕಿರೀಟಗಳ ಮೇಲೆ ಒಂದೊಂದು ಕೊಡೆಗಳಿವೆ. ಅವರ ವಾಹನ ಜಿಂಕೆಯನ್ನು ಸುಂದರವಾಗಿ ಅಲಂಕರಿಸಲಾಗಿದೆ. ಜಿಂಕೆಯ ಬೆನ್ನಿನ ಮೇಲೆ ಮೂರು ಸ್ತರದ ಹಾಸನ್ನು ಹಾಕಲಾಗಿದೆ. ಪೃಷ್ಠದ ಭಾಗದಲ್ಲಿ ಗಂಟೆಗಳ ಸರಪಳಿಯನ್ನು ಹಾಕಲಾಗಿದೆ. ಮುಖವನ್ನು ಹಗ್ಗಗಳಿಂದ ಬಂಧಿಸಲಾಗಿದೆ. ಇದು ಜಿಂಕೆಯ ಓಟವನ್ನು ನಿಯಂತ್ರಿಸುವುದಕ್ಕೆ ಹಾಕಿರಬೇಕು. ಮುಂಗಾಲುಗಳಿಗೆ ಉಂಗುರವನ್ನು ತೊಡಿಸಲಾಗಿದೆ. ಇದು ನಿಜಕ್ಕೂ ಅತ್ಯುತ್ತಮವಾದ ಶಿಲ್ಪ ಪಟ್ಟಿಕೆ (ಅಥವಾ ಚೌಕಟ್ಟು). (ಚಿತ್ರ ೮)

**ಕುಬೇರ :** ಉತ್ತರ ದಿಕ್ಕಿನ ರಕ್ಷಕ, ಧನಾಧಿಪತಿ. ಯಕ್ಷರು ಇವನ ಪ್ರಜೆಗಳು ಕುಬೇರನು ವೈಶ್ರವಣ ಮತ್ತು ಐಡವಿಡಾ ಎಂದೂ ಹೆಸರಾಗಿದ್ದಾನೆ. ಇವನ ಪತ್ನಿ ಹಾರಿತೀ ಅಥವಾ ವಿಭವಾಳ ಜೊತೆಗೂಡಿ ಕುದುರೆಯ ಮೇಲೆ ನಾಗಾಲೋಟದಲ್ಲಿ ಧಾವಿಸುತ್ತಿದ್ದಾನೆ.

ಇಲ್ಲಿ ಕುಬೇರ ಜಟಾಮಕುಟಧಾರಿಯಾಗಿ ಚಿತ್ರಿತನಾಗಿದ್ದಾನೆ. ವೃತ್ತಕುಂಡಲ, ಗ್ರೈವೇಯ, ಛನ್ನವೀರ, ಸೊಂಟಪಟ್ಟಿ, ಸೊಂಟವಸ್ತ್ರ, ಕಾಲ್ಬಳೆ, ಪಾದವಲಯ ಧರಿಸಿದ್ದಾನೆ. ಇವನು ಬಲಗೈಲಿ ಶಕ್ತಿಯನ್ನು ಹಿಡಿದಿದ್ದರೆ, ಎಡಗೈ ಪತಾಕಹಸ್ತ ಮುದ್ರೆಯಲ್ಲಿದೆ. ಇವನ ಸತಿ ಕರಂಡ ಮಕುಟ, ವೃತ್ತಕುಂಡಲ, ಗ್ರೈವೇಯ, ಕೇಯೂರ, ಬಳೆ, ಮೇಖಲ, ಸೊಂಟದಿಂದ ಕಾಲಿನವರೆಗೂ ಮುಚ್ಚಿರುವ ಸೀರೆ, ಪಾದವಲಯ ಧರಿಸಿದ್ದಾಳೆ. ಸೀರೆಯ ನೆರಿಗೆಗಳು ನಿರ್ದಿಷ್ಟ ಅಂತರದಲ್ಲಿ ಆಕರ್ಷಿತವಾಗಿ ಚಿತ್ರಿತವಾಗಿವೆ. ಈಕೆ ಬಲಗೈಲಿ ಚಾಮರವನ್ನು ಹಿಡಿದಿದ್ದಾಳೆ; ಎಡಗೈ ಪತಾಕಾ ಹಸ್ತದಲ್ಲಿದೆ. ಇಬ್ಬರ ಶಿರಗಳ ಮೇಲೆ ಒಂದೊಂದು ಛತ್ರಿಯನ್ನು ರೂಪಿಸಲಾಗಿದೆ. ಇವರ ವಾಹನ ಕುದುರೆ ವಿಭಿನ್ನವಾಗಿ ಅಲಂಕೃತವಾಗಿದೆ. ಇದರ ಬೆನ್ನ ಮೇಲೆ ವಿಶಾಲವಾದ ಸುರುಳಿ ಅಲಂಕಾರದಿಂದ ಕೂಡಿದ ಮೆತ್ತನೆಯ ಹಾಸು ಇದೆ. ಇದರ ಮೇಲೆ ಕುಬೇರ ಮತ್ತು ಅವನ ಪತ್ನಿ ಆಸೀನರಾಗಿದ್ದಾರೆ. ಕುದುರೆಯ ಪೃಷ್ಠದ ಸುತ್ತಲೂ ಗಂಟೆಗಳ ಸರಪಳಿ ಇದೆ ಹಾಗೂ ಇದನ್ನು ಮೆತ್ತನೆಯ ಹಾಸಿಗೆ ಸೇರಿಸಲಾಗಿದೆ. ಹಾಸಿನ ಮುಂಭಾಗವನ್ನು ಅದರ ಕತ್ತಿಗೆ ಕಟ್ಟಿ ಭದ್ರಪಡಿಸಲಾಗಿದೆ. ಕುದುರೆಯ ಮುಖಕ್ಕೆ ಸುಂದರ ವಿನ್ಯಾಸದ ಜೀನನ್ನು ಹಾಕಿ, ಅದರ ಕತ್ತಿನ ಸುತ್ತ ಕಟ್ಟಿರುವ ಹಗ್ಗಕ್ಕೆ ಸೇರಿಸಲಾಗಿದೆ. ಇದರ ಕತ್ತಿನ ಸುತ್ತಲೂ ಗೆಜ್ಜೆಗಳ ಪಟ್ಟಿ ಹಾಗೂ ಇತರ ಎರಡು ವಿನ್ಯಾಸಗಳ ಪಟ್ಟಿಗಳನ್ನು ಅಳವಡಿಸಲಾಗಿದೆ. (ಚಿತ್ರ ೯)

**ಈಶಾನ :** ಇವನು ಈಶಾನ್ಯ ದಿಕ್ಕಿನ ಒಡೆಯ. ಇವನನ್ನು ಶಿವ ಅಥವಾ ಶಿವನ ಅಂಶವೆಂದು ಪರಿಗಣಿಸಲಾಗಿದೆ. ಈಶಾನ ತನ್ನ ಸತಿಯಾದ ಗೌರಿಯ ಜೊತೆಯಲ್ಲಿ ನಂದಿಯ ಮೇಲೆ ಆಸೀನನಾಗಿದ್ದಾನೆ.

ಈ ಪಟ್ಟಿಕೆಯಲ್ಲಿ ಈಶಾನ ಜಟಾಮಕುಟಧಾರಿಯಾಗಿದ್ದು, ವೃತ್ತ ಕುಂಡಲ, ಗ್ರೈವೇಯ, ತೋಳ್ಬಂದಿ, ಕಟಕ, ಕಟಿಸೂತ್ರ, ಕಾಲ್ಬಳೆ, ಪಾದವಲಯ ಧರಿಸಿದ್ದಾನೆ. ಇವನು ಬಲಗೈಲಿ ಅಕ್ಷಮಾಲೆಯನ್ನು ಹಿಡಿದಿದ್ದಾನೆ; ಎಡಗೈ ಪತಾಕಾ ಹಸ್ತದಲ್ಲಿದೆ. ಇವನ ಜಟಾಮಕುಟದ ಮೇಲೆ ಛತ್ರಿ ಇದೆ. ಗೌರಿಯು ಕರಂಡ ಮಕುಟ, ವೃತ್ತಕುಂಡಲ, ಗ್ರೈವೇಯ, ಸ್ತನಸೂತ್ರ, ಕೇಯೂರ, ಕಟಕ, ಮೇಖಲ, ಸೊಂಟದಿಂದ ಪಾದದವರೆಗೆ ಸೀರೆ, ಕಾಲ್ಬಳೆ, ಪಾದವಲಯ ಧರಿಸಿದ್ದಾಳೆ. ಆಕೆಯ ಎಡಗೈ ಪತಾಕಹಸ್ತ ಮುದ್ರೆಯಲ್ಲಿದೆ. ನಂದಿ ರಭಸವಾಗಿ ಮುನ್ನುಗ್ಗುತ್ತಿದೆ. ನಂದಿಯ ಬೆನ್ನ ಮೇಲೆ ಹಾಸಿರುವ ಹಾಸಿನ ಮೇಲೆ ಈಶಾನ ಮತ್ತು ಗೌರಿಯರು ಪೀಠಸ್ಥರಾಗಿದ್ದಾರೆ. ಅದರ ಪೃಷ್ಠದ ಸುತ್ತಲೂ ಗಂಟೆಗಳ ಸರವನ್ನು ಹಾಕಲಾಗಿದೆ. ಇದರ ಕೊರಳಲ್ಲಿ ವಿವಿಧಾಕಾರದ ಗಂಟೆ ಅಥವಾ ಗೆಜ್ಜೆಗಳ ಸರವನ್ನು ಹಾಕಲಾಗಿದೆ. (ಚಿತ್ರ ೧೦)

## ಉಪಸಂಹಾರ

ಕಂಬದಹಳ್ಳಿಯ ಶಾಂತಿನಾಥ ಬಸದಿಯ ನವರಂಗದ ಅಷ್ಟದಿಕ್ಪಾಲಕರ ಪಟ್ಟಿಕೆಯು ಅಂದಿನ ಶಿಲ್ಪಿಗಳ ಅನುಪಮ ಸಾಧನೆಯಾಗಿದೆ. ಕರ್ನಾಟಕದ ಅತ್ಯುತ್ತಮ ಶಿಲ್ಪಗಳಲ್ಲಿ ಇದೂ ಒಂದು. ಪಟ್ಟಿಕೆಯ ಪ್ರಧಾನ ದೈವವಾಗಿ ವರ್ಧಮಾನ ಮಹಾವೀರನನ್ನು ಮಧ್ಯದ ಚೌಕಟ್ಟಿನಲ್ಲಿ ಚಿತ್ರಿಸಲಾಗಿದೆ.

ದಿಕ್ಪಾಲಕರನ್ನು ಅವರವರ ವಾಹನಗಳ ಮೇಲೆ ಅವರವರ ಸತಿಯರ ಸಮೇತ ಚಿತ್ರಿಸಲಾಗಿದೆ. ಎಲ್ಲರನ್ನು ಒಂದೇ ತೆರನಾಗಿ ಚಿತ್ರಿಸಿದಂತೆ ಕಾಣುತ್ತದೆ. ದಿಕ್ಪಾಲಕರು ಬಲಹಸ್ತದಲ್ಲಿ ತಮ್ಮ ವಿಶಿಷ್ಟ ವಸ್ತುವನ್ನು ಹಿಡಿದಿದ್ದರೆ, ಅಫರ ಎಡಗೈ ಪತಾಕ ಹಸ್ತದಲ್ಲಿದೆ. ಇದು ಅರ್ಧಚಂದ್ರ ಹಸ್ತಮುದ್ರೆಯಂತೆಯೂ ಕಾಣುತ್ತದೆ. ಅವರು ಅಭಯವನ್ನು ನೀಡುತ್ತಿರುವಂತೆಯೂ ಕಲ್ಪಿಸಿಕೊಳ್ಳಬಹುದು. ದಿಕ್ಪಾಲಕರ ಚಿತ್ರಣ ಒಂದೇ ರೀತಿ ಕಂಡರೂ, ಸೂಕ್ಷ್ಮವಾಗಿ ಅವಲೋಕಿಸಿದರೆ, ಅವರ ನಡುವೆ ಸಾಕಷ್ಟು ವಿಭಿನ್ನತೆ ಮತ್ತು ವಿಶೇಷತೆ ಗೋಚರಿಸುತ್ತದೆ. ಕೆಲ ದಿಕ್ಪಾಲಕರ ಚಿತ್ರಣವು ಮಹೋನ್ನತವೂ ಅಸದೃಶವೂ ಆಗಿವೆ. ಇಂದ್ರ, ಕುಬೇರ, ಈಶಾನ, ವಾಯು, ಅಗ್ನಿ, ಯಮ – ಇವರ ಶಿಲ್ಪಗಳು ಅಪೂರ್ವ ಸಾಧನೆಯ ಸಿದ್ಧಿ! ವರುಣನ ಚಿತ್ರಣ ಉತ್ತಮವಾಗಿದ್ದರೂ ಅದರ ಮೇಲೆ ಬಳಿದ ಸುಣ್ಣದಿಂದ ಅದರ ಮಹತ್ವವನ್ನು ಪರಿಶೀಲಿಸುವುದು ಕಷ್ಟವಾಗುತ್ತದೆ. ಪ್ರಧಾನ ದಿಕ್ಕುಗಳ ಪಾಲಕರು ಮೇಲ್ಮುಖವಾಗಿ ಮುನ್ನಡೆಯುತ್ತಿದ್ದರೆ, ಉಪದಿಕ್ಕುಗಳ (ಮೂಲೆ ದಿಕ್ಕುಗಳ) ಪಾಲಕರು ಕೆಳಮುಖವಾಗಿ ಹೋಗುತ್ತಿರುವಂತೆ ಕಾಣುತ್ತಾರೆ. ಎಲ್ಲ ದಿಕ್ಪಾಲಕರ ಮಕುಟಗಳ ಮೇಲೆ ಕೊಡೆ ಇದ್ದರೆ, ಯಮ ಮತ್ತು ಅವನ ಪತ್ನಿಯ ಮೇಲೆ ಕೊಡೆಯನ್ನು ಚಿತ್ರಿಸಿಲ್ಲ. ಇದು ರೂವಾರಿಯ ಪ್ರಮಾದವೋ ಅಥವಾ ಅವನೇ ಚಿತ್ರಿಸಲು ಕೈಬಿಟ್ಟಿದ್ದಾನೋ ಹೇಳಲುಬಾರದು. ಹೊಯ್ಸಳ ದೇವಾಲಯಗಳ ಸಾಧನೆಯ ಉನ್ನತ ಕಾಲದಲ್ಲಿ ಈ ಜಿನಾಲಯ ನಿರ್ಮಿತವಾಗಿದೆ. ಆದರೂ ಹೊಯ್ಸಳ ದೇವಾಲಯಗಳಲ್ಲಿ ಕಾಣುವ ಅತಿಯಾದ ಅಲಂಕರಣೆ ಈ ಪಟ್ಟಿಕೆಗಳಲ್ಲಿ ಮೂಡಿಲ್ಲ. ಹೊಯ್ಸಳ ದೇವಾಲಯಗಳ ಅತಿಯಾದ ಅಲಂಕರಣೆಯು, ಅಲ್ಲಿ ಶಿಲ್ಪಗಳ ಅಂತಃಸತ್ವ, ಜೀವಂತಿಕೆ ಮತ್ತು ಜೈವಿಕ ಚಲುವು – ಇವುಗಳನ್ನು ಮುಚ್ಚಿ ಹಾಕಿದೆ. ಅಷ್ಟದಿಕ್ಪಾಲಕರ ಈ ಪಟ್ಟಿಕೆಯಲ್ಲಿ ಹಿತಮಿತವಾದ ಅಲಂಕರಣೆ ಅಷ್ಟದಿಕ್ಪಾಲಕರ ಶಿಲ್ಪಗಳ ಸೊಬಗನ್ನು ನೂರ್ಮಡಿಗೊಳಿಸಿದೆ. ಇದನ್ನು ಕರ್ನಾಟಕದ ಅಪರೂಪದ ಶಿಲ್ಪ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ.

### ಆಧಾರ ಸೂಚಿ


೧. MAR, 1914-15, ಪು.೨೬.

೨. MAR, 1939, ಪು.೪೫.

೩. MAR, 1914-15, ಪು.೨೬.

೪. E.C. VIII, 1979, Ng. 32.

೫. E.C. VIII, 1979, Ng. 33.

೬. MAR, 1914-15, ಪು.೨೬.

೭. MAR, 1939, ಪು.೪೫.

೮. ನಾಗರಾಜಯ್ಯ ಹಂಪ, **ಯಕ್ಷ-ಯಕ್ಷಿಯರು**, ಬೆಂಗಳೂರು, ೨೦೦೮, ಪು.೧೦೪ ಮತ್ತು ೧೨೬.

೯. ಗೋಪಿನಾಥರಾವ್ ಟಿ.ಎ., *Elements of Hindu Iconography*, Vol. II, pt. ii, ದೆಹಲಿ, ೧೯೮೫, ಪು.೫೨೯.




# ಮೇಳಾಸಾಸಿರ್ಬ್ಬರು ಮತ್ತು ಮೇಲಶಂಕರ ದೇವಾಲಯ

– ಬಿ. ಮಹೇಶ್*

ಪ್ರಾಚೀನ ಕರ್ನಾಟಕದ ಇತಿಹಾಸದಲ್ಲಿ ರಾಯಚೂರು ಜಿಲ್ಲೆಗೆ ವಿಶಿಷ್ಟವಾದ ಸ್ಥಾನವಿದೆ. ಈ ಜಿಲ್ಲೆಯ ದೇವದುರ್ಗ ತಾಲೂಕಿನ ಅಪೂರ್ವ ಶಿಲ್ಪಕಲಾ ಸೌಂದರ್ಯದ, ಇತಿಹಾಸ ಮತ್ತು ಪುರಾಣ ಪ್ರಸಿದ್ಧವೂ ಆಗಿರುವ ಗಬ್ಬೂರು ದೇವದುರ್ಗದಿಂದ ಆಗ್ನೇಯಕ್ಕೆ ೨೭ ಕಿ.ಮೀ. ದೂರದಲ್ಲಿದೆ. ಇದು ಅಕ್ಷಾಂಶ ೧೬.೨೮ ಉತ್ತರ ಮತ್ತು ರೇಖಾಂಶ ೭೬.೫೮ ಪೂರ್ವದಲ್ಲಿದೆ.

ಈ ಊರನ್ನು ಬಬ್ರುವಾಹನ ಆಳ್ವಿಕೆ ಮಾಡಿದನೆಂಬ ಐತಿಹ್ಯವಿರುವುದರಿಂದ ಇದಕ್ಕೆ ಬಬ್ರುವಾಹನ ಪಟ್ಟಣ ಎಂಬ ಹೆಸರಿದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಈ ಊರಿಗೆ ಗೋಪುರಪುರ, ಹಿರಿಯ ಗಬ್ಬೂರು ಎಂಬ ಹೆಸರು ರೂಢಿಯಲ್ಲಿತ್ತೆಂದು ಇಲ್ಲಿಯ ಶಾಸನಗಳು ಉಲ್ಲೇಖಿಸುತ್ತವೆ. ಇದು ಹೆಸರಾಂತ ಅಗ್ರಹಾರ, ಬ್ರಹ್ಮಪುರಿ ಆಗಿದ್ದು, ಎಡದೊರೆ ೨೦೦೦ ನಾಡಿನ, ಮೊಸಳೆ ಕಲ್ಲು ೩೦೦, ಅಯ್ಯನವಾಡಿ ೩೦೦ ವಿಭಾಗಕ್ಕೆ ಸೇರಿತ್ತು ಎಂದು ಹೇಳಲಾಗುತ್ತದೆ ಹಾಗೂ ಗಬ್ಬೂರಿನ ಕ್ರಿ.ಶ. ೧೧೮೯ರ ಶಾಸನವು ಇಲ್ಲಿ ಬ್ರಹ್ಮಜಿನಾಲಯವೆಂಬ ಬಸದಿ ಇತ್ತು ಎಂದು ಉಲ್ಲೇಖಿಸುತ್ತದೆ.

ಕರ್ನಾಟಕದಲ್ಲಿ ಹಂಪೆಯ ನಂತರ ಅತಿ ಹೆಚ್ಚು ದೇವಾಲಯಗಳನ್ನು ಹೊಂದಿರುವ ಗಬ್ಬೂರು ಗ್ರಾಮವು 'ಎರಡನೇ ಹಂಪೆ' ಎಂದೇ ಪ್ರಸಿದ್ಧವಾಗಿದೆ. ಇಲ್ಲಿಯ ಪ್ರಮುಖವಾದ ದೇವಾಲಯಗಳಲ್ಲಿ ಮೇಲಶಂಕರ ದೇವಾಲಯವೂ ಒಂದಾಗಿದೆ. ಮೇಲಶಂಕರ ದೇವಸ್ಥಾನವು ಈ ಊರಿನ ಭವ್ಯ ಕಟ್ಟಡವಾಗಿದ್ದು, ಈ ದೇವಾಲಯವನ್ನು ಮೇಳಸಾಸಿರ್ವರು(ಒಕ್ಕಲುಗಳು) ಕಟ್ಟಿಸಿರುತ್ತಾರೆ.







* ಗಬ್ಬೂರು, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ.

ಕ್ರಿ.ಶ. ೧೧೮೪ರ ಒಂದು ಶಾಸನದಲ್ಲಿ ಆರಂಭದ ಭಾಗದಲ್ಲಿ ಗಬ್ಬೂರಿನ ವರ್ಣನೆಯಿದೆ. ಈ ವರ್ಣನೆಯಲ್ಲಿ ಗಬ್ಬೂರನ್ನು ಗೋಪುರ ಗ್ರಾಮ ಎಂದು ಕರೆದಿದೆ. ಈ ಊರಿನಲ್ಲಿ ಮೇಳೇಶ್ವರ ದೇವರು ನೆಲೆಸಿ ಗ್ರಾಮದ ಜನರನ್ನು ತನ್ನ ಅನುಗ್ರಹಕ್ಕೆ ಪಾತ್ರರನ್ನಾಗಿಸಿಕೊಂಡಿದ್ದ. ಈ ದೇವರ ಒಕ್ಕಲುಗಳನ್ನು ಮೇಳಸಾಸಿರ್ವರು ಅಥವಾ ಮೇಳಸಾಸಿರ್ಬರು ಎಂದು ಕರೆಯುತ್ತಿದ್ದರು. ಇವರನ್ನು ಶಾಸನದಲ್ಲಿ 'ಸಕಲ ಜೀವರಕ್ಷಕ, ಪರೋಪಕಾರಾರ್ಥ ಶರೀರ, ಮೇಳೇಶ್ವರ ದೇವರ ಪಾದಪಂಕಜ ಭ್ರಮರರು, ಚಕ್ರವರ್ತಿಯ ರಾಜ್ಯವನ್ನು ಉದ್ಧರಿಸುವವರು, ಶ್ರೀಮಂತರು, ವಿನಿಯರು, ಸತ್ಯವಂತರು, ನುಡಿದಂತೆ ನಡೆದವರು, ದಾನಿಗಳು, ಧರ್ಮಕಾರ್ಯದುರಂಧರು' ಮುಂತಾಗಿ ವರ್ಣಿಸಲಾಗಿದೆ. ಇವರು ಹಿರಿಯ ಗಬ್ಬೂರಿನಲ್ಲಿ ಮೇಳೇಶ್ವರ ದೇವಾಲಯವನ್ನು ಕಟ್ಟಿಸಿ ಆ ದೇವರ ಪೂಜೆ, ಪುನಸ್ಕಾರ ನೈವೇದ್ಯ, ಅಂಗಭೋಗ, ರಂಗಭೋಗ, ದೇವಾಲಯದ ಪರಿಪಾಲನೆ ಮುಂತಾದ ಕೆಲಸಗಳಿಗಾಗಿ ಗಬ್ಬೂರು ಮತ್ತು ಅದಕ್ಕೆ ಸೇರಿದ ಇತರ ಹಳ್ಳಿಗಳ ಜನರು ನೊಗ ಕಟ್ಟಿ ಉತ್ತು ಬಿತ್ತು ಬೆಳೆದ ಬೆಳೆಯಲ್ಲಿ ಸೊಡು ಜೋಳವನ್ನು ಹಾಗೂ ವರ್ಷಂಪ್ರತಿ ಬಳಸುವ ಒಂದೊಂದು ಕುಂಟಿಗೆ ಒಂದು ಹಣದ ಲೆಕ್ಕದಲ್ಲಿ ನೀಡಬೇಕೆಂದು ತೀರ್ಮಾನಿಸಿರುತ್ತಾರೆ.

ಕ್ರಿ.ಶ. ೧೧೮೮ರ ಶಾಸನದಲ್ಲಿ ಹಿರಿಯ ಗಬ್ಬೂರಿನ ಮುಂಮರಿದಂಡ ಸಾಸಿರ್ವರು, ಅಯ್ಯಾವೊಳೆ ಐನೂರವರು ಮುಂತಾದ ವ್ಯಾಪಾರಿಗಳು ಮಹಾಲಿಂಗ ಮೇಳೇಶ್ವರ ದೇವರಿಗೆ ಭತ್ತವನ್ನು ದಾನ ಮಾಡಿದ ವರ್ಣನೆಯಿದೆ.

ಮೇಳಶಂಕರ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಇದು ಗರ್ಭಗುಡಿ, ಅಂತರಾಳ, ನವರಂಗ ಹಾಗೂ ಮುಖ ಮಂಟಪಗಳನ್ನು ಒಳಗೊಂಡಿರುವ ದೇವಾಲಯವಾಗಿದೆ.

ಗರ್ಭಗೃಹವು ಒಂದು ಈಶ್ವರ ಲಿಂಗವನ್ನು ಹೊಂದಿದ್ದು, ಇದರ ದ್ವಾರವು ದೊಡ್ಡದಾಗಿದ್ದು, ದ್ವಾರಶಾಖೆ, ಸುರುಳಿ, ಸಿಂಹ ದಳಗಳ ಕೆತ್ತನೆ, ಮಕರತೋರಣ ಮತ್ತು ದ್ವಾರಪಾಲಕ ಗಜಲಕ್ಷ್ಮೀ ಶಿಲ್ಪವನ್ನು ಕೆತ್ತಲಾಗಿದೆ. ಅಂತರಾಳದಲ್ಲಿ ನಂದಿಯ ವಿಗ್ರಹವನ್ನಿಡಲಾಗಿದೆ. ಇದರ ಎರಡು ಅಕ್ಕಪಕ್ಕದಲ್ಲಿ ದೊಡ್ಡ ದೇವಕೋಷ್ಟಕಗಳಿವೆ. ಬಲಗಡೆಯ ಕೋಷ್ಟಕದ ಕೆಳಗೆ ಬಳಪದ ಕಲ್ಲಿನಲ್ಲಿ ಕೆತ್ತಿದ ಗಣೇಶನ ವಿಗ್ರಹವಿದೆ. ಈ ದೇವಾಲಯದ ಸಭಾಮಂಟಪವು ಅತ್ಯಂತ ವಿಶಾಲವಾಗಿದ್ದು, ಈ ನವರಂಗ ಮಂಟಪದ ಮಧ್ಯದಲ್ಲಿ ನಾಲ್ಕು ದೊಡ್ಡ ದೊಡ್ಡ ಕಂಬಗಳಿವೆ. ಇದು ಮೂರು ಪ್ರವೇಶವನ್ನು ಹೊಂದಿದ್ದು ಒಟ್ಟು ೯ ಅಂಕಣಗಳನ್ನು ಹೊಂದಿದೆ.

ಮುಖ ಮಂಟಪದ ಎರಡು ಪಾರ್ಶ್ವಗಳಲ್ಲಿ ದ್ವಾರಪಾಲಕರಿದ್ದಾರೆ. ೮೦ ಅಡಿ ಎತ್ತರ ಮತ್ತು ೨೯ ಅಡಿ ಅಗಲವಿರುವ ಈ ಉಬ್ಬು ಶಿಲ್ಪಗಳು ಆಕರ್ಷಕವಾಗಿವೆ. ಮುಖಮಂಟಪದ ದ್ವಾರ ಬಾಗಿಲ ಮೇಲೆ ನಂತರದ ಕಾಲದಲ್ಲಿ ಮಾಡಿದ ಮಂಟಪದ ಆಕಾರದಲ್ಲಿರುವ ಗೋಪುರವಿದ್ದು, ಅದರಲ್ಲಿ ಶಿವಪಾರ್ವತಿ ಹಾಗೂ ಋಷಿ ಮುನಿಗಳಿವೆ. ಇದರ ಮೇಲೆ ಐದು ಕಳಶಗಳಿವೆ. ಐದು ಅಡಿ ಎತ್ತರದ ಅಧಿಷ್ಠಾನ, ಭಿತ್ತಿ, ಮಂಜೂರು ಕಂಬಗಳನ್ನು ಹೊಂದಿದ್ದು ಇದರ ಮುಂದೆ ಅನೇಕ ವೀರಸ್ಮಾರಕಗಳು ಮತ್ತು ಒಂದು ಪುಷ್ಕರಣಿ ಇದೆ.

## ಆಧಾರ ಸೂಚಿ


೧. Channabasappa S. Patil : *Temples of Raichur & Bellary Districts' 1992*, Directore of Archaeology & Museums, Mysore.

೨. ಡಾ॥ ದೇವರಕೊಂಡಾರೆಡ್ಡಿ (ಸಂ): ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ' ೨೦೦೩, ಹಂಪಿ, ಪ.೪೭, ೪೮, ೪೯. ೭೪, ೭೫.

೩. ಮಹೇಶ್. ಬಿ. : 'ಗಬ್ಬೂರು ಶಾಸನಗಳು ಮತ್ತು ದೇವಾಲಯಗಳು' ಎಂ.ಫಿಲ್ ನಿಬಂಧ, ೨೦೦೨, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಶಿಶಿಲದ ಶ್ರೀ ಶಿಶಿಲೇಶ್ವರ ದೇವಾಲಯ

– ಡಾ॥ ಲ.ನ. ಸ್ವಾಮಿ*

ಶಿಶಿಲ ಗ್ರಾಮವು ಧರ್ಮಸ್ಥಳ–ಕೊಕ್ಕಡ–ಗುಂಡ್ಯ ರಸ್ತೆಯಲ್ಲಿ ಕೊಕ್ಕಡದ ಸಮೀಪದಲ್ಲಿದೆ. ಜಿಲ್ಲಾಕೇಂದ್ರ ಮಂಗಳೂರಿನಿಂದ ನೂರು ಕಿ.ಮೀ., ತಾಲೂಕು ಕೇಂದ್ರ ಬೆಳ್ತಂಗಡಿಯಿಂದ ನಲವತ್ತನಾಲ್ಕು ಕಿ.ಮೀ. ದೂರದಲ್ಲಿದೆ. ಧಾರ್ಮಿಕ ಕ್ಷೇತ್ರ ಧರ್ಮಸ್ಥಳದಿಂದ ಇಪ್ಪತ್ತೊಂಭತ್ತು ಕಿ.ಮೀ. ದೂರದಲ್ಲಿರುವ ಈ ಗ್ರಾಮಕ್ಕೆ ಧರ್ಮಸ್ಥಳ ಹಾಗೂ ಕೊಕ್ಕಡದಿಂದ ವಾಹನ ವ್ಯವಸ್ಥೆ ಇದೆ.

ಶ್ರೀ ಶಿಶಿಲೇಶ್ವರ ದೇವಾಲಯವು ಬೆಳ್ತಂಗಡಿ ತಾಲೂಕಿನ ಶಿಶಿಲ ಗ್ರಾಮದ ಪ್ರಶಾಂತ ಪ್ರದೇಶದಲ್ಲಿ ವಿರಾಜಿಸುತ್ತಿದೆ. ಇದರ ಪ್ರಾಂಗಣದಲ್ಲಿ ಶ್ರೀ ಮಹಾಗಣಪತಿಯ ಮಂದಿರವಿದೆ. ಇದರ ಪರಿಸರದಲ್ಲಿ ವಿಸ್ತಾರವಾದ ನಾಗವನವೂ ಭೂತಸ್ಥಳಗಳೂ ಕಂಗೊಳಿಸುತ್ತಿವೆ. ಈ ಶಿವಾಲಯದ ಉತ್ತರ ಪಾರ್ಶ್ವದಲ್ಲಿ ಕಪಿಲಾ ನದಿ ಪ್ರವಹಿಸುತ್ತಿದೆ. ಈ ಪಾವನ ತರಂಗಿಣಿಯಲ್ಲಿ ಪೆರುವೇಲು (ರಾಜೀವ) ಜಾತಿಯ ಬೃಹತ್ ಗಾತ್ರದ ಮೀನುಗಳಿಗೆ ಆಶ್ರಯವಾದ ಮತ್ಸ್ಯತೀರ್ಥ ಹೃದಯವು ಪ್ರವಾಸಿಗರನ್ನು ರಂಜಿಸುತ್ತಿದೆ. ಇಲ್ಲಿಂದ ಅನತಿ ದೂರದಲ್ಲಿ ಆಗ್ನೇಯ ದಿಕ್ಕಿನಲ್ಲಿ ತಲೆಯೆತ್ತಿ ನಿಂತಿರುವ ಕುಮಾರ ಗಿರಿಯಲ್ಲಿ ಶ್ರೀ ಶಿಶಿಲೇಶ್ವರನ ಮೂಲಸ್ಥಾನವಿದೆ.

**ಇತಿಹಾಸ**

ಕದಂಬ ಅರಸರ ಶಾಸನಗಳಲ್ಲಿ ಉಲ್ಲೇಖಗೊಂಡಿರುವ 'ಶ್ರೀ ಪರ್ವತ' ಎಂಬುದೇ ಶಿಶಿಲದ ಸುತ್ತ ಹಬ್ಬಿಕೊಂಡಿರುವ ಪರ್ವತಾವಳಿಯೆಂದೂ, ಆ ಅರಸರು ರಾಜ್ಯವಾಳಿದ 'ತ್ರಿ ಪರ್ವತ ನಗರ' ಎಂಬುದೇ ಶಿಶಿಲವೆಂದೂ ಇತಿಹಾಸಕಾರರು ಊಹಿಸಿದ್ದಾರೆ. ಆನೆಕಲ್ಲು, ಅಮೇದಿಕಲ್ಲು ಮತ್ತು ರಕ್ಕಸಕಲ್ಲು ಎಂಬ ಶಿಶಿಲದ ಸುತ್ತಣ ಮೂರು ಉತ್ತುಂಗ ಶೈಲಗಳೇ ತ್ರಿಪರ್ವತ. ಕ್ರಿ.ಶ.ಮೂರನೆಯ ಶತಮಾನದ ಅಂತ್ಯದಲ್ಲಿ ಮಯೂರಶರ್ಮನು ಕಂಚಿಯ ಪಲ್ಲವರಾಜರನ್ನು ಸೋಲಿಸಿ ಕದಂಬ ಸಾಮ್ರಾಜ್ಯವನ್ನು ಸ್ಥಾಪಿಸಿದನೆಂಬುದು ಇತಿಹಾಸ ಪ್ರಸಿದ್ಧ. ಅವನು ಶ್ರೀ ಪರ್ವತದ ದ್ವಾರವೆನಿಸಿದ ಶಿಶಿಲದಿಂದ ಕಣಿವೆಯನ್ನು ಹಾದು ಬಂದು, ಅಲ್ಲಿನ ಅರಣ್ಯ ಪ್ರದೇಶದಲ್ಲಿ ನೆಲೆಸಿದ್ದು, ಸ್ಥಳೀಯ ನಿವಾಸಿಗಳ ಬೆಂಬಲವನ್ನು ಗಳಿಸಿಕೊಂಡನು. ಪಲ್ಲವ ಸೇನೆಯನ್ನು ಹಿಮ್ಮೆಟ್ಟಿಸಿ ತರುವಾಯ ಬನವಾಸಿಯಲ್ಲಿ ಪಟ್ಟವೇರಿದ. ಆನಂತರದ ದೊರೆಗಳು ಶಿಶಿಲವನ್ನು ತಮ್ಮ ಉಪರಾಜಧಾನಿಯಾಗಿಸಿಕೊಂಡಿದ್ದಿರಬಹುದು. ೫ನೇ ಶತಮಾನದ ಆದಿಯಲ್ಲಿ ಕದಂಬ ಸಾಮ್ರಾಜ್ಯವು ವಿಭಜನೆಗೊಂಡಿತು. ಆಗ ಬನವಾಸಿಯಲ್ಲಿ ಶಾಂತಿವರ್ಮನೂ ತ್ರಿಪರ್ವತ ನಗರದಲ್ಲಿ ಆತನ ತಮ್ಮ ಒಂದನೆಯ ಕೃಷ್ಣವರ್ಮನೂ ನೆಲೆಸಿ ರಾಜ್ಯ ಪರಿಪಾಲನೆ ಮಾಡಿದರು. ತರುವಾಯ ಬನವಾಸಿಯಲ್ಲಿ ಹರಿವರ್ಮನು ಪಟ್ಟವೇರಿದರೆ ತ್ರಿಪರ್ವತ ನಗರದಲ್ಲಿ ಇಮ್ಮಡಿ ಕೃಷ್ಣವರ್ಮನು ಪ್ರಭುವಾದನು. ಹರಿವರ್ಮನ ಅವಸಾನದ ನಂತರ ಇಮ್ಮಡಿ ಕೃಷ್ಣವರ್ಮನು ೬ನೆಯ ಶತಮಾನದ ಅಂತ್ಯದಲ್ಲಿ ತನ್ನ ರಾಜಧಾನಿಯನ್ನು ಬನವಾಸಿಗೆ ವರ್ಗಾಯಿಸಿದನು. ಹೀಗೆ ಸುಮಾರು ಇನ್ನೂರು ವರ್ಷಗಳ ಕಾಲ ಶಿಶಿಲವು ಕದಂಬರ ರಾಜಧಾನಿಗಳಲ್ಲೊಂದಾಗಿ ಮೆರೆಯಿತು. ಈಗಲೂ ಶಿಶಿಲದ ಅರಣ್ಯದಲ್ಲಿ ಅಲ್ಲಲ್ಲಿ ಪಟ್ಟಣವೊಂದು ಇದ್ದಿರಬಹುದಾದ ಕುರುಹುಗಳಿವೆ. ಆದರೆ ಈ ಸಂಗತಿಗಳನ್ನು ದೃಢಪಡಿಸಲು ನಮಗೆ ಯಾವ ಶಾಸನಾಧಾರಗಳೂ ಇಂದು ಉಳಿದಿಲ್ಲ.

ಹದಿನಾಲ್ಕನೆಯ ಶತಮಾನದಲ್ಲಿ ಪಟ್ಟಿಪೊಂಬುಚ್ಚಪುರದರಸ ಲೋಕನಾಥ ದೇವನು ಶಿಶಿಲಕ್ಕೆ ಬಂದು, ಅರಮನೆ ಕಟ್ಟಿಸಿ ವಾಸವಾಗಿದ್ದನೆಂದು ಹಿರಿಯಂಗಡಿಯ ಶಾಸನವೊಂದು ತಿಳಿಸುತ್ತದೆ. ತರುವಾಯದಲ್ಲಿ ಅವನು ತನ್ನ ರಾಜಧಾನಿಯನ್ನು ಕಾರ್ಕಳಕ್ಕೆ ವರ್ಗಾಯಿಸಿದನು. ಮುಂದೆ ಕಾರ್ಕಳದ ಅರಸರ ಸಂಬಂಧಿಗಳಾದ ಮೂಲ ಅರಸರಿಗೆ ಶಿಶಿಲದ ಅಧಿಕಾರ ಸಿಕ್ಕಿತು. ಮೂಲರಸರಿಗೆ ಬಯಲಂಗಡಿ ಮತ್ತು ಶಿಶಿಲಗಳೆರಡೂ ರಾಜಧಾನಿಗಳಾಗಿದ್ದವು. ಹನ್ನೆರಡು ಮಾಗಣೆಗಳ ತಮ್ಮ

---

* ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ರಾಜ್ಯವನ್ನು ಅವರು ಆರಾರು ಮಾಗಣೆಗಳಾಗಿ ವಿಂಗಡಿಸಿಕೊಂಡು ಎರಡೂ ಕಡೆಗಳಲ್ಲಿ ಒಬ್ಬೊಬ್ಬ ರಾಜರು ಅರಮನೆ ಕಟ್ಟಿಕೊಂಡು ನೆಲೆಸಿ ಆಡಳಿತ ನಡೆಸುತ್ತಿದ್ದರು. ೧೫೩೮ರ ಶಾಸನವೊಂದರಲ್ಲಿ ಶಿಶಿಲದರಸರು ಎಂಬ ಉಲ್ಲೇಖವಿದೆ. ೧೬೦೮ರಲ್ಲಿ ಒಂದನೆಯ ವೆಂಕಟಪ್ಪ ನಾಯಕನು ಶಿಶಿಲದ ಶಿಥಿಲವಾಗಿದ್ದ ಕೋಟೆಯನ್ನು ಪುನಃ ನಿರ್ಮಾಣ ಮಾಡಿದನೆಂದು ಕೆಳದಿ ನೃಪವಿಜಯದಲ್ಲಿ ಉಲ್ಲೇಖವಿದೆ. ೧೬೪೨ರ ಶಾಸನ ಮತ್ತು ೧೮೦೫ರ ದಾಖಲೆಗಳಲ್ಲಿ ಶಿಶಿಲವು ಹೋಬಳಿಯ ಮುಖ್ಯ ಪಟ್ಟಣವಾಗಿತ್ತೆಂದು ಸೂಚಿತವಾಗಿದೆ. ಕಪಿಲಾ ತೀರದ ಕೋಟೆಬಾಗಿಲು ಎಂಬಲ್ಲಿ ಈಗಲೂ ಇರುವ ಪ್ರಾಚೀನ ಅವಶೇಷಗಳನ್ನು ನಾವು ನೋಡಬಹುದು.

ಇತಿಹಾಸ ಕಾಲದಲ್ಲಿ ಶಿಶಿಲವೊಂದು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತೆಂಬುದಕ್ಕೆ ಇಲ್ಲಿ ಬಲವಾದ ಸಾಕ್ಷಿಗಳಿವೆ. ಬಯಲು ಸೀಮೆ ಮತ್ತು ತುಳುನಾಡನ್ನು ಸಂಪರ್ಕಿಸುವ ದಾರಿಯೊಂದು ಇಲ್ಲಿದೆ. ಈ ದಾರಿಯನ್ನು ಅಚ್ಚುಕಟ್ಟಾಗಿ ಕಲ್ಲುಗಳಿಂದ ಕಟ್ಟಿರುವುದು ಅಲ್ಲಲ್ಲಿ ಕಾಣಬಹುದು. ಇದನ್ನು 'ಪೇರಾಟದ ಸಾದಿ' (ಹೋರಾಟದ ದಾರಿ) ಎನ್ನುತ್ತಿದ್ದರು. ತುಳುನಾಡಿನಿಂದ ಬಯಲು ಸೀಮೆಗೆ, ಅಂತೆಯೇ ಬಯಲು ಸೀಮೆಯಿಂದ ತುಳುನಾಡಿಗೆ ಕುದುರೆ ಅಥವಾ ಎತ್ತುಗಳ ಮೇಲೆ ಸಾಮಾನು, ಜೀವನಾವಶ್ಯಕ ವಸ್ತುಗಳನ್ನು ಸಾಗಿಸುತ್ತಿದ್ದರೆಂಬುದಕ್ಕೆ ಅಲ್ಲಲ್ಲಿ ಕಾಣುವ ಕೋಟೆಗಳು, ವಿಶ್ರಾಂತಿಯ ಸ್ಥಳಗಳು, ಸಾಮಾನುಗಳನ್ನು ಇಳಿಸುವ ಏರಿಸುವ ಬಯಲುಗಳು, ಅದಕ್ಕೆ ಹೊಂದಿಕೊಂಡಿರುವ ಸ್ಥಳನಾಮಗಳು ಸಾಕ್ಷಿಯನ್ನು ಹೇಳುತ್ತಿವೆ. ಈ ದಾರಿಯು ಮುಂದೆ ಸಾಗಿ ಮೂಡಿಗೆರೆ ತಾಲೂಕಿನ ಬೈರಾಪುರ ಎಂಬಲ್ಲಿ ಬೈರವೇಶ್ವರ ದೇವಾಲಯದ ಸಮೀಪದಿಂದ ಹೋಗುತ್ತಿತ್ತು. ಈಗಲೂ ಶಿಶಿಲದ ಸಮೀಪದ ಕಾಡುಗಳ, ನದಿದಂಡೆಗಳ ವಿಶಾಲ ಬಯಲುಗಳಲ್ಲಿರುವ ದೊಡ್ಡ ದೊಡ್ಡ ಪಂಚಾಂಗಗಳು (ಕಟ್ಟಡಗಳ ಅಡಿಪಾಯಗಳು), ಗದ್ದೆಗಳ ಕುರುಹುಗಳು, ಕಡೆಯುವ ಕಲ್ಲುಗಳು, ನೀರಾವರಿಗಾಗಿ ನಾಲೆಗಳಿರುವ ಕೆರೆಗಳು ಅಚ್ಚರಿ ಹುಟ್ಟಿಸುತ್ತವೆ. ಇಲ್ಲಿಯ ಸುತ್ತಮುತ್ತಲಿನ ಶಿಬರಾಜೆ, ಶಿಬಾಜೆ, ಶಿರಾಡಿ, ಸಿರಿಬಾಗಿಲು ಮುಂತಾದ ಊರುಗಳಿಗೆ ಶಿಶಿಲವೇ ಕೇಂದ್ರವಾಗಿದ್ದಿರಬಹುದೆಂದೂ, ಈ ಪ್ರದೇಶದಲ್ಲಿ ಹಿಂದೆ ಹೇರಳ ಜನಸಂಖ್ಯೆ ಇದ್ದಿರಬಹುದೆಂದೂ ಸಂಶಯ ಹುಟ್ಟಿಸುತ್ತವೆ.

ಶಿಶಿಲ ದೇವಾಲಯವನ್ನು ಜೈನರಸರು ಕಟ್ಟಿಸಿದರು. ಇತ್ತೀಚೆಗೆ ನವೀಕರಣಕ್ಕಾಗಿ ಇದರ ಗರ್ಭಗುಡಿಯನ್ನು ಬಿಚ್ಚಿದಾಗ, ಶಿವಲಿಂಗದ ಸುತ್ತಲೂ ಹಾಸಿರುವ ಹಾಸುಕಲ್ಲುಗಳ ಒಂದರ ಬದಿಯಲ್ಲಿ ೧೪೨೧ ಎಂಬ ಸಂಖ್ಯೆ ಕೊರೆಯಲ್ಪಟ್ಟಿದ್ದು ಪ್ರಾಯಶಃ ಈ ದೇವಾಲಯದ ನಿರ್ಮಾಣ ಕಾಲವದಾಗಿರಬಹುದೆಂದು ತರ್ಕಿಸಲಾಗಿದೆ.

### ನಾಮವ್ಯುತ್ಪತ್ತಿ

ಮಯೂರಶರ್ಮನು ಪಲ್ಲವರ ವಿರುದ್ಧ ಇಲ್ಲಿನ ಗುಡ್ಡಗಾಡು ಜನರನ್ನು ಸಂಘಟಿಸಿರಬೇಕು. ಈ ಶಿಶಿಲದ ಸುತ್ತ ೧೦ ಬೆಟ್ಟಗಳು ಸುತ್ತುಗಟ್ಟಿಕೊಂಡಿವೆ. ಹೀಗಾಗಿ ಇದು ದಶಶೈಲ>ದೆಸಿಲ>ಶಿಶಿಲವಾಗಿರಬೇಕೆಂದು ತೋರುತ್ತದೆ. ಇಸಿಲ ಎಂಬ ಪದಕ್ಕೂ ಶಿಶಿಲಕ್ಕೂ ಗಿಳಿರಾಮಭೂತವು ನೇಮದ ಹೊತ್ತಿನಲ್ಲಿ ಬಾಣಬಿಡುವುದಕ್ಕೂ ಏನಾದರೂ ಸಂಬಂಧವಿರಬಹುದೆ ಎಂದು ವಿಚಾರ ಮಾಡಬೇಕಾಗಿದೆ. ಇಲ್ಲಿನ ಭೂತಗಳು 'ಮಯೂರ ಶರ್ಮನ ಕಟ್ಟು ಕಟ್ಟಳೆಯ ಪ್ರಕಾರ' ಎಂದು ತಮ್ಮ ನುಡಿಗಟ್ಟಿನಲ್ಲಿ ಹೇಳುವುದಿದೆ. ಇದರ ಹಿನ್ನೆಲೆಯಲ್ಲಿ ಮಯೂರವರ್ಮನ ಶ್ರೀಪರ್ವತ ಪ್ರದೇಶ ಇದಾಗಿರಬಹುದೆಂಬ ಊಹೆಗೆ ಹೆಚ್ಚಿನ ಬಲ ಬರುತ್ತದೆ.

### ಶಿಶಿಲೇಶ್ವರ ದೇವಾಲಯ ನಿರ್ಮಾಣದ ಹಿನ್ನೆಲೆ

ಶ್ರೀ ಶಿಶಿಲೇಶ್ವರನ ಮೂಲಸ್ಥಾನವಾದ ಕುಮಾರಗಿರಿಗೆ ಅರ್ಚಕನು ಕಪಿಲಾ ನದಿಯಲ್ಲಿ ಸ್ನಾನ ಮಾಡಿ ದೇವಪೂಜೆಗೆ ಹೋಗುತ್ತಿದ್ದನು. ಮಳೆಗಾಲದಲ್ಲಿ ಒಂದು ದಿವಸ ಅವನು ಹೊಳೆಯಲ್ಲಿ ಮಿಂದು ಕೊಡದಲ್ಲಿ ನೀರನ್ನು ತುಂಬಿಸಿ ಹೊತ್ತುಕೊಂಡು ಬೆಟ್ಟದ ಮೇಲೇರುವಾಗ ಬಣ್ಪು ಮರದ ಸೊಪ್ಪನ್ನು ಮೆಟ್ಟಿ ಕಾಲು ಜಾರಿ ಬಿದ್ದನು. ಆಗ ಅವನು ನೋವನ್ನು ಸಹಿಸಲಾರದೆ 'ಈ ಊರಿನಲ್ಲಿ ಇನ್ನು ಮುಂದೆ ಬಣ್ಪು ಮರವು ಹುಟ್ಟದಿರಲಿ' ಎಂದು ಶಪಿಸಿ ಗುಡ್ಡವನ್ನು ಹತ್ತಿದನು. 'ಶ್ರೀ ಶಿಶಿಲೇಶ್ವರನು ಹೊಳೆಯ ಬಳಿಯಲ್ಲಿಯೇ ಉದ್ಭವಿಸುತ್ತಿದ್ದರೆ ಪೂಜಿಸಲು ಅನುಕೂಲವಾಗುತ್ತಿತ್ತು' ಎಂದುಕೊಂಡು ಶಿಶಿಲೇಶ್ವರ ಪ್ರತೀಕವಿರುವ ಸ್ಥಳಕ್ಕೆ ಬಂದನು. ಅನಂತರ ಎಂದಿನಂತೆ ಶಿವಪೂಜೆಯನ್ನು ನೆರವೇರಿಸಿ ಕುಮಾರಗಿರಿಯಿಂದ ಕೆಳಗಿಳಿದು ತನ್ನ ಮನೆಗೆ ಮರಳಿದನು.

ಆ ದಿವಸ ರಾತ್ರಿ ಕಾಲದಲ್ಲಿ ಅರ್ಚಕನಿಗೆ ಶ್ರೀ ಶಿಶಿಲೇಶ್ವರನು ಸ್ವಪ್ನದಲ್ಲಿ ಗೋಚರಿಸಿ ತಾನು ಕಪಿಲಾ ನದೀ ತೀರದಲ್ಲಿಯೇ ಆವಿರ್ಭವಿಸುವೆನೆಂದೂ ಅಲ್ಲಿಯೇ ಪ್ರತಿದಿನವೂ ಪೂಜಿಸಿದರೆ ಸಂತೃಪ್ತನಾಗುವೆನೆಂದೂ ಅನುಗ್ರಹಿಸಿದನು. ಮಾರನೆಯ ದಿನ ಕಪಿಲಾ ನದಿ ತಟದಲ್ಲಿ ಅರ್ಚಕನಿಗೆ ಕುಮಾರಗಿರಿಯ ಈಶ್ವರ ಪ್ರತೀಕದಂತೆ ಶಿರವಲ್ಲಿ ಗಾಯವಿರುವ ನವೀನ ಶಿವಲಿಂಗವು ಕಂಡಿತು. ಇದನ್ನು ನೋಡಿ ವಿಸ್ಮಯ ತಾಳಿ ಅವನು ಅಲ್ಲಿಂದ ಕುಮಾರಗಿರಿಗೆ ತೆರಳಿ ಪರೀಕ್ಷಿಸಿದನು. ಆ ಬೆಟ್ಟದ ತುದಿಯಲ್ಲಿದ್ದ ಶ್ರೀ ಶಿಶಿಲೇಶ್ವರ ಪ್ರತೀಕವು ಮಾಯವಾಗಿ ಶಿಲಾತಳದಲ್ಲಿ ಶಿವಪಾದ ಚಿಹ್ನೆಗಳು ಮೂಡಿದ್ದವು. ಅರ್ಚಕನು ಅಲ್ಲಿಂದ ಕೆಳಗಿಳಿದು ಬಂದು ಊರಿನ ಜನಕ್ಕೆ ಈ ವಿಚಾರವನ್ನು ವಿವರಿಸಿದನು. ಗ್ರಾಮ ನಿವಾಸಿಗಳು ಕಪಿಲಾ ನದಿ ತಟದ ಶ್ರೀ ಶಿಶಿಲೇಶ್ವರ ಲಿಂಗವನ್ನು ಕಂಡು ಅತ್ಯಂತ ಭಕ್ತಿ ಶ್ರದ್ಧೆಯಿಂದ ವಂದಿಸಿ ಶಿವ ಮಹಿಮೆಯನ್ನು ಕೊಂಡಾಡಿ ಸ್ತುತಿಸಿದರು. ಅಂದಿನಿಂದ ಅರ್ಚಕನು ಕಪಿಲಾ ನದೀ ತೀರದ ಶಿವಲಿಂಗವನ್ನು ಪೂಜಿಸಲು ಪ್ರಾರಂಭಿಸಿದನು. ಅನಂತರ ಇಲ್ಲಿ ಶ್ರೀ ಶಿಶಿಲೇಶ್ವರ ದೇವಾಲಯವನ್ನೂ, ಮಹಾಗಣಪತಿ ಮಂದಿರವನ್ನೂ ನಿರ್ಮಿಸಲಾಯಿತು.

## ದೇವಾಲಯದ ವಾಸ್ತು

ಇಲ್ಲಿನ ಶಿಶಿಲೇಶ್ವರ ದೇವಾಲಯವು ಚತುರಸ್ರಾಕಾರದ ಪ್ರಾಕಾರದ ಒಳಗಿದ್ದು, ಗೋಡೆ ದೇವಾಲಯದ ಒಳಕ್ಕೆ ತೆರೆದ ಮಂಟಪದ ಮಾದರಿಯಲ್ಲಿ ನಿರ್ಮಾಣಗೊಂಡಿದೆ. ಪ್ರಾಕಾರದ ಸುತ್ತಲಿನ ಮಂಟಪಗಳನ್ನು ಹೆಂಚಿನ ಮೇಲ್ಛಾವಣಿಯಿಂದ ಮುಚ್ಚಲಾಗಿದ್ದು ಸರ್ವ ಋತುಗಳಲ್ಲಿ, ದೇವಾಲಯದ ಉತ್ಸವಾದಿಗಳು ನೆರವೇರಲು ಸಹಾಯಕವಾಗಿದೆ. ಗರ್ಭಗುಡಿಯ ಮತ್ತು ಪ್ರಾಕಾರದ ಪ್ರವೇಶದ್ವಾರಗಳು ಪೂರ್ವಾಭಿಮುಖವಾಗಿವೆ. ಪ್ರಾಕಾರದ ಒಳಗೆ ಪ್ರವೇಶಿಸಿದ ತಕ್ಷಣ ಪ್ರವೇಶದ್ವಾರದ ಎರಡು ದ್ವಾರಗಳಲ್ಲಿ ಆಸ್ತಿಕರ ವಿಶ್ರಾಂತಿಗೆ ಮತ್ತು ಪೂಜೆ ಉತ್ಸವಾದಿಗಳನ್ನು ನೆರವೇರಿಸಲು ಸಹಾಯಕವಾಗುವಂತೆ ಎರಡು ಕೈ ಸಾಲೆಗಳಿವೆ. ಆಗ್ನೇಯದ ಮೂಲೆಯಲ್ಲಿ ದಕ್ಷಿಣ ಕನ್ನಡಕ್ಕೆ ವಿಶೇಷವೆನಿಸುವ ಮೂಲದೇವನ ದೈವಗಳ ಸಾನಿಧ್ಯವಿದೆ. ಇಲ್ಲಿ ಕೊಡಮಣಿತ್ತಾಯ, ಮೈಸಂದಾಯ, ಪಂಜುರ್ಲಿ ದೈವಗಳ ಪ್ರತಿರೂಪಗಳನ್ನಿಟ್ಟು ಪೂಜಿಸಲಾಗುತ್ತಿದೆ. ಅದಕ್ಕೆ ಸೇರಿದಂತೆ ದಕ್ಷಿಣ ದಿಕ್ಕಿನಲ್ಲಿ ಪಾಕಶಾಲೆಯಿದೆ. ಈಶಾನ್ಯದ ಮೂಲೆಯಲ್ಲಿ ಜಮಾ ಉಗ್ರಾಣವೂ, ವಾಯುವ್ಯದ ಮೂಲೆಯಲ್ಲಿ ದುರ್ಗಾದೇವಿಯ ಆಲಯವೂ ನಿರ್ಮಿಸಲ್ಪಟ್ಟಿವೆ. ದುರ್ಗಾದೇವಿಯ ದೇವಾಲಯ ಮತ್ತು ಜಮಾ ಉಗ್ರಾಣದ ನಡುವೆ ಮತ್ತೊಂದು ಪ್ರವೇಶದ್ವಾರವಿದೆ. ದೇವಾಲಯದ ಮುಂಭಾಗದಲ್ಲಿ ತೀರ್ಥಮಂಟಪವನ್ನು ಪ್ರಾಚೀನ ಮಾದರಿಯಲ್ಲಿ ದೇವಾಲಯದ ನವೀಕರಣ ಸಂದರ್ಭದಲ್ಲಿ ಪುನಃ ನಿರ್ಮಿಸಲಾಗಿದೆ. ಶಿವದೇವಾಲಯದ ನೈರುತ್ಯ ಮೂಲೆಯಲ್ಲಿ ಸಣ್ಣದಾದ ಗಣೇಶನ ಗುಡಿಯೊಂದನ್ನು ಸಹ ಇದೇ ಸಂದರ್ಭದಲ್ಲಿ ನಿರ್ಮಿಸಲಾಗಿದೆ. ದುರ್ಗಾಗುಡಿಯು ಕೂಡ ಇದೇ ಕಾಲದ ನಿರ್ಮಾಣವೆಂದು ತಿಳಿದುಬರುತ್ತದೆ. ಇಷ್ಟೆಲ್ಲವನ್ನೂ ಹೊಂದಿರುವ ಪ್ರಾಕಾರದ ಮಧ್ಯದಲ್ಲಿ ಶಿಲೆಯಿಂದ ನಿರ್ಮಿತವಾದ ಸುಂದರ ಶಿಶಿಲೇಶ್ವರನ ದೇವಾಲಯ ಕಂಡುಬರುತ್ತದೆ. ಈ ದೇವಾಲಯ ತಾಲೂಕು ಕೇಂದ್ರವಾದ ಬೆಳ್ತಂಗಡಿಯ ಕುತ್ಯಾರುವಿನಲ್ಲಿರುವ ಸೋಮನಾಥ ದೇವಾಲಯದ ರಚನಾಶೈಲಿಯನ್ನು ಹೋಲುತ್ತದೆ. ಶೈಲಿಯ ಆಧಾರದ ಮೇಲೆ ದೇವಾಲಯದ ನಿರ್ಮಾಣವು ೧೦-೧೧ನೆಯ ಶತಮಾನದಲ್ಲಿ ನಡೆದಿರಬಹುದೆಂದು ದಕ್ಷಿಣ ಕನ್ನಡದ ದೇವಾಲಯಗಳ ಗ್ರಂಥಕರ್ತರು ಈ ರೀತಿ ಅಭಿಪ್ರಾಯಪಡುತ್ತಾರೆ. 'ಶಿಶಿಲದ ಮುಖ್ಯ ಆಕರ್ಷಣೆ ಶ್ರೀ ಶಿಶಿಲೇಶ್ವರ ದೇವಸ್ಥಾನ. ಈಗಿನ ಶಿವಾಲಯ ಕಟ್ಟಡವು ೧೦-೧೧ನೆಯ ಶತಮಾನಕ್ಕೆ ಸೇರಿದ್ದಾದರೂ ಇದೊಂದು ಪ್ರಾಚೀನ ದೇವಸ್ಥಾನ'. ಈ ಬಗೆಯ ದೇವಾಲಯಗಳನ್ನು ಪಿ. ಗುರುರಾಜಭಟ್ಟರು ತಮ್ಮ ಗ್ರಂಥದಲ್ಲಿ ಇದೇ ಕಾಲಕ್ಕೆ ಅಂದರೆ ೧೦-೧೧ನೆಯ ಶತಮಾನಕ್ಕೆ ನಿಗದಿ ಮಾಡುತ್ತಾರೆ. ದೇವಾಲಯವು ಮೊದಲಿಗೆ ಗರ್ಭಗುಡಿಯನ್ನು ಮಾತ್ರ ಹೊಂದಿದ್ದು ಅನಂತರ ಸುಕನಾಸಿ ಮತ್ತು ಮುಖಮಂಟಪವನ್ನು ಪಡೆದಿರುವಂತೆ ಕಂಡುಬರುತ್ತದೆ. ಸುಕನಾಸಿ ಮತ್ತು ಮುಖಮಂಟಪಕ್ಕೆ ಹೋಲಿಸಿದಾಗ ಗರ್ಭಗುಡಿಯು ಉತ್ತರ ದಕ್ಷಿಣವಾಗಿ ದೀರ್ಘವಾಗಿದ್ದು ದೀರ್ಘ ಚತುರಸ್ರವಾಗಿದೆ. ದೇವಾಲಯದ ಛಾವಣಿಯ ಭಾರವನ್ನು ದೇವಾಲಯದ ಸುತ್ತಲಿನ ೧೮ ಕಂಬಗಳಲ್ಲಿ ವಿಭಾಗಿಸಲ್ಪಟ್ಟಿವೆ. ಅಂದರೆ ಗರ್ಭಗೃಹದ ಗೋಡೆ ಮತ್ತು ೧೮ ಕಂಬಗಳು ದೇವಾಲಯದ ಮೇಲ್ಛಾವಣಿಗೆ ಆಸರೆಯಾಗಿವೆ. ದೇವಾಲಯದ ಮುಖಮಂಟಪದ ನಾಲ್ಕು ಕಂಬಗಳು ಮಾತ್ರ ಇತ್ತೀಚಿನ ಅಂದರೆ ವಿಜಯನಗರೋತ್ತರ ಕಾಲದ್ದೆಂದು ಗುರುತಿಸಬಹುದು. ಉಳಿದವುಗಳು ಸರಳ, ಚತುರ್ಮುಖ ಕಂಬಗಳಾಗಿವೆ. ದೇವಾಲಯದ ಅಧಿಷ್ಠಾನ ಕೂಡ ಕುತ್ಯಾರು ಸೋಮನಾಥ ದೇವಾಲಯದ ಅಧಿಷ್ಠಾನವನ್ನು ಹೋಲುವ ಹಿನ್ನೆಲೆಯಲ್ಲಿ ಈ ದೇವಾಲಯದ ನಿರ್ಮಾಣ ಕಾಲವನ್ನು ಅದೇ ದೇವಾಲಯದ ಕಾಲದೊಂದಿಗೆ ಸಮೀಕರಿಸಬಹುದಾಗಿದೆ. ದೇವಾಲಯದ ಛಾವಣಿ ಎರಡು ತಲಗಳಲ್ಲಿ ಪಿರಮಿಡ್ಡಿನ ಆಕೃತಿಯಲ್ಲಿ ರಚಿತವಾಗಿದೆ. ಎರಡನೆಯ ಮೇಲ್ಛಾವಣಿಯ ಶಿಲೆಗಳು ಇಂದು ಕಂಡುಬರುತ್ತಿಲ್ಲ. ಪುನರ್‌ನಿರ್ಮಾಣದ ಸಂದರ್ಭಗಳಲ್ಲಿ ಎರಡನೆಯ

ತಲದ ಗೋಡೆಗಳನ್ನು ಮುರಕಲ್ಲುಗಳಿಂದ ನಿರ್ಮಾಣ ಮಾಡಿ ಮೇಲ್ಛಾವಣಿಗೆ ಮರ ಮತ್ತು ತಾಮ್ರದ ತಗಡುಗಳನ್ನು ಬಳಸಿ ನಿರ್ಮಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ಮರದ ಮೇಲ್ಛಾವಣಿಯ ಮನೆಗಳಲ್ಲಿ ಕಂಡುಬರುವ ಗವಾಕ್ಷ ಮಾದರಿಯ ರಚನೆ ಇಲ್ಲಿನ ವಿಶೇಷತೆ. ಈ ರಚನೆಯ ಆಧಾರದ ಮೇಲೆ ಕುತ್ಯಾರು ಸೋಮನಾಥನಿಗಿಂತ ಹಳೆಯ ರಚನೆ ಇದೆಂದು ಗುರುತಿಸಬಹುದು. ಪುನರ್‌ನಿರ್ಮಾಣದ ಕಾಲದಲ್ಲಿ ಗರ್ಭಗೃಹದ ಹಾಸುಗಲ್ಲಿನ ಮೇಲೆ ಕಂಡುಬಂದ ಸಂಖ್ಯೆಯನ್ನು (೧೪೨೧) ಆಧರಿಸಿ ಅದನ್ನೇ ದೇವಾಲಯದ ಪುನರ್‌ನಿರ್ಮಾಣದ ಕಾಲವೆಂದು ಗುರುತಿಸಬುದಾಗಿದೆ.

ದೇವಾಲಯದ ಮೂಲಮೂರ್ತಿಯಾದ ಶಿಶಿಲೇಶ್ವರನ ಲಿಂಗವೂ ಸ್ವಯಂಭು ಅಥವಾ ಉದ್ಭವಲಿಂಗ. ಹಾಗೆಯೇ ಕುತ್ಯಾರು ಸೋಮನಾಥನೂ ಸಹ ಸ್ವಯಂಭು ಉದ್ಭವಲಿಂಗ. ಈ ಬಗೆಯ ಲಿಂಗಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೭ ಮತ್ತು ೮ನೆಯ ಶತಮಾನದ ಹೊತ್ತಿಗಾಗಲೇ ಪೂಜಿಸಲ್ಪಡುತ್ತಿದ್ದವೆಂದು ಪಿ.ಗುರುರಾಜ ಭಟ್ಟರು ಅಭಿಪ್ರಾಯಪಡುತ್ತಾರೆ. ಈ ಕಾಲ ನಿರ್ದೇಶನದ ಆಧಾರದ ಮೇಲೆ ಚಿಂತಿಸಿದಾಗ ಶಿಶಿಲೇಶ್ವರ ಸಹ ಇದೇ ಕಾಲಘಟ್ಟದಲ್ಲಿ ಪೂಜಿಸಲ್ಪಡುತ್ತಿದ್ದು ಮರದ ಮೇಲ್ಛಾವಣಿಯನ್ನು ಹೊಂದಿದ್ದಂತೆ ತಿಳಿದುಬರುತ್ತದೆ. ಇದಕ್ಕೆ ಪೂರಕವಾಗಿ ಗರ್ಭಗುಡಿ ಮತ್ತು ಮುಖಮಂಟಪದ ನಡುವಿನ ಅಂತರಾಳವೆನಿಸುವ ರಚನೆ ನಮ್ಮ ಗಮನ ಸೆಳೆಯುತ್ತದೆ. ದೇವಾಲಯದ ಮೇಲ್ಛಾವಣಿಯ ಭಾರವನ್ನು ತಾಳಲು ಸಹಾಯಕವಾಗುವಂತೆ ಅನಂತರದ ನಿರ್ಮಾತೃಗಳು ಗರ್ಭಗೃಹದ ಸುತ್ತಲೂ ದಪ್ಪನಾದ ಗೋಡೆಯನ್ನು ನಿರ್ಮಿಸಿ ಶಿಲೆಯ ಮೇಲ್ಛಾವಣಿಯನ್ನು ನಿರ್ಮಿಸಿರುವುದು ಸ್ಥಳ ಪರೀಕ್ಷೆಯ ಕಾಲದಲ್ಲಿ ಕಂಡುಬಂದಿದೆ. ೧೫ನೆಯ ಶತಮಾನದ ಮೊದಲ ಭಾಗದಲ್ಲಿ ನವೀಕರಣ ನಡೆಸಿದ್ದಾರೆ ಎಂದು ಅಲ್ಲಿನ ೧೪೨೧ ಸಂಖ್ಯೆಯಲ್ಲಿ ಆಧಾರದ ಮೇಲೆ ನಂಬಬಹುದು. ಕೆಳದಿಯ ಅರಸ ವೆಂಕಟಪ್ಪ ನಾಯಕನ ಕಾಲದಲ್ಲಿ ಮತ್ತೊಮ್ಮೆ ನಡೆದ ನವೀಕರಣದ ಸಂದರ್ಭದಲ್ಲಿ ಈ ಕಂಬಗಳನ್ನು ಸೇರಿಸಿರುವ ಸಾಧ್ಯತೆಗಳಿವೆ. ಕಾರಣ ಕೆಳದಿಯ ನೃಪವಿಜಯದಲ್ಲಿ ಕ್ರಿ.ಶ. ೧೬೦೮ರಲ್ಲಿ ಒಂದನೆಯ ವೆಂಕಟಪ್ಪ ನಾಯಕನು ಇಲ್ಲಿನ ಕೋಟೆಯನ್ನು ಭದ್ರಪಡಿಸಿದ ಉಲ್ಲೇಖವಿದೆ. ಅಂದ ಮೇಲೆ ದೇವಾಲಯವನ್ನು ಪುನರ್‌ನಿರ್ಮಾಣ ಮಾಡಿದ ಎಲ್ಲಾ ಸಾಧ್ಯತೆಗಳಿವೆ. ಈ ಆಕರಗಳ ಅವಲೋಕನದ ಹಿನ್ನೆಲೆಯಲ್ಲಿ ಶಿಶಿಲೇಶ್ವರ ದೇವಾಲಯವು ಕ್ರಿ.ಶ. ೭ನೇ ಶತಮಾನದಲ್ಲಿ ಪೂಜಿಸಲ್ಪಡುತ್ತಿತ್ತು. ಅನಂತರ ೧೧ನೆಯ ಶತಮಾನದಲ್ಲಿ ಕಲ್ಲಿನಿಂದ ನಿರ್ಮಾಣಗೊಂಡು, ವಿಜಯನಗರದ ಪ್ರಾರಂಭಿಕ ದಿನಮಾನಗಳಲ್ಲಿ ಮತ್ತು ಕೆಳದಿ ವೆಂಕಟಪ್ಪನ ಕಾಲದಲ್ಲಿ ಪುನರ್ ನಿರ್ಮಾಣಗೊಂಡಿರುವಂತೆ ತಿಳಿದುಬರುತ್ತದೆ. ಅನಂತರದ ಜೈನ ಅರಸರುಗಳು ಇಲ್ಲಿ ಆಳ್ವಿಕೆ ನಡೆಸಿದ್ದರಿಂದ ಅವರೂ ಸಹ ಈ ದೇವಾಲಯದ ಪುರೋಭಿವೃದ್ಧಿಗೆ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಇತ್ತೀಚೆಗೆ ಕ್ರಿ.ಶ. ೨೦೦೦ದಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ನ್ಯಾಸವು ಈ ದೇವಾಲಯವನ್ನು ಸಂರಕ್ಷಿಸಿದೆ.

ದೇವಾಲಯದ ಮುಖಮಂಟಪದ ಕಂಬದಲ್ಲಿನ ಉಬ್ಬು ಶಿಲ್ಪಗಳಾದ ಯಾಳಿ, ನರ್ತಕಿ, ಮೃದಂಗವಾದಕ ಮತ್ತು ದೇವಾಲಯದ ಗರ್ಭಗುಡಿಯ ಹಿಂಭಾಗದ ಗೋಡೆಯಲ್ಲಿನ ಉಬ್ಬು ಶಿಲ್ಪಗಳಾದ ಹರಿಣಿ, ಮೊಲ, ಬಿಲ್ಲುಗಾರ, ಮತ್ಸ್ಯಗಳು ಮತ್ತು ಒಂದು ಲಜ್ಜಾಗೌರಿ ನಮ್ಮ ಗಮನ ಸೆಳೆಯುತ್ತವೆ.

## ಆಧಾರ ಸೂಚಿ


೧. ಕೆ. ಅನಂತರಾಮು, ದಕ್ಷಿಣದ ಸಿರಿನಾಡು, ೧೯೯೭, ಅನಂತ ಪ್ರಕಾಶನ, ದೇವಾಂಬ ಅಗ್ರಹಾರ, ಮೈಸೂರು.

೨. ಶ್ರೀ ಶಿಶಿಲ ಕ್ಷೇತ್ರ, ಶ್ರೀ ಶಿಶಿಲೇಶ್ವರ ಪ್ರಕಾಶನ, ಶಿಶಿಲ.

೩. ಮಂಜೇಶ್ವರ ಗಣಪತಿರಾವ್ ಐಗಳ್, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ೨೦೦೪, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೪. ಮುರಳೀಧರ ಉಪಾಧ್ಯ ಹಿರಿಯಡಕ ಮತ್ತು ನರಸಿಂಹಮೂರ್ತಿ ಪಿ.ಎನ್., ದಕ್ಷಿಣ ಕನ್ನಡ ಜಿಲ್ಲೆಯ ದೇವಾಲಯಗಳು, ೨೦೦೦, ಉಡುಪಿ.

೫. ರೇಷ್ಮ ಬಿ, ಶಿಶಿಲೇಶ್ವರ ದೇವಾಲಯ, ಮನಿಷಾ, ಎಸ್.ಡಿ.ಎಂ. ಕಾಲೇಜಿನ ವಾರ್ಷಿಕ ಸಂಚಿಕೆ, ೨೦೦೦, ಪುಟ ೪೦-೪೧.

# ಕರ್ನಾಟಕದಲ್ಲಿ ಅರಸರ ಶಿಲ್ಪಗಳು – ಒಂದು ಸಮೀಕ್ಷೆ

– ಎಸ್.ಕೆ. ಅರುಣಿ*

**ಭಾ**ರತೀಯ ಶಿಲ್ಪಕಲೆ ಪರಂಪರೆಯಲ್ಲಿ ಹೆಚ್ಚು ಚರ್ಚೆಗೆ ಗ್ರಾಸವಾಗಿರುವ ವಿಷಯವೆಂದರೆ ಅಲ್ಪಸಂಖ್ಯೆಯಲ್ಲಿ ದೊರೆಯುವ ಅರಸರ ಶಿಲ್ಪಗಳು. ಪಾಶ್ಚಾತ್ಯ ಶಿಲ್ಪಕಲೆಯಲ್ಲಿ ಸಮೃದ್ಧವಾಗಿ ಕಾಣಬರುವ ಭಾವಶಿಲ್ಪ ಪರಂಪರೆ ಭಾರತೀಯ ಶಿಲ್ಪದಲ್ಲಿ ತನ್ನ ಪ್ರಾಧ್ಯಾನ್ಯತೆ ಪಡೆಯದೇ ಕೇವಲ ಧಾರ್ಮಿಕ ಹಿನ್ನೆಲೆಯಲ್ಲಿ ಮೂರ್ತಿಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ರಚನೆಗೊಂಡಿವೆ. ಭಾರತದಲ್ಲಿ ಮೊಗಲರ ಆಳ್ವಿಕೆಯೊಂದಿಗೆ ಅರಸರ ಚಿತ್ರರಚನೆಯ ಪರಂಪರೆ ಪರಿಚಯವಾಯಿತೆಂಬ ಬಲವಾದ ನಂಬಿಕೆ ಕೆಲವು ಪಾಶ್ಚಾತ್ಯ ವಿದ್ವಾಂಸರಲ್ಲಿದೆ[1]. ಭಾರತೀಯ ಕಲೆಯ ಪರಂಪರೆಯಲ್ಲಿ ಅಚಲವಾದ ಧರ್ಮ ಆಧಾರಿತ ವಿಷಯಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಇದ್ದು ನಶ್ವರವೆನಿಸುವ ಮಾನವರ ಮೂರ್ತಿ ಅಥವಾ ಭಾವಚಿತ್ರಗಳು ರಚನೆ ಹಾಗೂ ಅರಸರ ಶಿಲ್ಪ ರಚನೆ ಪರಕೀಯ ಅರಸರೊಂದಿಗೆ ಪರಿಚಯಗೊಂಡಿತು ಎಂಬ ಅಭಿಪ್ರಾಯವನ್ನು ಹಿಂದಿನ ಕಲಾ–ಇತಿಹಾಸಕಾರರು ಹೊಂದಿದ್ದರು. ಆದರೆ ಇತ್ತೀಚಿನ ಶೋಧನೆಗಳಿಂದ ಈ ಹಳೆಯ ಅಭಿಪ್ರಾಯ ಪುನರ್ ಪರಿಶೀಲನೆಗೊಂಡು ಭಾರತದಲ್ಲಿಯೂ ಸಹ ಪ್ರಾಚೀನ ಕಾಲದಿಂದಲೂ ಆಳರಸರ ಶಿಲ್ಪಗಳ ಪರಂಪರೆ ರೂಢಿಯಲ್ಲಿತ್ತು ಎಂಬುದು ಶಿಲ್ಪಗಳ ಆಧಾರದಿಂದ ಗುರುತಿಸಲ್ಪಟ್ಟಿದೆ. ದೇವಾಲಯ, ವಿಹಾರ, ಮಠ, ಬಸದಿ ಇತ್ಯಾದಿಗಳನ್ನು ನಿರ್ಮಿಸಲು ದಾನ ನೀಡಿದ ಆಶ್ರಯದಾತ ಅರಸ ಅಥವಾ ಅಧಿಕಾರಿಯ ಉಬ್ಬುಶಿಲ್ಪವನ್ನು ಗೋಡೆ ಅಥವಾ ಕಂಬಗಳ ಮೇಲೆ ರಚಿಸುವುದು ಭಾರತದಲ್ಲಿಯೂ ರೂಢಿಯಲ್ಲಿತ್ತು ಎಂಬುದು ಇತ್ತೀಚಿನ ಸಂಶೋಧನೆಯಿಂದ ದೃಢಪಡುತ್ತದೆ. ಆದರೆ ಪಾಶ್ಚಾತ್ಯ ಪರಂಪರೆಯಲ್ಲಿ ವ್ಯಕ್ತಿಯ ಮೂಲ ರೂಪ ಅಥವಾ ಯಥಾವತ್ತಾದ ದೈಹಿಕ ಲಕ್ಷಣಗಳನ್ನು ಪ್ರತಿಬಿಂಬಿಸುವ ಅರಸರ ಶಿಲ್ಪಗಳ ರಚನೆ ಕಂಡುಬರುವಂತೆ ಭಾರತೀಯ ಶಿಲ್ಪಗಳಲ್ಲಿ ಕಂಡುಬರುವುದಿಲ್ಲ. ವ್ಯಕ್ತಿ ತದ್ರೂಪ ರಚನೆ ಪ್ರತಿಪಾದಿಸದೆ, ಸಾಂಕೇತಿಕವಾಗಿ ರೂಪಿಸುವ ಅರಸರ ಶಿಲ್ಪಗಳಿಗೆ ಭಾರತೀಯ ಪರಂಪರೆ ಮನ್ನಣೆಯನ್ನು ನೀಡಿದೆ. ಆ ಕಾರಣಕ್ಕಾಗಿ ಬಹುತೇಕ ಅರಸರ ಶಿಲ್ಪಗಳು ಏಕರೂಪದಲ್ಲಿ ರಚನೆಗೊಂಡಿವೆ. ನಮಸ್ಕಾರ ಮುದ್ರೆಯ ಭಕ್ತನ ರೂಪದ ಶಿಲ್ಪಗಳನ್ನು ದೇವಾಲಯಗಳ ಗೋಡೆ ಅಥವಾ ಕಂಬಗಳ ಮೇಲೆ ಕಾಣುತ್ತೇವೆ. ಇವುಗಳನ್ನು ಗುರುತಿಸಲು ಏಕೈಕ ಸಾಧನಗಳೆಂದರೆ ಶಾಸನಗಳು. ಶಾಸನ ಸಮೇತ ದೊರೆಯುವ ಅರಸರ ಶಿಲ್ಪಗಳು ಕಡಿಮೆ ಸಂಖ್ಯೆಯಲ್ಲಿದ್ದರೂ ಸಮಕಾಲೀನ ಶಾಸನಗಳನ್ನು ಅಥವಾ ಶಿಲ್ಪಶೈಲಿಗಳನ್ನು ಆಧರಿಸಿ ಅರಸರ ಶಿಲ್ಪಗಳನ್ನು ಗುರುತಿಸಲು ವಿದ್ವಾಂಸರು ಪ್ರಯತ್ನಿಸಿದ್ದಾರೆ.

## ಅರಸರ ಶಿಲ್ಪ ರಚನೆಯ ಪರಂಪರೆ

ಭಾರತದಲ್ಲಿ ಹರಪ್ಪಾ ಸಂಸ್ಕೃತಿಯ ಕಾಲದಿಂದಲೇ ವ್ಯಕ್ತಿಯ ಅಥವಾ ಗಣ್ಯರ ಶಿಲ್ಪರಚನಾ ಸಂಪ್ರದಾಯ ಪ್ರಾರಂಭಗೊಂಡಿತು ಎಂಬುದು ವಿದ್ವಾಂಸರ ವಾದ ಮತ್ತು ಅಭಿಪ್ರಾಯವಾಗಿದೆ. ಹರಪ್ಪಾ ಸಂಸ್ಕೃತಿಯ ಮಹೆಂಜೋದಾರೋದಲ್ಲಿ ದೊರೆತ ಗಡ್ಡಧಾರಿ ವ್ಯಕ್ತಿಯ ಶಿಲ್ಪ, ಆ ಕಾಲದ ಒಬ್ಬ ಪ್ರಮುಖ ವ್ಯಕ್ತಿಯ ಶಿಲ್ಪವಾಗಿದ್ದು, ಅರಸರ ಶಿಲ್ಪರಚನಾ ಪರಂಪರೆಯ ಪ್ರಾರಂಭಿಕ ಉದಾಹರಣೆಯಾಗಿ ಇದನ್ನು ಗುರುತಿಸಲ್ಪಡುತ್ತದೆ.

ಕುಶಾನ ಅರಸರ ಕಾನಿಷ್ಕ ಹಾಗೂ ಇದೇ ಮನೆತನದ ವಿಮಾ ಕಡಫಿಸ್ ಮತ್ತು ಇತರ ಅರಸರ ಶಿಲ್ಪಗಳು ಶಾಸನ ಸಮೇತ ದೊರೆತಿದ್ದು ಭಾರತೀಯ ಶಿಲ್ಪಪರಂಪರೆಯಲ್ಲಿ ಅರಸರ ಶಿಲ್ಪಸಂಪ್ರದಾಯ ರೂಢಿಯಲ್ಲಿತ್ತು ಎಂಬ ವಾದ ಪುಷ್ಟೀಕರಿಸಲು ಪ್ರಧಾನ ಆಕಾರಗಳಾಗಿ ಗುರುತಿಸಲ್ಪಡುತ್ತವೆ. ಮಥುರಾ ವಸ್ತುಸಂಗ್ರಹಾಲಯದಲ್ಲಿರುವ ಕಾನಿಷ್ಕ ಅರಸನ ಶಿಲ್ಪ ನಾಶವಾಗಿದ್ದು ಇದು ಶಿರ ರಹಿತವಾಗಿದ್ದು ಉಡುಗೆ ಹಾಗೂ ಖಡ್ಗದ ಆಧಾರದಿಂದ ಅರಸನ ಶಿಲ್ಪವೆಂದು ಸ್ಪಷ್ಟವಾಗಿ ಗುರುತಿಸಬಹುದು. ಅಲ್ಲದೇ ಇದರ ಮೇಲಿನ ಶಾಸನ "ಮಹಾರಾಜ ರಾಜಾತಿರಾಜ ದೇವಪುತ್ರೋ ಕಾನಿಷ್ಕೋ" ಎಂಬುದಾಗಿ

---

* ಉಪ ನಿರ್ದೇಶಕರು, ಐ.ಸಿ.ಹೆಚ್.ಆರ್., ಮೈಸೂರು ಬ್ಯಾಂಕ್ ವೃತ್ತ, ಅರಮನೆ ರಸ್ತೆ, ಬೆಂಗಳೂರು– ೫೬೦೦೦೯.

ಇದ್ದು ಇದನ್ನು ಆಧರಿಸಿ ಕುಶಾನ ಅರಸರ ಕಾನಿಷ್ಕ ಚಕ್ರವರ್ತಿಯದು ಎಂಬು ಗುರುತಿಸಲಾಗಿದೆ. ಇದು ಭಾರತದಲ್ಲಿ ದೊರೆತ ಪ್ರಥಮ ಶಾಸನೋಕ್ತ ಭಾವಶಿಲ್ಪವಾಗಿದೆ.

**ಕರ್ನಾಟಕದಲ್ಲಿ ಅರಸರ ಶಿಲ್ಪಗಳು**

ಪ್ರಸ್ತುತ ಲೇಖನ ಕರ್ನಾಟಕ ಪ್ರದೇಶದಲ್ಲಿ ಶೋಧಿಸಲ್ಪಟ್ಟ ವಿವಿಧ ಅರಸರ ಭಾವಶಿಲ್ಪಗಳ ಸಂಕ್ಷಿಪ್ತ ಮಾಹಿತಿ ಹಾಗೂ ವಿಶ್ಲೇಷಣೆಯನ್ನು ಒಳಗೊಂಡಿದೆ. ಅಲ್ಲದೇ ಕನ್ನಡ ನಾಡಿನ ಅರಸರ ಶಿಲ್ಪಗಳು ಹೊರ ರಾಜ್ಯಗಳಲ್ಲಿ ದೊರೆತ ವರದಿಗಳಿದ್ದು ಅವುಗಳನ್ನು ಕೂಡಾ ಪ್ರಸ್ತುತ ಲೇಖನದಲ್ಲಿ ನೀಡಲಾಗಿದೆ.

೧೯೯೭-೯೮ರ ಅವಧಿಯಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಗುಲ್ಬರ್ಗಾ ಜಿಲ್ಲೆಯ ಸನ್ನತಿ ಹತ್ತಿರದ ಕನಗನಹಳ್ಳಿಯ ಬೌದ್ಧಸ್ತೂಪ ಅವಶೇಷದ ಉತ್ಖನನ ಕೈಗೊಂಡ ಸಂದರ್ಭದಲ್ಲಿ ಸುಣ್ಣದ ಕಲ್ಲಿನಲ್ಲಿ ಕೊರೆದ ಅರಸನ ಶಿಲ್ಪವನ್ನು ಶೋಧಿಸಿದರು; ಈ ಶಿಲ್ಪದ ಕೆಳಭಾಗದಲ್ಲಿ "ರಾಯೋ ಅಸೋಕೋ" ಎಂದು ಬ್ರಾಹ್ಮಿ ಲಿಪಿಯಲ್ಲಿ ಪ್ರಾಕೃತ ಭಾಷೆಯಲ್ಲಿ ಬರೆಯಲಾಗಿದೆ. ಕನಗನಹಳ್ಳಿಯ ಬೌದ್ಧಸ್ತೂಪ ಒಂದು ಮಹಾಚೈತ್ಯವಾಗಿದ್ದು ಕ್ರಿ.ಪೂ.೧ನೇ ಶತಮಾನದಿಂದ ಕ್ರಿ.ಶ.೩ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ಶಾತವಾಹನ ಅರಸರ ಕಾಲದಲ್ಲಿ ನಿರ್ಮಿಸಲ್ಪಟ್ಟಿದೆ. ಮಹಾಯಾನ ಪಂಥಕ್ಕೆ ಸೇರಿದ ಈ ಸ್ತೂಪ ಸಂಪೂರ್ಣವಾಗಿ ಶೋಧಿಸಲ್ಪಟ್ಟಿದ್ದು ಈ ಅವಶೇಷದಲ್ಲಿ ಅಶೋಕನ ಶಿಲ್ಪವಲ್ಲದೇ ಶಾತವಾಹನ ಮನೆತನದ ಅರಸರ ಹಾಗೂ ರಾಣಿಯರ ಶಿಲ್ಪಗಳು ದೊರೆತಿರುವ ಮಾಹಿತಿಯನ್ನು ಇಲಾಖೆಯ ವರದಿಯಲ್ಲಿ ಉಲ್ಲೇಖಿಸಲಾಗಿದೆ[೨].

ಮೌರ್ಯ ಚಕ್ರವರ್ತಿ ಅಶೋಕನ ಶಿಲ್ಪವು ಮೌರ್ಯರ ನಂತರ ಆಳ್ವಿಕೆ ನಡೆಸಿದ ಶಾತವಾಹನರ ಕಾಲದಲ್ಲಿ ರಚನೆಗೊಂಡಿರುವುದು ಒಂದು ವಿಶೇಷ. ಈ ಪ್ರದೇಶದಲ್ಲಿ ಬೌದ್ಧಧರ್ಮ ಪ್ರಚಾರ ಹಾಗೂ ಆಶ್ರಯ ನೀಡಿದ ಅಶೋಕ ಚಕ್ರವರ್ತಿಗೆ ಶಾತವಾಹನರ ಕಾಲದಲ್ಲಿ ಪ್ರಾಧಾನ್ಯತೆ ನೀಡಿರುವುದನ್ನು ಈ ಶಿಲ್ಪದಿಂದ ಗುರುತಿಸಬಹುದು. ಸನ್ನತಿಯಲ್ಲಿಯೇ ಅಶೋಕನ ಧರ್ಮಫಲಕ ಶಾಸನ ದೊರೆತಿರುವುದನ್ನು ಸ್ಮರಿಸಬಹುದು. ಪ್ರಾಯಶಃ ಅಶೋಕ ಚಕ್ರವರ್ತಿ ಸನ್ನತಿ ಕ್ಷೇತ್ರಕ್ಕೆ ಭೇಟಿ ನೀಡಿರುವ ಸಾಧ್ಯತೆ ಈ ಶಿಲ್ಪದಿಂದ ವ್ಯಕ್ತವಾಗುತ್ತದೆ. ಈ ಶಿಲ್ಪದಲ್ಲಿ ರಾಜಭಂಗಿಯಲ್ಲಿ ಅಶೋಕ ತನ್ನ ರಾಣಿಯೊಂದಿಗೆ ನಿಂತಿರುವುದು ಬಲಗಡೆಯ ಸೇವಕಿ ರಾಜಲಾಂಛನವಾದ ಕೊಡೆಯನ್ನು ಚಕ್ರವರ್ತಿಯ ಶಿರದ ಮೇಲ್ಭಾಗದಲ್ಲಿ ಹಿಡಿದಿರುವುದು ಶಾತವಾಹನರ ಶೈಲಿಯಲ್ಲಿರುವ ಈ ಶಿಲ್ಪದಲ್ಲಿ 'ರಾಯೋ ಅಸೋಕೋ' ಎಂದು ಕಿರು ಶಾಸನವಿದೆ. ಈ ಶಿಲ್ಪ ಕರ್ನಾಟಕದಲ್ಲಿ ದೊರೆತ ಅತ್ಯಂತ ಪ್ರಾಚೀನ ಭಾವಶಿಲ್ಪವೆಂದು ಗುರುತಿಸಬಹುದು. ಇದೇ ಸ್ಥಳದಲ್ಲಿಯೇ. ಶಾತವಾಹನ ಅರಸರ ಶಿಲ್ಪಗಳು ದೊರೆತಿದ್ದು ಅವುಗಳ ಪೂರ್ಣ ಮಾಹಿತಿ ಇನ್ನು ಪ್ರಕಟಗೊಳ್ಳಬೇಕಾಗಿದೆ.

ಶಾತವಾಹನ ಅರಸ ಗೌತಮಿಪುತ್ರ ಶಾತಕರ್ಣಿಯ ಒಂದು ಶಿಲ್ಪ ಅಮರಾವತಿ ಮಹಾಸ್ತೂಪದಲ್ಲಿ ದೊರೆತಿದೆ. ಈಗ ಈ ಶಿಲ್ಪವು ಚೆನ್ನೈನ ಸರ್ಕಾರಿ ವಸ್ತುಸಂಗ್ರಹಾಲಯದಲ್ಲಿದೆ. ಶಿಲ್ಪದ ಶಿರ ಹಾಗೂ ಭುಜಗಳು ನಾಶವಾಗಿದ್ದು ಉಡುಪು ಹಗೂ ಆಭರಣಗಳನ್ನಾಧರಿಸಿ ಆ ಕಾಲದ ಗಣ್ಯವ್ಯಕ್ತಿಯ ಅಥವಾ ಗೌತಮಿಪುತ್ರ ಶಾತಕರ್ಣಿಯ ಶಿಲ್ಪವೆಂದು ವಿದ್ವಾಂಸರು ಗುರುತಿಸಿದ್ದಾರೆ[೩].

ತಮಿಳುನಾಡಿನ ಪಲ್ಲವರೊಂದಿಗೆ ರಾಜಕೀಯ ಸಂಬಂಧ ಹೊಂದಿದ್ದ ಬನವಾಸಿಯ ಕದಂಬ ಅರಸರ ಶಿಲ್ಪಗಳು ದೊರೆತ ವರದಿಗಳಿಲ್ಲ. ಆದರೆ ಶಾಸನೋಕ್ತ ಪಲ್ಲವ ಅರಸರ ಶಿಲ್ಪಗಳು ಮಹಾಬಲಿಪುರಂ ಹಾಗೂ ಪುದುಕೋಟೆ ಪ್ರದೇಶದ ಕಣ್ಣನ್‌ದರ್ ಕೋಯಿಲ್ ಗುಹಾಂತರ ದೇವಾಲಯಗಳಲ್ಲಿ ದೊರೆತಿವೆ.

ಬಾದಾಮಿ ಚಲುಕ್ಯ ಅರಸ ಇಮ್ಮಡಿ ವಿಕ್ರಮಾದಿತ್ಯ ಹಾಗೂ ಆತನ ರಾಣಿ ತ್ರೈಲೋಕ್ಯ ಮಹಾದೇವಿ ಜೊತೆಯಾಗಿ ನಿಂತಿರುವ ಉಬ್ಬುಶಿಲ್ಪಗಳು ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯದ ನವರಂಗ ಮಂಟಪದ ದಕ್ಷಿಣ ಗೋಡೆಯಲ್ಲಿ ಇರುವುದಾಗಿ ವಿದ್ವಾಂಸ ಅರವಮುಥನ್ ಗುರುತಿಸಿದ್ದಾರೆ[೪]. ವಿವಿಧ ಆಭರಣಗಳನ್ನು ಧರಿಸಿ ವಿಶೇಷ ಕೇಶಾಲಂಕಾರದಿಂದ ಕೂಡಿ ಅರಸನು ರಾಣಿಯ ಜೊತೆ ನಿಂತಿರುವನು ರಾಣಿಯೂ ಕೂಡ ಅರಸನ ಕೊರಳಿನ ಸುತ್ತ ತನ್ನ ಬಲಗೈಯನ್ನು ಹಾಕಿರುವಳು. ಆದ್ದರಿಂದ ಈ ಶಿಲ್ಪವು ದೇವಾಲಯಗಳಲ್ಲಿ ಕಂಡುಬರುವ ಮಿಥುನ ಶಿಲ್ಪಗಳಾಗಿರುವ ಸಾಧ್ಯತೆ ಇದೆ.

ಅದರಂತೆ ರಾಜು ಕಾಳಿದಾಸ್ ವಿದ್ವಾಂಸರು ಐಹೊಳೆಯ ಮೇಗುತಿ ದೇವಾಲಯದ ಹೊರಗೋಡೆಯ ಮೇಲೆ ಇಮ್ಮಡಿ ಪುಲಕೇಶಿಯ ಶಿಲ್ಪಗಳಿರುವುದಾಗಿ ಗುರುತಿಸಿದ್ದಾರೆ. ಆದರೆ ಈ ಮೇಲೆ ಉಲ್ಲೇಖಿಸಿದ ಮಲ್ಲಿಕಾರ್ಜುನ ದೇವಸ್ಥಾನದ ಮಿಥುನ ಶಿಲ್ಪ ಮಾದರಿಯಲ್ಲಿದ್ದು ಇದೂ ಕೂಡ ಮಿಥುನ ಶಿಲ್ಪವಾಗಿದೆ.

ಎಲ್ಲೋರಾದ ಗುಹಾಂತರ ಕೈಲಾಸ ದೇವಾಲಯದ ಯಜ್ಞಶಾಲೆಯ ಗೋಡೆಯ ಮೇಲೆ ರಾಣಿಯ ಶಿಲ್ಪವಿರುವುದಾಗಿ ಇತ್ತೀಚೆಗೆ ವಿದ್ವಾಂಸರು ಶೋಧಿಸಿದ್ದಾರೆ[೫]. ಯಜ್ಞಶಾಲೆಯ ನಿರ್ಮಾಣಕರ್ತೆಯೆಂದು ಗುರುತಿಸಲ್ಪಡುವ ರಾಷ್ಟ್ರಕೂಟರ ರಾಣಿಯ ಶಿಲ್ಪದಲ್ಲಿ ರಾಜಪೋಷಾಕು ಉಡುಪುಗಳು, ಕೇಶಾಲಂಕಾರ ವಿಶೇಷವೆನಿಸಿದ್ದು ಪಕ್ಕದಲ್ಲಿ ಸೇವಕಿಯರ ಶಿಲ್ಪಗನ್ನು ಕಾಣುತ್ತೇವೆ. ಶಿಲ್ಪ ವೈಶಿಷ್ಟ್ಯಗಳಿಂದಾಗಿ ಈ ಶಿಲ್ಪವನ್ನು ರಾಷ್ಟ್ರಕೂಟರ ರಾಣಿಯೆಂದು ಗುರುತಿಸಲಾಗಿದೆ.

ರಾಷ್ಟ್ರಕೂಟರ ಸಮಕಾಲೀನರಾದ ನೊಳಂಬ ಅರಸರ ಶಿಲ್ಪಗಳನ್ನು ವಿದ್ವಾಂಸರು ಶೋಧಿಸಿದ್ದಾರೆ. ಕೋಲಾರ ಜಿಲ್ಲೆಯ ಆವಣಿ ದೇವಾಲಯಗಳ ಸಂಕೀರ್ಣದಲ್ಲಿ ಹೊರಗೋಡೆಯ ಮೇಲೆ ನೊಳಂಬ ಅರಸ ವೀರ ನೊಳಂಬನ ಶಿಲ್ಪವನ್ನು ಶಾಸನ ಆಧಾರದಿಂದ ಗುರುತಿಸಲಾಗಿದೆ. ಅಣ್ಣಿಗ ಎಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದ ವೀರನೊಳಂಬ ಅರಸ ಕಿರೀಟಧಾರಿಯಾಗಿ ರಾಜಪೋಷಾಕುವಿನಲ್ಲಿ ಕೈಯಲ್ಲಿ ಮಾಲೆ ಹಿಡಿದು ನಿಂತಿರುವ ಶಿಲ್ಪವನ್ನು ನೊಳಂಬ ದೇವಾಲಯಗಳ ಬಗ್ಗೆ ಅಧ್ಯಯನ ಕೈಗೊಂಡ ಆಂಡ್ರೀವ್ ಕೋಹೆನ್ ಅವರು ಗುರುತಿಸಿದ್ದಾರೆ[೬]. ಇದೇ ದೇವಾಲಯದ ಉತ್ತರ ದಿಕ್ಕಿನ ಗೋಡೆಯ ಮೇಲೆ ವೀರನೊಳಂಬ ಅರಸರ ಧರ್ಮಗುರು ಹಾಗೂ ಸ್ಥಾನಪತಿ ತ್ರಿಭುವನಕರ್ತರ ಭಟ್ಟಾರಕನ ಶಿಲ್ಪವು ಇರುವುದು. ದೇವಾಲಯದ ನಿರ್ಮಾತೃ ಹಾಗೂ ಸ್ಥಾಪತಿಯರೀರ್ವರ ಶಿಲ್ಪಗಳು ಇರುವುದು ಆವಣಿ ದೇವಾಲಯದ ವಿಶೇಷ.

ಚಿಕ್ಕಬಳ್ಳಾಪುರ ಜಿಲ್ಲೆಯ ನಂದಿಯ ಭೋಗನಂದೀಶ್ವರ ದೇವಾಲಯದಲ್ಲಿ ಚೋಳ ಅರಸ ರಾಜೇಂದ್ರ ಚೋಳನ ಶಿಲ್ಪವಿರುವುದು ಮೈಸೂರು ಪುರಾತತ್ವ ಇಲಾಖೆಯ ವಾರ್ಷಿಕ ವರದಿ ೧೯೧೪ರಲ್ಲಿ ಪ್ರಕಟಗೊಂಡಿದೆ[೭]. ಈ ಶಿಲ್ಪ ಗ್ರಾನೈಟ್ ಶಿಲೆಯಲ್ಲಿ ರಚಿಸಲಾಗಿದ್ದು ಇದು ಒಂದು ಬಿಡಿ ಶಿಲ್ಪ. ಈ ಶಿಲ್ಪದಲ್ಲಿ ರಾಜೇಂದ್ರಚೋಳ ಅರಸ ಭಕ್ತಿಭಾವದಿಂದ ಧ್ಯಾನ ಮಾಡುತ್ತಿರುವಂತೆ ತೋರಿಸಲಾಗಿದೆ. ಪದ್ಮಾಸನದಲ್ಲಿ ಕುಳಿತು ಬಲಗೈಯನ್ನು ತನ್ನ ಎದೆಯ ಮೇಲೆ ಧ್ಯಾನಮುದ್ರೆಯಲ್ಲಿ ಇರಿಸಿ ಪಠಣ ಮಾಡುತ್ತಿರುವಂತೆ ಶಿಲ್ಪದಲ್ಲಿ ಕಾಣುತ್ತೇವೆ. ಆದರೆ ರಾಜನ ಲಕ್ಷಣಗಳಾದ ಕಿರೀಟ, ಆಭರಣಗಳು, ಛತ್ರ-ಚಾಮರಗಳು ಇತ್ಯಾದಿ ಈ ಶಿಲ್ಪದಲ್ಲಿ ಕಾಣುವುದಿಲ್ಲ. ಆದರೆ ಈ ಶಿಲ್ಪವನ್ನು ಒಬ್ಬ ಯತಿಯಂತೆ ಬಿಂಬಿಸಲಾಗಿದೆ.

ಚೋಳ ಅರಸ ಕೈಗೊಂಡ ದೇಗುಲಗಳ ನಾಶ ಕಾರ್ಯದ ಪ್ರಾಯಶ್ಚಿತ್ತಕ್ಕಾಗಿ ಕಿರೀಟದಂತಹ ರಾಜಲಕ್ಷಣಗಳನ್ನು ತೊರೆದು ತನ್ನ ಶಿಲ್ಪವನ್ನು ರಾಜೇಂದ್ರ ಚೋಳ ಹಾಕಿಸಿದ್ದಾನೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಚೋಳ ಅರಸನ ಶಿಲ್ಪ ಕರ್ನಾಟಕದ ದೇವಾಲಯದಲ್ಲಿ ಇರುವುದು ಒಂದು ಪ್ರಶ್ನಾರ್ಥ ವಿಷಯ. ಇತ್ತೀಚೆಗೆ ಎಂ.ಎಸ್. ಕೃಷ್ಣಮೂರ್ತಿಯವರು ತಮ್ಮ ಲೇಖನದಲ್ಲಿ ವಿವರಿಸುತ್ತಾ ಅವಳಿ ದೇಗುಲಗಳಾದ ಭೋಗ ನಂದೀಶ್ವರ ಮತ್ತು ಅರುಣಾಚಲೇಶ್ವರ ದೇವಾಲಯಗಳಲ್ಲಿ ಬಲಬದಿಯ ಅರುಣಾಚಲೇಶ್ವರವನ್ನು ಚೋಳ ಅರಸ ರಾಜೇಂದ್ರ ಚೋಳನು ನಾಶಗೊಳಿಸಿ ದೇಗುಲದ ಕಂಬ, ದ್ವಾರ ಮತ್ತು ಶಿಲ್ಪಗಳನ್ನು ವಿಜಯದ ಪಾರಿತೋಷಕವಾಗಿ ಕೊಂಡೊಯ್ದು ತನ್ನ ರಾಜ್ಯದ ದೇವಾಲಯಕ್ಕೆ ಬಳಸಿಕೊಂಡನು. ಆ ವೇಳೆಯಲ್ಲಿ ಚೋಳ ಅರಸನು ತನ್ನ ಶಿಲ್ಪವನ್ನು ನಂದಿಯ ಭೋಗ ನಂದೀಶ್ವರ ದೇವಾಲಯದಲ್ಲಿ ರಚಿಸಿಕೊಂಡನು ಎಂದು ವಿವರಿಸಿದ್ದಾರೆ[೮]. ರಾಜೇಂದ್ರ ಚೋಳ ಅರಸ ನೊಳಂಬ ರಾಜ್ಯದ ಮೇಲೆ ದಾಳಿ ಮಾಡಿದ ಬಗ್ಗೆ ಐತಿಹಾಸಿಕ ದಾಖಲೆಗಳಿದ್ದು ನೊಳಂಬ ದೇವಾಲಯದ ಭಾಗಗಳನ್ನು ಯುದ್ಧದಲ್ಲಿ ಜಯಗಳಿಸಿದ ಪಾರಿತೋಷಕದ ರೂಪದಲ್ಲಿ ಕೊಂಡೊಯ್ದು ತನ್ನ ರಾಜಧಾನಿಯಲ್ಲಿ ಪ್ರದರ್ಶನವಿಟ್ಟಿದ್ದ ಬಗ್ಗೆ ದಾಖಲೆಗಳಿಂದ ತಿಳಿದುಬರುತ್ತದೆ.

ಕ್ರಿ.ಶ. ೧೩ನೆಯ ಶತಮಾನದಲ್ಲಿ ಹೊಯ್ಸಳರ ಸಾಮಂತರಾದ ಇಳವಂಜಿ ರಾಯರ ಶಿಲ್ಪಗಳು ಆವನಿ, ಮಡಿವಾಳ, ಕುರುಡುಮಲೆ ಇತ್ಯಾದಿ ದೇವಾಲಯಗಳಲ್ಲಿ ದೊರಕಿದ ವರದಿಗಳಿವೆ[೯].

ಕಲ್ಯಾಣದ ಚಾಲುಕ್ಯ ಅರಸರ ಶಿಲ್ಪಗಳು ದೊರಕಿದ್ದು, ಅವುಗಳಲ್ಲಿ ಬಳ್ಳಾರಿ ಜಿಲ್ಲೆಯ ಕುರುವತ್ತಿಯಲ್ಲಿ ದೊರೆತ ಒಂದನೆಯ ಸೋಮೇಶ್ವರನ ಶಿಲ್ಪ ಬಹು ಮುಖ್ಯವಾದದ್ದು. ತುಂಗಭದ್ರಾ ನದಿಯ ತೀರದಲ್ಲಿರುವ ಕುರುವತ್ತಿಯಲ್ಲಿ



ಸನ್ನತಿಯಲ್ಲಿ ದೊರೆತಿರುವ ಅಶೋಕನ ಶಿಲ್ಪ



ರಾಷ್ಟ್ರಕೂಟರ ರಾಣಿಯರ ಶಿಲ್ಪ
(ಎಲ್ಲೋರದ ಕೈಲಾಸ ದೇವಾಲಯ)




ಮಲ್ಲಿಕಾರ್ಜುನರಾಯನ ಶಿಲ್ಪ
(ವಿಜಯನಗರದ ಅರಸು)



ಕೃಷ್ಣದೇವರಾಯ ಮಡದಿಯರೊಂದಿಗಿರುವ ಶಿಲ್ಪ
(ತಿರುಪತಿ)



ಅಚ್ಯುತದೇವರಾಯನ ಶಿಲ್ಪ
(ವಿಜಯನಗರದ ಅರಸು)



ಕೃಷ್ಣದೇವರಾಯನ ಶಿಲ್ಪ
(ಹಂಪಿ)



ಸದಾಶಿವರಾಯನ ಶಿಲ್ಪ
(ವರದರಾಜಸ್ವಾಮಿ ದೇವಾಲಯ, ಕಂಚಿ)



ಕೆಂಪೇಗೌಡರ ಶಿಲ್ಪ
(ಶಿವಗಂಗೆಯಲ್ಲಿನ ಕಂಚಿನ ವಿಗ್ರಹ)



ಕೆಂಪೇಗೌಡರ ಶಿಲ್ಪ



ಕೆಂಪೇಗೌಡರ ಶಿಲ್ಪ
(ಶಿವಗಂಗೆಯ ದೇವಸ್ಥಾನದ ಕಂಬದ ಮೇಲಿರುವ ವಿಗ್ರಹ)

ಒಂದನೆಯ ಸೋಮೇಶ್ವರ ಕ್ರಿ.ಶ. ೧೦೬೮ ಮಾರ್ಚಿ ೨೯ರಂದು ನದಿಯಲ್ಲಿ ತನ್ನ ಕೊನೆಯುಸಿರೆಳೆದನೆಂದು ಬಳ್ಳಿಗಾವೆಯ ಶಾಸನದಲ್ಲಿ ದಾಖಲೆಯಾಗಿದೆ. ಒಂದನೇ ಸೋಮೇಶ್ವರನಿಗೆ ಅಹವಮಲ್ಲನೆಂದು ಕೂಡ ಕರೆಯಲಾಗುತ್ತಿತ್ತು. ಅರಸರ ಸ್ಮಾರಕಾರ್ಥ ಕುರುವತ್ತಿಯಲ್ಲಿ ಅಹವಮಲ್ಲೇಶ್ವರ ಶೈವ ದೇವಾಲಯವನ್ನು ಕಟ್ಟಲಾಯಿತೆಂದು ವಿದ್ವಾಂಸರು ಗುರುತಿಸಿದ್ದಾರೆ. ಕುರುವತ್ತಿಯ ಈ ದೇವಸ್ಥಾನದಲ್ಲಿ ಒಂದನೇ ಸೋಮೇಶ್ವರನು ತನ್ನ ಇಬ್ಬರು ರಾಣಿಯರೊಂದಿಗೆ ಕುಳಿತಿರುವ ಶಿಲ್ಪವಿದೆ. ಅರಸನ ಶಿಲ್ಪವು ಮದುಶಿಲೆಯಾದ ಬಳಪದ ಶಿಲೆಯ ಒಂದು ದೊಡ್ಡ ಫಲಕದಲ್ಲಿ ಕೆತ್ತಲಾಗಿದೆ. ಈ ಶಿಲ್ಪವು ಎರಡು ಮೀಟರ್ ಎತ್ತರವಾಗಿದ್ದು ದೇವಾಲಯದ ದಕ್ಷಿಣ ದಿಕ್ಕಿನ ಮುಖಮಂಟಪದ ಗೋಡೆಗೆ ಒರಗಿಸಿ ಇರಿಸಲಾಗಿದೆ. ಈ ಶಿಲ್ಪವು ಕರ್ನಾಟಕದಲ್ಲಿ ದೊರೆತ ಅತ್ಯಂತ ಎತ್ತರದ ಅರಸನ ಶಿಲ್ಪವಾಗಿದ್ದು ಕಲ್ಯಾಣದ ಚಾಲುಕ್ಯರ ಶಿಲ್ಪಕಲಾಶೈಲಿಯಲ್ಲಿ ರಚಿಸಲಾಗಿದೆ. ಸೋಮೇಶ್ವರ ಅರಸನು ಪೀಠದ ಮೇಲೆ ಲಲಿತಾಸನದಲ್ಲಿ ಕುಳಿತಿದ್ದು ಎರಡು ಬದಿಗಳಲ್ಲಿ ರಾಣಿಯರು ಕುಳಿತಿರುವರು. ಕಿರೀಟ, ತೋಳುಬಂಧ, ಕಾಲ್ಕಡಗ ಇತ್ಯಾದಿ ಆಭರಣಗಳನ್ನು ಅರಸನು ಧರಿಸಿದ್ದಾನೆ. ಆದರೆ ಅರಸನ ಹಾಗೂ ರಾಣಿಯರ ಮುಖಗಳು ಸವೆದು ಹೋಗಿದ್ದು ಮುಖಲಕ್ಷಣಗಳನ್ನು ಗುರುತಿಸಲು ಸಾಧ್ಯವಾಗುತ್ತಿಲ್ಲ. ಅರಸ ಮತ್ತು ರಾಣಿಯರ ಹಿಂಭಾಗದಲ್ಲಿ ಚಾಮರಧಾರಿ ಸೇವಕರ ಶಿಲ್ಪಗಳಿವೆ. ಅರಸನ ಶಿರದ ಹಿಂಭಾಗದಲ್ಲಿ ವರ್ತುಲಾಕಾರದ ಪ್ರಭಾವಳಿಯನ್ನು ಮಾಡಲಾಗಿದೆ. ಮೇಲ್ಭಾಗದಲ್ಲಿ ಕೀರ್ತಿಮುಖ ಶಿಲ್ಪವನ್ನು ಕೊರೆಯಲಾಗಿದೆ. ರಾಜಲಾಂಛನಗಳಾದ ಕೊಡೆ, ಚಾಮರ, ಇತ್ಯಾದಿಗಳನ್ನು ಅರಸನ ಶಿರದ ಮೇಲ್ಭಾಗದಲ್ಲಿ ಕೊರೆಯಲಾಗಿದೆ. ಒಟ್ಟಾರೆ ಈ ಶಿಲ್ಪವು ಅರಸನ ಶಿಲ್ಪ ರಚನೆಯ ಪ್ರಮುಖ ಲಕ್ಷಣಗಳನ್ನು ಹೊಂದಿದೆ.

ಕಲ್ಯಾಣದ ಚಾಲುಕ್ಯ ಮಹಾದಂಡಾಧಿಕಾರಿ ಸಂಧಿವಿಗ್ರಹಿ ಅಧಿಕಾರಿಯಾಗಿದ್ದ ಮಹಾದೇವನ ಹಾಗೂ ಆತನ ಪೂರ್ವಜರ ಶಿಲ್ಪಗಳನ್ನು ಹಿರಿಯ ಸಂಶೋಧಕರಾದ ಡಾ॥ ಸಿ.ಎಸ್. ಪಾಟೀಲ್ ಅವರು ಇಟ್ಟಗಿ ಮಹಾದೇವ ದೇವಸ್ಥಾನದಲ್ಲಿ ಶೋಧಿಸಿ ಪ್ರಕಟಿಸಿದ್ದಾರೆ[೧೦]. ದೇವಾಲಯದ ನವರಂಗದ ಭುವನೇಶ್ವರಿ ಪಟ್ಟಿಕೆಯಲ್ಲಿ ಶಾಸನ ಸಮೇತ ಸಾಲಾಗಿ ಮಹಾದೇವ ದಂಡಾಧಿಕಾರಿ ಹಾಗೂ ಆತನ ಪೂರ್ವಜರು ಅಂಜಲಿಮುದ್ರೆಯಲ್ಲಿರುವ ಶಿಲ್ಪಗಳಿವೆ. ಪ್ರತಿ ಶಿಲ್ಪಗಳ ಕೆಳಗೆ ಅವರವರ ಹೆಸರುಗಳನ್ನು ಕೊರೆದಿದ್ದು ಶಿಲ್ಪಗಳನ್ನು ಗುರುತಿಸಲು ಸುಲಭವಾಗಿದೆ. ಅರಸರಲ್ಲದೇ ರಾಜ್ಯದ ಹಿರಿಯ ಹಾಗೂ ಪ್ರಭಾವಿಗಳು ತಮ್ಮ ಪೂರ್ವಜರಿಗೆ ಹಾಗೂ ತಮಗೆ ಪುಣ್ಯ ಲಭಿಸಲಿ ಎಂಬ ಕಾರಣಕ್ಕೆ ದೇವಾಲಯಗಳನ್ನು ನಿರ್ಮಿಸುತ್ತಿದ್ದರು. ದೇವಾಲಯ ನಿರ್ಮಿಸಿ ತಮ್ಮ ಹಾಗೂ ತಮ್ಮ ಪೂರ್ವಜರ ಶಿಲ್ಪಗಳನ್ನು ಶಾಸನ ಸಮೇತ ಇಟ್ಟಗಿಯಲ್ಲಿ ನಿರ್ಮಿಸಿರುವುದು ಒಂದು ವಿಶೇಷ. ಹೊಯ್ಸಳ ಅರಸ ವಿಷ್ಣುವರ್ಧನನ ಶಿಲ್ಪಗಳೆಂದು ಗುರುತಿಸುವ ಎರಡು ಶಿಲ್ಪಗಳನ್ನು ವಿದ್ವಾಂಸರು ಗುರುತಿಸಿದ್ದಾರೆ[೧೧]. ಅವುಗಳಲ್ಲಿ ಮೊದಲನೇ ಶಿಲ್ಪ ಬೇಲೂರಿನ ಚೆನ್ನಕೇಶವ ದೇವಾಲಯದ ಮುಖಮಂಟಪದ ಜಾಲಂಧ್ರದ ಗೋಡೆಯಲ್ಲಿ ಕೊರೆಯಲಾಗಿದೆ. ಈ ಶಿಲ್ಪದಲ್ಲಿ ಸಭೆಯಲ್ಲಿ ಹೊಯ್ಸಳ ಅರಸ ವಿಷ್ಣುವರ್ಧನ ಪೀಠದ ಮೇಲೆ ಕುಳಿತಿದ್ದಾನೆ. ಬಲಗೈಯಲ್ಲಿ ಖಡ್ಗ ಕಿರೀಟಧಾರಿಯಾಗಿ ಗಂಭೀರವಾಗಿ ಕುಳಿತಿರುವಂತೆ ಬಿಂಬಿಸಲಾಗಿದೆ. ಅರಸನ ಬಲಬದಿಯಲ್ಲಿ ಪದ್ಮಾಸನದಲ್ಲಿ ಪವಡಿಸಿಕೊಂಡು ರಾಜಗುರು ಅರಸನಿಗೆ ಸಲಹೆಗಳನ್ನು ನೀಡುತ್ತಿದ್ದಾನೆ. ಇವರ ಹಿಂಭಾಗದಲ್ಲಿ ಪಾತ್ರೆಗಳನ್ನು ಹಿಡಿದು ನಿಂತಿರುವರು. ಇವರ ಪಕ್ಕದಲ್ಲಿ ಆಯುಧಗಳನ್ನು ಹಿಡಿದ ಸೈನಿಕರು ಹಾಗೂ ಒಬ್ಬ ಚಾಮರಧಾರಿ ಇರುವರು. ಅರಸನ ಎಡಬದಿಯಲ್ಲಿ ರಾಣಿ ಕುಳಿತಿರುವಳು. ರಾಣಿಯ ಪಕ್ಕದಲ್ಲಿ ಸ್ತ್ರೀ ಸೇವಕಿಯರು ನಿಂತಿದ್ದಾರೆ. ಇವರ ಮೇಲಿನ ಸಾಲಲ್ಲಿ ಇಬ್ಬರು ಸ್ತ್ರೀ ಚಾಮರಧಾರಿಗಳು ಹಾಗೂ ಒಬ್ಬ ಸ್ತ್ರೀ ಸೇವಕಿ ನಿಂತಿರುವಳು. ಕ್ರಿ.ಶ. ೧೧೧೭ರಲ್ಲಿ ಚೆನ್ನಕೇಶವ ದೇವಾಲಯವು ವಿಷ್ಣುವರ್ಧನ ನಿರ್ಮಿಸಿದ್ದರಿಂದ ಇಲ್ಲಿಯ ರಾಜಸಭಾಂಗಣ ಕೋಷ್ಠದಶಿಲ್ಪ ದೇವಾಲಯದ ಆಶ್ರಯದಾತ ವಿಷ್ಣುವರ್ಧನದ್ದು ಎಂಬ ಅಭಿಪ್ರಾಯವನ್ನು ವಿದ್ವಾಂಸರು ವ್ಯಕ್ತಪಡಿಸುತ್ತಾರೆ.

ಇದೇ ದೇವಾಲಯದ ಒಂದು ಕೋಷ್ಠದಲ್ಲಿ ರಾಜಪೋಷಾಕಿನ ಶಿಲ್ಪ ದೊರೆತಿದ್ದು ಈ ಶಿಲ್ಪವೂ ಸಹ ಹೊಯ್ಸಳ ಅರಸ ವಿಷ್ಣುವರ್ಧನನ ಹಾಗೂ ಆತನ ರಾಣಿ ಶಾಂತಲೆಯ ಶಿಲ್ಪಗಳೆಂದು ವಿದ್ವಾಂಸ ಅರ್ವಮುಥನ್ ಗುರುತಿಸಿದ್ದಾರೆ[೧೨]. ಆದರೆ ಶಿಲ್ಪದ ಶೈಲಿ, ಉಡುಗೆ, ಆಭರಣಗಳು ಇತ್ಯಾದಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಈ ಶಿಲ್ಪಗಳು ವಿಜಯನಗರೋತ್ತರ ಕಾಲದ ರಚನೆಯಾಗಿರುವ ಸಾಧ್ಯತೆ ಕಾಣುತ್ತದೆ.

ವಿಜಯನಗರ ಕಾಲದೊಂದಿಗೆ ಇಡೀ ದಕ್ಷಿಣ ಭಾರತದ ಅರಸರ ಶಿಲ್ಪಕಲೆಯಲ್ಲಿ ಒಂದು ಹೊಸ ಪರ್ವವೇ ಪ್ರಾರಂಭಗೊಳ್ಳುತ್ತದೆ. ಇಲ್ಲಿಯವರೆಗೂ ಅರಸರು ಶಾಸನರಹಿತ ತಮ್ಮ ಭಾವಶಿಲ್ಪಗಳನ್ನು ದೇವಾಲಯದ ಕಂಬ, ಗೋಡೆ ಅಥವಾ ತೀರಾ ಗೌಣವೆನಿಸುವ ಸ್ಥಳಗಳಲ್ಲಿ ಹಾಕಿಸುತ್ತಿದ್ದರು. ವಿಜಯನಗರದ ಕಾಲದೊಂದಿಗೆ ಅರಸರು ಉದ್ದೇಶಪೂರ್ವಕವಾಗಿ ತಮ್ಮ ಅರಸರ ಶಿಲ್ಪಗಳನ್ನು ತಮ್ಮ ಹೆಸರಿನ ಶಾಸನದೊಂದಿಗೆ ರಚಿಸಿಕೊಳ್ಳುವ ಸಂಪ್ರದಾಯ ಪ್ರಾರಂಭಗೊಂಡಿತು.

ಭಾರತದಲ್ಲಿ ಮೊಗಲರ ಆಳ್ವಿಕೆ ಪ್ರಾರಂಭಗೊಳ್ಳುವ ಮುಂಚೆಯೇ ವಿಜಯನಗರ ಅರಸರು ತಮ್ಮ ಶಿಲ್ಪಗಳನ್ನು ರಚಿಸಿಕೊಳ್ಳುವುದನ್ನು ಅಧಿಕಸಂಖ್ಯೆಯಲ್ಲಿ ದೊರೆಯುವ ಅರಸರ ಶಿಲ್ಪಗಳಿಂದ ಸ್ಪಷ್ಟವಾಗುತ್ತದೆ.

ಹಂಪೆ ಕೋಟೆಯ ನೈರುತ್ಯ ಮೂಲೆಯ ದ್ವಾರದ ಬಳಿಯ ಆಂಜನೇಯ ದೇವಸ್ಥಾನದ ಗರ್ಭಗುಡಿಯ ದ್ವಾರದ ಇಕ್ಕೆಲಗಳಲ್ಲಿ ಶಾಸನ ಸಮೇತ ಅರಸ ಹಾಗೂ ಚಾಮರ ಸೇವಕರ ಉಬ್ಬುಶಿಲ್ಪಗಳನ್ನು ರಚಿಸಲಾಗಿದೆ. ಎಡಬದಿಯಲ್ಲಿ ಧೋತಿ ಹಾಗೂ ಅಂಗವಸ್ತ್ರ ಧರಿಸಿದ ವಿಜಯನಗರ ಅರಸ ಮಲ್ಲಿಕಾರ್ಜುನನ (ಕ್ರಿ.ಶ. ೧೪೪೭–೧೪೬೫) ಶಿಲ್ಪವಿದೆ. ಅರಸನು ಕುಲಾಯಿ ರೂಪದ ಕಿರೀಟ ಧರಿಸಿದ್ದು ವಿಜಯನಗರ ಶೈಲಿಯ ಲಕ್ಷಣಗಳಿಂದ ಕೂಡಿದೆ. ದ್ವಾರದ ಬಲಬದಿಯಲ್ಲಿ ಮಲ್ಲಿಕಾರ್ಜುನನ ಚಾಮರಸೇವಕ ಶ್ರೀರಂಗನ ಉಬ್ಬುಶಿಲ್ಪವಿದೆ. ಶ್ರೀರಂಗನ ಸೇವಕನು ಈ ದೇವಾಲಯವನ್ನು ಕಟ್ಟಿಸಿದನು ಎಂಬ ಶಾಸನವು ಈ ಶಿಲ್ಪದ ಸುತ್ತಲೂ ಕೊರೆಯಲಾಗಿದೆ. ಅದರಂತೆ ಮಲ್ಲಿಕಾರ್ಜುನ ಅರಸರ ಹೆಸರನ್ನು ಸೂಚಿಸುವ ಶಾಸನವು ಅರಸರ ಶಿಲ್ಪದ ಮೇಲ್ಭಾಗದಲ್ಲಿ ಪ್ರೌಢದೇವರಾಯನ ಮಗ ಮಲ್ಲಿಕಾರ್ಜುನರಾಯರು ಎಂದು ಕನ್ನಡದಲ್ಲಿ ಕೊರೆಯಲಾಗಿದೆ. ಶಿಲ್ಪ ವಿಜಯನಗರದ ಸಂಗಮವಂಶದ ಅರಸರಲ್ಲಿ ದೊರೆಯುವ ಪ್ರಥಮ ಅರಸರ ಶಿಲ್ಪವೆಂದು ವಿದ್ವಾಂಸರು ಗುರುತಿಸಿದ್ದಾರೆ[೧೩].

ಹಂಪಿಯ ತುಂಗಭದ್ರಾ ನದಿಯ ಬಂಡೆಗಳಲ್ಲಿರುವ ಕೋಟಿಲಿಂಗ ಬಂಡೆಯಲ್ಲಿ ಅನೇಕ ಭಕ್ತರ ರೂಪದ ಶಿಲ್ಪಗಳಿವೆ. ಇವು ವಿಜಯನಗರ ಕಾಲದ ಉಚ್ಚ ಅಧಿಕಾರಿಗಳು ಹಾಗೂ ಗಣ್ಯರ ಶಿಲ್ಪಗಳಾಗಿವೆ. ಇವುಗಳಲ್ಲಿ ಅಣ್ಣಾಜಿ, ದೀಕ್ಷಿತ ವಂಶದ ರಾಯಸ್ತ ರಾಮಚಂದ್ರ, ನಾಗಪ್ಪ ಹಾಗೂ ಕುಟುಂಬವರ್ಗದವರ ಶಿಲ್ಪಗಳನ್ನು ರಚಿಸಲಾಗಿದೆ. ಇವುಗಳಲ್ಲಿ ಕೆಲವು ಸ್ಮಾರಕಶಿಲ್ಪಗಳಾಗಿಯೂ ರಚನೆಗೊಂಡಿವೆ[೧೪]. ಸಂಗಮವಂಶದ ಅರಸರ ನಂತರ ವಿಜಯನಗರ ಅರಸರ ಶಿಲ್ಪಗಳು ದೊರಕುವುದು ತುಳುವ ವಂಶದ ಕೃಷ್ಣದೇವರಾಯನ ಕಾಲದಿಂದ ಕೃಷ್ಣದೇವರಾಯನ ಪರಮ ಆರಾಧ್ಯ ದೇವಸ್ಥಾನವಾದ ತಿರುಪತಿಯ ಬಾಲಾಜಿ ದೇವಸ್ಥಾನದಲ್ಲಿ ನಾಲ್ಕು ಅಡಿಯ ಕಂಚಿನ ಪ್ರತಿಮೆಗಳನ್ನು ಕಾಣುತ್ತೇವೆ. ಕೃಷ್ಣದೇವರಾಯ ಹಾಗೂ ಆತನ ಪತ್ನಿಯರಾದ ತಿರುಮಲಾದೇವಿ ಮತ್ತು ಚಿನ್ನಾದೇವಿಯರ ಪ್ರತಿಮೆಗಳು ಸುಂದರ ಕಲಾಶೈಲಿಯಲ್ಲಿ ರಚಿತಗೊಂಡಿವೆ. ಕೃಷ್ಣದೇವರಾಯ ತನ್ನ ಭಕ್ತಿ ಸದಾ ದೇವರಲ್ಲಿ ಇರಲಿ ಎಂಬ ನಂಬಿಕೆಯಿಂದ ಪ್ರತಿಮೆಗಳನ್ನು ಹಾಕಿಸಿದ್ದಾರೆ ಎಂದು ಹೇಳುತ್ತಾರೆ. ಈ ಶಿಲ್ಪಗಳಲ್ಲಿ ಭಕ್ತಿಭಾವದಿಂದ ನಮಿಸುತ್ತಾ ನಿಂತಿರುವರು. ಕರಂಡಮುಕುಟಧಾರಿಯಾದ ಕೃಷ್ಣದೇವರಾಯನ ಶಿಲ್ಪದಲ್ಲಿ ಅರಸನು ಮಗುವಿನ ಮುಗ್ಧರೂಪದಲ್ಲಿ ಅಥವಾ ಹದಿಹರೆಯದ ಯುವಕನಾಗಿ ಕಾಣುತ್ತಾನೆ ಎಂದು ಕಲಾ–ಇತಿಹಾಸಕಾರರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಕೃಷ್ಣದೇವರಾಯನ ಮತ್ತೊಂದು ಶಿಲ್ಪವು ತಮಿಳುನಾಡಿನ ಚಿದಂಬರಮ್‌ನ ಶಿವದೇವಾಲಯದ ದಕ್ಷಿಣ ಗೋಪುರದ ಕೋಷ್ಠದಲ್ಲಿ ಇರಿಸಲಾಗಿದೆ. ಪೀಠದ ಮೇಲೆ ಅಂಜಲಿಮುದ್ರೆಯಲ್ಲಿ ನಿಂತಿರುವ ಈ ಶಿಲ್ಪದಲ್ಲಿ ಬಿಗಿಯಾದ ಧೋತಿ, ಅಂಗವಸ್ತ್ರ ಧರಿಸಿ ವಿವಿಧ ಆಭರಣ ಹಾಗೂ ಎಡಗೈಯಲ್ಲಿ ಖಡ್ಗ ನೇತಾಡುವಂತೆ ಹಿಡಿದುಕೊಂಡಿರುವನು. ಈ ಶಿಲ್ಪದಲ್ಲಿ ಧರಿಸಿದ ಕಿರೀಟ – "ಕುಲಾಯಿ" ರೂಪದಲ್ಲಿದ್ದು ವಿಜಯನಗರ ಅರಸರು ಧರಿಸುವ ಮಾದರಿಯಲ್ಲಿ ಕಾಣುತ್ತೇವೆ. ಅಲ್ಲದೆ ಶಿಲ್ಪದ ಶೈಲಿಯ ಕೆಲವು ಲಕ್ಷಣಗಳನ್ನು ಗಮನಿಸಲಾಗಿದೆ. ಈ ಶಿಲ್ಪ ವಿಜಯನಗರ ಅಥವಾ ಕೃಷ್ಣದೇವರಾಯನ ಕಾಲಾವಧಿಯಲ್ಲಿ ರಚನೆಗೊಂಡಿರುವ ಸಾಧ್ಯತೆಯನ್ನು ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅದರಂತೆ ಕೃಷ್ಣದೇವರಾಯನ ಚಿನ್ನದ ಶಿಲ್ಪವನ್ನು ಕ್ರಿ.ಶ.೧೫೩೦ರಲ್ಲಿ ಸಾಮಂತ ಅರಸ ಶ್ರೀಶೈಲದ ಮಲ್ಲಿಕಾರ್ಜುನ ದೇವಾಲಯಕ್ಕೆ ನೀಡಿದ್ದಾಗಿ ಶಾಸನದಿಂದ ತಿಳಿದುಬರುತ್ತದೆ[೧೫].

ವಿಜಯನಗರದ ಒಂದನೇ ವೆಂಕಟಪತಿ ಅರಸನ ನಾಲ್ಕು ಅಡಿ ಎತ್ತರದ ತಾಮ್ರದ ಪ್ರತಿಮೆ ತಿರುಪತಿಯ ಬಾಲಾಜಿ ದೇವಸ್ಥಾನದಲ್ಲಿದೆ. ಬಹಳ ಸರಳ ಹಾಗೂ ನಿರಾಭರಣ ಶೈಲಿಯ ಈ ಶಿಲ್ಪದಲ್ಲಿ ವೆಂಕಟಪತಿ ಅರಸ ಭಕ್ತಿಯಿಂದ ದೇವರಿಗೆ ವಂದಿಸುತ್ತಾ ನಿಂತಿರುವನು. ಧರಿಸಿದ ಕಿರೀಟ ವಿಜಯನಗರ ಕಾಲದ ಕುಲಾಯಿಯ ಶೈಲಿಯಲ್ಲಿದೆ[೧೬].

ವಿಜಯನಗರೋತ್ತರ ಕಾಲದಲ್ಲಿ ಅರಸರ ಶಿಲ್ಪಗಳ ರಚನೆ ಹೆಚ್ಚು ಪ್ರಾಮುಖ್ಯತೆ ಪಡೆಯಿತು. ಪ್ರಧಾನ ಅರಸರಲ್ಲದೆ ಸಾಮಂತರು, ಮಂತ್ರಿ ವರ್ಗದವರು ಕೂಡಾ ತಮ್ಮ ಆರಾಧ್ಯ ದೇವಾಲಯಗಳಲ್ಲಿ ಲೋಹದ ಪ್ರತಿಮೆ ಹಾಕಿಸುವ ಅಥವಾ ಶಿಲೆಯಲ್ಲಿಯೇ ಶಿಲ್ಪಗಳನ್ನು ರಚಿಸಿಕೊಳ್ಳುವ ಸಂಪ್ರದಾಯ ರೂಢಿಗೆ ತಂದರು. ವಿಜಯನಗರೋತ್ತರ ಕಾಲದ ಬಹುತೇಕ ಪ್ರಮುಖ ದೇವಾಲಯಗಳನ್ನು ಅರಸರ ಶಿಲ್ಪಗಳು ರಚನೆಯಾಗಿರುವುದು ಕಾಣುತ್ತೇವೆ. ತಮಿಳುನಾಡಿನಲ್ಲಿ ಮಧುರೈ ತಂಜಾವೂರು, ಇತ್ಯಾದಿ ನಾಯಕ ಮನೆತನದ ಅಸಂಖ್ಯ ಅರಸರ ಶಿಲ್ಪಗಳು ಕಂಬಗಳ ಮೇಲೆ ಪ್ರಧಾನವಾಗಿ ಕಾಣುವಂತೆ

ರಚಿಸಿರುವುದನ್ನು ಕಾಣುತ್ತೇವೆ. ಕರ್ನಾಟಕದಲ್ಲಿಯೂ ಈ ಸಂಪ್ರದಾಯ ಮುಂದುವರೆಯಿತು. ಆದರೆ ಶಿಲ್ಪಗಳ ಗಾತ್ರ ಹಾಗೂ ಅವುಗಳ ರಚನೆಯ ಸ್ಥಳ ಏಕರೂಪದಲ್ಲಿ ಇರುವುದಿಲ್ಲ. ಇನ್ನು ಕೆಲವು ತೀರ್ಥಸ್ಥಳಗಳಲ್ಲಿ ದೇವಾಲಯದ ಮಂಟಪಗಳ ನೆಲಹಾಸುಗಳ ಮೇಲೆ ಶಿಲ್ಪಗಳನ್ನು ರಚಿಸಿಕೊಂಡಿರುವ ಉದಾಹರಣೆಗಳಿವೆ. ದೇವಾಲಯಕ್ಕೆ ಬರುವ ಭಕ್ತರ ಪಾದಗಳು ತಮ್ಮ ಅಥವಾ ಹಿರಿಯರ ಶಿಲ್ಪಗಳ ಮೇಲೆ ನಡೆದಾಡುವುದರಿಂದ ಮೋಕ್ಷಪ್ರಾಪ್ತಿಯಾಗಬಹುದೆಂಬ ನಂಬಿಕೆ ಆ ಕಾಲದಲ್ಲಿತ್ತು.

ಮೈಸೂರು ಅರಸರ ಶಿಲ್ಪಗಳು ಮೇಲುಕೋಟೆ, ನಂಜನಗೂಡು, ಮೈಸೂರು, ಶ್ರೀರಂಗಪಟ್ಟಣ, ಚಾಮರಾಜನಗರ, ಇತ್ಯಾದಿ ಸ್ಥಳಗಳ ದೇವಾಲಯಗಳಲ್ಲಿ ದೊರೆತಿವೆ. ಅವುಗಳಲ್ಲಿ ನಂಜನಗೂಡಿನ ಮುಮ್ಮಡಿ ಕೃಷ್ಣರಾಜ ಒಡೆಯರು ಹಾಗೂ ಅವರ ನಾಲ್ವರು ಪತ್ನಿಯರ ಶಿಲ್ಪ ಪ್ರಧಾನವಾದದ್ದು[೧೭]. ನಂಜುಂಡೇಶ್ವರ ದೇವಾಲಯದ ಮಂಟಪದಲ್ಲಿ ಈ ಶಿಲ್ಪದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು (೧೮೩೪) ನಮಿಸುತ್ತಾ ನಿಂತಿರುವರು. ಎಡ ಹಾಗೂ ಬಲ ಬದಿಗಳಲ್ಲಿ ಪತ್ನಿಯರ ಶಿಲ್ಪಗಳ ಸಾಲುಗಳಿವೆ. ಪೀಠಗಳನ್ನು ರಚಿಸಿ ಶಿಲ್ಪಗಳನ್ನು ಬಿಡಿಬಿಡಿಯಾಗಿ ನಿಲ್ಲಿಸಲಾಗಿವೆ. ಕೊನೆಯಲ್ಲಿ ಮಂತ್ರಿಯ ಶಿಲ್ಪವೂ ಇದೆ. ಶ್ರೀರಂಗಪಟ್ಟಣದ ನರಸಿಂಹ ದೇವಾಲಯದಲ್ಲಿ ಕಂಠೀರವ ನರಸರಾಜ ಒಡೆಯರ ಕಂಚಿನ ಪ್ರತಿಮೆ ಇರುವುದು. ಇದೇ ಮಾದರಿಯ ಇನ್ನೊಂದು ಪ್ರತಿಮೆ ಮೈಸೂರಿನ ತ್ರಿಣವೇಶ್ವರ ದೇವಾಲಯದಲ್ಲಿ ಇರುವುದಾಗಿ ತಿಳಿದು ಬರುತ್ತದೆ[೧೮]. ದೊಡ್ಡದೇವರಾಜ ಒಡೆಯರ ಕಂಚಿನ ಶಿಲ್ಪವು ಕೂಡ ಇದೇ ದೇವಸ್ಥಾನದಲ್ಲಿರುವುದು. ಮೇಲುಕೋಟೆಯಲ್ಲಿ ಒಂದನೇ ರಾಜ ಒಡೆಯರ್ ಅವರ ಒಂದುವರೆ ಎತ್ತರದ ಉಬ್ಬುಶಿಲ್ಪವು ರಚಿಸಲಾಗಿದೆ. ಮೈಸೂರು ಒಡೆಯರ ಅರಸರ ಶಿಲ್ಪಗಳಲ್ಲದೆ ಅನೇಕ ಪಾಳೆಯಗಾರರ ಅಥವಾ ಸ್ಥಳೀಯ ಅರಸರ ಶಿಲ್ಪಗಳು ಅನೇಕ ಸಂಖ್ಯೆಯಲ್ಲಿ ದೊರೆಯುತ್ತವೆ. ಬೆಂಗಳೂರು ಸಂಸ್ಥಾಪಕ ಕೆಂಪೇಗೌಡರ ಶಿಲ್ಪಗಳು ಬೆಂಹಿರಿಯ ಸಂಶೋಧಕರಾದ ದಿ॥ ಸಿ.ಎಸ್. ಪಾಟೀಲ್ ಅವರುಗಳೂರು, ಆವತಿ, ಶಿವಗಂಗೆ ಮತ್ತು ಮಾಗಡಿ ದೇವಸ್ಥಾನಗಳಲ್ಲಿ ದೊರಕಿವೆ. ಕೈಯಲ್ಲಿ ಕೋಟು ಹಿಡಿದು ಉದ್ದನೆಯ ಹೊದಿಕೆ ಹಾಕಿಕೊಂಡು ನಿಂತಿರುವ ಶಿಲ್ಪಗಳನ್ನು ವಿದ್ವಾಂಸರು ಈವರೆಗೂ ಕೃಷಿಕ ರೂಪದ ಕೆಂಪೇಗಾಡನ ಶಿಲ್ಪಗಳೆಂದು ಗುರುತಿಸಿದ್ದರು. ಆದರೆ ಕೃಷಿಕ ಅಥವಾ ಗೌಳಿಯ ರೂಪದ ಶಿಲ್ಪಗಳು ಕರ್ನಾಟಕ, ಆಂಧ್ರ ಮತ್ತು ತಮಿಳುನಾಡಿನಾದ್ಯಂತ ಹಾಗೂ ಕ್ರಿ.ಶ. ೧೨ನೆಯ ಶತಮಾನದಿಂದಲೂ ಅಸಂಖ್ಯ ಪ್ರಮಾಣದಲ್ಲಿ ದೊರೆಯುತ್ತವೆ. ಹಿರಿಯ ವಿದ್ವಾಂಸ ಫಾದರ್ ಹೆರಾಸ್ ಅವರು ವಿಜಯನಗರದ ಕಂಬದ ಮೇಲಿನ ಈ ರೂಪದ ಶಿಲ್ಪ ಗಮನಿಸಿ ಕೆಂಪೇಗೌಡರ ಹಂಪಿಗೆ ಭೇಟಿ ನೀಡಿದ ಸಂದರ್ಭದಲ್ಲಿ ರಚನೆಗೊಂಡಿರುವ ಶಿಲ್ಪವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು[೧೯]. ಅದೇ ಅಭಿಪ್ರಾಯ ಈವರೆಗೂ ಒಪ್ಪಿಕೊಳ್ಳಲಾಗಿದೆ. ಆದರೆ ಕೆಂಪೇಗೌಡರ ಕಾಲದಲ್ಲಿಯೇ ಜೀರ್ಣೋದ್ಧಾರಗೊಂಡ ಅಲಸೂರಿನ ಸೋಮೇಶ್ವರ ದೇವಸ್ಥಾನದ ನವರಂಗ ಕಂಬದಲ್ಲಿ ಇರುವ ಕೆಂಪೇಗೌಡರ ಹಾಗೂ ಆತನ ಪತ್ನಿಯ ಉಬ್ಬುಶಿಲ್ಪಗಳನ್ನು ಇತ್ತೀಚಿನ ಸಂಶೋಧನೆಯಿಂದ ಗುರುತಿಸಲಾಗಿದೆ[೨೦]. ಕೆಂಪೇಗೌಡರ ಹೆಸರಿನ ಶಾಸನವಿರುವ ಶಿಲ್ಪವನ್ನು ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ಬಾಗಿಲುವಾಡದಲ್ಲಿ ಗುರುತಿಸಲಾಗಿದೆ. ಈ ಶಿಲ್ಪದಲ್ಲಿ ಮಧ್ಯವಯಸ್ಕ ಅರಸರ ರೂಪದಲ್ಲಿ ಕಾಣುತ್ತೇವೆ. ಬಾಗಿಲುವಾಡದ ಎಡಬದಿಯಲ್ಲಿ ಕೆಂಪೇಗೌಡರ ಪತ್ನಿ ಹಾಗೂ ಪುತ್ರನ ಶಿಲ್ಪಗಳಿವೆ. ಶಿವಗಂಗೆಯಲ್ಲಿ ಕೆಂಪೇಗೌಡರ ಕಂಚಿನ ಪ್ರತಿಮೆ ಹೆಚ್ಚು ಪ್ರಸಿದ್ಧ. ಸುಂದರ ಹಾಗೂ ಕಲಾಶೈಲಿಯಲ್ಲಿ ರಚನೆಯಾದ ಈ ಪ್ರತಿಮೆ ನಾಡಿನ ಕಂಚಿನ ಪ್ರತಿಮೆ ಶಿಲ್ಪದಲ್ಲಿ ಶ್ರೇಷ್ಠ ಕೃತಿಯೆನಿಸಿದೆ. ಇದೇ ದೇವಾಲಯದ ಮುಖಮಂಟಪದ ಕಂಬದಲ್ಲಿ ಕೆಂಪೇಗೌಡರ ಹಾಗೂ ಆತನ ಪತ್ನಿಯ ಇನ್ನೊಂದು ಶಿಲ್ಪವನ್ನು ಗುರುತಿಸಲಾಗಿದೆ.

ಒಟ್ಟಿನಲ್ಲಿ ಕನ್ನಡ ನಾಡಿನಲ್ಲಿಯೂ ಅರಸರ ಶಿಲ್ಪರಚನೆ ಸಂಪ್ರದಾಯ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಪ್ರಾರಂಭ ಹಂತದಲ್ಲಿ ಇದು ಕೇವಲ ಅರಸರ ವೈಯುಕ್ತಿಕ ವಿಷಯವಾಗಿದ್ದು ದೇವಾಲಯದ ಗೌಣ ಭಾಗಗಳೆನಿಸಿದೆ. ಹೊರಗೋಡೆಯಲ್ಲಿ ಅಥವಾ ಅಧಿಷ್ಠಾನಗಳಲ್ಲಿ ಶಿಲ್ಪಗಳನ್ನು ರಚಿಸಲಾಗುತ್ತಿತ್ತು[೨೧]. ೧೫ನೇ ಶತಮಾನದ ಆರಂಭದೊಂದಿಗೆ ಅರಸರ ಶಿಲ್ಪಗಳು ದೇವಾಲಯಗಳ ಪ್ರಧಾನ ಭಾಗಗಳು ಅಥವಾ ಹೆಚ್ಚು ಭಕ್ತರು ಸೇರುವ ಸ್ಥಳಗಳಲ್ಲಿ ಗೋಚರಿಸುವಂತೆ ಶಿಲ್ಪಗಳನ್ನು ಹಾಕಿಸುವ ಸಂಪ್ರದಾಯ ರೂಢಿಗೆ ಬಂದಿತು. ಗರ್ಭಗುಡಿಯ ಮುಖ್ಯ ದೇವರಿಗೆ ಎದುರಾಗಿ ಇರುವ ಕಂಬ, ಗೋಡೆಗಳಲ್ಲಿ ವಂದಿಸುತ್ತಿರುವಂತೆ ಅಥವಾ ಅಂಜಲಿಮುದ್ರೆಯಲ್ಲಿ ಅರಸರ ಶಿಲ್ಪಗಳು ರಚಿಸುವುದು ಒಂದು ಸಂಪ್ರದಾಯವಾಗಿಯೇ ಬೆಳೆದು ಬಂದಿತು. ಇದು ಗರುಡ ಅಥವಾ ಆಂಜನೇಯ ಸೇವಕ ಭಕ್ತಿರೂಪದ ಅನುಕರಣೆಯೆಂದು ಪರಿಗಣಿಸಬಹುದು. ೧೨ನೇ ಶತಮಾನದ ವಚನಕಾರರು ಹಾಗೂ ನಂತರದ ದಾಸ ಸಂಪ್ರದಾಯದ ಹಿನ್ನೆಲೆಯಲ್ಲಿ "ದೇವ ಮತ್ತು ದಾಸ ಸಂಬಂಧದ ಕಲ್ಪನೆ" ೧೬ನೇ ಶತಮಾನದ ನಂತರದ ಅರಸರಶಿಲ್ಪ ರಚನೆಯಲ್ಲಿ ಮೂಡಿರುವ ಸಾಧ್ಯತೆಗಳಿವೆ.

## ಟಿಪ್ಪಣಿಗಳು


೧. Smith, V., 1930, *History of Fine Arts in India and Ceylon*, (Oxford).

೨. *Indian Archaeology - A Review*, 1997-98, p. 97.

೩. T.G. Aravamuthan, 1930, *Portrait Sculpture in South India* (1992-Reprint) Madras, pp.17 & Fig.1.

೪. Ibid, Fig.7.

೫. Dhavalikar, M.K. 2009, *Of Royal Design - The Rashtrakutas. Heritage India* - A Magazine on Indian Heritage" Vol.2, (Issue 4), p.62.

೬ Cohen, Andrew L. 1992, *The King and the Goddess: The Nolamba Period Lakshmanesvara Temple of Avani*, Artibus Asiae, Vol. 52, NIQ2, pp.7-24.

೭. *Annual Report of the Mysore Archaeological Department,* 1914.

೮. , ಕೃಷ್ಣಮೂರ್ತಿ. ಎಂ.ಎಸ್. ೨೦೦೪, ಕೋಲಾರ ಜಿಲ್ಲೆಯ ನಂದಿಯ ಭೋಗನಂದೀಶ್ವರ–ಅರುಣಾಚಲೇಶ್ವರ ದೇವಾಲಯಗಳು – ಒಂದು ಮರು ಚಿಂತನೆ', **ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ** (ಸಂ.ಆರ್. ಗೋಪಾಲ್) ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯ. ಮೈಸೂರು, ಪು.೮೯–೯೬.

೮ಅ. ಪಿ.ವಿ. ಕೃಷ್ಣಮೂರ್ತಿ, ೨೦೦೭. "ಇಳವಂಜಿನಾಡು ಮತ್ತು ಇಳವಂಜಿ ರಾಯರು". **ಇತಿಹಾಸ ದರ್ಶನ**. ೨೨. ಪು.೧೮೨–೧೮೭.

೯. Patil C.S. 1993, *A Portrait Sculpture of Ahavamalla (Chalukya Somesvara I) at Kuruvatti*, Sri Ramachandrika (Prof. O. Ramachandraiya Festischirift): Essays of Indian Archaeology, History, Epigraphy, Numismatics, Art and Religion (ed. A.V. Narasimha Murthy and T.K. Sharma), Delhi, pp.287-292.

೧೦. Patil C.S., *Portrait Sculprure in Mahadeva Temple at Ittagi, Kusumanjali* : New Interpretarions of Indian Art and Culture (Sri S. Sivaramamurti Commmoration Volume), ed. M.S. Nararaja Rao), Agamkala, Delhi, pp.311-314.

೧೧. Maity, S.K. 1978, *Master Pieces of Hoysala Art,* Bombay, p.13.

೧೨. Aravamuthan, Ibid, p.39, (Fig.14).

೧೩. Lakshminarayana Rao N. 1997, *Portait Sculpture of the Vijayanagara king Mallikarjuna*, Epigraphical Studies, Directorate of Archaeology & Museums, Mysore, p.301-302.

೧೪. Vijayanagara Progress of Research, 1983-84.

೧೫. Aravamuthan, Ibid, p.47.

೧೬. Ibid, Fig. 24.

೧೭. *Annual Report of the Mysore Archaeological Department* for the year 1940, Pl. 1 & p.26.

೧೮. Aravamuthanm Ibid, p.54.

೧೯. Heras, A, 1926, *Historical Carvings at Vijayanagara, Quarterly Journal of the Mythic Society*, Vol. 7(2) pp.85-88.

೨೦. ಎಸ್.ಕೆ. ಅರುಣಿ, ೨೦೦೯, **ಯಲಹಂಕನಾಡ ಪ್ರಭುಗಳು ವಾಸ್ತುಶಿಲ್ಪ–ಶಿಲ್ಪಕಲೆ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೧. Kailmal, Padma, 1999, *The Problem of Partrainture in South India* (c.870-970 A.D.) *Artibus Asiae*, Vol. LIX (1&2), pp.59-152.

# ದೇವದುರ್ಗದ ಈರಣ್ಣದೇವರ ಗುಡ್ಡದ ಶಾಸನದ ಕಲೆ ಮತ್ತು ಕಾವ್ಯದ ಅಧ್ಯಯನ ಚಿತ್ರ

– ಡಾ॥ ಹೆಚ್. ಚಂದ್ರಶೇಖರ*

ನಾನು ಹಿಂದೆ ರಾಯಚೂರು ಜಿಲ್ಲೆಯ ದೇವದುರ್ಗ ನಗರದ ಪೂರ್ವಕ್ಕೆ ಇರುವ ಈರಣ್ಣದೇವರ ಗುಡ್ಡದ ಶಿಖರದ ಮೇಲಿರುವ ಶಾಸನದ ಒಂದು ಅಧ್ಯಯನವನ್ನು ಪ್ರಕಟಿಸಿದ್ದೆ[1]. ಆ ಸಂಪ್ರಬಂಧದಲ್ಲಿ ಶಾಸನದಿಂದ ಲಭ್ಯವಾಗುವ ಇತಿಹಾಸ ಮತ್ತು ಪುರಾತತ್ವ ಅವಶೇಷಗಳ ಬಗ್ಗೆ ಬರೆದಿದ್ದ. ಆ ಶಾಸನದ ಕಾಲ ಶಾಲಿವಾಹನ ಶಕ ೧೬೧೨ನೆಯ ಪ್ರಮೋದೂತ, ಶ್ರಾವಣ ಬ೧೧ ಮಂಗಳವಾರ. ಇದು ಕ್ರಿ.ಶ. ೨೦-೮-೧೬೯೦ ಬುಧವಾರಕ್ಕೆ ಸಮನಾಗುತ್ತದೆ[2]. ಈ ಶಾಸನದ ಪ್ರಕಾರ ದೇವದುರ್ಗವನ್ನು ಅರಕೇರಿಯ ಕೇಸವ್ವೆಯ ಗೌಡನು ಕ್ರಿ.ಶ. ೧೬೭೭ರಲ್ಲಿ ಸ್ಥಾಪಿಸಿದನು. ಸಂಪ್ರಬಂಧದಲ್ಲಿ ಶಾಸನದ ಚಿತ್ರಶಿಲ್ಪಗಳ ಬಗ್ಗೆ ಹಾಗೂ ಶಾಸನದ ಭಾಷಾ ಸೌಂದರ್ಯದ ಬಗ್ಗೆ ಚರ್ಚಿಸಿರಲಿಲ್ಲ. ಪ್ರಸ್ತುತ ಲೇಖನದಲ್ಲಿ ಈ ಚಿತ್ರ ಶಾಸನದ ಕಲೆ ಮತ್ತು ಕಾವ್ಯದ ಬಗ್ಗೆ ಚರ್ಚಿಸುತ್ತೇನೆ.

ಸದರಿ ಶಾಸನ ಮತ್ತು ಉಬ್ಬುಶಿಲ್ಪಗಳನ್ನು ಈರಣ್ಣದೇವರ ಗುಡ್ಡದ ಕೋಟೆಯ ಮಧ್ಯ ಇರುವ ಸುಮಾರು ೬-೭ ಮೀಟರ್ ಎತ್ತರವಿರುವ ಬೂದುಬಣ್ಣದ (Gray colour) ಅಸಮನಾದ ಹರಳುಗಳುಳ್ಳ (Insquigranular granite) ಕಣಶಿಲೆಯ ಗುಂಡಿನ ತುದಿಯಲ್ಲಿ ಕಟೆಯಲಾಗಿದೆ. ಈ ಶಾಸನವನ್ನು ಮತ್ತು ಉಬ್ಬುಶಿಲ್ಪಗಳನ್ನು ಕೆತ್ತುವುದಕ್ಕಿಂತ ಪೂರ್ವದಲ್ಲಿ ಕಣಶಿಲೆಯ ಶಿಥಿಲಗೊಂಡ ಸುಮಾರು (೨-೩ ಸೆಂ.ಮೀ ದಪ್ಪದಷ್ಟು ಇರುವ) ಮೇಲ್ಪದರನ್ನು (Exfoliated layer) ಚಾಣದಿಂದ ಒಡೆದು ತೆಗೆಯಲಾಗಿದೆ. ಆಗ, ತಾಜಾ (Fresh) ಕಣಶಿಲೆಯನ್ನು ಪುನಃ ನುಣುಪಾಗಿ ಸಪಾಟುಗೊಳಿಸಲಾಗಿದೆ (Flat surface). ಇದರಿಂದಾಗಿ ಶಾಸನವನ್ನು, ಮತ್ತು ಉಬ್ಬುಶಿಲ್ಪಗಳನ್ನು ಕಲಾತ್ಮಕವಾಗಿ ಬಿಡಿಸಲು ಸಾಧ್ಯವಾಗಿದೆ. ಈ ಪೂರ್ವಸಿದ್ಧತೆಯು ಈ ಅನಾಮಧೇಯ ಶಿಲ್ಪಿ ಮತ್ತು ರೂವಾರಿಯ ಜಾಣ್ಮೆಗೆ ಸಾಕ್ಷಿಯಾಗಿದೆ (ಚಿತ್ರ ೧). ಇಡೀ ಶಾಸನದ ಮೇಲೆ, ಗಾಳಿ ಮಳೆಯಿಂದ ರಕ್ಷಿಸಲು ಇನ್ನೊಂದು ಚಾಚುಗಲ್ಲು ಇದೆ (Balcony). ಆದ್ದರಿಂದ ಈ ಶಾಸನ ಇಂದಿಗೂ ಸುರಕ್ಷಿತವಾಗಿದೆ. ಈ ಶಾಸನದ ಎಡಭಾಗದಲ್ಲಿ (ನೋಡುವರರ ಬಲಗಡೆ) ಶಾಸನವನ್ನು ಕನ್ನಡದ ಅಕ್ಷರಗಳಲ್ಲಿ ಕೆತ್ತಲಾಗಿದೆ. ಈ ಶಾಸನದ ಬಲ ಭಾಗದಲ್ಲಿ ಹಲವಾರು ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ (ಚಿತ್ರ ೨).

ಜಲಕನ್ಯೆ ಮತ್ತು ಮತ್ಸ್ಯಕನ್ಯೆ – ಚಿತ್ರ ೩ರಲ್ಲಿ ಒಬ್ಬ ಸುಂದರ ಜಲಕನ್ಯೆ (ಎಡಬದಿ) ಮತ್ತು ಸುಂದರ ಮತ್ಸ್ಯಕನ್ಯೆಯರ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ. ಈ ಕನ್ಯೆಯರ ತಲೆಯ ಮೇಲ್ಭಾಗದಲ್ಲಿ ಈಶ್ವರ ಲಿಂಗವನ್ನು ಪೂಜಿಸುತ್ತಿರುವ ಪುರುಷಮೃಗದ ಚಿತ್ರವನ್ನು ಬಿಡಿಸಲಾಗಿದೆ (ಚಿತ್ರ ೪). ಈ ಇಬ್ಬರು ಕನ್ಯೆಯರ ಮಧ್ಯೆ ಹನುಮಂತನನ್ನು ಬಿಡಿಸಲಾಗಿದೆ. ಜಲಕನ್ಯೆ ಮತ್ತು ಮತ್ಸ್ಯಕನ್ಯೆಯರ ನಡುವೆ ಈ ಹನುಮನನ್ನು ಕೆತ್ತಿರುವುದರಿಂದ ಈ ಹನುಮನನ್ನು ಮತ್ಸ್ಯಹನುಮನೆಂದು ಕರೆಯಬಹುದು. ಹನುಮಂತನು ಆಕಾಶದಲ್ಲಿ ಹಾರುತ್ತಿರುವಾಗ ಅವನ ವೀರ್ಯಸ್ಖಲನವಾಗುತ್ತಿದೆ. ಅಂಥ ವೀರ್ಯದ ಒಂದು ಹನಿಯನ್ನು ನುಂಗಿದ ಮತ್ಸ್ಯಕನ್ಯೆಯೊಬ್ಬಳು ಮಗನನ್ನು ಹಡೆಯುತ್ತಾಳೆ. ಇವನೇ ಮತ್ಸ್ಯಹನುಮ ಎಂಬುದು ಪುರಾಣದಿಂದ ತಿಳಿದು ಬರುತ್ತದೆ. ಈ ನಾಲ್ಕು ಕಲಾತ್ಮಕ ಹಾಗೂ ಅರ್ಥಪೂರ್ಣ ಉಬ್ಬುಶಿಲ್ಪಗಳ ಸುತ್ತಲೂ ನಾಲ್ಕು ಬಾಹುಗಳ ಚೌಕಟ್ಟನ್ನು ಕೆತ್ತಿ ಒಂದರಲ್ಲಿ ಮಯೂರದ ಸಾಲು, ಇನ್ನೊಂದರಲ್ಲಿ ಆನೆಗಳ ಸಾಲು, ಇನ್ನೊಂದು ಬಾಹುವಿನಲ್ಲಿ ಚೌಕದ ಸಾಲು ಮತ್ತು ಮೂರು ಈಶ್ವರ ಲಿಂಗದ ಸಾಲುಗಳನ್ನು, ಮತ್ತು ಮೇಲೆ ಕಮಲದ ಸಾಲನ್ನು ಕೆತ್ತಲಾಗಿದೆ. ಇದೊಂದು ಅಪರೂಪದ ಕಲಾತ್ಮಕ ಕೃತಿ.

---

* ಸಂಗಮ, ಎಮ್.ಐ.ಜಿ.-೭೭, ೬ನೆಯ ಅಡ್ಡರಸ್ತೆ, ೬ನೆಯ ಮುಖ್ಯರಸ್ತೆ, ಕೆ.ಎಚ್.ಬಿ. ಕಾಲೋನಿ, ೨ನೆಯ ಹಂತ, ಬಸವೇಶ್ವರನಗರ, ಬೆಂ-೭೯.

**ನಾರದಮುನಿ** – ಸದರಿ ಶಾಸನದಲ್ಲಿ, ಶ್ರೀಕೃಷ್ಣನಿಗೆ ನಾರದ ಮುನಿಯು ಭೂಲೋಕದಲ್ಲಿ ತಾನು ಕಂಡ ಕೇಸೆಯ್ಯಗೌಡನ ವೃತ್ತಾಂತವನ್ನು ಹೇಳಿದಂತೆ ರಚಿಸಲಾಗಿದೆ. ಆದ್ದರಿಂದ ಇಲ್ಲಿ ನಾರದ ಮುನಿಯ ಕೈಯಲ್ಲಿ ಎರಡು ಬುರುಡೆಗಳುಳ್ಳ ಒಂದು ವಾದ್ಯವನ್ನು ಬಿಡಿಸಲಾಗಿದೆ (ಚಿತ್ರ ೪) ಅವನ ತಲೆಯಲ್ಲಿ ಸಾಮಾನ್ಯವಾಗಿ ಮುನಿಗಳ ಉದ್ದನೆ ಜಟೆ ಇಲ್ಲ. ಜಟೆಯನ್ನು ಅಡ್ಡಗಲವಾಗಿ ಕೆತ್ತಲಾಗಿದೆ. ಅದೂ ಅಲ್ಲದೆ ನಾರದನು ನವಿಲಿನ ಮೇಲೆ ಕುಳಿತು ಸಂಚಾರಕ್ಕೆ ಹೊರಟಿದ್ದಾನೆ. ಇಲ್ಲಿಯೂ ಕಲಾವಿದ ತನ್ನ ಕಲಾ ಪ್ರೌಢಿಮೆಯನ್ನು ಮತ್ತು ಸ್ವತಂತ್ರ ಸೃಜನಶೀಲತೆಯನ್ನು ಮೆರೆದಿದ್ದಾನೆ. ಬಹುಶಃ ನಾರದನ ಈ ತೆರನ ಉಬ್ಬುಶಿಲ್ಪ ಇನ್ನೊಂದೆಡೆ ಇರಲಾರದು. ಇವನ ಜಟೆಯು ಇಪ್ಪತ್ತನೆ ಶತಮಾನದ ಆದಿ ಭಾಗದಲ್ಲಿ ಈ ಭಾಗದ ಶ್ರೀಮಂತರು ಮತ್ತು ಗಣ್ಯರು ತಲೆಯ ಮೇಲೆ ಧರಿಸುತ್ತಿದ್ದ ರುಮಾಲನ್ನು ಹೋಲುತ್ತದೆ. ಅಂದರೆ ಈ ಶಿಲ್ಪಿಯು ತನ್ನ ಸುತ್ತಲಿನ ಪರಿಸರವನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದನೆಂಬುದು ವ್ಯಕ್ತವಾಗುತ್ತದೆ.

**ಶೇಷಶಾಯಿ ರಂಗನಾಥ** – ಬಾಲ್ಕನಿಯಂತೆ ಮುಂಚಾಚಿರುವ ಕಲ್ಲಿನ ಮೇಲ್ಪದರನ್ನು ಕೆತ್ತಿ ಒಂದು ವಿಶಿಷ್ಟ ರೀತಿಯ ಶೇಷಶಾಯಿಯ ಶಿಲ್ಪವನ್ನು ಶಿಲ್ಪಿ ಕೆತ್ತಿದ್ದಾನೆ. ಈ ಉಬ್ಬುಶಿಲ್ಪದಲ್ಲಿ ಸರ್ಪಕ್ಕೆ ಹೆಚ್ಚಿನ ಪ್ರಧಾನ್ಯತೆಯನ್ನು ನೀಡಿ ಸುಂದರವಾಗಿ ಬಿಡಿಸಲಾಗಿದೆ (ಚಿತ್ರ ೫). ಬಲಬದಿಯಲ್ಲಿ, ಎತ್ತರದ ದ್ವಾರಪಾಲಕವನ್ನು ಬಿಡಿಸಲಾಗಿದೆ. ಬಲ ಮಗ್ಗುಲಾಗಿ ಮಲಗಿರುವ ವಿಷ್ಣು ಮತ್ತು ಕಾಲ್ದೆಸೆಯಲ್ಲಿ ಕುಳಿತಿರುವ ಲಕ್ಷ್ಮೀ ಶಿಲ್ಪಗಳನ್ನು ಸ್ಪಷ್ಟವಾಗಿ ಗುರ್ತಿಸಬಹುದು. ಈ ಶಿಲ್ಪದಲ್ಲಿಯೂ ಶಿಲ್ಪಿಯು ಸ್ವತಂತ್ರ ಮನೋಧರ್ಮವನ್ನು ಪ್ರದರ್ಶಿಸಿದ್ದಾನೆ. ಕೇಸವಯ್ಯನ ಮನೆತನದ ಮನೆದೇವರು ಅರಕೇರಿಯ ಹತ್ತಿರದಲ್ಲಿರುವ ಮಾನಸಗಲ್ಲಿನ ರಂಗನಾಥ. ಆದ್ದರಿಂದ ಈ ಉಬ್ಬು ಶಿಲ್ಪಕ್ಕೆ ರಂಗನಾಥ ಎಂದು ಹೆಸರಿಸಿದ್ದೇನೆ.

**ಶಿವ-ಪಾರ್ವತಿ ಮತ್ತು ಗರುಡ** – ರಂಗನಾಥ ಶಿಲ್ಪಕ್ಕೆ ಎಡಬದಿಯಲ್ಲಿ ಸಿಂಗಾರಗೊಂಡ ನಂದಿಯ ಮೇಲೆ ಶಿವ ಪಾರ್ವತಿಯನ್ನು ಬಿಡಿಸಲಾಗಿದೆ (ಚಿತ್ರ ೬). ಇಲ್ಲಿಯೂ ಶಿಲ್ಪಿಯು ನಂದಿಯ ಮೇಲೆ ತನ್ನ ಗಮನವನ್ನು ಕೇಂದ್ರೀಕರಿಸಿ ತುಂಬಾ ಸುಂದರವಾಗಿ ಉಬ್ಬುಶಿಲ್ಪವನ್ನು ಬಿಡಿಸಿದ್ದಾನೆ (ಚಿತ್ರ ೬). ಈ ನಂದಿ ಶಿಲ್ಪದ ಕೊರಳಲ್ಲಿರುವ ಗಂಟೆಗಳ ಸರಗಳಂತೆ ಇರುವ ಗಂಟೆ ಸರಗಳನ್ನು ಇಂದಿಗೂ ದೇವದುರ್ಗದ ಪ್ರದೇಶದಲ್ಲಿ ವಿಶೇಷ ಸಂದರ್ಭಗಳಲ್ಲಿ ಎತ್ತುಗಳಿಗೆ ಹಾಕಿ ಮೆರವಣಿಗೆಯನ್ನು ಮಾಡುತ್ತಾರೆ. ನಂದಿಯ ಮುಂದೆ ಬೃಹತ್ ಗಾತ್ರದ ಗರುಡನನ್ನು ಬಿಡಿಸಲಾಗಿದೆ. ಗರುಡ ವಿಷ್ಣುವಿನ ವಾಹನ. ಆದರೆ ಈ ಶಿಲ್ಪದಲ್ಲಿ ಶಿವ-ಪಾರ್ವತಿಯರ ನಂದಿಯ ಮುಂದೆ ಕೆತ್ತಿರುವುದು ಈ ಶಿಲ್ಪಿಗೂ ಮತ್ತು ಕೇಸವಯ್ಯ ನಾಯಕನಿಗೂ ಹರಿಹರದಲ್ಲಿ ಭೇದವೆಣಿಸುವ ಭಾವವಿರಲಿಲ್ಲವೆಂದು ಅರ್ಥೈಸಬಹುದು.

**ಚತುರ್ಮುಖ ಬ್ರಹ್ಮ** – ಈ ಚಿತ್ರ ಶಾಸನದ ಎಡದ ಕೊನೆಯಲ್ಲಿ ಚತುರ್ಮುಖ ಬ್ರಹ್ಮನ ಉಬ್ಬುಶಿಲ್ಪವನ್ನು ಬಿಡಿಸಲಾಗಿದೆ (ಚಿತ್ರ ೭). ನಾಲ್ಕು ಕೈಗಳಲ್ಲಿ ನಾಲ್ಕು ವೇದಗಳನ್ನು ಹಿಡಿದುಕೊಂಡಿರುವ ಬ್ರಹ್ಮ ಮಯೂರದ ಮೇಲೆ ಕುಳಿತಿದ್ದಾನೆ. ಈ ಶಿಲ್ಪದಲ್ಲಿಯೂ ಬ್ರಹ್ಮನಿಗಿಂತ ಅವನ ವಾಹನವಾದ ನವಿಲನ್ನು ತುಂಬಾ ಸುಂದರವಾಗಿ ಬಿಡಿಸಲಾಗಿದೆ. ನವಿಲುಗರಿಗಳನ್ನು ಅದರ ರೆಕ್ಕೆಗಳನ್ನು ಚುಂಚನ್ನು ಮತ್ತು ಎರಡು ಕಾಲುಗಳ ಉಗುರುಗಳನ್ನು ಸ್ಪಷ್ಟವಾಗಿ ಗುರ್ತಿಸಬಹುದು (ಚಿತ್ರ ೭). ನವಿಲಿನ ಮುಂದೆ ಸೀತಾಫಲದ ಗಿಡವನ್ನು ಕೆತ್ತಲಾಗಿದೆ. ಈ ಸೀತಾಫಲದ ಗಿಡವನ್ನು ಒಬ್ಬ ವ್ಯಕ್ತಿ ಏರುತ್ತಲಿದ್ದಾನೆ. ಮತ್ತೊಬ್ಬ ವ್ಯಕ್ತಿ ಆಗಲೇ ಮರದ ಟೊಂಗೆಯ ಮೇಲೆ ಕುಳಿತು ಸೀತಾಫಲವನ್ನು ಕಿತ್ತಿ ಕೆಳಕ್ಕೆ ಕೆಡುವುತ್ತಲಿದ್ದಾನೆ. ದೇವದುರ್ಗದ ಗುಡ್ಡಗಳು ೨೦ನೆಯ ಶತಮಾನದ ಮಧ್ಯ ಭಾಗದವರೆಗೆ ಸೀತಾಫಲದ ಮರಗಳಿಂದ ತುಂಬಿ ತುಳುಕುತ್ತಿದ್ದವು. ಜನರು ಯಥೇಚ್ಛವಾಗಿ ಸೀತಾಫಲಗಳನ್ನು ತಿನ್ನುತ್ತಿದ್ದರು. ಈಗ ಬರೀ ಕಲ್ಲು ಬಂಡೆಗಳೇ ಉಳಿದಿವೆ. ಒಂದು ಆಭಾಸಕಾರಿಯಾದ ಅಂಶವೆಂದರೆ, ಸೀತಾಫಲದ ಗಿಡವನ್ನು ಜನ ಹತ್ತುವದಿಲ್ಲ. ಹತ್ತಿದರೆ ಮನುಷ್ಯನ ಭಾರಕ್ಕೆ ಟೊಂಗೆ ಮುರಿದು ಬೀಳುತ್ತದೆ. ಈ ಅಂಶ ಈ ಶಿಲ್ಪಿಯ ಕಂಗಳಿಂದ ಮರೆಯಾಗಿದೆ.

**ಅಂಗಸಾಧಕ** – ಈ ಸೀತಾಫಲದ ಮುಂದೆ ಒಬ್ಬ ವ್ಯಕ್ತಿ ಬಲಗೈಯಲ್ಲಿ ಗದೆಯನ್ನು ಎಡಗೈಯಲ್ಲಿ ಒಂದು ದೊಡ್ಡ ಅಳತೆಯ ಗುಂಡನ್ನು ಹಿಡಿದು ನಿಂತಿದ್ದಾನೆ (ಚಿತ್ರ ೮). ಈ ವ್ಯಕ್ತಿಯ ಸ್ನಾಯುಗಳು, ಧರಿಸಿರುವ ಕಾಚಾ ಮತ್ತು ಅಂಗ ಸೌಷ್ಠವಗಳನ್ನು ಗಮನಿಸಿದರೆ ಇವನೊಬ್ಬ ಕುಸ್ತಿ ಪಟುವಾಗಿರಬೇಕು (ಚಿತ್ರ ೮) ಎಂಬ ಭಾವನೆ ತಕ್ಷಣವೇ ಮೂಡುತ್ತದೆ. ಈ ಶಿಲ್ಪಿಗೆ ಸೀತಾಫಲದ ಮೋಹ ಎಷ್ಟಿದೆ ಅಂದರೆ, ಎಡಗೈಯಲ್ಲಿ ಇರುವ ದೊಡ್ಡ ಗುಂಡಿಗೂ ಸೀತಾಫಲದ ಕಣ್ಣುಗಳನ್ನು ಬಿಡಿಸಿದ್ದಾನೆ. ಎಷ್ಟಾದರೂ ಅದೇ ಮಣ್ಣಿನಲ್ಲಿ ಹುಟ್ಟಿ ಬೆಳೆದ ಶಿಲ್ಪಿಗೆ ಮರದ ಹಣ್ಣಿನ ಮೋಹ ಬಿಟ್ಟಿಲ್ಲ.

**ವೀರಭದ್ರ ಮತ್ತು ಭದ್ರಕಾಳಿ** – ಇನ್ನೊಂದು ವಿಶಿಷ್ಟ ಶಿಲ್ಪವನ್ನು ಈ ಶಿಲ್ಪಿ ಬಿಡಿಸಿದ್ದಾನೆ (ಚಿತ್ರ ೯). ತಕ್ಷಣ ನೋಡಿದರೆ ಹರಿಹರೇಶ್ವರ ಶಿಲ್ಪ ಎಂಬ ಭ್ರಮೆ ಹುಟ್ಟಿಸುತ್ತದೆ. ಹಿಂದೆ, ಮೊದಲು ನೋಡಿದಾಗ, ತಕ್ಷಣ ಮನಸ್ಸಿನಲ್ಲಿ ಅದೇ ಭಾವನೆ ನನ್ನಲ್ಲಿ ಮೂಡಿತ್ತು. ಆದರೆ ಸೂಕ್ಷ್ಮವಾಗಿ ಗಮನಿಸಿದರೆ ಇಲ್ಲಿ ಈ ಶಿಲ್ಪಿ ಇನ್ನೊಂದು ಅಪರೂಪದ ಉಬ್ಬು ಶಿಲ್ಪವನ್ನು ಬಿಡಿಸಿದ್ದಾನೆ. ಒಂದು ದೇಹ ಎರಡು ಕಿರೀಟಧಾರಿ ತಲೆಗಳು. ಕೊರಳಲ್ಲಿ ಒಂದಕ್ಕೆ ಕರಡಿಗೆ ಇನ್ನೊಂದಕ್ಕೆ ಕಂಠಿಹಾರ. ಬಲಗಡೆಯ ಎರಡು ಕೈಗಳಲ್ಲಿ ತ್ರಿಶೂಲ ಮತ್ತು ಡಮರುಗಳನ್ನು ಈ ಶಿಲ್ಪ ಹಿಡಿದಿದೆ. ಎಡದ ಒಂದು ಕೈಯಲ್ಲಿ ಪಾಶ ಮತ್ತೊಂದು ಕೈಯಲ್ಲಿ ಅಗ್ನಿಯನ್ನು ಬಿಡಿಸಲಾಗಿದೆ. ದಕ್ಷಬ್ರಹ್ಮನ ಯಜ್ಞಶಾಲೆಯನ್ನು ನಾಶ ಮಾಡಲು ಮತ್ತು ಅವನನ್ನು ಸಂಹರಿಸಲು ರುದ್ರನ ಜಟೆಯಿಂದ ವೀರಭದ್ರ ಮತ್ತು ಭದ್ರಕಾಳಿಯು ಹುಟ್ಟುತ್ತಾರೆ. ಮುಂದೆ ಕೆಲ ಪುರಾಣಗಳ ಪ್ರಕಾರ ವೀರಭದ್ರ ದಕ್ಷನನ್ನು ಸಂಹರಿಸಿದರೆ, ಕೆಲ ಪುರಾಣಗಳ ಪ್ರಕಾರ ಭದ್ರಕಾಳಿ ಚಂಡಿಯಂತೆ ದಾಳಿ ಮಾಡಿ ದಕ್ಷನ ಅಗ್ನಿಕುಂಡವನ್ನು ನಾಶಗೊಳಿಸಿದ್ದಲ್ಲದೆ ಅವನನ್ನು ಸಂಹರಿಸುತ್ತಾಳೆ[೬]. ಈ ಎರಡೂ ಪೌರಾಣಿಕ ಕಥೆಗಳಿಗೆ ಹೊಂದುವಂತೆ ಈ ಉಬ್ಬುಶಿಲ್ಪವನ್ನು ಶಿಲ್ಪಿ ಕೆತ್ತಿದ್ದಾನೆ. ವೀರಭದ್ರ ಮತ್ತು ಭದ್ರಕಾಳಿ ಒಟ್ಟಾಗಿ ಒಂದೇ ಶಿಲ್ಪದಲ್ಲಿ ಕೆತ್ತಿರುವ ಉದಾಹರಣೆಗಳು ಬೇರೆಡೆ ಇಲ್ಲ.

**ಶಾಸನದ ಪಾಠ ಒಂದು ಪುಟ್ಟ ಕಾವ್ಯ**

ಈ ಶಾಸನದ ಪೂರ್ಣ ಪಾಠವನ್ನು (ದೇವದುರ್ಗ ಶಾಸನ ಸಂ.೮೬) ರಾಯಚೂರು ಜಿಲ್ಲೆಯ ಶಾಸನ ಸಂಪುಟದಲ್ಲಿ ಪ್ರಕಟಿಸಲಾಗಿದೆ[೭]. ಈ ಶಾಸನದ ಪೂರ್ತಿಪಾಠವನ್ನು ಅನುಬಂಧ ೧ರಲ್ಲಿ ಕೊಟ್ಟಿದ್ದೇನೆ. ನನ್ನ ೨೦೦೮ರ ಸಂಪ್ರಬಂಧವನ್ನು ಓದಿ ಮೆಚ್ಚಿಕೊಂಡ ನನ್ನ ಗೆಳೆಯ ಪ್ರೊ. ಎಂ.ಎಂ. ಕಲಬುರ್ಗಿಯವರು ಶಾಸನದಲ್ಲಿ ಸಾಂಗತ್ಯ ಮತ್ತು ವಾರ್ಧಕ ಷಟ್ಪದಿಗಳಿವೆ ಎಂಬ ಹೊಸ ವಿಷಯವನ್ನು ನನ್ನ ಗಮನಕ್ಕೆ ತಂದರು.

ಈ ಬಗ್ಗೆ "ಮಾರ್ಗ ೪" ರಲ್ಲಿ ಒಂದು ಲೇಖನವನ್ನು ಪ್ರಕಟಿಸಿದ್ದಾರೆ[೮]. ಅವರ ಪ್ರಕಾರ ಕರ್ನಾಟಕದಲ್ಲಿ ಸದ್ಯಕ್ಕೆ ಪ್ರಕಟವಾಗಿರುವ ಶಾಸನಗಳ ಸಂಖ್ಯೆ (೨೫ ಸಾವಿರ ಇರಬಹುದು. ಆದರೆ ಬಹುಪಾಲು ಎಲ್ಲವೂ ಅಕ್ಷರ ಛಂದಸ್ಸಿನಲ್ಲಿಯೇ ರಚಿತವಾಗಿವೆ. ಕ್ವಚಿತ್ ಎಂಬಂತೆ ಅಂಶವೃತ್ತ, ಮಾತ್ರಾವೃತ್ತಗಳ ಬಳಕೆ ಆಗಿವೆ. ಕೆಲ ತ್ರಿಪದಿ ಮತ್ತು ಷಟ್ಪದಿ ಶಾಸನಗಳನ್ನು ಉಲ್ಲೇಖಿಸುತ್ತಾ, ಸದರಿ ಶಾಸನವು ಸಾಂಗತ್ಯ ಮತ್ತು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿರುವುದನ್ನು ಸಿದ್ಧಮಾಡಿದ್ದಾರೆ. ಅಷ್ಟೇ ಅಲ್ಲದೆ ೧೮ ಸಾಲುಗಳ ಈ ಶಾಸನವನ್ನು ಪದ್ಯರೂಪದಲ್ಲಿ ಪುನರ್ ರಚಿಸಿದ್ದಾರೆ. ಅದನ್ನು ಈ ಕೆಳಗೆ ಕೊಡಲಾಗಿದೆ.

(ಸಾಲು: ೫–೬ ಸಾಂಗತ್ಯ)

ಬಲ್ಲಿದ ಮಚಾಳಿ ನಾರದ ಮುನಿ ನಿನ್ನ
ಬೊಲ್ಲೆಯ ಮಾತದಂತಿರಲಿ ।
ಯೆಲ್ಲಿದ ಬಂದೆ ಶುದ್ಧಿಯ ಪೇಳೆನಲಾಲಿ
ಸೋಲೇ[ಸೊಲ್ಲಿ]ಸಿದನು ಕೃಷ್ಣಣನೊಡನೆ ॥

(ಸಾಲು ೧೦–೧೫: ವಾರ್ಧಕ ಷಟ್ಪದಿ)

ಸುರಪುರದ ವಿಸ್ತಾರ ಯೀ ದೇವದುರ್ಗ ಸುಂ
ಧರ ಪ್ರಾಕಾರ ಮುಗಿಲಟ್ಟಣೆಯ ಹುಲಿಮುಖಂ
ಸರುವರುದ ರಾಜಗೃಹದ ಶೃಂಗಾರಮಂ ಶೋಭಾಯಮಾನಮಾದಾ ।
ಹರಿಯ ಮೂಡಣ ತಟಾಕದ ಹಿಂದೆ ವುಪವನಂ
ಮೆರೆದ ಬಾಜಾರ ವೃಂದಾರ ಕಾದ್ರಿಯಮರ
ರರಮನೆಯ ದುರ್ಗವಳಕಾನಗರಮಂ ಪೋಲ್ವ ಸೊಗಸಿಂದ ಚೆಲ್ವೆನಿಸಿದಾ ॥
ಮಲ್ಲೇದೇವರದುರ್ಗದಿರವ ವಿಸ್ತಾರಗೈವ
ರಲ್ಲಗಲ್ಲಿಗೆ ಬೆಂಚಿಕೆರೆ ಬಾವಿ ಡೊಣೆಗಳಂ
ಸಲ್ಲಲಿತ ವುಪಜಲದ ಸಾಥ ಸವುಖ್ಯದ ನೃಪಾಲಯದ ಪರಭಾಗಮೆಸೆವಾ ।
ಪಲ್ಲವಿತ ವನ ಕೊಳ್ಳ ಪಾಸರಿಗಳಿಂದೆಸೆವ
ಪುಲ್ಲ ತರು ಗೂಲ್ಮ ಲತೆ ಗುಹೆಗಳಂ ಮಿಗೆ ಬಲಿದು

ಬಲ್ಲಿದ ನೃಪಾಲ ಚಿಕಾಸಲೇಂದ್ರನು ಗಿರಿತ್ರಯವ ದುರ್ಗವ ರಚಿಸಿದಾ ॥
ಧ್ರುವನ ವಿಹಗ್ರದಿ ತ್ರಿಕೂಟಾದ್ರಿಂ ಯಳ್ದಪ
ಗ್ರೀವನನುಜನಂ (ರ)ಸಾತಳದ ಮಧ್ಯದ಼ ನಿಜ
ಭವನಮಂ ಬಲಿಗೆ ಸಂಪದ ಚಿರಾಯುವನಿಲದೀವಿಯರೇ ಯನನುಜನಾದಾ ।
ಅವಿರಗನಿಮಿಷ ಜನದನಾಥ ಸ್ವೇತಾಚಲದ
ಕವಿಯ ದೀಕ್ಷಿತ ಮಥನ ಗೋಪಾಲ ಶ್ರೀಕೃಷ್ಣ
ರವಿ ಸೋಮ ತಾರೆಯುಗ್ಗನ್ನೆವರ ಚಿಕಕಾಸಲೇಂದ್ರನನ್ವನೇ ರಕ್ಷಕಾ ॥

(ಸಾಲು ೧೫–೧೮: ಸಾಂಗತ್ಯ)

ಹರದರುಷನ ತಾತ್ವರಿಯದಿ ಶ್ರೋಣಿತ
ಪುರದೆಡೆಗಾನ್ಯೆದಲಾಗಿ ।
ಮುರಮರ್ಧನನಿನ್ನು ಮೊಮ್ಮನ ಸುಧಿ ವಿ
ಸ್ತರಪಾದುದೇನ ಪೇಳುವೆನೂ ॥
ಸ್ಮರತನಯನ ಪವುರುಷನನತ್ಯಧಿಕ ನಾ
ಲಿಸಲೊಳ ದೈತ್ಯನಾತ್ಮಜೆಯಾ ।
ಸುತರಲಂಪಟವಾಂತು ತಿರುಗದೆ ಸುಖ ಬಿಟು
ನಿರುನಾಗಿರ್ಧ ಗೋಪುರದಿ ॥
ಗಜ್ಜಿತನದಲಾತ ವೋಕೆರ್ದುದ ಕಂಡು
ತುಬಿಸಿ ಕೊಟ್ಟವರ್ನಾವು ।
ಕೊಬ್ಬಿದ ದಡಿಗ ದೈತ್ಯರು ಜಡು ಹಿಡಿಯ
ಲೈಬ್ಬಿದಾವರೊಡಲುಗಳಾ ॥
ಲೆಕ್ಕವಿಲ್ಲದೆ ಕೊಂದನದುಟಳ ದೈತ್ಯರ
ವಿಕ್ರಮ ವಿರೋತಮರಾ ।
ರಕ್ಕಸರಾಯ ಬಾಣಾಸುರ ಹಿಡಿದನು
ಮುಕ್ಕಂಣ ಕೊಟ್ಟ ಶಕ್ತಿಯಲಿ ॥

ಈ ಶಾಸನದಲ್ಲಿ ಭಾಷಾಲೋಪಗಳಿವೆ. ಬಹುಶಃ ಶಾಸನವನ್ನು ಕೆತ್ತಿದ ಶಿಲ್ಪಿಗೆ ಭಾಷಾದೋಷಗಳ ಬಗ್ಗೆ ಅಷ್ಟು ಜ್ಞಾನವಿರಲಿಲ್ಲ. ಪ್ರೊ. ಕಲಬುರ್ಗಿಯವರು ಶಾಸನದ ಕವಿಯ ಹೆಸರನ್ನು ಗಮನಿಸಿಲ್ಲ. ಈ ಶಾಸನದ ೧೪ನೇ ಸಾಲಿನಲ್ಲಿ 'ಸೇತಾಚಲದ ಕವಿ ದೀಕ್ಷಿತ ಮದನಗೋಪಾಲ' ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಕಾವ್ಯ ಸೌಂದರ್ಯದ ದೃಷ್ಟಿಯಿಂದ ಇದೊಂದು ಶ್ರೇಷ್ಠ ಕೃತಿ ಅಲ್ಲ. ಆದರೆ ಅಲ್ಲಲ್ಲಿ ಕವಿ ತನ್ನ ಪ್ರತಿಭೆಯನ್ನು ತೋರಿಸಿದ್ದಾನೆ. "ಮಲ್ಲೇದೇವರ ದುರ್ಗದಿರವ.. .. .." ಎಂದು ಆರಂಭವಾಗುವ ವಾರ್ಧಕ ಷಟ್ಪದಿಯ ಎರಡನೆಯ ನುಡಿ ತುಂಬಾ ಲಯಬದ್ಧವಾಗಿ ಹೊಮ್ಮಿದೆ. ಶಾಸನ ಕವಿಗಳು ಉಳಿದ ಕವಿಗಳಂತೆ ಕಾವ್ಯರಚನೆಯಲ್ಲಿ ಪರಿಣಿತರಾಗಿರುವುದಿಲ್ಲ.

ದೇವದುರ್ಗ ತಾಲ್ಲೂಕಿನಲ್ಲಿ ಇಂದು "ಶ್ವೇತಾಚಲ" ಎಂಬ ಹಳ್ಳಿ ಇಲ್ಲ. ಸುಣ್ಣದ ಕಲ್ಲು ಎಂಬ ಹೆಸರಿನ ಹಳ್ಳಿ ಇದೆ. ಕವಿಯು ತನ್ನ ಹುಟ್ಟೂರನ್ನು ಸುಣ್ಣದ ಕಲ್ಲು ಎಂದು ಹೇಳಿಕೊಳ್ಳಲು ನಾಚಿಕೆ ಅನ್ನಿಸಿರಬೇಕು. ಅಥವಾ ಸಂಸ್ಕೃತ ವ್ಯಾಮೋಹದಿಂದಾಗಿ ತನ್ನ ಊರನ್ನು "ಶ್ವೇತಾಚಲ"ವೆಂದು ಹೇಳಿಕೊಂಡಿದ್ದಾನೆ ಎಂದು ಊಹಿಸಬಹುದು. ಸುಣ್ಣದ ಕಲ್ಲಿನಲ್ಲಿ ಸದ್ಯ ಯಾವ ಬ್ರಾಹ್ಮಣ ಕುಟುಂಬ ವಾಸಿಸುತ್ತಿಲ್ಲವೆಂದು ತಿಳಿದು ಬಂದಿದೆ. ಹೀಗಾಗಿ ಈ ಕವಿಯ ವಂಶಜರನ್ನು ಪತ್ತೆ ಹಚ್ಚುವದು ಸಾಧ್ಯವಾಗಿಲ್ಲ.

## ಉಪಸಂಹಾರ

ದೇವದುರ್ಗದ ಈರಣ್ಣ ದೇವರ ಗುಡ್ಡದ ಶಾಸನದಿಂದ ದೇವದುರ್ಗದ ಇತಿಹಾಸ ಮಾತ್ರ ತಿಳಿದು ಬಂದುದಕ್ಕಾಗಿ ಈ ಶಾಸನ ಮಹತ್ವದ್ದು ಎಂದೆನಿಸುವುದಿಲ್ಲ. ಇಷ್ಟು ವೈವಿಧ್ಯಪೂರ್ಣವುಳ್ಳ ಮತ್ತು ವೈಶಿಷ್ಟ್ಯಪೂರ್ಣ ಚಿತ್ರಶಾಸನ ಕರ್ನಾಟಕದಲ್ಲಿ ಬಹುಶಃ ಇನ್ನೊಂದಿರಲಾರದು. ಕಲಬುರ್ಗಿಯವರೇ ಹೇಳಿದಂತೆ ಕಾವ್ಯರೂಪದಲ್ಲಿ ರಚಿತವಾದ ಶಾಸನಗಳೂ ಅಪರೂಪ. ಆದ್ದರಿಂದ ಈ ಮೂರು ದೃಷ್ಟಿಯಿಂದ ಈ ಶಾಸನವು ತುಂಬಾ ಅಪರೂಪದ ಹಾಗೂ ಅನುಪಮ ಶಾಸನ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗದು.

## ಕೃತಜ್ಞತೆಗಳು

ಈ ಶಾಸನದ ಕಾವ್ಯರೂಪದತ್ತ ನನ್ನ ಗಮನ ಸೆಳೆದ ಪ್ರೊ. ಎಂ.ಎಂ. ಕಲಬುರ್ಗಿಯವರಿಗೂ, ಸದರಿ ಚಿತ್ರಶಾಸನದ ಉಬ್ಬುಶಿಲ್ಪಗಳ ಬಗ್ಗೆ ಕೆಲ ಮಾಹಿತಿ ನೀಡಿದ ಡಾ॥ ಎಂ.ಜಿ. ನಾಗರಾಜ ಅವರಿಗೂ ಲೇಖಕ ಕೃತಜ್ಞನಾಗಿದ್ದಾನೆ.

## ಆಧಾರ ಸೂಚಿ


೧. ಚಂದ್ರಶೇಖರ್. ಹೆಚ್ (೨೦೦೯), ದೇವದುರ್ಗದ ಈರಣ್ಣದೇವರ ಗುಡ್ಡದ ಶಾಸನದ ಒಂದು ಅಧ್ಯಯನ.. .. ಇತಿಹಾಸ ದರ್ಶನ, ಸಂಪುಟ, ೨೩. ಪು. ೧೦೦-೧೦೮.

೨. ದೇವರಕೊಂಡಾರೆಡ್ಡಿ (೨೦೦೩). ರಾಯಚೂರು ಜಿಲ್ಲೆ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ:೭ ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು.೧೧೩-೧೧೫.

೩. ನಾಗರಾಜ, ಎಂ.ಜಿ. (೨೦೦೬), ಸಾಹಿತ್ಯೋಕ್ತ ವೀರಭದ್ರ ಶ್ರೀಮದ್ರಂಭಾಪುರೀ ವೀರ ಸೋಮೇಶ್ವರ ಜಗದ್ಗುರುಗಳ ಜನ್ಮ ಸುವರ್ಣ ಮಹೋತ್ಸವ ಗ್ರಂಥಮಾಲೆ – ಬಾಳೆಹೊನ್ನೂರು, ಪು.೩೬,೩೮.

೪. ದೇವರಕೊಂಡಾರೆಡ್ಡಿ (೨೦೦೩), ಪೂರ್ವೋಕ್ತ.

೫. ಕಲಬುರ್ಗಿ ಎಂ.ಎಂ. (೨೦೦೪) ಮಾರ್ಗ ೪, ಸ್ವಪ್ನ ಬುಕ್ ಹೌಸ್ ಬೆಂಗಳೂರು.




# ಕೆಳದಿ ಅರಸರ ವಾಸ್ತು-ಮೂರ್ತಿಶಿಲ್ಪಗಳು

– ಪ್ರೊ॥ ಶಕುಂತಲಾ ಸಿಂಧೂರ*

ಕೆಳದಿ ಅರಸರ ಆಳ್ವಿಕೆಗೆ ಸಂಬಂಧಿಸಿದ ಶಿವತತ್ವ ರತ್ನಾಕರ, ಕೆಳದಿ ನೃಪವಿಜಯ ಮೊದಲಾದ ಸ್ಥಳೀಯ ಕೃತಿಗಳಲ್ಲಿಯೂ ಪಯೆಸ್, ಡೆಲವೆಲ್ಲೆ ಮುಂತಾದ ವಿದೇಶೀಯರ ಬರಹಗಳಲ್ಲಿಯೂ ಅನೇಕ ಸಮಕಾಲೀನ ಕೋಟೆಕೊತ್ತಳಗಳ ಸುಂದರ ನಗರಗಳ ವೈಭವಯುತ ಅರಮನೆ ಮತ್ತು ದೇವಾಲಯಗಳ ವರ್ಣನೆಗಳು ದೊರಕುತ್ತವೆ. ಈ ವಾಸ್ತುಕೃತಿಗಳಲ್ಲಿ ಹಲವು ಇಂದಿಗೂ ಉಳಿದು ಬಂದಿವೆ. ಕೆಳದಿ ಅರಸರು ಕೆಳದಿ, ಇಕ್ಕೇರಿ, ಹಳೆನಗರ ಮತ್ತು ಕವಲೆದುರ್ಗಗಳಲ್ಲಿ ವಿಜಯನಗರ ಶೈಲಿಯಲ್ಲಿ ಕಟ್ಟಿಸಿದ ದೇವಾಲಯಗಳು, ಅವುಗಳ ಕಮಾನುಗಳು, ಸ್ತಂಭ ಗೋಪುರಗಳು, ತೆನೆಗಳು ಮತ್ತು ಗುಮ್ಮಟಗಳನ್ನು ಒಳಗೊಂಡಿವೆ.

ಇವರು ಹಲವಾರು ಗುರುಮನೆ(ಮಠ)ಗಳು, ಅರಮನೆಗಳು ಮತ್ತು ದೇವಾಲಯಗಳನ್ನೂ ನಿರ್ಮಿಸಿದರು. ಇವುಗಳನ್ನು ಕೆಳದಿ, ಇಕ್ಕೇರಿ, ನಗರ, ಕವಲೆದುರ್ಗ, ವರದಾಮೂಲ ಇತ್ಯಾದಿ ಸ್ಥಳಗಳಲ್ಲಿ ಕಾಣುತ್ತೇವೆ. ಶಿವಮೊಗ್ಗದ ಬೇಸಿಗೆ ಅರಮನೆ, ಕೆಳದಿ ಶ್ರೀರಾಮೇಶ್ವರ ದೇವಾಲಯ, ವೀರಭದ್ರ ದೇವಾಲಯಗಳು ಹೊಯ್ಸಳ ದ್ರಾವಿಡ ವಾಸ್ತುಶಿಲ್ಪದ ಮಾದರಿಯಲ್ಲಿವೆ. ನಗರದ ಆಂಜನೇಯ ದೇವಾಲಯ, ಗುಡ್ಡದ ವೆಂಕಟರಮಣ ದೇವಾಲಯ, ನೀಲಕಂಠ ದೇವಾಲಯ, ಕೊಲ್ಲೂರು ಮೂಕಾಂಬಿಕಾ ದೇವಾಲಯ, ಕವಲೆದುರ್ಗದ ವಿಶ್ವೇಶ್ವರ ದೇವಾಲಯ, ಇಕ್ಕೇರಿ ಅಘೋರೇಶ್ವರ ದೇವಾಲಯ, ಉಡುಪಿಯ ಶ್ರೀಕೃಷ್ಣ ಮಠ, ಕೆಳದಿ ರಾಜಗುರುಮಠ ಇವು ಅವರ ವಾಸ್ತುಶಿಲ್ಪಕ್ಕೆ ಪ್ರತೀಕವಾಗಿರುವ ದೇವಾಲಯಗಳಾಗಿವೆ. ಆ ಕಾಲದ ವಾಸ್ತುಶೈಲಿಯನ್ನು ಡಾ. ಅ.ಸುಂದರ ಅವರು ಸದಾಶಿವನಾಯಕ, ವೀರಭದ್ರನಾಯಕ (ಸು. ೧೬೪೦ರವರೆಗಿನ)ರ ಕಾಲದ್ದು 'ಹಿಂದೂ ಶೈಲಿ' ಮತ್ತು ಶಿವಪ್ಪನಾಯಕ ಹಾಗೂ ಮುಮ್ಮಡಿ ಸೋಮಶೇಖರ ನಾಯಕರ ಕಾಲದ್ದು 'ಹಿಂದೂ ಮುಸ್ಲಿಂ ಶೈಲಿ' ಎಂದು ಎರಡು ಹಂತಗಳನ್ನಾಗಿ ವಿಭಜಿಸಿದ್ದಾರೆ.[೩]

ಅಂದಿನ ಅರಮನೆಗಳಲ್ಲಿ ಶಿವಮೊಗ್ಗ ಬಿಟ್ಟರೆ ಉಳಿದವು ನಶಿಸಿವೆ. ಕೆಳದಿ ರಾಜಧಾನಿಯಲ್ಲಿ ಅದರ ಅವಶೇಷವಿದೆ. ಶಿವಮೊಗ್ಗದ ಕೋಟೆ ಆಂಜನೇಯ ದೇವಾಲಯದ ಪಕ್ಕದಲ್ಲಿ ನಿರ್ಮಿತವಾಗಿರುವ ಶಿವಪ್ಪನಾಯಕನ ಬೇಸಿಗೆ ಅರಮನೆ ಈ ನಿಟ್ಟಿನಲ್ಲಿ ಗಮನಿಸುವಂತಹುದು. ಇದು ತೇಗದಿಂದ ಕಟ್ಟಿದ್ದು. ಇಂತಹುದೇ ಇನ್ನೊಂದು ಗಾಂಧಿಬಜಾರ್ ಹತ್ತಿರದಲ್ಲಿಯೂ ಅವಶೇಷವಾಗಿ ಉಳಿದಿದೆ. ಇದು ವಾಸ್ತುವಿನ ದೃಷ್ಟಿಯಿಂದ ಸೊಗಸಾಗಿರುವ ಉಪ್ಪರಿಗೆ ಅರಮನೆ. ಇವರ ರಾಜ್ಯದಲ್ಲಿ ಸು. ೧೩೦ಕ್ಕೂ ಹೆಚ್ಚು ಮಠಗಳಿದ್ದು, ಕೆಲವು ಮಠಗಳು ಮಾತ್ರ ಉಳಿದಿವೆ. ಕೆಳದಿ ವಾಸ್ತುಶೈಲಿ ತನ್ನದೇ ಆದ ವೈಶಿಷ್ಟ್ಯದಿಂದ ತನ್ನತನವನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವುದರಿಂದ ಇದನ್ನು 'ಕೆಳದಿ ಶೈಲಿ' ಎನ್ನಲಾಗಿದೆ.

ಮಧ್ಯಕಾಲೀನ ಭಾರತದಲ್ಲಿ ಭಾರತಕ್ಕೆ ಬಂದಂತಹ ಒಂದು ಹೊಸ ವಾಸ್ತುಶೈಲಿ ಎಂದರೆ ಇಸ್ಲಾಮಿಕ್ ವಾಸ್ತುಶೈಲಿ. ಇಸ್ಲಾಮಿಕ್ ಶೈಲಿಯು ಈಗಾಗಲೇ ಭಾರತದಲ್ಲಿ ಪ್ರಚಲಿತದಲ್ಲಿದ್ದ ಶೈಲಿಗೆ ಸೇರ್ಪಡೆಯಾಗಿ ಬೆಳೆದ ಶೈಲಿಯನ್ನು ಇಂಡೋ-ಇಸ್ಲಾಮಿಕ್ ಕಲಾಪರಂಪರೆ ಎನ್ನಲಾಗಿದೆ. ಇದನ್ನು ೧೧ನೆಯ ಶತಮಾನದಿಂದ ಪ್ರಾರಂಭಿಸಿ ಸು.೧೭ನೆಯ ಶತಮಾನದವರೆಗೂ ಗುರುತಿಸಬಹುದು. ಈ ಶೈಲಿಯನ್ನು ಇತಿಹಾಸಕಾರರು ೩ ವಿಧವಾಗಿ ವಿಂಗಡಿಸಿದ್ದಾರೆ. ೧. ಸುಲ್ತಾನರ ಕಲಾಶೈಲಿ ೨. ಮೊಘಲ್ ಕಲಾಶೈಲಿ ೩. ಪ್ರಾದೇಶಿಕ ಕಲಾಶೈಲಿ.

ದಕ್ಷಿಣ ಭಾರತದಲ್ಲಿ ಈ ಶೈಲಿಯು ಸಾಮಾನ್ಯವಾಗಿ Imperial ಶೈಲಿಯ ಬೆಳವಣಿಗೆಯಾಗಿರದೇ ಪ್ರಾದೇಶಿಕ ಶೈಲಿಯ ಬೆಳವಣಿಗೆಯನ್ನು ತಿಳಿಸುತ್ತದೆ. ಅದರಲ್ಲಿಯೂ ಕರ್ನಾಟಕದ ಅಥವಾ ದಖ್ಖನ್ನಿನ ಪ್ರದೇಶದಲ್ಲಿ ಇದು ತನ್ನದೇ ಆದ

---

* ಕನ್ನಡ ಉಪನ್ಯಾಸಕರು, ಶಿವಗಂಗಾ ನಿಲಯ, ಕರಿಯಮ್ಮ ಬಡಾವಣೆ, ರಾಜೀವ್‌ಗಾಂಧಿ ನಗರ, ಗದಗ

ಪ್ರಾದೇಶಿಕ ಬೆಳವಣಿಗೆಯಾಗಿ ಬೆಳೆದುಬಂದಿದೆ. ಇಂಡೋ ಇಸ್ಲಾಮಿಕ್ ವಾಸ್ತುಶೈಲಿಯು ವಿಜಯನಗರ ಕಾಲದಲ್ಲಿ ಅವರ ಧಾರ್ಮಿಕೇತರ ಕಟ್ಟಡಗಳಲ್ಲಿ ಕಂಡುಬಂದಿದ್ದು, ಅದರ ಯಾವುದೇ ಪ್ರಭಾವವೂ ಧಾರ್ಮಿಕ ಕಟ್ಟಡಗಳಲ್ಲಿ ಕಂಡುಬರುವುದಿಲ್ಲ.

ನಗರದ ಕೋಟೆ, ಭುವನಗಿರಿ ಹಾಗೂ ಕವಲೆದುರ್ಗ ಮೊದಲಾದ ರಕ್ಷಣಾತ್ಮಕ ಕೋಟೆಗಳ ರಚನೆಯಲ್ಲಿ ಹಾಗೂ ಕೋಟೆಯ ಒಳಗಡೆ ಇರುವ ಕೆಲವು ಧಾರ್ಮಿಕ ಕಟ್ಟಡಗಳಲ್ಲಿ ಈ ಶೈಲಿಯ ಪ್ರಭಾವ ಗಾಢವಾಗಿದೆ. ಅಲ್ಲದೆ ಕೆಲವೊಂದು ಕೆರೆಯ ನಿರ್ಮಾಣದಲ್ಲಿ ಅದರಲ್ಲಿಯೂ ಕೆರೆಯ ಮಧ್ಯೆ ನಿರ್ಮಿಸಿರುವ ಕೆಲವೊಂದು ದೇವಾಲಯಗಳಲ್ಲಿ ವಿಶೇಷವಾಗಿ ಇಂಡೋ–ಇಸ್ಲಾಮಿಕ್ ವಾಸ್ತುಶಿಲ್ಪ ಶೈಲಿಯನ್ನು ಕಾಣುತ್ತೇವೆ. ಉದಾಹರಣೆಗೆ ಮಲ್ಲಂದೂರು ಕೆರೆ (ಸಾಗರ ತಾಲ್ಲೂಕು).

ಸಮಕಾಲೀನ ಕ್ಷಾತ್ರ ವಾಸ್ತುಗಳ ಪೈಕಿ ಶಿವಮೊಗ್ಗ ಜಿಲ್ಲೆಯ ನಗರದಲ್ಲಿರುವ ಬಿದನೂರು ಕೋಟೆ ಇದ್ದುದರಲ್ಲಿ ಒಳ್ಳೆಯ ಸ್ಥಿತಿಯಲ್ಲಿ ಉಳಿದಿವೆ. ಕೆಳದಿ ಅರಸರು ತಮ್ಮ ರಾಜಧಾನಿಯನ್ನು ೧೬೩೯ರ ಹೊತ್ತಿಗೆ ಅಲ್ಲಿಗೆ ವರ್ಗಾಯಿಸಿದ್ದು, ಅಲ್ಲಿರುವ ಬಹುತೇಕ ಕಟ್ಟಡಗಳನ್ನು ಶಿವಪ್ಪನಾಯಕನ ಕಾಲದಲ್ಲಿ ಕಟ್ಟಿರಬಹುದೆಂದು ನಂಬಲಾಗಿದೆ. ಕೆಳದಿ ರಾಜವಂಶದ ಪತನದ (೧೭೬೩) ಆನಂತರ ಹೈದರ್‌ಅಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿಯೂ ಈ ಕೋಟೆ ಊರ್ಜಿತ ಸ್ಥಿತಿಯಲ್ಲಿದ್ದು ಅನಂತರ ಶಿಥಿಲವಾಗತೊಡಗಿತು. ಕೋಟೆ ಪೂರ್ಣವಾಗಿ ಕಲ್ಲುಕಟ್ಟಡದ ವಿನ್ಯಾಸದಲ್ಲಿ ಮಾವಿನಕಾಯಿಯಂತಿದ್ದು ಸುತ್ತಲೂ ಕಂದಕದಿಂದ ಆವೃತವಾಗಿದೆ. ಅದೇ ಜಿಲ್ಲೆಯ ಚನ್ನಗಿರಿಯಲ್ಲಿ ಎರಡು ಸುತ್ತಿನ ಕೋಟೆಯಿದೆ. ಅದು ರಾಣಿ ಚೆನ್ನಮ್ಮಾಜಿ ಕಟ್ಟಿಸಿದ್ದೆಂದು ತಿಳಿದುಬರುತ್ತದೆ. ಹಾಗೆಯೇ ಕವಲೆದುರ್ಗ, ಹೊನ್ನಾವರ, ಕುಮಟ, ಭಾರಂಗಿ ಆ ಕಾಲದ ಕೋಟೆಗಳ ಅವಶೇಷಗಳಿವೆ.

ಲೌಕಿಕ ವಾಸ್ತುಕೃತಿಗಳಲ್ಲಿ ಸಂಬಂಧಿಸಿದಂತೆ ನಗರದ ಒಳಕೋಟೆಯ ಒಳಭಾಗದಲ್ಲಿದ್ದ ಶಿವಪ್ಪ ನಾಯಕನ ಕಾಲದ ಅರಮನೆಯ ಕೆಲವು ಕಂಬಗಳು ಮತ್ತು ಅಡಿಪಾಯಗಳು ಮಾತ್ರ ಉಳಿದಿವೆ. ಅವುಗಳಲ್ಲಿ ದರ್ಬಾರು, ಹಜಾರ, ಒಳಕೋಣೆ ಇತ್ಯಾದಿಗಳಿದ್ದ ಸ್ಥಳಗಳನ್ನು ಮಾತ್ರ ಗುರುತಿಸಬಹುದು. ಇಕ್ಕೇರಿ ಮತ್ತು ಕೆಳದಿಯ ಅರಮನೆಗಳಲ್ಲಿ ಏನೂ ಉಳಿದಿಲ್ಲವೆಂದೇ ಹೇಳಬಹುದು. ಈ ಕೋಟೆಗಳ ರಚನೆಯಲ್ಲಿ ಭಾರತೀಯ ಇಸ್ಲಾಮೀ ಸಂಪ್ರದಾಯದ ಛಾಯೆ ಬಹುವಾಗಿ ಕಾಣುತ್ತದೆ. ಅಲ್ಲದೆ ೧೭ ಮತ್ತು ೧೮ನೆಯ ಶತಮಾನಗಳಲ್ಲಿ ದಕ್ಷಿಣ ಭಾರತದ ಐರೋಪ್ಯ ವಾಸ್ತುಶಿಲ್ಪಗಳ ಕೈವಾಡ, ಅಲ್ಲಿಯ ಸಂಪ್ರದಾಯದ ಪ್ರಭಾವ ಕೆಳದಿ ಕಟ್ಟಡಗಳಲ್ಲಿಯೂ ಇರುವ ಸೂಚನೆಗಳಿವೆ. ಆಸಕ್ತಿಯಿಂದ ಇವುಗಳ ವ್ಯವಸ್ಥಿತ ಅಧ್ಯಯನ ನಡೆಯಬೇಕಾದ ಅಗತ್ಯವಿದೆ.

ಆ ಕಾಲದ ವೈಭವದ ದ್ಯೋತಕವಾದ ಕೆಲವು ಕೊಳಗಳು ಇನ್ನೂ ಉತ್ತಮ ಸ್ಥಿತಿಯಲ್ಲಿವೆ. ಇವುಗಳಲ್ಲಿ ನಗರದ ಸಮೀಪದಲ್ಲಿರುವ ದೇವಗಂಗೆ ಒಂದು ವಿಚಿತ್ರ ರೀತಿಯ ವಾಸ್ತುಕೃತಿ. ಇಲ್ಲಿ ೨೮೫' ಅಡಿ ಉದ್ದ ೯೮' ಅಡಿ ಅಗಲದ ಪ್ರಾಂಗಣದ ಮಧ್ಯೆ ಅನೇಕ ಕೊಳಗಳು ನಿರ್ಮಿತವಾಗಿವೆ. ಕೊಳಗಳ ತಳವಿನ್ಯಾಸ ಪದ್ಮ ನಕ್ಷತ್ರ ಮುಂತಾದ ಆಕಾರಗಳಲ್ಲಿವೆ. ಇವೆಲ್ಲಕ್ಕೂ ಬೆಟ್ಟದೆಡೆಯಿಂದ ಹರಿಯುತ್ತಿದ್ದ ಚಿಕ್ಕ ಝರಿಯೊಂದನ್ನು ತಿರುಗಿಸಿ ನೀರು ಒದಗಿಸಲಾಗುತ್ತಿತ್ತು. ಈ ಕೊಳಗಳನ್ನು ಅಂತಃಪುರದವರ ಜಲಕ್ರೀಡೆಗಾಗಿ ಕಟ್ಟಲಾಗಿತ್ತೆಂದು ಪ್ರತೀತಿ. ಚಂಪಕಾ ಸರಸ್ಸು ಎಂದು ಕರೆಯುವ ಇನ್ನೊಂದು ಸುಂದರ ಕೊಳ ಶಿವಮೊಗ್ಗ ಜಿಲ್ಲೆಯ ಆನಂದಾಪುರದಲ್ಲಿದೆ.

**ಇಕ್ಕೇರಿಯ ಅಘೋರೇಶ್ವರ ದೇವಾಲಯ(ಹಳೇ ಇಕ್ಕೇರಿ)**

ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿ, ಸಾಗರಕ್ಕೆ ಸು. ೫ ಕಿ.ಮೀ. ದೂರದಲ್ಲಿರುವ ಚಿಕ್ಕಹಳ್ಳಿ ಇಕ್ಕೇರಿ. ಸು. ೮೦ ವರ್ಷಗಳ ಕಾಲ ಕೆಳದಿ ಸಂಸ್ಥಾನದ ರಾಜಧಾನಿಯಾಗಿ ಮೆರೆದ ಐತಿಹಾಸಿಕ ಸ್ಥಳ ಇಕ್ಕೇರಿ. ಕೆಳದಿಯ ನಾಯಕರು ೧೫೬೦ರ ವೇಳೆಗೆ ತಮ್ಮ ರಾಜಧಾನಿಯನ್ನು ಕೆಳದಿಯಿಂದ ಇಕ್ಕೇರಿಗೆ ವರ್ಗಾಯಿಸಿದರು. ಈಗಿರುವ ಹಳ್ಳಿಗೆ ಸು. ಎರಡು ಕಿ.ಮೀ. ದೂರದಲ್ಲಿ ಗುಡ್ಡದ ಮೇಲೆ ಒಂದು ವಿಸ್ತಾರವಾದ ಕಲ್ಲಿನಕೋಟೆ, ಕೋಟೆಯ ಸುತ್ತಲೂ ಅಗಳು ಇದೆ. ಇಲ್ಲಿ ನಾಯಕರ ಅರಮನೆ ಮತ್ತಿತರ ಕಟ್ಟಡಗಳಿದ್ದವು. ಈಗ ಅವುಗಳ ಅವಶೇಷಗಳು ಮಾತ್ರ ಉಳಿದಿದ್ದು ಆ ಭಾಗವನ್ನು ಹಳೇ ಇಕ್ಕೇರಿ ಎನ್ನುತ್ತಾರೆ. ಇದು ರಾಜಧಾನಿಯಾಗಿದ್ದಾಗ ವಿಸ್ತಾರವಾದ ನಗರವಾಗಿದ್ದಂತೆ ತೋರುತ್ತದೆ. ಅಲ್ಲಿ ಪ್ರಾಚೀನ

ನಿವೇಶನದ ಅವಶೇಷಗಳು ಕೋಟೆಯ ಸುತ್ತಲೂ ಸು. ೩ ಕಿ.ಮೀ.ಗಳಷ್ಟು ಸುತ್ತಳತೆಯ ಪ್ರದೇಶದಲ್ಲಿ ಕಂಡುಬರುತ್ತದೆ. ವಿಜಯನಗರದ ಅರಸರಿಂದ ಸ್ವತಂತ್ರರಾಗಿ ರಾಜ್ಯವನ್ನು ಮತ್ತಷ್ಟು ವಿಸ್ತಾರಗೊಳಿಸಿದ ಮೇಲೆ ೧೬೩೯ರಲ್ಲಿ ಇಕ್ಕೇರಿ ನಾಯಕರು ತಮ್ಮ ರಾಜಧಾನಿಯನ್ನು ಹೆಚ್ಚು ಆಯಕಟ್ಟಿನ ಸ್ಥಳ ಬಿದನೂರಿಗೆ ಬದಲಾಯಿಸಿದಾಗ ಇದರ ಪ್ರಾಶಸ್ತ್ಯ ತಗ್ಗಿರಬೇಕು. ಆ ಸಮಯದಲ್ಲಿ ತರೀಕೆರೆ ಮತ್ತು ಬಾಣಾವರದ ಪಾಳೇಗಾರರು, ಬಿಜಾಪುರದ ಸುಲ್ತಾನನ ನೆರವಿನೊಂದಿಗೆ ಈ ರಾಜ್ಯಕ್ಕೆ ನುಗ್ಗಿ ರಾಜಧಾನಿಯಾಗಿದ್ದ ಇಕ್ಕೇರಿಯನ್ನು ಲೂಟಿ ಮಾಡಿದಂತೆ ತಿಳಿದುಬರುತ್ತದೆ. ಮುಂದೆ ಹೈದರನು ಬಿದನೂರನ್ನು ಮುತ್ತಿ ಈ ರಾಜವಂಶವನ್ನು ಕೊನೆಗಾಣಿಸಿ ಬಿದನೂರು ಸಂಸ್ಥಾನವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ ಮೇಲೆ ಇಕ್ಕೇರಿಯ ಪ್ರಾಶಸ್ತ್ಯ ಸಂಪೂರ್ಣವಾಗಿ ಉಡುಗಿ ಹೋಯಿತು. ಈಗ ಕೋಟೆ ಮತ್ತು ಅದರ ಸುತ್ತಮುತ್ತಲಿನ ಸ್ಥಳವೆಲ್ಲ ಸಂಪೂರ್ಣ ನಿರ್ಜನವಾಗಿದೆ.

ಅಲ್ಲಿಂದ ಸು. ಒಂದೂವರೆ ಕಿ.ಮೀ. ದೂರದಲ್ಲಿ ಇಕ್ಕೇರಿ ನಾಯಕರ ಕಾಲದಲ್ಲಿ ಕಟ್ಟಿಸಿದ ಪ್ರಸಿದ್ಧವಾದ ಅಘೋರೇಶ್ವರ ದೇವಾಲಯದ ಬಳಿ ಒಂದು ಚಿಕ್ಕಹಳ್ಳಿ ಉಳಿದಿದೆ. ಅಘೋರೇಶ್ವರ ದೇವಾಲಯ ಇಲ್ಲಿನ ಪ್ರಮುಖ ಆಕರ್ಷಣೆ. ಇದು ಬಹುಶಃ ಸದಾಶಿವನಾಯಕನ ಕಾಲದ (೧೫೩೦-೬೭) ರಚನೆ. ಇಕ್ಕೇರಿ ನಾಯಕರ ವಾಸ್ತುಶೈಲಿಯಲ್ಲಿ ಅತ್ಯಂತ ಪ್ರಮುಖವಾದ ಈ ದೇವಾಲಯದಲ್ಲಿ ಹೊಯ್ಸಳ ದ್ರಾವಿಡ ಮತ್ತು ಇಸ್ಲಾಮೀ ಶೈಲಿಗಳ ಹಿತಮಿತವಾದ ಸಮ್ಮಿಲನವಿದೆ.[೪]

ಅಘೋರೇಶ್ವರ ದೇವಾಲಯವು ೫ ದಪ್ಪ ದಿಂಡುಗಳನ್ನೊಳಗೊಂಡ ೬ ಅಡಿ ಎತ್ತರದ ಅತಿದೊಡ್ಡ ಮತ್ತು ಸುಂದರವಾದ ದೇವಾಲಯ. ಹೊಯ್ಸಳ ದೇವಾಲಯಗಳ ಲಕ್ಷಣವಾದ ಎತ್ತರವಾದ ಜಗಲಿ, ಕಲ್ಲಿನ ಗೋಪುರ, ವೃತ್ತಾಕಾರದ ಮತ್ತು ೧೬ ಮುಖದ ಕಂಬಗಳು, ಗೋಡೆಗಳ ಮೇಲೆ ಅಲಂಕಾರಗಳು ಮತ್ತು ಶಿಲ್ಪಗಳು, ಗೋಪುರದಲ್ಲಿ ದ್ರಾವಿಡ ಶೈಲಿಯಂತೆ ಅಂತಸ್ತುಗಳು ಮತ್ತು ದ್ವಾರಗಳು, ಗರ್ಭಗೃಹದ ಸುತ್ತ ಪ್ರದಕ್ಷಿಣಾ ಪಥ ಹಾಗೂ ಎರಡು ಸುಕನಾಸಿಗಳು ಇವೆ. ಕಮಾನುಗಳಲ್ಲಿ ಇಂಡೋ ಸಾರ್ಸೆನಿಕ್ ಲಕ್ಷಣವನ್ನು ನೋಡಬಹುದು. ದೇವಾಲಯದಲ್ಲಿ ಒಂದು ಗರ್ಭಗೃಹ, ಪ್ರದಕ್ಷಿಣಾ ಪಥದೊಂದಿಗೆ ಎರಡು ಸುಕನಾಸಿಗಳು ಮತ್ತು ದೊಡ್ಡದಾದ ಒಂದು ನವರಂಗವಿದೆ. ಎತ್ತರವಾದ ಜಗಲಿಯ ಮೇಲೆ ೫ ಅಚ್ಚುಗಳಿದ್ದು ಅವುಗಳಲ್ಲಿ ಎರಡು ಕೀರ್ತಿ ಮುಖಗಳಿಂದಲೂ, ಎದ್ದು ನಿಂತ ಸಿಂಹಗಳಿಂದಲೂ ಅಲಂಕೃತವಾಗಿವೆ. ಈ ಜಗಲಿಯು ಗರ್ಭಗೃಹಕ್ಕೆ ಮಾತ್ರ ಕಾಣಿಸುತ್ತದೆ. ಮಿಕ್ಕ ಭಾಗಗಳ ಅಧಿಷ್ಠಾನವೂ ಆ ಜಗಲಿಯಂತೇ ಇದ್ದರೂ ಅದರಲ್ಲಿ ವಿಭಜನೆಗಳಿಲ್ಲ. ಗರ್ಭಗೃಹದ ಗೋಡೆಗಳು ಸರಳವಾಗಿವೆ. ಪ್ರತಿ ಗೋಡೆಯಲ್ಲಿಯೂ ಒಂದೊಂದು ದೊಡ್ಡ ಗೂಡು, ಅದಕ್ಕೊಂದು ಗೋಪುರ ಇದೆ. ಗೋಡೆಯ ಮೇಲೆ 'ಎಸ್' ಆಕಾರದಲ್ಲಿ ಮುಂದೆ ಚಾಚಿದ ಸೂರುಗಳಿವೆ. ಗೋಪುರದಲ್ಲಿ ಎರಡು ಅಂತಸ್ತುಗಳಿದ್ದು ಸಣ್ಣಗೋಪುರಗಳಿಂದಲೂ ನಿಂತ ಸಿಂಹಗಳಿಂದಲೂ ಅಲಂಕೃತವಾಗಿದೆ. ಕೆಳ ಅಂತಸ್ತಿನಲ್ಲಿ ಒಂದು ದ್ವಾರವಿದ್ದು, ಅದರಿಂದ ಗೋಪುರದ ಒಳಗಿನ ವಿಶಾಲವಾದೊಂದು ಕೋಣೆಗೆ ಹೋಗಬಹುದು. ಗೋಪುರದ ಮೇಲಿನ ಶಿಖರ ಗುಮ್ಮಟಾಕಾರದಲ್ಲಿದ್ದು ಅದರ ನಾಲ್ಕು ಪಕ್ಕಗಳಲ್ಲಿಯೂ ನಾಲ್ಕು ಕೀರ್ತಿಮುಖಗಳಿವೆ. ನವರಂಗದ ಗೋಡೆಯಲ್ಲಿ ಆರು ಸಾಲುಶಿಲ್ಪಗಳಿವೆ. ತೀರಾ ಕೆಳಗಿನ ಸಾಲಿನಲ್ಲಿ ಹಂಸಗಳು, ಸಿಂಹಗಳು, ಕೋತಿಗಳು, ಶೃಂಗಾರ ವಿಗ್ರಹಗಳು ಇತ್ಯಾದಿ ಇವೆ. ಎರಡನೆಯದರಲ್ಲಿ ತುಸು ಒಳಸರಿದ ಚೌಕಾಕಾರದ ಗೋಡೆಗಂಬಗಳಿವೆ. ಪ್ರತಿಯೊಂದರ ಮೇಲೂ ಒಂದು ಸಣ್ಣ ಗೋಪುರವಿದೆ. ಮೂರನೆಯದರಲ್ಲಿ ಕಮಾನಿರುವ ಗೂಡುಗಳು, ಜಾಲರಿಗಳಿರುವ ತೆರೆ ಇವೆ. ಗೂಡುಗಳ ಕೆಳಗೆ ಯಕ್ಷ, ದಿಕ್ಪಾಲಕರು, ದೇವತೆಗಳು, ನರ್ತಕರು, ಲಿಂಗವನ್ನು ಪೂಜಿಸುವ ಪುರುಷಮೃಗ, ಪ್ರಾಣಿಗಳು, ಮಿಥುನಗಳು ಇತ್ಯಾದಿ ಶಿಲ್ಪಗಳಿರುವ ಎರಡು ಸಾಲುಗಳಿವೆ. ಐದನೆಯದು ಹೂವುಗಳ ಸಾಲು, ಆರನೆಯದರಲ್ಲಿ ಎಲೆ ಆಕಾರದ ತೆರೆಗಳುಳ್ಳ ಕೈಪಿಡಿಯ ಮಾದರಿ ಇದೆ.

ಈ ದೇವಾಲಯದ ದ್ವಾರದ ಕಂಬ ತೋಳುಗಳಲ್ಲಿ ಭವ್ಯವಾದ ಶೈವ ದ್ವಾರಪಾಲ ವಿಗ್ರಹಗಳು, ಗೋಡೆಗಂಬಗಳು, ಹೂವು ಎಲೆಗಳ ಪಟ್ಟಿಗಳಿವೆ. ಒಂದೊಂದು ಕಂಬತೋಳಿನ ಹೊರಗೂ ಮಕರದ ಮೇಲೆ ನಿಂತ ಹೆಣ್ಣು ಉದ್ದವಾದೊಂದು ಕಾಗದ ಸುರುಳಿಯನ್ನು ಹಿಡಿದುಕೊಂಡಂತೆ ವಿಗ್ರಹವಿದೆ. ಸಜ್ಜದ ಮೇಲೆ ಗಜಲಕ್ಷ್ಮಿಯ ವಿಗ್ರಹವಿದೆ. ನವರಂಗದ ಒಳಭಾಗದಲ್ಲಿ ಸುತ್ತಲೂ ಸಣ್ಣ ಜಗಲಿಯಿದೆ. ಅದರ ಮೇಲೆ ನಿಂತ ೧೪ ಕಂಬಗಳು ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಹೊಂದಿವೆ. ಹೊರಗಿನ

ಚೌಕಾಕಾರದಲ್ಲಿರುವ ೧೨ ಕಂಬಗಳೂ ಬೇರೆ ಆಕಾರದವು. ಮಧ್ಯದ ೪ ಕಂಬಗಳು ಹೊಯ್ಸಳ ಸ್ತಂಭಗಳಂತೆ ವೃತ್ತಾಕಾರದಲ್ಲಿವೆ. ದಕ್ಷಿಣದ ಗೋಡೆಯಲ್ಲಿ ೪ ಗೋಪುರವುಳ್ಳ ಗೂಡುಗಳಿವೆ. ಇವುಗಳಲ್ಲಿ ಷಣ್ಮುಖ, ಗಣೇಶ, ಮಹಿಷಾಸುರ ಮರ್ಧಿನಿ ಮತ್ತು ಭೈರವ ವಿಗ್ರಹಗಳಿವೆ. ನವರಂಗದ ಮಧ್ಯದ ಚಾವಣಿಯಲ್ಲಿ ಸುಂದರವಾಗಿ ಕೆತ್ತಿದ ಕಮಲ, ನವಿಲುಗಳು ಸಸುತ್ತುವರಿದ ಒಂದು ಫಲಕ ಇವೆ. ಗರ್ಭಗೃಹದಲ್ಲಿ ದೊಡ್ಡ ಪೀಠದ ಮೇಲೆ ಚಿಕ್ಕ ಪೀಠವಿದ್ದು ಅದರ ಮೇಲೆ ಒಂದು ಸಣ್ಣ ಲಿಂಗವನ್ನು ಪ್ರತಿಷ್ಠೆ ಮಾಡಿದೆ. ಮೊದಲು ದೊಡ್ಡ ಪೀಠದ ಮೇಲೆ ದೊಡ್ಡ ಲಿಂಗವಿದ್ದಿತು. ಈ ಪೀಠವು ಕುಳಿತ ದುರ್ಗೆಯರ ೩೨ ಮೂರ್ತಿಗಳಿಂದ ಅಲಂಕೃತವಾಗಿದೆ (ಚಿತ್ರ ನೋಡಿ).

ಮುಖ್ಯ ದೇವಾಲಯದ ಪಶ್ಚಿಮಕ್ಕೆ ಅದೇ ಶೈಲಿಯಲ್ಲಿ ಕಟ್ಟಿದ ಸಣ್ಣ ಅಳತೆಯ ಪಾರ್ವತಿ ದೇವಾಲಯವಿದೆ. ಮುಖ್ಯ ದೇವಾಲಯದ ಎದುರಿಗೆ ನಂದಿ ಮಂಟಪವಿದೆ. ಈ ಮಂಟಪಕ್ಕೆ ನಾಲ್ಕೂ ಪಕ್ಕಗಳಲ್ಲಿ ಕಮಾನಿರುವ ಪ್ರವೇಶವಿದೆ. ತೆನೆಯುಳ್ಳ ಕೈಪಿಡಿ ಗೋಡೆಯು ಇಸ್ಲಾಮಿಕ್ ವಾಸ್ತುಶಿಲ್ಪದ ವಿಶಿಷ್ಟ ಲಕ್ಷಣವಾಗಿದೆ.[೫]

## ಮೃಗವಧೆ ಗ್ರಾಮದಲ್ಲಿರುವ ಮಲ್ಲಿಕಾರ್ಜುನ ದೇವಾಲಯ

ಮೃಗವಧೆ ಎಂಬ ಹಳ್ಳಿಯು ತೀರ್ಥಹಳ್ಳಿಯಿಂದ ಸು. ೨೬ ಕಿ.ಮೀ. ದೂರದಲ್ಲಿ ಆಗ್ನೇಯ ದಿಕ್ಕಿನಲ್ಲಿದೆ. ಇಲ್ಲಿರುವ ಮಲ್ಲಿಕಾರ್ಜುನ ದೇವಾಲಯವು ಪೂರ್ವ ದಿಕ್ಕಿನ ಬ್ರಾಹ್ಮಿ ಎಂಬ ಸಣ್ಣ ತೊರೆಗೆ ಅಭಿಮುಖವಾಗಿದೆ. ದೇವಾಲಯವು ಏಕಕೂಟ ಮಾದರಿಯದ್ದಾಗಿದ್ದು ಗರ್ಭಗೃಹ, ಸುಕನಾಸಿ, ಮುಚ್ಚಿದ ಕಂಬಗಳ ಪಡಸಾಲೆ ಹಾಗೂ ಮುಖಮಂಟಪವನ್ನು ಹೊಂದಿದೆ. ಮಂಟಪಕ್ಕೆ ಪೂರ್ವದ ಮುಖ್ಯ ದ್ವಾರವಲ್ಲದೆ ಉತ್ತರ ಹಾಗೂ ದಕ್ಷಿಣ ದಿಕ್ಕಿನಿಂದಲೂ ಪ್ರವೇಶಿಸುವಂತೆ ದ್ವಾರಗಳನ್ನು ಅಳವಡಿಸಲಾಗಿದೆ.

ದೇವಾಲಯವು ಹೊರನೋಟದಲ್ಲಿ ಅತ್ಯಂತ ಸರಳವಾಗಿದ್ದು, ಯಾವುದೇ ರೀತಿಯ ಅಲಂಕಾರಗಳನ್ನು ಹೊಂದಿಲ್ಲ. ದೇವಾಲಯವನ್ನು ಗ್ರಾನೈಟ್ ಎಂಬ ಕಣ ಶಿಲೆಯಿಂದ ನಿರ್ಮಿಸಿದ್ದಾರೆ. ಈ ದೇವಾಲಯದಲ್ಲಿ ಈಗಾಗಲೇ ವರ್ಣಿಸಿರುವಂತೆ ಕೆಲವೊಂದು ಇಂಡೋ-ಇಸ್ಲಾಮಿಕ್ ಶೈಲಿಯನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ.

## ಕವಲೇದುರ್ಗದ ಕಾಶಿ ವಿಶ್ವೇಶ್ವರ ದೇವಾಲಯ

ಈ ದೇವಾಲಯವು ಕವಲೇದುರ್ಗದ ಬಿದನೂರು ಕೋಟೆಯ ಮೇಲೆ ಇರುವ ಸುಂದರ ದೇವಾಲಯ. ಇದು ತೀರ್ಥಹಳ್ಳಿಯಿಂದ ನೈಋುತ್ಯಕ್ಕೆ ಸು. ೧೫ ಕಿ.ಮೀ. ದೂರದಲ್ಲಿದೆ. ಕೆಳದಿ ವೆಂಕಟಪ್ಪನ ಕಾಲದಲ್ಲಿ ಭುವನಗಿರಿ ಎಂದು ಹೆಸರಾಗಿದ್ದ ಈ ಕೋಟೆಯು ಅವರ ರಾಜಧಾನಿಯೂ ಆಗಿತ್ತು. ಕೆಲವೊಂದು ಕೈಫಿಯತ್ತುಗಳ ಪ್ರಕಾರ ಮೂಲತಃ ಈ ಕೋಟೆಯು ಬೆಳಗಾವಿಯ ಮಾಂಡಲಿಕರಿಗೆ ಸೇರಿದ್ದು, ನಂತರ ಕೆಳದಿ ಅರಸರು ಇದನ್ನು ತಮ್ಮ ವಶಕ್ಕೆ ತೆಗೆದುಕೊಂಡು ಇಲ್ಲಿಗೆ ರಾಜಧಾನಿಯನ್ನು ವರ್ಗಾಯಿಸಿಕೊಂಡರೆಂದು ತಿಳಿದುಬರುತ್ತದೆ.

ಕಾಶಿ ವಿಶ್ವೇಶ್ವರ ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ಮುಚ್ಚಿದ ಮಂಟಪವನ್ನು ಹೊಂದಿದ್ದು, ಇಡೀ ದೇವಾಲಯಕ್ಕೆ ತಾಗಿಕೊಂಡ ಹಾಗೆ ಒಂದು ಪ್ರಾಕಾರ ಗೋಡೆಯಿದ್ದು, ಅದನ್ನು ಮುಂಭಾಗದಲ್ಲಿ ಸುಂದರವಾಗಿ ಅಲಂಕರಿಸಿದ್ದಾರೆ. ಈ ಪ್ರಾಕಾರದ ಒಳಗಡೆ ೨ ಕಲ್ಲಿನ ದೀಪಸ್ತಂಭವಿದ್ದು, ಅದನ್ನು ಎತ್ತರವಾದ ಅಧಿಷ್ಠಾನದ ಮೇಲೆ ನಿಲ್ಲಿಸಲಾಗಿದೆ.

ಈಗಾಗಲೇ ಮೇಲೆ ವಿವರಿಸಿದಂತೆ ದೇವಾಲಯದ ಹೊರಗಿನ ಗೋಡೆ ಅಲಂಕಾರ ರಹಿತವಾಗಿದೆ. ಮಂಟಪದ ಗೋಡೆಯ ಮೇಲೆ ಮಾತ್ರ ಕೆಲವೊಂದು Bas-relief ಮೂರ್ತಿ ಕೆತ್ತನೆಗಳಿದ್ದು ಮಧ್ಯಮಧ್ಯದಲ್ಲಿ ಕುಂಭ ಪಂಜರದ ರಚನೆ ಎದ್ದು ಕಾಣುತ್ತದೆ. ಗೋಡೆಯ ಮೇಲಿನ ಭಾಗವು ಬಹಳ ಇಳಿಜಾರಾದ ಸಜ್ಜವನ್ನು ಹೊಂದಿದ್ದು ಅಲ್ಲಿ ಕೆಲವು ಬಾಗಿದಂತಹ ಪುಷ್ಪ ಬೋದಿಗೆಗಳ ರಚನೆಯನ್ನು ಕಾಣಬಹುದು.

ವಿಮಾನದ ಮೇಲೆ ಪಿರಮಿಡ್ಸ್ ಆಕಾರದಂತಿರುವ ಶಿಖರವಿದ್ದು, ಕಂಠದ ಭಾಗದಲ್ಲಿ ೪ ಮೂಲೆಗಳಲ್ಲಿ ೪ ನಂದಿ ವಿಗ್ರಹಗಳಿವೆ. ಇದರ ಮೇಲೆ ಚಚ್ಚೌಕಾಕಾರದ ನಾಗರ ಶಿಖರ ಹಾಗೂ ಎದ್ದು ಕಾಣುವ ಕೀರ್ತಿಮುಖಗಳನ್ನು ೪

ದಿಕ್ಕುಗಳಲ್ಲಿಯೂ ನೋಡಬಹುದು. ಹಾಗೆಯೇ ಶಿಖರಕ್ಕೆ ತಾಗಿಕೊಂಡ ಹಾಗೆ ಸುಕನಾಸಿಯ Projection ಇದ್ದು, ಎದ್ದು ಕಾಣುವ ಕೀರ್ತಿಮುಖದ ರಚನೆ ಮನಸೆಳೆಯುತ್ತದೆ.

ಇದು ಕಮಾನಿರುವ ಪ್ರವೇಶ ದ್ವಾರವುಳ್ಳ ಚಿಕ್ಕ ದೇವಾಲಯ. ಇದೇ ಸ್ಥಳದಲ್ಲಿರುವ ಇನ್ನೊಂದು ಸಣ್ಣ ದೇವಾಲಯದಲ್ಲಿ ಕೈಪಿಡಿಗಳೂ ಮೂಲೆಗಳಲ್ಲಿ ಸಣ್ಣ ಸ್ತಂಭ ಗೋಪುರಗಳೂ ಇವೆ. ಕಮಾನು ಪ್ರವೇಶ ದ್ವಾರವಿದೆ. ಇವೆಲ್ಲವೂ ವಿಜಯನಗರ ಕಾಲದ ಲಕ್ಷಣಗಳ ಮುಂದುವರಿಕೆಯೇ ಆಗಿವೆ. ಈ ಅವಧಿಯ ಅನೇಕ ದೇವಾಲಯಗಳಲ್ಲಿ, ಉದಾ: ಆನಂದಪುರದ ಬಸವನಗುಡಿ, ಮೇಳಿಗೆಯ ಅನಂತನಾಥ ಬಸದಿ ಮತ್ತು ವೆಂಕಟರಮಣ ದೇವಾಲಯ ಮುಂತಾದುವುಗಳಲ್ಲಿ 'ಫಾಂಸನಾ' ಶಿಖರ ಪರಂಪರೆಯೇ ಮುಂದುವರಿದಿರುವುದು ಕಂಡುಬರುತ್ತದೆ.

## ಸಿದ್ಧೇಶ್ವರ ದೇವಾಲಯ

ಸಾಗರ ತಾಲ್ಲೂಕಿನ ಗೆಣಸಿನಕುಣಿಯ ಸಿದ್ಧೇಶ್ವರ ದೇವಾಲಯವು ಇಂದು ಸಂಪೂರ್ಣವಾಗಿ ಕಾಡಿನಿಂದ ಆವೃತವಾಗಿದ್ದರೂ ವಿಶಿಷ್ಟ ರಚನೆಯಿಂದಾಗಿ ಖ್ಯಾತಿ ಗಳಿಸಿದೆ. ಈ ದೇವಾಲಯವು ಆದಿಲ್‌ಶಾಹಿ ಕಾಲದ ಅರಸರ ಗೋರಿ ಮತ್ತು ವಾಸ್ತು ಶೈಲಿಯನ್ನು ನೆನಪಿಸುವಂತಹ ವಿಶೇಷ ವಿನ್ಯಾಸವನ್ನು ಹೊಂದಿದೆ. ಈ ದೇವಾಲಯವು ಒಂದು ಸಣ್ಣ ಅಧಿಷ್ಠಾನದ ಮೇಲೆ ನಿಂತಿದ್ದು, ಸುತ್ತಲೂ ಕಂಬಗಳಿಂದ ಆವೃತವಾದ ಹೊರ ಮಂಟಪವಿದ್ದು ಮಧ್ಯದಲ್ಲಿ ಒಂದು ಕೋಣೆಯ ರಚನೆ ಹೊಂದಿದ್ದು ಅಲ್ಲಿ ಶಿವಲಿಂಗವನ್ನು ಸ್ಥಾಪಿಸಲಾಗಿದೆ. ಅಂದರೆ ಬೇರೆ ದೇವಾಲಯಗಳಿಗಿಂತ ಭಿನ್ನವಾದ ರಚನೆಯುಳ್ಳದ್ದಾಗಿದ್ದು ಗರ್ಭಗೃಹದ ಮೇಲೆ ಶಿಖರವನ್ನು ಕಾಣಬಹುದು. ಈ ದೇವಾಲಯದ ಮೇಲ್ಭಾವಣಿಯಲ್ಲಿ *Stucco* ಕೆಲಸದಿಂದ ಅಲಂಕರಿಸಲ್ಪಟ್ಟ ಹೂಬಳ್ಳಿಗಳ ಹಾಗೂ ಸರ್ಪಗಳ ರಚನೆಯಿದ್ದು ಅದೂ ಇಸ್ಲಾಮಿಕ್ ಮಾದರಿಯ ರಚನೆಯನ್ನೇ ಹೋಲುತ್ತದೆ.

## ನಗರದ ನೀಲಕಂಠೇಶ್ವರ ದೇವಾಲಯ

ಹೊಸನಗರ ತಾಲೂಕಿನ ನಗರದಲ್ಲಿರುವ ನೀಲಕಂಠೇಶ್ವರ ದೇವಾಲಯದಲ್ಲಿರುವ ಇಂಡೋ ಇಸ್ಲಾಮಿಕ್ ವಾಸ್ತುಶಿಲ್ಪ ಶೈಲಿಯು ಇಂದು ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿದ್ದರೂ ಈ ದೇವಾಲಯದ *Super Structure* ಅಥವಾ ಶಿಖರ ನೋಡುಗರ ಗಮನ ಸೆಳೆಯುತ್ತದೆ. ಏಕೆಂದರೆ ಇದು ಆದಿಲ್‌ಷಾಹಿ ಕಾಲದ ಗುಮ್ಮಟದ ರಚನೆಯಂತೆ ಕಂಡುಬಂದಿದ್ದು ಶಿಖರದ ಭಾಗದಲ್ಲಿ ನಾಲ್ಕು ಮೂಲೆಗಳಲ್ಲಿ ನಂದಿಗಳನ್ನು ರೂಪಿಸಿದ್ದಾರೆ.

ಈ ಇಂಡೋ–ಇಸ್ಲಾಮಿಕ್ ಶೈಲಿಯಲ್ಲಿ ನಾವು ಹೆಚ್ಚಾಗಿ ಬಿಜಾಪುರದ ಪ್ರಾದೇಶಿಕ ಶೈಲಿಯ ಪ್ರಭಾವವನ್ನು ಕಾಣುತ್ತೇವೆ. ಇದು ಸಾಂಸ್ಕೃತಿಕವಾಗಿ ಹಾಗೂ ರಾಜಕೀಯವಾಗಿ ಈ ಎರಡೂ ರಾಜ್ಯಗಳ ಮಧ್ಯೆ ಒಂದು ಕಾಲದಲ್ಲಿ ಇದ್ದ ಒಡನಾಟದ ಪ್ರತೀಕವೂ ಆಗಿದೆ.[೬]

ಕೆಳದಿ ಅರಸರ ಕಾಲದ ಪ್ರತಿಯೊಂದೂ ಪ್ರಮುಖ ಧಾರ್ಮಿಕ ಕೇಂದ್ರವಾಗಿದ್ದ ಕೋಟೇಶ್ವರದ ದೇವಾಲಯವು ಪುನರುಜ್ಜೀವನಗೊಂಡಿರುವುದನ್ನು ಅಲ್ಲಿನ ಶಾಸನ ತಿಳಿಸುತ್ತದೆ.[೭] ಉಡುಪಿ ಕೃಷ್ಣಮಠವು ಕೆಳದಿ ಅರಸರ ದಾನದತ್ತಿ ಪಡೆದ ಬಗ್ಗೆ ದಾಖಲೆಗಳಿವೆ. ಹಿರಿಯ ವೆಂಕಟಪ್ಪ ನಾಯಕನ ಕಾಲದಲ್ಲಿ ಅದನ್ನು ಜೀರ್ಣೋದ್ಧಾರಗೊಳಿಸಿ ಎರಡು ನೆಲೆಯಾಗಿ ತಾಮ್ರವನ್ನು ಹೊದಿಸಿದ್ದಾರೆ. ಅಲ್ಲದೆ ಹೂವಿನಕೆರೆ ಗ್ರಾಮವನ್ನು ಈ ದೇವಾಲಯಕ್ಕೆ ದಾನ ನೀಡಿ ಅದರ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಲು ಮಾಡಿದ ಪ್ರಯತ್ನವನ್ನು ಕಾಣಬಹುದು.

ಗಂಗೊಳ್ಳಿ ವೆಂಕಟರಮಣ ದೇವಾಲಯಕ್ಕೆ ಕೆಳದಿ ಅರಸರು ಉದಾರ ದಾನ ನೀಡಿದ್ದರು. ಇದರೊಂದಿಗೆ ಇನ್ನೂ ಅನೇಕ ದೇವಾಲಯಗಳು ರಾಜಾಶ್ರಯದ ಸವಿಯನ್ನುಂಡವು. ತಮ್ಮ ರಾಜ್ಯದ ಭಾಗವಾಗಿದ್ದ ಮೂಡಬಿದರೆಯ ಜೈನರೊಂದಿಗೂ ಉತ್ತಮ ಬಾಂಧವ್ಯವನ್ನು ಹೊಂದಿದ್ದರು. ಮುಸ್ಲಿಂ ಸಮುದಾಯದೊಂದಿಗೂ ಸುಮಧುರ ಬಾಂಧವ್ಯ ಹೊಂದಿದ್ದರು. ಕ್ರೈಸ್ತ ಧರ್ಮ ಈ ಭಾಗದಲ್ಲಿ ಪ್ರಬಲವಾಗುವುದಕ್ಕೆ ಕೆಳದಿ ಅರಸರ ರಾಜಾಶ್ರಯವೇ ಕಾರಣ. ಅವರು ಚರ್ಚ್ ನಿರ್ಮಾಣಕ್ಕೆ

ಕರಾವಳಿಯಲ್ಲಿ ಜಾಗ ನೀಡಿದ್ದರು. ಅವರ ಕಾಲದಲ್ಲಿ ವೀರಶೈವ ಧರ್ಮವೂ ಪ್ರಬಲವಾಗಿತ್ತು. ಇವರು ೬೪ ವೀರಶೈವ ಮಠಗಳನ್ನು ಕಟ್ಟಿಸಿದ್ದಾರೆ. ಅವುಗಳಲ್ಲಿ ಗುರುಪುರ, ಉಡುಪಿ, ಕಲ್ಯಾಣಪುರ, ಜೆಣ್ಣೆಕುದ್ರು... ಇತ್ಯಾದಿಗಳು ಪ್ರಮುಖವಾಗಿವೆ. ಅಲ್ಲದೆ ಕೆಳದಿ ಅರಸರು ಈ ಭಾಗದ ವಾಸ್ತುಶೈಲಿಯ ಮೇಲೆ ಅಧಿಕ ಪ್ರಭಾವ ಬೀರಿದರು.

### ಕೆಳದಿಯ ರಾಮೇಶ್ವರ ದೇವಾಲಯ

ಈ ದೇವಾಲಯವನ್ನು ಕ್ರಿ.ಶ. ೧೫೧೨ರಲ್ಲಿ ಕೆಳದಿಯ ಚೌಡಪ್ಪ ನಾಯಕನು ಕಟ್ಟಿಸಿದನು. ಇದು ದಾಕ್ಷಿಣಾತ್ಯ ರೀತಿಯ ದೇವಾಲಯವಾಗಿದ್ದು, ಇದರಲ್ಲಿ ಹೊಯ್ಸಳ ಮತ್ತು ವಿಜಯನಗರ ಕಾಲದ ಸಮ್ಮಿಶ್ರಣ ಶೈಲಿಯನ್ನು ಕಾಣಬಹುದು. ಕೆಳದಿ ರಾಮೇಶ್ವರ ದೇವಾಲಯದ ಪಕ್ಕದಲ್ಲಿಯೇ ವೀರಭದ್ರ ದೇವಾಲಯವಿದ್ದು ಇವು ಅವಳಿ ದೇವಾಲಯ ಗಳಾಗಿವೆ.

ಇದು 'ತ್ರಿತಲ ಷಡ್ವರ್ಗ' ದೇವಾಲಯ. ಅಧಿಷ್ಠಾನವು 'ಕಪೋತ ಬಂಧ' ರೀತಿಯಲ್ಲಿದ್ದು ಇದರ ಕಪೋತವು ನಾಸಿಗಳಿಂದ ಅಲಂಕೃತಗೊಂಡಿದೆ. ದಾಕ್ಷಿಣಾತ್ಯ ದೇವಾಲಯಗಳಂತೆ ಅಧಿಷ್ಠಾನ ಅಂಗಗಳು ಘನವಾಗಿರದೆ ತೆಳುವಾಗಿವೆ. ನವರಂಗದ ಅಧಿಷ್ಠಾನದ ಮೇಲೆ ಕೂಟ, ನಾಸಿ ಕೋಷ್ಠ ಮತ್ತು ಶಾಲಾಗಳ ಸಾಲಿದೆ. ಭಿತ್ತಿಯು ನಿರಲಂಕೃತವಾಗಿದ್ದು, ಮೂಲೆಗಳಲ್ಲಿ ಮಾತ್ರ ಕಂಬವಿದೆ. 'ಪ್ರಸ್ತರ' ಮಾತ್ರ ವಿಭಿನ್ನ ರೀತಿಯಲ್ಲಿದ್ದು ಕಪೋತವು ಮಲೆನಾಡ ಶೈಲಿಯಲ್ಲಿ ಮುಂಚಾಚಿದೆ. ಕಪೋತದ ಮೇಲಿನ 'ವ್ಯಾಳಾವರಿ'ಯಲ್ಲಿ ವೀರಭದ್ರ, ತಾಂಡವೇಶ್ವರ, ಮೋಹಿನಿ, ವೇಣುಗೋಪಾಲ ಶಿಲ್ಪಗಳಿವೆ. ಇದರ ಮೇಲಿನ ಭಾಗವು ಜೀರ್ಣೋದ್ಧಾರಗೊಂಡಿದ್ದು, 'ಪ್ರಹಾರ'(ಕೈಪಿಡಿಗೋಡೆ)ವನ್ನು ನಿರ್ಮಿಸಲಾಗಿದೆ. ಇದರಿಂದಾಗಿ ಮೇಲ್ಕಟ್ಟಡದ ಕೆಳಗಿನ ದೃಶ್ಯಭಾಗ ನೋಡಲು ಸಾಧ್ಯವಿಲ್ಲ. ಆದರೂ ಇಲ್ಲಿ ದಾಕ್ಷಿಣಾತ್ಯ ರೀತಿಯ ೨ ತಲಗಳಿವೆಯೆಂದು ಊಹಿಸಲಾಗಿದೆ. ತಲಗಳಲ್ಲಿ ಕೂಟ-ಶಾಲಾಗಳ ಹಾರವಿದ್ದು 'ತಲಪ್ರಸ್ತರ'ದಲ್ಲಿ ನಾಸಿ ಇದೆ. 'ಗೃಹಪಿಂಡಿ'ಯಲ್ಲಿ ನಾಸಿ ಕೋಷ್ಠ ಜಡಿಸಿದೆ. ಷಡ್ವರ್ಗ ದೇವಾಲಯಗಳ ೪ನೇ ಭಾಗವಾದ ಗ್ರೀವ ಭಾಗವು ಸ್ವಲ್ಪ ಎತ್ತರವಾಗಿದೆ. 'ಗ್ರೀವಕೋಷ್ಠ'ದಲ್ಲಿ ಶಿಲ್ಪವಿಲ್ಲ (ದೇವರಿಗೆ ಸಂಬಂಧಿಸಿದ ವಾಹನವೂ ಇಲ್ಲಿ ಇದ್ದಿರಬೇಕು). ಷಡ್ವರ್ಗ ದೇವಾಲಯಗಳ ೫ನೆಯ ಅಂಗವಾದ 'ಶಿಖರ'ವು ದಾಕ್ಷಿಣಾತ್ಯ ರೀತಿಯಲ್ಲಿದ್ದು ಚೌಕಾಕಾರದ 'ಬ್ರಹ್ಮಛಂದ' ಶಿಖರದಲ್ಲಿ 'ಮಹಾನಾಸಿ' ಇದೆ. ಇದರ ಮೇಲೆ ಷಡ್ವರ್ಗ ದೇವಾಲಯಗಳ ಕೊನೆಯ ಅಂಗವಾದ ಸ್ತೂಪಿ ಇದೆ. 'ವ್ಯಾಳಾವರಿ' ಭಾಗ ಮತ್ತು 'ಪ್ರಸ್ತರ'ವು ಮುಂದಿನ ಮಂಟಪದವರೆಗೂ ಮುಂದುವರಿದಿದೆ.

ತಿರ್ಯಾಙ್ಮುಖ ಕ್ರಮದಲ್ಲಿ ಗರ್ಭಗೃಹ, ಅಂತರಾಳ, ಸಣ್ಣ ನವರಂಗ, ಮಂಟಪಗಳಿವೆ. ಪ್ರದಕ್ಷಿಣಾ ಪಥವಿರುವ ಗರ್ಭಗೃಹದಲ್ಲಿ (ರಾಮೇಶ್ವರ) ಲಿಂಗವಿದೆ. ಗರ್ಭಗೃಹದ ದ್ವಾರವು ನಿರಲಂಕೃತವಾಗಿದ್ದು, ಲಲಾಟ ಫಲಕದಲ್ಲಿ ರಾಮೇಶ್ವರ ಶಿಲ್ಪವಿದೆ. ಗರ್ಭಗೃಹದ ಎಡಕ್ಕೆ ಪ್ರಣಾಳವೂ, ಅದರ ಮುಂದೆ ಲಿಂಗವಿರುವ ಚಂಡಿಕೇಶ್ವರ ಮಂಟಪವೂ ಇದೆ. ಅಂತರಾಳ ದ್ವಾರದ ಬಳಿ 'ಚಂದ್ರಶಿಲಾ' ಇದೆ. ಇಲ್ಲಿ ೧೬ ಮುಖದ 'ಸೌಮ್ಯಕಾಂತ' ಸ್ತಂಭವಿದೆ. ಇದು ಕೆಲಮಟ್ಟಿಗೆ ಅಲಂಕೃತಗೊಂಡಿದೆ. ಈ ಮಂಟಪದಲ್ಲಿ ನೆಲದ ಮೇಲೆ ಭಕ್ತ ಶಿಲ್ಪಗಳ ಕೆತ್ತನೆ ಇದೆ. ದೇವಾಲಯದ ಎದುರಲ್ಲಿ ಮಾಡಿದ ಬಲಿಪೀಠಗಳಿವೆ.[೮]

### ವೀರಭದ್ರ ದೇವಾಲಯ

ಕ್ರಿ.ಶ. ೧೫೩೦-೧೫೪೦ರ ನಡುವೆ ನಿರ್ಮಿಸಿದ ಕೆಳದಿಯ ವೀರಭದ್ರ ದೇವಾಲಯವು ರಾಮೇಶ್ವರ ದೇವಾಲಯವನ್ನೇ ಹೋಲುತ್ತದೆ. ಇದರ ನವರಂಗದಲ್ಲಿ ಕೆಳಮಟ್ಟದ ಒಂದು ಪಟಲಾಂಕಣವಿದೆ. ಗರ್ಭಗೃಹದ ಅಧಿಷ್ಠಾನದಲ್ಲಿ ಅಧಿಕ ಸಂಖ್ಯೆಯ ಉಬ್ಬುಶಿಲ್ಪಗಳಿವೆ. ಗೋಡೆಯಲ್ಲಿ ಹೆಚ್ಚು ಸಂಖ್ಯೆಯ ಗೋಡೆಗಂಬಗಳಿವೆ. ಪಶ್ಚಿಮದ ಗೋಡೆಯ ಮೇಲೆ ವಾಸ್ತುಪುರುಷ ಎಂದು ಕರೆಯುವ ವಿಗ್ರಹವಿದೆ. ಅವನ ಕಾಲುಗಳು ಆನೆಯ ಕಾಲುಗಳಂತೆಯೂ ಕೈಗಳು ಆನೆಯ ಸೊಂಡಿಲಿನಂತೆಯೂ, ಮುಖವು ಸಿಂಹದಂತೆಯೂ ಇದೆ. ವಾಸ್ತುಪುರುಷನ ಶಿಲ್ಪವು ಮಲಗಿದ್ದು, ಅವನ ಒಂದೊಂದು ಅಂಗದ ಮೇಲೂ ಅನೇಕ ದೇವತೆಗಳಿರುತ್ತಾರೆ. ಅವನಿಗೆ ಸಿಂಹ ಮುಖವೂ ಇರುವುದಿಲ್ಲ. ಹೀಗಾಗಿ ಈ ಶಿಲ್ಪವು ವಾಸ್ತುಪುರುಷನಾಗಿರದೆ ಬೇರೊಂದು ಶಿಲ್ಪವಾಗಿದೆ ಎಂದು ಶಿವಮೊಗ್ಗ ಜಿಲ್ಲೆಯ ದೇವಾಲಯಗಳ ವಾಸ್ತುಶಿಲ್ಪ ಲೇಖನದಲ್ಲಿ ಡಾ॥ ಕೂ.ಸ. ಅಪರ್ಣ ಬರೆದಿದ್ದಾರೆ.[೯] ಅವನ ಬಲಗಡೆಗೆ ಒಬ್ಬ ಗಂಡಸು, ಒಬ್ಬ ಹೆಂಗಸು ಮತ್ತು ಒಂದು ಮಗು ಇದೆ.

ಎಡಗಡೆ ಮೋಹಿನಿ ಮತ್ತು ಭಸ್ಮಾಸುರರಿದ್ದಾರೆ. ದೊಡ್ಡ ಮಂಟಪದ ಕಕ್ಷಾಸನದಲ್ಲಿ ಅಧಿಕ ಸಂಖ್ಯೆಯ ಸಣ್ಣ ಶಿಲ್ಪಗಳಿವೆ. ಅದರ ಮುಂಭಾಗದಲ್ಲೊಂದು ಸಣ್ಣ ಕೈಸಾಲೆಯಿದೆ. ನವರಂಗದಲ್ಲಿ ದೊಡ್ಡದಾದ ಪಟಲಾಂಕಣವಿದೆ. ಪಶ್ಚಿಮದ ಬಾಗಿಲಿಗೆ ಎದುರಾಗಿ ದಕ್ಷಬ್ರಹ್ಮ ಮತ್ತು ನರಸಿಂಹ ೨ ದೊಡ್ಡ ವಿಗ್ರಹಗಳಿವೆ. ದೊಡ್ಡ ಮಂಟಪದ ೮ ಕಂಬಗಳ ಪೈಕಿ ೬ ಚೌಕವಾಗಿದ್ದು, ೨ ಹದಿನಾರು ಮುಖಗಳನ್ನು ಹೊಂದಿವೆ. ಕಂಬಗಳಲ್ಲಿ ಆನೆಯ ಮುಖವಿರುವ ಸಿಂಹ, ಆರು ಕೋತಿಗಳು ಪೂಜಿಸುತ್ತಿರುವ ಸಾಧು, ಗಡ್ಡವಿರುವ ಒಬ್ಬ ನಾಯಕನ ವಿಗ್ರಹಗಳಿವೆ. ಛಾವಣಿಗಳನ್ನು ಕಮಲಗಳಿಂದಲೂ ಹೆಣಿಕೆಗಳಿಂದಲೂ ಸುಂದರವಾಗಿ ಅಲಂಕರಿಸಲಾಗಿದೆ. ಮಧ್ಯಚಾವಣಿಯ ಹಲಗೆಯ ಮೇಲೆ ಸೂರ್ಯ, ಅವನ ಸುತ್ತ ಇತರ ಗ್ರಹಗಳು ಜಿಂಕೆ, ಆನೆ, ಸಿಂಹ, ವ್ಯಾಳ, ಬೇಲ, ಮಾನವ ಮತ್ತು ಎತ್ತುಗಳ ಮೇಲೆ ಸವಾರಿ ಮಾಡುತ್ತಿರುವರಂತೆ ಕೆತ್ತಿದೆ. ಮಧ್ಯದ ಹಲಗೆಯ ಪೂರ್ವಕ್ಕಿರುವ ಚಾವಣಿಯಲ್ಲಿ ಗಂಡಭೇರುಂಡದ ದೊಡ್ಡ ಉಬ್ಬುಕೆತ್ತನೆಯಿದೆ. ನವರಂಗದ್ವಾರದ ಕಂಬ ತೋಳುಗಳಲ್ಲಿ ಗೋಡೆಗಂಬಗಳು, ಕೆಳಭಾಗದಲ್ಲಿ ಆನೆ ಮತ್ತು ಸಿಂಹಗಳು, ಸಜ್ಜದ ಮೇಲೆ ಗಣೇಶ ಇವುಗಳಿಂದ ಮಾಡಿದ ಅಲಂಕಾರವಿದೆ. ಮೇಲೆ ೫ ಗೋಪುರಗಳಿಂದ ಕೂಡಿದ ಮೇಲುಕಟ್ಟು ಇದೆ. ನವರಂಗದ ಚಾವಣಿಯು ದೊಡ್ಡದಾದ ಸುಂದರವಾದ ಕಮಲದಿಂದ ಅಲಂಕೃತವಾಗಿದೆ. ಗರ್ಭಗೃಹದಲ್ಲಿ ಸಣ್ಣದಾದ ವೀರಭದ್ರ ಮೂರ್ತಿಯಿದೆ. ಪೂರ್ವದ ಕೈ ಸಾಲೆಯ ಮುಂದೆ ಕ್ರಿ.ಶ.೧೬೮೧ರಲ್ಲಿ ನಿಲ್ಲಿಸಿದ ದೊಡ್ಡ ಸ್ತಂಭವಿದೆ. ಅದರ ತಳಭಾಗವು ಚೌಕವಾಗಿದ್ದು, ಮಧ್ಯೆ ಅಷ್ಟಮುಖವಾಗಿದ್ದು ತುದಿಯಲ್ಲಿ ವೃತ್ತಾಕಾರವಾಗಿದೆ. ಮೇಲುತುದಿಯಲ್ಲೊಂದು ಚೌಕವಿದೆ. ಅದರೊಳಗೊಂದು ನಂದಿ ವಿಗ್ರಹವಿದೆ. ಕೆಳಗಿನ ಚೌಕಾಕಾರದ ೪ ಮುಖಗಳಲ್ಲಿ ಶಿಲ್ಪಗಳಿವೆ. ಪಶ್ಚಿಮದ ಮುಖದಲ್ಲಿ ಗಣೇಶ ಹಾಗೂ ಐದು ರಾಜಪುರುಷರ ವಿಗ್ರಹಗಳೂ, ದಕ್ಷಿಣದಲ್ಲಿ ಶಿವ ಮತ್ತು ನಂದಿ ವಿಗ್ರಹಗಳೂ ಉತ್ತರದಲ್ಲಿ ಭೈರವ ಮೂರ್ತಿಯೂ ಇವೆ. ಪೂರ್ವದಲ್ಲಿ ಪಾರ್ವತಿಯ ವಿಗ್ರಹವಿದೆ. ರಾಮೇಶ್ವರ – ವೀರಭದ್ರ ದೇವಾಲಯಗಳಿಗೆ ಸೇರಿದಂತೆ ಎತ್ತರವಾದ ದೀಪಸ್ತಂಭವಿದೆ. ಈ ವೀರಭದ್ರ ದೇವಾಲಯವು ಮೊದಲಿಗೆ ಲಕ್ಷ್ಮೀನಾರಾಯಣನ ದೇವಾಲಯ ವಾಗಿದ್ದಿರಬೇಕೆಂದೂ, ಈ ಸಂಕೀರ್ಣದ ಹೆಬ್ಬಾಗಿಲ ಬಳಿ ಇರುವ ಲಕ್ಷ್ಮೀನಾರಾಯಣನ ವಿಗ್ರಹವೇ ಇದರ ಗರ್ಭಗೃಹದಲ್ಲಿತ್ತೆಂದೂ ಶಂಕಿಸಲಾಗಿದೆ.[೧೦]

## ಪಾರ್ವತಿ ದೇವಾಲಯ

ಕ್ರಿ.ಶ. ೧೭ನೆಯ ಶತಮಾನದ ಪಾರ್ವತಿ ದೇವಾಲಯಕ್ಕೆ ಹೆಂಚಿನ ಛಾವಣಿ ಇದೆ. ಇದರಲ್ಲಿ ಗರ್ಭಗೃಹ, ಪ್ರದಕ್ಷಿಣಾಪಥ ಮತ್ತು ಎದುರಿಗೆ ನಂದಿ ಮಂಟಪವಿದೆ. ಗರ್ಭಗೃಹದಲ್ಲಿ ಪಾರ್ವತಿಯ ಶಿಲ್ಪವಿದೆ. ಮಂಟಪದ 'ವಿತಾನ'ದಲ್ಲಿರುವ ಮರದ ಕೆತ್ತನೆಯು ತುಂಬ ಸುಂದರವಾಗಿದೆ. ಇದರಲ್ಲಿ ಅಷ್ಟದಿಕ್ಪಾಲ, ಮತ್ತಿತರ ಶಿಲ್ಪಗಳಿವೆ. ಸು. ೫೦ಕ್ಕೂ ಹೆಚ್ಚು ವಿವಿಧ ದೇವತೆಗಳ ಕಾಷ್ಠ ಶಿಲ್ಪಗಳಿದ್ದು ಅವುಗಳೊಂದಿಗೆ ವಲ್ಲೀ ಪುಷ್ಪಗಳ ಅಲಂಕರಣವಲ್ಲದೆ. ಕೃಷ್ಣಲೀಲಾ ಶಿಲ್ಪಗಳೂ ಇವೆ. ಫಲಕಗಳ ಮೇಲಿರುವ ದೇವತಾ ಶಿಲ್ಪಗಳ ಕೆತ್ತನೆಯು ಶಿಲ್ಪಶಾಸ್ತ್ರಕ್ಕನುಗುಣವಾಗಿದೆಯೆಂಬುದು ಜಿ.ವಿ.ಕಲ್ಲಾಪೂರರ ಅಭಿಪ್ರಾಯವಾಗಿದೆ.[೧೧] ಈ ಎಲ್ಲಾ ದೇವಾಲಯಗಳಿಗೆ ಸೇರಿದಂತೆ ಆವರಣ ಗೋಡೆ ಇದ್ದು ಅವಕ್ಕೆ ಮರದ ಸ್ತಂಭಗಳಿವೆ. ಮುಂದೆ ತೋರಣದ ಹೆಬ್ಬಾಗಿಲ ಪ್ರವೇಶ ಇದೆ. ಇದರ ಬಳಿ ಅನೇಕ ಶಿಲ್ಪಗಳನ್ನು ಇಡಲಾಗಿದೆ.

ಕೆಳದಿ ಅರಸರ ಅವಶೇಷಗಳು ಕರ್ನಾಟಕದಲ್ಲಷ್ಟೇ ಅಲ್ಲದೆ ದೇಶದ ಹೊರಗಡೆಯಲ್ಲಿಯೂ ಹರಿದು ಹಂಚಿಹೋಗಿದೆ. ಕರಾವಳಿ ಅಥವಾ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಸಾಕಷ್ಟು ಸ್ಮಾರಕಗಳಿದ್ದು ಅವು ಜೀರ್ಣೋದ್ಧಾರದ ನೆಪ ಅಥವಾ ಅಭಿವೃದ್ಧಿ ನೆಪದಲ್ಲಿ ನಿರ್ನಾಮವಾಗುತ್ತಲಿವೆ ಇಲ್ಲವೇ ಬದಲಾವಣೆಗೊಳ್ಳುತ್ತಲಿವೆ. ಇವುಗಳ ನಾಶದಿಂದ ಕರಾವಳಿ ಕರ್ನಾಟಕದಲ್ಲಿ ಕೆಳದಿ ಇತಿಹಾಸ ರಚನೆಗೆ ಆಕರವಿಲ್ಲದಂತಾಗುತ್ತಲಿದೆ. ಆದ್ದರಿಂದ ಅಳಿದುಳಿದ ಪಳೆಯುಳಿಕೆಗಳನ್ನು ದಾಖಲಿಸಬೇಕಾಗಿದೆ. ಕೆಳದಿ ಕಾಲದ ಸ್ಮಾರಕಗಳು ರಾಜ್ಯದ ೯ ಜಿಲ್ಲೆಗಳಲ್ಲಿ ಉಪಲಬ್ಧ ಇವೆ. ಸಾಕಷ್ಟು ಸ್ಮಾರಕಗಳು ಶರಾವತಿ, ವರಾಹಿ ಯೋಜನೆಯಂತಹ ಬೃಹತ್ ಯೋಜನೆಗಳಲ್ಲಿ ನಾಶವಾಗಿವೆ. ಕೊಲ್ಲೂರಿನ ಮೂಕಾಂಬಿಕಾ ದೇವಾಲಯದ ಪ್ರದಕ್ಷಿಣ ಪಥದಲ್ಲಿದ್ದ ಕೆಳದಿ ಕಾಲದ ಉಬ್ಬು ಚಿತ್ರಗಳು ಅಮೃತಶಿಲೆ ಅಳವಡಿಸುವ ಸಂದರ್ಭದಲ್ಲಿ ಮುಚ್ಚಿ ಹೋಗಿವೆ. ಇಲ್ಲಿಯೇ ಇರುವ ಕೆಳದಿ ರಾಣಿ ನೀಡಿದ ದ್ವಾರಪಾಲಕರ ಕಂಚಿನ ಮೂರ್ತಿಗಳು ಹಾಗೂ ಆ ಕಾಲದ ಸಮಾಧಿಗಳು ಕೋಟೆ ಕೊತ್ತಲಗಳು ಭೂಗಳ್ಳರ ವಶವಾಗುತ್ತಿವೆ.

ಕೆಳದಿ ನಾಯಕರ ವಾಸ್ತುಶಿಲ್ಪವು ಇಸ್ಲಾಮಿಕ್ ಶೈಲಿಯಿಂದ ಅಳವಡಿಸಿಕೊಂಡ ಕಮಾನುಗಳು ಗುಮ್ಮಟಗಳು ಕೈಸಾಲೆಗಳು ಮತ್ತು ಸ್ತಂಭ ಗೋಪುರಗಳನ್ನು ಹೊಂದಿದ್ದು, ಹೊಸ ಮಾದರಿಯ ವಾಸ್ತುಶೈಲಿಯನ್ನು ಕೊಡುಗೆಯಾಗಿ ನೀಡಿದೆ. ರಾಜಕೀಯ ಗೊಂದಲದ ಕಾಲದಲ್ಲಿ ಕೆಳದಿ ಅರಸರು ವಾಸ್ತು ಮತ್ತು ಶಿಲ್ಪ ಕ್ಷೇತ್ರದಲ್ಲಿ ವಿಜಯನಗರದ ಪರಂಪರೆಯನ್ನು ಉಜ್ವಲವಾಗಿ ಮುಂದುವರೆಸಿದರು ಹಾಗೂ ಅಮರವಾದ ಅಪೂರ್ವ ಕೊಡುಗೆಗಳನ್ನು ಅರ್ಪಿಸಿ ಅಜರಾಮರರಾಗಿರುವರು.

## ಆಧಾರಗಳು


೧. **ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**, ಪು.೧೦೦.

೨. **ಕನ್ನಡ ವಿಷಯ ವಿಶ್ವಕೋಶ**, ಸಂ.೧, ಮೈಸೂರು ವಿಶ್ವವಿದ್ಯಾಲಯ, ೨೦೦೫.

೩. **ಕರ್ನಾಟಕ ಚರಿತ್ರೆ – ಚರಿತ್ರೆ** ಮಾಲೆ ೩ – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೭೨–೩೭೩.

೪. **ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**, ಪು.೨೮೫, ೨೮೬, ೨೮೭.

೫. ಅದೇ, ಪು.೧೪೭.

೬ ಅದೇ, ಪು.೨೧೯.

೭. ಅದೇ, ಪು.೨೨೦.

೮. **ಕರ್ನಾಟಕ ಚರಿತ್ರೆ**, ಚರಿತ್ರೆ ಮಾಲೆ ೩, ಪು.೩೭೧–೩೭೨.

೯. **ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**, ಪು.೨೨೦.




# ಚೌಸಟ್(ಚತುಷ್ಷಷ್ಠಿ) ಯೋಗಿನಿ ದೇವಾಲಯಗಳು – ಐತಿಹಾಸಿಕ ಅವಲೋಕನ

– ಸಿ.ಬಿ. ಪಾಟೀಲ* ಹಾಗೂ ಎಂ.ವಿ. ವಿಶ್ವೇಶ್ವರ**

ಆದಿಶಕ್ತಿಯನ್ನು ಮಾತೃದೇವತೆಯಾಗಿ ಸ್ತ್ರೀರೂಪದಲ್ಲಿ ಆರಾಧಿಸುವ ಪರಂಪರೆ, ಜಗತ್ತಿನ ಬಹುಶಃ ಕಾಲ ದೇಶಗಳ ವ್ಯಾಪ್ತಿಯನ್ನು ಮೀರಿದ, ಅತ್ಯಂತ ಹಳೆಯ ಜನಪ್ರಿಯ ಪದ್ಧತಿ. ವಿವಿಧ ಪಂಥ, ಆಚಾರ, ಆರಾಧನಾಮಾರ್ಗಗಳ ಮೂಲಕ ಇಂದಿನವರೆಗೂ ಅವಿಚ್ಛಿನ್ನವಾಗಿ, ಆಯಾ ಕಾಲ, ದೇಶಗಳ ಧಾರ್ಮಿಕ, ಸಾಮಾಜಿಕ ಅವಶ್ಯಕತೆಗಳಿಗನುಗುಣವಾಗಿ ಮಾರ್ಪಟ್ಟು ಮುಂದುವರೆದಿದೆ. ಸಾಹಿತ್ಯ, ಶಿಲ್ಪ, ವಾಸ್ತು, ಚಿತ್ರಾದಿ ಕಲಾಪ್ರಕಾರಗಳಲ್ಲಿ ವಿವಿಧ ರೂಪಗಳಲ್ಲಿ ಅಭಿವ್ಯಕ್ತಿಗೊಂಡಿದೆ. ಶಿವನ ಶಕ್ತಿ ಸ್ವರೂಪಿಣಿಯಾಗಿ, ಪ್ರತ್ಯೇಕವಾಗಿಯೂ ದೇವಿಯೇ ಪ್ರಧಾನಶಕ್ತಿಯಾಗಿ ಕಲ್ಪಿತಳಾಗಿರುವ ಶಾಕ್ತಪಂಥವೆಂದು ಜನಪ್ರಿಯವಾಗಿದೆ. ಒಂಬತ್ತನೆಯ ಶತಮಾನದ ಆರಂಭಕ್ಕಾಗಲೇ ಸ್ಪಷ್ಟವಾಗಿ ರೂಪುಗೊಂಡು ಬಹುಪ್ರಚಲಿತವಿದ್ದ ತಾಂತ್ರಿಕ ಆರಾಧನಾಮಾರ್ಗಗಳ ತೀವ್ರ ಪ್ರಭಾವಕ್ಕೀಡಾದ ಶಾಕ್ತಪಂಥಗಳಲ್ಲಿ ಸಪ್ತಮಾತೃಕಾ ಮತ್ತು ಯೋಗಿನೀಪಂಥಗಳು ಪ್ರಧಾನವಾಗಿ ಬೆಳೆದವು. ಅದರಂತೆಯೇ, ತಾಂತ್ರಿಕಪಂಥ ಗುಪ್ತಸಮಾಜಗಳ ಆದಿಗುರು ಶಿವನ ವೈವಿಧ್ಯಮಯ ಲೀಲಾಸ್ವರೂಪಗಳು–ಮುಖ್ಯವಾಗಿ ಭೈರವರೂಪದ ಜೊತೆಗೆ ಸಂಬಂಧಹೊಂದಿ ದೇಶದಾದ್ಯಂತ ಜನಪ್ರಿಯವಾಯಿತು.

ಬಹು ಸಂಕೀರ್ಣಸ್ವರೂಪದ ಹಿಂದೂಧರ್ಮದ ವಿವಿಧ ಪಂಥಗಳಲ್ಲಿ ಯೋಗಿನಿಯರ ಸಂಖ್ಯೆ, ಸ್ಥಾನ ಹಾಗೂ ಮಹತ್ವಗಳ ಬಗೆಗೆ ಪರಸ್ಪರ ವಿರುದ್ಧವೆನಿಸಬಹುದಾದ ಅಭಿಪ್ರಾಯಗಳಿವೆ. ಯೋಗಮಾರ್ಗದ ಅಧಿಷ್ಠಾತೃದೇವತೆ ಪರಮಯೋಗಿ–ಶಿವ. ಸಹಜವಾಗಿ ಯೋಗ ಮಾರ್ಗವನ್ನನುಸರಿಸುವ ತನ್ನ ಭಕ್ತರಿಗೆ ವಿವಿಧ ಹಂತದ ವಿಶೇಷ ಸಿದ್ಧಿ, ಶಕ್ತಿಗಳನ್ನೂ ಇತರ ಆನುಷಂಗಿಕ ಕ್ಷುದ್ರಶಕ್ತಿಗಳನ್ನೂ ಕರುಣಿಸುತ್ತಾನೆ. ಇಂತಹ ಶಿವನ ಶಕ್ತಿತತ್ತ್ವವೇ ಯೋಗಿನಿ. ಪರಶಿವನಂತೆಯೇ ತನ್ನ ಭಕ್ತರಿಗೂ ಶಕ್ತಿ, ಸಿದ್ಧಿಗಳ ಪ್ರದಾಯಿನಿ. ವಿವಿಧ ಯೋಗಿನಿಯರ ಉಗಮದ ಸಂದರ್ಭ, ಕಾರಣ, ಸ್ವರೂಪಾದಿಗಳ ವೈಶಿಷ್ಟ್ಯವನ್ನು ಕುರಿತ ಉಲ್ಲೇಖಗಳು ಪುರಾಣ, ಮಾಹಾತ್ಮ್ಯ ಮತ್ತಿತರ ಸಾಹಿತ್ಯಕ ಆಕರಗಳಲ್ಲಿವೆ. ಮಾರ್ಕಂಡೇಯ, ಕಾಲಿಕಾ, ಅಗ್ನಿ, ಮತ್ಸ್ಯ, ಗರುಡ, ಸ್ಕಾಂದ, ದೇವೀಭಾಗವತ ಮುಂತಾದ ಪುರಾಣಗಳಲ್ಲಿ ದುರ್ಗಾ, ಭಗವತಿ, ಗೌರೀ ಮುಂತಾದ ಮುಖ್ಯ ಶಕ್ತಿಯರು, ಅವರ ಪರಿವಾರದ ದೇವಿಯರು, ಸೇವಕಿ, ಗಣಗಳಾಗಿ ಅನೇಕ ದೇವಿ, ಕ್ಷುದ್ರದೇವತೆಗಳನ್ನು ಹೆಸರಿಸಲಾಗಿದೆ. ಸಾತ್ವಿಕ ಆರಾಧನಾಮಾರ್ಗವನ್ನು ಎತ್ತಿಹಿಡಿಯುವ, ಶಿಷ್ಟಸಮಾಜವು ಪುರಸ್ಕರಿಸಿ ಆರಾಧಿಸುವ ಶ್ರೀವಿದ್ಯೋಪಾಸನೆಯಲ್ಲಿ ಈ ದೇವತೆಗಳೆಲ್ಲ ಲಲಿತಾದೇವಿಯ ಸೇವಕಿಯರು. ಕೆಲವೊಮ್ಮೆ ಯೋಗಿನಿಯರು ಮಾನವಶರೀರ, ಪಶುಪಕ್ಷಿಗಳ ತಲೆಯಿರುವ ಶೈವಗಣಗಳ ಶಕ್ತಿರೂಪಿಣಿಯರಾಗಿಯೂ ಕಲ್ಪಿತರಾಗಿದ್ದಾರೆ(ದಹೇಜಾ ೧೯೮೬).

ಯೋಗಿನಿಯರು ಪ್ರಪಂಚದ ಹುಟ್ಟು, ಉಳಿವು, ಅಳಿವುಗಳಿಗೆ ಮುಖ್ಯಕಾರಣವಾದ ಕ್ರಿಯೋನ್ಮುಖೀ ಆದಿಶಕ್ತಿ ಅಥವಾ ಮೂಲಶಕ್ತಿಯ ವ್ಯಕ್ತರೂಪಗಳು. ಶಿಷ್ಟಸಮಾಜದವರ ಪ್ರಕಾರ ಕ್ಷುದ್ರಮಾಟಗಾತಿ ದೇವಿಯರು. ವಿವಿಧ ರೀತಿಯ ಅನೂಹ್ಯ, ಅಗ್ರಾಹ್ಯ ಶಕ್ತಿಸಾಮರ್ಥ್ಯಗಳನ್ನು ಪಡೆದು ಯೋಗಿನೀ, ಡಾಕಿನೀ, ಶಾಕಿನೀ ಮುಂತಾದ ಹೆಸರುಗಳಿಂದಲೂ ಪರಿಚಿತರು. ಕೆಲವೆಡೆಯಂತೂ ಮಂತ್ರಿಸಿದ ದಾರವನ್ನು ಕೊರಳಲ್ಲಿ ಕಟ್ಟುವುದರ ಮೂಲಕ ಯೋಗಿನಿಯರು, ಅಭಿಮಂತ್ರಿಸಿದ ಅಕ್ಕಿಯ ಕಾಳೆರೆಚುವುದರ ಮೂಲಕ ಶಾಕಿನಿಯರು ಮನುಷ್ಯರನ್ನು ತಮಗಿಷ್ಟಬಂದಂತೆ ಪಶು, ಪಕ್ಷಿ, ಮರ, ಕಲ್ಲು ಮುಂತಾದ ನಿರ್ಜೀವಿ ಪದಾರ್ಥಗಳನ್ನಾಗಿ ಪರಿವರ್ತಿಸಬಲ್ಲವರು. ಇಂಥಹ ಸಾಮರ್ಥ್ಯ ಪಡೆದ ಪೈಶಾಚಿಕ ಸ್ವಭಾವದವರಾದುದರಿಂದ ಈ ದೇವಿಯರನ್ನು 'ಭಯಕಾರಕ ಸ್ತ್ರೀದೇವತೆ'ಗಳೆಂದೂ ಜನ ನಂಜಿದ್ದರು(ದಹೇಜಾ ೧೯೮೬).

* ನಿವೃತ್ತ ಉಪ ಅಧೀಕ್ಷಕ ಪುರಾತತ್ತ್ವವಿದ, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ಬೆಂಗಳೂರು ವಲಯ, ಬೆಂಗಳೂರು–560034.
** ಉಪ ಅಧೀಕ್ಷಕ ಪುರಾತತ್ತ್ವವಿದ, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ಹಂಪಿ ವಿಶ್ವಪರಂಪರಾ ತಾಣಗಳ ಮೇಲ್ವಿಚಾರಕರು, ವಿಶ್ವಪರಂಪರೆ ನಿವೇಶನ, ಕಾಮಲಾಪುರ, ಹೊಸಪೇಟೆ.

ಈ ದೇವತೆಗಳ ಸಂಖ್ಯೆಯ ಬಗೆಗೆ ಸಾಕಷ್ಟು ಚರ್ಚೆಗಳಿವೆ. ಮೊದಲಿಗೆ ಮುಖ್ಯ ಪುರುಷದೇವತೆಗಳ ಶಕ್ತಿಸ್ವರೂಪಿಣಿಯರಾಗಿ ಮೂರು, ಪರಾಶಕ್ತಿಯ ಏಳು(ಸಪ್ತ) ಅಥವಾ ಎಂಟು(ಅಷ್ಟ) ಮಾತೃಕೆಯರಾಗಿ ಪ್ರಾದುರ್ಭವಿಸಿದರು. ಇವರ ವಂಶ ಅಥವಾ ಕುಟುಂಬವರ್ಗದ ದೇವತೆ–ಉಪದೇವತೆಗಳ ಎಂಟು ಕುಲಗಳು ಉಗಮಿಸಿದವು. ಈ ಎಂಟರ ಪ್ರತಿಕುಲದಲ್ಲೂ ಎಂಟೆಂಟು ದೇವಿಯರು ಉದ್ಭವಿಸಿ ಒಟ್ಟು ಚತುಷ್ಷಷ್ಠಿ (೬೪) ಯೋಗಿನಿಗಳಾದರು. ಉಳಿದಂತೆ ಈ ಸಂಖ್ಯೆಯಲ್ಲಿ ಕೆಲವರನ್ನು ಬಿಟ್ಟು, ಕೆಲವು ಪರಿವಾರ ದೇವತೆಗಳನ್ನು ಸೇರಿಸಿ ನಲವತ್ತೆರಡು(೪೨), ಅರವತ್ತನಾಲ್ಕು(೬೪) ಮತ್ತು ಎಂಬತ್ತೊಂದು(೮೧) ಯೋಗಿನಿಯರು ಉಗಮಿಸಿದರೆಂದು ಉಲ್ಲೇಖಗಳಿವೆ. ಹೀಗಿದ್ದರೂ, ಅರವತ್ತನಾಲ್ಕು(೬೪) ಯೋಗಿನಿಗಳ ಪಂಥವೇ ಪ್ರಧಾನ, ಪ್ರಸಿದ್ಧ ಹಾಗೂ ಬಹುಪ್ರಚಲಿತವಾದದ್ದು.

ಶೈವ ಹಾಗೂ ಶಾಕ್ತ ಆಗಮ ಗ್ರಂಥಗಳ ಪ್ರಕಾರ ಶಿವನ ಉಗ್ರಸ್ವರೂಪ ಭೈರವ. ಭೈರವನಿಂದ ಅಷ್ಟಭೈರವರೂ ಅವರಲ್ಲಿ ಪ್ರತಿಯೊಬ್ಬರು ಎಂಟುರೂಪಗಳಲ್ಲಿದ್ದು ಒಟ್ಟು ಅರವತ್ತನಾಲ್ಕು (ಅಷ್ಟಾಷ್ಟ) ಭೈರವರಾದರೆಂದೂ ಅವರವರ ಪ್ರತ್ಯೇಕ ಶಕ್ತಿಸ್ವರೂಪಿಣಿಯರಾಗಿ ಯೋಗಿನಿಯರು ಉಗಮಿಸಿದರೆಂದು ಹೇಳಿದೆ. ಪ್ರಾಚೀನ ಕಾಲದ ಪುರಾಣಾದಿ ಸಾಹಿತ್ಯದಲ್ಲಿ ಉಲ್ಲೇಖವಿದ್ದರೂ, ತಾಂತ್ರಿಕಪಂಥ, ಗುಪ್ತಸಮಾಜದ ಸುಳಿ, ಒಳಸುಳಿಗಳು ಅತಿ ಪ್ರಾಚೀನಪರಂಪರೆಯನ್ನು ಹೊಂದಿದ್ದರೂ, ದೇವಾಲಯ, ಶಿಲ್ಪ ಮುಂತಾದವು ಪ್ರತಿನಿಧಿಸುವ ಚತುಷ್ಷಷ್ಠಿ ಯೋಗಿನೀಪಂಥ ಪೂರ್ಣರೂಪದಲ್ಲಿ ಬೆಳೆದು ಅಸ್ತಿತ್ವಕ್ಕೆ ಬಂದಿದ್ದು ಕ್ರಿ.ಶ. ಒಂಬತ್ತನೆಯ ಶತಮಾನದ ವೇಳೆಗೇ.

ಈ ದೇವತೆಗಳ ಹೆಸರುಗಳೂ ಸಂಖ್ಯೆ ಹಾಗೂ ಸ್ವರೂಪದಷ್ಟೇ ವೈವಿಧ್ಯಮಯವಾಗಿವೆ. ಒಂದೊಂದು ಸಾಹಿತ್ಯಕ ಆಕರದಲ್ಲಿಯೂ ಬೇರೆಬೇರೆ ಹೆಸರುಗಳಿಂದ ಕರೆಯಲಾಗಿದೆ. ಈ ದೇವತೆಗಳನ್ನು 'ಕುಲ'ಗಳೆಂದು, ಇವರನ್ನು ಆರಾಧಿಸುವವರು 'ಕೌಲ'ರೆಂದು ವ್ಯವಹರಿಸಲಾಗಿದೆ. **ಕುಲಾರ್ಣವ, ಮತೋತ್ತರ** ಮತ್ತು **ಕಾಲಜ್ಞಾನನಿರ್ಣಯ** ಮುಂತಾದ ತಾಂತ್ರಿಕಪರಂಪರೆಯ ಕೃತಿಗಳಲ್ಲಿ ಇವರ ಉಲ್ಲೇಖವಿದೆ. ಎಲ್ಲ ಗುಪ್ತಸಮಾಜಗಳ ವಿಶಿಷ್ಟ ನಿಯಮಾವಳಿ, ಆಚಾರಸಂಹಿತೆಗಳಂತೆ ಈ ಪಂಥದ ವಿಧಿವಿಧಾನಾದಿ ವಿವರಗಳು ಮೌಖಿಕ ಸಂಪ್ರದಾಯದ ಮೂಲಕವೇ ದೀಕ್ಷೆಪಡೆದ ಮುಖ್ಯಶಿಷ್ಯ, ಸಾಧಕರಿಗೆ ಹಸ್ತಾಂತರವಾಗುತ್ತಿದ್ದವು. ಇಂತಹ 'ಕೌಲ' ಶಾಖೆಗಳಲ್ಲಿ ಮತ್ಸ್ಯೇಂದ್ರನಾಥ ಪ್ರಾರಂಭಿಸಿದ 'ಯೋಗಿನೀ ಕೌಲ' ಪ್ರಮುಖವೂ ಅತ್ಯಂತ ಜನಪ್ರಿಯವೂ ಆದುದು.

ಉಳಿದ ತಾಂತ್ರಿಕ ಆಚಾರಗಳಂತೆ ಸಾಧಕರು ಯೋಗಿನೀಸ್ವರೂಪಿಣಿಯರಾದ ಸಹಚರಿ ಸಾಧಕಿಯರೊಂದಿಗೆ ನಡೆಸುವ 'ಯೋಗಿನೀ ಚಕ್ರ' ಅಥವಾ 'ಕಾಲಚಕ್ರ'ದ ರಹಸ್ಯ ಪ್ರಕ್ರಿಯೆಗಳು ಮತ್ತು ಆಚರಣೆಗಳು ಪ್ರಬಲವಾದವು. ಯೋಗಿನಿಯರ ಆರಾಧನೆಯಲ್ಲಿಯೂ ಪಂಚಮಕಾರ (ಮತ್ಸ್ಯ, ಮಾಂಸ, ಮುದ್ರಾ, ಮದ್ಯ ಹಾಗೂ ಮೈಥುನ)ಗಳ ಸಾಧನೆ ಮುಖ್ಯವಾಗಿತ್ತು. ಈ ಸಾಧಕರ ಅಂತಿಮಗುರಿ ಮೋಕ್ಷವಾಗಿರದೆ ಆಯಾ ಯೋಗಿನಿಯರಿಗೆ ವಿಶಿಷ್ಟವಾದ ಮಾಯ, ಮಂತ್ರ ಮುಂತಾದ ಸಿದ್ಧಿಗಳನ್ನು ಪಡೆಯುವುದು. ಇದು ಲೌಕಿಕ ಪ್ರಯೋಜನ. ಅಲೌಕಿಕ ಪ್ರಯೋಜನದಲ್ಲಿ ಯೋಗಸಾಧನೆಯಿಂದ ಮೂಲಾಧಾರದಲ್ಲಿ ನಿದ್ರಿಸುತ್ತಿರುವ ಆದಿಶಕ್ತಿಸ್ವರೂಪಿಯಾದ ಕುಂಡಲಿನಿಯನ್ನು ಜಾಗೃತಗೊಳಿಸಿ, ಸ್ವಾಧಿಷ್ಠಾನ, ಮಣಿಪೂರ, ವಿಶುದ್ಧ, ಆಜ್ಞಾಚಕ್ರ ಸ್ಥಾನಗಳನ್ನು ತಲುಪಿ, ಕಡೆಗೆ ಸಹಸ್ರಾರಚಕ್ರದಲ್ಲಿ ಲೀನವಾಗಿಸಿ ಪಡೆಯುವ ಷಡೈಶ್ವರ್ಯ ಸಿದ್ಧಿಯೇ ತಂತ್ರದ ಪರಮ ಗುರಿ. ಲೌಕಿಕವಾಗಿ ಇಂತಹ ತಂತ್ರಮಾರ್ಗಾವಲಂಬಿ ಸಾಧಕರನ್ನು ಕಂಡರೆ ಶಿಷ್ಟಸಮಾಜದ ಜನರು ಭಯಪಡುತ್ತಿದ್ದರು. ಯೋಗಿನಿಯರ ಕೋಪ ಹಾಗೂ ಶಾಪಗಳ ಭಯ ಜನಸಾಮಾನ್ಯರನ್ನು ಕಾಡುತ್ತಿತ್ತು.

ವಾಮಾಚಾರದ ಆರಾಧನಾ ಪ್ರಕ್ರಿಯೆಗಳೇ ಪ್ರಧಾನವಾಗಿದ್ದ ಗುಪ್ತಸಮಾಜದ ಅನುಯಾಯಿಗಳಾಗಿದ್ದ ಸಾಧಕರಿಗೆ ಸಹಜವಾಗಿ ಶಿಷ್ಟಸಮಾಜದ ಪರಿಧಿಯೊಳಗೆ ತಮ್ಮ ಆಚರಣೆಗಳನ್ನು ನಡೆಸುವುದು ಅಸಾಧ್ಯ. ಆದುದರಿಂದ ಯೋಗಿನೀ ಮಂದಿರಗಳೆಲ್ಲ ಬಹುತೇಕ ಊರ ಹೊರಗಿರುತ್ತವೆ. ಸಾಧಾರಣವಾಗಿ ಬೆಟ್ಟಗುಡ್ಡಗಳ ಮೇಲೆ, ನದೀತೀರದಲ್ಲಿ ಹಾಗು ದಟ್ಟಕಾಡುಗಳಲ್ಲಿನ ಏಕಾಂತ ಸ್ಥಳದಲ್ಲಿ ಇವು ಕಂಡುಬರುತ್ತವೆ. ಇಂತಹ ನಿಗೂಢ ಸ್ಥಳಗಳಲ್ಲಿ ಯೋಗಿನಿಯರನ್ನು ಚಕ್ರಗಳ ರೂಪದಲ್ಲಿ ನಾಲ್ಕು ವಿಧವಾಗಿ ಆರಾಧಿಸುವ ಪರಂಪರೆಯಿತ್ತು. ಖೇಚರೀಚಕ್ರ ಮತ್ತು ಯೋಗಿನೀಚಕ್ರಗಳು ಅರವತ್ತನಾಲ್ಕು ಯೋಗಿನಿಯರನ್ನು ಪ್ರತಿನಿಧಿಸಿದರೆ ಮಾಲಿನೀಚಕ್ರ ಐವತ್ತು ಮತ್ತು ಮೂಲಚಕ್ರವು ಎಂಬತ್ತೊಂದು ಯೋಗಿನಿಯರನ್ನು ಒಳವಡಿಸಿಕೊಂಡಿವೆ (ದಹೇಜಾ ೧೯೮೬).

## ಯೋಗಿನೀ ದೇವಾಲಯಗಳು

ಜನಸಾಮಾನ್ಯರಲ್ಲಿ ಹಾಗೂ ಬರಹಗಳಲ್ಲಿ ಚೌಸಟ್ (ಚತುಷ್ಷಷ್ಠಿ) ಯೋಗಿನಿಯರ ದೇವಾಲಯಗಳೆಂದು ಪ್ರಸಿದ್ಧವಾದ ಈ ಗುಡಿಗಳು ಭಾರತದ ಶಿಲ್ಪಕಲೆ ಹಾಗೂ ವಾಸ್ತುಪರಂಪರೆಗಳಲ್ಲಿ ತನ್ನದೇ ಆದ ವಿಶಿಷ್ಟಲಕ್ಷಣಗಳಿಂದಾಗಿ ಅಸಮಾನ ಸ್ಥಾನಪಡೆದಿವೆ. ಇವು ಬಹುತೇಕ ಮಧ್ಯಭಾರತದಲ್ಲಿ ಚಾಂದೇಲ ಹಾಗೂ ಕಳಚೂರ್ಯ ರಾಜವಂಶೀಯರ ಮತ್ತು ಪೂರ್ವದ ಒರಿಸ್ಸಾದಲ್ಲಿ ಭೌಮಕಾರರ ಆಳ್ವಿಕೆಯ ಕಾಲದಲ್ಲಿ ಅಂದರೆ ಕ್ರಿ.ಶ. ಒಂಬತ್ತರಿಂದ ಹನ್ನೆರಡನೆಯ ಶತಮಾನಗಳಲ್ಲಿ ಹೆಚ್ಚು ಜನಪ್ರಿಯವೂ ಪ್ರಚಲಿತವೂ ಆಗಿದ್ದವು. ಚೆದುರಿದಂತೆ ಅಲ್ಲಲ್ಲಿ ಕಂಡುಬರುವ ಶಾಸನ ಹಾಗೂ ಶಿಲ್ಪಗಳನ್ನು ಆಧರಿಸಿ ಹೇಳುವುದಾದರೆ, ದಕ್ಷಿಣ ಭಾರತದಲ್ಲಿಯೂ ಯೋಗಿನೀಪಂಥ ಸಾಕಷ್ಟು ಜನಪ್ರಿಯವಾಗಿತ್ತೆನ್ನಬಹುದು. ಹದಿನಾರನೆಯ ಶತಮಾನದಿಂದೀಚೆಗೆ ಅಲ್ಲಲ್ಲಿ ಈ ಪಂಥದ ಅಸ್ತಿತ್ವವಿದ್ದರೂ ಪ್ರತ್ಯೇಕವಾದ ವಿಶೇಷ ಮಂದಿರಗಳಿದ್ದಂತಿಲ್ಲ. ಹದಿನೆಂಟನೆಯ ಶತಮಾನದ ವೇಳೆಗೆ ಈ ಪಂಥ ಧಾರ್ಮಿಕಪ್ರಾಬಲ್ಯ ಮತ್ತು ಜನಬೆಂಬಲಗಳನ್ನು ಸಂಪೂರ್ಣವಾಗಿ ಕಳೆದುಕೊಂಡಂತೆ ಕಾಣುತ್ತದೆ. ಆದರೂ ರಾಜಸ್ಥಾನದ ಕೆಲವು ಬುಡಕಟ್ಟು ಜನಾಂಗಗಳ ಪ್ರಾದೇಶಿಕ ಜಾನಪದ ಶೈಲಿಯ ಚಿತ್ರಕಲಾ ಪರಂಪರೆಯಲ್ಲಿ ಯೋಗಿನಿಯರ ಚಿತ್ರಣ ಸ್ವಲ್ಪಮಟ್ಟಿಗೆ ಇಪ್ಪತ್ತನೆಯ ಶತಮಾನದ ಆರಂಭದವರೆಗೂ ಉಳಿದಿತ್ತು.

ಯೋಗಿನಿ ದೇವಾಲಯಗಳು ಯಾವುದೇ ಸಮಕಾಲೀನ ಪ್ರಸಿದ್ಧ ಪ್ರಾದೇಶಿಕ ಹಾಗೂ ಸಿದ್ಧಶೈಲಿಗಳನ್ನು ಹೋಲದೆ ತಮ್ಮದೇ ಆದ ವಿಶಿಷ್ಟಲಕ್ಷಣಗಳನ್ನು ಹೊಂದಿವೆ. ಒಂದೆರಡು ವ್ಯತ್ಯಾಸಗಳನ್ನು ಹೊರತು ಪಡಿಸಿದರೆ ಎಲ್ಲ ಮಂದಿರಗಳೂ ಒಂದೇ ಶೈಲೀಯ ಚೌಕಟ್ಟಿನಲ್ಲಿವೆ. ಇವುಗಳ ತಲವಿನ್ಯಾಸವು ವೃತ್ತಾಕಾರದಲ್ಲಿದ್ದು ಛಾವಣಿಯಿಲ್ಲದೆ ಆಕಾಶಕ್ಕೆ ತೆರೆದುಕೊಂಡಿರುತ್ತವೆ. ಕೆಲವೊಮ್ಮೆ ಅಪವಾದವೆನ್ನುವಂತೆ ಚತುರ್ಭುಜಾಕಾರದಲ್ಲಿಯೂ ಇವೆ. ವೃತ್ತಾಕಾರದ ವೈಶಿಷ್ಟ್ಯ ಬಹುಶಃ ಲೌಕಿಕಪ್ರಪಂಚಕ್ಕೆ ವಿಮುಖವಾಗಿ ತಾವೇ ಹಾಕಿಕೊಂಡ ನೀತಿ, ನಿಯಮಾವಳಿಗಳ ಪರಿಮಿತಿಯೊಳಗೆ ಸ್ವಯಂಪೂರ್ಣ ಹಾಗೂ ಸ್ವತಂತ್ರವಾಗಿರುವುದು. ಛಾವಣಿಯಿಲ್ಲದೆ ಆಕಾಶಕ್ಕೆ ತೆರೆದುಕೊಂಡಿರುವುದು ಮುಖ್ಯವಾಗಿ ಬೆಳಕಿಗಾಗಿ ಹಾಗೂ ಸ್ವಚ್ಛಂದತೆ ಮತ್ತು ಮುಕ್ತತೆಯನ್ನು ಸಹ ಸಂಕೇತಿಸಲು. ಹೊರಗಣ ಜಗತಿ, ಅಧಿಷ್ಠಾನ, ಭಿತ್ತಿಗಳು ಯಾವುದೇ ಅಲಂಕರಣವಿಲ್ಲದೆ ತೀರ ಸಾಧಾರಣವಾಗಿರುತ್ತವೆ. ಆಡಂಬರರಹಿತವಾದ ಪ್ರವೇಶದ್ವಾರ ಸಾಮಾನ್ಯವಾಗಿ ಪೂರ್ವಕ್ಕಿರುತ್ತದೆ. ವೃತ್ತದ ಒಳಪರಿಧಿಗೆ ಹೊಂದಿಕೊಂಡಂತೆ, ಮಧ್ಯದಲ್ಲಿ ಮುಕ್ತವಾದ ವಿಶಾಲ ಅಂಕಣ, ಅದರ ಸುತ್ತ ಆಯಾ ಸಾಧಕವರ್ಗದ ನಂಬಿಕೆಗನುಗುಣವಾಗಿ ನಲವತ್ತೆರಡು, ಅರವತ್ತನಾಲ್ಕು, ಎಂಬತ್ತೊಂದು ಸಣ್ಣ ಮಂದಿರಗಳಿದ್ದು ಪ್ರತಿಯೊಂದರಲ್ಲಿ ಒಂದೊಂದು ಯೋಗಿನಿ ಶಿಲ್ಪವಿರುತ್ತದೆ. ವೃತ್ತದ ಮಧ್ಯದಲ್ಲಿ ಯೋಗಿನಿಯರ ನಾಯಕ ಭೈರವ ಅಥವಾ ಶಿವನ ಮುಖ್ಯ ಗರ್ಭಗೃಹವಿರುತ್ತದೆ.

ಯೋಗಿನಿಯರ ಶಿಲ್ಪಗಳು ವಿವಿಧ ಆಕರ್ಷಕ ಭಂಗಿಯಲ್ಲಿದ್ದು, ಪ್ರಮಾಣಬದ್ಧವಾಗಿ, ಛನ್ನವೀರ ಧರಿಸಿರುವ ತುಂಬು ಯೌವನವತಿ ಸುಂದರಿಯರ ಅಂಗಸೌಷ್ಠವವಿರುವಂತೆ ಕಂಡರಿಸಲಾಗಿರುತ್ತವೆ. ವಿವಿಧ ರೀತಿಯ ಕಿರೀಟ, ಆಕರ್ಷಕ ಕರ್ಣಾಭರಣ, ರತ್ನಖಚಿತ ಕಂಠಾಭರಣ, ಏಕಾವಳಿ, ಮೇಖಲೆ, ಕೇಯೂರ, ಕಂಕಣ ನೂಪುರಾದಿಗಳಿಂದ ಸರ್ವಾಲಂಕಾರಸುಶೋಭಿತರಾಗಿ, ಸುಖಾಸೀನರಾಗಿ ಇಲ್ಲವೆ ನಿಂತ ಭಂಗಿಯಲ್ಲಿರುತ್ತವೆ. ಶರೀರಾವಯವಗಳು ಮಾನವರೂಪದಲ್ಲಿದ್ದರೂ ಬಹುತೇಕ ಶಿಲ್ಪಗಳ ತಲೆಗಳು ಗಜ, ವರಾಹ, ಕಪಿ, ಸಿಂಹ, ಸರ್ಪ, ಮಹಿಷ, ಆಕಳು, ಕರಡಿ, ಜಿಂಕೆ, ಮೊಲ, ಮೇಕೆ, ಚಿರತೆ ಮುಂತಾದ ಪ್ರಾಣಿಗಳದಾಗಿರುತ್ತದೆ. ಈ ಯೋಗಿನಿಯರಿಗೆ ವಾಹನಗಳಿದ್ದು, ಗಜ, ಕೂರ್ಮ, ಮಹಿಷ, ಸರ್ಪ, ಮತ್ಸ್ಯ, ಸಿಂಹ, ಮಯೂರ, ಗಾರ್ದಭ, ಮೂಷಕ, ಶ್ವಾನ, ಚೇಳು ಹಾಗೂ ಮಾನವ ಶರೀರ(ಶವ), ಮುಂಡ ಇತ್ಯಾದಿಗಳ ಮೇಲೆ ಸಹ ನಿಂತಿರುವಂತೆ ಇಲ್ಲವೇ ಕುಳಿತಿರುವಂತೆ ತೋರಿಸಲಾಗಿದೆ.

ಮಧ್ಯ ಹಾಗೂ ಪೂರ್ವ ಭಾರತದ ಕೆಲವು ಪ್ರದೇಶಗಳಲ್ಲಿ ಕೇಂದ್ರೀಕೃತವಾದ, ಯೋಗಿನಿಯರಿಗೆಂದೇ ಅರ್ಪಿತವಾದ ಕನಿಷ್ಠ ಹದಿನೈದು ದೇವಾಲಯಗಳು ಇದುವರೆಗೆ ಬೆಳಕಿಗೆ ಬಂದಿವೆ. ಅವುಗಳಲ್ಲಿ ಮುಖ್ಯವಾದವು ಮಧ್ಯಪ್ರದೇಶದೊಳಗಣ ಖಜುರಾಹೋ (ಛತ್ತರಪುರ ಜಿಲ್ಲೆ), ದುಧಾಯಿ(ಝಾಂಸಿ ಜಿಲ್ಲೆ), ಮಿತವೂಲಿ(ಮೊರೆನ ಜಿಲ್ಲೆ), ಭೇರಾಘಾಟ್(ಜಬಲ್ಪುರ ಜಿಲ್ಲೆ), ನರೇಶ್ವರ್(ಗ್ವಾಲಿಯರ ಬಳಿ) ಹಾಗೂ ಗೊರ್ಗಿ (ರೇವಾ ಜಿಲ್ಲೆ) ಮತ್ತು ಈ ಪರಿಸರಕ್ಕೆ ಹೊಂದಿಕೊಂಡಂತೆ ಒರಿಸ್ಸಾ ರಾಜ್ಯದಲ್ಲಿರುವ ರಾಣಿಪುರ-ಝರಿಯಾಲ (ಬೋಲಂಗಿರ ಜಿಲ್ಲೆ), ಸುರಾದಾ (ಕಾಲಹಂಡಿಯ ಬಳಿ) ಮತ್ತು ಭುವನೇಶ್ವರ ಬಳಿಯ ಹೀರಾಪುರಗಳಲ್ಲಿವೆ. ಬಹುತೇಕ ಈ ದೇವಾಲಯಗಳನ್ನು ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಅಲೆಗ್ಸಾಂಡರ ಕನ್ನಿಂಗಹ್ಯಾಮ ಈ ಪ್ರದೇಶದಲ್ಲಿ ಸ್ಥಳಪರಿಶೋಧನೆ ನಡೆಸುತ್ತಿದ್ದಾಗ ಮೊದಲಬಾರಿಗೆ ಕಂಡುಹಿಡಿದನು.

ಅನಂತರವೂ ಕೆಲವು ದೇವಾಲಯಗಳು ಬೆಳಕಿಗೆ ಬಂದಿವೆ. ಈ ಮಂದಿರಗಳು ನೆಲೆಗೊಂಡಿರುವ ಸ್ಥಳಗಳ ಪ್ರಸರಣದ ಅವಲೋಕನದಿಂದ ಯೋಗಿನಿ ಆರಾಧನೆ ಮಧ್ಯದೇಶದಲ್ಲಿ ವಿಶೇಷವಾಗಿ ಜನಪ್ರಿಯವಾಗಿತ್ತೆಂದು ಕಂಡುಬರುತ್ತದೆ. ತಮಿಳುನಾಡಿನ ಕೊಯಮತ್ತೂರಿನಲ್ಲಿಯೂ ಒಂದು ಯೋಗಿನಿ ದೇವಾಲಯವಿದ್ದಂತೆ ತಿಳಿದುಬರುತ್ತದಾದರೂ ಅದರ ಬಗೆಗೆ ಹೆಚ್ಚಿನ ವಿವರ ದೊರೆತಿಲ್ಲ.

**ಖಜುರಾಹೋನ ಚೌಸಟ್ ಯೋಗಿನಿ ಮಂದಿರ:**

ಇದುವರೆಗೆ ಬೆಳಕಿಗೆ ಬಂದಿರುವ ಚತುಷ್ಷಷ್ಠಿ ಯೋಗಿನಿ ಮಂದಿರಗಳಲ್ಲಿ ಅತ್ಯಂತ ಪ್ರಸಿದ್ಧವಾದವು ಖಜುರಾಹೋ, ಬೇರಾಘಾಟ್ ಮತ್ತು ಹೀರಾಪುರನಲ್ಲಿವೆ. ಅದರಲ್ಲಿಯೂ ಖಜುರಾಹೋದಲ್ಲಿ ಮುಖ್ಯ ಹಾಗೂ ಪ್ರಸಿದ್ಧ ಕಂದಾರಿಯ ಮಹಾದೇವ ದೇವಾಲಯ ಸಮುಚ್ಚಯದಿಂದ ಸ್ವಲ್ಪ ದೂರದಲ್ಲಿ ಪ್ರತ್ಯೇಕವಾಗಿರುವ ಈ ಮಂದಿರ ಹಲವು ವೈಶಿಷ್ಟ್ಯಗಳಿಂದ ಕೂಡಿರುವ, ಅತ್ಯಂತ ಪ್ರಾಚೀನ ಹಾಗೂ ಅನನ್ಯ ಉದಾಹರಣೆಯಾಗಿದೆ. ಈ ದೇವಾಲಯವನ್ನು ೪.೨x೫.೫ಮೀ ಎತ್ತರವಾದ ಜಗತಿಯ ಮೇಲೆ ಚತುರ್ಭುಜಾಕಾರದ ತಲವಿನ್ಯಾಸದಲ್ಲಿ ನಿರ್ಮಿಸಲಾಗಿದೆ. ಸಾಧಾರಣವಾಗಿ ಯೋಗಿನಿಯರ ದೇವಾಲಯಗಳು ವೃತ್ತಾಕಾರದ ತಲವಿನ್ಯಾಸ ಹೊಂದಿರುತ್ತವೆ. ಅಪವಾದವೆನ್ನುವಂತೆ, ಖಜುರಾಹೋದ ದೇವಾಲಯ ಚತುರ್ಭುಜಾಕಾರದಲ್ಲಿದೆ (ನಕ್ಷೆ ೧& ಚಿತ್ರ ೧). ಪ್ರಸ್ತುತ ದೇವಾಲಯವನ್ನು ಎತ್ತರವಾದ ದಿನ್ನೆಯ ಮೇಲೆ ಕಟ್ಟಿದೆ. ಈ ದಿನ್ನೆಯ ಮೇಲ್ಭಾಗವು ಹೆಚ್ಚುಕಡಿಮೆ ಆಯತಾಕಾರವಾಗಿದ್ದು, ಈ ವಿನ್ಯಾಸವನ್ನೇ ಅನುಸರಿಸಿ ದೇವಾಲಯವನ್ನು ಆಯತಾಕಾರದಲ್ಲಿ ರೂಪಿಸಲಾಗಿದೆಯಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಅರವತ್ತನಾಲ್ಕು ಯೋಗಿನಿಯರಿಗಾಗಿ ಆವರಣದಲ್ಲಿ ಕಟ್ಟಿದ ಪ್ರತಿಯೊಂದು ಮಂದಿರವು ಆಯತಾಕಾರದಲ್ಲಿಯೇ ಇದ್ದು, ಇಷ್ಟೊಂದು ಆಯತಾಕಾರದ ಉಪಮಂದಿರಗಳನ್ನು ವೃತ್ತಾಕಾರದ ಮುಖ್ಯ ವಿನ್ಯಾಸದಲ್ಲಿ ಕುಶಲತೆಯಿಂದ ಹೊಂದಿಸುವುದು ಕಷ್ಟ. ಆದುದರಿಂದ ಮುಖ್ಯ ದೇವಾಲಯವನ್ನು ಉದ್ದೇಶಪೂರ್ವಕವಾಗಿ ಆಯತಾಕಾರದ ವಿನ್ಯಾಸದಲ್ಲಿ ರೂಪಿಸಿರಬೇಕು. ಅಲ್ಲದೆ ಈ ಪ್ರದೇಶದಲ್ಲಿಯೇ ಇರುವ ರಖಿಯಾ ಹಾಗೂ ಭಾಡುಹ್‌ಗಳಲ್ಲಿರುವ ಯೋಗಿನಿಯರ ಮಂದಿರಗಳೂ ಆಯತಾಕಾರದ ತಲವಿನ್ಯಾಸವನ್ನೇ ಹೊಂದಿವೆ. ಈ ಕಾರಣಗಳಿಂದ, ಇವು ವೃತ್ತಾಕಾರದ ತಲವಿನ್ಯಾಸದ ಮಂದಿರಗಳಂತೆಯೇ, ಅದಕ್ಕಿಂತ ಭಿನ್ನವಾದ ಆಯತಾಕಾರದ ವಿನ್ಯಾಸಗಳನ್ನು ಹೊಂದಿರುವ ಯೊಗೀನೀ ಮಂದಿರಗಳನ್ನು ನಿರ್ಮಿಸುವ ಒಂದು ವಿಶಿಷ್ಟ ಪರಂಪರೆ ಈ ಪ್ರದೇಶದಲ್ಲಿ ಬಳಕೆಯಲ್ಲಿದ್ದುದನ್ನು ಸೂಚಿಸುತ್ತದೆ.

ನಯಗೊಳಿಸಿದ ಕಣಶಿಲೆಯನ್ನು (ಗ್ರಾನೈಟ್) ಉಪಯೋಗಿಸಿ ಸುಮಾರು ೩೧.೮೯x೧೮.೨೪ಮೀ ವಿಶಾಲವಾದ ಆವರಣದ ಸುತ್ತ ಕಟ್ಟಿದ, ಛಾವಣಿಯಿಲ್ಲದ ಎತ್ತರವಾದ ಪ್ರಾಕಾರದ ಒಳಪರಿಧಿಗೆ ಹೊಂದಿಕೊಂಡಂತೆ ಮೊದಲಿಗೆ ಅರವತ್ತೇಳು ಸಣ್ಣಸಣ್ಣ ಮಂದಿರಗಳನ್ನು ಕಟ್ಟಲಾಗಿತ್ತು. ಪ್ರತಿಯೊಂದು ಗುಡಿಯಲ್ಲಿ ಯೋಗಿನಿ ಇಲ್ಲವೆ ಇತರ ದೇವತೆಗಳನ್ನು ಸ್ಥಾಪಿಸಲಾಗಿತ್ತು. ಈಶಾನ್ಯದಿಕ್ಕಿನಲ್ಲಿ ೫೦.೮ಸೆಂಮೀ. ಅಗಲದ ಪ್ರವೇಶದ್ವಾರವಿದೆ. ಈ ದ್ವಾರದ ಎರಡುಬದಿಯಲ್ಲಿ ಐದೈದು, ದಕ್ಷಿಣ–ಪಶ್ಚಿಮದಲ್ಲಿ ಹನ್ನೊಂದು ಹಾಗೂ ಎರಡೂಬದಿಯ ಪಾರ್ಶ್ವಭಾಗದ ಒಂದೊಂದರಲ್ಲಿ ಇಪ್ಪತ್ಮೂರು ಮಂದಿರಗಳಿದ್ದವು. ಇವುಗಳಲ್ಲಿ ನೈಋತ್ಯ ಭಾಗದ ಒಂಬತ್ತು ಹಾಗೂ ದಕ್ಷಿಣದ ಹನ್ನೊಂದು ಸಂಪೂರ್ಣವಾಗಿ ಶಿಥಿಲಗೊಂಡಿವೆ. ಇತರ ಮಂದಿರಗಳಲ್ಲಿರುವಂತೆ ಅಧಿಷ್ಠಾತೃದೇವತೆ ಶಿವ– ಭೈರವನಿಗಾಗಿ ಕಟ್ಟಿರುವ ದೊಡ್ಡ ಗರ್ಭಗೃಹ ಮಧ್ಯದಲ್ಲಿಲ್ಲದೆ ಇಲ್ಲಿ ಮಹಾದ್ವಾರಕ್ಕೆ ಎದುರಾಗಿ ನೈಋತ್ಯಗೋಡೆಗೆ ಹೊಂದಿಕೊಂಡಂತೆ ಇದೆ. ತೀವ್ರಹಾನಿಗೀಡಾಗಿರುವ ಮಂದಿರಗಳಿಗೆ ತೀರ ಸರಳರೀತಿಯ ರೇಖಾನಾಗರ ಶಿಖರಗಳಿದ್ದಂತೆ ಕಾಣುತ್ತದೆ. ತಲವಿನ್ಯಾಸದಲ್ಲಿ ಐದು ಅಥವಾ ಆರು ರಥಗಳಿದ್ದು ಅವುಗಳಲ್ಲಿ ಕನಿಷ್ಠ ಎರಡಕ್ಕೆ ಆಮಲಕಗಳಿದ್ದು ಅದರ ಮೇಲೆ ಕಳಸ ಹಾಗೂ ಬೀಜಪೂರಕಗಳಿದ್ದವು. ಮಂದಿರದ ಉರ್ಧ್ವವಿನ್ಯಾಸದಲ್ಲಿ ಯಾವುದೇ ಅಲಂಕರಣವಿಲ್ಲ ಆದರೆ ಹಿಂಭಾಗದ ಗೋಡೆಯ ಅಧಿಷ್ಠಾನದಲ್ಲಿ ಖುರಶಿಲಾ ಮತ್ತು ಭಾದ್ಯಕುಂಭಗಳಿದ್ದು ಠಕರ, ಅಂತರಪಟ್ಟ, ಖುರ, ಕುಂಭ ಹಾಗೂ ಕಪೋತಗಳಿಂದ ಅಲಂಕೃತವಾಗಿವೆ.

ಪ್ರಾಕಾರದ ಪರಿಧಿಯಲ್ಲಿರುವ ಬಹುತೇಕ ಉಪಮಂದಿರಗಳು ೮೧.೨೮x೯೮.೦೬x೭೧.೦೬ಸೆಂಮೀ ಅಳತೆಯವು. ಕಿರಿದಾದ ಪ್ರವೇಶದ್ವಾರ ಕೇವಲ ೪೫.೭೨ಸೆಂಮೀ ಎತ್ತರವಿದೆ. ಪ್ರತಿ ಗುಡಿಯ ದ್ವಾರವು ಸರಳವಾಗಿದ್ದು, ಹೊಸ್ತಿಲು, ದ್ವಾರಬಂಧ ಹಾಗೂ ತೊಲೆಗಳಿವೆ. ಮಧ್ಯದಲ್ಲಿರುವ ಮುಖ್ಯ ಗುಡಿಯ ಗರ್ಭಗೃಹದ ಗೋಡೆಗಳು ಸರಳವಾಗಿದ್ದರೆ ಛಾವಣಿ ಸಮತಲವಾಗಿದೆ. ಪ್ರಸ್ತುತ ಯಾವ ಗರ್ಭಗುಡಿಯಲ್ಲೂ ಶಿಲ್ಪವಿಲ್ಲವಾದರೂ ಕನಿಷ್ಠ ಮೂರರಲ್ಲಿ ಪ್ರಮಾಣಬದ್ಧವಾಗಿ

ರೂಪಿಸಿದ ಮರಳುಗಲ್ಲಿನ ಮಹಿಷಮರ್ದಿನಿ, ಮಾಹೇಶ್ವರಿ ಮತ್ತು ಬ್ರಹ್ಮಾಣಿ (ಬ್ರಾಹ್ಮಿ)ಯರನ್ನು ಪ್ರತಿಷ್ಠಾಪಿಸಲಾಗಿತ್ತೆಂದು ಹೇಳಬಹುದು. ಇವೆಲ್ಲ ದೇವಿಯರ ಪೀಠಗಳ ಮೇಲೆ ಶಾಸನಗಳಿವೆ. ಲಿಪಿಶೈಲಿ, ಒಟ್ಟಾರೆ ಸರಳವಿನ್ಯಾಸ ಇವುಗಳನ್ನಾಧರಿಸಿ ಈ ದೇವಾಲಯವು ಕ್ರಿ.ಶ. ೯೦೦ಕ್ಕಿಂತ ಸ್ವಲ್ಪ ಮೊದಲ ಕಾಲದ್ದೆಂದು ನಿರ್ಧರಿಸಲಾಗಿದೆ (ಕೃಷ್ಣದೇವ, ೧೯೯೦).

ಪ್ರಸ್ತುತ ಖಜುರಾಹೋದ ಪುರಾತತ್ತ್ವ ಸಂಗ್ರಹಾಲಯದಲ್ಲಿ ಪ್ರದರ್ಶಿಸಿರುವ ಮಹಿಷಮರ್ದಿನಿ ಮೂಲತಃ ಯೋಗಿನೀ ದೇವಾಲಯದ ಉಪಮಂದಿರವೊಂದರಲ್ಲಿ ಪೂಜೆಗೊಳ್ಳುತ್ತಿತ್ತು. ಈ ಶಿಲ್ಪವು ಆಲೀಢಾಸನದಲ್ಲಿರುವ ಅಷ್ಟಭುಜೆ ದೇವಿಯದಾಗಿದ್ದು, ಮಹಿಷಾಸುರನನ್ನು ವಧಿಸುತ್ತಿರುವಂತೆ ತೋರಿಸಲಾಗಿದೆ (ಚಿತ್ರ ೨). ಆರು ಕೈಗಳು ಭಗ್ನವಾಗಿದ್ದು, ಉಳಿದೆರಡರಲ್ಲಿ ಖಡ್ಗ ಹಾಗೂ ಖೇಟಕಗಳನ್ನು ಹಿಡಿದಿದ್ದಾಳೆ. ದೇವಿಯು ಧಮ್ಮಿಲ್ಲರೀತಿಯ ಕಿರೀಟಧಾರಿಣಿಯಾಗಿ, ಕುಂಡಲ, ಹಾರ, ಕೇಯೂರ, ಕಂಕಣ, ಕಟಿಬಂಧಾದಿಗಳಿಂದ ಸುಶೋಭಿತಳಾಗಿ ಪಿತಾಂಬರಧಾರಿಯಾಗಿದ್ದಾಳೆ. ಪ್ರಭಾವಳಿಯ ಎರಡುಬದಿಯ ಪಾರ್ಶ್ವಸ್ತಂಭದಲ್ಲಿ ಲಲಿತಾಸನದಲ್ಲಿರುವ ದೇವಿಯರನ್ನು ಹಾಗೂ ಮಹಿಷಮರ್ದಿನಿಯ ಇಕ್ಕೆಲಗಳಲ್ಲಿ ಕಮಲ ಹಿಡಿದ ಕಟಿಹಸ್ತ ಪರಿಚಾರಿಕೆಯರನ್ನು ತೋರಿಸಲಾಗಿದೆ. ಪೀಠದ ಮೇಲೆ 'ಹಿಂಗಲಜಾ'ಎಂಬ ಶಾಸನವಿದೆ. ಇನ್ನೊಂದು ದೇವಿಯು ಚತುರ್ಭುಜೆ ಮಾಹೇಶ್ವರಿ. ಲಲಿತಾಸನದಲ್ಲಿರುವ ಈ ದೇವಿಯು ಆಯುಧಗಳಾದ ತ್ರಿಶೂಲ, ಬಾಣ ಹಾಗೂ ದಂಡಗಳನ್ನು ಹೊಂದಿದ್ದು ಜಟಾಮುಕುಟ, ಕುಂಡಲ, ಹಾರ ಹಾಗೂ ಕಂಕಣಾದಿಗಳಿಂದ ಭೂಷಿತಳಾಗಿದ್ದಾಳೆ. ಎಡಕಾಲಿನ ಕೆಳಗೆ ನಂದಿ ಹಾಗೂ ಪ್ರಭಾವಳಿಯ ಎರಡು ಬದಿಗೆಲ್ಲಿ ಜಟಾಜೂಟಧಾರಿಣಿ ದೇವಿಯರು ಆಸೀನರಾಗಿದ್ದಾರೆ. ಪೀಠದ ಮೇಲೆ 'ಮಾಹೇಶ್ವರಿ'ಎಂಬ ಶಾಸನವಿದೆ. ಮೂರನೆಯ ಯೋಗಿನಿಯು ಚತುರ್ಭುಜೆ ಹಾಗೂ ಮೂರು ತಲೆಯುಳ್ಳ ಬ್ರಹ್ಮಾಣಿ ನಾಟ್ಯಮುದ್ರೆಯಲ್ಲಿದ್ದು ಎಲ್ಲಾ ಕೈ ಹಾಗೂ ಕಾಲುಗಳು ಭಗ್ನವಾಗಿವೆ. ಜಟಾಮುಕುಟ, ಕುಂಡಲ, ಅಕ್ಷಮಾಲಾ, ಹಾರ, ಕೇಯೂರ, ಕಂಕಣ ಹಾಗೂ ಮೇಖಲೆಗಳನ್ನು ಧರಿಸಿ ಹಂಸವಾಹಿನಿಯಾಗಿದ್ದಾಳೆ. ಬಲಬದಿಗೆ ಪರಿಚಾರಕ ಎಡಬದಿಗೆ ಪರಿಚಾರಿಕೆ ಹಾಗೂ ಪ್ರಭಾವಳಿಯ ಎರಡು ಬದಿಯಲ್ಲಿ ಚತುರ್ಭುಜ ದೇವಿಯರನ್ನು ತೋರಿಸಲಾಗಿದೆ.

**ಭೇರಾಘಾಟ್(ಭೈರವ ಘಾಟ್)ನ ಯೋಗಿನಿ ದೇವಾಲಯ**

ಜಬಲ್‌ಪುರನಿಂದ ಸುಮಾರು ಇಪ್ಪತ್ತೊಂದು ಕಿಮೀ ದೂರದಲ್ಲಿ ನರ್ಮದಾ ಮತ್ತು ಅದರ ಉಪನದಿ ಬಾವನಗಂಗಾ ಸಂಗಮಸ್ಥಾನದಲ್ಲಿರುವ ಭೇರಾಘಾಟ್‌ನ ದೇವಾಲಯ ಮುಖ್ಯವಾದದ್ದು. ವೃತ್ತಾಕಾರದ ಈ ಮಂದಿರದ ಒಳಾವರಣಕ್ಕೆ ಹೊಂದಿಕೊಂಡಂತೆ ಎಂಬತ್ತೊಂದು ಗರ್ಭಗೃಹಗಳಿದ್ದರೂ ಇದನ್ನು ಚತುಷ್ಷಷ್ಟಿ ಯೋಗಿನಿ ದೇವಾಲಯವೆಂದೇ ವ್ಯವಹರಿಸುವುದು ಕುತುಹೂಲಕರವಾಗಿದೆ. ಇದುವರೆಗೆ ಬೆಳಕಿಗೆ ಯೋಗಿನೀ ಮಂದಿರಗಳಲ್ಲಿ ಬಂದಿರುವ ಅತಿದೊಡ್ಡದಾದ ಈ ದೇವಾಲಯದ ವ್ಯಾಸವು ೩೫.೩೬ಮೀ ಇದ್ದು ಪಶ್ಚಿಮ ಹಾಗೂ ನೈಋತ್ಯದಲ್ಲಿ ಪ್ರವೇಶದ್ವಾರಗಳಿವೆ (ನಕ್ಷೆ ೨& ೩ ಚಿತ್ರ). ಗರ್ಭಗೃಹಗಳು ಕಂಬಗಳನ್ನಾಧರಿಸಿದ ಸಮತಲ ಛಾವಣಿಯುಳ್ಳವು. ಅರವತ್ತನಾಲ್ಕು ಯೋಗಿನಿಯರ ಶಿಲ್ಪಗಳೊಂದಿಗೆ ವೀರಭದ್ರ, ಗಣೇಶ ಸಹಿತರಾದ ಸಪ್ತಮಾತೃಕೆಯರು ಮತ್ತಿತರ ಪರಿವಾರ ದೇವತೆಗಳು ಸೇರಿ ಎಂಬತ್ತೊಂದು ದೇವಿಯರಾಗಿದ್ದಾರೆ. ಬಹುತೇಕ ಗರ್ಭಗೃಹಗಳಲ್ಲಿನ ಶಿಲ್ಪಗಳು ಕಾಣೆಯಾಗಿದ್ದು ಉಳಿದಿರುವ ಕೆಲವೂ ಬಹಳಷ್ಟು ಭಗ್ನವಾಗಿವೆ.

ಆವರಣದ ಮಧ್ಯದಲ್ಲಿ ಗೌರೀಶಂಕರ ದೇವಾಲಯವಿದ್ದು ಫಾಂಸನಾಶೈಲಿಯ ಛಾವಣಿಹೊಂದಿದ ಸಪ್ತರಥ ಗರ್ಭಗೃಹ ಹಾಗೂ ರಂಗಮಂಟಪಗಳಿವೆ. ಗರ್ಭಗೃಹದಲ್ಲಿ ಗೌರೀಶಂಕರ ಮೂರ್ತಿ ಇದೆ ಹಾಗೂ ಹನ್ನೆರಡನೆಯ ಶತಮಾನದ ಲಿಪಿಯಲ್ಲಿರುವ ಶಿಲ್ಪದ ಪೀಠದ ಮೇಲಿನ ಶಾಸನವು ಪ್ರತಿಷ್ಠಿತದೇವತೆಯನ್ನು ವರೇಶ್ವರ (ವೀರೇಶ್ವರ-ಭೈರವ?) ಎಂದು ಹೆಸರಿಸಿದೆ. ಈ ಗೌರೀಶಂಕರ ದೇವಾಲಯವು ಮೂಲ ಮಂದಿರಕ್ಕೆ ನಂತರದ ಸೇರ್ಪಡೆಯಾಗಿರಬೇಕು. ಕ್ರಿ.ಶ. ೧೧೫೫ರ ಶಾಸನದಲ್ಲಿ ಉಲ್ಲೇಖಿಸಿರುವ ಈ ದೇವಾಲಯ ಬಹುಶಃ ಶಿವ ಮಂದಿರವಾಗಿದ್ದು, ರಾಜಾ ನರಸಿಂಹನ ತಾಯಿ ಅಲನಾದೇವಿ ನಿರ್ಮಿಸಿರಬಹುದು.

ಕನ್ನಿಂಗಹ್ಯಾಮ ಮತ್ತು ಬ್ಯಾನರ್ಜಿ ತಮ್ಮ ಅಧ್ಯಯನಗಳಲ್ಲಿ ಈ ದೇವಾಲಯ ಸಮುಚ್ಚಯವು ಎರಡು ಹಂತಗಳಲ್ಲಿ ನಿರ್ಮಾಣವಾಯಿತೆಂದೂ, ಸುಮಾರು ಹತ್ತನೆಯ ಶತಮಾನದಲ್ಲಿ ಪ್ರಾಕಾರ, ಶಿಲ್ಪಗಳು ಮಾತ್ರವಿದ್ದು ಅನಂತರ ಹನ್ನೆರಡನೆಯ ಶತಮಾನದಲ್ಲಿ ಶಿಲ್ಪಗಳ ಹಿಂದಿನ ಗೋಡೆ, ಕಂಬ-ಅರೆಕಂಬಗಳ ಮಂಟಪ, ಅವನ್ನು ಆಧರಿಸಿದ ಸಮತಲ ಛಾವಣಿ ಮತ್ತು ಗೌರೀಶಂಕರ ಮಂದಿರಗಳನ್ನು ಸೇರಿಸಿ ವಿಸ್ತರಿಸಲಾಯಿತೆಂದು ಅಭಿಪ್ರಾಯ ಪಟ್ಟಿದ್ದಾರೆ (ಕನ್ನಿಂಗಹ್ಯಾಮ, ೨೦೦೦;

ಬ್ಯಾನರ್ಜಿ, ೧೯೩೧). ಬ್ಯಾನರ್ಜಿ ಮತ್ತು ಮಿರಾಶಿ ಇಲ್ಲಿನ ಹಾಗೂ ಭೇರಾಘಾಟ್‌ನ ಕ್ರಿ.ಶ. ೧೧೫೫ರ ರಾಜಾ ನರಸಿಂಹನ ಶಾಸನಗಳನ್ನು ಅಧ್ಯಯನ ಮಾಡಿ ಕ್ರಿ.ಶ. ೯೧೫–೪೫ರ ಅವಧಿಯಲ್ಲಿ ಮಹಾರಾಜ ಯುವರಾಜದೇವನು ಕಟ್ಟಿಸಿದ ಮೊದಲ ಹಂತದ ದೇವಾಲಯ ಮೂಲತಃ ನಾಥಸಂಪ್ರದಾಯಕ್ಕೆ ಸೇರಿದ ಗೋಲಕೀಮಠವಾಗಿತ್ತೆಂದು ಭಾವಿಸಿದ್ದಾರೆ (ಕೃಷ್ಣದೇವ, ೧೯೯೫).

ಈ ಮಂದಿರವನ್ನು ಅಲಂಕರಿಸಿದ ಯೋಗಿನಿ ಮೂರ್ತಿಗಳು ಎರಡು ಮಾದರಿಯವು. ಮೊದಲನೆಯ ಗುಂಪಿನ ಸಪ್ತಮಾತೃಕೆಯರು, ವೀರಭದ್ರ, ಗಣೇಶ ಮುಂತಾದ ಶಿಲ್ಪಗಳು ಕೆಂಪು ಮರಳುಗಲ್ಲಿನಲ್ಲಿ ನಿಂತಿರುವಂತೆ ರೂಪಿತವಾಗಿದ್ದರೆ ಇನ್ನುಳಿದ ಯೋಗಿನಿಯರ ಮೂರ್ತಿಗಳು ಹಸಿರುಮಿಶ್ರಿತ ಹಳದಿ ಬಣ್ಣದ ಮರಳುಗಲ್ಲಿನಲ್ಲಿ ಆಸೀನ ಭಂಗಿಯಲ್ಲಿವೆ. ಮೊದಲನೆಯ ಗುಂಪಿನ ಮೂರ್ತಿಗಳು ಯೋಗಿನಿ ಶಿಲ್ಪಗಳಿಗಿಂತ ಪ್ರಾಚೀನವಾದುದೆಂದು ತೋರುತ್ತವೆ. ಇವುಗಳು ಮೂಲ ದೇವಾಲಯದ ಮೂರ್ತಿಗಳಾಗಿದ್ದು ತದನಂತರದ ಯೋಗಿನಿ ಮಂದಿರದಲ್ಲಿ ಇವು, ಅರವತ್ನಾಲ್ಕು ಯೋಗಿನಿಯರು ಹಾಗೂ ಇನ್ನೂ ಕೆಲವೊಂದು ದೇವತೆಯರೊಂದಿಗೆ ಒಟ್ಟಾರೆ ಎಂಬತ್ತೊಂದು ದೇವಿಯರನ್ನು ಪ್ರತಿಷ್ಠಾಪಿಸಲಾಗಿತ್ತು.

ಈ ಶಿಲ್ಪಗಳಲ್ಲಿ, ಸರ್ವತೋಮುಖಿ ಯೋಗಿನಿ ಸುಸ್ಥಿತಿಯಲ್ಲಿದ್ದು ಅದರ ಮೂರು ಮುಖಗಳು ಮಾತ್ರ ಕಾಣುತ್ತವೆ (ಚಿತ್ರ ೪&೫). ಅಟ್ಟಹಾಸ ಭಾವವನ್ನು ಬಿಂಬಿಸುವ ಮಧ್ಯದ ಮುಖವು ತೆರೆದ ನೇತ್ರ, ಏರುಹುಬ್ಬು, ಗಹಗಹಿಸುವ ಬಾಯಿ, ದಂತಪಂಕ್ತಿಗಳಿಂದ ಶೋಭಿಸುತ್ತದೆ. ಎಡಗಡೆಯ ಮುಖವು ಸೌಮ್ಯವಾಗಿದೆ ಹಾಗೂ ಬಲಗಡೆಯ ರೌದ್ರಭಾವದ ಮುಖದ ಬಿರುನೋಟದ ಕಣ್ಣಾಲಿ, ಬಿಸುಸುಯ್ಯುವ ಮೂಗಿನ ಹೊಳ್ಳೆಗಳು, ತೆರೆದಕಣ್ಣು ಏರುಹುಬ್ಬು, ಕೋರೆಹಲ್ಲುಗಳು ಕ್ರೂರತೆಯಪ್ರತೀಕವಾಗಿದೆ. ರತ್ನಖಚಿತ ಹಾಗೂ ಮುಂಡದ ಪದಕವುಳ್ಳ ವಕ್ಷಹಾರ ಮತ್ತು ಸ್ತನಹಾರಗಳನ್ನು ಧರಿಸಿದ್ದಾಳೆ. ಪೀಠದ ಮೇಲೆ 'ಮಂತ್ರಹ್ರಿಮ' (ಮಾಂ ತ್ರಾಹಿ ಮಾ?) ಎಂಬ ಶಾಸನವಿದೆ.

ಪಶುವಿನ ಶಿರವಿರುವ ಯೋಗಿನಿಯರಲ್ಲಿ ಐಂಗಿಣಿ ಚಿತ್ತಾಕರ್ಷಕವಾಗಿದೆ (ಚಿತ್ರ ೬). ಗಜಶಿರ ಹಾಗೂ ವಿಶಾಲವಾದ ಕಿವಿಯ ಯೋಗಿನಿಯು ಲಲಿತಾಸನದಲ್ಲಿದ್ದು, ಎಲ್ಲಾ ಕೈಗಳು ಭಗ್ನವಾಗಿವೆ. ದುಂಡನೆಯ ಸ್ತನಗಳು ಹಾಗೂ ತೆಳುವಾದ ನಡು ಉದ್ದೀಪಕ ಸೌಂದರ್ಯ ಬಿಂಬಿಸುತ್ತವೆ. ಪೀತಾಂಬರಧಾರಿಯಾಗಿ ಮುಕುಟ, ವಿವಿಧ ವಕ್ಷಹಾರ, ಸ್ತನಹಾರ, ನೂಪುರಾದಿಗಳಿಂದ ಸರ್ವಾಲಂಕಾರಭೂಷಿತಳಾದ ದೇವಿಯು ಮೂಳೆ ಹಾಗೂ ಕಪಾಲದ ವೈಜಯಂತಿಯನ್ನು ಧರಿಸಿದ್ದಾಳೆ. ದೇವಿಯ ಎಡಗಾಲಿನ ಕೆಳಗೆ, ಅದನ್ನು ಎತ್ತಿಹಿಡಿದಿರುವಂತಿರುವ ಆನೆತಲೆಯ ಗಣವಿದ್ದಾನೆ. ದೇವಿಯ ಎರಡುಬದಿಯಲ್ಲಿ ಪುಷ್ಪಮಾಲೆ ಹಾಗೂ ಚಾಮರಗಳನ್ನು ಹಿಡಿದ ಪರಿಚಾರಿಕೆಯರು ಹಾಗೂ ಮಂಡಿಯೂರಿ ಕುಳಿತ ಉಪಾಸಕರನ್ನು ರೂಪಿಸಲಾಗಿದೆ. ಪೀಠದ ಮೇಲೆ 'ಶ್ರೀ ಐಂಗಿಣಿ'ಎಂಬ ಶಾಸನವಿದೆ.

ಮೋಹಕವಾದ ಇನ್ನೋರ್ವ ಯೋಗಿನಿಗೆ ವರಾಹ ಮುಖವಿದ್ದು (ಬ್ಯಾನರ್ಜಿ, ೧೯೩೧) ಇದನ್ನು ಅಶ್ವಮುಖಿ ಮೂರ್ತಿಯೆಂದೂ ಗುರುತಿಸಲಾಗಿದೆ (ದಹೇಜಾ, ೧೯೮೬) (ಚಿತ್ರ ೭). ಲಲಿತಾಸನದಲ್ಲಿರುವ ಹಾಗೂ ಜಟಾಮುಕುಟಧಾರಿಣಿ ದೇವಿಯ ಬಲ ಮೊಣಕಾಲಿನ ಮೇಲಿರುವ ವರದಹಸ್ತವನ್ನುಳಿದು ಎಲ್ಲಾ ಕೈಗಳು ಭಗ್ನವಾಗಿವೆ. ತೆಳುವಾದ ದೇಹ, ದುಂಡನೆಯ ಸ್ತನಗಳು, ಸಣ್ಣದಾದ ನಡು ಉಬ್ಬಿದ ಕಿಬ್ಬೊಟ್ಟೆ, ವಿಶಾಲವಾದ ಕಟಿ ಇವು ಶಿಲ್ಪವನ್ನು ಸುಂದರವಾಗಿಸಿವೆ. ರತ್ನಖಚಿತ ವಕ್ಷಹಾರ, ಸ್ತನಹಾರ, ನೂಪುರಾದಿಗಳಿಂದ ಶೋಭಿತಳಾದ ದೇವಿ ಪೀತಾಂಬರಧರಿಸಿದ್ದಾಳೆ. ಎರಡೂ ಬದಿಯಲ್ಲಿ ಚಾಮರಧಾರಿಣಿಯರು ಹಾಗೂ ಬಲಬದಿಯಲ್ಲಿ ಮಂಡಿಯೂರಿ ಕುಳಿತ ಉಪಾಸಕಿ ಇದ್ದರೆ ಎಡಬದಿಯ ಶಿಲ್ಪವು ಭಗ್ನವಾಗಿದೆ. ದೇವಿಯು ಆಸೀನಳಾದ ಕಮಲದ ಕೆಳಗೆ ಅಲಂಕೃತ ನಂದಿಯನ್ನು ತೋರಿಸಲಾಗಿದೆ.

**ಹೀರಾಪುರದ ಯೋಗಿನಿ ದೇವಾಲಯ**

ಇನ್ನೊಂದು ಗಮನಾರ್ಹ ಯೋಗಿನಿ ದೇವಾಲಯ ಭುವನೇಶ್ವರದ ಬಳಿಯಿರುವ ಹೀರಾಪುರದಲ್ಲಿದೆ. ಇದುವರೆಗೆ ಬೆಳಕಿಗೆ ಬಂದಿರುವ ದೇವಾಲಯಗಳಲ್ಲಿ ತೀರ ಚಿಕ್ಕದಾದರೂ ತನ್ನದೇ ಆದ ವಿಶಿಷ್ಟಾಂಶಗಳಿಂದ ಕೂಡಿರುವ ವೃತ್ತಾಕಾರದ ಈ ಮಂದಿರವು ಪೂರ್ವಾಭಿಮುಖವಾಗಿದ್ದು ಸುಮಾರು ೭.೬೨ಮೀ ಒಳವ್ಯಾಸ ಹೊಂದಿದ್ದು ೨.೪೩x೨.೭೪ಮೀ ಎತ್ತರವಾಗಿದೆ (ನಕ್ಷೆ ೩& ಚಿತ್ರ ೮). ಒರಟು ಕಣಗಳ ಮರಳುಗಲ್ಲಿನಲ್ಲಿ ಈ ದೇವಾಲಯವನ್ನು ಕಟ್ಟಲಾಗಿದ್ದು, ಶಿಲ್ಪಗಳನ್ನು ಮಾತ್ರ ನಯವಾದ ಬೂದುಬಣ್ಣದ ಬಳಪದಕಲ್ಲಿನಲ್ಲಿ (ಕ್ಲೋರೈಟ್ ಶಿಲೆ) ರೂಪಿಸಲಾಗಿದೆ. ಪೂರ್ವದಿಕ್ಕಿನಲ್ಲಿ ೨.೪೩x೦.೭೯ಮೀ

ಉದ್ದ–ಅಗಲದ ಪ್ರವೇಶದ್ವಾರವಿದೆ. ಈ ದೇವಾಲಯವು ಹೊರಗೋಡೆಯಲ್ಲಿ ದೇವತೆಗಳ ಭಿತ್ತಿಶಿಲ್ಪ ಹಾಗೂ ದ್ವಾರಪಾಲಕರಿರುವ ಏಕೈಕ ಯೋಗಿನಿ ಮಂದಿರವಾಗಿದೆ.

ಆವರಣದ ಮಧ್ಯದಲ್ಲಿ ೨.೯೩x೨.೪೩ಮೀ ಆಯತಾಕಾರದ ದೇವಿ–ಮಂಟಪವಿದೆ. ನಾಲ್ಕೂ ದಿಕ್ಕಿನಲ್ಲಿ ಪ್ರವೇಶದ್ವಾರಗಳಿರುವ ಈ ಮಂಟಪದ ಗೋಡೆಯ ಹೊರಬದಿಯ ನಾಲ್ಕೂ ಮೂಲೆಗಳಲ್ಲಿ ದೇವಿಯರನ್ನು ಪ್ರತಿಷ್ಠಾಪಿಸಲು ಕೋಷ್ಠಗಳಿವೆ. ಈ ಮಂಟಪದಲ್ಲಿನ ನಾಲ್ಕು ಹಾಗೂ ವೃತ್ತಾಕಾರದ ಗುಡಿಗಳಲ್ಲಿನ ಅರವತ್ತು ಮೂರ್ತಿಗಳು ಸೇರಿ ಈ ಮಂದಿರದಲ್ಲಿ ಒಟ್ಟಾರೆ ಅರವತ್ತನಾಲ್ಕು ಯೋಗಿನಿಯರಿದ್ದರು. ಮಂಟಪದ ಉಳಿದ ನಾಲ್ಕು ಕೋಷ್ಠಗಳಲ್ಲಿ ಭೈರವನ ಮೂರ್ತಿ ಹಾಗೂ ಮಧ್ಯದ ಗರ್ಭಗುಡಿಯಲ್ಲಿ ಶಿವನ ಮೂರ್ತಿಗಳಿದ್ದವು. ಆದರೆ ಶಿವನ ಶಿಲ್ಪವು ಈಗ ಅಲ್ಲಿಲ್ಲ.

ವೃತ್ತಾಕಾರದ ಗೋಡೆಯ ಒಳಪರಿಧಿಯಲ್ಲಿನ ಅರವತ್ತು ಕಿರುಮಂದಿರಗಳಲ್ಲಿ ಐವತ್ತೊಂಬತ್ತರಲ್ಲಿ ಇಂದಿಗೂ ದ್ವಿಭುಜ ಇಲ್ಲವೇ ಚತುರ್ಭುಜೆಯರಾಗಿ ವಿವಿಧ ಆಕರ್ಷಕ ಭಂಗಿಗಳಲ್ಲಿ ಕೆತ್ತಲಾದ ಯೋಗಿನಿಯರ ಶಿಲ್ಪಗಳಿವೆ. ಕೆಲವು ಮಾತ್ರ ಪ್ರಾಣಿಗಳ ಶಿರಗಳನ್ನು ಹೊಂದಿವೆ. ವೈವಿಧ್ಯಮಯ ಕೇಶಾಲಂಕಾರ, ಸುಂದರವಾಗಿ ರೂಪಿಸಿದ ಅಂಗಾಂಗಗಳಲ್ಲಿ ಸೂಕ್ಷ್ಮ ಕೆತ್ತನೆಯ ಆಭರಣಗಳು, ಮಂದಹಾಸ ಬೀರುವ ಮುಖಭಾವಗಳಿರುವ ಈ ಶಿಲ್ಪಗಳು ಮನೋಹರವಾಗಿವೆ. ಯಾವುದೇ ಶಿಲ್ಪಗಳ ಮೇಲೆ ಶಾಸನಗಳಿಲ್ಲ. ಪ್ರವೇಶದ್ವಾರದ ಎದುರಿಗಿರುವ ಗುಡಿಯಲ್ಲಿ ಈ ದೇವಾಲಯದ ಮುಖ್ಯ ಅಧಿದೇವತೆ ದಶಭುಜೆ ಮಹಾಮಾಯಾ ದೇವಿಯನ್ನು ಪ್ರತಿಷ್ಠಾಪಿಸಲಾಗಿತ್ತು. ಆದ್ದರಿಂದಲೇ, ಇಂದಿಗೂ ಈ ದೇವಾಲಯವು ಮಹಾಮಯಾ ಮಂದಿರವೆಂದೇ ಕರೆಯಲ್ಪಡುತ್ತದೆ. ಈ ದೇವಿಯ ಕಾಲುಗಳು ಹಾಗೂ ಎಲ್ಲ ಹತ್ತು ಕೈಗಳು ಭಗ್ನವಾಗಿವೆ. ಕಮಲದ ಮೇಲೆ ಮೋಹಕವಾಗಿ ನಿಂತಿರುವ ದೇವಿಯು ಮುಕುಟ ಹಾಗೂ ಕಿರೀಟಧಾರಿಣಿಯಾಗಿ ಹಾರ, ಕೇಯೂರ, ನೂಪುರ ಹಾಗೂ ಮೇಖಲಾಭರಣಗಳಿಂದ ಶೋಭಿತಳಾಗಿದ್ದಾಳೆ.

ಪರಿಧಿಯ ಉಪಮಂದಿರ ಒಂದರಲ್ಲಿ ಆನೆಯ ಮೇಲಿರುವ ಪದ್ಮಪೀಠದಮೇಲೆ ತ್ರಿಭಂಗದಲ್ಲಿ ನಿಂತಿರುವ ದ್ವಿಭುಜೆ ಯೋಗಿನಿ ಎಡಗೈಯಲ್ಲಿರುವ ಕಪಾಲದಿಂದ ರಕ್ತ ಪಾನಮಾಡುತ್ತಿದ್ದಾಳೆ (ಚಿತ್ರ ೯). ಬಲಗೈ ಹಾಗೂ ಬಲಗಾಲು (ಮಂಡಿಯ ಕೆಳಗೆ) ಭಗ್ನವಾಗಿದೆ. ಶಂಖುವಿನಾಕೃತಿಯ ಕೇಶವಿನ್ಯಾಸ, ಪತ್ರ–ವೃತ್ತ ಕುಂಡಲ, ವಕ್ಷಹಾರ, ಕೇಯೂರ, ಕಂಕಣ, ನೂಪುರ, ಕಟಿಬಂಧಾದಿಗಳಿಂದ ಶೋಭಿತಳಾಗಿ ಪೀತಾಂಬರಧಾರಿಣಿಯಾಗಿರುವ ದೇವಿಯು ರುಂಡಮಾಲೆಯನ್ನು ಧರಿಸಿದ್ದಾಳೆ.

ಪಶುವಿನ ಶಿರವುಳ್ಳ ಯೋಗಿನಿಯರಲ್ಲಿ ಗಾರ್ದಭಶಿರವುಳ್ಳ ಮೂರ್ತಿಯು (ದಹೇಜಾ, ೧೯೮೬) ಅತ್ಯಂತ ಆಕರ್ಷಕವಾಗಿದ್ದು ಅದನ್ನು ವರಾಹಶಿರದ ಯೋಗಿನಿಯೆಂದೂ ಗುರುತಿಸಲಾಗಿದೆ (ಮಾಹಾಪಾತ್ರಾ, ೧೯೫೩) (ಚಿತ್ರ ೧೦). ಪದ್ಮಲತೆಗಳಿಂದ ಅಲಂಕೃತವಾದ ಪೀಠದಮೇಲೆ ತ್ರಿಭಂಗದಲ್ಲಿ ನಿಂತಿರುವ ದೇವಿಯು ಬಲಗೈಯಲ್ಲಿ ಡಮರು ಹಿಡಿದಿದ್ದಾಳೆ. ಬಲಗೈಯ ಮೊಣಕೈನ ಕೆಳಭಾಗ ಭಗ್ನವಾಗಿದ್ದು ಮುಖ ಸ್ವಲ್ಪ ಹಾನಿಯಾಗಿದೆ. ದುಂಡಾದ ತುಂಬಿದ ಕುಚಗಳು, ತೆಳುವಾದ ನಡು, ವಿಶಾಲವಾದ ಕಟಿ, ಅಂಗಾಂಗಗಳು ಅತ್ಯಂತ ಆಕರ್ಷಕವಾಗಿದ್ದು ಯೌವನವತಿಯ ಸೌಂದರ್ಯವನ್ನು ಬಿಂಬಿಸುತ್ತವೆ. ವಿವಿಧ ವಕ್ಷಹಾರ, ಸ್ತನಹಾರ, ಕೇಯೂರ, ನೂಪುರಗಳಿಂದ ಅಲಂಕೃತವಾಗಿ ದೇವಿಯು ಪೀತಾಂಬರಧಾರಿಯಾಗಿದ್ದಾಳೆ. ಮೂರುಸ್ತರಗಳಲ್ಲಿ ಪ್ರಭಾವಲಯದಂತೆ ತೋರುವ ಜಟೆಯಂತಿರುವ ಕೇಶಾಲಂಕಾರ ಈ ಶಿಲ್ಪದ ವೈಶಿಷ್ಟ್ಯ.

ಅಶ್ವಶಿರದ ಇನ್ನೊರ್ವ ಯೋಗಿನಿಯೂ (ದಹೇಜಾ, ೧೯೮೬) ಕೂಡಾ ಅತ್ಯಂತ ಮನೋಹರವಾಗಿದ್ದು ಅದನ್ನು ಮಹಿಷಶಿರದ ಮೂರ್ತಿಯೆಂದೂ ಗುರುತಿಸಲಾಗಿದೆ (ಮಾಹಾಪಾತ್ರಾ, ೧೯೫೩) (ಚಿತ್ರ ೧೧). ದೃಢಕಾಯದ ಸ್ತ್ರೀರೂಪವನ್ನು ಬಿಂಬಿಸುವ ದೇವಿಯು ತ್ರಿಭಂಗದಲ್ಲಿ ನಿಂತಿದ್ದಾಳೆ. ಎರಡು ಕೈಗಳು ಭಗ್ನವಾಗಿದ್ದು, ಮುಖವು ಹಾನಿಯಾಗಿದೆ. ತಲೆಯಮೇಲಿನ ಉದ್ದವಾದ ತಲೆ ಕೂದಲು ಭುಜದವರೆಗೆ ಹರಡಿದೆ. ದುಂಡಾದ ಕುಚಗಳು, ತೆಳುವಾದ ನಡು, ವಿಶಾಲವಾದ ನಿತಂಬ ಉದ್ದೀಪಕ ಸ್ತ್ರೀ ಸೌಂದರ್ಯವನ್ನು ತೋರಿಸುತ್ತವೆ. ವಕ್ಷಹಾರ, ಸ್ತನಹಾರ, ಕೇಯೂರ, ಕಟಿಬಂಧಗಳಿಂದ ಸುಶೋಭಿತಳಾಗಿ ದೇವಿಯು ಪೀತಾಂಬರಧಾರಿಯಾಗಿದ್ದಾಳೆ.

ಹಳದಿಮಿಶ್ರಿತ ಕೆಂಪುಮರಳುಗಲ್ಲಿನಲ್ಲಿ ರೂಪಿಸಿದ ಒಂಬತ್ತು ಕಾತ್ಯಾಯಿನಿಯರ (ಬಹುಶಃ ನವದುರ್ಗಾ) ಶಿಲ್ಪಗಳನ್ನು ಹೊರಬದಿಯಲ್ಲಿಯ ಗೋಡೆಯಲ್ಲಿರುವ ಒಂಬತ್ತು ಕೋಷ್ಠಗಳಲ್ಲಿ ಪ್ರತಿಷ್ಠಾಪಿಸಿದೆ. ಪ್ರವೇಶದ್ವಾರದ ಎರಡುಬದಿಯಲ್ಲಿ

ಪರಿಚಾರಕರೊಂದಿಗೆ ನಿಂತಿರುವ ಇಬ್ಬರು ದೇವತೆಯರು ಹಾಗೂ ಪ್ರವೇಶದ್ವಾರದಲ್ಲಿ ದ್ವಾರಪಾಲಕರಿರುವುದು ಈ ದೇವಾಲಯದ ವೈಶಿಷ್ಟ್ಯ (ಮಾಹಾಪಾತ್ರಾ, ೧೯೫೩). ಈ ದೇವಾಲಯದ ಯೋಗಿನಿಯರು ಹಾಗೂ ಇನ್ನುಳಿದ ಎಲ್ಲಾ ಮೂರ್ತಿಗಳು ಶೈಲೀಯವಾಗಿ ಭುವನೇಶ್ವರದ ಮುಕ್ತೇಶ್ವರ ದೇವಾಲಯದ ಶಿಲ್ಪಗಳನ್ನೇ ಹೋಲುತ್ತವೆ. ಇವೇ ಕಾರಣಗಳಿಂದ ಈ ದೇವಾಲಯವನ್ನೂ ಒಂಬತ್ತನೆಯ ಶತಮಾನದ ಅಂತ್ಯ ಅಥವಾ ಹತ್ತನೆಯ ಶತಮಾನದ ಆದಿಭಾಗಕ್ಕೆ ಸೇರಿಸಬಹುದು (ದಹೇಜಾ, ೧೯೮೬).

ಮಧ್ಯದೇಶದ ಇನ್ನುಳಿದ ಯೋಗಿನಿ ದೇವಾಲಯಗಳು ಹೆಚ್ಚುಕಡಿಮೆ ಒಂದೇ ರೀತಿಯ ವಾಸ್ತುಶೈಲಿಯಲ್ಲಿವೆ. ಅವೆಲ್ಲವುಗಳ ತಲವಿನ್ಯಾಸವು ವೃತ್ತಾಕಾರದಲ್ಲಿದ್ದು ಛಾವಣಿಯಿಲ್ಲದೆ ಆಕಾಶಕ್ಕೆ ತೆರೆದುಕೊಂಡಿವೆ. ವೃತ್ತದ ಒಳಪರಿಧಿಗೆ ಹೊಂದಿಕೊಂಡಿರುವ ಗುಡಿಗಳಲ್ಲಿ ಅರವತ್ತನಾಲ್ಕರಿಂದ ಎಂಬತ್ತೊಂದು ಯೋಗಿನಿಯರು, ಅತಿ ವಿರಳವಾಗಿ ಬೇರೆ ದೇವತೆಯರನ್ನು ಪ್ರತಿಷ್ಠಾಪಿಸಲಾಗುತ್ತಿತ್ತು. ಈ ಮಂದಿರಗಳು ೧೬.೭೨ ರಿಂದ ೩೯.೫೦ಮೀ ವಿವಿಧ ಅಳತೆಯುಳ್ಳವುಗಳಾಗಿವೆ. ಇದಲ್ಲದೆ, ಗ್ವಾಲಿಯರ್ ಹತ್ತಿರದ ನರೇಶ್ವರ್, ರಿವಾ ಜಿಲ್ಲೆಯ ಗೂರ್ಗಿ ಹಾಗೂ ಶಾಹದೋಲ್ ಜಿಲ್ಲೆಯ ಅಂತರಾಗಳಲ್ಲಿ ಶಾಸನವಿರುವ ಯೋಗಿನಿ ಮೂರ್ತಿಗಳು ದೊರಕಿವೆ. ಆದ್ದರಿಂದ, ಈ ಸ್ಥಳಗಳಲ್ಲಿ ಯೋಗಿನಿ ದೇವಾಲಯಗಳಿರುವ ಸಾಧ್ಯತೆಗಳಿವೆಯೆಂದು ಹಾಗೂ ಇವೆಲ್ಲವು ನಲವತ್ತೆರಡು ಯೋಗಿನಿಯರ ಮಂದಿರಗಳಿರಬಹುದೆಂದು ಹೇಳಲಾಗಿದೆ. ಶಾಸನಗಳುಳ್ಳ ಈ ಮೂರ್ತಿಗಳು ಪ್ರಸ್ತುತ ಮಧ್ಯಪ್ರದೇಶದ ಗ್ವಾಲಿಯರ್, ಭೋಪಾಲ ಹಾಗೂ ಧುಬೇಲಾದ ವಸ್ತುಸಂಗ್ರಹಾಲಯದಲ್ಲಿ ಪ್ರದರ್ಶನಕ್ಕಿವೆ. ಇದೇ ರೀತಿ, ಒರಿಸ್ಸಾದ ರಾಣಿಪುರ್–ಜರಿಯಾಲದಲ್ಲಿ ಮತ್ತೊಂದು ಯೋಗಿನಿ ದೇವಾಲಯವಿದೆ. ಈ ಮಂದಿರವು ಸಹ ವೃತ್ತಾಕಾರದಲ್ಲಿದ್ದು ಛಾವಣಿಯಿಲ್ಲದೆ ಆಕಾಶಕ್ಕೆ ತೆರೆದುಕೊಂಡಿದೆ. ಒಳಪರಿಧಿಯ ಅರವತ್ತನಾಲ್ಕು ಗುಡಿಗಳಲ್ಲಿ ಯೋಗಿನಿ ಮೂರ್ತಿಗಳಿದ್ದವು. ಆವರಣದ ಮಧ್ಯದಲ್ಲಿ ನಾಲ್ಕು ಸ್ತಂಭಗಳ ಮಂಟಪವಿದ್ದು ಅದರಲ್ಲಿ ತಾಂಡವ ನೃತ್ಯಭಂಗಿಯಲ್ಲಿರುವ ಅಷ್ಟಭುಜ ಶಿವನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿತ್ತು. ಒರಿಸ್ಸಾದಲ್ಲಿನ ದೇವಾಲಯಗಳು ಕೇವಲ ಅರವತ್ತನಾಲ್ಕು ಯೋಗಿನಿಯರಿಗೆಂದೇ ನಿರ್ಮಿಸಲಾಗಿದೆ. ಇಲ್ಲಿನ ಎಲ್ಲಾ ಮೂರ್ತಿಗಳನ್ನು ನಿಂತ ಭಂಗಿಯಲ್ಲಿ ರೂಪಿಸಲಾಗಿದ್ದು ಶಾಸನರಹಿತವಾಗಿವೆ. ಆದರೆ ಮಧ್ಯಪ್ರದೇಶದ ಮಂದಿರಗಳಲ್ಲಿ ಯೋಗಿನಿಯರಲ್ಲದೇ ಮಾತೃಕೆಯರು ಹಾಗೂ ಇನ್ನಿತರ ದೇವಿಯರನ್ನೂ ಸಹ ಕಾಣಬಹುದು. ಇದಲ್ಲದೇ, ಬಹುತೇಕ ಶಿಲ್ಪಗಳು ಸುಖಾಸನ ಮುದ್ರೆಯಲ್ಲಿದ್ದು ಕಿರುನಾಮಾಂಕಿತ ಶಾಸನವಿರುವುದು ಸರ್ವೇ ಸಾಮಾನ್ಯ.

**ದಕ್ಷಿಣ ಭಾರತ ಹಾಗೂ ಕರ್ನಾಟಕದಲ್ಲಿ ಯೋಗಿನೀ ದೇವಾಲಯಗಳು:**

ಕಳೆದ ಶತಮಾನದ ಆರಂಭಕಾಲದಲ್ಲಿ ದಕ್ಷಿಣ ಭಾರತದ ವಿವಿಧ ಕಲಾಪ್ರಕಾರಗಳನ್ನು ವಿದೇಶಗಳಿಗೆ ಪರಿಚಯಿಸಿಕೊಟ್ಟ ವಿದ್ವಾಂಸರಲ್ಲಿ ಫ್ರೆಂಚ್ ಪುರಾತತ್ತ್ವಜ್ಞ ಹಾಗೂ ಕಲಾವಿಮರ್ಶಕ ಜೋವು ಡುಬ್ರೈಲ್ ಪ್ರಮುಖ. ಈತ ತಮಿಳುನಾಡಿನ ಉತ್ತರ ಭಾಗದಿಂದ ಹಲವಾರು ದೇವಿ ಶಿಲ್ಪಗಳನ್ನು ಸಂಗ್ರಹಿಸಿದ. ಈಗ ಅವೆಲ್ಲಾ ಅಮೆರಿಕಾ ಹಾಗೂ ಯೂರೋಪಿನ ಪ್ರಸಿದ್ಧ ವಸ್ತುಸಂಗ್ರಹಾಲಯಗಳಲ್ಲಿ ಪ್ರತಿಷ್ಠೆಯ ಪ್ರದರ್ಶಿತ ವಸ್ತುಗಳಾಗಿವೆ. ಯೋಗಿನಿಯರ ಆರಾಧನಾ ಪರಂಪರೆ ಹಾಗೂ ಅದರ ಪ್ರಸರಣದ ಹಿನ್ನೆಲೆಯಲ್ಲಿ ಈ ಶಿಲ್ಪಗಳು ಗಮನಾರ್ಹವಾದವು. ಆದರೆ ಡುಬ್ರೈಲ್ ಸಂಗ್ರಹಿಸಿದ ಶಿಲ್ಪಗಳ ಒಟ್ಟು ಸಂಖ್ಯೆ, ಸಂಗ್ರಹಿಸಲಾದ ಸಂದರ್ಭ, ಅವು ಮೊದಲು ಇದ್ದ ಸ್ಥಳ/ಪ್ರದೇಶ, ಅವನ್ನು ಪ್ರತಿಷ್ಠಾಪಿಸಿದ್ದಿರಬಹುದಾದ ದೇವಾಲಯ ಮುಂತಾದ ಮುಖ್ಯ ವಿವರಗಳು ದೊರಕಿಲ್ಲ. ಆ ಕಾರಣ ಐತಿಹಾಸಿಕ, ಪ್ರಾದೇಶಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಈ ಶಿಲ್ಪಗಳ ಮಹತ್ವವನ್ನು ನಿರ್ದಿಷ್ಟವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗಿಲ್ಲ. ಹಾಗಿದ್ದರೂ ಯೋಗಿನಿ ಆರಾಧನಾ ಪರಂಪರೆಯ ದೃಷ್ಟಿಯಿಂದ ಈ ಗುಂಪಿನ ಹನ್ನೊಂದು ಶಿಲ್ಪಗಳು ಮುಖ್ಯವಾಗುತ್ತವೆ.

ಈ ಶಿಲ್ಪಗಳು ಸಾಧಾರಣವಾಗಿ ದಕ್ಷಿಣ ಭಾರತದಾದ್ಯಂತ ವಿಶೇಷವಾಗಿ ಕಂಡುಬರುವ ಸಪ್ತಮಾತೃಕೆಯರ ಬಿಡಿ ಅಥವಾ ಸಮೂಹ ಶಿಲ್ಪಗಳನ್ನು ಸ್ವಲ್ಪವೂ ಹೋಲುವುದಿಲ್ಲ. ಹನ್ನೊಂದರಲ್ಲಿ ಮೂರು ಭೀಕರ ಸ್ವರೂಪದ ಕೃಶದೇಹದ ಚಾಮುಂಡಾ ಶಿಲ್ಪಗಳಿವೆ. ಸಪ್ತಮಾತೃಕೆಯರ ಸಿದ್ಧಪ್ರತಿಮಾಲಕ್ಷಣಗಳಿಗನುಗುಣವಾಗಿ ಉಳಿದವುಗಳನ್ನು ಪೂರ್ತಿಯಾಗಿ ಗುರುತಿಸಲು ಸಾಧ್ಯವಿಲ್ಲ. ಅಂದರೆ ಇವು ಸಪ್ತಮಾತೃಕಾ ಸಮೂಹಕ್ಕೆ ಸೇರಿದವಲ್ಲ. ಕೆಲವು ವಿದ್ವಾಂಸರು ಇವು ಷೋಡಶಮಾತೃಕೆಯರ ಗುಂಪಿಗೆ ಸೇರುತ್ತವೆಂದು ಅಭಿಪ್ರಾಯ ಪಟ್ಟಿದ್ದಾರೆ. ಗೌರೀದೇವಿ ಪ್ರಧಾನವಾಗಿರುವ ಷೋಡಶಮಾತೃಕೆಯರು ಶ್ರೀವಿದ್ಯಾ ಉಪಾಸನಾಪರಂಪರೆಗೆ ಸೇರಿದವರು. ಪದ್ಮಾ, ಶಚೀ, ಮೇಧಾ, ಸಾವಿತ್ರೀ, ವಿಜಯಾ,

ಜಯಾ, ದೇವಸೇನಾ, ಸ್ವಧಾ, ಸ್ವಾಹಾ, ಮಾತಾ, ಲೋಕಮಾತಾ, ಧೃತೀ, ಪುಷ್ಟೀ, ತುಷ್ಟೀ, ಕುಲದೇವತಾ ಇವರು ಈ ಗುಂಪಿನ ಇನ್ನುಳಿದ ದೇವಿಯರು. ಶ್ರೀವಿದ್ಯಾಪಂಥದ ಪ್ರಸಿದ್ಧ ಸ್ತೋತ್ರ ಸಾಹಿತ್ಯಕೃತಿಗಳಾದ ಲಲಿತಾಸಹಸ್ರನಾಮ, ಲಲಿತಾತ್ರಿಶತೀ ಮುಂತಾದವು ಉಲ್ಲೇಖಿಸುವಂತೆ ಈ ಹದಿನಾರು ಹೆಸರುಗಳೂ ಲೋಕಮಾತೆ ಲಲಿತೆಯ ಪರ್ಯಾಯನಾಮಗಳೇ. ಸಹಜವಾಗಿ ಅಂತರ್ಮುಖಿ ಆರಾಧನೆ, ಅರ್ಚನೆ, ಉಪಾಸನೆಗಳಿಗೆ ಒಲಿಯುವ ಈ ದೇವತೆಗಳು ಸೌಮ್ಯಸ್ವಭಾವ, ಸಾತ್ವಿಕಗುಣ ಪ್ರಧಾನರು. ಆದರೆ ಡುಬ್ರೈಲ್ ಸಂಗ್ರಹದ ಶಿಲ್ಪಗಳಲ್ಲಿ ಒಂದೆರಡನ್ನು ಬಿಟ್ಟರೆ ಉಳಿದವು ಕ್ರೂರ ಸ್ವಭಾವದ ರೌದ್ರ, ಭೀಕರ ಸ್ವರೂಪದ ಪ್ರತಿಮಾಲಕ್ಷಣಗಳನ್ನು ಹೊಂದಿವೆ. ಆದುದರಿಂದ ಇವು ಷೋಡಶಮಾತೃಕೆಯರ ಗುಂಪಿನವೂ ಅಲ್ಲವೆಂದಾಗುತ್ತದೆ.

ಈಚೆಗೆ ಡುಬ್ರೈಲ್ ಸಂಗ್ರಹದ ಶಿಲ್ಪಗಳನ್ನು ಕುರಿತು ಅನೇಕ ವಿಸ್ತೃತ ಲೇಖನ, ಚರ್ಚೆಗಳು ನಡೆದಿವೆ. ಶಿಲ್ಪಗಳ ಪುನಃಪರಿಶೀಲನೆಯ ಹಿನ್ನೆಲೆಯಲ್ಲಿ ಈ ಎಲ್ಲ ಬರವಣಿಗೆಯನ್ನು ತುಲನಾತ್ಮಕವಾಗಿ ವಿಶ್ಲೇಷಣೆ ಮಾಡಿರುವ ವಿದ್ಯಾ ದಹೇಜಾ ಅವರ ಪ್ರಕಾರ ಈ ಶಿಲ್ಪಗಳೆಲ್ಲ ಯೋಗಿನೀ ಆರಾಧನಾ ಪರಂಪರೆಯವೇ ಆಗಿದ್ದು, ಪ್ರತಿಮಾಲಕ್ಷಣ ಹಾಗೂ ಶೈಲೀಯವಾಗಿ ಕೆಲವು ಪ್ರಾದೇಶಿಕ ಬದಲಾವಣೆ ತೋರ್ಪಡಿಸುತ್ತವೆ.

ಈ ಶಿಲ್ಪಗಳು ಹಾಗೂ ಶೈಲೀಯವಾಗಿ ಇವುಗಳನ್ನು ಹೋಲುವ ಪ್ರಸ್ತುತ ಚೆನ್ನೈನ ರಾಜ್ಯ ಸರಕಾರದ ವಸ್ತುಸಂಗ್ರಹಾಲಯದಲ್ಲಿರುವ ಕೆಲವು ಶಿಲ್ಪಗಳನ್ನು ಶಿವರಾಮಮೂರ್ತಿಯವರೂ ತುಲನಾತ್ಮಕವಾಗಿ ಅಧ್ಯಯನ ಮಾಡಿದ್ದಾರೆ. ಈ ಎಲ್ಲ ಶಿಲ್ಪಗಳಲ್ಲಿಯೂ ಪ್ರಮುಖವಾಗಿ ಕಾಣುವ ಸಾಮಾನ್ಯಲಕ್ಷಣ ಕೆಳ ಎಡಗೈಯಲ್ಲಿ ಕಪಾಲಪಾನಪಾತ್ರೆಯನ್ನು ಹಿಡಿದಿರುವುದು. ಉಳಿದಂತೆ ತುಂಬು ಯೌವನದಿಂದ ಕೂಡಿದ ಶರೀರ ಲಾವಣ್ಯ, ಕರಾಳ ಅಥವಾ ಬೀಭತ್ಸತೆಯನ್ನು ಸೂಚಿಸುವ ಅಗಲವಾದ ಕಣ್ಣುಗಳು, ಬಾಗಿ ಮುಂಚಾಚಿದ ಕೋರೆಹಲ್ಲುಗಳು, ರುಂಡಮಾಲೆಯಿರುವ ಯಜ್ಞೋಪವೀತ; ಕುಂಡಲ, ಕಂಠಾಭರಣ, ಕೇಯೂರ, ಸ್ತನಬಂಧ ಮುಂತಾದವುಗಳಲ್ಲಿ ಸರ್ಪಗಳ ವಿಶೇಷ ಬಳಕೆ, ದೇವಿಯರ ವಾಹನಗಳಾಗಿ ಪ್ರೇತ ಪ್ರಾಣಿಗಳ ಬಳಕೆ ಮುಂತಾದವು ಗಮನಾರ್ಹವಾದವು (ಚಿತ್ರ ೧೨-೧೪). ಈ ಶಿಲ್ಪಗಳ ಕಾಲದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದ್ದು ಕ್ರಿ.ಶ. ೯ರಿಂದ ೧೩ನೆಯ ಶತಮಾನದವರೆಗಿನ ವಿವಿಧ ಕಾಲದ ಶೈಲಿಗಳನ್ನು ಇವುಗಳಲ್ಲಿ ಗುರುತಿಸಲಾಗಿದೆ.

ಡುಬ್ರೈಲ್ ಮೂಲತಃ ಈ ವಿಗ್ರಹಗಳನ್ನು ಸ್ಥೂಲವಾಗಿ ತಮಿಳುನಾಡಿನ ಉತ್ತರ ಭಾಗಗಳಿಂದ ಸಂಗ್ರಹಿಸಿದ್ದರು. ಐತಿಹಾಸಿಕವಾಗಿ ಈ ಪ್ರದೇಶ ಕ್ರಿಶ ೯೦೦ರ ವರೆಗೆ ಪಲ್ಲವರ ಅಧೀನದಲ್ಲಿದ್ದು ಅನಂತರ ಚೋಳಸಾಮ್ರಾಜ್ಯದ ಭಾಗವಾಯಿತು. ಇವುಗಳ ಮೂಲಸ್ಥಳ ನಿರ್ಣಾಯಕವಾಗಿ ತಿಳಿದಿಲ್ಲ. ಕೆಲವು ವಿದ್ವಾಂಸರ ಪ್ರಕಾರ ಇವು ಕಾಂಚೀಪುರದವೆಂದು ಹೇಳಲಾಗಿದ್ದರೂ ಶೈಲೀಯವಾಗಿ ಬಹುತೇಕ ಮಧ್ಯಯುಗದಲ್ಲಿ ಕಾಂಚೀಪುರದ ಪರಿಸರದಲ್ಲಿ ರೂಪಿತವಾದ ಶಿಲ್ಪಗಳಿಗಿಂತ ಇವು ತೀರ ಭಿನ್ನರೂಪದವು. ಕಾವೇರಿಪಾಕ್ಕಂನ ದೊಡ್ಡ ತಟಾಕದ ಜೀರ್ಣೋದ್ಧಾರದ ಸಂದರ್ಭದಲ್ಲಿ ಬೆಳಕಿಗೆಬಂದ ಕೆಲವು ಶಿಲ್ಪಗಳೊಂದಿಗೆ ಇವು ಹೆಚ್ಚಿನ ಹೋಲಿಕೆ ಹೊಂದಿರುವುದರಿಂದ, ಹೆಚ್ಚುಕಡಿಮೆ ತಟಾಕದ ಪರಿಸರದ್ದೇ ಆಗಿರಬೇಕೆಂದು ಅಭಿಪ್ರಾಯ ಪಡಲಾಗಿದೆ. ಪ್ರಸ್ತುತ ತಟಾಕದ ಪರಿಸರದಲ್ಲಿದ್ದ ದೇವಾಲಯಗಳನ್ನು ಇಡೀ ದಖ್ಖನಿನ ಸಾರ್ವಭೌಮನಾಗಿದ್ದ ರಾಷ್ಟ್ರಕೂಟ ಅರಸ ಮುಮ್ಮಡಿ ಕೃಷ್ಣನ (ಕ್ರಿ.ಶ. ೯೩೯-೯೬೭) ಕಾಲದಲ್ಲಿ (ಕ್ರಿ.ಶ. ೯೬೫ರ ಸುಮಾರಿಗೆ) ಕಟ್ಟಲಾಯಿತು. ಮುಮ್ಮಡಿ ಕೃಷ್ಣನು ತಮಿಳುನಾಡಿನ ಉತ್ತರ ಭಾಗದವರೆಗೆ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದ್ದನಲ್ಲದೇ ರಾಮೇಶ್ವರದವರೆಗೂ ಮುನ್ನುಗ್ಗಿ ತಮಿಳುನಾಡಿನ ಅನೇಕ ಸ್ಥಳಗಳಲ್ಲಿ ದೇವಾಲಯಗಳನ್ನು ಕಟ್ಟಿಸಿದ.

ಕಾವೇರಿಪಾಕ್ಕಂನಲ್ಲಿ ಬೆಳಕಿಗೆಬಂದಿರುವ ಶಿಲ್ಪಗಳಲ್ಲಿ ಮೂಲತಃ ದಕ್ಷಿಣ ಭಾರತದ್ದೇ ಆದ ವಿಶಿಷ್ಟ ಶೈಲೀಯ ವಿವರಗಳ ಜೊತೆಗೆ ಸಿಂಹಮುಖವುಳ್ಳ ಕೇಯೂರದಂತಹ ಆಭರಣಗಳು ಮತ್ತಿತರ ಉತ್ತರಭಾರತದ ಶಿಲ್ಪ ಶೈಲಿಗಳ ವಿವರಗಳೂ ಕಂಡುಬರುವುದು ಗಮನಾರ್ಹವಾದ ಅಂಶ. ಪ್ರಸ್ತುತ ಡುಬ್ರೈಲ್ ಸಂಗ್ರಹಿಸಿದ ಶಿಲ್ಪಗಳಲ್ಲಿಯೂ ಇಂತಹ ಸಮ್ಮಿಶ್ರ ಶೈಲೀಯಾಂಶಗಳನ್ನು ಗುರುತಿಸಬಹುದು. ಆದುದರಿಂದ ಇವುಗಳನ್ನು ಬಹುತೇಕ ಚೋಳ ಸಾಮ್ರಾಜ್ಯದ ಆರಂಭಕಾಲದಲ್ಲಿ ಅಂದರೆ ಕ್ರಿಶ ೧೦ನೆಯ ಶತಮಾನದಲ್ಲಿ ರೂಪಿಸಿರಬಹುದೆಂದು ಭಾವಿಸಬಹುದು. ಅಲ್ಲದೆ ಅಪರಿಮಿತ ಸೌಂದರ್ಯ, ಅದ್ಭುತ ಕಲೆಗಾರಿಕೆ ಹಾಗೂ ಸಾಧಾರಣ ಶಿಲ್ಪಗಳಿಗಿಂತ ಸ್ವಲ್ಪ ದೊಡ್ಡದೆನಿಸುವ ಗಾತ್ರ ಇವುಗಳಿಂದ ಈ ಶಿಲ್ಪಗಳನ್ನು ವಿಶಿಷ್ಟ ಉದ್ದೇಶದ ಮಹಾತ್ವಾಕಾಂಕ್ಷೆಯ ಪ್ರಾಯಶಃ ಯೋಗಿನಿಯರ ಅರ್ಚನಾದಿಗಳಿಗಾಗಿಯೇ ನಿರ್ಮಿತವಾದ ದೇವಾಲಯದಲ್ಲಿ ಸ್ಥಾಪಿಸಲಾಗಿತ್ತೆಂದು ಊಹಿಸಬಹುದು. ಈ ಮೊದಲು ವಿವರಿಸಿರುವಂತೆ ಈ ಕಾಲದಲ್ಲಿಯೇ ಮಧ್ಯಭಾರತದ ಧಾರ್ಮಿಕ, ರಾಜಕೀಯ ಸಂದರ್ಭದಲ್ಲಿ ಯೋಗಿನಿಯರ ಮಂದಿರಗಳ ನಿರ್ಮಾಣ, ಆರಾಧನೆ ವಿಶೇಷವಾಗಿ ಜನಪ್ರಿಯವೂ ಪ್ರಚಲಿತವೂ

ಆಗಿದ್ದುದು. ಆದುದರಿಂದ ಉತ್ತರ ತಮಿಳುನಾಡಿನ ಪರಿಸರದಲ್ಲಿ ಈ ಆರಾಧನೆಯ ಪ್ರಭಾವ ಮುಮ್ಮಡಿ ಕೃಷ್ಣನ ಕಾಲದಲ್ಲಿಯೇ ಆಗಿರಬೇಕೆಂದು ತಾರ್ಕಿಕವಾಗಿ ಸಮಂಜಸವೆನಿಸುತ್ತದೆ. ಮುಮ್ಮಡಿ ಕೃಷ್ಣ ಆಕ್ರಮಿಸಿದ್ದ ಪ್ರದೇಶದ ಸ್ಥಳೀಯ ಅರಸ ಶತ್ರುಬಾಧೆಯ ಪರಿಹಾರ, ಶತ್ರುನಾಶಗಳನ್ನು ಸಾಧಿಸುವ ಉದ್ದೇಶದಿಂದ ಈ ದೇವಾಲಯವನ್ನು ನಿರ್ಮಿಸಿರುವ ಸಾಧ್ಯತೆ ಇದೆ. ಆದರೆ ದಕ್ಷಿಣ ಭಾರತದಲ್ಲಿ ರಾಷ್ಟ್ರಕೂಟ ಕಾಲೀನ ಶೈಲಿಯ ಹಲವಾರು ದೇವಾಲಯಗಳಿದ್ದರೂ ಯೋಗಿನಿಯರಿಗಾಗಿಯೇ ಪ್ರತ್ಯೇಕವಾಗಿ ನಿರ್ಮಿಸಿದ ದೇವಾಲಯದ ಬಗೆಗೆ ಯಾವುದೇ ಮಾಹಿತಿ ದೊರಕದು. ಈ ಹಿನ್ನೆಲೆಯಲ್ಲಿ ಸೋಮದೇವಸೂರಿ ತನ್ನ ಯಶಸ್ತಿಲಕ ಚಂಪೂಕಾವ್ಯದಲ್ಲಿ ಭೀತಿಕಾರಕರಾದ ಭಯ ಮೂಡಿಸುವಂತಹ ಮಹಾಯೋಗಿನಿಯರ ವರ್ಣನೆ ಮಾಡಿರುವುದು ಹಾಗೂ ಮುಮ್ಮಡಿ ಕೃಷ್ಣ ದಕ್ಷಿಣಭಾರತದಲ್ಲಿ ದಂಡಯಾತ್ರೆಯನ್ನು ಕೈಗೊಂಡಿದ್ದಾಗಲೇ ತಾನು ಬರೆದ ಕಾವ್ಯವು ಪೂರ್ಣವಾಯಿತು ಎಂದು ದಾಖಲಿಸಿರುವುದು ಗಮನಾರ್ಹ, ಸಮರ್ಥಕ ಆಧಾರವಾಗಿ ಒದಗುತ್ತದೆ. ಹಾಗಿದ್ದರೂ ದಾಕ್ಷಿಣಾತ್ಯ ಹಾಗೂ ಔತ್ತರೇಯ ಶಿಲ್ಪ ಶೈಲಿಯ ವಿಶಿಷ್ಟಾಂಶಗಳ ಸಮ್ಮಿಲನದಿಂದ ಸ್ಥಳೀಯವಾಗಿ ರೂಪುಗೊಂಡು ಈ ಅದ್ಭುತ ಸೌಂದರ್ಯದ ಯೋಗಿನೀ ಶಿಲ್ಪಗಳು ಮತ್ತು ಇವುಗಳನ್ನು ಪ್ರತಿಷ್ಠಾಪಿಸಿದ್ದು ಈಗ ಪೂರ್ತಿನಷ್ಟವಾಗಿರುವ ದೇವಾಲಯ ಇವು ಕ್ರಿ.ಶ. ೧೦ನೆಯ ಶತಮಾನದ ಉತ್ತರಾರ್ಧದಲ್ಲಿ ರೂಪುಗೊಂಡವೆಂದು ಹೇಳಬಹುದು.

ರಾಷ್ಟ್ರಕೂಟ ಕಾಲದ, ಪ್ರಾದೇಶಿಕ ಶೈಲಿಯ ಈ ಶಿಲ್ಪಗಳ ಹಿನ್ನೆಲೆಯಲ್ಲಿ ಕಲ್ಯಾಣದ ಚಾಲುಕ್ಯರ ಕಾಲದ ದೇವಾಲಯಗಳಲ್ಲಿ ಆರಂಭವಾಗಿ ಹೊಯ್ಸಳರ ಕಾಲದಲ್ಲಿ ಅತಿಶಯವಾಗಿ ಕಾಣಿಸಿಕೊಳ್ಳುವ ಕೆಲವು ದೇವಿಯರ ಭಿತ್ತಿ ಶಿಲ್ಪಗಳು ಗಮನಾರ್ಹವಾಗುತ್ತವೆ. ಕಾಳಾಮುಖ-ಕಾಪಾಲಿಕ ಪಂಥಗಳ ಪ್ರಭಾವವಿದ್ದ ಸ್ಥಳಗಳಲ್ಲಿನ ದೇವಾಲಯಗಳಲ್ಲಿನ ಭಿತ್ತಿ ಶಿಲ್ಪಗಳಲ್ಲಿ ಕಂಡುಬರುವ ವೈವಿಧ್ಯಮಯ ಪ್ರತಿಮಾ ಶಾಸ್ತ್ರದ ಇಂತಹ ದೇವಿ ಶಿಲ್ಪಗಳ ಒಂದು ವಿಶೇಷ ಅಧ್ಯಯನದಿಂದ ಆಯಾ ಪ್ರದೇಶಗಳಲ್ಲಿ ಪ್ರಚಲಿತವಿದ್ದ ಯೋಗಿನೀ ಪಂಥದ ಬಗೆಗೆ ಅಮೂಲ್ಯ ಮಾಹಿತಿ ದೊರಕುವ ಸಾಧ್ಯತೆ ಇದೆ.

ಇದರ ಜೊತೆಗೆ ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುಕ್ಕನೂರಿನ ಮಹಾಮಾಯಾ ದೇವಾಲಯ ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಕರ್ನಾಟಕದ ಉತ್ತರ ಭಾಗದಲ್ಲಿ ಯೋಗಿನಿಯರ ಆರಾಧನೆಗೆ ಸಂಬಂಧಿಸಿದಂತೆ ಮಹತ್ವದ ವಿವರಗಳನ್ನು ದಾಖಲಿಸುತ್ತದೆ (ಶಾಸನ ಸಂಖ್ಯೆ ೫೨-ದೇವರಕೊಂಡಾರೆಡ್ಡಿ ೧೯೯೯). ಕ್ರಿ.ಶ. ೧೧೬೮ ಸೆಪ್ಟೆಂಬರ್ ೧೫ರ ಈ ಶಾಸನವನ್ನು ಮಹಾಮಾಯಾ ಮಂದಿರದ ಮುಖಮಂಟಪದಲ್ಲಿರಿಸಿರುವ ಶಿಲಾಫಲಕದ ಮೇಲೆ ಬರೆಯಲಾಗಿದೆ. ಅತ್ಯಂತ ಕಾವ್ಯಮಯ ಶೈಲಿಯ ಈ ಶಾಸನ ಕುಕ್ಕನೂರಿನ ಮಹತ್ವ, ಅಲ್ಲಿನ ದೇವಾಲಯಗಳ ಹಿರಿಮೆಯನ್ನು ವಿವರಿಸುತ್ತದೆ. ಮುಖ್ಯವಾಗಿ ಈ ಶಕ್ತಿಪೀಠದ (ಶಿವಶಕ್ತಿ ಸ್ಫುರತ್ಸಂಪುಟ ಕ್ಷೇತ್ರ)ದಲ್ಲಿ ಅಂಬಿಕೆ, ಪುರಾಣೀದೇವಿ, ಚಾಮುಂಡೀದೇವಿ, ಮಹಾಮಾಯೆ, (ತಡಾಗರ) ಅಂಬಿಕೆ, ವಸಂತಾದೇವಿ, ಕಾಳ್ಯಂಬೆ (ಕಾಳಿ), ಶಾಂತಿ ಹಾಗೂ ಶ್ರೀ ಗುಪ್ತಚಾಮುಂಡಿಯೆಂಬ ಒಂಬತ್ತು ದೇವಿಯರು ನೆಲೆಗೊಂಡಿದ್ದರು. ಈ ಅಗ್ರಹಾರದಲ್ಲಿನ ನವಮಠಗಳಲ್ಲಿ ಹಿರಿಯಳಾದ ಜ್ಯೇಷ್ಠಾದೇವಿ ಭೈರವಸಹಿತಳಾಗಿ ನೆಲೆಗೊಂಡಿದ್ದಳು. ಈ ದೇವಿ ಶತ್ರುಸ್ತಂಭನ, ವಾಗ್ಬಂಧನ (ಬಾಯಿಕಟ್ಟುವುದು), ಇದ್ದಕ್ಕಿದ್ದಂತೆ ಬೆಂಕಿಯೇಳಿಸುವುದು ಮುಂತಾದ ಲೌಕಿಕಶಕ್ತಿಗಳನ್ನು ನಿಷ್ಠಾವಂತ ಭಕ್ತರಿಗೆ ಕರುಣಿಸಬಲ್ಲ ಕರುಣಾಮಯಿ.

ದೈನಂದಿನ ಕಷ್ಟಕಾರ್ಪಣ್ಯ, ರೋಗರುಜಿನ, ಕ್ಷಾಮಡಾಮರ, ದುರ್ಭಿಕ್ಷಾದಿಗಳನ್ನು ಪರಿಹರಿಸುವುದರ ಜೊತೆಗೆ ಆರಾಧಕರಿಗೆ ಕ್ಷುದ್ರಲೌಕಿಕಶಕ್ತಿಗಳನ್ನು ದಯಪಾಲಿಸುವ ಸಾಮರ್ಥ್ಯವುಳ್ಳವರೆಂದು ಪ್ರಸಿದ್ಧಿಪಡೆದ ಕಾರಣ ಕರ್ನಾಟಕದಲ್ಲಿಯೂ ಈ ದೇವತೆಗಳನ್ನು ಆರಾಧಿಸುವುವರ ಸಂಖ್ಯೆ ಗಮನಾರ್ಹವಾಗಿ ಬೆಳೆದಿದ್ದಂತೆ ತೋರುತ್ತದೆ. ಬೀದರ ಜಿಲ್ಲೆ ಬಸವಕಲ್ಯಾಣ ತಾಲೂಕಿನ ನಾರಾಯಣಪುರದ ಕ್ರಿ.ಶ. ೧೧೧೬ರ ಶಾಸನದಲ್ಲಿ ಉಲ್ಲೇಖಿತವಾದ ತೂಂಬಿನ ಚಂಡಿಕಾದೇವಿ (ಶಾಸನ ಸಂಖ್ಯೆ ೪೩-ದೇವರಕೊಂಡಾರೆಡ್ಡಿ ೨೦೦೬); ಅದೇ ಜಿಲ್ಲೆಯ ಹುಮನಾಬಾದ ತಾಲೂಕಿನ ಘಾಟಬೋರಾಳದ ಕ್ರಿ.ಶ. ೧೧೨೦ರ ಶಾಸನವು ಉಲ್ಲೇಖಿಸುವ ಬೋರಿವಳದ ಮಲೆಯ ಸಮರದೇವತೆ (ಶಾಸನ ಸಂಖ್ಯೆ ೧-ದೇವರಕೊಂಡಾರೆಡ್ಡಿ ೨೦೦೬); ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುಕ್ಕನೂರಿನ ಕ್ರಿ.ಶ. ೧೧೬೮ರ ಶಾಸನದಲ್ಲಿ ವಿಶೇಷವಾಗಿ ಸವಿವರವಾಗಿ ಹೆಸರಿಸಿರುವ ಮಹಾಮಾಯಾದೇವಿ ಇವು ಕೇವಲ ಕೆಲವೇ ಉದಾಹರಣೆಗಳು. ಮೇಲೆ ಹೇಳಿದ ಶಾಸನಗಳೆಲ್ಲ ಕ್ರಿ.ಶ. ೧೧ನೆಯ ಶತಮಾನದ ಕೊನೆಯ ದಶಕಗಳು ಹಾಗೂ ೧೨ನೆಯ ಶತಮಾನದ ಆರಂಭ ಕಾಲದವು ಎನ್ನುವುದು ಗಮನಾರ್ಹವಾದ ಅಂಶ. ಮಧ್ಯಭಾರತದಲ್ಲಿ ಚತುಷ್ಷಷ್ಟಿಯೋಗಿನಿ ದೇವಾಲಯಗಳ ನಿರ್ಮಾಣ, ಆರಾಧನೆಗಳು ಅತ್ಯಂತ ಜನಪ್ರಿಯವಾಗಿದ್ದ ಉಚ್ಛ್ರಾಯ ಕಾಲವೂ ೧೨ನೆಯ ಶತಮಾನವೇ.

ಇತರ ಎಲ್ಲ ತಾಂತ್ರಿಕಪಂಥ ಗುಪ್ತಸಮಾಜದ ಆರಾಧನಾಮಾರ್ಗಗಳಂತೆ ಯೋಗಿನಿಯರ ಪ್ರತಿಮಾ ಲಕ್ಷಣ, ಶಿಲ್ಪ, ದೇವಾಲಯಗಳೂ ಸಹ ಅನೇಕ ಕೌತುಕ, ನಿಗೂಢ ರಹಸ್ಯಗಳಿಂದ ತುಂಬಿವೆ. ಬೆಳಕಿಗೆ ಬಂದಿರುವ ಮತ್ತು ಸಾಕಷ್ಟು ಸುಸ್ಥಿತಿಯಲ್ಲಿರುವ ಕೆಲವಾದರೂ ದೇವಾಲಯ, ಶಿಲ್ಪಗಳು ಭಾರತೀಯ ಕಲಾಪ್ರಪಂಚದ ಒಂದು ರೋಚಕ ಹಾಗೂ ವರ್ಣಮಯ ಅಧ್ಯಾಯಕ್ಕೆ ಸಾಕಷ್ಟು ಸಾಮಗ್ರಿ ಒದಗಿಸಿವೆ. ಸ್ತ್ರೀರೂಪದಲ್ಲಿ ಪ್ರಕೃತಿಯ ಅನಂತ ಸೃಜನಶೀಲ ಸಾಮರ್ಥ್ಯವನ್ನು ಆರಾಧಿಸುವ ಪರಂಪರೆ, ಅದರಿಂದ ಸ್ಫೂರ್ತಿಗೊಂಡ ಸ್ಥಾವರ ಹಾಗೂ ಜಂಗಮರೂಪದ ಕಲಾಕೃತಿಗಳು ಕೇವಲ ಭಾರತಕ್ಕಷ್ಟೇ ಸೀಮಿತವಾಗಿರದೆ ಪ್ರಪಂಚದಾದ್ಯಂತ ಕಾಲಕಾಲಕ್ಕೆ ತಕ್ಕಂತೆ ರೂಪುಗೊಂಡು ಪ್ರಸಿದ್ಧವಾಗಿವೆ.

ಪ್ರಸ್ತುತ ಕರ್ನಾಟಕದಲ್ಲಿ ಶಾಕ್ತಪರಂಪರೆಗೆ ಸಂಬಂಧಿಸಿದ್ದಿರಬಹುದಾದ ಇನ್ನಿತರ ದೇವಾಲಯಗಳು ಇರುವ ನೆಲೆ, ಅವುಗಳ ಭೌಗೋಳಿಕ ಪರಿಸರ, ದೇವಾಲಯದ ವಾಸ್ತುವೈಶಿಷ್ಟ್ಯಗಳು, ಶಿಲ್ಪಗಳ ಪ್ರತಿಮಾಲಕ್ಷಣ, ಶಾಸನ ವಿವರ, ಆಯಾ ದೇವಿಯರನ್ನು ಕುರಿತ ಸ್ಥಳೀಯ ಐತಿಹ್ಯ, ಆರಾಧನಾ ಪ್ರಕ್ರಿಯೆಗಳಲ್ಲಿನ ವಿವರ ಮುಂತಾದವನ್ನು ಕುರಿತ ಸಮಗ್ರ ಮಾಹಿತಿಯ ಒಂದು ತುಲನಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನ ಇನ್ನೂ ಆಗಬೇಕಾಗಿದೆ. ಇದರಿಂದ ಕರ್ನಾಟಕದ ಕೆಲವಾದರೂ ಭಾಗಗಳಲ್ಲಿ ಪ್ರಚಲಿತವಾಗಿದ್ದಿರಬಹುದಾದ ಯೋಗಿನಿ ಪಂಥದ ಬಗೆಗೆ ಅಮೂಲ್ಯ ಮಾಹಿತಿ ದೊರಕಬಹುದಾಗಿದೆ.

**ಕೃತಜ್ಞತೆಗಳು**

ಶ್ರೀ ಕೆ.ಎಮ್. ಶ್ರೀವಾಸ್ತವ, ಮಹಾ ನಿರ್ದೇಶಕರು, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ನವದೆಹಲಿ ಅವರ ಪ್ರೋತ್ಸಾಹ ಅವಿಸ್ಮರಣೀಯ. ವಿದ್ವನ್ಮಿತ್ರರಾದ ಡಾ॥ ಎಸ್.ವಿ. ವೆಂಕಟೇಶಯ್ಯ, ಶ್ರೀ ಜಿ.ಎಸ್. ನರಸಿಂಹನ್, ಶ್ರೀ ಟಿ.ಎಮ್. ಕೇಶವರವರು ಈ ಲೇಖನದ ಬಗೆಗೆ ಅತೀವ ಆಸಕ್ತಿ ವಹಿಸಿ ಅನೇಕ ಸಲಹೆಗಳನ್ನು ನೀಡಿದ್ದಾರೆ. ಶ್ರೀ ಶರವಣನ್ ಅತ್ಯುತ್ತಮವಾದ ರೇಖಾ ಚಿತ್ರಗಳನ್ನೂ ಶ್ರೀ ಷೇಕ ಸೈಫುಲ್ಲಾ ಅನೇಕ ಸೂಕ್ತ ಸಂದರ್ಭ ಗ್ರಂಥಗಳನ್ನು ಒದಗಿಸಿ ಕೊಟ್ಟಿದ್ದಾರೆ. ಭಾರತೀಯ ಪುರಾತತ್ತ್ವ ಸರ್ವೇಕ್ಷಣದ ಬೆಂಗಳೂರು ವಲಯದ ಸಿಬ್ಬಂದಿ ಮಿತ್ರರು ಅನೇಕ ರೀತಿಯಲ್ಲಿ ನೆರವಾಗಿದ್ದಾರೆ. ಈ ನಮ್ಮ ಸಹೋದ್ಯೋಗಿ ಮಿತ್ರರಿಗೆ ಅನೇಕ ವಂದನೆಗಳು. ಈ ಲೇಖನದ ಛಾಯಾಚಿತ್ರಗಳು, ವಿದ್ಯಾ ದಹೆಜಾ, ರಾಷ್ಟ್ರೀಯ ಸಂಗ್ರಹಾಲಯ, ನವ ದೆಹಲಿ ಹಾಗೂ ಭಾರತೀಯ ಪುರಾತತ್ತ್ವ ಸರ್ವೇಕ್ಷಣದ ಸ್ವಾಮ್ಯಕ್ಕೊಳಪಟ್ಟಿವೆ.

## ಆಧಾರ ಸೂಚಿ

ಬ್ಯಾನರ್ಜಿ, ಅರ್.ಡಿ ೧೯೩೧: ದಿ **ಹೈಹಯಾಸ್ ಆಫ್ ತ್ರಿಪುರಿ ಅಂಡ್ ದೇರ್ ಮಾನ್ಯುಮೆಂಟ್ಸ್**. ಎಂ.ಎ.ಎಸ್.ಐ., ನಂ. ೨೩. ಕಲಕತ್ತಾ, ಸೆಂಟ್ರಲ್ ಪಬ್ಲಿಕೇಷನ್ ಬ್ರ್ಯಾಂಚ್: ೬೭–೭೧, ೭೮–೯೧.

ಕನ್ನಿಂಗಹ್ಯಾಮ್, ಎ. ೨೦೦೦: **ರಿಪೋರ್ಟ್ ಆಫ್ ಎ ಟೂರ್ ಇನ್ ದಿ ಸೆಂಟ್ರಲ್ ಪ್ರಾವಿನ್ಸಸ್ ಇನ್ ೧೮೭೩–೭೪ ಆ್ಯಂಡ್ ೧೮೭೪–೭೫**(ಪು.ಮು). ನವ ದೆಹಲಿ, ಭಾರತೀಯ ಪುರಾತತ್ತ್ವ ಸರ್ವೇಕ್ಷಣ: ೬೦–೭೪.

ದಹೇಜಾ, ವಿದ್ಯಾ ೧೯೮೬: **ಯೋಗಿನಿ ಕಲ್ಟ್ ಅಂಡ್ ಟೆಂಪಲ್ಸ್: ಎ ತಾಂತ್ರಿಕ ಟ್ರೆಡಿಷನ್**. ನವದೆಹಲಿ, ರಾಷ್ಟ್ರೀಯ ಸಂಗ್ರಹಾಲಯ.

**ಜೋವು ಡುಬ್ರೈಲ್: ಉದ್ಧೃತ–ದಹೇಜಾ, ವಿದ್ಯಾ** ೧೯೮೬: ೧೭೫–೧೮೪.

ಕೃಷ್ಣದೇವ ೧೯೮೭: **ಖಜುರಾಹೊ**. ನವದೆಹಲಿ, ಬ್ರಿಜ್ ಬಾಸಿ ಪ್ರಿಂಟರ್ಸ್: ೪೯–೫೦.

——— ೧೯೯೦: **ಟೆಂಪಲ್ಸ್ ಆಫ್ ಖಜುರಾಹೋ**. ನವದೆಹಲಿ, ಭಾರತೀಯ ಪುರಾತತ್ತ್ವ ಸರ್ವೇಕ್ಷಣ: ೨೫–೨೯.

——— ೧೯೯೫: **ಟೆಂಪಲ್ಸ್ ಅಫ್ ಇಂಡಿಯಾ**. ನವದೆಹಲಿ, ಆರ್ಯನ್ ಬುಕ್ಸ್ ಇಂಟರ್‌ನ್ಯಾಷನಲ್: ೧೪೭, ೧೬೨–೬೩.

ಮಾಹಾಪಾತ್ರಾ, ಕೇದಾರನಾಥ ೧೯೫೩: **ಎ ನೋಟ್ ಆನ್ ದಿ ಹ್ಯಪೆತ್ರಲ್ ಟೆಂಪಲ್ ಆಫ್ ಸಿಕ್ಸ್ಟಿ–ಫೋರ್ ಯೋಗಿನಿಸ್ ಎಟ್ ಹೀರಾಪುರ್**. ಒರಿಸ್ಸಾ ಹಿಸ್ಟಾರಿಕಲ್ ರಿಸರ್ಚ್ ಜರ್ನಲ್, ೨(೨): ೨೩–೪೦.

ಸಿಂಹ, ರಾಜೇಂದ್ರ ಪ್ರಸಾದ ೧೯೯೦: **ಚೌಸಟ್ ಯೋಗಿನಿ ಎವಂ ಉನಕೆ ಮಂದಿರ**. ದೆಹಲಿ, ಜೆ.ಪಿ. ಪಬ್ಲಿಷಿಂಗ್ ಹೌಸ್.

ದೇವರಕೊಂಡಾರೆಡ್ಡಿ (ಸಂ) ೧೯೯೯: **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ: ೨– ಕೊಪ್ಪಳ ಜಿಲ್ಲೆ**. ಯಲಬುರ್ಗ ತಾಲೂಕು, ಶಾಸನ ಸಂಖೆ: ೫೨: ೨೨೮–೨೩೫. ಹಂಪಿ.

————೨೦೦೬: **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ: ೮– ಬೀದರ ಜಿಲ್ಲೆ**. ಬಸವಕಲ್ಯಾಣ ತಾಲೂಕು, ಶಾಸನ ಸಂಖ್ಯೆ ೪೩: ೫೫–೫೬; ಹುಮನಾಬಾದ್ ತಾಲೂಕು, ಶಾಸನ ಸಂಖ್ಯೆ: ೧: ೧–೨. ಹಂಪಿ.

ಶಿವರಾಮಮೂರ್ತಿ, ಸಿ. ೧೯೭೭: ದಿ **ಆರ್ಟ್ ಆಫ್ ಇಂಡಿಯಾ**. ನ್ಯೂಯಾರ್ಕ್, ಹ್ಯಾರಿ ಎನ್. ಅಬ್ರಾಮ್ಸ್ ಪಬ್ಲಿಷರ್ಸ್.



ಚಿತ್ರ ೧ – ಖಜುರಾಹೋ: ಚೌಸಟ್ ಯೋಗಿನಿ ದೇವಾಲಯ



ಚಿತ್ರ ೨ – ಖಜುರಾಹೋ: ಪುರಾತತ್ವ ಸಂಗ್ರಹಾಲಯ– ಹಿಂಗಲೆಜಾ ಯೋಗಿನಿ



ಚಿತ್ರ ೩ – ಭೇರಾಘಾಟ್: ಚೌಸಟ್ ಯೋಗಿನಿ ದೇವಾಲಯ



ಚಿತ್ರ ೪-ಭೇರಾಘಾಟ್: ಚೌಸಟ್ ಯೋಗಿನಿ ದೇವಾಲಯ-ಸರ್ವತೋಮುಖಿ ಯೋಗಿನಿ



ಚಿತ್ರ ೫-ಭೇರಾಘಾಟ್: ಚೌಸಟ್ ಯೋಗಿನಿ ದೇವಾಲಯ-ಸರ್ವತೋಮುಖಿ ಯೋಗಿನಿ



ಚಿತ್ರ ೬-ಭೇರಾಘಾಟ್: ಚೌಸಟ್ ಯೋಗಿನಿ ದೇವಾಲಯ - ಐಂಗಿಣಿ ಯೋಗಿನಿ



ಚಿತ್ರ ೭- ಭೇರಾಘಾಟ್: ಚೌಸಟ್ ಯೋಗಿನಿ ದೇವಾಲಯ-ಎರುಡಿ ಯೋಗಿನಿ



ಚಿತ್ರ ೯- ಹೀರಾಪುರ: ಅರವತ್ತನಾಲ್ಕು ಯೋಗಿನಿಯರ ದೇವಾಲಯ-ರಕ್ತ ಪಾನಾಸಕ್ತ ಯೋಗಿನಿ



ಚಿತ್ರ ೧೦-ಹೀರಾಪುರ: ಅರವತ್ತನಾಲ್ಕು ಯೋಗಿನಿಯರ ದೇವಾಲಯ-ಅಶ್ವಮುಖಿ ಯೋಗಿನಿ



ಚಿತ್ರ ೮ - ಹೀರಾಪುರ: ಅರವತ್ತನಾಲ್ಕು ಯೋಗಿನಿಯರ ದೇವಾಲಯ



ಚಿತ್ರ: ೧೧



ಚಿತ್ರ: ೧೨



ಚಿತ್ರ: ೧೩



ಚಿತ್ರ: ೧೪

ಚಿತ್ರ: ೧೧. ಹೀರಾಪುರ: ಅರವತ್ತನಾಲ್ಕು ಯೋಗಿನಿಯರ ದೇವಾಲಯ–ಗಾರ್ದಭಮುಖಿ ಯೋಗಿನಿ
ಚಿತ್ರ: ೧೨: ಪ್ಯಾರಿಸ್: ಗಿಮೆಟ್ ವಸ್ತುಸಂಗ್ರಹಾಲಯ–ದಕ್ಷಿಣ ಭಾರತ ಮೂಲದ ಯೋಗಿನಿ
ಚಿತ್ರ: ೧೩: ನ್ಯೂಯಾರ್ಕ: ಬ್ರೂಕ್ಲನ್ ವಸ್ತುಸಂಗ್ರಹಾಲಯ–ದಕ್ಷಿಣ ಭಾರತ ಮೂಲದ ಯೋಗಿನಿ
ಚಿತ್ರ: ೧೪: ಮಿನೆಪೋಲಿಸ್: ಮಿನೆಪೋಲಿಸ್ ಕಲಾ ಶಾಲೆ–ದಕ್ಷಿಣ ಭಾರತ ಮೂಲದ ಯೋಗಿನಿ



ನಕ್ಷೆ ೧ – ಚೌಸಟ್ ಯೋಗಿನಿ ದೇವಾಲಯ: ಖಜುರಾಹೋ




ನಕ್ಷೆ. ೨. ಚೌಸಟ್ ಯೋಗಿನಿ ದೇವಾಲಯ: ಭೇರಾಘಾಟ್



ನಕ್ಷೆ ೩ – ಅರವತ್ತನಾಲ್ಕು ಯೋಗಿನಿಯರ ದೇವಾಲಯ: ಹೀರಾಪುರ

